ಗಳಲ್ಲಿಯೂ ಕುಂಬಾರನೇ ಮುಂತಾದ (ಚೇತನರಿಂದ) ಅಧಿಷ್ಠಿತವಾಗಿಯೇ (ಆಯಾ) ಗೊತ್ತಾದ ಆಕಾರದ ರಚನೆಯನ್ನು ಮಾಡುವ (ಶಕ್ತಿಯು) ಕಂಡು ಬಂದಿರುತ್ತದೆ. ಅದರಂತೆ ಪ್ರಧಾನವೂ ಮತ್ತೊಂದು ಚೇತನದಿಂದ ಅಧಿಷ್ಠಿತ ವಾಗಿಯೇ (ರಚಿಸುತ್ತದೆ) ಎಂದು ಪ್ರಸಕ್ತವಾಗುತ್ತದೆ.[1]

ಮಣ್ಣು ಮುಂತಾದ ಉಪಾದಾನ(ಕಾರಣ)ಸ್ವರೂಪವನ್ನು ಆಶ್ರಯಿಸಿ ರುವ ಧರ್ಮದಿಂದಲೇ ಮೂಲಕಾರಣವನ್ನು ಗೊತ್ತುಮಾಡಬೇಕು, ಹೊರಗಿನ ಕುಂಬಾರನೇ ಮುಂತಾದವರನ್ನಾಶ್ರಯಿಸಿ ಗೊತ್ತುಮಾಡಬಾರದು ಎಂಬುದಕ್ಕೆ ಯಾವ ನಿಯಮವೂ ಇರುವದಿಲ್ಲ.[2] ಹೀಗಾದರೆ ಯಾವದೊಂದಕ್ಕೂ ವಿರೋಧ ವಾಗುವದಿಲ್ಲ ; (ಇಷ್ಟೇ ಅಲ್ಲ), ಶ್ರುತಿಗೂ ಹೊಂದುಗಡೆಯಾಗುತ್ತದೆ, ಏಕೆಂದರೆ (ಆಗ) ಚೇತನಕಾರಣವನ್ನೇ (ಯುಕ್ತಿಯು) ಒದಗಿಸಿಕೊಟ್ಟಂತೆ ಆಗುತ್ತದೆ. ಆದ್ದರಿಂದ ರಚನಾನುಪಪತ್ತಿ ಎಂಬ ಹೇತುವಿನಿಂದಲೂ ಅಚೇತನವಾದ (ಪ್ರಧಾನವು) ಜಗತ್ಕಾರಣವೆಂದು ಅನುಮಾನಿಸುವದಾಗುವದಿಲ್ಲ.

## ಅನ್ವಯಾದಿಗಳೂ ಹೊಂದುವದಿಲ್ಲ

(ಭಾಷ್ಯ)

೬. ಅನ್ವಯಾದ್ಯನುಪಪತ್ತೇಶ್ಚ ಇತಿ ಚಶಬ್ದೇನ ಹೇತೋರಸಿದ್ಧಿಂ ಸಮುಚ್ಚಿನೋತಿ | ನ ಹಿ ಬಾಹ್ಯಾಧ್ಯಾತ್ಮಿಕಾನಾಂ ಭೇದಾನಾಂ ಸುಖದುಃಖ ಮೋಹಾತ್ಮಕತಯಾ ಅನ್ವಯಃ ಉಪಪದ್ಯತೇ | ಸುಖಾದೀನಾಂ ಚ ಆನ್ತರತ್ವ ಪ್ರತೀತೇಃ ಶಬ್ದಾದೀನಾಂ ಚ ಅತದ್ರೂಪತ್ವಪ್ರತೀತೇಃ | ತನ್ನಿಮಿತ್ತತ್ವ ಪ್ರತೀತೇಶ್ಚ | ಶಬ್ದಾದ್ಯವಿಶೇಷೇಽಪಿ ಚ ಭಾವನಾವಿಶೇಷಾತ್ ಸುಖಾದಿ ವಿಶೇಷೋಪಲಬ್ಧೇಃ | ತಥಾ ಪರಿಮಿತಾನಾಂ ಭೇದಾನಾಂ ಮೂಲಾಙ್ಕುರಾ ದೀನಾಂ ಸಂಸರ್ಗಪೂರ್ವಕತ್ವಂ ದೃಷ್ಟ್ವಾ ಬಾಹ್ಯಾಧ್ಯಾತ್ಮಿಕಾನಾಂ ಭೇದಾನಾಂ ಪರಿಮಿತತ್ವಾತ್ ಸಂಸರ್ಗಪೂರ್ವಕತ್ವಮ್ ಅನುಮಿಮಾನಸ್ಯ ಸತ್ತ್ವರಜಸ್ತಮ ಸಾಮಪಿ ಸಂಸರ್ಗಪೂರ್ವಕತ್ವಪ್ರಸಙ್ಗಃ | ಪರಿಮಿತತ್ವಾವಿಶೇಷಾತ್ | ಕಾರ್ಯ

---

1. ಪ್ರಧಾನವು ತಾನೇ ಸೃಜಿಸಲಾರದು, ಚೇತನಕ್ಕೆ ಒಳಗಾಗಿ ಜಗತ್ಕಾರಣವಾಗ ಬಹುದು –ಎಂಬುದಕ್ಕೆ ದೃಷ್ಟಾಂತವಿದು. ಇದನ್ನೊಪ್ಪಿದರೆ ಪ್ರಧಾನವಾದವನ್ನು ಬಿಡ ಬೇಕಾಗುವದು.

2. ಅಚೇತನವನ್ನೇ ಏಕೆ ದೃಷ್ಟಾಂತವಾಗಿ ತೆಗೆದುಕೊಳ್ಳಬೇಕು ? ಚೇತನವನ್ನೇಕೆ ತೆಗೆದುಕೊಳ್ಳಬಾರದು ? –ಎಂಬ ಭಾವದಿಂದ ಇದನ್ನು ಹೇಳಿದೆ. ಚೇತನವನ್ನು ನಿಮಿತ್ತ ಕಾರಣವಾಗಿಯೇ ತೆಗೆದುಕೊಳ್ಳಬೇಕೆಂಬ ಭಾವವೇನೂ ಇಲ್ಲಿಲ್ಲ.

ಕಾರಣಭಾವಸ್ತು ಪ್ರೇಕ್ಷಾಪೂರ್ವಕನಿರ್ಮಿತಾನಾಂ ಶಯನಾಸನಾದೀನಾಂ ದೃಷ್ಟಃ ಇತಿ ನ ಕಾರ್ಯಕಾರಣಭಾವಾತ್ ಬಾಹ್ಯಾಧ್ಯಾತ್ಮಿಕಾನಾಂ ಭೇದಾನಾಮ್ ಅಚೇತನಪೂರ್ವಕತ್ವಂ ಶಕ್ಯಂ ಕಲ್ಪಯಿತುಮ್ ॥

( ಭಾಷ್ಯಾರ್ಥ )

ಅನ್ವಯಾದಿಗಳು ಹೊಂದುವದಿಲ್ಲವಾದ್ದರಿಂದಲೂ (ಪ್ರಧಾನವು ಜಗತ್ಕಾರಣವಲ್ಲ) ಎಂದು (ಸೂತ್ರದಲ್ಲಿರುವ) ಚಶಬ್ದದಿಂದ ಹೇತುವಿನ ಅಸಿದ್ಧಿಯನ್ನು (ಇದಕ್ಕೆ) ಸೇರಿಸಿಕೊಂಡಿರುತ್ತಾರೆ.[1] ಹೇಗೆಂದರೆ ಹೊರಗಿನ ಮತ್ತು ಆಧ್ಯಾತ್ಮಿಕವಾದ ಭೇದಗಳಲ್ಲಿ ಸುಖದುಃಖಮೋಹಾತ್ಮತ್ವವು ಅನುಗತವಾಗಿದೆ ಎಂಬುದು ಹೊಂದುವದಿಲ್ಲ. ಏಕೆಂದರೆ ಸುಖಾದಿಗಳು ಒಳಗಿರುವವೆಂದು ತೋರಿಬರುತ್ತಿದೆ : ಶಬ್ದಾದಿಗಳು ಆ ರೂಪದಲ್ಲಿ ತೋರುವದಿಲ್ಲ, ಅವಕ್ಕೆ ನಿಮಿತ್ತವಾಗಿರುವವೆಂದೂ ತೋರಿಬರುತ್ತಿವೆ.[2] ಶಬ್ದಾದಿಗಳಲ್ಲಿ ಯಾವ ವಿಶೇಷವೂ ಇಲ್ಲದಿದ್ದರೂ ಭಾವನಾವಿಶೇಷದಿಂದ[3] ಸುಖಾದಿವಿಶೇಷಗಳು (ಆಗುವದು) ಕಾಣಬರುವದರಿಂದಲೂ (ಹೀಗೆಂದು ತಿಳಿಯಬೇಕು). ಇದರಂತೆ ಪರಿಮಿತವಾಗಿರುವ[4] ಬೇರು,ಮೊಳಕೆ- ಮುಂತಾದ ಭೇದಗಳು ಸಂಸರ್ಗಪೂರ್ವಕವಾಗಿರುವದು, ಕಂಡುಬರುವದರಿಂದ ಹೊರಗಿನ ಮತ್ತು ಆಧ್ಯಾತ್ಮಿಕವಾದ ಭೇದಗಳೂ ಪರಿಮಿತವಾಗಿರುವದರಿಂದ ಸಂಸರ್ಗಪೂರ್ವಕವಾಗಿರಬೇಕು ಎಂಬುದು[5] ಅನು

---

1. ಪ್ರಧಾನದ ಗುಣಗಳ ಕಾರ್ಯವಾದ ಸುಖದುಃಖಮೋಹಗಳು ಕಾರ್ಯವಾದ ಜಗತ್ತಿನಲ್ಲಿ ಅನ್ವಿತವಾಗಿವೆ ಎಂಬುದನ್ನು ಒಪ್ಪಿದರೂ ಅಚೇತನವು ಸ್ವತಂತ್ರವಾಗಿ ಜಗತ್ಕಾರಣವಾಗಲಾರದು ಎಂದು ಪ್ರತ್ಯನುಮಾನವನ್ನು ಹೇಳಿತ್ತು. ಈಗ ಅವು ಅನುಗತವಾಗಿವೆ ಎಂಬ ಹೇತುವೇ ಇಲ್ಲದ್ದರಿಂದ ಅನುಮಾನವು ಸರಿಯಲ್ಲ ಎಂದು ಹೇಳಿದೆ.

2. ಶಬ್ದಾದಿಗಳು ಹೊರಗೆ ಇದ್ದುಕೊಂಡು ಒಳಗೆ ಆಗುವ ಸುಖಾದಿಗಳಿಗೆ ಹೇತುವಾಗಿವೆ, ತಾವೇ ಸುಖಾದಿಸ್ವರೂಪವಲ್ಲ ; ಆದ್ದರಿಂದ ಅವುಗಳಲ್ಲಿ ಸುಖಾದಿಗಳು ಅನುಗತವಾಗಿವೆ ಎಂಬುದು ಸರಿಯಲ್ಲ ಎಂದು ಭಾವ.

3. ಅದೇ ಶಬ್ದಾದಿಗಳಿಂದ ಒಬ್ಬನಿಗೆ ಸುಖವೂ ಮತ್ತೊಬ್ಬನಿಗೆ ದುಃಖವೂ ಆಗುವದು ; ಒಬ್ಬನಿಗೇ ಈಗ ಸುಖವೂ ಕಾಲಾಂತರದಲ್ಲಿ ದುಃಖವೂ ಆಗುವದು. ಇಲ್ಲಿ ಸುಖಾದಿಹೇತುತ್ವವುಕೂಡ ಶಬ್ದಾದಿಗಳಲ್ಲಿ ನಿಯತವಾಗಿಲ್ಲವೆಂದು ಹೇಳಿದಂತಾಗಿದೆ.

4. ಪರಿಮಾಣ ಎಂಬ ಹೇತುವೂ ಅಸಿದ್ಧವೆಂದು ತೋರಿಸುತ್ತಾರೆ.

5. ಪರಿಚ್ಛಿನ್ನವಾದದ್ದೆಲ್ಲವೂ ಅನೇಕ ವಸ್ತುಗಳ ಸಂಬಂಧಪೂರ್ವಕವಾಗಿರುತ್ತದೆ ಎಂಬ ನಿಯಮವು ಸರಿಯಲ್ಲ. ಏಕೆಂದರೆ ಸತ್ತ್ವರಜಸ್ತಮೋಗುಣಗಳು ಪರಸ್ಪರ ಪರಿಚ್ಛಿನ್ನವಾಗಿರುತ್ತವೆ ಎಂದರ್ಥ. ಈ ಅರ್ಥದಲ್ಲಿ ಪುರುಷರೂ ಗುಣಗಳೂ ಪರಿಮಿತವಾಗಿಯೇ ಇರುತ್ತವೆ ಎಂದೂ ವಾದಿಸುವದಕ್ಕೆ ಬರುತ್ತದೆ. ಆಗ ಪುರುಷನೂ ಸಂಸರ್ಗಪೂರ್ವಕವೆಂಬ ಅನಿಷ್ಟವೂ ಬಂದೊದಗುತ್ತದೆ.

ಮಾನಿಸುವ (ಪ್ರಧಾನವಾದಿಯ ಮತದಲ್ಲಿ) ಸತ್ತ್ವರಜಸ್ತಮಸ್ಸುಗಳುಕೂಡ ಸಂಸರ್ಗಪೂರ್ವಕವಾಗಿರಬೇಕೆಂಬ ಪ್ರಸಂಗವುಂಟಾಗುವದು. ಏಕೆಂದರೆ (ಅವೂ) ಪರಿಮಿತವಾಗಿವೆ ಎಂಬುದು ಸಮಾನವಾಗಿರುತ್ತದೆ. ಕಾರ್ಯಕಾರಣ ಭಾವವೋ ಎಂದರೆ ವಿಚಾರಪೂರ್ವಕವಾಗಿ ನಿರ್ಮಿಸಿರುವ ಹಾಸಿಗೆ, ಕುಳಿತು, ಕೊಳ್ಳುವ ಪೀಠ – ಮುಂತಾದವುಗಳಲ್ಲಿಯೇ ಕಂಡುಬರುತ್ತದೆಯಾದ್ದರಿಂದ ಕಾರ್ಯಕಾರಣಭಾವದಿಂದ ಹೊರಗಿನ ಮತ್ತು ಒಳಗಿನ ಭೇದಗಳು ಅಚೇತನ ಕಾರಣದಿಂದಾಗಿವೆ ಎಂದು ಕಲ್ಪಿಸುವದಕ್ಕಾಗುವದಿಲ್ಲ.[1]

**ಪ್ರವೃತ್ತೇಶ್ಚ ॥ ೨ ॥**

೨. ಪ್ರವೃತ್ತಿಯಿಂದಲೂ (ಹೀಗೆ).

## ಸ್ವತಂತ್ರಪ್ರಧಾನಕ್ಕೆ ಪ್ರವೃತ್ತಿಯೂ ಹೊಂದುವದಿಲ್ಲ

(ಭಾಷ್ಯ)

೭. ಆಸ್ತಾಂ ತಾವತ್ ಇಯಂ ರಚನಾ । ತತ್ಸಿದ್ಧ್ಯರ್ಥಾ ಯಾ ಪ್ರವೃತ್ತಿಃ ಸಾಮ್ಯಾವಸ್ಥಾನಾತ್ ಪ್ರಚ್ಯುತಿಃ ಸತ್ತ್ವರಜಸ್ತಮಸಾಮ್ ಅಙ್ಗಾಙ್ಗಿಭಾವರೂಪಾಪತ್ತಿಃ ವಿಶಿಷ್ಟಕಾರ್ಯಾಭಿಮುಖಪ್ರವೃತ್ತಿತಾ ಸಾಪಿ ನ ಅಚೇತನಸ್ಯ ಪ್ರಧಾನಸ್ಯ ಸ್ವತನ್ತ್ರಸ್ಯ ಉಪಪದ್ಯತೇ । ಮೃದಾದಿಷು ಅದರ್ಶನಾತ್, ರಥಾದಿಷು ಚ । ನ ಹಿ ಮೃದಾದಯೋ ರಥಾದಯೋ ವಾ ಸ್ವಯಮ್ ಅಚೇತನಾಃ ಸನ್ತಃ ಚೇತನೈಃ ಕುಲಾಲಾದಿಭಿಃ ಅಶ್ವಾದಿಭಿರ್ವಾ ಅನಧಿಷ್ಠಿತಾಃ ವಿಶಿಷ್ಟಕಾರ್ಯಾಭಿಮುಖಪ್ರವೃತ್ತಯೋ ದೃಶ್ಯನ್ತೇ । ದೃಷ್ಟಾಚ್ಚ ಅದೃಷ್ಟಸಿದ್ಧಿಃ । ಅತಃ ಪ್ರವೃತ್ತ್ಯನುಪಪತ್ತೇರಪಿ ಹೇತೋಃ ನ ಅಚೇತನಂ ಜಗತ್ಕಾರಣಮ್ ಅನುಮಾತವ್ಯಂ ಭವತಿ ॥

(ಭಾಷ್ಯಾರ್ಥ)

ಈ ರಚನೆಯು ಹಾಗಿರಲಿ, ಇದು ಸಿದ್ಧಿಯಾಗುವದಕ್ಕೆ ಪ್ರವೃತ್ತಿಯು, ಸಾಮ್ಯಾವಸ್ಥೆಯನ್ನು ಬಿಟ್ಟು ಜಾರುವದು,[2] 'ಅಂದರೆ ಸತ್ತ್ವರಜಸ್ತಮಸ್ಸುಗಳು ಅಂಗಾಂಗಿಭಾವರೂಪವನ್ನು ತಳೆಯುವದು, ಇಂಥದ್ದೊಂದು (ಗೊತ್ತಾದ) ಕಾರ್ಯವಾಗಲು ತೊಡಗುವದು (ಎಂಬುದಿದೆಯಲ್ಲ), ಆ (ಪ್ರವೃತ್ತಿಯು)

1. ಕಾರ್ಯವು ಅಚೇತನಕಾರಣದಿಂದಲೇ ಆಗಿರಬೇಕು ಎಂಬ ನಿಯಮವಿಲ್ಲ; ಚೇತನಾಧಿಷ್ಠಿತವಾದ ಅಚೇತನದಿಂದಾಗಿರುತ್ತದೆ ಎಂದೇ ಕಂಡಿದೆ.

2. —ಸತ್ತ್ವರಜಸ್ತಮಸ್ಸುಗಳ ಸಾಮ್ಯಾವಸ್ಥೆಯೇ ಪ್ರಧಾನವು, ಅದು ವಿಷಮವಾದರೆ ಸೃಷ್ಟಿಗೆ ಮೊದಲಾಗುವದು ಎಂದು ಸಾಂಖ್ಯರ ಅಭ್ಯುಪಗಮವು.

ಕೂಡ ಅಚೇತನವಾದ ಪ್ರಧಾನಕ್ಕೆ ಸ್ವತಂತ್ರವಾಗಿ ಹೊಂದುವದಿಲ್ಲ. ಏಕೆಂಪರೆ ಮಣ್ಣು ಮುಂತಾದವುಗಳಲ್ಲಿಯೂ ಗಾಡಿಯೇ ಮುಂತಾದವುಗಳಲ್ಲಿಯೂ (ಹಾಗೆ ತಾವೇ ತೊಡಗುವದು) ಕಂಡುಬಂದಿರುವದಿಲ್ಲ. ಮಣ್ಣು ಮುಂತಾದವುಗಳಾಗಲಿ ಗಾಡಿಯೇ ಮುಂತಾದವುಗಳಾಗಲಿ ತಾವು ಅಚೇತನವಾಗಿರುವದರಿಂದ ಚೇತನವಾದ ಕುಂಬಾರನೇ ಮುಂತಾದವರಿಂದ, ಅಥವಾ ಕುದುರೆಯೇ ಮುಂತಾದವುಗಳಿಂದ ಅಧಿಷ್ಠಿತವಾಗಿದ್ದ ಹೊರತು ಆಯಾ ಕಾರ್ಯಕ್ಕೆ ತಕ್ಕ ಪ್ರವೃತ್ತಿಯುಳ್ಳವಾಗುವದು ಕಂಡುಬಂದಿಲ್ಲವಲ್ಲ! ಆದರೆ **ದೃಷ್ಟದಿಂದಲೇ ಅದೃಷ್ಟವು ಸಿದ್ಧಿಯಾಗಬೇಕಾಗಿರುತ್ತದೆ.**[1] ಆದ್ದರಿಂದ ಪ್ರವೃತ್ತಿಯು ಹೊಂದುವದಿಲ್ಲವೆಂಬ ಕಾರಣದಿಂದಲೂ ಅಚೇತನವಾದ (**ಪ್ರಧಾನ**ವೆಂಬ) ಜಗತ್ಕಾರಣವನ್ನು ಅನುಮಾನಿಸುವದು ಸರಿಯಾಗುವದಿಲ್ಲ.[2]

## ಅಚೇತನದಲ್ಲಿ ಕಾಣಬರುವ ಪ್ರವೃತ್ತಿಗೆ ಚೇತನವೇ ನಿಮಿತ್ತ

(ಭಾಷ್ಯ)

೮. ನನು ಚೇತನಸ್ಯಾಪಿ ಪ್ರವೃತ್ತಿಃ ಕೇವಲಸ್ಯ ನ ದೃಷ್ಟಾ । ಸತ್ಯಮೇತತ್ । ತಥಾಪಿ ಚೇತನಸಂಯುಕ್ತಸ್ಯ ರಥಾದೇಃ ಅಚೇತನಸ್ಯ ಪ್ರವೃತ್ತಿಃ ದೃಷ್ಟಾ । ನ ತು ಅಚೇತನಸಂಯುಕ್ತಸ್ಯ ಚೇತನಸ್ಯ ಪ್ರವೃತ್ತಿಃ ದೃಷ್ಟಾ । ಕಿಂ ಪುನರತ್ರ ಯುಕ್ತಮ್? ಯಸ್ಮಿನ್ ಪ್ರವೃತ್ತಿಃ ದೃಷ್ಟಾ ತಸ್ಯ ಸಾ, ಉತ ಯತ್ಸಂಪ್ರಯುಕ್ತಸ್ಯ ದೃಷ್ಟಾ ತಸ್ಯ ಸಾ ಇತಿ? ನನು ಯಸ್ಮಿನ್ ದೃಶ್ಯತೇ ಪ್ರವೃತ್ತಿಃ ತಸ್ಯೈವ ಸಾ ಇತಿ ಯುಕ್ತಮ್ । ಉಭಯೋಃ ಪ್ರತ್ಯಕ್ಷತ್ವಾತ್ । ನ ತು ಪ್ರವೃತ್ತ್ಯಾಶ್ರಯತ್ವೇನ ಕೇವಲಃ ಚೇತನಃ ರಥಾದಿವತ್ ಪ್ರತ್ಯಕ್ಷಃ । ಪ್ರವೃತ್ತ್ಯಾಶ್ರಯದೇಹಾದಿಸಂಯುಕ್ತಸ್ಯೈವ ತು ಚೇತನಸ್ಯ ಸದ್ಭಾವಸಿದ್ಧಿಃ । ಕೇವಲಾಚೇತನರಥಾದಿವೈಲಕ್ಷಣ್ಯಂ ಜೀವದ್ದೇಹಸ್ಯ

1. ಅನುಮಾನಕ್ಕೆ ದೃಷ್ಟವಾಗಿರುವ ವ್ಯಾಪ್ತಿಯು ಬೇಕು. ಆದರೆ ಅಚೇತನವು ತಾನೇ ಪ್ರವರ್ತಿಸಿ ಕಾರ್ಯವಾಗುವದೆಂದು ಎಲ್ಲಿಯೂ ಕಂಡುಬಂದಿಲ್ಲ–ಎಂದರ್ಥ. ಅನುಮಾನವೇ ಇಲ್ಲಿ ಪ್ರಕೃತವಾಗಿರುವದರಿಂದ ಸಾಂಖ್ಯನಿಗೆ ಪ್ರಧಾನವನ್ನು ಅನುಮಾನಿಸುವದಕ್ಕೆ ತಕ್ಕ ದೃಷ್ಟಾಂತವಿಲ್ಲ ಎಂದಿದೆ. ಸರ್ವತ್ರ ಅದೃಷ್ಟಸಿದ್ಧಿಗೆ ದೃಷ್ಟಾಂತವಿರಲೇಬೇಕು ಎಂಬ ಅಭಿಪ್ರಾಯವೇನೂ ಇಲ್ಲ.

2. ಪ್ರಧಾನಕ್ಕೆ ತಾನೇ ತೊಡಗುವ ಶಕ್ತಿಯಿದೆ ಎಂಬುದನ್ನು ಅನುಮಾನದಿಂದ ಸಾಧಿಸುವದಕ್ಕೆ ಬರುವದಿಲ್ಲ ಎಂದು ಸಿದ್ಧವಾಯಿತು ಎಂದರ್ಥ. ಪ್ರವೃತ್ತಿಯೇ ಇಲ್ಲದ ಮೇಲೆ ರಚನೆ ಎಲ್ಲಿಂದ ಬಂದೀತು?

ದೃಷ್ಟಮ್ ಇತಿ । ಅತ ಏವ ಚ ಪ್ರತ್ಯಕ್ಷೇ ದೇಹೇ ಸತಿ ದರ್ಶನಾತ್ ಅಸತಿ ಚ ಅದರ್ಶನಾತ್ ದೇಹಸ್ಯೈವ ಚೈತನ್ಯಮಪಿ ಇತಿ ಲೌಕಾಯತಿಕಾಃ ಪ್ರತಿಪನ್ನಾಃ । ತಸ್ಮಾತ್ ಅಚೇತನಸ್ಯೈವ ಪ್ರವೃತ್ತಿಃ ಇತಿ । ತದಭಿಧೀಯತೇ । ನ ಬ್ರೂಮೋ ಯಸ್ಮಿನ್ ಅಚೇತನೇ ಪ್ರವೃತ್ತಿರ್ದೃಶ್ಯತೇ ನ ತಸ್ಯ ಸಾ ಇತಿ । ಭವತು ತಸ್ಯೈವ ಸಾ । ಸಾ ತು ಚೇತನಾತ್ ಭವತಿ ಇತಿ ಬ್ರೂಮಃ । ತದ್ಭಾವೇ ಭಾವಾತ್, ತದಭಾವೇ ಚ ಅಭಾವಾತ್ । ಯಥಾ ಕಾಷ್ಠಾದಿವ್ಯಪಾಶ್ರಯಾಪಿ ದಾಹಪ್ರಕಾಶಲಕ್ಷಣಾ ವಿಕ್ರಿಯಾ ಅನುಪಲಭ್ಯಮಾನಾಪಿ ಚ ಕೇವಲೇ ಜ್ವಲನೇ ಜ್ವಲನಾದೇವ ಭವತಿ ತತ್ಸಂಯೋಗೇ ದರ್ಶನಾತ್, ತದ್ವಿಯೋಗೇ ಚ ಅದರ್ಶನಾತ್ ತದ್ವತ್ । ಲೌಕಾಯತಿಕಾನಾಮಪಿ ಚೇತನ ಏವ ದೇಹಃ ಅಚೇತನಾನಾಂ ರಥಾದೀನಾಂ ಪ್ರವರ್ತಕೋ ದೃಷ್ಟಃ ಇತಿ ಅವಿಪ್ರತಿಷಿದ್ಧಂ ಚೇತನಸ್ಯ ಪ್ರವರ್ತಕತ್ವಮ್ ॥

(ಭಾಷ್ಯಾರ್ಥ)

(ಆಕ್ಷೇಪ):— ಬರಿಯ ಚೇತನದಲ್ಲಿಯೂ ಪ್ರವೃತ್ತಿಯು ಕಂಡಿರುವದಿಲ್ಲವಲ್ಲ !

(ಪರಿಹಾರ):— ಇದು ನಿಜ. ಆದರೂ ಚೇತನಸಂಯುಕ್ತವಾದ ಅಚೇತನವಾದ ರಥಾದಿಗಳಲ್ಲಿ ಪ್ರವೃತ್ತಿಯು ಕಂಡಿರುತ್ತದೆಯೇ ಹೊರತು ಅಚೇತನಸಂಯುಕ್ತವಾಗಿರುವ ಚೇತನದಲ್ಲಿ[1] ಪ್ರವೃತ್ತಿಯು ಕಂಡಿರುವದಿಲ್ಲ.

(ವಿಮರ್ಶೆ):— ಹಾಗಾದರೆ ಇಲ್ಲಿ ಯಾವದು ಸರಿ ? ಯಾವದರಲ್ಲಿ ಪ್ರವೃತ್ತಿಯು ಕಾಣುವದೋ ಆ (ಪ್ರವೃತ್ತಿಯು) ಅದರದ್ದೊ, ಯಾವದರ ಸಂಯೋಗವುಳ್ಳ (ಪದಾರ್ಥ)ದಲ್ಲಿ ಕಾಣುವದೋ ಅದರದ್ದೊ ?

(ಪ್ರಧಾನವಾದಿ):— ಯಾವದರಲ್ಲಿ ಪ್ರವೃತ್ತಿಯು ಕಾಣಬರುವದೋ ಅದರದ್ದೇ ಅದು ಎಂಬುದು ಸರಿಯಾದದ್ದು ; ಏಕೆಂದರೆ (ಆ ಪಕ್ಷದಲ್ಲಿ) ಎರಡೂ[2] ಪ್ರತ್ಯಕ್ಷವಾಗಿರುತ್ತವೆ. ಆದರೆ ಬರಿಯ ಚೇತನವು ರಥಾದಿಗಳಂತೆ ಪ್ರವೃತ್ತಿಗೆ ಆಶ್ರಯವೆಂದು ಪ್ರತ್ಯಕ್ಷವಾಗಿರುವದಿಲ್ಲ; ಮತ್ತೇನೆಂದರೆ ಪ್ರವೃತ್ತಿಗೆ ಆಶ್ರಯವಾಗಿರುವ ದೇಹಾದಿಗಳ ಸಂಯೋಗವುಳ್ಳದ್ದಾಗಿಯೇ ಚೇತನವು ಇದೆ

---

1. ಸಾಂಖ್ಯಮತದಂತೆ ಚೇತನವು ಅಸಂಗವಾದ್ದರಿಂದ ಚೇತನಾಚೇತನಗಳ ಸಂಯೋಗವನ್ನು ಸಾಂಖ್ಯನೂ ಒಪ್ಪುವದಿಲ್ಲ. ಚೇತನಸಂಬದ್ಧವಾದಂತೆ ತೋರುವ ಅಚೇತನದಲ್ಲಿ ಪ್ರವೃತ್ತಿಯು ಕಾಣಿಸುತ್ತದೆ ಎಂದಿಷ್ಟೇ ಅರ್ಥ.

2. ಪ್ರವೃತ್ತಿಯೂ ಅದಕ್ಕೆ ಆಶ್ರಯವಾದ ರಥಾದಿಗಳೂ ಎಂದರ್ಥ.

ಎಂದು ಸಿದ್ಧವಾಗುತ್ತದೆ. ಏಕೆಂದರೆ ಬರಿಯ ಅಚೇತನವಾಗಿರುವ ರಥಾದಿಗಳಿಗಿಂತ ಬದುಕಿರುವ ದೇಹದಲ್ಲಿ ವೈಲಕ್ಷಣ್ಯವು ಕಂಡುಬರುತ್ತದೆ. ಆದ್ದರಿಂದಲೇ ಪ್ರತ್ಯಕ್ಷವಾಗಿರುವ ದೇಹವು ಇದ್ದರೆ ಕಾಣಬರುವದರಿಂದಲೂ ಇಲ್ಲದಿದ್ದರೆ ಕಾಣದೆ ಇರುವದರಿಂದಲೂ ಚೈತನ್ಯವೂ ದೇಹಕ್ಕೇ (ಸೇರಿದ್ದು) ಎಂದು **ಲೌಕಾಯತಿಕರು** ತಿಳಿದಿರುವರು.[1] ಆದ್ದರಿಂದ ಪ್ರವೃತ್ತಿಯು ಅಚೇತನಕ್ಕೇ ಸೇರಿದ್ದು.

(ಸಿದ್ಧಾಂತಿ):— ಇದಕ್ಕೆ ಹೇಳುತ್ತೇವೆ. ಯಾವ ಅಚೇತನದಲ್ಲಿ ಪ್ರವೃತ್ತಿಯು ಕಾಣುವದೋ ಅದು ಅದರದ್ದಲ್ಲವೆಂದು (ನಾವು) ಹೇಳುತ್ತಿಲ್ಲ. ಅದು ಅದರದ್ದೇ ಆಗಲಿ. ಆದರೆ ಅದು ಚೇತನದಿಂದ ಆಗುತ್ತದೆ ಎಂದು ಹೇಳುತ್ತೇವೆ. ಏಕೆಂದರೆ ಅದಿದ್ದರೆ (ಪ್ರವೃತ್ತಿಯು) ಇರುತ್ತದೆ, ಅದಿಲ್ಲದೆ ಇದ್ದರೆ ಇರುವದಿಲ್ಲ. ಹೇಗೆ ಕಟ್ಟಿಗೆಯೇ ಮುಂತಾದವುಗಳನ್ನು ಆಶ್ರಯಿಸಿಕೊಂಡಿರುವ ಸುಡುವಿಕೆ, ಬೆಳಗುವಿಕೆ- ಮುಂತಾದದ್ದು ಬರಿಯ ಬೆಂಕಿಯಲ್ಲಿ ಕಾಣಬರುವದಿಲ್ಲವಾದರೂ ಬೆಂಕಿಯಿಂದಲೇ ಆಗುವದೋ (ಹಾಗೆ). ಆ (ಬೆಂಕಿಯ) ಸಂಯೋಗವಿದ್ದರೆ (ಆ ಸುಡುವಿಕೆಬೆಳಗುವಿಕೆಗಳು) ಕಾಣಬರುತ್ತವೆ. ಅದನ್ನಗಲಿದರೆ ಕಾಣಬರುವದಿಲ್ಲ(ವಾದ್ದರಿಂದ ಹೇಗೆ ಅದರದ್ದೇ ಎಂದು ನಿಶ್ಚಯಿಸುವೆವೋ) ಹಾಗೆಯೇ (ಇದು) ಲೌಕಾಯತಿಕ(ಪಕ್ಷದಲ್ಲಿ) ಕೂಡ ಚೇತನವಾದ ದೇಹವೇ ಅಚೇತನವಾದ ರಥಾದಿಗಳ ಪ್ರವೃತ್ತಿಗೆ ಕಾರಣವಾಗಿರುವದು ಕಂಡುಬರುವದರಿಂದ ಚೇತನವೇ ಪ್ರವರ್ತಕವೆಂಬುದನ್ನು (ಅವರೂ) ಅಲ್ಲಗಳೆಯುವ ಹಾಗಿಲ್ಲ.

## ಚೈತನ್ಯಸ್ವರೂಪನಾದ ಆತ್ಮನಿಗೆ ಪ್ರವರ್ತಕತ್ವವು ಹೇಗೆ?

(ಭಾಷ್ಯ)

೯. ನನು ತವ ದೇಹಾದಿಸಂಯುಕ್ತಸ್ಯಾಪಿ ಆತ್ಮನಃ ವಿಜ್ಞಾನಸ್ವರೂಪಮಾತ್ರವ್ಯತಿರೇಕೇಣ ಪ್ರವೃತ್ತ್ಯನುಪಪತ್ತೇಃ ಅನುಪಪನ್ನಂ ಪ್ರವರ್ತಕತ್ವಮ್

---

1. ಲೌಕಾಯತಿಕರು ಅಥವಾ ಚಾರ್ವಾಕರು ದೇಹವೇ ಚೈತನ್ಯಯುಕ್ತವಾಗಿದೆ ಎಂದು ಭ್ರಾಂತರಾಗಿರುವದಕ್ಕೆ ಪ್ರತ್ಯಕ್ಷವೇ ಕಾರಣವು ಎಂದು ಭಾವ. ಚೇತನದ ಸಿದ್ಧಿಗೆ ಅಚೇತನಸಂಯೋಗವು ಬೇಕು ಎಂಬ ಯುಕ್ತಿಗೆ ಇದು ಉಪೋದ್ಬಲಕವು. ಚೇತನವಿಲ್ಲದೆ ಸಂಯೋಗವ್ಯವಹಾರವೇ ಸಿದ್ಧಿಸುವದಿಲ್ಲ ಎಂಬ ಯುಕ್ತಿಯನ್ನು ಸಾಂಖ್ಯನು ಇಲ್ಲಿ ಕಡೆಗಣಿಸುತ್ತಾನೆ.

ಇತಿ ಚೇತ್ । ನ । ಅಯಸ್ಕಾನ್ತವತ್ ರೂಪಾದಿವಚ್ಚ ಪ್ರವೃತ್ತಿರಹಿತಸ್ಯಾಪಿ ಪ್ರವರ್ತಕತ್ವೋಪಪತ್ತೇಃ । ಯಥಾ ಅಯಸ್ಕಾನ್ತೋ ಮಣಿಃ ಸ್ವಯಂ ಪ್ರವೃತ್ತಿರಹಿತೋಽಪಿ ಅಯಸಃ ಪ್ರವರ್ತಕೋ ಭವತಿ । ಯಥಾ ವಾ ರೂಪಾದಯೋ ವಿಷಯಾಃ ಸ್ವಯಂ ಪ್ರವೃತ್ತಿರಹಿತಾ ಅಪಿ ಚಕ್ಷುರಾದೀನಾಂ ಪ್ರವರ್ತಕಾ ಭವನ್ತಿ । ಏವಂ ಪ್ರವೃತ್ತಿರಹಿತೋಽಪಿ ಈಶ್ವರಃ ಸರ್ವಗತಃ ಸರ್ವಾತ್ಮಾ ಸರ್ವಜ್ಞಃ ಸರ್ವಶಕ್ತಿಶ್ಚ ಸನ್ ಸರ್ವಂ ಪ್ರವರ್ತಯೇತ್ ಇತಿ ಉಪಪನ್ನಮ್ । ಏಕತ್ವಾತ್ ಪ್ರವರ್ತ್ಯಾಭಾವೇ ಪ್ರವರ್ತಕತ್ವಾನುಪಪತ್ತಿಃ ಇತಿ ಚೇತ್ । ನ । ಅವಿದ್ಯಾಪ್ರತ್ಯುಪಸ್ಥಾಪಿತನಾಮರೂಪಮಾಯಾವೇಶವಶೇನ ಅಸಕೃತ್ ಪ್ರತ್ಯುಕ್ತತ್ವಾತ್ । ತಸ್ಮಾತ್ ಸಂಭವತಿ ಪ್ರವೃತ್ತಿಃ ಸರ್ವಜ್ಞಕಾರಣತ್ವೇ ನ ತು ಅಚೇತನಕಾರಣತ್ವೇ ॥

(ಭಾಷ್ಯಾರ್ಥ)

(ಆಕ್ಷೇಪ):— ನಿನ್ನ (ಮತದಲ್ಲಿ) ಆತ್ಮನು ದೇಹಾದಿಸಂಯುಕ್ತನಾದರೂ ವಿಜ್ಞಾನಮಾತ್ರಸ್ವರೂಪವನ್ನು ಬಿಟ್ಟು (ಬೇರೊಂದು) ಪ್ರವೃತ್ತಿಯು (ಅವನಿಗೆ) ಹೊಂದುವಂತಿಲ್ಲವಾದ್ದರಿಂದ (ಅವನು) ಪ್ರವರ್ತಕನೆಂಬುದು ಹೊಂದುವದಿಲ್ಲವಲ್ಲ ![1]

(ಪರಿಹಾರ):— ಹಾಗಲ್ಲ. ಏಕೆಂದರೆ ಸೂಜಿಗಲ್ಲಿನಂತೆಯೂ ರೂಪವೇ ಮುಂತಾದವುಗಳಂತೆಯೂ (ತನ್ನಲ್ಲಿ) ಪ್ರವೃತ್ತಿಯಿಲ್ಲದ್ದೂ ಪ್ರವರ್ತಕವಾಗಬಹುದು. (ಇದರ ವಿವರ): **ಹೇಗೆ ಅಯಸ್ಕಾಂತಮಣಿಯು ತಾನು ಪ್ರವೃತ್ತಿರಹಿತವಾಗಿದ್ದರೂ ಕಬ್ಬಿಣವನ್ನು ಪ್ರವರ್ತಿಸುವದು ಕಂಡುಬರುತ್ತಿದೆಯೋ, ಅಥವಾ ಹೇಗೆ ರೂಪಾದಿವಿಷಯಗಳು ತಾವು ಪ್ರವೃತ್ತಿರಹಿತವಾಗಿದ್ದರೂ ಚಕ್ಷುಸ್ಸು(ರಿಂದ್ರಿಯವೇ) ಮುಂತಾದವುಗಳನ್ನು ಪ್ರವರ್ತಿಸುವದು ಕಂಡುಬರುತ್ತಿದೆಯೋ ಹಾಗೆ ಪ್ರವೃತ್ತಿರಹಿತನಾದರೂ ಈಶ್ವರನು ಕೂಡ ಸರ್ವಗತನೂ ಸರ್ವಾತ್ಮನೂ ಸರ್ವಜ್ಞನೂ ಸರ್ವಶಕ್ತಿ**

1. ಕೂಟಸ್ಥಚೈತನ್ಯದಲ್ಲಿ ಪ್ರವರ್ತಕತ್ವವೆಂಬ ವ್ಯಾಪಾರವು ಹೇಗೆ ?— ಎಂದು **ಆಕ್ಷೇಪ.** ಸಾಂಖ್ಯಮತದಂತೆ ಪುರುಷನು ಉದಾಸೀನನು, ಪ್ರಕೃತಿಯು ತಾನೇ ಪ್ರವರ್ತಿಸುತ್ತದೆ.

**ಯೂ ಆಗಿರುವದರಿಂದ ಎಲ್ಲವನ್ನೂ ಪ್ರವರ್ತಿಸಬಹುದು ಎಂಬುದು ಯುಕ್ತವಾಗಿರುತ್ತದೆ.**[1]

(ಆಕ್ಷೇಪ):–**(ಈಶ್ವರನು) ತಾನೊಬ್ಬನೇ ಇರುವದರಿಂದ (ಅವನಿಗೆ) ಪ್ರವರ್ತ್ಯವೇ ಇರುವದಿಲ್ಲವಾಗಿ (ಅವನು) ಪ್ರವರ್ತಕನೆಂಬುದು ಹೊಂದುವದಿಲ್ಲವಲ್ಲ!**[2]

(ಪರಿಹಾರ):– ಹಾಗಲ್ಲ. ಏಕೆಂದರೆ ಅವಿದ್ಯೆಯು ತಂದೊಡ್ಡಿದ ನಾಮರೂಪಮಾಯಾವೇಶವಶದಿಂದ (ಇದನ್ನು) ಅನೇಕ ಸಲ ತಿರಸ್ಕರಿಸಿದೆ.[3] ಆದ್ದ

---

1. ಅಯಸ್ಕಾಂತದೃಷ್ಟಾಂತವೂ ರೂಪಾದಿದೃಷ್ಟಾಂತವೂ ಸಾಂಖ್ಯನಿಗೆ ಒಪ್ಪಾಗಿರುತ್ತವೆಯಾದ್ದರಿಂದ ಪ್ರವೃತ್ತಿರಹಿತನಾದ ಈಶ್ವರನೂ ಪ್ರವರ್ತಕನಾಗಬಹುದು ಎಂದು ಆ ದೃಷ್ಟಾಂತಗಳ ಬಲದಿಂದ ಅನುಮಾನಿಸಿದೆ. ಆತ್ಮನು ಸರ್ವಜ್ಞನೆಂದೂ ಸರ್ವಶಕ್ತನೆಂದೂ ಶ್ರುತಿಯಲ್ಲಿ ಹೇಳಿರುವದರಿಂದ ಪ್ರವೃತ್ತಿರಹಿತನಾದ ಈಶ್ವರನಿಗೂ ಪ್ರವರ್ತಕತ್ವವಿರಬಹುದು ಎಂದು ಪ್ರವರ್ತಕಶಕ್ತಿಯನ್ನು ಆಗಮಬಲದಿಂದ ಸಾಧಿಸಿದೆ. ಕೂಟಸ್ಥಚೈತನ್ಯಸ್ವರೂಪನಾದ ಆತ್ಮನು ಪ್ರವರ್ತಕನಾಗಲಾರನು ಎಂಬ ತರ್ಕವು ಈ ಆಗಮಕ್ಕೆ ವಿರುದ್ಧ ಎಂಬ ಭಾವವು ಇದರಲ್ಲಿ ಅಡಕವಾಗಿದೆ. ಈ ಪ್ರವರ್ತಕತ್ವವೂ ಮಾಯಿಕ ಎಂಬುದು ಮುಂದೆಯೇ ಸ್ಫುಟವಾಗುವದು.

2. ಈಶ್ವರನು ಅಥವಾ ಬ್ರಹ್ಮವು ಅದ್ವಿತೀಯನು ಎಂಬುದು ನಿಮ್ಮ ಮತವು; ಈ ಮತದಲ್ಲಿ ಪ್ರವರ್ತ್ಯವಿಲ್ಲದ್ದರಿಂದ ಪ್ರವರ್ತ್ಯಪ್ರವರ್ತಕಭಾವಕ್ಕೆ ಅವಕಾಶವಿಲ್ಲವಲ್ಲ!– ಎಂದು ಆಕ್ಷೇಪ.

3. ಅವಿದ್ಯೆಯಿಂದ ನಾಮರೂಪಗಳನ್ನು ಕಲ್ಪಿಸಿರುವ ಸ್ಥಿತಿಯಲ್ಲಿ ಮಾಯಿಕವಾದ ಪ್ರವರ್ತ್ಯಪ್ರವರ್ತಕತ್ವವನ್ನು ಹೇಳುತ್ತೇವೆ. ಪರಮಾರ್ಥಾವಸ್ಥೆಯಲ್ಲಿ ಆಕ್ಷೇಪಪರಿಹಾರಗಳೇ ಇಲ್ಲ ಎಂದರ್ಥ. ಜೀವೇಶ್ವರವಿಭಾಗ, ಸೃಷ್ಟಿ- ಮುಂತಾದ ನಾಮರೂಪವ್ಯವಹಾರವು ಆವಿದ್ಯಕವೆಂಬುದನ್ನು ಹಿಂದ ಸಂ. ೧ ಭಾ. ಭಾ. ೪೪೦, ೪೬೪, ೪೭೧– ಇವುಗಳಲ್ಲಿ ತಿಳಿಸಿರುತ್ತದೆ. ವೇದಾಂತದಲ್ಲಿ ಸಕಲವ್ಯವಹಾರಗಳೂ ಆವಿದ್ಯಕವೇ ಆಗಿರುವದರಿಂದ ಇದೊಂದು ವ್ಯವಹಾರವನ್ನು ಆಕ್ಷೇಪಿಸುವದು ಅತ್ಯಲ್ಪವಾಗುತ್ತದೆ ಎಂಬುದನ್ನು 'ಅನೇಕಸಲ ತಿರಸ್ಕರಿಸಿತ್ತದೆ' ಎಂಬ ವಾಕ್ಯವು ಸೂಚಿಸುತ್ತದೆ.

'ಅವಿದ್ಯಾಪ್ರತ್ಯುಪಸ್ಥಾಪಿತನಾಮರೂಪಮಾಯಾವೇಶವಶೇನ' ಎಂಬುದನ್ನು ಭಾಮತೀವ್ಯಾಖ್ಯಾನದಲ್ಲಿ ಹೀಗೆ ವಿವರಿಸಿದೆ: ಕಾರಣಭೂತವಾದ ಲಯಲಕ್ಷಣಾವಿದ್ಯೆಯಿಂದಲೂ ಸೃಷ್ಟಿಗೆ ಪೂರ್ವದಲ್ಲಿ ಕೂಡಿಹಾಕಿಕೊಂಡಿರುವ ವಿಕ್ಷೇಪಸಂಸ್ಕಾರದಿಂದಲೂ ಮುಂದೆ ಬಂದಿರುವ ನಾಮರೂಪವೆಂಬ ಮಾಯೆಯಿದೆಯಲ್ಲ ಅದರ ವಶದಿಂದ ಈ ಚೋದ್ಯವನ್ನು ಅನೇಕ ಸೇಳೆ ತಿರಸ್ಕರಿಸಿದೆ. **ನ್ಯಾಯನಿರ್ಣಯ**ದಲ್ಲಿ ಅನಾದ್ಯನಿರ್ವಾಚ್ಯವಾದ ಅವಿದ್ಯೆಯು ತಂದೊಡ್ಡಿರುವ ಎಂದರೆ ಕಲ್ಪಿಸಿರುವ ನಾಮರೂಪಗಳೆಂಬವು ಮಾಯಾಕಾರ್ಯವಾದ್ದರಿಂದ ಮಾಯು, ಅದರಲ್ಲಿ ಆವೇಶವೆಂದರೆ ಅಧ್ಯಸ್ತವಾದ ಚಿದಾತ್ಮಸಂಬಂಧವು; ಅದರ ವಶದಿಂದ– ಎಂದು ವರ್ಣಿಸಿದೆ. ಅವಿದ್ಯಾಕಲ್ಪಿತವಾದ ನಾಮರೂಪಪ್ರಪಂಚದಲ್ಲಿ ಅದೇ

ರಿಂದ ಸರ್ವಜ್ಞನಾದ (ಈಶ್ವರನು) ಕಾರಣನೆಂಬ ಪಕ್ಷದಲ್ಲಿ ಪ್ರವೃತ್ತಿಯು ಆಗಬಹುದೇ ಹೊರತು ಅಚೇತನ(ವಾದ ಪ್ರಧಾನವು) ಕಾರಣವೆಂಬ ಪಕ್ಷದಲ್ಲಿ ಆಗಲಾರದು[1]

**ಪಯೋಽಮ್ಬುವಚ್ಚೇತ್ ತತ್ರಾಪಿ ॥ ೩ ॥**

೩. ಹಾಲುನೀರುಗಳಂತೆ (ಆಗಬಹುದು) ಎಂದರೆ ಅಲ್ಲಿಯೂ (ಚೇತನಾಧಿಷ್ಠಿತತ್ವವಿದೆ).

## ಹಾಲುನೀರುಗಳು ಅಚೇತನಪ್ರವೃತ್ತಿಗೆ ದೃಷ್ಟಾಂತವಲ್ಲ

(ಭಾಷ್ಯ)

೧೦. ಸ್ಯಾದೇತತ್ । ಯಥಾ ಕ್ಷೀರಮ್ ಅಚೇತನಂ ಸ್ವಭಾವೇನೈವ ವತ್ಸವಿವೃದ್ಧ್ಯರ್ಥಂ ಪ್ರವರ್ತತೇ, ಯಥಾ ಚ ಜಲಮ್ ಅಚೇತನಂ ಸ್ವಭಾವೇನೈವ ಲೋಕೋಪಕಾರಾಯ ಸ್ಯನ್ದತೇ, ಏವಂ ಪ್ರಧಾನಮ್ ಅಚೇತನಂ ಸ್ವಭಾವೇನೈವ ಪುರುಷಾರ್ಥಸಿದ್ಧಯೇ ಪ್ರವರ್ತಿಷ್ಯತೇ ಇತಿ । ನೈತತ್ ಸಾಧೂಚ್ಯತೇ । ಯತಃ ತತ್ರಾಪಿ ಪಯೋಮ್ಬುನೋಃ ಚೇತನಾಧಿಷ್ಠಿತಯೋರೇವ ಪ್ರವೃತ್ತಿಃ ಇತಿ ಅನುಮಿಮೀಮಹೇ । ಉಭಯವಾದಿಪ್ರಸಿದ್ಧೇ ರಥಾದಾವಚೇತನೇ ಕೇವಲೇ ಪ್ರವೃತ್ತ್ಯದರ್ಶನಾತ್ । ಶಾಸ್ತ್ರಂ ಚ "ಯೋಽಪ್ಸು ತಿಷ್ಠನ್ ಯೋಽಪೋಽನ್ತರೋ ಯಮಯತಿ" (ಬೃ. ೩-೭-೪), ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯನ್ದನ್ತೇ" (ಬೃ. ೩-೮-೯)

---

ಅವಿದ್ಯಾರೂಪವಾದ ಮಾಯೆಯಿಂದ ಆವೇಶವು ಎಂದರೆ ಜೀವಾತ್ಮನಿಗೆ ಕಲ್ಪಿತಸಂಬಂಧವಾಗಿದೆಯಲ್ಲ, ಆದರಿಂದ ಈಶ್ವರನಿಗೆ ಅಂತರ್ಯಾಮಿತ್ವಾದಿಗಳುಂಟಾಗಿವೆ ಎಂದು ಹೇಳಿರುವವರಿಂದ ಚೋದ್ಯಕ್ಕೆ ಅವಕಾಶವಿಲ್ಲ- ಎಂದು ರತ್ನಪ್ರಭಾ. 'ನಾಮರೂಪಗಳೆಂಬ ಮಾಯೆಯು ಅವಿದ್ಯಾಕಲ್ಪಿತವಾಗಿವೆ ; ಅವಿದ್ಯೆ ಎಂದರೆ ಅಧ್ಯಾಸವು'- ಎಂದು ಸ್ಪಷ್ಟವಾಗಿ ಭಾಷ್ಯದಲ್ಲಿ ಹೇಳಿರುವವನ್ನು ಹೀಗೆಲ್ಲ ಏಕೆ ವ್ಯಾಖ್ಯಾನಕಾರರು ತಿರುಗಿಸುವರೋ ತಿಳಿಯದು. ಅವ್ಯಾಕೃತವು ಅವಿದ್ಯಾಕಲ್ಪಿತವಾಗಿವೆ ; ಅದರಮೂಲಕ ಬ್ರಹ್ಮಕ್ಕೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ ಎಂಬುದು ಭಾಷ್ಯದ ಅಭಿಪ್ರಾಯ.

1. ಲೋಕದೃಷ್ಟವಾದ ಉದಾಹರಣೆಗಳಿಂದ ಚೇತನಪ್ರಯುಕ್ತವಾಗಿ ಅಚೇತನವಾದ ಅವ್ಯಾಕೃತದ ಪ್ರವೃತ್ತಿಯು ಸಿದ್ಧವಾಗಬಹುದು ; ಸ್ವತಂತ್ರವಾದ ಅಚೇತನವಾದ ಪ್ರಧಾನಕ್ಕೆ ಪ್ರವೃತ್ತಿಯು ಸಿದ್ಧವಾಗಲಾರದು ಎಂದು ಅರ್ಥ.

ಇತ್ಯೇವಂಜಾತೀಯಕಂ ಸಮಸ್ತಸ್ಯ ಲೋಕಪರಿಸ್ಪಂದಿತಸ್ಯ ಈಶ್ವರಾಧಿಷ್ಠಿತತಾಂ ಶ್ರಾವಯತಿ । ತಸ್ಮಾತ್ ಸಾಧ್ಯಪಕ್ಷನಿಕ್ಷಿಪ್ತತ್ವಾತ್ ಪಯೋಽಮ್ಬುವತ್ ಇತಿ ಅನುಪನ್ಯಾಸಃ । ಚೇತನಾಯಾಶ್ಚ ಧೇನ್ವಾಃ ಸ್ನೇಹೇಚ್ಛಯಾ ಪಯಸಃ ಪ್ರವರ್ತಕತ್ವೋಪಪತ್ತೇಃ । ವತ್ಸಚೋಷಣೇನ ಚ ಪಯಸಃ ಆಕೃಷ್ಯಮಾಣತ್ವಾತ್ । ನ ಚ ಅಮ್ಬುನೋಽಪಿ ಅತ್ಯನ್ತಮ್ ಅನಪೇಕ್ಷಾ ನಿಮ್ನಭೂಮ್ಯಾದ್ಯಪೇಕ್ಷತ್ವಾತ್ ಸ್ಯನ್ದನಸ್ಯ । ಚೇತನಾಪೇಕ್ಷಂ ತು ಸರ್ವತ್ರ ಉಪದರ್ಶಿತಮ್॥

(ಭಾಷ್ಯಾರ್ಥ)

(ಸಾಂಖ್ಯನ ಅಭಿಪ್ರಾಯವು) ಇದಾಗಿರಬಹುದು : ಹೇಗೆ ಅಚೇತನವಾದ ಹಾಲು ಸ್ವಭಾವದಿಂದಲೇ ಕರುವಿನ ಬೆಳವಣಿಗೆಗಾಗಿ ಪ್ರವರ್ತಿಸುತ್ತದೆಯೋ[1] ಮತ್ತು ಹೇಗೆ ಅಚೇತನವಾದ ನೀರು ಸ್ವಭಾವದಿಂದಲೇ ಲೋಕೋಪಕಾರಕ್ಕಾಗಿ ಹರಿಯುತ್ತದೆಯೋ[2] ಹಾಗೆಯೇ ಅಚೇತನವಾದ ಪ್ರಧಾನವು ಸ್ವಭಾವದಿಂದಲೇ ಪುರುಷಾರ್ಥಸಿದ್ಧಿಗಾಗಿ ಪ್ರವರ್ತಿಸಬಹುದಾಗಿದೆ– (ಎಂದು ಅವನು ಹೇಳಬಹುದು).

ಇದು ಸರಿಯಾಗಿ ಹೇಳಿದ್ದಲ್ಲ. ಏಕೆಂದರೆ ಆ (ದೃಷ್ಟಾಂತ)ಗಳಲ್ಲಿಯೂ ಹಾಲುನೀರುಗಳು ಚೇತನಾಧಿಷ್ಠಿತವಾಗಿಯೇ ಪ್ರವರ್ತಿಸುತ್ತವೆ ಎಂದು ಅನುಮಾನಿಸುತ್ತೇವೆ. ಏಕೆಂದರೆ ಇಬ್ಬರು ವಾದಿಗಳಿಗೂ ಸಿದ್ಧವಾಗಿರುವ ರಥವೇ ಮುಂತಾದ ಕೇವಲ ಅಚೇತನದಲ್ಲಿ ಪ್ರವೃತ್ತಿಯು ಕಂಡುಬರುವದಿಲ್ಲ. "ಯಾವನು ಅಪ್ಪಿನಲ್ಲಿರುವವನೋ, ಯಾವನು ಅಪ್ಪನ್ನು ಒಳಗಿನಿಂದ ಹಿಡಿತದಲ್ಲಿಟ್ಟುಕೊಂಡಿರುತ್ತಾನೊ" (ಬೃ. ೩-೭-೪).[3] "ಗಾರ್ಗಿಯೇ, ಇದೇ ಅಕ್ಷರದ ಕಟ್ಟಪ್ಪಣೆಯಿಂದ ಪೂರ್ವಕ್ಕೆ ಕೆಲವು ನದಿಗಳು ಹರಿಯುತ್ತವೆ" (ಬೃ. ೩–೮–೯) ಎಂಬೀ ಜಾತಿಯ ಶಾಸ್ತ್ರವುಕೂಡ ಸಮಸ್ತಲೋಕವ್ಯಾಪಾರವೂ ಈಶ್ವರಾಧಿಷ್ಠಿತವಾಗಿರುವದೆಂದು ತಿಳಿಸುತ್ತವೆ. ಆದ್ದರಿಂದ ಸಾಧ್ಯಪಕ್ಷದಲ್ಲಿಯೇ ಸೇರಿರು

---

1 ಸಾಂ. ಕಾ. ೫೭ನೆಯ ಕಾರಿಕೆಯನ್ನೂ ತತ್ತ್ವಕೌಮುದೀಟೀಕೆಯನ್ನೂ ನೋಡಿರಿ.

2. ಹಾಲುನೀರುಗಳಿಗೆ ಇದು ಹೀಗಾಗಲಿ ಎಂಬ ಇಚ್ಛೆಯಾಗಲಿ ತಿಳಿವಳಿಕೆಯಾಗಲಿ ಇರುವದಿಲ್ಲ ; ಆದರೂ ಅವುಗಳಿಂದ ಆಯಾ. ಪ್ರಯೋಜನವಾಗುವದು ಕಂಡಿದೆ ಎಂಬರ್ಥ.

3. ಹಾಲುನೀರುಗಳೂ ಚೇತನವನ್ನಪೇಕ್ಷಿಸಿಯೇ ಪ್ರವರ್ತಿಸುತ್ತವೆ ಎಂಬ ಅನುಮಾನಕ್ಕೆ ಶ್ರುತಿಯ ಬೆಂಬಲವೂ ಇದೆ. ಆದ್ದರಿಂದ ಅವನ್ನು ನೀವು ಅಚೇತನಪ್ರವೃತ್ತಿಪಕ್ಷಕ್ಕೆ ದೃಷ್ಟಾಂತವಾಗಿ ಕೊಡುವದಕ್ಕೆ ಬರುವದಿಲ್ಲ ಎಂಬು ಭಾವ.

ವದರಿಂದ[1] ಹಾಲುನೀರುಗಳಂತೆ ಎಂಬುದು (ಸರಿಯಾದ) ದೃಷ್ಟಾಂತವಲ್ಲ. ಇದಲ್ಲದೆ ಚೇತನವಾದ ಹಸು ಸ್ನೇಹ(ಯುಕ್ತ) ಇಚ್ಛೆಯಿಂದ ಹಾಲನ್ನು ತೊಡಗಿಸಬಹುದಾಗಿದೆ; ಕರುವು ಹೀರಿಕೊಳ್ಳುವದರಿಂದಲೂ ಹಾಲನ್ನು ಎಳೆದುಕೊಳ್ಳುವದರಿಂದಲೂ (ಪ್ರವರ್ತಿಸಬಹುದಾಗಿದೆ). ನೀರುಕೂಡ ಅತ್ಯಂತವಾಗಿ ಮತ್ತೊಂದನ್ನು ಬಯಸದೆ (ಹರಿಯುತ್ತದೆ ಎಂಬುದೂ) ಸರಿಯಲ್ಲ. ಏಕೆಂದರೆ (ಅದು) ಹರಿಯುವದಕ್ಕೆ ತಗ್ಗುನೆಲವೇ ಮುಂತಾದದ್ದರ ಅಪೇಕ್ಷೆಯಿರುತ್ತದೆ. ಎಲ್ಲಾ ಕಡೆಯಲ್ಲಿಯೂ ಚೇತನವನ್ನು ಅಪೇಕ್ಷಿಸಿಯೇ (ಅಚೇತನವು ಪ್ರವರ್ತಿಸುತ್ತದೆ)– ಎಂಬುದನ್ನಂತೂ (ಮೇಲೆ ಶ್ರುತ್ಯನುಮಾನಗಳಿಂದ) ತೋರಿಸಿಕೊಟ್ಟೇ ಇರುತ್ತೇವೆ.[2]

## ಕ್ಷೀರದೃಷ್ಟಾಂತದಲ್ಲಿ ಪೂರ್ವಾಪರವಿರೋಧವಿಲ್ಲ

(ಭಾಷ್ಯ)

೧೧. "ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ" (೨–೧–೨೪) ಇತ್ಯತ್ರ ತು ಬಾಹ್ಯನಿಮಿತ್ತನಿರಪೇಕ್ಷಮಪಿ ಸ್ವಾಶ್ರಯಂ ಕಾರ್ಯಂ ಭವತಿ ಇತ್ಯೇತತ್ ಲೋಕದೃಷ್ಟ್ಯಾ ನಿದರ್ಶಿತಮ್ | ಶಾಸ್ತ್ರದೃಷ್ಟ್ಯಾ ತು ಪುನಃ ಸರ್ವತ್ರೈವ ಈಶ್ವರಾಪೇಕ್ಷತ್ವಮ್ ಆಪದ್ಯಮಾನಂ ನ ಪರಾಣುದ್ಯತೇ ||

(ಭಾಷ್ಯಾರ್ಥ)

"ಉಪಸಂಹಾರವು ಕಂಡುಬರುವದರಿಂದ (ಇದು ಸರಿ)ಯಲ್ಲ, ಏಕೆಂದರೆ ಹಾಲಿನಂತೆ (ಪರಿಣಮಿಸಬಹುದು)" (೨–೧–೨೪) ಎಂಬಲ್ಲಿ ಹೊರಗಿನ ನಿಮಿತ್ತವನ್ನು ಬಯಸದೆಯೇ ತನ್ನನ್ನಾಶ್ರಯಿಸಿರುವ ಕಾರ್ಯವು ಆಗಬಹುದು ಎಂಬುದಕ್ಕೆ **ಲೋಕದೃಷ್ಟಿಯಿಂದ** ದೃಷ್ಟಾಂತವನ್ನು ಕೊಟ್ಟಿತ್ತು. ಆದರೆ **ಶಾಸ್ತ್ರದೃಷ್ಟಿ**ಯಿಂದ ಎಲ್ಲೆಲ್ಲಿಯೂ ಈಶ್ವರನನ್ನು ಅಪೇಕ್ಷಿಸಿಯೇ (ಕಾರ್ಯವಾಗುತ್ತದೆ) ಎಂದು ಸಿದ್ಧವಾಗಿರುವದನ್ನು (ಅಲ್ಲಿ) ತಿರಸ್ಕರಿಸಿರುವದಿಲ್ಲ.[3]

---

1. ಸಾಧ್ಯಸಮದೃಷ್ಟಾಂತವನ್ನು ಪ್ರತ್ಯನುಮಾನದಲ್ಲಿ ಉದಾಹರಿಸುವದಕ್ಕಾಗುವದಿಲ್ಲವೆಂಬುದಕ್ಕೆ ಮಾಂ. ಕಾ. ೪–೨೦ರಲ್ಲಿ ಬೀಜಾಂಕುರದೃಷ್ಟಾಂತದ ಭಾಷ್ಯವನ್ನು ನೋಡಿ.

2. ಆದ್ದರಿಂದ ಆ ದೃಷ್ಟಾಂತಗಳು ನಮ್ಮ ಸಿದ್ಧಾಂತಕ್ಕೇ ಅನುಗುಣವಾಗಿರುತ್ತವೆ ಎಂದು ಭಾವ.

3. **ಲೋಕದೃಷ್ಟಿ** ಎಂದರೆ ಆವಿದ್ಯಕವಾದ ವ್ಯಾವಹಾರಿಕದೃಷ್ಟಿಯು; **ಶಾಸ್ತ್ರದೃಷ್ಟಿ** ಎಂದರೆ ಪಾರಮಾರ್ಥಿಕವಾದ ದೃಷ್ಟಿಯು. **ಲೋಕದೃಷ್ಟಿ**ಯಿಂದ ಸಾಧಾರಣಕಾರಣವಾದ ಈಶ್ವರನನ್ನು ಕೈಬಿಟ್ಟು ಕ್ಷೀರವನ್ನು ದೃಷ್ಟಾಂತವಾಗಿ ಕೊಟ್ಟಿತ್ತು ಎಂದು ಭಾವ.

### ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್ ॥ ೪ ॥

೪. ಬೇರೆಯಾಗಿರುವದಿಲ್ಲವಾದ್ದರಿಂದಲೂ (ಪ್ರಧಾನವು ಮತ್ತೊಂದನ್ನು) ಅಪೇಕ್ಷಿಸುವದಿಲ್ಲವಾದ್ದರಿಂದ (ಪ್ರವೃತ್ತಿಯು ಹೊಂದುವದಿಲ್ಲ).

## ಸಾಂಖ್ಯರಿಗೆ ಪ್ರಧಾನಕ್ಕಿಂತ ಬೇರೆ ಪ್ರವರ್ತಕವಿಲ್ಲ

(ಭಾಷ್ಯ)

೧೨. ಸಾಂಖ್ಯಾನಾಂ ತ್ರಯೋ ಗುಣಾಃ ಸಾಮ್ಯೇನ ಅವತಿಷ್ಠಮಾನಾಃ ಪ್ರಧಾನಮ್ । ನ ತು ತದ್ವ್ಯತಿರೇಕೇಣ ಪ್ರಧಾನಸ್ಯ ಪ್ರವರ್ತಕಂ ನಿವರ್ತಕಂ ವಾ ಕಿಂಚಿದ್ ಬಾಹ್ಯಮ್ ಅಪೇಕ್ಷ್ಯಮ್ ಅವಸ್ಥಿತಮ್ ಅಸ್ತಿ । ಪುರುಷಸ್ತು ಉದಾಸೀನಃ, ನ ಪ್ರವರ್ತಕೋ ನ ನಿವರ್ತಕಃ ಇತ್ಯತಃ ಅನಪೇಕ್ಷಂ ಪ್ರಧಾನಮ್ । ಅನಪೇಕ್ಷತ್ವಾಚ್ಚ ಕದಾಚಿತ್ ಪ್ರಧಾನಂ ಮಹದಾದ್ಯಾಕಾರೇಣ ಪರಿಣಮತೇ ಕದಾಚಿತ್ ನ ಪರಿಣಮತೇ ಇತ್ಯೇತತ್ ಅಯುಕ್ತಮ್ । ಈಶ್ವರಸ್ಯ ತು ಸರ್ವಜ್ಞತ್ವಾತ್, ಸರ್ವಶಕ್ತಿತ್ವಾತ್, ಮಹಾಮಾಯತ್ವಾಚ್ಚ ಪ್ರವೃತ್ತ್ಯಪ್ರವೃತ್ತೀ ನ ವಿರುಧ್ಯೇತೇ ॥

(ಭಾಷ್ಯಾರ್ಥ)

ಸಾಂಖ್ಯರ (ಮತದಲ್ಲಿ) ಮೂರು ಗುಣಗಳು ಸಾಮ್ಯದಿಂದಿರುವದು ಪ್ರಧಾನವೆನಿಸುವದು.[1] (ಅಷ್ಟೇ ಹೊರತು) ಅವಕ್ಕಿಂತ ಬೇರೆಯಾದ ಪ್ರಧಾನದ ಪ್ರವರ್ತಕವಾಗಲಿ ನಿವರ್ತಕವಾಗಲಿ (ಪ್ರಧಾನವು) ಅಪೇಕ್ಷಿಸತಕ್ಕ ಯಾವದೊಂದು ಹೊರಗಿನ (ನಿಮಿತ್ತವೂ) ಇರುವದಿಲ್ಲ. ಪುರುಷನಾದರೋ ಉದಾಸೀನನಾಗಿರುವದರಿಂದ ಪ್ರವರ್ತಕನೂ ಅಲ್ಲ, ನಿವರ್ತಕನೂ ಅಲ್ಲ. ಆದ್ದರಿಂದ ಪ್ರಧಾನವು ಅನಪೇಕ್ಷವಾಗಿರುತ್ತದೆ. ( ಹೀಗೆ ) ಅನಪೇಕ್ಷವಾಗಿರುವದರಿಂದ ಒಂದೊಂದು ವೇಳೆ ಪ್ರಧಾನವು ಮಹದಾದ್ಯಾಕಾರದಿಂದ ಪರಿಣಮಿಸುತ್ತದೆ—ಎಂದೂ ಒಂದೊಂದು ವೇಳೆ ಪರಿಣಮಿಸುವದಿಲ್ಲವೆಂದೂ (ಹೇಳುವದು) ಸರಿಯಲ್ಲ.

---

1. ಗುಣಗಳ ವೈಷಮ್ಯಾವಸ್ಥೆಯೇ ಸೃಷ್ಟಿ, ಸಾಮ್ಯಾವಸ್ಥೆಯೇ ಪ್ರಧಾನ. ಪ್ರಧಾನವು ತಾನೇ ನಿಮಿತ್ತಾಂತರವನ್ನು ಬಯಸದೆ ವೈಷಮ್ಯಾವಸ್ಥೆಯನ್ನು ಹೊಂದುತ್ತದೆ.

**ಈಶ್ವರನಾದರೋ ಸರ್ವಜ್ಞನೂ ಸರ್ವಶಕ್ತನೂ ಮಹಾಮಾಯನೂ ಆಗಿರುವದರಿಂದ ಪ್ರವೃತ್ತ್ಯಪ್ರವೃತ್ತಿಗಳು ವಿರುದ್ಧವಾಗುವದಿಲ್ಲ.**[1]

**ಅನ್ಯತ್ರಾಭಾವಾಚ್ಚ ನ ತೃಣಾದಿವತ್ ॥ ೫ ॥**

೫. ಮತ್ತೊಂದೆಡೆಯಲ್ಲಿ ಇಲ್ಲವಾದ್ದರಿಂದ ಹುಲ್ಲು ಮುಂತಾದವುಗಳಂತೆ ಎನ್ನುವದೂ ಸರಿಯಲ್ಲ.

(ಭಾಷ್ಯ)

೧೩. ಸ್ಯಾದೇತತ್ । ಯಥಾ ತೃಣಪಲ್ಲವೋದಕಾದಿ ನಿಮಿತ್ತಾನ್ತರನಿರಪೇಕ್ಷಂ ಸ್ವಭಾವಾದೇವ ಕ್ಷೀರಾದ್ಯಾಕಾರೇಣ ಪರಿಣಮತೇ । ಏವಂ ಪ್ರಧಾನಮಪಿ ಮಹದಾದ್ಯಾಕಾರೇಣ ಪರಿಣಂಸ್ಯತೇ ಇತಿ । ಕಥಂ ಚ ನಿಮಿತ್ತಾನ್ತರನಿರಪೇಕ್ಷಂ ತೃಣಾದಿ ಇತಿ ಗಮ್ಯತೇ ? ನಿಮಿತ್ತಾನ್ತರಾನುಪಲಮ್ಭಾತ್ । ಯದಿ ಹಿ ಕಿಂಚಿತ್ ನಿಮಿತ್ತಮ್ ಉಪಲಭೇಮಹಿ, ತತಃ ಯಥಾಕಾಮಂ ತೇನ ತೃಣಾದಿ ಉಪಾದಾಯ ಕ್ಷೀರಂ ಸಂಪಾದಯೇಮಹಿ । ನ ತು ಸಂಪಾದಯಾಮಹೇ । ತಸ್ಮಾತ್ ಸ್ವಾಭಾವಿಕಃ ತೃಣಾದೇಃ ಪರಿಣಾಮಃ । ತಥಾ ಪ್ರಧಾನಸ್ಯಾಪಿ ಸ್ಯಾತ್ ಇತಿ । ಅತ್ರೋಚ್ಯತೇ । ಭವೇತ್ ತೃಣಾದಿವತ್ ಸ್ವಾಭಾವಿಕಃ ಪ್ರಧಾನಸ್ಯಾಪಿ ಪರಿಣಾಮಃ, ಯದಿ ತೃಣಾದೇರಪಿ ಸ್ವಾಭಾವಿಕಃ ಪರಿಣಾಮೋಽಭ್ಯುಪಗಮ್ಯೇತ । ನ ತು ಅಭ್ಯುಪಗಮ್ಯತೇ । ನಿಮಿತ್ತಾನ್ತರೋಪಲಬ್ಧೇಃ । ಕಥಂ ನಿಮಿತ್ತಾನ್ತರೋಪಲಬ್ಧಿಃ ? ಅನ್ಯತ್ರಾಭಾವಾತ್ । ಧೇನ್ವೈವ ಹಿ ಉಪಯುಕ್ತಂ ತೃಣಾದಿ ಕ್ಷೀರೀಭವತಿ ನ ಪ್ರಹೀಣಮ್, ಅನಡುದಾದ್ಯುಪಯುಕ್ತಂ ವಾ । ಯದಿ ಹಿ ನಿರ್ನಿಮಿತ್ತಮ್ ಏತತ್ ಸ್ಯಾತ್, ಧೇನುಶರೀರಸಂಬನ್ಧಾತ್ ಅನ್ಯತ್ರಾಪಿ ತೃಣಾದಿ ಕ್ಷೀರೀಭವೇತ್ । ನ ಚ ಯಥಾಕಾಮಂ ಮಾನುಷೈಃ ನ ಶಕ್ಯಂ ಸಂಪಾದಯಿತುಮ್ ಇತ್ಯೇತಾವತಾ ನಿರ್ನಿಮಿತ್ತಂ ಭವತಿ । ಭವತಿ ಹಿ ಕಿಂಚಿತ್ ಕಾರ್ಯಂ ಮಾನುಷಸಂಪಾದ್ಯಮ್, ಕಿಂಚಿದ್ ದೈವಸಂಪಾದ್ಯಮ್ । ಮನುಷ್ಯಾ ಅಪಿ ಶಕ್ನು

---

1. ಈಶ್ವರನು ಸರ್ವಜ್ಞನಾದ್ದರಿಂದ ಈಗ ಪ್ರವರ್ತಿಸಬೇಕು, ಈಗ ನಿವರ್ತಿಸಬೇಕು ಎಂದು ನಿಶ್ಚಯಿಸಬಲ್ಲನು; ಸರ್ವಶಕ್ತಿಯಾದ್ದರಿಂದ ವಿಚಿತ್ರಕಾರ್ಯಗಳನ್ನು ಸೃಷ್ಟಿಸಬಲ್ಲನು; ಮಹಾಮಾಯನಾದ್ದರಿಂದ ಕಾರ್ಯಸೃಷ್ಟಿಯನ್ನು ಮಾಡಿ ಅದ್ವಿತೀಯನಾಗಿರಲೂ ಬಲ್ಲನು. ಪ್ರಧಾನಕ್ಕೆ ಶಕ್ತಿಯಾಗಲಿ ಪ್ರವೃತ್ತಿಯಾಗಲಿ ನಿತ್ಯತ್ವವಾಗಲಿ ಸಂಭವಿಸುವದಿಲ್ಲ ಎಂದು ಭಾವ. ಕಾರಣಗುಣಗಳು ಬ್ರಹ್ಮಕ್ಕೆ ಹೊಂದುವದಕ್ಕೆ ಸರ್ವಜ್ಞತ್ವಾದಿಧರ್ಮತ್ರಯವೇ ಸಾಕು. ೨-೧-೩೭ರ ಭಾಷ್ಯವನ್ನು ನೋಡಿ.

ಪನ್ತ್ಯೇವ ಉಚಿತೇನ ಉಪಾಯೇನ ತೃಣಾದಿ ಉಪಾದಾಯ ಕ್ಷೀರಂ ಸಂಪಾದಯಿತುಮ್ | ಪ್ರಭೂತಂ ಹಿ ಕ್ಷೀರಂ ಕಾಮಯಮಾನಾಃ ಪ್ರಭೂತಂ ಘಾಸಂ ಧೇನುಂ ಚಾರಯನ್ತಿ | ತತಶ್ಚ ಪ್ರಭೂತಂ ಕ್ಷೀರಂ ಲಭನ್ತೇ | ತಸ್ಮಾತ್, ನ ತೃಣಾದಿವತ್ ಸ್ವಾಭಾವಿಕಃ ಪ್ರಧಾನಸ್ಯ ಪರಿಣಾಮಃ ||

(ಭಾಷ್ಯಾರ್ಥ)

(ಸಾಂಖ್ಯನ ಅಭಿಪ್ರಾಯವು) ಇದಾಗಿರಬಹುದು : ಹೇಗೆ ಹುಲ್ಲು, ಚಿಗುರು, ನೀರು– ಮುಂತಾದದ್ದು ಮತ್ತೊಂದು ನಿಮಿತ್ತವನ್ನು ಬಯಸದೆ ಸ್ವಭಾವದಿಂದಲೇ ಹಾಲು ಮುಂತಾದವುಗಳ ರೂಪದಿಂದ ಪರಿಣಮಿಸುತ್ತದೆಯೋ, ಹಾಗೆ ಪ್ರಧಾನವೂ ಮಹತ್ತೇ ಮುಂತಾದವುಗಳ ಆಕಾರದಿಂದ ಪರಿಣಮಿಸಬಹುದಲ್ಲ ! ಹುಲ್ಲು ಮುಂತಾದದ್ದು ಮತ್ತೊಂದು ನಿಮಿತ್ತವನ್ನು ಬಯಸುವದಿಲ್ಲವೆಂದು ಹೇಗೆ ನಿಶ್ಚಯಿಸುವದು?– ಎಂದರೆ, ಮತ್ತೊಂದು ನಿಮಿತ್ತವು ಕಾಣದೆ ಇರುವದರಿಂದ. ಯಾವದಾದರೊಂದು ನಿಮಿತ್ತವು ನಮಗೆ ಕಂಡುಬಂದಿದ್ದರೆ ಆಗ ನಮ್ಮ ಇಚ್ಛೆಯಿಂದ ಆ (ನಿಮಿತ್ತ)ದಿಂದ ಹುಲ್ಲು ಮುಂತಾದವುಗಳನ್ನು ತೆಗೆದುಕೊಂಡು ಹಾಲನ್ನು ಸಂಪಾದಿಸಿಕೊಳ್ಳಬಹುದಾಗಿತ್ತು. ಆದರೆ ನಮಗೆ (ಹಾಗೆ) ಸಂಪಾದಿಸಿಕೊಳ್ಳುವದಕ್ಕೆ ಆಗುವದಿಲ್ಲ. ಆದ್ದರಿಂದ ಹುಲ್ಲು ಮುಂತಾದವುಗಳು (ಹಾಲು ಮುಂತಾಗಿ) ಪರಿಣಾಮ(ವಾಗುವದು) ಸ್ವಾಭಾವಿಕ(ವಾಗಿರುತ್ತದೆ ಎಂದಾಯಿತು). ಹಾಗೆಯೇ ಪ್ರಧಾನಕ್ಕೂ (ಪರಿಣಾಮವು ಸ್ವಾಭಾವಿಕವಾಗಿ) ಆಗಬಹುದು.

ಇದಕ್ಕೆ (ಉತ್ತರವನ್ನು) ಹೇಳುತ್ತೇವೆ : ಹುಲ್ಲು ಮುಂತಾದವುಗಳಂತೆ ಪ್ರಧಾನಕ್ಕೂ ಸ್ವಾಭಾವಿಕಪರಿಣಾಮವಾಗುವದೆಂಬುದು ಹುಲ್ಲು ಮುಂತಾದವುಗಳಿಗಾದರೂ ಸ್ವಾಭಾವಿಕಪರಿಣಾಮವನ್ನು (ನಾವು) ಒಪ್ಪಿದ್ದರೆ ಆಗಬಹುದಾಗಿತ್ತು. ಆದರೆ (ನಾವು ಅದನ್ನೂ) ಒಪ್ಪುವದಿಲ್ಲ.[1] ಏಕೆಂದರೆ ಮತ್ತೊಂದು ನಿಮಿತ್ತವು ಕಂಡುಬರುತ್ತದೆ.

(ಸಾಂಖ್ಯ):- ಮತ್ತೊಂದು ನಿಮಿತ್ತವು ಕಂಡುಬರುತ್ತದೆ ಎಂಬುದು ಹೇಗೆ?

(ಸಿದ್ಧಾಂತಿ):– ಮತ್ತೊಂದೆಡೆಯಲ್ಲಿಲ್ಲವಾದ್ದರಿಂದ. ಹೇಗೆಂದರೆ ಹಸು ಉಪಯೋಗಿಸಿದ ಹುಲ್ಲು ಮುಂತಾದದ್ದೇ ಹಾಲಾಗುವದೇ ಹೊರತು ಹಾಗೆಯೇ

1. ಶ್ರುತಿಬಲದಿಂದ ಈಶ್ವರನೇ ಪ್ರವರ್ತಕನೆಂದು ಹೇಳಿರುವ ಸಾಧಾರಣಯುಕ್ತಿಯನ್ನು ಕೈಬಿಟ್ಟು ದೃಷ್ಟಾಂತಬಲದಿಂದಲೇ ಪ್ರಧಾನವಾದಿಯ ಮತವನ್ನು ನಿರಾಕರಿಸುವದಕ್ಕಾಗಿ ಈ ಸೂತ್ರವನ್ನು ತೆಗೆದಿದೆ. ಮೂರನೆಯ ಸೂತ್ರದಲ್ಲಿಯೂ ಶ್ರುತಿಯು ಉಪಷ್ಟಂಭಕವೇ. ಹಾಲುನೀರುಗಳು ಬಾಹ್ಯನಿಮಿತ್ತವನ್ನು ಅಪೇಕ್ಷಿಸಿಯೇ ಪ್ರವರ್ತಿಸುವವೆಂಬುದಕ್ಕೆ ಕೊಟ್ಟಿರುವ ಯುಕ್ತಿಯೇ ಪ್ರಧಾನವು.

ಬಿಟ್ಟ (ಹುಲ್ಲು) ಅಥವಾ ಎತ್ತೇ ಮುಂತಾದದ್ದು ಉಪಯೋಗಿಸಿದ ಹುಲ್ಲು (ಹಾಲಾ)ಗುವದಿಲ್ಲ. ಯಾವ ನಿಮಿತ್ತವೂ ಇಲ್ಲದೆ ಇದು ಆಗುವದಾಗಿದ್ದರೆ, ಹಸುವಿನ ಶರೀರದ ಸಂಬಂಧವನ್ನು ಬಿಟ್ಟು ಬೇರೆ ಕಡೆಯಲ್ಲಿಯೂ ಹುಲ್ಲು ಮುಂತಾದದ್ದು ಹಾಲಾಗಬಹುದಾಗಿತ್ತು. ಮನುಷ್ಯರು (ತಮ್ಮ) ಇಚ್ಛೆ ಬಂತೆ ಸಂಪಾದಿಸಲಾರರು ಎಂಬಿಷ್ಟರಿಂದಲೇ (ಅದು) ನಿರ್ನಿಮಿತ್ತವೆಂದೇ ಆಗಲಾರದು. ಏಕೆಂದರೆ ಒಂದು ಕಾರ್ಯವು ಮಾನುಷಸಂಪಾದ್ಯವಾಗಿರುತ್ತದೆ, ಮತ್ತೊಂದು ದೈವಸಂಪಾದ್ಯವಾಗಿರುತ್ತದೆ. ಮನುಷ್ಯರುಕೂಡ ತಕ್ಕ ಉಪಾಯದಿಂದ ಹುಲ್ಲು ಮುಂತಾದದ್ದನ್ನು ತೆಗೆದುಕೊಂಡು ಹಾಲನ್ನು ಸಂಪಾದಿಸಿಕೊಳ್ಳಬಲ್ಲವರಾಗಿರುತ್ತಾರೆ. ಹೇಗೆಂದರೆ ಬಹಳ ಹಾಲು ಬೇಕೆನ್ನುವವರು ಹಸುವಿಗೆ ಹೆಚ್ಚಾಗಿ ಹುಲ್ಲುಮೇಯಿಸುತ್ತಾರೆ; ಅದರಿಂದ ಹೆಚ್ಚು ಹಾಲನ್ನೂ ಪಡೆದುಕೊಳ್ಳುತ್ತಾರೆ. ಆದ್ದರಿಂದ ಹುಲ್ಲು ಮುಂತಾದವುಗಳಂತೆ ಪ್ರಧಾನಕ್ಕೆ ಸ್ವಾಭಾವಿಕವಾದ ಪರಿಣಾಮವಾಗುತ್ತದೆ ಎಂಬುದು ಸರಿಯಲ್ಲ.

**ಅಭ್ಯುಪಗಮೇಽಪ್ಯರ್ಥಾಭಾವಾತ್ ॥ ೬ ॥**

೬. ಒಪ್ಪಿದರೂ ಪ್ರಯೋಜನವಿಲ್ಲದ್ದರಿಂದಲೂ (ಪ್ರವೃತ್ತಿಯಿಲ್ಲ).

## ಪ್ರಧಾನಪ್ರವೃತ್ತಿಗೆ ಯಾವ ಪ್ರಯೋಜನವೂ ಇಲ್ಲ

(ಭಾಷ್ಯ)

೧೪. ಸ್ವಾಭಾವಿಕೀ ಪ್ರಧಾನಪ್ರವೃತ್ತಿಃ ನ ಭವತಿ ಇತಿ ಸ್ಥಾಪಿತಮ್ । ಅಥಾಪಿ ನಾಮ ಭವತಃ ಶ್ರದ್ಧಾಮ್ ಅನುರುಧ್ಯಮಾನಾಃ ಸ್ವಾಭಾವಿಕೀಮೇವ ಪ್ರಧಾನಸ್ಯ ಪ್ರವೃತ್ತಿಮ್ ಅಭ್ಯುಪಗಚ್ಛೇಮ, ತಥಾಪಿ ದೋಷಃ ಅನುಷಜ್ಯೇತೈವ । ಕುತಃ? ಅರ್ಥಾಭಾವಾತ್ । ಯದಿ ತಾವತ್ ಸ್ವಾಭಾವಿಕೀ ಪ್ರಧಾನಸ್ಯ ಪ್ರವೃತ್ತಿಃ, ನ ಕಿಂಚಿತ್ ಅನ್ಯತ್ ಇಹ ಅಪೇಕ್ಷತೇ ಇತ್ಯುಚ್ಯೇತ, ತತೋ ಯಥೈವ ಸಹಕಾರಿ ಕಿಂಚಿತ್ ನಾಪೇಕ್ಷತೇ, ಏವಂ ಪ್ರಯೋಜನಮಪಿ ಕಿಂಚಿತ್ ನಾಪೇಕ್ಷಿಷ್ಯತೇ ಇತ್ಯತಃ ಪ್ರಧಾನಂ ಪುರುಷಸ್ಯ ಅರ್ಥಂ ಸಾಧಯಿತುಂ ಪ್ರವರ್ತತೇ ಇತಿ ಇಯಂ ಪ್ರತಿಜ್ಞಾ ಹೀಯೇತ । ಸ ಯದಿ ಬ್ರೂಯಾತ್ ಸಹಕಾರ್ಯೇವ ಕೇವಲಂ ನಾಪೇಕ್ಷತೇ ನ ಪ್ರಯೋಜನಮಪಿ ಇತಿ । ತಥಾಪಿ ಪ್ರಧಾನಪ್ರವೃತ್ತೇಃ ಪ್ರಯೋಜನಂ ವಿವೇಕ್ತವ್ಯಮ್, ಭೋಗೋ ವಾ ಸ್ಯಾತ್, ಅಪವರ್ಗೋ ವಾ, ಉಭಯಂ ವಾ ಇತಿ । ಭೋಗಶ್ಚೇತ್ ಕೀದೃಶಃ ಅನಾ

ಧೇಯಾತಿಶಯಸ್ಯ ಪುರುಷಸ್ಯ ಭೋಗೋ ಭವೇತ್? ಅನಿರ್ಮೋಕ್ಷಪ್ರಸಙ್ಗಶ್ಚ | ಅಪವರ್ಗಶ್ಚೇತ್ ಪ್ರಾಗಪಿ ಪ್ರವೃತ್ತೇಃ ಅಪವರ್ಗಸ್ಯ ಸಿದ್ಧತ್ವಾತ್, ಪ್ರವೃತ್ತಿಃ ಅನರ್ಥಿಕಾ ಸ್ಯಾತ್ | ಶಬ್ದಾದ್ಯನುಪಲಬ್ಧಿಪ್ರಸಙ್ಗಶ್ಚ | ಉಭಯಾರ್ಥತಾಭ್ಯುಪಗಮೇಽಪಿ ಭೋಕ್ತವ್ಯಾನಾಂ ಪ್ರಧಾನಮಾತ್ರಾಣಾಮ್ ಆನನ್ತ್ಯಾತ್ ಅನಿರ್ಮೋಕ್ಷಪ್ರಸಙ್ಗ ಏವ | ನ ಚ ಔತ್ಸುಕ್ಯನಿವೃತ್ತ್ಯರ್ಥಾ ಪ್ರವೃತ್ತಿಃ | ನ ಹಿ ಪ್ರಧಾನಸ್ಯ ಅಚೇತನಸ್ಯ ಔತ್ಸುಕ್ಯಂ ಸಂಭವತಿ | ನ ಚ ಪುರುಷಸ್ಯ ನಿರ್ಮಲಸ್ಯ ನಿಷ್ಕಲಸ್ಯ ಔತ್ಸುಕ್ಯಮ್ | ದೃಕ್ಶಕ್ತಿಸರ್ಗಶಕ್ತಿವೈಯರ್ಥ್ಯಭಯಾತ್ ಚೇತ್ ಪ್ರವೃತ್ತಿಃ ತರ್ಹಿ ದೃಕ್ಶಕ್ತ್ಯನುಚ್ಛೇದವತ್ ಸರ್ಗಶಕ್ತ್ಯನುಚ್ಛೇದಾತ್[1] ಸಂಸಾರಾನುಚ್ಛೇದಾತ್ ಅನಿರ್ಮೋಕ್ಷಪ್ರಸಙ್ಗ ಏವ | ತಸ್ಮಾತ್ ಪ್ರಧಾನಸ್ಯ ಪುರುಷಾರ್ಥಾ ಪ್ರವೃತ್ತಿಃ ಇತ್ಯೇತತ್ ಅಯುಕ್ತಮ್ ||

(ಭಾಷ್ಯಾರ್ಥ)

ಪ್ರಧಾನದ ಪ್ರವೃತ್ತಿಯು ಸ್ವಾಭಾವಿಕವಾಗಿ ಆಗಲಾರದು ಎಂದು ಸ್ಥಾಪಿಸಿದ್ದಾಯಿತು. ಹೀಗಿದ್ದರೂ ನಿನ್ನ ಶ್ರದ್ಧೆಯನ್ನು ಅನುಸರಿಸಿ (ನಾವೂ) ಪ್ರಧಾನವು ಸ್ವಾಭಾವಿಕವಾಗಿಯೇ ಪ್ರವರ್ತಿಸುವದೆಂದು ಒಪ್ಪಿಕೊಳ್ಳೋಣ ; ಹಾಗಾದರೂ ದೋಷವು ಅಂಟಿಕೊಂಡೇ ಇರುತ್ತದೆ. ಏಕೆ? ಎಂದರೆ ಪ್ರಯೋಜನವಿರುವದಿಲ್ಲ. ಮೊದಲನೆಯದಾಗಿ ಪ್ರಧಾನದ ಪ್ರವೃತ್ತಿಯು ಸ್ವಾಭಾವಿಕವಾಗಿದ್ದರೆ, ಇಲ್ಲಿ ಮತ್ತೇನನ್ನೂ ಬಯಸುವದಿಲ್ಲ ಎನ್ನುವದಾದರೆ, ಆಗ ಹೇಗೆ ಸಹಕಾರಿಯನ್ನು ಯಾವದನ್ನೂ ಬಯಸುವದಿಲ್ಲವೋ, ಹಾಗೆಯೇ ಯಾವದೊಂದು ಪ್ರಯೋಜನವನ್ನೂ ಬಯಸದೆ ಇರಬಹುದು ; ಆದ್ದರಿಂದ ಪ್ರಧಾನವು ಪುರುಷನ ಅರ್ಥವನ್ನು ಸಾಧಿಸುವದಕ್ಕೆ ಹೊರಟಿರುತ್ತದೆ ಎಂಬೀ ಪ್ರತಿಜ್ಞೆಯನ್ನು ಬಿಡಬೇಕಾಗುವದು. ಆದರೆ ಆ (ಸಾಂಖ್ಯನು ಪ್ರಧಾನವು) ಸಹಕಾರಿಯನ್ನು ಮಾತ್ರ ಬಯಸುವದಿಲ್ಲವೇ ಹೊರತು ಪ್ರಯೋಜನವನ್ನೂ (ಬಯಸುವದಿಲ್ಲ) ಎಂಬುದಿಲ್ಲ ಎನ್ನಬಹುದು. ಹಾಗಾದರೂ ಪ್ರಧಾನಪ್ರವೃತ್ತಿಯ ಪ್ರಯೋಜನವು (ಎಂಥದ್ದು) ಎಂದು ವಿವೇಚನೆಮಾಡಬೇಕಾಗುವದು. ಭೋಗವಾಗಿರುವದೆ, ಅಪವರ್ಗವೆ, ಅಥವಾ (ಆ) ಎರಡೂವೆ? ಭೋಗವಾದರೆ ಯಾವ ಅತಿಶಯವನ್ನೂ ಉಂಟುಮಾಡಲು ಶಕ್ಯನಲ್ಲದ ಪುರುಷನಿಗೆ ಎಂಥ ಭೋಗವಾದೀತು ?[2]

---

1. 'ಸರ್ಗಶಕ್ತ್ಯನುಚ್ಛೇದವದ್ ದೃಕ್ಶಕ್ತ್ಯನುಚ್ಛೇದಾತ್' ಎಂದು ಭಾಮತೀಸಮ್ಮತಪಾಠ.

2. ಭೋಗದಿಂದ ಮೊದಲಿಲ್ಲದಿದ್ದ ಸುಖವೋ ದುಃಖವೋ ಆಗಬೇಕು ; ಆದರೆ ಪುರುಷನು ಕೂಟಸ್ಥನಾಗಿರುತ್ತಾನೆಂದು ಸಾಂಖ್ಯರು ಒಪ್ಪಿರುವದಕ್ಕೆ ಹಾಗೆನ್ನುವದು ವಿರುದ್ಧವಾಗುವದು.

(ಭೋಗವು ನಿಜವಾಗಿ ಆಗುವದೆಂದರೆ ಅದರಿಂದ) ಬಿಡುಗಡೆಯು ಇಲ್ಲವೆಂದೂ ಆಗುವದು[1] ; ಅಪವರ್ಗ ಎಂದರೆ (ಪ್ರಧಾನವು) ಪ್ರವರ್ತಿಸುವ ಮುಂಚೆಯೂ ಅಪವರ್ಗವು ಸಿದ್ಧವಾಗಿರುವದರಿಂದ ಪ್ರವೃತ್ತಿಯು ವ್ಯರ್ಥವಾಗುವದು[2] ; ಶಬ್ದಾದಿಗಳನ್ನು ಅನುಭವಿಸುವದು ಇಲ್ಲವೆಂದೂ ಆಗುವದು[3]. (ಈ) ಎರಡು ಪ್ರಯೋಜನಕ್ಕಾಗಿ (ಪ್ರವೃತ್ತಿ) ಎಂದರೂ ಭೋಕ್ತವ್ಯವಾಗಿರುವ ಪ್ರಧಾನದ ಅಂಶಗಳು ಅನಂತವಾಗಿರುವದರಿಂದ ಅನಿರ್ಮೋಕ್ಷಪ್ರಸಂಗವೇ ಉಂಟಾಗುವದು.[4] ಔತ್ಸುಕ್ಯವನ್ನು ಪರಿಹರಿಸಿಕೊಳ್ಳುವದಕ್ಕಾಗಿ (ಪ್ರಧಾನವು) ಪ್ರವರ್ತಿಸುತ್ತದೆ ಎನ್ನುವದೂ ಸರಿಯಲ್ಲ. ಏಕೆಂದರೆ ಅಚೇತನವಾದ ಪ್ರಧಾನಕ್ಕೆ ಔತ್ಸುಕ್ಯವುಂಟಾಗಲಾರದು ; ನಿರ್ಮಲನಾಗಿ ನಿರವಯವನಾಗಿರುವ ಪುರುಷನಿಗೂ ಔತ್ಸುಕ್ಯ(ವಾಗುವಂ)ತಿಲ್ಲ.[5] ದೃಕ್ಛಕ್ತಿಯೂ ಸರ್ಗಶಕ್ತಿಯೂ ವ್ಯರ್ಥವಾದೀತೆಂಬ ಅಂಜಿಕೆಯಿಂದ ಪ್ರವೃತ್ತಿಯಾಗುವದೆಂದರೆ,[6] ಆಗ ದೃಕ್ಛಕ್ತಿಯು ನಾಶವಾಗದಿರುವಂತೆ ಸೃಷ್ಟಿಶಕ್ತಿಯೂ ನಾಶವಾಗದಿರುವದರಿಂದ ಸಂಸಾರವು ನಾಶವಾಗದೆ ಇರುವದರಿಂದ ಅನಿರ್ಮೋಕ್ಷವು ಪ್ರಸಕ್ತವಾಗುವದು.[7] ಆದ್ದರಿಂದ ಪ್ರಧಾನವು ಪುರುಷನ ಪ್ರಯೋಜನಕ್ಕಾಗಿ ಪ್ರವರ್ತಿಸುವದೆಂಬುದು ಯುಕ್ತವಲ್ಲ.

---

1. ಭೋಗವನ್ನು ಒಪ್ಪಿದರೂ ಅದರಿಂದ ಬಿಡುಗಡೆಯಿಲ್ಲವೆಂದಾಗುವದು ; ಆಗ ಶಾಸ್ತ್ರಪ್ರವೃತ್ತಿಯು ವ್ಯರ್ಥವಾಗುವದು ಎಂದರ್ಥ.

2. ಶಾಸ್ತ್ರೋಪದೇಶವೂ ವ್ಯರ್ಥವಾಗುವದು ; ಏಕೆಂದರೆ ಉಪದೇಶಕ್ಕಿಂತಲೂ ಸಾಧನದಲ್ಲಿ ಪ್ರವರ್ತಿಸುವದಕ್ಕಿಂತಲೂ ಮುಂಚಿತವಾಗಿಯೇ ಉಪದೇಶಪ್ರವೃತ್ತಿಗಳ ಫಲವು ಸಿದ್ಧವಾಗಿರುತ್ತದೆ. ಪುರುಷನು ಯಾವಾಗಲೂ ಅಸಂಗನೆಂದು ಸಾಂಖ್ಯರು ಒಪ್ಪುವದರಿಂದ ಹೀಗೆಂದಾಗುತ್ತದೆ.

3. ಇದು ಭೋಕ್ತೃತ್ವವು ಸತ್ಯವೆಂಬ ಸಾಂಖ್ಯರ ಅಂಗೀಕಾರಕ್ಕೆ ವಿರುದ್ಧ. ಸಾಂ. ಕಾ. ೧೭ನ್ನು ನೋಡಿ.

4. ಏಕೆಂದರೆ ಯಾವಾಗಲೂ ಭೋಗವು ಉಳಿದುಕೊಂಡೇ ಇರುತ್ತದೆ ; ಭೋಗವಾದಮೇಲೆಯೇ ಮೋಕ್ಷವೆಂದು ಅಂಗೀಕರಿಸಿರುವದರಿಂದ ಈ ದೋಷವು ತಪ್ಪುವಹಾಗೆಯೇ ಇರುವದಿಲ್ಲ.

5. ೫೮ನೆಯ ಸಾಂ. ಕಾರಿಕೆಯನ್ನು ನೋಡಿ.

6. ಪುರುಷನ ದೃಕ್ಛಕ್ತಿಗೂ ಪ್ರಧಾನದ ಸೃಷ್ಟಿಶಕ್ತಿಗೂ ಸಾರ್ಥಕ್ಯವಿರಬೇಕಾದ್ದರಿಂದ ಪ್ರಧಾನವು ಪ್ರವರ್ತಿಸುತ್ತದೆ ಎಂದು ಒಪ್ಪಬೇಕು ಎಂದರೆ.

7. ಏಕೆಂದರೆ ಪುರುಷನ ದೃಕ್ಛಕ್ತಿಯೂ ಪ್ರಧಾನದ ಸರ್ಗಶಕ್ತಿಯೂ ವ್ಯರ್ಥವಾಗದೆ ಇರುವದಕ್ಕಾಗಿ ಎರಡೂ ಕೆಲಸಮಾಡುತ್ತಲೇ ಇರಬೇಕಾಗುವದು.

**ಪುರುಷಾಶ್ಮವದಿತಿ ಚೇತ್ ತಥಾಪಿ ॥ ೭ ॥**

೭. ಪುರುಷನಂತೆಯೂ ಕಲ್ಲಿನಂತೆಯೂ (ಆಗಬಹುದು) ಎಂದರೆ (ಹಾಗೂ ದೋಷವು ಇದ್ದೇ ಇರುವದು).

( ಭಾಷ್ಯ )

೧೫. ಸ್ಯಾದೇತತ್ । ಯಥಾ ಕಶ್ಚಿತ್ ಪುರುಷಃ ದೃಕ್ಶಕ್ತಿಸಂಪನ್ನಃ ಪ್ರವೃತ್ತಿಶಕ್ತಿವಿಹೀನಃ ಪಙ್ಗುಃ ಅಪರಂ ಪುರುಷಂ ಪ್ರವೃತ್ತಿಶಕ್ತಿಸಂಪನ್ನಂ ದೃಕ್ಶಕ್ತಿವಿಹೀನಮ್ ಅನ್ಧಮ್ ಅಧಿಷ್ಠಾಯ ಪ್ರವರ್ತಯತಿ। ಯಥಾ ವಾ ಅಯಸ್ಕಾನ್ತೋಽಶ್ಮಾ ಸ್ವಯಮ್ ಅಪ್ರವರ್ತಮಾನೋಽಪಿ ಅಯಃ ಪ್ರವರ್ತಯತಿ । ಏವಂ ಪುರುಷಃ ಪ್ರಧಾನಂ ಪ್ರವರ್ತಯಿಷ್ಯತಿ ಇತಿ ದೃಷ್ಟಾನ್ತಪ್ರತ್ಯಯೇನ ಪುನಃ ಪ್ರತ್ಯವಸ್ಥಾನಮ್ । ಅತ್ರೋಚ್ಯತೇ । ತಥಾಪಿ ನೈವ ದೋಷಾತ್ ನಿರ್ಮೋಕ್ಷೋಽಸ್ತಿ । ಅಭ್ಯುಪೇತಹಾನಂ ತಾವದ್ ದೋಷಃ ಆಪತತಿ । ಪ್ರಧಾನಸ್ಯ ಸ್ವತನ್ತ್ರಸ್ಯ ಪ್ರವೃತ್ತ್ಯಭ್ಯುಪಗಮಾತ್ । ಪುರುಷಸ್ಯ ಚ ಪ್ರವರ್ತಕತ್ವಾನಭ್ಯುಪಗಮಾತ್ । ಕಥಂ ಚ ಉದಾಸೀನಃ ಪುರುಷಃ ಪ್ರಧಾನಂ ಪ್ರವರ್ತಯೇತ್ ? ಪಙ್ಗುರಪಿ ಹಿ ಅನ್ಧಂ ವಾಗಾದಿಭಿಃ ಪುರುಷಂ ಪ್ರವರ್ತಯತಿ । ನೈವಂ ಪುರುಷಸ್ಯ ಕಶ್ಚಿದಪಿ ಪ್ರವರ್ತನವ್ಯಾಪಾರೋಽಸ್ತಿ । ನಿಷ್ಕ್ರಿಯತ್ವಾತ್, ನಿರ್ಗುಣತ್ವಾಚ್ಚ । ನಾಪಿ ಅಯಸ್ಕಾನ್ತವತ್ ಸಂನಿಧಿಮಾತ್ರೇಣ ಪ್ರವರ್ತಯೇತ್ । ಸಂನಿಧಿನಿತ್ಯತ್ವೇನ ಪ್ರವೃತ್ತಿನಿತ್ಯತ್ವಪ್ರಸಙ್ಗಾತ್ । ಅಯಸ್ಕಾನ್ತಸ್ಯ ತು ಅನಿತ್ಯಸಂನಿಧೇಃ ಅಸ್ತಿ ಸ್ವವ್ಯಾಪಾರಃ ಸಂನಿಧಿಃ । ಪರಿಮಾರ್ಜನಾದ್ಯಪೇಕ್ಷಾ ಚ ಅಸ್ಯ ಅಸ್ತಿ ಇತಿ ಅನುಪನ್ಯಾಸಃ 'ಪುರುಷಾಶ್ಮವತ್' ಇತಿ । ತಥಾ ಪ್ರಧಾನಸ್ಯ ಅಚೈತನ್ಯಾತ್ ಪುರುಷಸ್ಯ ಚ ಔದಾಸೀನ್ಯಾತ್ । ತೃತೀಯಸ್ಯ ಚ ತಯೋಃ ಸಂಬನ್ಧಯಿತುಃ ಅಭಾವಾತ್ ಸಂಬನ್ಧಾನುಪಪತ್ತಿಃ । ಯೋಗ್ಯತಾನಿಮಿತ್ತೇ ಚ ಸಂಬನ್ಧೇ ಯೋಗ್ಯತಾನುಚ್ಛೇದಾತ್, ಅನಿರ್ಮೋಕ್ಷಪ್ರಸಙ್ಗಃ । ಪೂರ್ವವಚ್ಚೇಹಾಪಿ ಅರ್ಥಾಭಾವೋ ವಿಕಲ್ಪಯಿತವ್ಯಃ । ಪರಮಾತ್ಮನಸ್ತು ಸ್ವರೂಪವ್ಯಪಾಶ್ರಯಮ್ ಔದಾಸೀನ್ಯಮ್, ಮಾಯಾವ್ಯಪಾಶ್ರಯಂ ಚ ಪ್ರವರ್ತಕತ್ವಮ್ ಇತಿ ಅಸ್ತಿ ಅತಿಶಯಃ ॥

( ಭಾಷ್ಯಾರ್ಥ )

(ಸಾಂಖ್ಯನ ಮತವು) ಇದಾಗಿರಬಹುದು. ಹೇಗೆ ದೃಕ್ಶಕ್ತಿಯುಕ್ತನಾಗಿ ಪ್ರವೃತ್ತಿಶಕ್ತಿಯಿಲ್ಲದ ಒಬ್ಬ ಹೆಳವ ಪುರುಷನು ಪ್ರವೃತ್ತಿಶಕ್ತಿಯುಕ್ತನೂ ದೃಕ್ಶಕ್ತಿಯಿಲ್ಲದವನೂ ಆಗಿರುವ ಕುರುಡನಾದ ಮತ್ತೊಬ್ಬ ಪುರುಷನಮೇಲೆ

ಕುಳಿತುಕೊಂಡು (ಅವನನ್ನು) ಪ್ರವರ್ತಿಸುವಂತೆ ಮಾಡುತ್ತಾನೋ, ಅಥವಾ ಹೇಗೆ ಸೂಜಿಕಲ್ಲು ತಾನೇ ಪ್ರವರ್ತಿಸದೆ ಇದ್ದರೂ ಕಬ್ಬಿಣವನ್ನು ಪ್ರವರ್ತಿಸುವಂತೆ ಮಾಡುತ್ತದೆಯೋ, ಹಾಗೆ ಪುರುಷನು ಪ್ರಧಾನವನ್ನು ಪ್ರವರ್ತಿಸುವಂತೆ ಮಾಡಬಹುದಲ್ಲ !– ಎಂದು ದೃಷ್ಟಾಂತದಲ್ಲಿರುವ ವಿಶ್ವಾಸದಿಂದ[1] ಮತ್ತೆ (ಸಾಂಖ್ಯನು) ಎದುರುನಿಲ್ಲಬಹುದು.

ಇದಕ್ಕೆ (ಉತ್ತರವನ್ನು) ಹೇಳುತ್ತೇವೆ. ಹೀಗಾದರೂ ದೋಷದಿಂದ ಬಿಡುಗಡೆಯಾಗುವದಿಲ್ಲ. (ಏಕೆಂದರೆ) ಮೊದಲನೆಯದಾಗಿ ಅಂಗೀಕಾರವನ್ನು ಕೈಬಿಡುವದೆಂಬ ದೋಷವು ಗಂಟುಬೀಳುತ್ತದೆ. ಏಕೆಂದರೆ ಪ್ರಧಾನವು ಸ್ವತಂತ್ರವಾಗಿಯೇ ಪ್ರವರ್ತಿಸುತ್ತದೆ ಎಂದು (ಸಾಂಖ್ಯನು) ಒಪ್ಪಿರುತ್ತಾನೆ; ಪುರುಷನು ಪ್ರವರ್ತಕನೆಂದು ಒಪ್ಪಿರುವದೂ ಇಲ್ಲ.[2] ಉದಾಸೀನನಾದ ಪುರುಷನು ಪ್ರಧಾನವನ್ನು ಹೇಗೆತಾನೆ ಪ್ರವರ್ತಿಸುವಂತೆ ಮಾಡಿಯಾನು? (ದೃಷ್ಟಾಂತದಲ್ಲಿ) ಹೆಳವನಾದರೂ ಕುರುಡನಾದ ಪುರುಷನನ್ನು ವಾಗಾದಿಗಳಿಂದ ಪ್ರವರ್ತಿಸುತ್ತಾನೆ. (ಆದರೆ) ಹೀಗೆ ಪುರುಷನಿಗೆ (ಪ್ರಧಾನವನ್ನು ತೊಡಗಿಸುವ ಯಾವ) ಪ್ರವರ್ತನವ್ಯಾಪಾರವೂ ಇರುವದಿಲ್ಲ. ಏಕೆಂದರೆ ಅವನು ನಿಷ್ಕ್ರಿಯನೂ ನಿರ್ಗುಣನೂ (ಆಗಿರುತ್ತಾನೆ). ಸೂಜಿಕಲ್ಲಿನಂತೆ ಸನ್ನಿಧಾನಮಾತ್ರದಿಂದ ತೊಡಗಿಸುತ್ತಾನೆ (ಎಂಬುದೂ ಸರಿ)ಯಲ್ಲ. ಏಕೆಂದರೆ ಸಂನಿಧಿಯು ನಿತ್ಯವಾಗಿರುವದರಿಂದ ಪ್ರವೃತ್ತಿಯೂ ನಿತ್ಯವಾಗಬೇಕಾಗುತ್ತದೆ.[3] ಅಯಸ್ಕಾಂತಮಣಿಗಾದರೋ ಅನಿತ್ಯವಾದ ಸಂನಿಧಿಯಿರುವದರಿಂದ ಸಂನಿಧಿಯೆಂಬುದು ತನ್ನ ವ್ಯಾಪಾರವು; ತೊಳೆಯುವದೇ ಮುಂತಾದದ್ದರ ಅಪೇಕ್ಷೆಯೂ ಅದಕ್ಕೆ ಉಂಟು.[4] ಆದ್ದರಿಂದ 'ಪುರುಷಾಶ್ಮಗಳಂತೆ' ಎಂಬ ದೃಷ್ಟಾಂತವು (ಸರಿ)ಯಲ್ಲ.

1. ಒಂದು ದೃಷ್ಟಾಂತದಲ್ಲಿ ಇಬ್ಬರ ಸಂಯೋಗದಿಂದ ಪ್ರವೃತ್ತಿಯಾದದ್ದು ಕಂಡಿದೆ ಎಂಬ ಮಾತ್ರದಿಂದ ಎಂದರ್ಥ. ಸಾಂ. ಕಾ. ೨೧ನ್ನು ನೋಡಿ.

2. ದೃಷ್ಟಾಂತದಲ್ಲಿ ಪ್ರವೃತ್ತಿಯಾದರೂ ದಾರ್ಷ್ಟಾಂತಿಕದಲ್ಲಿ ಹಾಗೆ ಒಪ್ಪಿದರೆ ಪುರುಷನು ಉದಾಸೀನನು, ಪ್ರಧಾನವು ತಾನೇ ಪ್ರವರ್ತಕವು ಎಂಬ ಸಿದ್ಧಾಂತಕ್ಕೆ ಲೋಪವು ಬರುತ್ತದೆ.

3. ಪುರುಷನು ಸರ್ವಗತನಾಗಿರುವದರಿಂದ ಪ್ರಧಾನಕ್ಕೆ ದೂರವಾಗಿರುವನೆಂಬುದಿಲ್ಲ.

4. ಅಯಸ್ಕಾಂತವು ಇಂತಿಷ್ಟು ದೂರದಲ್ಲಿದ್ದಾಗ ಮಾತ್ರ ಕಬ್ಬಿಣವನ್ನು ಸೆಳೆಯುವದು, ಶುದ್ಧವಾಗಿದ್ದಾಗ ಮಾತ್ರ ಸೆಳೆಯುವದು ಎಂಬ ನಿಯಮವಿರುವದರಿಂದ ಅದು ಸನಿಮಿತ್ತವಾಗಿಯೇ ಪ್ರವರ್ತಕವಾಗಿದೆ.

ಮತ್ತು ಪ್ರಧಾನವು ಅಚೇತನವಾಗಿರುವದರಿಂದಲೂ ಪುರುಷನು ಉದಾಸೀನನಾಗಿರುವದರಿಂದಲೂ ಇವೆರಡಕ್ಕೂ ಸಂಬಂಧವನ್ನುಂಟುಮಾಡುವ ಮೂರನೆಯ (ಯಾವದೂ) ಇಲ್ಲದ್ದರಿಂದಲೂ (ಪ್ರಧಾನಪುರುಷರಿಗೆ) ಸಂಬಂಧವು ಉಂಟಾಗುವಹಾಗಿಲ್ಲ.[1] ಯೋಗ್ಯತೆ ಎಂಬ ನಿಮಿತ್ತದಿಂದಲೇ ಸಂಬಂಧವಾಗುವದೆನ್ನುವದಾದರೆ ಯೋಗ್ಯತೆಯು ನಾಶವಾಗುವದಿಲ್ಲವಾದ್ದರಿಂದ ಅನಿರ್ಮೋಕ್ಷವೇ ಪ್ರಸಕ್ತವಾಗುವದು.[2] **ಪರಮಾತ್ಮನ ವಿಷಯದಲ್ಲಾದರೋ ತನ್ನ ರೂಪವನ್ನಾಶ್ರಯಿಸಿಕೊಂಡು ಔದಾಸೀನ್ಯವೂ ಮಾಯೆಯನ್ನಾಶ್ರಯಿಸಿಕೊಂಡು ಪ್ರವರ್ತಕತ್ವವೂ (ಆಗಬಹುದು) ಎಂಬ ಅತಿಶಯವಿರುತ್ತದೆ.**[3]

**ಅಙ್ಗಿತ್ವಾನುಪಪತ್ತೇಶ್ಚ ॥ ೯ ॥**

೮. ಅಂಗಿತ್ವವು ಹೊಂದುವದಿಲ್ಲವಾದ್ದರಿಂದಲೂ (ಈ ಮತವು ಯುಕ್ತವಲ್ಲ).

## ಗುಣಗಳಿಗೆ ಅಂಗಾಂಗಭಾವವುಂಟಾಗಲು ಕಾರಣವಿಲ್ಲ

(ಭಾಷ್ಯ)

೧೬. ಇತಶ್ಚ ನ ಪ್ರಧಾನಸ್ಯ ಪ್ರವೃತ್ತಿಃ ಅವಕಲ್ಪತೇ । ಯದ್ ಹಿ ಸತ್ತ್ವರಜಸ್ತಮಸಾಮ್ ಅನ್ಯೋನ್ಯಗುಣಪ್ರಧಾನಭಾವಮ್ ಉತ್ಸೃಜ್ಯ ಸಾಮ್ಯೇನ ಸ್ವರೂಪಮಾತ್ರೇಣ ಅವಸ್ಥಾನಮ್, ಸಾ ಪ್ರಧಾನಾವಸ್ಥಾ । ತಸ್ಯಾಮ್ ಅವಸ್ಥಾಯಾಮ್ ಅನಪೇಕ್ಷಸ್ವರೂಪಾಣಾಂ ಸ್ವರೂಪಪ್ರಣಾಶಭಯಾತ್ ಪರಸ್ಪರಂ ಪ್ರತಿ ಅಙ್ಗಾಙ್ಗಿಭಾವಾನುಪಪತ್ತೇಃ, ಬಾಹ್ಯಸ್ಯ ಚ ಕಸ್ಯಚಿತ್ ಕ್ಷೋಭಯಿತುಃ ಅಭಾವಾತ್ ಗುಣವೈಷಮ್ಯನಿಮಿತ್ತೋ ಮಹದಾದ್ಯುತ್ಪಾದೋ ನ ಸ್ಯಾತ್ ॥

---

1. ಪುರುಷನಿಗೂ ಪ್ರಕೃತಿಗೂ ಸಂನಿಧಿಯಲ್ಲದೆ ವಿಶೇಷಸಂಬಂಧವಿದೆ ಎಂದರೆ ಈ ದೋಷ.

2. ಸಂಬಂಧವಾಗುವ ಯೋಗ್ಯತೆಯು ಪುರುಷನಲ್ಲಿ, ಪ್ರಕೃತಿಯಲ್ಲಿ, ಅಥವಾ ಇಬ್ಬರಲ್ಲಿಯೂ ಇದ್ದೇ ಇದೆ ಎಂದರೆ ಈ ದೋಷ.

3. ಆತ್ಮನೂ ಸಾಂಖ್ಯರ ಪುರುಷರಂತೆ ಉದಾಸೀನನೇ ಆದರೂ ಅವಿದ್ಯಾಕಲ್ಪಿತ ಮಾಯಾಸಂಬಂಧದಿಂದ ಪ್ರವೃತ್ತಿನಿವೃತ್ತಿಗಳು ಅವನಿಗೆ ಆಗಬಹುದು ಎಂದು ಭಾವ.

( ಭಾಷ್ಯಾರ್ಥ )

ಈ (ಕಾರಣ)ದಿಂವಲೂ ಪ್ರಧಾನಕ್ಕೆ ಪ್ರವೃತ್ತಿಯು ಯುಕ್ತವಾಗುವದಿಲ್ಲ. ಏಕೆಂದರೆ ಸತ್ತ್ವರಜಸ್ತಮೋಗುಣಗಳು ಒಂದಕ್ಕೊಂದು ಅಧೀನಪ್ರಧಾನವಾಗಿರುವದನ್ನು ಬಿಟ್ಟು ಸಾಮ್ಯದಿಂದ ಸ್ವರೂಪವಲ್ಲಿಯೇ ಇದ್ದುಬಿಡುವದಿದೆಯಲ್ಲ, ಅದೇ **ಪ್ರಧಾನಾವಸ್ಥೆ.** ಆ ಅವಸ್ಥೆಯಲ್ಲಿ (ಮತ್ತೊಂದರ) ಅಪೇಕ್ಷೆಯಿಲ್ಲದ ಸ್ವರೂಪವುಳ್ಳ (ಆ ಗುಣಗಳು) ಒಂದಕ್ಕೊಂದಕ್ಕೆ ಅಂಗಾಂಗಿಭಾವವಿರುವದು ಹೊಂದುವದಿಲ್ಲ; ಏಕೆಂದರೆ (ಹಾಗಾದರೆ ಅವಕ್ಕೆ) ಸ್ವರೂಪನಾಶವಾಗುವದೆಂಬ ಅಂಜಿಕೆಯುಂಟು.[1] ಹೊರಗೆ ಯಾವನೊಬ್ಬನೂ ಅವನ್ನು ಅಲುಗಾಡಿಸುವವನು ಇಲ್ಲವಾದ್ದರಿಂದ[2] ಗುಣವೈಷಮ್ಯದ ನಿಮಿತ್ತದಿಂದ ಆಗಬೇಕಾದ ಮಹದಾದಿಗಳ ಉತ್ಪತ್ತಿಯು ಇಲ್ಲವಾಗಬೇಕಾಗುವದು.

**ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್ ॥ ೯ ॥**

೯. ಬೇರೊಂದು ರೀತಿಯಿಂದ ಅನುಮಾನಿಸಿದರೂ ಜ್ಞಶಕ್ತಿಯಿಲ್ಲದ್ದರಿಂದ (ಈ ದೋಷಗಳು ಇದ್ದೇ ಇರುತ್ತವೆ).

## ಪ್ರಧಾನಕ್ಕೆ ಚೈತನ್ಯಶಕ್ತಿಯಿಲ್ಲದ್ದರಿಂದ ಪ್ರವೃತ್ತಿಯಿಲ್ಲ

( ಭಾಷ್ಯ )

೧೭. ಅಥಾಪಿ ಸ್ಯಾತ್— ಅನ್ಯಥಾ ವಯಮ್ ಅನುಮಿಮೀಮಹೇ ಯಥಾ ನಾಯಮ್ ಅನನ್ತರೋ ದೋಷಃ ಪ್ರಸಜ್ಯೇತ । ನ ಹಿ ಅನಪೇಕ್ಷಸ್ವಭಾವಾಃ ಕೂಟಸ್ಥಾಶ್ಚ ಅಸ್ಮಾಭಿಃ ಗುಣಾಃ ಅಭ್ಯುಪಗಮ್ಯನ್ತೇ । ಪ್ರಮಾಣಾಭಾವಾತ್ । ಕಾರ್ಯವಶೇನ ತು ಗುಣಾನಾಂ ಸ್ವಭಾವೋಽಭ್ಯುಪಗಮ್ಯತೇ ।

---

1. ಗುಣಗಳು ಸ್ವಭಾವದಿಂದಲೇ ಒಂದೊಂದಕ್ಕೆ ಅಂಗಾಂಗಿಭಾವದಿಂದ ಇರುವದಿಲ್ಲ; ಹಾಗಿದ್ದರೆ ಅವುಗಳಿಗೆ ಪ್ರಧಾನಾವಸ್ಥೆಯೇ ಬರಬಾರದು— ಎಂದರ್ಥ.

2. ಪ್ರಕೃತಿಪುರುಷರಿಗಿಂತ ಬೇರೆಯಾದ ಈಶ್ವರನನ್ನು ಸಾಂಖ್ಯರು ಒಪ್ಪಿಲ್ಲ; ಪುರುಷರು ಉದಾಸೀನರಾದ್ದರಿಂದ ಅವರು ಗುಣಗಳನ್ನು ಕದಲಿಸಲಾರರು ಎಂದು ಭಾವ. ವ್ಯಾಖ್ಯಾನಕಾರರು "ಪ್ರಧಾನವು ಕೂಟಸ್ಥವೊ, ವಿಕಾರಿಯೊ? ಕೂಟಸ್ಥವಾದರೆ ತಾವೇ ಅಂಗಾಂಗಿಭಾವವನ್ನು ಹೊಂದಲಾರವು; ವಿಕಾರಿಗಳಾದರೂ ಹೊರಗಿನ ನಿಮಿತ್ತವಿಲ್ಲದೆ ಏಕೆ ಕಾರ್ಯರೂಪವನ್ನು ತಳೆಯುತ್ತವೆ?" ಎಂದು ವಿಕಲ್ಪಿಸಿ ವಿವರಿಸಿರುತ್ತಾರೆ. ಈ ಅಭಿಪ್ರಾಯವು ಮುಂದಿನ ಸೂತ್ರದ ಭಾಷ್ಯದಲ್ಲಿಯೇ ಇದೆ.

ಯಥಾ ಯಥಾ ಕಾರ್ಯೋತ್ಪಾದಃ ಉಪಪದ್ಯತೇ ತಥಾ ತಥಾ ಏಷಾಂ ಸ್ವಭಾವೋಽಭ್ಯುಪಗಮ್ಯತೇ । ಚಲಂ ಗುಣವೃತ್ತಮ್ ಇತಿ ಚ ಅಸ್ತಿ ಅಭ್ಯುಪಗಮಃ । ತಸ್ಮಾತ್ ಸಾಮ್ಯಾವಸ್ಥಾಯಾಮಪಿ ವೈಷಮ್ಯೋಪಗಮಯೋಗ್ಯಾ ಏವ ಗುಣಾ ಅವತಿಷ್ಠನ್ತೇ ಇತಿ । ಏವಮಪಿ ಪ್ರಧಾನಸ್ಯ ಜ್ಞಶಕ್ತಿವಿಯೋಗಾತ್ ರಚನಾನುಪಪತ್ತ್ಯಾದಯಃ ಪೂರ್ವೋಕ್ತಾಃ ದೋಷಾಃ ತದವಸ್ಥಾ ಏವ । ಜ್ಞಶಕ್ತಿಮಪಿ ತು ಅನುಮಿಮಾನಃ ಪ್ರತಿವಾದಿತ್ವಾತ್ ನಿವರ್ತೇತ । ಚೇತನಮ್ ಏಕಮ್ ಅನೇಕಪ್ರಪಞ್ಚಸ್ಯ ಜಗತಃ ಉಪಾದಾನಮ್ ಇತಿ ಬ್ರಹ್ಮವಾದಪ್ರಸಙ್ಗಾತ್ । ವೈಷಮ್ಯೋಪಗಮಯೋಗ್ಯಾ ಅಪಿ ಗುಣಾಃ ಸಾಮ್ಯಾವಸ್ಥಾಯಾಂ ನಿಮಿತ್ತಾಭಾವಾತ್ ನೈವ ವೈಷಮ್ಯಂ ಭಜೇರನ್ । ಭಜಮಾನಾ ವಾ ನಿಮಿತ್ತಾಭಾವಾವಿಶೇಷಾತ್ ಸರ್ವದೈವ ವೈಷಮ್ಯಂ ಭಜೇರನ್ ಇತಿ ಪ್ರಸಜ್ಯತ ಏವ ಅಯಮ್ ಅನನ್ತರೋಽಪಿ ದೋಷಃ ॥

(ಭಾಷ್ಯಾರ್ಥ)

ಇನ್ನು ಹೀಗೂ (ಸಾಂಖ್ಯನ ಮತ)ವಿರಬಹುದು. ಈ ಹಿಂದೆ ಹೇಳಿದ ದೋಷವು ಹೇಗಾದರೆ ಪ್ರಸಕ್ತವಾಗದೆ ಇರುವದೋ (ಹಾಗೆ) ಬೇರೊಂದು ರೀತಿಯಲ್ಲಿ ನಾವು ಅನುಮಾನಿಸುವೆವು. ಗುಣಗಳು (ಮತ್ತೆ ಯಾವದೊಂದನ್ನೂ) ಅಪೇಕ್ಷಿಸದ ಸ್ವಭಾವವುಳ್ಳವೆಂದೂ ಕೂಟಸ್ಥವಾಗಿರುವವೆಂದೂ ನಾವು ಒಪ್ಪಿರುವದಿಲ್ಲ ; ಏಕೆಂದರೆ (ಹಾಗೆನ್ನುವದಕ್ಕೆ) ಪ್ರಮಾಣವೇನೂ ಇರುವದಿಲ್ಲ. ಕಾರ್ಯವಶದಿಂದಲೇ ಗುಣಗಳ ಸ್ವಭಾವವನ್ನು ಅಂಗೀಕರಿಸುತ್ತೇವೆ. ಕಾರ್ಯವು ಉತ್ಪನ್ನವಾಗುವದೆಂಬುದು ಹೇಗೆಹೇಗೆ ಹೊಂದುತ್ತದೆಯೋ ಹಾಗೆಹಾಗೆ ಇವುಗಳ ಸ್ವಭಾವವನ್ನು (ನಾವು) ಒಪ್ಪುತ್ತೇವೆ. ಇದಲ್ಲದೆ **ಗುಣಗಳ ಸ್ವಭಾವವು ಚಂಚಲವಾಗಿರುತ್ತದೆ**[1] ಎಂದು (ನಮ್ಮ) ಅಂಗೀಕಾರವು ಅದ್ದರಿಂದ ಸಾಮ್ಯಾವಸ್ಥೆಯಲ್ಲಿಯೂ ವೈಷಮ್ಯವನ್ನು ಒಪ್ಪುವದಕ್ಕೆ ತಕ್ಕವಾಗಿಯೇ ಗುಣಗಳು ಇರುತ್ತವೆ ಎಂದು (ಸಾಂಖ್ಯನ ಮತವಿರಬಹುದು).

ಹೀಗಾದರೂ ಪ್ರಧಾನಕ್ಕೆ ಜ್ಞಶಕ್ತಿಯಿಲ್ಲದ್ದರಿಂದ ರಚನಾನುಪಪತ್ತಿಯೇ ಮುಂತಾದ ಹಿಂದೆ ಹೇಳಿದ ದೋಷಗಳು ಅದೇ ಸ್ಥಿತಿಯಲ್ಲಿರುತ್ತವೆ.[2] ಆದರೆ ಜ್ಞಶಕ್ತಿಯನ್ನೂ (ಪ್ರಧಾನಕ್ಕೆ) ಅನುಮಾನಿಸುವವನು ಪ್ರತಿವಾದಿತ್ವವನ್ನು

---

1. ಅದ್ದರಿಂದ ಗುಣಗಳು ಪ್ರಧಾನಾವಸ್ಥೆಯಲ್ಲಿಯೇ ಇರಬೇಕೆಂಬ ನಿಯಮವೇನೂ ಇರುವದಿಲ್ಲ.

2. ಆ ದೋಷಗಳಿಗೆ ಸಾಂಖ್ಯನು ಯಾವ ಪರಿಹಾರವನ್ನೂ ಹೇಳಿದಂತೆ ಆಗುವದಿಲ್ಲ.

ಬಿಟ್ಟು ಹಿಂತಿರುಗಬೇಕಾಗುವದು. ಏಕೆಂದರೆ (ಆಗ ಅವನಿಗೆ) ಚೇತನವೊಂದೇ ಅನೇಕ ಭೇದಗಳುಳ್ಳ ಜಗತ್ತಿಗೆ ಉಪಾದಾನವು ಎಂಬ ಬ್ರಹ್ಮವಾದವೇ ಅಂಟಿಕೊಳ್ಳುತ್ತದೆ.[1] ವೈಷಮ್ಯವನ್ನು ಒಪ್ಪುವದಕ್ಕೆ ತಕ್ಕವಾಗಿದ್ದರೂ ಗುಣಗಳ ಸಾಮ್ಯಾವಸ್ಥೆಯಲ್ಲಿ (ಮತ್ತೆ ಯಾವ) ನಿಮಿತ್ತವೂ ಇಲ್ಲದಿರುವದರಿಂದ ವೈಷಮ್ಯವನ್ನು ಹೊಂದಲೇ ಆರವು. (ಒಂದು ವೇಳೆ) ಹೊಂದಿದರೂ ನಿಮಿತ್ತವಿಲ್ಲವೆಂಬುದು ಸಮಾನವಾಗಿರುವದರಿಂದ ಯಾವಾಗಲೂ ವೈಷಮ್ಯವನ್ನು ಹೊಂದಬೇಕು[2] ಎಂದು ಹಿಂದೆ ಹೇಳಿದ ದೋಷವೂ ಪ್ರಸಕ್ತವಾಗಿಯೇ ತೀರುತ್ತದೆ.

**ವಿಪ್ರತಿಷೇಧಾಚ್ಚಾಸಮಞ್ಜಸಮ್ || ೧೦ ||**

೧೦. ವಿಪ್ರತಿಷೇಧ(ವಿರುವ)ವರಿಂದಲೂ (ಈ ದರ್ಶನವು) ಅಸಮಂಜಸವು.

## ಸಾಂಖ್ಯದರ್ಶನದಲ್ಲಿ ವಿರೋಧ

**( ಭಾಷ್ಯ )**

೧೮. ಪರಸ್ಪರವಿರುದ್ಧಶ್ಚ ಅಯಂ ಸಾಂಖ್ಯಾನಾಮ್ ಅಭ್ಯುಪಗಮಃ । ಕ್ವಚಿತ್ ಸಪ್ತೇನ್ದ್ರಿಯಾಣಿ ಅನುಕ್ರಾಮನ್ತಿ, ಕ್ವಚಿತ್ ಏಕಾದಶ, ತಥಾ ಕ್ವಚಿತ್ ಮಹತಃ ತನ್ಮಾತ್ರಸರ್ಗಮ್ ಉಪದಿಶನ್ತಿ, ಕ್ವಚಿತ್ ಅಹಙ್ಕಾರಾತ್, ತಥಾ ಕ್ವಚಿತ್ ತ್ರೀಣಿ ಅನ್ತಃಕರಣಾನಿ ವರ್ಣಯನ್ತಿ, ಕ್ವಚಿತ್ ಏಕಮ್ ಇತಿ । ಪ್ರಸಿದ್ಧ ಏವ ತು ಶ್ರುತ್ಯಾ ಈಶ್ವರಕಾರಣವಾದಿನ್ಯಾ ವಿರೋಧಃ, ತದನುವರ್ತಿನ್ಯಾ ಚ ಸ್ಮೃತ್ಯಾ । ತಸ್ಮಾದಪಿ ಅಸಮಞ್ಜಸಂ ಸಾಂಖ್ಯಾನಾಂ ದರ್ಶನಮ್ ಇತಿ ॥

**( ಭಾಷಾರ್ಥ )**

ಈ ಸಾಂಖ್ಯರ ಅಂಗೀಕಾರವು ಒಂದಕ್ಕೊಂದು ವಿರುದ್ಧವಾಗಿಯೂ ಇರುತ್ತದೆ. ಕೆಲವು ಕಡೆಗಳಲ್ಲಿ ಏಳು ಇಂದ್ರಿಯಗಳೆಂದು ಹೇಳಿರುತ್ತಾರೆ;[3] ಕೆಲವು

---

1. ಪುರುಷರೂ ಚೈತನ್ಯ, ಪ್ರಧಾನವೂ ಚೈತನ್ಯ– ಎಂದಾದರೆ ಎಲ್ಲವೂ ಚೈತನ್ಯವೇ ಎಂದಾಗುತ್ತದೆ. ಆ ಚೈತನ್ಯವು ಜಗತ್ತಿಗೆ ಉಪಾದಾನವೆಂಬುದೇ ಬ್ರಹ್ಮಕಾರಣವಾದವು.

2. ಪ್ರಧಾನಾವಸ್ಥೆಗೆ ಬರುವದಕ್ಕೇ ಕಾರಣವಿಲ್ಲ ಎಂದರ್ಥ.

3. ತ್ವಗಿಂದ್ರಿಯವೇ ಬುದ್ಧೀಂದ್ರಿಯಗಳೆಲ್ಲಕ್ಕೂ ಮೂಲರೂಪವು. ಕರ್ಮೇಂದ್ರಿಯಗಳು ಐದು, ಮನಸ್ಸು ಒಂದು – ಅಂತೂ ಏಳು ಇಂದ್ರಿಯಗಳು. **ಭಾಮತೀ.**

ಕಡೆಗಳಲ್ಲಿ ಹನ್ನೊಂದೆಂದು (ಹೇಳಿರುತ್ತಾರೆ). ಹಾಗೆಯೇ ಒಂದು ಕಡೆಯಲ್ಲಿ ಮಹತ್ತಿನಿಂದ ತನ್ಮಾತ್ರೆಗಳ ಸೃಷ್ಟಿಯನ್ನು ಹೇಳಿರುತ್ತಾರೆ; ಒಂದು ಕಡೆಯಲ್ಲಿ ಅಹಂಕಾರದಿಂದ (ಅವುಗಳ ಸೃಷ್ಟಿಯನ್ನು ಹೇಳಿರುತ್ತಾರೆ). ಒಂದು ಕಡೆ ಮೂರು ಅಂತಃಕರಣಗಳನ್ನು ವರ್ಣಿಸಿರುತ್ತಾರೆ; ಒಂದು ಕಡೆಯಲ್ಲಿ ಒಂದನ್ನೇ (ಹೇಳಿರುತ್ತಾರೆ).[1] ಈಶ್ವರಕಾರಣವಾದಿಯಾದ ಶ್ರುತಿಗೂ ಅದನ್ನು ಅನುಸರಿಸಿರುವ ಸ್ಮೃತಿಗೂ (ಈ ದರ್ಶನವು) ವಿರುದ್ಧವಾಗಿದೆ ಎಂಬುದು ತಿಳಿದೇ ಇದೆ. ಆದ್ದರಿಂದಲೂ ಸಾಂಖ್ಯರ ದರ್ಶನವು ಅಸಮಂಜಸವು.

## ವೇದಾಂತಿಯ ಸಿದ್ಧಾಂತದಮೇಲೆ ಸಾಂಖ್ಯನ ಆಕ್ಷೇಪ

( ಭಾಷ್ಯ )

೧೯. ಅತ್ರಾಹ– ನನು ಔಪನಿಷದಾನಾಮಪಿ ಅಸಮಞ್ಜಸಮೇವ ದರ್ಶನಮ್ । ತಪ್ಯತಾಪಕಯೋರ್ಜಾತ್ಯನ್ತರಭಾವಾನಭ್ಯುಪಗಮಾತ್ । ಏಕಂ ಹಿ ಬ್ರಹ್ಮ ಸರ್ವಾತ್ಮಕಂ ಸರ್ವಸ್ಯ ಪ್ರಪಞ್ಚಸ್ಯ ಕಾರಣಮ್ ಅಭ್ಯುಪಗಚ್ಛತಾಮ್ ಏಕಸ್ಯೈವ ಆತ್ಮನೋ ವಿಶೇಷೌ ತಪ್ಯತಾಪಕೌ ನ ಜಾತ್ಯನ್ತರಭೂತೌ ಇತಿ ಅಭ್ಯುಪಗನ್ತವ್ಯಂ ಸ್ಯಾತ್ । ಯದಿ ಚ ಏತೌ ತಪ್ಯತಾಪಕೌ ಏಕಸ್ಯ ಆತ್ಮನೋ ವಿಶೇಷೌ ಸ್ಯಾತಾಮ್, ಸ ತಾಭ್ಯಾಂ ತಪ್ಯತಾಪಕಾಭ್ಯಾಂ ನ ನಿರ್ಮುಚ್ಯೇತ ಇತಿ ತಾಪೋಪಶಾನ್ತಯೇ ಸಮ್ಯಗ್ದರ್ಶನಮ್ ಉಪದಿಶತ್ ಶಾಸ್ತ್ರಮ್ ಅನರ್ಥಕಂ ಸ್ಯಾತ್ । ನ ಹಿ ಔಷ್ಣ್ಯಪ್ರಕಾಶಧರ್ಮಕಸ್ಯ ಪ್ರದೀಪಸ್ಯ ತದವಸ್ಥಸ್ಯೈವ ತಾಭ್ಯಾಂ ನಿರ್ಮೋಕ್ಷಃ ಉಪಪದ್ಯತೇ । ಯೋಽಪಿ ಜಲತರಙ್ಗವೀಚೀಫೇನಾದ್ಯುಪನ್ಯಾಸಃ, ತತ್ರಾಪಿ ಜಲಾತ್ಮನ ಏಕಸ್ಯ ವೀಚ್ಯಾದಯೋ ವಿಶೇಷಾಃ ಆವಿರ್ಭಾವತಿರೋಭಾವರೂಪೇಣ ನಿತ್ಯಾ ಏವ ಇತಿ ಸಮಾನಃ ಜಲಾತ್ಮನೋ ವೀಚ್ಯಾದಿಭಿಃ ಅನಿರ್ಮೋಕ್ಷಃ । ಪ್ರಸಿದ್ಧಶ್ಚ ಅಯಂ ತಪ್ಯತಾಪಕಯೋಃ ಜಾತ್ಯನ್ತರಭಾವೋ ಲೋಕೇ । ತಥಾ ಹಿ— ಅರ್ಥೀ ಚ ಅರ್ಥಶ್ಚ ಅನ್ಯೋಽನ್ಯಭಿನ್ನೌ ಲಕ್ಷ್ಯೇತೇ । ಯದಿ ಅರ್ಥಿನಃ ಸ್ವತಃ ಅನ್ಯೋಽರ್ಥೋ ನ ಸ್ಯಾತ್ । ಯಸ್ಯ ಅರ್ಥಿನಃ ಯದ್ವಿಷಯಮ್ ಅರ್ಥಿತ್ವಮ್ ಸ ತಸ್ಯ ಅರ್ಥೋ ನಿತ್ಯಸಿದ್ಧ ಏವ ಇತಿ ನ ತಸ್ಯ ತದ್ವಿಷಯಮ್ ಅರ್ಥಿತ್ವಂ ಸ್ಯಾತ್ । ಯಥಾ ಪ್ರಕಾಶಾತ್ಮನಃ ಪ್ರದೀಪಸ್ಯ ಪ್ರಕಾಶಾಖ್ಯೋಽರ್ಥಃ ನಿತ್ಯಸಿದ್ಧ ಏವ

1. ಮನಸ್ಸು, ಬುದ್ಧಿ, ಅಹಂಕಾರ– ಎಂದು ಮೂರು; ಬುದ್ಧಿಯೊಂದೇ ಅಂತಃಕರಣ. ಈ ವಿಧವಿಧವಾದ ವರ್ಣನೆಗಳನ್ನು ಆಚಾರ್ಯರು ಯಾವ ಮೂಲಗ್ರಂಥಗಳಿಂದ ತೆಗೆದಿರುವರೆಂಬುದು ಗೊತ್ತಾಗಿಲ್ಲ. ಅವರು ಉದಾಹರಿಸಿರುವ ಸಾಂಖ್ಯಗ್ರಂಥವೆಂದರೆ ಸಾಂಖ್ಯಕಾರಿಕೆಯೊಂದೇ.

ಇತಿ ನ ತಸ್ಯ ತದ್ವಿಷಯಮರ್ಥಿತ್ವಂ ಭವತಿ । ಅಪ್ರಾಪ್ತೇ ಹಿ ಅರ್ಥೇ ಅರ್ಥಿನಃ ಅರ್ಥಿತ್ವಂ ಸ್ಯಾತ್ ಇತಿ । ತಥಾ ಅರ್ಥಸ್ಯಾಪಿ ಅರ್ಥತ್ವಂ ನ ಸ್ಯಾತ್ । ಯದಿ ಸ್ಯಾತ್ ಸ್ವಾರ್ಥತ್ವಮೇವ ಸ್ಯಾತ್ । ನ ಚ ಏತದಸ್ತಿ । ಸಂಬನ್ಧಿಶಬ್ದೌ ಹಿ ಏತೌ ಅರ್ಥೀ ಚ ಅರ್ಥಶ್ಚ ಇತಿ । ದ್ವಯೋಶ್ಚ ಸಂಬನ್ಧಿನೋಃ ಸಂಬನ್ಧಃ ನ್ಯಾನ್ನೈಕಸ್ಯೈವ । ತಸ್ಮಾತ್ ಭಿನ್ನೌ ಏತೌ ಅರ್ಥಾರ್ಥಿನೌ । ತಥಾ ಅನರ್ಥಾನರ್ಥಿನಾವಪಿ । ಅರ್ಥಿನೋಽನುಕೂಲಃ ಅರ್ಥಃ, ಪ್ರತಿಕೂಲಃ ಅನರ್ಥಃ । ತಾಭ್ಯಾಮ್ ಏಕಃ ಪರ್ಯಾಯೇಣ ಉಭಾಭ್ಯಾಂ ಸಂಬಧ್ಯತೇ । ತತ್ರ ಅರ್ಥಸ್ಯ ಅಲ್ಪೀಯಸ್ತ್ವಾತ್ ಭೂಯಸ್ತ್ವಾಚ್ಚ ಅನರ್ಥಸ್ಯ ಉಭಾವಪಿ ಅರ್ಥಾನರ್ಥೌ ಅನರ್ಥ ಏವ ಇತಿ ತಾಪಕಃ ಸ ಉಚ್ಯತೇ। ತಪ್ಯಸ್ತು ಪುರುಷಃ ಯ ಏಕಃ ಪರ್ಯಾಯೇಣ ಉಭಾಭ್ಯಾಂ ಸಂಬಧ್ಯತೇ ಇತಿ ತಯೋಃ ತಪ್ಯತಾಪಕಯೋಃ ಏಕಾತ್ಮತಾಯಾಂ ಮೋಕ್ಷಾನುಪಪತ್ತಿಃ । ಜಾತ್ಯನ್ತರಭಾವೇ ತು ತತ್ಸಂಯೋಗಹೇತುಪರಿಹಾರಾತ್ ಸ್ಯಾದಪಿ ಕದಾಚಿತ್ ಮೋಕ್ಷೋಪಪತ್ತಿಃ ಇತಿ ॥

(ಭಾಷ್ಯಾರ್ಥ)

ಇಲ್ಲಿ (ಸಾಂಖ್ಯನು) ಹೇಳುತ್ತಾನೇನೆಂದರೆ, ಔಪನಿಷದರ ದರ್ಶನವೂ[1] ಅಸಮಂಜಸವೇ ಆಗಿದೆ. ಏಕೆಂದರೆ (ಅವರು) ತಪ್ಯತಾಪಕಗಳು ಬೇರೆ ಜಾತಿಯವು ಎಂದು ಒಪ್ಪಿರುವದಿಲ್ಲ. ಒಂದೇ ಬ್ರಹ್ಮವು ಸರ್ವಾತ್ಮಕವೆಂದೂ ಸರ್ವಪ್ರಪಂಚಕ್ಕೂ ಕಾರಣವೆಂದೂ ಒಪ್ಪಿರುವ (ವೇದಾಂತಿಗಳ ಮತದಲ್ಲಿ) ತಪ್ಯತಾಪಕಗಳು ಒಬ್ಬನೇ ಆತ್ಮನ ವಿಶೇಷಗಳೇ ಹೊರತು ಬೇರೆ(ಬೇರೆಯ) ಜಾತಿಯವಲ್ಲ ಎಂದು ಒಪ್ಪಬೇಕಾಗುವದು. ಈ ತಪ್ಯತಾಪಕಗಳು ಒಬ್ಬನೇ ಆತ್ಮನ ವಿಶೇಷಗಳಾಗಿದ್ದರೆ ಅವನು ಆ ತಪ್ಯತಾಪಕಗಳಿಂದ ಬಿಡುಗಡೆಹೊಂದಲಾರನಾದ್ದರಿಂದ ತಾಪವನ್ನು ನಾಶಗೊಳಿಸುವದಕ್ಕಾಗಿ ಸಮ್ಯಗ್ದರ್ಶನವನ್ನು ಉಪದೇಶಿಸುವ ಶಾಸ್ತ್ರವು ವ್ಯರ್ಥವಾಗುವದು. ಬಿಸಿಬೆಳಕುಗಳೆಂಬ ಧರ್ಮಗಳುಳ್ಳ ದೀಪವು ಹಾಗೆಯೇ ಇದ್ದುಕೊಂಡು ಅವುಗಳಿಂದ ಬಿಡುಗಡೆಹೊಂದುತ್ತದೆ ಎಂಬುದು ಸರಿಯಾಗಲಾರದಷ್ಟೆ. ಇನ್ನು ನೀರು, ತೆರೆ, ಅಲೆ, ನೊರೆ- ಮುಂತಾದವುಗಳ ದೃಷ್ಟಾಂತವನ್ನು ಕೊಡುವಿರಷ್ಟೆ, ಅಲ್ಲಿಯೂ ಜಲಸ್ವರೂಪವುಳ್ಳ ಒಂದೇ (ಪದಾರ್ಥಕ್ಕೆ) ಅಲೆಯೇ ಮುಂತಾದ ವಿಶೇಷಗಳು ತೋರುವದು, ಮರೆಯಾಗುವದು- ಎಂಬ ರೂಪದಿಂದ ನಿತ್ಯವೇ ಆಗಿರುತ್ತವೆಯಾದ್ದರಿಂದ ಜಲಾತ್ಮಕ

---

1. ೨-೧-೧೩ರ ಭಾಷ್ಯವನ್ನು ನೋಡಿ.

(ವಸ್ತುವಿಗೆ) ಆ ಲಿ ಯೇ ಮುಂತಾದವುಗಳಿಂದ ಬಿಡುಗಡೆಯಿಲ್ಲವೆಂಬುದು (ಅದಕ್ಕೂ) ಸಮಾನವಾಗಿರುತ್ತದೆ.

ಈ ತಪ್ಯತಾಪಕಗಳು ಬೇರೆಬೇರೆಯ ಜಾತಿಯವೆಂಬುದು ಲೋಕದಲ್ಲಿ ಪ್ರಸಿದ್ಧವಾಗಿಯೂ ಇರುತ್ತದೆ. ಹೇಗೆಂದರೆ ಅರ್ಥಿಯೂ ಅರ್ಥವೂ ಒಂದಕ್ಕಿಂತ ಒಂದು ಬೇರೆಯಾಗಿರುವದು ಕಂಡುಬರುತ್ತದೆ. ಅರ್ಥಿಯಾದವನಿಗಿಂತ ಬೇರೆಯಾದ ಅರ್ಥವು ಇಲ್ಲದಿದ್ದರೆ ಯಾವ ಅರ್ಥಿಗೆ ಯಾವ (ಅರ್ಥದ) ವಿಷಯದ ಅರ್ಥಿತ್ವವುಂಟಾಗಿರಬೇಕೋ ಅವನ ಆ ಅರ್ಥವು ನಿತ್ಯಸಿದ್ಧವಾಗಿಯೇ ಇರುವದರಿಂದ ಅವನಿಗೆ ಅದರ ವಿಷಯದಲ್ಲಿ ಅರ್ಥಿತ್ವವುಂಟಾಗಲಾರದು. ಉದಾಹರಣೆಗೆ ಪ್ರಕಾಶರೂಪವಾಗಿರುವ ದೀಪಕ್ಕೆ ಪ್ರ ಕಾ ಶ ವೆಂ ಬ ಅರ್ಥವು ನಿತ್ಯಸಿದ್ಧವಾಗಿರುವದರಿಂದ ಆ (ದೀಪ)ಕ್ಕೆ ಆ (ಪ್ರಕಾಶ)ವಿಷಯವಾದ ಅರ್ಥಿತ್ವವು ಉಂಟಾಗುವಹಾಗಿಲ್ಲ; (ಏಕೆಂದರೆ) ಪ್ರಾಪ್ತವಾಗದಿರುವ ಅರ್ಥದಲ್ಲಿಯೇ ಅಲ್ಲವೆ, ಅರ್ಥಿಗೆ ಅರ್ಥಿತ್ವವು ಉಂಟಾಗಬೇಕು ? ಇದರಂತೆ ಅರ್ಥಕ್ಕೂ ಅರ್ಥತ್ವವೂ ಉಂಟಾಗಲಾರದು. ಒಂದು ವೇಳೆ ಅದರೂ ತನಗೆ ತಾನೇ ಅರ್ಥ ಎಂದಾಗುವದು. ಆದರೆ ಹೀಗಿಲ್ಲ ; ಏಕೆಂದರೆ ಅರ್ಥ, ಅರ್ಥಿ- ಎಂಬಿವು ಸಂಬಂಧಿ ಶಬ್ದಗಳು. ಎರಡು ಸಂಬಂಧಿಗಳಿಗೆ ಸಂಬಂಧವಾಗಬೇಕೇ ಹೊರತು ಒಂದಕ್ಕೇ ಆಗಲಾರದು. ಆದ್ದರಿಂದ ಈ ಅರ್ಥಾರ್ಥಿಗಳು ಬೇರೆಬೇರೆಯೇ. ಇದರಂತೆ ಅನರ್ಥ, ಅನರ್ಥಿ- ಇವೂ (ಬೇರೆಬೇರೆಯೇ). ಅರ್ಥಿಗೆ ಅನುಕೂಲವಾದದ್ದು ಅರ್ಥವು, ಪ್ರತಿಕೂಲವಾದದ್ದು ಅನರ್ಥವು. ಒಬ್ಬನೇ (ಪುರುಷನು) ಪರ್ಯಾಯದಿಂದ ಆ ಎರಡರಿಂದಲೂ ಸಂಬದ್ಧನಾಗುತ್ತಾನೆ.[1] ಅವುಗಳಲ್ಲಿ ಅರ್ಥವು ಸ್ವಲ್ಪವಾಗಿರುವದರಿಂದಲೂ ಅನರ್ಥವು ಬಹಳವಾಗಿರುವದರಿಂದಲೂ ಅರ್ಥ, ಅನರ್ಥ- ಎಂಬೀ ಎರಡೂ ಅನರ್ಥವೇ ಆದ್ದರಿಂದ ಇದು **'ತಾಪಕ'**ವೆನಿಸುತ್ತದೆ. (ಇನ್ನು) ತಪ್ಯನೋ ಎಂದರೆ ಯಾವ ಒಬ್ಬನು ಪರ್ಯಾಯದಿಂದ ಈ ಎರಡರಿಂದಲೂ ಸಂಬದ್ಧನಾಗುತ್ತಾನೋ ಆ ಪುರುಷನು. ಆದ್ದರಿಂದ ಈ ತಪ್ಯತಾಪಕಗಳು ಒಂದೇ (ವಸ್ತುವಿನ) ಸ್ವರೂಪವು ಎಂದಾದರೆ ಮೋಕ್ಷದಿಂದ ಬಿಡುಗಡೆಯಾಗಲಾರದು. (ಅವೆರಡೂ) ಬೇರೆಬೇರೆಯ ಜಾತಿಯವು ಎಂದರೆ ಅವುಗ(ಳೆರಡಕ್ಕೂ) ಸಂಯೋಗವನ್ನು ತಪ್ಪಿಸಿಕೊಳ್ಳುವದರಿಂದ

---

1. ವಿರುದ್ಧವಾದ ಅರ್ಥಾನರ್ಥಗಳೆರಡೂ ಒಂದೇ ಕಾಲದಲ್ಲಿರಲಾರದಾದ್ದರಿಂದ ಪರ್ಯಾಯದಿಂದ, ಒಂದಾಗುತ್ತಲೂ ಒಂದರಿಂದ, ಸಂಬದ್ಧನಾಗುತ್ತಾನೆಂದಿದೆ.

ಒಂದುವೇಳೆ[1] ಮೋಕ್ಷವು ಹೊಂದಿದರೂ ಹೊಂದಬಹುದು

## ವೇದಾಂತದಲ್ಲಿ ತಪ್ಯತಾಪಕಭಾವನಿರೂಪಣ

೨೦. ಅತ್ರೋಚ್ಯತೇ । ನ । ಏಕತ್ವಾದೇವ ತಪ್ಯತಾಪಕಭಾವಾನುಪಪತ್ತೇಃ । ಭವೇದೇಷ ದೋಷೋ ಯದಿ ಏಕಾತ್ಮತಾಯಾಂ ತಪ್ಯತಾಪಕೌ ಅನ್ಯೋನ್ಯಸ್ಯ ವಿಷಯವಿಷಯಿಭಾವಂ ಪ್ರತಿಪದ್ಯೇಯಾತಾಮ್ । ನ ತು ಏತದಸ್ತಿ । ಏಕತ್ವಾದೇವ । ನ ಹಿ ಅಗ್ನಿಃ ಏಕಃ ಸನ್ ಸ್ವಮ್ ಆತ್ಮಾನಂ ದಹತಿ ಪ್ರಕಾಶಯತಿ ವಾ ಸತ್ಯಪಿ ಔಷ್ಣ್ಯಪ್ರಕಾಶಾದಿಧರ್ಮಭೇದೇ ಪರಿಣಾಮಿತ್ವೇ ಚ । ಕಿಂ ಕೂಟಸ್ಥೇ ಬ್ರಹ್ಮಣಿ ಏಕಸ್ಮಿನ್ ತಪ್ಯತಾಪಕಭಾವಃ ಸಂಭವೇತ್ । ಕ್ವ ಪುನರಯಂ ತಪ್ಯತಾಪಕಭಾವಃ ಸ್ಯಾತ್ ಇತಿ? ಉಚ್ಯತೇ । ಕಿಂ ನ ಪಶ್ಯಸಿ ಕರ್ಮಭೂತೋ ಜೀವದ್ದೇಹಃ ತಪ್ಯಃ, ತಾಪಕಃ ಸವಿತಾ ಇತಿ? ನನು ತಪ್ತಿರ್ನಾಮ ದುಃಖಮ್ । ಸಾ ಚೇತಯಿತುಃ ನ ಅಚೇತನಸ್ಯ ದೇಹಸ್ಯ । ಯದಿ ಹಿ ದೇಹಸ್ಯೈವ ತಪ್ತಿಃ ಸ್ಯಾತ್ ಸಾ ದೇಹನಾಶೇ ಸ್ವಯಮೇವ ನಶ್ಯತಿ ಇತಿ ತನ್ನಾಶಾಯ ಸಾಧನಂ ನೈಷಿತವ್ಯಂ ಸ್ಯಾತ್ ಇತಿ । ಉಚ್ಯತೇ । ದೇಹಾಭಾವೇಽಪಿ ಕೇವಲಸ್ಯ ಚೇತನಸ್ಯ ತಪ್ತಿಃ ನ ದೃಷ್ಟಾ । ನ ಚ ತ್ವಯಾಪಿ ತಪ್ತಿರ್ನಾಮ ವಿಕ್ರಿಯಾ ಚೇತಯಿತುಃ ಕೇವಲಸ್ಯ ಇಷ್ಯತೇ । ನಾಪಿ ದೇಹಚೇತನಯೋಃ ಸಂಹತತ್ವಮ್ । ಅಶುದ್ಧ್ಯಾದಿದೋಷಪ್ರಸಙ್ಗಾತ್ । ನ ಚ ತಪ್ತೇರೇವ ತಪ್ತಿಮ್ ಅಭ್ಯುಪಗಚ್ಛಸಿ । ಕಥಂ ತವಾಪಿ ತಪ್ಯತಾಪಕಭಾವಃ ? ಸತ್ತ್ವಂ ತಪ್ಯಂ ತಾಪಕಂ ರಜಃ ಇತಿ ಚೇತ್ । ನ । ತಾಭ್ಯಾಂ ಚೇತನಸ್ಯ ಸಂಹತತ್ವಾನುಪಪತ್ತೇಃ । ಸತ್ತ್ವಾನುರೋಧಿತ್ವಾತ್ ಚೇತನೋಽಪಿ ತಪ್ಯತ ಇವ ಇತಿ ಚೇತ್ । ಪರಮಾರ್ಥತಸ್ತರ್ಹಿ ನೈವ ತಪ್ಯತೇ ಇತ್ಯಾಪತತಿ । ಇವಶಬ್ದಪ್ರಯೋಗಾತ್ । ನ ಚೇತ್ ತಪ್ಯತೇ ನ ಇವಶಬ್ದೋ ದೋಷಾಯ । ನ ಹಿ ಡುಣ್ಡುಭಃ ಸರ್ಪ ಇವ ಇತ್ಯೇತಾವತಾ ಸವಿಷೋ ಭವತಿ । ಸರ್ಪೋ ವಾ ಡುಣ್ಡುಭ ಇವ ಇತ್ಯೇತಾವತಾ ನಿರ್ವಿಷೋ ಭವತಿ । ಅತಶ್ಚ ಅವಿದ್ಯಾಕೃತೋಽಯಂ ತಪ್ಯತಾಪಕಭಾವಃ ನ ಪಾರಮಾರ್ಥಿಕಃ ಇತಿ ಅಭ್ಯುಪಗನ್ತವ್ಯಮ್ ಇತಿ । ನೈವಂ ಮಮಾಪಿ ಕಿಂಚಿತ್ ದುಷ್ಯತಿ । ಅಥ ಪಾರಮಾರ್ಥಿಕಮೇವ ಚೇತನಸ್ಯ ತಪ್ಯತ್ವಮ್ ಅಭ್ಯುಪಗಚ್ಛಸಿ, ತವೈವ ಸುತರಾಮ್ ಅನಿರ್ಮೋಕ್ಷಃ ಪ್ರಸಜ್ಯೇತ । ನಿತ್ಯತ್ವಾಭ್ಯುಪಗಮಾಚ್ಚ ತಾಪಕಸ್ಯ । ತಪ್ಯತಾಪಕಶಕ್ತ್ಯೋಃ ನಿತ್ಯತ್ವೇಽಪಿ ಸನಿಮಿತ್ತಸಂಯೋಗಾಪೇಕ್ಷತ್ವಾತ್ ತಪ್ತೇಃ ಸಂಯೋಗನಿಮಿತ್ತಾದರ್ಶನನಿವೃತ್ತೌ ಆತ್ಯನ್ತಿಕಃ ಸಂಯೋಗೋಪರಮಃ ತತಶ್ಚ ಆತ್ಯನ್ತಿಕೋ ಮೋಕ್ಷಃ ಉಪಪನ್ನಃ ಇತಿ ಚೇತ್ । ನ । ಅದರ್ಶನಸ್ಯ ತಮಸಃ

---

1. ಪ್ರಕೃತಿಪುರುಷರ ಅವಿವೇಕದಿಂದ ತಪ್ಯತಾಪಕಸಂಯೋಗವಾಗುತ್ತದೆ, ವಿವೇಕದಿಂದ ಸಂಯೋಗವು ಹೋಗುತ್ತದೆ ಎಂದು ಹೇಗೋ ಮೋಕ್ಷವನ್ನು ಹೊಂದಿಸಬಹುದು ಎಂದರ್ಥ. ಮುಂದಿನ ಭಾಷ್ಯಭಾಗದಲ್ಲಿ ಇದು ಸ್ಪಷ್ಟವಾಗುವದು.

ನಿತ್ಯತ್ವಾಭ್ಯುಪಗಮಾತ್ । ಗುಣಾನಾಂ ಚ ಉದ್ಭವಾಭಿಭವಯೋಃ ಅನಿಯತತ್ವಾತ್ ಅನಿಯತಃ ಸಂಯೋಗನಿಮಿತ್ತೋಪರಮಃ ಇತಿ ವಿಯೋಗಸ್ಯಾಪಿ ಅನಿಯತತ್ವಾತ್ ಸಾಂಖ್ಯಸ್ಯೈವ ಅನಿರ್ಮೋಕ್ಷಃ ಅಪರಿಹಾರ್ಯಃ ಸ್ಯಾತ್ । ಔಪನಿಷದಸ್ಯ ತು ಆತ್ಮೈಕತ್ವಾಭ್ಯುಪಗಮಾತ್ ಏಕಸ್ಯ ಚ ವಿಷಯವಿಷಯಿಭಾವಾನುಪಪತ್ತೇಃ ವಿಕಾರಭೇದಸ್ಯ ಚ ವಾಚಾರಮ್ಭಣಮಾತ್ರತ್ವಶ್ರವಣಾತ್ ಅನಿರ್ಮೋಕ್ಷಶಙ್ಕಾ ಸ್ವಪ್ನೇಽಪಿ ನೋಪಜಾಯತೇ । ವ್ಯವಹಾರೇ ತು ಯತ್ರ ಯಥಾ ದೃಷ್ಟಃ ತಪ್ಯತಾಪಕಭಾವಃ ತತ್ರ ತಥೈವ ಸಃ ಇತಿ ನ ಚೋದಯಿತವ್ಯಃ ಪರಿಹರ್ತವ್ಯೋ ವಾ ಭವತಿ ॥

( ಭಾಷ್ಯಾರ್ಥ )

ಇದಕ್ಕೆ (ಉತ್ತರವನ್ನು) ಹೇಳುತ್ತೇವೆ. ಇದು ಸರಿಯಲ್ಲ. ಏಕೆಂದರೆ ಒಂದೇ ಆಗಿರುವದರಿಂದಲೇ ತಪ್ಯತಾಪಕಭಾವವಿರುವದಿಲ್ಲ.[1] ಏಕಾತ್ಮತೆ ಯಾದಾಗ ತಪ್ಯತಾಪಕಗಳು ಒಂದಕ್ಕೊಂದು ವಿಷಯವಿಷಯಿಭಾವವನ್ನು ಹೊಂದಿರುತ್ತವೆ ಎಂದಾದರೆ ಈ ದೋಷವಾದೀತು. ಆದರೆ ಹೀಗಿರುವದಿಲ್ಲ; ಒಂದೇ (ವಸ್ತು)ವಾದ್ದರಿಂದಲೇ (ಹೀಗೆ). ಬೆಂಕಿಯು ಒಂದೇ (ವಸ್ತು)ವಾಗಿ ರುವಲ್ಲಿ ಅದಕ್ಕೆ ಬಿಸಿ, ಬೆಳಕು- ಮುಂತಾದ ಧರ್ಮಗಳು ಬೇರೆಯಾಗಿದ್ದರೂ ಪರಿಣಾಮಿತ್ವವೂ ಇದ್ದರೂ[2] (ಅದು) ತನ್ನನ್ನು ತಾನು ಸುಡುವದೂ ಇಲ್ಲ, ಬೆಳಗುವದೂ ಇಲ್ಲ. ಅಲ್ಲವೆ? (ಇನ್ನು) ಕೂಟಸ್ಥವಾದ ಒಂದೇ ಒಂದು ಬ್ರಹ್ಮದಲ್ಲಿ ತಪ್ಯತಾಪಕಭಾವವು (ಹೇಗೆ) ಇದ್ದೀತು ?[3]

(ಸಾಂಖ್ಯ) :— ಹಾಗಾದರೆ ಈ ತಪ್ಯತಾಪಕಭಾವವು ಎಲ್ಲಿರಬಹುದು ?

(ವೇದಾಂತಿ) :— ವಿಷಯವಾಗಿರುವ ಬದುಕಿರುವವನ ದೇಹವು ತಪ್ಯವು. ಸೂರ್ಯನು ತಾಪಕನು- ಎಂಬುದನ್ನು ನೀನು ಕಂಡಿಲ್ಲವೇನು ?[4]

(ಸಾಂಖ್ಯ) :— ತಪ್ತಿ ಎಂದರೆ ದುಃಖವು; ಅದು ಚೇತನನಿಗೆ (ಆಗ

---

1. ಏಕತ್ವವಾದದಲ್ಲಿ ಯಾವ ದೋಷವೂ ಬರುವದೇ ಇಲ್ಲ; ಏಕೆಂದರೆ ದೋಷ, ದುಷ್ಟ- ಎಂಬ ಭೇದವು ದ್ವೈತವಲ್ಲಿ ಮಾತ್ರ ಇರಬಲ್ಲದು- ಎಂದು ಆಚಾರ್ಯರು ತಮ್ಮ ಭಾಷ್ಯದಲ್ಲಿ ಮತ್ತೆ ಮತ್ತೆ ಹೇಳಿರುತ್ತಾರೆ.

2. ಬೆಂಕಿಗೆ ಹವಿಸ್ಸು, ಕಟ್ಟಿಗೆ- ಮುಂತಾದದ್ದನ್ನು ಹಾಕಿದರೆ ಹೆಚ್ಚಾಗುವದು, ಇಲ್ಲ ದಿದ್ದರೆ ಕಡಿಮೆಯಾಗುವದು- ಎಂಬ ಪರಿಣಾಮಿತ್ವವು ಕಂಡುಬರುತ್ತದೆ.

3. ಬೆಂಕಿಯು ದ್ವೈತಪ್ರಪಂಚದಲ್ಲಿರುವ ಒಂದು ವಸ್ತು. ಬ್ರಹ್ಮವು ತನ್ನ ಹೊರಗಾಗಲಿ ಒಳಗಾಗಲಿ ಯಾವ ಭೇದವೂ ಇಲ್ಲದ ನಿರ್ವಿಕಾರವಾದ ವಸ್ತು.

4. ತಪ್ಯತಾಪಕಭಾವವು ಅನಾತ್ಮಸಂಬಂಧದಿಂದಲೇ ಆತ್ಮನಿಗೆ ಆಗುವದೆಂಬುದನ್ನು ಸ್ಪಷ್ಟಪಡಿಸುವದಕ್ಕಾಗಿ ಈ ಉದಾಹರಣೆಯನ್ನು ಕೊಟ್ಟಿದೆ.

ತಕ್ಕದ್ದೇ ಹೊರತು) ಅಚೇತನವಾದ ದೇಹಕ್ಕಲ್ಲ. ದೇಹಕ್ಕೇ ತಪ್ತಿಯು ಆಗುವದಾದರೆ ಆದು ದೇಹವು ನಾಶವಾಗುವದಾದರೆ ತಾನೇ ನಾಶವಾಗುತ್ತದೆಯಾದ್ದರಿಂದ ಅದರ ನಾಶಕ್ಕಾಗಿ ಸಾಧನವನ್ನು ಹುಡುಕಬೇಕಾದದ್ದೇ ಇರುವದಿಲ್ಲವಲ್ಲ![1]

(ವೇದಾಂತಿ) : — ಇದಕ್ಕೆ ಹೇಳುತ್ತೇವೆ. ದೇಹವಿಲ್ಲದಿದ್ದರೆ ಬರಿಯ ಚೇತನಕ್ಕೂ ದುಃಖವಿರುವದು ಕಂಡಿರುವದಿಲ್ಲ.[2] ತಪ್ತಿ ಎಂಬ ವಿಕಾರವು ಬರಿಯ ಚೇತನಕ್ಕೆ ಆಗುವದೆಂದು ನೀನೂ ಒಪ್ಪುವದಿಲ್ಲ; ದೇಹಚೇತನಗಳು ಸಂಹತವಾಗಿರುವದೆಂಬದೂ (ಒಪ್ಪುವದಿಲ್ಲ). ಏಕೆಂದರೆ (ಆಗ ಆತ್ಮನಿಗೆ) ಅಶುದ್ಧಿಯೇ ಮುಂತಾದ ದೋಷಗಳು ಉಂಟಾಗುವವು.[3] ತಪ್ತಿಗೇ ತಪ್ತಿಯು ಎಂದೂ ಒಪ್ಪುವದಿಲ್ಲ.[4] ನಿನ್ನ (ಮತದಲ್ಲಾದರೂ) ತಪ್ಯತಾಪಕಭಾವವು ಹೇಗೆ ಹೊಂದುತ್ತದೆ ?

(ಸಾಂಖ್ಯ) :— ಸತ್ತ್ವವು ತಪ್ಯವು, ರಜಸ್ಸು ತಾಪಕವು.[5]

(ವೇದಾಂತಿ) :— ಹಾಗಲ್ಲ ಏಕೆಂದರೆ ಆ (ಗುಣಗಳೊಡನೆ) ಚೇತನವು ಸಂಹತವಾಗಿದೆ ಎಂಬುದು ಹೊಂದುವಂತಿಲ್ಲ.[6]

(ಸಾಂಖ್ಯ) :— ಸತ್ತ್ವವನ್ನು ಅನುಸರಿಸುವದರಿಂದ ಚೇತನವೂ ತಪ್ತವಾದಂತೆ ಆಗುತ್ತದೆ.[7]

(ವೇದಾಂತಿ) :— ಹಾಗಾದರೆ ನಿಜವಾಗಿ ತಪ್ತವಾಗುವದಿಲ್ಲ ಎಂದಾಗುತ್ತದೆ. ಏಕೆಂದರೆ ಇಂತೆ (ಇವ) ಎಂಬ ಶಬ್ದವನ್ನು ಪ್ರಯೋಗಿಸುತ್ತಿದ್ದೀಯೆ.

1. ಆಧ್ಯಾತ್ಮಿಕವಾದ ತಪ್ತಿಯು ಆತ್ಮನಿಗೇ ಅಲ್ಲವೆ ?... ಎಂದು ಶಂಕೆ.

2. ಆದ್ದರಿಂದ ಅಸಾತ್ಮ ಸಂಬಂಧದಿಂದ ಆತ್ಮನಲ್ಲಿ ಅಧ್ಯಾರೋಪಿತವಾಗಿರುವದೆಂದು ಒಪ್ಪಬೇಕೆಂದು ಭಾವ. ಪ್ರಕೃತದಲ್ಲಿ ದುಃಖವು ಅಂತಃಕರಣಾಧ್ಯಾಸದಿಂದ ಆಗುವದು.

3. ಆತ್ಮನು ನಿತ್ಯಶುದ್ಧನೆಂಬುದು ಸಾಂಖ್ಯನಿಗೂ ಒಪ್ಪು.

4. ಏಕೆಂದರೆ ತಾಪವೆಂಬುದು ಅದನ್ನು ಅನುಭವಿಸುವ ಮತ್ತೊಬ್ಬನಿಗೆ ಆಗುವದೆಂಬುದು ನಿನಗೂ ಸಮ್ಮತವು ಎಂದು ಭಾವ.

5. ಪ್ರಕೃತಿಯೇ ಬಂಧಮೋಕ್ಷಗಳನ್ನು ಅನುಭವಿಸುತ್ತದೆ ; ಅವು ಪುರುಷನಲ್ಲಿ ಅವಿವೇಕದಿಂದ ಆರೋಪಿತವಾಗಿರುತ್ತವೆ. ನಿಜವಾಗಿ ಪುರುಷನಿಗೆ ಬಂಧಮೋಕ್ಷಗಳಿಲ್ಲ ಎಂಬುದು ಸಾಂಖ್ಯರ ಮತವು. ಸಾಂ. ಕಾ. ೬೨ನ್ನು ನೋಡಿ. ಇದನ್ನು ಸ್ಪಷ್ಟಗೊಳಿಸುವದಕ್ಕಾಗಿಯೇ ಈ ವಾದವನ್ನು ತೆಗೆದಿರುವದು.

6. ಅಚೇತನವಾದ ಗುಣಗಳು ಒಂದಕ್ಕೊಂದು ಸಂಹತವಾಗಬಹುದು ; ಚೇತನನಾದ ಪುರುಷನಿಗೂ ಅವಕ್ಕೂ ಯಾವ ಸಂಬಂಧವೂ ಇಲ್ಲ. ಆದ್ದರಿಂದ ಸತ್ತ್ವಗುಣಕ್ಕೆ ಆದ ಬಂಧಮೋಕ್ಷಗಳು ಚೇತನನಾದ ಪುರುಷನಿಗೆ ಆಗಲಾರವು.

7. ಸತ್ತ್ವಗುಣದ ಧರ್ಮವು ಪುರುಷನಲ್ಲಿ ಅವಿವೇಕದಿಂದ ಅಧ್ಯಾರೋಪಿತವಾಗಿದೆ ಎಂದರ್ಥ. ಇದೇ ಸಾಂಖ್ಯರ ಪರಮಸಿದ್ಧಾಂತವು.

(ನಿಜವಾಗಿ) ತಾಪವಾಗುವದಿಲ್ಲವಾದರೆ ಇವಶಬ್ದ(ವನ್ನು ಪ್ರಯೋಗಿಸುವದು) ತಪ್ಪಲ್ಲ. ನೀರುಹಾವು ನಾಗರಹಾವಿನಂತೆ (ಇದೆ) ಎಂದಮಾತ್ರದಿಂದ (ಅದು) ಸವಿಷವಾಗುವದಿಲ್ಲವಷ್ಟೆ ; ನಾಗರಹಾವು ನೀರುಹಾವಿನಂತೆ ( ಇದೆ ) ಎಂದ ಮಾತ್ರದಿಂದ ನಿರ್ವಿಷವೂ ಆಗುವದಿಲ್ಲವಷ್ಟೆ. ಆದ್ದರಿಂದ ಈ ತಪ್ಯತಾಪಕ ಭಾವವು ಅವಿದ್ಯಾಕೃತವೇ ಹೊರತು ಪಾರಮಾರ್ಥಿಕವಲ್ಲ ಎಂದು ಒಪ್ಪ ಬೇಕಾಗುವದು. ಹೀಗೆಯೇ ನನ್ನ ( ಮತ )ದಲ್ಲಿಯೂ ಯಾವ ದೋಷವೂ ಉಂಟಾಗುವದಿಲ್ಲ.[1]

ಹಾಗಿಲ್ಲದೆ ಚೇತನವು ತಪ್ಯವೆಂಬುದು ಪರಮಾರ್ಥವೇ ಎಂದು ಒಪ್ಪುವೆ ಯಾದರೆ[2] ನಿನಗೇ ಅನಿರ್ಮೋಕ್ಷ(ದೋಷವು) ಹೆಚ್ಚಾಗಿ ಪ್ರಸಕ್ತವಾಗುವದು. ತಾಪಕವು ಸತ್ಯವೆಂದು ಅಂಗೀಕರಿಸಿರುವದರಿಂದಲೂ[3] (ಈ ದೋಷವು ಪ್ರಸಕ್ತ ವಾಗುವದು).

(ಸಾಂಖ್ಯ) :— ತಪ್ಯತಾಪಕಶಕ್ತಿಗಳು ನಿತ್ಯವಾಗಿದ್ದರೂ ಸನಿಮಿತ್ತ ವಾದ ಸಂಯೋಗದ ಅಪೇಕ್ಷೆಯಿಂದಲೇ ತಪ್ತಿಯಾಗುವದರಿಂದ ಸಂಯೋಗಕ್ಕೆ ನಿಮಿತ್ತವಾದ ಅದರ್ಶನವು ನಿವೃತ್ತಿಯಾದರೆ 'ಂಯೋಗವು ಆತ್ಯಂತಿಕವಾಗಿ ಇಲ್ಲವಾಗುವದು. ಅದರಿಂದ ಆತ್ಯಂತಿಕಮೋಕ್ಷವೂ ಆಗಬಹುದಲ್ಲ !

(ವೇದಾಂತಿ) :— ಹಾಗಲ್ಲ. ಅದರ್ಶನವೆಂಬ ತಮಸ್ಸು ನಿತ್ಯವೆಂದು ನೀವು ಅಂಗೀಕರಿಸಿರುತ್ತೀರಿ.[4] ಗುಣಗಳು ಹೊರತೋರಿಕೊಳ್ಳುವದು, ಮರೆ ಯಾಗುವದು – ಇವು ಅನಿಯತವಾಗಿರುವದರಿಂದ[5] ಸಂಯೋಗನಿಮಿತ್ತದ ನಾಶವೂ ಅನಿಯತವಾಗುವದರಿಂದ (ತಪ್ತಿ)ವಿಯೋಗವೂ ಅನಿಯತವಾಗಿ

---

1. ಆತ್ಮನು ಹೊರತು ಎಲ್ಲವೂ ಅವಿದ್ಯಾಕೃತವು ; ಆದ್ದರಿಂದ ಬಂಧಮೋಕ್ಷ ಗಳೂ ಅವಿದ್ಯಾಕೃತಗಳಾಗಿರುತ್ತವೆ ಎಂದು ಭಾವ.

2. ಕರ್ತೃತ್ವವು ಪುರುಷನಿಗೆ ಇಲ್ಲ, ಭೋಕ್ತೃತ್ವವುಂಟು ಎಂದು ಸಾಂಖ್ಯರು ಹೇಳುವದುಂಟು ಸಾಂ. ಕಾ. ೧೭ನ್ನೂ ಪ್ರ. ಭಾ. ಭಾ. ಭಾ. ೧೦೨ರಿಂದ ೧೦೮ರ ವರೆಗಿನ ಸಾಂಖ್ಯಖಂಡನೆಯನ್ನೂ ನೋಡಿರಿ.

3. ಗುಣಗಳು ನಿತ್ಯವೆಂಬುದು ಸಾಂಖ್ಯರ ಮತ. ಆದ್ದರಿಂದ ಪ್ರಕೃತಿಯಿಂ ದಾಗುವ ತಾಪವು ನಿತ್ಯವಾಗಿ ಪುರುಷನಿಗೆ ಆಗಬೇಕು ಎಂದರ್ಥ.

4. ಅದರ್ಶನವು ತಮಸ್ಸಿನ ಕಾರ್ಯವು. ತಮೋಗುಣವು ನಿತ್ಯವಾಗಿರುವದರಿಂದ ಅದರ್ಶನವೂ ನಿತ್ಯವಾಗಿರಬೇಕಾಗುವದು ಎಂದರ್ಥ.

5. ಗುಣಗಳು ಒಂದನ್ನೊಂದು ಮುಚ್ಚಿ ಹಾಕಿ ತಾವು ಎದ್ದುಕೊಳ್ಳುವವು ಎಂಬುದು ಸಾಂಖ್ಯರ ಅಂಗೀಕಾರ. ಸಾಂ. ಕಾ. ೧೨ನ್ನು ನೋಡಿ.

ಸಾಂಖ್ಯನಿಗೇ ಅನಿರ್ಮೋಕ್ಷವು ಅಪರಿಹಾರ್ಯವಾಗುವದು. **ಔಪನಿಷದ ಮತದಲ್ಲಾದರೋ ಆತ್ಮನು ಒಬ್ಬನೇ ಎಂದು ಅಂಗೀಕರಿಸಿರುವದರಿಂದ ಒಬ್ಬನಲ್ಲಿಯೇ ವಿಷಯವಿಷಯಿಭಾವವು ಹೊಂದುವದಿಲ್ಲವಾದ್ದರಿಂದಲೂ ವಿಕಾರವಿಶೇಷವು ವಾಚಾರಂಭಣಮಾತ್ರವೆಂದು ಶ್ರುತಿಯಲ್ಲಿ ಹೇಳಿರುವದರಿಂದಲೂ ಅನಿರ್ಮೋಕ್ಷದ ಶಂಕೆಯು ಕನಸಿನಲ್ಲಿ ಕೂಡ ಹೊಂದುವಂತಿಲ್ಲ.**[1] ವ್ಯವಹಾರದಲ್ಲಾದರೋ ತಪ್ಯತಾಪಕಭಾವವು ಎಲ್ಲಿ ಹೇಗೆ ಕಂಡಿದೆಯೋ ಅಲ್ಲಿ ಅದು ಹಾಗೆಯೇ (ಎಂದು ಒಪ್ಪಿರುತ್ತೇವಾದ್ದರಿಂದ ಅದನ್ನು) ಆಕ್ಷೇಪಿಸತಕ್ಕದ್ದೂ ಇಲ್ಲ, ಪರಿಹರಿಸಿಕೊಳ್ಳತಕ್ಕದ್ದೂ ಇಲ್ಲ.

## ೨. ಮಹದ್ದೀರ್ಘಾಧಿಕರಣ

### ( ವೈಶೇಷಿಕರ ಕಾರ್ಯಕಾರಣಪ್ರಕ್ರಿಯೆಯಲ್ಲಿ ದೋಷ )

### ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೨೧. ಪ್ರಧಾನಕಾರಣವಾದೋ ನಿರಾಕೃತಃ । ಪರಮಾಣುಕಾರಣವಾದಃ ಇದಾನೀಂ ನಿರಾಕರ್ತವ್ಯಃ । ತತ್ರ ಆದೌ ತಾವತ್ ಯೋಽಣುವಾದಿನಾ ಬ್ರಹ್ಮವಾದಿನಿ ದೋಷ ಉತ್ಪ್ರೇಕ್ಷ್ಯತೇ, ಸ ಪ್ರತಿಸಮಾಧೀಯತೇ ತತ್ರ ಅಯಂ ವೈಶೇಷಿಕಾಣಾಮ್ ಅಭ್ಯುಪಗಮಃ — ಕಾರಣದ್ರವ್ಯಸಮವಾಯಿನೋ ಗುಣಾಃ ಕಾರ್ಯದ್ರವ್ಯೇ ಸಮಾನಜಾತೀಯಂ ಗುಣಾನ್ತರಮ್ ಆರಭನ್ತೇ । ಶುಕ್ಲೇಭ್ಯಸ್ತನ್ತುಭ್ಯಃ ಶುಕ್ಲಸ್ಯ ಪಟಸ್ಯ ಪ್ರಸವದರ್ಶನಾತ್ ತದ್ವಿಪರ್ಯಯಾದರ್ಶನಾಚ್ಚ । ತಸ್ಮಾತ್ ಚೇತನಸ್ಯ ಬ್ರಹ್ಮಣೋ ಜಗತ್ಕಾರಣತ್ವೇ ಅಭ್ಯುಪಗಮ್ಯಮಾನೇ ಕಾರ್ಯೇಽಪಿ ಜಗತಿ ಚೈತನ್ಯಂ ಸಮವೇಯಾತ್ । ತದದರ್ಶನಾತ್ತು ನ ಚೇತನಂ ಬ್ರಹ್ಮ ಜಗತ್ಕಾರಣಂ ಭವಿತುಮರ್ಹತಿ ಇತಿ । ಇಮಮ್ ಅಭ್ಯುಪಗಮಂ ತದೀಯಯೈವ ಪ್ರಕ್ರಿಯಯಾ ವ್ಯಭಿಚಾರಯತಿ ॥

(ಭಾಷ್ಯಾರ್ಥ)

ಪ್ರಧಾನಕಾರಣವಾದವನ್ನು ನಿರಾಕರಿಸಿದಂತೆ ಆಯಿತು. ಈಗ ಪರಮಾಣುಕಾರಣವಾದವನ್ನು ನಿರಾಕರಿಸಬೇಕಾಗಿದೆ. ಅಲ್ಲಿ ಮೊದಲು ಅಣುವಾದಿಯು ಬ್ರಹ್ಮವಾದಿಯಲ್ಲಿ ಯಾವ ದೋಷವನ್ನು ಕಲ್ಪಿಸುತ್ತಾನೋ ಅದಕ್ಕೆ ಪ್ರತಿಸಮಾಧಾನವನ್ನು ಹೇಳಲಾಗುತ್ತದೆ.

---

1 ಅದ್ವಿತೀಯಾತ್ಮನು ನಿತ್ಯಮುಕ್ತನಾದ್ದರಿಂದ ಅವನಿಗೆ ಬಂಧವೇ ಇಲ್ಲ; ಇನ್ನು ಅನಿರ್ಮೋಕ್ಷಶಂಕೆಯೆಲ್ಲಿಂದ ಬಂದೀತು ?

ಇಲ್ಲಿ ವೈಶೇಷಿಕರ ಅಭ್ಯುಪಗಮವಿದು: ಕಾರಣದ್ರವ್ಯದಲ್ಲಿ ಸಮವಾಯಿಗಳಾಗಿರುವ[1] ಗುಣಗಳು ಕಾರ್ಯದ್ರವ್ಯದಲ್ಲಿ ಸಮಾನಜಾತಿಯ ಮತ್ತೊಂದು ಗುಣವನ್ನು ಆರಂಭಿಸುತ್ತವೆ.[2] ಏಕೆಂದರೆ ಬಿಳಿಯ ನೂಲುಗಳಿಂದ ಬಿಳಿಯ ಪಟವು ಹುಟ್ಟುವದು ಕಂಡುಬರುತ್ತದೆ, ಅದಕ್ಕೆ ವಿಪರೀತವಾಗಿ (ಹುಟ್ಟುವದು) ಕಂಡುಬರುವದೂ ಇಲ್ಲ.[3] ಆದ್ದರಿಂದ ಚೇತನವಾದ ಬ್ರಹ್ಮವು ಜಗತ್ಕಾರಣವು ಎಂದೊಪ್ಪಿದರೆ ಕಾರ್ಯವಾದ ಜಗತ್ತಿನಲ್ಲಿಯೂ ಚೈತನ್ಯವು ಸಮವೇತವಾಗಬೇಕು.[4] ಆದರೆ ಅದು ಕಂಡುಬರುವದಿಲ್ಲವಾದ್ದರಿಂದ ಚೇತನವಾದ ಬ್ರಹ್ಮವು ಜಗತ್ಕಾರಣವಾಗಲಾರದು ಎಂದು (ಅವರ ಅಭಿಪ್ರಾಯ). ಈ (ಅವರ) ಅಂಗೀಕಾರವನ್ನು ಅವರ ಪ್ರಕ್ರಿಯೆಯಿಂದಲೇ ತಪ್ಪೆಂದು ತೋರಿಸುತ್ತಾರೆ.[5]

**ಮಹದ್ದೀರ್ಘವದ್ ವಾ ಹ್ರಸ್ವಪರಿಮಣ್ಡಲಾಭ್ಯಾಮ್ ॥ ೧೧ ॥**

೧೧. ಹ್ರಸ್ವಪರಿಮಂಡಲಗಳಿಂದ ಮಹತ್ತು, ದೀರ್ಘ- (ಇವು ಹುಟ್ಟು)ವಂತೆಯೇ (ಆಗಬಹುದು).

## ವೈಶೇಷಿಕರ ಪ್ರಕ್ರಿಯೆಯಲ್ಲಿಯೂ ಕಾರಣಗುಣವು ಕಾರ್ಯಗುಣಕ್ಕೆ ಆರಂಭಕವಲ್ಲ

(ಭಾಷ್ಯ)

೨೨. ಏಷಾ ತೇಷಾಂ ಪ್ರಕ್ರಿಯಾ — ಪರಮಾಣವಃ ಕಿಲ ಕಂಚಿತ್ ಕಾಲಮ್ ಅನಾರಬ್ಧಕಾರ್ಯಾ ಯಥಾಯೋಗಂ ರೂಪಾದಿಮನ್ತಃ ಪಾರಿ

1. ಸಮವಾಯವೆಂಬ ನಿತ್ಯಸಂಬಂಧದಿಂದ ಸಂಬಂಧವಾಗಿರುವ ಎಂದರ್ಥ. ಸಂಯೋಗವು ಬೇರೆಬೇರೆಯಾಗಿರುವ ಹಸ್ತಪುಸ್ತಕಾದಿಗಳಿಗೆ ಆಗುವ ಸಂಬಂಧವು.

2. ಸಾಂಖ್ಯರು ಕಾರಣವೇ ಕಾರ್ಯವಾಗಿ ಪರಿಣಮಿಸುತ್ತದೆ ಎನ್ನುವರು; ವೈಶೇಷಿಕರು ಅನೇಕ ಕಾರಣಗಳು ಸೇರಿ ಕಾರ್ಯವನ್ನು ಉಂಟುಮಾಡುವವು ಎನ್ನುವರು. ವೈಶೇಷಿಕರ ವಾದಕ್ಕೆ ಆರಂಭವಾದ ಎಂದು ಹೆಸರು.

3. ಬಿಳಿಯ ನೂಲಿನಿಂದ ಕರಿಯ ಬಟ್ಟೆಯಾಗುವದು ಕಂಡುಬಂದಿಲ್ಲ.

4. ಸಮವಾಯಸಂಬಂಧದಿಂದ ಸೇರಿರಬೇಕು.

5. ಕಾರಣಕ್ಕಿಂತ ಕಾರ್ಯವು ವಿಲಕ್ಷಣವಾಗಲಾರದು ಎಂಬ ಸಾಂಖ್ಯರ ಆಕ್ಷೇಪವನ್ನು ಹಿಂದೆ ಪರಿಹರಿಸಿತ್ತು. ಈಗ ಕಾರಣಗುಣವು ಸಮಾನಜಾತಿಯ ಕಾರ್ಯಗುಣವನ್ನುಂಟುಮಾಡುತ್ತದೆ- ಎಂಬ ವೈಶೇಷಿಕರ ಪ್ರಕ್ರಿಯೆಯನ್ನು ಅವರೇ ಒಪ್ಪುವದಕ್ಕೆ ಆಗುವದಿಲ್ಲವೆಂದು ತೋರಿಸುತ್ತಾರೆ. ತಾವು ಹೇಳಿದ ದೋಷವು ತಮ್ಮ ಮತದಲ್ಲಿಯೇ ಇದೆ ಎಂದು ಯುಕ್ತಿಯಿಂದ ತೋರಿಸಿ ಅವರ ಮತವನ್ನು ತಿರಸ್ಕರಿಸುವದೇ ಈ ಗ್ರಂಥದ ಪ್ರಯೋಜನ.

ಮಾಣ್ಡಲ್ಯಪರಿಮಾಣಾಃ ತಿಷ್ಠನ್ತಿ। ತೇ ಚ ಪಶ್ಚಾತ್ ಅದೃಷ್ಟಾದಿಪುರಃ ಸರಾಃ ಸಂಯೋಗಸಚಿವಾಶ್ಚ ಸನ್ತಃ ದ್ವ್ಯಣುಕಾದಿಕ್ರಮೇಣ ಕೃತ್ಸ್ನಂ ಕಾರ್ಯ ಜಾತಮ್ ಆರಭನ್ತೇ। ಕಾರಣಗುಣಾಶ್ಚ ಕಾರ್ಯೇ ಗುಣಾನ್ತರಮ್। ಯದಾ ದ್ವೌ ಪರಮಾಣೂ ದ್ವ್ಯಣುಕಮ್ ಆರಭೇತೇ, ತದಾ ಪರಮಾಣುಗತಾ ರೂಪಾದಿವಿಶೇಷಾಃ ಶುಕ್ಲಾದಯಃ ದ್ವ್ಯಣುಕೇ ಶುಕ್ಲಾದೀನ್ ಅಪರಾನ್ ಆರಭನ್ತೇ। ಪರಮಾಣುಗುಣವಿಶೇಷಸ್ತು ಪಾರಿಮಾಣ್ಡಲ್ಯಂ ನ ದ್ವ್ಯಣುಕೇ ಪಾರಿಮಾಣ್ಡಲ್ಯಮ್ ಅಪರಮ್ ಆರಭತೇ। ದ್ವ್ಯಣುಕಸ್ಯ ಪರಿಮಾಣಾನ್ತರ ಯೋಗಾಭ್ಯುಪಗಮಾತ್। ಅಣುತ್ವಹ್ರಸ್ವತ್ವೇ ಹಿ ದ್ವ್ಯಣುಕವರ್ತಿನೀ ಪರಿ ಮಾಣೇ ವರ್ಣಯನ್ತಿ। ಯದಾಪಿ ದ್ವೇ ದ್ವ್ಯಣುಕೇ ಚತುರಣುಕಮ್ ಆರಭೇತೇ ತದಾಪಿ ಸಮಾನಂ ದ್ವ್ಯಣುಕಸಮವಾಯಿನಾಂ ಶುಕ್ಲಾದೀನಾಮ್ ಆರಮ್ಭಕತ್ವಮ್। ಅಣುತ್ವಹ್ರಸ್ವತ್ವೇ ತು ದ್ವ್ಯಣುಕಸಮವಾಯಿನೀ ಅಪಿ ನೈವ ಆರಭೇತೇ। ಚತುರಣುಕಸ್ಯ ಮಹತ್ತ್ವದೀರ್ಘತ್ವಪರಿಮಾಣಯೋಗಾ ಭ್ಯುಪಗಮಾತ್। ಯದಾಪಿ ಬಹವಃ ಪರಮಾಣವಃ, ಬಹೂನಿ ವಾ ದ್ವ್ಯಣು ಕಾನಿ, ದ್ವ್ಯಣುಕಸಹಿತೋ ವಾ ಪರಮಾಣುಃ, ಕಾರ್ಯಮ್ ಆರಭತೇ ತದಾಪಿ ಸಮಾನಾ ಏಷಾ ಯೋಜನಾ। ತದೇವಂ ಯಥಾ ಪರಮಾಣೋಃ ಪರಿಮಣ್ಡ ಲಾತ್ ಸತಃ ಅಣು ಹ್ರಸ್ವಂ ಚ ದ್ವ್ಯಣುಕಂ ಜಾಯತೇ ಮಹತ್ ದೀರ್ಘಂ ಚ ತ್ರ್ಯಣುಕಾದಿ ನ ಪರಿಮಣ್ಡಲಮ್, ಯಥಾ ವಾ ದ್ವ್ಯಣುಕಾತ್ ಅಣೋಃ ಹ್ರಸ್ವಾಚ್ಚ ಸತಃ ಮಹತ್ ದೀರ್ಘಂ ಚ ತ್ರ್ಯಣುಕಂ ಜಾಯತೇ ನಾಣು ನೋ ಹ್ರಸ್ವಮ್, ಏವಂ ಚೇತನಾತ್ ಬ್ರಹ್ಮಣಃ ಅಚೇತನಂ ಜಗತ್ ಜನಿಷ್ಯತೇ ಇತಿ ಅಭ್ಯುಪಗಮೇ ಕಿಂ ತವ ಛಿನ್ನಮ್ ?

( ಭಾಷ್ಯಾರ್ಥ )

ಇದು ಅವರ ಪ್ರಕ್ರಿಯೆಯು. ಪರಮಾಣುಗಳು ಸ್ವಲ್ಪಹೊತ್ತು ಕಾರ್ಯ ವನ್ನು ಆರಂಭಿಸದೆ ಅವವಕ್ಕೆ ತಕ್ಕ ರೂಪಾದಿಗಳುಳ್ಳವಾಗಿಯೂ[1] ಪಾರಿ ಮಾಂಡಲ್ಯಪರಿಮಾಣವುಳ್ಳವಾಗಿಯೂ[2] ಇರುತ್ತವೆ. ಬಳಿಕ ಅವು ಅದೃಷ್ಟ

---

1. ಪಾರ್ಥಿವಪರಮಾಣುವಿನಲ್ಲಿ ರೂಪಾದಿಚತುರ್ಗುಣತ್ವ, ಅಪ್ಯಪರಮಾಣುವಿ ನಲ್ಲಿ ತ್ರಿಗುಣತ್ವ, ತೈಜಸಪರಮಾಣುವಿನಲ್ಲಿ ದ್ವಿಗುಣತ್ವ, ವಾಯವೀಯ ಪರಮಾಣುವಿನಲ್ಲಿ ಏಕಗುಣತ್ವ – ಎಂದು 'ಅವವಕ್ಕೆ ತಕ್ಕ' ಎಂಬ ಮಾತಿನಿಂದ ಸೂಚಿತವಾಗಿರುತ್ತದೆ. ಆಕಾಶಪರಮಾಣುವನ್ನು ವೈಶೇಷಿಕರು ಒಪ್ಪಿಲ್ಲ.

2. ಪರಮಾಣುವಿನ ಪರಿಮಾಣವಿದು.

ವೇ ಮುಂತಾದ[1] (ನಿಮಿತ್ತ)ಕಾರಣದಿಂದ ಸಂಯೋಗವುಳ್ಳವಾಗಿ[2] ದ್ವ್ಯಣು ಕಾದಿಕ್ರಮದಿಂದ ಎಲ್ಲಾ ಕಾರ್ಯಸಮೂಹವನ್ನೂ ಆರಂಭಿಸುತ್ತದೆ; ಕಾರಣ ಗುಣಗಳು ಕಾರ್ಯದಲ್ಲಿ ಬೇರೆಯ ಗುಣಗಳನ್ನು (ಆರಂಭಿಸುತ್ತವೆ). ಎರಡು ಪರಮಾಣುಗಳು ದ್ವ್ಯಣುಕವನ್ನು ಆರಂಭಿಸುವವಲ್ಲ, ಆಗ ಪರಮಾಣುವಿನಲ್ಲಿ ರುವ ಬಿಳುಪೇ ಮುಂತಾದ ರೂಪಾದಿಗುಣವಿಶೇಷಗಳು ದ್ವ್ಯಣುಕದಲ್ಲಿ ಬೇರೆಯ ಬಿಳುಪೇ ಮುಂತಾದ (ಗುಣಗಳನ್ನು) ಆರಂಭಿಸುತ್ತವೆ. ಆದರೆ ಪರಮಾಣು ಗುಣವಿಶೇಷವಾದ ಪಾರಿಮಾಂಡಲ್ಯವು ದ್ವ್ಯಣುಕದಲ್ಲಿ ಮತ್ತೊಂದು ಪಾರಿ ಮಾಂಡಲ್ಯವನ್ನು ಆರಂಭಿಸುವದಿಲ್ಲ; ಏಕೆಂದರೆ ದ್ವ್ಯಣುಕದಲ್ಲಿ ಬೇರೊಂದು ಪರಿಮಾಣದ ಸಂಬಂಧವನ್ನು ಒಪ್ಪಿರುತ್ತದೆ. ಅಣುತ್ವಹ್ರಸ್ವತ್ವಗಳು ದ್ವ್ಯಣುಕ ದಲ್ಲಿರುವ ಪರಿಮಾಣಗಳು ಎಂದು (ಅವರು) ಹೇಳುತ್ತಾರೆ.[3] ಇನ್ನು ಯಾವಾಗ ಎರಡು ದ್ವ್ಯಣುಕಗಳು ಚತುರಣುಕವನ್ನು ಆರಂಭಿಸುತ್ತವೆಯೋ ಆಗಲೂ ದ್ವ್ಯಣುಕಸಮವಾಯಿಗಳಾದ ಶುಕ್ಲತ್ವಾದಿಗಳು ಆರಂಭಕವಾಗುತ್ತವೆ ಎಂಬುದು ಸಮಾನವು.[4] ಆದರೆ ಅಣುತ್ವ, ಹ್ರಸ್ವತ್ವ – ಎಂಬ (ಗುಣಗಳು)

---

1. ಈಶ್ವರ, ಪ್ರಯತ್ನ – ಮುಂತಾದ.

2. ಇಲ್ಲಿ ಅಸಮವಾಯಿಕಾರಣವನ್ನು ಹೇಳಿದೆ. ಅದೃಷ್ಟವುಳ್ಳ ಕ್ಷೇತ್ರಜ್ಞಸಂಯೋಗ ದಿಂದ ಪರಮಾಣುವಿನಲ್ಲಿ ಕರ್ಮವೂ ಮತ್ತೊಂದು ಪರಮಾಣುವಿನೊಡನೆ ಸಂಯೋಗವೂ ಆಗಿ ದ್ವ್ಯಣುಕವಾಗುತ್ತದೆ. ನ್ಯಾ. ನಿ.

3 ಭಾಮತೀಕಾರರು ಸೂತ್ರದ ತಾತ್ಪರ್ಯವನ್ನು ಹೀಗೆ ವರ್ಣಿಸಿರುತ್ತಾರೆ: ಹೇಗೆ ಮಹತ್ಪರಿಮಾಣವುಳ್ಳ ತ್ರ್ಯಣುಕಾದಿದ್ರವ್ಯವು ಹ್ರಸ್ವವಾದ ದ್ವ್ಯಣುಕದಿಂದ ಹುಟ್ಟು ತ್ತದೆಯೋ ಆದರೆ ಮಹತ್ತ್ವಗುಣವುಂಟಾಗುವದಕ್ಕೆ ದ್ವ್ಯಣುಕದಲ್ಲಿಯೂ ಮಹತ್ತ್ವವು ಇರಬೇಕಾದದ್ದಿಲ್ಲವೋ ದ್ವ್ಯಣುಕವು ಹ್ರಸ್ವವೇ ಆಗಿರುವದೋ ಅದೇ ತ್ರ್ಯಣುಕವು ದೀರ್ಘವಾದರೂ ಹ್ರಸ್ವವಾಗಿರುವ ದ್ವ್ಯಣುಕದಿಂದ ಹುಟ್ಟುವದೋ ದ್ವ್ಯಣುಕದಲ್ಲಿಯೂ ದೀರ್ಘತ್ವವಿರಬೇಕೆಂಬುದನ್ನು ಬಯಸುವದಿಲ್ಲವೋ ಹಾಗೆಯೇ, ಹೇಗೆ ಅಣುಹ್ರಸ್ವಪರಿ ಮಾಣವುಳ್ಳ ದ್ವ್ಯಣುಕವು ಪರಿಮಂಡಲವಾದ ಪರಮಾಣುವಿನಿಂದ ಅಪರಿಮಂಡಲವಾಗಿಯೇ ಹುಟ್ಟುತ್ತದೆಯೋ ಹಾಗೆಯೇ, ಚೇತನವಾದ ಬ್ರಹ್ಮದಿಂದ ಅಚೇತನವಾದ ಜಗತ್ತು ಹುಟ್ಟ ಬಹುದು ಎಂದು ಸೂತ್ರವನ್ನು ಜೋಡಿಸಬೇಕು.

4. ಭಾಷ್ಯದಲ್ಲಿ 'ದ್ವೇ ದ್ವೇ' ಎಂದು ಹೇಳಬೇಕಾಗಿದ್ದು ತಪ್ಪಿನಿಂದ ಒಂದು ದ್ವೇ ಪದವನ್ನು ಬಿಟ್ಟುಬಿಟ್ಟಿದೆ. ಎರಡು ದ್ವೇಪದಗಳಿದ್ದರೇ 'ಚತುರಣುಕವು' ಎಂದು ಮುಂತಾಗಿ ಹೇಳಿರುವದು ಹೊಂದುತ್ತದೆ; ಹಾಗಿಲ್ಲದಿದ್ದರೆ ಅದೂ ದ್ವ್ಯಣುಕವೇ ಆದೀತೇ ಹೊರತು ಮಹತ್ತಾಗಲಾರದು ಎಂದು ಹಿಂದೆ ತಿಳಿಸಿರುತ್ತೇವೆ. ಅಥವಾ ದ್ವೇ ಎಂಬುದು ದ್ವಿತ್ವವನ್ನು ಹೇಳುತ್ತದೆ... ....ಆದ್ದರಿಂದ ಭಾಷ್ಯವನ್ನು ಹೀಗೆ ಯೋಜನೆಮಾಡಬೇಕು: ದ್ವ್ಯಣುಕದಲ್ಲಿ ರುವ ದ್ವಿತ್ವಗಳಿವೆಯಲ್ಲ, ಅವು ಯಾವಾಗ ಚತುರಣುಕವನ್ನು ಆರಂಭಿಸುವವೋ (ಎಂದರ್ಥ). ಸಂಖ್ಯೇಯವಾಗಿರುವ ನಾಲ್ಕು ದ್ವ್ಯಣುಕಗಳು ಆರಂಭಕವಾಗಿರುವದ ರಿಂದ ತದ್ಗತದ್ವಿತ್ವಸಂಖ್ಯೆಗಳೂ ಆರಂಭಕವಾಗಿರುತ್ತವೆ ಎಂದರ್ಥ – ಎಂದು **ಭಾಮತೀ.**

ದ್ವ್ಯಣುಕಸಮವಾಯಿಗಳಾದರೂ (ಬೇರೆಯ ಅಣುತ್ವಹ್ರಸ್ವತ್ವಗಳನ್ನು) ಆರಂಭಿಸುವದಿಲ್ಲ. ಏಕೆಂದರೆ ಚತುರಣುಕಕ್ಕೆ ಮಹತ್ತ್ವ, ದೀರ್ಘತ್ವ ಎಂಬ ಪರಿಮಾಣಗಳ ಸಂಬಂಧವಿದೆ ಎಂದು (ಅವರು) ಅಂಗೀಕರಿಸಿರುತ್ತಾರೆ. ಇನ್ನು ಯಾವಾಗ ಬಹಳ ಪರಮಾಣುಗಳು, ಅಥವಾ ಬಹುದ್ವ್ಯಣುಕಗಳು, ಅಥವಾ ದ್ವ್ಯಣುಕಸಹಿತವಾದ ಪರಮಾಣುವು ಕಾರ್ಯವನ್ನು ಆರಂಭಿಸುತ್ತದೆಯೋ[1] ಆಗಲೂ ಈ ಯೋಜನೆಯು ಸಮಾನವಾಗಿರುವದು.[2]

ಅಂತೂ ಈ ರೀತಿಯಲ್ಲಿ ಹೇಗೆ ಪರಿಮಂಡಲವಾಗಿರುವ ಪರಮಾಣುವಿನಿಂದ ಅಣುವೂ ಹ್ರಸ್ವವೂ ಆದ ದ್ವ್ಯಣುಕವು ಹುಟ್ಟುತ್ತದೆಯೋ, ಮಹತ್ತಾಗಿ ದೀರ್ಘವಾಗಿರುವ ತ್ರ್ಯಣುಕಾದಿ[3] (ಕಾರ್ಯವು ಹುಟ್ಟುತ್ತದೆಯೋ) ಪರಿ

---

ದ್ವೇ ದ್ವೇ ಎಂಬ ಎರಡು (ದ್ವಿ) ಶಬ್ದಗಳು ಇರಬೇಕಾಗಿತ್ತು. ಹೀಗಾದರೆ ನಾಲ್ಕು ದ್ವ್ಯಣುಕಗಳಿಂದ ಚತುರಣುಕವು ಆರಬ್ಧವಾಗುತ್ತದೆ ಎಂದಿರುವದು ಹೊಂದುತ್ತದೆ. ಈಗ ಇರುವಂತೆ ಭಾಷ್ಯವನ್ನು ತೆಗೆದುಕೊಂಡರೆ ಎರಡು ದ್ವ್ಯಣುಕಗಳಿಂದ ಮಹತ್ತಾಗಿರುವ ಚತುರಣುಕದ ಆರಂಭವು ಹೊಂದುವದಿಲ್ಲ; ಏಕೆಂದರೆ ಕಾರಣಗತವಾದ ಮಹತ್ತ್ವವಾಗಲಿ ಬಹುತ್ವವಾಗಲಿ ಇಲ್ಲದೆ ಕಾರ್ಯದಲ್ಲಿ ಮಹತ್ತ್ವವುಂಟಾಗಲಾರದು ಎಂದು ತಿಳಿಯಬೇಕು. ಪ್ರಕಟಾರ್ಥಕಾರರಾದರೋ ಎರಡು ದ್ವ್ಯಣುಕಗಳಿಂದ ಕಾರ್ಯದಲ್ಲಿ ಮಹತ್ತ್ವವು ಆರಬ್ಧವಾಗುವದು ಕಾಣುತ್ತದೆಯಲ್ಲ, ಅದಕ್ಕೆ ಪ್ರಚಯವೆಂಬ ಸಡಿಲವಾದ ಅವಯವಸಂಯೋಗವೇ ಕಾರಣವೆಂದು ರಾವಣಭಾಷ್ಯದಲ್ಲಿ ಕಾಣಬರುತ್ತದೆಯಾದ್ದರಿಂದ ಹಿಂದಿನ ವೈಶೇಷಿಕರ ದೃಷ್ಟಿಯಿಂದ ಈ ಭಾಷ್ಯವು ಬಂದಿದೆ ಎಂದು ಹೇಳುತ್ತಾರೆ. ಹೇಗೂ ಹ್ರಸ್ವತ್ವಾಣುತ್ವಪರಿಮಾಣಗಳು (ಸಜಾತೀಯಪರಿಮಾಣವನ್ನು) ಆರಂಭಿಸುವದಿಲ್ಲವಾಗಿ ವ್ಯಭಿಚಾರವೇ ಆಗುವದು – ಎಂದು ರತ್ನಪ್ರಭಾ. ಇಲ್ಲಿರುವ ಭಾಷ್ಯವು ಬೇರೆಬೇರೆಯ ವೈಶೇಷಿಕಪ್ರಕ್ರಿಯೆಗಳನ್ನು ಪರಾಮರ್ಶಿಸುವದೋ, ಅನಾಸ್ಥೆಯಿಂದಲೇ ಇಲ್ಲಿ ಕೆಲವು ವಿಕಲ್ಪಗಳನ್ನು ಮಾಡಿದೆಯೋ, ಅಥವಾ ಭಾಷ್ಯಗ್ರಂಥದಲ್ಲಿಯೇ ಲೇಖಕರ ಪ್ರಮಾದದಿಂದ ಹೆಚ್ಚುಕಡಿಮೆಯಾಗಿದೆಯೋ ವಿದ್ವಾಂಸರು ನಿರ್ಣಯಿಸಬೇಕಾಗಿದೆ.

1. ತಾರ್ಕಿಕರು ಎರಡು ಪರಮಾಣುಗಳಿಂದಲೇ ದ್ವ್ಯಣುಕವೂ ಮೂರು ತ್ರ್ಯಣುಕಗಳಿಂದಲೇ ತ್ರ್ಯಣುಕವೂ ಆಗುವವೆಂದು ಕಲ್ಪಿಸಿರುತ್ತಾರಾದರೂ ತರ್ಕವು ಅಪ್ರತಿಷ್ಠಿತವಾಗಿರುವದರಿಂದ (ಇಲ್ಲಿ ಯಾವ) ನಿಯಮವೂ ಇಲ್ಲ ಎಂಬ ಅಭಿಪ್ರಾಯದಿಂದ 'ಯದಾಪಿ ಬಹವಃ' ಎಂಬ ಮುಂದಿನ ಭಾಷ್ಯವಾಕ್ಯವು ಬಂದಿದೆ – ಎಂದು ರತ್ನಪ್ರಭಾ.

2. ಅಲ್ಲಿಯೂ ಕಾರಣಗತವಾದ ಮಿಕ್ಕಗುಣಗಳು ಆರಂಭಕವಾದರೂ ಪಾರಿಮಾಂಡಲ್ಯ ಮತ್ತು ಅಣುತ್ವಹ್ರಸ್ವತ್ವಗಳು ಸ್ವಸಮಾನಜಾತೀಯ ಪರಿಮಾಣಾಂತರಕ್ಕೆ ಆರಂಭಕವಲ್ಲ – ಎಂದು ಹೊಂದಿಸಿಕೊಳ್ಳಬೇಕು ಎಂದರ್ಥ.

3. ದ್ವ್ಯಣುಕದಿಂದಲೇ ತ್ರ್ಯಣುಕವು ಹುಟ್ಟುತ್ತದೆ ಎಂಬುದು ತಾರ್ಕಿಕರ ಮತವು; ಆದರೂ ಪರಮಾಣುಗಳಿಂದಲೂ ಪರಂಪರೆಯಿಂದ ಹುಟ್ಟುತ್ತದೆ ಎಂದು ಕಲ್ಪಿಸಬಹುದು. ಇಲ್ಲಿ ತ್ರ್ಯಣುಕವನ್ನು ಸ್ಪಷ್ಟವಾಗಿ ಉದಾಹರಿಸಿದೆ; ಆದರೆ ಹಿಂದಿನ ಭಾಷ್ಯವಾಕ್ಯದಲ್ಲಿ ತ್ರ್ಯಣುಕವನ್ನು ಬಿಟ್ಟು ಚತುರಣುಕವನ್ನೇ ಉದಾಹರಿಸಿರುವದರ ರಹಸ್ಯವೇನೆಂಬುದನ್ನು ಶೋಧಕರು ತಿಳಿದು ಹೇಳಬೇಕಾಗಿದೆ.

ಮಂಡಲ(ಪರಿಮಾಣದ ಕಾರ್ಯವು ಹುಟ್ಟುವದಿಲ್ಲವೋ) ಮತ್ತು ಹೇಗೆ ಅಣು ವೂ ಹ್ರಸ್ವವೂ ಆಗಿರುವ ದ್ವ್ಯಣುಕದಿಂದ ಮಹತ್ತೂ ದೀರ್ಘವೂ ಆದ ತ್ರ್ಯಣುಕ ವು ಹುಟ್ಟುತ್ತದೆಯೋ ಅಣುವಾಗಿರುವ (ಕಾರ್ಯವಾಗಲಿ) ಹ್ರಸ್ವವಾದ (ಕಾರ್ಯವಾಗಲಿ) ಹುಟ್ಟುವದಿಲ್ಲವೋ ಹೀಗೆಯೇ ಚೇತನವಾದ ಬ್ರಹ್ಮದಿಂದ ಅಚೇತನವಾದ ಜಗತ್ತೂ ಹುಟ್ಟುವದೆಂದು ಒಪ್ಪಿಕೊಂಡರೆ ನಿನ್ನದೇನು ಹೋಗುವದು ?[1]

## ಪಾರಿಮಾಂಡಲ್ಯಾದಿಗಳ ಅನಾರಂಭಕತ್ವದ ವಿಷಯಕ್ಕೆ ಶಂಕಾಸಮಾಧಾನ

(ಭಾಷ್ಯ)

೨೩. ಅಥ ಮನ್ಯಸೇ ವಿರೋಧಿನಾ ಪರಿಮಾಣಾನ್ತರೇಣ ಆಕ್ರಾನ್ತಂ ಕಾರ್ಯದ್ರವ್ಯಂ ದ್ವ್ಯಣುಕಾದಿ ಇತ್ಯತಃ ನಾರಮ್ಭಕಾಣಿ ಕಾರಣಗತಾನಿ ಪಾರಿಮಾಣ್ಡಲ್ಯಾದೀನಿ ಇತಿ ಅಭ್ಯುಪಗಚ್ಛಾಮಿ । ನ ತು ಚೇತನಾವಿರೋಧಿನಾ ಗುಣಾನ್ತರೇಣ ಜಗತಃ ಆಕ್ರಾನ್ತತ್ವಮಸ್ತಿ । ಯೇನ ಕಾರಣಗತಾ ಚೇತನಾ ಕಾರ್ಯೇ ಚೇತನಾನ್ತರಂ ನಾರಭೇತ । ನ ಹಿ ಅಚೇತನಾ ನಾಮ ಚೇತನಾವಿರೋಧೀ ಕಶ್ಚಿದ್ ಗುಣೋಽಸ್ತಿ । ಚೇತನಾಪ್ರತಿಷೇಧಮಾತ್ರತ್ವಾತ್ । ತಸ್ಮಾತ್ ಪಾರಿಮಾಣ್ಡಲ್ಯಾದಿವೈಷಮ್ಯಾತ್ ಪ್ರಾಪ್ನೋತಿ ಚೇತನಾಯಾ ಆರಮ್ಭಕತ್ವಮ್ ಇತಿ । ನೈವಂ ಮಂಸ್ಥಾಃ । ಯಥಾ ಕಾರಣೇ ವಿದ್ಯಮಾನಾನಾಮಪಿ ಪಾರಿಮಾಣ್ಡಲ್ಯಾದೀನಾಮ್ ಅನಾರಮ್ಭಕತ್ವಮ್, ಏವಂ ಚೈತನ್ಯಸ್ಯಾಪಿ ಇತ್ಯಸ್ಯ ಅಂಶಸ್ಯ ಸಮಾನತ್ವಾತ್। ನ ಚ ಪರಿಮಾಣಾನ್ತರಾಕ್ರಾನ್ತತ್ವಂ ಪಾರಿಮಾಣ್ಡಲ್ಯಾದೀನಾಮ್ ಅನಾರಮ್ಭಕತ್ವೇ ಕಾರಣಮ್ । ಪ್ರಾಕ್ ಪರಿಮಾಣಾನ್ತರಾರಮ್ಭಾತ್ ಪಾರಿಮಾಣ್ಡಲ್ಯಾದೀನಾಮ್ ಆರಮ್ಭಕತ್ವೋಪಪತ್ತೇಃ । ಆರಬ್ಧಮಪಿ ಕಾರ್ಯದ್ರವ್ಯಂ ಪ್ರಾಗ್ ಗುಣಾರಮ್ಭಾತ್ ಕ್ಷಣಮಾತ್ರಮ್ ಅಗುಣಂ ತಿಷ್ಠತಿ ಇತ್ಯಭ್ಯುಪಗಮಾತ್ । ನ ಚ ಪರಿಮಾಣಾನ್ತರಾರಮ್ಭೇ ವ್ಯಗ್ರಾಣಿ ಪಾರಿಮಾಣ್ಡಲ್ಯಾದೀನಿ ಇತ್ಯತಃ ಸ್ವಸಮಾನಜಾತೀಯಂ ಪರಿಮಾಣಾನ್ತರಂ ನಾರಭನ್ತೇ । ಪರಿಮಾಣಾನ್ತರಸ್ಯ ಅನ್ಯಹೇತುತ್ವಾಭ್ಯುಪಗಮಾತ್ । "ಕಾರಣ

---

1. ಚೈತನ್ಯವು ಬ್ರಹ್ಮದ ಸ್ವರೂಪವೇ ಆಗಿದ್ದರೂ ಅದು ಬ್ರಹ್ಮದ ಗುಣವೆಂದು ಒಪ್ಪಿ ಈ ಪ್ರಕ್ರಿಯಾಸಾಮ್ಯವನ್ನು ಹೇಳಿದೆ ಎಂದು ತಿಳಿಯಬೇಕು. ವೈಶೇಷಿಕರ ಆಕ್ಷೇಪದಲ್ಲಿ ಯಾವದೊಂದು ವ್ಯವಸ್ಥೆಯನ್ನೂ ಅನುಸರಿಸಿಲ್ಲವೆಂಬುವನ್ನು ತೋರಿಸಿಕೊಡುವದೇ ಪ್ರಕೃತಭಾಷ್ಯದ ಉದ್ದೇಶವು.

ಬಹುತ್ವಾತ್ ಕಾರಣಮಹತ್ತ್ವಾತ್ ಪ್ರಚಯವಿಶೇಷಾಚ್ಚ ಮಹತ್"[1] (ವೈ. ಸೂ. ೭-೧-೯), "ತದ್ವಿಪರೀತಮಣು"[2] (ವೈ. ಸೂ. ೭-೧-೧೦) "ಏತೇನ ದೀರ್ಘತ್ವಹ್ರಸ್ವತ್ವೇ ವ್ಯಾಖ್ಯಾತೇ" (ವೈ. ಸೂ. ೭-೧-೧೭) ಇತಿ ಕಾಣಭುಜಾನಿ ಸೂತ್ರಾಣಿ | ನ ಚ ಸಂನಿಧಾನವಿಶೇಷಾತ್ ಕುತಶ್ಚಿತ್ ಕಾರಣಬಹುತ್ವಾದೀನ್ಯೇವ ಆರಭನ್ತೇ ನ ಪಾರಿಮಾಣ್ಡಲ್ಯಾದೀನಿ ಇತ್ಯುಚ್ಯೇತ | ದ್ರವ್ಯಾನ್ತರೇ ಗುಣಾನ್ತರೇ ವಾ ಆರಭ್ಯಮಾಣೇ ಸರ್ವೇಷಾಮೇವ ಕಾರಣಗುಣಾನಾಂ ಸ್ವಾಶ್ರಯಸಮವಾಯಾವಿಶೇಷಾತ್ । ತಸ್ಮಾತ್ ಸ್ವಭಾವಾದೇವ ಪಾರಿಮಾಣ್ಡಲ್ಯಾದೀನಾಮ್ ಅನಾರಮ್ಭಕತ್ವಮ್ । ತಥಾ ಚೇತನಾಯಾ ಅಪಿ ಇತಿ ದ್ರಷ್ಟವ್ಯಮ್ ||

(ಭಾಷ್ಯಾರ್ಥ)

ಇನ್ನು (ನಿನ್ನ) ಮತವು ಹೀಗಿರಬಹುದು. ದ್ವ್ಯಣುಕಾದಿಕಾರ್ಯದ್ರವ್ಯವು ವಿರೋಧಿಯಾದ ಪರಿಮಾಣಾಂತರದಿಂದ ಆಕ್ರಾಂತವಾಗಿರುವದರಿಂದ ಕಾರಣಗತವಾದ ಪಾರಿಮಾಂಡಲ್ಯವೇ ಮುಂತಾದವು ಆರಂಭಕವಾಗುವದಿಲ್ಲ ಎಂದು ಒಪ್ಪಿರುತ್ತೇನೆ. ಆದರೆ (ಹಾಗೆ) ಚೇತನವಿರೋಧಿಯಾದ ಮತ್ತೊಂದು ಗುಣದಿಂದ ಜಗತ್ತು ಆಕ್ರಾಂತವಾಗಿರುವದಿಲ್ಲ; ಹಾಗಿದ್ದಿದ್ದರೆ ಕಾರಣಗತವಾದ ಚೇತನವು ಕಾರ್ಯದಲ್ಲಿ ಮತ್ತೊಂದು ಚೇತನವನ್ನು ಆರಂಭಿಸದೆ ಇರಬಹುದಾಗಿತ್ತು. ಚೇತನಕ್ಕೆ ವಿರೋಧಿಯಾದ ಅಚೇತನ ಎಂಬ ಯಾವ ಗುಣವೂ ಇಲ್ಲವೇ ಇಲ್ಲ; ಏಕೆಂದರೆ (ಅಚೇತನವೆಂದರೆ) ಚೇತನದ ಅಭಾವಮಾತ್ರವಾಗಿರುತ್ತದೆ.[3] ಆದ್ದರಿಂದ (ಇದು) ಪಾರಿಮಾಂಡಲ್ಯವೇ ಮುಂತಾದದ್ದಕ್ಕಿಂತ ವಿಷಮವಾಗಿರುತ್ತದೆಯಾದ್ದರಿಂದ (ಇಲ್ಲಿ) ಚೇತನವು ಆರಂಭಕವಾಗಬೇಕೆಂದೇ ಆಗುತ್ತದೆ.

ಹೀಗೆಂದು ಬಗೆಯಬೇಡ. ಹೇಗೆ ಕಾರಣದಲ್ಲಿ ಇದ್ದುಕೊಂಡಿದ್ದರೂ ಪಾರಿಮಾಂಡಲ್ಯಾದಿಗಳು (ಸಜಾತೀಯಪರಿಮಾಣವನ್ನು) ಆರಂಭಿಸದೆ ಇರುವ

---

1. ಗುಜರಾತಿಪ್ರೆಸ್ಸಿನಲ್ಲಿ ಅಚ್ಚಾದ ಪುಸ್ತಕದಲ್ಲಿ "ಕಾರಣಬಹುತ್ವಾಚ್ಚ" ಎಂದಿಷ್ಟೇ ಇದೆ. ವ್ಯಾಖ್ಯಾನಕಾರರು ಚಶಬ್ದದಿಂದ ಮಹತ್ತ್ವಪ್ರಚಯಗಳನ್ನು ಸೇರಿಸಿಕೊಳ್ಳಬೇಕೆಂದು ಬರೆದಿರುತ್ತಾರೆ. ಆಚಾರ್ಯರ ಕಾಲದಲ್ಲಿದ್ದ ಈ ಪಾಠಭೇದವಿಷಯದಲ್ಲಿ ವ್ಯಾಖ್ಯಾನಕಾರರು ಏನೂ ಬರೆದಿಲ್ಲ.

2. "ಅತೋ ವಿಪರೀತಮಣು" ಎಂದು ಅಚ್ಚಿನ ಸೂತ್ರಪಾಠ.

3. ಈ ಅಭಿಪ್ರಾಯವನ್ನು ಮುಂದೆ ಭಾಷ್ಯಕಾರರು ಖಂಡಿಸಿರುವದಿಲ್ಲವಾಗಿ ಅಚೇತನವೆಂದರೆ ಚೇತನಶಕ್ತಿಯಿಲ್ಲದ್ದು ಎಂದೇ ಅವರಿಗೂ ಸಮ್ಮತವೆಂದು ತೋರುತ್ತದೆ ಭಾಷ್ಯದಲ್ಲಿ ಅಚೇತನಶಬ್ದಕ್ಕೆ ಪರ್ಯಾಯವಾಗಿ ಜಡಶಬ್ದವನ್ನೂ ಪ್ರಯೋಗಿಸಿಲ್ಲವೆಂಬುದನ್ನು ಲಕ್ಷಿಸತಕ್ಕದ್ದಾಗಿದೆ. ಭಾಷ್ಯಕಾರರ ಮತದಲ್ಲಿ ಅಚೇತನವೆಂಬ ಧರ್ಮವೊಂದನ್ನು ಅಂಗೀಕರಿಸಿದೆಯೆ?– ಎಂಬುದನ್ನು ವಿದ್ವಾಂಸರು ಶೋಧಿಸಿ ತಿಳಿಯಬೇಕಾಗಿದೆ.

ವೋ ಹಾಗೆಯೇ ಚೈತನ್ಯವೂ (ಆರಂಭಿಸದೆ ಇರಬಹುದು) ಎಂಬೀ ಅಂಶವು (ದೃಷ್ಟಾಂತದಾರ್ಷ್ಟಾಂತಿಕಗಳಿಗೆ) ಸಮಾನವಾಗಿರುತ್ತದೆ. ಕಾರ್ಯವು ಮತ್ತೊಂದು ಪರಿಮಾಣದಿಂದ ಆಕ್ರಾಂತವಾಗಿರುವದೇ ಪಾರಿಮಾಂಡಲ್ಯಾದಿಗಳು ಆರಂಭವಾಗದೆ ಇರುವದಕ್ಕೆ ಕಾರಣವೆಂದು ಹೇಳುವಂತಿಲ್ಲ ; ಏಕೆಂದರೆ ಮತ್ತೊಂದು ಪರಿಮಾಣವು ಆರಂಭವಾಗುವ ಮುಂಚೆಯೇ ಪಾರಿಮಾಂಡಲ್ಯಾದಿಗಳು ಆರಂಭಕವಾಗಬಹುದಾಗಿದೆ. ಏಕೆಂದರೆ ಕಾರ್ಯದ್ರವ್ಯವು ಆರಬ್ಧವಾದ ಬಳಿಕವೂ ಗುಣವು ಆರಂಭಕವಾಗುವ ಮುಂಚೆ (ಒಂದು) ಕ್ಷಣದವರೆಗೆ ನಿರ್ಗುಣವಾಗಿರುತ್ತದೆ (ಎಂದು) ನೀವು ಒಪ್ಪಿರುತ್ತೀರಿ.[1]

ಮತ್ತೊಂದು ಪರಿಮಾಣವನ್ನು ಆರಂಭಿಸುವದರಲ್ಲಿ ಪಾರಿಮಾಂಡಲ್ಯಾದಿಗಳು ವ್ಯಗ್ರವಾಗಿರುವದರಿಂದ ಸ್ವಸಮಾನಜಾತೀಯ ಪರಿಮಾಣಾಂತರವನ್ನು ಆರಂಭಿಸದೆ ಇರುವವು (ಎಂದೂ ಹೇಳುವ)ದಕ್ಕಿಲ್ಲ. ಏಕೆಂದರೆ ಪರಿಮಾಣಾಂತರ (ವುಂಟಾಗುವದಕ್ಕೆ) ಬೇರೊಂದು ಹೇತುವನ್ನು[2] (ನೀವು) ಅಂಗೀಕರಿಸಿರುತ್ತೀರಿ. ಹೇಗೆಂದರೆ "ಕಾರಣಬಹುತ್ವಾತ್ ಕಾರಣಮಹತ್ತ್ವಾತ್ ಪ್ರಚಯವಿಶೇಷಾಚ್ಚ ಮಹತ್" (ವೈ. ಸೂ. ೭–೧–೯) ಕಾರಣಬಹುತ್ವದಿಂದಲೂ ಕಾರಣಮಹತ್ತ್ವದಿಂದಲೂ ಪ್ರಚಯವಿಶೇಷದಿಂದಲೂ ಮಹತ್ಪರಿಮಾಣವು (ಆರಬ್ಧವಾಗುತ್ತದೆ) ; "ತದ್ವಿಪರೀತಮಣು" (ವೈ. ಸೂ. ೭–೧–೧೦) ಅದಕ್ಕೆ ವಿಪರೀತವಾದದ್ದು ಅಣು,[3] "ಏತೇನ ದೀರ್ಘತ್ವಹ್ರಸ್ವತ್ವೇ ವ್ಯಾಖ್ಯಾತೇ" (ವೈ. ಸೂ. ೭–೧–೧೭) ಇದರಿಂದ ದೀರ್ಘತ್ವಹ್ರಸ್ವತ್ವಗಳನ್ನೂ ವಿವರಿಸಿದಂತೆ ಆಯಿತು.[4]

---

1. ಯಾವ ಗುಣವೂ ಇಲ್ಲದ ಆ ಕ್ಷಣದಲ್ಲಿ ಪಾರಿಮಾಂಡಲ್ಯಾದಿಗಳು ತಮ್ಮ ಜಾತಿಯ ಗುಣವನ್ನೇಕೆ ಆರಂಭಿಸಬಾರದು?

2. ಪಾರಿಮಾಂಡಲ್ಯಾದಿಗಳಿಗಿಂತ ಬೇರೆಯಾಗಿ ಕಾರಣಬಹುತ್ವವೇ ಮುಂತಾದ ಹೇತುವನ್ನು.

3. ತ್ರ್ಯಣುಕಾದಿಗಳ ಮಹತ್ತ್ವಕ್ಕೆ ಮಹತ್ತ್ವಬಹುತ್ವಪ್ರಚಯಗಳು ಕಾರಣವು. ಆದರೆ ದ್ವ್ಯಣುಕದಲ್ಲಿರುವ ಅಣುತ್ವಕ್ಕೆ ಮಹತ್ತ್ವವು ಕಾರಣವಲ್ಲ ; ಏಕೆಂದರೆ ಕಾರಣವಾದ ಪರಮಾಣುವಿನಲ್ಲಿ ಮಹತ್ತ್ವವಿರುವದಿಲ್ಲ. ಮಹತ್ತ್ವಕ್ಕೆ ಕಾರಣಬಹುತ್ವವು ಕಾರಣ, ಅಣುತ್ವಕ್ಕೆ ಕಾರಣಗತದ್ವಿತ್ವವು ಕಾರಣ.

4. ಮಹತ್ತ್ವಕ್ಕೆ ಅಸಮವಾಯಿಕಾರಣವಾದದ್ದೇ ದೀರ್ಘತ್ವಕ್ಕೂ ಅಸಮವಾಯಿಕಾರಣವು, ಅಣುತ್ವಕ್ಕೆ ಕಾರಣವಾದದ್ದೇ ಹ್ರಸ್ವತ್ವಕ್ಕೂ ಕಾರಣವು. ಮಹತ್ತ್ವವೂ ದೀರ್ಘತ್ವವೂ ಸಮಾನಾಧಿಕರಣವಾಗಿರುತ್ತವೆ, ಅಣುತ್ವವೂ ಹ್ರಸ್ವತ್ವವೂ ಸಮಾನಾಧಿಕರಣವಾಗಿರುತ್ತವೆ. ಕಾರಣವು ಒಂದೇ ಆದರೂ ಪ್ರಾಗಭಾವಭೇದದಿಂದ ಬೇರೆಬೇರೆಯ ಕಾರ್ಯಗಳುಂಟಾಗಬಹುದು– ಎಂದು ವೈಶೇಷಿಕರ ಭಾವ. ವೈಶೇಷಿಕರ ಕಾರ್ಯಕಾರಣಪ್ರಕ್ರಿಯೆಯ ವಿಷಯಕ್ಕೆ ಪೀಠಿಕೆಯನ್ನು ನೋಡಿ.

ಎಂದಲ್ಲವೆ ಕಾರಣಭುಜಸೂತ್ರಗಳು? ಸಂನಿಧಾನವಿಶೇಷದಿಂದ ಕಾರಣಬಹುತ್ವಾದಿಗಳೇ (ಮಹದಾದಿಪರಿಮಾಣಗಳನ್ನು) ಆರಂಭಿಸುತ್ತವೆಯೇ[1] ಹೊರತು ಪಾರಿಮಾಂಡಲ್ಯಾದಿಗಳು ಆರಂಭಿಸುವದಿಲ್ಲ ಎಂದೂ ಹೇಳುವದಕ್ಕಾಗುವದಿಲ್ಲ.[2] ಏಕೆಂದರೆ ದ್ರವ್ಯಾಂತರವನ್ನಾಗಲಿ ಗುಣಾಂತರವನ್ನಾಗಲಿ ಆರಂಭಿಸುವಾಗ ಕಾರಣಗುಣಗಳೆಲ್ಲವೂ ತಮ್ಮ ಆಶ್ರಯದಲ್ಲಿ ಸಮಾನವಾಗಿಯೇ ಸಮವೇತವಾಗಿರುತ್ತವೆ.[3] ಆದ್ದರಿಂದಲೇ ಸ್ವಭಾವದಿಂದಲೇ ಪಾರಿಮಾಂಡಲ್ಯಾದಿಗಳು ಅನಾರಂಭಕವಾಗಿರುತ್ತವೆ (ಎಂದು ಒಪ್ಪಬೇಕು). ಇದರಂತೆ ಚೇತನವೂ (ಆರಂಭಕವಾಗಬಹುದು).[4]

## ಸಂಯೋಗವು ವಿಜಾತೀಯಾರಂಭಕವಾಗಿರುವದರಿಂದಲೂ ವೈಶೇಷಿಕಪ್ರಕ್ರಿಯೆ ವ್ಯವಸ್ಥಿತವಲ್ಲ

(ಭಾಷ್ಯ)

೨೪. ಸಂಯೋಗಾಚ್ಚ ದ್ರವ್ಯಾದೀನಾಂ ವಿಲಕ್ಷಣಾನಾಮ್ ಉತ್ಪತ್ತಿದರ್ಶನಾತ್ ಸಮಾನಜಾತೀಯೋತ್ಪತ್ತಿವ್ಯಭಿಚಾರಃ। ದ್ರವ್ಯೇ ಪ್ರಕೃತೇ ಗುಣೋದಾ

1. ದ್ವ್ಯಣುಕಗತ ಬಹುತ್ವವು ತ್ರ್ಯಣುಕದ ಮಹತ್ತ್ವಕ್ಕೆ ಆರಂಭಕ; ನೂಲುಗಳ ಮಹತ್ತ್ವವು ಬಟ್ಟೆಯ ಮಹತ್ತ್ವಕ್ಕೆ ಆರಂಭಕ; ಹತ್ತಿಯ ತುಂಡು ಇಂತಿಷ್ಟು ಪಲಗಳಿರುವಲ್ಲಿ ಅದರಿಂದ ಅಷ್ಟೇ ಪಲಗಳ ತೂಕದ ಕಾರ್ಯವು ಉತ್ಪನ್ನವಾಗುವಾಗ ಅದರ ಮಹತ್ತ್ವಕ್ಕೆ ಪ್ರಚಯವೆಂಬ ಸಂಯೋಗವಿಶೇಷವು ಆರಂಭಕ.

2. ಕಾರಣಬಹುತ್ವವೇ ಮುಂತಾದವು ಹತ್ತಿರವಾಗಿರುವದರಿಂದಲೂ ಪಾರಿಮಾಂಡಲ್ಯವು ಸಂಯೋಗಾದಿವ್ಯವಹಿತವಾಗಿರುವದರಿಂದ ಹತ್ತಿರವಿಲ್ಲದ್ದರಿಂದಲೂ ಕಾರಣಬಹುತ್ವಾದಿಗಳೇ ಮಹತ್ತ್ವಾದಿಗಳಿಗೆ ಕಾರಣವಾಗಿವೆ ಎಂದು ಹೇಳುವದಕ್ಕಾಗುವದಿಲ್ಲ ಎಂದು ಅಭಿಪ್ರಾಯ.

3. ಪಾರಿಮಾಂಡಲ್ಯಾದಿಗಳೂ ಕಾರಣಬಹುತ್ವವೇ ಮುಂತಾದವುಗಳಂತೆಯೇ ಗುಣಗಳು. ಆ ಗುಣಗಳೂ ಕಾರಣದಲ್ಲಿಯೇ ಇರುತ್ತವೆ. ದ್ರವ್ಯಗುಣಗಳು ಆರಬ್ಧವಾಗುವಾಗ ಕೆಲವು ಗುಣಗಳು ಆರಂಭಕ, ಮತ್ತೆ ಕೆಲವು ಆರಂಭಕವಲ್ಲ – ಎನ್ನುವದಕ್ಕೆ ಹೇತುವಿಲ್ಲ. ನಿರವಯವವಾದ ಪರಮಾಣುಗಳಲ್ಲಿರುವ ಗುಣಗಳು ಕೆಲವು ಸಂನಿಹಿತ, ಮತ್ತೆ ಕೆಲವು ಅಸಂನಿಹಿತ – ಎಂದು ವಿಶೇಷವನ್ನು ಕಲ್ಪಿಸುವದೂ ಆಗುವದಿಲ್ಲ ಎಂದು ಅಭಿಪ್ರಾಯ.

4. ಚೇತನವು ಅಚೇತನಕ್ಕೆ ಕಾರಣವಾಗಬಹುದು ಎಂದು ಅಭಿಪ್ರಾಯ. ಇಲ್ಲಿ ಚೇತನದಿಂದ ಅಚೇತನವು ಆರಬ್ಧವಾಗಿವೆ ಎಂಬುದನ್ನು ತಾತ್ಪರ್ಯದಿಂದ ಹೇಳಿಲ್ಲ. ಏಕೆಂದರೆ ಜಗತ್ತೆಲ್ಲವೂ ಚೇತನವೇ ಎಂದೂ ಸಾಧಿಸಬಹುದೆಂದು ೨-೧-೬ರ ಭಾಷ್ಯದಲ್ಲಿ ಹೇಳಿದೆ. ವೈಶೇಷಿಕಪ್ರಕ್ರಿಯೆ ಸರಿಯಿಲ್ಲ; ಆದ್ದರಿಂದ ಅವರ ಆಕ್ಷೇಪಕ್ಕೂ ಬೆಲೆಯಿಲ್ಲ ಎಂಬು ಇಲ್ಲಿ ದಿಷ್ಟೇ ವಿವಕ್ಷಿತ.

ಹರಣಮ್ ಅಯುಕ್ತಮ್ ಇತಿ ಚೇತ್ । ನ । ದೃಷ್ಟಾನ್ತೇನ ವಿಲಕ್ಷಣಾರಮ್ಭಮಾತ್ರಸ್ಯ ವಿವಕ್ಷಿತತ್ವಾತ್ । ನ ಚ ದ್ರವ್ಯಸ್ಯ ದ್ರವ್ಯಮೇವ ಉದಾಹರ್ತವ್ಯಮ್ ಗುಣಸ್ಯ ವಾ ಗುಣ ಏವ ಇತಿ ಕಶ್ಚಿತ್ ನಿಯಮೋ ಹೇತುರಸ್ತಿ । ಸೂತ್ರಕಾರೋಽಪಿ ಭವತಾಂ ದ್ರವ್ಯಸ್ಯ ಗುಣಮ್ ಉದಾಜಹಾರ "ಪ್ರತ್ಯಕ್ಷಾಪ್ರತ್ಯಕ್ಷಾಣಾಮಪ್ರತ್ಯಕ್ಷತ್ವಾತ್ ಸಂಯೋಗಸ್ಯ ಪಞ್ಚಾತ್ಮಕಂ ನ ವಿದ್ಯತೇ" (ವೈ. ಸೂ. ೪-೨-೨) ಇತಿ । ಯಥಾ ಪ್ರತ್ಯಕ್ಷಾಪ್ರತ್ಯಕ್ಷಯೋಃ ಭೂಮ್ಯಾಕಾಶಯೋಃ ಸಮವಯನ್ ಸಂಯೋಗಃ ಅಪ್ರತ್ಯಕ್ಷಃ, ಏವಂ ಪ್ರತ್ಯಕ್ಷಾಪ್ರತ್ಯಕ್ಷೇಷು ಪಞ್ಚಸು ಭೂತೇಷು ಸಮವಯತ್ ಶರೀರಮ್ ಅಪ್ರತ್ಯಕ್ಷಂ ಸ್ಯಾತ್ । ಪ್ರತ್ಯಕ್ಷಂ ಹಿ ಶರೀರಮ್ । ತಸ್ಮಾತ್ ನ ಪಾಞ್ಚಭೌತಿಕಮ್ ಇತಿ । ಏತತ್ ಉಕ್ತಂ ಭವತಿ । ಗುಣಶ್ಚ ಸಂಯೋಗಃ, ದ್ರವ್ಯಂ ಶರೀರಮ್ ॥

(ಭಾಷ್ಯಾರ್ಥ)

ಇದಲ್ಲದೆ ಸಂಯೋಗದಿಂದ ದ್ರವ್ಯವೇ ಮುಂತಾದ ವಿಲಕ್ಷಣ(ಕಾರ್ಯಗಳು) ಹುಟ್ಟುವದು ಕಂಡುಬರುವದರಿಂದಲೂ ಸಮಾನಜಾತೀಯವಾದ (ಕಾರ್ಯವೇ) ಉಂಟಾಗಬೇಕೆಂಬ (ನಿಯಮವು) ತಪ್ಪಿಹೋಗುತ್ತದೆ.

(ಆಕ್ಷೇಪ) :– ದ್ರವ್ಯವು ಪ್ರಕೃತವಾಗಿರುವಲ್ಲಿ ಗುಣವನ್ನು ಉದಾಹರಿಸುವದು ಸರಿಯಲ್ಲವಲ್ಲ !

(ಪರಿಹಾರ) :– ಹಾಗಲ್ಲ. ವಿಲಕ್ಷಣವಾದದ್ದು ಆರಂಭವಾಗಬಹುದೆಂಬುದಿಷ್ಟೇ ದೃಷ್ಟಾಂತದಿಂದ ವಿವಕ್ಷಿತವಾಗಿರುತ್ತದೆ. ದ್ರವ್ಯಕ್ಕೆ ದ್ರವ್ಯವನ್ನೇ ಉದಾಹರಿಸಬೇಕು, ಗುಣಕ್ಕೆ ಗುಣವನ್ನೇ ಉದಾಹರಿಸಬೇಕು ಎಂದು ನಿಯಮವನ್ನೇರ್ಪಡಿಸುವದಕ್ಕೆ ಯಾವ ಕಾರಣವೂ ಇರುವದಿಲ್ಲ. (ಇದಲ್ಲದೆ) ನಿಮ್ಮ ಸೂತ್ರಕಾರರೂ "ಪ್ರತ್ಯಕ್ಷಾಪ್ರತ್ಯಕ್ಷಾಣಾಮಪ್ರತ್ಯಕ್ಷತ್ವಾತ್ ಸಂಯೋಗಸ್ಯ ಪಞ್ಚಾತ್ಮಕಂ ನ ವಿದ್ಯತೇ" ಪ್ರತ್ಯಕ್ಷಾಪ್ರತ್ಯಕ್ಷಗಳ ಸಂಯೋಗವು ಅಪ್ರತ್ಯಕ್ಷವಾಗಿರುವದರಿಂದ ಪಂಚಾತ್ಮಕತ್ವವಿಲ್ಲ – (ವೈ. ಸೂ. ೪-೨-೨) ಎಂದು ದ್ರವ್ಯಕ್ಕೆ ಗುಣವನ್ನು (ದೃಷ್ಟಾಂತವಾಗಿ) ಉದಾಹರಿಸಿರುತ್ತಾರೆ. ಹೇಗೆ ಪ್ರತ್ಯಕ್ಷಾಪ್ರತ್ಯಕ್ಷಗಳಾದ ಭೂಮ್ಯಾಕಾಶಗಳಲ್ಲಿ ಸಮವೇತವಾಗಿರುವ ಸಂಯೋಗವು ಅಪ್ರತ್ಯಕ್ಷವೋ[1] ಹಾಗೆಯೇ ಪ್ರತ್ಯಕ್ಷಾಪ್ರತ್ಯಕ್ಷಗಳಾಗಿರುವ ಪಂಚಭೂತಗಳಲ್ಲಿ ಸಮವೇತ

1. ಗುಣವು ಗುಣಿಯಲ್ಲಿ ಸಮವಾಯಸಂಬಂಧದಿಂದ ಸೇರಿಕೊಂಡಿರುತ್ತದೆ ; ಸಂಯೋಗವೆಂಬುದು ಗುಣವಾದ್ದರಿಂದ ಭೂಮ್ಯಾಕಾಶಗಳ ಸಂಯೋಗವು ಅವುಗಳಲ್ಲಿ ಸಮವಾಯಸಂಬಂಧದಿಂದ ಸೇರಿರುತ್ತದೆ. ಆದರೆ ಸಂಯೋಗಿದ್ರವ್ಯಗಳಲ್ಲಿ ಒಂದು ಅಪ್ರ[illegible]ಕ್ಷ[illegible]ಗಿರುವದರಿಂದ ಸಂಯೋಗವೂ ಅಪ್ರತ್ಯಕ್ಷವಾಗಿರುತ್ತದೆ.

ವಾಗಿರುವ ಶರೀರವು[1] ಅಪ್ರತ್ಯಕ್ಷವಾದೀತು. ಶರೀರವು ಪ್ರತ್ಯಕ್ಷವಷ್ಟೆ. ಆದ್ದರಿಂದ (ಅದು) ಪಾಂಚಭೌತಿಕವಲ್ಲ ಎಂದು (ಸೂತ್ರದ ಅರ್ಥ). ಇಲ್ಲಿ ಇಷ್ಟನ್ನು ಹೇಳಿದಂತಾಗಿದೆ ಸಂಯೋಗವು ಗುಣವು, ಶರೀರವು ದ್ರವ್ಯವು.[2]

## ಈ ಅಧಿಕರಣದಲ್ಲಿ ಪುನರುಕ್ತಿದೋಷವಿಲ್ಲ

( ಭಾಷ್ಯ )

೨೫. 'ದೃಶ್ಯತೇ ತು' (೨-೧-೬) ಇತಿ ಚಾತ್ರಾಪಿ ವಿಲಕ್ಷಣೋತ್ಪತ್ತಿಃ ಪ್ರಪಞ್ಚಿತಾ | ನನು ಏವಂ ಸತಿ ತೇನೈವ ಏತದ್ ಗತಮ್। ನೇತಿ ಬ್ರೂಮಃ। ತತ್ ಸಾಂಖ್ಯಂಪ್ರತಿ ಉಕ್ತಮ್, ಏತತ್ತು ವೈಶೇಷಿಕಂ ಪ್ರತಿ। ನನು ಅತಿದೇಶೋಽಪಿ ಸಮಾನನ್ಯಾಯತಯಾ ಕೃತಃ "ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ" (೨-೧-೧೨) ಇತಿ । ಸತ್ಯಮ್ ಏತತ್ । ತಸ್ಯೈವ ತು ಅಯಂ ವೈಶೇಷಿಕಪ್ರಕ್ರಿಯಾರಮ್ಭೇ ತತ್ಪ್ರಕ್ರಿಯಾನುಗತೇನ ನಿದರ್ಶನೇನ ಪ್ರಪಞ್ಚಃ ಕೃತಃ ||

(ಭಾಷ್ಯಾರ್ಥ)

'ದೃಶ್ಯತೇ ತು' (೨--೧--೬) ಎಂಬಲ್ಲಿಯೂ ವಿಲಕ್ಷಣ(ಕಾರ್ಯದ) ಉತ್ಪತ್ತಿಯನ್ನು (ದೃಷ್ಟಾಂತದ ಮೂಲಕ) ವಿವರಿಸಿದ್ದಾಗಿದೆ.

(ಆಕ್ಷೇಪ) : — ಹಾಗಾದರೆ ಆ ( ಸೂತ್ರದ ಅಭಿಪ್ರಾಯ )ದಲ್ಲಿಯೇ ಇದೂ ಸೇರಿಹೋಗಿರುವದಿಲ್ಲವೆ ?

(ಸಮಾಧಾನ) :— ಇಲ್ಲ ಎನ್ನುತ್ತೇವೆ. (ಏಕೆಂದರೆ) ಅದು ಸಾಂಖ್ಯನನ್ನು ಕುರಿತು ಹೇಳಿದ್ದು, ಇದು ವೈಶೇಷಿಕನನ್ನು ಕುರಿತು (ಹೇಳಿದ್ದು).

(ಆಕ್ಷೇಪ) :— ಸಮಾನನ್ಯಾಯವಿರುವದರಿಂದ "ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ" (೨--೧--೧೨) ಎಂಬ ಸೂತ್ರದಿಂದ ವೈಶೇಷಿಕಪಕ್ಷಕ್ಕೂ (ಆ ಉತ್ತರವನ್ನು) ಅತಿದೇಶಮಾಡಿಯೂ ಆಗಿದೆಯಲ್ಲ !

---

1. ಕಾರ್ಯವು ಕಾರಣದಲ್ಲಿ ಸಮವಾಯಸಂಬಂಧದಿಂದ ಸೇರಿಸಿಕೊಂಡಿರುತ್ತದೆ. ಶರೀರವು ಕಾರ್ಯವಾದ್ದರಿಂದ ಪಂಚಭೂತಗಳಲ್ಲಿ ಸಮವಾಯಸಂಬಂಧದಿಂದ ಸೇರಿಕೊಂಡಿರಬೇಕು. ಭೂತಗಳಲ್ಲಿ ಒಂದಾದ ಆಕಾಶವು ಅಪ್ರತ್ಯಕ್ಷವಾಗಿರುವದರಿಂದ ಅದರಲ್ಲಿ ಸಮವೇತವಾಗಿರುವ ಶರೀರವೂ ಅಪ್ರತ್ಯಕ್ಷವಾಗಬೇಕಾಗುವದು ಎಂದರ್ಥ. ಈ ಸಮವಾಯವನ್ನು ೨-೨-೧೩ರಲ್ಲಿ ಖಂಡಿಸಲಾಗುವದು.

2. ಸಂಯೋಗವು ಅಪ್ರತ್ಯಕ್ಷವಾಗಿರುವಂತೆ ಶರೀರವೂ ಅಪ್ರತ್ಯಕ್ಷವಾಗಿರಬೇಕಾಗುವದು ಎಂದು ದ್ರವ್ಯಕ್ಕೆ ಗುಣದೃಷ್ಟಾಂತವನ್ನು ಸೂತ್ರಕಾರರು ಕೊಟ್ಟಂತೆ ಆಯಿತು ಎಂದರ್ಥ.

(ಸಮಾಧಾನ) :— ಅದು ನಿಜ. ಆದರೆ ವೈಶೇಷಿಕರ ಪ್ರಕ್ರಿಯೆ(ಯನ್ನು ಪರಿಶೀಲಿಸುವ) ಪ್ರಾರಂಭದಲ್ಲಿ ಅವರ ಪ್ರಕ್ರಿಯಾನುಸಾರಿಯಾದ ದೃಷ್ಟಾಂತದಿಂದ ಅವರ ವಿವರಣೆಯನ್ನೇ ಮಾಡಿರುತ್ತದೆ.

## ೩. ಪರಮಾಣುಜಗದಕಾರಣತ್ವಾಧಿಕರಣ (ಸೂ. ೧೨-೧೮)

( ಪರಮಾಣುವು ಜಗತ್ಕಾರಣವಲ್ಲ )

**ಉಭಯಥಾಪಿ ನ ಕರ್ಮಾತಸ್ತದಭಾವಃ ॥ ೧೨ ॥**

೧೨. ಎರಡು ವಿಧದಿಂದಲೂ ಕರ್ಮವಿಲ್ಲ ; ಆದ್ದರಿಂದ ಅದರ ಅಭಾವವಾಗುವುದು.

## ವೈಶೇಷಿಕರ ಪ್ರಕ್ರಿಯೆಯ ಅನುವಾದ

( ಭಾಷ್ಯ )

೨೬. ಇದಾನೀಂ ಪರಮಾಣುಕಾರಣವಾದಂ ನಿರಾಕರೋತಿ । ಸ ಚ ವಾದಃ ಇತ್ಥಂ ಸಮುತ್ತಿಷ್ಠತೇ । ಪಟಾದೀನಿ ಹಿ ಲೋಕೇ ಸಾವಯವಾನಿ ದ್ರವ್ಯಾಣಿ ಸ್ವಾನುಗತೈರೇವ ಸಂಯೋಗಸಚಿವೈಃ ತನ್ತ್ವಾದಿಭ್ಯಃ ದ್ರವ್ಯೈಃ ಆರಭ್ಯಮಾಣಾನಿ ದೃಷ್ಟಾನಿ । ತತ್ಸಾಮಾನ್ಯೇನ ಯಾವತ್ ಕಿಂಚಿತ್ ಸಾವಯವಂ ತತ್ ಸರ್ವಂ ಸ್ವಾನುಗತೈರೇವ ಸಂಯೋಗಸಚಿವೈಃ ತೈಸ್ತೈರ್ದ್ರವ್ಯೈಃ ಆರಬ್ಧಮ್ ಇತಿ ಗಮ್ಯತೇ, ಸ ಚಾಯಮ್ ಅವಯವಾವಯವಿವಿಭಾಗಃ ಯತೋ ನಿವರ್ತತೇ ಸಃ ಅಪಕರ್ಷಪರ್ಯನ್ತಗತಃ ಪರಮಾಣುಃ । ಸರ್ವಂ ಚೇದಂ ಜಗತ್ ಗಿರಿಸಮುದ್ರಾದಿಕಂ ಸಾವಯವಮ್ । ಸಾವಯವತ್ವಾಚ್ಚ ಆದ್ಯನ್ತವತ್ । ನ ಚ ಅಕಾರಣೇನ ಕಾರ್ಯೇಣ ಭವಿತವ್ಯಮ್ ಇತ್ಯತಃ ಪರಮಾಣವೋ ಜಗತಃ ಕಾರಣಮ್ ಇತಿ ಕಣಭುಗಭಿಪ್ರಾಯಃ । ತಾನಿ ಇಮಾನಿ ಚತ್ವಾರಿ ಭೂತಾನಿ ಭೂಮ್ಯುದಕತೇಜಃಪವನಾಖ್ಯಾನಿ ಸಾವಯವಾನ್ಯುಪಲಭ್ಯ ಚತುರ್ವಿಧಾಃ ಪರಮಾಣವಃ ಪರಿಕಲ್ಪ್ಯನ್ತೇ । ತೇಷಾಂ ಚ ಅಪಕರ್ಷಪರ್ಯನ್ತಗತತ್ವೇನ ಪರತೋ ವಿಭಾಗಾಸಂಭವಾತ್ ವಿನಶ್ಯತಾಂ ಪೃಥಿವ್ಯಾದೀನಾಂ ಪರಮಾಣುಪರ್ಯನ್ತೋ ವಿಭಾಗೋ ಭವತಿ । ಸ ಪ್ರಲಯಕಾಲಃ ತತಃ ಸರ್ಗಕಾಲೇ ಚ ವಾಯವೀಯೇಷು ಅಣುಷು ಅದೃಷ್ಟಾಪೇಕ್ಷಂ ಕರ್ಮ ಉತ್ಪದ್ಯತೇ। ತತ್ ಕರ್ಮ ಸ್ವಾಶ್ರಯಂ ಅಣುಮ್ ಅಣ್ವನ್ತರೇಣ ಸಂಯುನಕ್ತಿ। ತತೋ ದ್ವ್ಯಣುಕಾದಿಕ್ರಮೇಣ ವಾಯುಃ ಉತ್ಪದ್ಯತೇ । ಏವಮ್ ಅಗ್ನಿಃ, ಏವಂ ಆಪಃ, ಏವಂ ಪೃಥಿವೀ । ಏವಮೇವ ಶರೀರಂ ಸೇನ್ದ್ರಿಯಮ್ ।

ಇತ್ಯೇವಮ್ ಸರ್ವಮಿದಂ ಜಗತ್ ಅಣುಭ್ಯಃ ಸಂಭವತಿ । ಅಣುಗತೇಭ್ಯಶ್ಚ ರೂಪಾದಿಭ್ಯಃ ದ್ವ್ಯಣುಕಾದಿಗತಾನಿ ರೂಪಾದೀನಿ ಸಂಭವನ್ತಿ ತನ್ತುಪಟನ್ಯಾಯೇನ ಇತಿ ಕಾಣಾದಾ ಮನ್ಯನ್ತೇ ॥

(ಭಾಷ್ಯಾರ್ಥ)

ಈಗ ಪರಮಾಣುಕಾರಣವಾದವನ್ನು ನಿರಾಕರಿಸುತ್ತಾರೆ. ಆ ವಾದವು ಹೀಗೆ ಎದ್ದುನಿಂತಿರುತ್ತದೆ. ಲೋಕದಲ್ಲಿ ಬಟ್ಟೆಯೇ ಮುಂತಾದ ಸಾವಯವ ದ್ರವ್ಯಗಳು ತಮ್ಮಲ್ಲಿ ಅನುಗತವಾದ ಸಂಯೋಗಸಹಿತವಾದ ನೂಲು ಮುಂತಾದ ದ್ರವ್ಯಗಳಿಂದಲೇ ಆರಬ್ಧವಾಗುವದು ಕಂಡುಬರುತ್ತದೆಯಷ್ಟೆ. ಅದರ ಹೋಲಿಕೆಯಿಂದ ಯಾವಯಾವದು ಸಾವಯವವೋ ಅದೆಲ್ಲವೂ ತನ್ನಲ್ಲಿಯೇ ಅನುಗತವಾಗಿರುವ[1] ಸಂಯೋಗಸಹಿತವಾದ ಆಯಾ ದ್ರವ್ಯಗಳಿಂದ ಆರಬ್ಧವಾಗಿರಬೇಕು ಎಂದು ನಿಶ್ಚಯವಾಗುತ್ತದೆ. ಆ ಈ ಅವಯವಾವಯವಿವಿಭಾಗವು ಎಲ್ಲಿ ಇಲ್ಲವಾಗುವದೋ ಆ ಅಪಕರ್ಷದ ಕೊನೆಯನ್ನು ಮುಟ್ಟಿದ್ದೇ ಪರಮಾಣುವು.[2] ಗಿರಿಸಮುದ್ರಾದಿಯಾದ ಈ ಜಗತ್ತೆಲ್ಲವೂ ಸಾವಯವವಾಗಿರುತ್ತದೆ; ಸಾವಯವವಾಗಿರುವದರಿಂದಲೇ ಆದ್ಯಂತವುಳ್ಳದ್ದು. ಕಾರಣವಿಲ್ಲದೆ ಕಾರ್ಯವು ಆಗಲಾರದಾದ್ದರಿಂದ ಪರಮಾಣುಗಳು ಜಗತ್ತಿಗೆ ಕಾರಣವು ಎಂದು ಕಣಭುಜನ ಅಭಿಪ್ರಾಯವು. ಭೂಮಿ, ಉದಕ, ತೇಜಸ್ಸು, ಪವನ– ಎಂಬ ಆ ಈ ಭೂತಗಳು ಸಾವಯವವಾಗಿರುವದನ್ನು ಕಂಡು ನಾಲ್ಕು ವಿಧವಾದ ಪರಮಾಣುಗಳನ್ನು ಪರಿಕಲ್ಪಿಸಲಾಗಿರುತ್ತದೆ. ಅವುಗಳು ಅಪಕರ್ಷದ ಕೊನೆಯನ್ನು ಮುಟ್ಟಿರುವದರಿಂದ (ಇನ್ನು) ಮುಂದೆ ವಿಭಾಗವು ಇರಲಾರದಾದ್ದರಿಂದ ಪೃಥಿವ್ಯಾದಿಗಳು ವಿನಾಶವಾದರೆ ಪರಮಾಣುವನ್ನು ಮುಟ್ಟುವವರೆಗೂ ವಿಭಾಗವಾಗುತ್ತದೆ. ಅದೇ ಪ್ರಲಯಕಾಲವು.[3] ಆಮೇಲೆ ಸೃಷ್ಟಿಕಾಲದಲ್ಲಿ

1. ಸಮವಾಯಸಂಬಂಧದಿಂದ ಸಂಬದ್ಧವಾಗಿರುವ ಎಂದರ್ಥ. ಗುಣಗುಣಿ, ಕಾರ್ಯಕಾರಣ, ಅವಯವಾವಯವಿ, ಕ್ರಿಯಾಕ್ರಿಯಾವತ್ – ಇವುಗಳಿಗೆ ಸಮವಾಯಸಂಬಂಧವಿರುತ್ತದೆ ಎಂದು ವೈಶೇಷಿಕರ ಮತ.

2. ಇನ್ನು ಅವಯವವಿಭಾಗವಿಲ್ಲವೆನ್ನುವಷ್ಟು ತೀರ ಸಣ್ಣದಾಗಿರುವದೇ ಪರಮಾಣು ಎಂದರ್ಥ. ಈಗಿನ ಭೌತಿಕಶಾಸ್ತ್ರಜ್ಞರು ಹೇಳುವ ಪರಮಾಣುಗಳಂತೆ ಇವನ್ನು ಪರೀಕ್ಷೆಯಿಂದ ವೈಶೇಷಿಕರು ಕಂಡುಹಿಡಿದಿಲ್ಲ, ತರ್ಕದಿಂದಲೇ ಸಿದ್ಧಪಡಿಸಿರುತ್ತಾರೆ. ಪೀಠಿಕೆಯನ್ನು ನೋಡಿ.

3. ಕಾರಣನಾಶದಿಂದಲೂ ಕಾರಣವಿಭಾಗದಿಂದಲೂ ಕಾರ್ಯವು ನಾಶವಾಗುತ್ತದೆ. ಎಲ್ಲಾ ಕಾರ್ಯಗಳೂ ನಾಶವಾದ ಪ್ರಲಯಕಾಲದಲ್ಲಿ ಕಾರಣವಾದ ಪರಮಾಣುಗಳ ವಿಭಾಗವಾಗಿರುತ್ತದೆ.

ವಾಯುವಿನ ಅಣುಗಳಲ್ಲಿ ಅದೃಷ್ಟದ ಅಪೇಕ್ಷೆಯಿಂದ[1] ಕರ್ಮವುಂಟಾಗುತ್ತದೆ. ಆ ಕರ್ಮವು ತನಗೆ ಆಶ್ರಯವಾಗಿರುವ ಅಣುವನ್ನು ಮತ್ತೊಂದು ಅಣುವಿನೊಡನೆ ಸಂಯೋಗವನ್ನುಂಟುಮಾಡುತ್ತದೆ.[2] ಆಮೇಲೆ ದ್ವ್ಯಣುಕವೇ ಮುಂತಾದ ಕ್ರಮದಿಂದ ವಾಯುವು ಹುಟ್ಟುತ್ತದೆ.[3] ಹೀಗೆಯೇ ಅಗ್ನಿಯು, ಹೀಗೆಯೇ ಅಪ್ಪು, ಹೀಗೆಯೇ ಪೃಥಿವಿಯು, ಹೀಗೆಯೇ ಇಂದ್ರಿಯಸಹಿತಶರೀರವೂ (ಹುಟ್ಟುತ್ತದೆ).[4] ಹೀಗೆ ಜಗತ್ತೆಲ್ಲವೂ ಅಣುಗಳಿಂದ ಉಂಟಾಗಿರುತ್ತದೆ. ಅಣುಗತವಾದ ರೂಪಾದಿಗಳಿಂದ ದ್ವ್ಯಣುಕಾದಿಗಳಲ್ಲಿರುವ ರೂಪಾದಿಗಳೂ ತಂತುಪಟನ್ಯಾಯದಿಂದ ಉಂಟಾಗುತ್ತವೆ– ಎಂದು ಕಾಣಾದರು ಭಾವಿಸಿರುತ್ತಾರೆ.

## ಸೃಷ್ಟಿಕಾಲದಲ್ಲಿ ಅಣುಸಂಯೋಗಕ್ಕೆ ಕರ್ಮವೇ ಇಲ್ಲ

( ಭಾಷ್ಯ )

೨೭. ತತ್ರ ಇದಮ್ ಅಭಿಧೀಯತೇ । ವಿಭಾಗಾವಸ್ಥಾನಾಂ ತಾವತ್ ಅಣೂನಾಂ ಸಂಯೋಗಃ ಕರ್ಮಾಪೇಕ್ಷೋಽಭ್ಯುಪಗನ್ತವ್ಯಃ । ಕರ್ಮವತಾಂ ತನ್ತ್ವಾದೀನಾಂ ಸಂಯೋಗದರ್ಶನಾತ್ । ಕರ್ಮಣಶ್ಚ ಕಾರ್ಯತ್ವಾತ್ ನಿಮಿತ್ತಂ ಕಿಮಪಿ ಅಭ್ಯುಪಗನ್ತವ್ಯಮ್ । ಅನಭ್ಯುಪಗಮೇ ನಿಮಿತ್ತಾಭಾವಾತ್ ನಾಣುಷು ಆದ್ಯಂ ಕರ್ಮ ಸ್ಯಾತ್ । ಅಭ್ಯುಪಗಮೇಽಪಿ ಯದಿ ಪ್ರಯತ್ನಃ, ಅಭಿಘಾತಾದಿರ್ವಾ ಯಥಾದೃಷ್ಟಂ ಕಿಮಪಿ ಕರ್ಮಣೋ ನಿಮಿತ್ತಮ್ ಅಭ್ಯುಪಗಮ್ಯೇತ, ತಸ್ಯ ಅಸಂಭವಾತ್ ನೈವ ಅಣುಷು ಆದ್ಯಂ ಕರ್ಮ ಸ್ಯಾತ್ । ನ ಹಿ ತಸ್ಯಾಮ್ ಅವಸ್ಥಾಯಾಮ್ ಆತ್ಮಗುಣಃ ಪ್ರಯತ್ನಃ ಸಂಭವತಿ । ಶರೀರಾಭಾವಾತ್ । ಶರೀರಪ್ರತಿಷ್ಠೇ ಹಿ ಮನಸಿ ಆತ್ಮನಃ ಸಂಯೋಗೇ ಸತಿ ಆತ್ಮಗುಣಃ ಪ್ರಯತ್ನೋ ಜಾಯತೇ । ಏತೇನ ಅಭಿಘಾತಾ

---

1. ಇದನ್ನು ಖಂಡನೆಯಲ್ಲಿ ವಿವರಿಸಲಾಗುವದು.

2. ಒಂದು ಪರಮಾಣುವಿಗೂ ಮತ್ತೊಂದಕ್ಕೂ ಸಂಯೋಗವನ್ನುಂಟುಮಾಡುತ್ತದೆ.

3. ಸಂಯೋಗವೆಂಬ ಅಸಮವಾಯಿಕಾರಣದಿಂದ ದ್ವ್ಯಣುಕವುಂಟಾಗುತ್ತದೆ; ದ್ವ್ಯಣುಕಗಳ ಸಂಯೋಗದಿಂದ ತ್ರ್ಯಣುಕವೇ ಮುಂತಾದವು ಹುಟ್ಟಿ ಆಮೇಲೆ ವಾಯುವೇ ಮುಂತಾದ ಕಾರ್ಯರೂಪವಾದ ಭೂತಗಳು ಉಂಟಾಗುತ್ತವೆ ಎಂದರ್ಥ. ಈ ಪ್ರಕರಣದಲ್ಲಿ ಅಣು ಎಂಬ ಮಾತಿಗೆ ಪರಮಾಣು ಎಂದೇ ಅರ್ಥ.

4. ಭೂತಗಳಿಂದ ಭೌತಿಕವಾದ ಶರೀರೇಂದ್ರಿಯಗಳು ಹುಟ್ಟುತ್ತವೆ ಎಂದರ್ಥ

ದ್ಯಪಿ ದೃಷ್ಟಂ ನಿಮಿತ್ತಂ ಪ್ರತ್ಯಾಖ್ಯಾತಮ್[1] । ಸರ್ಗೋತ್ತರಕಾಲಂ ಹಿ ತತ್ ಸರ್ವಮ್, ನಾದ್ಯಸ್ಯ ಕರ್ಮಣೋ ನಿಮಿತ್ತಂ ಸಂಭವತಿ । ಅಥ ಅದೃಷ್ಟಮ್ ಆದ್ಯಸ್ಯ ಕರ್ಮಣಃ ನಿಮಿತ್ತಮ್ ಇತ್ಯುಚ್ಯೇತ । ತತ್ ಪುನಃ ಆತ್ಮಸಮವಾಯಿ ವಾ ಸ್ಯಾತ್ ಅಣುಸಮವಾಯಿ ವಾ । ಉಭಯಥಾಪಿ ನ ಅದೃಷ್ಟನಿಮಿತ್ತಮ್ ಅಣುಷು ಕರ್ಮ ಅವಕಲ್ಪೇತ । ಅದೃಷ್ಟಸ್ಯ ಅಚೇತನತ್ವಾತ್ । ನ ಹಿ ಅಚೇತನಂ ಚೇತನೇನ ಅನಧಿಷ್ಠಿತಂ ಸ್ವತನ್ತ್ರಂ ಪ್ರವರ್ತತೇ ಪ್ರವರ್ತಯತಿ ವಾ ಇತಿ ಸಾಂಖ್ಯಪ್ರಕ್ರಿಯಾಯಾಮ್ ಅಭಿಹಿತಮ್ । ಆತ್ಮನಶ್ಚ ಅನುತ್ಪನ್ನಚೈತನ್ಯಸ್ಯ ತಸ್ಯಾಮ್ ಅವಸ್ಥಾಯಾಮ್ ಅಚೇತನತ್ವಾತ್ । ಆತ್ಮಸಮವಾಯಿತ್ವಾಭ್ಯುಪಗಮಾಚ್ಚ ನ ಅದೃಷ್ಟಮ್ ಅಣುಷು ಕರ್ಮಣೋ ನಿಮಿತ್ತಂ ಸ್ಯಾತ್ । ಅಸಂಬನ್ಧಾತ್ । ಅದೃಷ್ಟವತಾ ಪುರುಷೇಣ ಅಸ್ತಿ ಅಣೂನಾಂ ಸಂಬನ್ಧಃ ಇತಿ ಚೇತ್, ಸಂಬನ್ಧಸಾತತ್ಯಾತ್ ಪ್ರವೃತ್ತಿಸಾತತ್ಯಪ್ರಸಙ್ಗಃ । ನಿಯಾಮಕಾನ್ತರಾಭಾವಾತ್ । ತದೇವಂ ನಿಯತಸ್ಯ ಕಸ್ಯಚಿತ್ ಕರ್ಮನಿಮಿತ್ತಸ್ಯ ಅಭಾವಾತ್ ನಾಣುಷು ಆದ್ಯಂ ಕರ್ಮ ಸ್ಯಾತ್ । ಕರ್ಮಾಭಾವಾತ್ ತನ್ನಿಬನ್ಧನಃ ಸಂಯೋಗೋ ನ ಸ್ಯಾತ್ । ಸಂಯೋಗಾಭಾವಾಚ್ಚ ತನ್ನಿಬನ್ಧನಃ ದ್ವ್ಯಣುಕಾದಿ ಕಾರ್ಯಜಾತಂ ನ ಸ್ಯಾತ್ । ಸಂಯೋಗಶ್ಚ ಅಣೋಃ ಅಣ್ವನ್ತರೇಣ ಸರ್ವಾತ್ಮನಾ ವಾ ಸ್ಯಾತ್ ಏಕದೇಶೇನ ವಾ। ಸರ್ವಾತ್ಮನಾ ಚೇತ್ ಉಪಚಯಾನುಪಪತ್ತೇಃ ಅಣುಮಾತ್ರತ್ವಪ್ರಸಙ್ಗಃ । ದೃಷ್ಟವಿಪರ್ಯಯಪ್ರಸಙ್ಗಶ್ಚ । ಪ್ರದೇಶವತೋಃ ದ್ರವ್ಯಸ್ಯ ಪ್ರದೇಶವತಾ ದ್ರವ್ಯಾನ್ತರೇಣ ಸಂಯೋಗಸ್ಯ ದೃಷ್ಟತ್ವಾತ್ । ಏಕದೇಶೇನ ಚೇತ್ ಸಾವಯವತ್ವಪ್ರಸಙ್ಗಃ। ಪರಮಾಣೂನಾಂ ಕಲ್ಪಿತಾಃ ಪ್ರದೇಶಾಃ ಸ್ಯುಃ ಇತಿ ಚೇತ್। ಕಲ್ಪಿತಾನಾಮ್ ಅವಸ್ತುತ್ವಾತ್ ಅವಸ್ತ್ವೇವ ಸಂಯೋಗಃ ಇತಿ ವಸ್ತುನಃ ಕಾರ್ಯಸ್ಯ ಅಸಮವಾಯಿಕಾರಣಂ ನ ಸ್ಯಾತ್ । ಅಸತಿ ಚ ಅಸಮವಾಯಿಕಾರಣೇ ದ್ವ್ಯಣುಕಾದಿಕಾರ್ಯದ್ರವ್ಯಂ ನೋತ್ಪದ್ಯೇತ ॥

(ಭಾಷ್ಯಾರ್ಥ)

ಅದಕ್ಕೆ ಈ (ದೋಷವನ್ನು) ಹೇಳುತ್ತೇವೆ. ವಿಭಾಗದ ಅವಸ್ಥೆಯಲ್ಲಿರುವ ಅಣುಗಳಿಗೆ ಸಂಯೋಗವು ಕರ್ಮಾಪೇಕ್ಷೆಯಿಂದ ಆಗುವದೆಂದು ಇಟ್ಟುಕೊಳ್ಳಬೇಕು. ಏಕೆಂದರೆ ನೂಲು ಮುಂತಾದವುಗಳಿಗೆ ಕರ್ಮದಿಂದಲೇ ಸಂಯೋಗವಾಗುವದು ಕಂಡುಬರುತ್ತದೆ. ಕರ್ಮವು ಕಾರ್ಯವಾಗಿರುವದರಿಂದ ಯಾವದಾದರೊಂದು ನಿಮಿತ್ತವನ್ನು ಒಪ್ಪಬೇಕು. ಒಪ್ಪದಿದ್ದರೆ

1. 'ಪ್ರತ್ಯಾಖ್ಯಾತವ್ಯಮ್' ಎಂಬುದು ಹೀಗಿರಬೇಕೆಂದು ತೋರುತ್ತದೆ.

ನಿಮಿತ್ತವೇ ಇಲ್ಲದೆ ಅಣುಗಳಲ್ಲಿ ಆದ್ಯಕರ್ಮವು ಆಗಲಾರದು. (ನಿಮಿತ್ತವನ್ನು) ಒಪ್ಪಿದರೂ[1] ಪ್ರಯತ್ನವೋ ಅಭಿಘಾತವೇ ಮುಂತಾದದ್ದೋ[2] (ಲೋಕದಲ್ಲಿ) ಕಂಡಿರುವಂತೆ ಯಾವದಾದರೊಂದು ಕರ್ಮಕ್ಕೆ ನಿಮಿತ್ತವೆಂದು ಒಪ್ಪಬೇಕಷ್ಟೆ. (ಆದರೆ) ಅದು ಆಗುವಂತಿಲ್ಲವಾದ್ದರಿಂದ ಅಣುಗಳಲ್ಲಿ ಮೊದಲನೆಯ ಕರ್ಮವು ಉಂಟಾಗುವಂತೆಯೇ ಇಲ್ಲ. ಹೇಗೆಂದರೆ ಆ ಅವಸ್ಥೆಯಲ್ಲಿ ಆತ್ಮಗುಣವಾದ ಪ್ರಯತ್ನವು ಸಂಭವಿಸುವದಿಲ್ಲ; ಏಕೆಂದರೆ (ಆಗ ಅವನಿಗೆ) ಶರೀರವಿರುವದಿಲ್ಲ. ಶರೀರದಲ್ಲಿರುವ ಮನಸ್ಸಿನಲ್ಲಿ ಆತ್ಮನಿಗೆ ಸಂಯೋಗವಾದರಲ್ಲವೆ, ಪ್ರಯತ್ನವೆಂಬ ಆತ್ಮಗುಣವು ಉಂಟಾಗುವದು?[3] ಇದರಿಂದ ಅಭಿಘಾತವೇ ಮುಂತಾದ ದೃಷ್ಟನಿಮಿತ್ತವನ್ನೂ ತಿರಸ್ಕರಿಸಿದಂತಾಯಿತು.[4] ಸೃಷ್ಟಿಯಾದ ಬಳಿಕಲ್ಲವೆ, ಅದೆಲ್ಲವೂ (ಉಂಟಾಗುವದು)? (ಆದ್ದರಿಂದ ಅದು ಯಾವದೂ) ಆದ್ಯಕರ್ಮಕ್ಕೆ ನಿಮಿತ್ತವಾಗಲಾರದು.

ಹಾಗಿಲ್ಲದೆ ಅದೃಷ್ಟವೇ (ಈ) ಮೊದಲನೆಯ ಕರ್ಮಕ್ಕೆ ನಿಮಿತ್ತವು ಎನ್ನುವದಾದರೆ ಅದು ಆತ್ಮಸಮವಾಯಿಯೋ ಅಣುಸಮವಾಯಿಯೋ ಆಗಿರಬೇಕಷ್ಟೆ.[5] ಎರಡು ಪ್ರಕಾರದಿಂದಲೂ ಅದೃಷ್ಟನಿಮಿತ್ತದಿಂದ ಅಣುಗಳಲ್ಲಿ ಕರ್ಮವು (ಆಗುವದೆಂಬುದು) ಹೊಂದುವದಾಗಿಲ್ಲ.[6] ಏಕೆಂದರೆ ಅದೃಷ್ಟವು ಅಚೇತನವಾಗಿರುತ್ತದೆ. ಅಚೇತನವಾದದ್ದು ಚೇತನದಿಂದ ಅಧಿಷ್ಠಿತವಾಗದೆ ಸ್ವತಂತ್ರವಾಗಿ (ತಾನೂ) ಪ್ರವರ್ತಿಸುವದೂ ಇಲ್ಲ, (ಮತ್ತೊಂದನ್ನು) ಪ್ರವರ್ತಿಸುವಂತೆ ಮಾಡುವದೂ ಇಲ್ಲ ಎಂದು ಸಾಂಖ್ಯಪ್ರಕ್ರಿಯೆಯ (ವಿಮರ್ಶೆ

---

1. ಒಪ್ಪಿದರೂ ಕರ್ಮವಾಗುವದಿಲ್ಲ, ಒಪ್ಪದಿದ್ದರೂ ಕರ್ಮವಾಗುವದಿಲ್ಲ- ಎಂಬುದನ್ನು ಸೂತ್ರದಲ್ಲಿ 'ಉಭಯಥಾಪಿ ನ ಕರ್ಮ' ಎಂದಿದೆ ಎಂದು ಭಾವ.

2. ಅಭಿಘಾತ (ಮತ್ತೊಂದು ವಸ್ತುವಿನ ಹೊಡೆತ), ನೋದನ (ಪ್ರೇರಿಸುವದು), ಗುರುತ್ವ (ಭಾರ), ವೇಗ, ಸಂಸ್ಕಾರ, ಸ್ಥಿತಿಸ್ಥಾಪಕತ್ವ (ಮೊದಲಿನ ಸ್ಥಿತಿಗೆ ತರುವ ಗುಣ)- ಇವೇ ಕರ್ಮಕ್ಕೆ ಹೇತುಗಳು.

3. ಆತ್ಮನ ಗುಣಗಳು ಆತ್ಮಮನಃಸಂಯೋಗದಿಂದ ಉಂಟಾಗುವವು ಎಂದು ವೈಶೇಷಿಕರ ಹೇಳಿಕೆ.

4. ಏಕೆಂದರೆ ಅಭಿಘಾತಾದಿಗಳೂ ಆಗ ಇರುವದಕ್ಕಾಗಲಿ ಕರ್ಮನಿಮಿತ್ತವಾಗುವದಕ್ಕಾಗಲಿ ಕಾರಣವಿಲ್ಲ.

5. ಅದೃಷ್ಟವು ಆತ್ಮಸಮವಾಯಿ ಎಂದೇ ವೈಶೇಷಿಕರು ಹೇಳುತ್ತಾರೆ. ಆದರೂ ಸೃಷ್ಟಿಗೆ ಪೂರ್ವದಲ್ಲಿ ಆತ್ಮನೂ ಅಣುಗಳಂತೆ ಅಚೇತನವಾಗಿಯೇ ಇರುವದರಿಂದ ಅಣುಗಳಲ್ಲಿಯೂ ಇರಬಹುದು; ಇರಬಾರದೆಂಬುದಕ್ಕೆ ಯಾವ ನ್ಯಾಯವೂ ಇಲ್ಲ ಎಂದು ಭಾವ.

6. ಸೂತ್ರಕ್ಕೆ ಇನ್ನೊಂದು ಅರ್ಥವಿದು.

ಯಲ್ಲಿ) ಹೇಳಿಯಾಗಿದೆ. ಆತ್ಮನಲ್ಲಿ ಚೈತನ್ಯವು ಇನ್ನೂ ಹುಟ್ಟಿರುವದಿಲ್ಲವಾದ್ದರಿಂದ[1] ಆ ಅವಸ್ಥೆಯಲ್ಲಿ (ಅವನು) ಅಚೇತನನಾಗಿರುತ್ತಾನೆ. ಆತ್ಮಸಮವಾಯಿಯಾಗಿರುವವರಿಂದಲೂ ಅದೃಷ್ಟವು ಅಣುಗಳಲ್ಲಿ (ಆಗುವ) ಕರ್ಮಕ್ಕೆ ನಿಮಿತ್ತನಾಗಲಾರದು. ಏಕೆಂದರೆ (ಅದಕ್ಕೂ ಅಣುಗಳಿಗೂ) ಸಂಬಂಧವಿರುವದಿಲ್ಲ. ಅದೃಷ್ಟವುಳ್ಳ ಪುರುಷನಿಗೂ ಅಣುಗಳಿಗೂ ಸಂಬಂಧವಿದೆಯಲ್ಲ![2] ಎಂದರೆ ಸಂಬಂಧವು ಸತತವಾಗಿರುವದರಿಂದ ಪ್ರವೃತ್ತಿಯೂ ಸತತವಾಗಿರಬೇಕಾಗುವದು.[3] ಏಕೆಂದರೆ (ಪ್ರವೃತ್ತಿಗೆ) ಮತ್ತೊಂದು ನಿಯಾಮಕವು ಇರುವದಿಲ್ಲ. ಅಂತೂ ಹೀಗೆ ಕರ್ಮಕ್ಕೆ ನಿಮಿತ್ತವು (ಯಾವದೂ) ನಿಯತವಾಗಿ ಇಲ್ಲದಿರುವದರಿಂದ ಅಣುಗಳಲ್ಲಿ ಮೊದಲನೆಯ ಕರ್ಮವು ಉಂಟಾಗಲಾರದು; ಕರ್ಮವಿಲ್ಲದ್ದರಿಂದ ಅದರ ನಿಮಿತ್ತದಿಂದ ಆಗಬೇಕಾದ ಸಂಯೋಗವು ಉಂಟಾಗಲಾರದು. ಮತ್ತು ಸಂಯೋಗವಿಲ್ಲದ್ದರಿಂದ ದ್ವ್ಯಣುಕವೇ ಮುಂತಾದ ಕಾರ್ಯಜಾತವೂ ಉಂಟಾಗಲಾರದು.

ಇದಲ್ಲದೆ (ಒಂದು) ಅಣುವಿಗೆ ಮತ್ತೊಂದು ಅಣುವಿನೊಡನೆ (ಆಗುವ) ಸಂಯೋಗವು ಪೂರ್ಣವಾಗಿ ಆಗುವದೊ, ಏಕದೇಶದಲ್ಲಿ (ಮಾತ್ರ) ಆಗುವದೊ? ಪೂರ್ಣವಾಗಿ (ಆಗುತ್ತದೆ) ಎನ್ನುವದಾದರೆ ದಪ್ಪನಾಗುವದಕ್ಕೆ ಕಾರಣವಿಲ್ಲದ್ದರಿಂದ (ಸಂಯೋಗವಾದಮೇಲೂ) ಅಣುಮಾತ್ರವಾಗಿಯೇ ಇರಬೇಕಾಗುವದು. (ಇದು) ಕಂಡಿರುವದಕ್ಕೆ ವಿಪರೀತವೂ ಆಗುವದು. ಏಕೆಂದರೆ ಪ್ರದೇಶವುಳ್ಳ ದ್ರವ್ಯಕ್ಕೆ ಪ್ರದೇಶವುಳ್ಳ ಮತ್ತೊಂದು ದ್ರವ್ಯದೊಡನೆ ಸಂಯೋಗವಾಗುವದು ಕಂಡಿರುತ್ತದೆ.[4] ಏಕದೇಶದಲ್ಲಿ (ಸಂಯೋಗವಾಗುತ್ತದೆ) ಎಂದರೆ (ಅಣುಗಳು) ಸಾವಯವವಾಗಿರಬೇಕಾಗುವದು.

(ಆಕ್ಷೇಪ):– ಪರಮಾಣುಗಳಿಗೆ ಕಲ್ಪಿತವಾದ ಪ್ರದೇಶಗಳು ಇರಬಹುದಲ್ಲ!

(ಪರಿಹಾರ):– ಹಾಗಲ್ಲ. ಏಕೆಂದರೆ ಕಲ್ಪಿತವಾದವುಗಳು ವಸ್ತುವಲ್ಲವಾದ್ದರಿಂದ ಸಂಯೋಗವೂ ವಸ್ತುವಲ್ಲವೆಂದೇ ಆಗುವದರಿಂದ ವಸ್ತುವಾದ ಕಾರ್ಯಕ್ಕೆ

---

1. ಚೈತನ್ಯವು ಗುಣವಾದ್ದರಿಂದ ಆತ್ಮನಲ್ಲಿ ಮೊದಲೇ ಇರುವದಕ್ಕೆ ಕಾರಣವಿಲ್ಲ.

2. ಅಣುವಿಗೂ ಆತ್ಮನಿಗೂ ಸಂಯೋಗವಾಗಿ ಆತ್ಮನಲ್ಲಿ ಸಮವಾಯಸಂಬಂಧದಿಂದ ಚೈತನ್ಯವಿರಬಹುದಲ್ಲ !– ಎಂದು ಅಭಿಪ್ರಾಯ.

3. ಪ್ರಲಯವೇ ಆಗಬಾರದು ಎಂದು ಭಾವ.

4. ಆದರೆ ಪರಮಾಣುಗಳಿಗೆ ಪ್ರದೇಶವಿಲ್ಲವಾದ್ದರಿಂದ ಅವುಗಳಿಗೆ ಸಂಯೋಗವಾಗುವದೆಂಬುದು ದೃಷ್ಟವಿರುದ್ಧವು.

(ಅದು) ಅಸಮವಾಯಿಕಾರಣವಾಗಲಾರದು.[1] ಅಸಮವಾಯಿಕಾರಣವು ಇಲ್ಲವಾದರೆ ದ್ವ್ಯಣುಕಾದಿಕಾರ್ಯದ್ರವ್ಯವೇ ಉಂಟಾಗಲಾರದು.[2]

## ಪ್ರಲಯಕಾಲದಲ್ಲಿಯೂ ಅಣುಗಳಲ್ಲಿ ಕರ್ಮವಾಗಲಾರದು

( ಭಾಷ್ಯ )

೨೮. ಯಥಾ ಚ ಆದಿಸರ್ಗೇ ನಿಮಿತ್ತಾಭಾವಾತ್ ಸಂಯೋಗೋತ್ಪತ್ತ್ಯರ್ಥಂ ಕರ್ಮ ನಾಣೂನಾಂ ಸಂಭವತಿ, ಏವಂ ಮಹಾಪ್ರಲಯೇಽಪಿ ವಿಭಾಗೋತ್ಪತ್ತ್ಯರ್ಥಂ ಕರ್ಮ ನೈವ ಅಣೂನಾಂ ಸಂಭವೇತ್ । ನ ಹಿ ತತ್ರಾಪಿ ಕಿಂಚಿತ್ ನಿಯತಂ ತನ್ನಿಮಿತ್ತಂ ದೃಷ್ಟಮ್ ಅಸ್ತಿ । ಅದೃಷ್ಟಮಪಿ ಭೋಗಪ್ರಸಿದ್ಧ್ಯರ್ಥಮ್, ನ ಪ್ರಲಯಪ್ರಸಿದ್ಧ್ಯರ್ಥಮ್ ಇತ್ಯತೋ ನಿಮಿತ್ತಾಭಾವಾತ್ ನ ಸ್ಯಾತ್ ಅಣೂನಾಂ ಸಂಯೋಗೋತ್ಪತ್ತ್ಯರ್ಥಂ ವಿಭಾಗೋತ್ಪತ್ತ್ಯರ್ಥಂ ವಾ ಕರ್ಮ । ಅತಶ್ಚ ಸಂಯೋಗವಿಭಾಗಾಭಾವಾತ್ ತದಾಯತ್ತಯೋಃ ಸರ್ಗಪ್ರಲಯಯೋಃ ಅಭಾವಃ ಪ್ರಸಜ್ಯೇತ । ತಸ್ಮಾತ್ ಅನುಪಪನ್ನಃ ಅಯಂ ಪರಮಾಣುಕಾರಣವಾದಃ ॥

(ಭಾಷ್ಯಾರ್ಥ)

ಹೇಗೆ ಆದಿಸರ್ಗದಲ್ಲಿ ನಿಮಿತ್ತವಿಲ್ಲದ್ದರಿಂದ ಸಂಯೋಗವುಂಟಾಗುವದಕ್ಕೆ ಅಣುಗಳಲ್ಲಿ ಕರ್ಮವು ಉಂಟಾಗುವಂತಿಲ್ಲವೋ, ಹಾಗೆ **ಮಹಾಪ್ರಲಯ**ದಲ್ಲಿಯೂ ವಿಭಾಗವುಂಟಾಗುವದಕ್ಕೆ[3] ಅಣುಗಳಲ್ಲಿ ಕರ್ಮವು ಆಗುವಂತಿಲ್ಲ. ಅಲ್ಲಿಯೂ ಗೊತ್ತಾದ ಯಾವದೊಂದು ದೃಷ್ಟನಿಮಿತ್ತವೂ ಇರುವದಿಲ್ಲ. ಅದೃಷ್ಟವು ಭೋಗವುಂಟಾಗುವದಕ್ಕೇ ಹೊರತು ಪ್ರಲಯವಾಗುವದಕ್ಕಲ್ಲ. ಆದ್ದರಿಂದ ನಿಮಿತ್ತವಿಲ್ಲದ್ದರಿಂದ ಅಣುಗಳ ಸಂಯೋಗವುಂಟಾಗುವದ

1. ಅವಸ್ತುವಾದದ್ದು ವಸ್ತುವಿಗೆ ಕಾರಣವಾಗುವದೆಂದಾದರೆ ಕನಸಿನ ಹಸುವಿನ ಹಾಲನ್ನು ಎಚ್ಚರದಲ್ಲಿರುವ ಮಗುವಿಗೂ ಕುಡಿಸಬಹುದೆಂದಾಗುವದು ಎಂದು ಭಾವ.

2. ಭಾವಕಾರ್ಯಕ್ಕೆ ಸಮವಾಯಿ, ಅಸಮವಾಯಿ, ನಿಮಿತ್ತ– ಎಂದು ಮೂರು ಕಾರಣಗಳಿರುವವು. ಬಟ್ಟೆಗೆ ನೂಲುಗಳು ಸಮವಾಯಿಕಾರಣ; ನೂಲುಗಳ ಸಂಯೋಗವು ಅಸಮವಾಯಿಕಾರಣ; ಮಗ್ಗ, ಲಾಳಿ– ಮುಂತಾದವು ನಿಮಿತ್ತಕಾರಣ. ಇದು ವೈಶೇಷಿಕರ ಪ್ರಕ್ರಿಯೆ. ಸಾಂಖ್ಯರು ಅಸಮವಾಯಿಕಾರಣವನ್ನು ಬೇರೆ ಎಂದು ಒಪ್ಪಿಲ್ಲ; ಸಮವಾಯಿಕಾರಣವನ್ನು ಉಪಾದಾನಕಾರಣವೆಂದೂ ಮಿಕ್ಕದ್ದೆಲ್ಲ ನಿಮಿತ್ತಕಾರಣವೆಂದೂ ಅವರು ವ್ಯವಹರಿಸುತ್ತಾರೆ.

3. ಸಂಯೋಗದಂತೆ ವಿಭಾಗವೂ ಗುಣವು; ಅದೂ ಒಂದು ಕಾರ್ಯವಾದ್ದರಿಂದ ಅದಕ್ಕೂ ಕಾರಣವು ಬೇಕು ಎಂದರ್ಥ.

ಕ್ಕಾಗಲಿ ವಿಭಾಗವುಂಟಾಗುವದಕ್ಕಾಗಲಿ ಕರ್ಮವು ಆಗಲಾರದು. ಆದ್ದರಿಂದ ಸಂಯೋಗವಿಭಾಗಗಳಿಲ್ಲದ್ದರಿಂದ ಅವುಗಳಿಗೆ ಅಧೀನವಾಗಿರುವ ಸರ್ಗಪ್ರಲಯಗಳ ಅಭಾವವು[2] ಪ್ರಸಕ್ತವಾದೀತು. ಆದ್ದರಿಂದ[3] ಈ ಪರಮಾಣುಕಾರಣವಾದವು ಹೊಂದುವದಿಲ್ಲ.

**ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ॥ ೧೩ ॥**

೧೩. ಸಮವಾಯವನ್ನು ಒಪ್ಪಿರುವದರಿಂದಲೂ (ಹೀಗೆ) ; ಏಕೆಂದರೆ ಸಾಮ್ಯದಿಂದ ಅನವಸ್ಥೆಯುಂಟಾಗುವದು.

## ಸಮವಾಯಾಂಗೀಕಾರವೂ ಈ ವಾದದಲ್ಲಿ ದೋಷ

( ಭಾಷ್ಯ )

೨೯. ಸಮವಾಯಾಭ್ಯುಪಗಮಾಚ್ಚ 'ತದಭಾವಃ' ಇತಿ ಪ್ರಕೃತೇನ ಅಣುವಾದನಿರಾಕರಣೇನ ಸಂಬಧ್ಯತೇ। ದ್ವಾಭ್ಯಾಂ ಚ ಅಣುಭ್ಯಾಂ ದ್ವ್ಯಣುಕಂ ಉತ್ಪದ್ಯಮಾನಮ್ ಅತ್ಯನ್ತಭಿನ್ನಮ್ ಅಣುಭ್ಯಾಮ್ ಅಣ್ವೋಃ ಸಮವೈತಿ ಇತಿ ಅಭುಪಗಮ್ಯತೇ ಭವತಾ। ನ ಚ ಏವಮ್ ಅಭ್ಯುಪಗಚ್ಛತಾ ಶಕ್ಯತೇ ಅಣುಕಾರಣತಾ ಸಮರ್ಥಯಿತುಮ್ । ಕುತಃ? 'ಸಾಮ್ಯಾದನವಸ್ಥಿತೇಃ'। ಯಥೈವ ಹಿ ಅಣುಭ್ಯಾಮ್ ಅತ್ಯನ್ತಭಿನ್ನಂ ಸದ್ ದ್ವ್ಯಣುಕಂ ಸಮವಾಯಲಕ್ಷಣೇನ ಸಂಬನ್ಧೇನ ತಾಭ್ಯಾಂ ಸಂಬಧ್ಯತೇ ಏವಂ ಸಮವಾಯೋಽಪಿ ಸಮವಾಯಿಭ್ಯೋಽತ್ಯನ್ತಭಿನ್ನಃ ಸನ್ ಸಮವಾಯಲಕ್ಷಣೇನ ಅನ್ಯೇನೈವ ಸಂಬನ್ಧೇನ ಸಮವಾಯಿಭಿಃ ಸಂಬಧ್ಯೇತ । ಅತ್ಯನ್ತಭೇದಸಾಮ್ಯಾತ್ । ತತಶ್ಚ ತಸ್ಯ ತಸ್ಯ ಅನ್ಯೋನ್ಯಃ ಸಮ್ಬನ್ಧಃ ಕಲ್ಪಯಿತವ್ಯಃ ಇತಿ ಅನವಸ್ಥೈವ ಪ್ರಸಜ್ಯೇತ । ನನು ಇಹಪ್ರತ್ಯಯಗ್ರಾಹ್ಯಃ ಸಮವಾಯೋ ನಿತ್ಯಸಂಬದ್ಧ ಏವ ಸಮವಾಯಿಭಿಃ ಗೃಹ್ಯತೇ ನಾಸಂಬದ್ಧಃ ಸಂಬನ್ಧಾನ್ತರಾಪೇಕ್ಷೋ ವಾ। ತತಶ್ಚ ನ ತಸ್ಯ ಅನ್ಯಃ

---

1. ಉಭಯಥಾಪಿ ಎಂಬ ಸೂತ್ರಪದಕ್ಕೆ ಇದು ಇನ್ನೊಂದು ವ್ಯಾಖ್ಯಾನ.

2. ತದಭಾವಃ ಎಂಬ ಸೌತ್ರಪದಕ್ಕೆ ಇದು ಇನ್ನೊಂದು ವ್ಯಾಖ್ಯಾನ.

3. ಸೃಷ್ಟಿಪ್ರಲಯಗಳು ಹೊಂದುವದಿಲ್ಲವಾದ್ದರಿಂದ ಎಂದರ್ಥ, ವೈಶೇಷಿಕರು ನಿಜವಾದ ಸೃಷ್ಟಿಪ್ರಲಯಗಳನ್ನು ಒಪ್ಪುತ್ತಾರಾದರೂ ಅವರ ಪ್ರಕ್ರಿಯೆಯಿಂದ ಅವು ಹೊಂದುವದಿಲ್ಲ ಎಂದು ಅಭಿಪ್ರಾಯ. ಸೃಷ್ಟಿಪ್ರಲಯಗಳು ಹೊಂದಲೇಬೇಕೆಂಬುದರಲ್ಲಿ ನಿರ್ಬಂಧವಿಲ್ಲ; ಸೃಷ್ಟಿಯು ವಾಯಿಕವೆಂಬ ಪಕ್ಷವನ್ನು ಬಿಟ್ಟರೆ ಯಾವ ಕಾರಣವಾದವೂ ಹೊಂದುವದಿಲ್ಲ ಎಂಬುದರಲ್ಲಿ ಪರಮತಾತ್ಪರ್ಯವಿದೆ.

ಸಂಬನ್ಧಃ ಕಲ್ಪಯಿತವ್ಯಃ, ಯೇನ ಅನವಸ್ಥಾ ಪ್ರಸಜ್ಯೇತ ಇತಿ। ನೇತ್ಯುಚ್ಯತೇ। ಸಂಯೋಗೋಽಪಿ ಏವಂ ಸತಿ ಸಂಯೋಗಿಭಿಃ ನಿತ್ಯಸಂಬದ್ಧ ಏವ ಇತಿ ಸಮವಾಯವತ್ ನಾನ್ಯಂ ಸಂಬನ್ಧಮ್ ಅಪೇಕ್ಷೇತ। ಅಥ ಅರ್ಥಾನ್ತರತ್ವಾತ್ ಸಂಯೋಗಃ ಸಂಬನ್ಧಾನ್ತರಮ್ ಅಪೇಕ್ಷೇತ, ಸಮವಾಯೋಽಪಿ ತರ್ಹಿ ಅರ್ಥಾನ್ತರತ್ವಾತ್ ಸಂಬನ್ಧಾನ್ತರಮ್ ಅಪೇಕ್ಷೇತ। ನ ಚ ಗುಣತ್ವಾತ್ ಸಂಯೋಗಃ ಸಂಬನ್ಧಾನ್ತರಮ್ ಅಪೇಕ್ಷತೇ ನ ಸಮವಾಯಃ, ಅಗುಣತ್ವಾತ್ ಇತಿ ಯುಜ್ಯತೇ ವಕ್ತುಮ್। ಅಪೇಕ್ಷಾಕಾರಣಸ್ಯ ತುಲ್ಯತ್ವಾತ್। ಗುಣಪರಿಭಾಷಾಯಾಶ್ಚ ಅತನ್ತ್ರತ್ವಾತ್। ತಸ್ಮಾತ್ ಅರ್ಥಾನ್ತರಂ ಸಮವಾಯಮ್ ಅಭ್ಯುಪಗಚ್ಛತಃ ಪ್ರಸಜ್ಯೇತೈವ ಅನವಸ್ಥಾ। ಪ್ರಸಜ್ಯಮಾನಾಯಾಂ ಚ ಅನವಸ್ಥಾಯಾಮ್ ಏಕಾಸಿದ್ಧೌ ಸರ್ವಾಸಿದ್ಧೇಃ ದ್ವಾಭ್ಯಾಮ್ ಅಣುಭ್ಯಾಂ ದ್ವ್ಯಣುಕಂ ನೈವ ಉತ್ಪದ್ಯೇತ। ತಸ್ಮಾದಪಿ ಅನುಪಪನ್ನಃ ಪರಮಾಣುಕಾರಣವಾದಃ ॥

(ಭಾಷ್ಯಾರ್ಥ)

ಸಮವಾಯವನ್ನು ಒಪ್ಪಿರುವದರಿಂದಲೂ 'ಅದರ ಅಭಾವ[1] (ವುಂಟಾಗುತ್ತದೆ)' ಎಂದು ಪ್ರಕೃತವಾಗಿರುವ ಅಣು(ಕಾರಣ)ವಾದ ನಿರಾಕರಣಕ್ಕೆ (ಇದನ್ನು) ಸಂಬಂಧಿಸಿಕೊಳ್ಳಬೇಕು. ಎರಡು ಅಣುಗಳಿಂದ ಉಂಟಾಗುವ ದ್ವ್ಯಣುಕವು ಅಣುಗಳಿಗಿಂತ ತೀರ ಭಿನ್ನವಾಗಿದ್ದುಕೊಂಡು (ಈ) ಅಣುಗಳಲ್ಲಿ ಸಮವೇತವಾಗಿರುತ್ತದೆ ಎಂದು ನೀನು ಅಂಗೀಕರಿಸಿರುತ್ತೀಯೆ. ಆದರೆ ಹೀಗೆ ಅಂಗೀಕರಿಸಿದರೆ ಅಣುಕಾರಣತ್ವವನ್ನು ಸಾಧಿಸುವದಕ್ಕೆ ಆಗುವದಿಲ್ಲ. ಏಕೆ? ಎಂದರೆ 'ಸಾಮ್ಯದಿಂದ ಅನವಸ್ಥಿತಿಯಾಗುವದರಿಂದ'. (ಇದರ ವಿವರ): ಅಣುಗಳಿಗಿಂತ ಅತ್ಯಂತಭಿನ್ನವಾದ ದ್ವ್ಯಣುಕವು ಹೇಗೆ ಸಮವಾಯರೂಪವಾದ ಸಂಬಂಧದಿಂದ ಅವುಗಳೊಡನೆ ಸಂಬದ್ಧವಾಗುತ್ತದೆಯೋ,[2] ಹಾಗೆಯೇ ಸಮವಾಯವುಕೂಡ ಸಮವಾಯಿಗಳಿಗಿಂತ ಅತ್ಯಂತಭಿನ್ನವಾಗಿರುವದರಿಂದ[3] ಸಮವಾಯರೂಪವಾದ ಮತ್ತೊಂದು ಸಂಬಂಧದಿಂದಲೇ ಸಮವಾಯಿಗಳೊಡನೆ ಸಂಬದ್ಧವಾಗಬೇಕು.[4] ಏಕೆಂದರೆ ಅತ್ಯಂತವಾಗಿ ಭಿನ್ನವಾಗಿರುವದೆಂಬುದು

1. ಅಣುಕಾರಣವಾದದ ಅಭಾವ.

2. ದ್ವ್ಯಣುಕವು ಹುಟ್ಟಿದಬಳಿಕ ಅಣುಗಳೊಡನೆ ಸಂಬದ್ಧವಾಗುತ್ತದೆ.

3. ಸಮವಾಯಿಗಳಾದ ಅಣುಗಳು ಮತ್ತು ದ್ವ್ಯಣುಕಗಳಿಗಿಂತ ಸಮವಾಯವು ಅತ್ಯಂತಭಿನ್ನವಾಗಿರುತ್ತದೆ; ಅದು ಅಣುವಲ್ಲ, ದ್ವ್ಯಣುಕವೂ ಅಲ್ಲ.

4. ಅಣುಗಳಿಗಿಂತ ಅತ್ಯಂತಭಿನ್ನವಾಗಿರುವದರಿಂದ ದ್ವ್ಯಣುಕಕ್ಕೆ ಸಮವಾಯಸಂಬಂಧವು ಬೇಕಾಗಿರುವದಾದರೆ ಅಣು, ದ್ವ್ಯಣುಕ— ಎರಡಕ್ಕೂ ಭಿನ್ನವಾಗಿರುವದರಿಂದ ಸಮವಾಯಕ್ಕೂ ಮತ್ತೊಂದು ಸಮವಾಯವು ಬೇಕು ಎಂದಾಗುತ್ತದೆ. ಸೂತ್ರದಲ್ಲಿರುವ 'ಸಾಮ್ಯಾತ್' ಎಂಬ ಮಾತಿಗೆ ಸಮವಾಯಕ್ಕೂ ದ್ವ್ಯಣುಕರೂಪಕಾರ್ಯಕ್ಕೂ ಸಾಮ್ಯ ಎಂದರೆ ಹೋಲಿಕೆ ಇರುವದರಿಂದ ಎಂಬ ಅರ್ಥವನ್ನು ಹೇಳಿದಂತೆ ಆಯಿತು.

ಇಲ್ಲಿಯೂ ಸಮಾನವಾಗಿರುತ್ತದೆ. ಆದ್ದರಿಂದ ಆಯಾ (ಸಮವಾಯಕ್ಕೂ) ಮತ್ತೊಂದು ಸಂಬಂಧವನ್ನು ಕಲ್ಪಿಸಬೇಕಾಗುವದಾದ್ದರಿಂದ ಅನವಸ್ಥೆಯೇ ಪ್ರಸಕ್ತವಾಗುತ್ತದೆ.[1]

(ಆಕ್ಷೇಪ):— ಇಹಪ್ರತ್ಯಯದಿಂದ ಗ್ರಾಹ್ಯವಾಗಿರುವ ಸಮವಾಯವು[2] ಸಮವಾಯಿಗಳೊಡನೆ ನಿತ್ಯಸಂಬದ್ಧವೇ ಆಗಿ ಕಾಣಬರುತ್ತದೆಯೇ ಹೊರತು (ಯಾವ) ಸಂಬಂಧವೂ ಇಲ್ಲದೆ, ಅಥವಾ ಮತ್ತೊಂದು ಸಂಬಂಧವನ್ನು ಬಯಸಿ (ಕಾಣಬರುವದಿಲ್ಲ)ವಲ್ಲ![3] ಆದ್ದರಿಂದ ಅದಕ್ಕೆ ಮತ್ತೊಂದು ಸಂಬಂಧವನ್ನು ಕಲ್ಪಿಸಬೇಕಾದದ್ದಿಲ್ಲವಲ್ಲ! (ಹಾಗೆ ಕಲ್ಪಿಸಬೇಕಾಗಿದ್ದರಲ್ಲವೆ), ಅನವಸ್ಥೆಯು ಪ್ರಸಕ್ತವಾದೀತು ?

(ಪರಿಹಾರ):— ಇಲ್ಲ ಎನ್ನುತ್ತೇವೆ. ಹೀಗಾದರೆ ಸಂಯೋಗವೂ ಸಂಯೋಗಿಗಳೊಡನೆ ನಿತ್ಯಸಂಬದ್ಧವೇ ಆಗಿರುವದರಿಂದ ಸಮವಾಯದಂತೆಯೇ ಮತ್ತೊಂದು ಸಂಬಂಧವನ್ನು ಬಯಸಬಾರದಾಗುವದು.[4] ಇನ್ನು ಸಂಯೋಗವು ಮತ್ತೊಂದು ಪದಾರ್ಥವಾಗಿರುವದರಿಂದ ಮತ್ತೊಂದು ಸಂಬಂಧವನ್ನು ಬಯಸುತ್ತದೆ (ಎನ್ನುವದಾದರೆ), ಆಗ ಸಮವಾಯವೂ ಬೇರೊಂದು ಪದಾರ್ಥವಾಗಿರುವದರಿಂದ ಮತ್ತೊಂದು ಸಂಬಂಧವನ್ನು ಬಯಸುತ್ತದೆ.[5] ಸಂಯೋಗವು

---

1. 'ಅನವಸ್ಥಿತೇಃ' ಎಂಬ ಪದಕ್ಕೆ ಅರ್ಥವಿದು.

2. 'ಇಲ್ಲಿ (ನೂಲುಗಳಲ್ಲಿ) ಬಟ್ಟೆ' ಎಂದು ಬಟ್ಟೆಯು ನೂಲುಗಳಲ್ಲಿ ಸಮವಾಯ ಸಂಬಂಧದಿಂದ ಕೂಡಿರುತ್ತದೆ. ಇಹಪ್ರತ್ಯಯವು ಆ ಸಮವಾಯವನ್ನು ತಿಳಿಸುತ್ತದೆ. ಸಮವಾಯಿಗಳನ್ನು ಬಿಟ್ಟರೆ ಆ ಸಮವಾಯವು ತೋರುವದೇ ಇಲ್ಲ.

3. ನೂಲುಬಟ್ಟೆಗಳಿಗೆ ಸಂಬಂಧಪಡದೆ, ಅಥವಾ ಗಂಡ, ಹೆಂಡತಿ ಮುಂತಾದವುಗಳಂತೆ ಮತ್ತೊಂದರ ಸಂಬಂಧವನ್ನು ಬಯಸಿ ಸಮವಾಯವು ಸಿದ್ಧವಾಗುವದಿಲ್ಲ.

4. ಹಸ್ತಪುಸ್ತಕಗಳಿಲ್ಲದೆ ಸಂಯೋಗವು ತೋರುವದಿಲ್ಲ ; ಆದ್ದರಿಂದ ಸಂಯೋಗಿಗಳ ಸಂಬಂಧವುಳ್ಳದ್ದಾಗಿಯೇ ಅದು ತೋರಿಕೊಳ್ಳುತ್ತದೆ. ಆದರೂ ಸಂಯೋಗಗುಣಕ್ಕೂ ಸಂಯೋಗಿದ್ರವ್ಯಕ್ಕೂ ಸಮವಾಯವೆಂಬ ಸಂಬಂಧವು ಬೇಕು ಎನ್ನುತ್ತೀರಿ. ಸಮವಾಯಕ್ಕೆ ಬೇಡವಾದರೆ ಸಂಯೋಗಕ್ಕೂ ಸಂಬಂಧಾಂತರವು ಬೇಡವೆನ್ನಿರಿ; ಇಲ್ಲದಿದ್ದರೆ ಎರಡಕ್ಕೂ ಬೇಕೆನ್ನಿರಿ ಎಂಬರ್ಥ.

5. ಸಂಯೋಗವು ಗುಣರೂಪವಾದ ಪದಾರ್ಥ, ಸಮವಾಯವು ಸಂಬಂಧರೂಪವಾದ ಪದಾರ್ಥ. ಭಾವಪದಾರ್ಥಗಳು ಆರರಲ್ಲಿ ಸಮವಾಯವೂ ಒಂದೆಂದು ವೈಶೇಷಿಕರ ಮತ.

ಗುಣವಾಗಿರುವದರಿಂದ ಸಂಯೋಗಕ್ಕೆ ಸಂಬಂಧಾಂತರದ ಅಪೇಕ್ಷೆಯಿದೆ; ಸಮವಾಯವು ಗುಣವಲ್ಲವಾದ್ದರಿಂದ (ಅದಕ್ಕೆ ಅಪೇಕ್ಷೆ) ಇಲ್ಲ ಎಂದು ಹೇಳುವದಕ್ಕೂ ಇಲ್ಲ. ಏಕೆಂದರೆ ಅಪೇಕ್ಷಾಕಾರಣವು ಸಮಾನವಾಗಿರುತ್ತದೆ[1]; ಗುಣಪರಿಭಾಷೆಯೂ ಅನಿಯತವೂ ಆಗಿರುತ್ತದೆ.[2] ಆದ್ದರಿಂದ ಅರ್ಥಾಂತರವಾದ ಸಮವಾಯವನ್ನು ಒಪ್ಪುವ (ನಿನಗೆ) ಅನವಸ್ಥೆ(ದೋಷವು) ಪ್ರಸಕ್ತವಾಗಿಯೇ ತೀರುತ್ತದೆ. ಮತ್ತು ಅನವಸ್ಥೆಯು ಪ್ರಸಕ್ತವಾಗುವದಾದರೆ **ಒಂದು ಅಸಿದ್ಧವಾದರೆ ಎಲ್ಲವೂ ಅಸಿದ್ಧವಾಗುವದರಿಂದ** ಎರಡು ಅಣುಗಳಿಂದ ದ್ವ್ಯಣುಕವು ಹುಟ್ಟಲೇ ಆರದು.[3] ಆದ್ದರಿಂದಲೂ ಪರಮಾಣುಕಾರಣವಾದವು ಅಯುಕ್ತ.

**ನಿತ್ಯಮೇವ ಚ ಭಾವಾತ್** ॥ ೧೪ ॥

೧೪. ಯಾವಾಗಲೂ ಇರುವದರಿಂದಲೂ (ಈ ವಾದವು ಅಯುಕ್ತ).

## ಅಣುವಿನ ಸ್ವಭಾವವು ಮಾರ್ಪಡಲಾರದು

( ಭಾಷ್ಯ )

೩೦. ಅಪಿ ಚ ಅಣವಃ ಪ್ರವೃತ್ತಿಸ್ವಭಾವಾ ವಾ, ನಿವೃತ್ತಿಸ್ವಭಾವಾ ವಾ ಉಭಯಸ್ವಭಾವಾ ವಾ, ಅನುಭಯಸ್ವಭಾವಾ ವಾ ಅಭ್ಯುಪಗಮ್ಯನ್ತೇ । ಗತ್ಯನ್ತರಾಭಾವಾತ್ । ಚತುರ್ಧಾ ಅಪಿ ನೋಪಪದ್ಯತೇ । ಪ್ರವೃತ್ತಿಸ್ವಭಾವತ್ವೇ ನಿತ್ಯಮೇವ ಪ್ರವೃತ್ತೇರ್ಭಾವಾತ್ ಪ್ರಲಯಾಭಾವಪ್ರಸಙ್ಗಃ । ನಿವೃತ್ತಿಸ್ವಭಾವತ್ವೇಽಪಿ ನಿತ್ಯಮೇವ ನಿವೃತ್ತೇರ್ಭಾವಾತ್ ಸರ್ಗಾಭಾವಪ್ರಸಙ್ಗಃ । ಉಭಯಸ್ವಭಾವತ್ವಂ ಚ ವಿರೋಧಾತ್ ಅಸಮಞ್ಜಸಮ್ । ಅನುಭಯಸ್ವಭಾವತ್ವೇ ತು ನಿಮಿತ್ತವಶಾತ್ ಪ್ರವೃತ್ತಿನಿವೃತ್ತ್ಯೋಃ ಅಭ್ಯುಪಗಮ್ಯಮಾನಯೋಃ

---

1. 'ಸಾಮ್ಯಾತ್' ಎಂಬ ಸೌತ್ರಪದಕ್ಕೆ ಇಷ್ಟೊಂದರ್ಥವಿದೆ.

2. ಸಮವಾಯವು ಗುಣವಲ್ಲ, ಸಂಯೋಗವು ಮಾತ್ರ ಗುಣವು ಎಂಬ ನಿಯಮವನ್ನೇರ್ಪಡಿಸುವದಕ್ಕೆ ಯಾವ ಕಾರಣವೂ ಇಲ್ಲ.

3. ದ್ವ್ಯಣುಕವು ಹುಟ್ಟಿ ಸಮವಾಯಸಂಬಂಧದಿಂದ ಅಣುಗಳಲ್ಲಿರುತ್ತದೆ ಎಂಬುದು ನಿಮ್ಮ ಅಂಗೀಕಾರವು. ಆದರೆ ಸಮವಾಯವು ದ್ವ್ಯಣುಕಕ್ಕೂ ಸಂಯೋಗಕ್ಕೂ ಸಮಾನವಾಗಿರುವದರಿಂದ ಅದಕ್ಕೂ ಮತ್ತೊಂದು ಸಮವಾಯ, ಅದಕ್ಕೆ ಮತ್ತೊಂದು ಸಮವಾಯ- ಹೀಗೆ ಸಮವಾಯಗಳ ಸಾಲನ್ನೇ ಇಟ್ಟುಕೊಳ್ಳಬೇಕಾಗುವದೆಂಬ ಅನವಸ್ಥಾದೋಷವನ್ನು ನಾವು ತೋರಿಸಿಕೊಟ್ಟಿರುತ್ತೇವೆ. ಇದರಿಂದ ಸಮವಾಯವು ಸಿದ್ಧಿಸಲಿಲ್ಲ; ಅದು ಅಸಿದ್ಧವಾದ್ದರಿಂದ ದ್ವ್ಯಣುಕದ ಉತ್ಪತ್ತಿಯೂ ಸಿದ್ಧವಾಗಲಿಲ್ಲ. ಆದರಿಂದ ಪರಮಾಣುಗಳು ಜಗತ್ಕಾರಣವೆಂಬ ವಾದವೇ ಅಸಿದ್ಧವಾಯಿತು ಎಂದು ಅಭಿಪ್ರಾಯ.

ಅದೃಷ್ಟಾದೇಃ ನಿಮಿತ್ತಸ್ಯ ನಿತ್ಯಸಂನಿಧಾನಾತ್ ನಿತ್ಯಪ್ರವೃತ್ತಿಪ್ರಸಙ್ಗಾತ್ । ಅತನ್ತ್ರತ್ವೇಽಪಿ ಅದೃಷ್ಟಾದೇಃ ನಿತ್ಯಾಪ್ರವೃತ್ತಿಪ್ರಸಙ್ಗಾತ್[1] । ತಸ್ಮಾದಪಿ ಅನುಪಪನ್ನಃ ಪರಮಾಣುಕಾರಣವಾದಃ ॥

( ಭಾಷ್ಯಾರ್ಥ )

ಇದಲ್ಲದೆ ಅಣುಗಳು ಪ್ರವೃತ್ತಿಸ್ವಭಾವದವೆಂದಾದರೂ, ನಿವೃತ್ತಿಸ್ವಭಾವದವೆಂದಾದರೂ ಎರಡೂ ಸ್ವಭಾವದವೆಂದಾದರೂ.(ಈ) ಎರಡು ಸ್ವಭಾವವೂ ಇಲ್ಲದವೆಂದಾದರೂ ಒಪ್ಪಬೇಕು.[2] ಏಕೆಂದರೆ (ಈ ನಾಲ್ಕನ್ನೂ ಬಿಟ್ಟರೆ) ಗತ್ಯಂತರವಿಲ್ಲ. (ಆದರೆ ಈ) ನಾಲ್ಕು ಪ್ರಕಾರದಿಂದಲೂ (ಪರಮಾಣುವಾದವು) ಯುಕ್ತವಾಗುವದಿಲ್ಲ. ಏಕೆಂದರೆ (ಅಣುಗಳು) ಪ್ರವೃತ್ತಿಸ್ವಭಾವದವು ಎಂದರೆ ಯಾವಾಗಲೂ ಪ್ರವೃತ್ತಿಯೇ ಇರಬೇಕಾಗುವದರಿಂದ ಪ್ರಲಯವೇ ಇಲ್ಲವೆನ್ನಬೇಕಾಗುವದು. ನಿವೃತ್ತಿಸ್ವಭಾವದವೇ ಆದರೆ ಯಾವಾಗಲೂ ನಿವೃತ್ತಿಯೇ ಇರುವದರಿಂದ ಸೃಷ್ಟಿಯೇ ಇಲ್ಲವಾಗಬೇಕಾಗುವದು. ಎರಡೂ ಸ್ವಭಾವದವೆನ್ನುವದು ವಿರುದ್ಧವಾದ್ದರಿಂದ ಸಮಂಜಸವಾಗುವದಿಲ್ಲ. ಯಾವ ಸ್ವಭಾವವೂ ಇಲ್ಲದವೆಂದರೆ ನಿಮಿತ್ತವಶದಿಂದಲೇ (ಅಣುಗಳ) ಪ್ರವೃತ್ತಿನಿವೃತ್ತಿಗಳನ್ನು ಒಪ್ಪಬೇಕಾಗುವದರಿಂದ[3] ನಿಮಿತ್ತವಾದ ಅದೃಷ್ಟಾದಿಗಳು ನಿತ್ಯವೂ ಸಂನ್ನಿಹಿತವಾಗಿರುವದರಿಂದ ನಿತ್ಯವೂ ಪ್ರವೃತ್ತಿಯಾಗಬೇಕಾಗುವದು. ಅದೃಷ್ಟಾದಿಗಳು ಗೊತ್ತಾದ (ನಿಮಿತ್ತ)ವಲ್ಲವೆಂದರೂ ಯಾವಾಗಲೂ ಪ್ರವೃತ್ತಿಯೇ ಆಗಬಾರದಾಗುವದು. ಆದ್ದರಿಂದಲೂ ಪರಮಾಣುಕಾರಣವಾದವು ಸರಿಯಲ್ಲ.

**ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್ ॥ ೧೫ ॥**

೧೫. ಮತ್ತು ರೂಪಾದಿಗಳುಳ್ಳವಾದ್ದರಿಂದ (ಅಭ್ಯುಪಗಮ) ವಿಪರ್ಯಯವೂ (ಆಗುವದು. ಏಕೆಂದರೆ ಹಾಗೆಂದು) ಕಂಡು ಬಂದಿದೆ.

1. ಈ ವಾಕ್ಯದ ಮತ್ತು ಇದರ ಹಿಂದಿನ ವಾಕ್ಯದ ಪಂಚಮೀವಿಭಕ್ತಿಗೆ ಬದಲು 'ಪ್ರಸಙ್ಗಃ' ಎಂದಿದ್ದರೆ ಸರಳವಾಗಿ ಅನ್ವಯವಾಗುತ್ತಿತ್ತು. ಈಗಿರುವಂತೆ 'ಅಸಮಞ್ಜಸಮ್' ಎಂಬ ಮಾತನ್ನು ಸೇರಿಸಿಕೊಂಡು ಅನ್ವಯಿಸಬೇಕಾಗಿದೆ.

2. ಪರಮಾಣುಗಳು ಸ್ವಭಾವದಿಂದಲೇ ಸಂಯುಕ್ತವಾಗಿ ದ್ವ್ಯಣುಕಾದಿಗಳಾಗುವವು ಎಂದರೆ ನಿತ್ಯಸೃಷ್ಟ್ಯಾದಿದೋಷಗಳುಂಟಾಗುವವು ಎಂದು ಹೇಳುವದಕ್ಕೆ ಈ ವಿಕಲ್ಪವನ್ನು ಮಾಡಿರುತ್ತದೆ. ಸಾಂಖ್ಯರ ಖಂಡನೆಯಲ್ಲಿ ದೃಕ್ಶಕ್ತಿಸರ್ಗಶಕ್ತಿಗಳು ಸ್ವಭಾವವೆಂದಿಟ್ಟುಕೊಂಡರೆ ದೋಷವುಂಟೆಂದು ೨-೨-೬ರ ಭಾಷ್ಯದಲ್ಲಿ ( ಭಾ. ಭಾ.೧೪ ) ಹೇಳಿರುವದನ್ನು ಇದಕ್ಕೆ ಹೋಲಿಸಿರಿ. ವೇದಾಂತದಲ್ಲಿ ಈ ದೋಷವಿಲ್ಲವೆಂಬುದಕ್ಕೆ ೨-೨-೪ರ ಭಾಷ್ಯದಲ್ಲಿ ಹೇಳಿರುವದನ್ನು ಇಲ್ಲಿಯೂ ನೆನಪಿಗೆ ತಂದುಕೊಳ್ಳಬೇಕು.

3. ಸ್ವಭಾವದಿಂದ ಆಗದಿದ್ದದ್ದು ನಿಮಿತ್ತದಿಂದಲೇ ಆಗಬೇಕು, ನಿಮಿತ್ತವು ಆಗಂತುಕವೂ ಆಗಿರಬೇಕು.

## ಪರಮಾಣುಗಳೂ ಸಕಾರಣವೆಂದು ಅನುಮಾನಿಸಬಹುದು

(ಭಾಷ್ಯ)

೩೧. ಸಾವಯವಾನಾಂ ದ್ರವ್ಯಾಣಾಮ್ ಅವಯವಶೋ ವಿಭಜ್ಯಮಾನಾನಾಂ ಯತಃ ಪರೋ ವಿಭಾಗೋ ನ ಸಂಭವತಿ ತೇ ಚತುರ್ವಿಧಾಃ ರೂಪಾದಿಮನ್ತಃ ಪರಮಾಣವಃ ಚತುರ್ವಿಧಸ್ಯ ರೂಪಾದಿಮತೋ ಭೂತಭೌತಿಕಸ್ಯ ಆರಮ್ಭಕಾಃ ನಿತ್ಯಾಶ್ಚ ಇತಿ ಯದ್ ವೈಶೇಷಿಕಾ ಅಭ್ಯುಪಗಚ್ಛನ್ತಿ ಸ ತೇಷಾಮ್ ಅಭ್ಯುಪಗಮೋ ನಿರಾಲಮ್ಬನ ಏವ । ಯತೋ ರೂಪಾದಿಮತ್ತ್ವಾತ್ ಪರಮಾಣೂನಾಮ್ ಅಣುತ್ವನಿತ್ಯತ್ವವಿಪರ್ಯಯಃ ಪ್ರಸಜ್ಯೇತ । ಪರಮಕಾರಣಾಪೇಕ್ಷಯಾ ಸ್ಥೂಲತ್ವಮ್ ಅನಿತ್ಯತ್ವಂ ಚ ತೇಷಾಮ್ ಅಭಿಪ್ರೇತವಿಪರೀತಮ್ ಆಪದ್ಯೇತ ಇತ್ಯರ್ಥಃ । ಕುತಃ ? ಏವಂ ಲೋಕೇ ದೃಷ್ಟತ್ವಾತ್। ಯದ್ ಹಿ[1] ಲೋಕೇ ರೂಪಾದಿಮತ್ ವಸ್ತು, ತತ್ ಸ್ವಕಾರಣಾಪೇಕ್ಷಯಾ ಸ್ಥೂಲಮ್ ಅನಿತ್ಯಂ ಚ ದೃಷ್ಟಮ್ । ತದ್ ಯಥಾ ಪಟಃ ತನ್ತೂನ್ ಅಪೇಕ್ಷ್ಯ ಸ್ಥೂಲಃ, ಅನಿತ್ಯಶ್ಚ ಭವತಿ । ತನ್ತವಶ್ಚ ಅಂಶೂನ್ ಅಪೇಕ್ಷ್ಯ ಸ್ಥೂಲಾಃ ಅನಿತ್ಯಾಶ್ಚ ಭವನ್ತಿ । ತಥಾ ಚ ಅಮೀ ಪರಮಾಣವಃ ರೂಪಾದಿಮನ್ತಃ ತೈಃ ಅಭ್ಯುಪಗಮ್ಯನ್ತೇ । ತಸ್ಮಾತ್ ತೇಽಪಿ ಕಾರಣವನ್ತಃ ತದಪೇಕ್ಷಯಾ ಸ್ಥೂಲಾಃ ಅನಿತ್ಯಾಶ್ಚ ಪ್ರಾಪ್ನುವನ್ತಿ ॥

(ಭಾಷ್ಯಾರ್ಥ)

ಸಾವಯವವಾಗಿರುವ ದ್ರವ್ಯಗಳನ್ನು ಅವಯವಗಳಾಗಿ ವಿಭಾಗಿಸಿದರೆ ಎಲ್ಲಿಗೆ ಇನ್ನುಮುಂದೆ ವಿಭಾಗವಿಲ್ಲವೆಂದಾಗುತ್ತದೋ ಆ ನಾಲ್ಕು ವಿಧವಾದ ರೂಪಾದಿಗಳುಳ್ಳ ಪರಮಾಣುಗಳು ರೂಪಾದಿಗಳುಳ್ಳ ಭೂತಭೌತಿಕ(ಲಕ್ಷಣವಾದ ಕಾರ್ಯಕ್ಕೆ) ಆರಂಭವಾಗಿರುತ್ತವೆ, ನಿತ್ಯವೂ ಆಗಿರುತ್ತವೆ ಎಂದು ವೈಶೇಷಿಕರು ಒಪ್ಪಿರುತ್ತಾರಷ್ಟೆ. ಆ ಅವರ ಅಭ್ಯುಪಗಮಕ್ಕೆ (ಯಾವ) ಆಧಾರವೂ ಇರುವದಿಲ್ಲ. ಏಕೆಂದರೆ ರೂಪಾದಿಗಳಿರುವದರಿಂದ ಪರಮಾಣುಗಳಿಗೆ ಅಣುತ್ವನಿತ್ಯತ್ವವಿಪರೀತವಾದ (ಸ್ವಭಾವವು) ಪ್ರಸಕ್ತವಾಗುವದು ; (ಎಂದರೆ) ಪರಮಕಾರಣಕ್ಕೆ (ಇರುವದ)ಕ್ಕಿಂತಲೂ (ಹೆಚ್ಚಿನ) ಸ್ಥೂಲತ್ವವೂ ಅನಿತ್ಯತ್ವವೂ ಅಭಿಪ್ರೇತಾರ್ಥಕ್ಕೆ ವಿಪರೀತವಾಗಿ ಅವುಗಳಿಗೆ ಗಂಟುಬೀಳುವದು ಎಂದರ್ಥ. ಅದೇಕೆ? ಎಂದರೆ ಲೋಕದಲ್ಲಿ ಹೀಗೆಂದು ಕಂಡುಬಂದಿರುವದರಿಂದ. ಲೋಕದಲ್ಲಿ ಯಾವದು ರೂಪಾದಿಗಳುಳ್ಳದ್ದೋ ಅದು ತನ್ನ ಕಾರಣಕ್ಕಿಂತ ಸ್ಥೂಲವೂ ಅನಿತ್ಯವೂ

---

1 ಮುದ್ರಿತಪುಸ್ತಕದಲ್ಲಿ ಯದಿ ಎಂಬುದು ಅಚ್ಚಿನ ತಪ್ಪು.

ಆಗಿರುವದೆಂದು ಕಂಡುಬಂದಿರುತ್ತದೆ. ಅದು ಹೇಗೆಂದರೆ ಬಟ್ಟೆಯು ನೂಲುಗಳಿಗಿಂತ ಸ್ಥೂಲವೂ ಅನಿತ್ಯವೂ ಆಗಿರುತ್ತದೆ. ಹೀಗೆಯೇ ಈ ಪರಮಾಣುಗಳೂ ರೂಪಾದಿಗಳುಳ್ಳವೆಂದು ಅವರು ಒಪ್ಪುತ್ತಾರೆ; ಆದ್ದರಿಂದ ಅವೂ ಕಾರಣವುಳ್ಳವೆಂತಲೂ ಅದಕ್ಕಿಂತ ಸ್ಥೂಲವೂ ಅನಿತ್ಯವೂ ( ಆಗಿರಬೇಕೆಂತಲೂ ) ಆಗುತ್ತದೆ.[1]

## ಪರಮಾಣುಗಳು ನಿತ್ಯವೆಂಬುದಕ್ಕೆ ಕೊಟ್ಟಿರುವ ಕಾರಣಗಳ ವಿಮರ್ಶೆ

( ಭಾಷ್ಯ )

೩೨. ಯಚ್ಚ ನಿತ್ಯತ್ವೇ ಕಾರಣಂ ತೈಃ ಉಕ್ತಮ್ "ಸದಕಾರಣವನ್ನಿತ್ಯಮ್" (ವೈ. ಸೂ. ೪–೧–೧) ಇತಿ, ತದಪಿ ಏವಂ ಸತಿ ಅಣುಷು ನ ಸಂಭವತಿ| ಉಕ್ತೇನ ಪ್ರಕಾರೇಣ ಅಣೂನಾಮಪಿ ಕಾರಣವತ್ತ್ವೋಪಪತ್ತೇಃ | ಯದಪಿ ನಿತ್ಯತ್ವೇ ದ್ವಿತೀಯಂ ಕಾರಣಮ್ ಉಕ್ತಮ್ "ಅನಿತ್ಯಮಿತಿ ಚ ವಿಶೇಷತಃ ಪ್ರತಿಷೇಧಾಭಾವಃ" (ವೈ. ಸೂ. ೪–೧–೪) ಇತಿ, ತದಪಿ ನಾವಶ್ಯಂ ಪರಮಾಣೂನಾಂ ನಿತ್ಯತ್ವಂ ಸಾಧಯತಿ | ಅಸತಿ ಹಿ ಯಸ್ಮಿನ್ಕಸ್ಮಿಂಶ್ಚಿತ್ ನಿತ್ಯೇ ವಸ್ತುನಿ ನಿತ್ಯಶಬ್ದೇನ ನಞಃ ಸಮಾಸೋ ನೋಪಪದ್ಯತೇ | ನ ಪುನಃ ಪರಮಾಣುನಿತ್ಯತ್ವಮೇವ ಅಪೇಕ್ಷ್ಯತೇ | ತಚ್ಚ ಅಸ್ತ್ಯೇವ ನಿತ್ಯಂ ಪರಮಕಾರಣಂ ಬ್ರಹ್ಮ | ನ ಚ ಶಬ್ದಾರ್ಥವ್ಯವಹಾರಮಾತ್ರೇಣ ಕಸ್ಯಚಿತ್ ಅರ್ಥಸ್ಯ ಪ್ರಸಿದ್ಧಿರ್ಭವತಿ | ಪ್ರಮಾಣಾನ್ತರಸಿದ್ಧಯೋಃ ಶಬ್ದಾರ್ಥಯೋಃ ವ್ಯವಹಾರಾವತಾರಾತ್| ಯದಪಿ ನಿತ್ಯತ್ವೇ ತೃತೀಯಂ ಕಾರಣಮ್ ಉಕ್ತಮ್ "ಅವಿದ್ಯಾ ಚ" (ವೈ. ಸೂ. ೪–೧–೫) ಇತಿ | ತದ್ ಯದಿ ಏವಂ ವಿವ್ರಿಯತೇ ಸತಾಂ ಪರಿದೃಶ್ಯಮಾನಕಾರ್ಯಾಣಾಂ ಕಾರಣಾನಾಂ ಪ್ರತ್ಯಕ್ಷೇಣ ಅಗ್ರಹಣಮ್ ಅವಿದ್ಯಾ ಇತಿ, ತತೋ ದ್ವ್ಯಣುಕನಿತ್ಯತಾಪಿ ಆಪದ್ಯೇತ | ಅಥ 'ಅದ್ರವ್ಯತ್ವೇ ಸತಿ' ಇತಿ ವಿಶೇಷ್ಯೇತ ತಥಾಪಿ ಅಕಾರಣವತ್ತ್ವಮೇವ ನಿತ್ಯತಾನಿಮಿತ್ತಮ್ ಆಪದ್ಯೇತ | ತಸ್ಯ ಚ ಪ್ರಾಗೇವ ಉಕ್ತತ್ವಾತ್ "ಅವಿದ್ಯಾ ಚ" ಇತಿ ಪುನರುಕ್ತಂ ಸ್ಯಾತ್ | ಅಥಾಪಿ ಕಾರಣವಿಭಾಗಾತ್ ಕಾರಣವಿನಾಶಾಚ್ಚ ಅನ್ಯಸ್ಯ ತೃತೀಯಸ್ಯ ವಿನಾಶಹೇತೋಃ ಅಸಂಭವಃ ಅವಿದ್ಯಾ | ಸಾ ಪರಮಾಣೂನಾಂ

1. ಆದ್ದರಿಂದ ಪರಮಾಣುಗಳು ಮೂಲಕಾರಣವಲ್ಲ ಎಂದು ಭಾವ. ರೂಪಾದಿಗಳುಳ್ಳದ್ದು ಸಕಾರಣವೂ ಕಾರಣಕ್ಕಿಂತ ಸ್ಥೂಲವೂ ಅನಿತ್ಯವೂ ಆಗಿರುತ್ತದೆ. ಆದ್ದರಿಂದ ಪರಮಾಣುಗಳೂ ರೂಪಾದಿಗಳುಳ್ಳವಾಗಿರುವದರಿಂದ ಸಕಾರಣ, ಸ್ಥೂಲ ಮತ್ತು ಅನಿತ್ಯ–ಎಂದು ಇಲ್ಲಿ ಅನುಮಾನವನ್ನು ಮಾಡಿದೆ. ರೂಪಾದಿಗಳಿಲ್ಲದ ಬ್ರಹ್ಮವೇ ಜಗತ್ತಿಗೆ ಕಾರಣವಾಗಿರಬೇಕೆಂಬ ನಿಶ್ಚಯಕ್ಕೆ ಇದು ಸಂಭಾವನಾಯುಕ್ತಿಯೂ ಆಗಬಹುದಾಗಿದೆ.

ನಿತ್ಯತ್ವಂ ಖ್ಯಾಪಯತಿ ಇತಿ ವ್ಯಾಖ್ಯಾಯೇತ | ನ ಅವಶ್ಯಂ ವಿನಶ್ಯದ್ ವಸ್ತು ದ್ವಾಭ್ಯಾಮೇವ ಹೇತುಭ್ಯಾಂ ವಿನಷ್ಟುಮರ್ಹತಿ ಇತಿ ನಿಯಮೋಽಸ್ತಿ| ಸಂಯೋಗ ಸಚಿವೇ ಹಿ ಅನೇಕಸ್ಮಿಂಶ್ಚ ದ್ರವ್ಯೇ ದ್ರವ್ಯಾನ್ತರಸ್ಯ ಆರಮ್ಭಕೇ ಅಭ್ಯುಪಗಮ್ಯ ಮಾನೇ ಏತದೇವಂ ಸ್ಯಾತ್| ಯದಾ ತು ಅಪಾಸ್ತವಿಶೇಷಂ ಸಾಮಾನ್ಯಾತ್ಮಕಂ ಕಾರಣಂ ವಿಶೇಷವದವಸ್ಥಾನ್ತರಮ್ ಆಪದ್ಯಮಾನಮ್ ಆರಮ್ಭಕಮ್ ಅಭ್ಯುಪಗಮ್ಯತೇ, ತದಾ ಘೃತಕಾಠಿನ್ಯವಿಲಯನವತ್ ಮೂರ್ತ್ಯವಸ್ಥಾವಿಲಯ ನೇನಾಪಿ ವಿನಾಶಃ ಉಪಪದ್ಯತೇ | ತಸ್ಮಾತ್ ರೂಪಾದಿಮತ್ತ್ವಾತ್ ಸ್ಯಾತ್ ಅಭಿಪ್ರೇತವಿಪರ್ಯಯಃ ಪರಮಾಣೂನಾಮ್ | ತಸ್ಮಾದಪಿ ಅನುಪಪನ್ನಃ ಪರಮಾಣುಕಾರಣವಾದಃ ||

( ಭಾಷ್ಯಾರ್ಥ )

(ಪರಮಾಣುಗಳು) ನಿತ್ಯವೆಂಬುದಕ್ಕೆ ಅವರು ಹೇಳಿರುವ "ಸದಕಾರಣವ ನ್ನಿತ್ಯಮ್" (ವೈ. ಸೂ. ೪–೧–೧) ಭಾವರೂಪವಾಗಿಯೂ[1] ಅಕಾರಣವಾಗಿ ಯೂ ಇರುವದು ನಿತ್ಯವು– ಎಂಬ ಕಾರಣವಿದೆಯಷ್ಟೆ, ಅದೂ ಹೀಗಾದರೆ[2] ಅಣುಗಳಿಗೆ ಹೊಂದುವದಿಲ್ಲ. ಏಕೆಂದರೆ (ಮೇಲೆ) ಹೇಳಿರುವ ಪ್ರಕಾರದಿಂದ ಅಣುಗಳೂ ಸಕಾರಣವಾಗಿರಬಹುದಾಗಿದೆ.[3] ಇನ್ನು ನಿತ್ಯವೆಂಬುದಕ್ಕೆ "ಅನಿತ್ಯ ಮಿತಿ ಚ ವಿಶೇಷತಃ ಪ್ರತಿಷೇಧಾಭಾವಃ" (ವೈ. ಸೂ. ೪–೧–೪) 'ಅನಿತ್ಯವು' ಎಂದು ವಿಶೇಷವಾಗಿ ಪ್ರತಿಷೇಧಮಾಡುವದೇ ಹೊಂದುವದಿಲ್ಲ[4] ಎಂದು ಎರಡ ನೆಯ ಕಾರಣವನ್ನು ಹೇಳಿರುತ್ತಾರಷ್ಟೆ, ಅದೂ ಅವಶ್ಯವಾಗಿ ಪರಮಾಣುಗಳೇ ನಿತ್ಯವೆಂಬುದನ್ನು ಸಾಧಿಸಿಕೊಡಲಾರದು. ಯಾವದೊಂದು ನಿತ್ಯವಸ್ತುವೂ ಇಲ್ಲದಿದ್ದರೆ ನಞ್ಶಬ್ದವನ್ನು ಸಮಾಸದಲ್ಲಿಡುವದು ಯುಕ್ತವಾಗುವದಿಲ್ಲವೇ ಹೊರತು ಪರಮಾಣುನಿತ್ಯತ್ವವೇ (ಇಲ್ಲಿ) ಬೇಕೆಂದೇನೂ ಇಲ್ಲ. ಪರಮಕಾರಣ ವಾದ ಬ್ರಹ್ಮವೆಂಬ ಆ ನಿತ್ಯ(ವಸ್ತು)ವಿದ್ದೇ ಇದೆ.[5] **ಇದಲ್ಲದೆ ಶಬ್ದಾರ್ಥ**

1. ಸತ್ತೆಂದರೆ ಭಾವರೂಪವು, ಸತ್ತಾಸಂಬಂಧವುಳ್ಳದ್ದು. ದ್ರವ್ಯಗುಣಕರ್ಮಗಳಲ್ಲಿ ಸತ್ತಾಜಾತಿಯಿದೆಯೆಂದೂ ಸಮವಾಯಸಂಬಂಧದಿಂದ ಅದರಲ್ಲಿ ಅವು ಸೇರಿಕೊಂಡಿರು ವದರಿಂದ ಅವು ಸತ್ತೆನಿಸಿರುವವೆಂದೂ ವೈಶೇಷಿಕರ ಕಲ್ಪನೆ.

2 ಕಾರಣರಹಿತವಾದ ಭಾವದ್ರವ್ಯವು ನಿತ್ಯವಾದರೆ.

3. ರೂಪಾದಿಗಳುಳ್ಳವೆಂಬ ಕಾರಣದಿಂದ ಪರಮಾಣುಗಳು ಸಕಾರಣವಾಗಿರ ಬೇಕೆಂದು ಹಿಂದಿನ ಸೂತ್ರದಲ್ಲಿ ತೋರಿಸಿಕೊಟ್ಟಿದೆ.

4. ನಿತ್ಯವಲ್ಲದ್ದು ಅನಿತ್ಯವು; ಅನಿತ್ಯವೆಂಬ ಸಮಾಸವನ್ನು ಪ್ರಯೋಗಿಸುವದ ರಿಂದಲೇ ನಿತ್ಯವಸ್ತುವಿರಬೇಕೆಂದು ಗೊತ್ತಾಗುತ್ತದೆ ಎಂದರ್ಥ.

5. ಆದ್ದರಿಂದ ಅನಿತ್ಯವೆಂದರೆ ನಿತ್ಯವಾದ ಬ್ರಹ್ಮವಲ್ಲದ್ದು ಎಂದೂ ಅರ್ಥವನ್ನು ಮಾಡಬಹುದಾಗಿದೆ; ಪರಮಾಣುವಲ್ಲದ್ದು ಎಂದೇನೂ ಅರ್ಥವಲ್ಲ.

**ವ್ಯವಹಾರಮಾತ್ರದಿಂದ ಯಾವದೊಂದು ಪದಾರ್ಥವೂ ಪ್ರಸಿದ್ಧವಾಗಲಾರದು[1];** ಏಕೆಂದರೆ ಪ್ರಮಾಣಾಂತರಸಿದ್ಧವಾದ ಶಬ್ದಾರ್ಥಗಳನ್ನೇ ವ್ಯವಹಾರದಲ್ಲಿ ಬಳಸುತ್ತಾರೆ. ಇನ್ನು (ಪರಮಾಣುಗಳು) ನಿತ್ಯವೆಂಬುದಕ್ಕೆ "ಅವಿದ್ಯಾ ಚ"[2] (ವೈ. ಸೂ. ೪-೧-೫) ಅವಿದ್ಯೆಯೂ (ಕಾರಣವು) ಎಂಬ ಮೂರನೆಯ ಕಾರಣವನ್ನು ಹೇಳಿದ್ದಾರಷ್ಟೆ; ಇಲ್ಲಿ ಸದ್ರೂಪವಾಗಿ ಕಂಡುಬರುವ ಕಾರ್ಯಗಳಿಗೆ ಕಾರಣಗಳನ್ನು ಪ್ರತ್ಯಕ್ಷವಾಗಿ ಕಾಣದೆ ಇರುವದು ಅವಿದ್ಯೆ ಎಂದಿಂತು ವಿವರಣೆಯನ್ನು ಹೇಳುವದಾದರೆ, ಆಗ ದ್ವ್ಯಣುಕವೂ ನಿತ್ಯವಾಗಿರುತ್ತದೆ ಎಂದಾಗುತ್ತದೆ.[3] ಹಾಗಿಲ್ಲದೆ 'ಅದ್ರವ್ಯವಾಗಿರುವಲ್ಲಿ' (ಕಾರಣವನ್ನು ಕಾಣದಿರುವದು ಅವಿದ್ಯೆ) ಎಂದು ವಿಶೇಷಣವನ್ನು ಹಾಕಿಕೊಳ್ಳುವದಾದರೆ,[4] ಹಾಗೂ ಕಾರಣವಿಲ್ಲದ್ದೇ ನಿತ್ಯತ್ವಕ್ಕೆ ಕಾರಣವು ಎಂದಾಗುವದು; ಅದನ್ನು ಹಿಂದಿನ (ಒಂದನೆಯ ಸೂತ್ರ)ದಲ್ಲಿಯೇ ಹೇಳಿದ್ದಾಗಿರುವದರಿಂದ "ಅವಿದ್ಯಾ ಚ" ಎಂಬುದು ಪುನರುಕ್ತವಾಗುವದು. ಹೀಗೂ ಅಲ್ಲದೆ ಕಾರಣವಿಭಾಗ, ಕಾರಣವಿನಾಶ- (ಇವೆರಡಕ್ಕಿಂತಲೂ) ಬೇರೊಂದು ವಿನಾಶಹೇತುವು ಸಂಭವಿಸುವದಿಲ್ಲವೆಂಬುದೇ ಅವಿದ್ಯೆ; ಅದು ಪರಮಾಣುಗಳು ನಿತ್ಯವೆಂಬುದನ್ನು ತೋರಿಸಿಕೊಡುತ್ತದೆ- ಎಂದು ವ್ಯಾಖ್ಯಾನಮಾಡುವದಾದರೆ[5] ವಿನಾಶವಾಗುವ ವಸ್ತು ಅವಶ್ಯವಾಗಿ (ಈ) ಎರಡು ಕಾರಣಗಳಿಂದಲೇ ವಿನಾಶವಾಗಬೇಕು ಎಂಬ ನಿಯಮವೇನೂ ಇಲ್ಲ. ಸಂಯೋಗಯುಕ್ತವಾದ ಅನೇಕದ್ರವ್ಯವೇ ದ್ರವ್ಯಾಂತರಕ್ಕೆ ಆರಂಭಕವು ಎಂದು ಒಪ್ಪಿದರೆ ಇದು ಹೀಗಾಗಬಹುದು. ಆದರೆ ಯಾವಾಗ **ಯಾವದೊಂದು ವಿಶೇಷವೂ ಇಲ್ಲದ ಸಾಮಾನ್ಯರೂಪವಾದ ಕಾರಣವು ವಿಶೇಷಗಳುಳ್ಳ ಮತ್ತೊಂದು ಅವಸ್ಥೆಯನ್ನು ಪಡೆಯುವದಾಗಿ**

---

1. ಬರಿಯ ಶಬ್ದಾರ್ಥವ್ಯವಹಾರದಿಂದ ವಸ್ತುಸಿದ್ಧಿಯಾಗುವದಾದರೆ 'ಶಶವಿಷಾಣಾಭಾವ' ಎಂಬ ವ್ಯವಹಾರದಿಂದ ಮೊಲದ ಕೊಂಬೂ ವಸ್ತುವೆಂದು ಸಿದ್ಧವಾಗಬಹುದು ಎಂದು ಭಾವ. ನೀವೇ ಈ ಪರಮಾಣುವ್ಯವಹಾರವನ್ನು ತಂದಿರುವವರು; ಇಂಥ ಪಾರಿಭಾಷಿಕವ್ಯವಹಾರಮಾತ್ರದಿಂದ ಪರಮಾಣು ಹೇಗೆತಾನೆ ಸಿದ್ಧಿಸೀತು ?- ಎಂದು ಆಕ್ಷೇಪ.

2. ಅಚ್ಚಿನ ಪುಸ್ತಕದಲ್ಲಿ 'ಅವಿದ್ಯಾ' ಎಂದಿಷ್ಟೇ ಪಾಠವಿದೆ.

3. ಏಕೆಂದರೆ ದ್ವ್ಯಣುಕಕ್ಕೆ ಕಾರಣವೆನ್ನುವ ಪರಮಾಣುಗಳನ್ನು ಪ್ರತ್ಯಕ್ಷವಾಗಿ ನೋಡುವಹಾಗಿಲ್ಲ.

4. ಅದ್ರವ್ಯವು ಎಂದರೆ ಕಾರಣದ್ರವ್ಯವು ಇಲ್ಲದ್ದು ಎಂಬ ಅರ್ಥ; ಈ ವಿಶೇಷಣವನ್ನು ಹಾಕಿಕೊಂಡರೆ ಕಾರಣವಿಲ್ಲದ್ದು ಎಂದರ್ಥವಾಗುತ್ತದೆ.

5. ಪರಮಾಣುಗಳ ವಿಷಯದಲ್ಲಿ ವಿನಾಶಹೇತು ಸಂಭವಿಸುವದಿಲ್ಲವೆಂಬ ಅವಿದ್ಯೆಯಿದೆ, ಆದ್ದರಿಂದ ಅವು ನಿತ್ಯ ಎಂದು ವ್ಯಾಖ್ಯಾನಮಾಡಿದರೆ ಎಂದರ್ಥ.

**ಆರಂಭಕ**ವಾಗಿರುತ್ತದೆ ಎಂದು ಒಪ್ಪುವೆವೋ ಆಗ ತುಪ್ಪದ ಗಟ್ಟಿಯು ಕರಗಿದಂತೆ ಮೂರ್ತ್ಯವಸ್ಥೆಯನ್ನು ಕರಗಿಸುವದರಿಂದಲೂ ವಿನಾಶವಾಗಬಹುದಾಗುವದು[1] ಆದ್ದರಿಂದ ಪರಮಾಣುಗಳು ರೂಪಾದಿಗಳುಳ್ಳವಾದ್ದರಿಂದ ಅಭಿಪ್ರೇತವಾದದ್ದಕ್ಕೆ ವಿಪರೀತವಾಗಿಯೇ ಆಗಬಹುದು.[2] ಆದ್ದರಿಂದಲೂ ಪರಮಾಣುಕಾರಣವಾದವು ಯುಕ್ತವಲ್ಲ.

**ಉಭಯಥಾ ಚ ದೋಷಾತ್ ॥ ೧೬ ॥**

೧೬. ಎರಡು ವಿಧದಿಂದಲೂ ದೋಷವಿರುವದರಿಂದ (ಈ ವಾದವು ಅಯುಕ್ತ).

## ಪರಮಾಣುಗಳಲ್ಲಿ ಗುಣಗಳು ಹೆಚ್ಚುಕಡಿಮೆಯಾಗಿದ್ದರೂ ಇಲ್ಲದಿದ್ದರೂ ದೋಷ

(ಭಾಷ್ಯ)

೩೩. ಗನ್ಧರಸರೂಪಸ್ಪರ್ಶಗುಣಾ ಸ್ಥೂಲಾ ಪೃಥಿವೀ, ರೂಪರಸಸ್ಪರ್ಶಗುಣಾಃ ಸೂಕ್ಷ್ಮಾ ಆಪಃ, ರೂಪಸ್ಪರ್ಶಗುಣಂ ಸೂಕ್ಷ್ಮತರಂ ತೇಜಃ, ಸ್ಪರ್ಶಗುಣಃ ಸೂಕ್ಷ್ಮತಮೋ ವಾಯುಃ ಇತ್ಯೇವಮ್ ಏತಾನಿ ಚತ್ವಾರಿ ಭೂತಾನಿ ಉಪಚಿತಾಪಚಿತಗುಣಾನಿ ಸ್ಥೂಲಸೂಕ್ಷ್ಮಸೂಕ್ಷ್ಮತರಸೂಕ್ಷ್ಮತಮತಾರತಮ್ಯೋಪೇತಾನಿ ಚ ಲೋಕೇ ಲಕ್ಷ್ಯನ್ತೇ । ತದ್ವತ್ ಪರಮಾಣವೋಽಪಿ ಉಪಚಿತಾಪಚಿತಗುಣಾಃ ಕಲ್ಪ್ಯೇರನ್ ನ ವಾ । ಉಭಯಥಾಪಿ ಚ ದೋಷಾನುಷಙ್ಗೋಽಪರಿಹಾರ್ಯ ಏವ ಸ್ಯಾತ್ । ಕಲ್ಪ್ಯಮಾನೇ ತಾವತ್ ಉಪಚಿತಾಪಚಿತಗುಣತ್ವೇ ಉಪಚಿತಗುಣಾನಾಂ ಮೂರ್ತ್ಯುಪಚಯಾತ್ ಅಪರಮಾಣುತ್ವಪ್ರಸಙ್ಗಃ । ನ ಚ ಅನ್ತರೇಣಾಪಿ ಮೂರ್ತ್ಯುಪಚಯಂ ಗುಣೋಪಚಯೋ ಭವತಿ ಇತ್ಯುಚ್ಯತೇ । ಕಾರ್ಯೇಷು ಭೂತೇಷು ಗುಣೋಪಚಯೇ ಮೂರ್ತ್ಯುಪಚಯದರ್ಶನಾತ್ । ಅಕಲ್ಪ್ಯಮಾನೇ ತು ಉಪಚಿತಾಪಚಿತಗುಣತ್ವೇ ಪರಮಾಣುತ್ವಸಾಮ್ಯಪ್ರಸಿದ್ಧಯೇ ಯದಿ ತಾವತ್ ಸರ್ವೇ ಏಕೈಕಗುಣಾ ಏವ ಕಲ್ಪ್ಯೇರನ್ ತತಃ ತೇಜಸಿ ಸ್ಪರ್ಶಸ್ಯ ಉಪಲಬ್ಧಿರ್ನ ಸ್ಯಾತ್, ಅಪ್ಸು ರೂಪಸ್ಪರ್ಶಯೋಃ, ಪೃಥಿವ್ಯಾಂ ಚ ರಸರೂಪಸ್ಪರ್ಶಾನಾಮ್ । ಕಾರಣಗುಣಪೂರ್ವಕತ್ವಾತ್ ಕಾರ್ಯಗುಣಾನಾಮ್ । ಅಥ ಸರ್ವೇ ಚತುರ್ಗುಣಾ

---

1. ಕಾರಣನಾಶವಾಗಲಿ ಕಾರಣವಿಭಾಗವಾಗಲಿ ಕಾರ್ಯನಾಶಕ್ಕೆ ಬೇಕಾಗುವದಿಲ್ಲ.
2. ಅವುಗಳು ಅಣು, ನಿತ್ಯ ಎಂಬುದಕ್ಕೆ ವಿಪರೀತವಾಗಿಯೇ ಆಗಬಹುದು.

ಏವ ಕಲ್ಪ್ಯೇರನ್ । ತತಃ ಅಪ್ಸ್ವಪಿ ಗನ್ಧಸ್ಯ ಉಪಲಬ್ಧಿಃ ಸ್ಯಾತ್ । ತೇಜಸಿ ಗನ್ಧರಸಯೋಃ । ವಾಯೌ ಗನ್ಧರೂಪರಸಾನಾಮ್ । ನ ಚ ಏವಂ ದೃಶ್ಯತೇ। ತಸ್ಮಾದಪಿ ಅನುಪಪನ್ನಃ ಪರಮಾಣುಕಾರಣವಾದಃ ॥

( ಭಾಷ್ಯಾರ್ಥ )

ಗಂಧ, ರಸ, ರೂಪ, ಸ್ಪರ್ಶ– ಎಂಬ ಗುಣಗಳುಳ್ಳ ಪೃಥಿವಿಯು ಸ್ಥೂಲ; ರೂಪ, ರಸ, ಸ್ಪರ್ಶ– ಎಂಬ ಗುಣಗಳುಳ್ಳ ಅಪ್ಪು ಸೂಕ್ಷ್ಮ; ರೂಪ, ಸ್ಪರ್ಶ– ಎಂಬ ಗುಣಗಳುಳ್ಳ ತೇಜಸ್ಸು ಇನ್ನೂ ಸೂಕ್ಷ್ಮವಾದದ್ದು ; ಸ್ಪರ್ಶವೆಂಬ (ಒಂದೇ) ಗುಣವುಳ್ಳ ವಾಯು ಸೂಕ್ಷ್ಮತಮವಾದದ್ದು– ಎಂದಿಂತು ಈ ನಾಲ್ಕು ಭೂತಗಳು ಹೆಚ್ಚುಕಡಿಮೆ ಗುಣಗಳು ಇವೆ ಎಂದು ಕಲ್ಪಿಸುತ್ತೀರೊ, ಇಲ್ಲವೊ ? ಎರಡು (ಪಕ್ಷ)ದಲ್ಲಿಯೂ ದೋಷದ ಸಂಬಂಧವು ಅಪರಿಹಾರ್ಯವೇ ಆಗುವದು. ಮೊದಲನೆಯದಾಗಿ ಹೆಚ್ಚುಕಡಿಮೆಯ (ಸಂಖ್ಯೆಯ) ಗುಣಗಳು ಇವೆಯೆಂದು ಕಲ್ಪಿಸಿದರೆ ಗುಣಗಳು ಹೆಚ್ಚಾದ (ಪರಮಾಣುವಿಗೆ) ಮೂರ್ತಿಯೂ ದೊಡ್ಡದಾಗುವದರಿಂದ ಪರಮಾಣುವಲ್ಲದೆ ಹೋಗುವದು. ಮೂರ್ತಿಯು ದೊಡ್ಡದಾಗದೆಯೇ ಗುಣಗಳು ಹೆಚ್ಚುವವು ಎನ್ನುವದಾಗಲಾರದು. ಏಕೆಂದರೆ ಕಾರ್ಯವಾದ ಭೂತಗಳಲ್ಲಿ ಗುಣಗಳು ಹೆಚ್ಚಿದರೆ ಮೂರ್ತಿಯೂ ಹೆಚ್ಚುವದು ಕಂಡುಬಂದಿರುತ್ತದೆ. ಪರಮಾಣುಗಳು (ಎಲ್ಲವೂ) ಸಮಾನವಾಗಿರುವದಕ್ಕಾಗಿ (ಅವುಗಳಲ್ಲಿ) ಹೆಚ್ಚುಕಡಿಮೆಯಾಗಿ ಗುಣಗಳಿವೆ ಎಂದು ಕಲ್ಪಿಸದೆ ಇದ್ದರೊ ? ಎಂದರೆ ಮೊದಲನೆಯದಾಗಿ ಎಲ್ಲಾ (ಪರಮಾಣುಗಳಲ್ಲಿಯೂ) ಒಂದೊಂದೇ ಗುಣವೆಂದೇ ಕಲ್ಪಿಸುವದಾದರೆ ಆಗ ತೇಜಸ್ಸಿನಲ್ಲಿ ಸ್ಪರ್ಶವು ಕಾಣದೆಹೋಗುವದು, ಅಪ್ಪಿನಲ್ಲಿ ರೂಪಸ್ಪರ್ಶಗಳು (ಕಾಣದೆ ಇರುವವು), ಮತ್ತು ಪೃಥಿವಿಯಲ್ಲಿ ರಸರೂಪಸ್ಪರ್ಶಗಳು (ಕಾಣದೆ ಇರುವವು). ಏಕೆಂದರೆ ಕಾರ್ಯದ ಗುಣಗಳು ಕಾರಣಗುಣಗಳಿಂದ (ಆಗುತ್ತವೆ ಎಂದು ಒಪ್ಪಿರುತ್ತೀರಿ). ಅಥವಾ ಎಲ್ಲಕ್ಕೂ ನಾಲ್ಕೇ ಗುಣಗಳು ಎಂದು ಕಲ್ಪಿಸುವದಾದರೆ, ಆಗ ಅಪ್ಪಿನಲ್ಲಿಯೂ ಗಂಧವು ಕಾಣಬರಬೇಕಾಗುವದು ; ತೇಜಸ್ಸಿನಲ್ಲಿ ಗಂಧರಸಗಳೂ ವಾಯುವಿನಲ್ಲಿ ಗಂಧರೂಪರಸಗಳೂ (ಕಾಣಬರಬೇಕಾಗುವದು). ಆದರೆ ಹಾಗೆ ಕಾಣಬರುತ್ತಿಲ್ಲ. ಆದ್ದರಿಂದಲೂ ಪರಮಾಣುಕಾರಣವಾದವು ಅಯುಕ್ತ.

**ಅಪರಿಗ್ರಹಾಚ್ಚಾತ್ಯನ್ತಮನಪೇಕ್ಷಾ ॥ ೧೭ ॥**

೧೭. (ಶಿಷ್ಟರು) ಪರಿಗ್ರಹಿಸದೆ ಇರುವದರಿಂದಲೂ ಅತ್ಯಂತವಾಗಿ ಉಪೇಕ್ಷೆಮಾಡತಕ್ಕದ್ದು.

## ಶಿಷ್ಟರು ಒಪ್ಪದಿರುವದರಿಂದ ಅಣುವಾದವು ಸರಿಯಲ್ಲ

(ಭಾಷ್ಯ)

೩೪. ಪ್ರಧಾನಕಾರಣವಾದಃ ವೇದವಿದ್ಭಿರಪಿ ಕೈಶ್ಚಿತ್ ಮನ್ವಾದಿಭಿಃ ಸತ್ಕಾರ್ಯತ್ವಾದ್ಯಂಶೋಪಜೀವನಾಭಿಪ್ರಾಯೇಣ ಉಪನಿಬದ್ಧಃ । ಅಯಂ ತು ಪರಮಾಣುಕಾರಣವಾದಃ ನ ಕೈಶ್ಚಿದಪಿ ಶಿಷ್ಟೈಃ ಕೇನಚಿದಪಿ ಅಂಶೇನ ಪರಿಗೃಹೀತಃ ಇತಿ ಅತ್ಯನ್ತಮೇವ ಅನಾದರಣೀಯೋ ವೇದವಾದಿಭಿಃ ॥

(ಭಾಷ್ಯಾರ್ಥ)

ಪ್ರಧಾನಕಾರಣವಾದವನ್ನು ವೇದವನ್ನು ಬಲ್ಲ **ಮನು**ವೇ ಮುಂತಾದವರು ಸತ್ಕಾರ್ಯವಾದವೇ ಮುಂತಾದ[1] ಅಂಶವನ್ನು ಉಪಜೀವಿಸಿದೆ ಎಂಬ ಅಭಿಪ್ರಾಯದಿಂದ (ತಮ್ಮ ಗ್ರಂಥಗಳಲ್ಲಿ) ಸೇರಿಸಿಕೊಂಡಿರುತ್ತಾರೆ. ಆದರೆ ಈ ಪರಮಾಣುಕಾರಣವನ್ನು ಯಾವ ಶಿಷ್ಟರೂ ಯಾವ ಅಂಶದಲ್ಲಿಯೂ ಪರಿಗ್ರಹಿಸಿರುವದಿಲ್ಲ. ಆದ್ದರಿಂದ (ಇದನ್ನು) ಅತ್ಯಂತವಾಗಿ ಅನಾದರಣೆಮಾಡಬೇಕು.

## ಭಿನ್ನಪದಾರ್ಥಗಳಿಗೆ ಪ್ರಧಾನಾಧೀನಭಾವವನ್ನು ಹೇಳಿರುವ ದೋಷ

(ಭಾಷ್ಯ)

೩೫. ಅಪಿ ಚ ವೈಶೇಷಿಕಾಃ ತನ್ತ್ರಾರ್ಥಭೂತಾನ್ ಷಟ್ಪದಾರ್ಥಾನ್ ದ್ರವ್ಯಗುಣಕರ್ಮಸಾಮಾನ್ಯವಿಶೇಷಸಮವಾಯಾಖ್ಯಾನ್ ಅತ್ಯನ್ತಭಿನ್ನಾನ್ ಭಿನ್ನಲಕ್ಷಣಾನ್ ಅಭ್ಯುಪಗಚ್ಛನ್ತಿ । ಯಥಾ ಮನುಷ್ಯಃ, ಅಶ್ವಃ, ಶಶಃ ಇತಿ । ತಥಾತ್ವಂ ಚ ಅಭ್ಯುಪಗಮ್ಯ ತದ್ವಿರುದ್ಧಂ ದ್ರವ್ಯಾಧೀನತ್ವಂ ಶೇಷಾಣಾಮ್ ಅಭ್ಯುಪಗಚ್ಛನ್ತಿ । ತನ್ನೋಪಪದ್ಯತೇ । ಕಥಮ್ । ಯಥಾ ಹಿ ಲೋಕೇ ಶಶಕುಶಪಲಾಶಪ್ರಭೃತೀನಾಮ್ ಅತ್ಯನ್ತಭಿನ್ನಾನಾಂ ಸತಾಮ್ ನೇತರೇತರಾಧೀನತ್ವಂ ಭವತಿ, ಏವಂ ದ್ರವ್ಯಾದೀನಾಮ್ ಅತ್ಯನ್ತಭಿನ್ನತ್ವಾತ್ ನೈವ ದ್ರವ್ಯಾಧೀನತ್ವಂ ಗುಣಾದೀನಾಂ ಭವಿತುಮರ್ಹತಿ । ಅಥ ಭವತಿ ದ್ರವ್ಯಾಧೀನತ್ವಂ ಗುಣಾದೀನಾಮ್, ತತೋ ದ್ರವ್ಯಭಾವೇ ಭಾವಾತ್ ದ್ರವ್ಯಾ

---

1. ಕಾರ್ಯಕಾರಣಾನನ್ಯತ್ವ, ಆತ್ಮನು ಅಸಂಗಚಿದ್ರೂಪನು ಎಂಬುದು ಮುಂತಾದ ಹಲವು ಅಂಶಗಳನ್ನು ಸಾಂಖ್ಯವು ಉಪಜೀವಿಸಿರುತ್ತದೆ- ಎಂಬುದನ್ನು "ಮುಂತಾದ' ಎಂಬ ಮಾತು ಸೂಚಿಸುವದು.

ಭಾವೇ ಅಭಾವಾತ್ ದ್ರವ್ಯಮೇವ ಸಂಸ್ಥಾನಾದಿಭೇದಾತ್ ಅನೇಕಶಬ್ದ ಪ್ರತ್ಯಯಭಾಗ್ ಭವತಿ | ಯಥಾ ದೇವದತ್ತಃ ಏಕ ಏವ ಸನ್ ಅವಸ್ಥಾನ್ತರ ಯೋಗಾತ್ ಅನೇಕಶಬ್ದಪ್ರತ್ಯಯಭಾಗ್ ಭವತಿ ತದ್ವತ್ | ತಥಾ ಸತಿ ಸಾಂಖ್ಯ ಸಿದ್ಧಾನ್ತಪ್ರಸಙ್ಗಃ, ಸ್ವಸಿದ್ಧಾನ್ತವಿರೋಧಶ್ಚ ಆಪದ್ಯೇಯಾತಾಮ್ । ನನು ಅಗ್ನೇ ರನ್ಯಸ್ಯಾಪಿ ಸತೋ ಧೂಮಸ್ಯ ಅಗ್ನ್ಯಧೀನತ್ವಂ ದೃಶ್ಯತೇ । ಸತ್ಯಂ ದೃಶ್ಯತೇ | ಭೇದಪ್ರತೀತೇಸ್ತು ತತ್ರ ಅಗ್ನಿಧೂಮಯೋಃ ಅನ್ಯತ್ವಂ ನಿಶ್ಚೀಯತೇ | ಇಹ ತು ಶುಕ್ಲಃ ಕಮ್ಬಲಃ, ರೋಹಿಣೀ ಧೇನುಃ, ನೀಲಮ್ ಉತ್ಪಲಮ್ ಇತಿ ದ್ರವ್ಯಸ್ಯೈವ ತಸ್ಯ ತಸ್ಯ ತೇನ ತೇನ ವಿಶೇಷಣೇನ ಪ್ರತೀಯಮಾನತ್ವಾತ್ ನೈವ ದ್ರವ್ಯಗುಣಯೋಃ ಅಗ್ನಿಧೂಮಯೋರಿವ ಭೇದಪ್ರತೀತಿರಸ್ತಿ | ತಸ್ಮಾತ್ ದ್ರವ್ಯಾತ್ಮಕತಾ ಗುಣಸ್ಯ | ಏತೇನ ಕರ್ಮಸಾಮಾನ್ಯವಿಶೇಷಸಮವಾಯಾನಾಂ ದ್ರವ್ಯಾತ್ಮಕತಾ ವ್ಯಾಖ್ಯಾತಾ ||

( ಭಾಷ್ಯಾರ್ಥ )

ಇದಲ್ಲದೆ ವೈಶೇಷಿಕರು ತಂತ್ರಾರ್ಥವಾಗಿರುವ[1] ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ– ಎಂಬ ಆರು ಪದಾರ್ಥಗಳನ್ನು[2] (ಒಂದ ಕ್ಕಿಂತ ಒಂದು ) ಅತ್ಯಂತಭಿನ್ನವೆಂದೂ ಭಿನ್ನ( ಭಿನ್ನ )ಲಕ್ಷಣಗಳುಳ್ಳವೆಂದೂ ಒಪ್ಪಿರುತ್ತಾರೆ. ಮನುಷ್ಯ, ಕುದುರೆ, ಮೊಲ– ಎಂಬಿವು (ಹೇಗೆ ಬೇರೆಬೇರೆಯ ಲಕ್ಷಣವುಳ್ಳ ಬೇರೆಬೇರೆಯ ವಸ್ತುಗಳೋ ಹಾಗೆಯೇ ಇದು). ಹಾಗೆಂದು ಒಪ್ಪಿ ಅದಕ್ಕೆ ವಿರುದ್ಧವಾಗಿ ಮಿಕ್ಕವು ದ್ರವ್ಯಕ್ಕೆ ಅಧೀನವಾಗಿರುವವು ಎಂದು ಒಪ್ಪಿರುತ್ತಾರೆ. ಅದು ಹೊಂದುವದಿಲ್ಲ. ಹೇಗೆ ? ಎಂದರೆ ಹೇಗೆ ಲೋಕದಲ್ಲಿ ಮೊಲ, ಕುಶ, ಮುತ್ತುಗದ ಗಿಡ– ಮುಂತಾದವು ಅತ್ಯಂತಭಿನ್ನವಾಗಿರುವದ ರಿಂದ (ಅವು) ಒಂದರ ಅಧೀನವಾಗಿ ಒಂದು (ಇವೆ ಎಂದು ಹೇಳುವದು) ಸರಿ ಯಾಗುವದಿಲ್ಲವೋ ಹಾಗೆಯೇ ದ್ರವ್ಯಾದಿಗಳೂ ಅತ್ಯಂತಭಿನ್ನವಾಗಿರುವದರಿಂದ ಗುಣಾದಿಗಳು ದ್ರವ್ಯಾಧೀನವೆಂಬುದು ಆಗುವಂತೆಯೇ ಇಲ್ಲ.[3] ಅಥವಾ ಗುಣಾದಿ ಗಳು ದ್ರವ್ಯಾಧೀನವೆಂದಾದರೆ, ದ್ರವ್ಯವಿದ್ದರೆ ಇರುವದರಿಂದಲೂ ದ್ರವ್ಯವಿಲ್ಲ ದಿದ್ದರೆ ಇಲ್ಲದಿರುವದರಿಂದಲೂ ದ್ರವ್ಯವೇ ಆಕಾರ ಮುಂತಾದವುಗಳ ಭೇದದಿಂದ ಅನೇಕ ಶಬ್ದಗಳಿಗೂ ಪ್ರತ್ಯಯಗಳಿಗೂ ವಿಷಯವೆಂದಾಗುವದು. ಹೇಗೆ ದೇವ

---

1. ತಮ್ಮ ಶಾಸ್ತ್ರಕ್ಕೆ ವಿಷಯವಾಗಿರುವ.

2. ಅಭಾವ ಎಂಬುದು ಏಳನೆಯ ಪದಾರ್ಥವೆಂಬ್ಚು ಹಿಂದಿನ ವೈಶೇಷಿಕರು ಹೇಳು ತ್ತಿರಲಿಲ್ಲವೆಂದು ಕಾಣುತ್ತದೆ.

3. ಅತ್ಯಂತಭಿನ್ನವಾಗಿರುವ ವಸ್ತುಗಳು ಒಂದಕ್ಕೊಂದು ಅಧೀನವೆಂಬುದು ದೃಷ್ಟ ವಿರುದ್ಧ.

ದತ್ತನು ಒಬ್ಬನೇ ಆಗಿದ್ದು ಬೇರೆ ಅವಸ್ಥೆಗಳ ಸಂಬಂಧದಿಂದ ಅನೇಕ ಶಬ್ದಪ್ರತ್ಯಯಗಳನ್ನು ಹೊಂದುವನೋ ಹಾಗೆಯೇ (ಇದು). ಹಾಗಾದರೆ (ನಿಮ್ಮ ಮತವು) ಸಾಂಖ್ಯಸಿದ್ಧಾಂತವಾಗುವದು[1] ; ನಿಮ್ಮ ಸಿದ್ಧಾಂತಕ್ಕೆ ವಿರೋಧವೂ ಆಗುವದು.[2]

(ಆಕ್ಷೇಪ) :— ಬೆಂಕಿಯು ಬೇರೆಯಾಗಿದ್ದರೂ ಹೊಗೆಯು ಬೆಂಕಿಗೆ ಅಧೀನವಾಗಿರುವದು ಕಂಡುಬಂದಿದೆಯಲ್ಲ !

(ಪರಿಹಾರ) :— ನಿಜ, ಕಂಡುಬಂದಿರುತ್ತದೆ. ಆದರೆ ಬೇರೆಬೇರೆಯಾಗಿ ತೋರುತ್ತಿರುವದರಿಂದ ಅಲ್ಲಿ ಬೆಂಕಿಯೂ ಹೊಗೆಯೂ ಬೇರೆಬೇರೆ ಎಂದು ನಿಶ್ಚಿತವಾಗುತ್ತದೆ. ಆದರೆ ಇಲ್ಲಿ ಬಿಳಿಯ ಕಂಬಳಿ, ಕೆಂಪು ಹಸು, ಕರಿಯ ನೈದಿಲೆ– ಎಂದು (ಆಯಾ) ದ್ರವ್ಯವೇ ಆಯಾ ವಿಶೇಷಣದಿಂದ ಕೂಡಿಕೊಂಡು ಕಾಣುತ್ತಿರುವದರಿಂದ ದ್ರವ್ಯಗುಣಗಳಿಗೆ ಬೆಂಕಿಹೊಗೆಗಳಂತೆ ಭೇದಪ್ರತೀತಿಯಿರುವದಿಲ್ಲ. ಆದ್ದರಿಂದ ಗುಣವು ದ್ರವ್ಯಾತ್ಮಕವೇ (ಆಗಿರುತ್ತದೆ). ಇದರಿಂದ ಕರ್ಮ, ಸಾಮಾನ್ಯ, ವಿಶೇಷ, ಸಮವಾಯ– ಇವೂ ದ್ರವ್ಯಾತ್ಮಕವೇ ಎಂದು ಹೇಳಿದಂತೆ ಆಯಿತು.[3]

## ಅಯುತಸಿದ್ಧಿಯೆಂಬುದೇ ಇಲ್ಲ

( ಭಾಷ್ಯ )

೩೭. ಗುಣಾನಾಂ ದ್ರವ್ಯಾಧೀನತ್ವಂ ದ್ರವ್ಯಗುಣಯೋಃ ಅಯುತಸಿದ್ಧತ್ವಾತ್ ಇತಿ, ಯದಿ ಉಚ್ಯೇತ, ತತ್ ಪುನಃ ಅಯುತಸಿದ್ಧತ್ವಮ್ ಅಪೃಥಗ್ದೇಶತ್ವಂ ವಾ ಸ್ಯಾತ್, ಅಪೃಥಕ್ಕಾಲತ್ವಂ ವಾ, ಅಪೃಥಕ್ಸ್ವಭಾವತ್ವಂ ವಾ । ಸರ್ವಥಾಪಿ ನೋಪಪದ್ಯತೇ । ಅಪೃಥಗ್ದೇಶತ್ವೇ ತಾವತ್ ಸ್ವಾಭ್ಯುಪಗಮೋ ವಿರುಧ್ಯೇತ । ಕಥಮ್ ? ತನ್ತ್ವಾರಬ್ಧೋ ಹಿ ಪಟಃ ತನ್ತುದೇಶೋಽಭ್ಯುಪಗಮ್ಯತೇ ನ ಪಟದೇಶಃ । ಪಟಸ್ಯ ತು ಗುಣಾಃ ಶುಕ್ಲತ್ವಾದಯಃ ಪಟದೇಶಾಃ ಅಭ್ಯುಪಗಮ್ಯನ್ತೇ ನ ತನ್ತುದೇಶಾಃ । ತಥಾ ಚ ಆಹುಃ– "ದ್ರವ್ಯಾಣಿ ದ್ರವ್ಯಾನ್ತರಮಾರಭನ್ತೇ ಗುಣಾಶ್ಚ ಗುಣಾನ್ತರಮ್ " (ವೈ. ಸೂ. ೧–೧–೧೦) ಇತಿ ।

---

1. ಪ್ರಧಾನವೇ ಅವಸ್ಥಾಭೇದದಿಂದ ಮಹತ್ತು, ಅಹಂಕಾರ– ಮುಂತಾದ ಶಬ್ದಪ್ರತ್ಯಯಗಳನ್ನು ಪಡೆಯುತ್ತದೆ ಎಂಬ ಸಾಂಖ್ಯರ ಸಿದ್ಧಾಂತಕ್ಕೂ ನಿಮ್ಮ ಮತಕ್ಕೂ ಭೇದವಿಲ್ಲದೆ ಹೋಗುವದು.

2. ಕಾರ್ಯವು ಮೊದಲು ಇಲ್ಲದೆ ಇದ್ದು ಹೊಸದಾಗಿ ಹುಟ್ಟಿ ಕಾರಣದೊಡನೆ ಸಮವಾಯಸಂಬಂಧದಿಂದ ಸೇರಿಕೊಳ್ಳುವದೆಂಬ ಸಿದ್ಧಾಂತವು ಸುಳ್ಳಾಗುವದು ಎಂದರ್ಥ.

3. ಆರು ಬೇರೆಬೇರೆಯ ಪದಾರ್ಥಗಳೆಂಬ ಅಂಗೀಕಾರವು ಹೋಯಿತು ಎಂದರ್ಥ.

ತನ್ತವೋ ಹಿ ಕಾರಣದ್ರವ್ಯಾಣಿ ಕಾರ್ಯದ್ರವ್ಯಂ ಪಟಮ್ ಆರಭನ್ತೇ । ತನ್ತುಗತಾಶ್ಚ ಗುಣಾಃ ಶುಕ್ಲಾದಯಃ ಕಾರ್ಯದ್ರವ್ಯೇ ಪಟೇ ಶುಕ್ಲಾದಿಗುಣಾನ್ತರಮ್ ಆರಭನ್ತೇ ಇತಿ ಹಿ ತೇ ಅಭ್ಯುಪಗಚ್ಛನ್ತಿ। ಸೋಽಭ್ಯುಪಗಮಃ ದ್ರವ್ಯಗುಣಯೋಃ ಅಪೃಥಗ್ದೇಶತ್ವೇ ಅಭ್ಯುಪಗಮ್ಯಮಾನೇ ಬಾಧ್ಯೇತ। ಅಥ ಅಪೃಥಕ್ಕಾಲತ್ವಮ್ ಅಯುತಸಿದ್ಧತ್ವಮ್ ಉಚ್ಯೇತ, ಸವ್ಯದಕ್ಷಿಣಯೋರಪಿ ಗೋವಿಷಾಣಯೋಃ ಅಯುತಸಿದ್ಧತ್ವಂ ಪ್ರಸಜ್ಯೇತ। ತಥಾ ಅಪೃಥಕ್ಸ್ವಭಾವತ್ವೇ ತು ಅಯುತಸಿದ್ಧತ್ವೇ ನ ದ್ರವ್ಯಗುಣಯೋಃ ಆತ್ಮಭೇದಃ ಸಂಭವತಿ । ತಸ್ಯ ತಾದಾತ್ಮ್ಯೇನೈವ ಪ್ರತೀಯಮಾನತ್ವಾತ್ । ಯುತಸಿದ್ಧಯೋಃ ಸಂಬನ್ಧಃ ಸಂಯೋಗಃ ಅಯುತಸಿದ್ಧಯೋಸ್ತು ಸಮವಾಯಃ ಇತ್ಯಯಮ್ ಅಭ್ಯುಪಗಮೋ ಮೃಷೈವ ತೇಷಾಮ್ । ಪ್ರಾಕ್ಸಿದ್ಧಸ್ಯ ಕಾರ್ಯಾತ್ ಕಾರಣಸ್ಯ ಅಯುತಸಿದ್ಧತ್ವಾನುಪಪತ್ತೇಃ । ಅಥ ಅನ್ಯತರಾಪೇಕ್ಷ ಏವ ಅಯಮ್ ಅಭ್ಯುಪಗಮಃ ಸ್ಯಾತ್, ಅಯುತಸಿದ್ಧಸ್ಯ ಕಾರ್ಯಸ್ಯ ಕಾರಣೇನ ಸಂಬನ್ಧಃ ಸಮವಾಯಃ ಇತಿ । ಏವಮಪಿ ಪ್ರಾಕ್ ಅಸಿದ್ಧಸ್ಯ ಅಲಬ್ಧಾತ್ಮಕಸ್ಯ ಕಾರ್ಯಸ್ಯ ಕಾರಣೇನ ಸಂಬನ್ಧೋ ನೋಪಪದ್ಯತೇ। ದ್ವಯಾಯತ್ತತ್ವಾತ್ ಸಂಬನ್ಧಸ್ಯ। ಸಿದ್ಧಂ ಭೂತ್ವಾ ಸಂಬಧ್ಯತೇ ಇತಿ ಚೇತ್ ನ। ಪ್ರಾಕ್ ಕಾರಣಸಂಬನ್ಧಾತ್ ಕಾರ್ಯಸ್ಯ ಸಿದ್ಧೌ ಅಭ್ಯುಪಗಮ್ಯಮಾನಾಯಾಮ್ ಅಯುತಸಿದ್ಧ್ಯಭಾವಾತ್ ಕಾರ್ಯಕಾರಣಯೋಃ ಸಂಯೋಗವಿಭಾಗೌ ನ ವಿದ್ಯೇತೇ ಇತೀದಂ ದುರುಕ್ತಂ ಸ್ಯಾತ್ । ಯಥಾ ಚ ಉತ್ಪನ್ನಮಾತ್ರಸ್ಯ ಅಕ್ರಿಯಸ್ಯ ಕಾರ್ಯದ್ರವ್ಯಸ್ಯ ವಿಭುಭಿಃ ಆಕಾಶಾದಿಭಿಃ ದ್ರವ್ಯಾನ್ತರೈಃ ಸಂಬನ್ಧಃ ಸಂಯೋಗ ಏವ ಅಭ್ಯುಪಗಮ್ಯತೇ ನ ಸಮವಾಯಃ, ಏವಂ ಕಾರಣದ್ರವ್ಯೇಣಾಪಿ ಸಂಬನ್ಧಃ ಸಂಯೋಗ ಏವ ಸ್ಯಾತ್ ನ ಸಮವಾಯಃ ||

( ಭಾಷ್ಯಾರ್ಥ )

(ವೈಶೇಷಿಕ) :– ದ್ರವ್ಯಗುಣಗಳು **ಅಯುತಸಿದ್ಧ**ವಾಗಿರುವದರಿಂದ ಗುಣಗಳು ದ್ರವ್ಯಕ್ಕೆ ಅಧೀನವಾಗಿರುತ್ತವೆ ಎಂದರೊ ?

(ಸಿದ್ಧಾಂತಿ) :– ಆ ಅಯುತಸಿದ್ಧತ್ವವೆಂಬುದು ಬೇರೆಯ ದೇಶದಲ್ಲಿರುವದಲ್ಲ ಎಂದೋ, ಬೇರೆಯ ಕಾಲದಲ್ಲಿರುವದಲ್ಲ ಎಂದೋ, ಅಥವಾ ಬೇರೆಯ ಸ್ವಭಾವದ್ದಲ್ಲ ಎಂದೋ ಆಗಬಹುದಷ್ಟೆ. ಹೇಗೂ (ಇದು) ಹೊಂದುವದಿಲ್ಲ.

---

1. ಅಯುತಸಿದ್ಧವೆಂದರೆ ಒಂದನ್ನು ಬಿಟ್ಟೊಂದು ಇಲ್ಲದಿರುವದು. ಇದರ ಅರ್ಥವಿವರವನ್ನು ಮುಂದಿನ ವಾಕ್ಯದಲ್ಲಿ ವಿಚಾರಮಾಡಿರುತ್ತದೆ.

ಮೊದಲನೆಯದಾಗಿ ಅಪೃಥಗ್ದೇಶತ್ವವೇ (ಅಯುತಸಿದ್ಧತ್ವ) ಎಂದರೆ ತಮ್ಮ ಅಭ್ಯುಪಗಮಕ್ಕೇ[1] ವಿರೋಧವಾಗುವದು. ಹೇಗೆಂದರೆ ನೂಲುಗಳಿಂದ ಆರಬ್ಧ ವಾದ ಬಟ್ಟೆಯು ನೂಲುಗಳ ದೇಶದಲ್ಲಿರುತ್ತದೆ, ಬಟ್ಟೆಯ ದೇಶದಲ್ಲಿರುವದಿಲ್ಲ, ಬಟ್ಟೆಯ ಗುಣವಾದ ಬಿಳುಪು ಮುಂತಾದವುಗಳು ಬಟ್ಟೆಯ ದೇಶದಲ್ಲಿರುತ್ತವೆ ಯೇ ಹೊರತು ನೂಲುಗಳ ದೇಶದಲ್ಲಿರುವದಿಲ್ಲ. ಆದ್ದರಿಂದಲೇ "ದ್ರವ್ಯಾಣಿ ದ್ರವ್ಯಾನ್ತರಮಾರಭನ್ತೇ ಗುಣಾಶ್ಚ ಗುಣಾನ್ತರಮ್" (ವೈ. ೧-೧-೧೦) ದ್ರವ್ಯ ಗಳು ಬೇರೆಯ ದ್ರವ್ಯಗಳನ್ನೂ ಗುಣಗಳು ಬೇರೆಯ ಗುಣಗಳನ್ನೂ ಆರಂಭಿಸು ತ್ತವೆ[2] - ಎಂದು (ಕಣಾದರು) ಹೇಳಿರುತ್ತಾರೆ. ಕಾರಣದ್ರವ್ಯವಾದ ನೂಲು ಗಳು ಕಾರ್ಯದ್ರವ್ಯವಾದ ಬಟ್ಟೆಯನ್ನು ಆರಂಭಿಸುತ್ತವೆ- ಎಂದೂ ನೂಲು ಗಳಲ್ಲಿರುವ ಬಿಳುಪು ಮುಂತಾದ ಗುಣಗಳು ಬಟ್ಟೆಯಲ್ಲಿ ಬೇರೆ ಗುಣಗಳನ್ನು ಆರಂಭಿಸುತ್ತವೆ ಎಂದೂ ಅಲ್ಲವೆ, ಅವರು ಒಪ್ಪಿರುವದು ? ದ್ರವ್ಯಗುಣಗಳು ಅಪೃಥಗ್ದೇಶದಲ್ಲಿರುವವು ಎಂದು ಒಪ್ಪಿದರೆ ಆ (ದ್ರವ್ಯಗುಣಾರಂಭಕತ್ವ ನಿಯಮದ) ಅಭ್ಯುಪಗಮವು ಬಾಧಿತವಾಗುತ್ತದೆ.[3] ಇನ್ನು ಅಪೃಥಕ್ಕಾಲತ್ವವೇ ಅಯುತಸಿದ್ಧತ್ವವು ಎಂದು ಹೇಳುವದಾದರೆ ಎತ್ತಿನ ಎಡಬಲದ ಕೋಡುಗಳು ಕೂಡ ಅಯುತಸಿದ್ಧವಾಗಬೇಕಾಗುವದು. ಮತ್ತು ಅಪೃಥಕ್ಸ್ವಭಾವವೇ ಅಯುತ ಸಿದ್ಧವೆಂದಾದರೆ (ಆಗ) ದ್ರವ್ಯಗುಣಗಳಿಗೆ ಸ್ವರೂಪಭೇದವು ಇರುವಹಾಗಿಲ್ಲ. ಏಕೆಂದರೆ ಅದು ತಾದಾತ್ಮ್ಯವೆಂದೇ ತೋರುತ್ತದೆ[4].

ಯುತಸಿದ್ಧ(ವಸ್ತುಗಳಿಗೆ) ಸಂಯೋಗ(ಸಂಬಂಧವಿರುತ್ತದೆ). ಅಯುತ ಸಿದ್ಧ(ವಸ್ತು)ಗಳಿಗೆ ಮಾತ್ರ ಸಮವಾಯ(ಸಂಬಂಧವಿರುತ್ತದೆ) - ಎಂಬೀ ಅವರ ಅಭ್ಯುಪಗಮವು ಹುಸಿಯೇ ; ಏಕೆಂದರೆ ಕಾರ್ಯಕ್ಕಿಂತಲೂ ಮೊದಲು ಸಿದ್ಧ ವಾಗಿರುವ ಕಾರಣವು ಅಯುತಸಿದ್ಧವೆಂಬುದೇ ಹೊಂದುವದಿಲ್ಲ.

ಇನ್ನು ಹೀಗಲ್ಲದೆ (ಈ ಎರಡರಲ್ಲಿ) ಒಂದಕ್ಕೇ ಈ ಅಭ್ಯುಪಗಮವು (ಸೇರಿದ್ದು), ಅಯುತಸಿದ್ಧವಾದ ಕಾರ್ಯಕ್ಕೆ ಕಾರಣದೊಡನೆ (ಇರುವ) ಸಂಬಂಧ

1. ಅವರು ಒಪ್ಪಿರುವದಕ್ಕೇ ಎಂದರ್ಥ

2. ದ್ರವ್ಯಗಳು ದ್ರವ್ಯಗಳಿಗೂ ಗುಣಗಳು ಗುಣಗಳಿಗೂ ಕಾರಣವಾಗಿರುತ್ತವೆ. ಎಂದರ್ಥ.

3. ಏಕೆಂದರೆ ಆ ಅಭ್ಯುಪಗಮದಂತೆ ದ್ರವ್ಯಗುಣಗಳು ಬೇರೆಬೇರೆಯ ದೇಶದಲ್ಲಿ ಯೇ ಇರಬೇಕಾಗುತ್ತದೆ.

4. ಬೇರೆಯ ಸ್ವಭಾವವಿಲ್ಲದಿದ್ದರೆ ತಾದಾತ್ಮ್ಯವೇ ಆಗುತ್ತದೆ ; ಗುಣವೇ ದ್ರವ್ಯ ವಾಗಿ ಬಿಳಿಯಬಟ್ಟೆ ಎಂದೇ ತೋರುತ್ತದೆ ; ಬಟ್ಟೆಯಲ್ಲಿ ಬಿಳುಪು ಎಂದೇನೂ ತೋರು ವದಿಲ್ಲವಾಗಿ ಸಮವಾಯಸಂಬಂಧಕ್ಕೆ ಕಾರಣವೇ ಇರುವದಿಲ್ಲ- ಎಂದರ್ಥ.

ವು ಸಮವಾಯವು —ಎನ್ನಬಹುದು[1] ಹಾಗಾದರೂ ಮೊದಲು ಸಿದ್ಧವಾಗದೆ ಸ್ವರೂಪವನ್ನೇ ಪಡೆದುಕೊಳ್ಳದೆ ಇದ್ದ ಕಾರ್ಯಕ್ಕೆ ಕಾರಣದೊಡನೆ ಸಂಬಂಧವು ಹೊಂದುವದಿಲ್ಲ; ಏಕೆಂದರೆ ಸಂಬಂಧವೆಂಬುದು ಎರಡನ್ನಾಶ್ರಯಿಸಿಕೊಂಡಿರುವದಾಗಿದೆ. ಸಿದ್ಧವಾದ ಬಳಿಕ ಸಂಬದ್ಧವಾಗಬಹುದಲ್ಲ! —ಎಂದರೆ ಕಾರಣದೊಡನೆ ಸಂಬಂಧವಾಗುವ ಮುಂಚೆಯೇ (ಅದಕ್ಕೆ) ಸಿದ್ಧಿಯನ್ನು ಒಪ್ಪಿದರೆ ಅಯುತಸಿದ್ಧಿಯಿಲ್ಲದ್ದರಿಂದ ಕಾರ್ಯಕಾರಣಗಳಿಗೆ ಸಂಯೋಗವಿಭಾಗಗಳು ಇರುವದಿಲ್ಲ ಎಂಬುದು ತಪ್ಪುಹೇಳಿಕೆಯಾಗುವದು. ಯಾವ ಕಾರ್ಯದ್ರವ್ಯವೇ ಆಗಲಿ, ಹುಟ್ಟಿದ ಮಾತ್ರದಿಂದ ವಿಭುಗಳಾದ ಆಕಾಶವೇ ಮುಂತಾದ (ದ್ರವ್ಯಗಳೊಡನೆ) ಸಂಯೋಗಸಂಬಂಧವೇ ಆಗುವದೆಂದು ಹೇಗೆ ಒಪ್ಪಿರುತ್ತೀರೋ, ಸಮವಾಯವಾಗುವದೆಂದು ಒಪ್ಪುವದಿಲ್ಲವೋ, ಹಾಗೆಯೇ ಕಾರಣದ್ರವ್ಯದೊಡನೆಯೂ (ಕಾರ್ಯಕ್ಕೆ) ಆಗುವ ಸಂಬಂಧವು ಸಂಯೋಗವೇ ಆದೀತೇ ಹೊರತು ಸಮವಾಯವಾಗಲಾರದು.

## ಸಂಯೋಗಸಮವಾಯಗಳೆಂಬ ಪದಾರ್ಥಗಳೇ ಇಲ್ಲ

(ಭಾಷ್ಯ)

೩೭. ನಾಪಿ ಸಂಯೋಗಸ್ಯ ಸಮವಾಯಸ್ಯ ವಾ ಸಂಬನ್ಧಸ್ಯ ಸಂಬನ್ಧಿವ್ಯತಿರೇಕೇಣ ಅಸ್ತಿತ್ವೇ ಕಿಂಚಿತ್ ಪ್ರಮಾಣಮ್ ಅಸ್ತಿ। ಸಂಬನ್ಧಿಶಬ್ದಪ್ರತ್ಯಯವ್ಯತಿರೇಕೇಣ ಸಂಯೋಗಸಮವಾಯಶಬ್ದಪ್ರತ್ಯಯದರ್ಶನಾತ್ ತಯೋರಸ್ತಿತ್ವಮ್ ಇತಿ ಚೇತ್। ನ। ಏಕತ್ವೇಽಪಿ ಸ್ವರೂಪಬಾಹ್ಯರೂಪಾಪೇಕ್ಷಯಾ ಅನೇಕಶಬ್ದಪ್ರತ್ಯಯದರ್ಶನಾತ್। ಯಥಾ ಏಕೋಽಪಿ ಸನ್ ದೇವದತ್ತೋ ಲೋಕೇ ಸ್ವರೂಪಂ ಸಂಬನ್ಧಿರೂಪಂ ಚ ಅಪೇಕ್ಷ್ಯ ಅನೇಕಶಬ್ದಪ್ರತ್ಯಯಭಾಗ್ ಭವತಿ, ಮನುಷ್ಯಃ, ಬ್ರಾಹ್ಮಣಃ, ಶ್ರೋತ್ರಿಯಃ, ವದಾನ್ಯಃ, ಬಾಲಃ, ಯುವಾ, ಸ್ಥವಿರಃ, ಪಿತಾ, ಪುತ್ರಃ, ಪೌತ್ರಃ, ಭ್ರಾತಾ, ಜಾಮಾತಾ ಇತಿ। ಯಥಾ ಚ ಏಕಾಪಿ ಸತೀ ರೇಖಾ ಸ್ಥಾನಾನ್ಯತ್ವೇನ ನಿವಿಶಮಾನಾ ಏಕದಶಶತಸಹಸ್ರಾದಿಶಬ್ದಪ್ರತ್ಯಯಭೇದಮ್ ಅನುಭವತಿ, ತಥಾ ಸಂಬನ್ಧಿನೋರೇವ ಸಂಬನ್ಧಿಶಬ್ದಪ್ರತ್ಯಯವ್ಯತಿರೇಕೇಣ ಸಂಯೋಗಸಮವಾಯಶಬ್ದಪ್ರತ್ಯಯಾರ್ಹತ್ವಮ್ ನ ವ್ಯತಿರಿಕ್ತವಸ್ತ್ವಸ್ತಿತ್ವೇನ ಇತಿ ಉಪಲಬ್ಧಿಲಕ್ಷಣಪ್ರಾಪ್ತಸ್ಯ ಅನುಪಲಬ್ಧೇಃ ಅಭಾವೋ ವಸ್ತ್ವನ್ತರಸ್ಯ। ನಾಪಿ ಸಂಬನ್ಧಿವಿಷಯತ್ವೇ ಸಂಬನ್ಧಶಬ್ದಪ್ರತ್ಯಯ-

---

1. ಕಾರಣವು ಸ್ವತಂತ್ರವಾಗಿರುವದರಿಂದ ಯುತಸಿದ್ಧವು, ಎಂದರೆ ಪೃಥಕ್ಸಿದ್ಧವು; ಆದರೆ ಕಾರ್ಯವು ಕಾರಣವನ್ನು ಬಿಟ್ಟು ಇರುವದಿಲ್ಲವಾದ್ದರಿಂದ ಅಯುತಸಿದ್ಧವು ಎನ್ನುವದಾದರೆ ಈ ಮುಂದಿನ ದೋಷವನ್ನು ಹೇಳುವೆವು ಎಂದು ಅಭಿಪ್ರಾಯ.

ಯೋಃ ಸನ್ತತಭಾವಪ್ರಸಙ್ಗಃ। ಸ್ವರೂಪಬಾಹ್ಯರೂಪಾಪೇಕ್ಷಯಾ ಇತಿ ಉಕ್ತೋ ತ್ತರತ್ವಾತ್ ॥

(ಭಾಷ್ಯಾರ್ಥ)

ಇದಲ್ಲದೆ ಸಂಯೋಗ, ಅಥವಾ ಸಮವಾಯ ಎಂಬ **ಸಂಬಂಧವು ಸಂಬಂಧಿಗಳಿಗಿಂತ ಬೇರೆಯಾಗಿ ಇರುವದೆನ್ನುವದಕ್ಕೆ ಯಾವ ಪ್ರಮಾಣವೂ ಇರುವದಿಲ್ಲ.**

(ಆಕ್ಷೇಪ):—ಸಂಬಂಧಿಶಬ್ದಪ್ರತ್ಯಯಗಳಿಗಿಂತ ಬೇರೆಯಾಗಿ ಸಂಯೋಗ, ಸಮವಾಯ-- ಎಂಬ ಶಬ್ದಪ್ರತ್ಯಯಗಳು ಕಾಣಬರುವದರಿಂದ ಅವೂ ಇರಬೇಕಲ್ಲವೆ ?

(ಪರಿಹಾರ) :— ಹಾಗಲ್ಲ. ಏಕೆಂದರೆ **(ವಸ್ತು) ಒಂದೇ ಆಗಿದ್ದರೂ ತನ್ನ ರೂಪ, ಹೊರಗಿನ (ವಸ್ತುವಿನ) ರೂಪ- ಇವುಗಳ ಅಪೇಕ್ಷೆಯಿಂದ ಅನೇಕಶಬ್ದಪ್ರತ್ಯಯಗಳು ಕಂಡುಬರುತ್ತವೆ.**[1] (ಇದರ ವಿವರ):— ಹೇಗೆ ಲೋಕದಲ್ಲಿ ದೇವದತ್ತನು (ತಾನು) ಒಬ್ಬನೇ ಆಗಿದ್ದರೂ ತನ್ನ ರೂಪವನ್ನೂ ಸಂಬಂಧಿಯ ರೂಪವನ್ನೂ ಅಪೇಕ್ಷಿಸಿ ಮನುಷ್ಯನು, ಬ್ರಾಹ್ಮಣನು, ಶ್ರೋತ್ರಿಯನು, ದಾನಿಯು, ಹುಡುಗನು, ಯುವಕನು, ಮುದುಕನು, ತಂದೆ, ಮಗನು, ಮೊಮ್ಮಗನು, ಒಡಹುಟ್ಟಿದವನು, ಅಳಿಯನು— ಎಂದು ಅನೇಕ ಶಬ್ದಪ್ರತ್ಯಯಗಳಿಗೆ ವಿಷಯವಾಗುವನೋ ಮತ್ತು ಹೇಗೆ ಗೆರೆಯು ಒಂದೇ ಆಗಿದ್ದರೂ ಬೇರೆಬೇರೆಯ ಸ್ಥಾನದಲ್ಲಿ ಇಟ್ಟಿದ್ದರಿಂದ ಒಂದು, ಹತ್ತು, ನೂರು, ಸಾವಿರ– ಮುಂತಾದ ಬೇರಬೇರೆಯ ಶಬ್ದಪ್ರತ್ಯಯಗಳನ್ನು ಅನುಭವಿಸುವದೋ ಹಾಗೆಯೇ ಸಂಬಂಧಿಗಳೇ[2] ಸಂಬಂಧಿಶಬ್ದಪ್ರತ್ಯಯಗಳಿಗಿಂತ ಬೇರೆಯಾಗಿ ಸಂಯೋಗ, ಸಮವಾಯ– ಎಂಬ ಶಬ್ದಪ್ರತ್ಯಯಗಳಿಗೆ ತಕ್ಕವಾಗುವವೇ ಹೊರತು ಬೇರೆಯಾಗಿರುವದರಿಂದಲ್ಲ ; ಆದ್ದರಿಂದ **ಉಪಲಬ್ಧಿಪ್ರಮಾಣಕ್ಕೆ ಪ್ರಾಪ್ತವಾದ ವಸ್ತ್ವಂತರವು**

---

1. ಪ್ರತೀತಿಯಿಂದಲೇ ವಸ್ತ್ವಂತರಸತ್ತ್ವವನ್ನು ಸಾಧಿಸುವ ತಾರ್ಕಿಕರಿಗೆಲ್ಲ ಇದು ಉತ್ತರವು.

2. ಕಾರ್ಯಕಾರಣಗಳಿಗೆ ತಾದಾತ್ಮ್ಯವೇ ಇದ್ದರೂ ಅನಿರ್ವಾಚ್ಯವಾದ ಕಾರ್ಯಕ್ಕೆ ಭೇದವನ್ನು ಹೇಳಬೇಕೆಂಬ ಅಭಿಪ್ರಾಯದಿಂದ 'ಸಂಬಂಧಿಗಳೇ' ಎಂದು ಪ್ರಯೋಗಿಸಿದೆ ಎಂದು ಭಾಮತೀವ್ಯಾಖ್ಯಾನ. ಪೂರ್ವಪಕ್ಷಿಯ ಮತದಂತೆ ಸಂಬಂಧಗಳನ್ನು ಒಪ್ಪದೆ ಇದ್ದರೂ ಸಂಬಂಧಿಗಳಿಗೆ ಆ ಶಬ್ದಪ್ರತ್ಯಯಗಳಾಗುವವೆಂದು ಹೇಳುವದಕ್ಕೆ ಬರುತ್ತದೆ ಎಂದು ಭಾಷ್ಯಕ್ಕೆ ಅರ್ಥವನ್ನು ಮಾಡಿದರೆ ಅನಿರ್ವಾಚ್ಯಪರಿಭಾಷೆಯು ಹಾಗೇ ಇರುವದಿಲ್ಲ ; ಅನಿರ್ವಾಚ್ಯವಾದದ್ದು ಭಿನ್ನವೆಂದು ಕಲ್ಪಿಸುವ ವ್ಯಾಘಾತವೂ ತಟ್ಟುವದಿಲ್ಲ.

**ಕಾಣದೆ ಇರುವದರಿಂದ (ಅದು) ಇಲ್ಲ(ವೆನ್ನಬೇಕು).**[1] ಸಂಬಂಧ ಎಂಬ ಶಬ್ದಪ್ರತ್ಯಯಗಳು ಸಂಬಂಧಿಗಳ ವಿಷಯವಾದವು ಎನ್ನುವದಾದರೆ ಸಂಬಂಧ ಶಬ್ದಪ್ರತ್ಯಯಗಳು ಯಾವಾಗಲೂ ಇರಬೇಕಾಗುವ ಪ್ರಸಂಗವೇನೂ ಇಲ್ಲ.[2] ಏಕೆಂದರೆ 'ಸ್ವರೂಪಬಾಹ್ಯರೂಪಾಪೇಕ್ಷೆಯಿಂದ' (ಅನೇಕ ಶಬ್ದಪ್ರತ್ಯಯ ವಿಷಯತ್ವವುಂಟಾಗುತ್ತದೆ) ಎಂದು (ಇದಕ್ಕೆ) ಉತ್ತರವನ್ನು ಹೇಳಿದ್ದಾಗಿದೆ.

## ಸಂಯೋಗಸಮವಾಯುಗಳು ಹೊಂದದ ಸ್ಥಲಗಳು

(ಭಾಷ್ಯ)

೩೮. ತಥಾ ಅಣ್ವಾತ್ಮಮನಸಾಮ್ ಅಪ್ರದೇಶತ್ವಾತ್ ನ ಸಂಯೋಗಃ ಸಂಭವತಿ | ಪ್ರದೇಶವತೋ ದ್ರವ್ಯಸ್ಯ ಪ್ರದೇಶವತಾ ದ್ರವ್ಯಾನ್ತರೇಣ ಸಂಯೋಗದರ್ಶನಾತ್ | ಕಲ್ಪಿತಾಃ ಪ್ರದೇಶಾಃ ಅಣ್ವಾತ್ಮಮನಸಾಂ ಭವಿಷ್ಯನ್ತಿ ಇತಿ ಚೇತ್ | ನ | ಅವಿದ್ಯಮಾನಾರ್ಥಕಲ್ಪನಾಯಾಂ ಸರ್ವಾರ್ಥಸಿದ್ಧಿಪ್ರಸಙ್ಗಾತ್| ಇಯಾನೇವ ಅವಿದ್ಯಮಾನೋ ವಿರುದ್ಧಃ ಅವಿರುದ್ಧೋ ವಾ ಅರ್ಥಃ ಕಲ್ಪನೀಯಃ ನ ಅತೋಽಧಿಕಃ ಇತಿ ನಿಯಮಹೇತ್ವಭಾವಾತ್ | ಕಲ್ಪನಾಯಾಶ್ಚ ಸ್ವಾಯತ್ತತ್ವಾತ್ ಪ್ರಭೂತತ್ವಸಂಭವಾಚ್ಚ | ನ ಚ ವೈಶೇಷಿಕೈಃ ಕಲ್ಪಿತೇಭ್ಯಃ ಷಡ್ಭ್ಯಃ ಪದಾರ್ಥೇಭ್ಯಃ ಅನ್ಯೇ ಅಧಿಕಾಃ ಶತಂ ಸಹಸ್ರಂ ವಾ ಅರ್ಥಾಃ ನ ಕಲ್ಪಯಿತವ್ಯಾಃ ಇತಿ ನಿವಾರಕೋ ಹೇತುರಸ್ತಿ | ತಸ್ಮಾತ್ ಯಸ್ಮೈ ಯಸ್ಮೈ ಯದ್ಯತ್ ರೋಚತೇ ತತ್ತತ್ ಸಿಧ್ಯೇತ್ | ಕಶ್ಚಿತ್ ಕೃಪಾಲುಃ ಪ್ರಾಣಿನಾಂ ದುಃಖಬಹುಲಃ ಸಂಸಾರ ಏವ ಮಾಭೂತ್ ಇತಿ ಕಲ್ಪಯೇತ್ | ಅನ್ಯೋ ವಾ ವ್ಯಸನೀ ಮುಕ್ತಾನಾಮಪಿ ಪುನರುತ್ಪತ್ತಿಂ ಕಲ್ಪಯೇತ್ | ಕಸ್ತಯೋರ್ನಿವಾರಕಃ ಸ್ಯಾತ್ ? ಕಿಂ ಚಾನ್ಯತ್ | ದ್ವಾಭ್ಯಾಂ ಪರಮಾಣುಭ್ಯಾಂ ನಿರವಯವಾಭ್ಯಾಂ ಸಾವಯವಸ್ಯ ದ್ವ್ಯಣುಕಸ್ಯ ಆಕಾಶೇನೇವ ಸಂಶ್ಲೇಷಾನುಪಪತ್ತಿಃ । ನ ಹಿ ಆಕಾಶಸ್ಯ ಪೃಥಿವ್ಯಾದೀನಾಂ ಚ ಜತುಕಾಷ್ಠವತ್ ಸಂಶ್ಲೇಷೋಽಸ್ತಿ । ಕಾರ್ಯಕಾರಣದ್ರವ್ಯಯೋಃ ಆಶ್ರಿತಾಶ್ರಯ

---

1. ಯಾವದು ಪ್ರಮಾಣಕ್ಕೆ ಯೋಗ್ಯವೋ ಅದು ಪ್ರಮಾಣದಿಂದ ತಿಳಿದು ಬರಬೇಕು ; ಹಾಗೆ ತಿಳಿದುಬರದೆ ಇರುವದರಿಂದ ಸಂಯೋಗಸಮವಾಯಗಳು ವಸ್ತ್ವಂತರವಲ್ಲ ಎಂದು ಅಭಿಪ್ರಾಯ. ಅನುಪಲಬ್ಧಿಯನ್ನು ಪೂರ್ವಪಕ್ಷಿಯು ಬೇರೊಂದು ಪ್ರಮಾಣವೆಂದು ಒಪ್ಪದಿದ್ದರೂ ಸಂಯೋಗಸಮವಾಯಗಳಿಗೆ ಪ್ರಮಾಣವಿಲ್ಲ ಎಂಬ ಅಭಿಪ್ರಾಯದಲ್ಲಿ ಈ ಯುಕ್ತಿಯು ಕೊನೆಗಾಣುವದು.

2. ಸಂಬಂಧಿಗಳು ಯಾವಾಗಲೂ ಇರುವದರಿಂದ ಸಂಬಂಧಶಬ್ದಪ್ರತ್ಯಯಗಳೂ ಯಾವಾಗಲೂ ಇರಬೇಕಾಗುವದೆಂದು ಶಂಕಿಸುವಹಾಗಿಲ್ಲ ಎಂದರ್ಥ.

ಭಾವೋಽನ್ಯಥಾ ನೋಪಪದ್ಯತೇ ಇತಿ ಅವಶ್ಯಂ ಕಲ್ಪ್ಯಃ ಸಮವಾಯಃ ಇತಿ ಚೇತ್ । ನ । ಇತರೇತರಾಶ್ರಯತ್ವಾತ್ । ಕಾರ್ಯಕಾರಣಯೋರ್ಹಿ ಭೇದಸಿದ್ಧೌ ಆಶ್ರಿತಾಶ್ರಯಭಾವಸಿದ್ಧಿಃ । ಆಶ್ರಿತಾಶ್ರಯಭಾವಸಿದ್ಧೌ ಚ ತಯೋರ್ಭೇದಸಿದ್ಧಿಃ ಕುಣ್ಡಬದರವತ್ ಇತಿ ಇತರೇತರಾಶ್ರಯತಾ ಸ್ಯಾತ್ । ನ ಹಿ ಕಾರ್ಯಕಾರಣಯೋಃ ಭೇದಃ ಆಶ್ರಿತಾಶ್ರಯಭಾವೋ ವಾ ವೇದಾನ್ತವಾದಿಭಿಃ ಽಭ್ಯುಪಗಮ್ಯತೇ । ಕಾರಣಸ್ಯೈವ ಸಂಸ್ಥಾನಮಾತ್ರಂ ಕಾರ್ಯಮ್ ಇತ್ಯಭ್ಯುಪಗಮಾತ್ ॥

(ಭಾಷ್ಯಾರ್ಥ)

ಮತ್ತು ಅಣು, ಆತ್ಮ, ಮನಸ್ಸು– ಇವುಗಳಿಗೆ ಪ್ರದೇಶವಿಲ್ಲದಿರುವದರಿಂದ (ಅವುಗಳಿಗೆ) ಸಂಯೋಗವು ಹೊಂದುವದಿಲ್ಲ. ಏಕೆಂದರೆ ಪ್ರದೇಶವುಳ್ಳ ದ್ರವ್ಯಕ್ಕೆ ಪ್ರದೇಶವುಳ್ಳ ಮತ್ತೊಂದು ದ್ರವ್ಯದೊಡನೆ ಸಂಯೋಗವು ಕಂಡುಬರುತ್ತದೆ.

(ಆಕ್ಷೇಪ):— ಅಣ್ವಾತ್ಮಮನಸ್ಸುಗಳಿಗೆ ಕಲ್ಪಿತಪ್ರದೇಶಗಳು ಇರಬಹುದಲ್ಲ !

(ಪರಿಹಾರ) :— ಹಾಗಲ್ಲ. ಏಕೆಂದರೆ **ಇಲ್ಲದ ಅರ್ಥವನ್ನು ಕಲ್ಪಿಸುವದಾದರೆ ಎಲ್ಲಾ ಪದಾರ್ಥಗಳೂ ಸಿದ್ಧಿಯಾಗುವ ಪ್ರಸಂಗವು ಬಂದೀತು.** ಇಲ್ಲದಿರುವ ವಿರುದ್ಧವಾದ ಅಥವಾ ಅವಿರುದ್ಧವಾದ ಅರ್ಥವನ್ನು ಇಷ್ಟನ್ನೇ ಕಲ್ಪಿಸಬೇಕು, [1]ಇದಕ್ಕಿಂತ ಹೆಚ್ಚು (ಕಲ್ಪಿಸ)ಬಾರದು ಎಂಬ ನಿಯಮಕ್ಕೆ ಹೇತುವಿರುವದಿಲ್ಲ. ಕಲ್ಪನೆಯು ತನ್ನ ಅಧೀನವಾಗಿರುವದರಿಂದ ಬೇಕಾದಷ್ಟು (ಸಿದ್ಧ)ವಾಗಬಹುದಾಗಿದೆ. ವೈಶೇಷಿಕರು ಕಲ್ಪಿಸಿರುವ ಆರು ಪದಾರ್ಥಗಳಿಗಿಂತ ಹೆಚ್ಚಾಗಿ ಬೇರೆ ನೂರು ಅಥವಾ ಸಾವಿರ ಪದಾರ್ಥಗಳನ್ನು ಕಲ್ಪಿಸಬಾರದು ಎಂದು ಅಡ್ಡಿಮಾಡುವ ಹೇತುವೂ ಇಲ್ಲ. ಆದ್ದರಿಂದ ಯಾನಯಾನನಿಗೆ ಯಾವಯಾವದು ರುಚಿಸುವದೋ ಅದದು ಸಿದ್ಧವಾಗಬಹುದಾಗುವದು. ಯಾವನೋ ಒಬ್ಬ ಕೃಪಾಲುವು ಪ್ರಾಣಿಗಳಿಗೆ ದುಃಖಬಹುಲವಾಗಿರುವ ಸಂಸಾರವೇ ಇರಬಾರದು ಎಂದು ಕಲ್ಪಿಸಬಹುದು. ಅಥವಾ ಮತ್ತೊಬ್ಬ ವ್ಯಸನಿಯಾದವನು ಮುಕ್ತರಿಗೂ ಪುನರುತ್ಪತ್ತಿಯನ್ನು ಕಲ್ಪಿಸಬಹುದು. ಅವರಿಬ್ಬರನ್ನೂ ನಿವಾರಿಸುವವನು ಯಾವನಿರುವನು ?

ಇನ್ನೂ ಒಂದು (ವಿಷಯ). ಸಾವಯವವಾದ ದ್ವ್ಯಣುಕಕ್ಕೆ ಆಕಾಶದೊಡನೆ (ಹೇಗೆ ಸಂಯೋಗವಿರಲಾರದೋ) ಹಾಗೆ ನಿರವಯವವಾದ ಎರಡು

---

1. ಹಿಂದಿನ ಭಾ. ಭಾ. ದಲ್ಲಿ ಸಂಯೋಗವೆಂಬ ಸಂಬಂಧವೇ ಇಲ್ಲವೆಂದು ವಾದಿಸಿದ್ದರೂ ಇಲ್ಲಿ ಸಂಯೋಗವ್ಯವಹಾರವನ್ನು ಮಾತ್ರ ಒಪ್ಪಿ ಹೀಗೆಂದಿದೆ.

ಪರಮಾಣುಗಳೊಡನೆ ಸಂಬಂಧವುಂಟಾಗಲಾರದು. ಆಕಾಶಕ್ಕೂ ಪೃಥಿವ್ಯಾದಿಗಳಿಗೂ ಅರಗುಕಟ್ಟಿಗೆಗಳಿಗೆ ಇರುವಂಥ ಸಂಬಂಧವಿಲ್ಲವಷ್ಟೆ.

(ಆಕ್ಷೇಪ):– ಕಾರ್ಯಕಾರಣದ್ರವ್ಯಗಳಿಗೆ ಆಶ್ರಿತಾಶ್ರಯಭಾವವು ಬೇರೆಯ ರೀತಿಯಿಂದ ಹೊಂದುವದಿಲ್ಲವಾದ್ದರಿಂದ ಸಮವಾಯವನ್ನು ಅವಶ್ಯವಾಗಿ ಕಲ್ಪಿಸಬೇಕಾಗುವದಿಲ್ಲವೆ ?

(ಪರಿಹಾರ):– ಇಲ್ಲ. ಏಕೆಂದರೆ (ಆಗ) ಇತರೇತರಾಶ್ರಯವಾಗುವದು. ಕಾರ್ಯಕಾರಣಗಳಿಗೆ ಭೇದವು ಸಿದ್ಧಿಸಿದರೆ ಆಶ್ರಿತಾಶ್ರಯಭಾವವು ಸಿದ್ಧಿಸುವದು; ಮತ್ತು ಆಶ್ರಿತಾಶ್ರಯಭಾವವು ಸಿದ್ಧಿಸಿದರೆ ಅವುಗಳಿಗೆ ಕುಂಡಬದರಗಳಿಗಿರುವಂತೆ ಭೇದವು ಸಿದ್ಧಿಸುವದು– ಎಂದು (ಅನ್ಯೋನ್ಯಾಶ್ರಯವುಂಟಾಗುವದು). ಕಾರ್ಯಕಾರಣಗಳಿಗೆ ಭೇದವನ್ನಾಗಲಿ ಆಶ್ರಿತಾಶ್ರಯಭಾವವನ್ನಾಗಲಿ ವೇದಾಂತವಾದಿಗಳು ಅಂಗೀಕರಿಸುವದೇ ಇಲ್ಲ ; ಏಕೆಂದರೆ ಕಾರಣದ ಆಕಾರವಿಶೇಷವೇ ಕಾರ್ಯವು ಎಂದು (ಅವರು) ಅಂಗೀಕರಿಸಿರುತ್ತಾರೆ.[1]

## ಪರಮಾಣುವಿಷಯದ ಅನುಪಪತ್ತಿಗಳು

### (ಭಾಷ್ಯ)

೩೯ ಕಿಂ ಚ ಅನ್ಯತ್ । ಪರಮಾಣೂನಾಂ ಪರಿಚ್ಛಿನ್ನತ್ವಾತ್ ಯಾವತ್ಯೋ ದಿಶಃ ಷಟ್ ಅಷ್ಟೌ ದಶ ವಾ ತಾವದ್ಭಿಃ ಅವಯವೈಃ ಸಾವಯವಾಃ ತೇ ಸ್ಯುಃ. ಸಾವಯವತ್ವಾತ್ ಅನಿತ್ಯಾಶ್ಚ ಇತಿ ನಿತ್ಯತ್ವನಿರವಯವತ್ವಾಭ್ಯುಪಗಮೋ ಬಾಧ್ಯೇತ। ಯಾಂ ಸ್ತ್ವಂ ದಿಗ್ಭೇದಭೇದಿನೋಽವಯವಾನ್ ಕಲ್ಪಯಸಿ, ತ ಏವ ಪರಮಾಣವಃ ಇತಿ ಚೇತ್ । ನ । ಸ್ಥೂಲಸೂಕ್ಷ್ಮತಾರತಮ್ಯಕ್ರಮೇಣ ಆಪರಮಕಾರಣಾತ್ ವಿನಾಶೋಪಪತ್ತೇಃ । ಯಥಾ ಪೃಥಿವೀ ದ್ವ್ಯಣುಕಾದ್ಯಪೇಕ್ಷಯಾ ಸ್ಥೂಲತಮಾ ವಸ್ತುಭೂತಾಪಿ ವಿನಶ್ಯತಿ, ತತಃ ಸೂಕ್ಷ್ಮಸೂಕ್ಷ್ಮತರಂ ಚ ಪೃಥಿವ್ಯೇಕಜಾತೀಯಕಂ ವಿನಶ್ಯತಿ, ತತೋ ದ್ವ್ಯಣುಕಮ್, ತಥಾ ಪರಮಾಣವೋಽಪಿ ಪೃಥಿವ್ಯೇಕಜಾತೀಯಕತ್ವಾತ್ ವಿನಶ್ಯೇಯುಃ । ವಿನಶ್ಯನ್ತಃ ಅವಯವವಿಭಾಗೇನೈವ ವಿನಶ್ಯನ್ತಿ ಇತಿ ಚೇತ್। ನಾಯಂ ದೋಷಃ ಯತಃ ಘೃತಕಾಠಿನ್ಯವಿಲಯನವದಪಿ ವಿನಾಶೋಪಪತ್ತಿಮ್ ಅವೋಚಾಮ । ಯಥಾ ಹಿ ಘೃತಸುವರ್ಣಾದೀನಾಮ್ ಅವಿಭಜ್ಯಮಾನಾವಯವಾನಾಮಪಿ

1. ಇದು ವ್ಯಾವಹಾರಿಕದೃಷ್ಟಿಯಿಂದ ಸಾಂಖ್ಯರ ಪ್ರಕ್ರಿಯೆಯನ್ನು ಒಪ್ಪಿ ಹೇಳಿದ್ದು. ಕಾರಣವು ಕಾರ್ಯದ ಆಕಾರದಲ್ಲಿರುವಂತೆ ತೋರುವದೆಂಬುದೇ ವೇದಾಂತಿಗಳಿಗೆ ನಿಜವಾಗಿ ಒಪ್ಪು. ಗೀ. ಭಾ. ೧೮_೪೯ (ಭಾ. ಭಾ. ೫೪೬, ೫೪೯) ನೋಡಿ.

ಅಗ್ನಿಸಂಯೋಗಾತ್ ದ್ರವಭಾವಾಪತ್ತ್ಯಾ ಕಾಠಿನ್ಯವಿನಾಶೋ ಭವತಿ, ಏವಂ ಪರಮಾಣೂನಾಮಪಿ ಪರಮಕಾರಣಭಾವಾಪತ್ತ್ಯಾ ಮೂರ್ತ್ಯಾದಿವಿನಾಶೋ ಭವಿಷ್ಯತಿ| ತಥಾ ಕಾರ್ಯಾರಮ್ಭೋಽಪಿ ನಾವಯವಸಂಯೋಗೇನೈವ ಕೇವಲೇನ ಭವತಿ | ಕ್ಷೀರಜಲಾದೀನಾಮ್ ಅನ್ತರೇಣಾಪಿ ಅವಯವಸಂಯೋಗಾನ್ತರಂ ದಧಿಹಿಮಾದಿಕಾರ್ಯಾರಮ್ಭದರ್ಶನಾತ್ । ತದೇವಂ ಅಸಾರತರತರ್ಕಸನ್ದೃಬ್ಧತ್ವಾತ್, ಈಶ್ವರಕಾರಣಶ್ರುತಿವಿರುದ್ಧತ್ವಾತ್, ಶ್ರುತಿಪ್ರವಣೈಶ್ಚ ಶಿಷ್ಟೈರ್ಮನ್ವಾದಿಭಿಃ ಅಪರಿಗೃಹೀತತ್ವಾತ್ ಅತ್ಯನ್ತಮೇವ ಅನಪೇಕ್ಷಾ ಅಸ್ಮಿನ್ ಪರಮಾಣುಕಾರಣವಾದೇ ಕಾರ್ಯಾ ಶ್ರೇಯೋಽರ್ಥಿಭಿಃ ಇತಿ ವಾಕ್ಯಶೇಷಃ ||

(ಭಾಷ್ಯಾರ್ಥ)

ಮತ್ತೊಂದೇನೆಂದರೆ, ಪರಮಾಣುಗಳು ಪರಿಚ್ಛಿನ್ನವಾಗಿರುವದರಿಂದ ದಿಕ್ಕುಗಳು ಎಷ್ಟಿರುವವೋ– ಆರು, ಎಂಟು, ಅಥವಾ, ಹತ್ತು (ಎಷ್ಟು ದಿಕ್ಕುಗಳೋ) ಅಷ್ಟು ಅವಯವಗಳಿರುವದರಿಂದ ಅವು ಸಾವಯವವಾಗಿರಬೇಕು ; ಸಾವಯವವಾಗಿರುವದರಿಂದ ಅನಿತ್ಯವೂ ಆಗಿರಬೇಕು.[1] ಆದ್ದರಿಂದ (ಪರಮಾಣುಗಳು) ನಿತ್ಯ, ನಿರವಯವ ಎಂದು (ವೈಶೇಷಿಕರ) ಅಭ್ಯುಪಗಮವು ಬಾಧಿತವಾಗುವದು.

(ವೈಶೇಷಿಕ) :— ಬೇರೆಬೇರೆಯ ದಿಕ್ಕುಗಳಿಂದ ಬೇರೆಬೇರೆಯಾಗಿರುವ ಅವಯವಗಳೆಂದು ನೀನು ಯಾವವನ್ನು ಕಲ್ಪಿಸುವೆಯೋ, ಅವೇ.(ನಮ್ಮ) ಪರಮಾಣುಗಳು.

(ಸಿದ್ಧಾಂತಿ) :— ಹಾಗಲ್ಲ. ಏಕೆಂದರೆ ಸ್ಥೂಲಸೂಕ್ಷ್ಮತಾರತಮ್ಯದ ಕ್ರಮದಿಂದ ಪರಮಕಾರಣದವರೆಗೂ (ಎಲ್ಲವೂ) ವಿನಾಶವಾಗಬಹುದಾಗಿದೆ. ( ಇದರ ವಿವರ ) :— ಹೇಗೆ ಪೃಥಿವಿಯು ದ್ವ್ಯಣುಕವೇ ಮುಂತಾದವುಗಳಿಗೆ ಹೋಲಿಸಿದರೆ ಸ್ಥೂಲತಮವಾಗಿದ್ದು ವಸ್ತುಭೂತವೇ ಆದರೂ ನಾಶವಾಗುತ್ತದೆಯೋ, (ಮತ್ತು ಹೇಗೆ) ಅದಕ್ಕಿಂತ ಸೂಕ್ಷ್ಮವೂ ಸೂಕ್ಷ್ಮತರವೂ (ಆಗಿರುವ) ಪೃಥಿವಿಯ ಜಾತಿಯವುಗಳಾದ ( ವಸ್ತುಗಳೆಲ್ಲವೂ ) ನಾಶವಾಗುವವೋ, ಅದಕ್ಕಿಂತ (ಸೂಕ್ಷ್ಮತರವಾದ) ದ್ವ್ಯಣುಕವೂ ಹೇಗೆ (ವಿನಾಶವಾಗುವದೋ) ಹಾಗೆಯೇ ಪರಮಾಣುಗಳೂ ಪೃಥಿವಿಯ ಜಾತಿಯವೇ ಆಗಿರುವದರಿಂದ ನಾಶವಾಗಬೇಕು.[2]

---

1 ಇದು ಅನುಮಾನವು.

2. ಈ ಅನುಮಾನಕ್ಕೆ ಪೃಥಿವೀಸಜಾತಿಯತ್ವವೇ ಕಾರಣ.

(ವೈಶೇಷಿಕ) :— ನಾಶವಾದರೂ (ತಮ್ಮ) ಅವಯುವವಿಭಾಗದಿಂದಲೇ ನಾಶವಾಗುತ್ತವೆ (ಎನ್ನಬೇಕಾಗುವದಲ್ಲ) ![1]

(ಸಿದ್ಧಾಂತಿ) :— (ನಮ್ಮ ವಾದದಲ್ಲಿ) ಈ ದೋಷವಿಲ್ಲ. ಏಕೆಂದರೆ ತುಪ್ಪದ ಗಟ್ಟಿಯು ಕರಗುವಂತೆಯೂ ವಿಕಾರವಾಗಬಹುದೆಂದು (ಹಿಂದೆ) ಹೇಳಿರುತ್ತೇವೆ.[2] ಹೇಗೆ ತುಪ್ಪ, ಚಿನ್ನ– ಮುಂತಾದವುಗಳ ಅವಯುವಗಳು ವಿಭಾಗವಾದರೂ ಬೆಂಕಿಯ ಸಂಯೋಗದಿಂದ ದ್ರವಭಾವವನ್ನು ಹೊಂದುವದ ರಿಂದ ಕಾಠಿನ್ಯವು ನಾಶವಾಗುವದೋ,[3] ಹಾಗೆಯೇ ಪರಮಾಣುಗಳೂ **ಪರಮಕಾರಣದ** ಸ್ವರೂಪವನ್ನು ಹೊಂದುವದರಿಂದ[4] (ಅವುಗಳ) ಮೂರ್ತಿ ಯೇ ಮುಂತಾದವುಗಳ ನಾಶವು ಆಗಬಹುದಾಗಿದೆ.[5]

ಇದರಂತೆ ಕಾರ್ಯದ ಆರಂಭವುಕೂಡ ಅವಯುವಗಳ ಬರಿಯ ಸಂಯೋಗದಿಂದಲೇ ಆಗಬೇಕೆಂಬುದಿಲ್ಲ. ಏಕೆಂದರೆ ಹಾಲು, ನೀರು, ಮುಂತಾದವುಗಳು ಬೇರೆಯ ಅಣುಗಳ ಅವಯುವಗಳ ಸಂಯೋಗವು ಇಲ್ಲದೆಯೇ ಮೊಸರು, ಮಂಜು ಮುಂತಾದ ಕಾರ್ಯಗಳನ್ನು ಆರಂಭಿಸುವದು ಕಂಡಿರುತ್ತದೆ.[6]

---

1. ಪರಮಾಣುಗಳು ನಿತ್ಯವಲ್ಲವೆಂದರೂ ಯಾವ ಅವಯುವಗಳ ವಿಭಾಗದಿಂದ ಅವು ನಾಶವಾಗುವವೋ ಆ ಅವಯುವಗಳೇ ಪರಮಾಣುಗಳಾಗಿ ಉಳಿದುಕೊಳ್ಳುವವು ಎಂದು ಭಾವ.

2. ಕಾರಣನಾಶ, ಕಾರಣವಿಭಾಗ– ಇವೆರಡೇ ಕಾರ್ಯನಾಶಕ್ಕೆ ಕಾರಣವಲ್ಲ. ಭಾ. ಭಾ. ೩೨.

3. ತುಪ್ಪವೂ ಚಿನ್ನವೂ ಹಾಗೆಯೇ ಇರುತ್ತವೆ ಎಂಬ ಅಭಿಪ್ರಾಯದಿಂದ ಕಾಠಿನ್ಯದ ನಾಶವನ್ನು ಮಾತ್ರ ಹೇಳಿದೆ. ಕಾಠಿನ್ಯವು ನಾಶವಾಗುವಾಗ ಕಾರಣವಿಭಾಗವಿನಾಶಗಳಿಲ್ಲ; ದ್ರವತ್ವವು ಹುಟ್ಟುವಾಗ ಅವಯುವಸಂಯೋಗವಿಲ್ಲ ಎಂದು ಅಭಿಪ್ರಾಯ.

4. ಪರಮಕಾರಣವೂ ಇದೇ ಅನುಮಾನದಿಂದ ಪರಮಾಣುಗಳಂತೆಯೇ ನಾಶ ವಾಗುವದಿಲ್ಲವೆ?– ಎಂದು ಶಂಕಿಸುವದಕ್ಕಿಲ್ಲ; ಏಕೆಂದರೆ ಅದರಲ್ಲಿ ಪೃಥಿವ್ಯಾದಿ ಸಜಾತೀಯತ್ವವೆಂಬ ಹೇತುವಿಲ್ಲ. ಅಜ್ಞಾನದಿಂದ ಅದು ಕಾರಣವೆನಿಸಿರುತ್ತದೆ. ಅಜ್ಞಾನವು ಜ್ಞಾನದಿಂದ ಬಾಧಿತವಾದರೆ ಕಾರ್ಯತ್ವವೂ ಕಾರಣತ್ವವೂ ಬಾಧಿತವಾಗುವವು.

5. ಪರಮಾಣುಗಳ ಆಕಾರ, ಅವಯುವಗಳು, ಗುಣಗಳು– ಎಲ್ಲವೂ ನಾಶವಾಗ ಬಹುದೆಂದದ್ದರಿಂದ ಪರಮಾಣುಗಳನ್ನು ಒಪ್ಪಿದರೂ ಅವೂ ಬ್ರಹ್ಮದಲ್ಲಿ ಅಧ್ಯಸ್ತವೆನ್ನಬಹುದು ಎಂಬ ಭಾವವನ್ನು ತೋರಿಸಿದಂತೆ ಆಯಿತು.

6. ಅದರಿಂದ ಕಾರಣವಿಭಾಗನಾಶಗಳೇ ಆಗಬೇಕೆಂಬ ನಿಯಮವಿಲ್ಲ.

ಅಂತೂ ಹೀಗೆ ಅಸಾರತರವಾದ ತರ್ಕದಿಂದ ರಚಿತವಾಗಿರುವದರಿಂದಲೂ ಈಶ್ವರನು (ಜಗತ್ತಿಗೆ) ಕಾರಣವೆಂಬ ಶ್ರುತಿಗೆ ವಿರುದ್ಧವಾಗಿರುವದರಿಂದಲೂ[1] ಶ್ರುತಿಯ ಕಡೆಗೆ ಒಲವಿರುವ ಮನ್ವಾದಿಗಳು ಪರಿಗ್ರಹಿಸದೆ ಇರುವದರಿಂದಲೂ ಶ್ರೇಯಸ್ಸನ್ನು ಕೋರುವವರು ಈ ಪರಮಾಣುಕಾರಣವಾದದಲ್ಲಿ ಅತ್ಯಂತವಾಗಿ ಅನಾದರವನ್ನು 'ಮಾಡಬೇಕು' ಎಂದು ವಾಕ್ಯಶೇಷವು.

## ೪. ಸಮುದಾಯಾಧಿಕರಣ (ಸೂ. ೧೮-೨೭)

(ಬೌದ್ಧರ ಬಾಹ್ಯಾರ್ಥವಾದಿಗಳ ಮತದ ಖಂಡನೆ)

**ಸಮುದಾಯ ಉಭಯಹೇತುಕೇऽಪಿ ತದಪ್ರಾಪ್ತಿಃ ॥ ೧೮ ॥**

೧೮. ಸಮುದಾಯವು ಎರಡು ಹೇತುಗಳುಳ್ಳದ್ದಾದರೂ ಆ (ಸಮುದಾಯವು) ಪ್ರಾಪ್ತವಾಗುವದಿಲ್ಲ.

### ಗ್ರಂಥದ ಸಂಬಂಧ

(ಭಾಷ್ಯ)

೪೦. ವೈಶೇಷಿಕರಾದ್ಧಾನ್ತೋ ದುರ್ಯುಕ್ತಿಯೋಗಾತ್ ವೇದವಿರೋಧಾತ್ ಶಿಷ್ಟಾಪರಿಗ್ರಹಾಚ್ಚ ನಾಪೇಕ್ಷಿತವ್ಯಃ ಇತ್ಯುಕ್ತಮ್ । ಸೋऽರ್ಧವೈನಾಶಿಕಃ ಇತಿ ವೈನಾಶಿಕತ್ವಸಾಮ್ಯಾತ್ ಸರ್ವವೈನಾಶಿಕರಾದ್ಧಾನ್ತೋ ನತರಾಮ್ ಅಪೇಕ್ಷಿತವ್ಯಃ ಇತೀದಮ್ ಇದಾನೀಮ್ ಉಪಪಾದಯಾಮಃ॥

(ಭಾಷ್ಯಾರ್ಥ)

ವೈಶೇಷಿಕರ ಸಿದ್ಧಾಂತವು ದುರ್ಯುಕ್ತಿಗಳ ಸಂಬಂಧದಿಂದಲೂ ವೇದಕ್ಕೆ ವಿರೋಧವಾಗಿರುವದರಿಂದಲೂ ಶಿಷ್ಟರು ಪರಿಗ್ರಹಿಸದೆ ಇರುವದರಿಂದಲೂ (ಅದನ್ನು) ಅಪೇಕ್ಷಿಸತಕ್ಕದ್ದಲ್ಲ ಎಂದು ಹೇಳಿದ್ದಾಯಿತು. ಅದು **ಅರ್ಧವೈನಾಶಿಕವಾಗಿರುವ**[2] ವೈನಾಶಿಕತ್ವವೆಂಬ ಹೋಲಿಕೆಯಿಂದ ಯಾವ

1. ಈಶ್ವರನೇ ಉಪಾದಾನಕಾರಣವೆಂಬ ಶ್ರುತಿಗೆ ವಿರುದ್ಧವಾಗಿರುವದರಿಂದ ಎಂದರ್ಥ. ಏಕೆಂದರೆ ನಿಮಿತ್ತಕಾರಣತ್ವವನ್ನು ವೈಶೇಷಿಕರೂ ಒಪ್ಪುತ್ತಾರೆ.

2. ಪರಮಾಣು, ಆಕಾಶ, ದಿಕ್ಕುಗಳು, ಕಾಲ, ಆತ್ಮ, ಮನಸ್ಸು– ಇವುಗಳೂ ಸಾಮಾನ್ಯ, ವಿಶೇಷ, ಸಮವಾಯ– ಇವುಗಳೂ ಕೆಲವು ಗುಣಗಳೂ ನಿತ್ಯವೆಂದೂ ಮಿಕ್ಕವೆಲ್ಲ ನಿರನ್ವಯವಾಗಿ ನಾಶವಾಗುವವೆಂದೂ ಒಪ್ಪಿರುವದರಿಂದ ವೈಶೇಷಿಕರು ಅರ್ಧವೈನಾಶಿಕರು ಎಂದು ಭಾಮತೀ. ಪರಿಮಾಣಭೇದದಿಂದ ದೇಹಾದಿಗಳು ಬೇಗನೆ ನಾಶವಾಗುವವೆಂದು ಒಪ್ಪಿರುವದರಿಂದ 'ಅರ್ಧವೈನಾಶಿಕರು' ಎಂದು ನ್ಯಾ. ನಿ. ಮೊದಲನೆಯ ವ್ಯಾಖ್ಯಾನವೇ ಮೇಲೆಂದು ತೋರುತ್ತದೆ.

ವೈನಾಶಿಕಸಿದ್ಧಾಂತವನ್ನೂ ಸ್ವಲ್ಪವೂ ಒಪ್ಪತಕ್ಕದ್ದಲ್ಲ ಎಂಬುದನ್ನೂ ಈಗ ಉಪಪಾದನೆಮಾಡುತ್ತೇವೆ.

## ವೈನಾಶಿಕಮತಪ್ರಭೇದಗಳು

( ಭಾಷ್ಯ )

೪೧. ಸ ಚ ಬಹುಪ್ರಕಾರಃ। ಪ್ರತಿಪತ್ತಿಭೇದಾತ್, ವಿನೇಯಭೇದಾದ್ ವಾ । ತತ್ರ ಏತೇ ತ್ರಯೋ ವಾದಿನೋ ಭವನ್ತಿ– ಕೇಚಿತ್ ಸರ್ವಾಸ್ತಿತ್ವವಾದಿನಃ । ಕೇಚಿದ್ ವಿಜ್ಞಾನಾಸ್ತಿತ್ವಮಾತ್ರವಾದಿನಃ । ಅನ್ಯೇ ಪುನಃ ಸರ್ವಶೂನ್ಯತ್ವವಾದಿನಃ ಇತಿ ॥

(ಭಾಷ್ಯಾರ್ಥ)

ಆ (ಸಿದ್ಧಾಂತವು) ತಿಳಿವಳಿಕೆಯ ಭೇದದಿಂದ ಅಥವಾ ಶಿಷ್ಯರ ಭೇದದಿಂದ ಬಹುಪ್ರಕಾರವಾಗಿರುತ್ತದೆ. ಅವರಲ್ಲಿ ಈ ಮೂರು (ಪ್ರಕಾರದ) ವಾದಿಗಳಿರುತ್ತಾರೆ: ಕೆಲವರು ಎಲ್ಲವೂ ಇದೆ ಎಂಬ ವಾದಿಗಳು, ಕೆಲವರು ವಿಜ್ಞಾನವು ಮಾತ್ರ ಇದೆ ಎಂಬ ವಾದಿಗಳು, ಆದರೆ ಇನ್ನು ಕೆಲವರು ಎಲ್ಲವೂ ಶೂನ್ಯವೆಂಬ ವಾದಿಗಳು.

## ಸರ್ವಾಸ್ತಿತ್ವವಾದದಲ್ಲಿ ಸಮುದಾಯಾಸಿದ್ಧಿ

(ಭಾಷ್ಯ)

೪೨. ತತ್ರ ಯೇ ಸರ್ವಾಸ್ತಿತ್ವವಾದಿನಃ ಬಾಹ್ಯಮ್ ಆನ್ತರಂ ಚ ವಸ್ತು ಅಭ್ಯುಪಗಚ್ಛನ್ತಿ, ಭೂತಂ ಭೌತಿಕಂ ಚ, ಚಿತ್ತಂ ಚ ಚೈತ್ತಂ ಚ, ತಾನ್ ತಾವತ್ ಪ್ರತಿಬ್ರೂಮಃ । ತತ್ರ ಭೂತಂ ಪೃಥಿವೀಧಾತ್ವಾದಯಃ । ಭೌತಿಕಂ ರೂಪಾದಯಃ ಚಕ್ಷುರಾದಯಶ್ಚ । ಚತುಷ್ಟಯೇ ಚ ಪೃಥಿವ್ಯಾದಿಪರಮಾಣವಃ ಖರಸ್ನೇಹೋಷ್ಣೇರಣಸ್ವಭಾವಾಃ । ತೇ ಪೃಥಿವ್ಯಾದಿಭಾವೇನ ಸಂಹನ್ಯನ್ತೇ ಇತಿ ಮನ್ಯನ್ತೇ । ತಥಾ ರೂಪವಿಜ್ಞಾನವೇದನಸಂಜ್ಞಾಸಂಸ್ಕಾರಸಂಜ್ಞಕಾಃ ಪಞ್ಚಸ್ಕನ್ಧಾಃ । ತೇಽಪಿ ಅಧ್ಯಾತ್ಮಂ[1] ಸರ್ವವ್ಯವಹಾರಾಸ್ಪದಭಾವೇನ ಸಂಹನ್ಯನ್ತೇ ಇತಿ ಮನ್ಯನ್ತೇ । ತತ್ರ ಇದಮಭಿಧೀಯತೇ– ಯೋಽಯಮ್ ಉಭಯಹೇತುಕಃ ಉಭಯಪ್ರಕಾರಃ ಸಮುದಾಯಃ ಪರೇಷಾಮ್ ಅಭಿಪ್ರೇತಃ ಅಣುಹೇತುಕಶ್ಚ ಭೂತಭೌತಿಕಸಂಹತಿರೂಪಃ, ಸ್ಕನ್ಧಹೇತುಕಶ್ಚ

1. 'ಅಧ್ಯಾತ್ಮಂ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

ಪಞ್ಚಸ್ಕನ್ಧೀರೂಪಃ ತಸ್ಮಿನ್ ಉಭಯಹೇತುಕೇಽಪಿ ಸಮುದಾಯೇ ಅಭಿಪ್ರೇಯಮಾಣೇ ತದಪ್ರಾಪ್ತಿಃ ಸ್ಯಾತ್, ಸಮುದಾಯಾಪ್ರಾಪ್ತಿಃ । ಸಮುದಾಯಭಾವಾನುಪಪತ್ತಿಃ ಇತ್ಯರ್ಥಃ। ಕುತಃ? ಸಮುದಾಯಿನಾಮ್ ಅಚೇತನತ್ವಾತ್। ಚಿತ್ತಾಭಿಜ್ವಲನಸ್ಯ ಚ ಸಮುದಾಯಸಿದ್ಧ್ಯಧೀನತ್ವಾತ್ । ಅನ್ಯಸ್ಯ ಚ ಕಸ್ಯಚಿತ್ ಚೇತನಸ್ಯ ಭೋಕ್ತುಃ ಪ್ರಶಾಸಿತುರ್ವಾ ಸ್ಥಿರಸ್ಯ ಸಂಹನ್ತುಃ ಅನಭ್ಯುಪಗಮಾತ್। ನಿರಪೇಕ್ಷಪ್ರವೃತ್ತ್ಯಭ್ಯುಪಗಮೇ ಚ ಪ್ರವೃತ್ತ್ಯನುಪರಮಪ್ರಸಙ್ಗಾತ್। ಆಶಯಸ್ಯಾಪಿ ಅನ್ಯತ್ವಾನನ್ಯತ್ವಾಭ್ಯಾಮ್ಅನಿರೂಪ್ಯತ್ವಾತ್। ಕ್ಷಣಿಕತ್ವಾಭ್ಯುಪಗಮಾಚ್ಚನಿರ್ವ್ಯಾಪಾರತ್ವಾತ್ ಪ್ರವೃತ್ತ್ಯನುಪಪತ್ತೇಃ ತಸ್ಮಾತ್ ಸಮುದಾಯಾನುಪಪತ್ತಿಃ । ಸಮುದಾಯಾನುಪಪತ್ತೌ ಚ ತದಾಶ್ರಯಾ ಲೋಕಯಾತ್ರಾ ಲುಪ್ಯೇತ ॥

( ಭಾಷ್ಯಾರ್ಥ )

ಅವರೊಳಗೆ ಯಾರು **ಸರ್ವಾಸ್ತಿತ್ವವಾದಿಗಳೋ**[1] ಹೊರಗಿನ ಮತ್ತು ಒಳಗಿನ ವಸ್ತುವನ್ನೂ, ಭೂತವನ್ನೂ ಭೌತಿಕವನ್ನೂ, ಚಿತ್ತವನ್ನೂ ಚೈತ್ತವನ್ನೂ[2] ಎಲ್ಲವನ್ನೂ ಒಪ್ಪುವರೋ ಅವರನ್ನು ಮೊದಲು ತಿರಸ್ಕರಿಸುತ್ತೇವೆ. ಇಲ್ಲಿ ಭೂತವೆಂದರೆ ಪೃಥಿವೀಧಾತುವೇ[3] ಮುಂತಾದವುಗಳು ; ಭೌತಿಕವೆಂದರೆ ರೂಪಾದಿಗಳು, ಮತ್ತು ಚಕ್ಷುರಾದಿಗಳು, ಪೃಥಿವ್ಯಾದಿ **ಪರಮಾಣುಗಳು** ನಾಲ್ಕು ಖರ (ಗಟ್ಟಿ), ಸ್ನೇಹ (ನೀರು), ಉಷ್ಣ, (ಬಿಸಿ), ಈರಣ (ಚಲನ)– ಎಂಬ ಸ್ವಭಾವವುಳ್ಳವು ; ಅವು ಪೃಥಿವಿಯೇ ಮುಂತಾದ ರೂಪದಿಂದ ಸಂಹತವಾಗುತ್ತವೆ.[4] ಮತ್ತು ರೂಪ,ವಿಜ್ಞಾನ,ವೇದನಾ, ಸಂಜ್ಞಾ, ಸಂಸ್ಕಾರ–ಎಂಬ ಹೆಸರಿನ **ಐದು ಸ್ಕಂಧಗಳು**[5]; ಅವುಗಳೂ ಅಧ್ಯಾತ್ಮವಾಗಿ ಸರ್ವವ್ಯವಹಾರಕ್ಕೂ ಆಶ್ರಯವಾಗುವಂತೆ ಸಂಹತವಾಗುವವು ಎಂದು (ಈ ವಾದಿಗಳು) ಭಾವಿಸಿರುತ್ತಾರೆ.

---

1. ವೈಭಾಷಿಕಸೌತ್ರಾಂತಿಕರಿಬ್ಬರನ್ನೂ ಈ ಪಂಗಡದಲ್ಲಿ ಸೇರಿಸಿದೆ; ಸೌತ್ರಾಂತಿಕರು ವಿಷಯಗಳನ್ನು ಯಾವಾಗಲೂ ಪರೋಕ್ಷವೆಂದು ನಂಬಿರುತ್ತಾರೆ– ಎಂದು ವ್ಯಾಖ್ಯಾನದಲ್ಲಿದೆ. ಬೌದ್ಧರ ಪ್ರಕ್ರಿಯೆಯನ್ನೂ ವ್ಯಾಖ್ಯಾನಗಳನ್ನನುಸರಿಸಿಯೇ ಇಲ್ಲಿ ಟಿಪ್ಪಣಿಗಳಲ್ಲಿ ವಿಮರ್ಶಿಸಿದೆ. ಮೂಲಗ್ರಂಥಗಳನ್ನು ವಿಚಾರಿಸಿಲ್ಲ. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿ.

2. ಕಾಮಾದಿಗಳನ್ನೂ ಎಂದರ್ಥ

3. ಧಾತುವೆಂದರೆ ಸ್ವಭಾವವು ; ಮುಂತಾದವು ಎಂದರೆ ಅಪ್ತೇಜೋವಾಯ್ವಾಕಾಶಗಳು, ಋತುಗಳು ಎಂದು ನ್ಯಾ. ನಿ.

4. ಪರಮಾಣುಪುಂಜಗಳೇ ವಸ್ತುಗಳು ; ವೈಶೇಷಿಕರು ಹೇಳುವಂತೆ ಅವಯವಿದ್ರವ್ಯಗಳು ದ್ವ್ಯಣುಕಾದಿಕ್ರಮದಿಂದ ಉಂಟಾಗುವವೆಂಬುದನ್ನು ಈ ಮತದಲ್ಲಿ ಒಪ್ಪಿಲ್ಲ.

5. ಸವಿಷಯವಾದ ಇಂದ್ರಿಯಗಳು **ರೂಪಸ್ಕಂಧ**; ನಾನು ಎಂದು ಪಂಡಾಯಮಾನವಾಗಿ ಆಗುವ ಅರಿವು **ವಿಜ್ಞಾನಸ್ಕಂಧವು**; ಸುಖದುಃಖಾದಿಗಳ ಅರಿವು **ವೇದನಸ್ಕಂಧವು**; ಸವಿಕಲ್ಪಪ್ರತ್ಯಯವೇ **ಸಂಜ್ಞಾಸ್ಕಂಧವು**; ರಾಗಾದಿಗಳೂ ಧರ್ಮಾಧರ್ಮಾದಿಗಳೂ **ಸಂಸ್ಕಾರಸ್ಕಂಧವು**.

ಈ ವಿಷಯದಲ್ಲಿ ಇದನ್ನು ಹೇಳುತ್ತೇವೆ : ಅಣುಹೇತುಕವಾದ ಭೂತ ಭೌತಿಕಸಂಹತಿರೂಪವಾಗಿಯೂ ಸ್ಕಂಧಹೇತುಕವಾದ ಪಂಚಸ್ಕಂಧೀರೂಪವಾಗಿಯೂ ಇರುವ ಈ ಉಭಯಹೇತುಕವಾದ ಉಭಯಪ್ರಕಾರವಾದ ಪರ(ವಾದಿಗಳಿಗೆ) ಅಭಿಪ್ರೇತವಾಗಿರುವ ಸಮುದಾಯವಿದೆಯಲ್ಲ, ಆ ಉಭಯಹೇತುಕವಾದ ಸಮುದಾಯವನ್ನು ಒಪ್ಪುವದಾದರೆ ಅದು ಪ್ರಾಪ್ತವಾಗುವದಿಲ್ಲ, ಎಂದರೆ ಸಮುದಾಯವು ಪ್ರಾಪ್ತವಾಗದೆಹೋಗುವದು, ಸಮುದಾಯಭಾವವೇ ಹೊಂದುವದಿಲ್ಲ ಎಂದರ್ಥ. ಏಕೆ ? ಎಂದರೆ ಸಮುದಾಯಿಗಳು ಅಚೇತನವಾಗಿರುವದರಿಂದ. ಚಿತ್ತಾಭಿಜ್ವಲನವೆಂಬುದು ಸಮುದಾಯಸಿದ್ಧಿಯ ಅಧೀನವಾಗಿರುವದರಿಂದಲೂ[1] (ಅದಕ್ಕಿಂತ) ಬೇರೆಯಾದ ಚೇತನವಾದ ಸ್ಥಿರವಾಗಿರುವ ಭೋಕ್ತೃವನ್ನಾಗಲಿ ಪ್ರಶಾಸಿತೃವನ್ನಾಗಲಿ (ಅವುಗಳನ್ನು) ಕೂಡಿಸುವವನೆಂದು (ವೈನಾಶಿಕರು) ಒಪ್ಪಿರುವದಿಲ್ಲವಾದ್ದರಿಂದಲೂ ಯಾವದನ್ನೂ ಬಯಸದೆ ಪ್ರವೃತ್ತಿಯಾಗುವದೆಂದು ಒಪ್ಪಿದರೆ ಪ್ರವೃತ್ತಿಯು ನಿಲ್ಲದೆಹೋಗಬೇಕಾಗಿಬರುವದರಿಂದಲೂ (ಸಮುದಾಯವುಂಟಾಗಲಾರದು). **ಆಶಯವೆಂಬುದು**[2] ಅನ್ಯವೆಂದಾಗಲಿ ಅನನ್ಯವೆಂದಾಗಲಿ ಗೊತ್ತುಮಾಡುವದು ಅಶಕ್ಯವಾದ್ದರಿಂದಲೂ (ಅದು) ಕ್ಷಣಿಕವೆಂದು ಒಪ್ಪಿರುವದರಿಂದಲೂ (ಅದಕ್ಕೆ ಯಾವ) ವ್ಯಾಪಾರವೂ (ಆಗುವಂ)ತಿಲ್ಲವಾದ್ದರಿಂದ (ಅದಕ್ಕೆ)ಪ್ರವೃತ್ತಿಯುಂಟಾಗುವದಿಲ್ಲ. ಆದ್ದರಿಂದ ಸಮುದಾಯವು ಹೊಂದುವದಿಲ್ಲ ; ಸಮುದಾಯವು ಹೊಂದುವದಿಲ್ಲವಾದರೆ ಅದನ್ನಾಶ್ರಯಿಸಿರುವ ಲೋಕಯಾತ್ರೆಯೇ ಲುಪ್ತವಾಗಬೇಕಾಗುವದು.

**ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್ ॥೧೯**

೧೯. ಒಂದಕ್ಕೊಂದು ಕಾರಣವಾಗಿರುವದರಿಂದ (ಆಗಬಹುದು) ಎಂದರೆ (ಅದು) ಸರಿಯಲ್ಲ; ಏಕೆಂದರೆ (ಅವು) ಉತ್ಪತ್ತಿಮಾತ್ರಕ್ಕೆ ನಿಮಿತ್ತವಾಗಿವೆ.

---

1. ಚಿತ್ತವು ಇಂದ್ರಿಯವಿಷಯಗಳ ಸಂಬಂಧವಾದರೆ ಅರಿವಿನ ರೂಪವಾಗಿ ಎದ್ದುಕೊಳ್ಳುವದೆಂದು ವೈನಾಶಿಕರ ನಂಬಿಕೆ. ಆದರೆ ಪ್ರಕೃತವಾಗಿರುವ ಹೊರಗಿನ ಒಳಗಿನ ಸಮುದಾಯಗಳುಂಟಾದ ಮೇಲೆಯೇ ಚಿತ್ತಾಭಿಜ್ವಲನವಾಗುವದು.

2. ಆಶಯವೇ, ಆಲಯವಿಜ್ಞಾನವೇ, ಸಮುದಾಯವನ್ನೇರ್ಪಡಿಸಲಿ ಎಂಬ ಶಂಕೆಗೆ ಈಗ ಉತ್ತರವನ್ನುಕೊಡುತ್ತಾರೆ.

## ಪೂರ್ವಪಕ್ಷ:
## ಪ್ರತೀತ್ಯಸಮುತ್ಪಾದವನ್ನೊಪ್ಪಿರುವದರಿಂದ ದೋಷವಿಲ್ಲ

(ಭಾಷ್ಯ)

೪೩. ಯದ್ಯಪಿ ಭೋಕ್ತಾ ಪ್ರಶಾಸಿತಾ ವಾ ಕಶ್ಚಿಚ್ಚೇತನಃ ಸಂಹನ್ತಾ ಸ್ಥಿರೋ ನಾಭ್ಯುಪಗಮ್ಯತೇ, ತಥಾಪಿ ಅವಿದ್ಯಾದೀನಾಮ್ ಇತರೇತರಕಾರಣತ್ವಾತ್ ಉಪಪದ್ಯತೇ ಲೋಕಯಾತ್ರಾ। ತಸ್ಯಾಂ ಚ ಉಪಪದ್ಯಮಾನಾಯಾಂ ನ ಕಿಂಚಿತ್ ಅಪರಮ್ ಅಪೇಕ್ಷಿತವ್ಯಮ್ ಅಸ್ತಿ। ತೇ ಚ ಅವಿದ್ಯಾದಯಃ– ಅವಿದ್ಯಾ, ಸಂಸ್ಕಾರಃ, ವಿಜ್ಞಾನಮ್, ನಾಮರೂಪಮ್, ಷಡಾಯತನಮ್, ಸ್ಪರ್ಶಃ, ವೇದನಾ, ತೃಷ್ಣಾ, ಉಪಾದಾನಮ್, ಭವಃ, ಜಾತಿಃ, ಜರಾ, ಮರಣಮ್, ಶೋಕಃ, ಪರಿದೇವನಾ, ದುಃಖಮ್, ದುರ್ಮನಸ್ತಾ– ಇತ್ಯೇವಂಜಾತೀಯಕಾಃ ಇತರೇತರಹೇತುಕಾಃ ಸೌಗತೇ ಸಮಯೇ ಕ್ವಚಿತ್ ಸಂಕ್ಷಿಪ್ತಾ ನಿರ್ದಿಷ್ಟಾಃ ಕ್ವಚಿತ್ ಪ್ರಪಞ್ಚಿತಾಃ। ಸರ್ವೇಷಾಮಪಿ ಅಯಮ್ ಅವಿದ್ಯಾದಿಕಲಾಪಃ ಅಪ್ರತ್ಯಾಖ್ಯೇಯಃ। ತದೇವಮ್ ಅವಿದ್ಯಾದಿಕಲಾಪೇ ಪರಸ್ಪರನಿಮಿತ್ತನೈಮಿತ್ತಿಕಭಾವೇನ ಘಟೀಯನ್ತ್ರವತ್ ಅನಿಶಮ್ ಆವರ್ತಮಾನೇ ಅರ್ಥಾಕ್ಷಿಪ್ತಃ ಉಪಪನ್ನಃ ಸಙ್ಘಾತಃ ಇತಿ ಚೇತ್ ॥

( ಭಾಷ್ಯಾರ್ಥ )

ಭೋಕ್ತೃವನ್ನಾಗಲಿ ಪ್ರಶಾಸಿತೃವನ್ನಾಗಲಿ ಒಟ್ಟುಗೂಡಿಸುವ ಸ್ಥಿರನಾಗಿರುವ ಚೇತನವನ್ನು ( ನಾವು ) ಒಪ್ಪುವದಿಲ್ಲ(ವೆಂಬುದು ನಿಜ) ; ಆದರೂ **ಅವಿದ್ಯೆಯೇ** ಮುಂತಾದವು ಒಂದಕ್ಕೊಂದು ಕಾರಣವಾಗಿರುವದರಿಂದ[1] ಲೋಕಯಾತ್ರೆಯು ಆಗಬಹುದಾಗಿದೆ. ಅದು ಆದರೆ ಮತ್ತೆ ಯಾವದನ್ನೂ ಅಪೇಕ್ಷಿಸಬೇಕಾದದ್ದಿರುವದಿಲ್ಲ. ಆ ಅವಿದ್ಯಾದಿಗಳು (ಯಾವವೆಂದರೆ) ಅವಿದ್ಯೆ, ಸಂಸ್ಕಾರ, ವಿಜ್ಞಾನ, ನಾಮರೂಪ, ಷಡಾಯತನ, ಸ್ಪರ್ಶ, ವೇದನೆ, ತೃಷ್ಣೆ, ಉಪಾದಾನ,

---

1. ಭಾಮತಿಯಲ್ಲಿ ಇದನ್ನು ವರ್ಣಿಸಿರುವದರ ಸಾರವಿದು: ಪ್ರತೀತ್ಯಸಮುತ್ಪಾದವೆಂಬುದು ಹೇತೂಪನಿಬಂಧ, ಪ್ರತ್ಯಯೋಪನಿಬಂಧ– ಎಂಬ ಎರಡು ಕಾರಣಗಳಿಂದಾಗುತ್ತದೆ. ಹೊರಗಿನ ಪ್ರತೀತ್ಯಸಮುತ್ಪಾದಕ್ಕೆ ಹೇತೂಪನಿಬಂಧವು ಹೇಗೆಂದರೆ, ಬೀಜದಿಂದ ಮೊಳಕೆ, ಅದರಿಂದ ಎಲೆ, ಅದರಿಂದ ಕಾಂಡ, ಅದರಿಂದ ನಾಲ, ಅದರಿಂದ ಗರ್ಭ, ಅದರಿಂದ ಶೂಕ, ಅದರಿಂದ ಪುಷ್ಪ, ಅದರಿಂದ ಫಲ– ಹೀಗೆ ಆಗುವವಷ್ಟೆ. ಇವುಗಳಲ್ಲಿ ಒಂದಿಲ್ಲದೆ ಮತ್ತೊಂದು ಆಗುವದಿಲ್ಲ ; ಆದರೆ ಬೀಜಕ್ಕೆ ನಾನು ಮೊಳಕೆಯನ್ನುಂಟುಮಾಡುತ್ತೇನೆಂಬ ಅರಿವಾಗಲಿ ಮೊಳಕೆಗೆ ನಾನು ಬೀಜದಿಂದ ಆಗಿರುವೆನೆಂಬ ಅರಿವಾಗಲಿ ಇರುವದಿಲ್ಲ. ಹೀಗೆ

ಭವ, ಜಾತಿ, ಜರಾಮರಣ, ಶೋಕ,[1] ಪರಿವೇದನೆ, ದುಃಖ, ದುರ್ಮನಸ್ತೆ– ಎಂಬೀ ಜಾತಿಯ (ಪದಾರ್ಥಗಳು. ಇವನ್ನು) **ಸೌಗತಸಮಯದಲ್ಲಿ** ಒಂದೊಂದು ಕಡೆ ಸಂಗ್ರಹವಾಗಿಯೂ ಇನ್ನೂ ಕೆಲವು ಕಡೆಗಳಲ್ಲಿ ವಿಸ್ತಾರವಾಗಿಯೂ ಹೇಳಿರುತ್ತಾರೆ. ಯಾರೇ ಆಗಲಿ, ಈ ಅವಿದ್ಯಾದಿಕಲಾಪವನ್ನು ಇಲ್ಲವೆನ್ನುವದಕ್ಕೆ ಆಗುವದಿಲ್ಲ. ಅಂತೂ ಹೀಗೆ (ಈ) ಅವಿದ್ಯಾದಿಕಲಾಪವು ಒಂದಕ್ಕೊಂದು ನಿಮಿತ್ತನೈಮಿತ್ತಿಕಭಾವದಿಂದ (ನೀರಿನ) ರಾಟೆಯಂತೆ ಮತ್ತೆಮತ್ತೆ ತಿರುಗುತ್ತಿರುವಲ್ಲಿ ಸಮುದಾಯವು ತಾನೇ ಆಕ್ಷಿಪ್ತವಾಗಿರುವದರಿಂದ (ಅದು) ಹೊಂದಿಯೇ ಹೊಂದುತ್ತದೆ ಎಂದರೆ ?

---

ಯೇ ಫಲದವರೆಗೂ ತಿಳಿಯಬೇಕು. ಆದ್ದರಿಂದ ಬೀಜಾದಿಗಳಿಗೆ ಚೈತನ್ಯವಿಲ್ಲದಿದ್ದರೂ ಚೈತನ್ಯರೂಪನಾದ ಮತ್ತೊಬ್ಬ ಅಧಿಷ್ಠಾತೃ ಇಲ್ಲದಿದ್ದರೂ ಕಾರ್ಯಕಾರಣಭಾವವಿರುವದೆಂದು ಕಂಡಿದೆ. ಇದು ಹೇತೂಪನಿಬಂಧವು. ಇನ್ನು ಪ್ರತ್ಯಯೋಪನಿಬಂಧವು ಹೇಗೆಂದರೆ ಹೇತುಗಳು ಒಕ್ಕಟ್ಟಿಗೆ ಕೂಡುವದೇ ಪ್ರತ್ಯಯವು. ಉದಾಹರಣೆಗೆ ಪೃಥಿವ್ಯಪ್ತೇಜೋವಾಯ್ವಾಕಾಶ ಋತು – ಎಂಬ ಆರು ಧಾತುಗಳೂ ಸೇರಿದರೇ ಬೀಜವು ಗಟ್ಟಿಯಾಗಿದ್ದು ಹಸಿಯಾಗಿ ಪಕ್ವವಾಗಿ ಮೊಳಕೆಯೊಡೆದು ಅನಾವರಣವುಂಟಾಗಿ ಪರಿಣಾಮವಾಗುವದು. ಇಲ್ಲದಿದ್ದರೆ ಆಗುವದಿಲ್ಲ. ಅಲ್ಲಿಯೂ ಈ ಧಾತುಗಳಿಗೆ ನಾವು ಈ ಕಾರ್ಯವನ್ನು ಮಾಡುತ್ತೇವೆಂಬುದಾಗಲಿ ಮೊಳಕೆಗೆ ನಾನು ಈ ಪ್ರತ್ಯಯದಿಂದ ಆಗಿರುತ್ತೇನೆಂದಾಗಲಿ ಅರಿವು ಇರುವದಿಲ್ಲ.

ಒಳಗಿನ ಪ್ರತೀತ್ಯಸಮುತ್ಪಾದವನ್ನೂ ಹೀಗೆಯೇ ತಿಳಿಯಬೇಕು. ಅವಿದ್ಯೆಗೆ ನಾನು ಸಂಸ್ಕಾರವನ್ನುಂಟುಮಾಡುತ್ತೇನೆಂದಾಗಲಿ ಸಂಸ್ಕಾರಕ್ಕೆ ನಾನು ಅವಿದ್ಯೆಯಿಂದ ಆಗಿರುತ್ತೇನೆಂದಾಗಲಿ ಅರಿವಿರುವದಿಲ್ಲ. ಹೊರಗಿನ ಬೀಜಾದಿಗಳಿಂದ ಅಂಕುರಾದಿಗಳುಂಟಾಗುವಂತೆಯೇ ಅಚೇತನವಾದ ಅವಿದ್ಯಾದಿಗಳು ಒಂದಕ್ಕೊಂದಕ್ಕೆ ಕಾರಣವಾಗಿ ಸಂಸ್ಕಾರಾದಿಗಳು ಆಗುತ್ತವೆ. ಇದು ಹೇತೂಪನಿಬಂಧವು. ಪ್ರತ್ಯಯೋಪನಿಬಂಧವು ಹೇಗೆಂದರೆ ಅಧ್ಯಾತ್ಮಿಕವಾಗಿ ಪೃಥಿವ್ಯಪ್ತೇಜೋವಾಯ್ವಾಕಾಶವಿಜ್ಞಾನಧಾತುಗಳ ಸಮವಾಯದಿಂದ ಕಾರ್ಯವುಂಟಾಗುತ್ತವೆ. ಇಲ್ಲಿಯೂ ಪೃಥಿವ್ಯಾದಿಗಳಿಗೆ ನಾವು ಇಂಥಿಂಥ ಕಾರ್ಯವನ್ನು ಮಾಡುತ್ತೇವೆಂಬ ಅರಿವಾಗಲಿ ಕಾರ್ಯಕ್ಕೆ ನಾನು ಈ ಪ್ರತ್ಯಯದಿಂದ ಆಗಿರುವೆನೆಂಬ ಅರಿವಾಗಲಿ ಇರುವದಿಲ್ಲ. ಆದರೂ ಚೇತನಾಂತರದ ಅಧಿಷ್ಠಾನವಿಲ್ಲದೆಯೇ ಕಾರ್ಯವು ಉತ್ಪನ್ನವಾಗುತ್ತದೆ.

1. **ಅವಿದ್ಯೆಯೆಂದರೆ** ಆರು ಧಾತುಗಳನ್ನೇ ಮನುಷ್ಯನು, ನಾನು ನನ್ನದು– ಎಂದು ಮುಂತಾಗಿ ಎಣಿಸುವ ತಪ್ಪುತಿಳಿವಳಿಕೆ ; **ಸಂಸ್ಕಾರಗಳೆಂದರೆ** ರಾಗದ್ವೇಷಮೋಹಗಳು ; ವಸ್ತುವಿನ ಅರಿವು ವಿಜ್ಞಾನವು. ವಿಜ್ಞಾನದಿಂದ ಆಗುವ ನಾಲ್ಕು ಉಪಾದಾನಸ್ಕಂಧಗಳು **ನಾಮವು** ; ಅವುಗಳಿಂದ **ರೂಪವಾಗುತ್ತದೆ.** ನಾಮರೂಪಮಿಶ್ರಿತ ಇಂದ್ರಿಯಗಳೇ **ಷಡಾಯತನ.** ನಾಮರೂಪವೂ ಇಂದ್ರಿಯಗಳೂ ಕೂಡುವದೇ **ಸ್ಪರ್ಶ.** ಸ್ಪರ್ಶದಿಂದ **ವೇದನೆಯೂ** ಅದರಿಂದ ಇರಬೇಕೆಂಬ **ತೃಷ್ಣೆ,** ಅದರಿಂದ **ಉಪಾದಾನವೆಂಬ** ವಾಕ್ಕಾಯವ್ಯಾಪಾರವು ಆಗುತ್ತದೆ. ಅದರಿಂದ **ಭವ** (ಧರ್ಮಾಧರ್ಮಗಳು), **ಜಾತಿ** (ಹುಟ್ಟು) ಜರಾಮರಣಾದಿಗಳೂ ಉಂಟಾಗುವವು– ಹೀಗೆ ಒಂದಕ್ಕೊಂದು ಕಾರಣವಾಗಿರುತ್ತವೆ.

## ಸಿದ್ಧಾಂತ : ಸಮುದಾಯಕ್ಕೆ ನಿಮಿತ್ತವಿಲ್ಲ

(ಭಾಷ್ಯ)

೪೪. ತನ್ನ । ಕಸ್ಮಾತ್ ? ಉತ್ಪತ್ತಿಮಾತ್ರನಿಮಿತ್ತತ್ವಾತ್ । ಭವೇತ್ ಉಪಪನ್ನಃ ಸಙ್ಘಾತಃ ಯದಿ ಸಙ್ಘಾತಸ್ಯ ಕಿಂಚಿತ್ ನಿಮಿತ್ತಮ್ ಅವಗಮ್ಯೇತ। ನ ತು ಅವಗಮ್ಯತೇ । ಯತಃ ಇತರೇತರಪ್ರತ್ಯಯತ್ವೇಽಪಿ ಅವಿದ್ಯಾದೀನಾಂ ಪೂರ್ವಪೂರ್ವಮ್ ಉತ್ತರೋತ್ತರಸ್ಯ ಉತ್ಪತ್ತಿಮಾತ್ರನಿಮಿತ್ತಂ ಭವತ್ ಭವೇತ್ । ನ ತು ಸಙ್ಘಾತೋತ್ಪತ್ತೇಃ ಕಿಂಚಿತ್ ನಿಮಿತ್ತಂ ಸಂಭವತಿ । ನನು ಅವಿದ್ಯಾದಿಭಿಃ ಅರ್ಥಾತ್ ಆಕ್ಷಿಪ್ಯತೇ ಸಙ್ಘಾತಃ ಇತ್ಯುಕ್ತಮ್ । ಅತ್ರೋಚ್ಯತೇ । ಯದಿ ತಾವತ್ ಅಯಮ್ ಅಭಿಪ್ರಾಯಃ – ಅವಿದ್ಯಾದಯಃ ಸಙ್ಘಾತಮನ್ತರೇಣ ಆತ್ಮಾನಮಲಭಮಾನಾಃ ಅಪೇಕ್ಷನ್ತೇ ಸಙ್ಘಾತಮ್ ಇತಿ । ತತಸ್ತಸ್ಯ ಸಙ್ಘಾತಸ್ಯ ನಿಮಿತ್ತಂ ವಕ್ತವ್ಯಮ್ । ತಚ್ಚ ನಿತ್ಯೇಷ್ವಪಿ ಅಣುಷು ಅಭ್ಯುಪಗಮ್ಯಮಾನೇಷು ಆಶ್ರಯಾಶ್ರಯಿಭೂತೇಷು ಚ ಭೋಕ್ತೃಷು ಸತ್ಸು ನ ಸಂಭವತಿ ಇತ್ಯುಕ್ತಂ ವೈಶೇಷಿಕಪರೀಕ್ಷಾಯಾಮ್ । ಕಿಮಙ್ಗ ಪುನಃ ಕ್ಷಣಿಕೇಷ್ವಪಿ ಅಣುಷು ಭೋಕ್ತೃರಹಿತೇಷು ಆಶ್ರಯಾಶ್ರಯಿಶೂನ್ಯೇಷು ವಾ ಅಭ್ಯುಪಗಮ್ಯಮಾನೇಷು ಸಂಭವೇತ್ ? ಅಥ ಅಯಮಭಿಪ್ರಾಯಃ—ಅವಿದ್ಯಾದಯ ಏವ ಸಙ್ಘಾತಸ್ಯ ನಿಮಿತ್ತಮ್ ಇತಿ । ಕಥಂ ತಮೇವ ಆಶ್ರಿತ್ಯ ಆತ್ಮಾನಂ ಲಭಮಾನಾಃ ತಸ್ಯೈವ ನಿಮಿತ್ತಂ ಸ್ಯುಃ ? ಅಥ ಮನ್ಯಸೇ । ಸಙ್ಘಾತಾ ಏವ ಅನಾದೌ ಸಂಸಾರೇ ಸನ್ತತ್ಯಾ ಅನುವರ್ತನ್ತೇ, ತದಾಶ್ರಯಾಶ್ಚ ಅವಿದ್ಯಾದಯಃ ಇತಿ, ತದಪಿ ಸಙ್ಘಾತಾತ್ ಸಙ್ಘಾತಾನ್ತರಮ್ ಉತ್ಪದ್ಯಮಾನಂ ನಿಯಮೇನ ವಾ ಸದೃಶಮೇವ ಉತ್ಪದ್ಯೇತ, ಅನಿಯಮೇನ ವಾ ಸದೃಶಂ ವಿಸದೃಶಂ ವಾ ಉತ್ಪದ್ಯೇತ। ನಿಯಮಾಭ್ಯುಪಗಮೇ ಮನುಷ್ಯಪುದ್ಗಲಸ್ಯ ದೇವತಿರ್ಯಗ್ಯೋನಿನಾರಕಪ್ರಾಪ್ತ್ಯಭಾವಃ ಪ್ರಾಪ್ನುಯಾತ್ । ಅನಿಯಮಾಭ್ಯುಪಗಮೇಽಪಿ ಮನುಷ್ಯಪುದ್ಗಲಃ ಕದಾಚಿತ್ ಕ್ಷಣೇನ ಹಸ್ತೀ ಭೂತ್ವಾ ದೇವೋ ವಾ ಪುನರ್ಮನುಷ್ಯೋ ವಾ ಭವೇತ್ ಇತಿ ಪ್ರಾಪ್ನುಯಾತ್। ಉಭಯಮಪಿ ಅಭ್ಯುಪಗಮವಿರುದ್ಧಮ್ । ಅಪಿ ಚ ಯದ್ಭೋಗಾರ್ಥಃ ಸಙ್ಘಾತಃ ಸ್ಯಾತ್ ಸ ನಾಸ್ತಿ ಸ್ಥಿರೋ ಭೋಕ್ತಾ ಇತಿ ತವಾಭ್ಯುಪಗಮಃ । ತತಶ್ಚ ಭೋಗೋ ಭೋಗಾರ್ಥ ಏವ ಸ ನಾನ್ಯೇನ ಪ್ರಾರ್ಥನೀಯಃ। ತಥಾ ಮೋಕ್ಷೋ ಮೋಕ್ಷಾರ್ಥ ಏವ ಇತಿ ಮುಮುಕ್ಷುಣಾ ನಾನ್ಯೇನ ಭವಿತವ್ಯಮ್ । ಅನ್ಯೇನ ಚೇತ್ ಪ್ರಾರ್ಥ್ಯೇತ ಉಭಯಮ್, ಭೋಗಮೋಕ್ಷಕಾಲಾವಸ್ಥಾಯಿನಾ ತೇನ ಭವಿತವ್ಯಮ್ । ಅವಸ್ಥಾಯಿತ್ವೇ ಕ್ಷಣಿಕತ್ವಾಭ್ಯುಪಗಮವಿರೋಧಃ । ತಸ್ಮಾತ್ ಇತರೇತರೋತ್ಪತ್ತಿಮಾತ್ರನಿಮಿತ್ತತ್ವಮ್ ಅವಿದ್ಯಾದೀನಾಂ ಯದಿ ಭವೇತ್

ಭವತು ನಾಮ । ನ ತು ಸಙ್ಘಾತಃ ಸಿಧ್ಯೇತ್ । ಭೋಕ್ತ್ರಭಾವಾತ್ ಇತ್ಯಭಿಪ್ರಾಯಃ ॥

( ಭಾಷ್ಯಾರ್ಥ )

ಇದು ಸರಿಯಲ್ಲ. ಏಕೆ? ಎಂದರೆ ಉತ್ಪತ್ತಿಮಾತ್ರಕ್ಕೆ ನಿಮಿತ್ತವಾಗಿರುವದರಿಂದ. (ಇದರ ವಿವರ) : ಸಂಘಾತಕ್ಕೆ ಯಾವದಾದರೂ ನಿಮಿತ್ತವೆಂದು ನಿಶ್ಚಯವಾಗುವಂತಿದ್ದರೆ ಸಂಘಾತವು ಉಪಪನ್ನವಾಗಬಹುದಾಗಿತ್ತು. ಆದರೆ (ಅದು) ನಿಶ್ಚಯವಾಗುವಂತಿಲ್ಲ. ಏಕೆಂದರೆ ಅವಿದ್ಯಾದಿಗಳು ಒಂದಕ್ಕೊಂದು ಪ್ರತ್ಯಯವಾಗಿರುತ್ತಿದ್ದರೂ[1] ಹಿಂದುಹಿಂದಿನದು ಮುಂದುಮುಂದಿನದಕ್ಕೆ ನಿಮಿತ್ತವಾದೀತೇ ಹೊರತು ಸಂಘಾತದ ಉತ್ಪತ್ತಿಗೆ ಯಾವದೊಂದು ನಿಮಿತ್ತವೂ ಇರುವಹಾಗಿಲ್ಲ.

(ಬೌದ್ಧ) :– , ಅವಿದ್ಯಾದಿಗಳಿಂದ ಸಂಘಾತವು ತಾನೇ ಆಕ್ಷಿಪ್ತವಾಗುತ್ತದೆ ಎಂದು ಹೇಳಿದೆವಲ್ಲ !

(ಪರಿಹಾರ) :– ಇದಕ್ಕೆ ಹೇಳುತ್ತೇವೆ. ಮೊದಲನೆಯದಾಗಿ ಅವಿದ್ಯಾದಿಗಳು ಸಂಘಾತವಿಲ್ಲದೆ ಸ್ವರೂಪವನ್ನೇ ಪಡೆಯಲಾರವಾದ್ದರಿಂದ ಸಂಘಾತವನ್ನು ಅಪೇಕ್ಷಿಸುತ್ತವೆ ಎಂಬಿದೇ (ನಿಮ್ಮ) ಅಭಿಪ್ರಾಯವಾದರೆ, ಆಗ ಆ ಸಂಘಾತಕ್ಕೆ ನಿಮಿತ್ತವನ್ನು ಹೇಳಬೇಕಾಗುವದು. ಆ (ನಿಮಿತ್ತವು) ನಿತ್ಯವಾದ ಅಣುಗಳನ್ನೂ ಆಶ್ರಯಾಶ್ರಯಿಭೂತವಾದ[2] ಭೋಕ್ತೃಗಳನ್ನೂ ಒಪ್ಪಿದರೂ ಸಂಭವಿಸುವದಿಲ್ಲವೆಂದು[3] ವೈಶೇಷಿಕಪರೀಕ್ಷೆಯಲ್ಲಿ ಹೇಳಿದ್ದಾಯಿತು. ಇನ್ನು ಅಣುಗಳು ಕ್ಷಣಿಕವೂ ಆಗಿ ಭೋಕ್ತೃರಹಿತವಾಗಿರುವವೆಂದು ಅಥವಾ ಆಶ್ರಯಾಶ್ರಯಿರಹಿತವಾಗಿರುವವೆಂದು[4] ಒಪ್ಪುವಲ್ಲಿ (ಅದು) ಉಂಟಾಗಲಾರದೆಂದು

---

1. ಹೇತುವಾಗಿದ್ದರೂ ಎಂದರ್ಥ.

2. ಅದೃಷ್ಟಕ್ಕೆ ಆಶ್ರಯವಾಗಿರುವ ಎಂದರ್ಥ.

3. ಸ್ಥಿರವಾದ ಅಣುಗಳನ್ನೂ ಭೋಗಕ್ಕೆ ಹೇತುವಾದ ಅದೃಷ್ಟಕ್ಕೆ ಆಶ್ರಯವಾಗಿರುವ ಭೋಕ್ತೃಗಳನ್ನು ಒಪ್ಪಿದರೂ ತಕ್ಕ ಚೇತನರೂಪನಾದ ಅಧಿಷ್ಠಾತೃವಿಲ್ಲದ್ದರಿಂದ ಸಂಘಾತವಾಗುವಹಾಗಿಲ್ಲ ಎಂದು (ಭಾ. ಭಾ. ೨೭) ಹೇಳಿದ್ದಾಗಿದೆ ಎಂದರ್ಥ– ಎಂದು ನ್ಯಾ. ನಿ.

4. ಉಪಕಾರ್ಯೋಪಕಾರಕಭಾವವಿಲ್ಲದ ಎಂದರ್ಥ –ಎಂದು ವ್ಯಾಖ್ಯಾನಗಳು. 'ಆಶ್ರಯಾಶ್ರಯಿಶೂನ್ಯೇಷು' ಎಂದು ಪಾಠಾಂತರವನ್ನು ಕಲ್ಪಿಸಿ ಸಂಘಾತಕರ್ತೃವಿಲ್ಲದ ಎಂದು ರ. ಪ್ರ. ವ್ಯಾಖ್ಯಾನದಲ್ಲಿ ವಿವರಿಸಿದೆ. ಭೋಗ್ಯವಾದ ಶರೀರಾದಿಗಳು ಆಶ್ರಯಿಸಿಕೊಂಡು ನಿಲ್ಲುವದಕ್ಕೆ ಬೇಕಾದ ಜೀವರುಗಳು ಎಂದು ಅರ್ಥವಿರಬಹುದು. ಈ ಶಬ್ದವು ಭಾಷ್ಯದಲ್ಲಿ ಮತ್ತೆಲ್ಲಿಯೂ ಕಂಡುಬಂದಿಲ್ಲ.

ಹೇಳುವದೇನಿದೆ ? ಇನ್ನು ಅವಿದ್ಯಾದಿಗಳೇ ಸಂಘಾತಕ್ಕೆ ನಿಮಿತ್ತ ಎಂಬಿದು ಅಭಿಪ್ರಾಯವಾದರೆ, ಅದನ್ನೇ ಆಶ್ರಯಿಸಿ ಸ್ವರೂಪವನ್ನು ಪಡೆದುಕೊಳ್ಳುವ (ಅವಿದ್ಯಾದಿಗಳು) ಅದಕ್ಕೇ ಹೇಗೆತಾನೆ ನಿಮಿತ್ತವಾದಾವು ? ಅಥವಾ ಸಂಘಾತಗಳೇ ಅನಾದಿಯಾದ ಸಂಸಾರದಲ್ಲಿ ಸಂತತವಾಗಿ ಇದ್ದುಕೊಂಡಿರುತ್ತವೆ, ಅವನ್ನಾಶ್ರಯಿಸಿಕೊಂಡು ಅವಿದ್ಯಾದಿಗಳೂ (ಇರುತ್ತಿವೆ) ಎಂದು ನಿನ್ನ ಅಭಿಪ್ರಾಯವಾದರೆ[1] ಆಗಲೂ (ಒಂದು) ಸಂಘಾತದಿಂದ ಮತ್ತೊಂದು ಸಂಘಾತವು ಹುಟ್ಟುವಾಗ ಗೊತ್ತಾದ ಅಂಥ (ಸಂಘಾತ)ವೇ ಹುಟ್ಟುವದೊ, ಅಥವಾ (ಯಾವ) ನಿಯಮವೂ ಇಲ್ಲದೆ ಸದೃಶವಾಗಿಯೋ ವಿಸದೃಶವಾಗಿಯೋ ಹುಟ್ಟುವದೊ ? ನಿಯಮವನ್ನು ಒಪ್ಪಿದರೆ ಮನುಷ್ಯಪುದ್ಗಲಕ್ಕೆ[2] ದೇವತಿರ್ಯಗ್ಯೋನಿನಾರಕಗಳು ಪ್ರಾಪ್ತವಾಗಬಾರದಾಗುವದು; ಅನಿಯಮವನ್ನು ಒಪ್ಪಿದರೆ ಒಂದು ಕ್ಷಣದಲ್ಲಿ ಆನೆಯಾಗಿ ಮತ್ತೆ (ಇನ್ನೊಂದು ಕ್ಷಣದಲ್ಲಿ) ದೇವತೆಯೋ ಮತ್ತೆ ಮನುಷ್ಯನೋ ಆಗಿಬಿಡಬಹುದೆಂದು ಬಂದೊದಗುವದು. ಇವೆರಡೂ (ನಿಮ್ಮ) ಅಭ್ಯುಪಗಮಕ್ಕೆ ವಿರುದ್ಧವು. ಇದಲ್ಲದೆ ಯಾವನ ಭೋಗಕ್ಕಾಗಿ ಸಂಘಾತ (ವಿರಬೇಕೋ) ಅಂಥ ಸ್ಥಿರನಾದ ಭೋಕ್ತೃವೇ ಇಲ್ಲವೆಂಬುದು ನಿನ್ನ ಅಭ್ಯುಪಗಮವು. ಆದ್ದರಿಂದ ಭೋಗವು ಭೋಗಾರ್ಥವೇ, ಮತ್ತೊಬ್ಬನು ಪ್ರಾರ್ಥಿಸತಕ್ಕದ್ದಲ್ಲ (ಎಂದಾಗುವದು). ಹೀಗೆಯೇ ಮೋಕ್ಷವು ಮೋಕ್ಷಾರ್ಥವೇ ಆಗುವದರಿಂದ ಮತ್ತೊಬ್ಬನು ಮುಮುಕ್ಷು ಇರಬೇಕಾದದ್ದಿಲ್ಲ. ಮತ್ತೊಬ್ಬನು ಅವೆರಡನ್ನೂ ಬಯಸುವನೆಂದಾದರೆ ಅವನು ಭೋಗಮೋಕ್ಷಕಾಲಗಳಲ್ಲಿ ಇದ್ದುಕೊಂಡಿರಬೇಕಾಗುವದು; ಹಾಗೆ ಇದ್ದರೆ ಕ್ಷಣಿಕತ್ವವನ್ನು ಒಪ್ಪಿರುವ (ನಿಮ್ಮ ಸಿದ್ಧಾಂತಕ್ಕೆ) ವಿರೋಧವಾಗುವದು. ಆದ್ದರಿಂದ ಅವಿದ್ಯಾದಿಗಳು ಒಂದಕ್ಕೊಂದು ಉತ್ಪತ್ತಿಯಾಗುವದಕ್ಕೆ ನಿಮಿತ್ತವಾಗಿ ಮಾತ್ರ ಆದರೆ ಆಗಬಹುದು; ಆದರೆ (ಅಷ್ಟರಿಂದ) ಸಂಘಾತವು ಸಿದ್ಧಿಸುವದಿಲ್ಲ; ಏಕೆಂದರೆ (ನಿಮ್ಮ ಮತದಲ್ಲಿ) ಭೋಕ್ತೃವಿಲ್ಲ ಎಂದು ಅಭಿಪ್ರಾಯ.

---

1. ಅವಿದ್ಯಾದಿಗಳ ಇರವಿಗೆ ಸಂಘಾತವಿರಬೇಕು —ಎಂದರೆ ಸಂಘಾತಕ್ಕೆ ಪ್ರಮಾಣವನ್ನು ಹೇಳಿದಂತಾಯಿತು, ನಿಮಿತ್ತವನ್ನು ಹೇಳಿದಂತೆ ಆಗಲಿಲ್ಲ ಅವಿದ್ಯಾದಿಗಳೇ ನಿಮಿತ್ತ ಎಂದರೆ ಅನ್ಯೋನ್ಯಾಶ್ರಯದೋಷವುಂಟಾಗುವದು. ಸಂಘಾತಗಳು ಅನಾದಿಯಾಗಿ ಒಂದರಿಂದೊಂದು ಹುಟ್ಟುತ್ತಿರುತ್ತವೆ ಎಂಬ ಮೂರನೆಯ ಕಲ್ಪದಲ್ಲಿ ಈಗ ದೋಷವನ್ನು ಹೇಳುತ್ತಾರೆ.

2. 'ಪೂರ್ಯತೇ ಗಲತಿ ಚ' ತುಂಬಿಕೊಳ್ಳುತ್ತದೆ, ನಾಶವೂ ಆಗುತ್ತಿರುತ್ತದೆ: ಆದ್ದರಿಂದ ದೇಹಕ್ಕೆ ಪುದ್ಗಲವೆಂದು ಹೆಸರು ಎಂದು ನ್ಯಾ.ನಿ. ರ.ಪ್ರ.

**ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ‖ ೨೦ ‖**

೨೦. ಮತ್ತು ಮುಂದಿನದು ಹುಟ್ಟಿದರೆ ಹಿಂದಿನದು ನಾಶವಾಗುವದರಿಂದ (ಉತ್ಪತ್ತಿನಿಮಿತ್ತತ್ವವೂ ಇಲ್ಲ).

## ಅವಿದ್ಯಾದಿಗಳಿಗೆ ಉತ್ಪತ್ತಿನಿಮಿತ್ತತ್ವವೂ ಇಲ್ಲ

(ಭಾಷ್ಯ)

೪೫. ಉಕ್ತಮೇತತ್ ಅವಿದ್ಯಾದೀನಾಮ್ ಉತ್ಪತ್ತಿಮಾತ್ರನಿಮಿತ್ತತ್ವಾತ್ ನ ಸಙ್ಘಾತಸಿದ್ಧಿರಸ್ತಿ ಇತಿ । ತದಪಿ ತು ಉತ್ಪತ್ತಿಮಾತ್ರನಿಮಿತ್ತತ್ವಂ ನ ಸಂಭವತಿ ಇತೀದಮ್ ಇದಾನೀಮ್ ಉಪಪಾದ್ಯತೇ । ಕ್ಷಣಭಙ್ಗವಾದಿನಃ ಅಯಮ್ ಅಭ್ಯುಪಗಮಃ ಉತ್ತರಸ್ಮಿನ್ ಕ್ಷಣೇ ಉತ್ಪದ್ಯಮಾನೇ ಪೂರ್ವಃ ಕ್ಷಣೋ ನಿರುಧ್ಯತೇ ಇತಿ । ನ ಚೈವಮ್ ಅಭ್ಯುಪಗಚ್ಛತಾ ಪೂರ್ವೋತ್ತರಯೋಃ ಕ್ಷಣಯೋಃ ಹೇತುಫಲಭಾವಃ ಶಕ್ಯತೇ ಸಂಪಾದಯಿತುಮ್ । ನಿರುಧ್ಯಮಾನಸ್ಯ ನಿರುದ್ಧಸ್ಯ ವಾ ಪೂರ್ವಕ್ಷಣಸ್ಯ ಅಭಾವಗ್ರಸ್ತತ್ವಾತ್ ಉತ್ತರಕ್ಷಣಹೇತುತ್ವಾನುಪಪತ್ತೇಃ । ಅಥ ಭಾವಭೂತಃ ಪರಿನಿಷ್ಪನ್ನಾವಸ್ಥಃ ಪೂರ್ವಕ್ಷಣಃ ಉತ್ತರಕ್ಷಣಸ್ಯ ಹೇತುಃ ಇತ್ಯಭಿಪ್ರಾಯಃ, ತಥಾಪಿ ನೋಪಪದ್ಯತೇ । ಭಾವಭೂತಸ್ಯ ಪುನರ್ವ್ಯಾಪಾರಕಲ್ಪನಾಯಾಂ ಕ್ಷಣಾನ್ತರಸಂಬನ್ಧಪ್ರಸಙ್ಗಾತ್ । ಅಥ ಭಾವ ಏವ ಅಸ್ಯ ವ್ಯಾಪಾರಃ ಇತ್ಯಭಿಪ್ರಾಯಃ । ತಥಾಪಿ ನೈವ ಉಪಪದ್ಯತೇ । ಹೇತುಸ್ವಭಾವಾನುಪರಕ್ತಸ್ಯ ಫಲಸ್ಯ ಉತ್ಪತ್ತ್ಯಸಂಭವಾತ್ । ಸ್ವಭಾವೋಪರಾಗಾಭ್ಯುಪಗಮೇ ಚ ಹೇತುಸ್ವಭಾವಸ್ಯ ಫಲಕಾಲಾವಸ್ಥಾಯಿತ್ವೇ ಸತಿ ಕ್ಷಣಭಙ್ಗಾಭ್ಯುಪಗಮತ್ಯಾಗಪ್ರಸಙ್ಗಃ । ವಿನೈವ ವಾ ಸ್ವಭಾವೋಪರಾಗೇಣ ಹೇತುಫಲಭಾವಮ್ ಅಭ್ಯುಪಗಚ್ಛತಃ ಸರ್ವತ್ರ ತತ್ಪ್ರಾಪ್ತೇಃ ಅತಿಪ್ರಸಙ್ಗಃ ‖

(ಭಾಷ್ಯಾರ್ಥ)

ಅವಿದ್ಯಾದಿಗಳು ಬರಿಯ ಉತ್ಪತ್ತಿಗೆ ನಿಮಿತ್ತವಾಗಿರುವದರಿಂದ ಸಂಘಾತವು ಸಿದ್ಧವಾಗುವದಿಲ್ಲ ಎಂಬಿದನ್ನು ಹೇಳಿದ್ದಾಯಿತು. ಆದರೆ ಉತ್ಪತ್ತಿಮಾತ್ರನಿಮಿತ್ತತ್ವವೂ ಹೊಂದುವದಿಲ್ಲ ಎಂಬಿದನ್ನು ಈಗ ಉಪಪಾದಿಸಲಾಗುತ್ತದೆ.[1]

---

1. ಹಿಂದೆ ಒಪ್ಪಿಕೊಂಡಿದ್ದ ಉತ್ಪತ್ತಿಹೇತುತ್ವವನ್ನೂ ಇಲ್ಲಿ ಕೈಬಿಡಲಾಗಿರುತ್ತದೆ.

ಉತ್ತರಕ್ಷಣವು ಹುಟ್ಟುವಾಗ ಪೂರ್ವಕ್ಷಣವು ನಿರೋಧವಾಗುತ್ತದೆ ಎಂಬಿದು **ಕ್ಷಣಭಂಗವಾದಿಯ**[1] ಅಭ್ಯುಪಗಮವು. ಹೀಗೆಂದು ಒಪ್ಪಿದವನು ಪೂರ್ವೋತ್ತರಕ್ಷಣಗಳಿಗೆ ಹೇತುಫಲಭಾವವನ್ನು ಸಾಧಿಸುವದಕ್ಕೆ ಆಗಲಾರದು. ಏಕೆಂದರೆ ನಾಶವಾಗುತ್ತಿರುವ, ಅಥವಾ ನಾಶವಾದ ಪೂರ್ವಕ್ಷಣವು, ಅಭಾವ ಗ್ರಸ್ತವಾಗಿರುವದರಿಂದ[2] (ಅದು) ಉತ್ತರಕ್ಷಣಕ್ಕೆ ಹೇತುವಾಗಲಾರದು. ಹೀಗಲ್ಲದೆ ಭಾವಭೂತವಾಗಿ ಸಿದ್ಧಾವಸ್ಥೆಯಲ್ಲಿರುವ ಪೂರ್ವಕ್ಷಣವೇ ಉತ್ತರ ಕ್ಷಣಕ್ಕೆ ಹೇತು ಎಂದು(ಅವನ) ಅಭಿಪ್ರಾಯವಾದರೆ ಹಾಗೂ (ಹೇತುಫಲಭಾವವು) ಉಪಪನ್ನವಾಗುವದಿಲ್ಲ. ಏಕೆಂದರೆ **ಭಾವಭೂತವಾದ (ಪದಾರ್ಥಕ್ಕೆ) ಮತ್ತೆ ವ್ಯಾಪಾರವಿರುವದೆಂದು ಕಲ್ಪಿಸಿದರೆ (ಅದಕ್ಕೆ) ಮತ್ತೊಂದು ಕ್ಷಣದ ಸಂಬಂಧವನ್ನು ಕಲ್ಪಿಸಿದಂತೆ ಆಗುತ್ತದೆ.**[3] ಹಾಗಲ್ಲದೆ ಭಾವವೇ (ಇರವೇ) ಅದರ ವ್ಯಾಪಾರವು ಎಂದು ಅಭಿಪ್ರಾಯವಾದರೆ,[4] ಹಾಗೂ (ಹೇತುಫಲ ಭಾವವು) ಹೊಂದುವದಿಲ್ಲ. ಏಕೆಂದರೆ ಹೇತುಸ್ವಭಾವದ ಸಂಬಂಧವಿಲ್ಲದೆ ಫಲವು ಹುಟ್ಟುವ ಸಂಭವವಿಲ್ಲ.[5] (ಆ) ಸ್ವಭಾವದ ಸಂಬಂಧವನ್ನು ಒಪ್ಪುವದಾದರೆ ಹೇತುಸ್ವಭಾವವು ಫಲಕಾಲದಲ್ಲಿಯೂ ಇರುವದೆಂದಾಗುವದರಿಂದ ಕ್ಷಣಭಂಗಾಭ್ಯುಪಗಮವನ್ನು ಬಿಡಬೇಕಾದ ಪ್ರಸಂಗವು (ಬರುವದು). ಸ್ವಭಾವದ ಉಪ

---

1. ಕ್ಷಣಭಂಗವಾದವೆಂದರೆ ಪ್ರತಿಯೊಂದು ಪದಾರ್ಥವೂ ಒಂದೇ ಕ್ಷಣವಿರುವದೆಂಬ ವಾದವು. ಬುದ್ಧನು ಇದನ್ನು ನೇರಾಗಿ ಹೇಳಲಿಲ್ಲವಾದರೂ ಅವನ ಅನಿತ್ಯವಾದದಲ್ಲಿಯೂ ಪ್ರತೀತ್ಯಸಮುತ್ಪಾದವಾದದಲ್ಲಿಯೂ ಇದು ಅಡಕವಾಗಿದೆ. ಅವನ ಅನುಯಾಯಿಗಳು ಇದನ್ನು ಸ್ಪಷ್ಟಗೊಳಿಸಿರುತ್ತಾರೆ.

2. ಕ್ಷಣವು ಹುಟ್ಟುತ್ತದೆ, ಕ್ಷಣವು ನಾಶವಾಗುತ್ತದೆ– ಎಂಬಲ್ಲಿ ಕ್ಷಣಿಕವಾದ ಪದಾರ್ಥವು ಹುಟ್ಟುತ್ತದೆ ಎಂದು ಅರ್ಥಮಾಡಬೇಕು. ನಾಶವಾಗುತ್ತಿರುವದಕ್ಕೆ ನಾಶರೂಪವಾದ ಅಭಾವದ ಸಂಬಂಧವಿರುತ್ತದೆ. ನಾಶವಾದದ್ದಂತೂ ಅಭಾವವೇ. ಇವೆರಡಕ್ಕೂ ಹೇತುತ್ವವಿಲ್ಲ.

3. ಪೂರ್ವಕ್ಷಣವು ಇರುವಾಗ ಅದರಲ್ಲಿ ಹೇತುತ್ವವಿರುವದಿಲ್ಲ ; ಆ ಹೇತುತ್ವವಿರುವದಕ್ಕೆಂದು ಇನ್ನೊಂದು ಕ್ಷಣವಿದ್ದು ವ್ಯಾಪಾರವನ್ನು ಮಾಡುವದೆಂದರೆ ಕ್ಷಣಭಂಗವಾದವನ್ನು ಬಿಡಬೇಕಾಗುತ್ತದೆ.

4. ವಸ್ತು ಬೇರೆ, ವ್ಯಾಪಾರವು ಬೇರೆ ಎಂಬುದಿಲ್ಲ ; ಇರುವದೆಂದರೆ ಕ್ರಿಯಾರೂಪವು ಎನ್ನುವದಾದರೆ ಎಂದರ್ಥ.

5. ಫಲವು ಎಂದರೆ ಕಾರ್ಯವು ಹೇತುವಿನ ಸಂಬಂಧವುಳ್ಳದ್ದೇ ಆಗಿರಬೇಕು ; ಮಡಕೆಯಲ್ಲಿ ಮಣ್ಣಿನ ಸ್ವಭಾವವಿರಬೇಕು.

ರಾಗವಿಲ್ಲದೆ ಹೇತುಫಲಭಾವವನ್ನು ಒಪ್ಪಿದವನ (ಮತದಲ್ಲಿ) ಎಲ್ಲೆಲ್ಲಿಯೂ ಆ (ಹೇತುಫಲಭಾವವು) ಬಂದೊದಗುವದರಿಂದ ಅತಿಪ್ರಸಂಗವಾಗುವದು.[1]

## ಸೌಗತಮತದಲ್ಲಿ ಉತ್ಪಾದನಿರೋಧಗಳು ಸಿದ್ಧಿಸುವದಿಲ್ಲ

(ಭಾಷ್ಯ)

೪೬. ಅಪಿ ಚ ಉತ್ಪಾದನಿರೋಧೌ ನಾಮ ವಸ್ತುನಃ ಸ್ವರೂಪಮೇವ ವಾ ಸ್ಯಾತಾಮ್, ಅವಸ್ಥಾನ್ತರಂ ವಾ, ವಸ್ತ್ವನ್ತರಮೇವ ವಾ | ಸರ್ವಥಾಪಿ ನೋಪಪದ್ಯತೇ | ಯದಿ ತಾವತ್ ವಸ್ತುನಃ ಸ್ವರೂಪಮೇವ ಉತ್ಪಾದನಿರೋಧೌ ಸ್ಯಾತಾಮ್, ತತೋ ವಸ್ತುಶಬ್ದಃ ಉತ್ಪಾದನಿರೋಧಶಬ್ದೌ ಚ ಪರ್ಯಾಯಾಃ ಪ್ರಾಪ್ನುಯುಃ | ಅಥ ಅಸ್ತಿ ಕಶ್ಚಿದ್ ವಿಶೇಷಃ ಇತಿ ಮನ್ಯೇತ, ಉತ್ಪಾದನಿರೋಧಶಬ್ದಾಭ್ಯಾಂ ಮಧ್ಯವರ್ತಿನೋ ವಸ್ತುನಃ ಆದ್ಯನ್ತಾಖ್ಯೇ ಅವಸ್ಥೇ ಅಭಿಲಪ್ಯೇತೇ ಇತಿ, ಏವಮಪಿ ಆದ್ಯನ್ತಮಧ್ಯಕ್ಷಣತ್ರಯಸಂಬನ್ಧಿತ್ವಾತ್ ವಸ್ತುನಃ ಕ್ಷಣಿಕತ್ವಾಭ್ಯುಪಗಮಹಾನಿಃ | ಅಥ ಅತ್ಯನ್ತವ್ಯತಿರಿಕ್ತಾವೇವ ಉತ್ಪಾದನಿರೋಧೌ ವಸ್ತುನಃ ಸ್ಯಾತಾಮ್, ಅಶ್ವಮಹಿಷವತ್, ತತಃ ವಸ್ತು ಉತ್ಪಾದನಿರೋಧಾಭ್ಯಾಮ್ ಅಸಂಸ್ಪೃಷ್ಟಮ್ ಇತಿ ವಸ್ತುನಃ ಶಾಶ್ವತತ್ವಪ್ರಸಙ್ಗಃ | ಯದಿ ಚ ದರ್ಶನಾದರ್ಶನೇ ವಸ್ತುನಃ ಉತ್ಪಾದನಿರೋಧೌ ಸ್ಯಾತಾಮ್, ಏವಮಪಿ ದ್ರಷ್ಟೃಧರ್ಮೌ ತೌ ನ ವಸ್ತುಧರ್ಮೌ ಇತಿ ವಸ್ತುನಃ ಶಾಶ್ವತತ್ವಪ್ರಸಙ್ಗ ಏವ | ತಸ್ಮಾದಪಿ ಅಸಙ್ಗತಂ ಸೌಗತಂ ಮತಮ್ ॥

(ಭಾಷ್ಯಾರ್ಥ)

ಇದಲ್ಲದೆ ಉತ್ಪಾದ, ನಿರೋಧ– ಎಂಬಿವು ವಸ್ತುವಿನ ಸ್ವರೂಪವೇ ಆಗಿರುವವೊ, ಅವಸ್ಥಾಂತರವೊ, ವಸ್ತ್ವಂತರವೇ ಆಗಿರುವವೊ? ಹೇಗೂ (ಈ ಮತವು) ಉಪಪನ್ನವಾಗುವದಿಲ್ಲ. ಮೊದಲನೆಯದಾಗಿ ಉತ್ಪಾದನಿರೋಧಗಳು ವಸ್ತುವಿನ ಸ್ವರೂಪವೇ ಆದರೆ ಆಗ ವಸ್ತುಶಬ್ದವೂ ಉತ್ಪಾದನಿರೋಧಶಬ್ದಗಳೂ ಪರ್ಯಾಯವೆಂದೇ ಆಗುವದು.[2] ಹಾಗಿಲ್ಲದೆ (ಅವುಗಳಲ್ಲಿ) ಯಾವ

---

1. ಹೇತುವು ಫಲಕಾಲದಲ್ಲಿರುತ್ತದೆ ಎಂದರೆ ಕ್ಷಣಿಕವಾದಕ್ಕೆ ವಿರೋಧವಾಗುವದು; ಇರುವದಿಲ್ಲವೆಂದರೆ ಹೇತುಫಲಭಾವಕ್ಕೆ ನಿಯಮವೇ ಇಲ್ಲವಾಗುವದು. ಮಡಕೆಯೂ ಮಣ್ಣಿಗೆ ಕಾರಣವಾಗಬಹುದು, ಹತ್ತಿಯೂ ಮಡಕೆಗೆ ಕಾರಣವೆಂದಾಗಬಹುದು ಎಂದು ಹೀಗೆಲ್ಲ ಅತಿಪ್ರಸಕ್ತಿಯುಂಟಾಗುವದು ಎಂದರ್ಥ.

2. ಆತ್ಮವಸ್ತುವಿಗಿಂತ ಚೈತನ್ಯಾದಿಗಳು ಬೇರೆಯಲ್ಲ ಎಂಬ ವೇದಾಂತಮತದಲ್ಲಿ ಆತ್ಮಚೈತನ್ಯಾದಿಶಬ್ದಗಳು ಪರ್ಯಾಯವೆಂದು ಶಂಕಿಸುವದಕ್ಕೆ ಬರುವದಿಲ್ಲ; ಏಕೆಂದರೆ ಆ ಮತದಲ್ಲಿ ಕಲ್ಪಿತಭೇದವನ್ನು ವ್ಯವಹಾರದೃಷ್ಟಿಯಿಂದ ಒಪ್ಪಿರುತ್ತದೆ. ಆದರೆ ಸೌಗತಮತದಲ್ಲಿ ವ್ಯವಹಾರಪರಮಾರ್ಥಗಳ ವಿಭಾಗಕ್ಕೆ ಅವಕಾಶವಿರುವದಿಲ್ಲವಾದ್ದರಿಂದ ಉತ್ಪಾದಾದಿಶಬ್ದಗಳು ಪರ್ಯಾಯವೇ ಆಗುತ್ತವೆ.

ದೋ ಒಂದು ವಿಶೇಷವು ಇರುತ್ತದೆಯೆಂದೂ ಉತ್ಪಾದ, ನಿರೋಧ – ಎಂಬ ಶಬ್ದಗಳಿಂದ ನಡುವೆ ಇರುವ ವಸ್ತುವಿನ ಮೊದಲು, ಕೊನೆ ಎಂಬ ಅವಸ್ಥೆಗಳನ್ನು ಹೇಳುತ್ತೇವೆ– ಎಂದು ತಿಳಿಯುವದಾದರೆ,. ಹೀಗಾದರೂ ಮೊದಲು, ಕೊನೆ, ನಡುವೆ – ಎಂಬ ಮೂರು ಮೂರು ಕ್ಷಣಗಳಿಗೆ ಸಂಬಂಧಪಟ್ಟಿದೆಯೆಂದಾಗಿ, ವಸ್ತುವು ಕ್ಷಣಿಕವೆಂದು ಒಪ್ಪಿರುವದನ್ನು ಬಿಡಬೇಕಾಗುವದು. ಇನ್ನು ಉತ್ಪಾದ ನಿರೋಧಗಳು ಕುದುರೆಕೋಣಗಳಂತೆ ವಸ್ತುವಿಗಿಂತ ಅತ್ಯಂತವಾಗಿ ಬೇರೆಯೇ (ಎಂದರೆ), ಆಗ ವಸ್ತುವನ್ನು ಉತ್ಪಾದನಿರೋಧಗಳು ಮುಟ್ಟಿಯೇ ಇಲ್ಲವಾದ್ದ ರಿಂದ ವಸ್ತುವು ಶಾಶ್ವತವಾಗಬೇಕಾಗುವದು. ವಸ್ತುವಿನ. ಉತ್ಪಾದನಿರೋಧಗಳು ದರ್ಶನ, ಅದರ್ಶನ –(ಇವೇ) ಆಗಿವೆ (ಎಂದರೆ), ಹಾಗೂ ಅವು ದ್ರಷ್ಟೃವಿನ ಧರ್ಮಗಳೇ ಹೊರತು ವಸ್ತುವಿನ ಧರ್ಮಗಳಲ್ಲವಾದ್ದರಿಂದ (ಆಗಲೂ) ವಸ್ತುವು ಶಾಶ್ವತವೇ ಆಗಬೇಕಾಗುವದು. ಆದ್ದರಿಂದಲೂ ಸೌಗತಮತವು ಅಸಂಗತವು.

**ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ॥ ೨೧ ॥**

೨೧. (ಹೇತು)ವಿಲ್ಲದಿದ್ದರೆ ಪ್ರತಿಜ್ಞೆಗೆ ವಿರೋಧವಾಗುವದು ; ಹಾಗಿಲ್ಲದಿದ್ದರೆ ಯೌಗಪದ್ಯವು (ಬಂದೊದಗುವದು).

## ಹೇತುವನ್ನೊಪ್ಪಿದರೂ ಒಪ್ಪದಿದ್ದರೂ ದೋಷ

( ಭಾಷ್ಯ )

೪೭. ಕ್ಷಣಭಙ್ಗವಾದೇ ಪೂರ್ವಕ್ಷಣಃ ನಿರೋಧಗ್ರಸ್ತತ್ವಾತ್ ನೋತ್ತರಸ್ಯ ಕ್ಷಣಸ್ಯ ಹೇತುರ್ಭವತಿ ಇತ್ಯುಕ್ತಮ್ । ಅಥ ಅಸತ್ಯೇವ ಹೇತೌ ಫಲೋತ್ಪತ್ತಿಂ ಬ್ರೂಯಾತ್, ತತಃ ಪ್ರತಿಜ್ಞೋಪರೋಧಃ ಸ್ಯಾತ್ । ಚತುರ್ವಿಧಾನ್ ಹೇತೂನ್ ಪ್ರತೀತ್ಯ ಚಿತ್ತಚೈತ್ತಾ ಉತ್ಪದ್ಯನ್ತೇ ಇತೀಯಂ ಪ್ರತಿಜ್ಞಾ ಹೀಯೇತ। ನಿರ್ಹೇತುಕಾಯಾಂ ಚ ಉತ್ಪತ್ತೌ ಅಪ್ರತಿಬನ್ಧಾತ್ ಸರ್ವಂ ಸರ್ವತ್ರ ಉತ್ಪದ್ಯೇತ । ಅಥ ಉತ್ತರಕ್ಷಣೋತ್ಪತ್ತಿಯಾವತ್ ಅವತಿಷ್ಠತೇ ಪೂರ್ವಕ್ಷಣಃ ಇತಿ ಬ್ರೂಯಾತ್ ತತಃ ಯೌಗಪದ್ಯಂ ಹೇತುಫಲಯೋಃ ಸ್ಯಾತ್ । ತಥಾಪಿ ಪ್ರತಿಜ್ಞೋಪರೋಧ ಏವ ಸ್ಯಾತ್ । ಕ್ಷಣಿಕಾಃ ಸರ್ವೇ ಸಂಸ್ಕಾರಾಃ ಇತೀಯಂ ಪ್ರತಿಜ್ಞಾ ಉಪರುಧ್ಯೇತ ॥

(ಭಾಷ್ಯಾರ್ಥ)

ಕ್ಷಣಭಂಗವಾದದಲ್ಲಿ ಮೊದಲಿನ ಕ್ಷಣವು ನಿರೋಧಗ್ರಸ್ತವಾಗಿರುವದರಿಂದ[1] ಉತ್ತರಕ್ಷಣಕ್ಕೆ ಕಾರಣವಲ್ಲ ಎಂದು ಹೇಳಿದ್ದಾಯಿತು. ಇನ್ನು ಹೇತುವೇ

[1] ನಾಶವಾಗುತ್ತಿರುವದರಿಂದ ಅಥವಾ ನಾಶವಾಗಿರುವದರಿಂದ.

ಇಲ್ಲದೆ ಫಲವು ಉತ್ಪನ್ನವಾಗುವದೆಂದು (ಆ ವಾದಿಯು) ಹೇಳುವದಾದರೆ, ಆಗ (ಅವನ) ಪ್ರತಿಜ್ಞೆಗೆ ವಿರೋಧವಾಗುವದು. 'ನಾಲ್ಕು ವಿಧವಾದ ಹೇತುಗಳನ್ನು ಪಡೆದು ಚಿತ್ತಚೈತ್ತಗಳು ಉತ್ಪನ್ನವಾಗುವವು' ಎಂಬೀ ಪ್ರತಿಜ್ಞೆಯು ಹಾನಿಯಾಗುವದು.[1] ಯಾವ ಹೇತುವೂ ಇಲ್ಲದೆ (ಕಾರ್ಯದ) ಉತ್ಪತ್ತಿಯಾಗುವದಾದರೆ (ಉತ್ಪತ್ತಿಗೆ) ಯಾವ ಅಡ್ಡಿಯೂ ಇರುವದಿಲ್ಲವಾದ್ದರಿಂದ ಎಲ್ಲವೂ ಎಲ್ಲೆಲ್ಲಿಯೂ ಹುಟ್ಟಬಹುದಾಗುವದು.[2] ಮೊದಲಿನ ಕ್ಷಣವು ಆಮೇಲಿನ ಕ್ಷಣವು (ಬರುವ)ವರೆಗೂ ನಿಂತಿರುತ್ತದೆ ಎನ್ನುವದಾದರೆ ಆಗ ಹೇತುಫಲಗಳಿಗೆ ಯೌಗಪದ್ಯವುಂಟಾಗುವದು.[3] ಹಾಗೂ ಪ್ರತಿಜ್ಞೆಗೆ ವಿರೋಧವೇ ಆಗುವದು ; (ಏಕೆಂದರೆ) ಎಲ್ಲಾ ಸಂಸ್ಕಾರಗಳೂ ಕ್ಷಣಿಕವು[4] ಎಂಬೀ ಪ್ರತಿಜ್ಞೆಗೆ ವಿರೋಧವಾಗುವದು.

**ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ॥ ೨೨ ॥**

೨೨. ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಗಳು ಪ್ರಾಪ್ತವಾಗುವದಿಲ್ಲ ; ಏಕೆಂದರೆ ವಿಚ್ಛೇದವಿಲ್ಲ.

## ನಿರೋಧದ್ವಯವು ಅಸಂಭಾವಿತ

( ಭಾಷ್ಯ )

೪೮. ಅಪಿ ಚ ವೈನಾಶಿಕಾಃ ಕಲ್ಪಯನ್ತಿ ಬುದ್ಧಿಬೋಧ್ಯಂ ತ್ರಯಾತ್ ಅನ್ಯತ್ ಸಂಸ್ಕೃತಂ ಕ್ಷಣಿಕಂ ಚ ಇತಿ । ತದಪಿ ತ್ರಯಂ ಪ್ರತಿಸಂಖ್ಯಾಪ್ರತಿ

---

1. ನೀಲವಾಗಿ ತೋರುವ ಚಿತ್ತಕ್ಕೆ 'ನೀಲವೆಂಬ ಆಲಂಬನಪ್ರತ್ಯಯದಿಂದ ನೀಲಾಕಾರವುಂಟಾಗುತ್ತದೆ ; ಹಿಂದಿನ ವಿಜ್ಞಾನವೆಂಬ ಸಮನಂತರಪ್ರತ್ಯಯದಿಂದ ಬೋಧರೂಪವುಂಟಾಗುತ್ತದೆ ; ಚಕ್ಷುಸ್ಸೆಂಬ ಅಧಿಪತಿಪ್ರತ್ಯಯದಿಂದ ರೂಪವನ್ನೇ ಗ್ರಹಿಸುವದೆಂಬ ನಿಯಮವುಂಟಾಗುತ್ತದೆ ; ಬೆಳಕೆಂಬ ಸಹಕಾರಿಪ್ರತ್ಯಯದಿಂದ ಅದು ಸ್ಪಷ್ಟಾರ್ಥವುಳ್ಳದ್ದಾಗುತ್ತದೆ. ಹೀಗೆಯೇ ಸುಖವೇ ಮುಂತಾದ ಚೈತ್ತಗಳೂ ಚಿತ್ತದ ಹೇತುಗಳಿಂದಲೇ ಆಗುವದರಿಂದ ಅವಕ್ಕೂ ಈ ನಾಲ್ಕೇ ಪ್ರತ್ಯಯ(ಕಾರಣ)ಗಳು ಈ ಪ್ರತೀತ್ಯಸಮುತ್ಪಾದದ ಪ್ರತಿಜ್ಞೆಯನ್ನು ಬಿಡಬೇಕಾಗುವದು ಎಂದರ್ಥ. ಭಾಮತೀ.

2. ಹಿಂದಿನ ಸೂತ್ರದಲ್ಲಿಯೇ ಇದನ್ನು ವಿವರಿಸಿದೆ ; ಭಾ. ಭಾ. ೪೫ರ 4ನೆಯ ಟಿಪ್ಪಣಿಯನ್ನು ನೋಡಿ.

3. ಹೇತುವೂ ಫಲವೂ ಒಟ್ಟಿಗೆ ಇರಬೇಕಾಗುವದು ಎಂದರ್ಥ.

4. ಸಂಸ್ಕ್ರಿಯನ್ತೇ ಉತ್ಪಾದ್ಯನ್ತೇ ಇತಿ ಸಂಸ್ಕಾರಾಃ ಎಂಬ ಉತ್ಪತ್ತಿಯಿಂದ ಸಂಸ್ಕಾರವೆಂದರೆ ಕಾರ್ಯ. ಕಾರ್ಯವೆಲ್ಲವೂ ಕ್ಷಣಿಕ ಎಂದರ್ಥ.

ಸಂಖ್ಯಾನಿರೋಧೌ ಆಕಾಶಂ ಚ ಇತ್ಯಾಚಕ್ಷತೇ । ತ್ರಯಮಪಿ ಚೈತತ್ ಅವಸ್ತು ಅಭಾವಮಾತ್ರಂ ನಿರುಪಾಖ್ಯಮ್ ಇತಿ ಮನ್ಯನ್ತೇ । ಬುದ್ಧಿಪೂರ್ವಕಃ ಕಿಲ ವಿನಾಶೋ ಭಾವಾನಾಂ ಪ್ರತಿಸಂಖ್ಯಾನಿರೋಧೋ ನಾಮ ಭಾಷ್ಯತೇ । ತದ್ವಿಪರೀತಃ ಅಪ್ರತಿಸಂಖ್ಯಾನಿರೋಧಃ । ಆವರಣಾಭಾವಮಾತ್ರಮ್ ಆಕಾಶಮ್ ಇತಿ । ತೇಷಾಮ್ ಆಕಾಶಂ ಪರಸ್ತಾತ್ ಪ್ರತ್ಯಾಖ್ಯಾಸ್ಯತಿ । ನಿರೋಧದ್ವಯಮ್ ಇದಾನೀಂ ಪ್ರತ್ಯಾಚಷ್ಟೇ । ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಯೋಃ ಅಪ್ರಾಪ್ತಿಃ । ಅಸಂಭವಃ ಇತ್ಯರ್ಥಃ । ಕಸ್ಮಾತ್ ? ಅವಿಚ್ಛೇದಾತ್। ಏತೌ ಹಿ ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧೌ ಸನ್ತಾನಗೋಚರೌ ವಾ ಸ್ಯಾತಾಮ್, ಭಾವಗೋಚರೌ ವಾ । ನ ತಾವತ್ ಸನ್ತಾನಗೋಚರೌ ಸಂಭವತಃ । ಸರ್ವೇಷ್ವಪಿ ಸನ್ತಾನೇಷು ಸನ್ತಾನಿನಾಮ್ ಅವಿಚ್ಛಿನ್ನೇನ ಹೇತುಫಲಭಾವೇನ ಸನ್ತಾನವಿಚ್ಛೇದಸ್ಯ ಅಸಂಭವಾತ್ । ನಾಪಿ ಭಾವಗೋಚರತಾ ಸಂಭವತಃ । ನ ಹಿ ಭಾವಾನಾಂ ನಿರನ್ವಯೋ ನಿರುಪಾಖ್ಯೋ ವಿನಾಶಃ ಸಂಭವತಿ । ಸರ್ವಾಸ್ವಪಿ ಅವಸ್ಥಾಸು ಪ್ರತ್ಯಭಿಜ್ಞಾನಬಲೇನ ಅನ್ವಯ್ಯವಿಚ್ಛೇದದರ್ಶನಾತ್ । ಅಸ್ಪಷ್ಟಪ್ರತ್ಯಭಿಜ್ಞಾನಾಸ್ವಪಿ ಅವಸ್ಥಾಸು ಕ್ವಚಿತ್ ದೃಷ್ಟೇನ ಅನ್ವಯ್ಯವಿಚ್ಛೇದೇನ ಅನ್ಯತ್ರಾಪಿ ತದನುಮಾನಾತ್ । ತಸ್ಮಾತ್ ಪರಪರಿಕಲ್ಪಿತಸ್ಯ ನಿರೋಧದ್ವಯಸ್ಯ ಅನುಪಪತ್ತಿಃ ॥

(ಭಾಷ್ಯಾರ್ಥ)

ಇದಲ್ಲದೆ ಸಂಸ್ಕೃತ(ವಸ್ತು)[1] ಮೂರಕ್ಕಿಂತ ಬೇರೆಯೂ ಕ್ಷಣಿಕವೂ (ಆಗಿರುತ್ತದೆ) ಎಂದು ಕಲ್ಪಿಸಿರುತ್ತಾರೆ. ಆ ಮೂರು ಯಾವದೆಂದರೆ ಪ್ರತಿಸಂಖ್ಯಾ ಪ್ರತಿಸಂಖ್ಯಾನಿರೋಧಗಳು, ಮತ್ತು ಆಕಾಶವು ಎನ್ನುತ್ತಾರೆ. ಈ ಮೂರು ಅವಸ್ತು ಅಭಾವಮಾತ್ರವು, ನಿರುಪಾಖ್ಯವು[2]– ಎಂದು (ಅವರ) ಮತ. ಬುದ್ಧಿಪೂರ್ವಕವಾಗಿ ಭಾವ(ವಸ್ತು)ಗಳನ್ನು ವಿನಾಶಗೊಳಿಸುವದು ಪ್ರತಿಸಂಖ್ಯಾನಿರೋಧವು; ಅದಕ್ಕೆ ವಿಪರೀತವಾದದ್ದು ಅಪ್ರತಿಸಂಖ್ಯಾನಿರೋಧವು;[3] ಬರಿಯ

1. ಉತ್ಪಾದ್ಯವಾದದ್ದು.

2. ನಿರೋಧದ್ವಯವೂ ಆಕಾಶವೂ ಅವಸ್ತು ಎಂದರೆ ನಿಸ್ಸಾರವು ; ನಿರುಪಾಖ್ಯವು ಎಂದರೆ ಇಂಥದ್ದೆಂದು ಹೇಳುವದಕ್ಕೆ ಬರುವದಲ್ಲ. ತಾರ್ಕಿಕರು ಅಭಾವವು ಭಾವಪ್ರತಿಯೋಗಿಕವಾದ ಪದಾರ್ಥ ಎನ್ನುವಂತೆ ಬೌದ್ಧರು ಅದನ್ನು ಪದಾರ್ಥವೆಂದು ಒಪ್ಪುವದಿಲ್ಲ. ಅಭಾವವೆಂದರೆ ಅವರ ಮತದಲ್ಲಿ ಏನೂ ಇಲ್ಲದ್ದು.

3. ಬುದ್ಧಿಪೂರ್ವಕವಾಗಿ ಮಾಡುವ ವಸ್ತುನಾಶವು ಪ್ರತಿಸಂಖ್ಯಾನಿರೋಧವು ; ಕ್ಷಣಿಕವಾಗಿರುವದರಿಂದ ವಸ್ತುಗಳು ತಾವೇ ನಾಶವಾಗುವದು ಅಪ್ರತಿಸಂಖ್ಯಾನಿರೋಧವು.

ಆವರಣಾಭಾವವು ಆಕಾಶವೆನಿಸುವದು. ಅವುಗಳಲ್ಲಿ ಆಕಾಶವನ್ನು (ಸೂತ್ರಕಾರರು) ಮುಂದೆ ತಿರಸ್ಕರಿಸುವರು. ಈಗ ನಿರೋಧದ್ವಯವನ್ನು ತಿರಸ್ಕರಿಸಿರುತ್ತಾರೆ.

ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಗಳು ಪ್ರಾಪ್ತವಾಗುವದಿಲ್ಲ, ಸಂಭವಿಸುವದಿಲ್ಲ. ಎಂದರ್ಥ. ಏಕೆ ? ಎಂದರೆ ವಿಚ್ಛೇದವಿಲ್ಲದ್ದರಿಂದ. ಹೇಗೆಂದರೆ ಈ ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಗಳು ಸಂತಾನವಿಷಯಕವಾದವುಗಳೊ,[1] ಭಾವ(ವಸ್ತು)ವಿಷಯಕವಾದವುಗಳೊ ? ಮೊದಲನೆಯದಾಗಿ ಸಂತಾನವಿಷಯಕವಾದವುಗಳು ಎಂಬುದು ಸಂಭವಿಸುವದಿಲ್ಲ. ಏಕೆಂದರೆ ಎಲ್ಲಾ ಸಂತಾನಗಳಲ್ಲಿಯೂ ಸಂತಾನಿಗಳು ವಿಚ್ಛೇದವಿಲ್ಲದೆ ಹೇತುಫಲಭಾವದಿಂದ ಇರುವದರಿಂದ ಸಂತಾನವಿಚ್ಛೇದವು ಸಂಭವಿಸುವದಿಲ್ಲ.[2] (ಅವು) ಭಾವವಸ್ತುವಿಷಯಕವಾದವುಗಳು ಎಂಬುದೂ ಸಂಭವಿಸುವದಿಲ್ಲ. ಹೇಗೆಂದರೆ ಭಾವ(ವಸ್ತು)ಗಳಿಗೆ ನಿರನ್ವಯವಾದ ನಿರುಪಾಖ್ಯವಾದ ವಿನಾಶವು ಸಂಭವಿಸುವದೇ ಇಲ್ಲ; ಏಕೆಂದರೆ ಎಲ್ಲಾ ಅವಸ್ಥೆಗಳಲ್ಲಿಯೂ ಪ್ರತ್ಯಭಿಜ್ಞಾನದ ಬಲದಿಂದ ಅನ್ವಯಿಯು ವಿಚ್ಛೇದವಾಗುವದಿಲ್ಲವೆಂದು ಕಂಡುಬಂದಿರುತ್ತದೆ.[3] ಪ್ರತ್ಯಭಿಜ್ಞಾನವು ಸ್ಪಷ್ಟವಾಗಿಲ್ಲದ ಅವಸ್ಥೆಗಳಲ್ಲಿಯೂ (ಹಾಗೆಯೇ ಎಂದು) ಒಂದುಕಡೆ ಕಂಡಿರುವ ಅನ್ವಯ್ಯವಿಚ್ಛೇದ(ಬಲ)ದಿಂದ ಮಿಕ್ಕ ಕಡೆಗಳಲ್ಲಿ ಅದನ್ನು ಅನುಮಾನಮಾಡಿರುವದರಿಂದ (ಸಿದ್ಧವಾಗುತ್ತದೆ).[4] ಆದ್ದರಿಂದ ಪರ(ವಾದಿಗಳು) ಕಲ್ಪಿಸಿರುವ ನಿರೋಧದ್ವಯವು ಉಪಪನ್ನವಾಗುವದಿಲ್ಲ.

---

1. ಪ್ರತಿಕ್ಷಣದಲ್ಲಿಯೂ ಬೇರೆಬೇರೆಯಾಗಿ ವಸ್ತುಗಳು ಉಂಟಾಗುತ್ತಿರುವದರಿಂದಾಗುವ ಪ್ರವಾಹವೇ ಸಂತಾನವು.

2. ಸಂತಾನಿಗಳಾದ ವಸ್ತುಗಳು ಪ್ರತಿಕ್ಷಣದಲ್ಲಿಯೂ ಉಂಟಾಗುತ್ತಲೇ ಇರುವದರಿಂದ ಸಂತಾನಿಗಳಿರುವಲ್ಲಿ ಸಂತಾನವು ನಾಶವಾಗಲಾರದು ಎಂದು ಭಾವ. ವಸ್ತುಗಳಿಗೆ ವಿನಾಶವನ್ನು ಬೌದ್ಧರು ಒಪ್ಪುತ್ತಾರಾದರೂ ಅದು ಸಂಭವಿಸುವದಿಲ್ಲವೆಂದು ಮುಂದಿನ ವಾಕ್ಯದಲ್ಲಿ ತೋರಿಸಲಾಗುವದು.

3. ಮಣ್ಣುಮುದ್ದೆ, ಗಡಿಗೆ ಮುಂತಾದ ಕಾರ್ಯಗಳಲ್ಲೆಲ್ಲ ಮಣ್ಣು ಅನುಗತವಾಗಿರುವದು ಕಂಡಿದೆ. ಆದ್ದರಿಂದ ಮಣ್ಣುಮುದ್ದೆಯುಂಟಾದಾಗಲೂ ಮಣ್ಣು ನಾಶವಾಗುವದಿಲ್ಲ, ಗಡಿಗೆಯುಂಟಾದಾಗಲೂ ನಾಶವಾಗುವದಿಲ್ಲ– ಎಂಬ ಅನುಭವಕ್ಕೆ ನಿರನ್ವಯನಾಶವಾದವು ವಿರುದ್ಧವಾಗಿರುತ್ತದೆ.

4. ಕಾದಕಾವಲಿಯ ಮೇಲೆ ಹಾಕಿದ ನೀರು ನಿರನ್ವಯವಾಗಿ ನಾಶವಾಗುವದಿಲ್ಲ; ಅಲ್ಲಿಯೂ ಆವಿಯೇ ಮುಂತಾದ ರೂಪಾಂತರವನ್ನು ತಾಳುತ್ತದೆ ಎಂದು ಅನುಮಾನಿಸಬಹುದಾಗಿದೆ.

**ಉಭಯಥಾ ಚ ದೋಷಾತ್ ॥ ೨೩ ॥**

೨೩. ಎರಡು ವಿಧದಿಂದಲೂ ದೋಷವಿರುವದರಿಂದ (ಈ ದರ್ಶನವು ಸರಿಯಲ್ಲ).

## ಅವಿದ್ಯಾದಿದೋಷಗಳ ನಿರೋಧವು ಹೇಗೂ ಇಲ್ಲ

(ಭಾಷ್ಯ)

೪೯. ಯೋಽಯಮ್ ಅವಿದ್ಯಾದಿನಿರೋಧಃ ಪ್ರತಿಸಂಖ್ಯಾನಿರೋಧಾನ್ತಃ ಪಾತೀ ಪರಪರಿಕಲ್ಪಿತಃ ಸ ಸಮ್ಯಗ್ಜ್ಞಾನಾದ್ ವಾ ಸಪರಿಕರಾತ್ ಸ್ಯಾತ್ ಸ್ವಯಮೇವ ವಾ ? ಪೂರ್ವಸ್ಮಿನ್ ವಿಕಲ್ಪೇ ನಿರ್ಹೇತುಕವಿನಾಶಾಭ್ಯುಪಗಮ ಹಾನಿಪ್ರಸಙ್ಗಃ । ಉತ್ತರಸ್ಮಿಂಸ್ತು ಮಾರ್ಗೋಪದೇಶಾನರ್ಥಕ್ಯಪ್ರಸಙ್ಗಃ । ಏವಮ್ ಉಭಯಥಾಪಿ ದೋಷಪ್ರಸಙ್ಗಾತ್ ಅಸಮಞ್ಜಸಮಿದಂ ದರ್ಶನಮ್ ॥

(ಭಾಷ್ಯಾರ್ಥ)

ಪ್ರತಿಸಂಖ್ಯಾನಿರೋಧದೊಳಗೆ ಸೇರಿರುವದೆಂದು ಪರವಾದಿಗಳು ಕಲ್ಪಿಸಿಕೊಂಡಿರುವ ಈ ಅವಿದ್ಯಾದಿಗಳ ನಿರೋಧವಿದೆಯಲ್ಲ, ಅದು ಪರಿಕರದಿಂದೊಡಗೂಡಿದ ಸಮ್ಯಗ್ಜ್ಞಾನದಿಂದ ಆಗುವದೊ, ತಾನೇ ಆಗುವದೊ ?[1] ಮೊದಲನೆಯ ವಿಕಲ್ಪದಲ್ಲಿ ಯಾವ ಹೇತುವೂ ಇಲ್ಲದೆ ವಿನಾಶವು ಆಗುವದು ಎಂಬ ಅಭ್ಯುಪಗಮವನ್ನು ಬಿಟ್ಟಂತೆ ಆಗುವದು[2]; ಮುಂದಿನ (ವಿಕಲ್ಪದಲ್ಲಿ)ಯೋ ಎಂದರೆ ಮಾರ್ಗವನ್ನು[3] ಉಪದೇಶಮಾಡಿರುವದು ವ್ಯರ್ಥವಾಗುವದು. ಹೀಗೆ ಎರಡು ಪ್ರಕಾರದಿಂದಲೂ ದೋಷವು ಪ್ರಸಕ್ತವಾಗುವದರಿಂದ ಈ ದರ್ಶನವು ಸಮಂಜಸವಲ್ಲ.

1 ಪ್ರತಿಸಂಖ್ಯಾನಿರೋಧವು ಬುದ್ಧಿಪೂರ್ವಕವಾದರೂ ಕ್ಷಣಿಕವಾದದಲ್ಲಿ ತಾನೇ ನಾಶವಾಗುವದೆಂಬ ವಿಕಲ್ಪವೂ ಹೊಂದುತ್ತದೆ.

2. ಏಕೆಂದರೆ ಇಲ್ಲಿ ಜ್ಞಾನಕ್ಕೆ ಬೇಕಾದ ಯಮನಿಯಮಾದಿಹೇತುಗಳನ್ನು ಇಲ್ಲಿ ಒಪ್ಪಿದೆ.

3. ದುಃಖನಾಶಕ್ಕೆ ಮಾರ್ಗವನ್ನುಪದೇಶಿಸುವದೇ ಬೌದ್ಧಮತದ ಗುರಿ; ಅದರೆ ತಾನೇ ನಾಶವಾಗುತ್ತಿರುವಲ್ಲಿ ಅದಕ್ಕೆ ಉಪದೇಶವೇಕೆ ?

**ಆಕಾಶೇ ಚ ಅವಿಶೇಷಾತ್ ॥ ೨೪ ॥**

೨೪. ಆಕಾಶದಲ್ಲಿಯೂ ವಿಶೇಷವಿಲ್ಲದ್ದರಿಂದ (ಅದೂ ನಿರುಪಾಖ್ಯವಲ್ಲ).

## ಆಕಾಶವು ನಿರುಪಾಖ್ಯವಲ್ಲ

( ಭಾಷ್ಯ )

೫೦. ಯಚ್ಚ ತೇಷಾಮೇವ ಅಭಿಪ್ರೇತಂ ನಿರೋಧದ್ವಯಮ್ ಆಕಾಶಂ ಚ ನಿರುಪಾಖ್ಯಮ್ ಇತಿ, ತತ್ರ ನಿರೋಧದ್ವಯಸ್ಯ ನಿರುಪಾಖ್ಯತ್ವಂ ಪುರಸ್ತಾತ್ ನಿರಾಕೃತಮ್ । ಆಕಾಶಸ್ಯ ಇದಾನೀಂ ನಿರಾಕ್ರಿಯತೇ । ಆಕಾಶೇ ಚ ಅಯುಕ್ತೋ ನಿರುಪಾಖ್ಯತ್ವಾಭ್ಯುಪಗಮಃ । ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಯೋರಿವ ವಸ್ತುತ್ವಪ್ರತಿಪತ್ತೇಃ ಅವಿಶೇಷಾತ್ । ಆಗಮಪ್ರಾಮಾಣ್ಯಾತ್ ತಾವತ್ "ಆತ್ಮನ ಆಕಾಶಃ ಸಂಭೂತಃ" (ತೈ. ೨-೧) ಇತ್ಯಾದಿಶ್ರುತಿಭ್ಯಃ ಆಕಾಶಸ್ಯ ಚ ವಸ್ತುತ್ವಪ್ರಸಿದ್ಧಿಃ । ವಿಪ್ರತಿಪನ್ನಾನ್ ಪ್ರತಿ ತು ಶಬ್ದಗುಣಾನುಮೇಯತ್ವಂ ವಕ್ತವ್ಯಮ್ । ಗನ್ಧಾದೀನಾಂ ಗುಣಾನಾಂ ಪೃಥಿವ್ಯಾದಿವಸ್ತ್ವಾಶ್ರಯತ್ವದರ್ಶನಾತ್ । ಅಪಿ ಚ ಆವರಣಾಭಾವಮಾತ್ರಮ್ ಆಕಾಶಮ್ ಇಚ್ಛತಾಮ್ ಏಕಸ್ಮಿನ್ ಸುಪರ್ಣೇ ಪತತಿ ಆವರಣಸ್ಯ ವಿದ್ಯಮಾನತ್ವಾತ್ ಸುಪರ್ಣಾನ್ತರಸ್ಯ ಉತ್ಪಿತ್ಸತೋಽನವಕಾಶತ್ವಪ್ರಸಙ್ಗಃ । ಯತ್ರ ಆವರಣಾಭಾವಃ ತತ್ರ ಪತಿಷ್ಯತಿ ಇತಿ ಚೇತ್, ಯೇನ ಆವರಣಾಭಾವೋ ವಿಶೇಷ್ಯತೇ ತತ್ ತರ್ಹಿ ವಸ್ತುಭೂತಮೇವ ಆಕಾಶಂ ಸ್ಯಾತ್ । ನಾವರಣಾಭಾವಮಾತ್ರಮ್ । ಅಪಿ ಚ ಆವರಣಾಭಾವಮಾತ್ರಮ್ ಆಕಾಶಂ ಮನ್ಯಮಾನಸ್ಯ ಸೌಗತಸ್ಯ ಸ್ವಾಭ್ಯುಪಗಮವಿರೋಧಃ ಪ್ರಸಜ್ಯೇತ । ಸೌಗತೇ ಹಿ ಸಮಯೇ "ಪೃಥಿವೀ ಭಗವಃ ಕಿಂ ಸಂನಿಶ್ರಯಃ" ಇತ್ಯಸ್ಮಿನ್ ಪ್ರತಿವಚನಪ್ರವಾಹೇ ಪೃಥಿವ್ಯಾದೀನಾಮ್ ಅನ್ತೇ "ವಾಯುಃ ಕಿಂ ಸಂನಿಶ್ರಯಃ" ಇತ್ಯಸ್ಯ ಪ್ರಶ್ನಸ್ಯ ಪ್ರತಿವಚನಂ ಭವತಿ "ವಾಯುರಾಕಾಶಸಂನಿಶ್ರಯಃ" ಇತಿ । ತತ್ ಆಕಾಶಸ್ಯ ಅವಸ್ತುತ್ವೇ ನ ಸಮಞ್ಜಸಂ ಸ್ಯಾತ್ । ತಸ್ಮಾದಪಿ ಅಯುಕ್ತಮ್ ಆಕಾಶಸ್ಯ ಅವಸ್ತುತ್ವಮ್ । ಅಪಿ ಚ ನಿರೋಧದ್ವಯಮ್ ಆಕಾಶಂ ಚ ತ್ರಯಮಪ್ಯೇತತ್ ನಿರುಪಾಖ್ಯಮ್ ಅವಸ್ತು ನಿತ್ಯಂ ಚ ಇತಿ ವಿಪ್ರತಿಷಿದ್ಧಮ್ । ನ ಹಿ ಅವಸ್ತುತ್ವೇ ನಿತ್ಯತ್ವಮ್ ಅನಿತ್ಯತ್ವಂ ವಾ ಸಂಭವತಿ । ವಸ್ತ್ವಾಶ್ರಯತ್ವಾತ್ ಧರ್ಮಧರ್ಮಿವ್ಯವಹಾರಸ್ಯ । ಧರ್ಮಧರ್ಮಿಭಾವೇ ಹಿ ಘಟಾದಿವತ್ ವಸ್ತುತ್ವಮೇವ ಸ್ಯಾತ್ । ನ ನಿರುಪಾಖ್ಯತ್ವಮ್ ॥

( ಭಾಷ್ಯಾರ್ಥ )

ಮತ್ತು ನಿರೋಧದ್ವಯವೂ ಆಕಾಶವೂ ನಿರುಪಾಖ್ಯ(ವಾಗಿರುತ್ತದೆ) ಎಂದು ಅವರಿಗೇ ಅಭಿಪ್ರೇತವಾಗಿರುವದಷ್ಟೆ, ಇವುಗಳಲ್ಲಿ ನಿರೋಧದ್ವಯವು ನಿರುಪಾಖ್ಯವೆಂಬುದನ್ನು ಹಿಂದೆ ನಿರಾಕರಿಸಿದ್ದಾಯಿತು.[1] ಈಗ ಆಕಾಶವು ನಿರುಪಾಖ್ಯ ಎಂಬುದನ್ನು ನಿರಾಕರಿಸಲಾಗುವದು.

ಆಕಾಶವು ನಿರುಪಾಖ್ಯವೆಂಬ ಅಭ್ಯುಪಗಮವೂ ಸರಿಯಲ್ಲ. ಏಕೆಂದರೆ ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಗಳಂತೆ ವಸ್ತುವೆಂದು ತಿಳಿವಳಿಕೆಯಾಗುವದರಲ್ಲಿ (ಯಾವ) ವಿಶೇಷವೂ ಇರುವದಿಲ್ಲ. ಮೊದಲನೆಯದಾಗಿ ಆಗಮಪ್ರಾಮಾಣ್ಯದಿಂದ "ಆತ್ಮನಿಂದ ಆಕಾಶವು ಉಂಟಾಯಿತು" (ತೈ. ೨-೧) ಎಂದು ಮುಂತಾಗಿರುವ ಶ್ರುತಿಗಳಿಂದ ಆಕಾಶವೂ ವಸ್ತುವೆಂದು ಸಿದ್ಧವಾಗುತ್ತದೆ.[2] (ಶ್ರುತಿಪ್ರಾಮಾಣ್ಯದಲ್ಲಿ) ವಿರುದ್ಧಮತಿಯಿರುವವರಿಗಾದರೆ (ಆಕಾಶವು) ಶಬ್ದಗುಣದಿಂದ ಅನುಮೇಯವಾಗಿರುತ್ತದೆ ಎಂದು ಹೇಳಬೇಕು. ಏಕೆಂದರೆ ಗಂಧವೇ ಮುಂತಾದ ಗುಣಗಳು ಪೃಥಿವ್ಯಾದಿವಸ್ತುಗಳನ್ನು ಆಶ್ರಯಿಸಿರುವದು ಕಂಡಿರುತ್ತದೆ.[3]

ಇದಲ್ಲದೆ ಆಕಾಶವೆಂದರೆ ಆವರಣಾಭಾವಮಾತ್ರವೆಂದು ಒಪ್ಪಿರುವವರ (ಮತದಲ್ಲಿ) ಒಂದು ಪಕ್ಷಿಯು ಹಾರಾಡುತ್ತಿದ್ದರೆ ಆವರಣವು ಇರುವದರಿಂದ ಮತ್ತೊಂದು ಪಕ್ಷಿಯು ಹಾರಾಡಬೇಕೆಂದರೆ (ಅದಕ್ಕೆ) ಅವಕಾಶವಿಲ್ಲದೆ ಹೋಗಬೇಕಾಗುವದು.[4]

---

1. ವಸ್ತುನಾಶವಾದರೂ ರೂಪಾಂತರದಲ್ಲಿರುವದೆಂದು ತೋರಿಸಿರುವದರಿಂದ ಅಭಾವವು ವಸ್ತುಮಾತ್ರವೇ, ಭಾವರೂಪವೇ ; ಆದ್ದರಿಂದ ನಿರುಪಾಖ್ಯವಲ್ಲ ಎಂದು ತಿಳಿಸಿದ್ದಾಯಿತು.

2. ಬೌದ್ಧರ ಯುಕ್ತಿಯು ಶ್ರುತಿವಿರುದ್ಧವೆಂಬುದನ್ನು ಶಿಷ್ಯರಿಗೆ ತಿಳಿಸುವದಕ್ಕೆ ಈ ವಚನವನ್ನು ಇಲ್ಲಿ ಉದಾಹರಿಸಿದೆ.

3. ಗಂಧಾದಿಗಳಂತೆ ಶಬ್ದವೂ ಯಾವದಕ್ಕೆ ಅಸಾಧಾರಣಗುಣವೋ ಅದು ಆಕಾಶವು ಎಂದು ಅನುಮಾನಿಸಬೇಕು. ವಾಯುವಿಲ್ಲದೆ ಶಬ್ದವಿಲ್ಲ ಎಂಬ ವ್ಯತಿರೇಕವನ್ನು ಭಾಷ್ಯದಲ್ಲಿ ಎಲ್ಲಿಯೂ ಪರ್ಯಾಲೋಚನೆಗೆ ತೆಗೆದುಕೊಂಡಂತೆ ಕಾಣುವದಿಲ್ಲ. ಅಚೇತನದಲ್ಲಾಗುವ ಪ್ರವೃತ್ತಿಯು ಚೇತನಪ್ರಯುಕ್ತ ಎಂದು ವಾದಿಸುವಂತೆ ವಾಯುವಿನಲ್ಲಿ ತೋರುವ ಶಬ್ದವು ಆಕಾಶಪ್ರಯುಕ್ತ ಎಂದೇ ಆಕಾಶಕ್ಕೆ ಶಬ್ದವು ಗುಣವೆಂಬ ವಾದಿಗಳು ಯುಕ್ತಿಯನ್ನು ಹೇಳುತ್ತಿದ್ದರೋ ಏನೋ ತಿಳಿಯದು.

4. ಏಕೆಂದರೆ ಆವರಣಾಭಾವರೂಪವಾದ ಆಕಾಶವು ಆವರಣವಿರುವಲ್ಲಿರುವದಿಲ್ಲ-ಎಂಬರ್ಥ.

(ಆಕ್ಷೇಪ) :– ಎಲ್ಲಿ ಆವರಣವು ಇಲ್ಲವೋ ಅಲ್ಲಿ (ಅದು) ಹಾರಾಡಬಹುದಲ್ಲ !

(ಪರಿಹಾರ) :– ಹಾಗಾದರೆ ಯಾವದನ್ನು ಆವರಣಾಭಾವಕ್ಕೆ ವಿಶೇಷಣವಾಗಿ ಹೇಳುವೆಯೋ ಆ ವಸ್ತುಭೂತವಾದದ್ದೇ ಆಕಾಶವಾಗುವದೇ ಹೊರತು ಆವರಣಾಭಾವ(ವೆಂದಾಗುವ)ದಿಲ್ಲ.[1]

ಇದೂ ಅಲ್ಲದೆ ಆಕಾಶವು ಆವರಣಾಭಾವಮಾತ್ರವೆಂದು ಎಣಿಸುವ ಸೌಗತನಿಗೆ ತನ್ನ ಅಭ್ಯುಪಗಮದ ವಿರೋಧವು ಪ್ರಸಕ್ತವಾಗುವದು. ಏಕೆಂದರೆ ಸೌಗತಶಾಸ್ತ್ರದಲ್ಲಿ "ಭಗವಂತನೆ, ಪೃಥಿವಿಯು ಯಾವದನ್ನಾಶ್ರಯಿಸಿರುತ್ತದೆ ?" ಎಂಬೀ ಪ್ರಶ್ನಪ್ರತಿವಚನಗಳ ಪ್ರವಾಹದಲ್ಲಿ ಪೃಥಿವ್ಯಾದಿಗಳ ಕೊನೆಯಲ್ಲಿ "ವಾಯು ಯಾವದನ್ನು ಆಶ್ರಯಿಸಿರುತ್ತದೆ ?" ಎಂಬ ಪ್ರಶ್ನೆಗೆ "ವಾಯು ಆಕಾಶವನ್ನಾಶ್ರಯಿಸಿರುತ್ತದೆ" ಎಂಬ ಉತ್ತರವಿದೆ. ಇದು ಆಕಾಶವು ಅವಸ್ತುವೆಂದಾದರೆ ಸಮಂಜಸವಾಗಲಾರದು.[2] ಆದ್ದರಿಂದಲೂ ಆಕಾಶವು ಅವಸ್ತುವೆಂಬುದು ಸರಿಯಲ್ಲ.

ಇದಲ್ಲದೆ ನಿರೋಧದ್ವಯ, ಆಕಾಶ – ಈ ಮೂರೂ ನಿರುಪಾಖ್ಯ, ಅವಸ್ತು, ಮತ್ತು ನಿತ್ಯವು– ಎಂಬುದು ಪರಸ್ಪರವಿರುದ್ಧವಾದದ್ದು. ಹೇಗೆಂದರೆ ಅವಸ್ತುವಾದದ್ದು ನಿತ್ಯವೆಂಬುದಾಗಲಿ ಅನಿತ್ಯವೆಂಬುದಾಗಲಿ ಹೊಂದುವಹಾಗಿಲ್ಲ ; ಏಕೆಂದರೆ ಧರ್ಮಧರ್ಮಿವ್ಯವಹಾರವು ವಸ್ತುವನ್ನು ಆಶ್ರಯಿಸಿ (ಆಗತಕ್ಕದ್ದು). ಧರ್ಮಧರ್ಮಿಭಾವವು (ಇಲ್ಲಿಯೂ ಇದೆ) ಎಂದರೆ (ಆಕಾಶವು) ಘಟಾದಿಗಳಂತೆ ವಸ್ತುವಾದೀತೇ ಹೊರತು ನಿರುಪಾಖ್ಯ(ವಾಗ)ಲಾರದು.

**ಅನುಸ್ಮೃತೇಶ್ಚ ॥ ೨೫ ॥**

೨೫- ಅನುಸ್ಮೃತಿಯಿಂದಲೂ (ಈ ಮತವು ಸರಿಯಲ್ಲ).

---

1. 'ಇಲ್ಲಿ ಆವರಣವಿದೆ, ಅಲ್ಲಿ ಇಲ್ಲ' –ಎಂದು ಆಕಾಶದಲ್ಲಿ ವಿಶೇಷವನ್ನು ಕಲ್ಪಿಸಿದರೆ ಇಲ್ಲಿ, ಅಲ್ಲಿ – ಎಂಬ ಉಪಾಧಿಗಳುಳ್ಳ ವಸ್ತುವೊಂದು ಬೇರೆ ಇದೆ ಎಂದಾಗುವದು. ಅದೇ ನಮ್ಮ ಆಕಾಶವೆನ್ನುತ್ತೇವೆ ಎಂದು ಅಭಿಪ್ರಾಯ.

2. ಏಕೆಂದರೆ ವಾಯುವಿಗೆ ಅವಸ್ತುವಾದ ಆಕಾಶವು ಆಧಾರವಾಗಿದೆ ಎಂಬುದು ಹೊಂದುವದಿಲ್ಲ ಎಂದು ಭಾವ. ಇಲ್ಲಿ ಉದಾಹರಿಸಿರುವ ಬೌದ್ಧಗ್ರಂಥವು ಯಾವದೆಂಬುದು ತಿಳಿಯಲಿಲ್ಲ.

## ಕ್ಷಣಿಕವಾದದಲ್ಲಿ ಸ್ಮೃತಿಪ್ರತ್ಯಭಿಜ್ಞಾನಗಳು ಹೊಂದುವದಿಲ್ಲ

( ಭಾಷ್ಯ )

೫೧. ಅಪಿ ಚ ವೈನಾಶಿಕಃ ಸರ್ವಸ್ಯ ವಸ್ತುನಃ ಕ್ಷಣಿಕತಾಮ್ ಅಭ್ಯುಪಯನ್ ಉಪಲಬ್ಧುರಪಿ ಕ್ಷಣಿಕತಾಮ್ ಅಭ್ಯುಪೇಯಾತ್ । ನ ಚ ಸಾ ಸಂಭವತಿ । ಅನುಸ್ಮೃತೇಃ । ಅನುಭವಮ್ ಉಪಲಬ್ಧಿಮ್ ಅನು ಉತ್ಪದ್ಯಮಾನಂ ಸ್ಮರಣಮೇವ ಅನುಸ್ಮೃತಿಃ । ಸಾ ಚ ಉಪಲಬ್ಧ್ಯೇಕಕರ್ತೃಕಾ ಸತೀ ಸಂಭವತಿ । ಪುರುಷಾನ್ತರೋಪಲಬ್ಧಿವಿಷಯೇ ಪುರುಷಾನ್ತರಸ್ಯ ಸ್ಮೃತ್ಯದರ್ಶನಾತ್ । ಕಥಂ ಹಿ 'ಅಹಮ್ ಅದೋಽದ್ರಾಕ್ಷಮ್,' 'ಇದಂ ಪಶ್ಯಾಮಿ' ಇತಿ ಚ ಪೂರ್ವೋತ್ತರದರ್ಶಿನಿ ಏಕಸ್ಮಿನ್ ಅಸತಿ ಪ್ರತ್ಯಯಃ ಸ್ಯಾತ್ ? ಅಪಿ ಚ ದರ್ಶನಸ್ಮರಣಯೋಃ ಕರ್ತರಿ ಏಕಸ್ಮಿನ್ ಪ್ರತ್ಯಕ್ಷಃ ಪ್ರತ್ಯಭಿಜ್ಞಾಪ್ರತ್ಯಯಃ ಸರ್ವಸ್ಯ ಲೋಕಸ್ಯ ಪ್ರಸಿದ್ಧಃ 'ಅಹಮ್ ಅದೋಽದ್ರಾಕ್ಷಮ್, ಇದಂ ಪಶ್ಯಾಮಿ' ಇತಿ । ಯದಿ ಹಿ ತಯೋಃ ಭಿನ್ನಃ ಕರ್ತಾ ಸ್ಯಾತ್ ತತಃ 'ಅಹಂ ಸ್ಮರಾಮಿ, ಅದ್ರಾಕ್ಷೀತ್ ಅನ್ಯಃ' ಇತಿ ಪ್ರತೀಯಾತ್ । ನ ತ್ವೇವಂ ಪ್ರತ್ಯೇತಿ ಕಶ್ಚಿತ್ । ಯತ್ರ ಏವಂ ಪ್ರತ್ಯಯಃ, ತತ್ರ ದರ್ಶನಸ್ಮರಣಯೋಃ ಭಿನ್ನಮೇವ ಕರ್ತಾರಂ ಸರ್ವಲೋಕೋಽವಗಚ್ಛತಿ 'ಸ್ಮರಾಮ್ಯಹಮ್ ಅಸೌ ಅದೋಽದ್ರಾಕ್ಷೀತ್' ಇತಿ। ಇಹ ತು 'ಅಹಮ್ ಅದೋಽದ್ರಾಕ್ಷಮ್' ಇತಿ ದರ್ಶನಸ್ಮರಣಯೋಃ ವೈನಾಶಿಕೋಽಪಿ ಆತ್ಮಾನಮೇವ ಏಕಂ ಕರ್ತಾರಮ್ ಅವಗಚ್ಛತಿ । ನ 'ನಾಹಮ್' ಇತಿ ಆತ್ಮನೋ ದರ್ಶನಂ ನಿರ್ವೃತ್ತಂ ನಿಹ್ನುತೇ ಯಥಾ 'ಅಗ್ನಿಃ ಅನುಷ್ಣಃ,' 'ಅಪ್ರಕಾಶಃ' ಇತಿ ವಾ । ತತ್ರ ಏವಂ ಸತಿ ಏಕಸ್ಯ ದರ್ಶನಸ್ಮರಣಲಕ್ಷಣಕ್ಷಣದ್ವಯಸಂಬನ್ಧೇ ಕ್ಷಣಿಕತ್ವಾಭ್ಯುಪಗಮಹಾನಿಃ ಅಪರಿಹಾರ್ಯಾ ವೈನಾಶಿಕಸ್ಯ ಸ್ಯಾತ್ । ತಥಾ ಅನನ್ತರಾಮ್ ಅನನ್ತರಾಮ್ ಆತ್ಮನ ಏವ ಪ್ರತಿಪತ್ತಿಂ ಪ್ರತ್ಯಭಿಜಾನನ್ ಏಕಕರ್ತೃಕಾಮ್ ಆ ಉತ್ತಮಾತ್ ಉಚ್ಛ್ವಾಸಾತ್, ಅತೀತಾಶ್ಚ ಪ್ರತಿಪತ್ತೀಃ ಆಜನ್ಮನಃ ಆತ್ಮೈಕಕರ್ತೃಕಾಃ ಪ್ರತಿಸಂದಧಾನಃ ಕಥಂ ಕ್ಷಣಭಙ್ಗವಾದೀ ವೈನಾಶಿಕಃ ನಾಪತ್ರಪೇತ ?

( ಭಾಷ್ಯಾರ್ಥ )

ಇದೂ ಅಲ್ಲದೆ ವೈನಾಶಿಕನು ಪ್ರತಿಯೊಂದು ವಸ್ತುವೂ ಕ್ಷಣಿಕವೆಂದು ಒಪ್ಪಿರುವದರಿಂದ (ವಸ್ತುವನ್ನು) ಅರಿಯುವವನೂ ಕ್ಷಣಿಕವೆಂದು ಒಪ್ಪಬೇಕಾಗುವದು. ಆದರೆ ಅದು ಹೊಂದುವದಿಲ್ಲ. ಏಕೆಂದರೆ ಅನುಸ್ಮೃತಿಯಿದೆ. ಅನುಭವವನ್ನು, ಅರಿವನ್ನು, ಅನುಸರಿಸಿ ಉಂಟಾಗುವ ಸ್ಮರಣವೇ ಅನುಸ್ಮೃತಿಯು. ಆ (ಅನುಸ್ಮೃತಿಯು) ಉಪಲಬ್ಧಿ (ಅರಿವಿ)ಗೆ ಸಮಾನವಾದ ಕರ್ತೃ

ವುಳ್ಳದ್ದಾದರೇ[1] ಹೊಂದುತ್ತಗೆ ಏಕೆಂದರೆ ಒಬ್ಬ ಪುರುಷನು ಅರಿವಿಗೆ ವಿಷಯವಾದ (ವಸ್ತುವಿನ)ಲ್ಲಿ ಮತ್ತೊಬ್ಬ ಪುರುಷನಿಗೆ ಸ್ಮೃತಿಯಾಗುವದು ಕಂಡಿಲ್ಲ. 'ನಾನು ಅದನ್ನು ಕಂಡೆನು, ಇದನ್ನು ನೋಡುತ್ತಿದೇನೆ' ಎಂಬ ಪ್ರತ್ಯಯವು ಹಿಂದಿನದನ್ನೂ ಮುಂದಿನದನ್ನೂ ಕಾಣುವವನು ಒಬ್ಬನೇ ಇಲ್ಲದಿದ್ದರೆ ಹೇಗೆತಾನೆ ಆದೀತು ?

ಇದಲ್ಲದೆ ದರ್ಶನಸ್ಮರಣಗಳಿಗೆ ಕರ್ತೃವಾದ ಒಬ್ಬನಿಗೇ 'ನಾನು ಅದನ್ನು ಕಂಡೆನು, ಇದನ್ನು ನೋಡುತ್ತಿದೇನೆ' ಎಂಬ ಪ್ರತ್ಯಭಿಜ್ಞಾಪ್ರತ್ಯಯವು ಪ್ರತ್ಯಕ್ಷವಾಗಿ (ಆಗುವದೆಂಬುದು) ಪ್ರತಿಯೊಬ್ಬ ಮನುಷ್ಯನಿಗೂ ತಿಳಿದೇ ಇದೆ. ಅವೆರಡಕ್ಕೂ ಬೇರೆಬೇರೆಯ ಕರ್ತೃಗಳಿದ್ದರೆ ಆಗ "ನನಗೆ ಸ್ಮರಣೆಯಾಗುತ್ತಿದೆ, ಮತ್ತೊಬ್ಬನು ಕಂಡನು" ಎಂದು ಪ್ರತ್ಯಯವಾಗಬೇಕಿತ್ತು. ಆದರೆ ಹೀಗೆ ಯಾರೊಬ್ಬನಿಗೂ ತೋರುವದಿಲ್ಲ ಎಲ್ಲಿ ಹೀಗೆ ಪ್ರತ್ಯಯವಾಗುವದೋ ಅಲ್ಲಿ ದರ್ಶನಸ್ಮರಣಗಳಿಗೆ ಬೇರೆಬೇರೆಯ ಕರ್ತೃವೆಂದೇ, 'ನನಗೆ ಸ್ಮರಣೆಯಾಗುತ್ತಿದೆ, ಅವನು ಅದನ್ನು ಕಂಡನು' ಎಂದೇ, ಪ್ರತಿಯೊಬ್ಬಮನುಷ್ಯನೂ ನಿಶ್ಚಯಿಸುತ್ತಾನೆ. ಆದರೆ ಇಲ್ಲಿ 'ನಾನು ಅದನ್ನು ಕಂಡೆನು' ಎಂದು ದರ್ಶನಸ್ಮರಣಗಳಿಗೆ ತಾನೊಬ್ಬನೇ ಕರ್ತೃವೆಂದು ವೈನಾಶಿಕನೂ ನಿಶ್ಚಯಿಸುತ್ತಾನೆ; 'ಬೆಂಕಿಯು ಬಿಸಿಯಲ್ಲ, ಅಥವಾ ಬೆಳಗುವದಿಲ್ಲ' ಎಂಬಂತೆ 'ನಾನಲ್ಲ' ಎಂದು ತನಗೆ ಉಂಟಾದ ಜ್ಞಾನವನ್ನು (ಅವನೂ) ಇಲ್ಲವೆನ್ನುವದಿಲ್ಲ[2]. ಇಲ್ಲಿ ಹೀಗೆ ಒಬ್ಬನಿಗೆ ದರ್ಶನಸ್ಮರಣೆಗಳಿಂದ ತಿಳಿಯಬರುವ ಕ್ಷಣದ್ವಯದ ಸಂಬಂಧವಾಗಿರುವದರಿಂದ (ಅರಿಯುವಾತನು) ಕ್ಷಣಿಕವೆಂದು (ತಾನು) ಒಪ್ಪಿದ್ದನ್ನು ಕೈಬಿಡುವದು ವೈನಾಶಿಕನಿಗೆ ಅನಿವಾರ್ಯವಾಗುತ್ತದೆ. ಹೀಗೆಯೇ ಮುಂದುಮುಂದಿನ ಅರಿವೂ ಕೊನೆಯ ಉಸಿರು ಹೋಗುವವರೆಗೂ ತನಗೆ ಆಗುವದೆಂದು ಪ್ರತ್ಯಭಿಜ್ಞೆ ಮಾಡಿಕೊಳ್ಳುತ್ತಲೂ ಹುಟ್ಟಿದಂದಿನಿಂದ ಆಗಿರುವ ಹಿಂದಿನ ಅರಿವುಗಳಿಗೂ ತಾನೊಬ್ಬನೇ ಕರ್ತೃವೆಂದು ಪ್ರತಿಸಂಧಾನಮಾಡಿಕೊಳ್ಳುತ್ತಲೂ[3] ಇರುವ ಕ್ಷಣಭಂಗವಾದಿಯಾದ ವೈನಾಶಿಕನು ಹೇಗೆತಾನೆ ನಾಚಿಕೆಪಡದೆ ಇರುವನು ?

---

1. ಅನುಭವಿಸುವ ಕರ್ತೃವೂ ಸ್ಮರಿಸುವ ಕರ್ತೃವೂ ಒಬ್ಬನೇ ಆಗಿದ್ದರೇ ಎಂದರ್ಥ

2. ದರ್ಶನಸ್ಮರಣಗಳಿಗೆ ತಾನೇ ಕರ್ತೃವೆಂಬುದನ್ನು ವೈನಾಶಿಕನೂ ಇಲ್ಲವೆನ್ನುವದಕ್ಕಾಗಲಾರದು. ಏಕೆಂದರೆ 'ನೀವು ಹೀಗೆ ಹೇಳಿದಿರಿ, ಇದಕ್ಕೆ ನಾನು ಹೀಗೆ ಉತ್ತರ ಕೊಡುತ್ತೇನೆ; ಈಗ ಹೀಗೆನ್ನುತ್ತಿದೀರಿ' ಎಂದು ವಾದಮಾಡುವದಕ್ಕೇ ಈ ಅನುಸ್ಮೃತಿಯು ಬೇಕಾಗುವದು.

3. ಹಿಂದೆ ಆದದ್ದನ್ನು ಈಗ ನೆನಪಿಗೆ ತಂದುಕೊಳ್ಳುವದಕ್ಕಾಗಲಿ ಇನ್ನು ಮುಂದೂ ನಮಗೇ ಆಗುವದೆಂದು ಮನದಂದುಕೊಳ್ಳುವದಕ್ಕಾಗಲಿ ಕರ್ತೃವು ಸ್ಥಾಯಿಯಾಗಿರಬೇಕು, ಈ ಅನುಭವವನ್ನು ಒಪ್ಪಿ ಕರ್ತೃವು ಕ್ಷಣಿಕವೆಂದೂ ಹೇಳುವದು ತನ್ನ ಅನುಭವವನ್ನೇ ತಾನು ಅಲ್ಲಗಳೆದಂತೆ- ಎಂದು ಅಭಿಪ್ರಾಯ.

## ಅನುಸ್ಮೃತಿಯು ಸಾದೃಶ್ಯದಿಂದ ಆಗಲಾರದು

(ಭಾಷ್ಯ)

೫೨. ಸ ಯದಿ ಬ್ರೂಯಾತ್ ಸಾದೃಶ್ಯಾತ್ ಏತತ್ ಸಂಪತ್ಸ್ಯತೇ ಇತಿ । ತಂ ಪ್ರತಿಬ್ರೂಯಾತ್ । ತೇನ ಇದಂ ಸದೃಶಮ್ ಇತಿ ದ್ವಯಾಯತ್ತತ್ವಾತ್ ಸಾದೃಶ್ಯಸ್ಯ ಕ್ಷಣಭಙ್ಗವಾದಿನಃ[1] ಸದೃಶಯೋರ್ದ್ವಯೋರ್ವಸ್ತುನೋಃ ಗ್ರಹೀತುರೇಕಸ್ಯ ಅಭಾವಾತ್ ಸಾದೃಶ್ಯನಿಮಿತ್ತಂ ಪ್ರತಿಸಂಧಾನಮ್ ಇತಿ ಮಿಥ್ಯಾಪ್ರಲಾಪ ಏವ ಸ್ಯಾತ್ । ಸ್ಯಾಚ್ಚೇತ್ ಪೂರ್ವೋತ್ತರಯೋಃ ಕ್ಷಣಯೋಃ ಸಾದೃಶ್ಯಸ್ಯ ಗ್ರಹೀತಾ ಏಕಃ, ತಥಾ ಸತಿ ಏಕಸ್ಯ ಕ್ಷಣದ್ವಯಾವಸ್ಥಾನಾತ್ ಕ್ಷಣಿಕತ್ವಪ್ರತಿಜ್ಞಾ ಪೀಡ್ಯೇತ । 'ತೇನ ಇದಂ ಸದೃಶಮ್' ಇತಿ ಪ್ರತ್ಯಯಾನ್ತರಮೇವ ಇದಮ್ ನ ಪೂರ್ವೋತ್ತರಕ್ಷಣದ್ವಯಗ್ರಹಣನಿಮಿತ್ತಮ್ ಇತಿ ಚೇತ್ । ನ । 'ತೇನ ಇದಮ್' ಇತಿ ಭಿನ್ನಪದಾರ್ಥೋಪಾದಾನಾತ್ । ಪ್ರತ್ಯಯಾನ್ತರಮೇವ ಚೇತ್ ಸಾದೃಶ್ಯವಿಷಯಂ ಸ್ಯಾತ್, 'ತೇನೇದಂ ಸದೃಶಮ್' ಇತಿ ವಾಕ್ಯಪ್ರಯೋಗೋಽನರ್ಥಕಃ ಸ್ಯಾತ್ । 'ಸಾದೃಶ್ಯಮ್' ಇತ್ಯೇವ ಪ್ರಯೋಗಃ ಪ್ರಾಪ್ನುಯಾತ್ । ಯದಾ ಹಿ ಲೋಕಪ್ರಸಿದ್ಧಃ ಪದಾರ್ಥಃ ಪರೀಕ್ಷಕೈರ್ನ ಪರಿಗೃಹ್ಯತೇ ತದಾ ಸ್ವಪಕ್ಷಸಿದ್ಧಿಃ ಪರಪಕ್ಷದೋಷೋ ವಾ ಉಭಯಮಪಿ ಉಚ್ಯಮಾನಂ ಪರೀಕ್ಷಕಾಣಾಮ್ ಆತ್ಮನಶ್ಚ ಯಥಾರ್ಥತ್ವೇನ ನ ಬುದ್ಧಿಸನ್ತಾನಮ್ ಆರೋಹತಿ । ಏವಮೇವ ಏಷೋಽರ್ಥಃ ಇತಿ ನಿಶ್ಚಿತಂ ಯತ್ ತದೇವ ವಕ್ತವ್ಯಮ್ । ತತೋಽನ್ಯತ್ ಉಚ್ಯಮಾನಂ ಬಹುಪ್ರಲಾಪಿತ್ವಮ್ ಆತ್ಮನಃ ಕೇವಲಂ ಪ್ರಖ್ಯಾಪಯೇತ್ । ನ ಚಾಯಂ ಸಾದೃಶ್ಯಾತ್ ಸಂವ್ಯವಹಾರೋ ಯುಕ್ತಃ । ತದ್ಭಾವಾವಗಮಾತ್ ತತ್ಸದೃಶಭಾವಾನವಗಮಾಚ್ಚ । ಭವೇದಪಿ ಕದಾಚಿದ್ ಬಾಹ್ಯವಸ್ತುನಿ ವಿಪ್ರಲಮ್ಭಸಂಭವಾತ್ 'ತದೇವೇದಂ ಸ್ಯಾತ್ ತತ್ಸದೃಶಂ ವಾ' ಇತಿ ಸಂದೇಹಃ । ಉಪಲಬ್ಧರಿ ಸಂದೇಹೋಽಪಿ ನ ಕದಾಚಿದ್ ಭವತಿ 'ಸ ಏವಾಹಂ ಸ್ಯಾಮ್, ತತ್ಸದೃಶೋ ವಾ' ಇತಿ । 'ಯ ಏವಾಹಂ ಪೂರ್ವೇದ್ಯುರದ್ರಾಕ್ಷಮ್, ಸ ಏವಾಹಮದ್ಯ ಸ್ಮರಾಮಿ' ಇತಿ ನಿಶ್ಚಿತತದ್ಭಾವೋಪಲಮ್ಭಾತ್ । ತಸ್ಮಾದಪಿ ಅನುಪಪನ್ನೋ ವೈನಾಶಿಕಸಮಯಃ ॥

(ಭಾಷ್ಯಾರ್ಥ)

ಆ (ವಾದಿಯು) ಸಾದೃಶ್ಯದಿಂದ ಈ (ಅನುಸ್ಮೃತಿಯು) ಆಗಬಹುದು ಎನ್ನುವದಾದರೆ ಅವನಿಗೆ (ಈ) ಉತ್ತರವನ್ನು ಹೇಳಬೇಕು. ಸಾದೃಶ್ಯವು 'ಅದಕ್ಕೆ ಇದು ಸದೃಶವಾಗಿದೆ' ಎಂದು ಎರಡು (ವಸ್ತುಗಳ) ಅಧೀನವಾಗಿರು

1 ಇಲ್ಲಿ ಒಂದು 'ಚ' ಇದ್ದರೆ ಸರಿಯಾಗಿತ್ತೆಂದು ತೋರುತ್ತದೆ.

ವದರಿಂದಲೂ ಕ್ಷಣಭಂಗವಾದಿಯ (ಮತದಲ್ಲಿ) ಸದೃಶವಾಗಿರುವ ಎರಡು ವಸ್ತುಗಳನ್ನೂ ಅರಿಯುವವನು ಒಬ್ಬನು ಇಲ್ಲದ್ದರಿಂದಲೂ ಸಾದೃಶ್ಯನಿಮಿತ್ತ ದಿಂದ ಪ್ರತಿಸಂಧಾನ( ವಾಗುತ್ತದೆ ) ಎಂಬುದು ಸುಳ್ಳುಮಾತೇ ಆಗುವದು. ಹಿಂದುಮುಂದಿನ ಕ್ಷಣಗಳ ಸಾದೃಶ್ಯವನ್ನು ಗ್ರಹಿಸುವವನು ಒಬ್ಬನಿದ್ದರೆ, ಹಾಗಾದರೆ ಒಬ್ಬನೇ ಎರಡು ಕ್ಷಣಗಳು ಇರುತ್ತಾನಾದ್ದರಿಂದ ಕ್ಷಣಿಕತ್ವಪ್ರತಿಜ್ಞೆಗೆ ತೊಂದರೆಯಾಗುವದು.

(ಆಕ್ಷೇಪ): 'ಅದಕ್ಕೆ ಇದು ಸದೃಶವು' ಎಂಬಿದು ಬೇರೊಂದು ಪ್ರತ್ಯಯ ವೇ ಹೊರತು ಹಿಂದುಮುಂದಿನ ಕ್ಷಣದ್ವಯವನ್ನು ಗ್ರಹಿಸಿದ ನಿಮಿತ್ತದಿಂದ (ಆದ)ದ್ದಲ್ಲವಲ್ಲ !

(ಪರಿಹಾರ) : ಹಾಗಲ್ಲ. ಏಕೆಂದರೆ 'ಅದಕ್ಕೆ' 'ಇದು' ಎಂದು ಬೇರೆ ಬೇರೆಯ ಪದಾರ್ಥಗಳನ್ನು[1] ತೆಗೆದುಕೊಂಡಿರುತ್ತದೆ. ಸಾದೃಶ್ಯವಿಷಯದ ಬೇರೊಂದು ಪ್ರತ್ಯಯವೇ ಆಗಿದ್ದರೆ 'ಅದಕ್ಕೆ ಇದು ಸದೃಶವು' ಎಂಬ ವಾಕ್ಯ ಪ್ರಯೋಗವು ವ್ಯರ್ಥವಾಗುತ್ತಿತ್ತು ; 'ಸಾದೃಶ್ಯವು' ಎಂದೇ ಪ್ರಯೋಗವಾಗ ಬೇಕಾಗಿತ್ತು. **ಯಾವಾಗ ಲೋಕಸಿದ್ಧವಾದ ಪದಾರ್ಥವನ್ನು ಪರೀಕ್ಷಕ ರು ಸ್ವೀಕರಿಸುವದಿಲ್ಲವೋ, ಆಗ ಸ್ವಪಕ್ಷಸಿದ್ಧಿಯಾಗಲಿ ಪರಪಕ್ಷ ದೋಷವಾಗಲಿ ಎರಡನ್ನೂ ಹೇಳಿದರೆ ಪರೀಕ್ಷಕರಿಗೂ ತನಗೂ ಯಥಾರ್ಥವೆಂದು ಬುದ್ಧಿಸಂತತಿಗೆ ಹತ್ತದೆ ಇರುತ್ತದೆ.**[2] ಈ ವಿಷಯವು ಹೀಗೇ ಎಂದು ಯಾವದು ನಿಶ್ಚಿತವಾಗಿರುತ್ತದೆಯೋ ಅದನ್ನೇ ಹೇಳಬೇಕು.[3] ಅದಕ್ಕಿಂತ ಬೇರೆಯಾದದ್ದನ್ನು ಹೇಳಿದರೆ ಸುಮ್ಮನೆ ತಾನು ಬಹಳ ಮಾತಿನವ ನೆಂಬುದನ್ನು ಮಾತ್ರ ತೋರಿಸುವದು. ಈ ಸಂವ್ಯವಹಾರವು ಸಾದೃಶ್ಯದಿಂದ (ಎಂಬುದು) ಯುಕ್ತವೂ ಅಲ್ಲ ; ಏಕೆಂದರೆ ಅದೇ ಇದೆಂದು ತಿಳಿಯಬರುತ್ತಿದೆ,

---

1. ಪದಗಳನ್ನು ಎಂದಿದ್ದರೇ ಇಲ್ಲಿ ಸಾಕಾಗಿದೆ ಎಂದು ಕಾಣುತ್ತದೆ; ಏಕೆಂದರೆ ಮುಂದೆ ವಾಕ್ಯಪ್ರಯೋಗವನ್ನೇ ಉದಾಹರಿಸಿದೆ. ಈಗ ಭಾಷ್ಯದಲ್ಲಿರುವ 'ಪದಾರ್ಥೋಪಾ ಪಾದಾನಾತ್' ಎಂಬ ಪಾಠವನ್ನೇ ಇಟ್ಟುಕೊಂಡು ಭಿನ್ನಪದಾರ್ಥಸಂಸರ್ಗರೂಪವಾದ ವಾಕ್ಯಾರ್ಥವು ತೋರುತ್ತಿರುವಲ್ಲಿ ನಾನಾಪದಾರ್ಥಗಳು ತೋರುವದಿಲ್ಲ – ಎಂಬುದು ಸರಿಯಲ್ಲ ಎಂದು ಭಾಮತಿಯಲ್ಲಿ ವಿವರಿಸಿದೆ.

2. ಎರಡು ಪದಗಳನ್ನು ಪ್ರಯೋಗಿಸುವವರು ಎರಡು ಪದಾರ್ಥಗಳನ್ನು ಕಂಡರೆ ವೆಂದೇ ಭಾವಿಸುತ್ತಾರೆ. ಲೋಕಪ್ರಸಿದ್ಧವಾದ ಪದಾರ್ಥವನ್ನಲ್ಲವೆ ಪರೀಕ್ಷಕರೂ ತೆಗೆದು ಕೊಂಡು ವಿಚಾರಮಾಡುತ್ತಾರೆ ? ಲೋಕಾನುಭವವನ್ನೇ ವಾದಗ್ರಸ್ತವಾಗಿ ಮಾಡಿದು ವಾದವೇ ಇರುವದಿಲ್ಲ.

3. ವಾದಗ್ರಸ್ತವಾದದ್ದನ್ನೇ ನಿಶ್ಚಿತವಾದಂತೆ ಹೇಳಬಾರದು.

ಅದಕ್ಕೆ ಸದೃಶವೆಂದೇನೂ ತಿಳಿಯಬರುವದಿಲ್ಲ.[1] **ಹೊರಗಿನ ವಸ್ತುವಿನಲ್ಲಿ ಅದೇ ಇದಿರಬಹುದೋ, ಅದಕ್ಕೆ ಸದೃಶವಾದ (ಮತ್ತೊಂದೋ) ಎಂಬ ಸಂದೇಹವು ಉಂಟಾದರೂ ಆಗಬಹುದು ; ಆದರೆ ಅರಿಯುವಾತನ ವಿಷಯದಲ್ಲಿ ಅವನೇ ನಾನೊ, ಅವನಿಗೆ ಸದೃಶನೊ?- ಎಂಬ ಸಂದೇಹವೂ ಆಗುವಂತಿಲ್ಲ.[2] ಏಕೆಂದರೆ ಹಿಂದಿನ ದಿನ ಯಾವ ನಾನು ನೋಡಿದ್ದೆನೋ ಅದೇ ನಾನು ಈಗ ಸ್ಮರಿಸಿಕೊಳ್ಳುತ್ತಿದೇನೆ – ಎಂದ ನಿಶ್ಚಿತವಾಗಿ ಅವನೇ ಎಂದು ಅರಿವಾಗುತ್ತದೆ.[3]** ಆದ್ದರಿಂದಲೂ ವೈನಾಶಿಕರ ಒಪ್ಪಿಗೆಯು ಸರಿಯಲ್ಲ.

**ನಾಸತೋಽದೃಷ್ಟತ್ವಾತ್ ॥ ೨೬ ॥**

೨೬. ಅಸತ್ತಿನಿಂದ (ಕಾರ್ಯವುಂಟಾಗದು). ಏಕೆಂದರೆ (ಅದು) ಕಂಡಿಲ್ಲ.

## ಅಭಾವದಿಂದ ಭಾವವು ಉತ್ಪನ್ನವಾಗದು

**( ಭಾಷ್ಯ )**

೫೩. ಇತಶ್ಚ ಅನುಪಪನ್ನೋ ವೈನಾಶಿಕಸಮಯಃ । ಯತಃ ಸ್ಥಿರಮ್ ಅನುಯಾಯಿಕಾರಣಮ್ ಅನಭ್ಯುಪಗಚ್ಛತಾಮ್ ಅಭಾವಾದ್ ಭಾವೋತ್ಪತ್ತಿಃ ಇತ್ಯೇತತ್ ಆಪದ್ಯತೇ । ದರ್ಶಯನ್ತಿ ಚ ಅಭಾವಾದ್ ಭಾವೋತ್ಪತ್ತಿಮ್ "ನಾನುಪಮೃದ್ಯಪ್ರಾದುರ್ಭಾವಾತ್" (?) ಇತಿ । ವಿನಷ್ಟಾದ್ ಹಿ ಕಿಲ ಬೀಜಾತ್ ಅಙ್ಕುರ ಉತ್ಪದ್ಯತೇ, ತಥಾ ವಿನಷ್ಟಾತ್ ಕ್ಷೀರಾದ್ ದಧಿ, ಮೃತ್ಪಿಣ್ಡಾಚ್ಚ ಘಟಃ । ಕೂಟಸ್ಥಾಚ್ಚೇತ್ ಕಾರಣಾತ್ ಕಾರ್ಯಮ್ ಉತ್ಪದ್ಯೇತ, ಅವಿಶೇಷಾತ್ ಸರ್ವಂ ಸರ್ವತ ಉತ್ಪದ್ಯೇತ । ತಸ್ಮಾತ್ ಅಭಾವಗ್ರಸ್ತೇಭ್ಯೋ ಬೀಜಾದಿಭ್ಯೋಽಙ್ಕುರಾದೀನಾಮ್ ಉತ್ಪದ್ಯಮಾನತ್ವಾತ್ ಅಭಾವಾದ್ ಭಾವೋತ್ಪತ್ತಿಃ ಇತಿ ಮನ್ಯನ್ತೇ । ತತ್ರ ಇದಮ್ ಉಚ್ಯತೇ ।

---

1. ನಿಶ್ಚಿತವಾಗಿರುವದನ್ನು ವಾದಗ್ರಸ್ತವಾಗಿ ಮಾಡುವದು ಸರಿಯಲ್ಲ ಎಂದರ್ಥ.

2. ದೀಪದ ಜ್ವಾಲೆಯೇ ಮುಂತಾದವುಗಳಲ್ಲಿ ಅದೇ ಇದು ಎಂಬ ನಿಶ್ಚಯವಿದ್ದರೂ ಅದು ಭ್ರಾಂತಿಯೆಂದು ಪ್ರಮಾಣಾಂತರದಿಂದ ನಿಶ್ಚಯವಾಗಿರುವದರಿಂದ ಬಾಹ್ಯಪ್ರತ್ಯಭಿಜ್ಞಾನವಿಷಯದಲ್ಲಿ ಸಂಶಯವುಂಟಾದರೂ ಆಗಬಹುದು. ಆದರೆ ಅವನೇ ನಾನು ಎಂಬ ಪ್ರತ್ಯಭಿಜ್ಞಾನದ ವಿಷಯದಲ್ಲಿ ಸಂಶಯವನ್ನು ಮಾಡುವದಕ್ಕೆ ಬರುವದೇ ಇಲ್ಲ ; ಏಕೆಂದರೆ ಸಂಶಯಮಾಡುವದಕ್ಕೂ ಈ ಪ್ರತ್ಯಭಿಜ್ಞಾನವನ್ನು ಒಪ್ಪಬೇಕಾಗುತ್ತದೆ.

3. ಇದನ್ನು ಅಲ್ಲಗಳೆಯುವದು ಕ್ಷಣಿಕವಾದಿಯಿಂದಲೂ ಆಗಲಾರದು ಎಂದರ್ಥ.

'ನಾಸತೋಽದೃಷ್ಟತ್ವಾತ್' ಇತಿ । ನಾಭಾವಾದ್ ಭಾವಃ ಉತ್ಪದ್ಯತೇ । ಯದಿ ಅಭಾವಾದ್ ಭಾವಃ ಉತ್ಪದ್ಯೇತ, ಅಭಾವತ್ವಾವಿಶೇಷಾತ್ ಕಾರಣ ವಿಶೇಷಾಭ್ಯುಪಗಮಃ ಅನರ್ಥಕಃ ಸ್ಯಾತ್ । ನ ಹಿ ಬೀಜಾದೀನಾಮ್ ಉಪ ಮೃದಿತಾನಾಂ ಯೋಽಭಾವಃ ತಸ್ಯ ಅಭಾವಸ್ಯ ಶಶವಿಷಾಣಾದೀನಾಂ ಚ ನಿಃಸ್ವಭಾವತ್ವಾವಿಶೇಷಾತ್ ಅಭಾವತ್ವೇ ಕಶ್ಚಿತ್ ವಿಶೇಷೋಽಸ್ತಿ । ಯೇನ ಬೀಜಾದೇವ ಅಙ್ಕುರೋ ಜಾಯತೇ । ಕ್ಷೀರಾದೇವ ದಧಿ ಇತ್ಯೇವಂಜಾತೀ ಯಕಃ ಕಾರಣವಿಶೇಷಾಭ್ಯುಪಗಮಃ ಅರ್ಥವಾನ್ ಸ್ಯಾತ್ । ನಿರ್ವಿಶೇಷಸ್ಯ ತು ಅಭಾವಸ್ಯ ಕಾರಣತ್ವಾಭ್ಯುಪಗಮೇ ಶಶವಿಷಾಣಾದಿಭ್ಯೋಽಪಿ ಅಙ್ಕುರಾ ದಯೋ ಜಾಯೇರನ್ । ನ ಚ ಏವಂ ದೃಶ್ಯತೇ । ಯದಿ ಪುನಃ ಅಭಾವಸ್ಯಾಪಿ ವಿಶೇಷಃ ಅಭ್ಯುಪಗಮ್ಯೇತ, ಉತ್ಪಲಾದೀನಾಮಿವ ನೀಲತ್ವಾದಿಃ, ತತೋ ವಿಶೇಷವತ್ತ್ವಾದೇವ ಅಭಾವಸ್ಯ ಭಾವತ್ವಮ್ ಉತ್ಪಲಾದಿವತ್ ಪ್ರಸಜ್ಯೇತ । ನಾಪಿ ಅಭಾವಃ ಕಸ್ಯಚಿತ್ ಉತ್ಪತ್ತಿಹೇತುಃ ಸ್ಯಾತ್ । ಅಭಾವತ್ವಾದೇವ, ಶಶವಿಷಾಣಾದಿವತ್ । ಅಭಾವಾಚ್ಚ ಭಾವೋತ್ಪತ್ತೌ ಅಭಾವಾನ್ವಿತಮೇವ ಸರ್ವಂ ಕಾರ್ಯಂ ಸ್ಯಾತ್ । ನ ಚೈವಂ ದೃಶ್ಯತೇ । ಸರ್ವಸ್ಯ ಚ ವಸ್ತುನಃ ಸ್ವೇನ ರೂಪೇಣ ಭಾವಾತ್ಮನೈವ ಉಪಲಭ್ಯಮಾನತ್ವಾತ್ । ನ ಚ ಮೃದನ್ವಿತಾಃ ಶರಾವಾದಯೋ ಭಾವಾಃ ತನ್ತ್ವಾದಿವಿಕಾರಾಃ ಕೇನಚಿತ್ ಅಭ್ಯುಪಗಮ್ಯನ್ತೇ । ಮೃದ್ವಿಕಾರಾನೇವ ತು ಮೃದನ್ವಿತಾನ್ ಭಾವಾನ್ ಲೋಕಃ ಪ್ರತ್ಯೇತಿ ॥

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ವೈನಾಶಿಕರ ಒಪ್ಪಿಗೆಯು ಹೊಂದುಗಡೆಯಾಗುವದಿಲ್ಲ. ಏಕೆಂದರೆ ಸ್ಥಿರವಾದ ಅನುಗತವಾದ ಕಾರಣವನ್ನು ಒಪ್ಪದೆ ಇರುವವರ (ಮತದಲ್ಲಿ) ಅಭಾವದಿಂದ ಭಾವವು ಉತ್ಪನ್ನವಾಗುತ್ತದೆ ಎಂದಾಗುವದು. "ನಾನುಪಮೃದ್ಯಪ್ರಾದುರ್ಭಾವಾತ್" (?) (ಕಾರಣವನ್ನು) ನಾಶಮಾಡದೆ (ಕಾರ್ಯವು) ಹುಟ್ಟುವದಿಲ್ಲವಾದ್ದರಿಂದ– ಎಂದು ಅಭಾವದಿಂದ ಭಾವವು ಉತ್ಪನ್ನವಾಗುವದೆಂದು (ವೈನಾಶಿಕರು) ಹೇಳಿಯೂ ಇರುತ್ತಾರೆ. ವಿನಷ್ಟ ಬೀಜದಿಂದ ಮೊಳಕೆಯು ಹುಟ್ಟುತ್ತದೆ, ಹಾಗೆಯೇ ವಿನಷ್ಟವಾದ ಕ್ಷೀರದಿಂದ ಮೊಸರು (ಉಂಟಾಗುತ್ತದೆ) ಮತ್ತು (ವಿನಷ್ಟವಾದ) ಮಣ್ಣುಮುದ್ದೆಯಿಂದ ಗಡಿಗೆ(ಯುಂಟಾಗುತ್ತದೆ). ಕೂಟಸ್ಥವಾದ ಕಾರಣದಿಂದ ಕಾರ್ಯವು ಉತ್ಪನ್ನ ವಾಗುವದಾದರೆ (ಕೂಟಸ್ಥವಾಗಿರುವದೆಂಬುದು ಎಲ್ಲಕ್ಕೂ) ಸಮಾನವಾಗಿರು ವದರಿಂದ ಎಲ್ಲವೂ ಎಲ್ಲದರಿಂದಲೂ ಉತ್ಪನ್ನವಾಗಬಹುದಾಗುವದು. ಆದ್ದರಿಂದ ಅಭಾವಗ್ರಸ್ತವಾದ ಬೀಜಾದಿಗಳಿಂದಲೇ ಅಂಕುರಾದಿಗಳು ಉತ್ಪನ್ನವಾಗು ವದರಿಂದ ಅಭಾವದಿಂದ ಭಾವವು ಹುಟ್ಟುತ್ತದೆ ಎಂದು (ಅವರು) ಅಭಿಪ್ರಾಯ ಪಡುತ್ತಾರೆ.

ಇದಕ್ಕೆ "ಅಸತ್ತಿನಿಂದ (ಕಾರ್ಯವುಂಟಾಗ)ಲಾರದು ; ಏಕೆಂದರೆ (ಅದು) ಕಂಡುಬಂದಿಲ್ಲ" ಎಂಬೀ (ಉತ್ತರವನ್ನು) ಹೇಳಿರುತ್ತದೆ. (ಇದರ ವಿವರ) : ಅಭಾವದಿಂದ ಭಾವವು ಹುಟ್ಟುವದಿಲ್ಲ. ಅಭಾವದಿಂದ ಭಾವವು ಹುಟ್ಟುವ ದಾದರೆ ಅಭಾವತ್ವವು (ಎಲ್ಲಕ್ಕೂ) ಸಮಾನವಾಗಿರುವದರಿಂದ ಇಂಥದ್ದೊಂದು ಕಾರಣವೆಂದು ಒಪ್ಪುವದು ವ್ಯರ್ಥವಾಗುವದು. ಹೇಗೆಂದರೆ **ಬೀಜಾದಿಗಳು ನಾಶವಾದಮೇಲೆ ಆಗುವ ಅಭಾವವಿದೆಯಲ್ಲ, ಆ ಅಭಾವಕ್ಕೂ ಮೊಲದ ಕೊಂಬೇ ಮುಂತಾದವುಗಳಿಗೂ ಸ್ವಭಾವವಿಲ್ಲವೆಂಬುದು ಸಮಾನ ವಾಗಿರುವದರಿಂದ[1] (ಅವುಗಳ) ಅಭಾವದಲ್ಲಿ ಯಾವ ವಿಶೇಷವೂ ಇರುವದಿಲ್ಲ.** ಹಾಗೆ (ವಿಶೇಷ)ವಿದ್ದಿದ್ದರೆ ಬೀಜದಿಂದಲೇ ಮೊಳಕೆಯುಂಟಾ ಗುತ್ತದೆ, ಹಾಲಿನಿಂದಲೇ ಮೊಸರು (ಉಂಟಾಗುತ್ತದೆ)– ಎಂಬೀ ಜಾತಿಯ ಕಾರಣವಿಶೇಷವನ್ನು ಒಪ್ಪುವದು ಸಾರ್ಥಕವಾಗುತ್ತಿತ್ತು. ನಿರ್ವಿಶೇಷವಾದ ಅಭಾವವು ಕಾರಣವೆಂದು ಒಪ್ಪಿದರೆ ಮೊಲದಕೊಂಬೇ ಮುಂತಾದವುಗಳಿಂದ ಲೂ ಮೊಳಕೆಯೇ ಮುಂತಾದವು ಉಂಟಾಗಬಹುದಾಗುವದು. ಆದರೆ ಹಾಗೆ (ಆದದ್ದು) ಕಂಡುಬರುವದಿಲ್ಲ. ಹಾಗಲ್ಲದೆ ನೈದಿಲೆಯೇ ಮುಂತಾದವುಗಳಲ್ಲಿ ಕೆಂಪು ಮುಂತಾದವುಗಳಂತೆ ಅಭಾವದಲ್ಲಿಯೂ ವಿಶೇಷವುಂಟೆನ್ನುವದಾದರೆ, ಆಗ ವಿಶೇಷವಿರುವದರಿಂದಲೇ ನೈದಿಲೆ ಮುಂತಾದವುಗಳಂತೆ ಅಭಾವವೂ ಭಾವವೆಂದಾಗುವದು.[2]

ಅಭಾವವು ಯಾವದಕ್ಕೂ ಉತ್ಪತ್ತಿಹೇತುವೂ ಅಲ್ಲ ; (ಅದು) ಮೊಲದ ಕೊಂಬು ಮುಂತಾದವುಗಳಂತೆ ಅಭಾವವಾಗಿದೆ ಎಂಬುದೇ (ಇದಕ್ಕೆ ಹೇತು). ಇದಲ್ಲದೆ ಅಭಾವದಿಂದ ಭಾವವು ಉಂಟಾಗುವದಾದರೆ ಎಲ್ಲಾ ಕಾರ್ಯವೂ ಅಭಾವಾನ್ವಿತವಾಗಿಯೇ ಇರಬೇಕಾಗುವದು. ಆದರೆ ಹಾಗೆ ಕಾಣಬರುವದಿಲ್ಲ. ಏಕೆಂದರೆ ಪ್ರತಿಯೊಂದು ವಸ್ತುವೂ ತನ್ನತನ್ನ ರೂಪದಿಂದ ಭಾವರೂಪವಾಗಿ ಯೇ ಕಾಣಬರುತ್ತದೆ.[3] ಮಣ್ಣಿನಿಂದ ಅನ್ವಿತವಾಗಿರುವ ಶ್ರಾವೆಯೇ ಮುಂ

---

1. ಅಭಾವಕ್ಕೆ ನಿಃಸ್ವಭಾವತ್ವವೇ ರೂಪವೆಂದು ಬೌದ್ಧರ ಅಭ್ಯುಪಗಮ. ಆಗ ಮೊಲದ ಕೊಂಬಿಗೂ ಅದಕ್ಕೂ ಯಾವ ಹೆಚ್ಚುಕಡಿಮೆಯನ್ನೂ ಹೇಳುವದಕ್ಕೆ ಬರುವದಿಲ್ಲ.

2. ತೈ. ಭಾ. ಅವ. (ಭಾ. ಭಾ. ೯) ; ಗೀ ಭಾ ೧೮–೪೮ (ಭಾ. ಭಾ. ೫೪೭)– ಇವುಗಳಲ್ಲಿಯೂ ಅಭಾವವು ನಿರ್ವಿಶೇಷವೆಂಬುದನ್ನು ಹೀಗೆಯೇ ಉಪಪಾದನೆಮಾಡಿದೆ.

3. ಕಾರಣವು ಕಾರ್ಯದಲ್ಲಿ ಅನ್ವಿತವಾಗಿರಬೇಕೆಂಬ ನಿಯಮವನ್ನು ಬೌದ್ಧನು ಒಪ್ಪುವದಿಲ್ಲವಾದರೂ ಮುಂದಿನ ವಾಕ್ಯದಲ್ಲಿ ಲೋಕಾನುಭವವನ್ನು ಉದಾಹರಿಸಿ ಆ ನಿಯಮವನ್ನು ಒಪ್ಪಿಯೇ ತೀರಬೇಕೆಂದು ಬಲಾತ್ಕಾರದಿಂದ ಬೌದ್ಧನನ್ನು ಒಪ್ಪಿಸಿರು ತ್ತಾರೆ. ಬೃ. ಭಾ. ದಲ್ಲಿ ೧–೨–೧ರ ಚರ್ಚೆಯನ್ನು ನೋಡಿ.

ತಾದವು ನೂಲು ಮುಂತಾದವುಗಳ ವಿಕಾರಗಳೆಂದು ಯಾವನೂ ಒಪ್ಪುವದಿಲ್ಲ. ಮಣ್ಣಿನಿಂದ ಅನ್ವಿತವಾಗಿರುವ ವಸ್ತುಗಳನ್ನೆಲ್ಲ ಮಣ್ಣಿನ ವಿಕಾರಗಳೆಂದೇ ಜನರು ತಿಳಿಯುತ್ತಾರೆ.

## ಕೂಟಸ್ಥವಸ್ತುವೂ ಕಾರಣವಾಗಬಹುದು

(ಭಾಷ್ಯ)

೫೪. ಯತ್ತು ಉಕ್ತಮ್, ಸ್ವರೂಪೋಪಮರ್ದಮನ್ತರೇಣ ಕಸ್ಯಚಿತ್ ಕೂಟಸ್ಥಸ್ಯ ವಸ್ತುನಃ ಕಾರಣತ್ವಾನುಪಪತ್ತೇಃ ಅಭಾವಾದ್ ಭಾವೋತ್ಪತ್ತಿ ರ್ಭವಿತುಮರ್ಹತಿ ಇತಿ । ತದ್ ದುರುಕ್ತಮ್ । ಸ್ಥಿರಸ್ವಭಾವಾನಾಮೇವ ಸುವರ್ಣಾದೀನಾಂ ಪ್ರತ್ಯಭಿಜ್ಞಾಯಮಾನಾನಾಂ ರುಚಕಾದಿಕಾರ್ಯಕಾರಣ ಭಾವದರ್ಶನಾತ್ । ಯೇಷ್ವಪಿ ಬೀಜಾದಿಷು ಸ್ವರೂಪೋಪಮರ್ದೋ ಲಕ್ಷ್ಯತೇ ತೇಷ್ವಪಿ ನಾಸೌ ಉಪಮೃದ್ಯಮಾನಾ ಪೂರ್ವಾವಸ್ಥಾ ಉತ್ತರಾವಸ್ಥಾಯಾಃ ಕಾರಣಮ್ ಅಭ್ಯುಪಗಮ್ಯತೇ । ಅನುಪಮೃದ್ಯಮಾನಾನಾಮೇವ ಅನು ಯಾಯಿನಾಂ ಬೀಜಾದ್ಯವಯವಾನಾಮ್ ಅಙ್ಕುರಾದಿಕಾರಣಭಾವಾಭ್ಯುಪ ಗಮಾತ್ ॥

(ಭಾಷ್ಯಾರ್ಥ)

ಇನ್ನು (ಕಾರಣ)ಸ್ವರೂಪವು ನಾಶವಾದ ಹೊರತು ಯಾವದೊಂದು ಕೂಟಸ್ಥವಸ್ತುವೂ[1] ಕಾರಣವಾಗಲಾರದಾದ್ದರಿಂದ ಅಭಾವದಿಂದ ಭಾವ ವುಂಟಾಗುವದೆಂಬುದು ಯುಕ್ತ ಎಂದು ಹೇಳಿತ್ತಷ್ಟೆ; ಆ ಹೇಳಿಕೆಯು ತಪ್ಪು. ಏಕೆಂದರೆ ಸ್ಥಿರಸ್ವಭಾವವುಳ್ಳ ಚಿನ್ನವೇ ಮುಂತಾದ ( ಅದೇ ಇದೆಂದು ) ಪ್ರತ್ಯಭಿಜ್ಞೆಯಾಗುವ (ವಸ್ತುಗಳೇ) ಸರಿಗೆಯೇ ಮುಂತಾದ ಕಾರ್ಯಗಳಿಗೆ ಕಾರಣವಾಗುವದು ಕಂಡುಬಂದಿದೆ.[2] ಇನ್ನು ಸ್ವರೂಪವು ನಾಶವಾಗುವದೆಂದು ಕಾಣಬರುವ ಬೀಜಾದಿಗಳಿವೆಯಷ್ಟೆ, ಅವುಗಳಲ್ಲಿಯೂ ಆ ನಾಶವಾಗುವ ಹಿಂದಿನ ಅವಸ್ಥೆಯು ಆಮೇಲಿನ ಅವಸ್ಥೆಗೆ ಕಾರಣವೆಂದು (ನಾವು) ಒಪ್ಪಿರು

1. ತಾನು ಇದ್ದಂತೆಯೇ ಇರುವ ವಸ್ತು. ಕಾರಣವು ವಿಕಾರವನ್ನು ಹೊಂದಿ ಕಾರ್ಯವಾಗುವದು ಎಂಬ ಪರಿಣಾಮವಾದಿಗಳ ಮತದಲ್ಲಿ ದೋಷವನ್ನು ಹೇಳುವ ದಕ್ಕಾಗಿ ಈ ವಿಶೇಷಣವನ್ನು ಹಾಕಿಕೊಂಡಿದೆ.

2. ಕಾರಣವಾಗಿರುವದೆಂದರೆ ಸರಿಗೆಯೇ ಮುಂತಾದ ರೂಪಾಂತರವನ್ನು ತಳೆದಂತೆ ತೋರುವದು ಎಂದು ಭಾವ. ಸಹಕಾರಿಕಾರಣಗಳು ಒಂದೊಂದಾಗಿ ಸೇರಿಕೊಂಡರೆ ಕಾರ್ಯವನ್ನು ಉಂಟುಮಾಡುತ್ತವೆ : ಸಹಕಾರಿಗಳಿಂದಾಗುವ ಉಪಕಾರವು ಅನಿವಾರ್ಯ ವಾಗಿರುತ್ತದೆ ಎಂಬ ಭಾಮತೀವ್ಯಾಖ್ಯಾನವು ಅನವಶ್ಯವೆಂದು ತೋರುತ್ತದೆ.

ವದಿಲ್ಲ ; ನಾಶವಾಗದೆ ಇರುವ ಅನುಯಾಯಿಗಳಾದ ಬೀಜಾದಿಗಳ ಅವಯವ ಗಳೇ ಅಂಕುರಾದಿಗಳಿಗೆ ಕಾರಣವಾಗಿವೆ ಎಂದು ಒಪ್ಪಿರುತ್ತೇವೆ.[1]

## ಅಭಾವಕಾರಣವಾದನಿರಾಕರಣೆಯ ಉಪಸಂಹಾರ

(ಭಾಷ್ಯ)

೫೫. ತಸ್ಮಾತ್ ಅಸದ್ಭ್ಯಃ ಶಶವಿಷಾಣಾದಿಭ್ಯಃ ಸದುತ್ಪತ್ತ್ಯದರ್ಶನಾತ್ ಸದ್ಭ್ಯಶ್ಚ ಸುವರ್ಣಾದಿಭ್ಯಃ ಸದುತ್ಪತ್ತಿದರ್ಶನಾತ್ ಅನುಪಪನ್ನೋಽಯಮ್ ಅಭಾವಾದ್ ಭಾವೋತ್ಪತ್ತ್ಯಭ್ಯುಪಗಮಃ । ಅಪಿ ಚ ಚತುರ್ಭಿಃ ಚಿತ್ತಚೈತ್ತಾ ಉತ್ಪದ್ಯನ್ತೇ ಪರಮಾಣುಭ್ಯಶ್ಚ ಭೂತಭೌತಿಕಲಕ್ಷಣಃ ಸಮುದಾಯಃ ಉತ್ಪದ್ಯತೇ ಇತಿ ಅಭ್ಯುಪಗಮ್ಯ ಪುನಃ ಅಭಾವಾತ್ ಭಾವೋತ್ಪತ್ತಿಂ ಕಲ್ಪಯದ್ಭಿಃ ಅಭ್ಯುಪಗತಮ್ ಅಪಹ್ನುವಾನೈಃ ವೈನಾಶಿಕೈಃ ಸರ್ವೋ ಲೋಕಃ ಆಕುಲೀ ಕ್ರಿಯತೇ ॥

(ಭಾಷ್ಯಾರ್ಥ)

ಆದ್ದರಿಂದ ಅಸತ್ತಾಗಿರುವ ಶಶವಿಷಾಣಾದಿಗಳಿಂದ ಸದ್ವಸ್ತು ಹುಟ್ಟುವದು ಕಂಡಿಲ್ಲವಾದ್ದರಿಂದಲೂ ಸದ್ರೂಪವಾಗಿರುವ ಸುವರ್ಣಾದಿಗಳಿಂದ ಸದ್ವಸ್ತು ಹುಟ್ಟುವದು ಕಂಡಿರುವದರಿಂದಲೂ[2] ಅಭಾವದಿಂದ ಭಾವವುಂಟಾಗುವದೆಂಬ ಈ ಅಭ್ಯುಪಗಮವು ಹೊಂದುವಹಾಗಿಲ್ಲ. ಇದಲ್ಲದೆ ನಾಲ್ಕು (ಬಗೆಯ ಹೇತುಗಳಿಂದ) ಚಿತ್ತಚೈತ್ತಗಳು ಉಂಟಾಗುತ್ತವೆ. ಪರಮಾಣುಗಳಿಂದ ಭೂತಭೌತಿಕರೂಪವಾದ ಸಮುದಾಯವುಂಟಾಗುತ್ತದೆ ಎಂದು ಒಪ್ಪಿ, ಮತ್ತೂ ಅಭಾವದಿಂದ ಭಾವವು ಉತ್ಪನ್ನವಾಗುತ್ತದೆ ಎಂದು ಕಲ್ಪಿಸಿ (ತಾವು) ಒಪ್ಪಿಕೊಂಡಿರುವದನ್ನೇ ಅಲ್ಲಗಳೆಯುವ ವೈನಾಶಿಕರು ಎಲ್ಲಾ ಜನರನ್ನೂ ಮೋಹಗೊಳಿಸುತ್ತಿರುವರು.

---

1. ಅನುಗತವಾಗದೆ ಇರುವ ಮೃತ್ಪಿಂಡಾದಿಗಳು ಘಟಾದಿಕಾರಣವಲ್ಲ ; ಕಾರಣವು ಕಾರ್ಯದೊಡನೆ ಇದ್ದೇ ಇರುತ್ತದೆ, ಕಾರ್ಯವು ಕಾರಣವನ್ನು ಬಿಟ್ಟಿರಲಾರದು— ಎಂಬ ಅಭಿಪ್ರಾಯವು ಇದರಲ್ಲಿ ಅಡಗಿದೆ. ೨-೧-೩, ೧೪ರ ಭಾಷ್ಯಗಳನ್ನು ನೋಡಿ.

2. ಸತ್ತಿನಿಂದ ಸತ್ತು ಹುಟ್ಟುತ್ತದೆ ಎಂಬುದನ್ನು ವ್ಯಾವಹಾರಿಕವಾಗಿ ಒಪ್ಪಿ ಹೇಳಿದ ಮಾತಿದು. ಆದರೆ ಕಾರ್ಯವು ಕಾರಣಕ್ಕಿಂತ ಭಿನ್ನವಲ್ಲವೆಂಬ ಪರಮಾರ್ಥವನ್ನು ತದನನ್ಯತ್ವಾಧಿಕರಣದಲ್ಲಿ ತೋರಿಸಿಕೊಟ್ಟಿದೆ. ಆದ್ದರಿಂದ ಮಾಂ. ಕಾ. ೪-೪, ೪-೨೨, ೪-೪೦- ಮುಂತಾದ ಕಡೆಗಳಲ್ಲಿ ಹೇಳಿರುವ ಅಜಾತಿವಾದಕ್ಕೂ ಇದಕ್ಕೂ ವಿರೋಧವಿಲ್ಲ.

ಉದಾಸೀನಾನಾಮಪಿ ಚೈವಂ ಸಿದ್ಧಿಃ || ೨೭ ||

೨೭. ಹೀಗಾದರೆ (ಉದಾಸೀ)ನರಿಗೂ (ಕಾರ್ಯವು) ಸಿದ್ಧಿಯಾಗ(ಬೇಕಾದೀತು).

(ಭಾಷ್ಯ)

೫೬. ಯದಿ ಚ ಅಭಾವಾದ್ ಭಾವೋತ್ಪತ್ತಿಃ ಅಭ್ಯುಪಗಮ್ಯೇತ ಏವಂ ಸತಿ ಉದಾಸೀನಾನಾಮ್ ಅನೀಹಮಾನಾನಾಮಪಿ ಜನಾನಾಮ್ ಅಭಿಮತಸಿದ್ಧಿಃ ಸ್ಯಾತ್ | ಅಭಾವಸ್ಯ ಸುಲಭತ್ವಾತ್ | ಕೃಷೀವಲಸ್ಯ ಕ್ಷೇತ್ರಕರ್ಮಣಿ ಅಪ್ರಯತಮಾನಸ್ಯಾಪಿ ಸಸ್ಯನಿಷ್ಪತ್ತಿಃ ಸ್ಯಾತ್ | ಕುಲಾಲಸ್ಯ ಚ ಮೃತ್ಸಂಸ್ಕ್ರಿಯಾಯಾಮ್ ಅಪ್ರಯತಮಾನಸ್ಯಾಪಿ ಅಮತ್ರೋತ್ಪತ್ತಿಃ | ತನ್ತುವಾಯಸ್ಯಾಪಿ ತನ್ತೂನ್ ಅತನ್ವಾನಸ್ಯಾಪಿ ತನ್ವಾನಸ್ಯೇವ ವಸ್ತ್ರಲಾಭಃ | ಸ್ವರ್ಗಾಪವರ್ಗಯೋಶ್ಚ ನ ಕಶ್ಚಿತ್ ಕಥಂಚಿತ್ ಸಮೀಹೇತ | ನ ಚ ಏತದ್ ಯುಜ್ಯತೇ ಅಭ್ಯುಪಗಮ್ಯತೇ ವಾ ಕೇನಚಿತ್ | ತಸ್ಮಾದಪಿ ಅನುಪಪನ್ನೋಽಯಮ್ ಅಭಾವಾದ್ ಭಾವೋತ್ಪತ್ತ್ಯಭ್ಯುಪಗಮಃ ||

(ಭಾಷ್ಯಾರ್ಥ)

ಮತ್ತು ಅಭಾವದಿಂದ ಭಾವದ ಉತ್ಪತ್ತಿಯನ್ನು ಒಪ್ಪುತ್ತೀರಾದರೆ, ಹೀಗಾದರೆ ಉದಾಸೀನರಾಗಿ ( ಯಾವ ) ಕೆಲಸವನ್ನೂ ಮಾಡದ ಜನರಿಗೂ ಅಭೀಷ್ಟಸಿದ್ಧಿಯಾಗಬೇಕು. ಏಕೆಂದರೆ ಅಭಾವವು ಸುಲಭವಾಗಿ (ದೊರಕುತ್ತದೆ). ಬೇಸಾಯಗಾರನು ಉಳುವ ಕೆಲಸದಲ್ಲಿ ತೊಡಗದಿದ್ದರೂ ಪೈರು ಬೆಳೆಯಬೇಕಾಗುವದು. ಮತ್ತು ಕುಂಬಾರನು ಮಣ್ಣಿನ ಸಂಸ್ಕಾರಕ್ಕಾಗಿ ಪ್ರಯತ್ನಮಾಡದಿದ್ದರೂ ಪಾತ್ರೆಯುಂಟಾಗಬೇಕು. ಮತ್ತು ನೇಯ್ಗೆಯವನಿಗೂ ನೂಲುಗಳನ್ನು ನೂಲದೆಯೇ (ಇದ್ದರೂ), ನೂತವನಿಗೆ (ದೊರಕು)ವಂತೆ ಬಟ್ಟೆಯು ದೊರಕಬೇಕು. ಮತ್ತು (ಹೀಗಾದರೆ) ಸ್ವರ್ಗಮೋಕ್ಷಗಳಿಗಾಗಿ ಯಾವನೊಬ್ಬನೂ ಹೇಗೂ ಪ್ರಯತ್ನಿಸದೆ ಹೋದಾನು. ಆದರೆ ಇದು ಯುಕ್ತವಲ್ಲ, ಯಾವನೂ ( ಇದನ್ನು ) ಒಪ್ಪುವದೂ ಇಲ್ಲ.[1] ಆದ್ದರಿಂದಲೂ ಅಭಾವದಿಂದ ಭಾವವುಂಟಾಗುವದೆಂಬ ಈ ಅಭ್ಯುಪಗಮವು ಅಯುಕ್ತವಾಗಿರುತ್ತದೆ.

---

1. ಉದಾಸೀನರಾದವರಿಗೆ ಕಾರ್ಯಸಿದ್ಧಿಯಾಗುವದನ್ನೂ ಯಾವ ಸಾಧನವನ್ನೂ ಮಾಡದೆ ಸ್ವರ್ಗಮೋಕ್ಷಗಳು ದೊರೆಯಬಹುದೆಂಬುದನ್ನೂ ಯಾರೂ ಒಪ್ಪುವದಿಲ್ಲ.

## ೫. ಅಭಾವಾಧಿಕರಣ (ಸೂ. ೨೮-೩೨)

**ನಾಭಾವ ಉಪಲಬ್ಧೇಃ ॥ ೨೮ ॥**

೨೮. (ಬಾಹ್ಯಾರ್ಥಕ್ಕೆ) ಅಭಾವವಿಲ್ಲ ; ಏಕೆಂದರೆ (ಅದು) ಕಾಣುತ್ತದೆ.

## ವಿಜ್ಞಾನವಾದದ ವರ್ಣನೆ

(ಭಾಷ್ಯ)

೫೭. ಏವಂ ಬಾಹ್ಯಾರ್ಥವಾದಮಾಶ್ರಿತ್ಯ ಸಮುದಾಯಾಪ್ರಾಪ್ತ್ಯಾದಿಷು ದೂಷಣೇಷು ಉದ್ಭಾವಿತೇಷು ವಿಜ್ಞಾನವಾದೀ ಬೌದ್ಧಃ ಇದಾನೀಂ ಪ್ರತ್ಯವತಿಷ್ಠತೇ । ಕೇಷಾಂಚಿತ್ ಕಿಲ ವಿನೇಯಾನಾಂ ಬಾಹ್ಯೇ ವಸ್ತುನಿ ಅಭಿನಿವೇಶಮ್ ಆಲಕ್ಷ್ಯ ತದನುರೋಧೇನ ಬಾಹ್ಯಾರ್ಥವಾದಪ್ರಕ್ರಿಯಾ ಇಯಂ ವಿರಚಿತಾ । ನಾಸೌ ಸುಗತಾಭಿಪ್ರಾಯಃ । ತಸ್ಯ ತು ವಿಜ್ಞಾನೈಕಸ್ಕಂಧವಾದ ಏವ ಅಭಿಪ್ರೇತಃ । ತಸ್ಮಿಂಶ್ಚ ವಿಜ್ಞಾನವಾದೇ ಬುದ್ಧ್ಯಾರೂಢೇನ ರೂಪೇಣ ಅನ್ತಸ್ಥ ಏವ ಪ್ರಮಾಣಪ್ರಮೇಯಫಲವ್ಯವಹಾರಃ ಸರ್ವಃ ಉಪಪದ್ಯತೇ । ಸತ್ಯಪಿ ಬಾಹ್ಯೇ ಅರ್ಥೇ ಬುದ್ಧ್ಯಾರೋಹಮನ್ತರೇಣ ಪ್ರಮಾಣಾದಿವ್ಯವಹಾರಾನವತಾರಾತ್ । ಕಥಂ ಪುನರವಗಮ್ಯತೇ ಅನ್ತಸ್ಥ ಏವ ಅಯಂ ಸರ್ವವ್ಯವಹಾರಃ, ನ ವಿಜ್ಞಾನವ್ಯತಿರಿಕ್ತೋ ಬಾಹ್ಯೋಽರ್ಥೋಽಸ್ತಿ ಇತಿ ? ತದಸಂಭವಾತ್ ಇತ್ಯಾಹ । ಸ ಹಿ ಬಾಹ್ಯೋಽರ್ಥಃ ಅಭ್ಯುಪಗಮ್ಯಮಾನಃ ಪರಮಾಣವೋ ವಾ ಸ್ಯುಃ, ತತ್ಸಮೂಹಾ ವಾ ಸ್ತಮ್ಭಾದಯಃ ಸ್ಯುಃ । ತತ್ರ ನ ತಾವತ್ ಪರಮಾಣವಃ ಸ್ತಮ್ಭಾದಿಪ್ರತ್ಯಯಪರಿಚ್ಛೇದ್ಯಾ ಭವಿತುಮರ್ಹನ್ತಿ। ಪರಮಾಣ್ವಾಭಾಸಜ್ಞಾನಾನುಪಪತ್ತೇಃ । ನಾಪಿ ತತ್ಸಮೂಹಾಃ ಸ್ತಮ್ಭಾದಯಃ । ತೇಷಾಂ ಪರಮಾಣುಭ್ಯೋಽನ್ಯತ್ವಾನನ್ಯತ್ವಾಭ್ಯಾಂ ನಿರೂಪಯಿತುಮ್ ಅಶಕ್ಯತ್ವಾತ್ । ಏವಂ ಜಾತ್ಯಾದೀನಪಿ ಪ್ರತ್ಯಾಚಕ್ಷೀತ । ಅಪಿ ಚ ಅನುಭವಮಾತ್ರೇಣ ಸಾಧಾರಣಾತ್ಮನೋ ಜ್ಞಾನಸ್ಯ ಜಾಯಮಾನಸ್ಯ ಯೋಽಯಂ ಪ್ರತಿವಿಷಯಂ ಪಕ್ಷಪಾತಃ ಸ್ತಮ್ಭಜ್ಞಾನಮ್, ಕುಡ್ಯಜ್ಞಾನಮ್, ಘಟಜ್ಞಾನಮ್, ಪಟಜ್ಞಾನಮ್ ಇತಿ, ನಾಸೌ ಜ್ಞಾನಗತವಿಶೇಷಮನ್ತರೇಣ ಉಪಪದ್ಯತೇ ಇತಿ ಅವಶ್ಯಂ ವಿಷಯಸಾರೂಪ್ಯಂ ಜ್ಞಾನಸ್ಯ ಅಙ್ಗೀಕರ್ತವ್ಯಮ್। ಅಙ್ಗೀಕೃತೇ ಚ ತಸ್ಮಿನ್ ವಿಷಯಾಕಾರಸ್ಯ ಜ್ಞಾನೇನೈವ ಅವರುದ್ಧತ್ವಾತ್ ಅಪಾರ್ಥಿಕಾ ಬಾಹ್ಯಾರ್ಥಸದ್ಭಾವಕಲ್ಪನಾ । ಅಪಿ ಚ ಸಹೋಪಲಮ್ಭ

ನಿಯಮಾತ್ ಅಭೇದೋ ವಿಷಯಜ್ಞಾನಯೋರಾಪತತಿ | ನ ಹಿ ಅನಯೋಃ ಏಕಸ್ಯ ಅನುಪಲಮ್ಭೇ ಅನ್ಯಸ್ಯ ಉಪಲಮ್ಭೋಽಸ್ತಿ | ನ ಚ ಏತತ್ ಸ್ವಭಾವ-ವಿವೇಕೇ ಯುಕ್ತಮ್ | ಪ್ರತಿಬನ್ಧಕಾರಣಾಭಾವಾತ್ | ತಸ್ಮಾದಪಿ ಅರ್ಥಾಭಾವಃ | ಸ್ವಪ್ನಾದಿವಚ್ಚ ಇದಂ ದ್ರಷ್ಟವ್ಯಮ್ | ಯಥಾ ಹಿ ಸ್ವಪ್ನಮಾಯಾಮರೀಚ್ಯುದಕಗನ್ಧರ್ವನಗರಾದಿಪ್ರತ್ಯಯಾ ವಿನೈವ ಬಾಹ್ಯೇನ ಅರ್ಥೇನ ಗ್ರಾಹ್ಯಗ್ರಾಹಕಾಕಾರಾ ಭವನ್ತಿ, ಏವಂ ಜಾಗರಿತಗೋಚರಾ ಅಪಿ ಸ್ತಮ್ಭಾದಿಪ್ರತ್ಯಯಾಃ ಭವಿತುಮರ್ಹನ್ತಿ ಇತ್ಯವಗಮ್ಯತೇ | ಪ್ರತ್ಯಯತ್ವಾವಿಶೇಷಾತ್ | ಕಥಂ ಪುನಃ ಅಸತಿ ಬಾಹ್ಯಾರ್ಥೇ ಪ್ರತ್ಯಯವೈಚಿತ್ರ್ಯಮ್ ಉಪಪದ್ಯತೇ? ವಾಸನಾವೈಚಿತ್ರ್ಯಾತ್ ಇತ್ಯಾಹ | ಅನಾದೌ ಹಿ ಸಂಸಾರೇ ಬೀಜಾಙ್ಕುರವತ್ ವಿಜ್ಞಾನಾನಾಂ ವಾಸನಾನಾಂ ಚ ಅನ್ಯೋನ್ಯನಿಮಿತ್ತನೈಮಿತ್ತಿಕಭಾವೇನ ವೈಚಿತ್ರ್ಯಂ ನ ವಿಪ್ರತಿಷಿಧ್ಯತೇ | ಅಪಿ ಚ ಅನ್ವಯವ್ಯತಿರೇಕಾಭ್ಯಾಂ ವಾಸನಾನಿಮಿತ್ತಮೇವ ಜ್ಞಾನವೈಚಿತ್ರ್ಯಮ್ ಇತ್ಯವಗಮ್ಯತೇ | ಸ್ವಪ್ನಾದಿಷು ಅನ್ತರೇಣಾಪ್ಯರ್ಥಂ ವಾಸನಾನಿಮಿತ್ತಸ್ಯ ಜ್ಞಾನವೈಚಿತ್ರ್ಯಸ್ಯ ಉಭಾಭ್ಯಾಮಪಿ ಆವಾಭ್ಯಾಮ್ ಅಭ್ಯುಪಗಮ್ಯಮಾನತ್ವಾತ್ | ಅನ್ತರೇಣ ತು ವಾಸನಾಮ್ ಅರ್ಥನಿಮಿತ್ತಸ್ಯ ಜ್ಞಾನವೈಚಿತ್ರ್ಯಸ್ಯ ಮಯಾ ಅನಭ್ಯುಪಗಮ್ಯಮಾನತ್ವಾತ್ | ತಸ್ಮಾದಪಿ ಅಭಾವೋ ಬಾಹ್ಯಾರ್ಥಸ್ಯ ಇತಿ ||

(ಭಾಷ್ಯಾರ್ಥ)

ಹೀಗೆ ಬಾಹ್ಯಾರ್ಥವಾದವನ್ನು ಆಶ್ರಯಿಸಿ ಸಮುದಾಯದ ಅಪ್ರಾಪ್ತಿಯೇ ಮುಂತಾದ ದೋಷಗಳನ್ನು ಎಬ್ಬಿಸಲು ವಿಜ್ಞಾನವಾದಿಯಾದ ಬೌದ್ಧನು ಈಗ ಎದುರುಬೀಳುತ್ತಾನೆ. ಕೆಲವರು ಶಿಷ್ಯರುಗಳಿಗೆ ಹೊರಗಿನ ವಸ್ತುವಿನಲ್ಲಿ ಅಭಿನಿವೇಶ(ವಿರುವ)ದನ್ನು ಕಂಡು ಅದನ್ನನುಸರಿಸಿ ಈ ಬಾಹ್ಯಾರ್ಥಪ್ರಕ್ರಿಯೆಯನ್ನು ವಿರಚಿಸಲಾಗಿದೆಯಂತೆ. (ಆದರೆ) ಇದು ಸುಗತನ ಅಭಿಪ್ರಾಯವಲ್ಲ. ಅವನಿಗಾದರೋ ವಿಜ್ಞಾನಸ್ಕಂಧವು ಒಂದೇ (ಪರಮಾರ್ಥವೆಂಬ) ವಾದವೇ ಅಭಿಪ್ರೇತವಾಗಿರುತ್ತದೆ. ಆ ವಿಜ್ಞಾನವಾದದಲ್ಲಿ ಬುದ್ಧ್ಯಾರೂಢವಾದ ರೂಪದಿಂದ ಎಲ್ಲಾ ಪ್ರಮಾಣಪ್ರಮೇಯಫಲವ್ಯವಹಾರವೂ[1] ಒಳಗೇ ಉಪಪನ್ನವಾಗುತ್ತದೆ. ಏಕೆಂದರೆ ಹೊರಗಿನ ವಸ್ತುವು ಇದ್ದರೂ ಬುದ್ಧಿಗೆ ಹತ್ತದೆ ಇದ್ದರೆ ಪ್ರಮಾಣವೇ ಮುಂತಾದವುಗಳ ವ್ಯವಹಾರವು ಬರುವದೇ ಇಲ್ಲ.

---

1. ಪ್ರಮಾಣವು ಕರಣವು, ಪ್ರಮೇಯವು ವಿಷಯವು, ಫಲವು ಕೊನೆಯಲ್ಲಿ ತೋರುವ ವಿಷಯಜ್ಞಾನವು.

(ಪ್ರಶ್ನೆ):— ಈ ವ್ಯವಹಾರವೆಲ್ಲವೂ ಒಳಗಿರುವದೇ, ವಿಜ್ಞಾನಕ್ಕಿಂತ ಬೇರೆಯಾಗಿರುವ ಹೊರಗಿನ ಅರ್ಥವು ಇಲ್ಲ ಎಂದು ಹೇಗೆ ನಿಶ್ಚಯಿಸಬೇಕು ?

(ಉತ್ತರ):— ಏಕೆಂದರೆ ಅದು ಸಂಭವಿಸುವದಿಲ್ಲ (ಎಂದೇ ಈ ವಾದಿಯು) ಹೇಳುತ್ತಾನೆ. ಈ (ನೀವು) ಒಪ್ಪುವ ಹೊರಗಿನ ಅರ್ಥವೆಂಬುದು ಪರಮಾಣುಗಳಾದರೂ ಆಗಿರಬೇಕು. ಅಥವಾ ಅವುಗಳ ಸಮೂಹವಾದ ಕಂಬವೇ ಮುಂತಾದವುಗಳಾಗಿಯಾದರೂ ಇರಬೇಕು. ಇದರಲ್ಲಿ ಮೊದಲನೆಯದಾಗಿ ಕಂಬವೇ ಮುಂತಾದ ಪ್ರತ್ಯಯಗಳಿಂದ ಗೊತ್ತಾಗುವದು ಪರಮಾಣುಗಳಾಗಲಾರವು ; ಏಕೆಂದರೆ ಪರಮಾಣುಗಳನ್ನು ತಿಳಿಸುವ ಜ್ಞಾನವೆಂಬುದೇ ಹೊಂದುವದಿಲ್ಲ.[1] ಆ (ಪರಮಾಣುಗಳ)ಸಮೂಹವಾದ ಸ್ತಂಭಾದಿಗಳೇ (ಆ ಪ್ರತ್ಯಯದಿಂದ ಗೊತ್ತಾಗುತ್ತವೆ ಎನ್ನುವದಕ್ಕೂ) ಇಲ್ಲ. ಏಕೆಂದರೆ ಆ (ಸ್ತಂಭಾದಿಗಳು) ಪರಮಾಣುಗಳಿಗಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಗೊತ್ತುಪಡಿಸುವದು ಅಶಕ್ಯವಾಗಿರುತ್ತದೆ.[2] ಹೀಗೆಯೇ ಜಾತಿ ಮುಂತಾದವುಗಳನ್ನೂ ಅಲ್ಲಗಳೆಯಬಹುದು.[3] ಇದಲ್ಲದೆ ಅನುಭವಮಾತ್ರವಾಗಿ ಸಾಧಾರಣರೂಪವಾಗಿರುವ ಜ್ಞಾನವು ಉಂಟಾಗುವಾಗ ಕಂಬದ ಜ್ಞಾನ, ಗೋಡೆಯ ಜ್ಞಾನ, ಗಡಿಗೆಯ ಜ್ಞಾನ, ಬಟ್ಟೆಯ ಜ್ಞಾನ— ಎಂದು ಪ್ರತಿವಿಷಯದಲ್ಲಿಯೂ ಪಕ್ಷಪಾತವುಂಟಾಗುವದಲ್ಲ, ಇದು ಜ್ಞಾನದಲ್ಲಾಗುವ ವಿಶೇಷವಲ್ಲದಿದ್ದರೆ ಹೊಂದುವದಿಲ್ಲವಾದ್ದರಿಂದ ಅವಶ್ಯವಾಗಿ ಜ್ಞಾನವು ವಿಷಯಸಾರೂಪ್ಯ(ವನ್ನು ಹೊಂದುತ್ತದೆ) ಎಂದು ಒಪ್ಪಬೇಕು. ಆದರೆ ಅದನ್ನು ಒಪ್ಪಿದರೆ ಜ್ಞಾನದಲ್ಲಿಯೇ ವಿಷಯಾಕಾರವು ಅಡಕವಾಗಿರುವದರಿಂದ ಹೊರಗಿನ ವಿಷಯವು (ಬೇರೆ, ಇದೆ ,ಎಂದು ಕಲ್ಪಿಸುವದು ವ್ಯರ್ಥ. ಇದೂ ಅಲ್ಲದೆ, ವಿಷಯ ಮತ್ತು ಜ್ಞಾನ— ಇವೆರಡೂ

---

1. ಪರಮಾಣುಗಳು ಅತೀಂದ್ರಿಯವಾಗಿರುವದರಿಂದ ಕಂಬ ಎಂದು ಮುಂತಾಗಿ ನಾವು ಅರಿಯುವದು ಬರಿಯ ಪರಮಾಣುಗಳಾಗಲಾರವು ಎಂದರ್ಥ

2. ಸಮೂಹವು ಸಮೂಹಿವಸ್ತುಗಳಿಗಿಂತ ಭಿನ್ನವಾಗಿದ್ದರೆ ಅತ್ಯಂತವಾಗಿ ಬೇರೆಯ ಸ್ವಭಾವದ್ದಾಗುವದರಿಂದ ಅವೆರಡಕ್ಕೂ ತಾದಾತ್ಮ್ಯವಿಲ್ಲ. ಅಭಿನ್ನವಾದರೆ ಸಮೂಹವೆಂಬ ಹೆಸರಿಗೆ ವಿಷಯವೇ ಇಲ್ಲ ಎಂದರ್ಥ.

3. ವನಸೇನಾದಿಸಮೂಹಗಳು ಮರ, ಪದಾತಿ ಮುಂತಾದವುಗಳಿಗಿಂತ ಭಿನ್ನವೂ ಅಲ್ಲ. ಅಭಿನ್ನವೂ ಅಲ್ಲ-'ಎಂಬಂತೆಯೇ ಜಾತಿಯು ವ್ಯಕ್ತಿಗಿಂತಲೂ ಗುಣವು ಗುಣಿಗಿಂತಲೂ ಕ್ರಿಯೆಯು ಕ್ರಿಯಾವದ್ದ್ರವ್ಯಕ್ಕಿಂತಲೂ ಭಿನ್ನವೆಂದಾಗಲಿ ಭಿನ್ನವಲ್ಲವೆಂದಾಗಲಿ ಗೊತ್ತುಪಡಿಸುವದಕ್ಕಾಗುವದಿಲ್ಲ ಎಂದೂ ವಾದಿಸಬಹುದು ಎಂದರ್ಥ.

ಜೊತೆಯಲ್ಲಿಯೇ ತಿಳಿಯಬರುವವೆಂಬ ನಿಯಮವಿರುವದರಿಂದ ಅಭಿನ್ನವೆಂದೇ ಆಗುತ್ತದೆ. ಹೇಗೆಂದರೆ ಇವೆರಡರಲ್ಲಿ ಒಂದು ತಿಳಿದುಬಾರದಿದ್ದರೆ ಮತ್ತೊಂದರ ಅರಿವು ಆಗುವದೇ ಇಲ್ಲ. (ಇವುಗಳ) ಸ್ವಭಾವವು ಬೇರೆಬೇರೆಯಾಗಿದ್ದರೆ ಇದು ಯುಕ್ತ(ವಾಗುವದಿಲ್ಲ). ಏಕೆಂದರೆ (ಹಾಗೆ ಅರಿವು ಆಗದೆ ಇರುವದಕ್ಕೆ) ಪ್ರತಿಬಂಧಕವಾದ ಕಾರಣವು (ಯಾವದೂ) ಇರುವದಿಲ್ಲ. ಆದ್ದರಿಂದಲೂ (ಹೊರಗಿನ) ಅರ್ಥವು ಇಲ್ಲ. ಇದನ್ನು ಸ್ವಪ್ನಾದಿಗಳಂತೆಯೂ ಅರಿಯಬೇಕು. ಹೇಗೆಂದರೆ ಸ್ವಪ್ನ, ಮಾಯೆ, ಮರೀಚ್ಯುದಕ, ಗಂಧರ್ವನಗರ– ಮುಂತಾದ ಪ್ರತ್ಯಯಗಳು ಹೇಗೆ ಹೊರಗಿನ ಅರ್ಥವು ಇಲ್ಲದೆಯೇ ಗ್ರಾಹ್ಯಗ್ರಾಹಕಾಕಾರವಾಗಿ ಇರುತ್ತವೆಯೋ[1] ಹೀಗೆಯೇ ಎಚ್ಚರದಲ್ಲಿ ಕಾಣುವ ಸ್ತಂಭಾದಿಪ್ರತ್ಯಯಗಳೂ ಇರಬೇಕು ಎಂದು ನಿಶ್ಚಯಿಸಬೇಕಾಗಿದೆ. ಏಕೆಂದರೆ (ಇವೂ) ಪ್ರತ್ಯಯಗಳು ಎಂಬುದು ಸಮಾನವಾಗಿರುತ್ತದೆ.[2]

(ಆಕ್ಷೇಪ) :— ಹಾಗಾದರೆ ಹೊರಗಿನ ಅರ್ಥವು ಇಲ್ಲದಿದ್ದರೆ ಪ್ರತ್ಯಯವೈಚಿತ್ರ್ಯವು ಹೇಗೆ ಉಪಪನ್ನವಾಗುತ್ತದೆ ?

(ಪರಿಹಾರ) :— (ಬೌದ್ಧನು) ವಾಸನಾವೈಚಿತ್ರ್ಯದಿಂದ (ಇದು ಹೊಂದುತ್ತದೆ) ಎನ್ನುತ್ತಾನೆ. ಹೇಗೆಂದರೆ ಅನಾದಿಯಾದ ಸಂಸಾರದಲ್ಲಿ ಬೀಜಾಂಕುರಗಳಂತೆ ವಿಜ್ಞಾನಗಳೂ ವಾಸನೆಗಳೂ ಒಂದಕ್ಕೊಂದು ನಿಮಿತ್ತನೈಮಿತ್ತಿಕಭಾವವುಳ್ಳವಾಗಿರುವದರಿಂದ ಪ್ರತ್ಯಯವೈಚಿತ್ರ್ಯ(ವುಂಟಾಗುವದು) ವಿರುದ್ಧವಲ್ಲ.[3] ಇದಲ್ಲದೆ ಅನ್ವಯವ್ಯತಿರೇಕಗಳಿಂದ ವಾಸನಾನಿಮಿತ್ತವಾಗಿಯೇ ಜ್ಞಾನವೈಚಿತ್ರ್ಯವಾಗಿರುತ್ತದೆ ಎಂದು ನಿಶ್ಚಯಿಸಬಹುದು, ಏಕೆಂದರೆ ಸ್ವಪ್ನಾದಿಗಳಲ್ಲಿ (ಹೊರಗಿನ) ಅರ್ಥವು ಇಲ್ಲದಿದ್ದರೂ ವಾಸನಾನಿಮಿತ್ತದಿಂದ ಜ್ಞಾನವೈಚಿತ್ರ್ಯವುಂಟಾಗುವದೆಂದು ನಾವಿಬ್ಬರೂ ಒಪ್ಪಿರುತ್ತೇವೆ.[4] ಆದರೆ ವಾಸನೆಯಿಲ್ಲದೆ (ಹೊರಗಿನ) ಅರ್ಥದ ನಿಮಿತ್ತದಿಂದಲೇ ಜ್ಞಾನವೈಚಿತ್ರ್ಯ(ವಾಗುವದೆಂದು) ನಾನು ಒಪ್ಪುವದಿಲ್ಲ. ಆದ್ದರಿಂದಲೂ ಹೊರಗಿನ ಅರ್ಥವು ಇಲ್ಲ.

---

1. ಸ್ವಪ್ನಾದಿಗಳಲ್ಲಿಯೂ ಜ್ಞಾನ, ವಿಷಯ– ಎಂಬ ಭೇದವಿರುವಂತೆ ತೋರುತ್ತದೆ ; ಆದರೆ ಅಲ್ಲಿ ನಿಜವಾಗಿ ವಿಷಯವು ಬೇರೆ ಇದೆ ಎಂದು ಯಾರೂ ಒಪ್ಪುವದಿಲ್ಲ.

2. ಇದು ಅನುಮಾನವು. ಎಚ್ಚರದ ಪ್ರತ್ಯಯಗಳು ವಿಷಯಶೂನ್ಯವಾಗಿವೆ ; ಏಕೆಂದರೆ ಸ್ವಪ್ನಾದಿಪ್ರತ್ಯಯಗಳಂತೆ ಅವೂ ಪ್ರತ್ಯಯವಾಗಿರುತ್ತವೆ ಎಂಬುದು ಅದರ ಆಕಾರ.

3. ವಾಸನಾವೈಚಿತ್ರ್ಯದಿಂದ ಪ್ರತ್ಯಯವೈಚಿತ್ರ್ಯವೂ ಪ್ರತ್ಯಯವೈಚಿತ್ರ್ಯದಿಂದ ವಾಸನಾವೈಚಿತ್ರ್ಯವೂ ಸಾಲಾಗಿ ನಡೆದುಕೊಂಡು ಬಂದಿರುತ್ತವೆ ಎಂದು ಕಲ್ಪಿಸಿದರೆ ಅರ್ಥವು ಬೇಕಾಗುವದಿಲ್ಲ ಎಂದು ಭಾವ.

4. ಬೌದ್ಧರಲ್ಲಿ ಬಾಹ್ಯಾರ್ಥವನ್ನು ಒಪ್ಪಿರುವ ವೈಭಾಷಿಕರೂ ಒಪ್ಪದ ವಿಜ್ಞಾನವಾದಿಗಳೂ ಸ್ವಪ್ನಾದಿಗಳು ವಾಸನಾಮಯವೆಂಬುದನ್ನು ಒಪ್ಪುತ್ತಾರೆ.

# ವಿಜ್ಞಾನವಾದದ ಖಂಡನೆ

( ಭಾಷ್ಯ )

೫೮. ಏವಂ ಪ್ರಾಪ್ತೇ ಬ್ರೂಮಃ । ನಾಭಾವ ಉಪಲಬ್ಧೇಃ ಇತಿ । ನ ಖಲು ಅಭಾವೋ ಬಾಹ್ಯಸ್ಯ ಅರ್ಥಸ್ಯ ಅಧ್ಯವಸಾತುಂ ಶಕ್ಯತೇ । ಕಸ್ಮಾತ್? ಉಪಲಬ್ಧೇಃ । ಉಪಲಭ್ಯತೇ ಹಿ ಪ್ರತಿಪ್ರತ್ಯಯಂ ಬಾಹ್ಯೋಽರ್ಥಃ ಸ್ತಮ್ಭಃ ಕುಡ್ಯಂ ಘಟಃ ಪಟಃ ಇತಿ । ನ ಚ ಉಪಲಭ್ಯಮಾನಸ್ಯೈವ ಅಭಾವೋ ಭವಿತುಮರ್ಹತಿ । ಯಥಾ ಹಿ ಕಶ್ಚಿತ್ ಭುಞ್ಜಾನೋ ಭುಜಿಸಾಧ್ಯಾಯಾಂ ತೃಪ್ತೌ ಸ್ವಯಮ್ ಅನುಭೂಯಮಾನಾಯಾಮ್ ಏವಂ ಬ್ರೂಯಾತ್ ನಾಹಂ ಭುಞ್ಜೇ ನ ವಾ ತೃಪ್ಯಾಮಿ ಇತಿ ತದ್ವತ್ ಇನ್ದ್ರಿಯಸನ್ನಿಕರ್ಷೇಣ ಸ್ವಯಮ್ ಉಪಲಭಮಾನ ಏವ ಬಾಹ್ಯಮರ್ಥಮ್ 'ನಾಹಮ್ ಉಪಲಭೇ ನ ಚ ಸೋಽಸ್ತಿ' ಇತಿ ಬ್ರುವನ್ ಕಥಮ್ ಉಪಾದೇಯವಚನಃ ಸ್ಯಾತ್ ? ನನು ನಾಹಮ್ ಏವಂ ಬ್ರವೀಮಿ ನ ಕಿಂಚಿದರ್ಥಮ್ ಉಪಲಭೇ ಇತಿ ಕಿಂ ತು ಉಪಲಬ್ಧಿವ್ಯತಿರಿಕ್ತಂ ನೋಪಲಭೇ ಇತಿ। ಬಾಢಮ್ ಏವಂ ಬ್ರವೀಷಿ ನಿರಙ್ಕುಶತ್ವಾತ್ ತೇ ತುಣ್ಡಸ್ಯ । ನ ತು ಯುಕ್ತ್ಯುಪೇತಂ ಬ್ರವೀಷಿ । ಯತ ಉಪಲಬ್ಧಿವ್ಯತಿರೇಕೋಽಪಿ ಬಲಾತ್ ಅರ್ಥಸ್ಯ ಅಭ್ಯುಪಗನ್ತವ್ಯಃ ಉಪಲಬ್ಧೇರೇವ । ನ ಹಿ ಕಶ್ಚಿತ್ ಉಪಲಬ್ಧಿಮೇವ ಸ್ತಮ್ಭಃ ಕುಡ್ಯಂ ಚ ಇತ್ಯುಪಲಭತೇ । ಉಪಲಬ್ಧಿವಿಷಯತ್ವೇನೈವ ತು ಸ್ತಮ್ಭಕುಡ್ಯಾದೀನ್ ಸರ್ವೇ ಲೌಕಿಕಾ ಉಪಲಭನ್ತೇ। ಅತಶ್ಚ ಏವಮೇವ ಸರ್ವೇ ಲೌಕಿಕಾಃ ಉಪಲಭನ್ತೇ ಯತ್ ಪ್ರತ್ಯಾಚಕ್ಷಾಣಾ ಅಪಿ ಬಾಹ್ಯಾರ್ಥಮ್ ಏವಂ ವ್ಯಾಚಕ್ಷತೇ 'ಯದನ್ತರ್ಜ್ಞೇಯರೂಪಂ ತದ್ಬಹಿರ್ವದವಭಾಸತೇ '[1] (?) ಇತಿ । ತೇಽಪಿ ಸರ್ವಲೋಕಪ್ರಸಿದ್ಧಾಂ ಬಹಿರವಭಾಸಮಾನಾಂ ಸಂವಿದಂ ಪ್ರತಿಲಭಮಾನಾಃ ಪ್ರತ್ಯಾಖ್ಯಾತುಕಾಮಾಶ್ಚ ಬಾಹ್ಯಮರ್ಥಂ 'ಬಹಿರ್ವತ್' ಇತಿ ವತ್ಕಾರಂ ಕುರ್ವನ್ತಿ । ಇತರಥಾ ಹಿ ಕಸ್ಮಾತ್ 'ಬಹಿರ್ವತ್' ಇತಿ ಬ್ರೂಯುಃ ? ನ ಹಿ ವಿಷ್ಣುಮಿತ್ರಃ ವನ್ಧ್ಯಾಪುತ್ರವತ್ ಅವಭಾಸತೇ ಇತಿ ಕಶ್ಚಿತ್ ಆಚಕ್ಷೀತ। ತಸ್ಮಾತ್ ಯಥಾನುಭವಂ ತತ್ತ್ವಮಭ್ಯುಪಗಚ್ಛದ್ಭಿಃ ಬಹಿರೇವ ಅವಭಾಸತೇ ಇತಿ ಯುಕ್ತಮ್ ಅಭ್ಯುಪಗನ್ತುಮ್, ನ ತು ಬಹಿರ್ವತ್ ಅವಭಾಸತೇ ಇತಿ । ನನು ಬಾಹ್ಯಸ್ಯ ಅರ್ಥಸ್ಯ ಅಸಂಭವಾತ್ ಬಹಿರ್ವತ್ ಅವಭಾಸತೇ ಇತಿ ಅಧ್ಯವಸಿತಮ್ । ನಾಯಂ ಸಾಧುರಧ್ಯವಸಾಯಃ। ಯತಃ ಪ್ರಮಾಣಪ್ರವೃತ್ತ್ಯಪ್ರವೃತ್ತಿಪೂರ್ವಕೌ ಸಂಭವಾಸಂಭವೌ ಅವ

1. 'ಯದನ್ತರ್ಜ್ಞೇಯರೂಪಂ ತು ಬಹಿರ್ವದವಭಾಸತೇ' ಎಂದು ದಿಙ್ನಾಗಕೃತ. 'ಆಲಂಬನಪರೀಕ್ಷಾ' ಎಂಬ ಗ್ರಂಥದಲ್ಲಿರುವದಾಗಿ ಅಡಿಯಾರ್‌ನಲ್ಲಿ ಪ್ರಕಟವಾದ ಪುಸ್ತಕದಿಂದ ತಿಳಿದುಬಂದಿದೆ.

ಧಾರ್ಯೇತೇ ನ ಪುನಃ ಸಂಭವಾಸಂಭವಪೂರ್ವಿಕೇ ಪ್ರಮಾಣಪ್ರವೃತ್ತ್ಯ ಪ್ರವೃತ್ತೀ| ಯದ್ ಹಿ ಪ್ರತ್ಯಕ್ಷಾದೀನಾಮ್ ಅನ್ಯತಮೇನಾಪಿ ಪ್ರಮಾಣೇನ ಉಪಲಭ್ಯತೇ ತತ್ ಸಂಭವತಿ । ಯತ್ತು ನ ಕೇನಚಿದಪಿ ಪ್ರಮಾಣೇನ ಉಪಲಭ್ಯತೇ ತತ್ ನ ಸಂಭವತಿ | ಇಹ ತು ಯಥಾಸ್ವಂ ಸರ್ವೈರೇವ ಪ್ರಮಾಣೈಃ ಬಾಹ್ಯೋಽರ್ಥಃ ಉಪಲಭ್ಯಮಾನಃ ಕಥಂ ವ್ಯತಿರೇಕಾವ್ಯತಿರೇಕಾದಿವಿಕಲ್ಪೈಃ ನ ಸಂಭವತಿ ಇತ್ಯುಚ್ಯೇತ? ಉಪಲಬ್ಧೇರೇವ | ನ ಚ ಜ್ಞಾನಸ್ಯ ವಿಷಯಸಾರೂಪ್ಯಾದ್ ವಿಷಯನಾಶೋ ಭವತಿ| ಅಸತಿ ವಿಷಯೇ ವಿಷಯಸಾರೂಪ್ಯಾನುಪಪತ್ತೇಃ | ಬಹಿರುಪಲಬ್ಧೇಶ್ಚ ವಿಷಯಸ್ಯ | ಅತ ಏವ ಸಹೋಪಲಮ್ಭನಿಯಮೋಽಪಿ ಪ್ರತ್ಯಯವಿಷಯಯೋಃ ಉಪಾಯೋಪೇಯಭಾವಹೇತುಕಃ ನಾಭೇದಹೇತುಃ ಇತಿ ಅಭ್ಯುಪಗನ್ತವ್ಯಮ್ ॥

( ಭಾಷ್ಯಾರ್ಥ )

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ 'ನಾಭಾವ ಉಪಲಬ್ಧೇಃ' (ಅಭಾವವಿಲ್ಲ, ಏಕೆಂದರೆ ಕಾಣಬರುತ್ತಿದೆ) ಎಂಬ (ಸಿದ್ಧಾಂತ)ವನ್ನು ಹೇಳಿರುತ್ತದೆ. (ಇದರ ವಿವರ) : ಹೊರಗಿನ ಅರ್ಥದ ಅಭಾವವನ್ನು ನಿಶ್ಚಯಿಸುವದಕ್ಕೆ ಆಗಲಾರದು. ಏಕೆ? ಎಂದರೆ ಕಾಣಬರುವದರಿಂದ. ಒಂದೊಂದು ಪ್ರತ್ಯಯದಲ್ಲಿಯೂ ಕಂಬ, ಗೋಡೆ, ಗಡಿಗೆ, ಬಟ್ಟೆ– ಎಂದು ಹೊರಗಿನ ಅರ್ಥವು ಕಾಣಬರುತ್ತದೆಯಲ್ಲವೆ ? (ಹೀಗೆ) ಕಂಡುಬರುತ್ತಿರುವದೇ ಇಲ್ಲ ಎನ್ನುವದು ಸರಿಯಲ್ಲ. ಹೇಗೆ ಯಾವನಾದರೊಬ್ಬನು ಊಟಮಾಡುತ್ತಿದ್ದು ಊಟದಿಂದ ಸಾಧ್ಯವಾದ ತೃಪ್ತಿಯು ತನಗೇ ಅನುಭವಕ್ಕೆ ಬರುತ್ತಿದ್ದರೂ 'ನಾನು ಊಟ ಮಾಡುತ್ತಿಲ್ಲ, ನನಗೆ ತೃಪ್ತಿಯೂ ಆಗುತ್ತಿಲ್ಲ' ಎಂದಿಂತು ಹೇಳಬಹುದೋ ಹಾಗೆ ಇಂದ್ರಿಯಸಂನಿಕರ್ಷದಿಂದ ಹೊರಗಿನ ಅರ್ಥವನ್ನು ತಾನೇ ಕಾಣುತ್ತಿದ್ದರೂ 'ನಾನು ಕಾಣುತ್ತಲೂ ಇಲ್ಲ ; ಅದು ಇಲ್ಲವೂ ಇಲ್ಲ' ಎಂದು ಹೇಳುತ್ತಿರುವವನ ಮಾತನ್ನು ಹೇಗೆತಾನೆ ಸ್ವೀಕರಿಸುವದಕ್ಕೆ ಆದೀತು ?

(ಬೌದ್ಧ) :— 'ಯಾವದೊಂದು ಅರ್ಥವನ್ನೂ (ನಾನು ಕಾಣುತ್ತಿಲ್ಲ' ಎಂದಿಂತು ನಾನು ಹೇಳುತ್ತಿಲ್ಲವಲ್ಲ ! ಉಪಲಬ್ಧಿ (ಅರಿವು)ಗಿಂತ ಬೇರೆಯಾಗಿ ಕಾಣುತ್ತಿಲ್ಲ ಎಂದು (ಮಾತ್ರ) ಹೇಳುತ್ತೇನಲ್ಲ !

(ಸಿದ್ಧಾಂತಿ) :— ನಿಜ, ಹೀಗೆಂದೇ ಹೇಳುತ್ತಿದ್ದೀಯೆ ; ಏಕೆಂದರೆ ನಿನ್ನ ಬಾಯಿಗೆ ಯಾವ ಅಂಕುಶವೂ ಇಲ್ಲ. ಆದರೆ ಯುಕ್ತಿಯುಕ್ತವಾದದ್ದನ್ನು ಹೇಳುತ್ತಿಲ್ಲ. ಹೇಗೆಂದರೆ ಅರ್ಥವು ಉಪಲಬ್ಧಿಗಿಂತ ಬೇರೆ ಎಂಬುದನ್ನು ಬಲಾತ್ಕಾರದಿಂದ ಒಪ್ಪಲೇಬೇಕು ; ಏಕೆಂದರೆ ಅದೂ ಕಂಡೇಬರುತ್ತಿದೆ. ಉಪಲಬ್ಧಿಯೇ ಕಂಬವು, ಗೋಡೆಯು– ಎಂದು ಯಾವನೂ ಕಾಣುತ್ತಿಲ್ಲ ; ಉಪ

ಲಬ್ಧಿಗೆ ವಿಷಯವೆಂದೇ ಕಂಬ, ಗೋಡೆ– ಮುಂತಾದವನ್ನು ಎಲ್ಲಾ ಜನರೂ ಕಾಣುತ್ತಿರುವರು. ಈ (ಕಾರಣ)ದಿಂದಲೂ ಎಲ್ಲ ಜನರೂ ಹೀಗೆಯೇ ಕಾಣುತ್ತಿದಾರೆನ್ನಬೇಕು; ಏಕೆಂದರೆ ಹೊರಗಿನ ಅರ್ಥವನ್ನು ಅಲ್ಲಗಳೆಯುವವರೂ 'ಒಳಗೆ ಜ್ಞೇಯರೂಪವಿದೆಯಲ್ಲ, ಅದು ಹೊರಗಿರುವಂತೆ ಕಾಣಿಸುತ್ತದೆ' ಎಂದಿಂತು ಹೇಳುತ್ತಾರೆ. ಅವರೂ ಸರ್ವಲೋಕಪ್ರಸಿದ್ಧವಾಗಿರುವ ಹೊರಗಿನ (ಪದಾರ್ಥವನ್ನು) ತೋರಿಸುವ ಜ್ಞಾನವನ್ನು ಕಂಡು, ಹೊರಗಿನ ಪದಾರ್ಥವನ್ನು ಇಲ್ಲವೆನ್ನಬೇಕೆಂಬ ಇಚ್ಛೆಯುಳ್ಳವರಾಗಿರುವದರಿಂದ ಹೊರಗಿರುವಂತೆ (ಬಹಿರ್ವತ್) ಎಂದು ಅಂತೆಶಬ್ದವನ್ನು ಪ್ರಯೋಗಿಸುತ್ತಿರುತ್ತಾರೆ. ಹಾಗಿಲ್ಲದಿದ್ದರೆ 'ಹೊರಗಿರುವಂತೆ' ಎಂದು ಏಕೆತಾನೆ ಹೇಳಿಯಾರು ! 'ವಿಷ್ಣುಮಿತ್ರನು ವಂಧ್ಯಾಪುತ್ರನಂತೆ ತೋರುತ್ತಾನೆ' ಎಂದು ಯಾವನೂ ಹೇಳಲಾರನಷ್ಟೆ ? ಆದ್ದರಿಂದ ಅನುಭವಕ್ಕನುಸಾರವಾಗಿ ತತ್ತ್ವವನ್ನು ಒಪ್ಪುವವರು ಹೊರಗೇ ತೋರುತ್ತದೆ ಎಂದು ಒಪ್ಪುವದು ಯುಕ್ತವೇ ಹೊರತು ಹೊರಗಿರುವಂತೆ ತೋರುತ್ತದೆ ಎಂದು (ಹೇಳುವದು ಯುಕ್ತ)ವಲ್ಲ.

(ವಿಜ್ಞಾನವಾದಿ) :— ಹೊರಗಿನ ವಸ್ತು ಸಂಭವಿಸುವದಿಲ್ಲವಾದ್ದರಿಂದ ಹೊರಗಿರುವಂತೆ ಎಂದು ನಿರ್ಣಯಿಸಿದೆವಲ್ಲ !

(ಸಿದ್ಧಾಂತಿ) :— ಇದು ಸರಿಯಾದ ನಿರ್ಣಯವಲ್ಲ. ಏಕೆಂದರೆ **ಪ್ರಮಾಣದ ಪ್ರವೃತ್ತಿ, ಅಪ್ರವೃತ್ತಿ– ಇವುಗಳ ಮೂಲಕವೇ ಸಂಭವ, ಅಸಂಭವ –ಇವನ್ನು ನಿರ್ಣಯಿಸಬೇಕೇ ಹೊರತು ಸಂಭವ, ಅಸಂಭವ –ಇವುಗಳಿಂದ ಪ್ರಮಾಣದ ಪ್ರವೃತ್ತಿ, ಅಪ್ರವೃತ್ತಿ – ಇವುಗಳನ್ನು (ನಿರ್ಣಯಿಸತಕ್ಕ)ದ್ದಲ್ಲ.**[1] (ಇದರ ವಿವರ) : ಯಾವದು ಪ್ರತ್ಯಕ್ಷವೇ ಮುಂತಾದವುಗಳಲ್ಲಿ ಯಾವದಾದರೊಂದು ಪ್ರಮಾಣದಿಂದಲಾದರೂ ಕಾಣಬರುವದೋ ಅದು ಸಂಭವಿಸುತ್ತದೆ; ಆದರೆ ಯಾವದು ಯಾವದೊಂದು ಪ್ರಮಾಣದಿಂದಲೂ ಕಾಣಬರುವದಿಲ್ಲವೋ ಅದು ಸಂಭವಿಸುವದಿಲ್ಲ. ಇಲ್ಲಿ ಯಾದರೋ ಆಯಾ (ವಸ್ತುವಿಗೆ) ತಕ್ಕಂತೆ ಎಲ್ಲಾ ಪ್ರಮಾಣಗಳಿಂದಲೂ ಹೊರಗಿನ ಅರ್ಥವು ಕಾಣಬರುವದರಿಂದ 'ಬೇರೆ', 'ಬೇರೆಯಲ್ಲ' –ಮುಂತಾದ ವಿಕಲ್ಪಗಳಿಂದ (ಅದು) ಸಂಭವಿಸುವದಿಲ್ಲ ಎನ್ನುವದು ಹೇಗೆ? ಅದು ಕಾಣಬರು

1. ಪ್ರಮಾಣಾನುಸಾರವಾಗಿ ಯುಕ್ತಿಯನ್ನು ಮಾಡಬೇಕೇ ಹೊರತು ಶುಷ್ಕ ತರ್ಕಕ್ಕೆ ಪ್ರಮಾಣವನ್ನು ಹೊಂದಿಸುವದಕ್ಕೆ ಹೋಗಬಾರದು ಎಂದರ್ಥ. ಅದ್ವೈತಿಗಳು ಪ್ರಮಾಣವ್ಯವಹಾರವು ಆವಿದ್ಯಕವೆಂದು ನಿಶ್ಚಯಿಸುವದಕ್ಕೂ ಅನುಭವದ ಆಧಾರವಿರುವದರಿಂದ ಅವರು ಬರಿಯ ಯುಕ್ತಿಯಿಂದ ಪ್ರಮಾಣವನ್ನು ತಳ್ಳಿದವರಾಗುವದಿಲ್ಲವೆಂದು ತಿಳಿಯಬೇಕು.

ತ್ತದೆಯಾದ್ದರಿಂದಲೇ (ಹಾಗೆನ್ನುವದು ಆಗಲಾರದು).[1] ಜ್ಞಾನವು ವಿಷಯದ ಸಾರೂಪ್ಯವನ್ನು ಪಡೆಯುತ್ತದೆ (ಎಂದಮಾತ್ರದಿಂದ) ವಿಷಯದ ನಾಶವಾಗುವದೂ ಇಲ್ಲ. ಏಕೆಂದರೆ ವಿಷಯವಿಲ್ಲದಿದ್ದರೆ ವಿಷಯಸಾರೂಪ್ಯವೆಂಬುದೇ ಹೊಂದುವದಿಲ್ಲ. ವಿಷಯವು ಹೊರಗೆ ಕಾಣಬರುವದರಿಂದಲೂ (ಹೀಗೆಂದು ತಿಳಿಯಬೇಕು).[2] ಆದ್ದರಿಂದಲೇ ಪ್ರತ್ಯಯವಿಷಯಗಳು ಜೊತೆಯಲ್ಲಿ ಕಾಣಬರುವವೆಂಬ ನಿಯಮವೂ ಉಪಾಯೋಪೇಯಭಾವವೆಂಬ ಕಾರಣದಿಂದಾವದ್ದೇ[3] ಹೊರತು ಅಭೇದವೆಂಬ ಕಾರಣದಿಂದ ಆದದ್ದಲ್ಲವೆಂದು ಒಪ್ಪಬೇಕು.

## ಜ್ಞಾನಾರ್ಥಗಳು ಬೇರೆ ಬೇರೆ ಇವೆ

( ಭಾಷ್ಯ )

೫೯. ಅಪಿ ಚ ಘಟಜ್ಞಾನಮ್, ಪಟಜ್ಞಾನಮ್– ಇತಿ ವಿಶೇಷಣಯೋರೇವ ಘಟಪಟಯೋಃ ಭೇದಃ ನ ವಿಶೇಷ್ಯಸ್ಯ ಜ್ಞಾನಸ್ಯ। ಯಥಾ ಶುಕ್ಲೋ ಗೌಃ ಕೃಷ್ಣೋ ಗೌಃ ಇತಿ ಶೌಕ್ಲ್ಯ ಕಾರ್ಷ್ಣ್ಯಯೋರೇವ ಭೇದಃ ನ ಗೋತ್ವಸ್ಯ। ದ್ವಾಭ್ಯಾಂ ಚ ಭೇದಃ ಏಕಸ್ಯ ಸಿದ್ಧೋ ಭವತಿ। ಏಕಸ್ಮಾಚ್ಚ ದ್ವಯೋಃ। ತಸ್ಮಾತ್ ಅರ್ಥಜ್ಞಾನಯೋರ್ಭೇದಃ। ತಥಾ ಘಟದರ್ಶನಮ್, ಘಟಸ್ಮರಣಮ್ ಇತ್ಯತ್ರಾಪಿ ಪ್ರತಿಪತ್ತವ್ಯಮ್। ಅತ್ರಾಪಿ ಹಿ ವಿಶೇಷ್ಯಯೋರೇವ ದರ್ಶನಸ್ಮರಣಯೋರ್ಭೇದಃ, ನ ವಿಶೇಷಣಸ್ಯ ಘಟಸ್ಯ। ಯಥಾ ಕ್ಷೀರಗನ್ಧಃ ಕ್ಷೀರರಸಃ ಇತಿ ವಿಶೇಷ್ಯಯೋರೇವ ಗನ್ಧರಸಯೋರ್ಭೇದಃ, ನ ವಿಶೇಷಣಸ್ಯ ಕ್ಷೀರಸ್ಯ ತದ್ವತ್। ಅಪಿ ಚ ದ್ವಯೋರ್ವಿಜ್ಞಾನಯೋಃ ಪೂರ್ವೋತ್ತರಕಾಲಯೋಃ ಸ್ವಸಂವೇದನೇನೈವ ಉಪಕ್ಷೀಣಯೋಃ ಇತರೇತರಗ್ರಾಹ್ಯಗ್ರಾಹಕತ್ವಾನುಪಪತ್ತಿಃ। ತತಶ್ಚ ವಿಜ್ಞಾನಭೇದಪ್ರತಿಜ್ಞಾ ಕ್ಷಣಿಕತ್ವಾದಿಧರ್ಮಪ್ರತಿಜ್ಞಾ ಸ್ವಲಕ್ಷಣಸಾಮಾನ್ಯಲಕ್ಷಣವಾಸ್ಯವಾಸಕತ್ವಾವಿದ್ಯೋಪಪ್ಲವಸದಸದ್ಧರ್ಮಬನ್ಧಮೋಕ್ಷಾದಿಪ್ರತಿಜ್ಞಾಶ್ಚ ಸ್ವ ಶಾ ಸ್ತ್ರ ಗ ತಾ ಸ್ತಾಃ ಹೀಯೇರನ್। ಕಿಂ ಚಾನ್ಯತ್। ವಿ ಜ್ಞಾ ನ ಮ್, ವಿ ಜ್ಞಾ ನ ಮ್– ಇತಿ ಅಭ್ಯುಪಗಚ್ಛತಾ ಬಾಹ್ಯೋಽರ್ಥಃ ಸ್ತಮ್ಭಃ ಕುಡ್ಯಮ್ ಇತ್ಯೇವಂಜಾತೀಯಕಃ ಕಸ್ಮಾತ್ ನಾಭ್ಯುಪಗಮ್ಯತೇ?– ಇತಿ ವಕ್ತವ್ಯಮ್ । ವಿಜ್ಞಾನಮ್ ಅನುಭೂಯತೇ

1. ಜ್ಞಾನಕ್ಕೆ ವಿಷಯವಾದದ್ದು ಇದೆ ಎನ್ನುವವರ ದೃಷ್ಟಿಯಿಂದ ಈ ಯುಕ್ತಿಯನ್ನು ಉದಾಹರಿಸಿದೆ. ಇರುವದೆಲ್ಲ ಜ್ಞಾನಕ್ಕೆ ವಿಷಯವಾಗಿರಬೇಕೆಂದೇನೂ ಇದರಿಂದ ಸಿದ್ಧವಾಗುವದಿಲ್ಲ.

2. ವಿಷಯವು ಆಕಾರಕ್ಕೆ ಕಾರಣ, ಆಕಾರವು ಕಾರ್ಯ; ವಿಷಯವು ಹೊರಗಿದೆ ಜ್ಞಾನವು ಒಳಗಿದೆ. ಆದ್ದರಿಂದ ಅವೆರಡೂ ಬೇರೆಬೇರೆ ಎಂದಾಯಿತು.

3. ಜ್ಞಾನವೆಂಬ ಉಪಾಯದಿಂದ ವಿಷಯವೆಂಬ ಉಪೇಯವನ್ನು ಸಾಧಿಸುತ್ತೇವೆ.

ಇತಿ ಚೇತ್.| ಬಾಹ್ಯೋಽಪ್ಯರ್ಥಃ ಅನುಭೂಯತ ಏವ ಇತಿ ಯುಕ್ತಿವತ್ ಅಭ್ಯುಪಗನ್ತುಮ್ | ಅಥ ವಿಜ್ಞಾನಂ ಪ್ರಕಾಶಾತ್ಮಕತ್ವಾತ್ ಪ್ರದೀಪವತ್ ಸ್ವಯಮೇವ ಅನುಭೂಯತೇ ನ ತಥಾ ಬಾಹ್ಯೋಽಪ್ಯರ್ಥಃ ಇತಿ ಚೇತ್ | ಅತ್ಯನ್ತವಿರುದ್ಧಾಂ ಸ್ವಾತ್ಮನಿ ಕ್ರಿಯಾಮ್ ಅಭ್ಯುಪಗಚ್ಛಸಿ, 'ಅಗ್ನಿರಾತ್ಮಾನಂ ದಹತಿ' ಇತಿವತ್, ಅವಿರುದ್ಧಂ ತು ಲೋಕಪ್ರಸಿದ್ಧಂ ಸ್ವಾತ್ಮವ್ಯತಿರಿಕ್ತೇನ ವಿಜ್ಞಾನೇನ ಬಾಹ್ಯೋಽರ್ಥಃ ಅನುಭೂಯತೇ ಇತಿ ನೇಚ್ಛಸಿ | ಅಹೋ ಪಾಣ್ಡಿತ್ಯಂ ಮಹದ್ ದರ್ಶಿತಮ್ | ನ ಚ ಅರ್ಥಾವ್ಯತಿರಿಕ್ತಮಪಿ ವಿಜ್ಞಾನಂ ಸ್ವಯಮೇವ ಅನುಭೂಯತೇ | ಸ್ವಾತ್ಮನಿ ಕ್ರಿಯಾವಿರೋಧಾದೇವ ||

(ಭಾಷ್ಯಾರ್ಥ)

ಇದಲ್ಲದೆ 'ಘಟಜ್ಞಾನ', 'ಪಟಜ್ಞಾನ'– ಎಂಬಲ್ಲಿ, ವಿಶೇಷಣವಾದ ಘಟಪಟಗಳಿಗೇ ಭೇದವೇ ಹೊರತು ವಿಶೇಷ್ಯವಾದ ಜ್ಞಾನಕ್ಕಿಲ್ಲ. ಹೇಗೆ 'ಬಿಳಿಯ ಎತ್ತು', 'ಕರಿಯ ಎತ್ತು' ಎಂಬಲ್ಲಿ ಬಿಳುಪು, ಕಪ್ಪು– ಇವುಗಳಿಗೇ ಭೇದವೇ ಹೊರತು ಗೋತ್ವದಲ್ಲಿ ಭೇದವಿಲ್ಲವೋ (ಹಾಗೆ). ಎರಡು (ಪದಾರ್ಥ) ಗಳಿಗಿಂತ ಒಂದಾದದ್ದು ಬೇರೆ ಎಂದು ಸಿದ್ಧವಾಗುತ್ತದೆ, ಒಂದಕ್ಕಿಂತ ಎರಡಾಗಿರುವ (ಪದಾರ್ಥ)ಗಳು (ಬೇರೆಯೆಂದೂ ಸಿದ್ಧವಾಗುತ್ತದೆ). ಆದ್ದರಿಂದ ಅರ್ಥಜ್ಞಾನಗಳಿಗೆ ಭೇದವಿದೆ[1]. ಘಟದರ್ಶನ,ಘಟಸ್ಮರಣ– ಎಂಬಲ್ಲಿಯೂ ಹೀಗೆಯೇ ತಿಳಿಯಬೇಕು. ಏಕೆಂದರೆ ಇಲ್ಲಿಯೂ ವಿಶೇಷ್ಯವಾಗಿರುವ ದರ್ಶನಸ್ಮರಣಗಳೆಂಬ ವಿಶೇಷ್ಯಗಳಿಗೇ ಭೇದವಿರುವದೇ ಹೊರತು ವಿಶೇಷಣವಾದ ಘಟಕ್ಕಿಲ್ಲ. ಹೇಗೆ ಹಾಲಿನ ವಾಸನೆ, ಹಾಲಿನ ಸವಿ– ಎಂಬಲ್ಲಿ ವಿಶೇಷ್ಯಗಳಾಗಿರುವ ವಾಸನೆಸವಿಗಳಿಗೇ ಭೇದವಿರುವದೇ ಹೊರತು ವಿಶೇಷಣವಾದ ಹಾಲಿಗಿಲ್ಲವೋ, ಹಾಗೆ.

ಇದಲ್ಲದೆ ಹಿಂದಿನ ಮುಂದಿನ ಕಾಲದಲ್ಲಿರುವ ಎರಡು ವಿಜ್ಞಾನಗಳೂ ತಮ್ಮನ್ನು ತಾವು ಅರಿಯುವದರಲ್ಲಿಯೇ ಮುಗಿಯುವದರಿಂದ[2] ಒಂದ ಕ್ಕೊಂದಕ್ಕೆ ಗ್ರಾಹ್ಯಗ್ರಾಹಕಭಾವವು ಆಗುವ ಹಾಗಿಲ್ಲ[3]. ಮತ್ತು ಹೀಗಿರುವದ

1. ಘಟ, ಪಟ– ಎರಡು ; ಜ್ಞಾನವು ಒಂದು. ಆದ್ದರಿಂದ ಘಟಪಟಗಳಿಗಿಂತ ಜ್ಞಾನವೂ ಜ್ಞಾನಕ್ಕಿಂತ ಘಟಪಟಗಳೂ ಬೇರೆ ಬೇರೆ ಎಂದಾಯಿತು ಎಂದರ್ಥ.

2. ವಿಜ್ಞಾನವು ಸ್ವಯಂಪ್ರಕಾಶವು, ಎಂದರೆ ತನ್ನನ್ನು ತಾನೇ ಅರಿಯುತ್ತದೆ; ಅದು ತನಗಿಂತ ಬೇರೆಯ ಪದಾರ್ಥವನ್ನು ಅರಿಯುವದಿಲ್ಲ– ಎಂಬ ವಿಜ್ಞಾನವಾದದಲ್ಲಿ ದೋಷವನ್ನು ಹೇಳುವದಕ್ಕೆ ಉಪಕ್ರಮಿಸಿರುತ್ತಾರೆ.

3. ಏಕೆಂದರೆ ಅವು ಒಂದಕ್ಕಿಂತ ಒಂದು ಬೇರೆಬೇರೆಯ ಕಾಲದಲ್ಲಿರುವ ಬೇರೆ ಬೇರೆ ಜ್ಞಾನಗಳು.

ರಿಂದ ವಿಜ್ಞಾನಗಳು ಬೇರೆಬೇರೆ ಎಂಬ ಪ್ರತಿಜ್ಞೆ, (ಅವಕ್ಕೆ) ಕ್ಷಣಿಕತ್ವವೇ ಮುಂತಾದ ಧರ್ಮಗಳಿವೆ ಎಂಬ ಪ್ರತಿಜ್ಞೆ, ಸ್ವಲಕ್ಷಣಸಾಮಾನ್ಯಲಕ್ಷಣ[1] ವಾಸ್ಯವಾಸಕತ್ವ.[2] ಅವಿದ್ಯೋಪ್ಲವ,[3] ಸದಸದ್ಧರ್ಮ[4] ಬಂಧಮೋಕ್ಷಗಳು ಮುಂತಾದ[5] ಸ್ವಶಾಸ್ತ್ರಗತವಾದ ಪ್ರತಿಜ್ಞೆಗಳಿರುವವಲ್ಲ, ಅವನ್ನು ಬಿಡಬೇಕಾಗುವದು.[6]

ಇದೂ ಅಲ್ಲದೆ 'ವಿಜ್ಞಾನ', 'ವಿಜ್ಞಾನ'– ಎಂದು ಒಪ್ಪಿರುವ (ನೀನು) ಕಂಬ, ಗೋಡೆ– ಎಂಬೀ ಜಾತಿಯ ಹೊರಗಿನ ವಸ್ತುವನ್ನು ಏತಕ್ಕೆ ಒಪ್ಪುವದಿಲ್ಲ ?– ಎಂಬುದನ್ನು ಹೇಳಬೇಕು.

(ವಿಜ್ಞಾನವಾದಿ) :— (ಏಕೆಂದರೆ) ವಿಜ್ಞಾನವು ಅನುಭವದಲ್ಲಿದೆ.

(ಸಿದ್ಧಾಂತಿ) :— ಹೊರಗಿನ ಅರ್ಥವೂ ಅನುಭವದಲ್ಲಿಯೇ ಇದೆಯಾದ್ದರಿಂದ (ಅದನ್ನೂ) ಒಪ್ಪುವದು ಯುಕ್ತ.

(ವಿಜ್ಞಾನವಾದಿ) :— (ಹಾಗಲ್ಲ). ವಿಜ್ಞಾನವು ಪ್ರದೀಪದಂತೆ ಪ್ರಕಾಶಾತ್ಮಕವಾಗಿರುವ ತಾನೇ (ತನ್ನ) ಅನುಭವಕ್ಕೆ ಬರುತ್ತದೆ ; (ಆದರೆ) ಹೊರಗಿನ ಅರ್ಥವೂ ಹಾಗೆ (ಅನುಭವಕ್ಕೆ) ಬರುವದಿಲ್ಲವಲ್ಲ !

(ಸಿದ್ಧಾಂತಿ):– 'ಬೆಂಕಿಯು ತನ್ನನ್ನೇ (ತಾನು) ಸುಡುತ್ತದೆ' ಎಂಬಂತೆ ಅತ್ಯಂತವಿರುದ್ಧವಾದ ತನ್ನಲ್ಲಿಯೇ ತನ್ನ ಕ್ರಿಯೆಯು (ವ್ಯಾಪಿಸಿರುವದೆಂಬುದನ್ನು) ಒಪ್ಪಿರುತ್ತೀಯೆ, ಆದರೆ (ಯಾವ) ವಿರೋಧವೂ ಇಲ್ಲದೆ ಲೋಕಸಿದ್ಧ

---

1 ಸ್ವಲಕ್ಷಣ ಎಂದರೆ ತನ್ನ ಅಸಾಧಾರಣವಾದ ಲಕ್ಷಣವು, ಮಿಕ್ಕ ಎಲ್ಲದ್ದಕ್ಕಿಂತಲೂ ಬೇರೆಯಾಗಿರುವ ರೂಪವು. ಸಾಮಾನ್ಯಲಕ್ಷಣವೆಂದರೆ ಎಲ್ಲಾ ವ್ಯಕ್ತಿಗಳಿಗೂ ಸಮಾನವಾಗಿರುವ ಗೋತ್ವಾದಿರೂಪವು, ಅಥವಾ ಅನ್ಯಾಪೋಹರೂಪವು.

2. ಹಿಂದಿನ ಜ್ಞಾನವು ವಾಸಕ, ಮುಂದಿನ ಜ್ಞಾನವು ವಾಸ್ಯ ; ಹಿಂದಿನ ಜ್ಞಾನದ ವಾಸನೆಯು ಮುಂದಿನ ಜ್ಞಾನದಲ್ಲಿರುತ್ತದೆ.

3. ಅವಿದ್ಯಾಸಂಬಂಧ.

4. ನೀಲ ಎಂಬುದು ಸದ್ಧರ್ಮ, ನರವಿಷಾಣ ಎಂಬುದು ಅಸದ್ಧರ್ಮ.

5. ಪ್ರತಿಪಾದಿಸುವ ತಾನು, ಪ್ರತಿಪಾದ್ಯವಿಷಯ, ಅದನ್ನು ಅರಿತುಕೊಳ್ಳಬೇಕಾದ ಮತ್ತೊಬ್ಬನು ; ಪ್ರತಿಜ್ಞೆ, ಹೇತು, ದೃಷ್ಟಾಂತ– ಮುಂತಾದವುಗಳನ್ನು 'ಮುಂತಾದ' ಎಂಬ ಶಬ್ದದಿಂದ ಅರಿಯಬೇಕು.

6. ಏಕೆಂದರೆ ಇವುಗಳಲ್ಲೆಲ್ಲ ಅನೇಕ ಪದಾರ್ಥಗಳ ಜ್ಞಾನವು ಅವಶ್ಯವಾಗುತ್ತದೆ ವಿಜ್ಞಾನವು ಕ್ಷಣಿಕವಾಗಿದ್ದು ತನ್ನ ಸ್ವರೂಪಕ್ಕಿಂತ ಬೇರೆ ಯಾವದನ್ನೂ ಅರಿಯುವಂತಿಲ್ಲ. ವಾದ್ದರಿಂದಲೂ ವಿಜ್ಞಾನಕ್ಕಿಂತ ವ್ಯತಿರಿಕ್ತವಾದ ವಿಜ್ಞಾತೃವನ್ನು ಈ ವಾದಿಯು ಒಪ್ಪಿಲ್ಲವಾದ್ದರಿಂದಲೂ ಈ ಪ್ರತಿಜ್ಞೆಗಳನ್ನೆಲ್ಲ ಕೈಬಿಡಬೇಕಾಗುವದು ಎಂದು ಅಭಿಪ್ರಾಯ.

ವಾಗಿರುವ ಹೊರಗಿನ ಅರ್ಥವು ತನ್ನ ಸ್ವರೂಪಕ್ಕಿಂತ ಬೇರೆಯಾದ ವಿಜ್ಞಾನ ದಿಂದ ತಿಳಿಯಬರುತ್ತದೆ ಎಂಬುದನ್ನು ಒಪ್ಪುವದಿಲ್ಲವಲ್ಲ ! ಆಹ ! (ನೀನು) ದೊಡ್ಡ ಪಾಂಡಿತ್ಯವನ್ನು ತೋರಿಸಿಕೊಂಡಂತಾಯಿತು ! ಅರ್ಥಕ್ಕಿಂತ ವ್ಯತಿರಿಕ್ತ ವಲ್ಲದ ವಿಜ್ಞಾನವು ತಾನೇ (ತನ್ನಿಂದ) ಅನುಭೂತವಾಗುತ್ತದೆ ಎಂಬುದೂ ಇಲ್ಲ. ಏಕೆಂದರೆ ತನ್ನಲ್ಲಿ (ತನ್ನ) ಕ್ರಿಯೆಯು (ವ್ಯಾಪಿಸುವದೆಂಬುದು) ವಿರುದ್ಧವಾಗಿ ರುವದರಿಂದಲೇ (ಹೀಗೆಂದು ನಿಶ್ಚಯವಾಗುತ್ತದೆ).[1]

## ವಿಜ್ಞಾನವು ಸ್ವವ್ಯತಿರಿಕ್ತಸಾಕ್ಷಿಗ್ರಾಹ್ಯ

( ಭಾಷ್ಯ )

೬೦. ನನು ವಿಜ್ಞಾನಸ್ಯ ಸ್ವರೂಪವ್ಯತಿರಿಕ್ತಗ್ರಾಹ್ಯತ್ವೇ ತದಪಿ ಅನ್ಯೇನ ಗ್ರಾಹ್ಯಮ್, ತದಪಿ ಅನ್ಯೇನ ಇತಿ ಅನವಸ್ಥಾ ಪ್ರಾಪ್ನೋತಿ। ಅಪಿ ಚ ಪ್ರದೀಪವತ್ ಅವಭಾಸಾತ್ಮಕತ್ವಾತ್ ಜ್ಞಾನಸ್ಯ ಜ್ಞಾನಾನ್ತರಂ ಕಲ್ಪಯತಃ ಸಮತ್ವಾತ್ ಅವ ಭಾಸ್ಯಾವಭಾಸಕತ್ವಾನುಪಪತ್ತೇಃ ಕಲ್ಪನಾನರ್ಥಕ್ಯಮ್ ಇತಿ। ತದುಭಯಮಪಿ ಅಸತ್। ವಿಜ್ಞಾನಗ್ರಹಣಮಾತ್ರೇ ಏವ ವಿಜ್ಞಾನಸಾಕ್ಷಿಣಃ ಗ್ರಹಣಾಕಾಙ್ಕ್ಷಾನು ತ್ಪಾದಾತ್ ಅನವಸ್ಥಾಶಙ್ಕಾನುಪಪತ್ತೇಃ। ಸಾಕ್ಷಿಪ್ರತ್ಯಯಯೋಶ್ಚ ಸ್ವಭಾವ ವೈಷಮ್ಯಾತ್ ಉಪಲಬ್ಧ್ರುಪಲಭ್ಯಭಾವೋಪಪತ್ತೇಃ। ಸ್ವಯಂಸಿದ್ಧಸ್ಯ ಚ ಸಾಕ್ಷಿಣಃ ಅಪ್ರತ್ಯಾಖ್ಯೇಯತ್ವಾತ್। ಕಿಂಚಾನ್ಯತ್। ಪ್ರದೀಪವತ್ ವಿಜ್ಞಾನಮ್ ಅವಭಾಸಕಾನ್ತರನಿರಪೇಕ್ಷಂ ಸ್ವಯಮೇವ ಪ್ರಥತೇ ಇತಿ ಬ್ರುವತಾ ಅಪ್ರಮಾಣ ಗಮ್ಯಂ ವಿಜ್ಞಾನಮ್ ಅನವಗನ್ತೃಕಮ್ ಇತ್ಯುಕ್ತಂ ಸ್ಯಾತ್। ಶಿಲಾಘನ ಮಧ್ಯಸ್ಥಪ್ರದೀಪಸಹಸ್ರಪ್ರಥನವತ್। ಬಾಢಮೇವಮ್। ಅನುಭವರೂಪ ತ್ವಾತ್ ತು ವಿಜ್ಞಾನಸ್ಯ ಇಷ್ಟೋ ನಃ ಪಕ್ಷಸ್ತ್ವಯಾ ಅನುಜ್ಞಾಯತೇ ಇತಿ ಚೇತ್। ನ। ಅನ್ಯಸ್ಯ ಅವಗನ್ತುಃ ಚಕ್ಷುಃಸಾಧನಸ್ಯ ಪ್ರದೀಪಾದಿಪ್ರಥನ ದರ್ಶನಾತ್। ಅತೋ ವಿಜ್ಞಾನಸ್ಯಾಪಿ ಅವಭಾಸ್ಯತ್ವಾವಿಶೇಷಾತ್ ಸತ್ಯೇವ ಅನ್ಯಸ್ಮಿನ್ ಅವಗನ್ತರಿ ಪ್ರಥನಂ ಪ್ರದೀಪವತ್ ಇತ್ಯವಗಮ್ಯತೇ। ಸಾಕ್ಷಿ ಣೋಽವಗನ್ತುಃ ಸ್ವಯಂಸಿದ್ಧತಾಮ್ ಉಪಕ್ಷಿಪತಾ ಸ್ವಯಂ ಪ್ರಥತೇ ವಿಜ್ಞಾನಮ್ ಇತ್ಯೇಷ ಏವ ಮಮ ಪಕ್ಷಃ ತ್ವಯಾ ವಾಚೋಯುಕ್ತ್ಯನ್ತರೇಣ ಆಶ್ರಿತಃ ಇತಿ ಚೇತ್। ನ। ವಿಜ್ಞಾನಸ್ಯ ಉತ್ಪತ್ತಿಪ್ರಧ್ವಂಸಾನೇಕತ್ವಾದಿ

---

1. ವಿಜ್ಞಾನವೇ ವಿಷಯಿಯಾಗಿಯೂ ವಿಷಯವಾಗಿಯೂ ತೋರುತ್ತದೆ ; ವಿಷಯ ವಾದ ವಿಜ್ಞಾನವು ವಿಷಯಿಯಾದ ವಿಜ್ಞಾನಕ್ಕೆ ಗೋಚರವಾಗುವದರಿಂದ ವಿಜ್ಞಾನವು ಸ್ವಪ್ರಕಾಶವೆನ್ನಬಹುದು ಎಂಬುದೂ ಸರಿಯಲ್ಲ. ಏಕೆಂದರೆ ತನ್ನ ಕ್ರಿಯೆಗೆ ತಾನು ಗೋಚರವಾಗಲಾರದು ಎಂದು ಅಭಿಪ್ರಾಯ.

ವಿಶೇಷವತ್ತ್ವಾಭ್ಯುಪಗಮ್ಯಾತ್ । ಅತಃ ಪ್ರದೀಪವದ್ ವಿಜ್ಞಾನಸ್ಯಾಪಿ ವ್ಯತಿರಿಕ್ತಾವಗಮ್ಯತ್ವಮ್ ಅಸ್ಮಾಭಿಃ ಪ್ರಸಾದಿತಮ್ ॥

(ಭಾಷ್ಯಾರ್ಥ)

(ವಿಜ್ಞಾನವಾದಿ) :- ವಿಜ್ಞಾನವು ತನ್ನ ರೂಪಕ್ಕಿಂತ ವ್ಯತಿರಿಕ್ತ (ವಾದ ಮತ್ತೊಂದ)ರಿಂದ ಗ್ರಾಹ್ಯ(ವಾಗುತ್ತದೆ) ಎಂದರೆ ಅದೂ ಮತ್ತೊಂದರಿಂದ ಗ್ರಾಹ್ಯ(ವಾಗಬೇಕು), ಅದೂ ಮತ್ತೊಂದರಿಂದ (ಗ್ರಾಹ್ಯವಾಗಬೇಕು)- ಎಂದು ಅನವಸ್ಥೆ ಪ್ರಸಕ್ತವಾಗುವದಲ್ಲ! ಇದಲ್ಲದೆ ಪ್ರದೀಪದಂತೆ ಜ್ಞಾನವು ಪ್ರಕಾಶಾತ್ಮಕವಾಗಿರುವವರಿಂದ (ಅದಕ್ಕೆ) ಮತ್ತೊಂದು ಜ್ಞಾನವು (ಬೇಕೆಂದು) ಕಲ್ಪಿಸುವವನ (ಮತದಲ್ಲಿ ಅವೆರಡೂ ಪ್ರಕಾಶರೂಪವೆಂಬುದು) ಸಮವಾಗಿರುವದರಿಂದ (ಅವಕ್ಕೆ) ಅವಭಾಸ್ಯಾವಭಾಸಕತ್ವವು[1] ಹೊಂದುವದಿಲ್ಲವಾದ್ದರಿಂದ (ಆ) ಕಲ್ಪನೆಯು ವ್ಯರ್ಥವಾಗುವದಲ್ಲ!

(ಸಿದ್ಧಾಂತಿ):- ಈ ಎರಡೂ ಸರಿಯಲ್ಲ. ಏಕೆಂದರೆ ವಿಜ್ಞಾನವನ್ನು ಗ್ರಹಿಸಿದ ಮಾತ್ರದಿಂದಲೇ ವಿಜ್ಞಾನಸಾಕ್ಷಿಯನ್ನು (ಮತ್ತೊಂದು) ಗ್ರಹಿಸಬೇಕೆಂಬ ಆಕಾಂಕ್ಷೆಯೇ ಇರುವದಿಲ್ಲವಾಗಿ ಅನವಸ್ಥಾಶಂಕೆಯು ಹುಟ್ಟುವದಿಲ್ಲ[2]. ಸಾಕ್ಷಿಪ್ರತ್ಯಯಗಳು ಸ್ವಭಾವದಲ್ಲಿ ಹೆಚ್ಚುಕಡಿಮೆಯುಳ್ಳವಾದ್ದರಿಂದ (ಅವೆರಡಕ್ಕೂ) ಉಪಲಬ್ಧ್ರುಪಲಭ್ಯಭಾವವು ಇರಬಹುದು.[3] ಸ್ವಯಂಸಿದ್ಧವಾಗಿರುವ ಸಾಕ್ಷಿಯನ್ನು ಇಲ್ಲವೆನ್ನುವದೂ ಆಗುವಂತಿಲ್ಲ.[4] (ನಿಮ್ಮ ಮತದಲ್ಲಿ) ಇನ್ನೂ ಒಂದು (ದೋಷವೇನೆಂದರೆ) ವಿಜ್ಞಾನವು ಪ್ರದೀಪದಂತೆ

1. ಒಂದನ್ನೊಂದು ತಿಳಿಸಿಕೊಡುವವೆಂಬ ಸಂಬಂಧವು ಎಂದರ್ಥ. ಆದ್ದರಿಂದ ವಿಜ್ಞಾನವು ವ್ಯತಿರಿಕ್ತಗ್ರಾಹ್ಯವೆಂದು ಕಲ್ಪಿಸಿದರೆ ಅನವಸ್ಥಾದೋಷವು ಬರುವದರಿಂದ ಅದನ್ನು ಪರಿಹರಿಸಿಕೊಳ್ಳುವದಕ್ಕಾಗಿ ವಿಜ್ಞಾನವು ಸ್ವಸಂವೇದ್ಯವೆಂದು ಕಲ್ಪಿಸುವದರಲ್ಲಿ ಲಾಘವವಿದೆ ಎಂದು ಭಾವ.

2. ವಿಜ್ಞಾನವು ಜ್ಞೇಯವಾಗಿರುವದರಿಂದ ಅದಕ್ಕೆ ಸ್ವಾತಿರಿಕ್ತಜ್ಞಾತೃ ಬೇಕು. ಸಾಕ್ಷಿಯು ನಿತ್ಯಜ್ಞಾತೃವಾಗಿರುವದರಿಂದ ಅವನನ್ನು ಅರಿಯುವದಕ್ಕೆ ಮತ್ತೊಬ್ಬ ಜ್ಞಾತೃವಿನ ಆಕಾಂಕ್ಷೆ ಬರುವದಿಲ್ಲ. ಏಕೆಂದರೆ ಜ್ಞಾನವು ಜ್ಞೇಯದ ವಿಷಯಕ್ಕೇ ಬೇಕಾಗಿರುತ್ತದೆ ಎಂದು ಅಭಿಪ್ರಾಯ.

3. ಸಾಕ್ಷಿಯು ಜ್ಞಾತೃವಾಗಿರುತ್ತಾನೆ; ಪ್ರತ್ಯಯವು ಕರಣವಾಗಿರುತ್ತದೆ, ಅವನಿಗೆ ತಿಳಿದುಬರತಕ್ಕದ್ದಾಗಿದೆ. ಆದ್ದರಿಂದ ಸಾಕ್ಷಿಯು ಅವಭಾಸ್ಯವಲ್ಲ, ವಿಜ್ಞಾನವು ಅವಭಾಸ್ಯವೇ ಎಂದು ಹೇಳುವದು ಯುಕ್ತ. ವಿಜ್ಞಾನದಲ್ಲಿ ಉತ್ಪತ್ತ್ಯಾದಿಗಳೂ ಇವೆ, ಆತ್ಮನಲ್ಲಿಲ್ಲ - ಎಂಬುದು ಮುಂದೆ ಸ್ಪಷ್ಟವಾಗುತ್ತದೆ.

4. ಏಕೆಂದರೆ ಸಾಕ್ಷಿಯು ಇಲ್ಲವೆನ್ನುವದಕ್ಕೂ ಒಬ್ಬ ಸಾಕ್ಷಿ ಬೇಕಾಗುವದು.

ಮತ್ತೊಂದು ಪ್ರಕಾಶಕವನ್ನು ಬಯಸದೆ ತಾನೇ ಬೆಳಗುತ್ತದೆ ಎಂದು ಹೇಳಿದರೆ, ವಿಜ್ಞಾನವು ಪ್ರಮಾಣಕ್ಕೆ ದೊರಕುವದಲ್ಲ, (ಅದನ್ನು) ಅರಿಯುವವನೂ ಇಲ್ಲ ಎಂದು ಹೇಳಿದಂತೆ ಆಗುವದು. (ಇದು) ಕಲ್ಲಿನ ಬಂಡೆಯೊಳಗೆ ಸಾವಿರ ಪ್ರದೀಪಗಳು ಬೆಳಗುತ್ತಿರುವವು ಎಂದಂತೆ (ಆಗುವದು) [1]

(ವಿಜ್ಞಾನವಾದಿ):– ನಿಜ. ಹೀಗೆಯೇ (ಸರಿ). ವಿಜ್ಞಾನವು ಅನುಭವರೂಪವಾಗಿರುವದರಿಂದ (ನಮಗೆ) ಇಷ್ಟವಾದ ಪಕ್ಷವನ್ನೇ ನೀನೂ ಒಪ್ಪಿದಂತಾಯಿತು.

(ಸಿದ್ಧಾಂತಿ) :– ಹಾಗಲ್ಲ. ಏಕೆಂದರೆ ಚಕ್ಷುಸ್ಸೆಂಬ ಕರಣವುಳ್ಳ ಮತ್ತೊಬ್ಬ ಜ್ಞಾತೃವಿಗೇ ಪ್ರದೀಪವು ತೋರುವದು ಕಂಡುಬಂದಿರುತ್ತದೆ. ಆದ್ದರಿಂದ ವಿಜ್ಞಾನವೂ ಅವಭಾಸ್ಯವಾಗಿರುವದೆಂಬುದು ಸಮಾನವಾಗಿರುವದರಿಂದ (ಅದನ್ನು) ಅರಿಯುವವನು ಮತ್ತೊಬ್ಬನು ಇದ್ದರೇ ಪ್ರದೀಪದಂತೆ (ಅದು) ಬೇಳಗುತ್ತದೆ ಎಂದು ನಿಶ್ಚಯಿಸಬೇಕು.

(ವಿಜ್ಞಾನವಾದಿ) :— ಜ್ಞಾತೃವಾದ ಸಾಕ್ಷಿಯು ಸ್ವಯಂಸಿದ್ಧನಾಗಿರುತ್ತಾನೆ ಎಂದು ಹೇಳಿರುವದರಿಂದ ವಿಜ್ಞಾನವು ತಾನೇ ಬೆಳಗುತ್ತದೆ– ಎಂಬೀ ನನ್ನ ಪಕ್ಷವನ್ನೇ ನೀನೂ ಮತ್ತೊಂದು ಬಗೆಯ ಮಾತಿನಿಂದ ಆಶ್ರಯಿಸಿದಂತಾಯಿತಲ್ಲ ![2]

(ಸಿದ್ಧಾಂತಿ) ;— ಹಾಗಲ್ಲ. ಏಕೆಂದರೆ (ನೀನು) ವಿಜ್ಞಾನಕ್ಕೆ ಹುಟ್ಟು, ಸಾವು, ಅನೇಕತ್ವ –ಮುಂತಾದ ವಿಶೇಷಗಳಿವೆ ಎಂದು ಒಪ್ಪಿರುತ್ತೀಯೆ.[3] ಆದ್ದರಿಂದ ಪ್ರದೀಪದಂತೆ ವಿಜ್ಞಾನವನ್ನೂ ಬೇರೊಬ್ಬನು ಅರಿಯುತ್ತಾನೆ ಎಂದು ನಾವು ಸಾಧಿಸಿರುತ್ತೇವೆ.[4]

---

1. ಎಷ್ಟುಸಾವಿರ ದೀಪಗಳು ಇದ್ದರೂ ಅವನ್ನು ಅರಿಯುವ ಕರಣವೂ ಜ್ಞಾತೃವೂ ಇಲ್ಲದೆ ಅವು ಬೆಳಗುತ್ತವೆ ಎಂದು ನಿಶ್ಚಯಿಸುವದಕ್ಕೆ ಬರುವದಿಲ್ಲ ಎಂದರ್ಥ. ವಿಜ್ಞಾನವು ಸ್ವವ್ಯತಿರಿಕ್ತವಿಜ್ಞಾತೃಗಮ್ಯವಾಗಿದೆ ; ಏಕೆಂದರೆ ಪ್ರದೀಪದಂತೆ ಅದು ವಿಷಯವನ್ನು ತೋರಿಸುವ ಪ್ರಕಾಶವಾಗಿದೆ– ಎಂಬ ಅನುಮಾನವನ್ನು ಇಲ್ಲಿ ಪ್ರಯೋಗಿಸಿದಂತೆ ಆಗಿದೆ.

2. ಸಾಕ್ಷಿಯು ಸ್ವಯಂಸಿದ್ಧನೆಂಬುದು ವಿಜ್ಞಾನವು ಸ್ವಯಂಸಿದ್ಧವೆಂಬ ನಮ್ಮ ಪಕ್ಷವೇ ಆಯಿತು. ನೀವು ಉಪಯೋಗಿಸಿರುವ ಹೆಸರು ಮಾತ್ರ ಬೇರೆ – ಎಂದು ಅಭಿಪ್ರಾಯ.

3. ಆ ವಿಶೇಷಗಳನ್ನು ನೋಡುವ ಕೂಟಸ್ಥಚೈತನ್ಯವು ಬೇಕಾಗುತ್ತದೆ.

4. ಅದ್ವಿತೀಯನಿರ್ವಿಶೇಷಚಿನ್ಮಾತ್ರವಾದಕ್ಕೂ ಅನೇಕಾನಿತ್ಯಸವಿಶೇಷವಿಜ್ಞಾನಮಾತ್ರವಾದಕ್ಕೂ ಬಹಳ ತಾರತಮ್ಯವಿದೆ ಎಂದು ಅಭಿಪ್ರಾಯ.

## ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ॥ ೨೯ ॥

೨೯. ವೈಧರ್ಮ್ಯವಿರುವದರಿಂದ ಸ್ವಪ್ನಾದಿಗಳಂತೆಯೂ ಅಲ್ಲ.

## ಸ್ವಪ್ನಾದಿಗಳಿಗೂ ಎಚ್ಚರಕ್ಕೂ ತಾರತಮ್ಯವಿದೆ

( ಭಾಷ್ಯ )

೬೧. ಯದುಕ್ತಂ ಬಾಹ್ಯಾರ್ಥಾಪಲಾಪಿನಾ ಸ್ವಪ್ನಾದಿಪ್ರತ್ಯಯವತ್ ಜಾಗರಿತಗೋಚರಾ ಅಪಿ ಸ್ತಮ್ಭಾದಿಪ್ರತ್ಯಯಾಃ ವಿನೈವ ಬಾಹ್ಯೇನ ಅರ್ಥೇನ ಭವೇಯುಃ ಪ್ರತ್ಯಯತ್ವಾವಿಶೇಷಾತ್ ಇತಿ। ತತ್ ಪ್ರತಿವಕ್ತವ್ಯಮ್। ಅತ್ರೋಚ್ಯತೇ। ನ ಸ್ವಪ್ನಾದಿಪ್ರತ್ಯಯವತ್ ಜಾಗ್ರತ್ಪ್ರತ್ಯಯಾ ಭವಿತುಮರ್ಹನ್ತಿ। ಕಸ್ಮಾತ್? ವೈಧರ್ಮ್ಯಾತ್। ವೈಧರ್ಮ್ಯಂ ಹಿ ಭವತಿ ಸ್ವಪ್ನಜಾಗರಿತಯೋಃ। ಕಿಂ ಪುನರ್ವೈಧರ್ಮ್ಯಮ್? ಬಾಧಾಬಾಧೌ ಇತಿ ಬ್ರೂಮಃ। ಬಾಧ್ಯತೇ ಹಿ ಸ್ವಪ್ನೋಪಲಬ್ಧಂ ವಸ್ತು ಪ್ರತಿಬುದ್ಧಸ್ಯ 'ಮಿಥ್ಯಾ ಮಯಾ ಉಪಲಬ್ಧೋ ಮಹಾಜನಸಮಾಗಮಃ' (ಇತಿ)[1]। 'ನ ಹ್ಯಸ್ತಿ ಮಮ ಮಹಾಜನಸಮಾಗಮಃ ನಿದ್ರಾಗ್ಲಾನಂ ತು ಮೇ ಮನೋ ಬಭೂವ, ತೇನ ಏಷಾ ಭ್ರಾನ್ತಿಃ ಉದ್ಬಭೂವ' ಇತಿ। ಏವಂ ಮಾಯಾದಿಷ್ವಪಿ ಭವತಿ ಯಥಾಯಥಂ ಬಾಧಃ। ನೈವಂ ಜಾಗರಿತೋಪಲಬ್ಧಂ ವಸ್ತು ಸ್ತಮ್ಭಾದಿಕಂ ಕಸ್ಯಾಂಚಿದಪಿ ಅವಸ್ಥಾಯಾಂ ಬಾಧ್ಯತೇ। ಅಪಿ ಚ ಸ್ಮೃತಿರೇಷಾ ಯತ್ ಸ್ವಪ್ನದರ್ಶನಮ್। ಉಪಲಬ್ಧಿಸ್ತು ಜಾಗರಿತದರ್ಶನಮ್। ಸ್ಮೃತ್ಯುಪಲಬ್ಧ್ಯೋಶ್ಚ ಪ್ರತ್ಯಕ್ಷಮ್ ಅನ್ತರಂ ಸ್ವಯಮ್ ಅನುಭೂಯತೇ ಅರ್ಥವಿಪ್ರಯೋಗಸಂಪ್ರಯೋಗಾತ್ಮಕಮ್ 'ಇಷ್ಟಂ ಪುತ್ರಂ ಸ್ಮರಾಮಿ ನೋಪಲಭೇ ಉಪಲಬ್ಧುಮಿಚ್ಛಾಮಿ' ಇತಿ। ತತ ಏವಂ ಸತಿ ನ ಶಕ್ಯತೇ ವಕ್ತುಮ್ ಮಿಥ್ಯಾ ಜಾಗರಿತೋಪಲಬ್ಧಿಃ ಉಪಲಬ್ಧಿತ್ವಾತ್ ಸ್ವಪ್ನೋಪಲಬ್ಧಿವತ್ ಇತಿ ಉಭಯೋರನ್ತರಂ ಸ್ವಯಮ್ ಅನುಭವತಾ। ನ ಚ ಸ್ವಾನುಭವಾಪಲಾಪಃ ಪ್ರಾಜ್ಞಮಾನಿಭಿರ್ಯುಕ್ತಃ ಕರ್ತುಮ್। ಅಪಿ ಚ ಅನುಭವವಿರೋಧಪ್ರಸಙ್ಗಾತ್ ಜಾಗರಿತಪ್ರತ್ಯಯಾನಾಂ ಸ್ವತೋ ನಿರಾಲಮ್ಬನತಾಂ ವಕ್ತುಮ್ ಅಶಕ್ನುವತಾ ಸ್ವಪ್ನಪ್ರತ್ಯಯಸಾಧರ್ಮ್ಯಾತ್ ವಕ್ತುಮಿಷ್ಯತೇ। ನ ಚ ಯೋ ಯಸ್ಯ ಸ್ವತೋ ಧರ್ಮೋ ನ ಸಂಭವತಿ ಸೋಽನ್ಯಸ್ಯ ಸಾಧರ್ಮ್ಯಾತ್ ತಸ್ಯ ಸಂಭವಿಷ್ಯತಿ। ನ ಹಿ ಅಗ್ನಿಃ ಉಷ್ಣೋಽನುಭೂಯಮಾನಃ ಉದಕಸಾಧರ್ಮ್ಯಾತ್ ಶೀತೋ ಭವಿಷ್ಯತಿ। ದರ್ಶಿತಂ ತು ವೈಧರ್ಮ್ಯಂ ಸ್ವಪ್ನಜಾಗರಿತಯೋಃ ॥

1. ಈ 'ಇತಿ'ಯು ಇಲ್ಲದಿದ್ದರೂ ಆಗುತ್ತಿತ್ತು

(ಭಾಷ್ಯಾರ್ಥ)

ಸ್ವಪ್ನಾದಿಪ್ರತ್ಯಯಗಳಂತೆ ಎಚ್ಚರದಲ್ಲಿ ಕಾಣಬರುವ ಸ್ತಂಭಾದಿಪ್ರತ್ಯಯಗಳುಕೂಡ ಹೊರಗಿನ ವಿಷಯವಿಲ್ಲದೆಯೇ ಇರಬಹುದು ; ಏಕೆಂದರೆ ಪ್ರತ್ಯಯವಾಗಿರುವದೆಂಬುದು (ಅದಕ್ಕೂ) ಸಮಾನವಾಗಿರುತ್ತದೆ ಎಂದು ಬಾಹ್ಯಾರ್ಥವನ್ನು ಅಲ್ಲಗಳೆಯುವ (ವಿಜ್ಞಾನವಾದಿಯು) ಹೇಳಿದ್ದನಷ್ಟೆ.[1] ಅದಕ್ಕೆ ಉತ್ತರವನ್ನು ಹೇಳಬೇಕಾಗಿದೆ. ಈ (ವಿಷಯದಲ್ಲಿ ಹೀಗೆ) ಹೇಳುತ್ತೇವೆ ; ಸ್ವಪ್ನಾದಿ ಪ್ರತ್ಯಯಗಳಂತೆ ಎಚ್ಚರದ ಪ್ರತ್ಯಯಗಳಾಗಿರಲಾರವು. ಏಕೆ ?- ಎಂದರೆ ವೈಧರ್ಮ್ಯವಿರುವದರಿಂದ. ಸ್ವಪ್ನಜಾಗರಿತಗಳಿಗೆ ವೈಧರ್ಮ್ಯವಿರುತ್ತದೆಯಷ್ಟೆ ?

(ವಿಜ್ಞಾನವಾದಿ) :— (ಆ) ವೈಧರ್ಮ್ಯವಾದರೂ ಯಾವದು ?

(ಸಿದ್ಧಾಂತಿ) :— ಬಾಧಾಬಾಧಗಳು ಎಂದು ಹೇಳುತ್ತೇವೆ. ಸ್ವಪ್ನದಲ್ಲಿ ಕಂಡ ವಸ್ತು 'ನನಗೆ ಬಹುಜನರ ಸಮಾಗಮವು (ನಿಜವಾಗಿ ಆಯಿತೆಂಬುದು) ಸುಳ್ಳು. ಆದರೆ ನನ್ನ ಮನಸ್ಸು ನಿದ್ರೆಯಿಂದ ಸೋತುಹೋಗಿತ್ತು, ಅದರಿಂದ ಈ ಭ್ರಾಂತಿಯಾಯಿತು'– ಎಂದು ಬಾಧಿತವಾಗುತ್ತದೆಯಲ್ಲವೆ ? ಹೀಗೆಯೇ ಮಾಯೆ ಮುಂತಾದವುಗಳಲ್ಲಿಯೂ[2] ಅದದಕ್ಕೆ ತಕ್ಕಂತೆ ಬಾಧವು ಆಗುತ್ತದೆ.[3] ಆದರೆ ಎಚ್ಚರದಲ್ಲಿ ಕಾಣಬರುವ ಕಂಬವೇ ಮುಂತಾದ ವಸ್ತು ಯಾವ ಅವಸ್ಥೆಯಲ್ಲಿಯೂ ಬಾಧಿತವಾಗುವದಿಲ್ಲ.[4]

ಇದಲ್ಲದೆ ಕನಸನ್ನು ಕಂಡದ್ದು ಎಂಬಿದು ಸ್ಮೃತಿಯು[5] ; ಆದರೆ ಎಚ್ಚರದಲ್ಲಿ ಕಂಡದ್ದು ಅನುಭವವಾಗಿರುತ್ತದೆ. 'ಇಷ್ಟಪುತ್ರನು ನನಗೆ ನೆನಪಿಗೆ

---

1. ಭಾ. ಭಾ. ೫೭ರಲ್ಲಿ ಹೇಳಿದ್ದ ಅನುಮಾನವಿದು.

2. ಮರೀಚ್ಯುದಕಗಂಧರ್ವನಗರಾದಿಗಳನ್ನು 'ಮುಂತಾದ' ಎಂಬ ಶಬ್ದದಿಂದ ಗ್ರಹಿಸಬೇಕು

3. ಕಣ್ಣುಕಟ್ಟಿನಿಂದ ಹಾಗೆ ಆನೆಯು ಕಂಡಿತು, ನಾನು ನಿಜವಾಗಿ ಆನೆಯನ್ನು ಕಾಣಲಿಲ್ಲ ; ಬಿಸಿಲುಕುದುರೆಯೇ ದೂರಕ್ಕೆ ನೀರೆಂದು ಕಂಡಿತು, ನಿಜವಾಗಿ ನೀರಿರಲಿಲ್ಲ. ಆಕಾಶದಲ್ಲಿ ಮೋಡಗಳನ್ನೇ ನಗರವೆಂದು ಭ್ರಾಂತಿಯಿಂದ ತಿಳಿದೆನು, ನಿಜವಾಗಿ ನಗರವಿರಲಿಲ್ಲ –ಎಂದು ಬಾಧೆಯಾಗುತ್ತದೆ ಎಂದರ್ಥ.

4. 'ಎಚ್ಚರದಲ್ಲಿ ನಾನು ಸ್ತಂಭಾದಿಗಳನ್ನು ನೋಡಲಿಲ್ಲ' ಎಂಬ ಬಾಧಕಜ್ಞಾನವು ಯಾವ ಅವಸ್ಥೆಯಲ್ಲಿಯೂ ಉಂಟಾಗುವದಿಲ್ಲ ; ಏಕೆಂದರೆ ಸ್ವಪ್ನವೇ ಮುಂತಾದವುಗಳಲ್ಲಿ ಆಗುವ ಅರಿವು ಸ್ವಪ್ನಾದಿಗಳನ್ನು ಇದು ಎಚ್ಚರವೇ, ನಿಜವೇ_ ಎಂದು ತೋರಿಸುತ್ತದೆ, ಎಚ್ಚರದ ಪರಾಮರ್ಶವನ್ನು ಮಾಡುವದೇ ಇಲ್ಲ.

5. ಅದು ಕನಸು ಎಂಬ ಅರಿವು ನಮಗೆ ಆಗುವಾಗ ಅದು ಭೂತಕಾಲಕ್ಕೆ ಸೇರಿ ಸ್ಮೃತಿಯಾಗಿಬಿಟ್ಟಿರುತ್ತದೆ ಎಂದರ್ಥ. ಕನಸೇ ಸ್ಮೃತಿ ಎಂದರ್ಥವಲ್ಲ; ಏಕೆಂದರೆ ಕನಸಿನಲ್ಲಿ ವಿಷಯವು ಎದುರಿಗೇ ಕಾಣುತ್ತಿರುತ್ತದೆ. ಸ್ವಪ್ನವು ಕೇವಲಸಂಸ್ಕಾರಜನ್ಯವಾದ್ದರಿಂದ

ಬರುತ್ತಾನೆ, (ಆದರೆ) ಕಾಣಿಸುವದಿಲ್ಲ; ಅವನನ್ನು ಕಾಣಲಿಚ್ಛಿಸುತ್ತೇನೆ' ಎಂದು ಸ್ಮೃತಿಗೂ ಅನುಭವಕ್ಕೂ ಅರ್ಥವಿಲ್ಲದಿರುವದು, (ಅರ್ಥ)ಸಂಬಂಧವಿರುವದು ಎಂಬ ರೂಪದ ಅಂತರ(ವಿರುವದು) ತನಗೇ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುತ್ತದೆ. ಇದು ಹೀಗಿರುವಲ್ಲಿ ಎಚ್ಚರದ ಅರಿವು ಹುಸಿ, ಏಕೆಂದರೆ ಅದು ಕನಸಿನ ಅರಿವಿನಂತೆ ಅರಿವಾಗಿರುತ್ತದೆ ಎಂದು– (ಆ) ಎರಡಕ್ಕೂ (ಇರುವ) ಅಂತರವನ್ನು ತಾನೇ ಅನುಭವಿಸುತ್ತಿದ್ದರೂ– (ಸಾಮ್ಯವನ್ನು) ಹೇಳುವದು ಆಗಲಾರದು.[1] ಪ್ರಾಜ್ಞರೆಂದುಕೊಳ್ಳುವವರು ತಮ್ಮ ಅನುಭವವನ್ನೇ ಅಲ್ಲಗಳೆಯುವದು ಯುಕ್ತವೂ ಅಲ್ಲ.[2]

ಇದಲ್ಲದೆ ಅನುಭವಕ್ಕೆ ವಿರೋಧವು ಪ್ರಸಕ್ತವಾಗುವದರಿಂದ ಜಾಗರಿತ ಪ್ರತ್ಯಯಗಳಿಗೆ ಸ್ವತಃ ನಿರಾಲಂಬನತ್ವವನ್ನು ಹೇಳಲಾರದೆ (ವಿಜ್ಞಾನವಾದಿಯು) ಸ್ವಪ್ನಪ್ರತ್ಯಯಗಳ ಸಾದೃಶ್ಯದಿಂದ (ಹಾಗೆಂದು) ಹೇಳುವದಕ್ಕೆ ಹೊರಟಿರುತ್ತಾನೆ. ಆದರೆ ಯಾವದು ಯಾವದಕ್ಕೆ ಧರ್ಮವೆಂದು ಸ್ವತಃ ಸಂಭವಿಸುವದಿಲ್ಲವೋ ಅದು ಮತ್ತೊಂದರ ಸಾದೃಶ್ಯದಿಂದ ಸಂಭವಿಸಲಾರದು.[3] ಹೇಗೆಂದರೆ ಬೆಂಕಿಯು ಬಿಸಿ ಎಂದು ಅನುಭವಕ್ಕೆ ಬರುತ್ತಿರುವಲ್ಲಿ ನೀರಿನ ಸಾದೃಶ್ಯದಿಂದ (ಅದು) ತಣ್ಣಗಿದೆ ಎಂದಾಗಲಾರದು.[4] ಆದರೆ ಸ್ವಪ್ನ ಜಾಗರಿತಗಳಿಗೆ ವೈಧರ್ಮ್ಯ(ವಿದೆಯೆಂದು ನಾವು) ತೋರಿಸಿಕೊಟ್ಟಿರುತ್ತೇವೆ.[5]

---

ಸ್ಮೃತಿಯೇ ಆದರೂ ನಿದ್ರಾದೋಷದಿಂದ ನಿಜವಾಗಿ ಎದುರಿಗೆ ಇಲ್ಲದ ಪಿತ್ರಾದಿಗಳನ್ನು ಇರುವಂತೆ ಕಾಣಿಸುತ್ತದೆ – ಎಂದು ಭಾಮತಿ; ಪರಮತಾನುಸಾರವಾಗಿ ಇದನ್ನು ಸ್ಮೃತಿ ಎಂದಿದೆ –ಎಂದು ನ್ಯಾ. ನಿ. ವಿಜ್ಞಾನವಾದಿಯ ಅನುಮಾನವು ಎಚ್ಚರದ ದೃಷ್ಟಿಯಿಂದಲೇ ಪ್ರಯುಕ್ತವಾಗಿರುವದರಿಂದ ಆ ದೃಷ್ಟಿಯಿಂದಲೇ ಸ್ಮೃತಿ ಎಂದು ಕರೆದಿದೆ ಎಂದರೆ ಸಾಕೆಂದು ತೋರುತ್ತದೆ.

1. ಅನುಭವವಿರುದ್ಧವಾದ ಯುಕ್ತಿ ಏತಕ್ಕೆ ಬಂದೀತು ?

2. ವಿಜ್ಞಾನವಾದಿಯು ತನ್ನ ಅನುಭವವನ್ನೇ ಅಲ್ಲಗಳೆಯುತ್ತಿದಾನೆ ; ಆದ್ದರಿಂದ ಅವನು ತನ್ನ ಅನುಭವವನ್ನು ತಾನರಿಯದ ಅವಿವೇಕಿಯು, ಅಥವಾ ಪರಮೋಹಕನಾದ ವಂಚಕನು ಎಂದು ಅಭಿಪ್ರಾಯ.

3. ಜ್ಞಾನಕ್ಕೆ ವಿಷಯವಿದೆ ಎಂಬ ಅನುಭವವಿರುವಲ್ಲಿ ಅದು ನಿರಾಲಂಬನ, ಎಂದರೆ ವಿಷಯವಿಲ್ಲದ್ದು– ಎನ್ನುವವರಿಗೆ ಅನುಭವವಿರೋಧವು ಪ್ರಸಕ್ತವಾಗುವದು.

4. ಇದರಂತೆ ಎಚ್ಚರದ ಜ್ಞಾನವು ಕನಸಿನ ಸಾದೃಶ್ಯದಿಂದ ನಿರ್ವಿಷಯವಾಗಲಾರದು.

5. ಈ ವೈಧರ್ಮ್ಯವು ಜಾಗ್ರದ್ದೃಷ್ಟಿಯಿಂದ ಎಂಬುದು ಸ್ಪಷ್ಟ. ಆದ್ದರಿಂದ ಮಾಂಡೂಕ್ಯಕಾರಿಕೆಯಲ್ಲಿ ಸ್ವಪ್ನಜಾಗರಿತಗಳ ಸಾಮ್ಯವನ್ನು ಸಾಧಿಸಿರುವದಕ್ಕೆ ಇದು ವಿರುದ್ಧವಲ್ಲ. ಪೀಠಿಕೆಯನ್ನು ನೋಡಿ.

## ನ ಭಾವೋಽನುಪಲಬ್ಧೇಃ ॥ ೩೦ ॥

೩೦. (ವಾಸನೆಗಳ) ಇರವು ಇಲ್ಲ ; ಏಕೆಂದರೆ (ಬಾಹ್ಯಾರ್ಥವು) ಕಾಣಿಸುವದಿಲ್ಲ.

### ವಿಜ್ಞಾನವಾದದಲ್ಲಿ ವಾಸನೆಗಳು ಸಿದ್ಧಿಸುವದಿಲ್ಲ

(ಭಾಷ್ಯ)

೬೨. ಯದಪ್ಯುಕ್ತಮ್ ವಿನಾಪಿ ಅರ್ಥೇನ ಜ್ಞಾನವೈಚಿತ್ರ್ಯಂ ವಾಸನಾವೈಚಿತ್ರ್ಯಾದೇವ ಅವಕಲ್ಪತೇ[1] ಇತಿ । ತತ್ ಪ್ರತಿವಕ್ತವ್ಯಮ್ । ಅತ್ರೋಚ್ಯತೇ। ನ ಭಾವೋ ವಾಸನಾನಾಮ್ ಉಪಪದ್ಯತೇ । ತ್ವತ್ಪಕ್ಷೇ ಅನುಪಲಬ್ಧೇ ಬಾಹ್ಯಾನಾಮ್ ಅರ್ಥಾನಾಮ್ । ಅರ್ಥೋಪಲಬ್ಧಿನಿಮಿತ್ತಾ ಹಿ ಪ್ರತ್ಯರ್ಥಂ ನಾನಾರೂಪಾ ವಾಸನಾಃ ಭವನ್ತಿ । ಅನುಪಲಭ್ಯಮಾನೇಷು ತು ಅರ್ಥೇಷು ಕಿಂನಿಮಿತ್ತಾ ವಿಚಿತ್ರಾ ವಾಸನಾ ಭವೇಯುಃ ? ಅನಾದಿತ್ವೇಽಪಿ ಅನ್ಧಪರಂಪರಾನ್ಯಾಯೇನ ಅಪ್ರತಿಷ್ಠೈವ ಅನವಸ್ಥಾ ವ್ಯವಹಾರಲೋಪಿನೀ ಸ್ಯಾತ್, ನಾಭಿಪ್ರಾಯಸಿದ್ಧಿಃ । ಯಾವಪಿ ಅನ್ವಯವ್ಯತಿರೇಕೌ ಅರ್ಥಾಪಲಾಪಿನಾ ಉಪನ್ಯಸ್ತೌ ವಾಸನಾನಿಮಿತ್ತಮೇವ ಇದಂ ಜ್ಞಾನಜಾತಂ ನಾರ್ಥನಿಮಿತ್ತಮ್ ಇತಿ, ತಾವಪಿ ಏವಂ ಸತಿ ಪ್ರತ್ಯುಕ್ತೌ ದ್ರಷ್ಟವ್ಯೌ । ವಿನಾ ಅರ್ಥೋಪಲಬ್ಧ್ಯಾ ವಾಸನಾನುಪಪತ್ತೇಃ । ಅಪಿ ಚ ವಿನಾಪಿ ವಾಸನಾಭಿಃ ಅರ್ಥೋಪಲಬ್ಧ್ಯುಪಗಮಾತ್, ವಿನಾ ತು ಅರ್ಥೋಪಲಬ್ಧ್ಯಾ ವಾಸನೋತ್ಪತ್ತ್ಯನಭ್ಯುಪಗಮಾತ್ ಅರ್ಥಸದ್ಭಾವಮೇವ ಅನ್ವಯವ್ಯತಿರೇಕಾವಪಿ ಪ್ರತಿಷ್ಠಾಪಯತಃ । ಅಪಿ ಚ ವಾಸನಾ ನಾಮ ಸಂಸ್ಕಾರವಿಶೇಷಾಃ । ಸಂಸ್ಕಾರಾಶ್ಚ ನಾಶ್ರಯಮನ್ತರೇಣ ಅವಕಲ್ಪನ್ತೇ । ಏವಂ ಲೋಕೇ ದೃಷ್ಟತ್ವಾತ್ । ನ ಚ ತವ ವಾಸನಾಶ್ರಯಃ ಕಶ್ಚಿದಸ್ತಿ । ಪ್ರಮಾಣತೋಽನುಪಲಬ್ಧೇಃ ॥

(ಭಾಷ್ಯಾರ್ಥ)

ಇನ್ನು ಅರ್ಥವಿಲ್ಲದೆ ಇದ್ದರೂ ಜ್ಞಾನವೈಚಿತ್ರ್ಯವು ವಾಸನೆಯ ವೈಚಿತ್ರ್ಯದಿಂದಲೇ ಉಪಪನ್ನವಾಗುತ್ತದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದಕ್ಕೆ (ಉತ್ತರವನ್ನು) ಹೇಳಬೇಕಾಗಿರುತ್ತದೆ. ಈ (ವಿಷಯದಲ್ಲಿ ಹೀಗೆ) ಹೇಳುತ್ತೇವೆ. ವಾಸನೆಗಳ ಇರವು ಹೊಂದುವದಿಲ್ಲ ; ಏಕೆಂದರೆ ನಿನ್ನ ಪಕ್ಷದಲ್ಲಿ ಹೊರಗಿನ ಅರ್ಥಗಳು ಕಾಣಬರುವದಿಲ್ಲ.[2] ಅರ್ಥಗಳ ಅರಿವಿನ ನಿಮಿತ್ತ

---

1. 'ಅವಕಲ್ಪ್ಯತೇ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

2. ವಿಜ್ಞಾನಕ್ಕಿಂತ ವ್ಯತಿರಿಕ್ತವಾದ ಬಾಹ್ಯಾರ್ಥವು ಕಾಣಬರುವದಿಲ್ಲ ಎಂದಲ್ಲವೆ, ನಿನ್ನ ಮತ ?

ದಿಂದಲ್ಲವೆ, ಒಂದೊಂದು ಅರ್ಥಕ್ಕೂ (ಒಂದೊಂದು) ಬೇರೆಬೇರೆಯ ರೂಪದ ವಾಸನೆಗಳು ಆಗುವದು ? ಆದರೆ ಅರ್ಥಗಳು ತಿಳಿಯುಬರದೆ ಇರುವಲ್ಲಿ ವಿಚಿತ್ರವಾದ ವಾಸನೆಗಳು ಯಾವ ನಿಮಿತ್ತದಿಂದ ಆಗಬೇಕು ? (ಇವು) ಅನಾದಿಯಾಗಿರುತ್ತವೆ ಎಂದರೂ **ಅಂಧಪರಂಪರಾನ್ಯಾಯ**ದಿಂದ ಯಾವ ಆಧಾರವೂ ಇಲ್ಲದ, ವ್ಯವಹಾರವನ್ನು ಲೋಪಗೊಳಿಸುವ, ಅನವಸ್ಥೆಯೇ[1] ಆದೀತೇ ಹೊರತು (ಅವನ) ಅಭಿಪ್ರಾಯವು ಸಿದ್ಧವಾಗಲಾರದು. ಇನ್ನು ಅರ್ಥವನ್ನು ಅಪಲಾಪಮಾಡುವ (ಈ ವಾದಿಯು) ವಾಸನಾನಿಮಿತ್ತದಿಂದಲೇ ಈ ಜ್ಞಾನಜಾತವುಂಟಾಗುತ್ತದೆ, ಅರ್ಥನಿಮಿತ್ತವಾಗಿ ಉಂಟಾಗುವದಿಲ್ಲ —ಎಂದು ಅನ್ವಯವ್ಯತಿರೇಕಗಳನ್ನು ಹೇಳಿದ್ದನಷ್ಟೆ[2] ; ಅವುಗಳನ್ನೂ ಹೀಗಿರುವದರಿಂದ ತಿರಸ್ಕರಿಸಿದಂತೆ ಆಯಿತೆಂದು ತಿಳಿಯಬೇಕು. ಏಕೆಂದರೆ ಅರ್ಥದ ಅರಿವಿಲ್ಲದೆ ವಾಸನೆಯೇ ಉಂಟಾಗುವದಿಲ್ಲ. ಇದಲ್ಲದೆ ವಾಸನೆಗಳಿಲ್ಲದೆಯೇ ಅರ್ಥದ ಅರಿವು ಉಂಟಾಗಬಹುದೆಂದು (ನಾವು) ಒಪ್ಪಿರುವದರಿಂದಲೂ[3] ಆದರೆ ಅರ್ಥದ ಅರಿವಿಲ್ಲದೆ ವಾಸನೆಯ ಉತ್ಪತ್ತಿಯನ್ನು ಒಪ್ಪದೆ ಇರುವದರಿಂದಲೂ ಅನ್ವಯವ್ಯತಿರೇಕಗಳೂ ಅರ್ಥಗಳಿವೆ ಎಂಬುದನ್ನೇ ಸ್ಥಾಪಿಸುತ್ತವೆ. ಇದಲ್ಲದೆ ವಾಸನೆಗಳು ಎಂದರೆ ಸಂಸ್ಕಾರವಿಶೇಷಗಳು. ಸಂಸ್ಕಾರಗಳಾದರೋ ಆಶ್ರಯವಿಲ್ಲದೆ ಆಗುವಹಾಗಿಲ್ಲ ; ಏಕೆಂದರೆ ಹಾಗೆ ಲೋಕದಲ್ಲಿ ಕಂಡಿರುತ್ತದೆ.[4] ಆದರೆ ನಿನ್ನ (ಮತದಲ್ಲಿ) ವಾಸನೆಗಳಿಗೆ ಆಶ್ರಯವು (ಯಾವದೂ) ಇರುವದಿಲ್ಲ; ಏಕೆಂದರೆ (ಅದು) ಪ್ರಮಾಣದಿಂದ ಕಂಡುಬರುವದಿಲ್ಲ.[5]

---

1. ವಾಸನೆಯು ಎಲ್ಲಿಯೂ ಸಿದ್ಧವಾಗಿರುವದಿಲ್ಲವಾದ್ದರಿಂದ ಈ ಕಲ್ಪನೆಯು ನಿರಾಧಾರವಾದದ್ದು, ವಾಸನೆಯಿಲ್ಲದೆ ಅನುಭವವೇ ಇಲ್ಲವೆನ್ನುವದರಿಂದ ವ್ಯವಹಾರವನ್ನೂ ಲೋಪಗೊಳಿಸತಕ್ಕದ್ದು ; ಅಸಿದ್ಧವಾದ ಅನಾದಿಯಾದ ವಾಸನಾಸಂತತಿಯನ್ನು ಕಲ್ಪಿಸುವದರಿಂದ ಅಂಧಪರಂಪರೆಯಾಗುವದು.

2. ವಾಸನೆಗಳಿದ್ದರೆ ಅರ್ಥವಿಲ್ಲದೆಯೂ ಜ್ಞಾನವೈಚಿತ್ರ್ಯವುಂಟಾಗುತ್ತದೆ, ಬರಿಯ ಅರ್ಥದ ನಿಮಿತ್ತದಿಂದಲೇ ಜ್ಞಾನವೈಚಿತ್ರ್ಯವಾಗುವದಿಲ್ಲ – ಎಂಬ ಅನ್ವಯವ್ಯತಿರೇಕಗಳನ್ನು ಭಾ. ಭಾ. ೫೭ರಲ್ಲಿ ಪೂರ್ವಪಕ್ಷಿ ಹೇಳಿದ್ದನು.

3. ಹೊಸದಾಗಿ ನೋಡುವ ವಸ್ತುವಿನಿಂದಲೂ ಜ್ಞಾನವುಂಟಾಗುತ್ತದೆ, ಅದರ ವಾಸನೆಯು ಆ ಜ್ಞಾನಕ್ಕೆ ಕಾರಣವೆಂದು ಹೇಳುವದಕ್ಕೆ ಅವಕಾಶವಿಲ್ಲ.

4. ಸಂಸ್ಕಾರವು ಒಂದನ್ನು ಆಶ್ರಯಿಸಿಕೊಂಡೇ ಇರುತ್ತದೆ. ಅನುಭವಗಳಿಂದಾಗುವ ಸಂಸ್ಕಾರಕ್ಕೂ ಅಂಥ ಒಂದು ಆಶ್ರಯವಿರಬೇಕು.

5. ನಮ್ಮ ಮತದಲ್ಲಿ ಮನಸ್ಸು ಸಂಸ್ಕಾರಕ್ಕೆ ಆಶ್ರಯವು ; ಕ್ಷಣಿಕವಿಜ್ಞಾನವಾದಿಗಳಿಗೆ ಯಾವ ಆಶ್ರಯವೂ ಇರುವದಿಲ್ಲ– ಎಂದರ್ಥ. ಸೂತ್ರಕ್ಕೆ ಇದು ಇನ್ನೊಂದು ಅರ್ಥ.

**ಕ್ಷಣಿಕತ್ವಾಚ್ಚ ॥ ೩೧ ॥**

೩೧. (ವಿಜ್ಞಾನವು) ಕ್ಷಣಿಕವಾಗಿರುವವರಿಂದಲೂ (ಈ ಮತದಲ್ಲಿ ದೋಷಗಳಿವೆ).

## ವಿಜ್ಞಾನವಾದದ ಇತರ ದೋಷಗಳು

(ಭಾಷ್ಯ)

೬೩. ಯದಪಿ ಆಲಯವಿಜ್ಞಾನಂ ನಾಮ ವಾಸನಾಶ್ರಯತ್ವೇನ ಪರಿಕಲ್ಪಿತಮ್, ತದಪಿ ಕ್ಷಣಿಕತ್ವಾಭ್ಯುಪಗಮಾತ್ ಅನವಸ್ಥಿತಸ್ವರೂಪಂ ಸತ್ ಪ್ರವೃತ್ತಿವಿಜ್ಞಾನವತ್ ನ ವಾಸನಾನಾಮ್ ಅಧಿಕರಣಂ ಭವಿತುಮರ್ಹತಿ। ನ ಹಿ ಕಾಲತ್ರಯಸಂಬನ್ಧಿನಿ ಏಕಸ್ಮಿನ್ ಅನ್ವಯಿನಿ ಅಸತಿ ಕೂಟಸ್ಥೇ ವಾ ಸರ್ವಾರ್ಥದರ್ಶಿನಿ ದೇಶಕಾಲನಿಮಿತ್ತಾಪೇಕ್ಷವಾಸನಾಧಾನಸ್ಮೃತಿಪ್ರತಿಸಂಧಾನಾದಿವ್ಯವಹಾರಃ ಸಂಭವತಿ। ಸ್ಥಿರಸ್ವರೂಪತ್ವೇ ತು ಆಲಯವಿಜ್ಞಾನಸ್ಯ ಸಿದ್ಧಾನ್ತಹಾನಿಃ। ಅಪಿ ಚ ವಿಜ್ಞಾನವಾದೇಽಪಿ ಕ್ಷಣಿಕತ್ವಾಭ್ಯುಪಗಮಸ್ಯ ಸಮಾನತ್ವಾತ್ ಯಾನಿ ಬಾಹ್ಯಾರ್ಥವಾದೇ ಕ್ಷಣಿಕತ್ವನಿಬನ್ಧನಾನಿ ದೂಷಣಾನಿ ಉದ್ಭಾವಿತಾನಿ "ಉತ್ತರೋತ್ಪಾದೇ ಚ ಪೂರ್ವನಿರೋಧಾತ್" (೨-೨-೨೦) ಇತ್ಯೇವಮಾದೀನಿ, ತಾನಿ ಇಹಾಪಿ ಅನುಸಂಧಾತವ್ಯಾನಿ ॥

(ಭಾಷ್ಯಾರ್ಥ)

ಇನ್ನು **ಆಲಯವಿಜ್ಞಾನ**ವೆಂಬುದು ವಾಸನೆಗಳಿಗೆ ಆಶ್ರಯವೆಂದು ಕಲ್ಪಿಸುತ್ತೀರಷ್ಟೆ, ಅದು ಕ್ಷಣಿಕವೆಂದು ಒಪ್ಪಿರುವದರಿಂದ ಇದ್ದದ್ದು ಇದ್ದಂತೆ ಇರುವದಿಲ್ಲವಾಗಿ **ಪ್ರವೃತ್ತಿವಿಜ್ಞಾನ**ದಂತೆಯೇ ವಾಸನೆಗಳಿಗೆ ಆಶ್ರಯವಾಗಲಾರದು.[1] ಕಾಲತ್ರಯಕ್ಕೂ ಸಂಬಂಧಿಸಿರುವ ಒಂದು ಅನ್ವಯಿ ಇಲ್ಲದಿದ್ದರೆ, ಅಥವಾ ಕೂಟಸ್ಥನಾಗಿ ಎಲ್ಲಾ ಅರ್ಥಗಳನ್ನೂ ನೋಡುವ(ವನೊಬ್ಬನು ಇಲ್ಲದಿದ್ದರೆ), ದೇಶಕಾಲನಿಮಿತ್ತಗಳನ್ನು ಬಯಸುವ ವಾಸನೆಗಳನ್ನು ಉಂಟುಮಾಡುವದು, ಸ್ಮೃತಿ, ಪ್ರತಿಸಂಧಾನ – ಮುಂತಾದ ವ್ಯವಹಾರವು ಸಂಭವಿಸಲಾರದಷ್ಟೆ.[2] ಆಲಯವಿಜ್ಞಾನವು ಸ್ಥಿರಸ್ವರೂಪವೇ ಎನ್ನುವಿರಾದರೆ ಸಿದ್ಧಾಂತವನ್ನು ಬಿಡಬೇಕಾಗುವದು,

---

1. ವಿಜ್ಞಾನಸ್ಕಂಧವು ಆಲಯವಿಜ್ಞಾನ, ಪ್ರವೃತ್ತಿವಿಜ್ಞಾನ – ಎಂದು ಎರಡು ಬಗೆ. ಆಲಯವಿಜ್ಞಾನವೆಂದರೆ ನಾನು ಎಂದು ತೋರುವ ವಿಜ್ಞಾನಸಂತಾನವು; ಪ್ರವೃತ್ತಿವಿಜ್ಞಾನವೆಂದರೆ ಹೊರಗಿನ ರೂಪಾದಿಗಳನ್ನು ತಿಳಿಸುವಂತೆ ತೋರುವ ವಿಜ್ಞಾನವು. ಈ ಎರಡೂ ಕ್ಷಣಿಕವಿಜ್ಞಾನವೇ ಆಗಿರುವಲ್ಲಿ ಒಂದನ್ನು ಮಾತ್ರ ಸಂಸ್ಕಾರಕ್ಕೆ ಆಶ್ರಯವೆನ್ನುವದಕ್ಕೆ ಹೇತುವಿಲ್ಲ ಎಂದರ್ಥ.

2. ಒಂದರಿಂದ ಮತ್ತೊಂದರಲ್ಲಿ ಉಂಟಾಗುವ ವಾಸನೆ. ಆಗಿಹೋಗಿರುವದನ್ನು ಈಗ ನೆನಪಿಗೆ ತಂದುಕೊಳ್ಳುವದು, ಅದೇ ಇದೆಂದು ಗುರುತುಹಿಡಿಯುವದು – ಇವು ಕ್ಷಣಿಕವಾದಕ್ಕೆ ಹೊಂದುವದಿಲ್ಲ.

ಮತ್ತು ವಿಜ್ಞಾನವಾದದಲ್ಲಿಯೂ ಕ್ಷಣಿಕತ್ವವನ್ನೊಪ್ಪಿರುವದು ಸಮಾನವಾಗಿರುವದರಿಂದ ಬಾಹ್ಯಾರ್ಥವಾದದಲ್ಲಿ "ಉತ್ತರೋತ್ಪಾದೇ ಚ ಪೂರ್ವನಿರೋಧಾತ್" (ಮುಂದಿನ ಕ್ಷಣವು ಉತ್ಪನ್ನವಾದರೆ ಹಿಂದಿನ ಕ್ಷಣವು ನಾಶವಾಗುವದರಿಂದ) ಎಂದು ಮುಂತಾಗಿ ಕ್ಷಣಿಕತ್ವನಿಮಿತ್ತದಿಂದ (ಆಗುವ) ಯಾವ ದೋಷಗಳನ್ನು ಹಿಂದೆ ಎತ್ತಿಹಿಡಿದಿತ್ತೋ ಅವುಗಳನ್ನು ಇಲ್ಲಿಯೂ ಅನುಸಂಧಾನ ಮಾಡಬೇಕು.[1]

## ಶೂನ್ಯವಾದದಲ್ಲಿ ದೋಷ

( ಭಾಷ್ಯ )

೬೪. ಏವಮ್ ಏತೌ ದ್ವಾವಪಿ ವೈನಾಶಿಕಪಕ್ಷೌ ನಿರಾಕೃತೌ ಬಾಹ್ಯಾರ್ಥವಾದಿಪಕ್ಷಃ । ವಿಜ್ಞಾನವಾದಿಪಕ್ಷಶ್ಚ । ಶೂನ್ಯವಾದಿಪಕ್ಷಸ್ತು ಸರ್ವಪ್ರಮಾಣಪ್ರತಿಷಿದ್ಧಃ ಇತಿ ತನ್ನಿರಾಕರಣಾಯ ನಾದರಃ ಕ್ರಿಯತೇ । ನ ಹಿ ಅಯಂ ಸರ್ವಪ್ರಮಾಣಪ್ರಸಿದ್ಧೋ ಲೋಕವ್ಯವಹಾರಃ ಅನ್ಯತ್ ತತ್ತ್ವಮನಧಿಗಮ್ಯ ಶಕ್ಯತೇ ಅಪಹ್ನೋತುಮ್ ಅಪವಾದಾಭಾವೇ ಉತ್ಸರ್ಗಪ್ರಸಿದ್ಧೇಃ ॥

(ಭಾಷ್ಯಾರ್ಥ)

ಹೀಗೆ ಬಾಹ್ಯಾರ್ಥವಾದಿಪಕ್ಷ, ವಿಜ್ಞಾನವಾದಿಪಕ್ಷ– ಎಂಬೀ ಎರಡು ವೈನಾಶಿಕಪಕ್ಷಗಳನ್ನೂ ನಿರಾಕರಿಸಿದ್ದಾಯಿತು. ಶೂನ್ಯವಾದಿಪಕ್ಷವಾದರೋ ಎಲ್ಲಾ ಪ್ರಮಾಣಗಳಿಗೂ ವಿರುದ್ಧವಾಗಿರುವದರಿಂದ (ನಾವು) ಅದನ್ನು ನಿರಾಕರಣಮಾಡುವದರಲ್ಲಿ ಆದರವನ್ನು ತೋರುವದಿಲ್ಲ. ಏಕೆಂದರೆ ಈ ಸರ್ವಪ್ರಮಾಣಸಿದ್ಧವಾದ ಲೋಕವ್ಯವಹಾರವನ್ನು ಮತ್ತೊಂದು ತತ್ತ್ವವನ್ನು ಆಶ್ರಯಿಸಿದ ಹೊರತು ಅಲ್ಲಗಳೆಯುವದಕ್ಕೆ ಆಗಲಾರದು. ಏಕೆಂದರೆ ಅಪವಾದವಿಲ್ಲದಿದ್ದರೆ ಸಾಮಾನ್ಯವು ಸಿದ್ಧವಾಗಿಯೇ ಇರುತ್ತದೆ.[2]

---

1. ಆಲಯವಿಜ್ಞಾನವು ಸಂಸ್ಕಾರವಾಗುವವರೆಗೆ ನಿಲ್ಲಲಾರದು, ಹೇತುಫಲಭಾವವು ಈ ಮತದಲ್ಲಿಯೂ ಉಪಪನ್ನವಾಗುವದಿಲ್ಲ, ಉತ್ಪಾದನಿರೋಧಗಳೂ ಹೊಂದುವದಿಲ್ಲ– ಎಂದರ್ಥ.

2. ಪ್ರಮಾಣಪ್ರಮೇಯವ್ಯವಹಾರವು ಸಾರ್ವತ್ರಿಕವಾಗಿದೆ ; ಇದು ಭ್ರಾಂತಿ ಎಂದು ಕೈಬಿಡುವ ಮುಂಚೆ ಇದಕ್ಕೆ ಬಾಧಕವಾದ ತತ್ತ್ವಜ್ಞಾನವನ್ನು ತೋರಿಸಿಕೊಡುವದು ಆವಶ್ಯ. ಶೂನ್ಯವಾದದಲ್ಲಿ ಅಂಥ ತತ್ತ್ವಜ್ಞಾನಕ್ಕೆ ಅವಕಾಶವೇ ಇಲ್ಲ ಎಂದು ಅಭಿಪ್ರಾಯ. ವೇದಾಂತದಲ್ಲಾದರೆ ಪ್ರಮಾಣಪ್ರಮೇಯವ್ಯವಹಾರವು ಅಧ್ಯಾಸನಿಮಿತ್ತವೆಂದೂ ಅದ್ವಿತೀಯಾತ್ಮತತ್ತ್ವವೇ ಪರಮಾರ್ಥವೆಂದೂ ತೋರಿಸಿಕೊಡುವದರಿಂದ ಈ ದೋಷವಿಲ್ಲ ಎಂದು ಭಾವ.

**ಸರ್ವಥಾನುಪಪತ್ತೇಶ್ಚ ॥ ೩೨ ॥**

೩೨. ಸರ್ವಪ್ರಕಾರದಿಂದಲೂ ಅನುಪಪನ್ನವಾಗಿರುವದರಿಂದಲೂ (ಈ ಮತವು ಸರಿಯಲ್ಲ).

## ಬೌದ್ಧಮತನಿರಾಕರಣೆಯ ಉಪಸಂಹಾರ

(ಭಾಷ್ಯ)

೬೫. ಕಿಂ ಬಹುನಾ ? ಸರ್ವಪ್ರಕಾರೇಣ ಯಥಾಯಥಾಽಯಂ ವೈನಾಶಿಕಸಮಯಃ ಉಪಪತ್ತಿಮತ್ತ್ವಾಯ ಪರೀಕ್ಷ್ಯತೇ, ತಥಾತಥಾ ಸಿಕತಾಕೂಪವದ್ ವಿದೀರ್ಯತ ಏವ । ನ ಕಾಂಚಿದಪಿ ಅತ್ರ ಉಪಪತ್ತಿಂ ಪಶ್ಯಾಮಃ । ಅತಶ್ಚ ಅನುಪಪನ್ನೋ ವೈನಾಶಿಕತನ್ತ್ರವ್ಯವಹಾರಃ । ಅಪಿ ಚ ಬಾಹ್ಯಾರ್ಥವಿಜ್ಞಾನಶೂನ್ಯವಾದತ್ರಯಮ್ ಇತರೇತರವಿರುದ್ಧಮ್ ಉಪದಿಶತಾ ಸುಗತೇನ ಸ್ಪಷ್ಟೀಕೃತಮ್ ಆತ್ಮನೋಽಸಂಬದ್ಧಪ್ರಲಾಪಿತ್ವಮ್, ಪ್ರದ್ವೇಷೋ ವಾ ಪ್ರಜಾಸು ವಿರುದ್ಧಾರ್ಥಪ್ರತಿಪತ್ತ್ಯಾ ವಿಮುಹ್ಯೇಯುರಿಮಾಃ ಪ್ರಜಾಃ ಇತಿ । ಸರ್ವಥಾಪಿ ಅನಾದರಣೀಯೋಽಯಂ ಸಂಗತಸಮಯಃ ಶ್ರೇಯಸ್ಕಾಮೈಃ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಹೆಚ್ಚು (ಹೇಳಿದ್ದ)ರಿಂದೇನು ? ಎಲ್ಲಾ ಪ್ರಕಾರದಿಂದಲೂ ಹೇಗೆಹೇಗೆ ಈ ವೈನಾಶಿಕಸಮಯವನ್ನು ಯುಕ್ತಿಯುಕ್ತವೆ, (ಅಲ್ಲವೆ)– ಎಂಬುದನ್ನು (ತಿಳಿಯುವದಕ್ಕಾಗಿ) ಪರೀಕ್ಷಿಸುವೆವೋ ಹಾಗೆಹಾಗೆ ಮರಳುಹಗೇವಿನಂತೆ ಬಿಟ್ಟುಕೊಳ್ಳುತ್ತಲೇ ಹೋಗುತ್ತದೆ. ಇದರಲ್ಲಿ ಯಾವ ಉಪಪತ್ತಿಯನ್ನೂ ಕಾಣೆವು. ಆದ್ದರಿಂದಲೂ ವೈನಾಶಿಕಸಮಯವು ಅನುಪಪನ್ನವಾಗುತ್ತದೆ.

ಇದಲ್ಲದೆ ಬಾಹ್ಯಾರ್ಥ, ವಿಜ್ಞಾನ, ಶೂನ್ಯ – ಎಂಬ ಒಂದಕ್ಕೊಂದು ವಿರುದ್ಧವಾದ ಮೂರು ವಾದಗಳನ್ನು ಉಪದೇಶಿಸಿರುವ ಸುಗತನು ತಾನು ಅಸಂಬದ್ಧಪ್ರಲಾಪಿಯೆಂಬುದನ್ನು, ಅಥವಾ ವಿರುದ್ಧವಾದ ಅರ್ಥಗಳನ್ನು ತಿಳಿದುಕೊಂಡು ಈ ಜನರು ಭ್ರಾಂತರಾಗಲಿ ಎಂದು ಜನರಲ್ಲಿ (ತನ್ನ) ದ್ವೇಷವನ್ನು ಸ್ಪಷ್ಟಗೊಳಿಸಿದಂತೆ (ಆಗಿರುತ್ತದೆ). ಹೇಗೆ ನೋಡಿದರೂ ಶ್ರೇಯಸ್ಕಾಮರಾದವರು ಈ ಸುಗತಸಮಯವನ್ನು ಅನಾದರಿಸತಕ್ಕದ್ದು[1] ಎಂದು ಅಭಿಪ್ರಾಯ.

---

[1] ಈ ವಿಷಯಕ್ಕೆ ಪೀಠಿಕೆಯನ್ನು ನೋಡಿ.

## ೬. ಏಕಸ್ಮಿನ್ನಸಂಭವಾಧಿಕರಣ (ಸೂ. ೩೩–೩೬)

(ಜೈನಮತಖಂಡನೆ)

**ನೈಕಸ್ಮಿನ್ನಸಂಭವಾತ್ ॥ ೩೩ ॥**

೩೩. ಒಂದರಲ್ಲಿಯೇ ಸಂಭವಿಸುವದಿಲ್ಲವಾದ್ದರಿಂದ (ಈ ಮತವು ಸರಿಯಲ್ಲ).

### ಜೈನರ ಸಪ್ತಭಂಗೀನಯ

(ಭಾಷ್ಯ)

೬೬. ನಿರಸ್ತಃ ಸುಗತಸಮಯಃ । ವಿವಸನಸಮಯಃ ಇದಾನೀಂ ನಿರಸ್ಯತೇ । ಸಪ್ತ ಚೈಷಾಂ ಪದಾರ್ಥಾಃ ಸಮ್ಮತಾಃ ಜೀವಾಜೀವಾಸ್ರವ ಸಂವರನಿರ್ಜರಬನ್ಧಮೋಕ್ಷಾ ನಾಮ । ಸಂಕ್ಷೇಪತಸ್ತು ದ್ವಾವೇವ ಪದಾರ್ಥೌ ಜೀವಾಜೀವಾಖ್ಯೌ । ಯಥಾಯೋಗಂ ತಯೋರೇವ ಇತರಾನ್ತರ್ಭಾವಾತ್ ಇತಿ ಮನ್ಯನ್ತೇ । ತಯೋರಿಮಮ್ ಅಪರಂ ಪ್ರಪಞ್ಚಮ್ ಆಚಕ್ಷತೇ ಪಞ್ಚಾಸ್ತಿಕಾಯಾ ನಾಮ – ಜೀವಾಸ್ತಿಕಾಯಃ, ಪುದ್ಗಲಾಸ್ತಿಕಾಯಃ, ಧರ್ಮಾಸ್ತಿಕಾಯಃ, ಅಧರ್ಮಾಸ್ತಿಕಾಯಃ, ಆಕಾಶಾಸ್ತಿಕಾಯಶ್ಚ ಇತಿ । ಸರ್ವೇಷಾಮಪಿ ಏಷಾಮ್ ಅವಾನ್ತರಪ್ರಭೇದಾನ್ ಬಹುವಿಧಾನ್ ಸ್ವಸಮಯ ಪರಿಕಲ್ಪಿತಾನ್ ವರ್ಣಯನ್ತಿ । ಸರ್ವತ್ರ ಚ ಇಮಂ ಸಪ್ತಭಙ್ಗೀನಯಂ ನಾಮ ನ್ಯಾಯಮ್ ಅವತಾರಯನ್ತಿ । ಸ್ಯಾದಸ್ತಿ, ಸ್ಯಾನ್ನಾಸ್ತಿ, ಸ್ಯಾದಸ್ತಿ ಚ ನಾಸ್ತಿ ಚ, ಸ್ಯಾದವಕ್ತವ್ಯಃ, ಸ್ಯಾದಸ್ತಿ ಚ ಅವಕ್ತವ್ಯಶ್ಚ, ಸ್ಯಾನ್ನಾಸ್ತಿ ಚ ಅವಕ್ತವ್ಯಶ್ಚ, ಸ್ಯಾದಸ್ತಿ ಚ ನಾಸ್ತಿ ಚ ಅವಕ್ತವ್ಯಶ್ಚ ಇತಿ । ಏವಮೇವ ಏಕತ್ವನಿತ್ಯತ್ವಾದಿಷ್ವಪಿ ಇಮಂ ಸಪ್ತಭಙ್ಗೀನಯಂ ಯೋಜಯನ್ತಿ ॥

(ಭಾಷ್ಯಾರ್ಥ)

ಸುಗತಸಮಯವನ್ನು ತಿರಸ್ಕರಿಸಿದ್ದಾಯಿತು. ಈಗ ದಿಗಂಬರಸಮಯವನ್ನು ತಿರಸ್ಕರಿಸಲಾಗುವದು[1]. ಇವರ ಮತದಲ್ಲಿ ಜೀವ, ಅಜೀವ, ಆಸ್ರವ, ಸಂವರ, ನಿರ್ಜರ, ಬಂಧ, ಮೋಕ್ಷ– ಎಂದು ಪದಾರ್ಥಗಳು ಏಳು. ಆದರೆ ಸಂಕ್ಷೇಪವಾಗಿ (ಹೇಳಿದರೆ) ಜೀವ, ಅಜೀವ– ಎಂಬ ಹೆಸರಿನ ಎರಡೇ ಪದಾರ್ಥ (ಗಳಿರುವವು) ; ಏಕೆಂದರೆ ಮಿಕ್ಕವುಗಳು ಈ ಎರಡರಲ್ಲಿಯೇ ಸಂಭವಾನು

1. ಜೈನಮತಖಂಡನೆಯ ಸಂಬಂಧದ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

ಸಾರವಾಗಿ ಅಡಕಮಾಡಬಹುದಾಗಿದೆ ಎಂದು (ಅವರ) ಮತವಿರುತ್ತದೆ. ಆ (ಎರಡಕ್ಕೆ) ಈ ಇನ್ನೊಂದು ವಿವರಣೆಯನ್ನು ಹೇಳುತ್ತಾರೆ. ಜೀವಾಸ್ತಿಕಾಯ, ಪುದ್ಗಲಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ– ಎಂದು ಐದು ಅಸ್ತಿಕಾಯಗಳೆಂಬವು (ಇರುವವು). ಇವುಗಳಲ್ಲೆಲ್ಲ ಬಹುವಿಧವಾದ ಅವಾಂತರಭೇದಗಳನ್ನು[1] ತಮ್ಮ ಸಮಯದಲ್ಲಿ ಕಲ್ಪಿಸಿಕೊಂಡು ಹೇಳುತ್ತಿರುವರು.

ಎಲ್ಲಾ (ವಿಷಯದಲ್ಲಿಯೂ) ಈ ಸಪ್ತಭಂಗೀನಯವೆಂಬ ನ್ಯಾಯವನ್ನು ತಂದಿಡುತ್ತಾರೆ: ಸ್ಯಾದಸ್ತಿ[2] (ಹೇಗೋ, ಒಂದು ದೃಷ್ಟಿಯಿಂದ, ಇದೆ), ಸ್ಯಾನ್ನಾಸ್ತಿ (ಒಂದು ದೃಷ್ಟಿಯಿಂದ ಇಲ್ಲ) ; ಸ್ಯಾದಸ್ತಿ ಚ ನಾಸ್ತಿ ಚ (ಒಂದು ದೃಷ್ಟಿಯಿಂದ ಇದ್ದೂ ಇಲ್ಲದೆಯೂ ಇದೆ) ; ಸ್ಯಾದವಕ್ತವ್ಯಃ (ಒಂದು ದೃಷ್ಟಿಯಿಂದ ಹೇಳುವದಕ್ಕಾಗದ್ದು) ; ಸ್ಯಾದಸ್ತಿ ಚ ವಕ್ತವ್ಯಶ್ಚ (ಒಂದು ದೃಷ್ಟಿಯಿಂದ ಇದ್ದೂ ಇದೆ, ಹೇಳುವದಕ್ಕೂ ಆಗುವದಿಲ್ಲ) ; ಸ್ಯಾನ್ನಾಸ್ತಿ ಚ ವಕ್ತವ್ಯಶ್ಚ (ಒಂದು ದೃಷ್ಟಿಯಿಂದ ಇಲ್ಲವೂ ಇಲ್ಲ, ಅವಕ್ತವ್ಯವೂ ಆಗಿದೆ) ; ಸ್ಯಾದಸ್ತಿ ಚ ನಾಸ್ತಿ ಚ ಅವಕ್ತವ್ಯಶ್ಚ (ಒಂದು ದೃಷ್ಟಿಯಿಂದ ಇದ್ದೂ ಇದೆ, ಇಲ್ಲವೂ ಇಲ್ಲ, ಅವಕ್ತವ್ಯವೂ ಆಗಿದೆ). ಹೀಗೆಯೇ ಏಕತ್ವ, ನಿತ್ಯತ್ವ– ಮುಂತಾದವುಗಳಲ್ಲಿಯೂ ಈ ಸಪ್ತಭಂಗೀನಯವನ್ನು ಯೋಜನೆಮಾಡುತ್ತಿರುವರು.

---

1. ಜೀವಾಸ್ತಿಕಾಯವು ಬದ್ಧ, ಮುಕ್ತ, ನಿತ್ಯಸಿದ್ಧ– ಎಂದು ಮೂರು ವಿಧ ; ಪುದ್ಗಲಾಸ್ತಿಕಾಯವು ಪೃಥಿವ್ಯಾದಿಭೂತಗಳು ನಾಲ್ಕು, ಸ್ಥಾವರ, ಜಂಗಮ– ಎಂದು ಆರು ವಿಧ ; ಧರ್ಮಾಸ್ತಿಕಾಯವು ಪ್ರವೃತ್ತ್ಯನುಮೇಯ, ಅಧರ್ಮಾಸ್ತಿಕಾಯವು ಸ್ಥಿತ್ಯನುಮೇಯ ; ಆಕಾಶವು ಲೋಕಾಕಾಶ, ಅಲೋಕಾಕಾಶ– ಎಂದು ಎರಡು ವಿಧ. ಒಂದರ ಮೇಲೊಂದು ಇರುವ ಲೋಕಗಳೊಳಗೆ ಇರುವದು ಲೋಕಾಕಾಶವು ; ಅವುಗಳ ಮೇಲೆ ಇರುವ ಮೋಕ್ಷಸ್ಥಾನವು ಅಲೋಕಾಕಾಶವು. ಹೀಗೆ ಜೀವಾಜೀವಗಳು ಐದು ಬಗೆ. ಆಸ್ರವ, ಸಂವರ, ನಿರ್ಜರ– ಇವು ಪ್ರವೃತ್ತಿಲಕ್ಷಣವಾಗಿರುತ್ತವೆ. ಪ್ರವೃತ್ತಿಯು ಸಮ್ಯಕ್ಪ್ರವೃತ್ತಿಯೆಂದೂ ಮಿಥ್ಯಾಪ್ರವೃತ್ತಿಯೆಂದೂ ಎರಡು ಬಗೆ. ಆಸ್ರವವು ಮಿಥ್ಯಾಪ್ರವೃತ್ತಿ, ಸಂವರನಿರ್ಜರಗಳು ಸಮ್ಯಕ್ಪ್ರವೃತ್ತಿಗಳು. ಬಂಧವು ಘಾತಿಕರ್ಮ ನಾಲ್ಕು, ಅಘಾತಿಕರ್ಮ ನಾಲ್ಕು– ಹೀಗೆ ಎಂಟು ಬಗೆ. ಎಲ್ಲಾ ಬಗೆಯ ಕ್ಲೇಶವೂ ಅದರ ವಾಸನೆಯೂ ಹೋಗಲು ಅನಾವರಣಜ್ಞಾನದಿಂದ ಸುಖೈಕತಾನನಾದ ಆತ್ಮನು ಮೇಲಿನ ದೇಶದಲ್ಲಿದ್ದುಕೊಂಡಿರುವದು ಮೋಕ್ಷವೆಂದು ಕೆಲವರು ; ಊರ್ಧ್ವಗಮನಶೀಲನಾದ ಜೀವನು ಬಂಧವನ್ನು ಕಳೆದುಕೊಂಡು ಮೇಲಕ್ಕೆ ಹೋಗುತ್ತಲೇ ಇರುವದು ಮೋಕ್ಷವೆಂದು ಕೆಲವರು. ಭಾಮತೀ ವ್ಯಾಖ್ಯಾನದ ಸಂಗ್ರಹ.

2. ಇಲ್ಲಿ 'ಸ್ಯಾತ್' ಎಂಬುದು ಅವ್ಯಯವು ; ಕ್ರಿಯಾಪದವಲ್ಲ.

# ಸಪ್ತಭಂಗೀನಯದ ಖಂಡನೆ

(ಭಾಷ್ಯ)

೬೭. ಅತ್ರಾಚಕ್ಷ್ಮಹೇ– ನಾಯಮ್ ಅಭ್ಯುಪಗಮೋ ಯುಕ್ತಃ ಇತಿ । ಕುತಃ ? ಏಕಸ್ಮಿನ್ ಅಸಂಭವಾತ್ । ನ ಹಿ ಏಕಸ್ಮಿನ್ ಧರ್ಮಿಣಿ ಯುಗಪತ್ ಸದಸತ್ತ್ವಾದಿವಿರುದ್ಧಧರ್ಮಸಮಾವೇಶಃ ಸಂಭವತಿ ಶೀತೋಷ್ಣವತ್ । ಯ ಏತೇ ಸಪ್ತಪದಾರ್ಥಾಃ ನಿರ್ಧಾರಿತಾಃ ಏತಾವನ್ತಃ ಏವಂರೂಪಾಶ್ಚ ಇತಿ । ತೇ ತಥೈವ ವಾ ಸ್ಯುಃ, ನೈವ ವಾ ತಥಾ ಸ್ಯುಃ । ಇತರಥಾ ಹಿ ತಥಾ ವಾ ಸ್ಯುಃ ಅತಥಾ ವಾ ಇತಿ ಅನಿರ್ಧಾರಿತರೂಪಂ ಜ್ಞಾನಂ ಸಂಶಯಜ್ಞಾನವತ್ ಅಪ್ರಮಾಣಮೇವ ಸ್ಯಾತ್ । ನನು ಅನೇಕಾತ್ಮಕಂ ವಸ್ತು ಇತಿ ನಿರ್ಧಾರಿತ ರೂಪಮೇವ ಜ್ಞಾನಮ್ ಉತ್ಪದ್ಯಮಾನಂ ಸಂಶಯಜ್ಞಾನವತ್ ನಾಪ್ರಮಾಣಂ ಭವಿತುಮರ್ಹತಿ । ನೇತಿ ಬ್ರೂಮಃ । ನಿರಙ್ಕುಶಂ ಹಿ ಅನೇಕಾನ್ತತ್ವಂ ಸರ್ವವಸ್ತುಷು ಪ್ರತಿಜಾನಾನಸ್ಯ ನಿರ್ಧಾರಣಸ್ಯಾಪಿ ವಸ್ತುತ್ವಾವಿಶೇಷಾತ್ 'ಸ್ಯಾದಸ್ತಿ', 'ಸ್ಯಾನ್ನಾಸ್ತಿ' ಇತ್ಯಾದಿ ವಿಕಲ್ಪೋಪನಿಪಾತಾತ್ ಅನಿರ್ಧಾರಣಾತ್ಮತೈವ ಸ್ಯಾತ್ । ಏವಂ ನಿರ್ಧಾರಯಿತುಃ ನಿರ್ಧಾರಣಫಲಸ್ಯ ಚ ಸ್ಯಾತ್ ಪಕ್ಷೇ ಅಸ್ತಿತಾ ಸ್ಯಾಚ್ಚ ಪಕ್ಷೇ ನಾಸ್ತಿತಾ ಇತಿ । ಏವಂ ಸತಿ ಕಥಂ ಪ್ರಮಾಣಭೂತಃ ಸನ್ ತೀರ್ಥಕರಃ ಪ್ರಮಾಣಪ್ರಮೇಯಪ್ರಮಾತೃಪ್ರಮಿತಿಷು ಅನಿರ್ಧಾರಿತಾಸು ಉಪದೇಷ್ಟುಂ ಶಕ್ನುಯಾತ್ ? ಕಥಂ ವಾ ತದಭಿಪ್ರಾಯಾನುಸಾರಿಣಃ ತದುಪದಿಷ್ಟೇ ಅರ್ಥೇ ಅನಿರ್ಧಾರಿತಸ್ವರೂಪೇ ಪ್ರವರ್ತೇರನ್ ? ಐಕಾನ್ತಿಕಫಲತ್ವನಿರ್ಧಾರಣೇ ಹಿ ಸತಿ ತತ್ಸಾಧನಾನುಷ್ಠಾನಾಯ ಸರ್ವೋ ಲೋಕೋ ಅನಾಕುಲಃ ಪ್ರವರ್ತತೇ ನಾನ್ಯಥಾ । ಅತಶ್ಚ ಅನಿರ್ಧಾರಿತಾರ್ಥಂ ಶಾಸ್ತ್ರಂ ಪ್ರಣಯನ್ ಮತ್ತೋನ್ಮತ್ತವತ್ ಅನುಪಾದೇಯವಚನಃ ಸ್ಯಾತ್ । ತಥಾ ಪಞ್ಚಾನಾಮ್ ಅಸ್ತಿಕಾಯಾನಾಂ ಪಞ್ಚತ್ವಸಂಖ್ಯಾ ಅಸ್ತಿ ವಾ ನಾಸ್ತಿ ವಾ ಇತಿ ವಿಕಲ್ಪ್ಯಮಾನಾ ಸ್ಯಾತ್ ತಾವದೇಕಸ್ಮಿನ್ ಪಕ್ಷೇ, ಪಕ್ಷಾನ್ತರೇ ತು ನ ಸ್ಯಾತ್ ಇತ್ಯತಃ ನ್ಯೂನಸಂಖ್ಯಾತ್ವಮಧಿಕಸಂಖ್ಯಾತ್ವಂ ವಾ ಪ್ರಾಪ್ನುಯಾತ್ । ನ ಚೈಷಾಂ ಪದಾರ್ಥಾನಾಮ್ ಅವಕ್ತವ್ಯತ್ವಂ ಸಂಭವತಿ । ಅವಕ್ತವ್ಯಾಶ್ಚೇತ್ ನೋಚ್ಯೇರನ್ । ಉಚ್ಯನ್ತೇ ಚ ಅವಕ್ತವ್ಯಾಶ್ಚ ಇತಿ ವಿಪ್ರತಿಷಿದ್ಧಮ್ । ಉಚ್ಯಮಾನಾಶ್ಚ ತಥೈವ ಅವಧಾರ್ಯನ್ತೇ ನಾವಧಾರ್ಯನ್ತೇ ಇತಿ ಚ । ತಥಾ ತದವಧಾರಣಫಲಂ ಸಮ್ಯಗ್ದರ್ಶನಮ್ ಅಸ್ತಿ ವಾ ನಾಸ್ತಿ ವಾ, ಏವಂ ತದ್ವಿಪರೀತಮ್ ಅಸಮ್ಯಗ್ದರ್ಶನಮಪಿ ಅಸ್ತಿ ವಾ ನಾಸ್ತಿ ವಾ ಇತಿ ಪ್ರಲಪನ್ ಮತ್ತೋನ್ಮತ್ತಪಕ್ಷಸ್ಯೈವ ಸ್ಯಾತ್ ನ ಪ್ರತ್ಯಾಯಿತವ್ಯಪಕ್ಷಸ್ಯ । ಸ್ವರ್ಗಾಪವರ್ಗಯೋಶ್ಚ ಪಕ್ಷೇ ಭಾವಃ, ಪಕ್ಷೇ ಚ ಅಭಾವಃ,

ತಥಾ ಪಕ್ಷೇ ನಿತ್ಯತಾ ಪಕ್ಷೇ ಚ ಅನಿತ್ಯತಾ ಇತ್ಯನವಧಾರಣಾಯಾಂ ಪ್ರವೃತ್ತ್ಯ ನುಪಪತ್ತಿಃ । ಅನಾದಿಸಿದ್ಧಜೀವಪ್ರಭೃತೀನಾಂ ಚ ಸ್ವಶಾಸ್ತ್ರಾವಧೃತಸ್ವಭಾವಾ ನಾಮ್ ಅಯಥಾವಧೃತಸ್ವಭಾವತ್ವಪ್ರಸಙ್ಗಃ। ಏವಂ ಜೀವಾದಿಷು ಪದಾರ್ಥೇ ಷು ಏಕಸ್ಮಿನ್ ಧರ್ಮಿಣಿ ಸತ್ತ್ವಾಸತ್ತ್ವಯೋರ್ವಿರುದ್ಧಯೋರ್ಧರ್ಮಯೋರ ಸಂಭವಾತ್, ಸತ್ತ್ವೇ ಚ ಏಕಸ್ಮಿನ್ ಧರ್ಮೇ ಅಸತ್ತ್ವಸ್ಯ ಧರ್ಮಾನ್ತರಸ್ಯ ಅಸಂಭವಾತ್, ಅಸತ್ತ್ವೇ ಚ ಏವಂ ಸತ್ತ್ವಸ್ಯ ಅಸಂಭವಾತ್ ಅಸಙ್ಗತ ಮಿದಮ್ ಆರ್ಹತಂ ಮತಮ್ । ಏತೇನ ಏಕಾನೇಕನಿತ್ಯಾನಿತ್ಯವ್ಯತಿರಿಕ್ತಾ ವ್ಯತಿರಿಕ್ತಾದ್ಯನೇಕಾನ್ತಾಭ್ಯುಪಗಮಾಃ ನಿರಾಕೃತಾ ಮನ್ತವ್ಯಾಃ ॥

(ಭಾಷ್ಯಾರ್ಥ)

ಈ (ವಿಷಯದಲ್ಲಿ ನಾವು) ಹೇಳುವದೇನೆಂದರೆ: ಈ ಅಭ್ಯುಪಗಮವು ಯುಕ್ತವಲ್ಲ. ಏಕೆ ? ಎಂದರೆ ಒಂದರಲ್ಲಿಯೇ ಸಂಭವಿಸುವದಿಲ್ಲವಾದ್ದರಿಂದ. (ಇದರ ವಿವರ) : ಒಂದೇ ಧರ್ಮಿಯಲ್ಲಿ ಒಂದೇ ಕಾಲಕ್ಕೆ ಸತ್ತ್ವ, ಅಸತ್ತ್ವ ಮುಂತಾದ ಶೀತೋಷ್ಣಗಳಂತೆ ವಿರುದ್ಧವಾದ ಧರ್ಮಗಳು ಒಂದೇ ಕಾಲದಲ್ಲಿ ಸೇರಿಕೊಂಡಿರುವದು ಸಂಭವಿಸಲಾರದಷ್ಟೆ. ಈ ಏಳು ಪದಾರ್ಥಗಳು ಇಷ್ಟು, ಇಂಥವು ಎಂದು ನಿರ್ಧರಿಸಿದ್ದೀರಷ್ಟೆ, ಇವು ಹಾಗೆಯೇ ಇದ್ದಾದರೂ ಇರಬೇಕು, ಅಥವಾ ಹಾಗಿಲ್ಲವೇ ಇಲ್ಲ ಎಂದಾದರೂ ಆಗಬೇಕು. ಏಕೆಂದರೆ ಹೀಗಿಲ್ಲದಿದ್ದರೆ ಹಾಗಾದರೂ ಇರಬಹುದು, ಹಾಗಲ್ಲದೆಯೊ ದರೂ ಇರಬಹುದು– ಎಂಬ ಅನಿರ್ಧಾರಿತರೂಪದ ಜ್ಞಾನವು ಸಂಶಯಜ್ಞಾನದಂತೆ ಅಪ್ರಮಾಣವೇ ಆಗಿಬಿಡುವದು.

(ಜೈನ):– ವಸ್ತುವು ಅನೇಕಾತ್ಮಕವೇ ಎಂದು ನಿರ್ಧಾರಿತರೂಪವಾಗಿಯೇ ಜ್ಞಾನವು ಹುಟ್ಟುವದರಿಂದ ಸಂಶಯಜ್ಞಾನದಂತೆ ಅಪ್ರಮಾಣವಾಗಲಾರ ದಲ್ಲವೆ ?

(ಸಿದ್ಧಾಂತಿ):– ಹಾಗಲ್ಲ ಎನ್ನುತ್ತೇವೆ. ಅನೇಕಾಂತತ್ವವು 'ನಿರಂಕುಶ ವಾಗಿ ಎಲ್ಲಾ ವಸ್ತುಗಳಲ್ಲಿಯೂ ಇದೆ ಎನ್ನುವ ನಿನಗೆ ನಿರ್ಧಾರಣೆಯೂ ವಸ್ತು ವೆಂಬುದು ಸಮಾನವಾಗಿರುವದರಿಂದ ಸ್ಯಾದಸ್ತಿ, ಸ್ಯಾನ್ನಾಸ್ತಿ– ಮುಂತಾದ ವಿಕಲ್ಪವು (ಅದಕ್ಕೂ) ಬಂದೊದಗುವದರಿಂದ (ಅದೂ) ಅನಿರ್ಧಾರಣರೂಪ ವೆಂದೇ ಆಗುವದು. ಇದರಂತೆ ನಿರ್ಧಾರಣೆಮಾಡುವವನೂ ನಿರ್ಧಾರಣೆಯ ಫಲವೂ (ಒಂದು) ಪಕ್ಷದಲ್ಲಿ ಇವೆಯೆಂದಾಗಬಹುದು, (ಇನ್ನೊಂದು) ಪಕ್ಷದಲ್ಲಿ ಇಲ್ಲವೆಂದೂ ಆಗಬಹುದು. ಹೀಗಿರುವಲ್ಲಿ ಪ್ರಮಾಣಭೂತನಾಗಿರುವ ತೀರ್ಥ ಕರನು ಪ್ರಮಾಣಪ್ರಮೇಯಪ್ರಮಾತೃಪ್ರಮಿತಿಗಳು ಅನಿರ್ಧಾರಿತವಾಗಿರುವದ

ರಿಂದ ಹೇಗೆತಾನೆ ಉಪದೇಶಮಾಡಲಾಪನು ? ಅವನ ಅಭಿಪ್ರಾಯವನ್ನು ಅನುಸರಿಸುವವರು ಆತನು ಉಪದೇಶಿಸಿದ ಅನಿರ್ಧಾರಿತರೂಪವಾದ ವಿಷಯದಲ್ಲಿ ಹೇಗೆತಾನೆ ಪ್ರವರ್ತಿಸಿಯಾರು ? ನಿಯತವಾಗಿ ಫಲವುಂಟೆಂದು ಗೊತ್ತಾದರೇ ಅದರ ಸಾಧನಕ್ಕಾಗಿ ಪ್ರತಿಯೊಬ್ಬನೂ ಅನಾಕುಲನಾಗಿ ಪ್ರವರ್ತಿಸುವನೇ ಹೊರತು ಹಾಗಿಲ್ಲವಾದರೆ (ಪ್ರವರ್ತಿಸುವ)ದಿಲ್ಲ. ಹೀಗಿರುವದರಿಂದ ಅನಿರ್ಧಾರಿತ ವಾದ ಶಾಸ್ತ್ರವನ್ನು ರಚಿಸುವವನು ಮತ್ತನಂತೆಯೂ ಉನ್ಮತ್ತನಂತೆಯೂ ಅನಾದರಿಸತಕ್ಕ ಮಾತಿನವನಾದಾನು. ಇದರಂತೆ ಪಂಚಾಸ್ತಿಕಾಯಗಳಲ್ಲಿ ಐದೆಂಬ ಸಂಖ್ಯೆ ಇದೆಯೆ, ಇಲ್ಲವೆ ?– ಎಂದು ವಿಕಲ್ಪಿಸಿದರೆ ಮೊದಲನೆಯ ದಾಗಿ ಒಂದು ಪಕ್ಷದಲ್ಲಿ ಇರಬಹುದಾಗುವದು, ಇನ್ನೊಂದು ಪಕ್ಷದಲ್ಲಿ ಯಾದರೋ ಇಲ್ಲದೆಯೂ ಇರಬಹುದು ; ಆದ್ದರಿಂದ ಕಡಿಮೆಯ ಸಂಖ್ಯೆಯು ಅಥವಾ ಹೆಚ್ಚಿನ ಸಂಖ್ಯೆಯು ಬಂದೊದಗುವದು.

ಈ ಪದಾರ್ಥಗಳು ಅವಕ್ತವ್ಯವೆಂಬುದೂ ಸಂಭವಿಸುವದಿಲ್ಲ. (ಏಕೆಂದರೆ) ಅವಕ್ತವ್ಯವಾದರೆ (ಅವುಗಳನ್ನು) ಹೇಳುವದೇ ಆಗಲಾರದು ; ಹೇಳುತ್ತೇವೆ, ಆದರೆ ಅವಕ್ತವ್ಯಗಳು ಎಂಬುದು (ಒಂದಕ್ಕೊಂದು) ವಿರುದ್ಧವು[1]. ಹೇಳಿದ ಮೇಲೆ ಹಾಗೆಂದೇ ನಿಶ್ಚಯವಾಗುತ್ತವೆ, ನಿಶ್ಚಯವಾಗುವದೂ ಇಲ್ಲ, ಎಂಬಿದೂ (ಒಂದಕ್ಕೊಂದು ವಿರುದ್ಧವು). ಹೀಗೆಯೇ ಈ (ಪದಾರ್ಥಗಳ) ನಿಶ್ಚಯದ ಫಲವಾದ ಸಮ್ಯಗ್ದರ್ಶನವು ಇದೆ ಅಥವಾ ಇಲ್ಲ ; ಇದರಂತೆ ಅದಕ್ಕೆ ವಿಪರೀತ ವಾದ ಅಸಮ್ಯಗ್ದರ್ಶನವೂ ಇದೆ ಅಥವಾ ಇಲ್ಲ ಎಂದು ಗಳಹುತ್ತಿರುವವನು ಮತ್ತೋನ್ಮತ್ತಪಕ್ಷಕ್ಕೆ (ಸೇರಿದವನಾ)ದಾನೇ ಹೊರತು ವಿಶ್ವಾಸವಿಡತಕ್ಕವರ ಪಕ್ಷಕ್ಕೆ ಸೇರಿದವನಾಗಲಾರನು. ಸ್ವರ್ಗಮೋಕ್ಷಗಳೂ ಒಂದು ಪಕ್ಷದಲ್ಲಿ ಇವೆ, ಇನ್ನೊಂದು ಪಕ್ಷದಲ್ಲಿ ಇಲ್ಲ ; ಮತ್ತು ಒಂದು ಪಕ್ಷದಲ್ಲಿ ನಿತ್ಯ, ಇನ್ನೊಂದು ಪಕ್ಷದಲ್ಲಿ ಅನಿತ್ಯ– ಎಂದು ಅನಿಶ್ಚಿತವಾಗಿಯೇ ಇದ್ದರೆ (ಅವುಗಳಿಗಾಗಿ) ಪ್ರವೃತ್ತಿ ಯೇ ಹೊಂದುವದಿಲ್ಲ. ಅನಾದಿಸಿದ್ಧಜೀವರೇ ಮುಂತಾದವರೆಂದು[2] ತಮ್ಮ ಶಾಸ್ತ್ರದಲ್ಲಿ ನಿಶ್ಚಯಿಸಿದ ಸ್ವಭಾವವುಳ್ಳವರು (ಕೂಡ) ನಿಶ್ಚಯಿಸಿದ ಸ್ವಭಾವ ದವರಲ್ಲವೆಂದೂ ಆಗಬಹುದಾಗುವದು[3]. ಹೀಗೆಯೇ ಜೀವರು– ಮುಂತಾದ

1. ಜೈನರ ಅವಕ್ತವ್ಯವಾದಕ್ಕೂ ವೇದಾಂತಿಗಳ ಅನಿರ್ವಚನೀಯವಾದಕ್ಕೂ ಇರುವ ಸಂಬಂಧದ ವಿಷಯಕ್ಕೆ ಪೀಠಿಕೆಯನ್ನು ನೋಡಿ.

2. ಅನಾದಿಸಿದ್ಧಜೀವರು (ನಿತ್ಯಮುಕ್ತರು), ಸಾಧನದಿಂದ ಮುಕ್ತರಾಗುವವರು, ಸಾಧನವಿಲ್ಲದ್ದರಿಂದ ಬದ್ಧರಾಗಿರುವವರು– ಹೀಗೆ ಜೀವರುಗಳಲ್ಲಿ ಮೂರು ಪ್ರಭೇದಗಳನ್ನು ಈ ಮತದಲ್ಲಿ ನಿರ್ಧರಿಸಿದೆ.

3. ನಿತ್ಯಮುಕ್ತರೂ ಒಂದು ಪಕ್ಷದಲ್ಲಿ ಸಾಧನದಿಂದ ಮುಕ್ತರಾಗುವವರೋ ಬದ್ಧರೋ ಆಗಬಹುದಾಗುವದು ; ಹೀಗೆಯೇ ಸಾಧಕರೂ ನಿತ್ಯಮುಕ್ತರೋ ಬದ್ಧರೋ ಆಗಬಹುದಾಗುವದು ಎಂದರ್ಥ.

ಪದಾರ್ಥಗಳಲ್ಲಿ ಒಂದೇ ಧರ್ಮಿಯಲ್ಲಿ ಸತ್ತ್ವಾಸತ್ತ್ವಗಳೆಂಬ ವಿರುದ್ಧಧರ್ಮಗಳು ಹೊಂದುವದಿಲ್ಲವಾದ್ದರಿಂದ ಸತ್ತ್ವವೆಂಬ ಒಂದು ಧರ್ಮ(ವಿದ್ದರೆ) ಅಸತ್ತ್ವವೆಂಬ ಮತ್ತೊಂದು ಧರ್ಮವು ಸಂಭವಿಸುವದಿಲ್ಲವಾದ್ದರಿಂದಲೂ ಹಾಗೆಯೇ ಅಸತ್ತ್ವವಿದ್ದರೆ ಸತ್ತ್ವವು ಹೊಂದದೆ ಇರುವದರಿಂದಲೂ ಈ ಆರ್ಹತಮತವು[1] ಅಸಂಗತವಾಗಿರುತ್ತದೆ. ಇದರಿಂದಲೇ ಏಕತ್ವ, ಅನೇಕತ್ವ; ನಿತ್ಯತ್ವ, ಅನಿತ್ಯತ್ವ; ವ್ಯತಿರಿಕ್ತತ್ವ, ಅವ್ಯತಿರಿಕ್ತತ್ವ– ಮುಂತಾದ ಅನೇಕಾಂತಗಳ ಅಭ್ಯುಪಗಮಗಳನ್ನೂ ನಿರಾಕರಿಸಿದಂತೆ ಆಯಿತೆಂದು ತಿಳಿಯಬೇಕು.

## ಪುದ್ಗಲವಾದದ ಖಂಡನೆ

(ಭಾಷ್ಯ)

೬೮. ಯತ್ತು ಪುದ್ಗಲಸಂಜ್ಞಕೇಭ್ಯೋಽಣುಭ್ಯಃ ಸಙ್ಘಾತಾಃ ಸಂಭವನ್ತಿ ಇತಿ ಕಲ್ಪಯನ್ತಿ, ತತ್ ಪೂರ್ವೇಣೈವ ಅಣುವಾದನಿರಾಕರಣೇನ ನಿರಾಕೃತಂ ಭವತಿ ಇತ್ಯತೋ ನ ಪೃಥಕ್ ತನ್ನಿರಾಕರಣಾಯ ಪ್ರಯತ್ಯತೇ ॥

(ಭಾಷ್ಯಾರ್ಥ)

ಇನ್ನು **ಪುದ್ಗಲ**ವೆಂಬ ಹೆಸರಿನ ಅಣುಗಳಿಂದ ಸಂಘಾತಗಳುಂಟಾಗುವವೆಂದು ಕಲ್ಪಿಸುತ್ತಾರಷ್ಟೆ; ಅದನ್ನು ಹಿಂದೆ ಮಾಡಿರುವ ಅಣುವಾದದ ನಿರಾಕರಣೆಯಿಂದಲೇ ನಿರಾಕರಿಸಿದಂತಾಗಿದೆಯಾದ್ದರಿಂದ[2] (ಇಲ್ಲಿ) ಮತ್ತೆ ಅದರ ನಿರಾಕರಣೆಗೆ ಪ್ರಯತ್ನಿಸುವದಿಲ್ಲ.

**ಏವಂ ಚಾತ್ಮಾಕಾರ್ತ್ಸ್ನ್ಯಮ್ ॥ ೩೪ ॥**

೩೪. ಹೀಗೆಯೇ ಆತ್ಮನಿಗೆ ಅಕಾರ್ತ್ಸ್ನ್ಯವೂ (ಬಂದೊದಗುತ್ತದೆ).

(ಭಾಷ್ಯ)

೬೯. ಯಥಾ ಏಕಸ್ಮಿನ್ ಧರ್ಮಿಣಿ ವಿರುದ್ಧಧರ್ಮಾಸಂಭವೋ ದೋಷಃ ಸ್ಯಾದ್ವಾದೇ ಪ್ರಸಕ್ತಃ, ಏವಮ್ ಆತ್ಮನೋಽಪಿ ಜೀವಸ್ಯ ಅಕಾರ್ತ್ಸ್ನ್ಯಮ್

---

1. ನಿತ್ಯಮುಕ್ತರಿಗೆ ಅರ್ಹಂತರೆಂದು ಹೆಸರು. ಅರ್ಹಂತರನ್ನು ಗೌರವಿಸುವವರು ಆರ್ಹತರು.

2. ಅಣುಗಳಿಗೆ ಮೊದಲಿನ ಸಂಯೋಗವಾಗುವದಕ್ಕೆ ನಿಮಿತ್ತವಿಲ್ಲ– ಎಂಬುದೇ ಮುಂತಾದ ನಿರಾಕರಣಕಾರಣವು ಇಲ್ಲಿಯೂ ಇದೆ ಎಂದು ಭಾವ.

ಅಪರೋ ದೋಷಃ ಪ್ರಸಜ್ಯೇತ । ಕಥಮ್ ? ಶರೀರಪರಿಮಾಣೋ ಹಿ ಜೀವಃ ಇತಿ ಆರ್ಹತಾ ಮನ್ಯನ್ತೇ । ಶರೀರಪರಿಮಾಣತಾಯಾಂ ಚ ಸತ್ಯಾಮ್ ಅಕೃತ್ಸ್ನೋಽಸರ್ವಗತಃ ಪರಿಚ್ಛಿನ್ನ ಆತ್ಮಾ ಇತ್ಯತಃ ಘಟಾದಿವತ್ ಅನಿತ್ಯತ್ವಮ್ ಆತ್ಮನಃ ಪ್ರಸಜ್ಯೇತ । ಶರೀರಾಣಾಂ ಚ ಅನವಸ್ಥಿತಪರಿಮಾಣತ್ವಾತ್ ಮನುಷ್ಯ ಜೀವಃ ಮನುಷ್ಯಶರೀರಪರಿಮಾಣೋ ಭೂತ್ವಾ ಪುನಃ ಕೇನಚಿತ್ ಕರ್ಮ ವಿಪಾಕೇನ ಹಸ್ತಿಜನ್ಮ ಪ್ರಾಪ್ನುವನ್ ನ ಕೃತ್ಸ್ನಂ ಹಸ್ತಿಶರೀರಂ ವ್ಯಾಪ್ನುಯಾತ್ । ಪುತ್ತಿಕಾಜನ್ಮ ಚ ಪ್ರಾಪ್ನುವನ್ ನ ಕೃತ್ಸ್ನಃ ಪುತ್ತಿಕಾಶರೀರೇ ಸಂಮೀಯೇತ । ಸಮಾನ ಏಷಃ ಏಕಸ್ಮಿನ್ನಪಿ ಜನ್ಮನಿ ಕೌಮಾರಯೌವನ ಸ್ಥಾವಿರೇಷು ದೋಷಃ । ಸ್ಯಾದೇತತ್ । ಅನನ್ತಾವಯವೋ ಜೀವಃ ತಸ್ಯ ತ ಏವಾವಯವಾಃ ಅಲ್ಪೇ ಶರೀರೇ ಸಂಕುಚೇಯುಃ ಮಹತಿ ಚ ವಿಕಸೇಯುಃ ಇತಿ । ತೇಷಾಂ ಪುನರನನ್ತಾನಾಂ ಜೀವಾವಯವಾನಾಂ ಸಮಾನದೇಶತ್ವಂ ಪ್ರತಿಹನ್ಯತೇ ವಾ ನ ವಾ ಇತಿ ವಕ್ತವ್ಯಮ್ । ಪ್ರತಿಘಾತೇ ತಾವತ್ ನಾನನ್ತಾವಯವಾಃ ಪರಿಚ್ಛಿನ್ನೇ ದೇಶೇ ಸಂಮೀಯೇರನ್ । ಅಪ್ರತಿ ಘಾತೇಽಪಿ ಏಕಾವಯವದೇಶತ್ವೋಪಪತ್ತೇಃ ಸರ್ವೇಷಾಮ್ ಅವಯವಾನಾಂ ಪ್ರಥಿಮಾನುಪಪತ್ತೇಃ ಜೀವಸ್ಯ ಅಣುಮಾತ್ರತ್ವಪ್ರಸಙ್ಗಃ ಸ್ಯಾತ್ । ಅಪಿ ಚ ಶರೀರಮಾತ್ರಪರಿಚ್ಛಿನ್ನಾನಾಂ ಜೀವಾವಯವಾನಾಮ್ ಆನನ್ತ್ಯಂ ನೋತ್ಪ್ರೇಕ್ಷಿತುಮಪಿ ಶಕ್ಯಮ್ ॥

(ಭಾಷ್ಯಾರ್ಥ)

ಹೇಗೆ ಒಂದೇ ಧರ್ಮಿಯಲ್ಲಿ ವಿರುದ್ಧವಾದ ಧರ್ಮಗಳು ಸಂಭವಿಸುವದಿಲ್ಲವೆಂಬ ದೋಷವು ಸ್ಯಾದ್ವಾದದಲ್ಲಿ ಪ್ರಸಕ್ತವಾಗುತ್ತದೆಯೋ ಹೀಗೆಯೇ ಆತ್ಮನಿಗೂ ಎಂದರೆ ಜೀವನಿಗೂ ಅಕಾರ್ತ್ಸ್ನ್ಯ ಎಂಬ ಮತ್ತೊಂದು ದೋಷವೂ ಪ್ರಸಕ್ತವಾಗುವದು. ಹೇಗೆ ? ಎಂದರೆ, ಜೀವನು ಶರೀರಪರಿಮಾಣನು ಎಂದಲ್ಲವೆ, ಆರ್ಹತರ ಮತವು ? ಆದರೆ ಶರೀರಪರಿಮಾಣದವನಾದರೆ ಆತ್ಮನು ಅಕೃತ್ಸ್ನನು, ಅಸರ್ವಗತನು, ಪರಿಚ್ಛಿನ್ನನು (ಎಂದಾಗುತ್ತದೆ) ; ಆದ್ದರಿಂದ ಗಡಿಗೆಯೇ ಮುಂತಾದವುಗಳಂತೆ (ಆತ್ಮನಿಗೆ) ಅನಿತ್ಯತ್ವವು ಪ್ರಸಕ್ತವಾಗುವದು. (ಹೇಗೆಂದರೆ) ಶರೀರಗಳಿಗೆ (ಇಂತಿಷ್ಟೆಂದು) ಗೊತ್ತಾದ ಪರಿಮಾಣವಿಲ್ಲವಾದ್ದರಿಂದ ಮನುಷ್ಯಜೀವನವು ಮನುಷ್ಯಶರೀರದ ಪರಿಮಾಣವುಳ್ಳವನಾಗಿ ಮತ್ತೆ ಯಾವದಾದರೊಂದು ಕರ್ಮವಿಪಾಕದಿಂದ ಆನೆಯ ಜನ್ಮವನ್ನು ಪಡೆದರೆ ಆನೆಯ ಶರೀರವಷ್ಟನ್ನೂ ವ್ಯಾಪಿಸಿಕೊಳ್ಳಲಾರದೆ ಹೋಗುವನು. ಗೆದ್ದಲಿನ ಜನ್ಮವನ್ನು ಪಡೆದರೆ ಪೂರ್ಣವಾಗಿ (ಆ) ಗೆದ್ದಲಿನ ಶರೀರದಲ್ಲಿ ಅಡಕವಾಗದೆ ಹೋಗಬಹುದಾಗುವದು. ಒಂದೇ ಜನ್ಮದಲ್ಲಿಯೇ ಕೌಮಾರ,

ಯೌವನ, ವಾರ್ಧಕ – ಎಂಬ ಅವಸ್ಥಾವಿಶೇಷಗಳಲ್ಲಿ ಈ ದೋಷವು (ಬಂದೊಂದಗುವದು) ಸಮಾನವಾಗಿರುತ್ತದೆ[1].

(ಪೂರ್ವಪಕ್ಷ) :– ಇನ್ನು (ಈ ವಾದಿಯ ಮತವು) ಇದಾಗಿರಬಹುದು : ಜೀವನಿಗೆ ಅನಂತ ಅವಯುವಗಳಿರುತ್ತವೆ; ಅದೇ ಅವಯುವಗಳೇ ಅಲ್ಪಶರೀರ ದಲ್ಲಿ ಸಂಕೋಚವಾಗಬಹುದು, ದೊಡ್ಡ ಶರೀರದಲ್ಲಿ ವಿಕಾಸವಾಗಬಹುದಲ್ಲ !

(ಸಿದ್ಧಾಂತ) :– ಹಾಗಾದರೆ ಆ ಅನಂತವಾಗಿರುವ ಜೀವಾವಯುವಗಳು ಒಂದೇ ದೇಶದಲ್ಲಿದ್ದರೆ (ಒಂದಕ್ಕೊಂದಕ್ಕೆ) ಅಡ್ಡಿಯಾಗುವದೊ, ಇಲ್ಲವೊ ?– ಎಂಬುದನ್ನು ( ಅವನು ) ಹೇಳಬೇಕು. ಮೊದಲನೆಯದಾಗಿ ಅಡ್ಡಿಯಾಗುವ ದಾದರೆ ಅನಂತವಾದ ಅವಯುವಗಳು ಪರಿಚ್ಛಿನ್ನದೇಶದಲ್ಲಿ ಅಡಕವಾಗಲಾರದೆ ಹೋಗುವವು ; ಅಡ್ಡಿಯಾಗುವದಿಲ್ಲವಾದರೂ ಒಂದೇ ಅವಯುವದ ಸ್ಥಲದಲ್ಲಿ ಯೇ ಎಲ್ಲಾ ಅವಯುವಗಳೂ ಸೇರಿಕೊಳ್ಳಬಹುದಾದ್ದರಿಂದ ಜೀವನು ಅಣು ಮಾತ್ರ (ಪರಿಮಾಣ)ದವನಾಗಬೇಕಾಗುವದು. ಇದಲ್ಲದೆ ಶರೀರಮಾತ್ರ ಪರಿ ಚ್ಛಿನ್ನವಾಗಿರುವ ಜೀವರ ಅವಯುವಗಳು ಅನಂತವಾಗಿರುತ್ತವೆ ಎಂಬಿದು ಊಹಿಸುವದಕ್ಕೆ ಕೂಡ ಬರುವಹಾಗಿಲ್ಲ.

**ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ॥ ೩೫ ॥**

೩೫. ಪರ್ಯಾಯದಿಂದಲೂ ಅವಿರೋಧವಾಗುವದಿಲ್ಲ ; ಏಕೆಂದರೆ ವಿಕಾರವೇ ಮುಂತಾದ (ದೋಷಗಳು ಬರುತ್ತವೆ).

## ಜೀವಾವಯುವಗಳು ಆಗಮಾಪಾಯಿಗಳೆಂದರೆ ದೋಷ

( ಭಾಷ್ಯ )

೭೦. ಅಥ ಪರ್ಯಾಯೇಣ ಬೃಹಚ್ಛರೀರಪ್ರತಿಪತ್ತೌ ಕೇಚಿತ್ ಜೀವಾ ವಯವಾಃ ಉಪಗಚ್ಛನ್ತಿ, ತನುಶರೀರಪ್ರತಿಪತ್ತೌ ಚ ಕೇಚಿತ್ ಅಪಗಚ್ಛನ್ತಿ ಇತ್ಯುಚ್ಯೇತ ತತ್ರಾಪ್ಯುಚ್ಯತೇ ('ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿ ಭ್ಯಃ' ।) ನ ಚ ಪರ್ಯಾಯೇಣಾಪಿ ಅವಯವೋಪಗಮಾಪಗಮಾಭ್ಯಾಮ್ ಏತದ್ದೇಹಪರಿಮಾಣತ್ವಂ ಜೀವಸ್ಯ ಅವಿರೋಧೇನ ಉಪಪಾದಯಿತುಂ ಶಕ್ಯತೇ । ಕುತಃ ? ವಿಕಾರಾದಿದೋಷಪ್ರಸಙ್ಗಾತ್ । ಅವಯವೋಪಗಮಾಪಗಮಾಭ್ಯಾಂ ಹಿ ಅನಿಶಮ್ ಆಪೂರ್ಯಮಾಣಸ್ಯ ಅಪಕ್ಷೀಯಮಾಣಸ್ಯ ಚ ಜೀವಸ್ಯ ವಿಕ್ರಿಯಾವತ್ತ್ವಂ ತಾವತ್ ಅಪರಿಹಾರ್ಯಮ್ । ವಿಕ್ರಿಯಾವತ್ತ್ವೇ ಚ

1. ಏಕೆಂದರೆ ಅಲ್ಲಿಯೂ ಶರೀರದ ಪರಿಮಾಣವು ಹೆಚ್ಚುಕಡಿಮೆಯಾಗುತ್ತದೆ.

ಚರ್ಮಾದಿವತ್ ಅನಿತ್ಯತ್ವಂ ಪ್ರಸಜ್ಯೇತ । ತತಶ್ಚ ಬನ್ಧಮೋಕ್ಷಾಭ್ಯುಪಗಮೋ ಬಾಧ್ಯೇತ, ಕರ್ಮಾಷ್ಟಕಪರಿವೇಷ್ಟಿತಸ್ಯ ಜೀವಸ್ಯ ಅಲಾಬುವತ್ ಸಂಸಾರ ಸಾಗರೇ ನಿಮಗ್ನಸ್ಯ ಬನ್ಧನೋಚ್ಛೇದಾತ್ ಊರ್ಧ್ವಗಾಮಿತ್ವಂ ಭವತೀತಿ । ಕಿಂ ಚಾನ್ಯತ್ । ಆಗಚ್ಛತಾಮ್ ಅಪಗಚ್ಛತಾಂ ಚ ಅವಯವಾನಾಮ್ ಆಗಮಾಪಾಯಧರ್ಮವತ್ತ್ವಾದೇವ ಅನಾತ್ಮತ್ವಂ ಶರೀರಾದಿವತ್ । ತತಶ್ಚ ಅವಸ್ಥಿತಃ ಕಶ್ಚಿತ್ ಅವಯವಃ ಆತ್ಮಾ ಇತಿ ಸ್ಯಾತ್ । ನ ಚ ಸ ನಿರೂಪ ಯಿತುಂ ಶಕ್ಯತೇಽಯಮಸಾವಿತಿ । ಕಿಂ ಚಾನ್ಯತ್ । ಆಗಚ್ಛನ್ತಶ್ಚೈತೇ ಜೀವಾವಯವಾಃ ಕುತಃ ಪ್ರಾದುರ್ಭವನ್ತಿ। ಅಪಗಚ್ಛನ್ತಶ್ಚ ಕ್ವ ವಾ ಲೀಯನ್ತೇ? ಇತಿ ವಕ್ತವ್ಯಮ್ । ನ ಹಿ ಭೂತೇಭ್ಯಃ ಪ್ರಾದುರ್ಭವೇಯುಃ ಭೂತೇಷು ಚ ನಿಲೀಯೇರನ್ । ಅಭೌತಿಕತ್ವಾತ್ ಜೀವಸ್ಯ । ನಾಪಿ ಕಶ್ಚಿತ್ ಅನ್ಯಃ ಸಾಧಾರಣಃ ಅಸಾಧಾರಣೋ ವಾ ಜೀವಾನಾಮ್ ಅವಯವಾಧಾರೋ ನಿರೂಪ್ಯತೇ । ಪ್ರಮಾಣಾಭಾವಾತ್ । ಕಿಂ ಚಾನ್ಯತ್ । ಅನವಧೃತ ಸ್ವರೂಪಶ್ಚ ಏವಂ ಸತಿ ಆತ್ಮಾ ಸ್ಯಾತ್ । ಆಗಚ್ಛತಾಮ್ ಅಪಗಚ್ಛತಾಂ ಚ ಅವಯವಾನಾಮ್ ಅನಿಯತಪರಿಮಾಣತ್ವಾತ್ । ಅತ ಏವಮಾದಿದೋಷ ಪ್ರಸಙ್ಗಾತ್ ನ ಪರ್ಯಾಯೇಣಾಪಿ ಅವಯವೋಪಗಮಾಪಗಮೌ ಆತ್ಮನಃ ಆಶ್ರಯಿತುಂ ಶಕ್ಯೇತೇ ॥

(ಭಾಷ್ಯಾರ್ಥ)

ಇನ್ನು ಸರದಿಯ ಪ್ರಕಾರ ದೊಡ್ಡ ಶರೀರವನ್ನು ಪಡೆದಾಗ– ಕೆಲವು ಜೀವಾವಯವಗಳು ಬಂದು ಸೇರಿಕೊಳ್ಳುತ್ತವೆ, ಸಣ್ಣ ಶರೀರವನ್ನು ಪಡೆದಾಗ ಕೆಲವು ಹೊರಕ್ಕೆ ಹೋಗುತ್ತವೆ– ಎನ್ನುವದಾದರೆ, ಅದಕ್ಕೂ ಹೇಳುತ್ತೇವೆ.

(ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ) ಪರ್ಯಾಯ ದಿಂದ ಅವಯವಗಳು ಬಂದು ಸೇರುವದು, ಹೊರಕ್ಕೆ ಹೋಗುವದು– (ಹೀಗಾಗುವದ)ರಿಂದ ಜೀವನು ಈ ದೇಹದ ಪರಿಮಾಣದವನಾಗುತ್ತಾನೆಂಬು ದನ್ನು ವಿರೋಧವಿಲ್ಲದೆ ಉಪಪಾದನೆಮಾಡಬಹುದೆಂದೂ ಹೇಳುವಹಾಗಿಲ್ಲ. ಏಕೆ ? ಎಂದರೆ (ಆಗ) ವಿಕಾರವೇ ಮುಂತಾದ ದೋಷಗಳು ಪ್ರಸಕ್ತವಾಗುವವು. ಹೇಗೆಂದರೆ ಮೊದಲನೆಯದಾಗಿ ಅವಯವಗಳ ಬಂದುಹೋಗುವಿಕೆಯಿಂದ ಯಾವಾಗಲೂ ತುಂಬಿಕೊಳ್ಳುತ್ತಲೂ ಕ್ಷಯವಾಗುತ್ತಲೂ ಇರುವ ಜೀವನಿಗೆ ವಿಕಾರವುಳ್ಳವನಾಗುವದನ್ನು ತಪ್ಪಿಸಿಕೊಳ್ಳುವದಕ್ಕಾಗುವದಿಲ್ಲ. ವಿಕಾರವುಳ್ಳವ ನಾದರೆ ಚರ್ಮಾದಿಗಳಿಗೆ ಹೇಗೋ ಹಾಗೆ ಅನಿತ್ಯತ್ವವು ಪ್ರಸಕ್ತವಾಗುವದು.

ಅದರಿಂದ– **ಕರ್ಮಾಷ್ಟಕದಿಂದ**[1] ಸುತ್ತುವರಿಯಲ್ಪಟ್ಟಿರುವವನಾಗಿ, ಸಂಸಾರ ಸಾಗರದಲ್ಲಿ ಸೋರೆಯಬುರುಡೆಯಂತೆ ಮುಳುಗಿರುವ ಜೀವನ ಬಂಧವು ನಾಶವಾಗಲು ಊರ್ಧ್ವಗಾಮಿತ್ವವುಂಟಾಗುವದು ಎಂಬ– ಬಂಧಮೋಕ್ಷಾಭ್ಯುಪಗಮವು ಬಾಧಿತವಾಗುವದು.

ಇದಲ್ಲದೆ ಬರುತ್ತಲೂ ಹೋಗುತ್ತಲೂ ಇರುವ ಅವಯವಗಳು ಆಗಮಾಪಾಯಧರ್ಮವಿರುವದರಿಂದಲೇ ಶರೀರಾದಿಗಳಂತೆ ಅನಾತ್ಮ(ವಾಗಿರಬೇಕೆಂದಾಗುವದು). ಅದರಿಂದ (ಹೋಗದೆ ಬರದೆ) ಹಾಗೆಯೇ ನಿಂತಿರುವ ಯಾವದೋ ಒಂದು ಅವಯವವೇ ಆತ್ಮ ಎಂದಾಗುವದು. ಆದರೆ ಇಂಥದ್ದೇ ಆ (ಅವಯವವು) ಎಂದು ಆ (ಆತ್ಮನನ್ನು) ಗೊತ್ತುಪಡಿಸುವದು ಆಗುವಹಾಗಿಲ್ಲ. ಮತ್ತೊಂದೇನೆಂದರೆ ಬರುತ್ತಿರುವ ಈ ಜೀವಾವಯವಗಳು ಎಲ್ಲಿಂದ ಹೊರತೋರಿಕೊಳ್ಳುತ್ತವೆ, ಹೊರಟುಹೋಗುವ (ಅವಯವಗಳು) ಎಲ್ಲಿ ಅಡಗಿಕೊಳ್ಳುವವು ಎಂಬುದನ್ನು (ನೀವು) ಹೇಳಬೇಕಾಗುವದು. ಭೂತಗಳಿಂದ ಹೊರತೋರಿಕೊಳ್ಳುವವು, ಭೂತಗಳಲ್ಲಿಯೇ ಲಯವಾಗುವವು (ಎನ್ನುವದ)ಕ್ಕಿಲ್ಲವಷ್ಟೆ? ಏಕೆಂದರೆ ಜೀವನು ಭೌತಿಕನಲ್ಲ. (ಭೂತಗಳಿಗಿಂತ) ಬೇರೆಯಾದ ಜೀವರುಗಳಿಗೆ ಸಾಧಾರಣವಾದ ಅಥವಾ ಅಸಾಧಾರಣವಾದ ಅವಯವಾಧಾರವನ್ನು ಗೊತ್ತುಪಡಿಸಿ ಹೇಳುವದಕ್ಕೂ ಬರುವಂತಿಲ್ಲ; ಏಕೆಂದರೆ (ಅದಕ್ಕೆ ಯಾವ) ಪ್ರಮಾಣವೂ ಇಲ್ಲ. ಇನ್ನು ಒಂದು (ಮಾತು ಏನೆಂದರೆ), ಹೀಗಾದರೆ ಆತ್ಮನ ಸ್ವರೂಪವು (ಇಂಥದ್ದೆಂದು) ನಿಶ್ಚಯವೇ ಇಲ್ಲವೆಂದಾಗುವದು. ಏಕೆಂದರೆ ಬರುವ ಹೋಗುವ ಅವಯವಗಳ ಪರಿಮಾಣವು ಗೊತ್ತಾಗಿರುವದಿಲ್ಲ ಆದ್ದರಿಂದ ಇವೇ ಮುಂತಾದ ದೋಷಗಳು ಪ್ರಸಕ್ತವಾಗುವದರಿಂದ ಪರ್ಯಾಯ

---

1. ಬಂಧವು ಘಾತಿಕರ್ಮ ನಾಲ್ಕು, ಅಘಾತಿಕರ್ಮ ನಾಲ್ಕು– ಹೀಗೆ ಎಂಟು ಬಗೆ. ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ– ಇವು ಘಾತಿಕರ್ಮಗಳು. ವೇದನೀಯ, ನಾಮಿಕ, ಗೌತ್ರಿಕ, ಆಯುಷ್ಕ– ಇವು ಅಘಾತಿಕರ್ಮಗಳು. ಸಮ್ಯಗ್ಜ್ಞಾನವು ಮೋಕ್ಷಸಾಧನವಲ್ಲವೆಂಬ ತಪ್ಪುತಿಳಿವಳಿಕೆ **ಜ್ಞಾನಾವರಣೀಯ**; ಆರ್ಹತಾದರ್ಶನಾಭ್ಯಾಸದಿಂದ ಮೋಕ್ಷವಿಲ್ಲ ಎಂಬುದು **ದರ್ಶನಾವರಣೀಯ**; ಬಹುಜನ ತೀರ್ಥಕರರು ಹೇಳಿದ ಮೋಕ್ಷಮಾರ್ಗದಲ್ಲಿ ಯಾವದು ಸರಿ ಎಂಬುದು ನಿಶ್ಚಯವಾಗದಿರುವದು **ಮೋಹನೀಯ**; ಮೋಕ್ಷಮಾರ್ಗದಲ್ಲಿ ಪ್ರವೃತ್ತರಾದವರಿಗೆ ವಿಘ್ನಕರವಾದ ವಿಜ್ಞಾನವು **ಅಂತರಾಯ**; ಶುಕ್ಲಪುದ್ಗಲದ ವಿಪಾಕಕ್ಕೆ ಹೇತುವಾದದ್ದು **ವೇದನೀಯ**; ಅದು ಬಂಧವಾದರೂ ಮೋಕ್ಷಕ್ಕೆ ಅಡ್ಡಿಯಲ್ಲ. ವೇದನೀಯಕರ್ಮಕ್ಕೆ ಅನುಗುಣವಾದದ್ದು **ನಾಮಿಕ**; ಅದು ಶುಕ್ಲಪುದ್ಗಲದ ಆದ್ಯಾವಸ್ಥೆಯನ್ನುಂಟುಮಾಡುತ್ತದೆ. **ಗೋತ್ರಿಕ**ವೆಂಬುದು ಅವ್ಯಾಕೃತವಾಗಿ ಅದಕ್ಕಿಂತ ಮೂಲವಾದ ಶಕ್ತಿ. **ಆಯುಷ್ಕ**ವು ಆಯುಸ್ಸನ್ನುಂಟುಮಾಡುವದು. ಇದೆಲ್ಲ ಭಾಮತಿಯಿಂದ ಸಂಗ್ರಹಿಸಿದ್ದು.

ದಿಂದಲೂ ಆತ್ಮನ ಅವಯುವಗಳು ಬಂದುಹೋಗುವವೆಂದು ಇಟ್ಟುಕೊಳ್ಳು ವದಕ್ಕೆ ಆಗುವದಿಲ್ಲ.

## ಸೂತ್ರಕ್ಕೆ ಮತ್ತೊಂದು ಅರ್ಥ

(ಭಾಷ್ಯ)

೭೧. ಅಥವಾ ಪೂರ್ವೇಣ ಸೂತ್ರೇಣ ಶರೀರಪರಿಮಾಣಸ್ಯ ಆತ್ಮನಃ ಉಪಚಿತಾಪಚಿತಶರೀರಾನ್ತರಪ್ರತಿಪತ್ತೌ ಅಕಾರ್ತ್ಸ್ನ್ಯಪ್ರಸಞ್ಜನದ್ವಾರೇಣ ಅನಿತ್ಯತಾಯಾಂ ಚೋದಿತಾಯಾಂ ಪುನಃ ಪರ್ಯಾಯೇಣ ಪರಿಮಾಣಾನವಸ್ಥಾನೇಽಪಿ ಸ್ರೋತಃಸನ್ತಾನನಿತ್ಯತಾನ್ಯಾಯೇನ ಆತ್ಮನೋ ನಿತ್ಯತಾ ಸ್ಯಾತ್ । ಯಥಾ ರಕ್ತಪಟಾನಾಂ ವಿಜ್ಞಾನಾನವಸ್ಥಾನೇಽಪಿ ತತ್ಸನ್ತಾನನಿತ್ಯತಾ ತದ್ವತ್ ವಿಸಿಚಾಮಪಿ ಇತ್ಯಾಶಙ್ಕ್ಯ ಅನೇನ ಸೂತ್ರೇಣ ಉತ್ತರಮ್ ಉಚ್ಯತೇ । ಸನ್ತಾನಸ್ಯ ತಾವತ್ ಅವಸ್ತುತ್ವೇ ನೈರಾತ್ಮ್ಯವಾದಪ್ರಸಙ್ಗಃ । ವಸ್ತುತ್ವೇಽಪಿ ಆತ್ಮನೋ ವಿಕಾರಾದಿದೋಷಪ್ರಸಙ್ಗಾತ್ ಅಸ್ಯ ಪಕ್ಷಸ್ಯ ಅನುಪಪತ್ತಿಃ ಇತಿ ॥

(ಭಾಷ್ಯಾರ್ಥ)

ಅಥವಾ (ಈ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನವನ್ನೂ ಮಾಡಬಹುದು. ಹೇಗೆಂದರೆ), ಹಿಂದಿನ ಸೂತ್ರದಲ್ಲಿ ಶರೀರಪರಿಣಾಮನಾಗಿರುವ ಆತ್ಮನಿಗೆ ದೊಡ್ಡ ಅಥವಾ ಸಣ್ಣ ದಾದ ಮತ್ತೊಂದು ಶರೀರವನ್ನು ಪಡೆದರೆ ಅಕಾರ್ತ್ಸ್ನ್ಯವು ಪ್ರಸಕ್ತವಾಗುವದೆನ್ನುವದರ ಮೂಲಕ (ಆತ್ಮನಿಗೆ) ಅನಿತ್ಯತ್ವವುಂಟಾಗುವದೆಂದು ಆಕ್ಷೇಪಿಸಲಾಗಿ ಮತ್ತೆ ಪರ್ಯಾಯದಿಂದ ಪರಿಮಾಣಕ್ಕೆ ನಿಲುಗಡೆ ಇಲ್ಲದೆ ಹೋದರೂ ಪ್ರವಾಹಸಂತಾನವು ನಿತ್ಯವು ಎಂಬ ನ್ಯಾಯದಿಂದ ಆತ್ಮನು ನಿತ್ಯನೆಂದಾಗಬಹುದು. ಹೇಗೆ ರಕ್ತವಸ್ತ್ರ(ಧಾರಿಗಳಾದ ಬೌದ್ಧರ ಮತದಲ್ಲಿ) ವಿಜ್ಞಾನಕ್ಕೆ ನಿಲುಗಡೆಯಿಲ್ಲದಿದ್ದರೂ ಅವುಗಳ ಸಂತಾನವು ನಿತ್ಯವಾಗಿರುವದೋ ಹಾಗೆಯೇ ದಿಗಂಬರರಿಗೂ ಆಗಬಹುದಾಗಿದೆ ಎಂದು (ಜೈನರು) ಆಶಂಕಿಸಿದ್ದಕ್ಕೆ ಈ ಸೂತ್ರದಿಂದ ಉತ್ತರವನ್ನು ಹೇಳಿದೆ (ಎಂದು ಕಲ್ಪಿಸಬಹುದು).

ಮೊದಲನೆಯದಾಗಿ ಸಂತಾನವು ವಸ್ತುವಲ್ಲವೆಂದರೆ ನೈರಾತ್ಮ್ಯವಾದವು ಪ್ರಸಕ್ತವಾಗುವದು. (ಅದು) ವಸ್ತು ಎಂದರೂ ಆತ್ಮನಿಗೆ ವಿಕಾರವೇ ಮುಂತಾದ ದೋಷಗಳು ಪ್ರಸಕ್ತವಾಗುವದರಿಂದ ಈ ಪಕ್ಷವು ಅಯುಕ್ತವಾಗುವದು (ಎಂಬಿದು) ಸೂತ್ರಾರ್ಥವು.

**ಅನ್ತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಃ ॥ ೩೬ ॥**

೩೬. ಕೊನೆಯದಕ್ಕೆ ನಿಲುಗಡೆ ಇರುವದರಿಂದ ಎರಡೂ ನಿತ್ಯವಾಗುವವು: (ಯಾವ) ವಿಶೇಷವೂ ಇರುವದಿಲ್ಲವೆಂದಾಗುವದು.

## ಜೀವನ ಪರಿಮಾಣವು ಮಾರ್ಪಡಲು ಕಾರಣವಿಲ್ಲ

(ಭಾಷ್ಯ)

೭೨. ಅಪಿ ಚ ಅನ್ತ್ಯಸ್ಯ ಮೋಕ್ಷಾವಸ್ಥಾಭಾವಿನೋ ಜೀವಪರಿಮಾಣಸ್ಯ ನಿತ್ಯತ್ವಮ್ ಇಷ್ಯತೇ ಜೈನೈಃ । ತದ್ವತ್ ಪೂರ್ವಯೋರಪಿ ಆದ್ಯಮಧ್ಯಮಯೋಃ ಜೀವಪರಿಮಾಣಯೋಃ ನಿತ್ಯತ್ವಪ್ರಸಙ್ಗಾತ್ ಅವಿಶೇಷಪ್ರಸಙ್ಗಃ ಸ್ಯಾತ್ । ಏಕಶರೀರಪರಿಮಾಣತೈವ ಸ್ಯಾತ್ ನೋಪಚಿತಾಪಚಿತಶರೀರಾನ್ತರಪ್ರಾಪ್ತಿಃ । ಅಥವಾ ಅನ್ತ್ಯಸ್ಯ ಜೀವಪರಿಣಾಮಸ್ಯ ಅವಸ್ಥಿತತ್ವಾತ್ ಪೂರ್ವಯೋರಪಿ ಅವಸ್ಥಯೋಃ ಅವಸ್ಥಿತಪರಿಮಾಣ ಏವ ಜೀವಃ ಸ್ಯಾತ್ । ತತಶ್ಚ ಅವಿಶೇಷೇಣ ಸರ್ವದೈವ ಅಣುಃ ಮಹಾನ್ ವಾ ಜೀವೋಽಭ್ಯುಗನ್ತವ್ಯಃ, ನ ಶರೀರಪರಿಮಾಣಃ । ಅತಶ್ಚ ಸೌಗತವತ್ ಆರ್ಹತಮಪಿ ಮತಮ್ ಅಸಙ್ಗತಮ್ ಇತ್ಯುಪೇಕ್ಷಿತವ್ಯಮ್ ॥

(ಭಾಷ್ಯಾರ್ಥ)

ಮತ್ತು ಕೊನೆಯದು, ಎಂದರೆ ಮೋಕ್ಷಾವಸ್ಥೆಯಲ್ಲಿರುವ ಜೀವಪರಿಮಾಣವು ನಿತ್ಯವು ಎಂದು ಜೈನರು ಒಪ್ಪಿರುತ್ತಾರೆ. ಅದರಂತೆ ಮೊದಲನೆಯ ನಡುವಿನ ಜೀವಪರಿಮಾಣಗಳಿಗೂ ನಿತ್ಯತ್ವವು ಪ್ರಸಕ್ತವಾಗುವದರಿಂದ ಅವಿಶೇಷ(ವೆಂಬ) ಪ್ರಸಂಗವು ಆಗುವದು. ಎಂದರೆ (ಜೀವನಿಗೆ) ಒಂದೇ ಶರೀರಪ್ರಮಾಣವು ಪ್ರಾಪ್ತವಾಗುವದೇ ಹೊರತು ದೊಡ್ಡ ಅಥವಾ ಸಣ್ಣಗಾದ ಶರೀರಾಂತರದ (ಪರಿಣಾಮವು) ಪ್ರಾಪ್ತವಾಗಲಾರದು.

ಅಥವಾ (ಈ ಸೂತ್ರಕ್ಕೆ ಹೀಗೂ ಅರ್ಥವನ್ನು ಹೇಳಬಹುದು): ಕೊನೆಯಲ್ಲಿರುವ ಜೀವಪರಿಮಾಣಕ್ಕೆ ನಿಲುಗಡೆಯಿರುವದರಿಂದ ಹಿಂದಿರುವ ಅವಸ್ಥೆಗಳಲ್ಲಿಯೂ ಜೀವನಿಗೆ ಒಂದೇ ಪರಿಣಾಮವೇ ಎಂದಾಗುವದು. ಆದರಿಂದ ಅವಿಶೇಷವಾಗಿ ಯಾವಾಗಲೂ ಅಣುವೆಂದೋ ಮಹತ್ಪರಿಣಾಮದವನೆಂದೋ ಜೀವನನ್ನು ಒಪ್ಪಬೇಕೇ ಹೊರತು ಶರೀರಪರಿಮಾಣದವನೆನ್ನುವದಕ್ಕೆ ಆಗುವ

ದಿಲ್ಲ[1]. ಆದ್ದರಿಂದ ಸೌಗತ(ಮತ)ದಂತೆ ಆರ್ಹತಮತವೂ ಅಸಂಗತವು ಎಂದು ಉಪೇಕ್ಷಿಸತಕ್ಕದ್ದು.

## ೭. ಪತ್ಯುರಧಿಕರಣ (ಸೂ. ೩೭–೪೧)

### (ತಟಸ್ಥೇಶ್ವರವಾದದ ಖಂಡನೆ)

## ಅಧಿಕರಣದ ಸಂಬಂಧ

(ಭಾಷ್ಯ)

೭೩. ಇದಾನೀಂ ಕೇವಲಾಧಿಷ್ಠಾತ್ರೀಶ್ವರಕಾರಣವಾದಃ ಪ್ರತಿಷಿಧ್ಯತೇ । ತತ್ ಕಥಮ್ ಅವಗಮ್ಯತೇ ? "ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್" (೧-೪–೨೩), "ಅಭಿಧ್ಯೋಪದೇಶಾಚ್ಚ" (೧–೪–೨೪) ಇತ್ಯತ್ರ ಪ್ರಕೃತಿಭಾವೇನ ಅಧಿಷ್ಠಾತೃಭಾವೇನ ಚ ಉಭಯಸ್ವಭಾವಸ್ಯ ಈಶ್ವರಸ್ಯ ಸ್ವಯಮೇವ ಆಚಾರ್ಯೇಣ ಪ್ರತಿಷ್ಠಾಪಿತತ್ವಾತ್ । ಯದಿ ಪುನಃ ಅವಿಶೇಷೇಣ ಈಶ್ವರಕಾರಣವಾದಮಾತ್ರಮ್ ಇಹ ಪ್ರತಿಷಿಧ್ಯೇತ, ಪೂರ್ವೋತ್ತರವಿರೋಧಾತ್ ವ್ಯಾಹತಾಭಿವ್ಯಾಹಾರಃ ಸೂತ್ರಕಾರಃ ಇತ್ಯೇತತ್ ಆಪದ್ಯೇತ । ತಸ್ಮಾತ್ ಅಪ್ರಕೃತಿಃ ಅಧಿಷ್ಠಾತಾ ಕೇವಲಂ ನಿಮಿತ್ತಕಾರಣಮ್ ಈಶ್ವರಃ ಇತಿ ಏಷ ಪಕ್ಷಃ ವೇದಾನ್ತವಿಹಿತಬ್ರಹ್ಮೈಕತ್ವಪ್ರತಿಪಕ್ಷತ್ವಾತ್ ಯತ್ನೇನ ಅತ್ರ ಪ್ರತಿಷಿಧ್ಯತೇ ॥

(ಭಾಷ್ಯಾರ್ಥ)

ಈಗ ಕೇವಲ ಅಧಿಷ್ಠಾತೃವಾದ ಈಶ್ವರನೇ ಜಗತ್ಕಾರಣನೆಂಬ ವಾದವನ್ನು ಅಲ್ಲಗಳೆಯಲಾಗುತ್ತದೆ, ಅದು ಹೇಗೆ ಗೊತ್ತು ?– ಎಂದರೆ, "ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್" (೧–೪–೨೩), "ಅಭಿಧ್ಯೋಪದೇಶಾಚ್ಚ" (೧–೪–೨೪) ಎಂಬಲ್ಲಿ ಪ್ರಕೃತಿಯಾಗಿಯೂ, ಅಧಿಷ್ಠಾತೃವಾಗಿಯೂ ಎರಡೂ ಸ್ವಭಾವವುಳ್ಳ ಈಶ್ವರನನ್ನು **ಆಚಾರ್ಯರು**[2] ತಾವೇ ಪ್ರತಿಷ್ಠಾಪನೆಮಾಡಿರು

---

1. ಅಂತ್ಯಪರಿಮಾಣವು ನಿತ್ಯವಾಗಿರುವದರಿಂದ ಹಿಂದಿನ ಎರಡು ಅವಸ್ಥೆಗಳ ಪರಿಮಾಣವೂ ನಿತ್ಯವಾಗಿರಬೇಕಾಗುವದು ; ಜೀವನು ಶರೀರಪರಿಮಾಣವೆಂದರೆ ಅನಿತ್ಯವಾಗುವದರಿಂದ ಈ ಅನುಮಾನಕ್ಕೆ ವಿರೋಧವಾಗುವದು– ಎಂದು ಮೊದಲನೆಯ ವ್ಯಾಖ್ಯಾನ. ಅಂತ್ಯಪರಿಮಾಣವು ಶರೀರಾನಪೇಕ್ಷವಾಗಿ ಇಪ್ಪಂತೆ ಇರುವದರಿಂದ ಹಿಂದಿನ ಶರೀರಗಳಲ್ಲಿಯೂ ಒಂದೇ ಪರಿಮಾಣದವನಾಗಿರಬೇಕು– ಎಂದು ಎರಡನೆಯ ವ್ಯಾಖ್ಯಾನ.

2. ಬಾದರಾಯಣಾಚಾರ್ಯರು. ಸೂತ್ರಕಾರರು.

ತ್ತಾರೆ. ಯಾವ ವಿಶೇಷವೂ ಇಲ್ಲದೆ ಈಶ್ವರನು ಜಗತ್ಕಾರಣನೆಂಬ ವಾದ ಸಾಮಾನ್ಯವನ್ನೇ ಇಲ್ಲಿ ಅಲ್ಲಗಳೆದಿದೆ ಎಂದಾದರೆ ಹಿಂದಿನಮುಂದಿನ (ಗ್ರಂಥಗಳಿಗೆ) ವಿರೋಧವಾಗುವದರಿಂದ ಸೂತ್ರಕಾರರು ವ್ಯಾಹತವಾಗಿ ಮಾತನಾಡುವವರು ಎಂದು ಬಂದೊದಗೀತು. **ಆದ್ದರಿಂದ ಈಶ್ವರನು ಪ್ರಕೃತಿಯಲ್ಲ, ಅಧಿಷ್ಠಾತೃವೇ, ಕೇವಲ ನಿಮಿತ್ತಕಾರಣವೇ– ಎಂಬೀ ಪಕ್ಷವೇ ವೇದಾಂತವಿಹಿತವಾದ ಬ್ರಹ್ಮೈಕತ್ವಕ್ಕೆ ಪ್ರತಿಪಕ್ಷವಾಗಿರುವದರಿಂದ**[1] ಪ್ರಯತ್ನಪೂರ್ವಕವಾಗಿ ಇಲ್ಲಿ (ಅದನ್ನು) ಅಲ್ಲಗಳೆಯಲಾಗುತ್ತದೆ.

## ನಿಮಿತ್ತಕಾರಣೇಶ್ವರವಾದಿಗಳ ಪ್ರಭೇದಗಳು

(ಭಾಷ್ಯ)

೭೪. ಸಾ ಚ ಇಯಂ ವೇದಬಾಹ್ಯೇಶ್ವರಕಲ್ಪನಾ ಅನೇಕಪ್ರಕಾರಾ । ಕೇಚಿತ್ ತಾವತ್ ಸಾಂಖ್ಯಯೋಗವ್ಯಪಾಶ್ರಯಾಃ ಕಲ್ಪಯನ್ತಿ ಪ್ರಧಾನಪುರುಷಯೋಃ ಅಧಿಷ್ಠಾತಾ ಕೇವಲಂ ನಿಮಿತ್ತಕಾರಣಮ್ ಈಶ್ವರಃ ಇತರೇತರವಿಲಕ್ಷಣಾಃ ಪ್ರಧಾನಪುರುಷೇಶ್ವರಾಃ ಇತಿ । ಮಾಹೇಶ್ವರಾಸ್ತು ಮನ್ಯನ್ತೇ ಕಾರ್ಯಕಾರಣಯೋಗವಿಧಿದುಃಖಾನ್ತಾಃ ಪಞ್ಚಪದಾರ್ಥಾಃ ಪಶುಪತಿನಾ ಈಶ್ವರೇಣ ಪಶುಪಾಶವಿಮೋಕ್ಷಣಾಯ ಉಪದಿಷ್ಟಾಃ, ಪಶುಪತಿಃ ಈಶ್ವರಃ ನಿಮಿತ್ತಕಾರಣಮ್ ಇತಿ ವರ್ಣಯನ್ತಿ । ತಥಾ ವೈಶೇಷಿಕಾದಯೋಽಪಿ ಕೇಚಿತ್, ಕಥಂಚಿತ್, ಸ್ವಪ್ರಕ್ರಿಯಾನುಸಾರೇಣ ನಿಮಿತ್ತಕಾರಣಮ್ ಈಶ್ವರಃ ಇತಿ ವರ್ಣಯನ್ತಿ ॥

(ಭಾಷ್ಯಾರ್ಥ)

ಆ ಈ **ವೇದಬಾಹ್ಯವಾದ ಈಶ್ವರಕಲ್ಪನೆಯು**[2] ಅನೇಕಪ್ರಕಾರವಾಗಿರುತ್ತದೆ. ಮೊದಲನೆಯದಾಗಿ **ಕೆಲವರು** ಸಾಂಖ್ಯಯೋಗಗಳನ್ನು ಆಶ್ರಯಿಸಿದವರಾಗಿ[3] ಪ್ರಧಾನಪುರುಷರಿಗೆ ಅಧಿಷ್ಠಾತೃವಾದ ಈಶ್ವರನು

---

1. ತದನನ್ಯತ್ವನ್ಯಾಯದಿಂದ ಕಾರ್ಯವು ಕಾರಣಕ್ಕಿಂತ ವ್ಯತಿರಿಕ್ತವಲ್ಲವೆಂದು ತಿಳಿಸುವದಕ್ಕೆ ಈಶ್ವರನು ನಿಮಿತ್ತಕಾರಣವಲ್ಲದೆ ಉಪಾದಾನಕಾರಣವೂ ಆಗಿರುತ್ತಾನೆಂಬ ವಾದವು ಬೇಕಾಗಿರುತ್ತದೆ. ಕೇವಲನಿಮಿತ್ತಕಾರಣವಾದವು ಆ ವಾದಕ್ಕೆ ವಿರುದ್ಧವಾಗಿರುತ್ತದೆ.

2. ಕೇವಲನಿಮಿತ್ತವಾದವು ವೇದಬಾಹ್ಯವು, ವೇದವಿರುದ್ಧ– ಎಂದದ್ದರಿಂದ ಹೊರಡುವ ಉಪಸಿದ್ಧಾಂತಕ್ಕೆ ಪೀಠಿಕೆಯನ್ನು ನೋಡಿ.

3. ಕೇವಲಸಾಂಖ್ಯರು ನಿರೀಶ್ವರವಾದಿಗಳು, ಯೋಗಿಗಳು ಸೇಶ್ವರರು, ಯೋಗಸಾಧನವನ್ನು ಮುಖ್ಯವಾಗಿ ಉಪದೇಶಿಸುವವರು. ಅದನ್ನೂ ಅವರ ಅನುಯಾಯಿಗಳನ್ನೂ ಸಾಂಖ್ಯಯೋಗವ್ಯಪಾಶ್ರಯರು ಎಂದು ಕರೆದಿದೆ. ಪೀಠಿಕೆಯನ್ನು ನೋಡಿ.

ಕೇವಲ ನಿಮಿತ್ತಕಾರಣನೇ, ಪ್ರಧಾನಪುರುಷೇಶ್ವರರು ಒಬ್ಬರಿಗಿಂತ ಒಬ್ಬರು ವಿಲಕ್ಷಣಸ್ವರೂಪರು[1] –ಎಂದು ಕಲ್ಪಿಸಿರುತ್ತಾರೆ. **ಮಾಹೇಶ್ವರರಾದರೋ**[2] ಅಭಿಪ್ರಾಯಪಟ್ಟಿರುವದೇನೆಂದರೆ ಕಾರ್ಯ, ಕಾರಣ, ಯೋಗ, ವಿಧಿ, ದುಃಖಾಂತ–[3] ಎಂಬ ಐದು ಪದಾರ್ಥಗಳನ್ನು ಪಶುಪತಿಯಾದ ಈಶ್ವರನು ಪಶುಪಾಶವಿಮೋಕ್ಷಕ್ಕಾಗಿ ಉಪದೇಶಿಸಿರುತ್ತಾರೆ[4]. (ಅ) ಪಶುಪತಿಯಾದ ಈಶ್ವರನು ನಿಮಿತ್ತಕಾರಣನು– ಎಂದು ವರ್ಣಿಸಿರುತ್ತಾರೆ. ಹೀಗೆಯೇ **ವೈಶೇಷಿಕಾದಿಗಳೂ**[5] ಕೆಲವರು ಹೇಗೋ ತಮ್ಮ ತಮ್ಮ ಪ್ರಕ್ರಿಯೆಗೆ ಅನುಗುಣವಾಗಿ ಈಶ್ವರನು ನಿಮಿತ್ತಕಾರಣನೆಂದೂ ವರ್ಣಿಸಿರುತ್ತಾರೆ.

**ಪತ್ಯುರಸಾಮಞ್ಜಸ್ಯಾತ್ ॥ ೩೭ ॥**

೩೭. ಪತಿಗೆ (ಜಗತ್ಕಾರಣತ್ವವು ಹೊಂದುವದಿಲ್ಲ), ಏಕೆಂದರೆ ಅಸಾಮಂಜಸ್ಯವಿದೆ.

## ತಟಸ್ಥೇಶ್ವರವಾದದ ಖಂಡನೆ

(ಭಾಷ್ಯ)

೭೫. ಅತಃ ಉತ್ತರಮ್ ಉಚ್ಯತೇ "ಪತ್ಯುರಸಾಮಞ್ಜಸ್ಯಾತ್" ಇತಿ । ಪತ್ಯುಃ ಈಶ್ವರಸ್ಯ ಪ್ರಧಾನಪುರುಷಯೋಃ ಅಧಿಷ್ಠಾತೃತ್ವೇನ

---

1. ಈಚೆಗೆ ಬಂದಿರುವ ರಾಮಾನುಜಾಚಾರ್ಯರೂ ಪ್ರಧಾನಕ್ಕಿಂತ ಜೀವನು ವಿಲಕ್ಷಣ, ಬದ್ಧ ಅಥವಾ ಮುಕ್ತಜೀವನಿಗಿಂತ ಪರಮೇಶ್ವರನು ವಿಲಕ್ಷಣಸ್ವರೂಪನು– ಎಂಬ ಅಭಿಪ್ರಾಯವನ್ನೇ ಹೊರಪಡಿಸಿರುತ್ತಾರೆ. ಪೀಠಿಕೆಯನ್ನು ನೋಡಿ.

2. ಮಾಹೇಶ್ವರರನ್ನು ವೇದಬಾಹ್ಯಮತಗಳೊಳಗೆ ಸೇರಿಸಿರುವದರಿಂದ ಹೊರಡುವ ಉಪಸಿದ್ಧಾಂತಕ್ಕೆ ಪೀಠಿಕೆಯನ್ನು ನೋಡಿ.

3. ಕಾರ್ಯವೆಂದರೆ ಪ್ರಧಾನಕಾರ್ಯವಾದ ಮಹದಾದಿಗಳು; ಕಾರಣವೆಂದರೆ ಈಶ್ವರನು; ಯೋಗವೆಂದರೆ ಓಂಕಾರವೇ ಮುಂತಾದದ್ದನ್ನು ಧ್ಯಾನಿಸುವದು, ಧಾರಣೆ– ಮುಂತಾದದ್ದು; ವಿಧಿ ಎಂದರೆ ತ್ರಿಕಾಲಸ್ನಾನವೇ ಮುಂತಾದದ್ದು; ದುಃಖಾಂತವೆಂದರೆ ಮೋಕ್ಷವು.

4. ಪಶುಗಳು ಎಂದರೆ ಜೀವರು; ಪಾಶವೆಂದರೆ ಬಂಧವು. ಸಂಸಾರಬಂಧದಿಂದ ಜೀವರುಗಳು ಬಿಡುಗಡೆಯಾಗಲಿ ಎಂದು ಈಶ್ವರನು ಈ ಪದಾರ್ಥಗಳನ್ನು ಉಪದೇಶಿಸಿರುತ್ತಾನೆ ಎಂದರ್ಥ.

5. ವೈಶೇಷಿಕರ ಅಣುವಾದವನ್ನು ಹಿಂದೆಯೇ ತಿರಸ್ಕರಿಸಿದೆ; ಇಲ್ಲಿ ನಿಮಿತ್ತಕಾರಣವಾದವನ್ನು ಖಂಡಿಸುವದಕ್ಕಾಗಿ ಮತ್ತೆ ಅವರನ್ನೂ ತೆಗೆದುಕೊಂಡಿದೆ.

ಜಗತ್ಕಾರಣತ್ವಂ ನೋಪಪದ್ಯತೇ ॥ ಕಸ್ಮಾತ್ ? ಅಸಾಮಂಜಸ್ಯಾತ್ । ಕಿಂ ಪುನರಸಾಮಂಜಸ್ಯಮ್ ? ಹೀನಮಧ್ಯಮೋತ್ತಮಭಾವೇನ ಹಿ ಪ್ರಾಣಿಭೇದಾನ್ ವಿದಧತಃ ಈಶ್ವರಸ್ಯ ರಾಗದ್ವೇಷಾದಿದೋಷಪ್ರಸಕ್ತೇಃ ಅಸ್ಮದಾದಿವತ್ ಅನೀಶ್ವರತ್ವಂ ಪ್ರಸಜ್ಯೇತ । ಪ್ರಾಣಿಕರ್ಮಾಪೇಕ್ಷಿತತ್ವಾತ್ ಅದೋಷಃ ಇತಿ ಚೇತ್ । ನ । ಕರ್ಮೇಶ್ವರಯೋಃ ಪ್ರವರ್ತ್ಯಪ್ರವರ್ತಯಿತೃತ್ವೇ ಇತರೇತರಾಶ್ರಯದೋಷಪ್ರಸಙ್ಗಾತ್ । ನ, ಅನಾದಿತ್ವಾತ್ ಇತಿ ಚೇತ್ । ನ । ವರ್ತಮಾನಕಾಲವತ್ ಅತೀತೇಷ್ವಪಿ ಕಾಲೇಷು ಇತರೇತರಾಶ್ರಯದೋಷಾವಿಶೇಷಾತ್ ಅನ್ಧಪರಮ್ಪರಾನ್ಯಾಯಾಪತ್ತೇಃ । ಅಪಿ ಚ "ಪ್ರವರ್ತನಾಲಕ್ಷಣಾ ದೋಷಾಃ" (ನ್ಯಾ. ಸೂ. ೧-೧-೧೮) ಇತಿ ನ್ಯಾಯವಿತ್ಸಮಯಃ । ನ ಹಿ ಕಶ್ಚಿತ್ ಅದೋಷಪ್ರಯುಕ್ತಃ ಸ್ವಾರ್ಥೇ ಪರಾರ್ಥೇ ವಾ ಪ್ರವರ್ತಮಾನೋ ದೃಶ್ಯತೇ । ಸ್ವಾರ್ಥಪ್ರಯುಕ್ತ ಏವ ಚ ಸರ್ವೋ ಜನಃ ಪರಾರ್ಥೇಽಪಿ ಪ್ರವರ್ತತೇ ಇತಿ । ಏವಮಪಿ ಅಸಾಮಂಜಸ್ಯಮ್ । ಸ್ವಾರ್ಥವತ್ತ್ವಾತ್ ಈಶ್ವರಸ್ಯ ಅನೀಶ್ವರತ್ವಪ್ರಸಙ್ಗಾತ್ । ಪುರುಷವಿಶೇಷತ್ವಾಭ್ಯುಪಗಮಾಚ್ಚ ಈಶ್ವರಸ್ಯ ಪುರುಷಸ್ಯ ಚ ಔದಾಸೀನ್ಯಾಭ್ಯುಪಗಮಾತ್ ಅಸಾಮಂಜಸ್ಯಮ್ ॥

(ಭಾಷ್ಯಾರ್ಥ)

ಇದಕ್ಕೆ (ಉತ್ತರವನ್ನು) "ಪತ್ಯುರಸಾಮಂಜಸ್ಯಾತ್" ಎಂಬ (ಸೂತ್ರದಲ್ಲಿ) ಹೇಳಿರುತ್ತದೆ. ಪತಿಯು ಎಂದರೆ ಈಶ್ವರನು ಪ್ರಧಾನಪುರುಷರಿಗೆ ಅಧಿಷ್ಠಾತೃವಾಗಿ ಜಗತ್ಕಾರಣನು ಎಂಬುದು ಹೊಂದುವದಿಲ್ಲ. ಏಕೆ ? ಎಂದರೆ ಅದು) ಅಸಮಂಜಸವಾಗುತ್ತದೆ.

(ಪ್ರಶ್ನೆ):- (ಇಲ್ಲಿರುವ) ಅಸಾಮಂಜಸ್ಯವೆಂಬುದು ಯಾವದು ?

(ಉತ್ತರ):- ಹೀನ, ಮಧ್ಯಮ, ಉತ್ತಮ- ಎಂದು ಪ್ರಾಣಿವಿಶೇಷಗಳನ್ನು ಸೃಷ್ಟಿಸಿರುವ ಈಶ್ವರನಿಗೆ ರಾಗದ್ವೇಷಾದಿದೋಷವು ಪ್ರಸಕ್ತವಾಗುವದರಿಂದ ನಮ್ಮಗಳಂತೆಯೇ ಅನೀಶ್ವರತ್ವವು ಪ್ರಸಕ್ತವಾಗುವದು[1].

(ಪೂರ್ವಪಕ್ಷಿ):- ಪ್ರಾಣಿಗಳ ಕರ್ಮವನ್ನು ಅಪೇಕ್ಷಿಸಿರುವದರಿಂದ ದೋಷವಿಲ್ಲವಲ್ಲ !

(ಸಿದ್ಧಾಂತಿ):- ಹಾಗಲ್ಲ. (ಜೀವರ) ಕರ್ಮ, ಮತ್ತು ಈಶ್ವರ (ಇವರುಗಳಿಗೆ) ಪ್ರವರ್ತ್ಯಪ್ರವರ್ತಕಭಾವವಿದ್ದರೆ ಅನ್ಯೋನ್ಯಾಶ್ರಯವೆಂಬ ದೋಷವು ಬರುತ್ತದೆ.

---

1. ವೇದಾಂತಿಗಳಿಗೆ ಸೃಷ್ಟಿಪರಮಾರ್ಥವಲ್ಲವಾದ್ದರಿಂದಲೂ ವ್ಯವಹಾರದೃಷ್ಟಿಯಿಂದ ನೋಡುವಾಗ ವೇದಪ್ರಾಮಾಣ್ಯದಿಂದ ಕರ್ಮಾಪೇಕ್ಷತ್ವವು ಸಿದ್ಧವಾಗುವದರಿಂದಲೂ ಈ ದೋಷವಿಲ್ಲ.

(ಪೂರ್ವಪಕ್ಷಿ):– (ಪ್ರವರ್ತ್ಯಪ್ರವರ್ತಕಗಳು) ಅನಾದಿಯಾಗಿರುವದರಿಂದ (ದೋಷ)ವಿಲ್ಲ.

(ಸಿದ್ಧಾಂತಿ):– ಹಾಗಲ್ಲ. ಏಕೆಂದರೆ ಈಗಿನ ಕಾಲದಲ್ಲಿ ಹೇಗೋ ಹಾಗೆ ಹಿಂದಿನ ಕಾಲದಲ್ಲಿಯೂ ಅನ್ಯೋನ್ಯಾಶ್ರಯದೋಷವು ಸಮಾನವಾಗಿರುವದರಿಂದ ಅಂಧಪರಂಪರಾನ್ಯಾಯವು ಬಂದೊದಗುವದು.[1]

"ಇದಲ್ಲದೆ ಪ್ರವರ್ತನಾಲಕ್ಷಣಾ ದೋಷಾಃ" (ನ್ಯಾ. ಸೂ. ೧–೧–೧೮) ಪ್ರವರ್ತನೆ ಎಂಬ ಲಿಂಗದಿಂದ ದೋಷಗಳು (ಅನುಮಿತವಾಗುತ್ತವೆ)[2] ಎಂಬುದು ನ್ಯಾಯವಿದರ ಸಮಯವು. ಯಾರೊಬ್ಬರೂ ಯಾವ ದೋಷದ ಪ್ರೇರಣೆಯೂ ಇಲ್ಲದೆ ಸ್ವಾರ್ಥಕ್ಕಾಗಲಿ ಪರಾರ್ಥಕ್ಕಾಗಲಿ ಪ್ರವರ್ತಿಸುವದು ಕಂಡೇ ಇಲ್ಲ. ಪ್ರತಿಯೊಬ್ಬನೂ ಸ್ವಾರ್ಥಪ್ರೇರಿತನಾಗಿಯೇ ಅಲ್ಲವೆ, ಪರಾರ್ಥಕ್ಕಾಗಿಯೂ ಪ್ರವರ್ತಿಸುತ್ತಾನೆ ? ಹೀಗೂ (ಈ ಮತದಲ್ಲಿ) ಅಸಾಮಂಜಸ್ಯ (ವಿದೆ)[3]; ಏಕೆಂದರೆ ಸ್ವಾರ್ಥವುಳ್ಳವನಾದ್ದರಿಂದ ಈಶ್ವರನು ಈಶ್ವರನಲ್ಲದೆ ಹೋಗುತ್ತಾನೆ. ಈಶ್ವರನು ಪುರುಷವಿಶೇಷನೇ ಎಂದು ಅಂಗೀಕರಿಸಿರುವದರಿಂದಲೂ ಪುರುಷನು ಉದಾಸೀನನೆಂದು ಒಪ್ಪಿರುವದರಿಂದಲೂ ಅಸಮಾಂಜಸ್ಯ (ವೇ ಉಂಟಾಗುವದು).[4]

## ಸಂಬನ್ಧಾನುಪಪತ್ತೇಶ್ಚ ॥ ೩೮ ॥

೩೮. ಸಂಬಂಧವು ಹೊಂದದೆ ಇರುವದರಿಂದಲೂ (ಅಸಾಮಂಜಸ್ಯವು).

(ಭಾಷ್ಯ)

೭೬. ಪುನರಪಿ ಅಸಾಮಞ್ಜಸ್ಯಮೇವ । ನ ಹಿ ಪ್ರಧಾನಪುರುಷವ್ಯತಿರಿಕ್ತ ಈಶ್ವರಃ ಅನ್ತರೇಣ ಸಂಬನ್ಧಂ ಪ್ರಧಾನಪುರುಷಯೋಃ ಈಶಿತಾ ।

1. ವೇದಾಂತದಲ್ಲಾದರೆ ಅವಿದ್ಯಕವಾಗಿ ಪ್ರವೃತ್ತಿಯುಂಟಾಗುವದರಿಂದ ಈ ದೋಷವಿಲ್ಲ ಎಂದು ಭಾವ.

2. ಯಾವನಾದರೂ ಒಂದು ಕಾರ್ಯದಲ್ಲಿ ತೊಡಗುವದಾದರೆ (ಅವನಲ್ಲಿ) ರಾಗಾದಿದೋಷಗಳಿರಬೇಕು ಎಂಬುದು ಸೂತ್ರದ ಅಭಿಪ್ರಾಯ.

3. ಈ ದೋಷವು ವೇದಾಂತಕ್ಕೆ ಬರುವದಿಲ್ಲ. ಏಕೆಂದರೆ ಈಶ್ವರನು ಸ್ವತಂತ್ರನಾಗಿಯೇ ಸೃಷ್ಟಿಗೆ ಪ್ರವರ್ತಕನಾಗಿರುತ್ತಾನೆ; ಅವನ ಕಾಮಗಳು ಅವನ ಸ್ವರೂಪಭೂತವಾಗಿಯೇ ಇರುತ್ತವೆ. ತೈ. ಭಾ. ೨–೩ ಭಾ. ಭಾ. ೧೬೧ ನೋಡಿ.

4. ಯೋಗದರ್ಶನವನ್ನು ಆಶ್ರಯಿಸಿರುವವರ ಮತವಿದು. ಇಲ್ಲಿ ಉದಾಸೀನನಾದ ಪುರುಷನು ಕರ್ಮದಲ್ಲಿ ತೊಡಗುತ್ತಾನೆಂಬ ದೋಷವಿದೆ. ವೇದಾಂತದಲ್ಲಿ ಪ್ರವೃತ್ತಿಯು ಮಾಯಿಕವೆಂದು ಹೇಳಿದ್ದಾಗಿದೆ.

ನ ತಾವತ್ ಸಂಯೋಗಲಕ್ಷಣಃ ಸಂಬನ್ಧಃ ಸಂಭವತಿ । ಪ್ರಧಾನಪುರುಷೇಶ್ವರಾಣಾಂ ಸರ್ವಗತತ್ವಾತ್, ನಿರವಯವತ್ವಾಚ್ಚ । ನಾಪಿ ಸಮವಾಯಲಕ್ಷಣಃ ಸಂಬನ್ಧಃ । ಆಶ್ರಯಾಶ್ರಯಿಭಾವಾನಿರೂಪಣಾತ್ । ನಾಪಿ ಅನ್ಯಃ ಕಶ್ಚಿತ್ ಕಾರ್ಯಗಮ್ಯಃ ಸಂಬನ್ಧಃ ಶಕ್ಯತೇ ಕಲ್ಪಯಿತುಮ್ । ಕಾರ್ಯಕಾರಣಭಾವಸ್ಯೈವ ಅದ್ಯಾಪಿ ಅಸಿದ್ಧತ್ವಾತ್ । ಬ್ರಹ್ಮವಾದಿನಃ ಕಥಮ್ ?–ಇತಿ ಚೇತ್ । ನ । ತಸ್ಯ ತಾದಾತ್ಮ್ಯಲಕ್ಷಣಸಂಬನ್ಧೋಪಪತ್ತೇಃ । ಅಪಿ ಚ ಆಗಮಬಲೇನ ಬ್ರಹ್ಮವಾದೀ ಕಾರಣಾದಿಸ್ವರೂಪಂ ನಿರೂಪಯತಿ ಇತಿ ನಾವಶ್ಯಂ ತಸ್ಯ ಯಥಾದೃಷ್ಟಮೇವ ಸರ್ವಮ್ ಅಭ್ಯುಪಗನ್ತವ್ಯಮ್ ಇತಿ ನಿಯಮಃ ಅಸ್ತಿ । ಪರಸ್ಯ ತು ದೃಷ್ಟಾನ್ತಬಲೇನ ಕಾರಣಾದಿಸ್ವರೂಪಂ ನಿರೂಪಯತಃ ಯಥಾದೃಷ್ಟಮೇವ ಸರ್ವಮ್ ಅಭ್ಯುಪಗನ್ತವ್ಯಮ್ ಇತ್ಯಯಮ್ ಅಸ್ತಿ ಅತಿಶಯಃ । ಪರಸ್ಯಾಪಿ ಸರ್ವಜ್ಞಪ್ರಣೀತಾಗಮಸದ್ಭಾವಾತ್ ಸಮಾನಮ್ ಆಗಮಬಲಮ್ ಇತಿ ಚೇತ್ । ನ । ಇತರೇತರಾಶ್ರಯತ್ವಪ್ರಸಙ್ಗಾತ್ ಆಗಮಪ್ರತ್ಯಯಾತ್ ಸರ್ವಜ್ಞತ್ವಸಿದ್ಧಿಃ ಸರ್ವಜ್ಞಪ್ರತ್ಯಯಾಚ್ಚ ಆಗಮಸಿದ್ಧಿಃ ಇತಿ । ತಸ್ಮಾತ್ ಅನುಪಪನ್ನಾ ಸಾಂಖ್ಯಯೋಗವಾದಿನಾಮ್ ಈಶ್ವರಕಲ್ಪನಾ । ಏವಮ್ ಅನ್ಯಾಸ್ವಪಿ ವೇದಬಾಹ್ಯಾಸು ಈಶ್ವರಕಲ್ಪನಾಸು ಯಥಾಸಂಭವಮ್ ಅಸಾಮಞ್ಜಸ್ಯಂ ಯೋಜಯಿತವ್ಯಮ್ ॥

(ಭಾಷ್ಯಾರ್ಥ)

(ಸಂಬಂಧವು ಹೊಂದದೆ ಇರುವದರಿಂದ) ಮತ್ತೂ ಅಸಾಮಂಜಸ್ಯವೇ (ಉಂಟಾಗುವದು). ಹೇಗೆಂದರೆ, ಪ್ರಧಾನಪುರುಷರಿಗಿಂತ ಬೇರೆಯಾಗಿರುವ ಈಶ್ವರನು ಸಂಬಂಧವಿಲ್ಲದೆ ಪ್ರಧಾನಪುರುಷರನ್ನು ಆಳುವದಕ್ಕೆ ಆಗಲಾರದಷ್ಟೆ.[1] ಮೊದಲನೆಯದಾಗಿ ಸಂಯೋಗರೂಪವಾದ ಸಂಬಂಧವು ಆಗುವಂತಿಲ್ಲ. ಏಕೆಂದರೆ ಪ್ರಧಾನ, ಪುರುಷ, ಈಶ್ವರ– ಇವರುಗಳು ಸರ್ವಗತರಾಗಿ ನಿರವಯವರೂ ಆಗಿರುತ್ತಾರೆ.[2] ಸಮವಾಯರೂಪವಾದ ಸಂಬಂಧವೂ (ಆಗು)ವಂತಿಲ್ಲ ; ಏಕೆಂದರೆ ಆಶ್ರಯಾಶ್ರಯಿಭಾವವನ್ನು ಗೊತ್ತುಮಾಡುವದಕ್ಕೆ ಬರುವಂತಿಲ್ಲ.[3]

1. ತಟಸ್ಥನಾಗಿರುವ ಈಶ್ವರನು ತನಗೆ ಸಂಬಂಧವಿಲ್ಲದ ಪ್ರಧಾನಪುರುಷರನ್ನು ಭೋಗಮೋಕ್ಷಗಳಲ್ಲಿ ಪ್ರವರ್ತಿಸುವಂತೆ ಮಾಡಲಾರನು. ಏಕೆಂದರೆ ಲೋಕದಲ್ಲಿ ಸಂಬಂಧವಿಲ್ಲದ ವಸ್ತುಗಳಿಗೆ ಪರಸ್ಪರವಾಗಿ ಪ್ರವರ್ತ್ಯಪ್ರವರ್ತಕಭಾವವು ಇರುವದಿಲ್ಲ.

2. ಪರಿಚ್ಛಿನ್ನವಾದ ವಸ್ತುಗಳಿಗೆ ಮಾತ್ರ ಸಂಯೋಗವಿರಬಹುದು.

3. ತಂತುಗಳು ಆಶ್ರಯ, ಪಟವು ಆಶ್ರಯಿ –ಎಂದು ಕಾಣುವದರಿಂದ ಅಲ್ಲಿ ಸಮವಾಯಸಂಬಂಧವಿದೆ ಎಂದರೂ ಎನ್ನಬಹುದು ; ಆದರೆ ಇಲ್ಲಿ ಹಾಗೆ ಕಂಡುಬರುವದಿಲ್ಲ ಎಂಬ ಅಭಿಪ್ರಾಯ. ಇದು ಒಪ್ಪಿಹೇಳಿದ್ದು. ನಿಜವಾಗಿ ಸಮವಾಯವೆಂಬ ಸಂಬಂಧವೇ ಇಲ್ಲವೆಂದು ೨–೨–೧೩ರಲ್ಲಿ ತೋರಿಸಿದ್ದಾಗಿದೆ.

(ಇವನ್ನು ಬಿಟ್ಟರೆ) ಕಾರ್ಯಾನುಮೇಯವಾದ ಬೇರೆ ಯಾವ ಸಂಬಂಧ ವನ್ನೂ ಕಲ್ಪಿಸುವದಕ್ಕೆ ಆಗುವಂತಿಲ್ಲ; ಏಕೆಂದರೆ ಕಾರ್ಯಕಾರಣಭಾವವೇ ಇನ್ನೂ ಸಿದ್ಧವಾಗಿಲ್ಲ.[1]

(ಆಕ್ಷೇಪ) :– ಬ್ರಹ್ಮವಾದಿಗೆ (ಸಂಬಂಧವು) ಹೇಗೆ ?

(ಪರಿಹಾರ) :– ಹಾಗಲ್ಲ. ಏಕೆಂದರೆ ಅವನಿಗೆ **ತಾದಾತ್ಮ್ಯರೂಪವಾದ** ಸಂಬಂಧವು ಇರಬಹುದಾಗಿದೆ.[2] **ಇದಲ್ಲದೆ ಬ್ರಹ್ಮವಾದಿಯು ಆಗಮ ಬಲದಿಂದ ಕಾರಣಾದಿಗಳ ಸ್ವರೂಪವನ್ನು ಗೊತ್ತುಪಡಿಸುತ್ತಾನೆ; ಆದ್ದರಿಂದ ಅವನು ಎಲ್ಲವನ್ನೂ (ಲೋಕದಲ್ಲಿ) ಕಂಡಂತೆಯೇ ಒಪ್ಪ ಬೇಕೆಂಬ ನಿಯಮವಿಲ್ಲ. ಆದರೆ ಪರ(ವಾದಿ)ಯಾದರೋ ದೃಷ್ಟಾಂತ ಬಲದಿಂದ ಕಾರಣಾದಿಗಳ ಸ್ವರೂಪವನ್ನು ಗೊತ್ತುಮಾಡುವನಾದ್ದ ರಿಂದ (ಲೋಕದಲ್ಲಿ) ಕಂಡಿರುವಂತೆಯೇ ಎಲ್ಲವನ್ನೂ ಅಂಗೀಕರಿಸ ಬೇಕು– ಎಂಬೀ ವಿಶೇಷವಿದೆ.**

(ಆಕ್ಷೇಪ) :– ಪರ(ವಾದಿ)ಗೂ **ಸರ್ವಜ್ಞನು ರಚಿಸಿರುವ ಆಗಮವು**[3] ಇರುವದರಿಂದ ಆಗಮಬಲವು (ಇಬ್ಬರಿಗೂ) ಸಮಾನವಲ್ಲವೆ ?

(ಪರಿಹಾರ) :– ಹಾಗಲ್ಲ. ಏಕೆಂದರೆ, ಆಗಮಜ್ಞಾನದಿಂದ ಸರ್ವಜ್ಞ ತ್ವವು ಸಿದ್ಧವಾಗಬೇಕು; ಆದರೆ ಸರ್ವಜ್ಞಪ್ರತ್ಯಯದಿಂದ ಆಗಮವು ಸಿದ್ಧವಾಗ ಬೇಕು –ಎಂದು ಅನ್ಯೋನ್ಯಾಶ್ರಯವು ಪ್ರಸಕ್ತವಾಗುತ್ತದೆ.[4] ಆದ್ದರಿಂದ ಸಾಂಖ್ಯಯೋಗವಾದಿಗಳ ಈಶ್ವರಕಲ್ಪನೆಯು ಯುಕ್ತವಾಗಿರುವದಿಲ್ಲ. ಹೀಗೆ ಯೇ ಮಿಕ್ಕ ವೇದಬಾಹ್ಯವಾದ ಈಶ್ವರಕಲ್ಪನೆಗಳಲ್ಲಿಯೂ ಅಸಾಮಂಜಸ್ಯವನ್ನು ಕೂಡಿಸಿಕೊಳ್ಳಬೇಕು.

---

1. ಕಾರ್ಯಕಾರಣಭಾವವು ಸಿದ್ಧವಾಗಿದ್ದರೆ ಕಾರ್ಯವಾದ ಪ್ರಧಾನಪುರುಷರಿಗೂ ಈಶ್ವರನಿಗೂ ಯಾವದಾದರೊಂದು ಸಂಬಂಧವನ್ನು ಕಲ್ಪಿಸಬಹುದಾಗಿತ್ತು.

2. ಏಕೆಂದರೆ ಪ್ರಪಂಚವು ನಿಜವಾಗಿ ಬ್ರಹ್ಮವೇ ಆಗಿದೆ. ಪ್ರತೀತವಾದ ರೂಪ ದಿಂದಲೂ ಬ್ರಹ್ಮಾವ್ಯತಿರಿಕ್ತವಾಗಿರುತ್ತದೆ.

3. ಸ್ವತಂತ್ರಪ್ರಮಾಣವಾದ ವೇದವನ್ನು ಮೀಮಾಂಸಕರಂತೆ ವೇದಾಂತಿಗಳೂ ಒಪ್ಪುತ್ತಾರೆ. ತಾರ್ಕಿಕರು ಸರ್ವಜ್ಞಪ್ರಣೀತಾಗಮವನ್ನು ಒಪ್ಪುತ್ತಾರೆ.

4. ಕಪಿಲಾದಿಗಳು ಸರ್ವಜ್ಞರೆಂದು ಸ್ವತಂತ್ರರಾಗಿ ಸಿದ್ಧವಾದ ಬಳಿಕ ಸರ್ವಜ್ಞ ಪ್ರಣೀತವಾದ ಆಗಮವನ್ನು ಪ್ರಮಾಣವಾಗಿ ಉದಾಹರಿಸಬಹುದು. ಆದರೆ ಅವರು ಸರ್ವಜ್ಞರೆಂಬುದಕ್ಕೆ ಆಗಮವೇ ಪ್ರಮಾಣವಾಗಬೇಕಾಗಿದೆ. ಹಿಂದೆ ೨–೧–೧ರಲ್ಲಿ ಭಾ. ಭಾ. ೪೦೨ ನೋಡಿ.

**ಅಧಿಷ್ಠಾನಾನುಪಪತ್ತೇಶ್ಚ ॥ ೩೯ ॥**

೩೯. ಅಧಿಷ್ಠಾನವು ಹೊಂದುವದಿಲ್ಲವಾದ್ದರಿಂದಲೂ (ಯುಕ್ತವಲ್ಲ).

೭೭. ಇತಶ್ಚ ಅನುಪಪತ್ತಿಃ ತಾರ್ಕಿಕಪರಿಕಲ್ಪಿತೇಶ್ವರಸ್ಯ; ಸ ಹಿ ಪರಿಕಲ್ಪ್ಯಮಾನಃ ಕುಮ್ಭಕಾರ ಇವ ಮೃದಾದೀನಿ ಪ್ರಧಾನಾದೀನಿ ಅಧಿಷ್ಠಾಯ ಪ್ರವರ್ತಯೇತ್ । ನ ಚೈವಮ್ ಉಪಪದ್ಯತೇ । ನ ಹಿ ಅಪ್ರತ್ಯಕ್ಷಂ ರೂಪಾದಿಹೀನಂ ಚ ಪ್ರಧಾನಮ್ ಈಶ್ವರಸ್ಯ ಅಧಿಷ್ಠೇಯಂ ಸಂಭವತಿ। ಮೃದಾದಿವೈಲಕ್ಷಣ್ಯಾತ್ ॥

(ಭಾಷ್ಯಾರ್ಥ)

ತಾರ್ಕಿಕರು ಕಲ್ಪಿಸಿರುವ ಈಶ್ವರನು ಈ (ಕಾರಣ)ದಿಂದಲೂ ಉಪಪನ್ನನಾಗುವದಿಲ್ಲ. ಏಕೆಂದರೆ ಅವನನ್ನು ಕಲ್ಪಿಸಿದರೆ ಕುಂಬಾರನು ಮಣ್ಣು ಮುಂತಾದದ್ದನ್ನು ಹೇಗೋ ಹಾಗೆ ಪ್ರಧಾನಾದಿಗಳನ್ನು ವಶಪಡಿಸಿಕೊಂಡು ಪ್ರವರ್ತಿಸಬೇಕಷ್ಟೆ. ಆದರೆ (ಇದು) ಹಾಗೆ ಉಪಪನ್ನವಾಗುವದಿಲ್ಲ. ಏಕೆಂದರೆ ಅಪ್ರತ್ಯಕ್ಷವೂ ಆಗಿದ್ದು ರೂಪಾದಿಗಳಿಲ್ಲದ ಪ್ರಧಾನವು ಈಶ್ವರನಿಗೆ ವಶವಾಗಿರುವೆಂಬುದು ಸಂಭವಿಸುವದಿಲ್ಲ; ಏಕೆಂದರೆ (ಇದು) ಮೃದಾದಿಗಳಿಗಿಂತ ವಿಲಕ್ಷಣವಾಗಿರುತ್ತದೆ.[1]

**ಕರಣವಚ್ಚೇನ್ನ ಭೋಗಾದಿಭ್ಯಃ ॥ ೪೦ ॥**

೪೦. ಕರಣಗಳಂತೆ ಎಂದರೆ (ಅದು ಸರಿ)ಯಲ್ಲ; ಏಕೆಂದರೆ ಭೋಗಾದಿಗಳಿಂದ (ಅಲ್ಲಿ ಆಗಬಹುದು).

## ಕರಣದೃಷ್ಟಾಂತವು ಪ್ರಕೃತಕ್ಕೆ ಹೊಂದುವದಿಲ್ಲ

(ಭಾಷ್ಯ)

೭೮. ಸ್ಯಾದೇತತ್ । ಯಥಾ ಕರಣಗ್ರಾಮಂ ಚಕ್ಷುರಾದಿಕಮ್ ಅಪ್ರತ್ಯಕ್ಷಂ ರೂಪಾದಿಹೀನಂ ಚ ಪುರುಷಃ ಅಧಿತಿಷ್ಠತಿ, ಏವಂ ಪ್ರಧಾನಮಪಿ

---

1. ಅಧಿಷ್ಠೇಯವಾದದ್ದು ಪ್ರತ್ಯಕ್ಷವೂ ರೂಪಾದಿಗಳುಳ್ಳದ್ದೂ ಆಗಿರಬೇಕೆಂಬ ನಿಯಮವಿದೆ. ಆದರೆ ಇಲ್ಲಿ ಹಾಗಿಲ್ಲದ್ದರಿಂದ ಕುಲಾಲಾದಿದೃಷ್ಟಾಂತದಿಂದ ಈಶ್ವರನು ಪ್ರಧಾನವನ್ನು ವಶಗೊಳಿಸಿಕೊಂಡಿರುತ್ತಾನೆಂದು ಅನುಮಾನಿ . ಚ್ಚ ಬರುವದಿಲ್ಲ ಎಂದು ಅಭಿಪ್ರಾಯ.

ಈಶ್ವರಃ ಅಧಿಷ್ಠಾಸ್ಯತಿ ಇತಿ। ತಥಾಪಿ ನೋಪಪದ್ಯತೇ। ಭೋಗಾದಿದರ್ಶನಾದ್ ಹಿ ಕರಣಗ್ರಾಮಸ್ಯ ಅಧಿಷ್ಠಿತತ್ವಂ ಗಮ್ಯತೇ। ನ ಚ ಅತ್ರ ಭೋಗಾದಯೋ ದೃಶ್ಯನ್ತೇ। ಕರಣಗ್ರಾಮಸಾಮ್ಯೇ ವಾ ಅಭ್ಯುಪಗಮ್ಯಮಾನೇ ಸಂಸಾರಿಣಾಮಿವ ಈಶ್ವರಸ್ಯಾಪಿ ಭೋಗಾದಯಃ ಪ್ರಸಜ್ಯೇರನ್ ॥

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಮತವು) ಇದಾಗಿರಬಹುದು : ಹೇಗೆ ಕರಣಗ್ರಾಮವಾದ ಚಕ್ಷುಸ್ಸೇ ಮುಂತಾದವುಗಳನ್ನು ಪುರುಷನು ವಶದಲ್ಲಿಟ್ಟುಕೊಂಡಿರುತ್ತಾನೋ ಹೀಗೆಯೇ ಪ್ರಧಾನವನ್ನೂ ಈಶ್ವರನು ವಶಪಡಿಸಿಕೊಂಡಿರಬಹುದಲ್ಲ !

(ಆದರೆ) ಹೀಗೂ ಉಪಪನ್ನವಾಗುವದಿಲ್ಲ. ಏಕೆಂದರೆ ಭೋಗಾದಿಗಳು ಕಂಡುಬರುವದರಿಂದಲ್ಲವೆ, ಕರಣಗ್ರಾಮವು (ಪುರುಷನಿಂದ) ಅಧಿಷ್ಠಿತವಾಗಿರುತ್ತದೆ ಎಂದು ನಿಶ್ಚಯಿಸಬಹುದಾಗಿದೆ ? ಆದರೆ ಇಲ್ಲಿ ಭೋಗಾದಿಗಳು ಕಾಣಬರುವದಿಲ್ಲ. ಕರಣಗ್ರಾಮದ ಹೋಲಿಕೆಯನ್ನು ಒಪ್ಪಿದರೆ ಸಂಸಾರಿಗಳಿಗೆ ಹೇಗೋ ಹಾಗೆ ಈಶ್ವರನಿಗೂ ಭೋಗಾದಿಗಳು ಪ್ರಸಕ್ತ.

## ಸೂತ್ರಗಳೆರಡಕ್ಕೂ ವ್ಯಾಖ್ಯಾನಾಂತರ

(ಭಾಷ್ಯ)

೭೯. ಅನ್ಯಥಾ ವಾ ಸೂತ್ರದ್ವಯಂ ವ್ಯಾಖ್ಯಾಯತೇ "ಅಧಿಷ್ಠಾನಾನುಪತ್ತೇಶ್ಚ" (೨-೨-೩೯), ಇತಶ್ಚ ಅನುಪಪತ್ತಿಃ ತಾರ್ಕಿಕಪರಿಕಲ್ಪಿತಸ್ಯ ಈಶ್ವರಸ್ಯ। ಸಾಧಿಷ್ಠಾನೋ ಹಿ ಲೋಕೇ ಸಶರೀರೋ ರಾಜಾ ರಾಷ್ಟ್ರಸ್ಯ ಈಶ್ವರೋ ದೃಶ್ಯತೇ ನ ನಿರಧಿಷ್ಠಾನಃ। ಅತಶ್ಚ ತದ್ದೃಷ್ಟಾನ್ತವಶೇನ ಅದೃಷ್ಟಮ್ ಈಶ್ವರಂ ಕಲ್ಪಯಿತುಮಿಚ್ಛತಃ ಈಶ್ವರಸ್ಯಾಪಿ ಕಿಂಚಿತ್ ಶರೀರಂ ಕರಣಾಯತನಂ ವರ್ಣಯಿತವ್ಯಂ ಸ್ಯಾತ್। ನ ಚ ತದ್ ವರ್ಣಯಿತುಂ ಶಕ್ಯತೇ। ಸೃಷ್ಟ್ಯುತ್ತರಕಾಲಭಾವಿತ್ವಾತ್ ಶರೀರಸ್ಯ ಪ್ರಾಕ್‌ಸೃಷ್ಟೇಸ್ತದನುಪಪತ್ತೇಃ, ನಿರಧಿಷ್ಠಾನತ್ವೇ ಚ ಈಶ್ವರಸ್ಯ ಪ್ರವರ್ತಕತ್ವಾನುಪಪತ್ತಿಃ। ಏವಂ ಲೋಕೇ ದೃಷ್ಟತ್ವಾತ್। "ಕರಣವಚ್ಚೇನ್ನ ಭೋಗಾದಿಭ್ಯಃ।" (೨-೨-೪೦) ಅಥ ಲೋಕದರ್ಶನಾನುಸಾರೇಣ ಈಶ್ವರಸ್ಯಾಪಿ ಕಿಂಚಿತ್ ಕರಣಾನಾಮ್ ಆಯತನಂ ಶರೀರಂ ಕಾಮೇನ ಕಲ್ಪ್ಯೇತ, ಏವಮಪಿ ನೋಪಪದ್ಯತೇ। ಸಶರೀರತ್ವೇ ಹಿ ಸತಿ ಸಂಸಾರಿವತ್ ಭೋಗಾದಿಪ್ರಸಙ್ಗಾತ್ ಈಶ್ವರಸ್ಯಾಪಿ ಅನೀಶ್ವರತ್ವಂ ಪ್ರಸಜ್ಯೇತ ॥

(ಭಾಷ್ಯಾರ್ಥ)

ಅಥವಾ ಈ ಎರಡು ಸೂತ್ರಕ್ಕೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನವನ್ನು ಮಾಡಬಹುದು. ಹೇಗೆಂದರೆ :

## ತಾರ್ಕಿಕರ ಈಶ್ವರನಿಗೆ ಶರೀರವೂ ಇರಬೇಕಾಗುವದು

**ಅಧಿಷ್ಠಾನಾನುಪಪತ್ತೇಶ್ಚ ॥ ೪೧ ॥**

ತಾರ್ಕಿಕರು ಪರಿಕಲ್ಪಿಸಿರುವ ಈಶ್ವರನು ಈ (ಕಾರಣ)ದಿಂದಲೂ ಅನುಪಪನ್ನನಾಗಿರುತ್ತಾನೆ. ಏಕೆಂದರೆ ಲೋಕದಲ್ಲಿ ಅಧಿಷ್ಠಾನವುಳ್ಳ ಎಂದರೆ ಶರೀರವುಳ್ಳ ರಾಜನೇ ರಾಷ್ಟ್ರಕ್ಕೆ ಒಡೆಯನಾಗಿರುವದು ಕಂಡಿರುತ್ತದೆಯೇ ಹೊರತು ಅಧಿಷ್ಠಾನರಹಿತನಾದವನು (ಒಡೆಯನಾಗಿರುವದು ಕಂಡು)ಬಂದಿಲ್ಲ. ಆದ್ದರಿಂದ ಆ ದೃಷ್ಟಾಂತದ ವಶದಿಂದ ಅದೃಷ್ಟನಾಗಿರುವ ಈಶ್ವರನನ್ನು ಕಲ್ಪಿಸಬೇಕೆಂದು ಇಚ್ಛಿಸುವವನು ಈಶ್ವರನಿಗೂ ಕರಣಗಳಿಗೆ ಆಶ್ರಯವಾಗಿರುವ ಯಾವದೋ ಒಂದು ಶರೀರವನ್ನು (ಕಲ್ಪಿಸಿ) ಹೇಳಬೇಕಾಗುವದು. ಆದರೆ (ಹಾಗೆ) ಹೇಳುವದಕ್ಕೆ ಆಗುವದಿಲ್ಲ; ಏಕೆಂದರೆ ಶರೀರವು ಸೃಷ್ಟಿಯಾದ ಬಳಿಕ ಕಾಲದಲ್ಲಿರತಕ್ಕದ್ದಾದ್ದರಿಂದ ಸೃಷ್ಟಿಗೆ ಮೊದಲು ಅದು ಇರಲಾರದು. ಈಶ್ವರನಿಗೆ ಶರೀರವೇ ಇಲ್ಲವೆಂದರೆ (ಅವನು) ಪ್ರವರ್ತಕನೆಂಬುದು ಹೊಂದುವದಿಲ್ಲ. ಏಕೆಂದರೆ ಹೀಗೆಂದು ಲೋಕದಲ್ಲಿ ಕಂಡಿರುತ್ತದೆ[1].

**ಕರಣವಚ್ಚೇನ್ನ ಭೋಗಾದಿಭ್ಯಃ ॥ ೪೨ ॥**

ಇನ್ನು ಲೋಕದಲ್ಲಿ ಕಂಡಿರುವದಕ್ಕನುಸಾರವಾಗಿ ಈಶ್ವರನಿಗೂ ಯಾವದಾದರೊಂದು ಕರಣಗಳಾಶ್ರಯವಾದ ಶರೀರವನ್ನು ತನ್ನ ಇಚ್ಛಾನುಸಾರವಾಗಿ ಕಲ್ಪಿಸಬಹುದು. ಹೀಗಾದರೂ (ಇದು) ಹೊಂದುವದಿಲ್ಲ. ಏಕೆಂದರೆ ಸಶರೀರತ್ವವಿದ್ದರೆ ಸಂಸಾರಿಗಳಂತೆ ಭೋಗಾದಿಗಳೂ ಪ್ರಸಕ್ತವಾಗುವದರಿಂದ ಈಶ್ವರನೂ ಅನೀಶ್ವರನೆಂದೇ ಪ್ರಸಕ್ತವಾಗಬಹುದು.

**ಅನ್ತವತ್ತ್ವಮಸರ್ವಜ್ಞತಾ ವಾ ॥ ೪೩ ॥**

೪೧. ಅಂತವತ್ತ್ವವೋ ಅಸರ್ವಜ್ಞತೆಯೋ ಪ್ರಸಕ್ತವಾಗುವದು.

---

1. ಈ ಪಾದದಲ್ಲೆಲ್ಲ ದೃಷ್ಟಾಂತದ ಬಲದಿಂದಲೇ ಪರಪಕ್ಷವನ್ನು ಖಂಡಿಸಿದೆ ಎಂಬುದನ್ನು ಲಕ್ಷ್ಯಕ್ಕೆ ತಂದುಕೊಳ್ಳಬೇಕು. ತಾರ್ಕಿಕರಿಗೆ ಅನುಮಾನವು ಪ್ರಧಾನವಾಗಿ[illegible] ಎಂಬುದನ್[illegible] ಆಗಮಬಲವಿಲ್ಲವೆಂಬುದನ್ನೂ ಇದು ಸೂಚಿಸುತ್ತದೆ. ಟಿಪ್ಪಣಿಯನ್ನು ನೋ[illegible]

# ಪ್ರಧಾನಪುರುಷೇಶ್ವರರಿಗೆ ಅಂತವತ್ತ್ವದೋಷ

(ಭಾಷ್ಯ)

೮೦. ಇತಶ್ಚ ಅನುಪಪತ್ತಿಃ ತಾರ್ಕಿಕಪರಿಕಲ್ಪಿತಸ್ಯ ಈಶ್ವರಸ್ಯ । ಸ ಹಿ ಸರ್ವಜ್ಞಸ್ತೈರಭ್ಯುಪಗಮ್ಯತೇ ಅನನ್ತಶ್ಚ । ಅನನ್ತಂ ಚ ಪ್ರಧಾನಮ್ ಅನನ್ತಾಶ್ಚ ಪುರುಷಾಃ ಮಿಥೋ ಭಿನ್ನಾಃ ಅಭ್ಯುಪಗಮ್ಯನ್ತೇ । ತತ್ರ ಸರ್ವಜ್ಞೇನ ಈಶ್ವರೇಣ ಪ್ರಧಾನಸ್ಯ ಪುರುಷಾಣಾಮ್ ಆತ್ಮನಶ್ಚ ಇಯತ್ತಾ ಪರಿಚ್ಛಿದ್ಯೇತ ವಾ ನ ವಾ ಪರಿಚ್ಛಿದ್ಯೇತ । ಉಭಯಥಾಪಿ ದೋಷಃ ಅನುಷಕ್ತ ಏವ । ಕಥಮ್? ಪೂರ್ವಸ್ಮಿನ್ ತಾವತ್ ವಿಕಲ್ಪೇ ಇಯತ್ತಾಪರಿಚ್ಛಿನ್ನತ್ವಾತ್ ಪ್ರಧಾನಪುರುಷೇಶ್ವರಾಣಾಮ್ ಅನ್ತವತ್ತ್ವಮ್ ಅವಶ್ಯಂ ಭಾವಿ। ಏವಂ ಲೋಕೇ ದೃಷ್ಟತ್ವಾತ್ । ಯದ್ ಹಿ ಲೋಕೇ ಇಯತ್ತಾಪರಿಚ್ಛಿನ್ನಂ ವಸ್ತು ಘಟಾದಿ[1] ತತ್ ಅನ್ತವದ್ ದೃಷ್ಟಮ್ । ತಥಾ ಪ್ರಧಾನಪುರುಷೇಶ್ವರತ್ರಯಮಪಿ ಇಯತ್ತಾಪರಿಚ್ಛಿನ್ನತ್ವಾತ್ ಅನ್ತವತ್ ಸ್ಯಾತ್ । ಸಂಖ್ಯಾಪರಿಮಾಣಂ ತಾವತ್ ಪ್ರಧಾನಪುರುಷೇಶ್ವರತ್ರಯರೂಪೇಣ ಪರಿಚ್ಛಿನ್ನಮ್ । ಸ್ವರೂಪಪರಿಮಾಣಮಪಿ ತದ್ಗತಮ್ ಈಶ್ವರೇಣ ಪರಿಚ್ಛಿದ್ಯೇತ ಇತಿ। ಪುರುಷಗತಾ ಚ ಮಹಾಸಂಖ್ಯಾ। ತತಶ್ಚ ಇಯತ್ತಾಪರಿಚ್ಛಿನ್ನಾನಾಂ ಮಧ್ಯೇ ಯೇ ಸಂಸಾರಿಣಃ ಸಂಸಾರಾನ್ಮುಚ್ಯನ್ತೇ ತೇಷಾಂ ಸಂಸಾರೋಽನ್ತವಾನ್, ಸಂಸಾರಿತ್ವಂ ಚ ತೇಷಾಮ್ ಅನ್ತವತ್, ಏವಮ್ ಇತರೇಷ್ವಪಿ ಕ್ರಮೇಣ ಮುಚ್ಯಮಾನೇಷು ಸಂಸಾರಸ್ಯ ಸಂಸಾರಿಣಾಂ ಚ ಅನ್ತವತ್ತ್ವಂ ಸ್ಯಾತ್। ಪ್ರಧಾನಂ ಚ ಸವಿಕಾರಂ ಪುರುಷಾರ್ಥಮ್ ಈಶ್ವರಾಧಿಷ್ಠೇಯಂ ಸಂಸಾರತ್ವೇನ[2] ಅಭಿಮತಮ್ । ತಚ್ಛೂನ್ಯತಾಯಾಮ್ ಈಶ್ವರಃ ಕಿಮ್ ಅಧಿತಿಷ್ಠೇತ್ ? ಕಿಂವಿಷಯೇ ವಾ ಸರ್ವಜ್ಞತೇಶ್ವರತೇ ಸ್ಯಾತಾಮ್ ? ಪ್ರಧಾನಪುರುಷೇಶ್ವರಾಣಾಂ ಚ ಏವಮ್ ಅನ್ತವತ್ತ್ವೇ ಸತಿ ಆದಿಮತ್ತ್ವಪ್ರಸಙ್ಗಃ । ಆದ್ಯನ್ತವತ್ತ್ವೇ ಚ ಶೂನ್ಯವಾದಪ್ರಸಙ್ಗಃ ॥

(ಭಾಷ್ಯಾರ್ಥ)

ಈ ಕಾರಣದಿಂದಲೂ ತಾರ್ಕಿಕಪರಿಕಲ್ಪಿತನಾದ ಈಶ್ವರನು ಅನುಪಪನ್ನನಾಗಿರುತ್ತಾನೆ. ಏಕೆಂದರೆ ಅವನು ಸರ್ವಜ್ಞನೆಂದೂ ಅನಂತನೆಂದೂ ಅವರು ಒಪ್ಪಿರುತ್ತಾರೆ. ಪ್ರಧಾನವೂ ಅನಂತವು, ಪುರುಷರೂ ಅನಂತರು; (ಇವರು)

---

1. ವ್ಯಾಖ್ಯಾನಾನುಸಾರವಾಗಿ ಇದನ್ನು ಘಟಾದಿ ಎಂದು ಬರೆದುಕೊಂಡಿದೆ ; ಭಾಷ್ಯದಲ್ಲಿ ಪಟಾದಿ ಎಂಬ ಪ್ರಯೋಗವು ಎಲ್ಲಿಯೂ ಇಲ್ಲ.

2. ಸಂಸಾರಿತ್ವೇನ ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಪರಸ್ಪರಭಿನ್ನರಾಗಿರುತ್ತಾರೆ ಎಂದು (ಅವರು) ಒಪ್ಪಿರುತ್ತಾರೆ. ಇಲ್ಲಿ ಸರ್ವಜ್ಞನಾದ ಈಶ್ವರನಿಂದ ಪ್ರಧಾನಕ್ಕೂ ಪುರುಷರಿಗೂ ತನಗೂ ಇಯತ್ತೆಯು ಪರಿಚ್ಛಿನ್ನವಾಗಬೇಕು,[1] ಇಲ್ಲವೆ ಪರಿಚ್ಛಿನ್ನವಾಗಬಾರದು. ಎರಡು ಪ್ರಕಾರದಿಂದಲೂ ದೋಷವು ಅಂಟಿಕೊಂಡೇ ಇರುತ್ತದೆ. ಹೇಗೆ ಎಂದರೆ ಮೊದಲನೆಯದಾಗಿ ಒಂದನೆಯ ವಿಕಲ್ಪದಲ್ಲಿ ಪ್ರಧಾನ, ಪುರುಷರು, ಈಶ್ವರ – ಇವರುಗಳು ಇಷ್ಟೆಂಬ ಪರಿಚ್ಛೇದವುಳ್ಳವರಾಗಿರುವದರಿಂದ (ಅವರಿಗೆ) ಅಂತವತ್ತ್ವವು ಅವಶ್ಯವಾಗಿ ಇರಬೇಕು. ಏಕೆಂದರೆ ಲೋಕದಲ್ಲಿ ಹೀಗೆ ಕಂಡಿರುತ್ತದೆ.[2] ಹೇಗೆಂದರೆ ಲೋಕದಲ್ಲಿ ಗಡಿಗೆಯೇ ಮುಂತಾದ[3] ಯಾವದು ಇಷ್ಟೆಂಬ ಪರಿಚ್ಛೇದವುಳ್ಳದ್ದಾಗಿರುತ್ತದೆಯೋ ಅದಕ್ಕೆ ಅಂತವಿರುತ್ತದೆ ಎಂದು ಕಂಡುಬಂದಿರುತ್ತದೆ. ಹಾಗೆಯೇ ಪ್ರಧಾನ, ಪುರುಷರು, ಈಶ್ವರ–ಎಂಬ ಮೂರೂ ಇಷ್ಟೆಂಬ ಪರಿಚ್ಛೇದವುಳ್ಳವರಾದ್ದರಿಂದ ಅಂತವುಳ್ಳವರಾಗಿರಬೇಕು. ಮೊದಲನೆಯದಾಗಿ ಸಂಖ್ಯಾಪರಿಮಾಣವು ಪ್ರಧಾನ, ಪುರುಷರು, ಈಶ್ವರ –ಎಂಬ ಮೂರು ರೂಪದಿಂದ ಪರಿಚ್ಛಿನ್ನವಾಗಿರುತ್ತದೆ.[4] ಅವುಗಳಲ್ಲಿರುವ ಸ್ವರೂಪಪರಿಣಾಮವೂ ಈಶ್ವರನಿಂದ ಪರಿಚ್ಛಿನ್ನವಾಗಿರಬೇಕಾಗಿರಬೇಕು.[5] ಪುರುಷಗತವಾದ ಮಹಾಸಂಖ್ಯೆಯೂ (ಪರಿಚ್ಛಿನ್ನವಾಗಿರುತ್ತದೆ). ಆದ್ದರಿಂದ ಇಷ್ಟೆಂದು ಪರಿಚ್ಛಿನ್ನರಾಗಿರುವವರೊಳಗೆ ಯಾವ ಸಂಸಾರಿಗಳು ಸಂಸಾರದಿಂದ ಮುಕ್ತರಾಗುವರೋ ಅವರಿಗೆ ಸಂಸಾರವು ಅಂತವುಳ್ಳದ್ದಾಗಬೇಕು. ಅವರ ಸಂಸಾರಿತ್ವವೂ ಅಂತವುಳ್ಳದ್ದಾಗಬೇಕು. ಹೀಗೆಯೇ ಮಿಕ್ಕವರೂ ಕ್ರಮವಾಗಿ ಮುಕ್ತರಾದಂತೆ ಸಂಸಾರವೂ ಸಂಸಾರಿಗಳೂ ಅಂತವುಳ್ಳವರಾಗಬೇಕಾಗುವದು. ಸಂಸಾರವೆಂದು (ಈ ವಾದಿಗಳಿಗೆ)

---

1. ಈಶ್ವರನಿಗೆ ಇವು ಇಷ್ಟೇ ಎಂದು ಗೊತ್ತಿರಬೇಕು, ಅವನ ಜ್ಞಾನವು ಇದರ ಸಂಖ್ಯೆಯನ್ನೂ ಪರಿಣಾಮವನ್ನೂ ಗೊತ್ತುಮಾಡಬೇಕು. ಏಕೆಂದರೆ ಅವನು ಸರ್ವಜ್ಞನಾಗಿರುತ್ತಾನೆ ಎಂದು ಅಭಿಪ್ರಾಯ.

2. ೩೭ನೆಯ ಸೂತ್ರದ ೧ನೆ ಟಿಪ್ಪಣಿಯನ್ನು ನೋಡಿ.

3. ಘಟಾದಿ ಎಂಬ ಪಾಠದ ಅನುವಾದವಿದು ; ಪಟಾದಿ ಎಂಬ ಪಾಠಕ್ಕೆ ಬಟ್ಟೆಯೇ ಮುಂತಾದ ಎಂದು ಕನ್ನಡಿಸಿಕೊಳ್ಳಬೇಕು.

4. ಗೊತ್ತಾಗಿರುತ್ತದೆ, ಕ್ಲಿಪ್ತವಾಗಿರುತ್ತದೆ –ಎಂಬ ಎರಡರ್ಥವನ್ನೂ ಈ ಶಬ್ದಕ್ಕೆ ತೆಗೆದುಕೊಳ್ಳಬಹುದಾಗಿರುತ್ತದೆ. ಆದ್ದರಿಂದ ನಾವು ಈ ಒಂದೇ ಶಬ್ದವನ್ನೇ ಎಲ್ಲಾ ಕಡೆಯಲ್ಲಿಯೂ ಇಟ್ಟಿರುತ್ತೇವೆ.

5. ಇಲ್ಲಿಗೆ ಈ ಜೀವನು ಮುಗಿದನು, ಇಲ್ಲಿಗೆ ಪ್ರಧಾನವು ಮುಗಿಯಿತು –ಎಂದು ಸ್ವರೂಪಪರ[illegible] ತ್ತಿರಬೇಕು.

ಅಭಿಮತವಾಗಿರುವ ವಿಕಾರಗಳಿಂದೊಡಗೂಡಿದ ಪುರುಷಾರ್ಥವಾದ ಪ್ರಧಾನವನ್ನು[1] ಈಶ್ವರನು ವಶದಲ್ಲಿಟ್ಟುಕೊಳ್ಳಬೇಕಷ್ಟೆ; ಅದೇ ಇಲ್ಲದ ಮೇಲೆ ಈಶ್ವರನು ಯಾವದನ್ನು ವಶದಲ್ಲಿಟ್ಟುಕೊಳ್ಳಬೇಕು ? ಆಗ (ಅವನ) ಸರ್ವಜ್ಞತ್ವಕ್ಕೂ ಈಶ್ವರತ್ವಕ್ಕೂ ಯಾವದು ವಿಷಯವಾಗಿದ್ದೀತು[2] ? ಪ್ರಧಾನ, ಪುರುಷರು, ಈಶ್ವರ – ಇವರುಗಳಿಗೆ ಹೀಗೆ ಅಂತವುಳ್ಳವರಾದರೆ ಅವರಿಗೆ ಆದಿಯಿರಬೇಕೆಂದೂ ಪ್ರಸಕ್ತವಾಗುವದು.[3] ಆದಿಯೂ ಅಂತವೂ ಇದ್ದರೆ ಶೂನ್ಯವಾದವೂ ಪ್ರಸಕ್ತವಾಗುವದು.[4]

## ಈಶ್ವರನಿಗೆ ಅಸರ್ವಜ್ಞತ್ವದೋಷ

(ಭಾಷ್ಯ)

೮೧. ಅಥ ಮಾಭೂತ್ ಏಷ ದೋಷಃ ಇತಿ ಉತ್ತರೋ ವಿಕಲ್ಪೋಽಭ್ಯುಪಗಮ್ಯೇತ, ನ ಪ್ರಧಾನಸ್ಯ ಪುರುಷಾಣಾಮ್ ಆತ್ಮನಶ್ಚ ಇಯತ್ತಾ ಈಶ್ವರೇಣ ಪರಿಚ್ಛಿದ್ಯತೇ ಇತಿ। ತತ ಈಶ್ವರಸ್ಯ ಸರ್ವಜ್ಞತ್ವಾಭ್ಯುಪಗಮಹಾನಿಃ ಅಪರೋ ದೋಷಃ ಪ್ರಸಜ್ಯೇತ। ತಸ್ಮಾದಪಿ ಅಸಙ್ಗತಃ ತಾರ್ಕಿಕಪರಿಗೃಹೀತ ಈಶ್ವರಕಾರಣವಾದಃ ॥

(ಭಾಷ್ಯಾರ್ಥ)

ಹೀಗಲ್ಲದೆ ಈ ದೋಷವುಂಟಾಗದೆ ಇರಲೆಂದು ಎರಡನೆಯ ವಿಕಲ್ಪವನ್ನು– ಪ್ರಧಾನದ, ಪುರುಷರುಗಳ, ಮತ್ತು ತನ್ನ ಇಯತ್ತೆಯನ್ನು ಈಶ್ವರನು ಪರಿಚ್ಛೇದಮಾಡಿಕೊಳ್ಳುವದಿಲ್ಲ ಎಂದು – ಒಪ್ಪುವದಾದರೆ, ಆಗ ಈಶ್ವರನಿಗೆ ಸರ್ವಜ್ಞತ್ವವನ್ನು ಒಪ್ಪಿರುವದನ್ನು ಬಿಡಬೇಕಾಗುವದೆಂಬ ಮತ್ತೊಂದು ದೋಷವು ಪ್ರಸಕ್ತವಾಗುವದು. ಆದ್ದರಿಂದಲೂ ತಾರ್ಕಿಕರು[5] ಪರಿಗ್ರಹಿಸಿರುವ ಈಶ್ವರಕಾರಣವಾದವು ಅಸಂಗತವಾಗಿರುತ್ತದೆ.

---

1. ಪುರುಷಾರ್ಥವಾಗಿ ಕೆಲಸಮಾಡುತ್ತಿರುವ ಪ್ರಧಾನವೂ ಅದರ ವಿಕಾರಗಳೂ ಸಂಸಾರವು ಎಂಬುದು ಈ ವಾದಿಗಳ ಮತವು.

2. ಸಂಸಾರಕ್ಕೆ ಅಂತವಿದೆಯೆಂದರೆ ಪ್ರಧಾನಕ್ಕೆ ಅಂತವಿದೆಯೆಂದಂತೆ. ಈಶ್ವರನು ಪ್ರಧಾನವನ್ನು ಅರಿತು ಅದನ್ನು ವಶದಲ್ಲಿಟ್ಟುಕೊಂಡಿರುವದರಿಂದಲೇ ಈಶ್ವರನೆನಿಸಿರುವನು. ಪ್ರಧಾನವೇ ಇಲ್ಲವಾದರೆ ಈಶ್ವರತ್ವವೂ ಇಲ್ಲವಾಗಬೇಕಾಗುವದು –ಎಂದರ್ಥ.

3. ಏಕೆಂದರೆ ಅನಾದಿಯಾದದ್ದಕ್ಕೆ ಅಂತವಿಲ್ಲ. ಮಾಂ. ಕಾ. ೪–೩೦.

4. ಹುಟ್ಟುವ ಮೊದಲು ಇಲ್ಲ, ನಾಶವಾದ ಬಳಿಕ ಇಲ್ಲ– ಎನ್ನುವವರು ನಡುವೆಯೂ ಪ್ರಧಾನಪುರುಷೇಶ್ವರರು ನಿಜವಾಗಿ ಇಲ್ಲ ಎಂದಂತೆ ಆಗುವದು. ಆದ್ದರಿಂದ ಶೂನ್ಯವಾದವೇ ಗಂಟುಬೀಳುವದು.

5. ಆಗಮವನ್ನು ಒಪ್ಪಿದ್ದರೂ ಅನ್ಯೋನ್ಯಾಶ್ರಯಾದಿದೂಷಿತವಾದ ಇವರ ಆಗಮಕಲ್ಪನೆಯು ನಿಲ್ಲುವದಿಲ್ಲವಾದ್ದರಿಂದ ಇವರನ್ನು ತಾರ್ಕಿಕರೆಂದೇ ಭಾವಿಸಬೇಕು ಎಂದು ಭಾವ ಈಶ್ವರನಿಮಿತ್ತಕಾರಣವಾದಿಗಳಿಗೆಲ್ಲ ಇದು ಅನ್ವಯಿಸುತ್ತದೆ. ಪೀಠಿಕೆಯನ್ನು ನೋಡಿ.

## ೮. ಉತ್ಪತ್ತ್ಯಸಂಭವಾಧಿಕರಣ (ಸೂ. ೪೨–೪೫)

### (ಜೀವರಿಗೆ ಉತ್ಪತ್ತಿಯನ್ನು ಹೇಳುವದು ಸರಿಯಲ್ಲ)

## ಅಧಿಕರಣದ ಸಂಬಂಧ

(ಭಾಷ್ಯ)

೮೨. ಯೇಷಾಮ್ ಅಪ್ರಕೃತಿರಧಿಷ್ಠಾತಾ ಕೇವಲನಿಮಿತ್ತಕಾರಣಮ್ ಈಶ್ವರೋಽಭಿಮತಃ ತೇಷಾಂ ಪಕ್ಷಃ ಪ್ರತ್ಯಾಖ್ಯಾತಃ। ಯೇಷಾಂ ಪುನಃ ಪ್ರಕೃತಿಶ್ಚ ಅಧಿಷ್ಠಾತಾ ಚ ಉಭಯಾತ್ಮಕಂ ಕಾರಣಮ್ ಈಶ್ವರೋಽಭಿಮತಃ ತೇಷಾಂ ಪಕ್ಷಃ ಪ್ರತ್ಯಾಖ್ಯಾಯತೇ। ನನು ಶ್ರುತಿಸಮಾಶ್ರಯಣೇನಾಪಿ ಏವಂರೂಪ ಏವ ಈಶ್ವರಃ ಪ್ರಾಕ್ ನಿರ್ಧಾರಿತಃ ಪ್ರಕೃತಿಶ್ಚ ಅಧಿಷ್ಠಾತಾ ಚ ಇತಿ। ಶ್ರುತ್ಯನುಸಾರಿಣೀ ಚ ಸ್ಮೃತಿಃ ಪ್ರಮಾಣಮ್ ಇತಿ ಸ್ಥಿತಿಃ। ತತ್ ಕಸ್ಯ ಹೇತೋಃ ಏಷ ಪಕ್ಷಃ ಪ್ರತ್ಯಾಚಿಖ್ಯಾಸಿತಃ ಇತಿ ? ಉಚ್ಯತೇ। ಯದ್ಯಪಿ ಏವಂಜಾತೀಯಕೋಽಂಶಃ ಸಮಾನತ್ವಾತ್ ನ ವಿಸಂವಾದಗೋಚರೋ ಭವತಿ, ಅಸ್ತಿ ತು ಅಂಶಾನ್ತರಂ ವಿಸಂವಾದಸ್ಥಾನಮ್ ಇತ್ಯತಃ ತತ್ಪ್ರತ್ಯಾಖ್ಯಾನಾಯ ಆರಮ್ಭಃ ॥

(ಭಾಷ್ಯಾರ್ಥ)

ಯಾರ (ಮತದಲ್ಲಿ) ಈಶ್ವರನು ಪ್ರಕೃತಿಯಲ್ಲವೆಂದೂ ಅಧಿಷ್ಠಾತೃವಾಗಿ ಕೇವಲ ನಿಮಿತ್ತಕಾರಣನೆಂದೂ ಒಪ್ಪಿರುತ್ತದೆಯೋ ಅವರ ಪಕ್ಷವನ್ನು ತಿರಸ್ಕರಿಸಿದ್ದಾಯಿತು. ಇನ್ನು ಯಾರ (ಮತದಲ್ಲಿ) ಈಶ್ವರನು ಪ್ರಕೃತಿಯೂ ಅಧಿಷ್ಠಾನವೂ ಆಗಿ ಎರಡೂ ರೂಪದ ಕಾರಣವೆಂದು ಒಪ್ಪಿರುತ್ತದೆಯೋ ಅವರ ಪಕ್ಷವನ್ನು ತಿರಸ್ಕರಿಸಲಾಗುವದು.[1]

(ಆಕ್ಷೇಪ) :– ಶ್ರುತಿಯನ್ನು ಆಶ್ರಯಿಸಿಯೂ ಈಶ್ವರನು ಇಂಥ ಸ್ವರೂಪವುಳ್ಳವನೇ ಪ್ರಕೃತಿಯೂ ಅಧಿಷ್ಠಾತೃವೂ (ಆಗಿರುತ್ತಾನೆ) ಎಂದು ಹಿಂದೆ ನಿರ್ಧರಿಸಲಾಗಿತ್ತಲ್ಲ! ಶ್ರುತಿಗೆ ಅನುಸಾರಿಯಾದ ಸ್ಮೃತಿಯು ಪ್ರಮಾಣವೇ ಎಂಬುದು (ವಸ್ತು)ಸ್ಥಿತಿ. ಹೀಗಿರುವಲ್ಲಿ ಈ ಪಕ್ಷವನ್ನು ಯಾವ ಕಾರಣದಿಂದ ತಿರಸ್ಕರಿಸುವದಕ್ಕೆ ಹೊರಟಿದೆ[2] ?

---

1. ಭಾಗವತಮತದಲ್ಲಿ ಈಶ್ವರನು ಉಪಾದಾನಕಾರಣವೂ ಆಗಿರುತ್ತಾನೆಂಬುದನ್ನು ಒಪ್ಪಿದೆ ಎಂಬ ಅಭಿಪ್ರಾಯವು ಇಲ್ಲಿದೆ. ಪೀಠಿಕೆಯನ್ನು ನೋಡಿ.

2. ಜ್ಯೈ. ಸೂ. ೧–೩–೩ನ್ನೂ ಅದರ ಶಾಂಕರಭಾಷ್ಯವನ್ನೂ ನೋಡಿ. ಮಹೇಶ್ವರಮತದವರೆಗಿನ ಸ್ಮೃತಿಗಳು ವೇದವಿರುದ್ಧವಾದ್ದರಿಂದ ಅವುಗಳ ಮತವನ್ನು ಖಂಡಿಸಿದ್ದು ಸರಿಯೇ ; ಆದರೆ ವೇದಾನುಸಾರಿಯಾದ ಪಾಂಚರಾತ್ರಾಗಮವನ್ನು ಖಂಡಿಸುವದೇಕೆ ? _ಎಂದು ಆಕ್ಷೇಪ.

(ಸಮಾಧಾನ) :– ಹೇಳುತ್ತೇವೆ. ಈ ಜಾತಿಯ ಅಂಶವು (ಇಬ್ಬರಿಗೂ) ಸಮಾನವಾಗಿರುವದರಿಂದ ವಿರುದ್ಧಾಭಿಪ್ರಾಯಕ್ಕೆ ವಿಷಯವಾಗುವದಿಲ್ಲವೆಂಬುದು ಸರಿಯೇ; ಆದರೂ ವಿರುದ್ಧಾಭಿಪ್ರಾಯಕ್ಕೆ ಸ್ಥಾನವಾಗಿರುವ ಮತ್ತೊಂದು ಅಂಶವು ಇರುತ್ತದೆ.[1] ಆದ್ದರಿಂದ ಅದನ್ನು ತಿರಸ್ಕರಿಸುವದಕ್ಕೆ ಆರಂಭಿಸಿರುತ್ತದೆ.

## ಭಾಗವತಮತದ ಅನುವಾದ

(ಭಾಷ್ಯ)

೮೩. ತತ್ರ ಭಾಗವತಾ ಮನ್ಯನ್ತೇ । ಭಗವಾನೇವ ಏಕೋ ವಾಸುದೇವಃ ನಿರಞ್ಜನಜ್ಞಾನಸ್ವರೂಪಃ ಪರಮಾರ್ಥತತ್ತ್ವಮ್ । ಸ ಚತುರ್ಧಾ ಆತ್ಮಾನಂ ಪ್ರವಿಭಜ್ಯ ಪ್ರತಿಷ್ಠಿತಃ, ವಾಸುದೇವವ್ಯೂಹರೂಪೇಣ, ಪ್ರದ್ಯುಮ್ನವ್ಯೂಹರೂಪೇಣ, ಅನಿರುದ್ಧವ್ಯೂಹರೂಪೇಣ ಚ । ವಾಸುದೇವೋ ನಾಮ ಪರಮಾತ್ಮಾ ಉಚ್ಯತೇ । ಸಂಕರ್ಷಣೋ ನಾಮ ಜೀವಃ । ಪ್ರದ್ಯುಮ್ನೋ ನಾಮ ಮನಃ ಅನಿರುದ್ಧೋ ನಾಮ ಅಹಂಕಾರಃ । ತೇಷಾಂ ವಾಸುದೇವಃ ಪರಾ ಪ್ರಕೃತಿಃ । ಇತರೇ ಸಂಕರ್ಷಣಾದಯಃ ಕಾರ್ಯಮ್ । ತಮ್ ಇತ್ಥಂಭೂತಂ ಪರಮೇಶ್ವರಂ ಭಗವನ್ತಮ್ ಅಭಿಗಮನೋಪಾದಾನೇಜ್ಯಾಸ್ವಾಧ್ಯಾಯಯೋಗೈಃ ವರ್ಷಶತಮ್ ಇಷ್ಟ್ವಾ ಕ್ಷೀಣಕ್ಲೇಶಃ ಭಗವನ್ತಮೇವ ಪ್ರತಿಪದ್ಯತೇ ಇತಿ ॥

(ಭಾಷ್ಯಾರ್ಥ)

ಇವರಲ್ಲಿ **ಭಾಗವತರ ಮತವೇನೆಂದರೆ:** ಭಗವಂತನಾದ ವಾಸುದೇವನೊಬ್ಬನೇ ನಿರಂಜನಜ್ಞಾನಸ್ವರೂಪನಾಗಿರುವ ಪರಮಾರ್ಥತತ್ತ್ವವು[2] ಆತನು ನಾಲ್ಕು ಬಗೆಯಾಗಿ ತನ್ನನ್ನು ವಿಂಗಡಿಸಿಕೊಂಡು ವಾಸುದೇವವ್ಯೂಹರೂಪದಿಂದಲೂ ಸಂಕರ್ಷಣವ್ಯೂಹರೂಪದಿಂದಲೂ ಪ್ರದ್ಯುಮ್ನವ್ಯೂಹರೂಪದಿಂದಲೂ ಅನಿರುದ್ಧವ್ಯೂಹರೂಪದಿಂದಲೂ ಇರುತ್ತಾನೆ. ವಾಸುದೇವನೆಂದು ಪರಮಾತ್ಮನನ್ನೇ ಹೇಳಿರುತ್ತದೆ; ಸಂಕರ್ಷಣನೆಂದರೆ ಜೀವನು; ಪ್ರದ್ಯುಮ್ನನೆಂದರೆ

1. ಬಹುಮಟ್ಟಿಗೆ ವೇದಾನುಸಾರಿಯಾಗಿರುವದಾದರೂ ವೇದವಿರುದ್ಧಾಂಶವೂ ಇರುವದರಿಂದ ಈ ಸ್ಮೃತಿಯನ್ನು ಖಂಡಿಸಬೇಕು ಎಂದು ಅಭಿಪ್ರಾಯ. ಭಾಗವತಮತದ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

2. ವಾಸುದೇವನೇ ಪರಮಾರ್ಥವು ಎಂಬ ವಾಕ್ಯವನ್ನು ಲಕ್ಷಿಸಬೇಕು; ಏಕೆಂದರೆ ಇದು ಭಾಗವತಮತಕ್ಕೂ ಅದ್ವೈತಕ್ಕೂ ಇರುವ ಸಂಬಂಧವನ್ನು ಸೂಚಿಸುವದು.

ಮನಸ್ಸು; ಅನಿರುದ್ಧನೆಂದರೆ ಅಹಂಕಾರವು.[1] ಅವರಲ್ಲಿ **ವಾಸುದೇವನೇ, ಪರಮಪ್ರಕೃತಿಯು; ಉಳಿದ ಸಂಕರ್ಷಣಾದಿಗಳು ಕಾರ್ಯವು.** ಹೀಗಿರುವ ಆ ಪರಮೇಶ್ವರನಾದ ಭಗವಂತನನ್ನು ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ, ಯೋಗ –ಇವುಗಳಿಂದ[2] ನೂರು ವರ್ಷವೂ ಪೂಜಿಸಿ ಕ್ಲೇಶಗಳನ್ನು ಕಳೆದುಕೊಂಡವನು ಭಗವಂತನನ್ನೇ ಸೇರುತ್ತಾನೆ.[3]

## ಖಂಡನೆ: ಜೀವರಿಗೆ ಉತ್ಪತ್ತಿಯನ್ನು ಹೇಳಬಾರದು

(ಭಾಷ್ಯ)

೮೪. ತತ್ರ ಯತ್ ತಾವತ್ ಉಚ್ಯತೇ। ಯೋಽಸೌ ನಾರಾಯಣಃ ಪರೋ ಅವ್ಯಕ್ತಾತ್ ಪ್ರಸಿದ್ಧಃ ಪರಮಾತ್ಮಾ ಸರ್ವಾತ್ಮಾ, ಸ ಆತ್ಮನಾ ಆತ್ಮಾನಮ್ ಅನೇಕಧಾ ವ್ಯೂಹ್ಯ ಅವಸ್ಥಿತಃ ಇತಿ, ತನ್ನ ನಿರಾಕ್ರಿಯತೇ। "ಸ ಏಕಧಾ ಭವತಿ ತ್ರಿಧಾ ಭವತಿ" (ಛಾಂ. ೭-೨೬-೨) ಇತ್ಯಾದಿ ಶ್ರುತಿಭ್ಯಃ ಪರಮಾತ್ಮನಃ ಅನೇಕಧಾಭಾವಸ್ಯ ಅಧಿಗತತ್ವಾತ್। ಯದಪಿ ತಸ್ಯ ಭಗವತಃ ಅಭಿಗಮನಾದಿ ಲಕ್ಷಣಮ್ ಆರಾಧನಮ್ ಅಜಸ್ರಮ್ ಅನನ್ಯಚಿತ್ತತಯಾ ಅಭಿಪ್ರೇಯತೇ, ತದಪಿ ನ ಪ್ರತಿಷಿಧ್ಯತೇ। ಶ್ರುತಿಸ್ಮೃತ್ಯೋಃ ಈಶ್ವರಪ್ರಣಿಧಾನಸ್ಯ ಪ್ರಸಿದ್ಧತ್ವಾತ್। ಯತ್ ಪುನಃ ಇದಮುಚ್ಯತೇ, ವಾಸುದೇವಾತ್ ಸಂಕರ್ಷಣ ಉತ್ಪದ್ಯತೇ ಸಂಕರ್ಷಣಾಚ್ಚ ಪ್ರದ್ಯುಮ್ನಃ ಪ್ರದ್ಯುಮ್ನಾಚ್ಚ ಅನಿರುದ್ಧಃ ಇತಿ। ಅತ್ರ ಬ್ರೂಮಃ। ನ ವಾಸುದೇವಸಂಜ್ಞಕಾತ್ ಪರಮಾತ್ಮನಃ ಸಂಕರ್ಷಣಸಂಜ್ಞಕಸ್ಯ ಜೀವಸ್ಯ ಉತ್ಪತ್ತಿಃ ಸಂಭವತಿ। ಅನಿತ್ಯತ್ವಾದಿದೋಷಪ್ರಸಙ್ಗಾತ್। ಉತ್ಪತ್ತಿಮತ್ತ್ವೇ ಹಿ ಜೀವಸ್ಯ ಅನಿತ್ಯತ್ವಾದಯೋ ದೋಷಾಃ ಪ್ರಸಜ್ಯೇರನ್। ತತಶ್ಚ ನೈವಾಸ್ಯ ಭಗವತ್ಪ್ರಾಪ್ತಿರ್ಮೋಕ್ಷಃ ಸ್ಯಾತ್। ಕಾರಣಪ್ರಾಪ್ತೌ ಕಾರ್ಯಸ್ಯ ಪ್ರವಿಲಯಪ್ರಸಙ್ಗಾತ್। ಪ್ರತಿಷೇಧಿಷ್ಯತಿ ಚ ಆಚಾರ್ಯೋ ಜೀವಸ್ಯ

---

1. ಈ ವ್ಯೂಹಗಳನ್ನು ಮತಾಂತರದವರು ಬೇರೆಯ ಬಗೆಯಿಂದ ವ್ಯಾಖ್ಯಾನ ಮಾಡಿರುತ್ತಾರೆ. ಪೀಠಿಕೆಯನ್ನು ನೋಡಿ.

2. ವಾಕ್ಕಾಯಮನಸ್ಸುಗಳನ್ನು ಸಾವಧಾನವಾಗಿಟ್ಟುಕೊಂಡು ದೇವತಾಗೃಹಕ್ಕೆ ಹೋಗುವದು ಅಭಿಗಮನ, ಪೂಜಾದ್ರವ್ಯಗಳನ್ನು ಸಂಪಾದಿಸಿಕೊಳ್ಳುವದು ಉಪಾದಾನ; ಪೂಜಿಸುವದೇ ಇಜ್ಯೆ; ಜಪವೇ ಸ್ವಾಧ್ಯಾಯ; ಧ್ಯಾನವೇ ಯೋಗ –ಎಂದು ನ್ಯಾ. ನಿ. ಬೆಳಗ್ಗೆ ಮಂತ್ರಜಪ, ಸ್ತುತಿ, ನಮಸ್ಕಾರ –ಮುಂತಾದವುಗಳನ್ನು ಮಾಡುವದು ಅಭಿಗಮನ; ಸಾಯಂಕಾಲದಲ್ಲಿ ಭಗವಂತನಲ್ಲಿ ಚಿತ್ತವನ್ನಿಡುವದು ಯೋಗ –ಎಂಬು ಕ. ತ. ಪ. ಟೀಕೆ.

3. ಬದುಕಿರುವವರೆಗೂ ಭಿನ್ನನಾಗಿದ್ದು ಸತ್ತಬಳಿಕ ಉಪಾಸನೆಯ ಫಲವಾಗಿ ಭಗವದಭಿನ್ನನಾಗುತ್ತಾನೆ –ಎಂದರ್ಥ.

ಉತ್ಪತ್ತಿಮ್ — "ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ" (೨–೩–೧೭) ಇತಿ। ತಸ್ಮಾತ್ ಅಸಂಗತಾ ಏಷಾ ಕಲ್ಪನಾ ॥

(ಭಾಷ್ಯಾರ್ಥ)

ಇಲ್ಲಿ ಮೊದಲನೆಯದಾಗಿ ಅವ್ಯಕ್ತಕ್ಕಿಂತ ಪರನಾಗಿರುವ ಸರ್ವರಿಗೂ ಆತ್ಮನಾಗಿರುವ ಪರಮಾತ್ಮನಾದ **ನಾರಾಯಣನು**ಂಟೆಷ್ಟೆ[1], ಆತನು ತನ್ನನ್ನು ತಾನೇ ಅನೇಕ ರೂಪವಾಗಿ ವಿಂಗಡಿಸಿಕೊಂಡು ಇರುತ್ತಾನೆ –ಎಂದು ಹೇಳಿರುತ್ತದೆಯಷ್ಟೆ, ಅದನ್ನು (ನಾವು) ನಿರಾಕರಿಸುವದಿಲ್ಲ. ಏಕೆಂದರೆ "ಅವನು ಒಂದು (ರೂಪ)ವಾಗುತ್ತಾನೆ, ಮೂರು (ರೂಪ)ಗಳವನಾಗಿರುತ್ತಾನೆ" (ಛಾಂ. ೭–೨೬–೨) ಮುಂತಾದ ಶ್ರುತಿಗಳಿಂದ ಪರಮಾತ್ಮನು ಅನೇಕ ರೂಪಗಳನ್ನು ಪಡೆಯುತ್ತಾನೆಂಬುದು ನಿಶ್ಚಯವಾಗಿರುತ್ತದೆ.[2] ಮತ್ತು ಆ ಭಗವಂತನನ್ನು ಅನನ್ಯಚಿತ್ತತೆಯಿಂದ ಅಭಿಗಮನಾದಿರೂಪವಾದ ಆರಾಧನೆಯನ್ನು ಅನವರತವಾಗಿ ಅನನ್ಯಚಿತ್ತತೆಯಿಂದ ಮಾಡಬೇಕೆಂದು ಅಭಿಪ್ರಾಯಪಟ್ಟಿರುತ್ತಾರಲ್ಲ, ಅದನ್ನೂ ಅಲ್ಲಗಳೆಯುವದಿಲ್ಲ; ಏಕೆಂದರೆ ಶ್ರುತಿಸ್ಮೃತಿಗಳಲ್ಲಿ ಈಶ್ವರ ಪ್ರಣಿಧಾನವು ಪ್ರಸಿದ್ಧವಾಗಿರುತ್ತದೆ.

ಇನ್ನು ವಾಸುದೇವನಿಂದ ಸಂಕರ್ಷಣನು ಹುಟ್ಟುತ್ತಾನೆ, ಸಂಕರ್ಷಣನಿಂದ ಪ್ರದ್ಯುಮ್ನನು ಹುಟ್ಟುತ್ತಾನೆ, ಪ್ರದ್ಯುಮ್ನನಿಂದ ಅನಿರುದ್ಧನು ಹುಟ್ಟುತ್ತಾನೆ –ಎಂದು ಹೇಳಿದೆಯಷ್ಟೆ, ಈ (ವಿಷಯ)ದಲ್ಲಿ (ನಾವು) ಹೇಳುವದೇನೆಂದರೆ ವಾಸುದೇವನೆಂಬ ಹೆಸರಿನ ಪರಮಾತ್ಮನಿಂದ ಸಂಕರ್ಷಣನೆಂಬ ಹೆಸರಿನ ಜೀವನ ಉತ್ಪತ್ತಿಯಾಗುತ್ತದೆ ಎಂಬುದು ಹೊಂದುವದಿಲ್ಲ. ಏಕೆಂದರೆ (ಆಗ) ಅನಿತ್ಯತ್ವವೇ ಮುಂತಾದ ದೋಷಗಳು ಪ್ರಸಕ್ತವಾಗುವವು. ಉತ್ಪತ್ತಿಯುಳ್ಳವನೆಂದಾದರೆ ಜೀವನಿಗೆ ಅನಿತ್ಯತ್ವವೇ ಮುಂತಾದ ದೋಷಗಳು ಪ್ರಸಕ್ತವಾಗುವವು. ಅದರಿಂದ ಇವನಿಗೆ ಭಗವತ್ಪ್ರಾಪ್ತಿ ಎಂಬ ಮೋಕ್ಷವು ಇಲ್ಲದಂತೆ ಆದೀತು; ಏಕೆಂದರೆ ಕಾರ್ಯವು ಕಾರಣವನ್ನು ಸೇರಿದರೆ ನಾಶವಾಗಬೇಕಾಗುವದು.[3] ಆಚಾರ್ಯರು ಜೀವನಿಗೆ ಉತ್ಪತ್ತಿಯನ್ನು "ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ

1. ಭಗವದ್ಗೀತಾಭಾಷ್ಯದ ಆದಿಯಲ್ಲಿ ಉದಾಹರಿಸಿರುವ 'ನಾರಾಯಣಃ ಪರೋಽವ್ಯಕ್ತಾತ್' ಎಂಬ ಶ್ಲೋಕದ ಸೂಚನೆಯಿದು.

2. ಈ ಶ್ರುತಿಯಲ್ಲಿ ಉಪಾಸಕನಿಗೆ ಆಗುವ ಫಲವನ್ನು ಹೇಳಿದೆಯಾದರೂ ಭಗವಂತನ ಸಾಯುಜ್ಯದಿಂದ ಆಗುವ ಫಲವಿದಾದ್ದರಿಂದ ಭಗವಂತನಿಗೆ ಈ ಸ್ವರೂಪವಿದೆ. ಎಂದೂ ಹೇಳಿದಂತೆ ಆಗಿದೆ.

3. ಮಾಂ. ಕಾ. ಭಾಷ್ಯದಲ್ಲಿ (೩–೧) ಹೇಳಿರುವ ಜಾತಿಬ್ರಹ್ಮವಾದವಿದು ಎಂದು ಇಟ್ಟುಕೊಂಡು ಖಂಡಿಸಿದೆ ಎಂಬುದು ಸ್ಪಷ್ಟವಾಗಿದೆ. ಗೀ. ೧೩–೨ (ಭಾ. ಭಾ. ೨೨೬)ರಲ್ಲಿಯೂ ಬೃ. ಭಾ. ೨–೧–೨೦ರಲ್ಲಿಯೂ ಈ ಮತವನ್ನು ಉಲ್ಲೇಖಿಸಿದೆ.

ತಾಭ್ಯಃ" (೨-೩-೧೭) ಎಂಬಲ್ಲಿ ಮುಂದೆ ತಿರಸ್ಕರಿಸಿಯೂ ಇರುತ್ತಾರೆ. ಆದ್ದರಿಂದ ಈ ಕಲ್ಪನೆಯು ಅಸಂಗತ.

**ನ ಚ ಕರ್ತುಃ ಕರಣಮ್ ॥ ೪೩ ॥**

೪೩. ಕರ್ತೃವಿನಿಂದ ಕರಣವು (ಉಂಟಾಗ)ಲೂ ಆರದು.

## ಜೀವನಿಂದ ಮನಸ್ಸುಂಟಾಗುವದೆಂಬ ಮತವೂ ಸರಿಯಲ್ಲ

(ಭಾಷ್ಯ)

೭೫. ಇತಶ್ಚ ಅಸಙ್ಗತಾ ಏಷಾ ಕಲ್ಪನಾ। ಯಸ್ಮಾತ್ ನ ಹಿ ಲೋಕೇ ಕರ್ತುಃ ದೇವದತ್ತಾದೇಃ ಕರಣಂ ಪರಶ್ವಾದಿ ಉತ್ಪದ್ಯಮಾನಂ ದೃಶ್ಯತೇ। ವರ್ಣಯನ್ತಿ ಚ ಭಾಗವತಾಃ ಕರ್ತುರ್ಜೀವಾತ್ ಸಂಕರ್ಷಣಸಂಜ್ಞಕಾತ್ ಕರಣಂ ಮನಃ ಪ್ರದ್ಯುಮ್ನಸಂಜ್ಞಕಮ್ ಉತ್ಪದ್ಯತೇ। ಕರ್ತೃಜಾಚ್ಚ ತಸ್ಮಾತ್ ಅನಿರುದ್ಧಸಂಜ್ಞಕೋಽಹಂಕಾರಃ ಉತ್ಪದ್ಯತೇ ಇತಿ। ನ ಚೈತದ್ ದೃಷ್ಟಾನ್ತಮನ್ತರೇಣ ಅಧ್ಯವಸಾತುಂ ಶಕ್ನುಮಃ। ನ ಚೈವಂಭೂತಾಂ ಶ್ರುತಿಮ್ ಉಪಲಭಾಮಹೇ ॥

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಈ ಕಲ್ಪನೆಯು ಅಸಂಗತವಾಗಿರುತ್ತದೆ. ಏಕೆಂದರೆ ಲೋಕದಲ್ಲಿ ಕರ್ತೃವಾದ **ದೇವದತ್ತನೇ** ಮುಂತಾದವರಿಂದ ಕರಣವಾದ ಕೊಡಲಿಯೇ ಮುಂತಾದದ್ದು ಹುಟ್ಟುವದು ಕಂಡುಬಂದಿರುವದಿಲ್ಲ. ಆದರೆ ಭಾಗವತರು ಕರ್ತೃವಾದ **ಸಂಕರ್ಷಣ**ನೆಂಬ ಹೆಸರಿನ ಜೀವನಿಂದ **ಪ್ರದ್ಯುಮ್ನ**ನೆಂಬ ಹೆಸರಿನ ಮನಸ್ಸು ಉತ್ಪನ್ನವಾಗುತ್ತದೆ; ಮತ್ತು ಕರ್ತೃವಿನಿಂದ ಹುಟ್ಟಿದ ಆ ಮನಸ್ಸಿನಿಂದ ಅನಿರುದ್ಧನೆಂಬ ಹೆಸರಿನ ಅಹಂಕಾರವು ಹುಟ್ಟುತ್ತದೆ ಎಂದು ಹೇಳುತ್ತಿರುತ್ತಾರೆ. ಆದರೆ ಇದು ದೃಷ್ಟಾಂತವಿಲ್ಲದೆ ನಿಶ್ಚಯಿಸುವದಕ್ಕೆ ಆಗುವದಿಲ್ಲ[1]; ಇಂಥ ಶ್ರುತಿಯನ್ನು (ನಾವು) ಕಂಡೂ ಇರುವದಿಲ್ಲ.[2]

**ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ ॥ ೪೪ ॥**

೪೪. ವಿಜ್ಞಾನಾದಿಸ್ವರೂಪವೆಂದರೂ ಅದನ್ನು ಇಲ್ಲವೆನ್ನುವದಕ್ಕಾಗುವದಿಲ್ಲ.

---

1. ಇದೇನು ಅನುಮಾನವೊ, ಶ್ರುತಿಸಿದ್ಧವೊ ? ಅನುಮಾನವಾದರೆ ದೃಷ್ಟಾಂತವಿಲ್ಲ.
2. ಶ್ರುತಿಯಲ್ಲಿ ಜೀವನಿಗೆ ಉತ್ಪತ್ತಿಯಿಲ್ಲವೆಂದೇ

# ಉತ್ಪತ್ತ್ಯಸಂಭವದೋಷವು ಈ ಮತಕ್ಕೆ ತಪ್ಪಿದ್ದಲ್ಲ

( ಭಾಷ್ಯ )

೮೬. ಅಥಾಪಿ ಸ್ಯಾತ್ ನ ಚೈತೇ ಸಂಕರ್ಷಣಾದಯಃ ಜೀವಾದಿ ಭಾವೇನ ಅಭಿಪ್ರೇಯನ್ತೇ ಕಿಂ ತರ್ಹಿ ಈಶ್ವರಾ ಏವೈತೇ ಸರ್ವೇ ಜ್ಞಾನೈಶ್ವರ್ಯಶಕ್ತಿಬಲವೀರ್ಯತೇಜೋಭಿರೈಶ್ವರೈರ್ಧರ್ಮೈಃ ಅನ್ವಿತಾಃ ಅಭ್ಯುಪಗಮ್ಯನ್ತೇ। ವಾಸುದೇವಾ ಏವೈತೇ ಸರ್ವೇ ನಿರ್ದೋಷಾಃ ನಿರಧಿಷ್ಠಾನಾಃ ನಿರವದ್ಯಾಶ್ಚ ಇತಿ। ತಸ್ಮಾತ್ ನಾಯಂ ಯಥಾವರ್ಣಿತಃ ಉತ್ಪತ್ತ್ಯಸಂಭವೋ ದೋಷಃ ಪ್ರಾಪ್ನೋತಿ ಇತಿ। ಅತ್ರೋಚ್ಯತೇ। ಏವಮಪಿ ತದಪ್ರತಿಷೇಧಃ ಉತ್ಪತ್ತ್ಯಸಂಭವಸ್ಯ ಅಪ್ರತಿಷೇಧಃ। ಪ್ರಾಪ್ನೋತ್ಯೇವ ಅಯಮ್ ಉತ್ಪತ್ತ್ಯಸಂಭವೋ ದೋಷಃ ಪ್ರಕಾರಾನ್ತರೇಣ ಇತ್ಯಭಿಪ್ರಾಯಃ। ಕಥಮ್ ? ಯದಿ ತಾವತ್ ಅಯಮ್ ಅಭಿಪ್ರಾಯಃ— ಪರಸ್ಪರಭಿನ್ನಾ ಏವೈತೇ ವಾಸುದೇವಾದಯಃ ಚತ್ವಾರ ಈಶ್ವರಾಃ, ತುಲ್ಯಧರ್ಮಾಣಃ ನೈಷಾಮ್ ಏಕಾತ್ಮಕತ್ವಮ್ ಅಸ್ತಿ ಇತಿ। ತತೋಽನೇಕೇಶ್ವರಕಲ್ಪನಾನರ್ಥಕ್ಯಮ್। ಏಕೇನೈವ ಈಶ್ವರೇಣ ಈಶ್ವರಕಾರ್ಯಸಿದ್ಧೇಃ। ಸಿದ್ಧಾನ್ತಹಾನಿಶ್ಚ। ಭಗವಾನೇವ ಏಕೋ ವಾಸುದೇವಃ ಪರಮಾರ್ಥತತ್ತ್ವಮ್ ಇತ್ಯಭ್ಯುಪಗಮಾತ್। ಅಥ ಅಯಮ್ ಅಭಿಪ್ರಾಯಃ— ಏಕಸ್ಯೈವ ಭಗವತಃ ಏತೇ ಚತ್ವಾರೋ ವ್ಯೂಹಾಃ ತುಲ್ಯಧರ್ಮಾಣಃ ಇತಿ। ತಥಾಪಿ ತದವಸ್ಥ ಏವ ಉತ್ಪತ್ತ್ಯಸಂಭವಃ। ನ ಹಿ ವಾಸುದೇವಾತ್ ಸಂಕರ್ಷಣಸ್ಯ ಉತ್ಪತ್ತಿಃ ಸಂಭವತಿ, ಸಂಕರ್ಷಣಾಚ್ಚ ಪ್ರದ್ಯುಮ್ನಸ್ಯ, ಪ್ರದ್ಯುಮ್ನಾಚ್ಚ ಅನಿರುದ್ಧಸ್ಯ। ಅತಿಶಯಾಭಾವಾತ್। ಭವಿತವ್ಯಂ ಹಿ ಕಾರ್ಯಕಾರಣಯೋಃ ಅತಿಶಯೇನ। ಯಥಾ ಮೃದ್ಘಟಯೋಃ। ನ ಹಿ ಅಸತ್ಯತಿಶಯೇ ಕಾರ್ಯಂ ಕಾರಣಮ್ ಇತಿ ಅವಕಲ್ಪತೇ। ನ ಚ ಪಞ್ಚರಾತ್ರಸಿದ್ಧಾನ್ತಿಭಿಃ ವಾಸುದೇವಾದಿಷು ಏಕಸ್ಮಿನ್ ಸರ್ವೇಷು ವಾ ಜ್ಞಾನೈಶ್ವರ್ಯಾದಿತಾರತಮ್ಯಕೃತಃ ಕಶ್ಚಿದ್ ಭೇದಃ ಅಭ್ಯುಪಗಮ್ಯತೇ। ವಾಸುದೇವಾ ಏವ ಹಿ ಸರ್ವೇ ವ್ಯೂಹಾ ನಿರ್ವಿಶೇಷಾ ಇಷ್ಯನ್ತೇ। ನ ಚೈತೇ ಭಗವದ್ವ್ಯೂಹಾಃ ಚತುಃಸಂಖ್ಯಾಯಾಮೇವ ಅವತಿಷ್ಠೇರನ್। ಬ್ರಹ್ಮಾದಿಸ್ತಮ್ಬಪರ್ಯನ್ತಸ್ಯ ಸಮಸ್ತಸ್ಯೈವ ಜಗತೋ ಭಗವದ್ವ್ಯೂಹತ್ವಾವಗಮಾತ್ ॥

(ಭಾಷ್ಯಾರ್ಥ)

ಇನ್ನು (ಪೂರ್ವಪಕ್ಷಿಗಳ ಮತವು) ಹೀಗೂ ಇರಬಹುದು. ಈ ಸಂಕರ್ಷಣಾದಿಗಳು ಜೀವಾದಿರೂಪವೆಂದು (ನಾವು) ಅಂಗೀಕರಿಸುವದಿಲ್ಲ. ಮತ್ತೇ

ನೆಂದರೆ ಇವರೆಲ್ಲರೂ ಈಶ್ವರರೇ ; ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜಸ್ಸು –ಎಂಬ ಈಶ್ವರಧರ್ಮಗಳಿಂದೊಡಗೂಡಿದವರೆಂದೂ ಇವರೆಲ್ಲರೂ ಯಾವ ದೋಷವೂ ಇಲ್ಲದವರು, ಅಧಿಷ್ಠಾನರಹಿತರು, ನಿರವದ್ಯರು[1] –ಎಂದೂ (ಅಂಗೀಕರಿಸಿರುತ್ತೇವೆ). ಆದ್ದರಿಂದ ಮೇಲೆ ವರ್ಣಿಸಿರುವ ಉತ್ಪತ್ತ್ಯಸಂಭವ ವೆಂಬ ದೋಷವು ಬಂದೊದಗುವದಿಲ್ಲ.

ಇದಕ್ಕೆ (ನಾವು) ಹೇಳುವದೇನೆಂದರೆ, ಹೀಗಾದರೂ ಅದನ್ನು ಅಲ್ಲಗಳೆಯುವದಕ್ಕಾಗಲಾರದು, ಉತ್ಪತ್ತ್ಯಸಂಭವವನ್ನು ಅಲ್ಲಗಳೆಯುವದಕ್ಕಾಗಲಾರದು. ಈ ಉತ್ಪತ್ತ್ಯಸಂಭವವೆಂಬ ದೋಷವು ಮತ್ತೊಂದು ಪ್ರಕಾರದಿಂದ ಬಂದೊದಗಿಯೇತೀರುತ್ತದೆ ಎಂದು ಅಭಿಪ್ರಾಯ. ಹೇಗೆ? ಎಂದರೆ ಮೊದಲನೆಯದಾಗಿ ಈ ವಾಸುದೇವನೇ ಮುಂತಾದ ನಾಲ್ವರೂ ಒಬ್ಬರಿಗಿಂತ ಒಬ್ಬರು ಬೇರೆಯೇ, ಈಶ್ವರರು, ಸಮಾನವಾದ ಧರ್ಮವುಳ್ಳವರು ; ಇವರು ಒಂದೇ ಅಲ್ಲ –ಎಂಬುದೇ (ಪೂರ್ವಪಕ್ಷಿಗಳ) ಅಭಿಪ್ರಾಯವಾದರೆ, ಆಗ ಅನೇಕರಾದ ಈಶ್ವರರನ್ನು ಕಲ್ಪಿಸಿದ್ದು ವ್ಯರ್ಥವಾಗುವದು ; ಏಕೆಂದರೆ ಒಬ್ಬ ಈಶ್ವರನಿಂದಲೇ ಈಶ್ವರಕಾರ್ಯ(ವೆಲ್ಲವೂ) ಸಿದ್ಧಿಸುತ್ತದೆ. ಸಿದ್ಧಾಂತವನ್ನು ಕೈಬಿಟ್ಟಂತೆಯೂ ಆಗುತ್ತದೆ. ಏಕೆಂದರೆ ವಾಸುದೇವನೆಂಬ ಭಗವಂತನೊಬ್ಬನೇ ಪರಮಾರ್ಥತತ್ತ್ವವು –ಎಂದು (ಈ ಮತದಲ್ಲಿ) ಒಪ್ಪಿರುತ್ತದೆ. ಹಾಗಿಲ್ಲದೆ ಒಬ್ಬನೇ ಭಗವಂತನಿಗೆ ಸಮಾನಧರ್ಮವುಳ್ಳ ಈ ನಾಲ್ವರೂ ವ್ಯೂಹಗಳು ಎಂಬಿದು (ಪೂರ್ವಪಕ್ಷಿಗಳ) ಅಭಿಪ್ರಾಯವಾದರೆ, ಹಾಗಾದರೂ ಉತ್ಪತ್ತ್ಯಸಂಭವ(ವೆಂಬ ದೋಷವು) ಅದೇ ಅವಸ್ಥೆಯಲ್ಲಿ (ಉಳಿದುಕೊಳ್ಳುತ್ತದೆ). ವಾಸುದೇವನಿಂದ ಸಂಕರ್ಷಣನ ಉತ್ಪತ್ತಿ, ಸಂಕರ್ಷಣನಿಂದ ಪ್ರದ್ಯುಮ್ನನಿಗೂ ಅನಿರುದ್ಧನಿಗೂ ಉತ್ಪತ್ತಿ (ಎಂಬುದು) ಸಂಭವಿಸುವದೇ ಇಲ್ಲ. ಏಕೆಂದರೆ ಯಾವ ಅತಿಶಯವೂ ಇರುವದಿಲ್ಲ. ಕಾರ್ಯಕಾರಣಗಳಿಗೆ – ಮಣ್ಣು ಗಡಿಗೆ ಇವುಗಳಿಗಿರುವಂತೆ (ಯಾವದಾದರೊಂದು) ಅತಿಶಯವೂ ಇಲ್ಲದಿದ್ದರೆ (ಇದು) ಕಾರ್ಯ, (ಇದು) ಕಾರಣ –ಎಂಬುದು ಹೊಂದುವದಿಲ್ಲ.[2] **ಪಂಚರಾತ್ರ** ಸಿದ್ಧಾಂತಿಗಳು ವಾಸುದೇವನೇ ಮುಂತಾದವರೊಳಗೆ ಒಬ್ಬನಲ್ಲಿಯಾಗಲಿ ಎಲ್ಲರಲ್ಲಿಯೇ ಆಗಲಿ ಜ್ಞಾನೈಶ್ವರ್ಯಾದಿಗಳ ತಾರತಮ್ಯದಿಂದುಂಟಾದ ಯಾವ ಭೇದವಾದರೂ (ಇರುವದೆಂದು) ಒಪ್ಪಿರುವದಿಲ್ಲ. ಏಕೆಂದರೆ ಈ ಎಲ್ಲಾ

1. ಅವಿದ್ಯಾದಿಗಳಿಲ್ಲದವರು, ಉಪಾದಾನವಿಲ್ಲದವರು, ಅನಿತ್ಯಾದಿಗಳಿಲ್ಲದವರು– ಎಂದು ಭಾಮತೀ.

2. ಕಾರಣಕ್ಕಿಂತ ಕಾರ್ಯದಲ್ಲಿ ಅತಿಶಯವಿಲ್ಲದಿದ್ದರೆ ಕಾರ್ಯವುಂಟಾಯಿತು ಎಂಬ ವ್ಯವಹಾರಕ್ಕೆ ಅವಕಾಶವಿರುವದಿಲ್ಲ.

ವ್ಯೂಹಗಳೂ ವಾಸುದೇವನೇ, (ಇವರಲ್ಲಿ ಯಾವ) ವಿಶೇಷವೂ ಇಲ್ಲ ಎಂದು ಒಪ್ಪಿರುತ್ತಾರೆ. ಇದಲ್ಲದೆ ಭಗವಂತನ ವ್ಯೂಹಗಳು ನಾಲ್ಕೆಂಬ ಸಂಖ್ಯೆಯಲ್ಲಿಯೇ ನಿಲ್ಲುವ ಹಾಗೂ ಇಲ್ಲ; ಏಕೆಂದರೆ ಬ್ರಹ್ಮನಿಂದ ಹಿಡಿದು ಸ್ತಂಬದ ಪರ್ಯಂತವಾಗಿರುವ ಸಮಸ್ತಜಗತ್ತೂ ಭಗವಂತನವೂ ಎಂದು ನಿಶ್ಚಿತವಾಗಿರುತ್ತದೆ.

**ವಿಪ್ರತಿಷೇಧಾಚ್ಚ ॥ ೪೫ ॥**

೪೫. ವಿಪ್ರತಿಷೇಧವಿರುವದರಿಂದಲೂ (ಈ ಮತವು ಸರಿಯಲ್ಲ).

## ಈ ಶಾಸ್ತ್ರದಲ್ಲಿ ವಿಪ್ರತಿಷೇಧಗಳು

(ಭಾಷ್ಯ)

೮೭. ವಿಪ್ರತಿಷೇಧಶ್ಚ ಅಸ್ಮಿನ್ ಶಾಸ್ತ್ರೇ ಬಹುವಿಧಃ ಉಪಲಭ್ಯತೇ ಗುಣಗುಣಿತ್ವಕಲ್ಪನಾದಿಲಕ್ಷಣಃ । ಜ್ಞಾನೈಶ್ವರ್ಯಶಕ್ತಿಬಲವೀರ್ಯತೇಜಾಂಸಿ ಗುಣಾಃ । ಆತ್ಮಾನ ಏವೈತೇ ಭಗವನ್ತೋ ವಾಸುದೇವಾಃ ಇತ್ಯಾದಿದರ್ಶನಾತ್। ವೇದವಿಪ್ರತಿಷೇಧಶ್ಚ ಭವತಿ । ಚತುರ್ಷು ವೇದೇಷು ಪರಂ ಶ್ರೇಯೋಽಲಬ್ಧ್ವಾ ಶಾಣ್ಡಿಲ್ಯಃ ಇದಂ ಶಾಸ್ತ್ರಮ್ ಅಧಿಗತವಾನ್ ಇತ್ಯಾದಿವೇದನಿನ್ದಾದರ್ಶನಾತ್ । ತಸ್ಮಾತ್ ಅಸಂಗತಾ ಏಷಾ ಕಲ್ಪನಾ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಈ ಶಾಸ್ತ್ರದಲ್ಲಿ ಗುಣಗುಣಿತ್ವಕಲ್ಪನೆಯೇ ಮುಂತಾದ ರೂಪದ ಅನೇಕ ಪ್ರಕಾರದ ವಿಪ್ರತಿಷೇಧವು ಕಂಡುಬರುತ್ತದೆ.[1] ಹೇಗೆಂದರೆ ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜಸ್ಸು– ಇವುಗಳು ಗುಣಗಳು; ಇವೆಲ್ಲವೂ ಆತ್ಮರುಗಳೇ ಭಗವಂತರಾದ ವಾಸುದೇವರೇ– ಎಂದು ಮುಂತಾಗಿ ಕಂಡುಬರುತ್ತದೆ. (ಇದರಲ್ಲಿ) ವೇದವಿಪ್ರತಿಷೇಧವೂ[2] ಇದೆ. ಹೇಗೆಂದರೆ ನಾಲ್ಕು ವೇದಗಳಲ್ಲಿಯೂ ಪರಮಶ್ರೇಯಸ್ಸನ್ನು ಹೊಂದದೆ (ಇದ್ದದ್ದರಿಂದ) ಶಾಂಡಿಲ್ಯನು ಈ ಶಾಸ್ತ್ರವನ್ನು ಸಂಪಾದಿಸಿಕೊಂಡನು ಎಂದು ಮುಂತಾಗಿ ವೇದನಿಂದೆಯೂ[2] ಕಂಡುಬರುತ್ತದೆ. ಆದ್ದರಿಂದ ಈ ಕಲ್ಪನೆಯು ಅಸಂಗತ ಎಂದು ಸಿದ್ಧವಾಯಿತು.

---

1. ವ್ಯವಹಾರದೃಷ್ಟಿಯಿಂದ ಇದು ಸಮ್ಮತವಾದರೂ ಈ ಶಾಸ್ತ್ರದಲ್ಲಿ ಪರಮಾರ್ಥವಾಗಿಯೇ ಇದನ್ನು ಒಪ್ಪಿರುವದು ಸರಿಯಲ್ಲ ಎಂದು ಭಾವ. ಗೀ. ಭಾ. ಅವತರಣಿಕೆ (ಗೀ. ಭಾ. ೨) ನೋಡಿ.

2. ಸೂತ್ರದಲ್ಲಿರುವ ವಿಪ್ರತಿಷೇಧವೆಂಬ ಮಾತಿಗೆ ಇದು ಮತ್ತೊಂದು ಅರ್ಥ.

# ಅಧಿಕರಣಗಳ ಸಾರ

ಈ ಪಾದದಲ್ಲಿ ಸಾಂಖ್ಯಾದಿದರ್ಶನಗಳ ಯುಕ್ತಿಯನ್ನು ಖಂಡಿಸಲಾಗುವದು.

## ೧. ರಚನಾನುಪಪತ್ತ್ಯಧಿಕರಣ

**ಸಂಶಯ :** ಸಾಂಖ್ಯರ ಪ್ರಧಾನಕಾರಣವಾದಕ್ಕೆ ವಿರುದ್ಧವಾದದ್ದರಿಂದ ಚೇತನ ಕಾರಣವಾದವಾದ ಬ್ರಹ್ಮವಾದವನ್ನು ತಿರಸ್ಕರಿಸಬೇಕೆ, ಬೇಡವೆ ?[1]

**ಪೂರ್ವಪಕ್ಷ :** ಸಾಂಖ್ಯರ ವಾದವು ಯುಕ್ತಿಯುಕ್ತವಾಗಿರುವದರಿಂದ ಅದಕ್ಕೆ ವಿರುದ್ಧವಾದ ಬ್ರಹ್ಮಕಾರಣವಾದವನ್ನು ತಳ್ಳಿಹಾಕಬೇಕು. ಹೇಗೆಂದರೆ ಬಾಹ್ಯಾಧ್ಯಾತ್ಮಿಕ ಭೇದಗಳೆಲ್ಲ ಸುಖದುಃಖಮೋಹಾತ್ಮಕವಾಗಿರುವದರಿಂದ ಅವಕ್ಕೆ ಸುಖದುಃಖಮೋಹಾತ್ಮಕವಾದ ಸಾಮಾನ್ಯವು ಕಾರಣವಾಗಿರಬೇಕೆಂಬುದು ನ್ಯಾಯವಾಗಿದೆ. ಆ ಸಾಮಾನ್ಯವೇ ತ್ರಿಗುಣಾತ್ಮಕ ಪ್ರಧಾನವು. ಈ ಪ್ರಧಾನವನ್ನು ಪರಿಮಾಣಾದಿಲಿಂಗಗಳಿಂದಲೂ ಅನುಮಾನ ಮಾಡಬಹುದು. ಬ್ರಹ್ಮಕಾರಣವಾದವು ಈ ವಾದಕ್ಕೆ ವಿರುದ್ಧವಾಗಿರುತ್ತದೆ.

**ಸಿದ್ಧಾಂತ :** ಸಾಂಖ್ಯರ ವಾದವು ಯುಕ್ತಿವಿರುದ್ಧ. ಏಕೆಂದರೆ ಚೇತನದಿಂದ ಅಧಿಷ್ಠಿತವಾಗದ ಅಚೇತನವು ತಾನೇ ಪುರುಷಾರ್ಥಕ್ಕೆ ತಕ್ಕ ವಿಕಾರಗಳನ್ನು ವಿರಚಿಸುವದು ಕಂಡಿಲ್ಲ. ಸುಖಾದಿಗಳು ಬಾಹ್ಯಾಧ್ಯಾತ್ಮಿಕಭೇದಗಳಲ್ಲಿ ಅನುಗತವಾಗಿರುವದೂ ಇಲ್ಲ. ಏಕೆಂದರೆ ಸುಖಾದಿಗಳು ಆಂತರವಾಗಿವೆ. ಭೇದಗಳು ಪರಿಮಿತವಾಗಿರುವ ಸಂಸರ್ಗ ಪೂರ್ವಕವಾಗಿರಬೇಕೆಂಬುದೂ ಸರಿಯಲ್ಲ; ಏಕೆಂದರೆ ಸತ್ತ್ವಾದಿಗುಣಗಳೂ ಸಂಸರ್ಗ ಪೂರ್ವಕವಾಗಿರಬೇಕೆಂದಾಗುವದು. ಕಾರ್ಯಕಾರಣಭಾವವು ಚೇತನದಿಂದ ನಿರ್ಮಿತವಾದ ಪದಾರ್ಥಗಳಿಗೇ ಇದೆ. ಪ್ರಧಾನವು ಅಚೇತನವಾದ್ದರಿಂದ ಸಾಮ್ಯಾವಸ್ಥೆಯನ್ನು ಬಿಟ್ಟು ಸೃಷ್ಟಿಗೆ ಪ್ರವರ್ತಿಸಲಾರದು. ಕ್ಷೀರಾದಿದೃಷ್ಟಾಂತಗಳಲ್ಲಿಯೂ ಚೇತನಪೂರ್ವಕವಾಗಿರಬೇಕೆಂದೇ ಶ್ರುತ್ಯನುಸಾರವಾಗಿ ಅನುಮಾನಿಸಬೇಕು. ಚೇತನವನ್ನು ಬಯಸದ ಪ್ರಧಾನವು ತಾನೇ ಒಂದು ಕಾಲದಲ್ಲಿ ಪ್ರವರ್ತಿಸುವದು, ಇನ್ನೊಂದು ಕಾಲದಲ್ಲಿ ಸುಮ್ಮನಿರುವದು— ಎಂಬ ನಿಯಮವು ಅದಕ್ಕೆ ಸಲ್ಲದು. ತೃಣಾದಿದೃಷ್ಟಾಂತವೂ ಸರಿಯಲ್ಲ; ಏಕೆಂದರೆ ಅದೂ ನಿರ್ನಿಮಿತ್ತವಾಗಿ ಪರಿಣಮಿಸುವದಿಲ್ಲ. ಪ್ರಧಾನವು ಪರಿಣಮಿಸಿದರೂ ಅದಕ್ಕೆ ಯಾವ ಪ್ರಯೋಜನವೂ ಇರುವದಿಲ್ಲ. ಹೆಳವಕುರುಡರ ದೃಷ್ಟಾಂತವಾಗಲಿ ಅಯಸ್ಕಾಂತದೃಷ್ಟಾಂತವಾಗಲಿ ಪ್ರಧಾನಕ್ಕೆ ಹತ್ತುವದಿಲ್ಲ; ಏಕೆಂದರೆ ಪ್ರಧಾನಕ್ಕೆ ಪುರುಷನು ಪ್ರವರ್ತಕನಲ್ಲ, ಅಯಸ್ಕಾಂತಕ್ಕಿರುವಂತೆ ಅದಕ್ಕೆ ಸಂನಿಧಿಯ ಅಪೇಕ್ಷೆಯೂ ಇಲ್ಲ. ಸಾಮ್ಯಾವಸ್ಥೆಯಿಂದ ಗುಣಗಳು ಅಂಗಾಂಗಿಭಾವವನ್ನು ಒಪ್ಪುವದಕ್ಕೆ ಕಾರಣವಿಲ್ಲ; ಪ್ರಧಾನಕ್ಕೆ ಚೈತನ್ಯವೂ ಇಲ್ಲ. ಸಾಂಖ್ಯರ ವಾದದಲ್ಲಿ ಪರಸ್ಪರವಿರುದ್ಧವಾದ ಅಭ್ಯುಪಗಮಗಳೂ ಇವೆ. ಆದ್ದರಿಂದ ಬ್ರಹ್ಮವಾದಕ್ಕೆ ಅವು ಎದುರಾಗುವಂತಿಲ್ಲ.

---

1. ಈ ಬಗೆಯ ಸಂಶಯವನ್ನು ಮುಂದಿನ ಅಧಿಕರಣಗಳಿಗೆಲ್ಲ ಕಲ್ಪಿಸಿಕೊಳ್ಳಬಹುದು.

## ೨. ಮಹದ್ದೀರ್ಘಾಧಿಕರಣ

**ಪೂರ್ವಪಕ್ಷ:** ವೈಶೇಷಿಕರ ಪ್ರಕ್ರಿಯೆಗೆ ಬ್ರಹ್ಮವಾದವು ವಿರುದ್ಧವಾಗಿದೆ. ಏಕೆಂದರೆ ಕಾರಣದ್ರವ್ಯಸಮವಾಯಿಗಳಾದ ಗುಣಗಳಿಂದ ಕಾರ್ಯದಲ್ಲಿ ಸಮಾನಜಾತಿಯ ಗುಣಾಂತರವು ಆರಬ್ಧವಾಗಬೇಕು. ಈ ಯುಕ್ತಿಯು ಸರಿಯಾದರೆ ಕಾರಣವಾದ ಬ್ರಹ್ಮದ ಚೈತನ್ಯಗುಣವು ಕಾರ್ಯದಲ್ಲಿಯೂ ಸಮವೇತವಾಗಿರಬೇಕಾಗುವದು. ಆದರೆ ಹಾಗಿಲ್ಲ.

**ಸಿದ್ಧಾಂತ:** ಈ ವೈಶೇಷಿಕರ ಪ್ರಕ್ರಿಯೆ ಸರಿಯಲ್ಲ. ಏಕೆಂದರೆ ಪರಿಮಂಡಲಪರಿಮಾಣದ ಪರಮಾಣುಗಳಿಂದ ಅಣುವೂ ಹ್ರಸ್ವವೂ ಆದ ದ್ವ್ಯಣುಕವೂ ಹುಟ್ಟುವದೆಂದೂ ಅಣುವೂ ಹ್ರಸ್ವವೂ ಆದ ದ್ವ್ಯಣುಕಗಳಿಂದ ಮಹತ್ತೂ ದೀರ್ಘವೂ ಆದ ತ್ರ್ಯಣುಕವೂ ಹುಟ್ಟುವವೆಂದೂ ಅವರೇ ಒಪ್ಪಿರುತ್ತಾರೆ. ಸಂಯೋಗದಿಂದ ಅದಕ್ಕಿಂತ ವಿಲಕ್ಷಣವಾದ ದ್ರವ್ಯಾದಿಗಳು ಹುಟ್ಟುವವೆಂದೂ ಒಪ್ಪಿರುತ್ತಾರೆ. ಆದ್ದರಿಂದ ಬ್ರಹ್ಮವು ಚೇತನವಾಗಿದ್ದರೂ ಜಗತ್ತು ಅದಕ್ಕಿಂತ ವಿಲಕ್ಷಣವಾಗಿರಬಹುದೆಂದು ಅವರೇ ಒಪ್ಪಿದಂತೆ ಆಗಿರುತ್ತದೆ.

## ೩. ಪರಮಾಣುಜಗದಕಾರಣತ್ವಾಧಿಕರಣ

**ಪೂರ್ವಪಕ್ಷ:** ಬ್ರಹ್ಮಕಾರಣವಾದವು ಪರಮಾಣುಕಾರಣವಾದಕ್ಕೆ ವಿರುದ್ಧವಾಗಿದೆ. ಆದ್ದರಿಂದ ಇದು ಯುಕ್ತಿಯುಕ್ತವಲ್ಲ.

**ಸಿದ್ಧಾಂತ:** ಪರಮಾಣುಕಾರಣವಾದವು ಸರಿಯಲ್ಲ. ಏಕೆಂದರೆ ಪ್ರಲಯದಲ್ಲಿ ವಿಭಕ್ತವಾಗಿರುವ ಪರಮಾಣುಗಳ ಸಂಯೋಗವಾಗುವದಕ್ಕೆ ಕರ್ಮವು ಬೇಕು. ಆ ಕರ್ಮಕ್ಕೆ ನಿಮಿತ್ತವು ಯಾವದಾದರೊಂದನ್ನು ಒಪ್ಪದಿದ್ದರೆ ಕರ್ಮವೇ ಇಲ್ಲದೆ ದ್ವ್ಯಣುಕಾದಿಗಳ ಉತ್ಪತ್ತಿಯಿಲ್ಲವಾಗುವದು. ಆದರೆ ಪ್ರಯತ್ನ, ಅಭಿಘಾತ, ಅದೃಷ್ಟ-ಮುಂತಾದ ನಿಮಿತ್ತಗಳು ಆಗ ಯಾವವೂ ಇರುವದಿಲ್ಲ. ಈ ಅಣುಗಳ ಸಂಯೋಗವೂ ಹೊಂದುವದಿಲ್ಲ. ಆದ್ದರಿಂದ ಸೃಷ್ಟಿಯಾಗುವಂತಿಲ್ಲ. ಇದರಂತೆ ಪ್ರಲಯವಾಗುವದಕ್ಕೆ ಬೇಕಾದ ವಿಭಾಗಕ್ಕೂ ನಿಮಿತ್ತವಿರುವದಿಲ್ಲ. ಪರಮಾಣುಗಳಿಂದ ಹುಟ್ಟುವ ವಿಲಕ್ಷಣವಾದ ದ್ವ್ಯಣುಕವು ಅವುಗಳಲ್ಲಿ ಸಮವಾಯಸಂಬಂಧದಿಂದ ಇರುತ್ತದೆ ಎಂಬುದನ್ನು ಒಪ್ಪುವದಕ್ಕಾಗುವದಿಲ್ಲ; ಏಕೆಂದರೆ ಸಂಯೋಗದಂತೆ ಸಮವಾಯಕ್ಕೂ ಸಂಬಂಧಾಂತರವು ಬೇಕಾಗುವದರಿಂದ ಅನವಸ್ಥಾದೋಷವು ಬರುವದು. ಪರಮಾಣುಗಳು ಪ್ರವೃತ್ತಿಸ್ವಭಾವದವಾದರೆ ನಿತ್ಯವೂ ಪ್ರವೃತ್ತವಾಗಬೇಕು; ನಿವೃತ್ತಿಸ್ವಭಾವದವಾದರೆ ನಿತ್ಯವೂ ನಿವೃತ್ತವಾಗಬೇಕು. ಆದರೆ ಇವೆರಡೂ ಅನಿಷ್ಟವಾಗಿರುತ್ತವೆ. ಪರಮಾಣುಗಳಿಗೆ ರೂಪಾದಿಗುಣಗಳಿರುವದರಿಂದ ಅವು ಪರಮಾಣುಗಳೆಂದೂ ನಿತ್ಯವೆಂದೂ ತಿಳಿದಿರುವದಕ್ಕೆ ವಿಪರೀತವಾಗಿ ಸಕಾರಣವಾಗಿರುವವೆಂದೂ ಕಾರಣಾಪೇಕ್ಷೆಯಿಂದ ಸ್ಥೂಲವಾಗಿರುವವೆಂದೂ ಏರ್ಪಡುತ್ತದೆ. ಪರಮಾಣುಗಳಲ್ಲಿ ಗುಣಸಂಖ್ಯೆಯ ತಾರತಮ್ಯವನ್ನು ಒಪ್ಪಿದರೆ ಗುಣಗಳು ಹೆಚ್ಚಾಗಿರುವವು, ದಪ್ಪನಾಗಿರುವವೆಂದಾಗಿ ಪರಮಾಣುವಲ್ಲದೆ ಹೋಗುವವು; ಒಪ್ಪದಿದ್ದರೆ ಒಂದೊಂದರಲ್ಲಿ ಒಂದೊಂದೇ ಗುಣವನ್ನು ಕಲ್ಪಿಸಬೇಕು; ಅಥವಾ ಒಂದೊಂದರಲ್ಲಿಯೂ ಗಂಧಾದಿಯಾಗಿ ನಾಲ್ಕು ಗುಣಗಳನ್ನೂ ಕಲ್ಪಿಸಬೇಕಾಗುವದು. ಹೇಗಾದರೂ ದೋಷವೇ ಉಂಟಾಗುತ್ತದೆ.

ಏಕೆಂದರೆ ಮೊದಲನೆಯ ಪಕ್ಷದಲ್ಲಿ ಕಾರ್ಯವಾಗಿರುವ ಭೂತಗಳಲ್ಲಿ ಈಗ ತೋರುತ್ತಿರುವ ಕೆಲವು ಗುಣಗಳು ತೋರದೆ ಇರಬೇಕಾಗುವದು ; ಎರಡನೆಯ ಪಕ್ಷದಲ್ಲಿ ಈಗ ತೋರದೆ ಇರುವ ಗುಣಗಳೂ ತೋರಬೇಕಾಗುವದು ; ಪ್ರಧಾನಕಾರಣವಾದವು ಸತ್ಕಾರ್ಯವಾದವೇ ಮುಂತಾದ ಅಂಶಗಳಲ್ಲಿ ವೇದಾಂತಸಿದ್ಧಾಂತಕ್ಕೆ ಸ್ವಲ್ಪಮಟ್ಟಿಗಾದರೂ ಹತ್ತಿರವಾಗಿದೆಯಾದ್ದರಿಂದ ಅದನ್ನು ಶಿಷ್ಟರು ಸ್ವಲ್ಪಮಟ್ಟಿಗೆ ಅನುಸರಿಸಿರುತ್ತಾರೆ. ಆದರೆ ಈ ಪರಮಾಣುಕಾರಣವಾದವನ್ನು ಶಿಷ್ಟರು ಯಾರೂ ಪರಿಗ್ರಹಿಸಿರುವದಿಲ್ಲ. ಆದ್ದರಿಂದ ಸರ್ವಥಾ ಯುಕ್ತಿವಿರುದ್ಧವಾಗಿರುವ ಈ ವಾದಕ್ಕೆ ವಿರುದ್ಧವಾಗಿರುವದೇನೂ ಬ್ರಹ್ಮಕಾರಣವಾದದ ದೋಷವಲ್ಲ.

## ೪. ಸಮುದಾಯಾಧಿಕರಣ

**ಪೂರ್ವಪಕ್ಷ :** ಸರ್ವಾಸ್ತಿತ್ವವಾದಿಗಳ ಮತಕ್ಕೆ ವಿರುದ್ಧವಾಗಿರುವದರಿಂದ ಬ್ರಹ್ಮವಾದವು ಸರಿಯಲ್ಲ.

**ಸಿದ್ಧಾಂತ :** ಈ ಮತವೂ ಯುಕ್ತಿವಿರುದ್ಧವಾಗಿರುತ್ತದೆ. ಏಕೆಂದರೆ ಅಣುಹೇತುಕವಾಗಿ ಭೂತಭೌತಿಕಸಮುದಾಯವೂ ಸ್ಕಂಧಹೇತುಕವಾದ ಅಧ್ಯಾತ್ಮಿಕಸಮುದಾಯವೂ ಅವರಿಗೆ ಸಮ್ಮತವಾಗಿರುತ್ತದೆ. ಆದರೆ ಸಮುದಾಯಿಗಳು ಅಚೇತನವಾಗಿರುವದರಿಂದಲೂ ಅವುಗಳನ್ನು ಒಟ್ಟುಗೂಡಿಸುವ ಚೇತನಜೀವನನ್ನಾಗಲಿ ಈಶ್ವರನನ್ನಾಗಲಿ ಅವರು ಒಪ್ಪಿರುವದಿಲ್ಲ. ಎಲ್ಲವೂ ಕ್ಷಣಿಕವೆಂದು ಒಪ್ಪಿರುವದರಿಂದ ಸಮುದಾಯಿಗಳಿಗೆ ವ್ಯಾಪಾರವಿಲ್ಲವಾಗಿ ಪ್ರವೃತ್ತಿಯು ಆಗುವಂತಿಲ್ಲ. ಅವಿದ್ಯಾದಿಗಳು ಒಂದಕ್ಕೊಂದು ಕಾರಣವಾಗಿರುವವು ಎಂದರೂ ಉತ್ಪತ್ತಿಮಾತ್ರಕ್ಕೆ ಕಾರಣವಾಗಿದ್ದಾವೇ ಹೊರತು ಸಮುದಾಯಕ್ಕೆ ಕಾರಣವಿರುವದಿಲ್ಲ ; ಆದರೆ ಉತ್ತರಕ್ಷಣವು ಹುಟ್ಟುವಾಗ್ಗೆ ಪೂರ್ವಕ್ಷಣವು ನಾಶವಾಗಿರುವವೆಂದು ಈ ವಾದಿಗಳು ಒಪ್ಪಿರುವದರಿಂದ ಉತ್ಪತ್ತಿಮಾತ್ರಕ್ಕೂ ಅವು ಕಾರಣವಾಗಲಾರವು. ಕಾರಣವಿಲ್ಲದೆಯೇ ಕಾರ್ಯವುಂಟಾಗುವದೆಂದರೆ ಚತುರ್ವಿಧಹೇತುಗಳಿಂದ ಚಿತ್ತಚೈತ್ತಗಳು ಉತ್ಪತ್ತಿಯಾಗುತ್ತವೆ ಎಂಬ ಈ ವಾದಿಗಳ ಪ್ರತಿಜ್ಞೆಗೆ ಭಂಗವನ್ನು ತರುವದು ; ಅದು ಯುಕ್ತವೂ ಆಗುವದಿಲ್ಲ. ಪೂರ್ವಕ್ಷಣವು ಉತ್ತರಕ್ಷಣದ ಉತ್ಪತ್ತಿಯುವರೆಗೂ ಇರುತ್ತದೆ ಎಂದರೆ ಕ್ಷಣಿಕತ್ವಾಭ್ಯುಪಗಮಕ್ಕೆ ವಿರೋಧವಾಗುವದು. ಪ್ರತಿಸಂಖ್ಯಾನಿರೋಧ ಅಪ್ರತಿಸಂಖ್ಯಾನಿರೋಧ –ಇವುಗಳನ್ನು ಒಪ್ಪಿರುವದೂ ಸರಿಯಲ್ಲ ; ಏಕೆಂದರೆ ಸಂತಾನವು ಯಾವಾಗಲೂ ಅವಿಚ್ಛಿನ್ನವಾಗಿರುತ್ತದೆ, ಸಂತಾನಿಗಳಾದ ಭಾವಗಳು ನಿರನ್ವಯವಾಗಿ ನಾಶವಾಗುವಹಾಗೂ ಇಲ್ಲ. ಪ್ರತಿಸಂಖ್ಯಾನಿರೋಧದಲ್ಲಿ ಸೇರಿರುವ ಅವಿದ್ಯಾದಿನಿರೋಧವೆಂಬುದು ಸಮ್ಯಗ್ಜ್ಞಾನದಿಂದ ಆಗುವದೆಂದರೆ ವಸ್ತುಗಳು ನಿರ್ಹೇತುಕವಾಗಿ ತಾವೇ ನಾಶವಾಗುವವೆಂಬ ವಾದಕ್ಕೆ ವಿರೋಧವಾಗುವದು ; ತಾನೇ ಆಗುವದೆಂದರೆ ಮಾರ್ಗೋಪದೇಶವು ವ್ಯರ್ಥವಾಗುವದು. ಆಕಾಶವು ನಿರುಪಾಖ್ಯವೆಂಬುದೂ ಸರಿಯಲ್ಲ ; ಏಕೆಂದರೆ ಶ್ರುತಿಯಿಂದಲೂ ಅನುಮಾನದಿಂದಲೂ ಅದು ವಸ್ತುವೆಂದು ಸಿದ್ಧವಾಗುತ್ತದೆ. ಅನುಸ್ಮೃತಿಯಿಂದಲೂ ಪ್ರತ್ಯಭಿಜ್ಞೆಯಿಂದಲೂ ಅದೇ ಎಂದು ಗೊತ್ತಾಗುವ ವಸ್ತುವು ಕ್ಷಣಿಕವೆಂಬ ಪ್ರತಿಜ್ಞೆಯೂ ಸರಿಯಲ್ಲ ; ಅವನೇ ನಾನು ಎಂಬ ಪ್ರತ್ಯಭಿಜ್ಞಾನನಿಶ್ಚಯವಿರುವದರಿಂದ ಜ್ಞಾತೃವು ಕ್ಷಣಿಕನೆಂಬುದಂತೂ ಹೊಂದುವದೇ ಇಲ್ಲ. ಅಸತ್ತಿನಿಂದ,

ನಾಶವಾಪಕಾರಣದಿಂದ, ಕಾರ್ಯವು ಉತ್ಪತ್ತಿಯಾಗುವದೆಂಬ ಇವರ ಮತವೂ ಪ್ರತ್ಯಕ್ಷ ವಿರುದ್ಧವಾಗಿರುವದರಿಂದ ಈ ಪಕ್ಷದಲ್ಲಿ ಕಾರ್ಯವು ಕಾರಣಸಾಮಗ್ರಿಯಿಲ್ಲದೆಯೇ ಸಿದ್ಧವಾಗ ಬೇಕಾಗುವದು. ಅದ್ದರಿಂದಲೂ ಈ ಮತವು ಅಯುಕ್ತವು.

# ೫. ಅಭಾವಾಧಿಕರಣ

**ಪೂರ್ವಪಕ್ಷ:** ಬ್ರಹ್ಮವಾದವು ವಿಜ್ಞಾನವಾದಕ್ಕೆ ವಿರುದ್ಧವಾಗಿರುವದರಿಂದ ಸರಿಯಲ್ಲ.

**ಸಿದ್ಧಾಂತ:** ವಿಜ್ಞಾನವಾದವು ಯುಕ್ತಿವಿರುದ್ಧವಾಗಿರುವದರಿಂದ ಅವರ ವಿರೋಧವು ದೋಷವಲ್ಲ. ಏಕೆಂದರೆ ಬಾಹ್ಯಾರ್ಥವು ಅನುಭೂತವಾಗಿರುವದರಿಂದ ಇಲ್ಲವೆನ್ನುವದ ಕ್ಕಾಗುವದಿಲ್ಲ ; ಆ ಅರ್ಥವು ಅನುಭವಕ್ಕಿಂತ ವ್ಯತಿರಿಕ್ತವಾಗಿಯೇ ತಿಳಿಯಬರುತ್ತದೆ. ಒಳಗಿನ ವಿಜ್ಞಾನವೇ ಹೊರಗಿರುವಂತೆ ತೋರುತ್ತದೆ ಎಂಬುದು ಸರಿಯಲ್ಲ ; ಅನುಭವಕ್ಕೆ ಸರಿಯಾಗಿ ಹೊರಗೇ ಇದೆ ಎಂಬುದೇ ಯುಕ್ತ. ಜ್ಞಾನವೇ ವಿಷಯಸಾರೂಪ್ಯವನ್ನು ಪಡೆಯುತ್ತದೆ ಎಂದು ಈ ವಾದಿಗಳು ಹೇಳುವದರಿಂದಲೂ ವಿಷಯವಿಲ್ಲದಿದ್ದರೆ ತತ್ಸಾ ರೂಪ್ಯವುಂಟಾಗಲಾರದಾದ್ದರಿಂದಲೂ ಬಾಹ್ಯಾರ್ಥವು ಇದೆಯೆಂದು ಒಪ್ಪುವದೇ ಯುಕ್ತ. ಎರಡೂ ಜೊತೆಯಲ್ಲಿದ್ದರೂ ಪ್ರತ್ಯಯವಿಷಯಗಳಿಗೆ ಉಪಾಯೋಪೇಯಭಾವವಿರುವದ ರಿಂದ ಅವು ಬೇರೆಯೇ ಎಂದು ತಿಳಿಯುವದು ಯುಕ್ತ. ವಿಜ್ಞಾನವು ತಾನೇ ಅನುಭವಕ್ಕೆ ಬರುತ್ತದೆ, ಹೊರಗಿನ ಅರ್ಥವು ತಾನೊಂದೇ ಅನುಭೂತವಾಗುವದಿಲ್ಲ ಎಂಬುದು ಸರಿಯಲ್ಲ ; ಏಕೆಂದರೆ ವಿಜ್ಞಾನವು ತನ್ನನ್ನು ತಾನು ಅರಿಯುತ್ತದೆಯೆಂಬುದು ವಿರುದ್ಧವಚನವು ; ವಿಜ್ಞಾನವು ತದ್ವ್ಯತಿರಿಕ್ತಸಾಕ್ಷಿಗೆ ಜ್ಞೇಯವಾಗಿದೆ ಎಂಬುದು ಅನುಭವದಲ್ಲಿದೆ. ವಿಜ್ಞಾನಕ್ಕೆ ಉತ್ಪತ್ತಿ, ನಾಶ, ಅನೇಕತ್ವ- ಮುಂತಾದವುಗಳನ್ನು ಒಪ್ಪಿರುವ ವಿಜ್ಞಾನವಾದಿಗಳು ಅದನ್ನೆಲ್ಲ ಅರಿಯುವ ಕೂಟಸ್ಥವಿಜ್ಞಾನರೂಪನಾದ ಆತ್ಮನನ್ನು ಒಪ್ಪಲೇಬೇಕು. ಸ್ವಪ್ನ ಮಾಯಾದಿಗಳಲ್ಲಿ ವಿಷಯವಿಲ್ಲದೆ ಪ್ರತ್ಯಯಗಳಿರುವವೆಂಬುದು ಜ್ಞಾನಾತಿರಿಕ್ತಬಾಹ್ಯಾರ್ಥ ಸದ್ಭಾವಕ್ಕೆ ವಿರುದ್ಧವಲ್ಲ ; ಏಕೆಂದರೆ ಸ್ವಪ್ನಾದಿಗಳು ಬಾಧಿತವಾಗುತ್ತವೆ, ಸ್ಮೃತಿರೂಪ ವಾಗಿರುತ್ತವೆ. ಅದ್ದರಿಂದ ಎಚ್ಚರದಲ್ಲಿರುವ ಜ್ಞಾನಕ್ಕೆ ವಿಷಯವಾದ ಬಾಹ್ಯಾರ್ಥವು ಇದೆ ಎಂಬುದೇ ಯುಕ್ತ. ಬಾಹ್ಯಾರ್ಥಗಳೇ ಇಲ್ಲದ್ದರಿಂದ ವಾಸನೆಗಳೂ ಅಸಿದ್ಧವಾಗು ತ್ತವೆ ; ಅದ್ದರಿಂದ ವಾಸನಾವೈಚಿತ್ರ್ಯದಿಂದಲೇ ಜ್ಞಾನವೈಚಿತ್ರ್ಯವು ಹೊಂದುತ್ತದೆ -ಎಂಬ ವಾದವು ಸರಿಯಲ್ಲ. ಏಕೆಂದರೆ ವಾಸನೆಗಳಿಗೆ ಆಶ್ರಯವಾದ ಸ್ಥಿರತತ್ತ್ವವು ಬೌದ್ಧ ಮತದಲ್ಲಿ ಯಾವದೂ ಸಿದ್ಧವಾಗುವದಿಲ್ಲ ; ಆಲಯವಿಜ್ಞಾನವೆಂಬುದು ಲಕ್ಷಣಿಕವಾಗಿರು ವದರಿಂದ ಅದೂ ವಾಸನೆಗಳಿಗೆ ಆಶ್ರಯವಾಗಲಾರದು. ಹೀಗೆ ಎಲ್ಲಾ ಬಗೆಯಿಂದಲೂ ಈ ಮತವು ಯುಕ್ತಿವಿರುದ್ಧವಾಗಿರುತ್ತದೆ.

# ೬. ಏಕಸ್ಮಿನ್ನಸಂಭವಾಧಿಕರಣ

**ಪೂರ್ವಪಕ್ಷ:** ಬ್ರಹ್ಮವಾದವು ಜೈನರ ಸ್ಯಾದ್ವಾದಕ್ಕೆ ವಿರುದ್ಧವಾಗಿದೆ.

**ಸಿದ್ಧಾಂತ:** ಈ ವಾದವು ಯುಕ್ತಿವಿರುದ್ಧ. ಸ್ಯಾದಸ್ತಿ, ಸ್ಯಾನ್ನಾಸ್ತಿ- ಎಂಬುದೇ ಸಿದ್ಧಾಂತವಾದರೆ ಈ ವಾದಿಗಳು ಒಪ್ಪಿರುವ ಸಿದ್ಧಾಂತವು ಒಂದು ಪಕ್ಷದಲ್ಲಿ ಇದೆ, ಇನ್ನೊಂದು ಪಕ್ಷದಲ್ಲಿಲ್ಲ ಎಂದಾಗುವದು. ನಿರ್ಧಾರಣೆ ಮಾಡಿದವನು, ನಿರ್ಧಾರಣೆಯ ಫಲ, ಅಸ್ತಿ

ಕಾಯಗಳು ಐದೇ ಎಂಬುದು, ಸಮ್ಯಗ್ದರ್ಶನ, ಸ್ವರ್ಗಾಪವರ್ಗಗಳು –ಮುಂತಾದವೆಲ್ಲ ಒಂದು ಪಕ್ಷದಲ್ಲಿ ಇಲ್ಲವೆಂದೂ ಒಪ್ಪಬೇಕಾಗುವದು. ಇವರಿ ಆತ್ಮನು ಶರೀರಪರಿಮಾಣದವನು ಎಂಬುದರಿಂದ ಮುಂದಿನ ಶರೀರವು ಈಗಿನದಕ್ಕಿಂತ ದೊಡ್ಡದಾದರೆ ಆತ್ಮನು ಅದಕ್ಕಿಂತ ಚಿಕ್ಕವನಾಗಿರಬೇಕಾಗುವದು, ಸಣ್ಣದಾದರೆ ಆತ್ಮನು ಅದರಲ್ಲಿ ಹಿಡಿಸಲಾರನೆಂದಾಗುವದು. ಪರಿಚ್ಛಿನ್ನನಾಗಿರುವದರಿಂದ ಆತ್ಮನಲ್ಲಿ ಅನಿತ್ಯತ್ವಾದಿದೋಷಗಳೂ ಬಂದೊದಗುವವು. ಆತ್ಮನಿಗೆ ಅವಯುವಗಳು ಪರ್ಯಾಯದಿಂದ ಬಂದು ಸೇರಿಕೊಳ್ಳುವವು, ಅಥವಾ ಬಿಟ್ಟುಹೋಗುವವು ಎಂದರೆ ಆತ್ಮನಲ್ಲಿ ವಿಕಾರಾದಿದೋಷಗಳುಂಟಾಗುವವು. ಅನಿತ್ಯವಾದ ಜೀವನಿಗೆ ಬಂಧಮೋಕ್ಷಗಳನ್ನು ಹೇಳುವದಕ್ಕಿಲ್ಲವಾಗುವದು. ಮೋಕ್ಷಾವಸ್ಥೆಯಲ್ಲಿ ಜೀವಪರಿಮಾಣವು ಈಗಿನಂತೆ ಅನಿತ್ಯವೆಂದೋ ಅಥವಾ ಆ ಅವಸ್ಥೆಯಲ್ಲಿರುವಂತೆ ಈಗಲೂ ವ್ಯವಸ್ಥಿತಪರಿಮಾಣವೆಂದೋ ಒಪ್ಪಬೇಕಾಗುವದು; ಆದರಿಂದ ಶರೀರಪರಿಮಾಣವಾದವು ಕೈಬಿಟ್ಟುಹೋಗುವದು. ಆದ್ದರಿಂದ ಈ ವಾದವು ಯುಕ್ತಿವಿರುದ್ಧವಾಗಿರುತ್ತದೆ.

# ೭. ಪತ್ಯಧಿಕರಣ

**ಪೂರ್ವಪಕ್ಷ:** ಈಶ್ವರನಿಮಿತ್ತಕಾರಣವಾದಿಗಳ ಮತಕ್ಕೆ ಬ್ರಹ್ಮಕಾರಣವಾದವು ವಿರುದ್ಧವಾಗಿದೆ.

**ಸಿದ್ಧಾಂತ:** ನಿಮಿತ್ತಕಾರಣವಾದಿಗಳ ಮತವು ಅಯುಕ್ತವಾಗಿರುತ್ತದೆ. ಸಾಂಖ್ಯಯೋಗಗಳನ್ನು ಆಶ್ರಯಿಸಿರುವ ನಿಮಿತ್ತಕಾರಣವಾದಿಗಳ ಮತದಲ್ಲಿ ಪ್ರಧಾನಪುರುಷರುಗಳ ಅಧಿಷ್ಠಾತೃವು ಈಶ್ವರನೆಂದು ಒಪ್ಪಿದೆ. ಹೀನಮಧ್ಯಮೋತ್ತಮಪ್ರಾಣಿಗಳನ್ನು ಸೃಷ್ಟಿಸಿರುವ ಅವರ ಮತದ ಈಶ್ವರನಿಗೆ ರಾಗದ್ವೇಷಾದಿಗಳು ಪ್ರಸಕ್ತವಾಗುವವು; ಪ್ರಾಣಿಗಳ ಕರ್ಮದ ಅಪೇಕ್ಷೆಯಿಂದ ಸೃಷ್ಟಿಸುತ್ತಾನೆಂದರೆ ಕರ್ಮೇಶ್ವರರು ಪ್ರವರ್ತ್ಯಪ್ರವರ್ತಕರೆಂಬುದು ಅನ್ಯೋನ್ಯಾಶ್ರಯವಾಗುವದು. ಸಂಸಾರವು ಅನಾದಿಯಾಗಿರುವದರಿಂದ ದೋಷವಿಲ್ಲ ಎನ್ನುವದಕ್ಕಿಲ್ಲ; ಏಕೆಂದರೆ ಈ ಅನ್ಯೋನ್ಯಾಶ್ರಯದೋಷವು ಎಲ್ಲಾ ಕಾಲದಲ್ಲಿಯೂ ಇದ್ದೇ ಇರುವದರಿಂದ ಇದು ಅಂಧಪರಂಪರಾನ್ಯಾಯವಾಗಿರುತ್ತದೆ. ಈಶ್ವರನು ಸೃಷ್ಟಿಯಲ್ಲಿ ಪ್ರವರ್ತಿಸುವದರಿಂದಲೇ ರಾಗದ್ವೇಷಾದಿಯುಕ್ತನೆಂದಾಗುತ್ತದೆ. ಈಶ್ವರನು ಪುರುಷವಿಶೇಷನೆಂಬುದರಿಂದ ಉದಾಸೀನನಾದ ಪುರುಷನಿಗೆ ಪ್ರವೃತ್ತಿಯನ್ನು ಹೇಳುವದರಿಂದ ಈ ಮತವು ಅಸಮಂಜಸವು. ಪ್ರಧಾನಪುರುಷರನ್ನು ಆಳುವ ಈಶ್ವರನಿಗೂ ಅವಕ್ಕೂ ಯಾವ ಸಂಬಂಧವೂ ಹೊಂದುವಂತಿಲ್ಲ; ಸಂಬಂಧವಿಲ್ಲದೆ ಆಳುವಂತಿಲ್ಲ. ಅಪ್ರತ್ಯಕ್ಷವಾಗಿರುವ ಪ್ರಧಾನಕ್ಕೆ ಈಶ್ವರನು ಕುಂಬಾರನು ಮಣ್ಣಿಗೆ ಅಧಿಷ್ಠಾತೃವಾಗಿರುವಂತೆ ಅಧಿಷ್ಠಾತೃವೆಂಬುದು ಯುಕ್ತವಾಗುವದಿಲ್ಲ. ಜೀವನು ಕರಣಗಳಿಗೆ ಅಧಿಷ್ಠಾತೃವಾಗಿರುವಂತೆ ಆಗಬಹುದು ಎನ್ನುವದಕ್ಕಿಲ್ಲ; ಏಕೆಂದರೆ ಜೀವನಿಗಿರುವಂತೆ ಭೋಗಾದಿಗಳು ಈಶ್ವರನಿಗಿಲ್ಲ, ಇದ್ದರೆ ಅವನು ಸಂಸಾರಿಯೇ ಆಗಿಬಿಡುತ್ತಾನೆ. ಅಧಿಷ್ಠಾತೃವಾದ ಅರಸನಿಗೆ ಶರೀರವಿರುವಂತೆ ಈಶ್ವರನಿಗೂ ಶರೀರವಿರಬೇಕು; ಇಲ್ಲದಿದ್ದರೆ ಅವನು ಪ್ರವರ್ತಕನಾಗಲಾರನು. ಶರೀರವಿದ್ದರೆ ಸಂಸಾರಿಯೇ ಆಗಿಬಿಡುತ್ತಾನೆ. ಈಶ್ವರನು ಅನಂತವಾದ ಪ್ರಧಾನವನ್ನೂ ಅನಂತವಾದ ಪುರುಷರನ್ನೂ ತನ್ನ ಜ್ಞಾನದಿಂದ ಪರಿಚ್ಛೇದ

ಮಾಡುವನಾದರೆ ಪ್ರಧಾನಪುರುಷರು ಅಂತವುಳ್ಳವರೆಂದಾಗುವದು. ಇಲ್ಲವಾದರೆ ಈಶ್ವರನು ಅಸರ್ವಜ್ಞನೆಂದಾಗುವದು. ಆದ್ದರಿಂದ ಇವರು ಕಲ್ಪಿಸಿರುವ ನಿಮಿತ್ತಕಾರಣವಾದವು ಅಯುಕ್ತವಾಗಿರುತ್ತದೆ. ಹೀಗೆಯೇ ಉಳಿದ ನಿಮಿತ್ತಕಾರಣವಾದಿಗಳ ಮತವನ್ನೂ ಖಂಡಿಸ ಬಹುದು.

# ೮. ಉತ್ಪತ್ತ್ಯಸಂಭವಾಧಿಕರಣ

ಪೂರ್ವಪಕ್ಷ: ಜೀವೋತ್ಪತ್ತ್ಯಾದಿಗಳನ್ನು ಹೇಳುವ ಭಾಗವತಮತಕ್ಕೆ ಈ ವೇದಾಂತಮತವು ವಿರುದ್ಧವು. ಭಾಗವತಮತವು ವೇದೋಕ್ತವಾದ ಉಪಾದಾನಕಾರಣ ವನ್ನು ಒಪ್ಪಿದೆ.

ಸಿದ್ಧಾಂತ: ಭಾಗವತಮತವು ಕೆಲವು ವಿಷಯಗಳಲ್ಲಿ ವೇದಾಂತಕ್ಕೆ ಅನುಗುಣವೇ ಆಗಿದ್ದರೂ ಮತ್ತೆ ಕೆಲವು ವಿಷಯಗಳಲ್ಲಿ ಯುಕ್ತಿವಿರುದ್ಧವಾಗಿರುತ್ತದೆ. ವಾಸುದೇವನೆಂಬ ಪರಮಾತ್ಮನಿಂದ ಸಂಕರ್ಷಣನೆಂಬ ಜೀವನು ಉತ್ಪನ್ನನಾಗುವದೆಂಬುದು ಯುಕ್ತವಲ್ಲ. ಏಕೆಂದರೆ ಜೀವನು ಅನಿತ್ಯನು ಎಂದು ಮುಂತಾದ ದೋಷವು ಪ್ರಸಕ್ತವಾಗುತ್ತದೆ; ಕಾರಣನಾದ ವಾಸುದೇವನನ್ನು ಸೇರಿದರೆ ಲಯವಾಗುತ್ತಾನೆಂದೂ ಆಗುತ್ತದೆ. ಕರ್ತೃ ವಾಗಿರುವ ಸಂಕರ್ಷಣನಿಂದ ಪ್ರದ್ಯುಮ್ನನೆಂಬ ಕರಣರೂಪವಾದ ಮನಸ್ಸು ಹುಟ್ಟುವ ದೆಂಬುದೂ ಲೋಕಾನುಭವವಿರುದ್ಧವು. ಈ ವಿಷಯದಲ್ಲಿ ಶ್ರುತಿಯೂ ಇಲ್ಲ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ– ಇವೆಲ್ಲ ಭಗವಂತರೇ; ಎಲ್ಲರೂ ಜ್ಞಾನಾದಿ ಗುಣಗಳಲ್ಲಿ ಸಮಾನರು– ಎನ್ನುವದಾದರೆ ಅನೇಕೇಶ್ವರವಾದವು ಬರುತ್ತದೆ. ಈ ನಾಲ್ಕು ಭಗವಂತನ ವ್ಯೂಹಗಳು ಎಂದರೆ ನಾಲ್ಕೇ ಎಂಬ ಸಂಖ್ಯಾಕ್ಲಿಪ್ತಿಗೆ ಕಾರಣವಿರುವದಿಲ್ಲ. ವಾಸುದೇವನಿಂದ ಸಂಕರ್ಷಣನು, ಸಂಕರ್ಷಣನಿಂದ ಪ್ರದ್ಯುಮ್ನನು, ಪ್ರದ್ಯುಮ್ನನಿಂದ ಅನಿರುದ್ಧನು– ಹೀಗೆ ಕಾರ್ಯಕಾರಣಭಾವದಿಂದ ಹುಟ್ಟುತ್ತಾರೆ ಎಂಬ ಅಭ್ಯುಪಗಮವನ್ನು ಬಿಡಬೇಕಾಗುತ್ತದೆ. ಜ್ಞಾನೈಶ್ವರ್ಯಾದಿಗಳು ಗುಣಗಳೆಂದೂ ವಾಸುದೇವಭಗವಂತರೇ ಎಂದು ಕಲ್ಪಿಸಿರುವ ವಿಪ್ರತಿಷೇಧವೂ ಈ ಮತದಲ್ಲಿದೆ; ವೇದನಿಂದಾದಿವಿಪ್ರತಿಷೇಧವೂ ಇವೆ. ಆದ್ದರಿಂದ ಈ ಮತವೂ ಅಯುಕ್ತವು.

---

# ಎರಡನೆಯ ಅಧ್ಯಾಯ-ಮೂರನೆಯ ಪಾದ

(ಸೃಷ್ಟಿಶ್ರುತಿಗಳ ಪರಸ್ಪರವಿರೋಧನಿರಾಕರಣೆ)

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೮೮. ವೇದಾನ್ತೇಷು ತತ್ರ ತತ್ರ ಭಿನ್ನಪ್ರಸ್ಥಾನಾ ಉತ್ಪತ್ತಿಶ್ರುತಯಃ ಉಪಲಭ್ಯನ್ತೇ। ಕೇಚಿತ್ ಆಕಾಶಸ್ಯ ಉತ್ಪತ್ತಿಮ್ ಆಮನನ್ತಿ। ಕೇಚಿನ್ನ। ತಥಾ ಕೇಚಿತ್ ವಾಯೋರುತ್ಪತ್ತಿಮ್ ಆಮನನ್ತಿ। ಕೇಚಿನ್ನ। ಏವಂ ಜೀವಸ್ಯ ಪ್ರಾಣಾನಾಂ ಚ। ಏವಮೇವ ಕ್ರಮಾದಿದ್ವಾರಕೋಽಪಿ ವಿಪ್ರತಿಷೇಧಃ ಶ್ರುತ್ಯನ್ತರೇಷು ಉಪಲಕ್ಷ್ಯತೇ। ವಿಪ್ರತಿಷೇಧಾಚ್ಚ ಪರಪಕ್ಷಾಣಾಮ್ ಅನಪೇಕ್ಷಿತತ್ವಂ ಸ್ಥಾಪಿತಮ್। ತದ್ವತ್ ಸ್ವಪಕ್ಷಸ್ಯಾಪಿ ವಿಪ್ರತಿಷೇಧಾದೇವ ಅನಪೇಕ್ಷಿತತ್ವಮ್ ಆಶಙ್ಕ್ಯೇತ ಇತ್ಯತಃ ಸರ್ವವೇದಾನ್ತಗತಸೃಷ್ಟಿಶ್ರುತ್ಯರ್ಥನಿರ್ಮಲತ್ವಾಯ ಪರಃ ಪ್ರಪಞ್ಚಃ ಆರಭ್ಯತೇ। ತದರ್ಥನಿರ್ಮಲತ್ವೇ ಚ ಫಲಂ ಯಥೋಕ್ತಾಶಙ್ಕಾನಿವೃತ್ತಿರೇವ ॥

(ಭಾಷ್ಯಾರ್ಥ)

ವೇದಾಂತಗಳಲ್ಲಿ ಅಲ್ಲಲ್ಲಿ ಬೇರೆಬೇರೆಯ ರೀತಿಯಲ್ಲಿ ಹೊರಟಿರುವ ಉತ್ಪತ್ತಿಶ್ರುತಿಗಳು ಕಂಡುಬರುತ್ತವೆ. (ಹೇಗೆಂದರೆ) ಕೆಲವು ಆಕಾಶದ ಉತ್ಪತ್ತಿಯನ್ನು ಹೇಳುತ್ತವೆ, ಕೆಲವು (ಹೇಳುವ)ದಿಲ್ಲ. ಹಾಗೆಯೇ ಕೆಲವು ವಾಯುವಿಗೆ ಉತ್ಪತ್ತಿಯನ್ನು ಹೇಳುತ್ತವೆ, ಕೆಲವು (ಹೇಳುವ)ದಿಲ್ಲ. ಜೀವನಿಗೂ ಪ್ರಾಣಗಳಿಗೂ ಹೀಗೆಯೇ ಕ್ರಮವೇ ಮುಂತಾದವುಗಳ ಮೂಲಕವಾದ ವಿಪ್ರತಿಷೇಧವೂ ಬೇರೆಯ ಶ್ರುತಿಗಳಲ್ಲಿ ಕಾಣಬರುತ್ತದೆ. ವಿಪ್ರತಿಷೇಧವಿರುವದರಿಂದ ಪರಪಕ್ಷಗಳು (ಶ್ರೇಯಸ್ಕಾರಣವೆಂದು) ಒಪ್ಪತಕ್ಕದ್ದಲ್ಲ ಎಂದು ಸ್ಥಾಪಿಸಲಾಗಿರುತ್ತದೆ. ಅದರಂತೆ ಸ್ವಪಕ್ಷವೂ ವಿಪ್ರತಿಷೇಧವಿರುವದರಿಂದಲೇ ಒಪ್ಪತಕ್ಕದ್ದಲ್ಲವೆಂದು (ಯಾರಾದರೂ) ಆಶಂಕಿಸಬಹುದು. ಆದ್ದರಿಂದ ಸರ್ವವೇದಾಂತಗಳಲ್ಲಿಯೂ ಇರುವ ಸೃಷ್ಟಿಶ್ರುತಿಗಳ ಅರ್ಥವು ನಿರ್ಮಲವಾಗಲೆಂದು ಮುಂದಿನ ವಿವರವನ್ನು ಆರಂಭಿಸಿರುತ್ತದೆ. ಅವುಗಳ ಅರ್ಥವು ನಿರ್ಮಲವಾಗುವದರಿಂದ ಫಲವೇನೆಂದರೆ ಈ (ನಾವು) ಹೇಳಿರುವ ಶಂಕೆಯ ನಿವೃತ್ತಿಯೇ[1].

---

1. ಸಗುಣೋಪಾಸನೆಗಳಲ್ಲಿ ಇದರ ಉಪಯೋಗವುಂಟೆಂದು ೩-೧-೧೪ರ ಭಾಷ್ಯದ ಕೊನೆಯಲ್ಲಿ ಹೇಳಿರುವದನ್ನೂ ನೆನಪಿಡಬೇಕು. ಪ್ರಕೃತಕ್ಕೆ ಸಿದ್ಧಾಂತದಲ್ಲಿ ವಿರೋಧವಿಲ್ಲವೆಂಬುದೇ ಬೇಕಾಗಿರುವದರಿಂದ ಅದನ್ನೇ ಇಲ್ಲಿ ಮುಖ್ಯವಾಗಿ ಹೇಳಿದೆ.

## ೧. ವಿಯದಧಿಕರಣ (ಸೂ. ೧-೭)

### (ಆಕಾಶವೂ ಬ್ರಹ್ಮದಿಂದ ಹುಟ್ಟುತ್ತದೆ)

**ನ ವಿಯದಶ್ರುತೇಃ ॥ ೧ ॥**

೧. ವಿಯತ್ತು (ಹುಟ್ಟುವ)ದಿಲ್ಲ ; ಏಕೆಂದರೆ ಶ್ರುತಿಯಿಲ್ಲ.

## ಪೂರ್ವಪಕ್ಷ: ಆಕಾಶಕ್ಕೆ ಉತ್ಪತ್ತಿಯಿಲ್ಲ

(ಭಾಷ್ಯ)

೮೯. ತತ್ರ ಪ್ರಥಮಂ ತಾವತ್ ಆಕಾಶಮ್ ಆಶ್ರಿತ್ಯ ಚಿನ್ತ್ಯತೇ ಕಿಮಸ್ಯ ಆಕಾಶಸ್ಯ ಉತ್ಪತ್ತಿರಸ್ತಿ, ಉತ ನಾಸ್ತಿ ಇತಿ । ತತ್ರ ತಾವತ್ ಪ್ರತಿಪದ್ಯತೇ 'ನ ವಿಯದಶ್ರುತೇಃ' ಇತಿ । ನ ಖಲು ಆಕಾಶಮ್ ಉತ್ಪದ್ಯತೇ । ಕಸ್ಮಾತ್ ? ಅಶ್ರುತೇಃ । ನ ಹಿ ಅಸ್ಯ ಉತ್ಪತ್ತಿಪ್ರಕರಣೇ ಶ್ರವಣಮಸ್ತಿ । ಛಾನ್ದೋಗ್ಯೇ ಹಿ "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್। (ಛಾಂ. ೬-೨-೧) ಇತಿ ಸಚ್ಛಬ್ದವಾಚ್ಯಂ ಬ್ರಹ್ಮ ಪ್ರಕೃತ್ಯ "ತದೈಕ್ಷತ.... ತತ್ತೇಜೋಽಸೃಜತ" (ಛಾಂ. ೬-೨-೩) ಇತಿ ಚ ಪಞ್ಚಾನಾಂ ಮಹಾಭೂತಾನಾಂ ಮಧ್ಯಮಂ ತೇಜಃ ಆದಿಂ ಕೃತ್ವಾ ತ್ರಯಾಣಾಂ ತೇಜೋಽಬನ್ನಾನಾಮ್ ಉತ್ಪತ್ತಿಃ ಶ್ರಾವ್ಯತೇ । ಶ್ರುತಿಶ್ಚ ನಃ ಪ್ರಮಾಣಮ್ ಅತೀನ್ದ್ರಿಯಾರ್ಥವಿಜ್ಞಾನೋತ್ಪತ್ತೌ । ನ ಚ ಅತ್ರ ಶ್ರುತಿರಸ್ತಿ ಆಕಾಶಸ್ಯ ಉತ್ಪತ್ತಿಪ್ರತಿಪಾದಿನೀ। ತಸ್ಮಾತ್ ನಾಸ್ತ್ಯಾಕಾಶಸ್ಯ ಉತ್ಪತ್ತಿಃ ಇತಿ ॥

(ಭಾಷ್ಯಾರ್ಥ)

ಇಲ್ಲಿ ಮೊಟ್ಟಮೊದಲನೆಯದಾಗಿ ಆಕಾಶವನ್ನು ಕುರಿತು 'ಈ ಆಕಾಶಕ್ಕೆ ಉತ್ಪತ್ತಿಯುಂಟೆ, ಅಥವಾ ಇಲ್ಲವೆ?' ಎಂದು ಚರ್ಚಿಸಲಾಗುತ್ತದೆ. ಇಲ್ಲಿ ಮೊದಲನೆಯದಾಗಿ ತಿಳಿಯಬರುವದೇನೆಂದರೆ 'ವಿಯತ್ತು (ಹುಟ್ಟುವ)ದಿಲ್ಲ ; ಏಕೆಂದರೆ ಶ್ರುತಿಯಿಲ್ಲ. ಆಕಾಶವು ಉತ್ಪನ್ನವಾಗುವದಿಲ್ಲವೆಂಬುದೇ ಸರಿ : ಏಕೆ ? ಎಂದರೆ ಶ್ರುತಿಯಿಲ್ಲದ್ದರಿಂದ (ಇದರ ವಿವರ) : ಇದಕ್ಕೆ ಉತ್ಪತ್ತಿಪ್ರಕರಣದಲ್ಲಿ ಶ್ರುತಿ(ವಚನವು) ಇರುವದಿಲ್ಲ. ಹೇಗೆಂದರೆ ಛಾಂದೋಗ್ಯದಲ್ಲಿ "ಸೋಮ್ಯನೆ, ಇದು ಮೊದಲು ಎರಡನೆಯದಿಲ್ಲದ ಸತ್ತೊಂದೇ ಆಗಿತ್ತು" (ಛಾ. ೬-೨-೧) ಎಂದು ಸಚ್ಛಬ್ದವಾಚ್ಯವಾದ ಬ್ರಹ್ಮದ ಪ್ರಕರಣ(ವನ್ನಾರಂಭಿಸಿ) "ಅದು ನೋಡಿತು...." ಎಂದೂ "ಅದು ತೇಜಸ್ಸನ್ನು ಸೃಜಿಸಿತು" (ಛಾಂ. ೬-೨-೩)

ಎಂದೂ ಐದು ಮಹಾಭೂತಗಳೊಳಗೆ ನಡುವಿನದಾದ ತೇಜಸ್ಸನ್ನು ಮೊದಲು ಮಾಡಿಕೊಂಡು ತೇಜೋಽಬನ್ನಗಳೆಂಬ ಮೂರಕ್ಕೇ ಉತ್ಪತ್ತಿಯನ್ನು ಶ್ರುತಿಯು ಹೇಳಿರುತ್ತದೆ. **ಅತೀಂದ್ರಿಯಾರ್ಥದ (ವಿಷಯದಲ್ಲಿ) ವಿಜ್ಞಾನವು ಹುಟ್ಟುವದಕ್ಕೆ ನಮಗೆ ಶ್ರುತಿಯೇ ಪ್ರಮಾಣವು.**[1] ಆದರೆ ಇಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ (ಯಾವ) ಶ್ರುತಿಯೂ ಇರುವದಿಲ್ಲ. ಆದ್ದರಿಂದ ಆಕಾಶಕ್ಕೆ ಉತ್ಪತ್ತಿಯಿರುವದಿಲ್ಲ.

**ಅಸ್ತಿ ತು ॥ ೨ ॥**

೨. ಆದರೆ ಇದೆ.

## ಆಕ್ಷೇಪ: ಮತ್ತೊಂದು ಶ್ರುತಿಯಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು ಹೇಳಿದೆ

(ಭಾಷ್ಯ)

೯೦. ತುಶಬ್ದಃ ಪಕ್ಷಾನ್ತರಪರಿಗ್ರಹೇ। ಮಾ ನಾಮ ಆಕಾಶಸ್ಯ ಛಾಂದೋಗ್ಯೇ ಭೂತ್ ಉತ್ಪತ್ತಿಃ। ಶ್ರುತ್ಯನ್ತರೇ ತ್ವಸ್ತಿ। ತೈತ್ತಿರೀಯಕಾ ಹಿ ಸಮಾಮನನ್ತಿ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" ಇತಿ ಪ್ರಕೃತ್ಯ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨–೧) ಇತಿ। ತತಶ್ಚ ಶ್ರುತ್ಯೋರ್ವಿಪ್ರತಿಷೇಧಃ। ಕ್ವಚಿತ್ ತೇಜಃಪ್ರಮುಖಾ ಸೃಷ್ಟಿಃ, ಕ್ವಚಿತ್ ಆಕಾಶಪ್ರಮುಖಾ ಇತಿ। ನನು ಏಕವಾಕ್ಯತಾ ಅನಯೋಃ ಶ್ರುತ್ಯೋರ್ಯುಕ್ತಾ। ಸತ್ಯಂ ಸಾ ಯುಕ್ತಾ। ನ ತು ಸಾ ಅವಗನ್ತುಂ ಶಕ್ಯತೇ। ಕುತಃ? "ತತ್ತೇಜೋಽಸೃಜತ" (ಛಾಂ. ೬–೨–೩) ಇತಿ ಸಕೃಚ್ಛ್ರುತಸ್ಯ ಸ್ರಷ್ಟುಃ ಸ್ರಷ್ಟವ್ಯದ್ವಯೇನ ಸಂಬನ್ಧಾನುಪಪತ್ತೇಃ "ತತ್ತೇಜೋಽಸೃಜತ" । 'ತದಾಕಾಶಮಸೃಜತ' ಇತಿ। ನನು ಸಕೃಚ್ಛ್ರುತಸ್ಯಾಪಿ ಕರ್ತುಃ ಕರ್ತವ್ಯದ್ವಯೇನ ಸಂಬನ್ಧೋ ದೃಶ್ಯತೇ ಯಥಾ 'ಸೂಪಂ ಪಕ್ತ್ವಾ ಓದನಂ ಪಚತಿ' ಇತಿ। ಏವಂ ತದ್ ಆಕಾಶಂ ಸೃಷ್ಟ್ವಾ ತತ್ ತೇಜೋಽಸೃಜತ' ಇತಿ ಯೋಜಯಿಷ್ಯಾಮಿ। ನೈವಂ ಯುಜ್ಯತೇ। ಪ್ರಥಮಜತ್ವಂ ಹಿ ಛಾನ್ದೋಗ್ಯೇ ತೇಜಸಃ ಅವಗಮ್ಯತೇ। ತೈತ್ತಿರೀಯಕೇ ಚ ಆಕಾಶಸ್ಯ। ನ ಚ ಉಭಯೋಃ ಪ್ರಥಮಜತ್ವಂ ಸಂಭವತಿ। ಏತೇನ ಇತರಶ್ರುತ್ಯಕ್ಷರವಿರೋಧೋಽಪಿ ವ್ಯಾಖ್ಯಾತಃ। "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨–೧) ಇತ್ಯತ್ರಾಪಿ

1. ಆಕಾಶವೇ ಮೊದಲು ಪ್ರತ್ಯಕ್ಷವಲ್ಲ; ಅದರ ಉತ್ಪತ್ತಿಯಂತೂ ಯಾವ ಇಂದ್ರಿಯಕ್ಕೂ ಗೋಚರವಾಗುವಂತಿಲ್ಲ. ಆದ್ದರಿಂದ ಇಲ್ಲಿ ಶ್ರುತಿಯನ್ನೇ ಹಿಡಿಯಬೇಕಾಗುವದು ಎಂದು ಅಭಿಪ್ರಾಯ.

'ತಸ್ಮಾದಾಕಾಶಃ ಸಂಭೂತಃ', 'ತಸ್ಮಾತ್ತೇಜಃ ಸಂಭೂತಮ್' ಇತಿ ಸಕೃಚ್ಛ್ರುತಸ್ಯ ಅಪಾದಾನಸ್ಯ ಸಂಭವನಸ್ಯ ಚ ವಿಯತ್ತೇಜೋಭ್ಯಾಂ ಯುಗಪತ್ಸಂಬನ್ಧಾನುಪಪತ್ತೇಃ । 'ವಾಯೋರಗ್ನಿಃ' (ತೈ. ೨-೧) ಇತಿ ಚ ಪೃಥಕ್ ಆಮ್ನಾನಾತ್ ।

(ಭಾಷ್ಯಾರ್ಥ)

ತುಶಬ್ದವನ್ನು ಮತ್ತೊಂದು ಪಕ್ಷವನ್ನು ಸ್ವೀಕರಿಸುವದಕ್ಕಾಗಿ (ಪ್ರಯೋಗಿಸಿದೆ). ಛಾಂದೋಗ್ಯದಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು (ಹೇಳದೆ) ಇದ್ದರೆ ಇರಲಿ. ಆದರೆ ಮತ್ತೊಂದು ಶ್ರುತಿಯಲ್ಲಿ (ಉತ್ಪತ್ತಿಯನ್ನು ಹೇಳಿ)ರುತ್ತದೆ. ಹೇಗೆಂದರೆ "ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು" ಎಂದು ಪ್ರಾರಂಭಿಸಿ "ಆ ಈ ಆತ್ಮನಿಂದ ಆಕಾಶವು ಉಂಟಾಯಿತು" (ತೈ. ೨-೧) ಎಂದು ತೈತ್ತಿರೀಯಕರು ಪಠಿಸುತ್ತಾರೆ. ಇದರಿಂದ (ಈ) ಎರಡು ಶ್ರುತಿಗಳಿಗೂ ವಿರೋಧವಾಯಿತು. (ಏಕೆಂದರೆ) ಒಂದು ಕಡೆಯಲ್ಲಿ ತೇಜಆದಿಯಾದ ಸೃಷ್ಟಿಯನ್ನು ಹೇಳಿರುತ್ತದೆ; ಇನ್ನೊಂದು ಕಡೆಯಲ್ಲಿ ಆಕಾಶಾದಿಯಾಗಿ (ಹೇಳಿರುತ್ತದೆ).

(ಆಕ್ಷೇಪ) :- ಈ ಎರಡು ಶ್ರುತಿಗಳಿಗೂ ಏಕವಾಕ್ಯತೆಯಾಗುವದು ಯುಕ್ತವಲ್ಲವೆ[1] ?

(ಪರಿಹಾರ) :- ನಿಜ, ಅದು ಯುಕ್ತ. ಆದರೆ (ಇಲ್ಲಿ) ಅದನ್ನು ನಿಶ್ಚಯಿಸುವದಕ್ಕೆ ಆಗುವಂತಿಲ್ಲ. ಏಕೆ? ಎಂದರೆ 'ಅದು ತೇಜಸ್ಸನ್ನು ಸೃಜಿಸಿತು' (ಛಾಂ. ೬-೨-೩) ಎಂದು ಒಮ್ಮೆ ಶ್ರುತಿಯಲ್ಲಿ ಹೇಳಿರುವ ಸ್ರಷ್ಟೃವಿಗೆ 'ಅದು ತೇಜಸ್ಸನ್ನು ಸೃಜಿಸಿತು', 'ಅದು ಆಕಾಶವನ್ನು ಸೃಜಿಸಿತು' ಎಂದು ಸ್ರಷ್ಟವ್ಯವಾದ ಎರಡು (ವಸ್ತು)ಗಳೊಡನೆ ಸಂಬಂಧವಾಗುವಂತಿಲ್ಲ.

(ಆಕ್ಷೇಪ) :- ಒಂದು ಸಲ ಶ್ರುತವಾದ ಕರ್ತೃವಿಗೂ ಕರ್ತವ್ಯದ್ವಯದ ಸಂಬಂಧವು ಕಂಡುಬರುತ್ತದೆಯಲ್ಲ ! (ಉದಾಹರಣೆಗೆ) 'ತೊವ್ವೆಯನ್ನು ಅಟ್ಟು ಅನ್ನವನ್ನು ಅಡುತ್ತಾನೆ' (ಎಂಬಲ್ಲಿ ಹೀಗೆ ಕರ್ತವ್ಯದ್ವಯಸಂಬಂಧವು ಇದೆಯಲ್ಲ)! ಇದರಂತೆ (ಇಲ್ಲಿಯೂ) 'ಅದು ಆಕಾಶವನ್ನು ಸೃಜಿಸಿ ಅದು ತೇಜಸ್ಸನ್ನು ಸೃಜಿಸಿತು' ಎಂದು (ನಾವು) ಯೋಜನೆಮಾಡಬಹುದಲ್ಲವೆ ?

(ಪರಿಹಾರ) :- ಹೀಗೆ (ಮಾಡುವದು) ಸರಿಯಾಗುವದಿಲ್ಲ. ಏಕೆಂದರೆ ಮೊದಲು ಹುಟ್ಟಿತೆಂಬುದು ಛಾಂದೋಗ್ಯದಲ್ಲಿ ತೇಜಸ್ಸಿಗೆ ಎಂದು ನಿಶ್ಚಿತವಾಗಿರುತ್ತದೆ; ತೈತ್ತಿರೀಯದಲ್ಲಾದರೆ ಆಕಾಶಕ್ಕೆ (ಎಂದು ನಿಶ್ಚಯವಾಗಿರುತ್ತದೆ).

---

1. ಒಂದೇ ವಿಷಯದ ಶ್ರುತಿಗಳಿಗೆ ಏಕವಾಕ್ಯತೆಯನ್ನು ಮಾಡಿಕೊಂಡರೇ ಶ್ರುತಿಗೆ ಪ್ರಾಮಾಣ್ಯವು ಬರುತ್ತದೆ -ಎಂದು ಭಾವ.

ಆದರೆ ಎರಡೂ ಮೊದಲು ಹುಟ್ಟಿತೆಂಬುದು ಸಂಭವಿಸುವದಿಲ್ಲ. ಇದರಿಂದ ಮತ್ತೊಂದು ಶ್ರುತಿಯಲ್ಲಿರುವ ಅಕ್ಷರವಿರೋಧವನ್ನೂ ವಿವರಿಸಿದಂತೆ ಆಯಿತು. ಏಕೆಂದರೆ 'ಆ ಈ ಆತ್ಮನಿಂದಲೇ ಆಕಾಶವು ಹುಟ್ಟಿತು' ಎಂಬಲ್ಲಿಯೂ 'ಅವನಿಂದ ಆಕಾಶವು ಹುಟ್ಟಿತು, ಅವನಿಂದ ತೇಜಸ್ಸು ಹುಟ್ಟಿತು' ಎಂದು ಒಂದು ಸಲ (ಮಾತ್ರವೇ) ಹೇಳಿರುವ ಅಪಾದಾನವೂ ಹುಟ್ಟುವಿಕೆಯೂ ಒಂದೇ ಕಾಲದಲ್ಲಿ ಆಕಾಶತೇಜಸ್ಸುಗಳಿಗೆ ಸಂಬದ್ಧವಾಗುವಂತಿಲ್ಲ. ಮತ್ತು 'ವಾಯುವಿನಿಂದ ಅಗ್ನಿಯು (ಹುಟ್ಟಿತು)' (ತೈ. ೨-೧) ಎಂದು ಬೇರೆಯಾಗಿಯೇ ಹೇಳಿರುತ್ತದೆ[1].

**ಗೌಣ್ಯಸಂಭವಾತ್ ॥ ೩ ॥**

೩. (ಆ ಶ್ರುತಿಯು) ಗೌಣವು ; ಏಕೆಂದರೆ ಸಂಭವಿಸುವದಿಲ್ಲ.

## ಏಕದೇಶಿಮತ: ಆಕಾಶೋತ್ಪತ್ತಿಶ್ರುತಿಯು ಗೌಣ

(ಭಾಷ್ಯ)

೯೧. ಅಸ್ಮಿನ್ ವಿಪ್ರತಿಷೇಧೇ ಕಶ್ಚಿತ್ ಆಹ। ನಾಸ್ತಿ ವಿಯತಃ ಉತ್ಪತ್ತಿಃ। ಅಶ್ರುತೇರೇವ। ಯಾ ತು ಇತರಾ ವಿಯದುತ್ಪತ್ತಿವಾದಿನೀ ಶ್ರುತಿಃ ಉದಾಹೃತಾ, ಸಾ ಗೌಣೀ ಭವಿತುಮರ್ಹತಿ। ಕಸ್ಮಾತ್ ? ಅಸಂಭವಾತ್। ನ ಹಿ ಆಕಾಶಸ್ಯ ಉತ್ಪತ್ತಿಃ ಸಂಭಾವಯಿತುಂ ಶಕ್ಯಾ ಶ್ರೀಮತ್ಕಣಭುಗಭಿಪ್ರಾಯಾನುಸಾರಿಷು ಜೀವತ್ಸು। ತೇ ಹಿ ಕಾರಣಸಾಮಗ್ರ್ಯಸಂಭವಾತ್ ಆಕಾಶಸ್ಯ ಉತ್ಪತ್ತಿಂ ವಾರಯನ್ತಿ। ಸಮವಾಯ್ಯಸಮವಾಯಿನಿಮಿತ್ತಕಾರಣೇಭ್ಯೋ ಹಿ ಕಿಲ ಸರ್ವಮ್ ಉತ್ಪದ್ಯಮಾನಂ ಸಮುತ್ಪದ್ಯತೇ। ದ್ರವ್ಯಸ್ಯ ಚ ಏಕಜಾತೀಯಕಮ್ ಅನೇಕಂ ಚ ದ್ರವ್ಯಮ್ ಸಮವಾಯಿಕಾರಣಂ ಭವತಿ। ನ ಚ ಆಕಾಶಸ್ಯ ಏಕಜಾತೀಯಕಮ್ ಅನೇಕಂ ಚ ದ್ರವ್ಯಮ್ ಆರಮ್ಭಕಮ್ ಅಸ್ತಿ, ಯಸ್ಮಿನ್ ಸಮವಾಯಿಕಾರಣೇ ಸತಿ ಅಸಮವಾಯಿಕಾರಣೇ ಚ ತತ್ಸಂಯೋಗೇ ಆಕಾಶಃ ಉತ್ಪದ್ಯೇತ। ತದಭಾವಾತ್ ತು ತದನುಗ್ರಹಪ್ರವೃತ್ತಂ ನಿಮಿತ್ತಕಾರಣಂ ದೂರಾಪೇತಮೇವ ಆಕಾಶಸ್ಯ ಭವತಿ। ಉತ್ಪತ್ತಿಮತಾಂ ಚ ತೇಜಃಪ್ರಭೃತೀನಾಂ ಪೂರ್ವೋತ್ತರಕಾಲಯೋರ್ವಿಶೇಷಃ ಸಂಭಾವ್ಯತೇ 'ಪ್ರಾಗುತ್ಪತ್ತೇಃ ಪ್ರಕಾಶಾದಿಕಾರ್ಯಂ ನ ಬಭೂವ ಪಶ್ಚಾಚ್ಚ ಭವತಿ ಇತಿ। ಆಕಾಶಸ್ಯ ಪುನರ್ನ ಪೂರ್ವೋತ್ತರಕಾಲಯೋರ್ವಿಶೇಷಃ

---

1. ಆದ್ದರಿಂದ ಈ ಎರಡು ವಾಕ್ಯಗಳಿಗೂ ಏಕವಾಕ್ಯತೆಯಿಲ್ಲ; ವಿರೋಧವೇ ಆಯಿತು.

ಸಂಭಾವಯಿತುಂ ಶಕ್ಯತೇ। ಕಿಂ ಹಿ ಪ್ರಾಗುತ್ಪತ್ತೇಃ ಅನವಕಾಶಮ್ ಅಸುಷಿರಮ್ ಅಚ್ಛಿದ್ರಂ ಬಭೂವ ಇತಿ ಶಕ್ಯತೇ ಅಧ್ಯವಸಾತುಮ್ ? ಪೃಥಿವ್ಯಾದಿ ವೈಧರ್ಮ್ಯಾಚ್ಚ ವಿಭುತ್ವಾದಿಲಕ್ಷಣಾತ್ ಆಕಾಶಸ್ಯ ಅಜತ್ವಸಿದ್ಧಿಃ। ತಸ್ಮಾತ್ ಯಥಾ ಲೋಕೇ ಆಕಾಶಂ ಕುರು 'ಆಕಾಶೋ ಜಾತಃ' ಇತ್ಯೇವಂಜಾತೀಯಕಃ ಗೌಣಃ ಪ್ರಯೋಗೋ ಭವತಿ, ಯಥಾ ಚ ಘಟಾಕಾಶಃ, ಕರಕಾಕಾಶಃ, ಗೃಹಾಕಾಶಃ, ಇತಿ ಏಕಸ್ಯಾಪಿ ಆಕಾಶಸ್ಯ ಏವಂಜಾತೀಯಕೋ ಭೇದವ್ಯಪದೇಶೋ ಗೌಣೋ ಭವತಿ। ವೇದೇಽಪಿ "ಆರಣ್ಯಾನಾಕಾಶೇಷ್ವಾಲಭೇರನ್" (ಶತ. ಬ್ರಾ. ೧೩-೫-೧-೫ ?) ಇತಿ ಏವಮ್ ಉತ್ಪತ್ತಿಶ್ರುತಿರಪಿ ಗೌಣೀ ದ್ರಷ್ಟವ್ಯಾ ॥

(ಭಾಷ್ಯಾರ್ಥ)

ಹೀಗೆ ವಿರೋಧವುಂಟಾಗಲು ಒಬ್ಬಾನೊಬ್ಬ (ವಾದಿ) ಹೇಳುತ್ತಾನೇನೆಂದರೆ : ಆಕಾಶಕ್ಕೆ ಉತ್ಪತ್ತಿಯಿಲ್ಲ ; ಏಕೆಂದರೆ (ಉತ್ಪತ್ತಿಗೆ) ಶ್ರುತಿ(ಪ್ರಮಾಣ)ವಿಲ್ಲದ್ದರಿಂದಲೇ. ಆದರೆ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಮತ್ತೊಂದು ಶ್ರುತಿಯನ್ನು ಉದಾಹರಿಸಿದಿರಲ್ಲ, ಅದು ಗೌಣವಿರಬೇಕು. ಏಕೆ ? ಎಂದರೆ ಸಂಭವಿಸುವದಿಲ್ಲವಾದ್ದರಿಂದ. (ಇದರ ವಿವರ) : **ಶ್ರೀಮಂತ್ಕಣಭುಜರ ಅಭಿಪ್ರಾಯವನ್ನು ಅನುಸರಿಸುವವರು** ಬದುಕಿರುವಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು ಸಂಭಾವಿಸುವದಕ್ಕೂ ಆಗುವಂತಿಲ್ಲ. ಏಕೆಂದರೆ ಅವರು ಕಾರಣಸಾಮಗ್ರಿಯು ಸಂಭವಿಸುವದಿಲ್ಲವಾದ್ದರಿಂದ ಆಕಾಶಕ್ಕೆ ಉತ್ಪತ್ತಿಯನ್ನು ಅಲ್ಲಗಳೆಯುತ್ತಿದಾರೆ. ಸಮವಾಯಿ, ಅಸಮವಾಯಿ, ನಿಮಿತ್ತ –ಎಂಬ ಕಾರಣಗಳಿಂದಲೇ ಅಲ್ಲವೆ, ಹುಟ್ಟುವದೆಲ್ಲವೂ ಹುಟ್ಟುತ್ತದೆ? (ಎಂಬುದು ಅವರ ಮತ). ದ್ರವ್ಯಕ್ಕೆ ಏಕಜಾತಿಯ ಅನೇಕವಾಗಿರುವ ದ್ರವ್ಯವು ಸಮವಾಯಿಕಾರಣವಾಗಿರುತ್ತದೆ; ಆದರೆ ಆಕಾಶಕ್ಕೆ ಒಂದೇ ಜಾತಿಯ ಅನೇಕವಾಗಿರುವ ಆರಂಭಕ ದ್ರವ್ಯವು ಇರುವದಿಲ್ಲ. ಆ ಸಮವಾಯಿಕಾರಣವೂ ಅದರ ಸಂಯೋಗವೆಂಬ ಅಸಮವಾಯಿಕಾರಣವೂ ಇದ್ದರೆ ಆಕಾಶವು ಹುಟ್ಟಬಹುದಾಗಿತ್ತು. ಆದರೆ (ಆ ಕಾರಣಗಳು) ಇಲ್ಲದ್ದರಿಂದ ಅವುಗಳಿಗೆ ಅನುಗ್ರಹಿಸುವದಕ್ಕೆ ತೊಡಗುವ ನಿಮಿತ್ತಕಾರಣವಂತೂ ಆಕಾಶಕ್ಕೆ ದೂರ ಸರಿದದ್ದಾಯಿತು[1]. ಇದಲ್ಲದೆ ಉತ್ಪತ್ತಿಯುಳ್ಳ ತೇಜಸ್ಸು ಮುಂತಾದವುಗಳಿಗೆ ಹಿಂದಿನ ಮುಂದಿನ ಕಾಲಗಳಲ್ಲಿ ವಿಶೇಷವು ಕಂಡುಬರುತ್ತದೆ. (ಹೇಗೆಂದರೆ) ಹುಟ್ಟುವದಕ್ಕಿಂತ ಮುಂಚೆ ಪ್ರಕಾಶವೇ

---

1. ಒಂದೇ ಜಾತಿಯ ದ್ರವ್ಯವಾದ ಅನೇಕವಾದ ನೂಲುಗಳು ಸಮವಾಯಿಕಾರಣ ; ಅವುಗಳ ಸಂಯೋಗವೇ ಅಸಮವಾಯಿಕಾರಣ ; ಮಗ್ಗ, ಲಾಳಿ –ಮುಂತಾದದ್ದು ನಿಮಿತ್ತಕಾರಣ. ಈ ಮೂರು ಕಾರಣಗಳಿಂದ ಬಟ್ಟೆಯು ಆಗುತ್ತದೆ. ಆಕಾಶಕ್ಕೆ ಈ ಮೂರರಲ್ಲಿ ಯಾವದೊಂದು ಕಾರಣವೂ ಇಲ್ಲ ಎಂದರ್ಥ.

ಮುಂತಾದ ಕಾರ್ಯವು ಇರಲಿಲ್ಲ, ಆಮೇಲೆ ಉಂಟಾಗುತ್ತದೆ ಎಂದು (ವಿಶೇಷವು ಕಾಣಿಸುತ್ತದೆ). ಆದರೆ ಆಕಾಶಕ್ಕೆ ಹಿಂದುಮುಂದಿನ ಕಾಲದಲ್ಲಿ ವಿಶೇಷವನ್ನು ಸಂಭವಿಸುವದಕ್ಕೂ ಆಗುವದಿಲ್ಲ. ಹುಟ್ಟುವದಕ್ಕೆ ಮುಂಚೆ ಅವಕಾಶವಿಲ್ಲದೆ, ಬಿಲವಿಲ್ಲದೆ, ರಂಧ್ರವಿಲ್ಲದೆ ಇತ್ತು ಎಂದು ಯಾವದನ್ನು ತಾನೆ ನಿಶ್ಚಯಿಸುವದಕ್ಕಾದೀತು ?[1] ಪೃಥಿವ್ಯಾದಿಗಳಿಗಿಂತ ವಿಲಕ್ಷಣವಾದ ವಿಭುತ್ವವೇ ಮುಂತಾದ ವೈಧರ್ಮ್ಯವಿರುವದರಿಂದಲೂ ಆಕಾಶವು ಅಜವೆಂದು ಸಿದ್ಧವಾಗುತ್ತದೆ. ಆದ್ದರಿಂದ ಹೇಗೆ ಲೋಕದಲ್ಲಿ 'ಆಕಾಶವನ್ನು ಮಾಡು', 'ಆಕಾಶವು ಹುಟ್ಟಿತು' ಎಂಬೀ ಜಾತಿಯ ಗೌಣಪ್ರಯೋಗವು ಆಗುತ್ತದೆಯೋ, ಮತ್ತು ಹೇಗೆ ಗಡಿಗೆಯ ಆಕಾಶ, ಕುಡಿಕೆಯ ಅಕಾಶ, ಮನೆಯ ಆಕಾಶ –ಎಂದು ಆಕಾಶವು (ನಿಜವಾಗಿ) ಒಂದೇ ಆಗಿದ್ದರೂ ಗೌಣವಾಗಿ ಭೇದವ್ಯಪದೇಶವು (ಆಗುವದೋ), ವೇದದಲ್ಲಿಯೂ "ಆರಣ್ಯಾನ್ಪಶೂನ್ ಆಕಾಶಗಳಲ್ಲಿ ಕೊಲ್ಲಬೇಕು" (?) ಎಂದು (ಗೌಣಪ್ರಯೋಗವಾಗಿರುತ್ತದೆಯೋ) ಹಾಗೆಯೇ (ಆಕಾಶದ) ಉತ್ಪತ್ತಿಶ್ರುತಿಯೂ ಗೌಣವೆಂದು ತಿಳಿಯಬೇಕು.

### ಶಬ್ದಾಚ್ಚ ॥ ೪ ॥

೪. ಶಬ್ದದಿಂದಲೂ (ಆಕಾಶವು ಜನ್ಮರಹಿತವಾಗಿರುತ್ತದೆ).

## ಏಕದೇಶಿಮತ : ಆಕಾಶವು ನಿತ್ಯವೆಂಬುದಕ್ಕೆ ಶಬ್ದಪ್ರಮಾಣ

(ಭಾಷ್ಯ)

೯೨. ಶಬ್ದಃ ಖಲು ಆಕಾಶಸ್ಯ ಅಜತ್ವಂ ಖ್ಯಾಪಯತಿ । ಯತ ಆಹ —"ವಾಯುಶ್ಚಾನ್ತರಿಕ್ಷಂ ಚೈತದಮೃತಮ್" (ಬೃ. ೨–೩–೩) ಇತಿ । ನ ಹಿ ಅಮೃತಸ್ಯ ಉತ್ಪತ್ತಿರುಪಪದ್ಯತೇ । 'ಆಕಾಶವತ್ಸರ್ವಗತಶ್ಚ ನಿತ್ಯಃ" (?) ಇತಿ ಚ ಆಕಾಶೇನ ಬ್ರಹ್ಮ ಸರ್ವಗತತ್ವನಿತ್ಯತ್ವಾಭ್ಯಾಂ ಧರ್ಮಾಭ್ಯಾಮ್ ಉಪಮಿಮಾನಃ ಆಕಾಶಸ್ಯಾಪಿ ತೌ ಧರ್ಮೌ ಸೂಚಯತಿ । ನ ಚ ತಾದೃಶಸ್ಯ ಉತ್ಪತ್ತಿರುಪಪದ್ಯತೇ । "ಸ ಯಥಾನನ್ತೋಽಯಮಾಕಾಶ ಏವಮನನ್ತ ಆತ್ಮಾ

---

1. ಸ್ಥೂಲದ್ರವ್ಯಗಳಿರುವದಕ್ಕೆ ಬೇಕಾದ ದೇಶವು ಅವಕಾಶವು ; ಸೂಕ್ಷ್ಮವಾಗಿರುವ ವಸ್ತುಗಳಿಗೆ ಬೇಕಾದದ್ದು ಸುಷಿರವು ; ಎರಡು ಅಣುಗಳೂ ಅವುಗಳ ಸಂಯೋಗವೂ ಆಗುವದಕ್ಕೆ ಬೇಕಾದದ್ದು ಛಿದ್ರವು –ಎಂದು ನ್ಯಾ॥ ನಿ॥. ಆಕಾಶವು ಹುಟ್ಟುವ ಮೊದಲು ಯಾವ ವಸ್ತುವನ್ನಾದರೂ ಅವಕಾಶವಿಲ್ಲದೆ ಇತ್ತು ಎಂದು ಕಲ್ಪಿಸುವದಕ್ಕೆ ಬರುವದಿಲ್ಲ. ಆಕಾಶವು ಯಾವಾಗಲೂ ಇತ್ತೆಂದೇ ಕಲ್ಪಿಸಬೇಕಾಗುತ್ತದೆ ಎಂದು ಅಭಿಪ್ರಾಯ.

ವೇದಿತವ್ಯಃ" (?) ಇತಿ ಚ ಉದಾಹರಣಮ್ । ಆಕಾಶಶರೀರಂ ಬ್ರಹ್ಮ" (ತೈ. ೧-೬-೨), "ಆಕಾಶ ಆತ್ಮಾ" (ತೈ. ೧-೭-೧) ಇತಿ ಚ। ನ ಹಿ ಆಕಾಶಸ್ಯ ಉತ್ಪತ್ತಿಮತ್ತ್ವೇ ಬ್ರಹ್ಮಣಃ ತೇನ ವಿಶೇಷಣಂ ಸಂಭವತಿ ನೀಲೇನೇವ ಉತ್ಪಲಸ್ಯ। ತಸ್ಮಾತ್ ನಿತ್ಯಮೇವ ಆಕಾಶೇನ ಸಾಧಾರಣಂ ಬ್ರಹ್ಮ ಇತಿ ಗಮ್ಯತೇ ॥

(ಭಾಷ್ಯಾರ್ಥ)

ಶಬ್ದವು ಆಕಾಶವು ಅಜವೆಂದೇ ತಿಳಿಸಿಕೊಡುತ್ತದೆ. ಏಕೆಂದರೆ "ವಾಯುವೂ ಅಂತರಿಕ್ಷವೂ -ಎಂಬಿದು ಅಮೃತವು" (ಬೃ. ೨-೩-೨) ಎಂದು (ಅದು) ಹೇಳುತ್ತದೆ. ಅಮೃತವಾದದ್ದಕ್ಕೆ ಉತ್ಪತ್ತಿಯು ಹೊಂದಲಾರದಷ್ಟೆ. "ಆಕಾಶದಂತೆ ಸರ್ವಗತನೂ ನಿತ್ಯನೂ (ಆಗಿರುತ್ತಾನೆ)" ಎಂದು ಬ್ರಹ್ಮದ ಸರ್ವಗತತ್ವ ನಿತ್ಯತ್ವಗಳಿಗೆ ಆಕಾಶದ ಹೋಲಿಕೆಯನ್ನು ಕೊಟ್ಟಿರುವದರಿಂದ (ವೇದವು) ಆಕಾಶಕ್ಕೂ ಆ (ಎರಡು) ಧರ್ಮಗಳು (ಇವೆ ಎಂದು) ಸೂಚಿಸಿರುತ್ತದೆ. ಆದರೆ ಅಂಥ (ಆಕಾಶಕ್ಕೆ) ಉತ್ಪತ್ತಿಯು ಹೊಂದಲಾರದು. "ಈ ಆಕಾಶವು ಹೇಗೆ ಅನಂತವೋ ಹಾಗೆ ಆತ್ಮನು ಅನಂತನೆಂದು ತಿಳಿಯಬೇಕು" (?) ಎಂದೂ "ಬ್ರಹ್ಮವು ಆಕಾಶಶರೀರವುಳ್ಳದ್ದು" (ತೈ. ೧-೬) ಎಂದೂ "ಆಕಾಶವೇ ಆತ್ಮನು" (ತೈ. ೧-೭) ಎಂದೂ ಉದಾಹರಣೆ (ಇದೆ). ಆಕಾಶಕ್ಕೆ ಉತ್ಪತ್ತಿಯಿದ್ದರೆ ನೈದಿಲೆಗೆ ಕಪ್ಪು(ಬಣ್ಣದಂತೆ) ಬ್ರಹ್ಮಕ್ಕೆ ಅದನ್ನು ವಿಶೇಷಣವಾಗಿ (ಹೇಳಿರುವದು) ಹೊಂದಲಾರದಷ್ಟೆ. ಆದ್ದರಿಂದ ಬ್ರಹ್ಮವು ಯಾವಾಗಲೂ ಆಕಾಶಕ್ಕೆ ಸಮಾನವಾಗಿರುತ್ತದೆ ಎಂದು ನಿಶ್ಚಯಿಸಬೇಕಾಗಿದೆ.

**ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್ ॥ ೫ ॥**

೫. ಬ್ರಹ್ಮಶಬ್ದದಂತೆ ಒಂದೇ ಶಬ್ದಕ್ಕೆ (ಎರಡು ಬಗೆಯ ಪ್ರಯೋಗವಾಗಬಹುದು).

## ಏಕದೇಶಿಮತ :
## ಸಂಭೂತಶಬ್ದಕ್ಕೆ ಎರಡು ಬಗೆಯ ಪ್ರಯೋಗ

(ಭಾಷ್ಯ)

೯೩. ಇದಂ ಪದೋತ್ತರಂ ಸೂತ್ರಮ್ । ಸ್ಯಾದೇತತ್ । ಕಥಂ ಪುನಃ ಏಕಸ್ಯ ಸಂಭೂತಶಬ್ದಶ್ಚ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧.) ಇತ್ಯಸ್ಮಿನ್ ಅಧಿಕಾರೇ ಪರೇಷು ತೇಜಃಪ್ರಭೃತಿಷು ಅನುವೃತ್ತಮಾನಸ್ಯ ಮುಖ್ಯತ್ವಂ ಸಂಭವತಿ ಆಕಾಶೇ ಚ ಗೌಣತ್ವಮ್ ಇತಿ ? ಅತ

ಉತ್ತರಮ್ ಉಚ್ಯತೇ। ಸ್ಯಾಚ್ಚ ಏಕಸ್ಯಾಪಿ ಸಂಭೂತಶಬ್ದಸ್ಯ ವಿಷಯವಿಶೇಷವಶಾತ್ ಗೌಣೋ ಮುಖ್ಯಶ್ಚ ಪ್ರಯೋಗಃ। ಬ್ರಹ್ಮಶಬ್ದವತ್। ಯಥಾ ಏಕಸ್ಯಾಪಿ ಬ್ರಹ್ಮಶಬ್ದಸ್ಯ "ತಪಸಾ ಬ್ರಹ್ಮ ವಿಜಿಜ್ಞಾಸಸ್ವ, ತಪೋ ಬ್ರಹ್ಮ" (ತೈ. ೩–೨.) ಇತಿ ಅಸ್ಮಿನ್ ಅಧಿಕಾರೇ ಅನ್ನಾದಿಷು ಗೌಣಃ ಪ್ರಯೋಗಃ, ಆನನ್ದೇ ಚ ಮುಖ್ಯಃ। ಯಥಾ ಚ ತಪಸಿ ಬ್ರಹ್ಮವಿಜ್ಞಾನಸಾಧನೇ ಬ್ರಹ್ಮಶಬ್ದಃ ಭಕ್ತ್ಯಾ ಪ್ರಯುಜ್ಯತೇ ಅಞ್ಜಸಾ ತು ವಿಜ್ಞೇಯೇ ಬ್ರಹ್ಮಣಿ, ತದ್ವತ್ ॥

(ಭಾಷ್ಯಾರ್ಥ)

ಈ ಸೂತ್ರವು (ಕೆಲವು ಶಂಕಾ)ಪದಗಳಿಗೆ ಉತ್ತರವಾಗಿರುತ್ತದೆ. ಹೇಗೆಂದರೆ (ಆಕ್ಷೇಪಕನ) ಮತವು ಇದಾಗಿರಬಹುದು. ಒಂದೇ ಸಂಭೂತಶಬ್ದಕ್ಕೆ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨–೧. ಆ ಈ ಆತ್ಮನಿಂದ ಆಕಾಶವು ಸಂಭೂತವಾಯಿತು) ಎಂಬೀ ಪ್ರಕರಣದಲ್ಲಿ ಮುಂದಿರುವ ತೇಜಸ್ಸೇ ಮುಂತಾದವುಗಳಲ್ಲಿ ಅನುವೃತ್ತಿಯಾಗಿರುವ ಒಂದೇ ಸಂಭೂತಶಬ್ದಕ್ಕೆ (ಅಲ್ಲಿ) ಮುಖ್ಯತ್ವವೂ ಆಕಾಶದಲ್ಲಿ (ಮಾತ್ರ) ಗೌಣತ್ವವೂ ಸಂಭವಿಸುವದು ಹೇಗೆ ?

ಇದಕ್ಕೆ ಉತ್ತರವನ್ನು (ಇಲ್ಲಿ) ಹೇಳಲಾಗುತ್ತದೆ. ಒಂದೇ ಸಂಭೂತಶಬ್ದಕ್ಕೂ ಆಯಾ ವಿಷಯದ ವಶದಿಂದ ಗೌಣ(ಪ್ರಯೋಗವೂ) ಮುಖ್ಯ ಪ್ರಯೋಗವೂ ಬ್ರಹ್ಮಶಬ್ದದಂತೆ ಆಗಲೂಬಹುದು. (ಇದರ ವಿವರ): ಹೇಗೆ ಬ್ರಹ್ಮಶಬ್ದವು ಒಂದೇ ಆದರೂ "ತಪಸ್ಸಿನಿಂದ ಬ್ರಹ್ಮವನ್ನು ತಿಳಿ, ತಪಸ್ಸೇ ಬ್ರಹ್ಮವು" (ತೈ. ೩–೨.) ಎಂಬೀ ಪ್ರಕರಣದಲ್ಲಿ ಅನ್ನಾದಿಗಳಲ್ಲಿ ಗೌಣ ಪ್ರಯೋಗವೂ ಆನಂದದಲ್ಲಿ ಮುಖ್ಯ(ಪ್ರಯೋಗವೂ ಆಗಿರುವದೋ,[1] ಮತ್ತು ಹೇಗೆ ಬ್ರಹ್ಮವಿಜ್ಞಾನಸಾಧನವಾದ ತಪಸ್ಸಿನಲ್ಲಿ ಬ್ರಹ್ಮಶಬ್ದವು ಗೌಣವಾಗಿಯೂ ವಿಜ್ಞೇಯವಾದ ಬ್ರಹ್ಮದಲ್ಲಿ ಮುಖ್ಯವಾಗಿಯೂ ಪ್ರಯುಕ್ತವಾಗಿರುತ್ತದೆಯೋ, ಹಾಗೆಯೇ (ಇಲ್ಲಿಯೂ ಆಗಬಹುದು).

## ಆಕಾಶವು ನಿತ್ಯವಾದರೂ ಏಕವಿಜ್ಞಾನದಿಂದ ಸರ್ವವಿಜ್ಞಾನವಾಗುತ್ತದೆ

(ಭಾಷ್ಯ)

೯೪. ಕಥಂ ಪುನಃ ಅನುತ್ಪತ್ತೌ ನಭಸಃ 'ಏಕಮೇವಾದ್ವಿತೀಯಮ್'

1. 'ಅನ್ನವನ್ನು ಬ್ರಹ್ಮವೆಂದು ತಿಳಿದನು' ಅನ್ನವು ನಿಜವಾಗಿ ಬ್ರಹ್ಮವಲ್ಲ; ಅದನ್ನು ಬ್ರಹ್ಮವನ್ನು ತಿಳಿಯುವದಕ್ಕೆ ದ್ವಾರವೆಂಬ ಕಾರಣದಿಂದ ಗೌಣವಾಗಿ 'ಬ್ರಹ್ಮ'ವೆಂದು ಕರೆದಿದೆ 'ಆನಂದವನ್ನು ಬ್ರಹ್ಮವೆಂದು ತಿಳಿದುಕೊಂಡನು' ಎಂಬಲ್ಲಿ ಬ್ರಹ್ಮಶಬ್ದವನ್ನು ಮುಖ್ಯಾರ್ಥದಲ್ಲಿ ಉಪಯೋಗಿಸಿದೆ.

(ಛಾಂ. ೬–೨–೧) ಇತೀಯಂ ಪ್ರತಿಜ್ಞಾ ಸಮರ್ಥ್ಯತೇ ? ನನು ನಭಸಾ ದ್ವಿತೀಯೇನ ಸದ್ವಿತೀಯಂ ಬ್ರಹ್ಮ ಪ್ರಾಪ್ನೋತಿ । ಕಥಂ ಚ ಬ್ರಹ್ಮಣಿ ವಿದಿತೇ ಸರ್ವಂ ವಿದಿತಂ ಸ್ಯಾತ್ ಇತಿ ? ತದುಚ್ಯತೇ – ಏಕಮೇವ ಇತಿ ತಾವತ್ ಸ್ವಕಾರ್ಯಾಪೇಕ್ಷಯಾ ಉಪಪದ್ಯತೇ । ಯಥಾ ಲೋಕೇ ಕಶ್ಚಿತ್ ಕುಮ್ಭಕಾರಕುಲೇ ಪೂರ್ವೇದ್ಯುಃ ಮೃದ್ ದಣ್ಡಚಕ್ರಾದೀನಿ ಚ ಉಪಲಭ್ಯ ಅಪರೇದ್ಯುಶ್ಚ ನಾನಾವಿಧಾನಿ ಅಮತ್ರಾಣಿ ಪ್ರಸಾರಿತಾನಿ ಉಪಲಭ್ಯ ಬ್ರೂಯಾತ್ 'ಮೃದೇವ ಏಕಾಕಿನೀ ಪೂರ್ವೇದ್ಯುಃ ಆಸೀತ್' ಇತಿ ಸ ಚ ತಯಾ ಅವಧಾರಣಯಾ ಮೃತ್ಕಾರ್ಯಜಾತಮೇವ ಪೂರ್ವೇದ್ಯುರ್ನಾಸೀತ್ ಇತಿ ಅಭಿಪ್ರೇಯಾತ್ ನ ದಣ್ಡಚಕ್ರಾದಿ, ತದ್ವತ್ । ಅದ್ವಿತೀಯಶ್ರುತಿಃ ಅಧಿಷ್ಠಾತ್ರನ್ತರಂ ವಾರಯತಿ । ಯಥಾ ಮೃದಃ ಅಮತ್ರಪ್ರಕೃತೇಃ ಕುಮ್ಭಕಾರೋಽಧಿಷ್ಠಾತಾ ದೃಶ್ಯತೇ, ನೈವಂ ಬ್ರಹ್ಮಣಃ ಜಗತ್ಪ್ರಕೃತೇಃ ಅನ್ಯೋಽಧಿಷ್ಠಾತಾ ಅಸ್ತಿ ಇತಿ । ನ ಚ ನಭಸಾಪಿ ದ್ವಿತೀಯೇನ ಸದ್ವಿತೀಯಂ ಬ್ರಹ್ಮ ಪ್ರಸಜ್ಯತೇ । ಲಕ್ಷಣಾನ್ಯತ್ವನಿಮಿತ್ತಂ ಹಿ ನಾನಾತ್ವಮ್ । ನ ಚ ಪ್ರಾಗುತ್ಪತ್ತೇಃ ಬ್ರಹ್ಮನಭಸೋಃ ಲಕ್ಷಣಾನ್ಯತ್ವಮ್ ಅಸ್ತಿ । ಕ್ಷೀರೋದಕಯೋರಿವ ಸಂಸೃಷ್ಟಯೋಃ ವ್ಯಾಪಿತ್ವಾಮೂರ್ತತ್ವಾದಿಧರ್ಮಸಾಮಾನ್ಯಾತ್ । ಸರ್ಗಕಾಲೇ ತು ಬ್ರಹ್ಮ ಜಗತ್ ಉತ್ಪಾದಯಿತುಂ ಯತತೇ, ಸ್ತಿಮಿತಮ್ ಇತರತ್ ತಿಷ್ಠತಿ । ತೇನ ಅನ್ಯತ್ವಮ್ ಅವಸೀಯತೇ । ತಥಾ ಚ "ಆಕಾಶಶರೀರಂ ಬ್ರಹ್ಮ" (ತೈ. ೧–೬) ಇತ್ಯಾದಿಶ್ರುತಿಭ್ಯೋಽಪಿ ಬ್ರಹ್ಮಾಕಾಶಯೋಃ ಅಭೇದೋಪಚಾರಸಿದ್ಧಿಃ । ಅತ ಏವ ಚ ಬ್ರಹ್ಮವಿಜ್ಞಾನೇನ ಸರ್ವವಿಜ್ಞಾನಸಿದ್ಧಿಃ । ಅಪಿ ಚ ಸರ್ವಂ ಕಾರ್ಯಮ್ ಉತ್ಪದ್ಯಮಾನಮ್ ಆಕಾಶೇನ ಅವ್ಯತಿರಿಕ್ತದೇಶಕಾಲಮೇವ ಉತ್ಪದ್ಯತೇ । ಬ್ರಹ್ಮಣಾ ಚ ಅವ್ಯತಿರಿಕ್ತದೇಶಕಾಲಮೇವ ಆಕಾಶಂ ಭವತಿ ಇತ್ಯತಃ ಬ್ರಹ್ಮಣಾ ತತ್ಕಾರ್ಯೇಣ ಚ ವಿಜ್ಞಾತೇನ ಸಹ ವಿಜ್ಞಾತಮೇವ ಆಕಾಶಂ ಭವತಿ । ಯಥಾ ಕ್ಷೀರಪೂರ್ಣೇ ಘಟೇ ಕತಿಚಿತ್ ಅಬ್ಬಿನ್ದವಃ ಪ್ರಕ್ಷಿಪ್ತಾಃ ಸನ್ತಃ ಕ್ಷೀರಗ್ರಹಣೇ ನೈವ ಗೃಹೀತಾ ಭವನ್ತಿ, ನ ಹಿ ಕ್ಷೀರಗ್ರಹಣಾತ್ ಅಬ್ಬಿನ್ದುಗ್ರಹಣಂ ಪರಿಶಿಷ್ಯತೇ । ಏವಂ ಬ್ರಹ್ಮಣಾ ತತ್ಕಾರ್ಯೈಶ್ಚ ಅವ್ಯತಿರಿಕ್ತದೇಶಕಾಲತ್ವಾತ್ ಗೃಹೀತಮೇವ ಬ್ರಹ್ಮಗ್ರಹಣೇನ ನಭೋ ಭವತಿ । ತಸ್ಮಾತ್ ಭಾಕ್ತಂ ನಭಸಃ ಸಂಭವಶ್ರವಣಮ್ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ಆಕಾಶವು ಹುಟ್ಟುವದಿಲ್ಲ ಎನ್ನುವದಾದರೆ (ಬ್ರಹ್ಮವು) 'ಒಂದೇ, ಅದ್ವಿತೀಯವು' (ಛಾಂ. ೬–೨–೧) ಎಂಬೀ ಪ್ರತಿಜ್ಞೆಯನ್ನು ಸಮರ್ಥಿಸುವದು ಹೇಗೆ ? ಆಕಾಶವೆಂಬ ಎರಡನೆಯದರಿಂದ ಬ್ರಹ್ಮವು ಸದ್ವಿತೀಯ

ಎಂದಾಗುವದಿಲ್ಲವೆ ? ಇದಲ್ಲದೆ ಬ್ರಹ್ಮವನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದು ಹೇಗೆ ?

(ಪರಿಹಾರ) :– ಇದನ್ನು ಹೇಳುತ್ತೇವೆ. ತಾನೊಂದೇ ಎಂಬುದು ಸ್ವಕಾರ್ಯದ ಅಪೇಕ್ಷೆಯಿಂದ ಆಗಬಹುದು. ಹೇಗೆ ಲೋಕದಲ್ಲಿ ಒಬ್ಬನು ಕುಂಬಾರನ ಮನೆಯಲ್ಲಿ ಹಿಂದಿನ ದಿನ ಮಣ್ಣನ್ನೂ ಕೋಲು, ತಿಗುರಿ– ಮುಂತಾದವುಗಳನ್ನೂ ಕಂಡಿದ್ದು ಮಾರನೆಯ ದಿನ ಬಗೆಬಗೆಯ ಪಾತ್ರೆಗಳನ್ನು ಹರಡಿರುವದನ್ನು ಕಂಡು, 'ನಿನ್ನೆಯ ದಿನ ಮಣ್ಣೊಂದೇ ಇತ್ತು' ಎಂದರೆ, ಹಾಗೆಂದು ಒತ್ತಿ ಹೇಳಿದ್ದರಿಂದ ಮಣ್ಣಿನ ಕಾರ್ಯಸಮೂಹವು ಮಾತ್ರ ಮುನ್ನಿನ ದಿನ ಇರಲಿಲ್ಲವೆಂದು ಅವನ ಅಭಿಪ್ರಾಯವೇ ಹೊರತು ಕೋಲು, ತಿಗುರಿ– ಮುಂತಾದವೂ (ಇರಲಿಲ್ಲ ಎಂದು ಹೇಗೆ ಅಭಿಪ್ರಾಯ)ವಿರುವದಿಲ್ಲವೋ, ಇದರಂತೆಯೇ (ಇದು). ಅದ್ವಿತೀಯಶ್ರುತಿಯು ಮತ್ತೊಬ್ಬ ಅಧಿಷ್ಠಾತೃವು ಇರಲಿಲ್ಲವೆನ್ನುತ್ತದೆ. ಹೇಗೆ ಪಾತ್ರೆಗಳ ಪ್ರಕೃತಿಯಾಗಿರುವ ಮಣ್ಣಿಗೆ ಕುಂಬಾರನೆಂಬ ಅಧಿಷ್ಠಾತೃವು ಕಾಣಬರುತ್ತಾನೋ ಹಾಗೆ ಜಗತ್ತಿಗೆ ಪ್ರಕೃತಿಯಾಗಿರುವ ಬ್ರಹ್ಮಕ್ಕೆ ಮತ್ತೊಬ್ಬ ಅಧಿಷ್ಠಾತೃವಿಲ್ಲ ಎಂದೇ (ಶ್ರುತಿಯ ಅಭಿಪ್ರಾಯವು). ಆದರೆ ಆಕಾಶವೆಂಬ ಎರಡನೆಯ (ವಸ್ತು) ವಿನಿಂದ ಬ್ರಹ್ಮವು ಸದ್ವಿತೀಯವೆಂದೇನೂ (ಇದರಿಂದ) ಪ್ರಸಕ್ತವಾಗುವದಿಲ್ಲ. ಬೇರೆಯ ಲಕ್ಷಣದ್ದಾಗಿರುವ ನಿಮಿತ್ತದಿಂದಲ್ಲವೆ, ನಾನಾತ್ವ(ವುಂಟಾಗುವದು) ? ಆದರೆ ಉತ್ಪತ್ತಿಗಿಂತ ಮುಂಚೆ – ಬ್ರಹ್ಮಾಕಾಶಗಳಿಗೆ ಬೇರೆಬೇರೆಯ ಲಕ್ಷಣವಿರುವದಿಲ್ಲ; ಏಕೆಂದರೆ ಹಾಲುನೀರುಗಳಂತೆ ಬೆರೆತುಕೊಂಡಿರುವ (ಅವೆರಡಕ್ಕೂ) ವ್ಯಾಪಿತ್ವ, ಅಮೂರ್ತತ್ವ – ಮುಂತಾದ ಧರ್ಮಗಳು ಸಮಾನವಾಗಿರುತ್ತವೆ. ಸೃಷ್ಟಿಕಾಲದಲ್ಲಿ ಮಾತ್ರ ಬ್ರಹ್ಮವು ಜಗತ್ತನ್ನು ಉಂಟುಮಾಡಲು ಪ್ರಯತ್ನಿಸುತ್ತದೆ. ಇನ್ನೊಂದಾದ (ಆಕಾಶವು) ಅಲುಗಾಡದೆ (ಹಾಗೆಯೇ) ಇದ್ದುಕೊಂಡಿರುತ್ತದೆ. ಆದ್ದರಿಂದ (ಅದು) ಬೇರೆ ಎಂದು ನಿಶ್ಚಿತವಾಗುತ್ತದೆ. ಆದ್ದರಿಂದಲೇ[1] "ಆಕಾಶಶರೀರವಾದ ಬ್ರಹ್ಮವು" (ತೈ. ೧–೬) ಮುಂತಾದ ಶ್ರುತಿಗಳಲ್ಲಿಯೂ ಬ್ರಹ್ಮಾಕಾಶಗಳಿಗೆ ಅಭೇದಪ್ರಯೋಗವು ಸಿದ್ಧಿಸುತ್ತದೆ.

ಆದ್ದರಿಂದಲೇ ಬ್ರಹ್ಮವಿಜ್ಞಾನದಿಂದ ಎಲ್ಲವನ್ನೂ ಅರಿತಂತಾಗುವದೆಂಬುದು ಸಿದ್ಧವಾಗುತ್ತದೆ.[2] ಇದಲ್ಲದೆ ಯಾವ ಕಾರ್ಯವೇ ಆಗಲಿ ಹುಟ್ಟುವಾಗ ಆಕಾಶ

---

1. ಬ್ರಹ್ಮಕ್ಕೂ ಆಕಾಶಕ್ಕೂ ಲಕ್ಷಣಭೇದವಿಲ್ಲದ್ದರಿಂದಲೇ.

2. ಲಕ್ಷಣಭೇದವಿದ್ದರೆ ಒಂದನ್ನರಿತರೂ ಇನ್ನೊಂದನ್ನು ಅರಿತಿಲ್ಲವೆಂದು ಆಗಬಹುದಾಗಿತ್ತು. ಆದರೆ ಹಾಗಿಲ್ಲ.

ಕ್ಕಿಂತ ಬೇರೆಯಲ್ಲದ ದೇಶಕಾಲಗಳಲ್ಲಿಯೇ ಹುಟ್ಟುತ್ತದೆ.[1] ಆಕಾಶವು ಕೂಡ ಬ್ರಹ್ಮಕ್ಕಿಂತ ಬೇರೆಯಲ್ಲದ ದೇಶಕಾಲಗಳಲ್ಲಿಯೇ ಇರುತ್ತದೆ. ಆದ್ದರಿಂದ ಬ್ರಹ್ಮವನ್ನೂ ಅದರ ಕಾರ್ಯವನ್ನೂ ಅರಿತುಕೊಂಡರೆ ಆಕಾಶವನ್ನು ಅರಿತುಕೊಂಡಂತೆಯೇ ಆಗುತ್ತದೆ. ಹಾಲನ್ನು ಅರಿತುಕೊಂಡರೆ ನೀರಿನ ತೊಟ್ಟನ್ನು ಅರಿತುಕೊಳ್ಳಬೇಕಾದದ್ದು ಉಳಿದಿರುವದಿಲ್ಲವಷ್ಟೆ.[2] ಈ ರೀತಿಯಲ್ಲಿ ಬ್ರಹ್ಮ, ಮತ್ತು ಅದರ ಕಾರ್ಯಗಳು ಇವುಗಳಿಗಿಂತ ಬೇರೆಯಲ್ಲದ ದೇಶಕಾಲಗಳುಳ್ಳದ್ದಾದ್ದರಿಂದ ಬ್ರಹ್ಮಗ್ರಹಣದಿಂದ ಆಕಾಶವನ್ನು ಗ್ರಹಿಸಿದಂತೆಯೇ ಆಗುತ್ತದೆ.

ಆದ್ದರಿಂದ ಆಕಾಶವು ಹುಟ್ಟುತ್ತದೆ ಎಂಬುದು ಗೌಣವೇ.[3]

**ಪ್ರತಿಜ್ಞಾಽಹಾನಿರವ್ಯತಿರೇಕಾಚ್ಛಬ್ದೇಭ್ಯಃ ॥ ೬ ॥**

೬. ಅವ್ಯತಿರೇಕದಿಂದ ಪ್ರತಿಜ್ಞೆಯ ಹಾನಿಯಾಗದೆ (ಇರುತ್ತದೆ). (ಇದು) ಶಬ್ದಗಳಿಂದ (ಸಿದ್ಧವಾಗುತ್ತದೆ).

(ಭಾಷ್ಯ)

೯೫. ಏವಂ ಪ್ರಾಪ್ತೇ ಇದಮಾಹ। ('ಪ್ರತಿಜ್ಞಾಽಹಾನಿರವ್ಯತಿರೇಕಾಚ್ಛಬ್ದೇಭ್ಯಃ') "ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮ್" (ಛಾಂ. ೬–೧–೧) ಇತಿ। "ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಂ ಸರ್ವಂ ವಿದಿತಮ್'' (ಬೃ. ೪–೫–೬) ಇತಿ,

---

1. ಯಾವ ವಸ್ತು ಎಲ್ಲಿ, ಯಾವಾಗ, ಹುಟ್ಟಿದರೂ ಅಲ್ಲಿ ಆಗ ಆಕಾಶವಿದ್ದೇ ಇರುತ್ತದೆ.

2. ಹಾಲು ಎಂದು ಗ್ರಹಿಸಿದರೆ ಆ ಜ್ಞಾನದ ವಿಷಯದಲ್ಲಿ ನೀರೂ ಸೇರಿಕೊಂಡೇ ಇರುತ್ತದೆ ಎಂದರ್ಥ.

3. ಇಲ್ಲಿ ಮೊದಲನೆಯ ಎರಡು ಸೂತ್ರಗಳೂ ಏಕದೇಶಿಗಳ ಮತವೆಂದೂ ಇಬ್ಬರಿಗೂ ಆಕಾಶದ ಉತ್ಪತ್ತಿಯು ಗೌಣವೆಂದೇ ಅಭಿಪ್ರೇತವೆಂದೂ ಭಾಮತಿಯಲ್ಲಿದೆ. ಆದರೆ 'ತುಶಬ್ದಃ ಪಕ್ಷಾನ್ತರಪರಿಗ್ರಹೇ' ಎಂಬ ಭಾಷ್ಯಕ್ಕೆ ಇದು ವಿರುದ್ಧವೆಂದು ಕಾಣುತ್ತದೆ. ಆದ್ದರಿಂದ ಉತ್ಪತ್ತಿಯಿಲ್ಲದ್ದರಿಂದ ಬ್ರಹ್ಮವು ಸದ್ವಿತೀಯವಾಯಿತು ಎಂದು ಪೂರ್ವಪಕ್ಷ. ಆಕಾಶಕ್ಕೆ ಉತ್ಪತ್ತಿಯನ್ನು ತೈತ್ತಿರೀಯದಲ್ಲಿ ಹೇಳಿರುವದರಿಂದಲೂ ಛಾಂದೋಗ್ಯಕ್ಕೂ ತೈತ್ತಿರೀಯಕ್ಕೂ ಏಕವಾಕ್ಯತೆಯು ಸಾಧ್ಯವಲ್ಲದ್ದರಿಂದಲೂ ಶ್ರುತಿಗಳು ಪರಸ್ಪರವಿರುದ್ಧವೇ ಆಗುವವು ಎಂದು ಮತ್ತೊಂದು ಪೂರ್ವಪಕ್ಷ. ಗೌಣ್ಯಸಂಭವಾತ್ ಎಂಬಲ್ಲಿಂದ ಮೂರು ಸೂತ್ರಗಳಲ್ಲಿ ಉತ್ಪತ್ತಿಯು ಗೌಣವೆಂದು ಹೇಳುವ ವೈಶೇಷಿಕ ಮತಾನುಯಾಯಿಯಾದ ಏಕದೇಶಿಯ ಅಭಿಪ್ರಾಯ. ಅಲ್ಲಿಂದ ಮುಂದಕ್ಕೆ ಪರಮಸಿದ್ಧಾಂತ –ಎಂದು ವಿಭಾಗಮಾಡಿಕೊಳ್ಳಬೇಕೆಂದು ನಮಗೆ ತೋರುತ್ತದೆ.

"ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ'' (ಮುಂ. ೧-೧-೩) ಇತಿ, 'ನ ಕಾಚನ ಮದ್ಬಹಿರ್ಧಾ ವಿದ್ಯಾಸ್ತಿ' (?) ಇತಿ ಚೈವಂರೂಪಾ ಪ್ರತಿವೇದಾನ್ತಂ ಪ್ರತಿಜ್ಞಾ ವಿಜ್ಞಾಯತೇ। ತಸ್ಯಾಃ ಪ್ರತಿಜ್ಞಾಯಾಃ ಏವಮ್ ಅಹಾನಿಃ ಅನುಪರೋಧಃ ಸ್ಯಾತ್ ಯದಿ ಅವ್ಯತಿರೇಕಃ ಕೃತ್ಸ್ನಸ್ಯ ವಸ್ತುಜಾತಸ್ಯ ವಿಜ್ಞೇಯಾದ್ ಬ್ರಹ್ಮಣಃ ಸ್ಯಾತ್। ವ್ಯತಿರೇಕೇ ಹಿ ಸತಿ ಏಕವಿಜ್ಞಾನೇನ ಸರ್ವಂ ವಿಜ್ಞಾಯತೇ ಇತೀಯಂ ಪ್ರತಿಜ್ಞಾ ಹೀಯೇತ। ಸ ಚ ಅವ್ಯತಿರೇಕಃ ಏವಮ್ ಉಪಪದ್ಯತೇ ಯದಿ ಕೃತ್ಸ್ನಂ ವಸ್ತುಜಾತಮ್ ಏಕಸ್ಮಾದ್ ಬ್ರಹ್ಮಣಃ ಉತ್ಪದ್ಯೇತ। ಶಬ್ದೇಭ್ಯಶ್ಚ ಪ್ರಕೃತಿವಿಕಾರಾವ್ಯತಿರೇಕನ್ಯಾಯೇನೈವ ಪ್ರತಿಜ್ಞಾಸಿದ್ಧಿಃ ಅವಗಮ್ಯತೇ। ತಥಾ ಹಿ "ಯೇನಾಶ್ರುತಂ ಶ್ರುತಂ ಭವತಿ'' ಇತಿ ಪ್ರತಿಜ್ಞಾಯ ಮೃದಾದಿದೃಷ್ಟಾನ್ತೈಃ ಕಾರ್ಯಕಾರಣಾಭೇದಪ್ರತಿಪಾದನಪರೈಃ ಪ್ರತಿಜ್ಞೈಷಾ ಸಮರ್ಥ್ಯತೇ। ತತ್ಸಾಧನಾಯೈವ ಚ ಉತ್ತರೇ ಶಬ್ದಾಃ "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್'' (ಛಾಂ. ೬-೨-೧) "ತದೈಕ್ಷತ....ತತ್ತೇಜೋಽಸೃಜತ'' (ಛಾಂ. ೬-೨-೩) ಇತ್ಯೇವಂ ಕಾರ್ಯಜಾತಂ ಬ್ರಹ್ಮಣಃ ಪ್ರದರ್ಶ್ಯ ಅವ್ಯತಿರೇಕಂ ಪ್ರದರ್ಶಯನ್ತಿ — "ಐತದಾತ್ಮ್ಯಮಿದಂ ಸರ್ವಮ್" (ಛಾಂ. ೬-೮-೭) ಇತ್ಯಾರಭ್ಯ ಆಪ್ರಪಾಠಕಪರಿಸಮಾಪ್ತೇಃ। ತದ್ ಯದ್ಯಾಕಾಶಂ ನ ಬ್ರಹ್ಮಕಾರ್ಯಂ ಸ್ಯಾತ್ ನ ಬ್ರಹ್ಮಣಿ ವಿಜ್ಞಾತೇ ಆಕಾಶಂ ವಿಜ್ಞಾಯೇತ। ತತಶ್ಚ ಪ್ರತಿಜ್ಞಾಹಾನಿಃ ಸ್ಯಾತ್। ನ ಚ ಪ್ರತಿಜ್ಞಾಹಾನ್ಯಾ ವೇದಸ್ಯ ಅಪ್ರಾಮಾಣ್ಯಂ ಯುಕ್ತಂ ಕರ್ತುಮ್। ತಥಾ ಹಿ ಪ್ರತಿವೇದಾನ್ತಂ ತೇ ತೇ ಶಬ್ದಾಃ ತೇನ ತೇನ ದೃಷ್ಟಾನ್ತೇನ ತಾಮೇವ ಪ್ರತಿಜ್ಞಾಂ ಖ್ಯಾಪಯನ್ತಿ "ಇದಂ ಸರ್ವಂ ಯದಯಮಾತ್ಮಾ" (ಬೃ. ೨-೪-೬), "ಬ್ರಹ್ಮೈವೇದಮಮೃತಂ ಪುರಸ್ತಾತ್" (ಮುಂ. ೨-೨-೧೧) ಇತ್ಯೇವಮಾದಯಃ। ತಸ್ಮಾತ್ ಜ್ವಲನಾದಿವದೇವ ಗಗನಮಪಿ ಉತ್ಪದ್ಯತೇ ॥

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು) ಇದನ್ನು ಹೇಳುತ್ತಾರೆ. (ಪ್ರತಿಜ್ಞಾಽಹಾನಿರವ್ಯತಿರೇಕಾಚ್ಛಬ್ದೇಭ್ಯಃ) "ಯಾವದರಿಂದ ಅಶ್ರುತವಾದದ್ದು ಶ್ರುತವಾಗುವದೋ, ಅಮತವಾದದ್ದು ಮತವಾಗುವದೋ ಅವಿಜ್ಞಾತವಾದದ್ದು ವಿಜ್ಞಾತವಾಗುವದೋ" (ಛಾಂ. ೬-೧-೧), "ಎಲೆ, ಆತ್ಮನನ್ನು ಕಂಡುಕೊಂಡರೆ, ಶ್ರವಣಮಾಡಿದರೆ, ಮನನಮಾಡಿದರೆ, ವಿಜ್ಞಾನಮಾಡಿಕೊಂಡರೆ, ಇದೆಲ್ಲವೂ ವಿದಿತ(ವಾಗುವದು)" (ಬೃ. ೪-೫-೬) ಎಂದು, "ಪೂಜ್ಯನೆ, ಯಾವದನ್ನು ಅರಿತುಕೊಂಡರೆ ಇದೆಲ್ಲವೂ ವಿಜ್ಞಾತವಾಗುವದು?" (ಮುಂ. ೧-೧-೩) ಎಂದು, ಮತ್ತು "ನನ್ನ ಹೊರಗೆ ಯಾವದೊಂದು ವಿದ್ಯೆಯೂ

ಇರುವದಿಲ್ಲ" ( ? ) ಎಂಬೀ ರೂಪದ ಪ್ರತಿಜ್ಞೆಯು ಪ್ರತಿವೇದಾಂತದಲ್ಲಿಯೂ ತಿಳಿಯಬರುತ್ತದೆ. ಹೀಗಾದರೆ, ಎಲ್ಲಾ ವಸ್ತುಸಮೂಹವೂ ವಿಜ್ಞೇಯವಾದ ಬ್ರಹ್ಮಕ್ಕಿಂತ ಅವ್ಯತಿರಿಕ್ತವೆಂದಾದರೆ, ಆ ಪ್ರತಿಜ್ಞೆಗೆ ಹಾನಿಯಾಗದೆ (ಇರುವದು), ವಿರೋಧವಾಗದೆ ಇರುವದು ; ವ್ಯತಿರಿಕ್ತವಾಗಿದ್ದರಲ್ಲವೆ, ಒಂದರ ಜ್ಞಾನದಿಂದ ಎಲ್ಲವನ್ನೂ ಅರಿತಂತಾಗುವದೆಂಬ ಪ್ರತಿಜ್ಞೆಯನ್ನು ಬಿಟ್ಟಂತೆ ಆದೀತು ? ಈ ಅವ್ಯತಿರೇಕವೆಂಬುದು ಎಲ್ಲಾ ವಸ್ತುಸಮೂಹವೂ ಒಂದೇ ಬ್ರಹ್ಮದಿಂದ ಉತ್ಪನ್ನವಾಗಿರುವದೆಂದರೇ ಉಪಪನ್ನವಾಗಿರುತ್ತದೆ.

ಶಬ್ದಗಳಿಂದಲೂ ಪ್ರಕೃತಿವಿಕಾರಗಳು ಅವ್ಯತಿರಿಕ್ತವಾಗಿರುವವೆಂಬ ಯುಕ್ತಿಯಿಂದಲೇ ಪ್ರತಿಜ್ಞಾಸಿದ್ಧಿಯಾಗುವದೆಂದು ನಿಶ್ಚಯವಾಗುತ್ತದೆ. ಹೇಗೆಂದರೆ "ಯಾವದರಿಂದ ಅಶ್ರುತವಾದದ್ದು ಶ್ರುತವಾಗುತ್ತದೆಯೋ......" ಎಂದು ಪ್ರತಿಜ್ಞೆಮಾಡಿ ಕಾರ್ಯಕಾರಣಗಳು ಅಭಿನ್ನವೆಂಬುದನ್ನು ಮಣ್ಣು ಮುಂತಾದ ದೃಷ್ಟಾಂತಗಳಿಂದ ಪ್ರತಿಪಾದನೆಮಾಡುವದರಲ್ಲಿ ತಾತ್ಪರ್ಯವುಳ್ಳ ( ಶಬ್ದಗಳು ) ಈ ಪ್ರತಿಜ್ಞೆಯನ್ನು ಸಮರ್ಥಿಸುತ್ತವೆ. ಅದನ್ನು ಸಾಧಿಸುವದಕ್ಕಾಗಿಯೇ ಮುಂದಿನ ಶಬ್ದಗಳು "ಸೋಮ್ಯನೆ, ಇದು ಮೊದಲು ಎರಡನೆಯದಿಲ್ಲದ ಒಂದೇ ಆದ ಸತ್ತೇ ಆಗಿತ್ತು" (ಛಾಂ. ೬-೨-೧), "ಅದು ನೋಡಿತು.... ಅದು ತೇಜಸ್ಸನ್ನು ಸೃಜಿಸಿತು" (ಛಾಂ. ೬-೨-೩) ಎಂದು ಕಾರ್ಯಸಮೂಹವು ಬ್ರಹ್ಮದಿಂದಲೇ (ಆಯಿತೆಂದು) ತಿಳಿಸಿ "ಇದೆಲ್ಲಕ್ಕೂ ಇದೇ ಆತ್ಮವು" ಎಂದು (ಆ) ಪ್ರಪಾಠಕವು ಪರಿಸಮಾಪ್ತವಾಗುವವರೆಗೂ ಅವ್ಯತಿರೇಕವನ್ನು ತಿಳಿಸುತ್ತವೆ. ಹೀಗಿರುವಲ್ಲಿ ಆಕಾಶವು ಬ್ರಹ್ಮಕಾರ್ಯವಲ್ಲದೆ ಹೋದರೆ ಬ್ರಹ್ಮವನ್ನು ಅರಿತರೂ ಆಕಾಶವನ್ನು ಅರಿತಂತೆ ಆಗದೆ ಹೋಗುವದು, ಅದರಿಂದ ಪ್ರತಿಜ್ಞಾಹಾನಿಯಾಗುವದು. ಆದರೆ ಪ್ರತಿಜ್ಞಾಹಾನಿಯನ್ನು ಮಾಡಿ ವೇದಕ್ಕೆ ಅಪ್ರಾಮಾಣ್ಯವನ್ನುಂಟುಮಾಡುವದು ಯುಕ್ತವಲ್ಲ. ಹೀಗೆಯೇ ಒಂದೊಂದು ವೇದಾಂತದಲ್ಲಿಯೂ "ಇದೆಲ್ಲವೂ ಈ ಆತ್ಮನೆಂಬುದು" (ಬೃ. ೨-೪-೬); "ಈ ಮುಂದಿರುವದು ಅಮೃತವಾದ ಬ್ರಹ್ಮವೇ" (ಮುಂ. ೨-೨-೧೧)- ಇವೇ ಮುಂತಾದ ಆಯಾ ಶಬ್ದಗಳು ಆಯಾ ದೃಷ್ಟಾಂತಗಳಿಂದ ಅದೇ ಪ್ರತಿಜ್ಞೆಯನ್ನೇ ಹೊರಪಡಿಸುತ್ತವೆ. ಆದ್ದರಿಂದ ಅಗ್ನಿಯೇ ಮುಂತಾದವುಗಳಂತೆಯೇ ಆಕಾಶವೂ ಉತ್ಪತ್ತಿಯಾಗುತ್ತದೆ.

## ಪೂರ್ವಪಕ್ಷಯುಕ್ತಿಗಳ ಖಂಡನೆ

(ಭಾಷ್ಯ)

೯೬. ಯದುಕ್ತಮ್ ಅಶ್ರುತೇರ್ನ ವಿಯತ್ ಉತ್ಪದ್ಯತೇ ಇತಿ । ತತ್ ಅಯುಕ್ತಮ್ । ವಿಯದುತ್ಪತ್ತಿವಿಷಯಶ್ರುತ್ಯನ್ತರಸ್ಯ ದರ್ಶಿತತ್ವಾತ್

"ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧) ಇತಿ। ಸತ್ಯಂ ದರ್ಶಿತವಮ್। ವಿರುದ್ಧಂ ತು "ತತ್ತೇಜೋಽಸೃಜತ" (ಛಾಂ.) ಇತ್ಯನೇನ ಶ್ರುತ್ಯನ್ತರೇಣ। ನ। ಏಕವಾಕ್ಯತ್ವಾತ್ ಸರ್ವಶ್ರುತೀನಾಮ್। ಭವತು ಏಕವಾಕ್ಯತ್ವಮ್ ಅವಿರುದ್ಧಾನಾಮ್। ಇಹ ತು ವಿರೋಧ ಉಕ್ತಃ ಸಕೃತ್ ಶ್ರುತಸ್ಯ ಸ್ರಷ್ಟುಃ ಸ್ರಷ್ಟವ್ಯದ್ವಯಸಂಬನ್ಧಾಸಂಭವಾತ್ ದ್ವಯೋಶ್ಚ ಪ್ರಥಮಜತ್ವಾಸಂಭವಾತ್, ವಿಕಲ್ಪಾಸಂಭವಾಚ್ಚ ಇತಿ। ನೈಷ ದೋಷಃ। ತೇಜಃಸರ್ಗಸ್ಯ ತೈತ್ತಿರೀಯಕೇ ತೃತೀಯತ್ವಶ್ರವಣಾತ್ ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ। ಆಕಾಶಾದ್ವಾಯುಃ। ವಾಯೋರಗ್ನಿಃ" (ತೈ. ೨-೧) ಇತಿ। ಅಶಕ್ಯಾ ಹಿ ಇಯಂ ಶ್ರುತಿಃ ಅನ್ಯಥಾ ಪರಿಣೇತುಮ್। ಶಕ್ಯಾ ತು ಪರಿಣೇತುಂ ಛಾನ್ದೋಗ್ಯಶ್ರುತಿಃ 'ತದಾಕಾಶಂ ವಾಯುಂ ಚ ಸೃಷ್ಟ್ವಾ ತತ್ ತೇಜೋಽಸೃಜತ' ಇತಿ। ನ ಹಿ ಇಯಂ ಶ್ರುತಿಃ ತೇಜೋಜನಿಪ್ರಧಾನಾ ಸತೀ ಶ್ರುತ್ಯನ್ತರಪ್ರಸಿದ್ಧಾಮ್ ಆಕಾಶಸ್ಯ ಉತ್ಪತ್ತಿಂ ವಾರಯಿತುಂ ಶಕ್ನೋತಿ। ಏಕಸ್ಯ ವಾಕ್ಯಸ್ಯ ವ್ಯಾಪಾರದ್ವಯಾಸಂಭವಾತ್। ಸ್ರಷ್ಟಾ ತು ಏಕೋಽಪಿ ಕ್ರಮೇಣ ಅನೇಕಂ ಸ್ರಷ್ಟವ್ಯಂ ಸೃಜೇತ್- ಇತ್ಯೇಕವಾಕ್ಯತ್ವಕಲ್ಪನಾಯಾಂ ಸಂಭವನ್ತ್ಯಾಂ ನ ವಿರುದ್ಧಾರ್ಥತ್ವೇನ ಶ್ರುತಿಃ ಹಾತವ್ಯಾ। ನ ಚ ಅಸ್ಮಾಭಿಃ ಸಕೃಚ್ಛ್ರುತಸ್ಯ ಸ್ರಷ್ಟವ್ಯದ್ವಯಸಂಬನ್ಧಃ ಅಭಿಧೀಯತೇ। ಶ್ರುತ್ಯನ್ತರವಶೇನ ಸ್ರಷ್ಟವ್ಯಾನ್ತರೋಪಸಂಗ್ರಹಾತ್। ಯಥಾ ಚ "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನ್" (ಛಾಂ. ೩-೧೪-೧) ಇತ್ಯತ್ರ ಸಾಕ್ಷಾದೇವ ಸರ್ವಸ್ಯ ವಸ್ತುಜಾತಸ್ಯ ಬ್ರಹ್ಮಜತ್ವಂ ಶ್ರೂಯಮಾಣಂ ನ ಪ್ರದೇಶಾನ್ತರವಿಹಿತಂ ತೇಜಃಪ್ರಮುಖಮ್ ಉತ್ಪತ್ತಿಕ್ರಮಂ ವಾರಯತಿ ಏವಂ ತೇಜಸೋಽಪಿ ಬ್ರಹ್ಮಜತ್ವಂ ಶ್ರೂಯಮಾಣಂ ನ ಶ್ರುತ್ಯನ್ತರವಿಹಿತಂ ನಭಃಪ್ರಮುಖಮ್ ಉತ್ಪತ್ತಿಕ್ರಮಂ ವಾರಯಿತುಮರ್ಹತಿ। ನನು ಶಮವಿಧಾನಾರ್ಥಮ್ ಏತದ್ ವಾಕ್ಯಮ್। 'ತಜ್ಜಲಾನಿತಿ ಶಾನ್ತ ಉಪಾಸೀತ' ಇತಿ ಶ್ರುತೇಃ। ನೈತತ್ ಸೃಷ್ಟಿವಾಕ್ಯಮ್। ತಸ್ಮಾತ್ ಏತತ್ ಪ್ರದೇಶಾನ್ತರಪ್ರಸಿದ್ಧಂ ಕ್ರಮಮ್ ಉಪರೋದ್ಧುಮರ್ಹತಿ (ಇತಿ)[1]। "ತತ್ತೇಜೋಽಸೃಜತ" ಇತ್ಯೇತತ್ ಸೃಷ್ಟಿವಾಕ್ಯಮ್। ತಸ್ಮಾತ್ ಅತ್ರ ಯಥಾಶ್ರುತಿಕ್ರಮೋ ಗೃಹೀತವ್ಯಃ ಇತಿ। ನೇತ್ಯುಚ್ಯತೇ। ನ ಹಿ ತೇಜಃಪ್ರಾಥಮ್ಯಾನುರೋಧೇನ ಶ್ರುತ್ಯನ್ತರಪ್ರಸಿದ್ಧಃ ವಿಯತ್ಪದಾರ್ಥಃ ಪರಿತ್ಯಕ್ತವ್ಯೋ ಭವತಿ। ಪದಾರ್ಥಧರ್ಮತ್ವಾತ್ ಕ್ರಮಸ್ಯ। ಅಪಿ ಚ "ತತ್ ತೇಜೋಽಸೃಜತ" ಇತಿ ನಾತ್ರ ಕ್ರಮಸ್ಯ ವಾಚಕಃ ಕಶ್ಚಿತ್ ಶಬ್ದಃ ಅಸ್ತಿ।

---

1. ಈ ಇತಿಯು ಇಲ್ಲಿ ಬೇಕಿರುವದಿಲ್ಲ; ವ್ಯಾಖ್ಯಾನಗಳ ಪಾಠದಲ್ಲಿ ಇದು ಇತ್ತೆಂಬುದಕ್ಕೆ ಗಮಕವೇನೂ ಕಾಣುವದಿಲ್ಲ.

ಅರ್ಥಾತ್ತು ಕ್ರಮೋಽವಗಮ್ಯತೇ । ಸ ಚ "ವಾಯೋರಗ್ನಿಃ" ಇತ್ಯನೇನ ಶ್ರುತ್ಯನ್ತರಪ್ರಸಿದ್ಧೇನ ಕ್ರಮೇಣ ನಿವಾರ್ಯತೇ । ವಿಕಲ್ಪಸಮುಚ್ಚಯೌ ತು ವಿಯತ್ತೇಜಸೋಃ ಪ್ರಥಮಜತ್ವವಿಷಯೌ ಅಸಂಭವಾನಭ್ಯುಪಗಮಾಭ್ಯಾಂ ನಿವಾರಿತೌ । ತಸ್ಮಾತ್ ನಾಸ್ತಿ ಶ್ರುತ್ಯೋರ್ವಿಪ್ರತಿಷೇಧಃ । ಅಪಿ ಚ ಛಾನ್ದೋಗ್ಯೇ "ಯೇನಾಶ್ರುತಂ ಶ್ರುತಂ ಭವತಿ" ಇತ್ಯೇತಾಂ ಪ್ರತಿಜ್ಞಾಂ ವಾಕ್ಯೋಪಕ್ರಮೇ ಶ್ರುತಾಂ ಸಮರ್ಥಯಿತುಮ್ ಅಸಮಾಮ್ನಾತಮಪಿ ವಿಯತ್ ಉತ್ಪತ್ತೌ ಉಪಸಂಖ್ಯಾತವ್ಯಮ್ । ಕಿಮಙ್ಗ ಪುನಸ್ತೈತ್ತಿರೀಯಕೇ ಸಮಾಮ್ನಾತಂ ನ ಸಂಗೃಹ್ಯತೇ ॥

(ಭಾಷ್ಯಾರ್ಥ)

ಇನ್ನು ಶ್ರುತಿಯಿಲ್ಲವ್ದರಿಂದ ಆಕಾಶವು ಹುಟ್ಟುವದಿಲ್ಲ ಎಂದು ಹೇಳಿತ್ತಷ್ಟೆ,[1] ಅದು ಸರಿಯಲ್ಲ. ಏಕೆಂದರೆ ಆಕಾಶವು ಹುಟ್ಟುವದೆಂಬುದನ್ನು ತಿಳಿಸುವ "ಆ ಈ ಆತ್ಮನಿಂದಲೇ ಆಕಾಶವುಂಟಾಯಿತು" (ತೈ. ೨-೧) ಎಂಬ ಮತ್ತೊಂದು ಶ್ರುತಿಯನ್ನು ತೋರಿಸಿದ್ದಾಗಿದೆ.[2]

(ಆಕ್ಷೇಪ) :- ನಿಜ, ತೋರಿಸಿದ್ದಾಗಿದೆ. ಆದರೆ (ಅದು).[3] 'ಅದು ತೇಜಸ್ಸನ್ನು ಸೃಜಿಸಿತು' ಎಂಬ ಶ್ರುತ್ಯಂತರಕ್ಕೆ ವಿರುದ್ಧವಾಗಿರುತ್ತದೆ.[4]

(ಸಿದ್ಧಾಂತ) :- ಹಾಗಲ್ಲ. ಏಕೆಂದರೆ ಎಲ್ಲಾ ಶ್ರುತಿಗಳಿಗೂ ಏಕವಾಕ್ಯತೆಯಿರುತ್ತದೆ.

(ಆಕ್ಷೇಪ) :- ವಿರುದ್ಧವಲ್ಲದ (ಶ್ರುತಿಗಳಿಗೆ) ಏಕವಾಕ್ಯತೆಯಾಗಲಿ. ಆದರೆ ಇಲ್ಲಿ ವಿರೋಧವನ್ನು ಹೇಳಿರುತ್ತೇವಲ್ಲ ! ಒಂದು ಸಲ ಶ್ರುತವಾಗಿರುವ ಸೃಷ್ಟ್ಯವಿಗೆ ಸ್ರಷ್ಟ್ರದ್ವಯದೊಡನೆ ಸಂಬಂಧವಾಗಲಾರದು. ಎರಡು ಮೊದಲು ಹುಟ್ಟಿದವೆಂಬುದು ಹೊಂದಲಾರದು. (ಇದಕ್ಕೆ) ವಿಕಲ್ಪವೂ ಸಂಭವಿಸುವದಿಲ್ಲ[5] ಎಂದು (ಹೇಳಿದ್ದೇವಲ್ಲ) !

---

1. ಇದು ಮೊದಲನೆಯ ಪೂರ್ವಪಕ್ಷ.

2. 'ಅಸ್ತಿ ತು' ಎಂಬ ಸೂತ್ರದಲ್ಲಿ ಶ್ರುತ್ಯಂತರವನ್ನು ಉದಾಹರಿಸಿರುವವನು ಸಿದ್ಧಾಂತಿಯೇ ಎಂದು ಇದರಿಂದ ನಿಶ್ಚಯಿಸಬಹುದು.

3. ಮೂಲದಲ್ಲಿ ಒಂದು 'ತತ್' ಬಿಟ್ಟುಹೋಗಿದೆ ಎಂದು ತೋರುತ್ತದೆ.

4. ಪರಸ್ಪರವಿಪ್ರತಿಷೇಧವಿರುವದರಿಂದ ಶ್ರುತಿಯು ಅಪ್ರಮಾಣವು ಎಂದ ಪೂರ್ವಪಕ್ಷಿಯಿವನು.

5. ಶ್ರುತಿವಾಕ್ಯಗಳಿಗೆ ಏಕವಾಕ್ಯತೆಯು ಕೆಲವು ಕಡೆಗಳಲ್ಲಿ ಆಗುತ್ತದೆ ಎಂದು ಒಪ್ಪಿದರೂ ಪ್ರಕೃತವಿರೋಧವು ತಪ್ಪಿದ್ದಲ್ಲ ಎಂದು ಪೂರ್ವಪಕ್ಷ. ಏಕವಾಕ್ಯತೆಯಿಂದ ಏಕದೇಶಿಮತವನ್ನು ಖಂಡಿಸಿದೆ ಎಂಬ ವ್ಯಾಖ್ಯಾನಕಾರರ ಮತವನ್ನೇನೂ ಇಲ್ಲಿ ಒಪ್ಪಬೇಕಾದದ್ದಿಲ್ಲ.

(ಸಿದ್ಧಾಂತ) :– ಇದೇನೂ ದೋಷವಲ್ಲ. ಏಕೆಂದರೆ "ಆ ಈ ಆತ್ಮನಿಂದಲೇ ಆಕಾಶವು ಉಂಟಾಯಿತು; ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ" (ತೈ. ೨–೧) ಎಂದು ತೇಜಸ್ಸಿನ ಸೃಷ್ಟಿಯನ್ನು ತೈತ್ತಿರೀಯದಲ್ಲಿ ಮೂರನೆಯದನ್ನಾಗಿ ಹೇಳಿರುತ್ತದೆ. ಈ ಶ್ರುತಿಯನ್ನು ಮತ್ತೊಂದು ರೀತಿಗೆ ತಿರುಗಿಸುವದಕ್ಕೆ ಆಗಲಾರದಷ್ಟೆ; ಆದರೆ ಛಾಂದೋಗ್ಯಶ್ರುತಿಯನ್ನು "ಅದು ಆಕಾಶವನ್ನೂ ವಾಯುವನ್ನೂ ಸೃಜಿಸಿ ಅದು ತೇಜಸ್ಸನ್ನು ಸೃಜಿಸಿತು" ಎಂದು ತಿರುಗಿಸಿಕೊಳ್ಳುವದಕ್ಕೆ ಬರುತ್ತದೆ. ಏಕೆಂದರೆ ಈ ಶ್ರುತಿಯು ತೇಜಸ್ಸಿನ ಜನ್ಮವನ್ನೇ ಪ್ರಧಾನವಾಗಿ (ಹೇಳುತ್ತಿರುವ)ದರಿಂದ ಶ್ರುತ್ಯಂತರದಲ್ಲಿ ಪ್ರಸಿದ್ಧವಾಗಿರುವ ಉತ್ಪತ್ತಿಯನ್ನು ಇಲ್ಲವೆನ್ನಲಾರದು. ಏಕೆಂದರೆ ಒಂದು ವಾಕ್ಯಕ್ಕೆ ಎರಡು ವ್ಯಾಪಾರಗಳು ಇರುವಹಾಗಿಲ್ಲ.[1] ಸ್ರಷ್ಟೃವಾದರೋ ಒಬ್ಬನೇ ಆದರೂ ಕ್ರಮದಿಂದ ಅನೇಕ ಸ್ರಷ್ಟವ್ಯಗಳನ್ನು ಸೃಜಿಸಬಹುದು – ಏಕವಾಕ್ಯತೆಯನ್ನು ಕಲ್ಪಿಸುವದಕ್ಕೆ ಬರುತ್ತಿರುವಲ್ಲಿ, ವಿರುದ್ಧಾರ್ಥವಾಗುತ್ತದೆ ಎಂದು ಶ್ರುತಿಯನ್ನು ಬಿಡತಕ್ಕದ್ದಲ್ಲ.

ಇದಲ್ಲದೆ ಒಂದು ಸಲ ಶ್ರುತಿಯು ಹೇಳಿದ ಸ್ರಷ್ಟೃವಿಗೇ ಸ್ರಷ್ಟವ್ಯದ್ವಯಸಂಬಂಧವನ್ನು ನಾವು ಹೇಳುತ್ತಿಲ್ಲ; ಏಕೆಂದರೆ ಬೇರೊಂದು ಶ್ರುತಿಯ ವಶದಿಂದ ಮತ್ತೊಂದು ಸ್ರಷ್ಟವ್ಯವನ್ನು ಸೇರಿಸಿಕೊಳ್ಳುತ್ತಿದೇವೆ. ಮತ್ತು "ಇದೆಲ್ಲವೂ ಬ್ರಹ್ಮವೇ; (ಇದು) ತಜ್ಜಲಾನ್ (ಎಂದು ಶಾಂತನಾಗಿ ಉಪಾಸನೆ ಮಾಡಬೇಕು)" (ಛಾಂ. ೩–೧೪–೧) ಎಂಬಲ್ಲಿ ನೇರಾಗಿಯೋ ಸಮಸ್ತವಸ್ತುಜಾತವೂ ಬ್ರಹ್ಮಜವೆಂದು ಶ್ರುತಿಯಲ್ಲಿದ್ದರೂ ಹೇಗೆ ಮತ್ತೊಂದು ಕಡೆಯಲ್ಲಿ ಹೇಳಿರುವ ತೇಜಆದಿಗಳ ಉತ್ಪತ್ತಿಕ್ರಮವನ್ನೇನೂ ಇಲ್ಲವೆನ್ನುವದಿಲ್ಲವೋ ಹಾಗೆಯೇ ತೇಜಸ್ಸು ಬ್ರಹ್ಮಜವೆಂದು ಶ್ರುತಿಯಲ್ಲಿದ್ದರೂ (ಅದು) ಶ್ರುತ್ಯಂತರವಿಹಿತವಾದ ಆಕಾಶವೇ ಮುಂತಾದ ಆಕಾಶಾದ್ಯುತ್ಪತ್ತಿಕ್ರಮವನ್ನು ಇಲ್ಲವೆನ್ನಲಾರದು.

(ಪೂರ್ವಪಕ್ಷಿ) :– ಈ ವಾಕ್ಯವು ಶಮವಿಧಾನಕ್ಕಾಗಿ ಬಂದದ್ದಲ್ಲವೆ? 'ತಜ್ಜಲಾನ್ ಎಂದು ಶಾಂತನಾಗಿ ಉಪಾಸನೆಮಾಡಬೇಕು' ಎಂದಲ್ಲವೆ, ಶ್ರುತಿಯಿರುವದು? ಇದು ಸೃಷ್ಟಿವಾಕ್ಯವಲ್ಲ; ಆದ್ದರಿಂದ ಮತ್ತೊಂದು ಕಡೆಯಲ್ಲಿ ಪ್ರಸಿದ್ಧವಾಗಿರುವ ಕ್ರಮವನ್ನು ತಪ್ಪಿಸಲಾರದು. 'ಅದು ತೇಜಸ್ಸನ್ನು ಸೃಜಿಸಿತು' ಎಂಬುದಾದರೋ ಸೃಷ್ಟಿವಾಕ್ಯವು. ಆದ್ದರಿಂದ ಇಲ್ಲಿ ಶ್ರುತಿಯಲ್ಲಿರುವಂತೆಯೇ ಕ್ರಮವನ್ನು ಗ್ರಹಿಸಬೇಕಲ್ಲವೆ?

---

1. ಇದ್ದರೆ ವಾಕ್ಯಗಳು ಬೇರೆಬೇರೆಯೆಂದೇ ಎಣಿಸಬೇಕಾಗುತ್ತದೆ.

(ಸಿದ್ಧಾಂತಿ) :– 'ಅಲ್ಲ' ಎನ್ನುತ್ತೇವೆ, ತೇಜಸ್ಸು ಪ್ರಥಮವೆಂಬುದಕ್ಕೆ ಅನುಸಾರವಾಗಿ ಶ್ರುತ್ಯಂತರದಲ್ಲಿ ಪ್ರಸಿದ್ಧವಾಗಿರುವ ಆಕಾಶಪದಾರ್ಥವನ್ನು ಬಿಡುವದಾಗುವದೇ ಇಲ್ಲ. ಏಕೆಂದರೆ ಕ್ರಮವೆಂಬುದು ಪದಾರ್ಥದ ಧರ್ಮವಾಗಿರುತ್ತದೆ.[1] ಇದಲ್ಲದೆ 'ಅದು ತೇಜಸ್ಸನ್ನು ಸೃಜಿಸಿತು' ಎಂಬಲ್ಲಿ ಕ್ರಮವನ್ನು ಹೇಳುವ ಯಾವ ಶಬ್ದವೂ ಇಲ್ಲ. ಆದರೆ ಅರ್ಥವಶದಿಂದ ಕ್ರಮವೂ ತಿಳಿಯಬರುತ್ತದೆ. ಆ (ಕ್ರಮವು) "ವಾಯುವಿನಿಂದ ಅಗ್ನಿಯು (ಉಂಟಾಯಿತು)" (ತೈ. ೨-೧) ಎಂಬ ಶ್ರುತ್ಯಂತರದಲ್ಲಿ ಪ್ರಸಿದ್ಧವಾಗಿರುವ ಕ್ರಮದಿಂದ ಬಾಧಿತವಾಗುತ್ತದೆ.[2] ಆಕಾಶ, ತೇಜಸ್ಸು– (ಇವುಗಳಲ್ಲಿ ಯಾವದು) ಮೊದಲು ಹುಟ್ಟಿತೆಂಬ ವಿಷಯದಲ್ಲಿ ವಿಕಲ್ಪಸಮುಚ್ಚಯಗಳೋ ಎಂದರೆ ಅಸಂಭವ, ಅನಭ್ಯುಪಗಮ– (ಎಂಬ ಹೇತು)ಗಳಿಂದಲೇ ನಿವಾರಿತವಾಗುತ್ತವೆ.[3] ಆದ್ದರಿಂದ (ಈ ಎರಡು) ಶ್ರುತಿಗಳಿಗೆ (ಒಂದಕ್ಕೊಂದಕ್ಕೆ) ವಿರೋಧವಿಲ್ಲ.

ಇದೂ ಅಲ್ಲದೆ ಛಾಂದೋಗ್ಯದಲ್ಲಿ "ಯಾವದರಿಂದ ಅಶ್ರುತವಾದದ್ದು ಶ್ರುತವಾಗುತ್ತದೆಯೋ" ಎಂಬೀ ಪ್ರತಿಜ್ಞೆಯನ್ನು ವಾಕ್ಯದ ಉಪಕ್ರಮದಲ್ಲಿ ಶ್ರುತಿಯು ಹೇಳಿರುವದರಿಂದ (ಅದನ್ನು) ಸಮರ್ಥಿಸುವದಕ್ಕೆ ಆಕಾಶದ ಉತ್ಪತ್ತಿಯನ್ನು (ಶ್ರುತಿಯಲ್ಲಿ) ಹೇಳದೆ ಇರುವದನ್ನು ಕೂಡ ಸೇರಿಸಿಕೊಳ್ಳಬೇಕಾಗಿರುತ್ತದೆ. (ಹೀಗಿರುವಲ್ಲಿ) ತೈತ್ತಿರೀಯಕದಲ್ಲಿ ಹೇಳಿರುವ ಆಕಾಶವನ್ನು ಸೇರಿಸಿಕೊಳ್ಳದೆ ಇರಲು ಕಾರಣವೇನಯ್ಯ ?

## ಪ್ರತಿಜ್ಞಾವಾಕ್ಯಕ್ಕೆ ಕ್ಷೀರೋದಕನ್ಯಾಯದಂತೆ ಅರ್ಥಮಾಡಬಾರದು

(ಭಾಷ್ಯ)

೯೭. ಯಚ್ಚೋಕ್ತಮ್ ಆಕಾಶಸ್ಯ ಸರ್ವೇಣ ಅನನ್ಯದೇಶಕಾಲತ್ವಾತ್ ಬ್ರಹ್ಮಣಾ ತತ್ಕಾರ್ಯೈಶ್ಚ ಸಹ ವಿದಿತಮೇವ ತದ್ ಭವತಿ । ಅತಃ ನ ಪ್ರತಿಜ್ಞಾ ಹೀಯತೇ । ನ ಚ 'ಏಕಮೇವಾದ್ವಿತೀಯಮ್' ಇತಿ ಶ್ರುತಿಕೋಪೋ ಭವತಿ । ಕ್ಷೀರೋದಕವತ್ ಬ್ರಹ್ಮನಭಸೋಃ ಅವ್ಯತಿರೇಕೋಪಪತ್ತೇಃ ಇತಿ । ಅತ್ರೋ

1. ಧರ್ಮಕ್ಕಿಂತ ಧರ್ಮಿಯು ಮುಖ್ಯವಾದ್ದರಿಂದ ಕ್ರಮವೆಂಬ ಧರ್ಮವನ್ನು ಕಡೆಗಣಿಸಿ ಧರ್ಮಿಯಾದ ಆಕಾಶಪದಾರ್ಥವನ್ನು ತೆಗೆದುಕೊಳ್ಳಬೇಕು ಎಂದರ್ಥ.

2. ಅರ್ಥವಶದಿಂದ ಪರಂಪರೆಯಾಗಿ ತಿಳಿದುಬರುವ ಕ್ರಮಕ್ಕಿಂತ ಶ್ರುತಿಯಿಂದ ನೇರಾಗಿ ಗೊತ್ತಾಗುವ ಕ್ರಮವು ಪ್ರಬಲ ಎಂದರ್ಥ.

3. ಆಕಾಶವೋ ತೇಜಸ್ಸೋ ಯಾವದಾದರೊಂದು ಮೊದಲು ಹುಟ್ಟಿತು ಎಂಬುದು ವಿಕಲ್ಪ ; ಎರಡೂ ಮೊದಲು ಹುಟ್ಟಿದವು ಎಂಬುದು ಸಮುಚ್ಚಯ. ಇವೆರಡೂ ಅಸಂಭವ, ಒಪ್ಪಿರುವದೂ ಅಲ್ಲ.

ಚ್ಯತೇ । ನ ಕ್ಷೀರೋದಕನ್ಯಾಯೇನ ಇದಮ್ ಏಕವಿಜ್ಞಾನೇನ ಸರ್ವವಿಜ್ಞಾನಂ ನೇತವ್ಯಮ್ । ಮೃದಾದಿದೃಷ್ಟಾನ್ತಪ್ರಣಯನಾದ್ ಹಿ ಪ್ರಕೃತಿವಿಕಾರನ್ಯಾಯೇನೈವ ಇದಂ ಸರ್ವವಿಜ್ಞಾನಂ ನೇತವ್ಯಮ್ ಇತಿ ಗಮ್ಯತೇ । ಕ್ಷೀರೋದಕನ್ಯಾಯೇನ ಚ ಸರ್ವವಿಜ್ಞಾನಂ ಕಲ್ಪ್ಯಮಾನಂ ನ ಸಮ್ಯಗ್ವಿಜ್ಞಾನಂ ಸ್ಯಾತ್ । ನ ಹಿ ಕ್ಷೀರಜ್ಞಾನಗೃಹೀತಸ್ಯ ಉದಕಸ್ಯ ಸಮ್ಯಗ್ವಿಜ್ಞಾನಗೃಹೀತತ್ವಮ್ ಅಸ್ತಿ । ನ ಚ ವೇದಸ್ಯ ಪುರುಷಾಣಾಮಿವ ಮಾಯಾಲೀಕವಞ್ಚನಾದಿಭಿಃ ಅರ್ಥಾವಧಾರಣಮ್ ಉಪಪದ್ಯತೇ । ಸಾವಧಾರಣಾ ಚ ಇಯಂ 'ಏಕಮೇವಾದ್ವಿತೀಯಮ್' ಇತಿ ಶ್ರುತಿಃ ಕ್ಷೀರೋದಕನ್ಯಾಯೇನ ನೀಯಮಾನಾ ಪೀಡ್ಯೇತ । ನ ಚ ಸ್ವಕಾರ್ಯಾಪೇಕ್ಷಯಾ ಇದಂ ವಸ್ತ್ವೇಕದೇಶವಿಷಯಂ ಸರ್ವವಿಜ್ಞಾನಮ್ ಏಕಮೇವಾದ್ವಿತೀಯತಾವಧಾರಣಂ ಚ ಇತಿ ನ್ಯಾಯ್ಯಮ್ । ಮೃದಾದಿಷ್ವಪಿ ಹಿ ತತ್ಸಂಭವಾತ್ ನ ತದಪೂರ್ವವತ್ ಉಪನ್ಯಸಿತವ್ಯಂ ಭವತಿ "ಶ್ವೇತಕೇತೋ ಯನ್ನು ಸೋಮ್ಯೇದಂ ಮಹಾಮನಾ ಅನೂಚಾನಮಾನೀ ಸ್ತಬ್ಧೋಽಸ್ಯುತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತಿ" (ಛಾಂ. ೬-೧-೧) ಇತ್ಯಾದಿನಾ । ತಸ್ಮಾತ್ ಅಶೇಷವಸ್ತುವಿಷಯಮೇವೇದಂ ಸರ್ವವಿಜ್ಞಾನಂ ಸರ್ವಸ್ಯ ಬ್ರಹ್ಮಕಾರ್ಯತಾಪೇಕ್ಷಯಾ ಉಪನ್ಯಸ್ಯತೇ ಇತಿ ದ್ರಷ್ಟವ್ಯಮ್ ॥

(ಭಾಷ್ಯಾರ್ಥ)

ಇನ್ನು ಆಕಾಶವು ಎಲ್ಲ (ವಸ್ತುಗಳ ದೇಶಕಾಲಕ್ಕಿಂತ) ಅನನ್ಯವಾದ ದೇಶಕಾಲಗಳುಳ್ಳದ್ದಾದ್ದರಿಂದ ಬ್ರಹ್ಮ ಮತ್ತು ಅದರ ಕಾರ್ಯಗಳೊಡನೆ ಅದನ್ನೂ ಅರಿತುಕೊಂಡಂತೆಯೇ ಆಗುತ್ತದೆ. ಆದ್ದರಿಂದ ಪ್ರತಿಜ್ಞೆಯನ್ನು ಬಿಟ್ಟಂತೆ ಆಗುವದಿಲ್ಲ. 'ಎರಡನೆಯದಿಲ್ಲದ ಒಂದೇ' ಎಂಬ ಶ್ರುತಿಗೂ ವಿರುದ್ಧವಾಗುವದಿಲ್ಲ; ಹಾಲುನೀರುಗಳಂತೆ ಬ್ರಹ್ಮಾಕಾಶಗಳು ಅವ್ಯತಿರಿಕ್ತವಾಗಿರಬಹುದು- ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದಕ್ಕೆ ಹೇಳುತ್ತೇವೆ. ಒಂದನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತಾಗುವದೆಂಬ ಈ (ಪ್ರತಿಜ್ಞೆಯನ್ನು) ಕ್ಷೀರೋದಕನ್ಯಾಯದಿಂದ ಎಳೆದು (ಅರ್ಥಮಾಡ)ತಕ್ಕದ್ದಲ್ಲ. ಏಕೆಂದರೆ ಮಣ್ಣು ಮುಂತಾದ ದೃಷ್ಟಾಂತವನ್ನು ತಂದಿರುವದರಿಂದ ಪ್ರಕೃತಿವಿಕಾರನ್ಯಾಯದಿಂದಲೇ ಈ ಸರ್ವವಿಜ್ಞಾನ (ಪ್ರತಿಜ್ಞೆಯನ್ನು) ನಯಿಸಬೇಕೆಂದು ಗೊತ್ತಾಗುತ್ತದೆ.[1] ಸರ್ವವಿಜ್ಞಾನವನ್ನು ಕ್ಷೀರೋದಕನ್ಯಾಯದಿಂದ

1. ಮಣ್ಣಿನ ದೃಷ್ಟಾಂತದಿಂದ ಪ್ರಕೃತಿವಿಕಾರನ್ಯಾಯವನ್ನು ಅನುಸರಿಸುವದೆಂದರೆ ಉಪಾದಾನವಾದ ಬ್ರಹ್ಮದ ಜ್ಞಾನದಿಂದ ವಿಕಾರವಾದ ಆಕಾಶಾದಿಗಳನ್ನೆಲ್ಲವನ್ನೂ ಅರಿತಂತೆ ಆಗುವದು ಎಂದು ಭಾವಿಸುವದು. ಪ್ರಕೃತಿಯಾದ ಮಣ್ಣಿನಂತೆ ಬ್ರಹ್ಮವು ಸಾವಯವವೂ ಪರಿಣಾಮಿಯೂ ಆಗಿರುವದೆಂದು ಕಲ್ಪಿಸುವದೇನೂ ಅಲ್ಲ.

ಕಲ್ಪಿಸಿದರೆ (ಅದು) ಸಮ್ಯಗ್ವಿಜ್ಞಾನವೂ ಆಗಲಾರದು. ಏಕೆಂದರೆ ಹಾಲಿನ ಜ್ಞಾನದಿಂದ ಗೃಹೀತವಾಗಿರುವ ನೀರು ಸಮ್ಯಗ್ಜ್ಞಾನದಿಂದ ಗೃಹೀತವಾಗಿರುವದಿಲ್ಲವಷ್ಟೆ.[1] ವೇದವು ಪುರುಷರಂತೆ ಮಾಯೆ, ಅಲೀಕ, ವಂಚನೆ– ಮುಂತಾದವುಗಳಿಂದ ಅರ್ಥವನ್ನು ನಿಶ್ಚಯಿಸುತ್ತದೆ ಎಂಬುದು ಯುಕ್ತವೂ ಅಲ್ಲ.[2] ಇದಲ್ಲದೆ ಎರಡನೆಯದಿಲ್ಲದ ಒಂದೇ ಎಂದು ಒತ್ತಿ ಹೇಳಿರುವ ಈ ಶ್ರುತಿಯನ್ನು ಕ್ಷೀರೋದಕನ್ಯಾಯದಿಂದ ನಯಿಸದರೆ ( ಇದಕ್ಕೆ ) ವಿರೋಧವಾಗುವದು. ಸ್ವಕಾರ್ಯಗಳ ಅಪೇಕ್ಷೆಯಿಂದಲೇ ವಸ್ತುವಿನ ಏಕದೇಶದ ವಿಷಯದ (ವಿಜ್ಞಾನ) ವಾದ ಸರ್ವವಿಜ್ಞಾನವನ್ನೂ, ಎರಡನೆಯದಿಲ್ಲದ ಒಂದೇ ಎಂಬ ಅವಧಾರಣೆಯನ್ನೂ ಹೇಳಿದೆ ಎಂಬುದೂ ಯುಕ್ತವಲ್ಲ. ಏಕೆಂದರೆ ಆ (ಏಕದೇಶವಿಷಯ ಜ್ಞಾನವು) ಮಣ್ಣು ಮುಂತಾದವುಗಳಿಗೂ ಹೊಂದುವದರಿಂದ ಅದು "ಸೋಮ್ಯ, ಶ್ವೇತಕೇತು, ಹೀಗೆ ಮಹಾಮಾನಿಯಾಗಿ ಪ್ರವಚನಸಮರ್ಥನೆಂದು (ನಿನ್ನನ್ನು ನೀನೇ) ತಿಳಿದುಕೊಂಡು ಸೆಟೆದುಕೊಂಡಿರುವೆಯಲ್ಲ ! ಯಾವದರಿಂದ ಅಶ್ರುತವೂ ಶ್ರುತವಾಗುತ್ತದೆಯೋ........ ಆ ಆದೇಶವನ್ನು ಕೇಳಿರುವೆಯೇನು ? " (ಛಾಂ. ೬–೧–೧) ಎಂದು ಮುಂತಾದ ವಾಕ್ಯದಿಂದ ಅಪೂರ್ವ(ವಿಷಯ)ದಂತೆ ಹೇಳತಕ್ಕದ್ದಾಗುವದಿಲ್ಲ. ಆದ್ದರಿಂದ ಎಲ್ಲವೂ ಬ್ರಹ್ಮಕಾರ್ಯವಾಗಿರುವದರಿಂದ ಎಲ್ಲಾ ವಸ್ತುಗಳ ವಿಷಯವಾಗಿಯೇ ಈ ಸರ್ವವಿಜ್ಞಾನವನ್ನು ಹೇಳಿರುತ್ತದೆ ಎಂದು ತಿಳಿಯಬೇಕು.

**ಯಾವದ್ವಿಕಾರಂ ತು ವಿಭಾಗೋ ಲೋಕವತ್ ॥ ೭ ॥**

೭. ಆದರೆ ವಿಕಾರವಿರುವವರೆಗೂ ವಿಭಾಗವಿರುತ್ತದೆ ; ಲೋಕ(ದಲ್ಲಿ ಕಂಡಿರು)ವಂತೆಯೇ.

## ಆಕಾಶನಿತ್ಯತ್ವವಾದದ ಖಂಡನೆ

(ಭಾಷ್ಯ)

೯೮. ಯತ್ಪುನರೇತದುಕ್ತಮ್— ಅಸಂಭವಾದ್ ಗೌಣೀ ಗಗನಸ್ಯ

1. ಬೆಳ್ಳಿಯೆಂದು ಕಪ್ಪೆಯಚಿಪ್ಪನ್ನು ಗ್ರಹಿಸಿದ್ದು ಮಿಥ್ಯಾಜ್ಞಾನವಾದೀತೇ ಹೊರತು ಕಪ್ಪೆಯಚಿಪ್ಪಿನ ಸಮ್ಯಗ್ಜ್ಞಾನವಾಗದು. ಇದರಂತೆ ನೀರನ್ನು ಹಾಲೆಂದು ಗ್ರಹಿಸಿದ್ದೂ ಸಮ್ಯಗ್ಜ್ಞಾನವಲ್ಲ.

2. ಇಲ್ಲದ್ದನ್ನು ಇದ್ದಂತೆ ತೋರಿಸುವದು ಮಾಯೆ ; ಇರುವದನ್ನು ಇಲ್ಲವೆನ್ನುವದು ಅಲೀಕ ; ಜನರನ್ನು ತಪ್ಪುದಾರಿಗೆ ಒಯ್ಯುವದು ವಂಚನೆ– ಈ ದೋಷಗಳು ಪುರುಷರಲ್ಲಿರಬಹುದು, ಅಪೌರುಷೇಯವಾದ ವೇದದಲ್ಲಿರಲಾರವು. ಕ್ಷೀರೋದಕನ್ಯಾಯವನ್ನು ಏಕದೇಶಿಯಾದ ಗೌಣವಾದಿಯು ಹೇಳಿದ್ದರೂ ಈ ವಾದದಲ್ಲಿಯೂ ಶ್ರುತಿಗೆ ಅಪ್ರಾಮಾಣ್ಯವೇ ಬರುತ್ತದೆ ಎಂಬುದನ್ನು ಸೂಚಿಸುವದಕ್ಕಾಗಿ ಪೂರ್ವಪಕ್ಷಿಗಳ ವಾದಗಳ ಜೊತೆಗೇ ಇದನ್ನೂ ಸೇರಿಸಿರುತ್ತದೆ.

ಉತ್ಪತ್ತಿಃ ಇತಿ । ಅತ್ರ ಬ್ರೂಮಃ -- (ಯಾವದ್ವಿಕಾರಂ ತು ವಿಭಾಗೋ ಲೋಕವತ್) । ತುಶಬ್ದಃ ಅಸಂಭವಾಶಙ್ಕಾವ್ಯಾವೃತ್ತ್ಯರ್ಥಃ । ನ ಖಲು ಆಕಾಶೋತ್ಪತ್ತೌ ಅಸಂಭವಾಶಙ್ಕಾ ಕರ್ತವ್ಯಾ, ಯತಃ ಯಾವತ್ ಕಿಂಚಿತ್ ವಿಕಾರಜಾತಂ ದೃಶ್ಯತೇ ಘಟಘಟಿಕೋದಞ್ಚನಾದಿ ವಾ ಕಟಕಕೇಯೂರ ಕುಣ್ಡಲಾದಿ ವಾ ಸೂಚೀನಾರಾಚನಿಸ್ತ್ರಿಂಶಾದಿ ವಾ ತಾವಾನೇವ ವಿಭಾಗಃ ಲೋಕೇ ಲಕ್ಷ್ಯತೇ । ನ ತು ಅವಿಕೃತಂ ಕಿಂಚಿತ್ ಕುತಶ್ಚಿತ್ ವಿಭಕ್ತಮ್ ಉಪಲಭ್ಯತೇ । ವಿಭಾಗಶ್ಚ ಆಕಾಶಸ್ಯ ಪೃಥಿವ್ಯಾದಿಭ್ಯೋಽವಗಮ್ಯತೇ । ತಸ್ಮಾತ್ ಸೋಽಪಿ ವಿಕಾರೋ ಭವಿತುಮರ್ಹತಿ । ಏತೇನ ದಿಕ್ಕಾಲಮನಃಪರಮಾಣ್ವಾದೀನಾಂ ಕಾರ್ಯತ್ವಂ ವ್ಯಾಖ್ಯಾತಮ್ ॥

(ಭಾಷ್ಯಾರ್ಥ)

ಇನ್ನು (ಉತ್ಪತ್ತಿಯು) ಸಂಭವಿಸುವದಿಲ್ಲವಾದ್ದರಿಂದ ಆಕಾಶದ ಉತ್ಪತ್ತಿಯು ಗೌಣವು ಎಂಬೀ (ಪಕ್ಷವನ್ನು) ಹೇಳಿತ್ತಷ್ಟೆ. ಅದಕ್ಕೆ ಹೇಳುತ್ತೇವೆ. ('ಯಾವದ್ವಿಕಾರಂ ತು ವಿಭಾಗೋ ಲೋಕವತ್' । ಈ ಸೂತ್ರದಲ್ಲಿ) ತು ಶಬ್ದವು ಅಸಂಭವಶಂಕೆಯನ್ನು ತಳ್ಳಿಹಾಕುವದಕ್ಕಾಗಿ (ಬಂದಿರುತ್ತದೆ). ಆಕಾಶದ ಉತ್ಪತ್ತಿ(ವಿಷಯ)ದಲ್ಲಿ ಅಸಂಭವದ ಆಶಂಕೆಯನ್ನು ಮಾಡತಕ್ಕದ್ದೇ ಅಲ್ಲ. ಏಕೆಂದರೆ ವಿಕಾರಸಮೂಹವು ಎಷ್ಟೆಷ್ಟು ಕಂಡಿದೆಯೋ– ಗಡಿಗೆ, ಚರಿಗೆ, ಹರವಿ ಮುಂತಾದದ್ದಾಗಲಿ ಕಡಗ, ವಂಕಿ, ಒಂಟಿ ಮುಂತಾದವುಗಳಾಗಲಿ, ಸೂಜಿ, ಬಾಣ, ಕತ್ತಿ ಮುಂತಾದವುಗಳಾಗಲಿ (ಎಷ್ಟು ಕಾರ್ಯವಿರುವದೋ)– ಅಷ್ಟೇ ವಿಭಾಗವು ಲೋಕದಲ್ಲಿ ಕಂಡಿರುತ್ತದೆ. ಅವಿಕೃತವಾದದ್ದು ಯಾವದೂ ಮತ್ತೊಂದರಿಂದ ವಿಭಕ್ತವಾಗಿರುವದು ಕಂಡುಬರುವದಿಲ್ಲ. ಆದರೆ ಆಕಾಶವು **ಪೃಥಿವ್ಯಾದಿಗಳಿಗಿಂತ ವಿಭಕ್ತವಾಗಿದೆ ಎಂದು ನಿಶ್ಚಯವಾಗಿರುತ್ತದೆ; ಆದ್ದರಿಂದ ಅದೂ ವಿಕಾರವಾಗಿರಬೇಕೆಂದಾಯಿತು.**[1] **ಇದರಿಂದ ದಿಕ್ಕು, ಕಾಲ, ಮನಸ್ಸು, ಪರಮಾಣು– ಮುಂತಾದವುಗಳೂ ಕಾರ್ಯವೆಂದು ತಿಳಿಸಿದಂತೆಯೇ ಆಯಿತು.**[2]

---

1. ಆಕಾಶವು ಕಾರ್ಯವಾಗಿದೆ; ಏಕೆಂದರೆ ಅದು ಘಟಾದಿಕಾರ್ಯಗಳಂತೆ ವಿಭಕ್ತವಾಗಿದೆ– ಎಂಬ ಅನುಮಾನವನ್ನು ಇಲ್ಲಿ ಹೇಳಿದೆ. ವೈಶೇಷಿಕನ ಅನುಮಾನಕ್ಕೆ ಇದು ಪ್ರತ್ಯನುಮಾನ.

2. ನ ಚ ಪರಮಸೂಕ್ಷ್ಮಾಣಾಂ ಭೂತಾನಾಮ್ ಆಕಾಶಕಾಲದಿಗಾತ್ಮಮನಸಾಂ ತದ್ಗುಣಾನಾಂ ಚ ಕೇಷಾಂಚಿತ್ ಸಾಮಾನ್ಯವಿಶೇಷಸಮವಾಯಾನಾಂ ಚ ಉತ್ಪತ್ತಿವಿನಾಶಧರ್ಮಕತ್ವಂ ಪ್ರಮಾಣತ ಉಪಲಭ್ಯತೇ । ತಸ್ಮಾತ್ ನಿತ್ಯಾನ್ಯೇತಾನಿ– ಎಂಬ ನ್ಯಾ.ಭಾ. ೪–೧–೨೮ ಅಭಿಪ್ರಾಯದ ಖಂಡನೆಯಿದು.

# ಆತ್ಮನು ಕಾರ್ಯನಲ್ಲ

(ಭಾಷ್ಯ)

೯೯. ನನು ಆತ್ಮಾಪಿ ಆಕಾಶಾದಿಭ್ಯೋ ವಿಭಕ್ತಃ ಇತಿ ತಸ್ಯಾಪಿ ಕಾರ್ಯತ್ವಂ ಘಟಾದಿವತ್ ಪ್ರಾಪ್ನೋತಿ । ನ । 'ಆತ್ಮನ ಆಕಾಶಃ ಸಂಭೂತಃ' (ತೈ. ೨-೧) ಇತಿ ಶ್ರುತೇಃ । ಯದಿ ಹಿ ಆತ್ಮಾಪಿ ವಿಕಾರಃ ಸ್ಯಾತ್ ತಸ್ಮಾತ್ ಪರಮ್ ಅನ್ಯತ್ ನ ಶ್ರುತಮ್ ಇತಿ ಆಕಾಶಾದಿ ಸರ್ವಂ ಕಾರ್ಯಂ ನಿರಾತ್ಮಕಮ್ ಆತ್ಮನಃ ಕಾರ್ಯತ್ವೇ ಸ್ಯಾತ್ । ತಥಾ ಚ ಶೂನ್ಯವಾದಃ ಪ್ರಸಜ್ಯೇತ । ಆತ್ಮತ್ವಾಚ್ಚ ಆತ್ಮನೋ ನಿರಾಕರಣಶಙ್ಕಾನುಪಪತ್ತಿಃ । ನ ಹಿ ಆತ್ಮಾ ಆಗನ್ತುಕಃ ಕಸ್ಯಚಿತ್ । ಸ್ವಯಂಸಿದ್ಧತ್ವಾತ್ । ನ ಹಿ ಆತ್ಮಾ ಆತ್ಮನಃ ಪ್ರಮಾಣಮ್ ಅಪೇಕ್ಷ್ಯ ಸಿಧ್ಯತಿ । ತಸ್ಯ ಹಿ ಪ್ರತ್ಯಕ್ಷಾದೀನಿ ಪ್ರಮಾಣಾನಿ ಅಪ್ರಸಿದ್ಧಪ್ರಮೇಯಸಿದ್ಧಯೇ ಉಪಾದೀಯನ್ತೇ । ನ ಹಿ ಆಕಾಶಾದಯಃ ಪದಾರ್ಥಾಃ ಪ್ರಮಾಣನಿರಪೇಕ್ಷಾಃ ಸ್ವಯಂಸಿದ್ಧಾಃ ಕೇನಚಿತ್ ಅಭ್ಯುಪಗಮ್ಯನ್ತೇ । ಆತ್ಮಾ ತು ಪ್ರಮಾಣಾದಿವ್ಯವಹಾರಾಶ್ರಯತ್ವಾತ್ ಪ್ರಾಗೇವ ಪ್ರಮಾಣಾದಿವ್ಯವಹಾರಾತ್ ಸಿಧ್ಯತಿ । ನ ಚ ಈದೃಶಸ್ಯ ನಿರಾಕರಣಂ ಸಂಭವತಿ । ಆಗನ್ತುಕಂ ಹಿ ವಸ್ತು ನಿರಾಕ್ರಿಯತೇ ನ ಸ್ವರೂಪಮ್ । ಯ ಏವ ಹಿ ನಿರಾಕರ್ತಾ ತದೇವ ತಸ್ಯ ಸ್ವರೂಪಮ್ । ನ ಹಿ ಅಗ್ನೇಃ ಔಷ್ಣ್ಯಮ್ ಅಗ್ನಿನಾ ನಿರಾಕ್ರಿಯತೇ । ತಥಾ ಅಹಮೇವ ಇದಾನೀಂ ಜಾನಾಮಿ । ವರ್ತಮಾನಂ ವಸ್ತು ಅಹಮೇವ ಅತೀತಮ್ ಅತೀತತರಂ ಚ ಅಜ್ಞಾಸಿಷಮ್, ಅಹಮೇವ ಅನಾಗತಮ್ ಅನಾಗತತರಂ ಚ ಜ್ಞಾಸ್ಯಾಮಿ ಇತಿ ಅತೀತಾನಾಗತವರ್ತಮಾನಭಾವೇನ ಅನ್ಯಥಾ ಭವತ್ಯಪಿ ಜ್ಞಾತವ್ಯೇ ನ ಜ್ಞಾತುಃ ಅನ್ಯಥಾಭಾವಃ ಅಸ್ತಿ । ಸರ್ವದಾ ವರ್ತಮಾನಸ್ವಭಾವತ್ವಾತ್ । ತಥಾ ಭಸ್ಮೀಭವತ್ಯಪಿ ದೇಹೇ ನಾತ್ಮನಃ ಉಚ್ಛೇದಃ ವರ್ತಮಾನಸ್ವಭಾವಾತ್ ಅನ್ಯಥಾಸ್ವಭಾವತ್ವಂ ವಾ ನ ಸಂಭಾವಯಿತುಂ ಶಕ್ಯಮ್ । ಏವಮ್ ಅಪ್ರತ್ಯಾಖ್ಯೇಯಸ್ವಭಾವತ್ವಾದೇವ ಅಕಾರ್ಯತ್ವಮ್ ಆತ್ಮನಃ, ಕಾರ್ಯತ್ವಂ ಚ ಆಕಾಶಸ್ಯ ॥

(ಭಾಷ್ಯಾರ್ಥ)

(ಆಕ್ಷೇಪ) :- ಆತ್ಮನೂ ಆಕಾಶಾದಿಗಳಿಗಿಂತ ವಿಭಕ್ತನಾಗಿರುತ್ತಾನಾದ್ದರಿಂದ ಅವನೂ ಘಟಾದಿಗಳಂತೆ ಕಾರ್ಯವೆಂದಾಗುವದಲ್ಲ[1] !

---

1. ವಿಭಕ್ತತ್ವವೆಂಬ ಹೇತುವಿದ್ದರೂ ಕಾರ್ಯತ್ವವೆಂಬ ಸಾಧ್ಯವಿಲ್ಲವೆಂದಾಯಿತಲ್ಲ ! —ಎಂದು ಶಂಕೆ. ಎಲ್ಲಾ ವಸ್ತುಗಳೂ ಆತ್ಮನಕಾರ್ಯವಾಗಿರುವದರಿಂದ ಅವು ಆತ್ಮನನ್ನು ಬಿಟ್ಟು ಬೇರೆಯಿರುವದಿಲ್ಲ. ಆತ್ಮನು ದೇಶಕಾಲಗಳಿಗೂ ಕಾರಣನಾಗಿರುವದರಿಂದ ಅವನಿಗೆ ದೇಶಕಾಲಗಳಲ್ಲಿ ಪ್ರವಿಭಾಗವೂ ಇಲ್ಲ. ಅದರೂ ಪ್ರಕೃತದಲ್ಲಿ ಆತ್ಮನೂ ಕಾರ್ಯವೇಕಲ್ಲ ?— ಎಂಬುದೇ ಶಂಕೆಯಾಗಿರುವದರಿಂದ ಈ ಯುಕ್ತಿಯನ್ನು ಉಪಯೋಗಿಸುವಹಾಗಿಲ್ಲ.

(ಪರಿಹಾರ) :– ಹಾಗಲ್ಲ. ಏಕೆಂದರೆ "ಆತ್ಮನಿಂದ ಆಕಾಶವುಂಟಾಯಿತು" (ತೈ. ೨–೧) ಎಂದು ಶ್ರುತಿಯಿದೆ. ಆತ್ಮನೂ ವಿಕಾರವಾಗಿದ್ದರೆ ಅವನಿಗಿಂತ ಆಚೆಗೆ ಇನ್ನೊಂದನ್ನು ಶ್ರುತಿಯಲ್ಲಿ ಹೇಳಿರುವದಿಲ್ಲವಾದ್ದರಿಂದ ಆಕಾಶವೇ ಮುಂತಾದ ಕಾರ್ಯವೆಲ್ಲವೂ (ಆತ್ಮನು ಕಾರ್ಯವಾಗಿರುವದರಿಂದ)[1] ನಿರಾತ್ಮಕವೆಂದಾಗುವದು[2]. ಹಾಗಾದರೆ ಶೂನ್ಯವಾದವೇ ಪ್ರಸಕ್ತವಾಗುವದು[3]. ಆದರೆ **ಆತ್ಮನಾಗಿರುವದರಿಂದಲೇ ಆತ್ಮನನ್ನು ನಿರಾಕರಿಸುವ ಶಂಕೆಯುಂಟಾಗುವದಿಲ್ಲ.** (ಇದರ ವಿವರ): ಆತ್ಮನು ಯಾರೊಬ್ಬನಿಗೂ ಆಗಂತುಕನಲ್ಲ ; ಏಕೆಂದರೆ (ಅವನು) ಸ್ವಯಂಸಿದ್ಧನಾಗಿರುತ್ತಾನೆ. **ಆತ್ಮನು ತನ್ನ (ವಿಷಯದ) ಪ್ರಮಾಣವನ್ನು ಬಯಸಿ ಸಿದ್ಧನಾಗುವದಿಲ್ಲ. ಏಕೆಂದರೆ ಅವನೇ ಅಪ್ರಸಿದ್ಧವಾಗಿರುವ ಪ್ರತ್ಯಕ್ಷಾದಿಪ್ರಮಾಣಗಳನ್ನು ಸ್ವೀಕರಿಸಬೇಕಾಗಿರುತ್ತದೆ. ಆಕಾಶಾದಿಪದಾರ್ಥಗಳು ಪ್ರಮಾಣದ ಅಪೇಕ್ಷೆಯಿಲ್ಲದೆ ತಾವೇ ಸಿದ್ಧವಾಗಿರುತ್ತವೆ ಎಂದು ಯಾವನೂ ಒಪ್ಪಿರುವದಿಲ್ಲ. ಆತ್ಮನಾದರೋ ಪ್ರಮಾಣಾದಿವ್ಯವಹಾರಕ್ಕೆ ಆಶ್ರಯನಾಗಿರುವದರಿಂದ ಪ್ರಮಾಣಾದಿವ್ಯವಹಾರಕ್ಕಿಂತ ಮೊದಲೇ ಸಿದ್ಧಿಯಾಗಿರುತ್ತಾನೆ[4]. ಇಂಥವನನ್ನು ನಿರಾಕರಣೆಮಾಡುವದು ಆಗುವ ಹಾಗಿಲ್ಲ.** ಏಕೆಂದರೆ ಆಗಂತುಕವಾದ ವಸ್ತುವನ್ನು ನಿರಾಕರಣೆಮಾಡುವದಕ್ಕೆ ಆಗುತ್ತದೆಯೇ ಹೊರತು ಸ್ವರೂಪವನ್ನೇ ನಿರಾಕರಣೆಮಾಡುವದಕ್ಕೆ ಆಗುವದಿಲ್ಲ ; ಏಕೆಂದರೆ ಯಾವನು ನಿರಾಕರಣೆಮಾಡಬೇಕೋ ಅವನೇ ತನ್ನ ಸ್ವರೂಪವು. ಬೆಂಕಿಯ ಬಿಸಿಯನ್ನು ಬೆಂಕಿಯು ನಿರಾಕರಿಸುವದಕ್ಕೆ ಆಗುವದಿಲ್ಲ. ಮತ್ತು ನಾನೇ ಈಗ ವರ್ತಮಾನವಸ್ತುವನ್ನು ಅರಿಯುತ್ತಿದೇನೆ ; ನಾನೇ ಹಿಂದಿನ ಮತ್ತು ಅದಕ್ಕೂ ಹಿಂದಿನ ( ವಸ್ತುವನ್ನು ) ಅರಿಯುತ್ತಿದ್ದೆನು ; ನಾನೇ ಮುಂದಿನ ಮತ್ತು ಅದಕ್ಕೂ ಮುಂದಿನ (ವಸ್ತುವನ್ನು) ಅರಿಯುತ್ತಿರುವೆನು–

---

1. ಕಂಸದಲ್ಲಿಟ್ಟಿರುವಷ್ಟು ಭಾಗವು ಪುನರುಕ್ತವಾಗಿರುವಂತೆ ತೋರುವದು.

2. ಕಾರ್ಯವೆಲ್ಲವೂ ವಾಚಾರಂಭಣವೆಂದು ಶ್ರುತಿಯಲ್ಲಿ ಹೇಳಿದೆ ; ಆತ್ಮನೂ ಕಾರ್ಯವೇ ಎಂದರೆ ಅನೃತವೇ ಆಗುವದರಿಂದ ಯಾವದಕ್ಕೂ ಆತ್ಮನೇ ಇಲ್ಲ, ಎಂದರೆ ಪರಮಾರ್ಥವಾದ ಸ್ವರೂಪವೇ ಇಲ್ಲ ಎಂದಾಗುವದು.

3. ಏಕೆಂದರೆ ಆತ್ಮನಿಗೂ ಕಾರಣವಾಗಿ ಮತ್ತೊಂದು ವಸ್ತುವನ್ನು ಶ್ರುತಿಯಲ್ಲಿ ಹೇಳಿಲ್ಲ ; ಹೇಳಿದ್ದರೂ ಅನುಮಾನದಿಂದ ಅದೂ ಕಾರ್ಯವೇ ಆಗಬೇಕಾಗುವದು.

4. ಸ್ವತಃಸಿದ್ಧನಾಗಿರುವ ಆತ್ಮನಿಗೇ ಪ್ರಮಾಣವು ಪ್ರಮೇಯಪರಿಚ್ಛಿತ್ತಿಗಾಗಿ ಬೇಕಾಗುತ್ತದೆ ; ಆತ್ಮಸಿದ್ಧಿಗೆ ಪ್ರಮಾಣವು ಬೇಡ ಎಂಬ ಅಭಿಪ್ರಾಯವು ಗೀ. ಭಾ. ೨–೧೮, ಛಾ. ಭಾ. ೮–೧೨ರಲ್ಲಿಯೂ ಇದೆ. ಆತ್ಮನು ಅಪ್ರಮೇಯನೆಂಬುದೇ ಶ್ರುತಿಸಿದ್ಧಾಂತವು.

ಎಂದು ಹಿಂದಿನದು, **ಈಗಿನದು, ಮುಂದಿನದು– ಎಂದು ಜ್ಞೇಯವು ಬೇರೆಬೇರೆಯಾಗುತ್ತಿದ್ದರೂ ಜ್ಞಾತೃವಿಗೆ ಅನ್ಯಥಾಭಾವವಿರುವದಿಲ್ಲ; ಏಕೆಂದರೆ (ಅವನು) ಯಾವಾಗಲೂ ವರ್ತಮಾನಸ್ವಭಾವದವನೇ** ಆಗಿರುತ್ತಾನೆ[1]. ಹೀಗೆಯೇ ದೇಹವು ಭಸ್ಮೀಭೂತವಾದರೂ ಆತ್ಮನಿಗೆ ನಾಶವಾಗಲಿ, ವರ್ತಮಾನಸ್ವಭಾವವನ್ನು ಬಿಟ್ಟು ಬೇರೆಯ ಸ್ವಭಾವವಾಗಲಿ ಬರುವದೆಂದು ಸಂಭಾವಿಸುವದಕ್ಕೆ ಆಗುವದಿಲ್ಲ[2]. (ಅಂತು) ಹೀಗೆ ಅಪ್ರತ್ಯಾಖ್ಯೇಯ ಸ್ವಭಾವದವನಾಗಿರುವದರಿಂದಲೇ ಆತ್ಮನು ಕಾರ್ಯವಲ್ಲ(ವೆಂದೂ) ಆಕಾಶವು ಕಾರ್ಯವೆಂದೂ (ಸಿದ್ಧವಾಯಿತು)[3].

## ವೈಶೇಷಿಕನ ಕಾರಣಸ್ವರೂಪವರ್ಣನೆ ಸರಿಯಲ್ಲ

( ಭಾಷ್ಯ )

೧೦೦. ಯತ್ತು ಉಕ್ತಮ್ ಸಮಾನಜಾತೀಯಮ್ ಅನೇಕಂ ಕಾರಣದ್ರವ್ಯಂ ವ್ಯೋಮ್ನೋ ನಾಸ್ತಿ ಇತಿ, ತತ್ ಪ್ರತ್ಯುಚ್ಯತೇ । ನ ತಾವತ್ ಸಮಾನಜಾತೀಯಮೇವ ಆರಭತೇ ನ ಭಿನ್ನಜಾತೀಯಮ್ ಇತಿ ನಿಯಮೋಽಸ್ತಿ । ನ ಹಿ ತನ್ತೂನಾಂ ತತ್ಸಂಯೋಗಾನಾಂ ಚ ಸಮಾನಜಾತೀಯತ್ವಮ್ ಅಸ್ತಿ । ದ್ರವ್ಯಗುಣತ್ವಾಭ್ಯುಪಗಮಾತ್ । ನ ಚ ನಿಮಿತ್ತಕಾರಣಾನಾಮಪಿ ತುರೀವೇಮಾದೀನಾಂ ಸಮಾನಜಾತೀಯತ್ವನಿಯಮೋಽಸ್ತಿ । ಸ್ಯಾದೇತತ್ । ಸಮವಾಯಿಕಾರಣವಿಷಯ ಏವ ಸಮಾನಜಾತೀಯತ್ವಾಭ್ಯುಪಗಮಃ, ನ ಕಾರಣಾನ್ತರವಿಷಯಃ ಇತಿ । ತದಪಿ ಅನೈಕಾನ್ತಿಕಮ್ । ಸೂತ್ರಗೋವಾಲೈರ್ಹಿ ಅನೇಕಜಾತೀಯೈಃ ಏಕಾ ರಜ್ಜುಃ ಸೃಜ್ಯಮಾನಾ ದೃಶ್ಯತೇ । ತಥಾ ಸೂತ್ರೈಃ

---

1. ಆತ್ಮನು ನಿತ್ಯವರ್ತಮಾನಸ್ವಭಾವದವನು ಎಂದರೆ ಹಿಂದೆ ಇದ್ದನು ಈಗ ಇಲ್ಲ ಎಂದಾಗಲಿ, ಮುಂದೆ ಉಂಟಾಗುವನು ಈಗ ಇಲ್ಲವೆಂದಾಗಲಿ, ಎಂದಿಗೂ ಕಲ್ಪಿಸುವದಕ್ಕೆ ಬಾರದೆ ಇರುವವನು ಎಂದರ್ಥ. ವರ್ತಮಾನಕಾಲಪರಿಚ್ಛಿನ್ನನು ಎಂದರ್ಥವಲ್ಲ.

2. ಯಾವ ವಸ್ತುವಿಗೆ ನಾಶವನ್ನಾಗಲಿ ಅನ್ಯಥಾಭಾವವನ್ನಾಗಲಿ ಕಲ್ಪಿಸುವದಕ್ಕೆ ಆಗುತ್ತದೆಯೋ ಅದು ಸವಿಕಾರವಾಗಿರುವದರಿಂದ ಕಾರ್ಯವೆಂದು ಒಪ್ಪಬೇಕಾಗುವದು. ಆದರೆ ಆತ್ಮನಿಗೆ ನಾಶವನ್ನಾಗಲಿ ಅನ್ಯಥಾಭಾವವನ್ನಾಗಲಿ ಕಲ್ಪಿಸುವದಕ್ಕೆ ಬರುವದಿಲ್ಲ. ಏಕೆಂದರೆ ಕಲ್ಪಿಸುವದಕ್ಕೇ ಆತ್ಮನು ಬೇಕು.

3. ಏಕೆಂದರೆ ಅದು ಆತ್ಮನಿಗಿಂತ ಬೇರೆಯಾಗಿರುವ ಅನಾತ್ಮವಾದದ್ದರಿಂದಲೂ ಮಿಕ್ಕಕಾರ್ಯಗಳಿಗಿಂತ ವಿಭಕ್ತವಾದದ್ದರಿಂದಲೂ ಅದನ್ನು ಅಲ್ಲಗಳೆಯಬಹುದು; ಅದಕ್ಕೆ ಅನ್ಯಥಾಭಾವವನ್ನೂ ನಾಶವನ್ನೂ ಶ್ರುತಿಯಲ್ಲಿ ಹೇಳಿಯೂ ಇರುತ್ತದೆ.

ಊರ್ಣಾದಿಭಿಶ್ಚ ವಿಚಿತ್ರಾನ್ ಕಮ್ಬಲಾನ್ ವಿತನ್ವತೇ । ಸತ್ತ್ವದ್ರವ್ಯತ್ವಾ ದ್ಯಪೇಕ್ಷಯಾ ವಾ ಸಮಾನಜಾತೀಯತ್ವೇ ಕಲ್ಪ್ಯಮಾನೇ ನಿಯಮಾನರ್ಥ ಕ್ಯಮ್ । ಸರ್ವಸ್ಯ ಸರ್ವೇಣ ಸಮಾನಜಾತೀಯಕತ್ವಾತ್ । ನಾಪಿ ಅನೇಕ ಮೇವ ಆರಭತೇ ನೈಕಮ್ ಇತಿ ನಿಯಮೋಽಸ್ತಿ । ಅಣುಮನಸೋಃ ಆದ್ಯಕರ್ಮಾರಮ್ಭಾಭ್ಯುಪಗಮಾತ್ । ಏಕೈಕೋ ಹಿ ಪರಮಾಣುಃ ಮನಶ್ಚ ಆದ್ಯಂ ಕರ್ಮ ಆರಭತೇ ನ ದ್ರವ್ಯಾನ್ತರೈಃ ಸಂಹತ್ಯ ಇತ್ಯಭ್ಯುಪಗಮ್ಯತೇ । ದ್ರವ್ಯಾರಮ್ಭೇ ಏವ ಅನೇಕಾರಮ್ಭಕತ್ವನಿಯಮಃ ಇತಿ ಚೇತ್ । ನ । ಪರಿ ಣಾಮಾಭ್ಯುಪಗಮಾತ್ । ಭವೇತ್ ಏಷ ನಿಯಮಃ ಯದಿ ಸಂಯೋಗಸಚಿವಂ ದ್ರವ್ಯಂ ದ್ರವ್ಯಾನ್ತರಸ್ಯ ಆರಮ್ಭಕಮ್ ಅಭ್ಯುಪಗಮ್ಯೇತ । ತದೇವ ತು ದ್ರವ್ಯಂ ವಿಶೇಷವತ್ ಅವಸ್ಥಾನ್ತರಮ್ ಆಪದ್ಯಮಾನಂ ಕಾರ್ಯಂ ನಾಮ ಅಭ್ಯುಪ ಗಮ್ಯತೇ । ತಚ್ಚ ಕ್ವಚಿತ್ ಅನೇಕಂ ಪರಿಣಮತೇ ಮೃದ್ಬೀಜಾದ್ಯಙ್ಕುರಾದಿ ಭಾವೇನ । ಕ್ವಚಿತ್ ಏಕಂ ಪರಿಣಮತೇ ಕ್ಷೀರಾದಿ ದಧ್ಯಾದಿಭಾವೇನ । ನೇಶ್ವರಶಾಸನಮಸ್ತಿ ಅನೇಕಮೇವ ಕಾರಣಂ ಕಾರ್ಯಂ ಜನಯತಿ ಇತಿ । ಅತಃ ಶ್ರುತಿಪ್ರಾಮಾಣ್ಯಾತ್ ಏಕಸ್ಮಾದ್ ಬ್ರಹ್ಮಣಃ ಆಕಾಶಾದಿಮಹಾ ಭೂತೋತ್ಪತ್ತಿಕ್ರಮೇಣ ಜಗತ್ ಜಾತಮ್ ಇತಿ ನಿಶ್ಚೀಯತೇ । ತಥಾ ಚ ಉಕ್ತಮ್– "ಉಪಸಂಹಾರದರ್ಶನಾತ್ ನೇತಿ ಚೇನ್ನ ಕ್ಷೀರವದ್ಧಿ" (೨–೧–೨೪) ಇತಿ ॥

(ಭಾಷ್ಯಾರ್ಥ)

ಇನ್ನು ಸಮಾನಜಾತಿಯ ಅನೇಕವಾದ ಕಾರಣದ್ರವ್ಯವು ಆಕಾಶಕ್ಕೆ ಇಲ್ಲ ಎಂದು (ಭಾ. ಭಾ. ೯೧) ಹೇಳಿತ್ತಷ್ಟೆ. ಅದಕ್ಕೆ ಉತ್ತರವನ್ನು ಹೇಳು ತ್ತೇವೆ. ಮೊದಲನೆಯದಾಗಿ ಸಮಾನಜಾತೀಯವಾದದ್ದೇ ಆರಂಭಕವು, ಭಿನ್ನಜಾತಿಯದ್ದು ಅಲ್ಲ ಎಂಬ ನಿಯಮವಿರುವದಿಲ್ಲ. ಹೇಗೆಂದರೆ ನೂಲುಗಳಿ ಗೂ ಅವುಗಳ ಸಂಯೋಗಕ್ಕೂ ಸಮಾನಜಾತೀಯತ್ವವಿಲ್ಲ; ಏಕೆಂದರೆ (ನೂಲುಗಳು) ದ್ರವ್ಯ(ಸಂಯೋಗವು) ಗುಣ– ಎಂದು (ವೈಶೇಷಿಕನು) ಒಪ್ಪಿರುತ್ತಾನೆ. ನಿಮಿತ್ತಕಾರಣವಾದ ಲಾಳಿ ಮಗ್ಗ ಮುಂತಾದವುಗಳಿಗೂ ಸಮಾನಜಾತಿಯವಾಗಿರುವದೆಂಬ ನಿಯಮವಿರುವದಿಲ್ಲ. (ಪೂರ್ವಪಕ್ಷಿಯ ಮತವು) ಸಮಾನಜಾತಿಯವೆಂದು (ನಾವು) ಒಪ್ಪಿರುವದು ಸಮವಾಯಿ ಕಾರಣದ ವಿಷಯದಲ್ಲಿಯೇ ಹೊರತು ಮಿಕ್ಕ ಕಾರಣಗಳ ವಿಷಯವಲ್ಲ ಎಂಬುದಾಗಿರಬಹುದು. (ಆದರೆ) ಅದೂ ಅನಿಯತವಾಗಿರುತ್ತದೆ. ಏಕೆಂದರೆ ಅನೇಕಜಾತಿಯವಾದ ದಾರ, ಗೋವಿನ ಕೂದಲು– ಇವುಗಳಿಂದ ಒಂದು ಹಗ್ಗವನ್ನು ಮಾಡುವದು ಕಂಡುಬರುತ್ತದೆ. ಹಾಗೂ ದಾರಗಳಿಂದಲೂ ಉಣ್ಣೆ– ಮುಂತಾದವುಗಳಿಂದಲೂ ರತ್ನಗಂಬಳಿಗಳನ್ನೂ ಮಾಡುತ್ತಾರೆ.

(ಅಲ್ಲಿ) ಸತ್ತ್ವ, ದ್ರವ್ಯತ್ವ– ಮುಂತಾದವುಗಳ ಅಪೇಕ್ಷೆಯಿಂದ ಸಮಾನ ಜಾತೀಯತ್ವವನ್ನು ಕಲ್ಪಿಸುವದಾದರಂತೂ ನಿಯಮವು ವ್ಯರ್ಥ. ಏಕೆಂದರೆ (ಆಗ) ಎಲ್ಲವೂ ಎಲ್ಲಕ್ಕೂ ಸಮಾನವಾದ ಜಾತಿಯದಾಗುವದು.

ಅನೇಕವೇ ಆರಂಭಕವು, ಒಂದಲ್ಲ– ಎಂಬ ನಿಯಮವೂ ಇಲ್ಲ. ಏಕೆಂದರೆ ಅಣು, ಮನಸ್ಸು– ಇವುಗಳು ಆದ್ಯಕರ್ಮಕ್ಕೆ ಆರಂಭಕವಾಗಿವೆ ಎಂದು (ವೈಶೇಷಿಕರು) ಒಪ್ಪಿರುತ್ತಾರೆ[1]. ಪರಮಾಣುವೂ ಮನಸ್ಸೂ ಒಂದೊಂದೇ ಆದ್ಯಕರ್ಮವನ್ನು ಆರಂಭಿಸುತ್ತವೆಯೇ ಹೊರತು ಬೇರೆ ದ್ರವ್ಯಗಳೊಡನೆ ಸೇರಿಕೊಂಡು ಆರಂಭಿಸುವದಿಲ್ಲ ಎಂದಲ್ಲವೆ, (ಅವರು) ಅಂಗೀಕರಿಸಿರುವರು ?

(ವೈಶೇಷಿಕ) :– ದ್ರವ್ಯಾರಂಭದಲ್ಲಿ ಮಾತ್ರ ಅನೇಕವು ಆರಂಭಕವಾಗಿರುವದೆಂಬ ನಿಯಮವನ್ನು (ನಾವು ಒಪ್ಪಿರುತ್ತೇವೆ)[2].

(ಸಿದ್ಧಾಂತಿ) :– ಹಾಗಲ್ಲ. ಏಕೆಂದರೆ ಪರಿಣಾಮವನ್ನು ಒಪ್ಪಿರುತ್ತೇವೆ. (ಇದರ ವಿವರ) : ಸಂಯೋಗಸಹಿತವಾದ (ಒಂದು) ದ್ರವ್ಯವು ಮತ್ತೊಂದು ದ್ರವ್ಯಕ್ಕೆ ಆರಂಭಕವೆಂದು ಒಪ್ಪುವದಾಗಿದ್ದರೆ ಈ ನಿಯಮವು ಆಗಬಹುದಾಗಿತ್ತು ; ಆದರೆ ಅದೇ ದ್ರವ್ಯವು ವಿಶೇಷವುಳ್ಳ ಅವಸ್ಥಾಂತರವನ್ನು ಹೊಂದಿದರೆ ಕಾರ್ಯವೆನಿಸುವದು ಎಂದು (ನಾವು) ಒಪ್ಪಿರುತ್ತೇವೆ. ಅದು ಕೆಲವು ಕಡೆಗಳಲ್ಲಿ ಅನೇಕವಾಗಿಯೇ ಪರಿಣಮಿಸುತ್ತದೆ ; ಉದಾಹರಣೆಗೆ ಮಣ್ಣು, ಬೀಜ– ಮುಂತಾದದ್ದು ಅಂಕುರವೇ ಮುಂತಾದ ರೂಪದಿಂದ ಪರಿಣಮಿಸುತ್ತದೆ ; ಕೆಲವು ಕಡೆಗಳಲ್ಲಿ ಒಂದೇ ಪರಿಣಮಿಸುತ್ತದೆ. ಉದಾಹರಣೆಗೆ ಕ್ಷೀರಾದಿಗಳು ದಧ್ಯಾದಿರೂಪದಿಂದ (ಪರಿಣಮಿಸುತ್ತವೆ)[3]. ಅನೇಕ ಕಾರಣವೇ ಕಾರ್ಯವನ್ನು ಉಂಟುಮಾಡುತ್ತದೆ ಎಂದು ರಾಜಾಜ್ಞೆಯೇನೂ ಇಲ್ಲ. ಆದ್ದರಿಂದ

---

1. ದ್ವ್ಯಣುಕಕ್ಕೂ ಜ್ಞಾನಕ್ಕೂ ಬೇಕಾದ ಸಂಯೋಗವನ್ನುಂಟುಮಾಡುವ ಕರ್ಮವು ಆದ್ಯಕರ್ಮ.

2. ಕರ್ಮಾರಂಭಕ್ಕೆ ಈ ನಿಯಮವಿಲ್ಲ.

3. ಮಣ್ಣಿಗೆ ಹೊರಗಿನ ಅನೇಕ ಕಾರಣಗಳು ಸಹಾಯವು ಬೇಕು, ಬೀಜಕ್ಕೂ ಬೇಕು ; ಆದರೆ ಹಾಲಿಗೆ ಬೇಡ. ಅದು ತಾನೊಂದೇ ಮೊಸರಾಗುತ್ತದೆ. ಕ್ಷೀರಪರಮಾಣುವು ದಧಿಪರಮಾಣುವಾಗುವದೆಂದು ಒಪ್ಪುವಾಗಲೂ ಒಂದನ್ನೇ ಕಾರಣವೆಂದು ವೈಶೇಷಿಕರೂ ಒಪ್ಪುತ್ತಾರೆ ; ಆದ್ದರಿಂದ ಕಾರಣವು ಅನೇಕವೇ ಆಗಿರಬೇಕೆಂಬ ನಿಯಮವೇನೂ ಇಲ್ಲ ಎಂದು ಭಾಮತಿಯಲ್ಲಿ ವಾದಿಸಿದೆ.

ಶ್ರುತಿಪ್ರಾಮಾಣ್ಯದಿಂದ ಒಂದೇ ಬ್ರಹ್ಮದಿಂದ ಆಕಾಶಾದಿಮಹಾಭೂತಗಳು ಉತ್ಪತ್ತಿಯಾಗುವ ಕ್ರಮದಿಂದ ಜಗತ್ತು ಉಂಟಾಯಿತು ಎಂದು ನಿಶ್ಚಿತವಾಗುತ್ತದೆ. ಹೀಗೆಂದು ಹಿಂದೆ "ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ" (೨-೧-೨೪) ಎಂಬಲ್ಲಿ ಹೇಳಿದ್ದಾಗಿದೆ.

## ಆಕಾಶಕ್ಕೆ ಪ್ರಾಗಭಾವಕಲ್ಪನೆಯೂ ಸುಲಭ

(ಭಾಷ್ಯ)

೧೦೧. ಯಚ್ಚೋಕ್ತಮ್ ಆಕಾಶಸ್ಯ ಉತ್ಪತ್ತೌ ನ ಪೂರ್ವೋತ್ತರಕಾಲಯೋರ್ವಿಶೇಷಃ ಸಂಭಾವಯಿತುಂ ಶಕ್ಯತ ಇತಿ । ತದಯುಕ್ತಮ್ । ಯೇನೈವ ಹಿ ವಿಶೇಷೇಣ ಪೃಥಿವ್ಯಾದಿಭ್ಯೋ ವ್ಯತಿರಿಚ್ಯಮಾನಂ ನಭಃ ಸ್ವರೂಪವತ್ ಇದಾನೀಮ್ ಅಧ್ಯವಸೀಯತೇ ಸ ಏವ ವಿಶೇಷಃ ಪ್ರಾಗುತ್ಪತ್ತೇಃ ನಾಸೀತ್ ಇತಿ ಗಮ್ಯತೇ । ಯಥಾ ಚ ಬ್ರಹ್ಮ ನ ಸ್ಥೂಲಾದಿಭಿಃ ಪೃಥಿವ್ಯಾದಿಸ್ವಭಾವೈಃ ಸ್ವಭಾವವತ್ "ಅಸ್ಥೂಲಮನಣು" (ಬೃ. ೩-೮-೮) ಇತ್ಯಾದಿಶ್ರುತಿಭ್ಯಃ, ಏವಮ್ ಆಕಾಶಸ್ವಭಾವೇನಾಪಿ ನ ಸ್ವಭಾವವತ್ 'ಅನಾಕಾಶಮ್' (ಬೃ. ೩-೮-೮) ಇತಿ ಶ್ರುತೇಃ ಅವಗಮ್ಯತೇ । ತಸ್ಮಾತ್ ಪ್ರಾಗುತ್ಪತ್ತೇಃ ಅನಾಕಾಶಮ್ ಇತಿ ಸ್ಥಿತಮ್ ॥

(ಭಾಷ್ಯಾರ್ಥ)

ಇನ್ನು ಆಕಾಶವು ಹುಟ್ಟುವದಾದರೆ ಹಿಂದುಮುಂದಿನ ಕಾಲಗಳಲ್ಲಿ ಯಾವ ವಿಶೇಷವನ್ನೂ ಸಂಭಾವಿಸುವದಕ್ಕೆ ಆಗುವಂತಿಲ್ಲ ಎಂದು (ಭಾ. ಭಾ. ೯೧ರಲ್ಲಿ) ಹೇಳಿತ್ತಷ್ಟೆ; ಅದು ಸರಿಯಲ್ಲ. ಏಕೆಂದರೆ ಯಾವ ವಿಶೇಷದಿಂದ ಪೃಥಿವ್ಯಾದಿಗಳಿಗಿಂತ ವ್ಯತಿರಿಕ್ತವಾದದ್ದು ಆಕಾಶವು ಈಗ ಸ್ವರೂಪವುಳ್ಳದ್ದೆಂದು ನಿಶ್ಚಿತವಾಗಿದೆಯೋ ಆ ವಿಶೇಷವೇ ಉತ್ಪತ್ತಿಗೆ ಪೂರ್ವದಲ್ಲಿ ಇರಲಿಲ್ಲ ಎಂದು ಗೊತ್ತುಮಾಡಬಹುದು[1]. ಮತ್ತು ಹೇಗೆ ಬ್ರಹ್ಮವು "ಅಸ್ಥೂಲ, ಅನಣು" (ಬೃ. ೩-೮-೮) ಮುಂತಾದ ಶ್ರುತಿಪ್ರಮಾಣದಿಂದ ಪೃಥಿವ್ಯಾದಿಗಳ ಸ್ವಭಾವವಾದ ಸ್ಥೂಲತ್ವಾದಿಗಳಿಂದ ಸ್ವಭಾವವುಳ್ಳದ್ದಲ್ಲವೋ[2] ಅದರಂತೆ ಆಕಾಶಸ್ವಭಾವದಿಂದಲೂ ಸ್ವಭಾವವುಳ್ಳದ್ದಲ್ಲ, ಎಂದು "ಅನಾಕಾಶವು" (ಬೃ. ೩-೮-೮) ಎಂಬ

1. ಅವಕಾಶಪ್ರದಾನವೆಂಬ ವಿಶೇಷವು ಈಗ ಕಾಣುತ್ತದೆ; ಅದು ಹಿಂದೆ ಇರಲಿಲ್ಲ.

2. ಸ್ಥೂಲತ್ವಾದಿಗಳು ಬ್ರಹ್ಮದ ಸ್ವರೂಪವೂ ಅಲ್ಲ, ಸ್ವಧರ್ಮವೂ ಅಲ್ಲ; ಅದರಂತೆ ಶಬ್ದಾಶ್ರಯತ್ವ, ಅವಕಾಶಪ್ರದತ್ವ- ಮುಂತಾದದ್ದೂ ಅದರ ಸ್ವಭಾವವಲ್ಲ.

ಶ್ರುತಿಯಿಂದ ಸಿದ್ಧಯುವಾಗುತ್ತದೆ. ಆದ್ದರಿಂದ ಆಕಾಶವೂ ಉತ್ಪತ್ತಿಯಾಗುವ ಮುಂಚೆ ಅನಾಕಾಶವಾಗಿರುತ್ತದೆ ಎಂಬುದೇ ನಿಲ್ಲುತ್ತದೆ[1].

## ಉಳಿದ ಆಕಾಶಾಜತ್ವಯುಕ್ತಿಗಳ ಖಂಡನೆ

(ಭಾಷ್ಯ)

೧೦೨. ಯದಪ್ಯುಕ್ತಮ್ ಪೃಥಿವ್ಯಾದಿವೈಧರ್ಮ್ಯಾತ್ ಆಕಾಶಸ್ಯ ಅಜತ್ವಮ್ ಇತಿ । ತದಪಿ ಅಸತ್ । ಶ್ರುತಿವಿರೋಧೇ ಸತಿ ಉತ್ಪತ್ತ್ಯಸಂಭವಾನುಮಾನಸ್ಯ ಆಭಾಸತ್ವೋಪಪತ್ತೇಃ । ಉತ್ಪತ್ತ್ಯನುಮಾನಸ್ಯ ಚ ದರ್ಶಿತತ್ವಾತ್ । ಅನಿತ್ಯಮ್ ಆಕಾಶಮ್ ಅನಿತ್ಯಗುಣಾಶ್ರಯತ್ವಾತ್ ಘಟಾದಿವತ್ ಇತ್ಯಾದಿಪ್ರಯೋಗಸಂಭವಾಚ್ಚ । ಆತ್ಮನಿ ಅನೈಕಾನ್ತಿಕಮ್ ಇತಿ ಚೇತ್ । ನ । ತಸ್ಯ ಔಪನಿಷದಂ ಪ್ರತಿ ಅನಿತ್ಯಗುಣಾಶ್ರಯತ್ವಾಸಿದ್ಧೇಃ । ವಿಭುತ್ವಾದೀನಾಂ ಚ ಆಕಾಶಸ್ಯ ಉತ್ಪತ್ತಿವಾದಿನಂ ಪ್ರತಿ ಅಸಿದ್ಧತ್ವಾತ್ ॥

(ಭಾಷ್ಯಾರ್ಥ)

ಇನ್ನು ಪೃಥಿವ್ಯಾದಿಗಳಿಗಿಂತ ವೈಧರ್ಮ್ಯವಿರುವದರಿಂದ ಆಕಾಶವು ಹುಟ್ಟುವದಿಲ್ಲ ಎಂದು (ಭಾ.ಭಾ. ೯೧ರಲ್ಲಿ ಪೂರ್ವಪಕ್ಷಿಯು) ಹೇಳಿದ್ದನಷ್ಟೆ, ಅದೂ ಸರಿಯಲ್ಲ. ಏಕೆಂದರೆ ಶ್ರುತಿಗೆ ವಿರೋಧವೆಂದಾದಮೇಲೆ ಉತ್ಪತ್ತ್ಯಸಂಭವಾನುಮಾನವು ಆಭಾಸವೆಂಬುದೇ ಯುಕ್ತ. ಇದಲ್ಲದೆ (ಆಕಾಶವು) ಉತ್ಪತ್ತಿಯಾಗುತ್ತದೆ ಎಂಬ ಅನುಮಾನವನ್ನು (ನಾವು) ತೋರಿಸಿಕೊಟ್ಟೂ ಇರುತ್ತೇವೆ. ಇದೂ ಅಲ್ಲದೆ "ಆಕಾಶವು ಅನಿತ್ಯವು ; ಏಕೆಂದರೆ ಗಡಿಗೆಯೇ ಮುಂತಾದವುಗಳಂತೆ ಅದು ಅನಿತ್ಯಗುಣಕ್ಕೆ ಆಶ್ರಯವಾಗಿರುತ್ತದೆ."[2] ಎಂಬುದೇ ಮುಂತಾದ (ಅನುಮಾನ)ಪ್ರಯೋಗಗಳು (ಇಲ್ಲಿ) ಸಂಭವಿಸುತ್ತವೆ. (ಈ ಹೇತುವು) ಆತ್ಮನಲ್ಲಿ ನಿಯಮವಾಗಿಲ್ಲವಲ್ಲ!– ಎಂದರೆ ಹಾಗಲ್ಲ; ಏಕೆಂದರೆ ಆ (ಆತ್ಮನು) ಅನಿತ್ಯಗುಣಾಶ್ರಯನೆಂಬುದು ಔಪನಿಷದನಿಗೆ

1. ಸುಷುಪ್ತಿಯೇ ಮುಂತಾದ ಅವಸ್ಥೆಗಳಲ್ಲಿ ಆಕಾಶವಿಲ್ಲದ ಆತ್ಮನ ಅನುಭವವಿದೆ; ಆದ್ದರಿಂದ ಹುಟ್ಟುವ ಮುಂಚೆ ಹೀಗೆಯೇ ಇತ್ತೆಂದು ಕಲ್ಪಿಸಬಹುದು. ಈ ಅನುಭವವನ್ನು ಇಲ್ಲಿ ಉದಾಹರಿಸದೆ ಇರುವದು ಯುಕ್ತಿಯಿಂದಲೂ ಅನಾಕಾಶತ್ವವನ್ನು ಕಲ್ಪಿಸಬಹುದು ಎಂದು ತಿಳಿಸುವದಕ್ಕೆ.

2. ಶಬ್ದವು ಅನಿತ್ಯಗುಣ ಎಂಬುದು ವೈಶೇಷಿಕರಿಗೆ ಸಮ್ಮತ; ಧರ್ಮವು ಬಂದೂ ಹೋಗಿಮಾಡಿದರೆ ಧರ್ಮಿಯಲ್ಲಿ ವಿಕಾರವಾಗಬೇಕು. ಆದ್ದರಿಂದ ಆಕಾಶಕ್ಕೆ ಜನ್ಮಾದಿ ವಿಕಾರಗಳುಂಟು ಎಂದು ಭಾವ. 'ಸಗುಣವಾಗಿರುವದರಿಂದ' ಎಂದಿಷ್ಟೇ ಹೇಳಿದರೂ ಸಾಕಾಗುತ್ತದೆ.

ಸಿದ್ಧವಾಗಿಲ್ಲ[1]. ವಿಭುತ್ವವೇ ಮುಂತಾದವುಗಳು (ಆಕಾಶಕ್ಕಿವೆ ಎಂಬುದು) ಆಕಾಶವು ಉತ್ಪನ್ನವಾಗುತ್ತದೆ ಎಂಬ (ವೇದಾಂತಿಗೆ) ಸಿದ್ಧವಾಗಿರುವದಿಲ್ಲ[2].

## ಆಕಾಶದ ಅಜತ್ವಕ್ಕೆ ಶ್ರುತಿಪ್ರಾಮಾಣ್ಯವೂ ಇಲ್ಲ

(ಭಾಷ್ಯ)

೧೦೩. ಯಚ್ಚೋಕ್ತಮ್ ಏತತ್, ಶಬ್ದಾಚ್ಚ ಇತಿ, ತತ್ರ ಅಮೃತತ್ವಶ್ರುತಿಸ್ತಾವತ್ ವಿಯತಿ ಅಮೃತಾ ದಿವೌಕಸಃ ಇತಿವದ್ ದ್ರಷ್ಟವ್ಯಾ । ಉತ್ಪತ್ತಿಪ್ರಲಯಯೋಃ ಉಪಪಾದಿತತ್ವಾತ್ । "ಆಕಾಶವತ್ ಸರ್ವಗತಶ್ಚ ನಿತ್ಯಃ" (?) ಇತ್ಯಪಿ ಪ್ರಸಿದ್ಧಮಹತ್ತ್ವೇನ ಆಕಾಶೇನ ಉಪಮಾನಂ ಕ್ರಿಯತೇ ನಿರತಿಶಯಮಹತ್ತ್ವಾಯ ನಾಕಾಶಸಮತ್ವಾಯ । ಯಥಾ ಇಷುರಿವ ಸವಿತಾ ಧಾವತಿ ಇತಿ ಕ್ಷಿಪ್ರಗತಿತ್ವಾಯ ಉಚ್ಯತೇ, ನ ಇಷುತುಲ್ಯಗತಿತ್ವಾಯ, ತದ್ವತ್ । ಏತೇನ ಅನನ್ತತ್ವೋಪಮಾನಶ್ರುತಿಃ ವ್ಯಾಖ್ಯಾತಾ । 'ಜ್ಯಾಯನಾಕಾಶಾತ್' (ಶತ. ಬ್ರಾ. ೧೦-೬-೫-೨) ಇತ್ಯಾದಿಶ್ರುತಿಭ್ಯಶ್ಚ ಬ್ರಹ್ಮಣಃ ಆಕಾಶಸ್ಯ ಊನಪರಿಮಾಣತ್ವಸಿದ್ಧಿಃ । "ನ ತಸ್ಯ ಪ್ರತಿಮಾಸ್ತಿ" (ಶ್ವೇ. ೪-೧೯) ಇತಿ ಚ ಬ್ರಹ್ಮಣಃ ಅನುಪಮಾನತ್ವಂ ದರ್ಶಯತಿ । "ಅತೋಽನ್ಯದಾರ್ತಮ್" (ಬೃ. ೩-೪-೨) ಇತಿ ಚ ಬ್ರಹ್ಮಣೋಽನ್ಯೇಷಾಮ್ ಆಕಾಶಾದೀನಾಮ್ ಆರ್ತತ್ವಂ ದರ್ಶಯತಿ । ತಪಸಿ ಬ್ರಹ್ಮಶಬ್ದವತ್ ಆಕಾಶಸ್ಯ ಜನ್ಮಶ್ರುತೇಃ ಗೌಣತ್ವಮ್ ಇತ್ಯೇತತ್ ಆಕಾಶಸಂಭವಶ್ರುತ್ಯನುಮಾನಾಭ್ಯಾಂ ಪರಿಹೃತಮ್ । ತಸ್ಮಾತ್ ಬ್ರಹ್ಮಕಾರ್ಯಂ ವಿಯತ್ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಇನ್ನು ಶಬ್ದ(ಪ್ರಮಾಣ)ದಿಂದಲೂ (ಆಕಾಶಕ್ಕೆ ಉತ್ಪತ್ತಿಯುಂಟು) ಎಂದು (ಭಾ. ಭಾ. ೯೨ರಲ್ಲಿ) ಹೇಳಿತ್ತಷ್ಟೆ; ಅಲ್ಲಿ ಮೊದಲನೆಯದಾಗಿ (ವಾಯುವೂ ಅಂತರಿಕ್ಷವೂ) ಅಮೃತವೆಂಬ ಶ್ರುತಿಯು ಸ್ವರ್ಗವಾಸಿಗಳು ಅಮೃತರು ಎಂಬಂತೆ (ಗೌಣವೆಂದು) ತಿಳಿಯಬೇಕು. ಏಕೆಂದರೆ ಉತ್ಪತ್ತಿಪ್ರಲಯಗಳು (ಇವೆ ಎಂದು) ಉಪಪಾದನೆಮಾಡಿದ್ದಾಗಿದೆ[3]. "ಆಕಾಶದಂತೆ ಸರ್ವಗತನೂ

---

1. ಉಪಾಸನೆಗಾಗಿ ಆತ್ಮನಲ್ಲಿ ವಿಕಾರಗಳ ಧರ್ಮಗಳನ್ನು ಶ್ರುತಿಯಲ್ಲಿ ಅಧ್ಯಾರೋಪಿಸಿರುತ್ತದೆಯೇ ಹೊರತು ನಿಜವಾಗಿ ಅವನಲ್ಲಿ ಯಾವ ಗುಣವೂ ಇರುವದಿಲ್ಲ ಎಂಬುದು ಔಪನಿಷದರ ಮತ.

2. ಹುಟ್ಟುವ ವಸ್ತು ಕಾರಣಪರಿಚ್ಛಿನ್ನವಾಗಿರುತ್ತದೆ, ಸಾವಯವವಾಗಿರುತ್ತದೆ, ಸ್ಪರ್ಶಗುಣವುಳ್ಳದ್ದೂ ಆಗಿರುತ್ತದೆ. ಆದ್ದರಿಂದ ವಿಭುತ್ವಾದಿಗಳು ಸಿದ್ಧವಲ್ಲ.

3. ಶ್ರುತ್ಯನುಮಾನಗಳಿಂದ ತೋರಿಸಿದ್ದಾಗಿದೆ; ಅಮೃತತ್ವವು ಮುಖ್ಯ ಎಂಬುದು ಅದಕ್ಕೆ ವಿರುದ್ಧ.

ನಿತ್ಯವೂ (ಆಗಿರುತ್ತಾನೆ)" (?) ಎಂದು ಮಹಾಪರಿಮಾಣವುಳ್ಳದ್ದೆಂದು ಪ್ರಸಿದ್ಧವಾಗಿರುವ ಆಕಾಶಕ್ಕೆ ಹೋಲಿಕೆಯನ್ನು ಮಾಡಿರುತ್ತದೆ ; (ಅದು ಬ್ರಹ್ಮವು) ನಿರತಿಶಯಮಹತ್ತ್ವವುಳ್ಳದ್ದೆಂದು (ತಿಳಿಸುವದಕ್ಕೇ ಹೊರತು) ಆಕಾಶಕ್ಕೆ ಸಮವೆಂದು (ತಿಳಿಸುವದಕ್ಕಲ್ಲ). 'ಸೂರ್ಯನು ಬಾಣದಂತೆ ಹೋಗುತ್ತಾನೆ' ಎಂದು ಕ್ಷಿಪ್ರವಾಗಿ ಹೋಗುತ್ತಾನೆಂಬುದಕ್ಕೆ (ಹೋಲಿಕೆಯಾಗಿ) ಹೇಳುತ್ತಾರೆಯೇ ಹೊರತು ಬಾಣದಷ್ಟೇ (ವೇಗ)ದಿಂದ ಹೋಗುತ್ತಾನೆಂದು (ತಿಳಿಸುವದಕ್ಕೆ ಹೇಳುವ)ದಿಲ್ಲವಷ್ಟೆ ; ಹಾಗೆಯೇ (ಇದು). ಇದರಿಂದ (ಆಕಾಶದ ಅನಂತತ್ವವನ್ನು ಉಪಮಾನವಾಗಿ ಹೇಳಿರುವ ಶ್ರುತಿಯನ್ನೂ ವ್ಯಾಖ್ಯಾನಮಾಡಿದಂತೆ ಆಯಿತು. "ಆಕಾಶಕ್ಕಿಂತಲೂ ದೊಡ್ಡವನು"(ಶತ. ಬ್ರಾ. ೧೦-೬-೩-೨) ಎಂದು (ಶ್ರುತಿಯಿರುವದರಿಂದ) ಬ್ರಹ್ಮಕ್ಕಿಂತಲೂ ಆಕಾಶವು ಕಡಿಮೆಯ ಪರಿಮಾಣವುಳ್ಳದ್ದೆಂದೂ ಸಿದ್ಧವಾಗುತ್ತದೆ. "ಅವನಿಗೆ ಉಪಮಾನವಿಲ್ಲ" (ಶ್ವೇ. ೪-೧೯) ಎಂದು (ಶ್ರುತಿಯು) ಬ್ರಹ್ಮಕ್ಕೆ (ಯಾವ) ಉಪಮಾನವೂ ಇಲ್ಲವೆಂದೇ ತಿಳಿಸುತ್ತದೆ. "ಇದಕ್ಕಿಂತ ಬೇರೆಯಾದದ್ದು ನಾಶವುಳ್ಳದ್ದು" (ಬೃ. ೩-೪-೨) ಎಂದು ಬ್ರಹ್ಮಕ್ಕಿಂತ ಬೇರೆಯಾದ ಆಕಾಶವೇ ಮುಂತಾದವು ನಾಶವುಳ್ಳವೆಂದೂ ತಿಳಿಸುತ್ತದೆ. ತಪಸ್ಸಿನಲ್ಲಿ ಬ್ರಹ್ಮಶಬ್ದದಂತೆ ಆಕಾಶಕ್ಕೆ ಜನ್ಮವನ್ನು (ಹೇಳುವ) ಶ್ರುತಿಯು ಗೌಣವು ಎಂಬುದನ್ನು ಆಕಾಶವು ಹುಟ್ಟುವದೆಂಬ ಶ್ರುತ್ಯನುಮಾನಗಳಿಂದ ಪರಿಹರಿಸಿದ್ದಾಗಿದೆ[1]. ಆದ್ದರಿಂದ ಆಕಾಶವು ಬ್ರಹ್ಮಕಾರ್ಯವು ಎಂದು ಸಿದ್ಧವಾಯಿತು.

## ೨. ಮಾತರಿಶ್ವಾಧಿಕರಣ

(ವಾಯುವೂ ಹುಟ್ಟುತ್ತದೆ)

**ಏತೇನ ಮಾತರಿಶ್ವಾ ವ್ಯಾಖ್ಯಾತಃ ॥ ೮ ॥**

೮. ಇದರಿಂದ ಮಾತರಿಶ್ವನನ್ನೂ ವ್ಯಾಖ್ಯಾನಮಾಡಲಾಯಿತು.

## ವಾಯುವೂ ಆಕಾಶದಂತೆ ಬ್ರಹ್ಮಕಾರ್ಯವೇ

(ಭಾಷ್ಯ)

೧೦೪. ಅತಿದೇಶೋಽಯಮ್ । ಏತೇನ ವಿಯದ್ವ್ಯಾಖ್ಯಾನೇನ ಮಾತರಿಶ್ವಾಪಿ ವಿಯದಾಶ್ರಯೋ ವಾಯುಃ ವ್ಯಾಖ್ಯಾತಃ । ತತ್ರಾಪಿ ಏತೇ

1. ಮುಖ್ಯಜನ್ಮವು ಪ್ರಮಾಣಸಿದ್ಧವಾಗಿರುವಲ್ಲಿ ಗೌಣತ್ವವನ್ನು ಕಲ್ಪಿಸುವದು ಯುಕ್ತವಾಗಲಾರದು.

ಯಥಾಯೋಗಂ ಪಕ್ಷಾಃ ರಚಯಿತವ್ಯಾಃ । ನ ವಾಯುಃ ಉತ್ಪದ್ಯತೇ । ಛನ್ದೋಗಾನಾಮ್ ಉತ್ಪತ್ತಿಪ್ರಕರಣೇ ಅನಾಮ್ನಾನಾತ್ ಇತ್ಯೇಕಃ ಪಕ್ಷಃ । ಅಸ್ತಿ ತು ತೈತ್ತಿರೀಯಾಣಾಮ್ ಉತ್ಪತ್ತಿಪ್ರಕರಣೇ ಆಮ್ನಾನಮ್ "ಆಕಾಶಾದ್ ವಾಯುಃ" (ತೈ. ೨-೧) ಇತಿ ಪಕ್ಷಾನ್ತರಮ್ । ತತಶ್ಚ ಶ್ರುತ್ಯೋರ್ವಿಪ್ರತಿಷೇಧೇ ಸತಿ ಗೌಣೀ ವಾಯೋರುತ್ಪತ್ತಿಶ್ರುತಿಃ । ಅಸಂಭವಾತ್ ಇತ್ಯಪರೋಽಭಿಪ್ರಾಯಃ । ಅಸಂಭವಶ್ಚ "ಸೈಷಾನಸ್ತಮಿತಾ ದೇವತಾ ಯದ್ ವಾಯುಃ" (ಬೃ. ೧-೫-೨೨) ಇತ್ಯಸ್ತಮಯಪ್ರತಿಷೇಧಾತ್, ಅಮೃತತ್ವಾದಿಶ್ರವಣಾಚ್ಚ । ಪ್ರತಿಜ್ಞಾನುಪರೋಧಾತ್ ಯಾವದ್ವಿಕಾರಂ ಚ ವಿಭಾಗಾಭ್ಯುಪಗಮಾತ್ ಉತ್ಪದ್ಯತೇ ವಾಯುಃ ಇತಿ ಸಿದ್ಧಾನ್ತಃ । ಅಸ್ತಮಯಪ್ರತಿಷೇಧಃ ಅಪರವಿದ್ಯಾವಿಷಯಃ ಆಪೇಕ್ಷಿಕಃ । ಅಗ್ನ್ಯಾದೀನಾಮಿವ ವಾಯೋಃ ಅಸ್ತಮಯಾಭಾವಾತ್ । ಕೃತಪ್ರತಿವಿಧಾನಂ ಚ ಅಮೃತತ್ವಾದಿಶ್ರವಣಮ್ ॥

(ಭಾಷ್ಯಾರ್ಥ)

ಈ (ಸೂತ್ರದಲ್ಲಿರುವದು) ಅತಿದೇಶವು. ಈ ಆಕಾಶವಿವರಣೆಯಿಂದ ಮಾತರಿಶ್ವನನ್ನೂ, ಆಕಾಶವನ್ನಾಶ್ರಯಿಸಿರುವ ವಾಯುವನ್ನೂ, ವಿವರಿಸಿದಂತೆ ಆಯಿತು. ಅಲ್ಲಿಯ ಈ ಪಕ್ಷಗಳನ್ನು ಯಥಾಸಂಭವವಾಗಿ ಹೊಂದಿಸಿಕೊಳ್ಳಬೇಕು. (ಹೇಗೆಂದರೆ); ವಾಯುವು ಹುಟ್ಟುವದಿಲ್ಲ ; ಏಕೆಂದರೆ **ಛಂದೋಗರ** ಉತ್ಪತ್ತಿಪ್ರಕರಣದಲ್ಲಿ (ಉತ್ಪತ್ತಿಯನ್ನು) ಹೇಳಿರುವದಿಲ್ಲ- ಎಂಬುದು ಒಂದು ಪಕ್ಷವು. ಆದರೆ ತೈತ್ತಿರೀಯರ ಉತ್ಪತ್ತಿಪ್ರಕರಣದಲ್ಲಿ "ಆಕಾಶದಿಂದ ವಾಯು (ಸಂಭೂತವಾಯಿತು)" (ತೈ. ೨-೧) ಎಂದು ಶ್ರುತಿವಚನವಿದೆ ಎಂದು ಮತ್ತೊಂದು ಪಕ್ಷವು. ಅದರಿಂದ ಶ್ರುತಿಗಳೆರಡಕ್ಕೂ ವಿರೋಧವಾಗಲು ವಾಯುವಿನ ಉತ್ಪತ್ತಿಯನ್ನು ಹೇಳುವ ಶ್ರುತಿಯು ಗೌಣವು ; ಏಕೆಂದರೆ (ಅದಕ್ಕೆ ಉತ್ಪತ್ತಿಯು) ಸಂಭವಿಸುವದಿಲ್ಲ ಎಂದು ಮತ್ತೊಂದು ಅಭಿಪ್ರಾಯವು. ಸಂಭವಿಸುವದಿಲ್ಲವೆಂಬುದು "ವಾಯು ವೆಂಬುದಿದೆಯಲ್ಲ, ಆ ಇದು ಅನಸ್ತಮಿತವಾದ ದೇವತೆಯು" (ಬೃ. ೧-೫-೨೨) ಎಂದು ಅಸ್ತಮಯವನ್ನು ಅಲ್ಲಗಳೆದಿರುವದರಿಂದಲೂ ಅಮೃತತ್ವಾದಿಗಳನ್ನು ಶ್ರುತಿಯಲ್ಲಿ ಹೇಳಿರುವದರಿಂದಲೂ (ಸಿದ್ಧವಾಗುತ್ತದೆ).

ಪ್ರತಿಜ್ಞೆಗೆ ವಿರೋಧವಾಗದೆ ಇರುವದಕ್ಕಾಗಿಯೂ ವಿಕಾರವಿರುವವರೆಗೂ ವಿಭಾಗವನ್ನು ಅಂಗೀಕರಿಸಿರುವದರಿಂದಲೂ ವಾಯುವು ಉತ್ಪನ್ನವಾಗುತ್ತದೆ ಎಂಬುದು ಸಿದ್ಧಾಂತವು. ಅಸ್ತಮಯವಿಲ್ಲವೆಂದಿರುವದೂ ಅಪರವಿದ್ಯಾವಿಷಯದ್ದು, ಆಪೇಕ್ಷಿಕವಾದದ್ದು ; ಏಕೆಂದರೆ ಅಗ್ನಿಯೇ ಮುಂತಾದವುಗಳಿಗಿರುವಂತೆ

ವಾಯುವಿಗೆ ಅಸ್ತಮಯವಿರುವದಿಲ್ಲ. ಅಮೃತತ್ವವೇ ಮುಂತಾದ ಶ್ರುತಿಗೆ ಸಮಾಧಾನವನ್ನು ಹೇಳಿದ್ದೂ ಆಗಿದೆ[1].

## ಅಧಿಕರಣಾಂತರಕ್ಕೆ ಕಾರಣ

(ಭಾಷ್ಯ)

೧೦೫. ನನು ವಾಯೋಃ ಆಕಾಶಸ್ಯ ಚ ತುಲ್ಯಯೋಃ ಉತ್ಪತ್ತಿಪ್ರಕರಣೇ ಶ್ರವಣಾಶ್ರವಣಯೋಃ ಏಕಮೇವ ಅಧಿಕರಣಮ್ ಉಭಯವಿಷಯಮ್ ಅಸ್ತು । ಕಿಮತಿದೇಶೇನ ಅಸತಿ ವಿಶೇಷೇ ಇತಿ ? ಉಚ್ಯತೇ । ಸತ್ಯಮ್ ಏವಮೇತತ್ । ತಥಾಪಿ ಮನ್ದಧಿಯಾಂ ಶಬ್ದಮಾತ್ರಕೃತಾಶಙ್ಕಾನಿವೃತ್ತ್ಯರ್ಥಃ ಅಯಮ್ ಅತಿದೇಶಃ ಕ್ರಿಯತೇ । ಸಂವರ್ಗವಿದ್ಯಾದಿಷು ಹಿ ಉಪಾಸ್ಯತಯಾ ವಾಯೋಃ ಮಹಾಭಾಗತ್ವಶ್ರವಣಾತ್, ಅಸ್ತಮಯಪ್ರತಿಷೇಧಾದಿಭ್ಯಶ್ಚ ಭವತಿ ನಿತ್ಯತ್ವಾಶಙ್ಕಾ ಕಸ್ಯಚಿತ್ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ವಾಯುವಿಗೂ ಆಕಾಶಕ್ಕೂ ಉತ್ಪತ್ತಿಪ್ರಕರಣದಲ್ಲಿ ಶ್ರುತವಾಗಿರುವದು, ಅಶ್ರುತವಾಗಿರುವದು – (ಎರಡೂ) ಸಮಾನವಾಗಿರುವದರಿಂದ ಎರಡರ ವಿಷಯದಲ್ಲಿಯೂ ಒಂದೇ ಅಧಿಕರಣವಿರಲಿ, ಯಾವ ವಿಶೇಷವೂ ಇಲ್ಲದಿದ್ದರೆ ಅತಿದೇಶದಿಂದ (ಆಗತಕ್ಕದ್ದು) ಏನು ?

(ಸಮಾಧಾನ) :– ನಿಜ, ಇದು ಹೀಗೇ ಸರಿ. ಆದರೂ ಅಲ್ಪಜ್ಞರಿಗೆ ಶಬ್ದಮಾತ್ರದಿಂದ ಆಗಿರುವ ಆಶಂಕೆಯ ನಿವೃತ್ತಿಗಾಗಿ ಈ ಅತಿದೇಶವನ್ನು ಮಾಡಿರುತ್ತದೆ. ಸಂವರ್ಗವಿದ್ಯೆಯೇ ಮುಂತಾದವುಗಳಲ್ಲಿ ಉಪಾಸ್ಯವೆಂದು ವಾಯುವಿನ ಮಹಾಭಾಗತ್ವವನ್ನು ಹೇಳಿರುವದರಿಂದಲೂ ಅಸ್ತಮಯವಿಲ್ಲವೆಂದಿರುವದೇ ಮುಂತಾದ (ಹೇತು)ಗಳಿಂದಲೂ (ವಾಯು) ನಿತ್ಯವೆಂಬ ಆಶಂಕೆಯು ಯಾವನಿಗಾದರೂ ಆಗಬಹುದು. (ಆದ್ದರಿಂದ ಅತಿದೇಶವನ್ನು ಮಾಡಿರುತ್ತದೆ)[2].

---

1. ಅಮೃತತ್ವವೂ ಅಸ್ತಮಯನಿಷೇಧವೂ ಆಪೇಕ್ಷಿಕವೇ – ಎಂದು ಸಮಾಧಾನವನ್ನು ಹೇಳಿದೆ – ಎಂದು ಅಭಿಪ್ರಾಯ.

2. ಅಸ್ತಮಯಪ್ರತಿಷೇಧ, ಅಮೃತತ್ವಶ್ರುತಿ, ವಾಯುವೇ ವ್ಯಷ್ಟಿಸಮಷ್ಟಿಗಳು– ಎಂದು ಸರ್ವಾತ್ಮತ್ವಶ್ರುತಿ– ಇವೆಲ್ಲ ವಾಯುನಿತ್ಯತ್ವಕ್ಕೆ ಕಾರಣವೆಂದು ಶಂಕೆಯು ಉಂಟಾಗಬಹುದು ; ಅದನ್ನು ಉತ್ಪತ್ತಿಶ್ರುತಿಯನ್ನು ಹೇಳಿ ನಿರಾಕರಿಸುವದಕ್ಕಾಗಿ ಈ ಅಧಿಕರಣ.

## ೩. ಅಸಂಭವಾಧಿಕರಣ

(ಬ್ರಹ್ಮಕ್ಕೆ ಉತ್ಪತ್ತಿಯ ಸಂಭವವಿಲ್ಲ)

**ಅಸಂಭವಸ್ತು ಸತೋಽನುಪಪತ್ತೇಃ ॥ ೯ ॥**

೯. ಸತ್ತಿಗೆ ಸಂಭವವಿಲ್ಲ ; ಏಕೆಂದರೆ ಹೊಂದುವದಿಲ್ಲ.

### ಬ್ರಹ್ಮವು ಸನ್ಮಾತ್ರವಾದ್ದರಿಂದ ಅದಕ್ಕೆ ಉತ್ಪತ್ತಿಯಿಲ್ಲ

(ಭಾಷ್ಯ)

೧೦೬. ವಿಯತ್ಪವನಯೋಃ ಅಸಂಭಾವ್ಯಮಾನಜನ್ಮನೋರಪಿ ಉತ್ಪತ್ತಿಮ್ ಉಪಶ್ರುತ್ಯ ಬ್ರಹ್ಮಣೋಽಪಿ ಭವೇತ್ ಕುತಶ್ಚಿತ್ ಉತ್ಪತ್ತಿಃ ಇತಿ ಸ್ಯಾತ್ ಕಸ್ಯಚಿತ್ ಮತಿಃ । ತಥಾ ವಿಕಾರೇಭ್ಯ ಏವ ಆಕಾಶಾದಿಭ್ಯಃ ಉತ್ತರೇಷಾಂ ವಿಕಾರಾಣಾಮ್ ಉತ್ಪತ್ತಿಮ್ ಉಪಶ್ರುತ್ಯ ಆಕಾಶಸ್ಯಾಪಿ ವಿಕಾರಾದೇವ ಬ್ರಹ್ಮಣಃ ಉತ್ಪತ್ತಿಃ ಇತಿ ಕಶ್ಚಿತ್ ಮನ್ಯೇತ । ತಾಮ್ ಆಶಙ್ಕಾಮ್ ಅಪನೇತುಮ್ ಇದಂ ಸೂತ್ರಮ್ "ಅಸಂಭವಸ್ತು...." ಇತಿ । ನ ಖಲು ಬ್ರಹ್ಮಣಃ ಸದಾತ್ಮಕಸ್ಯ ಕುತಶ್ಚಿತ್ ಅನ್ಯತಃ ಸಂಭವಃ ಉತ್ಪತ್ತಿಃ ಆಶಙ್ಕಿತವ್ಯಾ । ತಸ್ಮಾತ್ ? ಅನುಪಪತ್ತೇಃ। ಸನ್ಮಾತ್ರಂ ಹಿ ಬ್ರಹ್ಮ । ನ ತಸ್ಯ ಸನ್ಮಾತ್ರಾದೇವ ಉತ್ಪತ್ತಿಃ ಸಂಭವತಿ। ಅಸತ್ಯತಿಶಯೇ ಪ್ರಕೃತಿವಿಕಾರಭವಾನುಪಪತ್ತೇಃ। ನಾಪಿ ಸದ್ವಿಶೇಷಾತ್। ದೃಷ್ಟವಿಪರ್ಯಯಾತ್ । ಸಾಮಾನ್ಯಾದ್ ಹಿ ವಿಶೇಷಾ ಉತ್ಪದ್ಯಮಾನಾ ದೃಶ್ಯನ್ತೇ ಮೃದಾದೇರ್ಘಟಾದಯಃ, ನ ತು ವಿಶೇಷೇಭ್ಯಃ ಸಾಮಾನ್ಯಮ್। ನಾಪಿ ಅಸತಃ। ನಿರಾತ್ಮಕತ್ವಾತ್। "ಕಥಮಸತಃ ಸಜ್ಜಾಯೇತ" (ಛಾಂ. ೬-೨-೧) ಇತಿ ಚ ಆಕ್ಷೇಪಶ್ರವಣಾತ್ । "ಸ ಕಾರಣಂ ಕರಣಾಧಿಪಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ ।" (ಶ್ವೇ. ೬-೯) ಇತಿ ಚ ಬ್ರಹ್ಮಣೋ ಜನಯಿತಾರಂ ವಾರಯತಿ । ವಿಯತ್ಪವನಯೋಃ ಪುನರುತ್ಪತ್ತಿಃ ಪ್ರದರ್ಶಿತಾ ನ ತು ಬ್ರಹ್ಮಣಃ ಸಾ ಅಸ್ತಿ ಇತಿ ವೈಷಮ್ಯಮ್ । ನ ಚ ವಿಕಾರೇಭ್ಯೋ ವಿಕಾರಾನ್ತರೋತ್ಪತ್ತಿದರ್ಶನಾತ್ ಬ್ರಹ್ಮಣೋಽಪಿ ವಿಕಾರತ್ವಂ ಭವಿತುಮರ್ಹತಿ ( ಇತಿ )[1] । ಮೂಲಪ್ರಕೃತ್ಯನಭ್ಯುಪಗಮೇ ಅನವಸ್ಥಾಪ್ರಸಙ್ಗಾತ್ । ಯಾ ಮೂಲಪ್ರಕೃತಿಃ ಅಭ್ಯುಪಗಮ್ಯತೇ, ತದೇವ ಚ ನೋ ಬ್ರಹ್ಮ ಇತ್ಯವಿರೋಧಃ ॥

---

1. ಇಲ್ಲಿ 'ಇತಿ'ಯು ಬೇಕಿಲ್ಲ: ಅಥವಾ 'ವಾಚ್ಯಮ್' ಎಂಬಂಥ ಮಾತು ಇದರ ಮುಂದೆ ಇರಬೇಕಾಗುವದು– ಎಂದು ತೋರುತ್ತದೆ.

(ಭಾಷ್ಯಾರ್ಥ)

ಆಕಾಶವಾಯುಗಳಿಗೆ ಹುಟ್ಟನ್ನು ಸಂಭಾವಿಸುವಂತೆ ಇಲ್ಲದಿದ್ದರೂ ಉತ್ಪತ್ತಿಯುಂಟು ಎಂಬುದನ್ನು ಕೇಳಿ ಬ್ರಹ್ಮಕ್ಕೂ ಏತರಿಂದಾದರೂ ಉತ್ಪತ್ತಿಯಾಗಬಹುದು ಎಂದು ಯಾವನಾದರೊಬ್ಬನಿಗೆ ಅಭಿಪ್ರಾಯವಾಗಬಹುದು. ಮತ್ತು ಕಾರ್ಯವಾದ ಆಕಾಶಾದಿಗಳಿಂದಲೇ ಮುಂದಿನ ಕಾರ್ಯಗಳು ಉತ್ಪನ್ನವಾಗುವದನ್ನು ಕೇಳಿದ ಯಾವನಾದರೊಬ್ಬನು ಆಕಾಶಕ್ಕೂ ವಿಕಾರವಾದ ಬ್ರಹ್ಮದಿಂದಲೇ ಉತ್ಪತ್ತಿಯಾಗುತ್ತದೆ ಎಂದು ಭಾವಿಸಬಹುದು. ಆ ಆಶಂಕೆಯನ್ನು ತೊಲಗಿಸುವದಕ್ಕಾಗಿ ಈ 'ಅಸಂಭವಸ್ತು' ಎಂಬ ಸೂತ್ರವು (ಬಂದಿರುತ್ತದೆ).

ಸದ್ರೂಪವಾದ ಬ್ರಹ್ಮಕ್ಕೆ ಮತ್ತೆ ಯಾವದಾದರೊಂದರಿಂದ ಸಂಭವವನ್ನು, ಉತ್ಪತ್ತಿಯನ್ನು, ಆಶಂಕಿಸತಕ್ಕದ್ದಲ್ಲ. ಏಕೆ ? ಎಂದರೆ ಹೊಂದುವದಿಲ್ಲವಾದ್ದರಿಂದ. ಬ್ರಹ್ಮವೆಂದರೆ ಸನ್ಮಾತ್ರವು. ಅದಕ್ಕೆ ಸನ್ಮಾತ್ರದಿಂದಲೇ ಉತ್ಪತ್ತಿ ಎಂಬುದು ಸಂಭವಿಸುವದಿಲ್ಲ. ಏಕೆಂದರೆ (ಯಾವ) ಅತಿಶಯವೂ ಇಲ್ಲದೆ ಪ್ರಕೃತಿವಿಕಾರಭಾವವು ಯುಕ್ತವಾಗುವದಿಲ್ಲ. ಸದ್ವಿಶೇಷದಿಂದಲೂ (ಅದರು ಉತ್ಪತ್ತಿಯಾಗುವಹಾಗಿಲ್ಲ); ಏಕೆಂದರೆ ಅದು ಕಂಡಿರುವದಕ್ಕೆ ವಿಪರೀತವಾಗುತ್ತದೆ. ಮೃದಾದಿಸಾಮಾನ್ಯದಿಂದ ಘಟಾದಿವಿಶೇಷಗಳು ಹುಟ್ಟುವದು ಕಂಡಿದೆಯೇ ಹೊರತು ವಿಶೇಷಗಳಿಂದ ಸಾಮಾನ್ಯವು (ಹುಟ್ಟುವದು ಕಂಡು) ಬಂದಿಲ್ಲ. ಅಸತ್ತಿನಿಂದಲೂ (ಹುಟ್ಟುವಹಾಗಿಲ್ಲ) ; ಏಕೆಂದರೆ (ಅಸತ್ತು) ಸ್ವರೂಪರಹಿತವಾಗಿರುತ್ತದೆ. "ಅಸತ್ತಿನಿಂದ ಸತ್ತು ಹೇಗೆ ಹುಟ್ಟೀತು ?" (ಛಾಂ. ೬-೨-೧) ಎಂದು ಆಕ್ಷೇಪಿಸಿರುವ ಶ್ರುತಿಯಿಂದಲೂ ( ಅಸತ್ತಿನಿಂದ ಹುಟ್ಟಲಾರದು ). "ಆತನೇ ಕಾರಣವು, ಕರಣಾಧಿಪತಿ(ಗಳಾದ ಜೀವರಿಗೂ) ಅಧಿಪತಿಯು ; ಆತನಿಗೆ ಯಾವನೂ ಉಂಟುಮಾಡುವವನಿಲ್ಲ, ಅಧಿಪತಿಯೂ ಇಲ್ಲ" (ಶ್ವೇ.೬-೯) ಎಂದು ಬ್ರಹ್ಮವನ್ನು ಹುಟ್ಟಿಸುವ (ಕಾರಣವನ್ನು ಶ್ರುತಿಯಲ್ಲಿ) ನಿವಾರಣೆಮಾಡಿಯೂ ಇರುತ್ತದೆ. ಆಕಾಶವಾಯುಗಳಿಗಾದರೆ ಉತ್ಪತ್ತಿಯನ್ನು (ಶ್ರುತಿಯಲ್ಲಿ) ತೋರಿಸಿದ್ದಾಗಿದೆ ; ಆದರೆ ಬ್ರಹ್ಮಕ್ಕೆ ಆ (ಉತ್ಪತ್ತಿಯನ್ನು ಶ್ರುತಿಯಲ್ಲಿ ಹೇಳಿರು)ವದಿಲ್ಲ ಎಂಬುದೇ ವೈಷಮ್ಯವು. ಕಾರ್ಯಗಳಿಂದ ಕಾರ್ಯಾಂತರಗಳು ಹುಟ್ಟುವದು ಕಂಡಿರುವದರಿಂದ ಬ್ರಹ್ಮವೂ ಕಾರ್ಯವಾಗಿರಬೇಕೆಂದು

(ಹೇಳು)ವದಕ್ಕಿಲ್ಲ ; ಏಕೆಂದರೆ ಮೂಲಪ್ರಕೃತಿಯನ್ನು ಅಂಗೀಕರಿಸದಿದ್ದರೆ ಅನವಸ್ಥೆಯು ಪ್ರಸಕ್ತವಾಗುತ್ತದೆ[1]. ಯಾವದನ್ನು ಮೂಲಪ್ರಕೃತಿಯೆಂದು ಒಪ್ಪುತ್ತೀರೋ ಅದೇ ನಮ್ಮ (ಮತದಲ್ಲಿ) ಬ್ರಹ್ಮವು. ಆದ್ದರಿಂದ (ಯಾವ) ವಿರೋಧವೂ ಇಲ್ಲ[2].

## ೪. ತೇಜೋಽಧಿಕರಣ

( ತೇಜಸ್ಸು ವಾಯುವಿನಿಂದ ಹುಟ್ಟುತ್ತದೆ )

**ತೇಜೋಽತಸ್ತಥಾ ಹ್ಯಾಹ ॥ ೧೦ ॥**

೧೦. ತೇಜಸ್ಸು ಇದರಿಂದ (ಹುಟ್ಟುತ್ತದೆ) ; ಏಕೆಂದರೆ ಹಾಗೆಂದು ಹೇಳಿದೆ.

### ಸಂಶಯವೂ ಪೂರ್ವಪಕ್ಷವೂ

(ಭಾಷ್ಯ)

೧೦೭. ಛಾನ್ದೋಗ್ಯೇ ಸನ್ಮೂಲತ್ವಂ ತೇಜಸಃ ಶ್ರಾವಿತಮ್, ತೈತ್ತಿರೀಯಕೇ ತು ವಾಯುಮೂಲತ್ವಮ್ । ತತ್ರ ತೇಜೋಯೋನಿಂ ಪ್ರತಿ ಶ್ರುತಿವಿಪ್ರತಿಪತ್ತೌ ಸತ್ಯಾಂ ಪ್ರಾಪ್ತಂ ತಾವದ್ ಬ್ರಹ್ಮಯೋನಿಕಂ **ತೇಜಃ** ಇತಿ । ಕುತಃ ? "ಸದೇವ" (ಛಾಂ. ೬-೨-೧) ಇತ್ಯುಪಕ್ರಮ್ಯ "ತತ್ತೇಜೋಽಸೃಜತ" (ಛಾಂ. ೬-೨-೩) ಇತ್ಯುಪದೇಶಾತ್ । ಸರ್ವವಿಜ್ಞಾನಪ್ರತಿಜ್ಞಾಯಾಶ್ಚ

---

1. ಕಾರ್ಯದಿಂದ ಕಾರ್ಯವು ಹುಟ್ಟುತ್ತದೆ ಎಂಬ ಪಕ್ಷವನ್ನು ಪರಮಾರ್ಥವಾಗಿ ಸಿದ್ಧಾಂತದಲ್ಲಿ ಒಪ್ಪಿಲ್ಲವೆಂಬುದು ೧೩ನೆಯ ಸೂತ್ರದಲ್ಲಿ ಸ್ಪಷ್ಟವಾಗುತ್ತದೆ. ಆದರೆ ಒಂದು ಕಾರ್ಯದಿಂದ ಮತ್ತೊಂದು ಕಾರ್ಯವು ಉಂಟಾಗುವದೆಂದು ಒಪ್ಪಿದರೂ ಬ್ರಹ್ಮಕ್ಕೆ ಸತ್ತಾಗಲಿ ಅಸತ್ತಾಗಲಿ ಕಾರಣವಾಗಲಾರದೆಂದು ತೋರಿಸಿರುವದರಿಂದ ಇಲ್ಲಿ ಕಾರಣಾಸಂಭವವನ್ನೇ ಒತ್ತಿ ಹೇಳಿದೆ. ಬ್ರಹ್ಮಕ್ಕೆ ಕಾರಣವನ್ನು ಕಲ್ಪಿಸಿದರೆ ಕಾರಣಪರಂಪರೆಯನ್ನು ಕಲ್ಪಿಸಿ ಅನವಸ್ಥಾದೋಷಕ್ಕೂ ಗುರಿಯಾಗಬೇಕಾಗುವದು. ಅನಾದಿತ್ವವನ್ನು ಕಲ್ಪಿಸಿದರೆ ಆ ಕಲ್ಪನೆಗೂ ಯಾವ ಆಧಾರವೂ ಇರುವದಿಲ್ಲವಾದ್ದರಿಂದ ಅದು ಅಂಧಪರಂಪರೆಯಾಗುವದು ಎಂದು ಭಾವ.

2. ಮೂಲಪ್ರಕೃತಿಯನ್ನು ಒಪ್ಪಿದರೆ ಮೂಲಪ್ರಕೃತಿಯು ಅಣು, ಪ್ರಧಾನ–ಮುಂತಾದವುಗಳಾಗಲಾರವೆಂದು ತೋರಿಸಿರುವದರಿಂದ ಅದು ಚೇತನವೇ ಆಗಿರಬೇಕೆಂದಾಗುವದು. ತದನನ್ಯತ್ವನ್ಯಾಯದಿಂದ ಮೂಲಪ್ರಕೃತಿಯೇ ಬೇರೆಬೇರೆಯ ಕಾರ್ಯಗಳಾಗಿರುವವೆಂದೂ ಒಪ್ಪಬೇಕಾಗುವದು. ಇದೇ ಬ್ರಹ್ಮವಾದವು.

ಬ್ರಹ್ಮಪ್ರಭವತ್ವೇ ಸರ್ವಸ್ಯ ಸಂಭವಾತ್, 'ತಜ್ಜಲಾನ್' (ಛಾಂ. ೮-೭-೧) ಇತಿ ಚ ಅವಿಶೇಷಶ್ರುತೇಃ । "ಏತಸ್ಮಾಜ್ಜಾಯತೇ ಪ್ರಾಣಃ" (ಮುಂ. ೨-೧-೩) ಇತಿ ಚ ಉಪಕ್ರಮ್ಯ ಶ್ರುತ್ಯನ್ತರೇ ಸರ್ವಸ್ಯ ಅವಿಶೇಷೇಣ ಬ್ರಹ್ಮಜತ್ವೋಪದೇಶಾತ್ । ತೈತ್ತಿರೀಯಕೇ ಚ "ಸ ತಪಸ್ತಪ್ತ್ವಾ । ಇದಂ ಸರ್ವಮಸೃಜತ ಯದಿದಂ ಕಿಂ ಚ" (ತೈ. ೩-೬) ಇತ್ಯವಿಶೇಷಶ್ರವಣಾತ್ । ತಸ್ಮಾತ್ 'ವಾಯೋರಗ್ನಿಃ' (ತೈ. ೨-೧) ಇತಿ ಕ್ರಮೋಪದೇಶೋ ದ್ರಷ್ಟವ್ಯಃ, ವಾಯೋರನನ್ತರಮ್ ಅಗ್ನಿಃ ಸಂಭೂತಃ ಇತಿ ॥

(ಭಾಷ್ಯಾರ್ಥ)

ಛಾಂದೋಗ್ಯದಲ್ಲಿ ತೇಜಸ್ಸು ಸನ್ಮೂಲಕವಾಗಿ (ಹುಟ್ಟುತ್ತದೆ) ಎಂದು ಹೇಳಿದೆ; ಆದರೆ ತೈತ್ತಿರೀಯಕದಲ್ಲಿ ವಾಯುಮೂಲಕವೆಂದು (ಹೇಳಿದೆ). ಇಲ್ಲಿ ತೇಜಸ್ಸಿನ ಕಾರಣವನ್ನು ಕುರಿತು ಶ್ರುತಿಗಳಿಗೆ ವಿರೋಧವಾಗಲಾಗಿ ತೇಜಸ್ಸು ಬ್ರಹ್ಮದಿಂದಲೇ ಹುಟ್ಟುತ್ತದೆ ಎಂಬ (ಪೂರ್ವಪಕ್ಷವು) ಮೊದಲನೆಯದಾಗಿ ಬಂದೊದಗುತ್ತದೆ. ಏಕೆ? ಎಂದರೆ "ಸತ್ತೇ ಮೊದಲಿತ್ತು" (ಛಾಂ. ೬-೨-೧) ಎಂದು ಉಪಕ್ರಮಿಸಿ "ಅದು ತೇಜಸ್ಸನ್ನು ಸೃಜಿಸಿತು" (ಛಾಂ. ೬-೨-೩) ಎಂದು ಉಪದೇಶಿಸಿರುತ್ತದೆ. ಎಲ್ಲವನ್ನೂ ಅರಿತಂತಾಗುವದೆಂಬ ಪ್ರತಿಜ್ಞೆಯು ಎಲ್ಲವೂ ಬ್ರಹ್ಮದಿಂದ ಹುಟ್ಟಿದೆ ಎಂದರೆ ಸಂಭವಿಸುವದರಿಂದಲೂ (ಇದೇ ಸರಿ), "ತಜ್ಜಲಾನ್" (ಛಾಂ. ೮-೭-೧) ಅದರಿಂದ ಹುಟ್ಟಿ, ಅದರಲ್ಲಿ ಲಯವಾಗತಕ್ಕದ್ದು, ಅದರಿಂದಲೇ ವ್ಯಾಪಾರಮಾಡತಕ್ಕದ್ದು- ಎಂಬ ಸಾಮಾನ್ಯಶ್ರುತಿಯಿಂದಲೂ "ಇವನಿಂದ ಪ್ರಾಣನು ಹುಟ್ಟುತ್ತಾನೆ" (ಮುಂ. ೨-೧-೩) ಎಂದು ಉಪಕ್ರಮಿಸಿ ಶ್ರುತ್ಯಂತರದಲ್ಲಿ ಎಲ್ಲವೂ ಯಾವ ವಿಶೇಷವೂ ಇಲ್ಲದೆ ಬ್ರಹ್ಮದಿಂದಲೇ ಹುಟ್ಟುವದೆಂದು ಹೇಳುವದರಿಂದಲೂ (ಇದೇ ಸರಿ). ತೈತ್ತಿರೀಯಕದಲ್ಲಿಯೂ 'ಅವನು ತಪಸ್ಸನ್ನು ಮಾಡಿ ಇವೆಲ್ಲವನ್ನೂ ಸೃಜಿಸಿದನು' (ತೈ. ೩-೬) ಎಂದು ಅವಿಶೇಷವಾಗಿಯೇ ಶ್ರುತಿಯಲ್ಲಿ ಹೇಳಿರುತ್ತದೆ. ಆದ್ದರಿಂದ 'ವಾಯೋರಗ್ನಿಃ' ಎಂಬುದು ವಾಯುವಿನ ಬಳಿಕ ಅಗ್ನಿಯುಂಟಾಯಿತು ಎಂದು ಕ್ರಮವನ್ನು ಹೇಳುತ್ತದೆ ಎಂದು ತಿಳಿಯಬೇಕು.

## ಸಿದ್ಧಾಂತ: ತೇಜಸ್ಸು ವಾಯುವಿನಿಂದಾಗುತ್ತದೆ

(ಭಾಷ್ಯ)

೧೦೮. ಏವಂ ಪ್ರಾಪ್ತೇ ಉಚ್ಯತೇ । ತೇಜಃ ಅತೋ ಮಾತರಿಶ್ವನೋ ಜಾಯತೇ ಇತಿ । ಕಸ್ಮಾತ್ ? ತಥಾ ಹಿ ಆಹ "ವಾಯೋರಗ್ನಿಃ (ತೈ. ೨-೧)"

ಇತಿ । ಅವ್ಯವಹಿತೇ ಹಿ ತೇಜಸೋ ಬ್ರಹ್ಮಜತ್ವೇ ಸತಿ ಅಸತಿ ವಾಯುಜತ್ವೇ 'ವಾಯೋರಗ್ನಿಃ' ಇತೀಯಂ ಶ್ರುತಿಃ ಕದರ್ಥಿತಾ ಸ್ಯಾತ್ । ನನು ಕ್ರಮಾರ್ಥಾ ಏಷಾ ಭವಿಷ್ಯತಿ ಇತ್ಯುಕ್ತಮ್ । ನ, ಇತಿ ಬ್ರೂಮಃ । 'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ' (ತೈ. ೨-೧) ಇತಿ ಪುರಸ್ತಾತ್ ಸಂಭವತ್ಯಪಾದಾನಸ್ಯ ಆತ್ಮನಃ ಪಞ್ಚಮೀನಿರ್ದೇಶಾತ್, ತಸ್ಯೈವ ಚ ಸಂಭವತೇಃ ಇಹಾಧಿಕಾರಾತ್, ಪರಸ್ತಾದಪಿ ಚ ತದಧಿಕಾರೇ 'ಪೃಥಿವ್ಯಾ ಓಷಧಯಃ' (ತೈ. ೨-೧-೧) ಇತ್ಯಪಾದಾನಪಞ್ಚಮೀದರ್ಶನಾತ್ 'ವಾಯೋರಗ್ನಿಃ' ಇತಿ ಅಪಾದಾನಪಞ್ಚಮ್ಯೇವೈಷಾ ಇತಿ ಗಮ್ಯತೇ । ಅಪಿ ಚ ವಾಯೋರೂರ್ಧ್ವಮ್ ಅಗ್ನಿಃ ಸಂಭೂತಃ ಇತಿ ಕಲ್ಪ್ಯಃ ಉಪಪದಾರ್ಥಯೋಗಃ, ಕ್ಲೃಪ್ತಸ್ತು ಕಾರಕಾರ್ಥಯೋಗಃ ವಾಯೋರಗ್ನಿಃ ಸಂಭೂತಃ ಇತಿ । ತಸ್ಮಾತ್ ಏಷಾ ಶ್ರುತಿಃ ವಾಯುಯೋನಿತ್ವಂ ತೇಜಸೋಽವಗಮಯತಿ । ನನು ಇತರಾಪಿ ಶ್ರುತಿಃ ಬ್ರಹ್ಮಯೋನಿತ್ವಂ ತೇಜಸೋಽವಗಮಯತಿ 'ತತ್ ತೇಜೋಽಸೃಜತ' ಇತಿ । ನ । ತಸ್ಯಾಃ ಪಾರಂಪರ್ಯಜತ್ವೇಽಪಿ ಅವಿರೋಧಾತ್ । ಯದಾಪಿ ಹಿ ಆಕಾಶಂ ವಾಯುಂ ಚ ಸೃಷ್ಟ್ವಾ ವಾಯುಭಾವಾಪನ್ನಂ ಬ್ರಹ್ಮ ತೇಜೋಽಸೃಜತ ಇತಿ ಕಲ್ಪ್ಯತೇ ತದಾಪಿ ಬ್ರಹ್ಮಜತ್ವಂ ತೇಜಸೋ ನ ವಿರುಧ್ಯತೇ । ಯಥಾ 'ತಸ್ಯಾಃ ಶೃತಂ ತಸ್ಯಾ ದಧಿ ತಸ್ಯಾ ಆಮಿಕ್ಷಾ' (?) ಇತ್ಯಾದಿ । ದರ್ಶಯತಿ ಚ ಬ್ರಹ್ಮಣೋ ವಿಕಾರಾತ್ಮನಾ ಅವಸ್ಥಾನಂ ತದಾತ್ಮಾನಂ 'ಸ್ವಯಮಕುರುತ' (ತೈ. ೨-೭) ಇತಿ । ತಥಾ ಚ ಈಶ್ವರಸ್ಮರಣಂ ಭವತಿ 'ಬುದ್ಧಿರ್ಜ್ಞಾನಮಸಂಮೋಹಃ' (ಗೀ.೧೦-೪) ಇತ್ಯಾದ್ಯನುಕ್ರಮ್ಯ 'ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ' (ಗೀ.೧೦-೫) ಇತಿ। ಯದ್ಯಪಿ ಬುದ್ಧ್ಯಾದಯಃ ಸ್ವಕಾರಣೇಭ್ಯಃ ಪ್ರತ್ಯಕ್ಷಂ ಭವನ್ತೋ ದೃಶ್ಯನ್ತೇ, ತಥಾಪಿ ಸರ್ವಸ್ಯ ಭಾವಜಾತಸ್ಯ ಸಾಕ್ಷಾತ್ ಪ್ರಣಾಡ್ಯಾ ವಾ ಈಶ್ವರವಂಶ್ಯತ್ವಾತ್ । ಏತೇನ ಅಕ್ರಮವತ್ಸೃಷ್ಟಿವಾದಿನ್ಯಃ ಶ್ರುತಯೋ ವ್ಯಾಖ್ಯಾತಾಃ । ತಾಸಾಂ ಸರ್ವಥಾ ಉಪಪತ್ತೇಃ । ಕ್ರಮವತ್ಸೃಷ್ಟಿವಾದಿನೀನಾಂ ತು ಅನ್ಯಥಾ ಅನುಪಪತ್ತೇಃ । ಪ್ರತಿಜ್ಞಾಪಿ ಸದ್ವಂಶ್ಯತ್ವಮಾತ್ರಮ್ ಅಪೇಕ್ಷತೇ ನ ಅವ್ಯವಹಿತಜನ್ಯತ್ವಮ್ ಇತಿ ಅವಿರೋಧಃ ॥

(ಭಾಷ್ಯಾರ್ಥ)

ಹೀಗೆಂಬ ಪೂರ್ವಪಕ್ಷವು ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ: ತೇಜಸ್ಸು ಈ (ಮಾತರಿಶ್ವ)ನಿಂದ ಹುಟ್ಟುತ್ತದೆ. ಏಕೆ? ಎಂದರೆ ಹಾಗೆಂದಲ್ಲವೆ, 'ವಾಯೋರಗ್ನಿಃ' ಎಂಬ (ಶ್ರುತಿ) ಹೇಳುತ್ತದೆ? ತೇಜಸ್ಸು ಬ್ರಹ್ಮದಿಂದ ಹುಟ್ಟುವದು ವ್ಯವಹಿತವಲ್ಲದೆ ಇದ್ದರೆ, ವಾಯುವಿನಿಂದ

ಹುಟ್ಟುವದಿಲ್ಲವಾದರೆ 'ವಾಯುವಿನಿಂದ ಅಗ್ನಿ' ಎಂಬೀ ಶ್ರುತಿಯು ಬಾಧಿತವಾಗುವದು.

(ಆಕ್ಷೇಪ) :– ಇದು ಕ್ರಮಾರ್ಥಕವೆಂದು ಹೇಳಿದೆವಲ್ಲ ?

(ಪರಿಹಾರ) :– ಹಾಗಲ್ಲ ಎನ್ನುತ್ತೇವೆ. 'ಆ ಈ ಆತ್ಮನಿಂದಲೇ ಆಕಾಶವುಂಟಾಯಿತು' (ತೈ. ೨–೧) ಎಂದು ಮೊದಲು ಸಂಭವಕ್ಕೆ ಆತ್ಮನು ಅಪಾದಾನವೆಂದು ಆತ್ಮನನ್ನು ಪಂಚಮೀವಿಭಕ್ತಿಯಿಂದ ತಿಳಿಸಿರುವದರಿಂದಲೂ ಅದೇ ಸಂಭವವೇ ಇಲ್ಲಿಯೂ ಪ್ರಕೃತವಾಗಿರುವದರಿಂದಲೂ ಮುಂದೆಯೂ ಅದೇ ಪ್ರಕರಣದಲ್ಲಿ 'ಪೃಥಿವಿಯಿಂದ ಓಷಧಿಗಳು' (ತೈ. ೨–೧) ಎಂದು ಅಪಾದಾನಪಂಚಮಿಯೇ ಕಂಡುಬರುವದರಿಂದಲೂ 'ವಾಯೋರಗ್ನಿಃ' ಎಂಬಿದೂ ಅಪಾದಾನಪಂಚಮಿಯೇ ಎಂದು ತಿಳಿಯಬರುತ್ತದೆ. 'ವಾಯುವಾದ ಬಳಿಕ ಅಗ್ನಿ ಉಂಟಾಯಿತು' ಎಂದು ಉಪಪದಾರ್ಥದ ಸಂಬಂಧವನ್ನು ಕಲ್ಪಿಸಬೇಕಾಗಿದೆ ; ಆದರೆ 'ವಾಯುವಿನಿಂದ ಅಗ್ನಿಯುಂಟಾಯಿತು' ಎಂದು ಕಾರಕಾರ್ಥಸಂಬಂಧವು (ಆಗಲೇ) ಕ್ಲಿಪ್ತವಾಗಿಬಿಟ್ಟದೆ[1]. ಆದ್ದರಿಂದ ಈ ಶ್ರುತಿಯು ಅಗ್ನಿಯು ವಾಯುಕಾರಣಕವೇ ಎಂಬುದನ್ನು ಗೊತ್ತುಪಡಿಸಿಕೊಡುತ್ತದೆ.

(ಆಕ್ಷೇಪ) :– 'ಅದು ತೇಜಸ್ಸನ್ನು ಸೃಜಿಸಿತು' ಎಂಬ (ಅ) ಮತ್ತೊಂದು ಶ್ರುತಿಯೂ ತೇಜಸ್ಸು ಬ್ರಹ್ಮಕಾರಣಕವೆಂದು ಗೊತ್ತುಪಡಿಸಿಕೊಡುತ್ತಿದೆಯಲ್ಲ!

(ಪರಿಹಾರ) :– ಹಾಗಲ್ಲ. ಏಕೆಂದರೆ ( ತೇಜಸ್ಸು ) ಪರಂಪರೆಯಾಗಿ (ಬ್ರಹ್ಮದಿಂದ) ಹುಟ್ಟುತ್ತದೆ ಎಂದರೂ ಆ (ಶ್ರುತಿಗೆ) ವಿರೋಧವಾಗುವದಿಲ್ಲ. ಇನ್ನು ಆಕಾಶವನ್ನೂ ವಾಯುವನ್ನೂ ಸೃಷ್ಟಿಸಿ ವಾಯುಭಾವವನ್ನು ಹೊಂದಿದ ಬ್ರಹ್ಮವು ತೇಜಸ್ಸನ್ನು ಸೃಜಿಸಿತು ಎಂದು ಯಾವಾಗ ಕಲ್ಪಿಸುವೆವೋ ಆಗಲೂ ತೇಜಸ್ಸು ಬ್ರಹ್ಮದಿಂದ ಹುಟ್ಟಿತೆಂಬುದಕ್ಕೆ ವಿರೋಧವಿಲ್ಲ. "ಆ (ಹಸುವಿನಿಂದ) ಬಿಸಿಯ ಹಾಲು, ಅದರಿಂದಲೇ ಮೊಸರು, ಅದರಿಂದಲೇ ಆಮಿಕ್ಷೆ" (?) ಎಂದು ಮುಂತಾಗಿರುವ (ವಾಕ್ಯದ ಅರ್ಥ)ದಂತೆಯೇ (ಇದು). ಬ್ರಹ್ಮವು ಕಾರ್ಯದ ಅವಸ್ಥೆಯನ್ನು ಪಡೆಯುವದೆಂಬುದನ್ನು "ಅದು ತನ್ನನ್ನು ತಾನೇ ಮಾಡಿಕೊಂಡಿತು" (ತೈ. ೨-೭) ಎಂಬ (ಶ್ರುತಿಯು) ತಿಳಿಸಿಯೂ ಕೊಟ್ಟಿರುತ್ತದೆ. ಹೀಗೆಯೇ "ಬುದ್ಧಿ, ಜ್ಞಾನ, ಅಸಂಮೋಹ" ಎಂದು ಮುಂತಾಗಿ ಅನುಕ್ರಮ

---

1. ಅಮೇಲೆ, ಬಳಿಕ– ಮುಂತಾದ ಉಪಪದವನ್ನು ಇಟ್ಟುಕೊಂಡ ಹೊರತು ಪಂಚಮೀವಿಭಕ್ತಿಯಿಂದ ಕ್ರಮವು ತೋರುವದಿಲ್ಲ ; ಅದು ಕಲ್ಪ್ಯವಾಗಿರುತ್ತದೆ. ಬರಿಯ ಪಂಚಮಿಯಿಂದಲೇ ಅಪಾದಾನವು ತೋರುವದರಿಂದ ಅದು ಕ್ಲಪ್ತವಾಗಿದೆ.

ವಾಗಿ ಹೇಳಿ "ಈ ಬೇರೆಬೇರೆಯ ವಿಧದ ಭಾವಗಳು ಭೂತಗಳಿಗೆ ನನ್ನಿಂದಲೇ ಆಗುತ್ತವೆ" (ಗೀ. ೧೦-೫) ಎಂದು **ಈಶ್ವರಸ್ಮೃತಿಯೂ**[1] ಇರುತ್ತದೆ. ಬುದ್ಧಿಯೇ ಮುಂತಾದವುಗಳು ತಮ್ಮ (ತಮ್ಮ) ಕಾರಣಗಳಿಂದ ಆಗುವವೆಂಬುದು ಪ್ರತ್ಯಕ್ಷವಾಗಿ ತಿಳಿಯಬರುತ್ತದೆಯಾದರೂ ಸಮಸ್ತಭಾವಸಮೂಹವೂ ನೇರಾಗಿ ಅಥವಾ ಪರಂಪರೆಯಿಂದ ಈಶ್ವರವಂಶದ್ದೇ ಆಗುತ್ತದೆಯಾದ್ದರಿಂದ (ನನ್ನಿಂದಲೇ ಆಗುತ್ತವೆ ಎಂದು ಹೇಳಿದೆ). ಇದರಿಂದ ಕ್ರಮವಿಲ್ಲದ ಶ್ರುತಿಗಳನ್ನು ವ್ಯಾಖ್ಯಾನಮಾಡಿದಂತೆಯೇ ಆಯಿತು. ಏಕೆಂದರೆ ಅವು ಹೇಗಾದರೂ ಉಪಪನ್ನವಾಗುತ್ತವೆ ; ಕ್ರಮವನ್ನು ಹೇಳುವ ಶ್ರುತಿಗಳು ಬೇರೆಯ ರೀತಿಯಲ್ಲಿ ಹೊಂದುವದಿಲ್ಲ. ಪ್ರತಿಜ್ಞಾ(ವಾಕ್ಯ)ವೂ ( ಎಲ್ಲವೂ ) ಸದ್ಬ್ರಹ್ಮದ ವಂಶದ್ದೇ ಎಂಬುದನ್ನು ಮಾತ್ರ ಬಯಸುತ್ತದೆಯೇ ಹೊರತು ವ್ಯವಧಾನವಿಲ್ಲದೆ ನೇರಾಗಿಯೇ ಹುಟ್ಟಿರಬೇಕೆಂಬುದನ್ನು ಬಯಸುವದಿಲ್ಲ. ಆದ್ದರಿಂದ ಯಾವ ವಿರೋಧವೂ ಇರುವದಿಲ್ಲ.

## ೫. ಅಬಧಿಕರಣ

(ಅಪ್ಪು ತೇಜಸ್ಸಿನಿಂದ ಹುಟ್ಟುತ್ತದೆ)

**ಆಪಃ ॥ ೧೧ ॥**

೧೧. ಅಪ್ಪು (ಅದರಿಂದ ಹುಟ್ಟುತ್ತದೆ. ಏಕೆಂದರೆ ಹಾಗೆಂದು ಹೇಳುತ್ತದೆ).

(ಭಾಷ್ಯ)

೧೧೯. 'ಅತಸ್ತಥಾ ಹ್ಯಾಹ' ಇತಿ ಅನುವರ್ತತೇ। ಆಪಃ ಅತಃ ತೇಜಸಃ ಜಾಯನ್ತೇ। ಕಸ್ಮಾತ್ ? ತಥಾ ಹಿ ಆಹ– 'ತದಪೋಽಸೃಜತ' ಇತಿ 'ಅಗ್ನೇರಾಪಃ' ಇತಿ ಚ। ಸತಿ ವಚನೇ ನಾಸ್ತಿ ಸಂಶಯಃ । ತೇಜಸಸ್ತು ಸೃಷ್ಟಿಂ ವ್ಯಾಖ್ಯಾಯ ಪೃಥಿವ್ಯಾ ವ್ಯಾಖ್ಯಾಸ್ಯನ್ ಅಪೋಽನ್ತರಿಯಾಮ್ ಇತಿ ಆಪಃ ಇತಿ ಸೂತ್ರಯಾಂಬಭೂವ ॥

(ಭಾಷ್ಯಾರ್ಥ)

'ಅತಸ್ತಥಾ ಹ್ಯಾಹ' ಎಂಬ (ಭಾಗವು ಹಿಂದಿನ ಸೂತ್ರದಿಂದ) ಅನುವೃತ್ತವಾಗಿರುತ್ತದೆ. ಅಪ್ಪು ಅದರಿಂದ ಎಂದರೆ ತೇಜಸ್ಸಿನಿಂದ ಹುಟ್ಟುತ್ತದೆ. ಏಕೆ ?

1. ಭಗವದ್ಗೀತೆಯನ್ನು ಈಶ್ವರಸ್ಮೃತಿ, ಈಶ್ವರಗೀತೆಗಳು– ಎಂದೂ ಭಾಷ್ಯಕಾರರು ಅಲ್ಲಲ್ಲಿ ಕರೆದಿರುತ್ತಾರೆ.

ಎಂದರೆ ಹಾಗೆಂದು "ಅದು ಅಪ್ಪನ್ನು ಸೃಜಿಸಿತು" (ಛಾಂ. ೬-೧-೩) ಎಂದೂ "ಅಗ್ನಿಯಿಂದ ಅಪ್ಪು" (ತೈ. ೨-೧) ಎಂದೂ (ಶ್ರುತಿ) ಹೇಳುತ್ತದೆ.

ವಚನವಿರುವಲ್ಲಿ ಸಂಶಯವೇ ಇಲ್ಲ[1]. ಆದರೆ ತೇಜಸ್ಸಿನಿಂದ ಸೃಷ್ಟಿಯನ್ನು ವ್ಯಾಖ್ಯಾನಮಾಡಿದ ಬಳಿಕ ಪೃಥಿವಿಯ (ಸೃಷ್ಟಿಯನ್ನು) ವ್ಯಾಖ್ಯಾನ ಮಾಡಬೇಕಾಗಿರುವದರಿಂದ ಅಪ್ಪನ್ನೂ ಸೇರಿಸಿಕೊಳ್ಳೋಣವೆಂದು[2] 'ಆಪಃ' ಎಂದು (ಆಚಾರ್ಯರು) ಸೂತ್ರಿಸಿರುತ್ತಾರೆ.

## ೬. ಪೃಥಿವ್ಯಧಿಕಾರಾಧಿಕರಣ

(ಛಾಂದೋಗ್ಯದಲ್ಲಿ ಹೇಳಿರುವದು ಪೃಥಿವಿಯೇ)

**ಪೃಥಿವ್ಯಧಿಕಾರರೂಪಶಬ್ದಾನ್ತರೇಭ್ಯಃ ॥ ೧೨ ॥**

೧೨. ಪೃಥಿವಿಯನ್ನೇ ಹೇಳಿದೆ ; ಏಕೆಂದರೆ ಅಧಿಕಾರ, ರೂಪ, ಶಬ್ದಾಂತರ- ಇವುಗಳಿವೆ.

### ಪೂರ್ವಪಕ್ಷ: ಛಾಂದೋಗ್ಯದಲ್ಲಿ ಹೇಳಿರುವದು ಅನ್ನವನ್ನೇ, ಪೃಥಿವಿಯನ್ನಲ್ಲ

( ಭಾಷ್ಯ )

೧೧೦. "ತಾ ಆಪ ಐಕ್ಷನ್ತ ಬಹ್ವ್ಯಃ ಸ್ಯಾಮ ಪ್ರಜಾಯೇಮಹೀತಿ ತಾ ಅನ್ನಮಸೃಜನ್ತ" (ಛಾಂ. ೬-೨-೪) ಇತಿ ಶ್ರೂಯತೇ। ತತ್ರ ಸಂಶಯಃ- ಕಿಮ್ ಅನೇನ ಅನ್ನಶಬ್ದೇನ ವ್ರೀಹಿಯವಾದಿ ಅಭ್ಯವಹಾರ್ಯಂ ಚ ಓದನಾದಿ ಉಚ್ಯತೇ, ಕಿಂ ವಾ ಪೃಥಿವೀ ಇತಿ? ತತ್ರ ಪ್ರಾಪ್ತಂ ತಾವತ್ ವ್ರೀಹಿಯವಾದಿ ಓದನಾದಿ ವಾ ಪರಿಗ್ರಹೀತವ್ಯಮ್ ಇತಿ। ತತ್ರ ಹ್ಯನ್ನಶಬ್ದಃ ಪ್ರಸಿದ್ಧೋ ಲೋಕೇ। ವಾಕ್ಯಶೇಷೋಽಪಿ ಏತಮ್ ಅರ್ಥಮ್ ಉಪೋದ್ಬಲಯತಿ। "ತಸ್ಮಾದ್ ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ"

---

1. 'ತೇಜಸ್ಸನ್ನು ಸದ್ಬ್ರಹ್ಮವು ಸೃಜಿಸಿತು' ಎಂದು ಒಂದು ಕಡೆ, ವಾಯುವಿನಿಂದ ಅಗ್ನಿ- ಎಂದು ಒಂದು ಕಡೆ- ಹೀಗಿದ್ದದ್ದರಿಂದ ಸಂಶಯವುಂಟಾಯಿತು. ಇಲ್ಲಿ ಛಾಂದೋಗ್ಯತೈತ್ತಿರೀಯಗಳೆರಡರಲ್ಲಿಯೂ ಅಗ್ನಿಯಿಂದಲೇ ಅಪ್ಪು ಆಯಿತೆಂದು ಹೇಳಿರುವದರಿಂದ ಸಂಶಯವೇ ಇಲ್ಲ.

2. ಅಪ್ಪಿನ ಸೃಷ್ಟಿಯಾದ ಬಳಿಕವೇ ಪೃಥ್ವಿಯಾಯಿತೆಂದು ಕ್ರಮವನ್ನು ತಿಳಿಸುವದಕ್ಕೆ ಈ ಸೂತ್ರವೆಂದು ಭಾವ.

(ಛಾಂ. ೬–೨–೪) । ವ್ರೀಹಿಯವಾದ್ಯೇವ ಹಿ ಸತಿ ವರ್ಷಣೇ ಬಹು ಭವತಿ ನ ಪೃಥಿವೀ ಇತಿ ॥

(ಭಾಷ್ಯಾರ್ಥ)

"ಆ ಅಪ್ಪು ನಾನು ಬಹುವಾಗಿ ಹುಟ್ಟುವೆನು ಎಂದು ಯೋಚಿಸಿ ನೋಡಿತು ; ಅದು ಅನ್ನವನ್ನು ಸೃಜಿಸಿತ," (ಛಾಂ. ೬–೨–೪) ಎಂದು ಶ್ರುತಿಯಲ್ಲಿದೆ. ಅಲ್ಲಿ ಸಂಶಯವೇನೆಂದರೆ ಈ ಅನ್ನಶಬ್ದದಿಂದ ಬತ್ತ, ಜವೆ-ಮುಂತಾದ ತಿನ್ನುವ ಅನ್ನವನ್ನು ಹೇಳಿದೆಯೆ, ಅಥವಾ ಪೃಥಿವಿಯನ್ನೆ?

ಇಲ್ಲಿ ಬಂದೊದಗುವ (ಪೂರ್ವಪಕ್ಷ)ವೇನೆಂದರೆ, ಬತ್ತ, ಜವೆಯೇ ಮುಂತಾದದ್ದನ್ನೋ ಅನ್ನವನ್ನೇ ಮುಂತಾದದ್ದನ್ನೋ ಪರಿಗ್ರಹಿಸಬೇಕು, ಏಕೆಂದರೆ ಅದರಲ್ಲಿಯೇ ಅನ್ನಶಬ್ದವು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ವಾಕ್ಯಶೇಷವೂ ಈ ಅರ್ಥವನ್ನೇ ಬಲಪಡಿಸುತ್ತದೆ. "ಆದ್ದರಿಂದ ಎಲ್ಲೆಲ್ಲಿ ಮಳೆ ಬೀಳುತ್ತದೆಯೋ ಅಲ್ಲಿಯೇ ಹೆಚ್ಚು ಅನ್ನವು ಆಗುತ್ತದೆ" (ಛಾಂ. ೬–೨–೪) ಎಂದು (ವಾಕ್ಯಶೇಷ). ಮಳೆಯಾದರೆ ಬತ್ತ, ಜವೆ ಮುಂತಾದದ್ದೇ ಬಹಳವಾಗಿ ಹೆಚ್ಚುತ್ತದೆಯೇ ಹೊರತು ಪೃಥಿವಿಯಲ್ಲ.

## ಸಿದ್ಧಾಂತ : ಪೃಥಿವಿಯನ್ನೇ ಅನ್ನವೆಂದಿದೆ

(ಭಾಷ್ಯ)

೧೧೧. ಏವಂ ಪ್ರಾಪ್ತೇ ಬ್ರೂಮಃ । ಪೃಥಿವ್ಯೇವ ಇಯಮ್ ಅನ್ನಶಬ್ದೇನ ಅದ್ಭ್ಯೋ ಜಾಯಮಾನಾ ವಿವಕ್ಷ್ಯತೇ ಇತಿ । ಕಸ್ಮಾತ್ ? ಅಧಿಕಾರಾತ್, ರೂಪಾತ್, ಶಬ್ದಾನ್ತರಾಚ್ಚ । ಅಧಿಕಾರಸ್ತಾವತ್ "ತತ್ತೇಜೋಽಸೃಜತ" (ಛಾಂ. ೬–೨-೩), "ತದಪೋಽಸೃಜತ" (ಛಾಂ. ೬–೨–೩) ಇತಿ ಮಹಾಭೂತವಿಷಯೋ ವರ್ತತೇ । ತತ್ರ ಕ್ರಮಪ್ರಾಪ್ತಾಂ ಪೃಥಿವೀಂ ಮಹಾಭೂತಂ ವಿಲಙ್ಘ್ಯ ನ ಅಕಸ್ಮಾತ್ ವ್ರೀಹ್ಯಾದಿಪರಿಗ್ರಹೋ ನ್ಯಾಯ್ಯಃ । ತಥಾ ರೂಪಮಪಿ ವಾಕ್ಯಶೇಷೇ ಪೃಥಿವ್ಯನುಗುಣಂ ದೃಶ್ಯತೇ "ಯತ್ ಕೃಷ್ಣಂ ತದನ್ನಸ್ಯ" (ಛಾಂ. ೬–೪–೧) ಇತಿ । ನ ಹಿ ಓದನಾದೇಃ ಅಭ್ಯವಹಾರ್ಯಸ್ಯ ಕೃಷ್ಣತ್ವನಿಯಮೋಽಸ್ತಿ । ನಾಪಿ ವ್ರೀಹ್ಯಾದೀನಾಮ್ । ನನು ಪೃಥಿವ್ಯಾ ಅಪಿ ನೈವ ಕೃಷ್ಣತ್ವನಿಯಮಃ ಅಸ್ತಿ । ಪಯಃಪಾಣ್ಡುರಸ್ಯ ಅಙ್ಗಾರರೋಹಿತಸ್ಯ ಚ ಕ್ಷೇತ್ರಸ್ಯ ದರ್ಶನಾತ್ । ನಾಯಂ ದೋಷಃ । ಬಾಹುಲ್ಯಾಪೇಕ್ಷತ್ವಾತ್ । ಭೂಯಿಷ್ಠಂ ಹಿ ಪೃಥಿವ್ಯಾಃ ಕೃಷ್ಣಂ ರೂಪಮ್, ನ ತಥಾ ಶ್ವೇತರೋಹಿತೇ । ಪೌರಾಣಿಕಾ ಅಪಿ ಪೃಥಿವೀಚ್ಛಾಯಾಂ ಶರ್ವರೀಮ್ ಉಪ

ದಿಶನ್ತಿ । ಸಾ ಚ ಕೃಷ್ಣಾಭಾಸಾ ಇತ್ಯತಃ ಕೃಷ್ಣಂ ರೂಪಂ ಪೃಥಿವ್ಯಾ ಇತಿ ಶ್ಲಿಷ್ಯತೇ । ಶ್ರುತ್ಯನ್ತರಮಪಿ ಸಮಾನಾಧಿಕಾರಮ್ "ಅದ್ಭ್ಯಃ ಪೃಥಿವೀ" (ತೈ. ೨-೧) ಇತಿ ಭವತಿ । "ತದ್ಯದಪಾಂ ಶರ ಆಸೀತ್ತತ್ ಸಮಹನ್ಯತ ಸಾ ಪೃಥಿವ್ಯಭವತ್'' (ಬೃ. ೧-೨-೨) ಇತಿ ಚ । ಪೃಥಿವ್ಯಾಸ್ತು ವ್ರೀಹ್ಯಾದೇಃ ಉತ್ಪತ್ತಿಂ ದರ್ಶಯತಿ— "ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಮ್'' (ತೈ. ೨-೧) ಇತಿ ಚ । ಏವಮ್ ಅಧಿಕಾರಾದಿಷು ಪೃಥಿವ್ಯಾಃ ಪ್ರತಿಪಾದಕೇಷು ಸತ್ಸು ಕುತೋ ವ್ರೀಹ್ಯಾದಿಪ್ರತಿಪತ್ತಿಃ ? ಪ್ರಸಿದ್ಧಿರಪಿ ಅಧಿಕಾರಾದಿಭಿರೇವ ಬಾಧ್ಯತೇ । ವಾಕ್ಯಶೇಷೋಽಪಿ ಪಾರ್ಥಿವತ್ವಾತ್ ಅನ್ನಾದ್ಯಸ್ಯ ತದ್ದ್ವಾರೇಣ ಪೃಥಿವ್ಯಾ ಏವ ಅದ್ಭ್ಯಃ ಪ್ರಭವತ್ವಂ ಸೂಚಯತಿ ಇತಿ ದ್ರಷ್ಟವ್ಯಮ್ । ತಸ್ಮಾತ್ ಪೃಥಿವೀಯಮ್ ಅನ್ನಶಬ್ದಾ ಇತಿ ॥

(ಭಾಷ್ಯಾರ್ಥ)

ಹೀಗೆಂಬ ( ಪೂರ್ವಪಕ್ಷವು ) ಬಂದೊದಗಲಾಗಿ ( ಸಿದ್ಧಾಂತವನ್ನು ) ಹೇಳುತ್ತೇವೆ. ಈ ಪೃಥಿವಿಯನ್ನೇ ಅಪ್ಪಿನಿಂದ ಹುಟ್ಟಿತೆಂದು ಅನ್ನಶಬ್ದದಿಂದ ಹೇಳಬೇಕೆಂದು (ಶ್ರುತಿ) ಹೊರಟಿದೆ. ಏಕೆ ? ಎಂದರೆ ಅಧಿಕಾರದಿಂದ, ರೂಪ ದಿಂದ, ಮತ್ತು ಶಬ್ದಾಂತರದಿಂದ. ಮೊದಲನೆಯದಾಗಿ ಅಧಿಕಾರವು "ಅದು ತೇಜಸ್ಸನ್ನು ಸೃಜಿಸಿತು" (ಛಾಂ. ೬-೨-೩), "ಅದು ಅಪ್ಪನ್ನು ಸೃಜಿಸಿತು" (ಛಾಂ. ೬-೨-೩) ಎಂದು ಮಹಾಭೂತಗಳ ವಿಷಯವಾಗಿರುತ್ತದೆ. ಇಲ್ಲಿ ಕ್ರಮಪ್ರಾಪ್ತವಾಗಿರುವ ಮಹಾಭೂತವನ್ನು ಮೀರಿ ತಟ್ಟನೆ ಬತ್ತ ಮುಂತಾದ ವನ್ನು ಗ್ರಹಿಸುವದು ನ್ಯಾಯವಲ್ಲ. ಹೀಗೆಯೇ ವಾಕ್ಯಶೇಷದಲ್ಲಿ ರೂಪವೂ ಪೃಥಿವಿಗೆ ಅನುಗುಣವಾಗಿರುತ್ತದೆ; ಯಾವದು ಕಪ್ಪೋ ಅದು ಅನ್ನದ (ರೂಪವು)'' (ಛಾಂ. ೬-೪-೧) ಎಂದು (ವಾಕ್ಯಶೇಷವು). ತಿನ್ನತಕ್ಕ ಅನ್ನವೇ ಮುಂತಾದದ್ದು ಕಪ್ಪೆಂಬ ನಿಯಮವಿಲ್ಲ; ಬತ್ತ ಮುಂತಾದವುಗಳಿಗೂ (ಈ ನಿಯಮ) ವಿಲ್ಲ.

(ಆಕ್ಷೇಪ) :– ಪೃಥಿವಿಗೂ ಕಪ್ಪಾಗಿರುವದೆಂಬ ನಿಯಮವಿಲ್ಲವಲ್ಲ ! ಹಾಲಿನಂತೆ ಬೆಳ್ಳಗಿರುವ, ಮತ್ತು ಕೆಂಡದಂತೆ ಕೆಂಪಗಿರುವ ಹೊಲವೂ ಕಂಡುಬರುತ್ತದೆಯಲ್ಲ !

(ಸಮಾಧಾನ) :– ಇದೇನೂ ದೋಷವಲ್ಲ. ಏಕೆಂದರೆ ಬಾಹುಲ್ಯಾಪೇಕ್ಷೆ ಯಿಂದ (ಹೀಗೆ ಹೇಳಬಹುದಾಗಿದೆ ; ಪೃಥ್ವಿಗೆ ಕಪ್ಪೆಂಬ ಬಣ್ಣವು ಹೆಚ್ಚಾಗಿರು ತ್ತದೆ ; ಬಿಳುಪುಕೆಂಪುಗಳು ಅಷ್ಟು (ಹೆಚ್ಚಾ)ಗಿಲ್ಲ. **ಪೌರಾಣಿಕರು** ಕೂಡ ಪೃಥಿವಿಯ ನೆರಳೇ ಕತ್ತಲೆ ಎನ್ನುತ್ತಾರೆ ; ಅದು ಕಪ್ಪಾಗಿ ತೋರುತ್ತದೆ

ಯಾದ್ದರಿಂದ ಪೃಥಿವಿಯ ರೂಪವು ಕಪ್ಪು ಎಂಬುದು ಯುಕ್ತ. (ಇದಕ್ಕೆ) ಸಮಾನಪ್ರಕರಣದಲ್ಲಿ "ಅಪ್ಪಿನಿಂದ ಪೃಥಿವಿಯುಂಟಾಯಿತು" (ತೈ. ೨–೧) ಎಂಬ ಮತ್ತೊಂದು ಶ್ರುತಿಯೂ ಇದೆ. "ಅಲ್ಲಿ ಅಪ್ಪಿನ ಗಟ್ಟಿಭಾಗವಿತ್ತಲ್ಲ, ಅದು ಹೆಪ್ಪಾಯಿತು; ಅದು ಪೃಥಿವಿಯಾಯಿತು" (ಬೃ. ೧–೨–೨) ಎಂದೂ (ಶ್ರುತ್ಯಂತರವಿದೆ). ಆದರೆ ಪೃಥಿವಿಯಿಂದಲೇ ಬತ್ತ ಮುಂತಾದವು ಉತ್ಪನ್ನವಾದವೆಂದು "ಪೃಥಿವಿಯಿಂದ ಓಷಧಿಗಳು, ಓಷಧಿಗಳಿಂದ ಅನ್ನವು" (ತೈ ೨–೧) ಎಂದೂ (ಶ್ರುತಿಯಲ್ಲಿ) ಹೇಳಿರುತ್ತದೆ. ಹೀಗೆ ಪೃಥಿವಿಯನ್ನು ಹೇಳುವ ಪ್ರಕರಣವೇ ಮುಂತಾದವುಗಳಿರುವಲ್ಲಿ ಬತ್ತವೇ ಮುಂತಾದವುಗಳೇ (ಅನ್ನಶಬ್ದವಾಚ್ಯ)ವೆಂದು ಹೇಗೆ ತಿಳಿಯಬೇಕು? (ಅನ್ನಶಬ್ದದ) ಪ್ರಸಿದ್ಧಿಯೂ ಪ್ರಕರಣಾದಿಗಳಿಂದಲೇ ಬಾಧಿತವಾಗುತ್ತದೆ. ವಾಕ್ಯಶೇಷವೂ ಅನ್ನಾದ್ಯವು[1] ಪಾರ್ಥಿವವಾಗಿರುವದರಿಂದ, ಆದರ ದ್ವಾರದಿಂದ ಪೃಥಿವಿಯೇ ಅಪ್ಪಿನಿಂದ ಉಂಟಾಯಿತೆಂಬುದನ್ನು ತಿಳಿಸುತ್ತದೆ ಎಂದು ತಿಳಿಯಬೇಕು. ಆದ್ದರಿಂದ ಈ ಅನ್ನಶಬ್ದ(ವಾಚ್ಯವಾಗಿರುವದು) ಪೃಥಿವಿಯೇ.

## ೭. ತದಭಿಧ್ಯಾನಾಧಿಕರಣ

(ಆಕಾಶಾದಿರೂಪದಿಂದ ಪರಮೇಶ್ವರನೇ ಸ್ರಷ್ಟೃ)

**ತದಭಿಧ್ಯಾನಾದೇವ ತು ತಲ್ಲಿಙ್ಗಾತ್ ಸಃ ॥ ೧೩ ॥**

೧೩. ಆತನ ಅಭಿಧ್ಯಾನದಿಂದಲೇ (ಸೃಷ್ಟಿಯಾಗುತ್ತದೆ); ಆತನ ಲಿಂಗವಿರುವದರಿಂದ ಅವನೇ.

### ಪೂರ್ವಪಕ್ಷ: ಆಕಾಶಾದಿಭೂತವೇ ಸ್ರಷ್ಟೃ

(ಭಾಷ್ಯ)

೧೧೨. ಕಿಮ್ ಇಮಾನಿ ವಿಯದಾದೀನಿ ಭೂತಾನಿ ಸ್ವಯಮೇವ ಸ್ವವಿಕಾರಾನ್ ಸೃಜನ್ತಿ, ಆಹೋಸ್ವಿತ್ ಪರಮೇಶ್ವರ ಏವ ತೇನ ತೇನ ಆತ್ಮನಾ ಅವತಿಷ್ಠಮಾನಃ ಅಭಿಧ್ಯಾಯನ್ ತಂ ತಂ ವಿಕಾರಂ ಸೃಜತಿ ಇತಿ ಸಂದೇಹೇ ಸತಿ ಪ್ರಾಪ್ತಂ ತಾವತ್ ಸ್ವಯಮೇವ ಸೃಜನ್ತಿ ಇತಿ । ಕುತಃ ? "ಆಕಾಶಾದ್ ವಾಯುರ್ವಾಯೋರಗ್ನಿಃ" (ತೈ. ೨–೧) ಇತ್ಯಾದಿ ಸ್ವಾತನ್ತ್ರ್ಯಶ್ರವಣಾತ್ । ನನು ಅಚೇತನಾನಾಂ ಸ್ವತನ್ತ್ರಾಣಾಂ ಪ್ರವೃತ್ತಿಃ ಪ್ರತಿಷಿದ್ಧಾ । ನೈಷ

---

1. ತಿನ್ನುವ ಅನ್ನವು.

ದೋಷಃ । "ತತ್ತೇಜ ಐಕ್ಷತ" (ಛಾಂ. ೬-೨-೩) "ತಾ ಆಪ ಐಕ್ಷನ್ತ" (ಛಾಂ. ೬-೨-೪) ಇತಿ ಚ ಭೂತಾನಾಮಪಿ ಚೇತನತ್ವಶ್ರವಣಾತ್ ಇತಿ ॥

(ಭಾಷ್ಯಾರ್ಥ)

ಈ ಆಕಾಶವೇ ಮುಂತಾದ ಭೂತಗಳು ತಾವೇ ತಮ್ಮ ವಿಕಾರಗಳನ್ನು ಸೃಜಿಸುತ್ತವೆಯೊ, ಅಥವಾ ಪರಮೇಶ್ವರನೇ ಆಯಾ ರೂಪದಿಂದ ಇದ್ದುಕೊಂಡು ಅಭಿಧ್ಯಾನಮಾಡಿ ಆಯಾ ವಿಕಾರವನ್ನು ಸೃಜಿಸುತ್ತಾನೊ ? -ಎಂಬ ಸಂಶಯವು ಬರಲಾಗಿ ಮೊದಲು ಬಂದೊದಗುವ (ಪೂರ್ವಪಕ್ಷವು ಯಾವದೆಂದರೆ) ಅದೇ ಸೃಜಿಸುತ್ತದೆ. ಏಕೆ ? ಎಂದರೆ "ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ" (ತೈ. ೨-೧) ಎಂದು ಮುಂತಾದ (ಭೂತಗಳಿಗೆ) ಸ್ವಾತಂತ್ರ್ಯವನ್ನು (ಶ್ರುತಿಯಲ್ಲಿ) ಹೇಳಿರುತ್ತದೆ.

(ಆಕ್ಷೇಪ) :- ಅಚೇತನ(ವಸ್ತುಗಳಿಗೆ) ಸ್ವತಂತ್ರವಾದ ಪ್ರವೃತ್ತಿಯನ್ನು ಪ್ರತಿಷೇಧಿಸಿದ್ದಾಗಿದೆಯಲ್ಲ[1] !

(ಪೂರ್ವಪಕ್ಷಿ) :- ಇದೇನೂ ದೋಷವಲ್ಲ. "ಆ ತೇಜಸ್ಸು ನೋಡಿತು" (ಛಾಂ. ೬-೨-೩) ಎಂದೂ "ಆ ಅಪ್ಪು ನೋಡಿತು" (ಛಾಂ. ೬-೨-೪) ಎಂದೂ ಭೂತಗಳೂ ಚೇತನವೆಂದು ಶ್ರುತಿಯಲ್ಲಿ ಹೇಳಿರುತ್ತದೆ[2].

## ಸಿದ್ಧಾಂತ : ಪರಮೇಶ್ವರನ ಅಭಿಧ್ಯಾನದಿಂದಲೇ ಸೃಷ್ಟಿ

(ಭಾಷ್ಯ)

೧೧೩. ಏವಂ ಪ್ರಾಪ್ತೇ ಅಭಿಧೀಯತೇ। ಸ ಏವ ಪರಮೇಶ್ವರಃ ತೇನ ತೇನಾತ್ಮನಾ ಅವತಿಷ್ಠಮಾನಃ ಅಭಿಧ್ಯಾಯನ್ ತಂ ತಂ ವಿಕಾರಂ ಸೃಜತಿ ಇತಿ।

---

1. ಸಾಂಖ್ಯಮತದ ಖಂಡನೆಯಲ್ಲಿ ಇವನ್ನು ಪ್ರತಿಷೇಧಿಸಿದ್ದಾಗಿದೆಯಲ್ಲ !

2. ಭೂತಾಭಿಮಾನಿದೇವತೆಗಳನ್ನೂ ಇಲ್ಲಿಗೆ ತೆಗೆದುಕೊಂಡರಾಗುವದೆಂದು ಭಾವ. ದೇವತೆಗಳ ಮೂಲಕ ಭೂತಗಳನ್ನೇ ಚೇತನರೆಂದಿಟ್ಟುಕೊಂಡರೆ ಮುಂದುಮುಂದಿನ ಕಾರ್ಯಗಳಿಗೆ ಕಾರಣವಾಗುವವು, ಈಶ್ವರನೇನೂ ಬೇಕಿಲ್ಲ. ಆಕಾಶಾದಿಭೂತಗಳಿಗೆ ಅಧಿಷ್ಠಾತೃಗಳಾದ ದೇವತೆಗಳು ಸ್ವತಂತ್ರವಾಗಿಯೇ ಮುಂದುಮುಂದಿನ ಭೂತಗಳನ್ನು ಸೃಷ್ಟಿಮಾಡುತ್ತಾರೊ, ಪರಮೇಶ್ವರಾಧಿಷ್ಠಿತರಾಗಿ ಸೃಷ್ಟಿಮಾಡುತ್ತಾರೊ ಎಂಬ ಸಂಶಯವನ್ನು ಭಾಮತೀಕಾರರು ತೆಗೆದಿರುವದು ಈ ಭಾಷ್ಯಕ್ಕೆ ವಿರುದ್ಧವು. ಇಲ್ಲಿ ದೇವತೆಗಳು ಪ್ರಕೃತವಲ್ಲ; ಈಕ್ಷಿತ್ರಂತರನಿಷೇಧಶ್ರುತಿಯಿಂದಲೇ ದೇವತೆಗಳ ವಿಷಯವಾದ ಸಂಶಯವನ್ನು ಪರಿಹರಿಸಿಕೊಳ್ಳಬಹುದು. ದೇವತೆಗಳಿಗೂ ಪರಮೇಶ್ವರನೇ ಆತ್ಮನಾಗಿರುವದರಿಂದಲೂ ಭಾಷ್ಯವನ್ನು ಇದ್ದಂತೆ ಗ್ರಹಿಸುವದೇ ಯುಕ್ತವೆಂದು ತೋರುತ್ತದೆ.

ಕುತಃ ? ತಲ್ಲಿಙ್ಗಾತ್ । ತಥಾ ಹಿ ಶಾಸ್ತ್ರಮ್ "ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅನ್ತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮನ್ತರೋ ಯಮಯತಿ" (ಬೃ. ೩-೭-೩) ಇತ್ಯೇವಂಜಾತೀಯಕಂ ಸಾಧ್ಯಕ್ಷಾಣಾಮೇವ ಭೂತಾನಾಂ ಪ್ರವೃತ್ತಿಂ ದರ್ಶಯತಿ। ತಥಾ "ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯ" (ತೈ.೨-೬) ಇತಿ ಪ್ರಸ್ತುತ್ಯ "ಸಚ್ಚ ತ್ಯಚ್ಚಾ ಭವತ್" (ತೈ. ೨-೬) "ತದಾತ್ಮಾನಂ ಸ್ವಯಮಕುರುತ" (ತೈ.೨-೭) ಇತಿ ಚ ತಸ್ಯೈವ ಚ ಸರ್ವಾತ್ಮಭಾವಂ ದರ್ಶಯತಿ। ಯತ್ತು ಈಕ್ಷಣಶ್ರವಣಮ್ ಅಪ್ತೇಜಸೋಃ, ತತ್ಪರಮೇಶ್ವರಾವೇಶವಶಾದೇವ ದ್ರಷ್ಟವ್ಯಮ್ 'ನಾನ್ಯೋಽತೋಽಸ್ತಿ ದ್ರಷ್ಟಾ' (ಬೃ. ೩-೭-೨೩) ಇತಿ ಈಕ್ಷಿತ್ರನ್ತರಪ್ರತಿಷೇಧಾತ್, ಪ್ರಕೃತತ್ವಾಚ್ಚ ಸತ ಈಕ್ಷಿತುಃ "ತದೈಕ್ಷತ ಬಹು ಸ್ಯಾಂ ಪ್ರಜಾಯೇಯ" (ಛಾಂ. ೬-೨-೩) ಇತ್ಯತ್ರ ॥

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು)ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ: ಅದೇ ಪರಮೇಶ್ವರನನ್ನು ಆಯಾ ರೂಪದಿಂದ ಇದ್ದುಕೊಂಡು ಅಭಿಧ್ಯಾನಮಾಡಿ ಆಯಾ ವಿಕಾರವನ್ನು ಸೃಜಿಸುತ್ತಾನೆ. ಏಕೆ? ಎಂದರೆ ತಲ್ಲಿಂಗವಿರುವದರಿಂದ. ಹೇಗೆಂದರೆ "ಯಾವನು ಪೃಥಿವಿಯಲ್ಲಿದ್ದುಕೊಂಡಿರುವನೋ, ಯಾವನು ಪೃಥಿವಿಗೂ ಒಳಗಿರುವನೋ, ಯಾವನನ್ನು ಪೃಥಿವಿಯು ಅರಿಯದೋ, ಯಾವನಿಗೆ ಪೃಥಿವಿಯು ಶರೀರವೋ, ಯಾವನು ಪೃಥಿವಿಯನ್ನು ಒಳಗಿದ್ದು ನಿಯಮಿಸುತ್ತಿರುವನೋ" (ಬೃ. ೩-೭-೩) ಎಂಬೀ ಜಾತಿಯ ಶಾಸ್ತ್ರವು ಅಧ್ಯಕ್ಷನಿಂದೊಡಗೂಡಿದ ಭೂತಗಳಿಗೇ ಪ್ರವೃತ್ತಿಯನ್ನು ಹೇಳುತ್ತದೆ. ಹೀಗೆಯೇ "ಅವನು 'ಬಹುವಾಗುವೆನು, ಉತ್ಪತ್ತಿಯಾಗುವೆನು' ಎಂದು ಕಾಮಿಸಿದನು" (ತೈ.೨-೬) ಎಂದು ಪ್ರಾರಂಭಿಸಿ "ಸತ್ತೂ ತ್ಯತ್ತೂ ಆದನು" (ತೈ. ೨-೬) ಎಂದೂ, "ಅದು ತನ್ನನ್ನು ತಾನೇ ಮಾಡಿಕೊಂಡಿತು" (ತೈ. ೨-೭) ಎಂದೂ ಅವನಿಗೇ ಸರ್ವಾತ್ಮಭಾವವನ್ನು ಹೇಳಿರುತ್ತದೆ.

ಇನ್ನು ಅಪ್ತೇಜಸ್ಸುಗಳು ನೋಡಿದವು ಎಂದು ಶ್ರುತಿಯಲ್ಲಿರುವದಷ್ಟೆ, ಅದು ಪರಮೇಶ್ವರಾವೇಶದ ವಶದಿಂದಲೇ ಎಂದು ತಿಳಿಯಬೇಕು. ಏಕೆಂದರೆ "ಅವನಿಗಿಂತ ಬೇರೆ ದ್ರಷ್ಟೃವಿಲ್ಲ" (ಬೃ. ೩-೭-೨೩) ಎಂದು ಮತ್ತೊಬ್ಬ ನೋಡುವವನು ಇಲ್ಲವೆಂದಿರುತ್ತದೆ; ಮತ್ತು "ಅದು 'ಬಹುವಾಗುವೆನು, ಉತ್ಪತ್ತಿಯಾಗುವೆನು' ಎಂದು ಯೋಚಿಸಿನೋಡಿತು" (ಛಾಂ. ೬-೨-೩) ಎಂಬಲ್ಲಿ ಸತ್ತೆಂಬ ಈಕ್ಷಿತೃವೇ ಪ್ರಕೃತವಾಗಿರುತ್ತದೆ.

## ೮. ವಿಪರ್ಯಯಾಧಿಕರಣ

(ಉತ್ಪತ್ತಿಗೆ ವಿಪರೀತಕ್ರಮದಿಂದ ಪ್ರಲಯ)

**ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ ॥ ೧೪ ॥**

೧೪. ಇದಕ್ಕೆ ವಿಪರೀತವಾಗಿಯೇ (ಪ್ರಲಯ)ಕ್ರಮವು ; ಅದು ಉಪಪನ್ನವೂ ಆಗಿದೆ.

## ಪ್ರಲಯಕ್ರಮಕ್ಕೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೧೧೪. ಭೂತಾನಾಮ್ ಉತ್ಪತ್ತಿಕ್ರಮಶ್ಚಿನ್ತಿತಃ । ಅಥ ಇದಾನೀಮ್ ಅಪ್ಯಯಕ್ರಮಃ ಚಿನ್ತ್ಯತೇ । ಕಿಮ್ ಅನಿಯತೇನ ಕ್ರಮೇಣ ಅಪ್ಯಯಃ ಉತ ಉತ್ಪತ್ತಿಕ್ರಮೇಣ, ಅಥವಾ ತದ್ವಿಪರೀತೇನ ಇತಿ । ತ್ರಯೋಽಪಿ ಚ ಉತ್ಪತ್ತಿಸ್ಥಿತಿಪ್ರಲಯಾಃ ಭೂತಾನಾಂ ಬ್ರಹ್ಮಾಯತ್ತಾಃ ಶ್ರೂಯನ್ತೇ—"ಯತೋ ವಾ ಇಮಾನಿ ಭೂತಾನಿ ಜಾಯನ್ತೇ । ಯೇನ ಜಾತಾನಿ ಜೀವನ್ತಿ । ಯತ್ಪ್ರಯನ್ತ್ಯಭಿಸಂವಿಶನ್ತಿ" (ತೈ. ೩-೧) ಇತಿ । ತತ್ರ ಅನಿಯಮಃ ಅವಿಶೇಷಾತ್ ಇತಿ ಪ್ರಾಪ್ತಮ್ । ಅಥವಾ ಉತ್ಪತ್ತೇಃ ಕ್ರಮಸ್ಯ ಶ್ರುತತ್ವಾತ್ ಪ್ರಲಯಸ್ಯಾಪಿ ಕ್ರಮಾಕಾಙ್ಕ್ಷಿಣಃ ಸ ಏವ ಕ್ರಮಃ ಸ್ಯಾತ್ ಇತಿ ॥

(ಭಾಷ್ಯಾರ್ಥ)

ಭೂತಗಳ ಉತ್ಪತ್ತಿಕ್ರಮವನ್ನು ಕುರಿತು ವಿಚಾರಮಾಡಿದ್ದಾಯಿತು. ಇನ್ನು ಈಗ ಪ್ರಲಯದ ಕ್ರಮವನ್ನು ವಿಚಾರಮಾಡಲಾಗುತ್ತದೆ. (ಹೇಗೆಂದು) ಗೊತ್ತಿಲ್ಲದ ಕ್ರಮದಿಂದ ಪ್ರಲಯವೊ, ಅಥವಾ ಉತ್ಪತ್ತಿಕ್ರಮದಿಂದಲೊ, ಅಥವಾ ವಿಪರೀತವಾದ (ಕ್ರಮ)ದಿಂದಲೊ ? ಭೂತಗಳ ಉತ್ಪತ್ತಿಸ್ಥಿತಿಲಯಗಳು ಬ್ರಹ್ಮಕ್ಕೆ ಅಧೀನವಾಗಿರುವದೆಂದು ಶ್ರುತಿಯುಲ್ಲಿರುತ್ತದೆ. "ಯಾವದರಿಂದ ಈ ಭೂತಗಳು ಹುಟ್ಟುತ್ತವೆಯೋ, ಯಾವದರಿಂದ ಹುಟ್ಟಿದವು ಜೀವಿಸುತ್ತವೆಯೋ, ಯಾವದನ್ನು ಹೋಗಿ ಸೇರುತ್ತವೆಯೋ (ಅದು ಬ್ರಹ್ಮವು) (ತೈ.೩-೧) ಎಂದು (ಶ್ರುತಿ).

ಇಲ್ಲಿ (ಯಾವ ಕ್ರಮದಲ್ಲಿಯೂ ಯಾವ) ವಿಶೇಷವೂ ಇಲ್ಲದ್ದರಿಂದ (ಗೊತ್ತಾದ) ನಿಯಮವಿಲ್ಲ ಎಂದು (ಮೊದಲು) ಬಂದೊದಗುತ್ತದೆ. ಅಥವಾ ಉತ್ಪತ್ತಿಯ ಕ್ರಮವು ಶ್ರುತಿಯಲ್ಲಿರುವದರಿಂದಲೂ ಪ್ರಲಯಕ್ಕೂ ಕ್ರಮವು ಬೇಕಾಗುವದರಿಂದಲೂ ಅದೇ ಕ್ರಮವಾಗಬಹುದು ಎಂದು ಬಂದೊದಗುತ್ತದೆ.

# ಸಿದ್ಧಾಂತ: ಉತ್ಪತ್ತಿವಿಪರೀತಕ್ರಮದಿಂದ ಪ್ರಲಯವಾಗುತ್ತದೆ

(ಭಾಷ್ಯ)

ಏವಂ ಪ್ರಾಪ್ತಮ್। ತತೋ ಬ್ರೂಮಃ। ವಿಪರ್ಯಯೇಣ ತು ಪ್ರಲಯಕ್ರಮಃ, ಅತಃ ಉತ್ಪತ್ತಿಕ್ರಮಾದ್ ಭವಿತುಮರ್ಹತಿ। ತಥಾ ಹಿ ಲೋಕೇ ದೃಶ್ಯತೇ। ಯೇನ ಕ್ರಮೇಣ ಸೋಪಾನಮ್ ಆರೂಢಃ, ತತೋ ವಿಪರೀತೇನ ಕ್ರಮೇಣ ಅವರೋಹತಿ ಇತಿ। ಅಪಿ ಚ ದೃಶ್ಯತೇ ಮೃದೋ ಜಾತಂ ಘಟಶರಾವಾದಿ ಅಪ್ಯಯಕಾಲೇ ಮೃದ್ಭಾವಮ್ ಅಪ್ಯೇತಿ। ಅದ್ಭ್ಯಶ್ಚ ಜಾತಂ ಹಿಮಕರಕಾದಿ ಅಬ್ಭಾವಮಪ್ಯೇತಿ ಇತಿ। ಅತಶ್ಚ ಉಪಪದ್ಯತೇ ಏತತ್ ಯತ್ ಪೃಥಿವೀ ಅದ್ಭ್ಯೋ ಜಾತಾ ಸತೀ ಸ್ಥಿತಿಕಾಲವ್ಯತಿಕ್ರಾನ್ತೌ ಅಪೋಽಪೀಯಾತ್ ಆಪಶ್ಚ ತೇಜಸೋ ಜಾತಾಃ ಸತ್ಯಃ ತೇಜೋಽಪೀಯುಃ। ಏವಂ ಕ್ರಮೇಣ ಸೂಕ್ಷ್ಮಂ ಸೂಕ್ಷ್ಮತರಂ ಚ ಅನನ್ತರಮ್ ಅನನ್ತರಂ ಕಾರಣಮ್ ಅಪೀತ್ಯ ಸರ್ವಂ ಕಾರ್ಯಜಾತಂ ಪರಮಕಾರಣಂ ಪರಮಸೂಕ್ಷ್ಮಂ ಚ ಬ್ರಹ್ಮ ಅಪ್ಯೇತಿ ಇತಿ ವೇದಿತವ್ಯಮ್। ನ ಹಿ ಸ್ವಕಾರಣವ್ಯತಿಕ್ರಮೇಣ ಕಾರಣಕಾರಣೇ ಕಾರ್ಯಾಪ್ರಲಯೋ ನ್ಯಾಯ್ಯಃ। ಸ್ಮೃತಾವಪಿ ಉತ್ಪತ್ತಿಕ್ರಮವಿಪರ್ಯಯೇಣೈವ ಅಪ್ಯಯಕ್ರಮಃ ತತ್ರ ತತ್ರ ದರ್ಶಿತಃ– "ಜಗತ್ಪ್ರತಿಷ್ಠಾ ದೇವರ್ಷೇ ಪೃಥಿವ್ಯಪ್ಸು ಪ್ರಲೀಯತೇ। ಜ್ಯೋತಿಷ್ಯಾಪಃ ಪ್ರಲೀಯನ್ತೇ ಜ್ಯೋತಿರ್ವಾಯೌ ಪ್ರಲೀಯತೇ" (ಮೋ. ಧ. ೩೩೮–೨೯) ಇತ್ಯೇವಮಾದೌ। ಉತ್ಪತ್ತಿಕ್ರಮಸ್ತು ಉತ್ಪತ್ತಾವೇವ ಶ್ರುತತ್ವಾತ್ ನಾಪ್ಯಯೇ ಭವಿತುಮರ್ಹತಿ। ನ ಚ ಅಸೌ ಅಯೋಗ್ಯತ್ವಾತ್ ಅಪ್ಯಯೇನ ಆಕಾಙ್ಕ್ಷ್ಯತೇ। ನ ಹಿ ಕಾರ್ಯೇ ಧ್ರಿಯಮಾಣೇ ಕಾರಣಸ್ಯ ಅಪ್ಯಯೋ ಯುಕ್ತಃ। ಕಾರಣಾಪ್ಯಯೇ ಕಾರ್ಯಸ್ಯ ಅವಸ್ಥಾನಾನುಪಪತ್ತೇಃ। ಕಾರ್ಯಾಪ್ಯಯೇ ತು ಕಾರಣಸ್ಯ ಅವಸ್ಥಾನಂ ಯುಕ್ತಮ್। ಮೃದಾದಿಷು ಏವಂ ದೃಷ್ಟತ್ವಾತ್ ॥

(ಭಾಷ್ಯಾರ್ಥ)

ಹೀಗೆಂದು ಬಂದೊದಗಿತು. ಇದಕ್ಕೆ (ಸಿದ್ಧಾಂತವನ್ನು) ಹೇಳುತ್ತೇವೆ: ಪ್ರಲಯಕ್ರಮವು ಈ ಉತ್ಪತ್ತಿಕ್ರಮಕ್ಕೆ ವಿಪರೀತವಾಗಿಯೇ ಇರಬೇಕು. ಹಾಗಲ್ಲವೆ, ಲೋಕದಲ್ಲಿ ಕಾಣುವದು ? ಯಾವ ಕ್ರಮದಿಂದ ಸೋಪಾನವನ್ನು ಹತ್ತುವನೋ ಅದಕ್ಕೆ ವಿಪರೀತವಾದ ಕ್ರಮದಿಂದ ಇಳಿಯುತ್ತಾನೆ. ಇದಲ್ಲದೆ ಮಣ್ಣಿನಿಂದ ಹುಟ್ಟಿದ ಗಡಿಗೆ, ಶ್ರಾವೆ– ಮುಂತಾದದ್ದು ಪ್ರಲಯಕಾಲದಲ್ಲಿ ಮಣ್ಣಿನ ರೂಪದಲ್ಲಿ ಲಯವಾಗುತ್ತದೆ; ನೀರಿನಿಂದ ಹುಟ್ಟಿದ ಮಂಜು,

ಆಲಿಕಲ್ಲು– ಮುಂತಾದದ್ದು ನೀರಿನಲ್ಲಿಯೇ ಲಯವಾಗುತ್ತದೆ– ಎಂದೂ ಕಂಡುಬರುತ್ತದೆ. ಆದ್ದರಿಂದಲೂ ಪೃಥಿವಿಯು ಅಪ್ಪಿನಿಂದ ಹುಟ್ಟಿರುವದರಿಂದ ಸ್ಥಿತಿಕಾಲವು ಮುಗಿಯಲು ಅಪ್ಪಿನಲ್ಲಿಯೇ ಲಯವಾಗಬೇಕು, ಮತ್ತು ಅಪ್ಪು ತೇಜಸ್ಸಿನಿಂದ ಹುಟ್ಟಿರುವದರಿಂದ ತೇಜಸ್ಸಿನಲ್ಲಿ ಲಯವಾಗಬೇಕು ಎಂಬಿದು ಯುಕ್ತವಾಗಿರುತ್ತದೆ. ಈ ಕ್ರಮದಿಂದ ಕಾರ್ಯಜಾತವೆಲ್ಲವೂ ಸೂಕ್ಷ್ಮವಾದ ಮತ್ತು ಸೂಕ್ಷ್ಮತರವಾದ ಮುಂದುಮುಂದಿನ ಕಾರಣವನ್ನು ಸೇರಿ ಲಯವಾಗಿ ಪರಮಕಾರಣವೂ ಪರಮಸೂಕ್ಷ್ಮವೂ ಆಗಿರುವ ಬ್ರಹ್ಮದಲ್ಲಿ ಸೇರಿ ಲಯವಾಗುತ್ತದೆ ಎಂದು ತಿಳಿಯಬೇಕು. ಏಕೆಂದರೆ ತನ್ನ ಕಾರಣವನ್ನು ದಾಟಿ ಕಾರಣಕಾರಣದಲ್ಲಿ ಕಾರ್ಯವು ಲಯವಾಗುವದು ಯುಕ್ತವಲ್ಲ. "ದೇವರ್ಷಿಯೆ, ಜಗತ್ತಿಗೆ ಪ್ರತಿಷ್ಠೆಯಾಗಿರುವ ಪೃಥಿವಿಯು ಅಪ್ಪಿನಲ್ಲಿ ಪ್ರಲಯವಾಗುತ್ತದೆ; ಜ್ಯೋತಿಯಲ್ಲಿ ಅಪ್ಪು ಪ್ರಲಯವಾಗುತ್ತದೆ; ಜ್ಯೋತಿಯು ವಾಯುವಿನಲ್ಲಿ ಪ್ರಲಯವಾಗುತ್ತದೆ (ಮೋ.ಧ. ೩೩೪–೨೯) ಮುಂತಾಗಿರುವ ಸ್ಮೃತಿಯಲ್ಲಿಯೂ ಉತ್ಪತ್ತಿಕ್ರಮಕ್ಕೆ ವಿಪರೀತವಾಗಿಯೇ ಪ್ರಲಯಕ್ರಮವನ್ನು ಅಲ್ಲಲ್ಲಿ ಹೇಳಿರುತ್ತದೆ[1].

ಉತ್ಪತ್ತಿಕ್ರಮವಾದರೊ, ಉತ್ಪತ್ತಿಯ(ವಿಷಯ)ದಲ್ಲಿ ಹೇಳಿರುವದಾದ್ದರಿಂದ ಪ್ರಲಯದ (ವಿಷಯ)ದಲ್ಲಿ ಆಗಲಾರದು. ಈ (ಕ್ರಮವು ಪ್ರಲಯಕ್ಕೆ) ತಕ್ಕದ್ದಾಗಿರುವದಿಲ್ಲವಾದ್ದರಿಂದ ಪ್ರಲಯಕ್ಕೆ (ಈ ಕ್ರಮದ) ಅಪೇಕ್ಷೆಯಿರುವದೂ ಇಲ್ಲ. ಕಾರ್ಯವು ಇರುವಾಗಲೇ ಕಾರಣವು ಲಯವಾಗುವದೆಂಬುದು ಯುಕ್ತವೇ ಅಲ್ಲ; ಏಕೆಂದರೆ ಕಾರಣವು ಲಯವಾದರೆ ಕಾರ್ಯವು (ಹೀಗೆಯೇ) ಇದ್ದುಕೊಂಡಿರುವದೆಂಬುದು ಉಪಪನ್ನವಲ್ಲ. ಆದರೆ ಕಾರ್ಯವು ಲಯವಾದರೆ ಕಾರಣವು ಹಾಗೆಯೇ ಇರುವದು ಯುಕ್ತವಾಗಿರುತ್ತದೆ; ಏಕೆಂದರೆ ಮೃದಾದಿಗಳ (ವಿಷಯ)ದಲ್ಲಿ ಹೀಗಿರುವದು ಕಂಡಿರುತ್ತದೆ.

---

1. "ತೇ ವಾಯುಃ ಪ್ರಲಯಂ ಯಾತಿ ಮನಸ್ಯಾಕಾಶ ಏವ ಚ — ಮನೋ ಹಿ ಪರಮಂ ಭೂತಂ ತದವ್ಯಕ್ತೇ ಪ್ರಲೀಯತೇ। ಅವ್ಯಕ್ತಂ ಪುರುಷೇ ಬ್ರಹ್ಮನ್ ನಿಷ್ಕ್ರಿಯೇ ಸಂಪ್ರಲೀಯತೇ। ನಾಸ್ತಿ ತಸ್ಮಾತ್ ಪರತರಃ ಪುರುಷಾದ್ವೈ ಸನಾತನಾತ್" ಎಂದು ೩೦,೩೧ನೆಯ ಶ್ಲೋಕಗಳಿವೆ; ಇವುಗಳಲ್ಲಿ ೩೧ನೆಯ ಶ್ಲೋಕದ ಭಾಗವನ್ನು ೨–೧–೧೪ ಭಾಷ್ಯದಲ್ಲಿ ಉದಾಹರಿಸಿದೆ. ಅಲ್ಲಿ 'ನಿಷ್ಕ್ರಿಯೇ' ಎಂಬುದರ ಬದಲು 'ನಿರ್ಗುಣೇ' ಎಂಬ ಪಾಠವನ್ನು ಸ್ವೀಕರಿಸಿದೆ.

## ೯. ಅನ್ತರಾವಿಜ್ಞಾನಾಧಿಕರಣ

(ಮನೋಬುದ್ಧಿಗಳಿಗೆ ಸೃಷ್ಟಿಕ್ರಮದಲ್ಲಿ ಅವಕಾಶವಿದೆ)

**ಅನ್ತರಾವಿಜ್ಞಾನಮನಸೀ ಕ್ರಮೇಣ ತಲ್ಲಿಙ್ಗಾದಿತಿ ಚೇನ್ನಾವಿಶೇಷಾತ್ ॥ ೧೫ ॥**

೧೫. ವಿಜ್ಞಾನಮನಸ್ಸುಗಳನ್ನು ನಡುವೆ ಕ್ರಮವಾಗಿ ( ಸಂಗ್ರಹಿಸಬೇಕು ) ಏಕೆಂದರೆ ಅವುಗಳ ಲಿಂಗವಿದೆ ಎಂದರೆ ಹಾಗಲ್ಲ ; ಏಕೆಂದರೆ ವಿಶೇಷವಿಲ್ಲ.

### ಪೂರ್ವಪಕ್ಷ: ಮನೋಬುದ್ಧಿಗಳಿಗೆ ಸೃಷ್ಟಿಕ್ರಮದಲ್ಲಿ ಸ್ಥಾನವೇ ಇಲ್ಲವಲ್ಲ !

(ಭಾಷ್ಯ)

೧೧೬. ಭೂತಾನಾಮ್ ಉತ್ಪತ್ತಿಪ್ರಲಯೌ ಅನುಲೋಮಪ್ರತಿಲೋಮಕ್ರಮಾಭ್ಯಾಂ ಭವತಃ ಇತ್ಯುಕ್ತಮ್। ಆತ್ಮಾದಿರುತ್ಪತ್ತಿಃ ಪ್ರಲಯಶ್ಚ ಆತ್ಮಾನ್ತಃ ಇತ್ಯಪ್ಯುಕ್ತಮ್ । ಸೇನ್ದ್ರಿಯಸ್ಯ ತು ಮನಸಃ ಬುದ್ಧೇಶ್ಚ ಸದ್ಭಾವಃ ಪ್ರಸಿದ್ಧಃ ಶ್ರುತಿಸ್ಮೃತ್ಯೋಃ । "ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ। ಇನ್ದ್ರಿಯಾಣಿ ಹಯಾನಾಹುಃ" (ಕಾ. ೧-೩-೩,೪) ಇತ್ಯಾದಿಲಿಙ್ಗೇಭ್ಯಃ। ತಯೋರಪಿ ಕಸ್ಮಿಂಶ್ಚಿದನ್ತರಾಲೇ ಕ್ರಮೇಣ ಉತ್ಪತ್ತಿಪ್ರಲಯೌ ಉಪಸಂಗ್ರಾಹ್ಯೌ ಸರ್ವಸ್ಯ ವಸ್ತುಜಾತಸ್ಯ ಬ್ರಹ್ಮಜತ್ವಾಭ್ಯುಪಗಮಾತ್। ಅಪಿ ಚ ಆಥರ್ವಣೇ ಉತ್ಪತ್ತಿಪ್ರಕರಣೇ ಭೂತಾನಾಮ್ ಆತ್ಮನಶ್ಚ ಅನ್ತರಾಲೇ ಕರಣಾನಿ ಅನುಕ್ರಮ್ಯನ್ತೇ "ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇನ್ದ್ರಿಯಾಣೀ" ಚ। ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ " (ಮುಂ. ೨-೧-೩) ಇತಿ। ತಸ್ಮಾತ್ ಪೂರ್ವೋಕ್ತೋತ್ಪತ್ತಿಪ್ರಲಯಕ್ರಮಭಙ್ಗಪ್ರಸಙ್ಗೋ ಭೂತಾನಾಮ್ ಇತಿ ಚೇತ್ ॥

(ಭಾಷ್ಯಾರ್ಥ)

ಭೂತಗಳಿಗೆ ಉತ್ಪತ್ತಿಪ್ರಲಯಗಳು ಅನುಲೋಮಪ್ರತಿಲೋಮಕ್ರಮಗಳಿಂದ ಆಗುತ್ತವೆ ಎಂದು ಹೇಳಿದ್ದಾಯಿತು. ಆತ್ಮನನ್ನು ಮೊದಲುಮಾಡಿಕೊಂಡು ಉತ್ಪತ್ತಿಯಾಗುತ್ತದೆ; ಆತ್ಮನನ್ನು ಕೊನೆಯಾಗಿ ಮಾಡಿಕೊಂಡು

ಪ್ರಲಯವಾಗುತ್ತದೆ[1] ಎಂದೂ ಹೇಳಿದ್ದಾಯಿತು. ಆದರೆ ಇಂದ್ರಿಯಸಹಿತವಾದ ಮನಸ್ಸೂ ಬುದ್ಧಿಯೂ ಇರುತ್ತವೆ ಎಂದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುತ್ತದೆ. "ಬುದ್ಧಿಯನ್ನಾದರೆ ಸಾರಥಿ ಎಂದು ತಿಳಿ; ಮನಸ್ಸನ್ನು ಕಡಿವಾಣವೆಂದು ತಿಳಿ" (ಕಾ. ೧-೩-೩) "ಇಂದ್ರಿಯಗಳನ್ನು ಕುದುರೆಗಳೆಂದು ಕರೆಯುತ್ತಾರೆ" (ಕಾ. ೧-೩-೪) ಎಂದು ಮುಂತಾಗಿರುವ ಲಿಂಗಗಳಿಂದ (ಇದು ಸಿದ್ಧವಾಗಿರುತ್ತದೆ). ಅವೆರಡಕ್ಕೂ ನಡುವೆ ಯಾವದಾದರೊಂದು (ಕಡೆಯಲ್ಲಿ) ಕ್ರಮದಿಂದ ಉತ್ಪತ್ತಿಪ್ರಲಯಗಳನ್ನು ಸೇರಿಸಿಹೇಳಬೇಕು; ಏಕೆಂದರೆ ವಸ್ತುಜಾತವೆಲ್ಲವೂ ಬ್ರಹ್ಮದಿಂದ ಉಂಟಾಗಿರುತ್ತದೆ ಎಂದು (ವೇದಾಂತದಲ್ಲಿ) ಒಪ್ಪಿರುತ್ತದೆ. ಇದಲ್ಲದೆ **ಆಥರ್ವಣದಲ್ಲಿ** ಉತ್ಪತ್ತಿಪ್ರಕರಣದಲ್ಲಿ "ಪ್ರಾಣವೂ ಮನಸ್ಸೂ ಸರ್ವೇಂದ್ರಿಯಗಳೂ ಆಕಾಶ, ವಾಯು, ಜ್ಯೋತಿ, ಅಪ್ಪು, ಎಲ್ಲವನ್ನೂ ಧರಿಸಿರುವ ಪೃಥಿವಿ –ಇವು ಇವನಿಂದಲೇ ಹುಟ್ಟುತ್ತವೆ" (ಮುಂ. ೨-೧-೩) ಎಂದು ಭೂತಗಳಿಗೂ ಆತ್ಮನಿಗೂ ನಡುವೆ ಕರಣಗಳನ್ನು ಅನುಕ್ರಮವಾಗಿ ಹೇಳಿರುತ್ತದೆ. ಆದ್ದರಿಂದ ಹಿಂದೆ ಹೇಳಿರುವ ಭೂತೋತ್ಪತ್ತಿಪ್ರಲಯಕ್ರಮಕ್ಕೆ ಭಂಗವಾಗುವ ಪ್ರಸಂಗವಿದೆ, ಎಂದರೆ—

## ಸಿದ್ಧಾಂತ: ಹಿಂದೆ ಹೇಳಿದ ಭೂತೋತ್ಪತ್ತಿಕ್ರಮಕ್ಕೆ ಭಂಗವಿಲ್ಲ

(ಭಾಷ್ಯ)

೧೧೭. ನ। ಅವಿಶೇಷಾತ್। ಯದಿ ತಾವದ್ ಭೌತಿಕಾನಿ ಕರಣಾನಿ ತತಃ ಭೂತೋತ್ಪತ್ತಿಪ್ರಲಯಾಭ್ಯಾಮೇವ ಏಷಾಮ್ ಉತ್ಪತ್ತಿಪ್ರಲಯೌ ಭವತಃ ಇತಿ ನೈತಯೋಃ ಕ್ರಮಾನ್ತರಂ ಮೃಗ್ಯಮ್। ಭವತಿ ಚ ಭೌತಿಕತ್ವೇ ಲಿಙ್ಗಂ ಕರಣಾನಾಮ್। "ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಕ್" (ಛಾಂ.೬-೫-೪) ಇತ್ಯೇವಂಜಾತೀಯಕಮ್। ವ್ಯಪದೇಶೋಽಪಿ ಕ್ವಚಿದ್ ಭೂತಾನಾಂ ಕರಣಾನಾಂ ಚ ಬ್ರಾಹ್ಮಣಪರಿವ್ರಾಜಕನ್ಯಾಯೇನ ನೇತವ್ಯಃ। ಅಥ ತು ಅಭೌತಿಕಾನಿ ಕರಣಾನಿ ತಥಾಪಿ ಭೂತೋತ್ಪತ್ತಿಕ್ರಮೋ ನ ಕರಣೈರ್ವಿಶೇಷ್ಯತೇ ಪ್ರಥಮಂ ಕರಣಾನಿ ಉತ್ಪದ್ಯನ್ತೇ ಚರಮಂ ಭೂತಾನಿ, ಪ್ರಥಮಂ ವಾ ಭೂತಾನಿ ಉತ್ಪದ್ಯನ್ತೇ ಚರಮಂ ವಾ ಕರಣಾನಿ ಇತಿ। ಆಥರ್ವಣೇ ತು ಸಮಾಮ್ನಾಯಕ್ರಮಮಾತ್ರಂ ಕರಣಾನಾಂ ಭೂತಾನಾಂ ಚ। ನ ತತ್ರ ಉತ್ಪತ್ತಿಕ್ರಮಃ ಉಚ್ಯತೇ। ತಥಾ

---

1. ಆದ್ದರಿಂದ ಆತ್ಮವಿಜ್ಞಾನದಿಂದ ಅವೆಲ್ಲವುಗಳ ವಿಜ್ಞಾನವಾಗುತ್ತದೆ.

ಅನ್ಯತ್ರಾಪಿ ಪೃಥಗೇವ ಭೂತಕ್ರಮಾತ್ ಕರಣಕ್ರಮಃ ಆಮ್ನಾಯತೇ "ಪ್ರಜಾಪತಿರ್ವಾ ಇದಮಗ್ರ ಆಸೀತ್ ಸ ಆತ್ಮಾನಮೈಕ್ಷತ ಸ ಮನೋಽಸೃಜತ ತನ್ಮನ ಏವಾಸೀತ್ತದಾತ್ಮಾನಮೈಕ್ಷತ ತದ್ವಾಚಮಸೃಜತ" (ಶತ. ಬ್ರಾ. ?) ಇತ್ಯಾದಿನಾ । ತಸ್ಮಾತ್ ನಾಸ್ತಿ ಭೂತೋತ್ಪತ್ತಿಕ್ರಮಸ್ಯ ಭಙ್ಗಃ ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ ವಿಶೇಷವಿಲ್ಲ. ಮೊದಲನೆಯದಾಗಿ ಕರಣಗಳು ಭೌತಿಕವಾಗಿದ್ದರೆ, ಆಗ ಭೂತಗಳ ಉತ್ಪತ್ತಿಪ್ರಲಯಗಳಿಂದಲೇ ಇವುಗಳಿಗೂ ಉತ್ಪತ್ತಿಪ್ರಲಯಗಳು ಆಗುವದರಿಂದ ಇವುಗಳಿಗೆ ಬೇರೊಂದು ಕ್ರಮವನ್ನು ಹುಡುಕಬೇಕಾಗಿರುವದಿಲ್ಲ. ಕರಣಗಳು ಭೌತಿಕವೆನ್ನುವದಕ್ಕೆ "ಸೋಮ್ಯನೆ, ಮನಸ್ಸು ಅನ್ನಮಯವೇ; ಪ್ರಾಣವು ಆಪೋಮಯವೇ; ವಾಕ್ಕು ತೇಜೋಮಯವೇ" (ಛಾಂ. ೬-೫-೪) ಎಂಬೀ ಜಾತಿಯ ಲಿಂಗವು ಇದ್ದೂ ಇದೆ. ಕೆಲವು ಕಡೆಗಳಲ್ಲಿ ಭೂತಗಳನ್ನೂ ಕರಣಗಳನ್ನೂ (ಬೇರೆಬೇರೆಯಾಗಿ) ಹೇಳಿರುವದನ್ನು ಬ್ರಾಹ್ಮಣಪರಿವ್ರಾಜಕನ್ಯಾಯದಿಂದ[1] ನಯಿಸಬೇಕು.

ಅಥವಾ ಕರಣಗಳು ಅಭೌತಿಕ (ಎನ್ನುವದಾದರೆ), ಹಾಗಾದರೂ ಮೊದಲು ಕರಣಗಳು ಹುಟ್ಟುತ್ತವೆ, ಆಮೇಲೆ ಭೂತಗಳು (ಎಂದಾಗಲಿ), ಅಥವಾ ಮೊದಲೇ ಭೂತಗಳು ಹುಟ್ಟುತ್ತವೆ, ಆಮೇಲೆ ಕರಣಗಳು ಎಂದಾಗಲಿ, ಭೂತಗಳ ಉತ್ಪತ್ತಿಗೆ ಕರಣಗಳನ್ನು ವಿಶೇಷಣವಾಗಿ ಹೇಳಿರುವದಿಲ್ಲ (ಎನ್ನಬೇಕು)[2] ಆಥರ್ವಣದಲ್ಲಿಯಾದರೋ ಕರಣಗಳನ್ನು ಭೂತಗಳನ್ನು ಹೇಳಿರುವದು ಪಾಠಕ್ರಮಮಾತ್ರವೇ ಹೊರತು, ಅಲ್ಲಿ ಉತ್ಪತ್ತಿಕ್ರಮವನ್ನೇನೂ ಹೇಳಿಲ್ಲ[3]. ಆದ್ದರಿಂದಲೇ ಮತ್ತೊಂದು (ಶ್ರುತಿಯಲ್ಲಿ) ಯೂ "ಇದು ಮೊದಲು

1. ಬ್ರಾಹ್ಮಣರಿಗೇ ಪಾರಿವ್ರಾಜ್ಯದಲ್ಲಿ ಅಧಿಕಾರ ಎಂಬವರ ಪಕ್ಷದಲ್ಲಿ ಪರಿವ್ರಾಜಕನೂ ಬ್ರಾಹ್ಮಣನೇ ಆಗಿರುತ್ತಾನೆ; ಆದರೂ ಬ್ರಾಹ್ಮಣರು ಬಂದರು, ಪರಿವ್ರಾಜಕನೂ ಬಂದನು -ಎಂದು ಬೇರೆಬೇರೆಯಾಗಿ ವ್ಯವಹರಿಸುವದೂ ಉಂಟು. ಇದರಂತೆ ಎಂದರ್ಥ.

2. ಅವಿಶೇಷಾತ್ ಎಂಬ ಸೂತ್ರಪದಕ್ಕೆ ಮತ್ತೊಂದು ವ್ಯಾಖ್ಯಾನವಿದು. ಭೂತಗಳ ಉತ್ಪತ್ತಿಯನ್ನು ಹೇಳುವ ವಾಕ್ಯದಲ್ಲಿ 'ಕರಣಗಳ ಉತ್ಪತ್ತಿಯಾದ ಬಳಿಕ' ಎಂದಾಗಲಿ 'ಕರಣಗಳು ಹುಟ್ಟುವ ಮುಂಚೆ' ಎಂದಾಗಲಿ ಶ್ರುತಿಯಲ್ಲಿ ವಿಶೇಷಣವಿಲ್ಲ ಎಂದರ್ಥ. ಇಲ್ಲಿ ಕರಣಗಳು ಅಭೌತಿಕವೆಂಬ ಪಕ್ಷವನ್ನು ಪ್ರೌಢಿವಾದದಿಂದ ಒಪ್ಪಿ ಹೇಳಿದ್ದು- ಎಂದು ವ್ಯಾಖ್ಯಾನದಲ್ಲಿದೆ. ಆದರೆ ಭಾಷ್ಯದಲ್ಲಿ ಇದಕ್ಕೆ ಆಧಾರವೇನೂ ಕಾಣುವದಿಲ್ಲ. ಪ್ರಶ್ನೋಪನಿಷದ್ಭಾಷ್ಯ ಮತ್ತು ಬೃಹದಾರಣ್ಯಕಭಾಷ್ಯ- ಇವುಗಳ ಪೀಠಿಕೆಯನ್ನು ನೋಡಿ.

3. ಉಪನಿಷದ್ಭಾಷ್ಯದಲ್ಲಿ ಈ ಮಂತ್ರದಲ್ಲಿ ಸೃಷ್ಟಿಕ್ರಮವನ್ನೇ ಹೇಳಿದೆ ಎಂದು ಹೇಳಿದೆ. ಸೂತ್ರಭಾಷ್ಯಕ್ಕೂ ಉಪನಿಷದ್ಭಾಷ್ಯಕ್ಕೂ ಇರುವ ಈ ಅಭಿಪ್ರಾಯಭೇದವು ಏತಕ್ಕಾಗಿದೆಯೋ ತಿಳಿಯದು.

ಪ್ರಜಾಪತಿಯೇ ಆಗಿತ್ತು ; ಅವನು ತನ್ನನ್ನೇ ನೋಡಿದನು, ಅವನು ಮನಸ್ಸನ್ನು ಸೃಜಿಸಿದನು. ಆ ಮನಸ್ಸು (ತಾನೊಂದೇ) ಇತ್ತು ; ತನ್ನನ್ನೇ ನೋಡಿತು, ಅದು ವಾಕ್ಕನ್ನು ಸೃಜಿಸಿತು'' (ಶತ. ಬ್ರಾ. ?) ಎಂದು ಮುಂತಾಗಿರುವ (ವಾಕ್ಯದಿಂದ) ಭೂತಕ್ರಮಕ್ಕಿಂತಲೂ ಕರಣಕ್ರಮವನ್ನು ಬೇರೆಯಾಗಿಯೇ ಹೇಳಿರುತ್ತದೆ. ಆದ್ದರಿಂದ ಭೂತೋತ್ಪತ್ತಿಕ್ರಮಕ್ಕೆ ಭಂಗವಿಲ್ಲ.

## ೧೦. ಚರಾಚರವ್ಯಪಾಶ್ರಯಾಧಿಕರಣ

(ದೇಹೋತ್ಪತ್ತಿಪ್ರಲಯಗಳಿಂದ ಜೀವನಿಗೆ ಉತ್ಪತ್ತಿಪ್ರಲಯಗಳಿಲ್ಲ)

**ಚರಾಚರವ್ಯಪಾಶ್ರಯಸ್ತು ಸ್ಯಾತ್ ತದ್ವ್ಯಪದೇಶೋ ಭಾಕ್ತಸ್ತದ್ಭಾವಭಾವಿತ್ವಾತ್ ॥ ೧೬ ॥**

೧೬. ಆದರೆ ಚರಾಚರವ್ಯಪಾಶ್ರಯವೇ ಆಗಿರುವ ಆ ವ್ಯಪದೇಶವು ಭಾಕ್ತವು ; ಏಕೆಂದರೆ ಅದಿದ್ದರೆ ಆಗುತ್ತದೆ.

## ಜೀವನಿಗೆ ಜನ್ಮಮರಣಗಳಿಲ್ಲ

(ಭಾಷ್ಯ)

೧೧೧೮. ಸ್ತೋ ಜೀವಸ್ಯಾಪಿ ಉತ್ಪತ್ತಿಪ್ರಲಯೌ । 'ಜಾತೋ ದೇವದತ್ತಃ', 'ಮೃತೋ ದೇವದತ್ತಃ' ಇತ್ಯೇವಂಜಾತೀಯಕಾತ್ ಲೌಕಿಕವ್ಯಪದೇಶಾತ್ ಜಾತಕರ್ಮಾದಿಸಂಸ್ಕಾರವಿಧಾನಾಚ್ಚ ಇತಿ ಸ್ಯಾತ್ ಕಸ್ಯಚಿತ್ ಭ್ರಾನ್ತಿಃ। ತಾಮ್ ಅಪನುದಾಮಃ । ನ ಜೀವಸ್ಯ ಉತ್ಪತ್ತಿಪ್ರಲಯೌ ಸ್ತಃ । ಶಾಸ್ತ್ರಫಲಸಂಬನ್ಧೋಪಪತ್ತೇಃ । ಶರೀರಾನುವಿನಾಶಿನಿ ಹಿ ಜೀವೇ ಶರೀರಾನ್ತರಗತೇಷ್ಟಾನಿಷ್ಟಪ್ರಾಪ್ತಿಪರಿಹಾರಾರ್ಥೌ ವಿಧಿಪ್ರತಿಷೇಧೌ ಅನರ್ಥಕೌ ಸ್ಯಾತಾಮ್। ಶ್ರೂಯತೇ ಚ "ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತೇ" (ಛಾಂ. ೬-೧೧-೩) ಇತಿ । ನನು ಲೌಕಿಕೋ ಜನ್ಮಮರಣವ್ಯಪದೇಶೋ ಜೀವಸ್ಯ ದರ್ಶಿತಃ । ಸತ್ಯಂ ದರ್ಶಿತಃ । ಭಾಕ್ತಸ್ತ್ವೇಷ ಜೀವಸ್ಯ ಜನ್ಮಮರಣವ್ಯಪದೇಶಃ । ಕಿಮಾಶ್ರಯಃ ಪುನರಯಂ ಮುಖ್ಯೋ ಯದಪೇಕ್ಷಯಾ ಭಾಕ್ತಃ ಇತಿ ? ಉಚ್ಯತೇ । ಚರಾಚರವ್ಯಪಾಶ್ರಯಃ । ಸ್ಥಾವರಜಙ್ಗಮಶರೀರವಿಷಯೌ ಜನ್ಮಮರಣಶಬ್ದೌ । ಸ್ಥಾವರಜಙ್ಗಮಾನಿ ಹಿ ಭೂತಾನಿ ಜಾಯನ್ತೇ ಚ ಮ್ರಿಯನ್ತೇ ಚ । ಅತಃ ತದ್ವಿಷಯೌ ಜನ್ಮಮರಣಶಬ್ದೌ ಮುಖ್ಯೌ ಸನ್ತೌ ತತ್ಸ್ಥೇ ಜೀವಾತ್ಮನಿ ಉಪಚರ್ಯೇತೇ । ತದ್ಭಾವಭಾವಿ

ತ್ವಾತ್ । ಶರೀರಪ್ರಾದುರ್ಭಾವತಿರೋಭಾವಯೋರ್ಹಿ ಸತೋರ್ಜನ್ಮಮರಣ ಶಬ್ದೌ ಭವತಃ. ನಾಸತೋಃ । ನ ಹಿ ಶರೀರಸಂಬನ್ಧಾತ್ ಅನ್ಯತ್ರ ಜೀವೋ ಜಾತೋ ಮೃತೋ ವಾ ಕೇನಚಿತ್ ಲಕ್ಷ್ಯತೇ । "ಸ ವಾ ಅಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಸ ಉತ್ಕ್ರಾಮನ್ ಮ್ರಿಯಮಾಣಃ" (ಬೃ. ೪-೩-೮) ಇತಿ ಚ ಶರೀರಸಂಯೋಗವಿಯೋಗನಿಮಿತ್ತಾವೇವ ಜನ್ಮ ಮರಣಶಬ್ದೌ ದರ್ಶಯತಿ । ಜಾತಕರ್ಮಾದಿವಿಧಾನಮಪಿ ದೇಹಪ್ರಾದು ರ್ಭಾವಾಪೇಕ್ಷಮೇವ ದ್ರಷ್ಟವ್ಯಮ್ । ಅಭಾವಾತ್ ಜೀವಪ್ರಾದುರ್ಭಾವಸ್ಯ । ಜೀವಸ್ಯ ಪರಸ್ಮಾತ್ ಆತ್ಮನಃ ಉತ್ಪತ್ತಿರ್ವಿಯದಾದೀನಾಮಿವ ಅಸ್ತಿ ನಾಸ್ತಿ ವಾ ಇತ್ಯೇತತ್ ಉತ್ತರೇಣ ಸೂತ್ರೇಣ ವಕ್ಷ್ಯತಿ । ದೇಹಾಶ್ರಯೌ ತಾವತ್ ಜೀವಸ್ಯ ಸ್ಥೂಲೌ ಉತ್ಪತ್ತಿಪ್ರಲಯೌ ನ ಸ್ತಃ ಇತ್ಯೇತತ್ ಅನೇನ ಸೂತ್ರೇಣ ಅವೋಚತ್ ॥

(ಭಾಷ್ಯಾರ್ಥ)

ಜೀವನಿಗೂ ಉತ್ಪತ್ತಿಪ್ರಲಯಗಳು ಉಂಟು. ಏಕೆಂದರೆ 'ದೇವದತ್ತನು ಹುಟ್ಟಿದನು', 'ದೇವದತ್ತನು ಸತ್ತನು' ಎಂಬೀ ಜಾತಿಯ ಲೌಕಿಕವ್ಯಪದೇಶ ವಿರುತ್ತದೆ. ಜಾತಿಕರ್ಮಾದಿಸಂಸ್ಕಾರಗಳನ್ನು (ಶಾಸ್ತ್ರದಲ್ಲಿ) ವಿಧಿಸಿಯೂ ಇರು ತ್ತದೆ- ಎಂದು ಯಾವನಿಗಾದರೂ ಭ್ರಾಂತಿಯುಂಟಾಗಬಹುದು. ಅದನ್ನು ಪರಿ ಹರಿಸುತ್ತೇವೆ.

ಜೀವನಿಗೆ ಉತ್ಪತ್ತಿಪ್ರಲಯಗಳಿರುವದಿಲ್ಲ. ಏಕೆಂದರೆ (ಹಾಗಾದರೆ) ಶಾಸ್ತ್ರ(ಕರ್ಮ)ಫಲದ ಸಂಬಂಧವು ಹೊಂದುತ್ತದೆ. (ಇದರ ವಿವರ) : ಶರೀರ ವನ್ನು ಅನುಸರಿಸಿ ಜೀವನೂ ನಾಶವಾಗುವದಾದರೆ ಶರೀರಾಂತರದಲ್ಲಿರುವ ಇಷ್ಟಾನಿಷ್ಟಗಳ ಪ್ರಾಪ್ತಿಪರಿಹಾರಕ್ಕಾಗಿ (ಶಾಸ್ತ್ರದಲ್ಲಿರುವ) ವಿಧಿಪ್ರತಿಷೇಧಗಳು ವ್ಯರ್ಥವಾಗಬೇಕಾದೀತು. "ಜೀವನನ್ನು ಬಿಟ್ಟರೆ ಇದು ಸಾಯುವದು, (ಆದರೆ) ಜೀವನು ಸಾಯುವದಿಲ್ಲ" (ಛಾಂ. ೬-೧೧-೩) ಎಂದು ಶ್ರುತಿಯಲ್ಲಿ ಹೇಳಿಯೂ ಇರುತ್ತದೆ.

(ಆಕ್ಷೇಪ) :- 'ಹುಟ್ಟುತ್ತಾನೆ', 'ಸಾಯುತ್ತಾನೆ'- ಎಂಬ ಲೌಕಿಕವ್ಯಪ ದೇಶವನ್ನು ನಾವು ಉದಾಹರಿಸಿದೇವಲ್ಲ !

(ಪರಿಹಾರ) :- ನಿಜ, ಉದಾಹರಿಸಿರುತ್ತೀರಿ. ಆದರೆ ಜೀವನಿಗೆ ಜನ್ಮ ಮರಣಗಳನ್ನು (ಹೇಳುವ) ಈ ವ್ಯಪದೇಶವು ಗೌಣವಾಗಿರುತ್ತದೆ.

(ಪ್ರಶ್ನೆ) :- ಈ ವ್ಯಪದೇಶವು ಯಾವದನ್ನು ಆಶ್ರಯಿಸಿ ಮುಖ್ಯವಾಗಿರು ತ್ತದೆ ? ಯಾವ (ಮುಖ್ಯದ) ಅಪೇಕ್ಷೆಯಿಂದ ಇದು ಗೌಣವಾಗಿರುತ್ತದೆಯೋ (ಅದು ಯಾವದು) ?

(ಉತ್ತರ) :– (ಇದಕ್ಕೆ ಉತ್ತರವನ್ನು) ಹೇಳುತ್ತೇವೆ. ಚರಾಚರ ವ್ಯಪಾಶ್ರಯ(ವಾಗಿರುತ್ತದೆ). (ಅ) ಜನ್ಮಮರಣಶಬ್ದಗಳು ಸ್ಥಾವರಜಂಗಮ ಶರೀರವಿಷಯಕವಾಗಿರುತ್ತವೆ. ಸ್ಥಾವರಜಂಗಮಗಳಾದ ಭೂತಗಳಲ್ಲವೆ, ಹುಟ್ಟುತ್ತವೆ ಮತ್ತು ಸಾಯುತ್ತವೆ ? ಆದ್ದರಿಂದ ಅವುಗಳ ವಿಷಯದಲ್ಲಿ ಜನ್ಮಮರಣಶಬ್ದಗಳು ಮುಖ್ಯವಾಗಿದ್ದು ಕೊಂಡು ಅವುಗಳಲ್ಲಿರುವ ಜೀವಾತ್ಮನಲ್ಲಿ ಉಪಚರಿತವಾಗಿರುತ್ತವೆ. ಏಕೆಂದರೆ ಅದು ಇದ್ದರೆ ಇರುತ್ತವೆ. ಶರೀರವು ತೋರಿಕೊಳ್ಳುವದು, ಮರೆಯಾಗುವದು– ಇವು ಇದ್ದರೇ ಅಲ್ಲವೆ, ಜನ್ಮ, ಮರಣ– ಎಂಬ ಶಬ್ದಗಳು ಇರುತ್ತವೆ, ಇಲ್ಲದಿದ್ದರೆ ಇಲ್ಲ ; ಏಕೆಂದರೆ ಶರೀರದ ಸಂಬಂಧವಿಲ್ಲದೆ ಜೀವನು ಹುಟ್ಟಿದ್ದನ್ನಾಗಲಿ ಸತ್ತದ್ದನ್ನಾಗಲಿ ಯಾರೂ ಕಂಡಿರುವದಿಲ್ಲ. "ಆ ಈ ಪುರುಷನಿದಾನಲ್ಲ. (ಇವನು) ಹುಟ್ಟುವಾಗ ಶರೀರವನ್ನು ಪಡೆಯುತ್ತಾನೆ, ಸಾಯುವಾಗ (ಶರೀರವನ್ನು) ಬಿಟ್ಟು ಹೋಗುತ್ತಾನೆ." (ಬೃ. ೪–೩–೮) ಎಂದು ( ಶ್ರುತಿಯು ) ಜನ್ಮಮರಣಶಬ್ದಗಳು ಶರೀರಸಂಯೋಗ ನಿಮಿತ್ತದಿಂದಲೇ ಎಂದು ತಿಳಿಸುತ್ತದೆ. ಜಾತಕರ್ಮವನ್ನು ವಿಧಿಸಿರುವದು ಕೂಡ ದೇಹವು ತೋರಿಕೊಳ್ಳುವದನ್ನು ಅಪೇಕ್ಷಿಸಿಯೇ ಎಂದು ತಿಳಿಯಬೇಕು. ಏಕೆಂದರೆ ಜೀವನು ತೋರಿಕೊಳ್ಳುವದೆಂಬುದಿಲ್ಲ.

ಜೀವನಿಗೆ ಪರಮಾತ್ಮನಿಂದ ಆಕಾಶಾದಿಗಳಿಗಿರುವಂತೆ ಉತ್ಪತ್ತಿಯು ಇದೆಯೆ, ಇಲ್ಲವೆ ? –ಎಂಬುದನ್ನು ಮುಂದಿನ ಸೂತ್ರದಲ್ಲಿ ಹೇಳಲಾಗುವದು. ಮೊದಲು ದೇಹಾಶ್ರಯವಾದ ಸ್ಥೂಲಉತ್ಪತ್ತಿಪ್ರಲಯಗಳು (ಅವನಿಗೆ) ಇಲ್ಲ ಎಂಬುದನ್ನು ಈ ಸೂತ್ರದಿಂದ ಹೇಳಿರುತ್ತಾರೆ[1].

## ೧೧. ಆತ್ಮಾಧಿಕರಣ

### (ಜೀವನಿಗೆ ಸ್ವತಃ ಜನ್ಮವಿಲ್ಲ)

**ನಾತ್ಮಾಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ॥ ೧೭ ॥**

೧೭. ಆತ್ಮನು ಹುಟ್ಟುವದಿಲ್ಲ ; ಏಕೆಂದರೆ ಶ್ರುತಿಯಿಲ್ಲ. ಆ (ಶ್ರುತಿಗಳ ಪ್ರಮಾಣದಿಂದ ಅವನು) ನಿತ್ಯವಾಗಿರುವದರಿಂದಲೂ (ಹುಟ್ಟುವದಿಲ್ಲ).

---

1. ದೇಹವು ಹುಟ್ಟಿದರೆ ಜೀವನೂ ಹುಟ್ಟುತ್ತಾನೆ ಎಂಬಿದು ಸ್ಥೂಲವಾದ ಉತ್ಪತ್ತಿ; ಜೀವನೇ ಬ್ರಹ್ಮದಿಂದ ಹುಟ್ಟುತ್ತಾನೆ ಎಂಬುದು ಸೂಕ್ಷ್ಮವಾದ ಉತ್ಪತ್ತಿ. ಎರಡೂ ಜೀವನಿಗೆ ಇಲ್ಲವೆಂದೇ ಸಿದ್ಧಾಂತ.

## ಜೀವನ ಉತ್ಪತ್ತಿಯ ವಿಷಯಕ್ಕೆ ಸಂಶಯ

(ಭಾಷ್ಯ)

೧೧೯. ಅಸ್ತ್ಯಾತ್ಮಾ ಜೀವಾಖ್ಯಃ ಶರೀರೇನ್ದ್ರಿಯಪಞ್ಜರಾಧ್ಯಕ್ಷಃ ಕರ್ಮಫಲಸಂಬನ್ಧೀ। ಸ ಕಿಂ ವ್ಯೋಮಾದಿವತ್ ಉತ್ಪದ್ಯತೇ ಬ್ರಹ್ಮಣಃ, ಆಹೋಸ್ವಿತ್ ಬ್ರಹ್ಮವದೇವ ನೋತ್ಪದ್ಯತೇ ಇತಿ ಶ್ರುತಿವಿಪ್ರತಿಪತ್ತೇರ್ವಿಷಯಃ। ಕಾಸುಚಿತ್ ಶ್ರುತಿಷು ಅಗ್ನಿವಿಸ್ಫುಲಿಙ್ಗಾದಿನಿದರ್ಶನೈಃ ಜೀವಾತ್ಮನಃ ಪರಸ್ಮಾದ್ ಬ್ರಹ್ಮಣಃ ಉತ್ಪತ್ತಿರಾಮ್ನಾಯತೇ। ಕಾಸುಚಿತ್ತು ಅವಿಕೃತಸ್ಯೈವ ಪರಸ್ಯ ಬ್ರಹ್ಮಣಃ ಕಾರ್ಯಪ್ರವೇಶೇನ ಜೀವಭಾವೋ ವಿಜ್ಞಾಯತೇ। ನ ಚ ಉತ್ಪತ್ತಿರಾಮ್ನಾಯತೇ ಇತಿ ॥

(ಭಾಷ್ಯಾರ್ಥ)

ಶರೀರೇಂದ್ರಿಯಗಳ ಪಂಜರಕ್ಕೆ ಒಡೆಯನಾದ ಕರ್ಮಫಲಸಂಬಂಧಿಯಾದ ಜೀವನೆಂಬ ಆತ್ಮನುಂಟಷ್ಟೆ, ಅವನೇನು ಆಕಾಶಾದಿಗಳಂತೆ ಬ್ರಹ್ಮದಿಂದ ಹುಟ್ಟುತ್ತಾನೊ, ಅಥವಾ ಬ್ರಹ್ಮದಂತೆಯೇ ಹುಟ್ಟುವದಿಲ್ಲವೊ ? –ಎಂದು ಶ್ರುತಿಗಳು ವಿರುದ್ಧವಾಗಿರುವದರಿಂದ ಸಂಶಯವುಂಟಾಗುತ್ತದೆ. (ಶ್ರುತಿಗಳು ವಿರುದ್ಧವೆಂಬುದು ಹೇಗೆಂದರೆ), ಕೆಲವು ಶ್ರುತಿಗಳಲ್ಲಿ ಬೆಂಕಿಯ ಕಿಡಿಯೇ ಮುಂತಾದವುಗಳ ದೃಷ್ಟಾಂತದಲ್ಲಿ ಜೀವಾತ್ಮನಿಗೆ ಪರಮಾತ್ಮನಿಂದ ಉತ್ಪತ್ತಿಯನ್ನು ಹೇಳಿರುತ್ತದೆ; ಆದರೆ (ಇನ್ನು) ಕೆಲವು ಶ್ರುತಿಗಳಲ್ಲಾದರೋ (ಯಾವ) ವಿಕಾರವನ್ನೂ ಪಡೆಯದ ಬ್ರಹ್ಮವೇ ಕಾರ್ಯದಲ್ಲಿ ಪ್ರವೇಶಿಸಿದೆ ಎಂದು ಜೀವಭಾವವನ್ನು ಹೇಳಿರುವದು ತಿಳಿಯಬರುತ್ತದೆಯೇ ಹೊರತು ಉತ್ಪತ್ತಿಯನ್ನು ಹೇಳಿರುವದಿಲ್ಲ.

## ಪೂರ್ವಪಕ್ಷ: ಜೀವನು ಬ್ರಹ್ಮದಿಂದ ಹುಟ್ಟುತ್ತಾನೆ

(ಭಾಷ್ಯ)

೧೨೦. ತತ್ರ ಪ್ರಾಪ್ತಂ ತಾವತ್ ಉತ್ಪದ್ಯತೇ ಜೀವಃ ಇತಿ। ಕುತಃ ? ಪ್ರತಿಜ್ಞಾನುಪರೋಧಾದೇವ । "ಏಕಸ್ಮಿನ್ ವಿದಿತೇ ಸರ್ವಮಿದಂ ವಿದಿತಂ" ಇತೀಯಂ ಪ್ರತಿಜ್ಞಾ ಸರ್ವಸ್ಯ ವಸ್ತುಜಾತಸ್ಯ ಬ್ರಹ್ಮಪ್ರಭವತ್ವೇ ಸತಿ ನೋಪರುಧ್ಯೇತ । ತತ್ತ್ವಾನ್ತರತ್ವೇ ತು ಜೀವಸ್ಯ ಪ್ರತಿಜ್ಞೇಯಮ್ ಉಪರುಧ್ಯೇತ। ನ ಚ ಅವಿಕೃತಃ ಪರಮಾತ್ಮೈವ ಜೀವಃ ಇತಿ ಶಕ್ಯತೇ ವಿಜ್ಞಾತುಮ್। ಲಕ್ಷಣಭೇದಾತ್। ಅಪಹತಪಾಪ್ಮತ್ವಾದಿಧರ್ಮಕೋ ಹಿ ಪರಮಾತ್ಮಾ, ತದ್ವಿಪರೀತೋ ಹಿ ಜೀವಃ। ವಿಭಾಗಾಚ್ಚ ಅಸ್ಯ ವಿಕಾರತ್ವಸಿದ್ಧಿಃ। ಯಾವಾನ್ ಹಿ ಆಕಾಶಾದಿ ಪ್ರವಿಭಕ್ತಃ ನ ಸರ್ವೋ ವಿಕಾರಃ। ತಸ್ಯ ಚ ಆಕಾಶಾದೇಃ ಉತ್ಪತ್ತಿಃ ಸಮಧಿ

ಗತಾ । ಜೀವಾತ್ಮಾಪಿ ಪುಣ್ಯಾಪುಣ್ಯಕರ್ಮಾ ಸುಖದುಃಖಯುಕ್ ಪ್ರತಿಶರೀರಂ ಪ್ರವಿಭಕ್ತಃ ಇತಿ ತಸ್ಯಾಪಿ ಪ್ರಪಞ್ಚೋತ್ಪತ್ತ್ಯವಸರೇ ಉತ್ಪತ್ತಿರ್ಭವಿತು ಮರ್ಹತಿ। ಅಪಿ ಚ "ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಙ್ಗಾ ವ್ಯುಚ್ಚರನ್ತ್ಯೇವ ಮೇವಾಸ್ಮಾದಾತ್ಮನಃ ಸರ್ವೇ ಪ್ರಾಣಾಃ...." (ಬೃ. ಮಾ. ೨-೧-೨೩) ಇತಿ ಪ್ರಾಣಾದೇಃ ಭೋಗ್ಯಜಾತಸ್ಯ ಸೃಷ್ಟಿಂ ಶಿಷ್ಟ್ವಾ "ಸರ್ವ ಏವಾತ್ಮಾನೋ ವ್ಯುಚ್ಚರನ್ತಿ" (ಬೃ. ಮಾ. ೨-೧-೨೩) ಇತಿ ಭೋಕ್ತ್ರೂಣಾಮ್ ಆತ್ಮನಾಂ ಪೃಥಕ್ ಸೃಷ್ಟಿಂ ಶಾಸ್ತಿ। "ಯಥಾ ಸುದೀಪ್ತಾತ್ ಪಾವಕಾದ್ ವಿಸ್ಫುಲಿಙ್ಗಾ ಸಹಸ್ರಶಃ ಪ್ರಭವನ್ತೇ ಸರೂಪಾಃ। ತಥಾಕ್ಷರಾದ್ ವಿವಿಧಾಃ ಸೋಮ್ಯ ಭಾವಾಃ ಪ್ರಜಾಯನ್ತೇ ತತ್ರ ಚೈವಾಪಿಯನ್ತಿ" (ಮುಂ. ೩-೧-೧) ಇತಿ ಚ ಜೀವಾತ್ಮನಾಮ್ ಉತ್ಪತ್ತಿಪ್ರಲಯೌ ಉಚ್ಯೇತೇ। ಸರೂಪವಚನಾತ್। ಜೀವಾತ್ಮಾನೋ ಹಿ ಪರಮಾತ್ಮನಾ ಸರೂಪಾ ಭವನ್ತಿ ಚೈತನ್ಯಯೋಗಾತ್। ನ ಚ ಕ್ವಚಿತ್ ಅಶ್ರವಣಮ್ ಅನ್ಯತ್ರ ಶ್ರುತಂ ವಾರಯಿತುಮರ್ಹತಿ। ಶ್ರುತ್ಯನ್ತರಗತಸ್ಯಾಪಿ ಅವಿರುದ್ಧಸ್ಯ ಅಧಿಕಸ್ಯಾರ್ಥಸ್ಯ ಸರ್ವತ್ರ ಉಪಸಂಹರ್ತವ್ಯ ತ್ವಾತ್। ಪ್ರವೇಶಶ್ರುತಿರಪಿ ಏವಂ ಸತಿ ವಿಕಾರಭಾವಾಪತ್ತ್ಯೈವ ವ್ಯಾಖ್ಯಾತವ್ಯಾ "ತದಾತ್ಮಾನಂ ಸ್ವಯಮಕುರುತ" (ತೈ. ೨-೭) ಇತ್ಯಾದಿವತ್। ತಸ್ಮಾತ್ ಉತ್ಪದ್ಯತೇ ಜೀವಃ ಇತಿ ॥

(ಭಾಷ್ಯಾರ್ಥ)

ಇಲ್ಲಿ ಮೊದಲು ಬಂದೊದಗುವ (ಪೂರ್ವಪಕ್ಷವೇನೆಂದರೆ) ಜೀವನು ಹುಟ್ಟುತ್ತಾನೆ. ಏಕೆ ? ಎಂದರೆ (ಹೀಗಾದರೆ) ಪ್ರತಿಜ್ಞೆಗೆ ವಿರೋಧವಾಗುವ ದಿಲ್ಲವಾದ್ದರಿಂದಲೇ, 'ಒಂದನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತಂತೆ' ಆಗುವದೆಂಬೀ ಪ್ರತಿಜ್ಞೆಗೆ ಎಲ್ಲಾ ವಸ್ತುಸಮೂಹವೂ ಬ್ರಹ್ಮದಿಂದ ಹುಟ್ಟಿದೆ ಎಂದಾದರೆ ವಿರುದ್ಧವಾಗುವದಿಲ್ಲ. ಜೀವನು ಬೇರೊಂದು ತತ್ತ್ವವು ಎಂದಾದರೋ ಈ ಪ್ರತಿಜ್ಞೆಗೆ ವಿರೋಧವಾಗುತ್ತದೆ. ಅವಿಕೃತನಾದ ಪರಮಾತ್ಮನೇ ಜೀವನು ಎಂದು ತಿಳಿಯುವದಕ್ಕೆ ಆಗುವದೂ ಇಲ್ಲ; ಏಕೆಂದರೆ (ಇಬ್ಬರಿಗೂ) ಲಕ್ಷಣ ಭೇದವಿದೆ. ಹೇಗೆಂದರೆ ಪರಮಾತ್ಮನು ಅಪಹತಪಾಪ್ಮತ್ವಾದಿಧರ್ಮಗಳುಳ್ಳ ವನು, ಜೀವನು ಅದಕ್ಕೆ ವಿಪರೀತವಾದ (ಧರ್ಮವುಳ್ಳವನು)[1]. ವಿಭಾಗದಿಂದ ಲೂ ಇವನು ಕಾರ್ಯವಾಗಿರಬೇಕೆಂದು ಸಿದ್ಧವಾಗುತ್ತದೆ. ಹೇಗೆಂದರೆ ಆಕಾಶ ವೇ ಮುಂತಾದದ್ದು ಯಾವಯಾವದು ವಿಭಕ್ತವಾಗಿರುತ್ತದೆಯೋ ಅದೆಲ್ಲವೂ

1. ಅನುಭವಕ್ಕೆ ವಿರುದ್ಧವಾಗಿ ಕೇವಲ ಶ್ರುತಿಯ ಆಧಾರದಿಂದ ಐಕ್ಯವನ್ನು ನಿಶ್ಚಯಿಸುವದು ಸರಿಯಲ್ಲ.

ವಿಕಾರವು ; ಆ (ವಿಕಾರವಾದ) ಆಕಾಶಾದಿಗಳಿಗೆ ಉತ್ಪತ್ತಿಯುಂಟೆಂದು (ಹಿಂದೆ) ಗೊತ್ತಾಗಿರುತ್ತದೆ. ಜೀವನುಕೂಡ ಪುಣ್ಯಾಪುಣ್ಯಕರ್ಮಗಳುಳ್ಳವನು, ಸುಖದುಃಖಗಳಿಂದೊಡಗೂಡಿರುವವನು, ಒಂದೊಂದು ಶರೀರದಲ್ಲಿ ಬಿಂಗಡವಾಗಿರುವವನು ; ಆದ್ದರಿಂದ ಅವನಿಗೂ ಪ್ರಪಂಚೋತ್ಪತ್ತಿಯ ಸಮಯದಲ್ಲಿ ಉತ್ಪತ್ತಿಯಾಗಬೇಕು[1]. ಇದಲ್ಲದೆ "ಹೇಗೆ ಬೆಂಕಿಯಿಂದ ಸಣ್ಣ ಕಿಡಿಗಳು ಮೇಲಕ್ಕೆ ಸಿಡಿಯುವವೋ ಹೀಗೆಯೇ ಈ ಆತ್ಮನಿಂದ ಎಲ್ಲಾ ಪ್ರಾಣಗಳೂ...." (ಬೃ. ಮಾ. ೨-೧-೨೩) ಎಂದು ಪ್ರಾಣಾದಿಭೋಗ್ಯಜಾತಕ್ಕೆಲ್ಲಕ್ಕೂ ಸೃಷ್ಟಿಯನ್ನು ಹೇಳಿ "ಈ ಆತ್ಮರೆಲ್ಲರೂ ಸಿಡಿದುಬರುತ್ತಾರೆ" (ಬೃ. ಮಾಂ. ೨-೧-೨೩) ಎಂದು ಭೋಕ್ತೃಗಳಾದ ಆತ್ಮರುಗಳಿಗೆ ಬೇರೆಯಾಗಿ ಸೃಷ್ಟಿಯನ್ನೂ ಶಾಸ್ತ್ರದಲ್ಲಿ ಹೇಳಿದೆ. "ಹೇಗೆ ಚೆನ್ನಾಗಿ ಹೊತ್ತಿಕೊಂಡುರಿಯುವ ಬೆಂಕಿಯಿಂದ ಅಸದ್ರೂಪವಾದ ಸಾವಿರಾರು ಕಿಡಿಗಳು ಉಂಟಾಗುವವೋ ಹಾಗೆ ಅಕ್ಷರದಿಂದ ವಿವಿಧವಾದ ಭಾವಗಳು ಉಂಟಾಗುತ್ತವೆ, ಮತ್ತೆ ಅದರಲ್ಲಿಯೇ ಲಯವಾಗುತ್ತವೆ" (ಮುಂ. ೨-೧-೧) ಎಂದು ಜೀವಾತ್ಮರುಗಳಿಗ ಉತ್ಪತ್ತಿಪ್ರಲಯಗಳನ್ನು ಹೇಳಿರುತ್ತದೆ.[2] ಸರೂಪರೆಂದು ಹೇಳಿರುವದರಿಂದ (ಇದು ಜೀವವಿಷಯವಾಗಿರುತ್ತದೆ). ಜೀವಾತ್ಮರುಗಳೇ ಪರಮಾತ್ಮರಿಗೆ ಸರೂಪರಾಗಿರುತ್ತಾರೆ ; ಏಕೆಂದರೆ ಅವರಿಗೆ ಚೈತನ್ಯದ ಸಂಬಂಧವಿರುತ್ತದೆ. ಒಂದು ಕಡೆಯಲ್ಲಿ ಶ್ರುತಿಯಿಲ್ಲದಿರುವದು ಮತ್ತೊಂದು ಕಡೆಯಲ್ಲಿ ಶ್ರುತಿ ಹೇಳಿರುವದನ್ನು ನಿವಾರಣೆಮಾಡಲಾರದು. ಏಕೆಂದರೆ ಶ್ರುತ್ಯಂತರದಲ್ಲಿ ಹೇಳಿರುವ ಅವಿರುದ್ಧವಾದ ಅಧಿಕಾರ್ಥವನ್ನು ಎಲ್ಲಾ ಕಡೆಯಲ್ಲಿಯೂ ಉಪಸಂಹಾರಮಾಡಿಕೊಳ್ಳಬೇಕಾದದ್ದು ಯುಕ್ತವಾಗಿರುತ್ತದೆ[3]. ಹೀಗಿರುವದರಿಂದ ಪ್ರವೇಶಶ್ರುತಿಯನ್ನು "ಅದು ತನ್ನನ್ನೇ ತಾನು ಮಾಡಿಕೊಂಡಿತು" (ತೈ. ೨-೭) ಎಂದು ಮುಂತಾಗಿರುವ (ವಾಕ್ಯ)ದಂತೆ ವಿಕಾರಭಾವವನ್ನು ಪಡೆದೇ (ಪ್ರವೇಶಮಾಡಿತು) ಎಂದು ವ್ಯಾಖ್ಯಾನಮಾಡಬೇಕು. ಆದ್ದರಿಂದ (ಬ್ರಹ್ಮದಿಂದ) ಜೀವನು ಹುಟ್ಟುತ್ತಾನೆ.

---

1. ಆಕಾಶಕ್ಕೆ ಉತ್ಪತ್ತಿಯುಂಟೆಂದು ಭಾ. ಭಾ. ೯೮ರಲ್ಲಿ ಸಿದ್ಧಾಂತಿಯು ಉಪಯೋಗಿಸಿದ್ದ ಯುಕ್ತಿಗಳೇ ಇವು.

2. ಹಿಂದೆ ಹೇಳಿರುವ ಯುಕ್ತಿಗಳ ಬೆಂಬಲವಿರುವುದರಿಂದ ಇದನ್ನು ಗೌಣಾರ್ಥವೆಂದು ಭಾವಿಸುವದಕ್ಕೆ ಕಾರಣವಿಲ್ಲವೆಂದು ಭಾವ.

3. ಶಾಖಾಂತರಾಧಿಕರಣ ನ್ಯಾಯವಿದು. (ಜೈ. ೨-೪-೩೨)ವನ್ನು ನೋಡಿ. ಕರ್ಮಕ್ಕೆ ಅನ್ವಯಿಸಿದ್ದರೂ ವಸ್ತುವರ್ಣನೆಗೂ ಇದೇ ನ್ಯಾಯವು ಅನ್ವಯಿಸುತ್ತದೆ ಎಂದು ಭಾವ.

## ಸಿದ್ಧಾಂತ: ಜೀವನಿಗೆ ಉತ್ಪತ್ತಿಯೂ ಸಂಭವಿಸುವದಿಲ್ಲ

(ಭಾಷ್ಯ)

೧೨೧. ಏವಂ ಪ್ರಾಪ್ತೇ ಬ್ರೂಮಃ । ನಾತ್ಮಾ ಜೀವಃ ಉತ್ಪದ್ಯತೇ ಇತಿ । ಕಸ್ಮಾತ್ ? ಅಶ್ರುತೇಃ । ನ ಹಿ ಅಸ್ಯ ಉತ್ಪತ್ತಿಪ್ರಕರಣೇ ಶ್ರವಣಮಸ್ತಿ ಭೂಯಃಸು ಪ್ರದೇಶೇಷು । ನನು ಕ್ವಚಿತ್ ಅಶ್ರವಣಮ್ ಅನ್ಯತ್ರ ಶ್ರುತಂ ನ ವಾರಯತಿ ಇತ್ಯುಕ್ತಮ್ । ಸತ್ಯಮ್ ಉಕ್ತಮ್ । ಉತ್ಪತ್ತಿರೇವ ತು ಅಸ್ಯ ನ ಸಂಭವತಿ ಇತಿ ವದಾಮಃ । ಕಸ್ಮಾತ್ ? ನಿತ್ಯತ್ವಾಚ್ಚ ತಾಭ್ಯಃ । ಚಶಬ್ದಾತ್ ಅಜತ್ವಾದಿಭ್ಯಶ್ಚ । ನಿತ್ಯತ್ವಂ ಹಿ ಅಸ್ಯ ಶ್ರುತಿಭ್ಯೋಽವಗಮ್ಯತೇ । ತಥಾ ಅಜತ್ವಮ್, ಅವಿಕಾರಿತ್ವಮ್, ಅವಿಕೃತಸ್ಯೈವ ಬ್ರಹ್ಮಣಃ ಜೀವಾತ್ಮನಾ ಅವಸ್ಥಾನಂ ಬ್ರಹ್ಮಾತ್ಮನಾ ಚ ಇತಿ । ನ ಚ ಏವಂ ರೂಪಸ್ಯ ಉತ್ಪತ್ತಿಃ ಉಪಪದ್ಯತೇ । ತಾಃ ಕಾಃ ಶ್ರುತಯಃ ? "ನ ಜೀವೋ ಮ್ರಿಯತೇ".(ಛಾಂ. ೬–೧೧–೩), "ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ" (ಬೃ. ೪–೪–೨೨), "ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್" (ಕ. ೧–೨–೧೮), "ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ" (ಕ. ೧–೨–೧೮), "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ೨–೬), "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" (ಛಾಂ. ೬–೩–೨), "ಸ ಏಷ ಇಹ ಪ್ರವಿಷ್ಟ ಆನಖಾಗ್ರೇಭ್ಯಃ" (ಬೃ. ೧–೪–೭), "ತತ್ ತ್ವಮಸಿ" (ಛಾಂ. ೬–೮–೭), "ಅಹಂ ಬ್ರಹ್ಮಾಸ್ಮಿ" (ಬೃ. ೧–೪–೧೦), "ಅಯಮಾತ್ಮಾ ಬ್ರಹ್ಮ ಸರ್ವಾನುಭೂಃ" (ಬೃ. ೨–೫–೧೯) ಇತ್ಯೇವಮಾದ್ಯಾ ನಿತ್ಯತ್ವವಾದಿನಃ ಸತ್ಯಃ ಜೀವಸ್ಯ ಉತ್ಪತ್ತಿಂ ಪ್ರತಿಬಧ್ನನ್ತಿ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಹೇಳುತ್ತೇವೆ. ಆತ್ಮನು ಎಂದರೆ ಜೀವನು ಹುಟ್ಟುವದಿಲ್ಲ. ಏಕೆ ? ಎಂದರೆ ಶ್ರುತಿಯಿಲ್ಲದ್ದರಿಂದ. ಉತ್ಪತ್ತಿಪ್ರಕರಣದಲ್ಲಿ ಬಹಳ ಕಡೆಗಳಲ್ಲಿ ಈ (ಜೀವನಿಗೆ) ಉತ್ಪತ್ತಿಯನ್ನು ಹೇಳುವದಿಲ್ಲವಷ್ಟೆ.

(ಆಕ್ಷೇಪ):– ಒಂದು ಕಡೆಯಲ್ಲಿ ಶ್ರುತಿಯಲ್ಲಿಲ್ಲದಿರುವದು ಮತ್ತೊಂದು ಕಡೆಯಲ್ಲಿ ಶ್ರುತಿಯಲ್ಲಿರುವದನ್ನು ನಿವಾರಣಮಾಡಲಾರದು ಎಂದು ಹೇಳಿದೆವಲ್ಲ !

(ಪರಿಹಾರ):– ನಿಜ, ಹೇಳಿದಿರಿ. ಆದರೆ ಇವನಿಗೆ ಉತ್ಪತ್ತಿಯೇ ಸಂಭವಿಸುವದಿಲ್ಲ ಎಂದು ಹೇಳುತ್ತೇವೆ. ಏಕೆ ? ಎಂದರೆ ಆ (ಶ್ರುತಿಗಳಿಂದ

ಜೀವನು) ನಿತ್ಯನೆಂದು (ಗೊತ್ತಾಗು)ವದರಿಂದ. (ಸೂತ್ರದಲ್ಲಿ) ಚಶಬ್ದವಿರು ವದರಿಂದ ಅಜತ್ವಾದಿ(ಕಾರಣ)ಗಳಿಂದಲೂ (ಉತ್ಪತ್ತಿಯು ಸಂಭವಿಸುವದಿಲ್ಲ ಎಂದು ಸೇರಿಸಿಕೊಳ್ಳಬೇಕು. ಇದರ ವಿವರ): ಈ ಜೀವನು ನಿತ್ಯನೆಂದು ಶ್ರುತಿಗಳಿಂದ ನಿಶ್ಚಯವಾಗುತ್ತದೆ; ಮತ್ತು ಅಜನು, ಅವಿಕಾರಿ, ಅವಿಕೃತ ವಾಗಿರುವ ಬ್ರಹ್ಮವೇ ಜೀವನಾಗಿಯೂ ಬ್ರಹ್ಮವಾಗಿಯೂ ಇರುವದು ಎಂಬುದೂ (ಶ್ರುತಿಗಳಿಂದ ನಿಶ್ಚಯವಾಗುತ್ತದೆ). ಆದರೆ ಇಂಥ ರೂಪದವನಿಗೆ ಉತ್ಪತ್ತಿ ಎಂಬುದು ಯುಕ್ತವಾಗುವದಿಲ್ಲ. ಆ ಶ್ರುತಿಗಳು ಯಾವವು ? ಎಂದರೆ "ಜೀವನು ಸಾಯುವದಿಲ್ಲ" (ಛಾಂ. ೬-೧೧-೩), "ಆ ಈ ಮಹಾನ್ ಅಜನಾದ ಆತ್ಮನೇ, ಅಜರನು, ಅಮರನು, ಅಮೃತನು, ಅಭಯನು, ಬ್ರಹ್ಮವು" (ಬೃ. ೪-೪-೨೫), "ವಿವೇಕಿಯಾದ (ಈ ಆತ್ಮನು) ಹುಟ್ಟುವದಿಲ್ಲ, ಸಾಯುವದಿಲ್ಲ" (ಕ. ೧-೨-೧೮).... "ಇವನು ಅಜನು, ನಿತ್ಯನು, ಶಾಶ್ವತನು, ಪುರಾಣನು" (ಕ. ೧-೨-೧೮), "ಅದನ್ನು ಸೃಜಿಸಿ ಅದೇ ಅನುಪ್ರವೇಶ ಮಾಡಿತು" (ತೈ. ೨-೬), "ಈ ಜೀವನೆಂಬ ರೂಪದಿಂದ ಅನುಪ್ರವೇಶಮಾಡಿ ನಾಮರೂಪಗಳ ವ್ಯಾಕರಣಮಾಡುವೆನು" (ಛಾಂ. ೬-೩-೨), "ಆ ಈತನು ಇಲ್ಲಿ ಉಗುರುಕೊನೆಗಳವರೆಗೂ ಹೊಕ್ಕಿರುತ್ತಾನೆ" (ಬೃ. ೧-೪-೭), "ಅದೇ ನೀನಾಗಿರುವೆ" (ಛಾಂ. ೬-೮-೭), "ನಾನು ಬ್ರಹ್ಮವಾಗಿರುವೆನು" (ಬೃ. ೧-೪-೧೦), "ಈ ಆತ್ಮನು ಬ್ರಹ್ಮವು, ಸರ್ವಾನುಭೂ" (ಬೃ. ೨-೫-೧೯)- ಇದೇ ಮುಂತಾದವು ನಿತ್ಯತ್ವವನ್ನು ಹೇಳುತ್ತಿರುವದರಿಂದ ಜೀವನಿಗೆ ಉತ್ಪತ್ತಿ ಯನ್ನು ನಿವಾರಿಸುತ್ತವೆ.

## ಪೂರ್ವಪಕ್ಷಯುಕ್ತಿಗಳ ಖಂಡನೆ

(ಭಾಷ್ಯ)

೧೨೨. ನನು ಪ್ರವಿಭಕ್ತತ್ವಾತ್ ವಿಕಾರಃ, ವಿಕಾರತ್ವಾಚ್ಚ ಉತ್ಪದ್ಯತೇ ಇತ್ಯುಕ್ತಮ್ । ಅತ್ರೋಚ್ಯತೇ– ನಾಸ್ಯ ಪ್ರವಿಭಾಗಃ ಸ್ವತಃ ಅಸ್ತಿ । "ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ" (ಶ್ವೇ. ೬-೧೧) ಇತಿ ಶ್ರುತೇಃ । ಬುದ್ಧ್ಯಾದ್ಯುಪಾಧಿನಿಮಿತ್ತಂ ತು ಅಸ್ಯ ಪ್ರತಿಭಾಗಪ್ರತಿಭಾನಮ್ ಆಕಾಶಸ್ಯೇವ ಘಟಾದಿಸಂಬನ್ಧನಿಮಿತ್ತಮ್ । ತಥಾ ಚ ಶಾಸ್ತ್ರಮ್– "ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋ ಮಯಃ ಪ್ರಾಣಮಯಶ್ಚಕ್ಷುರ್ಮಯಃ ಶ್ರೋತ್ರಮಯಃ" (ಬೃ. ೪-೪-೫) ಇತ್ಯೇವಮಾದಿ ಬ್ರಹ್ಮಣ ಏವಾವಿಕೃತಸ್ಯ ಸತೋಽಪಿ ಏಕಸ್ಯ ಅನೇಕಬುದ್ಧ್ಯಾದಿ ಮಯತ್ವಂ ದರ್ಶಯತಿ । ತನ್ಮಯತ್ವಂ ಚ ಅಸ್ಯ ವಿವಿಕ್ತಸ್ವರೂಪಾನಭಿ ವ್ಯಕ್ತ್ಯಾ ತದುಪರಕ್ತಸ್ವರೂಪತ್ವಂ 'ಸ್ತ್ರೀಮಯೋ ಜಾಲ್ಮಃ' ಇತ್ಯಾದಿವದ್

ದ್ರಷ್ಟವ್ಯಮ್ । ಯದಪಿ ಕ್ವಚಿತ್ ಅಸ್ಯ ಉತ್ಪತ್ತಿಪ್ರಲಯಶ್ರವಣಮ್ ತದಪಿ ಅತ ಏವ ಉಪಾಧಿಸಂಬನ್ಧಾತ್ ನೇತವ್ಯಮ್ । ಉಪಾಧ್ಯುತ್ಪತ್ತ್ಯಾ ಅಸ್ಯ ಉತ್ಪತ್ತಿಃ, ತತ್ಪ್ರಲಯೇನ ಚ ಪ್ರಲಯಃ ಇತಿ । ತಥಾ ಚ ದರ್ಶಯತಿ– "ಪ್ರಜ್ಞಾನಘನ ಏವೈತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನು ವಿನಶ್ಯತಿ ನ ಪ್ರೇತ್ಯ ಸಂಜ್ಞಾಽಸ್ತಿ'' (ಬೃ. ೪–೫–೧೩) ಇತಿ । ತಥಾ ಉಪಾಧಿ ಪ್ರಲಯ ಏವಾಯಂ ನಾತ್ಮವಿಲಯಃ ಇತ್ಯೇತದಪಿ "ಅತ್ರೈವ ಮಾ ಭಗವಾನ್ ಮೋಹಾನ್ತಮಾಪೀಪದನ್ನ ವಾ ಅಹಮಿಮಂ ವಿಜಾನಾಮಿ ನ ಪ್ರೇತ್ಯ ಸಂಜ್ಞಾಸ್ತಿ" (ಬೃ. ಮಾ. ೪–೫–೧೪) ಇತಿ ಪ್ರಶ್ನಪೂರ್ವಕಂ ಪ್ರತಿಪಾದ ಯತಿ– "ನ ವಾ ಅರೇಽಹಂ ಮೋಹಂ ಬ್ರವೀಮ್ಯವಿನಾಶೀ ವಾ ಅರೇಽಯ ಮಾತ್ಮಾಽನುಚ್ಛಿತ್ತಿಧರ್ಮಾ ಮಾತ್ರಾಽಸಂಸರ್ಗಸ್ತ್ವಸ್ಯ ಭವತಿ" (ಬೃ.ಮಾ. ೪–೫–೧೪) ಇತಿ । ಪ್ರತಿಜ್ಞಾನುಪರೋಧೋಽಪ್ಯವಿಕೃತಸ್ಯೈವ ಬ್ರಹ್ಮಣೋ ಜೀವ ಭಾವಾಭ್ಯುಪಗಮಾತ್ । ಲಕ್ಷಣಭೇದೋಽಪಿ ಅನಯೋಃ ಉಪಾಧಿನಿಮಿತ್ತ ಏವ । "ಅತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹಿ'' (ಬೃ. ೪–೩–೧೫) ಇತಿ ಚ ಪ್ರಕೃತಸ್ಯೈವ ವಿಜ್ಞಾನಮಯಸ್ಯ ಆತ್ಮನಃ ಸರ್ವಸಂಸಾರಧರ್ಮ ಪ್ರತ್ಯಾಖ್ಯಾನೇನ ಪರಮಾತ್ಮಭಾವಪ್ರತಿಪಾದನಾತ್ । ತಸ್ಮಾತ್ ನೈವ ಆತ್ಮಾ ಉತ್ಪದ್ಯತೇ ಪ್ರವಿಲೀಯತೇ ಚ[1] ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ಪ್ರವಿಭಕ್ತವಾಗಿರುವದರಿಂದ (ಜೀವನೂ) ವಿಕಾರವು. ಮತ್ತು ವಿಕಾರವಾಗಿರುವದರಿಂದ (ಅವನಿಗೆ) ಉತ್ಪತ್ತಿಯುಂಟು– ಎಂದು ನಾವು ಹೇಳಿದೆವಲ್ಲ !

(ಪರಿಹಾರ) :– ಇದಕ್ಕೆ (ಪರಿಹಾರವನ್ನು) ಹೇಳುತ್ತೇವೆ. ಇವನಿಗೆ ಸ್ವತಃ ಪ್ರವಿಭಾಗವಿಲ್ಲ. ಏಕೆಂದರೆ "ಒಬ್ಬನೇ ದೇವನು ಸರ್ವಭೂತಗಳಲ್ಲಿ ಗೂಢನಾಗಿರುತ್ತಾನೆ. (ಅವನು) ಸರ್ವವ್ಯಾಪಿಯು, ಸರ್ವಭೂತಗಳಿಗೂ ಅಂತರಾತ್ಮನು" (ಶ್ವೇ. ೬–೧೧) 'ಎಂದು ಶ್ರುತಿಯಿದೆ. ಆದರೆ ಆಕಾಶಕ್ಕೆ ಗಡಿಗೆ ಮುಂತಾದವುಗಳ ಸಂಬಂಧದ ನಿಮಿತ್ತದಿಂದ (ತೋರು)ವಂತೆ ಬುದ್ಧಿ ಯೇ ಮುಂತಾದ ಉಪಾಧಿಗಳ ನಿಮಿತ್ತದಿಂದಲೇ ಇವನಿಗೆ ಪ್ರವಿಭಾಗವು ತೋರುವದು. ಆದ್ದರಿಂದಲೇ "ಆ ಈ ಆತ್ಮನೇ ಬ್ರಹ್ಮವು. (ಇವನು) ವಿಜ್ಞಾನಮಯನು, ಮನೋಮಯನು, ಪ್ರಾಣಮಯನು, ಚಕ್ಷುರ್ಮಯನು, ಶ್ರೋತ್ರಮಯನು" (ಬೃ. ೪–೪–೫) ಎಂಬಿದೇ ಮುಂತಾದ ಶಾಸ್ತ್ರವು ಅವಿಕೃತ ವಾದ ಬ್ರಹ್ಮವೇ ಆಗಿರುವ ಒಬ್ಬ (ಆತ್ಮನಿಗೆ) ಅನೇಕವಾಗಿರುವ ಬುದ್ಧ್ಯಾದಿ ಮಯತ್ವವನ್ನು ಹೇಳುತ್ತಿದೆ. ಇವನು ಆ (ಬುದ್ಧ್ಯಾದಿ)ಮಯನಾಗಿರುವ

1. ಇದು 'ವಾ' ಎಂದಿದ್ದರೆ ಚೆನ್ನಾಗಿತ್ತೆಂದು ತೋರುತ್ತವೆ.

ದೆಂಬುದು ವಿಂಗಡವಾದ ತನ್ನ ರೂಪವು ತೋರಿಕೊಳ್ಳದೆ ಅಪರ ಉಪರಾಗ ವುಳ್ಳ ಸ್ವರೂಪನಾಗಿಯೇ (ಕಾಣು)ವದು ; '(ಈ) ನೀಚನು ಸ್ತ್ರೀಪುಂಯು ನಾಗಿರುತ್ತಾನೆ' ಎಂಬುದೇ ಮುಂತಾದ (ಪ್ರಯೋಗ)ದಂತೆಯೇ (ಇದನ್ನು ಅರಿಯಬೇಕು). ಇನ್ನು, ಕೆಲವು (ಕಡೆ)ಗಳಲ್ಲಿ ಈ (ಜೀವ)ನಿಗೆ ಉತ್ಪತ್ತಿ ಯನ್ನೂ ಪ್ರಲಯವನ್ನೂ ಶ್ರುತಿಯಲ್ಲಿ ಹೇಳಿದೆಯಷ್ಟೆ ; ಅದೂ ಈ ಕಾರಣ ದಿಂದಲೇ ಉಪಾಧಿಸಂಬಂಧದಿಂದ ಎಂದು ತಿಳಿಯಬೇಕು ; ಉಪಾಧಿಯ ಉತ್ಪತ್ತಿಯಿಂದ ಇವನಿಗೆ ಉತ್ಪತ್ತಿ, ಆ (ಉಪಾಧಿಯ) ಪ್ರಲಯದಿಂದ ಪ್ರಲಯ ಎಂದು (ತಿಳಿಯಬೇಕು). ಆದ್ದರಿಂದಲೇ "ಪ್ರಜ್ಞಾನಘನನೇ ಆಗಿ ಈ ಭೂತ ಗಳಿಂದ ಮೇಲಕ್ಕೆದ್ದು ಅವುಗಳನ್ನೇ ಅನುಸರಿಸಿ ನಾಶವಾಗುತ್ತಾನೆ ; ಮರಣಾ ನಂತರದಲ್ಲಿ (ಇವನಿಗೆ) ಜ್ಞಾನವಿರುವದಿಲ್ಲ" (ಬೃ. ೪-೫-೧೩) ಎಂದು (ಶಾಸ್ತ್ರವು) ತಿಳಿಸುತ್ತದೆ. ಮತ್ತು ಇದು ಉಪಾಧಿಯ ಲಯವೇ ಹೊರತು ಆತ್ಮಲಯವಲ್ಲ ಎಂಬಿದನ್ನು "ಇಲ್ಲಿಯೇ ಪೂಜ್ಯನಾದ ನೀನು ನನ್ನನ್ನು ಭ್ರಾಂತಿ ಯ ನಡುವೆ ಹಾಕಿರುತ್ತೀಯೆ ; ಸತ್ತಬಳಿಕ ಜ್ಞಾನವಿರುವದಿಲ್ಲ ಎಂಬುದನ್ನು ನಾನು ಅರಿತುಕೊಳ್ಳಲೇ ಆರೆ"[1] (ಬೃ. ೪-೫-೧೪) ಎಂಬ ಪ್ರಶ್ನೆಯನ್ನು ಮುಂದುಮಾಡಿ "ಎಲೆ, ನಾನು ಮೋಹ(ಕರವಾದ ವಾಕ್ಯ)ವನ್ನು ಆಡುತ್ತಿಲ್ಲ. ಎಲೆ, ಈ ಆತ್ಮನು ಅವಿನಾಶಿಯು, ನಾಶವಾಗದ ಸ್ವಭಾವದವನು ; ಇವನಿಗೆ (ಭೂತ)ಮಾತ್ರೆಗಳ ಸಂಬಂಧವು ಮಾತ್ರ ಇಲ್ಲವಾಗುವದು'' (ಬೃ.ವಾ. ೪-೫-೧೪) ಎಂದು ಪ್ರತಿಪಾದಿಸಿರುತ್ತದೆ.[2]

ಅವಿಕೃತವಾದ ಬ್ರಹ್ಮವೇ ಜೀವತ್ವವನ್ನು ಸ್ವೀಕರಿಸಿರುವದರಿಂದ ಪ್ರತಿಜ್ಞೆಗೆ ವಿರೋಧವೂ ಆಗುವದಿಲ್ಲ. ಈ (ಇಬ್ಬರಿಗೂ) ಇರುವ ಲಕ್ಷಣಭೇದವೂ ಉಪಾಧಿನಿಮಿತ್ತದಿಂದಲೇ ಆಗಿರುತ್ತದೆ. ಏಕೆಂದರೆ ''ಇನ್ನುಮೇಲೆ ವಿಮೋಕ್ಷ ಕ್ಕೆ ಹೇಳು" (ಬೃ. ೪-೩-೧೫) ಎಂದು ಪ್ರಕೃತನಾದ ವಿಜ್ಞಾನಮಯಾತ್ಮನಿಗೇ ಎಲ್ಲಾ ಸಂಸಾರಧರ್ಮಗಳನ್ನೂ ಇಲ್ಲವೆಂದು ಪರಮಾತ್ಮಭಾವವನ್ನು ಹೇಳಿರುತ್ತದೆ.

ಆದ್ದರಿಂದ ಆತ್ಮನು ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ.

---

1. ಪ್ರಜ್ಞಾನಘನನೇ ಆಗಿರುವವನಿಗೆ ಸಾವೂ ಸತ್ತಬಳಿಕ ಜ್ಞಾನನಾಶವೂ ಆಗುವದು ಹೇಗೆ ?- ಎಂಬುದು ನನಗೆ ತಿಳಿಯಲಿಲ್ಲ ಎಂದು ಅಭಿಪ್ರಾಯ.

2. ಭೂತಕೃತವಾದ ಉಪಾಧಿಗಳು ಇಲ್ಲವಾದರೆ ನಾಶವೆನಿಸುತ್ತದೆ ; ಅವುಗಳ ಸಂಬಂಧದಿಂದಲೇ ಇವನಿಗೆ ವಿಶೇಷಜ್ಞಾನವು ತೋರುವದರಿಂದ ಅವುಗಳು ಹೋದರೆ ಅದೂ ಇಲ್ಲವಾಗುವದು ಎಂದು ಅಭಿಪ್ರಾಯ.

## ೧೨. ಜ್ಞಾಧಿಕರಣ

(ಆತ್ಮನು ಚೈತನ್ಯಸ್ವರೂಪನು)

**ಜ್ಞೋऽತ ಏವ ॥ ೧೮ ॥**

೧೮. ಆದ್ದರಿಂದಲೇ ಜ್ಞನು.

## ಆತ್ಮನ ಚೈತನ್ಯದ ವಿಷಯಕ್ಕೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೧೨೩. ಸ ಕಿಂ ಕಾಣಭುಜಾನಾಮಿವ[1] ಆಗನ್ತುಕಚೈತನ್ಯಃ, ಸ್ವತಃ ಅಚೇತನಃ, ಆಹೋಸ್ವಿತ್ ಸಾಂಖ್ಯಾನಾಮಿವ ನಿತ್ಯಚೈತನ್ಯಸ್ವರೂಪ ಏವ ಇತಿ ವಾದಿವಿಪ್ರತಿಪತ್ತೇಃ ಸಂಶಯಃ। ಕಿಂ ತಾವತ್ ಪ್ರಾಪ್ತಮ್? ಆಗನ್ತುಕಮ್ ಆತ್ಮನಶ್ಚೈತನ್ಯಮ್ ಆತ್ಮನಃ ಸಂಯೋಗಜಮ್ ಅಗ್ನಿಘಟಸಂಯೋಗಜರೋಹಿತಾದಿಗುಣವತ್ ಇತಿ ಪ್ರಾಪ್ತಮ್। ನಿತ್ಯಚೈತನ್ಯತ್ವೇ ಹಿ ಸುಪ್ತಮೂರ್ಛಿತಗ್ರಹಾವಿಷ್ಟಾನಾಮಪಿ ಚೈತನ್ಯಂ ಸ್ಯಾತ್। ತೇ ಪೃಷ್ಟಾಃ ಸನ್ತಃ 'ನ ಕಿಂಚಿದ್ ವಯಮ್ ಅಚೇತಯಾಮಹಿ' ಇತಿ ಜಲ್ಪನ್ತಿ। ಸ್ವಸ್ಥಾಶ್ಚ ಚೇತಯಮಾನಾ ದೃಶ್ಯನ್ತೇ। ಅತಃ ಕಾದಾಚಿತ್ಕಚೈತನ್ಯತ್ವಾತ್ ಆಗನ್ತುಕಚೈತನ್ಯ ಆತ್ಮಾ ಇತಿ ॥

(ಭಾಷ್ಯಾರ್ಥ)

ಆ (ಜೀವ)ನೇನು ಕಣಾದರ (ಅನುಯಾಯಿ)ಗಳ (ಮತದಲ್ಲಿ ಹೇಳಿರು)ವಂತೆ ಸ್ವತಃ ಅಚೇತನನಾಗಿ ಆಗಂತುಕಚೈತನ್ಯಸ್ವರೂಪನೊ, ಅಥವಾ ಸಾಂಖ್ಯರ (ಮತದವರು ಹೇಳು)ವಂತೆ ನಿತ್ಯಚೈತನ್ಯಸ್ವರೂಪನೇಯೊ ?– ಎಂದು ವಾದಿಗಳ ವಿರುದ್ಧ(ಮತ)ಗಳಿರುವದರಿಂದ ಸಂಶಯ(ವುಂಟಾಗುತ್ತದೆ).

ಮೊದಲು ಏನೆಂದು ಬಂದೊದಗುತ್ತದೆ? ಎಂದರೆ ಆತ್ಮನ ಚೈತನ್ಯವು ಆತ್ಮಮನಸ್ಸುಗಳ ಸಂಯೋಗದಿಂದ ಉಂಟಾಗುವದಾದ್ದರಿಂದ ಬೆಂಕಿಗಡಿಗೆಗಳ ಸಂಯೋಗದಿಂದುಂಟಾದ ಕೆಂಪು ಮುಂತಾದ (ಗುಣ)ಗಳಂತೆಯೇ ಆಗಂತುಕವು. (ಜೀವನು) ನಿತ್ಯಚೈತನ್ಯವುಳ್ಳವನು ಎಂದರೆ ನಿದ್ರಿಸುತ್ತಿರುವವನು, ಮೂರ್ಛಿತನಾದವನು, ಗ್ರಹವು ಹಿಡಿದಿರುವವನು– ಇವರಿಗೂ ಚೈತನ್ಯವಿರಬೇಕಾಗುವದು. ಆದರೆ ಅವರನ್ನು ಕೇಳಿದರೆ "ನಮಗೆ ಏನೂ ತಿಳಿಯಲಿಲ್ಲ"

---

1. 'ಕಣಭುಜಾನಾಮಿವ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದುಕೊಂಡಿದೆ.

ಎಂದು ಹೇಳುತ್ತಾರೆ; ಸ್ವಸ್ಥರಾಗಿರುವಾಗ ಅರಿಯುವಮೂ ಕಂಡುಬರುತ್ತದೆ. ಆದ್ದರಿಂದ ಕೆಲವು ವೇಳೆಗಳಲ್ಲಿ ಮಾತ್ರ ಅರಿವಿರುವದರಿಂದ ಆತ್ಮನ ಚೈತನ್ಯವು ಆಗಂತುಕವೇ.

## ಸಿದ್ಧಾಂತ: ಆತ್ಮನು ಚೈತನ್ಯಸ್ವರೂಪನೇ

(ಭಾಷ್ಯ)

೧೨೪. ಏವಂ ಪ್ರಾಪ್ತೇ ಅಭಿಧೀಯತೇ । ಜ್ಞಃ ನಿತ್ಯಚೈತನ್ಯಃ ಅಯಮಾತ್ಮಾ । ಅತ ಏವ । ಯಸ್ಮಾದೇವ ನೋತ್ಪದ್ಯತೇ ಪರಮೇವ ಬ್ರಹ್ಮ ಅವಿಕೃತಮ್ ಉಪಾಧಿಸಂಪರ್ಕಾತ್ ಜೀವಭಾವೇನ ಅವತಿಷ್ಠತೇ । ಪರಸ್ಯ ಹಿ ಬ್ರಹ್ಮಣಃ ಚೈತನ್ಯಸ್ವರೂಪತ್ವಮ್ ಆಮ್ನಾತಮ್ "ವಿಜ್ಞಾನಮಾನನ್ದಂ ಬ್ರಹ್ಮ" (ಬೃ. ೩-೯-೨೮) "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧), "ಅನನ್ತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ" (ಬೃ. ೪-೫-೧೩) ಇತ್ಯಾದಿಷು ಶ್ರುತಿಷು । ತದೇವ ಚೇತ್ ಪರಂ ಬ್ರಹ್ಮ ಜೀವಃ, ತಸ್ಮಾತ್ ಜೀವಸ್ಯಾಪಿ ನಿತ್ಯಚೈತನ್ಯಸ್ವರೂಪತ್ವಮ್ ಅಗ್ನ್ಯೌಷ್ಣ್ಯಪ್ರಕಾಶವತ್ ಇತಿ ಗಮ್ಯತೇ । ವಿಜ್ಞಾನಮಯಪ್ರಕ್ರಿಯಾಯಾಂ ಚ ಶ್ರುತಯೋ ಭವನ್ತಿ "ಅಸುಪ್ತಃ ಸುಪ್ತಾನಭಿಚಾಕಶೀತಿ" (ಬೃ. ೪-೩-೧೧), "ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ" (ಬೃ. ೪-೩-೯) ಇತಿ,[1] "ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ" (ಬೃ. ೪-೩-೩೦) ಇತ್ಯೇವಂರೂಪಾಃ । "ಅಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ" (ಛಾಂ. ೮-೧೨-೪) ಇತಿ ಚ ಸರ್ವೈಃ ಕರಣದ್ವಾರೈಃ 'ಇದಂ ವೇದ' 'ಇದಂ ವೇದ' ಇತಿ ವಿಜ್ಞಾನೇನ ಅನುಸಂಧಾನಾತ್ ತದ್ರೂಪತ್ವಸಿದ್ಧಿಃ । ನಿತ್ಯಸ್ವರೂಪಚೈತನ್ಯತ್ವೇ ಘ್ರಾಣಾದ್ಯಾನರ್ಥಕ್ಯಮ್ ಇತಿ ಚೇತ್ । ನ । ಗನ್ಧಾದಿವಿಷಯವಿಶೇಷಪರಿಚ್ಛೇದಾರ್ಥತ್ವಾತ್ । ತಥಾ ಹಿ ದರ್ಶಯತಿ- "ಗನ್ಧಾಯ ಘ್ರಾಣಮ್"(ಛಾಂ. ೮-೧೨-೪) ಇತ್ಯಾದಿ । ಯತ್ ತು ಸುಪ್ತಾದಯಃ ನ ಚೇತಯನ್ತೇ ಇತಿ, ತಸ್ಯ ಶ್ರುತ್ಯೈವ ಪರಿಹಾರಃ ಅಭಿಹಿತಃ ಸುಷುಪ್ತಂ ಪ್ರಕೃತ್ಯ "ಯದ್ವೈ ತನ್ನ ಪಶ್ಯತಿ ಪಶ್ಯನ್ವೈ ತನ್ನ ಪಶ್ಯತಿ । ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ ಪಶ್ಯೇತ್" (ಬೃ. ೪-೩-೨೩) ಇತ್ಯಾದಿನಾ । ಏತದುಕ್ತಂ ಭವತಿ । ವಿಷಯಾಭಾವಾತ್

---

1. ಇಲ್ಲಿ 'ಇತಿ' ಶಬ್ದವು ಅನವಶ್ಯವೆಂದು ತೋರುತ್ತದೆ. ಏಕೆಂದರೆ ಹಿಂದಿನ ವಾಕ್ಯದ ಕೊನೆಯಲ್ಲಿ 'ಇತಿ' ಇಲ್ಲ: ಮುಂದಿನ ವಾಕ್ಯದ ಕೊನೆಯಲ್ಲಿ 'ಇತಿ ಚೈವಂ ರೂಪಾ' ಎಂದೂ ಇಲ್ಲ.

ಇಯಮ್ ಅಚೇತಯಮಾನತಾ ನ ಚೈತನ್ಯಾಭಾವಾತ್ ಇತಿ । ಯಥಾ ವಿಯದಾಶ್ರಯಸ್ಯ ಪ್ರಕಾಶಸ್ಯ ಪ್ರಕಾಶ್ಯಾಭಾವಾತ್ ಅನಭಿವ್ಯಕ್ತಿಃ ನ ಸ್ವರೂಪಾಭಾವಾತ್, ತದ್ವತ್ । ವೈಶೇಷಿಕಾದಿತರ್ಕಶ್ಚ ಶ್ರುತಿವಿರೋಧೇ ಆಭಾಸೀಭವತಿ । ತಸ್ಮಾತ್ ನಿತ್ಯಚೈತನ್ಯಸ್ವರೂಪಂ ಏವ ಆತ್ಮಾ ಇತಿ ನಿಶ್ಚಿನುಮಃ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಈ ಆತ್ಮನು ಜ್ಞನು, ನಿತ್ಯಚೈತನ್ಯ(ರೂಪ)ನು. (ಏಕೆಂದರೆ) ಆದ್ದರಿಂದಲೇ ; ಯಾವ ಕಾರಣದಿಂದ ಹುಟ್ಟುವದಿಲ್ಲವೋ, ಅವಿಕೃತವಾದ ಪರಬ್ರಹ್ಮವೇ ಉಪಾಧಿಯ ಸಂಪರ್ಕದಿಂದ ಜೀವಭಾವದಿಂದಿದ್ದುಕೊಂಡಿರುವದೋ, (ಆ ಕಾರಣದಿಂದಲೇ). ಪರಬ್ರಹ್ಮವು ಚೈತನ್ಯಸ್ವರೂಪವೆಂದು "ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು" (ಬೃ. ೩-೯-೨೮), "ಸತ್ಯವೂ ಅನಂತವೂ ಆದ ಬ್ರಹ್ಮವು" (ತೈ. ೨-೧), "ಒಳಗಿಲ್ಲದವನು, ಹೊರಗಿಲ್ಲದವನು, ಪೂರ್ಣನು, ಪ್ರಜ್ಞಾನಘನನೇ" (ಬೃ. ೪-೫-೧೩) ಮುಂತಾದ ಶ್ರುತಿಗಳಲ್ಲಿ ಹೇಳಿರುತ್ತದೆ. ಆ ಪರಬ್ರಹ್ಮವೇ ಜೀವನೆಂದಾದರೆ ಆದರಿಂದ ಜೀವನಿಗೂ ಬೆಂಕಿಯ ಬಿಸಿಬೆಳಕುಗಳಂತೆ ನಿತ್ಯಚೈತನ್ಯಸ್ವರೂಪತ್ವವಿದೆ ಎಂದು ನಿಶ್ಚಯವಾಗುತ್ತದೆ. ವಿಜ್ಞಾನಮಯನ ಪ್ರಕರಣದಲ್ಲಿ "ತಾನು ನಿದ್ರಿಸದೆ ನಿದ್ರಿಸಿದವರನ್ನು ನೋಡುತ್ತಿರುತ್ತಾನೆ" (ಬೃ. ೪-೩-೧೧) "ಇಲ್ಲಿ ಈ ಪುರುಷನು ಸ್ವಯಂಜ್ಯೋತಿಯಾಗಿರುತ್ತಾನೆ" (ಬೃ. ೪-೩-೯) "ವಿಜ್ಞಾತೃವಿನ ವಿಜ್ಞಾನಕ್ಕೆ ವಿಪರಿಲೋಪವಿರುವದಿಲ್ಲ" (ಬೃ. ೪-೩-೩೦) ಎಂಬ ರೂಪದ ಶ್ರುತಿಗಳೂ ಇರುತ್ತವೆ. "ಇನ್ನು ಯಾವನು ಇದನ್ನು ಮೂಸುವೆನು ಎಂದು ಅರಿಯುವನೋ ಅವನು ಆತ್ಮನು" (ಛಾಂ. ೮-೧೨-೪) ಎಂದು ಎಲ್ಲಾ ಕರಣದ್ವಾರಗಳಿಂದಲೂ 'ಇದನ್ನು ಅರಿಯುತ್ತಾನೆ', 'ಇದನ್ನು ಅರಿಯುತ್ತಾನೆ' ಎಂದು ಅರಿವಿನಿಂದ ಅನುಸಂಧಾನಮಾಡಿರುವದರಿಂದ[1] ಆ (ವಿಜ್ಞಾನ)ಸ್ವರೂಪನೆಂದು ಸಿದ್ಧವಾಗುತ್ತದೆ.

(ಆಕ್ಷೇಪ) :– ಯಾವಾಗಲೂ ಸ್ವರೂಪವೇ ಆಗಿರುವ ಚೈತನ್ಯವುಳ್ಳವನಾದರೆ ಘ್ರಾಣಾದಿಗಳು ವ್ಯರ್ಥವಾಗುವವಲ್ಲ !

---

1. 'ಎಂದು ಅರಿಯುವನೋ' ಎಂದು ಅರಿವನ್ನೇ ಆತ್ಮನ ಪ್ರಧಾನಕ್ರಿಯೆಯಾಗಿ ಮತ್ತೆ ಮತ್ತೆ ಹೇಳಿಕೊಂಡಿರುವದರಿಂದ.

(ಪರಿಹಾರ):- ಹಾಗಲ್ಲ. ಏಕೆಂದರೆ ಗಂಧವೇ ಮುಂತಾದ ಆಯಾ ವಿಷಯವನ್ನು ಪರಿಚ್ಛೇದಗೊಳಿಸುವದಕ್ಕೆ[1] (ಅವು ಉಪಯೋಗವಾಗ ತ್ತವೆ). ಆದ್ದರಿಂದಲೇ "ಗಂಧಕ್ಕಾಗಿ ಘ್ರಾಣವು" (ಛಾಂ. ೮-೧೨-೪) ಎಂದು (ಶ್ರುತಿಯು) ತಿಳಿಸುತ್ತದೆ.

ಇನ್ನು ನಿದ್ರಿಸುವವರೇ ಮುಂತಾದವರಿಗೆ ಅರಿವಿರುವದಿಲ್ಲ ಎಂದು (ಪೂರ್ವಪಕ್ಷಿ ಹೇಳಿದ್ದನಷ್ಟೆ), ಅದಕ್ಕೆ ಪರಿಹಾರವನ್ನು ಸುಷುಪ್ತನ ಪ್ರಕರಣದಲ್ಲಿ "ಅಲ್ಲಿ ನೋಡುವದಿಲ್ಲವೆಂಬುದಿದೆಯಷ್ಟೆ, ಅಲ್ಲಿ ನೋಡುವವ ನಾಗಿಯೇ ನೋಡುತ್ತಿರುವದಿಲ್ಲ; ಏಕೆಂದರೆ (ಅವನು) ಅವಿನಾಶಿಯಾಗಿರು ವದರಿಂದ ನೋಡುವಾತನ ನೋಟಕ್ಕೆ ವಿಪರಿಲೋಪವಿರುವದಿಲ್ಲ. ಆದರೆ ಅಲ್ಲಿ ಅವನಿಗಿಂತ ಬೇರೆಯಾಗಿ ವಿಂಗಡವಾಗಿರುವ ಎರಡನೆಯದು ಇರುವದಿಲ್ಲ; (ಇದ್ದರೆ) ಅದನ್ನು ನೋಡಬಹುದಾಗಿತ್ತು" (ಬೃ. ೪-೩-೨೩) ಮುಂತಾದ (ವಾಕ್ಯ)ದಿಂದ ಶ್ರುತಿಯೇ ಹೇಳಿರುತ್ತದೆ. (ಈ ವಾಕ್ಯದಲ್ಲಿ) ಇಷ್ಟನ್ನು ಹೇಳಿದಂತಾಗಿರುತ್ತದೆ: ವಿಷಯವಿಲ್ಲದ್ದರಿಂದ ಈ ಅರಿವಿಲ್ಲವೇ ಹೊರತು ಅರಿವು ಇಲ್ಲದ್ದರಿಂದಲ್ಲ. ಹೇಗೆ ಆಕಾಶವನ್ನು ಆಶ್ರಯಿಸಿಕೊಂಡಿರುವ ಪ್ರಕಾಶಕ್ಕೆ ಪ್ರಕಾಶ್ಯವಿಲ್ಲದ್ದರಿಂದ ತೋರುವಿಕೆಯಿಲ್ಲವೇ ಹೊರತು ಸ್ವರೂಪ ವಿಲ್ಲದ್ದರಿಂದಲ್ಲವೋ, ಅದರಂತೆಯೇ (ಇದು). ವೈಶೇಷಿಕರೇ ಮುಂತಾದವರ ತರ್ಕವು ಶ್ರುತಿವಿರೋಧವಾಗಿರುವದರಿಂದ ಆಭಾಸವಾಗಿರುತ್ತದೆ. ಆದ್ದರಿಂದ ಆತ್ಮನು ನಿತ್ಯಚೈತನ್ಯಸ್ವರೂಪನೇ ಎಂದು ನಾವು ನಿಶ್ಚಯಿಸಬೇಕಾಗಿದೆ.

## ೧೩. ಉತ್ಕ್ರಾನ್ತಿಗತ್ಯಧಿಕರಣ (ಸೂ. ೧೯-೩೨)

### (ಜೀವನ ಪರಿಮಾಣ)

**ಉತ್ಕ್ರಾನ್ತಿಗತ್ಯಾಗತೀನಾಮ್ ॥ ೧೯ ॥**

೧೯. ಉತ್ಕ್ರಾಂತಿ, ಗತಿ, ಆಗತಿ -ಇವುಗಳ (ಶ್ರವಣವಿರು ವದರಿಂದ ಆತ್ಮನು ಅಣುಪರಿಮಾಣನು).

### ಅಧಿಕರಣಸಂಬಂಧವೂ ಸಂಶಯವೂ

(ಭಾಷ್ಯ)

೧೨೫. **ಇದಾನೀಂ ತು ಕಿಂಪರಿಮಾಣೋ ಜೀವಃ ಇತಿ ಚಿನ್ತ್ಯತೇ। ಕಿಮ್ ಅಣುಪರಿಮಾಣಃ, ಉತ ಮಧ್ಯಮಪರಿಮಾಣಃ, ಆಹೋಸ್ವಿತ್ ಮಹಾ**

---

1. ವಿಶೇಷರೂಪದಿಂದ ತಿಳಿಸುವದಕ್ಕೆ.

ಪರಿಮಾಣಃ ಇತಿ । ನನು ಚ ನಾತ್ಮಾ ಉತ್ಪದ್ಯತೇ ನಿತ್ಯಚೈತನ್ಯಶ್ಚ ಅಯಮ್ ಇತ್ಯುಕ್ತಮ್ । ಅತಶ್ಚ ಪರ ಏವಾತ್ಮಾ ಜೀವಃ ಇತಿ ಆಪತತಿ । ಪರಸ್ಯ ಚ ಆತ್ಮನಃ ಅನನ್ತತ್ವಮ್ ಆಮ್ನಾತಮ್ । ತತ್ರ ಕುತೋ ಜೀವಸ್ಯ ಪರಿಮಾಣ ಚಿನ್ತಾವತಾರಃ ಇತಿ ? ಉಚ್ಯತೇ । ಸತ್ಯಮ್ ಏತತ್ । ಉತ್ಕ್ರಾನ್ತಿಗತ್ಯಾಗತಿಶ್ರವಣಾನಿ ತು ಜೀವಸ್ಯ ಪರಿಚ್ಛೇದಂ ಪ್ರಾಪಯನ್ತಿ । ಸ್ವಶಬ್ದೇನ ಚ ಅಸ್ಯ ಕ್ವಚಿತ್ ಅಣುಪರಿಮಾಣತ್ವಮ್ ಆಮ್ನಾಯತೇ । ತಸ್ಯ ಸರ್ವಸ್ಯ ಅನಾಕುಲತ್ವೋಪಪಾದನಾಯ ಅಯಮ್ ಆರಮ್ಭಃ ॥

(ಭಾಷ್ಯಾರ್ಥ)

ಈಗಲಾದರೋ ಜೀವನ ಪರಿಮಾಣವು ಯಾವದು, ಎಂಬುದನ್ನು ಚಿಂತಿಸಲಾಗುತ್ತದೆ. (ಜೀವನು) ಅಣುಪರಿಮಾಣದವನೆ, ಮಧ್ಯಮಪರಿಮಾಣದವನೆ, ಅಥವಾ ಮಹಾಪರಿಮಾಣದವನೆ ? –ಎಂಬುದನ್ನು ವಿಚಾರಮಾಡಲಾಗುತ್ತದೆ.

(ಆಕ್ಷೇಪ) :– ಆತ್ಮನು ಹುಟ್ಟುವದಿಲ್ಲ, ಅವನು ನಿತ್ಯಚೈತನ್ಯ(ಸ್ವರೂಪ)ನೂ ಆಗಿರುತ್ತಾನೆ ಎಂದು ಹೇಳಿದ್ದಾಯಿತು. ಆದ್ದರಿಂದ ಜೀವನು ಪರಮಾತ್ಮನೇ ಎಂದಾಗುತ್ತದೆ. ಪರಮಾತ್ಮನು ಅನಂತನಾಗಿರುವನೆಂದು (ಶ್ರುತಿಯಲ್ಲಿ) ಹೇಳಿದೆ. ಹೀಗಿರುವಲ್ಲಿ ಜೀವನ ಪರಿಮಾಣವನ್ನು ಕುರಿತು ವಿಚಾರಕ್ಕೆ ಅವಕಾಶವೆಲ್ಲಿದೆ ?

(ಪರಿಹಾರ) :– (ಇದಕ್ಕೆ) ಹೇಳುತ್ತೇವೆ. ಇದು ನಿಜ. ಆದರೆ ಉತ್ಕ್ರಾಂತಿ, ಗತಿ, ಆಗತಿ –ಇವುಗಳನ್ನು ಹೇಳುವ ಶ್ರುತಿಗಳಿಂದ ಜೀವನಿಗೆ ಪರಿಚ್ಛೇದವು ಬಂದೊದಗುತ್ತದೆ. ಸ್ವಶಬ್ದದಿಂದಲೂ ಕೆಲವು ಕಡೆಗಳಲ್ಲಿ ಇವನು ಅಣುಪರಿಮಾಣದವನೆಂದೇ ಹೇಳಿರುತ್ತದೆ. ಇದೆಲ್ಲವೂ ಹೊಂದುಗಡೆಯಾಗುವದಕ್ಕಾಗಿ ಈ (ಅಧಿಕರಣವನ್ನು) ಆರಂಭಿಸಿರುತ್ತದೆ.

## ಪೂರ್ವಪಕ್ಷ: ಜೀವನು ಅಣುಪರಿಮಾಣನು

(ಭಾಷ್ಯ)

೧೨೬. ತತ್ರ ಪ್ರಾಪ್ತಂ ತಾವತ್ ಉತ್ಕ್ರಾನ್ತಿಗತ್ಯಾಗತೀನಾಂ ಶ್ರವಣಾತ್ ಪರಿಚ್ಛಿನ್ನಃ ಅಣುಪರಿಮಾಣೋ ಜೀವಃ ಇತಿ । ಉತ್ಕ್ರಾನ್ತಿಸ್ತಾವತ್ "ಸ ಯದಾಸ್ಮಾಚ್ಛರೀರಾದುತ್ಕ್ರಾಮತಿ ಸಹೈವೈತೈಃ ಸರ್ವೈರುತ್ಕ್ರಾಮತಿ"[1]

---

1. ಈ ಪಾಠವು ನಿ॥ ಸಾ॥ ಪುಸ್ತಕದಲ್ಲಿಲ್ಲ. ಆದರಲ್ಲಿ "ಸಯದಾ... ಉತ್ಕ್ರಾಮತಿ, ವಾಗಸ್ಮಾತ್ ಸರ್ವಾಣಿ ನಾಮಾನ್ಯಭಿವಿಸೃಜತೇ" ಎಂದಿದೆ. ಆನಂದಾಶ್ರಮದ ಶಾಂಖಾಯನಾರಣ್ಯಕದಲ್ಲಿ ಮಾತ್ರ– 'ಮನಃ ಸರ್ವೈರ್ಧ್ಯಾನೈಃ ಸಹಾಪ್ಯೇತಿ' ಆದಮೇಲೆ ಈ ವಾಕ್ಯವಿದೆ. ಆರಣ್ಯಕಕ್ರಮದಿಂದ ಇದು ೫–೩.

(ಕೌ. ೩-೩) ಇತಿ। ಗತಿರಪಿ "ಯೇ ವೈ ಕೇ ಚಾಸ್ಮಾಲ್ಲೋಕಾತ್ ಪ್ರಯನ್ತಿ ಚನ್ದ್ರಮಸಮೇವ ತೇ ಸರ್ವೇ ಗಚ್ಛನ್ತಿ" (ಕೌ. ೧-೨) ಇತಿ। ಆಗತಿರಪಿ "ತಸ್ಮಾಲ್ಲೋಕಾತ್ ಪುನರೇತ್ಯಸ್ಮೈ ಲೋಕಾಯ ಕರ್ಮಣೇ" (ಬೃ. ೪-೪-೬) ಇತಿ। ಆಸಾಮ್ ಉತ್ಕ್ರಾನ್ತಿಗತ್ಯಾಗತೀನಾಂ ಶ್ರವಣಾತ್ ಪರಿಚ್ಛಿನ್ನಸ್ತಾವತ್ ಜೀವಃ ಇತಿ ಪ್ರಾಪ್ನೋತಿ। ನ ಹಿ ವಿಭೋಃ ಚಲನಮ್ ಅವಕಲ್ಪತೇ ಇತಿ। ಸತಿ ಚ ಪರಿಚ್ಛೇದೇ ಶರೀರಪರಿಮಾಣತ್ವಸ್ಯ ಆರ್ಹತಪರೀಕ್ಷಾಯಾಂ ನಿರಸ್ತತ್ವಾತ್ ಅಣುರಾತ್ಮಾ ಇತಿ ಗಮ್ಯತೇ ॥

(ಭಾಷ್ಯಾರ್ಥ)

ಇಲ್ಲಿ ಮೊದಲು ಒದಗುವ (ಪೂರ್ವಪಕ್ಷವು) ಯಾವದೆಂದರೆ ಉತ್ಕ್ರಾಂತಿ, ಗತಿ, ಆಗತಿ –ಇವುಗಳ ಶ್ರವಣವಿರುವದರಿಂದ ಜೀವನು ಪರಿಚ್ಛಿನ್ನನು, ಅಣುಪರಿಮಾಣನು, ಮೊದಲನೆಯದಾಗಿ ಉತ್ಕ್ರಾಂತಿ ಹೇಗೆಂದರೆ "ಅವನು ಯಾವಾಗ ಈ ಶರೀರದಿಂದ ಉತ್ಕ್ರಾಂತನಾಗುತ್ತಾನೋ (ಆಗ) ಈ ಎಲ್ಲವುಗಳೊಡನೆ ಉತ್ಕ್ರಾಂತನಾಗುತ್ತಾನೆ" (ಕೌ. ೩-೩) ಎಂದು (ಹೇಳಿದೆ). ಗತಿಯನ್ನೂ "ಈ ಲೋಕದಿಂದ ಯಾರುಯಾರು ಹೊರಟುಹೋಗುತ್ತಾರೋ ಚಂದ್ರನನ್ನೇ ಅವರೆಲ್ಲರೂ ಸೇರುತ್ತಾರೆ" (ಕೌ.೧-೨) ಎಂದು (ಹೇಳಿದೆ). ಆಗತಿಯನ್ನೂ "ಆ ಲೋಕದಿಂದ ಈ ಲೋಕಕ್ಕೆ ಕರ್ಮ(ವನ್ನು ಮಾಡುವದ)ಕ್ಕೆ ಮತ್ತೆ ಬರುತ್ತಾನೆ" (ಬೃ. ೪-೪-೬) ಎಂದು (ಹೇಳಿದೆ). ಈ ಉತ್ಕ್ರಾಂತಿಗತ್ಯಾಗತಿಗಳನ್ನು (ಹೀಗೆ) ಶ್ರುತಿಯಲ್ಲಿ ಹೇಳಿರುವದರಿಂದ ಜೀವನು ಪರಿಚ್ಛಿನ್ನನೆಂದು ಮೊದಲನೆಯದಾಗಿ ಬಂದೊದಗುತ್ತದೆ. ಏಕೆಂದರೆ ವಿಭುವಾಗಿದ್ದರೆ (ಅವನಿಗೆ) ಚಲನವು ಹೊಂದುವದಿಲ್ಲ. ಪರಿಚ್ಛೇದವಿರಬೇಕೆಂದಾದಮೇಲೆ (ಆತ್ಮನು) ಶರೀರಪರಿಮಾಣದವನೆಂಬುದನ್ನು (ಹಿಂದೆ) ಆರ್ಹತಮತದ ಪರೀಕ್ಷೆಯಲ್ಲಿ ತಳ್ಳಿಹಾಕಿರುವದರಿಂದ ಆತ್ಮನು ಅಣುವೆಂದು ನಿಶ್ಚಿತವಾಗುತ್ತದೆ.

## ಸ್ವಾತ್ಮನಾ ಚೋತ್ತರಯೋಃ ॥ ೨೦ ॥

೨೦. ಮುಂದಿನ ಎರಡಕ್ಕೆ ತಮ್ಮ ಆತ್ಮನೊಡನೆ (ಸಂಬಂಧವಿರು)ವದರಿಂದಲೂ ಆತ್ಮನು ಅಣುಪರಿಮಾಣನು.

(ಭಾಷ್ಯ)

೧೨೭. ಉತ್ಕ್ರಾನ್ತಿಃ ಕದಾಚಿತ್ ಅಚಲತೋಽಪಿ ಗ್ರಾಮಸ್ವಾಮ್ಯನಿವೃತ್ತಿವತ್ ದೇಹಸ್ವಾಮ್ಯನಿವೃತ್ತ್ಯಾ ಕರ್ಮಕ್ಷಯೇಣ ಅವಕಲ್ಪೇತ। ಉತ್ತರೇ ತು ಗತ್ಯಾಗತೀ ನಾಚಲತಃ ಸಂಭವತಃ। ಸ್ವಾತ್ಮನಾ ಹಿ ತಯೋಃ ಸಂಬನ್ಧೋ

ಭವತಿ । ಗಮೇಃ ಕರ್ತೃಸ್ಥಕ್ರಿಯಾತ್ವಾತ್ । ಅಮಧ್ಯಮಪರಿಮಾಣಸ್ಯ ಚ ಗತ್ಯಾಗತೀ ಅಣುತ್ವೇ ಏವ ಸಂಭವತಃ । ಸತ್ಯೋಶ್ಚ ಗತ್ಯಾಗತ್ಯೋಃ ಉತ್ಕ್ರಾನ್ತಿರಪಿ ಅಪಸೃಪ್ತಿರೇವ ದೇಹಾತ್ ಇತಿ ಪ್ರತೀಯತೇ । ನ ಹಿ ಅನಪಸೃಪ್ತಸ್ಯ ದೇಹಾತ್ ಗತ್ಯಾಗತೀ ಸ್ಯಾತಾಮ್ । ದೇಹಪ್ರದೇಶಾನಾಂ ಚ ಉತ್ಕ್ರಾನ್ತೌ ಅಪಾದಾನತ್ವವಚನಾತ್ । "ಚಕ್ಷುಷೋ ವಾ ಮೂರ್ಧ್ನೋ ವಾನ್ಯೇಭ್ಯೋ ವಾ ಶರೀರದೇಶೇಭ್ಯಃ'' (೪-೪-೨) ಇತಿ । ''ಸ ಏತಾಸ್ತೇಜೋಮಾತ್ರಾಃ ಸಮಭ್ಯಾದದಾನೋ ಹೃದಯಮೇವಾನ್ವವಕ್ರಾಮತಿ" (ಬೃ.೪-೪-೧) "ಶುಕ್ರಮಾದಾಯ ಪುನರೈತಿ ಸ್ಥಾನಮ್'' (ಬೃ.೪–೩–೧೧) ಇತಿ ಚ ಅನ್ತರೇಽಪಿ ಶರೀರೇ ಶಾರೀರಸ್ಯ ಗತ್ಯಾಗತೀ ಭವತಃ । ತಸ್ಮಾದಪ್ಯಸ್ಯ ಅಣುತ್ವಸಿದ್ಧಿಃ ॥

(ಭಾಷ್ಯಾರ್ಥ)

ಉತ್ಕ್ರಾಂತಿಯು, ಒಂದುವೇಳೆ ಚಲಿಸದಿರುವ (ಜೀವನಿಗೂ) ಗ್ರಾಮದ ಒಡೆತನವು ತೊಲಗುವಂತೆ ಕರ್ಮಕ್ಷಯದಿಂದ ದೇಹದೊಡೆತನವು ತಪ್ಪುವದರಿಂದಲೇ ಆದರೂ ಆಗಬಹುದು. ಆದರೆ ಮುಂದಿನ ಗತ್ಯಾಗತಿಗಳೆಂಬೆರಡೂ ಅಚಲನಾದವನಿಗೆ ಸಂಭವಿಸುವದೇ ಇಲ್ಲ. ಏಕೆಂದರೆ ಗತಿ ಎಂಬುದು ಕರ್ತೃವಿನಲ್ಲಿರುವ ಕ್ರಿಯೆಯಾಗಿರುತ್ತದೆ. (ಆ ಕರ್ತೃವು) ಮಧ್ಯಮಪರಿಮಾಣನಲ್ಲದೆ (ಇರುವದರಿಂದ) ಅಣುವಾಗಿದ್ದರೇ ಗತ್ಯಾಗತಿಗಳು ಸಂಭವಿಸುತ್ತವೆ. ಗತ್ಯಾಗತಿಗಳು (ಹೀಗೆ ಜೀವನಿಗೆ) ಇರುತ್ತವೆ ಎಂದಾಗಲಾಗಿ ಉತ್ಕ್ರಾಂತಿ ಎಂದರೂ ದೇಹವನ್ನು ಬಿಟ್ಟು ತೆರಳುವದೇ ಎಂದು ತಿಳಿಯಬೇಕಾಗುತ್ತದೆ. ಏಕೆಂದರೆ ದೇಹವನ್ನು ಬಿಟ್ಟು ತೆರಳದೆ ಇದ್ದವನಿಗೆ ಗತಿಯಾಗಲಿ ಆಗತಿಯಾಗಲಿ ಆಗುವಂತಿಲ್ಲ. ''ಕಣ್ಣಿಂದಲಾಗಲಿ ನೆತ್ತಿಯಿಂದಲಾಗಲಿ ಮತ್ತುಳಿದ ಶರೀರದೇಶಗಳಿಂದಾಗಲಿ" (ಬೃ. ೪–೪–೨) ಎಂದು (ಶ್ರುತಿಯಲ್ಲಿ) ದೇಹಪ್ರದೇಶಗಳನ್ನು ಉತ್ಕ್ರಾಂತಿಗೆ ಅಪಾದಾನವಾಗಿ ಹೇಳಿರುವದರಿಂದಲೂ (ದೇಹವನ್ನು ಬಿಟ್ಟು ತೆರಳುವದೇ ಎಂದು ಗೊತ್ತಾಗುತ್ತದೆ). ಇದಲ್ಲದೆ "ಅವನು ಈ ತೇಜೋಮಾತ್ರಗಳನ್ನು[1] ಚೆನ್ನಾಗಿ ತೆಗೆದುಕೊಂಡವನಾಗಿ ಹೃದಯವನ್ನೇ ಹೋಗಿ ಸೇರಿಕೊಳ್ಳುತ್ತಾನೆ" (ಬೃ. ೪–೪–೧), ''ಶುದ್ಧವಾದ (ಇಂದ್ರಿಯಮಾತ್ರೆಯನ್ನು) ತೆಗೆದುಕೊಂಡು ಮತ್ತೆ (ಎಚ್ಚರದ) ಅವಸ್ಥೆಯನ್ನು ಸೇರುತ್ತಾನೆ'' (ಬೃ. ೪–೩–೧೧) ಎಂದೂ (ಶ್ರುತಿಯಲ್ಲಿರುವದರಿಂದ) ಶರೀರದ ಒಳಗಡೆಯಲ್ಲಿಯೂ ಶಾರೀರನಿಗೆ ಗತ್ಯಾಗತಿಗಳಾಗುತ್ತವೆ. ಆದ್ದರಿಂದ ಇವನಿಗೆ ಅಣುತ್ವವು ಸಿದ್ಧವಾಗುವದು.

---

1. ಚಕ್ಷುರಾದೀಂದ್ರಿಯಗಳನ್ನು.

**ನಾಣುರತಚ್ಛ್ರುತೇರಿತಿ ಚೇನ್ನೇತರಾಧಿಕಾರಾತ್ || ೨೧ ||**

೨೨. ಅದಲ್ಲದ್ದರ ಶ್ರುತಿಯಿರುವದರಿಂದ ಅಣುವಲ್ಲ ಎಂದರೆ ಹಾಗಲ್ಲ; ಏಕೆಂದರೆ ಮತ್ತೊಬ್ಬನ ಪ್ರಕರಣವಾಗಿರುತ್ತದೆ.

## ಪೂರ್ವಪಕ್ಷ: ಅಣುತ್ವಾಕ್ಷೇಪಪರಿಹಾರ

(ಭಾಷ್ಯ)

೧೨೮. ಅಥಾಪಿ ಸ್ಯಾತ್ ನಾಣುರಯಮ್ ಆತ್ಮಾ । ಕಸ್ಮಾತ್ ? ಅತಚ್ಛ್ರುತೇಃ । ಅಣುತ್ವಪರಿಮಾಣಶ್ರವಣಾತ್ ಇತ್ಯರ್ಥಃ । "ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು" (ಬೃ. ೪-೪-೨೨) "ಆಕಾಶವತ್ಸರ್ವಗತಶ್ಚ ನಿತ್ಯಃ" (ಶತ. ಬ್ರಾ. ?), "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಇತ್ಯೇವಂಜಾತೀಯಕಾ ಹಿ ಶ್ರುತಿಃ ಆತ್ಮನಃ ಅಣುತ್ವೇ ವಿಪ್ರತಿಷಿಧ್ಯೇತ ಇತಿ ಚೇತ್ । ನೈಷ ದೋಷಃ । ಕಸ್ಮಾತ್? ಇತರಾಧಿಕಾರಾತ್ । ಪರಸ್ಯ ಹಿ ಆತ್ಮನಃ ಪ್ರಕ್ರಿಯಾಯಾಮ್ ಏಷಾ ಪರಿಮಾಣಾನ್ತರಶ್ರುತಿಃ । ಪರಸ್ಯೈವ ಆತ್ಮನಃ ಪ್ರಾಧಾನ್ಯೇನ ವೇದಾನ್ತೇಷು ವೇದಿತವ್ಯತ್ವೇನ ಪ್ರಕೃತತ್ವಾತ್ । "ವಿರಜಃ ಪರ ಆಕಾಶಾತ್" (ಬೃ. ೪-೪-೨೦) ಇತ್ಯೇವಂವಿಧಾಚ್ಚ ಪರಸ್ಯೈವ ಆತ್ಮನಃ ತತ್ರ ತತ್ರ ವಿಶೇಷಾಧಿಕಾರಾತ್ । ನನು ಯೋಽಯಂ ವಿಜ್ಞಾನಮಯಃ ಪ್ರಾಣೇಷು" (ಬೃ. ೪-೪-೨೨) ಇತಿ ಶಾರೀರ ಏವ ಮಹತ್ತ್ವಸಂಬನ್ಧಿತ್ವೇನ ಪ್ರತಿನಿರ್ದಿಶ್ಯತೇ । ಶಾಸ್ತ್ರದೃಷ್ಟ್ಯಾ ತು ಏಷ ನಿರ್ದೇಶೋ ವಾಮದೇವವದ್ ದ್ರಷ್ಟವ್ಯಃ । ತಸ್ಮಾತ್ ಪ್ರಾಜ್ಞವಿಷಯತ್ವಾತ್ ಪರಿಮಾಣಾನ್ತರಶ್ರವಣಸ್ಯ ನ ಜೀವಸ್ಯ ಅಣುತ್ವಂ ವಿರುಧ್ಯತೇ॥

(ಭಾಷ್ಯಾರ್ಥ)

(ಆಕ್ಷೇಪಕನ ಅಭಿಪ್ರಾಯವು) ಹೀಗೂ ಇರಬಹುದು: ಈ ಆತ್ಮನು ಅಣುವಲ್ಲ. ಏಕೆ? ಎಂದರೆ ಅದಲ್ಲದ್ದರ ಶ್ರುತಿಯಿರುವದರಿಂದ, ಅಣುತ್ವಕ್ಕೆ ವಿಪರೀತವಾದ ಪರಿಮಾಣದ ಶ್ರವಣವಿರುವದರಿಂದ ಎಂದರ್ಥ. "ಪ್ರಾಣಗಳಲ್ಲಿ ಈ ವಿಜ್ಞಾನಮಯನಿದಾನಷ್ಟೆ, ಆ ಈತನೇ ಮಹಾನ್ ಅಜನಾದ ಆತ್ಮನು" (ಬೃ. ೪-೪-೨೨), "ಆಕಾಶದಂತೆ ಸರ್ವಗತನೂ ನಿತ್ಯನೂ (ಆಗಿರುತ್ತಾನೆ)" (ಶತ. ಬ್ರಾ. ?), "ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು" (ತೈ. ೨-೧) ಎಂಬೀ ಜಾತಿಯ ಶ್ರುತಿಗೆ ಆತ್ಮನು ಅಣುವೆಂದರೆ ವಿರೋಧವಾಗುವದಲ್ಲ !

ಹೀಗೆಂದರೆ, ಇದು ದೋಷವಲ್ಲ. ಏಕೆ? ಎಂದರೆ ಇತರಾಧಿಕಾರವಿರುವದರಿಂದ ಈ ಪರಿಮಾಣಾಂತರವನ್ನು ಹೇಳುವ ಶ್ರುತಿಯು ಪರ(ಮಾತ್ಮನ)

ಪ್ರಕರಣದಲ್ಲಿಯೋ ಅಲ್ಲವೆ, (ಬಂದಿದೆ) ? ಏಕೆಂದರೆ **ವೇದಾಂತಗಳಲ್ಲಿ ಪರಮಾತ್ಮನನ್ನೇ ಅರಿತುಕೊಳ್ಳಬೇಕೆಂದು ಪ್ರಾಧಾನ್ಯದಿಂದ (ಹೇಳುವದಕ್ಕೆ) ಪ್ರಕ್ರಮಮಾಡಿರುತ್ತದೆ.** "ವಿರಜನು, ಆಕಾಶಕ್ಕಿಂತಲೂ ಪರನು" (ಬೃ. ೪-೪-೨೦)- ಎಂಬೀ ವಿಧದ (ಶ್ರುತಿ)ಯಿಂದಲೂ ಅಲ್ಲಲ್ಲಿ ಪರಮಾತ್ಮನನ್ನೇ ವಿಶೇಷವಾಗಿ ಪ್ರಕ್ರಮಮಾಡಿ ಹೇಳಿರುವದರಿಂದಲೂ (ಇದೇ ಸರಿ).

(ಆಕ್ಷೇಪ) :– "ಈ ವಿಜ್ಞಾನಮಯನಿದಾನಲ್ಲ" (ಬೃ. ೪-೪-೨೨) ಎಂದು ಶಾರೀರನಿಗೇ ಮಹತ್ತ್ವದ ಸಂಬಂಧವನ್ನು ತಿಳಿಸಿರುತ್ತದೆಯಲ್ಲವೆ ?[1]

(ಪರಿಹಾರ) :– ಹೀಗೆ ತಿಳಿಸಿರುವದು ವಾಮದೇವನಂತೆ[2] ಶಾಸ್ತ್ರದೃಷ್ಟಿಯಿಂದಲೇ ಎಂದು ತಿಳಿಯಬೇಕು.

ಆದ್ದರಿಂದ ಪರಿಮಾಣಾಂತರವನ್ನು ಶ್ರುತಿಯಲ್ಲಿ ಹೇಳಿರುವದು ಪ್ರಾಜ್ಞನ ವಿಷಯವಾದ್ದರಿಂದ ಜೀವನು ಅಣುವೆಂಬುದಕ್ಕೆ ವಿರುದ್ಧವಾಗುವದಿಲ್ಲ.

**ಸ್ವಶಬ್ದೋನ್ಮಾನಾಭ್ಯಾಂ ಚ   ॥ ೨೨ ॥**

೨೨. ಸ್ವಶಬ್ದ, ಉನ್ಮಾನ- (ಇವು)ಗಳಿಂದಲೂ (ಅಣುವೆಂದು ತಿಳಿಯಬೇಕು).

## ಪೂರ್ವಪಕ್ಷ: ಶ್ರುತಿಯಲ್ಲಿ ಜೀವನನ್ನು ಅಣುವೆಂದಿದೆ

(ಭಾಷ್ಯ)

೧೮೯. ಇತಶ್ಚ ಅಣುರಾತ್ಮಾ । ಯತಃ ಸಾಕ್ಷಾದೇವ ಅಸ್ಯ ಅಣುತ್ವವಾಚೀ ಶಬ್ದಃ ಶ್ರೂಯತೇ "ಏಷೋಽಣುರಾತ್ಮಾ ಚೇತಸಾ ವೇದಿತವ್ಯೋ ಯಸ್ಮಿನ್ ಪ್ರಾಣಃ ಪಞ್ಚಧಾ ಸಂವಿವೇಶ" (ಮುಂ. ೩-೧-೯) ಇತಿ । ಪ್ರಾಣಸಂಬನ್ಧಾಚ್ಚ ಜೀವ ಏವಾಯಮ್ ಅಣುರಭಿಹಿತಃ ಇತಿ ಗಮ್ಯತೇ । ತಥಾ ಉನ್ಮಾನಮಪಿ ಜೀವಸ್ಯ ಅಣಿಮಾನಂ ಗಮಯತಿ "ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಭಾಗೋ ಜೀವಃ ಸ ವಿಜ್ಞೇಯಃ" (ಶ್ವೇ. ೫-೮) ಇತಿ । "ಆರಾಗ್ರಮಾತ್ರೋ ಹ್ಯವರೋಽಪಿ ದೃಷ್ಟಃ" (ಶ್ವೇ. ೫-೮) ಇತಿ ಚ ಉನ್ಮಾನಾನ್ತರಮ್ ॥

---

1. ಇಲ್ಲಿ ಪರಮಾತ್ಮನ ಪ್ರಕರಣವಿಲ್ಲವಲ್ಲ ! ಆದ್ದರಿಂದ ಜೀವನಿಗೇ ಮಹತ್ತ್ವಪರಿಮಾಣವನ್ನು ಹೇಳಿದಂತಾಯಿತಲ್ಲ !– ಎಂದು ಆಕ್ಷೇಪ. ಈ ಸಂದರ್ಭದಲ್ಲಿ ಮಹತ್ತ್ವವೆಂದರೆ ಅನಂತತ್ವವೇ ಎಂದು ತಿಳಿಯಬೇಕು.

2. ವಾಮದೇವನು ತನಗೆ ಸರ್ವಾತ್ಮಭಾವವನ್ನು ಹೇಗೆ ಶಾಸ್ತ್ರದೃಷ್ಟಿಯಿಂದ ಹೇಳಿಕೊಂಡಿರುವನೋ ಹಾಗೆ ಜೀವನು ಶಾಸ್ತ್ರದೃಷ್ಟಿಯಿಂದ ಪರಮಾತ್ಮನೇ ಆಗಿರುವದರಿಂದ ಅವನಿಗೆ ಮಹತ್ತ್ವಪರಿಮಾಣವನ್ನು ಹೇಳಿದೆ ಎಂದು ತಿಳಿಯಬೇಕು ಎಂದರ್ಥ.

(ಭಾಷ್ಯಾರ್ಥ)

ಇದರಿಂದಲೂ ಆತ್ಮನು ಅಣು ; ಏಕೆಂದರೆ ಇವನಿಗೆ ಸಾಕ್ಷಾತ್ತಾಗಿಯೇ ಅಣುತ್ವವಾಚಕಶಬ್ದವನ್ನು ಶ್ರುತಿಯಲ್ಲಿ "ಈ ಅಣುವಾದ ಆತ್ಮನನ್ನು ಚಿತ್ತದಿಂದ ತಿಳಿದುಕೊಳ್ಳಬೇಕು ; ಯಾವ ಇವನಲ್ಲಿ ಪ್ರಾಣವು ಐದು ಬಗೆಯಿಂದ ಸೇರಿ ಕೊಂಡಿರುತ್ತದೆ" (ಮುಂ. ೩-೧-೯) ಎಂದು ಹೇಳಿರುತ್ತದೆ. (ಇಲ್ಲಿ) ಅಣುವೆಂದು ಹೇಳಿರುವ ಈ (ಆತ್ಮನು) ಪ್ರಾಣಸಂಬಂಧವಿರುವದರಿಂದ– ಜೀವನೇ ಎಂದು ನಿಶ್ಚಯವಾಗುತ್ತದೆ. ಇದರಂತೆ "ಕೂದಲೆಳೆಯ ತುದಿಯ ನೂರನೆಯ ಭಾಗವನ್ನು ನೂರು ಭಾಗವಾಗಿ ಕಲ್ಪಿಸಿದರೆ (ಅದರ) ಭಾಗವು ಜೀವನೆಂದು ತಿಳಿಯಬೇಕು" (ಶ್ವೇ. ೫-೮) ಎಂಬ ಉನ್ಮಾನವೂ ಜೀವನು ಅಣುವೆಂದು ತಿಳಿಸಿಕೊಡುತ್ತದೆ. ಮತ್ತು "ದಬ್ಬಳದ ತುದಿಯ ಪ್ರಮಾಣವುಳ್ಳ ವನಾಗಿ ಅಲ್ಪನಾಗಿಯೂ ಕಂಡುಬರುತ್ತಾನೆ" (ಶ್ವೇ. ೫-೮) ಎಂಬುದು ಮತ್ತೊಂದು ಉನ್ಮಾನ(ವಚನ)ವು.

**ಅವಿರೋಧಶ್ಚನ್ದನವತ್ ॥ ೨೩ ॥**

೨೩. ಚಂದನದಂತೆ ಯಾವ ವಿರೋಧವೂ ಇಲ್ಲ.

## ಪೂರ್ವಪಕ್ಷ : ಅಣುವಾದರೂ ಆತ್ಮನಿಗೆ ಸಕಲದೇಹದಲ್ಲಿ ವೇದನೆಯಾಗಬಹುದು

(ಭಾಷ್ಯ)

೧೩೦. ನನು ಅಣುತ್ವೇ ಸತಿ ಏಕದೇಶಸ್ಥಸ್ಯ ಸಕಲದೇಹಗತಾ ಉಪಲಬ್ಧಿಃ ವಿರುಧ್ಯತೇ । ದೃಶ್ಯತೇ ಚ ಜಾಹ್ನವೀಹ್ರದನಿಮಗ್ನಾನಾಂ ಸರ್ವಾಙ್ಗಶೈತ್ಯೋಪಲಬ್ಧಿಃ ನಿದಾಘಸಮಯೇ ಚ ಸಕಲಶರೀರಪರಿತಾಪೋಪ ಲಬ್ಧಿಃ ಇತಿ । ಅತಃ ಉತ್ತರಂ ಪಠತಿ ('ಅವಿರೋಧಶ್ಚನ್ದನವತ್') ಯಥಾ ಹಿ ಹರಿಚನ್ದನಬಿನ್ದುಃ ಶರೀರೈಕದೇಶಸಂಬದ್ಧೋಽಪಿ ಸನ್ ಸಕಲದೇಹವ್ಯಾಪಿ ನಮ್[1] ಆಹ್ಲಾದಂ ಕರೋತಿ ಏವಮ್ ಆತ್ಮಾಪಿ ದೇಹಸ್ಯೈಕದೇಶಸ್ಥಃ ಸಕಲ ದೇಹವ್ಯಾಪಿನೀಮ್ ಉಪಲಬ್ಧಿಂ ಕರಿಷ್ಯತಿ । ತ್ವಕ್ಸಂಬನ್ಧನಾಚ್ಚ[2] ಅಸ್ಯ ಸಕಲ ಶರೀರಗತಾ ವೇದನಾ ನ ವಿರುಧ್ಯತೇ । ತ್ವಗಾತ್ಮನೋರ್ಹಿ ಸಂಬನ್ಧಃ ಕೃತ್ಸ್ನಾ ಯಾಂ ತ್ವಚಿ ವರ್ತತೇ । ತ್ವಕ್ಚ ಸಕಲಶರೀರವ್ಯಾಪಿನೀ ಇತಿ ॥

---

1. ಅಳತೆ.
2. 'ತ್ವಕ್ಸಂಬನ್ಧಾಚ್ಚ' ಎಂದಿಷ್ಟೇ ಇದ್ದರೂ ಆಗಬಹುದೆಂದು ತೋರುತ್ತದೆ.

(ಭಾಷ್ಯಾರ್ಥ)

(ಆಕ್ಷೇಪ) :– ಅಣುವಾಗಿದ್ದರೆ ಒಂದು ಸ್ಥಳದಲ್ಲಿರುವವನಿಗೆ ಸಕಲ ದೇಹದಲ್ಲಿಯೂ ಅರಿವು ಆಗುವದು ವಿರುದ್ಧವಲ್ಲವೆ ? ಜಾಹ್ನವೀ(ನದಿಯ) ಮಡುವಿನಲ್ಲಿ ಮುಳುಗಿದವರಿಗೆ ಸರ್ವಾಂಗದಲ್ಲಿಯೂ ತಂಪಿನ ಅರಿವಾಗುವದೂ ಬೇಸಗೆಯ ಕಾಲದಲ್ಲಿ ಸಕಲಶರೀರದಲ್ಲಿ ತಾಪದ ಅರಿವಾಗುವದೂ *ಕಂಡು ಬಂದಿದೆಯಲ್ಲ !

(ಪರಿಹಾರ) :– ಇದಕ್ಕೆ ಉತ್ತರವನ್ನು (ಸೂತ್ರಕಾರರು) ಹೇಳುತ್ತಾರೆ: (ಅವಿರೋಧಶ್ಚನ್ದನವತ್). ಹೇಗೆ ಚಂದನದ ತೊಟ್ಟು ಶರೀರದ ಒಂದು ಭಾಗಕ್ಕೆ ಸಂಬದ್ಧವಾಗಿರುವದಾದರೂ ಸಕಲ ದೇಹವನ್ನೂ ವ್ಯಾಪಿಸಿರುವ ಸುಖವನ್ನುಂಟುಮಾಡುತ್ತದೆಯೋ, ಹಾಗೆಯೇ ಆತ್ಮನೂ ದೇಹದ ಒಂದು ಕಡೆಯಲ್ಲಿದ್ದರೂ ಸಕಲದೇಹವನ್ನೂ ವ್ಯಾಪಿಸಿರುವ ಅರಿವನ್ನು ಉಂಟುಮಾಡ ಬಹುದು. ತ್ವಗಿಂದ್ರಿಯಸಂಬಂಧವಿರುವದರಿಂದಲೂ ಇವನಿಗೆ ಸಕಲ ಶರೀರ ಗತವಾದ ವೇದನೆಯಾಗುವದು ವಿರುದ್ಧವಲ್ಲ. ತ್ವಕ್ಕು, ಆತ್ಮ– ಇವರುಗಳಿಗಿರುವ ಸಂಬಂಧವು ತ್ವಕ್ಕಿನಲ್ಲೆಲ್ಲ ಇರುತ್ತದೆ; (ಆ) ತ್ವಕ್ಕು ಸಕಲಶರೀರವನ್ನೂ ವ್ಯಾಪಿಸಿ ಕೊಂಡಿರುತ್ತದೆಯಲ್ಲವೆ ?[1]

**ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ ಹೃದಿ ಹಿ ॥ ೨೪ ॥**

೨೪. (ದೃಷ್ಟಾಂತದಲ್ಲಿ) ವಿಶೇಷವಾದ ಅವಸ್ಥಿತಿಯಿದೆ ಯಲ್ಲ !– ಎಂದರೆ ಹಾಗಲ್ಲ. ಏಕೆಂದರೆ ಒಪ್ಪಿರುತ್ತೇವೆ. ಹೃದಯ ದಲ್ಲಿದಾನಷ್ಟೆ.

## ಪೂರ್ವಪಕ್ಷ: ಆತ್ಮನು ಶರೀರೈಕದೇಶದಲ್ಲಿದಾನೆ

(ಭಾಷ್ಯ)

೧೩೧. ಅತ್ರಾಹ– ಯದುಕ್ತಮ್ ಅವಿರೋಧಶ್ಚನ್ದನವತ್ ಇತಿ, ತದಯುಕ್ತಮ್ । ದೃಷ್ಟಾನ್ತದಾರ್ಷ್ಟಾನ್ತಿಕಯೋಃ ಅತುಲ್ಯತ್ವಾತ್ । ಸಿದ್ಧೇ ಹಿ ಆತ್ಮನಃ ದೇಹೈಕದೇಶಸ್ಥತ್ವೇ ಚನ್ದನದೃಷ್ಟಾನ್ತೋ ಭವತಿ । ಪ್ರತ್ಯಕ್ಷಂ ತು ಚನ್ದನಸ್ಯ ಅವಸ್ಥಿತಿವೈಶೇಷ್ಯಮ್ ಏಕದೇಶಸ್ಥತ್ವಂ ಸಕಲದೇಹಾಹ್ಲಾದನಂ ಚ । ಆತ್ಮನಃ ಪುನಃ ಸಕಲದೇಹೋಪಲಬ್ಧಿಮಾತ್ರಂ ಪ್ರತ್ಯಕ್ಷಂ ನೈಕದೇಶವರ್ತಿ ತ್ವಮ್ । ಅನುಮೇಯಂ ತು ತತ್ ಇತಿ ಯದಪಿ ಉಚ್ಯೇತ, ನ ಚಾತ್ರ

1. ಮೊದಲನೆಯ ಸಮಾಧಾನದಲ್ಲಿ ಒಂದುಕಡೆಯಿದ್ದರೂ ಸಕಲಶರೀರಗತವಾದ ವ್ಯಾಪಾರವುಳ್ಳವನಾಗಿರಬಹುದು ಎಂದು ಹೇಳಿದೆ; ಎರಡನೆಯದರಲ್ಲಿ ತ್ವಗಿಂದ್ರಿಯ ಸಂಬಂಧವು ಶರೀರದಲ್ಲೆಲ್ಲ ಇರುವದರಿಂದ ಒಂದುಕಡೆಯಲ್ಲಿರುವವನಿಗೂ ಸಂಬಂಧದ ಮೂಲಕ ಎಲ್ಲಾ ವೇದನೆಯೂ ಆಗಬಹುದು ಎಂದು ಹೇಳಿದೆ.

ಅನುಮಾನಂ ಸಂಭವತಿ। ಕಿಮ್ ಆತ್ಮನಃ ಸಕಲಶರೀರಗತಾ ವೇದನಾ ತ್ವಗಿನ್ದ್ರಿಯಸ್ಯೇವ ಸಕಲದೇಹವ್ಯಾಪಿನಃ ಸತಃ ಕಿಂ ವಾ ವಿಭೋರ್ನಭಸ ಇವ, ಆಹೋಸ್ವಿತ್ ಚನ್ದನಬಿನ್ದೋರಿವ ಅಣೋರೇಕದೇಶಸ್ಥಸ್ಯ ಇತಿ ಸಂಶಯಾನತಿವೃತ್ತೇಃ ಇತಿ। ಅತ್ರೋಚ್ಯತೇ। ನಾಯಂ ದೋಷಃ। ಕಸ್ಮಾತ್? ಅಭ್ಯುಪಗಮಾತ್। ಅಭ್ಯುಪಗಮ್ಯತೇ ಹಿ ಆತ್ಮನೋಽಪಿ ಚನ್ದನಸ್ಯೇವ ದೇಹೈಕದೇಶವೃತ್ತಿತ್ವಮ್ ಅವಸ್ಥಿತಿವೈಶೇಷ್ಯಮ್। ಕಥಮಿತಿ? ಉಚ್ಯತೇ। ಹೃದಿ ಹಿ ಏಷ ಆತ್ಮಾ ಪಠ್ಯತೇ ವೇದಾನ್ತೇಷು। "ಹೃದಿ ಹ್ಯೇಷ ಆತ್ಮಾ" (ಪ್ರ. ೩-೬), "ಸ ವಾ ಏಷ ಆತ್ಮಾ ಹೃದಿ" (ಛಾಂ. ೮-೩-೩) "ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯನ್ತರ್ಜ್ಯೋತಿಃ ಪುರುಷಃ" (ಬೃ. ೪-೩-೭) ಇತ್ಯಾದ್ಯುಪದೇಶೇಭ್ಯಃ। ತಸ್ಮಾತ್ ದೃಷ್ಟಾನ್ತದಾರ್ಷ್ಟಾನ್ತಿಕಯೋಃ ಅವೈಷಮ್ಯಾತ್ ಯುಕ್ತಮೇವೈತತ್ 'ಅವಿರೋಧಶ್ಚನ್ದನವತ್' ಇತಿ ॥

(ಭಾಷ್ಯಾರ್ಥ)

ಇಲ್ಲಿ (ಆಕ್ಷೇಪಕನು) ಹೇಳುತ್ತಾನೇನೆಂದರೆ: 'ಚಂದನದಂತೆ ಯಾವ ವಿರೋಧವೂ ಇಲ್ಲ' ಎಂದು ಹೇಳಿದಿರಲ್ಲ, ಅದು ಅಯುಕ್ತವು; ಏಕೆಂದರೆ ದೃಷ್ಟಾಂತಕ್ಕೂ ದಾರ್ಷ್ಟಾಂತಿಕಕ್ಕೂ ಹೋಲಿಕೆಯಿರುವದಿಲ್ಲ. ಆತ್ಮನು ದೇಹದಲ್ಲಿ ಒಂದು ಕಡೆಯಲ್ಲಿರುತ್ತಾನೆಂಬುದು ಸಿದ್ಧವಾದಮೇಲಲ್ಲವೆ, ಚಂದನದ ದೃಷ್ಟಾಂತವು ಆಗುವದು ?[1] ಚಂದನಕ್ಕೆ ವಿಶೇಷವಾದ ಅವಸ್ಥಿತಿಯೂ, (ಅದು) ಒಂದುಕಡೆಯಲ್ಲಿ ಇರುವದೆಂಬುದೂ ಸಕಲ ದೇಹದಲ್ಲಿಯೂ ಆನಂದವನ್ನುಂಟು ಮಾಡುವದೂ ಪ್ರತ್ಯಕ್ಷವಾಗಿರುತ್ತದೆ. ಆತ್ಮನಿಗೆ ಸಕಲದೇಹದಲ್ಲಿಯೂ ಜ್ಞಾನವುಂಟಾಗುವದು ಮಾತ್ರ ಪ್ರತ್ಯಕ್ಷವಾಗಿರುತ್ತದೆಯೇ ಹೊರತು ಒಂದು ಕಡೆಯಲ್ಲಿಯೇ ಇರುವದು (ಪ್ರತ್ಯಕ್ಷವಾಗಿರುವದಿಲ್ಲ). ಆದರೆ ಅದು ಅನುಮೇಯವಾಗಿದೆ ಎಂದು ಹೇಳಬಹುದು, ಆದರೆ ಇಲ್ಲಿ ಅನುಮಾನವು ಸಂಭವಿಸುವದಿಲ್ಲ. ಏಕೆಂದರೆ ಆತ್ಮನಿಗೆ ಸಕಲ ಶರೀರದಲ್ಲಿಯೂ ಆಗುವ ವೇದನೆಯು ತ್ವಗಿಂದ್ರಿಯದಂತೆ ಸಲಕದೇಹವ್ಯಾಪಿಯಾಗಿರುವದರಿಂದಲೊ, ಅಥವಾ ಆಕಾಶದಂತೆ ವಿಭುವಾಗಿರುವದರಿಂದಲೊ, ಅಥವಾ ಚಂದನಬಿಂದುವಿನಂತೆ ಅಣುವಾಗಿದ್ದು ಒಂದುಕಡೆಯಲ್ಲಿರುವದರಿಂದಲೊ ?– ಎಂಬ ಸಂಶಯವು ಬಗೆಹರಿಯುವಹಾಗಿಲ್ಲ.[2]

---

1. ಆದರೆ ಅದು ಸಿದ್ಧವಾಗಿರುವದಿಲ್ಲ ; ವಾದಗ್ರಸ್ತವಾಗಿರುತ್ತದೆ.

2. ವ್ಯಾಪಿಕಾರ್ಯವನ್ನುಂಟುಮಾಡುವದರಿಂದ ವ್ಯಾಪಿಯಾಗಿಯೇ ಇರಬೇಕೆಂಬುದು ಸಾಮಾನ್ಯನಿಯಮವು. ಚಂದನಬಿಂದುವು ಏಕದೇಶದಲ್ಲಿಯೇ ಇರುವದೆಂಬುದು ಕಂಡಿರುವದರಿಂದ ಅದಕ್ಕೂ ವ್ಯಾಪಿಕಾರ್ಯವಾಗುವದೆಂದಾಗಲಿ, ಆದರೆ ಆತ್ಮನ ಏಕದೇಶಸ್ಥತ್ವವು ಇನ್ನೂ ಸಿದ್ಧವಾಗಿಲ್ಲದಿರುವಾಗ ಅವನು ಏಕದೇಶಸ್ಥನೆಂದು ವಿಶೇಷವನ್ನು ಏತಕ್ಕೆ ಕಲ್ಪಿಸಬೇಕು ?

ಇದಕ್ಕೆ (ನಾವು) ಹೇಳುವದೇನೆಂದರೆ, ಇದೇನೂ ದೋಷವಲ್ಲ. ಏಕೆ? ಎಂದರೆ ಒಪ್ಪಿರುತ್ತೇವೆ. (ಇದರ ವಿವರ): ಆತ್ಮನೂ ಚಂದನದಂತೆ ಏಕದೇಶದಲ್ಲಿರುತ್ತಾನೆಂಬ ವಿಶೇಷವಾದ ಅವಸ್ಥಿತಿಯನ್ನು ಒಪ್ಪಿರುತ್ತೇವೆ. ಹೇಗೆ? ಎಂದರೆ ಹೇಳುತ್ತೇವೆ- "ಈ ಆತ್ಮನು ಹೃದಯದಲ್ಲಿಯೇ (ಇರುತ್ತಾನೆ)'' (ಪ್ರ. ೩-೬), "ಆ ಈ ಆತ್ಮನು ಹೃದಯದಲ್ಲಿಯೇ (ಇರುತ್ತಾನೆ)", (ಛಾಂ.೮-೩-೩), ''ಆತ್ಮನೆಂದರೆ (ಇವರುಗಳಲ್ಲಿ) ಯಾವನು? (ಉತ್ತರ): ಪ್ರಾಣಗಳಲ್ಲಿ ವಿಜ್ಞಾನಮಯನಾಗಿ ಹೃದಯದೊಳಗೆ ಇರುವ ಜ್ಯೋತಿಯಾದ ಪುರುಷನಿದಾನಲ್ಲ, (ಅವನು)." (ಬೃ. ೪-೩-೭)- ಎಂಬಿವೇ ಮುಂತಾದ ಉಪದೇಶಗಳಿರುವದರಿಂದ ಈ ಆತ್ಮನು ಹೃದಯದಲ್ಲಿದಾನೆಂದಲ್ಲವೆ, ವೇದಾಂತಗಳಲ್ಲಿ ಹೇಳಿರುತ್ತದೆ? ಆದ್ದರಿಂದ ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಹೆಚ್ಚುಕಡಿಮೆಯೇನೂ ಇಲ್ಲದ್ದರಿಂದ 'ಚಂದನದಂತೆ ಯಾವ ವಿರೋಧವೂ ಇಲ್ಲ' ಎಂದು ಹೇಳಿದ್ದು ಸರಿಯೇ.

**ಗುಣಾದ್ವಾ - ಲೋಕವತ್ ॥ ೨೫ ॥**

೨೫. ಗುಣವು (ವ್ಯಾಪಕವಾಗಿರುವ)ದರಿಂದಲೂ (ವ್ಯಾಪಕ ಜ್ಞಾನವಾಗಬಹುದು). ಲೋಕದಂತೆ (ಇದನ್ನು ಅರಿಯಬೇಕು).

## ಪೂರ್ವಪಕ್ಷ: ಆತ್ಮನ ಚೈತನ್ಯಗುಣವು ದೇಹವ್ಯಾಪಕವಾಗಿದೆ

**(ಭಾಷ್ಯ)**

೧೩೭. ಚೈತನ್ಯಗುಣವ್ಯಾಪ್ತೇರ್ವಾ ಅಣೋರಪಿ ಸತಃ ಜೀವಸ್ಯ ಸಕಲದೇಹವ್ಯಾಪಿ ಕಾರ್ಯಂ ನ ವಿರುಧ್ಯತೇ । ಯಥಾ ಲೋಕೇ ಮಣಿಪ್ರದೀಪಪ್ರಭೃತೀನಾಮ್ ಅಪವರಕೈಕದೇಶವರ್ತಿನಾಮಪಿ ಪ್ರಭಾ ಅಪವರಕವ್ಯಾಪಿನೀ ಸತೀ ಕೃತ್ಸ್ನೇ ಅಪವರಕೇ ಕಾರ್ಯಂ ಕರೋತಿ ತದ್ವತ್ । ಸ್ಯಾತ್ ಕದಾಚಿತ್ ಚನ್ದನಸ್ಯ ಸಾವಯವತ್ವಾತ್ ಸೂಕ್ಷ್ಮಾವಯವವಿಸರ್ಪಣೇನಾಪಿ ಸಕಲದೇಹೇ ಆಹ್ಲಾದಯಿತೃತ್ವಮ್ ನ ತು ಅಣೋಃ ಜೀವಸ್ಯ ಅವಯವಾಃ ಸನ್ತಿ ಯೈರಯಂ ಸಕಲದೇಹಂ ವಿಪ್ರಸರ್ಪೇತ್ ಇತ್ಯಾಶಙ್ಕ್ಯ 'ಗುಣಾದ್ವಾ ಲೋಕವತ್' ಇತ್ಯುಕ್ತಮ್ ॥

**(ಭಾಷ್ಯಾರ್ಥ)**

ಅಥವಾ ಜೀವನು ಅಣುವಾಗಿದ್ದರೂ ಚೈತನ್ಯಗುಣದ ವ್ಯಾಪ್ತಿಯಿಂದ (ಅವನಿಗೆ) ಸಕಲ ದೇಹವನ್ನೂ ವ್ಯಾಪಿಸಿಕೊಂಡಿರುವ ಕಾರ್ಯವಾಗುವದೆಂಬುದು ವಿರುದ್ಧವಲ್ಲ. ಹೇಗೆ ಲೋಕದಲ್ಲಿ ರತ್ನ, ಪ್ರದೀಪ- ಮುಂತಾದವುಗಳು ಕೋಣೆಯ ಒಂದು ಭಾಗದಲ್ಲಿರುತ್ತಿದ್ದರೂ (ಅವುಗಳ) ಪ್ರಭೆಯು

ಕೋಣೆಯನ್ನೆಲ್ಲ ವ್ಯಾಪಿಸಿಕೊಂಡಿರುವದರಿಂದ ಇಡಿಯ ಕೋಣೆಯಲ್ಲಿಯೇ ಕಾರ್ಯವನ್ನು ಮಾಡುತ್ತದೆಯೋ ಆದರಂತೆ(ಯೇ ಇದು).

ಚಂದ್ರನು ಸಾವಯವವಾಗಿರುವದರಿಂದ (ಅದರ) ಅವಯವಗಳು ಹರಡಿಕೊಳ್ಳುವದರಿಂದಲೂ ಸಕಲದೇಹವಲ್ಲಿಯೂ ಆನಂದಗೊಳಿಸುವದೆಂಬ (ಕಾರ್ಯವು) ಆಗುತ್ತದೆ (ಎಂದು) ಒಂದುವೇಳೆ ಆಗಬಹುದು. ಆದರೆ ಅಣು ಜೀವನಿಗೆ ಅವಯವಗಳು ಇರುವದಿಲ್ಲ; (ಇದ್ದರೆ) ಅವುಗಳಿಂದ ಇವನು ಸಕಲ ದೇಹವಲ್ಲಿಯೂ ಹರಡಿಕೊಳ್ಳಬಹುದಾಗಿತ್ತು ಎಂಬ ಆಶಂಕೆಯುಂಟಾಗಲು "ಗುಣವು (ವ್ಯಾಪಕ)ವಾಗಿರುವದರಿಂದಲೂ (ವ್ಯಾಪಕಜ್ಞಾನವಾಗಬಹುದು); ಲೋಕದಂತೆ (ಇದನ್ನು ಅರಿಯಬೇಕು)" ಎಂದು ಹೇಳಿರುತ್ತದೆ.

**ವ್ಯತಿರೇಕೋ ಗನ್ಧವತ್ ॥ ೨೬ ॥**

೨೬. ಗಂಧದಂತೆ ವ್ಯತಿರೇಕವು (ಆಗಬಹುದು).

## ಪೂರ್ವಪಕ್ಷ: ಗುಣವು ಗುಣಿಯನ್ನು ಬಿಟ್ಟೂ ಇರಬಹುದು

(ಭಾಷ್ಯ)

೧೩೩. ಕಥಂ ಪುನಃ ಗುಣೋ ಗುಣಿವ್ಯತಿರೇಕೇಣ ಅನ್ಯತ್ರ ವರ್ತೇತ? ನ ಹಿ ಪಟಸ್ಯ ಶುಕ್ಲೋ ಗುಣಃ ಪಟವ್ಯತಿರೇಕೇಣ ಅನ್ಯತ್ರ ವರ್ತಮಾನೋ ದೃಶ್ಯತೇ । ಪ್ರದೀಪಪ್ರಭಾವತ್ ಭವೇತ್ ಇತಿ ಚೇತ್ । ನ । ತಸ್ಯಾ ಅಪಿ ದ್ರವ್ಯತ್ವಾಭ್ಯುಪಗಮಾತ್ । ನಿಬಿಡಾವಯವಂ ಹಿ ತೇಜೋದ್ರವ್ಯಂ ಪ್ರದೀಪಃ । ಪ್ರವಿರಲಾವಯವಂ ತು ತೇಜೋದ್ರವ್ಯಮೇವ ಪ್ರಭಾ ಇತಿ । ಅತ ಉತ್ತರಂ ಪಠತಿ (ವ್ಯತಿರೇಕೋ ಗನ್ಧವತ್ ।) ಯಥಾ ಗುಣಸ್ಯಾಪಿ ಸತೋ ಗನ್ಧಸ್ಯ ಗನ್ಧವದ್ದ್ರವ್ಯವ್ಯತಿರೇಕೇಣ ವೃತ್ತಿರ್ಭವತಿ । ಅಪ್ರಾಪ್ತೇಷ್ವಪಿ ಕುಸುಮಾದಿಷು ಗನ್ಧವತ್ಸು ಕುಸುಮಗನ್ಧೋಪಲಬ್ಧೇಃ । ಏವಮ್ ಅಣೋರಪಿ ಸತೋ ಜೀವಸ್ಯ ಚೈತನ್ಯಗುಣವ್ಯತಿರೇಕೋ ಭವಿಷ್ಯತಿ । ಅತಶ್ಚ ಅನೈಕಾನ್ತಿಕಮೇತತ್ ಗುಣತ್ವಾತ್ ರೂಪಾದಿವತ್ ಆಶ್ರಯವಿಶ್ಲೇಷಾನುಪಪತ್ತಿಃ ಇತಿ । ಗುಣಸ್ಯೈವ ಸತೋ ಗನ್ಧಸ್ಯ ಆಶ್ರಯವಿಶ್ಲೇಷದರ್ಶನಾತ್ । ಗನ್ಧಸ್ಯಾಪಿ ಸಹೈವ ಆಶ್ರಯೇಣ ವಿಶ್ಲೇಷಃ ಇತಿ ಚೇತ್ । ನ । ಯಸ್ಮಾತ್ ಮೂಲದ್ರವ್ಯಾತ್ ವಿಶ್ಲೇಷಃ ತಸ್ಯ ಕ್ಷಯಪ್ರಸಙ್ಗಾತ್ । ಅಕ್ಷೀಯಮಾಣಮಪಿ ತತ್ ಪೂರ್ವಾವಸ್ಥಾತೋ ಗಮ್ಯತೇ । ಅನ್ಯಥಾ ತತ್ಪೂರ್ವಾವಸ್ಥೈಃ ಗುರುತ್ವಾದಿಭಿಃ ಹೀಯೇತ । ಸ್ಯಾದೇತತ್ । ಗನ್ಧಾಶ್ರಯಾಣಾಂ ವಿಶ್ಲಿಷ್ಟಾನಾಮ್ ಅವಯವಾನಾಮ್ ಅಲ್ಪತ್ವಾತ್ ಸನ್ನಪಿ ವಿಶೇಷಃ ನೋಪಲಕ್ಷ್ಯತೇ । ಸೂಕ್ಷ್ಮಾ ಹಿ ಗನ್ಧಪರಮಾಣವಃ ಸರ್ವತೋ ವಿಪ್ರಸೃತಾಃ ಗನ್ಧಮ್ ಉತ್ಪಾದಯನ್ತಿ ನಾಸಿಕಾಪುಟಮ್

ಅನುಪ್ರವಿಶಸ್ತಃ ಇತಿ ಚೇತ್[1] । ನ । ಅತೀನ್ದ್ರಿಯತ್ವಾತ್ ಪರಮಾಣುನಾಂ ಸ್ಫಟಿಗನ್ಧೋಪಲಬ್ಧೇಶ್ಚ ನಾಗಕೇಸರಾದಿಷು । ನ ಚ ಲೋಕೇ ಪ್ರತೀತಿಃ ಗನ್ಧವದ್ದ್ರವ್ಯಮ್ ಆಘ್ರಾತಮ್ ಇತಿ । ಗನ್ಧ ಏವ ಆಘ್ರಾತಃ ಇತಿ ತು ಲೌಕಿಕಾಃ ಪ್ರತಿಯನ್ತಿ । ರೂಪಾದಿಷು ಆಶ್ರಯವ್ಯತಿರೇಕಾನುಪಲಬ್ಧೇಃ ಗನ್ಧಸ್ಯಾಪಿ ಅಯುಕ್ತಃ ಆಶ್ರಯವ್ಯತಿರೇಕಃ ಇತಿ ಚೇತ್ । ನ । ಪ್ರತ್ಯಕ್ಷತ್ವಾತ್ ಅನುಮಾನಾಪ್ರವೃತ್ತೇಃ । ತಸ್ಮಾತ್ ಯದ್ ಯಥಾ ಲೋಕೇ ದೃಷ್ಟಂ ತತ್ ತಥೈವ ಅನುಮನ್ತವ್ಯಂ ನಿರೂಪಕೈಃ ನಾನ್ಯಥಾ । ನ ಹಿ ರಸೋ ಗುಣೋ ಜಿಹ್ವಯಾ ಉಪಲಭ್ಯತೇ ಇತ್ಯತೋ ರೂಪಾದಯೋಽಪಿ ಗುಣಾಃ ಜಿಹ್ವಯೇವ ಉಪಲಭ್ಯೇರನ್ ಇತಿ ನಿಯನ್ತುಂ ಶಕ್ಯತೇ ॥

(ಭಾಷ್ಯಾರ್ಥ)

(ಆಕ್ಷೇಪ) :– ಇನ್ನು ಗುಣವು ಗುಣಿಯನ್ನು ಬಿಟ್ಟು ಮತ್ತೊಂದು ಕಡೆಯಲ್ಲಿ ಇರುವದು ಹೇಗೆ ? ಬಟ್ಟೆಯ ಬಿಳುಪೆಂಬ ಗುಣವು ಬಟ್ಟೆಗಿಂತ ಬೇರೆಯಾಗಿ ಮತ್ತೊಂದು ಕಡೆ ಇರುವದು ಕಂಡಿಲ್ಲವಷ್ಟೆ. ಪ್ರದೀಪದ ಪ್ರಭೆಯಂತೆ ಆಗಬಹುದಲ್ಲ !– ಎಂದರೆ ಹಾಗಲ್ಲ. ಏಕೆಂದರೆ ಅದನ್ನು ದ್ರವ್ಯವೆಂದೇ ಒಪ್ಪಿರುತ್ತೇವೆ. ಅವಯವಗಳು ದಟ್ಟವಾಗಿರುವ ತೇಜೋದ್ರವ್ಯವು ಪ್ರದೀಪ (ವೆನಿಸುವದು); ಅವಯವಗಳು ಬಹುವಿರಳವಾಗಿದ್ದರೆ (ಆ) ತೇಜೋದ್ರವ್ಯವೇ ಪ್ರಭೆ. ಅಲ್ಲವೆ ?– ಎಂದರೆ

ಇದಕ್ಕೆ (ಪೂರ್ವಪಕ್ಷಿ) ಉತ್ತರವನ್ನು ಹೇಳುತ್ತಾನೆ: (ವ್ಯತಿರೇಕೋ ಗನ್ಧವತ್ ।) ಹೇಗೆ ಗಂಧವು ಗುಣವೇ ಆಗಿದ್ದರೂ (ಅದಕ್ಕೆ) ಗಂಧವುಳ್ಳ ದ್ರವ್ಯವನ್ನು ಬಿಟ್ಟು ಇರುವಿಕೆಯು ಇರಬಹುದೋ – ಹೂವು ಮುಂತಾದ ಗಂಧವುಳ್ಳ (ವಸ್ತುಗಳು) ಹತ್ತಿರಕ್ಕೆ ಜಾರದೆ ಇದ್ದರೂ ಹೂವಿನ ವಾಸನೆಯ ಅರಿವು ಆಗುವದರಿಂದ ಹೀಗೆಂದು ನಿಶ್ಚಯಿಸಬಹುದೋ– ಹೀಗೆಯೇ ಜೀವನು ಅಣುವಾಗಿದ್ದರೂ ಚೈತನ್ಯವೆಂಬ ಗುಣವು (ಅವನನ್ನು) ಬಿಟ್ಟು ಇರಬಹುದು. ಆದ್ದರಿಂದಲೇ ರೂಪಾದಿಗಳಂತೆ ಗುಣವಾಗಿರುವದರಿಂದ (ಚೈತನ್ಯವು ತನ್ನ) ಆಶ್ರಯವನ್ನು ಬಿಟ್ಟು ಅಗಲಲಾರದು– ಎಂಬೀ (ಅನುಮಾನವು) ಅನೈಕಾಂತಿಕವಾಗಿರುತ್ತದೆ. ಏಕೆಂದರೆ ಗುಣವೇ ಆಗಿದ್ದರೂ ಗಂಧವು (ತನ್ನ) ಆಶ್ರಯವನ್ನು ಬಿಟ್ಟಗಲಿರುವದು ಕಂಡುಬರುತ್ತದೆ.

(ಆಕ್ಷೇಪ) :— ಗಂಧವೂ (ತನ್ನ) ಆಶ್ರಯದೊಡನೆಯೇ (ಹೊರಗೆ) ಹೋಗುತ್ತದೆ ಎಂದರೊ ?

---

1. ಇಲ್ಲಿ 'ಚೇತ್' ಎಂಬ ಮಾತು ಇಲ್ಲದಿದ್ದರೂ ಆಗಿತ್ತೆಂದು ತೋರುತ್ತದೆ.

(ಪರಿಹಾರ) :— ಹಾಗಲ್ಲ. ಏಕೆಂದರೆ ಯಾವ ಮೂಲದ್ರವ್ಯವನ್ನು ಬಿಟ್ಟು (ಅದು) ಅಗಲುವದೋ ಅದು ಸವೆದುಹೋಗಬೇಕಾಗುವದು. ಆದರೆ ಅದು ಕ್ಷಯವಾಗದೆ ಇರುವದೆಂಬುದೂ ಹಿಂದಿನ ಅವಸ್ಥೆಯಲ್ಲಿಯೇ ಇರುವದರಿಂದ ಗೊತ್ತಾಗುತ್ತದೆ ; (ಏಕೆಂದರೆ) ಹಾಗಿಲ್ಲದಿದ್ದರೆ ಹಿಂದಿನ ಅವಸ್ಥೆಯಲ್ಲಿದ್ದ ಗುರುತ್ವವೇ ಮುಂತಾದವುಗಳು ಅದಕ್ಕೆ ಇಲ್ಲವಾಗಬೇಕಾಗುವದು.

(ಆಕ್ಷೇಪಕನ ಮತವು) ಹೀಗಿರಬಹುದು. ಗಂಧಕ್ಕೆ ಆಶ್ರಯವಾದದ್ದು ಹೊರಕ್ಕೆ ಬಂದಿರುವ ಅವಯವಗಳು ಅತ್ಯಲ್ಪವಾಗಿರುವದರಿಂದ (ದ್ರವ್ಯದಲ್ಲಿ) ವಿಶೇಷವಾಗಿದ್ದರೂ ಕಂಡೂಬರುವದಿಲ್ಲ ಏಕೆಂದರೆ ಸೂಕ್ಷ್ಮವಾದ ಗಂಧ ಪರಮಾಣುಗಳು ಎಲ್ಲಾ ಕಡೆಯಲ್ಲಿಯೂ ಹರಡಿಕೊಂಡಿರುವದರಿಂದ ಮೂಗಿನ ಸೊಳ್ಳೆಯನ್ನು ಹೊಕ್ಕು ಗಂಧವೆಂಬ ಬುದ್ಧಿಯನ್ನುಂಟುಮಾಡುತ್ತವೆ.

(ಪರಿಹಾರ):— ಹಾಗಲ್ಲ. ಏಕೆಂದರೆ ಪರಮಾಣುಗಳು ಅತೀಂದ್ರಿಯವಾಗಿರುತ್ತವೆ ; ನಾಗಕೇಸರವೇ ಮುಂತಾದ (ಹೂಗಳ)ಲ್ಲಿ ಸ್ಫುಟವಾದ ಗಂಧವೇ ಕಾಣಬರುತ್ತದೆ. ಲೋಕದಲ್ಲಿ 'ವಾಸನೆಯುಳ್ಳ ದ್ರವ್ಯವನ್ನು ಮೂಸಿದೆನು' ಎಂಬ ಪ್ರತೀತಿಯು ಆಗುವದೂ ಇಲ್ಲ ; 'ಗಂಧವನ್ನು ಮೂಸಿದೆನು' ಎಂದೇ ಜನರು ತಿಳಿಯುತ್ತಾರೆ.

(ಆಕ್ಷೇಪ) :— ರೂಪಾದಿ(ಗುಣಗಳು ತಮ್ಮ) ಆಶ್ರಯವನ್ನು ಬಿಟ್ಟು ಕಾಣದೆ ಇರುವದರಿಂದ ಗಂಧವೂ (ತನ್ನ) ಆಶ್ರಯವನ್ನು ಬಿಟ್ಟಿರುತ್ತದೆ ಎಂಬುದು ಯುಕ್ತವಾಗುವದಿಲ್ಲವಲ್ಲ !

(ಪರಿಹಾರ) :— ಹಾಗಲ್ಲ. ಏಕೆಂದರೆ (ಗಂಧವು ಬೇರೆಯಿರುವದು) ಪ್ರತ್ಯಕ್ಷವಾಗಿರುವದರಿಂದ (ಈ) ಅನುಮಾನವು (ಇಲ್ಲಿ) ಕೆಲಸಮಾಡಲಾರದು. ಆದ್ದರಿಂದ ಯಾವದು ಹೇಗೆ ಲೋಕದಲ್ಲಿ ಕಂಡುಬಂದಿರುತ್ತದೆಯೋ ಅದನ್ನು ಹಾಗೆಯೇ ಪರೀಕ್ಷಕರು ಒಪ್ಪಬೇಕು. ರಸವೆಂಬ ಗುಣವು ನಾಲಗೆಗೆ ತಿಳಿದುಬರುತ್ತದೆ ಎಂಬ ಕಾರಣದಿಂದ ರೂಪಾದಿಗುಣಗಳೂ ನಾಲಗೆಗೇ ತಿಳಿಯಬರಬೇಕೆಂದು ನಿಯಮಿಸುವದಕ್ಕೆ ಆಗಲಾರದಷ್ಟೆ.

**ತಥಾ ಚ ದರ್ಶಯತಿ ॥ ೨೭ ॥**

೨೭. ಹಾಗೆಂದೇ ಶಾಸ್ತ್ರವು ತಿಳಿಸುತ್ತಿದೆ.

## ಪೂರ್ವಪಕ್ಷ:

## ಚೈತನ್ಯಗುಣವು ಶರೀರವ್ಯಾಪಕವೆಂಬುದಕ್ಕೆ ಶ್ರುತಿ

(ಭಾಷ್ಯ)

೧೩೪. ಹೃದಯಾಯತನತ್ವಮ್ ಅಣುಪರಿಮಾಣತ್ವಂ ಚ ಆತ್ಮನಃ ಅಭಿಧಾಯ ತಸ್ಯೈವ "ಆಲೋಮಭ್ಯ ಆನಖಾಗ್ರೇಭ್ಯಃ" (ಛಾಂ. ೮-೮-೧) ಇತಿ ಚೈತನ್ಯೇನ ಗುಣೇನ ಸಮಸ್ತಶರೀರವ್ಯಾಪಿತ್ವಂ ದರ್ಶಯತಿ ॥

(ಭಾಷ್ಯಾರ್ಥ)

ಆತ್ಮನು ಹೃದಯವೆಂಬ ಆಶ್ರಯದಲ್ಲಿರುವನೆಂದೂ ಅಣುಪರಿಮಾಣ ನೆಂದೂ ಹೇಳಿ ಅವನಿಗೇ "ಕೂದಲೆಳೆಗಳವರೆಗೂ ಉಗುರುತುದಿಗಳವರೆಗೂ" (ಛಾಂ ೮-೮-೧) ಎಂದು (ಶ್ರುತಿಯು) ಚೈತನ್ಯವೆಂಬ ಗುಣದಿಂದ ಸರ್ವಶರೀರ ವ್ಯಾಪಿತ್ವವನ್ನು ತಿಳಿಸುತ್ತಿದೆ.

**ಪೃಥಗುಪದೇಶಾತ್ ॥ ೨೮ ॥**

೨೮. ಬೇರೆಯಾಗಿ ಉಪದೇಶಮಾಡಿರುವದರಿಂದಲೂ (ಹೀಗೆ).

## ಪೂರ್ವಪಕ್ಷ: ಆತ್ಮನನ್ನೂ ಚೈತನ್ಯವನ್ನೂ ಶ್ರುತಿಯಲ್ಲಿ ಬೇರೆಬೇರೆ ಹೇಳಿದೆ

(ಭಾಷ್ಯ)

೧೩೫. "ಪ್ರಜ್ಞಯಾ ಶರೀರಂ ಸಮಾರುಹ್ಯ" (ಕೌ. ೩-೬) ಇತಿ ಚ ಆತ್ಮಪ್ರಜ್ಞಯೋಃ ಕರ್ತೃಕರಣಭಾವೇನ ಪೃಥಗುಪದೇಶಾತ್ ಚೈತನ್ಯಗುಣೇ ನೈವ ಅಸ್ಯ ಶರೀರವ್ಯಾಪಿತಾ ಗಮ್ಯತೇ । "ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ" (ಬೃ. ೨-೧-೧೭) ಇತಿ ಚ ಕರ್ತುಃ ಶಾರೀರಾತ್ ಪೃಥಕ್ ವಿಜ್ಞಾನಸ್ಯ ಉಪದೇಶಃ ಏತಮೇವ ಅಭಿಪ್ರಾಯಮ್ ಉಪೋದ್ಬಲಯತಿ । ತಸ್ಮಾತ್ ಅಣುರಾತ್ಮಾ ಇತಿ ॥

(ಭಾಷ್ಯಾರ್ಥ)

"ಪ್ರಜ್ಞೆಯಿಂದ ಶರೀರವನ್ನು ಏರಿ'' (ಕೌ.೩-೬) ಎಂದು ಆತ್ಮ, ಪ್ರಜ್ಞೆ- ಇವುಗಳಿಗೆ ಕರ್ತೃಕರಣಭಾವದಿಂದ ಬೇರೆಬೇರೆಯಾಗಿ ಉಪದೇಶಮಾಡಿರುವದರಿಂದಲೂ ಚೈತನ್ಯಗುಣದಿಂದಲೇ ಇವನು ಶರೀರವನ್ನು ವ್ಯಾಪಿಸಿಕೊಂಡಿರುತ್ತಾನೆಂದು ನಿರ್ಣಯವಾಗುತ್ತದೆ. "ಆಗ ಈ ಪ್ರಾಣಗಳ ವಿಜ್ಞಾನವನ್ನು ವಿಜ್ಞಾನದಿಂದ ತೆಗೆದುಕೊಂಡು" (ಬೃ. ೨-೧-೧೭) ಎಂದೂ ಕರ್ತೃವಾದ ಶಾರೀರನಿಗಿಂತ ಬೇರೆಯಾಗಿ ವಿಜ್ಞಾನವನ್ನು ಉಪದೇಶಿಸಿರುವದೂ ಈ ಅಭಿಪ್ರಾಯಕ್ಕೆ ಬೆಂಬಲವನ್ನು ಕೊಡುತ್ತದೆ. ಆದ್ದರಿಂದ ಆತ್ಮನು ಅಣು.

## ಜೀವವಿಭುತ್ವಕ್ಕೆ ಸಿದ್ಧಾಂತಸೂತ್ರಗಳು

**ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ ॥ ೨೯ ॥**

೨೯. ಆದರೆ ತದ್ಗುಣಸಾರನಾಗಿರುವದರಿಂದ ಆ ವ್ಯಪದೇಶವಾಗಿರುತ್ತದೆ. ಪ್ರಾಜ್ಞನಂತೆಯೇ (ಇದು).

# ಜೀವನು ವಿಭುವೇ

(ಭಾಷ್ಯ)

೧೩೬. ಏವಂ ಪ್ರಾಪ್ತೇ ಬ್ರೂಮಃ— ('ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್') । ತುಶಬ್ದಃ ಪಕ್ಷಂ ವ್ಯಾವರ್ತಯತಿ । ನೈತದಸ್ತಿ ಅಣುರಾತ್ಮಾ ಇತಿ। ಉತ್ಪತ್ತ್ಯಶ್ರವಣಾದ್ ಹಿ ಪರಸ್ಯೈವ ತು ಬ್ರಹ್ಮಣಃ ಪ್ರವೇಶಶ್ರವಣಾತ್ ತಾದಾತ್ಮ್ಯೋಪದೇಶಾಚ್ಚ ಪರಮೇವ ಬ್ರಹ್ಮ ಜೀವಃ ಇತ್ಯುಕ್ತಮ್ । ಪರಮೇವ ಚೇತ್ ಬ್ರಹ್ಮ ಜೀವಃ ತಸ್ಮಾತ್ ಯಾವತ್ ಪರಂ ಬ್ರಹ್ಮ ತಾವಾನೇವ ಜೀವೋ ಭವಿತುಮರ್ಹತಿ । ಪರಸ್ಯ ಚ ಬ್ರಹ್ಮಣಃ ವಿಭುತ್ವಮ್ ಆಮ್ನಾತಮ್ । ತಸ್ಮಾತ್ ವಿಭುರ್ಜೀವಃ । ತಥಾ ಚ "ಸವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು" (ಬೃ. ೪-೪-೨೨) ಇತ್ಯೇವಂಜಾತೀಯಕಾಃ ಜೀವವಿಷಯಾಃ ವಿಭುತ್ವವಾದಾಃ ಶ್ರೌತಾಃ ಸ್ಮಾರ್ತಾಶ್ಚ ಸಮರ್ಥಿತಾ ಭವನ್ತಿ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ : (ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್) । (ಇಲ್ಲಿರುವ) ತುಶಬ್ದವು (ಪೂರ್ವ)ಪಕ್ಷವನ್ನು ಅಲ್ಲಗಳೆಯುತ್ತದೆ ಆತ್ಮನು ಅಣು ಎಂಬಿದಿಲ್ಲ. ಹೇಗೆಂದರೆ ಉತ್ಪತ್ತಿಯನ್ನು ಶ್ರುತಿಯಲ್ಲಿ ಹೇಳದೆ ಇರುವದರಿಂದಲೂ ಪರಬ್ರಹ್ಮವೇ (ಸೃಷ್ಟಿಯೊಳಗೆ) ಪ್ರವೇಶಿಸಿರುವದೆಂದು ಶ್ರುತಿಯಲ್ಲಿರುವದರಿಂದಲೂ (ಅದರಲ್ಲಿ) ತಾದಾತ್ಮ್ಯವನ್ನು ಉಪದೇಶಿಸಿರುವದರಿಂದಲೂ ಜೀವನು ಪರಬ್ರಹ್ಮವೇ ಎಂದೂ ಹೇಳಿದ್ದಾಗಿದೆ[1]. ಜೀವನು ಪರಬ್ರಹ್ಮವೇ ಆದರೆ, ಅದರಿಂದ ಪರಬ್ರಹ್ಮವು ಎಷ್ಟು (ಪರಿಮಾಣ)ವುಳ್ಳದ್ದೋ ಜೀವನೂ ಅಷ್ಟೇ (ಪರಿಮಾಣದವ)ನಾಗಿರಬೇಕು. ಪರಬ್ರಹ್ಮವು ವಿಭುವೆಂದು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ಜೀವನು ವಿಭುವೇ. ಹೀಗಾದರೆ "ಪ್ರಾಣಗಳಲ್ಲಿ ಈ ವಿಜ್ಞಾನಮಯನಿದಾನಲ್ಲ, ಆ ಇವನೇ ಮಹಾನ್ ಅಜನಾದ ಆತ್ಮನು" (ಬೃ. ೪-೪-೨೨) ಎಂಬೀ ಜಾತಿಯ ಜೀವವಿಷಯಕವಾದ ವಿಭುತ್ವವನ್ನು (ತಿಳಿಸುವ) ಶ್ರೌತವಾದಗಳನ್ನೂ ಸ್ಮಾರ್ತವಾದಗಳನ್ನೂ ಸಮರ್ಥನೆಮಾಡಿದಂತೆ ಆಗುತ್ತದೆ.

---

1. ೨-೩-೧೭ರ ಭಾಷ್ಯ (ಭಾ. ಭಾ. ೧೨೧) ವನ್ನು ನೋಡಿ.

## ಪೂರ್ವಪಕ್ಷಯುಕ್ತಿಗಳ ಖಂಡನೆ

(ಭಾಷ್ಯ)

೧೩೭. ನ ಚ ಅಣೋಃ ಜೀವಸ್ಯ ಸಕಲಶರೀರಗತಾ ವೇದನಾ ಉಪಪದ್ಯತೇ । ತ್ವಕ್ಸಂಬನ್ಧಾತ್ ಸ್ಯಾತ್ ಇತಿ ಚೇತ್ । ನ । ಕಣ್ಟಕತೋದನೇಽಪಿ ಸಕಲಶರೀರಗತೈವ ವೇದನಾ ಪ್ರಸಜ್ಯೇತ । ತ್ವಕ್ಕಣ್ಟಕಯೋರ್ಹಿ ಸಂಯೋಗಃ ಕೃತ್ಸ್ನಾಯಾಂ ತ್ವಚಿ ವರ್ತತೇ ತ್ವಕ್ಚ ಕೃತ್ಸ್ನಶರೀರವ್ಯಾಪಿನೀ ಇತಿ । ಪಾದತಲ ಏವ ತು ಕಣ್ಟಕನುನ್ನೋ ವೇದನಾಂ ಪ್ರತಿಲಭತೇ । ನ ಚ ಅಣೋಃ ಗುಣವ್ಯಾಪ್ತಿಃ ಉಪಪದ್ಯತೇ । ಗುಣಸ್ಯ ಗುಣಿದೇಶತ್ವಾತ್ । ಗುಣತ್ವಮೇವ ಹಿ ಗುಣಮ್ ಅನಾಶ್ರಿತ್ಯ ಗುಣಸ್ಯ ಹೀಯೇತ । ಪ್ರದೀಪಪ್ರಭಾಯಾಶ್ಚ ದ್ರವ್ಯಾನ್ತರತ್ವಂ ವ್ಯಾಖ್ಯಾತಮ್ । ಗನ್ಧೋಽಪಿ ಗುಣತ್ವಾಭ್ಯುಪಗಮಾತ್ ಸಾಶ್ರಯ ಏವ ಸಂಚರಿತುಮರ್ಹತಿ । ಅನ್ಯಥಾ ಗುಣತ್ವಹಾನಿಪ್ರಸಙ್ಗಾತ್ । ತಥಾ ಚೋಕ್ತಂ ದ್ವೈಪಾಯನೇನ– "ಉಪಲಭ್ಯಾಪ್ಸು ಚೇದ್ಗನ್ಧಂ ಕೇಚಿದ್ಬ್ರೂಯುರನೈಪುಣಾಃ । ಪೃಥಿವ್ಯಾಮೇವ ತಂ ವಿದ್ಯಾದಪೋ ವಾಯುಂ ಚ ಸಂಶ್ರಿತಮ್ ॥" (ಮೋ. ಧ. ೨೩೩–೯)[1] ಇತಿ । ಯದಿ ಚ ಚೈತನ್ಯಂ ಜೀವಸ್ಯ ಸಮಸ್ತಂ ಶರೀರಂ ವ್ಯಾಪ್ನುಯಾತ್, ನಾಣುರ್ಜೀವಃ ಸ್ಯಾತ್, ಚೈತನ್ಯಮೇವ ಹಿ ಅಸ್ಯ ಸ್ವರೂಪಮ್ ಅಗ್ನೇರಿವ ಔಷ್ಣ್ಯಪ್ರಕಾಶೌ । ನಾತ್ರ ಗುಣಗುಣಿವಿಭಾಗೋ ವಿದ್ಯತ ಇತಿ । ಶರೀರಪರಿಮಾಣತ್ವಂ ಚ ಪ್ರತ್ಯಾಖ್ಯಾತಮ್ । ಪರಿಶೇಷಾದ್ ವಿಭುರ್ಜೀವಃ ॥

(ಭಾಷ್ಯಾರ್ಥ)

ಅಣುವಾದ ಜೀವನಿಗೆ ಸಕಲಶರೀರಗತವಾದ ವೇದನೆಯಾಗುವದೂ ಹೊಂದುವದಿಲ್ಲ. ತ್ವಕ್ಸಂಬಂಧದಿಂದ ಆಗಬಹುದಲ್ಲ! (ಭಾ. ಭಾ. ೧೩೦) ಎಂದರೆ ಹಾಗಲ್ಲ. ಏಕೆಂದರೆ (ಆಗ) ಮುಳ್ಳು ಚುಚ್ಚುವದರಿಂದಲೂ ಸಕಲ ಶರೀರದಲ್ಲಿಯೂ ವೇದನೆಯುಂಟಾಗಬೇಕಾಗುವದು. ಏಕೆಂದರೆ ತ್ವಕ್ಕಂಟಕ ಸಂಯೋಗವು ತ್ವಕ್ಕಿನಲ್ಲೆಲ್ಲ ಇರುತ್ತದೆ; (ಆ) ತ್ವಕ್ಕು ಇಡಿಯ ಶರೀರದಲ್ಲಿರುತ್ತದೆ. ಆದರೆ ಮುಳ್ಳುತುಳಿದವನು ಅಂಗಾಲಿನಲ್ಲಿಯೇ ವೇದನೆಯನ್ನು ಅನುಭವಿಸುತ್ತಾನೆ. ಅಣುವಾದ (ಜೀವನ) ಗುಣವು (ಶರೀರವನ್ನೆಲ್ಲ) ವ್ಯಾಪಿಸಿಕೊಂಡಿದೆ ಎಂಬುದೂ (ಭಾ. ಭಾ. ೧೩೨) ಸರಿಯಲ್ಲ; ಏಕೆಂದರೆ ಗುಣವು ಗುಣಿಯಿದ್ದೆಡೆಯಲ್ಲಿರಬೇಕು. ಗುಣವು ಗುಣಿಯನ್ನಾಶ್ರಯಿಸದೆ ಇದ್ದರೆ ಗುಣತ್ವವೇ ಇಲ್ಲವಾಗಿಬಿಟ್ಟೀತು ! ಅಲ್ಲವೆ? ಪ್ರದೀಪದ ಪ್ರಭೆಯೋ ಎಂದರೆ

1. ಅಚ್ಚಿನ ಪುಸ್ತಕದಲ್ಲಿ 'ಅನೈಪುಣಾತ್', 'ಅಪಾಂ ವಾಯೋಶ್ಚ ಸಂಶ್ರಿತಮ್' ಎಂಬ ಪಾಠವಿದೆ.

(ಅದು) ಮತ್ತೊಂದು ದ್ರವ್ಯವೇ ಎಂದು (ಭಾ. ಭಾ. ೧೩೩) ಹೇಳಿದ್ದಾಗಿದೆ. ಗಂಧವು ಕೂಡ ಗುಣವೆಂದು ಒಪ್ಪಿರುವದರಿಂದ ಸಾಶ್ರಯವಾಗಿಯೇ ಸಂಚರಿಸುತ್ತಿದೆ ಎನ್ನಬೇಕು. ಹೀಗಿಲ್ಲದಿದ್ದರೆ (ಅದಕ್ಕೆ) ಗುಣತ್ವವೇ ತಪ್ಪಿಹೋಗುವ ಪ್ರಸಕ್ತಿಯಿದೆ. ಆದ್ದರಿಂದಲೇ **ದ್ವೈಪಾಯನರು** "ಅಪ್ಪಿನಲ್ಲಿ ಗಂಧವನ್ನು ಕಂಡು ವಿವೇಕಿಗಳಲ್ಲದವರು (ಯಾರಾದರೂ ಅದು) ಅಪ್ಪಿನದೇ (ಎಂದು) ಹೇಳಿದರೆ ಅಪ್ಪನ್ನೂ ವಾಯುವನ್ನೂ ಆಶ್ರಯಿಸಿರುವ ಅದು ಪೃಥಿವಿಯಲ್ಲಿಯೇ (ಇರತಕ್ಕದ್ದೆಂದು) ತಿಳಿಯಬೇಕು" (ಮೋ. ಧ. ೨೩೩-೯) ಎಂದು ಹೇಳಿರುತ್ತಾರೆ[1]. ಮತ್ತು ಜೀವನ ಚೈತನ್ಯವು ಸಮಸ್ತಶರೀರವನ್ನೂ ವ್ಯಾಪಿಸಿಕೊಂಡಿದೆ ಎನ್ನುವದಾದರೆ ಜೀವನು ಅಣುವಲ್ಲವೆಂದಾಗುವದು. ಏಕೆಂದರೆ ಬೆಂಕಿಗೆ ಬಿಸಿಬೆಳಕುಗಳಂತೆ ಚೈತನ್ಯವೇ ಅಲ್ಲವೆ, ಇವನ ಸ್ವರೂಪವಾಗಿರುತ್ತದೆ? ಇಲ್ಲಿ ಗುಣಗುಣಿಗಳೆಂಬ ವಿಂಗಡವು ಇರುವದಿಲ್ಲ. (ಜೀವನು) ಶರೀರಪ್ರಮಾಣನೆಂಬುದನ್ನು (ಹಿಂದೆಯೇ)[2] ತಿರಸ್ಕರಿಸಿದೆ. ಪರಿಶೇಷದಿಂದ ಜೀವನು ವಿಭು (ವೆಂದು ಸಿದ್ಧವಾಗುತ್ತದೆ)[3].

## ಅಣುತ್ವಾದಿಶ್ರುತಿಗಳಿಗೆ ಗತಿ

(ಭಾಷ್ಯ)

೧೩೮. ಕಥಂ ತರ್ಹಿ ಅಣುತ್ವಾದಿವ್ಯಪದೇಶಃ ಇತಿ ? ಅತ ಆಹ 'ತದ್ಗುಣಸಾರತ್ವಾತ್ ತು ತದ್ವ್ಯಪದೇಶಃ' ಇತಿ । ತಸ್ಯಾಃ ಬುದ್ಧೇಃ ಗುಣಾಃ ತದ್ಗುಣಾಃ ಇಚ್ಛಾ ದ್ವೇಷಃ ಸುಖಂ ದುಃಖಮ್ ಇತ್ಯೇವಮಾದಯಃ ಸಾರಃ ಪ್ರಧಾನಂ ಯಸ್ಯ ಆತ್ಮನಃ ಸಂಸಾರಿತ್ವೇ ಸಂಭವತಿ ಸ ತದ್ಗುಣಸಾರಃ । ತಸ್ಯ ಭಾವಃ ತದ್ಗುಣಸಾರತ್ವಮ್ । ನ ಹಿ ಬುದ್ಧೇಃ ಗುಣೈರ್ವಿನಾ ಕೇವಲಸ್ಯ ಆತ್ಮನಃ ಸಂಸಾರಿತ್ವಮಸ್ತಿ । ಬುದ್ಧ್ಯುಪಾಧಿಧರ್ಮಾಧ್ಯಾಸನಿಮಿತ್ತಂ ಹಿ ಕರ್ತೃತ್ವಭೋಕ್ತೃತ್ವಾದಿಲಕ್ಷಣಂ ಸಂಸಾರಿತ್ವಮ್ ಅಕರ್ತುಃ ಅಭೋಕ್ತುಶ್ಚ ಅಸಂಸಾ

---

1. ಇದು ೨೬ನೆಯ ಸೂತ್ರದ ಪೂರ್ವಪಕ್ಷಕ್ಕೇ ಪ್ರತ್ಯುತ್ತರವು. ಪೃಥಿವಿಯಲ್ಲಿ ಗಂಧವತ್ತ್ವವೆಂಬ ಗುಣವಿದೆ ಎಂದು ಇಲ್ಲಿ ಒಪ್ಪಿ ಹೀಗೆಂದು ಹೇಳಿದೆ. ಆದರೆ ಬೃ. ಭಾ. ೪-೩-೨೪ರಿಂದ ೩೦ರಲ್ಲಿ ಪೃಥಿವೀಪರಮಾಣುವು ಗಂಧರೂಪವೇ, ಅದಕ್ಕೆ ಗಂಧವತ್ತ್ವವೆಂಬ ಧರ್ಮವು ಮತ್ತೊಂದಿಲ್ಲ- ಎಂದು ಹೇಳಿದೆ. ಆ ದೃಷ್ಟಿಯಲ್ಲಿ ಪೃಥಿವ್ಯಾದಿಗಳಲ್ಲಿಯೂ ಪರಮಾರ್ಥವಾಗಿ ಗುಣಗುಣಿಭೇದವಿರುವದಿಲ್ಲ.

2. ಆರ್ಹತಪರೀಕ್ಷೆಯಲ್ಲಿ ; ೬೯ನೆಯ ಭಾ. ಭಾ. ವನ್ನು ನೋಡಿ.

3. ಅಣುವಲ್ಲ, ಮಧ್ಯಮಪರಿಮಾಣನಲ್ಲ : ಆದ್ದರಿಂದ ವಿಭುವಾಗಿಯೇ ಇರಬೇಕು- ಎಂಬುದು ಪರಿಶೇಷಾನುಮಾನ.

ರಿಣಃ ನಿತ್ಯಮುಕ್ತಸ್ಯ ಸತಃ ಆತ್ಮನಃ । ತಸ್ಮಾತ್ ತದ್ಗುಣಸಾರತ್ವಾತ್ ಬುದ್ಧಿಪರಿಮಾಣೇನ ಅಸ್ಯ ಪರಿಮಾಣವ್ಯಪದೇಶಃ । ತದುತ್ಕ್ರಾನ್ತ್ಯಾದಿಭಿಶ್ಚ ಅಸ್ಯ ಉತ್ಕ್ರಾನ್ತ್ಯಾದಿವ್ಯಪದೇಶೋ ನ ಸ್ವತಃ । ತಥಾ ಚ "ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಭಾಗೋ ಜೀವಃ ಸ ವಿಜ್ಞೇಯಃ ಸ ಚಾನನ್ತ್ಯಾಯ ಕಲ್ಪತೇ" (ಶ್ವೇ. ೫-೯) ಇತಿ ಅಣುತ್ವಂ ಜೀವಸ್ಯ ಉಕ್ತ್ವಾ ತಸ್ಯೈವ ಪುನಃ ಆನನ್ತ್ಯಮ್ ಆಹ । ತಚ್ಚ ಏವಮೇವ ಸಮಞ್ಜಸಂ ಸ್ಯಾತ್ ಯದಿ ಔಪಚಾರಿಕಮ್ ಅಣುತ್ವಂ ಜೀವಸ್ಯ ಭವೇತ್, ಪಾರಮಾರ್ಥಿಕಂ ಚ ಆನನ್ತ್ಯಮ್ । ನ ಹಿ ಉಭಯಂ ಮುಖ್ಯಮ್ ಅವಕಲ್ಪೇತ । ನ ಚ ಆನನ್ತ್ಯಮ್ ಔಪಚಾರಿಕಮ್ ಇತಿ ಶಕ್ಯಂ ವಿಜ್ಞಾತುಮ್, ಸರ್ವೋಪನಿಷತ್ಸು ಬ್ರಹ್ಮಾತ್ಮಭಾವಸ್ಯ ಪ್ರತಿಪಿಪಾದಯಿಷಿತತ್ವಾತ್ । ತಥಾ ಇತರಸ್ಮಿನ್ನಪಿ ಉನ್ಮಾನೇ "ಬುದ್ಧೇರ್ಗುಣೇನಾತ್ಮಗುಣೇನ ಚೈವ ಆರಾಗ್ರಮಾತ್ರೋ ಹ್ಯವರೋಽಪಿ ದೃಷ್ಟಃ" (ಶ್ವೇ. ೬-೮) ಇತಿ ಚ ಬುದ್ಧಿಗುಣಸಂಬನ್ಧೇನೈವ ಆರಾಗ್ರಮಾತ್ರತಾಂ ಶಾಸ್ತಿ ನ ಸ್ವೇನೈವ ಆತ್ಮನಾ । "ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ" (ಮುಂ. ೩-೧-೯) ಇತ್ಯತ್ರಾಪಿ ನ ಜೀವಸ್ಯ ಅಣುಪರಿಮಾಣತ್ವಂ ಶಿಷ್ಯತೇ । ಪರಸ್ಯೈವಾತ್ಮನಃ ಚಕ್ಷುರಾದ್ಯನವಗಾಹ್ಯತ್ವೇನ ಜ್ಞಾನಪ್ರಸಾದಗಮ್ಯತ್ವೇನ ಚ ಪ್ರವೃತ್ತತ್ವಾತ್ । ಜೀವಸ್ಯಾಪಿ ಚ ಮುಖ್ಯಾಣುಪರಿಮಾಣತ್ವಾನುಪಪತ್ತೇಃ । ತಸ್ಮಾತ್ ದುರ್ಜ್ಞಾನತ್ವಾಭಿಪ್ರಾಯಮಿದಮ್ ಅಣುತ್ವವಚನಮ್ ಉಪಾಧ್ಯಭಿಪ್ರಾಯಂ ವಾ ದ್ರಷ್ಟವ್ಯಮ್ । ತಥಾ "ಪ್ರಜ್ಞಯಾ ಶರೀರಂ ಸಮಾರುಹ್ಯ" (ಕೌ. ೩-೬) ಇತ್ಯೇವಂಜಾತೀಯಕೇಷ್ವಪಿ ಭೇದೋಪದೇಶೇಷು ಬುದ್ಧ್ಯೈವ ಉಪಾಧಿಭೂತಯಾ ಜೀವಃ ಶರೀರಂ ಸಮಾರುಹ್ಯ, ಇತ್ಯೇವಂ ಯೋಜಯಿತವ್ಯಮ್ । ವ್ಯಪದೇಶಮಾತ್ರಂ ವಾ 'ಶಿಲಾಪುತ್ರಕಸ್ಯ ಶರೀರಮ್' ಇತ್ಯಾದಿವತ್ । ನ ಹಿ ಅತ್ರ ಗುಣಗುಣಿವಿಭಾಗೋಽಪಿ ವಿದ್ಯತೇ ಇತ್ಯುಕ್ತಮ್ । ಹೃದಯಾಯತನತ್ವವಚನಮಪಿ ಬುದ್ಧೇರೇವ ತದಾಯತನತ್ವಾತ್ । ತಥಾ ಉತ್ಕ್ರಾನ್ತ್ಯಾದೀನಾಮಪಿ ಉಪಾಧ್ಯಾಯತ್ತತಾಂ ದರ್ಶಯತಿ "ಕಸ್ಮಿನ್ನ್ವಹಮುತ್ಕ್ರಾನ್ತ ಉತ್ಕ್ರಾನ್ತೋ ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ । ಸ ಪ್ರಾಣಮಸೃಜತ ।" (ಪ್ರ. ೬-೩-೪) ಇತಿ । ಉತ್ಕ್ರಾನ್ತ್ಯಭಾವೇ ಹಿ ಗತ್ಯಾಗತ್ಯೋರಪಿ ಅಭಾವೋ ವಿಜ್ಞಾಯತೇ । ನ ಹಿ ಅನಪಸೃಪ್ತಸ್ಯ ದೇಹಾತ್ ಗತ್ಯಾಗತೀ ಸ್ಯಾತಾಮ್ ॥

(ಭಾಷ್ಯಾರ್ಥ)

(ಪ್ರಶ್ನೆ) :- ಹಾಗಾದರೆ (ಶ್ರುತಿಯಲ್ಲಿ ಜೀವನಿಗೆ) ಅಣುತ್ವಾದಿಗಳನ್ನು ಹೇಳಿದೆಯಲ್ಲ, ಅದು ಹೇಗೆ ?

(ಉತ್ತರ) :– (ಇದಕ್ಕೆ ಸೂತ್ರಕಾರರು) ಹೇಳುತ್ತಾರೆ : (ತದ್ಗುಣಸಾರತ್ವಾತ್ತು ತದ್ವ್ಯಪದೇಶಃ) । ತದ್ಗುಣಗಳು ಎಂದರೆ ಆ ಬುದ್ಧಿಯ[1] ಗುಣಗಳು ; ಯಾವ ಆತ್ಮನು ಸಂಸಾರಿಯಾಗಿರುವದಕ್ಕೆ ಇಚ್ಛೆ, ದ್ವೇಷ, ಸುಖ, ದುಃಖ– ಮುಂತಾದ[2] (ತದ್ಗುಣಗಳು) ಸಾರವು, ಎಂದರೆ ಪ್ರಧಾನವಾಗಿರುವವೋ, ಅವನು ತದ್ಗುಣಸಾರನು ; ಅವನ ಭಾವವು ತದ್ಗುಣಸಾರತ್ವವು. ಬುದ್ಧಿಯ ಗುಣಗಳಿಲ್ಲದೆ ಬರಿಯ ಆತ್ಮನಿಗೆ ಸಂಸಾರಿತ್ವವಿಲ್ಲವಷ್ಟೆ. **ಬುದ್ಧಿ ಎಂಬ ಉಪಾಧಿಯ ಧರ್ಮಗಳನ್ನು ಅಧ್ಯಾಸಮಾಡುವದರಿಂದಲೇ ಅಲ್ಲವೆ, ಅಕರ್ತೃವೂ ಅಭೋಕ್ತೃವೂ ಅಸಂಸಾರಿಯೂ ನಿತ್ಯಮುಕ್ತನೂ ಆಗಿರುವ ಆತ್ಮನಿಗೆ ಕರ್ತೃಭೋಕ್ತೃತ್ವಾದಿರೂಪವಾದ ಸಂಸಾರ (ವುಂಟಾಗಿರುವದು) ?** ಆದ್ದರಿಂದ ತದ್ಗುಣಸಾರನಾಗಿರುವದರಿಂದ[3] ಬುದ್ಧಿಯ ಪರಿಮಾಣದಿಂದ ಇವನಿಗೆ (ಅಣು ಎಂಬ) ಪರಿಮಾಣವನ್ನು ಹೇಳಿರುತ್ತದೆ. ಮತ್ತು ಆ (ಬುದ್ಧಿಯ) ಉತ್ಕ್ರಾಂತಿಯೇ ಮುಂತಾದವುಗಳಿಂದಲೇ ಇವನಿಗೆ ಉತ್ಕ್ರಾಂತ್ಯಾದಿಗಳನ್ನು ಹೇಳಿದೆಯೇ ಹೊರತು ಸ್ವತಃ ಇವನಿಗೆ ಉತ್ಕ್ರಾಂತಿಯೇ ಮುಂತಾದವುಗಳು ಇರುವದಿಲ್ಲ. ಆದ್ದರಿಂದಲೇ "ಕೂದಲೆಳೆಯ ನೂರನೆಯ ಭಾಗವನ್ನು ನೂರು ಪಾಲಾಗಿ ಕಲ್ಪಿಸಿದರೆ (ಅದರ) ಭಾಗವೇ ಈ ಜೀವನೆಂದು ತಿಳಿಯಬೇಕು ; ಇವನೇ ಆನಂತ್ಯಕ್ಕೆ ತಕ್ಕವನಾಗಿರುವನು'' (ಶ್ವೇ. ೫–೯) ಎಂದು ಜೀವನಿಗೆ ಅಣುತ್ವವನ್ನು ಹೇಳಿ ಅವನಿಗೇ ಮತ್ತೆ ಆನಂತ್ಯವನ್ನು (ಶ್ರುತಿಯು) ಹೇಳಿರುತ್ತದೆ. ಆ (ವ್ಯಪದೇಶವು) ಜೀವನಿಗೆ ಅಣುತ್ವವು ಔಪಚಾರಿಕವೆಂದೂ ಆನಂತ್ಯವು ಪಾರಮಾರ್ಥಿಕವೆಂದೂ ಆದರೆ ಆ ಪ್ರಕಾರದಿಂದಲೇ ಸಮಂಜಸವಾದೀತು. ಇವೆರಡೂ ಮುಖ್ಯವೆಂಬುದು ಆಗಲಾರದಷ್ಟೆ, ಆನಂತ್ಯವೇ ಔಪಚಾರಿಕವೆಂದು ತಿಳಿಯುವದಕ್ಕೂ ಆಗುವದಿಲ್ಲ; ಏಕೆಂದರೆ ಎಲ್ಲಾ ಉಪನಿಷತ್ತುಗಳಲ್ಲಿಯೂ (ಇವನಿಗೆ) ಬ್ರಹ್ಮಾತ್ಮಭಾವವನ್ನೇ ಪ್ರತಿಪಾದನೆಮಾಡುವದಕ್ಕೆ ಹೊರಟಿರುತ್ತದೆ. ಹೀಗೆಯೇ ಇನ್ನೊಂದು ಉನ್ಮಾನ (ವನ್ನು ಹೇಳುವ ಶ್ರುತಿ)ಯಲ್ಲಿಯೂ ಬುದ್ಧಿಗುಣದಿಂದ ಆತ್ಮಗುಣದಿಂದಲೂ ದಬ್ಬಳದ ತುದಿಯಷ್ಟು ಪರಿಮಾಣದವನಾಗಿ ಸಣ್ಣವನಾಗಿಯೂ ಕಾಣುತ್ತಾನೆ" (ಶ್ವೇ. ೬–೮) ಎಂದು ಬುದ್ಧಿಗುಣಸಂಬಂಧದಿಂದಲೇ ಆರಾಗ್ರದಷ್ಟು ಪರಿಮಾಣ

---

1. ಅಂತಃಕರಣದ ಎಂದರ್ಥ. 2. ಗೀ. ಭಾ. ೧೩–೬.

3. ಸೂತ್ರದ "ತದ್ಗುಣ" ಎಂಬ ಸಮಾಸದಲ್ಲಿರುವ ತಚ್ಛಬ್ದವು ಬುದ್ಧಿಯನ್ನು ಹೇಳುತ್ತದೆ. "ಅನ್ತರಾ ವಿಜ್ಞಾನಮಸೀ", "ಹೃದಿ ಹಿ"– ಎಂದು ಬುದ್ಧಿಯು ಪ್ರಕೃತವಾಗಿದೆ, ಅದನ್ನು ತಚ್ಛಬ್ದವು ಹೇಳುತ್ತದೆ ಎಂದು **ರತ್ನಪ್ರಭಾ.** ಸ್ವಸಂಬಂಧಿಯಾದ ಬುದ್ಧಿಯನ್ನು ಆತ್ಮನೆಂಬ ಮಾತು ತಂದುಕೊಟ್ಟಿರುತ್ತದೆ ಎಂದು **ಭಾಮತೀ.**

ದವನೆಂದು ಹೇಳಿದೆಯೇ ಹೊರತು ತನ್ನ ರೂಪದಿಂದಲೇ (ಆ ಪರಿಮಾಣದವನೆಂದು ಹೇಳಿ)ರುವದಿಲ್ಲ.

"ಈ ಅಣುವಾದ ಆತ್ಮನನ್ನು ಚಿತ್ತದಿಂದ ಅರಿತುಕೊಳ್ಳಬೇಕು" (ಮುಂ. ೩-೧-೯) ಎಂಬಲ್ಲಿಯೂ ಜೀವನು ಅಣುಪರಿಮಾಣನೆಂದೇನೂ ತಿಳಿಸಿಲ್ಲ ; ಏಕೆಂದರೆ ಚಕ್ಷುರಿಂದ್ರಿಯುವೇ ಮುಂತಾದವುಗಳಿಂದ ಗ್ರಹಿಸುವದಕ್ಕಾಗದ ಪರಮಾತ್ಮನನ್ನೇ ಜ್ಞಾನಪ್ರಸಾದದಿಂದ ಅರಿತುಕೊಳ್ಳಬಹುದು ಎಂಬುದೇ ಪ್ರಕೃತವಾಗಿರುತ್ತದೆ ; ಜೀವನಿಗೆ ಮುಖ್ಯವಾದ[1] ಅಣುಪರಿಮಾಣವು ಹೊಂದುವದೂ ಇಲ್ಲ. **ಆದ್ದರಿಂದ ಈ ಅಣುತ್ವವಚನವು (ಇವನನ್ನು) ಅರಿತುಕೊಳ್ಳುವದು ಕಷ್ಟವೆಂಬ ಅಭಿಪ್ರಾಯದಿಂದಲೋ ಉಪಾಧಿಯ ಅಭಿಪ್ರಾಯದಿಂದಲೋ ಹೇಳಿದ್ದು ಎಂದು ತಿಳಿಯಬೇಕು.** ಇದರಂತೆ "ಪ್ರಜ್ಞೆಯಿಂದ ಶರೀರವನ್ನು ಏರಿಕೊಂಡು" (ಕೌ. ೩-೬) ಎಂಬೀ ಜಾತಿಯ ಭೇದೋಪದೇಶಗಳಲ್ಲಿಯೂ ಉಪಾಧಿಯಾಗಿರುವ ಬುದ್ಧಿಯಿಂದಲೇ 'ಜೀವನು ಶರೀರವನ್ನು ಏರಿಕೊಂಡು' ಎಂದೀ ಪರಿಯಾಗಿ (ಮಾತುಗಳನ್ನು) ಅನ್ವಯಿಸಬೇಕು. ಅಥವಾ 'ಕಲ್ಲಿನ ಗೊಂಬೆಯ ಶರೀರವು' ಎಂಬಂತೆ ಅದು ಬರಿಯ ಮಾತು[2] ಎಂದಾದರೂ (ತಿಳಿಯಬೇಕು) ; ಇಲ್ಲಿ ಗುಣಗುಣಿವಿಭಾಗವು ಇರುವದಿಲ್ಲ ಎಂದು ಹೇಳಿದ್ದಾಗಿದೆ[3]. ಹೃದಯದಲ್ಲಿರುತ್ತಾನೆಂದು ಹೇಳಿರುವದೂ ಬುದ್ಧಿಯು ಆ (ಹೃದಯ)ದಲ್ಲಿರುವದರಿಂದ[4]. ಇದರಂತೆ ಉತ್ಕ್ರಾಂತಿ ಮುಂತಾದವುಗಳೂ ಉಪಾಧಿಗೆ ಅಧೀನವಾಗಿಯೇ ಆಗುವವೆಂದು[5] "ಯಾವದು ಉತ್ಕ್ರಾಂತವಾದರೆ ನಾನೂ ಉತ್ಕ್ರಾಂತನಾಗುವೆನು" ಅಥವಾ ಯಾವದು

---

1. ಮುಖ್ಯಾರ್ಥವು ಹೊಂದುವದಿಲ್ಲವಾದ್ದರಿಂದ ಅಣು ಎಂಬ ಮಾತಿಗೆ ಗೌಣಾರ್ಥವನ್ನು ಕಲ್ಪಿಸಬೇಕು.

2. ಇದು ೨೮ನೆಯ ಸೂತ್ರದ ಪೂರ್ವಪಕ್ಷಕ್ಕೆ ಸಮಾಧಾನ. ಗೊಂಬೆಗೂ ಶರೀರಕ್ಕೂ ಭೇದವಿರುವದಿಲ್ಲ ; ಹಾಗೆ ಚೈತನ್ಯಕ್ಕೂ ಜೀವನಿಗೂ ಭೇದವಿರುವದಿಲ್ಲ.

3. "ಯದಿ ಚ ಚೈತನ್ಯಂ ಜೀವಸ್ಯ" ಎಂಬ ಭಾಷ್ಯದ ಅನುವಾದ (ಭಾ. ಭಾ. ೧೩೭)ವನ್ನು ನೋಡಿ.

4. ಇದು ೨೭ನೆಯ ಸೂತ್ರದ ಪೂರ್ವಪಕ್ಷಕ್ಕೆ ಸಮಾಧಾನ. ಚೈತನ್ಯರೂಪನಾದ ಆತ್ಮನಿಗೆ ಹೃದಯದಲ್ಲಿರುವದೆಂಬುದು ಸ್ವತಃ ಹೊಂದುವದಿಲ್ಲ. ಮುಂ. ಭಾ. (ಭಾ. ಭಾ. ೮೦)ನ್ನು ನೋಡಿ.

5. ಉತ್ಕ್ರಾಂತಿ, ಗತಿ, ಆಗತಿ – ಇವುಗಳು ; ಭಾ. ಭಾ. ೧೨೬ರನ್ನು ನೋಡಿ. ಉತ್ಕ್ರಾಂತ್ಯಾದಿಗಳು ಸ್ವತಃ ಆಗುವವೆಂದು ಸಿದ್ಧವಾದರೆ ಅಣುತ್ವವೂ ಸ್ವರೂಪಕ್ಕೆ ಸೇರಿದ್ದೆಂದು ಒಂದು ವೇಳೆ ಹೇಳಬಹುದಾಗಿತ್ತು. ಆದರೆ ಅವೂ ಉಪಾಧಿಯಿಂದಲೇ ಆಗತಕ್ಕವುಗಳಾಗಿವೆ,

ನಿಂತಿದ್ದರೆ ನಾನೂ ನಿಂತಿರುವೆನು ? ಎಂದು (ಯೋಚಿಸಿದನು), ಆವನು ಪ್ರಾಣವನ್ನು ಸೃಜಿಸಿದನು "(ಪ್ರ. ೬–೩–೪) ಎಂದು (ಶ್ರುತಿಯು) ತಿಳಿಸಿರುತ್ತದೆ. ಉತ್ಕ್ರಾಂತಿಯೇ ಇಲ್ಲದ ಬಳಿಕ ಗತ್ಯಾಗತಿಗಳೂ ಇಲ್ಲವೆಂದು ಗೊತ್ತಾಗುತ್ತದೆ. ಏಕೆಂದರೆ ದೇಹವನ್ನು ಬಿಟ್ಟು ತೆರಳದೆ ಇರುವವನಿಗೆ ಗತ್ಯಾಗತಿಗಳು ಆಗಲಾರವಷ್ಟೆ ?

## ಜೀವನ ಅಣುತ್ವಾದಿಗಳು ಔಪಾಧಿಕವೆಂಬುದಕ್ಕೆ ದೃಷ್ಟಾಂತ

(ಭಾಷ್ಯ)

೨೯. ಏವಮ್ ಉಪಾಧಿಗುಣಸಾರತ್ವಾತ್ ಜೀವಸ್ಯ ಅಣುತ್ವಾದಿವ್ಯಪದೇಶಃ । ಪ್ರಾಜ್ಞವತ್ । ಯಥಾ ಪ್ರಾಜ್ಞಸ್ಯ ಪರಮಾತ್ಮನಃ ಸಗುಣೇಷು ಉಪಾಸನೇಷು ಉಪಾಧಿಗುಣಸಾರತ್ವಾತ್ ಅಣೀಯಸ್ತ್ವಾದಿವ್ಯಪದೇಶಃ — "ಅಣೀಯಾನ್ ವ್ರೀಹೇರ್ವಾ ಯವಾದ್ವಾ । ಮನೋಮಯಃ ಪ್ರಾಣಶರೀರಃ ಸರ್ವಗನ್ಧಃ ಸರ್ವರಸಃ ಸತ್ಯಕಾಮಃ ಸತ್ಯಸಂಕಲ್ಪಃ"[1] (?) ಇತ್ಯೇವಂಪ್ರಕಾರಃ ತದ್ವತ್॥

(ಭಾಷ್ಯಾರ್ಥ)

ಹೀಗೆ ಉಪಾಧಿಗುಣಸಾರನಾಗಿರುವದರಿಂದ ಜೀವನಿಗೆ ಅಣುತ್ವಾದಿವ್ಯಪದೇಶವು (ಆಗಿರುತ್ತದೆ. ಇದು) ಪ್ರಾಜ್ಞನಂತೆ. (ಇದರ ವಿವರ) : ಪ್ರಾಜ್ಞನಾದ ಪರಮಾತ್ಮನು ಸಗುಣವಾದ ಉಪಾಸನೆಗಳಲ್ಲಿ ಉಪಾಧಿಗುಣಸಾರನಾಗಿರುವದರಿಂದ "ಬತ್ತದಕಾಳಿಗಿಂತಲೂ ಜವೆಕಾಳಿಗಿಂತಲೂ ಅಣುವಾಗಿರುವನು ; ಮನೋಮಯನು, ಪ್ರಾಣಶರೀರನು ; ಸರ್ವಗಂಧನು, ಸರ್ವರಸನು ; ಸತ್ಯಕಾಮನು, ಸತ್ಯಸಂಕಲ್ಪನು" (?) ಎಂಬೀ ಪ್ರಕಾರದ ಅಣೀಯಸ್ತ್ವಾದಿವ್ಯಪದೇಶವು ಹೇಗೋ ಅದರಂತೆಯೇ (ಇದು).

**ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ॥ ೩೦ ॥**

೩೦. ಮತ್ತು ಯಾವದಾತ್ಮಭಾವಿಯಾಗಿರುವದರಿಂದ ದೋಷವೂ ಇಲ್ಲ ; ಏಕೆಂದರೆ ಹಾಗೆಂದು (ಶ್ರುತಿ) ತಿಳಿಸುತ್ತದೆ.

---

1. ಈ ವಾಕ್ಯಗಳು ಯಾವದೊಂದು ಶ್ರುತಿಯನ್ನು ಅನುಸರಿಸಿ ಉದಾಹೃತವಾಗಿಲ್ಲವೆಂದು ತೋರುತ್ತದೆ. ಛಾಂ. ೩–೧೪–೨, ೩, ೪, ಶತ. ಬ್ರಾ. ೧೦–೬–೩–೨ ಇವನ್ನು ನೋಡಿ.

## ಜೀವೋಪಾಧಿಯು ಸಂಸಾರಿತ್ವವಿರುವವರೆಗೂ ಇರುತ್ತದೆ

(ಭಾಷ್ಯ)

೧೪೦. ಸ್ಯಾದೇತತ್ — ಯದಿ ಬುದ್ಧಿಗುಣಸಾರತ್ವಾತ್ ಆತ್ಮನಃ ಸಂಸಾರಿತ್ವಂ ಕಲ್ಪ್ಯೇತ. ತತೋ ಬುದ್ಧ್ಯಾತ್ಮನೋರ್ಭಿನ್ನಯೋಃ ಸಂಯೋಗಾವಸಾನಮ್ ಅವಶ್ಯಂಭಾವಿ ಇತ್ಯತಃ ಬುದ್ಧಿವಿಯೋಗೇ ಸತಿ ಆತ್ಮನಃ ವಿಭಕ್ತಸ್ಯ ಅನಾಲಕ್ಷ್ಯತ್ವಾತ್ ಅಸತ್ತ್ವಮ್ ಅಸಂಸಾರಿತ್ವಂ ವಾ ಪ್ರಸಜ್ಯೇತ ಇತಿ । ಅತ ಉತ್ತರಂ ಪಠತಿ– ('ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್') । ನೇಯಮ್ ಅನನ್ತರನಿರ್ದಿಷ್ಟದೋಷಪ್ರಾಪ್ತಿಃ ಆಶಙ್ಕನೀಯಾ । ಕಸ್ಮಾತ್ ? ಯಾವದಾತ್ಮಭಾವಿತ್ವಾತ್ ಬುದ್ಧಿಸಂಯೋಗಸ್ಯ । ಯಾವತ್ ಅಯಮಾತ್ಮಾ ಸಂಸಾರೀ ಭವತಿ, ಯಾವತ್ ಅಸ್ಯ ಸಮ್ಯಗ್ದರ್ಶನೇನ ಸಂಸಾರಿತ್ವಂ ನ ನಿವರ್ತತೇ, ತಾವತ್ ಅಸ್ಯ ಬುದ್ಧ್ಯಾ ಸಂಯೋಗೋ ನ ಶಾಮ್ಯತಿ । ಯಾವದೇವ ಚ ಅಯಂ ಬುದ್ಧ್ಯುಪಾಧಿಸಂಬನ್ಧಃ ತಾವತ್ ಜೀವಸ್ಯ ಜೀವತ್ವಂ ಸಂಸಾರಿತ್ವಂ ಚ । ಪರಮಾರ್ಥತಸ್ತು ನ ಜೀವೋ ನಾಮ ಬುದ್ಧ್ಯುಪಾಧಿಸಂಬನ್ಧಪರಿಕಲ್ಪಿತಸ್ವರೂಪವ್ಯತಿರೇಕೇಣ ಅಸ್ತಿ । ನ ಹಿ ನಿತ್ಯಮುಕ್ತಸ್ವರೂಪಾತ್ ಸರ್ವಜ್ಞಾತ್ ಈಶ್ವರಾತ್ ಅನ್ಯಃ ಚೇತನೋ ಧಾತುಃ ದ್ವಿತೀಯಃ ವೇದಾನ್ತಾರ್ಥನಿರೂಪಣಾಯಾಮ್ ಉಪಲಭ್ಯತೇ "ನಾನ್ಯೋಽತೋಽಸ್ತಿ ದ್ರಷ್ಟಾ ಶ್ರೋತಾ ಮನ್ತಾ ವಿಜ್ಞಾತಾ" (ಬೃ. ೩–೭–೨೩) "ನಾನ್ಯದತೋಽಸ್ತಿ ದ್ರಷ್ಟೃ ..... ಶ್ರೋತೃ ...... ಮನ್ತೃ ..... ವಿಜ್ಞಾತೃ"[1] (ಬೃ. ೩–೮–೧೧) "ತತ್ತ್ವಮಸಿ" (ಛಾಂ. ೬–೮–೭) "ಅಹಂ ಬ್ರಹ್ಮಾಸ್ಮಿ" (ಬೃ. ೧–೪–೭) ಇತ್ಯಾದಿಶ್ರುತಿಶತೇಭ್ಯಃ ॥

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಅಭಿಪ್ರಾಯವು ಇದಾಗಿರಬಹುದು) : ಬುದ್ಧಿಗುಣಸಾರನಾಗಿರುವದರಿಂದ ಆತ್ಮನಿಗೆ ಸಂಸಾರಿತ್ವ(ವಾಗಿರುವದೆಂದು) ಕಲ್ಪಿಸುವದಾದರೆ, ಆಗ ಬುದ್ಧ್ಯಾತ್ಮರುಗಳು ಬೇರೆಬೇರೆಯಾಗಿರುವದರಿಂದ (ಅವರಿಬ್ಬರ) ಸಂಯೋಗದ ನಾಶವು ಅವಶ್ಯವಾಗಿ ಆಗುವದು.[2] ಆದ್ದರಿಂದ ಬುದ್ಧಿಯು (ಆತ್ಮನನ್ನು) ಬಿಟ್ಟಗಲಿದರೆ ಆತ್ಮನು ಕಾಣುವಂತಿಲ್ಲವಾದ್ದರಿಂದ (ಅವನು) ಇಲ್ಲವೆಂದಾಗುವದು, ಅಥವಾ ಅಸಂಸಾರಿಯಾಗಬೇಕಾಗುವದಲ್ಲ !

ಇದಕ್ಕೆ (ಸೂತ್ರಕಾರರು) ಉತ್ತರವನ್ನು ಹೇಳುತ್ತಾರೇನೆಂದರೆ (ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್) । ಈಗ ಹೇಳಿದ ದೋಷವು

1 ಇಲ್ಲಿ ಗುರುತುಮಾಡಿರುವ ಕಡೆಗಳಲ್ಲಿ "ನಾನ್ಯದತೋಽಸ್ತಿ" ಎಂಬ ಮಾತು ಬಿಟ್ಟಿದೆ.

2. ಏಕೆಂದರೆ ಸಂಯೋಗಕ್ಕೆ ವಿಯೋಗವಾಗುವದೆಂಬುದು ನಿತ್ಯನಿಯಮವಾಗಿದೆ.

ಬಂದೊದಗುವದೆಂದು ಶಂಕಿಸತಕ್ಕದ್ದಲ್ಲ. ಏಕೆ ? ಎಂದರೆ ಬುದ್ಧಿಸಂಯೋಗವು ಯಾವದಾತ್ಮಭಾವಿಯಾಗಿರುತ್ತದೆ. (ಇದರ ವಿವರ) : ಈ ಆತ್ಮನು ಎಲ್ಲಿಯವರೆಗೆ ಸಂಸಾರಿಯಾಗಿರುತ್ತಾನೋ, ಎಲ್ಲಿಯವರೆಗೆ ಸಮ್ಯಗ್ಜ್ಞಾನದಿಂದ ಸಂಸಾರಿತ್ವವು ತೊಲಗುವದಿಲ್ಲವೋ, ಅಲ್ಲಿಯವರೆಗೂ ಇವನಿಗೆ ಬುದ್ಧಿಯೊಡನೆ ಸಂಯೋಗವು ಹೋಗುವದಿಲ್ಲ. **ಎಲ್ಲಿಯವರೆಗೆ ಈ ಬುದ್ಧಿ ಎಂಬ ಉಪಾಧಿಯ ಸಂಬಂಧವಿರುವದೋ ಅಲ್ಲಿಯವರೆಗೇ ಜೀವನಿಗೆ ಜೀವತ್ವವೂ ಸಂಸಾರಿತ್ವವೂ ಇರುವದು. ಆದರೆ ಪರಮಾರ್ಥವಾಗಿ ಬುದ್ಧಿ ಎಂಬ ಉಪಾಧಿಯ ಸಂಬಂಧದಿಂದ ಪರಿಕಲ್ಪಿತವಾದ ಸ್ವರೂಪಕ್ಕಿಂತ ಬೇರೆಯಾಗಿ ಜೀವನೆಂಬವನೇ ಇರುವದಿಲ್ಲ.**[1] ನಿತ್ಯಮುಕ್ತಸ್ವರೂಪನೂ ಸರ್ವಜ್ಞನೂ ಆಗಿರುವ ಈಶ್ವರನಿಗಿಂತ ಬೇರೆಯಾಗಿರುವ ಎರಡನೆಯ ಚೇತನವಸ್ತುವು, ವೇದಾಂತಗಳ ಅರ್ಥವನ್ನು ಪರೀಕ್ಷಿಸಿದರೆ ಕಂಡುಬರುವದೇ ಇಲ್ಲ. "ಇವನಿಗಿಂತ ಬೇರೆಯಾದ ದ್ರಷ್ಟೃವಾಗಲಿ, ಶ್ರೋತೃವಾಗಲಿ, ಮಂತೃವಾಗಲಿ. ವಿಜ್ಞಾತೃವಾಗಲಿ ಇಲ್ಲ" (ಬೃ.೩-೭-೨೩), "ಇದಕ್ಕಿಂತ ಬೇರೆಯಾದ ದ್ರಷ್ಟೃವಿಲ್ಲ,.... ಶ್ರೋತೃವಿಲ್ಲ,.... ಮಂತೃವಿಲ್ಲ,.... ವಿಜ್ಞಾತೃವಿಲ್ಲ'' ಬೃ. ೩-೮-೧೧)[2] "ಅದೇ ನೀನಾಗಿರುವೆ" (ಛಾಂ. ೬-೮-೭) "ನಾನು ಬ್ರಹ್ಮವಾಗಿರುತ್ತೇನೆ" (ಬೃ. ೧-೪-೭) ಎಂಬಿವೇ ಮುಂತಾದ ನೂರಾರು ಶ್ರುತಿಗಳಿಂದ ಇದು ಸಿದ್ಧವಾಗುತ್ತದೆ.

## ಬುದ್ಧಿಸಂಬಂಧವು ಮುಕ್ತಿಯವರೆಗೆಂಬುದಕ್ಕೆ ಶ್ರುತಿ

(ಭಾಷ್ಯ)

೧೪೧. ಕಥಂ ಪುನರವಗಮ್ಯತೇ ಯಾವದಾತ್ಮಭಾವೀ ಬುದ್ಧಿಸಂಯೋಗಃ ಇತಿ ? ತದ್ದರ್ಶನಾತ್ ಇತ್ಯಾಹ । ತಥಾ ಹಿ ಶಾಸ್ತ್ರಂ ದರ್ಶಯತಿ "ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯನ್ತರ್ಜ್ಯೋತಿಃ ಪುರುಷಃ ಸಮಾನಃ ಸನ್ನುಭೌ ಲೋಕಾವನುಸಂಚರತಿ ಧ್ಯಾಯತೀವ ಲೇಲಾಯತೀವ'' (ಬೃ. ೪-೩-೭) ಇತ್ಯಾದಿ । ತತ್ರ ವಿಜ್ಞಾನಮಯಃ ಇತಿ ಬುದ್ಧಿಮಯಃ ಇತ್ಯೇತದುಕ್ತಂ ಭವತಿ । ಪ್ರದೇಶಾನ್ತರೇ "ವಿಜ್ಞಾನಮಯೋ ಮನೋಮಯಃ ಪ್ರಾಣಮಯಶ್ಚಕ್ಷುರ್ಮಯಃ ಶ್ರೋತ್ರಮಯಃ" (ಬೃ.೪-೪-೫) ಇತಿ ವಿಜ್ಞಾನಮಯಸ್ಯ ಮನಆದಿಭಿಃ ಸಹ ಪಾಠಾತ್ । ಬುದ್ಧಿಮಯತ್ವಂ ಚ ತದ್ಗುಣಸಾರತ್ವಮೇವ ಅಭಿಪ್ರೇಯತೇ । ಯಥಾ ಲೋಕೇ ಸ್ತ್ರೀಮಯೋ ದೇವದತ್ತಃ ಇತಿ ಸ್ತ್ರೀರಾಗಾದಿಪ್ರಧಾನಃ ಅಭಿಧೀಯತೇ, ತದ್ವತ್ । "ಸ ಸಮಾನಃ ಸನ್ನುಭೌ

---

1. ಜೀವತ್ವವೇ ಕಲ್ಪಿತವಾಗಿರುತ್ತದೆ.

2. ಇಲ್ಲಿ ಮೊದಲನೆಯ ಶ್ರುತಿಯು ಯಾಜ್ಞವಲ್ಕ್ಯರು ಉದ್ದಾಲಕನಿಗೆ ಹೇಳಿದ ಅಂತರ್ಯಾಮಿಯ ವರ್ಣನೆಯಲ್ಲಿದೆ ; ಎರಡನೆಯದು ಗಾರ್ಗಿಗೆ ಹೇಳಿದ ಅಕ್ಷರದ ವರ್ಣನೆಯಲ್ಲಿದೆ ; ಸೋಪಾಧಿಕನಿರುಪಾಧಿಕ ಬ್ರಹ್ಮವು ಒಂದೇ ಎಂದೂ ಅದಕ್ಕಿಂತ ಬೇರೆಯಾದ ಜೀವನು ಮತ್ತೊಬ್ಬನಿಲ್ಲವೆಂದೂ ಇಲ್ಲಿ ತಿಳಿಸಿರುತ್ತದೆ.

ಲೋಕಾವನುಸಂಚರತಿ'' (ಬೃ. ೪-೩-೭) ಇತಿ ಚ ಲೋಕಾನ್ತರಗಮನೇಽಪಿ ಅವಿಯೋಗಂ ಬುದ್ಧ್ಯಾ ದರ್ಶಯತಿ । ಕೇನ ಸಮಾನಃ ? ತಯೈವ ಬುದ್ಧ್ಯೇತಿ ಗಮ್ಯತೇ ಸಂನಿಧಾನಾತ್ । ತಚ್ಚ ದರ್ಶಯತಿ– ''ಧ್ಯಾಯತೀವ ಲೇಲಾಯತೀವ'' (ಬೃ. ೪-೩-೭) ಇತಿ । ಏತದುಕ್ತಂ ಭವತಿ– ನಾಯಂ ಸ್ವತೋ ಧ್ಯಾಯತಿ, ನಾಪಿ ಚಲತಿ । ಧ್ಯಾಯನ್ತ್ಯಾಂ ಬುದ್ಧೌ ಧ್ಯಾಯತೀವ ಚಲನ್ತ್ಯಾಂ ಬುದ್ಧೌ ಚಲತೀವ ಇತಿ । ಅಪಿ ಚ ಮಿಥ್ಯಾಜ್ಞಾನಪುರಃಸರೋಽಯಮ್ ಆತ್ಮನಃ ಬುದ್ಧ್ಯುಪಾಧಿಸಂಬನ್ಧಃ । ನ ಚ ಮಿಥ್ಯಾಜ್ಞಾನಸ್ಯ ಸಮ್ಯಗ್ಜ್ಞಾನಾತ್ ಅನ್ಯತ್ರ ನಿವೃತ್ತಿರಸ್ತಿ ಇತ್ಯತಃ ಯಾವದ್ ಬ್ರಹ್ಮಾತ್ಮತಾನವಬೋಧಃ ತಾವದಯಂ ಬುದ್ಧ್ಯುಪಾಧಿಸಂಬನ್ಧಃ ನ ಶಾಮ್ಯತಿ । ದರ್ಶಯತಿ ಚ– ''ವೇದಾಹಮೇತಂ ಪುರುಷಂ ಮಹಾನ್ತಮಾದಿತ್ಯವರ್ಣಂ ತಮಸಃ ಪರಸ್ತಾತ್ । ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪನ್ಥಾ ವಿದ್ಯತೇಽಯನಾಯ'' (ಶ್ವೇ. ೩-೮) ಇತಿ ॥

(ಭಾಷ್ಯಾರ್ಥ)

(ಪ್ರಶ್ನೆ) :– ಬುದ್ಧಿಸಂಯೋಗವು ಯಾವದಾತ್ಮಭಾವಿ ಎಂಬುದು ಹೇಗೆ ನಿಶ್ಚಯವಾಗುತ್ತದೆ ?

(ಉತ್ತರ) :– (ಇದಕ್ಕೆ ಸೂತ್ರಕಾರರು) ಹೇಳುತ್ತಾರೇನೆಂದರೆ "ಹಾಗೆ ದರ್ಶನವಿರುವದರಿಂದ". ಹಾಗಲ್ಲವೆ, "ಪ್ರಾಣಗಳಲ್ಲಿ ವಿಜ್ಞಾನಮಯನಾಗಿರುವ, ಹೃದಯದೊಳಗೆ ಜ್ಯೋತಿಯಾಗಿರುವ ಈ ಪುರುಷನಿದಾನಲ್ಲ, ಅವನು ಸಮಾನನಾಗಿ ಎರಡು ಲೋಕಗಳನ್ನೂ ಅನುಸಂಚಾರಮಾಡುತ್ತಿರುತ್ತಾನೆ; ಧ್ಯಾನ ಮಾಡುವಂತೆಯೂ ಸಂಚರಿಸುವಂತೆಯೂ ಇರುತ್ತಾನೆ (ಬೃ. ೪-೩-೭) ಎಂದು ಮುಂತಾಗಿರುವ ಶಾಸ್ತ್ರವು ತಿಳಿಸುತ್ತದೆ? ಇಲ್ಲಿ 'ವಿಜ್ಞಾನಮಯನು' ಎಂದು ಬುದ್ಧಿಮಯನನ್ನೇ ಹೇಳಿರುತ್ತದೆ; ಏಕೆಂದರೆ ಮತ್ತೊಂದು ಕಡೆಯಲ್ಲಿ "ವಿಜ್ಞಾನಮಯನು, ಮನೋಮಯನು, ಪ್ರಾಣಮಯನು, ಚಕ್ಷುರ್ಮಯನು, ಶ್ರೋತ್ರಮಯನು" (ಬೃ. ೪-೪-೫) ಎಂದು ವಿಜ್ಞಾನಮಯನನ್ನು ಮನಸ್ಸೇ ಮುಂತಾದವುಗಳೊಡನೆ ಹೇಳಿರುತ್ತದೆ.[1] ಬುದ್ಧಿಮಯನಾಗಿರುವದೆಂದರೆ ತದ್ಗುಣಸಾರತ್ವವೇ ಎಂದು (ಇಲ್ಲಿ) ಅಭಿಪ್ರಾಯ. ಹೇಗೆ ಲೋಕದಲ್ಲಿ 'ದೇವದತ್ತನು ಸ್ತ್ರೀಮಯನಾಗಿರುತ್ತಾನೆ' ಎಂದು ಸ್ತ್ರೀರಾಗದ ಪ್ರಧಾನನಾಗಿ(ರುವ ಪುರುಷ)ನನ್ನೇ ಹೇಳುತ್ತಾರೋ ಹಾಗೆಯೇ ಇದು.[2] "ಅವನು ಸಮಾನ

1. ಆದ್ದರಿಂದ ವಿಜ್ಞಾನವೆಂದರೆ ಅರಿವು ಎಂದು ಅರ್ಥವಲ್ಲ; ಬುದ್ಧಿ ಎಂಬ ಕರಣವೇ.

2. 'ವಿಜ್ಞಾನಮಯ' ಎಂಬಲ್ಲಿ ವಿಕಾರವನ್ನು ಹೇಳುವದಕ್ಕೆ 'ಮಯ' ಎಂಬ ಪ್ರತ್ಯಯವು ಬಂದಿಲ್ಲವೆಂಬುದಕ್ಕೆ ದೃಷ್ಟಾಂತವಿದು.

ನಾಗಿ ಎರಡು ಲೋಕಗಳನ್ನೂ ಅನುಸಂಚಾರಮಾಡುತ್ತಾನೆ" ಎಂದು ಲೋಕಾಂತರಕ್ಕೆ ಹೋದರೂ ಬುದ್ಧಿಯನ್ನು ಬಿಟ್ಟು ಅಗಲುವದಿಲ್ಲವೆಂದು (ಶ್ರುತಿ) ಹೇಳುತ್ತಿದೆ. (ಇಲ್ಲಿ) ಏತಕ್ಕೆ ಸಮಾನ(ನಾಗಿ)? –ಎಂದರೆ ಅದೇ ಬುದ್ಧಿಗೆ ಎಂದು ನಿಶ್ಚಯವಾಗುತ್ತದೆ. ಏಕೆಂದರೆ (ಬುದ್ಧಿಯನ್ನೇ) ಹತ್ತಿರದಲ್ಲಿ ಹೇಳಿರುತ್ತದೆ. "ಧ್ಯಾನಿಸುವಂತೆಯೂ ಓಡಾಡುವಂತೆಯೂ" (ಬೃ. ೪-೩-೭) ಎಂದು ಅದನ್ನು (ಶ್ರುತಿಯೂ) ತಿಳಿಸುತ್ತದೆ. (ಇಲ್ಲಿ) ಇಷ್ಟನ್ನು ಹೇಳಿದಂತಾಗಿದೆ : ಇವನು ತಾನೇ ಧ್ಯಾನಮಾಡುವದಿಲ್ಲ, ಚಲಿಸುವದೂ ಇಲ್ಲ; ಬುದ್ಧಿಯು ಧ್ಯಾನಿಸುತ್ತಿದ್ದರೆ ಧ್ಯಾನಿಸುವಂತಿರುತ್ತಾನೆ, ಬುದ್ಧಿಯು ಚಲಿಸುತ್ತಿದ್ದರೆ ಚಲಿಸುವಂತೆ (ತೋರುತ್ತಾನೆ).

**ಇದೂ ಅಲ್ಲದೆ ಆತ್ಮನಿಗೆ ಬುದ್ಧಿ ಎಂಬ ಉಪಾಧಿಯ ಸಂಬಂಧವು ಮಿಥ್ಯಾಜ್ಞಾನಪುರಃಸರವಾಗಿರುತ್ತದೆ. ಮಿಥ್ಯಾಜ್ಞಾನವು ಸಮ್ಯಗ್ಜ್ಞಾನವಿಲ್ಲದೆ ನಿವೃತ್ತಿಯಾಗುವಂತಿಲ್ಲವಾದ್ದರಿಂದ ಎಲ್ಲಿಯವರೆಗೆ ಬ್ರಹ್ಮಾತ್ಮತ್ವವನ್ನು ತಿಳಿದುಕೊಳ್ಳದೆ ಇರುವನೋ, ಅಲ್ಲಿಯವರೆಗೆ ಈ ಬುದ್ಧ್ಯುಪಾಧಿಯ ಸಂಬಂಧವು ನಾಶವಾಗುವದಿಲ್ಲ.** "ನಾನು ಆದಿತ್ಯವರ್ಣನಾದ ಕತ್ತಲೆಯ ಆಚೆಯಿರುವ ಈ ಮಹಾಪುರುಷನನ್ನು ಬಲ್ಲೆನು. ಅವನನ್ನು ಅರಿತುಕೊಂಡರೇ ಅತಿಮೃತ್ಯುವನ್ನು ಹೊಂದುತ್ತಾನೆ, (ಅದನ್ನು) ಪಡೆಯುವದಕ್ಕೆ ಮತ್ತೆ ಯಾವ ಹಾದಿಯೂ ಇರುವದಿಲ್ಲ" (ಶ್ವೇ. ೩-೮) ಎಂದು (ಶ್ರುತಿಯು) ಹೇಳುತ್ತಲೂ ಇರುತ್ತದೆ.

**ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ॥ ೩೧ ॥**

೩೧. ಆದರೆ ಪುಂಸ್ತ್ವವೇ ಮುಂತಾದವುಗಳಂತೆ ಇದು ಇದ್ದದ್ದೇ ಅಭಿವ್ಯಕ್ತಿಯಾಗಬಹುದಾದ್ದರಿಂದ (ಇದು ಯಾವದಾತ್ಮಭಾವಿ).

## ಅಂತಃಕರಣಸಂಬಂಧವು ಸುಷುಪ್ತಿಪ್ರಲಯಗಳಲ್ಲಿಯೂ ಇರುತ್ತದೆ

(ಭಾಷ್ಯ)

೧೪೨. ನನು ಸುಷುಪ್ತಪ್ರಲಯೋಃ ನ ಶಕ್ಯತೇ ಬುದ್ಧಿಸಂಬನ್ಧಃ ಆತ್ಮನೋಽಭ್ಯುಪಗನ್ತುಮ್ । "ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ" (ಛಾಂ. ೬-೮-೧) ಇತಿ ವಚನಾತ್ । ಕೃತ್ಸ್ನವಿಕಾರಪ್ರಲಯಾಭ್ಯುಪಗಮಾಚ್ಚ । ತತ್ ಕಥಂ ಯಾವದಾತ್ಮಭಾವಿತ್ವಂ ಬುದ್ಧಿಸಂಬನ್ಧಸ್ಯ ಇತಿ ? ಅತ್ರೋಚ್ಯತೇ– ("ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿ

ಯೋಗಾತ್) । ಯಥಾ ಲೋಕೇ ಪುಂಸ್ತ್ವಾದೀನಿ ಬೀಜಾತ್ಮನಾ ವಿದ್ಯಮಾನಾನ್ಯೇವ ಬಾಲ್ಯಾದಿಷು ಅನುಪಲಭ್ಯಮಾನಾನಿ ಅವಿದ್ಯಮಾನವತ್ ಅಭಿಪ್ರೇಯಮಾಣಾನಿ ಯೌವನಾದಿಷು ಆವಿರ್ಭವನ್ತಿ, ನಾವಿದ್ಯಮಾನಾನಿ ಉತ್ಪದ್ಯನ್ತೇ। ಷಣ್ಢಾದೀನಾಮಪಿ ತದುತ್ಪತ್ತಿಪ್ರಸಙ್ಗಾತ್ । ಏವಮ್ ಅಯಮಪಿ ಬುದ್ಧಿಸಂಬನ್ಧಃ ಶಕ್ತ್ಯಾತ್ಮನಾ ವಿದ್ಯಮಾನ ಏವ ಸುಷುಪ್ತಪ್ರಲಯಯೋಃ ಪುನಃ ಪ್ರಬೋಧಪ್ರಸವಯೋಃ ಆವಿರ್ಭವತಿ । ಏವಂ ಹಿ ಏತದ್ ಯುಜ್ಯತೇ । ನ ಹಿ ಆಕಸ್ಮಿಕೀ ಕಸ್ಯಚಿತ್ ಉತ್ಪತ್ತಿಃ ಸಂಭವತಿ । ಅತಿಪ್ರಸಙ್ಗಾತ್ । ದರ್ಶಯತಿ ಚ ಸುಷುಪ್ತಾತ್ ಉತ್ಥಾನಮ್ ಅವಿದ್ಯಾತ್ಮಕಬೀಜಸದ್ಭಾವಕಾರಿತಮ್ "ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹೇ ಇತಿ" (ಛಾಂ. ೬–೯–೨) "ತ ಇಹ ವ್ಯಾಘ್ರೋ ವಾ ಸಿಂಹೋ ವಾ" (ಛಾಂ.೬–೯–೩) ಇತ್ಯಾದಿನಾ । ತಸ್ಮಾತ್ ಸಿದ್ಧಮೇತತ್ ಯಾವದಾತ್ಮಭಾವೀ ಬುದ್ಧ್ಯಾದ್ಯುಪಾಧಿಸಂಬನ್ಧಃ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ಸುಷುಪ್ತಿಪ್ರಲಯಗಳಲ್ಲಿ ಆತ್ಮನಿಗೆ ಬುದ್ಧಿಸಂಬಂಧವನ್ನು ಒಪ್ಪಿಕೊಳ್ಳುವದು ಆಗುವದಿಲ್ಲ ಏಕೆಂದರೆ "ಸೋಮ್ಯನೆ, ಆಗ ಸತ್ತಿನೊಡನೆ ಸೇರಿಹೋಗುತ್ತಾನೆ, ತನ್ನಲ್ಲಿ ಲಯವಾಗಿರುತ್ತಾನೆ" (ಛಾಂ. ೬–೮–೧) ಎಂದು (ಶ್ರುತಿ)ವಚನವಿರುತ್ತದೆ. ಎಲ್ಲಾ ಕಾರ್ಯಗಳೂ (ಆಗ) ಪ್ರಲಯವಾಗಿರುತ್ತವೆ ಎಂದು ಒಪ್ಪಿರುತ್ತೀರಲ್ಲ! ಹೀಗಿರುವಲ್ಲಿ ಬುದ್ಧಿಸಂಬಂಧವು ಯಾವದಾತ್ಮಭಾವಿ ಎಂಬುದು ಹೇಗೆ?

(ಪರಿಹಾರ):– ಇದಕ್ಕೆ ಹೇಳುತ್ತೇವೆ: (ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್)। ಹೇಗೆ ಲೋಕದಲ್ಲಿ ಪುಂಸ್ತ್ವವೇ ಮುಂತಾದವುಗಳು ಬೀಜರೂಪದಿಂದ ಇದ್ದುಕೊಂಡೇ ಬಾಲ್ಯಾದಿಗಳಲ್ಲಿ ಕಾಣದೆ ಇದ್ದು ಇಲ್ಲವೆಂಬಂತೆ ಅಭಿಪ್ರೇತವಾಗಿದ್ದರೂ ಯೌವನಾದಿಗಳಲ್ಲಿ ಹೊರತೋರಿಕೊಳ್ಳುವವೋ, ಇಲ್ಲದೆ ಇದ್ದು (ಹೊಸದಾಗಿ) ಹುಟ್ಟುವದಿಲ್ಲವೋ–ಏಕೆಂದರೆ (ಹಾಗೆ ಹುಟ್ಟುವದಾದರೆ) ನಪುಂಸಕರೇ ಮುಂತಾದವರಿಗೂ ಅವು ಹುಟ್ಟಬೇಕಾಗಿಬರಬಹುದು– ಹಾಗೆಯೇ **ಈ ಬುದ್ಧಿಸಂಬಂಧವೂ ಸುಷುಪ್ತಪ್ರಲಯಗಳಲ್ಲಿ ಶಕ್ತಿರೂಪದಿಂದ ಇದ್ದುಕೊಂಡೇ ಮತ್ತೆ ಎಚ್ಚರಸೃಷ್ಟಿಗಳಲ್ಲಿ ಹೊರತೋರಿಕೊಳ್ಳುತ್ತದೆ.** ಹೀಗಾದರೇ ಇದು ಯುಕ್ತವಾಗುತ್ತದೆ; ಆಕಸ್ಮಿಕವಾಗಿ ಯಾವದು ಉತ್ಪನ್ನವಾಗಲಾರದು. ಏಕೆಂದರೆ ಆಗ ಅತಿಪ್ರಸಂಗವಾಗುವದು.[1] ಶ್ರುತಿಯು ಸುಷುಪ್ತಿ

---

1. ಮುಕ್ತರೂ ಮತ್ತೆ ಸಂಸಾರಕ್ಕೆ ಹಿಂತೆರಳಬಹುದೆಂದಾಗುವದು. ಮಾಂ.ಭಾ. ಭಾ. ಭಾ. ೨೪; ೧–೪–೩ (ಭಾ. ಭಾ. ೩೩೯)ವನ್ನು ನೋಡಿರಿ.

ಯಿಂದ ಏಳುವದು ಅವಿದ್ಯಾತ್ಮಕಬೀಜವಿರುವದರ ಕಾರಣದಿಂದ[1] ಎಂದು "ಸತ್ತಿನಲ್ಲಿ ಸಂಪತ್ತಿಯಾದರು ಸತ್ತಿನಲ್ಲಿ ಸಂಪನ್ನರಾಗಿದೇವೆ ಎಂದು ಅರಿಯದೆ ಇರುವರು" (ಛಾಂ. ೬-೯-೨), "ಅವರು ಇಲ್ಲಿ ಹುಲಿಯಾಗಿರಲಿ, ಸಿಂಹವಾಗಿರಲಿ, .... (ಅದೇ ಎಚ್ಚರುತ್ತಲೂ ಆಗಿಬಿಡುತ್ತಾರೆ)" (ಛಾಂ. ೬-೯-೩) ಎಂದು ಮುಂತಾದ ವಾಕ್ಯದಿಂದ ತಿಳಿಸಿಯೂ ಇರುತ್ತದೆ. ಆದ್ದರಿಂದ ಬುದ್ಧ್ಯುಪಾಧಿ ಸಂಬಂಧವು ಯಾವದಾತ್ಮಭಾವಿಯಾಗಿರುತ್ತದೆ ಎಂದು ಸಿದ್ಧವಾಯಿತು.[2]

**ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಙ್ಗೋಽನ್ಯತರನಿಯಮೋ ವಾನ್ಯಥಾ||**

೩೨. ಹಾಗಿಲ್ಲದಿದ್ದರೆ ನಿತ್ಯವೂ ಅರಿವಾಗುವ ಅಥವಾ ಅರಿವಾಗದಿರುವ ಪ್ರಸಂಗವುಂಟಾಗುವದು; ಅಥವಾ ಎರಡರಲ್ಲಿ ಒಂದರ ನಿಯಮವಾಗಲಿ (ಆಗಬೇಕಾದೀತು).

## ಅಂತಃಕರಣವೆಂಬ ಉಪಾಧಿಯನ್ನು ಒಪ್ಪಬೇಕು

(ಭಾಷ್ಯ)

೧೪೩. ತಚ್ಚ ಆತ್ಮನಃ ಉಪಾಧಿಭೂತಮ್ ಅನ್ತಃಕರಣಂ ಮನಃ ಬುದ್ಧಿಃ ವಿಜ್ಞಾನಮ್ ಚಿತ್ತಮ್ ಇತಿ ಚ ಅನೇಕಧಾ ತತ್ರ ತತ್ರ ಅಭಿಲಪ್ಯತೇ । ಕ್ವಚಿಚ್ಚ ವೃತ್ತಿವಿಭಾಗೇನ ಸಂಶಯಾದಿವೃತ್ತಿಕಂ ಮನಃ ಇತ್ಯುಚ್ಯತೇ, ನಿಶ್ಚಯಾದಿವೃತ್ತಿಕಂ ಬುದ್ಧಿಃ ಇತಿ । ತಚ್ಚ ಏವಂಭೂತಮ್ ಅನ್ತಃಕರಣಮ್ ಅವಶ್ಯಮ್ ಅಸ್ತಿ ಇತಿ ಅಭ್ಯುಪಗನ್ತವ್ಯಮ್ । ಅನ್ಯಥಾ ಹಿ ಅಭ್ಯುಪಗಮ್ಯಮಾನೇ ತಸ್ಮಿನ್ ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಙ್ಗಃ ಸ್ಯಾತ್ । ಆತ್ಮೇನ್ದ್ರಿಯವಿಷಯಾಣಾಮ್ ಉಪಲಬ್ಧಿಸಾಧನಾನಾಂ ಸಂನಿಧಾನೇ ಸತಿ ನಿತ್ಯಮೇವ ಉಪಲಬ್ಧಿಃ ಪ್ರಸಜ್ಯೇತ । ಅಥ ಸತ್ಯಪಿ ಹೇತುಸಮವಧಾನೇ ಫಲಾಭಾವಃ ತತೋ ನಿತ್ಯಮೇವ ಅನುಪಲಬ್ಧಿಃ ಪ್ರಸಜ್ಯೇತ । ನ ಚ

---

1. 'ತಿಳಿಯದೆ ಇರುತ್ತಾರೆ' ಎಂದದ್ದರಿಂದ ತಿಳಿಯುವದಕ್ಕೆ ಕಾರಣವಾದ ಬುದ್ಧಿ ಸಂಯೋಗವು ಬೀಜರೂಪದಿಂದ ಇರುತ್ತದೆ ಎಂದಂತೆ ಆಯಿತು. ಇದು ಅವಿದ್ಯಾತ್ಮಕವು ಎಂದರೆ ಅವಿದ್ಯಾಕಲ್ಪಿತವು. ಬುದ್ಧಿಸಂಯೋಗವು ಮಿಥ್ಯಾಜ್ಞಾನಪುರಃಸರವಾಗಿರುತ್ತದೆ ಎಂದು ಹಿಂದೆ (ಭಾ. ಭಾ. ೧೪೧)ರಲ್ಲಿ ಹೇಳಿರುವದನ್ನು ನೆನಪಿನಲ್ಲಿಡಬೇಕು.

2. ವ್ಯಾಕೃತಾವ್ಯಾಕೃತಗಳೆರಡೂ ಅವಿದ್ಯಾಕಲ್ಪಿತವೆಂದು ೨-೧-೨೭ರಲ್ಲಿ (ಭಾ. ಭಾ. ೪೬೪)ಸ್ಪಷ್ಟನಾಗಿ ಹೇಳಿರುವದರಿಂದ ಬುದ್ಧ್ಯುಪಾಧಿಯು ಅವಿದ್ಯೆಯ ರೂಪದಿಂದ ಸುಷುಪ್ತಿಪ್ರಲಯಗಳಲ್ಲಿರುತ್ತದೆ ಎಂಬ ಕೆಲವರ ವ್ಯಾಖ್ಯಾನವು ಭಾಷ್ಯಪ್ರಸ್ಥಾನಕ್ಕೆ ಹೊಂದಿಲ್ಲವೆಂದು ತಿಳಿಯಬೇಕು.

ಏವಂ ದೃಶ್ಯತೇ। ಅಥವಾ ಅನ್ಯತರಸ್ಯ ಆತ್ಮನಃ ಇನ್ದ್ರಿಯಸ್ಯ ವಾ ಶಕ್ತಿಪ್ರತಿಬನ್ಧಃ ಅಭ್ಯುಪಗನ್ತವ್ಯಃ। ನ ಚ ಆತ್ಮನಃ ಶಕ್ತಿಪ್ರತಿಬನ್ಧಃ ಸಂಭವತಿ। ಅವಿಕ್ರಿಯತ್ವಾತ್। ನಾಪಿ ಇನ್ದ್ರಿಯಸ್ಯ। ನ ಹಿ ತಸ್ಯ ಪೂರ್ವೋತ್ತರಯೋಃ ಕ್ಷಣಯೋಃ ಅಪ್ರತಿಬದ್ಧಶಕ್ತಿಕಸ್ಯ ಸತಃ ಅಕಸ್ಮಾತ್ ಶಕ್ತಿಃ ಪ್ರತಿಬಧ್ಯೇತ। ತಸ್ಮಾತ್ ಯಸ್ಯ ಅವಧಾನಾನವಧಾನಾಭ್ಯಾಮ್ ಉಪಲಬ್ಧ್ಯನುಪಲಬ್ಧೀ ಭವತಃ ತನ್ಮನಃ। ತಥಾ ಚ ಶ್ರುತಿಃ "ಅನ್ಯತ್ರಮನಾ ಅಭೂವಂ ನಾದರ್ಶಮನ್ಯತ್ರಮನಾ ಅಭೂವಂ ನಾಶ್ರೌಷಮಿತಿ। "ಮನಸಾ ಹ್ಯೇವ ಪಶ್ಯತಿ ಮನಸಾ ಶೃಣೋತಿ" (ಬೃ.೧-೫-೩) ಇತಿ। ಕಾಮಾದಯಶ್ಚ ವೃತ್ತಯಃ ಇತಿ ದರ್ಶಯತಿ "ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿರ್ಹ್ರೀರ್ಧೀರ್ಭೀರಿತ್ಯೇತತ್ ಸರ್ವಂ ಮನ ಏವ" (ಬೃ. ೧-೫-೩) ಇತಿ। ತಸ್ಮಾತ್ ಯುಕ್ತಮೇತತ್ "ತದ್ಗುಣಸಾರತ್ವಾತ್ ತದ್ವ್ಯಪದೇಶಃ" (೨-೩-೨೯) ಇತಿ ॥

(ಭಾಷ್ಯಾರ್ಥ)

ಮತ್ತು ಆತ್ಮನಿಗೆ ಉಪಾಧಿಯಾಗಿರುವ ಆ ಅಂತಃಕರಣವನ್ನು ಮನಸ್ಸು, ಬುದ್ಧಿ, ವಿಜ್ಞಾನ, ಚಿತ್ತ– ಎಂದು ಅನೇಕಪ್ರಕಾರವಾಗಿ ಅಲ್ಲಲ್ಲಿ ಕರೆದಿರುತ್ತದೆ. ಕೆಲವು ಕಡೆಯಲ್ಲಿ ವೃತ್ತಿಗಳನ್ನು ವಿಂಗಡಿಸಿ ಸಂಶಯುವೇ ಮುಂತಾದ ವೃತ್ತಿಗಳುಳ್ಳದ್ದು **ಮನಸ್ಸು**, ನಿಶ್ಚಯಾದಿವೃತ್ತಿಗಳುಳ್ಳದ್ದು **ಬುದ್ಧಿ**– ಎಂದು ಹೇಳಿದೆ.[1] ಅಂಥ ಅಂತಃಕರಣವು ಇದೆ ಎಂದು ಅವಶ್ಯವಾಗಿ ಒಪ್ಪಬೇಕು. ಹಾಗಿಲ್ಲದಿದ್ದರೆ, ಅದನ್ನು ಒಪ್ಪದಿದ್ದರೆ, ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗವಾಗುವದು. (ಎಂದರೆ), ಆತ್ಮ, ಇಂದ್ರಿಯ, ವಿಷಯಗಳು– ಎಂಬ ಅರಿವಿನ ಸಾಧನಗಳು ಹತ್ತಿರವಿರುವಾಗ ನಿತ್ಯವೂ ಅರಿವು ಆಗಬೇಕಾಗುವದು; ಹಾಗಲ್ಲದೆ ಹೇತುಗಳು ಇದ್ದುಕೊಂಡಿದ್ದರೂ ಫಲವಾಗುವದಿಲ್ಲವಾದರೆ, ಆಗ ಯಾವಾಗಲೂ ಅರಿವು ಆಗದೆಯೇ ಇರಬೇಕಾಗುವದು. ಆದರೆ ಹೀಗಿರುವದು ಕಂಡುಬಂದಿಲ್ಲ.

ಅಥವಾ ಇವೆರಡರೊಳಗೆ ಒಂದಕ್ಕೆ, ಎಂದರೆ ಆತ್ಮನಿಗೆ ಅಥವಾ ಇಂದ್ರಿಯಕ್ಕೆ ಶಕ್ತಿಯು ಪ್ರತಿಬದ್ಧವಾಗುತ್ತದೆ ಎಂದು ಒಪ್ಪಬೇಕಾಗುವದು. ಆದರೆ ಆತ್ಮನ ಶಕ್ತಿಯು ಪ್ರತಿಬದ್ಧವಾಗುವಂತಿಲ್ಲ; ಏಕೆಂದರೆ (ಅವನು) ವಿಕಾರವಿಲ್ಲದವನಾಗಿರುತ್ತಾನೆ. ಇಂದ್ರಿಯಕ್ಕೂ ಆಗುವಂತಿಲ್ಲ. ಏಕೆಂದರೆ ಹಿಂದುಮುಂದಿನ ಕ್ಷಣಗಳಲ್ಲಿ ಯಾವ ಶಕ್ತಿಪ್ರತಿಬಂಧವೂ ಇಲ್ಲದಿದ್ದರೂ (ನಡುವೆ) ಅದಕ್ಕೆ ಅಕಸ್ಮಾತ್ತಾಗಿ ಶಕ್ತಿಯು ಪ್ರತಿಬಂಧವಾಗಿದೆ ಎನ್ನುವದಕ್ಕಾಗಲಾರದಷ್ಟೆ. ಆದ್ದರಿಂದ ಯಾವದರ ಅವಧಾನ, ಅನವಧಾನ– ಇವುಗಳಿಂದ

1. ಇಲ್ಲಿ ಯಾವಯಾವ ವೃತ್ತಿಗಳನ್ನು ಮನಸ್ಸಿಗೆ ಮತ್ತು ಬುದ್ಧಿಗೆ ಹಂಚಿಕೊಟ್ಟಿದೆ ಎಂಬುದು ತಿಳಿಯುವಂತಿಲ್ಲ.

ಅರಿವೂ ಅರಿವಾಗದಿರುವಡೂ ಆಗುವವ್ಪೋ ಅದೇ ಮನಸ್ಸು. ಆದ್ದರಿಂದಲೇ "ಮತ್ತೊಂದು ಕಡೆಯಲ್ಲಿ ಮನಸ್ಸುಳ್ಳವನಾಗಿದ್ದೆನು, ಕಾಣಲಿಲ್ಲ; ಮತ್ತೊಂದು ಕಡೆಯಲ್ಲಿ ಮನಸ್ಸುಳ್ಳವನಾಗಿದ್ದೆನು, ಕೇಳಲಿಲ್ಲ ಎನ್ನುತ್ತಾನೆ; ಏಕೆಂದರೆ ಮನಸ್ಸಿನಿಂದಲೇ ನೋಡುತ್ತಾನೆ, ಮನಸ್ಸಿನಿಂದಲೇ ಕೇಳುತ್ತಾನೆ. (ಬೃ. ೧-೫-೩) ಎಂದು ಶ್ರುತಿಯಿದೆ. ಮತ್ತು ಕಾಮಾದಿಗಳು ಇದರ ವೃತ್ತಿಗಳು[1] ಎಂದು "ಕಾಮ, ಸಂಕಲ್ಪ, ಸಂಶಯ, ಶ್ರದ್ಧೆ, ಅಶ್ರದ್ಧೆ, ಧೃತಿ, ಅಧೃತಿ, ನಾಚಿಕೆ, ತಿಳಿವಳಿಕೆ, ಅಂಜಿಕೆ- ಎಂಬುದೆಲ್ಲವೂ ಮನಸ್ಸೇ'' (ಬೃ. ೧-೫-೩) ಎಂಬ (ಶ್ರುತಿಯು) ತಿಳಿಸುತ್ತದೆ. ಆದ್ದರಿಂದ "ತದ್ಗುಣಸಾರನಾಗಿರುವದರಿಂದ ಆ ವ್ಯಪದೇಶವಾಗಿರುತ್ತದೆ'' (೨-೩-೨೯) ಎಂದಿತಲ್ಲ, ಅದು ಯುಕ್ತವೇ.

## ೧೪. ಕರ್ತ್ರಧಿಕರಣ (ಸೂ. ೩೩-೪೦)

### (ಜೀವನ ಕರ್ತೃತ್ವ)

**ಕರ್ತಾ ಶಾಸ್ತ್ರಾರ್ಥವತ್ತ್ವಾತ್ ॥ ೩೩ ॥**

೩೩. (ಜೀವನು) ಕರ್ತೃ; ಏಕೆಂದರೆ ಶಾಸ್ತ್ರವು ಸಾರ್ಥಕವಾಗಬೇಕಾಗಿದೆ.

## ಜೀವನು ಕರ್ತೃವೆಂದರೆ ಶಾಸ್ತ್ರವು ಸಾರ್ಥಕ

### (ಭಾಷ್ಯ)

೧೪೪. ತದ್ಗುಣಸಾರತ್ವಾಧಿಕಾರೇಣೈವ ಅಪರೋಽಪಿ ಜೀವಧರ್ಮಃ ಪ್ರಪಞ್ಚ್ಯತೇ । ಕರ್ತಾ ಚಾಯಂ ಜೀವಃ ಸ್ಯಾತ್ । ಕಸ್ಮಾತ್ ? ಶಾಸ್ತ್ರಾರ್ಥವತ್ತ್ವಾತ್ । ಏವಂ ಚ 'ಯಜೇತ', 'ಜುಹುಯಾತ್', 'ದದ್ಯಾತ್' ಇತ್ಯೇವಂವಿಧಂ ವಿಧಿಶಾಸ್ತ್ರಮ್ ಅರ್ಥವತ್ ಭವತಿ । ಅನ್ಯಥಾ ತತ್ ಅನರ್ಥಕಂ ಸ್ಯಾತ್ । ತದ್ ಹಿ ಕರ್ತುಃ ಸತಃ ಕರ್ತವ್ಯವಿಶೇಷಮ್ ಉಪದಿಶತಿ । ನ ಚ ಅಸತಿ ಕರ್ತೃತ್ವೇ ತತ್ ಉಪಪದ್ಯೇತ । ತಥಾ ಇದಮಪಿ ಶಾಸ್ತ್ರಮ್ ಅರ್ಥವದ್ ಭವತಿ "ಏಷ ಹಿ ದ್ರಷ್ಟಾ ಶ್ರೋತಾ ಮನ್ತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ'' (ಪ್ರ. ೪-೯) ಇತಿ ॥

---

1. ಮನಸ್ಸು ಕಾಮಾದಿಗಳ ರೂಪದಲ್ಲಿ ಪರಿಣಮಿಸಿ ಪಡೆಯುವ ಆಕಾರಗಳು ವೃತ್ತಿಗಳು ಎನಿಸುತ್ತವೆ.

(ಭಾಷ್ಯಾರ್ಥ)

ತದ್ಗುಣಸಾರತ್ವದ ಪ್ರಕರಣದಲ್ಲಿಯೇ ಮತ್ತೊಂದು ಜೀವಧರ್ಮವನ್ನು ವಿವರಿಸಲಾಗುತ್ತದೆ.[1] ಈ ಜೀವನು ಕರ್ತೃವಾಗಿಯೂ ಇರುತ್ತಾನೆ. ಏಕೆ? ಎಂದರೆ ಶಾಸ್ತ್ರವು ಅರ್ಥವತ್ತಾಗಬೇಕಾಗಿರುವದರಿಂದ. ಹೀಗಾದರೆ 'ಯಜೇತ' (ಯಾಗಮಾಡಬೇಕು), 'ಜುಹುಯಾತ್' (ಹೋಮಮಾಡಬೇಕು), 'ದದ್ಯಾತ್' (ಕೊಡಬೇಕು)– ಎಂಬೀ ವಿಧದ ವಿಧಿಶಾಸ್ತ್ರವು ಸಾರ್ಥಕವಾಗುತ್ತದೆ. ಹಾಗಿಲ್ಲದಿದ್ದರೆ ಅದು ವ್ಯರ್ಥವಾಗುವದು. ಆ (ಶಾಸ್ತ್ರವು) ಕರ್ತೃವಾಗಿರುವವನಿಗಲ್ಲವೆ, ಕರ್ತವ್ಯವಿಶೇಷವನ್ನು ಉಪದೇಶಿಸುತ್ತದೆ? ಆದರೆ ಕರ್ತೃತ್ವವು ಇಲ್ಲದಿದ್ದರೆ ಅದು ಉಪಪನ್ನವಾಗಲಾರದು. ಇದರಂತೆ "ದ್ರಷ್ಟೃವೂ ಶ್ರೋತೃವೂ ಮಂತೃವೂ ಬೋದ್ಧೃವೂ ಕರ್ತೃವೂ ವಿಜ್ಞಾನಾತ್ಮನೂ ಆದ ಈ ಪುರುಷನಿದಾನಲ್ಲ...." (ಪ್ರ. ೫–೯) ಎಂಬೀ ಶಾಸ್ತ್ರವೂ (ಈ ಪಕ್ಷದಲ್ಲಿಯೇ) ಸಾರ್ಥಕವಾಗುತ್ತದೆ.

**ವಿಹಾರೋಪದೇಶಾತ್ ॥ ೩೪ ॥**

೩೪. ವಿಹಾರವನ್ನು ಉಪದೇಶಿಸಿರುವದರಿಂದಲೂ (ಜೀವನು ಕರ್ತೃ).

## ಜೀವನಿಗೆ ಸ್ವಪ್ನದಲ್ಲಿ ವಿಹಾರವನ್ನು ಹೇಳಿದೆ

(ಭಾಷ್ಯ)

೧೫೪. ಇತಶ್ಚ ಜೀವಸ್ಯ ಕರ್ತೃತ್ವಮ್, ಯತ್ ಜೀವಪ್ರಕ್ರಿಯಾಯಾಂ ಸಂಧ್ಯೇ ಸ್ಥಾನೇ ವಿಹಾರಮ್ ಉಪದಿಶತಿ "ಸ ಈಯತೇಽಮೃತೋ ಯತ್ರ ಕಾಮಮ್" (ಬೃ. ೪–೩–೧೨) ಇತಿ "ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ" (ಬೃ. ೨–೧–೧೮) ಇತಿ ಚ ॥

(ಭಾಷ್ಯಾರ್ಥ)

ಇದರಿಂದಲೂ ಜೀವನು ಕರ್ತೃ. ಏಕೆಂದರೆ ಜೀವನ ಪ್ರಕರಣದಲ್ಲಿ "ಅಮೃತನಾದ ಆ (ಆತ್ಮನು) ಎಲ್ಲಿ ಕಾಮವುಂಟಾಗುವದೋ (ಅಲ್ಲಿಗೆ) ಹೋಗುತ್ತಾನೆ" (ಬೃ. ೪–೩–೧೨) ಎಂದೂ "ತನ್ನ ಶರೀರದಲ್ಲಿ ಕಾಮವಿದ್ದ ತೆ ಓಡಾಡುತ್ತಾನೆ" (ಬೃ. ೨–೧–೧೮) ಎಂದೂ ಸಂಧ್ಯಸ್ಥಾನದಲ್ಲಿ (ಇವನಿಗೆ) ವಿಹಾರವನ್ನು (ಶ್ರುತಿಯು) ತಿಳಿಸುತ್ತದೆ.

---

1. ಅಂತಃಕರಣದ ಸಂಬಂಧದಿಂದ ಅಣುತ್ವಾದಿವ್ಯಪದೇಶಗಳು ಆಗಿರುವಂತೆ ಕರ್ತೃತ್ವವ್ಯಪದೇಶವೂ ಅದರ ಸಂಬಂಧದಿಂದಲೇ ಎಂದು ವಿವರಿಸಲಾಗುತ್ತದೆ.

**ಉಪಾದಾನಾತ್ ॥ ೩೫ ॥**

೩೫. ಸ್ವೀಕಾರವನ್ನು (ಹೇಳಿರುವ)ದರಿಂದಲೂ (ಕರ್ತೃ).

## ಕರಣಗಳನ್ನು ತೆಗೆದುಕೊಳ್ಳುವನೆಂದು ಹೇಳಿದೆ

(ಭಾಷ್ಯ)

೧೪೬. ಇತಶ್ಚ ಅಸ್ಯ ಕರ್ತೃತ್ವಮ್, ಯತ್ ಜೀವಪ್ರಕ್ರಿಯಾಯಾಮೇವ ಕರಣಾನಾಮ್ ಉಪಾದಾನಂ ಸಂಕೀರ್ತಯತಿ — "ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ" (ಬೃ. ೨-೧-೧೭), "ಪ್ರಾಣಾನ್ ಗೃಹೀತ್ವಾ" (ಬೃ. ೨-೧-೧೮) ಇತಿ ಚ ॥

(ಭಾಷ್ಯಾರ್ಥ)

ಇದರಿಂದಲೂ ಇವನು ಕರ್ತೃ. ಏಕೆಂದರೆ ಜೀವಪ್ರಕ್ರಿಯೆಯಲ್ಲಿಯೇ (ಇವನು) ಕರಣಗಳನ್ನು ಸ್ವೀಕರಿಸುತ್ತಾನೆಂದು "ಆಗ ಈ ಪ್ರಾಣಗಳ ವಿಜ್ಞಾನವನ್ನು ವಿಜ್ಞಾನದಿಂದ ಸ್ವೀಕರಿಸಿ" (ಬೃ.೨-೧-೧೭) ಎಂದೂ "ಪ್ರಾಣಗಳನ್ನು ಸ್ವೀಕರಿಸಿ" (ಬೃ. ೨-೧-೧೮) ಎಂದೂ (ಶ್ರುತಿಗಳಲ್ಲಿ) ಹೇಳಿರುತ್ತದೆ.

**ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ ॥೩೬॥**

೩೬. ಕ್ರಿಯೆಯಲ್ಲಿ (ಕರ್ತೃತ್ವವನ್ನು) ಹೇಳಿರುವದರಿಂದಲೂ (ಇವನು ಕರ್ತೃ). ಹಾಗಿಲ್ಲದಿದ್ದರೆ ವಿಪರೀತವಾಗಿ ನಿರ್ದೇಶ(ವಾಗಬೇಕಿತ್ತು).

## ಶ್ರುತಿಯಲ್ಲಿ ಆತ್ಮನನ್ನು ಕರ್ತೃವೆಂದಿದೆ

(ಭಾಷ್ಯ)

೧೪೭. ಇತಶ್ಚ ಜೀವಸ್ಯ ಕರ್ತೃತ್ವಮ್, ಯದಸ್ಯ ಲೌಕಿಕೇಷು ವೈದಿಕೇಷು ಚ ಕ್ರಿಯಾಸು ಕರ್ತೃತ್ವಂ ವ್ಯಪದಿಶತಿ ಶಾಸ್ತ್ರಮ್ "ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ" (ತೈ. ೨-೫) ಇತಿ । ನನು ವಿಜ್ಞಾನಶಬ್ದೋ ಬುದ್ಧೌ ಸಮಧಿಗತಃ । ಕಥಮ್ ಅನೇನ ಜೀವಸ್ಯ ಕರ್ತೃತ್ವಂ ಸೂಚ್ಯತೇ ಇತಿ ? ನೇತ್ಯುಚ್ಯತೇ । ಜೀವಸ್ಯೈಷ ನಿರ್ದೇಶೋ ನ ಬುದ್ಧೇಃ । ನ ಚೇತ್ ಜೀವಸ್ಯ ಸ್ಯಾತ್ ನಿರ್ದೇಶವಿಪರ್ಯಯಃ ಸ್ಯಾತ್ । ವಿಜ್ಞಾನೇನ ಇತ್ಯೇವಂ ನಿರದೇಕ್ಷ್ಯತ್ । ತಥಾ ಹಿ ಅನ್ಯತ್ರ ಬುದ್ಧಿವಿವಕ್ಷಾಯಾಂ ವಿಜ್ಞಾನ

ಶಬ್ದಸ್ಯ ಕರಣವಿಭಕ್ತಿನಿರ್ದೇಶೋ ದೃಶ್ಯತೇ "ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ" (ಬೃ. ೨-೧-೧೭) ಇತಿ । ಇಹ ತು "ವಿಜ್ಞಾನಂ ಯಜ್ಞಂ ತನುತೇ" (ತೈ. ೨-೫) ಇತಿ ಕರ್ತೃಸಾಮಾನಾಧಿಕರಣ್ಯನಿರ್ದೇಶಾತ್ ಬುದ್ಧಿವ್ಯತಿರಿಕ್ತಸ್ಯೈವ ಆತ್ಮನಃ ಕರ್ತೃತ್ವಂ ಸೂಚ್ಯತೇ ಇತ್ಯದೋಷಃ ॥

(ಭಾಷ್ಯಾರ್ಥ)

ಇದರಿಂದಲೂ ಜೀವನಿಗೆ ಕರ್ತೃತ್ವವಿದೆ (ಎನ್ನಬೇಕು). ಏಕೆಂದರೆ ಲೌಕಿಕ(ಕ್ರಿಯೆಗಳಲ್ಲಿಯೂ) ವೈದಿಕಕ್ರಿಯೆಗಳಲ್ಲಿಯೂ (ಇವನಿಗೆ) ಕರ್ತೃತ್ವವಿದೆ ಎಂದು "ವಿಜ್ಞಾನವು ಯಜ್ಞವನ್ನು ಮಾಡುತ್ತದೆ, ಕರ್ಮಗಳನ್ನೂ ಮಾಡುತ್ತದೆ" (ತೈ. ೨-೫) ಎಂಬ ಶಾಸ್ತ್ರವು ಹೇಳುತ್ತಿದೆ.

(ಆಕ್ಷೇಪ):- ವಿಜ್ಞಾನಶಬ್ದವು ಬುದ್ಧಿಯಲ್ಲಿ (ರೂಢವಾಗಿದೆ ಎಂದು) ಗೊತ್ತಾಗಿದೆಯಲ್ಲ! ಈ (ವಚನ)ದಿಂದ ಜೀವನಿಗೆ ಕರ್ತೃತ್ವವನ್ನು ಸೂಚಿಸಿದೆ ಎಂಬುದು ಹೇಗೆ ?

(ಪರಿಹಾರ):-ಇಲ್ಲ, ಎನ್ನುತ್ತೇವೆ. ಈ ನಿರ್ದೇಶವು ಜೀವನಿಗೆ (ಹೇಳಿದ್ದೇ) ಹೊರತು ಬುದ್ಧಿಗೆ (ಹೇಳಿದ್ದ)ಲ್ಲ. (ಇದು) ಜೀವನನ್ನು (ಹೇಳಿ)ದ್ದಲ್ಲದೆ ಇದ್ದರೆ (ಇದಕ್ಕೆ) ವಿಪರೀತವಾಗಿ ನಿರ್ದೇಶವಾಗಬೇಕಾಗಿತ್ತು, 'ವಿಜ್ಞಾನದಿಂದ' ಎಂದೇ (ಶ್ರುತಿಯು) ಹೇಳುತ್ತಿತ್ತು. ಏಕೆಂದರೆ ಬುದ್ಧಿಯನ್ನು ಹೇಳಬೇಕೆಂಬ ಅಭಿಪ್ರಾಯದಿಂದ ಮತ್ತೊಂದು ಕಡೆಯಲ್ಲಿ "ಆಗ ಈ ಪ್ರಾಣಗಳ ವಿಜ್ಞಾನದಿಂದ ವಿಜ್ಞಾನವನ್ನು ತೆಗೆದುಕೊಂಡು" (ಬೃ. ೩-೧-೧೭) ಎಂದು ವಿಜ್ಞಾನಶಬ್ದವು ಕರಣವಿಭಕ್ತಿಯನ್ನು ತಿಳಿಸಿರುವದು ಕಂಡುಬರುತ್ತದೆ. ಆದರೆ ಇಲ್ಲಿ 'ವಿಜ್ಞಾನವು ಯಜ್ಞವನ್ನು ಮಾಡುತ್ತದೆ' ಎಂದು ಕರ್ತೃವಿಗೆ ಸಮಾನಾಧಿಕರಣವಾಗಿ ತಿಳಿಸಿರುವದರಿಂದ[1] ಬುದ್ಧಿಗಿಂತ ಬೇರೆಯಾಗಿರುವ ಆತ್ಮನಿಗೇ (ಇಲ್ಲಿ) ಕರ್ತೃತ್ವವು ಸೂಚಿತವಾಗಿರುತ್ತದೆ ಎಂಬಲ್ಲಿ (ಯಾವ) ದೋಷವೂ ಇಲ್ಲ.

**ಉಪಲಬ್ಧಿವದನಿಯಮಃ ॥ ೩೭ ॥**

೩೭. ಉಪಲಬ್ಧಿಯಂತೆ ನಿಯಮವಿಲ್ಲ.

## ಸ್ವತಂತ್ರನೂ ಅಹಿತವನ್ನು ಮಾಡಿಕೊಳ್ಳಬಹುದು

**(ಭಾಷ್ಯ)**

೧೪೮. ಅತ್ರಾಹ- ಯದಿ ಬುದ್ಧಿವ್ಯತಿರಿಕ್ತೋ ಜೀವಃ ಕರ್ತಾ ಸ್ಯಾತ್

---

1. ವಿಜ್ಞಾನವು ಎಂದರೆ ಯಾವದರಿಂದ ಅರಿಯುತ್ತಾರೋ ಅದು ಎಂಬರ್ಥದಲ್ಲಿ ಉಪಯೋಗಿಸಿದ್ದರೆ ವಿಜ್ಞಾನೇನ ಎಂದು ತೃತೀಯಾವಿಭಕ್ತಿಪ್ರತ್ಯಯವು ಅದಕ್ಕೆ ಬರುತ್ತಿತ್ತು, ವಿಜ್ಞಾನಮ್ ಎಂದು ಪ್ರಥಮಾವಿಭಕ್ತಿಯು ಬಂದಿರುವದರಿಂದ ಯಾವನು ಅರಿಯುತ್ತಾನೋ, ಅವನು ಎಂದು ಅರ್ಥಮಾಡಬೇಕು.

ಸ ಸ್ವತನ್ತ್ರಃ ಸನ್ ಪ್ರಿಯಂ ಹಿತಂ ಚೈವ ಆತ್ಮನೋ ನಿಯಮೇನ ಸಂಪಾದಯೇತ್, ನ ವಿಪರೀತಮ್। ವಿಪರೀತಮಪಿ ತು ಸಂಪಾದಯನ್ ಉಪಲಭ್ಯತೇ। ನ ಚ ಸ್ವತನ್ತ್ರಸ್ಯ ಆತ್ಮನ ಈದೃಶೀ ಪ್ರವೃತ್ತಿಃ ಅನಿಯಮೇನ ಉಪಪದ್ಯತೇ ಇತಿ। ಅತ ಉತ್ತರಂ ಪಠತಿ– (ಉಪಲಬ್ಧಿವದನಿಯಮಃ)। ಯಥಾ ಅಯಮಾತ್ಮಾ ಉಪಲಬ್ಧಿಂ ಪ್ರತಿ ಸ್ವತನ್ತ್ರೋಽಪಿ ಅನಿಯಮೇನ ಇಷ್ಟಮನಿಷ್ಟಂ ಚ ಉಪಲಭತೇ ಏವಮ್ ಅನಿಯಮೇನೈವ ಇಷ್ಟಮ್ ಅನಿಷ್ಟಂ ಚ ಸಂಪಾದಯಿಷ್ಯತಿ। ಉಪಲಬ್ಧಾವಪಿ ಅಸ್ವಾತನ್ತ್ರ್ಯಮ್ ಉಪಲಬ್ಧಿಹೇತೂಪಾದಾನೋಪಲಮ್ಭಾತ್ ಇತಿ ಚೇತ್ । ನ। ವಿಷಯಪ್ರಕಲ್ಪನಾಮಾತ್ರಪ್ರಯೋಜನತ್ವಾತ್ ಉಪಲಬ್ಧಿಹೇತೂನಾಮ್। ಉಪಲಬ್ಧೌ ತು ಅನನ್ಯಾಪೇಕ್ಷತ್ವಮ್ ಆತ್ಮನಃ । ಚೈತನ್ಯಯೋಗಾತ್ । ಅಪಿ ಚ ಅರ್ಥಕ್ರಿಯಾಯಾಮಪಿ ನಾತ್ಯನ್ತಮ್ ಆತ್ಮನಃ ಸ್ವಾತನ್ತ್ರ್ಯಮ್ ಅಸ್ತಿ। ದೇಶಕಾಲನಿಮಿತ್ತವಿಶೇಷಾಪೇಕ್ಷತ್ವಾತ್। ನ ಚ ಸಹಾಯಾಪೇಕ್ಷಸ್ಯ ಕರ್ತುಃ ಕರ್ತೃತ್ವಂ ನಿವರ್ತತೇ। ಭವತಿ ಹಿ ಏಧೋದಕಾದ್ಯಪೇಕ್ಷಸ್ಯಾಪಿ ಪಕ್ತುಃ ಪಕ್ತೃತ್ವಮ್। ಸಹಕಾರಿವೈಚಿತ್ರ್ಯಾಚ್ಚ ಇಷ್ಟಾನಿಷ್ಟಾರ್ಥಕ್ರಿಯಾಯಾಮ್ ಅನಿಯಮೇನ ಪ್ರವೃತ್ತಿರಾತ್ಮನೋ ನ ವಿರುಧ್ಯತೇ ॥

(ಭಾಷ್ಯಾರ್ಥ)

(ಆಕ್ಷೇಪ) :– ಇಲ್ಲಿ (ಆಕ್ಷೇಪಕನು) ಹೇಳುತ್ತಾನೇನೆಂದರೆ: ಬುದ್ಧಿಗಿಂತ ಬೇರೆಯಾಗಿರುವ ಜೀವನು ಕರ್ತೃವಾದರೆ ಅವನು ಸ್ವತಂತ್ರನಾಗಿರುವದರಿಂದ ಪ್ರಿಯವೂ ಹಿತವೂ ಆದದ್ದನ್ನೇ ಗೊತ್ತಾಗಿ ಸಂಪಾದಿಸಿಕೊಳ್ಳಬೇಕೇ ಹೊರತು (ಅದಕ್ಕೆ) ವಿಪರೀತವಾದದ್ದನ್ನು (ಸಂಪಾದಿಸಿಕೊಳ್ಳ)ಬಾರದು. ಆದರೆ ವಿಪರೀತವಾದದ್ದನ್ನು ಉಂಟುಮಾಡಿಕೊಳ್ಳುತ್ತಿರುವದು ಕಂಡುಬರುತ್ತದೆ. ಸ್ವತಂತ್ರನಾದವನಿಗೆ ಇಂಥ ಅನಿಯಮದ ಪ್ರವೃತ್ತಿಯು ಯುಕ್ತವಲ್ಲವಲ್ಲ !

ಇದಕ್ಕೆ (ಸೂತ್ರಕಾರರು) ಉತ್ತರವನ್ನು ಹೇಳುತ್ತಾರೆ: ('ಉಪಲಬ್ಧಿವದನಿಯಮಃ') । ಹೇಗೆ ಈ ಆತ್ಮನು ಅರಿವಿನ ವಿಷಯದಲ್ಲಿ ಸ್ವತಂತ್ರನಾದರೂ ಅನಿಯಮವಾಗಿ ಇಷ್ಟವಾದದ್ದನ್ನೂ ಅನಿಷ್ಟವಾದದ್ದನ್ನೂ ಅನಿಯಮದಿಂದಲೇ ಅರಿಯುತ್ತಿರುವನೋ ಹೀಗೆಯೇ ಇಷ್ಟವಾದದ್ದನ್ನೂ ಅನಿಷ್ಟವಾದದ್ದನ್ನೂ ಅನಿಯಮದಿಂದಲೇ ಉಂಟುಮಾಡಿಕೊಳ್ಳಬಹುದು.

(ಆಕ್ಷೇಪ) :– ಇವನಿಗೆ ಅರಿವಿನ (ವಿಷಯ)ದಲ್ಲಿಯೂ ಸ್ವಾತಂತ್ರ್ಯವಿರುವದಿಲ್ಲ; ಏಕೆಂದರೆ ಅರಿವಿಗೆ ಕಾರಣವಾಗಿರುವ (ಇಂದ್ರಿಯಗಳನ್ನು) ಸ್ವೀಕರಿಸುವದು ಕಂಡುಬರುತ್ತದೆ.

(ಪರಿಹಾರ) :– ಹಾಗಲ್ಲ. ಏಕೇದರೆ ಅರಿವಿಗೆ ಹೇತುಗಳಾದ (ಇಂದ್ರಿಯಗಳಿಗೆ) ವಿಷಯಗಳನ್ನು ಗೊತ್ತುಪಡಿಸುವದೇ ಪ್ರಯೋಜನವು ; ಅರಿವಿನ ವಿಷಯದಲ್ಲಿಯೋ ಎಂದರೆ ಆತ್ಮನಿಗೆ ಮತ್ತೊಂದರ ಅಪೇಕ್ಷೆಯಿಲ್ಲ; ಏಕೆಂದರೆ (ಅವನಿಗೆ) ಚೈತನ್ಯದ ಸಂಬಂಧವಿದೆ.[1] ಇದೂ ಅಲ್ಲದೆ ಅರ್ಥಕ್ರಿಯೆಯಲ್ಲಿಯೂ ಆತ್ಮನಿಗೆ ಅತ್ಯಂತಸ್ವಾತಂತ್ರ್ಯವಿರುವದಿಲ್ಲ ; ಏಕೆಂದರೆ ಆಯಾ ದೇಶ, ಕಾಲ, ನಿಮಿತ್ತ –(ಇವುಗಳ) ಅಪೇಕ್ಷೆಯು (ಅಲ್ಲಿಯೂ) ಇರುತ್ತದೆ.[2] ಸಹಾಯವನ್ನು ಅಪೇಕ್ಷಿಸುವ (ಮಾತ್ರದಿಂದ) ಕರ್ತೃವಿಗೆ ಕರ್ತೃತ್ವವು ತಪ್ಪುವದೂ ಇಲ್ಲ. ಕಟ್ಟಿಗೆ, ನೀರು– ಮುಂತಾದದ್ದನ್ನು ಅಪೇಕ್ಷಿಸುವ ಅಡಿಗೆಯವನೂ ಅಡಿಗೆಯವನಾಗಿಯೇ ಇರುತ್ತಾನಲ್ಲವೆ ? ಮತ್ತು ಸಹಕಾರಿಗಳು ಬಗೆಬಗೆಯಾಗಿರುವದರಿಂದಲೇ ಇಷ್ಟವಾದ ಅಥವಾ ಅನಿಷ್ಟವಾದ ಅರ್ಥವನ್ನು ಮಾಡಿಕೊಳ್ಳುವದರಲ್ಲಿ ಆತ್ಮನು ನಿಯಮವಿಲ್ಲದೆ ಪ್ರವರ್ತಿಸುವನೆಂಬುದು ವಿರುದ್ಧವಲ್ಲ.[3]

**ಶಕ್ತಿವಿಪರ್ಯಯಾತ್ ॥ ೩೮ ॥**

೩೮. ಶಕ್ತಿಯ ವೈಪರೀತ್ಯವಾದೀತಾದ್ದರಿಂದ (ಜೀವನು ಕರ್ತೃ).

## ಬುದ್ಧಿಯೇ ಕರ್ತೃವಾದರೆ ಶಕ್ತಿವೈಪರೀತ್ಯವಾಗುವದು

(ಭಾಷ್ಯ)

೧೪೯. ಇತಶ್ಚ ವಿಜ್ಞಾನವ್ಯತಿರಿಕ್ತೋ ಜೀವಃ ಕರ್ತಾ ಭವಿತುಮರ್ಹತಿ । ಯದಿ ಪುನರ್ವಿಜ್ಞಾನಶಬ್ದವಾಚ್ಯಾ ಬುದ್ಧಿರೇವ ಕರ್ತ್ರೀ ಸ್ಯಾತ್, ತತಃ ಶಕ್ತಿವಿಪರ್ಯಯಃ ಸ್ಯಾತ್ । ಕರಣಶಕ್ತಿರ್ಬುದ್ಧೇರ್ಹೀಯೇತ, ಕರ್ತೃಶಕ್ತಿಶ್ಚ

---

1. ಕಣ್ಣು ರೂಪವೊಂದನ್ನೇ ನೋಡುತ್ತದೆ, ಕಿವಿಯು ಶಬ್ದವೊಂದನ್ನೇ ಕೇಳುತ್ತದೆ –ಎಂದು ಆಯಾ ವಿಷಯವನ್ನು ಗೊತ್ತುಪಡಿಸುವದಕ್ಕೆ ಇಂದ್ರಿಯಗಳ ವಿನಿಯೋಗವಾಗಿರುತ್ತದೆ ; ಆದರೆ ಜ್ಞಾನಸಾಮಾನ್ಯವು ಆತ್ಮನದೇ ಆಗಿರುತ್ತದೆ. ಏಕೆಂದರೆ ಆತ್ಮನಿಗೆ ಚೈತನ್ಯವು ಸ್ವರೂಪವೇ ಆಗಿರುವದರಿಂದ ಅವನಿಗೆ ಅರಿವಿನ ಸಂಬಂಧವು ನಿತ್ಯವಾಗಿರುತ್ತದೆ ಛಾಂ. ಭಾ. ೮–೧೨–೫ನ್ನು ನೋಡಿ.

2. ದೇಶಕಾಲಾದಿಗಳ ಅಪೇಕ್ಷೆಯಿಂದಲೇ ಕ್ರಿಯೆಯನ್ನು ಮಾಡಿಕೊಳ್ಳುವದರಿಂದ ಅರ್ಥಕ್ರಿಯೆಯನ್ನು ಸ್ವತಂತ್ರವಾಗಿ ಮಾಡಿಕೊಳ್ಳುತ್ತಾನೆಂದು ಹೇಳುವಂತೆಯೂ ಇಲ್ಲ. –ಎಂದು ಅಭಿಪ್ರಾಯ. ಇದೂ ಪ್ರೌಢವಾದವು ; ಏಕೆಂದರೆ ಆತ್ಮನಿಗೆ ಸ್ವತಃ ಕರ್ತೃತ್ವವಿಲ್ಲವೆಂಬುದೇ ಸಿದ್ಧಾಂತಿಗೆ ಇಷ್ಟ ; ಇದು ಮುಂದಿನ ಅಧಿಕರಣದಲ್ಲಿ ಸ್ಪಷ್ಟವಾಗುವದು.

3. ದಕ್ಷನಾದ ಅಡಿಗೆಯವನಿಗೂ ಸಹಕಾರಿಗಳು ಸರಿಯಾಗಿಲ್ಲದಿದ್ದರೆ ಅಡಿಗೆಯು ಕೆಟ್ಟುಹೋಗಬಹುದಾಗಿರುವಂತೆ ಸಹಕಾರಿಗಳ ವೈಚಿತ್ರ್ಯದಿಂದ ಇಷ್ಟವೂ ಅನಿಷ್ಟವೂ ಒದಗಬಹುದು. ಕಾರಕಗಳನ್ನು ಸ್ವತಂತ್ರನಾಗಿ ಪ್ರಯೋಗಿಸುವದೇ ಕರ್ತೃತ್ವವು; ಇತರಾನಪೇಕ್ಷತ್ವವಲ್ಲ– ಎಂದು ಅಭಿಪ್ರಾಯ.

ಆಪದ್ಯೇತ । ಸತ್ಯಾಂ ಚ ಬುದ್ಧೇಃ ಕರ್ತೃಶಕ್ತೌ ತಸ್ಯಾ ಏವ ಅಹಂಪ್ರತ್ಯಯ ವಿಷಯತ್ವಮ್ ಅಭ್ಯುಪಗನ್ತವ್ಯಮ್ । ಅಹಂಕಾರಪೂರ್ವಿಕಾಯಾ ಏವ ಪ್ರವೃತ್ತೇಃ ಸರ್ವತ್ರ ದರ್ಶನಾತ್ 'ಅಹಂ ಗಚ್ಛಾಮಿ', 'ಅಹಮ್ ಆಗಚ್ಛಾಮಿ' 'ಅಹಂ ಭುಞ್ಜೇ', 'ಅಹಂ ಪಿಬಾಮಿ' ಇತಿ ಚ । ತಸ್ಯಾಶ್ಚ ಕರ್ತೃಶಕ್ತಿಯುಕ್ತಾಯಾಃ ಸರ್ವಾರ್ಥಕಾರಿ ಕರಣಮ್ ಅನ್ಯತ್ ಕಲ್ಪಯಿತವ್ಯಮ್ । ಶಕ್ತೋಽಪಿ ಹಿ ಸನ್ ಕರ್ತಾ ಕರಣಮ್ ಉಪಾದಾಯ ಕ್ರಿಯಾಸು ಪ್ರವರ್ತಮಾನೋ ದೃಶ್ಯತ ಇತಿ । ತತಶ್ಚ ಸಂಜ್ಞಾಮಾತ್ರೇ ವಿವಾದಃ ಸ್ಯಾತ್ । ನ ವಸ್ತುಭೇದಃ ಕಶ್ಚಿತ್ । ಕರಣವ್ಯತಿರಿಕ್ತಸ್ಯ ಕರ್ತೃತ್ವಾಭ್ಯುಪಗಮಾತ್ ॥

(ಭಾಷ್ಯಾರ್ಥ)

ಇದರಿಂದಲೂ ವಿಜ್ಞಾನಕ್ಕಿಂತ ಬೇರೆಯಾದ ಜೀವನು ಕರ್ತೃವಾಗಿರಬೇಕು. (ಏಕೆಂದರೆ) ಹೀಗಲ್ಲದೆ ವಿಜ್ಞಾನಶಬ್ದವಾಚ್ಯವಾದ ಬುದ್ಧಿಯೇ ಕರ್ತೃವಾಗಿದ್ದರೆ ಆಗ ಶಕ್ತಿಯ ವೈಪರೀತ್ಯವಾದೀತು ; ಬುದ್ಧಿಗೆ ಕರಣಶಕ್ತಿಯು ಹೋಗಿಬಿಡಬೇಕಾಗುವದು, ಕರ್ತೃಶಕ್ತಿಯೇ ಉಂಟಾಗಬೇಕಾಗುವದು. ಮತ್ತು ಬುದ್ಧಿಗೆ ಕರ್ತೃಶಕ್ತಿಯಿದ್ದರೆ ಅದೇ ಅಹಂಪ್ರತ್ಯಯಕ್ಕೆ ವಿಷಯವೆಂದು ಒಪ್ಪಬೇಕಾಗುವದು ; ಏಕೆಂದರೆ 'ನಾನು ಹೋಗುತ್ತೇನೆ', 'ನಾನು ಬರುತ್ತೇನೆ', 'ನಾನು ಊಟಮಾಡುತ್ತೇನೆ', 'ನಾನು ಕುಡಿಯುತ್ತೇನೆ' ಎಂದು ಎಲ್ಲೆಲ್ಲಿಯೂ ಅಹಂಕಾರಪೂರ್ವಕವಾಗಿಯೇ (ಆಗುವದು) ಕಂಡುಬರುತ್ತದೆ. ಮತ್ತು ಆ ಕರ್ತೃಶಕ್ತಿಯುಕ್ತವಾಗಿರುವ ಬುದ್ಧಿಗೆ ಎಲ್ಲಾ ಅರ್ಥಗಳನ್ನೂ ಮಾಡಿಕೊಡುವ ಮತ್ತೊಂದು ಕರಣವನ್ನು ಕಲ್ಪಿಸಬೇಕಾಗಿಬರುವದು. ಏಕೆಂದರೆ ಕರ್ತೃವು ಶಕ್ತನಾಗಿದ್ದರೂ ಕರಣವನ್ನು ತೆಗೆದುಕೊಂಡೇ ಕ್ರಿಯೆಗಳಲ್ಲಿ ತೊಡಗುವದು ಕಂಡುಬರುತ್ತದೆ. ಮತ್ತು ಆಗ ಹೆಸರಿನಲ್ಲಿ ಮಾತ್ರ ವಿವಾದವಾದೀತೇ ಹೊರತು ವಸ್ತುವಿನಲ್ಲಿ ಯಾವ ಭೇದವೂ (ಆಗುವ)ದಿಲ್ಲ ; ಏಕೆಂದರೆ ಕರಣವ್ಯತಿರಿಕ್ತವಾಗಿರುವವನೇ ಕರ್ತೃವೆಂದು (ನೀವೂ) ಒಪ್ಪಿದಂತಾಗುವದು.[1]

## ಸಮಾಧ್ಯಭಾವಾಚ್ಚ ॥ ೩೯ ॥

೩೯. ಸಮಾಧಿಯು ಇಲ್ಲವಾಗುವದರಿಂದಲೂ (ಹೀಗೆಂದು ಒಪ್ಪಬೇಕು).

---

1. ಕರಣವನ್ನು ಕರ್ತೃವೆಂದು ಸಾಧಿಸಿ ಆ ಕರ್ತೃವಿಗೆ ಮತ್ತೊಂದು ಕರಣವನ್ನು ಕಲ್ಪಿಸುವದಕ್ಕಿಂತ ದೃಷ್ಟವಾಗಿರುವ ಆತ್ಮರೂಪಕರ್ತೃತ್ವವನ್ನೂ ಕರಣಗಳನ್ನೂ ಒಪ್ಪುವದೇ ಯುಕ್ತ —ಎಂದು ಭಾವ.

## ಶಾಸ್ತ್ರದಲ್ಲಿ ಚಿತ್ತಸಮಾಧಾನವನ್ನು ಉಪದೇಶಿಸಿರುವದರಿಂದಲೂ ಜೀವನು ಕರ್ತೃ

(ಭಾಷ್ಯ)

೧೫೦. ಯೋಽಪ್ಯಯಮ್ ಔಪನಿಷದಾತ್ಮಪ್ರತಿಪತ್ತಿಪ್ರಯೋಜನಃ ಸಮಾಧಿಃ ಉಪದಿಷ್ಟೋ ವೇದಾನ್ತೇಷು "ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" (ಬೃ. ೨-೪-೫), "ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ" (ಛಾಂ. ೮-೭-೧), "ಓಮಿತ್ಯೇವಂ ಧ್ಯಾಯಥ ಆತ್ಮಾನಮ್" (ಮುಂ. ೨-೨-೬)—ಇತ್ಯೇವಂಲಕ್ಷಣಃ, ಸೋಽಪಿ ಅಸತ್ಯಾತ್ಮನಃ ಕರ್ತೃತ್ವೇ ನೋಪಪದ್ಯೇತ, ತಸ್ಮಾದಪಿ ಅಸ್ಯ ಕರ್ತೃತ್ವಸಿದ್ಧಿಃ ॥

(ಭಾಷ್ಯಾರ್ಥ)

ಔಪನಿಷದನಾದ ಆತ್ಮನನ್ನು ಅರಿತುಕೊಳ್ಳುವದೆಂಬ ಪ್ರಯೋಜನಕ್ಕಾಗಿ ವೇದಾಂತಗಳಲ್ಲಿ "ಆತ್ಮನನ್ನೇ ಕಾಣಬೇಕು, ಶ್ರವಣಮಾಡಬೇಕು, ಮನನ ಮಾಡಬೇಕು, ನಿದಿಧ್ಯಾಸನಮಾಡಬೇಕು" (ಬೃ. ೨-೪-೫), "ಅವನನ್ನು ಹುಡುಕಬೇಕು, ಅವನನ್ನೇ ಅರಿತುಕೊಳ್ಳಬೇಕು" (ಛಾಂ.೮-೭-೧), "ಓಂ ಎಂದು ಆತ್ಮನನ್ನು ಧ್ಯಾನಮಾಡಿರಿ"(ಮುಂ. ೨-೨-೬)ಎಂಬೀ ರೂಪದ **ಸಮಾಧಿ**ಯನ್ನು[1] ಉಪದೇಶಿಸಿರುತ್ತದೆಯಲ್ಲ, ಅದೂ ಆತ್ಮನಿಗೆ ಕರ್ತೃತ್ವವಿಲ್ಲದಿದ್ದರೆ ಹೊಂದದೆ ಹೋಗುವದು. ಆದ್ದರಿಂದಲೂ ಇವನು ಕರ್ತೃವೆಂದು ಸಿದ್ಧವಾಯಿತು.

---

1. ಸಮಾಧಿ ಎಂದರೆ ಸಂಯಮವೆಂದೂ ಧಾರಣಾಧ್ಯಾನಸಮಾಧಿಗಳನ್ನೇ ಸಮಾಧಿಯೆಂಬ ಮಾತಿನಿಂದ ಕರೆದಿದೆಯೆಂದೂ ಭಾಮತೀವ್ಯಾಖ್ಯಾನ. 'ಶ್ರೋತವ್ಯೋ ಮನ್ತವ್ಯಃ' ಎಂಬುದು ಧಾರಣೆ, 'ನಿದಿಧ್ಯಾಸಿತವ್ಯಃ' ಎಂಬುದು ಧ್ಯಾನ, 'ದ್ರಷ್ಟವ್ಯಃ' ಎಂಬುದು ಸಮಾಧಿ—ಎಂದು ಆ ವ್ಯಾಖ್ಯಾನಕಾರರ ಅಭಿಪ್ರಾಯ. ಆದರೆ ಯೋಗೋಕ್ತವಾದ ಸಂಯಮವನ್ನೇ ಇಲ್ಲಿ ಹೇಳಿದೆ ಎಂಬುದಕ್ಕೆ ಯಾವ ಗಮಕವೂ ಇಲ್ಲ. ವೇದೋಕ್ತವಾದ ಧ್ಯಾನವು ಯೋಗಿಗಳ ಧ್ಯಾನಕ್ಕಿಂತ ಬೇರೆ ಎಂದು ೨-೧-೩ರ ಭಾಷ್ಯ (ಭಾ. ಭಾ. ೪೦೭)ದಲ್ಲಿ ಹೇಳಿಯೂ ಇದೆ. ಇಲ್ಲಿ 'ನಿದಿಧ್ಯಾಸಿತವ್ಯಃ', 'ವಿಜಿಜ್ಞಾಸಿತವ್ಯಃ', 'ಧ್ಯಾಯಥ'—ಎಂದು ಆತ್ಮನಲ್ಲಿ ಚಿತ್ತಸಮಾಧಾನವನ್ನುಪದೇಶಿಸಿದೆ ಎಂದೇ ಭಾಷ್ಯಕ್ಕೆ ಅಭಿಪ್ರಾಯವೆಂದು ನಮಗೆ ತೋರುತ್ತದೆ.

## ೧೫. ತಕ್ಷಾಧಿಕರಣ

(ಜೀವನ ಕರ್ತೃತ್ವವು ಔಪಾಧಿಕ)

**ಯಥಾ ಚ ತಕ್ಷೋಭಯಥಾ ॥ ೪೦ ॥**

೪೦. ಆದರೆ ಬಡಗಿಯು ಎರಡು ಬಗೆಯಲ್ಲಿಯೂ ಇರುವಂತೆ (ಇವನು ಅಕರ್ತೃವೂ ಆಗಿದಾನೆ).

### ಜೀವನ ಕರ್ತೃತ್ವವು ಸ್ವಾಭಾವಿಕವಲ್ಲ

(ಭಾಷ್ಯ)

**೧೫೧. ಏವಂ ತಾವತ್ ಶಾಸ್ತ್ರಾರ್ಥವತ್ತ್ವಾದಿಭಿರ್ಹೇತುಭಿಃ ಕರ್ತೃತ್ವಂ ಶಾರೀರಸ್ಯ ಪ್ರದರ್ಶಿತಮ್। ತತ್ಪುನಃ ಸ್ವಾಭಾವಿಕಂ ವಾ ಸ್ಯಾತ್ ಉಪಾಧಿ ನಿಮಿತ್ತಂ ವಾ ಇತಿ ಚಿನ್ತ್ಯತೇ। ತತ್ರ ಏತೈರೇವ ಶಾಸ್ತ್ರಾರ್ಥವತ್ತ್ವಾದಿಭಿಃ ಹೇತುಭಿಃ ಸ್ವಾಭಾವಿಕಂ ಕರ್ತೃತ್ವಮ್ ಅಪವಾದಹೇತ್ವಭಾವಾತ್ ಇತ್ಯೇವಂ ಪ್ರಾಪ್ತೇ ಬ್ರೂಮಃ। ನ ಸ್ವಾಭಾವಿಕಂ ಕರ್ತೃತ್ವಮ್ ಆತ್ಮನಃ ಸಂಭವತಿ। ಅನಿರ್ಮೋಕ್ಷಪ್ರಸಙ್ಗಾತ್। ಕರ್ತೃತ್ವಸ್ವಭಾವತ್ವೇ ಹಿ ಆತ್ಮನಃ ನ ಕರ್ತೃತ್ವಾತ್ ನಿರ್ಮೋಕ್ಷಃ ಸಂಭವತಿ। ಅಗ್ನೇರಿವ ಔಷ್ಣ್ಯಾತ್। ನ ಚ ಕರ್ತೃತ್ವಾತ್ ಅನಿರ್ಮುಕ್ತಸ್ಯ ಅಸ್ತಿ ಪುರುಷಾರ್ಥಸಿದ್ಧಿಃ। ಕರ್ತೃತ್ವಸ್ಯ ದುಃಖರೂಪತ್ವಾತ್। ನನು ಸ್ಥಿತಾಯಾಮಪಿ ಕರ್ತೃತ್ವಶಕ್ತೌ ಕರ್ತೃತ್ವಕಾರ್ಯಪರಿಹಾರಾತ್ ಪುರುಷಾರ್ಥಃ ಸೇತ್ಸ್ಯತಿ। ತತ್ಪರಿಹಾರಶ್ಚ ನಿಮಿತ್ತಪರಿಹಾರಾತ್। ಯಥಾ ಅಗ್ನೇಃ ದಹನಶಕ್ತಿಯುಕ್ತಸ್ಯಾಪಿ ಕಾಷ್ಠವಿಯೋಗಾತ್ ದಹನಕಾರ್ಯಾಭಾವಃ, ತದ್ವತ್। ನ। ನಿಮಿತ್ತಾನಾಮಪಿ ಶಕ್ತಿಲಕ್ಷಣೇನ ಸಂಬನ್ಧೇನ ಸಂಬದ್ಧಾನಾಮ್ ಅತ್ಯನ್ತಪರಿಹಾರಾಸಂಭವಾತ್। ನನು ಮೋಕ್ಷಸಾಧನವಿಧಾನಾತ್ ಮೋಕ್ಷಃ ಸೇತ್ಸ್ಯತಿ। ನ। ಸಾಧನಾಯತ್ತಸ್ಯ ಅನಿತ್ಯತ್ವಾತ್। ಅಪಿ ಚ ನಿತ್ಯಶುದ್ಧಬುದ್ಧಮುಕ್ತಾತ್ಮಪ್ರತಿಪಾದನಾತ್ ಮೋಕ್ಷಸಿದ್ಧಿಃ ಅಭಿಮತಾ। ತಾದೃಗಾತ್ಮಪ್ರತಿಪಾದನಂ ಚ ನ ಸ್ವಾಭಾವಿಕೇ ಕರ್ತೃತ್ವೇ ಅವಕಲ್ಪೇತ।[1] ತಸ್ಮಾತ್ ಉಪಾಧಿಧರ್ಮಾಧ್ಯಾಸೇನೈವ ಆತ್ಮನಃ ಕರ್ತೃತ್ವಮ್, ನ ಸ್ವಾಭಾವಿಕಮ್। ತಥಾ ಚ ಶ್ರುತಿಃ—"ಧ್ಯಾಯತೀವ ಲೇಲಾಯತೀವ" (ಬೃ. ೪-೩-೭) ಇತಿ।**

---

1. 'ಅವಕಲ್ಪತೇ' ಎಂದಿಷ್ಟೇ ಇದ್ದರೇ ಸಾಕಾಗುತ್ತದೆ; ಮೂಲಭಾಷ್ಯದಲ್ಲಿ ಹಾಗೆಯೇ ಇದ್ದು ಬರೆದವರು ಹೀಗೆ ಬರೆದುಕೊಂಡಿದ್ದರೂ ಇರಬಹುದು.

"ಆತ್ಮೇನ್ದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ" (ಕ. ೧-೩-೪) ಇತಿ ಚ ಉಪಾಧಿಸಂಪೃಕ್ತಸ್ಯೈವ ಆತ್ಮನಃ ಭೋಕ್ತೃತ್ವಾದಿ ವಿಶೇಷಲಾಭಂ ದರ್ಶಯತಿ। ನ ಹಿ ವಿವೇಕಿನಾಂ ಪರಸ್ಮಾದನ್ಯಃ ಜೀವೋ ನಾಮ ಕರ್ತಾ ಭೋಕ್ತಾ ವಾ ವಿದ್ಯತೇ। "ನಾನ್ಯೋಽತೋಽಸ್ತಿ ದ್ರಷ್ಟಾ" (ಬೃ. ೪-೩-೨೩) ಇತ್ಯಾದಿಶ್ರವಣಾತ್। ಪರ ಏವ ತರ್ಹಿ ಸಂಸಾರೀ ಕರ್ತಾ ಭೋಕ್ತಾ ಚ ಪ್ರಸಜ್ಯೇತ, ಪರಸ್ಮಾತ್ ಅನ್ಯಶ್ಚೇತ್ ಚಿತಿಮಾನ್ ಜೀವಃ ಕರ್ತಾ ಬುದ್ಧ್ಯಾದಿಸಙ್ಘಾತವ್ಯತಿರಿಕ್ತೋ ನ ಸ್ಯಾತ್। ನ। ಅವಿದ್ಯಾಪ್ರತ್ಯುಪಸ್ಥಾಪಿತತ್ವಾತ್ ಕರ್ತೃತ್ವಭೋಕ್ತೃತ್ವಯೋಃ। ತಥಾ ಚ ಶಾಸ್ತ್ರಮ್ "ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ" (ಬೃ. ೪-೫-೧೫), ಇತಿ ಅವಿದ್ಯಾವಸ್ಥಾಯಾಂ ಕರ್ತೃತ್ವಭೋಕ್ತೃತ್ವೇ ದರ್ಶಯಿತ್ವಾ ವಿದ್ಯಾವಸ್ಥಾಯಾಂ ತೇ ಏವ ಕರ್ತೃತ್ವಭೋಕ್ತೃತ್ವೇ ನಿವಾರಯತಿ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ ೪-೫-೧೫) ಇತಿ। ತಥಾ ಸ್ವಪ್ನಜಾಗರಿತಯೋಃ ಆತ್ಮನಃ ಉಪಾಧಿಸಂಪರ್ಕಕೃತಂ ಶ್ರಮಂ ಶ್ಯೇನಸ್ಯೇವ ಆಕಾಶೇ ವಿಪರಿಪತತಃ ಶ್ರಾವಯಿತ್ವಾ ತದಭಾವಂ ಸುಷುಪ್ತೌ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಸ್ಯ ಶ್ರಾವಯತಿ—"ತದ್ವಾ ಅಸ್ಯೈತದಾಪ್ತಕಾಮಮಾತ್ಮಕಾಮಮಕಾಮಂ ರೂಪಂ ಶೋಕಾನ್ತರಮ್" (ಬೃ. ೪-೩-೨೧) ಇತ್ಯಾರಭ್ಯ "ಏಷಾಸ್ಯ ಪರಮಾ ಗತಿರೇಷಾಸ್ಯ ಪರಮಾ ಸಂಪದೇಷೋಽಸ್ಯ ಪರಮೋ ಲೋಕ ಏಷೋಽಸ್ಯ ಪರಮ ಆನನ್ದಃ" (ಬೃ. ೪-೩-೩೨) ಇತ್ಯುಪಸಂಹಾರಾತ್ ॥

(ಭಾಷ್ಯಾರ್ಥ)

ಹೀಗೆ ಮೊದಲನೆಯದಾಗಿ ಶಾಸ್ತ್ರಾರ್ಥವತ್ತ್ವವೇ ಮುಂತಾದ ಹೇತುಗಳಿಂದ ಶಾರೀರನಿಗೆ ಕರ್ತೃತ್ವವನ್ನು ತೋರಿಸಿಕೊಟ್ಟಿದ್ದಾಯಿತು. ಇನ್ನು ಅದು ಸ್ವಾಭಾವಿಕವೊ ಉಪಾಧಿನಿಮಿತ್ತವೊ ? –ಎಂಬುದನ್ನು ಚಿಂತಿಸಲಾಗುತ್ತದೆ. ಇಲ್ಲಿ ಶಾಸ್ತ್ರಸಾರ್ಥಕ್ಯವೇ ಮುಂತಾದ ಈ ಹೇತುಗಳಿಂದಲೇ ಕರ್ತೃತ್ವವು ಸ್ವಾಭಾವಿಕವು ; ಏಕೆಂದರೆ (ಇದಕ್ಕೆ) ಬಾಧಕವಾದ ಹೇತುವಿಲ್ಲ ಎಂಬೀ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ.

ಆತ್ಮನಿಗೆ ಸ್ವಾಭಾವಿಕಕರ್ತೃತ್ವವು ಸಂಭವಿಸುವದಿಲ್ಲ. ಏಕೆಂದರೆ (ಹಾಗಾದರೆ) ಬಿಡುಗಡೆಯಿಲ್ಲವೆಂದೇ ಆಗುವದು. (ಇದರ ವಿವರ) ; ಆತ್ಮನಿಗೆ ಕರ್ತೃತ್ವವು ಸ್ವಭಾವವೇ ಆದರೆ ಅವನಿಗೆ (ಅ) ಕರ್ತೃತ್ವದಿಂದ ಬಿಡುಗಡೆಯು ಇಲ್ಲವೆಂದೇ ಆಗುವದು. ಬೆಂಕಿಗೆ (ತನ್ನ ಸ್ವಾಭಾವಿಕವಾದ) ಬಿಸಿಯಿಂದ ಹೇಗೆ (ಬಿಡುಗಡೆಯಿಲ್ಲವೋ ಹಾಗೆಯೇ ಇದು). ಆದರೆ ಕರ್ತೃತ್ವದಿಂದ ಬಿಡುಗಡೆಯಾಗದೆ

ಇದ್ದರೆ ಪುರುಷಾರ್ಥವು ಸಿದ್ಧವಾಗಲಾರದು ; ಏಕೆಂದರೆ ಕರ್ತೃತ್ವವು ದುಃಖ ರೂಪವಾಗಿರುತ್ತದೆ.[1]

(ಆಕ್ಷೇಪ) :- ಕರ್ತೃತ್ವಶಕ್ತಿಯು ಇದ್ದರೂ ಕರ್ತೃತ್ವದ ಕಾರ್ಯವನ್ನು ತಪ್ಪಿಸಿಕೊಂಡರೆ ಪುರುಷಾರ್ಥವು ಸಿದ್ಧವಾಗಬಹುದಲ್ಲ! ಆ (ಕಾರ್ಯದ) ಪರಿಹಾರವು ನಿಮಿತ್ತಗಳನ್ನು ತಪ್ಪಿಸಿಕೊಳ್ಳುವದರಿಂದ (ಆಗಬಹುದಾಗಿದೆ). ಹೇಗೆ ಬೆಂಕಿಗೆ ಸುಡುವ ಶಕ್ತಿಯಿದ್ದರೂ ಕಟ್ಟಿಗೆಯನ್ನು ತಪ್ಪಿಸುವದರಿಂದ ಸುಡುವದೆಂಬ ಕಾರ್ಯವು ಇಲ್ಲವಾಗುವದೋ ಹಾಗೆ.

(ಪರಿಹಾರ) :- ಹಾಗಲ್ಲ. ಏಕೆಂದರೆ ನಿಮಿತ್ತಗಳುಕೂಡ ಶಕ್ತಿರೂಪವಾದ ಸಂಬಂಧದಿಂದ ಸಂಬದ್ಧವಾಗಿರುವದರಿಂದ (ಅವುಗಳನ್ನೂ) ಆತ್ಯಂತಿಕವಾಗಿ ಪರಿಹರಿಸಿಕೊಳ್ಳುವದು ಆಗಲಾರದು.[2]

(ಶಂಕೆ) :- ಮೋಕ್ಷಸಾಧನಗಳನ್ನು (ಶ್ರುತಿಯಲ್ಲಿ) ವಿಧಾನಮಾಡಿರುವದರಿಂದ ಮೋಕ್ಷವು ಸಿದ್ಧವಾಗಬಹುದಲ್ಲ[3] !

(ಪರಿಹಾರ) :- ಹಾಗಲ್ಲ. ಏಕೆಂದರೆ **ಸಾಧನಕ್ಕೆ ವಶವಾಗಿರುವದು ಅನಿತ್ಯವಾಗಿರುತ್ತದೆ.** ಇದಲ್ಲದೆ ನಿತ್ಯಶುದ್ಧಬುದ್ಧಮುಕ್ತನಾದ ಆತ್ಮನನ್ನು ತಿಳಿಸುವದರಿಂದ ಮೋಕ್ಷಸಿದ್ಧಿಯಾಗುವದೆಂಬುದು (ವೇದಾಂತಿಗಳಿಗೆ) ಇಷ್ಟವಾಗಿರುತ್ತದೆ. ಆದರೆ ಇಂಥ ಆತ್ಮನನ್ನು ತಿಳಿಸುವದೆಂಬುದು ಕರ್ತೃತ್ವವು ಸಾಭಾವಿಕವಾದರೆ ಆಗಲಾರದು. ಆದ್ದರಿಂದ ಉಪಾಧಿಯ ಧರ್ಮವನ್ನು ಅಧ್ಯಾಸಮಾಡುವದರಿಂದಲೇ ಕರ್ತೃತ್ವ(ವಾಗಿರುವದೇ ಹೊರತು ಅದು) ಸ್ವಾಭಾವಿಕವಲ್ಲ. ಆದ್ದರಿಂದಲೇ ಶ್ರುತಿಯು "ಧ್ಯಾನಮಾಡುವಂತೆ ಇರುತ್ತಾನೆ, ಚಲಿಸುತ್ತಿರುವಂತೆ ಇರುತ್ತಾನೆ" (ಬೃ. ೪-೩-೭) ಎಂದೂ "ದೇಹ,

---

1. ಸ್ವಭಾವವು ಹೋಗಲಾರದಾದ್ದರಿಂದ ಸ್ವಾಭಾವಿಕಕರ್ತೃತ್ವವು ಹೋಗಲಾರದು. ಕರ್ತೃತ್ವವು ದುಃಖರೂಪವಾಗಿರುವದರಿಂದ ಅದು ಹೋದಲ್ಲದೆ ಮೋಕ್ಷವಿಲ್ಲ. ತೈ. ಭಾ. ಭಾ. ಭಾ. ೧೦.

2. ಕ್ರಿಯೆಗೆ ನಿಮಿತ್ತಗಳು ಧರ್ಮಾಧರ್ಮರಾಗದ್ವೇಷಾದಿಗಳು ; ಅವು ಕರ್ತೃತ್ವಶಕ್ತಿಯಿರುವವರೆಗೆ ಇದ್ದೇಇರುತ್ತವೆ. ಏಕೆಂದರೆ ಶಕ್ತಿಯು ಅವ್ಯಕ್ತವಾಗಿದ್ದರೆ ಶಕ್ಯವಾದ ಧರ್ಮಾಧರ್ಮಾದಿಗಳೂ ಇದ್ದೇಇರುವವು. ಆತ್ಮನ ಜ್ಞಾನವು ಸ್ವಾಭಾವಿಕವೆಂದು ಒಪ್ಪುವ ಸಿದ್ಧಾಂತದಲ್ಲಿ ವಿಷಯಗಳನ್ನು ಅರಿಯುವ ಶಕ್ತಿಯೂ ಹೀಗೆಯೇ ಇರಬೇಕಾಗುವದಿಲ್ಲವೆ ? -ಎಂದು ಶಂಕಿಸಬಾರದು. ಏಕೆಂದರೆ ಆ ಶಕ್ತಿಯು ಜ್ಞಾನದ ಸ್ವರೂಪವೇ ಆಗಿರುತ್ತದೆ.

3. ಕರ್ತೃತ್ವವೂ ಇದ್ದು ಮೋಕ್ಷಸಾಧನಗಳನ್ನು ಮಾಡಿದ ಮಾತ್ರದಿಂದ ಮೋಕ್ಷವು ಬರಲಾರದು : ಏಕೆಂದರೆ ಮೋಕ್ಷವು ನಿತ್ಯವಾಗಿರುವದರಿಂದ ಸಾಧನದಿಂದ ಉಂಟಾಗಲಾರದು.

ಇಂದ್ರಿಯ, ಮನಸ್ಸು- ಇವುಗಳಿಂದೊಡಗೂಡಿದವನು ಭೋಕ್ತೃವೆಂದು ಬಲ್ಲವರು ಹೇಳುತ್ತಾರೆ" (ಕ. ೧-೩-೪) ಎಂದೂ ಉಪಾಧಿಸಂಬದ್ಧನಾದ ಆತ್ಮನಿಗೇ ಭೋಕ್ತೃತ್ವವೇ ಮುಂತಾದ[1] ವಿಶೇಷವುಂಟಾಗುತ್ತದೆ ಎಂದು ತಿಳಿಸುತ್ತದೆ. ವಿವೇಕಿಗಳ (ಮತದಲ್ಲಿ) ಪರಮಾತ್ಮನಿಗಿಂತ ಬೇರೆಯಾದ ಕರ್ತೃವಾಗಲಿ ಭೋಕ್ತೃವಾಗಲಿ ಇರುವದಿಲ್ಲವಷ್ಟೆ. ಏಕೆಂದರೆ "ಇವನಿಗಿಂತ ಬೇರೆಯಾದ ದ್ರಷ್ಟೃವಿಲ್ಲ'' (ಬೃ. ೪-೩-೨೩) ಎಂದು ಮುಂತಾಗಿ ಶ್ರುತಿಯಲ್ಲಿದೆ.

(ಆಕ್ಷೇಪ) :- ಹಾಗಾದರೆ ಪರಮಾತ್ಮನೇ ಸಂಸಾರಿಯು, ಕರ್ತೃವು, ಮತ್ತು ಭೋಕ್ತೃವು ಎಂದಾಯಿತಲ್ಲ![2] ಪರಮಾತ್ಮನಿಗಿಂತ ಬೇರೆಯಾದ ಚೈತನ್ಯವುಳ್ಳ ಬುದ್ಧ್ಯಾದಿಸಂಘಾತಕ್ಕಿಂತ ಬೇರೆಯಾಗಿರುವ ಕರ್ತೃವಾದ ಜೀವನು ಇಲ್ಲದಿದ್ದರೆ (ಈ ದೋಷವು ಬರುವದಿಲ್ಲವೆ) ?

(ಪರಿಹಾರ) :- ಇಲ್ಲ. ಏಕೆಂದರೆ **ಕರ್ತೃತ್ವಭೋಕ್ತೃತ್ವಗಳು ಅವಿದ್ಯೆಯು ತಂದೊಡ್ಡಿದವುಗಳಾಗಿವೆ.** ಆದ್ದರಿಂದಲೇ ಶಾಸ್ತ್ರವು "ಎಲ್ಲಿ ದ್ವೈತವಿದ್ದಂತೆ ಇರುವದೋ ಅಲ್ಲಿ ಒಬ್ಬನು ಇನ್ನೊಬ್ಬನನ್ನು ಕಾಣುತ್ತಾನೆ'' (ಬೃ. ೨-೪-೧೪) ಎಂದು ಅವಿದ್ಯಾವಸ್ಥೆಯಲ್ಲಿ ಕರ್ತೃತ್ವಭೋಕ್ತೃತ್ವಗಳನ್ನು ಹೇಳಿ ವಿದ್ಯಾವಸ್ಥೆಯಲ್ಲಿ "ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಯಿತೋ ಅಲ್ಲಿ ಏತರಿಂದ ಯಾರನ್ನು ಕಂಡಾನು ? (ಬೃ. ೪-೫-೧೫) ಎಂದು ಅದೇ ಕರ್ತೃತ್ವಭೋಕ್ತೃತ್ವಗಳನ್ನು ತಳ್ಳಿಹಾಕಿರುತ್ತದೆ. ಹಾಗೂ **ಸ್ವಪ್ನಜಾಗರಿತೆಗಳಲ್ಲಿ ಆತ್ಮನಿಗೆ ಉಪಾಧಿಯ ಸಂಪರ್ಕದಿಂದ ಆಕಾಶದಲ್ಲಿ ಹಾರಾಡುವ ಗಿಡುಗನಿಗೆ (ಆಗು)ವಂತೆ ಆಯಾಸವಾಗುತ್ತದೆ - ಎಂದು ತಿಳಿಸಿ "ಆ ಇದೇ ಇವನಿಗೆ ಆಪ್ತಕಾಮವೂ ಆತ್ಮಕಾಮವೂ ಅಕಾಮವೂ ಆದ ಶೋಕರಹಿತವಾದ ರೂಪವು'' (ಬೃ. ೪-೩-೨೧) ಎಂಬಲ್ಲಿಂದ ಹಿಡಿದು "ಇದೇ ಇವನಿಗೆ ಪರಮಗತಿಯು, ಇದೇ ಇವನಿಗೆ ಪರಮ**

---

1. ಭೋಕ್ತೃತ್ವಕ್ಕೆ ಕರ್ತೃತ್ವವೂ ಬೇಕಾದ್ದರಿಂದ ಶ್ರುತಿಯಲ್ಲಿ ಕರ್ತೃತ್ವವನ್ನು ಹೇಳಿದಂತೆಯೇ ಆಗಿದೆ ಎಂದು ಭಾವ.

2. ಪರಮಾತ್ಮನೇ ಸಂಸಾರಿಯಾದರೆ ಅವನಿಗೆ ಮುಕ್ತಿಯಾದರೆ ಎಲ್ಲರಿಗೂ ಮುಕ್ತಿಯಾಗಬೇಕಲ್ಲ!- ಎಂದು ಈ ವಾಕ್ಯಕ್ಕೆ ತಾತ್ಪರ್ಯವನ್ನು ಭಾಮತೀಕಾರರು ಕಲ್ಪಿಸಿರುತ್ತಾರೆ. ಇದು ಮಂಡನಮಿಶ್ರನ ಬ್ರಹ್ಮಸಿದ್ಧಿಯಲ್ಲಿರುವ ಪೂರ್ವಪಕ್ಷಯುಕ್ತಿಯಾದರೂ ಪ್ರಸ್ಥಾನತ್ರಯಭಾಷ್ಯದಲ್ಲಿ ಕಾಣಿಸುವದಿಲ್ಲ. ಪರಮಾತ್ಮನು ಸಂಸಾರಿಯಾದರೆ ಸಂಸಾರಿ ಜ್ಞಾನದಿಂದಲೇ ಮುಕ್ತಿಯೆಂದಾಗುವದು, ಪರಮಾತ್ಮನು ನಿತ್ಯಮುಕ್ತನೆಂಬ ಸಿದ್ಧಾಂತಕ್ಕೂ ವಿರೋಧವಾಗುವದು, ಶ್ರುತಿವಿರೋಧವೂ ಬರುವದು- ಎಂದಿಷ್ಟೇ ಶಂಕೆಗೆ ಅಭಿಪ್ರಾಯವನ್ನು ಕಲ್ಪಿಸಿದರೆ ಸಾಕೆಂದು ತೋರುವದು.

**ಸಂಪತ್ತು, ಇದೇ ಇವನಿಗೆ ಪರಲೋಕವು, ಇದೇ ಇವನಿಗೆ ಪರಮ ಆನಂದವು" (ಬೃ ೪-೩-೩೨) ಎಂಬ ಉಪಸಂಹಾರದವರೆಗೂ ಸುಷುಪ್ತಿಯಲ್ಲಿ ಪ್ರಾಜ್ಞ ಆತ್ಮನಿಂದ ಆಲಿಂಗಿತನಾಗಿರುವದರಿಂದ ಆ (ಶ್ರಮವು) ಇರುವದಿಲ್ಲ ಎಂದು ತಿಳಿಸಿರುತ್ತದೆ.[1]**

## ತಕ್ಷಸೂತ್ರದ ಅಕ್ಷರಯೋಜನೆ

(ಭಾಷ್ಯ)

೧೫೨. ತದೇತದಾಹ ಆಚಾರ್ಯಃ– 'ಯಥಾ ಚ ತಕ್ಷೋಭಯಥಾ' ಇತಿ । ತ್ವರ್ಥೇ ಚಾಯಂ ಚಃ ಪಠಿತಃ । ನೈವಂ ಮನ್ತವ್ಯಂ ಸ್ವಾಭಾವಿಕಮೇವ ಆತ್ಮನಃ ಕರ್ತೃತ್ವಮ್ ಅಗ್ನೇರಿವ ಔಷ್ಣ್ಯಮ್ ಇತಿ । ಯಥಾ ತು ತಕ್ಷಾ ಲೋಕೇ ವಾಸ್ಯಾದಿಕರಣಹಸ್ತಃ ಕರ್ತಾ ದುಃಖೀ ಭವತಿ, ಸ ಏವ ಸ್ವಗೃಹಂ ಪ್ರಾಪ್ತಃ ವಿಮುಕ್ತವಾಸ್ಯಾದಿಕರಣಃ ಸ್ವಸ್ಥಃ ನಿರ್ವೃತೋ ನಿರ್ವ್ಯಾಪಾರಃ ಸುಖೀ ಭವತಿ, ಏವಮ್ ಅವಿದ್ಯಾಪ್ರತ್ಯುಪಸ್ಥಾಪಿತದ್ವೈತಸಂಪೃಕ್ತಃ ಆತ್ಮಾ ಸ್ವಪ್ನಜಾಗರಿತಾವಸ್ಥಯೋಃ ಕರ್ತಾ ದುಃಖೀ ಭವತಿ । ಸ ತಚ್ಛ್ರಮಾಪನುತ್ತಯೇ ಸ್ವಮಾತ್ಮಾನಂ ಪರಂ ಬ್ರಹ್ಮ ಪ್ರವಿಶ್ಯ ವಿಮುಕ್ತಕಾರ್ಯಕರಣಸಂಘಾತಃ ಅಕರ್ತಾ ಸುಖೀ ಭವತಿ ಸಂಪ್ರಸಾದಾವಸ್ಥಾಯಾಮ್ । ತಥಾ ಮುಕ್ತ್ಯವಸ್ಥಾಯಾಮಪಿ ಅವಿದ್ಯಾಧ್ವಾನ್ತಂ ವಿದ್ಯಾಪ್ರದೀಪೇನ ವಿಧೂಯ ಆತ್ಮೈವ ಕೇವಲೋ ನಿರ್ವೃತಃ ಸುಖೀ ಭವತಿ । ತಕ್ಷದೃಷ್ಟಾನ್ತಶ್ಚ ಏತಾವತಾ ಅಂಶೇನ ದ್ರಷ್ಟವ್ಯಃ । ತಕ್ಷಾ ಹಿ ವಿಶಿಷ್ಟೇಷು ತಕ್ಷಣಾದಿವ್ಯಾಪಾರೇಷು ಅಪೇಕ್ಷ್ಯೈವ ಪ್ರತಿನಿಯತಾನಿ ಕರಣಾನಿ ವಾಸ್ಯಾದೀನಿ ಕರ್ತಾ ಭವತಿ । ಸ್ವಶರೀರೇಣ ತು ಅಕರ್ತೈವ । ಏವಮ್ ಅಯಮಾತ್ಮಾ ಸರ್ವವ್ಯಾಪಾರೇಷು ಅಪೇಕ್ಷ್ಯೈವ ಮನಆದೀನಿ ಕರಣಾನಿ ಕರ್ತಾ ಭವತಿ, ಸ್ವಾತ್ಮನಾ ತು ಅಕರ್ತೈವ ಇತಿ । ನ ತು ಆತ್ಮನಃ ತಕ್ಷ್ಣ ಇವ ಅವಯವಾಃ ಸನ್ತಿ ಯೈಃ ಹಸ್ತಾದಿಭಿರಿವ ವಾಸ್ಯಾದೀನಿ ತಕ್ಷಾ ಮನಆದೀನಿ ಕರಣಾನಿ ಆತ್ಮಾ ಉಪಾದದೀತ ನ್ಯಸ್ಯೇದ್ವಾ ॥

(ಭಾಷ್ಯಾರ್ಥ)

ಆ ಇದನ್ನೇ (ಸೂತ್ರಕಾರರಾದ) ಆಚಾರ್ಯರು 'ಯಥಾ ಚ ತಕ್ಷೋಭಯಥಾ' ಎಂಬ (ಸೂತ್ರದಲ್ಲಿ) ಹೇಳಿರುತ್ತಾರೆ. ಈ (ಸೂತ್ರದಲ್ಲಿರುವ) ಚ

1. ಉಪಾಧಿಧರ್ಮದ ಅಧ್ಯಾಸದಿಂದಲೇ ಸ್ವಪ್ನಜಾಗರಿತಗಳಲ್ಲಿ ಆವಿದ್ಯಕವಾದ ಕರ್ತೃತ್ವಭೋಕ್ತೃತ್ವಗಳು ತೋರುತ್ತಿರುವವೆಂದೂ ಸುಷುಪ್ತಿಯಲ್ಲಿ ಅವಿದ್ಯೆಯಿಲ್ಲದ್ದರಿಂದ ಪರಮಾತ್ಮಸ್ವರೂಪದಲ್ಲಿಯೇ ಜೀವನು ಇರುತ್ತಾನೆಂದೂ ಶ್ರುತಿಯಲ್ಲಿ ಹೇಳಿದೆ ಎಂಬರ್ಥ. ಇದನ್ನು ಮುಂದೆ ಭಾಷ್ಯದಲ್ಲಿಯೇ ವಿವರಿಸಿದೆ.

(ಶಬ್ದ)ವನ್ನು ತು(ಶಬ್ದದ) ಅರ್ಥದಲ್ಲಿಯೇ ಪ್ರಯೋಗಿಸಿರುತ್ತದೆ. ಬೆಂಕಿಗೆ ಬಿಸಿಯಂತೆ ಆತ್ಮನಿಗೆ ಕರ್ತೃತ್ವವು ಸ್ವಾಭಾವಿಕವೇ ಎಂದು ಭಾವಿಸಬಾರದು[1]; **ಮತ್ತೇನೆಂದರೆ ಲೋಕದಲ್ಲಿ ಬಡಗಿಯು ಹೇಗೆ ಬಾಚಿಯೇ ಮುಂತಾದ ಕರಣಗಳನ್ನು ಕೈಯಲ್ಲಿಟ್ಟುಕೊಂಡು ಕರ್ತೃವೂ ದುಃಖಿಯೂ ಆಗಿರುವನೋ, ಅದೇ (ಬಡಗಿಯು ಹೇಗೆ) ತನ್ನ ಮನೆಗೆ ಹೋಗಿ ಬಾಚಿಯೇ ಮುಂತಾದ ಕರಣಗಳನ್ನು ಕೈಬಿಟ್ಟು ಸ್ವಸ್ಥನಾಗಿ ಆಯಾಸವಿಲ್ಲದೆ ಯಾವ ಕೆಲಸವನ್ನೂ ಮಾಡದೆ ಸುಖಿಯಾಗಿರುವನೋ ಹಾಗೆಯೇ ಅವಿದ್ಯೆಯು ತಂದೊಡ್ಡಿದ ದ್ವೈತದ ಸಂಪರ್ಕವುಳ್ಳ ಆತ್ಮನು ಸ್ವಪ್ನ ಜಾಗರಿತಾವಸ್ಥೆಗಳಲ್ಲಿ ಕರ್ತೃವಾಗಿ ದುಃಖಿಯಾಗಿರುತ್ತಾನೆ, ಅವನು ಆ ಶ್ರಮವನ್ನು ಕಳೆದುಕೊಳ್ಳುವದಕ್ಕಾಗಿ ತನ್ನ ಆತ್ಮನಾಗಿರುವ ಪರಬ್ರಹ್ಮವನ್ನು ಹೊಕ್ಕು ಕಾರ್ಯಕರಣಸಂಘಾತವನ್ನು ಬಿಟ್ಟು ಸುಷುಪ್ತಿಯ ಅವಸ್ಥೆಯಲ್ಲಿ ಅಕರ್ತೃವೂ ಸುಖಿಯೂ ಆಗಿರುತ್ತಾನೆ. ಹೀಗೆಯೇ ಮುಕ್ತ್ಯವಸ್ಥೆಯಲ್ಲಿಯೂ ಅವಿದ್ಯೆಯ ಕತ್ತಲೆಯನ್ನು ವಿದ್ಯೆಯೆಂಬ ಪ್ರದೀಪದಿಂದ ಓಡಿಸಿಕೊಂಡು ಬರಿಯ ಆತ್ಮನೇ ಆಗಿ ನಿರಾಯಾಸದಿಂದ ಸುಖಿಯಾಗಿರುವನು.**

ತಕ್ಷದೃಷ್ಟಾಂತವನ್ನು ಇಷ್ಟು ಅಂಶಕ್ಕೇ (ಕೊಟ್ಟಿದೆ ಎಂದು) ತಿಳಿಯಬೇಕು. ಬಡಗಿಯು ಕೆತ್ತುವದೇ ಮುಂತಾದ ಅಸಾಧಾರಣವ್ಯಾಪಾರಗಳಿಗೆ ಬಾಚಿಯೇ ಮುಂತಾದ ಆಯಾ ಕರಣಗಳನ್ನು ಅಪೇಕ್ಷಿಸಿಯೇ ಕರ್ತೃವಾಗಿರುತ್ತಾನೆ. ತನ್ನ ಶರೀರದಿಂದಲಾದರೋ (ಆ ಕ್ರಿಯೆಗಳಿಗೆ) ಅಕರ್ತೃವೇ. ಅಲ್ಲವೆ? ಹೀಗೆಯೇ, **ಈ ಆತ್ಮನು ಎಲ್ಲಾ ವ್ಯಾಪಾರಗಳಲ್ಲಿಯೂ ಮನಸ್ಸೇ ಮುಂತಾದ ಕರಣಗಳನ್ನು ಅಪೇಕ್ಷಿಸಿಯೇ ಕರ್ತೃವಾಗಿರುತ್ತಾನೆ, ತನ್ನ ಸ್ವರೂಪದಿಂದಲಾದರೋ ಅಕರ್ತೃವೇ**[2] (ಎಂಬಿದೇ ದೃಷ್ಟಾಂತಾಂಶವು). ಆದರೆ ಆತ್ಮನಿಗೆ ಬಡಗಿಗಿರುವಂತೆ ಅವಯವಗಳಿರುವದಿಲ್ಲ; (ಇದ್ದರಲ್ಲವೆ), ಅವುಗಳಿಂದ ಕೈ ಮುಂತಾದವುಗಳಿಂದ ಬಾಚಿಯೇ ಮುಂತಾದವನ್ನು ಬಡಗಿಯು (ಸ್ವೀಕರಿಸುವಂತೆ) ಆತ್ಮನೂ ಮನಸ್ಸೇ ಮುಂತಾದ ಕರಣಗಳನ್ನು ತೆಗೆದುಕೊಳ್ಳುತ್ತಾನೆಂದೂ ಇಡುತ್ತಾನೆಂದೂ (ತಿಳಿಯ)ಬಹುದಾಗಿತ್ತು[3]?

---

1. ಇದೇ ತುಶಬ್ದದ ಅರ್ಥವು.

2. ಬಡಗಿಯ ಬಡಗಿತನದ ಕರ್ತೃತ್ವವು ಬಾಚಿ– ಮುಂತಾದವುಗಳ ಅಪೇಕ್ಷೆಯಿಂದ; ಆತ್ಮನ ಕರ್ತೃತ್ವವು ಕರಣಗಳ ಅಪೇಕ್ಷೆಯಿಂದ ಎಂಬಿಷ್ಟು ಹೋಲಿಕೆಯ ಅಂಶವು ಎಂದರ್ಥ

3. ಬಡಗಿಗೆ ಕರಣಗಳನ್ನು ತೆಗೆದುಕೊಳ್ಳುವ ಕರ್ತೃತ್ವವಿದೆ; ಆತ್ಮನಿಗೆ ಸ್ವತಃ ಕರಣಗಳಿಲ್ಲ, ಅಧ್ಯಸ್ತ ಕರಣಗಳೇ ಅವಿದ್ಯಕಕರ್ತೃತ್ವಕ್ಕೆ ಕಾರಣವಾಗಿರುತ್ತವೆ.

## ಕರ್ತೃತ್ವವು ಸ್ವಾಭಾವಿಕವೆಂಬ ಮತದ ಯುಕ್ತಿಗಳ ಖಂಡನೆ

(ಭಾಷ್ಯ)

೧೫೩. ಯತ್ತು ಉಕ್ತಮ್ ಶಾಸ್ತ್ರಾರ್ಥವತ್ತ್ವಾದಿಭಿರ್ಹೇತುಭಿಃ ಸ್ವಾಭಾವಿಕಮ್ ಆತ್ಮನಃ ಕರ್ತೃತ್ವಮ್ ಇತಿ । ತನ್ನ । ವಿಧಿಶಾಸ್ತ್ರಂ ತಾವದ್ ಯಥಾಪ್ರಾಪ್ತಂ ಕರ್ತೃತ್ವಮ್ ಉಪಾದಾಯ ಕರ್ತವ್ಯವಿಶೇಷಮ್ ಉಪದಿಶತಿ ನ ಕರ್ತೃತ್ವಮಾತ್ಮನಃ ಪ್ರತಿಪಾದಯತಿ । ನ ಚ ಸ್ವಾಭಾವಿಕಮ್ ಅಸ್ಯ ಕರ್ತೃತ್ವಮಸ್ತಿ ಬ್ರಹ್ಮಾತ್ಮತ್ವೋಪದೇಶಾತ್ ಇತ್ಯವೋಚಾಮ । ತಸ್ಮಾತ್ ಅವಿದ್ಯಾಕೃತಂ ಕರ್ತೃತ್ವಮ್ ಉಪಾದಾಯ ವಿಧಿಶಾಸ್ತ್ರಂ ಪ್ರವರ್ತಿಷ್ಯತೇ । ಕರ್ತಾ ವಿಜ್ಞಾನಾತ್ಮಾ ಪುರುಷಃ ಇತ್ಯೇವಂಜಾತೀಯಕಮಪಿ ಶಾಸ್ತ್ರಮ್ ಅನುವಾದರೂಪತ್ವಾತ್ ಯಥಾಪ್ರಾಪ್ತಮೇವ ಅವಿದ್ಯಾಕೃತಂ ಕರ್ತೃತ್ವಮ್ ಅನುವದಿಷ್ಯತಿ । ಏತೇನ ವಿಹಾರೋಪಾದಾನೇ ಪರಿಹೃತೇ । ತಯೋರಪಿ ಅನುವಾದರೂಪತ್ವಾತ್ । ನನು ಸಂಧ್ಯೇ ಸ್ಥಾನೇ ಪ್ರಸುಪ್ತೇಷು ಕರಣೇಷು "ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ'' (ಬೃ. ೨-೧-೧೮) ಇತಿ ವಿಹಾರಃ ಉಪದಿಶ್ಯಮಾನಃ ಕೇವಲಸ್ಯ ಆತ್ಮನಃ ಕರ್ತೃತ್ವಮ್ ಆವಹತಿ । ತಥಾ ಉಪಾದಾನೇಽಪಿ "ತದೇಷಾಂ ಪ್ರಾಣಾನಾಂ ವಿಜ್ಞಾನೇ ವಿಜ್ಞಾನಮಾದಾಯ" (ಬೃ. ೨-೧-೧೭) ಇತಿ ಕರಣೇಷು ಕರ್ಮಕರಣವಿಭಕ್ತೀ ಶ್ರೂಯಮಾಣೇ ಕೇವಲಸ್ಯ ಆತ್ಮನಃ ಕರ್ತೃತ್ವಂ ಗಮಯತಃ ಇತಿ । ಅತ್ರೋಚ್ಯತೇ- ನ ತಾವತ್ ಸಂಧ್ಯೇ ಸ್ಥಾನೇ ಅತ್ಯನ್ತಮಾತ್ಮನಃ ಕರಣವಿರಮಣಮಸ್ತಿ । "ಸಧೀಃ ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ"[1] (ಬೃ. ಮಾ. ೪-೩-೭) ಇತಿ ತತ್ರಾಪಿ ಧೀಸಂಬನ್ಧಶ್ರವಣಾತ್ । ತಥಾ ಚ ಸ್ಮರನ್ತಿ "ಇನ್ದ್ರಿಯಾಣಾಮುಪರಮೇ ಮನೋಽನುಪರತಂ ಯದಿ । ಸೇವತೇ ವಿಷಯಾನೇವ ತದ್ವಿದ್ಯಾತ್ ಸ್ವಪ್ನದರ್ಶನಮ್"[2] (ಮೋ. ಧ. ೨೭೫-೨೪) ಇತಿ । ಕಾಮಾದಯಶ್ಚ ಮನಸೋ ವೃತ್ತಯಃ ಇತಿ ಶ್ರುತಿಃ । ತಾಶ್ಚ ಸ್ವಪ್ನೇ ದೃಶ್ಯನ್ತೇ । ತಸ್ಮಾತ್ ಸಮನಾ ಏವ ಸ್ವಪ್ನೇ ವಿಹರತಿ । ವಿಹಾರೋಽಪಿ ಚ ತತ್ರತ್ಯಃ ವಾಸನಾಮಯ ಏವ ನ ತು ಪಾರಮಾರ್ಥಿಕೋಽಸ್ತಿ । ತಥಾ ಚ ಶ್ರುತಿಃ ಇವಕಾರಾನುಬದ್ಧಮೇವ ಸ್ವಪ್ನವ್ಯಾಪಾರಂ ವರ್ಣಯತಿ- "ಉತೇವ ಸ್ತ್ರೀಭಿಃ ಸಹ ಮೋದಮಾನೋ ಜಕ್ಷದುತೇವಾಪಿ ಭಯಾನಿ ಪಶ್ಯನ್।" (ಬೃ.೪-೩-೧೩) ಇತಿ । ಲೌಕಿಕಾ ಅಪಿ ತಥೈವ ಸ್ವಪ್ನಂ ಕಥಯನ್ತಿ 'ಆರುಕ್ಷಮಿವ ಗಿರಿಶೃಙ್ಗಮ್', ಅದ್ರಾಕ್ಷಮಿವ ವನರಾಜಿಮ್' ಇತಿ । ತಥಾ ಉಪಾದಾನೇಽಪಿ

1. "ಸ ಹಿ" ಎಂದು ಕಾಣ್ವಪಾಠ; "ಸಧೀಃ" ಎಂಬುದು ಮಾಧ್ಯಂದಿನಪಾಠ.

2. ಅಚ್ಚಿನ ಪುಸ್ತಕದಲ್ಲಿ "ಇನ್ದ್ರಿಯಾಣಾಂ ವ್ಯುಪರಮೇ ಮನೋಽವ್ಯುಪರತಂ ಯದಿ" ಎಂಬ ಪಾಠವಿದೆ.

ಯದ್ಯಪಿ ಕರಣೇಷು ಕರ್ತೃಕರಣವಿಭಕ್ತಿನಿರ್ದೇಶಃ ತಥಾಪಿ ತತ್ಸಂಪೃಕ್ತಸ್ಯೈವ ಆತ್ಮನಃ ಕರ್ತೃತ್ವಂ ದ್ರಷ್ಟವ್ಯಮ್ । ಕೇವಲೇ ಕರ್ತೃತ್ವಾಸಂಭವಸ್ಯ ದರ್ಶಿತತ್ವಾತ್ । ಭವತಿ ಚ ಲೋಕೇ ಅನೇಕಪ್ರಕಾರಾ ವಿವಕ್ಷಾ– 'ಯೋಧಾ ಯುಧ್ಯನ್ತೇ', 'ಯೋಧೈಃ ರಾಜಾ ಯುಧ್ಯತೇ' ಇತಿ । ಅಪಿ ಚ ಅಸ್ಮಿನ್ ಉಪಾದಾನೇ ಕರಣವ್ಯಾಪಾರೋಪರಮಮಾತ್ರಂ ವಿವಕ್ಷ್ಯತೇ ನ ಸ್ವಾತನ್ತ್ರ್ಯಂ ಕಸ್ಯಚಿತ್ । ಅಬುದ್ಧಿಪೂರ್ವಕಸ್ಯಾಪಿ ಸ್ವಾಪೇ ಕರಣವ್ಯಾಪಾರೋಪರಮಸ್ಯ ದೃಷ್ಟತ್ವಾತ್ । ಯಸ್ತ್ವಯಂ ವ್ಯಪದೇಶೋ ದರ್ಶಿತಃ "ವಿಜ್ಞಾನಂ ಯಜ್ಞಂ ತನುತೇ" (ತೈ. ೨–೫) ಇತಿ, ಸ ಬುದ್ಧೇರೇವ ಕರ್ತೃತ್ವಂ ಪ್ರಾಪಯತಿ । ವಿಜ್ಞಾನಶಬ್ದಸ್ಯ ತತ್ರ ಪ್ರಸಿದ್ಧತ್ವಾತ್ । ಮನೋಽನನ್ತರಂ ಪಾಠಾಚ್ಚ । "ತಸ್ಯ ಶ್ರದ್ಧೈವ ಶಿರಃ" (ತೈ. ೨–೪) ಇತಿ ಚ ವಿಜ್ಞಾನಮಯಸ್ಯ ಆತ್ಮನಃ ಶ್ರದ್ಧಾದ್ಯವಯವತ್ವಸಂಕೀರ್ತನಾತ್ । ಶ್ರದ್ಧಾದೀನಾಂ ಚ ಬುದ್ಧಿಧರ್ಮತ್ವಪ್ರಸಿದ್ಧೇಃ । "ವಿಜ್ಞಾನಂ ದೇವಾಃ ಸರ್ವೇ ಬ್ರಹ್ಮ ಜ್ಯೇಷ್ಠಮುಪಾಸತೇ" (ತೈ. ೨–೫) ಇತಿ ಚ ವಾಕ್ಯಶೇಷಾತ್ । ಜ್ಯೇಷ್ಠತ್ವಸ್ಯ ಚ ಪ್ರಥಮಜತ್ವಸ್ಯ ಬುದ್ಧೌ ಪ್ರಸಿದ್ಧತ್ವಾತ್ । "ಸ ಏಷ ವಾಚಶ್ಚಿತ್ತಸ್ಯೋತ್ತರೋತ್ತರಕ್ರಮೋ ಯದ್ಯಜ್ಞಃ" (ಶತ ಬ್ರಾ. ?) ಇತಿ ಚ ಶ್ರುತ್ಯನ್ತರೇ ಯಜ್ಞಸ್ಯ ವಾಗ್ಬುದ್ಧಿಸಾಧ್ಯತ್ವಾವಧಾರಣಾತ್ । ನ ಚ ಬುದ್ಧೇಃ ಶಕ್ತಿವಿಪರ್ಯಯಃ ಕರಣಾನಾಂ ಕರ್ತೃತ್ವಾಭ್ಯುಪಗಮೇ ಭವತಿ । ಸರ್ವಕಾರಕಾಣಾಮೇವ ಸ್ವಸ್ವವ್ಯಾಪಾರೇಷು ಕರ್ತೃತ್ವಸ್ಯ ಅವಶ್ಯಂಭಾವಿತ್ವಾತ್ । ಉಪಲಬ್ಧ್ಯಪೇಕ್ಷಂ ತು ಏಷಾಂ ಕರಣಾನಾಂ ಕರಣತ್ವಮ್ । ಸಾ ಚ ಆತ್ಮನಃ । ನ ಚ ತಸ್ಯಾಮಪಿ ಅಸ್ಯ ಕರ್ತೃತ್ವಮಸ್ತಿ । ನಿತ್ಯೋಪಲಬ್ಧಿಸ್ವರೂಪತ್ವಾತ್ । ಅಹಂಕಾರಪೂರ್ವಕಮಪಿ ಕರ್ತೃತ್ವಂ ನೋಪಲಬ್ಧುರ್ಭವಿತುಮರ್ಹತಿ । ಅಹಂಕಾರಸ್ಯಾಪಿ ಉಪಲಭ್ಯಮಾನತ್ವಾತ್ । ನ ಚ ಏವಂ ಸತಿ ಕರಣಾನ್ತರಕಲ್ಪನಾಪ್ರಸಙ್ಗಃ । ಬುದ್ಧೇಃ ಕರಣತ್ವಾಭ್ಯುಪಗಮಾತ್ । ಸಮಾಧ್ಯಭಾವಸ್ತು ಶಾಸ್ತ್ರಾರ್ಥವತ್ತ್ವೇನೈವ ಪರಿಹೃತಃ । ಯಥಾಪ್ರಾಪ್ತಮೇವ ಕರ್ತೃತ್ವಮ್ ಉಪಾದಾಯ ಸಮಾಧಿವಿಧಾನಾತ್ । ತಸ್ಮಾತ್ ಕರ್ತೃತ್ವಮಪ್ಯಾತ್ಮನಃ ಉಪಾಧಿನಿಮಿತ್ತಮೇವ ಇತಿ ಸ್ಥಿತಮ್ ॥

(ಭಾಷ್ಯಾರ್ಥ)

ಇನ್ನು ಶಾಸ್ತ್ರದ ಸಾರ್ಥಕ್ಯವೇ ಮುಂತಾದ ಹೇತುಗಳಿಂದ[1] ಆತ್ಮನ ಕರ್ತೃತ್ವವು ಸ್ವಾಭಾವಿಕವು ಎಂದು (ಪೂರ್ವಪಕ್ಷದಲ್ಲಿ ಹೇಳಿತ್ತಷ್ಟೆ). ಅದು ಸರಿಯಲ್ಲ.

1. ಇಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಿರುವ (೧) ಶಾಸ್ತ್ರಾರ್ಥವತ್ತ್ವ, (೨) ವಿಹಾರ, (೩) ಉಪಾದಾನ, (೪) ಕರ್ತೃತ್ವವ್ಯಪದೇಶ, (೫) ಉಪಲಬ್ಧಿದೃಷ್ಟಾಂತ (೬) ಶಕ್ತಿವಿಪರ್ಯಯ, (೭) ಸಮಾಧ್ಯಭಾವ– ಎಂಬ ಯುಕ್ತಿಗಳನ್ನು ಕ್ರಮವಾಗಿ ಖಂಡಿಸಿದೆ.

(ಏಕೆಂದರೆ) ಮೊದಲನೆಯದಾಗಿ (೩೩ನೆಯ ಸೂತ್ರದಲ್ಲಿ ಹೇಳಿದ) ವಿಧಿಶಾಸ್ತ್ರವು ಬಂದೊದಗಿದ ಕರ್ತೃತ್ವವನ್ನು ತೆಗೆದುಕೊಂಡೇ ಇಂಥಿಂಥದ್ದು ಕರ್ತವ್ಯವೆಂದು ಉಪದೇಶಿಸುತ್ತದೆಯೇ ಹೊರತು ಆತ್ಮನಿಗೆ ಕರ್ತೃತ್ವವು (ನಿಜವಾಗಿದೆ ಎಂದೇ ನೂ) ಪ್ರತಿಪಾದಿಸುವದಿಲ್ಲ. ಇವನಿಗೆ ಸ್ವಾಭಾವಿಕವಾದ ಕರ್ತೃತ್ವವು ಇಲ್ಲವೂ ಇಲ್ಲ; ಏಕೆಂದರೆ (ಇವನಿಗೆ) ಬ್ರಹ್ಮಸ್ವರೂಪವನ್ನು (ಶ್ರುತಿಯಲ್ಲಿ) ಉಪದೇಶಿಸಿರುತ್ತದೆ ಎಂದು ಹಿಂದೆಯೇ ಹೇಳಿರುತ್ತೇವೆ. ಆದ್ದರಿಂದ **ಅವಿದ್ಯಾಕೃತವಾದ ಕರ್ತೃತ್ವವನ್ನು ಇಟ್ಟುಕೊಂಡೇ ವಿಧಿಶಾಸ್ತ್ರವು ಪ್ರವರ್ತಿಸಬಹುದಾಗಿದೆ.** "ಕರ್ತೃವೂ ವಿಜ್ಞಾನಾತ್ಮನೂ ಆದ ಪುರುಷನು" (ಪ್ರ.೪-೯) ಎಂಬೀ ಜಾತಿಯ ಶಾಸ್ತ್ರವೂ ಅನುವಾದಕವಾಗಿರುವದರಿಂದ ಅವಿದ್ಯಾಕೃತವಾಗಿರುವ ಕರ್ತೃತ್ವವನ್ನೇ ಇದ್ದದ್ದು ಇದ್ದಂತೆ ಅನುವಾದಮಾಡಬಹುದಾಗಿದೆ[1]. ಇದರಿಂದ (೩೪-೩೫ನೆಯ ಸೂತ್ರಗಳಲ್ಲಿ ಹೇಳಿರುವ) ವಿಹಾರೋಪಾದಾನಗಳ ದೋಷಗಳನ್ನು ಪರಿಹರಿಸಿದಂತೆ ಆಯಿತು; ಏಕೆಂದರೆ ಅವೂ ಅನುವಾದರೂಪವಾಗಿಯೇ (ಇರುತ್ತವೆ).

(ಆಕ್ಷೇಪ) :– ಸಂಧ್ಯಸ್ಥಾನದಲ್ಲಿ[2] ಕರಣಗಳು ನಿದ್ರಿಸುತ್ತಿರುವಲ್ಲಿ "ತನ್ನ ಶರೀರದಲ್ಲಿ ಕಾಮವಿದ್ದಂತೆ ಸಂಚರಿಸುತ್ತಿರುತ್ತಾನೆ" (ಬೃ. ೨-೧-೧೮) ಎಂದು ವಿಹಾರವನ್ನು ಉಪದೇಶಿಸಿರುವದರಿಂದ ಕೇವಲಾತ್ಮನಿಗೇ[3] ಕರ್ತೃತ್ವವು ಬಂದೊದಗುವದಿಲ್ಲವೆ? ಹೀಗೆಯೇ ಉಪಾದಾನದಲ್ಲಿಯೂ "ಆಗ ಈ ಪ್ರಾಣಗಳ ವಿಜ್ಞಾನವನ್ನು ವಿಜ್ಞಾನದಿಂದ ತೆಗೆದುಕೊಂಡು" (ಬೃ. ೨-೧-೧೭) ಎಂದು ಕರ್ಮಕರಣವಿಭಕ್ತಿಗಳನ್ನು ಶ್ರುತಿಯಲ್ಲಿ ಹೇಳಿರುವದರಿಂದ[4] ಕೇವಲಾತ್ಮನಿಗೆ ಕರ್ತೃತ್ವವಿದೆಯೆಂದು ತಿಳಿಸುವದಿಲ್ಲವೆ ?

(ಪರಿಹಾರ) :– ಇಲ್ಲಿ (ನಾವು) ಹೇಳುವದೇನೆಂದರೆ, ಮೊದಲನೆಯದಾಗಿ ಸಂಧ್ಯಸ್ಥಾನದಲ್ಲಿ ಆತ್ಮನ ಕರಣಗಳು ಅತ್ಯಂತವಾಗಿ ಇಲ್ಲವಾಗುವದೆಂಬುದಿಲ್ಲ. ಏಕೆಂದರೆ "ಬುದ್ಧಿಯಿಂದೊಡಗೂಡಿದವನಾಗಿ ಸ್ವಪ್ನವಾಗಿ ಈ ಲೋಕವನ್ನು ಅತಿಕ್ರಮಿಸಿರುತ್ತಾನೆ" (ಬೃ. ಮಾಂ. ೪-೩-೭) ಎಂದು ಅಲ್ಲಿಯೂ ಬುದ್ಧಿ ಸಂಬಂಧವನ್ನು ಶ್ರುತಿಯಲ್ಲಿ ಹೇಳಿರುತ್ತದೆ. ಆದ್ದರಿಂದಲೇ ಸ್ಮೃತಿಕಾರರು

---

1. ಕರ್ತೃತ್ವವೂ ವಿಜ್ಞಾನಾತ್ಮನೂ ಆದ ಪುರುಷನು ಅಕ್ಷರದಲ್ಲಿ ಸೇರಿಹೋಗುತ್ತಾನೆ ಎಂದು ಬ್ರಹ್ಮದೊಡನೆ ಐಕ್ಯವನ್ನು ಪ್ರತಿಪಾದಿಸುವದರಿಂದ ಶ್ರುತಿಯು ಕರ್ತೃತ್ವವನ್ನು ತಾತ್ಪರ್ಯದಿಂದ ಹೇಳಿಲ್ಲ ; ಅದನ್ನು ಅನುವಾದಮಾಡಿಕೊಂಡಿದೆ.

2. ಸ್ವಪ್ನದಲ್ಲಿ. 3. ನಿರುಪಾಧಿಕಾತ್ಮನಿಗೇ.

4. "ವಿಜ್ಞಾನವನ್ನು" ಎಂದು ಕರಣಜ್ಞಾನಕ್ಕೆ ಕರ್ಮವಿಭಕ್ತಿಯನ್ನೂ "ವಿಜ್ಞಾನದಿಂದ" ಎಂದು ಕರಣಗಳಿಗೆ ಕರಣವಿಭಕ್ತಿಯನ್ನೂ ಹೇಳಿದೆ. ಕರಣವಿಶಿಷ್ಟನೇ ಕರ್ತೃವಾಗಿದ್ದರೆ ಕರ್ತೃವಿಭಕ್ತಿಯನ್ನು ಹೇಳಬೇಕಿತ್ತು ಎಂದು ಭಾವ.

"ಇಂದ್ರಿಯಗಳು ವ್ಯಾಪಾರವನ್ನು ಬಿಟ್ಟು ಮನಸ್ಸು ವ್ಯಾಪಾರವನ್ನು ಬಿಡದೆ ಇದ್ದು ವಿಷಯಗಳನ್ನು ಸೇವಿಸುತ್ತಾನಾದರೆ ಅದನ್ನು ಸ್ವಪ್ನದರ್ಶನವೆಂದು ತಿಳಿಯಬೇಕು" (ಮೋ ಧ.೨೭೫–೨೪) ಎಂದು ಹೇಳಿರುತ್ತಾರೆ. ಕಾಮಾದಿಗಳು ಮನಸ್ಸಿನ ವೃತ್ತಿಗಳು ಎಂದು (ಬೃ. ೧–೫–೩) ಶ್ರುತಿಯಿದೆ. ಆ (ಕಾಮಾದಿ) ವೃತ್ತಿಗಳು ಸ್ವಪ್ನದಲ್ಲಿ ಕಾಣಬರುತ್ತವೆ. **ಆದ್ದರಿಂದ ಮನಸ್ಸಿನಿಂದೊಡಗೂಡಿಯೇ ಸ್ವಪ್ನದಲ್ಲಿ ವಿಹರಿಸುತ್ತಾನೆ. ಇದಲ್ಲದೆ ಅಲ್ಲಿರುವ ವಿಹಾರವೂ ವಾಸನಾಮಯವೇ ಹೊರತು ಪಾರಮಾರ್ಥಿಕವಲ್ಲ**[1] ಆದ್ದರಿಂದಲೇ ಶ್ರುತಿಯು "ಸ್ತ್ರೀಯರೊಡನೆ ಸಂತೋಷದಿಂದ ಭೋಗಿಸುತ್ತಿರುವಂತೆ, ಮತ್ತು ಭಯಗಳನ್ನು ಕಾಣುವವನಂತೆ ...." (ಬೃ. ೪–೩–೧೩) ಎಂದು ಇವಕಾರ (ಅಂತೆ ಎಂಬ ಮಾತಿನ) ಸಂಬಂಧವನ್ನಿಟ್ಟೇ ಸ್ವಪ್ನವ್ಯಾಪಾರವನ್ನು ವರ್ಣಿಸುತ್ತದೆ. ಲೋಕದ ಜನರು ಹಾಗೆಯೇ "ಬೆಟ್ಟದ ಕೋಡುಗಲ್ಲನ್ನು ಹತ್ತಿದೆನೆಂಬಂತಾಯಿತು, ವನಸಮೂಹವನ್ನು ಕಂಡಂತೆ ಆಯಿತು" ಎಂದು ಸ್ವಪ್ನವನ್ನು (ವಿವರಿಸಿ) ಹೇಳುತ್ತಾರೆ.

ಹೀಗೆಯೇ ಉಪಾದಾನದಲ್ಲಿಯೂ ಕರಣಗಳಲ್ಲಿ ಕರ್ಮಕರಣವಿಭಕ್ತಿಗಳನ್ನು (ಉಪಯೋಗಿಸಿ) ತಿಳಿಸಿದೆಯಾದರೂ ಆ (ಕರಣ)ಗಳಿಂದೊಡಗೂಡಿದ (ಆತ್ಮನಿಗೆ) ಕರ್ತೃತ್ವವನ್ನು (ಹೇಳಿದೆ) ಎಂದು ತಿಳಿಯಬೇಕು; ಏಕೆಂದರೆ ಕೇವಲಾತ್ಮನಲ್ಲಿ ಕರ್ತೃತ್ವವು ಸಂಭವಿಸುವದಿಲ್ಲ ಎಂದು ತಿಳಿಸಿದ್ದಾಗಿದೆ. ಲೋಕದಲ್ಲಿ 'ಸಿಪಾಯಿಗಳು ಯುದ್ಧಮಾಡುತ್ತಾರೆ', 'ರಾಜನು ಸಿಪಾಯಿಗಳ ಮೂಲಕ ಯುದ್ಧಮಾಡುತ್ತಾನೆ' ಎಂದು ಅನೇಕಪ್ರಕಾರವಾಗಿ ವಿವಕ್ಷೆಯಿರುವದೂ (ಕಂಡಿದೆ)[2]. ಇದೂ ಅಲ್ಲದೆ ಈ ಉಪಾದಾನದಲ್ಲಿ ಕರಣವ್ಯಾಪಾರಗಳು ನಿಲ್ಲುವದನ್ನು ಮಾತ್ರ ಹೇಳಿದೆಯೇ ಹೊರತು ಯಾರಿಗೂ (ಇಲ್ಲಿ) ಕರ್ತೃತ್ವವನ್ನು ಹೇಳಿಲ್ಲ[3]. ಏಕೆಂದರೆ ತನಿನಿದ್ರೆಯಲ್ಲಿ ಅಬುದ್ಧಿಪೂರ್ವಕವಾಗಿಯೂ ಕರಣವ್ಯಾಪಾರವನ್ನು ಬಿಡುವದು ಕಂಡುಬರುತ್ತದೆ[4].

ಇನ್ನು (ಸೂ. ೩೬ರಲ್ಲಿ ಹೇಳಿರುವಂತೆ) "ವಿಜ್ಞಾನವು ಯಜ್ಞವನ್ನು ಮಾಡುತ್ತದೆ'' (ತೈ. ೨–೫) ಎಂಬ (ಶ್ರುತಿ)ವ್ಯಪದೇಶವನ್ನು (ಪೂರ್ವಪಕ್ಷದಲ್ಲಿ)

1. ಎಚ್ಚರದಲ್ಲಿ ವಿಹಾರವು ಪಾರಮಾರ್ಥಿಕವೆಂಬುದೂ ವ್ಯಾವಹಾರಿಕ, ಪರಮಾರ್ಥವಲ್ಲ. ೨–೧–೪, ೩–೨–೪ರ ಭಾಷ್ಯಗಳನ್ನು ನೋಡಿ.

೨. ಆದ್ದರಿಂದ ಕರಣವಿಭಕ್ತಿಯಾದರೆ ಕರ್ತೃತ್ವವಿಲ್ಲವೆನ್ನುವದಕ್ಕೆ ಆಗುವದಿಲ್ಲ.

3. ಹಿಂದೆ ಕರ್ತೃತ್ವವನ್ನು ಒಪ್ಪಿ ಕರಣಗಳಿಗೆ ಕರ್ತೃತ್ವವನ್ನು ಹೇಳಿತ್ತು ; ಈಗ ಆ ಅಂಗೀಕಾರವನ್ನು ಬಿಟ್ಟು ವಾದಿಸಿದೆ.

4. ಕರಣವನ್ನು ಬಿಡುವದು ಎಂಬುದು ನಿಜವಾಗಿ ಕ್ರಿಯೆಯಲ್ಲ; ಅದು ಕ್ರಿಯೆಯಾದರೆ ಬುದ್ಧಿಪೂರ್ವಕವಾಗಿ ಮಾಡತಕ್ಕದ್ದಾಗಿರುತ್ತಿತ್ತು.

ತೋರಿಸಿತ್ತಷ್ಟೆ. ಅದು ಬುದ್ಧಿಗೇ ಕರ್ತೃತ್ವವನ್ನು ತಂದುಕೊಡುತ್ತದೆ[1]; ಏಕೆಂದರೆ ವಿಜ್ಞಾನಶಬ್ದವು ಆ (ಬುದ್ಧಿ)ಯಲ್ಲಿ ಪ್ರಸಿದ್ಧವಾಗಿರುತ್ತದೆ. (ಇದನ್ನು) ಮನಸ್ಸಾದಬಳಿಕ ಹೇಳಿರುವದರಿಂದಲೂ (ಇದು ಬುದ್ಧಿಯೇ)[2]. "ಅವನಿಗೆ ಶ್ರದ್ಧೆಯೇ ತಲೆ" (ತೈ. ೨-೪) ಎಂದು ವಿಜ್ಞಾನಮಯಾತ್ಮನಿಗೆ ಶ್ರದ್ಧೆಯೇ ಮುಂತಾದ ಅವಯುವಗಳನ್ನು ಹೇಳಿರುವದರಿಂದಲೂ ಶ್ರದ್ಧೆ ಮುಂತಾದವುಗಳು ಬುದ್ಧಿಧರ್ಮಗಳೆಂದು ಪ್ರಸಿದ್ಧವಾಗಿರುವದರಿಂದಲೂ (ಇದು ಬುದ್ಧಿಯು). "ವಿಜ್ಞಾನವನ್ನು ಜ್ಯೇಷ್ಠವಾದ ಬ್ರಹ್ಮವೆಂದು ದೇವತೆಗಳೆಲ್ಲರೂ ಉಪಾಸನೆ ಮಾಡುತ್ತಾರೆ" (ತೈ. ೨-೫) ಎಂಬ ವಾಕ್ಯಶೇಷದಿಂದಲೂ (ಹೀಗೆಂದು ಸಿದ್ಧವಾಗುತ್ತದೆ); ಏಕೆಂದರೆ ಜ್ಯೇಷ್ಠತ್ವವು ಎಂದರೆ ಮೊದಲು ಹುಟ್ಟುವದು ಬುದ್ಧಿಯ ಧರ್ಮವೆಂದು ಪ್ರಸಿದ್ಧವಾಗಿರುತ್ತದೆ[3]. "ಆ ಈ ಯಜ್ಞವೆಂಬುದು ವಾಕ್ಕಿಗೂ ಚಿತ್ತಕ್ಕೂ ಉತ್ತರೋತ್ತರವಾಗಿ ಆಗತಕ್ಕದ್ದು" (?) ಎಂದು ಮತ್ತೊಂದು ಶ್ರುತಿಯಲ್ಲಿ ಯಜ್ಞವು ವಾಗ್ಬುದ್ಧಿಗಳಿಂದ ಆಗತಕ್ಕದ್ದು ಎಂದು ಗೊತ್ತುಪಡಿಸಿರುವದರಿಂದಲೂ (ಇದು ಬುದ್ಧಿಯೇ). (ಸೂ. ೩೮ರಲ್ಲಿ ಹೇಳಿರುವಂತೆ ಕರಣಗಳಿಗೆ ಕರ್ತೃತ್ವವನ್ನು ಒಪ್ಪಿದರೆ) ಬುದ್ಧಿಯ ಶಕ್ತಿಗೆ ವಿಪರ್ಯಯವಾಗುವದೂ ಇಲ್ಲ; ಏಕೆಂದರೆ ಎಲ್ಲಾ ಕಾರಕಗಳಿಗೂ ತಮ್ಮತಮ್ಮ ವ್ಯಾಪಾರಗಳಲ್ಲಿ ಕರ್ತೃತ್ವವು ಅವಶ್ಯವಾಗಿದ್ದೇ ಇರುವದು[4]. ಆದರೆ ಆ ಕರಣಗಳು ಕರಣವಾಗಿರುವವೆಂಬುದು ಅರಿವಿನ ಅಪೇಕ್ಷೆಯಿಂದ; ಆ (ಅರಿವು) ಆತ್ಮನದು. ಆ (ಅರಿವಿ)ನಲ್ಲಿಯೂ ಈ (ಆತ್ಮನಿಗೆ ೩೭ನೆಯ ಸೂತ್ರದಲ್ಲಿ ಹೇಳಿರುವಂತೆ) ಕರ್ತೃತ್ವವಿಲ್ಲ; ಏಕೆಂದರೆ ಇವನು ನಿತ್ಯಚೈತನ್ಯಸ್ವರೂಪನೇ ಆಗಿರುತ್ತಾನೆ[5]. ಅಹಂಕಾರಪೂರ್ವಕವಾಗಿ ಆಗುವ ಕರ್ತೃತ್ವವೂ ಅರಿಯುವ (ಆತ್ಮ)ನದೆಂದಾಗಲಾರದು; ಏಕೆಂದರೆ ಅಹಂಕಾರವೂ ಅರಿಯಲ್ಪಡುತ್ತದೆ. ಹೀಗಾದರೆ ಮತ್ತೊಂದು ಕರಣವನ್ನು ಕಲ್ಪನೆಮಾಡಬೇಕಾಗಿಬರುತ್ತದೆ (ಎಂದು ೩೮ನೆಯ ಸೂತ್ರದಲ್ಲಿ ಹೇಳಿರುವದೂ ಸರಿ)ಯಲ್ಲ; ಏಕೆಂದರೆ ಬುದ್ಧಿಯು ಕರಣವೆಂದೇ (ನಾವು) ಅಂಗೀಕರಿಸಿರುತ್ತೇವೆ[6].

---

1. ವಿಜ್ಞಾತೃವಾದ ಜೀವನಿಗಲ್ಲ.

2. ಮನಸ್ಸಾದಬಳಿಕ ಬುದ್ಧಿಯು ಪ್ರಸಕ್ತವಾಗುತ್ತದೆ, ಜೀವನಲ್ಲ.

3. ಹಿರಣ್ಯಗರ್ಭನ ಬುದ್ಧಿಯು ಎಲ್ಲಕ್ಕೂ ಮೊದಲು ಹುಟ್ಟುತ್ತದೆ ಎಂಬುದು ಶ್ರುತಿಸಿದ್ಧ. ಬೃ. ೫-೪-೧.

4. ಕರಣಗಳು ತಮ್ಮತಮ್ಮ ವ್ಯಾಪಾರವನ್ನು ಮಾಡುವಷ್ಟರಮಟ್ಟಿಗೆ ಕರ್ತೃಗಳೇ ಆಗಿರುತ್ತವೆ.

5. ಆತ್ಮನಲ್ಲಿ ಕರ್ತೃತ್ವವನ್ನು ಒಪ್ಪಿದರೆ ಕರಣಗಳು ಬೇಕು; ನಿಜವಾಗಿ ಅರಿವೆಂಬುದು ಆತ್ಮನ ಕ್ರಿಯೆಯಲ್ಲ, ಸ್ವರೂಪವೇ.

6. ಬುದ್ಧಿಯೇ ಕರ್ತೃವೆಂದೇನೂ ನಾವು ಹೇಳಿರುವದಿಲ್ಲ; ಕಾರಕವಾಗಿರುವಷ್ಟುಮಟ್ಟಿಗೆ ಕರ್ತೃವೆಂದು ಹೇಳಿದೇವೆ.

ಸಮಾಧ್ಯಭಾವ ಎಂಬ (೩೯ನೆಯ ಸೂತ್ರದಲ್ಲಿರುವ ಆಕ್ಷೇಪವನ್ನಾದರೋ) ಶಾಸ್ತ್ರಸಾರ್ಥಕ್ಯ(ಯುಕ್ತಿ)ಯಿಂದಲೇ ಪರಿಹರಿಸಿದಂತೆ ಆಯಿತು. ಏಕೆಂದರೆ (ಇಲ್ಲಿಯೂ ವ್ಯವಹಾರದೃಷ್ಟಿಯಿಂದ) ಬಂದೊದಗಿರುವ ಕರ್ತೃತ್ವವನ್ನು ಇಟ್ಟುಕೊಂಡೇ (ಶಾಸ್ತ್ರದಲ್ಲಿ) ಸಮಾಧಿಯನ್ನು ವಿಧಿಸಿದೆ (ಎಂದು ಹೇಳ ಬಹುದಾಗಿದೆ).

ಆದ್ದರಿಂದ ಆತ್ಮನಿಗೆ ಕರ್ತೃತ್ವವು ಉಪಾಧಿನಿಮಿತ್ತದಿಂದಲೇ (ಆದದ್ದು) ಎಂಬುದೇ ನಿಂತಿತು.

## ೧೬. ಪರಾಯತ್ತಾಧಿಕರಣ (ಸೂ. ೪೧–೪೨)

### (ಜೀವನ ಕರ್ತೃತ್ವವು ಈಶ್ವರಾಧೀನ)

**ಪರಾತ್ತು ತಚ್ಛ್ರುತೇಃ ॥ ೪೧ ॥**

೧. ಅದು ಪರ(ಮಾತ್ಮನಿಂದ) ; ಏಕೆಂದರೆ ಶ್ರುತಿಯಿದೆ.

### ಸಂಶಯಪೂರ್ವಪಕ್ಷಗಳು

(ಭಾಷ್ಯ)

೧೫೪. ಯದಿದಮ್ ಅವಿದ್ಯಾವಸ್ಥಾಯಾಮ್ ಉಪಾಧಿನಿಬನ್ಧನಂ ಕರ್ತೃತ್ವಂ ಜೀವಸ್ಯ ಅಭಿಹಿತಮ್, ತತ್ ಕಿಮ್ ಅನಪೇಕ್ಷ್ಯ ಈಶ್ವರಂ ಭವತಿ, ಆಹೋಸ್ವಿತ್ ಈಶ್ವರಾಪೇಕ್ಷಮ್ ? ಇತಿ ಭವತಿ ವಿಚಾರಣಾ । ತತ್ರ ಪ್ರಾಪ್ತಂ ತಾವತ್ ನೇಶ್ವರಮ್ ಅಪೇಕ್ಷತೇ ಜೀವಃ ಕರ್ತೃತ್ವೇ ಇತಿ। ಕಸ್ಮಾತ್ ? ಅಪೇಕ್ಷಾಪ್ರಯೋಜನಾಭಾವಾತ್। ಅಯಂ ಹಿ ಜೀವಃ ಸ್ವಯಮೇವ ರಾಗ ದ್ವೇಷಾದಿದೋಷಪ್ರಯುಕ್ತಃ ಕಾರಕಾನ್ತರಸಾಮಗ್ರೀಸಂಪನ್ನಃ ಕರ್ತೃತ್ವಮ್ ಅನುಭವಿತುಂ ಶಕ್ನೋತಿ । ತಸ್ಯ ಕಿಮ್ ಈಶ್ವರಃ ಕರಿಷ್ಯತಿ? ನ ಚ ಲೋಕೇ ಪ್ರಸಿದ್ಧಿರಸ್ತಿ ಕೃಷ್ಯಾದಿಕಾಸು ಕ್ರಿಯಾಸು ಅನಡುದಾದಿವತ್ ಈಶ್ವರೋಽಪರಃ ಅಪೇಕ್ಷಿತವ್ಯಃ ಇತಿ। ಕ್ಲೇಶಾತ್ಮಕೇನ ಚ ಕರ್ತೃತ್ವೇನ ಜನ್ತೂನ್ ಸಂಸೃಜತಃ ಈಶ್ವರಸ್ಯ ನೈರ್ಘೃಣ್ಯಂ ಪ್ರಸಜ್ಯೇತ। ವಿಷಮಫಲಂ ಚ ಏಷಾಂ ಕರ್ತೃತ್ವಂ ವಿದಧತೋ ವೈಷಮ್ಯಮ್। ನನು "ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್" (೨–೧–೩೪) ಇತ್ಯುಕ್ತಮ್। ಸತ್ಯಮುಕ್ತಮ್ ಸತಿ ತು ಈಶ್ವರಸ್ಯ ಸಾಪೇಕ್ಷತ್ವ ಸಂಭವೇ। ಸಾಪೇಕ್ಷತ್ವಂ ಚ ಈಶ್ವರಸ್ಯ ಸಂಭವತಿ ಸತೋರ್ಜನ್ತೂನಾಂ ಧರ್ಮಾ ಧರ್ಮಯೋಃ। ತಯೋಶ್ಚ ಸದ್ಭಾವಃ ಸತಿ ಜೀವಸ್ಯ ಕರ್ತೃತ್ವೇ। ತದೇವ

ಚೇತ್ ಕರ್ತೃತ್ವಮ್ ಈಶ್ವರಾಪೇಕ್ಷಂ ಸ್ಯಾತ್ ಕಿಂ ವಿಷಯಮ್ ಈಶ್ವರಸ್ಯ ಸಾಪೇಕ್ಷತ್ವಮ್ ಉಚ್ಯೇತ? ಅಕೃತಾಭ್ಯಾಗಮಶ್ಚ ಏವಂ ಜೀವಸ್ಯ ಪ್ರಸಜ್ಯೇತ। ತಸ್ಮಾತ್ ಸ್ವತ ಏವ ಅಸ್ಯ ಕರ್ತೃತ್ವಮ್ ಇತಿ ॥

(ಭಾಷ್ಯಾರ್ಥ)

ಅವಿದ್ಯಾವಸ್ಥೆಯಲ್ಲಿ ಉಪಾಧಿನಿಮಿತ್ತವಾದ ಈ ಕರ್ತೃತ್ವವನ್ನು ಜೀವನಿಗೆ ಹೇಳಿದೆಯಲ್ಲ, ಇದೇನು ಈಶ್ವರನ ಅಪೇಕ್ಷೆಯಿಲ್ಲದೆ ಆಗಿದೆಯೊ, ಅಥವಾ ಈಶ್ವರಾಪೇಕ್ಷವಾಗಿ ಆಗಿದೆಯೊ? –ಎಂದು ವಿಚಾರವನ್ನು ಮಾಡಬೇಕಾಗಿದೆ.

ಇಲ್ಲಿ ಮೊದಲು ಒದಗುವ (ಪೂರ್ವಪಕ್ಷವೇನೆಂದರೆ) ಜೀವನಿಗೆ ಕರ್ತೃತ್ವಕ್ಕೆ ಈಶ್ವರನ ಅಪೇಕ್ಷೆಯಿಲ್ಲ. ಏಕೆ? ಎಂದರೆ (ಆ) ಅಪೇಕ್ಷೆಗೆ ಪ್ರಯೋಜನವಿರುವದಿಲ್ಲ. ಹೇಗೆಂದರೆ ಈ ಜೀವನು ರಾಗದ್ವೇಷಾದಿಗಳಿಂದ ಪ್ರಯುಕ್ತನಾಗಿ ಉಳಿದ ಕಾರಕಗಳೆಂಬ ಸಾಮಗ್ರಿಯಿಂದೊಡಗೂಡಿದವನಾಗಿ ತಾನೇ ಕರ್ತೃತ್ವವನ್ನು ಅನುಭವಿಸಬಲ್ಲವನಾಗಿರುತ್ತಾನೆ. ಇಂಥವನಿಗೆ ಈಶ್ವರನು ಏನು ಮಾಡಿಕೊಟ್ಟಾನು? ಲೋಕದಲ್ಲಿ ಬೇಸಾಯವೇ ಮುಂತಾದ ಕ್ರಿಯೆಗಳಲ್ಲಿ ಎತ್ತು ಮುಂತಾದವುಗಳಂತೆ ಮತ್ತೊಬ್ಬ ಈಶ್ವರನು ಬೇಕು ಎಂಬ ಪ್ರಸಿದ್ಧಿಯಿರುವದಿಲ್ಲ. ಇದಲ್ಲದೆ ಕ್ಲೇಶರೂಪವಾದ ಕರ್ತೃತ್ವವನ್ನು ಜೀವರಿಗೆ ಸಂಬಂಧಿಸುತ್ತಾನೆ ಎಂದರೆ ಈಶ್ವರನಿಗೆ ನೈರ್ಘೃಣ್ಯವು ಪ್ರಸಕ್ತವಾಗುವದು; ಮತ್ತು ವಿಷಮಫಲಗಳುಳ್ಳ ಕರ್ತೃತ್ವವನ್ನು ಇವರಿಗೆ ಉಂಟುಮಾಡುವದರಿಂದ ವೈಷಮ್ಯವು (ಪ್ರಸಕ್ತವಾಗುವದು).

(ಆಕ್ಷೇಪ) :– "(ಈಶ್ವರನಿಗೆ) ವೈಷಮ್ಯನೈರ್ಘೃಣ್ಯಗಳಿಲ್ಲ; ಏಕೆಂದರೆ (ಕರ್ಮ)ಸಾಪೇಕ್ಷನಾಗಿರುತ್ತಾನೆ" (೧–೪–೧೭) ಎಂದು ಹಿಂದೆ ಹೇಳಿದೇವಲ್ಲ!

(ಪರಿಹಾರ) :– ನಿಜ, ಹೇಳಿದೀರಿ. ಈಶ್ವರನಿಗೆ ಸಾಪೇಕ್ಷತ್ವವು ಸಂಭವಿಸಿದರೆ (ನೀವು ಹೇಳಿದ್ದು ಸರಿಯಾಗುವದು). ಈಶ್ವರನಿಗೆ (ಆ) ಸಾಪೇಕ್ಷತ್ವವು ಜೀವರುಗಳಿಗೆ ಧರ್ಮಾಧರ್ಮಗಳುಂಟೆಂದಾದರೆ ಸಂಭವಿಸುತ್ತದೆ. ಆದರೆ ಅವು ಇರುವವೆಂಬುದು ಜೀವನಿಗೆ ಕರ್ತೃತ್ವವಿದೆ ಎಂದರೇ (ಸಿದ್ಧವಾಗುತ್ತದೆ). ಆದೇ ಕರ್ತೃತ್ವವೇ ಈಶ್ವರಾಪೇಕ್ಷ ಎನ್ನುವದಾದರೆ ಈಶ್ವರನಿಗೆ ಸಾಪೇಕ್ಷತ್ವವು ಯಾವ ವಿಷಯದಲ್ಲಿ ಎಂದು ಹೇಳುವದಕ್ಕಾದೀತು? ಹೀಗಾದರೆ ಜೀವನಿಗೆ ಅಕೃತಾಭ್ಯಾಗಮವೂ[1] ಉಂಟಾಗುವದು. ಆದ್ದರಿಂದ ಇವನಿಗೆ ಸ್ವಭಾವದಿಂದಲೇ ಕರ್ತೃತ್ವವು ಇದೆ ಎನ್ನಬೇಕು.

---

1. ತಾನು ಹಿಂದೆ ಮಾಡದೆ ಇರುವ ಫಲವೂ ಉಂಟಾಗುವದು. ಏಕೆಂದರೆ ಈಶ್ವರನೇ ಇವನಿಗೆ ಕರ್ತೃತ್ವವನ್ನು ಹೊಸದಾಗಿ ಕೊಟ್ಟು ಕರ್ಮವನ್ನು ಮಾಡಿಸುತ್ತಾನೆ ಎಂದಾಗುವದು.

## ಸಿದ್ಧಾಂತ: ಜೀವನ ಕರ್ತೃತ್ವವು ಈಶ್ವರಾಪೇಕ್ಷ

(ಭಾಷ್ಯ)

೧೫೫. ಏತಾಂ ಪ್ರಾಪ್ತಿಂ ತುಶಬ್ದೇನ ವ್ಯಾವರ್ತ್ಯ ಪ್ರತಿಜಾನೀತೇ—'ಪರಾತ್' ಇತಿ । ಅವಿದ್ಯಾವಸ್ಥಾಯಾಂ ಕಾರ್ಯಕರಣಸಂಘಾತಾವಿವೇಕದರ್ಶಿನೋ ಜೀವಸ್ಯ ಅವಿದ್ಯಾತಿಮಿರಾನ್ಧಸ್ಯ ಸತಃ ಪರಸ್ಮಾದಾತ್ಮನಃ ಕರ್ಮಾಧ್ಯಕ್ಷಾತ್ ಸರ್ವಭೂತಾಧಿವಾಸಾತ್ ಸಾಕ್ಷಿಣಃ ಚೇತಯಿತುಃ ಈಶ್ವರಾತ್ ತದನುಜ್ಞಯಾ ಕರ್ತೃತ್ವಭೋಕ್ತೃತ್ವಲಕ್ಷಣಸ್ಯ ಸಂಸಾರಸ್ಯ ಸಿದ್ಧಿಃ । ತದನುಗ್ರಹಹೇತುಕೇನೈವ ಚ ವಿಜ್ಞಾನೇನ ಮೋಕ್ಷಸಿದ್ಧಿರ್ಭವಿತುಮರ್ಹತಿ । ಕುತಃ? ತಚ್ಛ್ರುತೇಃ । ಯದ್ಯಪಿ ದೋಷಪ್ರಯುಕ್ತಃ ಸಾಮಗ್ರೀಸಂಪನ್ನಶ್ಚ ಜೀವಃ, ಯದ್ಯಪಿ ಚ ಲೋಕೇ ಕೃಷ್ಯಾದಿಷು ಕರ್ಮಸು ನೇಶ್ವರಕಾರಣತ್ವಂ ಪ್ರಸಿದ್ಧಮ್, ತಥಾಪಿ ಸರ್ವಾಸ್ವೇವ ಪ್ರವೃತ್ತಿಷು ಈಶ್ವರೋ ಹೇತುಕರ್ತಾ ಇತಿ ಶ್ರುತೇರವಸೀಯತೇ । ತಥಾ ಹಿ ಶ್ರುತಿರ್ಭವತಿ —"ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ । ಏಷ ಹ್ಯೇವಾಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ" (ಕೌ. ೩–೮)[1] ಇತಿ । "ಯ ಆತ್ಮನಿ ತಿಷ್ಠನ್ನಾತ್ಮಾನಮನ್ತರೋ ಯಮಯತಿ" (ಬೃ.ಮಾಂ.೩–೭) ಇತಿ ಚೈವಂಜಾತೀಯಕಾ ॥

(ಭಾಷ್ಯಾರ್ಥ)

ಈ (ಪೂರ್ವಪಕ್ಷದ) ಪ್ರಾಪ್ತಿಯನ್ನು ತುಶಬ್ದದಿಂದ ತಿರಸ್ಕರಿಸಿ (ಸೂತ್ರಕಾರರು) 'ಪರಾತ್' (ಪರಮಾತ್ಮನಿಂದ) ಎಂದಿರುತ್ತಾರೆ. **ಅವಿದ್ಯಾವಸ್ಥೆಯಲ್ಲಿ ಕಾರ್ಯಕರಣಸಂಘಾತವನ್ನು ವಿಂಗಡಿಸಿ ಅರಿತುಕೊಳ್ಳದೆ ಅವಿದ್ಯೆ ಎಂಬ ಕಣ್ಪರೆಯಿಂದ ಕುರುಡನಾಗಿರುವ ಜೀವನಿಗೆ ಪರಮಾತ್ಮನಿಂದ ಎಂದರೆ, ಕರ್ಮಾಧ್ಯಕ್ಷನೂ ಸರ್ವಭೂತಾಧಿವಾಸನೂ ಸಾಕ್ಷಿಯೂ ಚೇತನನೂ[1] ಆಗಿರುವ ಈಶ್ವರನಿಂದ, ಅವನ ಅನುಜ್ಞೆಯಿಂದ ಕರ್ತೃತ್ವಭೋಕ್ತೃತ್ವರೂಪವಾದ ಸಂಸಾರದ ಸಿದ್ಧಿಯಾಗುತ್ತದೆ ; ಅವನ ಅನುಗ್ರಹದ ಹೇತುವಿನಿಂದಾದ ವಿಜ್ಞಾನದಿಂದಲೇ ಮೋಕ್ಷಸಿದ್ಧಿಯೂ ಆಗಬೇಕು.** ಏಕೆ? ಎಂದರೆ ಹಾಗೆಂದು ಶ್ರುತಿಯಿದೆ. ಜೀವನು (ರಾಗಾದಿ) ದೋಷಗಳಿಂದೊಡಗೂಡಿ (ಕ್ರಿಯಾ)ಸಾಮಗ್ರಿಗಳಿಂದಲೂ ಒಡಗೂಡಿರುತ್ತಾನಾದರೂ, ಲೋಕದಲ್ಲಿ ಕೃಷಿಯೇ ಮುಂತಾದ ಕರ್ಮಗಳಲ್ಲಿ ಈಶ್ವರಕಾರಣತ್ವವು ಪ್ರಸಿದ್ಧವಾಗಿಲ್ಲವಾದರೂ,– (ಹೀಗಿದ್ದರೂ) ಎಲ್ಲಾ ಪ್ರವೃತ್ತಿಗಳಲ್ಲಿಯೂ ಈಶ್ವರನು ಹೇತುಕರ್ತೃವೆಂದೇ ಶ್ರುತಿಯಿಂದ ನಿಶ್ಚಯವಾಗುತ್ತದೆ. ಆದ್ದರಿಂದಲೇ ಅಲ್ಲವೆ,

1. ೩ll ಪಾಠದಲ್ಲಿ ಇದು ಸ್ವಲ್ಪ ಹೆಚ್ಚುಕಡಿಮೆಯಾಗಿದೆ.

"ಯಾವನನ್ನು ಈ ಲೋಕಗಳಿಂದ ಮೇಲಕ್ಕೊಯ್ಯುವದಕ್ಕೆ ಇಚ್ಛಿಸುತ್ತಾನೋ ಅವನನ್ನು ಈತನೇ ಉತ್ತಮಕರ್ಮಗಳನ್ನು ಮಾಡುವಂತೆ ಮಾಡುತ್ತಾನೆ; ಯಾವನನ್ನು ಕೆಳಕ್ಕೆ ಇಳಿಸಬೇಕೆಂದು ಇಚ್ಛಿಸುತ್ತಾನೋ ಅವನನ್ನು ಈತನೇ ಕೆಟ್ಟಕರ್ಮಗಳನ್ನು ಮಾಡುವಂತೆ ಮಾಡುತ್ತಾನೆ" (ಕೌ. ೪-೮) "ಯಾವನು ಆತ್ಮನಲ್ಲಿ ಇರುವನಾಗಿ ಆತ್ಮನನ್ನು ಒಳಗಿಂದ ಆಳುತ್ತಿರುವನೋ'' (ಬೃ. ಮಾ. ೩-೭) ಎಂಬೀ ಜಾತಿಯ ಶ್ರುತಿಯು ಇರುವದು ?

**ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ || ೪೨ ||**

೪೨. ಆದರೆ ಕೃತಪ್ರಯತ್ನವನ್ನು ಅಪೇಕ್ಷಿಸಿಯೇ (ಪ್ರೇರಕನಾಗಿರುತ್ತಾನೆ); ಏಕೆಂದರೆ ವಿಹಿತಪ್ರತಿಷಿದ್ಧಗಳು ವ್ಯರ್ಥವಾಗದಿರಬೇಕೆಂಬುದೇ ಮುಂತಾದ (ಕಾರಣಗಳಿವೆ).

## ಜೀವನ ಪ್ರಯತ್ನಾನುಗುಣವಾಗಿ ಈಶ್ವರನು ಪ್ರೇರಕನು

**(ಭಾಷ್ಯ)**

೧೫೬. ನನು ಏವಮ್ ಈಶ್ವರಸ್ಯ ಕಾರಯಿತೃತ್ವೇ ಸತಿ ವೈಷಮ್ಯನೈರ್ಘೃಣ್ಯೇ ಸ್ಯಾತಾಮ್ ಅಕೃತಾಭ್ಯಾಗಮಶ್ಚ ಜೀವಸ್ಯ ಇತಿ । ನೇತ್ಯುಚ್ಯತೇ —(ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ) । ತು ಶಬ್ದಃ ಚೋದಿತದೋಷವ್ಯಾವರ್ತನಾರ್ಥಃ । ಕೃತಃ ಯಃ ಪ್ರಯತ್ನಃ ಜೀವಸ್ಯ ಧರ್ಮಾಧರ್ಮಲಕ್ಷಣಃ, ತದಪೇಕ್ಷ ಏವ ಏನಮ್ ಈಶ್ವರಃ ಕಾರಯತಿ । ತತಶ್ಚ ಏತೇ ಚೋದಿತಾ ದೋಷಾಃ ನ ಪ್ರಸಜ್ಯನ್ತೇ । ಜೀವಕೃತಧರ್ಮಾಧರ್ಮವೈಷಮ್ಯಾಪೇಕ್ಷ ಏವ ತತ್ತತ್ಫಲಾನಿ ವಿಷಮಂ ವಿಭಜೇತ್ ಪರ್ಜನ್ಯವತ್ ಈಶ್ವರಃ ನಿಮಿತ್ತತ್ವಮಾತ್ರೇಣ । ಯಥಾ ಲೋಕೇ ನಾನಾವಿಧಾನಾಂ ಗುಚ್ಛಗುಲ್ಮಾದೀನಾಂ ವ್ರೀಹಿಯವಾದೀನಾಂ ಚ ಅಸಾಧಾರಣೇಭ್ಯಃ ಸ್ವಸ್ವಬೀಜೇಭ್ಯಃ ಜಾಯಮಾನಾನಾಂ ಸಾಧಾರಣಂ ನಿಮಿತ್ತಂ ಭವತಿ ಪರ್ಜನ್ಯಃ । ನ ಹಿ ಅಸತಿ ಪರ್ಜನ್ಯೇ ರಸಪುಷ್ಪಫಲಾಶಾದಿವೈಷಮ್ಯಂ ತೇಷಾಂ ಜಾಯತೇ, ನಾಪಿ ಅಸತ್ಸು ಸ್ವಸ್ವಬೀಜೇಷು । ಏವಂ ಜೀವಕೃತಪ್ರಯತ್ನಾಪೇಕ್ಷಃ ಈಶ್ವರಃ ತೇಷಾಂ ಶುಭಾಶುಭಂ ವಿದಧ್ಯಾತ್ ಇತಿ ಶ್ಲಿಷ್ಯತೇ । ನನು ಕೃತಪ್ರಯತ್ನಾಪೇಕ್ಷತ್ವಮೇವ ಜೀವಸ್ಯ ಪರಾಯತ್ತೇ ಕರ್ತೃತ್ವೇ ನೋಪಪದ್ಯತೇ । ನೈಷ ದೋಷಃ । ಪರಾಯತ್ತೇಽಪಿ ಹಿ ಕರ್ತೃತ್ವೇ ಕರೋತ್ಯೇವ ಜೀವಃ । ಕುರ್ವನ್ತಂ ಹಿ ತಮೀಶ್ವರಃ ಕಾರಯತಿ । ಅಪಿ ಚ ಪೂರ್ವಪ್ರಯತ್ನಮಪೇಕ್ಷ್ಯ ಇದಾನೀಂ ಕಾರಯತಿ ಪೂರ್ವತರಂ ಚ ಪ್ರಯತ್ನಮ್ ಅಪೇಕ್ಷ್ಯ ಪೂರ್ವಮ್ ಅಕಾರಯತ್ ಇತಿ ಅನಾದಿ

ತ್ವಾತ್ ಸಂಸಾರಸ್ಯ ಇತ್ಯನವದ್ಯಮ್ । ಕಥಂ ಪುನರವಗಮ್ಯತೇ ಕೃತಪ್ರಯತ್ನಾಪೇಕ್ಷ ಈಶ್ವರ ಇತಿ ? ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ ಇತ್ಯಾಹ । ಏವಂ ಹಿ 'ಸ್ವರ್ಗಕಾಮೋ ಯಜೇತ', 'ಬ್ರಾಹ್ಮಣೋ ನ ಹನ್ತವ್ಯಃ' ಇತ್ಯೇವಂ ಜಾತೀಯಕಸ್ಯ ವಿಹಿತಸ್ಯ ಪ್ರತಿಷಿದ್ಧಸ್ಯ ಚ ಅವೈಯರ್ಥ್ಯಂ ಭವತಿ । ಅನ್ಯಥಾ ತತ್ ಅನರ್ಥಕಂ ಸ್ಯಾತ್ । ಈಶ್ವರ ಏವ ವಿಧಿಪ್ರತಿಷೇಧಯೋರ್ನಿಯುಜ್ಯೇತ। ಅತ್ಯನ್ತಪರತನ್ತ್ರತ್ವಾತ್ ಜೀವಸ್ಯ । ತಥಾ ವಿಹಿತಕಾರಿಣಮಪಿ ಅನರ್ಥೇನ ಸಂಸೃಜೇತ್, ಪ್ರತಿಷಿದ್ಧಕಾರಿಣಮಪಿ ಅರ್ಥೇನ । ತತಶ್ಚ ಪ್ರಾಮಾಣ್ಯಂ ವೇದಸ್ಯ ಅಸ್ತಮಿಯಾತ್ । ಈಶ್ವರಸ್ಯ ಚ ಅತ್ಯನ್ತಮ್ ಅನಪೇಕ್ಷತ್ವೇ ಲೌಕಿಕಸ್ಯಾಪಿ ಪುರುಷಕಾರಸ್ಯ ವೈಯರ್ಥ್ಯಮ್। ತಥಾ ದೇಶಕಾಲನಿಮಿತ್ತಾನಾಂ ಪೂರ್ವೋಕ್ತದೋಷಪ್ರಸಙ್ಗಶ್ಚ ಇತ್ಯೇವಂಜಾತೀಯಕಂ ದೋಷಜಾತಮ್ ಆದಿಗ್ರಹಣೇನ ದರ್ಶಯತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ಹೀಗೆ ಈಶ್ವರನು ಕಾರಯಿತೃವಾದರೆ ವೈಷಮ್ಯನೈರ್ಘೃಣಗಳೂ ಜೀವನಿಗೆ ಅಕೃತಾಭ್ಯಾಗಮವೂ (ಆಗುವವಲ್ಲ) !

(ಪರಿಹಾರ) :– 'ಇಲ್ಲ', ಎನ್ನುತ್ತೇವೆ. ಏಕೆಂದರೆ ('ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ' । ಈ ಸೂತ್ರದಲ್ಲಿರುವ) ತು ಶಬ್ದವು ಇಲ್ಲಿ ತೆಗೆದಿರುವ ದೋಷಗಳನ್ನು ತಿರಸ್ಕರಿಸುವದಕ್ಕೆ. ಜೀವನು ಧರ್ಮಾಧರ್ಮರೂಪವಾಗಿರುವ ಪ್ರಯತ್ನವನ್ನು ಮಾಡುವನಷ್ಟೆ ; ಅದನ್ನು ಅಪೇಕ್ಷಿಸಿಯೇ ಇವನನ್ನು ಈಶ್ವರನು ಮಾಡಿಸುತ್ತಾನೆ. ಆದ್ದರಿಂದಲೇ ಈ ತೆಗೆದಿರುವ ದೋಷಗಳು ಪ್ರಸಕ್ತವಾಗುವದಿಲ್ಲ. ಜೀವರು ಮಾಡಿರುವ ಧರ್ಮಾಧರ್ಮಗಳ ವೈಷಮ್ಯದ ಅಪೇಕ್ಷೆಯಿಂದಲೇ ಈಶ್ವರನು ಮಳೆಯಂತೆ ನಿಮಿತ್ತನಾಗಿರುವನೆಂಬ ಮಾತ್ರದಿಂದಲೇ ಆಯಾ ಫಲಗಳನ್ನು ವಿಷಮವಾಗಿ ವಿಂಗಡಿಸಿಕೊಡುವನು. (ಇದರ ವಿವರ): ಹೇಗೆ ಲೋಕದಲ್ಲಿ ನಾನಾವಿಧವಾಗಿರುವ ಗಿಡ, ಬಳ್ಳಿ –ಮುಂತಾದವುಗಳೂ ಬತ್ತ, ಜವೆ– ಮುಂತಾದವುಗಳೂ ಅಸಾಧಾರಣವಾದ ತಮ್ಮತಮ್ಮ ಬೀಜಗಳಿಂದ ಉಂಟಾಗುತ್ತಿರುವಲ್ಲಿ ಮಳೆಯು ಸಾಧಾರಣನಿಮಿತ್ತವಾಗಿರುತ್ತದೆಯೋ ಮಳೆಯಿಲ್ಲದೆ ಇದ್ದರೆ ರಸ, ಹೂವು, ಹಣ್ಣು, ಚಿಗುರು –ಮುಂತಾದ ವೈಷಮ್ಯವು ಅವುಗಳಲ್ಲಿ ಆಗುವದಿಲ್ಲ, ತಮ್ಮತಮ್ಮ ಬೀಜಗಳು ಇಲ್ಲದಿದ್ದರೂ ಆಗುವದಿಲ್ಲ. ಅಲ್ಲವೆ ? –ಇದರಂತೆ ಜೀವಕೃತವಾದ ಪ್ರಯತ್ನದ ಅಪೇಕ್ಷೆಯಿಂದ ಈಶ್ವರನು ಅವರಿಗೆ ಶುಭಾಶುಭ(ಫಲಗಳನ್ನು) ಕೊಡುವನೆಂಬುದು ಯುಕ್ತವಾಗಿರುತ್ತದೆ.

(ಆಕ್ಷೇಪ) :– ಜೀವನ ಕರ್ತೃತ್ವವು ಪರಾಧೀನವಾಗಿದ್ದರೆ (ಈಶ್ವರನು ಜೀವ)ಕೃತಪ್ರಯತ್ನಾಪೇಕ್ಷನೆಂಬುದೇ ಹೊಂದುವದಿಲ್ಲವಲ್ಲ !

(ಪರಿಹಾರ) :– ಇದೇನೂ ದೋಷವಲ್ಲ. ಕರ್ತೃತ್ವವು ಪರಾಧೀನವಾದರೂ ಜೀವನು (ಕರ್ಮವನ್ನು ಮಾಡಿಯೇ)ತೀರುತ್ತಾನೆ. ಇದಲ್ಲದೆ ಹಿಂದಿನ (ಜನ್ಮದ) ಪ್ರಯತ್ನವನ್ನು ಅಪೇಕ್ಷಿಸಿ ಈಗ ಮಾಡಿಸುತ್ತಾನೆ; ಹಿಂದಿನ (ಜನ್ಮ)ದಲ್ಲಿ ಅದಕ್ಕೂ ಹಿಂದಿನ (ಜನ್ಮದ) ಪ್ರಯತ್ನವನ್ನು ಅಪೇಕ್ಷಿಸಿ ಮಾಡಿಸಿರುತ್ತಾನೆ –ಎಂಬುದು ಸಂಸಾರವು ಅನಾದಿಯಾಗಿರುವದರಿಂದ ನಿರ್ದೋಷವಾಗಿರುತ್ತದೆ.

(ಪ್ರಶ್ನೆ) :– ಈಶ್ವರನು (ಜೀವ)ಕೃತಪ್ರಯತ್ನಾಪೇಕ್ಷನಾಗಿಯೇ (ಅವನನ್ನು ಮಾಡಿಸುತ್ತಾನೆ) ಎಂದು ಗೊತ್ತಾಗುವದು ಹೇಗೆ ?

(ಉತ್ತರ) :– ವಿಹಿತಪ್ರತಿಷಿದ್ಧಗಳು ವ್ಯರ್ಥವಾಗದಿರುವದೇ ಮುಂತಾದ ಹೇತುಗಳಿಂದ ಎಂದು (ಸೂತ್ರಕಾರರು) ಹೇಳಿರುತ್ತಾರೆ. ಹೀಗಾದರಲ್ಲವೆ, 'ಸ್ವರ್ಗಕಾಮನು ಯಾಗವನ್ನು ಮಾಡಬೇಕು', 'ಬ್ರಾಹ್ಮಣನನ್ನು ಕೊಲ್ಲತಕ್ಕದ್ದಲ್ಲ' ಎಂಬೀ ಜಾತಿಯ ವಿಹಿತವಾದ ಮತ್ತು ಪ್ರತಿಷಿದ್ಧವಾದ (ಕರ್ಮಕ್ಕೆ) ಅವೈಯರ್ಥ್ಯವು ಉಂಟಾಗುತ್ತದೆ ? ಹಾಗಲ್ಲದಿದ್ದರೆ ಅದು ವ್ಯರ್ಥವಾಗುವದು. ಈಶ್ವರನನ್ನೇ ವಿಧಿಪ್ರತಿಷೇಧಗಳಲ್ಲಿ ನಿಯೋಜಿಸಿರುತ್ತದೆ (ಎಂದಾಗುವದು), ಏಕೆಂದರೆ ಜೀವನು ಅತ್ಯಂತವಾಗಿ ಪರತಂತ್ರನಾಗಿರುತ್ತಾನೆ. ಇದರಂತೆ ವಿಹಿತವನ್ನು ಮಾಡಿದವನನ್ನೂ ಅನರ್ಥಸಂಬದ್ಧನಾಗಿಮಾಡುವನು ಎಂದಾಗುವದು, ಪ್ರತಿಷಿದ್ಧವನ್ನು ಮಾಡಿದವನನ್ನೂ ಅರ್ಥಸಂಬದ್ಧನನ್ನಾಗಿ (ಮಾಡುವನೆಂದಾಗುವದು). ಆಗ ವೇದಕ್ಕೆ ಪ್ರಾಮಾಣ್ಯವು ಇಲ್ಲವಾಗಿಬಿಡುವದು[1]. ಮತ್ತು ಈಶ್ವರನು ಅತ್ಯಂತವಾಗಿ ಅನಪೇಕ್ಷನು ಎಂದರೆ ಲೌಕಿಕವಾದ ಪುರುಷಪ್ರಯತ್ನವೂ ವ್ಯರ್ಥವಾಗುವದು; ಹಾಗೆಯೇ ದೇಶಕಾಲಾದಿನಿಮಿತ್ತಗಳೂ (ವ್ಯರ್ಥವಾಗುವವು); ಹಿಂದೆ ಹೇಳಿರುವ (ಅಕೃತಾಭ್ಯಾಗಮವೆಂಬ) ದೋಷವೂ ಪ್ರಸಕ್ತವಾಗುವದು –ಎಂಬೀ ಜಾತಿಯ ದೋಷಜಾತವನ್ನು 'ಆದಿ' ಎಂಬ(ಶಬ್ದವನ್ನು) ಗ್ರಹಿಸಿರುವದರಿಂದ ತಿಳಿಸಿರುತ್ತಾರೆ.

## ೧೭. ಅಂಶಾಧಿಕರಣ (ಸೂ. ೪೩–೫೩)

(ಜೀವನು ಪರಮಾತ್ಮನ ಅಂಶವು)

**ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇ ॥ ೪೩ ॥**

---

1. ಕರ್ಮಾನುಗುಣವಾಗಿ ಫಲವಾಗುವದೆಂದು ವೇದದಲ್ಲಿ ಹೇಳಿರುವದು ಅಯಥಾರ್ಥವೆಂದಾಗಿಬಿಡುತ್ತದೆ.

೪೩. (ಜೀವನು) ಪರಬ್ರಹ್ಮನ ಅಂಶವು. ಏಕೆಂದರೆ ನಾನಾ ವ್ಯಪದೇಶವಿದೆ, ಅನ್ಯಥಾ(ವ್ಯಪದೇಶ)ವೂ ಇದೆ. ಏಕೆಂದರೆ ಬ್ರಹ್ಮವು ದಾಶ, ಕಿತವ –ಮುಂತಾದವುಗಳ. (ರೂಪವೆಂದೂ) ಕೆಲವರು ಅಧ್ಯಯನಮಾಡಿರುತ್ತಾರೆ.

## ಜೀವೇಶ್ವರಸಂಬಂಧಕ್ಕೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೧೫೭. ಜೀವೇಶ್ವರಯೋಃ ಉಪಕಾರ್ಯೋಪಕಾರಕಭಾವಃ ಉಕ್ತಃ । ಸ ಚ ಸಂಬದ್ಧಯೋರೇವ ಲೋಕೇ ದೃಷ್ಟಃ ಯಥಾ ಸ್ವಾಮಿಭೃತ್ಯಯೋಃ, ಯಥಾ ವಾ ಅಗ್ನಿವಿಸ್ಫುಲಿಙ್ಗಯೋಃ। ತತಶ್ಚ ಜೀವೇಶ್ವರಯೋರಪಿ ಉಪಕಾರ್ಯೋಪಕಾರಕಭಾವಾಭ್ಯುಪಗಮಾತ್ ಕಿಂ ಸ್ವಾಮಿಭೃತ್ಯವತ್ ಸಂಬನ್ಧಃ, ಆಹೋಸ್ವಿತ್ ಅಗ್ನಿವಿಸ್ಫುಲಿಙ್ಗವತ್ ? ಇತ್ಯಸ್ಯಾಂ ವಿಚಿಕಿತ್ಸಾಯಾಮ್ ಅನಿಯಮೋ ವಾ ಪ್ರಾಪ್ನೋತಿ । ಅಥವಾ ಸ್ವಾಮಿಭೃತ್ಯಪ್ರಕಾರೇಷ್ವೇವ ಈಶಿತ್ರೀಶಿತವ್ಯಭಾವಸ್ಯ ಪ್ರಸಿದ್ಧತ್ವಾತ್ ತದ್ವಿಧ ಏವ ಸಂಬನ್ಧಃ ಇತಿ ಪ್ರಾಪ್ನೋತಿ ॥

(ಭಾಷ್ಯಾರ್ಥ)

ಜೀವೇಶ್ವರರಿಗೆ ಉಪಕಾರ್ಯೋಪಕಾರಕಭಾವ[1] ಎಂಬ ಸಂಬಂಧವನ್ನು ಹೇಳಿಯಾಯಿತು. ಆ (ಸಂಬಂಧವು) ಸಂಬದ್ಧವಾದವುಗಳಿಗೇ (ಇರುವದು) ಲೋಕದಲ್ಲಿ ಕಂಡಿದೆ; ಉದಾಹರಣೆಗೆ ಸ್ವಾಮಿಭೃತ್ಯರಿಗೆ ಅಥವಾ ಬೆಂಕಿಕಿಡಿಗಳಿಗೆ (ಆ ಸಂಬಂಧವು ಇರುವದು ಕಂಡುಬಂದಿದೆ). ಆದ್ದರಿಂದ ಜೀವೇಶ್ವರರಿಗೂ ಉಪಕಾರ್ಯೋಪಕಾರಕಭಾವವನ್ನು ಒಪ್ಪಿರುವದರಿಂದ ಸ್ವಾಮಿಭೃತ್ಯರಿಗೆ ಇರುವಂತೆ (ಅವರಿಬ್ಬರಿಗೂ) ಸಂಬಂಧವೆ, ಅಥವಾ ಬೆಂಕಿಕಿಡಿಗಳಿಗೆ ಇರುವಂತೆ (ಸಂಬಂಧವೆ) ? ಎಂಬೀ ಸಂಶಯವು ಬಂದೊದಗಲಾಗಿ ಯಾವ ನಿಯಮವೂ ಇಲ್ಲವೆಂದು ಪ್ರಾಪ್ತವಾಗುತ್ತದೆ. ಅಥವಾ ಸ್ವಾಮಿಭೃತ್ಯಪ್ರಕಾರವಾಗಿರುವವರಲ್ಲಿಯೇ ಆಳುವವನು. ಆಳಲ್ಪಡುವವನು – ಎಂಬೀ ಭಾವವು ಪ್ರಸಿದ್ಧವಾಗಿರುವದರಿಂದ ಆ ಬಗೆಯ ಸಂಬಂಧವೇ (ಇಲ್ಲಿಯೂ ಇದೆ) ಎಂಬ (ಪೂರ್ವಪಕ್ಷವು) ಬಂದೊದಗುತ್ತದೆ.

## ಸಿದ್ಧಾಂತ: ಜೀವನು ಬ್ರಹ್ಮದ ಅಂಶ

(ಭಾಷ್ಯ)

೧೫೮. ಅತೋ ಬ್ರವೀತಿ 'ಅಂಶಃ' ಇತಿ। ಜೀವಃ ಈಶ್ವರಸ್ಯ ಅಂಶೋ ಭವಿತುಮರ್ಹತಿ। ಯಥಾ ಅಗ್ನೇರ್ವಿಸ್ಫುಲಿಙ್ಗಃ । ಅಂಶ ಇವ ಅಂಶಃ।

1. ಜೀವನು ಕರ್ಮಗಳನ್ನು ಮಾಡುತ್ತಾನೆ; ಈಶ್ವರನು ಅವನ ಕರ್ಮಗಳಿಗೆ ಫಲವನ್ನು ಕೊಡುತ್ತಾನೆ.

ನ ಹಿ ನಿರವಯವಸ್ಯ ಮುಖ್ಯೋಽಂಶಃ ಸಂಭವತಿ। ಕಸ್ಮಾತ್ ಪುನರ್ನಿರವಯವತ್ವಾತ್ ಸ ಏವ ನ ಭವತಿ? ನಾನಾವ್ಯಪದೇಶಾತ್। "ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ" (ಛಾಂ. ೮-೭-೧), "ಏತಮೇವ ವಿದಿತ್ವಾ ಮುನಿರ್ಭವತಿ" (ಬೃ. ೩-೫-೧[1] ?), "ಯ ಆತ್ಮನಿ ತಿಷ್ಠನ್ನಾತ್ಮಾನಮನ್ತರೋ ಯಮಯತಿ" (ಬೃ. ಮಾಂ) ಇತಿ ಚ ಏವಂಜಾತೀಯಕೋ ಭೇದನಿರ್ದೇಶಃ ನಾಸತಿ ಭೇದೇ ಯುಜ್ಯತೇ। ನನು ಚ ಅಯಂ ನಾನಾವ್ಯಪದೇಶಃ ಸುತರಾಂ ಸ್ವಾಮಿಭೃತ್ಯಸಾರೂಪ್ಯೇ ಯುಜ್ಯತೇ ಇತಿ? ಅತ ಆಹ-'ಅನ್ಯಥಾ ಚಾಪಿ' ಇತಿ। ನ ಚ ನಾನಾವ್ಯಪದೇಶಾದೇವ ಕೇವಲಾತ್ ಅಂಶತ್ವಪ್ರತಿಪತ್ತಿಃ। ಕಿಂ ತರ್ಹಿ ಅನ್ಯಥಾ ಚಾಪಿ ವ್ಯಪದೇಶೋ ಭವತಿ ಅನಾನಾತ್ವಸ್ಯ ಪ್ರತಿಪಾದಕಃ। ತಥಾ ಹಿ ಏಕೇ ಶಾಖಿನಃ ದಾಶಕಿತವಾದಿಭಾವಂ ಬ್ರಹ್ಮಣಃ ಆಮನನ್ತಿ ಆಥರ್ವಣಿಕಾಃ ಬ್ರಹ್ಮಸೂಕ್ತೇ — "ಬ್ರಹ್ಮ ದಾಶಾ ಬ್ರಹ್ಮ ದಾಸಾ ಬ್ರಹ್ಮೈವೇಮೇ ಕಿತವಾಃ" (?) ಇತ್ಯಾದಿನಾ। ದಾಶಾ ಯ ಏತೇ ಕೈವರ್ತಾಃ ಪ್ರಸಿದ್ಧಾಃ, ಯೇ ಚಾಮೀ ದಾಸಾಃ ಸ್ವಾಮಿಷು ಆತ್ಮಾನಮ್ ಉಪಕ್ಷಪಯನ್ತಿ, ಯೇ ಚಾನ್ಯೇ ಕಿತವಾ ದ್ಯೂತಕೃತಃ ತೇ ಸರ್ವೇ ಬ್ರಹ್ಮೈವ ಇತಿ ಹೀನಜನ್ತೂದಾಹರಣೇನ ಸರ್ವೇಷಾಮೇವ ನಾಮರೂಪಕೃತಕಾರ್ಯಕರಣಸಂಘಾತಪ್ರವಿಷ್ಟಾನಾಂ ಜೀವಾನಾಂ ಬ್ರಹ್ಮತ್ವಮಾಹ। ತಥಾ ಅನ್ಯತ್ರಾಪಿ ಬ್ರಹ್ಮಪ್ರಕ್ರಿಯಾಯಾಮೇವ ಅಯಮರ್ಥಃ ಪ್ರಪಞ್ಚ್ಯತೇ —"ತ್ವಂ ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತ ವಾ ಕುಮಾರೀ। ತ್ವಂ ಜೀರ್ಣೋ ದಣ್ಡೇನ ವಞ್ಚಸಿ ತ್ವಂ ಜಾತೋ ಭವಸಿ ವಿಶ್ವತೋಮುಖಃ" (ಶ್ವೇ. ೪-೩) ಇತಿ। "ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಭಿವದನ್ ಯದಾಸ್ತೇ" (ತೈ. ಆ. ೩-೧೨-೧೬) ಇತಿ ಚ। "ನಾನ್ಯೋಽತೋಽಸ್ತಿ ದ್ರಷ್ಟಾ" (ಬೃ. ೩-೭-೨೩) ಇತ್ಯಾದಿಶ್ರುತಿಭ್ಯಶ್ಚ ಅಸ್ಯಾರ್ಥಸ್ಯ ಸಿದ್ಧಿಃ। ಚೈತನ್ಯಂ ಚ ಅವಿಶಿಷ್ಟಂ ಜೀವೇಶ್ವರಯೋಃ ಯಥಾ ಅಗ್ನಿವಿಸ್ಫುಲಿಙ್ಗಯೋಃ ಔಷ್ಣ್ಯಮ್। ಅತೋ ಭೇದಾಭೇದಾವಗಮಾಭ್ಯಾಮ್ ಅಂಶತ್ವಾವಗಮಃ॥

(ಭಾಷ್ಯಾರ್ಥ)

ಆದ್ದರಿಂದ (ಸೂತ್ರಕಾರರು) 'ಅಂಶಃ' (ಜೀವನು ಅಂಶವಾಗಿರುತ್ತಾನೆ) ಎಂದು ಹೇಳಿರುತ್ತಾರೆ. ಜೀವನು, ಬೆಂಕಿಗೆ ಕಿಡಿಯು (ಅಂಶ)ವಾಗಿರುವಂತೆ ಈಶ್ವರನ ಅಂಶವಾಗಿರಬೇಕು. (ಇಲ್ಲಿ) ಅಂಶ ಎಂದರೆ ಅಂಶವಿದ್ದಂತೆ ಎಂದರ್ಥ; ಏಕೆಂದರೆ ನಿರವಯವ(ನಾದ ಈಶ್ವರನಿಗೆ) ಮುಖ್ಯವಾದ ಅಂಶವು ಸಂಭವಿಸುವದಿಲ್ಲ.

---

1. ಇದು ಶ್ರುತಿಯ ಅರ್ಥಮಾತ್ರವೆಂದು ಕಾಣುತ್ತದೆ.

(ಪ್ರಶ್ನೆ) :- ನಿರವಯವನಾಗಿರುವದರಿಂದ ಆ (ಈಶ್ವರನೇ ಇವನು) ಎಂದಾಗಬಾರದೇಕೆ ?

(ಉತ್ತರ) :- ಏಕೆಂದರೆ ನಾನಾವ್ಯಪದೇಶವಿದೆ. "ಅವನನ್ನು ಹುಡುಕ ಬೇಕು, ಅವನನ್ನು ಅರಿತುಕೊಳ್ಳಬೇಕು" (ಛಾ. ೮-೭-೧), "ಈತನನ್ನೇ ಅರಿತುಕೊಂಡರೆ ಮುನಿಯಾಗುವನು" (ಬೃ. ೩-೫-೧ ?), ಮತ್ತು "ಯಾವನು ಆತ್ಮನೊಳಗಿದ್ದುಕೊಂಡು ಆತ್ಮನನ್ನು ಒಳಗಿನಿಂದ ನಿಯಮನಮಾಡುತ್ತಿರು ವನೋ" (ಬೃ. ಮಾ· ?) ಎಂಬೀ ಜಾತಿಯ ಭೇದನಿರ್ದೇಶವು ಭೇದವಿಲ್ಲ ದಿದ್ದರೆ ಯುಕ್ತವಾಗುವದಿಲ್ಲ.

(ಆಕ್ಷೇಪ) :- ಈ ನಾನಾವ್ಯಪದೇಶವು ಸ್ವಾಮಿಭೃತ್ಯರಂತಿದ್ದರೆ ಇನ್ನೂ ಚೆನ್ನಾಗಿ ಒಪ್ಪುವದಿಲ್ಲವೆ ?

(ಪರಿಹಾರ) :- ಇದಕ್ಕೆ (ಸೂತ್ರಕಾರರು) ಹೇಳುತ್ತಾರೇನೆಂದರೆ : ಅನ್ಯಥಾವ್ಯಪದೇಶವೂ (ಇದೆ). ಬರಿಯ ನಾನಾವ್ಯಪದೇಶದಿಂದ ಅಂಶವೆಂದು ತಿಳಿಯಬೇಕಾಗಿಲ್ಲ ; ಮತ್ತೇನೆಂದರೆ ಅನ್ಯಥಾವ್ಯಪದೇಶವೂ ಎಂದರೆ ಅನಾನಾತ್ವ ವನ್ನು ತಿಳಿಸುವ (ವ್ಯಪದೇಶವೂ) ಇರುತ್ತದೆ. ಹೇಗೆಂದರೆ, (ವೇದದ ಒಂದಾ ನೊಂದು) ಶಾಖೆಯನ್ನು ಅಧ್ಯಯನಮಾಡುವವರು ಕೆಲವರು, ಎಂದರೆ ಆಥರ್ವಣಿಕರು **ಬ್ರಹ್ಮಸೂಕ್ತ**ದಲ್ಲಿ "ದಾಶರು ಬ್ರಹ್ಮವು, ದಾಸರು ಬ್ರಹ್ಮವು, ಈ ಕಿತವರು ಬ್ರಹ್ಮವೇ" (?) ಎಂದು ಮುಂತಾಗಿರುವ ವಾಕ್ಯದಿಂದ ಬ್ರಹ್ಮಕ್ಕೆ ದಾಶಕಿತವಾದಿಭಾವವನ್ನು ಹೇಳುತ್ತಾರೆ. ದಾಶರು ಎಂದರೆ ಈ ಬೆಸ್ತರೆಂದು ಪ್ರಸಿದ್ಧರಾಗಿರುವವರು ಇದಾರಲ್ಲ, (ಅವರು), ಇನ್ನೂ ಬೇರೆಯಾಗಿರುವ ಕಿತವರು ಎಂದರೆ ಜೂಜಾಡುವವರು ಇರುತ್ತಾರಲ್ಲ, (ಅವರು) –ಇವರೆಲ್ಲರೂ ಬ್ರಹ್ಮವೇ ಎಂದು ಹೀನ ಜೀವರನ್ನು ಉದಾಹರಿಸಿರುವದರಿಂದ ನಾಮರೂಪಕೃತ ವಾದ ಕಾರ್ಯಕರಣಸಂಘಾತಗಳನ್ನು ಒಳಹೊಕ್ಕಿರುವ ಜೀವರುಗಳೆಲ್ಲರೂ ಬ್ರಹ್ಮ ವೇ ಎಂದು (ಶ್ರುತಿ) ಹೇಳುತ್ತದೆ (ಎಂದಾಯಿತು). ಹೀಗೆಯೇ ಮತ್ತೊಂದು (ಶ್ರುತಿ ಯಲ್ಲಿಯೂ) ಬ್ರಹ್ಮಪ್ರಕರಣದಲ್ಲಿಯೇ "ನೀನು ಹೆಂಗಸು, ನೀನೇ ಗಂಡಸಾಗಿರುವೆ, ನೀನೇ ಹುಡುಗನು, ಅಥವಾ ಹುಡುಗಿಯು ; ನೀನೇ ಮುದುಕನಾಗಿ ಕೋಲನ್ನು ಹಿಡಿದುಕೊಂಡು ಓಡಾಡುವೆ, ನೀನು ಹುಟ್ಟಿ ವಿಶ್ವತೋಮುಖನಾಗಿರುವೆ" (ಶ್ವೇ. ೪-೩) ಎಂದು ಇದೇ ಅರ್ಥವನ್ನು ವಿಸ್ತರಿಸಿ ಹೇಳಿದೆ. "ಎಲ್ಲಾ ರೂಪ ಗಳನ್ನೂ ಮಾಡಿ ನಾಮಗಳನ್ನಿಟ್ಟು ಕರೆಯುತ್ತಿದಾನಲ್ಲ" (ತೈ. ಆ. ೩-೧೧-೧೭) ಎಂದೂ (ಹೇಳುತ್ತದೆ). "ಇವನಿಗಿಂತ ಬೇರೆಯ ದ್ರಷ್ಟೃವಿಲ್ಲ" (ಬೃ. ೩-೭-೨೩) ಎಂದು ಮುಂತಾಗಿರುವ ಶ್ರುತಿಗಳಿಂದಲೂ ಈ ಅರ್ಥವು ಸಿದ್ಧವಾಗುವದು. ಇದಲ್ಲದೆ ಬೆಂಕಿಕಿಡಿಗಳಿಗೆ ಬಿಸಿಯು (ಸಮಾನ)ವಾಗಿರುವಂತೆ ಜೀವೇಶ್ವರರಿಗೆ

ಚೈತನ್ಯವೆಂಬುದು ಸಮಾನವಾಗಿರುತ್ತದೆ. ಆದ್ದರಿಂದ ಭೇದಾಭೇದಗಳು (ಶ್ರುತಿಯಲ್ಲಿ) ಗೊತ್ತಾಗಿರುವದರಿಂದ[1] (ಜೀವನು) ಅಂಶವೆಂದು ನಿಶ್ಚಯಿಸಬೇಕಾಗಿದೆ.

## ಮನ್ತ್ರವರ್ಣಾಚ್ಚ ॥ ೪೪ ॥

೪೪. ಮಂತ್ರವರ್ಣದಿಂದಲೂ (ಅಂಶವೆಂದು ತಿಳಿಯಬೇಕು).

### ಜೀವರು ಈಶ್ವರಾಂಶರೆಂಬುದಕ್ಕೆ ಮಂತ್ರ

(ಭಾಷ್ಯ)

೧೫೯. ಕುತಶ್ಚ ಅಂಶತ್ವಾಪಗಮಃ ? ಮನ್ತ್ರವರ್ಣಶ್ಚ ಏತಮ್ ಅರ್ಥಮ್ ಅವಗಮಯತಿ "ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ । ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" (ಛಾಂ. ३-೧೨-೬) ಇತಿ । ಅತ್ರ ಭೂತಶಬ್ದೇನ ಜೀವಪ್ರಧಾನಾನಿ ಸ್ಥಾವರಜಙ್ಗಮಾನಿ ನಿರ್ದಿಶತಿ। "ಅಹಿಂಸನ್ ಸರ್ವಭೂತಾನ್ಯನ್ಯತ್ರ ತೀರ್ಥೇಭ್ಯ" (ಛಾಂ. ೮-೧೫-೧) ಇತಿ ಪ್ರಯೋಗಾತ್ । ಅಂಶಃ ಪಾದಃ ಭಾಗಃ ಇತಿ ಅನರ್ಥಾನ್ತರಮ್ । ತಸ್ಮಾದಪಿ ಅಂಶತ್ವಾವಗಮಃ ॥

(ಭಾಷ್ಯಾರ್ಥ)

ಮತ್ತು ಏತರಿಂದ ಅಂಶವೆಂದು ತಿಳಿಯಬೇಕು ? (ಮನ್ತ್ರವರ್ಣಾಚ್ಚ) । ಮಂತ್ರವರ್ಣವೂ ಈ ಅರ್ಥವನ್ನು "ಅಷ್ಟು ಈತನ ಮಹಿಮೆಯು ; ಪುರುಷನು ಅದಕ್ಕಿಂತಲೂ ಹೆಚ್ಚಿನವನು. ಸರ್ವಭೂತಗಳೂ ಇವನ ಪಾದವು ; ಇವನ ಮೂರು ಪಾದವು ದ್ಯುಲೋಕದಲ್ಲಿದೆ[2]" (ಛಾಂ. ३-೧೨-೬) ಎಂದು ತಿಳಿಸುತ್ತದೆ. ಇಲ್ಲಿ ಭೂತ ಎಂಬ ಶಬ್ದದಿಂದ ಜೀವಪ್ರಧಾನವಾಗಿರುವ ಸ್ಥಾವರಜಂಗಮಗಳನ್ನು ತಿಳಿಸಿರುತ್ತದೆ. "ತೀರ್ಥಗಳನ್ನು[3] ಬಿಟ್ಟು ಮಿಕ್ಕ ಕಡೆಗಳಲ್ಲಿ ಯಾವ ಭೂತಗಳನ್ನೂ ಹಿಂಸೆಮಾಡದೆ" (ಛಾಂ. ೮-೧೫-೧) ಎಂಬ ಪ್ರಯೋಗದಿಂದ (ಹೀಗೆಂದು ನಿಶ್ಚಯಿಸಬೇಕು). ಅಂಶ, ಪಾದ, ಭಾಗ- ಎಂಬಿವು ಒಂದೇ ಪದಾರ್ಥವನ್ನು (ಹೇಳುವ ಮಾತುಗಳು).[4]

---

1. ಅಂಶಕ್ಕೂ ಅಂಶಿಗೂ ಬೆಂಕಿಕಿಡಿಗಳಂತೆ ಭೇದಾಭೇದವಿರುತ್ತದೆ ; ಬೆಂಕಿಗಿಂತ ಕಿಡಿಯು ಬೇರೆಯಾದರೂ ಅದೇ ಜಾತಿಗೆ ಸೇರುತ್ತದೆ.

2. ತನ್ನ ಪ್ರಕಾಶಮಯವಾದ ಸ್ವರೂಪದಲ್ಲಿದೆ.

3. ಶಾಸ್ತ್ರದಲ್ಲಿ ಒಪ್ಪಿರುವ ಸ್ಥಲಗಳನ್ನು ಬಿಟ್ಟು ಎಂದರ್ಥ. ಶಾಸ್ತ್ರೀಯಸ್ಥಲಗಳಲ್ಲಿ ಹಿಂಸೆಯಾದರೂ ಪಾಪವಿಲ್ಲ ; ಅಥವಾ ಅದು ನಿಜವಾದ ಅರ್ಥದಲ್ಲಿ ಹಿಂಸೆಯಲ್ಲ —ಎಂದರ್ಥ. ಈ ಶ್ರುತಿಯ ಭಾಷ್ಯವನ್ನು ನೋಡಿ.

4. ಶಾಸ್ತ್ರಸಿದ್ಧಿಯು ಲೋಕಪ್ರಸಿದ್ಧಿಯನ್ನು ಬಾಧಿಸಬಹುದು ; ಲೋಕಪ್ರಸಿದ್ಧವಾದದ್ದನ್ನೇ ಶಾಸ್ತ್ರವು ಹೇಳಬೇಕೆಂಬುದಿಲ್ಲ.

**ಅಪಿ ಚ ಸ್ಮರ್ಯತೇ ॥ ೪೫ ॥**

೪೫. ಮತ್ತು ಸ್ಮೃತಿಯಲ್ಲಿಯೂ (ಅಂಶವೆಂದು ಹೇಳಿರುತ್ತದೆ).

## ಜೀವನು ಅಂಶವೆಂಬುದಕ್ಕೆ ಗೀತಾಪ್ರಾಮಾಣ್ಯ

(ಭಾಷ್ಯ)

೧೬೦. ಕುತಶ್ಚ ಅಂಶತ್ವಾವಗಮಃ ? (ಅಪಿ ಚ ಸ್ಮರ್ಯತೇ) । ಈಶ್ವರಗೀತಾಸ್ವಪಿ ಚ ಈಶ್ವರಾಂಶತ್ವಂ ಜೀವಸ್ಯ ಸ್ಮರ್ಯತೇ– "ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ'' (ಗೀ. ೧೫–೭) ಇತಿ । ತಸ್ಮಾದಪಿ ಅಂಶತ್ವಾವಗಮಃ । ಯತ್ತು ಉಕ್ತಮ್ ಸ್ವಾಮಿಭೃತ್ಯಾದಿಷ್ವೇವ ಈಶಿತ್ರೀಶಿತವ್ಯಭಾವೋ ಲೋಕೇ ಪ್ರಸಿದ್ಧಃ ಇತಿ । ಯದ್ಯಪಿ ಏಷಾ ಲೋಕೇ ಪ್ರಸಿದ್ಧಿಃ ತಥಾಪಿ ಶಾಸ್ತ್ರಾತ್ತು ಅಂಶಾಂಶಿತ್ವಮ್ ಈಶಿತ್ರೀಶಿತವ್ಯಭಾವಶ್ಚ ನಿಶ್ಚೀಯತೇ । ನಿರತಿಶಯೋಪಾಧಿಸಂಪನ್ನಶ್ಚ ಈಶ್ವರಃ ನಿಹೀನೋಪಾಧಿಸಂಪನ್ನಾನ್ ಜೀವಾನ್ ಪ್ರಶಾಸ್ತಿ ಇತಿ ನ ಕಿಂಚಿದ್ ವಿಪ್ರತಿಷಿಧ್ಯತೇ ॥

(ಭಾಷ್ಯಾರ್ಥ)

ಮತ್ತೂ ಏತರಿಂದ ಅಂಶವೆಂದು ನಿಶ್ಚಯಿಸಬೇಕು ? ಎಂದರೆ (ಅಪಿಚ ಸ್ಮರ್ಯತೇ) : ಮತ್ತು **ಈಶ್ವರಗೀತೆಗಳಲ್ಲಿಯೂ** ಜೀವನು ಈಶ್ವರಾಂಶನೆಂದು "ಜೀವಲೋಕದಲ್ಲಿ ನನ್ನ ಅಂಶವೇ ಸನಾತನಜೀವನಾಗಿರುತ್ತದೆ'' (ಗೀ. ೧೫–೭) ಎಂದು ಸ್ಮರಣೆಮಾಡಿರುತ್ತದೆ. ಆದ್ದರಿಂದಲೂ ಅಂಶವೆಂದು ನಿಶ್ಚಯಿಸಬೇಕು.

ಇನ್ನು ಧಣಿ, ಆಳು– ಇವರೇ ಮುಂತಾದವರಲ್ಲಿ ಮಾತ್ರ ಈಶಿತ್ರೀಶಿತವ್ಯಭಾವವು ಲೋಕದಲ್ಲಿ ಪ್ರಸಿದ್ಧವಾಗಿದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ ; (ಅದಕ್ಕೆ ಉತ್ತರವೇನೆಂದರೆ) : ಲೋಕದಲ್ಲಿ ಈ ಪ್ರಸಿದ್ಧಿಯೇನೋ ಇದೆ. ಆದರೂ ಶಾಸ್ತ್ರದಿಂದ ಅಂಶಾಂಶಿಭಾವವೂ ಈಶಿತ್ರೀಶಿತವ್ಯಭಾವವೂ (ಎರಡೂ ಇವೆ ಎಂದು) ನಿಶ್ಚಯಿಸಬೇಕಾಗಿದೆ[1]. ಮಿಗಿಲಿಲ್ಲದ (ಉತ್ತಮವಾದ) ಉಪಾಧಿಯುಳ್ಳ ಈಶ್ವರನು ಕಡಿಮೆಯ ಉಪಾಧಿಯಿಂದೊಡಗೂಡಿದ ಜೀವರನ್ನು[2] ಆಳುತ್ತಾನೆ ಎಂಬುದರಲ್ಲಿ ಯಾವ ವಿರೋಧವೂ ಇರುವದಿಲ್ಲ[3].

---

1. ಶಾಸ್ತ್ರಪ್ರಸಿದ್ಧಿಯು ಲೋಕಪ್ರಸಿದ್ಧಿಯನ್ನು ಬಾಧಿಸಬಹುದು ; ಲೋಕಸಿದ್ಧವಾದವನ್ನೇ ಶಾಸ್ತ್ರವು ಹೇಳಬೇಕೆಂಬುದಿಲ್ಲ.

2. ನಾಮರೂಪಗಳೆಂಬ ಉಪಾಧಿಯು ಈಶ್ವರನಿಗೆ ; ನಾಮರೂಪಕೃತಕಾರ್ಯಕರಣಸಂಘಾತಗಳು ಜೀವನಿಗೆ. ಕಾರಣವು ಉತ್ಕೃಷ್ಟ, ಕಾರ್ಯವು ನಿಹೀನ. ೨-೧-೧೪ರ ಭಾಷ್ಯವನ್ನು (ಭಾ. ಭಾ. ೪೪೦) ನೋಡಿ.

3. ಜೀವನು ಪರಮೇಶ್ವರನೇ ಆಗಿರುವವರಿಂದ ತನ್ನನ್ನು ತಾನೇ ಆಳುವದು ಹೇಗೆ ?– ಎಂಬ ವಿರೋಧವನ್ನು ಕಲ್ಪಿಸುವದಕ್ಕೆ ಬರುವದಿಲ್ಲ. ಏಕೆಂದರೆ ಉಪಾಧಿಕೃತವಾಗಿ ಇಬ್ಬರಿಗೂ ಭೇದವೂ ಇದೆ.

**ಪ್ರಕಾಶಾದಿವನ್ನೈವಂ ಪರಃ ॥ ೪೬ ॥**

೪೬. ಪ್ರಕಾಶವೇ ಮುಂತಾದವುಗಳಂತೆ ; ಹೀಗೆ ಪರಮಾತ್ಮನು (ದುಃಖಿ)ಯಲ್ಲ.

## ಜೀವನು ಈಶ್ವರಾಂಶವೆಂಬ ಬಗ್ಗೆ ಆಕ್ಷೇಪಸಮಾಧಾನಗಳು

(ಭಾಷ್ಯ)

೯೬೧. ಅತ್ರಾಹ– ನನು ಜೀವಸ್ಯ ಈಶ್ವರಾಂಶತ್ವಾಭ್ಯುಪಗಮೇ ತದೀಯೇನ ಸಂಸಾರದುಃಖೋಪಭೋಗೇನ ಅಂಶಿನಃ ಈಶ್ವರಸ್ಯಾಪಿ ದುಃಖಿತ್ವಂ ಸ್ಯಾತ್ । ಯಥಾ ಲೋಕೇ ಹಸ್ತಪಾದಾದ್ಯನ್ಯತಮಾಙ್ಗಗತೇನ ದುಃಖೇನ ಅಙ್ಗಿನೋ ದೇವದತ್ತಸ್ಯ ದುಃಖಿತ್ವಂ ತದ್ವತ್ । ತತಶ್ಚ ತತ್ಪ್ರಾಪ್ತಾನಾಂ ಮಹತ್ತರಂ ದುಃಖಂ ಪ್ರಾಪ್ನುಯಾತ್ । ಅತೋ ವರಂ ಪೂರ್ವಾವಸ್ಥಃ ಸಂಸಾರ ಏವಾಸ್ತು ಇತಿ ಸಮ್ಯಗ್ದರ್ಶನಾನರ್ಥಕ್ಯಪ್ರಸಙ್ಗಃ ಸ್ಯಾತ್ ಇತಿ । ಅತ್ರೋಚ್ಯತೇ– ('ಪ್ರಕಾಶಾದಿವನ್ನೈವಂ ಪರಃ') । ಯಥಾ ಜೀವಃ ಸಂಸಾರದುಃಖಮ್ ಅನುಭವತಿ ನೈವಂ ಪರಃ ಈಶ್ವರಃ ಅನುಭವತಿ ಇತಿ ಪ್ರತಿಜಾನೀಮಹೇ । ಜೀವೋ ಹಿ ಅವಿದ್ಯಾವೇಶವಶಾದ್ ದೇಹಾದ್ಯಾತ್ಮಭಾವಮಿವ ಗತ್ವಾ ತತ್ಕೃತೇನ ದುಃಖೇನ ದುಃಖ್ಯಹಮ್ ಇತಿ ಅವಿದ್ಯಯಾ ಕೃತಂ ದುಃಖೋಪಭೋಗಮ್ ಅಭಿಮನ್ಯತೇ। ನೈವಂ ಪರಮೇಶ್ವರಸ್ಯ ದೇಹಾದ್ಯಾತ್ಮಭಾವೋ ದುಃಖಾಭಿಮಾನೋ ವಾ ಅಸ್ತಿ । ಜೀವಸ್ಯಾಪಿ ಅವಿದ್ಯಾಕೃತನಾಮರೂಪನಿರ್ವೃತ್ತದೇಹೇನ್ದ್ರಿಯಾದ್ಯುಪಾಧ್ಯವಿವೇಕಭ್ರಮನಿಮಿತ್ತ ಏವ ದುಃಖಾಭಿಮಾನಃ ನ ತು ಪಾರಮಾರ್ಥಿಕೋಽಸ್ತಿ । ಯಥಾ ಚ ಸ್ವದೇಹಗತದಾಹಚ್ಛೇದಾದಿನಿಮಿತ್ತಂ ದುಃಖಂ ತದಭಿಮಾನಭ್ರಾನ್ತ್ಯಾ ಅನುಭವತಿ, ತಥಾ ಪುತ್ರಮಿತ್ರಾದಿಗೋಚರಮಪಿ ದುಃಖಂ ತದಭಿಮಾನಭ್ರಾನ್ತ್ಯೈವ ಅನುಭವತಿ 'ಅಹಮೇವ ಪುತ್ರಃ', 'ಅಹಮೇವ ಮಿತ್ರಮ್' ಇತ್ಯೇವಂ ಸ್ನೇಹವಶೇನ ಪುತ್ರಮಿತ್ರಾದಿಷ್ವಭಿನಿವಿಶಮಾನಃ । ತತಶ್ಚ ನಿಶ್ಚಿತಮೇತತ್ ಅವಗಮ್ಯತೇ– ಮಿಥ್ಯಾಭಿಮಾನಭ್ರಮನಿಮಿತ್ತ ಏವ ದುಃಖಾನುಭವಃ ಇತಿ। ವ್ಯತಿರೇಕದರ್ಶನಾಚ್ಚ ಏವಮ್ ಅವಗಮ್ಯತೇ । ತಥಾ ಹಿ । ಪುತ್ರಮಿತ್ರಾದಿಮತ್ಸು ಬಹುಷು ಉಪವಿಷ್ಟೇಷು ತತ್ಸಂಬನ್ಧಾಭಿಮಾನಿಷು ಇತರೇಷು ಚ 'ಪುತ್ರೋ ಮೃತಃ', 'ಮಿತ್ರಂ ಮೃತಮ್' ಇತ್ಯೇವಮಾದ್ಯುದ್ಘೋಷಿತೇ ಯೇಷಾಮೇವ ಪುತ್ರಮಿತ್ರಾದಿಮತ್ತ್ವಾಭಿಮಾನಃ ತೇಷಾಮೇವ ತನ್ನಿಮಿತ್ತಂ ದುಃಖಮ್ ಉತ್ಪದ್ಯತೇ, ನಾಭಿಮಾನಹೀನಾನಾಂ ಪರಿವ್ರಾಜಕಾದೀನಾಮ್ । ಅತಶ್ಚ ಲೌಕಿಕಸ್ಯಾಪಿ ಪುಂಸಃ ಸಮ್ಯಗ್ದರ್ಶನಾರ್ಥವತ್ತ್ವಂ ದೃಷ್ಟಮ್, ಕಿಮುತ ವಿಷಯಶೂನ್ಯಾತ್ ಆತ್ಮನೋಽನ್ಯದ್ವಸ್ತ್ವನ್ತ

ರವತ್ ಪ್ರಸಜ್ಯೇತ ನಿತ್ಯಶುದ್ಧಚೈತನ್ಯಮಾತ್ರಸ್ವರೂಪಸ್ಯ ಇತಿ। ತಸ್ಮಾತ್ ನಾಸ್ತಿ ಸಮ್ಯಗ್ದರ್ಶನಾನರ್ಥಕ್ಯಪ್ರಸಙ್ಗಃ ॥

(ಭಾಷ್ಯಾರ್ಥ)

(ಆಕ್ಷೇಪ) :– ಇಲ್ಲಿ (ಆಕ್ಷೇಪಕನು) ಹೇಳುತ್ತಾನೇನೆಂದರೆ, ಜೀವನು ಈಶ್ವರನ ಅಂಶವೆಂದು ಒಪ್ಪಿದರೆ ಅವನ ಸಂಸಾರದುಃಖೋಪಭೋಗದಿಂದ ಅಂಶಿಯಾದ ಈಶ್ವರನಿಗೂ ದುಃಖಿತ್ವವುಂಟಾಗಬೇಕಲ್ಲ! ಹೇಗೆ ಲೋಕದಲ್ಲಿ ಕೈ, ಕಾಲು– ಮುಂತಾದವುಗಳಲ್ಲಿ ಯಾವದಾವದೊಂದು ಅಂಗದ ದುಃಖದಿಂದ ಅಂಗಿಯಾದ ದೇವದತ್ತನಿಗೆ ದುಃಖಿತ್ವವುಂಟಾಗುವದೋ, ಹಾಗೆ (ಇಲ್ಲಿಯೂ ಆಗಬೇಕಲ್ಲವೆ)? ಆದ್ದರಿಂದ ಆ (ಈಶ್ವರನನ್ನು) ಪಡೆದುಕೊಂಡವರಿಗೆ ಇನ್ನೂ ಹೆಚ್ಚಿನ ದುಃಖವನ್ನು (ಅನುಭವಿಸ)ಬೇಕಾಗಿಬರುವದು. ಅದಕ್ಕಿಂತಲೂ ಹಿಂದಿನ ಅವಸ್ಥೆಯಲ್ಲಿರುವ ಸಂಸಾರವೇ ಇರಲಿ (ಎನ್ನುವಹಾಗಾಗುವ)ದರಿಂದ[1] ಸಮ್ಯಗ್ದರ್ಶನವು ವ್ಯರ್ಥವೆಂದು ಆಗುವದಲ್ಲ!

(ಪರಿಹಾರ) :– ಇದಕ್ಕೆ ಹೇಳುತ್ತೇವೆ: ('ಪ್ರಕಾಶಾದಿವನ್ನೈವಂ ಪರಃ')। ಹೇಗೆ ಜೀವನು ಸಂಸಾರದುಃಖವನ್ನು ಅನುಭವಿಸುತ್ತಾನೋ ಹಾಗೆ ಪರನು ಎಂದರೆ ಈಶ್ವರನು ಅನುಭವಿಸುವದಿಲ್ಲ ಎನ್ನುತ್ತೇವೆ.[2] ಏಕೆಂದರೆ ಜೀವನು ಅವಿದ್ಯೆಯ ಆವೇಶದ ವಶದಿಂದ ದೇಹಾದಿಗಳೊಡನೆ ಆತ್ಮಭಾವವನ್ನೇ ಪಡೆದಂತಾಗಿ ಅದರಿಂದಾದ ದುಃಖದಿಂದ 'ನಾನು ದುಃಖಿಯು' ಎಂದು ಅವಿದ್ಯೆಯಿಂದಾಗಿರುವ ದುಃಖದ ಉಪಭೋಗದಲ್ಲಿ ಅಭಿಮಾನಪಡುತ್ತಾನೆ. ಹೀಗೆ ಪರಮೇಶ್ವರನಿಗೆ ದೇಹಾದ್ಯಾತ್ಮಭಾವವಾಗಲಿ ದುಃಖಾಭಿಮಾನವಾಗಲಿ ಇರುವದಿಲ್ಲ.[3]

**ಜೀವನಿಗೆಕೂಡ ಅವಿದ್ಯಾಕೃತನಾಮರೂಪಗಳಿಂದಾಗಿರುವ ದೇಹೇಂದ್ರಿಯಗಳೇ ಮುಂತಾದ ಉಪಾಧಿಯನ್ನು ವಿಂಗಡಿಸಿಕೊಳ್ಳದ್ದರಿಂದಾದ ಭ್ರಮೆಯ ನಿಮಿತ್ತದಿಂದಲೇ ದುಃಖಾಭಿಮಾನವಿರುವದೇ ಹೊರತು ಪಾರಮಾರ್ಥಿಕವಾದ (ದುಃಖಾಭಿಮಾನ)ವಿರುವದಿಲ್ಲ. ಮತ್ತು ಹೇಗೆ ತನ್ನ ದೇಹದಲ್ಲಿ ಆಗುವ ಸುಡುವಿಕೆ, ಕತ್ತರಿಸುವಿಕೆ– ಮುಂತಾದವುಗಳ ನಿಮಿತ್ತದಿಂದಾಗಿರುವ ದುಃಖವನ್ನು ಅದರ ಅಭಿ**

1. ಏಕೆಂದರೆ ಜೀವನಿಗೆ ತನ್ನ ಶರೀರಾದ್ಯಭಿಮಾನದಿಂದಾದ ದುಃಖವಾದರೆ ಈಶ್ವರನಿಗೆ ಸರ್ವಶರೀರದ ದುಃಖಗಳೂ ಇರಬೇಕು ; ಆ ಈಶ್ವರಸಾಯುಜ್ಯವನ್ನು ಪಡೆದವರಿಗೂ ಆ ದುಃಖವೆಲ್ಲ ಬರಬೇಕು.

2. ಜೀವನಿಗೆ ಸಂಸಾರದುಃಖವಿದೆ, ಈಶ್ವರನಿಗೆ ದುಃಖವಿಲ್ಲವೇ ಇಲ್ಲ ಎಂದರ್ಥ.

3. ಏಕೆಂದರೆ ಅವನಿಗೆ ಅವಿದ್ಯೆಯಿಲ್ಲ.

ಮಾನದ ಭ್ರಾಂತಿಯಿಂದ ಅನುಭವಿಸುತ್ತಾನೋ ಹಾಗೆಯೇ ಪುತ್ರಮಿತ್ರಾದಿವಿಷಯವಾದ 'ದುಃಖವನ್ನೂ ಅವರ ಅಭಿಮಾನದ ಭ್ರಾಂತಿಯಿಂದಲೇ– 'ನಾನೇ ಮಗನು', 'ನಾನೇ ಮಿತ್ರನು'– ಎಂಬೀ ಬಗೆಯ ಸ್ನೇಹವಶದಿಂದ ಪುತ್ರಮಿತ್ರಾದಿಗಳಲ್ಲಿ ಅಭಿನಿವೇಶವುಳ್ಳವನಾಗಿ– ಅನುಭವಿಸುತ್ತಾನೆ.[1] ಆದ್ದರಿಂದ ಮಿಥ್ಯಾಭಿಮಾನದ ಭ್ರಮೆಯ ನಿಮಿತ್ತದಿಂದಲೇ ದುಃಖಾನುಭವ(ವಾಗುವದೆಂಬಿದು) ನಿಶ್ಚಿತವಾಗಿ ಗೊತ್ತಾಗುತ್ತದೆ. ವ್ಯತಿರೇಕದೃಷ್ಟಾಂತದಿಂದಲೂ ಹೀಗೆಂದು ಗೊತ್ತಾಗುತ್ತದೆ. ಹೇಗೆಂದರೆ, ಪುತ್ರಮಿತ್ರಾದಿಗಳುಳ್ಳ ಬಹುಜನರು ಆ ಸಂಬಂಧದ ಅಭಿಮಾನವುಳ್ಳವರೂ ಇತರರೂ ಕುಳಿತಿರುವಲ್ಲಿ 'ಮಗನು ಸತ್ತನು', 'ಸ್ನೇಹಿತನು ಸತ್ತನು' ಎಂದು ಮುಂತಾಗಿ ಕೂಗಿ ಹೇಳಿದರೆ ಯಾರಿಗೆ ಪುತ್ರಮಿತ್ರಾದಿಗಳಲ್ಲಿ ಅಭಿಮಾನವೋ ಅವರಿಗೇ ಆ ನಿಮಿತ್ತದಿಂದಾದ ದುಃಖವುಂಟಾಗುತ್ತದೆಯೇ ಹೊರತು ಅಭಿಮಾನವಿಲ್ಲದ ಪರಿವ್ರಾಜಕರೇ ಮುಂತಾದವರಿಗೆ ಆಗುವದಿಲ್ಲ. ಆದ್ದರಿಂದ ಲೌಕಿಕಪುರುಷನಿಗೂ ಸಮ್ಯಗ್ದರ್ಶನದ ಸಪ್ರಯೋಜನತ್ವವು ಕಂಡುಬರುತ್ತದೆ[2], ಇನ್ನು ವಿಷಯರಹಿತನಾಗಿರುವ ಆತ್ಮನಿಗಿಂತ ಬೇರೆಯಾಗಿರುವ ಮತ್ತೊಂದು ವಸ್ತುವನ್ನು ಕಾಣದಿರುವ ನಿತ್ಯಚೈತನ್ಯಮಾತ್ರಸ್ವರೂಪನಾಗಿರುವವನಿಗೆ (ಸಮ್ಯಗ್ದರ್ಶನವು ಸಪ್ರಯೋಜನವೆಂಬುದನ್ನು ಹೇಳುವ)ದೇನಿದೆ[3] ? ಆದ್ದರಿಂದ ಸಮ್ಯಗ್ದರ್ಶನವು ವ್ಯರ್ಥವೆಂಬ ಪ್ರಸಕ್ತಿಯಿರುವದಿಲ್ಲ.

## ಜೀವನ ದುಃಖವು ಪರಮಾತ್ಮನಿಗಿಲ್ಲವೆಂಬುದಕ್ಕೆ ದೃಷ್ಟಾಂತ

(ಭಾಷ್ಯ)

೧೬೨. ಪ್ರಕಾಶಾದಿವತ್ ಇತಿ ನಿದರ್ಶನೋಪನ್ಯಾಸಃ। ಯಥಾ ಪ್ರಕಾಶಃ ಸೌರಃ ಚಾನ್ದ್ರಮಸೋ ವಾ ವಿಯದ್ ವ್ಯಾಪ್ಯ ಅವತಿಷ್ಠಮಾನಃ ಅಙ್ಗುಲ್ಯಾದ್ಯುಪಾಧಿಸಂಬನ್ಧಾತ್ ತೇಷು ಋಜುವಕ್ರಾದಿಭಾವಂ ಪ್ರತಿಪದ್ಯ

---

1. ಪುತ್ರಾದಿಗಳು ಬೇರೆ ಎಂದು ಗೊತ್ತಿದ್ದರೂ ದುಃಖವಾಗುವದಲ್ಲ ! –ಎಂಬ ಶಂಕೆಗೆ ಪರಿಹಾರವಿದು. ಗೌಣಾತ್ಮರಲ್ಲಿಯೂ ಮಿಥ್ಯಾಭಿಮಾನದಿಂದಲೇ ತನಗೆ ದುಃಖವಾಗುತ್ತದೆ ಎಂದು ಭಾವ.

2. ಸಮ್ಯಗ್ದರ್ಶನವು ಸಪ್ರಯೋಜನವೆಂಬುದು ಸಮ್ಯಗ್ದರ್ಶನದಿಂದ ಅಭಿಮಾನವನ್ನು ಕಳೆದುಕೊಂಡಿರುವ ಜನರಿಗೆಲ್ಲ ತಿಳಿದಿರುತ್ತದೆ.

3. ನಾನು ಅದ್ವಿತೀಯಚೈತನ್ಯಸ್ವರೂಪನು ಎಂಬ ಜ್ಞಾನವುಂಟಾದವನಿಗೆ ಯಾವ ನಿಮಿತ್ತದಿಂದ ತಾನೆ ದುಃಖವುಂಟಾದೀತು ? ದ್ವಿತೀಯವಸ್ತುವಿದ್ದರಲ್ಲವೆ, ಅದರ ಅಭಿಮಾನದಿಂದ ದುಃಖ ?

ಮಾನೇಷು ತತ್ತದ್ಭಾವಮಿವ ಪ್ರತಿಪದ್ಯಮಾನೋಽಪಿ ನ ಪರಮಾರ್ಥತಃ ತದ್ಭಾವಂ ಪ್ರತಿಪದ್ಯತೇ । ಯಥಾ ಚ ಆಕಾಶಃ ಘಟಾದಿಷು ಗಚ್ಛತ್ಸು ಗಚ್ಛನ್ನಿವ ವಿಭಾವ್ಯಮಾನೋಽಪಿ ನ ಪರಮಾರ್ಥತೋ ಗಚ್ಛತಿ । ಯಥಾ ಚ ಉದಶರಾವಾದಿಕಮ್ಪನಾತ್ ತದ್ಗತೇ ಸೂರ್ಯಪ್ರತಿಬಿಮ್ಬೇ ಕಮ್ಪಮಾನೋಽಪಿ ನ ತದ್ವಾನ್ ಸೂರ್ಯಃ ಕಮ್ಪತೇ । ಏವಮ್ ಅವಿದ್ಯಾಪ್ರತ್ಯುಪಸ್ಥಾಪಿತೇ ಬುದ್ಧ್ಯಾದ್ಯುಪಹಿತೇ ಜೀವಾಖ್ಯೇ ಅಂಶೇ ದುಃಖಾಯಮಾನೇಽಪಿ ನ ತದ್ವಾನ್ ಈಶ್ವರಃ ದುಃಖಾಯತೇ । ಜೀವಸ್ಯಾಪಿ ತು ದುಃಖಪ್ರಾಪ್ತಿಃ ಅವಿದ್ಯಾನಿಮಿತ್ತೈವ ಇತ್ಯುಕ್ತಮ್ । ತಥಾ ಚ ಅವಿದ್ಯಾನಿಮಿತ್ತಜೀವಭಾವವ್ಯುದಾಸೇನ ಬ್ರಹ್ಮಭಾವಮೇವ ಜೀವಸ್ಯ ಪ್ರತಿಪಾದಯನ್ತಿ ವೇದಾನ್ತಾಃ "ತತ್ತ್ವಮಸಿ" (ಛಾಂ. ೬–೮–೭) ಇತ್ಯೇವಮಾದಯಃ । ತಸ್ಮಾತ್ ನಾಸ್ತಿ ಜೈವೇನ ದುಃಖೇನ ಪರಮಾತ್ಮನೋ ದುಃಖಿತ್ವಪ್ರಸಙ್ಗಃ ॥

(ಭಾಷ್ಯಾರ್ಥ)

(ಇಲ್ಲಿ) 'ಪ್ರಕಾಶವೇ ಮುಂತಾದವುಗಳಂತೆ' ಎಂದು ದೃಷ್ಟಾಂತವನ್ನು ಹೇಳಿರುತ್ತದೆ. ಹೇಗೆ ಸೂರ್ಯನ ಅಥವಾ ಚಂದ್ರನ ಬೆಳಕು ಆಕಾಶವನ್ನು ವ್ಯಾಪಿಸಿಕೊಂಡಿದ್ದು ಬೆರಳುಗಳೇ ಮುಂತಾದ ಉಪಾಧಿಯ ಸಂಬಂಧದಿಂದ ಅವುಗಳು ನೆಟ್ಟಗಿರುವದು, ಡೊಂಕಾಗಿರುವದು, ಮುಂತಾದ ರೂಪವನ್ನು ಪಡೆಯುತ್ತಿರಲು ಆಯಾ ರೂಪವನ್ನೇ ಹೊಂದುತ್ತಿರುವಂತಿದ್ದರೂ ನಿಜವಾಗಿಯೂ ಆ ರೂಪವನ್ನು ಹೊಂದುವದಿಲ್ಲವೋ[1], ಹೇಗೆ ಗಡಿಗೆ ಮುಂತಾದವುಗಳು ಹೋಗುತ್ತಿರುವಾಗ ಆಕಾಶವು (ತಾನು) ಹೋಗುತ್ತಿರುವಂತೆ ತೋರಿದರೂ ನಿಜವಾಗಿಯೂ ಹೋಗುತ್ತಿರುವದಿಲ್ಲವೋ[2], ಮತ್ತು ಹೇಗೆ ನೀರಿನ ಶ್ರಾವೆಯೇ ಮುಂತಾದವು ಅಲುಗಾಡುತ್ತಿರುವಲ್ಲಿ ಅದರಲ್ಲಿರುವ ಸೂರ್ಯಪ್ರತಿಬಿಂಬವು ಅಲುಗಾಡುತ್ತಿದ್ದರೂ[3] ಆ (ಪ್ರತಿಬಿಂಬ)ವುಳ್ಳ ಸೂರ್ಯನು ಅಲುಗಾಡುವದಿಲ್ಲವೋ ಹೀಗೆಯೇ ಅವಿದ್ಯೆಯು ತಂದೊಡ್ಡುವ ಬುದ್ಧಿಯೇ ಮುಂತಾದವುಗಳಿಂದ ಉಪಹಿತವಾಗಿರುವ ಜೀವನೆಂಬ ಅಂಶವು ದುಃಖಿಯಾದರೂ[4] ಆ (ಅಂಶವುಳ್ಳ) ಈಶ್ವರನು ದುಃಖಿಸುವದಿಲ್ಲ. ಜೀವನಿಗಾದರೂ ದುಃಖಪ್ರಾಪ್ತಿಯು ಅವಿದ್ಯಾನಿಮಿತ್ತವೇ ಎಂದು (ಮೇಲೆ) ಹೇಳಿರುತ್ತೇವೆ. ಆದ್ದರಿಂದಲೇ 'ತತ್ತ್ವಮಸಿ' (ಅದೇ ನೀನು ಆಗಿರುವೆ ಛಾ. ೬–೮–೭)

---

1. ಮಾಂ. ಕಾ. ೪–೪೭ನ್ನು ಹೋಲಿಸಿ. 2. ಮಾಂ. ಕಾ. ೩–೯ನ್ನು ಹೋಲಿಸಿ.

3. ಅಲುಗಾಡುವಂತಿದ್ದರೂ ಎಂದು ಅಭಿಪ್ರಾಯ; ಏಕೆಂದರೆ ಪ್ರತಿಬಿಂಬವು ವಸ್ತುವಲ್ಲದ್ದರಿಂದ ಅದಕ್ಕೆ ಅಲುಗಾಡುವದೇ ಮುಂತಾದ ವಸ್ತುಧರ್ಮವು ಅದಕ್ಕಿಲ್ಲ.

4. ಇಲ್ಲಿಯೂ 'ದುಃಖಿಯಾದಂತಿದ್ದರೂ' ಎಂದೇ ಅರ್ಥ; ಜೀವನೂ ಅವನ ದುಃಖವೂ ಅವಿದ್ಯಾಕೃತವೆಂದು ತಿಳಿಸುವದಕ್ಕೆ ಇಲ್ಲಿ ಹೊರಟಿರುತ್ತಾರೆ.

ಎಂಬಿದೇ ಮುಂತಾದ ವೇದಾಂತಗಳು ಅವಿದ್ಯಾನಿಮಿತ್ತವಾದ ಜೀವಭಾವವನ್ನು ತೆಗೆದುಹಾಕಿ ಬ್ರಹ್ಮಭಾವವನ್ನೇ ಜೀವನಿಗೆ ಪ್ರತಿಪಾದಿಸುತ್ತವೆ.[1] ಆದ್ದರಿಂದ ಜೀವಸಂಬಂಧಿಯಾದ ದುಃಖದಿಂದ ಪರಮಾತ್ಮನಿಗೂ ದುಃಖಿತ್ವವು ಪ್ರಸಕ್ತವಾಗುವದಿಲ್ಲ.

**ಸ್ಮರನ್ತಿ ಚ ॥ ೪೭ ॥**

೪೭. ಸ್ಮರಿಸುತ್ತಲೂ ಇದಾರೆ.

## ಪರಮಾತ್ಮನಿಗೆ ಜೀವನ ದುಃಖವಿಲ್ಲವೆಂಬುವಕ್ಕೆ ಶ್ರುತಿಸ್ಮೃತಿಗಳು

(ಭಾಷ್ಯ)

೧೬೩. ಸ್ಮರನ್ತಿ ಚ ವ್ಯಾಸಾದಯಃ ಯಥಾ ಜೈವೇನ ದುಃಖೇನ ನ ಪರಮಾತ್ಮಾ ದುಃಖಾಯತೇ ಇತಿ । "ತತ್ರ ಯಃ ಪರಮಾತ್ಮಾ ಹಿ ಸ ನಿತ್ಯೋ ನಿರ್ಗುಣಃ ಸ್ಮೃತಃ । ನ ಲಿಪ್ಯತೇ ಫಲೈಶ್ಚಾಪಿ ಪದ್ಮಪತ್ರಮಿವಾಮ್ಭಸಾ ॥ ಕರ್ಮಾತ್ಮಾತ್ವಪರೋ ಯೋಽಸೌ ಮೋಕ್ಷಬನ್ಧೈಃ ಸ ಯುಜ್ಯತೇ । ಸ ಸಪ್ತದಶಕೇನಾಪಿ ರಾಶಿನಾ ಯುಜ್ಯತೇ ಪುನಃ"[2] (ಮೋ. ಧ. ೩೫೦–೧೪ರಿಂದ ೧೬) ಇತಿ । ಚಶಬ್ದಾತ್ 'ಸಮಾಮನನ್ತಿ ಚ' ಇತಿ ವಾಕ್ಯಶೇಷಃ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ" (ಶ್ವೇ. ೪–೬, ಮುಂ. ೩–೧–೧) ಇತಿ । "ಏಕಸ್ತಥಾ ಸರ್ವಭೂತಾನ್ತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ" (ಕ. ೨–೨–೧೧) ಇತಿ ಚ ॥

(ಭಾಷ್ಯಾರ್ಥ)

**ವ್ಯಾಸರೇ** ಮೊದಲಾದವರು ಜೀವನ ದುಃಖದಿಂದ ಪರಮಾತ್ಮನು ದುಃಖಿಸುವದಿಲ್ಲವೆಂಬುದನ್ನು ಸ್ಮರಿಸುತ್ತಲೂ ಇದಾರೆ. ಹೇಗೆಂದರೆ "ಅವರೊಳಗೆ ಪರಮಾತ್ಮನೆಂಬವನಿದಾನಲ್ಲ, ಅವನು ನಿತ್ಯನು, ನಿರ್ಗುಣನೆನಿಸಿರುವನು...... ತಾವರೆಯೆಲೆಗೆ ನೀರಿನ ಲೇಪವಿಲ್ಲದಿರುವಂತೆ( ಅವನಿಗೆ) ಫಲಗಳ ಲೇಪವು ಇರುವದಿಲ್ಲ. ಆದರೆ ಕರ್ಮಾತ್ಮನೆಂಬ ಈ ಮತ್ತೊಬ್ಬನಿರುವನಲ್ಲ, ಅವನಿಗೆ ಮೋಕ್ಷ

1. ಜೀವನಿಗೆ ದುಃಖವು ಅವಿದ್ಯಾನಿಮಿತ್ತವಾಗಿದ್ದು ಬ್ರಹ್ಮಸ್ವರೂಪವು ಪಾರಮಾರ್ಥಿಕವಾಗಿರುವದರಿಂದಲೇ 'ನೀನು ಆ ಬ್ರಹ್ಮವೇ' ಎಂಬ ವೇದಾಂತವು ಪ್ರಮಾಣವೆನಿಸಿರುತ್ತದೆ ಎಂದರ್ಥ.

2. ಈ ವಾಕ್ಯದಲ್ಲಿ 'ನಿತ್ಯಂ ನಿರ್ಗುಣಃ' 'ರಾಶಿನಾ ಯುಜ್ಯತೇ ಚ ಸಃ' ಎಂಬ ಪಾಠಗಳು ಅಚ್ಚಿನ ಪುಸ್ತಕದಲ್ಲಿ ಕಂಡುಬರುತ್ತವೆ; 'ನಿರ್ಗುಣಃ ಸ್ಮೃತಃ' ಆದ ಬಳಿಕ 'ಸ ಹಿ ನಾರಾಯಣೋ ಜ್ಞೇಯಃ ಸರ್ವಾತ್ಮಾ ಪುರುಷೋ ಹಿ ಸಃ' ಎಂಬ ಶ್ಲೋಕಾರ್ಧವಿದೆ.

ಬಂಧಗಳ ಸಂಬಂಧವುಂಟು. ಮತ್ತು ಅವನು **ಸಪ್ತದಶಕದಿಂದಲೂ** (ಹದಿನೇಳು ಅವಯವಗಳುಳ್ಳ ರಾಶಿಯಿಂದಲೂ)[1] ಸಂಬದ್ಧನಾಗಿರುತ್ತಾನೆ" (ಮೋ. ಧ. ೩೫೧–೧೪ರಿಂದ ೧೬) ಎಂದು (ಅವರು ಹೇಳುತ್ತಾರೆ).

(ಸೂತ್ರದಲ್ಲಿ) ಚಶಬ್ದವಿರುವದರಿಂದ ಅಧ್ಯಯನಮಾಡುತ್ತಲೂ ಇರುತ್ತಾರೆ ಎಂದು ವಾಕ್ಯಶೇಷವನ್ನು (ಹಾಕಿಕೊಳ್ಳಬೇಕು). "ಅವೆರಡರಲ್ಲಿ ಒಂದು ಪಿಪ್ಪಲವನ್ನು ಸವಿದು ತಿನ್ನುತ್ತಿರುತ್ತದೆ; ಇನ್ನೊಂದು ತಿನ್ನದೆ ನೋಡುತ್ತಿರುತ್ತದೆ" (ಶ್ವೇ. ೪–೬, ಮು. ೩–೧–೧) ಎಂದೂ "ಹಾಗೆಯೇ ಸರ್ವಭೂತಗಳಿಗೂ ಅಂತರಾತ್ಮನಾಗಿರುವ ಒಬ್ಬನೇ (ಪರಮಾತ್ಮನು) ಲೋಕದುಃಖದಿಂದ ಲಿಪ್ತನಾಗುವದಿಲ್ಲ, ಏಕೆಂದರೆ ಹೊರಚ್ಚಾಗಿರುತ್ತಾನೆ" (ಕ. ೨–೨–೧೧) ಎಂದು (ಅಧ್ಯಯನಮಾಡುತ್ತಿದಾರೆ).

**ಅನುಜ್ಞಾಪರಿಹಾರೌ ದೇಹಸಂಬನ್ಧಾಜ್ಜ್ಯೋತಿರಾದಿವತ್ ॥ ೪೮ ॥**

೪೮. ಅನುಜ್ಞಾಪರಿಹಾರಗಳು ಜ್ಯೋತಿರಾದಿಗಳಂತೆ ದೇಹಸಂಬಂಧದಿಂದ.

## ಶಂಕೆ : ಏಕಾತ್ಮವಾದದಲ್ಲಿ ಅನುಜ್ಞಾಪರಿಹಾರಗಳು ಹೇಗೆ ?

(ಭಾಷ್ಯ)

೧೬೪. ಅತ್ರಾಹ— ಯದಿ ತರ್ಹಿ ಏಕ ಏವ ಸರ್ವೇಷಾಂ ಭೂತಾನಾಮ್ ಅನ್ತರಾತ್ಮಾ ಸ್ಯಾತ್ ಕಥಮ್ ಅನುಜ್ಞಾಪರಿಹಾರೌ ಸ್ಯಾತಾಂ ಲೌಕಿಕೌ ವೈದಿಕೌ ಚ ಇತಿ? ನನು ಚ ಅಂಶೋ ಜೀವೋ ಈಶ್ವರಸ್ಯ ಇತ್ಯುಕ್ತಮ್। ತದ್ಭೇದಾಚ್ಚ ಅನುಜ್ಞಾಪರಿಹಾರೌ ತದಾಶ್ರಯೌ ಅವ್ಯತಿಕೀರ್ಣೌ ಉಪಪದ್ಯೇತೇ। ಕಿಮತ್ರ ಚೋದ್ಯತ ಇತಿ ? ಉಚ್ಯತೇ—ನೈತದೇವಮ್। ಅನಂಶತ್ವಮಪಿ ಹಿ ಜೀವಸ್ಯ ಅಭೇದವಾದಿನ್ಯಃ ಶ್ರುತಯಃ ಪ್ರತಿಪಾದಯನ್ತಿ —"ತತ್ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ೨–೬), "ನಾನ್ಯೋಽತೋಽಸ್ತಿ ದ್ರಷ್ಟಾ" (ಬೃ. ೩–೭–೨೩). "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (ಬೃ. ೪–೪–೧೯), "ತತ್ತ್ವಮಸಿ" (ಛಾಂ. ೬–೮–೭)

1. ಲಿಂಗಶರೀರದಿಂದಲೂ ಎಂದರ್ಥ. ಇಂದ್ರಿಯಗಳು ಹತ್ತು, ಅಂತಃಕರಣವೊಂದು, ಶರೀರ, ವಿಷಯಗಳು ಐದು —ಹೀಗೆ ಹದಿನೇಳು ಎಂಬ ಭಾಮತೀವ್ಯಾಖ್ಯಾನದಲ್ಲಿ ಸ್ಥೂಲಶರೀರವೂ ಸೇರುತ್ತದೆ. ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಪ್ರಾಣಗಳು, ಮನಸ್ಸು, ಬುದ್ಧಿ —ಇವೇ ಹದಿನೇಳು ಎಂಬ ನ್ಯಾ. ನಿ. ಮತ್ತು ರ. ಪ್ರ. ವ್ಯಾಖ್ಯಾನಗಳಲ್ಲಿ ಶರೀರವು ಸೇರಿಲ್ಲ. ಮುಂದೆ ಭಾ. ಭಾ. ೧೮೫ರ ಅನುವಾದದ ಟಿಪ್ಪಣಿಯಲ್ಲಿ ಪುರ್ಯಷ್ಟಕದ ವಿವರಣೆಯನ್ನು ನೋಡಿ.

"ಅಹಂ ಬ್ರಹ್ಮಾಸ್ಮಿ" (ಬೃ. ೧-೪-೧೦) ಇತ್ಯೇವಂಜಾತೀಯಕಾಃ। ನನು ಭೇದಾಭೇದಾವಗಮಾಭ್ಯಾಮ್ ಅಂಶತ್ವಂ ಸಿಧ್ಯತಿ ಇತ್ಯುಕ್ತಮ್। ಸ್ಯಾದೇತ ದೇವಂ ಯದಿ ಉಭಾವಪಿ ಭೇದಾಭೇದೌ ಪ್ರತಿಪಿಪಾದಯಿಷಿತೌ ಸ್ಯಾತಾಮ್। ಅಭೇದ ಏವ ತು ಅತ್ರ ಪ್ರತಿಪಿಪಾದಯಿಷಿತಃ। ಬ್ರಹ್ಮಾತ್ಮತ್ವಪ್ರತಿಪತ್ತೌ ಪುರುಷಾರ್ಥಸಿದ್ಧೇಃ। ಸ್ವಭಾವಪ್ರಾಪ್ತಸ್ತು ಭೇದಃ ಅನೂದ್ಯತೇ। ನ ಚ ನಿರ ವಯವಸ್ಯ ಬ್ರಹ್ಮಣೋ ಮುಖ್ಯೋಽಂಶೋ ಜೀವಃ ಸಂಭವತಿ ಇತ್ಯುಕ್ತಮ್। ತಸ್ಮಾತ್ ಪರ ಏವ ಏಕಃ ಸರ್ವೇಷಾಂ ಭೂತಾನಾಮ್ ಅನ್ತರಾತ್ಮಾ ಜೀವ ಭಾವೇನ ಅವಸ್ಥಿತಃ ಇತ್ಯತಃ ವಕ್ತವ್ಯಾ ಅನುಜ್ಞಾಪರಿಹಾರೋಪಪತ್ತಿಃ ॥

(ಭಾಷ್ಯಾರ್ಥ)

ಇಲ್ಲಿ (ಆಕ್ಷೇಪಕನು) ಹೇಳುತ್ತಾನೇನೆಂದರೆ : ಒಬ್ಬನೇ ಸರ್ವಭೂತ ಗಳಿಗೂ ಒಳಗಿನ ಆತ್ಮನು ಎಂದಾದರೆ ಲೌಕಿಕವಾದ ಮತ್ತು ವೈದಿಕವಾದ ಅನುಜ್ಞಾಪರಿಹಾರಗಳು ಹೇಗೆ ಆಗಬೇಕು ?

(ಸಿದ್ಧಾಂತಿ) :- ಜೀವನು ಈಶ್ವರನ ಅಂಶವೆಂದು ಹೇಳಿದ್ದೆವಲ್ಲ; ಅವನು ಬೇರೆಯಿರುವದರಿಂದಲೇ ಅವನನ್ನಾಶ್ರಯಿಸಿಕೊಂಡಿರುವ ಅನುಜ್ಞಾ ಪರಿಹಾರಗಳು ಒಂದರಲ್ಲೊಂದು ಬೆರೆಯದೆ ಹೊಂದಿಕೊಳ್ಳುತ್ತವೆ[1] ; ಇಲ್ಲಿ ಆಕ್ಷೇಪಿಸುವದು ಏನಿದೆ ?

(ಆಕ್ಷೇಪಕ) :- (ಇದಕ್ಕೆ) ಹೇಳುತ್ತೇವೆ. ಇದು ಹೀಗಲ್ಲ. ಅಭೇದವನ್ನು ಹೇಳುವ ಶ್ರುತಿಗಳು ಜೀವನು ಅಂಶವಲ್ಲವೆಂದೂ ಹೇಳುತ್ತಿವೆ. "ಅದನ್ನು ಸೃಜಿಸಿ ಅದನ್ನೇ ಒಳಹೊಕ್ಕನು" (ತೈ. ೨-೬), "ಇವನಿಗಿಂತ ಬೇರೆಯಾದ ದ್ರಷ್ಟೃವಿಲ್ಲ" (ಬೃ. ೩-೭-೨೩), "ಯಾವನು ಇಲ್ಲಿ ನಾನಾಬಗೆಯಾಗಿ ಇರು ವಂತೆ ಕಾಣುತ್ತಾನೋ ಅವನು ಮೃತ್ಯುವಿನಮೇಲೆ ಮೃತ್ಯುವನ್ನು ಹೊಂದು ತ್ತಾನೆ" (ಬೃ.೪-೪-೧೯) "ಅದೇ ನೀನಾಗಿರುವೆ" (ಛಾಂ. ೬-೮-೭), "ನಾನು ಬ್ರಹ್ಮವಾಗಿರುವೆನು" (ಬೃ. ೧-೪-೧೦) ಎಂಬೀ ಜಾತಿಯ (ಶ್ರುತಿಗಳು ಹಾಗೆಂದು ಹೇಳುತ್ತವೆ).

(ಸಿದ್ಧಾಂತ್ಯೇಕದೇಶಿ) :- ಭೇದಾಭೇದ(ಗಳೆರಡೂ) ತಿಳಿದುಬರುವದರಿಂದ ಅಂಶತ್ವವು ಸಿದ್ಧವಾಗುತ್ತದೆ ಎಂದು ಹೇಳಿದೆವಲ್ಲ[2] !

---

1. ಜೀವನಿಗೆ ವಿಧಿನಿಷೇಧಗಳ ಸಂಬಂಧವಿದೆ, ಈಶ್ವರನಿಗಿಲ್ಲ -ಎಂದು ಹೇಳುವದ ರಲ್ಲಿ ಯಾವ ದೋಷವೂ ಇಲ್ಲ ಎಂದು ಅಭಿಪ್ರಾಯ.

2. ಅಂಶತ್ವವಿರುವದರಿಂದ ಅಂಶಕ್ಕೆ ಸಂಬಂಧಪಟ್ಟ ವಿಧಿನಿಷೇಧಗಳು ಅಂಶಿಗೆ ಹೊಂದುವದಿಲ್ಲ ಎಂದು ಸಮಾಧಾನವನ್ನು ಹೇಳಬಹುದಲ್ಲವೆ ? ಎಂದು ಆಕ್ಷೇಪಕನ ಮೇಲಿನ ಶಂಕೆ.

(ಆಕ್ಷೇಪಕ) :– ಭೇದ, ಅಭೇದ– ಎರಡನ್ನೂ ಪ್ರತಿಪಾದನೆಮಾಡಬೇಕೆಂದಿದ್ದರೆ ಇದು ಹೀಗಾಗಬಹುದಾಗಿತ್ತು. ಆದರೆ ಅಭೇದವೊಂದನ್ನೇ ಇಲ್ಲಿ ಪ್ರತಿಪಾದನೆಮಾಡುವದಕ್ಕೆ ಹೊರಟಿದೆ; ಏಕೆಂದರೆ ಬ್ರಹ್ಮಾತ್ಮತ್ವವನ್ನು ಅರಿತುಕೊಂಡರೆ ಪುರುಷಾರ್ಥವು ಸಿದ್ಧವಾಗುತ್ತದೆ. ಆದರೆ ಸ್ವಭಾವದಿಂದ ಪ್ರಾಪ್ತವಾಗಿರುವ ಭೇದವನ್ನು (ಇಲ್ಲಿ) ಅನುವಾದಮಾಡಿಕೊಂಡಿರುತ್ತದೆ.[1] ನಿರವಯುವವಾದ ಬ್ರಹ್ಮಕ್ಕೆ ಜೀವನು ಮುಖ್ಯವಾದ ಅಂಶವು ಎಂಬುದು ಸಂಭವಿಸುವದಿಲ್ಲವೆಂದೂ ಹೇಳಿರುತ್ತೀರಿ. ಆದ್ದರಿಂದ ಎಲ್ಲಾ ಭೂತಗಳಿಗೂ ಅಂತರಾತ್ಮನಾಗಿರುವ ಪರಮಾತ್ಮನೊಬ್ಬನೇ ಜೀವಭಾವದಿಂದ ಇದ್ದುಕೊಂಡಿರುತ್ತಾನಾಗಿ ಅನುಜ್ಞಾಪರಿಹಾರಗಳಿಗೆ ಉಪಪತ್ತಿಯನ್ನು ಹೇಳಬೇಕು.

## ಸಿದ್ಧಾಂತ: ದೇಹಾದಿಸಂಬಂಧದಿಂದ ಅನುಜ್ಞಾಪರಿಹಾರಗಳು

(ಭಾಷ್ಯ)

೧೬೫. ತಾಂ ಬ್ರೂಮಃ। (ಅನುಜ್ಞಾಪರಿಹಾರೌ ದೇಹಸಂಬನ್ಧಾಜ್ಜ್ಯೋತಿರಾದಿವತ್")। "ಋತೌ ಭಾರ್ಯಾಮುಪೇಯಾತ್"(?) ಇತ್ಯನುಜ್ಞಾ "ಗುರ್ವಙ್ಗನಾಂ ನೋಪಗಚ್ಛೇತ್" (?) ಇತಿ ಪರಿಹಾರಃ। ತಥಾ "ಅಗ್ನೀಷೋಮೀಯಂ ಪಶುಂ ಸಂಜ್ಞಪಯೇತ್'' (?) ಇತ್ಯನುಜ್ಞಾ "ನ ಹಿಂಸ್ಯಾತ್ ಸರ್ವಾ ಭೂತಾನಿ'' (?) ಇತಿ ಪರಿಹಾರಃ। ಏವಂ ಲೋಕೇಽಪಿ 'ಮಿತ್ರಮ್ ಉಪಸೇವಿತವ್ಯಮ್' ಇತಿ ಅನುಜ್ಞಾ। 'ಶತ್ರುಃ ಪರಿಹರ್ತವ್ಯಃ' ಇತಿ ಪರಿಹಾರಃ। ಏವಂಪ್ರಕಾರೌ ಅನುಜ್ಞಾಪರಿಹಾರೌ ಏಕತ್ವೇಽಪಿ ಆತ್ಮನಃ ದೇಹಸಂಬನ್ಧಾತ್ ಸ್ಯಾತಾಮ್। ದೇಹೈಃ ಸಂಬನ್ಧಃ ದೇಹಸಂಬನ್ಧಃ। ಕಃ ಪುನರ್ದೇಹಸಂಬನ್ಧಃ? ದೇಹಾದಿರಯಂ ಸಂಘಾತೋಽಹಮೇವ ಇತಿ ಆತ್ಮನಿ ವಿಪರೀತಪ್ರತ್ಯಯೋತ್ಪತ್ತಿಃ। ದೃಷ್ಟಾ ಚ ಸಾ ಸರ್ವಪ್ರಾಣಿನಾಮ್ 'ಅಹಂ ಗಚ್ಛಾಮಿ', 'ಅಹಮ್ ಆಗಚ್ಛಾಮಿ', 'ಅಹಮ್ ಅನ್ಧಃ', 'ಅಹಮ್ ಅನನ್ಧಃ', 'ಅಹಂ ಮೂಢಃ', ಅಹಮ್ ಅಮೂಢಃ' ಇತ್ಯೇವಮಾತ್ಮಿಕಾ। ನ ಹಿ ಅಸ್ಯಾಃ ಸಮ್ಯಗ್ದರ್ಶನಾತ್ ಅನ್ಯತ್ ನಿವಾರಕಮ್ ಅಸ್ತಿ। ಪ್ರಾಕ್ತು ಸಮ್ಯಗ್ದರ್ಶನಾತ್ ಪ್ರತತಾ ಏಷಾ ಭ್ರಾನ್ತಿಃ ಸರ್ವಜನ್ತುಷು। ತದೇವಮ್ ಅವಿದ್ಯಾನಿಮಿತ್ತದೇಹಾದ್ಯುಪಾಧಿಸಂಬನ್ಧಕೃತಾತ್ ವಿಶೇಷಾತ್ ಐಕಾತ್ಮ್ಯಾಭ್ಯುಪಗಮೇಽಪಿ ಅನುಜ್ಞಾಪರಿಹಾರೌ ಅವಕಲ್ಪೇತೇ[2]। ಸಮ್ಯಗ್ದರ್ಶಿನಸ್ತರ್ಹಿ ಅನುಜ್ಞಾಪರಿಹಾರಾ

1. ಆದ್ದರಿಂದ ಮುಖ್ಯಾಂಶವೆಂದು ಹೇಳುವದಕ್ಕೆ ಹೊರಟಿಲ್ಲವೆಂದಾಯಿತು.
2. 'ಅವಕಲ್ಪ್ಯೇತೇ' ಎಂಬ ಕರ್ಮಣಿಪ್ರಯೋಗವು ಬೇಕಿಲ್ಲ.

ನರ್ಥಕ್ಯಂ ಪ್ರಾಪ್ತಮ್ । ನ । ತಸ್ಯ ಕೃತಾರ್ಥತ್ವಾತ್ ನಿಯೋಜ್ಯತ್ವಾನುಪಪತ್ತೇಃ। ಹೇಯೋಪಾದೇಯಯೋರ್ಹಿ ನಿಯೋಜ್ಯೋ ನಿಯೋಕ್ತವ್ಯಃ ಸ್ಯಾತ್। ಆತ್ಮನಸ್ತು ಅತಿರಿಕ್ತಂ ಹೇಯಮ್ ಉಪಾದೇಯಂ ವಾ ವಸ್ತು ಅಪಶ್ಯನ್ ಕಥಂ ನಿಯುಜ್ಯೇತ ? ನ ಚ ಆತ್ಮಾ ಆತ್ಮನ್ಯೇವ ನಿಯೋಜ್ಯಃ ಸ್ಯಾತ್ । ಶರೀರವ್ಯತಿರೇಕದರ್ಶಿನ ಏವ ನಿಯೋಜ್ಯತ್ವಮ್ ಇತಿ ಚೇತ್ । ನ । ತತ್ಸಂಹತತ್ವಾಭಿಮಾನಾತ್ । ಸತ್ಯಂ ವ್ಯತಿರೇಕದರ್ಶಿನಃ ನಿಯೋಜ್ಯತ್ವಮ್ । ತಥಾಪಿ ವ್ಯೋಮಾದಿವತ್ ದೇಹಾದ್ಯಸಂಹತತ್ವಮ್ ಅಪಶ್ಯತ ಏವ ಆತ್ಮನೋ ನಿಯೋಜ್ಯತ್ವಾಭಿಮಾನಃ। ನ ಹಿ ದೇಹಾದ್ಯಸಂಹತತ್ವದರ್ಶಿನಃ ಕಸ್ಯಚಿದಪಿ ನಿಯೋಗೋ ದೃಷ್ಟಃ। ಕಿಮುತ ಐಕಾತ್ಮ್ಯದರ್ಶಿನಃ। ನ ಚ ನಿಯೋಗಾಭಾವಾತ್ ಸಮ್ಯಗ್ದರ್ಶಿನೋ ಯಥೇಷ್ಟಚೇಷ್ಟಾಪ್ರಸಙ್ಗಃ। ಸರ್ವತ್ರ ಅಭಿಮಾನಸ್ಯೈವ ಪ್ರವರ್ತಕತ್ವಾತ್ ಅಭಿಮಾನಾಭಾವಾಚ್ಚ ಸಮ್ಯಗ್ದರ್ಶಿನಃ। ತಸ್ಮಾತ್ ದೇಹಸಂಬನ್ಧಾದೇವ ಅನುಜ್ಞಾಪರಿಹಾರೌ ॥

(ಭಾಷ್ಯಾರ್ಥ)

ಆ (ಉಪಪತ್ತಿಯನ್ನು) ಹೇಳುತ್ತೇವೆ: ("ಅನುಜ್ಞಾಪರಿಹಾರೌ ದೇಹಸಂಬನ್ಧಾಜ್ಜ್ಯೋತಿರಾದಿವತ್")। 'ಋತುಕಾಲದಲ್ಲಿ ಹೆಂಡತಿಯೊಡನೆ ಕೂಡಬೇಕು' (?) ಎಂದು ಅನುಜ್ಞೆ; 'ಗುರ್ವಂಗನೆಯನ್ನು ಕೂಡಬಾರದು' (?) ಎಂಬುದು ಪರಿಹಾರ. ಇದರಂತೆ 'ಅಗ್ನಿಷೋಮೀಯ ಪಶುವನ್ನು ಕೊಲ್ಲಬೇಕು" (?) ಎಂದು ಅನುಜ್ಞೆ; "ಯಾವ ಪ್ರಾಣಿಗಳನ್ನೂ ಕೊಲ್ಲಬಾರದು" (?) ಎಂದು ಪರಿಹಾರ. ಹೀಗೆಯೇ ಲೋಕದಲ್ಲಿಯೂ 'ಮಿತ್ರನನ್ನು ಸೇರಬೇಕು' ಎಂದು ಅನುಜ್ಞೆ; 'ಶತ್ರುವನ್ನು ದೂರವಿಡಬೇಕು' ಎಂದು ಪರಿಹಾರ. ಈ ಬಗೆಯ ಅನುಜ್ಞಾಪರಿಹಾರಗಳು ಆತ್ಮನು ಒಬ್ಬನೇ ಆದರೂ (ಅವನಿಗೆ) ದೇಹಸಂಬಂಧದಿಂದ ಆಗಬಹುದು. ದೇಹಗಳೊಡನೆ ಸಂಬಂಧವೇ ದೇಹಸಂಬಂಧವು. (ಆ) ದೇಹಸಂಬಂಧವು ಯಾವದು? ಎಂದರೆ **ದೇಹವೇ ಮುಂತಾದ ಈ ಸಂಘಾತವು[1] ನಾನೇ ಎಂದು ತನ್ನಲ್ಲಿ ವಿಪರೀತಪ್ರತ್ಯಯವುಂಟಾಗುವದೇ (ಆ ಸಂಬಂಧವು). 'ನಾನು ಹೋಗುತ್ತೇನೆ' 'ನಾನು ಬರುತ್ತೇನೆ', 'ನಾನು ಕುರುಡನು', 'ನಾನು ಕುರುಡನಲ್ಲ', 'ನಾನು ಮೂಢನು', 'ನಾನು ಮೂಢನಲ್ಲ', ಎಂಬೀ (ಮುಂತಾದ) ರೂಪದ (ಪ್ರತ್ಯಯವುಂಟಾಗುವದು) ಸರ್ವಜೀವರಲ್ಲಿಯೂ ಕಂಡುಬರುತ್ತದೆ. ಸಮ್ಯಗ್ದರ್ಶನವನ್ನು ಬಿಟ್ಟರೆ ಮತ್ತೆ ಯಾವದೂ ಇದನ್ನು ಕಳೆಯಲೇ ಆರದು. ಸಮ್ಯಗ್ದರ್ಶನದ ಮುಂಚೆ ಈ ಭ್ರಾಂತಿಯು ಎಲ್ಲಾ ಪ್ರಾಣಿ**

---

1, ದೇಹೈಃ ಎಂಬ ಮಾತಿಗೆ ದೇಹಾದಿಗಳೊಡನೆ ಎಂಬರ್ಥವನ್ನು ಇಲ್ಲಿ ಸ್ಫುಟಗೊಳಿಸಿದೆ.

**ಗಳಲ್ಲಿಯೂ ಸತತವಾಗಿ ಇರುತ್ತದೆ. ಅಂತೂ ಹೀಗೆ ಅವಿದ್ಯಾನಿಮಿತ್ತವಾದ ದೇಹಾದ್ಯುಪಾಧಿಸಂಬಂಧದಿಂದಾಗಿರುವ ವಿಶೇಷದಿಂದ ಐಕಾತ್ಮ್ಯವನ್ನು ಅಂಗೀಕರಿಸಿದರೂ ಅನುಜ್ಞಾಪರಿಹಾರಗಳು ಹೊಂದುತ್ತವೆ.**[1]

(ಆಕ್ಷೇಪ) :– ಹಾಗಾದರೆ ಸಮ್ಯಗ್ದರ್ಶಿಗೆ ಅನುಜ್ಞಾಪರಿಹಾರಗಳು ವ್ಯರ್ಥವಾದವಲ್ಲ !

(ಪರಿಹಾರ) :– ಹಾಗಲ್ಲ. ಏಕೆಂದರೆ **(ಸಮ್ಯಗ್ದರ್ಶಿಯು) ಕೃತಾರ್ಥನಾಗಿರುವದರಿಂದ ಅವನು ನಿಯೋಜ್ಯನಾಗಲಾರನು.** ಬಿಡಬೇಕಾದದ್ದು, ತೆಗೆದುಕೊಳ್ಳಬೇಕಾದದ್ದು –ಇವುಗಳಲ್ಲಲ್ಲವೆ, ನಿಯೋಜ್ಯನು ತೊಡಗಿಸಲ್ಪಡಬಹುದಾಗಿರುವದು ? ತನಗಿಂತ ಅತಿರಿಕ್ತವಾದ ಹೇಯವನ್ನಾಗಲಿ ಉಪಾದೇಯವನ್ನಾಗಲಿ ಕಾಣದೆ ಇರುವವನು ಹೇಗೆತಾನೆ ನಿಯುಕ್ತನಾದಾನು ? ತಾನು ತನ್ನಲ್ಲಿಯೇ ನಿಯುಕ್ತನಾಗಲೂ ಆರನು.

(ಆಕ್ಷೇಪ) :– ಶರೀರವ್ಯತಿರಿಕ್ತಾತ್ಮನನ್ನು ಕಂಡವನೇ ಅಲ್ಲವೆ, ನಿಯೋಜ್ಯನು ?

(ಪರಿಹಾರ) :– ಹಾಗಲ್ಲ. ಏಕೆಂದರೆ ಅದರಿಂದ ಸಂಹತನಾಗಿರುವೆನೆಂಬ ಅಭಿಮಾನವಿರುತ್ತದೆ. (ಇದರ ವಿವರ) : (ಶರೀರಕ್ಕಿಂತ ಬೇರೆಯಾಗಿ ಆತ್ಮನಿರುವನೆಂಬ) ತಿಳಿವಳಿಕೆಯುಳ್ಳವನೇ ನಿಯೋಜ್ಯನೆಂಬುದು ನಿಜ. **ಆದರೂ ಆಕಾಶಾದಿಗಳಂತೆ (ತಾನು) ದೇಹಾದಿಗಳೊಡನೆ ಅಸಂಹತನು ಎಂಬದನ್ನು ಅರಿಯದಿರುವವನಿಗೇ ತಾನು ನಿಯೋಜ್ಯನೆಂಬ ಅಭಿಮಾನವಿರುವದು.**[2] **ದೇಹಾದಿಗಳೊಡನೆ ತಾನು ಸಂಹತನೆಂಬ ಅರಿವಿಲ್ಲದ ಯಾವನಿಗೂ ನಿಯೋಗವು ಕಂಡಿಲ್ಲ ; ಇನ್ನು ಐಕಾತ್ಮ್ಯದರ್ಶಿಗೆ (ಅದು ಇಲ್ಲವೆಂದು ಹೇಳುವ) ದೇನು**[3] **? ಆದರೆ ನಿಯೋಗವಿಲ್ಲದ್ದರಿಂದ ಸಮ್ಯಗ್ದರ್ಶಿಗೆ ಯಥೇಷ್ಟವ್ಯಾಪಾರವು ಪ್ರಸಕ್ತವಾಗುವದು ಎಂದು (ಹೇಳುವದಕ್ಕೆ ಬರುವ) ದಿಲ್ಲ. ಏಕೆಂದರೆ ಎಲ್ಲೆಲ್ಲಿಯೂ ಅಭಿ**

---

1. ವಿಪರೀತಪ್ರತ್ಯಯ, ಭ್ರಾಂತಿ, ಅವಿದ್ಯಾ– ಈ ಶಬ್ದಗಳನ್ನು ಪರ್ಯಾಯವಾಗಿ ಪ್ರಯೋಗಿಸಿರುವದನ್ನೂ ಅವಿದ್ಯೆಯೇ ದೇಹಸಂಬಂಧಕ್ಕೆ ನಿಮಿತ್ತಕಾರಣವೆಂದಿರುವದನ್ನೂ ಲಕ್ಷಿಸಿರಿ. ಮಿಥ್ಯಾಜ್ಞಾನನಿಮಿತ್ತವೇ ಸಶರೀರತ್ವವೆಂದು ಸಂಪುಟ ೧ (೧–೧–೪, ಭಾ. ಭಾ. ೫೮)ರಲ್ಲಿ ಹೇಳಿಯೇ ಇದೆ.

2. ಆದ್ದರಿಂದಲೇ ಅಧ್ಯಾಸಭಾಷ್ಯದಲ್ಲಿ (ಭಾ. ಭಾ. ೭) ಪರಲೋಕಸಂಬಂಧದ ಕರ್ಮಕ್ಕೆ ಅವಿದ್ಯಾವಂತನೇ ಅಧಿಕಾರಿ ಎಂದು ಹೇಳಿರುವದು.

3. ನಿದ್ರಿಸುತ್ತಿರುವವನೇ ಮುಂತಾದವರಿಗೇ ನಿಯೋಗವಿಲ್ಲ, ಜ್ಞಾನಿಗಳಿಗೆ ಇಲ್ಲವೆಂದು ಹೇಳುವದೇನಿದೆ ?

**ಮಾನವೇ ಪ್ರವರ್ತಕವು; ಆದರೆ ಸಮ್ಯಗ್ದರ್ಶಿಗೆ ಅಭಿಮಾನವಿರುವದಿಲ್ಲ** ಆದ್ದರಿಂದ ದೇಹಸಂಬಂಧದಿಂದಲೇ ಅನುಜ್ಞಾಪರಿಹಾರಗಳು (ಎಂದಾಯಿತು).

## ಒಂದೇ ಪದಾರ್ಥದಲ್ಲಿ ಅನುಜ್ಞಾಪರಿಹಾರಗಳಿರಬಹುದು

(ಭಾಷ್ಯ)

೧೬೬. ಜ್ಯೋತಿರಾದಿವತ್। ಯಥಾ ಜ್ಯೋತಿಷಃ ಏಕತ್ವೇಽಪಿ ಅಗ್ನಿಃ ಕ್ರವ್ಯಾತ್ ಪರಿಹ್ರಿಯತೇ ನೇತರಃ। ಯಥಾ ಚ ಪ್ರಕಾಶಃ ಏಕಸ್ಯಾಪಿ ಸವಿತುಃ ಅಮೇಧ್ಯದೇಶಸಂಬದ್ಧಃ ಪರಿಹ್ರಿಯತೇ। ನೇತರಃ ಶುಚಿಭೂಮಿಷ್ಠಃ। ಯಥಾ ಭೌಮಾಃ ಪ್ರದೇಶಾಃ ವಜ್ರವೈಡೂರ್ಯಾದಯಃ ಉಪಾದೀಯನ್ತೇ। ಭೌಮಾ ಅಪಿ ಸನ್ತಃ ನರಕಲೇವರಾದಯಃ ಪರಿಹ್ರಿಯನ್ತೇ। ಯಥಾ ಮೂತ್ರಪುರೀಷಂ ಗವಾಂ ಪವಿತ್ರತಯಾ ಪರಿಗೃಹ್ಯತೇ। ತದೇವ ಜಾತ್ಯನ್ತರೇ ಪರಿವರ್ಜ್ಯತೇ। ತದ್ವತ್ ॥

(ಭಾಷ್ಯಾರ್ಥ)

ಜ್ಯೋತಿರಾದಿಗಳಂತೆ (ಇದನ್ನು ತಿಳಿಯಬೇಕು. ಹೇಗೆಂದರೆ), ಹೇಗೆ ಜ್ಯೋತಿಯು ಒಂದೇ ಆದರೂ ಮಾಂಸಾಹಾರಿಯಾದ ಬೆಂಕಿಯನ್ನು ತ್ಯಜಿಸುತ್ತಾರೋ, ಮಿಕ್ಕದ್ದನ್ನು ತ್ಯಜಿಸುವದಿಲ್ಲವೋ, ಮತ್ತು ಹೇಗೆ ಒಬ್ಬನೇ ಸೂರ್ಯನದಾದರೂ ಅಮೇಧ್ಯದೇಶದಲ್ಲಿರುವ ಬೆಳಕನ್ನು ತ್ಯಜಿಸುತ್ತಾರೆಯೇ ಹೊರತು ಮಿಕ್ಕ ಶುಚಿಯಾದ ನೆರಳಲ್ಲಿರುವ (ಬೆಳಕನ್ನು ತ್ಯಜಿಸುವ)ದಿಲ್ಲವೋ, ಹೇಗೆ ಪೃಥಿವೀವಿಕಾರವಾದ ವಜ್ರವೈಡೂರ್ಯಾದಿಪ್ರದೇಶಗಳನ್ನು ತೆಗೆದುಕೊಳ್ಳುತ್ತಾರೋ ಮನುಷ್ಯನ (ಶವ)ಶರೀರವೇ ಮುಂತಾದವು ಪೃಥಿವಿಯ ವಿಕಾರವಾದರೂ (ಅವನ್ನು) ತ್ಯಜಿಸುತ್ತಾರೋ, ಹೇಗೆ ಗೋಗಳ ಮೂತ್ರಪುರೀಷವನ್ನು ಪವಿತ್ರವೆಂದು ಸ್ವೀಕರಿಸುತ್ತಾರೋ ಜಾತ್ಯಂತರ(ದ ಪ್ರಾಣಿ)ಯಲ್ಲಿ ಅದನ್ನೇ ಬಿಡುತ್ತಾರೋ, ಅದರಂತೆ (ಎಂದು ಅಭಿಪ್ರಾಯ).

**ಅಸನ್ತತೇಶ್ಚಾವ್ಯತಿಕರಃ ॥ ೪೯ ॥**

೪೯. ಸಂತತವಾಗಿಲ್ಲದ್ದರಿಂದ ಬೆರಕೆಯೂ ಇಲ್ಲ.

## ಜೀವಾತ್ಮನಿಗೆ ಸರ್ವಶರೀರಗಳ ಸಂಬಂಧವಿಲ್ಲ

(ಭಾಷ್ಯ)

೧೬೭. ಸ್ಯಾತಾಂ ನಾಮ ಅನುಜ್ಞಾಪರಿಹಾರೌ ಏಕಸ್ಯಾಪಿ ಆತ್ಮನಃ ದೇಹವಿಶೇಷಯೋಗಾತ್। ಯಸ್ತ್ವಯಂ ಕರ್ಮಫಲಸಂಬನ್ಧಃ ಸ ಚ ಐಕಾತ್ಮ್ಯಾಭ್ಯುಪಗಮೇ ವ್ಯತಿಕೀರ್ಯೇತ ಸ್ವಾಮ್ಯೈಕತ್ವಾತ್ ಇತಿ ಚೇತ್। ನೈತದೇವಮ್,

ಅಸನ್ತತೇಃ । ನ ಹಿ ಕರ್ತುರ್ಭೋಕ್ತುಶ್ಚ ಆತ್ಮನಃ ಸನ್ತತಃ ಸರ್ವೈಃ ಶರೀರೈಃ ಸಂಬನ್ಧಃ ಅಸ್ತಿ । ಉಪಾಧಿತನ್ತ್ರೋ ಹಿ ಜೀವಃ ಇತ್ಯುಕ್ತಮ್, ಉಪಾಧ್ಯಸಂತಾನಾಚ್ಚ ನಾಸ್ತಿ ಜೀವಸನ್ತಾನಃ । ತತಶ್ಚ ಕರ್ಮವ್ಯತಿಕರಃ ಫಲವ್ಯತಿಕರೋ ವಾ ನ ಭವಿಷ್ಯತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ಒಬ್ಬನೇ ಆತ್ಮನಿಗೆ ಆಯಾ ದೇಹದ ಸಂಬಂಧದಿಂದ ಅನುಜ್ಞಾಪರಿಹಾರಗಳು ಆದರೂ ಆಗಬಹುದು. ಆದರೆ ಈ ಕರ್ಮಫಲ ಸಂಬಂಧವೆಂಬುದಿದೆಯಲ್ಲ, ಅದು ಮಾತ್ರ ಒಬ್ಬನೇ ಆತ್ಮನೆಂದು ಒಪ್ಪಿದರೆ ಬೆರಕೆಯಾಗಬೇಕಾಗುವದು ; ಏಕೆಂದರೆ (ಈ ಮತದಲ್ಲಿ ಎಲ್ಲಕ್ಕೂ) ಒಬ್ಬನೇ ಒಡೆಯನಾಗಿರುತ್ತಾನೆ. (ಅಲ್ಲವೆ) ?

(ಪರಿಹಾರ) :– ಇದು ಹೀಗಲ್ಲ. ಏಕೆಂದರೆ ಸಂತತವಾಗಿಲ್ಲ. (ಇದರ ವಿವರ) : ಕರ್ತೃವೂ ಭೋಕ್ತೃವೂ ಆಗಿರುವ ಆತ್ಮನಿಗೆ ಎಲ್ಲಾ ಶರೀರಗಳೊಡನೆಯೂ ಸಂತತವಾಗಿ ಸಂಬಂಧವಿರುವದಿಲ್ಲ. ಜೀವನು ಉಪಾಧಿಗೆ ವಶನಾಗಿರುತ್ತಾನೆ ಎಂದಲ್ಲವೆ, (ಹಿಂದೆ) ಹೇಳಿದೇವೆ [1] ? (ಆ) ಉಪಾಧಿಯು ಸಂತತವಾಗಿಲ್ಲವಾದ್ದರಿಂದ ಜೀವನೂ ಸಂತತವಾಗಿರುವದಿಲ್ಲ. ಆದ್ದರಿಂದಲೇ ಕರ್ಮಗಳ ಬೆರಕೆಯಾಗಲಿ ಫಲಗಳ ಬೆರಕೆಯಾಗಲಿ ಆಗುವದಿಲ್ಲ.[2]

**ಆಭಾಸ ಏವ ಚ ॥ ೫೦ ॥**

೫೦. ಆಭಾಸವೇ ಆಗಿರುತ್ತಾನೆ.

## ಜೀವನು ಪರಮಾತ್ಮನ ಆಭಾಸವೇ

(ಭಾಷ್ಯ)

೧೬೮. ಆಭಾಸ ಏವ ಚ ಏಷ ಜೀವಃ ಪರಸ್ಯ ಆತ್ಮನಃ ಜಲಸೂರ್ಯಕಾದಿವತ್ ಪ್ರತಿಪತ್ತವ್ಯಃ । ನ ಸ ಏವ ಸಾಕ್ಷಾತ್, ನಾಪಿ ವಸ್ತ್ವನ್ತರಮ್ । ಅತಶ್ಚ ಯಥಾ ನೈಕಸ್ಮಿನ್ ಜಲಸೂರ್ಯಕೇ ಕಮ್ಪಮಾನೇ ಜಲಸೂರ್ಯಕಾನ್ತರಂ ಕಮ್ಪತೇ, ಏವಂ ನೈಕಸ್ಮಿನ್ ಜೀವೇ ಕರ್ಮಫಲಸಂಬನ್ಧಿನಿ ಜೀವಾನ್ತರಸ್ಯ ತತ್ಸಂಬನ್ಧಃ । ಏವಮಪಿ ಅವ್ಯತಿಕರ ಏವ ಕರ್ಮಫಲಯೋಃ । ಆಭಾಸಸ್ಯ

1. ತದ್ಗುಣಸಾರಾಧಿಕರಣದಲ್ಲಿ (ಭಾ.ಭಾ. ೧೪೦) ಬುದ್ಧಿಯು ಆತ್ಮನಿಗೆ ಉಪಾಧಿಯಾಗಿರುತ್ತದೆ ; ಅದರ ಸಂಬಂಧವು ಸಂಸಾರವಿರುವವರೆಗೂ ಇರುತ್ತದೆ ಎಂದು ಹೇಳಿದೆ.

2. ಒಬ್ಬನ ಕರ್ಮವು ಮತ್ತೊಬ್ಬನದಾಗುವದಿಲ್ಲ, ಒಬ್ಬನ ಕರ್ಮದ ಫಲವು ಮತ್ತೊಬ್ಬನಿಗಿಲ್ಲ– ಎಂಬ ವ್ಯವಸ್ಥೆಯಿರಬಹುದು ; ಕರ್ಮಫಲಗಳೆರಡೂ ಅವಿದ್ಯಾತ್ಮಕವಾಗಿದ್ದರೂ ಸ್ವಪ್ನದಲ್ಲಿರುವಂತೆ ವ್ಯವಸ್ಥೆಯಿರಬಹುದು ಎಂದು ಭಾವ.

ಚ ಅವಿದ್ಯಾಕೃತತ್ವಾತ್ ತದಾಶ್ರಯಸ್ಯ ಸಂಸಾರಸ್ಯ ಅವಿದ್ಯಾಕೃತತ್ವೋಪಪತ್ತಿರಿತಿ । ತದ್ವ್ಯುದಾಸೇನ ಚ ಪಾರಮಾರ್ಥಿಕಸ್ಯ ಬ್ರಹ್ಮಾತ್ಮಭಾವಸ್ಯ ಉಪದೇಶೋಪಪತ್ತಿಃ ॥

(ಭಾಷ್ಯಾರ್ಥ)

ಈ ಜೀವನು ಪರಮಾತ್ಮನಿಗೆ ಜಲಸೂರ್ಯಕವೇ ಮುಂತಾದದ್ದರಂತೆ ಪರಮಾತ್ಮನ ಆಭಾಸವೇ ಎಂದು ತಿಳಿಯಬೇಕು.[1] ನೇರಾಗಿ ಅವನೇ ಅಲ್ಲ, ಅವನಿಗಿಂತ ಬೇರೆಯ ವಸ್ತುವೂ ಅಲ್ಲ.[2] ಆದ್ದರಿಂದ ಹೇಗೆ ಒಂದು ಜಲಸೂರ್ಯಕವು ಅಲುಗಾಡುತ್ತಿದ್ದರೆ ಮತ್ತೊಂದು ಜಲಸೂರ್ಯಕವು ಅಲುಗಾಡುವದಿಲ್ಲವೋ ಹಾಗೆ ಒಬ್ಬ ಜೀವನು ಕರ್ಮಫಲಸಂಬಂಧವುಳ್ಳವನಾದರೆ ಮತ್ತೊಬ್ಬ ಜೀವನಿಗೆ ಅದರ ಸಂಬಂಧವಿಲ್ಲ.[3] ಹೀಗೂ ಕರ್ಮಫಲಗಳ ಬೆರಕೆಯಾಗುವದೇ ಇಲ್ಲ. **ಆಭಾಸವು ಅವಿದ್ಯಾಕೃತವಾಗಿರುವದರಿಂದಲೂ ಅದನ್ನು ಆಶ್ರಯಿಸಿರುವ ಸಂಸಾರವು ಅವಿದ್ಯಾಕೃತವಾಗಿರಬಹುದಾಗಿದೆಯಾದ್ದರಿಂದ ಅದನ್ನು ತಿರಸ್ಕರಿಸಿ ಪಾರಮಾರ್ಥಿಕವಾದ ಬ್ರಹ್ಮಾತ್ಮಭಾವವನ್ನು (ಶ್ರುತಿಯಲ್ಲಿ) ಉಪದೇಶಿಸಿರುವದು ಹೊಂದುತ್ತದೆ.**[4]

## ಸರ್ವಗತಾನೇಕಾತ್ಮವಾದಿಗಳ ಮತದಲ್ಲಿ ಕರ್ಮಫಲಸಾಂಕರ್ಯ

(ಭಾಷ್ಯ)

೧೬೯. ಯೇಷಾಂ ತು ಬಹವ ಆತ್ಮಾನಃ ತೇ ಚ ಸರ್ವೇ ಸರ್ವಗತಾಃ ತೇಷಾಮೇವ ಏಷ ವ್ಯತಿಕರಃ ಪ್ರಾಪ್ನೋತಿ । ಕಥಮ್ ? ಬಹವೋ ವಿಭವಶ್ಚ

---

1. ಅಂಶಸೂತ್ರದಲ್ಲಿ (೨-೩-೪೩) ಅವಚ್ಛೇದವಾದವನ್ನು ಒಪ್ಪಿ ಈ ಸೂತ್ರದಲ್ಲಿ ಆ ವಾದದಲ್ಲಿ ಅರುಚಿಯನ್ನು ಸೂಚಿಸಿ ಪ್ರತಿಬಿಂಬವಾದವನ್ನು ಅಂಗೀಕರಿಸಿರುತ್ತದೆ ಎಂದು ರ॥ ಪ್ರ॥ ವ್ಯಾಖ್ಯಾನದಲ್ಲಿ ಬರೆದಿದೆ. ಇದಕ್ಕೆ ಗಮಕವೇನೂ ಕಾಣುವದಿಲ್ಲ.

2. ಜೀವನು ಅನಿರ್ವಚನೀಯನೆಂದು ಇದಕ್ಕೆ ಅರ್ಥವಲ್ಲ ; ಪರಮಾರ್ಥವಾಗಿ ಪರಮಾತ್ಮನೇ ಆಗಿರುವ ಜೀವನಲ್ಲಿ ಅವಿದ್ಯಾಕಲ್ಪಿತವಾದ ಆಭಾಸಾಂಶವೂ ಇವೆ ಎಂದರ್ಥ. ಆದ್ದರಿಂದಲೇ ಜೀವನಿಗೆ ಪರಮಾತ್ಮಭಾವವನ್ನು ಹೇಳಿರುವದು ಹೊಂದುತ್ತದೆ. ಈ ಭಾ. ಭಾ. ದ ಕೊನೆಯ ವಾಕ್ಯವನ್ನು ನೋಡಿ. ಪ್ರತಿಬಿಂಬದೃಷ್ಟಾಂತದ ಅಭಿಪ್ರಾಯವನ್ನು ೩-೨-೧೮, ೨೦- ಈ ಸೂತ್ರಗಳ ಭಾಷ್ಯದಲ್ಲಿ ವಿವರಿಸಲಾಗುವದು.

3. ಉ.ಸಾ. ಪದ್ಯ. ೧೮ರಲ್ಲಿ ಇದನ್ನು ವಿವರಿಸಿದೆ. ಆತ್ಮಸ್ವರೂಪವನ್ನು ವಿಂಗಡಿಸಿಕೊಳ್ಳದಿರುವದರಿಂದ ಸಂಸಾರಭ್ರಾಂತಿಯಾಗಿರುತ್ತದೆ ಎಂಬುದೇ ಗ್ರಂಥದ ಸಾರವು.

4. ಆಭಾಸಾಶ್ರಯವಾಗಿರುವ ಸಂಸಾರವು ಆತ್ಮನಿಗೆ ಇಲ್ಲ ಎಂಬುದು ನ್ಯಾಯವಾಗಿದೆ.

ಆತ್ಮಾನಃ ಚೈತನ್ಯಮಾತ್ರಸ್ವರೂಪಾಃ ನಿರ್ಗುಣಾಃ ನಿರತಿಶಯಾಶ್ಚ। ತದರ್ಥಂ ಸಾಧಾರಣಂ ಪ್ರಧಾನಮ್. ತನ್ನಿಮಿತ್ತಾ ಏಷಾಂ ಭೋಗಾಪವರ್ಗಸಿದ್ಧಿಃ ಇತಿ ಸಾಂಖ್ಯಾಃ। ಸತಿ ಬಹುತ್ವೇ ವಿಭುತ್ವೇ ಚ ಘಟಕುಡ್ಯಾದಿಸಮಾನಾ ದ್ರವ್ಯಮಾತ್ರಸ್ವರೂಪಾಃ ಸ್ವತೋಽಚೇತನಾಃ ಆತ್ಮಾನಃ ತದುಪಕರಣಾನಿ ಚ ಅಣೂನಿ ಮನಾಂಸಿ ಅಚೇತನಾನಿ। ತತ್ರ ಆತ್ಮದ್ರವ್ಯಾಣಾಂ ಮನೋದ್ರವ್ಯಾಣಾಂ ಚ ಸಂಯೋಗಾತ್ ನವ ಇಚ್ಛಾದಯಃ ವೈಶೇಷಿಕಾಃ ಆತ್ಮಗುಣಾಃ ಉತ್ಪದ್ಯನ್ತೇ। ತೇ ಚ ಅವ್ಯತಿಕರೇಣ ಪ್ರತ್ಯೇಕಮ್ ಆತ್ಮಸು ಸಮವಯನ್ತಿ। ಸ ಸಂಸಾರಃ। ತೇಷಾಂ ನವಾನಾಮ್ ಆತ್ಮಗುಣಾನಾಮ್ ಅತ್ಯನ್ತಾನುತ್ಪಾದೋ ಮೋಕ್ಷಃ ಇತಿ ಕಾಣಾದಾಃ। ತತ್ರ ಸಾಂಖ್ಯಾನಾಂ ತಾವತ್ ಚೈತನ್ಯಸ್ವರೂಪತ್ವಾತ್ ಸರ್ವಾತ್ಮನಾಂ ಸಂನಿಧಾನಾದ್ಯವಿಶೇಷಾಚ್ಚ ಏಕಸ್ಯ ಸುಖದುಃಖಸಂಬನ್ಧೇ ಸರ್ವೇಷಾಂ ಸುಖದುಃಖಸಂಬನ್ಧಃ ಪ್ರಾಪ್ನೋತಿ। ಸ್ಯಾದೇತತ್। ಪ್ರಧಾನಪ್ರವೃತ್ತೇಃ ಪುರುಷಕೈವಲ್ಯಾರ್ಥತ್ವಾತ್ ವ್ಯವಸ್ಥಾ ಭವಿಷ್ಯತಿ। ಅನ್ಯಥಾ ಹಿ ಸ್ವವಿಭೂತಿಖ್ಯಾಪನಾರ್ಥಾ ಪ್ರಧಾನಪ್ರವೃತ್ತಿಃ ಸ್ಯಾತ್। ತಥಾ ಚ ಅನಿರ್ಮೋಕ್ಷಃ ಪ್ರಸಜ್ಯೇತ ಇತಿ। ನೈತತ್ ಸಾರಮ್। ನ ಹಿ ಅಭಿಲಷಿತಸಿದ್ಧಿನಿಬನ್ಧನಾ ವ್ಯವಸ್ಥಾ ಶಕ್ಯಾ ವಿಜ್ಞಾತುಮ್। ಉಪಪತ್ತ್ಯಾ ತು ಕಯಾಚಿತ್ ವ್ಯವಸ್ಥಾ ಉಚ್ಯೇತ। ಅಸತ್ಯಾಂ ಪುನರುಪಪತ್ತೌ ಕಾಮಂ ಮಾಭೂತ್ ಅಭಿಲಷಿತಂ ಪುರುಷಕೈವಲ್ಯಮ್। ಪ್ರಾಪ್ನೋತಿ ತು ವ್ಯವಸ್ಥಾಹೇತ್ವಭಾವಾತ್ ವ್ಯತಿಕರಃ। ಕಾಣಾದಾನಾಮಪಿ ಯದಾ ಏಕೇನಾತ್ಮನಾ ಮನಃ ಸಂಯುಜ್ಯತೇ ತದಾ ಆತ್ಮಾನ್ತರೈರಪಿ ನಾನ್ತರೀಯಕಃ ಸಂಯೋಗಃ ಸ್ಯಾತ್ ಸಂನಿಧಾನಾದ್ಯವಿಶೇಷಾತ್। ತತಶ್ಚ ಹೇತ್ವವಿಶೇಷಾತ್ ಫಲಾವಿಶೇಷಃ ಇತಿ ಏಕಸ್ಯಾತ್ಮನಃ ಸುಖದುಃಖಯೋಗೇ ಸರ್ವಾತ್ಮನಾಮಪಿ ಸಮಾನಂ ಸುಖದುಃಖಿತ್ವಂ ಪ್ರಸಜ್ಯೇತ ॥

(ಭಾಷ್ಯಾರ್ಥ)

ಆವರೆ ಯಾರ ಮತದಲ್ಲಿ ಆತ್ಮರುಗಳು ಅನೇಕರೋ, ಮತ್ತು ಅವರೆಲ್ಲರೂ ಸರ್ವಗತರಾಗಿರುವರೋ ಅವರ (ಮತದಲ್ಲಿಯೇ) ಈ ಸಂಕರವು ಬಂದೊದಗುತ್ತದೆ. ಹೇಗೆ? ಎಂದರೆ ಆತ್ಮರು ಅನೇಕರು, ವಿಭುವಾಗಿರುತ್ತಾರೆ, ಚೈತನ್ಯಮಾತ್ರಸ್ವರೂಪರು, ನಿರ್ಗುಣರು, ನಿರತಿಶಯರು[1]; ಅವರಿಗಾಗಿ ಕೆಲಸ ಮಾಡುವ ಪ್ರಧಾನವು (ಎಲ್ಲರಿಗೂ) ಸಮಾನವಾಗಿರುತ್ತದೆ, ಅದರ ನಿಮಿತ್ತದಿಂದ ಅವರಿಗೆ ಭೋಗಾಪವರ್ಗಗಳು ಸಿದ್ಧಿಯಾಗುತ್ತವೆ ಎಂದು **ಸಾಂಖ್ಯರು** (ಹೇಳುತ್ತಾರೆ). (ತಮ್ಮಲ್ಲಿ) ಬಹುತ್ವವೂ ವಿಭುತ್ವವೂ ಇದ್ದರೂ

---

1. ಚಿನ್ಮಾತ್ರಸ್ವರೂಪವಾಗಿರುವವರಿಂದ ಅವರಲ್ಲಿ ಒಬ್ಬರಿಗಿಂತ ಒಬ್ಬರಲ್ಲಿ ಯಾವ ಅತಿಶಯವೂ ಇರುವದಿಲ್ಲ.

ಆತ್ಮರುಗಳು ಗಡಿಗೆ, ಗೋಡೆ ಮುಂತಾದವುಗಳಿಗೆ ಸಮಾನರಾಗಿ ದ್ರವ್ಯಮಾತ್ರ ಸ್ವರೂಪರಾಗಿ ಸ್ವತಃ ಅಚೇತನರಾಗಿರುತ್ತಾರೆ; ಮತ್ತು ಅವರಿಗೆ ಉಪಕರಣವಾಗಿರುವ ಅಣುಪರಿಮಾಣದ ಮನಸ್ಸುಗಳೂ ಅಚೇತನವಾಗಿರುತ್ತವೆ. ಇಲ್ಲಿ ಆತ್ಮದ್ರವ್ಯಗಳಿಗೂ ಮನೋದ್ರವ್ಯಗಳಿಗೂ ಆಗುವ ಸಂಯೋಗದಿಂದ ಇಚ್ಛೆಯೇ ಮುಂತಾದ **ಒಂಬತ್ತು ವೈಶೇಷಿಕಗುಣಗಳು**[1] ಉಂಟಾಗುತ್ತವೆ. ಅವುಗಳು ಆತ್ಮರುಗಳಲ್ಲಿ ಒಬ್ಬೊಬ್ಬರಲ್ಲಿಯೂ ಸಮವಾಯ(ಸಂಬಂಧದಿಂದ) ಸೇರಿಕೊಂಡಿರುತ್ತವೆ, ಅದೇ ಸಂಸಾರವು; ಆ ಒಂಬತ್ತು ಆತ್ಮಗುಣಗಳು ಅತ್ಯಂತವಾಗಿ ಉಂಟಾಗದಿರುವದೇ ಮೋಕ್ಷವು ಎಂದು **ಕಾಣಾದರು** (ಹೇಳುತ್ತಾರೆ)[2].

ಇವರಲ್ಲಿ ಮೊದಲನೆಯದಾಗಿ ಸಾಂಖ್ಯರ (ಮತದಲ್ಲಿ) ಆತ್ಮರುಗಳೆಲ್ಲರೂ ಚೈತನ್ಯಸ್ವರೂಪರಾಗಿರುವದರಿಂದಲೂ ಎಲ್ಲಾ ಆತ್ಮರುಗಳಿಗೂ ಸಂನಿಧಾನವೇ ಮುಂತಾದದ್ದು[3] ಸಮಾನವಾಗಿರುವದರಿಂದಲೂ ಒಬ್ಬನಿಗೆ ಸುಖದುಃಖಗಳ ಸಂಬಂಧವಾದರೆ ಎಲ್ಲರಿಗೂ ಸುಖದುಃಖಗಳ ಸಂಬಂಧವು ಬಂದೊದಗುತ್ತದೆ. (ಇಲ್ಲಿ) ಪ್ರಧಾನದ ಪ್ರವೃತ್ತಿಯು ಪುರುಷನಿಗೆ ಕೈವಲ್ಯ(ವನ್ನುಂಟುಮಾಡುವ) ಪ್ರಯೋಜನಕ್ಕಾಗಿ ಆಗುತ್ತಿರುವದರಿಂದ (ಸುಖದುಃಖ)ವ್ಯವಸ್ಥೆಯಾಗಬಹುದು; ಏಕೆಂದರೆ ಹಾಗಿಲ್ಲದಿದ್ದರೆ ತನ್ನ ವಿಭೂತಿಗಳನ್ನು ತೋರಿಸಿಕೊಳ್ಳುವದಕ್ಕಾಗಿಯೇ ಪ್ರಧಾನಪ್ರವೃತ್ತಿ ಎಂದಾಗುವದು[4]. ಹಾಗಿಲ್ಲದಿದ್ದರೆ ಮೋಕ್ಷವೇ ಇಲ್ಲವೆಂಬ ಪ್ರಸಂಗವು ಬಂದೀತು– ಎಂಬುದು (ಸಾಂಖ್ಯನ ಮತ)ವಾಗಿರಬಹುದು. ಆದರೆ ಇದು ಸಾರವಲ್ಲ. ಏಕೆಂದರೆ **ಇಷ್ಟಾರ್ಥಸಿದ್ಧಿಯು ನಿಮಿತ್ತದಿಂದ ವ್ಯವಸ್ಥೆಯನ್ನು ನಿಶ್ಚಯಿಸುವದು ಆಗಲಾರದು**[5] ಯಾವದಾದರೊಂದು ಉಪಪತ್ತಿಯಿಂದಲಾದರೆ ವ್ಯವಸ್ಥೆಯನ್ನು ಹೇಳಬಹುದು. ಆದರೆ ಉಪಪತ್ತಿಯು ಇಲ್ಲವಾದರೆ (ನಿಮಗೆ) ಇಷ್ಟವಾಗಿರುವ ಪುರುಷಕೈವಲ್ಯವು ಆಗದೆ ವ್ಯವಸ್ಥೆಗೆ ಹೇತುವಿಲ್ಲದ್ದರಿಂದ ಸಂಕರವು ಆಗಿಯೇ ಆಗುತ್ತದೆ.

---

1. ಜ್ಞಾನ, ಸುಖದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ –ಎಂಬಿವು.

2. ಸಾಂಖ್ಯವೈಶೇಷಿಕರು ಅದ್ವೈತಿಗಳಿಗೆ ಮುಖ್ಯಪ್ರತಿವಾದಿಗಳು; ಅವರ ಮತದಲ್ಲಿಯೇ ಈ ಸಾಂಕರ್ಯವುಂಟಾಗುತ್ತದೆ. ಆದ್ದರಿಂದ ಅವರ ಯುಕ್ತಿಯು ಆಭಾಸಮಾತ್ರವಾಗಿದೆ ಎಂದು ಇಲ್ಲಿಂದ ಮುಂದಕ್ಕೆ ತೋರಿಸುತ್ತಾರೆ. ಈ ಭಾಗದ ಭಾಷ್ಯದ ಅಭಿಪ್ರಾಯವು ಸೂತ್ರದ ಚಕಾರದಿಂದ ಸೂಚಿತವಾಗಿದೆ ಎಂದು ವ್ಯಾಖ್ಯಾನಕಾರರ ಮತ.

3. ಮುಂತಾದದ್ದು ಎಂದರೆ ಎಲ್ಲಾ ಪುರುಷರೂ ಉದಾಸೀನರಾಗಿರುವದು.

4. ನ್ಯಾ. ವಾ. ೪–೧–೨೧, ಪುಟ ೪೬೩ ನೋಡಿ.

5. ಮೋಕ್ಷವು ಆಗಬೇಕು ಎಂಬುದು ಸಾಂಖ್ಯರ ಅಭಿಲಾಷೆ; ಆ ಇಷ್ಟದ ಸಿದ್ಧಿಗಾಗಿ ವ್ಯವಸ್ಥೆಯನ್ನು ಕಲ್ಪಿಸುವದು ಯುಕ್ತವಲ್ಲ. ವ್ಯವಸ್ಥೆಯೂ ಇಲ್ಲ, ಕೈವಲ್ಯವೂ ಇಲ್ಲ ಎಂಬೇಕೆ ಆಗಬಾರದು? –ಎಂದು ಸಿದ್ಧಾಂತಿಯ ಆಕ್ಷೇಪ.

**ಕಾಣಾದ**ರಿಗಾದರೂ ಯಾವಾಗ ಒಬ್ಬ ಆತ್ಮನೊಡನೆ ಮನಸ್ಸು ಸಂಯುಕ್ತವಾಗುತ್ತದೆಯೋ ಆಗ ಬೇರೆಯ ಆತ್ಮರೊಡನೆಯೂ ತಪ್ಪದೆ ಸಂಯೋಗವು ಆಗಿಯೇ ತೀರುವದು; ಏಕೆಂದರೆ ಸಂನಿಧಾನವೇ ಮುಂತಾದದ್ದು[1] ಸಮಾನವಾಗಿರುತ್ತದೆ. ಆದ್ದರಿಂದಲೇ ಹೇತುಗಳು ಸಮಾನವಾಗಿರುವದರಿಂದ ಫಲವೂ (ಎಲ್ಲಾ ಆರ್ಥಗಳಿಗೂ) ಸಮಾನವಾಗಿರಬೇಕು. ಆದ್ದರಿಂದ ಒಬ್ಬ ಆತ್ಮನಿಗೆ ಸುಖದುಃಖಸಂಬಂಧವುಂಟಾದರೆ ಎಲ್ಲಾ ಆತ್ಮರಿಗೂ ಸಮಾನವಾಗಿಯೇ ಸುಖದುಃಖಗಳು ಪ್ರಸಕ್ತವಾಗುವವು.

**ಅದೃಷ್ಟಾನಿಯಮಾತ್ ॥ ೫೧ ॥**

೫೧. ಅದೃಷ್ಟವು ಗೊತ್ತಾಗಿರುವದಿಲ್ಲವಾದ್ದರಿಂದ(ಲೂ ಹೀಗೆ).

## ಜೀವರುಗಳಿಗೆ ಬೇರೆಬೇರೆಯ ಅದೃಷ್ಟವು ಸಿದ್ಧವಾಗಿಲ್ಲ

(ಭಾಷ್ಯ)

೧೭೦. ಸ್ಯಾದೇತತ್ । ಅದೃಷ್ಟನಿಮಿತ್ತೋ ನಿಯಮೋ ಭವಿಷ್ಯತಿ ಇತಿ । ನ ಇತ್ಯಾಹ– (ಅದೃಷ್ಟಾನಿಯಮಾತ್ ।) ಬಹುಷು ಆತ್ಮಸು ಆಕಾಶವತ್ ಸರ್ವಗತೇಷು ಪ್ರತಿಶರೀರಂ ಬಾಹ್ಯಾಭ್ಯನ್ತರಾವಿಶೇಷೇಣ ಸಂನಿಹಿತೇಷು ಮನೋವಾಕ್ಕಾಯೈಃ ಧರ್ಮಾಧರ್ಮಲಕ್ಷಣಮ್ ಅದೃಷ್ಟಮ್ ಉಪಾರ್ಜ್ಯತೇ। ಸಾಂಖ್ಯಾನಾಂ ತಾವತ್ ತತ್ ಅನಾತ್ಮಸಮವಾಯಿ ಪ್ರಧಾನವರ್ತಿ ಪ್ರಧಾನಸಾಧಾರಣ್ಯಾತ್ ನ ಪ್ರತ್ಯಾತ್ಮಂ ಸುಖದುಃಖೋಪಭೋಗಸ್ಯ ನಿಯಾಮಕಮ್ ಉಪಪದ್ಯತೇ । ಕಾಣಾದಾನಾಮಪಿ ಪೂರ್ವವತ್ ಸಾಧಾರಣೇನ ಆತ್ಮಮನಃಸಂಯೋಗೇನ ನಿರ್ವರ್ತಿತಸ್ಯ ಅದೃಷ್ಟಸ್ಯಾಪಿ ಅಸ್ಯೈವ ಆತ್ಮನಃ ಇದಮ್ ಅದೃಷ್ಟಮ್ ಇತಿ ನಿಯಮೇ ಹೇತ್ವಭಾವಾದೇಷ ಏವ ದೋಷಃ ॥

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಮತವು) ಇದಾಗಿರಬಹುದು: ಅದೃಷ್ಟನಿಮಿತ್ತದಿಂದ ನಿಯಮವು ಆಗಬಹುದು (ಎಂದು ಅವನೆನ್ನಬಹುದು). (ಆದರೆ) ಇದು ಸರಿಯಲ್ಲ ಎಂದು (ಸೂತ್ರಕಾರರು) ಹೇಳುತ್ತಾರೆ: (ಅದೃಷ್ಟಾನಿಯಮಾತ್) । ಅನೇಕ ಆತ್ಮರು ಆಕಾಶದಂತೆ ಸರ್ವಗತರಾಗಿರುವಲ್ಲಿ ಒಂದೊಂದು ಶರೀರಕ್ಕೂ ಹೊರಗೂ ಒಳಗೂ ಸಮಾನವಾಗಿಯೇ ಸಂನಿಹಿತರಾಗಿರುವದರಿಂದ (ಅವರು) ಮನೋವಾಕ್ಕಾಯಗಳಿಂದ ಧರ್ಮಾಧರ್ಮಗಳೆಂಬ ಅದೃಷ್ಟವನ್ನು ಸಂಪಾದಿಸಿಕೊಳ್ಳುತ್ತಾರೆ. ಮೊದಲನೆಯದಾಗಿ ಸಾಂಖ್ಯರ ಮತದಲ್ಲಿ ಆ (ಅದೃಷ್ಟವು) ಅನಾತ್ಮಸಂಬಂಧಿಯಾಗಿ ಪ್ರಧಾನದಲ್ಲಿರುತ್ತದೆಯಾದ್ದರಿಂದ ಪ್ರಧಾನವು ಎಲ್ಲರಿ

1. ಸಂಯೋಗಿದ್ರವ್ಯವಾಗಿರುವದು, ಅಚೇತನವಾಗಿರುವದು– ಮುಂತಾದದ್ದು.

ಗೂ ಸಮಾನವಾಗಿರುವದರಿಂದ ಒಬ್ಬೊಬ್ಬ ಆತ್ಮನಿಗೂ (ಇಂಥಿಂಥ) ಸುಖ ದುಃಖಭೋಗವೆಂದು ಗೊತ್ತುಪಡಿಸುವ (ಕಾರಣ)ವಾಗಲಾರದು. **ಕಾಣಾದರ** (ಮತ)ದಲ್ಲಿಯೂ ಮೊದಲು ಹೇಳಿರುವಂತೆ ಸಮಾನವಾಗಿಯೇ ಇರುವ ಆತ್ಮಮನಃಸಂಯೋಗದಿಂದ ಉಂಟಾಗಿರುವ ಅದೃಷ್ಟವೂ "ಈ ಆತ್ಮನದೇ ಈ ಅದೃಷ್ಟವು" ಎಂಬ ನಿಯಮಕ್ಕೆ ಕಾರಣವಿಲ್ಲದಿರುವದರಿಂದಲೇ ಈ ದೋಷವು (ಬರುತ್ತದೆ).

**ಅಭಿಸನ್ಧ್ಯಾದಿಷು ಚೈವಮ್ ॥ ೫೨ ॥**

೫೨. ಅಭಿಸಂಧ್ಯಾದಿಗಳಲ್ಲಿಯೂ ಹೀಗೆಯೇ (ಅವ್ಯವಸ್ಥೆ)

## ಅಭಿಸಂಧಿಯೇ ಮುಂತಾದದ್ದು ನಿಯಾಮಕವಲ್ಲ

(ಭಾಷ್ಯ)

೧೭೧. ಸ್ಯಾದೇತತ್ । "ಅಹಮಿದಂ ಫಲಂ ಪ್ರಾಪ್ನವಾನಿ, ಇದಂ ಪರಿಹರಾಣಿ, ಇತ್ಥಂ ಪ್ರಯತ್ನೈ, ಇತ್ಥಂ ಕರವಾಣಿ– ಇತ್ಯೇವಂವಿಧಾ ಅಭಿಸಂಧ್ಯಾದಯಃ ಪ್ರತ್ಯಾತ್ಮಂ ಪ್ರವರ್ತಮಾನಾಃ ಅದೃಷ್ಟಸ್ಯ ಆತ್ಮನಾಂ ಚ ಸ್ವಸ್ವಾಮಿಭಾವಂ ನಿಯಂಸ್ಯನ್ತಿ ಇತಿ । ನೇತ್ಯಾಹ– (ಅಭಿಸಂಧ್ಯಾದಿಷ್ವಪಿ ಚೈವಮ್), ಅಭಿಸಂಧ್ಯಾದೀನಾಮಪಿ ಸಾಧಾರಣೇನ್ಯೈವ ಆತ್ಮಮನಃಸಂಯೋಗೇನ ಸರ್ವಾತ್ಮಸಂನಿಧೌ ಕ್ರಿಯಮಾಣಾನಾಂ ನಿಯಮಹೇತುತ್ವಾನುಪಪತ್ತೇಃ ಉಕ್ತದೋಷಾನುಷಙ್ಗ ಏವ ॥

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಮತವು) ಇದ್ದಾಗಿರಬಹುದು: "ನನಗೆ ಇಂಥ ಫಲವು ಸಿಕ್ಕಬೇಕು, ಇದನ್ನು ತಪ್ಪಿಸಿಕೊಳ್ಳಬೇಕು. (ನಾನು) ಹೀಗೆ ಪ್ರಯತ್ನಿಸಬೇಕು", "ಹೀಗೆ ಮಾಡಬೇಕು" ಎಂಬೀ ಬಗೆಯ ಅಭಿಸಂಧಿಯೇ ಮುಂತಾದವುಗಳು ಒಬ್ಬೊಬ್ಬ ಆತ್ಮನಲ್ಲಿಯೂ ಆಗುತ್ತಿರುವದರಿಂದ ಅದೃಷ್ಟಕ್ಕೂ ಆತ್ಮರುಗಳಿಗೂ ಸ್ವಸ್ವಾಮಿಭಾವವನ್ನು ಗೊತ್ತುಪಡಿಸಬಹುದಲ್ಲ! (ಇದು) ಸರಿಯಲ್ಲ ಎಂದು (ಸೂತ್ರಕಾರರು) ಹೇಳುತ್ತಾರೆ. (ಅಭಿಸಂಧ್ಯಾದಿಷ್ವಪಿ ಚೈವಮ್)। ಅಭಿಸಂಧಿಯೇ ಮುಂತಾದವುಗಳೂ ಸಮಾನವಾಗಿರುವ ಆತ್ಮಮನಃಸಂಯೋಗದಿಂದ ಎಲ್ಲಾ ಆತ್ಮರುಗಳ ಸಂನಿಧಿಯಲ್ಲಿಯೂ ಆಗುವದರಿಂದ (ಸುಖದುಃಖಗಳನ್ನು) ಗೊತ್ತುಪಡಿಸುವದಕ್ಕೆ ಹೇತುವಾಗಲಾರವಾದ್ದರಿಂದ (ಈ ಮೇಲೆ) ಹೇಳಿದ ದೋಷವು ಅಂಟಿಕೊಂಡೇ ಇರುತ್ತದೆ.[1]

1. ಇಚ್ಛೆ, ಸಂಕಲ್ಪ, ಪ್ರಯತ್ನ– ಮುಂತಾದವು ಒಬ್ಬೊಬ್ಬರಿಗೆ ಒಂದೊಂದು ಬೇರೆಬೇರೆ, ಆದ್ದರಿಂದ ಅವರವರ ಕರ್ಮಕ್ಕೆ ಆಗುವ ಸುಖದುಃಖಗಳು ಅವರವರಿಗೆ ಎಂದು ಗೊತ್ತುಮಾಡಬಹುದು –ಎಂಬ ಪೂರ್ವಪಕ್ಷಕ್ಕೆ ಸಮಾಧಾನವಿದು.

**ಪ್ರದೇಶಾದಿತಿ ಚೇನ್ನಾನ್ತರ್ಭಾವಾತ್ ॥ ೫೩ ॥**

೫೩. ಪ್ರದೇಶದಿಂದ (ವ್ಯವಸ್ಥೆಯಾಗಬಹುದಲ್ಲ !) ಎಂದರೆ ಹಾಗಲ್ಲ ; ಏಕೆಂದರೆ ಅಂತರ್ಭಾವ(ವಾಗುತ್ತದೆ).

## ಭೋಗಕ್ಕೆ ಪ್ರದೇಶವನ್ನು ಕಲ್ಪಿಸುವದಕ್ಕೂ ಆಗುವದಿಲ್ಲ

(ಭಾಷ್ಯ)

೧೭೨. ಅಥೋಚ್ಯೇತ– ವಿಭುತ್ವೇಽಪಿ ಆತ್ಮನಃ ಶರೀರಪ್ರತಿಷ್ಠೇನ ಮನಸಾ ಸಂಯೋಗಃ ಶರೀರಾವಚ್ಛಿನ್ನೇ ಏವ ಆತ್ಮಪ್ರದೇಶೇ ಭವಿಷ್ಯತಿ । ಅತಃ ಪ್ರದೇಶಕೃತಾ ವ್ಯವಸ್ಥಾ ಅಭಿಸಂಧ್ಯಾದೀನಾಮ್ ಅದೃಷ್ಟಸ್ಯ ಸುಖ ದುಃಖಯೋಶ್ಚ ಭವಿಷ್ಯತಿ ಇತಿ। ತದಪಿ ನೋಪಪದ್ಯತೇ । ಕಸ್ಮಾತ್ ? ಅನ್ತ ರ್ಭಾವಾತ್ । ವಿಭುತ್ವಾವಿಶೇಷಾದ್ ಹಿ ಸರ್ವ ಏವ ಆತ್ಮಾನಃ ಸರ್ವಶರೀರೇಷು ಅನ್ತರ್ಭವನ್ತಿ । ತತ್ರ ನ ವೈಶೇಷಿಕೈಃ ಶರೀರಾವಚ್ಛಿನ್ನೋಽಪಿ ಆತ್ಮನಃ ಪ್ರದೇಶಃ ಕಲ್ಪಯಿತುಂ ಶಕ್ಯಃ । ಕಲ್ಪ್ಯಮಾನೋಽಪಿ ಅಯಂ ನಿಷ್ಪ್ರದೇಶಸ್ಯ ಆತ್ಮನಃ ಪ್ರದೇಶಃ ಕಾಲ್ಪನಿಕತ್ವಾದೇವ ನ ಪಾರಮಾರ್ಥಿಕಂ ಕಾರ್ಯಂ ನಿಯನ್ತುಂ ಶಕ್ನೋತಿ । ಶರೀರಮಪಿ ಸರ್ವಾತ್ಮಸಂನಿಧೌ ಉತ್ಪದ್ಯಮಾನಮ್ ಅಸ್ಯೈವ ಆತ್ಮನಃ ನೇತರೇಷಾಮ್ ಇತಿ ನಿಯನ್ತುಂ ಶಕ್ಯಮ್ । ಪ್ರದೇಶ ವಿಶೇಷಾಭ್ಯುಪಗಮೇಽಪಿ ಚ ದ್ವಯೋರಾತ್ಮನೋಃ ಸಮಾನಸುಖದುಃಖ ಭಾಜೋಃ ಕದಾಚಿತ್ ಏಕೇನೈವ ತಾವತ್ ಶರೀರೇಣ ಉಪಭೋಗಸಿದ್ಧಿಃ ಸ್ಯಾತ್ । ಸಮಾನಪ್ರದೇಶಸ್ಯಾಪಿ ದ್ವಯೋರಾತ್ಮನೋಃ ಅದೃಷ್ಟಸ್ಯ ಸಂಭ ವಾತ್ । ತಥಾ ಹಿ– ದೇವದತ್ತಃ ಯಸ್ಮಿನ್ ಪ್ರದೇಶೇ ಸುಖದುಃಖಮ್ ಅನ್ವಭೂತ್ ತಸ್ಮಾತ್ ಪ್ರದೇಶಾತ್ ಅಪಕ್ರಾನ್ತೇ ತಚ್ಛರೀರೇ ಯಜ್ಞದತ್ತ ಶರೀರೇ ಚ ತಂ ಪ್ರದೇಶಮ್ ಅನುಪ್ರಾಪ್ತೇ ತಸ್ಯಾಪಿ ಇತರೇಣ ಸಮಾನಃ ಸುಖ ದುಃಖಾನುಭವೋ ದೃಶ್ಯತೇ। ಸ ನ ಸ್ಯಾತ್ ಯದಿ ದೇವದತ್ತಯಜ್ಞದತ್ತಯೋಃ ಸಮಾನಪ್ರದೇಶಮ್ ಅದೃಷ್ಟಂ ನ ಸ್ಯಾತ್ । ಸ್ವರ್ಗಾದ್ಯನುಪಭೋಗಪ್ರಸಙ್ಗಶ್ಚ ಪ್ರದೇಶವಾದಿನಃ ಸ್ಯಾತ್ । ಬ್ರಾಹ್ಮಣಾದಿಶರೀರಪ್ರದೇಶೇಷು ಅದೃಷ್ಟನಿಷ್ಪತ್ತೇಃ ಪ್ರದೇಶಾನ್ತರವರ್ತಿತ್ವಾಚ್ಚ ಸ್ವರ್ಗಾದ್ಯುಪಭೋಗಸ್ಯ । ಸರ್ವಗತತ್ವಾನುಪಪತ್ತಿಶ್ಚ ಬಹೂನಾಮ್ ಆತ್ಮನಾಮ್ । ದೃಷ್ಟಾನ್ತಾಭಾವಾತ್ । ವದ ತಾವತ್ ತ್ವಂ ಕೇ ಬಹವಃ ಸಮಾನಪ್ರದೇಶಾಶ್ಚ ಇತಿ । ರೂಪಾದಯಃ ಇತಿ ಚೇತ್ । ನ । ತೇಷಾಮಪಿ ಧರ್ಮ್ಯಂಶೇನ ಅಭೇದಾತ್ ಲಕ್ಷಣಭೇದಾಚ್ಚ । ನ ತು ಬಹೂ ನಾಮ್ ಆತ್ಮನಾಂ ಲಕ್ಷಣಭೇದೋಽಸ್ತಿ । ಅನ್ತ್ಯವಿಶೇಷಕಲ್ಪನಾಯಾಶ್ಚ ಇತರೇತರಾಶ್ರಯತ್ವಾತ್ । ಆಕಾಶಾದೀನಾಮಪಿ ವಿಭುತ್ವಂ ಬ್ರಹ್ಮವಾದಿನ

ಅಸಿದ್ಧಮ್ । ಕಾರ್ಯತ್ವಾಭ್ಯುಪಗಮಾತ್ । ತಸ್ಮಾತ್ ಆತ್ಮೈಕಪಕ್ಷೇ ಏವ ಸರ್ವದೋಷಾಭಾವಃ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಇನ್ನು (ಪೂರ್ವಪಕ್ಷಿಯು) ಹೀಗೆನ್ನಬಹುದು : ಆತ್ಮನು ವಿಭುವಾದರೂ ಶರೀರದಲ್ಲಿರುವ ಮನಸ್ಸಿನೊಡನೆ ಆಗುವ ಸಂಯೋಗವು ಶರೀರಾವಚ್ಛಿನ್ನವಾದ ಆತ್ಮಪ್ರದೇಶದಲ್ಲಿಯೇ ಆಗುತ್ತದೆ. ಆದ್ದರಿಂದ ಪ್ರದೇಶದಿಂದಾದ ವ್ಯವಸ್ಥೆಯು ಅಭಿಸಂಧ್ಯಾದಿಗಳಿಗೂ ಅದೃಷ್ಟಕ್ಕೂ ಸುಖದುಃಖಗಳಿಗೂ ಆಗಬಹುದು.[1]

ಅದೂ ಯುಕ್ತವಾಗುವದಿಲ್ಲ. ಏಕೆ ? ಎಂದರೆ ಅಂತರ್ಭಾವವಾಗುವದರಿಂದ (ಇದರ ವಿವರ) : ವಿಭುವಾಗಿರುವದೆಂಬುದು (ಎಲ್ಲಾ ಆತ್ಮರುಗಳಿಗೂ) ಸಮಾನವಾಗಿರುವದರಿಂದ ಎಲ್ಲಾ ಆತ್ಮರುಗಳೂ ಎಲ್ಲಾ ಶರೀರಗಳಲ್ಲಿಯೂ ಒಳಗಿರುತ್ತಾರೆ.[2] ಹೀಗಿರುವಲ್ಲಿ ಆತ್ಮನಿಗೆ ಶರೀರಾವಚ್ಛಿನ್ನವಾದ ಪ್ರದೇಶವನ್ನು ಕಲ್ಪಿಸುವದೂ **ವೈಶೇಷಿಕರಿಗೆ** ಆಗುವಂತಿಲ್ಲ. ಪ್ರದೇಶರಹಿತನಾದ ಆತ್ಮನಿಗೆ **(ಒಂದಾನೊಂದು) ಪ್ರದೇಶವನ್ನು ಕಲ್ಪಿಸಿದರೂ (ಅದು) ಕಾಲ್ಪನಿಕವಾಗಿರುವದರಿಂದಲೇ ಪಾರಮಾರ್ಥಿಕವಾದ ಕಾರ್ಯವನ್ನು ಗೊತ್ತುಪಡಿಸಲಾರದು.**[3] ಶರೀರವೂ ಎಲ್ಲಾ ಆತ್ಮರುಗಳ ಸಂನಿಧಿಯಲ್ಲಿ ಉಂಟಾಗುವದರಿಂದ (ಇದು) ಈ ಆತ್ಮನದೇ ಮಿಕ್ಕವರದ್ದಲ್ಲ —ಎಂದು ಗೊತ್ತುಪಡಿಸುವದಕ್ಕೆ ಆಗುವದಿಲ್ಲ. (ಒಂದಾನೊಂದು) ಪ್ರದೇಶವನ್ನು ಒಪ್ಪಿದರೂ ಮೊದಲನೆಯದಾಗಿ ಸಮಾನಸುಖದುಃಖಗಳನ್ನು ಹೊಂದುವ ಇಬ್ಬರು ಆತ್ಮರುಗಳಿಗೆ ಒಂದೊಂದು ವೇಳೆ ಒಂದೇ ಶರೀರದಿಂದಲೇ ಉಪಭೋಗವು ಸಿದ್ಧವಾದರೂ ಆಗಬಹುದಾಗುವದು ; ಏಕೆಂದರೆ ಇಬ್ಬರು ಆತ್ಮರುಗಳಿಗೂ ಒಂದೇ ಪ್ರದೇಶದಲ್ಲಿಯೇ ಅದೃಷ್ಟವು ಇರಬಹುದಾಗುವದು. ಹೇಗೆಂದರೆ, ದೇವದತ್ತನು ಯಾವ ಪ್ರದೇಶದಲ್ಲಿ ಸುಖದುಃಖಗಳನ್ನು ಅನುಭವಿಸಿರುವನೋ ಆ ಪ್ರದೇಶದಿಂದ ಅವನ ಶರೀರವು ಅತ್ತಸರಿದರೆ, ಬಳಿಕ ಯಜ್ಞದತ್ತನ ಶರೀರವು ಆ ಪ್ರದೇಶಕ್ಕೆ ಬಂದರೆ ಅವನಿಗೂ (ಆ) ಇನ್ನೊಬ್ಬ(ನಾದ ದೇವದತ್ತನಿಗೆ,

1. ಒಂದೊಂದು ಮನಸ್ಸು ಒಂದೊಂದು ಶರೀರದಲ್ಲಿರುತ್ತದೆ ; ಆ ಮನಸ್ಸಿನೊಡನೆ ಆಗುವ ಸಂಯೋಗವು ಘಟಾವಚ್ಛಿನ್ನಾಕಾಶದಂತೆ ಆಯಾ ಶರೀರಕ್ಕೇ ಕಟ್ಟುಬಿದ್ದಿರುತ್ತದೆ. ಆದ್ದರಿಂದ ಈ ಶರೀರದಲ್ಲಿರುವ ಮನಸ್ಸಿನ ಸಂಯೋಗದಿಂದಾದ ಸುಖದುಃಖಗಳು ಈ ಶರೀರಪ್ರದೇಶದಲ್ಲಿಯೇ ಆಗುತ್ತವೆ. ಸಂಯೋಗವು ಎಲ್ಲಿ ಆಗುವದೋ ಅಲ್ಲಿಯೇ ಸುಖದುಃಖಗಳಾಗುವವು ಎಂದು ಕಲ್ಪಿಸುತ್ತೇವೆ ಎಂದರ್ಥ.

2. ಪ್ರತಿಯೊಬ್ಬ ಆತ್ಮನಿಗೂ ಪ್ರತಿಯೊಂದು ಶರೀರದಲ್ಲಿಯೂ ಮನಃಸಂಯೋಗವಾಗಬಹುದಾಗಿದೆ.

3. ಪ್ರದೇಶವಿಲ್ಲದಿದ್ದರೂ ಇದೆ ಎಂದು ಕಲ್ಪಿಸಿದಮಾತ್ರದಿಂದ ಸತ್ಯವಾದ ಸುಖದುಃಖಭೋಗದ ವ್ಯವಸ್ಥೆಯಾಗಲಾರದು.

ಸಮಾನವಾದ ಸುಖದುಃಖಗಳ ಅನುಭವವಾಗುವದು ಕಂಡುಬರುತ್ತದೆ: ದೇವದತ್ತಯಜ್ಞದತ್ತರುಗಳಿಗೆ ಸಮಾನಪ್ರದೇಶವಲ್ಲಿಯೇ ಅದೃಷ್ಟ ಇಲ್ಲವಾದರೆ ಅದು ಆಗಬಾರದಾಗುವದು ಪ್ರದೇಶವಾದಿಯಾದ (ವೈಶೇಷಿಕನ ಮತದಲ್ಲಿ) ಸ್ವರ್ಗಾದಿಗಳ ಉಪಭೋಗವಾಗಬಾರದೆಂಬ ಪ್ರಸಕ್ತಿಯೂ ಉಂಟಾಗುವದು. ಏಕೆಂದರೆ (ಅವನ ಮತದಲ್ಲಿ) ಬ್ರಾಹ್ಮಣಶರೀರವೇ ಮುಂತಾದ (ಶರೀರಗಳಲ್ಲಿ) ಅದೃಷ್ಟವು ಉಂಟಾಗುತ್ತದೆ, ಪ್ರದೇಶಾಂತರದಲ್ಲಿ ಸ್ವರ್ಗಾದಿಗಳ ಉಪಭೋಗವಾಗುತ್ತದೆ. **ಅನೇಕರು ಆತ್ಮರುಗಳು ಸರ್ವಗತರೆಂಬುದೂ ಹೊಂದುವದಿಲ್ಲ; ಏಕೆಂದರೆ (ಅದಕ್ಕೆ) ದೃಷ್ಟಾಂತವೇ ಇರುವದಿಲ್ಲ.**[1] ಮೊದಲನೆಯದಾಗಿ ಸಮಾನಪ್ರದೇಶದಲ್ಲಿಯೂ ಇದ್ದು ಬಹುವಾಗಿಯೂ ಇರುವ (ಪದಾರ್ಥಗಳು) ಯಾವವು ಹೇಳು, (ನೋಡೋಣ).[2]

(ವೈಶೇಷಿಕ) :– ರೂಪಾದಿಗಳು (ಅಂಥ ಪದಾರ್ಥಗಳು).[3]

(ಸಿದ್ಧಾಂತಿ) :– ಹಾಗಲ್ಲ. ಏಕೆಂದರೆ ಅವು ಧರ್ಮ್ಯಂಶಕ್ಕಿಂತ ಭಿನ್ನವಲ್ಲ, (ಅವುಗಳಿಗೆ) ಲಕ್ಷಣಭೇದವೂ ಇದೆ. ಆದರೆ ಬಹು(ಸಂಖ್ಯಾಕರಾಗಿರುವ) ಆತ್ಮರುಗಳಿಗೆ (ಹಾಗೆ) ಲಕ್ಷಣಭೇದವು ಇರುವದಿಲ್ಲ.[4]

(ವೈಶೇಷಿಕ) :– ಅಂತ್ಯವಿಶೇಷಗಳ ವಶದಿಂದ ಭೇದವಿರಬಹುದಲ್ಲ![5]

---

1. ಅನೇಕವಾಗಿರುವ ವಸ್ತುಗಳು ಪರಸ್ಪರಪರಿಚ್ಛಿನ್ನವಾಗಿರುವದೇ ಕಂಡಿದೆ. ಸರ್ವಗತವಾಗಿರುವದು ಕಂಡಿಲ್ಲ. ಎಲ್ಲವೂ ಸರ್ವಗತವೆಂದರೆ ಬಹುತ್ವವಿರುವ ಹಾಗೇ ಇಲ್ಲ. ಎಲ್ಲವೂ ಒಂದೇ ಆಗಿಬಿಡಬೇಕು.

2. ವಿಭುವಾಗಿರುವ ಅನೇಕ ಆತ್ಮರುಗಳು ಒಂದೇ ಪ್ರದೇಶದಲ್ಲಿರುತ್ತಾರೆಂಬುದರಲ್ಲಿ ಬಹು ಆತ್ಮರು ವಿಭುವಾಗಿರುತ್ತಾರೆಂಬುದು ಹಾಗಿರಲಿ, ಅನೇಕ ಪದಾರ್ಥಗಳು ಸಮಾನಪ್ರದೇಶದಲ್ಲಿರಬಹುದೆಂಬುದಕ್ಕೇ ದೃಷ್ಟಾಂತವಿಲ್ಲ.

3. ಬಹುವಾಗಿರುವ ರೂಪರಸಾದಿಗಳು ಒಂದೇ ಪದಾರ್ಥದಲ್ಲಿರುವದಿಲ್ಲವೆ? ಹಾಗೆ ಬಹುಪದಾರ್ಥಗಳು ಸಮಾನಪ್ರದೇಶದಲ್ಲಿರಬಹುದು ಎಂದು ಅಭಿಪ್ರಾಯ.

4. ರೂಪಾದಿಗಳು ಘಟಾದಿಗಳಲ್ಲಿರುವ ಗುಣಗಳು ಎಂಬುದೇ ಸರಿಯಲ್ಲ; ಏಕೆಂದರೆ ರೂಪವೆಂದರೆ ಧರ್ಮಿಯಾದ ತೇಜಸ್ಸೇ, ರಸವೆಂದರೆ ಧರ್ಮಿಯಾದ ಜಲವೇ. ಘಟವೆಂಬುದು ಅವುಗಳಿಗಿಂತ ಭಿನ್ನವಾಗಿರುವ ಧರ್ಮಿ ಎಂಬುದಕ್ಕೆ ಪ್ರಮಾಣವೇ ಇಲ್ಲ. ಇದೂ ಅಲ್ಲದೆ ರೂಪದ ಸ್ವಭಾವಕ್ಕಿಂತ ರಸದ ಸ್ವಭಾವವು ಬೇರೆ ಎಂದು ರೂಪಾದಿಗಳಿಗೆ ಲಕ್ಷಣಭೇದವಿದೆ, ಆತ್ಮರುಗಳಿಗೆ ಹೀಗೆ ಲಕ್ಷಣಭೇದವೂ ಇಲ್ಲ.

5. ಆತ್ಮರುಗಳು ನಿತ್ಯದ್ರವ್ಯವಾಗಿರುವದರಿಂದ ಒಬ್ಬೊಬ್ಬ ಆತ್ಮನನ್ನು ಮಿಕ್ಕವರಿಂದ ಬೇರ್ಪಡಿಸುವ **ಅಂತ್ಯವಿಶೇಷಗಳು** ಎಂಬ ಭೇದಕಪದಾರ್ಥಗಳಿವೆ ಎಂದು ವೈಶೇಷಿಕನು ಹೇಳುತ್ತಾನೆ.

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ ಭೇದಕಲ್ಪನೆಗೂ ಅಂತ್ಯವಿಶೇಷಗಳ ಕಲ್ಪನೆಗೂ ಅನ್ಯೋನ್ಯಾಶ್ರಯವಿರುತ್ತದೆ.[1] ಆಕಾಶಾದಿಗಳು ವಿಭುವಾಗಿವೆ ಎಂಬುದೂ ಬ್ರಹ್ಮವಾದಿಯ ಮತದಲ್ಲಿ ಸಿದ್ಧವಲ್ಲ; ಏಕೆಂದರೆ (ಅವು) ಕಾರ್ಯವೆಂದು (ಅವನು) ಒಪ್ಪಿರುತ್ತಾನೆ.[2]

ಆದ್ದರಿಂದ[3] ಆತ್ಮೈಕತ್ವಪಕ್ಷದಲ್ಲಿಯೇ ಯಾವ ದೋಷವೂ ಇರುವದಿಲ್ಲ ಎಂದು ಸಿದ್ಧವಾಯಿತು.

———o———

1. ಆತ್ಮರ ಬಹುತ್ವವು ಸಿದ್ಧವಾದರೆ ಅಂತ್ಯವಿಶೇಷಗಳು ಸಿದ್ಧವಾಗುತ್ತವೆ, ಭೇದಕವಾದ ಅಂತ್ಯವಿಶೇಷಗಳು ಸಿದ್ಧವಾದರೆ ಆತ್ಮರು ಬೇರೆಬೇರೆಯಿರುವರೆಂಬುದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯವಿದೆ.

2. ಆಕಾಶಾದಿಗಳು ಕಾರ್ಯವೆಂದು ೨-೩-೭ರಲ್ಲಿ ತೋರಿಸಿಕೊಟ್ಟಿದೆ; ಕಾರ್ಯವು ಪರಿಚ್ಛಿನ್ನವಾಗಿರುವದರಿಂದ ವಿಭುವಲ್ಲ. ಆದ್ದರಿಂದ ಆಕಾಶಾದಿ ದೃಷ್ಟಾಂತದಿಂದ ಅನೇಕಾತ್ಮರು ವಿಭುಗಳಾಗಿರುವರೆಂದು ಸಾಧಿಸುವದಕ್ಕಾಗಲಾರದು.

3. ಸರ್ವಗತರಾದ ಆತ್ಮರು ಅನೇಕರು ಇರುತ್ತಾರೆಂಬವರ ಮತದಲ್ಲಿ ಹೀಗೆ ಕರ್ಮಫಲಗಳು ಸಂಕರವಾಗುವದರಿಂದ ಎಂದರ್ಥ.

ಆತ್ಮಸಮವಾಯಿಯಾದ ಅದೃಷ್ಟವು ಒಬ್ಬೊಬ್ಬ ಆತ್ಮನಿಗೂ ಅಸಾಧಾರಣವಾಗಿರುತ್ತದೆ. ಅದರಿಂದಾಗಿರುವ ಆತ್ಮಮನಸ್ಸುಗಳ ಸ್ವಸ್ವಾಮಿಭಾವಸಂಬಂಧವು ಅನಾದಿಯಾಗಿರುತ್ತದೆ. ಏಕೆಂದರೆ ಅದೃಷ್ಟಗಳೂ ಅನಾದಿಯೇ ಆಗಿರುತ್ತವೆ. ಆದ್ದರಿಂದ ಆತ್ಮಮನಸ್ಸಂಯೋಗವು ಸಾಧಾರಣವೆಂದು ಒಪ್ಪಿದರೂ ಸ್ವಸ್ವಾಮಿಭಾವವು ಅಸಾಧಾರಣವಾಗಿರುವದರಿಂದ ಅಭಿಸಂಧ್ಯಾದಿಗಳ ವ್ಯವಸ್ಥೆಯಾಗಬಹುದು. ನಿಜವಾಗಿ ಸಂಯೋಗವೂ ಸಾಧಾರಣವಲ್ಲ; ಏಕೆಂದರೆ ಸ್ವಾಮಿಯಾದ ಒಬ್ಬ ಆತ್ಮನೊಡನೆ ಆಗುವ ಮನಃಸಂಯೋಗವು ಬೇರೆ ಮಿಕ್ಕ ಆತ್ಮರುಗಳೊಡನೆ ಆಗುವ ಮನಃಸಂಯೋಗವೇ ಬೇರೆ- ಎಂದು ವೈಶೇಷಿಕರು ಹೇಳಬಹುದಾಗಿದೆ. ಆದರೆ ಆಗಮಸಿದ್ಧವಾಗಿರುವ ಆತ್ಮೈಕತ್ವಪಕ್ಷವನ್ನು ಬಿಟ್ಟು ತದ್ವಿರುದ್ಧವಾದ ಆತ್ಮಭೇದಕಲ್ಪನೆಯನ್ನು ಮಾಡಿರುವರು ಅಪ್ರಾಮಾಣಿಕ; ಅಂತ್ಯವಿಶೇಷಕಲ್ಪನೆಯೂ ಅಸಿದ್ಧ- ಎಂಬುದಿಷ್ಟೇ ವೈಶೇಷಿಕರ ದೂಷಣೆ, ಮಿಕ್ಕವೆಲ್ಲ ಸಾಂಖ್ಯರ ದೂಷಣೆ- ಎಂದು ಭಾಮತೀವ್ಯಾಖ್ಯಾನದಲ್ಲಿದೆ. ಆದರೆ 'ಅನಾದಿ' ಎಂದು ಕರೆದಮಾತ್ರದಿಂದ ಅದೃಷ್ಟದ ನಿಯಮವೇ ಮುಂತಾದವು ಸಿದ್ಧವಾಗುವದಿಲ್ಲವಾಗಿ ಭಾಷ್ಯಕಾರರ ಖಂಡನೆಯು ಕಾಣಾದರಿಗೂ ಅವಶ್ಯವಾಗಿ ಅನ್ವಯಿಸುತ್ತದೆ ಎಂದು ನಮಗೆ ತೋರುತ್ತದೆ. ಆತ್ಮನಾನಾತ್ವವನ್ನು ಆಗಮವಿರುದ್ಧವಾಗಿ ಅಂಗೀಕರಿಸಿರುವದು ಪ್ರಧಾನದ ಪಾರಾರ್ಥ್ಯಕ್ಕೆ ಅವಶ್ಯವಿಲ್ಲವಾದ್ದರಿಂದ ಆತ್ಮೈಕ್ಯವನ್ನೊಪ್ಪದಿರುವದಷ್ಟೇ ದೂಷಣವು ಸಾಂಖ್ಯರಿಗೂ ಅನ್ವಯಿಸುವದೆಂದು ಭಾಮತೀಕಾರರ ದೃಷ್ಟಿಯಿಂದ ವಾದಿಸುವದಕ್ಕೂ ಬರುತ್ತದೆ; ಏಕೆಂದರೆ ಆತ್ಮನಿಗೆ ಸುಖದುಃಖಾದಿಗಳು ನಿಜವಾಗಿರುವವೆಂಬುದನ್ನು ಅವರೂ ಒಪ್ಪುವದಿಲ್ಲ. ಸಾಂ. ಕಾ. ಭಾ. ೩-೫ನ್ನು ನೋಡಿ.

# ಅಧಿಕರಣಗಳ ಸಾರ

ಈ ಪಾದದಲ್ಲಿ ಪಂಚಭೂತಜೀವರುಗಳ ವಿಷಯಕವಾದ ಶ್ರುತಿಗಳಲ್ಲಿ ಯಾವ ವಿರೋಧವೂ ಇಲ್ಲವೆಂಬುದನ್ನು ತಿಳಿಸಲಾಗುತ್ತದೆ.

## ೧. ವಿಯದಧಿಕರಣ

**ಸಂಶಯ :–** ಆಕಾಶಕ್ಕೆ ಉತ್ಪತ್ತಿಯುಂಟೋ, ಇಲ್ಲವೊ ?

**ಪೂರ್ವಪಕ್ಷ :–** ಆಕಾಶಕ್ಕೆ ಉತ್ಪತ್ತಿಯನ್ನು ಶ್ರುತಿಯಲ್ಲಿ ಹೇಳಿಲ್ಲ, ಆದ್ದರಿಂದ ಆಕಾಶಕ್ಕೆ ಉತ್ಪತ್ತಿಯಿಲ್ಲ. ಆದ್ದರಿಂದ ಅದ್ವೈತಹಾನಿಯಾಯಿತು. ಅಥವಾ ಆಕಾಶಕ್ಕೆ ಉತ್ಪತ್ತಿಯನ್ನು ತೈತ್ತಿರೀಯದಲ್ಲಿ ಹೇಳಿದೆ ; ಛಾಂದೋಗ್ಯದಲ್ಲಿ ಹೇಳಿಲ್ಲ. ಆದ್ದರಿಂದ ಶ್ರುತಿಗಳು ಪರಸ್ಪರವಿರುದ್ಧವಾಗಿವೆ.

**ಸಿದ್ಧಾಂತ್ಯೇಕದೇಶಿಯ ಮತ :** ಆಕಾಶಕ್ಕೆ ಉತ್ಪತ್ತಿಯಿದೆ ಎಂಬುದು ವೈಶೇಷಿಕರ ತರ್ಕಕ್ಕೆ ವಿರುದ್ಧ. ಆಕಾಶವು ಅಮೃತವೆಂದು ಶ್ರುತಿಯಲ್ಲಿ ಹೇಳಿರುವದರಿಂದ ಅದಕ್ಕೆ ಉತ್ಪತ್ತಿಯು ಹೊಂದುವದಿಲ್ಲ. ಆದ್ದರಿಂದ ಆಕಾಶದ ಉತ್ಪತ್ತಿಯು ಗೌಣವೇ. ಬ್ರಹ್ಮವು ಏಕವು, ಅದ್ವಿತೀಯವು, ಎಂಬ ಶ್ರುತಿಯ ಅರ್ಥವನ್ನು ಕಾರ್ಯಾಪೇಕ್ಷೆಯಿಂದ ಒಂದು, ಮತ್ತೊಬ್ಬ ಅಧಿಷ್ಠಾತೃವಿಲ್ಲದ್ದರಿಂದ ಅದ್ವಿತೀಯ –ಎಂದು ಮಾಡಿಕೊಳ್ಳಬೇಕು. ಬ್ರಹ್ಮವನ್ನು ಅರಿತರೆ ಎಲ್ಲವನ್ನೂ ಅರಿತಂತಾಗುವದೆಂಬ ಪ್ರತಿಜ್ಞೆಯು ಹಾಲನ್ನು ಅರಿತರೆ ಅದರಲ್ಲಿ ಬೆರೆತಿರುವ ಸ್ವಲ್ಪ ನೀರನ್ನೂ ಅರಿತಂತೆ ಎಂಬಂತೆ ಆಗಬಹುದು.

**ಸಿದ್ಧಾಂತ :** ಒಂದನ್ನು ಅರಿತರೆ ಎಲ್ಲವನ್ನೂ ಅರಿತದ್ದಾಗುವದೆಂಬ ಪ್ರತಿಜ್ಞೆಯು ಮುಖ್ಯಾರ್ಥದಲ್ಲಿ ಹೊಂದುವದಕ್ಕಾಗಿ ಆಕಾಶಕ್ಕೆ ಮುಖ್ಯೋತ್ಪತ್ತಿಯನ್ನೇ ಸ್ವೀಕರಿಸಬೇಕು. ತೈತ್ತಿರೀಯಶ್ರುತಿಗೆ ಛಾಂದೋಗ್ಯವು ವಿರುದ್ಧವಲ್ಲ ; ಏಕೆಂದರೆ ಛಾಂದೋಗ್ಯಶ್ರುತಿಯನ್ನು ಆಕಾಶವಾಯುಗಳ ಉತ್ಪತ್ತಿಯಾದ ಬಳಿಕ ತೇಜಸ್ಸಿನ ಸೃಷ್ಟಿಯಾಯಿತು ಎಂದು ನಯಿಸಬಹುದು. ಹಾಲುನೀರುಗಳ ಜ್ಞಾನದಂತೆ ಸರ್ವವಿಜ್ಞಾನವೆಂಬುದು ಯುಕ್ತವಲ್ಲ ; ಏಕೆಂದರೆ ನಿರ್ದುಷ್ಟವಾದ ಶ್ರುತಿಯನ್ನು ಆಗ ಅಯಥಾರ್ಥವಾದಿ ಎಂದು ಕಲ್ಪಿಸಬೇಕಾಗುತ್ತದೆ. ವಿಭಕ್ತವಾದದ್ದು ಕಾರ್ಯ ಎಂಬ ಯುಕ್ತಿಗೆ ವಿರುದ್ಧವಾಗಿರುವ ತಾರ್ಕಿಕಯುಕ್ತಿಯು ಆಭಾಸಮಾತ್ರವಾಗಿದೆ. ಆದ್ದರಿಂದ ಆಕಾಶವು ಬ್ರಹ್ಮಕಾರ್ಯವೇ. ಅದ್ವೈತಸಿದ್ಧಾಂತಕ್ಕೆ ಯಾವ ವಿರೋಧವೂ ಇಲ್ಲ.

## ೨. ಮಾತರಿಶ್ವಾಧಿಕರಣ

**ಸಂಶಯ :** ವಾಯುವು ಉತ್ಪನ್ನವಾಗುತ್ತದೆಯೊ, ಇಲ್ಲವೆ ?

**ಪೂರ್ವಪಕ್ಷ :** ಆಕಾಶದಂತೆಯೇ ಇಲ್ಲಿಯೂ ಪೂರ್ವಪಕ್ಷಗಳು. ಛಾಂದೋಗ್ಯದಲ್ಲಿ ಹೇಳಿಲ್ಲವಾದ್ದರಿಂದ ಉತ್ಪತ್ತಿಯಿಲ್ಲ ಎಂಬುದು ಒಂದು ಪಕ್ಷ : ತೈತ್ತಿರೀಯದಲ್ಲಿ ಉತ್ಪತ್ತಿಯನ್ನು ಹೇಳಿರುವದರಿಂದ ಶ್ರುತಿಗಳೆರಡಕ್ಕೂ ವಿರೋಧವೆಂಬುದು ಮತ್ತೊಂದು ಪಕ್ಷ.

**ಸಿದ್ಧಾಂತ್ಯೇಕದೇಶಿಯ ಮತ :** 'ವಾಯುವಿಗೆ ಅಸ್ತಮಯವಿಲ್ಲ, ಅದು ಅಮೃತವು' ಎಂದು ಶ್ರುತಿಯಿದೆ. ಆದ್ದರಿಂದ ವಾಯುವಿಗೆ ಮುಖ್ಯೋತ್ಪತ್ತಿಯಿಲ್ಲ, ಶ್ರುತಿಯು ಗೌಣವೇ.

**ಸಿದ್ಧಾಂತ :** ಪ್ರತಿಜ್ಞೆಗೆ ವಿರೋಧವಿಲ್ಲದಿರುವದಕ್ಕಾಗಿಯೂ ವಿಭಕ್ತವಾದದ್ದು 'ಕಾರ್ಯವಾಗಿರಬೇಕೆಂಬ ಯುಕ್ತಿಗೆ ಹೊಂದುವದಕ್ಕಾಗಿಯೂ ಉತ್ಪತ್ತಿಯನ್ನು ಒಪ್ಪಬೇಕು

ಈ ಅಧಿಕರಣದಲ್ಲಿ ಹಿಂದಿನ ಅಧಿಕರಣದ ಯುಕ್ತಿಗಳನ್ನೇ ಅತಿದೇಶ ಮಾಡಿದೆ. ಶ್ರುತಿಯಲ್ಲಿ ವಾಯುವಿಗೆ ಉತ್ಪತ್ತಿಯಿಲ್ಲವೋ ಎಂಬಂತೆ ಹೇಳಿರುವದರಿಂದ ವಾಯುವಿಗೆ ಉತ್ಪತ್ತಿಯಿಲ್ಲವೆಂಬ ಶಂಕೆ ಯಾರಿಗಾದರೂ ಉಂಟಾದೀತು ಎಂದು ಬೇರೊಂದು ಅಧಿಕರಣದಿಂದ ಶಂಕೆಯನ್ನು ಪರಿಹರಿಸಿದೆ.

## ೩. ಅಸಂಭವಾಧಿಕರಣ

**ಸಂಶಯ :** ಆಕಾಶಾದಿಗಳಂತೆ ಬ್ರಹ್ಮಕ್ಕೂ ಉತ್ಪತ್ತಿಯುಂಟೋ, ಇಲ್ಲವೊ ?

**ಪೂರ್ವಪಕ್ಷ :** ಕಾರ್ಯದಿಂದಲೇ ಕಾರ್ಯವು ಹುಟ್ಟುವದು ಕಂಡಿರುವದರಿಂದ ಆಕಾಶವು ಕೂಡ ಕಾರ್ಯವಾದ ಬ್ರಹ್ಮದಿಂದ ಹುಟ್ಟಿರಬೇಕು.

**ಸಿದ್ಧಾಂತ:** ಬ್ರಹ್ಮವು ಸನ್ಮಾತ್ರವು. ಸನ್ಮಾತ್ರವು ತನ್ನಿಂದಲಾಗಲಿ ಸದ್ವಿಶೇಷದಿಂದಾಗಲಿ ಹುಟ್ಟಿದೆ ಎಂದು ಕಲ್ಪಿಸುವದಕ್ಕೆ ಆಗುವದಿಲ್ಲ. ಶ್ರುತಿಯಲ್ಲಿ ಬ್ರಹ್ಮಕ್ಕೆ ಕಾರಣವಿಲ್ಲವೆಂದು ಹೇಳಿದೆ. ಎಲ್ಲವೂ ಕಾರ್ಯವೇ ಎಂದರೆ ಅನವಸ್ಥಾದೋಷವು ಬರುವದರಿಂದ ಬ್ರಹ್ಮೋತ್ಪತ್ತಿ ತರ್ಕವು ಸರಿಯಲ್ಲ. ಆದ್ದರಿಂದ ಬ್ರಹ್ಮವು ಹುಟ್ಟುವದಿಲ್ಲ.

## ೪. ತೇಜೋಧಿಕರಣ

**ಸಂಶಯ :** ಛಾಂದೋಗ್ಯದಲ್ಲಿ ತೇಜಸ್ಸು ಎಂದರೆ ಅಗ್ನಿಯು ಸದ್ಬ್ರಹ್ಮದಿಂದ ಹುಟ್ಟಿತು ಎಂದು ಹೇಳಿದೆ ; ತೈತ್ತಿರೀಯದಲ್ಲಿ ವಾಯುವಿನಿಂದ ಹುಟ್ಟಿತು ಎಂದಿದೆ. ಅಗ್ನಿಗೆ ಯಾವದು ಕಾರಣವೆಂದು ನಿಶ್ಚಯಿಸಬೇಕು?

**ಪೂರ್ವಪಕ್ಷ :** ಬ್ರಹ್ಮವೇ ಅಗ್ನಿಗೆ ಕಾರಣವು. ಏಕೆಂದರೆ 'ಸದೇವ' (ಸತ್ತೇ ಮೊದಲು ಇತ್ತು) ಎಂದು ಬ್ರಹ್ಮವನ್ನು ಹೇಳುವದಕ್ಕುಪಕ್ರಮಿಸಿ 'ಅದು ತೇಜಸ್ಸನ್ನು ಸೃಜಿಸಿತು' ಎಂದು ಹೇಳಿದೆ. ಒಂದನ್ನರಿತರೆ ಎಲ್ಲವನ್ನೂ ಅರಿತುಕೊಳ್ಳಬಹುದು –ಎಂಬ ಪ್ರತಿಜ್ಞೆಯು ಎಲ್ಲವೂ ಬ್ರಹ್ಮದಿಂದಲೇ ಆಗಿದ್ದರೆ ಹೊಂದುತ್ತದೆ. ಎಲ್ಲವೂ ಬ್ರಹ್ಮದಿಂದಲೇ ಆಯಿತೆಂದು ಮುಂಡಕದಲ್ಲಿದೆ, ತೈತ್ತಿರೀಯದಲ್ಲಿಯೂ "ಅವನು ತಪಸ್ಸನ್ನು ಮಾಡಿ ಇದೆಲ್ಲವನ್ನೂ ಸೃಜಿಸಿದನು" ಎಂದು ಹೇಳಿದೆ. ಆದ್ದರಿಂದ 'ವಾಯೋರಗ್ನಿಃ' ಎಂಬುದು ವಾಯುವಿನ ಅನಂತರದಲ್ಲಿ ಅಗ್ನಿಯುಂಟಾಯಿತು –ಎಂದು ಕ್ರಮವನ್ನು ಹೇಳುತ್ತದೆ ಎಂದು ತಿಳಿಯಬೇಕು.

**ಸಿದ್ಧಾಂತ :** 'ವಾಯೋರಗ್ನಿಃ' ಎಂದಿರುವದರಿಂದ ವಾಯುವಿನಿಂದಲೇ ಅಗ್ನಿಯುಂಟಾಯಿತೆಂದು ತಿಳಿಯಬೇಕು. "ಆತ್ಮನ ಆಕಾಶಃ ಸಂಭೂತಃ" (ಆತ್ಮನಿಂದ

ಆಕಾಶವುಂಟಾಯಿತು) ಎಂದು ಅಪಾದಾನಪಂಚಮಿಯನ್ನು ಹೇಳಿದ ಪ್ರಕರಣದಲ್ಲಿಯೇ ಈ ಪ್ರಕೃತವಾಕ್ಯವಿದೆ ; "ಪೃಥಿವಿಯಿಂದ ಗಿಡಮರಗಳು" ಎಂದು ಮುಂದಿನ ವಾಕ್ಯದಲ್ಲಿಯೂ ಅಪಾದಾನಪಂಚಮಿಯೇ ಇದೆ. ವಾಯುವಾದ ಬಳಿಕ ಅಗ್ನಿಯಾಯಿತು ಎಂದು ಉಪಪದಾರ್ಥವನ್ನು ಕಲ್ಪಿಸಬೇಕಾಗಿದೆ ; ಆದರೆ ಪಂಚಮಿ ಎಂಬ ಕಾರಕಾರ್ಥವು ಆಗಲೇ ಸಿದ್ಧವಾಗಿರುತ್ತದೆ. ಮಿಕ್ಕ ಶ್ರುತಿಗಳಲ್ಲಿ ಬ್ರಹ್ಮವೇ ಕಾರಣವೆಂದು ಹೇಳಿದ್ದರೂ ಪರಂಪರೆಯಿಂದ ಬ್ರಹ್ಮದಿಂದ ಉಂಟಾಯಿತು ಎಂದೂ ಅದಕ್ಕೆ ಅರ್ಥವನ್ನು ಮಾಡಬಹುದು. ಒಂದನ್ನು ಅರಿತರೆ ಎಲ್ಲವನ್ನೂ ಅರಿತಂತಾಗುವದೆಂಬುದು ಬ್ರಹ್ಮದಿಂದ ನೇರಾಗಿಯೇ ಹುಟ್ಟಬೇಕೆಂಬುದನ್ನೇನೂ ಬಯಸುವದಿಲ್ಲ : ಬ್ರಹ್ಮದಿಂದ ಹುಟ್ಟಿದ್ದು ಎಂಬಿಷ್ಟರಿಂದಲೇ ಅದು ಚರಿತಾರ್ಥವಾಗುವದು. ಅದ್ದರಿಂದ ವಾಯುವಿನಿಂದಲೇ ಅಗ್ನಿ ಹುಟ್ಟಿತೆಂದು ನಿಶ್ಚಯಿಸಬೇಕು.

## ೫. ಅಬಧಿಕರಣ

ಸಿದ್ಧಾಂತ : "ಆ ತೇಜಸ್ಸು ಅಪ್ಪನ್ನು ಸೃಜಿಸಿತು" "ಅಪ್ಪು ಅಗ್ನಿಯಿಂದಲೇ ಹುಟ್ಟಿತು" ಎಂದು ಶ್ರುತಿಯಿದೆ ; ಆದ್ದರಿಂದ ಇಲ್ಲಿ ಸಂಶಯವೇ ಇಲ್ಲ. ಮುಂದಿನ ಅಧಿಕರಣಕ್ಕೆ ಸಂಬಂಧಿಸುವದಕ್ಕಾಗಿ ಇದನ್ನು ಬೇರೆ ಅಧಿಕರಣವಾಗಿ ಸೂತ್ರಕಾರರು ಮಾಡಿರುತ್ತಾರೆ.

## ೬. ಪೃಥಿವ್ಯಧಿಕಾರಾಧಿಕರಣ

ಸಂಶಯ : "ಅಪ್ಪು ಅನ್ನವನ್ನು ಸೃಜಿಸಿತು" ಎಂದು ಛಾಂದೋಗ್ಯದಲ್ಲಿದೆ. ಇಲ್ಲಿ ಅನ್ನವೆಂದರೆ ಬತ್ತ, ಜವೆ –ಮುಂತಾದದ್ದೊ, ಉಣ್ಣುವ ಅನ್ನ ಮುಂತಾದದ್ದೊ ಅಥವಾ ಪೃಥಿವಿಯೊ ?

ಪೂರ್ವಪಕ್ಷ : ಬತ್ತವೇ - ಮುಂತಾದದ್ದು, ಉಣ್ಣುವ ಅನ್ನವೇ ಮುಂತಾದದ್ದು ಇಲ್ಲಿ ಅನ್ನಶಬ್ದದಿಂದ ಉಕ್ತವಾಗಿವೆ. ಏಕೆಂದರೆ ಅನ್ನಶಬ್ದಕ್ಕೆ ಇದೇ ಪ್ರಸಿದ್ಧಾರ್ಥ. ವಾಕ್ಯಶೇಷದಲ್ಲಿಯೂ "ಮಳೆಯಾದಲ್ಲಿ ಅನ್ನವು ಹೆಚ್ಚಾಗಿ ಆಗುತ್ತದೆ" ಎಂದು ಇದೆ.

ಸಿದ್ಧಾಂತ : ಇಲ್ಲಿ ಅನ್ನವೆಂದರೆ ಪೃಥಿವಿಯೇ. ಇಲ್ಲಿ ತೇಜಸ್ಸು, ಅಪ್ಪು ಎಂದು ಭೂತಗಳ ಸೃಷ್ಟಿಯನ್ನು ಹೇಳಿದೆ ; ಆ ಪ್ರಕರಣದಲ್ಲಿ ಈ ವಾಕ್ಯವಿದೆ. ಅನ್ನಕ್ಕೆ ಕಪ್ಪುರೂಪವೆಂದು ಹೇಳಿರುವದೂ ಪೃಥಿವಿಗೆ ಹೊಂದುತ್ತದೆ ; ಏಕೆಂದರೆ ಪೃಥಿವಿಯು ಬಹುಮಟ್ಟಿಗೆ ಕಪ್ಪಾಗಿರುತ್ತದೆ. ಬೃಹದಾರಣ್ಯಕಶ್ರುತಿಯಲ್ಲಿ ಅಪ್ಪಿನಿಂದ ಪೃಥಿವಿಯುಂಟಾಯಿತೆಂದು ಹೇಳಿಯೂ ಇದೆ. ಈ ಕಾರಣಗಳಿಂದ ಪ್ರಸಿದ್ಧಾರ್ಥವನ್ನು ಬಿಟ್ಟು ಪೃಥಿವಿಯನ್ನೇ ತೆಗೆದುಕೊಳ್ಳಬೇಕು. ಅನ್ನವು ಪೃಥಿವಿಯಿಂದಲೇ ಆಗುವದರಿಂದ (ವಾಕ್ಯಶೇಷದಲ್ಲಿರುವ) ಅನ್ನಶಬ್ದವೂ ತನ್ಮೂಲಕವಾಗಿ ಪೃಥಿವಿಯೇ ಹುಟ್ಟುವದೆಂಬುದನ್ನು ಸೂಚಿಸುತ್ತದೆ.

## ೭. ತದಭಿಧ್ಯಾನಾಧಿಕರಣ

ಸಂಶಯ : ಈ ಭೂತಗಳು ತಾವುತಾವೇ ತಮ್ಮತಮ್ಮ ಕಾರ್ಯಗಳನ್ನು ಸೃಜಿಸುತ್ತವೆಯೋ ಅಥವಾ ಇವುಗಳ ರೂಪದಲ್ಲಿರುವ ಪರಮೇಶ್ವರನೇ ಸೃಜಿಸುತ್ತಾನೋ ?

**ಪೂರ್ವಪಕ್ಷ :** ಈ ಭೂತಗಳು ತಾವೇ ಸೃಜಿಸುತ್ತವೆ ಏಕೆಂದರೆ ಹಾಗೆಂದು ಶ್ರುತಿ ಹೇಳುತ್ತದೆ. ಭೂತಗಳೂ ಚೇತನವೆಂದು ಶ್ರುತಿಯಿರುವದರಿಂದ ಭೂತಗಳೂ ಸೃಜಿಸಬಹುದಾಗಿವೆ.

**ಸಿದ್ಧಾಂತ :** ಆ ಪರಮೇಶ್ವರನೇ ಆಯಾ ರೂಪದಿಂದ ಇದ್ದುಕೊಂಡು ಆಯಾ ಕಾರ್ಯವನ್ನು ಸೃಜಿಸುತ್ತಾನೆ. ಏಕೆಂದರೆ ಅಧ್ಯಕ್ಷನಿಂದ ಕೂಡಿದ ಭೂತಗಳಿಗೇ ಪ್ರವೃತ್ತಿಯನ್ನು ಬೃಹದಾರಣ್ಯಕಶ್ರುತಿಯಲ್ಲಿ (೩-೭-೩), ಹೇಳಿವೆ ; ಆ ಪರಮೇಶ್ವರನೇ ಸರ್ವಾತ್ಮಭಾವವನ್ನು ಪಡೆದುಕೊಂಡನೆಂದೂ ತೈತ್ತಿರೀಯದಲ್ಲಿ (೨-೬) ಇದೆ. ಅಪ್ತೇಜಸ್ಸುಗಳಿಗೆ ಶ್ರುತಿಯಲ್ಲಿ ಈಕ್ಷಣವನ್ನು ಹೇಳಿರುವದು ಅವು ಸ್ವತಃ ಚೇತನವೆಂದೂ ತಿಳಿಸುವದಕ್ಕಲ್ಲ. ಪರಮೇಶ್ವರಾವೇಶದಿಂದ ಅವು ಆಲೋಚನೆಮಾಡಿದವೆಂದು ತಿಳಿಸುವದಕ್ಕೆ.

## ೮. ವಿಪರ್ಯಯಾಧಿಕರಣ

**ಸಂಶಯ :** ಭೂತಗಳು ಲಯವಾಗುವದಕ್ಕೆ ನಿಯತಕ್ರಮವೇ ಇಲ್ಲವೋ, ಉತ್ಪತ್ತಿಕ್ರಮದಲ್ಲಿಯೇ ಅವು ಲಯವಾಗುವವೋ, ಅಥವಾ ಅದಕ್ಕೆ ವಿಪರೀತವಾದ ಕ್ರಮದಿಂದ ಲಯವಾಗುವವೊ ?

**ಪೂರ್ವಪಕ್ಷ :** ಲಯಕ್ಕೆ ಯಾವ ನಿಯಮವೂ ಇಲ್ಲ ; ಏಕೆಂದರೆ ಹೇಗಾದರೂ ಲಯವಾಗಬಹುದು ಅಥವಾ ಉತ್ಪತ್ತಿಕ್ರಮವನ್ನು ಶ್ರುತಿಯಲ್ಲಿ ಹೇಳಿರುವದರಿಂದ ಅದೇ ಕ್ರಮವೇ ಪ್ರಲಯಕ್ಕೂ ಅನ್ವಯಿಸಬಹುದು.

**ಸಿದ್ಧಾಂತ :** ಉತ್ಪತ್ತಿಕ್ರಮಕ್ಕೆ ವಿಪರೀತವಾದ ಕ್ರಮದಲ್ಲಿಯೇ ಲಯವಾಗುತ್ತದೆ. ಇದು ಯುಕ್ತಿಗೆ ಹೊಂದುತ್ತದೆ, ಏಕೆಂದರೆ ಲೋಕದಲ್ಲಿ ಸೋಪಾನವನ್ನು ಹತ್ತಿದವನು ವಿಪರೀತಕ್ರಮದಿಂದ ಇಳಿಯುತ್ತಾನೆ ; ಕಾರ್ಯವು ತನ್ನ ಕಾರಣದಲ್ಲಿ ಲಯವಾಗುತ್ತದೆ, ಪೃಥಿವಿಯು ಅಪ್ಪಿನಲ್ಲಿ, ಅಪ್ಪು ತೇಜಸ್ಸಿನಲ್ಲಿ — ಈ ಕ್ರಮದಲ್ಲಿ ಲಯವಾಗುತ್ತದೆ ಎಂದು ಸ್ಮೃತಿಯಲ್ಲಿ ಹೇಳಿಯೂ ಇದೆ. ಉತ್ಪತ್ತಿಶ್ರುತಿಯ ಕ್ರಮವು ಪ್ರಲಯಕ್ಕೆ ಹೊಂದುವದಿಲ್ಲವಾದ್ದರಿಂದ ಅದನ್ನು ಇಲ್ಲಿ ತೆಗೆದುಕೊಳ್ಳುವದು ಸರಿಯಲ್ಲ.

## ೯. ಅಂತರಾವಿಜ್ಞಾನಾಧಿಕರಣ

**ಸಂಶಯ :** ಇಂದ್ರಿಯಗಳೊಡಗೂಡಿದ ಮನೋಬುದ್ಧಿಗಳು ಯಾವ ಕ್ರಮದಲ್ಲಿ ಉತ್ಪತ್ತಿಪ್ರಲಯಗಳನ್ನು ಅನುಭವಿಸುತ್ತವೆ ? ಅವುಗಳನ್ನು ಈ ಶಾಸ್ತ್ರದಲ್ಲಿ ನಿರ್ಣಯಿಸದೆ ಇರುವದರಿಂದ ಉತ್ಪತ್ತಿಪ್ರಲಯಗಳ ಕ್ರಮಕ್ಕೆ ಭಂಗ ಬರುವದಿಲ್ಲವೆ ?

**ಪೂರ್ವಪಕ್ಷ :** ನಿರ್ಣಯಮಾಡದೆ ಇರುವದರಿಂದ ಕ್ರಮಕ್ಕೆ ಭಂಗ ಬರುತ್ತದೆ.

**ಸಿದ್ಧಾಂತ :** ಬರುವದಿಲ್ಲ. ಕರಣಗಳು ಭೌತಿಕವೆಂಬ ಪಕ್ಷವನ್ನು ಗ್ರಹಿಸಿದರೆ ಭೂತಗಳ ಉತ್ಪತ್ತಿಪ್ರಲಯಕ್ರಮವೇ ಅವಕ್ಕೂ ಆಗುತ್ತದೆ. ಅಭೌತಿಕವೆಂದು ಇಟ್ಟುಕೊಂಡರೂ ಭೂತೋತ್ಪತ್ತಿಪ್ರಲಯಗಳ ಕ್ರಮದಲ್ಲಿ ಕರಣಗಳ ಕ್ರಮವನ್ನು ಗೊತ್ತುಪಡಿಸಿ ನಾವು ಹೇಳಿಲ್ಲವಾದ್ದರಿಂದ ಅವುಗಳ ಉತ್ಪತ್ತಿಪ್ರಲಯಕ್ರಮಕ್ಕೆ ವಿರೋಧವಿಲ್ಲ. ಶ್ರುತಿಯಲ್ಲಿ ಕೆಲವು ಕಡೆಗಳಲ್ಲಿ ಭೂತಕ್ರಮಕ್ಕಿಂತ ಬೇರೆಯಾಗಿಯೇ ಕರಣಗಳ ಉತ್ಪತ್ತಿಕ್ರಮವನ್ನು ಹೇಳಿಯೂ ಇದೆ. ಆದ್ದರಿಂದ ಭೂತಗಳ ಉತ್ಪತ್ತಿಕ್ರಮಕ್ಕೆ ಯಾವ ಭಂಗವೂ ಇಲ್ಲ.

# ೧೦. ಚರಾಚರವ್ಯಪಾಶ್ರಯಾಧಿಕರಣ

**ಸಂಶಯ :** ಜೀವನಿಗೆ ಉತ್ಪತ್ತಿ ಮತ್ತು ಮರಣವು ಇವೆಯೆ, ಇಲ್ಲವೆ ?

**ಪೂರ್ವಪಕ್ಷ :** ದೇಹಾಶ್ರಯವಾದ ಉತ್ಪತ್ತಿಪ್ರಲಯಗಳು ಜೀವನಿಗೆ ಉಂಟು. ಏಕೆಂದರೆ 'ಹುಟ್ಟಿದನು', 'ಸತ್ತನು' – ಎಂಬ ಲೋಕಪ್ರಸಿದ್ಧಿಯಿದೆ. ಜಾತಕರ್ಮಾದಿ ಸಂಸ್ಕಾರವನ್ನು ಶಾಸ್ತ್ರದಲ್ಲಿ ವಿಧಿಸಿಯೂ ಇದೆ.

**ಸಿದ್ಧಾಂತ :** ಜೀವನಿಗೆ ಜನ್ಮಮರಣಗಳಿಲ್ಲ. ಏಕೆಂದರೆ ಶರೀರಾಂತರದಲ್ಲಿ ಈ ಶರೀರದಲ್ಲಿ ಮಾಡಿದ ಕರ್ಮಫಲಗಳನ್ನು ಹೊಂದುವನೆಂಬುದು ಈ ಪಕ್ಷದಲ್ಲಿಯೇ ಹೊಂದುತ್ತದೆ. ಲೋಕಪ್ರಸಿದ್ಧಿಯು ಶರೀರೋಪಾಧಿಯಿಂದಾದ ಗೌಣವ್ಯಪದೇಶಕೃತವಾದದ್ದು.

# ೧೧. ಆತ್ಮಾಧಿಕರಣ

**ಸಂಶಯ :** ಜೀವನೂ ಆಕಾಶಾದಿಗಳಂತೆ ಬ್ರಹ್ಮದಿಂದ ಹುಟ್ಟುತ್ತಾನೊ, ಇಲ್ಲವೊ ?

**ಪೂರ್ವಪಕ್ಷ :** ಜೀವನೂ ಬ್ರಹ್ಮದಿಂದ ಹುಟ್ಟುತ್ತಾನೆನ್ನಬೇಕು. ಏಕೆಂದರೆ ಹಾಗಾದರೇ ಏಕವಿಜ್ಞಾನದಿಂದ ಸರ್ವವಿಜ್ಞಾನವಾಗುವದೆಂಬ ಶ್ರುತಿಯ ಪ್ರತಿಜ್ಞೆ ಹೊಂದುತ್ತದೆ. ಪರಮಾತ್ಮನೇ ಜೀವನೆಂಬುದು ಸರಿಯಲ್ಲ, ಏಕೆಂದರೆ ಇಬ್ಬರಿಗೂ ಲಕ್ಷಣಭೇದವಿದೆ. ವಿಭಕ್ತನಾಗಿರುವದರಿಂದ ಜೀವನು ಕಾರ್ಯವೆಂಬುದು ಯುಕ್ತಿಗೂ ಹೊಂದುತ್ತದೆ. ಕೆಲವು ಶ್ರುತಿಗಳಲ್ಲಿ ಜೀವನ ಉತ್ಪತ್ತಿಯಿಲ್ಲದಿದ್ದರೂ ಜೀವನಿಗೆ ಕಿಡಿಗಳೇ ಮುಂತಾದ ದೃಷ್ಟಾಂತದಿಂದ ಉತ್ಪತ್ತಿಯನ್ನು ಹೇಳುವ ಶ್ರುತಿಗಳೂ ಇರುವದರಿಂದ ಜೀವನಿಗೆ ಉತ್ಪತ್ತಿಯುಂಟೆಂಬುದೇ ಯುಕ್ತ.

**ಸಿದ್ಧಾಂತ :** ಜೀವನು ಹುಟ್ಟುವದಿಲ್ಲ. ಏಕೆಂದರೆ ಅದಕ್ಕೆ ಶ್ರುತಿಯಿಲ್ಲ. ಎಲ್ಲಿಯೋ ಕೆಲವು ಕಡೆ ಉತ್ಪತ್ತಿಬೋಧಕಶ್ರುತಿಯಿದ್ದರೂ ಅದು ಜೀವನು ನಿತ್ಯನು, ಅಜನು – ಎಂಬ ಶ್ರುತಿಗಳಿಗೆ ವಿರುದ್ಧವಾಗಿದೆ. ಜೀವನಿಗೆ ಉಪಾಧಿಯ ಉತ್ಪತ್ತಿಪ್ರಲಯಗಳಿಂದಲೇ ಉತ್ಪತ್ತಿಪ್ರಲಯಗಳು ಎಂದು (ಬೃ. ೪–೫–೧೩,೧೪) ಶ್ರುತಿಯಲ್ಲಿದೆ. ಬ್ರಹ್ಮವೇ ಜೀವನಾಗಿರುವದರಿಂದಲೂ ಜೀವೇಶ್ವರಲಕ್ಷಣಭೇದವು ಉಪಾಧಿನಿಮಿತ್ತವಾಗಿರುವದರಿಂದಲೂ ಏಕವಿಜ್ಞಾನದಿಂದ ಸರ್ವವಿಜ್ಞಾನವೆಂಬ ಪ್ರತಿಜ್ಞೆಗೆ ವಿರೋಧವಿಲ್ಲ, ಅನುತ್ಪತ್ತಿಶ್ರುತಿಗೂ ವಿರೋಧವಿಲ್ಲ. ಹೀಗಾದರೆ ಜೀವನಿಗೆ ಬ್ರಹ್ಮತ್ವವನ್ನುಪದೇಶಿಸುವ ಶ್ರುತಿಯೂ ಹೊಂದುತ್ತದೆ.

# ೧೨. ಜ್ಞಾಧಿಕರಣ

**ಸಂಶಯ :** ಜೀವನ ಚೈತನ್ಯವು ಸ್ವಾಭಾವಿಕವೆ, ಆಗಂತುಕವೆ ?

**ಪೂರ್ವಪಕ್ಷ :** ಆತ್ಮಮನಃಸಂಯೋಗದಿಂದ ಉಂಟಾಗುವದರಿಂದ ಚೈತನ್ಯವು ಆಗಂತುಕವು. ಜೀವನು ನಿತ್ಯಚೈತನ್ಯರೂಪನು ಎಂದರೆ ಸುಪ್ತಮೂರ್ಛಿತಾದಿಗಳಿಗೂ ಜ್ಞಾನವಿರಬೇಕಾದೀತು.

**ಸಿದ್ಧಾಂತ :** ಈ ಚೈತನ್ಯವು ಸ್ವಾಭಾವಿಕವೇ. ಜೀವನೆಂದರೆ ಬ್ರಹ್ಮವೇ. ಉಪಾಧಿಸಂಪರ್ಕದಿಂದ ಮಾತ್ರ ಬ್ರಹ್ಮವು ಜೀವನಾಗಿ ತೋರುತ್ತದೆ. ಬ್ರಹ್ಮವು ನಿತ್ಯಚೈತನ್ಯ

ಸ್ವರೂಪವೆಂದು (ಬೃ. ೩-೯-೨೮, ೪-೫-೧೩ ; ತೈ. ೨-೧-೧) ಶ್ರುತಿಗಳಲ್ಲಿ ಹೇಳಿದೆ. ವಿಜ್ಞಾನಮಯಪ್ರಕರಣದ ಶ್ರುತಿಗಳೂ ಜೀವನು ಚೈತನ್ಯರೂಪನೆಂದೇ ಹೇಳಿವೆ. ಸುಷುಪ್ತಾದಿಗಳಿಗೆ ಜ್ಞಾನವಿಲ್ಲವೆನ್ನುವದು ವಿಷಯವಿಲ್ಲದ್ದರಿಂದಲೇ ಹೊರತು ಚೈತನ್ಯವಿಲ್ಲದ್ದರಿಂದಲ್ಲ ಎಂದು ಶ್ರುತಿ (ಬೃ. ೪-೩-೨೩) ಹೇಳುತ್ತಿದೆ. ಆದ್ದರಿಂದ ಜೀವನು ನಿತ್ಯಚೈತನ್ಯಸ್ವರೂಪನೇ.

## ೧೩. ಉತ್ಕ್ರಾಂತಿಗತ್ಯಧಿಕರಣ

**ಸಂಶಯ :** ಜೀವನು ಅಣುಪರಿಮಾಣನೆ, ಮಧ್ಯಮಪರಿಮಾಣನೆ, ವಿಭುವೆ ?

**ಪೂರ್ವಪಕ್ಷ :** ಉತ್ಕ್ರಾಂತಿಗತ್ಯಾಗತಿಗಳನ್ನು ಶ್ರುತಿಯಲ್ಲಿ ಹೇಳಿವೆಯಾದ್ದರಿಂದ ಜೀವನು ಪರಿಚ್ಛಿನ್ನನೆಂದಾಗುತ್ತದೆ. ಮಧ್ಯಮಪರಿಮಾಣನೆಂಬುದು ಆರ್ಹತಪರೀಕ್ಷೆಯಲ್ಲಿ ತಿರಸ್ಕರಿಸಿರುವದರಿಂದ ಜೀವನು ಅಣುವೇ ಎಂದಾಗುತ್ತದೆ. ಶ್ರುತಿಯಲ್ಲಿ ಆತ್ಮನು ಅನಂತಪರಿಮಾಣನೆಂದು ಹೇಳಿರುವದು ಪರಮಾತ್ಮನ ವಿಷಯ. ಆತ್ಮನು ಅಣುವೆಂದೇ ಹೇಳುವ ಶ್ರುತಿಗಳೂ ಇವೆ. ದೇಹದ ಒಂದು ಭಾಗದಲ್ಲಿರುವ ಚಂದನಬಿಂದುವು, ಶರೀರದಲ್ಲೆಲ್ಲ ಆನಂದವನ್ನುಂಟುಮಾಡುವಂತೆ ಅಣುವಾಗಿರುವ ಜೀವನಿಗೂ ಶರೀರದ ಎಲ್ಲಾ ಕಡೆಯಲ್ಲಿಯೂ ಆಗುವ ಅನುಭವದ ವೇದನೆಯಾಗಬಹುದು ; ಏಕೆಂದರೆ ಆತ್ಮನು ಹೃದಯಪ್ರದೇಶದಲ್ಲಿ ಮಾತ್ರ ಇದಾನೆಂದು ಶ್ರುತಿ ಹೇಳುತ್ತದೆ. ಅಥವಾ ಇವನ ಚೈತನ್ಯಗುಣವು ಸಕಲದೇಹದಲ್ಲಿಯೂ ವ್ಯಾಪಿಸಿದೆ ಎನ್ನಬಹುದು. ಗಂಧಾದಿಗಳಂತೆ ಗುಣವು ಗುಣಿಯನ್ನು ಬಿಟ್ಟು ಬೇರೆ ದೇಶದಲ್ಲಿಯೂ ಇರಬಹುದು ; ಹಾಗೆ ಇದೆ ಎಂದು ಶ್ರುತಿಯೂ ಹೇಳುತ್ತದೆ. ಆದ್ದರಿಂದ ಜೀವನು ಅಣುವೇ.

**ಸಿದ್ಧಾಂತ :** ಜೀವನು ಬ್ರಹ್ಮವೇ ಎಂದು ಶ್ರುತಿಯಲ್ಲಿರುವದರಿಂದ ಅವನು ವಿಭುವೇ. ಅವನಿಗೆ ಆಯಾ ಪ್ರದೇಶದ ಅನುಭವವು ಅಲ್ಲಲ್ಲಿಯೇ ಆಗುವದರಿಂದಲೂ ಅವನು ವಿಭು. ಗುಣವು ಗುಣಿಯ ಪ್ರದೇಶದಲ್ಲಿಯೇ ಇರುವದರಿಂದ ಚೈತನ್ಯವು ಜೀವನ ಗುಣವೆಂಬುದು ಸರಿಯಲ್ಲ ; ಗಂಧವೂ ನಿಜವಾಗಿ ಗುಣಿಯನ್ನು ಆಶ್ರಯಿಸಿಯೇ ಇರುತ್ತದೆ. ಚೈತನ್ಯವೇ ಆತ್ಮನ ಸ್ವರೂಪವಾಗಿರುವದರಿಂದಲೂ ಅದು ಗುಣವಲ್ಲ. ಜೀವನು ಅಣು ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿರುವದು ಬುದ್ಧಿಗುಣಸಾರನಾಗಿರುವದರಿಂದ, ಅಥವಾ ಅಣುವೆಂದರೆ ಅವನ ಸ್ವರೂಪವನ್ನು ತಿಳಿಯುವದು ಕಷ್ಟ ಎಂದು ಅಭಿಪ್ರಾಯ –ಎಂದೂ ಹೇಳಬಹುದು. ಗುಣಿಗುಣವ್ಯಪದೇಶವು ಶ್ರುತಿಯಲ್ಲಿರುವ ಬುದ್ಧಿಜೀವರ ಸಂಬಂಧವನ್ನು ಹೇಳುತ್ತದೆಯೆಂದೋ ಔಪಚಾರಿಕವೆಂದೋ ತಿಳಿಯಬೇಕು. ಹೃದಯದಲ್ಲಿರುವದು, ಉತ್ಕ್ರಾಂತಿ, ಗತಿ –ಮುಂತಾದವೆಲ್ಲವೂ ಬುದ್ಧ್ಯುಪಾಧಿಯಿಂದಲೇ ಸಂಸಾರವಿರುವವರೆಗೂ ಇರುತ್ತವೆ. ಆ ಉಪಾಧಿಸಂಬಂಧವು ಅಜ್ಞಾನಕೃತವಾಗಿರುವದರಿಂದ ಆತ್ಮಜ್ಞಾನವುಂಟಾಗುವವರೆಗೂ ಸುಷುಪ್ತ್ಯಾದಿಗಳಲ್ಲಿಯೂ ಅವ್ಯಕ್ತವಾಗಿರುತ್ತದೆ. ಬುದ್ಧಿ ಎಂಬ ಉಪಾಧಿಯನ್ನು ಒಪ್ಪದೆ ಇದ್ದರೆ ಆತ್ಮನು ಯಾವಾಗಲೂ ಅರಿಯಬೇಕು, ಅಥವಾ ಅರಿಯದೆ ಇರಬೇಕು –ಎಂಬ ಅನಿಷ್ಟವು ಬಂದೊದಗುವದು. ಆದ್ದರಿಂದ ಬುದ್ಧಿ ಎಂಬ ಉಪಾಧಿಯಿದೆ. ಆ ಉಪಾಧಿಯ ಸಂಬಂಧದಿಂದ ಜೀವನನ್ನು ಅಣುವೆಂದು ಕರೆದಿದೆ ಎಂಬುದೇ ಸರಿ.

# ೧೪. ಕರ್ತ್ರಧಿಕರಣ

ಸಂಶಯ : ಜೀವನು ಕರ್ತೃವೋ, ಅಲ್ಲವೋ ?

ಪೂರ್ವಪಕ್ಷ : ಬುದ್ಧಿಯೇ ಕರ್ತೃವೆನ್ನಬಹುದು ; ಆತ್ಮನು ಭೋಕ್ತೃಮಾತ್ರವಾಗಿರುತ್ತಾನೆ –ಎಂದು ಸಾಂಖ್ಯರ ಅಭಿಪ್ರಾಯವಿದೆ. ಅದೇ ಸಾಕಾಗಿದೆ. ಜೀವನಿಗೆ ಕರ್ತೃತ್ವವು ಬೇಕಿಲ್ಲ.

ಸಿದ್ಧಾಂತ : ಶಾಸ್ತ್ರದಲ್ಲಿ ಕರ್ಮವನ್ನು ವಿಧಿಸಿರುವುದು ಸಾರ್ಥಕವಾಗುವುದಕ್ಕೆ ಜೀವನು ಕರ್ತೃವಾಗಿರಬೇಕು. ಕನಸಿನಲ್ಲಿ ಶ್ರುತಿಯು ಜೀವನಿಗೆ ವಿಹಾರವನ್ನು ಹೇಳಿರುವುದರಿಂದಲೂ ನಿದ್ರೆಗೆ ಹೋಗುವಾಗ ಕರಣಗಳ ವಿಜ್ಞಾನವನ್ನು ಒಯ್ಯುತ್ತಾನೆಂದಿರುವುದರಿಂದಲೂ ವಿಜ್ಞಾನಮಯಜೀವನು ಯಜ್ಞಾದಿಗಳನ್ನು ಮಾಡುತ್ತಾನೆಂದು ಶ್ರುತಿಯಲ್ಲಿರುವುದರಿಂದಲೂ ಜೀವನು ಕರ್ತೃವೇ. ಇಷ್ಟವನ್ನೂ ಅನಿಷ್ಟವನ್ನೂ ತನಗೆ ತಾನೇ ಮಾಡಿಕೊಳ್ಳಲಾರನಾದ್ದರಿಂದ ಜೀವನನ್ನು ಕರ್ತೃವೆನ್ನುವುದು ಹೇಗೆ ? ಎಂದು ಆಕ್ಷೇಪಿಸಬಾರದು ; ಇಷ್ಟವನ್ನೂ ಅನಿಷ್ಟವನ್ನೂ ಅರಿಯುವಂತೆಯೇ ಅವುಗಳನ್ನೂ ತನಗೆ ತಾನೇ ಮಾಡಿಕೊಳ್ಳಬಹುದು. ಬುದ್ಧಿಯೇ ಕರ್ತೃ ಎಂಬವರಿಗೆ ಕರಣಶಕ್ತಿಯನ್ನು ಬಿಟ್ಟು ಅದಕ್ಕೆ ಕರ್ತೃಶಕ್ತಿಯನ್ನೊಪ್ಪಬೇಕಾಗುವುದು. ಜೀವನು ಕರ್ತೃವಲ್ಲದಿದ್ದರೆ ಶಾಸ್ತ್ರದಲ್ಲಿ ವಿಧಿಸಿರುವ ಆತ್ಮಧ್ಯಾನವೂ ಇಲ್ಲದೆಹೋಗುವುದು. ಆದ್ದರಿಂದ ಜೀವನು ಕರ್ತೃವೇ.

# ೧೫. ತಕ್ಷಾಧಿಕರಣ

ಸಂಶಯ : ಜೀವನ ಕರ್ತೃತ್ವವು ಸ್ವಾಭಾವಿಕವೋ, ಉಪಾಧಿನಿಮಿತ್ತವೋ ?

ಪೂರ್ವಪಕ್ಷ : ಹಿಂದಿನ ಅಧಿಕರಣದಲ್ಲಿ ಹೇಳಿರುವ ಸಿದ್ಧಾಂತಯುಕ್ತಿಗಳಿಂದ ಕರ್ತೃತ್ವವು ಸ್ವಾಭಾವಿಕವೇ.

ಸಿದ್ಧಾಂತ : ಜೀವನ ಕರ್ತೃತ್ವವು ಸ್ವಾಭಾವಿಕವಲ್ಲ. ಏಕೆಂದರೆ ಅದು ಸ್ವಾಭಾವಿಕವಾದರೆ ಅದರಿಂದ ಬಿಡುಗಡೆಯಾಗಲಾರದು. ಆಗ ಮೋಕ್ಷೋಪದೇಶಶ್ರುತಿಯು ಅಪ್ರಮಾಣವಾಗುವುದು. ಶ್ರುತಿಯಲ್ಲಿ (ಬೃ. ೪–೩–೭) ಜೀವನು ಅಂತಃಕರಣವೆಂಬ ಉಪಾಧಿಯ ನಿಮಿತ್ತದಿಂದ ಕರ್ತೃವಾಗಿರುವಂತೆ ಕಾಣುತ್ತಾನೆಂದು ಹೇಳಿದೆ. ಆದ್ದರಿಂದ ಹೇಗೆ ಬಡಗಿಯು ಸಾಧನಗಳನ್ನು ಉಪಯೋಗಿಸುವಾಗ ಕರ್ತೃವಾಗಿದ್ದು ಆಯಾಸಪಟ್ಟರೂ ಅವುಗಳಿಲ್ಲದಾಗ ಸ್ವರೂಪಸ್ಥಿತಿಯಲ್ಲಿದ್ದು ಸುಖಿಯಾಗಿರುವನೋ ಹಾಗೆಯೇ ಆತ್ಮನು ಜಾಗ್ರತ್ಸ್ವಪ್ನಗಳಲ್ಲಿ ಕರಣಗಳ ಸಂಬಂಧದಿಂದ ಕರ್ತೃವೆನಿಸಿದ್ದು ಸುಷುಪ್ತ್ಯಾದಿಗಳಲ್ಲಿ ಅವುಗಳಿಲ್ಲದ್ದರಿಂದ ಸ್ವರೂಪದಲ್ಲಿದ್ದು ಆನಂದಿಯಾಗಿರುತ್ತಾನೆಂದು ನಿಶ್ಚಯಿಸಬೇಕು. ಮುಕ್ತ್ಯವಸ್ಥೆಯಲ್ಲಿ ಜ್ಞಾನದಿಂದ ಅವಿದ್ಯಾಕೃತವಾದ ಕರ್ತೃತ್ವದಿಂದ ಬಿಡುಗಡೆಹೊಂದಿ ಸ್ವರೂಪದಲ್ಲಿದ್ದುಕೊಂಡು ಸುಖಿಯಾಗಿರುತ್ತಾನೆ. ಆದ್ದರಿಂದ ಶಾಸ್ತ್ರೋಪದೇಶವೂ ಧ್ಯಾನೋಪದೇಶವೂ ಅವಿದ್ಯಾಕೃತವಾದ ಕರ್ತೃತ್ವವನ್ನು ಆಶ್ರಯಿಸಿರುತ್ತವೆ. ಸ್ವಪ್ನವಿಹಾರವು ಪಾರಮಾರ್ಥಿಕವಲ್ಲ ; ಕರಣವಿಜ್ಞಾನವನ್ನು ತೆಗೆದುಕೊಂಡು ನಿದ್ರೆಗೆ ಹೋಗುತ್ತಾನೆಂಬುದು ಕರಣವ್ಯಾಪಾರಗಳನ್ನು ಬಿಡುವುದು ಮಾತ್ರ, ವಿಜ್ಞಾನವೇ ಕರ್ತೃವೆಂದು ಶಾಸ್ತ್ರದಲ್ಲಿ ಅಧ್ಯಾರೋಪಮಾಡಿ ಆತ್ಮನು ಸ್ವತಃ ಕರ್ತೃವಲ್ಲವೆಂದೂ ಹೇಳಿಯೂ ಇದೆ. ಆದ್ದರಿಂದ ಕರ್ತೃತ್ವವು ಔಪಾಧಿಕವೇ ಸ್ವಾಭಾವಿಕವಲ್ಲ.

## ೧೬. ಪರಾಯತ್ತಾಧಿಕರಣ

ಸಂಶಯ : ಜೀವನ ಕರ್ತೃತ್ವವು ನಿರಪೇಕ್ಷವೊ, ಈಶ್ವರಾಪೇಕ್ಷವೊ ?

ಪೂರ್ವಪಕ್ಷ : ಜೀವನು ಸ್ವಯಂಕರ್ತೃವಾಗಿರುವದರಿಂದಲೂ ಕೃಷ್ಯಾದಿಗಳಲ್ಲಿ ಈಶ್ವರನ ಅಪೇಕ್ಷೆಯು ಕಂಡುಬಂದಿರುವದಿಲ್ಲವಾದ್ದರಿಂದಲೂ ಈಶ್ವರನ ಅಪೇಕ್ಷೆಯು ಅವನಿಗೆ ಬೇಕಿರುವದಿಲ್ಲ. ಜೀವನ ಕರ್ತೃತ್ವವು ಈಶ್ವರಸಾಪೇಕ್ಷವಾದರೆ ಈಶ್ವರನಿಗೆ ವೈಷಮ್ಯನೈರ್ಘೃಣ್ಯಗಳೂ ಬಂದೊದಗುತ್ತವೆ. ಆದ್ದರಿಂದ ಜೀವನಿಗೆ ನಿರಪೇಕ್ಷಕರ್ತೃತ್ವವಿದೆ.

ಸಿದ್ಧಾಂತ : ಈಶ್ವರಾಪೇಕ್ಷವಾಗಿಯೇ ಜೀವನಿಗೆ ಕರ್ತೃತ್ವವಿರುತ್ತದೆ. ಏಕೆಂದರೆ ಹಾಗೆಂದು ಶ್ರುತಿಯಿದೆ. ಜೀವನ ಪ್ರಯತ್ನವನ್ನು ಅಪೇಕ್ಷಿಸಿಯೇ ಈಶ್ವರನು ಜೀವನಿಂದ ಮಾಡಿಸುತ್ತಾನಾದ್ದರಿಂದ ಅವನಿಗೆ ವೈಷಮ್ಯಾದಿಗಳುಂಟಾಗುವದಿಲ್ಲ. ಕರ್ತೃವಾದ ಜೀವನಿಗೇ ಈಶ್ವರನು ಕಾರಯಿತೃವಾಗಿರುತ್ತಾನೆ. ಶಾಸ್ತ್ರದಲ್ಲಿ ಕಾಣಬರುವ ವಿಧಿನಿಷೇಧಗಳಿಂದ ಹೀಗೆಂದು ಗೊತ್ತಾಗುತ್ತದೆ.

## ೧೭. ಅಂಶಾಧಿಕರಣ

ಸಂಶಯ : ಜೀವೇಶ್ವರರಿಗೆ ಇರುವ ಸಂಬಂಧವು ಸ್ವಾಮಿಭೃತ್ಯಭಾವವೊ, ಬೆಂಕಿ ಕಿಡಿಗಳಿಗಿರುವಂತೆ ಅಂಶಾಂಶಿಭಾವವೊ ?

ಪೂರ್ವಪಕ್ಷ : ಇಂಥ ಸಂಬಂಧವೆಂಬ ನಿಯಮವಿಲ್ಲ. ಅಥವಾ ಈಶಿತ್ರೀಶಿತವ್ಯಭಾವವು ಸ್ವಾಮಿಭೃತ್ಯರಲ್ಲಿ ಪ್ರಸಿದ್ಧವಾಗಿರುವದರಿಂದ ಆ ಸಂಬಂಧವೇ ಎಂದು ಹೇಳಬಹುದು.

ಸಿದ್ಧಾಂತ : ಜೀವನು ಪರಮೇಶ್ವರನ ಅಂಶದಂತೆ ಇರುತ್ತಾನೆ. ಏಕೆಂದರೆ ಶ್ರುತಿಯಲ್ಲಿ ಜೀವೇಶ್ವರರು ಬೇರೆ ಎಂಬ ನಿರ್ದೇಶವಿರುತ್ತದೆ. ಅಭೇದನಿರ್ದೇಶವೂ ಇದೆ. ಭೂತಗಳು ಈ ಪರಮೇಶ್ವರನ ಪಾದವೆಂದು ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ಹೇಳಿದೆ. ಜೀವನು ಈಶ್ವರನ ಅಂಶವಾದರೂ ಜೀವನ ದುಃಖವು ಈಶ್ವರನಿಗೆ ಇಲ್ಲ; ಏಕೆಂದರೆ ಜೀವನಿಗೆ ಮಿಥ್ಯಾಭಿಮಾನದಿಂದ ದುಃಖಿತ್ವವಿರುತ್ತದೆ, ಈಶ್ವರನಿಗೆ ಮಿಥ್ಯಾಭಿಮಾನವಿಲ್ಲ. ಪ್ರಕಾಶ, ಆಕಾಶ, ಸೂರ್ಯ ಇವುಗಳಿಗೆ ಹೇಗೆ ಬೆರಳುಗಳು, ಘಟಾದಿಗಳು, ಜಲಾದಿಗಳು ಎಂಬ ಉಪಾಧಿಗಳಿಂದಾದಂತೆ ತೋರುವ ವಕ್ರತೆ, ಗಮನ, ಕಂಪನ—ಮುಂತಾದವು ನಿಜವಾಗಿಲ್ಲವೋ ಹಾಗೆಯೇ ಇದು. ಪರಮಾತ್ಮನಿಗೆ ಜೀವನ ದುಃಖವಿಲ್ಲವೆಂದು ವ್ಯಾಸಾದಿಗಳ ಸ್ಮೃತಿಯಲ್ಲಿದೆ. ಶಾಸ್ತ್ರದಲ್ಲಿರುವ ಅನುಜ್ಞಾಪರಿಹಾರಗಳು ಮಿಥ್ಯಾಜ್ಞಾನಕೃತವಾದ ದೇಹಸಂಬಂಧದಿಂದ ಜೀವರುಗಳಿಗೆ ಆಗುತ್ತವೆ. ಜೀವನು ಉಪಾಧ್ಯಧೀನನಾಗಿರುವದರಿಂದ ಕರ್ತೃಭೋಕ್ತೃವಾದ ಜೀವನಿಗೆ ಎಲ್ಲಾ ಶರೀರಗಳ ಸಂಬಂಧವಿಲ್ಲದ್ದರಿಂದಲೂ ಜೀವನು ಪರಮಾತ್ಮನ ಆಭಾಸಮಾತ್ರವಾಗಿರುವದರಿಂದಲೂ ಕರ್ಮಫಲಸಾಂಕರ್ಯವೂ ಆಗುವದಿಲ್ಲ. ಸಾಂಖ್ಯವೈಶೇಷಿಕಾದಿಗಳಿಗಾದರೆ ಅದೃಷ್ಟ, ಅಭಿಸಂಧ್ಯಾದಿಗಳು ಇವುಗಳು ಇಂಥ ಆತ್ಮನಿಗೇ ಎಂಬ ನಿಯಮವಿಲ್ಲದ್ದರಿಂದಲೂ ಆತ್ಮನಿಗೆ ಪ್ರದೇಶವಿಶೇಷವನ್ನು ಕಲ್ಪಿಸುವದಕ್ಕೆ ಬರುವಂತಿಲ್ಲವಾದ್ದರಿಂದಲೂ ಸರ್ವರಿಗೂ ಸರ್ವರ ಕರ್ಮಗಳೂ ಫಲಗಳೂ ಆಗುವವೆಂಬ ದೋಷವುಂಟು. ಈ ರೀತಿಯಲ್ಲಿ ಆತ್ಮನು ಒಬ್ಬನೇ, ಜೀವರುಗಳು ಅವನ ಆಭಾಸರೂಪವಾದ ಅಂಶಗಳು ಎಂಬುದೇ ಸರಿ.



# ಎರಡನೆಯ ಅಧ್ಯಾಯ-ನಾಲ್ಕನೆಯ ಪಾದ

## (ಪ್ರಾಣೇಂದ್ರಿಯಶ್ರುತಿಗಳ ವಿರೋಧಪರಿಹಾರ)

## ಪಾದದ ಸಂಬಂಧ

(ಭಾಷ್ಯ)

೧೭೩. ವಿಯದಾದಿವಿಷಯಃ ಶ್ರುತಿವಿಪ್ರತಿಷೇಧಸ್ತೃತೀಯೇನ ಪಾದೇನ ಪರಿಹೃತಃ । ಚತುರ್ಥೇನ ಇದಾನೀಂ ಪ್ರಾಣವಿಷಯಃ ಪರಿಹ್ರಿಯತೇ ॥

(ಭಾಷ್ಯಾರ್ಥ)

ಆಕಾಶಾದಿವಿಷಯದ ಶ್ರುತಿಗಳ ವಿರೋಧವನ್ನು ಮೂರನೆಯ ಪಾದದಲ್ಲಿ ಪರಿಹರಿಸಿದ್ದಾಯಿತು. ಈಗ ನಾಲ್ಕನೆಯ ಪಾದದಿಂದ ಪ್ರಾಣವಿಷಯವಾದ (ವಿರೋಧವನ್ನು) ಪರಿಹರಿಸಲಾಗುತ್ತದೆ.

### ೧. ಪ್ರಾಣಾಧಿಕರಣ (ಸೂ. ೧-೪)

**ತಥಾ ಪ್ರಾಣಾಃ ॥ ೧ ॥**

೧. ಪ್ರಾಣಗಳೂ ಹಾಗೆಯೇ

## ಪ್ರಾಣೋತ್ಪತ್ತಿವಿಷಯದಲ್ಲಿ ಸಂಶಯಪೂರ್ವಪಕ್ಷಗಳು

(ಭಾಷ್ಯ)

೧೭೪. ತತ್ರ ತಾವತ್ "ತತ್ತೇಜೋಽಸೃಜತ" (ಛಾಂ. ೬-೨-೩) ಇತಿ, "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧) ಇತಿ ಚೈವಮಾದಿಷು ಉತ್ಪತ್ತಿಪ್ರಕರಣೇಷು ಪ್ರಾಣಾನಾಮ್ ಉತ್ಪತ್ತಿರ್ನಾಮ್ನಾಯತೇ । ಕ್ವಚಿಚ್ಚ ಅನುತ್ಪತ್ತಿರೇವ ಏಷಾಮ್ ಆಮ್ನಾಯತೇ "ಅಸದ್ವಾ ಇದಮಗ್ರ ಆಸೀತ್ ತದಾಹುಃ ಕಿಂ ತದಸದಾಸೀದಿತ್ಯೃಷಯೋ ವಾವ ತೇಽಗ್ರೇಽಸದಾಸೀತ್ । ತದಾಹುಃ ಕೇ ತೇ ಋಷಯ ಇತಿ । ಪ್ರಾಣಾ ವಾವ ಋಷಯಃ" (ಶತ. ಬ್ರಾ. ೬-೧-೧-೧ ?) ಇತ್ಯತ್ರ ಪ್ರಾಗುತ್ಪತ್ತೇಃ ಪ್ರಾಣಾನಾಂ ಸದ್ಭಾವಶ್ರವಣಾತ್ । ಅನ್ಯತ್ರ ತು ಪ್ರಾಣಾನಾಮಪಿ ಉತ್ಪತ್ತಿಃ ಪಠ್ಯತೇ "ಯಥಾಗ್ನೇರ್ಜ್ವಲತಃ ಕ್ಷುದ್ರಾ ವಿಸ್ಫುಲಿಙ್ಗಾ ವ್ಯುಚ್ಚರನ್ತ್ಯೇವಮೇವೈತಸ್ಮಾದಾತ್ಮನಃ ಸರ್ವೇ ಪ್ರಾಣಾಃ" (ಬೃ. ೨-೧-೨೦) ಇತಿ, "ಏತಸ್ಮಾಜ್ಜಾಯತೇ

ಪ್ರಾಣೋ ಮನಃ ಸರ್ವೇನ್ದ್ರಿಯಾಣಿ ಚ" (ಮುಂ ೨-೧-೩) ಇತಿ, "ಸಪ್ತ ಪ್ರಾಣಾಃ ಪ್ರಭವನ್ತಿ ತಸ್ಮಾತ್" (ಮುಂ. ೨-೧-೮) ಇತಿ. "ಸ ಪ್ರಾಣಮ ಸೃಜತ। ಪ್ರಾಣಾಚ್ಛ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀನ್ದ್ರಿಯಂ ಮನೋಽನ್ನಮ್" (ಪ್ರ. ೬-೪) ಇತಿ ಚೈವಮಾದಿಪ್ರದೇಶೇಷು । ತತ್ರ[1] ಶ್ರುತಿ ವಿಪ್ರತಿಷೇಧಾತ್ ಅನ್ಯತರನಿರ್ಧಾರಣಕಾರಣಾನಿರೂಪಣಾಚ್ಚ ಅಪ್ರತಿಪತ್ತಿಃ ಪ್ರಾಪ್ನೋತಿ । ಅಥವಾ ಪ್ರಾಗುತ್ಪತ್ತೇಃ ಸದ್ಭಾವಶ್ರವಣಾತ್ ಗೌಣೀ ಪ್ರಾಣಾನಾಮ್ ಉತ್ಪತ್ತಿಶ್ರುತಿಃ ಇತಿ ಪ್ರಾಪ್ನೋತಿ ॥

(ಭಾಷ್ಯಾರ್ಥ)

ಇಲ್ಲಿ ಮೊದಲನೆಯದಾಗಿ "ಅದು ತೇಜಸ್ಸನ್ನು ಸೃಜಿಸಿತು" (ಛಾಂ. ೬-೨-೩) ಎಂದು ಮತ್ತು "ಆ ಈ ಆತ್ಮನಿಂದ ಆಕಾಶವು ಉಂಟಾಯಿತು" (ತೈ. ೨-೧) ಎಂಬಿವೇ ಮುಂತಾದ ಉತ್ಪತ್ತಿಪ್ರಕರಣಗಳಲ್ಲಿ ಪ್ರಾಣಗಳ ಉತ್ಪತ್ತಿಯನ್ನು ಪಠಿಸಿಲ್ಲ. ಮತ್ತು ಕೆಲವು ಕಡೆಗಳಲ್ಲಿ ಇವುಗಳಿಗೆ ಉತ್ಪತ್ತಿಯು ಇಲ್ಲವೆಂದೇ ಪಠಿತವಾಗಿರುತ್ತದೆ: "ಇದು ಮೊದಲು ಅಸತ್ತೇ ಆಗಿತ್ತು. ಇಲ್ಲಿ ಕೇಳುತ್ತಾರೆ: ಅಸತ್ತಾಗಿದ್ದದ್ದು ಯಾವದು ? ಋಷಿಗಳೇ, ಅವರು ಮೊದಲೂ ಅಸತ್ತಾಗಿದ್ದರು. ಆ ಋಷಿಗಳು ಯಾರು ? ಪ್ರಾಣಗಳೇ ಋಷಿಗಳು" (ಶತ. ಬ್ರಾ. ೬-೧-೧-೧ ?) ಎಂಬಲ್ಲಿ ಉತ್ಪತ್ತಿಗೆ ಮೊದಲೂ ಪ್ರಾಣಗಳು ಇದ್ದವು ಎಂದು ಶ್ರುತಿಯಲ್ಲಿರುವದರಿಂದ (ಉತ್ಪತ್ತಿಯಿಲ್ಲ ವೆಂದಂತಾಗಿದೆ). ಆದರೆ ಬೇರೆ ಕಡೆಯಲ್ಲಿಯೋ ಎಂದರೆ "ಹೇಗೆ ಉರಿಯುವ ಬೆಂಕಿಯಿಂದ ಸಣ್ಣ ಕಿಡಿಗಳು ಸಿಡಿದುಬರುತ್ತವೆಯೋ ಹಾಗೆಯೇ ಈ ಆತ್ಮನಿಂದ ಎಲ್ಲಾ ಪ್ರಾಣಗಳೂ (ಸಿಡಿದುಬರುತ್ತವೆ)" (ಬೃ. ೨-೧-೨೦) ಎಂದೂ "ಇವನಿಂದ ಪ್ರಾಣನೂ, ಮನಸ್ಸೂ ಸರ್ವೇಂದ್ರಿಯಗಳೂ (ಉಂಟಾಗುತ್ತವೆ)"(ಮುಂ. ೨-೧-೩) ಎಂದೂ "ಇವನಿಂದ ಏಳು ಪ್ರಾಣಗಳು ಉಂಟಾಗುತ್ತವೆ" (ಮುಂ. ೨-೧-೮) ಎಂದೂ "ಅವನು ಪ್ರಾಣವನ್ನು ಸೃಜಿಸಿದನು; ಪ್ರಾಣದಿಂದ ಶ್ರದ್ಧೆಯನ್ನು, ಆಕಾಶ, ವಾಯು, ಜ್ಯೋತಿ, ಅಪ್ಪು, ಪೃಥಿವಿ; ಇಂದ್ರಿಯ, ಮನಸ್ಸು, ಅನ್ನ (....ಇವನ್ನೂ ಸೃಜಿಸಿದನು)" (ಪ್ರ. ೬-೪) ಎಂದು ಮುಂತಾಗಿರುವ ಕಡೆಗಳಲ್ಲಿ ಪ್ರಾಣಗಳಿಗೆ ಉತ್ಪತ್ತಿಯನ್ನು ಹೇಳಿರುತ್ತದೆ.

ಇಲ್ಲಿ ಶ್ರುತಿವಿರೋಧವಿರುವದರಿಂದಲೂ ಇವುಗಳಲ್ಲಿ ಒಂದನ್ನು (ಸರಿಯೆಂದು) ನಿರ್ಧರಿಸುವದಕ್ಕೆ ಕಾರಣವಿಲ್ಲದ್ದರಿಂದಲೂ ಯಾವ (ನಿಶ್ಚಯದ)

1. 'ತತ್ರ' ಎಂದಿಷ್ಟೇ ಸಾಕಾದ್ದರಿಂದ ಅಚ್ಚಿನ ಪುಸ್ತಕದಲ್ಲಿರುವ ಮತ್ತೊಂದು 'ತತ್ರ'ವನ್ನು ಕೈಬಿಟ್ಟಿದೆ.

ಅರಿವೂ ಆಗುವವಿಲ್ಲ ಎಂದು ಬಂದೊದಗುತ್ತದೆ. ಅಥವಾ ಉತ್ಪತ್ತಿಗಿಂತ ಮುಂಚೆ ಇರುತ್ತವೆ ಎಂದು ಶ್ರುತಿಯಲ್ಲಿರುವದರಿಂದ ಪ್ರಾಣಗಳ ಉತ್ಪತ್ತಿ ಶ್ರುತಿಯು ಗೌಣ ಎಂದು ಬಂದೊದಗುತ್ತದೆ[1].

## ಸಿದ್ಧಾಂತ: ಪ್ರಾಣಗಳೂ ಆಕಾಶಾದಿಗಳಂತೆ ಹುಟ್ಟುತ್ತವೆ

(ಭಾಷ್ಯ)

೧೭೫. ಅತ ಉತ್ತರಮಿದಂ ಪಠತಿ– 'ತಥಾ ಪ್ರಾಣಾಃ' ಇತಿ । ಕಥಂ ಪುನರತ್ರ 'ತಥಾ' ಇತಿ ಅಕ್ಷರಾನುಲೋಮ್ಯಮ್? ಪ್ರಕೃತೋಪಮಾನಾಭಾವಾತ್ । ಸರ್ವಗತಾತ್ಮಬಹುತ್ವವಾದಿದೂಷಣಮ್ ಅತೀತಾನನ್ತರಪಾದಾನ್ತೇ ಪ್ರಕೃತಮ್ । ತತ್ ತಾವತ್ ನೋಪಮಾನಂ ಸಂಭವತಿ । ಸಾದೃಶ್ಯಾಭಾವಾತ್ । ಸಾದೃಶ್ಯೇ ಹಿ ಸತಿ ಉಪಮಾನಂ ಸ್ಯಾತ್ 'ಯಥಾ ಸಿಂಹಃ ತಥಾ ಬಲವರ್ಮಾ' ಇತಿ । ಅದೃಷ್ಟಸಾಮ್ಯಪ್ರತಿಪಾದನಾರ್ಥಮ್ ಇತಿ ಯದ್ಯುಚ್ಯೇತ ಯಥಾ ಅದೃಷ್ಟಸ್ಯ ಸರ್ವಾತ್ಮಸಂನಿಧೌ ಉತ್ಪದ್ಯಮಾನಸ್ಯ ಅನಿಯತತ್ವಮ್ ಏವಂ ಪ್ರಾಣಾನಾಮಪಿ ಸರ್ವಾತ್ಮನಃ ಪ್ರತಿ ಅನಿಯತತ್ವಮಿತಿ । ತದಪಿ ದೇಹಾನಿಯಮೋನೈವ ಉಕ್ತತ್ವಾತ್ ಪುನರುಕ್ತಂ ಭವೇತ್ । ನ ಚ ಜೀವೇನ ಪ್ರಾಣಾಃ ಉಪಮೀಯೇರನ್ । ಸಿದ್ಧಾನ್ತವಿರೋಧಾತ್ । ಜೀವಸ್ಯ ಹಿ ಅನುತ್ಪತ್ತಿಃ ಆಖ್ಯಾತಾ ಪ್ರಾಣಾನಾಂ ತು ಉತ್ಪತ್ತಿಃ ವ್ಯಾಚಿಖ್ಯಾಸಿತಾ ತಸ್ಮಾತ್ 'ತಥಾ' ಇತಿ ಅಸಂಬದ್ಧಮಿವ ಪ್ರತಿಭಾತಿ । ನ । ಉದಾಹರಣೋಪಾತ್ತೇನಾಪಿ ಉಪಮಾನೇನ ಸಂಬನ್ಧೋಪಪತ್ತೇಃ । ಅತ್ರ ಪ್ರಾಣೋತ್ಪತ್ತಿವಾದಿವಾಕ್ಯಜಾತಮ್ ಉದಾಹರಣಮ್– "ಏತಸ್ಮಾದಾತ್ಮನಃ ಸರ್ವೇ ಪ್ರಾಣಾಃ ಸರ್ವೇ ಲೋಕಾಃ ಸರ್ವೇ ದೇವಾಃ ಸರ್ವಾಣಿ ಭೂತಾನಿ ವ್ಯುಚ್ಚರನ್ತಿ" (ಬೃ. ೨–೧–೨೦) ಇತ್ಯೇವಂಜಾತೀಯಕಮ್ । ತತ್ರ ಯಥಾ ಲೋಕಾದಯಃ ಪರಸ್ಮಾದ್ ಬ್ರಹ್ಮಣಃ ಉತ್ಪದ್ಯನ್ತೇ ತಥಾ ಪ್ರಾಣಾ ಅಪಿ ಇತ್ಯರ್ಥಃ । ತಥಾ "ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇನ್ದ್ರಿಯಾಣಿ ಚ ಖಂ ವಾಯುಃ ಜ್ಯೋತಿರಾಪಃ ಪೃಥಿವೀವಿಶ್ವಸ್ಯ ಧಾರಿಣೀ" (ಮುಂ.೨–೧–೩) ಇತ್ಯೇವಮಾದಿಷ್ವಪಿ ಖಾದಿವತ್ ಪ್ರಾಣಾನಾಮ್ ಉತ್ಪತ್ತಿಃ ಇತಿ ದ್ರಷ್ಟವ್ಯಮ್ । ಅಥವಾ "ಪಾನವ್ಯಾಪಚ್ಚ ತದ್ವತ್" (ಜೈ ಸೂ. ೩–೪–೩೮) ಇತ್ಯೇವಮಾದಿಷು ವ್ಯವಹಿತೋಪಮಾನ

1. ಇಲ್ಲಿ ಯಾವ ನಿಶ್ಚಯವೂ ಇಲ್ಲ ಎಂಬ ಪಕ್ಷವು ಅಷ್ಟು ಮುಖ್ಯವಲ್ಲ. ಪ್ರಾಣಗಳ ಉತ್ಪತ್ತಿಶ್ರುತಿಯು ಗೌಣ ಎಂಬುದೇ ಮುಖ್ಯವಾದದ್ದು. ವಿಯದಧಿಕರಣದ ಪೂರ್ವಪಕ್ಷ ಹೇತುಗಳನ್ನೇ ಇಲ್ಲಿ ಹೇಳಿರುತ್ತದೆ. ಪ್ರಾಣಗಳು ಮೊದಲು ಇದ್ದವೆಂಬುದು ಅನನ್ಯಥಾಸಿದ್ಧವಾಗಿರುವದರಿಂದ ಉತ್ಪತ್ತಿಶ್ರುತಿಗಳನ್ನು ಗೌಣವೆಂದು ಭಾವಿಸಬೇಕು ಎಂದು ಭಾವ.

ಸಂಬನ್ಧಸ್ಯಾಪಿ ಆಶ್ರಿತತ್ವಾತ್ ಯಥಾ ಅತೀತಾನನ್ತರಪಾದಾದ್ಯುಕ್ತಾ ವಿಯದಾದಯಃ ಪರಸ್ಯ ಬ್ರಹ್ಮಣೋ ವಿಕಾರಾಃ ಸಮಧಿಗತಾಃ ತಥಾ ಪ್ರಾಣಾ ಅಪಿ ಪರಸ್ಯ ಬ್ರಹ್ಮಣೋ ವಿಕಾರಾಃ ಇತಿ ಚ ಯೋಜಯಿತವ್ಯಮ್। ಕಃ ಪುನಃ ಪ್ರಾಣಾನಾಂ ವಿಕಾರತ್ವೇ ಹೇತುಃ? ಶ್ರುತತ್ವಮೇವ। ನನು ಕೇಷುಚಿತ್ ಪ್ರದೇಶೇಷು ನ ಪ್ರಾಣಾನಾಮ್ ಉತ್ಪತ್ತಿಃ ಶ್ರೂಯತೇ ಇತ್ಯುಕ್ತಮ್। ತದಯುಕ್ತಮ್। ಪ್ರದೇಶಾನ್ತರೇಷು ಶ್ರವಣಾತ್। ನ ಹಿ ಕ್ವಚಿದಶ್ರವಣಮ್ ಅನ್ಯತ್ರ ಶ್ರುತಂ ನಿವಾರಯಿತುಮುತ್ಸಹತೇ। ತಸ್ಮಾತ್ ಶ್ರುತತ್ವಾವಿಶೇಷಾತ್ ಆಕಾಶಾದಿವತ್ ಪ್ರಾಣಾ ಅಪಿ ಉತ್ಪದ್ಯನ್ತೇ ಇತಿ ಸೂಕ್ತಮ್ ॥

(ಭಾಷ್ಯಾರ್ಥ)

ಇದಕ್ಕೆ ಈ ಉತ್ತರವನ್ನು (ಸೂತ್ರಕಾರರು) ಹೇಳುತ್ತಾರೆ. ('ತಥಾ ಪ್ರಾಣಾಃ')। 'ಪ್ರಾಣಗಳೂ ಹಾಗೇ'.

(ಆಕ್ಷೇಪ) :– ಈ (ಸೂತ್ರದಲ್ಲಿ) 'ತಥಾ' (ಹಾಗೆ) ಎಂಬ ಶಬ್ದದ ಅನುಗುಣ್ಯವು ಹೇಗೆ? ಪ್ರಕೃತವಾದ ಉಪಮಾನವಿಲ್ಲವಲ್ಲ! ಸರ್ವಗತರಾದ ಆತ್ಮರು ಅನೇಕರು ಎಂಬ ವಾದಿಗಳ ದೂಷಣವು (ಇದರ) ಹಿಂದಿನ ಪಾದದ ಕೊನೆಯಲ್ಲಿ ಪ್ರಕೃತವಾಗಿತ್ತು. ಅದಂತು ಉಪಮಾನವಾಗುವಂತಿಲ್ಲ; ಏಕೆಂದರೆ (ಅದಕ್ಕೂ ಪ್ರಾಣಗಳಿಗೂ) ಸಾದೃಶ್ಯವಿಲ್ಲ ಸಾದೃಶ್ಯವಿದ್ದರಲ್ಲವೆ, 'ಸಿಂಹವು ಹೇಗೋ ಬಲವರ್ಮನು ಹಾಗೆ' ಎಂಬಂತೆ ಉಪಮಾನವಾದೀತು? ಅದೃಷ್ಟಕ್ಕೆ ಹೋಲಿಕೆ ಹೇಳುವದಕ್ಕಾಗಿ ('ಹಾಗೆ' ಎಂದಿದೆ), ಎಲ್ಲಾ ಆತ್ಮರುಗಳ ಸಂನಿಧಿಯಲ್ಲಿ ಉಂಟಾಗುವ ಅದೃಷ್ಟವು ಹೇಗೆ ಅನಿಯತವೋ ಹಾಗೆ ಪ್ರಾಣಗಳೂ ಎಲ್ಲಾ ಆತ್ಮರ ವಿಷಯಕ್ಕೆ ಅನಿಯತವಾಗಿರುತ್ತವೆ (ಎಂದು ಅಭಿಪ್ರಾಯ)–ಎನ್ನುವದಾದರೆ, ಅದನ್ನು ದೇಹವು ನಿಯತವಲ್ಲ ಎನ್ನುವದರಿಂದಲೇ ಹೇಳಿದಂತಾಗಿರುವದರಿಂದ ಪುನರುಕ್ತಿಯುಂಟಾಗುವದು[1]. ಜೀವನಿಗೆ ಪ್ರಾಣಗಳನ್ನು ಹೋಲಿಸಿರಬಹುದು (ಎನ್ನುವದು) ಸರಿಯಾಗುವದಿಲ್ಲ; ಏಕೆಂದರೆ (ಅದು) ಸಿದ್ಧಾಂತಕ್ಕೆ ವಿರುದ್ಧವಾಗುವದು. ಹೇಗೆಂದರೆ (ಹಿಂದೆ) ಜೀವನಿಗೆ ಉತ್ಪತ್ತಿಯಿಲ್ಲವೆಂದು ಹೇಳಿರುತ್ತದೆ; ಪ್ರಾಣಗಳಿಗಾದರೋ ಉತ್ಪತ್ತಿ(ಯುಂಟೆಂದು) ಹೇಳಲಿರುತ್ತಾರೆ[2]. ಆದ್ದರಿಂದ 'ತಥಾ' (ಹಾಗೆ) ಎಂಬ (ಮಾತು) ಅಸಂಬದ್ಧವಾಗಿರುವಂತೆ ತೋರುವದಲ್ಲ!

(ಪರಿಹಾರ) :– ಹಾಗಲ್ಲ. ಏಕೆಂದರೆ ಉದಾಹರಣೆಯಲ್ಲಿ ತೆಗೆದುಕೊಂಡಿರುವ ಉಪಮಾನಕ್ಕೂ (ಇದು) ಸಂಬದ್ಧವಾಗಬಹುದಾಗಿದೆ. (ಇದರ

---

1. ಆದ್ದರಿಂದ ಹಿಂದಿನ ಅಧಿಕರಣದಿಂದಲೇ ಇದು ಗತಾರ್ಥವೆಂದಾಗುತ್ತದೆ.

2. ಜೀವರಂತೆ ಪ್ರಾಣಗಳೂ ಹುಟ್ಟುವದಿಲ್ಲ ಎಂಬರ್ಥವನ್ನು ಮಾಡಬಾರದೇಕೆ?– ಎಂಬ ಶಂಕೆಗೆ ಇದು ಉತ್ತರ.

ವಿವರ): ಇಲ್ಲಿ "ಈ ಆತ್ಮನಿಂದ ಎಲ್ಲಾ ಪ್ರಾಣಗಳೂ ಎಲ್ಲಾ ಲೋಕಗಳೂ ಎಲ್ಲಾ ದೇವತೆಗಳೂ ಎಲ್ಲಾ ಭೂತಗಳೂ ಸಿಡಿದುಬರುತ್ತವೆ" (ಬೃ.೨-೧-೨೦) ಎಂಬೀ ಜಾತಿಯ ಪ್ರಾಣೋತ್ಪತ್ತಿಯನ್ನು ಹೇಳುವ ವಾಕ್ಯಜಾತವು ಉದಾಹರಣೆ. ಅಲ್ಲಿ ಹೇಗೆ ಲೋಕಾದಿಗಳು ಪರಬ್ರಹ್ಮದಿಂದ ಉತ್ಪನ್ನವಾಗುವವೋ ಹಾಗೆಯೇ ಪ್ರಾಣಗಳೂ ಉತ್ಪನ್ನವಾಗುವವು ಎಂದರ್ಥ. ಹೀಗೆಯೇ "ಇವನಿಂದಲೇ ಪ್ರಾಣವೂ, ಮನಸ್ಸೂ, ಸರ್ವೇಂದ್ರಿಯಗಳೂ, ಆಕಾಶವೂ, ವಾಯುವೂ, ಜ್ಯೋತಿಯೂ, ಅಪ್ಪೂ, ಎಲ್ಲವನ್ನೂ ಧರಿಸಿರುವ ಪೃಥಿವಿಯೂ (ಹುಟ್ಟುತ್ತವೆ)" (ಮುಂ.೨-೧-೩) ಎಂಬಿವೇ ಮುಂತಾದ (ವಾಕ್ಯ)ಗಳಲ್ಲಿಯೂ ಆಕಾಶವೇ ಮುಂತಾದವುಗಳಂತೆ ಪ್ರಾಣಾದಿಗಳಿಗೂ ಉತ್ಪತ್ತಿ(ಯಾಗುತ್ತದೆ) ಎಂದು (ಹೇಳಿದೆ) ಎಂದು ತಿಳಿಯಬೇಕು. ಅಥವಾ "ಪಾನವ್ಯಾಪಚ್ಚ ತದ್ವತ್"[1] (ಜೈ.ಸೂ. ೩-೪-೩೮) ಮುಂತಾದ ಸ್ಥಲಗಳಲ್ಲಿ ವ್ಯವಹಿತೋಪಮಾನದ ಸಂಬಂಧವನ್ನೂ ಆಶ್ರಯಿಸಿರುವದರಿಂದ[2] ಹೇಗೆ ಹಿಂದಿನ ಪಾದದ ಮೊದಲಿನಲ್ಲಿ ಹೇಳಿರುವ ಆಕಾಶಾದಿಗಳು ಪರಬ್ರಹ್ಮದ ವಿಕಾರಗಳೆಂದು ನಿಶ್ಚಯವಾಗಿರುತ್ತದೆಯೋ ಹಾಗೆಯೇ ಪ್ರಾಣಗಳೂ ಪರಬ್ರಹ್ಮದ ವಿಕಾರಗಳು ಎಂದು ಸಂಬಂಧವನ್ನು ಮಾಡಿಕೊಳ್ಳಬೇಕು.

(ಪ್ರಶ್ನೆ) : -- ಹಾಗಾದರೆ ಪ್ರಾಣಗಳು (ಬ್ರಹ್ಮದ) ವಿಕಾರವೇ ಎಂಬುದಕ್ಕೆ ಹೇತು ಯಾವದು ?

(ಉತ್ತರ) :— ಶ್ರುತಿಯಲ್ಲಿ (ಹಾಗೆಂದು) ಹೇಳಿರುವದೇ (ಹೇತು).

1. ಸೋಮಪಾನದಿಂದ ವಮನವಾದರೆ 'ಸೌಮೇಂದ್ರಚರುವನ್ನು ಕೊಟ್ಟು ದೋಷಪರಿಹಾರಮಾಡಬೇಕು' ಎಂಬ ಶ್ರುತಿಯನ್ನು ವಿಚಾರಮಾಡುವಾಗ ಈ ಸೂತ್ರವು ಬಂದಿದೆ. "ಪಾನದಲ್ಲಿ ವ್ಯಾಪತ್ (ವಮನವು ಆದರೆ) ತದ್ವತ್ (ಅದರಂತೆ)" ಎಂಬುದು ಸೂತ್ರದ ಅಕ್ಷರಾರ್ಥ. ಇಲ್ಲಿ ಅದರಂತೆ ಎಂಬುದು (೩-೪-೩೪ರಲ್ಲಿರುವ) ಅಶ್ವಪ್ರತಿಗ್ರಹೇಷ್ಟ್ಯಧಿಕರಣದ ಪೂರ್ವಪಕ್ಷವನ್ನು ಪರಾಮರ್ಶಿಸುತ್ತದೆ. ಅಶ್ವದಾನನಿಮಿತ್ತವಾದ ಇಷ್ಟಿಯು ಲೌಕಿಕದಾನಕ್ಕೂ ಅನ್ವಯಿಸುತ್ತದೆ ಎಂಬುದು ಅಲ್ಲಿ ಪೂರ್ವಪಕ್ಷ ; ಅದರಂತೆ ಇಲ್ಲಿ ಲೌಕಿಕ ಸೋಮಪಾನದ ನಿಮಿತ್ತದಿಂದ ವಮನವಾದರೆ ಈ ಚರುವನ್ನು ವಿಧಿಸಿದೆ— ಎಂಬುದು ಪೂರ್ವಪಕ್ಷಿಯ ಅಭಿಪ್ರಾಯ. ಉದಾಹೃತಸೂತ್ರದಲ್ಲಿ 'ತದ್ವತ್' (ಅದರಂತೆ) ಎಂಬುದು ವ್ಯವಹಿತವಾದದ್ದನ್ನು ಹೋಲಿಕೆ ತೆಗೆದುಕೊಂಡಿರುವಂತೆ ಪ್ರಕೃತದಲ್ಲಿಯೂ 'ತಥಾ' (ಹಾಗೆ ಎಂಬ ಮಾತಿನಿಂದ ವ್ಯವಹಿತವಾಗಿ ಆಕಾಶಾದಿಗಳನ್ನು ಉಪಮಾನವಾಗಿ ತೆಗೆದುಕೊಳ್ಳಬಹುದು ಎಂದು ಅಭಿಪ್ರಾಯ.

2. ಹಿಂದೆ ಉದಾಹೃತಶ್ರುತಿಗಳಲ್ಲಿರುವ ಉಪಮಾನವನ್ನು 'ತಥಾ' ಎಂಬ ಶಬ್ದದಿಂದ ಪರಾಮರ್ಶಮಾಡಿದೆ ಎಂದು ಹೇಳಿತ್ತು. ಸಂನಿಹಿತವಾದದ್ದೇ ಉಪಮಾನವಾಗಿರಬೇಕೆಂದು ಒಪ್ಪಿ ಆ ಅರ್ಥವನ್ನು ಮಾಡಿತ್ತು. ; ಈಗ ವ್ಯವಹಿತವಾದ ಉಪಮಾನವೂ ಇರಬಹುದೆಂದು ತಿಳಿಸಿ ಈ ಸಮಾಧಾನವನ್ನು ಹೇಳಿದೆ.

(ಆಕ್ಷೇಪ) :— ಕೆಲವು ಕಡೆಗಳಲ್ಲಿ ಪ್ರಾಣಗಳ ಉತ್ಪತ್ತಿಯನ್ನು ಶ್ರುತಿಯಲ್ಲಿ ಹೇಳಿಲ್ಲವೆಂದು (ನಾವು) ಹೇಳಿದೇವಲ್ಲ !

(ಪರಿಹಾರ) :— ಅದು ಸರಿಯಲ್ಲ. ಏಕೆಂದರೆ ಬೇರೆ ಕಡೆಗಳಲ್ಲಿ (ಹೀಗೆಂದು) ಶ್ರುತಿಯಲ್ಲಿ ಹೇಳಿದೆ. ಒಂದು ಕಡೆಯಲ್ಲಿ ಶ್ರುತಿಯಲ್ಲಿಲ್ಲದೆ ಇರುವದು ಮತ್ತೊಂದು ಶ್ರುತಿಯಲ್ಲಿರುವದನ್ನು ತಪ್ಪಿಸಲಾರದಷ್ಟೆ. ಆದ್ದರಿಂದ ಶ್ರುತಿಯಲ್ಲಿ ಹೇಳಿರುವದೆಂಬುದು ಸಮಾನವಾಗಿರುವದರಿಂದ ಆಕಾಶಾದಿಗಳಂತೆ ಪ್ರಾಣಗಳೂ ಉತ್ಪನ್ನವಾಗುತ್ತವೆ ಎಂದು ಹೇಳಿದ್ದು ಸರಿ.

**ಗೌಣ್ಯಸಂಭವಾತ್ ॥ ೨ ॥**

೨. ಗೌಣವೆಂಬುದು ಸಂಭವಿಸುವದಿಲ್ಲವಾದ್ದರಿಂದ (ನಿಜವಾಗಿ ಹುಟ್ಟುತ್ತವೆ).

## ಪ್ರಾಣೋತ್ಪತ್ತಿಶ್ರುತಿಯು ಗೌಣವಲ್ಲ.

(ಭಾಷ್ಯ)

೧೭೬. ಯತ್ ಪುನರುಕ್ತಂ ಪ್ರಾಗುತ್ಪತ್ತೇಃ ಸದ್ಭಾವಶ್ರವಣಾತ್ ಗೌಣೀ ಪ್ರಾಣಾನಾಮ್ ಉತ್ಪತ್ತಿಶ್ರುತಿಃ ಇತಿ । ತತ್ ಪ್ರತ್ಯಾಹ— 'ಗೌಣ್ಯಸಂಭವಾತ್' ಇತಿ। ಗೌಣ್ಯಾ ಅಸಂಭವಃ ಗೌಣ್ಯಸಂಭವಃ। ನ ಹಿ ಪ್ರಾಣಾನಾಮ್ ಉತ್ಪತ್ತಿಶ್ರುತಿಃ ಗೌಣೀ ಸಂಭವತಿ । ಪ್ರತಿಜ್ಞಾಹಾನಿಪ್ರಸಙ್ಗಾತ್ । "ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" (ಮುಂ. ೧-೧-೩) ಇತಿ ಹಿ ಏಕವಿಜ್ಞಾನೇನ ಸರ್ವವಿಜ್ಞಾನಂ ಪ್ರತಿಜ್ಞಾಯ ತತ್ಸಾಧನಾಯ ಇದಮ್ ಆಮ್ನಾಯತೇ "ಏತಸ್ಮಾಜ್ಜಾಯತೇ ಪ್ರಾಣಃ" (ಮುಂ. ೨-೧-೩) ಇತ್ಯಾದಿ । ಸಾ ಚ ಪ್ರತಿಜ್ಞಾ ಪ್ರಾಣಾದೇಃ ಸಮಸ್ತಸ್ಯ ಜಗತಃ ಬ್ರಹ್ಮವಿಕಾರತ್ವೇ ಸತಿ ಪ್ರಕೃತಿವ್ಯತಿರೇಕೇಣ ವಿಕಾರಾಭಾವಾತ್ ಸಿಧ್ಯತಿ। ಗೌಣ್ಯಾಂ ತು ಪ್ರಾಣಾನಾಮ್ ಉತ್ಪತ್ತಿಶ್ರುತೌ ಪ್ರತಿಜ್ಞಾ ಇಯಂ ಹೀಯೇತ । ತಥಾ ಚ ಪ್ರತಿಜ್ಞಾತಾರ್ಥಮ್ ಉಪಸಂಹರತಿ "ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಮ್" (ಮುಂ. ೨-೧-೧೦) ಇತಿ "ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್"[1] (ಮುಂ. ೨-೨-೧೧) ಇತಿ ಚ । ತಥಾ "ಆತ್ಮನೋ

1. ಈ ಶ್ರುತಿಯನ್ನು 'ಬ್ರಹ್ಮೈವೇದಂ ವಿಶ್ವಮ್' ಎಂದೇ ಆಚಾರ್ಯರು ಇಲ್ಲಿ ಉದಾಹರಿಸಿರುವದರಿಂದ ಇದೇ ಭಾಷ್ಯದಲ್ಲಿ ಬೇರೆ ಕಡೆಯಲ್ಲಿ 'ಬ್ರಹ್ಮೈವೇದಂ ಸರ್ವಮ್' ಎಂದು ಉದಾಹರಿಸಿರುವ ಶ್ರುತಿಯು ಬೇರೆ ಯಾವದೋ ಒಂದು ಎಂದು ಊಹಿಸುವದಕ್ಕೆಡೆಯಿದೆ.

ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಮ್ ವಿದಿತಮ್” (ಬೃ. ೨-೪-೫), ಇತ್ಯೇವಂಜಾತೀಯಕಾಸು ಶ್ರುತಿಷು ಏಷೈವ ಪ್ರತಿಜ್ಞಾ ಯೋಜಯಿತವ್ಯಾ । ಕಥಂ ಪುನಃ ಪ್ರಾಗುತ್ಪತ್ತೇಃ ಪ್ರಾಣಾನಾಂ ಸದ್ಭಾವಶ್ರವಣಮ್ ? ನೈತತ್ ಮೂಲಪ್ರಕೃತಿವಿಷಯಮ್ । “ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ ಪರತಃ ಪರಃ” (ಮುಂ. ೨-೧-೨) ಇತಿ ಮೂಲಪ್ರಕೃತೇಃ ಪ್ರಾಣಾದಿಸಮಸ್ತವಿಶೇಷರಹಿತತ್ವಾವಧಾರಣಾತ್ । ಅವಾನ್ತರಪ್ರಕೃತಿವಿಷಯಂ ತು ಏತತ್ ಸ್ವವಿಕಾರಾಪೇಕ್ಷಂ ಪ್ರಾಗುತ್ಪತ್ತೇಃ ಪ್ರಾಣಾನಾಂ ಸದ್ಭಾವಾವಧಾರಣಮ್ ಇತಿ ದ್ರಷ್ಟವ್ಯಮ್ । ವ್ಯಾಕೃತವಿಷಯಾಣಾಮಪಿ ಭೂಯಸೀನಾಮ್ ಅವಸ್ಥಾನಾಂ ಶ್ರುತಿಸ್ಮೃತ್ಯೋಃ ಪ್ರಕೃತಿವಿಕೃತಿಭಾವಪ್ರಸಿದ್ಧೇಃ ॥

(ಭಾಷ್ಯಾರ್ಥ)

ಇನ್ನು ಉತ್ಪತ್ತಿಗೆ ಪೂರ್ವದಲ್ಲಿ ಇದ್ದವೆಂದು ಶ್ರುತಿಯಲ್ಲಿರುವದರಿಂದ ಪ್ರಾಣಗಳು ಹುಟ್ಟುವವೆಂಬ ಶ್ರುತಿಯು ಗೌಣವು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದನ್ನು (ಸೂತ್ರಕಾರರು) ‘ಗೌಣ್ಯಸಂಭವಾತ್’ ಎಂಬ (ಸೂತ್ರದಿಂದ) ತಿರಸ್ಕರಿಸುತ್ತಾರೆ. ಗೌಣಶ್ರುತಿಯು ಸಂಭವಿಸುವದಿಲ್ಲವೆಂಬುದೇ ಗೌಣ್ಯಸಂಭವವು. (ಇದರ ವಿವರ) : ಪ್ರಾಣಗಳ ಉತ್ಪತ್ತಿಶ್ರುತಿಯು ಗೌಣವೆಂಬುದು ಸಂಭವಿಸುವದಿಲ್ಲ. ಏಕೆಂದರೆ (ಹಾಗಾದರೆ) ಪ್ರತಿಜ್ಞಾಹಾನಿಯು ಪ್ರಸಕ್ತವಾಗುತ್ತದೆ. ಹೇಗೆಂದರೆ “ಭಗವಂತನೆ, ಯಾವದನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತಂತೆ ಆಗುತ್ತದೆ ?” (ಮುಂ. ೧-೧-೩) ಎಂದು ಒಂದನ್ನು ಅರಿತರೆ ಎಲ್ಲವನ್ನೂ ಅರಿತಂತೆ ಆಗುವದೆಂದು ಪ್ರತಿಜ್ಞೆಮಾಡಿ ಅದನ್ನು ಸಾಧಿಸುವದಕ್ಕಾಗಿ “ಇವನಿಂದ ಪ್ರಾಣವು ಹುಟ್ಟುತ್ತದೆ” (ಮುಂ. ೨-೧-೩) ಮುಂತಾದ ಈ (ವಾಕ್ಯ)ವನ್ನು ಪಠಿಸಿರುತ್ತದೆ. ಪ್ರಾಣಗಳೇ ಮುಂತಾದ ಜಗತ್ತೆಲ್ಲವೂ ಬ್ರಹ್ಮವಿಕಾರವೆಂದಾದರೆ ಪ್ರಕೃತಿಗಿಂತ ಬೇರೆಯಾಗಿ ವಿಕಾರವು ಇಲ್ಲದ್ದರಿಂದ ಆ ಪ್ರತಿಜ್ಞೆಯು ಸಿದ್ಧವಾಗಿರುತ್ತದೆ. ಪ್ರಾಣಗಳು ಹುಟ್ಟುತ್ತವೆ ಎಂಬ ಶ್ರುತಿಯು ಗೌಣವೆಂದರೋ, ಈ ಪ್ರತಿಜ್ಞೆಯನ್ನು ಬಿಡಬೇಕಾಗುವದು. ಆದ್ದರಿಂದ ಪ್ರತಿಜ್ಞೆಮಾಡಿದ (ಈ) ವಿಷಯವನ್ನು “ಕರ್ಮವೂ ಜ್ಞಾನವೂ ಇದೆಲ್ಲವೂ ಪುರುಷನೇ ; (ಆದ್ದರಿಂದ) ಬ್ರಹ್ಮವು ಹೆಚ್ಚಿನ ಅಮೃತವು” (ಮುಂ. ೨-೧-೧೦), ಎಂದೂ “ಇದೆಲ್ಲವೂ ವರಿಷ್ಠವಾದ ಬ್ರಹ್ಮವೇ” (ಮುಂ. ೨-೨-೧೧) ಎಂದೂ ಉಪಸಂಹಾರಮಾಡಿರುತ್ತದೆ. ಹೀಗೆಯೇ “ಎಲೆ, ಆತ್ಮನ ದರ್ಶನದಿಂದ ಶ್ರವಣದಿಂದ, ಮನನದಿಂದ, ವಿಜ್ಞಾನದಿಂದ ಇದೆಲ್ಲವೂ ವಿದಿತ(ವಾಗುತ್ತದೆ)” (ಬೃ. ೨-೪-೫) ಎಂಬೀ ಜಾತಿಯ ಶ್ರುತಿಗಳಲ್ಲಿ ಇದೇ ಪ್ರತಿಜ್ಞೆಯನ್ನೇ ಹೊಂದಿಸಿಕೊಳ್ಳಬೇಕು.

(ಆಕ್ಷೇಪ) :– ಹಾಗಾದರೆ ಉತ್ಪತ್ತಿಗೆ ಪೂರ್ವದಲ್ಲಿ ಪ್ರಾಣಗಳು ಇರುತ್ತವೆ ಎಂದು ಶ್ರುತಿಯಿದೆಯಲ್ಲ, (ಅದು) ಹೇಗೆ ಸರಿ ?

(ಸಮಾಧಾನ) :– "ಅಪ್ರಾಣನು, ಅಮನಸ್ಕನು, ಶುಭ್ರನು, ಹೆಚ್ಚಿನ ಅಕ್ಷರಕ್ಕಿಂತ ಹೆಚ್ಚಿನವನು'' (ಮುಂ. ೨–೧–೨) ಎಂದು ಮೂಲಪ್ರಕೃತಿಯು ಪ್ರಾಣಾದಿಯಾದ ಯಾವ ವಿಶೇಷವೂ ಇಲ್ಲದ್ದಾಗಿರುವದೆಂದು ಅವಧಾರಣೆ ಮಾಡಿರುವದರಿಂದ ಇದು ಮೂಲಪ್ರಕೃತಿಯ ವಿಷಯವಲ್ಲ.[1] ಮತ್ತೇನೆಂದರೆ ಈ ಪ್ರಾಣಗಳು ಉತ್ಪತ್ತಿಗಿಂತ ಮೊದಲು ಇರುವವೆಂದು ಅವಧಾರಣೆಮಾಡಿರುವದು ಅವಾಂತರಪ್ರಕೃತಿಯ ವಿಷಯವಾದದ್ದು[2], ಆ (ಅವಾಂತರಪ್ರಕೃತಿಯ) ವಿಕಾರದ ಅಪೇಕ್ಷೆಯಿಂದ (ಹೇಳಿದ್ದು) ಎಂದು ತಿಳಿಯಬೇಕು. ಏಕೆಂದರೆ **ವ್ಯಾಕೃತವಿಷಯವಾಗಿರುವ ಅನೇಕಾವಸ್ಥೆಗಳಿಗೂ ಪ್ರಕೃತಿವಿಕಾರಭಾವವನ್ನು (ಹೇಳಿರುವದು) ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುತ್ತದೆ.**[3]

## ವಿಯದಧಿಕರಣಕ್ಕೂ ಈ ಅಧಿಕರಣಕ್ಕೂ ಸೂತ್ರಾರ್ಥದಲ್ಲಿ ತಾರತಮ್ಯ

(ಭಾಷ್ಯ)

೧೭೭. ವಿಯದಧಿಕರಣೇ ಹಿ "ಗೌಣ್ಯಸಂಭವಾತ್" (೨–೩–೩) ಇತಿ ಪೂರ್ವಪಕ್ಷಸೂತ್ರತ್ವಾತ್ ಗೌಣೀ ಜನ್ಮಶ್ರುತಿಃ, ಅಸಂಭವಾತ್– ಇತಿ ವ್ಯಾಖ್ಯಾತಮ್ । ತದನುರೋಧೇನ ತು ಇಹಾಪಿ ಗೌಣೀ ಜನ್ಮಶ್ರುತಿಃ ಅಸಂಭವಾತ್ ಇತಿ ವ್ಯಾಚಕ್ಷಾಣೈಃ ಪ್ರತಿಜ್ಞಾಹಾನಿಃ ಉಪೇಕ್ಷಿತಾ ಸ್ಯಾತ್ ॥

(ಭಾಷ್ಯಾರ್ಥ)

ವಿಯದಧಿಕರಣದಲ್ಲಿ 'ಗೌಣ್ಯಸಂಭವಾತ್' (೨–೩–೩) ಎಂಬದು ಪೂರ್ವಪಕ್ಷಸೂತ್ರವಾದ್ದರಿಂದ 'ಜನ್ಮಶ್ರುತಿಯು ಗೌಣವು, ಏಕೆಂದರೆ (ಆಕಾಶಕ್ಕೆ ಉತ್ಪತ್ತಿಯು) ಸಂಭವಿಸುವದಿಲ್ಲ' ಎಂದು ವ್ಯಾಖ್ಯಾನಮಾಡಿತ್ತು. (ಜಗತ್ತು

1. ಇದು ಸರ್ವಜಗತ್ಕಾರಣವಾದ ಬ್ರಹ್ಮವನ್ನು ಕುರಿತು ಹೇಳಿದ್ದಲ್ಲ ; ಏಕೆಂದರೆ ಮೂಲಕಾರಣವಾದ ಬ್ರಹ್ಮದಲ್ಲಿ ಪ್ರಾಣಗಳೂ ಇಲ್ಲವೆಂದೇ ಶ್ರುತಿಯಲ್ಲಿದೆ.

2. ಹಿರಣ್ಯಗರ್ಭನೆಂಬ ಅವಾಂತರಪ್ರಕೃತಿಯನ್ನಿಟ್ಟುಕೊಂಡು ಪ್ರಾಣಗಳು ಸೃಷ್ಟಿಗೆ ಪೂರ್ವದಲ್ಲಿದ್ದವೆಂದು ಹೇಳಿದೆ ಎಂದಭಿಪ್ರಾಯ.

3. ವ್ಯಾಕೃತಪ್ರಪಂಚದಲ್ಲಿಯೂ ಒಂದಕ್ಕೊಂದು ಕಾರಣವಾಗಿಯೂ ಕಾರ್ಯವಾಗಿಯೂ ಶ್ರುತಿಸ್ಮೃತಿಗಳಲ್ಲಿ ಹೇಳಿರುವದು ಕಂಡುಬರುವದರಿಂದ ಇಲ್ಲಿ ಹೀಗೆ ಅರ್ಥ ಮಾಡುವದು ಶ್ರುತಿಸ್ಮೃತಿವಿರುದ್ಧವಲ್ಲ.

ಬ್ರಹ್ಮಕ್ಕಿಂತ ವ್ಯತಿರಿಕ್ತವಲ್ಲ ಎನ್ನದಿದ್ದರೆ) ಪ್ರತಿಜ್ಞಾಹಾನಿಯಾಗುವದು ಎಂದು ಅಲ್ಲಿ (೨-೩-೬) ಸಿದ್ಧಾಂತವನ್ನು ಹೇಳಿರುತ್ತದೆ. ಆದರೆ ಇಲ್ಲಿ (ಇದು) ಸಿದ್ಧಾಂತಸೂತ್ರವಾಗಿರುವದರಿಂದ "ಗೌಣಜನ್ಮಶ್ರುತಿಯು ಸಂಭವಿಸುವದಿಲ್ಲ ವಾದ್ದರಿಂದ (ಪ್ರಾಣಗಳು ಹುಟ್ಟುತ್ತವೆ)" ಎಂದು ವ್ಯಾಖ್ಯಾನಮಾಡಿರುತ್ತದೆ. ಆದರೆ ಆ (ಪೂರ್ವಪಕ್ಷಸೂತ್ರವ್ಯಾಖ್ಯಾನಕ್ಕೆ) ಅನುಸಾರವಾಗಿ ಇಲ್ಲಿಯೂ ಜನ್ಮಶ್ರುತಿಯು ಗೌಣವು, ಏಕೆಂದರೆ (ಉತ್ಪತ್ತಿಯು) ಸಂಭವಿಸುವದಿಲ್ಲ' ಎಂದು ವ್ಯಾಖ್ಯಾನಮಾಡುವವರು[1] ಪ್ರತಿಜ್ಞಾಹಾನಿಯನ್ನು ಅಸಡ್ಡೆಮಾಡಿದಂತೆ ಆಗುತ್ತದೆ.

## ತತ್ಪ್ರಾಕ್ಶ್ರುತೇಶ್ಚ ॥ ೩ ॥

೩. ಅದಕ್ಕಿಂತ ಮುಂಚೆ (ಪ್ರಾಣ)ಶ್ರುತಿಯಿರುವದರಿಂದಲೂ (ಇದು ಮುಖ್ಯವೇ).

## ಮುಖ್ಯಜನ್ಮವಾಚಕಶಬ್ದವು ಮೊದಲೇ ಇದೆ

(ಭಾಷ್ಯ)

೧೬೮. ಇತಶ್ಚ ಆಕಾಶಾದೀನಾಮಿವ ಪ್ರಾಣಾನಾಮಪಿ ಮುಖ್ಯೈವ ಜನ್ಮಶ್ರುತಿಃ। ಯತ್ 'ಜಾಯತೇ' ಇತ್ಯೇಕಂ ಜನ್ಮವಾಚಿಪದಂ ಪ್ರಾಣೇಷು ಪ್ರಾಕ್ ಶ್ರುತಂ ಸತ್ ಉತ್ತರೇಷ್ವಪಿ ಆಕಾಶಾದಿಷು ಅನುವರ್ತತೇ। "ಏತಸ್ಮಾಜ್ಜಾಯತೇ ಪ್ರಾಣಃ" (ಮುಂ. ೨-೧-೩) ಇತ್ಯತ್ರ। ಆಕಾಶಾದಿಷು ಮುಖ್ಯಂ ಜನ್ಮ ಇತಿ ಪ್ರತಿಷ್ಠಾಪಿತಮ್। ತತ್ಸಾಮಾನ್ಯಾತ್ ಪ್ರಾಣೇಷ್ವಪಿ ಮುಖ್ಯಮೇವ ಜನ್ಮ ಭವಿತುಮರ್ಹತಿ। ನ ಹಿ ಏಕಸ್ಮಿನ್ ಪ್ರಕರಣೇ ಏಕಸ್ಮಿಂಶ್ಚ ವಾಕ್ಯೇ ಏಕಃ ಶಬ್ದಃ ಸಕೃತ್ ಉಚ್ಚರಿತಃ ಬಹುಭಿಃ ಸಂಬಧ್ಯಮಾನಃ ಕ್ವಚಿತ್ ಮುಖ್ಯಃ ಕ್ವಚಿತ್ ಗೌಣಃ ಇತಿ ಅಧ್ಯವಸಾತುಂ ಶಕ್ಯಮ್। ವೈರೂಪ್ಯಪ್ರಸಙ್ಗಾತ್। ತಥಾ "ಸ ಪ್ರಾಣಮಸೃಜತ ಪ್ರಾಣಾಚ್ಛ್ರದ್ಧಾಮ್" (ಪ್ರ. ೬-೪) ಇತ್ಯತ್ರಾಪಿ ಪ್ರಾಣೇಷು ಶ್ರುತಃ ಸೃಜತಿಃ ಪರೇಷ್ವಪಿ ಉತ್ಪತ್ತಿಮತ್ಸು ಶ್ರದ್ಧಾದಿಷು ಅನುಷಜ್ಯತೇ। ಯತ್ರಾಪಿ ಪಶ್ಚಾತ್ ಶ್ರುತಃ ಉತ್ಪತ್ತಿವಚನಃ ಶಬ್ದಃ ಪೂರ್ವೈಃ ಸಂಬಧ್ಯತೇ ತತ್ರಾಪಿ ಏಷ ಏವ ನ್ಯಾಯಃ। ಯಥಾ "ಸರ್ವಾಣಿ ಭೂತಾನಿ ವ್ಯುಚ್ಚರನ್ತಿ" (ಬೃ. ೨-೧-೨೦) ಇತ್ಯಯಮ್ ಅನ್ತೇ ಪಠಿತಃ ವ್ಯುಚ್ಚರನ್ತಿಶಬ್ದಃ ಪೂರ್ವೈರಪಿ ಪ್ರಾಣಾದಿಭಿಃ ಸಂಬಧ್ಯತೇ ॥

---

1. ಹೀಗೆ ಕೆಲವರು ವ್ಯಾಖ್ಯಾನಮಾಡಿದ್ದರೆಂದು ಭಾಮತೀಟೀಕೆಯಲ್ಲಿದೆ.

(ಭಾಷ್ಯಾರ್ಥ)

ಈ ಕಾರಣದಿಂದಲೂ ಆಕಾಶವೇ ಮುಂತಾದವುಗಳಂತೆ ಪ್ರಾಣಗಳ ಜನ್ಮವನ್ನು (ಹೇಳುವ) ಶ್ರುತಿಯು ಮುಖ್ಯವೇ. ಏಕೆಂದರೆ ಈ (ಪುರುಷನಿಂದಲೇ) ಪ್ರಾಣನು ಹುಟ್ಟುತ್ತಾನೆ....." (ಮುಂ. ೨-೧-೩) 'ಜಾಯತೇ' (ಹುಟ್ಟುತ್ತದೆ) ಎಂಬ ಜನ್ಮವಾಚಕವಾದ ಅದೇ ಪದವು ಮೊದಲು ಪ್ರಾಣಗಳ ವಿಷಯದಲ್ಲಿ ಶ್ರುತಿಯಲ್ಲಿದ್ದು ಮುಂದೆ ಆಕಾಶವೇ ಮುಂತಾದವುಗಳಲ್ಲಿ ಅನುವೃತ್ತವಾಗಿರುತ್ತದೆ. ಆಕಾಶಾದಿಗಳ ವಿಷಯದಲ್ಲಿ ಜನ್ಮವು ಮುಖ್ಯವೇ ಎಂದು (ಹಿಂದೆ) ಸ್ಥಾಪಿಸಿಕೊಟ್ಟಿದೆಯಷ್ಟೆ; ಅದಕ್ಕೆ ಸಮಾನವಾಗಿರುವದರಿಂದ ಪ್ರಾಣಗಳ ಜನ್ಮವೂ ಮುಖ್ಯವೇ ಆಗಿರಬೇಕು[1]. **ಒಂದೇ ಪ್ರಕರಣದಲ್ಲಿ ಒಂದೇ ವಾಕ್ಯದಲ್ಲಿ ಒಂದು ಸಲ ಉಚ್ಚರಿಸಿರುವ ಶಬ್ದವು ಬಹಳ (ಪದಾರ್ಥಗಳಿಗೆ) ಸಂಬದ್ಧವಾಗಿದ್ದರೆ ಒಂದು ಕಡೆಯಲ್ಲಿ ಅದು ಮುಖ್ಯ, ಇನ್ನೊಂದು ಕಡೆಯಲ್ಲಿ ಗೌಣ ಎಂದು ನಿಶ್ಚಯಿಸಲಾಗುವದಿಲ್ಲವಷ್ಟೆ;** ಏಕೆಂದರೆ (ಹಾಗೆ ನಿಶ್ಚಯಿಸಿದರೆ) ವೈರೂಪ್ಯವು ಪ್ರಸಕ್ತವಾಗುತ್ತದೆ[2] ಹೀಗೆಯೇ "ಅವನು ಪ್ರಾಣವನ್ನು ಸೃಜಿಸಿದನು; ಪ್ರಾಣದಿಂದ ಶ್ರದ್ಧೆಯನ್ನು (ಸೃಜಿಸಿದನು)....." (ಪ್ರ. ೬-೪) ಎಂಬಲ್ಲಿಯೂ ಪ್ರಾಣಗಳಲ್ಲಿ ಶ್ರುತಿಯು ಉಪಯೋಗಿಸಿರುವ ಸೃಷ್ಟಿಶಬ್ದವು ಮುಂದೆ ಇರುವ ಉತ್ಪತ್ತಿಯುಳ್ಳ ಶ್ರದ್ಧಾದಿಗಳಲ್ಲಿಯೂ ಅನುವೃತ್ತವಾಗಿರುತ್ತದೆ. ಇನ್ನು ಎಲ್ಲಿ ಉತ್ಪತ್ತಿಯನ್ನು ಹೇಳುವ ಶಬ್ದವು ಆಮೇಲೆ ಶ್ರುತಿಯಲ್ಲಿದ್ದು ಹಿಂದಿನ (ಮಾತುಗಳಿಗೆ) ಸಂಬದ್ಧವಾಗುತ್ತದೆಯೋ ಅಲ್ಲಿಯೂ ಇದೇ ನ್ಯಾಯ[3]. ಉದಾಹರಣೆಗೆ "ಸರ್ವಭೂತಗಳೂ ಸಿಡಿದು ಬರುತ್ತವೆ" (ಬೃ. ೨-೧-೨೦) ಎಂದು ಕೊನೆಯಲ್ಲಿ ಪಠಿತವಾಗಿರುವ ಈ 'ಸಿಡಿದುಬರುತ್ತವೆ' ('ವ್ಯುಚ್ಚರನ್ತಿ') ಎಂಬ ಶಬ್ದವು ಹಿಂದಿರುವ ಪ್ರಾಣಾದಿಗಳಿಗೂ ಸಂಬದ್ಧವಾಗುತ್ತವೆ.

---

1. 'ಹುಟ್ಟುತ್ತವೆ' ಎಂದು ಹೇಳಿರುವ ಆಕಾಶಾದಿಗಳಿಗೆ ಮುಖ್ಯಜನ್ಮವಿರುವದರಿಂದ ಪ್ರಾಣಗಳಿಗೂ ಮುಖ್ಯಜನ್ಮವೇ ಇರಬೇಕಾಯಿತು.

2. ಹಾಗಾದರೆ ಇದು ಒಂದೇ ವಾಕ್ಯವೆಂದು ಆಗುವದೇ ಇಲ್ಲ. ಒಂದೇ ಪ್ರಕರಣವಾದರೂ 'ಅನ್ನಂ ಬ್ರಹ್ಮ' 'ಆನನ್ದೋ ಬ್ರಹ್ಮ' ಎಂಬಂತೆ ಅನೇಕಾರ್ಥವಿರಬಹುದು; ಆದರೆ ಒಂದು ಪ್ರಕರಣದಲ್ಲಿ ಒಂದೇ ಶಬ್ದವನ್ನು ಒಂದೇ ಸಲ ಉಚ್ಚರಿಸಿರುವದಕ್ಕೆ ಅನೇಕಾರ್ಥವು ಬರಲಾರದು. ವಿಯದಧಿಕರಣದಲ್ಲಿ 'ಸಂಭೂತಃ' ಎಂಬ ಶಬ್ದಕ್ಕೂ ಇದೇ ನ್ಯಾಯವು.

3. ಜೊತೆಯಲ್ಲಿ ಪಠಿತವಾಗಿರುವ ಪದಾರ್ಥಗಳಿಗೆ ಒಂದು ಕಡೆ ಒಂದು ಶಬ್ದಕ್ಕೆ ಮುಖ್ಯಾರ್ಥವನ್ನು ಹೇಳಿದ್ದರೆ ಮತ್ತೊಂದು ಕಡೆಯಲ್ಲಿಯೂ ಮುಖ್ಯಾರ್ಥವನ್ನೇ ಸ್ವೀಕರಿಸಬೇಕು ಎಂಬ ನ್ಯಾಯ. 'ಮುಖ್ಯಜನ್ಮವಾಚಕವಾದ ಶಬ್ದಕ್ಕಿಂತ ಮೊದಲು ಪ್ರಾಣಾದಿಗಳನ್ನು ಹೇಳಿರುವದರಿಂದ' ಎಂದು ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನವಿದು.

**ತತ್ಪೂರ್ವಕತ್ವಾದ್ವಾಚಃ ॥ ೪ ॥**

೪. ವಾಕ್ಕು ತತ್ಪೂರ್ವಕವಾಗಿರುವದರಿಂದಲೂ (ಹೀಗೆ).

## ವಾಗಾದಿಗಳಿಗೆ ತೇಜಆದಿಗಳಿಂದ ಜನ್ಮವನ್ನು ಹೇಳಿದೆ

(ಭಾಷ್ಯ)

೧೭೯. ಯದ್ಯಪಿ "ತತ್ತೇಜೋಽಸೃಜತ" (ಛಾಂ. ೬-೨-೩) ಇತ್ಯೇತಸ್ಮಿನ್ ಪ್ರಕರಣೇ ಪ್ರಾಣಾದೀನಾಮ್ ಉತ್ಪತ್ತಿಃ ನ ಪಠ್ಯತೇ। ತೇಜೋಽಬನ್ನಾನಾಮೇವ ಚ ತ್ರಯಾಣಾಂ ಭೂತಾನಾಮ್ ಉತ್ಪತ್ತಿಶ್ರವಣಾತ್। ತಥಾಪಿ ಬ್ರಹ್ಮಪ್ರಕೃತಿಕತೇಜೋಽಬನ್ನಪೂರ್ವಕತ್ವಾಭಿಧಾನಾತ್ ವಾಕ್ಪ್ರಾಣಮನಸಾಂ ತತ್ಸಾಮಾನ್ಯಾಚ್ಚ ಸರ್ವೇಷಾಮೇವ ಪ್ರಾಣಾನಾಂ ಬ್ರಹ್ಮಪ್ರಭವತ್ವಂ ಸಿದ್ಧಂ ಭವತಿ। ತಥಾ ಹಿ। ಅಸ್ಮಿನ್ನೇವ ಪ್ರಕರಣೇ ತೇಜೋಽಬನ್ನಪೂರ್ವಕತ್ವಂ ವಾಕ್ಪ್ರಾಣಮನಸಾಮ್, ಆಮ್ನಾಯತೇ—"ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಕ್" (ಛಾಂ. ೬-೫-೪) ಇತಿ ತತ್ರ ಯದಿ ತಾವನ್ಮುಖ್ಯಮೇವ ಏಷಾಮನ್ನಾದಿಮಯತ್ವಮ್, ತತೋ ವರ್ತತ ಏವ ಬ್ರಹ್ಮಪ್ರಭವತ್ವಮ್। ಅಥ ಭಾಕ್ತಮ್, ತಥಾಪಿ ಬ್ರಹ್ಮಕರ್ತೃಕಾಯಾಂ ನಾಮರೂಪವ್ಯಾಕ್ರಿಯಾಯಾಂ ಶ್ರವಣಾತ್ "ಯೇನಾಶ್ರುತಂ ಶ್ರುತಂ ಭವತಿ" (ಛಾಂ. ೬-೧-೩) ಇತಿ ಚ ಉಪಕ್ರಮಾತ್ "ಐತದಾತ್ಮ್ಯಮಿದಂ ಸರ್ವಮ್" (ಛಾಂ. ೬-೮-೭) ಇತಿ ಚ ಉಪಸಂಹಾರಾತ್ ಶ್ರುತ್ಯನ್ತರಪ್ರಸಿದ್ಧೇಶ್ಚ ಬ್ರಹ್ಮಕಾರ್ಯತ್ವಪ್ರಪಞ್ಚನಾರ್ಥಮೇವ ಮನಆದೀನಾಮ್ ಅನ್ನಾದಿಮಯತ್ವವಚನಮ್ ಇತಿ ಗಮ್ಯತೇ। ತಸ್ಮಾದಪಿ ಪ್ರಾಣಾನಾಂ ಬ್ರಹ್ಮವಿಕಾರತ್ವಸಿದ್ಧಿಃ॥

(ಭಾಷ್ಯಾರ್ಥ)

"ತತ್ತೇಜೋಽಸೃಜತ" (ಅದು ತೇಜಸ್ಸನ್ನು ಸೃಜಿಸಿತು) (ಛಾಂ. ೬-೨-೩) ಎಂಬೀ ಪ್ರಕರಣದಲ್ಲಿ ಪ್ರಾಣಗಳ ಉತ್ಪತ್ತಿಯೇನೋ ಪಠಿತವಾಗಿಲ್ಲ; ಏಕೆಂದರೆ ತೇಜಸ್ಸು, ಅಪ್ಪು, ಅನ್ನ -ಎಂಬ ಮೂರು ಭೂತಗಳಿಗೇ ಉತ್ಪತ್ತಿಯು (ಆ) ಶ್ರುತಿಯಲ್ಲಿ (ಹೇಳಿದೆ). ಆದರೂ ಬ್ರಹ್ಮಪ್ರಕೃತಿಕವಾದ ತೇಜೋಽಬನ್ನಪೂರ್ವಕವೆಂದೇ ವಾಕ್ಪ್ರಾಣಮನಸ್ಸುಗಳನ್ನೂ ಹೇಳಿರುವದರಿಂದ[1] ಎಲ್ಲಾ ಪ್ರಾಣಗಳೂ ಅವಕ್ಕೆ ಸಮಾನವಾಗಿರುವದರಿಂದಲೂ[2] (ಪ್ರಾಣಗಳು) ಬ್ರಹ್ಮದಿಂದ ಹುಟ್ಟಿ

1. ಸೂತ್ರದಲ್ಲಿರುವ ವಾಕ್ಶಬ್ದವು ವಾಙ್ಮನಃಪ್ರಾಣಗಳಿಗೆ ಉಪಲಕ್ಷಣವೆಂದು ತೆಗೆದುಕೊಳ್ಳಬೇಕು; ಪ್ರಕೃತದಲ್ಲಿ ಪ್ರಾಣಗಳ ಉತ್ಪತ್ತಿಯನ್ನು ಹೇಳುವದಕ್ಕೆ ಅವು ಅಮ್ನಾಯವೆಂದು ತಿಳಿಯಬೇಕಾಗಿದೆ -ಎಂದು ಭಾವ.

2. ವಾಗಾದಿಗಳು ಬ್ರಹ್ಮಪ್ರಭವವೇ ಆದರೂ ಇತರ ಪ್ರಾಣಗಳಿಗೆ ಅದು ಹೇಗೆ ಸಿದ್ಧಿಸುವದು? -ಎಂದರೆ ಅವುಗಳೂ ಪ್ರಾಣಗಳೇ ಆಗಿರುವದರಿಂದ ಎಂದು ಇಲ್ಲಿ ಹೇಳಿದೆ.

ತ್ತವೆ ಎಂದು ಸಿದ್ಧವಾಗುತ್ತದೆ. ಹೇಗೆಂದರೆ ಇದೇ ಪ್ರಕರಣದಲ್ಲಿ "ಸೋಮ್ಯನೆ, ಮನಸ್ಸು ಅನ್ನಮಯವೇ, ಪ್ರಾಣವು ಆಪೋಮಯವು, ವಾಕ್ಕು ತೇಜೋಮಯವು" (ಛಾಂ. ೬-೫-೪) ಎಂದು ವಾಕ್ಪ್ರಾಣಮನಸ್ಸುಗಳಿಗೆ ತೇಜೋಬನ್ನಪೂರ್ವಕತ್ವವನ್ನು ಹೇಳಿದೆ. ಇಲ್ಲಿ **ಈ (ವಾಗಾದಿಗಳು) ಅನ್ನಾದಿಗಳಿಂದಾಗಿರುವವೆಂಬುದು ಮುಖ್ಯವೇ ಆಗಿದ್ದರೆ ಆಗ (ಇವು) ಬ್ರಹ್ಮದಿಂದ ಹುಟ್ಟುತ್ತವೆ ಎಂಬುದು ಇದ್ದೇ ಇರುತ್ತದೆ. ಹಾಗಿಲ್ಲದೆ ಗೌಣವಾಗಿದ್ದರೆ**[1] ಆಗಲೂ ಬ್ರಹ್ಮಕರ್ತೃಕವಾದ ನಾಮರೂಪವ್ಯಾಕರಣದ (ಪ್ರಕರಣದಲ್ಲಿ) ಈ ಶ್ರುತಿಯಿರುವದರಿಂದಲೂ "ಯಾವದರಿಂದ ಅಶ್ರುತವಾದದ್ದು ಶ್ರುತವಾಗುವದೋ" (ಛಾ. ೬-೧-೩) ಎಂದು ಉಪಕ್ರಮಿಸಿರುವದರಿಂದಲೂ "ಇದೆಲ್ಲವೂ ಇದನ್ನೇ ಆತ್ಮನನ್ನಾಗುಳ್ಳದ್ದು" ಎಂದು (ಛಾಂ. ೬-೮-೭) ಎಂದು ಉಪಸಂಹಾರಮಾಡಿರುವದರಿಂದಲೂ ಶ್ರುತ್ಯಂತರದಲ್ಲಿ (ಬ್ರಹ್ಮಕಾರ್ಯವೆಂದು) ಪ್ರಸಿದ್ಧವಾಗಿರುವದರಿಂದಲೂ (ಇವು) ಬ್ರಹ್ಮದ ಕಾರ್ಯವೆಂಬುದನ್ನು ವಿವರಿಸುವದಕ್ಕಾಗಿಯೇ ಮನಆದಿಗಳು ಅನ್ನಾದಿಮಯವೆಂದು (ಇಲ್ಲಿ) ಹೇಳಿದೆ ಎಂದು ನಿಶ್ಚಯವಾಗುತ್ತದೆ. ಆದ್ದರಿಂದಲೂ ಪ್ರಾಣಗಳು ಬ್ರಹ್ಮವಿಕಾರವೆಂದು ಸಿದ್ಧವಾಯಿತು.

## ೨. ಸಪ್ತಗತ್ಯಧಿಕರಣ (ಸೂ. ೫-೬)

### ಸಪ್ತಗತೇರ್ವಿಶೇಷಿತತ್ವಾಚ್ಚ ॥ ೫ ॥

೫. (ಪ್ರಾಣಗಳು) ಏಳು ; ಏಕೆಂದರೆ (ಹಾಗೆಂದು) ತಿಳಿಯಬರುತ್ತದೆ, ಮತ್ತು ವಿಶೇಷಿತವಾಗಿಯೂ ಇದೆ.

### ಪ್ರಾಣಸಂಖ್ಯೆಯ ವಿಷಯಕ್ಕೆ ಸಂಶಯ

(ಭಾಷ್ಯ)

೧೮೦. ಉತ್ಪತ್ತಿವಿಷಯಃ ಶ್ರುತಿವಿಪ್ರತಿಷೇಧಃ ಪ್ರಾಣಾನಾಂ ಪರಿಹೃತಃ। ಸಂಖ್ಯಾವಿಷಯಃ ಇದಾನೀಂ ಪರಿಹ್ರಿಯತೇ। ತತ್ರ ಮುಖ್ಯಂ ಪ್ರಾಣಮ್ ಉಪರಿಷ್ಟಾತ್ ವಕ್ಷ್ಯತಿ। ಸಂಪ್ರತಿ ತು ಕತಿ ಇತರೇ ಪ್ರಾಣಾಃ ಇತಿ ಸಂಪ್ರಧಾರಯತಿ। ಶ್ರುತಿವಿಪ್ರತಿಪತ್ತೇಶ್ಚ ಅತ್ರ ವಿಷಯಃ। ಕ್ವಚಿತ್ ಸಪ್ತ ಪ್ರಾಣಾಃ ಸಂಕೀರ್ತ್ಯನ್ತೇ "ಸಪ್ತ ಪ್ರಾಣಾಃ ಪ್ರಭವನ್ತಿ ತಸ್ಮಾತ್" (ಮು. ೨-೧-೮) ಇತಿ। ಕ್ವಚಿಚ್ಚ ಅಷ್ಟೌ ಪ್ರಾಣಾ ಗ್ರಹತ್ವೇನ ಗುಣೇನ ಸಂಕೀರ್ತ್ಯನ್ತೇ, "ಅಷ್ಟೌಗ್ರಹಾ ಅಷ್ಟಾವತಿಗ್ರಹಾಃ" (ಬೃ. ೩-೨-೧) ಇತಿ। ಕ್ವಚಿನ್ನವ, "ಸಪ್ತ ವೈ ಶೀರ್ಷಣ್ಯಾಃ ಪ್ರಾಣಾ ದ್ವಾವವಾಞ್ಚೌ" (ತೈ. ಸಂ. ೫-೩-೨-೪) ಇತಿ।

[1] ಈ ವಿಷಯದಲ್ಲಿ ೨-೪-೧೫ (ಭಾ. ಭಾ. ೧೦೯)ರಲ್ಲಿ ಹೇಳಿರುವವನ್ನೂ ಅದರ ಟಿಪ್ಪಣಿಯನ್ನೂ ನೋಡಿರಿ.

ಕ್ವಚಿದ್ದಶ, "ನವ ವೈ ಪುರುಷೇ ಪ್ರಾಣಾ ನಾಭಿರ್ದಶಮೀ" (ತೈ. ಸಂ. ೫-೩-೬-೩) ಇತಿ। ಕ್ವಚಿತ್ ಏಕಾದಶ, "ದಶೇಮೇ ಪುರುಷೇ ಪ್ರಾಣಾ ಆತ್ಮೈಕಾದಶಃ" (ಬೃ. ೩-೯-೪) ಇತಿ। ಕ್ವಚಿತ್ ದ್ವಾದಶ, "ಸರ್ವೇಷಾಂ ಸ್ಪರ್ಶಾನಾಂ ತ್ವಗೇಕಾಯನಮ್" (ಬೃ. ೨-೪-೧೧) ಇತ್ಯತ್ರ। ಕ್ವಚಿತ್ ತ್ರಯೋದಶ "ಚಕ್ಷುಶ್ಚ ದ್ರಷ್ಟವ್ಯಂ ಚ" (ಪ್ರ. ೪-೮) ಇತ್ಯತ್ರ। ಏವಂ ಹಿ ವಿಪ್ರತಿಪನ್ನಾಃ ಪ್ರಾಣೇಯತ್ತಾಂ ಪ್ರತಿ ಶ್ರುತಯಃ॥

(ಭಾಷ್ಯಾರ್ಥ)

ಪ್ರಾಣಗಳ ಉತ್ಪತ್ತಿಯ ವಿಷಯದ ಶ್ರುತಿವಿರೋಧವನ್ನು ಪರಿಹರಿಸಿದ್ದಾಯಿತು. ಸಂಖ್ಯಾವಿಷಯದ (ಶ್ರುತಿವಿರೋಧವನ್ನು) ಈಗ ಪರಿಹರಿಸಲಾಗುತ್ತದೆ. ಇವುಗಳಲ್ಲಿ ಮುಖ್ಯಪ್ರಾಣವನ್ನು (ಸೂತ್ರಕಾರರು) ಮುಂದೆ ಹೇಳುತ್ತಾರೆ; ಆದರೆ ಈಗ ಮಿಕ್ಕ ಪ್ರಾಣಗಳು ಎಷ್ಟು ಎಂಬುದನ್ನು ಇಲ್ಲಿ ನಿಶ್ಚಯಿಸುತ್ತಾರೆ.

ಶ್ರುತಿಗಳಿಗೆ (ಪರಸ್ಪರ)ವಿರೋಧಪ್ರತಿಪತ್ತಿಯಾಗುವವರಿಂದಲೇ ಇಲ್ಲಿ ಸಂಶಯ(ವುಂಟಾಗಿದೆ. ಹೇಗೆಂದರೆ): ಒಂದು ಕಡೆಯಲ್ಲಿ "ಅವನಿಂದ ಏಳು ಪ್ರಾಣಗಳು ಉಂಟಾಗುತ್ತವೆ" (ಮುಂ. ೨-೧-೮) ಎಂದು ಪ್ರಾಣಗಳು ಏಳು ಎಂದು ಹೇಳಿದೆ. ಮತ್ತೊಂದು ಕಡೆಯಲ್ಲಿ "ಎಂಟು ಗ್ರಹಗಳು, ಎಂಟು ಅತಿಗ್ರಹಗಳು" (ಬೃ. ೩-೨-೧) ಎಂದು ಗ್ರಹತ್ವವೆಂಬ ಗುಣದಿಂದ (ಕೂಡಿದ) ಪ್ರಾಣಗಳು ಎಂಟೆಂದು ಹೇಳಿರುತ್ತದೆ. ಒಂದು ಕಡೆಯಲ್ಲಿ "ತಲೆಯಲ್ಲಿರುವ ಪ್ರಾಣಗಳು ಏಳೇ, ಕೆಳಗೆ ಎರಡು" (ತೈ.ಸಂ. ೫-೩-೨-೪)ಎಂದು ಒಂಬತ್ತೆಂದು (ಹೇಳಿದೆ). ಒಂದು ಕಡೆಯಲ್ಲಿ "ಪುರುಷನಲ್ಲಿ ಒಂಬತ್ತೇ ಪ್ರಾಣಗಳು, ನಾಭಿಯು ಹತ್ತನೆಯದು" (ತೈ. ಸಂ. ೫-೩-೨-೩) ಎಂದು ಹತ್ತೆಂದು (ಹೇಳಿದೆ). ಒಂದು ಕಡೆಯಲ್ಲಿ "ಪುರುಷನಲ್ಲಿ ಈ ಹತ್ತುಪ್ರಾಣಗಳಿವೆ, ಆತ್ಮನು ಹನ್ನೊಂದನೆಯವನು" (ಬೃ. ೩-೯-೪) ಎಂದು ಹನ್ನೊಂದೆಂದು (ಹೇಳಿದೆ). ಒಂದು ಕಡೆಯಲ್ಲಿ "ಸ್ಪರ್ಶಗಳಿಗೆಲ್ಲ ತ್ವಕ್ಕು ಏಕಾಯನವು" (ಬೃ. ೨-೪-೧೧) ಎಂಬಲ್ಲಿ -ಹನ್ನೆರಡೆಂದು ಹೇಳಿದೆ. ಒಂದು ಕಡೆಯಲ್ಲಿ "ಚಕ್ಷುಸ್ಸೂ ದ್ರಷ್ಟವ್ಯವೂ" (ಪ್ರ. ೪-೮) ಎಂಬಲ್ಲಿ ಹದಿಮೂರೆಂದು ಹೇಳಿದೆ. ಹೀಗೆ ಪ್ರಾಣಗಳು ಎಷ್ಟೆಂಬ ಬಗ್ಗೆ ಶ್ರುತಿಗಳು (ಪರಸ್ಪರ)ವಿರುದ್ಧವಾಗಿಯೇ ಇವೆಯಷ್ಟೆ; (ಆದ್ದರಿಂದ ಸಂಶಯವುಂಟಾಗುತ್ತದೆ).

---

1. ಇಲ್ಲಿ ಯಥಾಶ್ರುತವಾಗಿ ಅಕ್ಷರಾರ್ಥವನ್ನು ಬರೆದಿದೆ ; ಮುಂದೆ ಭಾ. ಭಾ. ೧೮೩ ರಲ್ಲಿ ಸಿದ್ಧಾಂತಸಮ್ಮತವಾದ ಅರ್ಥವನ್ನು ಬರೆದಿದೆ.

## ಪೂರ್ವಪಕ್ಷ: ಪ್ರಾಣಗಳು ಏಳು

(ಭಾಷ್ಯ)

೧೮೧. ಕಿಂ ತಾವತ್ ಪ್ರಾಪ್ತಮ್ ? ಸಪ್ತೈವ ಪ್ರಾಣಾಃ ಇತಿ। ಕುತಃ? ಗತೇಃ. ಯತಸ್ತಾವನ್ತೋಽವಗಮ್ಯನ್ತೇ "ಸಪ್ತ ಪ್ರಾಣಾಃ ಪ್ರಭವನ್ತಿ ತಸ್ಮಾತ್" (ಮುಂ. ೨-೧-೮) ಇತ್ಯೇವಂವಿಧಾಸು ಶ್ರುತಿಷು। ವಿಶೇಷಿತಾಶ್ಚ ಏತೇ "ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ" (ತೈ. ಸಂ. ೫-೩-೨-೪) ಇತ್ಯತ್ರ। ನನು "ಪ್ರಾಣಾ ಗುಹಾಶಯಾ ನಿಹಿತಾಃ ಸಪ್ತಸಪ್ತ" (ಮುಂ. ೨-೧-೮) ಇತಿ ವೀಪ್ಸಾ ಶ್ರೂಯತೇ। ಸಾ ಸಪ್ತಭ್ಯೋಽತಿರಿಕ್ತಾನ್ ಪ್ರಾಣಾನ್ ಗಮಯತಿ ಇತಿ। ನೈಷ ದೋಷಃ। ಪುರುಷಭೇದಾಭಿಪ್ರಾಯಾ ಇಯಂ ವೀಪ್ಸಾ ಪ್ರತಿಪುರುಷಂ ಸಪ್ತಸಪ್ತ ಪ್ರಾಣಾಃ ಇತಿ, ನ ತತ್ತ್ವಭೇದಾಭಿಪ್ರಾಯಾ 'ಸಪ್ತಸಪ್ತ ಅನ್ಯೇಽನ್ಯೇ ಪ್ರಾಣಾಃ' ಇತಿ। ನನು ಅಷ್ಟತ್ವಾದಿಕಾಪಿ ಸಂಖ್ಯಾ ಪ್ರಾಣೇಷು ಉದಾಹೃತಾ। ಕಥಂ ಸಪ್ತೈವ ಸ್ಯುಃ ? ಸತ್ಯಮ್ ಉದಾಹೃತಾ। ವಿರೋಧಾತ್ ತು ಅನ್ಯತಮಾ ಸಂಖ್ಯಾ ಅಧ್ಯವಸಾತವ್ಯಾ। ತತ್ರ ಸ್ತೋಕಕಲ್ಪನಾನುರೋಧಾತ್ ಸಪ್ತಸಂಖ್ಯಾಧ್ಯವಸಾನಮ್। ವೃತ್ತಿಭೇದಾಪೇಕ್ಷಂ ಚ ಸಂಖ್ಯಾನ್ತರಶ್ರವಣಮ್ ಇತಿ ಮನ್ಯತೇ ॥

(ಭಾಷ್ಯಾರ್ಥ)

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಪ್ರಾಣಗಳು ಏಳೇ ಎಂದು (ಬಂದೊದಗುತ್ತದೆ). ಏಕೆ ? ಎಂದರೆ ಗತಿಯಾಗುವದರಿಂದ. (ಇದರ ವಿವರ) : "ಅವನಿಂದ ಏಳು ಪ್ರಾಣಗಳು ಉಂಟಾಗುತ್ತವೆ" (ಮುಂ. ೨-೧೮) ಎಂಬೀ ವಿಧದ ಶ್ರುತಿಗಳಲ್ಲಿ ಅಷ್ಟೇ (ಪ್ರಾಣ)ಗಳೆಂದಲ್ಲವೆ, ತಿಳಿಯ ಬರುತ್ತದೆ? ಮತ್ತು "ತಲೆಯಲ್ಲಿ ಏಳೇ ಪ್ರಾಣಗಳು" (ತೈ. ಸಂ. ೫-೩-೨-೪) ಎಂಬಲ್ಲಿ ಇವನ್ನು ವಿಶೇಷಣ(ಪೂರ್ವಕವಾಗಿ) ಹೇಳಿದೆ[1].

(ಶಂಕೆ):- "ಗುಹಾಶಯವಾದ ಪ್ರಾಣಗಳು ಏಳೇಳಾಗಿ ಇಡಲ್ಪಟ್ಟಿವೆ" (ಮು. ೨-೧-೮) ಎಂದು ವೀಪ್ಸೆಯು ಶ್ರುತಿಯಲ್ಲಿದೆಯಲ್ಲ! ಅದರಿಂದ ಏಳಕ್ಕಿಂತಲೂ ಬೇರೆಯಾಗಿ ಪ್ರಾಣಗಳುಂಟೆಂದು ತಿಳಸುವದಿಲ್ಲವೆ ?

(ಪರಿಹಾರ):- ಇದೇನೂ ದೋಷವಲ್ಲ. ಏಕೆಂದರೆ ಈ ವೀಪ್ಸೆಯು ಒಬ್ಬೊಬ್ಬ ಪುರುಷನಿಗೂ ಏಳೇಳು ಪ್ರಾಣಗಳು ಎಂದು ಬೇರೆಬೇರೆ ಪುರುಷರ ಅಭಿಪ್ರಾಯದಿಂದ ಹೇಳಿದ್ದೇ ಹೊರತು ಏಳೇಳು ಬೇರೆಬೇರೆಯ ಪ್ರಾಣಗಳು ಎಂದು ತತ್ತ್ವಭೇದವನ್ನು (ಹೇಳುವ) ಅಭಿಪ್ರಾಯದಿಂದ ಹೇಳಿರುವದಲ್ಲ.

---

1. ತಲೆಯಲ್ಲಿರುವವೇ ಪ್ರಾಣಗಳು _ಎಂದು ಸವಿಶೇಷಣವಾಗಿ ಹೇಳಿರುವದರಿಂದ ಮಿಕ್ಕವು ಇಲ್ಲವೆಂದಂತೆ ಆಯಿತು ಎಂದರ್ಥ.

(ಶಂಕೆ) :– ಎಂಟು ಮುಂತಾದ ಸಂಖ್ಯೆಯನ್ನೂ ಪ್ರಾಣಗಳ ವಿಷಯ ದಲ್ಲಿ ಉದಾಹರಿಸಿದ್ದಾಗಿದೆ. (ಹೀಗಿರುವಲ್ಲಿ) ಏಳೇ ಹೇಗಾದಾವು ?

(ಪರಿಹಾರ) :– ನಿಜ, ಉದಾಹರಿಸಿದ್ದಾಗಿದೆ. ಆದರೆ (ಶ್ರುತಿಗಳಿಗೆ) ವಿರೋಧವಿರುವದರಿಂದ (ಇವುಗಳಲ್ಲಿ) ಯಾವದಾದರೊಂದು ಸಂಖ್ಯೆಯನ್ನು ನಿಶ್ಚಯಿಸಬೇಕಾಗುತ್ತದೆ. ಹೀಗಿರುವಲ್ಲಿ ಕಡಿಮೆಯ ಸಂಖ್ಯೆಯನ್ನು ಅನುಸರಿ ಸಿದರೆ ಏಳೆಂಬ ಸಂಖ್ಯೆಯನ್ನು ನಿಶ್ಚಯಿಸಬೇಕಾಗುತ್ತದೆ. ಉಳಿದ ಸಂಖ್ಯೆಗಳನ್ನು ಶ್ರುತಿಗಳಲ್ಲಿ ಹೇಳಿರುವದು ಬೇರೆಬೇರೆ ವೃತ್ತಿಗಳ ಅಪೇಕ್ಷೆಯಿಂದ ಎಂದು (ಪೂರ್ವಪಕ್ಷಿಯ) ಮತವು.

**ಹಸ್ತಾದಯಸ್ತು ಸ್ಥಿತೇಽತೋ ನೈವಮ್ ॥ ೭ ॥**

೬. ಆದರೆ ಹಸ್ತಾದಿಗಳೂ (ಇವೆ). (ಇದು) ಇರುವಲ್ಲಿ ಹೀಗಾಗಲಾರದು.

## ಏಳಕ್ಕಿಂತ ಹೆಚ್ಚಿನ ಸಂಖ್ಯೆಯು ಪ್ರಾಣಗಳ ಶ್ರುತಿಯಿದೆ

(ಭಾಷ್ಯ)

೧೮೨. ಅತ್ರೋಚ್ಯತೇ। (ಹಸ್ತಾದಯಸ್ತು ಸ್ಥಿತೇಽತೋ ನೈವಮ್)। ಹಸ್ತಾದಯಸ್ತು ಅಪರೇ ಸಪ್ತಭ್ಯೋಽತಿರಿಕ್ತಾಃ ಪ್ರಾಣಾಃ ಶ್ರೂಯನ್ತೇ –"ಹಸ್ತೌ ವೈ ಗ್ರಹಃ ಸ ಕರ್ಮಣಾಽತಿಗ್ರಹೇಣ ಗೃಹೀತೋ ಹಸ್ತಾಭ್ಯಾಂ ಹಿ ಕರ್ಮ ಕರೋತಿ" (ಬೃ. ೩–೨–೮) ಇತ್ಯೇವಮಾದ್ಯಾಸು ಶ್ರುತಿಷು। ಸ್ಥಿತೇ ಚ ಸಪ್ತತ್ವಾತಿರೇಕೇ ಸಪ್ತತ್ವಮ್ ಅನ್ತರ್ಭಾವಾತ್ ಶಕ್ಯತೇ ಸಂಭಾವಯಿತುಮ್। ಹೀನಾಧಿಕಸಂಖ್ಯಾವಿಪ್ರತಿಪತ್ತೌ ಹಿ ಅಧಿಕಾ ಸಂಖ್ಯಾ ಸಂಗ್ರಾಹ್ಯಾ ಭವತಿ। ತಸ್ಯಾಂ ಹೀನಾ ಅನ್ತರ್ಭವತಿ, ನ ತು ಹೀನಾಯಾಮ್ ಅಧಿಕಾ। ಅತಶ್ಚ ನೈವಂ ಮನ್ತವ್ಯಮ್ ಸ್ತೋಕಕಲ್ಪನಾನುರೋಧಾತ್ ಸಪ್ತೈವ ಪ್ರಾಣಾಃ ಸ್ಯುಃ ಇತಿ ॥

(ಭಾಷ್ಯಾರ್ಥ)

ಇದಕ್ಕೆ (ಸಿದ್ಧಾಂತವನ್ನು) ಹೇಳುತ್ತೇವೆ. (ಹಸ್ತಾದಯಸ್ತು ಸ್ಥಿತೇಽತೋ ನೈವಮ್)। ಏಳಕ್ಕಿಂತ ಬೇರೆಯಾಗಿರುವ ಹಸ್ತವೇ ಮುಂತಾದ ಇನ್ನೂ ಕೆಲವು ಪ್ರಾಣಗಳನ್ನು "ಹಸ್ತವೇ ಗ್ರಹವು, ಅದು ಕರ್ಮವೆಂಬ ಅತಿಗ್ರಹದಿಂದ ಗೃಹೀತವಾಗಿರುತ್ತದೆ; ಹಸ್ತಗಳಿಂದಲೇ ಅಲ್ಲವೆ, ಕರ್ಮವನ್ನು ಮಾಡುತ್ತಾನೆ ?" (ಬೃ. ೩–೨–೮) ಎಂಬಿವೇ ಮುಂತಾದ ಶ್ರುತಿಗಳಲ್ಲಿ ಹೇಳಿದೆ. ಏಳಕ್ಕಿಂತ ಹೆಚ್ಚಾಗಿರುವಲ್ಲಿ ಏಳನ್ನು ಅಂತರ್ಭಾವಮಾಡಿ ಹೊಂದಿಸುವದಕ್ಕೆ ಆಗುತ್ತದೆ. ಕಡಿಮೆ, ಹೆಚ್ಚು ಎಂಬೀ ಸಂಖ್ಯೆಗಳಿಗೆ ವಿರೋಧವುಂಟಾದರೆ ಅಧಿಕಸಂಖ್ಯೆಯನ್ನೇ ಗ್ರಹಿಸಬೇಕಾಗುತ್ತದೆ; (ಏಕೆಂದರೆ) ಆದರಲ್ಲಿ ಕಡಿಮೆಯದು ಅಂತರ್ಭಾವ

ವಾಗುತ್ತದೆಯೇ ಹೊರತು ಕಡಿಮೆಯದರಲ್ಲಿ ಹೆಚ್ಚಿನ (ಸಂಖ್ಯೆಯು ಅಡಕವಾಗುವ)ದಿಲ್ಲ. ಆದ್ದರಿಂದಲೂ ಅಲ್ಪಕಲ್ಪನೆಗೆ ಅನುಸಾರವಾಗಿ ಪ್ರಾಣಗಳು ಏಳೇ ಇರಬೇಕು ಎಂದಿಂತು ತಿಳಿಯಬಾರದಾಯಿತು.[1]

## ಪ್ರಾಣಗಳು ಹನ್ನೊಂದೇ

(ಭಾಷ್ಯ)

೧೮೩. ಉತ್ತರಸಂಖ್ಯಾನುರೋಧಾತ್ತು ಏಕಾದಶೈವ ತೇ ಪ್ರಾಣಾಃ ಸ್ಯುಃ। ತಥಾ ಚ ಉದಾಹೃತಾ ಶ್ರುತಿಃ। "ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶ" (ಬೃ. ೩-೯-೪) ಇತಿ। ಆತ್ಮಶಬ್ದೇನ ಚ ಅತ್ರ ಅನ್ತಃಕರಣಂ ಪರಿಗೃಹ್ಯತೇ। ಕರಣಾಧಿಕಾರಾತ್। ನನು ಏಕಾದಶತ್ವಾದಪಿ ಅಧಿಕೇ ದ್ವಾದಶ ತ್ರಯೋದಶತ್ವೇ ಉದಾಹೃತೇ। ಸತ್ಯಮ್ ಉದಾಹೃತೇ। ನ ತು ಏಕಾದಶಭ್ಯಃ ಕಾರ್ಯಜಾತೇಭ್ಯಃ ಅಧಿಕಂ ಕಾರ್ಯಜಾತಮಸ್ತಿ ಯದರ್ಥಮ್ ಅಧಿಕಂ ಕರಣಂ ಕಲ್ಪ್ಯೇತ। ಶಬ್ದಸ್ಪರ್ಶರೂಪರಸಗನ್ಧವಿಷಯಾಃ ಪಞ್ಚ ಬುದ್ಧಿಭೇದಾಃ, ತದರ್ಥಾನಿ ಪಞ್ಚ ಬುದ್ಧೀನ್ದ್ರಿಯಾಣಿ। ವಚನಾದಾನವಿಹರಣೋತ್ಸರ್ಗಾನನ್ದಾಃ ಪಞ್ಚ ಕರ್ಮಭೇದಾಃ ತದರ್ಥಾನಿ ಚ ಪಞ್ಚ ಕರ್ಮೇನ್ದ್ರಿಯಾಣಿ। ಸರ್ವಾರ್ಥವಿಷಯಂ ತ್ರೈಕಾಲ್ಯವೃತ್ತಿ ಮನಸ್ತು ಏಕಮ್ ಅನೇಕವೃತ್ತಿಕಮ್। ತದೇವ ವೃತ್ತಿಭೇದಾತ್ ಕ್ವಚಿದ್ ಭಿನ್ನವದ್ ವ್ಯಪದಿಶ್ಯತೇ ಮನಃ, ಬುದ್ಧಿಃ ಅಹಂಕಾರಃ, ಚಿತ್ತಂ ಚ ಇತಿ। ತಥಾ ಶ್ರುತಿಃ ಕಾಮಾದ್ಯಾಃ ನಾನಾವಿಧಾಃ ವೃತ್ತೀಃ ಅನುಕ್ರಮ್ಯ ಆಹ "ಏತತ್ ಸರ್ವಂ ಮನ ಏವ" (ಬೃ. ೧-೫-೩) ಇತಿ। ಅಪಿ ಚ ಸಪ್ತೈವ ಶೀರ್ಷಣ್ಯಾನ್ ಪ್ರಾಣಾನ್ ಅಭಿಮನ್ಯಮಾನಸ್ಯ ಚತ್ವಾರ ಏವ ಪ್ರಾಣಾ ಅಭಿಮತಾಃ ಸ್ಯುಃ ಸ್ಥಾನಭೇದಾದ್ಧ್ಯೇತೇ ಚತ್ವಾರಃ ಸನ್ತಃ ಸಪ್ತ ಗಣ್ಯನ್ತೇ 'ದ್ವೇ ಶ್ರೋತ್ರೇ, ದ್ವೇ ಚಕ್ಷುಷೀ, ದ್ವೇ ನಾಸಿಕೇ, ಏಕಾ ವಾಕ್' ಇತಿ। ನ ಚ ತಾವತಾಮೇವ ವೃತ್ತಿಭೇದಾಃ ಇತರೇ ಪ್ರಾಣಾಃ ಇತಿ ಶಕ್ಯತೇ ವಕ್ತುಮ್। ಹಸ್ತಾದಿವೃತ್ತೀನಾಮ್ ಅತ್ಯನ್ತವಿಜಾತೀಯತ್ವಾತ್। ತಥಾ "ನವ ವೈ ಪುರುಷೇ ಪ್ರಾಣಾ ನಾಭಿರ್ದಶಮೀ" (ತೈ. ಸಂ. ೫-೩-೨-೩) ಇತ್ಯತ್ರಾಪಿ ದೇಹಚ್ಛಿದ್ರಭೇದಾಭಿಪ್ರಾಯೇಣೈವ ದಶ ಪ್ರಾಣಾ ಉಚ್ಯನ್ತೇ, ನ ಪ್ರಾಣತತ್ತ್ವಭೇದಾಭಿಪ್ರಾಯೇಣ। "ನಾಭಿರ್ದಶಮೀ" ಇತಿ ವಚನಾತ್। ನ ಹಿ ನಾಭಿರ್ನಾಮ ಕಶ್ಚಿತ್ ಪ್ರಾಣಃ ಪ್ರಸಿದ್ಧೋಽಸ್ತಿ। ಮುಖ್ಯಸ್ಯ ತು ಪ್ರಾಣಸ್ಯ ಭವತಿ ನಾಭಿರಪಿ ಏಕಂ ವಿಶೇಷಾಯತನಮ್ ಇತ್ಯತಃ 'ನಾಭಿರ್ದಶಮೀ' ಇತ್ಯುಚ್ಯತೇ। ಕ್ವಚಿತ್ ಉಪಾಸನಾರ್ಥಂ ಕತಿಚಿತ್

---

1. ಲಾಘವವಿರುವದರಿಂದ ಕಡಿಮೆಯ ಸಂಖ್ಯೆಯನ್ನು ಇಟ್ಟುಕೊಳ್ಳಬೇಕು ಎನುವದು ಸರಿಯಲ್ಲ; ಏಕೆಂದರೆ ಹೆಚ್ಚಿನ ಸಂಖ್ಯೆಯು ಅದರೊಳಗೆ ಅಂತರ್ಭಾವವಾಗುವದಿಲ್ಲ

ಪ್ರಾಣಾಃ ಗಣ್ಯನ್ತೇ, ಕ್ವಚಿತ್ ಪ್ರದರ್ಶನಾರ್ಥಮ್। ತದೇವಂ ವಿಚಿತ್ರೇ ಪ್ರಾಣೇಯತ್ತಾಮ್ನಾನೇ ಸತಿ ಕ್ವ ಕಿಂ ಪರಮ್ ಆಮ್ನಾನಮ್ ಇತಿ ವಿವೇಕ್ತವ್ಯಮ್। ಕಾರ್ಯಜಾತವಶಾತ್ತು ಏಕಾದಶತ್ವಾಮ್ನಾನಂ ಪ್ರಾಣವಿಷಯಂ ಪ್ರಮಾಣಮ್ ಇತಿ ಸ್ಥಿತಮ್ ॥

(ಭಾಷ್ಯ)

ಹೆಚ್ಚಿಗೆಯ ಸಂಖ್ಯೆಯನ್ನು ಅನುಸರಿಸಿದರೂ ಆ ಪ್ರಾಣಗಳು ಹನ್ನೊಂದೇ ಆಗಬೇಕು. ಇವಕ್ಕೆ ತಕ್ಕಂತೆ "ಪುರುಷನಲ್ಲಿ ಈ ಹತ್ತು ಪ್ರಾಣಗಳಿವೆ, ಆತ್ಮವು ಹನ್ನೊಂದನೆಯದು" (ಬೃ. ೩-೧-೪) ಎಂಬ ಶ್ರುತಿಯನ್ನು (ಆಗಲಿ) ಉದಾಹರಿಸಿದ್ದಾಗಿದೆ. ಆತ್ಮವೆಂಬ ಮಾತಿನಿಂದ ಈ (ಶ್ರುತಿ)ಯಲ್ಲಿ ಅಂತಃಕರಣವನ್ನು ಪರಿಗ್ರಹಿಸಬೇಕು; ಏಕೆಂದರೆ (ಇದು) ಕರಣಗಳ ಪ್ರಕರಣವು.

(ಆಕ್ಷೇಪ) :- ಹನ್ನೊಂದಕ್ಕಿಂತಲೂ ಹೆಚ್ಚಾಗಿ ಹನ್ನೆರಡು, ಹದಿಮೂರು- ಎಂಬ (ಸಂಖ್ಯೆ)ಗಳನ್ನೂ ಉದಾಹರಿಸಿಲ್ಲವೆ?

(ಪರಿಹಾರ) :- ನಿಜ, ಉದಾಹರಿಸಿದ್ದಾಗಿದೆ. ಆದರೆ ಹನ್ನೊಂದು ಕಾರ್ಯಜಾತಗಳಿಗಿಂತ ಹೆಚ್ಚಾದ ಕಾರ್ಯಜಾತವು ಇರುವದಿಲ್ಲ; (ಹಾಗಿದ್ದರಲ್ಲವೆ), ಅದಕ್ಕಾಗಿ ಹೆಚ್ಚಿನ ಕರಣವನ್ನು ಕಲ್ಪಿಸಬೇಕಾಗಿತ್ತು?[1] ಶಬ್ದಸ್ಪರ್ಶರೂಪರಸಗಂಧಗಳ ವಿಷಯವಾದ ಬುದ್ಧಿವಿಶೇಷಗಳು ಐದು, ಅದಕ್ಕಾಗಿ ಐದು **ಬುದ್ಧೀಂದ್ರಿಯಗಳು**; ಮಾತನಾಡುವದು, ಸ್ವೀಕರಿಸುವದು, ಓಡಾಡುವದು, ಬಿಡುವದು, ಸುಖಿಸುವದು-ಎಂದು ಐದು ಕರ್ಮವಿಶೇಷಗಳು, ಅದಕ್ಕಾಗಿ ಐದು ಕರ್ಮೇಂದ್ರಿಯಗಳು; ಸರ್ವಾರ್ಥವಿಷಯವೂ ಮೂರು ಕಾಲದಲ್ಲಿಯೂ ವ್ಯಾಪಾರವುಳ್ಳದ್ದೂ ಆಗಿರುವ ಮನಸ್ಸೆಂಬ ಅನೇಕವೃತ್ತಿಗಳುಳ್ಳ (ಕರಣವು) ಒಂದು; ಅದನ್ನೇ ವೃತ್ತಿಭೇದದಿಂದ 'ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ' ಎಂದು ಬೇರೆಬೇರೆಯಾಗಿರುವಂತೆ ಕರೆದಿರುತ್ತಾರೆ[2]. ಆದ್ದರಿಂದಲೇ ಶ್ರುತಿಯು ಕಾಮವೇ ಮುಂತಾದ ಬಗೆಬಗೆಯ ವೃತ್ತಿಗಳನ್ನು[3] ಒಂದೊಂದಾಗಿ ಹೇಳಿ "ಇವೆಲ್ಲವೂ ಮನಸ್ಸೇ" (ಬೃ. ೧-೫-೩) ಎಂದು ಹೇಳಿರುತ್ತದೆ.

---

1. ಶ್ರುತಿಗಳೆರಡಕ್ಕೆ ವಿರೋಧವಾದರೆ ನ್ಯಾಯೋಪಬೃಂಹಿತಶ್ರುತಿಯು ಪ್ರಬಲವಾಗುತ್ತದೆ; ಇಲ್ಲಿ ಹನ್ನೊಂದೇ ಕಾರ್ಯವಿರುತ್ತದೆ ಎಂಬ ನ್ಯಾಯವಿದೆ.

2. ವೃತ್ತಿಪ್ರಧಾನವಾಗಿಯೂ ಸಾಮಾನ್ಯವಾಗಿಯೂ ಅಂತಃಕರಣಕ್ಕೆ ಈ ಹೆಸರುಗಳು ಇರುವವು. ೨-೩-೩೨ (ಭಾ. ಭಾ. ೧೪೩)ನ್ನು ನೋಡಿ.

3. ವೃತ್ತಿ ಎಂದರೆ ಜ್ಞಾನವೇ ಎಂಬುದಿಲ್ಲ, ಕಾಮಾದಿಗಳೂ ಅಂತಃಕರಣದ ಪರಿಣಾಮವಿಶೇಷಗಳಾಗಿರುವ ವೃತ್ತಿಗಳೇ- ಎಂದು ಇಲ್ಲಿ ಹೇಳಿರುವದನ್ನು ಲಕ್ಷಿಸಬೇಕು

ಇದಲ್ಲದೆ ತಲೆಯಲ್ಲಿರುವ ಏಳೇ ಪ್ರಾಣಗಳೆಂದು ಅಭಿಪ್ರಾಯವಿರುವವನ (ಮತ)ದಲ್ಲಿ ಪ್ರಾಣಗಳು ನಾಲ್ಕೇ ಎಂದು ಒಪ್ಪಿದಂತಾಗುವದು. ಏಕೆಂದರೆ ಇವು ನಾಲ್ಕೇ ಆಗಿದ್ದರೂ ಸ್ಥಾನಭೇದದಿಂದಲೇ ಎರಡು ಶ್ರೋತ್ರಗಳು, ಎರಡು ಚಕ್ಷುಸ್ಸುಗಳು, ಎರಡು ನಾಸಿಕೆಗಳು, ಒಂದು ವಾಕ್ಕು– ಎಂದು (ಇವನ್ನು) ಏಳಾಗಿ ಲೆಕ್ಕಮಾಡಿರುತ್ತದೆ. ಆದರೆ ಉಳಿದ ಪ್ರಾಣಗಳು ಇವಿಷ್ಟೇ ಪ್ರಾಣಗಳ ವೃತ್ತಿಭೇದಗಳು ಎಂದು ಹೇಳುವದಕ್ಕಾಗುವದಿಲ್ಲ ; ಏಕೆಂದರೆ ಹಸ್ತಾದಿಗಳ ವೃತ್ತಿಗಳು ಅತ್ಯಂತವಿಜಾತೀಯವಾಗಿರುತ್ತವೆ[1] ಹೀಗೆಯೇ "ಪುರುಷನಲ್ಲಿರುವ ಪ್ರಾಣಗಳು ಒಂಬತ್ತೇ; ನಾಭಿಯು ಹತ್ತನೆಯದು" (ತೈ. ಸಂ. ೫–೩ ೨–೩)ಎಂಬಲ್ಲಿಯೂ ದೇಹದ ರಂಧ್ರಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ ಹತ್ತು ಪ್ರಾಣಗಳು ಎಂದಿದೆಯೇ ಹೊರತು ಪ್ರಾಣತತ್ತ್ವದ ಭೇದಗಳನ್ನು ಮನದಂದುಕೊಂಡು ಹೇಳಿಲ್ಲ ; ಏಕೆಂದರೆ 'ಹೊಕ್ಕುಳು ಹತ್ತನೆಯದು' ಎಂಬ ವಚನವಿದೆ. ಹೊಕ್ಕುಳು ಎಂಬ ಪ್ರಾಣವು ಯಾವದೂ ಪ್ರಸಿದ್ಧವಾಗಿಲ್ಲವಷ್ಟೆ ; ಆದರೆ ಮುಖ್ಯಪ್ರಾಣಕ್ಕೆ ಹೊಕ್ಕುಳೂ ಒಂದು ವಿಶೇಷಸ್ಥಾನವಾಗಿದೆ ಎಂಬದರಿಂದ 'ಹೊಕ್ಕುಳು ಹತ್ತನೆಯದು' ಎಂದು ಹೇಳಿದೆ. ಕೆಲವು ಕಡೆಗಳಲ್ಲಿ ಉಪಾಸನೆಗಾಗಿ ಕೆಲವನ್ನು ಪ್ರಾಣಗಳೆಂದು ಲೆಕ್ಕಹಿಡಿದಿರುತ್ತದೆ ; ಕೆಲವು ಕಡೆಗಳಲ್ಲಿ ಉಪಲಕ್ಷಣಾರ್ಥವಾಗಿ ಹೇಳಿರುತ್ತದೆ[2] .

ಅಂತು ಹೀಗೆ ಪ್ರಾಣಗಳು ಇಂತಿಷ್ಟೆಂಬದಕ್ಕೆ ಶ್ರುತಿಯು ಬಗೆಬಗೆಯಾಗಿರುವದರಿಂದ ಎಲ್ಲಿ ಯಾವದರಲ್ಲಿ ತಾತ್ಪರ್ಯವಿದೆ ಎಂಬುದನ್ನು ವಿವೇಚನೆಮಾಡಬೇಕಾಗುತ್ತದೆ. ಆದರೆ ಕಾರ್ಯಜಾತಗಳ ವಶದಿಂದ ಪ್ರಾಣಗಳ ವಿಷಯದಲ್ಲಿ ಹನ್ನೊಂದೆಂಬ ಪಾಠವು ಪ್ರಮಾಣವೆಂದು (ಇಲ್ಲಿ) ನಿಂತಿರುತ್ತದೆ.

## ಸೂತ್ರಗಳಿಗೆ ಮತ್ತೊಂದು ಯೋಜನೆ, ಪೂರ್ವಪಕ್ಷ

(ಭಾಷ್ಯ)

೧೮೪. ಇಯಮಪರಾ ಸೂತ್ರದ್ವಯಯೋಜನಾ । ಸಪ್ತೈವ ಪ್ರಾಣಾಃ ಸ್ಯುಃ ಯತಃ ಸಪ್ತಾನಾಮೇವ ಗತಿಃ ಶ್ರೂಯತೇ "ತಮುತ್ಕ್ರಾಮನ್ತಂ ಪ್ರಾಣೋಽನೂತ್ಕ್ರಾಮತಿ ಪ್ರಾಣಮನೂತ್ಕ್ರಾಮನ್ತಂ ಸರ್ವೇ ಪ್ರಾಣಾ ಅನೂತ್ಕ್ರಾಮನ್ತಿ" (ಬೃ. ೩–೪–೨) ಇತ್ಯತ್ರ । ನನು ಸರ್ವಶಬ್ದೋಽಪ್ಯತ್ರ

---

1. ಜ್ಞಾನಾರ್ಥವಾಗಿರುವ ಕರಣಗಳಲ್ಲಿ ಕರ್ಮಾರ್ಥವಾದವುಗಳನ್ನು ಅಡಕಮಾಡುವದಕ್ಕೆ ಬರುವದೇ ಇಲ್ಲ ಎಂದು ಭಾವ.

2. ಉಪಾಸನೆಗಾಗಿ ಹೇಳಿರುವಲ್ಲಿ ಸಂಖ್ಯೆಯು ಅಷ್ಟೇ ಎಂಬದರಲ್ಲಿ ತಾತ್ಪರ್ಯವಿರುವದಿಲ್ಲ ; ಉಪಲಕ್ಷಣಕ್ಕಾಗಿ ಕೆಲವನ್ನೇ ಹೇಳಿದ್ದರೂ ಮಿಕ್ಕವನ್ನೂ ಗ್ರಹಿಸಬೇಕಾಗುತ್ತದೆ.

ಪಶ್ಯತೇ। ತತ್ ಕಥಂ ಸಪ್ತಾನಾಮೇವ ಗತಿಃ ಪ್ರತಿಜ್ಞಾಯತೇ ಇತಿ। ವಿಶೇಷಿತತ್ವಾತ್ ಇತ್ಯಾಹ। ಸಪ್ತೈವ ಹಿ ಪ್ರಾಣಾಃ ಚಕ್ಷುರಾದಯಃ ತ್ವಕ್ಪರ್ಯನ್ತಾಃ ವಿಶೇಷಿತಾಃ ಇಹ ಪ್ರಕೃತಾಃ "ಸ ಯತ್ರೈಷ ಚಾಕ್ಷುಷಃ ಪುರುಷಃ ಪರಾಙ್ಪರ್ಯಾವರ್ತತೇಽಥಾರೂಪಜ್ಞೋ ಭವತಿ" (ಬೃ. ೪-೪-೧), "ಏಕೀಭವತಿ ನ ಪಶ್ಯತೀತ್ಯಾಹುಃ" (ಬೃ. ೪-೪-೨) ಇತ್ಯೇವಮಾದಿನಾ ಅನುಕ್ರಮಣೇನ। ಪ್ರಕೃತಗಾಮೀ ಚ ಸರ್ವಶಬ್ದೋ ಭವತಿ ಯಥಾ 'ಸರ್ವೇ ಬ್ರಾಹ್ಮಣಾಃ ಭೋಜಯಿತವ್ಯಾಃ' ಇತಿ ಯೇ ನಿಮನ್ತ್ರಿತಾಃ ಪ್ರಕೃತಾ ಬ್ರಾಹ್ಮಣಾಃ ತ ಏವ ಸರ್ವಶಬ್ದೇನ ಉಚ್ಯನ್ತೇ ನಾನ್ಯೇ। ಏವಮ್ ಇಹಾಪಿ ಯೇ ಪ್ರಕೃತಾಃ ಸಪ್ತಪ್ರಾಣಾಃ ತ ಏವ ಸರ್ವಶಬ್ದೇನ ಉಚ್ಯನ್ತೇ ನಾನ್ಯೇ ಇತಿ। ನನ್ವತ್ರ ವಿಜ್ಞಾನಮ್ ಅಷ್ಟಮಮ್ ಅನುಕ್ರಾನ್ತಮ್। ಕಥಂ ಸಪ್ತಾನಾಮೇವ ಅನುಕ್ರಮಣಮ್ ? ನೈಷ ದೋಷಃ। ಮನೋವಿಜ್ಞಾನಯೋಃ ತತ್ತ್ವಾಭೇದಾತ್ ವೃತ್ತಿಭೇದೇಽಪಿ ಸಪ್ತತ್ವೋಪಪತ್ತೇಃ। ತಸ್ಮಾತ್ ಸಪ್ತೈವ ಪ್ರಾಣಾಃ ಇತಿ ॥

(ಭಾಷ್ಯಾರ್ಥ)

**(ಈ) ಎರಡು ಸೂತ್ರಗಳಿಗೆ ಇದು ಮತ್ತೊಂದು ಯೋಜನೆ.** ಪ್ರಾಣಗಳು ಏಳೇ ಆಗಿರಬೇಕು. ಏಕೆಂದರೆ "ಅವನು ಉತ್ಕ್ರಾಂತನಾಗುತ್ತಿರುವಲ್ಲಿ ಪ್ರಾಣವು ಹಿಂದೆಯೇ ಉತ್ಕ್ರಾಂತವಾಗುವದು; ಪ್ರಾಣವು ಹಿಂದೆ ಉತ್ಕ್ರಾಂತವಾಗಲು ಸರ್ವಪ್ರಾಣಗಳೂ ಉತ್ಕ್ರಾಂತವಾಗುವವು" (ಬೃ. ೪-೪-೨) ಎಂಬಲ್ಲಿ ಏಳಕ್ಕೇ ಗತಿಯನ್ನು ಶ್ರುತಿಯಲ್ಲಿ (ಹೇಳಿದೆ).

(ಆಕ್ಷೇಪ) :- ಇಲ್ಲಿ (ಎಲ್ಲಾ ಎಂಬ ಅರ್ಥದ) ಸರ್ವಶಬ್ದವೂ ಪಠಿತವಾಗಿದೆಯಲ್ಲ! (ಇಲ್ಲಿ) ಏಳಕ್ಕೇ ಗತಿಯನ್ನು ಹೇಳಿದೆ ಎಂದು (ನೀವು) ಪ್ರತಿಜ್ಞೆ ಮಾಡುತ್ತಿರುವದು ಹೇಗೆ (ಸರಿ) ?

(ಪರಿಹಾರ) :- ವಿಶೇಷಿತವಾಗಿರುವದರಿಂದ (ಎಂದು ಈ ವಾದಿಯು) ಹೇಳುತ್ತಾನೆ. "ಆ ಈ ಚಾಕ್ಷುಷಪುರುಷನು ಯಾವಾಗ ಹೊರಕ್ಕೆ ಹೊರಟು ಹೋಗುತ್ತಾನೋ ಆಗ ರೂಪವನ್ನು ತಿಳಿಯಲಾರದವನಾಗಿರುತ್ತಾನೆ" (ಬೃ. ೪-೪-೧), "ಒಂದಾಗಿಬಿಡುತ್ತಾನೆ, (ಆಗ) ಕಾಣದೆ ಇರುತ್ತಾನೆ ಎನ್ನುವರು" (ಬೃ. ೪-೪-೨) ಎಂದು ಮುಂತಾಗಿರುವ ಅನುಕ್ರಮಣದಿಂದ ಚಕ್ಷುರಾದಿಯಾಗಿ ತ್ವಕ್ಪರ್ಯಂತವಾಗಿರುವ ಏಳೇ ಪ್ರಾಣಗಳೇ ವಿಶೇಷಿತವಾಗಿ ಇಲ್ಲಿ ಪ್ರಕೃತವಾಗಿವೆ[1]. ಸರ್ವಶಬ್ದವು ಪ್ರಕೃತಗಾಮಿಯಾಗಿರುತ್ತದೆ. ಹೇಗೆಂದರೆ

1. 'ಸಪ್ತಗತೇರ್ವಿಶೇಷಿತತ್ವಾಚ್ಚ' ಎಂಬ ಸೂತ್ರಕ್ಕೆ ಈ ವ್ಯಾಖ್ಯಾನದಂತೆ ಅರ್ಥವು ಹೇಗೆಂದರೆ: (ಏಳಕ್ಕೇ) ಗತಿಯನ್ನು ಹೇಳಿರುವದರಿಂದಲೂ (ಏಳೇ) ವಿಶೇಷಿತವಾಗಿರುವದರಿಂದಲೂ (ಪ್ರಾಣಗಳು) ಏಳು.

'ಸರ್ವಬ್ರಾಹ್ಮಣರಿಗೂ ಭೋಜನಮಾಡಿಸಬೇಕು' ಎಂಬಲ್ಲಿ ಯಾವ ಬ್ರಾಹ್ಮಣರು ನಿಮಂತ್ರಿತರಾಗಿರುವದರಿಂದ ಪ್ರಕೃತರಾಗಿರುತ್ತಾರೋ ಅವರನ್ನೇ ಸರ್ವಶಬ್ದದಿಂದ ಹೇಳುತ್ತಾರೆಯೇ ಹೊರತು ಮಿಕ್ಕವರನ್ನಲ್ಲ. ಹಾಗೆಯೇ ಇಲ್ಲಿಯೂ ಪ್ರಕೃತವಾಗಿರುವ ಏಳು ಪ್ರಾಣಗಳಿವೆಯಲ್ಲ, ಅವನ್ನೇ ಸರ್ವಶಬ್ದದಿಂದ ಹೇಳಿರುತ್ತದೆ, ಮಿಕ್ಕವನ್ನಲ್ಲ.

(ಆಕ್ಷೇಪ) :– ಇಲ್ಲಿ 'ವಿಜ್ಞಾನವೆಂಬ' ಎಂಟನೆಯುದನ್ನೂ ಹೇಳಿದೆಯಲ್ಲ; ಏಳನ್ನೇ ಅನುಕ್ರಮವಾಗಿ ಹೇಳಿದೆ ಎಂಬುದು ಹೇಗೆ ?

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಮನೋವಿಜ್ಞಾನಗಳಲ್ಲಿ ವೃತ್ತಿಭೇದವಿದ್ದರೂ ತತ್ತ್ವದ ಭೇದವಿಲ್ಲದ್ದರಿಂದ[1] ಏಳೆಂದೇ ಆಗಬಹುದು. ಆದ್ದರಿಂದ ಪ್ರಾಣಗಳು ಏಳೇ.

## ಸಿದ್ಧಾಂತ : ಪ್ರಾಣಗಳು ಹನ್ನೊಂದೇ

(ಭಾಷ್ಯ)

೧೮೫. ಏವಂ ಪ್ರಾಪ್ತೇ ಬ್ರೂಮಃ । ಹಸ್ತಾದಯಸ್ತು ಅಪರೇ ಸಪ್ತಭ್ಯೋಽತಿರಿಕ್ತಾಃ ಪ್ರಾಣಾಃ ಪ್ರತೀಯನ್ತೇ "ಹಸ್ತೋ ವೈ ಗ್ರಹಃ"(ಬೃ.೩-೨-೮) ಇತ್ಯಾದಿಶ್ರುತಿಷು । ಗ್ರಹತ್ವಂ ಚ ಬನ್ಧನಭಾವೋ ಗೃಹ್ಯತೇ ಬಧ್ಯತೇ ಕ್ಷೇತ್ರಜ್ಞಃ ಅನೇನ ಗ್ರಹಸಂಜ್ಞಕೇನ ಬನ್ಧನೇನ ಇತಿ । ಸ ಚ ಕ್ಷೇತ್ರಜ್ಞಃ ನೈಕಸ್ಮಿನ್ನೇವ ಶರೀರೇ ಬಧ್ಯತೇ । ಶರೀರಾನ್ತರೇಷ್ವಪಿ ತುಲ್ಯತ್ವಾತ್ ಬನ್ಧನಸ್ಯ । ತಸ್ಮಾತ್ ಶರೀರಾನ್ತರಸಂಚಾರಿ ಇದಂ ಗ್ರಹಸಂಜ್ಞಕಂ ಬನ್ಧನಮ್ ಇತಿ ಅರ್ಥಾತ್ ಉಕ್ತಂ ಭವತಿ । ತಥಾ ಚ ಸ್ಮೃತಿಃ "ಪುರ್ಯಷ್ಟಕೇನ ಲಿಙ್ಗೇನ ಪ್ರಾಣಾದ್ಯೇನ ಸ ಯುಜ್ಯತೇ । ತೇನ ಬದ್ಧಸ್ಯ ವೈ ಬನ್ಧೋ ಮೋಕ್ಷೋ ಮುಕ್ತಸ್ಯ ತೇನ ಚ ॥" (?)[2] ಇತಿ ಪ್ರಾಙ್ಮೋಕ್ಷಾತ್ ಗ್ರಹಸಂಜ್ಞಕೇನ ಅನೇನ ಬನ್ಧನೇನ ಅವಿಯೋಗಂ ದರ್ಶಯತಿ । ಆಥರ್ವಣೇ ಚ ವಿಷಯೇನ್ದ್ರಿಯಾನುಕ್ರಮಣೇ "ಚಕ್ಷುಶ್ಚ ದ್ರಷ್ಟವ್ಯಂ ಚ" (ಪ್ರ ೪-೮) ಇತ್ಯತ್ರ ತುಲ್ಯವತ್ ಹಸ್ತಾದೀನಿ ಇನ್ದ್ರಿಯಾಣಿ ಸವಿಷಯಾಣಿ ಅನುಕ್ರಾಮತಿ "ಹಸ್ತೌ ಚಾದಾತವ್ಯಂ ಚೋಪಸ್ಥಶ್ಚಾನನ್ದಯಿತವ್ಯಂ ಚ ಪಾಯುಶ್ಚ ವಿಸರ್ಜಯಿತವ್ಯಂ ಚ ಪಾದೌ ಚ ಗನ್ತವ್ಯಂ ಚ" (ಪ್ರ. ೪-೮) ಇತಿ । ತಥಾ ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಸ್ತೇ ಯದಾಸ್ಮಾಚ್ಛರೀರಾನ್ಮರ್ತ್ಯಾದುತ್ಕ್ರಾಮನ್ತ್ಯಥ ರೋದ

1. ಮನಸ್ಸು, ವಿಜ್ಞಾನ –ಎಂಬ ಹೆಸರು ಆಯಾ ಕ್ರಿಯೆಗಳಿಂದ ಬಂದವೇ ಹೊರತು ತತ್ತ್ವಗಳೇ ಎರಡೆಂದಲ್ಲ.

2. ಇದು ಎಲ್ಲಿಯ ವಾಕ್ಯವೆಂದು ತಿಳಿಯಲಿಲ್ಲ ; ಮಹಾಭಾರತದಲ್ಲಿರಬಹುದು.

ಯನ್ತಿ" (ಬೃ. ೩-೯-೪) ಇತ್ಯೇಕಾದಶಾನಾಂ ಪ್ರಾಣಾನಾಮ್ ಉತ್ಕ್ರಾನ್ತಿಂ ದರ್ಶಯತಿ। ಸರ್ವಶಬ್ದೋಽಪಿ ಚ ಪ್ರಾಣಶಬ್ದೇನ ಸಂಬಧ್ಯಮಾನಃ ಅಶೇಷಾನ್ ಪ್ರಾಣಾನ್ ಅಭಿದಧಾನಃ ನ ಪ್ರಕರಣವಶೇನ ಸಪ್ತಸ್ವೇವ ಅವಸ್ಥಾಪಯಿತುಂ ಶಕ್ಯತೇ। ಪ್ರಕರಣಾತ್ ಶಬ್ದಸ್ಯ ಬಲೀಯಸ್ತ್ವಾತ್। 'ಸರ್ವೇ ಬ್ರಾಹ್ಮಣಾ ಭೋಜಯಿತವ್ಯಾಃ' ಇತ್ಯತ್ರಾಪಿ ಸರ್ವೇಷಾಮೇವ ಅವನಿವರ್ತಿನಾಂ ಬ್ರಾಹ್ಮಣಾನಾಂ ಗ್ರಹಣಂ ನ್ಯಾಯ್ಯಮ್। ಸರ್ವಶಬ್ದಸಾಮರ್ಥ್ಯಾತ್। ಸರ್ವಭೋಜನಾಸಂಭವಾತ್ ತು ತತ್ರ ನಿಮನ್ತ್ರಿತಮಾತ್ರವಿಷಯಾ ಸರ್ವಶಬ್ದಸ್ಯ ವೃತ್ತಿಃ ಆಶ್ರಿತಾ। ಇಹ ತು ನ ಕಿಂಚಿತ್ ಸರ್ವಶಬ್ದಾರ್ಥಸಂಕೋಚನೇ ಕಾರಣಮಸ್ತಿ। ತಸ್ಮಾತ್ ಸರ್ವಶಬ್ದೇನ ಅತ್ರ ಅಶೇಷಾಣಾಂ ಪ್ರಾಣಾನಾಂ ಪರಿಗ್ರಹಃ। ಪ್ರದರ್ಶನಾರ್ಥಂ ಚ ಸಪ್ತಾನಾಮ್ ಅನುಕ್ರಮಣಮ್ ಇತಿ ಅನವದ್ಯಮ್। ತಸ್ಮಾತ್ ಏಕಾದಶೈವ ಪ್ರಾಣಾಃ ಶಬ್ದತಃ ಕಾರ್ಯತಶ್ಚ ಇತಿ ಸಿದ್ಧಮ್॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಹಸ್ತವೇ ಮುಂತಾದ ಇನ್ನೂ ಬೇರೆಯಾಗಿ ಏಳಕ್ಕಿಂತ ಹೆಚ್ಚಾಗಿಯೂ ಪ್ರಾಣಗಳು "ಹಸ್ತಗಳೇ ಗ್ರಹವು" (ಬೃ. ೩-೨-೮) ಮುಂತಾದ ಶ್ರುತಿಗಳಲ್ಲಿ ಕಂಡುಬರುತ್ತವೆ. (ಇಲ್ಲಿ) ಗ್ರಹವೆಂದರೆ ಬಂಧನವಾಗಿರುವಿಕೆ ಎಂಬ (ಅರ್ಥದ) ಗ್ರಹಣವಾಗುತ್ತದೆ. ಈ ಗ್ರಹವೆಂಬ ಹೆಸರಿನ ಬಂಧನದಿಂದ ಕ್ಷೇತ್ರಜ್ಞನು('ಗೃಹ್ಯತೇ') ಬದ್ಧನಾಗುತ್ತಾನೆ; ಆದ್ದರಿಂದ (ಇದು ಗ್ರಹವು). ಆದರೆ ಆ ಕ್ಷೇತ್ರಜ್ಞನು ಒಂದೇ ಶರೀರದಲ್ಲಿ ಬದ್ಧನಾಗಿರುವದಿಲ್ಲ; ಏಕೆಂದರೆ ಬೇರೆಯ ಶರೀರಗಳಲ್ಲಿಯೂ ಬಂಧನವಿರುವದೆಂಬುದು ಸಮಾನವಾಗಿರುತ್ತದೆ ಆದ್ದರಿಂದ ಶರೀರಾಂತರಕ್ಕೂ ಈ ಗ್ರಹಸಂಜ್ಞಕವಾದ ಬಂಧನವು ಹೋಗುತ್ತದೆ ಎಂದು ಅರ್ಥ(ವಶ)ದಿಂದ (ಇಲ್ಲಿ) ಹೇಳಿದಂತೆಯೇ ಆಗಿರುತ್ತದೆ. ಆದ್ದರಿಂದಲೇ "**ಪುರ್ಯಷ್ಟಕ**ರೂಪವಾದ ಪ್ರಾಣವೇ ಮುಂತಾದ ಲಿಂಗ(ಶರೀರ)ದಿಂದ[1] ಅವನು ಕೂಡಿರುತ್ತಾನೆ; ಅದರಿಂದ ಬದ್ಧನಾಗಿರುವದರಿಂದ (ಅವ)ನಿಗೆ ಬಂಧವು, ಅದರಿಂದ ಮುಕ್ತನಾಗುವದರಿಂದಲಾದರೆ ಆವನಿಗೆ ಮೋಕ್ಷವು" (?) ಎಂದು ಸ್ಮೃತಿಯು ಮೋಕ್ಷವಾಗುವ ಮುಂಚೆ ಗ್ರಹ ಎಂಬ ಹೆಸರಿನ ಈ ಬಂಧನವನ್ನು ಬಿಟ್ಟು ಅಗಲುವಿಕೆಯಿಲ್ಲ

---

1. ಪ್ರಾಣಾದಿಪಂಚಕ, ಭೂತಸೂಕ್ಷ್ಮಪಂಚಕ, ಕರ್ಮೇಂದ್ರಿಯಪಂಚಕ, ಜ್ಞಾನೇಂದ್ರಿಯಪಂಚಕ, ಅಂತಃಕರಣಚತುಷ್ಟಯ, ಅವಿದ್ಯೆ, ಕಾಮ, ಕರ್ಮ -ಎಂಬೀ ಎಂಟರಿಂದ ಕೂಡಿರುವದು **ಪುರ್ಯಷ್ಟಕ**ವೆಂಬ ಲಿಂಗಶರೀರ -ಎಂದು ರ. ಪ್ರ. ಮತ್ತು ನ್ಯಾ. ನಿ. ಇದನ್ನು **ಸಪ್ತದಶಕ**ವೆಂದೂ ಕರೆಯುತ್ತಾರೆ; ಸೂ. ಭಾ. ೨-೩-೪೭ನ್ನು ನೋಡಿ.

ಎಂದು ತಿಳಿಸುತ್ತದೆ. ವಿಷಯೇಂದ್ರಿಯಗಳನ್ನು ಒಂದೊಂದಾಗಿ ಹೇಳುವ **ಆಥರ್ವಣ**ದಲ್ಲಿಯೂ "ಚಕ್ಷುರಿಂದ್ರಿಯವೂ ನೋಡತಕ್ಕ ವಿಷಯವೂ" (ಪ್ರ. ೪-೮) ಎಂಬಲ್ಲಿ "ಹಸ್ತಗಳೂ ತೆಗೆದುಕೊಳ್ಳತಕ್ಕದ್ದೂ ಉಪಸ್ಥವೂ ಆನಂದ ಪಡತಕ್ಕದ್ದೂ, ಪಾಯುವೂ ಬಿಡತಕ್ಕದ್ದೂ, ಪಾದಗಳೂ ನಡೆಯತಕ್ಕದ್ದೂ" (ಪ್ರ. ೪-೮) ಎಂದು ಸಮಾನವಾಗಿಯೇ ಸವಿಷಯವಾದ ಹಸ್ತಾದಿಗಳನ್ನೂ ಅನುಕ್ರಮವಾಗಿ ಹೇಳಿರುತ್ತದೆ. ಹೀಗೆಯೇ "ಪುರುಷನಲ್ಲಿ ಈ ಹತ್ತು ಪ್ರಾಣಗಳು (ಇವೆ), ಆತ್ಮವು ಹನ್ನೊಂದನೆಯದು ; ಅವು ಯಾವಾಗ ಈ ಮರ್ತ್ಯವಾದ ಶರೀರದಿಂದ ಉತ್ಕ್ರಮಣಮಾಡುವವೋ ಆಗ ಅಳುವಂತೆ ಮಾಡುತ್ತವೆ" (ಬೃ. ೩-೯-೪) ಎಂದು ಹನ್ನೊಂದು ಪ್ರಾಣಗಳಿಗೂ ಉತ್ಕ್ರಾಂತಿಯನ್ನು ತಿಳಿಸಿರುತ್ತದೆ. ಸರ್ವಶಬ್ದವೂ ಪ್ರಾಣಶಬ್ದದೊಡನೆ ಸಂಬದ್ಧವಾಗಿರುವದರಿಂದ ಎಲ್ಲಾ ಪ್ರಾಣಗಳನ್ನೂ ಹೇಳುತ್ತಿದೆಯಾಗಿ ಪ್ರಕರಣವಶದಿಂದ (ಅವನ್ನು) ಏಳು (ಪ್ರಾಣ)ಗಳಲ್ಲಿಯೇ ನಿಲ್ಲಿಸುವದು ಆಗಲಾರದು. ಏಕೆಂದರೆ ಪ್ರಕರಣಕ್ಕಿಂತಲೂ ಶಬ್ದವು ಬಲವತ್ತರವಾಗಿರುತ್ತದೆ.[1] "ಸರ್ವಬ್ರಾಹ್ಮಣರಿಗೂ ಭೋಜನಮಾಡಿಸಬೇಕು" ಎಂಬಲ್ಲಿಯೂ ಭೂಮಿಯ ಮೇಲಿರುವ ಎಲ್ಲಾ ಬ್ರಾಹ್ಮಣರನ್ನೂ ತೆಗೆದುಕೊಳ್ಳುವದೇ ನ್ಯಾಯವು ; ಏಕೆಂದರೆ ಸರ್ವಶಬ್ದಕ್ಕೆ (ಅದರಲ್ಲಿ) ಸಾಮರ್ಥ್ಯವಿದೆ. ಆದರೆ ಎಲ್ಲರಿಗೂ ಭೋಜನಮಾಡಿಸುವದು ಆಗುವಹಾಗಿಲ್ಲವಾದ್ದರಿಂದ ಅಲ್ಲಿ ನಿಮಂತ್ರಿತರಾದ (ಸರ್ವಬ್ರಾಹ್ಮಣರ) ವಿಷಯವೆಂದು ಸರ್ವಶಬ್ದಕ್ಕೆ (ಲಕ್ಷಣಾ)ವೃತ್ತಿಯನ್ನು ಆಶ್ರಯಿಸಿರುತ್ತದೆ. ಆದರೆ ಇಲ್ಲಿ ಸರ್ವಶಬ್ದದ ಅರ್ಥವನ್ನು ಸಂಕೋಚಪಡಿಸುವದಕ್ಕೆ (ಯಾವ) ಕಾರಣವೂ ಇರುವದಿಲ್ಲ. ಆದ್ದರಿಂದ ಸರ್ವಶಬ್ದದಿಂದ ಇಲ್ಲಿ ಎಲ್ಲಾ ಪ್ರಾಣಗಳನ್ನೂ ತೆಗೆದುಕೊಳ್ಳಬೇಕು ; ಏಳನ್ನು ಅನುಕ್ರಮವಾಗಿ ಹೇಳಿರುವದು ಉಪಲಕ್ಷಣಕ್ಕಾಗಿರುತ್ತದೆಯಾಗಿ (ಇದರಲ್ಲಿ ಯಾವ) ದೋಷವೂ ಇಲ್ಲ.

ಆದ್ದರಿಂದ ಪ್ರಾಣಗಳು ಹನ್ನೊಂದೇ ; ಏಕೆಂದರೆ ಅದಕ್ಕೆ ಶಬ್ದವಿದೆ, ಮತ್ತು ಕಾರ್ಯಗಳೂ (ಹನ್ನೊಂದೇ ಇವೆ) ಎಂದು ಸಿದ್ಧವಾಯಿತು.

## ೩. ಪ್ರಾಣಾಣುತ್ವಾಧಿಕರಣ

(ಪ್ರಾಣಗಳು ಅಣುವಾಗಿವೆ)

**ಅಣವಶ್ಚ ॥ ೭ ॥**

೭. ಅಣುಗಳೂ ಆಗಿವೆ.

---

1. ಸರ್ವ (ಎಲ್ಲಾ) ಎಂಬುದು ಬಾಯಿಬಿಟ್ಟು ಇಷ್ಟೆಂದು ತಿಳಿಸುವ ಮಾತು ; ಪ್ರಕರಣದಿಂದ ಇಷ್ಟೆಂದು ನಾವು ಕಲ್ಪಿಸಬೇಕು. ಆದ್ದರಿಂದ ಶಬ್ದವು ಪ್ರಕರಣಕ್ಕಿಂತ ಬಲವತ್ತರವಾಗಿದೆ.

# ಪ್ರಾಣಗಳು ಸೂಕ್ಷ್ಮವೂ ಪರಿಚ್ಛಿನ್ನವೂ ಆಗಿವೆ

(ಭಾಷ್ಯ)

೧೮೬. ಅಧುನಾ ಪ್ರಾಣಾನಾಮೇವ ಸ್ವಭಾವಾನ್ತರಮ್ ಅಭ್ಯುಚ್ಚಿನೋತಿ । ಅಣವಶ್ಚ ಏತೇ ಪ್ರಕೃತಾಃ ಪ್ರಾಣಾಃ ಪ್ರತಿಪತ್ತವ್ಯಾಃ । ಅಣುತ್ವಂ ಚ ಏಷಾಂ ಸೌಕ್ಷ್ಮ್ಯಪರಿಚ್ಛೇದೌ ನ ಪರಮಾಣುತುಲ್ಯತ್ವಮ್ । ಕೃತ್ಸ್ನದೇಹವ್ಯಾಪಿಕಾರ್ಯಾನುಪಪತ್ತಿಪ್ರಸಙ್ಗಾತ್ । ಸೂಕ್ಷ್ಮಾ ಏತೇ ಪ್ರಾಣಾಃ । ಸ್ಥೂಲಾಶ್ಚೇತ್ ಸ್ಯುಃ, ಮರಣಕಾಲೇ ಶರೀರಾತ್ ನಿರ್ಗಚ್ಛನ್ತಃ ಬಿಲಾತ್ ಅಹಿರಿವ ಉಪಲಭ್ಯೇರನ್ ಮ್ರಿಯಮಾಣಸ್ಯ ಪಾರ್ಶ್ವಸ್ಥೈಃ । ಪರಿಚ್ಛಿನ್ನಾಶ್ಚ ಏತೇ ಪ್ರಾಣಾಃ । ಸರ್ವಗತಾಶ್ಚೇತ್ ಸ್ಯುಃ, ಉತ್ಕ್ರಾನ್ತಿಗತ್ಯಾಗತಿಶ್ರುತಿವ್ಯಾಕೋಪಃ ಸ್ಯಾತ್ । ತದ್ಗುಣಸಾರತ್ವಂ ಚ ಜೀವಸ್ಯ ನ ಸಿಧ್ಯೇತ್ । ಸರ್ವಗತಾನಾಮಪಿ ವೃತ್ತಿಲಾಭಃ ಶರೀರದೇಶೇ ಸ್ಯಾತ್ ಇತಿ ಚೇತ್ । ನ। ವೃತ್ತಿಮಾತ್ರಸ್ಯ ಕರಣತ್ವೋಪಪತ್ತೇಃ । ಯದೇವ ಹಿ ಉಪಲಬ್ಧಿಸಾಧನಂ ವೃತ್ತಿಃ ಅನ್ಯದ್ವಾ, ತಸ್ಯೈವ ನಃ ಕರಣತ್ವಮ್ । ಸಂಜ್ಞಾಮಾತ್ರೇ ವಿವಾದಃ ಇತಿ ಕರಣಾನಾಂ ವ್ಯಾಪಿತ್ವಕಲ್ಪನಾ ನಿರರ್ಥಿಕಾ । ತಸ್ಮಾತ್ ಸೂಕ್ಷ್ಮಾಃ ಪರಿಚ್ಛಿನ್ನಾಶ್ಚ ಪ್ರಾಣಾಃ ಇತಿ ಅಧ್ಯವಸ್ಯಾಮಃ ॥

(ಭಾಷ್ಯಾರ್ಥ)

ಈಗ ಪ್ರಾಣಗಳದ್ದೇ ಮತ್ತೊಂದು ಸ್ವಭಾವವನ್ನು (ಇದಕ್ಕೆ) ಸೇರಿಸಿ (ಹೇಳುತ್ತಾರೆ). ಈ ಪ್ರಕೃತವಾದ ಪ್ರಾಣಗಳು ಅಣುವಾಗಿರುವವೆಂದೂ ತಿಳಿಯಬೇಕು. ಇಲ್ಲಿ ಅಣುವಾಗಿರುವದು ಎಂದರೆ ಸೂಕ್ಷ್ಮತ್ವಪರಿಚ್ಛೇದಗಳೇ ಹೊರತು ಪರಮಾಣುಸಮಾನವಾಗಿರುವದಲ್ಲ. ಏಕೆಂದರೆ (ಅವು ಪರಮಾಣುಸಮಾನ ಎಂದರೆ) ಇಡಿಯ ಶರೀರವನ್ನು ವ್ಯಾಪಿಸಿಕೊಂಡಿರುವ ಕಾರ್ಯವನ್ನು ಮಾಡಬಾರದೆಂದಾಗುವದು. ಈ ಪ್ರಾಣಗಳು ಸೂಕ್ಷ್ಮವಾಗಿರುತ್ತವೆ ; (ಏಕೆಂದರೆ) ಸ್ಥೂಲವಾಗಿದ್ದರೆ ಮರಣಕಾಲದಲ್ಲಿ ಶರೀರವನ್ನು ಬಿಟ್ಟು ಹೊರಡುವಾಗ ಬಿಲದಿಂದ (ಹೊರಡುವ) ಹಾವಿನಂತೆ ಸಾಯುವವನ ಪಕ್ಕದಲ್ಲಿರುವವರಿಗೆ (ಅವು) ಕಾಣಬರಬೇಕಾದೀತು. ಈ ಪ್ರಾಣಗಳು ಪರಿಚ್ಛಿನ್ನವೂ (ಆಗಿರುತ್ತವೆ) ; (ಏಕೆಂದರೆ) ಸರ್ವಗತವಾಗಿದ್ದರೆ ಉತ್ಕ್ರಾಂತಿ, ಗತಿ, ಆಗತಿ –ಇವುಗಳನ್ನು ಹೇಳುವ ಶ್ರುತಿಗೆ ವಿರೋಧವಾಗುವದು. ಜೀವನು ತದ್ಗುಣಸಾರನು ಎಂಬುದು ಸಿದ್ಧವಾಗದೆ ಹೋಗುವದು.[1]

---

1. ೨–೩–೨೯ರಲ್ಲಿ ಹೇಳಿರುವ ತದ್ಗುಣಸಾರತ್ವಕ್ಕೆ ಪ್ರಾಣಗಳು ಸರ್ವಗತವೆಂಬುದು ವಿರುದ್ಧವಾಗುವದು ಎಂದು ಭಾವ.

(ಆಕ್ಷೇಪ) :– ಸರ್ವಗತವಾಗಿದ್ದರೂ (ಪ್ರಾಣಗಳಿಗೆ) ಶರೀರದೇಶದಲ್ಲಿ ವೃತ್ತಿಲಾಭವಾಗಬಹುದಲ್ಲ !

(ಪರಿಹಾರ) :– ಹಾಗಲ್ಲ. ಏಕೆಂದರೆ ವೃತ್ತಿಮಾತ್ರವೇ ಕರಣವಾಗಿರಬಹುದು. **ವೃತ್ತಿಯೋ ಆಗಲಿ, ಮತ್ತೊಂದೋ ಆಗಲಿ ಅರಿವಿಗೆ ಯಾವದು ಸಾಧನವೋ ಅದೇ ನಮ್ಮ ಮತದಲ್ಲಿ ಕರಣವು. (ನಮಗೂ ನಿಮಗೂ) ಹೆಸರಿನಲ್ಲಿ ಮಾತ್ರ ವಿವಾದವಾಯಿತು. ಆದ್ದರಿಂದ ಕರಣಗಳಿಗೆ ವ್ಯಾಪಿತ್ವವನ್ನು ಕಲ್ಪಿಸುವದು ವ್ಯರ್ಥವು.**[1] ಆದ್ದರಿಂದ ಪ್ರಾಣಗಳು ಸೂಕ್ಷ್ಮವೂ ಆಗಿರುತ್ತವೆ ಎಂದು ನಾವು ನಿಶ್ಚಯಿಸಬೇಕಾಗಿದೆ.

## ೪. ಪ್ರಾಣಶ್ರೈಷ್ಠ್ಯಾಧಿಕರಣ

(ಮುಖ್ಯಪ್ರಾಣನೂ ಬ್ರಹ್ಮಕಾರ್ಯವೇ)

**ಶ್ರೇಷ್ಠಶ್ಚ ॥ ೮ ॥**

೮. ಶ್ರೇಷ್ಠನೂ (ಬ್ರಹ್ಮಕಾರ್ಯವೇ)

### ಮುಖ್ಯಪ್ರಾಣದ ವಿಷಯಕ್ಕೆ ಅಧಿಕಶಂಕೆ

(ಭಾಷ್ಯ)

೧೮೭. ಮುಖ್ಯಶ್ಚ ಪ್ರಾಣಃ ಇತರಪ್ರಾಣವತ್ ಬ್ರಹ್ಮವಿಕಾರಃ ಇತಿ ಅತಿದಿಶತಿ । ತಚ್ಚ ಅವಿಶೇಷೇಣೈವ ಸರ್ವಪ್ರಾಣಾನಾಂ ಬ್ರಹ್ಮವಿಕಾರತ್ವಮ್ ಆಖ್ಯಾತಮ್ । "ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇನ್ದ್ರಿಯಾಣಿ ಚ" (ಮುಂ. ೨-೧-೩) ಇತಿ ಸೇನ್ದ್ರಿಯಮನೋವ್ಯತಿರೇಕೇಣ ಪ್ರಾಣಸ್ಯ ಉತ್ಪತ್ತಿಶ್ರವಣಾತ್ । "ಸ ಪ್ರಾಣಮಸೃಜತ" (ಪ್ರ. ೬-೪) ಇತ್ಯಾದಿ ಶ್ರವಣೇಭ್ಯಶ್ಚ । ಕಿಮರ್ಥಃ ಪುನರತಿದೇಶಃ ? ಅಧಿಕಾಶಙ್ಕಾಪಾಕರಣಾರ್ಥಃ। ನಾಸದಾಸೀಯೇ ಹಿ ಬ್ರಹ್ಮಪ್ರಧಾನೇ ಸೂಕ್ತೇ ಮನ್ತ್ರವರ್ಣೋ ಭವತಿ "ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ ಪ್ರಕೇತಃ । ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ" (ಋ.ಸಂ. ೮-೭-೧೭) ಇತಿ । 'ಆನೀತ್' ಇತಿ ಪ್ರಾಣಕರ್ಮೋಪಾದಾನಾತ್ ಪ್ರಾಗುತ್ಪತ್ತೇಃ ಸನ್ತಮಿವ ಪ್ರಾಣಂ ಸೂಚಯತಿ । ತಸ್ಮಾತ್ ಅಜಃ ಪ್ರಾಣ ಇತಿ ಜಾಯತೇ ಕಸ್ಯಚಿನ್ಮತಿಃ । ತಾಮ್ ಅತಿದೇಶೇನ ಅಪನುದತಿ ॥

---

1. ಬೃ. ಭಾ. ೪-೪-೨ರಲ್ಲಿ ವೃತ್ತಿಲಾಭಪಕ್ಷವನ್ನೇ ಅನುಸರಿಸಿದೆ. ಈ ಎರಡು ಭಾಷ್ಯಗಳಲ್ಲಿರುವ ಈ ವಿರೋಧದ ವಿಷಯಕ್ಕೆ ಒಂದನೆಯ ಸಂಪುಟದ ಪೀಠಿಕೆಯನ್ನು ನೋಡಿ.

(ಭಾಷ್ಯಾರ್ಥ)

ಮುಖ್ಯಪ್ರಾಣನೂ ಉಳಿದ ಪ್ರಾಣಗಳಂತೆ ಬ್ರಹ್ಮವಿಕಾರವೇ ಎಂದು **ಅತಿದೇಶ**ವನ್ನು ಮಾಡಿರುತ್ತದೆ. ಸರ್ವಪ್ರಾಣಗಳಿಗೂ ಸಮಾನವಾಗಿಯೇ ಆ ಬ್ರಹ್ಮವಿಕಾರತ್ವವನ್ನು ಹೇಳಿದೆ. ಏಕೆಂದರೆ "ಇವನಿಂದ ಪ್ರಾಣನು ಹುಟ್ಟುತ್ತಾನೆ, ಮನಸ್ಸೂ ಸರ್ವೇಂದ್ರಿಯಗಳೂ (ಹುಟ್ಟುತ್ತವೆ)" (ಮುಂ. ೨-೧-೩) ಎಂದು ಇಂದ್ರಿಯಗಳಿಂದೊಡಗೂಡಿದ ಮನಸ್ಸನ್ನು ಬಿಟ್ಟು ಪ್ರಾಣನಿಗೂ (ಬೇರೆಯಾಗಿ) ಉತ್ಪತ್ತಿಯನ್ನು ಶ್ರುತಿಯು ಹೇಳಿರುತ್ತದೆ; "ಅವನು ಪ್ರಾಣನನ್ನು ಸೃಜಿಸಿದನು" (ಪ್ರ. ೬-೪) ಎಂಬುದೇ ಮುಂತಾದ ಶ್ರುತಿಗಳೂ (ಇರುತ್ತವೆ).

(ಪ್ರಶ್ನೆ):- ಹಾಗಾದರೆ ಮತ್ತೆ ಅತಿದೇಶವನ್ನು ಮಾಡಿರುವದೇಕೆ ?

(ಉತ್ತರ):- ಹೆಚ್ಚಿನ ಆಶಂಕೆಯನ್ನು ಪರಿಹರಿಸುವದಕ್ಕೆ. (ಇದರ ವಿವರ) : ಬ್ರಹ್ಮಪ್ರಧಾನವಾದ 'ನಾಸದಾಸೀಯ' ಸೂಕ್ತದಲ್ಲಿ "ಮೃತ್ಯುವಿರಲಿಲ್ಲ, ಆಗ ಅಮೃತವೂ ಇರಲಿಲ್ಲ; ರಾತ್ರಿಯ ಚಿಹ್ನವಾದ (ಚಂದ್ರ)ನಾಗಲಿ, ಹಗಲಿನ (ಚಿಹ್ನವಾದ ಸೂರ್ಯ)ನಾಗಲಿ ಇರಲಿಲ್ಲ. ಅದು ಸ್ವಧೆಯಿಂದ ತಾನೊಂದೇ ಅವಾತವಾಗಿ ಚೇಷ್ಟೆಮಾಡುತ್ತಿತ್ತು. ಅದಕ್ಕಿಂತ ಹೆಚ್ಚಿನದು ಮತ್ತೆ ಯಾವದೂ ಇರಲಿಲ್ಲ" (ಋ. ಸಂ. ೮-೭-೧೭) ಎಂಬ **ಮಂತ್ರವರ್ಣ**ವಿರುತ್ತದೆ. (ಇಲ್ಲಿ) 'ಆನೀತ್' (ಚೇಷ್ಟೆಮಾಡುತ್ತಿತ್ತು) ಎಂದು ಪ್ರಾಣಕರ್ಮವನ್ನು ತೆಗೆದುಕೊಂಡು (ಹೇಳಿರುವದ)ರಿಂದ ಉತ್ಪತ್ತಿಗಿಂತ ಪೂರ್ವದಲ್ಲಿ ಪ್ರಾಣವು ಇದ್ದಂತೆ ಸೂಚಿಸಿದಂತಾಗಿದೆ. ಆದ್ದರಿಂದ ಪ್ರಾಣವು ಜನ್ಮರಹಿತ ಎಂದು ಯಾರಿಗಾದರೂ ಅಭಿಪ್ರಾಯವಿರಬಹುದು. ಆ (ಶಂಕೆಯನ್ನು) ಅತಿದೇಶದಿಂದ ತೆಗೆದುಹಾಕಿರುತ್ತದೆ.

## ಸೂತ್ರದ ಅಭಿಪ್ರಾಯ

(ಭಾಷ್ಯ)

೧೮೮. ಆನೀಚ್ಛಬ್ದೋಽಪಿ ನ ಪ್ರಾಗುತ್ಪತ್ತೇಃ ಪ್ರಾಣಸದ್ಭಾವಂ ಸೂಚಯತಿ । 'ಅವಾತಮ್' ಇತಿ ವಿಶೇಷಣಾತ್ । "ಅಪ್ರಾಣೋ ಹ್ಯಮನಾಃ ಶುಭ್ರಃ" (ಮುಂ. ೨-೧-೨) ಇತಿ ಚ ಮೂಲಪ್ರಕೃತೇಃ ಪ್ರಾಣಾದಿಸಮಸ್ತವಿಶೇಷರಹಿತತ್ವಸ್ಯ ದರ್ಶಿತತ್ವಾತ್, । ತಸ್ಮಾತ್ ಕಾರಣಸದ್ಭಾವಪ್ರದರ್ಶನಾರ್ಥ ಏವಾಯಮ್ ಆನೀಚ್ಛಬ್ದಃ ಇತಿ । 'ಶ್ರೇಷ್ಠಃ' ಇತಿ ಚ ಮುಖ್ಯಂ ಪ್ರಾಣಮ್ ಅಭಿದಧಾತಿ "ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ" (ಛಾಂ. ೫-೧-೧) ಇತಿ ಶ್ರುತಿನಿರ್ದೇಶಾತ್ । ಜ್ಯೇಷ್ಠಶ್ಚ ಪ್ರಾಣಃ ಶುಕ್ರನಿಷೇಕಕಾಲಾದಾರಭ್ಯ ತಸ್ಯ

ವೃತ್ತಿಲಾಭಾತ್ । ನ ಚೇತ್ ತಸ್ಯ ತದಾನೀಂ ವೃತ್ತಿಲಾಭಃ ಸ್ಯಾತ್ ಯೋನೌ ನಿಷಿಕ್ತಂ ಶುಕ್ರಂ "ಪೂಯೇತ ನ ಸಂಭವೇದ್ವಾ" (ಐ. ಆ. ೩-೨-೨) । ಶ್ರೋತ್ರಾದೀನಾಂ ತು ಕರ್ಣಶಷ್ಕುಲ್ಯಾದಿಸ್ಥಾನವಿಭಾಗನಿಷ್ಪತ್ತೌ ವೃತ್ತಿಲಾಭಾತ್ ನ ಜ್ಯೈಷ್ಠ್ಯಮ್ । ಶ್ರೇಷ್ಠಶ್ಚ ಪ್ರಾಣಃ । ಗುಣಾಧಿಕ್ಯಾತ್ । "ನ ವೈ ಶಕ್ಷ್ಯಾಮಸ್ತ್ವದೃತೇ ಜೀವಿತುಮ್" (ಬೃ. ೬-೧-೧೩) ಇತಿ ಶ್ರುತೇಃ ॥

(ಭಾಷ್ಯಾರ್ಥ)

'ಆನೀತ್' ಎಂಬ ಶಬ್ದವು ಕೂಡ ಉತ್ಪತ್ತಿಗಿಂತ ಮುಂಚೆ ಪ್ರಾಣವು ಇದ್ದಿತೆಂಬುದನ್ನು ಸೂಚಿಸುವದಿಲ್ಲ; ಏಕೆಂದರೆ 'ಅವಾತಮ್' (ವಾಯುವಿಲ್ಲದೆ) ಎಂಬ ವಿಶೇಷಣವಿರುತ್ತದೆ. "ಅಪ್ರಾಣನು, ಅಮನನು, ಶುಭ್ರನು" (ಮುಂ. ೨-೧-೨) ಎಂದು **ಮೂಲಪ್ರಕೃತಿ**(ಯಾದ ಪರಮಾತ್ಮನು) ಪ್ರಾಣವೇ ಮುಂತಾದ ಯಾವ ವಿಶೇಷವೂ ಇಲ್ಲದವನೆಂದು ಶ್ರುತಿಯಲ್ಲಿದೆ. ಆದ್ದರಿಂದ 'ಆನೀತ್' ಎಂಬ ಶಬ್ದವು ಕಾರಣ(ವಾದ ಬ್ರಹ್ಮ)ವು ಇತ್ತೆಂಬುದನ್ನು ತಿಳಿಸುವದಕ್ಕಾಗಿಯೇ ಪ್ರಯುಕ್ತವಾಗಿರುತ್ತದೆ ಎಂದು (ನಿಶ್ಚಯಿಸಬೇಕು).

"ಶ್ರೇಷ್ಠಶ್ಚ" (ಶ್ರೇಷ್ಠನೂ) ಎಂದು (ಸೂತ್ರಕಾರರು) ಮುಖ್ಯಪ್ರಾಣವನ್ನು ಹೇಳುತ್ತಾರೆ; ಏಕೆಂದರೆ "ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ" (ಛಾಂ. ೫-೧-೧) ಎಂದು ಶ್ರುತಿನಿರ್ದೇಶವಿರುತ್ತದೆ. ಪ್ರಾಣವು ಜ್ಯೇಷ್ಠನಾಗಿರುತ್ತದೆ ; ಏಕೆಂದರೆ ಶುಕ್ರನಿಷೇಕದ ಕಾಲದಿಂದ ಮೊದಲಾಗಿಯೇ ಆ (ಪ್ರಾಣಕ್ಕೆ)) ವೃತ್ತಿಯುಂಟಾಗುತ್ತದೆ. ಆಗ ಅದಕ್ಕೆ ವೃತ್ತಿಲಾಭವಾಗದೆ ಇದ್ದರೆ ಯೋನಿಯಲ್ಲಿ ನಿಷಿಕ್ತವಾದ ಶುಕ್ರವು "ಕೊಳೆತುಹೋದೀತು ಅಥವಾ ಗರ್ಭವಾಗಲಾರದು" (ಐ.ಆ. ೩-೨-೨). ಶ್ರೋತ್ರಾದಿಗಳಿಗಾದರೋ ಕಿವಿಯ ಕುಡಿಕೆಯೇ ಮುಂತಾದ **ಸ್ಥಾನಗಳು**[1] ವಿಂಗಡವಾದಬಳಿಕ ವೃತ್ತಿಲಾಭವಾಗುವದರಿಂದ (ಅವು) ಜ್ಯೇಷ್ಠವಲ್ಲ. ಪ್ರಾಣವು ಶ್ರೇಷ್ಠನೂ ಆಗಿದೆ ; ಏಕೆಂದರೆ "ನಿನ್ನನ್ನು ಬಿಟ್ಟು ಬದುಕಿರಲೇ ಆರೆವು" (ಬೃ. ೬-೧-೧೩) ಎಂಬ ಶ್ರುತಿ(ಯ ಪ್ರಾಮಾಣ್ಯದಿಂದ ಪ್ರಾಣದಲ್ಲಿ) ಗುಣಾಧಿಕ್ಯವಿರುತ್ತದೆ.

## ೫. ವಾಯುಕ್ರಿಯಾಧಿಕರಣ (ಸೂ. ೯-೧೨)

### ನ ವಾಯುಕ್ರಿಯೇ ಪೃಥಗುಪದೇಶಾತ್ ॥ ೯ ॥

೯. (ಮುಖ್ಯಪ್ರಾಣವು) ವಾಯುಕ್ರಿಯೆಗಳಲ್ಲ ; ಏಕೆಂದರೆ ಬೇರೆಯಾಗಿ ಉಪದೇಶಿಸಿದೆ.

---

1. ಇವನ್ನು ಈಗಿನ ವೇದಾಂತಿಗಳು 'ಗೋಲಕಗಳು' ಎಂದು ಕರೆಯುತ್ತಾರೆ.

## ಮುಖ್ಯಪ್ರಾಣದ ಸ್ವರೂಪದ ವಿಷಯಕ್ಕೆ ಪೂರ್ವಪಕ್ಷ

(ಭಾಷ್ಯ)

೧೮೯. ಸ ಪುನರ್ಮುಖ್ಯಃ ಪ್ರಾಣಃ ಕಿಂ ಸ್ವರೂಪಃ ಇತಿ ಇದಾನೀಂ ಜಿಜ್ಞಾಸ್ಯತೇ। ತತ್ರ ಪ್ರಾಪ್ತಂ ತಾವತ್ ಶ್ರುತೇರ್ವಾಯುಃ ಪ್ರಾಣಃ ಇತಿ। ಏವಂ ಹಿ ಶ್ರೂಯತೇ– "ಯಃ ಪ್ರಾಣಃ ಸ ವಾಯುಃ ಸ ಏಷ ವಾಯುಃ ಪಞ್ಚವಿಧಃ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನಃ" (?) ಇತಿ। ಅಥವಾ ತನ್ತ್ರಾನ್ತರೀಯಾಭಿಪ್ರಾಯಾತ್ ಸಮಸ್ತಕರಣವೃತ್ತಿಃ ಪ್ರಾಣಃ ಇತಿ ಪ್ರಾಪ್ತಮ್। ಏವಂ ಹಿ ತನ್ತ್ರಾನ್ತರೀಯಾಃ ಆಚಕ್ಷತೇ– "ಸಾಮಾನ್ಯಾ ಕರಣ ವೃತ್ತಿಃ ಪ್ರಾಣಾದ್ಯಾ ವಾಯವಃ ಪಞ್ಚ" (ಸಾಂ. ಕಾ. ೨೯) ಇತಿ॥

(ಭಾಷ್ಯಾರ್ಥ)

ಇನ್ನು ಆ ಮುಖ್ಯಪ್ರಾಣದ ಸ್ವರೂಪವು ಯಾವದು? ಎಂಬುದನ್ನು ವಿಚಾರಿಸಲಾಗುವದು. ಇಲ್ಲಿ ಮೊದಲು ಬಂದೊದಗುವ (ಪೂರ್ವಪಕ್ಷವು ಯಾವದೆಂದರೆ) ವಾಯುವೇ ಪ್ರಾಣವು. ಏಕೆಂದರೆ "ಯಾವದು ಪ್ರಾಣವೋ ಅದು ವಾಯು; ಆ ಈ ವಾಯುವು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ– ಎಂದು ಐದು ಬಗೆ" (?) ಎಂದಿಂತಲ್ಲವೆ, ಶ್ರುತಿಯಲ್ಲಿದೆ? ಅಥವಾ ಬೇರೆಯ ತಂತ್ರದವರಾದ (ಸಾಂಖ್ಯರ) ಅಭಿಪ್ರಾಯದಂತೆ ಸಮಸ್ತಕರಣಗಳ ವೃತ್ತಿಯೇ ಪ್ರಾಣವು ಎಂಬ (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆಂದರೆ "ಪ್ರಾಣವೇ ಮುಂತಾದ ಐದು ವಾಯುಗಳು ಸಾಮಾನ್ಯವಾದ ಕರಣವೃತ್ತಿಯು" (ಸಾಂ.ಕಾ. ೨೯) ಎಂದು ತಂತ್ರಾಂತರದವರು[1] ಹೇಳಿರುತ್ತಾರೆ.

## ಸಿದ್ಧಾಂತ: ಮುಖ್ಯಪ್ರಾಣವು ವಾಯುರೂಪವಿಶೇಷ

(ಭಾಷ್ಯ)

೧೯೦. ಅತ್ರೋಚ್ಯತೇ– ನ ವಾಯುಃ ಪ್ರಾಣಃ, ನಾಪಿ ಕರಣ ವ್ಯಾಪಾರಃ। ಕುತಃ? ಪೃಥಗುಪದೇಶಾತ್। ವಾಯೋಸ್ತಾವತ್ ಪ್ರಾಣಸ್ಯ ಪೃಥಗುಪದೇಶೋ ಭವತಿ "ಪ್ರಾಣ ಏವ ಬ್ರಹ್ಮಣಶ್ಚತುರ್ಥಃ ಪಾದಃ ಸ ವಾಯುನಾ ಜ್ಯೋತಿಷಾ ಭಾತಿ ಚ ತಪತಿ ಚ" (ಛಾಂ. ೩–೧೮–೪) ಇತಿ। ನ ಹಿ ವಾಯುರೇವ ಸನ್ ವಾಯೋಃ ಪೃಥಕ್ ಉಪದಿಶ್ಯೇತ। ತಥಾ ಕರಣ ವೃತ್ತೇರಪಿ ಪೃಥಗುಪದೇಶೋ ಭವತಿ। ವಾಗಾದೀನಿ ಕರಣಾನಿ ಅನುಕ್ರಮ್ಯ

---

1. ಸಾಂಖ್ಯಶಾಸ್ತ್ರಜ್ಞರು.

ತತ್ರ ತತ್ರ ಪೃಥಕ್ ಪ್ರಾಣಸ್ಯ ಅನುಕ್ರಮಣಾತ್ । ವೃತ್ತಿವೃತ್ತಿಮತೋಃಶ್ಚ ಅಭೇದಾತ್ । ನ ಹಿ ಕರಣವ್ಯಾಪಾರ ಏವ ಸನ್ ಕರಣೇಭ್ಯಃ ಪೃಥಕ್ ಉಪ ದಿಶ್ಯೇತ । ತಥಾ "ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇನ್ದ್ರಿಯಾಣಿ ಚ । ಖಂ ವಾಯುಃ" (ಮುಂ. ೨-೧-೩) ಇತ್ಯೇವಮಾದಯೋಽಪಿ ವಾಯೋಃ ಕರಣೇಭ್ಯಶ್ಚ ಪ್ರಾಣಸ್ಯ ಪೃಥಗುಪದೇಶಾ ಅನುಸರ್ತವ್ಯಾಃ । ನ ಚ ಸಮಸ್ತಾ ನಾಂ ಕರಣಾನಾಂ ಏಕಾ ವೃತ್ತಿಃ ಸಂಭವತಿ । ಪ್ರತ್ಯೇಕಮ್ ಏಕೈಕವೃತ್ತಿ ತ್ವಾತ್ । ಸಮುದಾಯಸ್ಯ ಚ ಅಕಾರಕತ್ವಾತ್ । ನನು ಪಞ್ಜರಚಾಲನನ್ಯಾ ಯೇನ ಏತದ್ ಭವಿಷ್ಯತಿ । ಯಥಾ ಏಕಪಞ್ಜರವರ್ತಿನಃ ಏಕಾದಶಪಕ್ಷಿಣಃ ಪ್ರತ್ಯೇಕಂ ಪ್ರತಿನಿಯತವ್ಯಾಪಾರಾಃ ಸನ್ತಃ ಸಂಭೂಯ ಏಕಂ ಪಞ್ಜರಂ ಚಾಲಯನ್ತಿ, ಏವಮ್ ಏಕಶರೀರವರ್ತಿನ ಏಕಾದಶ ಪ್ರಾಣಾಃ ಪ್ರತ್ಯೇಕಂ ಪ್ರತಿನಿಯತವೃತ್ತಯಃ ಸನ್ತಃ ಸಂಭೂಯ ಏಕಂ ಪ್ರಾಣಾಖ್ಯಾಂ ವೃತ್ತಿಂ ಪ್ರತಿಲಪ್ಸ್ಯನ್ತೇ ಇತಿ । ನೇತ್ಯುಚ್ಯತೇ । ಯುಕ್ತಂ ತತ್ರ ಪ್ರತ್ಯೇಕವೃತ್ತಿಭಿಃ ಅವಾನ್ತರವ್ಯಾಪಾರೈಃ ಪಞ್ಜರಚಾಲನಾನುರೂಪೈರೇವ ಉಪೇತಾಃ ಪಕ್ಷಿಣಃ ಸಂಭೂಯ ಏಕಂ ಪಞ್ಜರಂ ಚಾಲಯೇಯುಃ ಇತಿ । ತಥಾ ದೃಷ್ಟತ್ವಾತ್ । ಇಹ ತು ಶ್ರವಣಾದ್ಯವಾನ್ತರವ್ಯಾಪಾರೋಪೇತಾಃ ಪ್ರಾಣಾಃ ನ ಸಂಭೂಯ ಪ್ರಾಣ್ಯುಃ ಇತಿ ಯುಕ್ತಮ್ । ಪ್ರಮಾಣಾಭಾವಾತ್ । ಅತ್ಯನ್ತವಿಜಾತೀಯ ತ್ವಾಚ್ಚ ಶ್ರವಣಾದಿಭ್ಯಃ ಪ್ರಾಣನಸ್ಯ । ತಥಾ ಪ್ರಾಣಸ್ಯ ಶ್ರೇಷ್ಠತ್ವಾದ್ಯುದ್ಘೋ ಷಣಂ ಗುಣಭಾವೋಪಗಮಶ್ಚ ತಂ ಪ್ರತಿ ವಾಗಾದೀನಾಂ ನ ಕರಣವೃತ್ತಿ ಮಾತ್ರೇ ಪ್ರಾಣೇ ಅವಕಲ್ಪತೇ । ತಸ್ಮಾತ್ ಅನ್ಯೋ ವಾಯುಕ್ರಿಯಾಭ್ಯಾಂ ಪ್ರಾಣಃ । ಕಥಂ ತರ್ಹಿ ಇಯಂ ಶ್ರುತಿಃ "ಯಃ ಪ್ರಾಣಃ ಸ ವಾಯುಃ" (?) ಇತಿ । ಉಚ್ಯತೇ । ವಾಯುರೇವ ಅಯಮ್ ಅಧ್ಯಾತ್ಮಮಾಪನ್ನಃ ಪಞ್ಚ ವ್ಯೂಹಃ ವಿಶೇಷಾತ್ಮನಾ ಅವತಿಷ್ಠಮಾನಃ ಪ್ರಾಣೋ ನಾಮ ಭಣ್ಯತೇ ನ ತತ್ತ್ವಾನ್ತರಮ್, ನಾಪಿ ವಾಯುಮಾತ್ರಮ್ । ಅತಶ್ಚ ಉಭೇ ಅಪಿ ಭೇದಾ ಭೇದಶ್ರುತೀ ನ ವಿರುಧ್ಯೇತೇ ॥

(ಭಾಷ್ಯಾರ್ಥ)

ಇದಕ್ಕೆ (ನಾವು) ಹೇಳುವದೇನೆಂದರೆ: ಪ್ರಾಣವು ವಾಯುವೂ ಅಲ್ಲ, ಕರಣಗಳ ವ್ಯಾಪಾರವೂ ಅಲ್ಲ. ಏಕೆ? ಎಂದರೆ ಬೇರೆಯಾಗಿ ಉಪದೇಶ ಮಾಡಿರುವದರಿಂದ. (ಇದರ ವಿವರ): ಮೊದಲನೆಯದಾಗಿ "ಪ್ರಾಣವೇ ಬ್ರಹ್ಮದ ನಾಲ್ಕನೆಯ ಪಾದವು; ಅದು ವಾಯುವೆಂಬ ಜ್ಯೋತಿಯಿಂದ ಹೊಳೆಯುತ್ತಲೂ ಸುಡುತ್ತಲೂ ಇರುತ್ತದೆ" (ಛಾಂ. ೩-೧೮-೪) ಎಂದು ವಾಯುವಿಗಿಂತ ಪ್ರಾಣವು ಬೇರೆ ಎಂದು ಉಪದೇಶಿಸಿರುತ್ತದೆ. (ಪ್ರಾಣವು)

ವಾಯುವೇ ಆಗಿದ್ದರೆ ವಾಯುವಿಗಿಂತ ಬೇರೆಯಾಗಿ ಉಪದೇಶವನ್ನು ಮಾಡು ತ್ತಿರಲಿಲ್ಲವಷ್ಟೆ. ಇದರಂತೆ ಕರಣವೃತ್ತಿಗಿಂತಲೂ ಬೇರೆ ಎಂದು (ಪ್ರಾಣವನ್ನು ಶ್ರುತಿಯಲ್ಲಿ) ಉಪದೇಶಿಸಿರುತ್ತದೆ. ವಾಗಾದಿಕರಣಗಳನ್ನು ಅನುಕ್ರಮವಾಗಿ ಹೇಳುವಾಗ ಅಲ್ಲಲ್ಲಿ ಪ್ರಾಣವನ್ನು ಹೇಳಿರುವದರಿಂದ (ಹೀಗೆಂದು ನಿಶ್ಚಯವಾಗು ತ್ತದೆ). ವೃತ್ತಿ-ವೃತ್ತಿಯುಳ್ಳದ್ದು- ಇವೆರಡೂ ಬೇರೆಯಾಗಿರಲಾರವಾದ್ದರಿಂದಲೂ (ಹೀಗೆಂದು ತಿಳಿಯಬೇಕು) ಕರಣಗಳ ವ್ಯಾಪಾರವೇ ಆಗಿದ್ದರೆ (ಪ್ರಾಣ ವನ್ನು) ಕರಣಗಳಿಗಿಂತ ಬೇರೆಯಾಗಿ ಉಪದೇಶಿಸುವದು ಸರಿಯಾಗಲಾರದಷ್ಟೆ. ಹೀಗೆಯೇ "ಈತನಿಂದ ಪ್ರಾಣವು ಹುಟ್ಟುತ್ತದೆ, ಮನಸ್ಸೂ ಸರ್ವೇಂದ್ರಿಯ ಗಳೂ (ಹುಟ್ಟುತ್ತವೆ)" (ಮುಂ. ೨-೧-೩) ಎಂಬಿವೇ ಮುಂತಾದ ವಾಯು ವಿಗಿಂತಲೂ ಕರಣಗಳಿಗಿಂತಲೂ ಬೇರೆಯಾಗಿ ಪ್ರಾಣವನ್ನು ಉಪದೇಶಿಸಿರುವ (ಶ್ರುತಿಗಳನ್ನು) ಅನುಸರಿಸಬೇಕು ಸಮಸ್ತ ಕರಣಗಳಿಗೂ ಒಂದೇ ವೃತ್ತಿಯು ಇರುವದಾಗೂ ಇಲ್ಲ; ಏಕೆಂದರೆ (ಅವು) ಒಂದೊಂದಕ್ಕೂ ಒಂದೊಂದು ವ್ಯಾಪಾರವಿರುತ್ತದೆ. ಒಟ್ಟು ಸಮುದಾಯವು ಕಾರಕವೂ ಅಲ್ಲ.[1]

(ಆಕ್ಷೇಪ) :- ಪಂಜರಚಾಲನನ್ಯಾಯದಿಂದ ಇದು ಆಗಬಹುದಲ್ಲ! (ಇದರ ವಿವರ) : ಹೇಗೆ ಒಂದೇ ಪಂಜರದಲ್ಲಿರುವ ಹನ್ನೊಂದು ಪಕ್ಷಿಗಳು ಪ್ರತ್ಯೇಕವಾಗಿ (ತಮತಮಗೆ) ಗೊತ್ತಾದ ವ್ಯಾಪಾರವಿದ್ದರೂ ಒಟ್ಟುಗೂಡಿ ಒಂದೇ ಪಂಜರವನ್ನು ಚಲಿಸುವಂತೆ ಮಾಡುತ್ತವೆಯೋ ಹಾಗೆಯೇ ಒಂದೇ ಶರೀರದಲ್ಲಿರುವ ಹನ್ನೊಂದು ಪ್ರಾಣಗಳೂ ಪ್ರತ್ಯೇಕವಾಗಿ (ತಮತಮಗೆ) ಗೊತ್ತಾದ ವೃತ್ತಿಗಳಿದ್ದರೂ ಒಟ್ಟುಗೂಡಿ ಪ್ರಾಣವೆಂಬ ಒಂದು ವೃತ್ತಿಯನ್ನು ಪಡೆದುಕೊಳ್ಳಬಹುದಲ್ಲ !

(ಪರಿಹಾರ) :- ಹಾಗಲ್ಲ, ಎನ್ನುತ್ತೇವೆ. (ಏಕೆಂದರೆ) ಪಂಜರವನ್ನು ಚಲಿಸುವಂತೆ ಮಾಡುವದಕ್ಕೇ ಅನುಕೂಲವಾದ ಒಂದೊಂದರಲ್ಲಿಯೂ ಇರುವ ಅವಾಂತರವ್ಯಾಪಾರಗಳಿಂದೊಡಗೂಡಿರುವ ಪಕ್ಷಿಗಳು ಒಟ್ಟುಗೂಡಿ ಒಂದೇ ಪಂಜರವನ್ನು ನಡೆಯಿಸಬಹುದೆಂಬುದು ಆ (ದೃಷ್ಟಾಂತ)ದಲ್ಲಿ ಯುಕ್ತವಾಗಿರು ತ್ತದೆ. ಏಕೆಂದರೆ ಹಾಗಿರುವದು ಕಂಡುಬಂದಿರುತ್ತದೆ[2]. ಆದರೆ ಇಲ್ಲಿ ಕೇಳು ವದೇ ಮುಂತಾದ ಅವಾಂತರವ್ಯಾಪಾರವುಳ್ಳ ಪ್ರಾಣಗಳು ಒಟ್ಟುಗೂಡಿ ಪ್ರಾಣನವ್ಯಾಪಾರವನ್ನು ಮಾಡಲಾರವು ಎಂಬುದೇ ಯುಕ್ತವು. ಏಕೆಂದರೆ

---

1. ಐ. ಭಾ. (ಭಾ. ಭಾ. ೮೫)ರಲ್ಲಿ ಪ್ರಾಣವು ಕರಣಗಳ ಸಂಹತಿ ಎಂದು ಹೇಳಿರು ವದನ್ನು ಇಲ್ಲೇಕೆ ಲೆಕ್ಕಕ್ಕೆ ಹಿಡಿದಿಲ್ಲವೆಂಬುದು ವಿಚಾರಣೀಯವಾಗಿದೆ.

2. ಪ್ರತ್ಯಕ್ಷಪ್ರಮಾಣಸಿದ್ಧವಾಗಿರುವದರಿಂದ ಅಲ್ಲಿ ಒಟ್ಟುಗೂಡಿ ಒಂದು ವ್ಯಾಪಾರ ವಿರುತ್ತದೆ ಎಂದು ಕಲ್ಪಿಸುವದು ಯುಕ್ತವಾಗಿರುತ್ತದೆ.

(ಹಾಗೆ ಮಾಡುವವೆಂಬುದಕ್ಕೆ) ಪ್ರಮಾಣವಿರುವದಿಲ್ಲ; ಪ್ರಾಣನವೆಂಬ ವ್ಯಾಪಾರವು ಶ್ರವಣಾದಿಗಳಿಗಿಂತ ಅತ್ಯಂತ ವಿಜಾತೀಯವೂ ಆಗಿರುತ್ತದೆ[1]. ಹೀಗೆಯೇ ಪ್ರಾಣವು ಶ್ರೇಷ್ಠವೆಂದು ಮುಂತಾಗಿ ಬಾಯಿಬಿಟ್ಟು ಹೇಳಿರುವದೂ ವಾಗಾದಿಗಳು ಆ (ಪ್ರಾಣಕ್ಕೆ) ಗುಣಭೂತವಾಗಿರುವವೆಂದು ಒಪ್ಪಿರುವದೂ ಪ್ರಾಣವು ಕರಣವೃತ್ತಿಮಾತ್ರವೆಂಬ (ಪಕ್ಷದಲ್ಲಿ) ಯುಕ್ತವಾಗುವದಿಲ್ಲ[2]. ಆದ್ದರಿಂದ ಪ್ರಾಣವು ವಾಯುಕ್ರಿಯೆಗಳಿಗಿಂತ ಬೇರೆಯೇ.

(ಪ್ರಶ್ನೆ) :– ಹಾಗಾದರೆ "ಪ್ರಾಣನೆಂದರೆ ವಾಯುವೇ" (?) ಎಂಬೀ ಶ್ರುತಿಯು ಹೇಗೆ (ಯುಕ್ತವಾಗುತ್ತದೆ) ?

(ಉತ್ತರ) :– ಹೇಳುತ್ತೇವೆ. ಇದು ವಾಯುವೇ (ಆಗಿದ್ದು) ಅಧ್ಯಾತ್ಮವಾಗಿ ಐದು ವ್ಯೂಹಗಳಾಗಿ ವಿಶೇಷರೂಪದಿಂದ ಇದ್ದುಕೊಂಡು[3] ಪ್ರಾಣವೆನಿಸುತ್ತದೆ. ಇದು (ಅದಕ್ಕಿಂತ) ಬೇರೊಂದು ತತ್ತ್ವವೂ ಅಲ್ಲ, ವಾಯುಮಾತ್ರವೂ ಅಲ್ಲ. ಆದ್ದರಿಂದ ಭೇದಾಭೇದಶ್ರುತಿಗಳೆರಡಕ್ಕೂ ವಿರೋಧವಿಲ್ಲ.

**ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ॥ ೧೦ ॥**

೧೦. ಆದರೆ ಚಕ್ಷುರಾದಿಗಳಂತೆ (ಪ್ರಾಣವೂ ಕರಣವೇ) ; ಏಕೆಂದರೆ ಅವುಗಳೊಡನೆ ಉಪದೇಶಿಸಿರುವದೇ ಮುಂತಾದ (ಕಾರಣಗಳಿವೆ).

## ಮುಖ್ಯಪ್ರಾಣವು ಜೀವನಂತೆ ಸ್ವತಂತ್ರವಲ್ಲ

(ಭಾಷ್ಯ)

೧೯೧. ಸ್ಯಾದೇತತ್। ಪ್ರಾಣೋಽಪಿ ತರ್ಹಿ ಜೀವವತ್ ಅಸ್ಮಿನ್ ಶರೀರೇ ಸ್ವಾತನ್ತ್ರ್ಯಂ ಪ್ರಾಪ್ನೋತಿ। ಶ್ರೈಷ್ಠ್ಯಾತ್, ಗುಣಭಾವೋಪಗಮಾಚ್ಚ ತಂ ಪ್ರತಿ ವಾಗಾದೀನಾಮ್ ಇನ್ದ್ರಿಯಾಣಾಮ್। ತಥಾ ಹಿ ಅನೇಕವಿಧಾ

---

1. ಅನುಗುಣವ್ಯಾಪಾರಗಳಿಲ್ಲವೆಂಬುದು ಮಾತ್ರವೇ ಅಲ್ಲ, ಪ್ರಾಣನವೆಂಬ ವ್ಯಾಪಾರವು ಪ್ರತ್ಯೇಕವಾದ ವ್ಯಾಪಾರಗಳಿಗಿಂತ ಅತ್ಯಂತವಿಲಕ್ಷಣವಾದ ವ್ಯಾಪಾರವು ಎಂಬುದೂ ಇಲ್ಲಿ ದೃಷ್ಟಾಂತವು ಹೊಂದುವದಿಲ್ಲವೆಂಬುದಕ್ಕೆ ಸಾಧಕ.

2. ಪ್ರಾಣವು ಕರಣಗಳ ವ್ಯಾಪಾರವಾಗಿದ್ದರೆ ಕರಣಗಳೇ ಸ್ವತಂತ್ರವೆಂದಾಗುತ್ತಿತ್ತು; ಅವುಗಳು ಪ್ರಾಣಕ್ಕೆ ಗುಣಭೂತ ಎಂದರೆ ಅಧೀನ ಎಂಬ ಉಕ್ತಿಯು ಸರಿಯಾಗುತ್ತಿರಲಿಲ್ಲ. ಪ್ರಾಣನು ಶ್ರೇಷ್ಠನು ಎಂಬ ಶ್ರುತಿಯಂತೂ ವೃತ್ತಿವಾದಕ್ಕೆ ವಿರುದ್ಧವೇ ಆಗಿದೆ ಎಂದರ್ಥ.

3. ಪ್ರ. ೨–೩.

ವಿಭೂತಿಃ ಪ್ರಾಣಸ್ಯ ಶ್ರೂಯತೇ 'ಸುಪ್ತೇಷು ವಾಗಾದಿಷು ಪ್ರಾಣ ಏಕೋ ಹಿ ಜಾಗರ್ತಿ' (ಪ್ರ. ೫-೩ ?), 'ಪ್ರಾಣ ಏಕೋ ಮೃತ್ಯುನಾಽನಾಪ್ತಃ' ಬೃ. (೧-೩-೯ ೧-೫-೨೧ ?) 'ಪ್ರಾಣಃ ಸಂವರ್ಗೋ ವಾಗಾದೀನ್ ಸಂವೃಙ್ಕ್ತೇ' (ಛಾಂ. ೪-೩-೩), "ಪ್ರಾಣಃ ಇತರಾನ್ ಪ್ರಾಣಾನ್ ರಕ್ಷತಿ ಮಾತೇವ ಪುತ್ರಾನ್" (ಪ್ರ. ೨-೧೩)[1] ಇತಿ। ತಸ್ಮಾತ್ ಪ್ರಾಣಸ್ಯಾಪಿ ಜೀವವತ್ ಸ್ವಾತನ್ತ್ರ್ಯಪ್ರಸಙ್ಗಃ। ತಂ ಪರಿಹರತಿ ('ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ'), ತುಶಬ್ದಃ ಪ್ರಾಣಸ್ಯ ಜೀವವತ್ ಸ್ವಾತನ್ತ್ರ್ಯಂ ವ್ಯಾವರ್ತಯತಿ। ಯಥಾ ಚಕ್ಷುರಾದೀನಿ ರಾಜಪ್ರಕೃತಿವತ್ ಜೀವಸ್ಯ ಕರ್ತೃತ್ವಂ ಭೋಕ್ತೃತ್ವಂ ಚ ಪ್ರತಿ ಉಪಕರಣಾನಿ ನ ಸ್ವತನ್ತ್ರಾಣಿ। ತಥಾ ಮುಖ್ಯೋಽಪಿ ಪ್ರಾಣಃ ರಾಜಮನ್ತ್ರಿವತ್ ಜೀವಸ್ಯ ಸರ್ವಾರ್ಥಕರತ್ವೇನ ಉಪಕರಣಭೂತಃ ನ ಸ್ವತನ್ತ್ರಃ। ಕುತಃ ? ತತ್ಸಹಶಿಷ್ಟ್ಯಾದಿಭ್ಯಃ। ತೈಃ ಚಕ್ಷುರಾದಿಭಿಃ ಸಹೈವ ಪ್ರಾಣಃ ಶಿಷ್ಯತೇ ಪ್ರಾಣಸಂವಾದಾದಿಷು। ಸಮಾನಧರ್ಮಾಣಾಂ ಚ ಸಹಶಾಸನಂ ಯುಕ್ತಮ್। ಬೃಹದ್ರಥನ್ತರಾದಿವತ್। ಆದಿಶಬ್ದೇನ ಸಂಹತತ್ವಾಚೇತನತ್ವಾದೀನ್ ಪ್ರಾಣಸ್ಯ ಸ್ವಾತನ್ತ್ರ್ಯನಿರಾಕರಣಹೇತೂನ್ ದರ್ಶಯತಿ ॥

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಮತವು) ಇದಾಗಿರಬಹುದು : ಹಾಗಾದರೆ ಪ್ರಾಣಕ್ಕೂ ಜೀವನಂತೆ ಸ್ವಾತಂತ್ರ್ಯವು ಬರುತ್ತದೆ. ಏಕೆಂದರೆ (ಅದು) ಶ್ರೇಷ್ಠವಾಗಿರುತ್ತದೆ, ಅದಕ್ಕೆ ವಾಕ್ಕು ಮುಂತಾದ ಇಂದ್ರಿಯಗಳು ಗುಣಭಾವದಿಂದ ಇರುವವೆಂದು (ನೀವು) ಒಪ್ಪಿಯೂ ಇರುತ್ತೀರಿ. ಆದ್ದರಿಂದಲೇ 'ವಾಗಾದಿಗಳು ನಿದ್ರಿಸುತ್ತಿರುವಾಗ ಪ್ರಾಣವೊಂದೇ ಎಚ್ಚತ್ತಿರುತ್ತದೆ' (ಪ್ರ. ೫-೩) 'ಪ್ರಾಣವೊಂದೇ ಮೃತ್ಯುವು ಹಿಡಿದುಕೊಳ್ಳದೆ ಇರುವದು' (ಬೃ. ೧-೩-೯, ೧-೫-೨೧) 'ಪ್ರಾಣವು ಸಂವರ್ಗವು, ವಾಗಾದಿಗಳನ್ನು (ತನ್ನಲ್ಲಿ) ಅಡಕಮಾಡಿಕೊಂಡಿರುತ್ತದೆ' (ಛಾಂ. ೪-೩-೩), 'ತಾಯಿಯು ಮಕ್ಕಳನ್ನು (ಕಾಪಾಡುವಂತೆ) ಪ್ರಾಣವು ಉಳಿದ ಪ್ರಾಣಗಳನ್ನು ಕಾಪಾಡುತ್ತದೆ' (ಪ್ರ. ೨-೧೩) ಎಂದು ಪ್ರಾಣದ ವಿಭೂತಿಯನ್ನು ಅನೇಕ ವಿಧವಾಗಿ ಶ್ರುತಿಯಲ್ಲಿ ಹೇಳಿರುತ್ತದೆ. ಆದ್ದರಿಂದ ಜೀವನಂತೆ ಪ್ರಾಣಕ್ಕೂ ಸ್ವಾತಂತ್ರ್ಯವು ಪ್ರಸಕ್ತವಾಗುವದಲ್ಲ !

ಆ (ಸ್ವಾತಂತ್ರ್ಯಪ್ರಸಂಗವನ್ನು ಸೂತ್ರಕಾರರು) ಪರಿಹರಿಸುತ್ತಾರೆ : (ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯ) । "ಆದರೆ ಚಕ್ಷುರಾದಿಗಳಂತೆ (ಪ್ರಾಣವೂ ಕರಣವು ;) ಏಕೆಂದರೆ ಅವುಗಳೊಡನೆ ಉಪದೇಶಿಸಿರುವದೇ ಮುಂತಾದ (ಕಾರಣ

---

1. ಇಲ್ಲಿ ಕೊಟ್ಟಿರುವವೆಲ್ಲ ಶ್ರುತ್ಯರ್ಥಗಳೇ, ಸಾಕ್ಷಾತ್ತಾಗಿ ಶ್ರುತಿವಚನಗಳಲ್ಲ.

ಗಳಿವೆ)" (ಸೂತ್ರದಲ್ಲಿರುವ). ತುಶಬ್ದವು ಪ್ರಾಣಕ್ಕೆ ಜೀವನಂತೆ (ಪ್ರಸಕ್ತ ವಾಗುವ) ಸ್ವಾತಂತ್ರ್ಯವನ್ನು ಇಲ್ಲವೆನ್ನುತ್ತದೆ. ಹೇಗೆ ಚಕ್ಷುರಾದಿಗಳು ರಾಜನ ಪ್ರಜೆಗಳಂತೆ ಜೀವನ ಕರ್ತೃತ್ವಕ್ಕೂ ಭೋಕ್ತೃತ್ವಕ್ಕೂ ಉಪಕರಣಗಳೇ ಹೊರತು ಸ್ವತಂತ್ರವಾಗಿರುವದಿಲ್ಲವೋ ಹಾಗೆಯೇ ಮುಖ್ಯಪ್ರಾಣವೂ ರಾಜನ ಮಂತ್ರಿಯಂತೆ[1] ಜೀವನಿಗೆ ಸರ್ವಪ್ರಯೋಜನವನ್ನೂ ಉಂಟುಮಾಡಿಕೊಡುತ್ತಿರುವದರಿಂದ ಉಪಕರಣವಾಗಿರುತ್ತದೆಯೇ ಹೊರತು ಸ್ವತಂತ್ರವಾಗಿರುವದಿಲ್ಲ. ಏಕೆ ? ಎಂದರೆ 'ಅವುಗಳೊಡನೆ ಉಪದೇಶಿಸಿರುವದೇ ಮುಂತಾದ (ಕಾರಣ)ಗಳಿಂದ. ಆ ಚಕ್ಷುರಾದಿಗಳೊಡನೆಯೇ ಪ್ರಾಣವನ್ನೂ ಪ್ರಾಣಸಂವಾದವೇ ಮುಂತಾದವುಗಳಲ್ಲಿ ಹೇಳಿರುತ್ತದೆ. ಬೃಹತ್ಸಾಮರಥಂತರಸಾಮಗಳಂತೆ[2] (ಇಲ್ಲಿಯೂ) ಸಮಾನಧರ್ಮಗಳುಳ್ಳ (ಪದಾರ್ಥಗಳನ್ನೇ) ಜೊತೆಯಲ್ಲಿ ಶಾಸ್ತ್ರವು ಹೇಳಿರುತ್ತದೆ ಎಂಬುದು ಯುಕ್ತವು. (ಸೂತ್ರದಲ್ಲಿ) ಮುಂತಾದ (ಕಾರಣಗಳಿಂದ)' ಎಂಬ ಮಾತಿನಿಂದ ಸಂಹತತ್ವ, ಅಚೇತನತ್ವ –ಮುಂತಾದ ಪ್ರಾಣಸ್ವಾತಂತ್ರ್ಯವನ್ನು ನಿರಾಕರಿಸುವ ಕಾರಣಗಳನ್ನು ತಿಳಿಸಿರುತ್ತದೆ.

**ಅಕರಣತ್ವಾಚ್ಚ ನ ದೋಷಸ್ತಥಾ ಹಿ ದರ್ಶಯತಿ || ೧೧ ||**

೧೧. ಕರಣವಲ್ಲದ್ದರಿಂದ ದೋಷವೂ ಅಲ್ಲ. ಏಕೆಂದರೆ ಹೀಗೆಂದೇ (ಶ್ರುತಿ) ತಿಳಿಸುತ್ತದೆ.

## ಪೂರ್ವಪಕ್ಷ :
## ಪ್ರಾಣವು ಕರಣವಾದರೆ ಅದಕ್ಕೆ ವಿಷಯವಿಲ್ಲವಲ್ಲ !

(ಭಾಷ್ಯ)

೧೯೨. ಸ್ಯಾದೇತತ್ । ಯದಿ ಚಕ್ಷುರಾದಿವತ್ ಪ್ರಾಣಸ್ಯ ಜೀವಂ ಪ್ರತಿ ಕರಣಭಾವಃ ಅಭ್ಯುಪಗಮ್ಯೇತ, ವಿಷಯಾನ್ತರಂ ರೂಪಾದಿವತ್ ಪ್ರಸಜ್ಯೇತ । ರೂಪಾದ್ಯಾಲೋಚನಾದಿಭಿಃ ವೃತ್ತಿಭಿಃ ಯಥಾಸ್ವಂ ಚಕ್ಷುರಾದೀನಾಂ ಜೀವಂ ಪ್ರತಿ ಕರಣಭಾವೋ ಭವತಿ । ಅಪಿ ಚ ಏಕಾದಶೈವ ಕಾರ್ಯಜಾತಾನಿ

---

1. ಮಂತ್ರಿ, ಪ್ರಜೆಗಳು –ಇವರಿಗೆ ಸ್ಥಾನಮಾನಗಳು ಬೇರೆಬೇರೆಯಾದರೂ ರಾಜನಿಗೆ ಇಬ್ಬರೂ ಉಪಕರಣವೇ ಆಗಿರುವಂತೆ ಮುಖ್ಯಪ್ರಾಣ, ಇತರ ಪ್ರಾಣಗಳು– ಎರಡೂ ಜೀವನಿಗೆ ಉಪಕರಣವೇ ಎಂದರ್ಥ.

2. ಈ ಎರಡು ನಾಮಗಳನ್ನು ಜೊತೆಯಲ್ಲಿಯೇ ಶಾಸ್ತ್ರದಲ್ಲಿ ಹೇಳಿರುತ್ತದೆ ; ಎರಡೂ ಕರ್ಮಗಳಲ್ಲಿ ಜೊತೆಯಲ್ಲಿಯೇ ಪ್ರಯುಕ್ತವಾಗುತ್ತವೆ.

ರೂಪಾಲೋಚನಾದೀನಿ ಪರಿಗಣಿತಾನಿ ಯಾವದರ್ಥಮ್ ಏಕಾದಶ ಪ್ರಾಣಾಃ ಸಂಗೃಹೀತಾಃ । ನ ತು ದ್ವಾದಶಮ್ ಅಪರಂ ಕಾರ್ಯಜಾತಮ್ ಅಧಿಗಮ್ಯತೇ ಯದರ್ಥಂ ದ್ವಾದಶಃ ಪ್ರಾಣಃ ಪ್ರತಿಜ್ಞಾಯೇತ ಇತಿ ॥

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಮತವು) ಇದಾಗಿರಬಹುದು: ಚಕ್ಷುರಾದಿಗಳಂತೆ ಪ್ರಾಣಕ್ಕೆ ಜೀವನ ವಿಷಯಕ್ಕೆ ಕರಣತ್ವವನ್ನು ಒಪ್ಪುವದಾದರೆ ತದನುಗುಣವಾಗಿ (ಅನುಗುಣವಾಗಿ)ರೂಪಾದಿಗಳಂತೆ(ಅದಕ್ಕೂ) ಮತ್ತೊಂದು ವಿಷಯವು ಪ್ರಸಕ್ತವಾಗುವದು. ರೂಪಾದಿಗಳನ್ನು ಕಾಣುವದೇ ಮುಂತಾದ ವೃತ್ತಿಗಳಿಂದ ಚಕ್ಷುರಾದಿಗಳು ಜೀವನಿಗೆ ಕರಣವಾಗಿರುತ್ತವೆ. ಇದಲ್ಲದೆ ರೂಪವನ್ನು ಅರಿಯುವದೇ ಮುಂತಾದ ಹನ್ನೊಂದೇ ಕಾರ್ಯಜಾತಗಳನ್ನು ಲೆಕ್ಕಮಾಡಿರುತ್ತದೆ; ಅವುಗಳಿಗಾಗಿ ಹನ್ನೊಂದು ಕರಣಗಳೆಂದು ಹಿಡಿದದ್ದಾಗಿದೆ. ಆದರೆ ಹನ್ನೆರಡನೆಯದಾದ ಮತ್ತೊಂದು ಕಾರ್ಯಜಾತವು ಇರುವದಿಲ್ಲ; (ಹಾಗಿದ್ದರಲ್ಲವೆ), ಅದಕ್ಕಾಗಿ ಹನ್ನೆರಡನೆಯದಾಗಿ ಪ್ರಾಣವನ್ನು (ಕರಣವೆಂದು) ಹೇಳಬಹುದಾಗಿತ್ತು ?

## ಸಿದ್ಧಾಂತ: ಪ್ರಾಣಕ್ಕೂ ಕಾರ್ಯವಿರುತ್ತದೆ

(ಭಾಷ್ಯ)

೧೯೩. ಅತಃ ಉತ್ತರಂ ಪಠತಿ—("ಅಕರಣತ್ವಾಚ್ಚ ನ ದೋಷಸ್ತಥಾ ಹಿ ದರ್ಶಯತಿ) ನ ತಾವತ್ ವಿಷಯಾನ್ತರಪ್ರಸಙ್ಗೋ ದೋಷಃ । ಅಕರಣತ್ವಾತ್ ಪ್ರಾಣಸ್ಯ । ನ ಹಿ ಚಕ್ಷುರಾದಿವತ್ ಪ್ರಾಣಸ್ಯ ವಿಷಯಪರಿಚ್ಛೇದೇನ ಕರಣತ್ವಮ್ ಅಭ್ಯುಪಗಮ್ಯತೇ । ನ ಚ ಅಸ್ಯ ಏತಾವತಾ ಕಾರ್ಯಾಭಾವ ಏವ । ಕಸ್ಮಾತ್ ? ತಥಾ ಹಿ ಶ್ರುತಿಃ ಪ್ರಾಣಾನ್ತರೇಷು ಅಸಂಭಾವ್ಯಮಾನಂ ಮುಖ್ಯಪ್ರಾಣಸ್ಯ ವೈಶೇಷಿಕಂ ಕಾರ್ಯಂ ದರ್ಶಯತಿ ಪ್ರಾಣಸಂವಾದಾದಿಷು । 'ಅಥ ಹ ಪ್ರಾಣಾ ಅಹಂ ಶ್ರೇಯಸಿ ವ್ಯೂದಿರೇ" (ಛಾಂ. ೫–೧–೬) ಇತಿ ಉಪಕ್ರಮ್ಯ 'ಯಸ್ಮಿನ್ ವ ಉತ್ಕ್ರಾನ್ತೇ ಶರೀರಂ ಪಾಪಿಷ್ಠತರಮಿವ ದೃಶ್ಯತೇ ಸ ವಃ ಶ್ರೇಷ್ಠಃ (ಛಾ. ೫–೧–೭) ಇತಿ ಚ ಉಪನ್ಯಸ್ಯ, ಪ್ರತ್ಯೇಕಂ ವಾಗಾದ್ಯುತ್ಕ್ರಮಣೇನ ತದ್ವೃತ್ತಿಮಾತ್ರಹೀನಂ ಯಥಾಪೂರ್ವಂ ಜೀವನಂ ದರ್ಶಯಿತ್ವಾ ಪ್ರಾಣೋಚ್ಚಿಕ್ರಮಿಷಾಯಾಂ ವಾಗಾದಿಶೈಥಿಲ್ಯಾಪತ್ತಿಂ ಶರೀರಪಾತಪ್ರಸಙ್ಗಂ ಚ ದರ್ಶಯನ್ತೀ (ಛಾಂ. ೫–೧–೧೨) ಶ್ರುತಿಃ ಪ್ರಾಣನಿಮಿತ್ತಾಂ ಶರೀರೇನ್ದ್ರಿಯಸ್ಥಿತಿಂ ದರ್ಶಯತಿ । "ತಾನ್ ವರಿಷ್ಠಃ ಪ್ರಾಣ ಉವಾಚ ಮಾ ಮೋಹಮಾಪದ್ಯಥಾಹಮೇವೈತತ್ ಪಞ್ಚಧಾತ್ಮಾನಂ ಪ್ರವಿಭಜ್ಯೈತದ್ ಬಾಣಮವಷ್ಟಭ್ಯ ವಿಧಾರ

ಯೂವಿ" (ಪ್ರ. ೨-೩) ಇತಿ ಚ ಏತಮೇವ ಅರ್ಥಂ ಶ್ರುತಿರಾಹ। "ಪ್ರಾಣೇನ ರಕ್ಷನ್ನವರಂ ಕುಲಾಯಮ್" (ಬೃ. ೪-೩-೧೨) ಇತಿ ಚ ಸುಪ್ತೇಷು ಚಕ್ಷುಶ್ಶ್ರೋತ್ರಾದಿಷು ಪ್ರಾಣನಿಮಿತ್ತಾಂ ಶರೀರರಕ್ಷಾಂ ದರ್ಶಯತಿ। "ಯಸ್ಮಾತ್ ಕಸ್ಮಾಚ್ಚಾಪ್ರಾಣ ಉತ್ಕ್ರಾಮತಿ ತದೇವ ತಚ್ಛುಷ್ಯತಿ" (ಬೃ. ೧-೩-೧೯) "ತೇನ ಯದಶ್ನಾತಿ ಯತ್ಪಿಬತಿ ತೇನೇತರಾನ್ ಪ್ರಾಣಾನವತಿ" (?) ಇತಿ ಚ ಪ್ರಾಣನಿಮಿತ್ತಾಂ ಶರೀರೇನ್ದ್ರಿಯಪುಷ್ಟಿಂ ದರ್ಶಯತಿ। "ಕಸ್ಮಿನ್ನ್ವಹಮುತ್ಕ್ರಾನ್ತ ಉತ್ಕ್ರಾನ್ತೋ ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮಿ" (ಪ್ರ. ೬-೩) ಇತಿ "ಸ ಪ್ರಾಣಮಸೃಜತ" (ಪ್ರ.೬-೪) ಇತಿ ಪ್ರಾಣನಿಮಿತ್ತೇ ಜೀವಸ್ಯ ಉತ್ಕ್ರಾನ್ತಿಪ್ರತಿಷ್ಠೇ ದರ್ಶಯತಿ ॥

(ಭಾಷ್ಯಾರ್ಥ)

ಇದಕ್ಕೆ ಉತ್ತರವನ್ನು (ಸೂತ್ರಕಾರರು) ಹೇಳುತ್ತಾರೆ: ("ಅಕರಣತ್ವಾಚ್ಚ ನ ದೋಷಸ್ತಥಾ ಹಿ ದರ್ಶಯತಿ")। ಮೊದಲನೆಯದಾಗಿ ಮತ್ತೊಂದು ವಿಷಯವು ಪ್ರಸಕ್ತವಾಗುವದೆಂಬ ದೋಷವಿರುವದಿಲ್ಲ. ಏಕೆಂದರೆ ಪ್ರಾಣವು ಕರಣವಲ್ಲ. (ಇದರ ವಿವರ): ಚಕ್ಷುರಾದಿಗಳಂತೆ ವಿಷಯವನ್ನು ಗೊತ್ತುಪಡಿಸುವದರಿಂದ (ಪ್ರಾಣವು ಕರಣವೆಂದೇನೂ (ನಾವು) ಒಪ್ಪಿರುವದಿಲ್ಲ. ಆದರೆ ಇಷ್ಟುಮಾತ್ರದಿಂದ ಇದಕ್ಕೆ ಕಾರ್ಯವೇ ಇಲ್ಲವೆಂದೂ (ಆಗುವ)ದಿಲ್ಲ. ಏಕೆ ? ಎಂದರೆ ಹಾಗೆಂದಲ್ಲವೆ ಶ್ರುತಿಯು ಮಿಕ್ಕ ಪ್ರಾಣಗಳಲ್ಲಿ ಸಂಭವಿಸದೆ ಇರುವ ವಿಶೇಷ ಕಾರ್ಯವನ್ನು ಮುಖ್ಯಪ್ರಾಣಕ್ಕೆ ಪ್ರಾಣಸಂವಾದಾದಿಗಳಲ್ಲಿ ತಿಳಿಸಿರುತ್ತದೆ. "ಇನ್ನು ಪ್ರಾಣಗಳು ನಾನು ಹೆಚ್ಚು (ನಾನು ಹೆಚ್ಚು) ಎಂದು ವಿವಾದವನ್ನು ಮಾಡಿದವು." (ಛಾಂ. ೫-೧೬) ಎಂದು ಉಪಕ್ರಮಿಸಿ "ನಿಮ್ಮಗಳಲ್ಲಿ ಯಾವನು ಉತ್ಕ್ರಾಂತನಾದರೆ ಶರೀರವು ಅತ್ಯಂತ ಪಾಪಿಷ್ಠವಾಗಿ ಕಾಣುವದೋ ಅವನು ನಿಮ್ಮೊಳಗೆ ಶ್ರೇಷ್ಠನು" (ಛಾಂ. ೫-೧-೭) ಎಂದೂ ಹೇಳಿ ಒಂದೊಂದಾಗಿ ವಾಗಾದಿಗಳು ಉತ್ಕ್ರಮಣಮಾಡಲು ಆಯಾ ವೃತ್ತಿಮಾತ್ರ ಇಲ್ಲದೆ ಮೊದಲಿನಂತೆ ಬದುಕಿದ್ದನೆಂದು ತಿಳಿಸಿ ಪ್ರಾಣವು ಉತ್ಕ್ರಮಿಸುವದಕ್ಕೆ ಹೊರಡಲು ವಾಗಾದಿಗಳು ಸಡಿಲವಾದವೆಂದೂ ಶರೀರವು ಬಿದ್ದುಹೋಗುವ ಪ್ರಸಂಗ ಬಂತೆಂದೂ ತಿಳಿಸಿರುವ (ಛಾಂ.೫-೧-೧೨) ಶ್ರುತಿಯು ಪ್ರಾಣನಿಮಿತ್ತದಿಂದಲೇ ಶರೀರೇಂದ್ರಿಯಗಳು ಇದ್ದುಕೊಂಡಿರುವವೆಂದು ತಿಳಿಸುತ್ತದೆ. "ಅವುಗಳನ್ನು ಶ್ರೇಷ್ಠನಾದ ಪ್ರಾಣನು ಇಂತೆಂದನು: ಮೋಹವನ್ನೂ ಹೊಂದದಿರಿ; ನಾನೇ ಈ ರೀತಿಯಲ್ಲಿ ಐದು ಬಗೆಯಾಗಿ ನನ್ನನ್ನು ವಿಂಗಡಿಸಿಕೊಂಡು ಈ ಶರೀರವನ್ನು ಎತ್ತಿ ಹಿಡಿದುಕೊಂಡಿರುತ್ತೇನೆ". (ಪ್ರ. ೨-೩) ಎಂದೂ ಶ್ರುತಿಯು ಇದೇ ಅರ್ಥವನ್ನು ಹೇಳಿರುತ್ತದೆ. "ಪ್ರಾಣದಿಂದ ಈ ಕಡಿಮೆಯ ಗೂಡನ್ನು ಕಾಪಾಡಿಕೊಂಡು" (ಬೃ. ೪-೩-೧೨) ಎಂದೂ ಚಕ್ಷುರಾದಿಗಳು ನಿದ್ರಿಸುತ್ತಿರಲು ಪ್ರಾಣ

ನಿಮಿತ್ತದಿಂದ ಶರೀರವ ರಕ್ಷೆಯಾಗುವದೆಂದು ತಿಳಿಸಿರುತ್ತದೆ. "ಯಾವದೊಂದೇ ಅಂಗದಿಂದ ಪ್ರಾಣವು ಉತ್ಕ್ರಾಂತವಾದರೂ ಆಗಲೇ ಅದು ಒಣಗುತ್ತದೆ" (ಬೃ. ೧-೩-೧೯) "ಆದರಿಂದ ಯಾವದನ್ನು ತಿನ್ನುತ್ತಾನೋ ಯಾವದನ್ನು ಕುಡಿಯುತ್ತಾನೋ ಅದರಿಂದ ಉಳಿದ ಪ್ರಾಣಗಳನ್ನು ಕಾಪಾಡಿಕೊಳ್ಳುತ್ತಾನೆ"(?) ಎಂದೂ ಪ್ರಾಣನಿಮಿತ್ತವಾಗಿಯೇ ಶರೀರೇಂದ್ರಿಯಗಳ ಪುಷ್ಟಿಯಾಗುವದೆಂದು ತಿಳಿಸಿರುತ್ತದೆ. "ಯಾವದು ಉತ್ಕ್ರಾಂತವಾದರೆ ನಾನು ಉತ್ಕ್ರಾಂತನಾಗುವೆನು, ಯಾವದು ನಿಂತಿದ್ದರೆ ನಿಂತಿರುವೆನು (ಎಂದು ಆಲೋಚಿಸಿದನು)" (ಪ್ರ. ೬-೩) ಎಂದೂ "ಅವನು ಪ್ರಾಣವನ್ನು ಸೃಜಿಸಿದನು" (ಪ್ರ. ೬-೪)ಎಂದೂ ಜೀವನಿಗೆ ಉತ್ಕ್ರಾಂತಿಯೂ ನಿಲುಗಡೆಯೂ ಪ್ರಾಣನಿಮಿತ್ತವಾಗಿ (ಆಗುವವು) ಎಂದೂ ತಿಳಿಸಿರುತ್ತದೆ.

## ಪಞ್ಚವೃತ್ತಿರ್ಮನೋವದ್ವ್ಯಪದಿಶ್ಯತೇ ॥ ೧೨ ॥

೧೨. ಮನಸ್ಸಿನಂತೆ ಐದು ವೃತ್ತಿಗಳುಳ್ಳದ್ದೆಂದು ಹೇಳಲ್ಪಟ್ಟಿದೆ.

## ಪ್ರಾಣಕ್ಕೆ ಐದು ವೃತ್ತಿಗಳಿವೆ

(ಭಾಷ್ಯ)

೧೯೪. ಇತಶ್ಚ ಅಸ್ತಿ ಮುಖ್ಯಸ್ಯ ಪ್ರಾಣಸ್ಯ ವೈಶೇಷಿಕಂ ಕಾರ್ಯಮ್ । ಯತ್ಕಾರಣಂ ಪಞ್ಚವೃತ್ತಿರಯಂ ವ್ಯಪದಿಶ್ಯತೇ ಶ್ರುತಿಷು "ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನಃ" (ಬೃ. ೧-೫-೩) ಇತಿ । ವೃತ್ತಿಭೇದಶ್ಚ ಅಯಂ ಕಾರ್ಯಭೇದಾಪೇಕ್ಷಃ । ಪ್ರಾಣಃ ಪ್ರಾಗ್ವೃತ್ತಿಃ, ಉಚ್ಛ್ವಾಸಾದಿಕರ್ಮಾ । ಅಪಾನಃ, ಅರ್ವಾಗ್ವೃತ್ತಿಃ ನಿಶ್ವಾಸಾದಿಕರ್ಮಾ, ವ್ಯಾನಃ ತಯೋಃ ಸನ್ಧೌ ವರ್ತಮಾನಃ ವೀರ್ಯವತ್ಕರ್ಮಹೇತುಃ । ಉದಾನಃ ಊರ್ಧ್ವವೃತ್ತಿಃ ಉತ್ಕ್ರಾನ್ತ್ಯಾದಿಹೇತುಃ । ಸಮಾನಃ ಸಮಂ ಸರ್ವೇಷು ಅಙ್ಗೇಷು ಯೋಽನ್ನರಸಾನ್ ನಯತಿ ಇತಿ । ಏವಂ ಪಞ್ಚವೃತ್ತಿಃ ಪ್ರಾಣಃ । ಮನೋವತ್ । ಯಥಾ ಮನಸಃ ಪಞ್ಚವೃತ್ತಯಃ ಏವಂ ಪ್ರಾಣಸ್ಯಾಪಿ ಇತ್ಯರ್ಥಃ । ಶ್ರೋತ್ರಾದಿನಿಮಿತ್ತಾಃ ಶಬ್ದಾದಿವಿಷಯಾಃ ಮನಸಃ ಪಞ್ಚ ವೃತ್ತಯಃ ಪ್ರಸಿದ್ಧಾಃ । ನ ತು "ಕಾಮಃ ಸಂಕಲ್ಪಃ" (ಬೃ. ೧-೫-೩) ಇತ್ಯಾದ್ಯಾಃ ಪರಿಪಠಿತಾಃ ಪರಿಗೃಹ್ಯೇರನ್ । ಪಞ್ಚಸಂಖ್ಯಾತಿರೇಕಾತ್ । ನನು ಅತ್ರಾಪಿ ಶ್ರೋತ್ರಾದಿನಿರಪೇಕ್ಷಾ ಭೂತಭವಿಷ್ಯದಾದಿವಿಷಯಾ ಅಪರಾ ಮನಸೋ ವೃತ್ತಿಃ ಅಸ್ತಿ ಇತಿ ಸಮಾನಃ ಪಞ್ಚ ಸಂಖ್ಯಾತಿರೇಕಃ । ಏವಂ ತರ್ಹಿ "ಪರಮತಮ್ ಅಪ್ರತಿಷಿದ್ಧಮ್ ಅನುಮತಂ ಭವತಿ" ಇತಿ ನ್ಯಾಯಾತ್ ಇಹಾಪಿ ಯೋಗಶಾಸ್ತ್ರ ಪ್ರಸಿದ್ಧಾಃ ಮನಸಃ ಪಞ್ಚವೃತ್ತಯಃ ಪರಿಗೃಹ್ಯನ್ತೇ "ಪ್ರಮಾಣವಿಪರ್ಯಯ

ವಿಕಲ್ಪನಿದ್ರಾಸ್ಮೃತಯಃ" (ಯೋ. ಸೂ. ೧-೧-೬) ನಾಮ । ಬಹುವೃತ್ತಿತ್ವ ಮಾತ್ರೇಣ ವಾ ಮನಃ ಪ್ರಾಣಸ್ಯ ನಿದರ್ಶನಮ್ ಇತಿ ದ್ರಷ್ಟವ್ಯಮ್ । ಜೀವೋಪಕರಣತ್ವಮಪಿ ಪ್ರಾಣಸ್ಯ ಪಞ್ಚವೃತ್ತಿತ್ವಾತ್ ಮನೋವತ್ ಇತಿ ಯೋಜಯಿತವ್ಯಮ್ ॥

(ಭಾಷ್ಯಾರ್ಥ)

ಇದರಿಂದಲೂ ಮುಖ್ಯಪ್ರಾಣಕ್ಕೆ ವಿಶೇಷಕಾರ್ಯವಿದೆ (ಎಂದು ನಿಶ್ಚಯಿಸಬಹುದು). ಯಾವ (ಕಾರಣ)ದಿಂದ ಎಂದರೆ "ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ" (ಬೃ. ೧ ೫-೩) ಎಂದು (ಇದಕ್ಕೆ) ಐದು ವೃತ್ತಿಗಳಿರುವವೆಂದು ಶ್ರುತಿಗಳಲ್ಲಿ ಹೇಳಿರುತ್ತದೆ. ಈ ಬೇರೆಬೇರೆಯ ವೃತ್ತಿಗಳನ್ನು (ಹೇಳಿರುವದು) ಬೇರೆಬೇರೆಯ ಕಾರ್ಯದ ಅಪೇಕ್ಷೆಯಿಂದ. (ಹೇಗೆಂದರೆ) **ಪ್ರಾಣವೆಂದರೆ** ಉಚ್ಛ್ವಾಸವೇ ಮುಂತಾದ ಕರ್ಮಗಳುಳ್ಳ ಮುಂದುವರಿಯುವ ವೃತ್ತಿ ; **ಅಪಾನವೆಂದರೆ** ನಿಶ್ವಾಸವೇ ಮುಂತಾದ ಕರ್ಮಗಳುಳ್ಳ ಹಿಂದಕ್ಕೆ ಸರಿಯುವ ವೃತ್ತಿ ; **ವ್ಯಾನವೆಂದರೆ** ಅವೆರಡರ ನಡುವೆ ಇರುವದಾಗಿ ವೀರ್ಯವತ್ಕರ್ಮವನ್ನು (ಮಾಡುವದಕ್ಕೆ) ಕಾರಣವಾಗಿರುವ (ವೃತ್ತಿ); **ಉದಾನವೆಂದರೆ** ಉತ್ಕ್ರಾಂತಿಯೇ ಮುಂತಾದ (ಕರ್ಮಕ್ಕೆ) ಕಾರಣವಾಗಿರುವ ಮೇಲಕ್ಕೇರುವ ವೃತ್ತಿ ; **ಸಮಾನವೆಂದರೆ** ಎಲ್ಲಾ ಅಂಗಗಳಿಗೂ ಸಮಾನವಾಗಿ ಅನ್ನರಸವನ್ನು ಒಯ್ಯುತ್ತದೆಯಲ್ಲ, (ಆ ವೃತ್ತಿ). ಹೀಗೆ ಪ್ರಾಣಕ್ಕೆ ಐದು ವೃತ್ತಿಗಳಿವೆ.

'ಮನಸ್ಸಿನಂತೆ', (ಇದರ ವಿವರ) : ಹೇಗೆ ಮನಸ್ಸಿಗೆ ಐದು ವೃತ್ತಿಗಳೋ ಹಾಗೆಯೇ ಪ್ರಾಣಕ್ಕೂ (ಇರುವವು) ಎಂದರ್ಥ. ಶ್ರೋತ್ರಾದಿಗಳ ನಿಮಿತ್ತದಿಂದ ಶಬ್ದವೇ ಮುಂತಾದವುಗಳ ವಿಷಯವಾಗಿರುವ ಐದು ವೃತ್ತಿಗಳು ಮನಸ್ಸಿಗೆ ಪ್ರಸಿದ್ಧವಾಗಿರುತ್ತವೆ. (ಅವನ್ನೇ ಇಲ್ಲಿ ತೆಗೆದುಕೊಳ್ಳಬೇಕೇ ಹೊರತು) ಕಾಮ, ಸಂಕಲ್ಪ (ಬೃ. ೧-೫-೩) ಎಂದು ಮುಂತಾಗಿ (ಶ್ರುತಿಯಲ್ಲಿ) ಪಠಿತವಾಗಿರುವ (ವೃತ್ತಿಗಳನ್ನು) ತೆಗೆದುಕೊಳ್ಳಬಾರದು. ಏಕೆಂದರೆ (ಆಗ) ಐದೆಂಬ ಸಂಖ್ಯೆಗಿಂತ ಹೆಚ್ಚಾಗುತ್ತದೆ.

(ಆಕ್ಷೇಪ) :— ಶ್ರೋತ್ರಾದಿಗಳ ಬಯಕೆಯಿಲ್ಲದ ಭೂತಭವಿಷ್ಯದಾದಿಗಳ ವಿಷಯವಾದ ಮನೋವೃತ್ತಿಯು ಮತ್ತೊಂದು ಇದೆಯಾದ್ದರಿಂದ ಐದೆಂಬ ಸಂಖ್ಯೆಗಿಂತ ಹೆಚ್ಚಾಗಿರುವದು ಇಲ್ಲಿಯೂ ಸಮಾನವಾಗಿದೆಯಲ್ಲ !

(ಪರಿಹಾರ) :— ಹೀಗಾದರೆ **'ಪ್ರತಿಷೇಧಮಾಡದಿರುವ ಪರಮತವು ಒಪ್ಪಿದ್ದೇ ಆಗಿರುತ್ತದೆ' ಎಂಬ ನ್ಯಾಯದಿಂದ[1] ಇಲ್ಲಿಯೂ**

---

1. ಈ ನ್ಯಾಯವನ್ನು ಅನುಸರಿಸಿಯೇ ಆಚಾರ್ಯರು ಮಿಕ್ಕ ದರ್ಶನಗಳಲ್ಲಿ ಹೇಳಿರುವ ಕೆಲವು ವಿಷಯಗಳನ್ನು ಅಂಗೀಕರಿಸಿರುವರು.

**ಯೋಗಶಾಸ್ತ್ರಪ್ರಸಿದ್ಧವಾದ ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರೆ, ಸ್ಮೃತಿ –ಎಂಬ (ಯೋ. ಸೂ. ೧–೧–೬) ಐದು ವೃತ್ತಿಗಳನ್ನು ತೆಗೆದುಕೊಳ್ಳಬಹುದು.** ಅಥವಾ ಅನೇಕವೃತ್ತಿಗಳು ಇವೆ ಎಂಬ ಮಾತ್ರದಿಂದಲೇ ಮನಸ್ಸನ್ನು ಪ್ರಾಣಕ್ಕೆ ನಿದರ್ಶನವಾಗಿ (ಕೊಟ್ಟಿದೆ) ಎಂದು ತಿಳಿಯಬೇಕು[1]. ಪ್ರಾಣವು ಜೀವನಿಗೆ ಉಪಕರಣವಾಗಿದೆ ಎಂಬುದೂ ಐದು ವೃತ್ತಿಗಳಿರುವದರಿಂದ ಮನಸ್ಸಿನಂತೆಯೇ (ಇದು) ಎಂದು (ಸೂತ್ರಾಕ್ಷರವನ್ನು) ಜೋಡಿಸಿಕೊಳ್ಳಬೇಕು[2].

## ೬. * ಶ್ರೇಷ್ಠಾಣುತ್ವಾಧಿಕರಣ

(ಮುಖ್ಯಪ್ರಾಣವು ಅಣು)

**ಅಣುಶ್ಚ ॥ ೧೩ ॥**

೧೩. (ಮುಖ್ಯಪ್ರಾಣವು) ಅಣುವೂ ಆಗಿದೆ.

## ಮುಖ್ಯಪ್ರಾಣವು ಸೂಕ್ಷ್ಮ, ಪರಿಚ್ಛಿನ್ನ

(ಭಾಷ್ಯ)

೧೫೫. ಅಣುಶ್ಚ ಅಯಂ ಮುಖ್ಯಃ ಪ್ರಾಣಃ ಪ್ರತ್ಯೇತವ್ಯಃ । ಇತರಪ್ರಾಣವತ್ । ಅಣುತ್ವಂ ಚ ಇಹಾಪಿ ಸೌಕ್ಷ್ಮ್ಯಪರಿಚ್ಛೇದೌ ನ ಪರಮಾಣುತುಲ್ಯತ್ವಮ್ । ಪಞ್ಚಭಿಃ ವೃತ್ತಿಭಿಃ ಕೃತ್ಸ್ನಶರೀರವ್ಯಾಪಿತ್ವಾತ್ । ಸೂಕ್ಷ್ಮಃ ಪ್ರಾಣಃ । ಉತ್ಕ್ರಾನ್ತೌ ಪಾರ್ಶ್ವಸ್ಥೇನ ಅನುಪಲಭ್ಯಮಾನತ್ವಾತ್ । ಪರಿಚ್ಛಿನ್ನಶ್ಚ ಉತ್ಕ್ರಾನ್ತಿಗತ್ಯಾಗತಿಶ್ರುತಿಭ್ಯಃ । ನನು ವಿಭುತ್ವಮಪಿ ಪ್ರಾಣಸ್ಯ "ಸಮಾಮ್ನಾಯತೇ । ಸಮಃ ಪ್ಲುಷಿಣಾ ಸಮೋ ಮಶಕೇನ ಸಮೋ ನಾಗೇನ ಸಮ ಏಭಿಸ್ತ್ರಿಭಿರ್ಲೋಕೈಃ ಸಮೋಽನೇನ ಸರ್ವೇಣ" (ಬೃ. ೧–೩–೨೨) ಇತ್ಯೇವಮಾದಿಪ್ರದೇಶೇಷು । ತದುಚ್ಯತೇ । ಆಧಿದೈವಿಕೇನ ಸಮಷ್ಟಿವ್ಯಷ್ಟಿರೂಪೇಣ ಹೈರಣ್ಯಗರ್ಭೇಣ ಪ್ರಾಣಾತ್ಮನೈವ ಏತದ್ವಿಭುತ್ವಮ್ ಆಮ್ನಾಯತೇ ನಾಧ್ಯಾತ್ಮಿಕೇನ । ಅಪಿ ಚ 'ಸಮಃ ಪ್ಲುಷಿಣಾ ಇತ್ಯಾದಿನಾ ಸಾಮ್ಯವಚನೇನ ಪ್ರತಿಪ್ರಾಣಿವರ್ತಿನಃ ಪ್ರಾಣಸ್ಯ ಪರಿಚ್ಛೇದ ಏವ ಪ್ರದರ್ಶ್ಯತೇ । ತಸ್ಮಾತ್ ಅದೋಷಃ ॥

---

1. ಎರಡಕ್ಕೂ ಸಮಾನಸಂಖ್ಯೆಯ ವೃತ್ತಿಗಳಿವೆಯೆಂಬುದೇನೂ ವಿವಕ್ಷಿತವಲ್ಲ.
2. ಎರಡನೆಯ ಪಕ್ಷದಲ್ಲಿ ಸೂತ್ರಕ್ಕೆ ಈ ವ್ಯಾಖ್ಯಾನ.

(ಭಾಷ್ಯಾರ್ಥ)

ಈ ಮುಖ್ಯಪ್ರಾಣವು ಉಳಿದ ಪ್ರಾಣಗಳಂತೆ ಅಣುವೂ ಆಗಿರುತ್ತದೆ ಎಂದು ತಿಳಿಯಬೇಕು. ಇಲ್ಲಿಯೂ ಅಣುತ್ವವೆಂದರೆ ಸೌಕ್ಷ್ಮ್ಯಪರಿಚ್ಛೇದಗಳೇ ಹೊರತು ಪರಮಾಣುಸಮಾನತ್ವವಲ್ಲ ; ಏಕೆಂದರೆ (ಮುಖ್ಯಪ್ರಾಣವು) ಐದು ವೃತ್ತಿಗಳಿಂದ ಇಡಿಯ ಶರೀರವನ್ನೇ ವ್ಯಾಪಿಸಿಕೊಂಡಿರುತ್ತದೆ.

ಪ್ರಾಣವು ಸೂಕ್ಷ್ಮವಾಗಿರುತ್ತದೆ; ಏಕೆಂದರೆ ಉತ್ಕ್ರಾಂತಿಯಾಗುವಾಗ ಪಕ್ಕದಲ್ಲಿರುವವರಿಗೆ ಕಾಣಿಸುವದಿಲ್ಲ. ಪರಿಚ್ಛಿನ್ನವೂ ಆಗಿರುತ್ತದೆ ; ಏಕೆಂದರೆ ಉತ್ಕ್ರಾಂತಿ, ಗತ್ಯಾಗತಿಗಳು –(ಇವುಗಳನ್ನು ಹೇಳುವ) ಶ್ರುತಿಗಳಿವೆ[1].

(ಆಕ್ಷೇಪ) :– "ಗೆದ್ದಲಿಗೆ ಸಮನು, ಸೊಳ್ಳೆಗೆ ಸಮನು, ಆನೆಗೆ ಸಮನು, ಈ ಮೂರು ಲೋಕಕ್ಕೂ ಸಮನು, ಇದೆಲ್ಲಕ್ಕೂ ಸಮನು" (ಬೃ ೧–೩–೨೨) ಎಂಬಿವೇ ಮುಂತಾದ ಕಡೆಗಳಲ್ಲಿ ಪ್ರಾಣನು ವಿಭುವೆಂದೂ (ಶ್ರುತಿಯಲ್ಲಿ) ಹೇಳಿದೆಯಲ್ಲ !

(ಪರಿಹಾರ) :– ಅದಕ್ಕೆ ಹೇಳುತ್ತೇವೆ. **ಆಧಿದೈವಿಕವಾದ ಸಮಷ್ಟಿ ವ್ಯಷ್ಟಿರೂಪದ ಹಿರಣ್ಯಗರ್ಭನ ಪ್ರಾಣರೂಪದಿಂದಲೇ ಈ ವಿಭುತ್ವವನ್ನು ಹೇಳಿದೆಯೇ ಹೊರತು ಆಧ್ಯಾತ್ಮಿಕರೂಪದಿಂದಲ್ಲ.** ಇದೂ ಅಲ್ಲದೆ "ಗೆದ್ದಲಿಗೆ ಸಮನು" ಮುಂತಾದ ಸಾಮ್ಯವಚನದಿಂದ ಒಂದೊಂದು ಪ್ರಾಣಿಯಲ್ಲಿಯೂ ಇರುವ ಪ್ರಾಣಕ್ಕೆ ಪರಿಚ್ಛೇದವನ್ನೇ ತಿಳಿಸಿದೆ[2]. ಆದ್ದರಿಂದ (ಇಲ್ಲಿ) ಯಾವ ದೋಷವೂ ಇಲ್ಲ.

## ೬. ಜ್ಯೋತಿರಾದ್ಯಧಿಕರಣ (ಸೂ. ೧೪–೧೬)

(ಪ್ರಾಣಗಳಿಗೆ ಅಧಿಷ್ಠಾತೃದೇವತೆಗಳುಂಟು)

**ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ॥ ೧೪ ॥**

೧೪. ಆದರೆ ಜ್ಯೋತಿರಾದಿಗಳ ಅಧಿಷ್ಠಾನ(ವುಂಟು) ; ಏಕೆಂದರೆ ಅದನ್ನು (ಶ್ರುತಿಯಲ್ಲಿ) ಹೇಳಿದೆ.

---

1. ಬೃಹದಾರಣ್ಯಕಭಾಷ್ಯದಲ್ಲಿ ಪ್ರಾಣನಿಗೆ ಶರೀರದಲ್ಲೆಲ್ಲ ವೃತ್ತಿಲಾಭವಾಗುವದು ಎಂದೇ ಇಲ್ಲಿಯೂ ಬರೆದಿದೆ. ಇಲ್ಲಿ ಕರಕಾಕಾಶದಂತೆ ಔಪಾಧಿಕವಾದ ಪರಿಚ್ಛೇದವೆನ್ನಬಾರದು ಎಂದು ಭಾಮತಿಯಲ್ಲಿದೆ. ೨–೪–೬ರ ಟಿಪ್ಪಣಿಯನ್ನು ನೋಡಿ.

2. ಬೃ: ಭಾ. ೧–೩–೨೨ರ ಭಾಷ್ಯದಲ್ಲಿ ಶ್ರುತಿಯು ಅನಂತತ್ವವನ್ನೇ ಹೇಳುವದೆಂದು ಬರೆದಿರುವವಕ್ಕೆ ಇದು ವಿರುದ್ಧವಾಗಿರುವಂತೆ ತೋರುತ್ತದೆ. ಒಂದನೆಯ ಸಂಪುಟದ ಪೀಠಿಕೆಯನ್ನು ನೋಡಿ.

## ಪ್ರಾಣಗಳ ಪ್ರವೃತ್ತಿವಿಷಯಕ್ಕೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೧೯೬. ತೇ ಪುನಃ ಪ್ರಕೃತಾಃ ಪ್ರಾಣಾಃ ಕಿಂ ಸ್ವಮಹಿಮ್ನೈವ ಸ್ವಸ್ಮೈ ಸ್ವಸ್ಮೈ ಕಾರ್ಯಾಯ ಪ್ರಭವನ್ತಿ, ಆಹೋಸ್ವಿತ್ ದೇವತಾಧಿಷ್ಠಿತಾಃ ಪ್ರಭವನ್ತಿ? ಇತಿ ವಿಚಾರ್ಯತೇ । ತತ್ರ ಪ್ರಾಪ್ತಂ ತಾವತ್ ಯಥಾ ಸ್ವಕಾರ್ಯಶಕ್ತಿಯೋಗಾತ್ ಸ್ವಮಹಿಮ್ನೈವ ಪ್ರಾಣಾಃ ಪ್ರವರ್ತೇರನ್ ಇತಿ । ಅಪಿ ಚ ದೇವತಾಧಿಷ್ಠಿತಾನಾಂ ಪ್ರಾಣಾನಾಂ ಪ್ರವೃತ್ತೌ ಅಭ್ಯುಪಗಮ್ಯಮಾನಾಯಾಂ ತಾಸಾಮೇವ ಅಧಿಷ್ಠಾತ್ರೀಣಾಂ ದೇವತಾನಾಂ ಭೋಕ್ತೃತ್ವಪ್ರಸಙ್ಗಾತ್ ಶಾರೀರಸ್ಯ ಭೋಕ್ತೃತ್ವಂ ಪ್ರಲೀಯೇತ । ಅತಃ ಸ್ವಮಹಿಮ್ನೈವ ಏಷಾಂ ಪ್ರವೃತ್ತಿರಿತಿ ॥

(ಭಾಷ್ಯಾರ್ಥ)

ಇನ್ನು ಆ ಪ್ರಕೃತವಾಗಿರುವ ಪ್ರಾಣಗಳು ತಮ್ಮ ಮಹಿಮೆಯಿಂದಲೇ ತಮ್ಮತಮ್ಮ ಕಾರ್ಯಕ್ಕೆ ಶಕ್ತವಾಗಿರುತ್ತವೆಯೊ, ಅಥವಾ ದೇವತೆಗಳಿಂದ ಅಧಿಷ್ಠಿತವಾಗಿಯೇ (ಶಕ್ತವಾಗಿರುತ್ತವೆಯೊ) ? –ಎಂಬುದನ್ನು (ಇಲ್ಲಿ) ವಿಚಾರ ಮಾಡಲಾಗುವದು.

ಇಲ್ಲಿ ಮೊದಲನೆಯದಾಗಿ ಬಂದೊದಗುವ (ಪೂರ್ವಪಕ್ಷವು) ಯಾವದೆಂದರೆ, ತಮ್ಮತಮ್ಮ ಕಾರ್ಯಕ್ಕೆ (ತಕ್ಕ) ಶಕ್ತಿಯ ಸಂಬಂಧವಿರುವದರಿಂದ ತಮ್ಮ ಮಹಿಮೆಯಿಂದಲೇ ಪ್ರಾಣಗಳು ಪ್ರವರ್ತಿಸಬಹುದು. ಇದಲ್ಲದೆ ದೇವತಾಧಿಷ್ಠಿತವಾಗಿಯೇ ಪ್ರಾಣಗಳು ಪ್ರವರ್ತಿಸುವವೆಂದು ಒಪ್ಪಿದರೆ ಆ ಅಧಿಷ್ಠಾತೃದೇವತೆಗಳೇ ಭೋಕ್ತೃವೆಂದಾಗುವದರಿಂದ ಶಾರೀರನಿಗೆ ಭೋಕ್ತೃತ್ವವೇ ಇಲ್ಲವಾಗುವದು. ಆದ್ದರಿಂದ ತಮ್ಮ(ತಮ್ಮ) ಮಹಿಮೆಯಿಂದಲೇ ಇವು ಪ್ರವರ್ತಿಸುತ್ತವೆ.

## ಅಗ್ನಿಯೇ ಮುಂತಾದವರು ಇಂದ್ರಿಯಗಳ ದೇವತೆಗಳು

(ಭಾಷ್ಯ)

೧೯೭. ಏವಂ ಪ್ರಾಪ್ತೇ ಇದಮುಚ್ಯತೇ "ಜ್ಯೋತಿರಾದ್ಯಧಿಷ್ಠಾನಂ ತು" ಇತಿ । ತುಶಬ್ದೇನ ಪೂರ್ವಪಕ್ಷೋ ವ್ಯಾವರ್ತ್ಯತೇ । ಜ್ಯೋತಿರಾದಿಭಿಃ ಅಗ್ನ್ಯಾದ್ಯಭಿಮಾನಿನೀಭಿಃ ದೇವತಾಭಿಃ ಅಧಿಷ್ಠಿತಂ ವಾಗಾದಿಕರಣಜಾತಂ ಸ್ವಕಾರ್ಯೇಷು[1] ಪ್ರವರ್ತತೇ ಇತಿ ಪ್ರತಿಜಾನೀತೇ । ಹೇತುಂ ವ್ಯಾಚಷ್ಟೇ—'ತದಾಮನನಾತ್' ಇತಿ । ತಥಾ ಹಿ ಆಮನನ್ತಿ—"ಅಗ್ನಿರ್ವಾಗ್ಭೂತ್ವಾ ಮುಖಂ

1. ಇಲ್ಲಿ 'ಸ್ವಕಾರ್ಯೇ' ಎಂದು ಏಕವಚನವಿದ್ದರೇ ಸಾಕಾಗುತ್ತೆಂದು ತೋರುತ್ತದೆ.

ಪ್ರಾವಿಶತ್" (ಐ. ೨-೪) ಇತ್ಯಾದಿ । ಅಗ್ನೇಶ್ಚಾಯಂ ವಾಗ್ಭಾವೋ ಮುಖಪ್ರವೇಶಶ್ಚ ದೇವತಾತ್ಮನಾ ಅಧಿಷ್ಠಾತೃತ್ವಮ್ ಅಙ್ಗೀಕೃತ್ಯ ಉಚ್ಯತೇ । ನ ಹಿ ದೇವತಾಸಂಬನ್ಧಂ ಪ್ರತ್ಯಾಖ್ಯಾಯ ಅಗ್ನೇರ್ವಾಚಿ ಮುಖೇ ವಾ ಕಶ್ಚಿತ್ ವಿಶೇಷಸಂಬನ್ಧೋ ದೃಶ್ಯತೇ । ತಥಾ "ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶತ್" (ಐ. ೨-೪) ಇತ್ಯೇವಮಾದ್ಯಪಿ ಯೋಜಯಿತವ್ಯಮ್ । ತಥಾ ಅನ್ಯತ್ರಾಪಿ "ವಾಗೇವ ಬ್ರಹ್ಮಣಶ್ಚತುರ್ಥಃ ಪಾದಃ ಸೋಽಗ್ನಿನಾ ಜ್ಯೋತಿಷಾ ಭಾತಿ ಚ ತಪತಿ ಚ" (ಛಾಂ. ೩-೧೮-೩) ಇತ್ಯೇವಮಾದಿನಾ ವಾಗಾದೀನಾಮ್ ಅಗ್ನ್ಯಾದಿಜ್ಯೋತಿಷ್ಟ್ವವಚನೇನ ಏತಮೇವಾರ್ಥಂ ದ್ರಢಯತಿ । "ಸ ವೈ ವಾಚಮೇವ ಪ್ರಥಮಾಮತ್ಯವಹತ್ ಸಾ ಯದಾ ಮೃತ್ಯುಮತ್ಯಮುಚ್ಯತ ಸೋಽಗ್ನಿರಭವತ್" (ಬೃ. ೧-೩-೧೨) ಇತಿ ಚೈವಮಾದಿನಾ ವಾಗಾದೀನಾಮ್ ಅಗ್ನ್ಯಾದಿಭಾವಾಪತ್ತಿವಚನೇನ ಏತಮೇವ ಅರ್ಥಂ ದ್ಯೋತಯತಿ । ಸರ್ವತ್ರ ಚ ಅಧ್ಯಾತ್ಮಾಧಿದೈವತವಿಭಾಗೇನ ವಾಗಾದ್ಯಗ್ನ್ಯಾದ್ಯನುಕ್ರಮಣಮ್ ಅನೇನೈವ ಪ್ರತ್ಯಾಸತ್ತ್ಯಾ ಭವತಿ । ಸ್ಮೃತಾವಪಿ "ವಾಗಧ್ಯಾತ್ಮಮಿತಿ ಪ್ರಾಹುರ್ಬ್ರಾಹ್ಮಣಾಸ್ತತ್ತ್ವದರ್ಶಿನಃ । ವಕ್ತವ್ಯಮಧಿಭೂತಂ ತು ವಹ್ನಿಸ್ತತ್ರಾಧಿದೈವತಮ್" (ಮೋ. ಧ. ೩೧೩-೫)[1] ಇತ್ಯಾದಿನಾ ವಾಗಾದೀನಾಮ್ ಅಗ್ನ್ಯಾದಿದೇವತಾಧಿಷ್ಠಿತತ್ವಂ ಸಪ್ರಪಞ್ಚಂ ದರ್ಶಿತಮ್ । ಯದುಕ್ತಂ ಸ್ವಕಾರ್ಯಶಕ್ತಿಯೋಗಾತ್ ಸ್ವಮಹಿಮ್ನೈವ ಪ್ರಾಣಾಃ ಪ್ರವರ್ತೇರನ್ ಇತಿ । ತದಯುಕ್ತಮ್ । ಶಕ್ತಾನಾಮಪಿ ಶಕಟಾದೀನಾಮ್ ಅನಡುದಾದ್ಯಧಿಷ್ಠಿತಾನಾಂ ಪ್ರವೃತ್ತಿದರ್ಶನಾತ್ । ಉಭಯಥಾ ಉಪಪತ್ತೌ ಚ ಆಗಮಾತ್ ದೇವತಾಧಿಷ್ಠಿತತ್ವಮೇವ ನಿಶ್ಚೀಯತೇ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ 'ಜ್ಯೋತಿರಾದ್ಯಧಿಷ್ಠಾನಂ ತು' ಎಂಬ ಈ (ಸಿದ್ಧಾಂತ)ವನ್ನು ಹೇಳಲಾಗಿರುತ್ತದೆ. ತುಶಬ್ದದಿಂದ ಪೂರ್ವಪಕ್ಷವನ್ನು ತಳ್ಳಿಹಾಕಿರುತ್ತದೆ. ಜ್ಯೋತಿರಾದಿಗಳಿಂದ ಎಂದರೆ (ಆಯಾ) ಅಭಿಮಾನಿದೇವತೆಗಳಿಂದ ಅಧಿಷ್ಠಿತವಾಗಿ ವಾಕ್ಕೇ ಮುಂತಾದ ಕರಣಜಾತವು ತನ್ನ ಕಾರ್ಯದಲ್ಲಿ ತೊಡಗುತ್ತದೆ ಎಂದು (ಸೂತ್ರಕಾರರು) ಪ್ರತಿಜ್ಞೆಮಾಡಿರುತ್ತಾರೆ.

'ತದಾಮನನಾತ್' (ಏಕೆಂದರೆ ಶ್ರುತಿಯಲ್ಲಿ ಅದನ್ನು ಹೇಳಿದೆ) ಎಂದು ಹೇತುವನ್ನು ತಿಳಿಸಿರುತ್ತಾರೆ. "ಅಗ್ನಿಯು ವಾಕ್ಕಾಗಿ ಮುಖವನ್ನು ಹೊಕ್ಕನು" (ಐ. ೨-೪) ಎಂದು ಮುಂತಾಗಿ ಹಾಗೆಂದಲ್ಲವೆ (ಶ್ರುತಿಯನ್ನು) ಪಠಿಸುತ್ತಾರೆ ?

---

1. ಅಚ್ಚಿನ ಭಾರತ ಪುಸ್ತಕದಲ್ಲಿ 'ಬ್ರಾಹ್ಮಣಾಸ್ತತ್ತ್ವದರ್ಶಿನಃ' ಎಂಬುದರ ಬದಲು 'ಯಥಾ ಶ್ರುತಿನಿದರ್ಶಿನಃ' ಎಂದಿದೆ.

ಅಗ್ನಿಯು ವಾಕ್ಕಾದದ್ದು ಮತ್ತು ಮುಖವನ್ನು ಹೊಕ್ಕದ್ದು ಎಂಬಿದೂ (ಅವನು) ದೇವತಾರೂಪದಿಂದ ಅಧಿಷ್ಠಾತೃವಾಗಿರುವನೆಂದು ಅಂಗೀಕರಿಸಿಯೇ ಹೇಳಿರುತ್ತದೆ. ದೇವತೆಯ ಸಂಬಂಧವನ್ನು ಬಿಟ್ಟರೆ ಅಗ್ನಿಗೆ ವಾಕ್ಕಿನಲ್ಲಿ ಅಥವಾ ಬಾಯಿಯಲ್ಲಿ (ಯಾವ) ವಿಶೇಷಸಂಬಂಧವೂ ಕಾಣಬರುವದಿಲ್ಲವಷ್ಟೆ. ಹೀಗೆಯೇ "ವಾಯು ಪ್ರಾಣವಾಗಿ ಮೂಗಿನ ಸೊಳ್ಳೆಗಳನ್ನು ಹೊಕ್ಕನು" ಎಂಬಿದೇ ಮುಂತಾದದ್ದನ್ನು ಜೋಡಿಸಿಕೊಳ್ಳಬೇಕು. ಹೀಗೆಯೇ ಇನ್ನೊಂದು ಶ್ರುತಿಯಲ್ಲಿಯೂ "ವಾಕ್ಕೇ ಬ್ರಹ್ಮದ ನಾಲ್ಕನೆಯ ಪಾದವು; ಅದು ಅಗ್ನಿ ಎಂಬ ಜ್ಯೋತಿಯಿಂದ ಹೊಳೆಯುತ್ತಿದೆ, ಸುಡುತ್ತಿದೆ" (ಛಾಂ. ೩-೧೮-೭) ಎಂದು ಮುಂತಾಗಿರುವ (ವಾಕ್ಯದಿಂದ) ವಾಗಾದಿಗಳು ಅಗ್ನ್ಯಾದಿಜ್ಯೋತಿಯುಳ್ಳವು ಎಂದು ಮುಂತಾಗಿ ಹೇಳಿರುವದರಿಂದ ಈ ಅರ್ಥವನ್ನೇ ಗಟ್ಟಿಗೊಳಿಸಿರುತ್ತದೆ. "ಆ (ಪ್ರಾಣನು) ವಾಕ್ಕನ್ನೇ ಮೊದಲು ದಾಟಿಸಿದನು; ಅದು ಯಾವಾಗ ಮೃತ್ಯುವಿನಿಂದ ಬಿಡುಗಡೆಯನ್ನು ಹೊಂದಿತೋ (ಆಗ) ಅದು ಅಗ್ನಿಯಾಯಿತು" (ಬೃ. ೧-೩-೧೨) ಎಂಬಿದೇ ಮುಂತಾದ ವಾಗಾದಿಗಳಿಗೆ ಅಗ್ನ್ಯಾದಿಭಾವಪ್ರಾಪ್ತಿಯನ್ನು ಹೇಳುವ ವಚನದಿಂದ ಈ ಅರ್ಥವನ್ನೇ ತಿಳಿಸಿರುತ್ತದೆ[1]. ಎಲ್ಲೆಲ್ಲಿಯೂ ಅಧ್ಯಾತ್ಮ, ಅಧಿದೈವ -ಎಂದು ವಿಂಗಡಿಸಿ ವಾಗಾದಿಗಳನ್ನೂ ಅಗ್ನ್ಯಾದಿಗಳನ್ನೂ ಅನುಕ್ರಮವಾಗಿ ಹೇಳಿರುವದು ಇದೇ ಸಂಬಂಧದಿಂದ[2]. ಸ್ಮೃತಿಯಲ್ಲಿಯೂ "ತತ್ತ್ವದರ್ಶಿಗಳಾದ ಬ್ರಾಹ್ಮಣರು ವಾಕ್ಕನ್ನು ಅಧ್ಯಾತ್ಮವೆನ್ನುವರು; ವಕ್ತವ್ಯವು ಅಧಿಭೂತವು; ಅಲ್ಲಿ ವಹ್ನಿಯೇ ಅಧಿದೈವತವು" (ಮೋ. ಧ. ೩೧೩-೪) ಎಂದು ಮುಂತಾಗಿರುವ (ವಚನ)ದಿಂದ ವಾಗಾದಿಗಳು ಅಗ್ನ್ಯಾದಿಗಳಿಂದ ಅಧಿಷ್ಠಿತವಾಗಿರುತ್ತವೆ ಎಂದು ವಿಸ್ತಾರವಾಗಿ ಹೇಳಿರುತ್ತದೆ.

ಪ್ರಾಣಗಳಿಗೆ ಸ್ವಕಾರ್ಯಶಕ್ತಿಯ ಸಂಬಂಧವಿರುವದರಿಂದ ತಮ್ಮ (ತಮ್ಮ) ಮಹಿಮೆಯಿಂದಲೇ (ಅವು) ಪ್ರವರ್ತಿಸಬಹುದು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದು ಸರಿಯಲ್ಲ. ಏಕೆಂದರೆ ಬಂಡಿಯೇ ಮುಂತಾದವುಗಳು (ತಾವೇ) ಶಕ್ತವಾಗಿದ್ದರೂ ಎತ್ತು ಮುಂತಾದವುಗಳ ಅಧಿಷ್ಠಾನದಿಂದಲೇ ಪ್ರವರ್ತಿಸುವದು ಕಂಡಿದೆ, ಎರಡು ಪ್ರಕಾರದಿಂದಲೂ ಹೊಂದುತ್ತಿರುವಲ್ಲಿ

---

1. ಈ ಶ್ರುತಿಯಲ್ಲಿ ವಾಗಾದಿಗಳಿಗೆ ಅಗ್ನ್ಯಾದಿಭಾವವನ್ನು ಹೇಳಿರುವದರ ಅಭಿಪ್ರಾಯವೇನೆಂಬುದನ್ನು ಭಾಷ್ಯದಲ್ಲಾಗಲಿ ವ್ಯಾಖ್ಯಾನದಲ್ಲಾಗಲಿ ಸ್ಪಷ್ಟಪಡಿಸಿಲ್ಲ.

2. ವಾಗಾದಿಗಳು ಅಧಿಷ್ಠೇಯ, ಅಗ್ನ್ಯಾದಿಗಳು ಅಧಿಷ್ಠಾತೃಗಳು -ಎಂಬ ಸಂಬಂಧದಿಂದ ಎಂದರ್ಥ.

(ಪ್ರಾಣಗಳು) ದೇವತಾಧಿಷ್ಠಿತವಾಗಿಯೇ (ಇರುವವೆಂದು) ಆಗಮಬಲದಿಂದ ನಿಶ್ಚಯಮಾಡಬೇಕಾಗಿರುತ್ತದೆ[1].

**ಪ್ರಾಣವತಾ ಶಬ್ದಾತ್ ॥ ೧೫ ॥**

೧೫. ಪ್ರಾಣವಂತ(ನಾದ ಜೀವನೊಡನೆ ಇವಕ್ಕೆ ಸಂಬಂಧವು); ಏಕೆಂದರೆ (ಹಾಗೆಂದು) ಶಬ್ದವಿದೆ.

## ದೇವತೆಗಳಿಗೆ ನಮ್ಮ ಶರೀರದಲ್ಲಿ ಭೋಕ್ತೃತ್ವವಿಲ್ಲ

(ಭಾಷ್ಯ)

೧೯೮. ಯದಪ್ಯುಕ್ತಮ್ ದೇವತಾನಾಮೇವ ಅಧಿಷ್ಠಾತ್ರೀಣಾಂ ಭೋಕ್ತೃತ್ವಪ್ರಸಙ್ಗಃ ನ ಶಾರೀರಸ್ಯ ಇತಿ, ತತ್ ಪರಿಹ್ರಿಯತೇ। ('ಪ್ರಾಣವತಾ ಶಬ್ದಾತ್')। ಸತೀಷ್ವಪಿ ಪ್ರಾಣಾನಾಮ್ ಅಧಿಷ್ಠಾತ್ರೀಷು ದೇವತಾಸು ಪ್ರಾಣವತಾ ಕಾರ್ಯಕರಣಸಂಘಾತಸ್ವಾಮಿನಾ ಶಾರೀರೇಣೈವ ಏಷಾಂ ಪ್ರಾಣಾನಾಂ ಸಂಬನ್ಧಃ ಶ್ರುತೇರವಗಮ್ಯತೇ। ತಥಾ ಹಿ ಶ್ರುತಿಃ— "ಅಥ ಯತ್ರೈತದಾಕಾಶಮನುವಿಷಣ್ಣಂ ಚಕ್ಷುಃ ಸ ಚಾಕ್ಷುಷಃ ಪುರುಷೋ ದರ್ಶನಾಯ ಚಕ್ಷುರಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ ಗನ್ಧಾಯ ಘ್ರಾಣಮ್" (ಛಾಂ. ೮-೧೨-೪) ಇತ್ಯೇವಂಜಾತೀಯಕಾ ಶಾರೀರೇಣೈವ ಪ್ರಾಣಾನಾಂ ಸಂಬನ್ಧಂ ಶ್ರಾವಯತಿ। ಅಪಿ ಚ ಅನೇಕತ್ವಾತ್ ಪ್ರತಿಕರಣಮ್ ಅಧಿಷ್ಠಾತ್ರೀಣಾಂ ದೇವತಾನಾಂ ನ ಭೋಕ್ತೃತ್ವಮ್ ಅಸ್ಮಿನ್ ಶರೀರೇ ಅವಕಲ್ಪತೇ। ಏಕೋ ಹಿ ಏವಮ್ ಅಸ್ಮಿನ್ ಶರೀರೇ ಶಾರೀರೋ ಭೋಕ್ತಾ ಪ್ರತಿಸಂಧಾನಾದಿಸಂಭವಾತ್ ಅವಗಮ್ಯತೇ ॥

(ಭಾಷ್ಯಾರ್ಥ)

ಅಧಿಷ್ಠಾತೃಗಳಾದ ದೇವತೆಗಳಿಗೆ ಭೋಕ್ತೃತ್ವವು ಪ್ರಸಕ್ತವಾಗುತ್ತದೆಯೇ ಹೊರತು ಶಾರೀರನಿಗೆ (ಭೋಕ್ತೃತ್ವವೆಂದಾ)ಗುವದಿಲ್ಲ ಎಂದು ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದನ್ನು (ಇಲ್ಲಿ) ಪರಿಹಾರಮಾಡಲಾಗುತ್ತದೆ. ('ಪ್ರಾಣವತಾ ಶಬ್ದಾತ್'); ಪ್ರಾಣಗಳಿಗೆ ದೇವತೆಗಳು ಅಧಿಷ್ಠಾತೃಗಳಾದರೂ ಪ್ರಾಣವಂತನಾದ ಕಾರ್ಯಕರಣಸಂಘಾತಕ್ಕೆ ಒಡೆಯನಾದ ಶಾರೀರನೊಡನೆಯೇ

---

1. ಎತ್ತು ಮುಂತಾದವುಗಳಿಂದ ಪ್ರೇರಿತವಾಗಿ ಬಂಡಿ ಮುಂತಾದವು ಕೆಲಸ ಮಾಡುವದೂ ಕಂಡಿದೆ; ಹಾಲು ಮುಂತಾದವು ಮತ್ತೊಂದು ಚೇತನದ ಪ್ರೇರಣೆಯಿಲ್ಲದೆ ತಾವೇ ಮೊಸರು ಮುಂತಾದವುಗಳಾಗಿ ಪರಿಣಮಿಸುವದೂ ಕಂಡಿದೆ. ಪ್ರಕೃತದಲ್ಲಿ ಅಚೇತನವಾದ ಕರಣಗಳು ಅಧಿಷ್ಠಾನವನ್ನು ಬಯಸುತ್ತವೆಯೋ ಇಲ್ಲವೋ, ಹೇಗೆ ನಿರ್ಣಯಿಸುವದು ?— ಎಂಬ ಪ್ರಶ್ನೆಗೆ ಉತ್ತರವಿದು.

ಈ ಪ್ರಾಣಗಳಿಗೆ ಸಂಬಂಧ (ವಿರುತ್ತದೆ ಎಂದು) ಶ್ರುತಿಯಿಂದ ನಿಶ್ಚಿತವಾಗುತ್ತದೆ. ಹೇಗೆಂದರೆ "ಇನ್ನು ಎಲ್ಲಿ ಈ ಚಕ್ಷುಸ್ಸು ಆಕಾಶವನ್ನು[1] ಸೇರಿಕೊಂಡಿರುವದೋ ಅಲ್ಲಿ ಆ (ಆತ್ಮನು) ಚಾಕ್ಷುಷಪುರುಷ(ನೆನಿಸುವನು), ಚಕ್ಷುಸ್ಸು ನೋಡುವದಕ್ಕೆ; ಇನ್ನು ಯಾವನು 'ಇದನ್ನು ಮೂಸುವೆನು' ಎಂದು ಭಾವಿಸುವನೋ ಅವನು ಆತ್ಮನು, ಘ್ರಾಣವು ವಾಸನೆ(ಯನ್ನು ತಿಳಿಯು)ವದಕ್ಕೆ" (ಛಾಂ. ೮-೧೨-೪) ಎಂಬೀ ಜಾತಿಯ ಶ್ರುತಿಯು ಶಾರೀರನೊಡನೆಯೇ ಪ್ರಾಣಗಳಿಗೆ ಸಂಬಂಧವನ್ನು ಹೇಳುತ್ತಿದೆ. ಇದೂ ಅಲ್ಲದೆ ಪ್ರತಿಕರಣದಲ್ಲಿಯೂ ಅಧಿಷ್ಠಾತೃಗಳಾದ ದೇವತೆಗಳು ಅನೇಕರಾಗಿರುವದರಿಂದ ಈ ಶರೀರದಲ್ಲಿ ಭೋಕ್ತೃವಾಗಿರುವವೆಂಬುದು ಹೊಂದುವದಿಲ್ಲ,[2] ಹೀಗೆ (ನೋಡಿದರೆ) ಈ ಶರೀರದಲ್ಲಿ ಪ್ರತ್ಯಭಿಜ್ಞೆಯೇ ಮುಂತಾದವುಗಳು ಸಂಭವಿಸಬೇಕಾದರೆ ಈ ಶರೀರದಲ್ಲಿ ಒಬ್ಬನೇ ಭೋಕ್ತೃವಿರಬೇಕೆಂದಲ್ಲವೆ ನಿಶ್ಚಯವಾಗುತ್ತದೆ[3] ?

**ತಸ್ಯ ಚ ನಿತ್ಯತ್ವಾತ್ ॥ ೧೬ ॥**

೧೬. ಆ (ಶಾರೀರನು) ನಿತ್ಯನಾಗಿರುವದರಿಂದಲೂ (ದೇವತೆಗಳಿಗೆ ಭೋಕ್ತೃತ್ವವಿಲ್ಲ).

## ಶರೀರದಲ್ಲಿ ಜೀವನೇ ನಿತ್ಯಭೋಕ್ತೃ

(ಭಾಷ್ಯ)

೧೯೯ ತಸ್ಯ ಚ ಶಾರೀರಸ್ಯ ಅಸ್ಮಿನ್ ಶರೀರೇ ಭೋಕ್ತೃತ್ವೇನ ನಿತ್ಯತ್ವಮ್ । ಪುಣ್ಯಪಾಪೋಪಲೇಪಸಂಭವಾತ್ ಸುಖದುಃಖೋಪಭೋಗಸಂಭವಾಚ್ಚ, ನ ದೇವತಾನಾಮ್ । ತಾ ಹಿ ಪರಸ್ಮಿನ್ ಐಶ್ವರ್ಯೇ ಪದೇ ಅವತಿಷ್ಠಮಾನಾಃ ನ ಹೀನೇ ಅಸ್ಮಿನ್ ಶರೀರೇ ಭೋಕ್ತೃತ್ವಂ ಪ್ರತಿಲಬ್ಧುಮ್ ಅರ್ಹನ್ತಿ । ಶ್ರುತಿಶ್ಚ ಭವತಿ– "ಪುಣ್ಯಮೇವಾಮುಂ ಗಚ್ಛತಿ ನ ಹ ವೈ ದೇವಾನ್ ಪಾಪಂ ಗಚ್ಛತಿ" (ಬೃ. ೧-೫-೨೦) ಇತಿ । ಶಾರೀರೇಣೈವ ಚ ನಿತ್ಯಃ ಪ್ರಾಣಾನಾಂ ಸಂಬನ್ಧಃ । ಉತ್ಕ್ರಾನ್ತ್ಯಾದಿಷು ತದನುವೃತ್ತಿದರ್ಶನಾತ್ ತಮುತ್ಕ್ರಾಮನ್ತಂ ಪ್ರಾಣೋಽನೂತ್ಕ್ರಾಮತಿ ಪ್ರಾಣಮನೂತ್ಕ್ರಾಮನ್ತಂ

---

1. ಕರಿಗುಡ್ಡೆಯ ರಂಧ್ರವನ್ನು.

2. ಏಕೆಂದರೆ ಆಗ ಒಬ್ಬೊಬ್ಬನು ಒಂದೊಂದು ಸಂಕಲ್ಪವನ್ನು ಮಾಡಿದಲ್ಲಿ ಶರೀರವು ಹೀಗೆಯೇ ಪ್ರವರ್ತಿಸಬೇಕೆಂಬ ನಿಯಮವಿರುವದಕ್ಕೆ ಕಾರಣವಿರುವದಿಲ್ಲ.

3. ಕೇಳಿದವನೇ ಕಾಣುತ್ತಾನೆ, ಅನುಭವಿಸಿದವನೇ ನೆನಪಿಗೆ ತಂದುಕೊಳ್ಳುತ್ತಾನೆ ಮುಂತಾದ ಪ್ರತ್ಯಭಿಜ್ಞೆ, ಸ್ಮೃತಿ, ಇಚ್ಛಾಪ್ರಯತ್ನಗಳು– ಇವೆಲ್ಲ ಒಬ್ಬ ಭೋಕ್ತೃವಿಗೇ ಹೊಂದುತ್ತವೆ.

ಸರ್ವೇ ಪ್ರಾಣಾ ಅನೂತ್ಕ್ರಾಮನ್ತಿ" (ಬೃ· ೪-೪-೨) ಇತ್ಯಾದಿಶ್ರುತಿಭ್ಯಃ। ತಸ್ಮಾತ್ ಸತೀಷ್ವಪಿ ಕರಣಾನಾಂ ನಿಯನ್ತ್ರೀಷು ದೇವತಾಸು ನ ಶಾರೀರಸ್ಯ ಭೋಕ್ತೃತ್ವಮ್ ಅಪಗಚ್ಛತಿ। ಕರಣಪಕ್ಷಸ್ಯೈವ ಹಿ ದೇವತಾಃ ನ ಭೋಕ್ತೃ ಪಕ್ಷಸ್ಯ ಇತಿ ॥

(ಭಾಷ್ಯಾರ್ಥ)

ಮತ್ತು ಆ ಶಾರೀರನು ಈ ಶರೀರದಲ್ಲಿ ಭೋಕ್ತೃರೂಪದಿಂದ ನಿತ್ಯನಾಗಿರುತ್ತಾನೆ. ಏಕೆಂದರೆ (ಅವನಿಗೆ) ಪುಣ್ಯಪಾಪಗಳು ಅಂಟಿಕೊಳ್ಳುವ ಸಂಭವವಿದೆ, ಸುಖದುಃಖಗಳ ಉಪಭೋಗದ ಸಂಭವವೂ ಇದೆ. (ಇಷ್ಟೇ ಹೊರತು) ದೇವತೆಗಳಿಗೆ (ಆ ಸಂಭವವಿಲ್ಲ). ಏಕೆಂದರೆ ಅವರು ಪರಮೈಶ್ವರ್ಯದ ಸ್ಥಾನದಲ್ಲಿದ್ದುಕೊಂಡಿರುವದರಿಂದ ಈ ಕೀಳಾದ ಶರೀರದಲ್ಲಿ ಭೋಕ್ತೃತ್ವವನ್ನು ಪಡೆಯಲಾರರು[1]. "ಇವನಿಗೆ ಪುಣ್ಯವೇ ಬಂದು ಸೇರುತ್ತದೆ. ದೇವತೆಗಳಿಗೆ ಪಾಪವು ಸೇರಿಕೊಳ್ಳುವದೇ ಇಲ್ಲ" (ಬೃ. ೧-೫-೨೦) ಎಂಬ ಶ್ರುತಿಯೂ ಇರುತ್ತದೆ[2]. ಇದಲ್ಲದೆ ಪ್ರಾಣಗಳಿಗೆ ಶಾರೀರನೊಡನೆಯೇ ನಿತ್ಯವಾದ ಸಂಬಂಧವಿರುತ್ತದೆ[3]. "ಅವನು ಉತ್ಕ್ರಾಂತನಾಗುವಾಗ ಪ್ರಾಣವು ಹಿಂದೆಯೇ ಉತ್ಕ್ರಾಂತವಾಗುತ್ತದೆ; ಪ್ರಾಣವು ಹಿಂಬಾಲಿಸಿ ಉತ್ಕ್ರಾಂತನಾಗಲು ಎಲ್ಲಾ ಪ್ರಾಣಗಳೂ ಹಿಂಬಾಲಿಸಿ ಉತ್ಕ್ರಾಂತವಾಗುತ್ತವೆ" (ಬೃ. ೪-೪-೨) ಮುಂತಾದ ಶ್ರುತಿಗಳಿರುವದರಿಂದ ಉತ್ಕ್ರಾಂತ್ಯಾದಿಗಳಲ್ಲಿ ಆ ಜೀವನನ್ನು (ಅವು) ಅನುಸರಿಸಿಕೊಂಡಿರುತ್ತವೆ ಎಂದು ತಿಳಿದುಬರುತ್ತದೆ.

ಆದ್ದರಿಂದ ಕರಣಗಳನ್ನು ಕಟ್ಟುಮಾಡುವ ದೇವತೆಗಳು ಇದ್ದರೂ ಶಾರೀರನಿಗೆ ಭೋಕ್ತೃತ್ವವು ತಪ್ಪುವದಿಲ್ಲ; ಏಕೆಂದರೆ ದೇವತೆಗಳು ಕರಣಪಕ್ಷಕ್ಕೆ (ಸೇರಿದವರೇ ಹೊರತು) ಭೋಕ್ತೃಪಕ್ಷಕ್ಕೆ ಸೇರಿದವರಲ್ಲ[4].

---

1. ಅವರು ಐಶ್ವರ್ಯಯುಕ್ತವಾದ ದೇವತಾಶರೀರವನ್ನು ಪಡೆದುಕೊಂಡಿರುವದರಿಂದ ಅನೇಕಪ್ರತಿಘಾತಗಳುಳ್ಳ ಈ ಶರೀರದಲ್ಲಿ ಭೋಕ್ತೃಗಳಾಗಿರಲಾರರು.

2. ಸಂಪ್ರತ್ತಿಕರ್ಮವನ್ನು ಮಾಡಿ ಪ್ರಾಜಾಪತ್ಯಸ್ಥಾನದಲ್ಲಿರುವ ಜೀವನಿಗೆ ದೇವತಾತ್ಮಪ್ರಾಪ್ತಿಯಾಗಿರುವದರಿಂದ ಪಾಪಫಲವು ಸಂಭವಿಸುವದಿಲ್ಲ –ಎಂದಿರುವದರಿಂದ ದೇವತೆಗಳಿಗೆ ಈ ಶರೀರದಲ್ಲಾಗುವ ದುಃಖದ ಭೋಕ್ತೃತ್ವವಿಲ್ಲವೆಂದು ಶ್ರುತಿ ಹೇಳಿದಂತಾಯಿತು ಎಂದು ಭಾವ.

3. ಇದು ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ.

4. ದೇವತೆಗಳಿಂದ ಅಧಿಷ್ಠಿತವಾದ ಕರಣಗಳನ್ನು ಜೀವನು ಉಪಯೋಗಿಸಿಕೊಂಡು ಭೋಕ್ತೃವಾಗಿರುತ್ತಾನೆ; ಎತ್ತಿನ ವಶದಿಂದ ಚಲಿಸುವ ಬಂಡಿಯನ್ನು ಬಂಡಿಯವನು ಉಪಯೋಗಿಸುವಂತೆಯೇ ಇದು.

## ೮. ಇಂದ್ರಿಯಾಧಿಕರಣ (ಸೂ. ೧೭–೧೯)

(ಮುಖ್ಯಪ್ರಾಣಕ್ಕಿಂತ ಇತರ ಪ್ರಾಣಗಳು ಬೇರೆಯ ತತ್ತ್ವಗಳು)

**ತ ಇನ್ದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ॥ ೧೭ ॥**

೧೭. ಆ ಪ್ರಾಣಗಳು ಮುಖ್ಯಪ್ರಾಣವನ್ನು ಬಿಟ್ಟರೆ (ಉಳಿದವೆಲ್ಲ) ಇಂದ್ರಿಯಗಳು, ಏಕೆಂದರೆ ಆ ವ್ಯಪದೇಶವಿದೆ.

## ಸಾಮಾನ್ಯಪ್ರಾಣಗಳ ವಿಷಯಕ್ಕೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೨೦೦. ಮುಖ್ಯಶ್ಚ ಏಕಃ ಇತರೇ ಚ ಏಕಾದಶಪ್ರಾಣಾ ಅನುಕ್ರಾನ್ತಾಃ। ತತ್ರ ಇದಮಪರಂ ಸಂದಿಹ್ಯತೇ। ಕಿಂ ಮುಖ್ಯಸ್ಯೈವ ಪ್ರಾಣಸ್ಯ ವೃತ್ತಿಭೇದಾ ಇತರೇ ಪ್ರಾಣಾಃ ಆಹೋಸ್ವಿತ್ ತತ್ತ್ವಾನ್ತರಾಣಿ ಇತಿ। ಕಿಂ ತಾವತ್ ಪ್ರಾಪ್ತಮ್ ? ಮುಖ್ಯಸ್ಯೈವ ಇತರೇ ವೃತ್ತಿಭೇದಾಃ ಇತಿ। ಕುತಃ ? ಶ್ರುತೇಃ। ತಥಾ ಹಿ ಶ್ರುತಿಃ ಮುಖ್ಯಮ್ ಇತರಾಂಶ್ಚ ಪ್ರಾಣಾನ್ ಸಂನಿಧಾಪ್ಯ ಮುಖ್ಯಾತ್ಮತಾಮ್ ಇತರೇಷಾಂ ಖ್ಯಾಪಯತಿ—"ಹನ್ತಾಸ್ಯೈವ ಸರ್ವೇ ರೂಪಮಸಾಮೇತಿ ತ ಏತಸ್ಯೈವ ಸರ್ವೇ ರೂಪಮಭವನ್" (ಬೃ. ೧–೫–೨೧) ಇತಿ। ಪ್ರಾಣೈಕಶಬ್ದತ್ವಾಚ್ಚ ಏಕತ್ವಾಧ್ಯವಸಾಯಃ। ಇತರಥಾ ಹಿ ಅನ್ಯಾಯ್ಯಮ್ ಅನೇಕಾರ್ಥತ್ವಂ ಪ್ರಾಣಶಬ್ದಸ್ಯ ಪ್ರಸಜ್ಯೇತ। ಏಕತ್ರ ವಾ ಮುಖ್ಯತ್ವಮ್ ಇತರತ್ರ ವಾ[1] ಲಾಕ್ಷಣಿಕತ್ವಮ್ ಆಪದ್ಯೇತ। ತಸ್ಮಾತ್ ಯಥಾ ಏಕಸ್ಯೈವ ಪ್ರಾಣಸ್ಯ ಪ್ರಾಣಾದ್ಯಾಃ ಪಞ್ಚವೃತ್ತಯಃ ಏವಂ ವಾಗಾದ್ಯಾ ಅಪಿ ಏಕಾದಶ ಇತಿ ॥

(ಭಾಷ್ಯಾರ್ಥ)

ಮುಖ್ಯ(ಪ್ರಾಣ)ವೊಂದು, ಉಳಿದ ಪ್ರಾಣಗಳು ಹನ್ನೊಂದು (ಇವುಗಳನ್ನು) ಹೇಳಿದ್ದಾಯಿತು. ಅಲ್ಲಿ ಈ ಇನ್ನೊಂದು (ವಿಷಯದಲ್ಲಿ) ಸಂದೇಹವಾಗುತ್ತದೆ. ಮುಖ್ಯಪ್ರಾಣಕ್ಕೇ ಉಳಿದ ಪ್ರಾಣಗಳು ಬೇರೆಬೇರೆಯ ವೃತ್ತಿಗಳೆ, ಅಥವಾ ಅವೇ ಬೇರೆಯ ತತ್ತ್ವವೆ ?

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಮುಖ್ಯ (ಪ್ರಾಣಕ್ಕೇ) ಮಿಕ್ಕವು ವೃತ್ತಿಭೇದಗಳು ಎಂದು (ಒದಗುತ್ತದೆ). ಏಕೆ ?

---

1. ಇಲ್ಲಿ 'ವಾ' ಶಬ್ದವು ಅನವಶ್ಯ ; ಅಥವಾ ಇದು 'ಚ' ಎಂದಿರಬೇಕು ಎಂತ ತೋರುತ್ತದೆ.

ಎಂಬರೆ ಶ್ರುತಿಯಿರುವದರಿಂದ. ಹೇಗೆಂದರೆ ಶ್ರುತಿಯು ಮುಖ್ಯ(ಪ್ರಾಣವನ್ನು) ಉಳಿದ ಪ್ರಾಣಗಳನ್ನು (ತಿಳಿಸಿದ ಸಂನಿಧಿಯಲ್ಲಿ ಉಳಿದವು ಮುಖ್ಯದ ರೂಪವೇ ಆಗರುವವೆಂದು "ಒಳ್ಳೆಯದು, ನಾವೆಲ್ಲರೂ ಇದರ ರೂಪವನ್ನೇ (ಪಡೆದು ಕೊಂಡು) ಇರೋಣ ಎಂದು ಅವುಗಳೆಲ್ಲವೂ ಈ (ಪ್ರಾಣದ) ರೂಪವನ್ನೇ (ಪಡೆದುಕೊಂಡ)ವುಗಳಾದವು" (ಬೃ. ೧-೫-೨೧) ಎಂದು ತಿಳಿಸುತ್ತದೆ. ಪ್ರಾಣ ಎಂಬ ಒಂದೇ ಶಬ್ದದಿಂದ (ಕರೆಯಲ್ಪಡುತ್ತಿರುವದರಿಂದಲೂ ಇವು ಒಂದೇ (ತತ್ತ್ವವೆಂದು) ನಿಶ್ಚಯವಾಗುತ್ತದೆ. ಏಕೆಂದರೆ ಹೀಗಲ್ಲದಿದ್ದರೆ ಪ್ರಾಣ ಶಬ್ದಕ್ಕೆ ಅನೇಕಾರ್ಥಗಳು (ಇರುವವೆಂದು) ಅನ್ಯಾಯವಾಗಿ ಪ್ರಸಕ್ತವಾಗುವದು. ಅಥವಾ ಒಂದರಲ್ಲಿ ಮುಖ್ಯತ್ವವೂ ಉಳಿದವುಗಳಲ್ಲಿ ಲಾಕ್ಷಣಿಕತ್ವವೂ (ಪ್ರಸಕ್ತ ವಾಗುವದು).[1] ಆದ್ದರಿಂದ[2] ಹೇಗೆ ಒಂದೇ ಪ್ರಾಣಕ್ಕೆ ಪ್ರಾಣವೇ ಮುಂತಾದ ಐದೂ ವೃತ್ತಿಗಳೋ ಹೀಗೆಯೇ ವಾಗಾದಿಯಾದ ಹನ್ನೊಂದೂ (ವೃತ್ತಿಗಳೇ).

## ಸಿದ್ಧಾಂತ: ವಾಗಾದಿಗಳು ತತ್ತ್ವಾಂತರವೇ

(ಭಾಷ್ಯ)

೨೧೧. ಏವಂ ಪ್ರಾಪ್ತೇ ಬ್ರೂಮಃ—ತತ್ತ್ವಾನ್ತರಾಣ್ಯೇವ ಪ್ರಾಣಾದ್ ವಾಗಾದೀನಿ ಇತಿ। ಕುತಃ? ವ್ಯಪದೇಶಭೇದಾತ್। ಕೋಽಯಂ ವ್ಯಪದೇಶ ಭೇದಃ? ತೇ ಪ್ರಕೃತಾಃ ಪ್ರಾಣಾಃ ಶ್ರೇಷ್ಠಂ ವರ್ಜಯಿತ್ವಾ ಅವಶಿಷ್ಟಾಃ ಏಕಾ ದಶ ಇನ್ದ್ರಿಯಾಣಿ ಇತಿ ಉಚ್ಯನ್ತೇ। ಶ್ರುತೌ ಏವಂ ವ್ಯಪದೇಶದರ್ಶನಾತ್। "ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇನ್ದ್ರಿಯಾಣಿ ಚ" (ಮುಂ. ೨-೧-೩) ಇತಿ ಹಿ ಏವಂಜಾತೀಯಕೇಷು ಪ್ರದೇಶೇಷು ಪೃಥಕ್ ಪ್ರಾಣೋ ವ್ಯಪದಿಶ್ಯತೇ ಪೃಥಕ್ಚ ಇನ್ದ್ರಿಯಾಣಿ। ನನು ಮನಸೋಽಪಿ ಏವಂ ಸತಿ ವರ್ಜನಮ್ ಇನ್ದ್ರಿಯತ್ವೇನ ಪ್ರಾಣವತ್ ಸ್ಯಾತ್ "ಮನಃ ಸರ್ವೇನ್ದ್ರಿಯಾಣಿ ಚ ಇತಿ ಪೃಥಗ್ವ್ಯಪದೇಶದರ್ಶನಾತ್। ಸತ್ಯಮೇತತ್। ಸ್ಮೃತೌ ತು 'ಏಕಾದಶೇನ್ದ್ರಿಯಾಣಿ' ಇತಿ ಮನೋಽಪಿ ಇನ್ದ್ರಿಯತ್ವೇನ ಶ್ರೋತ್ರಾದಿವತ್ ಸಂಗೃಹ್ಯತೇ। ಪ್ರಾಣಸ್ಯ ತು ಇನ್ದ್ರಿಯತ್ವಂ ನ ಶ್ರುತೌ ಸ್ಮೃತೌ ವಾ ಪ್ರಸಿದ್ಧ ಮಸ್ತಿ। ವ್ಯಪದೇಶಭೇದಶ್ಚ ಅಯಂ ತತ್ತ್ವಭೇದಪಕ್ಷೇ ಉಪಪದ್ಯತೇ। ತತ್ತ್ವೈ ಕತ್ವೇ ತು ಸ ಏವೈಕಃ ಸನ್ ಪ್ರಾಣಃ ಇನ್ದ್ರಿಯವ್ಯಪದೇಶಂ ಲಭತೇ ನ

---

1. ಮುಖ್ಯಪ್ರಾಣವು ಪ್ರಾಣಶಬ್ದಕ್ಕೆ ಮುಖ್ಯಾರ್ಥವು; ವಾಗಾದಿಗಳು ಲಕ್ಷಣಾರ್ಥ —ಎಂದು ಹೇಳಬೇಕಾಗುವದು.

2. ಅನೇಕಾರ್ಥವನ್ನು ಹೇಳುವದಾಗಲಿ ಮುಖ್ಯಾರ್ಥವನ್ನು ಬಿಡುವದಾಗಲಿ ಸರಿಯಲ್ಲವಾದ್ದರಿಂದ ಎಂದರ್ಥ.

ಲಭತೇ ಚ ಇತಿ ವಿಪ್ರತಿಷಿದ್ಧಮ್ । ತಸ್ಮಾತ್ ತತ್ತ್ವಾನ್ತರಭೂತಾ ಮುಖ್ಯಾತ್ ಇತರೇ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ವಾಗಾದಿಗಳು ಪ್ರಾಣಕ್ಕಿಂತ ಬೇರೆಯು ತತ್ತ್ವಗಳೇ. ಏಕೆ ? ಎಂದರೆ ವ್ಯಪದೇಶಭೇದವಿರುವದರಿಂದ. ಈ ವ್ಯಪದೇಶಭೇದವೆಂಬುದು ಯಾವದು ? ಶ್ರೇಷ್ಠ(ಪ್ರಾಣವನ್ನು) ಬಿಟ್ಟು ಉಳಿಯುವ ಆ ಪ್ರಕೃತವಾದ ಪ್ರಾಣಗಳು ಹನ್ನೊಂದೂ ಇಂದ್ರಿಯಗಳೆಂದೆನಿಸಿಕೊಳ್ಳುತ್ತವೆ. ಏಕೆಂದರೆ ಶ್ರುತಿಯಲ್ಲಿ ಹೀಗೆಂದು ವ್ಯಪದೇಶವು ಕಂಡಿರುತ್ತದೆ. "ಈತನಿಂದ ಪ್ರಾಣವು ಹುಟ್ಟುತ್ತದೆ, ಮನಸ್ಸೂ ಸರ್ವೇಂದ್ರಿಯಗಳೂ (ಹುಟ್ಟುತ್ತವೆ)" (ಮುಂ. ೨-೧-೩) ಎಂಬೀ ಜಾತಿಯ ಕಡೆಗಳಲ್ಲಿ ಪ್ರಾಣವನ್ನು ಬೇರೆಯಾಗಿಯೂ ಇಂದ್ರಿಯಗಳನ್ನು ಬೇರೆಯಾಗಿಯೂ ಹೇಳಿರುತ್ತದೆ.

(ಆಕ್ಷೇಪ) :- ಹಾಗಾದರೆ ಪ್ರಾಣದಂತೆ ಮನಸ್ಸನ್ನೂ ಇಂದ್ರಿಯವಲ್ಲವೆಂದು ಬಿಡಬೇಕಾಗುವದು. ಏಕೆಂದರೆ "ಮನಸ್ಸೂ ಸರ್ವೇಂದ್ರಿಯಗಳೂ (ಹುಟ್ಟುತ್ತವೆ)" ಎಂದು (ಅದನ್ನೂ) ಬೇರೆಯಾಗಿ ಹೇಳಿರುವದು ಕಂಡಿದೆ.

(ಪರಿಹಾರ) :- ಇದು ನಿಜ. ಆದರೆ **ಸ್ಮೃತಿಯಲ್ಲಿ 'ಹನ್ನೊಂದು ಇಂದ್ರಿಯಗಳು' ಎಂದು ಮನಸ್ಸನ್ನೂ ಶ್ರೋತ್ರಾದಿಗಳಂತೆ ಇಂದ್ರಿಯವೆಂದೇ ಸೇರಿಸಿ (ಹೇಳಿದೆ)**[1]. ಆದರೆ ಪ್ರಾಣವು ಇಂದ್ರಿಯವೆಂತ ಶ್ರುತಿಯಲ್ಲಾಗಲಿ ಸ್ಮೃತಿಯಲ್ಲಾಗಲಿ ಪ್ರಸಿದ್ಧವಾಗಿರುವದಿಲ್ಲ.

ಈ ವ್ಯಪದೇಶಭೇದವು (ಮುಖ್ಯಪ್ರಾಣಗಳು) ಬೇರೆಯು ತತ್ತ್ವಗಳು ಎಂಬ ಪಕ್ಷದಲ್ಲಿಯೇ ಹೊಂದುತ್ತದೆ. (ಎಲ್ಲವೂ) ಒಂದೇ ತತ್ತ್ವ ಎನ್ನುವ

---

1. ಏಕಾದಶೇನ್ದ್ರಿಯಾಣ್ಯಾಹುರ್ಯಾನಿ ಪೂರ್ವೇ ಮನೀಷಿಣಃ । ತಾನಿ ಸಮ್ಯಕ್ಪ್ರವಕ್ಷ್ಯಾಮಿ ಯಥಾವದನುಪೂರ್ವಶಃ ॥ ಶ್ರೋತ್ರಂ ತ್ವಕ್ಚಕ್ಷುಷೀ ಜಿಹ್ವಾ ನಾಸಿಕಾ ಚೈವ ಪಞ್ಚಮೀ । ಪಾಯೂಪಸ್ಥಂ ಹಸ್ತಪಾದಂ ವಾಕ್ಚೈವ ದಶಮೀ ಸ್ಮೃತಾ । ಏಕಾದಶಂ ಮನೋ ಜ್ಞೇಯಂ ಸ್ವಗುಣೇನೋಭಯಾತ್ಮಕಮ್ ॥ (ಮನು. ೨-೮೯ರಿಂದ ೯೨) ಏಕಾದಶ ಚ ಯಾನ್ಯಾಹುರಿನ್ದ್ರಿಯಾಣಿ ವಿಶೇಷತಃ । ಅಹಂಕಾರಪ್ರಸೂತಾನಿ ತಾನಿ ವಕ್ಷ್ಯಾಮ್ಯಹಂ ದ್ವಿಜಾಃ ॥ (ಅಶ್ವ. ೧೪-೧೨) ಮುಂತಾದ ಸ್ಮೃತಿಗಳಲ್ಲಿ ಹೀಗೆಂದು ಹೇಳಿದೆ. ಮನಸ್ಸು ಇಂದ್ರಿಯವಲ್ಲವೆನ್ನುವವರ ಮತವು ಈ ಸ್ಮೃತಿಗಳಿಗೂ ಭಾಷ್ಯಕ್ಕೂ ವಿರುದ್ಧವು.

ದಾದರೆ ಪ್ರಾಣವು ತಾನೊಂದೇ ಆಗಿದ್ದು ಇಂದ್ರಿಯಗಳೆಂಬ ಹೆಸರನ್ನು ಪಡೆಯು ತ್ತದೆ, ಪಡೆಯುವದೂ ಇಲ್ಲ –ಎಂಬುದು (ಪರಸ್ಪರ)ವಿರುದ್ಧ(ವಾದ ಮಾತಾಗು ತ್ತದೆ). ಆದ್ದರಿಂದ ಮುಖ್ಯ(ಪ್ರಾಣ)ಕ್ಕಿಂತ ಉಳಿದ (ಪ್ರಾಣ)ಗಳು ಬೇರೆಯ ತತ್ತ್ವಗಳು.

**ಭೇದಶ್ರುತೇಃ ॥ ೧೮ ॥**

೧೮. ಬೇರೆಯಾಗಿ ಶ್ರುತಿಯಲ್ಲಿ ಹೇಳಿರುವದರಿಂದಲೂ.

## ಶ್ರುತಿಗಳಲ್ಲಿಯೂ ವಾಗಾದಿಗಳಿಗಿಂತ ಮುಖ್ಯಪ್ರಾಣವನ್ನು ಬೇರೆ ಹೇಳಿದೆ

(ಭಾಷ್ಯ)

೨೦೨. ಕುತಶ್ಚ ತತ್ತ್ವಾನ್ತರಭೂತಾಃ ? (ಭೇದಶ್ರುತೇಃ) । ಭೇದೇನ ವಾಗಾದಿಭ್ಯಃ ಪ್ರಾಣಃ ಸರ್ವತ್ರ ಶ್ರೂಯತೇ "ತೇ ಹ ವಾಚಮೂಚುಃ" । (ಬೃ. ೧–೩–೨) ಇತ್ಯುಪಕ್ರಮ್ಯ ವಾಗಾದೀನ್ ಅಸುರಪಾಪ್ಮವಿದ್ಧಾನ್[1] ಉಪನ್ಯಸ್ಯ ಉಪಸಂಹೃತ್ಯ ವಾಗಾದಿಪ್ರಕರಣಮ್ "ಅಥ ಹೇಮಮಾಸನ್ಯಂ ಪ್ರಾಣಮೂಚುಃ" (ಬೃ. ೧–೩–೭) ಇತಿ ಅಸುರವಿಧ್ವಂಸಿನೋ ಮುಖ್ಯಸ್ಯ ಪ್ರಾಣಸ್ಯ ಪೃಥಕ್ ಉಪಕ್ರಮಣಾತ್ । ತಥಾ "ಮನೋ ವಾಚಂ ಪ್ರಾಣಂ ತಾನ್ಯಾತ್ಮನೇಽಕುರುತ" (ಬೃ. ೧–೫–೩) ಇತ್ಯೇವಮಾದ್ಯಾ ಅಪಿ ಭೇದಶ್ರುತಯಃ ಉದಾಹರ್ತವ್ಯಾಃ । ತಸ್ಮಾದಪಿ ತತ್ತ್ವಾನ್ತರಭೂತಾಃ ಮುಖ್ಯಾತ್ ಇತರೇ ॥

(ಭಾಷ್ಯಾರ್ಥ)

ಮತ್ತೂ ಯಾವ ಕಾರಣದಿಂದ (ಉಳಿದ ಪ್ರಾಣಗಳು) ತತ್ತ್ವಾಂತರ ವಾಗಿವೆ ? ಎಂದರೆ ವಾಗಾದಿಗಳಿಗಿಂತ ಬೇರೆಯಾಗಿ (ಮುಖ್ಯ)ಪ್ರಾಣವನ್ನು ಎಲ್ಲಾ ಕಡೆಯಲ್ಲಿಯೂ ಶ್ರುತಿಯಲ್ಲಿ ಹೇಳಿರುತ್ತದೆ. ಹೇಗೆಂದರೆ "ಅವು ವಾಕ್ಕನ್ನು ಕುರಿತು ಇಂತೆಂದವು" (ಬೃ. ೧–೩–೨) ಎಂದು ಉಪಕ್ರಮಿಸಿ ವಾಗಾದಿಗಳು ಅಸುರಪಾಪದಿಂದ ವಿದ್ಧರಾದರೆಂದು ಹೇಳಿ ವಾಗಾದಿಪ್ರಕರಣವನ್ನು ಉಪ

1. ಇಲ್ಲಿ "ಅಸುರಪಾಪ್ಮವಿಧ್ವಸ್ತಾನ್" ಎಂಬ ಭಾಷ್ಯಮೂಲವನ್ನು ಹೀಗೆ ತಿದ್ದಿ ಕೊಂಡಿದೆ. ಮೂಲದಲ್ಲಿ 'ತಮಭಿಶ್ರುತ್ಯ ಪಾಪ್ಮನಾ ವಿಧ್ಯನ್' ಎಂದೇ ಮತ್ತೆ ಮತ್ತೆ ಬಂದಿದೆ ; ನ್ಯಾ. ನಿ. ಟೀಕೆಯಲ್ಲಿ 'ಅಸುರೈಃ ಪಾಪ್ಮನಾ ಕಲ್ಯಾಣಾಸಙ್ಗನಿಮಿತ್ತೇನ ವಿದ್ಧಾನ್ ಉಕ್ತ್ವಾ' ಎಂದಿದೆ. ರ. ಪ್ರ.ದಲ್ಲಿ ಮಾತ್ರ 'ಅನೃತಾದಿದೋಷೇಣ ವಿಧ್ವಂಸಿತ ವನ್ತೋಽಸುರಾಃ' ಎಂದಿದೆ. ಉಪನಿಷತ್ತಿನಲ್ಲಿ ಪ್ರಾಣಪರ್ಯಾಯದಲ್ಲಿ ಮಟ್ಟಿಗೆ 'ವಿಧ್ವಂಸ ಮಾನಾಃ' ಎಂಬ ಮಾತಿದೆ. ನಾವು ಉಪನಿಷತ್ತಿಗೆ ಅನುಗುಣವಾಗಿ ತಿದ್ದಿರುತ್ತೇವೆ.

ಸಂಹಾರಮಾಡಿ "ಈಗ ಈ ಮುಖದಲ್ಲಿರುವ ಪ್ರಾಣವನ್ನು ಕುರಿತು ಇಂತೆಂದವು" (ಬೃ. ೧-೩-೭) ಎಂದು ಅಸುರವಿಧ್ವಂಸಿಯಾದ ಮುಖ್ಯಪ್ರಾಣವನ್ನು ಬೇರೆಯಾಗಿ ಹೇಳುವದಕ್ಕೆ) ಉಪಕ್ರಮಿಸಿರುವದರಿಂದ (ಹೀಗೆಂದು ನಿಶ್ಚಯಿಸಬೇಕು). ಹೀಗೆಯೇ "ಮನಸ್ಸು, ವಾಕ್ಕು, ಪ್ರಾಣ –ಇವುಗಳನ್ನು ತನಗೆ ಮಾಡಿಕೊಂಡನು" (ಬೃ. ೧-೫-೩) ಮುಂತಾದ ಭೇದಶ್ರುತಿಗಳನ್ನೂ ಉದಾಹರಿಸಬಹುದು. ಆದ್ದರಿಂದಲೂ ಮುಖ್ಯ(ಪ್ರಾಣಕ್ಕಿಂತ) ಇತರ (ಪ್ರಾಣಗಳು) ತತ್ತ್ವಾಂತರವಾಗಿವೆ.

## ವೈಲಕ್ಷಣ್ಯಾಚ್ಚ ॥ ೧೯ ॥

೧೯. ವೈಲಕ್ಷಣ್ಯವಿರುವದರಿಂದಲೂ (ಅವು ತತ್ತ್ವಾಂತರವಾಗಿವೆ).

(ಭಾಷ್ಯ)

೨೦೩. ಕುತಶ್ಚ ತತ್ತ್ವಾನ್ತರಭೂತಾಃ ? (ವೈಲಕ್ಷಣ್ಯಾಚ್ಚ) । ವೈಲಕ್ಷಣ್ಯಂ ಚ ಭವತಿ ಮುಖ್ಯಸ್ಯ ಇತರೇಷಾಂ ಚ । ಸುಪ್ತೇಷು[1] ವಾಗಾದಿಷು ಮುಖ್ಯ ಏಕೋ ಜಾಗರ್ತಿ । ಸ ಏವ ಚ ಏಕೋ ಮೃತ್ಯುನಾನಾಪ್ತಃ ಆಪ್ತಾಸ್ತ್ವಿತರೇ । ತಸ್ಯೈವ ಚ ಸ್ಥಿತ್ಯುತ್ಕ್ರಾನ್ತಿಭ್ಯಾಂ ದೇಹಧಾರಣಪತನಹೇತುತ್ವಂ ನೇನ್ದ್ರಿಯಾಣಾಮ್ । ವಿಷಯಾಲೋಚನಹೇತುತ್ವಂ ಚ ಇನ್ದ್ರಿಯಾಣಾಂ ನ ಪ್ರಾಣಸ್ಯ– ಇತ್ಯೇವಂಜಾತೀಯಕೋ ಭೂಯಾನ್ ಲಕ್ಷಣಭೇದಃ ಪ್ರಾಣೇನ್ದ್ರಿಯಾಣಾಮ್ । ತಸ್ಮಾದಪಿ ಏಷಾಂ ತತ್ತ್ವಾನ್ತರಭಾವಸಿದ್ಧಿಃ ॥

(ಭಾಷ್ಯಾರ್ಥ)

ಮತ್ತು ಏತಕ್ಕೆ (ಅವು) ಬೇರೆಯ ತತ್ತ್ವವಾಗಿವೆ ? ಎಂದರೆ ('ವೈಲಕ್ಷಣ್ಯಾಚ್ಚ'), ಮುಖ್ಯ(ಪ್ರಾಣಕ್ಕೂ) ಇತರ (ಪ್ರಾಣಗಳಿಗೂ) ವೈಲಕ್ಷಣ್ಯವೂ ಇದೆ. (ಹೇಗೆಂದರೆ) ವಾಗಾದಿಗಳು, ನಿದ್ರಿಸುತ್ತಿರುವಲ್ಲಿ ಮುಖ್ಯಪ್ರಾಣವೊಂದೇ ಎಚ್ಚರವಾಗಿರುತ್ತದೆ ; ಅದೊಂದೇ ಮೃತ್ಯುವಿನಿಂದ ವ್ಯಾಪಿಸಲ್ಪಡದಿರುವದು, ಮಿಕ್ಕವು ವ್ಯಾಪ್ತವಾಗಿರುತ್ತವೆ. ಅದೇ ಸ್ಥಿತ್ಯುತ್ಕ್ರಾಂತಿಗಳಿಂದ ದೇಹಧಾರಣಕ್ಕೂ (ದೇಹ)ಪತನಕ್ಕೂ ಕಾರಣವಾಗಿದೆಯೇ ಹೊರತು ಇಂದ್ರಿಯಗಳು (ಕಾರಣವಾಗಿಲ್ಲ). ಇಂದ್ರಿಯಗಳು ವಿಷಯಾಲೋಚನಕ್ಕೆ ಕಾರಣವಾಗಿವೆ, ಪ್ರಾಣವಲ್ಲ– ಎಂಬೀ ಜಾತಿಯ ಬಹಳ ಲಕ್ಷಣಭೇದವು ಪ್ರಾಣಕ್ಕೂ

---

1. ಶ್ರುತಿಯಲ್ಲಿ ಸುಪ್ತೇಷು ಜಾಗರ್ತಿ ಎಂದೇ ಇದೆ.

ಇಂದ್ರಿಯಗಳಿಗೂ (ಇರುತ್ತದೆ). ಆದ್ದರಿಂದಲೂ ಇವುಗಳು ತತ್ತ್ವಾಂತರವೆಂದು ಸಿದ್ಧವಾಯಿತು[1].

## ಪೂರ್ವಪಕ್ಷಯುಕ್ತಿಗಳ ಖಂಡನೆ

(ಭಾಷ್ಯ)

೨೦೪. ಯದುಕ್ತಮ್ "ತ ಏತಸ್ಯೈವ ಸರ್ವೇ ರೂಪಮಭವನ್" (ಬೃ. ೧-೫-೨೧) ಇತಿ ಶ್ರುತೇಃ ಪ್ರಾಣ ಏವ ಇನ್ದ್ರಿಯಾಣಿ ಇತಿ, ತದಯುಕ್ತಮ್ । ತತ್ರಾಪಿ ಪೌರ್ವಾಪರ್ಯಾಲೋಚನಾತ್ ಭೇದಪ್ರತೀತೇಃ । ತಥಾ ಹಿ "ವದಿಷ್ಯಾಮ್ಯೇವಾಹಮಿತಿ ವಾಗ್ದಧ್ರೇ" (ಬೃ. ೧-೫-೨೧) ಇತಿ ವಾಗಾದೀನಿ ಇನ್ದ್ರಿಯಾಣಿ ಅನುಕ್ರಮ್ಯ "ತಾನಿ ಮೃತ್ಯುಃ ಶ್ರಮೋ ಭೂತ್ವೋಪಯೇಮೇ ತಸ್ಮಾಚ್ಛ್ರಾಮ್ಯತ್ಯೇವ ವಾಕ್" (ಬೃ. ೧-೫-೨೧) ಇತಿ ಚ ಶ್ರಮರೂಪೇಣ ಮೃತ್ಯುನಾ ಗ್ರಸ್ತತ್ವಂ ವಾಗಾದೀನಾಮ್ ಅಭಿಧಾಯ "ಅಥೇಮಮೇವ ನಾಪ್ನೋದ್ಯೋಽಯಂ ಮಧ್ಯಮಃ ಪ್ರಾಣಃ" (ಬೃ. ೧-೫-೨೧) ಇತಿ ಪೃಥಕ್ ಪ್ರಾಣಂ ಮೃತ್ಯುನಾ ಅನಭಿಭೂತಂ ತಮ್ ಅನುಕ್ರಾಮತಿ । "ಅಯಂ ವೈ ನಃ ಶ್ರೇಷ್ಠಃ" (ಬೃ. ೧-೫-೨೧) ಇತಿ ಚ ಶ್ರೇಷ್ಠತಾಮ್ ಅಸ್ಯ ಅವಧಾರಯತಿ । ತಸ್ಮಾತ್ ತದವಿರೋಧೇನ ವಾಗಾದಿಷು ಪರಿಸ್ಪನ್ದಲಾಭಸ್ಯ ಪ್ರಾಣಾಯತ್ತತ್ವಮ್; ತದ್ರೂಪಭವನಂ ವಾಗಾದೀನಾಮ್ ಇತಿ ಮನ್ತವ್ಯಮ್, ನ ತಾದಾತ್ಮ್ಯಮ್। ಅತ ಏವ ಚ ಪ್ರಾಣಶಬ್ದಸ್ಯ ಇನ್ದ್ರಿಯೇಷು ಲಾಕ್ಷಣಿಕತ್ವಸಿದ್ಧಿಃ । ತಥಾ ಚ ಶ್ರುತಿಃ "ತ ಏತಸ್ಯೈವ ಸರ್ವೇ ರೂಪಮಭವನ್ । ತಸ್ಮಾದೇತೇ ಏತೇನಾ

---

1. ಈ ಅಧಿಕರಣದಲ್ಲಿ ಒಂಬತ್ತನೆಯ ಸೂತ್ರದಲ್ಲಿ 'ಭೇದ'ಶಬ್ದದ ಅಧ್ಯಾಹಾರವಿದೆ; 'ಭೇದಶ್ರುತೇಶ್ಚ' ಎಂಬಲ್ಲಿ ಪುನರುಕ್ತಿಯಾಗುತ್ತದೆ; ತಚ್ಛಬ್ದವು ಹಿಂದೆ ಹೇಳಿದ್ದರ ಪರಾಮರ್ಶಕವಲ್ಲ. ಆದ್ದರಿಂದ ವಾಗಾದಿಗಳು ಹನ್ನೊಂದೇ ಇಂದ್ರಿಯವೊ, ಪ್ರಾಣವೂ ಇಂದ್ರಿಯವೊ ?- ಎಂಬ ಸಂಶಯವನ್ನು ತೆಗೆದು ವಾಗಾದಿಗಳೇ ಇಂದ್ರಿಯಗಳು, ಪ್ರಾಣವಲ್ಲ ಎಂದು ಅಧಿಕರಣದ ಸಿದ್ಧಾಂತವನ್ನು ತೆಗೆಯಬೇಕು ; ಭಾಷ್ಯಕಾರರ ಅಧಿಕರಣವನ್ನು ಭೇದಶ್ರುತೇಃ ಮುಂತಾದ ಸೂತ್ರಗಳಿಗೆ ಹೊಂದಿಸಬೇಕು- ಎಂದು ಭಾಮತೀ ವ್ಯಾಖ್ಯಾನ. ಆದರೆ ಇಂದ್ರಿಯಗಳು ಯಾವವು ಎಂಬುದನ್ನು ಗೊತ್ತುಮಾಡಿದ್ದರಿಂದ ಸಿದ್ಧಾಂತಕ್ಕೆ ಯಾವ ಪ್ರಯೋಜನವೂ ಇಲ್ಲ; ಇಂದ್ರಿಯಗಳು ಮುಖ್ಯಾರ್ಥದಲ್ಲಿ ಪ್ರಾಣವಲ್ಲ ಎಂಬುದು ಆತ್ಮಾನಾತ್ಮವಿವೇಕಕ್ಕೆ ಉಪಯೋಗವಾಗುತ್ತದೆ. ಸೂತ್ರಾಕ್ಷರಕ್ಕೆ ಹೊರಚ್ಚಾಗಿಯೇ ಪ್ರತಿಜ್ಞೆಮಾಡಿರುವ ಸ್ಥಲಗಳೂ ಇವೆ. (೧೭)ನೆಯ ಸೂತ್ರಕ್ಕೆ ಆ ಪ್ರಾಣಗಳು ಶ್ರೇಷ್ಠಪ್ರಾಣನನ್ನು ಬಿಟ್ಟು ಮಿಕ್ಕವು ಇಂದ್ರಿಯಗಳೆನಿಸುತ್ತವೆ ; ಏಕೆಂದರೆ ಆ ವ್ಯಪದೇಶವಿದೆ, ಎಂದರೆ ಇಂದ್ರಿಯಗಳೆಂಬ ವ್ಯಪದೇಶವಿದೆ ಎಂದು ಅರ್ಥ. ತದ್ವ್ಯಪದೇಶಾತ್ ಎಂಬಲ್ಲಿ ಇಂದ್ರಿಯಗಳನ್ನೇ ಪರಾಮರ್ಶಿಸಿದೆ. ಪ್ರಾಣಗಳು ತತ್ತ್ವಾಂತರಗಳು ಎಂಬುದು ಸೂತ್ರದ ಅರ್ಥ. ೧೮ನೆಯ ಸೂತ್ರದಲ್ಲಿ ಭೇದಶ್ರುತಿಗಳನ್ನು ಹೇಳಿರುವದರಿಂದ ಪುನರುಕ್ತಿಯಿಲ್ಲ.

ಖ್ಯಾಯನ್ತೇ ಪ್ರಾಣಾಃ (ಇತಿ)'' (ಬೃ. ೧-೫-೨೧) ಇತಿ ಮುಖ್ಯಪ್ರಾಣ ವಿಷಯಸ್ಯೈವ ಪ್ರಾಣಶಬ್ದಸ್ಯ ಇನ್ದ್ರಿಯೇಷು ಲಾಕ್ಷಣಿಕೀಂ ವೃತ್ತಿಂ ದರ್ಶಯತಿ । ತಸ್ಮಾತ್ ತತ್ತ್ವಾನ್ತರಾಣಿ ಪ್ರಾಣಾತ್ ಇನ್ದ್ರಿಯಾಣಿ ಇತಿ ॥

(ಭಾಷ್ಯಾರ್ಥ)

ಇನ್ನು ''ಅವು ಎಲ್ಲವೂ ಇದರ ರೂಪವಾದವು'' (ಬೃ. ೧-೫-೨೧) ಎಂಬ ಶ್ರುತಿಯ (ಪ್ರಮಾಣ)ದಿಂದ ಪ್ರಾಣವೇ ಇಂದ್ರಿಯಗಳು ಎಂದು (ಪೂರ್ವ ಪಕ್ಷದಲ್ಲಿ) ಹೇಳಿತ್ತಷ್ಟೆ, ಅದು ಅಯುಕ್ತ. ಏಕೆಂದರೆ ಅಲ್ಲಿಯೂ ಹಿಂದು ಮುಂದಿನ (ಸಂದರ್ಭವನ್ನು) ಆಲೋಚಿಸಿದರೆ ಭೇದವೇ ಕಾಣುತ್ತದೆ. ಹೇಗೆಂದರೆ "ವಾಕ್ಕು ಮಾತನಾಡುತ್ತಲೇ ಇರುವೆನು ಎಂದು ನಿರ್ಧಾರಣೆ ಮಾಡಿಕೊಂಡಿತು'' (ಬೃ. ೧-೫-೨೧) ಎಂದು ವಾಗಾದೀಂದ್ರಿಯಗಳನ್ನು ಒಂದೊಂದಾಗಿ ಹೇಳಿ ಅವುಗಳನ್ನು ಮೃತ್ಯುವು ಶ್ರಮರೂಪವಾಗಿ ಸಮಾಪಿಸಿ ದನು. ಆದ್ದರಿಂದ ವಾಕ್ಕು ಶ್ರಾಂತವಾಗಿಯೇ ತೀರುತ್ತದೆ" (ಬೃ. ೧-೫-೨೧) ಎಂದು ವಾಗಾದಿಗಳು ಶ್ರಮರೂಪವಾದ ಮೃತ್ಯುವಿನಿಂದ ಗ್ರಸ್ತವಾಗಿರುತ್ತವೆ ಎಂದು ಹೇಳಿ "ಇನ್ನು ಈ ಮಧ್ಯಮಪ್ರಾಣವಿದೆಯಲ್ಲ, ಇದನ್ನು ಮಾತ್ರ ವ್ಯಾಪಿಸಲಿಲ್ಲ'' (ಬೃ. ೧-೫-೨೧) ಎಂದು ಅದು ಮೃತ್ಯುವಿನಿಂದ ಪರಾಭವವನ್ನು ಹೊಂದಲಿಲ್ಲ ಎಂದು ಪ್ರಾಣವನ್ನು ಬೇರೆಯಾಗಿಯೇ ಹೇಳಿದೆ. "ಇವನೇ ನಮ್ಮಲ್ಲಿ ಶ್ರೇಷ್ಠನು'' (ಬೃ. ೧-೫-೨೧) ಎಂದು ಇದು ಶ್ರೇಷ್ಠವು ಎಂದೂ ನಿಶ್ಚಯಿಸಿದೆ. ಆದ್ದರಿಂದ ಅದಕ್ಕೆ ವಿರೋಧವಾಗದಂತೆ ವಾಗಾದಿಗಳಿಗೆ ಚಲನೆಯ ಪ್ರಾಪ್ತಿಗಾಗಿ ಪ್ರಾಣದ ಅಧೀನವಾಗಿರುವದೆಂಬುದನ್ನೇ ವಾಗಾದಿಗಳು ಆ (ಪ್ರಾಣದ) ರೂಪವನ್ನು ಹೊಂದಿದ್ದೆಂಬು (ಹೇಳಿದೆಯೇ) ಹೊರತು (ಅದರ) ತಾದಾತ್ಮ್ಯವಲ್ಲ ಎಂದು ತಿಳಿಯಬೇಕು.

ಇದರಿಂದಲೇ ಪ್ರಾಣಶಬ್ದಕ್ಕೆ ಇಂದ್ರಿಯಗಳಲ್ಲಿ ಲಾಕ್ಷಣಿಕ(ವೃತ್ತಿಯು) ಸಿದ್ಧವಾಗುತ್ತದೆ. ಆದ್ದರಿಂದಲೇ "ಅವು ಇದರ ರೂಪವನ್ನೇ ಹೊಂದಿದವು ; ಆದ್ದರಿಂದ ಅವು ಈ (ಪ್ರಾಣದ ಹೆಸರಿನಿಂದ) ಪ್ರಾಣಗಳು ಎಂದು ಕರೆಯಿಸಿ ಕೊಳ್ಳುತ್ತವೆ'' (ಬೃ. ೧-೫-೨೧) ಎಂದು ಮುಖ್ಯಪ್ರಾಣವಿಷಯವಾಗಿರುವ ಪ್ರಾಣಶಬ್ದಕ್ಕೇ ಇಂದ್ರಿಯಗಳಲ್ಲಿ ಲಾಕ್ಷಣಿಕವೃತ್ತಿಯನ್ನು ತಿಳಿಸಿರುತ್ತದೆ. ಆದ್ದ ರಿಂದ ಇಂದ್ರಿಯಗಳು ಪ್ರಾಣಕ್ಕಿಂತ ಬೇರೆಯಾದ ತತ್ತ್ವಗಳು.

## ೯. ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣ (ಸೂ. ೨೦-೨೨)

(ನಾಮರೂಪಗಳ ವ್ಯಾಕರಣವು ಬ್ರಹ್ಮಕೃತ)

**ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್ ॥ ೨೦ ॥**

೨೦. ಸಂಜ್ಞಾಮೂರ್ತಿಗಳ ಕಲ್ಪನವು ತ್ರಿವೃತ್ಕರಣಮಾಡು ವವನದು ; ಏಕೆಂದರೆ (ಹಾಗೆಂದು) ಉಪದೇಶಿಸಿರುತ್ತದೆ.

## ವಿಷಯವೂ ಸಂಶಯವೂ

(ಭಾಷ್ಯ)

೨೦೫. ಸತ್ಪ್ರಕ್ರಿಯಾಯಾಂ ತೇಜೋಽಬನ್ನಾನಾಂ ಸೃಷ್ಟಿಮ್ ಅಭಿಧಾಯ ಉಪದಿಶ್ಯತೇ "ಸೇಯಂ ದೇವತೈಕ್ಷತ ಹನ್ತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ" (ಛಾಂ. ೬-೩-೨) "ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತಿ" (ಛಾಂ. ೬-೩-೩) (ಇತಿ) । ತತ್ರ ಸಂಶಯಃ । ಕಿಂ ಜೀವಕರ್ತೃಕಮಿದಂ ನಾಮರೂಪವ್ಯಾಕರಣಮ್ ಆಹೋಸ್ವಿತ್ ಪರಮೇಶ್ವರಕರ್ತೃಕಮ್ ಇತಿ ॥

(ಭಾಷ್ಯಾರ್ಥ)

ಸದ್ಬ್ರಹ್ಮದ ಪ್ರಕರಣದಲ್ಲಿ ತೇಜೋಽಬನ್ನಗಳ ಸೃಷ್ಟಿಯನ್ನು ಹೇಳಿ ಉಪದೇಶಿಸಿರುವುದೇನೆಂದರೆ "ಒಳ್ಳೆಯದು, ನಾನು ಈ ಮೂರು ದೇವತೆಗಳನ್ನು ಈ ಜೀವನೆಂಬ ಆತ್ಮನಿಂದ ಅನುಪ್ರವೇಶಮಾಡಿ ನಾಮರೂಪಗಳನ್ನು ವ್ಯಾಕರಣಮಾಡುವೆನು ಎಂದು ಆ ಈ ದೇವತೆಯು (ಆಲೋಚಿಸಿ) ನೋಡಿತು" (ಛಾಂ. ೬-೩-೨) ಅವುಗಳಲ್ಲಿ ಒಂದೊಂದನ್ನೂ ತ್ರಿವೃತ್ತ್ರಿವೃತವಾಗಿ ಮಾಡುವೆನು ಎಂದು (ಯೋಚಿಸಿಕೊಂಡಿತು)" (ಛಾಂ. ೬-೩-೩). ಇಲ್ಲಿ ಸಂಶಯವೇನೆಂದರೆ, ಈ ನಾಮರೂಪವ್ಯಾಕರಣವು ಜೀವಕರ್ತೃಕವೊ ಅಥವಾ ಪರಮೇಶ್ವರಕರ್ತೃಕವೊ[1] ?

## ಪೂರ್ವಪಕ್ಷ: ನಾಮರೂಪವ್ಯಾಕರಣವು ಜೀವಕರ್ತೃಕ

(ಭಾಷ್ಯ)

೨೦೬. ತತ್ರ ಪ್ರಾಪ್ತಂ ತಾವತ್ ಜೀವಕರ್ತೃಕಮೇವೇದಂ ನಾಮರೂಪವ್ಯಾಕರಣಮ್ ಇತಿ । ಕುತಃ ? "ಅನೇನ ಜೀವೇನಾತ್ಮನಾ" ಇತಿ ವಿಶೇಷ

1. ಹಿಂದೆ ನಾಮರೂಪಗಳು ಬೇರೆಯಾಗಿರುವವರಿಂದ ಪ್ರಾಣವು ಬೇರೆಯ ತತ್ತ್ವವು ಎಂದು ಹೇಳಿದೆಯಷ್ಟೆ ; ಆ ಪ್ರಸಂಗದಿಂದ ನಾಮರೂಪಗಳ ಕರ್ತೃ ಯಾರು ಎಂಬುದನ್ನು ಇಲ್ಲಿ ಚಿಂತಿಸಿರುತ್ತದೆ ಎಂದು ನ್ಯಾ. ನಿ. ಮತ್ತು. ರ. ಪ್ರ. ಶ್ರುತಿವ್ಯಪದೇಶ, ಭೇದಶ್ರುತಿ, ವೈಲಕ್ಷಣ್ಯ– ಇವುಗಳಿಂದ ಇಂದ್ರಿಯಗಳು ಮುಖ್ಯಪ್ರಾಣನಿಗಿಂತ ಬೇರೆಯ ತತ್ತ್ವಗಳೆಂದಾದರೆ ಇದೇ ಹೇತುಗಳಿಂದ ಜೀವನು ಪರಮೇಶ್ವರನಿಗಿಂತ ಬೇರೆಯ ತತ್ತ್ವವಾಗಲಿ ಎಂದು ಜೀವತ್ವವ್ಯಪದೇಶ, ದೇವತಾಜೀವಭೇದಶ್ರುತಿ, ನಾಮರೂಪವ್ಯಾಕರಣ ರೂಪಧರ್ಮದಿಂದ ವೈಲಕ್ಷಣ್ಯ ಇವುಗಳನ್ನು ಉದಾಹರಿಸುವದರ ಮೂಲಕ ಅದ್ವೈತವಿರೋಧವನ್ನು ಇಲ್ಲಿಶಂಕಿಸಿ ಪರಿಹರಿಸಿದೆ ಎಂದು ತೋರುತ್ತದೆ

ಣಾತ್ । ಯಥಾ ಲೋಕೇ 'ಚಾರೇಣ ಅಹಂ ಪರಸೈನ್ಯಮ್ ಅನುಪ್ರವಿಶ್ಯ ಸಂಕಲಯಾನಿ' ಇತ್ಯೇವಂಜಾತೀಯಕೇ ಪ್ರಯೋಗೇ ಚಾರಕರ್ತೃಕಮೇವ ಸತ್ ಸೈನ್ಯಸಂಕಲನಂ ಹೇತುಕರ್ತೃತ್ವಾತ್ ರಾಜಾ ಆತ್ಮನಿ ಅಧ್ಯಾರೋಪಯತಿ ಸಂಕಲಯಾನಿ ಇತಿ ಉತ್ತಮಪುರುಷಪ್ರಯೋಗೇಣ, ಏವಂ ಜೀವಕರ್ತೃಕಮೇವ ಸತ್ ನಾಮರೂಪವ್ಯಾಕರಣಂ ಹೇತುಕರ್ತೃತ್ವಾತ್ ದೇವತಾ ಆತ್ಮನಿ ಅಧ್ಯಾರೋಪಯತಿ 'ವ್ಯಾಕರವಾಣಿ' ಇತಿ ಉತ್ತಮಪುರುಷಪ್ರಯೋಗೇಣ ಅಪಿ ಚ ಡಿತ್ಥಡವಿತ್ಥಾದಿಷು ನಾಮಸು ಘಟಶರಾವಾದಿಷು ಚ ರೂಪೇಷು ಜೀವಸ್ಯೈವ ವ್ಯಾಕರ್ತೃತ್ವಂ ದೃಷ್ಟಮ್ । ತಸ್ಮಾತ್ ಜೀವಕರ್ತೃಕಮೇವೇದಂ ನಾಮರೂಪವ್ಯಾಕರಣಮ್ ಇತಿ ॥

(ಭಾಷ್ಯಾರ್ಥ)

ಇಲ್ಲಿ ಮೊದಲು ಬಂದೊದಗುವ (ಪೂರ್ವಪಕ್ಷ)ವೇನೆಂದರೆ, ಈ ನಾಮರೂಪವ್ಯಾಕರಣವು ಜೀವಕರ್ತೃಕವೇ. ಏಕೆ ? ಎಂದರೆ "ಈ ಜೀವನೆಂಬ ಆತ್ಮನಿಂದ" ಎಂದು ವಿಶೇಷಣವನ್ನು ಕೊಟ್ಟಿರುವದರಿಂದ. ಹೇಗೆ ಲೋಕದಲ್ಲಿ 'ಚಾರನಿಂದ ಪರಸೈನ್ಯವನ್ನು ಒಳಹೊಕ್ಕು ಒಟ್ಟು ಎಷ್ಟೆಂಬುದನ್ನು ಎಣಿಸಿ ನೋಡುವೆನು' ಎಂಬೀ ಜಾತಿಯ ಪ್ರಯೋಗದಲ್ಲಿ ಸೈನ್ಯವನ್ನು ಎಣಿಸುವದೆಂಬ (ಕ್ರಿಯೆಯು) ಚಾರಕರ್ತೃಕವೇ ಆದರೂ (ಅದನ್ನು) ರಾಜನು (ತಾನು) ಹೇತುಕರ್ತೃವಾಗಿರುವದರಿಂದ 'ಸಂಕಲಯಾನಿ' (ಕೂಡಿಸಿ ಎಣಿಸುವೆನು) ಎಂಬ ಉತ್ತಮಪುರುಷಪ್ರಯೋಗದಿಂದ ತನ್ನಲ್ಲಿ ಅಧ್ಯಾರೋಪಿಸಿಕೊಳ್ಳುವನೋ, ಹಾಗೆಯೇ ನಾಮರೂಪವ್ಯಾಕರಣವು ಜೀವನದೇ ಆಗಿದ್ದರೂ (ಅದನ್ನು) ದೇವತೆಯು (ತಾನು) ಹೇತುಕರ್ತೃವಾಗಿರುವದರಿಂದ 'ವ್ಯಾಕರಣಮಾಡುವೆನು' ಎಂದು ಉತ್ತಮಪುರುಷಪ್ರಯೋಗದಿಂದ ತನ್ನಲ್ಲಿ ಅಧ್ಯಾರೋಪಿಸಿಕೊಂಡಿರುತ್ತದೆ.[1] ಇದಲ್ಲದೆ **ಡಿತ್ಥ, ಡವಿತ್ಥ** ಮುಂತಾದ ನಾಮಗಳಲ್ಲಿಯೂ ಗಡಿಗೆ, ಶ್ರಾವೆ– ಮುಂತಾದ ರೂಪಗಳಲ್ಲಿಯೂ ಜೀವನಿಗೇ ಕರ್ತೃತ್ವವು ಕಂಡಿದೆ. ಆದ್ದರಿಂದ ಈ ನಾಮರೂಪವ್ಯಾಕರಣವು ಜೀವಕರ್ತೃಕವೇ.

## ಸಿದ್ಧಾಂತ : ನಾಮರೂಪವ್ಯಾಕರಣವು ಪರಮೇಶ್ವರನದೇ

(ಭಾಷ್ಯ)

೨೦೭. ಏವಂ ಪ್ರಾಪ್ತೇ ಅಭಿಧತ್ತೇ "ಸಂಜ್ಞಾಮೂರ್ತಿಕ್ಲೃಪ್ತಿಸ್ತು" ಇತಿ । ತುಶಬ್ದೇನ ಪಕ್ಷಂ ವ್ಯಾವರ್ತಯತಿ । 'ಸಂಜ್ಞಾಮೂರ್ತಿಕ್ಲೃಪ್ತಿಃ' ಇತಿ ।

1. ಇಲ್ಲಿ ದೇವತೆ ಎಂದರೆ ಪರಮೇಶ್ವರನು. ಶ್ರುತಿಯಲ್ಲಿ ಪರಮೇಶ್ವರನನ್ನು ದೇವತೆ ಎಂದು ಕರೆದಿದೆ. ದೇವತೆಯು ವ್ಯಾಕರಣಕರ್ತೃತ್ವವನ್ನು ತನ್ನಲ್ಲಿ ಅಧ್ಯಾರೋಪಿಸಿಕೊಂಡಿದೆ ಎಂದರೆ ಗೌಣವಾಗಿ ಪ್ರಯೋಗಿಸಿಕೊಂಡಿದೆ ಎಂದರ್ಥ.

ನಾಮರೂಪವ್ಯಾಕ್ರಿಯಾ ಇತ್ಯೇತತ್ । 'ತ್ರಿವೃತ್ಕುರ್ವತಃ' ಇತಿ ಪರಮೇಶ್ವರಂ ಲಕ್ಷಯತಿ । ತ್ರಿವೃತ್ಕರಣೇ ತಸ್ಯ ನಿರಪವಾದಕರ್ತೃತ್ವನಿರ್ದೇಶಾತ್ । ಯೇಯಂ ಸಂಜ್ಞಾಕ್ಲೃಪ್ತಿಃ ಮೂರ್ತಿಕ್ಲೃಪ್ತಿಶ್ಚ 'ಅಗ್ನಿಃ', 'ಆದಿತ್ಯಃ', 'ಚನ್ದ್ರಮಾಃ' 'ವಿದ್ಯುತ್'– ಇತಿ, ತಥಾ ಕುಶಕಾಶಪಲಾಶಾದಿಷು ಪಶುಮೃಗಮನುಷ್ಯಾದಿಷು ಚ ಪ್ರತ್ಯಾಕೃತಿ ಪ್ರತಿವ್ಯಕ್ತಿ ಚ ಅನೇಕಪ್ರಕಾರಾ, ಸಾ ಖಲು ಪರಮೇಶ್ವರಸ್ಯೈವ ತೇಜೋಽಬನ್ನಾನಾಂ ನಿರ್ಮಾತುಃ ಕೃತಿರ್ಭವಿತುಮರ್ಹತಿ। ಕುತಃ ? ಉಪದೇಶಾತ್ । ತಥಾ ಹಿ "ಸೇಯಂ ದೇವತೈಕ್ಷತ" ಇತ್ಯುಪಕ್ರಮ್ಯ "ವ್ಯಾಕರವಾಣಿ" ಇತಿ ಉತ್ತಮಪುರುಷಪ್ರಯೋಗೇಣ ಪರಸ್ಯೈವ ಬ್ರಹ್ಮಣಃ ವ್ಯಾಕರ್ತೃತ್ವಮ್ ಇಹ ಉಪದಿಶ್ಯತೇ । ನನು ಜೀವೇನ ಇತಿ ವಿಶೇಷಣಾತ್ ಜೀವಕರ್ತೃಕತ್ವಂ ವ್ಯಾಕರಣಸ್ಯ ಅಧ್ಯವಸಿತಮ್ । ನೈತದೇವಮ್ । 'ಜೀವೇನ ಇತ್ಯೇತತ್ ಅನುಪ್ರವಿಶ್ಯ' ಇತ್ಯನೇನ ಸಂಬಧ್ಯತೇ । ಆನನ್ತರ್ಯಾತ್ । ನ 'ವ್ಯಾಕರವಾಣಿ' ಇತ್ಯನೇನ । ತೇನ ಹಿ ಸಂಬನ್ಧೇ 'ವ್ಯಾಕರವಾಣಿ' ಇತ್ಯಯಂ ದೇವತಾವಿಷಯಃ ಉತ್ತಮಪುರುಷಃ ಔಪಚಾರಿಕಃ ಕಲ್ಪ್ಯೇತ । ನ ಚ ಗಿರಿನದೀಸಮುದ್ರಾದಿಷು ನಾನಾವಿಧೇಷು ನಾಮರೂಪೇಷು ಅನೀಶ್ವರಸ್ಯ ಜೀವಸ್ಯ ವ್ಯಾಕರಣಸಾಮರ್ಥ್ಯಮ್ ಅಸ್ತಿ । ಯೇಷ್ವಪಿ ಚ ಅಸ್ತಿ ಸಾಮರ್ಥ್ಯಮ್ ತೇಷ್ವಪಿ ಪರಮೇಶ್ವರಾಯತ್ತಮೇವ ತತ್ । ನ ಚ ಜೀವೋ ನಾಮ ಪರಮೇಶ್ವರಾತ್ ಅತ್ಯನ್ತಭಿನ್ನಃ ಚಾರ ಇವ ರಾಜ್ಞಃ । 'ಆತ್ಮನಾ' ಇತಿ ವಿಶೇಷಣಾತ್। ಉಪಾಧಿಮಾತ್ರನಿಬನ್ಧನತ್ವಾಚ್ಚ ಜೀವಭಾವಸ್ಯ । ತೇನ ತತ್ಕೃತಮಪಿ ನಾಮರೂಪವ್ಯಾಕರಣಂ ಪರಮೇಶ್ವರಕೃತಮೇವ ಭವತಿ । ಪರಮೇಶ್ವರ ಏವ ಚ ನಾಮರೂಪಯೋಃ ವ್ಯಾಕರ್ತಾ ಇತಿ ಸರ್ವೋಪನಿಷತ್ಸಿದ್ಧಾನ್ತಃ । "ಆಕಾಶೋ ಹ ವೈ ನಾಮ ನಾಮರೂಪಯೋರ್ನಿರ್ವಹಿತಾ (ಛಾಂ. ೮–೧೪–೧) ಇತ್ಯಾದಿ ಶ್ರುತಿಭ್ಯಃ । ತಸ್ಮಾತ್ ಪರಮೇಶ್ವರಸ್ಯೈವ ತ್ರಿವೃತ್ಕುರ್ವತಃ ಕರ್ಮ ನಾಮರೂಪಯೋರ್ವ್ಯಾಕರಣಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ "ಸಂಜ್ಞಾಮೂರ್ತಿಕ್ಲೃಪ್ತಿಸ್ತು" ಎಂದು (ಸೂತ್ರಕಾರರು) ಹೇಳಿರುತ್ತಾರೆ. ಇಲ್ಲಿ ತು (ಆದರೆ) ಎಂಬ ಶಬ್ದದಿಂದ (ಪೂರ್ವ)ಪಕ್ಷವನ್ನು ತಳ್ಳಿಹಾಕಿರುತ್ತಾರೆ. 'ಸಂಜ್ಞಾಮೂರ್ತಿಕ್ಲೃಪ್ತಿಯು, ಎಂದರೆ ನಾಮರೂಪವ್ಯಾಕರಣವು ಎಂದರ್ಥ. 'ತ್ರಿವೃತ್ಕರಣವನ್ನು ಮಾಡುವವನು' ಎಂಬುದು ಪರಮೇಶ್ವರನನ್ನು ತಿಳಿಸುತ್ತದೆ. ಏಕೆಂದರೆ ತ್ರಿವೃತ್ಕರಣದಲ್ಲಿ ಆತನಿಗೆ ಕರ್ತೃತ್ವವನ್ನು ಹೇಳಿದೆ ಎಂಬುದನ್ನು ಅಲ್ಲವೆನ್ನುವಂತಿಲ್ಲ. ಅಗ್ನಿ, ಆದಿತ್ಯ, ಚಂದ್ರ, ಮಿಂಚು– ಎಂದೂ ಮತ್ತು ಕುಶ. ಕಾಶ, ಮುತ್ತುಗ– ಮುಂತಾದವುಗಳಲ್ಲಿಯೂ, ಪಶುಮೃಗಮನುಷ್ಯಾದಿಗಳಲ್ಲಿಯೂ ಒಂದೊಂದು

ಆಕೃತಿಗೂ ಒಂದೊಂದು ವ್ಯಕ್ತಿಗೂ ಬೇರೆಬೇರೆಯ ಪ್ರಕಾರವಾಗಿರುವ ಸಂಜ್ಞಾ ಕಲ್ಪನೆಯೂ ಮೂರ್ತಿಕಲ್ಪನೆಯೂ ಇರುವವಷ್ಟೆ. ಅದು ತೇಜೋಽಬನ್ನಗಳನ್ನು ನಿರ್ಮಿಸಿರುವ ಪರಮೇಶ್ವರನದೇ ಕೃತಿಯಾಗಿರಬೇಕು. ಏಕೆ? ಎಂದರೆ ಉಪದೇಶಿಸಿರುವದರಿಂದ. ಹೇಗೆಂದರೆ "ಆ ಈ ದೇವತೆಯು (ಹೀಗೆಂದು) (ಆಲೋಚಿಸಿ) ನೋಡಿತು" ಎಂದು ಉಪಕ್ರಮಿಸಿ "ವ್ಯಾಕರಣಮಾಡುವೆನು" ಎಂದು ಉತ್ತಮಪುರುಷಪ್ರಯೋಗವನ್ನು ಮಾಡಿರುವದರಿಂದ ಪರಬ್ರಹ್ಮಕ್ಕೇ ಇಲ್ಲಿ ವ್ಯಾಕರ್ತೃತ್ವವನ್ನು ಹೇಳಿರುತ್ತದೆ.

(ಆಕ್ಷೇಪ) :– 'ಜೀವನೆಂಬ (ಆತ್ಮ)ನಿಂದ' ಎಂದು ವಿಶೇಷಣವನ್ನು ಕೊಟ್ಟಿರುವದರಿಂದ (ಈ) ವ್ಯಾಕರಣವು ಜೀವನದೆಂದೇ ನಿಶ್ಚಯಿಸಿದ್ದೆವಲ್ಲ!

(ಪರಿಹಾರ) :– ಇದು ಹಾಗಲ್ಲ. 'ಜೀವೇನ' (ಜೀವನಿಂದ) ಎಂಬುದು 'ಅನುಪ್ರವಿಶ್ಯ' (ಒಳಹೊಕ್ಕು) ಎಂಬುದರೊಡನೆ ಸಂಬದ್ಧವಾಗಿರುತ್ತದೆ; ಏಕೆಂದರೆ (ಆ ಮಾತು) ಅನಂತರದಲ್ಲಿಯೇ ಇರುತ್ತದೆ. ವ್ಯಾಕರವಾಣಿ (ವ್ಯಾಕರಣಮಾಡುವೆನು) ಎಂಬದರೊಡನೆ (ಅದು) ಸಂಬದ್ಧವಾಗಿರುವದಿಲ್ಲ. ಏಕೆಂದರೆ ಅದರೊಡನೆ ಸಂಬಂಧವನ್ನು (ಹೇಳಿದರೆ) ದೇವತಾವಿಷಯವಾದ 'ವ್ಯಾಕರವಾಣಿ'(ವ್ಯಾಕರಣಮಾಡುವೆನು) ಎಂಬೀ ಉತ್ತಮಪುರುಷವು ಔಪಚಾರಿಕವೆಂದು ಕಲ್ಪಿಸಬೇಕಾಗುವದು.[1] ನಾನಾವಿಧವಾಗಿರುವ ಗಿರಿನದೀಸಮುದ್ರಾದಿ ನಾಮರೂಪಗಳ (ವಿಷಯದಲ್ಲಿ) ಅನೀಶ್ವರನಾದ ಜೀವನಿಗೆ ವ್ಯಾಕರಣಮಾಡುವ ಸಾಮರ್ಥ್ಯವಿರುವದಿಲ್ಲ. (ಅವನಿಗೆ) ಯಾವ (ನಾಮರೂಪಗಳ ವಿಷಯದಲ್ಲಿ) ಸಾಮರ್ಥ್ಯವಿದೆಯೋ ಅವುಗಳಲ್ಲಿಯೂ ಪರಮೇಶ್ವರನಿಗೆ ಅಧೀನವಾಗಿಯೇ ಆ (ಸಾಮರ್ಥ್ಯ)ವಿರುತ್ತದೆ. ಇದಲ್ಲದೆ ಜೀವನೆಂಬವನು ಪರಮೇಶ್ವರನಿಗಿಂತ, ರಾಜನಿಗಿಂತ ಚಾರನು (ಭಿನ್ನನಾಗಿರು)ವಂತೆ, ಅತ್ಯಂತಭಿನ್ನನಾಗಿರುವದೂ ಇಲ್ಲ. ಏಕೆಂದರೆ (ಜೀವನೆಂಬ) ಆತ್ಮನಿಂದ ಎಂಬ ವಿಶೇಷಣವಿದೆ; ಇದಲ್ಲದೆ ಜೀವಭಾವವು ಬರಿಯ ಉಪಾಧಿಯ ನಿಮಿತ್ತದಿಂದ ಆಗಿರುತ್ತದೆ. ಆದ್ದರಿಂದ ಅವನು ಮಾಡಿದ ನಾಮರೂಪವ್ಯಾಕರಣವೂ ಪರಮೇಶ್ವರಕೃತವೇ ಆಗುತ್ತದೆ. ಪರಮೇಶ್ವರನೇ ನಾಮರೂಪಗಳ ವ್ಯಾಕರ್ತೃ ಎಂಬುದು ಸರ್ವೋಪನಿಷತ್ತುಗಳ ಸಿದ್ಧಾಂತವು. "ಆಕಾಶನೆಂದು ಪ್ರಸಿದ್ಧನಾಗಿರುವವನೇ ನಾಮರೂಪಗಳನ್ನು ನಿರ್ವಹಿಸುವವನು" (ಛಾ. ೮–೧೪–೧) ಎಂಬಿದೇ ಮುಂತಾದ ಶ್ರುತಿಗಳಿಂದ

---

1. ಇದು ಮುಂದೆ ಹೇಳುವ ಶ್ರುತಿಯುಕ್ತ್ಯನುಭವಗಳಿಗೆ ವಿರುದ್ಧವಾಗುವದು. ಆದ್ದರಿಂದ ಜೀವೇನ ಎಂಬುದರ ಸಂಬಂಧವನ್ನು ಅನುಪ್ರವಿಶ್ಯ ಎಂಬದರೊಡನೆ ಮಾಡಿಕೊಳ್ಳಬೇಕು. ಹಾಗೆ ಮಾಡಿದರೆ ವಿರೋಧವು ಯಾವದೂ ಉಳಿಯುವದಿಲ್ಲ ಎಂದು ಭಾವ.

ಇದು ಸಿದ್ಧವಾಗುತ್ತದೆ. ಆದ್ದರಿಂದ ನಾಮರೂಪಗಳ ವ್ಯಾಕರಣವು ತ್ರಿವೃತ್ಕರಣವನ್ನು ಮಾಡುವ ಪರಮೇಶ್ವರನ ಕರ್ಮವೇ.

## ಛಾಂದೋಗ್ಯದ ನಾಮರೂಪವ್ಯಾಕರಣವು ಭೌತಿಕವಿಷಯಮೇ

(ಭಾಷ್ಯ)

೨೦೮. ತ್ರಿವೃತ್ಕರಣಪೂರ್ವಕಮೇವೇದಮ್ ಇಹ ನಾಮರೂಪವ್ಯಾಕರಣಂ ವಿವಕ್ಷ್ಯತೇ। ಪ್ರತ್ಯೇಕಂ ನಾಮರೂಪವ್ಯಾಕರಣಸ್ಯ ತೇಜೋಽಬನ್ನೋತ್ಪತ್ತಿವಚನೇನೈವ ಉಕ್ತತ್ವಾತ್। ತಚ್ಚ ತ್ರಿವೃತ್ಕರಣಮ್ ಅಗ್ನ್ಯಾದಿತ್ಯಚಂದ್ರವಿದ್ಯುತ್ಸು ಶ್ರುತಿರ್ದರ್ಶಯತಿ "ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ ಕೃಷ್ಣಂ ತದನ್ನಸ್ಯ" (ಛಾಂ. ೬-೪-೧) ಇತ್ಯಾದಿನಾ। ತತ್ರ 'ಅಗ್ನಿಃ' ಇತೀದಂ ರೂಪಂ ವ್ಯಾಕ್ರಿಯತೇ। ಸತಿ ಚ ರೂಪವ್ಯಾಕರಣೇ ವಿಷಯಪ್ರತಿಲಮ್ಭಾತ್ 'ಅಗ್ನಿ' ಇತೀದಂ ನಾಮ ವ್ಯಾಕ್ರಿಯತೇ। ಏವಮೇವ ಆದಿತ್ಯಚನ್ದ್ರವಿದ್ಯುತ್ಸ್ವಪಿ ದ್ರಷ್ಟವ್ಯಮ್। ಅನೇನ ಚ ಅಗ್ನ್ಯಾದ್ಯುದಾಹರಣೇನ ಭೌಮಾಮ್ಭಸತೈಜಸೇಷು ತ್ರಿಷ್ವಪಿ ದ್ರವ್ಯೇಷು ಅವಿಶೇಷೇಣ ತ್ರಿವೃತ್ಕರಣಮ್ ಉಕ್ತಂ ಭವತಿ। ಉಪಕ್ರಮೋಪಸಂಹಾರಯೋಃ ಸಾಧಾರಣತ್ವಾತ್। ತಥಾ ಹಿ ಅವಿಶೇಷೇಣೈವ ಉಪಕ್ರಮಃ—"ಇಮಾಸ್ತಿಸ್ರೋ ದೇವತಾಸ್ತ್ರಿವೃತ್ತ್ರಿವೃದೇಕೈಕಾ ಭವತಿ" (ಛಾಂ. ೬-೩-೪) ಇತಿ। ಅವಿಶೇಷೇಣೈವ ಚ ಉಪಸಂಹಾರಃ "ಯದು ರೋಹಿತಮಿವಾಭೂದಿತಿ ತೇಜಸಸ್ತದ್ರೂಪಮ್—(ಛಾ. ೬-೪-೬) "ಯದವಿಜ್ಞಾತಮಿವಾಭೂದಿತ್ಯೇತಾಸಾಮೇವ ದೇವತಾನಾಂ ಸಮಾಸಃ......" (ಛಾಂ. ೬-೪-೭) ಇತ್ಯೇವಮನ್ತಃ ॥

(ಭಾಷ್ಯಾರ್ಥ)

ತ್ರಿವೃತ್ಕರಣಪೂರ್ವಕವಾದ ನಾಮರೂಪವ್ಯಾಕರಣವೇ ಇಲ್ಲಿ ವಿವಕ್ಷಿತವಾಗಿರುವ ಈ (ವ್ಯಾಕರಣವು). ಏಕೆಂದರೆ ಬೇರೆಬೇರೆಯಾಗಿ (ಭೂತಗಳ) ನಾಮರೂಪವ್ಯಾಕರಣವನ್ನು ತೇಜೋಽಬನ್ನಗಳ ಉತ್ಪತ್ತಿಯನ್ನು ಹೇಳಿದ್ದರಿಂದಲೇ ಹೇಳಿದ್ದಾಗಿದೆ. ಆ ತ್ರಿವೃತ್ಕರಣವನ್ನು ಅಗ್ನಿ, ಆದಿತ್ಯ, ಚಂದ್ರ, ಮಿಂಚು– ಇವುಗಳ (ವಿಷಯ)ದಲ್ಲಿ "ಅಗ್ನಿಯ ಕೆಂಪು ರೂಪವಿದೆಯಲ್ಲ, ಅದು ತೇಜಸ್ಸಿನ ರೂಪವು ; ಶುಕ್ಲ(ರೂಪ)ವಿದೆಯಲ್ಲ, ಅದು ಅಪ್ಪಿನದು ; ಕಪ್ಪು(ರೂಪ) ವಿದೆಯಲ್ಲ, ಅದು ಅನ್ನದ್ದು" (ಛಾ. ೬-೪-೧) ಮುಂತಾದ (ವಾಕ್ಯ)ದಿಂದ ಶ್ರುತಿಯು ತಿಳಿಸಿರುತ್ತದೆ. ಅಲ್ಲಿ ಅಗ್ನಿ ಎಂಬೀ 'ರೂಪವು' ವ್ಯಾಕೃತವಾಗು

ತ್ತದೆ; ರೂಪವ್ಯಾಕರಣವಾಗಲು ವಿಷಯದ ಅರಿವಾಗುತ್ತದೆಯಾದ್ದರಿಂದ ಅಗ್ನಿ ಯೆಂಬೀ ನಾಮವು ವ್ಯಾಕೃತವಾಗುತ್ತದೆ.[1] ಹೀಗೆಯೇ ಆದಿತ್ಯ, ಚಂದ್ರ, ಮಿಂಚು –ಇವುಗಳಲ್ಲಿಯೂ (ನಾಮರೂಪವ್ಯಾಕರಣವನ್ನು) ತಿಳಿಯಬೇಕು. ಈ ಅಗ್ನ್ಯಾದಿಗಳ ಉದಾಹರಣೆಯಿಂದ ಪಾರ್ಥಿವ, ಅಬ್ವಿಕಾರ, ತೈಜಸ –ಎಂಬ ಮೂರು (ಬಗೆಯ) ದ್ರವ್ಯಗಳಲ್ಲಿಯೂ ಸಮಾನವಾಗಿಯೇ ತ್ರಿವೃತ್ಕರಣ ವನ್ನು ಹೇಳಿದಂತೆ ಆಗಿರುತ್ತದೆ. ಏಕೆಂದರೆ ಉಪಕ್ರಮೋಪಸಂಹಾರಗಳು (ಇವು ಮೂರಕ್ಕೂ) ಸಮಾನವಾಗಿರುತ್ತವೆ. ಹೇಗೆಂದರೆ "ಈ ಮೂರು ದೇವತೆ ಗಳು ಒಂದೊಂದು ಮುಮ್ಮಡಿಯಾಗಿ ಆಗಿರುತ್ತವೆ" (ಛಾಂ. ೬–೩–೪) ಎಂದು ಸಮಾನವಾಗಿಯೇ ಉಪಕ್ರಮವಿದೆ. "ಕೆಂಪಿನಂತೆ ಇತ್ತಲ್ಲ, ಅದು ತೇಜಸ್ಸಿನ ರೂಪವು" (ಛಾಂ. ೬–೪–೬) ಎಂದು ಮೊದಲಾಗಿ (ಇನ್ನು) "ಅವಿಜ್ಞಾತ ವಾದಂತೆ ಇತ್ತಲ್ಲ, ಅದೂ ಇದೇ ದೇವತೆಗಳ ಸಮುದಾಯವು......" (ಛಾಂ. ೬–೪–೭) ಎಂಬವರೆಗೆ ಸಮಾನವಾಗಿಯೇ ಉಪಸಂಹಾರ(ವಿದೆ).[2]

**ಮಾಂಸಾದಿ ಭೌಮಂ ಯಥಾಶಬ್ದಮಿತರಯೋಶ್ಚ ॥ ೨೧ ॥**

೨೧. ಮಾಂಸಾದಿಗಳು ಶಬ್ದಕ್ಕನುಗುಣವಾಗಿ ಭೂಮಿಯ (ವಿಕಾರವು) ; ಮಿಕ್ಕ (ಎರಡ)ಕ್ಕೂ (ಹೀಗೆಯೇ).

## ಅಧ್ಯಾತ್ಮತ್ರಿವೃತ್ಕರಣ

(ಭಾಷ್ಯ)

೨೧೯. ತಾಸಾಂ ತಿಸೃಣಾಂ ದೇವತಾನಾಂ ಬಹಿಸ್ತ್ರಿವೃತ್ಕೃತಾನಾಂ ಸತೀ ನಾಮ್ ಅಧ್ಯಾತ್ಮಮ್ ಅಪರಂ ತ್ರಿವೃತ್ಕರಣಮ್ ಉಕ್ತಮ್ "ಇಮಾಸ್ತ್ರಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ" (ಛಾಂ. ೬–೪–೭) ಇತಿ ॥ ತದಿದಾನೀಮ್ ಆಚಾರ್ಯಃ ಯಥಾಶ್ರುತ್ಯೈವ ಉಪದರ್ಶಯತಿ ಆಶಙ್ಕಿತಂ ಕಂಚಿದ್ ದೋಷಂ ಪರಿಹರಿಷ್ಯನ್—(ಮಾಂಸಾದಿ ಭೌಮಂ ಯಥಾ

---

1. ಹಿಂದೆ "ಅತಃಪ್ರಭವಾತ್" (೧–೩–೨೮) ಎಂಬಲ್ಲಿ ವೇದಶಬ್ದದಿಂದ ಅರ್ಥ ಸೃಷ್ಟಿಯೆಂದು ಹೇಳಿದ್ದರೂ ಅದು ಅವ್ಯಕ್ತಶಬ್ದದಿಂದ ಸೃಷ್ಟಿಯನ್ನು ಹೇಳಿದ್ದು; ಇಲ್ಲಿ ಸ್ಫುಟವಾಗಿರುವ ನಾಮದ ಸಂಬಂಧವನ್ನು ಹೇಳಿರುವದರಿಂದ ಪೂರ್ವಾಪರವಿರೋಧವಿಲ್ಲ ಎಂದು ರ॥ ಪ್ರ॥

2. ತ್ರಿವೃತ್ಕರಣವು ಪಂಚೀಕರಣಕ್ಕೂ ಉಪಲಕ್ಷಣವೆಂದು ತಿಳಿಯಬೇಕು; ಏಕೆಂದರೆ ಛಾಂದೋಗ್ಯದಲ್ಲಿ ತೇಜಃಪೂರ್ವಕಸೃಷ್ಟಿಯನ್ನು ಹೇಳಿದ್ದರೂ ಆಕಾಶಾದಿಯಾಗಿ ಯೇ ಸೃಷ್ಟಿಯನ್ನು ಪರಿಗ್ರಹಿಸಬೇಕೆಂದು ವಿಯದಧಿಕರಣದಲ್ಲಿ ಹೇಳಿದೆ.

ಶಬ್ದಮಿತರಯೋಶ್ಚ) । ಭೂಮೇಃ ತ್ರಿವೃತ್ಕೃತಾಯಾಃ ಪುರುಷೇಣ ಉಪಭುಜ್ಯಮಾನಾಯಾಃ ಮಾಂಸಾದಿಕಾರ್ಯಂ ಯಥಾಶಬ್ದಂ ನಿಷ್ಪದ್ಯತೇ । ತಥಾ ಹಿ ಶ್ರುತಿಃ "ಅನ್ನಮಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಸ್ತತ್ಪುರೀಷಂ ಭವತಿ ಯೋ ಮಧ್ಯಮಸ್ತನ್ಮಾಂಸಂ ಯೋಽಣಿಷ್ಠಸ್ತನ್ಮನಃ" (ಛಾಂ. ೬-೫-೧) ಇತಿ । ತ್ರಿವೃತ್ಕೃತಾ ಭೂಮಿರೇವ ಏಷಾ ವ್ರೀಹಿಯವಾದ್ಯನ್ನರೂಪೇಣ ಅದ್ಯತೇ ಇತ್ಯಭಿಪ್ರಾಯಃ । ತಸ್ಯಾಶ್ಚ ಸ್ಥವಿಷ್ಠಂ ರೂಪಂ ಪುರೀಷಭಾವೇನ ಬಹಿರ್ನಿರ್ಗಚ್ಛತಿ । ಮಧ್ಯಮಮ್ ಆಧ್ಯಾತ್ಮಂ ಮಾಂಸಂ ವರ್ಧಯತಿ । ಅಣಿಷ್ಠಂ ತು ಮನಃ । ಏವಮ್ ಇತರಯೋಃ ಅಪ್ತೇಜಸೋಃ ಯಥಾಶಬ್ದಂ ಕಾರ್ಯಮ್ ಅವಗನ್ತವ್ಯಮ್ । ಏವಂ ಮೂತ್ರಂ ಲೋಹಿತಂ ಪ್ರಾಣಶ್ಚ ಅಪಾಂ ಕಾರ್ಯಮ್ । ಅಸ್ಥಿಮಜ್ಜಾ ವಾಕ್ ತೇಜಸಃ ಇತಿ ॥

(ಭಾಷ್ಯಾರ್ಥ)

"ಈ ಮೂರು ದೇವತೆಗಳೂ ಪುರುಷನನ್ನು ಪಡೆದ(ಬಳಿಕ) ಒಂದೊಂದೂ ಮುಮ್ಮಡಿಮುಮ್ಮಡಿಯಾಗುತ್ತದೆ" (ಛಾಂ. ೬-೪-೭) ಎಂದು ಹೊರಗೆ ತ್ರಿವೃತ್ಕೃತವಾಗಿರುವ ಆ ಮೂರು ದೇವತೆಗಳಿಗೆ ಅಧ್ಯಾತ್ಮವಾಗಿ ಮತ್ತೊಂದು ತ್ರಿವೃತ್ಕರಣವನ್ನು ಹೇಳುತ್ತದೆ.[1] ಅದನ್ನು ಈಗ (ಸೂತ್ರಕಾರರಾದ) ಆಚಾರ್ಯರು ಆಶಂಕಿತವಾದ ಒಂದಾನೊಂದು ದೋಷವನ್ನು ಪರಿಹರಿಸುವದಕ್ಕಾಗಿ ಶ್ರುತ್ಯನುಸಾರವಾಗಿಯೇ ತಿಳಿಸುತ್ತಾರೆ.[2] (ಮಾಂಸಾದಿ ಭೌಮಂ ಯಥಾಶಬ್ದಮ್ ಇತರಯೋಶ್ಚ) । ತ್ರಿವೃತ್ಕೃತವಾದ ಭೂಮಿಯನ್ನು ಪುರುಷನು ಉಪಭೋಗಿಸಲಾಗಿ (ಅದರಿಂದ) ಮಾಂಸವೇ ಮುಂತಾದ ಕಾರ್ಯವು ಶಬ್ದ(ಪ್ರಮಾಣ)ಕ್ಕನುಗುಣವಾಗಿ ಉಂಟಾಗುತ್ತದೆ. ಹಾಗೆಂದಲ್ಲವೆ, "ಉಂಡ ಅನ್ನವು ಮೂರು ಪ್ರಕಾರವಾಗಿ ಆಗುತ್ತದೆ. ಅದರ ಅತ್ಯಂತಸ್ಥೂಲವಾದ ಧಾತುವಿರುವದಲ್ಲ, ಅದು ಪುರೀಷವಾಗುತ್ತದೆ; ನಡುವಿನ (ಧಾತು)ವಿರುವದಲ್ಲ, ಅದು ಮಾಂಸ(ವಾಗುತ್ತದೆ), ಅತ್ಯಂತಸೂಕ್ಷ್ಮವಾದ (ಧಾತು)ವಿರುವದಲ್ಲ, ಅದು ಮನಸ್ಸಾಗುತ್ತದೆ" (ಛಾಂ. ೬-೫-೧) ಎಂಬ ಶ್ರುತಿ ಹೇಳುತ್ತದೆ? ತ್ರಿವೃತ್ಕೃತ

1. ಮೊದಲು ತೇಜಸ್ಸು, ಅಪ್ಪು, ಪೃಥಿವಿ –ಎಂಬ ಶುದ್ಧಭೂತಗಳು ಸೃಷ್ಟಿಯಾಗುತ್ತವೆ, ಆ ಬಳಿಕ ತೇಜಸ್ಸು, ಅಪ್ಪು, ಪೃಥಿವಿ –ಇವುಗಳೆಲ್ಲ ಬೆರಕೆಯಾಗಿರುವ ತ್ರಿವೃತ್ಕೃತ ಭೂತಗಳು ಆಗುತ್ತವೆ. ಆ ಭೂತಗಳು ನಾನಾವಸ್ತುರೂಪಗಳನ್ನು ಹೊಂದಿ ಮನುಷ್ಯನು ಅವುಗಳನ್ನು ಆಹಾರವಾಗಿ ಉಪಯೋಗಿಸಿದ ಬಳಿಕ ಒಂದೊಂದು ಭೂತವೂ ಮೂರು ಮೂರು ಬಗೆಯಾಗಿ ಶರೀರದಲ್ಲಿ ಪರಿಣಮಿಸುತ್ತದೆ (ಛಾಂ. ೬-೫-೧ರಿಂದ ೩). ಇದೇ ಆಧ್ಯಾತ್ಮಿಕತ್ರಿವೃತ್ಕರಣ.

2. ಈ ಸೂತ್ರದಲ್ಲಿ ವಿಶೇಷವಾಗಿ ಏನನ್ನೂ ನಿರ್ಣಯಿಸಿಲ್ಲ; ಮುಂದಿನ ಸೂತ್ರದ ಅಭಿಪ್ರಾಯಕ್ಕಾಗಿ ಇದನ್ನು ಇಲ್ಲಿ ಅನುವಾದಮಾಡಿಕೊಂಡಿದೆ –ಎಂದು ಅರ್ಥ.

ವಾದ ಈ ಭೂಮಿಯನ್ನೇ ಬತ್ತ, ಜವೆ –ಮುಂತಾದ ಅನ್ನರೂಪದಿಂದ ತಿನ್ನು ತ್ತಾರೆ ಎಂದು ಅಭಿಪ್ರಾಯ. ಆ (ಇದರ) ಸ್ಥೂಲತಮವಾದ ರೂಪವು ಪುರೀಷ ವಾಗಿ ಹೊರಕ್ಕೆ ಬರುತ್ತದೆ ; ನಡುತರವಾದದ್ದು ಒಳಗೆ ಮಾಂಸವನ್ನು ಬೆಳೆಸು ತ್ತದೆ; ಸೂಕ್ಷ್ಮತಮವಾದದ್ದೋ ಎಂದರೆ ಮನಸ್ಸನ್ನು (ಬೆಳೆಸುತ್ತದೆ). ಹೀಗೆಯೇ ಉಳಿದೆರಡರ ಎಂದರೆ ಅಪ್ತೇಜಸ್ಸುಗಳ ಕಾರ್ಯವನ್ನು ಶಬ್ದಾನು ಸಾರವಾಗಿ ನಿಶ್ಚಯಿಸಬೇಕು. ಹೀಗೆಯೇ, ಮೂತ್ರ, ರಕ್ತ, ಪ್ರಾಣ– (ಇವು) ಅಪ್ಪಿನ ಕಾರ್ಯ; ಎಲುಬು, ಮಜ್ಜೆ, ವಾಕ್ಕು – (ಇವು) ತೇಜಸ್ಸಿನ (ಕಾರ್ಯವು) ಎಂದು (ನಿಶ್ಚಯಿಸಬೇಕು).

**ವೈಶೇಷ್ಯಾತ್ತು ತದ್ವಾದಸ್ತದ್ವಾದಃ ॥ ೨೨ ॥**

೨೨. ಆದರೆ ವೈಶೇಷ್ಯದಿಂದ ಅದು ಎಂಬ ವಾದವು, ಅದು ಎಂಬ ವಾದವು.

## ತ್ರಿವೃತ್ಕೃತಭೂತಗಳಿಗೆ ಆಯಾ ಹೆಸರು ಬರಲು ಕಾರಣ

(ಭಾಷ್ಯ)

೨೧೦. ಅತ್ರಾಹ । ಯದಿ ಸರ್ವಮೇವ ತ್ರಿವೃತ್ಕೃತಂ ಭೂತಭೌತಿಕಮ್ ಅವಿಶೇಷಶ್ರುತೇಃ "ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್" (ಛಾಂ. ೬-೩-೪) ಇತಿ । ಕಿಂಕೃತಸ್ತರ್ಹಿ ಅಯಂ ವಿಶೇಷವ್ಯಪದೇಶಃ ಇದಂ ತೇಜಃ, ಇಮಾ ಆಪಃ, ಇದಮನ್ನಮ್ ಇತಿ, ತಥಾ ಆಧ್ಯಾತ್ಮಮ್ ಇದಮನ್ನಸ್ಯ ಅಶಿತಸ್ಯ ಕಾರ್ಯಂ ಮಾಂಸಾದಿ, ಇದಮಪಾಂ ಪೀತಾನಾಂ ಕಾರ್ಯಂ ಲೋಹಿತಾದಿ, ಇದಂ ತೇಜಸೋಽಶಿತಸ್ಯ ಕಾರ್ಯಮ್ ಅಸ್ಥ್ಯಾದಿ' ಇತ್ಯಾದಿ, ಅತ್ರೋಚ್ಯತೇ । (ವೈಶೇಷ್ಯಾತ್ತು ತದ್ವಾದಸ್ತದ್ವಾದಃ) । ತುಶಬ್ದೇನ ಚೋದಿತಂ ದೋಷಮ್ ಅಪನುದತಿ । ವಿಶೇಷಸ್ಯ ಭಾವಃ ವೈಶೇಷ್ಯಮ್ । ಭೂಯಸ್ತ್ವಮ್ ಇತಿ ಯಾವತ್ । ಸತ್ಯಪಿ ತ್ರಿವೃತ್ಕರಣೇ ಕ್ವಚಿತ್ ಕಸ್ಯಚಿತ್ ಭೂತಧಾತೋಃ ಭೂಯಸ್ತ್ವಮ್ ಉಪಲಭ್ಯತೇ ಅಗ್ನೇಸ್ತೇಜೋಭೂಯಸ್ತ್ವಮ್, ಉದಕಸ್ಯ ಅಬ್ಭೂಯಸ್ತ್ವಮ್, ಪೃಥಿವ್ಯಾ ಅನ್ನಭೂಯಸ್ತ್ವಮ್ ಇತಿ । ವ್ಯವಹಾರ ಪ್ರಸಿದ್ಧ್ಯರ್ಥಂ ಚ ಇದಂ ತ್ರಿವೃತ್ಕರಣಮ್ । ವ್ಯವಹಾರಶ್ಚ ತ್ರಿವೃತ್ಕೃತರಜ್ಜುವತ್ ಏಕತ್ವಾಪತ್ತೌ ಸತ್ಯಾಂ ನ ಭೇದೇನ ಭೂತತ್ರಯಗೋಚರೋ ಲೋಕಸ್ಯ ಪ್ರಸಿಧ್ಯೇತ್ । ತಸ್ಮಾತ್ ಸತ್ಯಪಿ ತ್ರಿವೃತ್ಕರಣೇ ವೈಶೇಷ್ಯಾದೇವ ತೇಜೋಽಬನ್ನವಿಶೇಷವಾದೋ ಭೂತಭೌತಿಕವಿಷಯಃ ಉಪಪದ್ಯತೇ । 'ತದ್ವಾದಸ್ತದ್ವಾದಃ' ಇತಿ ಪದಾಭ್ಯಾಸಃ ಅಧ್ಯಾಯಪರಿಸಮಾಪ್ತಿಂ ದ್ಯೋತಯತಿ ॥

(ಭಾಷ್ಯಾರ್ಥ)

ಇಲ್ಲಿ (ಆಕ್ಷೇಪಕನು) ಕೇಳುತ್ತಾನೇನೆಂದರೆ "ಅವುಗಳಲ್ಲಿ ಒಂದೊಂದನ್ನು ಮುಮ್ಮಡಿಮುಮ್ಮಡಿಯಾಗಿ ಮಾಡಿತು" (ಛಾಂ. ೬-೩-೪) ಎಂಬ ಅವಿಶೇಷ ಶ್ರುತಿಯಿರುವದರಿಂದ ಭೂತಭೌತಿಕವೆಲ್ಲವೂ ತ್ರಿವೃತ್ಕೃತವೇ ಆಗಿದೆಯಾದರೆ 'ಇದು ತೇಜಸ್ಸು', 'ಇದು ಅಪ್ಪು', 'ಇದು ಅನ್ನವು' -ಎಂದೂ ಮತ್ತು ಅಧ್ಯಾತ್ಮವಾಗಿ 'ಇದು ತಿಂದ ಅನ್ನದ ಕಾರ್ಯವಾದ ಮಾಂಸಾದಿಯು', 'ಇದು ಕುಡಿದ ಅಪ್ಪಿನ ಕಾರ್ಯವಾದ ರಕ್ತಾದಿ', 'ಇದು ತಿಂದ ತೇಜಸ್ಸಿನ ಕಾರ್ಯವಾದ ಎಲುಬೇ ಮುಂತಾದದ್ದು' ಎಂಬೀ ವಿಶೇಷವ್ಯಪದೇಶವು ಏತರಿಂದ ಆಗುತ್ತದೆ?

ಇದಕ್ಕೆ (ಸೂತ್ರಕಾರರು) ಹೇಳುತ್ತಾರೇನೆಂದರೆ:(ವೈಶೇಷ್ಯಾತ್ತು ತದ್ವಾದಸ್ತದ್ವಾದಃ)। ತುಶಬ್ದದಿಂದ (ಸೂತ್ರಕಾರರು ಆಕ್ಷೇಪಕನು) ತೋರಿಸಿದ ದೋಷವನ್ನು ತಳ್ಳಿಹಾಕಿರುತ್ತಾರೆ.[1] ವಿಶೇಷದ ಭಾವವು ವೈಶೇಷ್ಯವು, ಬಾಹುಲ್ಯವು ಎಂದು ಅಭಿಪ್ರಾಯ. ತ್ರಿವೃತ್ಕರಣವಾಗಿದ್ದರೂ ಒಂದೊಂದು ಕಡೆಯಲ್ಲಿ (ಒಂದೊಂದು) ಭೂತಧಾತುವಿನ ಹೆಚ್ಚಿಗೆಯು - ಅಗ್ನಿಗೆ ತೇಜಸ್ಸಿನ ಹೆಚ್ಚಿಗೆ, ಅಪ್ಪಿಗೆ ನೀರಿನ ಹೆಚ್ಚಿಗೆ, ಪೃಥಿವಿಗೆ ಅನ್ನದ ಹೆಚ್ಚಿಗೆ, ಹೀಗೆ - ಕಂಡುಬರುತ್ತದೆ. ಈ ತ್ರಿವೃತ್ಕರಣವು ವ್ಯವಹಾರಸಿದ್ಧಿಗಾಗಿ (ಮಾಡಿರುವದಾಗಿದೆ). ಮೂರು ಹುರಿಯ ಹಗ್ಗದಂತೆ ಒಂದೇ ಆಗಿದ್ದರೆ ಬೇರೆಬೇರೆಯಾಗಿ ಭೂತತ್ರಯವಿಷಯವಾದ ವ್ಯವಹಾರವು ಜನರಿಗೆ ಸಿದ್ಧಿಸಲಾರದು.[2] ಆದ್ದರಿಂದ ತ್ರಿವೃತ್ಕರಣವು ಇದ್ದರೂ ವೈಶೇಷ್ಯದಿಂದಲೇ ಭೂತಭೌತಿಕಗಳ ವಿಷಯದಲ್ಲಿ ತೇಜಸ್ಸು, ಅಪ್ಪು, ಅನ್ನ -ಎಂಬ ವಿಶೇಷವಾದವು ಹೊಂದುತ್ತದೆ. 'ತದ್ವಾದಸ್ತದ್ವಾದಃ' ಎಂದು (ಪದಗಳನ್ನು) ಮತ್ತೆಮತ್ತೆ ಹೇಳಿರುವದು ಅಧ್ಯಾಯವು ಮುಗಿಯಿತೆಂಬುದನ್ನು ತಿಳಿಸುತ್ತದೆ.

ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ
ಶ್ರೀಮಚ್ಛಂಕರಭಗವತ್ಪಾದಕೃತೌ ಶಾರೀರಕಮೀಮಾಂಸಾಭಾಷ್ಯೇ
ದ್ವಿತೀಯೋಽಧ್ಯಾಯಃ

—(✱)✱(✱)—

---

1. ಈ ದೋಷವನ್ನು ತಿರಸ್ಕರಿಸುವದಕ್ಕಾಗಿಯೇ ಹಿಂದಿನ ಸೂತ್ರದಲ್ಲಿ ಶ್ರುತ್ಯರ್ಥವನ್ನು ಅನುವಾದಮಾಡಿಕೊಂಡಿರುವದು.

2. ಕಲ್ಲು ಬೆರೆತಿದ್ದರೂ ಅಕ್ಕಿ ಹೆಚ್ಚಾಗಿದ್ದರೆ ಅಕ್ಕಿಯೆಂದೇ ವ್ಯವಹರಿಸುವಂತೆ ಜನರು ಆಯಾ ಭೂತಾಂಶವು ಹೆಚ್ಚಾಗಿರುವದರಿಂದ ಆಯಾ ಭೂತಗಳೆಂದು ವ್ಯವಹರಿಸುತ್ತಾರೆ; ಎಲ್ಲವೂ ಸಮವಾಗಿದ್ದರೆ ಇಂಥ ಭೂತವೆಂಬ ವ್ಯವಹಾರವು ಸಿದ್ಧಿಸುತ್ತಿರಲಿಲ್ಲ. ಮೂರು ಬೇರೆಬೇರೆಯ ಬಗೆಯ ದಾರಗಳು ಹೆಚ್ಚಾಗಿದ್ದರೂ ತೆಂಗಿನ ನಾರು ಹೆಚ್ಚಾಗಿದ್ದರೆ ತೆಂಗಿನ ಹಗ್ಗವೆಂದೇ ವ್ಯವಹರಿಸುವಂತೆಯೇ ಇದು -ಎಂದು ಅಭಿಪ್ರಾಯ.

# ಅಧಿಕರಣಗಳ ಸಾರ

ಈ ಪಾದದಲ್ಲಿ ಮುಖ್ಯಪ್ರಾಣ, ಇಂದ್ರಿಯಗಳು – ಇವುಗಳ ವಿಷಯದ ಶ್ರುತಿಗಳಿಗೆ ಅವಿರೋಧವನ್ನು ಪ್ರತಿಪಾದಿಸಿರುತ್ತದೆ.

## ೧. ಪ್ರಾಣೋತ್ಪತ್ತ್ಯಧಿಕರಣ

ಸಂಶಯ : ಕೆಲವು ಶ್ರುತಿಗಳಲ್ಲಿ ಪ್ರಾಣಗಳಿಗೆ ಉತ್ಪತ್ತಿಯನ್ನು ಹೇಳಿಲ್ಲ, ಮತ್ತೆ ಕೆಲವು ಶ್ರುತಿಗಳಲ್ಲಿ ಹೇಳಿದೆ ; ಇನ್ನೂ ಕೆಲವು ಶ್ರುತಿಗಳಲ್ಲಿ ಸೃಷ್ಟಿಗೆ ಪೂರ್ವದಲ್ಲಿ ಪ್ರಾಣಗಳು ಇದ್ದವೆಂದೇ ಹೇಳಿದೆ. ಪ್ರಾಣಗಳು ಹುಟ್ಟುತ್ತವೆಯೊ, ಇಲ್ಲವೆ ?

ಪೂರ್ವಪಕ್ಷ : ಶ್ರುತಿಗಳು ಪರಸ್ಪರವಿರುದ್ಧವಾಗಿರುವದರಿಂದ ಇವೆರಡರಲ್ಲಿ ಒಂದನ್ನು ನಿರ್ಣಯಿಸುವದು ಆಗುವಂತಿಲ್ಲ. ಅಥವಾ ಉತ್ಪತ್ತಿಗೆ ಪೂರ್ವದಲ್ಲಿಯೂ ಇದ್ದವೆಂದೇ ಶ್ರುತಿಯಲ್ಲಿರುವದರಿಂದ ಉತ್ಪತ್ತಿಯನ್ನು ಹೇಳುವ ಶ್ರುತಿಗಳು ಗೌಣವೆನ್ನಬೇಕು.

ಸಿದ್ಧಾಂತ : ಪ್ರಾಣೋತ್ಪತ್ತಿವಾಕ್ಯದಲ್ಲಿ ಉತ್ಪತ್ತಿಯುಳ್ಳ ಲೋಕಾದಿಗಳನ್ನೇ ಹೇಳಿದೆ ; ಆಕಾಶಾದಿಗಳಂತೆ ಪ್ರಾಣಗಳಿಗೂ ಉತ್ಪತ್ತಿಯನ್ನು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ಅವೂ ಬ್ರಹ್ಮದಿಂದ ಹುಟ್ಟುತ್ತವೆ ಎಂಬುವೇ ಸರಿ. ಉತ್ಪತ್ತಿಶ್ರುತಿಯನ್ನು ಗೌಣವೆಂದು ಹಿಡಿದರೆ ಏಕವಿಜ್ಞಾನದಿಂದ ಸರ್ವವಿಜ್ಞಾನವಾಗುವದೆಂಬ ಪ್ರತಿಜ್ಞೆಯ ಹಾನಿಯಾಗುವದು. ಪ್ರಾಣೋತ್ಪತ್ತಿವಾಕ್ಯದಲ್ಲಿರುವ 'ಜಾಯತೇ' (ಹುಟ್ಟುತ್ತದೆ) ಎಂಬ ಮಾತೇ ಆಕಾಶಾದಿಗಳಿಗೂ ಹೊಂದಿಕೊಂಡುಬಂದಿರುವದರಿಂದ ಪ್ರಾಣೋತ್ಪತ್ತಿಯು ಮುಖ್ಯವೆಂಬುವೇ ನ್ಯಾಯವು. ವಾಕ್ಕು, ಪ್ರಾಣ, ಮನಸ್ಸು– ಇವು ತೇಜಆದಿಗಳಿಂದಾಗಿರುವವೆಂದು ಶ್ರುತಿಯಲ್ಲಿ ಹೇಳಿರುವದರಿಂದ ಅವು ತೇಜಆದಿಗಳ ವಿಕಾರಗಳೆಂಬುದು ಮುಖ್ಯವಾಗದೆ ಇದ್ದರೂ ಬ್ರಹ್ಮಕರ್ತೃಕನಾಮರೂಪವ್ಯಾಕರಣದ ಪ್ರಕರಣದಲ್ಲಿ ಹೇಳಿರುವದರಿಂದ ಅವೂ ಬ್ರಹ್ಮವಿಕಾರವೇ ಎಂದು ತಿಳಿಯುವದು ಯುಕ್ತ. ಪ್ರಾಣಗಳು ಉತ್ಪತ್ತಿಗಿಂತ ಪೂರ್ವದಲ್ಲಿದ್ದವೆಂಬ ಶ್ರುತಿಯು ಅವಾಂತರಪ್ರಲಯದ ವಿಷಯವಾಗಿರುತ್ತದೆ.

## ೨. ಸಪ್ತಗತ್ಯಧಿಕರಣ

ಸಂಶಯ : ಶ್ರುತಿಯಲ್ಲಿ ಪ್ರಾಣಸಂಖ್ಯೆಯ ವಿಷಯದಲ್ಲಿ ಬಗೆಬಗೆಯ ವಚನಗಳಿವೆ. ಯಾವದನ್ನು ಪ್ರಮಾಣವಾಗಿ ಹಿಡಿಯಬೇಕು ?

ಪೂರ್ವಪಕ್ಷ : ಶ್ರುತಿಯಲ್ಲಿ ಪ್ರಾಣಗಳು ಏಳೆಂದೇ ಹೇಳಿದೆ. ಶೀರ್ಷಣ್ಯಪ್ರಾಣಗಳು ಏಳೇ ಎಂದು ವಿಶೇಷಣವನ್ನು ಕೊಟ್ಟಿದೆ ; ಸಂಖ್ಯೆಗಳು ಬಗೆಬಗೆಯಾಗಿರುವಲ್ಲಿ ಅಲ್ಪಸಂಖ್ಯೆಯಾದ ಏಳನ್ನೇ ಹಿಡಿಯುವದು ಯುಕ್ತ. ಆದ್ದರಿಂದ ಪ್ರಾಣಗಳು ಏಳೇ. ಅಥವಾ ಬೃಹದಾರಣ್ಯಕದಲ್ಲಿ ಗತಿಯನ್ನು ಹೇಳುವಾಗ ಏಳಕ್ಕೇ ಗತಿಯನ್ನು ಹೇಳಿದೆ ; ಆದ್ದರಿಂದ ಏಳೇ ಪ್ರಾಣಗಳು.

ಸಿದ್ಧಾಂತ : ಹಸ್ತವೇ ಮುಂತಾದ ಏಳಕ್ಕಿಂತ ಹೆಚ್ಚಿನ ಸಂಖ್ಯೆಯ ಪ್ರಾಣಗಳನ್ನು ಶ್ರುತಿಯಲ್ಲಿ ಹೇಳಿದೆ. ಅಧಿಕಸಂಖ್ಯೆಯಲ್ಲಿ ಕಡಿಮೆಯ ಸಂಖ್ಯೆ ಸೇರಿರುತ್ತವೆ, ಕಡಿಮೆಯ ಸಂಖ್ಯೆಯಲ್ಲಿ ಹೆಚ್ಚಿನ ಸಂಖ್ಯೆ ಅಡಕವಾಗಲಾರದು. ಆದ್ದರಿಂದ ಕರ್ಮೇಂದ್ರಿಯ

ಜ್ಞಾನೇಂದ್ರಿಯ, ಮತ್ತು ಮನಸ್ಸು –ಎಂಬ ಹನ್ನೊಂದೇ ಪ್ರಾಣಗಳು ಎಂದು ನಿರ್ಣಯಿಸುವದು ಯುಕ್ತ. ಹನ್ನೊಂದಕ್ಕಿಂತ ಹೆಚ್ಚಿನ ಸಂಖ್ಯೆಯು ಶ್ರುತಿಗಳೂ ಇವೆ; ಆದರೆ ಹನ್ನೊಂದಕ್ಕಿಂತ ಹೆಚ್ಚಿನ ಸಂಖ್ಯೆಯು ಕಾರ್ಯಜಾತಗಳಲ್ಲಿ ಕೆಲವು ಕಡೆ ಹೆಚ್ಚಿಗೆ ಸಂಖ್ಯೆಯನ್ನು ಹೇಳಿರುವದು ಉಪಾಸನೆಗಾಗಿ, ಕೆಲವು ಕಡೆ ಕಡಿಮೆ ಹೇಳಿರುವದು ಉಪಲಕ್ಷಣಕ್ಕಾಗಿ. ಏಳು ಪ್ರಾಣಗಳು ಎನ್ನುವವರು ನಿಜವಾಗಿ ನಾಲ್ಕೇ ಪ್ರಾಣಗಳನ್ನು ಒಪ್ಪಿದಂತೆ ಆಗುತ್ತದೆಯಾದ್ದರಿಂದ ಶ್ರುತಿಗೆ ಏಳರಲ್ಲಿ ತಾತ್ಪರ್ಯವಿಲ್ಲವೆನ್ನಬೇಕು. ಬೃಹದಾರಣ್ಯಕದಲ್ಲಿ ಗತಿಯನ್ನು ಹೇಳುವಾಗಲೂ ಏಳೆಂಬ ಸಂಖ್ಯೆಯನ್ನು ಉಪಲಕ್ಷಣಕ್ಕಾಗಿಯೇ ಹೇಳಿದೆ; ಆದ್ದರಿಂದಲೇ ಅಲ್ಲಿ 'ಎಲ್ಲಾ ಪ್ರಾಣಗಳೂ ಹಿಂದಿನಿಂದ ಉತ್ಕ್ರಾಂತವಾಗುತ್ತವೆ' ಎಂದಿದೆ. ಆದ್ದರಿಂದ ಅಲ್ಲಿಯೂ ಹನ್ನೊಂದು ಪ್ರಾಣಗಳನ್ನೇ ಗ್ರಹಿಸಬೇಕು.

## ೩. ಪ್ರಾಣಾಣುತ್ವಾಧಿಕರಣ

**ಸಂಶಯಪೂರ್ವಪಕ್ಷಗಳು :** ಪ್ರಾಣಗಳು ಅಣುವೊ, ಮಧ್ಯಮಪರಿಮಾಣವೊ, ವಿಭುವೊ ? ಎಂಬುದು ಸಂಶಯ. ಪ್ರಾಣಗಳು ಅನಂತವೆಂಬ ಶ್ರುತಿಯಿರುವದರಿಂದ ಅವು ಸರ್ವಗತವೇ.

**ಸಿದ್ಧಾಂತ :** ಪ್ರಾಣಗಳು ಅಣುವೇ, ಎಂದರೆ ಸೂಕ್ಷ್ಮವಾಗಿಯೂ ಪರಿಚ್ಛಿನ್ನವಾಗಿಯೂ ಇರುತ್ತವೆ. ಅವು ಅಣುಪರಿಮಾಣವಲ್ಲ, ಏಕೆಂದರೆ ಶರೀರದಲ್ಲೆಲ್ಲ ಅವುಗಳ ಕಾರ್ಯವು ಕಾಣಬರುತ್ತದೆ. ಅವು ಸರ್ವಗತವೂ ಅಲ್ಲ; ಏಕೆಂದರೆ ಹಾಗಿದ್ದರೆ ಪ್ರಾಣಗಳಿಗೆ ಉತ್ಕ್ರಾಂತಿ, ಗತಿ, ಆಗತಿ –ಇವುಗಳನ್ನು ಶ್ರುತಿಯಲ್ಲಿ ಹೇಳಿವೆ. ಜೀವನಿಗೆ ತದ್ಗುಣಸಾರತ್ವವು ಬರಬೇಕಾದರೆ ಅವು ಸೂಕ್ಷ್ಮವಾಗಿಯೂ ಪರಿಚ್ಛಿನ್ನವಾಗಿಯೂ ಇರತಕ್ಕದ್ದು ಅವಶ್ಯವಾಗಿರುತ್ತದೆ.

## ೪. ಪ್ರಾಣಶ್ರೈಷ್ಠ್ಯಾಧಿಕರಣ

**ಸಂಶಯ :** ಮುಖ್ಯಪ್ರಾಣವು ಬ್ರಹ್ಮವಿಕಾರವೊ, ಅಲ್ಲವೊ ?

**ಪೂರ್ವಪಕ್ಷ :** ಶ್ರುತಿಯಲ್ಲಿ ಉತ್ಪತ್ತಿಗೆ ಪೂರ್ವದಲ್ಲಿ 'ಆನೀದವಾತಮ್' ಎಂದು ಪ್ರಾಣಕರ್ಮವಿತ್ತೆಂದು ಹೇಳಿದೆ. ಆದ್ದರಿಂದ ಪ್ರಾಣವು ಹುಟ್ಟುವದಿಲ್ಲ.

**ಸಿದ್ಧಾಂತ :** ಇಂದ್ರಿಯಮನಸ್ಸುಗಳಿಗಿಂತ ಬೇರೆಯಾಗಿ ಪ್ರಾಣಕ್ಕೂ ಉತ್ಪತ್ತಿಯನ್ನು ಹೇಳಿದೆ. ಶ್ರುತಿಯಲ್ಲಿರುವ 'ಆನೀತ್' ಎಂಬ ಮಾತು ಪ್ರಾಣವಿರುವದೆಂಬುದನ್ನು ಹೇಳುವದಿಲ್ಲ; ಏಕೆಂದರೆ ಅಲ್ಲಿ ವಾತವಿರಲಿಲ್ಲ ಎಂದು ಹೇಳಿದೆ. ಆದ್ದರಿಂದ ಶ್ರೇಷ್ಠಪ್ರಾಣವೂ ಬ್ರಹ್ಮದಿಂದ ಹುಟ್ಟುತ್ತದೆ.

## ೫. ವಾಯುಕ್ರಿಯಾಧಿಕರಣ

**ಸಂಶಯ :** ಮುಖ್ಯಪ್ರಾಣವು ವಾಯುವೆ, ಕರಣಗಳ ವೃತ್ತಿಯೆ ?

**ಪೂರ್ವಪಕ್ಷ :** ಇವೆರಡರಲ್ಲಿ ಯಾವದಾದರೊಂದು ಆಗಬಹುದು. ಮೊದಲನೆಯದಕ್ಕೆ ಶ್ರುತಿಯ ಬೆಂಬಲವಿದೆ; ಎರಡನೆಯದಕ್ಕೆ ಸಾಂಖ್ಯಶಾಸ್ತ್ರದ ಆಧಾರವಿದೆ.

**ಸಿದ್ಧಾಂತ :** ಪ್ರಾಣವು ವಾಯುವೂ ಅಲ್ಲ; ಕರಣವೃತ್ತಿಯೂ ಅಲ್ಲ. ಏಕೆಂದರೆ ವಾಯುವಿಗಿಂತ ಬೇರೆಯಾಗಿ ಶ್ರುತಿಯಲ್ಲಿ ಪ್ರಾಣವನ್ನು ಬೇರೆಯಾಗಿ ಹೇಳಿರುತ್ತದೆ. ಇದರಂತೆ ಕರಣಗಳನ್ನು ಹೇಳಿ ಅವುಗಳಿಗಿಂತ ಬೇರೆಯಾಗಿಯೇ ಪ್ರಾಣವನ್ನು ಹೇಳಿರುತ್ತದೆ. ಎಲ್ಲಾ ಕರಣಗಳಿಗೂ ಒಟ್ಟುಗೂಡಿ ಪ್ರಾಣವೆಂಬ ವೃತ್ತಿ ಎಂಬುದು ಯುಕ್ತಿಗೂ ಹೊಂದು

ವದಿಲ್ಲ ; ಪ್ರಾಣವು ಶ್ರೇಷ್ಠವು, ಉಳಿದ ಪ್ರಾಣಗಳು ಅದಕ್ಕೆ ಅಧೀನ –ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿರುವದಕ್ಕೂ ವಿರುದ್ಧವಾಗುತ್ತದೆ. ಪ್ರಾಣವು ವಾಯುವಿನ ಅಧ್ಯಾತ್ಮ ರೂಪವಿಶೇಷವು. ಆದ್ದರಿಂದ ಪ್ರಾಣವೇ ವಾಯು ಎಂದು ಕೆಲವು ಶ್ರುತಿಗಳಲ್ಲಿ ಹೇಳಿದೆ. ಪ್ರಾಣವನ್ನು ಚಕ್ಷುರಾದಿಗಳಂತೆ ಜೀವನಿಗೆ ಉಪಕರಣವಾಗಿಯೇ ಹೇಳಿರುವವದರಿಂದ ಅದಕ್ಕೆ ಜೀವನಂತೆ ಸ್ವಾತಂತ್ರ್ಯವಿಲ್ಲ ; ಅದು ಕರಣಾಂತರವಲ್ಲದ್ದರಿಂದ ಚಕ್ಷುರಾದಿಗಳಂತೆ ಅದಕ್ಕೆ ಮತ್ತೊಂದು ವಿಷಯವಿಲ್ಲ. ಶರೀರೇಂದ್ರಿಯಸಂಘಾತವು ಇದ್ದುಕೊಂಡಿರುವಂತೆ ನೋಡಿ ಕೊಳ್ಳುವದೆಂಬ ಅಸಾಧಾರಣವಾದ ಒಂದಾನೊಂದು ಕಾರ್ಯವಿರುವದರಿಂದ ಅದು ವ್ಯರ್ಥವೂ ಅಲ್ಲ. ಮನಸ್ಸಿನಂತೆ ಅದಕ್ಕೂ ಪಂಚವೃತ್ತಿಗಳಿರುವದರಿಂದ ಅದೂ ಜೀವನಿಗೆ ಒಂದು ಉಪಕರಣವಾಗಿರತ್ತದೆ.

## ೬. ಶ್ರೇಷ್ಠಾಣುತ್ವಾಧಿಕರಣ

ಸಂಶಯ : ಪ್ರಾಣದ ಪರಿಮಾಣವು ಯಾವದು ? ಅದು ಅಣುವೊ, ಸರ್ವಗತವೊ ?

ಪೂರ್ವಪಕ್ಷ : ಇದು ಸರ್ವಗತವೇ, ಏಕೆಂದರೆ ಹಾಗೆಂದು ಶ್ರುತಿಯಲ್ಲಿದೆ.

ಸಿದ್ಧಾಂತ : ಇದೂ ಇತರ ಪ್ರಾಣಗಳಂತೆ ಅಣು, ಎಂದರೆ ಸೂಕ್ಷ್ಮವೂ ಪರಿಚ್ಛಿನ್ನವೂ ಆಗಿರುತ್ತದೆ. ಅದು ಪರಮಾಣುವಿನ ಪರಿಮಾಣದ್ದಲ್ಲ, ಏಕೆಂದರೆ ಐದು ವೃತ್ತಿಗಳಿಂದ ಶರೀರವನ್ನೆಲ್ಲ ವ್ಯಾಪಿಸಿಕೊಂಡಿರುತ್ತದೆ. ವಿಭುವೂ ಅಲ್ಲ ; ಅದು ವಿಭುವೆಂದು ಶ್ರುತಿಯಲ್ಲಿ ರುವದು ಆಧಿದೈವಿಕರೂಪವಾದ ಸಮಷ್ಟಿವ್ಯಷ್ಟಿರೂಪಪ್ರಾಣವಿಷಯಂ.

## ೭. ಜ್ಯೋತಿರಾದ್ಯಧಿಕರಣ

ಸಂಶಯ : ಪ್ರಾಣಗಳು ತಮ್ಮ ಶಕ್ತಿಯಿಂದಲೇ ತಮ್ಮತಮ್ಮ ಕಾರ್ಯವನ್ನು ಮಾಡುತ್ತವೆಯೋ, ದೇವತೆಗಳ ಹಿಡಿತದಲ್ಲಿದ್ದುಕೊಂಡು ಮಾಡುತ್ತವೆಯೊ ?

ಪೂರ್ವಪಕ್ಷ : ತಮ್ಮ ಶಕ್ತಿಯಿಂದ ತಾವೇ ಮಾಡುತ್ತವೆ. ಏಕೆಂದರೆ ದೇವತಾಧಿಷ್ಠಿತ ವಾಗಿ ಮಾಡುತ್ತವೆ ಎಂದರೆ ಈ ಶರೀರದಲ್ಲಿ ಭೋಕ್ತೃತ್ವವು ದೇವತೆಗಳಿಗೇ ಬರ ಬೇಕಾಗುತ್ತದೆ.

ಸಿದ್ಧಾಂತ : ದೇವತಾಧಿಷ್ಠಿತವಾಗಿಯೇ ಕೆಲಸವನ್ನು ಮಾಡುತ್ತವೆ. ಏಕೆಂದರೆ 'ಅಗ್ನಿಯು ವಾಕ್ಕಾಗಿ ಮುಖವನ್ನು ಪ್ರವೇಶಿಸಿದನು' ಎಂದು ಮುಂತಾಗಿರುವ ಶ್ರುತಿಯು ಹೀಗೆಂದು ಹೇಳುತ್ತದೆ. ಶಕ್ತವಾಗಿರುವ ವಸ್ತುಗಳು ತಾವೇ ತಮ್ಮ ಕಾರ್ಯವನ್ನು ಮಾಡಬಹುದು ; ಮತ್ತೊಬ್ಬರಿಂದ ಅಧಿಷ್ಠಿತವಾಗಿಯೂ ಮಾಡಬಹುದು. ಹೀಗೆ ಎರಡೂ ಬಗೆಯಾಗಿರುವದರಿಂದ ಶ್ರುತ್ಯನುಗುಣವಾಗಿ ದೇವತಾಧಿಷ್ಠಿತವಾದ ಪ್ರಾಣಗಳೇ ತಮ್ಮತಮ್ಮ ಕೆಲಸವನ್ನು ಮಾಡುತ್ತವೆ ಎಂಬುದೇ ಯುಕ್ತ. ಪ್ರಾಣಗಳಿಗೆ ಜೀವನೊಡನೆ ಸಂಬಂಧ ವಿದೆ ಎಂದು ಶ್ರುತಿ ಹೇಳಿರುವದರಿಂದಲೂ ಅನೇಕ ಕರಣಗಳ ಅಧಿಷ್ಠಾತೃಗಳಾಗಿರುವ ದೇವತೆಗಳೆಲ್ಲರೂ ಒಂದು ಶರೀರದಲ್ಲಿ ಭೋಕ್ತೃವಾಗಿರುವದು ಸಾಧ್ಯವಿಲ್ಲವಾದ್ದರಿಂದಲೂ ಜೀವನು ಧರ್ಮಾಧರ್ಮಗಳಿಂದ ಶರೀರದಲ್ಲಿ ನಿತ್ಯಭೋಕ್ತೃವಾಗಿರುವನೆಂಬುದೇ ಯುಕ್ತ ವಾಗಿರುವದರಿಂದಲೂ ದೇವತೆಗಳಿಗೆ ಈ ಶರೀರದಲ್ಲಿ ಭೋಕ್ತೃತ್ವಪ್ರಸಂಗವಿಲ್ಲ.

## ೮. ಇಂದ್ರಿಯಾಧಿಕರಣ

ಸಂಶಯ : ಉಳಿದ ಪ್ರಾಣಗಳು ಮುಖ್ಯಪ್ರಾಣದ ವೃತ್ತಿಭೇದಗಳೇ, ಅಥವಾ ತತ್ತ್ವಾಂತರಗಳೆ ?

ಪೂರ್ವಪಕ್ಷ : ಇತರ ಪ್ರಾಣಗಳು ಮುಖ್ಯಪ್ರಾಣದ ವೃತ್ತಿಗಳೇ ; ಏಕೆಂದರೆ ಶ್ರುತಿಯಲ್ಲಿ ಹಾಗೆಂದು ಹೇಳಿದೆ. ಎಲ್ಲಕ್ಕೂ 'ಪ್ರಾಣಗಳು' ಎಂಬ ಹೆಸರೂ ಇದೆ. ಅದ್ದರಿಂದ ಪ್ರಾಣಾಪಾನಾದಿಗಳಂತೆ ಕರಣಗಳೂ ಮುಖ್ಯಪ್ರಾಣದ ವೃತ್ತಿಗಳೆಂದು ಹೇಳುವದು ಯುಕ್ತ.

ಸಿದ್ಧಾಂತ : ಅವು ತತ್ತ್ವಾಂತರಗಳೇ. ಏಕೆಂದರೆ ಅವಕ್ಕೆ 'ಇಂದ್ರಿಯಗಳು' ಎಂಬ ಬೇರೊಂದು ವ್ಯಪದೇಶವು ಶ್ರುತಿಯಲ್ಲಿದೆ. ಮನಸ್ಸನ್ನು ಇಂದ್ರಿಯವೆಂದು ಶ್ರುತಿಯಲ್ಲಿ ಕರೆಯದಿದ್ದರೂ ಸ್ಮೃತಿಯಲ್ಲಿ ಹಾಗೆಂದು ಕರೆದಿದೆ. ಪ್ರಾಣವನ್ನು ವಾಗಾದಿಗಳಿಗಿಂತ ಬೇರೆಯಾಗಿ ಶ್ರುತಿಯಲ್ಲಿ ಹೇಳಿಯೂ ಇದೆ. ವಾಗಾದಿಗಳಿಗೂ ಮುಖ್ಯಪ್ರಾಣಕ್ಕೂ ವೈಲಕ್ಷಣ್ಯವೂ ಇದೆ, ಹೇಗೆಂದರೆ ಪ್ರಾಣವೊಂದೇ ಸುಷುಪ್ತಿಯಲ್ಲಿ ಎಚ್ಚರವಾಗಿರುತ್ತದೆ ; ಅದಕ್ಕೊಂದಕ್ಕೇ ಶ್ರಮರೂಪಿಯಾದ ಮೃತ್ಯುವಿನ ವ್ಯಾಪ್ತಿಯಿಲ್ಲ ; ಅದರ ಇರವು ಉತ್ಕ್ರಾಂತಿ ಇವುಗಳಿಂದಲೇ ಶರೀರಧಾರಣವೂ ಶರೀರಪತನವೂ ಆಗುತ್ತದೆ.

## ೯. ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣ

ಸಂಶಯ : ಛಾಂದೋಗ್ಯದಲ್ಲಿ ಹೇಳಿರುವ ನಾಮರೂಪವ್ಯಾಕರಣವು ಜೀವಕರ್ತೃಕವೊ ಬ್ರಹ್ಮಕರ್ತೃಕವೊ ?

ಪೂರ್ವಪಕ್ಷ : ಇದು ಜೀವಕರ್ತೃಕವೇ. ಏಕೆಂದರೆ 'ಈ ಜೀವಾತ್ಮನ ರೂಪದಿಂದ ಪ್ರವೇಶಮಾಡಿ ನಾಮರೂಪಗಳನ್ನು ವ್ಯಾಕರಣಮಾಡುವೆನು'– ಎಂಬ ಶ್ರುತಿವಾಕ್ಯವಿದೆ. ಜೀವನಿಗೆ ಡಿತ್ಥಡವಿತ್ಥಾದಿನಾಮಗಳ ಮತ್ತು ಘಟಶರಾವಾದಿರೂಪಗಳ ವ್ಯಾಕರಣ ಕರ್ತೃತ್ವವು ಲೋಕದಲ್ಲಿ ಕಂಡೂ ಇದೆ.

ಸಿದ್ಧಾಂತ : ಈ ನಾಮರೂಪವ್ಯಾಕರಣವು ಬ್ರಹ್ಮದ್ದೇ. ಏಕೆಂದರೆ ತ್ರಿವೃತ್ಕರಣವನ್ನು ಮಾಡುವ ಪರಮೇಶ್ವರನಿಗೇ ಈ ವ್ಯಾಕರಣವನ್ನು ಹೇಳಿರುತ್ತದೆ. ಸೇಯಂ ದೇವತಾ– ಆ ಈ ದೇವತೆಯು ಆಲೋಚನೆಮಾಡಿತು ಎಂದು ಉಪಕ್ರಮಿಸಿಯೇ ಈ ವ್ಯಾಕರ್ತೃತ್ವವನ್ನು ಹೇಳಿರುತ್ತದೆ. 'ಜೀವರೂಪದಿಂದ ಅನುಪ್ರವೇಶಮಾಡಿ' ಎಂದಿಷ್ಟೇ ಸಂಬಂಧವು ; ಜೀವನಿಂದ ವ್ಯಾಕರಣಮಾಡಿಸುವೆನು ಎಂದೇನೂ ಅಭಿಪ್ರಾಯವಿಲ್ಲ. ಹಾಗೆ ಸಂಬಂಧ ಮಾಡಿದರೆ 'ವ್ಯಾಕರಣಮಾಡುವೆನು' ಎಂಬ ಉತ್ತಮಪುರುಷಪ್ರಯೋಗವನ್ನು ಗೌಣಾರ್ಥದಲ್ಲಿ ತೆಗೆದುಕೊಳ್ಳಬೇಕಾಗುತ್ತದೆ. ಜೀವನಿಗೆ ಗಿರಿನದೀಸಮುದ್ರಾದಿಗಳ ನಾಮರೂಪ ವ್ಯಾಕರಣವು ಅನುಭವದಲ್ಲಿ ಕಂಡುಬರುವದಿಲ್ಲ. ಅವನಿಗೆ ವ್ಯಾಕರ್ತೃತ್ವವು ಕಾಣುವ ಕಡೆಯಲ್ಲಿಯೂ ಅದು ಪರಮೇಶ್ವರನಿಗೆ ಅಧೀನವಾಗಿರುತ್ತದೆ. ತತ್ತ್ವದೃಷ್ಟಿಯಿಂದ ಅವನು ಪರಮಾತ್ಮನೇ ಆಗಿರುತ್ತಾನೆ. ಈ ವ್ಯಾಕರಣವು ತ್ರಿವೃತ್ಕರಣಪೂರ್ವಕವಾಗಿಯೇ ಇರುತ್ತದೆ. ಆಧ್ಯಾತ್ಮಿಕವಾದ ತ್ರಿವೃತ್ಕರಣವೂ ಆ ಪರಮೇಶ್ವರನಿಂದಲೇ ಆಗುತ್ತದೆ. ಭೂತಗಳು ತ್ರಿವೃತ್ಕೃತವಾಗಿದ್ದರೂ ಆಯಾ ಭೂತವು ಹೆಚ್ಚಿನ ಪ್ರಮಾಣದಲ್ಲಿ ಬೆರೆತಿರುವದರಿಂದ ಆಯಾ ಹೆಸರಿನಿಂದ ವ್ಯವಹೃತವಾಗಬಹುದಾಗಿದೆ. ಅಂತೂ ಹೀಗೆ ತ್ರಿವೃತ್ಕರಣಕರ್ತೃವಾದ ಪರಮೇಶ್ವರನಿಗೇ ನಾಮರೂಪವ್ಯಾಕರಣವನ್ನು ಹೇಳಿದೆ ಎಂದು ಸಿದ್ಧವಾಯಿತು.

---

# ಮೂರನೆಯ ಅಧ್ಯಾಯದ - ಒಂದನೆಯ ಪಾದ

(ಗತ್ಯಾಗತಿವಿಚಾರ)

## ಅಧ್ಯಾಯದ ಮತ್ತು ಮೊದಲನೆಯ ಪಾದದ ಸಂಗತಿ

(ಭಾಷ್ಯ)

೨೧೧. ದ್ವಿತೀಯೇ ಅಧ್ಯಾಯೇ ಸ್ಮೃತಿನ್ಯಾಯವಿರೋಧೋ ವೇದಾನ್ತವಿಹಿತೇ ಬ್ರಹ್ಮದರ್ಶನೇ ಪರಿಹೃತಃ। ಪರಪಕ್ಷಾಣಾಂ ಚ ಅನಪೇಕ್ಷತ್ವಂ ಪ್ರಪಞ್ಚಿತಮ್। ಶ್ರುತಿವಿಪ್ರತಿಷೇಧಶ್ಚ ಪರಿಹೃತಃ। ತತ್ರ ಚ ಜೀವವ್ಯತಿರಿಕ್ತಾನಿ ತತ್ತ್ವಾನಿ ಜೀವೋಪಕರಣಾನಿ ಬ್ರಹ್ಮಣೋ . ಜಾಯನ್ತೇ ಇತಿ ಯುಕ್ತಮ್। ಅಥ ಇದಾನೀಮ್ ಉಪಕರಣೋಪಹಿತಸ್ಯ ಜೀವಸ್ಯ ಸಂಸಾರಗತಿಪ್ರಕಾರಃ, ತದವಸ್ಥಾನ್ತರಾಣಿ, ಬ್ರಹ್ಮಸತತ್ತ್ವಮ್, ವಿದ್ಯಾಭೇದಾಭೇದೌ, ಗುಣೋಪಸಂಹಾರಾನುಪಸಂಹಾರೌ ಸಮ್ಯಗ್ದರ್ಶನಾತ್ ಪುರುಷಾರ್ಥಸಿದ್ಧಿಃ, ಸಮ್ಯಗ್ದರ್ಶನೋಪಾಯವಿಧಿಪ್ರಭೇದಃ, ಮುಕ್ತಿಫಲಾನಿಯಮಶ್ಚ ಇತ್ಯೇತತ್ ಅರ್ಥಜಾತಂ ತೃತೀಯೇ ಅಧ್ಯಾಯೇ ನಿರೂಪಯಿಷ್ಯತೇ। ಪ್ರಸಙ್ಗಾಗತಂ ಚ ಕಿಮಪ್ಯನ್ಯತ್। ತತ್ರ ಪ್ರಥಮೇ ತಾವತ್ ಪಾದೇ ಪಞ್ಚಾಗ್ನಿವಿದ್ಯಾಮ್ ಆಶ್ರಿತ್ಯ ಸಂಸಾರಗತಿಪ್ರಭೇದಃ ಪ್ರದರ್ಶ್ಯತೇ ವೈರಾಗ್ಯಹೇತೋಃ। "ತಸ್ಮಾಜ್ಜುಗುಪ್ಸೇತ" (ಛಾಂ. ೫–೧೦–೮) ಇತಿ ಚಾನ್ತೇ ಶ್ರವಣಾತ್ ॥

(ಭಾಷ್ಯಾರ್ಥ)

ಎರಡನೆಯ ಅಧ್ಯಾಯದಲ್ಲಿ ಸ್ಮೃತಿಗಳಿಗೂ ಯುಕ್ತಿಗಳಿಗೂ ವೇದಾಂತದಲ್ಲಿ ಹೇಳಿರುವ ಬ್ರಹ್ಮದರ್ಶನವು ವಿರುದ್ಧವೆಂಬುದನ್ನು ಪರಿಹರಿಸಿದ್ದಾಯಿತು ; ಪರವಾದಿಗಳ ಪಕ್ಷಗಳನ್ನು ಅನಾದರಮಾಡಬೇಕೆಂಬುದನ್ನೂ ವಿವರಿಸಿದ್ದಾಯಿತು; ಶ್ರುತಿಗಳಿಗೆ (ಪರಸ್ಪರ)ವಿರೋಧ(ವೆಂಬುದನ್ನೂ) ಪರಿಹರಿಸಿದ್ದಾಯಿತು. ಅದರಲ್ಲಿಯೂ ಜೀವವ್ಯತಿರಿಕ್ತವಾಗಿರುವ, ಜೀವನಿಗೆ ಉಪಕರಣವಾಗಿರುವ, ತತ್ತ್ವಗಳು ಬ್ರಹ್ಮದಿಂದ ಹುಟ್ಟಿರುತ್ತವೆ ಎಂದು ಹೇಳಿದ್ದಾಗಿದೆ.

ಇಲ್ಲಿ ಈಗ (ಈ) ಉಪಕರಣಗಳಿಂದ ಉಪಹಿತನಾಗಿರುವ[1] ಜೀವನಿಗೆ (ಆಗುವ) ಸಂಸಾರಗತಿಯ ಪ್ರಕಾರವನ್ನೂ[2] ಅವನ ಬೇರೆಬೇರೆಯ ಅವಸ್ಥೆ

1. ಉಪಾಧಿಗಳಿಂದಲೇ ಜೀವನಿಗೆ ಜೀವತ್ವವೆಂಬುದನ್ನು ಈ ವಿಶೇಷಣವು ತಿಳಿಸುತ್ತದೆ.

2. ಇದು ಒಂದನೆಯ ಪಾದದ ಅರ್ಥ.

ಗಳನ್ನೂ[1] ಬ್ರಹ್ಮದ ತತ್ತ್ವವನ್ನೂ[2], ವಿದ್ಯೆಗಳ ಭೇದಾಭೇದಗಳನ್ನೂ (ಬ್ರಹ್ಮದ) ಗುಣಗಳ ಉಪಸಂಹಾರವನ್ನೂ ಮಾಡಬೇಕಾದದ್ದು ಅಥವಾ ಉಪಸಂಹಾರವನ್ನು ಮಾಡಬಾರದ್ದು[3] ಇವುಗಳನ್ನೂ ಸಮ್ಯಗ್ದರ್ಶನದಿಂದ ಪುರುಷಾರ್ಥಸಿದ್ಧಿ(ಯಾಗುವದೆಂಬುದನ್ನೂ), ಸಮ್ಯಗ್ದರ್ಶನಕ್ಕೆ ಉಪಾಯಗಳನ್ನು ವಿಧಿಸಿರುವದರಲ್ಲಿ ಒಳಭೇದಗಳನ್ನೂ ಮುಕ್ತಿಫಲದಲ್ಲಿ ಅನಿಯಮವನ್ನೂ[4]– ಈ (ಎಲ್ಲಾ) ಅರ್ಥಜಾತವನ್ನು ಮೂರನೆಯ ಅಧ್ಯಾಯದಲ್ಲಿ ನಿರೂಪಿಸಲಾಗುವದು. ಪ್ರಸಂಗದಿಂದ ಬರುವ ಇನ್ನು ಬೇರೆಯ (ವಿಷಯವನ್ನೂ ನಿರೂಪಿಸಲಾಗುವದು).[5]

ಇಲ್ಲಿ ಮೊದಲನೆಯದಾಗಿ ಒಂದನೆಯ ಪಾದದಲ್ಲಿ ಪಂಚಾಗ್ನಿವಿದ್ಯೆಯನ್ನು ಆಶ್ರಯಿಸಿಕೊಂಡು ಸಂಸಾರಗತಿಯ ಒಳಭೇದವನ್ನು ವೈರಾಗ್ಯಕ್ಕಾಗಿ[6] ತಿಳಿಸಲಾಗುವದು. "ಆದ್ದರಿಂದ ಹೇಸಬೇಕು" (ಛಾಂ. ೫–೧೦–೮) ಎಂದು ಆ (ಪ್ರಕರಣದ) ಕೊನೆಯಲ್ಲಿ ಶ್ರುತಿಯು ಹೇಳಿರುವದರಿಂದ (ಹೀಗೆಂದು ನಿಶ್ಚಯಿಸಬೇಕು).

## ೧. ತದನ್ತರಪ್ರತಿಪತ್ತ್ಯಧಿಕರಣ (ಸೂ. ೧–೭)

### (ಜೀವರುಗಳ ಮರಣಾನಂತರದ ಗತಿ)

**ತದನ್ತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಮ್ ||**

೧. ಆ (ದೇಹಕ್ಕಿಂತ) ಬೇರೆಯಾದ (ದೇಹವನ್ನು) ಪಡೆಯುವಾಗ ಸಂಪರಿಷ್ವಕ್ತನಾಗಿಯೇ ಹೋಗುತ್ತಾನೆ. ಪ್ರಶ್ನೋತ್ತರಗಳಿಂದ (ಹೀಗೆಂದು ಗೊತ್ತಾಗುತ್ತದೆ).

### ಸಂಶಯ : ಜೀವನು ದೇಹಾಂತರಪ್ರಾಪ್ತಿಗೆ ಭೂತಸೂಕ್ಷ್ಮಗಳನ್ನೊಯ್ಯುತ್ತಾನೆಯೆ ?

(ಭಾಷ್ಯ)

೨೧೨. ಜೀವೋ ಮುಖ್ಯಪ್ರಾಣಸಚಿವಃ ಸೇನ್ದ್ರಿಯಃ ಸಮನಸ್ಕಃ ಅವಿದ್ಯಾ

1. ಇದು ಎರಡನೆಯ ಪಾದದ ನಾಲ್ಕು ಅಧಿಕರಣಗಳ ಅರ್ಥ.

2. ಇದು ಎರಡನೆಯ ಪಾದದ ಐದನೆಯ ಅಧಿಕರಣದಿಂದ ಮುಂದಿನ ಗ್ರಂಥಭಾಗದ ಅರ್ಥ.

3. ಇದು ಮೂರನೆಯ ಪಾದದ ಅರ್ಥ.

4. ಇದಿಷ್ಟೂ ನಾಲ್ಕನೆಯ ಪಾದದ ಅರ್ಥ.

5. ಲೋಕಾಯತಮತನಿರಾಕರಣಪೂರ್ವಕವಾಗಿ ಆತ್ಮಾಸ್ತಿತ್ವವೇ ಮುಂತಾದದ್ದನ್ನು.

6. ಪಂಚಾಗ್ನಿವಿದ್ಯೆಯು ಉಪಾಸನೆಗಾಗಿ ಹೇಳಿದ್ದರೂ ಇಲ್ಲಿ ಹೇಳಿರುವ ಗತಿಯು ಜ್ಞಾನಸಾಧನವಾದ ವೈರಾಗ್ಯಕ್ಕೂ ಕಾರಣವಾಗುತ್ತದೆ ಎಂದು ಭಾವ.

ಕರ್ಮಪೂರ್ವಪ್ರಜ್ಞಾಪರಿಗ್ರಹಃ ಪೂರ್ವದೇಹಂ ವಿಹಾಯ ದೇಹಾನ್ತರಂ ಪ್ರತಿಪದ್ಯತೇ ಇತ್ಯೇತತ್ ಅವಗತಮ್ "ಅಥೈನಮೇತೇ ಪ್ರಾಣಾ ಅಭಿಸಮಾಯನ್ತಿ" (ಬೃ. ೪-೪-೧) ಇತ್ಯೇವಮಾದೇಃ "ಅನ್ಯನ್ನವತರಂ ಕಲ್ಯಾಣತರಂ ರೂಪಂಕುರುತೇ" (ಬೃ. ೪-೪-೪) ಇತ್ಯೇವಮನ್ತಾತ್ ಸಂಸಾರಪ್ರಕರಣಸ್ಥಾತ್ ಶಬ್ದಾತ್ । ಧರ್ಮಾಧರ್ಮಫಲೋಪಭೋಗಸಂಭವಾಚ್ಚ । ಸ ಕಿಂ ದೇಹಬೀಜೈಃ ಭೂತಸೂಕ್ಷ್ಮೈಃ ಅಸಂಪರಿಷ್ವಕ್ತೋ ಗಚ್ಛತಿ ಆಹೋಸ್ವಿತ್ ಸಂಪರಿಷ್ವಕ್ತಃ ? ಇತಿ ಚಿನ್ತ್ಯತೇ ॥

(ಭಾಷ್ಯಾರ್ಥ)

ಜೀವನು ಮುಖ್ಯಪ್ರಾಣಸಹಿತನಾಗಿ ಇಂದ್ರಿಯಗಳಿಂದೊಡಗೂಡಿ ಮನಸ್ಸಿನೊಡನೆ ಹಿಂದಿನ ದೇಹವನ್ನು ಬಿಟ್ಟು ಮತ್ತೊಂದು ದೇಹವನ್ನು ವಿದ್ಯಾಕರ್ಮಪೂರ್ವಪ್ರಜ್ಞೆಗಳಿಂದೊಡಗೂಡಿದವನಾಗಿ[1] ಪಡೆಯುತ್ತಾನೆ – ಎಂಬಿದು "ಇನ್ನು (ಈ ಜೀವನನ್ನು) ಈ ಪ್ರಾಣಗಳು ಸುತ್ತುಗಟ್ಟಿಕೊಂಡು ಹೋಗುವವು" (ಬೃ. ೪-೪-೧) ಎಂಬುದರಿಂದ ಮೊದಲಾಗಿ "ಮತ್ತೊಂದು ಹೊಚ್ಚಹೊಸದಾದ ಕಲ್ಯಾಣತರವಾದ ರೂಪವನ್ನು ಮಾಡಿಕೊಳ್ಳುತ್ತಾನೆ" (ಬೃ. ೪-೪-೪) ಎಂಬವರೆಗಿನ ಸಂಸಾರಪ್ರಕರಣದಲ್ಲಿರುವ ಶಬ್ದ(ಪ್ರಮಾಣ)ದಿಂದ ಗೊತ್ತಾಗಿರುತ್ತದೆ. (ಹೀಗಾದರೇ) ಧರ್ಮಾಧರ್ಮಗಳ ಫಲಗಳ ಉಪಭೋಗವು (ಜೀವನಿಗೆ) ಸಂಭವಿಸುತ್ತದೆಯಾದ್ದರಿಂದಲೂ[2] (ಹೀಗೆಂದು ಗೊತ್ತಾಗುತ್ತದೆ). ಆ (ಜೀವನು) ದೇಹಬೀಜಗಳಾಗಿರುವ ಭೂತಸೂಕ್ಷ್ಮಗಳಿಂದ ಅಸಂಪರಿಷ್ವಕ್ತನಾಗಿ ಹೋಗುತ್ತಾನೆಯೆ, ಅಥವಾ ಸಂಪರಿಷ್ವಕ್ತನಾಗಿ ಹೋಗುತ್ತಾನೆಯೆ ? –ಎಂಬುದನ್ನು (ಇಲ್ಲ) ವಿಚಾರಮಾಡಬೇಕಾಗಿದೆ[3].

---

1. ವಿದ್ಯೆ ಎಂದರೆ ವಿಹಿತಾವಿಹಿತಗಳು, ಪ್ರತಿಷಿದ್ಧಾಪ್ರತಿಷಿದ್ಧಗಳು– ಇವುಗಳ ಸಾಮಾನ್ಯಜ್ಞಾನ ; ಕರ್ಮವೆಂದರೆ ಸಾಮಾನ್ಯಕರ್ಮ, ಪೂರ್ವಪ್ರಜ್ಞೆಎಂದರೆ ಕರ್ಮಫಲಾನುಭವದ ವಾಸನೆ. ಇಲ್ಲಿ ಅವಿದ್ಯೆ ಎಂಬ ಪಾಠವನ್ನು ಕಲ್ಪಿಸಿ ಅನಾದ್ಯನಿರ್ವಾಚ್ಯವಾಗಿ ಜೀವತ್ವಕ್ಕೆ ಕಾರಣವಾಗಿರುವ ಮೂಲಾವಿದ್ಯೆ ಎಂಬ ನ್ಯಾ. ನಿ. ವಿವರಣವು (ಬೃ. ೪-೪-೩)ರ ಭಾಷ್ಯಕ್ಕೆ ವಿರುದ್ಧ.

2. ಧರ್ಮಾಧರ್ಮಗಳ ಫಲಗಳ ಉಪಭೋಗವು ಜೀವನಿಗೆ ಆಗಬೇಕಾದರೆ ಅವನಿಗೆ ಲೋಕಾಂತರಕ್ಕೂ ಜನ್ಮಾಂತರಕ್ಕೂ ಹೋಗುವದಕ್ಕೂ ಫಲವನ್ನು ಅನುಭವಿಸುವದಕ್ಕೂ ಉಪಾಧಿಗಳಾಗಿರುವ ಪ್ರಾಣೇಂದ್ರಿಯಮನಸ್ಸುಗಳು ಬೇಕು ಎಂದು ಅರ್ಥಾಪತ್ತಿಯಿಂದ ಗೊತ್ತು ಮಾಡಬಹುದು.

3. ಭೂತಸೂಕ್ಷ್ಮಗಳು ಎಂದರೆ ದೇಹಕ್ಕೆ ಕಾರಣವಾಗಿರುವ ಸೂಕ್ಷ್ಮವಾಗಿರುವ ಮಹಾಭೂತಾಂಶಗಳು. ಆಶ್ರಯವಾಗಿರುವ ಭೂತಗಳೂ ಇವೆ ಎಂದರೆ ಪ್ರಾಣಗಳಿಗೆ ಗತಿಯು ಸಿದ್ಧಿಸುತ್ತದೆ. ಸಂಪರಿಷ್ವಕ್ತನಾಗಿ ಎಂದರೆ ಭೂತಸೂಕ್ಷ್ಮಗಳಿಂದ ಕೂಡಿ ಎಂದರ್ಥ. ಕರಣಗಳು ಭೌತಿಕವಾದರೂ ದೇಹಕ್ಕೆ ಬೇಕಾದ ಭೂತಗಳನ್ನು ತೆಗೆದುಕೊಂಡು ಹೋಗುತ್ತಾನೆಯೆ ? –ಎಂದು ಇಲ್ಲಿ ಸಂಶಯ.

## ಪೂರ್ವಪಕ್ಷ :
## ದೇಹಾಂತರಕ್ಕೆ ಭೂತಮಾತ್ರೆಗಳನ್ನೊಯ್ಯುವದಿಲ್ಲ

(ಭಾಷ್ಯ)

೨೧೩. ಕಿಂ ತಾವತ್ ಪ್ರಾಪ್ತಮ್ ? ಅಸಂಪರಿಷ್ವಕ್ತಃ ಇತಿ। ಕುತಃ ? ಕರಣೋಪಾದಾನವತ್ ಭೂತೋಪಾದಾನಸ್ಯ ಅಶ್ರುತತ್ವಾತ್ । "ಸ ಏತಾ ಸ್ತೇಜೋಮಾತ್ರಾಃ ಸಮಭ್ಯಾದದಾನಃ" (ಬೃ. ೪-೪-೧) ಇತಿ ಹಿ ಅತ್ರ ತೇಜೋ ಮಾತ್ರಾಶಬ್ದೇನ ಕರಣಾನಾಮ್ ಉಪಾದಾನಂ ಸಂಕೀರ್ತಯತಿ। ವಾಕ್ಯಶೇಷೇ ಚಕ್ಷುರಾದಿಸಂಕೀರ್ತನಾತ್ । ನೈವಂ ಭೂತಮಾತ್ರೋಪಾದಾನಸಂಕೀರ್ತನ ಮಸ್ತಿ। ಸುಲಭಾಶ್ಚ ಸರ್ವತ್ರ ಭೂತಮಾತ್ರಾಃ। ಯತ್ರೈವ ದೇಹಃ ಆರಬ್ಧವ್ಯಃ ತತ್ರೈವ ಸನ್ತಿ । ತತಶ್ಚ ತಾಸಾಂ ನಯನಂ ನಿಷ್ಪ್ರಯೋಜನಮ್ । ತಸ್ಮಾತ್ ಅಸಂಪರಿಷ್ವಕ್ತೋ ಯಾತಿ ಇತಿ ॥

(ಭಾಷ್ಯಾರ್ಥ)

ಮೊದಲು ಯಾವ(ಪೂರ್ವಪಕ್ಷವು) ಬಂದೊದಗುತ್ತದೆ ? ಅಸಂಪರಿಷ್ವಕ್ತ ನಾಗಿ (ಹೋಗುತ್ತಾನೆ) ಎಂದು (ಬಂದೊದಗುತ್ತದೆ). ಏಕೆ ? ಎಂದರೆ ಕರಣ ಗಳನ್ನು ತೆಗೆದುಕೊಳ್ಳುತ್ತಾನೆಂದು (ಹೇಳಿರುವಂತೆ) ಭೂತಗಳನ್ನೂ ತೆಗೆದು ಕೊಂಡು ಹೋಗುತ್ತಾನೆಂದು ಶ್ರುತಿಯಲ್ಲಿ ಹೇಳಿರುವದಿಲ್ಲ. "ಅವನು ಈ ತೇಜೋಮಾತ್ರೆಗಳನ್ನು ತೆಗೆದುಕೊಂಡವನಾಗಿ (ಬೃ. ೪-೪-೧) ಎಂದು ತೇಜೋಮಾತ್ರಾಶಬ್ದದಿಂದ ಕರಣಗಳ ಉಪಾದಾನವನ್ನಲ್ಲವೆ, ಇಲ್ಲಿ ಹೇಳಿರು ತ್ತದೆ ? ಏಕೆಂದರೆ ವಾಕ್ಯಶೇಷದಲ್ಲಿ ಚಕ್ಷುರಾದಿಗಳನ್ನು ಹೇಳಿರುವದರಿಂದ (ಹೀಗೆಂದು ನಿಶ್ಚಯವಾಗುತ್ತದೆ)[1]. (ಆದರೆ) ಹೀಗೆ ಭೂತಮಾತ್ರೆಗಳನ್ನು ತೆಗೆದುಕೊಂಡು ಹೋಗುತ್ತಾನೆಂದು ಹೇಳಿರುವದಿಲ್ಲ. (ಇದಲ್ಲದೆ) ಭೂತ ಮಾತ್ರೆಗಳು ಎಲ್ಲಿಯಾದರೂ ಸುಲಭವಾಗಿ (ಸಿಕ್ಕುತ್ತವೆ). ಎಲ್ಲಿ (ಹೊಸ) ದೇಹವು ಉಂಟಾಗಬೇಕಾಗಿರುವದೋ ಅಲ್ಲಿಯೇ (ಅವು) ಇರುತ್ತವೆ. ಆದ್ದ ರಿಂದಲೂ ಅವನ್ನು ತೆಗೆದುಕೊಂಡು ಹೋಗುವದು ನಿಷ್ಪ್ರಯೋಜನವು. ಆದ್ದರಿಂದ (ಭೂತಸೂಕ್ಷ್ಮಗಳಿಂದ) ಅಸಂಪರಿಷ್ವಕ್ತನಾಗಿ ಹೋಗುತ್ತಾನೆ.

---

1. ವಿಷಯಗಳನ್ನು ಬೆಳಗುವದರಿಂದ ಚಕ್ಷುರಾದಿಗಳನ್ನು ತೇಜೋಮಾತ್ರೆ ಗಳೆಂದು ಕರೆದಿದೆ.

# ಸಿದ್ಧಾಂತ: ದೇಹಾಂತರಕ್ಕಾಗಿ ಭೂತಮಾತ್ರೆಗಳನ್ನು ಒಯ್ಯುತ್ತಾನೆ

(ಭಾಷ್ಯ)

೨೧೪. ಏವಂ ಪ್ರಾಪ್ತೇ ಪಠತ್ಯಾಚಾರ್ಯಃ 'ತದನ್ತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ' ಇತಿ । ತದನ್ತರಪ್ರತಿಪತ್ತೌ ದೇಹಾನ್ತರಪ್ರತಿಪತ್ತೌ ದೇಹಬೀಜೈಃ ಭೂತಸೂಕ್ಷ್ಮೈಃ ಸಂಪರಿಷ್ವಕ್ತಃ ರಂಹತಿ ಗಚ್ಛತಿ ಇತಿ ಅವಗನ್ತವ್ಯಮ್ । ಕುತಃ ? ಪ್ರಶ್ನನಿರೂಪಣಾಭ್ಯಾಮ್ । ತಥಾ ಹಿ ಪ್ರಶ್ನಃ– "ವೇತ್ಥ ಯಥಾ ಪಞ್ಚಮ್ಯಾಮ್ ಆಹುತಾವಾಪಃ ಪುರುಷವಚಸೋ ಭವನ್ತಿ" (ಛಾಂ. ೫–೩–೩) ಇತಿ । ನಿರೂಪಣಂ ಚ ಪ್ರತಿವಚನಂ ದ್ಯುಪರ್ಜನ್ಯಪೃಥಿವೀಪುರುಷಯೋಷಿತ್ಸು ಪಞ್ಚಸು ಅಗ್ನಿಷು ಶ್ರದ್ಧಾಸೋಮವೃಷ್ಟ್ಯನ್ನರೇತೋರೂಪಾಃ ಪಞ್ಚ ಆಹುತೀಃ ದರ್ಶಯಿತ್ವಾ "ಇತಿ ತು ಪಞ್ಚಮ್ಯಾಮಾಹುತಾವಾಪಃ ಪುರುಷವಚಸೋ ಭವನ್ತಿ" (ಛಾಂ. ೫–೯–೧) ಇತಿ । ತಸ್ಮಾತ್ ಅದ್ಭಿಃ ಪರಿವೇಷ್ಟಿತೋ ಜೀವೋ ರಂಹತಿ ವ್ರಜತಿ ಇತಿ ಗಮ್ಯತೇ । ನನು ಅನ್ಯಾ ಶ್ರುತಿಃ ಜಲೂಕಾವತ್ ಪೂರ್ವದೇಹಂ ನ ಮುಞ್ಚತಿ ಯಾವತ್ ನ ದೇಹಾನ್ತರಮ್ ಆಕ್ರಾಮತಿ ಇತಿ ದರ್ಶಯತಿ "ತದ್ಯಥಾ ತೃಣಜಲಾಯುಕಾ" (ಬೃ. ೪–೪–೩) ಇತಿ । ತತ್ರಾಪಿ ಅಪ್ಪರಿವೇಷ್ಟಿತಸ್ಯೈವ ಜೀವಸ್ಯ ಕರ್ಮೋಪಸ್ಥಾಪಿತಪ್ರತಿಪತ್ತವ್ಯದೇಹವಿಷಯಭಾವನಾದೀರ್ಘೀಭಾವಮಾತ್ರಂ ಜಲೂಕಯಾ ಉಪಮೀಯತೇ ಇತ್ಯವಿರೋಧಃ । ಏವಂ ಶ್ರುತ್ಯುಕ್ತೇ ದೇಹಾನ್ತರಪ್ರತಿಪತ್ತಿಪ್ರಕಾರೇ ಸತಿ ಯಾಃ ಪುರುಷಮತಿಪ್ರಭವಾಃ ಕಲ್ಪನಾಃ ವ್ಯಾಪಿನಾಂ ಕರಣಾನಾಮ್ ಆತ್ಮನಶ್ಚ ದೇಹಾನ್ತರಪ್ರತಿಪತ್ತೌ ಕರ್ಮವಶಾತ್ ವೃತ್ತಿಲಾಭಸ್ತತ್ರ ಭವತಿ । ಕೇವಲಸ್ಯೈವ ಆತ್ಮನಃ ವೃತ್ತಿಲಾಭಃ ತತ್ರ ಭವತಿ । ಇನ್ದ್ರಿಯಾಣಿ ತು ದೇಹವತ್ ಅಭಿನವಾನ್ಯೇವ ತತ್ರ ತತ್ರ ಭೋಗಸ್ಥಾನೇ ಉತ್ಪದ್ಯನ್ತೇ । ಮನ ಏವ ವಾ ಕೇವಲಂ ಭೋಗಸ್ಥಾನಮ್ ಅಭಿಪ್ರತಿಷ್ಠೇತ । ಜೀವ ಏವ ಉತ್ಪ್ಲುತ್ಯ ದೇಹಾದ್ ದೇಹಾನ್ತರಂ ಪ್ರತಿಪದ್ಯತೇ, ಶುಕ ಇವ ವೃಕ್ಷಾದ್ ವೃಕ್ಷಾನ್ತರಮ್ । ಇತ್ಯೇವಮಾದ್ಯಾಃ ಸರ್ವಾ ಏವ ಅನಾದರ್ತವ್ಯಾಃ । ಶ್ರುತಿವಿರೋಧಾತ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ **ಆಚಾರ್ಯರು** "ತದನ್ತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ......" ಎಂಬೀ (ಸೂತ್ರವನ್ನು) ಹೇಳಿರುತ್ತಾರೆ. 'ತದನ್ತರಪ್ರತಿಪತ್ತೌ' (ಎಂದರೆ) ದೇಹಾನ್ತರಪ್ರಾಪ್ತಿಯಾಗುವಲ್ಲಿ ದೇಹಬೀಜಗಳಾದ ಭೂತಸೂಕ್ಷ್ಮಗಳಿಂದ ಸಂಪರಿಷ್ವಕ್ತನಾಗಿ 'ರಂಹತಿ' (ಎಂದರೆ)

ಹೋಗುತ್ತಾನೆ ಎಂದು ತಿಳಿಯಬೇಕು. ಏಕೆ ? ಎಂದರೆ (ಪ್ರಶ್ನನಿರೂಪಣಾಭ್ಯಾಮ್) ಪ್ರಶ್ನನಿರೂಪಣಗಳಿಂದ. ಹೇಗೆಂದರೆ "ಐದನೆಯ ಆಹುತಿಯಲ್ಲಿ ಅಪ್ಪು ಹೇಗೆ ಪುರುಷವಚಸ್ಸಾಗುತ್ತದೆ[1] ಎಂಬುದನ್ನು ಬಲ್ಲೆಯ ?" (ಛಾಂ. ೫-೩-೩) ಎಂದು ಪ್ರಶ್ನೆಯು. ದ್ಯುಲೋಕ, ಪರ್ಜನ್ಯ, ಪೃಥಿವಿ, ಪುರುಷ, ಸ್ತ್ರೀ- ಎಂಬ ಐದು ಅಗ್ನಿಗಳಲ್ಲಿ ಶ್ರದ್ಧೆ, ಸೋಮ, ವೃಷ್ಟಿ, ಅನ್ನ, ರೇತಸ್ಸು- ಎಂಬ ರೂಪದ ಐದು ಆಹುತಿಗಳನ್ನು ತಿಳಿಸಿ "ಹೀಗೆಯೇ ಐದನೆಯ ಆಹುತಿಯಲ್ಲಿ ಅಪ್ಪು ಪುರುಷವಚಸ್ಸಾಗುತ್ತದೆ" (ಛಾಂ. ೫-೯-೧) ಎಂದು ನಿರೂಪಣವು ಎಂದರೆ ಉತ್ತರವೂ (ಇದೆ). ಆದ್ದರಿಂದ ಅಪ್ಪಿನಿಂದ ಸುತ್ತುವರಿಯಲ್ಪಟ್ಟು ಜೀವನು 'ರಂಹತಿ' ಎಂದರೆ ಹೋಗುತ್ತಾನೆ ಎಂದು ನಿಶ್ಚಯವಾಗುತ್ತದೆ.

(ಆಕ್ಷೇಪ) :- "ತದ್ಯಥಾ ತೃಣಜಲಾಯುಕಾ" (ಬೃ. ೪-೪-೩) ಎಂಬ ಬೇರೊಂದು ಶ್ರುತಿಯು ಜಿಗಣೆಯಂತೆ ಮತ್ತೊಂದು ದೇಹವನ್ನು ಆಕ್ರಮಿಸುವವರೆಗೂ ಮೊದಲಿನ ದೇಹವನ್ನು ಬಿಡುವದಿಲ್ಲ ಎಂದು ಹೇಳುತ್ತದೆಯಲ್ಲ !

(ಪರಿಹಾರ) :- ಅಲ್ಲಿಯೂ ಅಪ್ಪಿನಿಂದ ಸುತ್ತುವರಿಯಲ್ಪಟ್ಟಿರುವ ಜೀವನ ಕರ್ಮವು ತಂದೊಡ್ಡುವ ಪ್ರಾಪ್ತವ್ಯದೇಹವಿಷಯದ ಭಾವನೆಯ ದೀರ್ಘೀಭಾವವನ್ನೇ ಜಿಗಣೆಗೆ ಹೋಲಿಸಿರುತ್ತದೆಯಾದ್ದರಿಂದ (ಯಾವ) ವಿರೋಧವೂ ಇಲ್ಲ[2].

ಹೀಗೆ ದೇಹಾಂತರವನ್ನು ಪಡೆಯುವ ಪ್ರಕಾರವನ್ನು ಶ್ರುತಿಯು ಹೇಳಿರುವಲ್ಲಿ (೧) **ವ್ಯಾಪಿಗಳಾದ ಕರಣಗಳಿಗೂ ಆತ್ಮಕ್ಕೂ ದೇಹಾಂತರಪ್ರಾಪ್ತಿಯಾದ ಬಳಿಕ ಕರ್ಮವಶದಿಂದ ವೃತ್ತಿಲಾಭವಾಗುತ್ತದೆ[3] ; (೨) ಬರಿಯ ಆತ್ಮಕ್ಕೇ ಅಲ್ಲಿ ವೃತ್ತಿಲಾಭವಾಗುತ್ತದೆ[4] ; ಇಂದ್ರಿಯಗಳಾದರೋ ದೇಹದಂತೆ ಹೊಸವೇ ಆಯಾ ಭೋಗಸ್ಥಾನದಲ್ಲಿ ಉಂಟಾಗು**

---

1. ಪುರುಷಶಬ್ದವಾಚ್ಯವಾಗುತ್ತವೆ.

2. ಪ್ರಕೃತವಾದ ಛಾಂದೋಗ್ಯಕ್ಕಿಂತ ಬೇರೆಯಾದ ಬೃ. ೪-೪-೩ರಲ್ಲಿ ಈ ಉಪಮಾನವನ್ನು ಕೊಟ್ಟಿದೆ.

3. ಈ ಪಕ್ಷವನ್ನೇ ಬೃ. ೪-೪-೩ರ ಭಾಷ್ಯದಲ್ಲಿ ಒಪ್ಪಿರುತ್ತದೆ ; ೪-೪-೨ರಲ್ಲಿ ಯುಕ್ತಿಪೂರ್ವಕವಾಗಿ ಪ್ರತಿಪಾದಿಸಿದೆ. ಸೂತ್ರಭಾಷ್ಯಕ್ಕೂ ಉಪನಿಷದ್ಭಾಷ್ಯಕ್ಕೂ ಇರುವ ಈ ಅಭಿಪ್ರಾಯಭೇದಕ್ಕೆ ಕಾರಣವು ತಿಳಿಯದು. ೨-೪-೭ರ ಭಾಷ್ಯವನ್ನೂ ಈ ವಿಷಯದ ಟಿಪ್ಪಣಿಯನ್ನೂ ನೋಡಿರಿ. ಇಲ್ಲಿ ಕರಣಗಳಿಗೂ ಆತ್ಮಕ್ಕೂ (ಆತ್ಮನಿಗೂ) ಎಂಬುದರ ಅಭಿಪ್ರಾಯವು ವಿಚಾರಣೀಯವಾಗಿದೆ. ೨-೪-೬ರ ಭಾಷ್ಯದಲ್ಲಿ ಹೇಳಿರುವಂತೆ ಆತ್ಮವೆಂದರೆ ಮನಸ್ಸೆ, ಅಥವಾ ಬೃ. ಭಾ. ೪-೪-೩ರಂತೆ ಜೀವಾತ್ಮನೆ ?

4. ಇಲ್ಲಿಯೂ ಆತ್ಮಶಬ್ದದ ಅಭಿಪ್ರಾಯವು ವಿಚಾರಣೀಯವಾಗಿದೆ.

ತ್ತವೆ; (೩) ಅಥವಾ ಮನಸ್ಸೊಂದೇ ಭೋಗಸ್ಥಾನಕ್ಕೆ ಹೋಗಿ ನೋಡುತ್ತದೆ;[1] (೪) ಜೀವನೇ[2] ಗಿಳಿಯು ಮರದಿಂದ ಮರಕ್ಕೆ ಹಾರುವಂತೆ (ಒಂದು) ದೇಹದಿಂದ ಮತ್ತೊಂದು ದೇಹಕ್ಕೆ ಹೋಗುತ್ತಾನೆ- ಎಂಬೀ ಮುಂತಾದ ಪುರುಷಮತಿಯಿಂದುಂಟಾಗಿರುವ ಕಲ್ಪನೆಗಳನ್ನೆಲ್ಲವನ್ನು ತಿರಸ್ಕರಿಸಬೇಕು; ಏಕೆಂದರೆ (ಅವೆಲ್ಲ) ಶ್ರುತಿವಿರುದ್ಧವಾಗಿರುತ್ತವೆ.

## ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ॥ ೨ ॥

೬. ಆದರೆ ತ್ರ್ಯಾತ್ಮಕವಾಗಿರುವದರಿಂದ (ಶಂಕೆಗೆ ಕಾರಣವಿಲ್ಲ); ಹೆಚ್ಚಾಗಿರುವದರಿಂದ ('ಅಪ್ಪು' ಎಂದಿದೆ).

## ಭೂತಮಾತ್ರೆಗಳನ್ನು ಅಪ್ಪು ಎಂದು ಕರೆದಿರುವದಕ್ಕೆ ಕಾರಣ

(ಭಾಷ್ಯ)

೨೧೫. ನನು ಉದಾಹೃತಾಭ್ಯಾಂ ಪ್ರಶ್ನಪ್ರತಿವಚನಾಭ್ಯಾಂ ಕೇವಲಾಭಿಃ ಅದ್ಭಿಃ ಸಂಪರಿಷ್ವಕ್ತೋ ರಂಹತಿ ಇತಿ ಪ್ರಾಪ್ನೋತಿ। ಅಪ್ಶಬ್ದಶ್ರವಣಸಾಮರ್ಥ್ಯಾತ್। ತತ್ರ ಕಥಂ ಸಾಮಾನ್ಯೇನ ಪ್ರತಿಜ್ಞಾಯತೇ ಸರ್ವೈರೇವ ಭೂತಸೂಕ್ಷ್ಮೈಃ ಸಂಪರಿಷ್ವಕ್ತೋ ರಂಹತಿ ಇತಿ? ಅತ ಉತ್ತರಂ ಪಠತಿ ('ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್')। ತುಶಬ್ದೇನ ಚೋದಿತಾಮ್ ಆಶಙ್ಕಾಮ್ ಉಚ್ಛಿನತ್ತಿ। ತ್ರ್ಯಾತ್ಮಿಕಾ ಹಿ ಆಪಃ। ತ್ರಿವೃತ್ಕರಣಶ್ರುತೇಃ। ತಾಸು ಆರಮ್ಭಿಕಾಸು ಅಭ್ಯುಪಗತಾಸು ಇತರದಪಿ ಭೂತದ್ವಯಮ್ ಅವಶ್ಯಮ್ ಅಭ್ಯುಪಗನ್ತವ್ಯಂ ಭವತಿ। ತ್ರ್ಯಾತ್ಮಕಶ್ಚ ದೇಹಃ। ತ್ರಯಾಣಾಮಪಿ ತೇಜೋಽಬನ್ನಾನಾಂ ತಸ್ಮಿನ್ ಕಾರ್ಯೋಪಲಬ್ಧೇಃ। ಪುನಶ್ಚ ತ್ರ್ಯಾತ್ಮಕಃ ತ್ರಿಧಾತುತ್ವಾತ್ ತ್ರಿಭಿರ್ವಾತಪಿತ್ತಶ್ಲೇಷ್ಮಭಿಃ। ನ ಸ ಭೂತಾನ್ತರಾಣಿ ಪ್ರತ್ಯಾಖ್ಯಾಯ ಕೇವಲಾಭಿಃ ಅದ್ಭಿಃ ಆರಬ್ಧುಂ ಶಕ್ಯತೇ। ತಸ್ಮಾತ್ ಭೂಯಸ್ತ್ವಾಪೇಕ್ಷೋಽಯಮ್ ಆಪಃ ಪುರುಷವಚಸಃ ಇತಿ ಪ್ರಶ್ನಪ್ರತಿವಚನಯೋಃ ಅಪ್ಶಬ್ದಃ, ನ ಕೈವಲ್ಯಾಪೇಕ್ಷಃ। ಸರ್ವದೇಹೇಷು ಹಿ ರಸಲೋಹಿತಾದಿದ್ರವದ್ರವ್ಯಭೂಯಸ್ತ್ವಂ ದೃಶ್ಯತೇ। ನನು ಪಾರ್ಥಿವೋ ಧಾತುಃ ಭೂಯಿಷ್ಠೋ ದೇಹೇಷು ಉಪಲಕ್ಷ್ಯತೇ। ನೈಷ ದೋಷಃ। ಇತರಾಪೇಕ್ಷಯಾಪಿ ಅಪಾಂ ಬಾಹುಲ್ಯಂ ಭವಿಷ್ಯತಿ। ದೃಶ್ಯತೇ ಚ ಶುಕ್ಲಶೋಣಿತಲಕ್ಷಣೇಽಪಿ ದೇಹಬೀಜೇ ದ್ರವಬಾಹುಲ್ಯಮ್। ಕರ್ಮ ಚ ನಿಮಿತ್ತ

1. ಇದು ವೈಶೇಷಿಕರ ಕಲ್ಪನೆ. 2. ಜೈನರ ಕಲ್ಪನೆ.

ಕಾರಣಂ ದೇಹಾಸ್ತರಾರಮ್ಭೇ ಕರ್ಮಾಣಿ ಚ ಅಗ್ನಿಹೋತ್ರಾದೀನಿ ಸೋಮಾಜ್ಯ ಪಯಃಪ್ರಭೃತಿದ್ರವದ್ರವ್ಯವ್ಯಪಾಶ್ರಯಾಣಿ । ಕರ್ಮಸಮವಾಯಿನ್ಯಶ್ಚ ಆಪಃ ಶ್ರದ್ಧಾಶಬ್ದೋದಿತಾಃ ಸಹ ಕರ್ಮಭಿಃ ದ್ಯುಲೋಕಾಖ್ಯೇ ಅಗ್ನೌ ಹೂಯನ್ತೇ (ಛಾಂ ೫-೪-೨) ಇತಿ ವಕ್ಷ್ಯತಿ । ತಸ್ಮಾದಪಿ ಅಪಾಂ ಬಾಹುಲ್ಯಪ್ರಸಿದ್ಧಿಃ । ಬಾಹುಲ್ಯಾಚ್ಚ ಅಪ್ಶಬ್ದೇನ ಸರ್ವೇಷಾಮೇವ ದೇಹಬೀಜಾನಾಂ, ಭೂತ ಸೂಕ್ಷ್ಮಾಣಾಮ್ ಉಪಾದಾನಮ್ ಇತಿ ನಿರವದ್ಯಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಉದಾಹರಿಸಿರುವ (ಈ) ಪ್ರಶ್ನಪ್ರತಿವಚನಗಳಿಂದ ಕೇವಲ ಅಪ್ಪಿನಿಂದ ಸಂಪರಿಷ್ವಕ್ತನಾಗಿ ಹೋಗುತ್ತಾನೆ ಎಂದು ಪ್ರಾಪ್ತವಾಗುತ್ತದೆ. (ವಾಕ್ಯಗಳಲ್ಲಿ) ಅಪ್ಶಬ್ದವನ್ನು ಶ್ರುತಿಯಲ್ಲಿ (ಹೇಳಿರುವದರಿಂದ) ಸಾಮರ್ಥ್ಯ ದಿಂದ (ಇದು ಸಿದ್ಧವಾಗುತ್ತದೆ). ಹೀಗಿರುವಲ್ಲಿ ಎಲ್ಲಾ ಭೂತಸೂಕ್ಷ್ಮಗಳಿಂದ ಲೂ ಸಂಪರಿಷ್ವಕ್ತನಾಗಿ ಹೋಗುತ್ತಾನೆ ಎಂದು ಸಾಮಾನ್ಯವಾಗಿ ಹೇಳಿರುವದು ಹೇಗೆ (ಸರಿ) ?

(ಪರಿಹಾರ) :- ಇದಕ್ಕೆ ಉತ್ತರವನ್ನು ಸೂತ್ರಕಾರರು ಹೇಳಿರುವದೇ ನೆಂದರೆ (ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್)। (ಸೂತ್ರದಲ್ಲಿ) ತುಶಬ್ದದಿಂದ (ಪೂರ್ವಪಕ್ಷಿಯು) ತೆಗೆದಿರುವ ಆಶಂಕೆಯನ್ನು ಪರಿಹರಿಸಿರುತ್ತದೆ. ಅಪ್ಪು ತ್ರ್ಯಾತ್ಮಕವಾಗಿರುತ್ತವೆ; ಏಕೆಂದರೆ (ಇಲ್ಲಿ) ತ್ರಿವೃತ್ಕರಣಶ್ರುತಿಯಿದೆ. ಆ (ಅಪ್ಪು) ಆರಂಭಕವೆಂದು ಒಪ್ಪಿದರೆ ಉಳಿದ ಎರಡು ಭೂತಗಳೂ (ಆರಂಭಕ ವೆಂದು) ಅವಶ್ಯವಾಗಿ ಒಪ್ಪಬೇಕಾಗುತ್ತದೆ. ದೇಹವೂ ತ್ರ್ಯಾತ್ಮಕವಾಗಿರು ತ್ತದೆ; ಏಕೆಂದರೆ ಅದರಲ್ಲಿ ತೇಜ, ಅಪ್ಪು, ಅನ್ನ- ಮೂರರ ಕಾರ್ಯವೂ ಕಂಡುಬರುತ್ತದೆ[1]. ಮತ್ತೂ ಒಂದು ಬಗೆಯಿಂದ (ಅದು) ತ್ರ್ಯಾತ್ಮಕವಾಗಿರು ತ್ತದೆ. ಏಕೆಂದರೆ ವಾತ, ಪಿತ್ತ, ಶ್ಲೇಷ್ಮ- ಎಂಬ ಮೂರರ (ಮಿಶ್ರಣದಿಂದ ಅದು) ಧಾತುತ್ರಯರೂಪವಾಗಿರುತ್ತದೆ. ಈ (ದೇಹವು) ಮಿಕ್ಕ ಭೂತಗಳನ್ನು ಬಿಟ್ಟು ಬರಿಯ ಅಪ್ಪಿನಿಂದ ಆರಬ್ಧವಾಗುವಂತಿಲ್ಲ. ಆದ್ದರಿಂದ 'ಅಪ್ಪು ಪುರುಷ ವಚಸ್ಸಾಗುತ್ತದೆ' ಎಂದು ಪ್ರಶ್ನಪ್ರತಿವಚನಗಳಲ್ಲಿ (ಕಂಡುಬರುವ) ಅಪ್ಶಬ್ದವು ಭೂಯಸ್ತ್ವದ ಅಪೇಕ್ಷೆಯಿಂದ (ಪ್ರಯುಕ್ತವಾದದ್ದೇ ಹೊರತು) ಅದೊಂದೇ

---

1. "ತ್ರ್ಯಾತ್ಮಕತ್ವಾತ್" ಎಂಬುದಕ್ಕೆ ಭಾಷ್ಯದಲ್ಲಿ ಬೇರೆಬೇರೆಯ ಅರ್ಥಗಳನ್ನು ಹೇಳಿರುತ್ತದೆ. ಛಾಂದೋಗ್ಯದಲ್ಲಿ ತ್ರಿವೃತ್ಕರಣವನ್ನು ಹೇಳಿರುವದರಿಂದ ಸೂತ್ರಕಾರರು "ತ್ರ್ಯಾತ್ಮಕತ್ವಾತ್" ಎಂದಿದ್ದರೂ ತ್ರಿವೃತ್ಕರಣವು ಪಂಚೀಕರಣಕ್ಕೆ ಉಪಲಕ್ಷಣವಾಗಿರುವದ ರಿಂದ "ಪಞ್ಚಾತ್ಮಕತ್ವಾತ್" ಎಂದು ಹೇಳಿದಂತೆ ಭಾವಿಸಬೇಕು.

ಎಂಬ ಅಪೇಕ್ಷೆಯಿಂದ (ಪ್ರಯುಕ್ತ)ವಾದವಲ್ಲ. ಏಕೆಂದರೆ ಎಲ್ಲಾ ದೇಹ ಗಳಲ್ಲಿಯೂ ರಸ, ರಕ್ತ– ಮುಂತಾದ ದ್ರವದ್ರವ್ಯಗಳು ಹೆಚ್ಚಾಗಿರುವದು ಕಂಡು ಬರುತ್ತದೆಯಲ್ಲವೆ ?

(ಆಕ್ಷೇಪ) :— ಪೃಥಿವೀಧಾತುವು ದೇಹಗಳಲ್ಲಿ ಎಲ್ಲಕ್ಕಿಂತಲೂ ಹೆಚ್ಚಾಗಿ ರುವದು ಕಂಡುಬರುವದಿಲ್ಲವೆ ?

(ಪರಿಹಾರ) : — ಇದೇನೂ ದೋಷವಲ್ಲ. (ಮಿಕ್ಕ) ಧಾತುಗಳಿಗೆ ಹೋಲಿಸಿದರೆ ಅಪ್ಪು ಹೆಚ್ಚಾಗಿರುವದೆಂದೂ ಆಗಬಹುದು. ಶುಕ್ಲಶೋಣಿತ ರೂಪವಾದ ದೇಹಬೀಜದಲ್ಲಿ ದ್ರವವು ಹೆಚ್ಚಾಗಿರುವದು ಕಂಡುಬರುತ್ತದೆ. ಇದೂ ಅಲ್ಲದೆ ದೇಹಾಂತರವು ಹುಟ್ಟುವದಕ್ಕೆ ಕರ್ಮವು ನಿಮಿತ್ತಕಾರಣವು; ಅಗ್ನಿಹೋತ್ರವೇ ಮುಂತಾದ ಕರ್ಮಗಳು ಸೋಮ, ಆಜ್ಯ, ಹಾಲು–ಮುಂತಾದ ದ್ರವದ್ರವ್ಯಗಳನ್ನು ಆಶ್ರಯಿಸಿಕೊಂಡಿರುತ್ತವೆ. ಶ್ರದ್ಧಾಶಬ್ದವಾಚ್ಯವಾದ ಕರ್ಮಸಂಬಂಧವಾದ ಅಪ್ಪು ಕರ್ಮಗಳೊಡನೆ ದ್ಯುಲೋಕವೆಂಬ ಅಗ್ನಿಯಲ್ಲಿ ಹುತವಾಗುತ್ತವೆ- ಎಂದು (ಮುಂದೆ ಛಾಂ.೫-೪-೨ರಲ್ಲಿ) ಶ್ರುತಿಯಲ್ಲಿ ಹೇಳಿಯೂ ಇರುತ್ತದೆ. ಆದ್ದರಿಂದಲೂ ಅಪ್ಪು ಹೆಚ್ಚಾಗಿವೆ ಎಂಬುದು ಸಿದ್ಧವಾಗುತ್ತದೆ. (ಹೀಗೆ) ಹೆಚ್ಚಾಗಿರುವದರಿಂದ (ಶ್ರುತಿಯಲ್ಲಿ ಪ್ರಯುಕ್ತವಾಗಿರುವ) ಅಪ್ಶಬ್ದ ದಿಂದ ದೇಹಬೀಜವಾಗಿರುವ ಎಲ್ಲಾ ಭೂತಸೂಕ್ಷ್ಮಗಳನ್ನೂ ಗ್ರಹಿಸಬೇಕು ಎಂದು ನಿಶ್ಚಯಿಸಬೇಕು[1].

## ಪ್ರಾಣಗತೇಶ್ಚ ॥ ೩ ॥

೩. ಪ್ರಾಣಗತಿ(ಯನ್ನು ಹೇಳಿರುವದ)ರಿಂದಲೂ (ಹೀಗೆ).

## ಪ್ರಾಣಗಳ ಗತಿಗೆ ಆಶ್ರಯವಾಗಿ ಭೂತಗಳು ಬೇಕು

(ಭಾಷ್ಯ)

೨೧೬. ಪ್ರಾಣಾನಾಂ ಚ ದೇಹಾನ್ತರಪ್ರತಿಪತ್ತೌ ಗತಿಃ ಶ್ರಾವ್ಯತೇ– "ತಮುತ್ಕ್ರಾಮನ್ತಂ ಪ್ರಾಣೋಽನೂತ್ಕ್ರಾಮತಿ ಪ್ರಾಣಮನೂತ್ಕ್ರಾಮನ್ತಂ ಸರ್ವೇ ಪ್ರಾಣಾ ಅನೂತ್ಕ್ರಾಮನ್ತಿ" (ಬೃ. ೪–೪–೯) ಇತ್ಯಾದಿಶ್ರುತಿಭಿಃ। ಸಾ ಚ ಪ್ರಾಣಾನಾಂ ಗತಿಃ ನಾಶ್ರಯಮನ್ತರೇಣ ಸಂಭವತಿ ಇತ್ಯತಃ ಪ್ರಾಣಗತಿಪ್ರಯುಕ್ತಾ ತದಾಶ್ರಯಭೂತಾನಾಮ್ ಅಪಾಮಪಿ

---

1. ಭೂಯಸ್ತ್ವಾತ್ ಎಂಬುದನ್ನು ಬೇರೆಬೇರೆಯ ಪ್ರಕಾರಗಳಿಂದ ವ್ಯಾಖ್ಯಾನಮಾಡಿ ಶ್ರುತಿಯಲ್ಲಿ ಅಪ್ಶಬ್ದವು ಪಂಚಭೂತಗಳನ್ನು ತಿಳಿಸುತ್ತದೆ ಎಂದು ಇಲ್ಲಿ ತೀರ್ಮಾನಿಸಿದೆ.

ಭೂತಾನ್ತರೋಪಸೃಷ್ಟಾನಾಂ ಗತಿಃ ಅವಗಮ್ಯತೇ । ನ ಹಿ ನಿರಾಶ್ರಯಾಃ ಪ್ರಾಣಾಃ ಕ್ವಚಿದ್ ಗಚ್ಛನ್ತಿ ತಿಷ್ಠನ್ತಿ ವಾ । ಜೀವತೋಽದರ್ಶನಾತ್ ॥[1]

(ಭಾಷ್ಯಾರ್ಥ)

ಮತ್ತು ದೇಹಾಂತರಪ್ರಾಪ್ತಿಯಾಗುವಾಗ ಪ್ರಾಣಗಳಿಗೆ ಗತಿಯನ್ನು "ಉತ್ಕ್ರಮಣವಾಗುವಾಗ ಪ್ರಾಣವು ಅವನ ಹಿಂದೆಯೇ ಉತ್ಕ್ರಮಿಸುವದು; ಪ್ರಾಣವು ಉತ್ಕ್ರಮಿಸಲು ಎಲ್ಲಾ ಪ್ರಾಣಗಳೂ ಹಿಂದೆಯೇ ಉತ್ಕ್ರಮಿಸುವವು" (ಬೃ. ೪-೪-೨) ಎಂಬಿದೇ ಮುಂತಾದ ಶ್ರುತಿಗಳಲ್ಲಿ ಹೇಳಿರುತ್ತದೆ. ಪ್ರಾಣಗಳ ಈ ಗತಿಯು ಆಶ್ರಯವಿಲ್ಲದೆ ಸಂಭವಿಸುವದಿಲ್ಲವಾದ್ದರಿಂದ ಪ್ರಾಣಗತಿಯು ನಿಮಿತ್ತದಿಂದ, ಆದಕ್ಕಾಶ್ರಯವಾಗಿರುವ ಭೂತಾಂತರಸಂಬದ್ಧವಾದ ಅಪ್ಪಿಗೂ ಗತಿಯು (ಆಗುವದೆಂದು) ನಿಶ್ಚಯವಾಗುತ್ತದೆ. ಪ್ರಾಣಗಳು ಯಾವದೊಂದು ಆಶ್ರಯವೂ ಇಲ್ಲದೆ ಎಲ್ಲಿಯೂ ಹೋಗಲೂ ಆರವು, ಇರಲೂ ಆರವು. ಅಲ್ಲವೆ ? ಏಕೆಂದರೆ ಬದುಕಿರುವವನ (ಪ್ರಾಣಗಳು ನಿರಾಶ್ರಯವಾಗಿರುವದು) ಕಂಡಿರುವದಿಲ್ಲ[2].

**ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ॥ ೪ ॥**

೪. ಆಗ್ನ್ಯಾದಿಗತಿಯು ಶ್ರುತ್ಯುಕ್ತವಾಗಿರುವದರಿಂದ (ಇದು ಸರಿಯಲ್ಲ) ಎಂದರೆ ಹಾಗಲ್ಲ; ಏಕೆಂದರೆ (ಅದು) ಭಾಕ್ತವಾಗಿದೆ.

(ಭಾಷ್ಯ)

೨೧೭. ಸ್ಯಾದೇತತ್ । ನೈವ ಪ್ರಾಣಾಃ ದೇಹಾನ್ತರಪ್ರತಿಪತ್ತೌ ಸಹ ಜೀವೇನ ಗಚ್ಛನ್ತಿ । ಅಗ್ನ್ಯಾದಿಗತಿಶ್ರುತೇಃ । ತಥಾ ಹಿ ಶ್ರುತಿಃ ಮರಣಕಾಲೇ ವಾಗಾದಯಃ ಪ್ರಾಣಾಃ ಅಗ್ನ್ಯಾದೀನ್ ದೇವಾನ್ ಗಚ್ಛನ್ತಿ ಇತಿ ದರ್ಶಯತಿ– "ಯತ್ರಾಸ್ಯ ಪುರುಷಸ್ಯ ಮೃತಸ್ಯಾಗ್ನಿಂ ವಾಗಪ್ಯೇತಿ ವಾತಂ ಪ್ರಾಣಃ" (ಬೃ. ೩-೨-೧೩) ಇತ್ಯಾದಿನಾ ಇತಿ ಚೇತ್ । ನ । ಭಾಕ್ತತ್ವಾತ್ । ವಾಗಾದೀನಾಮ್ ಅಗ್ನ್ಯಾದಿಗತಿಶ್ರುತಿಃ ಗೌಣೀ । ಲೋಮಸು ಕೇಶೇಷು ಚ ಅದರ್ಶನಾತ್ । "ಓಷಧೀರ್ಲೋಮಾನಿ ವನಸ್ಪತೀನ್ ಕೇಶಾಃ" (ಬೃ. ೩-೨-೧೩) ಇತಿ ಹಿ ತತ್ರ ಆಮ್ನಾಯತೇ । ನ ಹಿ ಲೋಮಾನಿ ಕೇಶಾಶ್ಚ ಉತ್ಪ್ಲುತ್ಯ ಔಷಧೀಃ ವನಸ್ಪತೀಂಶ್ಚ ಗಚ್ಛನ್ತಿ ಇತಿ ಸಂಭವತಿ । ನ ಚ ಜೀವಸ್ಯ ಪ್ರಾಣೋಪಾಧಿಪ್ರತ್ಯಾಖ್ಯಾನೇ ಗಮನಮ್ ಅವಕಲ್ಪತೇ ।[3] ನಾಪಿ ಪ್ರಾಣೈರ್ವಿನಾ

---

1. 'ದರ್ಶನಾತ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ಆದ್ದರಿಂದ ಸತ್ತಬಳಿಕವೂ ಅವು ನಿರಾಶ್ರಯವಾಗಿ ತಾವೇ ಹೋಗಲಾರವು ಎಂದರ್ಥ.

3. 'ಅವಕಲ್ಪ್ಯತೇ' ಎಂಬ ಅಚ್ಚಿನಪಾಠಕ್ಕಿಂತ ಇದೇ ಮೇಲು.

ದೇಹಾನ್ತರೇ ಉಪಭೋಗಃ ಉಪಪದ್ಯತೇ । ವಿಸ್ಪಷ್ಟಂ ಚ ಪ್ರಾಣಾನಾಂ ಸಹ ಜೀವೇನ ಗಮನಮ್ ಅನ್ಯತ್ರ ಶ್ರಾವಿತಮ್ । ಅತಃ ವಾಗಾದ್ಯಧಿಷ್ಠಾತ್ರೀಣಾಮ್ ಅಗ್ನ್ಯಾದಿದೇವತಾನಾಂ ವಾಗಾದ್ಯುಪಕಾರಿಣೀನಾಂ ಮರಣಕಾಲೇ ಉಪಕಾರನಿವೃತ್ತಿಮಾತ್ರಮ್ ಅಪೇಕ್ಷ್ಯ ವಾಗಾದಯಃ ಅಗ್ನ್ಯಾದೀನ್ ಗಚ್ಛನ್ತಿ ಇತಿ ಉಪಚರ್ಯತೇ ॥

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಮತವು) ಇದಾಗಿರಬಹುದು: ಪ್ರಾಣಗಳು ದೇಹಾನ್ತರ ಪ್ರಾಪ್ತಿಯಾಗುವಾಗ (ಜೀವನ) ಜೊತೆಯಲ್ಲಿ ಹೋಗುವದಿಲ್ಲ. ಏಕೆಂದರೆ ಅಗ್ನ್ಯಾದಿಗಳಲ್ಲಿ ಗತಿಯು ಶ್ರುತ್ಯುಕ್ತವಾಗಿರುತ್ತದೆ. ಹೇಗೆಂದರೆ ಮರಣಕಾಲ ದಲ್ಲಿ ವಾಗಾದಿಗಳು ಅಗ್ನ್ಯಾದಿದೇವತೆಗಳನ್ನು ಸೇರಿಕೊಳ್ಳುತ್ತವೆ ಎಂದು "ಯಾವಾಗ ಈ ಮೃತಪುರುಷನ ವಾಕ್ಕು ಅಗ್ನಿಯನ್ನು ಸೇರುವದೋ, ಪ್ರಾಣವು ವಾಯುವನ್ನು (ಸೇರುವದೋ) ..... (ಬೃ. ೩-೨-೧೩) ಎಂದು ಮುಂತಾದ ವಾಕ್ಯದಿಂದ ಹೇಳಿರುತ್ತದೆ.

ಹೀಗೆಂದರೆ (ಇದು) ಸರಿಯಲ್ಲ. ಏಕೆಂದರೆ ಭಾಕ್ತವಾಗಿರುತ್ತದೆ. ವಾಗಾದಿಗಳು ಅಗ್ನ್ಯಾದಿಗಳಲ್ಲಿ ಹೋಗಿ ಸೇರಿಕೊಳ್ಳುವದೆಂಬುದು ಗೌಣವು; ಏಕೆಂದರೆ ಲೋಮಗಳ ಮತ್ತು ಕೇಶಗಳ ವಿಷಯದಲ್ಲಿ (ಅದು) ಕಂಡುಬರುವದಿಲ್ಲ. "ಲೋಮಗಳು ಗಿಡಗಳನ್ನೂ ಕೇಶಗಳು ವನಸ್ಪತಿಗಳನ್ನೂ (ಸೇರುತ್ತವೆ)" (ಬೃ. ೩-೨-೧೩) ಎಂದಲ್ಲವೆ, (ಶ್ರುತಿ)ಯಲ್ಲಿರುವದು ? ಲೋಮಗಳೂ ಕೇಶಗಳೂ ಹಾರಿಕೊಂಡುಹೋಗಿ ಗಿಡಗಳನ್ನೂ ಮರಗಳನ್ನೂ ಸೇರಿಕೊಳ್ಳುತ್ತವೆ ಎಂಬುದು ಸಂಭವಿಸುವದಿಲ್ಲವಷ್ಟೆ. ಜೀವನಿಗೆ ಪ್ರಾಣಗಳೆಂಬ ಉಪಾಧಿಯನ್ನು ಬಿಟ್ಟರೆ ಗಮನವು ಉಪಪನ್ನವೂ ಆಗುವದಿಲ್ಲ. ಪ್ರಾಣಗಳಿಲ್ಲದೆ ದೇಹಾಂತರ ದಲ್ಲಿ ಉಪಭೋಗವೂ ಹೊಂದುವದಿಲ್ಲ. ಮತ್ತು ಇನ್ನೊಂದು ವಚನದಲ್ಲಿ[1] ಪ್ರಾಣಗಳು ಜೀವನೊಡನೆ ಉತ್ಕ್ರಮಿಸುತ್ತವೆ ಎಂದು ವಿಸ್ಪಷ್ಟವಾಗಿ ಹೇಳಿಯೂ ಇದೆ. ಆದ್ದರಿಂದ ವಾಕ್ಕೇ ಮುಂತಾದವುಗಳಿಗೆ ಅಧಿಷ್ಠಾತೃವಾಗಿರುವ ಅಗ್ನ್ಯಾದಿ ದೇವತೆಗಳು ವಾಗಾದಿಗಳಿಗೆ ಉಪಕಾರಕವಾಗಿದ್ದು ಮರಣಕಾಲದಲ್ಲಿ ಉಪಕಾರವು ಇಲ್ಲವಾಗುವದೆಂಬುದನ್ನು ಮಾತ್ರ ಲಕ್ಷ್ಯದಲ್ಲಿಟ್ಟು ವಾಗಾದಿಗಳು ಅಗ್ನ್ಯಾದಿಗಳನ್ನು ಸೇರಿಕೊಳ್ಳುತ್ತವೆ ಎಂದು ಉಪಚಾರಕ್ಕೆ ಹೇಳಲಾಗಿದೆ (ಎನಬೇಕು)..

---

1. ಬೃ. ೪-೪-೨ ರಲ್ಲಿ. ಆ ಶ್ರುತಿಯನ್ನು ಗೌಣವೆನ್ನುವದಕ್ಕಾಗುವದಿಲ್ಲ; ಏಕೆಂದರೆ ಆಗ ಕರ್ಮಫಲಕ್ಕೆ ದೇಹಾಂತರದಲ್ಲಿ ಭೋಗವಿಲ್ಲವೆಂದಾಗುತ್ತದೆ.

**ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ॥ ೫ ॥**

೫. ಪ್ರಥಮದಲ್ಲಿ ಶ್ರುತಿಯಿಲ್ಲದ್ದರಿಂದ (ಇದು ಸರಿಯಲ್ಲ) ಎಂದರೆ ಹಾಗಲ್ಲ. ಏಕೆಂದರೆ ಅದೇ ಅಪ್ಪೇ (ಅಲ್ಲಿಯೂ ಅಭಿಪ್ರೇತವಾಗಿದೆ. ಅದು) ಹೊಂದುವದರಿಂದ (ಹೀಗೆನ್ನಬಹುದು).

## ಪ್ರಥಮಾಗ್ನಿಯಲ್ಲಿ ಅಪ್ಪನ್ನು ಹೇಳಿಲ್ಲವೆಂಬ ಆಕ್ಷೇಪ

(ಭಾಷ್ಯ)

೨೧೨. ಸ್ಯಾದೇತತ್ । ಕಥಂ ಪುನಃ "ಪಞ್ಚಮ್ಯಾಮಾಹುತಾವಾಪಃ ಪುರುಷವಚಸೋ ಭವನ್ತಿ" (ಛಾಂ. ೫-೩-೩) ಇತ್ಯೇತತ್ ನಿರ್ಧಾರಯಿತುಂ ಪಾರ್ಯತೇ ? ಯಾವತಾ ನೈವ ಪ್ರಥಮೇ ಅಗ್ನೌ ಅಪಾಂ ಶ್ರವಣಮಸ್ತಿ । ಇಹಹಿ ದ್ಯುಲೋಕಪ್ರಭೃತಯಃ ಪಞ್ಚಾಗ್ನಯಃ ಪಞ್ಚಾನಾಮ್ ಆಹುತೀನಾಮ್ ಆಧಾರತ್ವೇನ ಅಧೀತಾಃ । ತೇಷಾಂ ಚ ಪ್ರಮುಖೇ "ಅಸೌ ವಾವ ಲೋಕೋ ಗೌತಮಾಗ್ನಿಃ" (ಛಾಂ. ೫-೪-೧) ಇತಿ ಉಪನ್ಯಸ್ಯ "ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ" (ಛಾಂ. ೫-೪-೨) ಇತಿ ಶ್ರದ್ಧಾ ಹೌಮ್ಯದ್ರವ್ಯತ್ವೇನ ಆವೇದಿತಾ । ನ ತತ್ರ ಆಪೋ ಹೌಮ್ಯದ್ರವ್ಯತಯಾ ಶ್ರುತಾಃ । ಯದಿ ನಾಮ ಪರ್ಜನ್ಯಾದಿಷು ಉತ್ತರೇಷು ಚತುರ್ಷು ಅಗ್ನಿಷು ಅಪಾಂ ಹೌಮ್ಯದ್ರವ್ಯತಾ ಪರಿಕಲ್ಪ್ಯೇತ, ಪರಿಕಲ್ಪ್ಯತಾಂ ನಾಮ । ತೇಷು ಹೋತವ್ಯತಯಾ ಉಪಾತ್ತಾನಾಂ ಸೋಮಾದೀನಾಮ್ ಅಬ್ಬಹುಲತ್ವೋಪಪತ್ತೇಃ । ಪ್ರಥಮೇ ತು ಅಗ್ನೌ ಶ್ರುತಾಂ ಶ್ರದ್ಧಾಂ ಪರಿತ್ಯಜ್ಯ ಅಶ್ರುತಾ ಆಪಃ ಪರಿಕಲ್ಪ್ಯನ್ತೇ ಇತಿ ಸಾಹಸಮೇತತ್ । ಶ್ರದ್ಧಾ ಚ ನಾಮ ಪ್ರತ್ಯಯವಿಶೇಷಃ । ಪ್ರಸಿದ್ಧಿಸಾಮರ್ಥ್ಯಾತ್ । ತಸ್ಮಾತ್ ಅಯುಕ್ತಃ ಪಞ್ಚಮ್ಯಾಮ್ ಆಹುತೌ ಅಪಾಂ ಪುರುಷಭಾವಃ ಇತಿ ಚೇತ್ ॥[1]

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಮತವು) ಇದಾಗಿರಬಹುದು. "ಐದನೆಯ ಆಹುತಿಯಲ್ಲಿ ಅಪ್ಪು ಪುರುಷಶಬ್ದವಾಚ್ಯವಾಗುತ್ತದೆ" ಎಂಬಿದನ್ನು ನಿರ್ಧರಿಸುವದು ಹೇಗೆ ಸಾಧ್ಯ? ಮೊದಲನೆಯ ಅಗ್ನಿಯಲ್ಲಿ ಅಪ್ಪನ್ನು ಶ್ರುತಿಯಲ್ಲಿ ಹೇಳಿರುವದೇ ಇಲ್ಲವಲ್ಲ! (ಇದರ ವಿವರ): ಇಲ್ಲಿ ದ್ಯುಲೋಕವೇ ಮುಂತಾದ ಐದು ಅಗ್ನಿಗಳನ್ನು ಐದು ಆಹುತಿಗಳಿಗೆ ಆಧಾರವೆಂದು ಹೇಳಿರುತ್ತದೆ. ಅವುಗಳ ಆದಿಯಲ್ಲಿ "ಗೌತಮನೆ, ಆ ಲೋಕವೇ ಅಗ್ನಿಯು" (ಛಾಂ. ೫-೪-೧) ಎಂದು ಉಪ

---

1. ಚೇತ್ ಎಂಬ ಮಾತು ಅನ್ವಯಕ್ಕೆ ಅವಶ್ಯವಿಲ್ಲವೆಂದು ತೋರುತ್ತದೆ.

ಶ್ರವಿಸಿ "ಆ ಈ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯನ್ನು ಹೋಮಮಾಡುತ್ತಾರೆ" (ಛಾಂ. ೫-೪-೨) ಎಂದು ಶ್ರದ್ಧೆಯೇ ಹೋಮದ್ರವ್ಯವೆಂದು ತಿಳಿಸಿರುತ್ತದೆ; ಅಲ್ಲಿ ಅಪ್ಪನ್ನು ಹೋಮದ್ರವ್ಯವೆಂದು ಶ್ರುತಿಯಲ್ಲಿ ಹೇಳಿಲ್ಲ. ಒಂದು ವೇಳೆ ಪರ್ಜನ್ಯವೇ ಮುಂತಾದ ಮುಂದಿನ ನಾಲ್ಕು ಅಗ್ನಿಗಳಲ್ಲಿ ಅಪ್ಪು ಹೋಮದ್ರವ್ಯವೆಂದು ಕಲ್ಪಿಸುವದಾದರೆ. (ಅವಶ್ಯವಾಗಿ) ಕಲ್ಪಿಸಬಹುದು. ಏಕೆಂದರೆ ಅಲ್ಲಿ ಹೋಮಮಾಡತಕ್ಕದ್ದೆಂದು ಗ್ರಹಿಸಿರುವ ಸೋಮಾದಿಗಳಲ್ಲಿ ಅಪ್ಪೇ ಹೆಚ್ಚಾಗಿರುತ್ತದೆ. ಆದರೆ ಒಂದನೆಯ ಅಗ್ನಿಯಲ್ಲಿ ಶ್ರುತವಾಗಿರುವ ಶ್ರದ್ಧೆಯನ್ನು ಬಿಟ್ಟು ಅಶ್ರುತವಾದ ಅಪ್ಪನ್ನು ಕಲ್ಪಿಸುವದೆಂಬುದು ಸಾಹಸವು. ಶ್ರದ್ಧೆಯೆಂಬುದು ಒಂದಾನೊಂದು ಪ್ರತ್ಯಯವು; (ಅದರಲ್ಲಿ ಆ ಶಬ್ದವು) ಪ್ರಸಿದ್ಧವಾಗಿರುವದೆಂಬ ಸಾಮರ್ಥ್ಯದಿಂದ (ಹಾಗೆನ್ನಬೇಕು)[1]. ಆದ್ದರಿಂದ ಐದನೆಯ ಆಹುತಿಯಲ್ಲಿ ಅಪ್ಪು ಪುರುಷನಾಗುವದೆಂಬುದು ಅಯುಕ್ತವು.

## ಸಿದ್ಧಾಂತ : ಶ್ರದ್ಧೆಯೆಂದರೆ ಈ ಶ್ರುತಿಯಲ್ಲಿ ಅಪ್ಪು

(ಭಾಷ್ಯ)

೨೯. ನೈಷ ದೋಷಃ । ಯತಃ ತತ್ರಾಪಿ ಪ್ರಥಮೇಽಗ್ನೌ ತಾ ಏವ ಆಪಃ ಶ್ರದ್ಧಾಶಬ್ದೇನ ಅಭಿಪ್ರೇಯನ್ತೇ । ಕುತಃ ? ಉಪಪತ್ತೇಃ । ಏವಂ ಹಿ ಆದಿಮಧ್ಯಾವಸಾನಸಂಗಾನಾತ್ ಅನಾಕುಲಮ್ ಏತತ್ ಏಕವಾಕ್ಯಮ್ ಉಪಪದ್ಯತೇ । ಇತರಥಾ ಪುನಃ ಪಞ್ಚಮ್ಯಾಮಾಹುತೌ ಅಪಾಂ ಪುರುಷವಚಸ್ತ್ವಪ್ರಕಾರೇ ಪೃಷ್ಟೇ ಪ್ರತಿವಚನಾವಸರೇ ಪ್ರಥಮಾಹುತಿಸ್ಥಾನೇ ಯದಿ ಅನಪೋ ಹೌಮ್ಯದ್ರವ್ಯಂ ಶ್ರದ್ಧಾಂ ನಾಮ ಅವತಾರಯೇತ್, ತತಃ ಅನ್ಯಥಾ ಪ್ರಶ್ನಃ ಅನ್ಯಥಾ ಪ್ರತಿವಚನಮ್ ಇತ್ಯೇಕವಾಕ್ಯತಾ ನ ಸ್ಯಾತ್ । "ಇತಿ ತು ಪಞ್ಚಮ್ಯಾಮಾಹುತಾವಾಪಃ ಪುರುಷವಚಸೋ ಭವನ್ತಿ" ಇತಿ ಚ ಉಪಸಂಹರನ್ ಏತದೇವ ದರ್ಶಯತಿ । ಶ್ರದ್ಧಾಕಾರ್ಯಂ ಚ ಸೋಮವೃಷ್ಟ್ಯಾದಿ ಸ್ಥೂಲೀಭವತ್ ಅಬ್ಬಹುಲಂ ಲಕ್ಷ್ಯತೇ । ಸಾ ಚ ಶ್ರದ್ಧಾಯಾ ಅಪ್ತ್ವೇ ಯುಕ್ತಿಃ । ಕಾರಣಾನುರೂಪಂ ಹಿ ಕಾರ್ಯಂ ಭವತಿ । ನ ಚ ಶ್ರದ್ಧಾಖ್ಯಃ ಪ್ರತ್ಯಯಃ ಮನಸಃ ಜೀವಸ್ಯ ವಾ ಧರ್ಮಃ ಸನ್ ಧರ್ಮಿಣೋ ನಿಷ್ಕೃಷ್ಯ ಹೋಮಾಯ ಉಪಾದಾತುಂ ಶಕ್ಯತೇ ಪಶ್ವಾದಿಭ್ಯ ಇವ ಹೃದಯಾದೀನಿ ಇತಿ ಆಪ ಏವ ಶ್ರದ್ಧಾಶಬ್ದಾ ಭವೇಯುಃ । ಶ್ರದ್ಧಾಶಬ್ದಶ್ಚ ಅಪ್ಸು ಉಪಪದ್ಯತೇ ।

---

1. ಹೀಗಿರುವಲ್ಲಿ ಪ್ರತ್ಯಯವನ್ನು ಭೂತವೆಂದು ಕಲ್ಪಿಸುವದು ಹೇಗೆತಾನೆ ಸರಿಯಾದೀತು ?_ ಎಂದು ಆಕ್ಷೇಪಕನ ಭಾವ.

ವೈದಿಕಪ್ರಯೋಗದರ್ಶನಾತ್ "ಶ್ರದ್ಧಾ ವಾ ಆಪಃ" (ತೈ. ಸಂ. ೧-೬-೮-೧) ಇತಿ। ತನುತ್ವಂ ಚ ಶ್ರದ್ಧಾಸಾರೂಪ್ಯಂ ಗಚ್ಛನ್ತ್ಯಃ ಆಪಃ ದೇಹಬೀಜಭೂತಾ ಇತ್ಯತಃ ಶ್ರದ್ಧಾಶಬ್ದಾಃ ಸ್ಯುಃ। ಯಥಾ ಸಿಂಹಪರಾಕ್ರಮೋ ನರಃ ಸಿಂಹಶಬ್ದೋ ಭವತಿ। ಶ್ರದ್ಧಾಪೂರ್ವಕಕರ್ಮಸಮವಾಯಾಚ್ಚ ಅಪ್ಸು ಶ್ರದ್ಧಾಶಬ್ದಃ ಉಪಪದ್ಯತೇ। ಮಞ್ಚಶಬ್ದ ಇವ ಪುರುಷೇಷು। ಶ್ರದ್ಧಾಹೇತುತ್ವಾಚ್ಚ ಶ್ರದ್ಧಾಶಬ್ದೋಪಪತ್ತಿಃ "ಆಪೋ ಹಾಸ್ಮೈ ಶ್ರದ್ಧಾಂ ಸಂನಮನ್ತೇ ಪುಣ್ಯಾಯ ಕರ್ಮಣೇ" (?) ಇತಿ ಶ್ರುತೇಃ॥

(ಭಾಷ್ಯಾರ್ಥ)

ಇದೇನೂ ತಪ್ಪಲ್ಲ. ಏಕೆಂದರೆ ಆ ಪ್ರಥಮಾಗ್ನಿಯಲ್ಲಿಯೂ ಅದೇ ಅಪ್ಪೇ ಶ್ರದ್ಧೆ ಎಂಬ ಶಬ್ದದಿಂದ ಅಭಿಪ್ರೇತವಾಗಿರುತ್ತದೆ. ಏಕೆ ? ಎಂದರೆ ಉಪಪನ್ನವಾಗಿರುವದರಿಂದ. ಹೇಗೆಂದರೆ ಹೀಗಾದರೆ ಆದಿ, ಮಧ್ಯ, ಅಂತ್ಯ- ಮೂರೂ ಹೊಂದುಗಡೆಯಾಗುವದರಿಂದ ಯಾವ ಅಡ್ಡಿಯೂ ಇಲ್ಲದೆ ಇದು ಏಕವಾಕ್ಯವಾಗುವದೆಂದು ಉಪಪನ್ನವಾಗುತ್ತದೆ. ಹೀಗಲ್ಲದೆ ಇದ್ದರೋ ಐದನೆಯ ಆಹುತಿಯಲ್ಲಿ ಅಪ್ಪು ಪುರುಷಶಬ್ದವಾಚ್ಯವಾಗುವ ಪ್ರಕಾರವನ್ನು ಕೇಳಿರುವಲ್ಲಿ ಉತ್ತರವನ್ನು ಕೊಡುವಾಗ ಮೊದಲನೆಯ ಆಹುತಿಯ ಸ್ಥಾನದಲ್ಲಿ ಅಪ್ಪಲ್ಲದ ಶ್ರದ್ಧೆಯೆಂಬ ಹೋಮದ್ರವ್ಯವನ್ನು ತಂದಿಳಿಸಿದರೆ, ಆಗ ಪ್ರಶ್ನೆಯೇ ಬೇರೆ, ಉತ್ತರವೇ ಬೇರೆ ಎಂದಾಗಿ ಏಕವಾಕ್ಯತೆಯಿಲ್ಲದೆ ಹೋಗುವದು. "ಹೀಗೆಯೇ ಐದನೆಯ ಆಹುತಿಯಲ್ಲಿ ಅಪ್ಪು ಪುರುಷಶಬ್ದವಾಚ್ಯವಾಗುತ್ತದೆ" (ಛಾಂ.) ಎಂದು ಉಪಸಂಹಾರಮಾಡಿರುವದರಿಂದ (ಶ್ರುತಿಯು) ಇದನ್ನೇ ತಿಳಿಸುತ್ತದೆ. ಶ್ರದ್ಧಾಕಾರ್ಯವಾದ ಸೋಮ, ವೃಷ್ಟಿ ಮುಂತಾದದ್ದು ಸ್ಥೂಲವಾಗುವಲ್ಲಿ (ಅದರಲ್ಲಿ) ಅಪ್ಪು ಬಹಳವಾಗಿರುವದು ಕಾಣಬರುತ್ತದೆ; ಅದೇ ಶ್ರದ್ಧೆಯು ಅಪ್ಪೆಂಬುದಕ್ಕೆ ಯುಕ್ತಿ. ಕಾರ್ಯವು ಕಾರಣಾನುರೂಪವಾಗಿಯಲ್ಲವೆ, ಇರುತ್ತದೆ? ಶ್ರದ್ಧೆ ಎಂಬ ಪ್ರತ್ಯಯವು ಮನಸ್ಸಿನ ಅಥವಾ ಜೀವನ ಧರ್ಮವಾಗಿರುವದರಿಂದ (ಆ) ಧರ್ಮಿಯಿಂದ ಅದನ್ನು-ಪಶ್ವಾದಿಗಳಿಂದ ಹೃದಯಾದಿಗಳನ್ನು (ಎಳೆದುಕೊಳ್ಳು)ವಂತೆ- ಎಳೆದುಕೊಂಡು ಹೋಮಕ್ಕೆ ತೆಗೆದುಕೊಳ್ಳುವದು ಆಗಲಾರದು. ಆದ್ದರಿಂದ ಅಪ್ಪೇ ಶ್ರದ್ಧಾಶಬ್ದವಾಚ್ಯವಾಗಿರಬೇಕು. ಶ್ರದ್ಧೆ ಎಂಬ ಶಬ್ದವು ಅಪ್ಪಿನಲ್ಲಿ ಹೊಂದುಗಡೆಯೂ ಆಗುತ್ತದೆ. ಏಕೆಂದರೆ 'ಶ್ರದ್ಧೆಯೇ ಅಪ್ಪು' (ತೈ. ಸಂ. ೧-೬-೮-೧) ಎಂದು ವೈದಿಕಪ್ರಯೋಗವು ಕಂಡುಬರುತ್ತದೆ. ಅಪ್ಪು ಸೂಕ್ಷ್ಮತ್ವವೆಂಬ ಶ್ರದ್ಧಾಸಾರೂಪ್ಯವನ್ನು ಹೊಂದಿ

ದೇಹಬೀಜವಾಗುವದರಿಂದ (ಅದು) ಶ್ರದ್ಧಾಶಬ್ದವಾಚ್ಯವಾಗಬಹುದಾಗಿದೆ[1]. ಸಿಂಹದಂತೆ ಪರಾಕ್ರಮವುಳ್ಳವನು ಸಿಂಹಶಬ್ದವಾಚ್ಯನಾಗುವನಲ್ಲ, ಹಾಗೆ. ಶ್ರದ್ಧಾಪೂರ್ವಕವಾಗಿ ಮಾಡುವ ಕರ್ಮದ ಸಂಬಂಧವಿರುವದರಿಂದಲೂ ಅಪ್ಪಿನಲ್ಲಿ ಶ್ರದ್ಧೆ ಎಂಬ ಮಾತು– ಪುರುಷರಲ್ಲಿ ಮಂಚಶಬ್ದದಂತೆ– (ಪ್ರಯುಕ್ತವಾಗುವದು) ಹೊಂದುತ್ತದೆ[2]. ಶ್ರದ್ಧೆಗೆ ನಿಮಿತ್ತವಾಗಿರುವದರಿಂದಲೂ (ಅಪ್ಪಿನಲ್ಲಿ) ಶ್ರದ್ಧಾಶಬ್ದವು ಉಪಪನ್ನವಾಗಿರುತ್ತದೆ. "ಅಪ್ಪೇ ಈತನಿಗೆ ಪುಣ್ಯಕರ್ಮವನ್ನು ಮಾಡುವದಕ್ಕೆ ಶ್ರದ್ಧೆಯನ್ನುಂಟುಮಾಡುತ್ತದೆ" (?) ಎಂಬ ಶ್ರುತಿಯಿಂದಲೂ (ಶ್ರದ್ಧಾಹೇತುತ್ವವು ಸಿದ್ಧವಾಗಿರುತ್ತದೆ).

**ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ॥ ೬ ॥**

೬. ಶ್ರುತವಾಗಿಲ್ಲವಾದ್ದರಿಂದ (ಜೀವರ ಉತ್ಕ್ರಮಣವಾಗುವದಿಲ್ಲ) ಎಂದರೆ ಹಾಗಲ್ಲ. ಏಕೆಂದರೆ ಇಷ್ಟಾದಿಗಳನ್ನು ಮಾಡುವವರ ಪ್ರತೀತಿಯಾಗುತ್ತದೆ.

## ಜೀವರು ಅಪ್ಪರಿವೇಷ್ಟಿತರಾಗಿ ಹೋಗುತ್ತಾರೆಂಬುದಕ್ಕೆ ಗಮಕ

(ಭಾಷ್ಯ)

೨೨೦. ಅಥಾಪಿ ಸ್ಯಾತ್ ಪ್ರಶ್ನಪ್ರತಿವಚನಾಭ್ಯಾಂ ನಾಮ ಆಪಃ ಶ್ರದ್ಧಾದಿಕ್ರಮೇಣ ಪಞ್ಚಮ್ಯಾಮ್ ಆಹುತೌ ಪುರುಷಾಕಾರಂ ಪ್ರತಿಪದ್ಯೇರನ್ । ನ ತು ತತ್ಸಂಪರಿಷ್ವಕ್ತಾ ಜೀವಾ ರಂಹೇಯುಃ । ಅಶ್ರುತತ್ವಾತ್ । ನ ಹಿ ಅತ್ರ ಅಪಾಮಿವ ಜೀವಾನಾಂ ಶ್ರಾವಯಿತಾ ಕಶ್ಚಿತ್ ಶಬ್ದಃ ಅಸ್ತಿ । ತಸ್ಮಾದ್ ರಂಹತಿ ಸಂಪರಿಷ್ವಕ್ತಃ ಇತಿ ಅಯುಕ್ತಮ್ ಇತಿ ಚೇತ್ । ನೈಷ ದೋಷಃ । ಕುತಃ? ಇಷ್ಟಾದಿಕಾರಿಣಾಂ ಪ್ರತೀತೇಃ । "ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವನ್ತಿ"

---

1. ದೇಹಬೀಜವಾಗಿರುವ ಭೂತಮಾತ್ರೆಗಳು ಹೋಗುವದು ಯಾವ ಇಂದ್ರಿಯಕ್ಕೂ ಗೋಚರವಾಗುವದಿಲ್ಲವಾದ್ದರಿಂದ ಅವು ಸೂಕ್ಷ್ಮವಾಗಿರುತ್ತವೆ; ಸೂಕ್ಷ್ಮತ್ವಗುಣವಿರುವದರಿಂದ ಪಂಚಭೂತಾತ್ಮಕವಾದ ಅಪ್ಪನ್ನು ಶ್ರದ್ಧೆಯೆಂದು ಗೌಣವೃತ್ತಿಯಿಂದ ಕರೆದಿದೆ.

2. ಮಂಚಿಕೆಯಲ್ಲಿರುವವರನ್ನು ಮಂಚಿಕೆ ಎಂದು ಕರೆಯುವಂತೆ ಶ್ರದ್ಧೆಯಿಂದ ಮಾಡುವ ಕರ್ಮಕ್ಕೆ ಸಂಬದ್ಧವಾಗಿರುವ ಅಪ್ಪನ್ನು ಲಕ್ಷಣೆಯಿಂದ ಶ್ರದ್ಧೆ ಎಂದು ಕರೆಯಬಹುದು ಎಂದರ್ಥ. ಅಪ್ಪನ್ನು ಶ್ರದ್ಧೆ ಎಂದು ಕರೆಯುವದಕ್ಕೆ ಅನೇಕ ನಿಮಿತ್ತಗಳಿವೆ ಎಂಬುದು ಅಭಿಪ್ರಾಯ.

(ಛಾಂ. ೫–೧೦–೩) ಇತ್ಯುಪಕ್ರಮ್ಯ ಇಷ್ಟಾದಿಕಾರಿಣಾಂ ಧೂಮಾದಿನಾ ಪಿತೃಯಾಣೇನ ಪಥಾ ಚನ್ದ್ರಪ್ರಾಪ್ತಿಂ ಕಥಯತಿ "ಆಕಾಶಾಚ್ಚನ್ದ್ರಮಸಮೇಷ ಸೋಮೋ ರಾಜಾ" (ಛಾಂ. ೫–೧೦–೪) ಇತಿ । ತ ಏವ ಇಹಾಪಿ ಪ್ರತೀಯನ್ತೇ "ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ತಸ್ಯಾ ಆಹುತೇಃ ಸೋಮೋ ರಾಜಾ ಸಂಭವತಿ" (ಛಾಂ. ೫–೪–೨) ಇತಿ ಶ್ರುತಿಸಾಮಾನ್ಯಾತ್ । ತೇಷಾಂ ಚ ಅಗ್ನಿಹೋತ್ರದರ್ಶಪೂರ್ಣಮಾಸಾದಿಕರ್ಮಸಾಧನಭೂತಾಃ ದಧಿಪಯಃಪ್ರಭೃತಯಃ ದ್ರವದ್ರವ್ಯಭೂಯಸ್ತ್ವಾತ್ ಪ್ರತ್ಯಕ್ಷಮೇವ ಆಪಃ ಸನ್ತಿ । ತಾ ಆಹವನೀಯೇ ಹುತಾಃ ಸೂಕ್ಷ್ಮಾ ಆಹುತ್ಯಃ ಅಪೂರ್ವರೂಪಾಃ ಸತ್ಯಃ ತಾನ್ ಇಷ್ಟಾದಿಕಾರಿಣಃ ಆಶ್ರಯನ್ತಿ । ತೇಷಾಂ ಚ ಶರೀರಂ ನೈಧನೇನ ವಿಧಾನೇನ ಅನ್ತ್ಯೇ ಅಗ್ನೌ ಋತ್ವಿಜೋ ಜುಹ್ವತಿ "ಅಸೌ ಸ್ವರ್ಗಾಯ ಲೋಕಾಯ ಸ್ವಾಹಾ" (?) । ತತಸ್ತಾಃ ಶ್ರದ್ಧಾಪೂರ್ವಕಕರ್ಮಸಮವಾಯಿನ್ಯ ಆಹುತಿಮಯ್ಯ ಆಪಃ ಅಪೂರ್ವರೂಪಾಃ ಸತ್ಯಃ ತಾನ್ ಇಷ್ಟಾದಿಕಾರಿಣೋ ಜೀವಾನ್ ಪರಿವೇಷ್ಟ್ಯ ಅಮುಂ ಲೋಕಂ ಫಲದಾನಾಯ ನಯನ್ತಿ ಇತಿ ಯತ್ ತದತ್ರ ಜುಹೋತಿನಾ ಅಭಿಧೀಯತೇ "ಶ್ರದ್ಧಾಂ ಜುಹ್ವತಿ" (ಬೃ. ೬–೨–೯) ಇತಿ । ತಥಾ ಚ ಅಗ್ನಿಹೋತ್ರೇ ಷಟ್ಪ್ರಶ್ನೀನಿರ್ವಚನರೂಪೇಣ ವಾಕ್ಯಶೇಷೇಣ "ತೇ ವಾ ಏತೇ ಆಹುತೀ ಹುತೇ ಉತ್ಕ್ರಾಮತಃ" (ಶತ.ಬ್ರಾ. ೧೧–೬–೨–೬) ಇತ್ಯೇವಮಾದಿನಾ ಅಗ್ನಿಹೋತ್ರಾಹುತ್ಯೋಃ ಫಲಾರಮ್ಭಾಯ ಲೋಕಾನ್ತರಪ್ರಾಪ್ತಿಃ ಪ್ರದರ್ಶಿತಾ । ತಸ್ಮಾತ್ ಆಹುತೀಮಯೀಭಿರದ್ಭಿಃ ಸಂಪರಿಷ್ವಕ್ತಾ ಜೀವಾ ರಂಹನ್ತಿ ಸ್ವಕರ್ಮಫಲೋಪಭೋಗಾಯ ಇತಿ ಶ್ಲಿಷ್ಯತೇ ॥

(ಭಾಷ್ಯಾರ್ಥ)

ಇನ್ನು (ಹೀಗೂ ಆಕ್ಷೇಪ)ವುಂಟಾಗಬಹುದು. ಪ್ರಶ್ನೋತ್ತರಗಳಿಂದ ಅಪ್ಪು ಶ್ರದ್ಧಾದಿಕ್ರಮದಿಂದ ಐದನೆಯ ಆಹುತಿಯಲ್ಲಿ ಪುರುಷಾಕಾರವನ್ನು ಪಡೆಯುತ್ತದೆಯೆಂದಾಗಲಿ. ಆದರೆ ಅದರಿಂದ ಸಂಪರಿಷ್ವಕ್ತರಾಗಿ ಜೀವರುಗಳು ಹೋಗುತ್ತಾರೆ ಎನ್ನಬಾರದು. ಏಕೆಂದರೆ (ಹಾಗೆಂದು) ಶ್ರುತಿಯಲ್ಲಿಲ್ಲ. ಇಲ್ಲಿ ಅಪ್ಪನ್ನು (ಹೇಳಿರುವ ಮಾತಿರುವಂತೆ) ಜೀವರುಗಳನ್ನು ತಿಳಿಸುವ ಶಬ್ದವು ಯಾವದೊಂದೂ ಇರುವದಿಲ್ಲ. ಆದ್ದರಿಂದ "ಸಂಪರಿಷ್ವಕ್ತನಾಗಿ (ಜೀವನು) ಹೋಗುತ್ತಾನೆ" ಎಂದು (೩–೧–೧) ಹೇಳಿದ್ದು ಯುಕ್ತವಲ್ಲ ಎಂದರೆ–

ಈ ದೋಷವು (ನಮ್ಮ ಪಕ್ಷದಲ್ಲಿ) ಇರುವದಿಲ್ಲ. ಏಕೆ? ಎಂದರೆ "ಇಷ್ಟಾದಿಕಾರಿಗಳ ಪ್ರತೀತಿಯಾಗುವದರಿಂದ." "ಇನ್ನು ಯಾವ ಇವರು ಗ್ರಾಮೆ

ದಲ್ಲಿ ಇಷ್ಟಾಪೂರ್ತಗಳು, ದತ್ತವು[1]– ಎಂಬೀ ಬಗೆಯ (ಕರ್ಮವನ್ನು) ಉಪಾಸನೆಮಾಡುತ್ತಾರೋ ಅವರು ಧೂಮವನ್ನು ಪಡೆಯುತ್ತಾರೆ" (ಛಾಂ. ೫–೧೦–೩) ಎಂದು ಉಪಕ್ರಮಿಸಿ ಇಷ್ಟಾದಿಕಾರಿಗಳಿಗೆ ಧೂಮವೇ ಮುಂತಾದ ಪಿತೃಯಾಣಮಾರ್ಗದಿಂದ ಚಂದ್ರನ ಪ್ರಾಪ್ತಿಯಾಗುವದೆಂದು "ಆಕಾಶದಿಂದ ಚಂದ್ರನನ್ನು (ಪಡೆಯುತ್ತಾರೆ). ಈ ಸೋಮನು ರಾಜನು....." (ಛಾಂ. ೫–೧೦–೪) ಎಂದು ಹೇಳಿರುತ್ತದೆ. ಆ (ಇಷ್ಟಾದಿಕಾರಿಗಳೇ) ಇಲ್ಲಿಯೂ ಪ್ರತೀತ ವಾಗುತ್ತಿದಾರೆ. ಏಕೆಂದರೆ "ಆ ಈ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯನ್ನು ಹೋಮಮಾಡುತ್ತಾರೆ; ಆ ಆಹುತಿಗೆ ಸೋಮನು ರಾಜನಾಗಿರುತ್ತಾನೆ" (ಛಾಂ. ೫–೪–೨) ಎಂಬ (ಈ) ಶ್ರುತಿಯು ಸಮಾನವಾಗಿರುತ್ತದೆ. ಮತ್ತು ಆ (ಇಷ್ಟಾದಿಕಾರಿಗಳಿಗೆ) ಅಗ್ನಿಹೋತ್ರದರ್ಶಪೂರ್ಣಮಾಸಾದಿಕರ್ಮಗಳಿಗೆ ಸಾಧನವಾಗಿರುವ ಮೊಸರು, ಹಾಲು– ಮುಂತಾದವುಗಳಲ್ಲಿ ದ್ರವದ್ರವ್ಯವು ಹೆಚ್ಚಾಗಿರುವದರಿಂದ ಪ್ರತ್ಯಕ್ಷವಾಗಿಯೇ ಅಪ್ಪು ಇರುತ್ತದೆ. ಆಹವನೀಯ ದಲ್ಲಿ ಹೋಮಮಾಡಿದ ಆ ಆಹುತಿಗಳು ಸೂಕ್ಷ್ಮವಾದ ಅಪೂರ್ವರೂಪವನ್ನು ಪಡೆದು ಆ ಇಷ್ಟಾದಿಕಾರಿಗಳನ್ನು ಆಶ್ರಯಿಸಿಕೊಳ್ಳುತ್ತವೆ. ಅವರ ಶರೀರವನ್ನು ಮರಣಕ್ಕೆ ಸಂಬಂಧಪಟ್ಟ (ಅಂತ್ಯೇಷ್ಟಿ)ವಿಧಾನದಿಂದ ಕೊನೆಯ ಅಗ್ನಿಯಲ್ಲಿ ಋತ್ವಿಜರು "ಇವನು ಸ್ವರ್ಗಲೋಕಕ್ಕೆ ಹೋಗಲಿ" (?) ಎಂದು ಹೋಮ ಮಾಡುತ್ತಾರೆ. ಆ ಬಳಿಕ ಶ್ರದ್ಧಾಪೂರ್ವಕಕರ್ಮಸಂಬಂಧವುಳ್ಳ ಆಹುತಿ ಮಯವಾದ ಆ ಅಪ್ಪು **'ಅಪೂರ್ವ'**ರೂಪವನ್ನು ಪಡೆದುಕೊಂಡದ್ದಾಗಿ ಆ ಇಷ್ಟಾದಿಕಾರಿಗಳಾದ ಜೀವರನ್ನು ಸುತ್ತಿಕೊಂಡು ಆ ಲೋಕವನ್ನು ಫಲವನ್ನು ಕೊಡುವದಕ್ಕೆ ಒಯ್ಯುತ್ತವೆ– ಎಂಬುದಿದೆಯಲ್ಲ, ಅದನ್ನೇ ಇಲ್ಲಿ "ಶ್ರದ್ಧೆಯನ್ನು ಹೋಮಮಾಡುತ್ತಾರೆ" (ಛಾಂ. ೫–೪–೨) ಎಂದು ಹೋಮಾರ್ಥಕಶಬ್ದದಿಂದ ಹೇಳಿರುತ್ತದೆ. ಆದ್ದರಿಂದ ಅಗ್ನಿಹೋತ್ರದಲ್ಲಿ ಆರು ಪ್ರಶ್ನೆಗಳಿಗೆ[2] ಉತ್ತರ ವನ್ನು ಹೇಳುವ ರೂಪದ ವಾಕ್ಯಶೇಷದಲ್ಲಿ "ಆ ಈ ಆಹುತಿಗಳೆರಡೂ ಹೋಮ

---

1. ಇಷ್ಟವೆಂದರೆ ಅಗ್ನಿಹೋತ್ರಾದಿಕರ್ಮ, ಪೂರ್ತವೆಂದರೆ ಬಾವಿ, ಕೆರೆ, ಕುಂಟೆ, ತೋಪು– ಮುಂತಾದವನ್ನು ಮಾಡಿಸುವದು, ದತ್ತವೆಂದರೆ ಯಜ್ಞವೇದಿಯಲ್ಲಿಲ್ಲದ ಕಡೆಯ ಲ್ಲಿಯೂ ಯೋಗ್ಯರಾದವರಿಗೆ ಯಥಾಶಕ್ತಿಯಾಗಿ ದಾನಮಾಡುವದು.

2. 'ಇವೆರಡರ ಉತ್ಕ್ರಾಂತಿಯನ್ನಾಗಲಿ ಗತಿಯನ್ನಾಗಲಿ ಪ್ರತಿಷ್ಠೆಯನ್ನಾಗಲಿ ತೃಪ್ತಿಯನ್ನಾಗಲಿ ಪುನರಾವೃತ್ತಿಯನ್ನಾಗಲಿ ಲೋಕಕ್ಕೆ ಮತ್ತೆ ಏಳುವದನ್ನಾಗಲಿ ತಿಳಿಸರಿಯೆ,' ಎಂದು ಆರು ಪ್ರಶ್ನೆಗಳನ್ನು ಯಾಜ್ಞವಲ್ಕ್ಯನನ್ನು ಜನಕನು ಕೇಳಿರುತ್ತಾನೆ.

ಮಾಡಲಾಗಿ ಉತ್ಕ್ರಮಿಸುತ್ತವೆ....." (ಶತ. ಬ್ರಾ. ೧೧-೬-೨-೬)[1] ಎಂದು ಮುಂತಾಗಿರುವ ವಾಕ್ಯದಿಂದ ಅಗ್ನಿಹೋತ್ರದ ಆಹುತಿಗಳೆರಡೂ ಫಲವನ್ನು ಕೊಡುವದಕ್ಕೆ ಲೋಕಾಂತರವನ್ನು ಹೊಂದುವವೆಂದು ತಿಳಿಸಿರುತ್ತದೆ. ಆದ್ದರಿಂದ ಆಹುತಿಮಯವಾದ ಅಪ್ಪಿನಿಂದ ಸಂಪರಿಷ್ವಕ್ತರಾದ ಜೀವರು ತಮ್ಮ ಕರ್ಮದ ಫಲವನ್ನು ಅನುಭವಿಸುವದಕ್ಕೆ ಹೋಗುತ್ತಾರೆ ಎಂಬುದು ಯುಕ್ತವಾಗಿದೆ.[2]

**ಭಾಕ್ತಂ ವಾಽನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ ॥ ೭ ॥**

೭. (ಇಷ್ಟಾದಿಕಾರಿಗಳು ಅನ್ನವೆಂಬುದು) ಭಾಕ್ತವೇ, ಏಕೆಂದರೆ ಅನಾತ್ಮಜ್ಞರಾಗಿರುತ್ತಾರೆ. ಹಾಗೆಂದಲ್ಲವೆ, ಶ್ರುತಿಯು ತಿಳಿಸುತ್ತದೆ?

## ಆಕ್ಷೇಪ :

## ಇಷ್ಟಾದಿಕಾರಿಗಳು ದೇವತೆಗಳಿಗೆ ಅನ್ನವೆಂಬ ಶ್ರುತಿ ಹೇಗೆ?

(ಭಾಷ್ಯ)

೨೨೧. ಕಥಂ ಪುನರಿದಮ್ ಇಷ್ಟಾದಿಕಾರಿಣಾಂ ಸ್ವಕರ್ಮಫಲೋಪಭೋಗಾಯ ರಂಹಣಂ ಪ್ರತಿಜ್ಞಾಯತೇ ? ಯಾವತಾ ತೇಷಾಂ ಧೂಮಪ್ರತೀಕೇನ ವರ್ತ್ಮನಾ ಚನ್ದ್ರಮಸಮ್ ಅಧಿರೂಢಾನಾಮ್ ಅನ್ನಭಾವಂ ದರ್ಶಯತಿ– "ಏಷ ಸೋಮೋ ರಾಜಾ ತದ್ದೇವಾನಾಮನ್ನಂ ತಂ ದೇವಾ ಭಕ್ಷಯನ್ತಿ" (ಛಾಂ. ೫-೧೦-೪) ಇತಿ । ತೇ ಚನ್ದ್ರಂ ಪ್ರಾಪ್ಯಾನ್ನಂ ಭವನ್ತಿ ತಾಂಸ್ತತ್ರ ದೇವಾ ಯಥಾ ಸೋಮಂ ರಾಜಾನಮಾಪ್ಯಾಯಸ್ವಾಪಕ್ಷೀಯಸ್ವೇತ್ಯೇವ

---

1. ಹುತವಾದ ಈ ಆಹುತಿಗಳು ಉತ್ಕ್ರಮಿಸುತ್ತವೆ, ಅಂತರಿಕ್ಷದ ಮೂಲಕ ದ್ಯುಲೋಕವನ್ನು ಕುರಿತು ಹೋಗುತ್ತವೆ, ದ್ಯುಲೋಕವೆಂಬ ಆಹವನೀಯವನ್ನೇ ಪ್ರತಿಷ್ಠೆಯಾಗಿ ಮಾಡಿಕೊಳ್ಳುತ್ತವೆ, ದ್ಯುಲೋಕಕ್ಕೆ ತೃಪ್ತಿಯನ್ನುಂಟುಮಾಡುತ್ತವೆ, ಆ ಬಳಿಕ ಅವು ಹಿಂದಕ್ಕೆ ಬರುತ್ತವೆ, ಆ ಬಳಿಕ ಪುರುಷನಲ್ಲಿಯೂ ಸ್ತ್ರೀಯಲ್ಲಿಯೂ ಹುತವಾಗಿ ಪುರುಷರೂಪದಿಂದ ಮೇಲಕ್ಕೇಳುತ್ತವೆ– ಎಂದು ಈ ವಾಕ್ಯಶೇಷದಲ್ಲಿ ಹೇಳಿದೆ.

2. ಶ್ರುತಿಯಲ್ಲಿ ಹೇಳಿರುವ ಆಹುತಿಗಳ ಉತ್ಕ್ರಾಂತಿಯೂ ಪ್ರಕೃತವಾಗಿರುವ 'ಅಪ್ಪು' ಲೋಕಾಂತರಕ್ಕೆ ಹೋಗುವದೆಂದು ಹೇಳಿರುವ ಗತಿಯೂ ಒಂದೇ. ಇವೆರಡರಲ್ಲಿ ಭೂತಮಾತ್ರಾಯುತರಾಗಿ ಜೀವರು ಹೋಗುತ್ತಾರೆಂದೇ ಹೇಳಿದೆ ಎಂದು ಭಾವ. ಇಲ್ಲಿ ಕೊಟ್ಟಿರುವ ಭಾಷ್ಯವಿವರಣೆಯು ಕೃತಕವಾದದ್ದು, ಸ್ವಾಭಾವಿಕವಲ್ಲ ಎಂದು–ಥೀಬೋ ವಿದ್ವಾಂಸನು ತನ್ನ ಇಂಗ್ಲಿಷು ಅನುವಾದದಲ್ಲಿ ಬರೆದಿರುವದು ವೈದಿಕಸಂಪ್ರದಾಯದಲ್ಲಿ ಆಸ್ತಿಕ್ಯಬುದ್ಧಿಯಿಲ್ಲದ್ದರ ಫಲವೆಂದು ತಿಳಿಯಬೇಕು.

ಮೇನಾಂಸ್ತತ್ರ ಭಕ್ಷಯನ್ತಿ" (ಬೃ. ೬-೨-೧೬) ಇತಿ ಚ ಸಮಾನವಿಷಯಂ ಶ್ರುತ್ಯನ್ತರಮ್ । ನ ಚ ವ್ಯಾಘ್ರಾದಿಭಿರಿವ ದೇವೈಃ ಭಕ್ಷ್ಯಮಾಣಾನಾಮ್ ಉಪಭೋಗಃ ಸಂಭವತಿ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ):— ಇದು ಇಷ್ಟಾದಿಕಾರಿಗಳು ತಮ್ಮ ಕರ್ಮಫಲವನ್ನು ಅನುಭವಿಸುವದಕ್ಕೆ ಹೋಗುವ (ಗತಿ) ಎಂದು ಹೇಳುವದು ಹೇಗೆ ? ಧೂಮುವೇ ಮುಂತಾದ ಮಾರ್ಗದಿಂದ ಚಂದ್ರ(ಲೋಕ)ವನ್ನು ಏರಿದ ಬಳಿಕ ಅವರು ಅನ್ನವಾಗುವರೆಂದು "ಈ ಸೋಮನು ರಾಜನು, ಅದು ದೇವತೆಗಳಿಗೆ ಅನ್ನವು ; ಅವನನ್ನು ದೇವತೆಗಳು ಭಕ್ಷಿಸುತ್ತಾರೆ" (ಛಾಂ. ೫-೧೦-೪) ಎಂದು (ಶ್ರುತಿಯು) ಹೇಳುತ್ತದೆ. "ಅವರು ಚಂದ್ರನನ್ನು ಪಡೆದು ಅನ್ನವಾಗುತ್ತಾರೆ ; ಅಲ್ಲಿ ದೇವತೆಗಳು ಹೇಗೆ ಸೋಮರಾಜನನ್ನು (ಋತ್ವಿಜರು) ತುಂಬುವದು, ಕ್ಷಯಗೊಳಿಸುವದು (ಹೀಗೆ ಮಾಡುತ್ತಿರುವರೋ) ಹಾಗೆಯೇ ಇವರನ್ನು ಅಲ್ಲಿ ತಿನ್ನುವರು" (ಬೃ. ೬-೨-೧೬) ಎಂದು ಸಮಾನವಿಷಯಕವಾದ ಮತ್ತೊಂದು ಶ್ರುತಿಯೂ (ಹೇಳುತ್ತದೆ). ಆದರೆ ಹುಲಿ ಮುಂತಾದವುಗಳಂತೆ ದೇವತೆಗಳು ಭಕ್ಷಿಸಿದರೆ (ಇವರಿಗೆ) ಉಪಭೋಗವು ಸಂಭವಿಸುವದಿಲ್ಲವಲ್ಲ !

## ಇಷ್ಟಾದಿಕಾರಿಗಳು ದೇವತೆಗಳಿಗೆ ಉಪಭೋಗ್ಯರು

(ಭಾಷ್ಯ)

೨೨೨. ಅತಃ ಉತ್ತರಂ ಪಠತಿ— ('ಭಾಕ್ತಂ ವಾಽನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ') । ವಾಶಬ್ದಃ ಚೋದಿತದೋಷವ್ಯಾವರ್ತನಾರ್ಥಃ । ಭಾಕ್ತಮೇಷಾಮ್ ಅನ್ನತ್ವಂ ನ ಮುಖ್ಯಮ್ । ಮುಖ್ಯೇ ಹಿ ಅನ್ನತ್ವೇ "ಸ್ವರ್ಗಕಾಮೋ ಯಜೇತ" (?) ಇತ್ಯೇವಂಜಾತೀಯಕಾ ಅಧಿಕಾರಶ್ರುತಿಃ ಉಪರುಧ್ಯೇತ । ಚನ್ದ್ರಮಣ್ಡಲೇ ಚೇತ್ ಇಷ್ಟಾದಿಕಾರಿಣಾಮ್ ಉಪಭೋಗೋ ನ ಸ್ಯಾತ್ ಕಿಮರ್ಥಮ್ ಅಧಿಕಾರಿಣಃ ಇಷ್ಟಾದ್ಯಾಯಾಸಬಹುಲಂ ಕರ್ಮ ಕುರ್ಯುಃ? ಅನ್ನಶಬ್ದಶ್ಚ ಉಪಭೋಗಹೇತುತ್ವಸಾಮಾನ್ಯಾತ್ ಅನನ್ನೇಽಪಿ ಉಪಚರ್ಯಮಾಣೋ ದೃಶ್ಯತೇ । ಯಥಾ 'ವಿಶೋಽನ್ನಂ ರಾಜ್ಞಾಮ್, ಪಶವೋಽನ್ನಂ ವಿಶಾಮ್' ಇತಿ । ತಸ್ಮಾತ್ ಇಷ್ಟಸ್ತ್ರೀಪುತ್ರಮಿತ್ರಭೃತ್ಯಾದಿಭಿರಿವ ಗುಣಭಾವೋಪಗತೈಃ ಇಷ್ಟಾದಿಕಾರಿಭಿಃ ಯತ್ ಸುಖವಿಹರಣಂ ದೇವಾನಾಂ ತದೇವ ಏಷಾಂ ಭಕ್ಷಣಮ್ ಅಭಿಪ್ರೇತಂ ನ ಮೋದಕಾದಿವತ್ ಚರ್ವಣಂ ನಿಗರಣಂ ವಾ । "ನ ಹ ವೈ ದೇವಾ ಅಶ್ನನ್ತಿ ನ ಪಿಬನ್ತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯನ್ತಿ" (ಛಾಂ. ೩-೬-೧) ಇತಿ ಚ ದೇವಾನಾಂ ಚರ್ವಣಾದಿ

ವ್ಯಾಪಾರಂ ವಾರಯತಿ । ತೇಷಾಂ ಚ ಇಷ್ಟಾದಿಕಾರಿಣಾಂ ದೇವಾನ್ ಪ್ರತಿ ಗುಣಭಾವೋಪಗತಾನಾಮಪಿ ಉಪಭೋಗಃ ಉಪಪದ್ಯತೇ ರಾಜೋಪಜೀವಿನಾಮಿವ ಪರಿಜನಾನಾಮ್ । ಅನಾತ್ಮವಿತ್ತ್ವಾಚ್ಚ ಇಷ್ಟಾದಿಕಾರಿಣಾಂ ದೇವೋಪಭೋಗ್ಯಭಾವಃ ಉಪಪದ್ಯತೇ । ತಥಾ ಹಿ ಶ್ರುತಿಃ ಅನಾತ್ಮವಿದಾಂ ದೇವೋಪಭೋಗ್ಯತಾಂ ದರ್ಶಯತಿ– "ಅಥ ಯೋಽನ್ಯಾಂ ದೇವತಾಮ್ ಉಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಂ ಸ ದೇವಾನಾಮ್" (ಬೃ. ೧–೪–೧೦) ಇತಿ । ಸ ಚ ಅಸ್ಮಿನ್ನಪಿ ಲೋಕೇ ಇಷ್ಟಾದಿಭಿಃ ಕರ್ಮಭಿಃ ಪ್ರೀಣಯನ್ ಪಶುವತ್ ದೇವಾನಾಮ್ ಉಪಕರೋತಿ ಅಮುಷ್ಮಿನ್ನಪಿ ಲೋಕೇ ತದುಪಜೀವೀ ತದಾದಿಷ್ಟಂ ಫಲಮ್ ಉಪಭುಞ್ಜಾನಃ ಪಶುವತ್ ದೇವಾನಾಮ್ ಉಪಕರೋತಿ ಇತಿ ಗಮ್ಯತೇ ॥

(ಭಾಷ್ಯಾರ್ಥ)

ಇದಕ್ಕೆ ಸೂತ್ರಕಾರರು ('ಭಾಕ್ತಂ ವಾಽನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ') ಎಂದು ಉತ್ತರವನ್ನು ಹೇಳಿರುತ್ತಾರೆ. (ಸೂತ್ರದಲ್ಲಿರುವ) ವಾ ಶಬ್ದವು ಆಕ್ಷೇಪದಲ್ಲಿ ಹೇಳಿದ ದೋಷವನ್ನು ಪರಿಹರಿಸುವದಕ್ಕಾಗಿ (ಬಂದಿದೆ). ಈ (ಇಷ್ಟಾದಿಕಾರಿಗಳಿಗೆ) ಅನ್ನತ್ವ(ವುಂಟಾಗುವದೆಂಬುದು) ಭಾಕ್ತವೇ, ಮುಖ್ಯವಲ್ಲ. ಏಕೆಂದರೆ ಅನ್ನತ್ವವು ಮುಖ್ಯವಾದರೆ "ಸ್ವರ್ಗಕಾಮನಾದವನು ಯಾಗ ಮಾಡಬೇಕು" ಎಂಬೀ ಜಾತಿಯ ಅಧಿಕಾರಶ್ರುತಿಗೆ ವಿರೋಧವಾಗುವದು[1]. (ಹೇಗೆಂದರೆ) ಚಂದ್ರಮಂಡಲದಲ್ಲಿ ಇಷ್ಟಾದಿಕಾರಿಗಳಿಗೆ ಉಪಭೋಗವು ಆಗುವದಿಲ್ಲವಾದರೆ ಅಧಿಕಾರಿಗಳು ಏತಕ್ಕೋಸ್ಕರ ಆಯಾಸವೇ ಹೆಚ್ಚಾಗಿರುವ ಕರ್ಮವನ್ನು ಮಾಡಿಯಾರು ? ಅನ್ನಶಬ್ದವನ್ನು ಉಪಭೋಗಕ್ಕೆ ಹೇತುವಾಗಿರುವದೆಂಬ ಹೋಲಿಕೆಯಿಂದ ಅನ್ನವಲ್ಲದ (ಪದಾರ್ಥದಲ್ಲಿಯೂ) ಉಪಚಾರಕ್ಕಾಗಿ (ಪ್ರಯೋಗಿಸುವದು) ಕಂಡುಬಂದಿರುತ್ತದೆ. ಉದಾಹರಣೆ 'ಜನರು ರಾಜರಿಗೆ ಅನ್ನವು, ಪಶುಗಳು ಜನರಿಗೆ ಅನ್ನವು' (?) ಎಂಬಲ್ಲಿ ಹೀಗೆ ಪ್ರಯೋಗಿಸಿದೆ. ಆದ್ದರಿಂದ (ತಮಗೆ) ಇಷ್ಟರಾದ ಹೆಂಡತಿ, ಮಕ್ಕಳು, ಮಿತ್ರರು, ಆಳುಗಳು– ಮುಂತಾದವರಂತೆ (ತಮಗೆ) ಅಧೀನರಾಗಿರುವ ಇಷ್ಟಾದಿಕಾರಿಗಳಿಂದ ದೇವತೆಗಳು ಸುಖವಾಗಿ ವಿಹರಿಸುವದುಂಟಲ್ಲ, ಅದೇ ಇವರನ್ನು ಭಕ್ಷಿಸುವದೆಂಬ (ಮಾತಿನಿಂದ) ಅಭಿಪ್ರೇತವಾಗಿದೆಯೇ ಹೊರತು ಮೋದಕಾದಿಗಳಂತೆ ಅಗಿಯುವದಾಗಲಿ ನುಂಗುವದಾಗಲಿ (ಭಕ್ಷಣವೆಂದು ಅಭಿಪ್ರೇತ)ವಾಗಿಲ್ಲ. "ದೇವತೆಗಳು ತಿನ್ನುವದೂ ಇಲ್ಲ, ಕುಡಿಯುವದೂ ಇಲ್ಲ; ಈ ಅಮೃತವನ್ನು

1. ಸ್ವರ್ಗಕಾಮನೇ ಅಧಿಕಾರಿಯು ಎಂದು ಈ ಶ್ರುತಿಯಲ್ಲಿದೆ ; ಭೋಗವೇ ಇಲ್ಲದಿದ್ದರೆ ಈ ಶ್ರುತಿಯು ಅಧಿಕಾರಿಯನ್ನು ಹೇಳುತ್ತದೆ ಎಂಬುದೇ ಸುಳ್ಳಾಗುವದು.

ನೋಡಿಯೇ ತೃಪ್ತರಾಗಿರುತ್ತಾರೆ" (ಛಾಂ. ೩-೬-೧) ಎಂದು ದೇವತೆಗಳಿಗೆ ಆಗಿಯುವದೇ ಮುಂತಾದ ವ್ಯಾಪಾರವನ್ನು (ಶ್ರುತಿಯು) ಅಲ್ಲಗಳೆದಿದೆ. ಆ ಇಷ್ಟಾದಿಕಾರಿಗಳು ದೇವತೆಗಳಿಗೆ ಅಧೀನಭಾವವನ್ನು ಪಡೆದುಕೊಂಡಿದ್ದರೂ ರಾಜನ ಉಪಜೀವಿಗಳಾದ ಪರಿಜನರಿಗಿರುವಂತೆ ಅವರಿಗೂ ಉಪಭೋಗವಿರಬಹುದಾಗಿರುತ್ತದೆ.

ಮತ್ತು ಇಷ್ಟಾದಿಕಾರಿಗಳು ಅನಾತ್ಮವಿದರಾದ್ದರಿಂದ ದೇವತೆಗಳಿಗೆ ಅವರು ಉಪಭೋಗ್ಯರಾಗಿರುವದು ಯುಕ್ತವೂ ಆಗಿದೆ. ಆದ್ದರಿಂದಲೇ ಶ್ರುತಿಯು ಆತ್ಮಜ್ಞಾನಿಗಳಲ್ಲದವರು ದೇವತೆಗಳಿಗೆ ಉಪಭೋಗ್ಯರಾಗಿರುವರೆಂದು "ಇನ್ನು ಯಾವನು ಈ (ದೇವತೆ) ಬೇರೆ, ನಾನು ಬೇರೆಯಾಗಿರುವೆನು ಎಂದು ದೇವತೆಯನ್ನು ಅನ್ಯವಾಗಿ ಉಪಾಸನೆಮಾಡುತ್ತಿರುವನೋ ಅವನು ಅರಿಯನು; ಅವನು ದೇವತೆಗಳಿಗೆ ಪಶುವು ಹೇಗೋ ಹಾಗೆ" (ಬೃ. ೧-೪-೧೦) ಎಂದು ತಿಳಿಸುತ್ತದೆ. ಅವನು ಈ ಲೋಕದಲ್ಲಿಯೂ ಇಷ್ಟಾದಿಕರ್ಮಗಳಿಂದ ಸಂತೋಷಗೊಳಿಸುತ್ತಾ ದೇವತೆಗಳಿಗೆ ಪಶುವಿನಂತೆ ಉಪಕಾರವನ್ನು ಮಾಡುತ್ತಿರುತ್ತಾನೆ; ಆ (ಪರ)ಲೋಕದಲ್ಲಿಯೂ ಅವರ ಉಪಜೀವಿಯಾಗಿ ಅವರು ಕೊಟ್ಟ ಫಲವನ್ನು ಉಪಭೋಗಿಸುತ್ತಾ ಪಶುವಿನಂತೆ ದೇವತೆಗಳಿಗೆ ಉಪಕಾರವನ್ನು ಮಾಡುತ್ತಿರುತ್ತಾನೆ ಎಂದು ನಿಶ್ಚಯವಾಗುತ್ತದೆ[1].

## ಸೂತ್ರದಲ್ಲಿ 'ಅನಾತ್ಮವಿತ್ತ್ವಾತ್' ಎಂಬ ಮಾತಿಗೆ ವ್ಯಾಖ್ಯಾಂತರ

(ಭಾಷ್ಯ)

೨೨೩. 'ಅನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ' ಇತ್ಯಸ್ಯ ಅಪರಾ ವ್ಯಾಖ್ಯಾ । ಅನಾತ್ಮವಿದೋ ಹ್ಯೇತೇ ಕೇವಲಕರ್ಮಿಣಃ ಇಷ್ಟಾದಿಕಾರಿಣೋ ನ ಜ್ಞಾನಕರ್ಮಸಮುಚ್ಚಯಾನುಷ್ಠಾಯಿನಃ । ಪಞ್ಚಾಗ್ನಿವಿದ್ಯಾಮ್ ಇಹ ಆತ್ಮವಿದ್ಯಾ ಇತಿ ಉಪಚರನ್ತಿ । ಪ್ರಕರಣಾತ್ । ಪಞ್ಚಾಗ್ನಿವಿಜ್ಞಾನವಿಹೀನತ್ವಾಚ್ಚ ಇದಮ್ ಇಷ್ಟಾದಿಕಾರಿಣಾಂ ಗುಣವಾದೇನ ಅನ್ನತ್ವಮ್ ಉದ್ಭಾವ್ಯತೇ ಪಞ್ಚಾಗ್ನಿವಿಜ್ಞಾನಪ್ರಶಂಸಾಯೈ । ಪಞ್ಚಾಗ್ನಿವಿದ್ಯಾ ಹಿ ಇಹ ವಿಧಿತ್ಸಿತಾ ವಾಕ್ಯತಾತ್ಪರ್ಯಾವಗಮಾತ್ । ತಥಾ ಹಿ ಶ್ರುತ್ಯನ್ತರಂ ಚನ್ದ್ರಮಣ್ಡಲೇ ಭೋಗಸದ್ಭಾವಂ ದರ್ಶಯತಿ "ಸ ಸೋಮಲೋಕೇ ವಿಭೂತಿಮನುಭೂಯ

1. ಕರ್ಮವನ್ನು ದೇವತೆಗಳಿಗಾಗಿಯೇ ಮಾಡಿರುವದರಿಂದ ಅವರಿಗಧೀನವಾಗಿಯೇ ಫಲವನ್ನನುಭವಿಸುವನೆಂದು ಕಲ್ಪಿಸುವದು ಯುಕ್ತ. ಇದು ಶ್ರುತಿಗೆ ಪೋಷಕವಾದ ಯುಕ್ತಿ.

ಪುನರಾವರ್ತತೇ'' (ಪ್ರ. ೫-೪) ಇತಿ । ತಥಾ ಅನ್ಯದಪಿ ಶ್ರುತ್ಯಂತರಮ್ "ಅಥ ಯೇ ಶತಂ ಪಿತೄಣಾಂ[1] ಜಿತಲೋಕಾನಾಮಾನನ್ದಾಃ.... ಸ ಏಕಃ ಕರ್ಮದೇವಾನಾಮಾನನ್ದೋ ಯೇ ಕರ್ಮಣಾ ದೇವತ್ವಮಭಿಸಂಪದ್ಯನ್ತೇ'' (ಬೃ ೪-೩-೩೩)[2] ಇತಿ ಇಷ್ಟಾದಿಕಾರಿಣಾಂ ದೇವೈಃ ಸಹ ಸಂವಸತಾಂ ಭೋಗಪ್ರಾಪ್ತಿಂ ದರ್ಶಯತಿ । ಏವಂ ಭಾಕ್ತತ್ವಾದನ್ನಭಾವವಚನಸ್ಯೇಷ್ಟಾದಿ ಕಾರಿಣಃ ಅತ್ರ ಜೀವಾ ರಂಹನ್ತಿ ಇತಿ ಪ್ರತೀಯತೇ । ತಸ್ಮಾತ್ ರಂಹತಿ ಸಂಪರಿಷ್ವಕ್ತಃ ಇತಿ ಯುಕ್ತಮೇವ ಉಕ್ತಮ್ ॥

(ಭಾಷ್ಯಾರ್ಥ)

"ಅನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ" ಎಂಬ (ಸೂತ್ರಭಾಗಕ್ಕೆ) ಮತ್ತೊಂದು **ವ್ಯಾಖ್ಯಾನವು** ಹೇಗೆಂದರೆ ಈ ಇಷ್ಟಾದಿಕಾರಿಗಳು ಕೇವಲ ಕರ್ಮಿಗಳಾದ್ದರಿಂದ ಅನಾತ್ಮಜ್ಞರಾಗಿರುತ್ತಾರೆ, (ಇವರು) ಜ್ಞಾನಕರ್ಮ ಸಮುಚ್ಚಯವನ್ನು ಅನುಷ್ಠಾನಮಾಡಿದವರಲ್ಲ (ಎಂದರ್ಥ). ಪಂಚಾಗ್ನಿವಿದ್ಯೆಯನ್ನೇ ಇಲ್ಲಿ ಆತ್ಮವಿದ್ಯೆ ಎಂದು ಉಪಚಾರದಿಂದ (ಕರೆ)ದಿರುತ್ತದೆ ; ಏಕೆಂದರೆ (ಇದು ಆ ವಿದ್ಯೆಯ) ಪ್ರಕರಣವಾಗಿರುತ್ತದೆ[3]. ಪಂಚಾಗ್ನಿವಿಜ್ಞಾನವು ಇಲ್ಲದ್ದರಿಂದ ಇಷ್ಟಾದಿಗಳನ್ನು ಮಾಡದವರಿಗೆ ಈ ಅನ್ನತ್ವವನ್ನು ಗುಣವಾದದಿಂದ ಕಲ್ಪಿಸಿ ಹೇಳಿರುತ್ತದೆ; (ಈ ಗೌಣಕಲ್ಪನೆಯೂ) ಪಂಚಾಗ್ನಿವಿಜ್ಞಾನವನ್ನು ಹೊಗಳುವದಕ್ಕಾಗಿ (ಹೇಳಿದ್ದು). ಪಂಚಾಗ್ನಿವಿದ್ಯೆಯನ್ನಲ್ಲವೆ, ಇಲ್ಲಿ ವಿಧಾನ ಮಾಡಬೇಕಾಗಿದೆ ? ವಾಕ್ಯತಾತ್ಪರ್ಯವನ್ನು ನಿಶ್ಚಯಿಸುವದರಿಂದ ಹೀಗೆಂದು ಗೊತ್ತಾಗುತ್ತದೆ. ಆದ್ದರಿಂದಲೇ ಮತ್ತೊಂದು ಶ್ರುತಿಯಲ್ಲಿ " ಅವನು ಸೋಮ ಲೋಕದಲ್ಲಿ ವಿಭೂತಿಯನ್ನು ಅನುಭವಿಸಿ ಮತ್ತೆ ಹಿಂತಿರುಗುತ್ತಾನೆ " (ಪ್ರ.೫-೪)ಎಂದು ಚಂದ್ರಮಂಡಲದಲ್ಲಿಯೂ ಭೋಗವುಂಟೆಂದು ಹೇಳಿರುತ್ತದೆ.

---

1. ಪಿತ್ರ್ಯಾಣಾಂ ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ಕಾಣ್ವಪಾಠದಲ್ಲಿ "ಜಿತಲೋಕಾನಾಮಾನನ್ದಾಃ" ಇದಾದಮೇಲೆ ಗಂಧರ್ವ ಲೋಕದವರ ಆನಂದವನ್ನು ಹೇಳುವ ವಾಕ್ಯವಿದೆ, ಅದಾದಬಳಿಕ ಕರ್ಮದೇವತೆಗಳನ್ನು ಹೇಳುವ ವಾಕ್ಯವಿದೆ. ಮಾಧ್ಯಂದಿನಪಾಠಾಂತರವನ್ನು ವಾರ್ತಿಕದಲ್ಲಾಗಲಿ ವಾರ್ತಿಕಟೀಕೆ ಯಲ್ಲಾಗಲಿ ಕೊಟ್ಟಿಲ್ಲ. ಆದ್ದರಿಂದ ಇದು ಕಾಣ್ವಪಾಠವೆಂದೇ ಗ್ರಹಿಸಿ ನಡುವೆ.... ಹೀಗೆ ಚುಕ್ಕೆ ಹಾಕಿದೇವೆ.

3. ಹಿಂದೆ ಅನಾತ್ಮವಿತ್ತ್ವಾತ್ ಎಂಬ ಮಾತಿಗೆ ಪರಮಾತ್ಮನನ್ನರಿಯದವರು ಎಂದು ಅರ್ಥಮಾಡಿತ್ತು. ಆಗ ಪಂಚಾಗ್ನಿವಿದ್ಯೆಯನ್ನರಿತವರೂ ಅನಾತ್ಮಜ್ಞರಾಗುವರೆಂಬ ಕಾರಣದಿಂದ ಈ ವ್ಯಾಖ್ಯಾನಾಂತರವನ್ನು ಕೊಟ್ಟಿರಬಹುದೆಂದು ತೋರುತ್ತದೆ. ಪಂಚಾಗ್ನಿ ವಿದ್ಯೆಯು ಜೀವಾತ್ಮರುಗಳ ವಿಷಯವಾದ ಉಪಾಸನೆಯಾಗಿರುವದರಿಂದ ಆ ಉಪಾಸನೆ ಯನ್ನೂ ಆತ್ಮವಿದ್ಯೆ ಎಂದು ಕರೆಯಬಹುದು ಎಂದು ಭಾವ.

ಮತ್ತೂ ಒಂದು ಶ್ರುತ್ಯಂತರದಲ್ಲಿ "ಇನ್ನು ಜಿತಲೋಕರಾಗಿರುವ ಪಿತೃಗಳ ನೂರು ಆನಂದಗಳಿವೆಯಲ್ಲ...... ಅದು ಒಂದು ಕರ್ಮದೇವತೆಗಳ ಆನಂದವು ; ಆ (ಕರ್ಮದೇವತೆಗಳು) ಕರ್ಮದಿಂದ ದೇವತ್ವವನ್ನು ಪಡೆದುಕೊಂಡಿರುವರು" (ಬೃ. ೪-೩-೩೩) ಎಂದು ಇಷ್ಟಾದಿಕಾರಿಗಳು ದೇವತೆಗಳೊಡನೆ ಇದ್ದುಕೊಂಡು ಭೋಗವನ್ನು ಪಡೆಯುವರೆಂದು ತಿಳಿಸಿರುತ್ತದೆ. ಹೀಗೆ ಅನ್ನವಾಗುವದೆಂಬ ವಚನವು ಭಾಕ್ತವಾಗಿರುವದರಿಂದ ಇಲ್ಲಿ ಇಷ್ಟಾದಿಕಾರಿಗಳಾದ ಜೀವರುಗಳು (ಚಂದ್ರಲೋಕಕ್ಕೆ ಭೋಗಕ್ಕಾಗಿ) ಹೋಗುತ್ತಾರೆ ಎಂದು ಇಲ್ಲಿ ಅರ್ಥವಾಗುತ್ತದೆ. ಆದ್ದರಿಂದ 'ರಂಹತಿ ಸಂಪರಿಷ್ವಕ್ತಃ' (ಅಪ್ಪಿನಿಂದ ಸಂಪರಿಷ್ವಕ್ತನಾದ ಜೀವನು) ಹೋಗುತ್ತಾನೆ ಎಂದು (ಸೂತ್ರದಲ್ಲಿ) ಹೇಳಿದ್ದು ಯುಕ್ತವೇ.

## ೨. ಕೃತಾತ್ಯಯಾಧಿಕರಣ (ಸೂ. ೮-೧೧)

(ಇಷ್ಟಾದಿಕಾರಿಗಳಿಗೆ ಸಾನುಶಯವಾಗಿ ಪುನರಾವೃತ್ತಿ)

**ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಯಥೇತಮನೇವಂ ಚ ॥ ೮ ॥**

೮. ಕರ್ಮವು ಮುಗಿಯಲು ಅನುಶಯವಂತನಾಗಿ (ಇಳಿಯುತ್ತಾನೆ). ಏಕೆಂದರೆ ಶ್ರುತಿಸ್ಮೃತಿಗಳಿವೆ. ಹೋದಂತೆಯೂ ಅದರಂತಲ್ಲದೆಯೂ (ಇಳಿಯುತ್ತಾರೆ).

## ಚಂದ್ರಲೋಕದಿಂದ ಇಳಿಯುವದು ಸಾನುಶಯವೊ, ಅಲ್ಲವೊ ?

(ಭಾಷ್ಯ)

೩೨೪. ಇಷ್ಟಾದಿಕಾರಿಣಾಂ ಧೂಮಾದಿನಾ ವರ್ತ್ಮನಾ ಚನ್ದ್ರಮಣ್ಡಲಮ್ ಅಧಿರೂಢಾನಾಂ ಭುಕ್ತಭೋಗಾನಾಂ ತತಃ ಪ್ರತ್ಯವರೋಹಃ ಆಮ್ನಾಯತೇ- "ತಸ್ಮಿನ್ ಯಾವತ್ಸಂಪಾತಮುಷಿತ್ವಾಥೈತಮೇವಾಧ್ವಾನಂ ಪುನರ್ನಿವರ್ತನ್ತೇ ಯಥೇತಮ್" (ಛಾಂ. ೫-೧೦-೫) ಇತ್ಯಾರಭ್ಯ ಯಾವತ್ "ರಮಣೀಯಚರಣಾಃ ಬ್ರಾಹ್ಮಣಾದಿಯೋನಿಮ್ ಆಪದ್ಯನ್ತೇ ಕಪೂಯಚರಣಾಃ ಶ್ವಾದಿಯೋನಿಮ್" (ಛಾಂ. ೫-೧೦-೭)[1] ಇತಿ। ತತ್ರೇದಂ ವಿಚಾರ್ಯತೇ ಕಿಂ ನಿರನುಶಯಾ ಭುಕ್ತಕೃತ್ಸ್ನಕರ್ಮಾಣೋಽವರೋಹನ್ತಿ ಆಹೋಸ್ವಿತ್ ಸಾನುಶಯಾ ಇತಿ ? ॥

1. ಇದು ಶ್ರುತಿಯ ಅರ್ಥವು ಮಾತ್ರ.

(ಭಾಷ್ಯಾರ್ಥ)

ಇಷ್ಟಾದಿಕಾರಿಗಳು ಧೂಮಾದಿಮಾರ್ಗದಿಂದ ಚಂದ್ರಮಂಡಲವನ್ನು ಏರಿ ಭೋಗಗಳನ್ನು ಅನುಭವಿಸಿದ ಬಳಿಕ ಕೆಳಕ್ಕೆ ಇಳಿಯುವರು ಎಂದು "ಅಲ್ಲಿ ಸಂಪಾತವಿರುವವರೆಗೆ ಇದ್ದು ಆಮೇಲೆ ಹೋಗಿದ್ದ ಕ್ರಮದಂತೆ ಈ ದಾರಿಯಲ್ಲಿಯೇ ಮತ್ತೆ ಹಿಂತಿರುಗುತ್ತಾರೆ'' (ಛಾಂ. ೫-೧೦-೫) ಎಂಬುದರಿಂದ ಹಿಡಿದು "ಒಳ್ಳೆಯದನ್ನು ಮಾಡಿದವರು ಬ್ರಾಹ್ಮಣಾದಿಯೋನಿಯನ್ನು ಪಡೆಯುತ್ತಾರೆ, ಕೆಟ್ಟ ಕರ್ಮವನ್ನು ಮಾಡಿದವರು ನಾಯಿಯೇ ಮುಂತಾದ ಯೋನಿಯನ್ನು ಪಡೆಯುತ್ತಾರೆ" (ಛಾಂ. ೫-೧೦-೭ರ ಅರ್ಥ) ಎಂಬವರೆಗಿನ ಶ್ರುತಿಯಲ್ಲಿ ಹೇಳಿರುತ್ತದೆ.

ಇಲ್ಲಿ ಇದನ್ನು ವಿಚಾರಮಾಡಬೇಕಾಗಿರುತ್ತದೆ, ನಿರನುಶಯರಾಗಿ ಎಂದರೆ ಎಲ್ಲಾ ಕರ್ಮಗಳನ್ನೂ ಅನುಭವಿಸಿ ಇಳಿಯುತ್ತಾರೆಯೆ, ಅಥವಾ ಸಾನುಶಯರಾಗಿ (ಇಳಿಯುತ್ತಾರೆಯೆ) ?

## ಪೂರ್ವಪಕ್ಷ:

## ಅನುಶಯವಿಲ್ಲದವರಾಗಿಯೇ ಕರ್ಮಿಗಳು ಇಳಿಯುತ್ತಾರೆ

(ಭಾಷ್ಯ)

೨೫೫. ಕಿಂ ತಾವತ್ ಪ್ರಾಪ್ತಮ್ ? ನಿರನುಶಯಾಃ ಇತಿ । ಕುತಃ ? 'ಯಾವತ್ಸಂಪಾತಮ್' ಇತಿ ವಿಶೇಷಣಾತ್ । ಸಂಪಾತಶಬ್ದೇನ ಅತ್ರ ಕರ್ಮಾಶಯ ಉಚ್ಯತೇ ಸಂಪತನ್ತಿ ಅನೇನ ಅಸ್ಮಾಲ್ಲೋಕಾತ್ ಅಮುಂ ಲೋಕಂ ಫಲೋಪಭೋಗಾಯ ಇತಿ "ಯಾವತ್ಸಂಪಾತಮುಷಿತ್ವಾ"[1] ಇತಿ ಚ ಕೃತ್ಸ್ನಸ್ಯ ತಸ್ಯ ಕೃತಸ್ಯ ತತ್ರೈವ ಭುಕ್ತತಾಂ ದರ್ಶಯತಿ । "ತೇಷಾಂ ಯದಾ ತತ್ ಪರ್ಯವೈತಿ" (ಬೃ. ೬-೨-೧೬) ಇತಿ ಚ ಶ್ರುತ್ಯನ್ತರೇಣ ಏಷ ಏವಾರ್ಥಃ ಪ್ರದರ್ಶ್ಯತೇ । ಸ್ಯಾದೇತತ್ । ಯಾವತ್ ಅಮುಷ್ಮಿಲ್ಲೋಕ ಉಪಭೋಕ್ತವ್ಯಂ ಕರ್ಮ ತಾವತ್ ಉಪಭುಙ್ಕ್ತೇ ಇತಿ ಕಲ್ಪಯಿಷ್ಯಾಮಿ ಇತಿ । ನೈವಂ ಕಲ್ಪಯಿತುಂ ಶಕ್ಯತೇ । 'ಯತ್ಕಿಂಚ' ಇತಿ ಅನ್ಯತ್ರ ಪರಾಮರ್ಶಾತ್ ।

---

1. ಕರ್ಮವು ಉಳಿದುಕೊಂಡಿದ್ದು ಭೋಗಕ್ಕಾಗಿ ಬರುತ್ತಾರೆಂದರೆ ಸಂಸಾರದ ವಿಷಯಕ್ಕೆ ವೈರಾಗ್ಯವು ದೃಢವಾಗುತ್ತದೆ ಎಂಬ ಪ್ರಯೋಜನವನ್ನು ರ.ಪ್ರ.ಯಲ್ಲಿ ಹೇಳಿದೆ. ಪೂರ್ವಪಕ್ಷದಂತೆ ಕರ್ಮದಿಂದಲೇ ಗತಿ, ಅದು ಇಲ್ಲದ್ದರಿಂದ ಹಿಂದಕ್ಕೆಬರುವದು ಎಂದಾಗುತ್ತದೆ ; ಸಿದ್ಧಾಂತದಲ್ಲಿ ಹಿಂತಿರುಗಿಬರುವದೂ ಕರ್ಮಕೃತವೆಂದಾಗುತ್ತದೆ ಎಂದು ನ್ಯಾ. ನಿ. ಕರ್ಮಶೇಷವು ಇದ್ದೇ ಇರುವದರಿಂದ ಕಾಮ್ಯನಿಷಿದ್ಧಕರ್ಮಗಳನ್ನು ಬಿಟ್ಟಮಾತ್ರದಿಂದ ಮೋಕ್ಷಫಲವಾಗುವದಿಲ್ಲವೆಂಬ ಪ್ರಯೋಜನವನ್ನು ಈ ಅಧಿಕರಣದ ಸಿದ್ಧಾಂತಕ್ಕೆ ಪ್ರಯೋಜನವೆಂದು ಹೇಳಬಹುದಾಗಿ ತೋರುತ್ತದೆ.

“ಪ್ರಾಪ್ಯಾನ್ತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಮ್ । ತಸ್ಮಾಲ್ಲೋಕಾತ್ ಪುನರೇತ್ಯಸ್ಮೈ ಲೋಕಾಯ ಕರ್ಮಣೇ” (ಬೃ. ೪-೪-೬) ಇತಿ ಹಿ ಅಪರಾ ಶ್ರುತಿಃ 'ಯತ್ಕಿಂಚ' ಇತ್ಯವಿಶೇಷಪರಾಮರ್ಶೇನ ಕೃತ್ಸ್ನಸ್ಯ ಇಹ ಕೃತಸ್ಯ ಕರ್ಮಣಃ ತತ್ರ ಕ್ಷಯಿತಾಂ ದರ್ಶಯತಿ । ಅಪಿ ಚ ಪ್ರಾಯಣಮ್ ಅನಾರಬ್ಧಫಲಸ್ಯ ಕರ್ಮಣೋಽಭಿವ್ಯಞ್ಜಕಮ್ । ಪ್ರಾಕ್ಪ್ರಾಯಣಾತ್ ಆರಬ್ಧಫಲೇನ ಕರ್ಮಣಾ ಪ್ರತಿಬದ್ಧಸ್ಯ ಅಭಿವ್ಯಕ್ತ್ಯನುಪಪತ್ತೇಃ । ತಚ್ಚ ಅವಿಶೇಷಾತ್ ಯಾವತ್ ಕಿಂಚಿತ್ ಅನಾರಬ್ಧಫಲಮ್ ತಸ್ಯ ಸರ್ವಸ್ಯ ಅಭಿವ್ಯಞ್ಜಕಮ್ । ನ ಹಿ ಸಾಧಾರಣೇ ನಿಮಿತ್ತೇ ನೈಮಿತ್ತಿಕಮ್ ಅಸಾಧಾರಣಂ ಭವಿತುಮರ್ಹತಿ । ನ ಹಿ ಅವಿಶಿಷ್ಟೇ ಪ್ರದೀಪಸಂನಿಧೌ ಘಟೋಽಭಿವ್ಯಜ್ಯತೇ ನ ಪಟ ಇತ್ಯುಪಪದ್ಯತೇ । ತಸ್ಮಾತ್ ನಿರನುಶಯಾ ಅವರೋಹನ್ತೀತಿ ॥

(ಭಾಷ್ಯಾರ್ಥ)

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? (ಯಾವ) ಅನುಶಯವೂ ಇಲ್ಲದೆ (ಇಳಿಯುತ್ತಾರೆಂದು ಪ್ರಾಪ್ತವಾಗುತ್ತದೆ). ಏಕೆ? ಎಂದರೆ 'ಸಂಪಾತವಿರುವವರೆಗೆ' ಎಂಬ ವಿಶೇಷಣವಿರುವದರಿಂದ. ಇಲ್ಲಿ ಸಂಪಾತ ಶಬ್ದದಿಂದ ಕರ್ಮಾಶಯವನ್ನು ಹೇಳಿದೆ. ಆದರಿಂದ ಈ ಲೋಕವನ್ನು ಬಿಟ್ಟು ಆ ಲೋಕಕ್ಕೆ ಫಲಭೋಗಕ್ಕೆ ಹೋಗುತ್ತಾರೆ (ಸಂಪತನ್ತಿ), ಆದ್ದರಿಂದ (ಸಂಪಾತವೆಂದು ಅದಕ್ಕೆ ಹೆಸರು). 'ಸಂಪಾತವಿರುವವರೆಗೆ ಇದ್ದು' ಎಂದದ್ದರಿಂದ ಮಾಡಿದ ಆ (ಕರ್ಮ)ವನ್ನೆಲ್ಲ ಅಲ್ಲಿಯೇ ಭೋಗಮಾಡಿರುತ್ತಾರೆಂದು ತಿಳಿಸಿರುತ್ತದೆ. “ಅವರಿಗೆ ಯಾವಾಗ ಅದು ಮುಗಿಯುತ್ತದೆಯೋ.....” (ಬೃ. ೬-೨-೧೬) ಎಂಬ ಶ್ರುತ್ಯಂತರವೂ ಇದೇ ಅರ್ಥವನ್ನು ತಿಳಿಸುತ್ತದೆ.

(ಪ್ರತಿವಾದಿಯ ಮತವು) ಇದಾಗಿರಬಹುದು. 'ಎಷ್ಟರಮಟ್ಟಿಗೆ ಆ ಲೋಕದಲ್ಲಿ ಕರ್ಮವನ್ನು ಉಪಭೋಗಿಸಬೇಕೋ ಅಷ್ಟುಮಟ್ಟಿಗೆ ಉಪಭೋಗಿಸುತ್ತಾನೆ' ಎಂದು (ಶ್ರುತಿಗೆ ಅರ್ಥವನ್ನು) ಕಲ್ಪಿಸೋಣ (ಎಂದು ಅವನೆನ್ನಬಹುದು. ಆದರೆ) ಹೀಗೆ ಕಲ್ಪಿಸುವದಕ್ಕೆ ಆಗುವದಿಲ್ಲ; ಏಕೆಂದರೆ ಇನ್ನೊಂದು ಕಡೆಯಲ್ಲಿ 'ಎಷ್ಟಿದೆಯೋ ಅಷ್ಟನ್ನೂ' ಎಂದು ಪರಾಮರ್ಶಮಾಡಿರುತ್ತದೆ. (ಇದರ ವಿವರ): “ಇವನು ಇಲ್ಲಿ ಎಷ್ಟು (ಕರ್ಮ)ವನ್ನು ಮಾಡಿರುತ್ತಾನೋ ಆ ಕರ್ಮದ ಅಂತವನ್ನು ಪಡೆದು, ಆ ಲೋಕದಿಂದ ಈ ಲೋಕಕ್ಕೆ ಮತ್ತೆ ಕರ್ಮಕ್ಕಾಗಿ ಬರುವನು” (ಬೃ. ೪-೪-೬) ಎಂದಲ್ಲವೆ, ಮತ್ತೊಂದು ಶ್ರುತಿಯು 'ಎಷ್ಟು (ಕರ್ಮವಿದೆಯೋ) ಅಷ್ಟನ್ನೂ' ಎಂದು ಸಾಮಾನ್ಯವಾಗಿ ಪರಾಮರ್ಶಮಾಡಿರುವದರಿಂದ ಮಾಡಿದ್ದಕರ್ಮವೆಲ್ಲ ಅಲ್ಲಿ ಮುಗಿದುಹೋಗುವದೆಂದು ತಿಳಿಸುತ್ತದೆ? ಇದೂ ಅಲ್ಲದೆ ಸಾಯುವದೆಂಬುದು ಅನಾರಬ್ಧಫಲವುಳ್ಳ

ಕರ್ಮಕ್ಕೆ ಅಭಿವ್ಯಂಜಕವು ; ಏಕೆಂದರೆ ಸಾಯುವ ಮುಂಚೆ ಆರಬ್ಧಫಲವುಳ್ಳ ಕರ್ಮವು ಪ್ರತಿಬಂಧಕವಾಗಿರುವದರಿಂದ (ಅದು) ಅಭಿವ್ಯಕ್ತವಾಗುವ ಹಾಗಿರುವದಿಲ್ಲ. (ಯಾವ) ವಿಶೇಷವೂ ಇಲ್ಲದ್ದರಿಂದ ಆ ಅನಾರಬ್ಧಫಲ(ವುಳ್ಳ ಕರ್ಮವು) ಎಷ್ಟಿಷ್ಟಿದೆಯೋ ಅದೆಲ್ಲಕ್ಕೂ ಆ (ಸಾವು) ಅಭಿವ್ಯಂಜಕ(ವೆನ್ನಬೇಕು). ಏಕೆಂದರೆ ನಿಮಿತ್ತವು ಸಾಧಾರಣವಾಗಿರುವಲ್ಲಿ ನೈಮಿತ್ತಿಕವು ಮಾತ್ರ ಅಸಾಧಾರಣವಾಗಲಾರದು ; ದೀಪವು ಹತ್ತಿರವಿರುವದು ಸಮಾನವಾಗಿರುವಲ್ಲಿ ಗಡಿಗೆಯು ತೋರುತ್ತದೆ, ಬಟ್ಟೆಯು (ಮಾತ್ರ) ತೋರುವದಿಲ್ಲ ಎಂಬುದು ಹೊಂದುವದಿಲ್ಲವಷ್ಟೆ ? ಆದ್ದರಿಂದ ನಿರನುಶಯರಾಗಿ ಇಳಿಯುತ್ತಾರೆ.

## ಸಿದ್ಧಾಂತ:

## ಇಷ್ಟಾದಿಕಾರಿಗಳು ಸಾನುಶಯರಾಗಿಯೇ ಇಳಿಯುತ್ತಾರೆ

(ಭಾಷ್ಯ)

೨೨೬. ಏವಂ ಪ್ರಾಪ್ತೇ ಬ್ರೂಮಃ 'ಕೃತಾತ್ಯಯೇಽನುಶಯವಾನ್' ಇತಿ। ಯೇನ ಕರ್ಮವೃನ್ದೇನ ಚನ್ದ್ರಮಸಮ್ ಆರೂಢಾಃ ಫಲೋಪಭೋಗಾಯ, ತಸ್ಮಿನ್ ಉಪಭೋಗೇನ ಕ್ಷಯಿತೇ ತೇಷಾಂ ಯತ್ ಅಮ್ಮಯಂ ಶರೀರಂ ಚನ್ದ್ರಮಸಿ ಉಪಭೋಗಾಯ ಆರಬ್ಧಮ್ ತತ್ ಉಪಭೋಗಕ್ಷಯದರ್ಶನಶೋಕಾಗ್ನಿಸಂಪರ್ಕಾತ್ ಪ್ರವಿಲೀಯತೇ ಸವಿತೃಕಿರಣಸಂಪರ್ಕಾದಿವ ಹಿಮಕರಕಾಃ, ಹುತಭುಗರ್ಚಿಃಸಂಪರ್ಕಾದಿವ ಚ ಘೃತಕಾಠಿನ್ಯಮ್। ತತಃ ಕೃತಾತ್ಯಯೇ ಕೃತಸ್ಯ ಇಷ್ಟಾದೇಃ ಕರ್ಮಣಃ ಫಲೋಪಭೋಗೇನ ಉಪಕ್ಷಯೇ ಸತಿ ಸಾನುಶಯಾ ಏವ ಇಮಮ್ ಅವರೋಹನ್ತಿ। ಕೇನ ಹೇತುನಾ ? ದೃಷ್ಟಸ್ಮೃತಿಭ್ಯಾಮ್ ಇತ್ಯಾಹ। ತಥಾ ಹಿ ಪ್ರತ್ಯಕ್ಷಾ ಶ್ರುತಿಃ ಸಾನುಶಯಾನಾಮ್ ಅವರೋಹಂ ದರ್ಶಯತಿ "ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ ತೇ ರಮಣೀಯಾಂ ಯೋನಿಮಾಪದ್ಯೇರನ್ ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾಽಥ ಯ ಇಹ ಕಪೂಯಚರಣಾ ಅಭ್ಯಾಶೋ ಹ ಯತ್ತೇ ಕಪೂಯಾಂ ಯೋನಿಮಾಪದ್ಯೇರಞ್ಶ್ವಯೋನಿಂ ವಾ ಸೂಕರಯೋನಿಂ ವಾ ಚಣ್ಡಾಲಯೋನಿಂ ವಾ" (ಛಾ. ೫-೧೦-೭) ಇತಿ। ಚರಣಶಬ್ದೇನ ಅನುಶಯಃ ಸೂಚ್ಯತ ಇತಿ ವರ್ಣಯಿಷ್ಯತಿ। ದೃಷ್ಟಶ್ಚಾಯಂ ಜನ್ಮನೈವ ಪ್ರತಿಪ್ರಾಣಿ ಉಚ್ಚಾವಚರೂಪ ಉಪಭೋಗಃ ಪ್ರವಿಭಜ್ಯಮಾನ ಆಕಸ್ಮಿಕತ್ವಾಸಂಭವಾತ್ ಅನುಶಯಸದ್ಭಾವಂ ಸೂಚಯತಿ। ಅಭ್ಯುದಯಪ್ರತ್ಯವಾಯಯೋಃ ಸುಕೃತದುಷ್ಕೃತಹೇತುತ್ವಸ್ಯ ಸಾಮಾನ್ಯತಃ ಶಾಸ್ತ್ರೇಣಾವಗಮಿತತ್ವಾತ್। ಸ್ಮೃತಿರಪಿ "ವರ್ಣಾ ಆಶ್ರಮಾಶ್ಚ ಸ್ವಕರ್ಮ

ನಿಷ್ಠಾಃ ಪ್ರೇತ್ಯ ಕರ್ಮಫಲಮನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲರೂಪಾಯುಃ ಶ್ರುತವೃತ್ತವಿತ್ತಸುಖಮೇಧಸೋ ಜನ್ಮ ಪ್ರತಿಪದ್ಯಂತೇ" (ಗೌ. ಧ. ೨-೨-೨೯, ವ್ಯ. ಗೌ. ಧ. ೧೧-೩೧) ಇತಿ ಸಾನುಶಯಾನಾಮೇವ ಅವರೋಹಂ ದರ್ಶಯತಿ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ "ಕೃತಾತ್ಯಯೇಽನುಶಯವಾನ್....." ಎಂಬ (ಸಿದ್ಧಾಂತವನ್ನು) ಹೇಳಲಾಗಿರುತ್ತದೆ. ಯಾವ ಕರ್ಮಸಮೂಹದಿಂದ ಚಂದ್ರಲೋಕವನ್ನು ಫಲದ ಉಪಭೋಗಕ್ಕಾಗಿ ಏರಿದ್ದರೋ ಅದು ಉಪಭೋಗದಿಂದ ಕ್ಷಯವಾಗಲು ಆ (ಇಷ್ಟಾದಿಕಾರಿಗಳ) ಅಪ್ಪಿನಿಂದಾಗಿದ್ದ ಶರೀರವು[1] ಚಂದ್ರಲೋಕದಲ್ಲಿ ಉಪಭೋಗಕ್ಕಾಗಿ ಆಗಿತ್ತಷ್ಟೆ, ಅದು ಉಪಭೋಗವು ಸವೆಯಿತೆಂಬುದನ್ನು ಕಂಡ ಶೋಕವೆಂಬ ಅಗ್ನಿಯ ಸಂಪರ್ಕದಿಂದ ಸೂರ್ಯಕಿರಣಗಳ ಸಂಪರ್ಕದಿಂದ ಆಲಿಕಲ್ಲುಗಳು (ಕರಗು)ವಂತೆಯೂ, ಬೆಂಕಿಯ ಉರಿಯ ಸಂಪರ್ಕದಿಂದ ತುಪ್ಪದ ಗಟ್ಟಿಯು (ಕರಗು)ವಂತೆಯೂ) ಕರಗಿಹೋಗುತ್ತದೆ. ಆ ಬಳಿಕ ಕೃತಾತ್ಯಯವಾಗಲು, ಕೃತವೆಂಬ ಇಷ್ಟಾದಿಕರ್ಮವು ಫಲದ ಉಪಭೋಗದಿಂದ ಸವೆದುಹೋಗಲಾಗಿ ಸಾನುಶಯರಾಗಿಯೇ ಈ ಲೋಕಕ್ಕೆ ಇಳಿಯುತ್ತಾರೆ.

ಯಾವ ಹೇತುವಿನಿಂದ ? ಎಂದರೆ ದೃಷ್ಟಸ್ಮೃತಿಗಳಿಂದ (ಎಂದು) ಹೇಳುತ್ತಾರೆ. ಹೇಗೆಂದರೆ ಪ್ರತ್ಯಕ್ಷವು ಎಂದರೆ ಶ್ರುತಿಯು[2] "ಅದರಲ್ಲಿ ಯಾರು ರಮಣೀಯಚರಣರಾಗಿದ್ದರೋ ಅವರು ರಮಣೀಯವಾದ ಯೋನಿಯನ್ನು–ಬ್ರಾಹ್ಮಣಯೋನಿಯನ್ನೋ ಕ್ಷತ್ರಿಯಯೋನಿಯನ್ನೋ ವೈಶ್ಯಯೋನಿಯನ್ನೋ ಪಡೆಯುವರೆಂಬುದು ಬೇಗನೆಯೇ (ಆಗುವದು). ಇನ್ನು ಯಾರು ಇಲ್ಲಿ ಕಪೂಯಚರಣರಾಗಿದ್ದರೋ[3] ಅವರು ಕೆಟ್ಟ ಯೋನಿಯನ್ನೇ– ನಾಯಿಯ ಯೋನಿಯನ್ನೋ ಹಂದಿಯ ಯೋನಿಯನ್ನೋ ಚಾಂಡಾಲಯೋನಿಯನ್ನೋ–ಪಡೆಯುವರೆಂಬಿದು ಬೇಗನೆಯೇ (ಆಗುವದು)" (ಛಾಂ. ೫-೧೦-೭) ಎಂದು ಸಾನುಶಯರಾಗಿಯೇ ಇಳಿಯುತ್ತಾರೆಂದು ತಿಳಿಸುತ್ತದೆ. ಚರಣಶಬ್ದದಿಂದ ಅನುಶಯವನ್ನೇ ಸೂಚಿಸಿದೆ ಎಂದು ಮುಂದೆ ತಿಳಿಸಲಾಗುತ್ತದೆ. ಹುಟ್ಟು

---

1. ಆಯಾ ಲೋಕಕ್ಕೆ ಆಯಾ ಭೂತವು ಪ್ರಧಾನವಾಗಿರುವ ಶರೀರವು ಏರ್ಪಡುವದೆಂಬುದನ್ನು ಇದು ಸೂಚಿಸುತ್ತದೆ.

2. ಸೂತ್ರದಲ್ಲಿರುವ ದೃಷ್ಟ ಎಂದರೆ ಪ್ರತ್ಯಕ್ಷವು, ಶ್ರುತಿಯು. ಶ್ರುತಿಯು ನಿರಪೇಕ್ಷವಾಗಿ ಪ್ರಮಾಣವಾಗಿರುವದರಿಂದ ಅದನ್ನು ಪ್ರತ್ಯಕ್ಷವೆಂದಿದೆ.

3. ಕೆಟ್ಟ ಆಚರಣೆಯುವರಾಗಿದ್ದರೋ.

ವಾಗಲೇ ಪ್ರತಿಯೊಂದು ಪ್ರಾಣಿಗೂ ಹೆಚ್ಚುಕಡಿಮೆಯ ರೂಪದ ಉಪಭೋಗವು ವಿಂಗಡವಾಗಿರುವದು ಕಂಡುಬರುವದರಿಂದ ಅದು ಆಕಸ್ಮಿಕವಾಗಿ ಆಗಲಾರ ದಾದ್ದರಿಂದ ಅನುಶಯವಿರಬೇಕೆಂಬುದನ್ನು ಸೂಚಿಸುತ್ತದೆ. ಏಕೆಂದರೆ ಅಭ್ಯು ದಯವೂ ಪ್ರತ್ಯವಾಯವೂ ಸುಕೃತದುಷ್ಕೃತಗಳ ಕಾರಣದಿಂದಾಗುವದೆಂದು ಸಾಮಾನ್ಯವಾಗಿ ಶಾಸ್ತ್ರವು ತಿಳಿಸಿಕೊಟ್ಟಿರುತ್ತದೆ. ಸ್ಮೃತಿಯೂ "(ಬೇರೆಬೇರೆ ಯ) ವರ್ಣದವರೂ ಆಶ್ರಮದವರೂ ಸ್ವಕರ್ಮನಿಷ್ಠರಾಗಿದ್ದು ಸತ್ತಬಳಿಕ ಕರ್ಮಫಲವನ್ನು ಅನುಭವಿಸಿ ಆಮೇಲೆ ಅದರಲ್ಲಿ ಉಳಿದ (ಕರ್ಮದ ಫಲವಾಗಿ) ಆಯಾ ದೇಶ, ಜಾತಿ, ಕುಲ, ರೂಪ, ಆಯುಸ್ಸು, ಶಾಸ್ತ್ರಜ್ಞಾನ, ನಡತೆ, ಧನ, ಸುಖ, ಮೇಧಾಶಕ್ತಿ– ಇವುಗಳಿಂದೊಡಗೂಡಿ ಜನ್ಮವನ್ನು ಹೊಂದುತ್ತಾರೆ" (ಗೌ. ಧ. ೨–೨೯, ವ್ಯಾ. ಗೌ. ಧ. ೧೧–೩೧) ಎಂದು ಸಾನುಶಯವಾಗಿಯೇ ಇಳಿಯುತ್ತಾರೆಂದು ತಿಳಿಸುತ್ತದೆ.

## ಅನುಶಯವೆಂದರೇನೆಂಬ ಬಗ್ಗೆ ಏಕದೇಶಿಗಳ ಮತ

(ಭಾಷ್ಯ)

೨೨೭. ಕಃ ಪುನರನುಶಯೋ ನಾಮ ಇತಿ ? ಕೇಚಿತ್ ತಾವದಾಹುಃ ಸ್ವರ್ಗಾರ್ಥಸ್ಯ ಕರ್ಮಣಃ ಭುಕ್ತಫಲಸ್ಯ ಅವಶೇಷಃ ಕಶ್ಚಿತ್ ಅನುಶಯೋ ನಾಮ ಭಾಣ್ಡಾನುಸಾರಿಸ್ನೇಹವತ್ । ಯಥಾ ಹಿ ಸ್ನೇಹಭಾಣ್ಡಂ ರಿಚ್ಯಮಾನಂ ನ ಸರ್ವಾತ್ಮನಾ ರಿಚ್ಯತೇ, ಭಾಣ್ಡಾನುಸಾರ್ಯೇವ ಕಶ್ಚಿತ್ ಸ್ನೇಹಶೇಷಃ ಅವ ತಿಷ್ಠತೇ, ತಥಾ ಅನುಶಯೋಽಪಿ ಇತಿ । ನನು ಕಾರ್ಯವಿರೋಧಿತ್ವಾತ್ ಅದೃಷ್ಟಸ್ಯ ನ ಭುಕ್ತಫಲಸ್ಯ ಅವಶೇಷಾವಸ್ಥಾನಂ ನ್ಯಾಯ್ಯಮ್ । ನಾಯಂ ದೋಷಃ । ನ ಹಿ ಸರ್ವಾತ್ಮನಾ ಭುಕ್ತಫಲತ್ವಂ ಕರ್ಮಣಃ ಪ್ರತಿಜಾನೀಮಹೇ ನನು ನಿರವಶೇಷಕರ್ಮಫಲೋಪಭೋಗಾಯ ಚನ್ದ್ರಮಣ್ಡಲಮ್ ಆರೂಢಃ । ಬಾಢಮ್ । ತಥಾಪಿ ಸ್ವಲ್ಪಕರ್ಮಾವಶೇಷಮಾತ್ರೇಣ ತತ್ರ ಅವಸ್ಥಾತುಂ ನ ಲಭ್ಯತೇ । ಯಥಾ ಕಿಲ ಕಶ್ಚಿತ್ ಸೇವಕಃ ಸಕಲೈಃ ಸೇವೋಪಕರಣೈ ರಾಜಕುಲಮ್ ಉಪಸೃಪ್ತಃ ಚಿರಪ್ರವಾಸಾತ್ ಪರಿಕ್ಷೀಣಬಹೂಪಕರಣಃ ಛತ್ರಪಾದುಕಾದಿಮಾತ್ರಾವಶೇಷಃ ನ ರಾಜಕುಲೇ ಅವಸ್ಥಾತುಂ ಶಕ್ನೋತಿ । ಏವಮ್ ಅನುಶಯಮಾತ್ರಪರಿಗ್ರಹೋ ನ ಚನ್ದ್ರಮಣ್ಡಲೇ ಅವಸ್ಥಾತುಂ ಶಕ್ನೋತೀತಿ ॥

(ಭಾಷ್ಯಾರ್ಥ)

ಇನ್ನು ಅನುಶಯವೆಂದರೇನು ? (ಈ ವಿಷಯಕ್ಕೆ) ಮೊದಲನೆಯದಾಗಿ **ಕೆಲವರು ಹೇಳುತ್ತಾರೇನೆಂದರೆ** ಸ್ವರ್ಗಾರ್ಥವಾದ ಕರ್ಮದ ಫಲವನ್ನು

ಅನುಭವಿಸಿ ಉಳಿದಿರುವ ಯಾವದೋ ಒಂದು (ಭಾಗವು) ಅನುಶಯವು. ಪಾತ್ರೆಯನ್ನು ಅನುಸರಿಸಿಕೊಂಡುಬಂದಿರುವ ಜಿಡ್ಡಿನಂತೆ (ಇದನ್ನು ಅರಿಯಬೇಕು. ಇದರ ವಿವರ) : ಹೇಗೆ ಎಣ್ಣೆಯ ಪಾತ್ರೆಯನ್ನು ಬರಿದುಮಾಡಿದರೆ ಸಂಪೂರ್ಣವಾಗಿ ಬರಿದುಮಾಡುವದು ಆಗುವದಿಲ್ಲವೋ ಪಾತ್ರೆಯನ್ನಂಟಿಕೊಂಡೇ ಸ್ವಲ್ಪ ಎಣ್ಣೆಯ ಶೇಷವು ಹತ್ತಿಕೊಂಡೇ ಇರುವದೋ, ಹಾಗೆ ಅನುಶಯವೂ (ಅಂಟಿಕೊಂಡೇ ಇರುತ್ತದೆ) ಎಂದು (ಅವರ ಅಭಿಪ್ರಾಯ).

(ಆಕ್ಷೇಪ):– ಅದೃಷ್ಟವು ಕಾರ್ಯಕ್ಕೆ ವಿರುದ್ಧವಾಗಿರುವದರಿಂದ ಭುಕ್ತಫಲವಾದ (ಕರ್ಮಕ್ಕೆ) ಅವಶೇಷವು ಇರುವದೆಂಬುದು ಯುಕ್ತವಾಗುವದಿಲ್ಲವಲ್ಲ[1]!

(ಏಕದೇಶಿಯ ಪರಿಹಾರ):– ಇದು ದೋಷವಲ್ಲ. ಕರ್ಮದ ಫಲವನ್ನು ಸಂಪೂರ್ಣವಾಗಿ ಭೋಗಮಾಡಿದ್ದಾಗಿರುವದೆಂದು (ನಾವು) ಹೇಳುವದಿಲ್ಲ[2].

(ಆಕ್ಷೇಪ):– ಕರ್ಮಫಲವನ್ನು ಸಂಪೂರ್ಣವಾಗಿ ಅನುಭವಿಸುವದಕ್ಕೆಂದಲ್ಲವೆ, ಚಂದ್ರಮಂಡಲವನ್ನು ಏರಿದ್ದನು ?

(ಪರಿಹಾರ):–ನಿಜ. ಆದರೂ ಸ್ವಲ್ಪವೇ ಕರ್ಮವು ಉಳಿದುಕೊಂಡಿರುವದರಿಂದ ಅಲ್ಲಿ(ಅವನು) ನಿಂತಿರುವದಕ್ಕೆ ಆಗುವದಿಲ್ಲ[3]. ಹೇಗೆ ಒಬ್ಬ ಸೇವಕನು ಸೇವೋಪಕರಣಗಳನ್ನೆಲ್ಲ ತೆಗೆದುಕೊಂಡು ಅರಮನೆಗೆ ಹೋಗಿದ್ದವನು ಬಹುಕಾಲ ಅಲ್ಲಿದ್ದದ್ದರಿಂದ ಬಹಳ ಉಪಕರಣಗಳು ಮುಗಿದುಹೋಗಲಾಗಿ ಛತ್ರ, ಪಾದುಕೆ– ಮುಂತಾದವುಗಳಷ್ಟೇ ಉಳಿದರೆ ಅರಮನೆಯಲ್ಲಿ ನಿಲ್ಲುವದಕ್ಕೆ ಆಗಲಾರದೋ ಹಾಗೆಯೇ ಅನುಶಯವು ಮಾತ್ರ ಇರುವವನು ಚಂದ್ರಮಂಡಲದಲ್ಲಿ ನಿಲ್ಲಲಾರದೆ ಇರುವನು, (ಹೀಗೆಂದು ಅವರ ಅಭಿಪ್ರಾಯ).

## ಸಿದ್ಧಾಂತ: ಅನುಶಯವೆಂದರೆ ಐಹಿಕಫಲವನ್ನು ಕೊಡುವ ಕರ್ಮಶೇಷವು

(ಭಾಷ್ಯ)

೨೨೮. ನ ಚೈತದ್ ಯುಕ್ತಮಿವ। ನ ಹಿ ಸ್ವರ್ಗಾರ್ಥಸ್ಯ ಕರ್ಮಣಃ ಭುಕ್ತಫಲಸ್ಯ ಅವಶೇಷಾನುವೃತ್ತಿಃ ಉಪಪದ್ಯತೇ। ಕಾರ್ಯವಿರೋಧಿತ್ವಾತ್

---

1. ಕರ್ಮದ ಅದೃಷ್ಟವು ಫಲವನ್ನೇ ಕೊಟ್ಟೇತೀರಬೇಕು; ಆದರಲ್ಲಿ ಸ್ವಲ್ಪ ಉಳಿದಿರುವದೆಂಬುದು ವಿರುದ್ಧ ಎಂದು ಅರ್ಥ.

2. ಹಾಗೆ ಹೇಳಿದ್ದರೆ ಅನುಶಯವು ಉಳಿಯುವದಕ್ಕೆ ಅವಕಾಶವಿರುತ್ತಿರಲಿಲ್ಲ; ಸ್ವಲ್ಪ ಭಾಗವು ಉಳಿದುಕೊಂಡಿದ್ದರೂ ಅದೃಷ್ಟವು ತನ್ನ ಕಾರ್ಯವನ್ನು ಮಾಡಿದಂತೆ ಆಗುವದು ಎಂದು ಭಾವ.

3. ಆದ್ದರಿಂದ ಅದೃಷ್ಟವು ಕೊಡಬೇಕಾಗಿದ್ದ ಫಲವನ್ನು ಕೊಡಲಿಲ್ಲವೆಂಬ ದೋಷವಿಲ್ಲ.

ಇತ್ಯುಕ್ತಮ್। ನನ್ವೇತದಪ್ಯುಕ್ತಮ್ ನ ಸ್ವರ್ಗಫಲಸ್ಯ ಕರ್ಮಣೋ ನಿಖಿಲಸ್ಯ ಭುಕ್ತಫಲತ್ವಂ ಭವಿಷ್ಯತೀತಿ। ತದೇತತ್ ಅಪೇಶಲಮ್। ಸ್ವರ್ಗಾರ್ಥಂ ಕಿಲ ಕರ್ಮಸ್ವರ್ಗಸ್ಥಸ್ಯೈವ ಸ್ವರ್ಗಫಲಂ ನಿಖಿಲಂ ನ ಜನಯತಿ, ಸ್ವರ್ಗಚ್ಯುತಸ್ಯಾಪಿ ಕಂಚಿತ್ ಫಲಲೇಶಂ ಜನಯತೀತಿ। ನ ಶಬ್ದಪ್ರಮಾಣಕಾನಾಮ್ ಈದೃಶೀ ಕಲ್ಪನಾ ಅವಕಲ್ಪತೇ। ಸ್ನೇಹಭಾಣ್ಡೇ ತು ಸ್ನೇಹಲೇಶಾನುವೃತ್ತಿರ್ದೃಷ್ಟತ್ವಾತ್ ಉಪಪದ್ಯತೇ। ತಥಾ ಸೇವಕಸ್ಯ ಉಪಕರಣಲೇಶಾನುವೃತ್ತಿಶ್ಚ ದೃಶ್ಯತೇ। ನ ತ್ವಿಹ ತಥಾ ಸ್ವರ್ಗಫಲಸ್ಯ ಕರ್ಮಣಃ ಲೇಶಾನುವೃತ್ತಿರ್ದೃಶ್ಯತೇ। ನಾಪಿ ಕಲ್ಪಯಿತುಂ ಶಕ್ಯತೇ। ಸ್ವರ್ಗಫಲತ್ವಶಾಸ್ತ್ರವಿರೋಧಾತ್। ಅವಶ್ಯಂ ಚೈತದೇವಂ ವಿಜ್ಞೇಯಮ್ ನ ಸ್ವರ್ಗಫಲಸ್ಯ ಇಷ್ಟಾದೇಃ ಕರ್ಮಣಃ ಭಾಣ್ಡಾನುಸಾರಿ ಸ್ನೇಹವತ್ ಏಕದೇಶೋಽನುವರ್ತಮಾನಃ ಅನುಶಯಃ ಇತಿ। ಯದಿ ಹಿ ಯೇನ ಸುಕೃತೇನ ಕರ್ಮಣಾ ಇಷ್ಟಾದಿನಾ ಸ್ವರ್ಗಮ್ ಅನ್ವಭೂವನ್ ತಸ್ಯೈವ ಕಶ್ಚಿತ್ ಏಕದೇಶಃ ಅನುಶಯಃ ಕಲ್ಪ್ಯೇತ, ತತೋ ರಮಣೀಯ ಏವೈಕೋಽನುಶಯಃ ಸ್ಯಾತ್, ನ ವಿಪರೀತಃ। ತತ್ರ ಇಯಮ್ ಅನುಶಯವಿಭಾಗಶ್ರುತಿರುಪರುಧ್ಯೇತ–"ತದ್ಯ ಇಹ ರಮಣೀಯಚರಣಾ.....ಅಥ ಯ ಇಹ ಕಪೂಯಚರಣಾಃ" (ಛಾಂ. ೫-೧೦-೭) ಇತಿ। ತಸ್ಮಾತ್ ಆಮುಷ್ಮಿಕಫಲೇ ಕರ್ಮಜಾತ ಉಪಭುಕ್ತೇ ಅವಶಿಷ್ಟಮ್ ಐಹಿಕಫಲಂ ಕರ್ಮಾನ್ತರಜಾತಮ್ ಅನುಶಯಃ, ತದ್ವನ್ತೋಽವರೋಹನ್ತೀತಿ॥

(ಭಾಷ್ಯಾರ್ಥ)

ಆದರೆ ಇದು ಯುಕ್ತವೆಂದು (ತೋರು)ವದಿಲ್ಲ. ಏಕೆಂದರೆ ಸ್ವರ್ಗಾರ್ಥವಾದ ಕರ್ಮದ ಫಲವನ್ನು ಭೋಗಮಾಡಿದ ಬಳಿಕ (ಅದರ) ಅವಶೇಷವು ಅನುವರ್ತಿಸಿಕೊಂಡಿರುವದೆಂಬುದು ಹೊಂದುವದಿಲ್ಲ. ಏಕೆಂದರೆ ( ಅದು ) ಕಾರ್ಯವಿರೋಧಿಯಾಗುತ್ತದೆ[1] ಎಂದು (ಆಗಲೆ) ಹೇಳಿರುತ್ತೇವೆ.

(ಆಕ್ಷೇಪ) :— ಇದೂ ಸರಿಯಲ್ಲವಲ್ಲ ! ಏಕೆಂದರೆ ಸ್ವರ್ಗಫಲಕವಾದ ಕರ್ಮವೆಲ್ಲವೂ ಭುಕ್ತಫಲವಾಗಿರುವದಿಲ್ಲ.

(ಪರಿಹಾರ) :— ಆ ಈ (ಅಭಿಪ್ರಾಯವು) ಸರಿಯಲ್ಲ. ಸ್ವರ್ಗಾರ್ಥವಾದ ಕರ್ಮವು ಸ್ವರ್ಗದಲ್ಲಿರುವವನಿಗೆ ಎಲ್ಲಾ ಸ್ವರ್ಗಫಲವನ್ನೂ ಕೊಡುವದಿಲ್ಲವಂತೆ, ಸ್ವರ್ಗಚ್ಯುತನಾದವನಿಗೂ ಬೇರೊಂದಿಷ್ಟು ಫಲವನ್ನುಂಟುಮಾಡುತ್ತದೆ

1. ಕಾರ್ಯವನ್ನು ಕೊಟ್ಟಿರುವ ಕರ್ಮವು ಉಳಿದುಕೊಂಡಿರುತ್ತದೆ ಎಂದರೆ ವಿರೋಧ.

ಯಂತೆ ! ಶಬ್ದಪ್ರಮಾಣಕರಾದವರಿಗೆ ಇಂಥ ಕಲ್ಪನೆಯು ಯುಕ್ತವಾಗುವದಿಲ್ಲ[1]. ಎಣ್ಣೆಯು ಪಾತ್ರದಲ್ಲಾದರೋ ಒಂದಿಷ್ಟು ಎಣ್ಣೆಯು ಉಳಿದುಕೊಂಡಿರುವದು ಕಂಡುಬರುವದರಿಂದ ಹೊಂದುತ್ತದೆ; ಅದರಂತೆ ಸೇವಕನಿಗೆ ಒಂದಿಷ್ಟು ಉಪಕರಣವು ಉಳಿದುಕೊಂಡಿರುವದೂ ಕಂಡುಬರುತ್ತದೆ. ಆದರೆ ಈ (ಸಂದರ್ಭ)ದಲ್ಲಿ ಹಾಗೆ ಕರ್ಮದ ಲೇಶವು ಅನುಸರಿಸಿಕೊಂಡು ಬಂದಿರುವದು ಕಾಣುವದಿಲ್ಲ, ( ಹಾಗೆಂದು ) ಕಲ್ಪಿಸುವದೂ ಆಗುವದಿಲ್ಲ. ಏಕೆಂದರೆ (ಅದು) ಸ್ವರ್ಗಫಲ(ವುಳ್ಳ ಕರ್ಮ) ಎಂಬ ಶಾಸ್ತ್ರಕ್ಕೆ ವಿರುದ್ಧವಾಗುತ್ತದೆ. ಸ್ವರ್ಗಫಲಕವಾದ ಇಷ್ಟಾದಿಕರ್ಮದಲ್ಲಿ ಪಾತ್ರಾನುಸಾರಿಯಾದ ಎಣ್ಣೆಯಂತೆ ಅನುವರ್ತಿಸಿಕೊಂಡುಬರುವ ಒಂದು ಭಾಗವು ಅನುಶಯವೆಂಬುದು ಸರಿಯಲ್ಲ) ಎಂದು ಅವಶ್ಯವಾಗಿ ಹೀಗೆಯೇ ಒಪ್ಪಲೂ ಬೇಕು. ಏಕೆಂದರೆ ಯಾವ ಇಷ್ಟಾದಿಪುಣ್ಯದಿಂದ ಸ್ವರ್ಗವನ್ನು ಅನುಭವಿಸಿದರೋ ಅದರದ್ದೇ ಒಂದು ಅಂಶವು ಅನುಶಯವು ಎಂದು ಕಲ್ಪಿಸಿದರೆ ಆಗ ರಮಣೀಯವಾದದ್ದೊಂದೇ ಅನುಶಯವಾಗುವದು, (ಅದಕ್ಕೆ) ವಿಪರೀತವಾದದ್ದು (ಅನುಶಯ)ವಾಗಲಾರದು. ಆಗ "ಆದ್ದರಿಂದ ಯಾರು ಇಲ್ಲಿ ರಮಣೀಯಚರಣರೋ ...... ಇನ್ನು ಯಾರು ಇಲ್ಲಿ ಕಪೂಯಚರಣರೋ'' ( ಛಾಂ. ೫-೧೦-೭ ) ಎಂದು ವಿಂಗಡಿಸಿರುವ ಈ ಅನುಶಯಶ್ರುತಿಗೆ ವಿರುದ್ಧವಾಗುವದು. ಆದ್ದರಿಂದ **ಆಮುಷ್ಮಿಕಫಲವುಳ್ಳ ಕರ್ಮವನ್ನು ಉಪಭೋಗವಾಡಿದಬಳಿಕ ಉಳಿದ ಐಹಿಕಫಲವುಳ್ಳ ಮತ್ತೊಂದು ಕರ್ಮಜಾತವೇ ಅನುಶಯವು;** ಅದರಿಂದೊಡಗೂಡಿ (ಇಷ್ಟಾದಿಕಾರಿಗಳು) ಇಳಿಯುತ್ತಾರೆ ಎಂದು ಒಪ್ಪಬೇಕು.

## ನಿರನುಶಯವಾದದ ಯುಕ್ತಿಗಳ ಖಂಡನೆ

(ಭಾಷ್ಯ)

೩೯. ಯದುಕ್ತಮ್ 'ಯತ್ಕಿಂಚ' ಇತ್ಯವಿಶೇಷಪರಾಮರ್ಶಾತ್ ಸರ್ವಸ್ಯೇಹ ಕೃತಸ್ಯ ಕರ್ಮಣಃ ಫಲೋಪಭೋಗೇನ ಅನ್ತಂ ಪ್ರಾಪ್ಯ ನಿರನುಶಯಾ ಅವರೋಹನ್ತಿ ಇತಿ। ನೈತದೇವಮ್ ಅನುಶಯಸದ್ಭಾವಸ್ಯ ಅವಗಮಿತತ್ವಾತ್ ಯತ್ಕಿಂಚಿದಿಹ ಕೃತಮ್ ಆಮುಷ್ಮಿಕಫಲಂ ಕರ್ಮ ಆರಬ್ಧಭೋಗಂ ತತ್ಸರ್ವಂ ಫಲೋಪಭೋಗೇನ ಕ್ಷಪಯಿತ್ವಾ ಇತಿ ಗಮ್ಯತೇ। ಯದಪ್ಯುಕ್ತಮ್ ಪ್ರಾಯಣಂ ಅವಿಶೇಷಾತ್ ಅನಾರಬ್ಧಫಲಂ ಕೃತ್ಸ್ನಮೇವ ಕರ್ಮ ಅಭಿವ್ಯನಕ್ತಿ, ತತ್ರ ಕೇನಚಿತ್ ಕರ್ಮಣಾ ಅಮುಷ್ಮಿನ್ ಲೋಕೇ ಫಲಮ್ ಆರಭ್ಯತೇ ಕೇನಚಿತ್ ಅಸ್ಮಿನ್ ಇತ್ಯಯಂ ವಿಭಾಗೋ ನ ಸಂಭವತೀತಿ। ತದಪಿ ಅನುಶಯಸದ್ಭಾವಪ್ರತಿಪಾದನೇನೈವ ಪ್ರತ್ಯುಕ್ತಮ್। ಅಪಿ

---

1. ಶಬ್ದವು ಹಾಗೆಂದೇನೂ ಹೇಳುವದಿಲ್ಲ.

ಚ ಕೇನ ಹೇತುನಾ ಪ್ರಾಯಣಮ್ ಅನಾರಬ್ಧಫಲಸ್ಯ ಕರ್ಮಣೋಽಭಿ ವ್ಯಞ್ಜಕಂ ಪ್ರತಿಜ್ಞಾಯತೇ ಇತಿ ವಕ್ತವ್ಯಮ್ । ಆರಬ್ಧಫಲೇನ ಕರ್ಮಣಾ ಪ್ರತಿಬದ್ಧಸ್ಯ ಇತರಸ್ಯ ವೃತ್ತ್ಯುದ್ಭವಾನುಪಪತ್ತೇಃ ತದುಪಶಮಾತ್ ಪ್ರಾಯಣ ಕಾಲೇ ವೃತ್ತ್ಯುದ್ಭವೋ ಭವತಿ ಇತಿ ಯದ್ಯುಚ್ಯೇತ । ತತೋ ವಕ್ತವ್ಯಮ್ ಯಥೈವ ತರ್ಹಿ ಪ್ರಾಕ್ ಪ್ರಾಯಣಾತ್ ಆರಬ್ಧಫಲೇನ ಕರ್ಮಣಾ ಪ್ರತಿ ಬದ್ಧಸ್ಯ ಇತರಸ್ಯ ವೃತ್ತ್ಯುದ್ಭವಾನುಪಪತ್ತಿಃ ।[1] ಏವಂ ಪ್ರಾಯಣಕಾಲೇಽಪಿ ವಿರುದ್ಧಫಲಸ್ಯ ಅನೇಕಸ್ಯ ಕರ್ಮಣಃ ಯುಗಪತ್ಫಲಾರಮ್ಭಾಸಂಭವಾತ್ ಬಲ ವತಾ ಪ್ರತಿಬದ್ಧಸ್ಯ ದುರ್ಬಲಸ್ಯ ವೃತ್ತ್ಯುದ್ಭವಾನುಪಪತ್ತಿರಿತಿ । ನ ಹಿ ಅನಾ ರಬ್ಧಫಲತ್ವಸಾಮಾನ್ಯೇನ ಜಾತ್ಯನ್ತರೋಪಭೋಗ್ಯಫಲಮಪಿ ಅನೇಕಂ ಕರ್ಮ ಏಕಸ್ಮಿನ್ ಪ್ರಾಯಣೇ ಯುಗಪತ್ ಅಭಿವ್ಯಕ್ತಂ ಸತ್ ಏಕಾಂ ಜಾತಿಮ್ ಆರಭೇತ ಇತಿ ಶಕ್ಯಂ ವಕ್ತುಮ್ । ಪ್ರತಿನಿಯತಫಲತ್ವವಿರೋಧಾತ್ । ನಾಪಿ ಕಸ್ಯಚಿತ್ ಕರ್ಮಣಃ ಪ್ರಾಯಣೇ ಅಭಿವ್ಯಕ್ತಿಃ ಕಸ್ಯಚಿತ್ ಉಚ್ಛೇದಃ ಇತಿ ಶಕ್ಯತೇ ವಕ್ತುಮ್ । ಐಕಾನ್ತಿಕಫಲತ್ವವಿರೋಧಾತ್ । ನ ಹಿ ಪ್ರಾಯಶ್ಚಿತ್ತಾ ದಿಭಿರ್ಹೇತುಭಿರ್ವಿನಾ ಕರ್ಮಣಾಮ್ ಉಚ್ಛೇದಃ ಸಂಭಾವ್ಯತೇ । ಸ್ಮೃತಿರಪಿ ವಿರುದ್ಧಫಲೇನ ಕರ್ಮಣಾ ಪ್ರತಿಬದ್ಧಸ್ಯ ಕರ್ಮಾನ್ತರಸ್ಯ ಚಿರಮ್ ಅವಸ್ಥಾನಂ ದರ್ಶಯತಿ — "ಕದಾಚಿತ್ ಸುಕೃತಂ ಕರ್ಮ[2] ಕೂಟಸ್ಥಮಿಹ ತಿಷ್ಠತಿ । ಮಜ್ಜಮಾನಸ್ಯ ಸಂಸಾರೇ ಯಾವದ್ ದುಃಖಾದ್ವಿಮುಚ್ಯತೇ" (ಮೋ. ಧ. ೨೯೦–೧೮) ಇತ್ಯೇವಂಜಾತೀಯಕಾ । ಯದಿ ಚ ಕೃತ್ಸ್ನಂ ಅನಾರಬ್ಧಫಲಂ ಕರ್ಮ ಏಕಸ್ಮಿನ್ ಪ್ರಾಯಣೇ ಅಭಿವ್ಯಕ್ತಂ ಸತ್ ಏಕಾಂ ಜಾತಿಮ್ ಆರಭೇತ ತತಃ ಸ್ವರ್ಗನರಕತಿರ್ಯಗ್ಯೋನಿಷು ಅಧಿಕಾರಾನವಗಮಾತ್ ಧರ್ಮಾಧರ್ಮಾ ನುತ್ಪತ್ತೌ ನಿಮಿತ್ತಾಭಾವಾತ್ ನೋತ್ಪದ್ಯೇತ ರಾ ಜಾತಿರುಪಪದ್ಯೇತ । ಬ್ರಹ್ಮಹತ್ಯಾ ದೀನಾಂ ಚ ಏಕೈಕಸ್ಯ ಕರ್ಮಣಃ ಅನೇಕಜನ್ಮನಿಮಿತ್ತತ್ವಂ ಸ್ಮರ್ಯಮಾಣಂ ಉಪರುಧ್ಯೇತ । ನ ಚ ಧರ್ಮಾಧರ್ಮಯೋಃ ಸ್ವರೂಪಫಲಸಾಧನಾದಿಸಮಧಿ ಗಮೇ ಶಾಸ್ತ್ರಾತ್ ಅತಿರಿಕ್ತಂ ಕಾರಣಂ ಶಕ್ಯಂ ಸಂಭಾವಯಿತುಮ್ । ನ ಚ ದೃಷ್ಟಫಲಸ್ಯ ಕರ್ಮಣಃ ಕಾರೀರ್ಯಾದೇಃ ಪ್ರಾಯಣಮ್ ಅಭಿವ್ಯಞ್ಜಕಂ ಸಂಭವತಿ ಇತ್ಯವ್ಯಾಪಿಕಾಪಿ ಇಯಂ ಪ್ರಾಯಣಸ್ಯ ಅಭಿವ್ಯಞ್ಜಕತ್ವಕಲ್ಪನಾ । ಪ್ರದೀಪೋಪನ್ಯಾಸೋಽಪಿ ಕರ್ಮಬಲಾಬಲಪ್ರದರ್ಶನೇನೈವ ಪ್ರತಿನೀತಃ । ಸ್ಥೂಲಸೂಕ್ಷ್ಮರೂಪಾಭಿವ್ಯಕ್ತ್ಯನಭಿವ್ಯಕ್ತಿವಚ್ಚ ಇದಂ ದ್ರಷ್ಟವ್ಯಮ್ । ಯಥಾ ಹಿ ಪ್ರದೀಪಃ ಸಮಾನೇಽಪಿ ಸಂನಿಧಾನೇ ಸ್ಥೂಲಂ ರೂಪಂ ಅಭಿವ್ಯನಕ್ತಿ, ನ

---

1. ಅಚ್ಚಿನ ಪುಸ್ತಕಗಳಲ್ಲಿ ಇದರ ಮುಂದೆ ಒಂದು "ಇತಿ" ಹೆಚ್ಚಾಗಿದೆ.
2. "ತಾತ" ಎಂಬುದು ಅಚ್ಚಿನ ಪುಸ್ತಕದ ಪಾಠ.

ಸೂಕ್ಷ್ಮಮ್ । ಏವಂ ಪ್ರಾಯಣಂ ಸಮಾನೇಽಪಿ ಅನಾರಬ್ಧಫಲಸ್ಯ ಕರ್ಮ ಜಾತಸ್ಯ ಪ್ರಾಪ್ತಾವಸರತ್ವೇ ಬಲವತಃ ಕರ್ಮಣೋ ವೃತ್ತಿಮ್ ಉದ್ಭಾವಯತಿ, ನ ದುರ್ಬಲಸ್ಯ ಇತಿ । ತಸ್ಮಾತ್ ಶ್ರುತಿಸ್ಮೃತಿನ್ಯಾಯವಿರೋಧಾತ್ ಅಶ್ಲಿಷ್ಟೋಽಯಮ್ ಅಶೇಷಕರ್ಮಾಭಿವ್ಯಕ್ತ್ಯಭ್ಯುಪಗಮಃ । ಶೇಷಕರ್ಮ ಸದ್ಭಾವೇ ಅನಿರ್ಮೋಕ್ಷಪ್ರಸಙ್ಗ ಇತ್ಯಯಮಪಿ ಅಸ್ಥಾನೇ ಸಂಭ್ರಮಃ । ಸಮ್ಯಗ್ದರ್ಶನಾತ್ ಅಶೇಷಕರ್ಮಕ್ಷಯಶ್ರುತೇಃ । ತಸ್ಮಾತ್ ಸ್ಥಿತಮೇತತ್ ಅನುಶಯವನ್ತೋಽವರೋಹನ್ತಿ ಇತಿ ॥

(ಭಾಷ್ಯ)

ಇನ್ನು 'ಯತ್ಕಿಂಚ' (ಎಷ್ಟು ಕರ್ಮವನ್ನು ಮಾಡಿರುತ್ತಾನೋ) ಎಂದು ಅವಿಶೇಷವಾಗಿ ಪರಾಮರ್ಶಿಸಿರುವದರಿಂದ ಇಲ್ಲಿ ಮಾಡಿರುವ ಎಲ್ಲಾ ಕರ್ಮದ ಫಲವನ್ನೂ ಅನುಭವಿಸಿ ಕೊನೆಯನ್ನು ಮುಟ್ಟಿ (ಯಾವ) ಅನುಶಯವೂ ಇಲ್ಲದೆ ಇಳಿಯುತ್ತಾರೆ ಎಂದು (ಭಾ. ಭಾ. ೨೨೫) ಹೇಳಿತ್ತಷ್ಟೆ, ಅದು ಹಾಗಲ್ಲ. ಏಕೆಂದರೆ ಅನುಶಯವು ಇರುತ್ತದೆ ಎಂಬುವನ್ನು ಗೊತ್ತುಪಡಿಸಿಕೊಟ್ಟಿರುತ್ತೇವೆ ; (ಆದ್ದರಿಂದ) ಇಲ್ಲಿ ಮಾಡಿದ ಆಮುಷ್ಮಿಕಫಲವನ್ನು ಕೊಡುವ ಎಷ್ಟು ಕರ್ಮ(ವನ್ನು ಮಾಡಿರುತ್ತಾನೋ) ಭೋಗವನ್ನು ಕೊಟ್ಟಿರುವ ಅದಷ್ಟನ್ನೂ ಫಲೋಪಭೋಗದಿಂದ ಕ್ಷಯಿಸಿ (ಇಳಿಯುತ್ತಾರೆ)[1] ಎಂದು ನಿಶ್ಚಯವಾಗುತ್ತದೆ.

ಇನ್ನು ಮರಣಕಾಲವು ಅನಾರಬ್ಧವಾಗಿರುವ ಫಲವುಳ್ಳ ಕರ್ಮವನ್ನೆಲ್ಲ ಯಾವ ವಿಶೇಷವೂ ಇಲ್ಲದೆ ಅಭಿವ್ಯಕ್ತಿಗೊಳಿಸುತ್ತದೆ ; ಹೀಗಿರುವದರಿಂದ ಒಂದು ಕರ್ಮಕ್ಕೆ ಆ ಲೋಕದಲ್ಲಿ ಫಲವುಂಟಾಗುತ್ತದೆ, ಒಂದು (ಕರ್ಮಕ್ಕೆ) ಈ ಲೋಕದಲ್ಲಿ (ಫಲವುಂಟಾಗುತ್ತದೆ) ಎಂಬೀ ವಿಭಾಗವು ಸಂಭವಿಸುವದಿಲ್ಲ ಎಂದು ಹೇಳಿದ್ದಿರಲ್ಲ, ಅದಕ್ಕೂ ಅನುಶಯವು ಇರುತ್ತದೆ ಎಂದು ಪ್ರತಿಪಾದಿಸಿದ್ದರಿಂದಲೇ ಪ್ರತ್ಯುತ್ತರವನ್ನು ಹೇಳಿದಂತೆ ಆಯಿತು. ಇದಲ್ಲದೆ ಮರಣಕಾಲವು ಅನಾರಬ್ಧ ಫಲವುಳ್ಳ ಕರ್ಮಕ್ಕೆ ಅಭಿವ್ಯಂಜಕವೆಂದು ಯಾವ ಹೇತುವಿನಿಂದ ಒಪ್ಪುತ್ತೀರಿ ಎಂಬುದನ್ನು (ನೀವು) ಹೇಳಬೇಕು. 'ಆರಬ್ಧಫಲವುಳ್ಳ ಕರ್ಮವು ಅಡ್ಡಿಯಾಗಿರುವದರಿಂದ ಇನ್ನೊಂದು (ಕರ್ಮಕ್ಕೆ) ವೃತ್ತಿಯುಂಟಾಗಲಾರದಾದ್ದರಿಂದ ಅದು ನಾಶವಾಗಲು ಪ್ರಯಾಣಕಾಲದಲ್ಲಿ (ಆ ಇನ್ನೊಂದು ಕರ್ಮಕ್ಕೆ) ವೃತ್ತಿಯುಂಟಾಗುತ್ತದೆ– ಎಂದು (ನೀವು) ಹೇಳುವದಾದರೆ, ಆಗ ಹಾಗಾದರೆ ಹೇಗೆ ಸಾಯುವ ಕಾಲಕ್ಕಿಂತ ಮುಂಚೆ ಆರಬ್ಧಫಲವುಳ್ಳ ಕರ್ಮದ ಅಡ್ಡಿಯಾಗಿರುವದರಿಂದ ಇನ್ನೊಂದು (ಕರ್ಮಕ್ಕೆ) ಹೇಗೆ ವೃತ್ತಿಯುಂಟಾಗಲಾರದೋ ಹಾಗೆಯೇ ಮರಣಕಾಲದಲ್ಲಿ ವಿರುದ್ಧಫಲವುಳ್ಳ ಅನೇಕ ಕರ್ಮಗಳಿಗೆ ಒಂದೆ

---

1. ಇದು ಬೃಹದಾರಣ್ಯಕಶ್ರುತಿಗೆ ಸಿದ್ಧಾಂತಿಯ ಅರ್ಥ.

ಕಾಲದಲ್ಲಿ ಫಲವುಂಟಾಗುವ ಸಂಭವವಿಲ್ಲದ್ದರಿಂದ ಪ್ರಬಲ(ಕರ್ಮ)ದ ಅಡ್ಡಿಯಿರುವ ದುರ್ಬಲ(ಕರ್ಮ)ಕ್ಕೆ ವೃತ್ತಿಯುಂಟಾಗಲಾರದು ಎಂದು ಹೇಳಬೇಕಾಗುವದು. ಅನಾರಬ್ಧಫಲವುಳ್ಳದ್ದು ಎಂಬ ಸಾಮಾನ್ಯದಿಂದ ಮತ್ತೊಂದು ಜನ್ಮದಲ್ಲಿ ಉಪಭೋಗಿಸಬೇಕಾದ ಫಲವುಳ್ಳ ಅನೇಕ ಕರ್ಮಗಳು ಒಂದೇ ಮರಣಕಾಲದಲ್ಲಿ ಏಕಕಾಲದಲ್ಲಿ ಅಭಿವ್ಯಕ್ತವಾಗಿ ಒಂದೇ ಜನ್ಮವನ್ನು ಉಂಟು ಮಾಡುತ್ತವೆ ಎಂದು ಹೇಳುವದು ಆಗಲಾರದಷ್ಟೆ. ಏಕೆಂದರೆ (ಅದು) ಗೊತ್ತಾದ ಫಲವುಳ್ಳದ್ದು ಎಂಬುದಕ್ಕೆವಿರೋಧವಾಗುವದು.[1] ಯಾವದೋ ಒಂದು ಕರ್ಮವು ಮರಣಕಾಲದಲ್ಲಿ ಅಭಿವ್ಯಕ್ತವಾಗುತ್ತದೆ, ಇನ್ನೊಂದು ನಾಶವಾಗುತ್ತದೆ ಎಂದು ಹೇಳುವದಕ್ಕೂ ಆಗುವದಿಲ್ಲ. ಏಕೆಂದರೆ (ಕರ್ಮವು) ನಿಯತವಾಗಿ ಫಲವನ್ನು ಕೊಡುವದೆಂಬುದಕ್ಕೆ (ಅದು) ವಿರುದ್ಧವಾಗುವದು[2]. ಪ್ರಾಯಶ್ಚಿತ್ತವೇ ಮುಂತಾದಹೇತುಗಳಿಲ್ಲದೆ ಕರ್ಮಗಳು ನಾಶವಾಗುವವೆಂದು ಸಂಭಾವಿತವಲ್ಲ[3]. "ಕೆಲವು ವೇಳೆ ಸಂಸಾರದಲ್ಲಿ ಮುಳಗಿರುವವನು ದುಃಖದಿಂದ ಬಿಡುಗಡೆಯಾಗುವವರೆಗೂ ಸುಕೃತಕರ್ಮವು ಹಾಗೆಯೇ ಇಲ್ಲಿ ಸುಮ್ಮನಿದ್ದುಕೊಂಡು ಬಿಟ್ಟಿರುತ್ತದೆ" (ಮೋ.ಧ. ೯೦-೧೮) ಎಂಬೀ ಜಾತಿಯ ಸ್ಮೃತಿಯೂ ವಿರುದ್ಧ ಫಲವನ್ನು (ಕೊಡುವ) ಕರ್ಮದಿಂದ ಪ್ರತಿಬದ್ಧವಾಗಿರುವ ಕರ್ಮಾಂತರವು ಚಿರಕಾಲದವರೆಗೆ (ಹಾಗೆಯೇ) ಇರುವದೆಂದು ತಿಳಿಸುತ್ತದೆ. ಮತ್ತು ಒಂದೇ ಮರಣಕಾಲದಲ್ಲಿ ಅನಾರಬ್ಧಫಲವಾದ ಕರ್ಮವೆಲ್ಲವೂ ಅಭಿವ್ಯಕ್ತವಾಗಿ ಒಂದೇ ಜನ್ಮವನ್ನು ಉಂಟುಮಾಡಿದರೆ ಆಗ ಸ್ವರ್ಗ, ನರಕ, ತಿರ್ಯಗ್ಯೋನಿಗಳಲ್ಲಿ ಅಧಿಕಾರವಿದೆಯೆಂಬ ನಿಶ್ಚಯವಿಲ್ಲದ್ದರಿಂದ ಧರ್ಮಾಧರ್ಮಗಳುಂಟಾಗುವದಕ್ಕೆ ನಿಮಿತ್ತವಿಲ್ಲದ್ದರಿಂದ ಮುಂದೆ (ಯಾವ) ಜನ್ಮವೂ ಉಂಟಾಗಬಾರದಾಗುವದು[4]. ಬ್ರಹ್ಮಹತ್ಯವೇ ಮುಂತಾದವುಗಳಲ್ಲಿ ಒಂದೊಂದು ಕರ್ಮವೇ ಅನೇಕ ಜನ್ಮಗಳಿಗೆ ನಿಮಿತ್ತವಾಗುವದೆಂದು ಸ್ಮೃತಿಯಲ್ಲಿರುವದಕ್ಕೆ ವಿರುದ್ಧವಾಗುವದು. ಧರ್ಮಾಧರ್ಮಗಳ ಸ್ವರೂಪ, ಫಲ ಸಾಧನ-ಮುಂತಾದವುಗಳನ್ನು ಅರಿತುಕೊಳ್ಳುವದಕ್ಕೆ ಶಾಸ್ತ್ರಕ್ಕಿಂತ ಬೇರೆಯಾದ ಪ್ರಮಾಣವಿದೆಯೆಂದು ಸಂಭಾವಿಸುವದು ಶಕ್ಯವಲ್ಲ. ದೃಷ್ಟಫಲವುಳ್ಳ ಕಾರೀರಿ(ಯಾಗ)ವೇ[5] ಮುಂತಾದ ಕರ್ಮಕ್ಕೆ

1. ಈ ಜನ್ಮದಲ್ಲಿ ಇಂಥ ಫಲವನ್ನೇ ಅನುಭವಿಸಬೇಕು ಎಂಬ ನಿಯಮಕ್ಕೆ ವಿರೋಧವಾಗುವದು.

2. ಅಕೃತಾಭ್ಯಾಗಮ ಕೃತವಿಪ್ರಣಾಶ-ಎಂಬ ದೋಷವು ಬಂದು ಶಾಸ್ತ್ರವು ವ್ಯರ್ಥವಾಗುವದು.

3. ಪ್ರಾಯಶ್ಚಿತ್ತದಿಂದಲೋ ಭೋಗದಿಂದಲೋ ಕರ್ಮವು ನಾಶವಾಗಬೇಕು! ಅಥವಾ ಆತ್ಮಜ್ಞಾನದಿಂದ ಬಾಧಿತವಾಗಬೇಕು.

4. ಆಗ ಮುಕ್ತಿಯು ಜ್ಞಾನವುಂಟಾಗದೆಯೇ ಆಗಿಬಿಡುವದು.

೬ ವೃಷ್ಟಿಯಾಗುವದಕ್ಕಾಗಿ ಮಾಡುವ ಯಾಗ.

ಮರಣವು ಅಭಿವ್ಯಂಜಕವೆಂಬುದು ಸಂಭವಿಸುವದೂ ಇಲ್ಲವಾದ್ದರಿಂದ ಮರಣ ಕಾಲವು ಅಭಿವ್ಯಂಜಕವೆಂದು ಕಲ್ಪಿಸುವದು ಅವ್ಯಾಪಕವಾಗಿಯೂ ಇರುತ್ತದೆ. (ಮರಣಕಾಲವು ಎಲ್ಲಕ್ಕೂ ಅಭಿವ್ಯಂಜಕವೆಂಬುದಕ್ಕೆ ಕೊಟ್ಟಿರುವ) ದೀಪದ ದೃಷ್ಟಾಂತವನ್ನೂ ಕರ್ಮಗಳಲ್ಲಿ ಪ್ರಬಲದುರ್ಬಲ(ಕರ್ಮ)ಗಳಿವೆ ಎಂದು ತೋರಿಸಿದ್ದರಿಂದಲೇ ಅತ್ತ ತಳ್ಳಿದಂತೆ ಆಯಿತು. ಸ್ಥೂಲಸೂಕ್ಷ್ಮರೂಪಗಳಿಗೆ ಅಭಿವ್ಯಂಜಕವಾಗಿರುವದು, ಇಲ್ಲದ್ದು ಎಂಬಂತೆಯೇ ಇದನ್ನೂ ತಿಳಿಯಬಹುದು. (ಇದರ ವಿವರ): ಹೇಗೆ ದೀಪಕ್ಕೆ (ವಸ್ತುಗಳು) ಹತ್ತಿರವಿರುವದು ಸಮಾನ ವಾದರೂ ಸ್ಥೂಲವಾದ ರೂಪವನ್ನು ತೋರಿಸುತ್ತದೆಯೋ ಸೂಕ್ಷ್ಮವಾದದ್ದನ್ನು (ತೋರಿಸು)ವದಿಲ್ಲವೋ ಹಾಗೆ ಮರಣಕಾಲವು ಅನಾರಬ್ಧಫಲವುಳ್ಳ ಕರ್ಮ ಜಾತಕ್ಕೆ ಸಮಯವು ಬಂದಿರುವದು ಸಮಾನವಾದರೂ ಪ್ರಬಲವಾದ ಕರ್ಮಕ್ಕೆ ವೃತ್ತಿಯನ್ನುಂಟುಮಾಡುತ್ತದೆ, ದುರ್ಬಲಕ್ಕೆ (ಮಾಡು)ವದಿಲ್ಲ ಎಂದು (ತಿಳಿಯ ಬೇಕು). ಆದ್ದರಿಂದ ಶ್ರುತಿಸ್ಮೃತಿನ್ಯಾಯಗಳಿಗೆ ವಿರೋಧವಾಗುವದರಿಂದ ಎಲ್ಲಾ ಕರ್ಮಗಳನ್ನೂ (ಮರಣಕಾಲವು) ಅಭಿವ್ಯಕ್ತಗೊಳಿಸುವದೆಂದು ಒಪ್ಪುವ ಈ (ವಾದವು) ಯುಕ್ತವಲ್ಲ. **ಕರ್ಮದ ಶೇಷವು ಇದೆ ಎಂದರೆ ಮೋಕ್ಷವೇ ಇಲ್ಲವೆಂಬ ಪ್ರಸಂಗವುಂಟಾಗುವದು ಎಂಬುದು ಅಸ್ಥಾನದಲ್ಲಿ (ತೋರಿ ಸಿದ) ಸಂಭ್ರಮವು. ಏಕೆಂದರೆ ಸಮ್ಯಗ್ದರ್ಶನದಿಂದ ಎಲ್ಲಾ ಕರ್ಮವೂ ಕ್ಷಯವಾಗುವದೆಂದು ಶ್ರುತಿಯಿರುತ್ತದೆ.** ಆದ್ದರಿಂದ ಅನುಶಯವುಳ್ಳವ ರಾಗಿ (ಇಷ್ಟಾದಿಕಾರಿಗಳು) ಇಳಿಯುತ್ತಾರೆ- ಎಂಬೀ ಪಕ್ಷವೇ ನಿಂತಿತು.

## ಸೂತ್ರಶೇಷಕ್ಕೆ ವ್ಯಾಖ್ಯಾನ

(ಭಾಷ್ಯ)

೩೩೦. ತೇ ಚ ಅವರೋಹನ್ತಿ ಯಥೇತಮ್ ಅನೇವಂ ಚ ಅವ ರೋಹನ್ತಿ। ಯಥೇತಮ್ ಇತಿ ಯಥಾಗತಮ್ ಇತ್ಯರ್ಥಃ। ಅನೇವಮ್ ಇತಿ ತದ್ವಿಪರ್ಯಯೇಣ ಇತ್ಯರ್ಥಃ। ಧೂಮಾಕಾಶಯೋಃ ಪಿತೃಯಾಣೇ ಅಧ್ವನಿ ಉಪಾತ್ತಯೋಃ ಅವರೋಹೇ ಸಂಕೀರ್ತನಾತ್ ಯಥೇತಂಶಬ್ದಾಚ್ಚ ಯಥಾ ಗತಮ್ ಇತಿ ಪ್ರತೀಯತೇ। ರಾತ್ರ್ಯಾದ್ಯಸಂಕೀರ್ತನಾತ್ ಅಭ್ರಾದ್ಯುಪ ಸಂಖ್ಯಾನಾಚ್ಚ ವಿಪರ್ಯಯೋಽಪಿ ಪ್ರತೀಯತೇ॥

(ಭಾಷ್ಯಾರ್ಥ)

(ಹೀಗೆ) ಇಳಿಯುವಾಗ ಅವರು ಹೋದಂತೆಯೂ ಹಾಗಲ್ಲದೆಯೂ ಇಳಿಯುತ್ತಾರೆ. 'ಯಥೇತಮ್' (ಹೋದಂತೆ) ಎಂಬ (ಸೂತ್ರಶಬ್ದಕ್ಕೆ) ಹೇಗೆ ಹೋಗಿದ್ದರೋ ಹಾಗೆ ಎಂದರ್ಥ. 'ಅನೇವಂ ಚ' (ಹಾಗಲ್ಲದೆಯೂ) ಎಂದರೆ ಅದಕ್ಕೆ ವಿಪರೀತವಾಗಿಯೂ ಎಂದರ್ಥ. ಪಿತೃಯಾಣ(ಮಾರ್ಗ)ದಲ್ಲಿ ಅಂಗೀ

ಕರಿಸಿದ್ದ ಧೂಮಾಕಾಶಗಳನ್ನು ಅವರೋಹದಲ್ಲಿ ಹೇಳಿರುವದರಿಂದಲೂ 'ಯಥೇತಮ್' ಎಂಬ ಶಬ್ದದಿಂದಲೂ ಹೋದಂತೆ (ಇಳಿಯುತ್ತಾರೆ) ಎಂದು ತೋರುತ್ತದೆ. ರಾತ್ರ್ಯಾದಿಗಳನ್ನು ಹೇಳದೆ ಇರುವದರಿಂದಲೂ ಅಭ್ರಾದಿಗಳನ್ನು ಸೇರಿಸಿಕೊಂಡಿರುವದರಿಂದಲೂ ವಿಪರ್ಯಯವೂ (ಉಂಟೆಂದು ತೋರುತ್ತದೆ[1].)

**ಚರಣಾದಿತಿ ಚೇನ್ನೋಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ॥ ೯ ॥**

೯. ಚರಣದಿಂದ (ಜನ್ಮಾಂತರವನ್ನು ಹೇಳಿರು)ವದರಿಂದ (ಸರಿ)ಯಲ್ಲ ಎಂದರೆ ಹಾಗಲ್ಲ. ಏಕೆಂದರೆ (ಈ ಶ್ರುತಿಯು) ಉಪಲಕ್ಷಣಾರ್ಥವಾಗಿರುತ್ತದೆ ಎಂದು ಕಾರ್ಷ್ಣಾಜಿನಿಯು (ಅಭಿಪ್ರಾಯಪಡುತ್ತಾನೆ).

## ಚರಣವೆಂಬ ಶ್ರುತಿಯು ಅನುಶಯಕ್ಕೆ ಉಪಲಕ್ಷಣ

(ಭಾಷ್ಯ)

೨೩೧. ಅಥಾಪಿ ಸ್ಯಾತ್। ಯಾ ಶ್ರುತಿಃ ಅನುಶಯಸದ್ಭಾವಪ್ರತಿಪಾದನಾಯ ಉದಾಹೃತಾ "ತದ್ಯ ಇಹ ರಮಣೀಯಚರಣಾಃ" (ಛಾಂ.೫-೧೦-೭) ಇತಿ। ಸಾ ಖಲು ಚರಣಾತ್ ಯೋನ್ಯಾಪತ್ತಿಂ ದರ್ಶಯತಿ ನಾನುಶಯಾತ್। ಅನ್ಯತ್ ಚರಣಮ್, ಅನ್ಯೋಽನುಶಯಃ। ಚರಣಮ್, ಚಾರಿತ್ರಮ್ ಆಚಾರಃ ಶೀಲಮ್ ಇತಿ ಅನರ್ಥಾನ್ತರಮ್। ಅನುಶಯಸ್ತು ಭುಕ್ತಫಲಾತ್ ಕರ್ಮಣೋಽತಿರಿಕ್ತಂ ಕರ್ಮ ಅಭಿಪ್ರೇತಮ್। ಶ್ರುತಿಶ್ಚ ಕರ್ಮಚರಣೇ ಭೇದೇನ ವ್ಯಪದಿಶತಿ "ಯಥಾಕಾರೀ ಯಥಾಚಾರೀ ತಥಾ ಭವತಿ" (ಬೃ. ೪-೪-೫) ಇತಿ। "ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ನೋ

---

1. ಆ (ಚಂದ್ರಮಂಡಲದಲ್ಲಿ) ಸಂಪಾತದವರೆಗೆ ಇದ್ದುಕೊಂಡಿದ್ದು ಬಳಿಕ ಇದೇ ಮಾರ್ಗದಲ್ಲಿ ಹಿಂತಿರುಗುತ್ತಾರೆ ಎಂದು ಹೇಳಿ ಆಕಾಶವನ್ನು, ಅದರಿಂದ ವಾಯುವನ್ನು, ವಾಯುವಾಗಿ ಧೂಮವಾಗುತ್ತಾನೆ, ಧೂಮವಾಗಿ ಅಭ್ರವಾಗುತ್ತಾನೆ (ಛಾಂ. ೫-೧೦-೫), ಅಭ್ರವಾಗಿ ಮೇಘವಾಗುತ್ತಾನೆ, ಮೇಘವಾಗಿ ಮಳೆಗರೆಯುತ್ತಾನೆ. ಅವರು ಇಲ್ಲಿ ವ್ರೀಹಿಯವಗಳು, ಔಷಧಿವನಸ್ಪತಿಗಳು, ತಿಲಮಾಷಗಳು-ಹೀಗೆ ಹುಟ್ಟುತ್ತಾರೆ... "(೫-೧೦-೬) ಎಂದು ಮುಂತಾಗಿರುವ ಶ್ರುತಿಯಲ್ಲಿ "ಯಥೇತಂ" ಹೋದಂತೆಯೇ, ಎಂಬ ಮಾತಿರುವದರಿಂದ ಅದೇ ಮಾರ್ಗವೆಂದಾಗುತ್ತದೆ; ಆ ಧೂಮಮಾರ್ಗದಲ್ಲಿರುವ ರಾತ್ರ್ಯಾದಿಗಳನ್ನು ಹೇಳದೆ ಅಭ್ರಾದಿಗಳನ್ನು ಹೇಳಿದೆ. ಆದ್ದರಿಂದ ಸ್ವಲ್ಪ ಕ್ರಮವು ಬದಲಾಯಿಸಿಯೂ ಇದೆ ಎಂದು ಸೂತ್ರಕಾರರು ಹೇಳಿರುತ್ತಾರೆ- ಎಂದು ಅರ್ಥ. ಶ್ರುತಿಯ ತಾತ್ಪರ್ಯವನ್ನು ಮುಂದೆ ಭಾ. ಭಾ. ೨೪೫ರಲ್ಲಿ ಚರ್ಚಿಸಲಾಗುವದು.

ಇತರಾಣಿ : ಯಾನ್ಯಸ್ಮಾಕಗ್ಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ" (ತೈ. ೧-೧೧) ಇತಿ ಚ । ತಸ್ಮಾತ್ ಚರಣಾತ್ ಯೋನ್ಯಾಪತ್ತಿಶ್ರುತೇಃ ನಾನುಶಯಸಿದ್ಧಿಃ ಇತಿ ಚೇತ್ । ನೈಷ ದೋಷಃ । ಯತೋಽನುಶಯೋಪಲಕ್ಷಣಾರ್ಥೈಷಾ ಚರಣಶ್ರುತಿಃ ಇತಿ ಕಾರ್ಷ್ಣಾಜಿನಿರಾಚಾರ್ಯೋ ಮನ್ಯತೇ ॥

(ಭಾಷ್ಯಾರ್ಥ)

ಇನ್ನು (ಪೂರ್ವಪಕ್ಷಿಯು) ಹೀಗೂ ಅನ್ನಬಹುದು ; ಅನುಶಯವಿದೆ-ಎಂಬುವನ್ನು ತಿಳಿಸುವದಕ್ಕೆ "ತದ್ಯ ಇಹ ರಮಣೀಯಚರಣಾಃ" (ಆದ್ದರಿಂದ ಯಾರು ಇಲ್ಲಿ ರಮಣೀಯಚರಣರೋ) ಎಂಬ ಶ್ರುತಿಯನ್ನು ಉದಾಹರಿಸಿದಿರಷ್ಟೆ. ಅದು ಚರಣದಿಂದ ಯೋನಿಯನ್ನು ಪಡೆಯುತ್ತಾರೆಂದು ಹೇಳುತ್ತದೆಯೇ ಹೊರತು ಅನುಶಯದಿಂದಲ್ಲ ; ಚರಣವೆಂದರೆ ಬೇರೆ,ಅನುಶಯವೆಂದರೇ ಬೇರೆ, ಚರಣ, ಚರಿತ್ರ, ಆಚಾರ, ಶೀಲ- (ಇವೆಲ್ಲ) ಪರ್ಯಾಯ. ಅನುಶಯವೋ ಎಂದರೆ ಫಲವನ್ನುಪಭೋಗಿಸಿದ ಕರ್ಮಕ್ಕಿಂತ ಅತಿರಿಕ್ತವಾದ ಕರ್ಮವೆಂದೂ (ನಿಮ್ಮ) ಅಭಿಪ್ರಾಯ. ಆದರೆ ಶ್ರುತಿಯು ಕರ್ಮವನ್ನೂ ಚರಣವನ್ನೂ ಬೇರೆಬೇರೆ ಎಂದು "ಎಂಥ ಕರ್ಮವನ್ನು ಮಾಡಿರುತ್ತಾನೋ ಎಂಥ ಚರಣವನ್ನು ಆಚರಿಸುತ್ತಾನೋ ಹಾಗೆ ಆಗುತ್ತದೆ." (ಬೃ. ೪-೪-೫) ಎಂದೂ "ಯಾವವು ಅದುಷ್ಟವಾದ ಕರ್ಮಗಳೋ ಅವುಗಳನ್ನು ಸೇವಿಸಬೇಕು, ಮಿಕ್ಕವುಗಳನ್ನಲ್ಲ; ನಮ್ಮಗಳ ಸುಚರಿತಗಳು ಯಾವವೋ ಅವುಗಳನ್ನೇ ನೀನು ಸೇವಿಸಬೇಕು" (ತೈ. ೧-೧೧) ಎಂದೂ ಹೇಳುತ್ತದೆ. ಆದ್ದರಿಂದ ಚರಣದಿಂದ ಯೋನಿಯನ್ನು ಹೊಂದುವರೆಂದು ಶ್ರುತಿಯಿರುವದರಿಂದ ಅನುಶಯವು ಸಿದ್ಧವಾಗುವದಿಲ್ಲ ಎಂದರೆ ಇದೇನೂ ದೋಷವಲ್ಲ. ಏಕೆಂದರೆ ಅನುಶಯಕ್ಕೆ ಉಪಲಕ್ಷಣವಾಗಿಯೇ ಈ ಚರಣಶ್ರುತಿಯೂ ಬಂದಿದೆ ಎಂದು ಕಾರ್ಷ್ಣಾಜಿನಿ ಎಂಬ ಆಚಾರ್ಯರು ಅಭಿಪ್ರಾಯಪಡುತ್ತಾರೆ.

**ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ॥ ೧೦ ॥**

೧೦. ವ್ಯರ್ಥವಾಯಿತಲ್ಲ ! ಎಂದರೆ ಹಾಗಲ್ಲ, ಏಕೆಂದರೆ ಅದರ ಅಪೇಕ್ಷೆಯಿದೆ.

## ಅನುಶಯವು ಬೇರೆ ಎಂದರೆ ಶರೀರವು ವ್ಯರ್ಥವಾಗುವದಿಲ್ಲ

(ಭಾಷ್ಯ)

೫೩೨. ಸ್ಯಾದೇತತ್ । ಕಸ್ಮಾತ್ ಪುನಶ್ಚರಣಶಬ್ದೇನ ಶ್ರೌತಂ ಶೀಲಂ ವಿಹಾಯ ಲಾಕ್ಷಣಿಕೋಽನುಶಯಃ ಪ್ರತ್ಯಾಯ್ಯತೇ? ನನು ಶೀಲಸ್ಯೈವ ಶ್ರೌತಸ್ಯ ವಿಹಿತಪ್ರತಿಷಿದ್ಧಸ್ಯ ಸಾಧ್ವಸಾಧುರೂಪಸ್ಯ ಶುಭಾಶುಭಯೋನ್ಯಾಪತ್ತಿಃ ಫಲಂ

ಭವಿಷ್ಯತಿ। ಅವಶ್ಯಂ ಚ ಶೀಲಸ್ಯಾಪಿ ಕಿಂಚಿತ್ ಫಲಮ್ ಅಭ್ಯುಪಗನ್ತವ್ಯಮ್। ಅನ್ಯಥಾ ಹಿ ಆನರ್ಥಕ್ಯಮೇವ ಶೀಲಸ್ಯ ಪ್ರಸಜ್ಯೇತ ಇತಿ ಚೇತ್। ನೈಷ ದೋಷಃ। ಕುತಃ? ತದಪೇಕ್ಷತ್ವಾತ್। ಇಷ್ಟಾದಿ ಹಿ ಕರ್ಮಜಾತಂ ಚರಣಾಪೇಕ್ಷಮ್। ನ ಹಿ ಸದಾಚಾರಹೀನಃ ಕಶ್ಚಿದಧಿಕೃತಃ ಸ್ಯಾತ್। "ಆಚಾರಹೀನಂ ನ ಪುನನ್ತಿ ವೇದಾಃ" (?) ಇತ್ಯಾದಿಸ್ಮೃತಿಭ್ಯಃ। ಪುರುಷಾರ್ಥತ್ವೇಽಪಿ ಆಚಾರಸ್ಯ ನಾನರ್ಥಕ್ಯಮ್। ಇಷ್ಟಾದೌ ಹಿ ಕರ್ಮಜಾತೇ ಫಲಮ್ ಆರಭಮಾಣೇ ತದಪೇಕ್ಷ ಏವ ಆಚಾರಃ ತತ್ರೈವ ಕಂಚಿತ್ ಅತಿಶಯಮ್ ಆರಪ್ಸ್ಯತೇ। ಕರ್ಮ ಚ ಸರ್ವಾರ್ಥಕಾರಿ ಇತಿ ಶ್ರುತಿಸ್ಮೃತಿಪ್ರಸಿದ್ಧಿಃ। ತಸ್ಮಾತ್ ಕರ್ಮೈವ ಶೀಲೋಪಲಕ್ಷಿತಮ್ ಅನುಶಯಭೂತಂ ಯೋನ್ಯಾಪತ್ತೌ ಕಾರಣಮ್ ಇತಿ ಕಾರ್ಷ್ಣಾಜಿನೇರ್ಮತಮ್। ನ ಹಿ ಕರ್ಮಣಿ ಸಂಭವತಿ ಶೀಲಾತ್ ಯೋನ್ಯಾಪತ್ತಿರ್ಯುಕ್ತಾ। ನ ಹಿ ಪದ್ಭ್ಯಾಂ ಪಲಾಯಿತುಂ ಪಾರಯಮಾಣೋ ಜಾನುಭ್ಯಾಂ ರಂಹಿತುಮರ್ಹತಿ ಇತಿ॥

(ಭಾಷ್ಯಾರ್ಥ)

ಪೂರ್ವಪಕ್ಷಿಯ ಮತವು ಇದಾಗಿರಬಹುದು: ಚರಣಶಬ್ದವು ವಾಚ್ಯವಾಗಿರುವ ಶೀಲವೆಂಬ (ಅರ್ಥವನ್ನು) ಬಿಟ್ಟು ಲಾಕ್ಷಣಿಕಾರ್ಥವಾದ ಅನುಶಯವನ್ನು ತಿಳಿಸುವದೇಕೆ? ವಾಚ್ಯವಾದ ವಿಹಿತಪ್ರತಿಷಿದ್ಧವಾದ ಒಳ್ಳೆಯ ಕೆಟ್ಟ ಶೀಲದಿಂದಲೇ ಒಳ್ಳೆಯ ಕೆಟ್ಟ ಯೋನಿಗಳನ್ನು ಪಡೆಯುವದು ಆಗಬಹುದಲ್ಲವೆ? ಶೀಲಕ್ಕೂ ಅವಶ್ಯವಾಗಿ ಯಾವದಾವದೊಂದು ಫಲವನ್ನು ಒಪ್ಪಬೇಕು. ಹಾಗಿಲ್ಲದಿದ್ದರೆ ಶೀಲವು ವ್ಯರ್ಥವೆಂದೇ ಪ್ರಸಕ್ತವಾಗುವದಲ್ಲ!

(ಪರಿಹಾರ):– ಇದೇನೂ ದೋಷವಲ್ಲ. ಏಕೆ? ಎಂದರೆ ಅದನ್ನು ಅಪೇಕ್ಷಿಸುತ್ತದೆಯಾದ್ದರಿಂದ. (ಇದರ ವಿವರ): ಇಷ್ಟವೇ ಮುಂತಾದ ಕರ್ಮಜಾತವು ಚರಣವನ್ನು ಅಪೇಕ್ಷಿಸುತ್ತದೆ. ಏಕೆಂದರೆ **ಸದಾಚಾರಹೀನನಾದವನು ಯಾವನೂ (ಕರ್ಮಕ್ಕೆ) ಅಧಿಕಾರಿಯಾಗುವದಿಲ್ಲ.** "ಆಚಾರಹೀನನಾದವನನ್ನು ವೇದಗಳು ಪವಿತ್ರಗೊಳಿಸಲಾರವು" (?) ಮುಂತಾದ ಸ್ಮೃತಿಗಳು (ಇದಕ್ಕೆ ಪ್ರಮಾಣವು). ಆಚಾರವು ಪುರುಷಾರ್ಥವಾಗಿರುವದೆಂಬ ಪಕ್ಷದಲ್ಲಿಯೂ[1] (ಅದು) ವ್ಯರ್ಥವಲ್ಲ. ಏಕೆಂದರೆ ಇಷ್ಟವೇ ಮುಂತಾದ ಕರ್ಮಜಾತವು ಫಲವನ್ನುಂಟುಮಾಡುತ್ತಿರುವಲ್ಲಿ ಅದನ್ನು ಅಪೇಕ್ಷಿಸಿಯೇ ಆಚಾರವು ಆ ಫಲದಲ್ಲಿಯೇ ಯಾವದೋ ಒಂದು ಅತಿಶಯವನ್ನು ಉಂಟುಮಾಡುತ್ತದೆ ಎನ್ನಬಹುದಾಗಿದೆ. ಕರ್ಮವು ಸರ್ವಪ್ರಯೋಜನಗಳನ್ನೂ ಮಾಡಿಕೊಡುತ್ತದೆ

1. ಕರ್ತ್ರರ್ಥವಲ್ಲ, ಅದು ಪುರುಷಸಂಸ್ಕಾರಕ್ಕಾಗಿರತಕ್ಕದ್ದು.

ಎಂದು ಶ್ರುತಿಸ್ಮೃತಿಪ್ರಸಿದ್ಧಿಯಿದೆ[1]. ಆದ್ದರಿಂದ ಶೀಲೋಪಲಕ್ಷಿತವಾಗಿ ಕರ್ಮವೇ ಅನುಶಯವಾಗಿ (ಮತ್ತೊಂದು) ಯೋನಿಯನ್ನು ಪಡೆಯುವದಕ್ಕೆ ಕಾರಣವು ಎಂದು ಕಾರ್ಷ್ಣಾಜಿನಿಯ ಮತವು. ಕರ್ಮವು ಸಂಭವಿಸುತ್ತಿರುವಲ್ಲಿ ಶೀಲದಿಂದ ಯೋನಿಯನ್ನು ಪಡೆಯುತ್ತಾನೆಂದು (ಕಲ್ಪಿಸುವದು) ಯುಕ್ತವಲ್ಲವೇ ಅಲ್ಲ. ಏಕೆಂದರೆ ಕಾಲುಗಳಿಂದ ಓಡುವದಕ್ಕೆ ಶಕ್ತನಾದವನು ಮೊಳಕಾಲುಗಳಿಂದ ತೆವಳಿಕೊಂಡು ಹೋಗಲಾರನಷ್ಟೆ.

**ಸುಕೃತದುಷ್ಕೃತೇ ಏವೇತಿ ತು ಬಾದರಿಃ ॥ ೧೧ ॥**

೧೧. ಆದರೆ ಬಾದರಿಯು ಸುಕೃತದುಷ್ಕೃತಗಳೇ (ಚರಣವು ಎಂದು ಅಭಿಪ್ರಾಯಪಡುತ್ತಾನೆ).

## ಪರಮಸಿದ್ಧಾಂತ: ಸುಕೃತದುಷ್ಕೃತಗಳೇ ಚರಣವು

(ಭಾಷ್ಯ)

೨೩೩. ಬಾದರಿಸ್ತು ಆಚಾರ್ಯಃ ಸುಕೃತದುಷ್ಕೃತೇ ಏವ ಚರಣಶಬ್ದೇನ ಪ್ರತ್ಯಾಯ್ಯೇತೇ ಇತಿ ಮನ್ಯತೇ। ಚರಣಮ್, ಅನುಷ್ಠಾನಮ್, ಕರ್ಮ, ಇತ್ಯನರ್ಥಾನ್ತರಮ್ । ತಥಾ ಹಿ। ಅವಿಶೇಷೇಣ ಕರ್ಮಮಾತ್ರೇ ಚರತಿಃ ಪ್ರಯುಜ್ಯಮಾನೋ ದೃಶ್ಯತೇ। ಯೋ ಹಿ ಇಷ್ಟಾದಿಲಕ್ಷಣಂ ಪುಣ್ಯಂ ಕರ್ಮ ಕರೋತಿ ತಂ ಲೌಕಿಕಾ ಆಚಕ್ಷತೇ ಧರ್ಮಂ ಚರತಿ ಏಷ ಮಹಾತ್ಮಾ ಇತಿ। ಆಚಾರೋಽಪಿ ಚ ಧರ್ಮವಿಶೇಷ ಏವ। ಭೇದವ್ಯಪದೇಶಸ್ತು ಕರ್ಮಚರಣಯೋಃ ಬ್ರಾಹ್ಮಣಪರಿವ್ರಾಜಕನ್ಯಾಯೇನಾಪಿ ಉಪಪದ್ಯತೇ। ತಸ್ಮಾತ್ ರಮಣೀಯಚರಣಾಃ ಪ್ರಶಸ್ತಕರ್ಮಾಣಃ, ಕಪೂಯಚರಣಾಃ ನಿನ್ದಿತಕರ್ಮಾಣಃ ಇತಿ ನಿರ್ಣಯಃ ॥

(ಭಾಷ್ಯಾರ್ಥ)

ಆದರೆ ಬಾದರಿ ಎಂಬ ಆಚಾರ್ಯರು ಸುಕೃತದುಷ್ಕೃತಗಳೇ ಚರಣಶಬ್ದದಿಂದ ತಿಳಿಸಲ್ಪಡುತ್ತವೆ ಎಂದು ಅಭಿಪ್ರಾಯಪಡುತ್ತಾರೆ. ಚರಣ, ಅನುಷ್ಠಾನ, ಕರ್ಮ– ಇವೆಲ್ಲ ಒಂದೇ ಅರ್ಥವನ್ನು (ತಿಳಿಸುವ ಮಾತುಗಳು). ಆದ್ದರಿಂದಲೇ ಕರ್ಮಸಾಮಾನ್ಯದಲ್ಲಿ ಯಾವ ವಿಶೇಷವೂ ಇಲ್ಲದೆ ಚರಣಶಬ್ದವನ್ನು ಪ್ರಯೋಗಿಸುವದು ಕಂಡುಬರುತ್ತದೆ. ಯಾವನು ಇಷ್ಟವೇ ಮುಂತಾದ ಪುಣ್ಯಕರ್ಮವನ್ನು ಮಾಡುತ್ತಾನೋ ಅವನನ್ನು ಲೌಕಿಕರು "ಈ ಮಹಾತ್ಮನು

[1]. ಆದ್ದರಿಂದ ಕರ್ಮವೇ ಫಲವನ್ನು ಕೊಡುತ್ತದೆ; ಚರಣವು ಅಥವಾ ಶೀಲವು ಅದರಲ್ಲಿ ಯಾವದೋ ಒಂದು ಅತಿಶಯವನ್ನುಂಟುಮಾಡುತ್ತದೆ ಎಂಬುವೇ ಯುಕ್ತ.

ಧರ್ಮವನ್ನು ಆಚರಿಸುತ್ತಾನೆ' ಎನ್ನುತ್ತಾರಲ್ಲವೆ? ಆಚಾರವೆಂಬುದೂ ಒಂದು ಬಗೆಯ ಧರ್ಮವೇ. ಕರ್ಮ, ಚರಣ (ಇವೆರಡಕ್ಕೂ) ಭೇದವನ್ನು ಹೇಳಿರುವದೋ ಎಂದರೆ ಬ್ರಾಹ್ಮಣಪರಿವ್ರಾಜಕನ್ಯಾಯದಿಂದಲೂ ಹೊಂದುತ್ತದೆ. ಆದ್ದರಿಂದ (ಶ್ರುತಿಯಲ್ಲಿ) ರಮಣೀಯಚರಣರು ಎಂದರೆ ಒಳ್ಳೆಯ ಕರ್ಮವನ್ನು (ಮಾಡಿ)ದವರು, ಕಪೂಯಚರಣರು ಎಂದರೆ ನಿಂದಿತಕರ್ಮವನ್ನು (ಮಾಡಿ)ದವರು ಎಂದೇ ನಿರ್ಣಯವು.

## ೩. ಅನಿಷ್ಟಾದಿಕಾರ್ಯಾಧಿಕರಣ (ಸೂ. ೧೨-೨೧)

### (ಪಾಪಿಗಳಿಗೆ ಚಂದ್ರಲೋಕಪ್ರಾಪ್ತಿಯಿಲ್ಲ)

**ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್ ॥ ೧೨ ॥**

೧೨. ಇಷ್ಟಾದಿಕಾರಿಗಳಲ್ಲದವರಿಗೂ (ಚಂದ್ರಪ್ರಾಪ್ತಿಯು) ಶ್ರುತವಾಗಿದೆ.

### ಪೂರ್ವಪಕ್ಷ:

### ಇಷ್ಟಾದಿಗಳನ್ನು ಮಾಡದವರಿಗೂ ಚಂದ್ರಲೋಕವುಂಟು

(ಭಾಷ್ಯ)

೨೩೪. ಇಷ್ಟಾದಿಕಾರಿಣಃ ಚನ್ದ್ರಮಸಂ ಗಚ್ಛನ್ತಿ ಇತ್ಯುಕ್ತಮ್। ಯೇ ತು ಇತರೇ ಅನಿಷ್ಟಾದಿಕಾರಿಣಃ, ತೇಽಪಿ ಕಿಂ ಚನ್ದ್ರಮಸಂ ಗಚ್ಛನ್ತಿ। ಉತ ನ ಗಚ್ಛನ್ತಿ ಇತಿ ಚಿನ್ತ್ಯತೇ। ತತ್ರ ತಾವದಾಹುಃ ಇಷ್ಟಾದಿಕಾರಿಣ ಏವ ಚನ್ದ್ರಮಸಂ ಗಚ್ಛನ್ತಿ ಇತ್ಯೇತನ್ನ। ಕಸ್ಮಾತ್? ಯತೋಽನಿಷ್ಟಾದಿಕಾರಿಣಾಮಪಿ ಚನ್ದ್ರಮಂಡಲಂ ಗನ್ತವ್ಯತ್ವೇನ ಶ್ರುತಮ್। ಯಥಾ ಹಿ[1] ಅವಿಶೇಷೇಣ ಕೌಷೀತಕಿನಃ ಸಮಾಮನನ್ತಿ "ಯೇ ವೈ ಕೇ ಚಾಸ್ಮಾಲ್ಲೋಕಾತ್ ಪ್ರಯನ್ತಿ ಚನ್ದ್ರಮಸಮೇವ ತೇ ಸರ್ವೇ ಗಚ್ಛನ್ತಿ" (ಕೌ. ೧-೨) ಇತಿ। ದೇಹಾರಮ್ಭೋಽಪಿ ಚ ಪುನರ್ಜಾಯಮಾನಾನಾಂ ನಾನ್ತರೇಣ ಚನ್ದ್ರಪ್ರಾಪ್ತಿಮ್ ಅವಕಲ್ಪತೇ। 'ಪಞ್ಚಮ್ಯಾಮ್ ಆಹುತೌ' (ಛಾಂ. ೫-೯-೧) ಇತ್ಯಾಹುತಿಸಂಖ್ಯಾನಿಯಮಾತ್। ತಸ್ಮಾತ್ ಸರ್ವ ಏವ ಚನ್ದ್ರಮಸಮ್ ಆಸೀದೇಯುಃ। ಇಷ್ಟಾದಿಕಾರಿಣಾಮ್ ಇತರೇಷಾಂ ಚ ಸಮಾನಗತಿತ್ವಂ ನ ಯುಕ್ತಮ್ ಇತಿ ಚೇತ್। ನ। ಇತರೇಷಾಂ ಚನ್ದ್ರಮಣ್ಡಲೇ ಭೋಗಾಭಾವಾತ್ ॥

---

1. ಅಚ್ಚಿನ ಪುಸ್ತಕದಲ್ಲಿ ಇದು ತಪ್ಪುಬಿದ್ದಿದೆ. "ತಥಾ ಹಿ" ಎಂದೇ ಆಚಾರ್ಯರು ಬರೆದಿದ್ದರೂ ಬರೆದಿರಬಹುದು.

(ಭಾಷ್ಯಾರ್ಥ)

ಇಷ್ಟಾದಿಗಳನ್ನು ಮಾಡಿದವರು ಚಂದ್ರನನ್ನು ಸೇರುತ್ತಾರೆ ಎಂದು ಹೇಳಿದ್ದಾಯಿತು. ಇನ್ನು ಉಳಿದ ಇಷ್ಟಾದಿಕಾರಿಗಳಲ್ಲದವರಿರುವರಲ್ಲ, ಅವರೇನು ಚಂದ್ರನನ್ನು ಸೇರುವರೊ, ಅಥವಾ ಸೇರುವದಿಲ್ಲವೊ? ಎಂಬುದನ್ನು ಈಗ ಚಿಂತಿಸಲಾಗುವದು.

ಇಲ್ಲಿ ಮೊದಲು (ಪೂರ್ವಪಕ್ಷಿಗಳು) ಹೇಳುವದೇನೆಂದರೆ ಇಷ್ಟಾದಿಕಾರಿಗಳೇ ಚಂದ್ರನನ್ನು ಸೇರುವರೆಂಬುದು (ಸರಿ)ಯಲ್ಲ. ಏಕೆ? ಎಂದರೆ ಇಷ್ಟಾದಿಕಾರಿಗಳಲ್ಲದವರೂ ಚಂದ್ರಮಂಡಲವನ್ನು ಸೇರುತ್ತಾರೆಂದು ಶ್ರುತಿಯಲ್ಲಿದೆ. ಹೇಗೆಂದರೆ ಕೌಷೀತಕಿ(ಶಾಖೆ)ಯವರು "ಈ ಲೋಕದಿಂದ ಯಾರುಯಾರು ಹೊರಟುಹೋಗುತ್ತಾರೋ ಅವರೆಲ್ಲರೂ ಚಂದ್ರನನ್ನೇ ಸೇರುತ್ತಾರೆ" (ಕೌ. ೧-೨) ಎಂದು ಯಾವ ವಿಶೇಷವೂ ಇಲ್ಲದೆ ಪಠಿಸುತ್ತಾರೆ. ಇದಲ್ಲದೆ ಮತ್ತೆ ಹುಟ್ಟುವವರಿಗೆ ದೇಹವುಂಟಾಗುವದೂ ಚಂದ್ರಪ್ರಾಪ್ತಿಯಿಲ್ಲದೆ ಆಗಲಾರದು. ಏಕೆಂದರೆ "ಐದನೆಯ ಆಹುತಿಯಲ್ಲಿ" (ಛಾಂ. ೫-೯-೧) ಎಂದು ಆಹುತಿಗಳ ಸಂಖ್ಯೆಯನ್ನು ನಿಯಮವಾಗಿ (ಗೊತ್ತುಮಾಡಿ) ಹೇಳಿದೆ. ಆದ್ದರಿಂದ ಎಲ್ಲರೂ ಚಂದ್ರನನ್ನು ಸೇರುತ್ತಾರೆನ್ನಬೇಕು. ಇಷ್ಟಾದಿಕಾರಿಗಳೂ ಇತರರೂ ಸಮಾನವಾದ ಗತಿಯನ್ನೇ ಪಡೆಯುವದು ಯುಕ್ತವಲ್ಲವಲ್ಲ!- ಎಂದರೆ ಹಾಗಲ್ಲ. ಏಕೆಂದರೆ ಉಳಿದವರಿಗೆ ಚಂದ್ರಮಂಡಲವಲ್ಲಿ ಭೋಗವೇನೂ ಆಗುವದಿಲ್ಲ.

**ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್ ॥ ೧೩ ॥**

೧೩. ಆದರೆ ಸಂಯಮನದಲ್ಲಿ ಅನುಭವಿಸಿದ ಬಳಿಕ ಇತರರಿಗೆ ಆರೋಹಾವರೋಹಗಳಾಗುತ್ತವೆ; ಏಕೆಂದರೆ ಆ ಗತಿಯು (ಶ್ರುತಿಯಲ್ಲಿ) ಕಂಡಿರುತ್ತದೆ.

(ಭಾಷ್ಯ)

೨೩೫. ತುಶಬ್ದಃ ಪಕ್ಷಂ ವ್ಯಾವರ್ತಯತಿ। ನೈತದಸ್ತಿ ಸರ್ವೇ ಚನ್ದ್ರಮಸಂ ಗಚ್ಛನ್ತಿ ಇತಿ। ಏತತ್ ಕಸ್ಮಾತ್? ಯತೋ ಭೋಗಾಯೈವ ಚನ್ದ್ರಾರೋಹಣಂ ನ ನಿಷ್ಪ್ರಯೋಜನಮ್ ನಾಪಿ ಪ್ರತ್ಯವರೋಹಾಯೈವ। ಯಥಾ ಕಶ್ಚಿತ್ ವೃಕ್ಷಮಾರೋಹತಿ ಪುಷ್ಪಫಲೋಪಾದಾನಾಯೈವ ನ ನಿಷ್ಪ್ರಯೋಜನಮ್, ನಾಪಿ ಪತನಾಯೈವ। ಭೋಗಶ್ಚ ಅನಿಷ್ಟಾದಿಕಾರಿಣಾಂ ಚನ್ದ್ರಮಸಿ ನಾಸ್ತಿ ಇತ್ಯುಕ್ತಮ್। ತಸ್ಮಾತ್ ಇಷ್ಟಾದಿಕಾರಿಣ ಏವ ಚನ್ದ್ರ

ಮುಪಯಾರೋಹನ್ತಿ ನೇತರೇ । ತೇ ತು ಸಂಯಮನಂ ಯಮಾಲಯಮ್
ಅವಗಾಹ್ಯ ಸ್ವದುಷ್ಕೃತಾನುರೂಪಾ ಯಾಮೀರ್ಯಾತನಾ ಅನುಭೂಯ ಪುನ
ರೇವೇಮಂ ಲೋಕಂ ಪ್ರತ್ಯವರೋಹನ್ತಿ । ಏವಂ ಭೂತೌ ತೇಷಾಮಾರೋಹಾವ
ರೋಹೌ ಭವತಃ । ಕುತಃ ? ತದ್ಗತಿದರ್ಶನಾತ್ । ತಥಾ ಹಿ ಯಮವಚನಸ
ರೂಪಾಶ್ರುತಿಃ ಪ್ರಯತಾಮ್ ಅನಿಷ್ಟಾದಿಕಾರಿಣಾಂ ಯಮವಶ್ಯತಾಂ ದರ್ಶಯತಿ
"ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯನ್ತಂ ವಿತ್ತಮೋಹೇನ
ಮೂಢಮ್ । ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃಪುನರ್ವಶ
ಮಾಪದ್ಯತೇ ಮೇ" (ಕ. ೧–೨–೬) ಇತಿ । "ವೈವಸ್ವತಂ ಸಂಗಮನಂ ಜನಾ
ನಾಮ್" (ಋ. ಸಂ. ೧೦–೧೪–೧) ಇತ್ಯೇವಂಜಾತೀಯಕಂ ಚ ಬಹ್ವೇವ
ಯಮವಶ್ಯತಾಪ್ರಾಪ್ತಿಲಿಙ್ಗಂ ಭವತಿ ॥

(ಭಾಷ್ಯಾರ್ಥ)

ತುಶಬ್ದವು (ಪೂರ್ವ)ಪಕ್ಷವನ್ನು ತಳ್ಳಿಹಾಕುತ್ತದೆ. ಎಲ್ಲರೂ ಚಂದ್ರನನ್ನು ಸೇರುತ್ತಾರೆ ಎಂಬೀ (ನಿಯಮ)ವಿಲ್ಲ. ಇದೇಕೆ ? ಏಕೆಂದರೆ ಭೋಗಕ್ಕಾಗಿಯೇ ಚಂದ್ರ(ಲೋಕ)ವನ್ನು ಏರುತ್ತಾರೆಯೇ ಹೊರತು ಯಾವ ಪ್ರಯೋಜನವೂ ಇಲ್ಲದೆ (ಏರು)ವದಿಲ್ಲ. ಸುಮ್ಮನೆ ಇಳಿಯುವದಕ್ಕಾಗಿಯೂ ಅಲ್ಲ. ಹೇಗೆ ಒಬ್ಬನು ಮರವನ್ನು ಹೂಹಣ್ಣುಗಳನ್ನು ತೆಗೆದುಕೊಳ್ಳುವದಕ್ಕೆ ಹತ್ತುತ್ತಾನೆಯೇ ಹೊರತು ನಿಷ್ಪ್ರಯೋಜನವಾಗಿ (ಹತ್ತು)ವದಿಲ್ಲ. ಬೀಳುವದಕ್ಕಾಗಿಯೂ (ಹತ್ತು)ವದಿಲ್ಲವೋ (ಹಾಗೆ). ಆದರೆ ಇಷ್ಟಾದಿಕಾರಿಗಳಲ್ಲದವರಿಗೆ ಚಂದ್ರ(ಲೋಕ)ದಲ್ಲಿ ಭೋಗವು ಇಲ್ಲವೆಂದು ಹೇಳಿದ್ದಾಗಿದೆ. ಆದ್ದರಿಂದ ಇಷ್ಟಾದಿಕಾರಿಗಳೇ ಚಂದ್ರನನ್ನು ಏರುತ್ತಾರೆ, ಉಳಿದವರು (ಏರು)ವದಿಲ್ಲ. ಅವರಾದರೋ ಸಂಯಮನವೆಂಬ ಯಮಾಲಯವನ್ನು ಹೊಕ್ಕು ತಮ್ಮ ದುಷ್ಕೃತಕ್ಕೆ ಅನುರೂಪವಾದ ಯಮ(ಲೋಕದ) ಯಾತನೆಗಳನ್ನು ಅನುಭವಿಸಿ (ಮತ್ತೆ) ಈ ಲೋಕಕ್ಕೆ ಇಳಿಯುತ್ತಾರೆ. ಅವರಿಗೆ ಇಂಥ ಏರಿಳಿತಗಳು ಆಗುತ್ತವೆ. ಏಕೆ? ಎಂದರೆ ಆ ಗತಿಯು (ಶ್ರುತಿಯಲ್ಲಿ) ಕಂಡುಬರುವದರಿಂದ. ಆದ್ದರಿಂದಲೇ ಯಮವಚನರೂಪವನ್ನು (ಧರಿಸಿದ) ಶ್ರುತಿಯು "ಇಲ್ಲಿಂದ ಹೊರಟುಹೋದ ಇಷ್ಟಾದಿಕಾರಿಗಳಲ್ಲದವರು ಯಮನಿಗೆ ವಶರಾಗುವರೆಂದು "ವಿತ್ತಮೋಹದಿಂದ ಮೂಢನಾಗಿ ಎಚ್ಚರದಪ್ಪಿದ ಸಾಂಪರಾಯವು ತೋರುವದಿಲ್ಲ; ಇದೇ ಲೋಕವು, ಪರಲೋಕವಿಲ್ಲ ಎಂದು ತಿಳಿದುಕೊಂಡು (ಅವನು) ಮತ್ತೆಮತ್ತೆ ನನ್ನ ವಶವನ್ನು ಹೊಂದುತ್ತಾನೆ" (ಕ. ೧–೨–೬) "ಆ ಜನಗಳಿಗೆ ವೈವಸ್ವತಲೋಕವೇ ಸೇರುವಸ್ಥಲವು" (ಋ. ೧೦–೧೪–೧) ಎಂಬೀ ಜಾತಿಯ ಯಮವಶ್ಯತೆಯನ್ನು ತಿಳಿಸುವ ಲಿಂಗವೂ ಬಹುವಾಗಿ (ಶ್ರುತಿಯಲ್ಲಿ)ರುತ್ತದೆ.

**ಸ್ಮರನ್ತಿ ಚ ||೧೪||**

೧೪. (ಹಾಗೆಯೇ) ಸ್ಮರಿಸುತ್ತಲೂ ಇರುತ್ತಾರೆ.

## ಇಷ್ಟಾದಿಕಾರಿಗಳಲ್ಲದವರಿಗೆ ಯಮವಶ್ಯಗತಿಯನ್ನು ಹೇಳುವ ಸ್ಮೃತಿಗಳಿವೆ

(ಭಾಷ್ಯ)

೩೩೬. ಅಪಿ ಚ ಮನುವ್ಯಾಸಪ್ರಭೃತಯಃ ಶಿಷ್ಟಾಃ ಸಂಯಮನೇ ಪುರೇ ಯಮಾಯತ್ತಂ ಕಪೂಯಕರ್ಮವಿಪಾಕಂ ಸ್ಮರನ್ತಿ, ನಾಚಿಕೇತೋಪಾಖ್ಯಾನಾದಿಷು ॥

(ಭಾಷ್ಯಾರ್ಥ)

ಮತ್ತು ಮನು, ವ್ಯಾಸ–ಮೊದಲಾದ ಶಿಷ್ಟರು ಸಂಯಮನಪುರದಲ್ಲಿ ಯಮನಿಗೆ ಅಧೀನವಾಗಿ ಪಾಪಕರ್ಮದ ವಿಪಾಕವಾಗುವದೆಂದು ನಚಿಕೇತೋಪಾಖ್ಯಾನವೇ[1] ಮುಂತಾದವುಗಳಲ್ಲಿ ಸ್ಮರಿಸಿರುತ್ತಾರೆ.

**ಅಪಿ ಚ ಸಪ್ತ || ೧೫ ||**

೧೫. ಇವಲ್ಲದೆ ಏಳು (ನರಕಗಳು ಸ್ಮೃತಿಯಲ್ಲಿವೆ).

(ಭಾಷ್ಯ)

೩೩೭. ಅಪಿ ಚ ಸಪ್ತ ನರಕಾ ರೌರವಪ್ರಮುಖಾ ದುಷ್ಕೃತಫಲೋಪಭೋಗಭೂಮಿತ್ವೇನ ಸ್ಮರ್ಯನ್ತೇ ಪೌರಾಣಿಕೈಃ । ತಾನ್ ಅನಿಷ್ಟಾದಿಕಾರಿಣಃ ಪ್ರಾಪ್ನುವನ್ತಿ । ಕುತಸ್ತೇ ಚನ್ದ್ರಂ ಪ್ರಾಪ್ನುಯುಃ ? ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಇದಲ್ಲದೆ ರೌರವ ಮುಂತಾದ ಏಳು ನರಕಗಳು[2] ದುಷ್ಕೃತ(ಕರ್ಮಗಳ) ಫಲವನ್ನು ಉಪಭೋಗಿಸುವ ಭೂಮಿಗಳೆಂದು ಪೌರಾಣಿಕರು ಸ್ಮರಿಸುತ್ತಾರೆ. ಅವುಗಳನ್ನು ಇಷ್ಟಾದಿಗಳನ್ನು ಮಾಡದ (ಪಾಪಿಗಳು) ಪಡೆಯುತ್ತಾರೆ. (ಹೀಗಿರುವಲ್ಲಿ) ಅವರು ಚಂದ್ರನನ್ನು ಹೇಗೆ ಪಡೆದಾರು ? ಎಂದು ಅಭಿಪ್ರಾಯ.

---

1. ಅಚ್ಚಿನ ಮಹಾಭಾರತದಲ್ಲಿ ನಾಚಿಕೇತೋಪಾಖ್ಯಾನದಲ್ಲಿ ನರಕವರ್ಣನೆ ಕಂಡುಬರುವದಿಲ್ಲ. ಮನು. ೧೨–೨೧, ೨೨ರಲ್ಲಿ ಯಮಯಾತನೆಯ ವಿಷಯವಿದೆ.

2. ರೌರವ, ಮಹಾರೌರವ, ವಹ್ನಿ, ವೈತರಣಿ, ಕುಂಭೀ, ತಾಮಿಸ್ರ, ಅಂಧತಾಮಿಸ್ರ – ಈ ಏಳು ನರಕಗಳೆಂದು ಕೆಲವರು ಹೇಳುತ್ತಾರೆ. ಇವಕ್ಕೆ ಯಾವದು ಆಧಾರವೆಂಬುದು ತಿಳಿಯದು.

**ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ॥೧೬॥**

೧೬. ಅಲ್ಲಿಯೂ ಆ (ಯಮನ) ವ್ಯಾಪಾರವಿರುವದರಿಂದ ವಿರೋಧವಿಲ್ಲ.

(ಭಾಷ್ಯ)

೨೩೮. ನನು ವಿರುದ್ಧಮಿದಮ್ ಯಮಾಯತ್ತಾ ಯಾತನಾಃ ಪಾಪಕರ್ಮಾಣೋಽನುಭವನ್ತಿ ಇತಿ । ಯಾವತ್ ತೇಷು ರೌರವಾದಿಷು ಅನ್ಯೇ ಚಿತ್ರಗುಪ್ತಾದಯೋ ನಾನಾ ಅಧಿಷ್ಠಾತಾರಃ ಸ್ಮರ್ಯನ್ತೇ ಇತಿ । ನೇತ್ಯಾಹ । ತೇಷ್ವಪಿ ಸಪ್ತಸು ನರಕೇಷು ತಸ್ಯೈವ ಯಮಸ್ಯ ಅಧಿಷ್ಠಾತೃತ್ವವ್ಯಾಪಾರಾಭ್ಯುಪಗಮಾತ್ ಅವಿರೋಧಃ । ಯಮಪ್ರಯುಕ್ತಾ ಏವ ಹಿ ತೇ ಚಿತ್ರಗುಪ್ತಾದಯೋಽಧಿಷ್ಠಾತಾರಃ ಸ್ಮರ್ಯನ್ತೇ ॥

(ಭಾಷ್ಯಾರ್ಥ)

(ಆಕ್ಷೇಪ) :— ಇದು ಪಾಪಕರ್ಮಿಗಳು ಯಮಾಧೀನವಾದ ಯಾತನೆಗಳನ್ನು ಅನುಭವಿಸುತ್ತಾರೆ ಎಂಬುದು, ವಿರುದ್ಧವಲ್ಲವೆ ? ಏಕೆಂದರೆ ಆ ರೌರವವೇ ಮುಂತಾದವುಗಳಲ್ಲಿ ಚಿತ್ರಗುಪ್ತರೇ ಮೊದಲಾದ ಬೇರೆಬೇರೆಯ ಅಧಿಷ್ಠಾತೃಗಳಿರುವರೆಂದು ಸ್ಮೃತಿಯಲ್ಲಿದೆಯಲ್ಲ[1] !

(ಪರಿಹಾರ) :— ಹಾಗಲ್ಲ ಎಂದು (ಸೂತ್ರಕಾರರು) ಹೇಳುತ್ತಾರೆ. ಆ ಏಳು ನರಕಗಳಲ್ಲಿಯೂ ಅದೇ ಯಮನ ಮೇಲುವಿಚಾರಣೆಯ ವ್ಯಾಪಾರವನ್ನು ಅಂಗೀಕರಿಸುವದರಿಂದ ವಿರೋಧವಿಲ್ಲ. ಯಮಪ್ರೇರಿತರಾಗಿಯೇ ಆ ಚಿತ್ರಗುಪ್ತಾದಿಗಳು ಅಧಿಷ್ಠಾತೃವಾಗಿರುವರೆಂದು ಸ್ಮೃತಿಯಲ್ಲಿದೆ.

**ವಿದ್ಯಾಕರ್ಮಣೋರಿತಿ ಪ್ರಕೃತತ್ವಾತ್ ॥ ೧೭ ॥**

೧೭. ಏತಯೋಃ (ಎಂದರೆ) ವಿದ್ಯಾಕರ್ಮಗಳ ಗ್ರಹಣವಾಗುತ್ತದೆ ; ಏಕೆಂದರೆ (ಅವುಗಳು) ಪ್ರಕೃತವಾಗಿವೆ.

## ಪಾಪಿಗಳಿಗೆ ಮೂರನೆಯ ಗತಿಯುಂಟು

(ಭಾಷ್ಯ)

೨೩೯. ಪಞ್ಚಾಗ್ನಿವಿದ್ಯಾಯಾಮ್ "ವೇತ್ಥ ಯಥಾಸೌ ಲೋಕೋ ನ ಸಂಪೂರ್ಯತೇ" (ಛಾಂ. ೫–೩–೩) ಇತ್ಯಸ್ಯ ಪ್ರಶ್ನಸ್ಯ ಪ್ರತಿವಚನಾವಸರೇ

1. ಚಿತ್ರಗುಪ್ತರು ರೌರವಾದಿಗಳಲ್ಲಿ ಪಾಪಿಗಳಿಗೆ ದಂಡನೆಯನ್ನು ಮಾಡುತ್ತಾರೆಂದು ಸ್ಮೃತಿಯಲ್ಲಿದೆ ; ಯಮನು ದಂಡಿಸುವನೆಂದದ್ದು ಹೇಗೆ ಸರಿ ? ಎಂದು ಅಭಿಪ್ರಾಯ.

ಪ್ರಾಯತೇ— ಅಥೈತಯೋಃ ಪಥೋರ್ನ ಕತರೇಣಚನ ತಾನೀಮಾನಿ ಕ್ಷುದ್ರಾಣ್ಯಸಕೃದಾವರ್ತೀನಿ ಭೂತಾನಿ ಭವಂತಿ ಜಾಯಸ್ವ ಮ್ರಿಯಸ್ವೇತ್ಯೇತತ್ತೃತೀಯಂ ಸ್ಥಾನಂ ತೇನಾಸೌ ಲೋಕೋ ನ ಸಂಪೂರ್ಯತೇ" (ಛಾಂ. ೫-೧೦-೮) ಇತಿ ತತ್ರ 'ಏತಯೋಃ ಪಥೋಃ' ಇತಿ ವಿದ್ಯಾಕರ್ಮಣೋರಿತ್ಯೇತತ್ । ಕಸ್ಮಾತ್ ? ಪ್ರಕೃತತ್ವಾತ್ . ವಿದ್ಯಾಕರ್ಮಣೀ ಹಿ ದೇವಯಾನಪಿತೃಯಾಣಯೋಃ ಪಥೋಃ ಪ್ರತಿಪತ್ತೌ ಪ್ರಕೃತೇ "ತದ್ಯ ಇತ್ಥಂವಿದುಃ" ಇತಿ ವಿದ್ಯಾ। ತಯಾ ಪ್ರತಿಪತ್ತವ್ಯೋ "ದೇವಯಾನಃ ಪನ್ಥಾಃ ಪ್ರಕೀರ್ತಿತಃ। ಇಷ್ಟಾಪೂರ್ತೇ ದತ್ತಮ್" ಇತಿ ಕರ್ಮ । ತೇನ ಪ್ರತಿಪತ್ತವ್ಯಃ ಪಿತೃಯಾಣಃ ಪನ್ಥಾಃ ಪ್ರಕೀರ್ತಿತಃ। ತತ್ಪ್ರಕ್ರಿಯಾಯಾಂ "ಅಥೈತಯೋಃ ಪಥೋರ್ನ ಕತರೇಣಚನ" ಇತಿ ಶ್ರುತಮ್ । ಏತದುಕ್ತಂ ಭವತಿ— ಯೇ ನ ವಿದ್ಯಾಸಾಧನೇನ ದೇವಯಾನೇ ಪಥಿ ಅಧಿಕೃತಾಃ ನಾಪಿ ಕರ್ಮಣಾ ಪಿತೃಯಾಣೇ, ತೇಷಾಮೇಷ ಕ್ಷುದ್ರಜನ್ತುಲಕ್ಷಣೋಽಸಕೃದಾವರ್ತೀ ತೃತೀಯಃ ಪನ್ಥಾ ಭವತೀತಿ । ತಸ್ಮಾದಪಿ ನಾನಿಷ್ಟಾದಿಕಾರಿಭಿಶ್ಚನ್ದ್ರಮಾಃ ಪ್ರಾಪ್ಯತೇ । ಸ್ಯಾದೇತತ್ । ತೇಽಪಿ ಚನ್ದ್ರಬಿಮ್ಬಮ್ ಆರುಹ್ಯ ತತೋಽವರುಹ್ಯ ಕ್ಷುದ್ರಜನ್ತುತ್ವಂ ಪ್ರತಿಪತ್ಸ್ಯನ್ತ ಇತಿ। ತದಪಿ ನಾಸ್ತಿ । ಆರೋಹಾನರ್ಥಕ್ಯಾತ್ । ಅಪಿ ಚ ಸರ್ವೇಷು ಪ್ರಯತ್ಸು ಚನ್ದ್ರಲೋಕಂ ಪ್ರಾಪ್ನುವತ್ಸು ಅಸೌ ಲೋಕಃ ಪ್ರಯದ್ಭಿಃ ಸಂಪೂರ್ಯೇತ ಇತ್ಯತಃ ಪ್ರಶ್ನವಿರುದ್ಧಂ ಪ್ರತಿವಚನಂ ಪ್ರಸಜ್ಯೇತ। ತಥಾ ಹಿ ಪ್ರತಿವಚನಂ ದಾತವ್ಯಂ ಯಥಾ ಅಸೌ ಲೋಕೋ ನ ಸಂಪೂರ್ಯತೇ। ಅವರೋಹಾಭ್ಯುಪಗಮಾತ್ ಅಸಂಪೂರಣೋಪಪತ್ತಿಃ[1] ಇತಿ ಚೇತ್ । ನ । ಅಶ್ರುತತ್ವಾತ್ । ಸತ್ಯಮ್ ಅವರೋಹಾದಪಿ ಅಸಂಪೂರಣಮ್ ಉಪಪದ್ಯತೇ । ಶ್ರುತಿಸ್ತು ತೃತೀಯಸ್ಥಾನಸಂಕೀರ್ತನೇನ ಅಸಂಪೂರಣಂ ದರ್ಶಯತಿ "ಏತತ್ ತೃತೀಯಂ ಸ್ಥಾನಂ ತೇನಾಸೌ ಲೋಕೋ ನ ಸಂಪೂರ್ಯತೇ ।" (ಛಾಂ. ೫-೧೦-೮) ಇತಿ । ತೇನ ಅನಾರೋಹಾದೇವ ಅಸಂಪೂರಣಮ್ ಇತಿ ಯುಕ್ತಮ್ । ಅವರೋಹಸ್ಯ ಇಷ್ಟಾದಿಕಾರಿಷ್ವಪಿ ಅವಿಶಿಷ್ಟತ್ವೇ ಸತಿ ತೃತೀಯಸ್ಥಾನೋಕ್ತ್ಯಾನರ್ಥಕ್ಯಪ್ರಸಙ್ಗಾತ್ ॥

(ಭಾಷ್ಯಾರ್ಥ)

ಪಂಚಾಗ್ನಿವಿದ್ಯೆಯಲ್ಲಿ "ಆ ಲೋಕವು ತುಂಬಿಕೊಳ್ಳುವದಿಲ್ಲವೆಂಬುದು ಹೇಗೆ?" (ಛಾಂ. ೫-೩-೩) ಎಂಬೀ ಪ್ರಶ್ನೆಗೆ ಉತ್ತರ(ವನ್ನು) ಹೇಳುವ ಕಾಲದಲ್ಲಿ "ಇನ್ನು ಈ (ಎರಡು) ದಾರಿಗಳಲ್ಲಿ ಯಾವದೊಂದು (ದಾರಿ)ಯಿಂದಲೂ (ಹೋಗದೆ ಇರುವವರು) ಆ ಈ ಕ್ಷುದ್ರವಾದ ಮತ್ತೆಮತ್ತೆ (ಹುಟ್ಟಿಸಾಯುವ)

---

1. 'ಅಸಂಪೂರ್ಣ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಆ ವೃತ್ತಿಯುಳ್ಳ ಭೂತಗಳು ಆಗುತ್ತಾರೆ, ಹುಟ್ಟುವದು ಸಾಯುವದು– ಎಂಬೀ ಆ ಇದು ಮೂರನೆಯ ಸ್ಥಾನವು. ಅದರಿಂದ ಆ ಲೋಕವು ತುಂಬಿಕೊಳ್ಳುವದಿಲ್ಲ" (ಛಾಂ ೫–೧೦–೮) ಎಂದು (ಇದೆ). ಅಲ್ಲಿ 'ಈ (ಎರಡು) ದಾರಿಗಳಲ್ಲಿ' ಎಂದಿದೆಯಲ್ಲ, ವಿದ್ಯಾಕರ್ಮಗಳ (ದಾರಿಗಳಲ್ಲಿ) ಎಂದು ಅಭಿಪ್ರಾಯ. ಏಕೆ ? ಎಂದರೆ ಪ್ರಕೃತವಾಗಿರುವದರಿಂದ. ವಿದ್ಯಾಕರ್ಮಗಳಲ್ಲವೆ, ದೇವಯಾನಪಿತೃಯಾಣಗಳೆಂಬ ಮಾರ್ಗಗಳ ಪ್ರಾಪ್ತಿಗೆ ಪ್ರಕೃತವಾಗಿರುತ್ತವೆ ? "ಅಲ್ಲಿ ಯಾರು ಹೀಗೆಂದು ಅರಿತುಕೊಂಡಿರುವರೋ" (ಛಾಂ. ೫–೧೦–೧) ಎಂಬುದು ವಿದ್ಯೆ; ಅದರಿಂದ ಪ್ರಾಪ್ತವ್ಯವೆಂದು ದೇವಯಾನಮಾರ್ಗವನ್ನು ಹೇಳಿರುತ್ತದೆ. "ಇಷ್ಟಾಪೂರ್ತಗಳು ದತ್ತ" (ಛಾಂ. ೫–೧೦–೩) ಎಂಬುದು ಕರ್ಮವು; ಅದರಿಂದ ಪ್ರಾಪ್ತವ್ಯವೆಂದು ಪಿತೃಯಾಣಮಾರ್ಗವನ್ನು ಹೇಳಿರುತ್ತದೆ. ಆ ಪ್ರಕರಣದಲ್ಲಿ "ಇನ್ನು ಈ (ಎರಡು) ದಾರಿಗಳಲ್ಲಿ ಯಾವದೊಂದು (ದಾರಿ) ಯಿಂದಲೂ (ಹೋಗದೆ ಇರುವವರು)" ಎಂದು ಹೇಳಿರುತ್ತದೆ. (ಇಲ್ಲಿ) ಇಷ್ಟನ್ನು ಹೇಳಿದಂತಾಗಿರುತ್ತದೆ. ಯಾರು ವಿದ್ಯಾಸಾಧನದಿಂದ ದೇವಯಾನಮಾರ್ಗಕ್ಕೆ ಅಧಿಕಾರಿಗಳಲ್ಲವೊ, ಕರ್ಮದಿಂದ ಪಿತೃಯಾಣಕ್ಕೂ (ಅಧಿಕಾರಿ)ಗಳಲ್ಲವೊ, ಅವರಿಗೇ ಕ್ಷುದ್ರಜಂತುರೂಪವಾದ ಮತ್ತೆಮತ್ತೆ ಹಿಂತಿರುಗುವ ಮೂರನೆಯ ಮಾರ್ಗವು ಆಗುತ್ತದೆ ಎಂಬುದು (ತಾತ್ಪರ್ಯವು). ಆದ್ದರಿಂದಲೂ ಇಷ್ಟಾದಿಕಾರಿಗಳಲ್ಲದವರು ಚಂದ್ರನನ್ನು ಪಡೆಯುವದಿಲ್ಲ.

(ಪೂರ್ವಪಕ್ಷಿಯ ಮತವು) ಇದಾಗಿರಬಹುದು : ಅವರೂ ಚಂದ್ರಬಿಂಬಕ್ಕೆ ಏರಿ ಅಲ್ಲಿಂದ ಇಳಿದು ಕ್ಷುದ್ರಜಂತುರೂಪವನ್ನು ಪಡೆಯಬಹುದು (ಎಂದು ಅವನು ಹೇಳಬಹುದು). ಅದೂ (ಸರಿ)ಯಲ್ಲ. ಏಕೆಂದರೆ (ಆಗೆ) ಏರುವದು ವ್ಯರ್ಥವಾಗುವದು. ಸತ್ತವರು ಎಲ್ಲರೂ ಚಂದ್ರಲೋಕವನ್ನು ಪಡೆದುಕೊಂಡರೆ ಆ ಲೋಕವು ಸತ್ತವರಿಂದ ತುಂಬಿಕೊಳ್ಳಬೇಕಾಗುವದು. ಆದ್ದರಿಂದ ಪ್ರಶ್ನೆಗೆ ವಿರುದ್ಧವಾಗಿಯೇ ಉತ್ತರ(ವಾಯಿತೆಂದು) ಪ್ರಸಕ್ತವಾಗುವದು. ಆ ಲೋಕವು ಹೇಗೆ ಸಂಪೂರ್ಣವಾಗುವದಿಲ್ಲವೋ ಹಾಗಲ್ಲವೆ, ಉತ್ತರವನ್ನು ಕೊಡಬೇಕು ?

(ಪೂರ್ವಪಕ್ಷಿ) :– (ಅವರು ಕೆಳಕ್ಕೆ) ಇಳಿಯುವರೆಂದು ಒಪ್ಪುವದರಿಂದ (ಆ ಲೋಕವು) ತುಂಬಿಕೊಳ್ಳುವದಿಲ್ಲವೆಂಬುದು ಹೊಂದುತ್ತದೆಯಲ್ಲ !

(ಸಿದ್ಧಾಂತಿ) :– ನಿಜ, ಇಳಿಯುತ್ತಾರೆಂಬುದರಿಂದಲೂ ತುಂಬಿಕೊಳ್ಳದೆ ಇರುವದು ಹೊಂದುತ್ತದೆ. ಆದರೆ ಶ್ರುತಿಯು "ಇದು ಮೂರನೆಯ ಸ್ಥಾನವು, ಅದರಿಂದ ಆ ಲೋಕವು ತುಂಬಿಕೊಳ್ಳುವದಿಲ್ಲ" (ಛಾಂ. ೫–೧೦–೮) ಎಂದು ಮೂರನೆಯ ಸ್ಥಾನವನ್ನು ಹೇಳುವದರಿಂದಲೇ ತುಂಬಿಕೊಳ್ಳುವದಿಲ್ಲವೆಂದು

ತ್ತಿಳಿಸುತ್ತದೆ. ಆದ್ದರಿಂದ ಎರಡೆ ಇರುವವರಿಂದಲೇ (ಆ ಲೋಕವು) ತುಂಬಿಕೊಳ್ಳುವದಿಲ್ಲ ಎಂದು ನಿಶ್ಚಯವಾಗುತ್ತದೆ; ಏಕೆಂದರೆ ಕೆಳಕ್ಕಿಳಿಯುವದು ಇಷ್ಟಾದಿಗಳನ್ನು ಮಾಡಿದವರಿಗೂ ಸಮಾನವಾಗಿರುವಲ್ಲಿ ಮೂರನೆಯ ಸ್ಥಾನವನ್ನು ಹೇಳಿದ್ದು ವ್ಯರ್ಥವಾಗುವ ಪ್ರಸಕ್ತಿಯುಂಟಾಗುತ್ತದೆ.

## ಸೂತ್ರದಲ್ಲಿರುವ ತುಶಬ್ದಕ್ಕೆ ಶಂಕಾಪರಿಹಾರವೇ ಪ್ರಯೋಜನ

(ಭಾಷ್ಯ)

೨೪೦. ತುಶಬ್ದಸ್ತು ಶಾಖಾನ್ತರೀಯವಾಕ್ಯಪ್ರಭವಾಮ್ ಆಶೇಷಗಮನಾಶಙ್ಕಾಮ್ ಉಚ್ಛಿನತ್ತಿ । ಏವಂ ಸತಿ ಅಧಿಕೃತಾಪೇಕ್ಷಃ ಶಾಖಾನ್ತರೀಯೇ ವಾಕ್ಯೇ ಸರ್ವಶಬ್ದೋಽವತಿಷ್ಠತೇ । ಯೇ ವೈ ಕೇಚಿದಧಿಕೃತಾ ಅಸ್ಮಾಲ್ಲೋಕಾತ್ ಪ್ರಯನ್ತಿ ಚನ್ದ್ರಮಸಮೇವ ತೇ ಸರ್ವೇ ಗಚ್ಛನ್ತಿ ಇತಿ ॥

(ಭಾಷ್ಯಾರ್ಥ)

(ಸೂತ್ರದಲ್ಲಿರುವ) ತುಶಬ್ದವಾದರೋ ಬೇರೆಯ ಶಾಖೆಯಲ್ಲಿರುವ[1] ವಾಕ್ಯದಿಂದ ಉಂಟಾಗುವ ಎಲ್ಲರೂ (ಚಂದ್ರಲೋಕಕ್ಕೆ) ಹೋಗುವರೆಂಬ ಆಶಂಕೆಯನ್ನು ನಾಶಮಾಡುತ್ತದೆ. ಹೀಗಾಗಿರುವದರಿಂದ[2] "ಯಾವಯಾವ ಅಧಿಕಾರಿಗಳು ಈ ಲೋಕದಿಂದ ಹೊರಟುಹೋಗುವರೋ ಅವರೆಲ್ಲರೂ ಚಂದ್ರನನ್ನೇ ಸೇರುವರು" ಎಂದು (ಆ) ಬೇರೆಯ ಶಾಖೆಯಲ್ಲಿರುವ ಸರ್ವಶಬ್ದವು ಅಧಿಕಾರಿಗಳ ಅಪೇಕ್ಷೆಯಿಂದ (ಪ್ರಯೋಗಿಸಿದ್ದೆಂದು) ಸಿದ್ಧವಾಗುತ್ತದೆ[3].

### ನ ತೃತೀಯೇ ತಥೋಪಲಬ್ಧೇಃ ॥ ೧೮ ॥

೧೮. (ಮೂರನೆಯ (ಮಾರ್ಗದಲ್ಲಿ ಆಹುತಿಸಂಖ್ಯಾನಿಯಮ) ವಿಲ್ಲ; ಏಕೆಂದರೆ ಹಾಗೆಂದು (ಶ್ರುತಿಯಲ್ಲಿ) ಕಂಡಿದೆ.

---

1. ಕೌಷೀತಕಿಯಲ್ಲಿರುವ.

2. ಮೂರನೆಯ ಮಾರ್ಗವು ಚಂದ್ರಲೋಕವು ತುಂಬಿಕೊಳ್ಳದಿರುವದಕ್ಕೆ ಕಾರಣವೆಂದು ಸಿದ್ಧವಾಗಿರುವದರಿಂದ.

3. ಉಕ್ತಕೌಷೀತಕೀಶ್ರುತಿವಾಕ್ಯದಲ್ಲಿ "ಯಾರುಯಾರು ಈ ಲೋಕದಿಂದ ಹೋಗುತ್ತಾರೋ" ಎಂಬ ವಾಕ್ಯದ ಎಲ್ಲಾ ಎಂಬ ಶಬ್ದಕ್ಕೆ ಬ್ರಾಹ್ಮಣರೆಲ್ಲರೂ ಭೋಜನಕ್ಕೆ ಬಂದರು ಎಂಬ ವಾಕ್ಯದಂತೆ ಸಂಕುಚಿತಾರ್ಥವನ್ನು ಮಾಡಬೇಕು.

## ಆಹುತಿಸಂಖ್ಯಾವಿರೋಧಪರಿಹಾರ

(ಭಾಷ್ಯ)

೨೪೧. ಯತ್ ಪುನರುಕ್ತಮ್ ದೇಹಲಾಭೋಪಪತ್ತಯೇ ಸರ್ವೇ ಚನ್ದ್ರಮಸಂ ಗನ್ತುಮರ್ಹನ್ತಿ 'ಪಞ್ಚಮ್ಯಾಮಾಹುತೌ' ಇತಿ ಆಹುತಿಸಂಖ್ಯಾನಿಯಮಾತ್ ಇತಿ। ತತ್ ಪ್ರತ್ಯುಚ್ಯತೇ। ನ ತೃತೀಯೇ ಸ್ಥಾನೇ ದೇಹಲಾಭಾಯ ಪಞ್ಚಸಂಖ್ಯಾನಿಯಮಃ ಆಹುತೀನಾಮ್ ಆದರ್ತವ್ಯಃ। ಕುತಃ? ತಥಾ ಉಪಲಬ್ಧೇಃ। ತಥಾ ಹಿ ಅನ್ತರೇಣೈವ ಆಹುತಿಸಂಖ್ಯಾನಿಯಮಂ ವರ್ಣಿತೇನ ಪ್ರಕಾರೇಣ ತೃತೀಯಸ್ಥಾನಪ್ರಾಪ್ತಿಃ ಉಪಲಭ್ಯತೇ "ಜಾಯಸ್ವ ಮ್ರಿಯಸ್ವೇತ್ಯೇತತ್ ತೃತೀಯಂ ಸ್ಥಾನಮ್" (ಛಾಂ. ೫-೧೦-೮) ಇತಿ। ಅಪಿ ಚ "ಪಞ್ಚಮ್ಯಾಮಾಹುತಾವಾಪಃ ಪುರುಷವಚಸೋ ಭವನ್ತಿ" (ಛಾಂ.೫-೩-೩) ಇತಿ ಮನುಷ್ಯಶರೀರಹೇತುತ್ವೇನ ಆಹುತಿಸಂಖ್ಯಾ ಕೀರ್ತ್ಯತೇ। ನ ಕೀಟಪತಙ್ಗಾದಿ ಶರೀರಹೇತುತ್ವೇನ। ಪುರುಷಶಬ್ದಸ್ಯ ಮನುಷ್ಯಜಾತಿವಚನತ್ವಾತ್। ಅಪಿ ಚ ಪಞ್ಚಮ್ಯಾಮ್ ಆಹುತೌ ಅಪಾಂ ಪುರುಷವಚಸ್ತ್ವಮ್ ಉಪದಿಶ್ಯತೇ, ನ ಅಪಞ್ಚಮ್ಯಾಮ್ ಆಹುತೌ ಪುರುಷವಚಸ್ತ್ವಂ ಪ್ರತಿಷಿಧ್ಯತೇ। ವಾಕ್ಯಸ್ಯ ದ್ವ್ಯರ್ಥತಾದೋಷಾತ್। ತತ್ರ ಯೇಷಾಮ್ ಆರೋಹಾವರೋಹೌ ಸಂಭವತಃ ತೇಷಾಂ ಪಞ್ಚಮ್ಯಾಮಾಹುತೌ ದೇಹ ಉದ್ಭವಿಷ್ಯತಿ, ಅನ್ಯೇಷಾಂ ತು ವಿನೈವ ಆಹುತಿಸಂಖ್ಯಯಾ ಭೂತಾನ್ತರೋಪಸೃಷ್ಟಾಭಿರದ್ಭಿಃ ದೇಹ ಆರಪ್ಸ್ಯತೇ ॥

(ಭಾಷ್ಯಾರ್ಥ)

ಇನ್ನು ದೇಹವನ್ನು ಪಡೆಯುವದು ಹೊಂದುವದಕ್ಕೆ ಎಲ್ಲರೂ ಚಂದ್ರನನ್ನು ಹೋಗಿ ಸೇರುವರೆಂಬುದೇ ಯುಕ್ತ, ಏಕೆಂದರೆ (ಶ್ರುತಿಯಲ್ಲಿ) 'ಐದನೆಯ ಆಹುತಿಯಲ್ಲಿ' ಎಂದು ಆಹುತಿಸಂಖ್ಯೆಯ ನಿಯಮವಿದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದಕ್ಕೆ (ಈಗ) ಉತ್ತರವನ್ನು ಹೇಳಲಾಗುತ್ತದೆ :

ಮೂರನೆಯ ಸ್ಥಾನದಲ್ಲಿ ದೇಹವನ್ನು ಪಡೆಯುವದಕ್ಕೆ ಆಹುತಿಗಳಿಗೆ ಐದೆಂಬ ಸಂಖ್ಯಾನಿಯಮವನ್ನು ಇಟ್ಟುಕೊಳ್ಳಬೇಕಾದ್ದಿಲ್ಲ. ಏಕೆ ? ಎಂದರೆ (ಶ್ರುತಿಯಲ್ಲಿ) ಹಾಗೆ ಕಂಡುಬರುವದರಿಂದ. ಆದ್ದರಿಂದಲೇ ಆಹುತಿಸಂಖ್ಯಾನಿಯಮವಿಲ್ಲದೆಯೇ ಮೇಲೆ (ನಾವು) ವರ್ಣಿಸಿರುವ ಪ್ರಕಾರದಿಂದ ಮೂರನೆಯ ಸ್ಥಾನದ ಪ್ರಾಪ್ತಿ(ಯಾಗುವದೆಂದು) "ಹುಟ್ಟುವದೂ ಸಾಯುವದೂ ಹೀಗಿರುವ ಇದು ಮೂರನೆಯ ಸ್ಥಾನವು" (ಛಾಂ. ೫-೧೦-೮) ಎಂಬ (ಶ್ರುತಿಯಲ್ಲಿ) ಕಂಡುಬರುತ್ತದೆ. ಇದಲ್ಲದೆ "ಐದನೆಯ ಆಹುತಿಯಲ್ಲಿ ಪುರುಷಶಬ್ದವಾಚ್ಯವಾಗುತ್ತವೆ" (ಛಾಂ. ೫-೩-೩) ಎಂದು ಮನುಷ್ಯಶರೀರ(ಪ್ರಾಪ್ತಿಗೆ) ಹೇತು

ವಾಗಿ ಆಹುತಿಸಂಖ್ಯೆಯನ್ನು ಹೇಳಿರುತ್ತದೆಯೇ ಹೊರತು ಹುಳು, ಹಕ್ಕಿ ಮುಂತಾದವುಗಳ ಶರೀರದ (ಪ್ರಾಪ್ತಿಗೆ) ಹೇತುವಾಗಿ (ಹೇಳಿ)ಲ್ಲ; ಏಕೆಂದರೆ ಪುರುಷಶಬ್ದವು ಮನುಷ್ಯಜಾತಿಯನ್ನು ಹೇಳುವದಾಗಿದೆ. ಇದೂ ಅಲ್ಲದೆ ಐದನೆಯ ಆಹುತಿಯಲ್ಲಿ ಅಪ್ಪು ಪುರುಷಶಬ್ದವಾಚ್ಯವಾಗುತ್ತದೆ ಎಂದು ಹೇಳಿದೆಯೇ ಹೊರತು, ಐದನೆಯದಲ್ಲದ ಆಹುತಿಯಲ್ಲಿ ಪುರುಷಶಬ್ದವಾಚ್ಯತ್ವವು ಆಗುವದಿಲ್ಲವೆಂದಿಲ್ಲ; ಏಕೆಂದರೆ (ಹಾಗಾದರೆ ಒಂದು) ವಾಕ್ಯಕ್ಕೆ ಎರಡು ಅರ್ಥವಾಗುವ ದೋಷವುಂಟಾಗುವದು. ಅಲ್ಲಿ ಯಾರಿಗೆ ಏರಿಳಿತಗಳು ಸಂಭವಿಸುತ್ತವೆಯೋ ಅವರಿಗೆ ಐದನೆಯ ಆಹುತಿಯಲ್ಲಿ ದೇಹವುಂಟಾಗಬಹುದು; ಮಿಕ್ಕವರಿಗಾದರೆ ಆಹುತಿಸಂಖ್ಯೆಯು ಇಲ್ಲದೆಯೇ ಭೂತಾಂತರಗಳಿಂದೊಡಗೂಡಿದ ಅಪ್ಪು ದೇಹವನ್ನುಂಟುಮಾಡಬಹುದಾಗಿದೆ.

**ಸ್ಮರ್ಯತೇಽಪಿ ಚ ಲೋಕೇ ॥ ೧೯ ॥**

೧೯. ಲೋಕದಲ್ಲಿ ಸ್ಮೃತವಾಗಿಯೂ ಇದೆ.

## ಆಹುತಿಸಂಖ್ಯೆಯ ಅನಿಯಮಕ್ಕೆ ಸ್ಮೃತಿ

(ಭಾಷ್ಯ)

೨೪೨. ಅಪಿ ಚ ಸ್ಮರ್ಯತೇ ಲೋಕೇ ದ್ರೋಣಧೃಷ್ಟದ್ಯುಮ್ನಪ್ರಭೃತೀನಾಂ ಸೀತಾದ್ರೌಪದೀಪ್ರಭೃತೀನಾಂ ಚ ಅಯೋನಿಜತ್ವಮ್ । ತತ್ರ ದ್ರೋಣಾದೀನಾಂ ಯೋಷಿದ್ವಿಷಯಕಾಹುತಿರ್ನಾಸ್ತಿ । ಧೃಷ್ಟದ್ಯುಮ್ನಾದೀನಾಂ ತು ಯೋಷಿತ್ಪುರುಷವಿಷಯೇ ದ್ವೇ ಅಪ್ಯಾಹುತೀ ನ ಸ್ತಃ । ಯಥಾ ಚ ತತ್ರ ಆಹುತಿಸಂಖ್ಯಾ ನಿಯಮಾನಾದರೋ ಭವತಿ, ಏವಮ್ ಅನ್ಯತ್ರಾಪಿ ಭವಿಷ್ಯತಿ । ಬಲಾಕಾಪಿ ಅನ್ತರೇಣೈವ ರೇತಃಸೇಕಂ ಗರ್ಭಂ ಧತ್ತೇ ಇತಿ ಲೋಕರೂಢಿಃ ॥

(ಭಾಷ್ಯಾರ್ಥ)

ಇದಲ್ಲದೆ ದ್ರೋಣ, ಧೃಷ್ಟದ್ಯುಮ್ನ ಮೊದಲಾದವರೂ ಸೀತೆ, ದ್ರೌಪದಿ ಮೊದಲಾದವರೂ ಅಯೋನಿಜರೆಂದು ಲೋಕದಲ್ಲಿ[1] ಸ್ಮೃತಿಯಿರುತ್ತದೆ. ಅವರಲ್ಲಿ ದ್ರೋಣಾದಿಗಳಿಗೆ ಸ್ತ್ರೀವಿಷಯವಾದ ಆಹುತಿಯು ಇಲ್ಲ[2]; ಧೃಷ್ಟ

---

1. ವೇದಭಿನ್ನವಾದದ್ದು ಲೋಕವು; ಪ್ರಕೃತದಲ್ಲಿ ಇತಿಹಾಸವು.

2. ದ್ಯುಲೋಕ, ಪರ್ಜನ್ಯ, ಪೃಥಿವೀ, ಪುರುಷ, ಸ್ತ್ರೀ — ಎಂಬ ಅಗ್ನಿಗಳಲ್ಲಿ ಐದು ಆಹುತಿಗಳಾಗಲು ಐದನೆಯ ಆಹುತಿಯಲ್ಲಿ ಭೂತಗಳು ಪುರುಷಶಬ್ದವಾಚ್ಯವಾಗುತ್ತವೆ ಎಂದಿದ್ದರೂ ದ್ರೋಣಾದಿಗಳಿಗೆ ನಾಲ್ಕೇ ಆಹುತಿಗಳು, ಧೃಷ್ಟದ್ಯುಮ್ನಾದಿಗಳಿಗೆ ಮೂರೇ.

ದ್ಯುಮ್ನಾದಿಗಳಿಗಾದರೋ ಸ್ತ್ರೀಪುರುಷವಿಷಯವಾದ ಎರಡು ಆಹುತಿಗಳೂ ಇರುವದಿಲ್ಲ. ಅಲ್ಲಿ ಹೇಗೆ ಆಹುತಿಗಳ ಸಂಖ್ಯೆಯನ್ನು (ಲೆಕ್ಕಕ್ಕೆ) ಹಿಡಿಯುವದಿಲ್ಲವೋ ಇನ್ನೊಂದು ಕಡೆಯಲ್ಲಿಯೂ[1] ಹಾಗೆಯೇ ಆಗಬಹುದಾಗಿದೆ. ಬೆಳ್ಳಕ್ಕಿಯೂ ರೇತಃಸೇಕವಿಲ್ಲದೆಯೇ ಗರ್ಭವನ್ನು ಧರಿಸುತ್ತದೆ ಎಂದು ಲೋಕರೂಢಿ[2].

## ದರ್ಶನಾಚ್ಚ ॥ ೨೦ ॥

೨೦. (ಲೋಕದಲ್ಲಿ) ಕಂಡುಬರುವದರಿಂದಲೂ (ಹೀಗೆ)

## ಆಹುತಿಗಳ ಸಂಖ್ಯೆಯಿಲ್ಲದ್ದಕ್ಕೆ ಲೋಕದಲ್ಲಿ ದೃಷ್ಟಾಂತ

(ಭಾಷ್ಯ)

೨೪೩. ಅಪಿ ಚ ಚತುರ್ವಿಧೇ ಭೂತಗ್ರಾಮೇ ಜರಾಯುಜಾಣ್ಡಜಸ್ವೇದಜೋದ್ಭಿಜ್ಜಲಕ್ಷಣೇ ಸ್ವೇದಜೋದ್ಭಿಜ್ಜಯೋರನ್ತರೇಣೈವ ಗ್ರಾಮ್ಯಧರ್ಮಮ್ ಉತ್ಪತ್ತಿದರ್ಶನಾತ್ ಆಹುತಿಸಂಖ್ಯಾನಾದರೋ ಭವತಿ । ಏವಮ್ ಅನ್ಯತ್ರಾಪಿ ಭವಿಷ್ಯತಿ॥

(ಭಾಷ್ಯಾರ್ಥ)

ಇದಲ್ಲದೆ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ –ಎಂಬ ರೂಪದ ನಾಲ್ಕುಬಗೆಯ ಭೂತಗ್ರಾಮದಲ್ಲಿ ಸ್ವೇದಜ, ಉದ್ಭಿಜ್ಜ – ಇವುಗಳೆರಡಕ್ಕೂ ಮೈಥುನಕರ್ಮವಿಲ್ಲದೆಯೇ ಉತ್ಪತ್ತಿಯು ಕಂಡುಬರುವದರಿಂದ[3] ಆಹುತಿ ಸಂಖ್ಯೆಯ(ನ್ನು ಅಲ್ಲಿ) ಹಿಡಿಯದೆ ಇರಬೇಕಾಗುತ್ತದೆ. ಹಾಗೆಯೇ ಮಿಕ್ಕ ಕಡೆಯಲ್ಲಿಯೂ ಆಗಬಹುದಾಗಿದೆ.

## ತೃತೀಯಶಬ್ದಾವರೋಧಃ ಸಂಶೋಕಜಸ್ಯ ॥ ೨೧ ॥

೨೧. ಸಂಶೋಕಜಕ್ಕೆ[4] ಮೂರನೆಯ ಶಬ್ದದಿಂದಲೇ ಅಂತರ್ಭಾವವಾಗುತ್ತದೆ.

(ಭಾಷ್ಯ)

೨೪೪. ನನು "ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವನ್ತಿ ಆಣ್ಡಜಂ ಜೀವಜಮುದ್ಭಿಜ್ಜಮ್" (ಛಾ. ೬–೩–೧) ಇತ್ಯತ್ರ

---

1. ಇಷ್ಟಾದಿಕಾರಿಗಳಲ್ಲದ ಪಾಪಿಗಳ ವಿಷಯದಲ್ಲಿಯೂ.
2. ಲೋಕ ಎಂಬ ಶಬ್ದಕ್ಕೆ ಇಲ್ಲಿ ಮುಖ್ಯಾರ್ಥವನ್ನು ಇಟ್ಟುಕೊಂಡಿದೆ.
3. ಬಲಾಕಾಪಕ್ಷಿಯ ವಿಷಯಕ್ಕೆ ಜನರ ನಂಬಿಕೆಯನ್ನು ಉದಾಹರಿಸಿತ್ತು; ಈಗ ಪ್ರತ್ಯಕ್ಷದೃಷ್ಟಾಂತವನ್ನು ಕೊಟ್ಟಿದೆ.
4. ಸಂಶೋಕಜವೆಂದರೆ ಸ್ವೇದಜವು.

ತ್ರಿವಿಧ ಏವ ಭೂತಗ್ರಾಮಃ ಶ್ರೂಯತೇ। ಕಥಂ ಚತುರ್ವಿಧತ್ವಂ ಭೂತಗ್ರಾಮಸ್ಯ ಪ್ರತಿಜ್ಞಾತಮಿತಿ ? ಅತ್ರೋಚ್ಯತೇ- "ಆಣ್ಡಜಂ ಜೀವಜಮುದ್ಭಿಜ್ಜಮ್" (ಛಾಂ. ೬-೩-೧) ಇತ್ಯತ್ರ ತೃತೀಯೇನ ಉದ್ಭಿಜ್ಜಶಬ್ದೇನೈವ ಸ್ವೇದಜೋಪಸಂಗ್ರಹಃ ಕೃತಃ ಪ್ರತ್ಯೇತವ್ಯಃ। ಉಭಯೋರಪಿ ಸ್ವೇದಜೋದ್ಭಿಜ್ಜಯೋಃ ಭೂಮ್ಯುದಕೋದ್ಭೇದಪ್ರಭವತ್ವಸ್ಯ ತುಲ್ಯತ್ವಾತ್। ಸ್ಥಾವರೋದ್ಭೇದಾತ್ತು ವಿಲಕ್ಷಣೋ ಜಙ್ಗಮೋದ್ಭೇದ ಇತಿ ಅನ್ಯತ್ರ ಸ್ವೇದಜೋದ್ಭಿಜ್ಜಯೋರ್ಭೇದವಾದಃ ಇತ್ಯವಿರೋಧಃ ॥

(ಭಾಷ್ಯಾರ್ಥ)

(ಆಕ್ಷೇಪ):- "ಆ ಈ ಭೂತಗಳಿಗೆ ಮೂರೇ ಬೀಜಗಳು ಇರುತ್ತವೆಯಷ್ಟೆ. ಆಣ್ಡಜ, ಜೀವಜ, ಮತ್ತು ಉದ್ಭಿಜ್ಜ (ಇವೇ ಆ ಮೂರು)" (ಛಾಂ. ೬-೩-೧) ಎಂಬಲ್ಲಿ ಭೂತಗ್ರಾಮವು ಮೂರೇ ವಿಧವೆಂದು ಶ್ರುತಿಯಲ್ಲಿದೆ. ಭೂತಗ್ರಾಮವು ನಾಲ್ಕು ವಿಧವೆಂದು (ಇಲ್ಲಿ) ಹೇಳಿರುವದು ಹೇಗೆ ?[1]

(ಸಮಾಧಾನ):- ಇದಕ್ಕೆ ಹೇಳುತ್ತೇವೆ. 'ಆಣ್ಡಜಂ ಜೀವಜಮುದ್ಭಿಜ್ಜಮ್' (ಛಾಂ. ೬-೩-೧) ಎಂಬಲ್ಲಿ ಮೂರನೆಯದಾದ ಉದ್ಭಿಜ್ಜಶಬ್ದದಿಂದಲೇ ಸ್ವೇದಜವನ್ನು ಸೇರಿಸಿಕೊಂಡಿದೆ ಎಂದು ತಿಳಿಯಬೇಕು. ಏಕೆಂದರೆ ಸ್ವೇದಜ, ಉದ್ಭಿಜ್ಜ- ಎಂಬ ಎರಡೂ ಭೂಮ್ಯುದಕಗಳನ್ನು ಒಡೆದುಕೊಂಡು ಹುಟ್ಟುವದು ಸಮಾನವಾಗಿದೆ. ಆದರೆ ಸ್ಥಾವರದ ಉದ್ಭೇದಕ್ಕಿಂತ ಜಂಗಮದ ಉದ್ಭೇದವು ವಿಲಕ್ಷಣವಾಗಿರುತ್ತದೆಯಾದ್ದರಿಂದ[2] ಮತ್ತೊಂದು (ಶ್ರುತಿ)ಯಲ್ಲಿ[3] ಭೇದವನ್ನು ಹೇಳಿರುತ್ತದೆ. ಆದ್ದರಿಂದ (ಇದು) ವಿರೋಧವಲ್ಲ.

## ೪. ಸಾಭಾವ್ಯಾಧಿಕರಣ

(ಇಷ್ಟಾದಿಕಾರಿಗಳು ಇಳಿಯುವಾಗ ಆಕಾಶಾದಿಸಾಮ್ಯವನ್ನು ಪಡೆಯುತ್ತಾರೆ)

**ಸಾಭಾವ್ಯಾಪತ್ತಿರುಪಪತ್ತೇಃ ॥ ೨೨ ॥**

೨೨. (ಜೀವರುಗಳು ಆಕಾಶಾದಿಗಳ) ಸಾಭಾವ್ಯವನ್ನು ಹೊಂದುವರು ; ಏಕೆಂದರೆ (ಅದು) ಹೊಂದುತ್ತದೆ.

1. ಹಿಂದಿನ ಸೂತ್ರದಲ್ಲಿ ನಾಲ್ಕು ವಿಧವೆಂದು ಹೇಳಿರುವದು ಸ್ಪಷ್ಟವಾಗಿಲ್ಲವಾದರೂ ಈ ಸೂತ್ರದಲ್ಲಿ ಅಂತರ್ಭಾವವನ್ನು ಹೇಳಿರುವದರ ಆಧಾರದಿಂದ ಸೂತ್ರಕಾರರಿಗೆ ಚತುರ್ವಿಧ ಭೂತಗ್ರಾಮವೇ ಇಷ್ಟವೆಂದು ಕಲ್ಪಿಸಿದೆ.

2. ಉದ್ಭಿದ್ಯ ಜಾಯತೇ ಇತಿ ಉದ್ಭಿಜ್ಜಮ್ ; ಒಡೆದುಕೊಂಡು ಹುಟ್ಟುವದು- ಎಂಬ ವ್ಯುತ್ಪತ್ತಿಯಿಂದ ಎರಡೂ ಒಂದೇ ಆದರೂ ಭೂಮಿಯನ್ನು ಒಡೆದುಕೊಂಡು ಹುಟ್ಟುವದು, ಬೆವರನ್ನು ಒಡೆದುಕೊಂಡು ಹುಟ್ಟುವದು- ಎಂಬ ಭೇದವಿದೆ ಎಂದು ರ. ಪ್ರ.

3. ಐತರೇಯದಲ್ಲಿ ಎಂದರ್ಥ. ಛಾಂದೋಗ್ಯದಲ್ಲಿ ಜೀವಜ ಎಂಬ ಮಾತಿಗೆ ಜರಾಯುಜವೆಂದು ಅರ್ಥ.

## ಅವರೋಹದ ವಿಷಯಕ್ಕೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೨೪೫. ಇಷ್ಟಾದಿಕಾರಿಣಃ ಚನ್ದ್ರಮಸಮ್ ಆರುಹ್ಯ ತಸ್ಮಿನ್ ಯಾವತ್ಸಂಪಾತಮ್ ಉಷಿತ್ವಾ ತತಃ ಸಾನುಶಯಾ ಅವರೋಹನ್ತಿ ಇತ್ಯುಕ್ತಮ್ । ಅಥ ಅವರೋಹಪ್ರಕಾರಃ ಪರೀಕ್ಷ್ಯತೇ । ತತ್ರ ಇಯಮ್ ಅವರೋಹಶ್ರುತಿರ್ಭವತಿ "ಅಥೈತಮೇವಾಧ್ವಾನಂ ಪುನರ್ನಿವರ್ತನ್ತೇ ಯಥೇತಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾಽಭ್ರಂ ಭವತ್ಯಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ" (ಛಾಂ.೫-೧೦-೫) ಇತಿ । ತತ್ರ ಸಂಶಯಃ । ಕಿಮ್ ಆಕಾಶಾದಿಸ್ವರೂಪಮೇವ ಅವರೋಹನ್ತಃ ಪ್ರತಿಪದ್ಯನ್ತೇ ಕಿಂ ವಾ ಆಕಾಶಾದಿಸಾಮ್ಯಮ್ ಇತಿ ? ತತ್ರ ಪ್ರಾಪ್ತಂ ತಾವತ್ ಆಕಾಶಾದಿಸ್ವರೂಪಮೇವ ಪ್ರತಿಪದ್ಯನ್ತ ಇತಿ । ಕುತಃ ? ಏವಂ ಹಿ ಶ್ರುತಿರ್ಭವತಿ । ಇತರಥಾ ಲಕ್ಷಣಾ ಸ್ಯಾತ್ । ಶ್ರುತಿಲಕ್ಷಣಾವಿಶಯೇ ಚ ಶ್ರುತಿರ್ನ್ಯಾಯ್ಯಾ ನ ಲಕ್ಷಣಾ । ತಥಾ ಚ ವಾಯುರ್ಭೂತ್ವಾ ಧೂಮೋ ಭವತಿ ಇತ್ಯೇವಮಾದೀನಿ ಅಕ್ಷರಾಣಿ ತತ್ತತ್ಸ್ವರೂಪೋಪಪತ್ತೌ ಆಞ್ಜಸ್ಯೇನ ಅವಕಲ್ಪನ್ತೇ । ತಸ್ಮಾತ್ ಆಕಾಶಾದಿಸ್ವರೂಪಪ್ರತಿಪತ್ತಿಃ ಇತಿ ॥

(ಭಾಷ್ಯಾರ್ಥ)

ಇಷ್ಟವೇ ಮುಂತಾದವುಗಳನ್ನು ಮಾಡುವವರು ಚಂದ್ರನನ್ನು ಏರಿ ಅಲ್ಲಿ ಸಂಪಾತದವರೆಗೆ[1] ಇದ್ದು ಅದಲಾದ ಅನುಶಯಸಹಿತರಾಗಿ ಇಳಿಯುತ್ತಾರೆ ಎಂದು ಹೇಳಿದ್ದಾಯಿತು. ಇನ್ನು ಇಳಿಯುವ ಪ್ರಕಾರವನ್ನು ಪರೀಕ್ಷಿಸಲಾಗುತ್ತದೆ. ಅಲ್ಲಿ "ಇನ್ನು ಈ ಮಾರ್ಗವನ್ನೇ ಮತ್ತೆ ಹಿಂತಿರಲಿ (ಸೇರುವರು) ; ಹೇಗೆ ಹೋಗಿದ್ದರೋ ಹಾಗೆಯೇ (ಹಿಂತಿರುಗುವರು). ಆಕಾಶವನ್ನು, ಆಕಾಶದಿಂದ ವಾಯುವನ್ನು ; ವಾಯುವಾಗಿ ಧೂಮವಾಗುವನು, ಧೂಮವಾಗಿ ಅಭ್ರವಾಗುವನು, ಅಭ್ರವಾಗಿ ಮೇಘವಾಗುವನು,[2] ಮೇಘವಾಗಿ ಮಳೆಗರೆಯುತ್ತಾನೆ" (ಛಾಂ.೫-೧೦-೫) ಎಂಬೀ ಅವರೋಹಶ್ರುತಿಯು ಇರುತ್ತದೆ. ಇಲ್ಲಿ ಸಂಶಯವೇನೆಂದರೆ, ಇಳಿಯುವಾಗ ಆಕಾಶಾದಿಗಳ ಸ್ವರೂಪವನ್ನೇ ಪಡೆದುಕೊಳ್ಳುತ್ತಾರೊ, ಅಥವಾ ಆಕಾಶಾದಿಸಾಮ್ಯವನ್ನು ಪಡೆದುಕೊಳ್ಳುತ್ತಾರೊ ?

---

1. ಕರ್ಮಾಶಯವು ಮುಗಿಯುವವರೆಗೆ.

2. ಶಬ್ದದಿಂದ ನೇರಾಗಿ ತಿಳಿಯಬರುವ ಅರ್ಥವನ್ನು ಸ್ವೀಕರಿಸುವದು ಯುಕ್ತ, 'ವಾಯುವಾಗಿ' ಎಂಬ ಮಾತಿಗೆ ಎರಡನೆಯ ವೃತ್ತಿಯಿಂದ ವಾಯುಸಮಾನನಾಗಿ ಎಂದು ಅರ್ಥವನ್ನು ಕಲ್ಪಿಸುವದು ಅಯುಕ್ತ.

ಇಲ್ಲಿ ಮೊದಲು ಒದಗುವ (ಪೂರ್ವ ಪಕ್ಷ)ವೇನೆಂದರೆ ಆಕಾಶಾದಿಗಳ ಸ್ವರೂಪವನ್ನೇ ಪಡೆದುಕೊಳ್ಳುತ್ತಾರೆ. ಏಕೆ ? ಎಂದರೆ ಹಾಗೆಯೇ ಶ್ರುತಿ ಇರುತ್ತದೆ. ಹೀಗಲ್ಲದೆ ಇದ್ದರೆ ಲಕ್ಷಣೆಯಾಗುತ್ತದೆ. ಶ್ರುತಿ, ಲಕ್ಷಣೆ –ಇವುಗಳೊಳಗೆ (ಯಾವದೆಂಬ) ಸಂಶಯವಾದರೆ ಶ್ರುತಿಯೇ ಯುಕ್ತವು, ಲಕ್ಷಣೆಯಲ್ಲ. ಹಾಗಾದರೆ ವಾಯುವಾಗಿ ಧೂಮವಾಗುವನು ಎಂಬಿದೇ ಮುಂತಾದ ಅಕ್ಷರಗಳು ಆಯಾ ಸ್ವರೂಪವನ್ನು ಪಡೆದುಕೊಳ್ಳುವನೆಂದರೆ ಚೆನ್ನಾಗಿ ಹೊಂದುತ್ತವೆ. ಆದ್ದರಿಂದ ಆಕಾಶಾದಿಗಳ ಸ್ವರೂಪವನ್ನೇ ಪಡೆದುಕೊಳ್ಳುವರೆಂಬುದು (ಯುಕ್ತ).

## ಚಂದ್ರಮಂಡಲದಿಂದ ಇಳಿಯುವವರು ಆಕಾಶಾದಿಸಾಮ್ಯವನ್ನು ಪಡೆಯುತ್ತಾರೆ

(ಭಾಷ್ಯ)

೨೪೬. ಏವಂ ಪ್ರಾಪ್ತೇ ಬ್ರೂಮಃ । ಆಕಾಶಾದಿಸಾಮ್ಯಂ ಪ್ರತಿಪದ್ಯನ್ತ ಇತಿ । ಚನ್ದ್ರಮಣ್ಡಲೇ ಯದಮ್ಮಯಂ ಶರೀರಮ್ ಉಪಭೋಗಾರ್ಥಮ್ ಆರಬ್ಧಮ್, ತತ್ ಉಪಭೋಗಕ್ಷಯೇ ಸತಿ ಪ್ರವಿಲೀಯಮಾನಂ ಸೂಕ್ಷ್ಮಮ್ ಆಕಾಶಸಮಂ ಭವತಿ । ತತೋ ವಾಯೋರ್ವಶಮ್ ಏತಿ । ತತಃ ಧೂಮಾದಿಭಿಃ ಸಂಪೃಚ್ಯತ ಇತಿ । ತದೇತದುಚ್ಯತೇ — "ಯಥೇತಮಾಕಾಶಮಾಕಾಶಾದ್ವಾಯುಮ್" (ಛಾಂ. ೫–೧೦–೫) ಇತ್ಯೇವಮಾದಿನಾ । ಕುತ ಏತತ್ ? ಉಪಪತ್ತೇಃ । ಏವಂ ಹಿ ಏತದುಪಪದ್ಯತೇ । ನ ಹಿ ಅನ್ಯಸ್ಯ ಅನ್ಯಭಾವೋ ಮುಖ್ಯಃ ಉಪಪದ್ಯತೇ । ಆಕಾಶಸ್ವರೂಪಪ್ರತಿಪತ್ತೌ ಚ ವಾಯ್ವಾದಿಕ್ರಮೇಣ ಅವರೋಹೋ ನೋಪಪದ್ಯತೇ । ವಿಭುತ್ವಾಚ್ಚ ಆಕಾಶೇನ ನಿತ್ಯಸಂಬದ್ಧತ್ವಾತ್ ನ ತತ್ಸಾದೃಶ್ಯಾಪತ್ತೇರನ್ಯಃ ತತ್ಸಂಬನ್ಧೋ ಘಟತೇ । ಶ್ರುತ್ಯಸಂಭವೇ ಚ ಲಕ್ಷಣಾಶ್ರಯಣಂ ನ್ಯಾಯ್ಯಮೇವ । ಅತಃ ಆಕಾಶಾದಿತುಲ್ಯತಾಪತ್ತಿರೇವ ಅತ್ರ ಆಕಾಶಾದಿಭಾವಃ ಇತಿ ಉಪಚರ್ಯತೇ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಆಕಾಶಾದಿಗಳ ಸಾಮ್ಯವನ್ನು (ಅವರು) ಪಡೆಯುತ್ತಾರೆ. ಚಂದ್ರಮಂಡಲದಲ್ಲಿ ಅಪ್ಪಿನಿಂದಾಗಿರುವ ಶರೀರವು ಉಪಭೋಗಕ್ಕಾಗಿ ಉಂಟಾಗಿತ್ತಷ್ಟೆ, ಅದು ಉಪಭೋಗವು ಕ್ಷಯವಾಗಲು ಕರಗಿ ಸೂಕ್ಷ್ಮವಾಗಿ ಆಕಾಶದಂತೆ ಆಗುತ್ತದೆ; ಆಮೇಲೆ ವಾಯುವಿನ ಅಧೀನನಾಗುತ್ತಾನೆ; ಆಮೇಲೆ ಧೂಮಾದಿಗಳೊಡನೆ ಸಂಬದ್ಧನಾಗುತ್ತಾನೆ –ಎಂದು (ಶ್ರುತಿಯ ಅರ್ಥ).

ಇದನ್ನೇ "ಹೋಗಿದ್ದಂತೆಯೇ ಆಕಾಶವನ್ನು, ಆಕಾಶದಿಂದ ವಾಯುವನ್ನು....." (ಛಾಂ. ೫-೧೦-೫) ಎಂದು ಮುಂತಾಗಿರುವ (ಶ್ರುತಿಯೂ) ಹೇಳುತ್ತದೆ, ಇದು ಯಾವ (ಕಾರಣ)ದಿಂದ ? ಎಂದರೆ ಉಪಪತ್ತಿಯಿಂದ. ಹೀಗಲ್ಲವೆ, ಇದು ಹೊಂದುತ್ತದೆ ? ಏಕೆಂದರೆ ಒಂದು ಇನ್ನೊಂದಾಗುವದೆಂಬುದು ಮುಖ್ಯ (ವಾದ ಅರ್ಥದಲ್ಲಿ) ಹೊಂದುವದಿಲ್ಲ. ಆಕಾಶಸ್ವರೂಪವನ್ನೇ ಹೊಂದುತ್ತಾನೆಂದರೆ ವಾಯುವೇ ಮುಂತಾದವುಗಳ ಕ್ರಮದಿಂದ ಇಳಿಯುವದೂ ಹೊಂದುವದಿಲ್ಲ. ವಿಭುವಾಗಿರುವದರಿಂದ ಆಕಾಶದೊಡನೆ ನಿತ್ಯಸಂಬದ್ಧನಾಗಿರುತ್ತಾನೆ ; ಆದ್ದರಿಂದ ಆ (ಆಕಾಶದ) ಸಾದೃಶ್ಯವನ್ನು ಪಡೆಯುವದಕ್ಕಿಂತ ಬೇರೆಯಾಗಿ ಅದರೊಡನೆ ಸಂಬಂಧವು ಆಗುವಂತಿಲ್ಲ. ಶ್ರುತಿಯೂ ಸಂಭವಿಸದೆ ಇರುವಲ್ಲಿ ಲಕ್ಷಣೆಯನ್ನು ಆಶ್ರಯಿಸುವದು ನ್ಯಾಯವೇ ಆಗಿರುತ್ತದೆ. ಆದ್ದರಿಂದ ಆಕಾಶವೇ ಮುಂತಾದವುಗಳಿಗೆ ಸಮವಾಗುವದನ್ನೇ ಇಲ್ಲಿ ಆಕಾಶಾದಿಭಾವವೆಂದು ಉಪಚಾರಕ್ಕೆ ಕರೆದಿರುತ್ತಾರೆ (ಎನ್ನಬೇಕು).

## ೫. ನಾತಿಚಿರಾಧಿಕರಣ

(ಇಷ್ಟಾದಿಕಾರಿಜೀವನು ಆಕಾಶಾದಿಗಳ ಮೂಲಕ ಬೇಗನೆ ಇಳಿಯುತ್ತಾನೆ)

**ನಾತಿಚಿರೇಣ ವಿಶೇಷಾತ್ ॥ ೨೩ ॥**

೨೩. ಬಹಳ ತಡವಿಲ್ಲದೆ (ಇಳಿಯುತ್ತಾನೆ), ಏಕೆಂದರೆ ವಿಶೇಷ(ವಿದೆ).

## ಆಕಾಶಾದಿಭಾವದಲ್ಲಿ ಜೀವನಿರುವ ಕಾಲದ ವಿಷಯಕ್ಕೆ ಸಂಶಯಪೂರ್ವಪಕ್ಷ

(ಭಾಷ್ಯ)

೨೮೭. ತತ್ರ ಆಕಾಶಾದಿಪ್ರತಿಪತ್ತ್ಯಾ ಪ್ರಾಗ್ ವ್ರೀಹ್ಯಾದಿಭಾವಾಪತ್ತೇಃ ಭವತಿ ವಿಶಯಃ । ಕಿಂ ದೀರ್ಘಂ ದೀರ್ಘಂ ಕಾಲಂ ಪೂರ್ವಪೂರ್ವಸಾದೃಶ್ಯೇನ ಅವಸ್ಥಾಯ ಉತ್ತರೋತ್ತರಸಾದೃಶ್ಯಂ ಗಚ್ಛನ್ತಿ, ಉತ ಅಲ್ಪಮಲ್ಪಮ್ ಇತಿ ? ತತ್ರ ಅನಿಯಮಃ । ನಿಯಮಕಾರಿಣಃ ಶಾಸ್ತ್ರಸ್ಯ ಅಭಾವಾತ್ ಇತಿ ॥

(ಭಾಷ್ಯಾರ್ಥ)

ಇಲ್ಲಿ ಆಕಾಶಾದಿಗಳನ್ನು ಪಡೆಯುತ್ತಾನಷ್ಟೆ ; ವ್ರೀಹಿ ಮುಂತಾದವುಗಳ ಸ್ವರೂಪವನ್ನು ಪಡೆಯುವ ಮುಂಚೆ (ಈ) ಸಂಶಯವಾಗುತ್ತದೆ. ಬಹಳಬಹಳ ಕಾಲದವರೆಗೆ ಹಿಂದುಹಿಂದಿನ (ಆಕಾಶಾದಿಗಳ) ಸಾದೃಶ್ಯವನ್ನು ಹೊಂದಿದ್ದು

(ಆಮೇಲೆ) ಮುಂದುಮುಂದಿನದರ ಸಾದೃಶ್ಯವನ್ನು ಹೊಂದುತ್ತಾರೊ, ಅಥ ವಾ ಸ್ವಲ್ಪಸ್ವಲ್ಪಕಾಲ(ವಿದ್ದು ಹೊಂದುತ್ತಾರೊ)? ಈ (ಸಂಶಯಕ್ಕೆ) ನಿಯಮವನ್ನು ಮಾಡುವ ಶಾಸ್ತ್ರವು ಇಲ್ಲದ್ದರಿಂದ ನಿಯಮವೇ ಇಲ್ಲ (ಎನ್ನಬೇಕು).

## ಆಕಾಶಾದಿಭಾವವು ಸ್ವಲ್ಪಸ್ವಲ್ಪಕಾಲವೇ

(ಭಾಷ್ಯ)

೨೪೪. ಏವಂ ಪ್ರಾಪ್ತೇ ಇದಮಾಹ 'ನಾತಿಚಿರೇಣ' ಇತಿ। ಅಲ್ಪಮ್ ಅಲ್ಪಂ ಕಾಲಮ್ ಆಕಾಶಾದಿಭಾವೇನ ಅವಸ್ಥಾಯ ವರ್ಷಧಾರಾಭಿಃ ಸಹಇಮಾಂ ಭುವಮ್ ಆಪತನ್ತಿ। ಕುತ ಏತತ್ ? ವಿಶೇಷದರ್ಶನಾತ್। ತಥಾ ಹಿ ವ್ರೀಹ್ಯಾದಿ ಭಾವಾಪತ್ತೇರನನ್ತರಂ ವಿಶಿನಷ್ಟಿ "ಅತೋ ವೈ ಖಲು ದುರ್ನಿಷ್ಪ್ರಪತರಮ್" (ಛಾಂ. ೫-೧೦-೬) ಇತಿ। ತಕಾರ ಏಕಶ್ಛಾನ್ದಸ್ಯಾಂ ಪ್ರಕ್ರಿಯಾಯಾಂ ಲುಪ್ತೋ ಮನ್ತವ್ಯಃ। ದುರ್ನಿಷ್ಪ್ರಪತತರಮ್, ದುರ್ನಿಷ್ಕ್ರಮತರಮ್, ದುಃಖ ತರಮ್ ಅಸ್ಮಾತ್ ವ್ರೀಹ್ಯಾದಿಭಾವಾತ್ ನಿಃಸರಣಂ ಭವತಿ ಇತ್ಯರ್ಥಃ। ತದತ್ರ ದುಃಖಂ ನಿಷ್ಪ್ರಪತನಂ ಪ್ರದರ್ಶಯನ್ ಪೂರ್ವೇಷು ಸುಖಂ ನಿಷ್ಪ್ರಪತನಂ ದರ್ಶಯತಿ। ಸುಖದುಃಖತಾವಿಶೇಷಶ್ಚ ಅಯಂ ನಿಷ್ಪ್ರಪತನಸ್ಯ ಕಾಲಾಲ್ಪತ್ವ ದೀರ್ಘತ್ವನಿಮಿತ್ತಃ। ತಸ್ಮಿನ್ ಅವಧೌ ಶರೀರನಿಷ್ಪತ್ತೇಃ ಉಪಭೋಗಾಸಂಭ ವಾತ್। ತಸ್ಮಾತ್ ವ್ರೀಹ್ಯಾದಿಭಾವಾಪತ್ತೇಃ ಪ್ರಾಕ್ ಅಲ್ಪೇನೈವ ಕಾಲೇನ ಅವರೋಹಃ ಸ್ಯಾತ್ ಇತಿ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಈ (ಸಿದ್ಧಾಂತವನ್ನು) ಹೇಳುತ್ತಾರೆ: 'ಬಹಳ ತಡವಿಲ್ಲದೆ'. ಸ್ವಲ್ಪಸ್ವಲ್ಪಕಾಲದವರೆಗೆ ಆಕಾಶಾದಿಭಾವ ದಿಂದ ಇದ್ದುಕೊಂಡು ಮಳೆಯ ಧಾರೆಗಳೊಡನೆ ಈ ಭೂಮಿಗೆ ಇಳಿಯುತ್ತಾರೆ. ಇದು ಏತರಿಂದ (ಗೊತ್ತಾಗುತ್ತದೆ)? ಎಂದರೆ ವಿಶೇಷದರ್ಶನದಿಂದ. (ಇದರ ವಿವರ): ಆದ್ದರಿಂದಲೇ ಅಲ್ಲವೆ, ವ್ರೀಹ್ಯಾದಿಭಾವವನ್ನು ಪಡೆದಮೇಲೆ "ಇಲ್ಲಿಂದ ಇನ್ನು ದುಃಖದಿಂದ ಹೊರಡುತ್ತಾರೆ" (ಛಾಂ. ೫-೧೦-೬) ಎಂದು ವಿಶೇಷ ವಾಗಿ ತಿಳಿಸಿರುತ್ತದೆ. ವೈದಿಕಪ್ರಕ್ರಿಯೆಯಲ್ಲಿ (ಇಲ್ಲಿ) ಒಂದು ತಕಾರಕ್ಕೆ ಲೋಪವಾಗಿರುತ್ತದೆ ಎಂದು ತಿಳಿಯಬೇಕು. ದುರ್ನಿಷ್ಪ್ರಪತತರವು, ಎಂದರೆ ಹೊರಕ್ಕೆ ಬರುವದು ಇನ್ನೂ ಕಷ್ಟವು, ಈ ವ್ರೀಹ್ಯಾದಿಭಾವದಿಂದ ಹೊರಕ್ಕೆ ಹೊರಟುಬರುವದು ಇನ್ನೂ ಕಷ್ಟವಾಗಿರುತ್ತದೆ ಎಂದರ್ಥ. ಆದ್ದರಿಂದ ಇಲ್ಲಿ ಹೊರಕ್ಕೆ ಬರುವದು ಕಷ್ಟವೆಂದು ತೋರಿಸಿರುವದರಿಂದ ಹಿಂದಿನ (ಸಂದರ್ಭ) ಗಳಲ್ಲಿ ಸುಖವಾಗಿ ಹೊರಕ್ಕೆ ಬರುವದಾಗುತ್ತದೆ ಎಂದು ತಿಳಿಸಿದಂತೆ ಆಗಿರುತ್ತದೆ.

ಹೊರಕ್ಕೆ ಬರುವದು ಸುಲಭವಾಗಿರುವದು. ಕಷ್ಟವಾಗಿರುವದು –ಎಂಬುದು ಕಾಲವು ಅಲ್ಪವಾಗಿರುವದು ದೀರ್ಘವಾಗಿರುವದು ಎಂಬ ನಿಮಿತ್ತದಿಂದ (ಆಗುತ್ತದೆ). ಏಕೆಂದರೆ ಆ ಕಾಲದಲ್ಲಿ ಶರೀರವು ಉಂಟಾಗಿರುವದಿಲ್ಲವಾದ್ದರಿಂದ ಉಪಭೋಗವು ಸಂಭವಿಸುವದಿಲ್ಲ.[1] ಆದ್ದರಿಂದ ವ್ರೀಹ್ಯಾದಿಭಾವವನ್ನು ಪಡೆಯುವ ಮುಂಚೆ– ಸ್ವಲ್ಪ ಕಾಲದಲ್ಲಿಯೇ ಇಳಿಯುವರಾಗಿರಬೇಕು.

## ೬. ಅನ್ಯಾಧಿಷ್ಠಿತಾಧಿಕರಣ

(ವ್ರೀಹ್ಯಾದಿಗಳಲ್ಲಿ ಅನುಶಯಿಗಳು ಸೇರಿಕೊಂಡಿರುತ್ತಾರೆ)

**ಅನ್ಯಾಧಿಷ್ಠಿತೇಷು ಪೂರ್ವವದಭಿಲಾಪಾತ್ ॥ ೨೪ ॥**

೨೪. ಬೇರೆಯ (ಜೀವರುಗಳಿಗೆ) ಸೇರಿರುವ (ವ್ರೀಹ್ಯಾದಿ) ಗಳಲ್ಲಿ (ಸೇರಿಕೊಂಡಿರುತ್ತಾರೆ); ಏಕೆಂದರೆ ಮೊದಲಿನಂತೆ ಹೇಳಿದೆ.

## ವ್ರೀಹ್ಯಾದಿಭಾವದ ವಿಷಯಕ್ಕೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೨೪೯. ತಸ್ಮಿನ್ನೇವ ಅವರೋಹೇ ಪ್ರವರ್ಷಣಾನನ್ತರಂ ಪಠ್ಯತೇ–"ತ ಇಹ ವ್ರೀಹಿಯವಾ ಓಷಧಿವನಸ್ಪತಯಸ್ತಿಲಮಾಷಾ ಇತಿ ಜಾಯನ್ತೇ" (ಛಾ. ೫-೧೦-೬) ಇತಿ। ತತ್ರ ಸಂಶಯಃ। ಕಿಮ್ ಅಸ್ಮಿನ್ ಅವಧೌ ಸ್ಥಾವರಜಾತ್ಯಾಪನ್ನಾಃ ಸ್ಥಾವರಸುಖದುಃಖಭಾಜೋಽನುಶಯಿನೋ ಭವನ್ತಿ, ಆಹೋಸ್ವಿತ್ ಕ್ಷೇತ್ರಜ್ಞಾನ್ತರಾಧಿಷ್ಠಿತೇಷು ಸ್ಥಾವರಶರೀರೇಷು ಸಂಶ್ಲೇಷಮಾತ್ರಂ ಗಚ್ಛನ್ತಿ ಇತಿ। ಕಿಂ ತಾವತ್ ಪ್ರಾಪ್ತಮ್ ? ಸ್ಥಾವರಜಾತ್ಯಾಪನ್ನಾಃ ತತ್ಸುಖದುಃಖಭಾಜೋಽನುಶಯಿನೋ ಭವನ್ತಿ ಇತಿ। ಕುತ ಏತತ್ ? ಜನೇರ್ಮುಖ್ಯಾರ್ಥತ್ವೋಪಪತ್ತೇಃ। ಸ್ಥಾವರಭಾವಸ್ಯ ಚ ಶ್ರುತಿಸ್ಮೃತ್ಯೋಃ ಉಪಭೋಗಸ್ಥಾನತ್ವಪ್ರಸಿದ್ಧೇಃ। ಪಶುಹಿಂಸಾದಿಯೋಗಾಚ್ಚ ಇಷ್ಟಾದೇಃ ಕರ್ಮಜಾತಸ್ಯ ಅನಿಷ್ಟಫಲತ್ವೋಪಪತ್ತೇಃ। ತಸ್ಮಾತ್ ಮುಖ್ಯಮೇವ ಇದಮ್ ಅನುಶಯಿನಾಂ ವ್ರೀಹ್ಯಾದಿಜನ್ಮ, ಶ್ವಾದಿಜನ್ಮವತ್। ಯಥಾ "ಶ್ವಯೋನಿಂ ವಾ ಸೂಕರಯೋನಿಂ ವಾ ಚಣ್ಡಾಲಯೋನಿಂ ವಾ" (ಛಾಂ. ೫-೧೦-೭) ಮುಖ್ಯಮೇವ ಅನುಶಯಿನಾಂ ಶ್ವಾದಿಜನ್ಮ ತತ್ಸುಖದುಃಖಾನ್ವಿತಂ ಭವತಿ, ಏವಂ ವ್ರೀಹ್ಯಾದಿಜನ್ಮಾಪಿ ಇತಿ ॥

---

1. ಗರ್ಭವನ್ನು ಹೊಕ್ಕ ಬಳಿಕವೇ ಶರೀರವುಂಟಾಗುತ್ತದೆ; ಶರೀರವೇ ಭೋಗಕ್ಕೆ ಆಶ್ರಯ.

(ಭಾಷ್ಯಾರ್ಥ)

ಆ ಅವರೋಹದಲ್ಲಿ ಮಳೆಯಾದ ಬಳಿಕ (ಹೀಗಾಗುವದೆಂದು) ಪಠಿತ ವಾಗಿರುತ್ತದೆ: "ಅವರು ಇಲ್ಲಿ ಬತ್ತ, ಜವೆ, ಗಿಡಮರಗಳು, ಎಳ್ಳುಉದ್ದುಗಳ ಎಂಬೀ ಪ್ರಕಾರವಾಗಿ ಹುಟ್ಟುತ್ತಾರೆ" (ಛಾಂ. ೫-೧೦-೬). ಇಲ್ಲಿ ಸಂಶಯ ವೇನೆಂದರೆ ಈ ಕಾಲದಲ್ಲಿ ಸ್ಥಾವರಜನ್ಮವನ್ನು ಪಡೆದುಕೊಂಡು ಸ್ಥಾವರಗಳ ಸುಖದುಃಖವನ್ನೇ ಅನುಶಯಿಗಳು ಹೊಂದುತ್ತಾರೋ, ಅಥವಾ ಬೇರೆಯ ಕ್ಷೇತ್ರಜ್ಞರಿಗೆ ಆಶ್ರಯವಾಗಿರುವ ಸ್ಥಾವರಶರೀರಗಳಲ್ಲಿ ಸಂಬಂಧಮಾತ್ರವನ್ನು ಪಡೆಯುತ್ತಾರೋ ?

ಇಲ್ಲಿ ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಎಂದರೆ ಸ್ಥಾವರಜನ್ಮವನ್ನು ಪಡೆದುಕೊಂಡು (ಪ್ರಾಣಿಗಳ) ಸುಖದುಃಖಗಳನ್ನೇ ಅನು ಶಯಿಗಳು ಹೊಂದುತ್ತಾರೆ. ಇದು ಏತರಿಂದ (ಗೊತ್ತಾಗುತ್ತದೆ) ? ಎಂದರೆ ಜನ್(ಧಾತುವಿಗೆ) ಮುಖ್ಯಾರ್ಥವು ಹೊಂದುವದರಿಂದಲೂ, ಸ್ಥಾವರಭಾವವು ಉಪಭೋಗಸ್ಥಾನವೆಂದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುವದರಿಂದಲೂ ಪಶು ಹಿಂಸೆಯೇ ಮುಂತಾದ (ಕರ್ಮಗಳ) ಸಂಬಂಧದಿಂದ ಇಷ್ಟಾದಿಕರ್ಮಜಾತಕ್ಕೆ ಅನಿಷ್ಟಫಲವು ಆಗಬಹುದಾಗಿರುವದರಿಂದಲೂ (ಹೀಗೆಂದು ಗೊತ್ತಾಗುತ್ತದೆ). ಆದ್ದರಿಂದ ಅನುಶಯಿಗಳಿಗೆ ವ್ರೀಹ್ಯಾದಿಜನ್ಮವು ಮುಖ್ಯವೆ, ಶ್ವಾದಿಜನ್ಮದಂತೆಯೇ (ಇವರ ವಿವರ): ಹೇಗೆ "ನಾಯಿಯ ಜನ್ಮವನ್ನಾಗಲಿ, ಹಂದಿಯ ಜನ್ಮವನ್ನಾ ಗಲಿ, ಚಂಡಾಲನ ಜನ್ಮವನ್ನಾಗಲಿ" (ಛಾ. ೫-೧೦-೭) ಎಂದು ಮುಖ್ಯವಾದ ಶ್ವಾದಿಜನ್ಮವೇ ಆಯಾ ಸುಖದುಃಖಗಳಿಂದೊಡಗೂಡಿರುತ್ತದೆಯೊ ಹಾಗೆಯೇ ವ್ರೀಹ್ಯಾದಿಜನ್ಮವು (ಆಗುತ್ತದೆ).

## ವ್ರೀಹ್ಯಾದಿಗಳ ಸಂಬಂಧಮಾತ್ರವೇ ಅನುಶಯಿಗಳಿಗೆ

(ಭಾಷ್ಯ)

೨೫೦. ಏವಂ ಪ್ರಾಪ್ತೇ ಬ್ರೂಮಃ । ಅನ್ಯೈರ್ಜೀವೈಃ ಅಧಿಷ್ಠಿತೇಷು ವ್ರೀಹ್ಯಾದಿಷು ಸಂಸರ್ಗಮಾತ್ರಮ್ ಅನುಶಯಿನಃ ಪ್ರತಿಪದ್ಯನ್ತೇ ನ ತತ್ಸುಖ ದುಃಖಭಾಜೋ ಭವನ್ತಿ । ಪೂರ್ವವತ್ । ಯಥಾ ವಾಯುಧೂಮಾದಿಭಾವೋಽ ನುಶಯಿನಾಂ ತತ್ಸಂಶ್ಲೇಷಮಾತ್ರಮ್, ಏವಂ ವ್ರೀಹ್ಯಾದಿಭಾವೋಽಪಿ ಜಾತಿ ಸ್ಥಾವರೈಃ ಸಂಶ್ಲೇಷಮಾತ್ರಮ್ । ಕುತ ಏತತ್ ? ತದ್ವದೇವೇಹಾಪಿ ಅಭಿ ಲಾಪಾತ್ । ಕೋಽಭಿಲಾಪಸ್ಯ ತದ್ವದ್ಭಾವಃ ? ಕರ್ಮವ್ಯಾಪಾರಮನ್ತರೇಣ ಸಂ ಕೀರ್ತನಮ್ । ಯಥಾ ಆಕಾಶಾದಿಷು ಪ್ರವರ್ಷಣಾನ್ತೇಷು ನ ಕಂಚಿತ್ ಕರ್ಮ ವ್ಯಾಪಾರಂ ಪರಾಮೃಶತಿ ಏವಂ ವ್ರೀಹ್ಯಾದಿಜನ್ಮನ್ಯಪಿ । ತಸ್ಮಾತ್ ನಾಸ್ತ್ಯತ್ರ ಸುಖದುಃಖಭಾಕ್ತ್ವಮ್ ಅನುಶಯಿನಾಮ್ । ಯತ್ರ ತು ಸುಖದುಃಖ

ಭಾಕ್ತತ್ವಮ್ ಅಭಿಪ್ರೈತಿ, ಪರಾಮೃಶತಿ ತತ್ರ ಕರ್ಮವ್ಯಾಪಾರಮ್ "ರಮಣೀಯಚರಣಾಃ ಕಪೂಯಚರಣಾಃ" (ಛಾಂ. ೫-೧೦-೭) ಇತಿ ಚ । ಅಪಿ ಚ ಮುಖ್ಯೇ ಅನುಶಯಿನಾಂ ವ್ರೀಹ್ಯಾದಿಜನ್ಮನಿ ವ್ರೀಹ್ಯಾದಿಷು ಲೂಯಮಾನೇಷು ಕಣ್ಡ್ಯಮಾನೇಷು ಪಚ್ಯಮಾನೇಷು ಭಕ್ಷ್ಯಮಾಣೇಷು ಚ ತದಭಿಮಾನಿನೋಽನುಶಯಿನಃ ಪ್ರವಸೇಯುಃ । ಯೋ ಹಿ ಜೀವೋ ಯಚ್ಛರೀರಮ್ ಅಭಿಮನ್ಯತೇ ಸ ತಸ್ಮಿನ್ ಪೀಡ್ಯಮಾನೇ ಪ್ರವಸತಿ ಇತಿ ಪ್ರಸಿದ್ಧಮ್ । ತತ್ರ ವ್ರೀಹ್ಯಾದಿಭಾವಾತ್ ರೇತಃಸಿಗ್ಭಾವೋಽನುಶಯಿನಾಂ ನಾಭಿಲಪ್ಯೇತ । ಅತಃ ಸಂಸರ್ಗಮಾತ್ರಮ್ ಅನುಶಯಿನಾಮ್ ಅನ್ಯಾಧಿಷ್ಠಿತೇಷು ವ್ರೀಹ್ಯಾದಿಷು ಭವತಿ । ಏತೇನ ಜನೇರ್ಮುಖ್ಯಾರ್ಥತ್ವಂ ಪ್ರತಿಬ್ರೂಯಾತ್, ಉಪಭೋಗಸ್ಥಾನತ್ವಂ ಚ ಸ್ಥಾವರಭಾವಸ್ಯ । ನ ಚ ವಯಮ್ ಉಪಭೋಗಸ್ಥಾನತ್ವಂ ಸ್ಥಾವರಭಾವಸ್ಯ ಅವಜಾನೀಮಹೇ । ಭವತು ಅನ್ಯೇಷಾಂ ಜನ್ತೂನಾಮ್ ಅಪುಣ್ಯಸಾಮರ್ಥ್ಯೇನ ಸ್ಥಾವರಭಾವಮ್ ಉಪಗತಾನಾಮ್ ಉಪಭೋಗಸ್ಥಾನಮ್ । ಚನ್ದ್ರಮಸಸ್ತು ಅವರೋಹನ್ತೋಽನುಶಯಿನಃ ನ ಸ್ಥಾವರಭಾವಮ್ ಉಪಭುಞ್ಜತೇ ಇತ್ಯಾಚಕ್ಷ್ಮಹೇ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಬೇರೆಯ ಜೀವರಿಗೆ ಆಶ್ರಯವಾಗಿರುವ ವ್ರೀಹ್ಯಾದಿಗಳಲ್ಲಿ ಅನುಶಯಿಗಳು ಸಂಬಂಧವನ್ನು ಮಾತ್ರ ಪಡೆಯುತ್ತಾರೆ, ಅವುಗಳ ಸುಖದುಃಖಗಳನ್ನು ಹೊಂದುವದಿಲ್ಲ. ಹಿಂದಿನಂತೆಯೇ (ಇದು). ಹೇಗೆ ವಾಯು, ಧೂಮ– ಮುಂತಾದವುಗಳಾಗುವವೆಂದರೆ ಅನುಶಯಿಗಳಿಗೆ ಅವುಗಳ ಸಂಬಂಧಮಾತ್ರವೋ, ಹಾಗೆಯೇ ವ್ರೀಹ್ಯಾದಿಭಾವವೂ ಹುಟ್ಟಿನಿಂದ ಸ್ಥಾವರವಾಗಿರುವವುಗಳೊಡನೆ ಸಂಬಂಧಮಾತ್ರವೇ. ಇದು ಏತರಿಂದ (ಗೊತ್ತಾಗುತ್ತದೆ) ? ಅದರಂತೆಯೇ ಇಲ್ಲಿಯೂ ಹೇಳಿರುವದರಿಂದ.[1] ಹೇಳುವಿಕೆಯು ಅದರಂತೆ ಇದೆ ಎಂದರೆ ಯಾವದು ? ಕರ್ಮವ್ಯಾಪಾರವಿಲ್ಲದೆ ಹೇಳಿರುವದು. (ಇದರ ವಿವರ): ಹೇಗೆ ಆಕಾಶಾದಿಗಳಲ್ಲಿ ಮಳೆಗರೆಯುವವರೆಗೆ ಯಾವ ಕರ್ಮವ್ಯಾಪಾರವನ್ನು (ಶ್ರುತಿಯು) ಪರಾಮರ್ಶಿಸಿಲ್ಲವೋ ಹಾಗೆಯೇ ವ್ರೀಹ್ಯಾದಿಜನ್ಮದಲ್ಲಿಯೂ (ಪರಾಮರ್ಶಿಸಿರುವದಿಲ್ಲ). ಆದ್ದರಿಂದ ಇಲ್ಲಿ ಅನುಶಯಿಗಳಿಗೆ ಸುಖದುಃಖವನ್ನು ಪಡೆಯುವದೆಂಬುದಿಲ್ಲ. ಎಲ್ಲಿಯಾದರೆ ಸುಖದುಃಖಗಳನ್ನು

---

1. ಪೂರ್ವವತ್ (ಹಿಂದಿನಂತೆ) ಎಂಬ ಸೂತ್ರಪದವು ಹಿಂದಿನಂತೆ ಸಂಬಂಧಮಾತ್ರ ಎಂಬುದಕ್ಕೂ ಹಿಂದಿನಂತೆ ಹೇಳಿರುವದರಿಂದ ಎಂಬುದಕ್ಕೂ ಅನ್ವಯವಾಗುತ್ತದೆ.

ಪಡೆಯುವರೆಂದು (ಶ್ರುತಿಯು) ಅಭಿಪ್ರಾಯಪಟ್ಟಿದೆಯೋ ಅಲ್ಲಿ 'ರಮಣೀಯ ಚರಣರಾದವರು, ಕಪೂಯಚರಣರಾದವರು' (ಛಾಂ. ೫-೧೦-೭) ಎಂದು ಪರಾಮರ್ಶಿಸಿರುತ್ತದೆ.

ಇದೂ ಅಲ್ಲದೆ ಅನುಶಯಿಗಳಿಗೆ ವ್ರೀಹ್ಯಾದಿಜನ್ಮವು ಮುಖ್ಯವೇ ಆದರೆ (ಆಗ ಆ) ವ್ರೀಹ್ಯಾದಿಗಳನ್ನು ಕತ್ತರಿಸುವಾಗ, ಕುಟ್ಟುವಾಗ, ಬೇಯಿಸುವಾಗ, ಮತ್ತು ತಿನ್ನುವಾಗ, ಅವುಗಳ ಅಭಿಮಾನಿಗಳಾದ ಅನುಶಯಿಗಳು ಅಲ್ಲಿಂದ ಹೊರಟು (ಸಾಯ)ಬೇಕಾಗುವದು. ಯಾವ ಜೀವನು ಯಾವ ಶರೀರದಲ್ಲಿ ಅಭಿಮಾನಿಯಾಗಿರುವನೋ ಅವನು ಅದಕ್ಕೆ ಹಿಂಸೆಯಾದರೆ (ಅದನ್ನು) ಬಿಟ್ಟು ಹೋಗುವನೆಂಬುದು ಪ್ರಸಿದ್ಧವು. ಆಗ ವ್ರೀಹ್ಯಾದಿಭಾವವಾದಮೇಲೆ ರೇತಃ ಸಿಗ್ಭಾವವನ್ನು ಅನುಶಯಿಗಳಿಗೆ (ಶ್ರುತಿಯು) ಹೇಳಬಾರದಾಗುವದು. ಆದ್ದರಿಂದ ಅನುಶಯಿಗಳಿಗೆ ಬೇರೆಯವರಿಗೆ ಸೇರಿದ ವ್ರೀಹ್ಯಾದಿಗಳಲ್ಲಿ ಸಂಬಂಧವು ಮಾತ್ರವೇ ಆಗುತ್ತದೆ. ಇದರಿಂದ ಜನ್‌ಧಾತುವಿಗೆ ಮುಖ್ಯಾರ್ಥವಿದ್ದಂತಾಗುವದೆಂಬುದಕ್ಕೂ ಸ್ಥಾವರಭಾವವು ಉಪಭೋಗಸ್ಥಾನವೆಂಬುದಕ್ಕೂ ಪ್ರತ್ಯುತ್ತರವನ್ನು ಹೇಳಿದಂತೆ ಆಗುವದು. ಸ್ಥಾವರಭಾವವು ಉಪಭೋಗಸ್ಥಾನವೆಂಬುದನ್ನೇನೂ ನಾವು ಅಲ್ಲಗಳೆಯುವದಿಲ್ಲ. ಪಾಪದ ಸಾಮರ್ಥ್ಯದಿಂದ ಸ್ಥಾವರಭಾವವನ್ನು ಹೊಂದಿದ ಮಿಕ್ಕ ಜೀವರಿಗೆ ಅದು ಉಪಭೋಗಸ್ಥಾನವೇ ಆಗಲಿ. ಆದರೆ ಚಂದ್ರಮಂಡಲದಿಂದ ಇಳಿದುಬಂದ ಅನುಶಯಿಗಳು ಸ್ಥಾವರಭಾವವನ್ನು ಉಪಭೋಗಿಸುವದಿಲ್ಲ ಎಂದು ಹೇಳುತ್ತೇವೆ.

**ಅಶುದ್ಧಮಿತಿ ಚೇನ್ನ ಶಬ್ದಾತ್ ॥ ೨೫ ॥**

೨೫. ಅಶುದ್ಧವು ಎಂದರೆ ಹಾಗಲ್ಲ ; ಏಕೆಂದರೆ ಶಬ್ದವಿದೆ.

## ಯಾಗವು ಅಶುದ್ಧಕರ್ಮವಲ್ಲ

(ಭಾಷ್ಯ)

೨೫೧. ಯತ್ ಪುನರುಕ್ತಮ್ ಪಶುಹಿಂಸಾದಿಯೋಗಾತ್ ಅಶುದ್ಧಮ್ ಆಧ್ವರಿಕಂ ಕರ್ಮ, ತಸ್ಯ ಅನಿಷ್ಟಮಪಿ ಫಲಮ್ ಅವಕಲ್ಪತೇ ಇತ್ಯತಃ ಮುಖ್ಯಮೇವ ಅನುಶಯಿನಾಂ ವ್ರೀಹ್ಯಾದಿಜನ್ಮಾಸ್ತು । ತತ್ರ ಗೌಣೀ ಕಲ್ಪನಾ ಅನರ್ಥಿಕಾ ಇತಿ । ತತ್ ಪರಿಹ್ರಿಯತೇ । ನ । ಶಾಸ್ತ್ರಹೇತುತ್ವಾತ್ ಧರ್ಮಾಧರ್ಮವಿಜ್ಞಾನಸ್ಯ । ಅಯಂ ಧರ್ಮಃ, ಅಯಮ್ ಅಧರ್ಮಃ ಇತಿ ಶಾಸ್ತ್ರಮೇವ ವಿಜ್ಞಾನೇ ಕಾರಣಮ್ । ಅತೀನ್ದ್ರಿಯತ್ವಾತ್ ತಯೋಃ । ಅನಿಯತದೇಶಕಾಲನಿಮಿತ್ತತ್ವಾಚ್ಚ । ಯಸ್ಮಿನ್ ದೇಶಕಾಲೇ ನಿಮಿತ್ತೇ ಚ ಯೋ

ಧರ್ಮೋಽನುಷ್ಠೀಯತೇ ಸ ಏವ ದೇಶಕಾಲನಿಮಿತ್ತಾಂತರೇಷು ಅಧರ್ಮೋ ಭವತಿ। ತೇನ ನ ಶಾಸ್ತ್ರಾತ್ ಋತೇ ಧರ್ಮಾಧರ್ಮವಿಷಯಂ ವಿಜ್ಞಾನಂ ಕಸ್ಯಚಿತ್ ಅಸ್ತಿ। ಶಾಸ್ತ್ರಾಚ್ಚ ಹಿಂಸಾನುಗ್ರಹಾದ್ಯಾತ್ಮಕೋ ಜ್ಯೋತಿಷ್ಟೋಮೋ ಧರ್ಮಃ ಇತ್ಯವಧಾರಿತಃ। ಸ ಕಥಮ್ ಅಶುದ್ಧ ಇತಿ ಶಕ್ಯತೇ ವಕ್ತುಮ್? ನನು "ನ ಹಿಂಸ್ಯಾತ್ ಸರ್ವಾ ಭೂತಾನಿ'' (?) ಇತಿ ಶಾಸ್ತ್ರಮೇವ ಭೂತವಿಷಯಾಂ ಹಿಂಸಾಮ್ ಅಧರ್ಮಃ ಇತ್ಯವಗಮಯತಿ। ಬಾಢಮ್। ಉತ್ಸರ್ಗಸ್ತು ಸಃ। ಅಯಂ ಚ ಅಪವಾದಃ ''ಅಗ್ನೀಷೋಮೀಯಂ ಪಶುಮಾಲಭೇತ'' (?) ಇತಿ, ಉತ್ಸರ್ಗಾಪವಾದಯೋಶ್ಚ ವ್ಯವಸ್ಥಿತವಿಷಯತ್ವಮ್। ತಸ್ಮಾದ್ ವಿಶುದ್ಧಂ ಕರ್ಮ ವೈದಿಕಮ್। ಶಿಷ್ಟೈರನುಷ್ಠೀಯಮಾನತ್ವಾತ್, ಅನಿಂದ್ಯಮಾನತ್ವಾಚ್ಚ। ತೇನ ನ ತಸ್ಯ ಪ್ರತಿರೂಪಂ ಫಲಂ ಜಾತಿಸ್ಥಾವರತ್ವಮ್, ನ ಚ-ಶ್ವಾದಿಜನ್ಮವದಪಿ ವ್ರೀಹ್ಯಾದಿಜನ್ಮ ಭವಿತುಮರ್ಹತಿ। ತದ್ಧಿ ಕಪೂಯಚರಣಾನ್ ಅಧಿಕೃತ್ಯ ಉಚ್ಯತೇ। ನೈವಮ್ ಇಹ ವೈಶೇಷಿಕಃ ಕಶ್ಚಿದ್ ಅಧಿಕಾರೋಽಸ್ತಿ। ಅತಃ ಚಂದ್ರಮಂಡಲಸ್ಖಲಿತಾನಾಮ್ ಅನುಶಯಿನಾಂ ವ್ರೀಹ್ಯಾದಿ ಸಂಶ್ಲೇಶಮಾತ್ರಂ ತದ್ಭಾವಃ ಇತ್ಯುಪಚರ್ಯತೇ ॥

(ಭಾಷ್ಯಾರ್ಥ)

ಇನ್ನು ಪಶುಹಿಂಸೆಯೇ ಮುಂತಾದವುಗಳ ಸಂಬಂಧವಿರುವದರಿಂದ ಯಜ್ಞಕರ್ಮವು ಅಶುದ್ಧವಾಗಿದೆ; ಅದಕ್ಕೆ ಅನಿಷ್ಟಫಲವೂ ಆಗಬಹುದಾಗಿದೆಯಾಗಿ ಅನುಶಯಿಗಳಿಗೆ ವ್ರೀಹ್ಯಾದಿಜನ್ಮವು ಮುಖ್ಯವೆಂದೇ ಆಗಲಿ, ಹೀಗಿರುವಲ್ಲಿ ಗೌಣವೆಂಬ ಕಲ್ಪನೆಯು ವ್ಯರ್ಥ- ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದಕ್ಕೆ ಪರಿಹಾರವನ್ನು ಹೇಳುತ್ತೇವೆ. ಹಾಗಲ್ಲ. ಏಕೆಂದರೆ ಧರ್ಮ, ಅಧರ್ಮ -ಎಂಬ ತಿಳಿವಳಿಕೆಗೆ ಶಾಸ್ತ್ರವೇ ಕಾರಣವಾಗಿರುತ್ತದೆ. (ಇದರ ವಿವರ): ಇದು ಧರ್ಮ, ಇದು ಅಧರ್ಮ- ಎಂದು ತಿಳಿದುಕೊಳ್ಳುವದಕ್ಕೆ ಶಾಸ್ತ್ರವೇ ಕಾರಣವು; ಏಕೆಂದರೆ ಅವು ಅತೀಂದ್ರಿಯವಾಗಿರುತ್ತವೆ. (ಅವು) ದೇಶಕಾಲನಿಮಿತ್ತಗಳ ನಿಯಮವಿಲ್ಲವಾದ್ದರಿಂದಲೂ (ಹೀಗೆಂದು ತಿಳಿಯಬೇಕು. ಇದರ ವಿವರ): ಯಾವ ದೇಶದಲ್ಲಿ, (ಯಾವ) ಕಾಲದಲ್ಲಿ, ಮತ್ತು (ಯಾವ) ನಿಮಿತ್ತದಲ್ಲಿ ಯಾವದನ್ನು ಧರ್ಮವೆಂದು ಅನುಷ್ಠಾನಮಾಡುತ್ತಾರೋ, ಅದೇ ಬೇರೆಯ ದೇಶಕಾಲನಿಮಿತ್ತಗಳಲ್ಲಿ ಅಧರ್ಮವಾಗುತ್ತದೆ.[1] ಆದ್ದರಿಂದ ಶಾಸ್ತ್ರವಿಲ್ಲದೆ ಧರ್ಮಾಧರ್ಮಗಳ ವಿಷಯಕ್ಕೆ ತಿಳಿವಳಿಕೆಯು ಯಾವನಿಗೂ ಇರುವ

1. ಶುದ್ಧದೇಶದಲ್ಲಿ ಸಾಯಂಕಾಲ, ಪ್ರಾತಃಕಾಲ -ಎಂಬುದೇ ಮುಂತಾದ ಕಾಲದಲ್ಲಿ ಜೀವನಾದಿನಿಮಿತ್ತದಲ್ಲಿ ಮಾಡಿದ ಅಗ್ನಿಹೋತ್ರಾದಿಯು ಧರ್ಮವು, ಅಶುದ್ಧವಾದ ದೇಶದಲ್ಲಿ ರಾತ್ರಿ ಸರಿಹೊತ್ತಿನಲ್ಲಿ ಮರಣಾದಿನಿಮಿತ್ತದಲ್ಲಿ ಮಾಡಿದರೆ ಅಧರ್ಮವು.

ಹಾಗಿಲ್ಲ. ಶಾಸ್ತ್ರದಿಂದಲಾದರೆ ಹಿಂಸಾನುಗ್ರಹವೇ ಮುಂತಾದ[1] ರೂಪದ ಜ್ಯೋತಿಷ್ಟೋಮವು ಧರ್ಮವೆಂದು ಗೊತ್ತಾಗಿರುವಲ್ಲಿ (ಅದು) ಅಶುದ್ಧವೆಂದು ಹೇಗೆತಾನೆ ಹೇಳುವದಕ್ಕಾದೀತು ?

(ಆಕ್ಷೇಪ) :– "ಯಾವ ಪ್ರಾಣಿಗಳನ್ನೂ ಹಿಂಸೆಮಾಡಬಾರದು" (?) ಎಂದು ಶಾಸ್ತ್ರವೇ ಪ್ರಾಣಿಗಳ ವಿಷಯದ ಹಿಂಸೆಯನ್ನು ಅಧರ್ಮವೆಂದು ತಿಳಿಸುತ್ತದೆಯಲ್ಲ !

(ಪರಿಹಾರ) :– ನಿಜ. ಆದರೆ ಇದು ಸಾಮಾನ್ಯ(ನಿಯಮ)ವು. "ಅಗ್ನಿಷ್ಟೋಮದ ಪಶುವನ್ನು ಆರ್ಪಿಸಬೇಕು" (?) ಎಂಬಿದು (ಅದಕ್ಕೆ) ಅಪವಾದವು. ಉತ್ಸರ್ಗ, ಅಪವಾದ –ಇವುಗಳಿಗೆ (ಬೇರೆಬೇರೆ) ವಿಷಯವು ಗೊತ್ತಾಗಿರುತ್ತದೆ. ಆದ್ದರಿಂದ ವೈದಿಕಕರ್ಮವು ವಿರುದ್ಧವಾಗಿರುತ್ತದೆ ; ಏಕೆಂದರೆ (ಅದನ್ನು) ಶಿಷ್ಟರು ಮಾಡುತ್ತಾರೆ, (ಅದನ್ನು) ನಿಂದಿಸುತ್ತಲೂ ಇಲ್ಲ.[2] ಆದ್ದರಿಂದ ಅದಕ್ಕೆ ಜಾತಿಸ್ಥಾವರತ್ವವು ಅನುಗುಣವಾದ ಫಲವಲ್ಲ. (ಈ) ವ್ರೀಹ್ಯಾದಿಜನ್ಮವು ನಾಯಿಯೇ ಮುಂತಾದವುಗಳ ಜನ್ಮದಂತೆ ಎಂಬುದೂ ಸರಿಯಲ್ಲ; ಏಕೆಂದರೆ ಅದು ಕಪೂಯಚರಣರಾದ (ಪಾಪಿ)ಗಳನ್ನು ಕುರಿತು ಹೇಳುತ್ತದೆ ; (ಆದರೆ) ಹಾಗೆ ಇಲ್ಲಿ ವಿಶೇಷವಾಗಿ ಯಾರನ್ನೂ ಕುರಿತು ಹೇಳಿಲ್ಲ. ಆದ್ದರಿಂದ ಚಂದ್ರಮಂಡಲದಿಂದ ಜಾರಿಬಿದ್ದ ಅನುಶಯಿಗಳಿಗೆ ವ್ರೀಹ್ಯಾದಿಗಳ ಸಂಬಂಧಮಾತ್ರವೇ ಆ (ವ್ರೀಹ್ಯಾದಿ)ಭಾವವು ಎಂದು ಉಪಚಾರಕ್ಕೆ ಹೇಳಿದೆ (ಎಂದಾಯಿತು).

**ರೇತಃಸಿಗ್ಯೋಗೋಽಥ ॥ ೨೬ ॥**

೨೬. ಆ ಬಳಿಕ ರೇತಃಸಿಗ್ಯೋಗ(ವಾಗುವದು).

## ವ್ರೀಹ್ಯಾದಿಗಳ ಸಂಬಂಧಮಾತ್ರವೇ ಎಂಬುದಕ್ಕೆ ಕಾರಣಾಂತರ

(ಭಾಷ್ಯ)

೨೫೩. ಇತಶ್ಚ ವ್ರೀಹ್ಯಾದಿಸಂಶ್ಲೇಷಮಾತ್ರಂ ತದ್ಭಾವಃ। ಯತ್ಕಾರಣಂ ವ್ರೀಹ್ಯಾದಿಭಾವಸ್ಯ ಅನನ್ತರಮ್ ಅನುಶಯಿನಾಂ ರೇತಃಸಿಗ್ಭಾವ ಆಮ್ನಾಯತೇ "ಯೋ ಯೋ ಹ್ಯನ್ನಮತ್ತಿ ಯೋ ರೇತಃ ಸಿಞ್ಚತಿ ತದ್ಭೂಯ ಏವ ಭವತಿ" (ಛಾ. ೫–೧೦–೬) ಇತಿ। ನ ಚ ಅತ್ರ ಮುಖ್ಯೋ ರೇತಃಸಿಗ್ಭಾವಃ ಸಂಭವತಿ

---

1. ಪ್ರಾಣಿಗಳ ಹಿಂಸೆಯಿಂದ, ದೇವತೆಗಳಿಗೂ ಬ್ರಾಹ್ಮಣರಿಗೂ ಉಪಕಾರವಿದೆ.
2. ಶಾಸ್ತ್ರದಲ್ಲಿ ಶ್ಯೇನಾದಿಗಳನ್ನು ನಿಷೇಧಿಸಿರುವಂತೆ ಇದನ್ನು ನಿಷೇಧಿಸಿಲ್ಲ ; ಶಿಷ್ಟರು ನಿಂದಿಸುವದೂ ಇಲ್ಲ.

ಚಿರಜಾತೋ ಹಿ ಪ್ರಾಪ್ತಯೌವನೋ ರೇತಃಸಿಗ್ಭವತಿ। ಕಥಮಿವ ಅನುಪ ಚರಿತತದ್ಭಾವಮ್ ಅದ್ಯಮಾನಾನ್ನಾನುಗತೋಽನುಶಯೀ ಪ್ರತಿಪದ್ಯತೇ ? ತತ್ರ ತಾವತ್ ಅವಶ್ಯಂ ರೇತಃಸಿಗ್ಯೋಗ ಏವ ರೇತಃಸಿಗ್ಭಾವೋಽಭ್ಯುಪ ಗನ್ತವ್ಯಃ। ತದ್ವತ್ ವ್ರೀಹ್ಯಾದಿಭಾವೋಽಪಿ ವ್ರೀಹ್ಯಾದಿಯೋಗ ಏವ ಇತ್ಯ ವಿರೋಧಃ ॥

(ಭಾಷ್ಯಾರ್ಥ)

ಇದರಿಂದಲೂ ವ್ರೀಹ್ಯಾದಿಗಳ ಸಂಬಂಧಮಾತ್ರವೇ ಆ (ವ್ರೀಹ್ಯಾದಿ) ಭಾವವು. ಏಕೆಂದರೆ ವ್ರೀಹ್ಯಾದಿಭಾವವುಂಟಾದ ಬಳಿಕ ಅನುಶಯಿಗಳಿಗೆ ರೇತಃ ಸಿಗ್ಭಾವವನ್ನು (ಶ್ರುತಿಯಲ್ಲಿ) ಪಠಿಸಿದೆ. "ಯಾವಯಾವನು ಅನ್ನವನ್ನು ತಿನ್ನುತ್ತಾನೋ ಯಾವನು ತೇಜಸ್ಸನ್ನು ಸೇಚನಮಾಡುತ್ತಾನೋ ಅವನ ಭಾವದವನೇ ಆಗುತ್ತಾನೆ" (ಛಾ. ೫-೧೦-೬) ಎಂದು (ಹೇಳಿದೆ). ಇಲ್ಲಿ ಮುಖ್ಯವಾದ ರೇತಃಸಿಗ್ಭಾವವು ಸಂಭವಿಸುವದಿಲ್ಲ. ಹುಟ್ಟಿ ಬಹಳ ಕಾಲವಾಗಿ ಯೌವನವನ್ನು ಪಡೆದುಕೊಂಡವನಲ್ಲವೆ, ರೇತಸ್ಸನ್ನು ಸೇಚನಮಾಡುವವ ನಾಗುತ್ತಾನೆ ? ತಿನ್ನುವ ಅನ್ನವನ್ನು ಅನುಸರಿಸಿಕೊಂಡು ಬಂದಿರುವ ಅನುಶಯಿ ಯು ಹೇಗೆತಾನೆ ಅನುಪಚರಿತವಾಗಿ (ಮುಖ್ಯವಾದ) ಆ (ರೇತಸ್ಸೇಕಮಾಡು ವವನ) ಭಾವವನ್ನು ಪಡೆದುಕೊಂಡಾನು ? ಅಲ್ಲಂತೂ ಅವಶ್ಯವಾಗಿ ರೇತಸ್ಸೇಚನ ಕರ್ತನ ಸಂಬಂಧವೇ ರೇತಃಸಿಗ್ಭಾವವೆಂದು ಒಪ್ಪಬೇಕಾಯಿತು. ಅದರಂತೆ ವ್ರೀಹ್ಯಾದಿಭಾವವೂ ವ್ರೀಹ್ಯಾದಿಗಳ ಸಂಬಂಧವೇ ಎಂಬುದು ಅವಿರುದ್ಧವಾಗಿದೆ.

**ಯೋನೇಃ ಶರೀರಮ್ ॥ ೨೭ ॥**

೨೭. ಯೋನಿಯಿಂದ ಶರೀರ(ವುಂಟಾಗುತ್ತದೆ).

## ಅನುಶಯಿಗಳಿಗೆ ವ್ರೀಹ್ಯಾದಿಶರೀರವಾಗುವದಿಲ್ಲವೆಂಬುದಕ್ಕೆ ಹೇತು

(ಭಾಷ್ಯ)

೨೫೩. ಅಥ ರೇತಃಸಿಗ್ಭಾವಾನನ್ತರಂ ಯೋನೌ ನಿಷಿಕ್ತೇ ರೇತಸಿ ಯೋನೇರಧಿ ಶರೀರಮ್ ಅನುಶಯಫಲೋಪಭೋಗಾಯ ಜಾಯತೇ ಇತ್ಯಾಹ ಶಾಸ್ತ್ರಮ್ "ತದ್ಯ ಇಹ ರಮಣೀಯಚರಣಾಃ" (ಛಾ. ೫-೧೦-೭) (ಇತ್ಯಾದಿ) ತಸ್ಮಾದಪಿ ಅವಗಮ್ಯತೇ ನಾವರೋಹೇ ವ್ರೀಹ್ಯಾದಿಭಾವಾವಸರೇ ತಚ್ಛರೀರಮೇವ ಸುಖದುಃಖಾನ್ವಿತಂ ಭವತೀತಿ। ತಸ್ಮಾತ್ ವ್ರೀಹ್ಯಾದಿ ಸಂಶ್ಲೇಷಮಾತ್ರಮ್ ಅನುಶಯಿನಾಂ ತಜ್ಜನ್ಮ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಬಳಿಕ ರೇತಃಸಿಗ್ಭಾವವಾದಮೇಲೆ ಯೋನಿಯಲ್ಲಿ ರೇತಸ್ಸು ನಿಷಿಕ್ತವಾಗಲು ಯೋನಿಯಲ್ಲಿ ಶರೀರವು ಅನುಶಯಿಗಳಿಗೆ ಅನುಶಯದ ಫಲವನ್ನು ಉಪಭೋಗಿಸುವದಕ್ಕಾಗಿ ಉಂಟಾಗುತ್ತದೆ ಎಂದು "ಅವರಲ್ಲಿ ಯಾರು ಇಲ್ಲಿ ರಮಣೀಯಚರಣರೋ....." (ಛಾಂ. ೫-೧೦-೭) ಮುಂತಾದ ಶಾಸ್ತ್ರವು ಹೇಳುತ್ತದೆ. ಆದ್ದರಿಂದಲೂ ಇಳಿಯುವಾಗ ವ್ರೀಹ್ಯಾದಿಭಾವವಾಗುವ ಕಾಲದಲ್ಲಿ ಅವರ ಶರೀರವೇ ಸುಖದುಃಖಾನ್ವಿತವಾಗಿರುವದಿಲ್ಲ ಎಂದು ನಿಶ್ಚಯವಾಗುತ್ತದೆ. ಆದ್ದರಿಂದ ವ್ರೀಹ್ಯಾದಿಸಂಬಂಧಮಾತ್ರವೇ ಅನುಶಯಿಗಳಿಗೆ ಆ (ವ್ರೀಹ್ಯಾದಿ)ಭಾವವು ಎಂದು ಸಿದ್ಧವಾಯಿತು.

---

# ಅಧಿಕರಣಗಳ ಸಾರ

ಈ ಪಾದದಲ್ಲಿ ವೈರಾಗ್ಯೋತ್ಪತ್ತಿಗಾಗಿ ಜೀವರುಗಳ ಗತ್ಯಾಗತಿವಿಚಾರ ವನ್ನು ಮಾಡಿರುತ್ತದೆ.

## ೧. ತದನಂತರಪ್ರತಿಪತ್ತ್ಯಧಿಕರಣ

**ಸಂಶಯ :** ಪಂಚಾಗ್ನಿವಿದ್ಯೆಯ ವಾಕ್ಯವು ವಿಷಯ. ಜೀವನು ಸಾಯುವಾಗ ಮುಂದಿನ ದೇಹಕ್ಕೆ ಬೀಜವಾಗಿರುವ ಭೂತಸೂಕ್ಷ್ಮಗಳನ್ನು ತೆಗೆದುಕೊಂಡೇ ಹೋಗು ತ್ತಾನೊ, ಇಲ್ಲವೊ ?

**ಪೂರ್ವಪಕ್ಷ :** ಚಕ್ಷುರಾದಿಗಳನ್ನು ತೆಗೆದುಕೊಂಡುಹೋಗುತ್ತಾನೆಂದು ಶ್ರುತಿ ಯಲ್ಲಿರುವಂತೆ ಭೂತಮಾತ್ರೆಗಳನ್ನು ತೆಗೆದುಕೊಂಡು ಹೋಗುತ್ತಾನೆಂದು ಹೇಳಿರುವದಿಲ್ಲ. ಭೂತಮಾತ್ರೆಗಳು ಎಲ್ಲಾ ಕಡೆಯಲ್ಲಿಯೂ ಸುಲಭವಾಗಿ ಸಿಕ್ಕುತ್ತವೆ. ಆದ್ದರಿಂದ ಭೂತ ಸೂಕ್ಷ್ಮಗಳನ್ನು ತೆಗೆದುಕೊಳ್ಳದೆಯೇ ಹೋಗುತ್ತಾನೆ.

**ಸಿದ್ಧಾಂತ :** ಜೀವನು ದೇಹಾಂತರಕ್ಕೆ ಭೂತಮಾತ್ರೆಗಳನ್ನು ತೆಗೆದುಕೊಂಡೇ ಹೋಗುತ್ತಾನೆ. ಏಕೆಂದರೆ ಇಲ್ಲಿ ಪ್ರಶ್ನೆಯಲ್ಲಿಯೂ ಉತ್ತರದಲ್ಲಿಯೂ ಅಪ್ಪು ಪುರುಷಶಬ್ದ ವಾಚ್ಯವಾಗುವದು ಹೇಗೆಂಬುದನ್ನೇ ಕೇಳಿದೆ, ಹೇಳಿದೆ. ಇಲ್ಲಿ ಹೇಳಿರುವ ಅಪ್ಪು ಪಂಚೀಕೃತ ವಾಗಿರುವದರಿಂದಲೂ ಪ್ರಾಣಗಳು ಉತ್ಕ್ರಾಂತಿಯನ್ನು ಹೇಳುವ ಶ್ರುತಿಯು ಅವುಗಳಿಗೆ ಆಶ್ರಯವಾಗಿರುವ ಭೂತಗಳನ್ನು ಬಯಸುವದರಿಂದಲೂ ಭೂತಮಾತ್ರೆಗಳನ್ನು ತೆಗೆದು ಕೊಂಡುಹೋಗುತ್ತಾನೆ ಪ್ರಥಮಾಗ್ನಿಯಲ್ಲಿ ಹೇಳಿರುವ ಶ್ರದ್ಧೆಯೂ ಅಪ್ಪೇ ; ಆದ್ದರಿಂದ ವಿರೋಧವಿಲ್ಲ. ಇಲ್ಲಿ ಹೇಳಿರುವ ಇಷ್ಟಾದಿಕಾರಿಗಳೇ ಜೀವರು. ಅವರನ್ನು ದೇವತೆಗಳು ಭಕ್ಷಿಸುತ್ತಾರೆಂದು ಹೇಳಿರುವದು ಗೌಣಪ್ರಯೋಗ ; ದೇವತೆಗಳಿಗೆ ಉಪಭೋಗ್ಯರಾಗು ತ್ತಾರೆ ಎಂದರ್ಥ. ಇಷ್ಟಾದಿಕಾರಿಗಳೂ ಅನಾತ್ಮವಿದರಾದ್ದರಿಂದ ಹೀಗೆ ಹೇಳಿರುವದು ಯುಕ್ತವಾಗಿದೆ. ಆದ್ದರಿಂದ ಜೀವರು ದೇಹಾಂತರಕ್ಕೆ ಭೂತಸೂಕ್ಷ್ಮಪರಿವೇಷ್ಟಿತರಾಗಿಯೇ ಹೊರಡುತ್ತಾರೆಂದು ಸಿದ್ಧವಾಯಿತು.

## ೨. ಕೃತಾತ್ಯಯಾಧಿಕರಣ

**ಸಂಶಯ :** ಇಷ್ಟಾದಿಕಾರಿಗಳು ಧೂಮಾದಿಮಾರ್ಗದಿಂದ ಚಂದ್ರಮಂಡಲಕ್ಕೆ ಹೋಗಿ ಕರ್ಮವು ಕ್ಷಯವಾಗಲು ಮತ್ತೆ ಭೂಲೋಕಕ್ಕೆ ಇಳಿದುಬರುತ್ತಾರೆಂದು (ಛಾಂ. ೫-೧೦-೫) ಶ್ರುತಿಯಲ್ಲಿದೆ. ಅಲ್ಲಿ ಕರ್ಮವೆಲ್ಲವನ್ನೂ ಉಪಭೋಗಿಸಿ ಇಳಿಯುತ್ತಾರೊ, ಅಥವಾ ಅನುಶಯವೆಂಬ ಕರ್ಮಶೇಷಸಹಿತವಾಗಿ ಇಳಿಯುತ್ತಾರೊ ?

**ಪೂರ್ವಪಕ್ಷ :** 'ಯಾವತ್ಸಂಪಾತಮುಷಿತ್ವಾ' (ಕರ್ಮಾಶಯವಿರುವವರೆಗೂ ಇದ್ದು) ಎಂದು ಶ್ರುತಿಯಲ್ಲಿರುವದರಿಂದಲೂ ಬೃಹದಾರಣ್ಯಕದಲ್ಲಿ ಮಾಡಿದ ಕರ್ಮವನ್ನೆಲ್ಲ ಮುಗಿಸಿ

ಇಳಿಯುತ್ತಾರೆಂದು ಸ್ಪಷ್ಟವಾಗಿ ಹೇಳಿರುವದರಿಂದಲೂ ಸಾಯುವ ಕಾಲದಲ್ಲಿ ಅನಾರಬ್ಧ ಕರ್ಮಕ್ಕೆ ಅಭಿವ್ಯಂಜಕವಾಗಿರುವದರಿಂದಲೂ ಎಲ್ಲಾ ಕರ್ಮಗಳನ್ನೂ ಅನುಭವಿಸಿ ಇಳಿಯುತ್ತಾರೆಂದು ನಿಶ್ಚಯಿಸಬೇಕು.

ಸಿದ್ಧಾಂತ : ತಾವು ಮಾಡಿದ ಕರ್ಮವು ಉಳಿಯುಳ್ಳವರಾಗಿಯೇ ಇಳಿಯುತ್ತಾರೆ. ಏಕೆಂದರೆ ಶ್ರುತಿಯು ಪುಣ್ಯಪಾಪಕರ್ಮವನ್ನು ಮಾಡಿದವರಿಗೆ ಒಳ್ಳೆಯ ಕೆಟ್ಟ ಯೋನಿಗಳು ದೊರೆಯುವವೆಂದು ಹೇಳುತ್ತದೆ. ಸ್ಮೃತಿಯಲ್ಲಿಯೂ ಕರ್ಮಶೇಷವು ಉಳಿದಿರುವವೆಂದು ಹೇಳಿದೆ. ಚಂದ್ರಮಂಡಲದಲ್ಲಿ ವಿರುದ್ಧಫಲವುಳ್ಳ ಎಲ್ಲಾ ಕರ್ಮಗಳ ಫಲವನ್ನು ಅನುಭವಿಸುವದೆಂಬುದು ಅಸಾಧ್ಯ. ಶ್ರುತ್ಯಂತರದಲ್ಲಿ ಹೇಳಿರುವ 'ಎಲ್ಲಾ ಕರ್ಮಗಳನ್ನು ಅನುಭವಿಸಿ' ಎಂಬ ವಾಕ್ಯಕ್ಕೆ ಅನುಭವಿಸಬೇಕಾದ ಕರ್ಮಫಲಗಳನ್ನು ಎಂದರ್ಥ. ಮರಣಕಾಲದಲ್ಲಿ ಎಲ್ಲಾ ಕರ್ಮಗಳೂ ಅಭಿವ್ಯಕ್ತವಾಗುವದಾಗಿಲ್ಲ, ಏಕೆಂದರೆ ವಿರುದ್ಧಫಲಗಳುಳ್ಳ ಎಲ್ಲಾ ಕರ್ಮಗಳೂ ಒಂದೇ ಕಾಲದಲ್ಲಿ ಅಭಿವ್ಯಕ್ತಿಯಾಗುವದಕ್ಕೆ ಅವಕಾಶವಿಲ್ಲದ್ದರಿಂದ ಪ್ರಬಲವಾದ ಕರ್ಮವು ಮಾತ್ರ ಅಭಿವ್ಯಕ್ತವಾಗುತ್ತದೆ ಎನ್ನಬೇಕಾಗಿದೆ. ಶ್ರುತಿಯಲ್ಲಿ ಹೇಳಿರುವ ಚರಣವೇ ಬೇರೆ, ಕರ್ಮವೇ ಬೇರೆ ಎಂಬುದು ಸರಿಯಲ್ಲ; ಅದು ಅನುಶಯಕ್ಕೆ ಉಪಲಕ್ಷಣವೆಂದೋ ವಾಚಕವೆಂದೋ ಅರ್ಥಮಾಡಬಹುದಾಗಿದೆ.

## ೩. ಅನಿಷ್ಟಾದಿಕಾರ್ಯಾಧಿಕರಣ

ಸಂಶಯ : ಇಷ್ಟಾದಿಗಳನ್ನು ಮಾಡದ ಪಾಪಿಗಳೂ ಚಂದ್ರಲೋಕಕ್ಕೆ ಹೋಗುವರೋ, ಇಲ್ಲವೋ ?

ಪೂರ್ವಪಕ್ಷ : ಅವರೂ ಚಂದ್ರಲೋಕಕ್ಕೆ ಹೋಗುತ್ತಾರೆ. ಏಕೆಂದರೆ ಕೌಷೀತಕ್ಯುಪನಿಷತ್ತಿನಲ್ಲಿ ಈ ಲೋಕವನ್ನು ಬಿಟ್ಟು ತೆರಳುವರೆಲ್ಲರೂ ಚಂದ್ರಲೋಕಕ್ಕೇ ಹೋಗುತ್ತಾರೆಂದಿದೆ. ಚಂದ್ರಪ್ರಾಪ್ತಿಯಿಲ್ಲದೆ ಹೊಸದೇಹವೂ ಉಂಟಾಗಲಾರದು. ಏಕೆಂದರೆ ಐದು ಆಹುತಿಗಳಾಗಬೇಕೆಂದು ಶ್ರುತಿಯಲ್ಲಿ ನಿಯಮವಿದೆ ; ಚಂದ್ರಪ್ರಾಪ್ತಿಯಿಲ್ಲದೆ ಇದ್ದರೆ ಆಹುತಿ ಸಂಖ್ಯೆಯು ಕಡಿಮೆಯಾಗುತ್ತದೆ. ಇಷ್ಟಾದಿಕಾರಿಗಳಲ್ಲದವರಿಗೂ ಚಂದ್ರಪ್ರಾಪ್ತಿಯೆಂಬ ಸದ್ಗತಿಯಾಗುವದು ಯುಕ್ತವಲ್ಲವೆಂದು ಶಂಕಿಸುವದಾಗಿಲ್ಲ ; ಏಕೆಂದರೆ ಪಾಪಿಗಳಿಗೆ ಆ ಲೋಕದಲ್ಲಿ ಭೋಗವಾಗುವದಿಲ್ಲ.

ಸಿದ್ಧಾಂತ : ಇಷ್ಟಾದಿಕಾರಿಗಳಲ್ಲದವರು ಚಂದ್ರಲೋಕಕ್ಕೆ ಹೋಗುವದಿಲ್ಲ. ಏಕೆಂದರೆ ಅವರಿಗೆ ಅಲ್ಲಿ ಭೋಗವಾಗದೆ ಇರುವದರಿಂದ ಅವರು ಅಲ್ಲಿಗೆ ಹೋಗುವದು ವ್ಯರ್ಥ. ಅವರು ಯಮಲೋಕದಲ್ಲಿ ಯಾತನೆಗಳನ್ನು ಅನುಭವಿಸಿ ಈ ಲೋಕಕ್ಕೆ ಇಳಿಯುತ್ತಾರೆಂದು ಶ್ರುತಿ ಹೇಳುತ್ತದೆ ; ಹಾಗೆಂದು ಸ್ಮೃತಿಯಿದೆ. ಯಮನ ಅಧೀನವಾಗಿರುವ ಚಿತ್ರಗುಪ್ತಾದಿಗಳ ಆಳ್ವಿಕೆಯಲ್ಲಿರುವ ನರಕಗಳನ್ನು ಪುರಾಣಗಳಲ್ಲಿ ವರ್ಣಿಸಿದೆ. ವಿದ್ಯಾಕರ್ಮಗಳ ಲೋಕಕ್ಕಿಂತ ಬೇರೆಯಾದ ಮತ್ತೆ ಮತ್ತೆ ಹುಟ್ಟಿಸಾಯುವ ಕ್ಷುದ್ರಜಂತುಗಳ ಜನ್ಮವು ಪಾಪಿಗಳಿಗೆ ಆಗುವದೆಂದು (ಛಾ. ೫–೧೦–೮) ಈ ಶ್ರುತಿಯಲ್ಲಿರುವದರಿಂದಲೂ ಅದರಿಂದಲೇ ಸ್ವರ್ಗಲೋಕವು ತುಂಬದೆ ಇರುವದೆಂದೂ ಹೇಳಿರುವದರಿಂದಲೂ ಈ ಪಕ್ಷವೇ ಸರಿ. ಆಹುತಿ ಸಂಖ್ಯೆಯು ಮನುಷ್ಯಜನ್ಮವನ್ನು ಪಡೆಯುವವರಿಗಾಗಿ ಹೇಳಿದ್ದು ; ಆಹುತಿಸಂಖ್ಯೆಯ ನಿಯಮವಿಲ್ಲದೆ ಹುಟ್ಟಿದವರ ದೃಷ್ಟಾಂತಗಳು ಇತಿಹಾಸದಲ್ಲಿದೆ ; ಸ್ವೇದಜ ಉದ್ಭಿಜ್ಜ –ಈ ಪ್ರಾಣಿಗಳು ಸ್ತ್ರೀಪುರುಷರ ಸಂಯೋಗವಿಲ್ಲದೆಯೇ ಹುಟ್ಟುವದು ಕಂಡೂ ಇದೆ. ಆದ್ದರಿಂದ ಪಾಪಿಗಳಿಗೆ ಚಂದ್ರಲೋಕಪ್ರಾಪ್ತಿಯಿಲ್ಲವೆಂಬುದೇ ಸರಿ.

# ೪. ಸಾಭಾವ್ಯಾಪತ್ತ್ಯಧಿಕರಣ

**ಸಂಶಯ :** ಚಂದ್ರಲೋಕದಿಂದ ಇಳಿಯುವ ಅನುಶಯಿಗಳು ಆಕಾಶಾದಿಗಳ ಸ್ವರೂಪವೇ ಆಗುವರೊ, ಅವುಗಳ ಸಾದೃಶ್ಯವನ್ನು ಮಾತ್ರ ಹೊಂದುವರೊ ?

**ಪೂರ್ವಪಕ್ಷ :** ಶ್ರುತಿಯಲ್ಲಿ ವಾಯುವಾಗುತ್ತಾನೆ- ಧೂಮವಾಗುತ್ತಾನೆ –ಎಂದು ಮುಂತಾಗಿ ಹೇಳಿರುವದರಿಂದ ಆಕಾಶಾದಿಸ್ವರೂಪವೇ ಆಗುತ್ತಾರೆಂಬುದು ಯುಕ್ತ. ಮುಖ್ಯಾರ್ಥವನ್ನು ಬಿಟ್ಟು ಲಕ್ಷಣಾರ್ಥವನ್ನು ತೆಗೆದುಕೊಳ್ಳುವದು ನ್ಯಾಯವಲ್ಲ.

**ಸಿದ್ಧಾಂತ :** ಆಕಾಶಾದಿಗಳ ಸಾದೃಶ್ಯವನ್ನೇ ಹೊಂದುತ್ತಾರೆ. ಏಕೆಂದರೆ ಒಂದು ಪದಾರ್ಥವು ಇನ್ನೊಂದರ ರೂಪವನ್ನು ಪಡೆಯುತ್ತದೆ ಎಂಬುದು ಮುಖ್ಯವೃತ್ತಿಯಿಂದ ಹೊಂದುವದಿಲ್ಲ. ಆಕಾಶಸ್ವರೂಪವನ್ನು ಪಡೆದರೆ ವಾಯ್ವಾದಿಕ್ರಮದಿಂದ ಇಳಿಯುವ ರೆಂಬುದು ಹೊಂದುವದಿಲ್ಲ ; ಆಕಾಶದೊಡನೆ ನಿತ್ಯಸಂಬಂಧವಿರುವದರಿಂದ ಸಾದೃಶ್ಯವೇ ಸಂಬಂಧವೆಂದು ತಿಳಿಯಬೇಕಾಗುತ್ತದೆ. ಇಲ್ಲಿ ಮುಖ್ಯಾರ್ಥವು ಹೊಂದುವದಿಲ್ಲವಾದ್ದರಿಂದ ಲಕ್ಷಣಾರ್ಥವನ್ನು ತೆಗೆದುಕೊಳ್ಳುವದು ಅಯುಕ್ತವಲ್ಲ.

# ೫. ನಾತಿಚಿರಾಧಿಕರಣ

**ಸಂಶಯ:–** ಆಕಾಶಾದಿಸಾದೃಶ್ಯವನ್ನು ಹೊಂದಿ ಬಹುಕಾಲವಿರುವರೊ, ಸ್ವಲ್ಪ ಸ್ವಲ್ಪ ಕಾಲವಿರುವರೊ ?

**ಪೂರ್ವಪಕ್ಷ :** ಯಾವ ನಿಯಮವೂ ಇಲ್ಲ; ಏಕೆಂದರೆ ನಿಯಮವನ್ನು ಹೇಳುವ ಶಾಸ್ತ್ರವಚನವಿಲ್ಲ.

**ಸಿದ್ಧಾಂತ :** ವ್ರೀಹ್ಯಾದಿಭಾವವನ್ನು ಹೊಂದಿದಮೇಲೆ ಅಲ್ಲಿಂದ ಬಿಟ್ಟುಬರುವದು ಬಹಳ ಕಷ್ಟವೆಂದು ಹೇಳಿರುವದರಿಂದ ಅಲ್ಲಿ ದೀರ್ಘಕಾಲವಿರುತ್ತಾರೆಂದು ಶ್ರುತಿಯು ಹೇಳಿದಂತೆ ಆಗಿದೆ. ಆದ್ದರಿಂದ ಅದಕ್ಕೆ ಪೂರ್ವದಲ್ಲಿ ಸ್ವಲ್ಪ ಸ್ವಲ್ಪ ಕಾಲವೇ ಇದ್ದು ಇಳಿಯುತ್ತಾರೆಂದು ಸಿದ್ಧವಾಗುತ್ತದೆ.

# ೬. ಅನ್ಯಾಧಿಷ್ಠಿತಾಧಿಕರಣ

**ಸಂಶಯ :** ವ್ರೀಹ್ಯಾದಿಭಾವವನ್ನು ಹೊಂದಿದವರು ಸ್ಥಾವರಜನ್ಮವನ್ನೇ ಪಡೆದು ಸ್ಥಾವರಸುಖದುಃಖಗಳನ್ನು ಅನುಭವಿಸುತ್ತಾರೊ, ಬೇರೆಯವರ ಶರೀರದಲ್ಲಿ ಸಂಬಂಧ ಮಾತ್ರವನ್ನು ಹೊಂದಿರುತ್ತಾರೊ ?

**ಪೂರ್ವಪಕ್ಷ :** 'ಇತಿ ಜಾಯಂತೇ' ಎಂದು ಶ್ರುತಿಯಲ್ಲಿರುವದರಿಂದ ಜನ್‌ಧಾತುವಿಗೆ ಮುಖ್ಯಾರ್ಥವನ್ನು ಇಟ್ಟುಕೊಳ್ಳುವದು ಯುಕ್ತವಾಗಿರುತ್ತದೆ. ಸ್ಥಾವರಜನ್ಮವೂ ಉಪಭೋಗಸ್ಥಾನವೆಂದು ಶ್ರುತಿಯಲ್ಲಿದೆ; ಇಷ್ಟಾದಿಗಳಲ್ಲಿ ಪಶುಹಿಂಸಾದಿಗಳು ಇರುವದರಿಂದ ಅನಿಷ್ಟಫಲವೂ ಅವಕ್ಕೆ ಆಗಬಹುದಾಗಿದೆ. ಆದ್ದರಿಂದ ಶ್ವಯೋನಿಯೇ ಮುಂತಾದವುಗಳನ್ನು ಶ್ರುತಿಯಲ್ಲಿ ಹೇಳಿರುವಂತೆ ಇಲ್ಲಿಯೂ ಮುಖ್ಯಜನ್ಮವೆಂದು ಹೇಳಿದೆಯೆನ್ನುವದು ಯುಕ್ತ.

ಸಿದ್ಧಾಂತ: ಇಲ್ಲಿಯೂ ವ್ರೀಹ್ಯಾದಿಗಳ ಸಂಬಂಧಮಾತ್ರವನ್ನೇ ಒಪ್ಪಬೇಕು. ಏಕೆಂದರೆ ಶ್ರುತಿಯಲ್ಲಿ ಯಾವ ಕರ್ಮದ ವ್ಯಾಪಾರವೂ ಇಲ್ಲದೆ ಆಕಾಶಾದಿಭಾವವನ್ನು ಪಡೆಯುವರೆಂದು ಹೇಗೆ ಹಿಂದೆ ಹೇಳಿದೆಯೋ ಇಲ್ಲಿಯೂ ಹಾಗೆಯೇ ಹೇಳುತ್ತದೆ. ಸುಖದುಃಖಗಳನ್ನೇ ಪಡೆಯುವರೆಂದು ವಿವಕ್ಷಿತವಾಗಿರುವಲ್ಲಿ ರಮಣೀಯಚರಣರು ಎಂದು ಮುಂತಾಗಿ ಕರ್ಮವ್ಯಾಪಾರವನ್ನು ಶ್ರುತಿ ಹೇಳುತ್ತದೆ. ವ್ರೀಹ್ಯಾದಿಶರೀರವನ್ನೇ ಅನುಶಯಿಗಳು ಪಡೆದುಕೊಂಡರೆ ಅವುಗಳನ್ನು ಕತ್ತರಿಸುವದು, ಕುಟ್ಟುವದು, ತಿನ್ನುವದು– ಮುಂತಾದ ಸಂದರ್ಭಗಳಲ್ಲಿ ಅವರು ಆ ಶರೀರಗಳನ್ನು ಬಿಟ್ಟು ಹೊರಟೇಹೋಗಬೇಕಾಗುವದು. ಮುಂದೆ ರೇತಃಸೇಕವನ್ನು ಮಾಡುವ ಪುರುಷನ ಸಾದೃಶ್ಯವನ್ನು ಹೊಂದುತ್ತಾರೆಂದು ಶ್ರುತಿ ಹೇಳುವದು ಯುಕ್ತವಾಗುವದಿಲ್ಲ. ಇಷ್ಟಾದಿಕರ್ಮವು ಅಶುದ್ಧವೆಂಬುದು ಸರಿಯಲ್ಲ. ಏಕೆಂದರೆ ಶಾಸ್ತ್ರವೇ ಅದನ್ನು ಧರ್ಮವೆನ್ನುತ್ತದೆ; ಶಿಷ್ಟರೂ ಅದನ್ನು ಆಚರಣೆಯಲ್ಲಿಟ್ಟುಕೊಂಡಿರುತ್ತಾರೆ. ಮುಂದೆ ವ್ರೀಹ್ಯಾದಿಗಳನ್ನು ತಿಂದ ರೇತಃಸೇಚಕ ಪುರುಷನ ಸಂಬಂಧವನ್ನು ಪಡೆದು ಸ್ತ್ರೀಯೋನಿಯಲ್ಲಿ ಶರೀರವನ್ನು ಪಡೆಯುತ್ತಾರೆಂದು ಹೇಳಿರುವದೂ ಇದಕ್ಕೆ ಬಲವನ್ನು ಕೊಡುತ್ತದೆ. ಆದ್ದರಿಂದ ಇಷ್ಟಾದಿಕಾರಿಗಳಾದ ಅನುಶಯಿಗಳಿಗೆ ವ್ರೀಹ್ಯಾದಿಸಂಬಂಧವೇ ವ್ರೀಹ್ಯಾದಿಜನ್ಮವೆಂದು ಸಿದ್ಧವಾಯಿತು.

---

# ಮೂರನೆಯ ಅಧ್ಯಾಯ - ಎರಡನೆಯ ಪಾದ

(ಆತ್ಮಸ್ವರೂಪನಿರ್ಧಾರಣ)

## ೧. ಸಂಧ್ಯಾಧಿಕರಣ (ಸೂ. ೧-೬)

(ಸ್ವಪ್ನವು ಮಾಯಾಮಾತ್ರ)

**ಸನ್ಧ್ಯೇ ಸೃಷ್ಟಿರಾಹ ಹಿ ॥ ೧ ॥**

೧. ಸಂಧ್ಯದಲ್ಲಿ ಸೃಷ್ಟಿ(ಯು ಸತ್ಯವಾಗಿ ಆಗುತ್ತದೆ). ಏಕೆಂದರೆ (ಶ್ರುತಿಯು ಹಾಗೆಂದು) ಹೇಳುತ್ತದೆ.

### ಪೂರ್ವಪಕ್ಷ: ಸ್ವಪ್ನದಲ್ಲಿ ನಿಜವಾದ ಸೃಷ್ಟಿಯಾಗುತ್ತದೆ

(ಭಾಷ್ಯ)

೨೫೪. ಅತಿಕ್ರಾನ್ತೇ ಪಾದೇ ಪಞ್ಚಾಗ್ನಿವಿದ್ಯಾಮ್ ಉದಾಹೃತ್ಯ ಜೀವಸ್ಯ ಸಂಸಾರಗತಿಪ್ರಭೇದಃ ಪ್ರಪಞ್ಚಿತಃ । ಇದಾನೀಂ ತು ತಸ್ಯೈವ ಅವಸ್ಥಾಭೇದಃ ಪ್ರಪಞ್ಚ್ಯತೇ। ಇದಮಾಮನನ್ತಿ "ಸ ಯತ್ರ ಪ್ರಸ್ವಪಿತಿ" (ಬೃ. ೪-೩-೯) ಇತ್ಯುಪಕ್ರಮ್ಯ 'ನ ತತ್ರ ರಥಾ ನ ರಥಯೋಗಾ ನ ಪನ್ಥಾನೋ ಭವನ್ತ್ಯಥ ರಥಾನ್ ರಥಯೋಗಾನ್ ಪಥಃ ಸೃಜತೇ" (ಬೃ. ೪-೩-೧೦) ಇತ್ಯಾದಿ। ತತ್ರ ಸಂಶಯಃ। ಕಿಂ ಪ್ರಬೋಧ ಇವ ಸ್ವಪ್ನೇಽಪಿ ಪಾರಮಾರ್ಥಿಕೀ ಸೃಷ್ಟಿಃ ಆಹೋಸ್ವಿತ್ ಮಾಯಾಮಯೀ ಇತಿ? ತತ್ರ ತಾವತ್ ಪ್ರತಿಪದ್ಯತೇ ಸಂಧ್ಯೇ ತಥ್ಯರೂಪಾ ಸೃಷ್ಟಿಃ ಇತಿ। ಸಂಧ್ಯಮ್ ಇತಿ ಸ್ವಪ್ನಸ್ಥಾನಮ್ ಆಚಷ್ಟೇ। ವೇದೇ ಪ್ರಯೋಗದರ್ಶನಾತ್ "ಸಂಧ್ಯಂ ತೃತೀಯಂ ಸ್ವಪ್ನಸ್ಥಾನಮ್" (ಬೃ. ೪-೩-೯) ಇತಿ। ದ್ವಯೋರ್ಲೋಕಸ್ಥಾನಯೋಃ ಪ್ರಬೋಧಸಂಪ್ರಸಾದಸ್ಥಾನಯೋರ್ವಾ ಸಂಧೌ ಭವತೀತಿ ಸಂಧ್ಯಮ್ । ತಸ್ಮಿನ್ ಸಂಧ್ಯೇ ಸ್ಥಾನೇ ತಥ್ಯರೂಪೈವ ಸೃಷ್ಟಿರ್ಭವಿತುಮರ್ಹತಿ। ಕುತಃ? ಯತಃ ಪ್ರಮಾಣಭೂತಾ ಶ್ರುತಿಃ ಏವಮಾಹ "ಅಥ ರಥಾನ್ ರಥಯೋಗಾನ್ ಪಥಃ ಸೃಜತೇ" (ಬೃ. ೪-೩-೧೦) ಇತ್ಯಾದಿ । "ಸ ಹಿ ಕರ್ತಾ" (ಬೃ. ೪-೩-೧೦) ಇತಿ ಚ, ಉಪಸಂಹಾರಾತ್ ಏವಮೇವ ಅವಗಮ್ಯತೇ ॥

(ಭಾಷ್ಯಾರ್ಥ)

ಹಿಂದಿನ ಪಾದದಲ್ಲಿ ಪಂಚಾಗ್ನಿವಿದ್ಯೆಯನ್ನು ಉದಾಹರಿಸಿಕೊಂಡು

ಜೀವನ ಸಂಸಾರಗತಿಯು ಒಳಭೇದವನ್ನು ವಿಸ್ತರಿಸಲಾಯಿತು. ಈಗಲಾದರೋ, ಅದೇ (ಜೀವನ) ಅವಸ್ಥಾಭೇದವನ್ನು ವಿವರಿಸಲಾಗುವದು.[1]

ಇದನ್ನು ಪಠಿಸುತ್ತಾರೆ: "ಅವನು ಎಲ್ಲಿ ನಿದ್ರಿಸುತ್ತಿರುತ್ತಾನೋ" (ಬೃ. ೪-೩-೯) ಎಂದು ಉಪಕ್ರಮಿಸಿ "ಅಲ್ಲಿ ರಥಗಳಿರುವದಿಲ್ಲ, ರಥಕ್ಕೆ ಸಂಬಂಧಪಟ್ಟ (ಕುದುರೆಗಳು) ಇಲ್ಲ, ದಾರಿಗಳಿರುವದಿಲ್ಲ; ಆದರೂ ರಥಗಳನ್ನೂ ರಥಕ್ಕೆ ಸಂಬಂಧಪಟ್ಟ (ಕುದುರೆಗಳನ್ನೂ) ದಾರಿಗಳನ್ನೂ ಸೃಜಿಸುತ್ತಾನೆ" (ಬೃ. ೪-೩-೧೦) ಎಂದುಮುಂತಾಗಿ (ಪಠಿಸುತ್ತಾರೆ). ಅಲ್ಲಿ ಸಂಶಯವೇನೆಂದರೆ ಎಚ್ಚರದಲ್ಲಿರುವಂತೆ ಕನಸಿನಲ್ಲಿಯೂ ಸೃಷ್ಟಿಯು ಪಾರಮಾರ್ಥಿಕವೋ, ಅಥವಾ ಮಾಯಾಮಯವೋ ?[2]

ಇಲ್ಲಿ ಮೊದಲು (ಪೂರ್ವಪಕ್ಷಿಯು) ತಿಳಿಯುತ್ತಾನೇನೆಂದರೆ 'ಸಂಧ್ಯದಲ್ಲಿ ನಿಜರೂಪವಾಗಿಯೇ ಸೃಷ್ಟಿಯಿರುತ್ತದೆ'. ಸಂಧ್ಯವು ಎಂದು ಸ್ವಪ್ನಸ್ಥಾನವನ್ನು ಹೇಳಿರುತ್ತದೆ. ಏಕೆಂದರೆ 'ಸಂಧ್ಯಂ ತೃತೀಯಂ ಸ್ವಪ್ನಸ್ಥಾನಮ್' (ಸಂಧ್ಯವು ಮೂರನೆಯ ಸ್ವಪ್ನಸ್ಥಾನವು) ಎಂದು ವೇದದಲ್ಲಿ ಪ್ರಯೋಗಮಾಡಿರುವದು ಕಂಡುಬರುತ್ತದೆ. ಎರಡು ಲೋಕಸ್ಥಾನಗಳ ಅಥವಾ ಎಚ್ಚರತನಿನಿದ್ರೆಗಳ ಸಂಧಿಯಲ್ಲಿರುವದರಿಂದ (ಅದು) ಸಂಧ್ಯವು ; ಆ ಸಂಧ್ಯಸ್ಥಾನದಲ್ಲಿ ಸೃಷ್ಟಿಯು ಸತ್ಯರೂಪವಾಗಿಯೇ ಇರಬೇಕು. ಏಕೆ ? ಎಂದರೆ ಪ್ರಮಾಣಭೂತವಾಗಿರುವ ಶ್ರುತಿಯು "ಆದರೂ ರಥಗಳನ್ನು ರಥಯೋಗದ (ಕುದುರೆಗಳನ್ನೂ) ದಾರಿಗಳನ್ನೂ ಸೃಜಿಸುತ್ತಾನೆ" (ಬೃ. ೪-೩-೧೦) ಎಂದುಮುಂತಾಗಿ ಹಾಗೆಂದು ಹೇಳಿರುತ್ತದೆ.[3] "ಅವನು ಕರ್ತೃವಲ್ಲವೆ ?" (ಬೃ. ೪-೩-೧೦) ಎಂದೂ ಉಪಸಂಹಾರ ಮಾಡಿರುವದರಿಂದ ಹೀಗೆಂದು ನಿಶ್ಚಯವಾಗುತ್ತದೆ.

---

1. ಈ ಅವಸ್ಥಾವಿಚಾರವು ಮುಂದಿನ ನಾಲ್ಕು ಅಧಿಕರಣಗಳಲ್ಲಿ ಸಾಗುವದು. ಅಲ್ಲಿಂದ ಮುಂದಕ್ಕೆ ಈಶ್ವರಸ್ವರೂಪವಿಚಾರವು ನಡೆಯುವದು. ಜೀವನ ಪರಮಾರ್ಥಸ್ವರೂಪವನ್ನು ನಿರ್ಧರಿಸುವದೇ ಈ ಚರ್ಚೆಗೆ ಪ್ರಯೋಜನ.

2. ಬ್ರಹ್ಮಕ್ಕಿಂತ ಬೇರೆಯಾದದ್ದೆಲ್ಲ ಅನಿರ್ವಚನೀಯವಾದ್ದರಿಂದ ಎರಡು ಅವಸ್ಥೆಗಳ ಸೃಷ್ಟಿಗಳೂ ಮಾಯಾಮಯವೇ ಆದರೂ ಎಚ್ಚರದ ಸೃಷ್ಟಿಯು ಬ್ರಹ್ಮಾತ್ಮಭಾವಸಾಕ್ಷಾತ್ಕಾರವಾಗುವ ಮುಂಚೆ ಇದ್ದುಕೊಂಡೇ ಇರುತ್ತದೆ. ಇದರಂತೆಯೇ ಸ್ವಪ್ನಸೃಷ್ಟಿಯೋ ಅಥವಾ ಪ್ರತಿದಿನವೂ ಹೋಗಿಬಿಡುತ್ತದೆಯೊ ?— ಎಂದು ವಿಮರ್ಶೆಮಾಡಲಾಗುತ್ತದೆ ಎಂದು ಭಾಮತೀ ವ್ಯಾಖ್ಯಾನ. ಅನುಭವದಲ್ಲಿ ಬಾಧಿತವಾಗುವ ಸ್ವಪ್ನದ ವಿಷಯಕ್ಕೆ ಹೀಗೆ ಸಂಶಯವೇಕೆಂಬುದು ತಿಳಿಯದು.

3. ಶ್ರುತಿಯು ಪ್ರಮಾಣವಾಗಿರುವದರಿಂದ ಸತ್ಯವನ್ನೇ ಹೇಳಬೇಕು ಎಂದು ಭಾವ.

## ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ॥ ೨ ॥

೨. ಕೆಲವರು ನಿರ್ಮಾತೃವು (ಈಶ್ವರನೆಂದು) ಹೇಳುತ್ತಾರೆ; ಪುತ್ರಾದಿಗಳೇ (ಅಲ್ಲಿ ಕಾಮಗಳು).

## ಈಶ್ವರಸೃಷ್ಟಿಯಾದ್ದರಿಂದಲೂ ಸ್ವಪ್ನವು ಸತ್ಯವು

(ಭಾಷ್ಯ)

೨೫೫. ಅಪಿ ಚ ಏಕೇ ಶಾಖಿನಃ ಅಸ್ಮಿನ್ನೇವ ಸಂಧ್ಯೇ ಸ್ಥಾನೇ ಕಾಮಾನಾಂ ನಿರ್ಮಾತಾರಮ್ ಆತ್ಮಾನಮ್ ಆಮನನ್ತಿ । "ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ" (ಕ. ೨-೨-೮) ಇತಿ । ಪುತ್ರಾದಯಶ್ಚ ತತ್ರ ಕಾಮಾ ಅಭಿಪ್ರೇಯನ್ತೇ, ಕಾಮ್ಯನ್ತ ಇತಿ । ನನು ಕಾಮ ಶಬ್ದೇನ ಇಚ್ಛಾವಿಶೇಷಾ ಏವ ಉಚ್ಯೇರನ್। ನ । "ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ" (ಕ. ೧-೧-೨೩) ಇತಿ ಪ್ರಕೃತ್ಯ ಅನ್ತೇ "ಕಾಮಾನಾಂ ತ್ವಾ ಕಾಮ ಭಾಜಂ ಕರೋಮಿ"(ಕ. ೧-೧-೨೪) ಇತಿ ಪ್ರಕೃತೇಷು ತತ್ರ ತತ್ರ ಪುತ್ರಾ ದಿಷು ಕಾಮಶಬ್ದಸ್ಯ ಪ್ರಯುಕ್ತತ್ವಾತ್। ಪ್ರಾಜ್ಞಂ ಚೈನಂ ನಿರ್ಮಾತಾರಂ ಪ್ರ ಕರಣವಾಕ್ಯಶೇಷಾಭ್ಯಾಂ ಪ್ರತೀಮಃ । ಪ್ರಾಜ್ಞಸ್ಯ ಹಿ ಇದಂ ಪ್ರಕರಣಮ್ "ಅನ್ಯತ್ರಧರ್ಮಾದನ್ಯತ್ರಾಧರ್ಮಾತ್" (ಕ. ೧-೨-೧೪) ಇತ್ಯಾದಿ । ತ ದ್ವಿಷಯ ಏವ ಚ ವಾಕ್ಯಶೇಷೋಽಪಿ "ತದೇವ ಶುಕ್ರಂ ತದ್ ಬ್ರಹ್ಮ ತದೇವಾ ಮೃತಮುಚ್ಯತೇ। ತಸ್ಮಿಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ" (ಕ. ೨-೨-೮) ಇತಿ। ಪ್ರಾಜ್ಞಕರ್ತೃಕಾ ಚ ಸೃಷ್ಟಿಃ ತಥ್ಯರೂಪಾ ಸಮಧಿಗತಾ ಜಾಗರಿತಾಶ್ರಯಾ । ತಥಾ ಸ್ವಪ್ನಾಶ್ರಯಾಪಿ ಸೃಷ್ಟಿರ್ಭವಿತುಮರ್ಹತಿ। ತಥಾ ಚ ಶ್ರುತಿಃ "ಅಥೋ ಖಲ್ವಾಹುರ್ಜಾಗರಿತದೇಶ ಏವಾಸ್ಯೈಷ ಇತಿ ಯಾನಿ ಹ್ಯೇವ ಜಾಗ್ರತ್ ಪಶ್ಯತಿ ತಾನಿ ಸುಪ್ತಃ" (ಬೃ. ೪-೩-೧೪) ಇತಿ ಸ್ವಪ್ನಜಾಗರಿತ ಯೋಃ ಸಮಾನನ್ಯಾಯತಾಂ ಶ್ರಾವಯತಿ। ತಸ್ಮಾತ್ ತಥ್ಯರೂಪೈವ ಸಂಧ್ಯೇ ಸೃಷ್ಟಿಃ ಇತಿ ॥

(ಭಾಷ್ಯಾರ್ಥ)

ಇದಲ್ಲದೆ ಒಂದು ಶಾಖೆಯವರು ಇದೇ ಸಂಧ್ಯಸ್ಥಾನದಲ್ಲಿ ಆತ್ಮನು ಕಾಮ ಗಳ ನಿರ್ಮಾತೃವು ಎಂದು "(ಮಿಕ್ಕವರು) ನಿದ್ರಿಸುತ್ತಿರುವಲ್ಲಿ ಯಾವ ಈ ಪುರು ಷನು ಕಾಮಕಾಮವನ್ನು ನಿರ್ಮಿಸುತ್ತಾ ಎಚ್ಚತ್ತಿರುವನೋ" (ಕ. ೨-೨-೮) ಎಂಬ (ವಾಕ್ಯದಿಂದ) ಪಠಿಸುತ್ತಿದ್ದಾರೆ. ಅಲ್ಲಿ ಕಾಮಗಳು ಎಂದರೆ ಕಾಮಿಸ ಲ್ಪಡುವದರಿಂದ ಪುತ್ರಾದಿಗಳೇ ಕಾಮಗಳು ಎಂಬ ಅಭಿಪ್ರಾಯವಿದೆ.

(ಆಕ್ಷೇಪ):– ಕಾಮಶಬ್ದವೆಂದ ಇಚ್ಛಾದಿಗಳನ್ನೇ ಹೇಳಿದೆ ಎನ್ನಬಹುದಲ್ಲ!

(ಪರಿಹಾರ) :– ಹಾಗಲ್ಲ. ಏಕೆಂದರೆ "ಶತಾಯುಗಳಾದ ಪುತ್ರಪೌತ್ರರನ್ನು ಬೇಡಿಕೊ" (ಕ. ೧-೧-೨೩) ಎಂದು ಪ್ರಾರಂಭಿಸಿ "ಕಾಮಗಳನ್ನು ಇಷ್ಟದಂತೆ ಪಡೆಯುವವನನ್ನಾಗಿ ನಿನ್ನನ್ನು ಮಾಡುತ್ತೇನೆ" (ಕ. ೧-೧-೨೪) ಎಂದು ಪ್ರಕೃತವಾಗಿರುವ ಪುತ್ರಾದಿಗಳಲ್ಲಿಯೇ ಅಲ್ಲಲ್ಲಿ ಕಾಮಶಬ್ದವನ್ನು ಪ್ರಯೋಗಿಸಿದೆ. ಈ ನಿರ್ಮಾತೃವು ಪ್ರಾಜ್ಞನೆಂದೇ ಪ್ರಕರಣವಾಕ್ಯಶೇಷಗಳಿಂದ ನಮಗೆ ತಿಳಿಯಬರುತ್ತದೆ. ಹೇಗೆಂದರೆ "ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್'' (ಕ. ೧-೨-೧೪) (ಧರ್ಮಕ್ಕಿಂತ ಬೇರೆಯಾಗಿ ಅಧರ್ಮಕ್ಕಿಂತಲೂ ಬೇರೆಯಾಗಿ) ಎಂದುಮೊದಲಾಗಿರುವ ಇದು ಪ್ರಾಜ್ಞನ ಪ್ರಕರಣವೇ (ಆಗಿರುತ್ತದೆ). "ತದೇವ ಶುಕ್ರಮ್" (ಅದೇ ಶುಕ್ರವು, ಅದೇ ಬ್ರಹ್ಮವು, ಅದೇ ಅಮೃತವೆನಿಸುತ್ತದೆ; ಅದರಲ್ಲಿ ಎಲ್ಲಾ ಲೋಕಗಳೂ ಆಶ್ರಯಿಸಿಕೊಂಡಿವೆ. ಅದನ್ನು ಯಾವನೊಬ್ಬನೂ ಮೀರಿಹೋಗಲಾರನು) ಎಂಬ ವಾಕ್ಯಶೇಷವೂ ಆ (ಪ್ರಾಜ್ಞನ) ವಿಷಯದ್ದೇ (ಆಗಿರುತ್ತದೆ). ಎಚ್ಚರವನ್ನಾಶ್ರಯಿಸಿಕೊಂಡಿರುವ ಪ್ರಾಜ್ಞಕರ್ತೃಕವಾದ ಸೃಷ್ಟಿಯು ಸತ್ಯರೂಪವಾಗಿರುವದೆಂಬುದು ಗೊತ್ತೇ ಇದೆ. ಸ್ವಪ್ನವನ್ನಾಶ್ರಯಿಸಿರುವ ಸೃಷ್ಟಿಯೂ ಹಾಗೆಯೇ ಇರಬೇಕು, ಆದ್ದರಿಂದಲೇ ಶ್ರುತಿಯು "ಮತ್ತೂ (ಕೆಲವರು) ಹೇಳುತ್ತಾರೇನೆಂದರೆ ಈತನಿಗೆ ಈ (ಸ್ವಪ್ನವು) ಜಾಗರಿತದೇಶದಲ್ಲಿಯೇ (ಆಗುತ್ತದೆ) ; ಇವನು ಜಾಗರಿತದಲ್ಲಿ ಯಾವವುಗಳನ್ನು ಕಾಣುತ್ತಾನೋ ಅವುಗಳನ್ನೇ ಸ್ವಪ್ನದಲ್ಲಿ (ಕಾಣುತ್ತಾನೆ)" (ಬೃ. ೪-೩-೧೪) ಎಂದು ಕನಸು, ಎಚ್ಚರ ಇವೆರಡಕ್ಕೂ ಒಂದೇ ನ್ಯಾಯವೆಂದು ತಿಳಿಸುತ್ತದೆ. ಆದ್ದರಿಂದ ಸಂಧ್ಯದಲ್ಲಿ ಸೃಷ್ಟಿಯು ಸತ್ಯರೂಪವೇ (ಆಗಿರುತ್ತದೆ).

**ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ॥ ೩ ॥**

೩. (ಸ್ವಪ್ನಸೃಷ್ಟಿಯೂ) ಮಾಯಾಮಾತ್ರವೇ ; ಏಕೆಂದರೆ ಸಂಪೂರ್ಣವಾಗಿ ಅಭಿವ್ಯಕ್ತವಾಗಿರುವ ಸ್ವರೂಪವುಳ್ಳದ್ದಲ್ಲ.

(ಭಾಷ್ಯ)

೨೫೬. ಏವಂ ಪ್ರಾಪ್ತೇ ಪ್ರತ್ಯಾಹ। (ಮಾಯಾಮಾತ್ರಂ ತು ....)। ತುಶಬ್ದಃ ಪಕ್ಷಂ ವ್ಯಾವರ್ತಯತಿ। ನೈತದಸ್ತಿ ಯದುಕ್ತಂ ಸನ್ಧ್ಯೇ ಸೃಷ್ಟಿಃ ಪಾರಮಾರ್ಥಿಕೀ ಇತಿ। ಮಾಯೈವ ಸಂಧ್ಯೇ ಸೃಷ್ಟಿರ್ನ ಪರಮಾರ್ಥಗನ್ಧೋಽಪ್ಯಸ್ತಿ। ಕುತಃ? ಕಾರ್ತ್ಸ್ನ್ಯೇನ ಅನಭಿವ್ಯಕ್ತಸ್ವರೂಪತ್ವಾತ್। ನ ಹಿ ಕಾರ್ತ್ಸ್ನ್ಯೇನ ಪರಮಾರ್ಥವಸ್ತುಧರ್ಮೇಣ ಅಭಿವ್ಯಕ್ತಸ್ವರೂಪಃ ಸ್ವಪ್ನಃ। ಕಿಂ ಪುನರತ್ರ ಕಾರ್ತ್ಸ್ನ್ಯಮ್ ಅಭಿಪ್ರೇತಮ್? ದೇಶಕಾಲನಿಮಿತ್ತಸಂಪತ್ತಿಃ ಅಬಾಧಶ್ಚ।

ನ ಹಿ ಪರಮಾರ್ಥವಸ್ತುವಿಷಯಾಣಿ ದೇಶಕಾಲನಿಮಿತ್ತಾನಿ ಅಬಾಧಶ್ಚ ಸ್ವಪ್ನೇ ಸಂಭಾವ್ಯನ್ತೇ। ನ ತಾವತ್ ಸ್ವಪ್ನೇ ರಥಾದೀನಾಮ್ ಉಚಿತೋ ದೇಶಃ ಸಂಭವತಿ। ನ ಹಿ ಸಂವೃತೇ ದೇಹದೇಶೇ ರಥಾದಯಃ ಅವಕಾಶಂ ಲಭೇರನ್, ಸ್ಯಾದೇತತ್। ಬಹಿರ್ದೇಹಾತ್ ಸ್ವಪ್ನಂ ದ್ರಕ್ಷ್ಯತಿ। ದೇಶಾಂತರಿತದ್ರವ್ಯ ಗ್ರಹಣಾತ್। ದರ್ಶಯತಿ ಚ ಶ್ರುತಿಃ ಬಹಿರ್ದೇಹಾತ್ ಸ್ವಪ್ನಮ್ "ಬಹಿಷ್ಕುಲಾಯಾದಮೃತಶ್ಚರಿತ್ವಾ। ಸ ಈಯತೇಽಮೃತೋ ಯತ್ರ ಕಾಮಮ್" (ಬೃ. ೪-೩-೧೨) ಇತಿ ಸ್ಥಿತಿಗತಿಪ್ರತ್ಯಯಭೇದಶ್ಚ ನಾನಿಷ್ಕ್ರಾನ್ತೇ ಜನ್ತೌ ಸಾಮಞ್ಜಸ್ಯಮ್ ಅಶ್ನುವೀತ ಇತಿ। ನೇತ್ಯುಚ್ಯತೇ। ನ ಹಿ ಸುಪ್ತಸ್ಯ ಜನ್ತೋಃ ಕ್ಷಣಮಾತ್ರೇಣ ಯೋಜನಶತಾನ್ತರಿತಂ ದೇಶಂ ಪರ್ಯೇತುಂ ವಿಪರ್ಯೇತುಂ ಚ ತತಃ ಸಾಮರ್ಥ್ಯಂ ಸಂಭಾವ್ಯತೇ। ಕ್ವಚಿಚ್ಚ ಪ್ರತ್ಯಾಗಮನವರ್ಜಿತಂ ಸ್ವಪ್ನಂ ಶ್ರಾವಯತಿ "ಕುರುಷು ಅಹಮದ್ಯ ಶಯಾನೋ ನಿದ್ರಯಾ ಅಭಿಪ್ಲುತಃ ಸ್ವಪ್ನೇ ಪಞ್ಚಾಲಾನಭಿಗತಶ್ಚಾಸ್ಮಿ[1] ಪ್ರತಿಬುದ್ಧಃ" ಇತಿ। ದೇಹಾಚ್ಚೇತ್ ಅಪೇಯಾತ್ ಪಞ್ಚಾಲೇಷು ಪ್ರತಿಬುಧ್ಯೇತ। ನ ತಾನಸೌ ಅಭಿಗತಃ ಇತಿ ಕುರುಷ್ವೇವ ತು ಪ್ರತಿಬುಧ್ಯತೇ। ಯೇನ ಚಾಯಂ ದೇಹೇನ ದೇಹಾನ್ತರಮ್ ಅಶ್ನುವಾನೋ ಮನ್ಯತೇ ತಮನ್ಯೇ ಪಾರ್ಶ್ವಸ್ಥಾಃ ಶಯನದೇಶ ಏವ ಪಶ್ಯನ್ತಿ। ಯಥಾ ಭೂತಾನಿ ಚ ಅಯಂ ದೇಶಾನ್ತರಾಣಿ ಸ್ವಪ್ನೇ ಪಶ್ಯತಿ ನ ತಾನಿ ತಥಾಭೂತಾ ನ್ಯೇವ ಭವನ್ತಿ। ಪರಿಧಾವಂಶ್ಚೇತ್ ಪಶ್ಯೇತ್ ಜಾಗ್ರದ್ವತ್ ವಸ್ತುಭೂತಮರ್ಥಮ್ ಆಕಲಯೇತ್। ದರ್ಶಯತಿ ಚ ಶ್ರುತಿಃ ಅನ್ತರೇವ ದೇಹೇ ಸ್ವಪ್ನಮ್ "ಸ ಯತ್ರೈತತ್ ಸ್ವಪ್ನ್ಯಯಾ ಚರತಿ" ಇತ್ಯುಪಕ್ರಮ್ಯ "ಸ್ವೇ ಶರೀರೇ ಯಥಾ ಕಾಮಂ ಪರಿವರ್ತತೇ" (ಬೃ. ೨-೧-೧೮) ಇತಿ। ಅತಶ್ಚ ಶ್ರುತ್ಯುಪಪತ್ತಿ ವಿರೋಧಾತ್ ಬಹಿಷ್ಕುಲಾಯಶ್ರುತಿರ್ಗೌಣೀ ವ್ಯಾಖ್ಯಾತವ್ಯಾ ಬಹಿರಿವ ಕುಲಾಯಾದಮೃತಶ್ಚರಿತ್ವಾ ಇತಿ। ಯೋ ಹಿ ವಸನ್ನಪಿ ಶರೀರೇ ನ ತೇನ ಪ್ರಯೋಜನಂ ಕರೋತಿ ಸ ಬಹಿರಿವ ಶರೀರಾದ್ ಭವತಿ ಇತಿ। ಸ್ಥಿತಿಗತಿಪ್ರತ್ಯಯ ಭೇದೋಽಪಿ ಏವಂ ಸತಿ ವಿಪ್ರಲಮ್ಭ ಏವಾಭ್ಯುಪಗನ್ತವ್ಯಃ। ಕಾಲವಿಸಂ ವಾದೋಽಪಿ ಚ ಸ್ವಪ್ನೇ ಭವತಿ ರಜನ್ಯಾಂ ಸುಪ್ತೋ ವಾಸರಂ ಭಾರತೇ ವರ್ಷೇ ಮನ್ಯತೇ। ತಥಾ ಮುಹೂರ್ತಮಾತ್ರವರ್ತಿನಿ ಸ್ವಪ್ನೇ ಕದಾಚಿದ್ ಬಹುವರ್ಷ ಪೂಗಾನ್ ಅತಿವಾಹಯತಿ। ನಿಮಿತ್ತಾನ್ಯಪಿ ಚ ಸ್ವಪ್ನೇ ನ ಬುದ್ಧಯೇ ಕರ್ಮಣೇ ವಾ ಉಚಿತಾನಿ ವಿದ್ಯನ್ತೇ। ಕರಣೋಪಸಂಹಾರಾತ್ ಹಿ ನಾಸ್ಯ ರಥಾದಿಗ್ರಹ ಣಾಯ ಚಕ್ಷುರಾದೀನಿ ಸನ್ತಿ ರಥಾದಿನಿರ್ವರ್ತನೇಽಪಿ ಕುತೋಽಸ್ಯ ನಿಮೇಷ ಮಾತ್ರೇಣ ಸಾಮರ್ಥ್ಯಮ್, ದಾರೂಣಿ ವಾ? ಬಾಧ್ಯನ್ತೇ ಚ ಏತೇ ರಥಾದಯಃ

1. ಅಸ್ಮಿನ್ ಎಂಬ ಅಚ್ಚಿನಪಾಠವನ್ನು ಹೀಗೆಂದು ತಿದ್ದಿಕೊಂಡಿದೆ.

ಸ್ವಪ್ನದೃಷ್ಟಾಃ ಪ್ರಬೋಧೇ। ಸ್ವಪ್ನ ಏವ ಚೈತೇ ಸುಲಭಬಾಧಾ ಭವನ್ತಿ। ಆದ್ಯನ್ತಯೋರ್ವ್ಯಭಿಚಾರದರ್ಶನಾತ್। ರಥೋಽಯಮಿತಿ ಹಿ ಕದಾಚಿತ್ ಸ್ವಪ್ನೇ ನಿರ್ಧಾರಿತಃ ಕ್ಷಣೇನ ಮನುಷ್ಯಃ ಸಂಪದ್ಯತೇ, ಮನುಷ್ಯೋಽಯಮಿತಿ ನಿರ್ಧಾರಿತಃ ಕ್ಷಣೇನ ವೃಕ್ಷಃ। ಸ್ಪಷ್ಟಂ ಚ ಅಭಾವಂ ರಥಾದೀನಾಂ ಸ್ವಪ್ನೇ ಶ್ರಾವಯತಿ ಶಾಸ್ತ್ರಮ್ "ನ ತತ್ರ ರಥಾ ನ ರಥಯೋಗಾ ನ ಪನ್ಥಾನೋ ಭವನ್ತಿ (ಬೃ. ೪-೩-೧೦) ಇತ್ಯಾದಿ। ತಸ್ಮಾತ್ ಮಾಯಾಮಾತ್ರಂ ಸ್ವಪ್ನದರ್ಶನಮ್॥

(ಭಾಷ್ಯಾರ್ಥ)

ಹೀಗೆಂಬ ಪೂರ್ವಪಕ್ಷವು ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತಾರೆ. (ಮಾಯಾಮಾತ್ರಂ ತು....) (ಇಲ್ಲಿ ಸೂತ್ರದಲ್ಲಿರುವ) ತುಶಬ್ದವು (ಪೂರ್ವ)ಪಕ್ಷವನ್ನು ತಳ್ಳಿಗಳೆಯುತ್ತದೆ. ಸಂಧ್ಯದಲ್ಲಿ ಸೃಷ್ಟಿಯು ಪರಮಾರ್ಥವೇ ಎಂದು ಹೇಳಿದಿರಲ್ಲ, ಇದು (ಸರಿ)ಯಲ್ಲ. ಸಂಧ್ಯದಲ್ಲಿ ಸೃಷ್ಟಿಯು ಮಾಯೆಯೇ,[1] (ಅದರಲ್ಲಿ) ಪರಮಾರ್ಥದ ವಾಸನೆಯೂ ಕೂಡ ಇರುವದಿಲ್ಲ. ಏಕೆ? ಎಂದರೆ ಕಾರ್ತ್ಸ್ನ್ಯವಾಗಿ (ಸಂಪೂರ್ಣವಾಗಿ) ಸ್ವರೂಪವು ಅಭಿವ್ಯಕ್ತವಾಗದೆ ಇರುವದರಿಂದ. ಕಾರ್ತ್ಸ್ನ್ಯವಾಗಿ ಪರಮಾರ್ಥವಸ್ತುವಿನ ಧರ್ಮದಿಂದ ಸ್ವಪ್ನವು ಅಭಿವ್ಯಕ್ತವಾಗಿಲ್ಲವಷ್ಟೆ.

(ಪ್ರಶ್ನೆ): ಇಲ್ಲಿ ಕಾರ್ತ್ಸ್ನ್ಯವೆಂದರೆ ಯಾವದೆಂದು (ಸೂತ್ರಕಾರರ) ಅಭಿಪ್ರಾಯ?

(ಉತ್ತರ): ದೇಶಕಾಲನಿಮಿತ್ತಸಂಪತ್ತಿಯೂ ಬಾಧವಾಗದೆ ಇರುವದೂ (ಕಾರ್ತ್ಸ್ನ್ಯವು).[2] ಪರಮಾರ್ಥವಸ್ತುವಿಷಯವಾಗಿರುವ ದೇಶಕಾಲನಿಮಿತ್ತಗಳಾಗಲಿ ಬಾಧವಿಲ್ಲದೆ ಇರುವವಾಗಲಿ ಸ್ವಪ್ನದಲ್ಲಿ ಇರುವಹಾಗಿಲ್ಲವಷ್ಟೆ.[3] ಮೊದಲನೆಯದಾಗಿ ಸ್ವಪ್ನದಲ್ಲಿ ರಥಾದಿಗಳಿಗೆ ಯೋಗ್ಯವಾದ ದೇಶವು

---

1. ಇಲ್ಲಿ ಮಾಯಾಮಾತ್ರ ಎಂಬ ಸೂತ್ರದ ಮಾತಿನ ವಿಷಯಕ್ಕೆ (ನ್ಯಾ. ನಿ. ರ. ಪ್ರ) ವ್ಯಾಖ್ಯಾನಕಾರರು ಹೀಗೆ ಬರೆದಿದ್ದಾರೆ. "ಚಿನ್ಮಾತ್ರನಿಷ್ಠವಾದ ಅವಿದ್ಯೆಯು ಚಿತ್ತಾವಚ್ಛೇದವಿರುವದರಿಂದ ಜೀವನಲ್ಲಿಯೂ ಇದೆ; ಅದು ರಥಾದಿಗಳ ಆಕಾರವನ್ನು ಪಡೆದಿರುವದೇ ಮಾಯೆ" (ರ. ಪ್ರ.) ಮಾಯಾವಿದ್ಯೆಗಳಿಗೆ ಭೇದವಿಲ್ಲವೆಂದು ತಿಳಿಸುವದಕ್ಕೆ ಸೂತ್ರಭಾಷ್ಯಗಳಲ್ಲಿ ಮಾಯಾಶಬ್ದವು; ಪ್ರಮಾತೃವಿರುವಾಗ ಬಾಧಿತವಾಗುವದೆಂಬುದೇ ಜಾಗ್ರತ್ತಿಗಿಂತ ಸ್ವಪ್ನದ ವೈಲಕ್ಷಣ್ಯವೆಂದು ತಿಳಿಸುವದಕ್ಕೆ ಮಾತ್ರ ಶಬ್ದ. (ನ್ಯಾ. ನಿ) ಈ ವ್ಯಾಖ್ಯಾನಗಳಿಗೆ ಭಾಷ್ಯದ ಆಧಾರವಿಲ್ಲ. ಮಾಯಾಮಾತ್ರವೆಂದರೆ ಹುಸಿತೋರಿಕೆಯೇ, ನಿಜವಾದ ವಸ್ತುವಲ್ಲ ಎಂದರ್ಥ.

2. ಇದೇ ಇಲ್ಲಿ ಪರಮಾರ್ಥವೆಂಬ ಮಾತಿನ ಅರ್ಥ. ಇಲ್ಲಿ ದೇಶಕಾಲನಿಮಿತ್ತಗಳೆಂದರೆ ಜಾಗ್ರದವಸ್ಥೆಯಲ್ಲಿ ತೋರುವವುಗಳೇ.

3. ಜಾಗ್ರತ್ಸ್ವಪ್ನಗಳ ಈ ವೈಷಮ್ಯವನ್ನು ಸ್ವಪ್ನಮಿಥ್ಯಾತ್ವಸಿದ್ಧಿಗಾಗಿ ಮಾಡಿರುವದು ಮಾಂ. ಕಾ. ವೈತಥ್ಯಪ್ರಕರಣದ ಆದಿಯಲ್ಲಿಯೂ ಕಂಡುಬರುತ್ತದೆ. ಇದೆಲ್ಲವೂ ಜಾಗ್ರದ್ದೃಷ್ಟಿಯಿಂದ.

ಇರುವಹಾಗಿಲ್ಲ; ಏಕೆಂದರೆ ಸಂಕುಚಿತವಾದ ದೇಹದೇಶದಲ್ಲಿ ರಥಾದಿಗಳಿಗೆ ಅವಕಾಶವು ದೊರಕಲಾರದು.

(ಪೂರ್ವಪಕ್ಷಿಯ ಮತವು) ಹೀಗಿರಬಹುದು. ದೇಹದಿಂದ ಹೊರಗಿನ (ದೇಶ)ದಲ್ಲಿ ಸ್ವಪ್ನವನ್ನು ಕಾಣಬಹುದು; ಏಕೆಂದರೆ ವ್ಯವಹಿತದೇಶದಲ್ಲಿರುವ ದ್ರವ್ಯಗಳನ್ನು (ಅಲ್ಲಿ) ಗ್ರಹಿಸುತ್ತಾನೆ. "ಗೂಡಿನ(ಂತಿರುವ ದೇಹದ) ಹೊರಗೆ ಅಮೃತವಾದ (ಜೀವನು) ಸಂಚರಿಸುತ್ತಾನೆ. ಅವನು ಎಲ್ಲಿ ಇಚ್ಛೆಯಿರುವದೋ ಅಲ್ಲಿಗೆ ಹೋಗುತ್ತಾನೆ" (ಬೃ. ೪-೩-೧೨) ಎಂದು ದೇಹದ ಹೊರಗಡೆ ಸ್ವಪ್ನ ವಾಗುವದೆಂದು ತಿಳಿಸುತ್ತದೆ. ನಿಂತಿರುವದು, ಓಡಾಡುವದು -ಎಂಬ ಪ್ರತ್ಯಯ ಭೇದವು (ದೇಹವನ್ನು ಬಿಟ್ಟು) ಜೀವನು ಹೊರಹೊರಡದೆ ಇರುವನಾದರೆ ಸರಿಯಾಗಿ ಹೊಂದುವದಿಲ್ಲವಷ್ಟೆ.

(ಈ ಮತವು) ಸರಿಯಲ್ಲ ಎನ್ನುತ್ತೇವೆ. ಏಕೆಂದರೆ ನಿದ್ರಿಸುತ್ತಿರುವ ಜೀವನಿಗೆ ಕ್ಷಣಮಾತ್ರ ನೂರುಗಟ್ಟಲೆ ಯೋಜನದ ಅಂತರದ ದೇಶಕ್ಕೆ ಹೋಗು ವದಕ್ಕೂ ಅಲ್ಲಿಂದ ಹಿಂದಕ್ಕೆ ಬರುವದಕ್ಕೂ ಸಾಮರ್ಥ್ಯವು ಇರುವಹಾಗಿಲ್ಲ. ಕೆಲವು ಕಡೆಗಳಲ್ಲಿ "ಕುರುದೇಶದಲ್ಲಿ ನಾನು ಇಂದು ಮಲಗಿದ್ದು ನಿದ್ರೆಯು ಹಿಡಿದು ಸ್ವಪ್ನದಲ್ಲಿ ಪಂಚಾಲದೇಶಕ್ಕೆ ಹೋದೆನು, ಮತ್ತು ಎಚ್ಚತ್ತೆನು[1]" ಎಂದು ಹಿಂತಿ ರುಗಿ ಬಾರದ ಸ್ವಪ್ನವನ್ನು (ಎಚ್ಚತ್ತವನು) ಹೇಳುತ್ತಾನೆ. ದೇಹವನ್ನು ಬಿಟ್ಟು ಹೊರಗೆ ಹೋಗಿದ್ದರೆ ಪಂಚಾಲದೇಶದಲ್ಲಿಯೇ ಎಚ್ಚರಬೇಕಾಗಿತ್ತು, ಏಕೆಂದರೆ ಅವನು ಆ (ದೇಶಕ್ಕೆ) ಹೋಗಿರುತ್ತಾನೆ, ಆದರೆ ಕುರುದೇಶದಲ್ಲಿಯೇ ಎಚ್ಚರು ತ್ತಾನೆ. ಮತ್ತು ಯಾವ ದೇಹದೊಡನೆ ದೇಶಾಂತರಕ್ಕೆ ಹೋದಂತೆ ತಿಳಿದು ಕೊಂಡಿರುತ್ತಾನೋ ಆ (ಎಚ್ಚರದ ದೇಹ)ವನ್ನು ಹತ್ತಿರವಿರುವ ಬೇರೆ (ಜನ)ರು ಮಲಗಿದ್ದ ಕಡೆಯಲ್ಲಿಯೇ ಕಾಣುತ್ತಾರೆ. ಮತ್ತು ಇವನು ಎಂಥ ಬೇರೆಯ ದೇಶಗಳನ್ನು ಸ್ವಪ್ನದಲ್ಲಿ ಕಾಣುತ್ತಾನೋ ಅವು ಅಂಥವುಗಳೇ ಆಗಿರುವದಿಲ್ಲ. ಹೀಗೆ ನೋಡುವದಾಗಿದ್ದರೆ ಎಚ್ಚರದಲ್ಲಿ ಹೇಗೋ ಹಾಗೆ ವಸ್ತುಭೂತವಾದ ವಿಷಯವನ್ನೇ ಗ್ರಹಿಸಬೇಕಾಗಿತ್ತು. ಇದಲ್ಲದೆ ಶ್ರುತಿಯು "ಅವನು ಯಾವಾಗ ಸ್ವಪ್ನವೃತ್ತಿಯಿಂದ ಸಂಚರಿಸುತ್ತಾನೋ......" ಎಂದು ಉಪಕ್ರಮಿಸಿ "ತನ್ನ ಶರೀರದಲ್ಲಿ ಇಚ್ಛೆಯಿದ್ದಂತೆ ತಿರುಗಾಡುತ್ತಿರುವನು" (ಬೃ. ೨-೧-೧೮) ಎಂದು ದೇಹದಲ್ಲಿಯೇ ಸ್ವಪ್ನವಾಗುವದೆಂದು ಹೇಳುತ್ತದೆ. ಆದ್ದರಿಂದ ಶ್ರುತಿಯುಕ್ತಿ ಗಳಿಗೆ ವಿರೋಧವಾಗಿರುವದರಿಂದ ಬಹಿಷ್ಕುಲಾಯಶ್ರುತಿಯನ್ನು ಶರೀರದಿಂದ

---

1. 'ಅಸ್ಮಿನ್' ಎಂಬ ಪಾಠಕ್ಕೆ ಈ (ದೇಶದಲ್ಲಿ) ಎಚ್ಚತ್ತೆನು ಎಂದು ಅರ್ಥಮಾಡ ಬೇಕಾಗುತ್ತಿತ್ತು. ಹೋಗಿದ್ದರೇನು ಹಾಗೆಯೇ ಎಚ್ಚರವಾಯಿತು ಎಂಬ ಅರ್ಥವು ನಾವು ಒಪ್ಪಿರುವ ಪಾಠದಿಂದ ಸ್ವರಸವಾಗುತ್ತದೆ.

ಹೊರಗೆ ಇರುವಂತೆ ಅಸ್ವಸ್ಥನಾದ (ಜೀವನು) ಸಂಚರಿಸಿ ಎಂದು- ಗೌಣವಾಗಿ ವಿವರಿಸಬೇಕು. ಏಕೆಂದರೆ ಯಾವನು ಶರೀರದಲ್ಲಿ ವಾಸಮಾಡುತ್ತಿದ್ದರೂ ಅದರಿಂದ ಪ್ರಯೋಜನವನ್ನು ಮಾಡಿಕೊಳ್ಳುವದಿಲ್ಲವೋ ಅವನು ಶರೀರದಿಂದ ಹೊರಗೆ ಇದ್ದಂತೆಯೇ ಇರುತ್ತಾನೆ. ನಿಂತಿರುವದು, ಓಡಾಡುವದು –ಎಂಬ ಪ್ರತ್ಯಯಭೇದವೂ ಹೀಗಿರುವದರಿಂದ ಮೋಸವೇ ಎಂದು ಒಪ್ಪಬೇಕು.

ಸ್ವಪ್ನದಲ್ಲಿ **ಕಾಲವೂ** ಹೊಂದಿಕೆಯಿಲ್ಲದೆ ಇರುತ್ತದೆ. ರಾತ್ರಿಯಲ್ಲಿ ನಿದ್ರಿಸುವವನು ಭಾರತವರ್ಷದಲ್ಲಿ[1] ಹಗಲಾಗಿರುವದೆಂದು (ಅಲ್ಲಿ) ಎಣಿಸುತ್ತಾನೆ. ಹೀಗೆಯೇ ಒಂದು ಮುಹೂರ್ತಮಾತ್ರವೇ (ಇರುವ) ಸ್ವಪ್ನದಲ್ಲಿ ಒಂದೊಂದು ವೇಳೆ ಬಹಳ ವರ್ಷಗಳ ಸಮೂಹವನ್ನು ಕಳೆಯುತ್ತಾನೆ. **ನಿಮಿತ್ತಗಳು** ಸ್ವಪ್ನದಲ್ಲಿ (ಆಯಾ) ಜ್ಞಾನಕ್ಕಾಗಲಿ ಕರ್ಮಕ್ಕಾಗಲಿ ತಕ್ಕವಾಗಿರುವದಿಲ್ಲ. ಏಕೆಂದರೆ ಕರಣಗಳನ್ನು ಉಪಸಂಹಾರಮಾಡಿಕೊಂಡಿರುವದರಿಂದ ಇವನಿಗೆ ರಥವೇ ಮುಂತಾದವುಗಳನ್ನು ಗ್ರಹಿಸುವದಕ್ಕೆ ಚಕ್ಷುರಾದಿಗಳಿರುವದಿಲ್ಲ. ರಥಾದಿಗಳನ್ನು ಮಾಡಿಕೊಳ್ಳುವದಕ್ಕಾದರೂ ಇವನಿಗೆ ನಿಮಿಷಮಾತ್ರದಲ್ಲಿ ಸಾಮರ್ಥ್ಯವಾಗಲಿ ಕಟ್ಟಿಗೆಯಾಗಲಿ ಎಲ್ಲಿಂದ (ಬಂದವು) ? ಈ ಸ್ವಪ್ನದಲ್ಲಿ ಕಂಡ ರಥಾದಿಗಳು ಎಚ್ಚರವಾಗುತ್ತಲೂ **ಬಾಧಿತವೂ**[2] ಆಗುತ್ತವೆ. ಸ್ವಪ್ನದಲ್ಲಿಯೇ ಇವು ಸುಲಭವಾಗಿ ಬಾಧಿತವಾಗುತ್ತವೆ. ಏಕೆಂದರೆ (ಅದಕ್ಕೆ) ಆದಿಯಲ್ಲಿಯೂ ಅಂತದಲ್ಲಿಯೂ ಬೇರ್ಪಡುವಿಕೆಯಿರುತ್ತದೆ. ಇದು ರಥವು ಎಂದು ಸ್ವಪ್ನದಲ್ಲಿ ಒಂದು ಸಲ ನಿಶ್ಚಿತವಾದದ್ದು ಕ್ಷಣಮಾತ್ರದಲ್ಲಿ ಮನುಷ್ಯನಾಗುತ್ತದೆ, ಮನುಷ್ಯನಿವನು ಎಂದು ನಿಶ್ಚಯವಾದವನು ಕ್ಷಣಮಾತ್ರದಲ್ಲಿ ಮರವಾಗಿಬಿಡುತ್ತಾನೆ ! ರಥಾದಿಗಳು ಸ್ವಪ್ನದಲ್ಲಿ ಇರುವದೇ ಇಲ್ಲವೆಂದು "ಅಲ್ಲಿ ರಥಗಳಿರುವದಿಲ್ಲ. ರಥಕ್ಕೆ ಸೇರಿದ (ಕುದುರೆ)ಗಳೂ ಇರುವದಿಲ್ಲ, ದಾರಿಗಳು ಇರುವದಿಲ್ಲ" (ಬೃ. ೪–೩–೧೦) ಎಂದುಮುಂತಾಗಿ ಸ್ಪಷ್ಟವಾಗಿ ಶಾಸ್ತ್ರವು ತಿಳಿಸುತ್ತದೆ. ಆದ್ದರಿಂದ ಸ್ವಪ್ನದರ್ಶನವು ಮಾಯಾಮಾತ್ರ(ವಾಗಿರುತ್ತದೆ).

**ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ॥ ೪ ॥**

೪. ಸೂಚಕವೂ ಆಗಿದೆಯಷ್ಟೆ. ಶ್ರುತಿಯಿಂದ (ಹೀಗೆಂದು ನಿಶ್ಚಯಿಸಬೇಕು) ; ಅದನ್ನು ಬಲ್ಲವರು (ಹಾಗೆಂದು) ಹೇಳುತ್ತಲೂ ಇದ್ದಾರೆ.

---

1. ಕೇತುಮಾಲವೇ ಮುಂತಾದ ವರ್ಷಗಳಲ್ಲಿ ಆಗಲೆ ಹಗಲಾಗಿರಬಹುದು ; ಆದರೆ ಇದೇ ಭಾರತವರ್ಷದಲ್ಲಿಯೇ ರಾತ್ರಿಯಾಗಿರುವಾಗ ಹಗಲಾಗಲಾರದು.

2. ದೇಶಕಾಲನಿಮಿತ್ತಗಳೂ ಹೊಂದುಗೆಯಿಲ್ಲ, ಬಾಧಿತವೂ ಆಗುತ್ತದೆ– ಎಂಬುದನ್ನು ಜಾಗ್ರದ್ವೃತ್ತಿಯಿಂದಲೇ ಹೇಳಿರುತ್ತದೆ.

## ಸ್ವಪ್ನವು ಮಾಯಾಮಯವಾದರೂ ಸೂಚಕವಾಗಬಹುದು

(ಭಾಷ್ಯ)

೨೫೭. ಮಾಯಾಮಾತ್ರತ್ವಾತ್ ತರ್ಹಿ ನ ಕಶ್ಚಿತ್ ಸ್ವಪ್ನೇ ಪರಮಾರ್ಥಗನ್ಧೋಽಸ್ತಿ ಇತಿ । ನೇತ್ಯುಚ್ಯತೇ । ಸೂಚಕಶ್ಚ ಹಿ ಸ್ವಪ್ನೋ ಭವತಿ ಭವಿಷ್ಯತೋಃ ಸಾಧ್ವಸಾಧುನೋಃ । ತಥಾ ಹಿ ಶ್ರೂಯತೇ "ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಷು ಪಶ್ಯತಿ । ಸಮೃದ್ಧಿಂ ತತ್ರ ಜಾನೀಯಾತ್ತಸ್ಮಿನ್ ಸ್ವಪ್ನನಿದರ್ಶನೇ" (ಛಾಂ. ೫-೨-೯) ತಥಾ "ಪುರುಷಂ ಕೃಷ್ಣಂ ಕೃಷ್ಣದನ್ತಂ ಪಶ್ಯತಿ ಸ ಏನಂ ಹನ್ತಿ ...." (ಐ. ಆ. ೩-೨-೪) ಇತ್ಯೇವಮಾದಿಭಿಃ ಸ್ವಪ್ನೈಃ ಅಚಿರಜೀವಿತ್ವಮ್ ಆವೇದ್ಯತೇ ಇತಿ ಶ್ರಾವಯತಿ । ಆಚಕ್ಷತೇ ಚ ಸ್ವಪ್ನಾಧ್ಯಾಯವಿದಃ ಕುಞ್ಜರಾರೋಹಣಾದೀನಿ ಸ್ವಪ್ನೇ ಧನ್ಯಾನಿ ಖರಯಾನಾದೀನಿ ಅಧನ್ಯಾನಿ" (?) ಇತಿ । ಮನ್ತ್ರದೇವತಾದ್ರವ್ಯವಿಶೇಷಾಶ್ಚ ಕೇಚಿತ್ ಸ್ವಪ್ನಾಃ ಸತ್ಯಾರ್ಥಗನ್ಧಿನೋ ಭವನ್ತಿ ಇತಿ ಮನ್ಯನ್ತೇ । ತತ್ರಾಪಿ ಭವತು ನಾಮ ಸೂಚ್ಯಮಾನಸ್ಯ ವಸ್ತುನಃ ಸತ್ಯತ್ವಮ್, ಸೂಚಕಸ್ಯ ತು ಸ್ತ್ರೀದರ್ಶನಾದೇರ್ಭವತ್ಯೇವ ವೈತಥ್ಯಂ ಬಾಧ್ಯಮಾನತ್ವಾತ್ ಇತ್ಯಭಿಪ್ರಾಯಃ । ತಸ್ಮಾತ್ ಉಪಪನ್ನಂ ಸ್ವಪ್ನಸ್ಯ ಮಾಯಾಮಾತ್ರತ್ವಮ್ ॥

(ಭಾಷ್ಯಾರ್ಥ)

(ಪ್ರಶ್ನೆ):– ಹಾಗಾದರೆ ಸ್ವಪ್ನವು ಮಾಯಾಮಯವಾಗಿರುವದರಿಂದ (ಅದರಲ್ಲಿ) ಪರಮಾರ್ಥದ ಗಂಧವೂ ಇಲ್ಲವಷ್ಟೆ ?

(ಉತ್ತರ):– ಹಾಗಲ್ಲ, ಎನ್ನುತ್ತೇವೆ. ಏಕೆಂದರೆ ಮುಂದೆ ಆಗುವ ಒಳ್ಳೆಯದು, ಕೆಟ್ಟದ್ದು – ಇವುಗಳಿಗೆ (ಅದು) ಸೂಚಕವೂ ಆಗಿರುತ್ತದೆ. ಆದ್ದರಿಂದಲೇ "ಯಾವಾಗ ಕಾಮ್ಯಕರ್ಮಗಳ(ನ್ನು ಮಾಡುತ್ತಿರುವ)ಲ್ಲಿ ಸ್ವಪ್ನಗಳಲ್ಲಿ ಸ್ತ್ರೀಯನ್ನು ಕಾಣುತ್ತಾನೋ ಆಗ ಆ ಸ್ವಪ್ನದರ್ಶನದಲ್ಲಿ ಸಮೃದ್ಧಿಯನ್ನು ತಿಳಿಯಬೇಕು" (ಛಾಂ. ೫-೨-೯) ಎಂದು ಶ್ರುತಿಯಲ್ಲಿದೆ; ಮತ್ತು "ಕಪ್ಪಾಗಿ ಕರಿಯಹಲ್ಲಿನವನಾದ ಪುರುಷನನ್ನು ಕಂಡರೆ ಅವು ಇವನನ್ನು ಕೊಲ್ಲುವದು" (ಐ. ಆ. ೩-೨-೪) ಎಂಬುದುಮುಂತಾಗಿರುವ ಸ್ವಪ್ನಗಳಿಂದ ಬಹುಕಾಲ ಬದುಕಿರುವದಿಲ್ಲ[1]ವೆಂದು ಸೂಚಿತವಾಗಿರುತ್ತದೆ ಎಂದು ಶ್ರುತಿಯಿದೆ. ಸ್ವಪ್ನಾ

---

1. ಈ ಪ್ರಕರಣವೇ "ನ ಚಿರಮಿವ ಜೀವಸ್ಯತೀತಿ ವಿದ್ಯಾತ್" ಎಂಬವನ್ನು ವಿಷ[illegible]ವಕ್ಕೆ ಬಂದಿರುತ್ತದೆ.

ಧ್ಯಾಯವನ್ನು[1] ಒಪ್ಪಿದರೆ, "ಆನೆಯನ್ನು ಹತ್ತುವದು ಮುಂತಾದವುಗಳು ಒಳ್ಳೆಯವು; ಕತ್ತೆಯ ಮೇಲೆ (ಕುಳಿತು) ಹೋಗುವದು ಮುಂತಾದವು ಕೆಟ್ಟವು" ಎಂದು ಹೇಳುತ್ತಾರೆ. ಕೆಲಕೆಲವು ಮಂತ್ರಗಳು, ದೇವತೆಗಳು, ದ್ರವ್ಯಗಳು– ಇವುಗಳ ನಿಮಿತ್ತದಿಂದಾದ ಕೆಲವು ಸ್ವಪ್ನಗಳು ಸತ್ಯಾರ್ಥದ ವಾಸನೆಯಿಂದೊಡಗೂಡಿರುತ್ತವೆ ಎಂದು ತಿಳಿಯುತ್ತಾರೆ. **ಅಲ್ಲಿಯೂ ಸೂಚಿತವಾಗುವ ವಸ್ತುವು ಸತ್ಯವಾಗಲಿ, ಸೂಚಕವಾದ ಸ್ತ್ರೀದರ್ಶನವೇ ಮುಂತಾದವುಗಳು ಹುಸಿಯೇ ಆಗಿರುವವು; ಏಕೆಂದರೆ ಅವು ಬಾಧಿತವಾಗುತ್ತವೆ**– ಎಂದು ಅಭಿಪ್ರಾಯ[2]. ಆದ್ದರಿಂದ ಸ್ವಪ್ನವು ಮಾಯಾಮಯವೆಂಬುದು ಯುಕ್ತ.

## ಪೂರ್ವಪಕ್ಷದ ಆಕ್ಷೇಪಗಳಿಗೆ ಪರಿಹಾರ

(ಭಾಷ್ಯ)

೫೫೮. ಯದುಕ್ತಮ್ "ಆಹ ಹಿ" (೩–೨–೧) ಇತಿ ತದೇವಂ ಸತಿ ಭಾಕ್ತಂ ವ್ಯಾಖ್ಯಾತವ್ಯಮ್ । ಯಥಾ ಲಾಙ್ಗಲಂ ಗವಾದೀನ್ ಉದ್ವಹತಿ ಇತಿ ನಿಮಿತ್ತಮಾತ್ರತ್ವಾತ್ ಏವಮುಚ್ಯತೇ । ನ ತು ಪ್ರತ್ಯಕ್ಷಮೇವ ಲಾಙ್ಗಲಂ ಗವಾದೀನ್ ಉದ್ವಹತಿ ಏವಂ ನಿಮಿತ್ತಮಾತ್ರತ್ವಾತ್ ಸುಪ್ತೋ ರಥಾದೀನ್ ಸೃಜತೇ ಸ ಹಿ ಕರ್ತಾ ಇತಿ ಚ ಉಚ್ಯತೇ । ನ ತು ಪ್ರತ್ಯಕ್ಷಮೇವ ಸುಪ್ತೋ ರಥಾದೀನ್ ಸೃಜತಿ । ನಿಮಿತ್ತತ್ವಂ ತ್ವಸ್ಯ ರಥಾದಿಪ್ರತಿಭಾನನಿಮಿತ್ತಮೋದತ್ರಾಸಾದಿದರ್ಶನಾತ್ ತನ್ನಿಮಿತ್ತಭೂತಯೋಃ ಸುಕೃತದುಷ್ಕೃತಯೋಃ ಕರ್ತೃತ್ವೇನ ಇತಿ ವಕ್ತವ್ಯಮ್ । ಅಪಿ ಚ ಜಾಗರಿತೇ ವಿಷಯೇನ್ದ್ರಿಯಸಂಯೋಗಾತ್ ಆದಿತ್ಯಾದಿಜ್ಯೋತಿರ್ವ್ಯತಿಕರಾಚ್ಚ ಆತ್ಮನಃ ಸ್ವಯಂಜ್ಯೋತಿಷ್ಟ್ವಂ ದುರ್ವಿವೇಚನಮ್ ಇತಿ ತದ್ವಿವೇಚನಾಯ ಸ್ವಪ್ನ ಉಪನ್ಯಸ್ತಃ । ತತ್ರ ಯದಿ ರಥಾದಿಸೃಷ್ಟಿವಚನಂ ಶ್ರುತ್ಯಾ ನೀಯೇತ ತದಾ ಸ್ವಯಂಜ್ಯೋತಿಷ್ಟ್ವಂ ನ ನಿರ್ಣೀತಂ ಸ್ಯಾತ್ । ತಸ್ಮಾತ್ ರಥಾದ್ಯಭಾವವಚನಂ ಶ್ರುತ್ಯಾ ರಥಾದಿಸೃಷ್ಟಿವಚನಂ ತು ಭಕ್ತ್ಯಾ ಇತಿ ವ್ಯಾಖ್ಯೇಯಮ್ । ಏತೇನ ನಿರ್ಮಾಣಶ್ರವಣಂ (೩–೨–೨) ವ್ಯಾಖ್ಯಾತಮ್ । ಯದಪ್ಯುಕ್ತಮ್ ಪ್ರಾಜ್ಞಮೇನಂ ನಿರ್ಮಾತಾರಮಾಮನನ್ತಿ ಇತಿ ತದಪ್ಯಸತ್ । ಶ್ರುತ್ಯನ್ತರೇ "ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ ಸ್ವೇನ ಭಾಸಾ ಸ್ವೇನ ಜ್ಯೋತಿಷಾ ಪ್ರಸ್ವಪಿತಿ" (ಬೃ. ೪–೩–೯) ಇತಿ ಜೀವವ್ಯಾಪಾರಶ್ರವಣಾತ್ । ಇಹಾಪಿ "ಯ ಏಷ ಸುಪ್ತೇಷು ಜಾಗರ್ತಿ"

---

1. ಸ್ವಪ್ನಾಧ್ಯಾಯವು ಒಂದು ಗ್ರಂಥವೋ ಗ್ರಂಥದ ಒಂದು ಅಧ್ಯಾಯವೋ ತಿಳಿಯಲಿಲ್ಲ.

2. ಸೂಚಕವೂ ಸ್ವಪ್ನಕಾಲಕ್ಕೆ ಸತ್ಯವೇ. ೨-೧-೧೪ (ಭಾ. ಭಾ. ೪೩೭)ವನ್ನು ನೋಡಿರಿ.

(೨-೨-೮) ಇತಿ ಪ್ರಸಿದ್ಧಾನುವಾದಾತ್ ಜೀವ ಏವಾಯಂ ಕಾಮಾನಾಂ ನಿರ್ಮಾತಾ ಸಂಕೀರ್ತ್ಯತೇ । ತಸ್ಯ ತು ವಾಕ್ಯಶೇಷೇಣ "ತದೇವ ಶುಕ್ರಂ ತದ್ಬ್ರಹ್ಮ" ಇತಿ ಜೀವಭಾವಂ ವ್ಯಾವರ್ತ್ಯ ಬ್ರಹ್ಮಭಾವ ಉಪದಿಶ್ಯತೇ "ತತ್ತ್ವಮಸಿ" (ಛಾಂ. ೬-೮-೭) ಇತ್ಯಾದಿವತ್ ಇತಿ ನ ಬ್ರಹ್ಮಪ್ರಕರಣಂ ವಿರುಧ್ಯತೇ । ನ ಚ ಅಸ್ಮಾಭಿಃ ಸ್ವಪ್ನೇಽಪಿ ಪ್ರಾಜ್ಞವ್ಯಾಪಾರಃ ಪ್ರತಿಷಿಧ್ಯತೇ । ತಸ್ಯ ಸರ್ವೇಶ್ವರತ್ವಾತ್ ಸರ್ವಾಸ್ವಪಿ ಅವಸ್ಥಾಸು ಅಧಿಷ್ಠಾತೃತ್ವೋಪಪತ್ತೇಃ । ಪಾರಮಾರ್ಥಿಕಸ್ತು ನಾಯಂ ಸಂಧ್ಯಾಶ್ರಯಃ ಸರ್ಗೋ ವಿಯದಾದಿಸರ್ಗವತ್ ಇತ್ಯೇತಾವತ್ ಪ್ರತಿಪಾದ್ಯತೇ ॥

(ಭಾಷ್ಯಾರ್ಥ)

"ಏಕೆಂದರೆ (ಶ್ರುತಿಯು) ಹೇಳುತ್ತದೆ" (೩-೨-೧) ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದನ್ನು ಹೀಗಿರುವದರಿಂದ ಗೌಣವೆಂದು ವಿವರಿಸಬೇಕು. ಹೇಗೆ 'ನೇಗಿಲು ಎತ್ತು ಮುಂತಾದವುಗಳನ್ನು ಹೊರುತ್ತದೆ' ಎಂದು ನಿಮಿತ್ತಮಾತ್ರವಾಗಿರುವದರಿಂದ ಹಾಗೆನ್ನುವರೋ (ಹಾಗೆಯೇ ಇದು)[1] ; ನೇಗಿಲು, ಪ್ರತ್ಯಕ್ಷವಾಗಿಯೇ ಎತ್ತು ಮುಂತಾದವುಗಳನ್ನು ಹೊರುವದಿಲ್ಲವಷ್ಟೆ. ಹಾಗೆಯೇ ನಿಮಿತ್ತಮಾತ್ರವಾಗಿರುವದರಿಂದ ನಿದ್ರಿಸಿದವನು ರಥವೇ ಮುಂತಾದವುಗಳನ್ನು ಸೃಜಿಸುತ್ತಾನೆ; ಅವನು ಕರ್ತೃವಲ್ಲವೆ ? ಎಂದು (ಶ್ರುತಿ) ಹೇಳುತ್ತದೆ. (ಇಷ್ಟೇ) ಹೊರತು ಪ್ರತ್ಯಕ್ಷವಾಗಿಯೇ ನಿದ್ರಿಸುತ್ತಿರುವವನು ರಥಾದಿಗಳನ್ನು ಸೃಜಿಸುವದಿಲ್ಲ. ಇವನು[2] ನಿಮಿತ್ತವಾಗಿರುತ್ತಾನೆಂಬುದು ರಥಾದಿನಿಮಿತ್ತವಾದ ಸಂತೋಷ, ಭಯ– ಮುಂತಾದವುಗಳನ್ನು ಅನುಭವಿಸುವದರಿಂದ ಅವಕ್ಕೆ ನಿಮಿತ್ತವಾಗಿರುವ ಸುಕೃತದುಷ್ಕೃತಗಳನ್ನು ಮಾಡುವದರಿಂದ ಎಂದು ಹೇಳಬೇಕು. ಇದೂ ಅಲ್ಲದೆ ಎಚ್ಚರದಲ್ಲಿ ವಿಷಯೇಂದ್ರಿಯಗಳ ಸಂಯೋಗವಾಗುವದರಿಂದಲೂ ಸೂರ್ಯನೇ ಮುಂತಾದವುಗಳ ಬೆಳಕಿನ ಸಂಬಂಧವಿರುವದರಿಂದಲೂ ಆತ್ಮನಿಗೆ ಸ್ವಯಂಜ್ಯೋತಿಷ್ಟ್ವವಿದೆ ಎಂಬುದನ್ನು ವಿಂಗಡಿಸಿತೋರಿಸುವದು ಕಷ್ಟವಾಗಿದೆಯಾಗಿ ಅದನ್ನು ವಿಂಗಡಿಸಿ ತೋರಿಸುವದಕ್ಕಾಗಿ ಸ್ವಪ್ನವನ್ನು ಹೇಳಿರುತ್ತದೆ. ಅಲ್ಲಿಯೂ ರಥಾದಿಗಳನ್ನು ಸೃಷ್ಟಿಮಾಡುವನೆಂಬ ವಚನವನ್ನು ಶ್ರುತಿಗೆ ವಿವಕ್ಷಿತವೆಂದು ಮಾಡಿದರೆ ಆಗ ಸ್ವಯಂಜ್ಯೋತಿಷ್ಟ್ವವನ್ನು ನಿರ್ಣಯಿಸಿದಂತೆ ಆಗುವದಿಲ್ಲ. ಆದ್ದರಿಂದ ರಥಾದಿಗಳಿಲ್ಲವೆಂಬ ವಚನವು ಶ್ರುತಿಗೆ (ವಿವಕ್ಷಿತ)ವೆಂದೂ ರಥಾದಿಗಳನ್ನು ಸೃಷ್ಟಿಮಾಡುತ್ತಾ

---

1. ಎತ್ತು ಮುಂತಾದವುಗಳು ಜೀವಿಸುವದಕ್ಕೆ ನೇಗಿಲು ನಿಮಿತ್ತವು, ನೇಗಿಲಿಗಾಗಿ- ಉಳುವದಕ್ಕಾಗಿ- ಎತ್ತು ಮುಂತಾದವುಗಳನ್ನು ಸಾಕುತ್ತಾರೆ.

ನೆಂಬ ವಚನವಾದರೋ ಗೌಣವಾಗಿ ಎಂದು ವಿವರಿಸಬೇಕಾಯಿತು. ಇದರಿಂದ ನಿರ್ಮಾಣಶ್ರುತಿಯನ್ನು ವ್ಯಾಖ್ಯಾನಮಾಡಿದಂತೆ ಆಯಿತು[1].

ಇನ್ನು ಈ ನಿರ್ಮಾತೃವು ಪ್ರಾಜ್ಞನೆಂದು (ಶ್ರುತಿಗಳಲ್ಲಿ) ಹೇಳಿದೆ ಎಂದು ಹೇಳಿತ್ತಷ್ಟೆ. ಅದೂ ಸರಿಯಲ್ಲ; ಏಕೆಂದರೆ "ತಾನೇ ಅದನ್ನು ಕೊಂದು (ಕೆಡಹಿ ನಿಶ್ಚೇಷ್ಟಿತವಾಗಿ ಮಾಡಿ) ತಾನೇ (ವಾಸನಾಶರೀರವನ್ನು) ನಿರ್ಮಿಸಿಕೊಂಡು ತನ್ನ ಕಾಂತಿಯಿಂದ ತನ್ನ ಜ್ಯೋತಿಯಿಂದ ನಿದ್ರಿಸುತ್ತಿರುತ್ತಾನೆ" (ಬೃ. ೪-೩-೯) ಎಂದು ಜೀವನ ವ್ಯಾಪಾರವನ್ನೇ ಶ್ರುತಿಯಲ್ಲಿ ಹೇಳಿರುತ್ತದೆ. ಇಲ್ಲಿಯೂ "ಯಾವ ಈ ಪುರುಷನು (ವಿಾಕ್ಷವರು) ನಿದ್ರಿಸುತ್ತಿರುವಲ್ಲಿ ಎಚ್ಚತ್ತಿರುವನೋ" (ಕ. ೨-೨-೮) ಎಂದು ಪ್ರಸಿದ್ಧವಾಗಿರುವದನ್ನೇ ಅನುವಾದಮಾಡಿಕೊಂಡಿರುವದರಿಂದ ಕಾಮಗಳನ್ನು ನಿರ್ಮಿಸಿಕೊಳ್ಳುವ ಈ ಜೀವನನ್ನೇ ಹೇಳಿದೆ (ಎನ್ನಬೇಕು). ಆದರೆ ವಾಕ್ಯಶೇಷದಿಂದ "ಅದೇ ಶುದ್ಧವಾದದ್ದು, ಅದೇ ಬ್ರಹ್ಮವು" ಎಂದು ಅವನ ಜೀವಭಾವವನ್ನು ತಳ್ಳಿಹಾಕಿ "ಅದೇ ನೀನು" (ಛಾಂ. ೬-೮-೭) ಎಂದು ಮುಂತಾದ (ಶ್ರುತಿಗಳಲ್ಲಿ ಹೇಗೋ) ಹಾಗೆ ಬ್ರಹ್ಮಭಾವವನ್ನು ಉಪದೇಶಿಸಿದೆ. ಆದ್ದರಿಂದ ಬ್ರಹ್ಮಪ್ರಕರಣಕ್ಕೆ (ಇದು) ವಿರುದ್ಧವಲ್ಲ. ಸ್ವಪ್ನದಲ್ಲಿ ಕೂಡ ನಾವು ಪ್ರಾಜ್ಞನ ವ್ಯವಹಾರವನ್ನು ತಲ್ಲಗಳೆಯುತ್ತಿಲ್ಲ; ಏಕೆಂದರೆ ಅವನು ಸರ್ವೇಶ್ವರನಾಗಿರುವದರಿಂದ ಎಲ್ಲಾ ಅವಸ್ಥೆಗಳಲ್ಲಿಯೂ ಆಳಬಹುದಾಗಿರುತ್ತದೆ. ಆದರೆ ಈ ಸಂಧ್ಯವನ್ನು ಆಶ್ರಯಿಸಿಕೊಂಡಿರುವ ಸೃಷ್ಟಿಯು ಆಕಾಶಾದಿಸೃಷ್ಟಿಯಂತೆ ಪಾರಮಾರ್ಥಿಕವಲ್ಲ ಎಂದಿಷ್ಟೇ ಹೇಳುತ್ತಿದೇವೆ.

## ಸ್ವಪ್ನವು ಮಾಯಾಮಯವೆಂಬಿದರ ಅಭಿಪ್ರಾಯ

(ಭಾಷ್ಯ)

೨೫೯. ನ ಚ ವಿಯದಾದಿಸರ್ಗಸ್ಯಾಪಿ ಆತ್ಯನ್ತಿಕಂ ಸತ್ಯತ್ವಮಸ್ತಿ। ಪ್ರತಿಪಾದಿತಂ ಹಿ "ತದನನ್ಯತ್ವಮಾರಮ್ಭಣಶಬ್ದಾದಿಭ್ಯಃ" (೨-೧-೧೪) ಇತ್ಯತ್ರ ಸಮಸ್ತಸ್ಯ ಪ್ರಪಞ್ಚಸ್ಯ ಮಾಯಾಮಾತ್ರತ್ವಮ್। ಪ್ರಾಕ್ತು ಬ್ರಹ್ಮಾತ್ಮತ್ವದರ್ಶನಾದ್ ವಿಯದಾದಿಪ್ರಪಞ್ಚೋ ವ್ಯವಸ್ಥಿತರೂಪೋ ಭವತಿ। ಸಂಧ್ಯಾಶ್ರಯಸ್ತು ಪ್ರಪಞ್ಚಃ ಪ್ರತಿದಿನಂ ಬಾಧ್ಯತ ಇತ್ಯತೋ ವೈಶೇಷಿಕಮಿದಂ ಸಂಧ್ಯಸ್ಯ ಮಾಯಾಮಾತ್ರತ್ವಮ್ ಉದಿತಮ್ ॥

(ಭಾಷ್ಯಾರ್ಥ)

ಆಕಾಶಾದಿಸೃಷ್ಟಿಗೂ ಕೂಡ ಆತ್ಯಂತಿಕವಾದ ಸತ್ಯತ್ವವಿರುವದಿಲ್ಲ; ಏಕೆಂದರೆ "ತದನನ್ಯತ್ವಮಾರಮ್ಭಣಶಬ್ದಾದಿಭ್ಯಃ" (೨-೧-೧೪) ಎಂಬಲ್ಲಿ ಇಡಿಯ

1. ಅದೂ ಗೌಣವೇ.

ಪ್ರಪಂಚವೇ ಮಾಯಾಮಾತ್ರವೇ ಆಗಿದೆ ಎಂದು ಪ್ರತಿಪಾದಿಸಲಾಗಿರುತ್ತದೆ. ಬ್ರಹ್ಮಾತ್ಮತ್ವದರ್ಶನಕ್ಕಿಂತ ಮೊದಲು ವಿಯದಾದಿಪ್ರಪಂಚವು ಇದ್ದಹಾಗೆಯೇ ಇದ್ದುಕೊಂಡಿರುತ್ತದೆ; ಆದರೆ ಸಂಧ್ಯಾಶ್ರಯವಾದ ಪ್ರಪಂಚವು ಪ್ರತಿದಿನವೂ ಬಾಧಿತವಾಗುತ್ತದೆ. ಆದ್ದರಿಂದ ಸಂಧ್ಯವು ಮಾಯಾಮಾತ್ರವೆಂದು (ನಾವು) ಹೇಳಿರುವದು (ಈ) ವಿಶೇಷವನ್ನು ತಿಳಿಸುವದಕ್ಕೆ[1].

**ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬನ್ಧವಿಪರ್ಯಯೌ ॥**

೫. ಪರ(ಮಾತ್ಮನ) ಧ್ಯಾನದಿಂದಲೇ (ಅವನ) ಮುಚ್ಚಿಕೊಂಡಿರುವ (ಶಕ್ತಿಯು ತೋರಿಕೊಳ್ಳುತ್ತದೆ). ಅವನಿಂದಲೇ ಅಲ್ಲವೆ, ಇವನಿಗೆ ಬಂಧವೂ (ಅದರ) ವಿಷಯವೂ (ಆಗುತ್ತವೆ) ?

## ಜೀವನ ಜ್ಞಾನೈಶ್ವರ್ಯಶಕ್ತಿಯು ಈಶ್ವರನ ವಶ

(ಭಾಷ್ಯ)

೨೬೦. ಅಥಾಪಿ ಸ್ಯಾತ್ ಪರಸ್ಯೈವ ತಾವತ್ ಆತ್ಮನೋಽಂಶೋ ಜೀವಃ, ಅಗ್ನೇರಿವ ವಿಸ್ಫುಲಿಙ್ಗಃ । ತತ್ರ ಏವಂ ಸತಿ ಯಥಾ ಅಗ್ನಿವಿಸ್ಫುಲಿಙ್ಗಯೋಃ ಸಮಾನೇ ದಹನಪ್ರಕಾಶನಶಕ್ತೀ ಭವತಃ ಏವಂ ಜೀವೇಶ್ವರಯೋರಪಿ ಜ್ಞಾನೈಶ್ವರ್ಯಶಕ್ತೀ । ತತಶ್ಚ ಜೀವಸ್ಯ ಜ್ಞಾನೈಶ್ವರ್ಯವಶಾತ್ ಸಾಂಕಲ್ಪಿಕೀ ಸ್ವಪ್ನೇ ರಥಾದಿಸೃಷ್ಟಿರ್ಭವಿಷ್ಯತಿ ಇತಿ । ಅತ್ರೋಚ್ಯತೇ । ಸತ್ಯಪಿ ಜೀವೇಶ್ವರಯೋರಂಶಾಂಶಿತ್ವೇ ಪ್ರತ್ಯಕ್ಷಮೇವ ಜೀವಸ್ಯ ಈಶ್ವರವಿಪರೀತಧರ್ಮತ್ವಮ್ । ಕಿಂ ಪುನರ್ಜೀವಸ್ಯ ಈಶ್ವರಸಮಾನಧರ್ಮತ್ವಂ ನಾಸ್ತ್ಯೇವ ? ನ ನಾಸ್ತ್ಯೇವ । ವಿದ್ಯಮಾನಮಪಿ ತತ್ ತಿರೋಹಿತಮ್ ಅವಿದ್ಯಾದಿ ವ್ಯವಧಾನಾತ್ । ತತ್ ಪುನಸ್ತಿರೋಹಿತಂ ಸತ್ ಪರಮೇಶ್ವರಮ್ ಅಭಿಧ್ಯಾಯತಃ ಯತಮಾನಸ್ಯ ಜನ್ತೋರ್ವಿಧೂತಧ್ವಾನ್ತಸ್ಯ ತಿಮಿರತಿರಸ್ಕೃತೇವ ದೃಕ್ಶಕ್ತಿಃ ಔಷಧವೀರ್ಯಾತ್ ಈಶ್ವರಪ್ರಸಾದಾತ್ ಸಂಸಿದ್ಧಸ್ಯ ಕಸ್ಯಚಿದೇವ ಆವಿರ್ಭವತಿ, ನ ಸ್ವಭಾವತ ಏವ ಸರ್ವೇಷಾಂ ಜನ್ತೂನಾಮ್ । ಕುತಃ ? ತತೋ ಹಿ ಈಶ್ವರಾತ್ ಹೇತೋಃ ಅಸ್ಯ ಜೀವಸ್ಯ ಬನ್ಧಮೋಕ್ಷೌ ಭವತಃ । ಈಶ್ವರಸ್ವರೂಪಾಪರಿಜ್ಞಾನಾತ್ ಬನ್ಧಃ, ತತ್ಸ್ವರೂಪಪರಿಜ್ಞಾನಾತ್ತು ಮೋಕ್ಷಃ । ತಥಾ ಚ ಶ್ರುತಿಃ । "ಜ್ಞಾತ್ವಾ ದೇವಂ ಸರ್ವಪಾಶಾಪಹಾನಿಃ ಕ್ಷೀಣೈಃ ಕ್ಲೇಶೈರ್ಜನ್ಮಮೃತ್ಯುಪ್ರಹಾಣಿಃ ।

---

1. ಸ್ವಪ್ನವು ವಿಶೇಷರೂಪದಿಂದ ಮಾಯಾಮಯ; ಲೌಕಿಕದೃಷ್ಟಿಯಿಂದಲೇ ಮಿಥ್ಯೆ. ಚೆನ್ನಾಗಿ ವಿಚಾರಮಾಡಿದರೆ ಜಾಗರಿತವೂ ಮಿಥ್ಯೆಯೇ ಆಗುತ್ತದೆ ಎಂದರ್ಥ. ಮಾ. ಕಾ. ವೈತಥ್ಯಪ್ರಕರಣವನ್ನು ನೋಡಿ.

ತಸ್ಯಾಭಿಧ್ಯಾನಾತ್ ತೃತೀಯಂ ದೇಹಭೇದೇ ವಿಶ್ವೈಶ್ವರ್ಯಂ ಕೇವಲ ಆಪ್ತಕಾಮಃ (ಶ್ವೇ. ೧-೧೧) ಇತ್ಯೇವಮಾದ್ಯಾ ॥

(ಭಾಷ್ಯಾರ್ಥ)

ಆದರೂ (ಪೂರ್ವಪಕ್ಷಿಯ ಮತವು) ಹೀಗಿರಬಹುದು. ಜೀವನು ಕಿಡಿಯು ಬೆಂಕಿಯ (ಅಂಶವಾಗಿರು)ವಂತೆ ಜೀವನಂತೂ ಪರಮಾತ್ಮನದೇ ಅಂಶವಾಗಿರುತ್ತಾನೆ. ಇದು ಹೀಗಿರುವಲ್ಲಿ ಹೇಗೆ ಬೆಂಕಿಕಿಡಿಗಳಿಗೆ ಸುಡುವದು, ಬೆಳಗುವದು –ಎಂಬ ಶಕ್ತಿಗಳು ಸಮಾನವಾಗಿಯೇ ಇರುತ್ತವೆಯೋ ಹಾಗೆಯೇ ಜೀವೇಶ್ವರರಿಗೂ ಜ್ಞಾನೈಶ್ವರ್ಯಶಕ್ತಿಗಳು (ಸಮಾನವಾಗಿರುತ್ತವೆ). ಆದ್ದರಿಂದ ಜೀವರಿಗೆ ಜ್ಞಾನೈಶ್ವರ್ಯಗಳ ವಶದಿಂದ ಸ್ವಪ್ನದಲ್ಲಿ ರಥಾದಿಗಳ ಸೃಷ್ಟಿಯು (ಅವನ) ಸಂಕಲ್ಪದಿಂದಲೇ ಆಗಬಹುದಲ್ಲ! ಇದಕ್ಕೆ ಹೇಳುತ್ತೇವೆ. ಜೀವೇಶ್ವರರಿಗೆ ಅಂಶಾಂಶಿಭಾವವು ಇದ್ದರೂ ಜೀವನಿಗೆ ಈಶ್ವರನಿಗಿಂತ ವಿಪರೀತವಾದ ಧರ್ಮವು ಇರುವದು ಪ್ರತ್ಯಕ್ಷವೇ ಆಗಿರುತ್ತದೆ.

(ಪ್ರಶ್ನೆ):– ಹಾಗಾದರೆ ಈಶ್ವರನಿಗೆ ಸಮಾನವಾದ ಧರ್ಮವು ಜೀವನಿಗೆ ಇಲ್ಲವೇ ಇಲ್ಲವೇನು ?

(ಉತ್ತರ):–ಇಲ್ಲವೇ ಇಲ್ಲವೆಂದಲ್ಲ. ಇದ್ದರೂ ಅದು ಅವಿದ್ಯಾದಿಗಳ ವ್ಯವಧಾನದಿಂದ ಮುಚ್ಚಿಕೊಂಡಿರುತ್ತದೆ. ಹಾಗೆ ಮುಚ್ಚಿಕೊಂಡಿರುವ ಅದು ಪರಮೇಶ್ವರನನ್ನು ಧ್ಯಾನಮಾಡಿ ಪ್ರಯತ್ನಿಸುವ ಜೀವನಿಗೆ ಅವಿದ್ಯೆಯು ನಾಶವಾದರೆ– ಕಣ್ಣು ಪರೆಯಿಂದ ಮುಚ್ಚಿಹೋಗಿದ್ದ ದೃಕ್ಶಕ್ತಿಯು ಔಷಧಿವೀರ್ಯದಿಂದ ಹೇಗೆ (ತೋರಿಕೊಳ್ಳುವದೋ ಹಾಗೆ)– ಈಶ್ವರನ ಪ್ರಸಾದದಿಂದ ಸಂಸಿದ್ಧನಾದ ಯಾವನೋ ಒಬ್ಬನಿಗೆ ತೋರಿಕೊಳ್ಳುವದೇ ಹೊರತು ಸ್ವಭಾವದಿಂದ ಎಲ್ಲಾ ಜೀವರುಗಳಿಗೂ (ತೋರಿಕೊಳ್ಳುತ್ತಿರು)ವದಿಲ್ಲ. ಏಕೆ? ಎಂದರೆ ಆ ಈಶ್ವರನೆಂಬ ಹೇತುವಿನಿಂದಲೇ ಈ ಜೀವನಿಗೆ ಬಂಧಮೋಕ್ಷಗಳು ಆಗುತ್ತವೆ. ಈಶ್ವರಸ್ವರೂಪವನ್ನು ಅರಿಯದ್ದರಿಂದ ಬಂಧವು, ಅವನ ಸ್ವರೂಪವನ್ನು ಅರಿತುಕೊಂಡದ್ದರಿಂದಲೇ ಮೋಕ್ಷವು. ಹಾಗೆಂದು "ದೇವನನ್ನು ಅರಿತುಕೊಂಡರೆ ಸರ್ವನಾಶಗಳೂ ಹೋಗುವವು; ಕ್ಲೇಶಗಳು ಸವೆದರೆ ಜನ್ಮಮೃತ್ಯುಗಳು ತೊಲಗುವವು. ಆ (ಈಶ್ವರನ) ಅಭಿಧ್ಯಾಯದಿಂದ ದೇಹವು ನಾಶವಾದ ಬಳಿಕ ಮೂರನೆಯದಾದ ವಿಶ್ವೈಶ್ವರ್ಯವುಂಟಾಗುವದು.[1] ಕೇವಲನಾಗು

1. ಇಲ್ಲಿ ತೃತೀಯವೆಂದರೇನು ಎಂಬ ಬಗ್ಗೆ ಸಂಶಯವಿದೆ: ವ್ಯಾಖ್ಯಾನಗಳಲ್ಲಿಯೂ ಶ್ವೇತಾಶ್ವತರಭಾಷ್ಯದಲ್ಲಿಯೂ ಬೇರೆಬೇರೆಯ ವಿವರಣವಿದೆ. ನಿರ್ಗುಣಜ್ಞಾನದ ಮೂಲಕ ಸದ್ಯೋಮುಕ್ತಿಯನ್ನೂ ಧ್ಯಾನದಿಂದ ಕ್ರಮಮುಕ್ತಿಯನ್ನೂ ಹೇಳಿಮತ್ತದೆ ಎಂದು ವ್ಯಾಖ್ಯಾನಕಾರರು ಬರೆದಿರುತ್ತಾರೆ. ಈ ವಿಷಯವನ್ನು ಶ್ವೇತಾಶ್ವತರಭಾಷ್ಯದ ಅನುವಾದದಲ್ಲಿ ಚರ್ಚಿಸಲಾಗುವದು.

ವನು, ಆಪ್ತಕಾಮನಾಗುವನು" (ಶ್ವೇ. ೧–೧೧) ಎಂದುಮುಂತಾಗಿರುವ ಶ್ರುತಿಯು (ಹೇಳುತ್ತದೆ).

**ದೇಹಯೋಗಾದ್ವಾ ಸೋಽಪಿ ॥ ೬ ॥**

೬. ಅದೂ ದೇಹಯೋಗದಿಂದಲೇ.

(ಭಾಷ್ಯ)

೪೬೧. ಕಸ್ಮಾತ್ ಪುನರ್ಜೀವಃ ಪರಮಾತ್ಮಾಂಶ ಏವ ಸನ್ ತಿರಸ್ಕೃತ ಜ್ಞಾನೈಶ್ವರ್ಯೋ ಭವತಿ ? ಯುಕ್ತಂ ತು ಜ್ಞಾನೈಶ್ವರ್ಯಯೋಃ ಅತಿರಸ್ಕೃತತ್ವಂ ವಿಸ್ಫುಲಿಙ್ಗಸ್ಯೇವ ದಹನಪ್ರಕಾಶಯೋರಿತಿ ಉಚ್ಯತೇ । ಸತ್ಯಮೇವೈತತ್ । ಸೋಽಪಿ ತು ಜೀವಸ್ಯ ಜ್ಞಾನೈಶ್ವರ್ಯತಿರೋಭಾವೋ ದೇಹಯೋಗಾದ್ ದೇಹೇನ್ದ್ರಿಯಮನೋಬುದ್ಧಿವಿಷಯವೇದನಾದಿಯೋಗಾತ್ ಭವತಿ । ಅಸ್ತಿ ಚ ಅತ್ರೋಪಮಾ । ಯಥಾ ಅಗ್ನೇರ್ದಹನಪ್ರಕಾಶನಸಂಪನ್ನಸ್ಯಾಪಿ ಅರಣಿ ಗತಸ್ಯ ದಹನಪ್ರಕಾಶನೇ ತಿರೋಹಿತೇ ಭವತಃ, ಯಥಾ ವಾ ಭಸ್ಮಚ್ಛನ್ನಸ್ಯ, ಏವಮ್ ಅವಿದ್ಯಾಪ್ರತ್ಯುಪಸ್ಥಾಪಿತನಾಮರೂಪಕೃತದೇಹಾದ್ಯುಪಾಧಿ ಯೋಗಾತ್ ತದವಿವೇಕಭ್ರಮಕೃತೋ ಜೀವಸ್ಯ ಜ್ಞಾನೈಶ್ವರ್ಯತಿರೋ ಭಾವಃ । ವಾಶಬ್ದೋ ಜೀವಸ್ಯ ಈಶ್ವರಾದನ್ಯತ್ವಾಶಙ್ಕಾವ್ಯಾವೃತ್ತ್ಯರ್ಥಃ । ನನು ಅನ್ಯ ಏವ ಜೀವ ಈಶ್ವರಾತ್ ಅಸ್ತು ತಿರಸ್ಕೃತಜ್ಞಾನೈಶ್ವರ್ಯತ್ವಾತ್, ಕಿಂ ದೇಹಯೋಗಕಲ್ಪನಯಾ ? ನೇತ್ಯುಚ್ಯತೇ । ನ ಹಿ ಅನ್ಯತ್ವಂ ಜೀವಸ್ಯ ಈಶ್ವರಾತ್ ಉಪಪದ್ಯತೇ "ಸೇಯಂ ದೇವತೈಕ್ಷತ" (ಛಾಂ. ೬–೩–೨) ಇತಿ ಉಪಕ್ರಮ್ಯ "ಅನೇನ ಜೀವೇನಾತ್ಮನಾನುಪ್ರವಿಶ್ಯ" (ಛಾಂ. ೬–೩–೨) ಇತಿ ಆತ್ಮಶಬ್ದೇನ ಜೀವಸ್ಯ ಪರಾಮರ್ಶಾತ್; "ತತ್ ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ" (ಛಾಂ. ೬–೮–೭) ಇತಿ ಚ ಜೀವಾಯ ಉಪದಿಶತಿ ಈಶ್ವರಾತ್ಮ ತ್ವಮ್ । ಅತೋಽನನ್ಯ ಏವ ಈಶ್ವರಾತ್ ಜೀವಃ ಸನ್ ದೇಹಯೋಗಾತ್ ತಿರೋಹಿತಜ್ಞಾನೈಶ್ವರ್ಯೋ ಭವತಿ । ಅತಶ್ಚ ನ ಸಾಂಕಲ್ಪಿಕೀ ಜೀವಸ್ಯ ಸ್ವಪ್ನೇ ರಥಾದಿಸೃಷ್ಟಿರ್ಘಟತೇ । ಯದಿ ಚ ಸಾಂಕಲ್ಪಿಕೀ ಸ್ವಪ್ನೇ ರಥಾದಿ ಸೃಷ್ಟಿಃ ಸ್ಯಾತ್ ನೈವ ಅನಿಷ್ಟಂ ಕಶ್ಚಿತ್ ಸ್ವಪ್ನಂ ಪಶ್ಯೇತ್ । ನ ಹಿ ಕಶ್ಚಿತ್ ಅನಿಷ್ಟಂ ಸಂಕಲ್ಪಯತೇ । ಯತ್ಪುನರುಕ್ತಮ್ ಜಾಗರಿತದೇಶಶ್ರುತಿಃ ಸ್ವಪ್ನಸ್ಯ ಸತ್ಯತ್ವಂ ಖ್ಯಾಪಯತೀತಿ, ನ ತತ್ಸಾಮ್ಯವಚನಂ ಸತ್ಯತ್ವಾಭಿಪ್ರಾಯಮ್ । ಸ್ವಯಂಜ್ಯೋತಿಷ್ಟ್ವವಿರೋಧಾತ್ । ಶ್ರುತ್ಯೈವ ಚ ಸ್ವಪ್ನೇ ರಥಾದ್ಯಭಾವಸ್ಯ ದರ್ಶಿತತ್ವಾತ್ ಜಾಗರಿತಪ್ರಭವವಾಸನಾನಿರ್ಮಿತತ್ವಾತ್ ತು ಸ್ವಪ್ನಸ್ಯ ತತ್ತುಲ್ಯನಿರ್ಭಾಸತ್ವಾಭಿಪ್ರಾಯಂ ತತ್ । ತಸ್ಮಾದುಪಪನ್ನಃ ಸ್ವಪ್ನಸ್ಯ ಮಾಯಾಮಾತ್ರತ್ವಮ್ ॥

(ಭಾಷ್ಯಾರ್ಥ)

(ಆಕ್ಷೇಪ) :– ಜೀವನು ಪರಮಾತ್ಮನ ಅಂಶವೇ ಆಗಿದ್ದುಕೊಂಡಿದ್ದರೂ (ಅವನ) ಜ್ಞಾನೈಶ್ವರ್ಯಗಳು ಮರೆಯಾಗಿರುವದೇಕೆ ? ಕಿಡಿಗೆ ಸುಡುವಿಕೆ, ಬೆಳಗುವಿಕೆ– ಇವು ಹೇಗೆ (ಮರೆಯಾಗದೆ ಇರುವವೋ ಹಾಗೆ) ಜ್ಞಾನೈಶ್ವರ್ಯಗಳು ಮರೆಯಾಗದೆ ಇರುವವೇ ಯುಕ್ತವಾಗಿದೆಯಲ್ಲ !

(ಪರಿಹಾರ) :– ಇದು ನಿಜವೇ. ಆದರೆ ಜೀವನ ಜ್ಞಾನೈಶ್ವರ್ಯಗಳ ಆ ಮರೆಯೂ ದೇಹಯೋಗದಿಂದ, ಅಂದರೆ ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ವಿಷಯ, ವೇದನೆ– ಮುಂತಾದವುಗಳ ಸಂಬಂಧದಿಂದ ಆಗಿರುತ್ತದೆ. ಇದಕ್ಕೆ ಉಪಮಾನವೂ ಇದೆ. ಹೇಗೆ ಬೆಂಕಿಗೆ ಸುಡುವದು ಬೆಳಗುವದು– ಇವುಗಳು (ಧರ್ಮ)ವಾಗಿದ್ದರೂ ಅರಣಿಯಲ್ಲಿರುವಾಗ (ಅವು) ಮರೆಯಾಗಿರುತ್ತವೆಯೋ, ಅಥವಾ ಹೇಗೆ ಬೂದಿ ಮುಚ್ಚಿರುವಾಗ ಬೆಂಕಿಗೆ (ಅವು ಮುಚ್ಚಿಕೊಂಡಿರುತ್ತವೆಯೋ) ಹಾಗೆಯೇ **ಅವಿದ್ಯೆಯು ತಂದೊಡ್ಡಿದ ನಾಮರೂಪಗಳಿಂದಾದ ದೇಹವೇ ಮುಂತಾದ ಉಪಾಧಿಗಳ ಸಂಬಂಧದಿಂದ ಅವುಗಳ ಅವಿವೇಕದಿಂದಾಗಿರುವ ಭ್ರಮದಿಂದ ಜೀವನಿಗೆ ಜ್ಞಾನೈಶ್ವರ್ಯಗಳ ಮರೆಯಾಗಿರುತ್ತದೆ.**

(ಸೂತ್ರದಲ್ಲಿರುವ) ವಾಶಬ್ದವು ಜೀವನು ಈಶ್ವರನಿಗಿಂತ ಬೇರೆಯೆಂಬ ಶಂಕೆಯನ್ನು ತಳ್ಳಿಹಾಕುವದಕ್ಕೆ ಬಂದಿರುತ್ತದೆ.

(ಆಕ್ಷೇಪ) :– ಜೀವನು ಈಶ್ವರನಿಗಿಂತ ಬೇರೆಯೇ ಎಂದಾಗಲಿ ! ಏಕೆಂದರೆ (ಅವನ) ಜ್ಞಾನೈಶ್ವರ್ಯಗಳು ಮರೆಯಾಗಿರುತ್ತವೆ. ದೇಹಸಂಬಂಧ(ದಿಂದ ಆಗಿವೆ) ಎಂದು ಕಲ್ಪಿಸುವದರಿಂದ (ಆಗಬೇಕಾ)ದದ್ದೇನು ?

(ಪರಿಹಾರ) :– ಹಾಗಲ್ಲ, ಎನ್ನುತ್ತೇವೆ. ಜೀವನು ಈಶ್ವರನಿಗಿಂತ ಬೇರೆ ಎಂಬುದು ಯುಕ್ತವೇ ಅಲ್ಲ. ಏಕೆಂದರೆ "ಆ ಈ ದೇವತೆಯು (ಯೋಚಿಸಿ)ನೋಡಿತು" (ಛಾಂ. ೬–೩–೨) ಎಂದು ಉಪಕ್ರಮಿಸಿ "ಈ ಜೀವನೆಂಬ ಆತ್ಮನಿಂದ ಒಳಹೊಕ್ಕು" ಎಂದು ಆತ್ಮಶಬ್ದದಿಂದ ಜೀವನನ್ನು (ಶ್ರುತಿಯು) ಪರಾಮರ್ಶಿಸುತ್ತದೆ. ಮತ್ತು "ಅದು ಸತ್ಯವು, ಅದೇ ಆತ್ಮನು. ಶ್ವೇತಕೇತುವೆ, ಅದೇ ನೀನು" (ಛಾಂ. ೬–೮–೭) ಎಂದು ಜೀವನಿಗೆ ಈಶ್ವರಸ್ವರೂಪದವನೆಂದು ಉಪದೇಶಿಸಿರುತ್ತದೆ. ಆದ್ದರಿಂದ ಜೀವನು ಈಶ್ವರನಿಗಿಂತ ಅನನ್ಯನೇ ಆಗಿದ್ದರೂ ದೇಹಸಂಬಂಧದಿಂದ ಜ್ಞಾನೈಶ್ವರ್ಯಗಳು ಮರೆಯಾದವನಾಗಿರುತ್ತಾನೆ.

ಆದ್ದರಿಂದ ಸ್ವಪ್ನದಲ್ಲಿ ರಥಾದಿಗಳ ಸೃಷ್ಟಿಯು ಜೀವನ ಸಂಕಲ್ಪದಿಂದ ಆದದ್ದೆಂಬುದು, ಕೂಡುವದಿಲ್ಲ. ಸ್ವಪ್ನದಲ್ಲಿ ಆಗುವ ಸೃಷ್ಟಿಯು ಸಂಕಲ್ಪ

ದಿಂದಾಗಿದ್ದರೆ ಯಾವನೊಬ್ಬನೂ (ತನಗೆ) ಅನಿಷ್ಟವಾದ ಸ್ವಪ್ನವನ್ನು ನೋಡ ಬಾರದಾಗುವದು. ಏಕೆಂದರೆ ಯಾವನೂ ತನಗೆ ಅನಿಷ್ಟವಾದದ್ದನ್ನು ಸಂಕಲ್ಪಿಸಿಕೊಳ್ಳುವದಿಲ್ಲ.

ಇನ್ನು ಜಾಗರಿತದೇಶ(ದಲ್ಲಿ ಸ್ವಪ್ನವಾಗುವದೆಂದು ತಿಳಿಸುವ) ಶ್ರುತಿಯು ಸ್ವಪ್ನವು ಸತ್ಯವೆಂಬುದನ್ನು ತಿಳಿಸುತ್ತದೆ- ಎಂದು (ಪೂರ್ವಪಕ್ಷ)ದಲ್ಲಿ ಹೇಳಿತ್ತಷ್ಟೆ, ಆ ಹೋಲಿಕೆಯ ವಾಕ್ಯವು (ಸ್ವಪ್ನವು) ಸತ್ಯವೆಂಬ ಅಭಿಪ್ರಾಯದಿಂದ (ಹೇಳಿ)ದ್ದಲ್ಲ, ಏಕೆಂದರೆ (ಹಾಗಾದರೆ ಆತ್ಮನು) ಸ್ವಯಂಜ್ಯೋತಿ ಎಂಬುದಕ್ಕೆ ವಿರುದ್ಧವಾಗುತ್ತದೆ. ಮತ್ತು ಶ್ರುತಿಯೇ ಸ್ವಪ್ನದಲ್ಲಿ ರಥಾದಿಗಳು ಇರುವದಿಲ್ಲ ವೆಂದು ತಿಳಿಸಿರುತ್ತದೆ. ಆದರೆ ಸ್ವಪ್ನವು ಜಾಗರಿತದಿಂದುಂಟಾದ ವಾಸನೆ ಯಿಂದಾಗಿರುವದರಿಂದ ಅದಕ್ಕೆ ಸಮಾನವಾಗಿ ತೋರುತ್ತದೆ ಎಂಬ ಅಭಿಪ್ರಾಯ ದಿಂದ (ಹೊರಟಿರುವ) ವಚನವದು. ಆದ್ದರಿಂದ ಸ್ವಪ್ನವು ಮಾಯಾಮಯ ವೆಂಬುದು ಯುಕ್ತವೇ.

## ೨. ತದಭಾವಾಧಿಕರಣ (ಸೂ. ೭-೮)

(ಜೀವನಿಗೆ ಸುಷುಪ್ತಿಯು ಪರಮಾತ್ಮನಲ್ಲಿಯೇ ಆಗುತ್ತದೆ).

**ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಚ ॥ ೭ ॥**

೭. ಆ (ಸ್ವಪ್ನದ) ಅಭಾವವು ನಾಡಿಗಳಲ್ಲಿಯೂ ಆತ್ಮನಲ್ಲಿ ಯೂ. ಏಕೆಂದರೆ ಅದನ್ನು (ಹೇಳುವ) ಶ್ರುತಿಯಿದೆ.

### ಸುಷುಪ್ತಿಯ ಬಗ್ಗೆ ಸಂಶಯ

(ಭಾಷ್ಯ)

೨೬೨. ಸ್ವಪ್ನಾವಸ್ಥಾ ಪರೀಕ್ಷಿತಾ ಸುಷುಪ್ತಾವಸ್ಥಾ ಇದಾನೀಂ ಪರೀಕ್ಷ್ಯತೇ। ತತ್ರ ಏತಾಃ ಸುಷುಪ್ತಿವಿಷಯಾಃ ಶ್ರುತಯೋ ಭವನ್ತಿ। ಕ್ವಚಿತ್ ಶ್ರೂಯತೇ- "ತದ್ಯತ್ರೈತತ್ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯಾಸು ತದಾ ನಾಡೀಷು ಸೃಪ್ತೋ ಭವತಿ" (ಛಾಂ. ೮-೬-೩) ಇತಿ। ಅನ್ಯತ್ರ ತು ನಾಡೀರೇವ ಅನುಕ್ರಮ್ಯ ಶ್ರೂಯತೇ "ತಾಭಿಃ ಪ್ರತ್ಯವಸೃಪ್ಯ ಪುರೀತತಿ ಶೇತೇ" (ಬೃ. ೨-೧-೧೯) ಇತಿ। ತಥಾ ಅನ್ಯತ್ರ ನಾಡೀರೇವ ಅನುಕ್ರಮ್ಯ "ತಾಸು ತದಾ ಭವತಿ ಯದಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತ್ಯಥಾಸ್ಮಿನ್ ಪ್ರಾಣ ಏವೈಕಧಾ ಭವತಿ" (ಕೌ. ೪-೧೯) ಇತಿ। ತಥಾ ಅನ್ಯತ್ರ "ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿನ್ಛೇತೇ" (ಬೃ. ೨-೧-೧೭) ಇತಿ। ತಥಾ ಅನ್ಯತ್ರ "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾಂ. ೬-೮-೧) ಇತಿ "ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ

ವೇದ ನಾನ್ತರಮ್'' (ಬೃ. ೪-೩-೨೧) ಇತಿ ಚ । ತತ್ರ ಸಂಶಯಃ । ಕಿಮೇತಾನಿ ನಾಡ್ಯಾದೀನಿ ಪರಸ್ಪರನಿರಪೇಕ್ಷಾಣಿ ಭಿನ್ನಾನಿ ಸುಷುಪ್ತಿಸ್ಥಾನಾನಿ, ಆಹೋಸ್ವಿತ್ ಪರಸ್ಪರಾಪೇಕ್ಷಯಾ ಏಕಂ ಸುಷುಪ್ತಿಸ್ಥಾನಮ್ ಇತಿ ॥

(ಭಾಷ್ಯಾರ್ಥ)

ಸ್ವಪ್ನಾವಸ್ಥೆಯನ್ನು ಪರೀಕ್ಷಿಸಿದ್ದಾಯಿತು. ಸುಷುಪ್ತಾವಸ್ಥೆಯನ್ನು ಈಗ ಪರೀಕ್ಷಿಸಲಾಗುತ್ತದೆ. ಇಲ್ಲಿ ಈ ಸುಷುಪ್ತಿವಿಷಯವಾದ ಶ್ರುತಿಗಳಿವೆ : ಒಂದು ಕಡೆಯಲ್ಲಿ "ಹೀಗಿರುವಲ್ಲಿ ಎಲ್ಲಿ ಹೀಗೆ ಈ (ಜೀವನು) ಸುಪ್ತನಾಗಿ ಸಮಸ್ತನಾಗಿ[1] ಸಂಪ್ರಸನ್ನನಾಗಿ ಸ್ವಪ್ನವನ್ನು ಅರಿಯದೆ ಇರುವನೋ ಆಗ ಈ ನಾಡಿಗಳಲ್ಲಿ ಸೇರಿಕೊಂಡಿರುತ್ತಾನೆ" (ಛಾಂ. ೮-೬-೩) ಎಂದು ಶ್ರುತಿಯಲ್ಲಿರುತ್ತದೆ. ಆದರೆ ಮತ್ತೊಂದು ಕಡೆಯಲ್ಲಿ ನಾಡಿಗಳನ್ನೇ ಅನುಕ್ರಮದಿಂದ (ಹೇಳುವಾಗ) "ಅವುಗಳಲ್ಲಿ ಸೇರಿಕೊಂಡು ಪುರೀತತ್ತಿನಲ್ಲಿ ನಿದ್ರಿಸುತ್ತಾನೆ" (ಬೃ. ೨-೧-೧೯) ಎಂದು ಶ್ರುತಿಯಿದೆ. ಮತ್ತು ಮತ್ತೊಂದು ಕಡೆಯಲ್ಲಿ ನಾಡಿಗಳನ್ನೇ ಅನುಕ್ರಮದಿಂದ (ಹೇಳುವಾಗ) "ಯಾವಾಗ ನಿದ್ರಿಸಿದವನು ಯಾವ ಸ್ವಪ್ನವನ್ನೂ ಕಾಣುವದಿಲ್ಲವೋ ಆಗ ಅವುಗಳಲ್ಲಿ ಇರುತ್ತಾನೆ, ಆಗ ಈ ಪ್ರಾಣನಲ್ಲಿಯೇ ಒಂದಾಗಿರುತ್ತಾನೆ" (ಕೌ. ೪-೧೯) ಎಂದು (ಹೇಳಿದೆ). ಹೀಗೆಯೇ ಮತ್ತೊಂದು ಕಡೆಯಲ್ಲಿ "ಹೃದಯದೊಳಗೆ ಯಾವ ಆಕಾಶವಿದೆಯಲ್ಲ, ಅದರಲ್ಲಿ ನಿದ್ರಿಸುತ್ತಿರುತ್ತಾನೆ" (ಛಾ. ೨-೧-೧೭) ಎಂದು (ಹೇಳಿದೆ). ಹೀಗೆಯೇ ಮತ್ತೊಂದು ಕಡೆಯಲ್ಲಿ "ಸೋಮ್ಯನೆ, ಆಗ ಸತ್ತಿನೊಡನೆ ಒಂದಾಗಿರುತ್ತಾನೆ, ತನ್ನಲ್ಲಿ ಲಯವಾಗಿರುತ್ತಾನೆ" (ಛಾಂ.೬-೮-೩) ಎಂದು (ಹೇಳಿದೆ). ಹೀಗೆಯೇ "ಪ್ರಾಜ್ಞನಾದ ಆತ್ಮನಿಂದ ಆಲಿಂಗಿತನಾಗಿ ಹೊರಗಿನದನ್ನಾಗಲಿ ಒಳಗಿನದನ್ನಾಗಲಿ ಸ್ವಲ್ಪವೂ ಅರಿಯದೆ ಇರುತ್ತಾನೆ" (ಬೃ. ೪-೩-೨೧) ಎಂದು (ಹೇಳಿದೆ). ಇಲ್ಲಿ ಸಂಶಯವೇನೆಂದರೆ ಈ ನಾಡಿಗಳೇ ಮುಂತಾದವು ಒಂದನ್ನೊಂದು ಬಯಸದೆ (ಇರುವ) ಬೇರೆಬೇರೆಯ ಸುಷುಪ್ತಿಸ್ಥಾನಗಳೊ, ಅಥವಾ ಒಂದನ್ನೊಂದು ಬಯಸಿಕೊಂಡಿದ್ದು ಒಂದೇ ಸುಷುಪ್ತಿಸ್ಥಾನವೊ ?

## ಪೂರ್ವಪಕ್ಷ: ನಾಡ್ಯಾದಿಗಳು ಬೇರೆಬೇರೆ ಸುಷುಪ್ತಿಸ್ಥಾನಗಳು

(ಭಾಷ್ಯ)

೨೬೩. ಕಿಂ ತಾವತ್ ಪ್ರಾಪ್ತಮ್ ? ಭಿನ್ನಾನಿ ಇತಿ । ಕುತಃ? ಏಕಾರ್ಥತ್ವಾತ್ । ನ ಹಿ ಏಕಾರ್ಥಾನಾಂ ಕ್ವಚಿತ್ ಪರಸ್ಪರಾಪೇಕ್ಷತ್ವಂ ದೃಶ್ಯತೇ ವ್ರೀಹಿ

1. ಕರಣವೃತ್ತಿಗಳನ್ನೆಲ್ಲ ಉಪಸಂಹಾರಮಾಡಿಕೊಂಡು.

ಯವಾದೀನಾಮ್ । ನಾಡ್ಯಾದೀನಾಂ ತು ಏಕಾರ್ಥತಾ ಸುಷುಪ್ತೌ ದೃಶ್ಯತೇ "ನಾಡೀಷು ಸೃಪ್ತೋ ಭವತಿ" (ಛಾ. ೮-೬-೩), "ಪುರೀತತಿ ಶೇತೇ" (ಬೃ. ೨-೧-೧೯) ಇತಿ ಚ ತತ್ರ ತತ್ರ ಸಪ್ತಮೀನಿರ್ದೇಶಸ್ಯ ತುಲ್ಯತ್ವಾತ್ । ನನು ನೈವಂ ಸತಿ ಸಪ್ತಮೀನಿರ್ದೇಶೋ ದೃಶ್ಯತೇ "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾಂ. ೬-೮-೧) ಇತಿ । ನೈಷ ದೋಷಃ । ತತ್ರಾಪಿ ಸಪ್ತಮ್ಯರ್ಥಸ್ಯ ಗಮ್ಯಮಾನತ್ವಾತ್ । ವಾಕ್ಯಶೇಷೋ ಹಿ ತತ್ರ ಆಯತನೈಷೀ ಜೀವಃ ಸತ್ ಉಪಸರ್ಪತಿ ಇತ್ಯಾಹ –"ಅನ್ಯತ್ರಾಯತನಮಲಬ್ಧ್ವಾ ಪ್ರಾಣಮೇವೋಪಶ್ರಯತೇ" (ಛಾ. ೬-೮-೨) ಇತಿ ಪ್ರಾಣಶಬ್ದೇನ ತತ್ರ ಪ್ರಕೃತಸ್ಯ ಸತಃ ಉಪಾದಾನಾತ್ । ಆಯತನಂ ಚ ಸಪ್ತಮ್ಯರ್ಥಃ । ಸಪ್ತಮೀನಿರ್ದೇಶೋಽಪಿ ತತ್ರ ವಾಕ್ಯಶೇಷೇ ದೃಶ್ಯತೇ "ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹೇ" (ಛಾಂ. ೬-೯-೨) ಇತಿ[1] । ಸರ್ವತ್ರ ಚ ವಿಶೇಷವಿಜ್ಞಾನೋಪರಮಲಕ್ಷಣಂ ಸುಷುಪ್ತಂ ನ ವಿಶಿಷ್ಯತೇ । ತಸ್ಮಾತ್ ಏಕಾರ್ಥತ್ವಾತ್ ನಾಡ್ಯಾದೀನಾಂ ವಿಕಲ್ಪೇನ ಕದಾಚಿತ್ ಕಿಂಚಿತ್ ಸ್ಥಾನಂ ಸ್ವಾಪಾಯ ಉಪಸರ್ಪತೀತಿ "

(ಭಾಷ್ಯಾರ್ಥ)

ಮೊದಲನೆಯದಾಗಿ ಯಾವ (ಪಕ್ಷವು) ಬಂದೊದಗುತ್ತದೆ ? (ಇವು) ಬೇರೆ ಬೇರೆಯ ಸ್ಥಾನಗಳು. ಏಕೆ ? ಎಂದರೆ (ಇವು) ಏಕಾರ್ಥವಾಗಿರುವದರಿಂದ. ಏಕಾರ್ಥವಾಗಿರುವ ವ್ರೀಹಿ, ಯವ- ಮುಂತಾದವುಗಳು ಎಲ್ಲಿಯೂ ಒಂದನ್ನೊಂದು ಬಯಸುವದು ಕಂಡುಬರುವದಿಲ್ಲವಷ್ಟೆ[2]. ನಾಡ್ಯಾದಿಗಳು ಸುಷುಪ್ತಿಯೆಂಬ ಒಂದೇ ಪ್ರಯೋಜನಕ್ಕಾಗಿ ಎಂದು ಕಂಡುಬರುತ್ತವೆ; ಏಕೆಂದರೆ "ನಾಡಿಗಳಲ್ಲಿ ಸೇರಿದವನಾಗುತ್ತಾನೆ" (ಛಾ. ೮-೬-೩), "ಪುರೀತತ್ತಿನಲ್ಲಿ ನಿದ್ರಿಸುತ್ತಾನೆ" (ಬೃ. ೨-೧-೧೯) ಎಂದೂ ಅಲ್ಲಲ್ಲಿ ಸಪ್ತಮೀನಿರ್ದೇಶವು ಸಮಾನವಾಗಿರುತ್ತದೆ.

(ಆಕ್ಷೇಪ):- "ಸೋಮ್ಯನೆ, ಸತ್ತಿನೊಡನೆ, ಆಗ ಸಂಪನ್ನನಾಗಿರುತ್ತಾನೆ" (ಛಾಂ. ೬-೧-೧) ಎಂಬಲ್ಲಿ ಹಾಗೆ ಸತ್ತಿನ ವಿಷಯದಲ್ಲಿ ಸಪ್ತಮೀನಿರ್ದೇಶವು ಕಂಡುಬರುವದಿಲ್ಲವಲ್ಲ !

(ಪರಿಹಾರ):- ಇದು ದೋಷವಲ್ಲ. ಏಕೆಂದರೆ ಅಲ್ಲಿಯೂ ಸಪ್ತಮಿಯ ಅರ್ಥವು ತೋರಿಬರುತ್ತದೆ. ಹೇಗೆಂದರೆ ಅಲ್ಲಿ ವಾಕ್ಯಶೇಷವು ಆಯತನವನ್ನು ಬಯಸಿ ಜೀವನು ಸತ್ತಿನ ಬಳಿಗೆ ಬರುತ್ತಾನೆ ಎಂದು ಹೇಳುತ್ತದೆ. ಏಕೆಂದರೆ "ಇನ್ನೊಂದೆಡೆಯಲ್ಲಿ ಆಯತನವನ್ನು ಪಡೆಯದೆ ಪ್ರಾಣವನ್ನೇ ಆಶ್ರಯಿಸು

1. ಇಲ್ಲಿ ಒಂದು ಇತಿಯು ಬಿಟ್ಟುಹೋಗಿದೆಯೆಂದು ತೋರುತ್ತದೆ.

2. ಪುರೋಡಾಶವೆಂಬ ಒಂದಕ್ಕಾಗಿಯೇ ಉಪಯೋಗಿಸುವ ವ್ರೀಹಿ, ಯವ ಮುಂತಾದವುಗಳು ಎಲ್ಲವೂ ಸೇರಿ ಒಂದು ಸಾಧನವಾಗುವದಿಲ್ಲ.

ತ್ತಾನೆ" (ಛಾಂ.೬-೮-೨) ಎಂದು ಪ್ರಾಣಶಬ್ದದಿಂದ ಅಲ್ಲಿ ಪ್ರಕೃತವಾದ ಸತ್ತನ್ನೇ ತೆಗೆದುಕೊಂಡಿದೆ. ಆಯತನವಂತೂ ಸಪ್ತಮ್ಯರ್ಥವೇ, ಅಲ್ಲಿ ವಾಕ್ಯಶೇಷದಲ್ಲಿ "ಸತ್ತಿನಲ್ಲಿ ಒಂದಾಗಿ ಸೇರಿಕೊಂಡಿರುತ್ತೇವೆ -ಎಂದು ಅರಿಯದೆ ಇರುತ್ತಾರೆ" (ಛಾಂ. ೬-೯-೨) ಎಂದು ಸಪ್ತಮೀನಿರ್ದೇಶವೂ ಕಂಡುಬರುತ್ತದೆ.

ಮತ್ತು ಎಲ್ಲಾ ಕಡೆಯಲ್ಲಿಯೂ ವಿಶೇಷಜ್ಞಾನವು ನಿಂತುಹೋಗುವ ರೂಪದ ಸುಷುಪ್ತವು ಬೇರ್ಪಡದೆ ಇರುತ್ತದೆ. ಆದ್ದರಿಂದ (ಹೀಗೆ) ಏಕಾರ್ಥ ವಾಗಿರುವದರಿಂದ ನಾಡ್ಯಾದಿಗಳಲ್ಲಿ ಒಂದೊಂದು ಕಾಲದಲ್ಲಿ ಒಂದೊಂದು ಸ್ಥಾನವನ್ನು ನಿದ್ರೆಗಾಗಿ (ಜೀವನು) ಸೇರುತ್ತಾನೆ (ಎನ್ನಬೇಕು).

## ಸಿದ್ಧಾಂತ: ನಾಡ್ಯಾದಿಗಳೆಲ್ಲ ಸೇರಿ ಒಂದೇ ಸುಷುಪ್ತಿಸ್ಥಾನ

(ಭಾಷ್ಯ)

೨೬೪. ಏವಂ ಪ್ರಾಪ್ತೇ ಪ್ರತಿಪಾದ್ಯತೇ[1] "ತದಭಾವೋ ನಾಡೀಷು ಆತ್ಮನಿ ಚ" ಇತಿ। ತದಭಾವಃ ಇತಿ। ತಸ್ಯ ಪ್ರಕೃತಸ್ಯ ಸ್ವಪ್ನದರ್ಶನಸ್ಯ ಅಭಾವಃ ಸುಷುಪ್ತಮ್ ಇತ್ಯರ್ಥಃ। ನಾಡೀಷು ಆತ್ಮನಿ ಚ ಇತಿ ಸಮುಚ್ಚಯೇನ ಏತಾನಿ ನಾಡ್ಯಾದೀನಿ ಸ್ವಾಪಾಯ ಉಪೈತಿ ನ ವಿಕಲ್ಪೇನ ಇತ್ಯರ್ಥಃ। ಕುತಃ? ತಚ್ಛ್ರುತೇಃ। ತಥಾ ಹಿ। ಸರ್ವೇಷಾಮೇವ ನಾಡ್ಯಾದೀನಾಂ ತತ್ರ ತತ್ರ ಸುಷುಪ್ತಿಸ್ಥಾನತ್ವಂ ಶ್ರೂಯತೇ। ತಚ್ಚ ಸಮುಚ್ಚಯೇ ಸಂಗೃಹೀತಂ ಭವತಿ। ವಿಕಲ್ಪೇ ಹಿ ಏಷಾಂ ಪಕ್ಷೇ ಬಾಧಃ ಸ್ಯಾತ್। ನನು ಏಕಾರ್ಥತ್ವಾತ್ ವಿಕಲ್ಪೋ ನಾಡ್ಯಾದೀನಾಂ ವ್ರೀಹಿಯವಾದಿವತ್ ಇತ್ಯುಕ್ತಮ್। ನೇತ್ಯುಚ್ಯತೇ। ನ ಹಿ ಏಕವಿಭಕ್ತಿನಿರ್ದೇಶಮಾತ್ರೇಣ ಏಕಾರ್ಥತ್ವಂ ವಿಕಲ್ಪಶ್ಚ ಆಪತತಿ। ನಾನಾರ್ಥತ್ವಸಮುಚ್ಚಯಯೋರಪಿ ಏಕವಿಭಕ್ತಿನಿರ್ದೇಶದರ್ಶನಾತ್ ಪ್ರಾಸಾದೇ ಶೇತೇ ಪರ್ಯಂಕೇ ಶೇತೇ ಇತ್ಯೇವಮಾದಿಷು। ತಥಾ ಇಹಾಪಿ ನಾಡೀಷು ಪುರೀತತಿ ಬ್ರಹ್ಮಣಿ ಚ ಸ್ವಪಿತಿ ಇತ್ಯೇತತ್[2] ಉಪಪದ್ಯತೇ ಸಮುಚ್ಚಯಃ। ತಥಾ ಚ ಶ್ರುತಿಃ "ತಾಸು ತದಾ ಭವತಿ ಯದಾ ಸುಪ್ತಃ ಸ್ವಪ್ನಂ ನ ಕಿಂಚನ ಪಶ್ಯತ್ಯಥಾಸ್ಮಿನ್ ಪ್ರಾಣ ಏವೈಕಧಾ ಭವತಿ" (ಕೌ.೪-೧೯) ಇತಿ ಸಮುಚ್ಚಯಂ ನಾಡೀನಾಂ ಪ್ರಾಣಸ್ಯ ಚ ಸುಷುಪ್ತೌ ಶ್ರಾವಯತಿ, ಏಕವಾಕ್ಯೋಪಾದಾನಾತ್। ಪ್ರಾಣಸ್ಯ ಚ ಬ್ರಹ್ಮತ್ವಂ ಸಮಧಿಗತಮ್ "ಪ್ರಾಣಸ್ತಥಾನುಗಮಾತ್" (೧-೧-೨೮) ಇತ್ಯತ್ರ॥

---

1. ಇಲ್ಲಿ "ಪ್ರತಿಪದ್ಯತೇ" ಎಂಬ ಪಾಠಾಂತರವಿದೆಯೆ ?- ಎಂಬುದನ್ನು ಲಿಖಿತ ಪುಸ್ತಕಗಳಲ್ಲಿ ನೋಡಬೇಕಾದದ್ದು.

2. ಅಚ್ಚಿನಪುಸ್ತಕಗಳಲ್ಲೆಲ್ಲ 'ಏತತ್' ಎಂದೇ ಇದೆ ; 'ಇತ್ಯೇವಮ್' ಎಂದಿದ್ದರೆ ಚೆನ್ನಾಗಿರುವದೆಂದು ತೋರುತ್ತದೆ.

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು)ಹೇಳುತ್ತಾರೆ: "ತದಭಾವವು ನಾಡಿಗಳಲ್ಲಿಯೂ ಆತ್ಮನಲ್ಲಿಯೂ (ಆಗುತ್ತದೆ). 'ತದಭಾವ' ಎಂದರೆ ಆ ಪ್ರಕೃತವಾಗಿರುವ ಸ್ವಪ್ನದರ್ಶನದ ಅಭಾವವು, ಸುಷುಪ್ತವು ಎಂದರ್ಥ. ನಾಡಿಗಳಲ್ಲಿಯೂ ಆತ್ಮನಲ್ಲಿಯೂ ಎಂದರೆ ಈ ನಾಡ್ಯಾದಿಗಳನ್ನು ಸೇರಿಸಿಕೊಂಡು (ಒಂದು ಸ್ಥಾನಕ್ಕೇ) ನಿದ್ರೆಗಾಗಿ ಬಂದು ಸೇರುತ್ತಾನೆಯೇ ಹೊರತು ವಿಕಲ್ಪದಿಂದ (ಯಾವದಾದರೊಂದನ್ನು ಸೇರು)ವದಿಲ್ಲ ಎಂದರ್ಥ. ಏಕೆ? ಎಂದರೆ ಆ ಶ್ರುತಿಯಿರುವದರಿಂದ. ಹೇಗೆಂದರೆ ನಾಡ್ಯಾದಿಗಳಲ್ಲಿ ಪ್ರತಿಯೊಂದನ್ನು ಅಲ್ಲಲ್ಲಿ ಸುಷುಪ್ತಿಸ್ಥಾನವೆಂದು ಶ್ರುತಿ ಹೇಳುತ್ತದೆ; ಸಮುಚ್ಚಯ(ಪಕ್ಷದಲ್ಲಿ) ಇವನ್ನೆಲ್ಲ ಸೇರಿಸಿಕೊಂಡಂತೆ ಆಗುತ್ತದೆ. ವಿಕಲ್ಪವಾದರೆ ಇವುಗಳಿಗೆ (ಒಂದೊಂದು) ಪಕ್ಷದಲ್ಲಿ ಬಾಧವಾಗುವದು.[1]

(ಆಕ್ಷೇಪ):– ಏಕಾರ್ಥವಾಗಿರುವದರಿಂದ ವ್ರೀಹಿಯವಾದಿಗಳಂತೆ ನಾಡ್ಯಾದಿಗಳಿಗೆ ವಿಕಲ್ಪವೆಂದು (ಒಪ್ಪಬೇಕೆಂದು) ಹೇಳಿದೆವಲ್ಲ!

(ಪರಿಹಾರ):– ಹಾಗಲ್ಲ ಎನ್ನುತ್ತೇವೆ. ಏಕೆಂದರೆ ಒಂದೇ ವಿಭಕ್ತಿಯ ನಿರ್ದೇಶವಿದ್ದ ಮಾತ್ರದಿಂದ ಏಕಾರ್ಥತ್ವವೂ ವಿಕಲ್ಪವೂ ಇರಬೇಕೆಂದಾಗುವದಿಲ್ಲ. ಏಕೆಂದರೆ "ಪ್ರಾಸಾದದಲ್ಲಿ ನಿದ್ರಿಸುತ್ತಿದಾನೆ, ಮಂಚದ ಮೇಲೆ ನಿದ್ರಿಸುತ್ತಿದಾನೆ"[2] ಎಂಬುದೇ ಮುಂತಾದ ಕಡೆಗಳಲ್ಲಿ ನಾನಾರ್ಥತ್ವಸಮುಚ್ಚಯಗಳನ್ನು (ತಿಳಿಸುವದಕ್ಕೂ) ಒಂದೇ ವಿಭಕ್ತಿಯಿಂದ ನಿರ್ದೇಶಮಾಡಿರುವದು ಕಂಡುಬರುತ್ತದೆ. ಹಾಗೆಯೇ ಇಲ್ಲಿಯೂ ನಾಡಿಗಳಲ್ಲಿಯೂ ಪುರೀತತ್ತಿನಲ್ಲಿಯೂ ಬ್ರಹ್ಮದಲ್ಲಿಯೂ ನಿದ್ರಿಸುತ್ತಾನೆ ಎಂಬೀ ಸಮುಚ್ಚಯವು ಹೊಂದುತ್ತದೆ. ಆದ್ದರಿಂದಲೇ ಶ್ರುತಿಯು "ಯಾವಾಗ ನಿದ್ರಿಸಿದವನು ಯಾವದೊಂದು ಸ್ವಪ್ನವನ್ನೂ ಕಾಣುವದಿಲ್ಲವೋ ಆಗ ಆ (ನಾಡಿಗಳಲ್ಲಿ)ರುತ್ತಾನೆ, ಆಗ ಈ ಪ್ರಾಣನಲ್ಲಿಯೇ ಒಂದಾಗಿರುತ್ತಾನೆ" (ಕೌ. ೪–೧೯) ಎಂದು ಸುಷುಪ್ತಿಯಲ್ಲಿ ನಾಡಿಗಳ ಮತ್ತು ಪ್ರಾಣನ ಸಮುಚ್ಚಯವನ್ನು ತಿಳಿಸುತ್ತದೆ; ಒಂದೇ ವಾಕ್ಯದಲ್ಲಿ (ಅವೆರಡನ್ನೂ) ತೆಗೆದು(ಹೇಳಿರು)ವದರಿಂದ (ಹಾಗೆಂದು ಏರ್ಪಡುತ್ತದೆ). "ಪ್ರಾಣಸ್ತಥಾನುಗಮಾತ್" (೧–೧–೨೮) ಎಂಬಲ್ಲಿ ಪ್ರಾಣನು ಬ್ರಹ್ಮವೇ ಎಂದು ಗೊತ್ತಾಗಿರುತ್ತದೆ.

---

1. ನಾಡಿ ಎಂಬದನ್ನು ಸ್ಥಾನವಾಗಿ ಒಪ್ಪಿದರೆ ಆ ಪಕ್ಷದಲ್ಲಿ ಮಿಕ್ಕೆರಡನ್ನೂ ಬಿಟ್ಟಂತೆ ಆಗುವದು. ಇತ್ಯಾದಿ.

2. ಅರಮನೆಯೊಳಗಿರುವ ಮಂಚದಮೇಲೆ ಮಲಗಿರುತ್ತಾನೆ ಎಂಬ ಅಭಿಪ್ರಾಯದಿಂದ ಈ ವಾಕ್ಯಗಳನ್ನು ಪ್ರಯೋಗಿಸಬಹುದು ಎಂದರ್ಥ.

## ನಾಡ್ಯಾದಿಗಳನ್ನು ಪ್ರತ್ಯೇಕವಾಗಿ ಹೇಳಿರುವ ವಾಕ್ಯಗಳ ಗತಿ

(ಭಾಷ್ಯ)

೩೬೫. ಯತ್ರಾಪಿ ನಿರಪೇಕ್ಷಾ ಇವ ನಾಡೀಃ ಸುಪ್ತಿಸ್ಥಾನತ್ವೇನ ಶ್ರಾವಯತಿ "ಆಸು ತದಾ ನಾಡೀಷು ಸೃಪ್ತೋ ಭವತಿ" (ಛಾಂ. ೮-೬-೩) ಇತಿ ತತ್ರಾಪಿ ಪ್ರದೇಶಾಂತರಪ್ರಸಿದ್ಧಸ್ಯ ಬ್ರಹ್ಮಣಃ ಅಪ್ರತಿಷೇಧಾತ್ ನಾಡೀದ್ವಾರೇಣೈವ ಬ್ರಹ್ಮಣ್ಯೇವ ಅವತಿಷ್ಠತೇ ಇತಿ ಪ್ರತೀಯತೇ । ನ ಚ ಏವಮಪಿ ನಾಡೀಷು ಸಪ್ತಮೀ ವಿರುಧ್ಯತೇ । ನಾಡೀದ್ವಾರಾಪಿ ಬ್ರಹ್ಮ ಉಪಸರ್ಪನ್ ಸೃಪ್ತ ಏವ ನಾಡೀಷು ಭವತಿ । ಯೋ ಹಿ ಗಙ್ಗಯಾ ಸಾಗರಂ ಗಚ್ಛತಿ ಗತ ಏವ ಸ ಗಙ್ಗಾಯಾಂ ಭವತಿ । ಅಪಿ ಚ ಅತ್ರ ರಶ್ಮಿನಾಡೀದ್ವಾರಾತ್ಮಕಸ್ಯ ಬ್ರಹ್ಮಲೋಕಮಾರ್ಗಸ್ಯ ವಿವಕ್ಷಿತತ್ವಾತ್ ನಾಡೀಸ್ತುತ್ಯರ್ಥಂ ಸೃಪ್ತಿಸಂಕೀರ್ತನಮ್ । "ನಾಡೀಷು ಸೃಪ್ತೋ ಭವತಿ" (ಛಾಂ. ೮-೬-೩) ಇತ್ಯುಕ್ತ್ವಾ "ತಂ ನ ಕಶ್ಚನ ಪಾಪ್ಮಾ ಸ್ಪೃಶತಿ" (ಛಾಂ. ೮-೬-೩) ಇತಿ ಬ್ರುವನ್ ನಾಡೀಃ ಪ್ರಶಂಸತಿ । ಬ್ರವೀತಿ ಚ ಪಾಪ್ಮಸ್ಪರ್ಶಾಭಾವೇ ಹೇತುಮ್ "ತೇಜಸಾ ಹಿ ತದಾ ಸಂಪನ್ನೋ ಭವತಿ" (ಛಾಂ. ೮-೬-೩) ಇತಿ ತೇಜಸಾ ನಾಡೀಗತೇನ ಪಿತ್ತಾಖ್ಯೇನ ಅಭಿವ್ಯಾಪ್ತಕರಣಃ ನ ಬಾಹ್ಯಾನ್ ವಿಷಯಾನ್ ಈಕ್ಷತ ಇತ್ಯರ್ಥಃ । ಅಥವಾ ತೇಜಸಾ ಇತಿ ಬ್ರಹ್ಮಣ ಏವಾಯಂ ನಿರ್ದೇಶಃ । ಶ್ರುತ್ಯನ್ತರೇ "ಬ್ರಹ್ಮೈವ ತೇಜ ಏವ" (ಬೃ. ೪-೪-೭) ಇತಿ ತೇಜಃಶಬ್ದಸ್ಯ ಬ್ರಹ್ಮಣಿ ಪ್ರಯುಕ್ತತ್ವಾತ್ । ಬ್ರಹ್ಮಣಾ ಹಿ ತದಾ ಸಂಪನ್ನೋ ಭವತಿ ನಾಡೀದ್ವಾರೇಣ । ಅತಸ್ತಂ ನ ಕಶ್ಚನ ಪಾಪ್ಮಾ ಸ್ಪೃಶತಿ ಇತ್ಯರ್ಥಃ । ಬ್ರಹ್ಮಸಂಪತ್ತಿಶ್ಚ ಪಾಪ್ಮಸ್ಪರ್ಶಾಭಾವೇ ಹೇತುಃ ಸಮಧಿಗತಃ "ಸರ್ವೇ ಪಾಪ್ಮಾನೋಽತೋ ನಿವರ್ತನ್ತೇಽಪಹತಪಾಪ್ಮಾ ಹ್ಯೇಷ ಬ್ರಹ್ಮಲೋಕಃ" (ಛಾಂ. ೮-೪-೧) ಇತ್ಯಾದಿಶ್ರುತಿಭ್ಯಃ । ಏವಂ ಚ ಸತಿ ಪ್ರದೇಶಾನ್ತರಪ್ರಸಿದ್ಧೇನ ಬ್ರಹ್ಮಣಾ ಸುಷುಪ್ತಿಸ್ಥಾನೇನ ಅನುಗತೋ ನಾಡೀನಾಂ ಸಮುಚ್ಚಯಃ ಸಮಧಿಗತೋ ಭವತಿ । ತಥಾ ಪುರೀತತೋಽಪಿ ಬ್ರಹ್ಮಪ್ರಕ್ರಿಯಾಯಾಂ ಸಂಕೀರ್ತನಾತ್ ತದನುಗುಣಮೇವ ಸುಪ್ತಿಸ್ಥಾನತ್ವಂ ವಿಜ್ಞಾಯತೇ "ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿಞ್ಛೇತೇ" (ಬೃ. ೨-೧-೧೭) ಇತಿ ಹೃದಯಾಕಾಶೇ ಸುಪ್ತಿಸ್ಥಾನೇ ಪ್ರಕೃತೇ ಇದಮುಚ್ಯತೇ "ಪುರೀತತಿ ಶೇತೇ" (ಬೃ. ೨-೧-೧೯) ಇತಿ । ಪುರೀತತ್ ಇತಿ ಹೃದಯಪರಿವೇಷ್ಟನಮ್ ಉಚ್ಯತೇ । ತದನ್ತರ್ವರ್ತಿನ್ಯಪಿ ಹೃದಯಾಕಾಶೇ ಶಯಾನಃ ಶಕ್ಯತೇ ಪುರೀತತಿ ಶೇತ ಇತಿ ವಕ್ತುಮ್ । ಪ್ರಾಕಾರಪರಿಕ್ಷಿಪ್ತೇಽಪಿ ಪುರೇ ವರ್ತಮಾನಃ ಪ್ರಾಕಾರೇ ವರ್ತತ ಇತ್ಯುಚ್ಯತೇ । ಹೃದಯಾಕಾಶಸ್ಯ ಚ ಬ್ರಹ್ಮತ್ವಂ ಸಮಧಿಗತಮ್ "ದಹರ ಉತ್ತರೇಭ್ಯಃ"

(೧-೩-೧೪) ಇತ್ಯತ್ರ । ತಥಾ ನಾಡೀಪುರೀತತ್ಸಮುಚ್ಚಯೋಽಪಿ "ತಾಭಿಃ ಪ್ರತ್ಯವಸೃಪ್ಯ ಪುರೀತತಿ ಶೇತೇ" (ಬೃ. ೨-೧-೧೯) ಇತಿ ಏಕವಾಕ್ಯೋಪಾದಾನಾತ್ ಅವಗಮ್ಯತೇ । ಸತ್ತ್ವಪ್ರಾಜ್ಞಯೋಶ್ಚ ಪ್ರಸಿದ್ಧಮೇವ ಬ್ರಹ್ಮತ್ವಮ್ ।

(ಭಾಷ್ಯಾರ್ಥ)

(ಇನ್ನು) ಎಲ್ಲಿ ನಾಡಿಗಳು ನಿರಪೇಕ್ಷವಾಗಿರುವಂತೆ "ಆಗ ಈ ನಾಡಿಗಳಲ್ಲಿ ಸೇರಿಕೊಂಡಿರುತ್ತಾನೆ" (ಛಾಂ. ೮-೬-೩) ಎಂದು (ಅವೇ) ಸುಷುಪ್ತಿಸ್ಥಾನ ವೆಂದು ಶ್ರುತಿಯು ಹೇಳುತ್ತದೆಯೋ ಅಲ್ಲಿಯೂ ಮತ್ತೊಂದೆಡೆಯಲ್ಲಿ ಪ್ರಸಿದ್ಧ ವಾಗಿರುವ ಬ್ರಹ್ಮವನ್ನು ಅಲ್ಲವೆಂದಿಲ್ಲವಾಗಿ ನಾಡೀದ್ವಾರದಿಂದ ಬ್ರಹ್ಮದಲ್ಲಿಯೇ ಇರುತ್ತಾನೆ ಎಂದು ತಿಳಿಯಬೇಕು ಹೀಗಾದರೂ ನಾಡಿಗಳ (ವಿಷಯದ)ದಲ್ಲಿ ಸಪ್ತಮೀವಿಭಕ್ತಿಯು ವಿರುದ್ಧವೆಂದಾಗುವದಿಲ್ಲ; ಏಕೆಂದರೆ ನಾಡಿಗಳಿಂದ ಬ್ರಹ್ಮವನ್ನು ಬಂದು ಸೇರುವವನೂ ನಾಡಿಗಳಲ್ಲಿ ಸಿದ್ರಿಸಿದವನೇ ಆಗುತ್ತಾನೆ. ಗಂಗೆಯಿಂದ ಸಾಗರವನ್ನು ಯಾವನು ಬಂದು ಸೇರುತ್ತಾನೋ ಅವನು ಗಂಗೆಗೆ ಬಂದು ಸೇರುವವನೇ ಆಗಿರುತ್ತಾನಲ್ಲವೆ ? ಇಲ್ಲಿ ರಶ್ಮಿನಾಡೀದ್ವಾರಗಳ ರೂಪ ವಾಗಿರುವ ಬ್ರಹ್ಮಲೋಕಮಾರ್ಗವು ವಿವಕ್ಷಿತವಾಗಿರುವದರಿಂದ ನಾಡಿಗಳ ಸ್ತುತಿಗಾಗಿ (ಅವುಗಳಲ್ಲಿ) ಬಂದು ಸೇರುತ್ತಾನೆಂದು ಹೇಳುವದು, (ಸರಿ) ಯಾಗಿರುತ್ತದೆ. "ನಾಡಿಗಳಲ್ಲಿ ಬಂದು ಸೇರುತ್ತಾನೆ" ಎಂದು ಹೇಳಿ "ಅವನನ್ನು ಯಾವ ಪಾಪವೂ ಸೋಂಕುವದಿಲ್ಲ" (ಛಾಂ. ೮-೬-೩) ಎಂದು ಹೇಳಿರುವದರಿಂದ ನಾಡಿಗಳನ್ನು ಹೊಗಳಿರುತ್ತದೆ. ಪಾಪದ ಸೋಂಕಿಲ್ಲದಿರು ವದಕ್ಕೆ ಕಾರಣವನ್ನು "ಏಕೆಂದರೆ ಆಗ ತೇಜಸ್ಸಿನೊಡನೆ ಒಂದಾಗಿರುತ್ತಾನೆ" (ಛಾಂ. ೮-೬-೩) ಎಂದು ಹೇಳಿಯೂ ಇರುತ್ತದೆ. ನಾಡಿಗಳಲ್ಲಿರುವ ಪಿತ್ತ ವೆಂಬ ತೇಜಸ್ಸಿನಿಂದ ಕರಣಗಳು ಅಭಿವ್ಯಾಪ್ತವಾಗಿರುವದರಿಂದ ಹೊರಗಿನ ವಿಷಯಗಳನ್ನು ಕಾಣುವದಿಲ್ಲ ಎಂದರ್ಥ. ಅಥವಾ ತೇಜಸ್ಸಿನೊಡನೆ ಎಂಬಿದು ಬ್ರಹ್ಮದ ನಿರ್ದೇಶವೇ. ಏಕೆಂದರೆ "ಬ್ರಹ್ಮವೇ ತೇಜಸ್ಸೇ" (ಬೃ. ೪-೪-೭) ಎಂದು ತೇಜಃಶಬ್ದವನ್ನು ಬ್ರಹ್ಮದಲ್ಲಿ ಪ್ರಯೋಗಿಸಿರುತ್ತದೆ. 'ಆಗ ನಾಡೀದ್ವಾರದಿಂದ ಹೋಗಿ ಬ್ರಹ್ಮದೊಡನೆ ಸೇರಿ ಒಂದಾಗಿರುತ್ತಾನಲ್ಲವೆ? ಆದ್ದರಿಂದ ಅವನನ್ನು ಯಾವ ಪಾಪವೂ ಸೋಂಕುವದಿಲ್ಲ' ಎಂದು (ಶ್ರುತಿಯ) ಅರ್ಥ. ಬ್ರಹ್ಮದಲ್ಲಿ ಒಂದಾಗುವದು ಪಾಪವು ಸೋಂಕದೆ ಇರುವದಕ್ಕೆ ಹೇತುವೆಂದು "ಇದರಿಂದ ಎಲ್ಲಾ ಪಾಪಗಳೂ ಬಿಟ್ಟು ತೆರಳುವವು, ಏಕೆಂದರೆ ಈ ಬ್ರಹ್ಮಲೋಕವು ಪಾಪಗಳನ್ನೆಲ್ಲ ನಾಶಪಡಿಸಿಕೊಂಡದ್ದಾಗಿರುತ್ತದೆ" (ಛಾಂ. ೮-೪-೨) ಎಂದುಮುಂತಾಗಿರುವ ಶ್ರುತಿಗಳಿಂದ ಪ್ರಸಿದ್ಧಬಂದಿರುತ್ತದೆ. ಹೀಗಿರುವದರಿಂದ ಮತ್ತೊಂದೆಡೆಯಲ್ಲಿ ಪ್ರಸಿದ್ಧವಾಗಿರುವ ಬ್ರಹ್ಮವೆಂಬ

ಸುಷುಪ್ತಿಸ್ಥಾನದಿಂದ, ಅನುಗತವಾಗಿಯೇ ನಾಡಿಗಳ ಸಮುಚ್ಚಯವನ್ನು ತಿಳಿಪಂತೆ ಆಗುತ್ತದೆ.[1]

ಇದರಂತೆ ಪುರೀತತ್ತನ್ನೂ ಬ್ರಹ್ಮಪ್ರಕರಣದಲ್ಲಿ ಹೇಳಿರುವದರಿಂದ ಅದಕ್ಕೆ ಅನುಗುಣವಾಗಿಯೇ (ಅದು) ಸುಷುಪ್ತಿಸ್ಥಾನವೆಂದು ತಿಳಿದುಬರುತ್ತದೆ. "ಹೃದಯದೊಳಗಿನ ಯಾವ ಈ ಆಕಾಶವಿದೆಯಲ್ಲ, ಅದರಲ್ಲಿ ನಿದ್ರಿಸುತ್ತಿರುತ್ತಾನೆ" (ಬೃ. ೨-೧-೧೭) ಎಂದು ಹೃದಯಾಕಾಶವು ಸುಷುಪ್ತಿಸ್ಥಾನವೆಂದು ಪ್ರಕೃತವಾಗಿರುವಲ್ಲಿಯೇ "ಪುರೀತತ್ತಿನಲ್ಲಿ ನಿದ್ರಿಸುತ್ತಿರುತ್ತಾನೆ" (ಬೃ. ೨-೧-೧೯) ಎಂಬಿದನ್ನು ಹೇಳಿರುತ್ತದೆ. ಪುರೀತತ್ತೆಂದರೆ ಹೃದಯವನ್ನು ಸುತ್ತಿಕೊಂಡಿರುವ ಪೊರೆ; ಅದರ ಒಳಗೆ ಇರುವ ಹೃದಯಾಕಾಶದಲ್ಲಿ ನಿದ್ರಿಸುತ್ತಿರುವವನೂ "ಪುರೀತತ್ತಿನೊಳಗೆ ನಿದ್ರಿಸುತ್ತಿರುತ್ತಾನೆ" ಎಂದು ಹೇಳುವದಕ್ಕೆ ಬರುತ್ತದೆ. (ಕೋಟೆಯ) ಪೌಳಿಯಿಂದ ಸುತ್ತುವರೆಯಲ್ಪಟ್ಟ ಕೋಟೆಯೊಳಗೆ ಇರುವವನನ್ನು ಪೌಳಿಯೊಳಗೆ ಇರುತ್ತಾನೆ ಎನ್ನಬಹುದಾಗಿದೆ. (ಅದರಂತೆಯೇ ಇದು). ಹೃದಯಾಕಾಶವು ಬ್ರಹ್ಮವೇ ಎಂದು "ದಹರ ಉತ್ತರೇಭ್ಯಃ" (೧-೩-೧೪) ಎಂಬಲ್ಲಿ ಗೊತ್ತಾಗಿರುತ್ತದೆ. ಹೀಗೆಯೇ "ಅವುಗಳಿಂದ ಬಂದು ಪುರೀತತ್ತಿನಲ್ಲಿ ನಿದ್ರಿಸುತ್ತಿರುತ್ತಾನೆ" (ಬೃ. ೨-೧-೧೯) ಎಂದು ನಾಡೀಪುರೀತತ್ತುಗಳನ್ನು ಒಂದೇ ವಾಕ್ಯದಲ್ಲಿ ಹೇಳಿರುವದರಿಂದ (ಅವುಗಳ) ಸಮುಚ್ಚಯವೂ ನಿಶ್ಚಯವಾಗುತ್ತದೆ. ಸತ್ತು, ಪ್ರಾಜ್ಞ— ಇವರಂತೂ ಬ್ರಹ್ಮವೆಂಬುದು ಪ್ರಸಿದ್ಧವೇ ಆಗಿದೆ.[2]

## ಬ್ರಹ್ಮವೊಂದೇ ನಿಜವಾಗಿ ಸುಷುಪ್ತಿಸ್ಥಾನವು

(ಭಾಷ್ಯ)

೨೬೬. ಏವಮ್ ಏತಾಸು ಶ್ರುತಿಷು ತ್ರೀಣ್ಯೇವ ಸುಷುಪ್ತಿಸ್ಥಾನಾನಿ ಸಂಕೀರ್ತಿತಾನಿ ನಾಡ್ಯಃ, ಪುರೀತತ್, ಬ್ರಹ್ಮ ಚ ಇತಿ। ತತ್ರಾಪಿ ದ್ವಾರಮಾತ್ರಂ ನಾಡ್ಯಃ ಪುರೀತಚ್ಚ। ಬ್ರಹ್ಮೈವ ತು ಏಕಂ ಸುಷುಪ್ತಿಸ್ಥಾನಮ್। ಅಪಿ ಚ ನಾಡ್ಯಃ ಪುರೀತದ್ ವಾ ಜೀವಸ್ಯ ಉಪಾಧ್ಯಾಧಾರ ಏವ ಭವತಿ ತತ್ರ ಅಸ್ಯ ಕರಣಾನಿ ವರ್ತನ್ತ ಇತಿ। ನ ಹಿ ಉಪಾಧಿಸಂಬನ್ಧಮ್ ಅನ್ತರೇಣ ಸ್ವತ ಏವ ಜೀವಸ್ಯಾಧಾರಃ ಕಶ್ಚಿತ್ ಸಂಭವತಿ। ಬ್ರಹ್ಮಾವ್ಯತಿರೇಕೇಣ ಸ್ವಮಹಿಮಪ್ರತಿಷ್ಠಿತತ್ವಾತ್। ಬ್ರಹ್ಮಾಧಾರತ್ವಮಪಿ ಅಸ್ಯ ಸುಷುಪ್ತೇ ನೈವ

1. ನಾಡಿಗಳೂ ಬ್ರಹ್ಮವೂ ಸೇರಿಯೇ ಬ್ರಹ್ಮವು ಸುಷುಪ್ತಿಸ್ಥಾನವೆಂದು ಅರ್ಥ. ನಾಡಿಗಳ ಮೂಲಕ ಬ್ರಹ್ಮದಲ್ಲಿರುತ್ತಾನಾದ್ದರಿಂದ ಎರಡನ್ನೂ ಸುಷುಪ್ತಿಸ್ಥಾನವೆನ್ನಬಹುದು.

2. ಆದ್ದರಿಂದ ಅವು ಹಿಂದೆ ಹೇಳಿದವುಗಳಿಗಿಂತ ಬೇರೆಯ ಸುಷುಪ್ತಿಸ್ಥಾನಗಳಲ್ಲ.

ಆಧಾರಾಧೇಯಭೇದಾಭಿಪ್ರಾಯೇಣ ಉಚ್ಯತೇ, ಕಥಂ ತರ್ಹಿ ತಾದಾತ್ಮ್ಯಾಭಿಪ್ರಾಯೇಣ। ಯತ ಆಹ "ಸತಾ ಸೋಮ್ಯ ತದಾ ಸಂಪನ್ನೋ ಭವತಿ, ಸ್ವಮಪೀತೋ ಭವತಿ" (ಛಾಂ. ೬-೮-೧) ಇತಿ। ಸ್ವಶಬ್ದೇನ ಆತ್ಮಾ ಅಭಿಲಪ್ಯತೇ। ಸ್ವರೂಪಮಾಪನ್ನಃ ಸುಪ್ತೋ ಭವತಿ ಇತ್ಯರ್ಥಃ। ಅಪಿ ಚ ನ ಕದಾಚಿತ್ ಜೀವಸ್ಯ ಬ್ರಹ್ಮಣಾ ಸಂಪತ್ತಿರ್ನಾಸ್ತಿ। ಸ್ವರೂಪಸ್ಯ ಅನಪಾಯಿತ್ವಾತ್। ಸ್ವಪ್ನಜಾಗರಿತಯೋಸ್ತು ಉಪಾಧಿಸಂಪರ್ಕವಶಾತ್ ಪರರೂಪಾಪತ್ತಿಮಿವ ಅಪೇಕ್ಷ್ಯ ತದುಪಶಮಾತ್ ಸುಷುಪ್ತೇ ಸ್ವರೂಪಾಪತ್ತಿರ್ವಕ್ಷ್ಯತೇ। ಅತಶ್ಚ ಸುಪ್ತಾವಸ್ಥಾಯಾಂ ಕದಾಚಿತ್ ಸತಾ ಸಂಪದ್ಯತೇ ಕದಾಚಿತ್ ನ ಸಂಪದ್ಯತೇ ಇತಿ ಅಯುಕ್ತಮ್। ಅಪಿ ಚ ಸ್ಥಾನವಿಕಲ್ಪಾಭ್ಯುಪಗಮೇಽಪಿ ವಿಶೇಷವಿಜ್ಞಾನೋಪಶಮಲಕ್ಷಣಂ ತಾವತ್ ಸುಷುಪ್ತಂ ನ ಕ್ವಚಿತ್ ವಿಶಿಷ್ಯತೇ। ತತ್ರ ಸತಿ ಸಂಪನ್ನಸ್ತಾವತ್ ತದೇಕತ್ವಾತ್ ನ ವಿಜಾನಾತಿ ಇತಿ ಯುಕ್ತಮ್। "ತತ್ ಕೇನ ಕಂ ವಿಜಾನೀಯಾದ್" (ಬೃ. ೨-೪-೧೪) ಇತಿ ಶ್ರುತೇಃ। ನಾಡೀಷು ಪುರೀತತಿ ಚ ಶಯಾನಸ್ಯ ನ ಕಿಂಚಿತ್ ಅವಿಜ್ಞಾನೇ ಕಾರಣಂ ಶಕ್ಯಂ ವಿಜ್ಞಾತುಮ್। ಭೇದವಿಷಯತ್ವಾತ್। "ಯತ್ರ ವಾ ಅನ್ಯದಿವ ಸ್ಯಾತ್ ತತ್ರಾನ್ಯೋಽನ್ಯತ್ ಪಶ್ಯೇತ್" (ಬೃ. ೪-೩-೩೧) ಇತಿ ಶ್ರುತೇಃ। ನನು ಭೇದವಿಷಯಸ್ಯಾಪಿ ಅತಿದೂರಾದಿಕಾರಣಮ್ ಅವಿಜ್ಞಾನೇ ಸ್ಯಾತ್। ಬಾಢಮ್ ಏವಂ ಸ್ಯಾತ್ ಯದಿ ಜೀವಃ ಸ್ವತಃ ಪರಿಚ್ಛಿನ್ನೋಽಭ್ಯುಪಗಮ್ಯೇತ ಯಥಾ ವಿಷ್ಣುಮಿತ್ರಃ ಪ್ರವಾಸೀ ಸ್ವಗೃಹಂ ನ ಪಶ್ಯತಿ। ನ ತು ಜೀವಸ್ಯ ಉಪಾಧಿವ್ಯತಿರೇಕೇಣ ಪರಿಚ್ಛೇದೋ ವಿದ್ಯತೇ। ಉಪಾಧಿಗತಮೇವ ಅತಿದೂರಾದಿಕಾರಣಮ್ ಅವಿಜ್ಞಾನೇ ಇತಿ ಯದ್ಯುಚ್ಯೇತ ತಥಾಪಿ ಉಪಾಧೇರುಪಶಾನ್ತತ್ವಾತ್ ಸತ್ಯೇವ ಸಂಪನ್ನೋ ನ ವಿಜಾನಾತೀತಿ ಯುಕ್ತಮ್॥

(ಭಾಷ್ಯಾರ್ಥ)

ಹೀಗೆ ಈ ಶ್ರುತಿಗಳಲ್ಲಿ ನಾಡಿಗಳು, ಪುರೀತತ್ತು ಮತ್ತು ಬ್ರಹ್ಮ- ಎಂಬ ಮೂರೇ ಸುಷುಪ್ತಿಸ್ಥಾನಗಳನ್ನು ಹೇಳಿದಂತೆ ಆಗಿದೆ. ಇವುಗಳಲ್ಲಿ ಯೂ ನಾಡಿಗಳೂ ಪುರೀತತ್ತೇ ದ್ವಾರಮಾತ್ರವಾಗಿವೆ; ಬ್ರಹ್ಮವೊಂದೇ ಸುಷುಪ್ತಿಸ್ಥಾನವು. ಇದಲ್ಲದೆ ನಾಡಿಗಳೇ ಆಗಲಿ ಪುರೀತತ್ತೇ ಆಗಲಿ ಜೀವನ ಉಪಾಧಿಗೆ ಆಧಾರಮಾತ್ರವಾಗಿರುತ್ತದೆ[1]; ಏಕೆಂದರೆ ಅಲ್ಲಿ ಈ (ಜೀವನ) ಕರಣಗಳು (ಆಗ) ಇದ್ದುಕೊಂಡಿರುತ್ತವೆ. ಉಪಾಧಿಯ ಸಂಬಂಧವಿಲ್ಲದೆ ಜೀವನಿಗೆ ತನ್ನ (ರೂಪ)ದಿಂದಲೇ ಯಾವ ಆಧಾರವೂ ಇರುವಹಾಗೆಯೇ ಇಲ್ಲ; ಏಕೆಂದರೆ

1. ಸಪ್ತಮೀವಿಭಕ್ತಿಯು ಹೇಳುವ ಆಧಾರದ ವಿಷಯದ ವಿಮರ್ಶೆಮಾಡಿದರೆ ಬ್ರಹ್ಮವೊಂದೇ ಸುಷುಪ್ತಿಸ್ಥಾನವಾಗುತ್ತದೆ ಎಂದು ತೋರಿಸುವದಕ್ಕೆ ಹೊರಟಿದಾರೆ.

(ಆವನು) ಬ್ರಹ್ಮಕ್ಕಿಂತ ಬೇರೆಯಾಗಿಲ್ಲದ್ದರಿಂದ ತನ್ನ ಮಹಿಮೆಯಲ್ಲಿಯೇ ಇದ್ದುಕೊಂಡಿರುತ್ತಾನೆ.[1] **ಸುಷುಪ್ತಿಯಲ್ಲಿ ಇವನಿಗೆ ಬ್ರಹ್ಮವು ಆಧಾರವೆಂಬುದುಕೂಡ ಆಧಾರಾಧೇಯಗಳು ಬೇರೆಬೇರೆ ಎಂಬ ಅಭಿಪ್ರಾಯದಿಂದ ಹೇಳಿರುವದಿಲ್ಲ; ಮತ್ತೇನೆಂದರೆ ತಾದಾತ್ಮ್ಯಾಭಿಪ್ರಾಯದಿಂದ.**[2] ಏಕೆಂದರೆ "ಆಗ ಸತ್ತಿನೊಡನೆ ಒಂದಾಗಿರುತ್ತಾನೆ, ತನ್ನಲ್ಲಿ ಲಯವಾಗಿರುತ್ತಾನೆ" (ಛಾಂ ೬-೮-೧) ಎಂದು (ಶ್ರುತಿ) ಹೇಳುತ್ತದೆ. (ಇಲ್ಲಿ) ಸ್ವ(ತಾನು ಎಂಬ) ಶಬ್ದದಿಂದ ಆತ್ಮನನ್ನು ಹೇಳಿದೆ; ಸ್ವರೂಪವನ್ನು ಹೊಂದಿ ಸುಷುಪ್ತನಾಗಿರುತ್ತಾನೆ ಎಂದರ್ಥ.[3] ಇದೂ ಅಲ್ಲದೆ **ಜೀವನಿಗೆ ಬ್ರಹ್ಮದೊಡನೆ ಒಂದಾಗುವದೆಂಬುದು ಯಾವಾಗಲೂ ಇಲ್ಲವೆಂಬುದೇ ಇಲ್ಲ; ಏಕೆಂದರೆ ಸ್ವರೂಪವು ಬಿಟ್ಟುಹೋಗತಕ್ಕದ್ದಲ್ಲ. ಆದರೆ ಸ್ವಪ್ನ, ಎಚ್ಚರ- ಇವುಗಳಲ್ಲಿ ಉಪಾಧಿಯ ಸಂಬಂಧವಶದಿಂದ ಮತ್ತೊಂದು ರೂಪವನ್ನು ಹೊಂದಿದಂತೆ (ಆಗಿರುವದರ) ಅಪೇಕ್ಷೆಯಿಂದ ಅದು ಹೋಗಿರುವದರಿಂದ ಸುಷುಪ್ತಿಯಲ್ಲಿ ಸ್ವರೂಪವನ್ನು ಹೊಂದಿದಂತಾಗುತ್ತದೆ**[4] ಎಂದು "ಸ್ವಮಪೀತೋ ಭವತಿ" (ತನ್ನಲ್ಲಿ ಲಯವಾಗಿರುತ್ತಾನೆ) ಎಂದು ಹೇಳಿರುತ್ತದೆ. ಆದ್ದರಿಂದಲೂ ಸುಷುಪ್ತಾವಸ್ಥೆಯಲ್ಲಿ ಒಂದು ವೇಳೆ ಸತ್ತಿನೊಡನೆ ಒಂದಾಗುತ್ತಾನೆ, ಒಂದು ವೇಳೆ ಆಗುವದಿಲ್ಲ ಎಂಬುದು ಅಯುಕ್ತವು.[5]

ಇದೂ ಅಲ್ಲದೆ (ಸುಷುಪ್ತಿ)ಸ್ಥಾನಗಳ ವಿಕಲ್ಪವನ್ನು ಒಪ್ಪಿದರೂ **ವಿಶೇಷವಿಜ್ಞಾನವು ಇಲ್ಲವಾಗುವದೆಂಬ ರೂಪದ ನಿದ್ರೆಯು ಎಲ್ಲಿಯೂ ಬೇರೆ**

---

1. ಬ್ರಹ್ಮವು ತನ್ನಲ್ಲಿ ತಾನು ಇರುತ್ತದೆ, ಮತ್ತೊಂದನ್ನು ಆಶ್ರಯಿಸಿಲ್ಲ: ಆದ್ದರಿಂದ ತದಭಿನ್ನಜೀವನೂ ಹಾಗೆಯೇ. ಛಾಂ. ಭಾ. ೭-೨೪-೧.

2. ತಾದಾತ್ಮ್ಯವೆಂದರೆ ಅದೇ ತಾನಾಗಿರುವದು, ಜಾತಿವ್ಯಕ್ತಿಗಳ ಹಾಗೆ ಭೇದವೂ ಇರುವಂತೆ ಅಭಿನ್ನವಾಗಿರುವದು ಎಂಬುದಲ್ಲ.

3. ಹಿಂದೆ ೧-೧-೯ರ ಭಾಷ್ಯದಲ್ಲಿಯೂ ಇದನ್ನು ಹೇಳಿದೆ.

4. ೧-೧-೯ರ ಭಾಷ್ಯದಲ್ಲಿ (ಭಾ. ಭಾ. ೮೫) ಹೇಳಿರುವ "ಪ್ರಲೀನ ಇವ" ಎಂಬುದರ ಅರ್ಥವೇ ಇದು; ಮುಂದೆ ೩-೨-೩೫ರಲ್ಲಿಯೂ ಇದನ್ನು ಸ್ವರೂಪಸಂಬಂಧವೆಂದು ಹೇಳಿದೆ. ಸುಷುಪ್ತಿಯಲ್ಲಿಯೂ ಜೀವಬ್ರಹ್ಮವಿಭಾಗವಿರುವದೆಂಬವರ ಮತವು ಈ ಭಾಷ್ಯಕ್ಕೆ ವಿರುದ್ಧವು. ಅಜ್ಞಾನದಿಂದ ವಿಭಾಗವು ಯಾವಾಗಲೂ ಇದೆ; ಜ್ಞಾನದಿಂದ ಏಕತ್ವವೂ ಇದೆ. ಸುಷುಪ್ತಿಯಲ್ಲಿ ಉಪಾಧಿಯಿಂದಾಗಿದ್ದ ರೂಪಾಂತರವು ಇಲ್ಲವಾಗುತ್ತದೆ ಎಂಬುದೇ ಅಭಿಪ್ರಾಯ.

5. ಆದ್ದರಿಂದ ವಿಕಲ್ಪಪಕ್ಷವು ಅಯುಕ್ತ.

**ಯಾಗಿರುವದಿಲ್ಲ.**[1] ಈ (**ಸ್ಥಾನಗಳಲ್ಲಿ**) **ಸತ್ತಿನಲ್ಲಿ ಒಂದಾಗಿದ್ದರಂತೂ ಒಂದಾಗಿರುವದರಿಂದ ತಿಳಿಯುವದಿಲ್ಲ ಎಂಬುದು ಯುಕ್ತ**ವಾಗಿರುತ್ತದೆ[2]; "ಅಲ್ಲಿ ಏತರಿಂದ ಯಾರನ್ನು ಅರಿತಾನು ?" (ಬೃ. ೨-೪-೧೪) ಎಂಬ ಶ್ರುತಿಯಿಂದ (ಇದು ಸಿದ್ಧವಾಗಿರುತ್ತದೆ).[3] ನಾಡಿಗಳಲ್ಲಿಯೂ ಪುರೀತತ್ತಿನಲ್ಲಿಯೂ ನಿದ್ರಿಸುತ್ತಿರುವವನಿಗೆ ಅರಿಯದೆ ಇರಲು ಯಾವ ಕಾರಣವನ್ನೂ ತಿಳಿಯುವದಕ್ಕೆ ಬರುವಂತಿಲ್ಲ; ಏಕೆಂದರೆ (ಅದು) ಭೇದವಿಷಯವಾಗಿರುತ್ತದೆ. "ಎಲ್ಲಿಯಾದರೆ ಮತ್ತೊಂದರಂತೆ ಇರುವದೋ ಅಲ್ಲಿ ಒಬ್ಬನು ಮತ್ತೊಂದನ್ನು ಕಾಣಬಹುದು" (ಬೃ. ೪-೩-೩೧) ಎಂದು ಶ್ರುತಿಯಿದೆ.[4]

(ಆಕ್ಷೇಪ):- ಭೇದವಿಷಯವಾದರೂ ಅರಿಯದಿರುವದಕ್ಕೆ ಅತಿದೂರವೇ ಮುಂತಾದ ಕಾರಣವು ಇರಬಹುದಲ್ಲ![5]

(ಪರಿಹಾರ):- ನಿಜ, ಜೀವನು ಸ್ವತಃ ಪರಿಚ್ಛಿನ್ನನೆಂದು ಒಪ್ಪಿದರೆ ಹೀಗೂ ಆಗಬಹುದು. ಉದಾಹರಣೆಗೆ ಬೇರೊಂದು ಕಡೆಗೆ ಹೋಗಿರುವ ವಿಷ್ಣುಮಿತ್ರನು ತನ್ನ ಗೃಹವನ್ನು ಕಾಣುವದಿಲ್ಲ. ಆದರೆ ಜೀವನಿಗೆ ಉಪಾಧಿಯನ್ನು ಬಿಟ್ಟರೆ (ಯಾವ) ಪರಿಚ್ಛೇದವೂ ಇರುವದೇ ಇಲ್ಲ.[6] ಉಪಾಧಿಗತವಾದ ಅತಿದೂರಾದಿಗಳೇ ಅರಿಯದೆ ಇರಲು ಕಾರಣ ಎನ್ನುವದಾದರೆ, ಹಾಗೂ (ಇಲ್ಲಿ) ಉಪಾಧಿಯು ನಾಶವಾಗಿಬಿಟ್ಟಿರುವದರಿಂದ ಸತ್ತಿನಲ್ಲಿ ಒಂದಾಗಿರುವದರಿಂದಲೇ ಅರಿಯುವದಿಲ್ಲ ಎಂಬುದೇ ಯುಕ್ತವಾಗುವದು.

---

1. ಬಿಡಿಯರಿವು ಇಲ್ಲದಿರುವದೆಂಬುದೇ ಸುಷುಪ್ತಿಯ ಲಕ್ಷಣವೆಂದು ವಿಕಲ್ಪವಾದಿಗಳೂ ಅನುಭವಾನುಸಾರವಾಗಿ ಒಪ್ಪಲೇಬೇಕು.

2. ಇಲ್ಲಿ ಎರಡನೆಯ ವಸ್ತುವನ್ನು ಅರಿಯುವದಕ್ಕೆ ಭಾವಾಜ್ಞಾನವೇ ಕಾರಣವೆಂಬ ಈಗಿನ ವೇದಾಂತಿಗಳ ಮತವು ಭಾಷ್ಯದಲ್ಲಿ ಎಲ್ಲಿಯೂ ಕಂಡುಬರುವದಿಲ್ಲ; ಏಕತ್ವವೇ ಅಜ್ಞಾನಕ್ಕೆ ಕಾರಣವೆಂಬುದಕ್ಕೆ ಬೃ ಭಾ. ೪-೩-೨೧ವನ್ನೂ ನೋಡಿ.

3. ಆತ್ಮನು ಒಬ್ಬನೇ ಇರುವಲ್ಲಿ ವಿಶೇಷವಿಜ್ಞಾನರೂಪವಾದ ಅರಿವಿಗೆ ಅವಕಾಶವಿಲ್ಲ ಎಂಬುದೇ ಶ್ರುತಿಯ ಅಭಿಪ್ರಾಯ.

4. ಆದ್ದರಿಂದ ಭೇದವಿರುವದರಿಂದ ನಾಡಿಗಳಲ್ಲಿಯೂ ಪುರೀತತ್ತಿನಲ್ಲಿಯೂ ಇರುವದಾದರೆ ದ್ವಿತೀಯವಸ್ತುವಿನ ಜ್ಞಾನವು, ನಾನು ಇಲ್ಲಿದೇನೆ ಎಂಬ ರೂಪದ ಅರಿವು, ಆಗಲೇಬೇಕು.

5. ಅತಿದೂರಾತ್ ಸಾಮೀಪ್ಯಾದಿಂದ್ರಿಯಘಾತಾನ್ಮನೋಽನವಸ್ಥಾನಾತ್ । ಸೌಕ್ಷ್ಮ್ಯಾದ್ ವ್ಯವಧಾನಾದಭಿಭವಾತ್ಸಮಾನಾಭಿಹಾರಾಚ್ಚ ॥ (ಸಾ.ಕಾ. ೭) ಎಂಬ ಸಾಂಖ್ಯಕಾರಿಕೆಯಲ್ಲಿ ಈ ಕಾರಣಗಳನ್ನು ಹೇಳಿದೆ.

೬. ಏಕೆಂದರೆ ಸ್ವತಃ ಅವನು ಅಪರಿಚ್ಛಿನ್ನನಾದ ಪರಮಾತ್ಮನೇ ಆಗಿರುತ್ತಾನೆ.

## ಶ್ರುತ್ಯಾದಿಗಳಲ್ಲಿ ನಾಡ್ಯಾದಿಗಳ ಸಮುಚ್ಚಯವಿವಕ್ಷಿತವಲ್ಲ

(ಭಾಷ್ಯ)

೨೬೦. ನ ಚ ವಯಮ್ ಇಹ ತುಲ್ಯವತ್ ನಾಡ್ಯಾದಿಸಮುಚ್ಚಯಂ ಪ್ರತಿಪಾದಯಾಮಃ । ನ ಹಿ ನಾಡ್ಯಃ ಸುಷುಪ್ತಿಸ್ಥಾನಂ ಪುರೀತದ್ವಾ ಇತ್ಯನೇನ ವಿಜ್ಞಾನೇನ ಕಿಂಚಿತ್ ಪ್ರಯೋಜನಮ್ ಅಸ್ತಿ । ನ ಹಿ ಏತದ್ವಿಜ್ಞಾನಪ್ರತಿಬದ್ಧಂ ಕಿಂಚಿತ್ ಫಲಂ ಶ್ರೂಯತೇ. ನಾಪಿ ಏತದ್ವಿಜ್ಞಾನಂ ಫಲವತಃ ಕಸ್ಯಚಿತ್ ಅಙ್ಗಮ್ ಉಪದಿಶ್ಯತೇ । ಬ್ರಹ್ಮ ತು ಅನಪಾಯಿ ಸುಪ್ತಿಸ್ಥಾನಮ್ ಇತ್ಯೇತತ್ ಪ್ರತಿಪಾದಯಾಮಃ । ತೇನ ತು ವಿಜ್ಞಾನೇನ ಪ್ರಯೋಜನಮಸ್ತಿ ಜೀವಸ್ಯ ಬ್ರಹ್ಮಾತ್ಮತ್ವಾವಧಾರಣಮ್, ಸ್ವಪ್ನಜಾಗರಿತವ್ಯವಹಾರವಿಮುಕ್ತತ್ವಾವಧಾರಣಾ ಚ । ತಸ್ಮಾತ್ ಆತ್ಮೈವ ಸುಪ್ತಿಸ್ಥಾನಮ್ ॥

(ಭಾಷ್ಯಾರ್ಥ)

ಇಲ್ಲಿ ನಾವು ಸಮಾನವಾಗಿ ನಾಡ್ಯಾದಿಗಳ ಸಮುಚ್ಚಯವನ್ನು ಪ್ರತಿಪಾದಿಸುತ್ತಲೂ ಇಲ್ಲ.[1] ಏಕೆಂದರೆ ನಾಡಿಗಳು ಸುಷುಪ್ತಿಸ್ಥಾನವು ಅಥವಾ ಪುರೀತತ್ತು (ಸುಷುಪ್ತಿಸ್ಥಾನವು) ಎಂಬೀ ತಿಳಿವಳಿಕೆಯಿಂದ ಯಾವ ಪ್ರಯೋಜನವೂ ಇರುವದಿಲ್ಲ. ಈ ತಿಳಿವಳಿಕೆಯಿಂದ ಆಗುವ ಯಾವದೊಂದು ಫಲವನ್ನೂ ಶ್ರುತಿಯಲ್ಲಿ ಹೇಳಿರುವದೇ ಇಲ್ಲ; ಈ ತಿಳಿವಳಿಕೆಯು ಫಲವುಳ್ಳ ಮತ್ತೊಂದು ಜ್ಞಾನಕ್ಕೆ ಅಂಗವೆಂದೂ (ಶ್ರುತಿಯಲ್ಲಿ) ಉಪದಿಷ್ಟವಾಗಿಲ್ಲ. **ಬ್ರಹ್ಮವಾದರೋ ಎಂದಿಗೂ ತಪ್ಪದ ಸುಪ್ತಿಸ್ಥಾನವಾಗಿದೆ ಎಂಬಿದನ್ನು ಪ್ರತಿಪಾದಿಸುತ್ತಿದೇವೆ; ಆ ತಿಳಿವಳಿಕೆಯಿಂದಲಾದರೆ ಜೀವನು ಬ್ರಹ್ಮಸ್ವರೂಪನೆಂದು ಗೊತ್ತುಮಾಡುವದೆಂಬ ಮತ್ತು ಸ್ವಪ್ನಜಾಗ್ರದವಸ್ಥೆಗಳ ವ್ಯವಹಾರವು ಅವನಿಗಿಲ್ಲವೆಂದು ಗೊತ್ತುಮಾಡುವದೆಂಬ ಪ್ರಯೋಜನವಿದೆ. ಆದ್ದರಿಂದ ಆತ್ಮನೇ ಸುಷುಪ್ತಿಸ್ಥಾನವು.**

**ಅತಃ ಪ್ರಬೋಧೋಽಸ್ಮಾತ್ ॥ ೮ ॥**

೮. ಆದ್ದರಿಂದ ಇವನಿಂದ ಎಚ್ಚರ(ವಾಗುವದೆಂದು ಹೇಳಿದೆ).

(ಭಾಷ್ಯ)

೨೬೧. ಯಸ್ಮಾಚ್ಚ ಆತ್ಮೈವ ಸುಪ್ತಿಸ್ಥಾನಮ್ ಅತ ಏವ ಚ ಕಾರಣಾತ್ ನಿತ್ಯವದೇವ ಅಸ್ಮಾದಾತ್ಮನಃ ಪ್ರಬೋಧಃ ಸ್ವಾಪಾಧಿಕಾರೇ ಶಿಷ್ಯತೇ

---

1. ನಾಡಿಗಳೂ ಪುರೀತತ್ತೂ ಬ್ರಹ್ಮವೂ ಸೇರಿ ಒಂದು ಸುಷುಪ್ತಿಸ್ಥಾನವೆಂದು ಹೇಳುತ್ತಿಲ್ಲ; ಏಕೆಂದರೆ ನಾಡಿಗಳೂ ಪುರೀತತ್ತುಗಳೂ ಸುಷುಪ್ತಿಗೆ ದ್ವಾರಮಾತ್ರ, ಬ್ರಹ್ಮವೇ ಸುಷುಪ್ತಿಸ್ಥಾನ.

"ಕುತ ಏತದಾಗಾತ್" (ಬೃ. ೨-೧-೧೬) ಇತ್ಯಸ್ಯ ಪ್ರಶ್ನಸ್ಯ ಪ್ರತಿವಚನಾವಸರೇ "ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಙ್ಗಾ ವ್ಯುಚ್ಚರನ್ತ್ಯೇವಮೇವೈತಸ್ಮಾದಾತ್ಮನಃ ಸರ್ವೇ ಪ್ರಾಣಾಃ" (ಬೃ. ೨-೧-೨೦) ಇತ್ಯಾದಿನಾ । "ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹೇ" (ಛಾಂ. ೬-೧೦-೨) ಇತಿ ಚ । ವಿಕಲ್ಪ್ಯಮಾನೇಷು ತು ಸುಷುಪ್ತಿಸ್ಥಾನೇಷು ಕದಾಚಿತ್ ನಾಡೀಭ್ಯಃ ಪ್ರತಿಬುಧ್ಯತೇ ಕದಾಚಿತ್ ಪುರೀತತಃ, ಕದಾಚಿತ್ ಆತ್ಮನಃ ಇತಿ ಅಶಾಸಿಷ್ಯತ್ । ತಸ್ಮಾದಪಿ ಆತ್ಮೈವ ಸುಷುಪ್ತಿಸ್ಥಾನಮಿತಿ ।

(ಭಾಷ್ಯಾರ್ಥ)

ಮತ್ತು ಆತ್ಮನೇ ಸುಷುಪ್ತಿಸ್ಥಾನವಾಗಿರುವನಷ್ಟೆ. ಆ ಕಾರಣದಿಂದಲೇ "ಹೀಗೆ ಎಲ್ಲಿಂದ ಬಂದನು ?" (ಬೃ. ೨-೧-೧೬) ಎಂಬೀ ಪ್ರಶ್ನೆಯ ಉತ್ತರವನ್ನು ಹೇಳುವ ಸಂದರ್ಭದಲ್ಲಿ "ಹೇಗೆ ಬೆಂಕಿಯಿಂದ ಸಣ್ಣಕಿಡಿಗಳು ಸಿಡಿದು ಬರುವವೋ. ಹೀಗೆಯೇ ಈ ಆತ್ಮನಿಂದ ಎಲ್ಲಾ ಪ್ರಾಣಿಗಳೂ...." (ಬೃ. ೨-೧-೨೦) ಎಂಬುದೇ ಮುಂತಾದ (ವಾಕ್ಯ)ದಿಂದಲೂ "ಸತ್ತಿನಿಂದ ಬಂದಿದ್ದರೂ ಸತ್ತಿನಿಂದ ಬರುತ್ತಿದೇವೆಂದು ಅರಿಯದಿರುವರು" (ಛಾಂ. ೬-೧೦-೨) ಎಂಬ (ವಾಕ್ಯ)ದಿಂದಲೂ ಸುಷುಪ್ತಿಪ್ರಕರಣದಲ್ಲಿ ಆತ್ಮನಿಂದಲೇ ನಿಯಮವಾಗಿಯೇ ಎಚ್ಚರವನ್ನು ಉಪದೇಶಿಸಿರುತ್ತದೆ. ಆದರೆ ಸುಷುಪ್ತಿಸ್ಥಾನಗಳಾದ (ನಾಡ್ಯಾದಿಗಳನ್ನು) ವಿಕಲ್ಪಿಸಿ (ಹೇಳುವ)ದಾಗಿದ್ದರೆ ಒಮ್ಮೆ ನಾಡಿಗಳಿಂದಲೂ ಒಮ್ಮೆ ಪುರೀತತ್ತಿನಿಂದಲೂ ಒಮ್ಮೆ ಆತ್ಮನಿಂದಲೂ ಎಚ್ಚರುತ್ತಾನೆ ಎಂದು ಉಪದೇಶಮಾಡುತ್ತಿತ್ತು. ಆದ್ದರಿಂದ ಆತ್ಮನೇ ಸುಷುಪ್ತಿಸ್ಥಾನವು.

## ೩. ಕರ್ಮಾನುಸ್ಮೃತಿಶಬ್ದವಿಧ್ಯಧಿಕರಣ

(ಸುಷುಪ್ತಿಗೆ ಹೋದ ಜೀವನೇ ಎಚ್ಚರುತ್ತಾನೆ)

### ಪೂರ್ವಪಕ್ಷ:

### ಸುಷುಪ್ತಿಗೆ ಹೋದವನೇ ಎಚ್ಚರುವನೆಂಬ ನಿಯಮವಿಲ್ಲ

(ಭಾಷ್ಯ)

೨೬೯. ತಸ್ಯಾಃ ಪುನಃ ಸತ್ಸಂಪತ್ತೇಃ ಪ್ರತಿಬುಧ್ಯಮಾನಃ ಕಿಂ ಯ ಏವ ಸತ್ಸಂಪನ್ನಃ ಸ ಏವ ಪ್ರತಿಬುಧ್ಯತೇ, ಉತ ಸ ವಾ ಅನ್ಯೋ ವಾ ಇತಿ ಚಿನ್ತ್ಯತೇ । ತತ್ರ ಪ್ರಾಪ್ತಂ ತಾವದನಿಯಮಃ ಇತಿ । ಕುತಃ ? ಯದಾ ಹಿ ಜಲರಾಶೌ ಕಶ್ಚಿತ್ ಜಲಬಿನ್ದುಃ ಪ್ರಕ್ಷಿಪ್ಯತೇ ಜಲರಾಶಿರೇವ ಸ ತದಾ ಭವತಿ ಪುನರುದ್ಧರಣೇ ಚ ಸ ಏವ ಜಲಬಿನ್ದುರ್ಭವತಿ ಇತಿ ದುಃಸಂಪಾದಮ್ ।

ತದ್ವತ್ ಸುಪ್ತಃ ಪರೇಣ ಏಕತ್ವಮಾಪನ್ನಃ ಸಂಪ್ರಸೀದತಿ ಇತಿ ನ ಸ ಏವ ಪುನರುತ್ಥಾತುಮರ್ಹತಿ ; ತಸ್ಮಾತ್ ಸ ಏವ ಈಶ್ವರೋ ವಾ ಅನ್ಯೋ ವಾ ಜೀವಃ ಪ್ರತಿಬುಧ್ಯತೇ ಇತಿ ॥

(ಭಾಷ್ಯಾರ್ಥ)

ಇನ್ನು ಆ ಸತ್ಸಂಪತ್ತಿಯಿಂದ ಎಚ್ಚರುವಾಗ, ಯಾವನು ಸತ್ತಿನಲ್ಲಿ ಒಂದಾಗಿದ್ದನೋ ಅವನೇ ಎಚ್ಚರುತ್ತಾನೊ, ಅಥವಾ ಅವನೋ ಮತ್ತೊಬ್ಬನೋ (ಎಚ್ಚರುತ್ತಾರೊ) ? – ಎಂದು ವಿಚಾರಿಸಲಾಗುತ್ತದೆ.

ಇಲ್ಲಿ ಮೊದಲು ಬಂದೊದಗುವ (ಪೂರ್ವಪಕ್ಷ)ವೇನೆಂದರೆ (ಇವರಲ್ಲಿ ಯಾವ) ನಿಯಮವೂ ಇಲ್ಲ. ಏಕೆ ? ಎಂದರೆ ಯಾವಾಗ ಜಲರಾಶಿಯಲ್ಲಿ ಒಂದಾನೊಂದು ನೀರಿನ ತೊಟ್ಟನ್ನು ಹಾಕುವೆವೋ ಆಗ ಅದು ಜಲರಾಶಿಯೇ ಆಗಿಬಿಡುತ್ತದೆ. ಮತ್ತೆ ಎತ್ತಿಕೊಂಡರೆ ಅದೇ ನೀರಿನ ತೊಟ್ಟಾಗಿರುತ್ತದೆ ಎಂಬುದು ಆಗುವ ಹಾಗಿಲ್ಲ. ಹಾಗೆಯೇ ನಿದ್ರಿಸಿ ಪರಮಾತ್ಮನೊಡನೆ ಏಕತ್ವವನ್ನು ಹೊಂದಿದವನಾಗಿ ಸಂಪ್ರಸನ್ನನಾಗುತ್ತಾನಾದ್ದರಿಂದ ಅವನೇ ಮತ್ತೆ ಏಳಲಾರನು. ಆದ್ದರಿಂದ ಅವನೇ ಅಥವಾ ಈಶ್ವರನು, ಅಥವಾ ಮತ್ತೊಬ್ಬ ಜೀವನು ಎಚ್ಚರುತ್ತಾನೆ ಎಂದಾಯಿತು.[1]

## ಸಿದ್ಧಾಂತ: ನಿದ್ರೆಯಿಂದ ಅದೇ ಜೀವನೇ ಎಚ್ಚರುತ್ತಾನೆ

(ಭಾಷ್ಯ)

೨೭೧. ಏವಂ ಪ್ರಾಪ್ತೇ ಇದಮಾಹ — ಸ ಏವ ತು ಜೀವಃ ಸುಪ್ತಃ ಸ್ವಾಸ್ಥ್ಯಂ ಗತಃ ಪುನರುತ್ತಿಷ್ಠತಿ ನಾನ್ಯಃ । ಕಸ್ಮಾತ್ ? ಕರ್ಮಾನುಸ್ಮೃತಿಶಬ್ದವಿಧಿಭ್ಯಃ । ವಿಭಜ್ಯ ಹೇತುಂ ದರ್ಶಯಿಷ್ಯಾಮಿ । ಕರ್ಮಶೇಷಾನುಷ್ಠಾನದರ್ಶನಾತ್ ತಾವತ್ ಸ ಏವ ಉತ್ಥಾತುಮರ್ಹತಿ ನಾನ್ಯಃ । ತಥಾ ಹಿ ಪೂರ್ವೇದ್ಯುರನುಷ್ಠಿತಸ್ಯ ಕರ್ಮಣಃ ಅಪರೇದ್ಯುಃ ಶೇಷಮ್ ಅನುತಿಷ್ಠನ್ ದೃಶ್ಯತೇ । ನ ಚ ಅನ್ಯೇನ ಸಾಮಿಕೃತಸ್ಯ ಕರ್ಮಣಃ ಅನ್ಯಃ ಶೇಷಕ್ರಿಯಾಯಾಂ ಪ್ರವರ್ತಿತುಮರ್ಹತಿ । ಅತಿಪ್ರಸಙ್ಗಾತ್ । ತಸ್ಮಾತ್ ಏಕ ಏವ ಪೂರ್ವೇದ್ಯುಃ ಅಪರೇದ್ಯುಶ್ಚ ಏಕಸ್ಯ ಕರ್ಮಣಃ ಕರ್ತಾ ಇತಿ ಗಮ್ಯತೇ । ಇತಶ್ಚ ಸ ಏವ ಉತ್ತಿಷ್ಠತಿ । ಯತ್ಕಾರಣಮ್ ಅತೀತೇ ಅಹನಿ ಅಹಮದೋಽದ್ರಾಕ್ಷಮ್ ಇತಿ

---

1. ಪೂರ್ವಪಕ್ಷದಲ್ಲಿ ಜೀವನು ಬೇರೆಯಾಗಿದ್ದವನು ನೀರಿನ ತೊಟ್ಟು ಜಲರಾಶಿಯಲ್ಲಿ ಬೆರೆತುಕೊಳ್ಳುವಂತೆ ಸುಷುಪ್ತಿಯಲ್ಲಿ ಬ್ರಹ್ಮದೊಡನೆ ಒಂದಾಗುತ್ತವೆ ಎಂದು ಇಟ್ಟುಕೊಂಡಿದೆ. ಭಾ. ಭಾ. ೨೬೬ರಲ್ಲಿ ಹೇಳಿರುವ ಸಿದ್ಧಾಂತವನ್ನು ಲೆಕ್ಕಕ್ಕೆ ತೆಗೆದುಕೊಂಡಿಲ್ಲ.

ಪೂರ್ವಾನುಭೂತಸ್ಯ ಪಶ್ಚಾತ್ ಸ್ಮರಣಮ್ ತಸ್ಯೈವ ಉತ್ಥಾನೇ ಉಪಪದ್ಯತೇ । ನ ಹಿ ಅನ್ಯದೃಷ್ಟಮ್ ಅನ್ಯೋಽನುಸ್ಮರ್ತುಮರ್ಹತಿ । ಸೋಽಹಮಸ್ಮಿ ಇತಿ ಚ ಆತ್ಮಾನುಸ್ಮರಣಮ್ ಆತ್ಮಾನ್ತರೋತ್ಥಾನೇ ನಾವಕಲ್ಪತೇ । ಶಬ್ದೇಭ್ಯಶ್ಚ ತಸ್ಯೈವ ಉತ್ಥಾನಮ್ ಅವಗಮ್ಯತೇ । ತಥಾ ಹಿ "ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಬುದ್ಧಾನ್ತಾಯೈವ" (ಬೃ. ೪-೩-೧೬), "ಸರ್ವಾಃ ಪ್ರಜಾಃ ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕಂ ನ ವಿನ್ದನ್ತಿ" (ಛಾಂ. ೮-೩-೨), "ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಙ್ಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ಭವನ್ತಿ ತದಾಭವನ್ತಿ" (ಛಾಂ. ೬-೯-೩) ಇತ್ಯೇವಮಾದಯಃ ಶಬ್ದಾಃ ಸ್ವಾಪಪ್ರಬೋಧಾಧಿಕಾರೇ ಪಠಿತಾಃ ನಾತ್ಮಾನ್ತರೋತ್ಥಾನೇ ಸಾಮಞ್ಜಸ್ಯಮ್ ಈಯುಃ । ಕರ್ಮವಿದ್ಯಾವಿಧಿಭ್ಯಶ್ಚ ಏವಮೇವ ಅವಗಮ್ಯತೇ । ಅನ್ಯಥಾ ಹಿ ಕರ್ಮವಿದ್ಯಾವಿಧಯೋಽನರ್ಥಕಾಃ ಸ್ಯುಃ । ಅನ್ಯೋತ್ಥಾನಪಕ್ಷೇ ಹಿ ಸುಪ್ತಮಾತ್ರೋ ಮುಚ್ಯತ ಇತಿ ಆಪದ್ಯೇತ । ಏವಂ ಚೇತ್ ಸ್ಯಾತ್ ವದ ಕಿಂ ಕಾಲಾನ್ತರಫಲೇನ ಕರ್ಮಣಾ ವಿದ್ಯಯಾ ವಾ ಕೃತಂ ಸ್ಯಾತ್ ?

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಈ (ಸಿದ್ಧಾಂತವನ್ನು) ಹೇಳುತ್ತಾರೆ. ಅದೇ ಜೀವನೇ ಸುಪ್ತನಾಗಿ ಸ್ವಸ್ಥತೆಯನ್ನು[1] ಪಡೆದು ಮತ್ತೆ ಏಳುತ್ತಾನೆಯೇ ಹೊರತು ಮತ್ತೊಬ್ಬನಲ್ಲ. ಏಕೆ? ಕರ್ಮಾನುಸ್ಮೃತಿಶಬ್ದವಿಧಿಗಳಿಂದ (ಹೀಗೆಂದು ಗೊತ್ತಾಗುತ್ತದೆ). ಹೇತುವನ್ನು ಬಿಂಗಡಿಸಿ ಒಂದೊಂದಾಗಿ ತಿಳಿಸುವೆನು. ಮೊದಲನೆಯದಾಗಿ ಕರ್ಮಶೇಷದ ಅನುಷ್ಠಾನವು ಕಂಡು ಬರುವದರಿಂದ ಅವನೇ ಏಳಬೇಕೇ ಹೊರತು ಮತ್ತೊಬ್ಬನು (ಏಳ)ಲಾರನು. ಹೇಗೆಂದರೆ ಹಿಂದಿನ ದಿನ ಮಾಡಿದ ಕರ್ಮದ ಶೇಷವನ್ನು ಮಾರನೆಯ ದಿನ ಮಾಡುವದು ಕಂಡುಬರುತ್ತದೆ. ಒಬ್ಬನು ಅರ್ಧಮಾಡಿದ್ದ ಕರ್ಮವನ್ನು ಮತ್ತೊಬ್ಬನು ಉಳಿದ (ಭಾಗ)ವನ್ನು ಮಾಡಲು) ತೊಡಗಲಾರನು ; ಏಕೆಂದರೆ (ಆಗ) ಅತಿಪ್ರಸಂಗವಾದೀತು.[2] ಆದ್ದರಿಂದ ಹಿಂದಿನ ದಿನವೂ ಮುಂದಿನ ದಿನವೂ ಒಂದೇ ಕರ್ಮವನ್ನು ಮಾಡುವವನು ಒಬ್ಬನೇ ಎಂದು ನಿಶ್ಚಯಿಸಬೇಕು.

ಈ (ಕಾರಣ)ದಿಂದಲೂ ಅವನೇ ಏಳುತ್ತಾನೆ. ಏಕೆಂದರೆ ಕಳೆದ ದಿನ ನಾನು ಅದನ್ನು ಕಂಡೆನು ಎಂದು ಹಿಂದೆ ಅನುಭವಿಸಿದ್ದನ್ನು ಆ ಬಳಿಕ ಸ್ಮರಿಸು

---

1. ತನ್ನ ಸ್ವರೂಪವನ್ನು.

2. ಬೇರೆಬೇರೆಯವರು ಒಂದೇ ಕರ್ಮವನ್ನು ಮಾಡಿದರೆಂದಾಗಿ ಫಲವು ಯಾರಿಗೆಂಬ ನಿರ್ಧಾರವಿಲ್ಲದೆ ಹೋದೀತು.

ವದು ಮತ್ತೊಬ್ಬನು ಏಳುತ್ತಾನೆಂಬ (ಪಕ್ಷ)ದಲ್ಲಿ ಹೊಂದುವದಿಲ್ಲ. ಏಕೆಂದರೆ ಒಬ್ಬನು ಕಂಡದ್ದನ್ನು ಮತ್ತೊಬ್ಬನು ಸ್ಮರಣೆಮಾಡಲಾರನು. ಅವನೇ ನಾನು ಎಂದು ತನ್ನನ್ನೇ (ತಾನು) ಸ್ಮರಿಸಿಕೊಳ್ಳುವದೂ[1] ಮತ್ತೊಬ್ಬ ಆತ್ಮನು ಏಳುತ್ತಾನೆಂಬ (ಪಕ್ಷ)ದಲ್ಲಿ ಹೊಂದುವದಿಲ್ಲ.

ಶಬ್ದಗಳಿಂದಲೂ ಅವನೇ ಏಳುತ್ತಾನೆಂದು ನಿಶ್ಚಯವಾಗುತ್ತದೆ. ಹೇಗೆಂದರೆ "ಮತ್ತೆ ಹೋಗಿದ್ದಕ್ಕೆ ಅನುಗುಣವಾಗಿ ಆಯಾ ಯೋನಿಗೆ ಎಚ್ಚರದವಸ್ಥೆಗೇ ಬರುತ್ತಾನೆ" (ಬೃ. ೪-೩-೧೬), "ಈ ಸರ್ವಪ್ರಜೆಗಳೂ ದಿನದಿನವೂ ಹೋಗುತ್ತಿದ್ದರೂ ಈ ಬ್ರಹ್ಮಲೋಕವನ್ನು ಅರಿತುಕೊಳ್ಳದೆ ಇರುವರು" (ಛಾಂ. ೮-೩-೨), "ಅವರು ಇಲ್ಲಿ ಹುಲಿಯೋ ಸಿಂಹವೋ ತೋಳವೋ ಹಂದಿಯೋ ಹುಳುವೋ ಜಿಟ್ಟೆಯೋ ಕಣಜವೋ ಸೊಳ್ಳೆಯೋ- ಯಾವಯಾವದಾಗಿರುವರೋ ಅದೇ ಆಗುವರು" (ಛಾಂ. ೬-೯-೩) - ಎಂಬಿವೇ ಮುಂತಾದ ನಿದ್ರೆ ಎಚ್ಚರಗಳ ಪ್ರಕರಣದಲ್ಲಿ ಪಠಿತವಾಗಿರುವ ಶಬ್ದಗಳು ಮತ್ತೊಬ್ಬ ಆತ್ಮನು ಏಳುವನೆಂಬ (ಪಕ್ಷ)ದಲ್ಲಿ ಸಾಮಂಜಸ್ಯವನ್ನು ಹೊಂದಲಾರವು. ಕರ್ಮವಿದ್ಯಾವಿಧಿಗಳಿಂದಲೂ ಹೀಗೆಂದೇ ನಿಶ್ಚಿತವಾಗುತ್ತದೆ. ಏಕೆಂದರೆ ಹೀಗಲ್ಲದಿದ್ದರೆ ಕರ್ಮವಿದ್ಯಾವಿಧಿಗಳು ವ್ಯರ್ಥವೆಂದಾಗುವವು. ಮತ್ತೊಬ್ಬನು ಏಳುತ್ತಾನೆಂಬ ಪಕ್ಷದಲ್ಲಿ ನಿದ್ರಿಸಿದಮಾತ್ರಕ್ಕೆ ಮುಕ್ತನಾಗುತ್ತಾನೆಂದಾಗಬೇಕಷ್ಟೆ. ಹೀಗಾದರೆ ಕಾಲಾಂತರದಲ್ಲಿ ಫಲವಾಗುವ ಕರ್ಮದಿಂದಲಾಗಲಿ ಫಲದಿಂದಲಾಗಲಿ ಏನು ಆದಂತಾಯಿತು ? ಹೇಳು.

## ಮತ್ತೊಬ್ಬ ಜೀವನು ಇಲ್ಲಿ ಎಚ್ಚರುತ್ತಾನೆಂದರೆ ದೋಷಗಳು

(ಭಾಷ್ಯ)

೩೭೧. ಅಪಿ ಚ ಅನ್ಯೋತ್ಥಾನಪಕ್ಷೇ ಯದಿ ತಾವತ್ ಶರೀರಾನ್ತರೇ ವ್ಯವಹರಮಾಣೋ ಜೀವಃ ಉತ್ತಿಷ್ಠೇತ್ ತತ್ರತ್ಯವ್ಯವಹಾರಲೋಪಪ್ರಸಙ್ಗಃ ಸ್ಯಾತ್ । ಅಥ ತತ್ರ ಸುಪ್ತ ಉತ್ತಿಷ್ಠೇತ್ ಕಲ್ಪನಾನರ್ಥಕ್ಯಂ ಸ್ಯಾತ್ । ಯೋ ಹಿ ಯಸ್ಮಿನ್ ಶರೀರೇ ಸುಪ್ತಃ ಸ ತಸ್ಮಿನ್ ನೋತ್ತಿಷ್ಠತಿ ಅನ್ಯಸ್ಮಿನ್ ಶರೀರೇ ಸುಪ್ತೋಽನ್ಯಸ್ಮಿನ್ ಉತ್ತಿಷ್ಠತಿ ಇತಿ ಕೋಽಸ್ಯ ಕಲ್ಪನಾಯಾಂ ಲಾಭಃ ಸ್ಯಾತ್ ? ಅಥ ಮುಕ್ತ ಉತ್ತಿಷ್ಠೇತ್ ಅನ್ತವಾನ್ ಮೋಕ್ಷ ಆಪದ್ಯೇತ । ನಿವೃತ್ತಾವಿದ್ಯಸ್ಯ ಚ ಪುನರುತ್ಥಾನಮ್ ಅನುಪಪನ್ನಮ್ । ಏತೇನ ಈಶ್ವರಸ್ಯ ಉತ್ಥಾನಂ ಪ್ರತ್ಯುಕ್ತಮ್ । ನಿತ್ಯನಿವೃತ್ತಾವಿದ್ಯತ್ವಾತ್ । ಅಕೃತಾಭ್ಯಾಗಮಕೃತವಿಪ್ರಣಾಶೌ ಚ

1. ಅನುಸ್ಮೃತಿ ಎಂದರೆ ಸ್ಮರಣೆ ಎಂಬರ್ಥವಲ್ಲದೆ ತನ್ನ ಪ್ರತ್ಯಭಿಜ್ಞಾನವೆಂದೂ ಆಗಬಹುದೆಂದು ಭಾವ.

ದುರ್ನಿವಾರೌ ಅನ್ಯೋತ್ಥಾನಪಕ್ಷೇ ಸ್ಯಾತಾಮ್ । ತಸ್ಮಾತ್ ಸ ಏವ ಉತ್ತಿಷ್ಠತಿ ನಾನ್ಯಃ ಇತಿ ॥

(ಭಾಷ್ಯಾರ್ಥ)

ಇವನಲ್ಲದೆ ಮತ್ತೊಬ್ಬನು ಏಳುತ್ತಾನೆಂಬ ಪಕ್ಷದಲ್ಲಿ ಮೊದಲನೆಯದಾಗಿ ಮತ್ತೊಂದು ಶರೀರದಲ್ಲಿ ವ್ಯವಹರಿಸುತ್ತಿರುವ ಜೀವನು (ಈ ಶರೀರದಲ್ಲಿ) ಏಳುವನೆಂದಾದರೆ ಅಲ್ಲಿಯ ವ್ಯವಹಾರವು ಲೋಪವಾಗುವ ಪ್ರಸಂಗವಾಗುವದು. ಹಾಗಿಲ್ಲದೆ (ಇಲ್ಲಿ) ನಿದ್ರಿಸಿದವನು ಅಲ್ಲಿ ಏಳುತ್ತಾನೆ ಎಂದರೆ (ಹಾಗೆ) ಕಲ್ಪಿಸುವದು ವ್ಯರ್ಥವಾಗುವದು. ಏಕೆಂದರೆ ಯಾವನು ಯಾವ ಶರೀರದಲ್ಲಿ ನಿದ್ರಿಸಿದನೋ ಅವನು ಆ (ಶರೀರ)ದಲ್ಲಿ ಏಳುವದಿಲ್ಲ, ಒಂದು ಶರೀರದಲ್ಲಿ ನಿದ್ರಿಸಿದವನು ಮತ್ತೊಂದು ಶರೀರದಲ್ಲಿ ಏಳುತ್ತಾನೆ –ಎಂಬೀ ಕಲ್ಪನೆಯಲ್ಲಿ ಯಾವ ಲಾಭವಾದೀತು ? ಹೀಗಲ್ಲದೆ ಮುಕ್ತನು ಏಳುತ್ತಾನೆ ಎಂದರೆ, ಮೋಕ್ಷವು ಅಂತವುಳ್ಳದ್ದೆಂದಾಗುವದು ; ಅವಿದ್ಯೆಯು ತೊಲಗಿದವನು ಮತ್ತೆ ಏಳುವನೆಂಬುದೂ ಯುಕ್ತವಲ್ಲ. ಇದರಿಂದ ಈಶ್ವರನು ಏಳುತ್ತಾನೆ ಎಂಬುವನ್ನು ತಿರಸ್ಕರಿಸಿದಂತೆ ಆಯಿತು. ಏಕೆಂದರೆ ಅವನು ಎಂದೆಂದಿಗೂ ಅವಿದ್ಯೆಯನ್ನು ತೊಲಗಿಸಿಕೊಂಡಿರುತ್ತಾನೆ. ಮಾಡದೆ ಇರುವ (ಕರ್ಮದ ಫಲವು), ಬರುವದು, ಮಾಡಿದ (ಕರ್ಮದ ಫಲವು) ನಾಶವಾಗುವದು –ಎಂಬಿವು ಮತ್ತೊಬ್ಬನು ಏಳುವನೆಂಬ ಪಕ್ಷದಲ್ಲಿ ನಿವಾರಣೆಮಾಡಲಾಗದ ದೋಷಗಳಾಗುವವು. ಆದ್ದರಿಂದ ಅವನೇ ಏಳುತ್ತಾನೆಯೇ ಹೊರತು ಮತ್ತೊಬ್ಬನಲ್ಲ.

## ಜೀವನು ಸುಷುಪ್ತಿಜಾಗರಿತಗಳಲ್ಲಿ ಒಬ್ಬನೇ ಎಂಬುದಕ್ಕೆ ಯುಕ್ತಿ

(ಭಾಷ್ಯ)

೨೭೨. ಯತ್ ಪುನರುಕ್ತಂ ಯಥಾ ಜಲರಾಶೌ ಪ್ರಕ್ಷಿಪ್ತೋ ಜಲಬಿನ್ದುಃ ನೋದ್ಧರ್ತುಂ ಶಕ್ಯತೇ ಏವಂ ಸತಿ ಸಂಪನ್ನೋ ಜೀವೋ ನೋತ್ಪತಿತುಮರ್ಹತಿ ಇತಿ । ತತ್ ಪರಿಹ್ರಿಯತೇ । ಯುಕ್ತಂ ತತ್ರ ವಿವೇಕಕಾರಣಾಭಾವಾತ್ ಜಲಬಿನ್ದೋಃ ಅನುದ್ಧರಣಮ್ । ಇಹ ತು ವಿದ್ಯತೇ ವಿವೇಕಕಾರಣಂ ಕರ್ಮ ಚ ಅವಿದ್ಯಾ ಚ ಇತಿ ವೈಷಮ್ಯಮ್ । ದೃಶ್ಯತೇ ಚ ದುರ್ವಿವೇಚಯೋರಪಿ ಅಸ್ಮಜ್ಜಾತೀಯೈಃ ಕ್ಷೀರೋದಕಯೋಃ ಸಂಸೃಷ್ಟಯೋಃ ಹಂಸೇನ ವಿವೇಚನಮ್ । ಅಪಿ ಚ ನ ಜೀವೋ ನಾಮ ಕಶ್ಚಿತ್ ಪರಸ್ಮಾತ್ ಅನ್ಯೋ ವಿದ್ಯತೇ ಯೋ ಜಲಬಿನ್ದುರಿವ ಜಲರಾಶೇಃ ಸತೋ ವಿವಿಚ್ಯೇತ । ಸದೇವ ತು ಉಪಾಧಿಸಂಪರ್ಕಾತ್ ಜೀವ ಇತಿ ಉಪಚರ್ಯತೇ ಇತಿ ಅಸಕೃತ್ ಪ್ರಪಞ್ಚಿತಮ್ । ಏವಂ

ಸತಿ ಯಾವತ್ ಏಕೋಪಾಧಿಗತಾ ಬನ್ಧಾನುವೃತ್ತಿಃ ತಾವದೇಕಜೀವವ್ಯವಹಾರಃ ಉಪಾಧ್ಯನ್ತರಗತಾಯಾಂ ತು ಬನ್ಧಾನುವೃತ್ತೌ ಜೀವಾನ್ತರವ್ಯವಹಾರಃ । ಸ ಏವಾಯಮ್ ಉಪಾಧಿಃ ಸ್ವಾಪಪ್ರಬೋಧಯೋಃ ಬೀಜಾಙ್ಕುರನ್ಯಾಯೇನ ಇತ್ಯತಃ ಸ ಏವ ಜೀವಃ ಪ್ರತಿಬುಧ್ಯತೇ ಇತಿ ಯುಕ್ತಮ್ ॥

(ಭಾಷ್ಯಾರ್ಥ)

ಇನ್ನು ಜಲರಾಶಿಯಲ್ಲಿ ಹಾಕಿದ ನೀರಿನ ತೊಟ್ಟು ಹೇಗೆ ಮೇಲಕ್ಕೆತ್ತಿಕೊಳ್ಳುವದಕ್ಕೆ ಆಗುವದಿಲ್ಲವೋ, ಹಾಗೆ ಸತ್ತಿನಲ್ಲಿ ಸಂಪನ್ನನಾದ ಜೀವನು (ಮತ್ತೆ) ಮೇಲಕ್ಕೇಳಲಾರನು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದನ್ನು (ಈಗ) ಪರಿಹರಿಸಲಾಗುವದು. ಅಲ್ಲಿ[1] ವಿವೇಕಕಾರಣವು ಇಲ್ಲದ್ದರಿಂದ ಜಲಬಿಂದುವನ್ನು ಎತ್ತಿಕೊಳ್ಳುವದಕ್ಕೆ ಆಗುವದಿಲ್ಲವೆಂಬುದು ಯುಕ್ತವು; ಆದರೆ **ಇಲ್ಲಿ ವಿವೇಕಕ್ಕೆ ಕಾರಣವಾಗಿ ಕರ್ಮವೂ ಅವಿದ್ಯೆಯೂ ಇದೆಯಾದ್ದರಿಂದ (ದೃಷ್ಟಾಂತದಾರ್ಷ್ಟಾಂತಿಕಗಳಿಗೆ) ಹೆಚ್ಚುಕಡಿಮೆಯಿದೆ[2],** ನಮ್ಮಂಥವರು ವಿವೇಚನೆಮಾಡುವದು ಕಷ್ಟವಾಗಿದ್ದರೂ ಬೆರೆತಿರುವ ಹಾಲುನೀರುಗಳನ್ನು ಹಂಸವು ಬೇರ್ಪಡಿಸುವದು ಕಂಡಿದೆ. **ಇದೂ ಅಲ್ಲದೆ ಪರಮಾತ್ಮನಿಗಿಂತ ಬೇರೆಯಾಗಿ ಜೀವನೆಂಬವನೊಬ್ಬನು ಇರುವದಿಲ್ಲ, ಹಾಗಿದ್ದರೆ ಜಲರಾಶಿಯಿಂದ ನೀರಿನ ತೊಟ್ಟನ್ನು (ಬೇರ್ಪಡಿಸುವಂತೆ) ಅವನನ್ನು ಸತ್ತಿನಿಂದ ವಿಂಗಡಿಸಬೇಕಾಗುತ್ತಿತ್ತು. ಸತ್ತನ್ನೇ ಉಪಾಧಿಯ ಸಂಪರ್ಕದಿಂದ ಜೀವನೆಂದು ಉಪಚಾರಕ್ಕೆ ಹೇಳುತ್ತಾರೆ ಎಂದು ಅನೇಕವೇಳೆ ವಿವರಿಸಿದ್ದಾಗಿದೆ[3].** ಹೀಗಿರುವದರಿಂದ ಎಲ್ಲಿಯವರೆಗೆ ಒಂದು ಉಪಾಧಿಯಲ್ಲಿರುವ ಬಂಧವು ಅನುಸರಿಸಿಕೊಂಡಿರುವದೋ ಅಲ್ಲಿಯವರೆಗೆ ಒಬ್ಬ ಜೀವನೆಂಬ ವ್ಯವಹಾರವು, ಮತ್ತೊಂದು ಉಪಾಧಿಯಲ್ಲಿರುವ ಬಂಧವು ಅನುವರ್ತಿಸಿಕೊಂಡುಬಂದರೆ ಮತ್ತೊಬ್ಬ ಜೀವನೆಂಬ ವ್ಯವಹಾರವು[4]. ಆದರೆ ಸುಷುಪ್ತಿ, ಎಚ್ಚರ– ಇವುಗಳಲ್ಲಿ ಬೀಜಾಂಕುರನ್ಯಾಯದಿಂದ ಈ ಉಪಾಧಿಯು

---

1. ದೃಷ್ಟಾಂತದಲ್ಲಿ.

2. ಕರ್ಮ, ಅವಿದ್ಯೆ– ಇವುಗಳಿಂದ ಅದೇ ಜೀವನೆಂದು ಗುರುತಿಸಬಹುದಾಗಿದೆ ಎಂದು ಭಾವ. 'ಇಲ್ಲಿ' ಎಂದರೆ ಸುಷುಪ್ತಿಯಲ್ಲಿ ಎಂಬರ್ಥವನ್ನು ಮಾಡಿ ಸುಷುಪ್ತಿಯಲ್ಲಿ ಅವಿದ್ಯೆಯಿದೆ ಎಂಬುದಕ್ಕೆ ಇದನ್ನು ಉದಾಹರಿಸುವದು ತಪ್ಪೆಂದು ಹೇಳಬೇಕಾದದ್ದೇ ಇಲ್ಲ.

3. ಬ್ರಹ್ಮಕ್ಕೇ ದೇಹಾದ್ಯುಪಾಧಿಗಳಿಂದ ಆಕಾಶಘಟಾಕಾಶಗಳಂತೆ ಜೀವೇಶ್ವರ ವ್ಯವಹಾರವು ಬಂದಿದೆ ಎಂದರ್ಥ.

4. ಒಂದೊಂದು ಕಾರ್ಯಕಾರಣಸಂಘಾತದಿಂದ ಒಬ್ಬೊಬ್ಬ ಜೀವನೆಂಬ ವ್ಯವಹಾರವುಂಟಾಗುತ್ತದೆ ಎಂದರ್ಥ. ಇಲ್ಲಿ ನಾನಾಜೀವವಾದವನ್ನು ಖಂಡಿಸಿದೆ ಎಂದು ನ್ಯಾ. ನಿ. ದಲ್ಲಿ ಹೇಳಿರುವದಕ್ಕೆ ಭಾಷ್ಯದ ಆಧಾರವಿಲ್ಲ.

ಅದೇ ಆಗಿರುತ್ತದೆಯಾದ್ದರಿಂದ ಅದೇ ಜೀವನೇ ಎಚ್ಚರುತ್ತಾನೆ ಎಂಬುದೇ ಯುಕ್ತವು[1].

## ೪. ಮುಗ್ಧೇಽರ್ಧಸಂಪತ್ತ್ಯಧಿಕರಣ

(ಮೂರ್ಛಾವಸ್ಥೆಯು ಸುಷುಪ್ತಿಪಕ್ಷಕ್ಕೇ ಸೇರಿದ್ದು)

## ಮೂರ್ಛೆಯ ವಿಷಯಕ್ಕೆ ಪೂರ್ವಪಕ್ಷ

(ಭಾಷ್ಯ)

೨೭೩. ಅಸ್ತಿ ಮುಗ್ಧೋ ನಾಮ ಯಂ ಮೂರ್ಛಿತ ಇತಿ ಲೌಕಿಕಾಃ ಕಥಯನ್ತಿ । ಸ ತು ಕಿಮವಸ್ಥಃ ಇತಿ ಪರೀಕ್ಷಾಯಾಮ್ ಉಚ್ಯತೇ । ತಿಸ್ರಸ್ತಾವದವಸ್ಥಾಃ ಶರೀರಸ್ಥಸ್ಯ ಜೀವಸ್ಯ ಪ್ರಸಿದ್ಧಾಃ ಜಾಗರಿತಮ್, ಸ್ವಪ್ನಃ, ಸುಷುಪ್ತಮಿತಿ । ಚತುರ್ಥೀ ಶರೀರಾತ್ ಅಪಸೃಪ್ತಿಃ । ನ ತು ಪಞ್ಚಮೀ ಕಾಚಿತ್ ಅವಸ್ಥಾ ಜೀವಸ್ಯ ಶ್ರುತೌ ಸ್ಮೃತೌ ವಾ ಪ್ರಸಿದ್ಧಾ ಅಸ್ತಿ । ತಸ್ಮಾತ್ ಚತಸೃಣಾಮೇವ ಅವಸ್ಥಾನಾಮ್ ಅನ್ಯತಮಾವಸ್ಥಾ ಮೂರ್ಛಾ ಇತಿ ॥

(ಭಾಷಾ)

ಮುಗ್ಧನೆಂಬವನೂ ಉಂಟು, ಅವನನ್ನು ಜನರು ಮೂರ್ಛಿತನೆಂದು ಕರೆಯುತ್ತಾರೆ. ಆದರೆ ಅವನು ಯಾವ ಅವಸ್ಥೆಯುಳ್ಳವನು ? ಎಂಬ ಪರೀಕ್ಷೆಯುಂಟಾಗುವಲ್ಲಿ (ಪೂರ್ವಪಕ್ಷಿ) ಹೇಳುತ್ತಾನೆ. ಮೊದಲನೆಯದಾಗಿ ಶರೀರದಲ್ಲಿರುವ ಜೀವನಿಗೆ ಎಚ್ಚರ, ಕನಸು, ತನಿನಿದ್ರೆ– ಎಂಬ ಮೂರು ಅವಸ್ಥೆಗಳು ಪ್ರಸಿದ್ಧವಾಗಿರುತ್ತವೆ. ನಾಲ್ಕನೆಯದು ಶರೀರದಿಂದ ಹೊರಟುಹೋಗುವದು. ಆದರೆ ಜೀವನಿಗೆ ಐದನೆಯದಾದ ಯಾವ ಅವಸ್ಥೆಯೂ ಶ್ರುತಿಯಲ್ಲಾಗಲಿ ಸ್ಮೃತಿಯಲ್ಲಾಗಲಿ ಪ್ರಸಿದ್ಧವಾಗಿರುವದಿಲ್ಲ. ಆದ್ದರಿಂದ ಮೂರ್ಛೆಯು (ಈ) ನಾಲ್ಕು ಅವಸ್ಥೆಗಳಲ್ಲಿಯೇ ಯಾವದೋ ಒಂದು ಅವಸ್ಥೆ.

## ಸಿದ್ಧಾಂತ : ಮೂರ್ಛೆಯೆಂದರೆ ಅರ್ಧಸಂಪತ್ತಿಯ ಅವಸ್ಥೆ

(ಭಾಷ್ಯ)

೨೭೪. ಏವಂ ಪ್ರಾಪ್ತೇ ಬ್ರೂಮಃ । ನ ತಾವನ್ಮುಗ್ಧೋ ಜಾಗರಿತಾವಸ್ಥೋ ಭವಿತುಮರ್ಹತಿ । ನ ಹಿ ಅಯಮ್ ಇನ್ದ್ರಿಯೈರ್ವಿಷಯಾನ್ ಈಕ್ಷತೇ । ಸ್ಯಾದೇತತ್ । ಇಷುಕಾರನ್ಯಾಯೇನ ಮುಗ್ಧೋ ಭವಿಷ್ಯತಿ । ಯಥಾ ಇಷುಕಾರೋ ಜಾಗ್ರದಪಿ ಇಷ್ವಾಸಕ್ತಮನಸ್ತಯಾ ನಾನ್ಯಾನ್ ವಿಷಯಾನ್ ಈಕ್ಷತೇ ಏವಂ ಮುಗ್ಧೋ ಮುಸಲಸಂಪಾತಾದಿಜನಿತದುಃಖಾನುಭವವ್ಯಗ್ರಮನಸ್ತಯಾ

1. ಆದೇ ಉಪಾಧಿಯು ಎಂದರೆ ಅಂತಃಕರಣವು; ಅವಿದ್ಯೆಯೆಂಬ ಉಪಾಧಿ ಎಂಬ ಭಾಮತೀವ್ಯಾಖ್ಯಾನಕ್ಕೆ ಆಧಾರವಿಲ್ಲ. ೨–೩–೩೦ರ ಭಾಷ್ಯವನ್ನು ನೋಡಿ.

ಜಾಗ್ರದಪಿ ಸಾನ್ಯಾನ್ ವಿಷಯಾನ್ ಈಕ್ಷತೇ ಇತಿ। ನ। ಅಚೇತಯಮಾನತ್ವಾತ್. ಇಷುಕಾರೋ ಹಿ ವ್ಯಾಪೃತಮನಾಃ ಬ್ರವೀತಿ ಇಷುಮೇವ ಅಹಮೇತಾವನ್ತಂ ಕಾಲಮ್ ಉಪಲಭಮಾನೋಽಭೂವಮ್ ಇತಿ। ಮುಗ್ಧಸ್ತು ಲಬ್ಧಸಂಜ್ಞೋ ಬ್ರವೀತಿ ಅನ್ಧೇ ತಮಸಿ ಅಹಮೇತಾವನ್ತಂ ಕಾಲಮ್ ಪ್ರಕ್ಷಿಪ್ತೋಽಭೂವಮ್, ನ ಕಿಂಚಿತ್ ಮಯಾ ಚೇತಿತಮ್ ಇತಿ। ಜಾಗ್ರತಶ್ಚ ಏಕವಿಷಯವಿಷಕ್ತಚೇತಸೋಽಪಿ ದೇಹೋ ವಿಧ್ರಿಯತೇ। ಮುಗ್ಧಸ್ಯ ತು ದೇಹೋ ಧರಣ್ಯಾಂ ಪತತಿ। ತಸ್ಮಾನ್ನ ಜಾಗರ್ತಿ ನಾಪಿ ಸ್ವಪ್ನಾನ್ ಪಶ್ಯತಿ। ನಿಸ್ಸಂಜ್ಞಕತ್ವಾತ್। ನಾಪಿ ಮೃತಃ। ಪ್ರಾಣೋಷ್ಮಣೋರ್ಭಾವಾತ್। ಮುಗ್ಧೇ ಹಿ ಜನ್ತೌ ಮೃತೋಽಯಂ ಸ್ಯಾತ್ ನ ವಾ ಮೃತಃ ಇತಿ ಸಂಶಯಾನಾ ಊಷ್ಮಾಸ್ತಿ ನಾಸ್ತೀತಿ ಹೃದಯದೇಶಮ್ ಆಲಭನ್ತೇ ನಿಶ್ಚಯಾರ್ಥಮ್। ಪ್ರಾಣೋಽಸ್ತಿ ನಾಸ್ತಿ ಇತಿ ಚ ನಾಸಿಕಾದೇಶಮ್। ಯದಿ ಪ್ರಾಣೋಷ್ಮಣೋರಸ್ತಿತ್ವಂ ನಾವಗಚ್ಛನ್ತಿ ತತೋ ಮೃತೋಽಯಮಿತಿ ಅಧ್ಯವಸಾಯ ದಹನಾಯ ಅರಣ್ಯಂ ನಯನ್ತಿ. ಅಥ ತು ಪ್ರಾಣಮ್ ಊಷ್ಮಾಣಂ ವಾ ಪ್ರತಿಪದ್ಯನ್ತೇ ತತೋ ನಾಯಂ ಮೃತಃ ಇತ್ಯಧ್ಯವಸಾಯ ಸಂಜ್ಞಾಲಾಭಾಯ ಭಿಷಜ್ಯನ್ತಿ। ಪುನರುತ್ಥಾನಾಚ್ಚ ನ ದಿಷ್ಟಂ ಗತಃ। ನ ಹಿ ಯಮರಾಷ್ಟ್ರಾತ್ ಪ್ರತ್ಯಾಗಚ್ಛತಿ। ಅಸ್ತು ತರ್ಹಿ ಸುಷುಪ್ತಃ। ನಿಃಸಂಜ್ಞತ್ವಾತ್ ಅಮೃತತ್ವಾಚ್ಚ। ನ। ವೈಲಕ್ಷಣ್ಯಾತ್। ಮುಗ್ಧಃ ಕದಾಚಿತ್ ಚಿರಮಪಿ ನೋಚ್ಛ್ವಸಿತಿ। ಸವೇಪಥುರಸ್ಯ ದೇಹೋ ಭವತಿ ಭಯಾನಕಂ ಚ ವದನಮ್ ವಿಸ್ಫಾರಿತೇ ನೇತ್ರೇ। ಸುಷುಪ್ತಸ್ತು ಪ್ರಸನ್ನವದನಃ ತುಲ್ಯಕಾಲಂ ಪುನಃ ಪುನರುಚ್ಛ್ವಸಿತಿ। ನಿಮೀಲಿತೇ ಅಸ್ಯ ನೇತ್ರೇ ಭವತಃ। ನ ಚಾಸ್ಯ ದೇಹೋ ವೇಪತೇ। ಪಾಣಿಪೇಷಣಮಾತ್ರೇಣ ಚ ಸುಷುಪ್ತಮ್ ಉತ್ಥಾಪಯನ್ತಿ। ನ ತು ಮುಗ್ಧಂ ಮುದ್ಗರಘಾತೇನಾಪಿ। ನಿಮಿತ್ತಭೇದಶ್ಚ ಭವತಿ ಮೋಹಸ್ವಾಪಯೋಃ। ಮುಸಲಸಂಪಾತಾದಿನಿಮಿತ್ತತ್ವಾನ್ಮೋಹಸ್ಯ। ಶ್ರಮಾದಿನಿಮಿತ್ತತ್ವಾಚ್ಚ ಸ್ವಾಪಸ್ಯ। ನ ಚ ಲೋಕೇಽಸ್ತಿ ಪ್ರಸಿದ್ಧಿಃ ಮುಗ್ಧಃ ಸುಪ್ತಃ ಇತಿ। ಪರಿಶೇಷಾತ್ ಅರ್ಧಸಂಪತ್ತಿರ್ಮುಗ್ಧತಾ ಇತ್ಯವಗಚ್ಛಾಮಃ। ನಿಃಸ್ಸಂಜ್ಞತ್ವಾತ್ ಸಂಪನ್ನಃ ಇತರಸ್ಮಾತ್ ವೈಲಕ್ಷಣ್ಯಾತ್ ಅಸಂಪನ್ನಃ ಇತಿ ||

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಮೊದಲನೆಯದಾಗಿ ಮುಗ್ಧನು ಎಚ್ಚರದವಸ್ಥೆಯಲ್ಲಿರುವವನೆಂದಾಗಲಾರದು. ಏಕೆಂದರೆ ಇವನು ಇಂದ್ರಿಯಗಳಿಂದ ವಿಷಯಗಳನ್ನು ನೋಡುತ್ತಿರುವದಿಲ್ಲ.

(ಆಕ್ಷೇಪ):– ಈ (ಮತ)ವಿರಬಹುದಲ್ಲ! ಇಷುಕಾರನ್ಯಾಯದಿಂದ ಮುಗ್ಧನು ಇರಬಹುದಲ್ಲ! ಹೇಗೆ ಬಾಣವನ್ನು ಮಾಡುವವನು ಎಚ್ಚರವಾಗಿಯೇ ಇದ್ದರೂ ಬಾಣದಲ್ಲಿಯೇ ಇಟ್ಟ ಮನಸ್ಸುಳ್ಳವನಾಗಿರುವದರಿಂದ ಮಿಕ್ಕ ವಿಷಯಗಳನ್ನು ಕಾಣದೆ ಇರುವನೋ ಹೀಗೆ ಮೂರ್ಛಿತನಾದವನು ಒನಕೆಯ ಪೆಟ್ಟೇ ಮುಂತಾದದ್ದರಿಂದುಂಟಾದ ದುಃಖವನ್ನು ಅನುಭವಿಸುವದರಲ್ಲಿಯೇ ನೆಟ್ಟ ಮನಸ್ಸಿರುವದರಿಂದ ಎಚ್ಚರವಾಗಿದ್ದರೂ ಮಿಕ್ಕ ವಿಷಯಗಳನ್ನು ಕಾಣದೆ ಇರುತ್ತಾನೆ (ಎನ್ನಬಹುದಲ್ಲ) !

(ಪರಿಹಾರ):– ಹಾಗಲ್ಲ. ಏಕೆಂದರೆ (ಅವನಿಗೆ) ಎಚ್ಚರವಿರುವದಿಲ್ಲ. (ಇದರ ವಿವರ) : ಬಾಣವನ್ನು ಮಾಡುವವನ ಮನಸ್ಸು ಬಾಣದಲ್ಲಿಯೇ ವ್ಯಾಪೃತವಾಗಿರುವದರಿಂದ "ನಾನು ಇಷ್ಟು ಕಾಲವೂ ಬಾಣವನ್ನೇ ಕಾಣುತ್ತಿದ್ದೆನು'' ಎನ್ನುತ್ತಾನೆ; ಆದರೆ ಮೂರ್ಛಿತನಾದರೋ ಜ್ಞಾನವು ಬಂದ ಬಳಿಕ "ನಾನು ಈ ಕಾಲವೆಲ್ಲ ಅಂಧಂತಮಸ್ಸಿನಲ್ಲಿ ಬಿದ್ದಿದ್ದೆನು; ನನಗೆ ಏನೊಂದೂ ತಿಳಿಯಬರಲೇ ಇಲ್ಲ" ಎನ್ನುತ್ತಾನೆ. ಮತ್ತು ಎಚ್ಚತ್ತಿರುವವನಿಗೆ ಒಂದೇ ವಿಷಯದಲ್ಲಿ ಮನಸ್ಸು ಆಸಕ್ತವಾಗಿದ್ದರೂ ದೇಹವು ನಿಂತಿರುತ್ತದೆ; ಆದರೆ ಮೂರ್ಛಿತನಾದವನ ದೇಹವು ಭೂಮಿಯ ಮೇಲೆ ಬಿದ್ದಿರುತ್ತದೆ. ಆದ್ದರಿಂದ (ಮೂರ್ಛಿತನು) ಎಚ್ಚರವಾಗಿರುವದಿಲ್ಲ, ಸ್ವಪ್ನಗಳನ್ನು ಕಾಣುತ್ತಲೂ ಇರುವದಿಲ್ಲ; ಏಕೆಂದರೆ (ಆಗ ಆವನಿಗೆ ಯಾವ) ಅರಿವೂ ಇರುವದಿಲ್ಲ. (ಆಗ ಅವನು) ಸತ್ತೂ ಇರುವದಿಲ್ಲ; ಏಕೆಂದರೆ ಪ್ರಾಣವೂ ಕಾವೂ ಇರುತ್ತವೆ. ಜೀವನು ಮೂರ್ಛಿತನಾಗಿರುವಾಗ ಇವನು ಸತ್ತನೊ ಇಲ್ಲವೊ–ಎಂಬ ಸಂಶಯವಿರುವವರು ಕಾವು ಇದೆಯೊ ಇಲ್ಲವೊ ಎಂಬುದನ್ನು ನಿಶ್ಚಯಿಸುವದಕ್ಕಾಗಿ ಹೃದಯದೇಶವನ್ನು ಮುಟ್ಟಿ (ನೋಡು)ತ್ತಾರೆ, ಪ್ರಾಣವು ಇದೆಯೊ ಇಲ್ಲವೊ ಎಂಬುದನ್ನು (ನಿಶ್ಚಯಿಸುವದಕ್ಕಾಗಿ) ಮೂಗಿನ ಪ್ರದೇಶವನ್ನು (ಮುಟ್ಟಿನೋಡುತ್ತಾರೆ). ಪ್ರಾಣ, ಕಾವು–ಇವು ಇಲ್ಲವೆಂದು ತಿಳಿದರೆ ಆಗ ಇವನು ಸತ್ತನು ಎಂದು ನಿಶ್ಚಯಿಸಿ ಸುಡುವದಕ್ಕೆ ಕಾಡಿಗೆ ಒಯ್ಯುತ್ತಾರೆ; ಹಾಗಿಲ್ಲದೆ ಪ್ರಾಣವನ್ನೂ ಕಾವನ್ನೂ ಕಂಡರೆ ಆಗ ಇವನು ಸತ್ತಿಲ್ಲ ಎಂದು ನಿಶ್ಚಯಿಸಿ ಜ್ಞಾನವು ಬರುವದಕ್ಕಾಗಿ ವೈದ್ಯವನ್ನು ಮಾಡಿಸುತ್ತಾರೆ. ಮತ್ತೆ ಏಳುವದರಿಂದ ಸತ್ತಿರುವದಿಲ್ಲ (ವೆನ್ನಬೇಕು) ; ಏಕೆಂದರೆ ಯಮರಾಷ್ಟ್ರಕ್ಕೆ ಹೋದವನು ಮತ್ತೆ ಬರುವದಿಲ್ಲ.

(ಆಕ್ಷೇಪ):– ಹಾಗಾದರೆ ಸುಷುಪ್ತನಾಗಿರುವನೆನ್ನೋಣ, ಏಕೆಂದರೆ (ಅವನಿಗೆ) ಜ್ಞಾನವಿರುವದರಿಂದ (ಅವನು) ಸತ್ತಿರುವದೂ ಇಲ್ಲ.

(ಪರಿಹಾರ):– ಹಾಗಲ್ಲ, ಏಕೆಂದರೆ (ಸುಷುಪ್ತನಿಗಿಂತ) ವೈಲಕ್ಷಣ್ಯವಿರುತ್ತದೆ. ಮೂರ್ಛಿತನಾದವನು ಕೆಲವು ವೇಳೆ ಬಹುಕಾಲದವರೆಗೆ ಉಸಿ

ರಾಡುವದಿಲ್ಲ, ಇವನ ದೇಹವು ನಡುಗುತ್ತಿರುತ್ತದೆ, ಮುಖವು ಭಯಾನಕವಾಗಿರುತ್ತದೆ, ಕಣ್ಣುಗಳು ತೆರೆದಿರುತ್ತವೆ. ಸುಷುಪ್ತನಾದರೋ ಪ್ರಸನ್ನಮುಖನಾಗಿರುತ್ತಾನೆ; ಕಾಲಕ್ಕೆ ಸಮನಾಗಿ ಮತ್ತೆಮತ್ತೆ ಉಸಿರಾಡುತ್ತಾನೆ. ಅವನ ಕಣ್ಣುಗಳು ಮುಚ್ಚಿರುತ್ತವೆ, ಅವನ ದೇಹವೂ ನಡುಗುವದಿಲ್ಲ. ನಿದ್ರಿಸಿದವನನ್ನು ಕೈಯಿಂದ ತಟ್ಟಿದಮಾತ್ರದಿಂದ ಎಬ್ಬಿಸುತ್ತಾರೆ; ಆದರೆ ಮೂರ್ಛಿತನನ್ನು ಸುತ್ತಿಗೆಯಿಂದ ಹೊಡೆದರೂ (ಎಬ್ಬಿಸುವದ)ಕ್ಕಾಗುವದಿಲ್ಲ. ಮೂರ್ಛೆ, ಸುಷುಪ್ತಿ –ಇವೆರಡಕ್ಕೂ ಬೇರೆಬೇರೆಯ ನಿಮಿತ್ತಗಳು ಇವೆ. (ಹೇಗೆಂದರೆ) ಒನಕೆಯ ಪೆಟ್ಟೇ ಮುಂತಾದದ್ದು ಮೂರ್ಛೆಗೆ ನಿಮಿತ್ತವು, ಸುಷುಪ್ತಿಗೆ ಆಯಾಸವೇ ಮುಂತಾದದ್ದು ನಿಮಿತ್ತವು. ಲೋಕದಲ್ಲಿ ಮೂರ್ಛಿತನು ನಿದ್ರಿಸುತ್ತಿದಾನೆಂಬ ಪ್ರಸಿದ್ಧಿಯೂ ಇರುವದಿಲ್ಲ, ಪರಿಶೇಷದಿಂದ ಮೂರ್ಛೆ ಎಂಬುದು ಅರ್ಧಸಂಪತ್ತಿ ಎಂದು ನಾವು ನಿಶ್ಚಯಿಸಬೇಕಾಗಿದೆ; ಜ್ಞಾನವಿಲ್ಲದ್ದರಿಂದ ಸಂಪನ್ನನಾಗಿರುತ್ತಾನೆ, (ಆ) ಇನ್ನೊಂದು (ಅವಸ್ಥೆ)ಗಿಂತ ವೈಲಕ್ಷಣ್ಯವಿರುವದರಿಂದ ಸಂಪನ್ನನಲ್ಲವೂ ಅಲ್ಲ[1].

## ಮೂರ್ಛೆಯು ಅರ್ಧಸಂಪತ್ತಿ ಎಂಬುದರ ಅಭಿಪ್ರಾಯ

(ಭಾಷ್ಯ)

೨೭೫. ಕಥಂ ಪುನರರ್ಧಸಂಪತ್ತಿರ್ಮುಗ್ಧತಾ ಇತಿ ಶಕ್ಯತೇ ವಕ್ತುಮ್? ಯಾವತಾ ಸುಪ್ತಂ ಪ್ರತಿ ತಾವದುಕ್ತಂ ಶ್ರುತ್ಯಾ "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾಂ. ೬–೮–೧) ಇತಿ "ಅತ್ರ ಸ್ತೇನೋಽಸ್ತೇನೋ ಭವತಿ" (ಬೃ. ೪–೩–೨೨)। "ನೈತಂ ಸೇತುಮಹೋರಾತ್ರೇ ತರತೋ ನ ಜರಾ ನ ಮೃತ್ಯುರ್ನ ಶೋಕೋ ನ ಸುಕೃತಂ ನ ದುಷ್ಕೃತಮ್" (ಛಾಂ. ೮–೪–೧) ಇತ್ಯಾದಿ। ಜೀವೇ ಹಿ ಸುಕೃತದುಷ್ಕೃತಯೋಃ ಪ್ರಾಪ್ತಿಃ ಸುಖಿತ್ವದುಃಖಿತ್ವಪ್ರತ್ಯಯೋತ್ಪಾದನೇನ ಭವತಿ। ನ ಚ ಸುಖಿತ್ವಪ್ರತ್ಯಯೋ ದುಃಖಿತ್ವಪ್ರತ್ಯಯೋ ವಾ ಸುಷುಪ್ತೇ ವಿದ್ಯೇತೇ[2]। ಮುಗ್ಧೇಽಪಿ ತೌ ಪ್ರತ್ಯಯೌ ನೈವ ವಿದ್ಯೇತೇ। ತಸ್ಮಾತ್ ಉಪಾಧ್ಯುಪಶಮಾತ್ ಸುಷುಪ್ತವನ್ಮುಗ್ಧೇಽಪಿ ಕೃತ್ಸ್ನಸಂಪತ್ತಿರೇವ ಭವಿತುಮರ್ಹತಿ ನಾರ್ಧಸಂಪತ್ತಿಃ ಇತಿ। ಅತ್ರೋಚ್ಯತೇ। ನ ಬ್ರೂಮೋ ಮುಗ್ಧೇ ಅರ್ಧಸಂಪತ್ತಿರ್ಜೀವಸ್ಯ ಬ್ರಹ್ಮಣಾ ಭವತಿ ಇತಿ। ಕಿಂ ತರ್ಹಿ ಅರ್ಧೇನ ಸುಷುಪ್ತಪಕ್ಷಸ್ಯ ಭವತಿ ಮುಗ್ಧತ್ವಮ್ ಅರ್ಧೇನ ಅವಸ್ಥಾಂತರಪಕ್ಷಸ್ಯ ಇತಿ ಬ್ರೂಮಃ। ದರ್ಶಿತೇ ಚ ಮೋಹಸ್ಯ ಸ್ವಾಪೇನ ಸಾಮ್ಯವೈಷಮ್ಯೇ। ದ್ವಾರಂ ಚೈತನ್ಮರಣಸ್ಯ। ಯದಾ ಅಸ್ಯ ಸಾವಶೇಷಂ ಕರ್ಮ ಭವತಿ ತದಾ ವಾಙ್ಮನಸೇ ಪ್ರತ್ಯಾಗಚ್ಛತಃ। ಯದಾ ತು ನಿರವಶೇಷಂ ಕರ್ಮ ಭವತಿ

1. ಅಂತೂ ಜಾಗ್ರತ್ಸ್ವಪ್ನಸುಷುಪ್ತಿಗಳಿಗಿಂತ ವೈಲಕ್ಷಣ್ಯವುಳ್ಳ ಅವಸ್ಥೆಯಿದು.
2. 'ವಿದ್ಯತೇ' ಎಂದಿದ್ದರೆ ಸಾಕು; ಅಚ್ಚಿನಪುಸ್ತಕದಲ್ಲಿ ವಿದ್ಯೇತೇ ಎಂದೇ ಇದೆ.

ತದಾ ಪ್ರಾಣೋಷ್ಮಾಣೌ ಅಪಗಚ್ಛತಃ । ತಸ್ಮಾತ್ ಅರ್ಧಸಂಪತ್ತಿಂ ಬ್ರಹ್ಮವಿದಃ ಇಚ್ಛಂತಿ । ಯತ್ತು ಉಕ್ತಮ್ ನ ಪಂಚಮೀ ಕಾಚಿದವಸ್ಥಾ ಪ್ರಸಿದ್ಧಾಸ್ತಿ ಇತಿ; ನೈಷ ದೋಷಃ । ಕಾದಾಚಿತ್ಕೀ ಇಯಮವಸ್ಥಾ ಇತಿ ನ ಪ್ರಸಿದ್ಧಾ ಸ್ಯಾತ್ । ಪ್ರಸಿದ್ಧಾ ಚ ಏಷಾ ಲೋಕಾಯುರ್ವೇದಯೋಃ । ಅರ್ಧಸಂಪತ್ತ್ಯಭ್ಯುಪಗಮಾಚ್ಚ ನ ಪಂಚಮೀ ಗಣ್ಯತೇ ಇತಿ ಅನವದ್ಯಮ್ ॥

(ಭಾಷ್ಯಾರ್ಥ)

(ಆಕ್ಷೇಪ) :– ಮೂರ್ಛೆಯು ಅರ್ಧಸಂಪತ್ತಿ ಎಂದು ಹೇಳುವದು ಹೇಗೆ? ಏಕೆಂದರೆ ಸುಪ್ತನನ್ನು ಕುರಿತು ಶ್ರುತಿಯಲ್ಲಿ "ಸೋಮ್ಯನೆ, ಆಗ ಸತ್ತಿನೊಡನೆ ಒಂದಾಗಿರುತ್ತಾನೆ" (ಛಾಂ. ೬–೮–೧), "ಇಲ್ಲಿ ಕಳ್ಳನು ಕಳ್ಳನಲ್ಲದವನಾಗುವನು...." (ಬೃ. ೪–೩–೨೨), "ಈ ಸೇತುವನ್ನು ಹಗಲುರಾತ್ರಿಗಳು ದಾಟುವದಿಲ್ಲ, ಮುಪ್ಪಿಲ್ಲ, ಸಾವಿಲ್ಲ, ಶೋಕವಿಲ್ಲ, ಸುಕೃತವಿಲ್ಲ, ದುಷ್ಕೃತವಿಲ್ಲ" (ಛಾಂ. ೮–೪–೧) ಎಂದುಮುಂತಾಗಿ ಹೇಳಿರುತ್ತವೆಯಲ್ಲ ! ಜೀವನಿಗಲ್ಲವೆ, ಸುಖಿತ್ವ ದುಃಖಿತ್ವಪ್ರತ್ಯಯಗಳನ್ನುಂಟುಮಾಡುವದರಿಂದ ಸುಕೃತದುಷ್ಕೃತಗಳ ಪ್ರಾಪ್ತಿಯಾಗುವದು? ಸುಷುಪ್ತಿಯಲ್ಲಿ ಸುಖಿಯೆಂಬ ಅರಿವಾಗಲಿ ದುಃಖಿಯೆಂಬ ಅರಿವಾಗಲಿ ಇರುವದಿಲ್ಲ ; ಮೂರ್ಛಿತನಲ್ಲಿಯೂ ಆ (ಎರಡು) ಪ್ರತ್ಯಯಗಳು ಇರುವದಿಲ್ಲ. ಆದ್ದರಿಂದ ಉಪಾಧಿಯು ನಾಶವಾಗುವದರಿಂದ ಸುಷುಪ್ತನಲ್ಲಿ ಹೇಗೋ ಹಾಗೆಯೇ ಪೂರ್ಣಸಂಪತ್ತಿಯೇ ಆಗಬೇಕು, ಅರ್ಧಸಂಪತ್ತಿಯಲ್ಲ.

(ಪರಿಹಾರ) :– ಈ (ವಿಷಯ)ದಲ್ಲಿ (ಸಿದ್ಧಾಂತವನ್ನು) ಹೇಳುತ್ತೇವೆ. **ಮೂರ್ಛಿತನಾದವನಿಗೆ ಬ್ರಹ್ಮದೊಡನೆ ಸಂಪತ್ತಿಯು ಅರ್ಧವಾಗಿರುತ್ತದೆ ಎಂದು ನಾವು ಹೇಳುತ್ತಿಲ್ಲ**[1]. **ಮತ್ತೇನೆಂದರೆ ಮೂರ್ಛೆಯು ಅರ್ಧಪಾಲು ಸುಷುಪ್ತಿಯ ಪಕ್ಷಕ್ಕೆ (ಸೇರಿ)ರುತ್ತದೆ, ಅರ್ಧಪಾಲು ಮತ್ತೊಂದು ಅವಸ್ಥೆಗೆ ಸೇರಿರುತ್ತದೆ ಎಂದು ಹೇಳುತ್ತೇವೆ.** ಮೂರ್ಛೆಗೆ ನಿದ್ರೆಯೊಡನೆ ಇರುವ ಸಾಮ್ಯವೈಷಮ್ಯಗಳನ್ನು (ಆಗಲೆ) ಹೇಳಿಯೂ ಇರುತ್ತೇವೆ. ಇದು ಮರಣಕ್ಕೆ ದ್ವಾರವೂ ಆಗಿರುತ್ತದೆ. ಯಾವಾಗ ಈ (ಜೀವ)ನಿಗೆ ಕರ್ಮವು ಸವಿಶೇಷವಾಗಿರುತ್ತದೆಯೋ ಆಗ ವಾಕ್ಕು, ಮನಸ್ಸು– ಇವು ಹಿಂತಿರುಗಿ ಬರುತ್ತವೆ ; ಆದರೆ ಯಾವಾಗ ಕರ್ಮವು ನಿರವಶೇಷವಾಗಿರುತ್ತದೆಯೋ, ಆಗ ಪ್ರಾಣ, ಶಾಖ– ಇವು ಹೋಗಿಬಿಡುತ್ತವೆ. ಆದ್ದರಿಂದ

---

1. ಸುಷುಪ್ತಿಯಲ್ಲಿ ಎಂಥ ಸಂಪತ್ತಿಯಾಗುತ್ತದೆಯೋ ಅಂಥ ಸಂಪತ್ತಿಯು ಮೂರ್ಛೆಯಲ್ಲಾಗುವದಿಲ್ಲ ಎಂಬ ಭಾಮತೀವ್ಯಾಖ್ಯಾನವು ಈ ಭಾಷ್ಯಕ್ಕೆ ವಿರುದ್ಧ.

(ಇದನ್ನು) ಅರ್ಧಸಂಪತ್ತಿ ಎಂದು ಬ್ರಹ್ಮಜ್ಞಾನಿಗಳು ಅಭಿಪ್ರಾಯಪಡುತ್ತಾರೆ[1].

ಇನ್ನು ಐದನೆಯ ಯಾವ ಅವಸ್ಥೆಯೂ ಪ್ರಸಿದ್ಧವಾಗಿಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದೇನೂ ದೋಷವಲ್ಲ. ಏಕೆಂದರೆ ಈ ಅವಸ್ಥೆಯು ಯಾವಾಗಲೋ ಆಗುವದಾದ್ದರಿಂದ ಪ್ರಸಿದ್ಧವಾಗದೆ ಇರಬಹುದು. ಲೋಕದಲ್ಲಿಯೂ ಆಯುರ್ವೇದದಲ್ಲಿಯೂ (ಇದು) ಪ್ರಸಿದ್ಧವೂ (ಆಗಿರುತ್ತದೆ. ಇದು) ಅರ್ಧಸಂಪತ್ತಿಯೆಂದು ಒಪ್ಪಿರುವದರಿಂದಲೇ ಐದನೆಯದೆಂದು ಲೆಕ್ಕಹಿಡಿದಿಲ್ಲವಾಗಿ (ಇಲ್ಲಿ) ಯಾವ ದೋಷವೂ ಇಲ್ಲ.

## ೫. ಉಭಯಲಿಙ್ಗಾಧಿಕರಣ (ಸೂ. ೧೧–೨೧)

(ಬ್ರಹ್ಮವು ನಿರ್ವಿಶೇಷವೇ)

**ನ ಸ್ಥಾನತೋಽಪಿ ಪರಸ್ಯೋಭಯಲಿಙ್ಗಂ ಸರ್ವತ್ರ ಹಿ ॥ ೧೧ ॥**

೧೧. ಸ್ಥಾನದಿಂದಲೂ ಪರಮಾತ್ಮನಿಗೆ ಉಭಯಲಿಂಗವಿಲ್ಲ, ಏಕೆಂದರೆ ಎಲ್ಲೆಲ್ಲಿಯೂ (ನಿರ್ವಿಶೇಷತ್ವವನ್ನೇ ಹೇಳಿದೆ).

### ಬ್ರಹ್ಮಸ್ವರೂಪದ ವಿಷಯಕ್ಕೆ ಸಂಶಯ

(ಭಾಷ್ಯ)

೨೭೬. ಯೇನ ಬ್ರಹ್ಮಣಾ ಸುಷುಪ್ತ್ಯಾದಿಷು ಜೀವಃ ಉಪಾಧ್ಯುಪಶಮಾತ್ ಸಂಪದ್ಯತೇ ತಸ್ಯ ಇದಾನೀಂ ಸ್ವರೂಪಂ ಶ್ರುತಿವಶೇನ ನಿರ್ಧಾರ್ಯತೇ। ಸನ್ತಿ ಉಭಯಲಿಙ್ಗಾಃ ಶ್ರುತಯೋ ಬ್ರಹ್ಮವಿಷಯಾಃ। "ಸರ್ವಕರ್ಮಾ ಸರ್ವಕಾಮಃ ಸರ್ವಗನ್ಧಃ ಸರ್ವರಸಃ" (ಛಾಂ. ೩–೧೪–೨) ಇತ್ಯೇವಮಾದ್ಯಾಃ ಸವಿಶೇಷಲಿಙ್ಗಾಃ। "ಅಸ್ಥೂಲಮನಣ್ವಹ್ರಸ್ವಮದೀರ್ಘಮ್" (ಬೃ. ೩–೮–೮) ಇತ್ಯೇವಮಾದ್ಯಾಶ್ಚ ನಿರ್ವಿಶೇಷಣಲಿಙ್ಗಾಃ। ಕಿಮ್ ಆಸು ಶ್ರುತಿಷು ಉಭಯಲಿಙ್ಗಂ ಬ್ರಹ್ಮ ಪ್ರತಿಪತ್ತವ್ಯಮ್ ಉತ ಅನ್ಯತರಲಿಙ್ಗಮ್ ? ಯದಾಪಿ ಅನ್ಯತರಲಿಙ್ಗಮ್, ತದಾಪಿ ಕಿಂ ಸವಿಶೇಷಮ್ ಉತ ನಿರ್ವಿಶೇಷಮ್ ? ಇತಿ ಮೀಮಾಂಸ್ಯತೇ ॥

---

1. ಹೀಗೆಯೇ ಬೇರೆ ಕೆಲವು ಅವಸ್ಥೆಗಳಿದ್ದರೂ ಅವನ್ನು ಮೂರವಸ್ಥೆಗಳಲ್ಲಿ ಯಾವದಾದರೊಂದರಲ್ಲಿ ಅಡಕಮಾಡಬಹುದು. ದರ್ಶನವೃತ್ತಿ, ಅದರ್ಶನವೃತ್ತಿ– ಎಂಬ ಎರಡಕ್ಕಿಂತ ಬೇರೆ ಯಾವ ಅವಸ್ಥೆಯನ್ನೂ ಗಣಿಸುವದಕ್ಕೆ ಬರುವದೇ ಇಲ್ಲ. ಅವಸ್ಥಾತ್ರಯವನ್ನು ವಿಚಾರಮಾಡಿದರೆ ತತ್ತ್ವಸಮಾಪ್ತಿಯಾಗುವದೆಂದು ಎಣಿಸುವದಕ್ಕೆ ಇದೇ ಕಾರಣ. ಮಾಂ. ಕಾ. ೪–೮೮ ಭಾಷ್ಯವನ್ನು ನೋಡಿ.

(ಭಾಷ್ಯಾರ್ಥ)

ಜೀವನು ಸುಷುಪ್ತ್ಯಾದಿಗಳಲ್ಲಿ[1] ಉಪಾಧಿಗಳು ನಾಶವಾಗುವದರಿಂದ ಯಾವ ಬ್ರಹ್ಮದೊಡನೆ ಒಂದಾಗುತ್ತಾನೋ ಆ (ಬ್ರಹ್ಮದ) ಸ್ವರೂಪವನ್ನು ಈಗ ಶ್ರುತಿವಶದಿಂದ ನಿರ್ಧರಿಸಲಾಗುತ್ತದೆ. ಬ್ರಹ್ಮವಿಷಯದಲ್ಲಿ ಉಭಯಲಿಂಗದ ಶ್ರುತಿಗಳು ಇರುತ್ತವೆ. (ಹೇಗೆಂದರೆ) "ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು" (ಛಾಂ ೩-೧೪-೨) ಇವೇ ಮುಂತಾದ ಸವಿಶೇಷಲಿಂಗದ (ಶ್ರುತಿ)ಗಳು. "ಸ್ಥೂಲವಲ್ಲದ್ದು, ಅಣುವಲ್ಲದ್ದು, ಹ್ರಸ್ವವಲ್ಲದ್ದು, ದೀರ್ಘವಲ್ಲದ್ದು," (ಬೃ. ೩-೮-೮) ಎಂಬಿವೇ ಮುಂತಾದವು ನಿರ್ವಿಶೇಷಲಿಂಗದ (ಶ್ರುತಿ)ಗಳು. ಈ ಶ್ರುತಿಗಳಲ್ಲಿ ಬ್ರಹ್ಮವು ಎರಡೂ ಲಿಂಗಗಳುಳ್ಳದ್ದೆಂದು ತಿಳಿದುಕೊಳ್ಳತಕ್ಕದ್ದೋ, ಅಥವಾ ಇವೆರಡರಲ್ಲಿ ಒಂದು ಲಿಂಗವುಳ್ಳದ್ದೆಂದು (ತಿಳಿದುಕೊಳ್ಳತಕ್ಕದ್ದೋ)? ಇವೆರಡರಲ್ಲಿ ಒಂದೇ ಲಿಂಗವುಳ್ಳದ್ದೆಂದು ಯಾವಾಗ (ಗೊತ್ತಾಗುವದೋ) ಆಗಲೂ ಸವಿಶೇಷವೋ, ಅಥವಾ ನಿರ್ವಿಶೇಷವೋ?- ಎಂಬುದನ್ನು ವಿಚಾರಮಾಡಲಾಗುವದು[2].

## ಬ್ರಹ್ಮವು ಉಭಯಲಿಂಗವಲ್ಲ, ನಿರ್ವಿಶೇಷವೇ

(ಭಾಷ್ಯ)

೨೭೭. ತತ್ರ ಉಭಯಲಿಙ್ಗಶ್ರುತ್ಯನುಗ್ರಹಾತ್ ಉಭಯಲಿಙ್ಗಮೇವ ಬ್ರಹ್ಮೇತಿ । ಏವಂ ಪ್ರಾಪ್ತೇ ಬ್ರೂಮಃ । ನ ತಾವತ್ ಸ್ವತ ಏವ ಪರಸ್ಯ ಬ್ರಹ್ಮಣ ಉಭಯಲಿಙ್ಗತ್ವಮ್ ಉಪಪದ್ಯತೇ । ನ ಹಿ ಏಕಂ ವಸ್ತು ಸ್ವತ ಏವ ರೂಪಾದಿವಿಶೇಷೋಪೇತಂ ತದ್ವಿಪರೀತಂ ಚ ಇತಿ ಅವಧಾರಯಿತುಂ ಶಕ್ಯಮ್ । ವಿರೋಧಾತ್ । ಅಸ್ತು ತರ್ಹಿ ಸ್ಥಾನತಃ ಪೃಥಿವ್ಯಾದ್ಯುಪಾಧಿಯೋಗಾತ್ ಇತಿ । ತದಪಿ ನೋಪಪದ್ಯತೇ । ನ ಹಿ ಉಪಾಧಿಯೋಗಾದಪಿ ಅನ್ಯಾದೃಶಸ್ಯ ವಸ್ತುನಃ ಅನ್ಯಾದೃಶಃ ಸ್ವಭಾವಃ ಸಂಭವತಿ । ನ ಹಿ ಸ್ವಚ್ಛಃ ಸನ್ ಸ್ಫಟಿಕಃ ಅಲಕ್ತಕಾದ್ಯುಪಾಧಿಯೋಗಾತ್ ಅಸ್ವಚ್ಛೋ ಭವತಿ । ಭ್ರಮಮಾತ್ರತ್ವಾತ್ ಅಸ್ವಚ್ಛತಾಭಿನಿವೇಶಸ್ಯ । ಉಪಾಧೀನಾಂ ಚ ಅವಿದ್ಯಾಪ್ರತ್ಯುಪಸ್ಥಾಪಿತತ್ವಾತ್ । ಅತಶ್ಚ ಅನ್ಯತರಲಿಙ್ಗಪರಿಗ್ರಹೇಽಪಿ ಸಮಸ್ತವಿಶೇಷರಹಿತಂ

---

1. ಸುಷುಪ್ತಿಸಮಾಧಿಮೂರ್ಛಾದಿಗಳಲ್ಲಿ. ಈ ಅವಸ್ಥೆಗಳಲ್ಲಿ ಪೂರ್ಣಸಂಪತ್ತಿಯಾಗುವದಿಲ್ಲವೆಂಬವರ ಪಕ್ಷದಲ್ಲಿ ಈ ಅಧಿಕರಣವನ್ನು ಪ್ರಾರಂಭಿಸುವದು ಅಸಂಗತವಾಗುತ್ತದೆ ಎಂಬುದು ಸ್ಪಷ್ಟವು.

2 ಇವರಲ್ಲಿ ಯಾವದು ಬ್ರಹ್ಮದ ಸ್ವರೂಪವಾಗುವದೋ ಅದೇ ಜೀವನ ಪರಮಾರ್ಥಸ್ವರೂಪವೆಂದೂ ನಿರ್ಣಯವಾದಂತೆ ಆಗುವದು.

ನಿರ್ವಿಕಲ್ಪಕಮೇವ ಬ್ರಹ್ಮ ಪ್ರತಿಪತ್ತವ್ಯಮ್, ನ ತದ್ವಿಪರೀತಮ್ । ಸರ್ವತ್ರ ಹಿ ಬ್ರಹ್ಮಸ್ವರೂಪಪ್ರತಿಪಾದನಪರೇಷು ವಾಕ್ಯೇಷು "ಅಶಬ್ದಮಸ್ಪರ್ಶಮರೂಪಮವ್ಯಯಮ್" (ಕ. ೧-೩-೧೫) ಇತ್ಯೇವಮಾದಿಷು ಅಪಾಸ್ತಸಮಸ್ತವಿಶೇಷಮೇವ ಬ್ರಹ್ಮ ಉಪದಿಶ್ಯತೇ ॥

(ಭಾಷ್ಯಾರ್ಥ)

ಇಲ್ಲಿ ಎರಡೂ ವಿಧವಾದ ಲಿಂಗದ ಶ್ರುತಿಗಳಿಗೆ ಅನುಗ್ರಹವಾಗುವದರಿಂದ ಬ್ರಹ್ಮವು ಉಭಯಲಿಂಗವೇ ಎಂದು (ಒಪ್ಪಬೇಕು) ಎಂಬೀ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಮೊದಲನೆಯದಾಗಿ ಪರಬ್ರಹ್ಮಕ್ಕೆ ತನ್ನಿಂದಲೇ (ತನಗೆ) ಉಭಯಲಿಂಗತ್ವವು ಹೊಂದುವದಿಲ್ಲ. ಏಕೆಂದರೆ ತನ್ನಿಂದ (ತಾನು) ರೂಪಾದಿವಿಶೇಷಗಳಿಂದ ಕೂಡಿದ್ದೂ ಆಗಿದೆ, ಅದಕ್ಕೆ ವಿಪರೀತವೂ ಆಗಿದೆ ಎಂದು ನಿಶ್ಚಯಿಸಿ ಹೇಳುವದಕ್ಕೆ ಆಗುವದಿಲ್ಲ ; ಏಕೆಂದರೆ (ಆಗ) ವಿರೋಧವಾಗುತ್ತದೆ. ಹಾಗಾದರೆ ಸ್ಥಾನದಿಂದ, ಪೃಥಿವಿಯೇ ಮುಂತಾದ ಉಪಾಧಿಗಳ ಸಂಬಂಧದಿಂದ, (ಹೀಗೆ) ಆಗಬಹುದು ಎಂದರೆ ಅದೂ ಹೊಂದುವದಿಲ್ಲ. ಏಕೆಂದರೆ **ಉಪಾಧಿಯ ಸಂಬಂಧದಿಂದಲೂ ಒಂದು ವಸ್ತುವಿಗೆ ಮತ್ತೊಂದು ಸ್ವಭಾವವು ಆಗುವಹಾಗಿಲ್ಲ. ಸ್ಫಟಿಕವು ಸ್ವಚ್ಛವಾಗಿದ್ದು ಕೆಂಪು ಅರಗು ಮುಂತಾದ ಉಪಾಧಿಗಳ ಸಂಬಂಧದಿಂದ ಅಸ್ವಚ್ಛವಾಗಲಾರದಷ್ಟೆ ;** ಏಕೆಂದರೆ (ಅದು) ಅಸ್ವಚ್ಛವೆಂಬ ಅಭಿಪ್ರಾಯವು ಭ್ರಮೆಮಾತ್ರವಾಗಿರುತ್ತದೆ. **ಉಪಾಧಿಗಳು ಅವಿದ್ಯೆಯಿಂದ ತಂದೊಡ್ಡಿರುವವಾದ್ದರಿಂದಲೂ**[1] (ಅವುಗಳಿಂದ ವಿಶೇಷವಾಗಲಾರದು). ಆದ್ದರಿಂದ ಎರಡರಲ್ಲಿ ಒಂದು ಲಿಂಗವೆಂದು ಇಟ್ಟುಕೊಂಡರೂ ಬ್ರಹ್ಮವು ಯಾವ ವಿಶೇಷವೂ ಇಲ್ಲದ್ದು, ನಿರ್ವಿಕಲ್ಪಕವಾದದ್ದು ಎಂದೇ ತಿಳಿದುಕೊಳ್ಳಬೇಕು. ಇದಕ್ಕೆ ವಿಪರೀತವಾಗಿ (ತಿಳಿದುಕೊಳ್ಳ) ಬಾರದು. ಏಕೆಂದರೆ ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವದರಲ್ಲಿ ತಾತ್ಪರ್ಯವುಳ್ಳ "ಅಶಬ್ದವು, ಅಸ್ಪರ್ಶವು, ಅರೂಪವು, ಅವ್ಯಯವು" (ಕ. ೧-೩-೧೫) ಎಂಬುದೇ ಮುಂತಾದ ವಾಕ್ಯಗಳಲ್ಲೆಲ್ಲ ಯಾವ ವಿಶೇಷವೂ ಇಲ್ಲದ್ದೆಂದೇ ಬ್ರಹ್ಮವನ್ನು ಉಪದೇಶಿಸುತ್ತದೆ.

## ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ॥ ೧೨ ॥

೧೨. ಭೇದ(ವನ್ನುಪದೇಶಿಸಿರು)ವದರಿಂದ ಸರಿಯಲ್ಲ ಎಂದರೆ ಹಾಗಲ್ಲ ; ಏಕೆಂದರೆ ಒಂದೊಂದಕ್ಕೂ ಅದಲ್ಲವೆಂದೇ ಹೇಳಿದೆ.

---

1. ಉಪಾಧಿಯಿಂದ ಬ್ರಹ್ಮವು ಸವಿಶೇಷವಾಗಿ ತೋರುತ್ತಿರುವದಾದರೂ ಉಪಾಧಿಗಳು ನಾಮರೂಪಕೃತವಾಗಿರುತ್ತವೆ ; ನಾಮರೂಪಗಳು ಅವಿದ್ಯಾಕೃತವಾಗಿರುತ್ತವೆ.

## ಪೂರ್ವಪಕ್ಷ:

## ಬ್ರಹ್ಮಕ್ಕೆ ಬೇರೆಬೇರೆಯ ಆಕಾರಗಳನ್ನು ಶ್ರುತಿ ಹೇಳುತ್ತದೆ

(ಭಾಷ್ಯ)

೨೭೮. ಅಥಾಪಿ ಸ್ಯಾತ್ ಯದುಕ್ತಮ್ ನಿರ್ವಿಕಲ್ಪಕಮ್ ಏಕಲಿಙ್ಗಮೇವ ಬ್ರಹ್ಮ ನಾಸ್ಯ ಸ್ವತಃ ಸ್ಥಾನತೋ ವಾ ಉಭಯಲಿಙ್ಗತ್ವಮ್ ಅಸ್ತಿ ಇತಿ। ತನ್ನೋಪಪದ್ಯತೇ। ಕಸ್ಮಾತ್ ? ಭೇದಾತ್। ಭಿನ್ನಾ ಹಿ ಪ್ರತಿವಿದ್ಯಂ ಬ್ರಹ್ಮಣ ಆಕಾರಾಃ ಉಪದಿಶ್ಯನ್ತೇ ಚತುಷ್ಪಾದ್ ಬ್ರಹ್ಮ, ಷೋಡಶಕಲಂ ಬ್ರಹ್ಮ ವಾಮನೀತ್ವಾದಿಲಕ್ಷಣಂ ಬ್ರಹ್ಮ, ತ್ರೈಲೋಕ್ಯಶರೀರವೈಶ್ವಾನರಶಬ್ದೋದಿತಂ ಬ್ರಹ್ಮ ಇತ್ಯೇವಂಜಾತೀಯಕಾಃ। ತಸ್ಮಾತ್ ಸವಿಶೇಷತ್ವಮಪಿ ಬ್ರಹ್ಮಣೋಽಭ್ಯುಪಗನ್ತವ್ಯಮ್। ನನು ಉಕ್ತಂ ನೋಭಯಲಿಙ್ಗತ್ವಂ ಬ್ರಹ್ಮಣಃ ಸಂಭವತಿ ಇತಿ। ಅಯಮಪಿ ಅವಿರೋಧಃ। ಉಪಾಧಿಕೃತತ್ವಾತ್ ಆಕಾರಭೇದಸ್ಯ। ಅನ್ಯಥಾ ಹಿ ನಿರ್ವಿಷಯಮೇವ ಭೇದಶಾಸ್ತ್ರಂ ಪ್ರಸಜ್ಯೇತ ಇತಿ ಚೇತ್॥

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಮತವು) ಹೀಗೂ ಇರಬಹುದು. (ನೀವು) ಬ್ರಹ್ಮವು ನಿರ್ವಿಕಲ್ಪಕವೇ, ಏಕಲಿಂಗವೇ; ಅದಕ್ಕೆ ತನ್ನಿಂದಲೇ ಆಗಲಿ, ಸ್ಥಾನದಿಂದಲಾಗಲಿ ಉಭಯಲಿಂಗತ್ವವು ಇರುವದಿಲ್ಲ ಎಂದು ಹೇಳಿದಿರಷ್ಟೆ, ಅದು ಯುಕ್ತವಾಗುವದಿಲ್ಲ. ಏಕೆ ? ಎಂದರೆ ಭೇದ(ವನ್ನು ಹೇಳಿರು)ವದರಿಂದ. ಪ್ರತಿಯೊಂದು ವಿದ್ಯೆಯಲ್ಲಿಯೂ ಬೇರೆಬೇರೆಯಾಗಿಯೇ ಬ್ರಹ್ಮಕ್ಕೆ ಆಕಾರಗಳನ್ನು ಉಪದೇಶಿಸಿದೆಯಲ್ಲವೆ ? ಬ್ರಹ್ಮವು ನಾಲ್ಕುಪಾದಗಳುಳ್ಳದ್ದು[1] ಬ್ರಹ್ಮವು ಹದಿನಾರು ಕಲೆಗಳುಳ್ಳದ್ದು,[2] ಬ್ರಹ್ಮವು ವಾಮನೀತ್ವಾದಿಲಕ್ಷಣಗಳುಗಳ್ಳದ್ದು[3] ಬ್ರಹ್ಮವು ತ್ರೈಲೋಕ್ಯಶರೀರವುಳ್ಳ ವೈಶ್ವಾನರಶಬ್ದವಾಚ್ಯವಾದದ್ದು[4] —ಎಂಬೀ ಜಾತಿಯ (ಆಕಾರಗಳನ್ನು ಉಪದೇಶಿಸಿದೆಯಲ್ಲವೆ) ? ಆದ್ದರಿಂದ ಬ್ರಹ್ಮಕ್ಕೆ ಸವಿಶೇಷತ್ವವನ್ನು ಒಪ್ಪಬೇಕು.

(ಸಿದ್ಧಾಂತಿ):— ಬ್ರಹ್ಮಕ್ಕೆ ಎರಡು ಲಿಂಗಗಳೂ ಇರುವದು ಸಂಭವಿಸುವದಿಲ್ಲವೆಂದು ಹೇಳಿದೆವಲ್ಲ !

(ಪೂರ್ವಪಕ್ಷಿ):— ಇದು ವಿರೋಧವಲ್ಲ. ಏಕೆಂದರೆ ಆಕಾರಭೇದವು ಉಪಾಧಿಯಿಂದ ಆಗಿರುತ್ತದೆ. ಹಾಗಿಲ್ಲದಿದ್ದರೆ ಭೇದಶಾಸ್ತ್ರಕ್ಕೆ ವಿಷಯವೇ ಇಲ್ಲವೆಂಬ ಪ್ರಸಂಗವುಂಟಾದೀತು.

---

1. ಛಾಂ. ೩-೧೨-೫. 2. ಪ್ರ. ೬-೧-೮.
೩. ಛಾಂ. ೪-೧೫-೩. 4. ಛಾಂ. ೫-೧೧-೬.

## ಸಿದ್ಧಾಂತ: ಉಪಾಧಿಯಿಂದಾದ ಭೇದವನ್ನು ಶ್ರುತಿ ಅಲ್ಲಗಳೆಯುತ್ತದೆ

(ಭಾಷ್ಯ)

೨೭೯. ನೇತಿ ಬ್ರೂಮಃ। ಕಸ್ಮಾತ್ ? ಪ್ರತ್ಯೇಕಮ್ ಅತದ್ವಚನಾತ್ ಪ್ರತ್ಯುಪಾಧಿಭೇದಂ ಹಿ ಅಭೇದಮೇವ ಬ್ರಹ್ಮಣಃ ಶ್ರಾವಯತಿ ಶಾಸ್ತ್ರಮ್ "ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಶಾರೀರಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ" (ಬೃ. ೨-೫-೧) ಇತ್ಯಾದಿ। ಅತಶ್ಚ ನ ಭಿನ್ನಾಕಾರಯೋಗೋ ಬ್ರಹ್ಮಣಃ ಶಾಸ್ತ್ರೀಯ ಇತಿ ಶಕ್ಯತೇ ವಕ್ತುಮ್। ಭೇದಸ್ಯ ಉಪಾಸನಾರ್ಥತ್ವಾತ್ ಅಭೇದೇ ತಾತ್ಪರ್ಯಾತ್ ॥

(ಭಾಷ್ಯಾರ್ಥ)

ಹಾಗಲ್ಲ ಎನ್ನುತ್ತೇವೆ. ಏಕೆ ? ಎಂದರೆ ಪ್ರತ್ಯೇಕವಾಗಿ ಅದಲ್ಲವೆಂಬ ವಚನವಿರುವದರಿಂದ. (ಇದರ ವಿವರ): ಒಂದೊಂದು ಉಪಾಧಿವಿಶೇಷದಲ್ಲಿಯೂ ಬ್ರಹ್ಮಕ್ಕೆ ಅಭೇದವನ್ನೇ "ಈ ಪೃಥಿವಿಯಲ್ಲಿ ಯಾವ ತೇಜೋಮಯನೂ ಅಮೃತಮಯನೂ ಆದ ಪುರುಷನಿರುವನೋ ಅಧ್ಯಾತ್ಮದಲ್ಲಿ ತೇಜೋಮಯನೂ ಅಮೃತಮಯನೂ, ಆದ ಶಾರೀರಪುರುಷನಿರುವನೋ ಈ ಆತ್ಮನಿದಾನಲ್ಲ, ಇವನೇ ಅವನು[1]" (ಬೃ. ೨-೫-೧) ಎಂದುಮುಂತಾಗಿರುವ ಶಾಸ್ತ್ರವು ಹೇಳುತ್ತಿದೆ. ಆದ್ದರಿಂದಲೂ ಬ್ರಹ್ಮಕ್ಕೆ ಬೇರೆಬೇರೆಯ ಆಕಾರದ ಸಂಬಂಧವು ಶಾಸ್ತ್ರೀಯವೆಂದು ಹೇಳುವದು ಆಗುವದಿಲ್ಲ. ಏಕೆಂದರೆ **ಭೇದವು ಉಪಾಸನೆಗಾಗಿ ಹೇಳಿದ್ದು, ಅಭೇದದಲ್ಲಿ (ಶ್ರುತಿಗೆ) ತಾತ್ಪರ್ಯವಿದೆ.**

**ಅಪಿ ಚೈವಮೇಕೇ ॥ ೧೩ ॥**

೧೩. ಮತ್ತು ಹೀಗೆಂದು ಕೆಲವರು (ಪಠಿಸುತ್ತಾರೆ)-

## ಶ್ರುತಿಯಲ್ಲಿ ಭೇದವನ್ನು ನಿಂದಿಸಿ ಅಭೇದವನ್ನು ಹೇಳಿದೆ

(ಭಾಷ್ಯ)

೨೮೦. ಅಪಿ ಚ ಏವಂ ಭೇದದರ್ಶನನಿನ್ದಾಪೂರ್ವಕಮ್ ಅಭೇದದರ್ಶನಮೇವ ಏಕೇ ಶಾಖಿನಃ ಸಮಾಮನನ್ತಿ "ಮನಸೈವೇದಮಾಪ್ತವ್ಯಂ

---

1. ಬೃ. ಭಾ. ದಲ್ಲಿ ಇದರ ಅರ್ಥವನ್ನು ಸ್ವಲ್ಪ ಬೇರೆಯಾಗಿ ಕೊಟ್ಟಿದೆ. ಮಾಂ. ಕಾ. ೩-೧೨ರಲ್ಲಿ ಇದೇ ಅರ್ಥವನ್ನು ಕೊಟ್ಟಿದೆ.

ನೇಹ ನಾನಾಸ್ತಿ ಕಿಂಚನ। ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (ಕ. ೨-೧-೧೧) ಇತಿ। ತಥಾ ಅನ್ಯೇಽಪಿ "ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮ ಮೇ ತತ್" (ಶ್ವೇ. ೧-೧೨) ಇತಿ ಸಮಸ್ತಸ್ಯ ಭೋಗ್ಯಭೋಕ್ತೃನಿಯನ್ತೃಲಕ್ಷಣಸ್ಯ ಪ್ರಪಞ್ಚಸ್ಯ ಬ್ರಹ್ಮೈಕಸ್ವಭಾವತಾಮ್ ಅಧೀಯತೇ ॥

(ಭಾಷ್ಯಾರ್ಥ)

ಇದಲ್ಲದೆ ಹೀಗೆಯೇ ಭೇದದರ್ಶನವನ್ನು ನಿಂದಿಸುವದರ ಮೂಲಕ ಅಭೇದದರ್ಶನವನ್ನೇ ಒಂದು ಶಾಖೆಯವರು ಪಠಿಸುತ್ತಾರೆ. (ಹೇಗೆಂದರೆ) "ಇದು ಮನಸ್ಸಿನಿಂದಲೇ ಪಡೆದುಕೊಳ್ಳತಕ್ಕದ್ದು ; ಇದರಲ್ಲಿ ಯಾವ ನಾನಾತ್ವವೂ ಇಲ್ಲ. ಯಾವನು ಇಲ್ಲಿ ಭೇದವಿರುವಂತೆ ಕಾಣುತ್ತಾನೋ ಅವನು ಮೃತ್ಯುವಿನ ಮೇಲೆ ಮೃತ್ಯುವನ್ನು ಪಡೆಯುತ್ತಾನೆ" (ಕ. ೨-೧-೧೧). ಹೀಗೆಯೇ ಬೇರೆ ಶಾಖೆಯವರೂ "ಭೋಕ್ತೃ, ಭೋಗ್ಯ, ಪ್ರೇರಣೆಮಾಡುವವನು-ತಿಳಿದುಕೊಂಡು ಈ ಮೂರು ವಿಧವೆಂದು ಹೇಳಿದ್ದೆಲ್ಲವೂ ನಮಗೆ ಬ್ರಹ್ಮವೇ (ಎಂದರಿಯಬೇಕು)" (ಶ್ವೇ. ೧-೧೨) ಎಂದು ಭೋಗ್ಯಭೋಕ್ತೃನಿಯಂತೃರೂಪವಾಗಿರುವ ಪ್ರಪಂಚವೆಲ್ಲವೂ ಬ್ರಹ್ಮವೆಂಬ ಒಂದೇ ಸ್ವಭಾವವುಳದ್ದೆಂದು ಪಠಿಸುತ್ತಾರೆ.

**ಅರೂಪವದೇವ ತತ್ಪ್ರಧಾನತ್ವಾತ್ ॥ ೧೪ ॥**

೧೪. (ಅದು) ರೂಪವಿಲ್ಲದ್ದೇ, ಏಕೆಂದರೆ (ಶಾಸ್ತ್ರವು) ತತ್ಪ್ರಧಾನವಾಗಿದೆ.

## ಶಾಸ್ತ್ರವು ನಿರಾಕಾರಬ್ರಹ್ಮಪರವು

(ಭಾಷ್ಯ)

೨೮೧. ಕಥಂ ಪುನಃ ಆಕಾರವದುಪದೇಶಿನೀಷು ಅನಾಕಾರೋಪದೇಶಿನೀಷು ಚ ಬ್ರಹ್ಮವಿಷಯಾಸು ಶ್ರುತಿಷು ಸತೀಷು ಅನಾಕಾರಮೇವ ಬ್ರಹ್ಮ ಅವಧಾರ್ಯತೇ ನ ಪುನರ್ವಿಪರೀತಮ್ ಇತಿ ? ಅತ ಉತ್ತರಂ ಪಠತಿ ! (ಅರೂಪವದೇವ ಹಿ ತತ್ಪ್ರಧಾನತ್ವಾತ್ ।) ರೂಪಾದ್ಯಾಕಾರರಹಿತಮೇವ ಬ್ರಹ್ಮ ಅವಧಾರಯಿತವ್ಯಮ್, ನ ರೂಪಾದಿಮತ್ । ಕಸ್ಮಾತ್ ? ತತ್ಪ್ರಧಾನತ್ವಾತ್। "ಅಸ್ಥೂಲಮನಣ್ವಹ್ರಸ್ವಮದೀರ್ಘಮ್" (ಬೃ. ೩-೮-೮), "ಅಶಬ್ದಮಸ್ಪರ್ಶಮರೂಪಮವ್ಯಯಮ್" (ಕ. ೧-೩-೧೫) ; "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ ಬ್ರಹ್ಮ" (ಛಾಂ. ೮-೧೪-೧), "ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯನ್ತರೋ ಹ್ಯಜಃ"

( ಮುಂ. ೨-೧-೨ ), "ತದೇತದ್ಬ್ರಹ್ಮಾಪೂರ್ವಮನಪರಮನನ್ತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂಃ" (ಬೃ. ೨-೫-೧೯) ಇತ್ಯೇವಮಾದೀನಿ ವಾಕ್ಯಾನಿ ನಿಷ್ಪ್ರಪಞ್ಚಬ್ರಹ್ಮಾತ್ಮತತ್ತ್ವಪ್ರಧಾನಾನಿ ನಾರ್ಥಾನ್ತರಪ್ರಧಾನಾನಿ ಇತ್ಯೇತತ್ ಪ್ರತಿಷ್ಠಾಪಿತಂ "ತತ್ತು ಸಮನ್ವಯಾತ್" (೧-೧-೪) ಇತ್ಯತ್ರ । ತಸ್ಮಾತ್ ಏವಂಜಾತೀಯಕೇಷು ವಾಕ್ಯೇಷು ಯಥಾಶ್ರುತಂ ನಿರಾಕಾರಮೇವ ಬ್ರಹ್ಮ ಅವಧಾರಯಿತವ್ಯಮ್ । ಇತರಾಣಿ ತು ಆಕಾರವದ್ಬ್ರಹ್ಮವಿಷಯಾಣಿ ವಾಕ್ಯಾನಿ ನ ತತ್ಪ್ರಧಾನಾನಿ । ಉಪಾಸನಾವಿಧಿಪ್ರಧಾನಾನಿ ಹಿ ತಾನಿ । ತೇಷು ಅಸತಿ ವಿರೋಧೇ ಯಥಾಶ್ರುತಮ್ ಆಶ್ರಯಿತವ್ಯಮ್ । ಸತಿ ತು ವಿರೋಧೇ ತತ್ಪ್ರಧಾನಾನಿ ಅತತ್ಪ್ರಧಾನೇಭ್ಯೋ ಬಲೀಯಾಂಸಿ ಭವನ್ತೀತ್ಯೇಷ ವಿನಿಗಮನಾಯಾಂ ಹೇತುಃ ಯೇನ ಉಭಯೀಷ್ವಪಿ ಶ್ರುತಿಷು ಸತೀಷು ಅನಾಕಾರಮೇವ ಬ್ರಹ್ಮ ಅವಧಾರ್ಯತೇ ನ ಪುನರ್ವಿಪರೀತಮ್ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ):- ಆಕಾರವುಳ್ಳದ್ದೆಂದು ಹೇಳುವ (ಶ್ರುತಿಗಳೂ) ಆಕಾರವಿಲ್ಲದ್ದೆಂದು ಹೇಳುವ ಶ್ರುತಿಗಳೂ ಬ್ರಹ್ಮವಿಷಯದಲ್ಲಿ ಇರುವಾಗ ಬ್ರಹ್ಮವು ಆಕಾರವಿಲ್ಲದ್ದೆಂದೇ ಗೊತ್ತುಮಾಡುವದು ಹೇಗೆ ? (ಇದಕ್ಕೆ) ವಿಪರೀತವೆಂದೇಕೆ (ಗೊತ್ತುಮಾಡು)ವದಿಲ್ಲ ? ಇದಕ್ಕೆ ಉತ್ತರವನ್ನು ಹೇಳುತ್ತಾರೆ. (ಅರೂಪವದೇವ ಹಿ ತತ್ಪ್ರಧಾನತ್ವಾತ್) । ಬ್ರಹ್ಮವು ರೂಪವೇ ಮುಂತಾದ[1] ಆಕಾರಗಳಿಲ್ಲದ್ದೇ ಎಂದು ನಿಶ್ಚಯಿಸಬೇಕೇ ಹೊರತು ರೂಪಾದಿಗಳುಳ್ಳದ್ದೆಂದು (ನಿಶ್ಚಯಿಸ) ತಕ್ಕದ್ದಲ್ಲ. ಏಕೆ ? ಎಂದರೆ (ಶಾಸ್ತ್ರವು) ತತ್ಪ್ರಧಾನವಾಗಿರುವದರಿಂದ. "ಸ್ಥೂಲವಲ್ಲದ್ದು, ಅಣುವಲ್ಲದ್ದು, ಹ್ರಸ್ವವಲ್ಲದ್ದು, ದೀರ್ಘವಲ್ಲದ್ದು" (ಬೃ. ೩-೮-೮) "ಶಬ್ದವಿಲ್ಲದ್ದು, ಸ್ಪರ್ಶವಿಲ್ಲದ್ದು, ರೂಪವಿಲ್ಲದ್ದು, ಅವ್ಯಯವಾದದ್ದು (ಕ. ೩-೧-೧೫) "ಆಕಾಶವೆಂಬುದೇ ನಾಮರೂಪಗಳನ್ನು ನಿರ್ವಹಿಸತಕ್ಕದ್ದು, ಅವುಗಳಿಗಿಂತ ಯಾವದು ಬೇರೆಯೋ ಅದು ಬ್ರಹ್ಮವು" (ಛಾಂ. ೮-೧೪-೧), "ಪುರುಷನು ದಿವ್ಯನು, ಅಮೂರ್ತನು, ಒಳಗೂ ಹೊರಗೂ ಇರುವವನು, ಅಜನು" (ಮುಂ. ೨-೧-೨), "ಆ ಈ ಬ್ರಹವು ಪೂರ್ವವಿಲ್ಲದ್ದು, ಪರವಿಲ್ಲದ್ದು, ಒಳಗಿಲ್ಲದ್ದು, ಹೊರಗಿಲ್ಲದ್ದು ; ಈ ಆತ್ಮನು ಸರ್ವವನ್ನೂ ಅನುಭವಿಸುವವನು ಬ್ರಹ್ಮವು" (ಬೃ. ೨-೫-೧೯)- ಇವೇ ಮುಂತಾದ ವಾಕ್ಯಗಳು ನಿಷ್ಪ್ರಪಂಚವಾದ ಬ್ರಹ್ಮಾತ್ಮತತ್ತ್ವವನ್ನೇ ಪ್ರಧಾನವಾಗಿ (ತಿಳಿಸುವವು), ಮತ್ತೊಂದರ್ಥವನ್ನು

1. ಶಬ್ದ, ಸ್ಪರ್ಶ ಮುಂತಾದ

ಮುಖ್ಯವಾಗಿ (ತಿಳಿಸುವದಿಲ್ಲ) ಎಂಬ "ತತ್ತು ಸಮನ್ವಯಾತ್" (೧-೧-೪) ಎಂಬಲ್ಲಿ ಸಿದ್ಧಪಡಿಸಲಾಗಿದೆ. ಆದ್ದರಿಂದ ಈ ಜಾತಿಯ ವಾಕ್ಯಗಳಲ್ಲಿ ಶ್ರುತಿಯಲ್ಲಿರುವಂತೆ ಬ್ರಹ್ಮವು ನಿರಾಕಾರವೆಂದೇ ನಿಶ್ಚಯಿಸಬೇಕು. ಆಕಾರವುಳ್ಳ ಬ್ರಹ್ಮದ ವಿಷಯವಾಗಿರುವ ಉಳಿದ ವಾಕ್ಯಗಳೋ ಎಂದರೆ ತತ್ಪ್ರಧಾನವಲ್ಲ; ಏಕೆಂದರೆ ಅವು ಉಪಾಸನಾವಿಧಿಪ್ರಧಾನವಾಗಿರುತ್ತವೆ. ಅವುಗಳಲ್ಲಿ ವಿರೋಧವಿಲ್ಲದಿದ್ದರೆ (ಅವುಗಳಲ್ಲಿ) ಹೇಳಿದಂತೆಯೋ (ಎಂದು) ಇಟ್ಟುಕೊಳ್ಳಬೇಕು. ಆದರೆ ವಿರೋಧವುಂಟಾದರೆ ತತ್ಪ್ರಧಾನವಾದ ವಾಕ್ಯಗಳೂ ಅತತ್ಪ್ರಧಾನವಾಗಿರುವ ವಾಕ್ಯಗಳಿಗಿಂತ ಪ್ರಬಲವಾಗಿರುವವೆಂಬಿದೇ ಎರಡು ಬಗೆಯ ಶ್ರುತಿಗಳು ಇದ್ದರೂ ಬ್ರಹ್ಮವು ನಿರಾಕಾರವೇ ಎಂದು ನಿಶ್ಚಯಿಸುವವೇ ಹೊರತು (ಅದಕ್ಕೆ) ವಿಪರೀತವೆಂದು ನಿಶ್ಚಯಿಸುವದಿಲ್ಲವೆಂಬ ನಿರ್ಣಯಕ್ಕೆ ಕಾರಣವಾಗಿದೆ.

**ಪ್ರಕಾಶವಚ್ಚಾವೈಯರ್ಥ್ಯಾತ್ ॥ ೧೫ ॥**

೧೫. ಪ್ರಕಾಶದಂತೆ (ಆ ವಾಕ್ಯಗಳಿಗೂ) ಅವೈಯರ್ಥ್ಯವಾಗುತ್ತದೆ.

## ಸಾಕಾರವಾಕ್ಯಗಳಿಗೆ ಗತಿ

(ಭಾಷ್ಯ)

೨೮೩. ಕಾ ತರ್ಹಿ ಆಕಾರವದ್ವಿಷಯಾಣಾಂ ಶ್ರುತೀನಾಂ ಗತಿರಿತಿ ? ಅತ ಆಹ-(ಪ್ರಕಾಶವಚ್ಚಾವೈಯರ್ಥ್ಯಮ್।) ಯಥಾ ಪ್ರಕಾಶಃ ಸೌರಃ ಚಾನ್ದ್ರಮಸೋ ವಾ ವಿಯದ್ ವ್ಯಾಪ್ಯ ಅವತಿಷ್ಠಮಾನಃ ಅಙ್ಗುಲ್ಯಾದ್ಯುಪಾಧಿಸಂಬನ್ಧಾತ್ ತೇಷು ಋಜುವಕ್ರಾದಿಭಾವಂ ಪ್ರತಿಪದ್ಯಮಾನೇಷು ತದ್ಭಾವಮಿವ ಪ್ರತಿಪದ್ಯತೇ। ಏವಂ ಬ್ರಹ್ಮಾಪಿ ಪೃಥಿವ್ಯಾದ್ಯುಪಾಧಿಸಂಬನ್ಧಾತ್ ತದಾಕಾರತಾಮಿವ ಪ್ರತಿಪದ್ಯತೇ। ತದಾಲಮ್ಬನೋ ಬ್ರಹ್ಮ ಆಕಾರವಿಶೇಷೋಪದೇಶ ಉಪಾಸನಾರ್ಥೋ ನ ವಿರುಧ್ಯತೇ। ಏವಮ್ ಅವೈಯರ್ಥ್ಯಮ್ ಆಕಾರವದ್ಬ್ರಹ್ಮವಿಷಯಾಣಾಮಪಿ ವಾಕ್ಯಾನಾಂ ಭವಿಷ್ಯತಿ। ನ ಹಿ ವೇದವಾಕ್ಯಾನಾಂ ಕಸ್ಯಚಿತ್ ಅರ್ಥವತ್ತ್ವಮ್ ಕಸ್ಯಚಿತ್ ಅನರ್ಥವತ್ತ್ವಮ್ ಇತಿ ಯುಕ್ತಂ ಪ್ರತಿಪತ್ತುಮ್ । ಪ್ರಮಾಣತ್ವಾವಿಶೇಷಾತ್ । ನನು ಏವಮಪಿ ಯತ್ ಪುರಸ್ತಾತ್ ಪ್ರತಿಜ್ಞಾತಮ್ ನೋಪಾಧಿಯೋಗಾದಪಿ ಉಭಯಲಿಙ್ಗತ್ವಂ ಬ್ರಹ್ಮಣೋಽಸ್ತಿ ಇತಿ ತದ್ ವಿರುಧ್ಯತೇ । ನೇತಿ ಬ್ರೂಮಃ । ಉಪಾಧಿನಿಮಿತ್ತಸ್ಯ ವಸ್ತುಧರ್ಮತ್ವಾನುಪಪತ್ತೇಃ । ಉಪಾಧೀನಾಂ ಚ ಅವಿದ್ಯಾಪ್ರತ್ಯುಪಸ್ಥಾಪಿತತ್ವಾತ್ । ಸತ್ಯಾಮೇವ ಚ ನೈಸರ್ಗಿಕ್ಯಾಮ್ ಅವಿದ್ಯಾಯಾಂ ಲೋಕವೇದವ್ಯವಹಾರಾವತಾರಃ ಇತಿ ತತ್ರ ತತ್ರ ಅವೋಚಾಮ ॥

(ಭಾಷ್ಯಾರ್ಥ)

(ಪ್ರಶ್ನೆ) :– ಹಾಗಾದರೆ ಆಕಾರವುಳ್ಳ (ಬ್ರಹ್ಮದ) ವಿಷಯದ ಶ್ರುತಿಗಳಿಗೆ ಗತಿ ಏನು ?

(ಉತ್ತರ) :– ಇದಕ್ಕೆ ಹೇಳುತ್ತಾರೆ (ಪ್ರಕಾಶವಚ್ಚಾವೈಯರ್ಥ್ಯಾತ್) । ಹೇಗೆ ಸೂರ್ಯನ ಅಥವಾ ಚಂದ್ರನ ಪ್ರಕಾಶವು ಆಕಾಶವನ್ನು ವ್ಯಾಪಿಸಿ ಕೊಂಡಿರುವಲ್ಲಿ ಬೆರಳೇ ಮುಂತಾದ ಉಪಾಧಿಗಳ ಸಂಬಂಧದಿಂದ ಅವು ನೆಟ್ಟಗಿರುವದು, ಡೊಂಕಾಗುವದು – ಮುಂತಾದ ಸ್ವರೂಪವನ್ನು ಪಡೆಯಲು ಆ ಸ್ವರೂಪವನ್ನೇ ಪಡೆಯುವಂತಿರುವದೋ ಹೀಗೆಯೇ ಬ್ರಹ್ಮವೂ ಪೃಥಿವಿಯೇ ಮುಂತಾದ **ಉಪಾಧಿಗಳ ಸಂಬಂಧದಿಂದ ಅವುಗಳ ಆಕಾರವನ್ನು ಹೊಂದುವಂತೆ ತೋರುತ್ತದೆ. ಅದನ್ನಾಶ್ರಯಿಸಿ ಬ್ರಹ್ಮಕ್ಕೆ ಆಕಾರವಿಶೇಷಗಳನ್ನು ಉಪಾಸನೆಗಾಗಿ ಉಪದೇಶಿಸಿರುವದು ವಿರುದ್ಧವಾಗುವದಿಲ್ಲ.** ಹೀಗಿರುವದರಿಂದ ಆಕಾರವುಳ್ಳ ಬ್ರಹ್ಮದ ವಿಷಯದ ವಾಕ್ಯಗಳಿಗೂ ವ್ಯರ್ಥತ್ವವಿಲ್ಲವೆಂದಾಗಬಹುದು. ವೇದವಾಕ್ಯಗಳಲ್ಲಿ ಒಂದು ಸಾರ್ಥಕವಾಗಿರುವದು, ಇನ್ನೊಂದು ವ್ಯರ್ಥವಾಗಿರುವದು –ಎಂದು ತಿಳಿಯುವದು ಯುಕ್ತವಲ್ಲವೇ ಅಲ್ಲ, ಏಕೆಂದರೆ (ಎಲ್ಲವೂ) ಸಮಾನವಾಗಿಯೇ ಪ್ರಮಾಣವಾಗಿರುತ್ತವೆ.

(ಆಕ್ಷೇಪ) :– ಹೀಗಾದರೂ ಮೇಲೆ (ನೀವು) ಉಪಾಧಿಸಂಬಂಧದಿಂದಲೂ ಬ್ರಹ್ಮಕ್ಕೆ ಉಭಯಲಿಂಗತ್ವವಿಲ್ಲ ಎಂದು ಪ್ರತಿಜ್ಞೆಮಾಡಿದಿರಲ್ಲ, ಅದಕ್ಕೆ ವಿರುದ್ಧವಾಗುವದಲ್ಲ !

(ಪರಿಹಾರ) :– ಇಲ್ಲ ಎನ್ನುತ್ತೇವೆ. ಏಕೆಂದರೆ **ಉಪಾಧಿಯ ನಿಮಿತ್ತದಿಂದಾದದ್ದು ವಸ್ತುವಿನ ಧರ್ಮವಾಗಲಾರದು. ಉಪಾಧಿಗಳು ಅವಿದ್ಯೆಯು ತಂದೊಡ್ಡಿದವಾಗಿರುತ್ತವೆ. ನೈಸರ್ಗಿಕವಾದ ಅವಿದ್ಯೆಯು ಇರುವಲ್ಲಿಯೇ ಲೋಕವೇದವ್ಯವಹಾರವು ಬಂದಿಳಿಯುತ್ತದೆ ಎಂದು ಅಲ್ಲಲ್ಲಿ ಹೇಳಿಯೂ ಇರುತ್ತೇವೆ.**

**ಆಹ ಚ ತನ್ಮಾತ್ರಮ್ ॥ ೧೬ ॥**

೧೬. ತನ್ಮಾತ್ರವೆಂದು ಹೇಳಿಯೂ ಹೇಳುತ್ತದೆ.

## ಆತ್ಮನು ಚಿನ್ಮಾತ್ರನೆಂದು ಶ್ರುತಿ ಹೇಳುತ್ತದೆ

(ಭಾಷ್ಯ)

೨೮೩. ಆಹ ಚ ಶ್ರುತಿಃ ಚೈತನ್ಯಮಾತ್ರಂ ವಿಲಕ್ಷಣರೂಪಾನ್ತರರಹಿತಂ ನಿರ್ವಿಶೇಷಂ ಬ್ರಹ್ಮ "ಸ ಯಥಾ ಸೈನ್ಧವಘನೋಽನನ್ತರೋಽಬಾಹ್ಯಃ ಕೃತ್ಸ್ನೋ ರಸಘನ ಏವೈವಂ ವಾ ಅರೇಽಯಮಾತ್ಮಾನನ್ತರೋಽಬಾಹ್ಯಃ

ಕೃತ್ಸ್ನಃ ಪ್ರಜ್ಞಾನಘನ ಏವ" (ಬೃ. ೪-೫-೧೩) ಇತಿ । ಏತದುಕ್ತಂ ಭವತಿ । ನಾಸ್ಯ ಆತ್ಮನೋಽನ್ತರ್ಬಹಿರ್ವಾ ಚೈತನ್ಯಾದನ್ಯದ್ರೂಪಮಸ್ತಿ, ಚೈತನ್ಯಮೇವ ತು ನಿರನ್ತರಮಸ್ಯ ಸ್ವರೂಪಮ್ । ಯಥಾ ಸೈನ್ಧವಘನಸ್ಯ ಅನ್ತರ್ಬಹಿಶ್ಚ ಲವಣರಸ ಏವ ನಿರನ್ತರೋ ಭವತಿ ನ ರಸಾಽನ್ತರಮ್ ತಥೈವ ಇತಿ ।

(ಭಾಷ್ಯಾರ್ಥ)

ಬ್ರಹ್ಮವು ಚೈತನ್ಯಮಾತ್ರವು, (ಅದಕ್ಕಿಂತ) ವಿಲಕ್ಷಣವಾದ ರೂಪಾಂತರವಿಲ್ಲದ್ದು, ನಿರ್ವಿಶೇಷವು ಎಂದು "ಅದು ಹೇಗೆಂದರೆ ಹೇಗೆ ಉಪ್ಪಿನ ಹರಳು ಒಳಗಿಲ್ಲದೆ, ಪೂರ್ಣವಾಗಿ ಹೊರಗಿಲ್ಲದೆ ಸಂಪೂರ್ಣವಾಗಿ ರಸದ ಗಟ್ಟಿಯೇ ಆಗಿರುವದೋ, ಎಲೆ (ಮೈತ್ರೇಯಿ), ಹಾಗೆಯೇ ಈ ಆತ್ಮನು ಒಳಗಿಲ್ಲದೆ ಹೊರಗಿಲ್ಲದೆ ಪೂರ್ಣವಾಗಿ ಪ್ರಜ್ಞಾನಘನನೇ" (ಬೃ. ೪-೫-೧೩) ಎಂಬ ಶ್ರುತಿಯು ಹೇಳಿಯೂ ಇರುತ್ತದೆ. (ಇಲ್ಲಿ) ಇಷ್ಟನ್ನು ಹೇಳಿದಂತಾಗಿದೆ : ಈ ಆತ್ಮನಿಗೆ ಒಳಗಾಗಲಿ ಹೊರಗಾಗಲಿ ಚೈತನ್ಯಕ್ಕಿಂತ ಬೇರೆಯ ರೂಪವು ಇರುವದಿಲ್ಲ; ಹೇಗೆ ಉಪ್ಪಿನ ಹರಳಿನ ಹೊರಗೂ ಒಳಗೂ ಉಪ್ಪಿನ ರಸವೇ ಕಡಿವಡೆಯದೆ ಇರುತ್ತದೆಯೋ ಮತ್ತೊಂದು ಸವಿಯು ಇರುವದಿಲ್ಲವೋ ಹಾಗೆಯೇ.

**ದರ್ಶಯತಿ ಚಾಥೋ ಅಪಿ ಸ್ಮರ್ಯತೇ ॥ ೧೭॥**

೧೭. ಶ್ರುತಿಯೂ ತಿಳಿಸುತ್ತದೆ, ಮತ್ತು ಸ್ಮೃತಿಯೂ ಇದೆ.

## ಬ್ರಹ್ಮವು ನಿರ್ವಿಶೇಷವೆಂಬುದಕ್ಕೆ ಶ್ರುತಿಸ್ಮೃತಿಗಳ ಆಧಾರ

(ಭಾಷ್ಯ)

೨೮೪. ದರ್ಶಯತಿ ಚ ಶ್ರುತಿಃ ಪರರೂಪಪ್ರತಿಷೇಧೇನೈವ ಬ್ರಹ್ಮ ನಿರ್ವಿಶೇಷತ್ವಾತ್ "ಅಥಾತ ಆದೇಶೋ ನೇತಿ ನೇತಿ" (ಬೃ. ೨-೩-೬) ಇತಿ, "ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ" (ಕೇ. ೧-೩) ಇತಿ, "ಯತೋ ವಾಚೋ ನಿವರ್ತನ್ತೇ ಅಪ್ರಾಪ್ಯ ಮನಸಾ ಸಹ" (ತೈ. ೨-೪) ಇತ್ಯೇವಮಾದ್ಯಾ । ಬಾಷ್ಕಲಿನಾ ಚ ಬಾಧ್ವಃ ಪೃಷ್ಟಃ ಸನ್ ಅವಚನೇನೈವ ಬ್ರಹ್ಮ ಪ್ರೋವಾಚೇತಿ ಶ್ರೂಯತೇ "ಸ ಹೋವಾಚಾಧೀಹಿ ಭೋ ಇತಿ ಸ ತೂಷ್ಣೀಂ ಬಭೂವ ತಂ ಹ ದ್ವಿತೀಯೇ ವಾ ತೃತೀಯೇ ವಾ ವಚನ ಉವಾಚ ಬ್ರೂಮಃ ಖಲು ತ್ವಂ ತು ನ ವಿಜಾನಾಸಿ । ಉಪಶಾನ್ತೋಽಯಮಾತ್ಮಾ" (?) ಇತಿ । ತಥಾ ಸ್ಮೃತಿಷ್ವಪಿ ಪರಪ್ರತಿಷೇಧೇನೈವ ಉಪದಿಶ್ಯತೇ "ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ । ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥" (ಗೀ. ೧೩-೧೨) ಇತ್ಯೇವಮಾದ್ಯಾಸು । ತಥಾ ವಿಶ್ವರೂಪಧರೋ ನಾರಾಯಣೋ ನಾರದಮುವಾಚ ಇತಿ ಸ್ಮರ್ಯತೇ

"ಮಾಯಾ ಹ್ಯೇಷಾ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ। ಸರ್ವಭೂತ ಗುಣೈರ್ಯುಕ್ತಮ್ ನೈವಂ ಮಾಂ ಜ್ಞಾತುಮರ್ಹಸಿ" (ಮೋ. ಧ. ೩೩೯-೪೫) ಇತಿ ॥

(ಭಾಷ್ಯಾರ್ಥ)

ಮತ್ತು (ಬ್ರಹ್ಮವು) ನಿರ್ವಿಶೇಷವಾಗಿರುವದರಿಂದಲೇ ಶ್ರುತಿಯು "ಇನ್ನು ಆದ್ದರಿಂದ ಆದೇಶವು: ಹೀಗಲ್ಲ, ಹೀಗಲ್ಲ" (ಬೃ. ೨-೩-೬) ಎಂದು "ಅದು ತಿಳಿದಷ್ಟಕ್ಕಿಂತಲೂ ತಿಳಿಯದೆ ಇರುವದಕ್ಕಿಂತಲೂ ಬೇರೆಯೇ" (ಕೇ. ೧-೩) ಎಂದು "ವಾಕ್ಕುಗಳು ಮನಸ್ಸಿನೊಡನೆ (ಅದನ್ನು) ಪಡೆಯದೆ ಯಾವದರಿಂದ ಹಿಂತಿರುಗುವವೋ" (ತೈ.೨-೪) ಎಂದು ಮುಂತಾಗಿರುವ ಶ್ರುತಿಯು ಮತ್ತೊಂದು ರೂಪವನ್ನು ಅಲ್ಲಗಳೆಯುವದರಿಂದ ಬ್ರಹ್ಮವನ್ನು ತಿಳಿಸುತ್ತದೆ.[1] **ಬಾಷ್ಕಲಿಯನ್ನು ಬಾಧ್ವನು** ಕೇಳಿದ್ದಕ್ಕೆ ಯಾವ ಮಾತೂ ಇಲ್ಲದೆಯೇ ಬ್ರಹ್ಮವನ್ನು ತಿಳಿಸಿಕೊಟ್ಟನೆಂದು "ಅವನು ಹೇಳಿದನೇನೆಂದರೆ ಭಗವಂತನೆ, ಬ್ರಹ್ಮವನ್ನು ತಿಳಿಸಿಕೊಡು ಎಂದನು. ಅವನು ಸುಮ್ಮನೆ ಇದ್ದನು, ಅವನನ್ನು ಎರಡನೆಯ ಸಲ, ಮತ್ತು ಮೂರನೆಯ ಸಲ ಕೇಳಲು ಅವನಿಂತೆಂದನು : ಹೇಳುತ್ತಿರುವೆನಲ್ಲ! ಆದರೆ ನೀನು ಅರಿತುಕೊಳ್ಳದೆ ಇರುವೆ. ಈ ಆತ್ಮನು ಉಪಶಾಂತನಾಗಿರುತ್ತಾನೆ" (?) ಎಂಬ ಶ್ರುತಿಯು ಹೇಳುತ್ತಿದೆ.[2]

ಹೀಗೆಯೇ "ಜ್ಞೇಯವಿದೆಯಲ್ಲ, ಅದನ್ನು ತಿಳಿಸಿಕೊಡುವೆನು, ಅದನ್ನರಿತುಕೊಂಡರೆ ಅಮೃತವನ್ನು ಪಡೆದುಕೊಳ್ಳುವನು ಪರಬ್ರಹ್ಮವು ಆದಿಯಿಲ್ಲದ್ದು; ಅದು ಸತ್ತೆನಿಸುವದಿಲ್ಲ ಅಸತ್ತೂ ಎನಿಸುವದಿಲ್ಲ" (ಗೀ. ೧೩-೧೨) ಮುಂತಾದ ಸ್ಮೃತಿಗಳಲ್ಲಿಯೂ ಮತ್ತೊಂದು (ರೂಪವನ್ನು) ಪ್ರತಿಷೇಧಮಾಡುವದರಿಂದಲೇ (ಬ್ರಹ್ಮವನ್ನು) ಉಪದೇಶಮಾಡಿರುತ್ತದೆ. ವಿಶ್ವರೂಪಧರನಾದ **ನಾರಾಯಣನು** ನಾರದನನ್ನು ಕುರಿತು "ಎಲೈ ನಾರದನೆ, ನನ್ನನ್ನು ನೋಡುತ್ತಿರುವೆಯಷ್ಟೆ, ಇದು ನಾನು ಸೃಜಿಸಿರುವ ಮಾಯೆಯು; ನಾನು ಹೀಗೆ ಸರ್ವಭೂತಗುಣಗಳಿಂದಲೂ ಕೂಡಿರುವೆನೆಂದು ತಿಳಿದುಕೊಳ್ಳಬೇಡ"[3] (ಮೋ. ಧ. ೩೩೯-೪೫) ಎಂದು ಹೇಳಿದನೆಂದು ಸ್ಮೃತಿಯಲ್ಲಿದೆ.

---

1. ಬ್ರಹ್ಮದಲ್ಲಿ ಆರೋಪಿತವಾಗಿದ್ದು ಅದರಲ್ಲಿಲ್ಲದ ಧರ್ಮವನ್ನು ಅಲ್ಲಗಳೆದು ತಿಳಿಸುವದರಿಂದಲೇ ಅದು ನಿರ್ವಿಶೇಷವೆಂದು ಗೊತ್ತಾಗುತ್ತದೆ. ಏಕೆಂದರೆ ವಿಶೇಷವಿದ್ದರೆ ಅದು ಇಂಥದ್ದು ಎಂದೇ ತಿಳಿಸಬಹುದಾಗಿತ್ತು —ಎಂದರ್ಥ.

2. ಬ್ರಹ್ಮದಲ್ಲಿ ಯಾವ ವಿಶೇಷವೂ ಇಲ್ಲವೆಂದೇ ಇಲ್ಲಿ ಹೇಳಿದೆ.

3. ಈ ಶ್ಲೋಕದ ಹಿಂದಿನ ಶ್ಲೋಕದಲ್ಲಿ ಬ್ರಹ್ಮವು ನಿರ್ಗುಣವು, ನಿಷ್ಕಲವು, ನಿರ್ದ್ವಂದ್ವವು— ಎಂದುಮುಂತಾಗಿ ಹೇಳಿದೆ.

**ಅತ ಏವ ಚೋಪಮಾ ಸೂರ್ಯಕಾದಿವತ್ ॥ ೧೮ ॥**

೧೮. ಆದ್ದರಿಂದಲೇ ಸೂರ್ಯಕಾದಿಗಳಂತೆ ಎಂಬ ಉಪಮಾನವಿದೆ.

## ಸವಿಶೇಷರೂಪವು ಪರಮಾರ್ಥವಲ್ಲವೆಂದು ಶಾಸ್ತ್ರದಲ್ಲಿದೆ

(ಭಾಷ್ಯ)

೨೮೫. ಯತ ಏವ ಚ ಅಯಮಾತ್ಮಾ ಚೈತನ್ಯರೂಪೋ ನಿರ್ವಿಶೇಷೋ ವಾಙ್ಮನಸಾತೀತಃ ಪರಪ್ರತಿಷೇಧೋಪದೇಶ್ಯಃ ಅತ ಏವ ಚ ಅಸ್ಯ ಉಪಾಧಿನಿಮಿತ್ತಾಮ್ ಅಪಾರಮಾರ್ಥಿಕೀಂ ವಿಶೇಷವತ್ತಾಮ್ ಅಭಿಪ್ರೇತ್ಯ ಜಲಸೂರ್ಯಕಾದಿವತ್ ಇತಿ ಉಪಮಾ ಉಪಾದೀಯತೇ ಮೋಕ್ಷಶಾಸ್ತ್ರೇಷು "ಯಥಾ ಹ್ಯಯಂ ಜ್ಯೋತಿರಾತ್ಮಾ ವಿವಸ್ವಾನಪೋ ಭಿನ್ನಾ ಬಹುಧೈಕೋಽನುಗಚ್ಛನ್ । ಉಪಾಧಿನಾ ಕ್ರಿಯತೇ ಭೇದರೂಪೋ ದೇವಃ ಕ್ಷೇತ್ರೇಷ್ವೇವಮಜೋಽಯಮಾತ್ಮಾ" (?) ಇತಿ । "ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ। ಏಕಧಾ ಬಹುಧಾ ಚೈವ ದೃಶ್ಯತೇ ಜಲಚನ್ದ್ರವತ್" (?)[1] ಇತ್ಯೇವಮಾದಿಷು ॥

(ಭಾಷ್ಯಾರ್ಥ)

ಈ ಆತ್ಮನು (ಹೀಗೆ) ಚೈತನ್ಯರೂಪನೂ ನಿರ್ವಿಶೇಷನೂ ವಾಙ್ಮನಸ್ಸುಗಳನ್ನು ಮೀರಿರುವವನೂ ಆಗಿದ್ದು ಇನ್ನೊಂದು (ಸ್ವರೂಪ)ವನ್ನು ಅಲ್ಲಗಳೆದೇ ತಿಳಿಸತಕ್ಕವನಾಗಿರುವನಷ್ಟೆ, ಆದ್ದರಿಂದಲೇ ಇವನಿಗೆ ಉಪಾಧಿನಿಮಿತ್ತವಾಗಿ ಅಪರಮಾರ್ಥವಾದ ಸವಿಶೇಷ(ರೂಪವಾಗಿರುವದೆಂಬ) ಅಭಿಪ್ರಾಯದಿಂದ ನೀರಿನಲ್ಲಿರುವ ಸೂರ್ಯಬಿಂಬವೇ ಮುಂತಾದವುಗಳಂತೆ ಎಂಬ ಉಪಮಾನವನ್ನು ತೆಗೆದುಕೊಂಡು "ಹೇಗೆ ಈ ಜ್ಯೋತಿರೂಪದ ಸೂರ್ಯನು ಬೇರೆಬೇರೆಯಾದ ನೀರುಗಳನ್ನು ಅನುಸರಿಸಿ ತಾನೊಬ್ಬನೇ ಇದ್ದರೂ ಬಹುಪ್ರಕಾರವಾಗಿ ಭೇದರೂಪವುಳ್ಳವನಾಗಿ ಉಪಾಧಿಯಿಂದ ಮಾಡಲ್ಪಡುವನೋ ಹಾಗೆ ದೇವನೂ ಅಜನೂ ಆಗಿರುವ ಈ ಆತ್ಮನು ಕ್ಷೇತ್ರಗಳಲ್ಲಿ (ಭೇದರೂಪನಾಗಿ ಮಾಡಲ್ಪಟ್ಟಿರುತ್ತಾನೆ" (?) "ಒಬ್ಬ ಭೂತಾತ್ಮನೇ ಒಂದೊಂದು ಭೂತದಲ್ಲಿಯೂ ಇದ್ದುಕೊಂಡಿರುತ್ತಾನೆ; ಜಲಚಂದ್ರನಂತೆ ಒಂದು ರೂಪದಿಂದಲೂ ಅನೇಕರೂಪ

---

1. ಈ ವಾಕ್ಯಗಳು ಎಲ್ಲಿಯವೆಂಬುದು ತಿಳಿಯಲಿಲ್ಲ. ಕೆಲವರು ಎರಡನೆಯದು ಬ್ರಹ್ಮಬಿಂದೂಪನಿಷತ್ತಿನದೆಂದು ಕಲ್ಪಿಸಿರುತ್ತಾರೆ; ಆದರೆ ಆ ಉಪನಿಷತ್ತನ್ನು ಮತ್ತೆಲ್ಲಿಯೂ ಭಾಷ್ಯಕಾರರು ಪರಾಮರ್ಶಿಸಿಲ್ಲ.

ದಿಂದಲೂ ಕಾಣುತ್ತಿರುತ್ತಾನೆ" (?) ಎಂದು ಮುಂತಾದ ಮೋಕ್ಷಶಾಸ್ತ್ರಗಳಲ್ಲಿ ಹೇಳಲ್ಪಟ್ಟದೆ

**ಅಮ್ಬುವದಗ್ರಹಣಾತ್ತು ನ ತಥಾತ್ವಮ್ ॥ ೧೯ ॥**

೧೯. ನೀರಿನಂತೆ ಕಾಣದೆ ಇರುವದರಿಂದ ಹಾಗಲ್ಲ.

## ಸೂರ್ಯಾದಿಪ್ರತಿಬಿಂಬಗಳ ವಿಷಯಕ್ಕೆ ಆಕ್ಷೇಪ

( ಭಾಷ್ಯ )

೫೮೬. ಅತ್ರ ಪ್ರತ್ಯವಸ್ಥೀಯತೇ। ನ ಜಲಸೂರ್ಯಕಾದಿತುಲ್ಯತ್ವಮ್ ಇಹ ಉಪಪದ್ಯತೇ । ತದ್ವತ್ ಅಗ್ರಹಣಾತ್ । ಸೂರ್ಯಾದಿಭ್ಯೋ ಹಿ ಮೂರ್ತೇಭ್ಯಃ ಪೃಥಗ್ಭೂತಂ ವಿಪ್ರಕೃಷ್ಟದೇಶಂ ಮೂರ್ತಂ ಜಲಂ ಗೃಹ್ಯತೇ। ತತ್ರ ಯುಕ್ತಃ ಸೂರ್ಯಾದಿಪ್ರತಿಬಿಮ್ಬೋದಯಃ। ನ ತು ಆತ್ಮಾ ಮೂರ್ತಃ। ನ ಚ ಅಸ್ಮಾತ್ ಪೃಥಗ್ಭೂತಾ ವಿಪ್ರಕೃಷ್ಟದೇಶಾಶ್ಚ ಉಪಾಧಯಃ। ಸರ್ವಗತತ್ವಾತ್, ಸರ್ವಾನನ್ಯತ್ವಾಚ್ಚ। ತಸ್ಮಾತ್ ಅಯುಕ್ತೋಽಯಂ ದೃಷ್ಟಾನ್ತಃ ಇತಿ ॥

(ಭಾಷ್ಯಾರ್ಥ)

ಇಲ್ಲಿ (ಪೂರ್ವಪಕ್ಷಿಯು ಹೀಗೆ) ಎದುರುಬೀಳುತ್ತಾನೆ. ಇಲ್ಲಿ ಜಲಸೂರ್ಯಕವೇ ಮುಂತಾದವುಗಳ ಹೋಲಿಕೆಯು ಹೊಂದುವದಿಲ್ಲ. ಏಕೆಂದರೆ ಅವುಗಳಂತೆ (ಇಲ್ಲಿ) ಗ್ರಹಣವಾಗುವದಿಲ್ಲ. (ಇದರ ವಿವರ): ಮೂರ್ತಗಳಾಗಿರುವ ಸೂರ್ಯನೇ ಮುಂತಾದವುಗಳಿಗಿಂತ ಬೇರೆಯಾಗಿ ದೂರಪ್ರದೇಶದಲ್ಲಿ ಮೂರ್ತವಾದ ಜಲವು ಕಾಣಿಸುತ್ತದೆ; ಅಲ್ಲಿ ಸೂರ್ಯಾದಿಗಳ ಪ್ರತಿಬಿಂಬವು ಹುಟ್ಟುವದು ಯುಕ್ತವು. ಆದರೆ ಆತ್ಮನು ಮೂರ್ತನಲ್ಲ, ಉಪಾಧಿಗಳು ಅವನಿಗಿಂತ ಬೇರೆಯಾಗಿ ದೂರದೇಶದಲ್ಲಿ ಇಲ್ಲವೂ ಇಲ್ಲ; ಏಕೆಂದರೆ (ಆತ್ಮನು) ಸರ್ವಗತನೂ ಆಗಿರುತ್ತಾನೆ. ಎಲ್ಲರೊಡನೆ ಅನನ್ಯನೂ (ಆಗಿರುತ್ತಾನೆ). ಆದ್ದರಿಂದ ಈ ದೃಷ್ಟಾಂತವು ಅಯುಕ್ತವು.

**ವೃದ್ಧಿಹ್ರಾಸಭಾಕ್ತ್ವಮನ್ತರ್ಭಾವಾದುಭಯಸಾಮಞ್ಜಸ್ಯಾದೇವಮ್ ॥**

೨೦. (ಉಪಾಧಿಯಲ್ಲಿ) ಅಂತರ್ಭಾವವಾಗಿರುವದರಿಂದ ದೊಡ್ಡದಾಗುವದು, ಸಣ್ಣದಾಗುವದು (ವಿವಕ್ಷಿತಾಂಶವು). ಎರಡೂ ಸಮಂಜಸವಾಗಿರುವದರಿಂದ ಹೀಗೆ.

## ಪ್ರತಿಬಿಂಬದೃಷ್ಟಾಂತದಲ್ಲಿ ವಿವಕ್ಷಿತಾಂಶ

(ಭಾಷ್ಯ)

೫೭೭. ಅತ್ರ ಪ್ರತಿವಿಧೀಯತೇ ಯುಕ್ತ ಏವ ತು ಅಯಂ ದೃಷ್ಟಾಂತಃ। ವಿವಕ್ಷಿತಾಂಶಸಂಭವಾತ್। ನ ಹಿ ದೃಷ್ಟಾನ್ತದಾರ್ಷ್ಟಾನ್ತಿಕಯೋಃ ಕ್ವಚಿತ್ ಕಂಚಿತ್ ವಿವಕ್ಷಿತಾಂಶಂ ಮುಕ್ತ್ವಾ ಸರ್ವಸಾರೂಪ್ಯಂ ಕೇನಚಿತ್ ದರ್ಶಯಿತುಂ ಶಕ್ಯತೇ। ಸರ್ವಸಾರೂಪ್ಯೇ ಹಿ ದೃಷ್ಟಾನ್ತದಾರ್ಷ್ಟಾನ್ತಿಕಭಾವೋಚ್ಛೇದ ಏವ ಸ್ಯಾತ್। ನ ಚೇದಂ ಸ್ವಮನೀಷಯಾ ಜಲಸೂರ್ಯಕಾದಿ ದೃಷ್ಟಾನ್ತಪ್ರಣಯನಮ್। ಶಾಸ್ತ್ರಪ್ರಣೀತಸ್ಯ ತು ಅಸ್ಯ ಪ್ರಯೋಜನಮಾತ್ರಮ್ ಉಪನ್ಯಸ್ಯತೇ। ಕಿಂ ಪುನರತ್ರ ವಿವಕ್ಷಿತಂ ಸಾರೂಪ್ಯಮಿತಿ? ತದುಚ್ಯತೇ। ವೃದ್ಧಿಹ್ರಾಸಭಾಕ್ತ್ವಮ್ ಇತಿ। ಜಲಗತಂ ಹಿ ಸೂರ್ಯಪ್ರತಿಬಿಮ್ಬಂ ಜಲವೃದ್ಧೌ ವರ್ಧತೇ, ಜಲಹ್ರಾಸೇ ಹ್ರಸತಿ, ಜಲಚಲನೇ ಚಲತಿ, ಜಲಭೇದೇ ಭಿದ್ಯತೇ–ಇತ್ಯೇವಂ ಜಲಧರ್ಮಾನುಯಾಯಿ ಭವತಿ, ನ ತು ಪರಮಾರ್ಥತಃ ಸೂರ್ಯಸ್ಯ ತಥಾತ್ವಮಸ್ತಿ। ಏವಂ ಪರಮಾರ್ಥತೋಽವಿಕೃತಮ್ ಏಕರೂಪಮಪಿ ಸದ್ ಬ್ರಹ್ಮ ದೇಹಾದ್ಯುಪಾಧ್ಯನ್ತರ್ಭಾವಾತ್ ಭಜತ ಇವ ಉಪಾಧಿಧರ್ಮಾನ್ ವೃದ್ಧಿಹ್ರಾಸಾದೀನ್। ಏವಮುಭಯೋಃ ದೃಷ್ಟಾನ್ತದಾರ್ಷ್ಟಾನ್ತಿಕಯೋಃ ಸಾಮಞ್ಜಸ್ಯಾತ್ ಅವಿರೋಧಃ ॥

(ಭಾಷ್ಯಾರ್ಥ)

ಇದಕ್ಕೆ (ಈಗ) ಪರಿಹಾರವನ್ನು ಹೇಳಲಾಗುವದು. ಈ ದೃಷ್ಟಾಂತವು ಸರಿಯೇ (ಆಗಿದೆ), ಏಕೆಂದರೆ ವಿವಕ್ಷಿತವಾದ ಅಂಶವು (ಇಲ್ಲಿ) ಇರಬಹುದಾಗಿದೆ. ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಒಂದೊಂದು ಕಡೆಯಲ್ಲಿ ಒಂದೊಂದು ವಿವಕ್ಷಿತಾಂಶವನ್ನು ಬಿಟ್ಟರೆ ಎಲ್ಲಾ ಬಗೆಯಿಂದಲೂ ಸಾರೂಪ್ಯವನ್ನು ಯಾರೂ ತೋರಿಸಿಕೊಡುವದು ಆಗಲಾರದಷ್ಟೆ. ಏಕೆಂದರೆ ಎಲ್ಲಾ ಬಗೆಯಿಂದಲೂ ಸಾರೂಪ್ಯವಿದ್ದರೆ ದೃಷ್ಟಾಂತದಾರ್ಷ್ಟಾಂತಿಕಭಾವದ ನಾಶವೇ ಆದೀತು. ಇದು (ನಮ್ಮ) ಸ್ವಬುದ್ಧಿಯಿಂದ ಜಲಸೂರ್ಯಕವೇ ಮುಂತಾದ ದೃಷ್ಟಾಂತವನ್ನು ಕಲ್ಪಿಸಿರುವದಲ್ಲ ; ಶಾಸ್ತ್ರದಲ್ಲಿ ಕೊಟ್ಟಿರುವ ಈ (ದೃಷ್ಟಾಂತಕ್ಕೆ) ಪ್ರಯೋಜನವನ್ನು ಮಾತ್ರ ಹೇಳುತ್ತಿದೇವೆ.

(ಪ್ರಶ್ನೆ) :— ಹಾಗಾದರೆ ಇಲ್ಲಿ ವಿವಕ್ಷಿತವಾದ ಸಾರೂಪ್ಯವು ಯಾವದು?

(ಉತ್ತರ) :— ಅದನ್ನು ಹೇಳುತ್ತೇವೆ. ವೃದ್ಧಿಹ್ರಾಸಭಾಕ್ತ್ವವೇ. (ಇದರ ವಿವರ) : ನೀರಲ್ಲಿರುವ ಸೂರ್ಯಪ್ರತಿಬಿಂಬವು, ನೀರು ದೊಡ್ಡದಾದರೆ ತಾನೂ) ದೊಡ್ಡದಾಗುತ್ತವೆ, ನೀರು ಸಣ್ಣದಾದರೆ (ತಾನೂ) ಸಣ್ಣದಾಗುತ್ತದೆ,

ಇದನ್ನು ನೀವೂ ಓದಿ ನಿಮ್ಮ ಮಿತ್ರರಿಗೂ ಕೊಡಿರಿ

# ಶಾಂಕರವೇದಾಂತಪ್ರಕ್ರಿಯೆಯ

## ಹದಿನಾರು ಮುಖ್ಯತತ್ತ್ವಗಳು

ಆತ್ಮತತ್ತ್ವಜಿಜ್ಞಾಸುಗಳಿರ,

ಬ್ರಹ್ಮವು ನಮ್ಮ ಆತ್ಮನೇ ಎಂದು ಉಪನಿಷತ್ತುಗಳಲ್ಲಿ ಸಾರಿರುತ್ತದೆ, ಬಲ್ಲವರೂ ಉಪದೇಶಿಸುತ್ತಿರುತ್ತಾರೆ. ಇದನ್ನು ಅನುಭವಕ್ಕೆ ತಂದುಕೊಂಡವನಿಗೆ ಮುಕ್ತಿಯಾಗುವದೆಂದು ಆಸ್ತಿಕರಾದ ಮುಮುಕ್ಷುಗಳ ನಂಬಿಕೆ. ಆದರೆ ಆತ್ಮತತ್ತ್ವವು ಯಾವದು? ಅದನ್ನು ಹೇಗೆ ಕಂಡುಕೊಳ್ಳಬೇಕು? ಅದರಿಂದಾಗುವ ಮುಕ್ತಿಯ ಸ್ವರೂಪವೇನು? ಎಂಬ ವಿಷಯಕ್ಕೆ ಒಮ್ಮತವಿರುವದಿಲ್ಲ. ಶ್ರೀಶಂಕರಾಚಾರ್ಯರವರು ಅಪ್ಪಣೆಕೊಡಿಸಿರುವಂತೆ **'ಬಹವೋ ವಿಪ್ರತಿಪನ್ನಾ ಯುಕ್ತಿವಾಕ್ಯತದಾಭಾಸಸಮಾಶ್ರಯಾಃ ಸನ್ತಃ। ತತ್ರಾವಿಚಾರ್ಯ ಯತ್ಕಿಂಚಿತ್ ಪ್ರತಿಪದ್ಯಮಾನೋ ನಿಃಶ್ರೇಯಸಾತ್ ಪ್ರತಿಹನ್ಯೇತ, ಅನರ್ಥಂ ಚೇಯಾತ್।'** (ಸೂ. ಭಾ. ೧-೧-೧) ಈ ವಿಷಯದಲ್ಲಿ ಬಹುಜನರು ಯುಕ್ತಿ, ವಾಕ್ಯ, ಯುಕ್ತ್ಯಾಭಾಸ, ವಾಕ್ಯಾಭಾಸಗಳನ್ನು ಆಶ್ರಯಿಸಿಕೊಂಡು ವಿರುದ್ಧವಾದ ಅಭಿಪ್ರಾಯವುಳ್ಳವರಾಗಿರುತ್ತಾರೆ. ಹೀಗಿರುವಲ್ಲಿ ಯಾವ ವಿಚಾರವನ್ನೂ ಮಾಡದೆ ಯಾವದಾದರೊಂದು ಮತವನ್ನು ಒಪ್ಪಿಕೊಂಡವನಿಗೆ ಮುಕ್ತಿಯು ದೊರಕುವದಕ್ಕೆ ಅಡಚಣೆಯಾದೀತು, ಅನರ್ಥವೂ ಬಂದೊದಗೀತು. ಆದ್ದರಿಂದ ತತ್ತ್ವವನ್ನು ಸರಿಯಾದ ಕ್ರಮದಿಂದ ವಿಚಾರಿಸಿ ತಿಳಿದುಕೊಳ್ಳುವದು ಅವಶ್ಯವಾಗಿರುತ್ತದೆ.

ಆದರೆ ಶಂಕರಾಚಾರ್ಯರಂತೆಯೇ ಇನ್ನೂ ಅನೇಕ ಆಚಾರ್ಯರುಗಳೂ ತತ್ತ್ವವನ್ನು ಅರಿತುಕೊಂಡು ಕೃತಾರ್ಥರಾಗುವದು ಒಳ್ಳೆಯದೆಂದು ತಮ್ಮ ತಮ್ಮ ಶಿಷ್ಯರಿಗೆ ಬೋಧಿಸಿರುತ್ತಾರೆ. ಶಂಕರಾಚಾರ್ಯರವರ ಮತವನ್ನು ಅನುವಾದಮಾಡಿಕೊಂಡು ಖಂಡಿಸಿರುತ್ತಾರೆ; ಅದಕ್ಕೆ ಶ್ರುತಿಯ ಆಧಾರವಾಗಲಿ ಯುಕ್ತಿಯ ಬೆಂಬಲವಾಗಲಿ ಇಲ್ಲವೆಂದೂ ಅವರು ತಿಳಿಸುತ್ತಿರುತ್ತಾರೆ. ಶಂಕರಾಚಾರ್ಯರವರ ಅನುಯಾಯಿಗಳೆಂದು ಹೇಳಿಕೊಳ್ಳುತ್ತಿರುವ ಉಪದೇಶಕರುಗಳು ಶಾಂಕರವೇದಾಂತವೊಂದೇ ಮೋಕ್ಷಕ್ಕೆ ಸಾಧನವನ್ನು ತೋರಿಸುತ್ತದೆ ಎಂದು ಹೇಳುತ್ತಿದಾರಾದರೂ ಶಾಂಕರವೇದಾಂತದ ವಿಷಯಕ್ಕೆ ತಮ್ಮ

ತಮ್ಮೊಳಗೆ ಮತಭೇದವನ್ನು ತೋರಿಸುತ್ತಲೂ ತಾವುತಾವು ಹೇಳುತ್ತಿರುವದೇ ಶಾಂಕರಮತವು ಎಂದು ಸಾರುತ್ತಲೂ ಬೇರೊಂದು ಪ್ರಕ್ರಿಯೆಯು ಶಾಂಕರಮತವಲ್ಲವೆಂದು ಪ್ರತಿಯುಕ್ತಿಗಳಿಂದ ತೋರಿಸಿಕೊಡುವದಕ್ಕೂ ಹೊರಟಿರುತ್ತಾರೆ. ಹೀಗೆ ಖಂಡನೆಗೂ ಮಂಡನೆಗೂ ಶಾಂಕರಮತವನ್ನು ಉದಾಹರಿಸುತ್ತಿರುವವರಲ್ಲಿ ಶಾಂಕರವೇದಾಂತದ ಅಸಾಧಾರಣತತ್ತ್ವಗಳು ಯಾವವು ?– ಎಂಬ ಬಗ್ಗೆ ಭಿನ್ನ ಭಿನ್ನಾಭಿಪ್ರಾಯಗಳಿರುವದರಿಂದ ಜಿಜ್ಞಾಸುಗಳಿಗೆ ನಿಜವಾದ ಶಾಂಕರಮತವು ಯಾವದೆಂಬವಿಷಯಕ್ಕೆ ನಿಶ್ಚಿತವಾದ ತೀರ್ಮಾನವಾಗದೆ ಇರುತ್ತದೆ.

ಶಂಕರಭಗವತ್ಪಾದರವರು ಉಪದೇಶಿಸಿರುವ ವೇದಾಂತದ ನಿಜವಾದ ಸ್ವರೂಪವು ಯಾವದು ?– ಎಂಬುದನ್ನು ತಿಳಿಯುವದಕ್ಕೆ ಕನ್ನಡನಾಡಿನ ಸ್ವತಂತ್ರಪ್ರಜ್ಞರಾದ ಜಿಜ್ಞಾಸುಗಳಿಗೆ ಈಗ ಕಷ್ಟವಿರುವದಿಲ್ಲ. ಏಕೆಂದರೆ ಈಗ ಆ ಆಚಾರ್ಯವರ್ಯರ ಉಪನಿಷದ್ಭಾಷ್ಯಗಳು, ಗೀತಾಭಾಷ್ಯ, ವೇದಾಂತಸೂತ್ರಭಾಷ್ಯ– ಎಂಬ ಪ್ರಸ್ಥಾನತ್ರಯಭಾಷ್ಯಗಳೂ ಮೂಲಸಮೇತವಾಗಿ ಕನ್ನಡದ ಅನುವಾದರೂಪದಲ್ಲಿ ಬೆಳಕಿಗೆ ಬಂದು ಹೊಳೆನರಸೀಪುರದ ಅಧ್ಯಾತ್ಮಪ್ರಕಾಶ ಕಾರ್ಯಾಲಯದಲ್ಲಿ ಅಚ್ಚಾಗಿರುತ್ತವೆ. ಆದರೆ ಆ ಭಾಷ್ಯಗಳನ್ನೆಲ್ಲ ಓದಿ ಅಲ್ಲಿರುವ ಅಭಿಪ್ರಾಯಗಳನ್ನು ವಿಂಗಡಿಸಿ ಇದೇ ಶಾಂಕರಮತವೆಂದು ನಿಶ್ಚಯಿಸಿಕೊಳ್ಳುವದು ಎಲ್ಲರಿಗೂ ಸುಲಭಸಾಧ್ಯವಲ್ಲ. ಆದ್ದರಿಂದ ಇಲ್ಲಿ ಶಾಂಕರವೇದಾಂತ ಪ್ರಕ್ರಿಯೆಯಲ್ಲಿ ಅಸಾಧಾರಣವಾಗಿರುವ ಹದಿನಾರು ಮುಖ್ಯತತ್ತ್ವಗಳನ್ನು ಸಂಗ್ರಹಿಸಿರುತ್ತೇನೆ. ಈ ತತ್ತ್ವಗಳನ್ನು ಮನದಟ್ಟುಮಾಡಿಕೊಳ್ಳದೆ ಇರುವದರಿಂದ ವೇದಾಂತಜಿಜ್ಞಾಸುಗಳ ಪ್ರಪಂಚದಲ್ಲಿ ಪ್ರಚಾರಕ್ಕೆ ಬಂದಿರುವ ಕೆಲವು ತಪ್ಪು ಅಭಿಪ್ರಾಯಗಳನ್ನೂ ಇಲ್ಲಿ ಕಾಣಿಸಿರುತ್ತೇನೆ. ಇವನ್ನು ಭಾಷ್ಯವಾಕ್ಯಗಳಿಗೆ ಹೋಲಿಸಿಕೊಂಡು ಓದುಗರು ಮನಗಾಣಬೇಕೆಂದು ಕೋರುತ್ತೇನೆ.

## ಶಾಂಕರಪ್ರಕ್ರಿಯೆಯ ತತ್ತ್ವಗಳೂ ಆ ಬಗ್ಗೆ ಜನರ ತಪ್ಪುತಿಳಿವಳಿಕೆಗಳೂ

**೧. ಬ್ರಹ್ಮವೆಂದು ಉಪನಿಷತ್ತುಗಳಲ್ಲಿ ಕರೆದಿರುವ ಪರಮಾರ್ಥವು ಸ್ವಯಂಸಿದ್ಧವಾದ ನಮ್ಮೆಲ್ಲರ ಆತ್ಮನಾದ ಸಾಕ್ಷಿಯು. ಅದನ್ನು ತಿಳಿಸುವದಕ್ಕೆ ಯಾವ ಪ್ರಮಾಣವೂ ಇಲ್ಲ, ಬೇಕಿಲ್ಲ. ಶಾಸ್ತ್ರವು ಆತ್ಮಸ್ವರೂಪದ ವಿಷಯಕ್ಕಿರುವ ಅವಿದ್ಯೆಯನ್ನು ಮಾತ್ರ ಕಳೆಯುತ್ತದೆ.**

ಈ ತತ್ತ್ವವನ್ನರಿಯದವರಲ್ಲಿ (1) ಆತ್ಮಸಾಕ್ಷಾತ್ಕಾರವೆಂಬ ಅನುಭವವೊಂದಿದೆ, (2) ಆ ಅನುಭವಕ್ಕೆ ಮಹಾವಾಕ್ಯಯೋಗಾಭ್ಯಾಸಾದಿಗಳು ಸಾಧನ– ಎಂಬಿವೇ ಮುಂತಾದ ಕಲ್ಪನೆಗಳು ಇರುತ್ತವೆ.

**೨. ಅವಿದ್ಯೆ ಎಂದರೆ ಸತ್ಯಾನೃತರೂಪವಾಗಿರುವ ಆತ್ಮಾನಾತ್ಮಗಳ ಅನ್ಯೋನ್ಯಾಧ್ಯಾಸವು. ಇದು ಅನುಭವವೇದ್ಯ, ಈ ಅಧ್ಯಾಸದ ಹಿನ್ನೆಲೆಯಲ್ಲಿಯೇ ಪ್ರಮಾತೃಪ್ರಮಾಣಪ್ರಮೇಯವ್ಯವಹಾರವುಂಟಾಗಿದೆ.**

ಈ ತತ್ತ್ವವನ್ನರಿಯಲಾರದ್ದರಿಂದ (1) ಅಧ್ಯಾಸವು ಕಾರ್ಯಾವಿದ್ಯೆಯೆಂದೂ ಅದಕ್ಕೆ ಕಾರಣವಾದ ಮೂಲಾವಿದ್ಯೆಯೊಂದಿದೆಯೆಂದೂ ಹೇಳುವ ನವೀನಕಲ್ಪನೆಯೊಂದು ವ್ಯಾಖ್ಯಾನಗಳಲ್ಲಿ ಕಾಣುತ್ತಿದೆ. (2) ಅಧ್ಯಾಸಕ್ಕೂ ಅವಿದ್ಯೆಗೂ ಅನುಮಾನ, ಅರ್ಥಾಪತ್ತಿ, ಶ್ರುತಿ–ಪ್ರಮಾಣಗಳನ್ನು ಉದಾಹರಿಸುವ ತಲೆಕೆಳಕಾದ ಪದ್ಧತಿಯು ಪ್ರಚಾರಕ್ಕೆ ಬಂದಿದೆ. (3) ಅವಿದ್ಯೆಯು ಜೀವಾಶ್ರಯವೆ, ಬ್ರಹ್ಮಾಶ್ರಯವೆ, ಚಿನ್ಮಾತ್ರಾಶ್ರಯವೆ ?– ಎಂಬ ಅಸಂಬದ್ಧ ಪ್ರಶ್ನೆಗಳೂ ತಲೆಯೆತ್ತಿಕೊಂಡು ವಿವಾದಕ್ಕೆಡೆಗೊಟ್ಟಿವೆ.

**೩. ಬ್ರಹ್ಮಾತ್ಮನಲ್ಲಿ ಅಧ್ಯಾರೋಪಿತವಾಗಿರುವ ಪ್ರಮಾತೃಪ್ರಮಾಣಪ್ರಮೇಯವಿಭಾಗವನ್ನು –ಅಧ್ಯಾಸವನ್ನು ತೊಲಗಿಸುವದರ ಮೂಲಕ– ಬಾಧಿಸುವದರಿಂದಲೇ ಶಾಸ್ತ್ರವು ಆತ್ಮವಿಷಯಕ್ಕೆ ಪ್ರಮಾಣವೆನಿಸಿಕೊಂಡಿದೆ. ಆದ್ದರಿಂದ ಅದು ಅಂತ್ಯಪ್ರಮಾಣವು.**

ಈ ತತ್ತ್ವವನ್ನರಿಯದವರು, ವಿಧಿಮುಖವಾಗಿಯೂ ಆತ್ಮೋಪದೇಶವನ್ನು ಮಾಡಬಹುದು; ಹಾಗೆ ಉಪದೇಶಮಾಡುವ ವಾಕ್ಯಗಳೇ ಆತ್ಮನ ವಿಷಯಕ್ಕೆ ಮುಖ್ಯಪ್ರಮಾಣ–ಎಂಬಿವೇ ಮುಂತಾದ ತಪ್ಪು ಅಭಿಪ್ರಾಯಗಳನ್ನು ಜಿಜ್ಞಾಸುಗಳಲ್ಲಿ ಹರಡುತ್ತಿದಾರೆ.

**೪. ತತ್ತ್ವಮಸಿ, ನೇತಿನೇತ್ಯಾತ್ಮಾ– ಮುಂತಾದ ವೇದಾಂತವಾಕ್ಯಗಳು ಆತ್ಮವಸ್ತುವಿನಲ್ಲಿ ಸಮನ್ವಿತವಾಗಿವೆ, ಆತ್ಮನವಲ್ಲದ ಧರ್ಮಗಳನ್ನು ಅಲ್ಲಗಳೆದೇ ಸ್ವತಃಸಿದ್ಧನಾದ ಆತ್ಮನನ್ನು ತಿಳಿಸುತ್ತವೆ. ಆ ವಾಕ್ಯಗಳು ಯಾವ ಕ್ರಿಯೆಗೂ ಶೇಷವಾಗಿ ಬ್ರಹ್ಮಾತ್ಮವಸ್ತುವನ್ನು ತಿಳಿಸುವದಿಲ್ಲ.**

ಇದನ್ನರಿಯದವರಲ್ಲಿ (1) ವೇದಾಂತವಾಕ್ಯವು ಬ್ರಹ್ಮಾತ್ಮೈಕತ್ವವನ್ನು ಪರೋಕ್ಷವಾಗಿ ತಿಳಿಸುತ್ತದೆ ; (2) ಅಪರೋಕ್ಷಾನುಭವಕ್ಕಾಗಿ ವಾಕ್ಯಜ್ಞಾನಾಭ್ಯಾಸ, ಪ್ರಪಂಚಪ್ರವಿಲಯ, ನಿರ್ಗುಣಧ್ಯಾನ, ಪಾತಂಜಲಯೋಗ– ಮುಂತಾದವುಗಳನ್ನು ಅನುಷ್ಠಾನಮಾಡಬೇಕು –ಎಂಬ ನಂಬಿಕೆಗಳು ಹರಡಿಕೊಂಡಿವೆ. ವಾಕ್ಯದಿಂದಾದ ಅಪರೋಕ್ಷಜ್ಞಾನವು ಗಟ್ಟಿಯಾಗುವದಕ್ಕೆ ಶ್ರವಣಾದ್ಯಭ್ಯಾಸವು ಬೇಕೆಂಬ ನಂಬಿಕೆಯೂ ಕೆಲವರಲ್ಲಿದೆ.

**೫. 'ವೇದಾಂತವಾಕ್ಯವು ಬ್ರಹ್ಮಾತ್ಮವಸ್ತುವಿನಲ್ಲಿಯೇ ಸಮನ್ವಯವಾಗುತ್ತದೆ' ಎಂದರೆ ವಸ್ತುವಿನಲ್ಲಿಯೇ ಪರ್ಯವಸಾನವಾಗುವ ಜ್ಞಾನವನ್ನುಂಟುಮಾಡುತ್ತದೆ. ಪ್ರವೃತ್ತಿನಿವೃತ್ತ್ಯಂಗವಾದ ಅರಿವನ್ನುಂಟು**

**ಮಾಡುವದಿಲ್ಲ– ಎಂದಿಷ್ಟೇ ಅರ್ಥ. ಆತ್ಮನು ಯಾವದಾದರೊಂದು ಪದಕ್ಕೆ ಅಥವಾ ವಾಕ್ಯಕ್ಕೆ ಅರ್ಥವೆಂದೇನೂ ವಿವಕ್ಷಿತನಲ್ಲ. ಆತ್ಮನು ಸ್ವತಃಸಿದ್ಧನಾದ್ದರಿಂದ ವಾಕ್ಯದಿಂದ ನೇರಾಗಿ ಆತ್ಮಜ್ಞಾನವೇ ಆಗಬೇಕಾದದ್ದೇನೂ ಇಲ್ಲ.**

ಈ ಅಭಿಪ್ರಾಯವನ್ನು ಮನದಂದುಕೊಳ್ಳದೆ ಇರುವದರಿಂದ (1) ನಿಷೇಧವಾಕ್ಯಗಳು ಅಧ್ಯಾರೋಪಿತವಾದದ್ದನ್ನು ಅಲ್ಲಗಳೆಯುವದರಲ್ಲಿಯೇ ಪರ್ಯವಸಾನವಾಗುವದರಿಂದ ನಾನು ಬ್ರಹ್ಮವು ಎಂಬಾಕಾರದ ಜ್ಞಾನವನ್ನುಂಟುಮಾಡಲಾರವು; ಇದು ಹಗ್ಗ ಎಂಬ ಜ್ಞಾನವಾಗದೆ ಇದು ಹಾವಲ್ಲ ಎಂದಿಷ್ಟೇ ತಿಳಿದರೆ ಹಗ್ಗದ ವಿಷಯದ ಅಜ್ಞಾನವು ನಷ್ಟವಾಗುವದಿಲ್ಲವಾದ್ದರಿಂದ ಬರಿಯ ನಿಷೇಧವಾಕ್ಯದಿಂದ ಆತ್ಮಾಜ್ಞಾನವು ತೊಲಗದು. (2) ನಿಷೇಧವಾಕ್ಯವು ದ್ವೈತವಿಲ್ಲವೆಂದು ಸ್ವತಂತ್ರವಾಗಿ ಪ್ರತಿಪಾದಿಸುವದಿಲ್ಲ; ವಿಧಿವಾಕ್ಯದಿಂದ ಸಿದ್ಧವಾದ ಅರ್ಥವನ್ನೇ ಅನುವಾದ ಮಾಡುತ್ತದೆ –ಎಂಬಿವೇ ಮುಂತಾದ ಅಭಿಪ್ರಾಯಗಳು ಹರಡಿಕೊಂಡಿರುತ್ತವೆ.

**೬. ಶ್ರವಣಮನನನಿದಿಧ್ಯಾಸನಾದಿಗಳೆಲ್ಲ ಆತ್ಮಜ್ಞಾನಕ್ಕೆ ಸಾಧನಗಳಾದರೂ ಶ್ರವಣಮಾತ್ರದಿಂದಲೇ ವಾಕ್ಯಜ್ಞಾನವುಂಟಾದ ಉತ್ತಮಾಧಿಕಾರಿಗಳಿಗೆ ಮತ್ತೆಯಾವ ಸಾಧನವೂ ಬೇಡ.**

ಇದನ್ನರಿತುಕೊಳ್ಳದ್ದರಿಂದ, ಶ್ರವಣಕ್ಕೆ ಮನನನಿದಿಧ್ಯಾಸನಗಳು ಅಂಗವೊ, ನಿದಿಧ್ಯಾಸನಕ್ಕೆ ಶ್ರವಣಾದಿಗಳು ಅಂಗವೊ?–ಎಂಬ ವಿಷಯದಲ್ಲಿ ವಿವಾದವು ಎದ್ದುಕೊಳ್ಳುವದಕ್ಕೆ ಕಾರಣವಾಗಿವೆ.

**೭. ಶ್ರವಣಾದಿಗಳು ಜಿಜ್ಞಾಸುವನ್ನು ಆತ್ಮಾಭಿಮುಖವಾಗಿ ತಿರುಗಿಸಿ ಆತ್ಮನಲ್ಲಿಯೇ ಪ್ರಣಿಧಾನವನ್ನು ಮಾಡಿಸುವಮಟ್ಟಿಗೆ ವಿಧಿಗಳು; ಅವುಗಳಿಂದಾಗುವ ಶ್ರಾವಣಜ್ಞಾನವೇ ಮುಂತಾದದ್ದು ವಿಧೇಯವಲ್ಲ.**

ಈ ಗುಟ್ಟನ್ನರಿಯದ್ದರಿಂದ 'ಶ್ರೋತವ್ಯಃ' ಎಂಬುದು ವಿಧಿಯನ್ನೇ ಹೇಳುತ್ತದೆಯೆ, ಬರಿಯ ಅರ್ಹಾರ್ಥವನ್ನು ಹೇಳುವ ತವ್ಯಪ್ರತ್ಯಯದ ಶಬ್ದವೆ ?– ಎಂಬ ವಿಷಯಕ್ಕೆ ವಿವಾದವೆದ್ದುಕೊಳ್ಳುವದಕ್ಕೆ ಕಾರಣವಾಗಿದೆ.

**೮. ಮನನವೆಂಬುದು ಶ್ರುತ್ಯನುಗೃಹೀತವಾದ ಅನುಭವಾಂಗವಾದ ತರ್ಕ. ಅನುಭವವೆಂದರೆ ಜ್ಞೇಯವನ್ನೆಲ್ಲ ವಿಚಾರಕ್ಕೆ ತೆಗೆದುಕೊಂಡು ನೋಡಿದ್ದರಿಂದ ಆಗುವ ಅತೀಂದ್ರಿಯವಾದ ಅರಿವು.**

ಇದನ್ನರಿಯದ್ದರಿಂದ ಜ್ಞೇಯೈಕದೇಶವಾದ ಜಾಗರಿತಾವಸ್ಥೆಯನ್ನೇ ಪ್ರಧಾನವಾಗಿ ಹಿಡಿದು ಮಾಡುವ ತರ್ಕವನ್ನವಲಂಬಿಸುವ ವಾದಿಗಳ ತಂಡಗಳೂ ವಾಕ್ಯಗಳಿಗೆ ತಮ್ಮತಮ್ಮ ಅಭಿಪ್ರಾಯಗಳಿಗನುಸಾರವಾಗಿ ಅರ್ಥವನ್ನು ಮಾಡಿ ಆ ವಾಕ್ಯಪ್ರಮಾಣದಿಂದಲೇ ತಮ್ಮ

ಮತವು ಸರಿ ಎನ್ನುವ ವಾಕ್ಯಾರ್ಥಕೌಶಲಸ್ವಸಂಪ್ರದಾಯಾಭಿಮಾನಗ್ರಸ್ತರ ತಂಡಗಳೂ ಎದ್ದುಕೊಂಡಿವೆ.

**೯. ನಿದಿಧ್ಯಾಸನವು ಅತಿಸೂಕ್ಷ್ಮವಾಗಿರುವ ಆತ್ಮವಸ್ತುವನ್ನು ಏಕಾಗ್ರಚಿತ್ತದಿಂದ ನಿಟ್ಟಿಸಿನೋಡಿ ಅರಿತುಕೊಳ್ಳುವ ಸಾಧನವು. ಈ ಸಾಧನದ ಕೊನೆಯಲ್ಲಿ ಆತ್ಮನ ಅರಿವಾದಾಗ ಮನಸ್ಸು ಅಮನಸ್ಕವಾಗುವದು, ಆಗ ಅದು ಆತ್ಮನೇ ಆಗಿರುತ್ತದೆ.**

ಇದನ್ನರಿಯದೆ ನಿದಿಧ್ಯಾಸನವೆಂದರೆ ಉಪಾಸನೆಯಂತೆಯೇ ಭಾವನೆ ಎಂದು ಕೆಲವರು, ಚಿತ್ತವೃತ್ತಿನಿರೋಧವನ್ನು ಮಾಡಿಕೊಂಡು ಸವಿಕಲ್ಪಕನಿರ್ವಿಕಲ್ಪಕಸಮಾಧಿಗಳನ್ನು ಪಡೆದುಕೊಳ್ಳುವ ಪಾತಂಜಲಯೋಗವೆಂದು ಕೆಲವರು– ಹೀಗೆ ಭ್ರಾಂತರಾಗಿರುತ್ತಾರೆ.

**೧೦. ಅವಸ್ಥಾತ್ರಯಪರೀಕ್ಷಣವು ಶ್ರುತಿಯೇ ಅನುಗ್ರಹಿಸಿರುವ ತರ್ಕವು. ಅಲ್ಲಿ ವಿಶ್ವತೈಜಸಪ್ರಾಜ್ಞರನ್ನು ಸಮಷ್ಟಿಪ್ರಪಂಚೋಪಹಿತರೂಪದಿಂದಲೇ ಗ್ರಹಿಸಬೇಕು. ಅವಸ್ಥಾತ್ರಯದಲ್ಲಿಯೇ ಜ್ಞೇಯವೆಲ್ಲವೂ ಅಡಕವಾಗಿರುವದರಿಂದ ಈ ತರ್ಕಕ್ಕೆ ಪೂರ್ಣಾನುಭವದ ಆಧಾರವಿದೆ. ಜಾಗ್ರತ್ಸ್ವಪ್ನಸುಷುಪ್ತಿಗಳಲ್ಲಿ ಯಾವದಾದರೊಂದು ಇರುವಾಗ ಮತ್ತೆರಡು ಎಲ್ಲಿಯೂ ಇರುವದೇ ಇಲ್ಲವಾದ್ದರಿಂದ ಅವು ಒಂದೊಂದೂ ಪರಮಾರ್ಥವು ಹೊರತೋರುವ ಒಂದೊಂದು ಬಗೆಯೇ. ಜಾಗ್ರತ್ಸ್ವಪ್ನಗಳು ಸರ್ವಸಮವಾಗಿರುವದರಿಂದ ಎರಡೂ ಮಿಥ್ಯೆ, ಸುಷುಪ್ತಿಯಲ್ಲಿ ಸಚ್ಚಿದಾನಂದಸ್ವರೂಪವಾದ ನಿಷ್ಪ್ರಪಂಚಾತ್ಮನು ಮಾತ್ರ ಉಳಿದುಕೊಂಡಿರುತ್ತಾನೆ. ಆದ್ದರಿಂದ ಈ ತರ್ಕವು ಆಗಮಗಮ್ಯವಾದ ಅಜಾದ್ವಯಾತ್ಮತತ್ತ್ವವನ್ನು ಸ್ಫುಟತರವಾಗಿ ತಿಳಿಸಿಕೊಡುತ್ತದೆ.**

ಈ ಪ್ರಕ್ರಿಯೆಯನ್ನು ಸರಿಯಾಗಿ ಮನದಟ್ಟುಮಾಡಿಕೊಳ್ಳದೆ ಇರುವವರು (1) ಅವಸ್ಥಾತ್ರಯನಿರೂಪಣವು ತತ್ತದ್ದೇಹಾವಚ್ಛಿನ್ನನಾದ ಆತ್ಮನನ್ನು ತಿಳಿಸಿಕೊಡುತ್ತದೆ– ಎಂಬ ಸಾಂಖ್ಯಪ್ರಕ್ರಿಯೆಯನ್ನು ಹಿಡಿದಿರುತ್ತಾರೆ ; (2) ಜಾಗ್ರತ್ತಿನಲ್ಲಾಗುವ ಸ್ವಪ್ನಸುಷುಪ್ತಿಗಳ ಸ್ಮೃತಿಯನ್ನೇ ಆ ಅವಸ್ಥೆಗಳ ನಿರ್ಧಾರಣಕ್ಕೆ ಉಪಯೋಗಿಸುತ್ತಾರೆ. (3) ಸುಷುಪ್ತಿಯಲ್ಲಿಯೂ ಅವಿದ್ಯೆಯು ಬೀಜರೂಪದಿಂದ ಇದೆಯೆಂದು ಭಾವಿಸುತ್ತಾರೆ ; (4) ಜಾಗ್ರತ್ತಿನಲ್ಲಿ ಮಾತ್ರ ಕಾಣುವ ಭೋಕ್ತೃತ್ವೋಪಾಧಿಯಾದ ಆನಂದಮಯಕೋಶವು ಸುಷುಪ್ತಿಯಲ್ಲಿ ಅವಿದ್ಯಾರೂಪದಿಂದಿರುತ್ತದೆಯೆಂದು ಭ್ರಮಿಸಿರುತ್ತಾರೆ ; (5) ಅದ್ವೈತಸಾಕ್ಷಾತ್ಕಾರಕ್ಕೆ ಸಮಾಧಿಯೆಂಬ ಬೇರೊಂದವಸ್ಥೆಯು ಅವಶ್ಯವೆಂಬ ಅವೈದಿಕವಾದವನ್ನು ಹಿಡಿದಿರುತ್ತಾರೆ.

**೧೧. ಆತ್ಮನು ಯಾವಾಗಲೂ ಅಜಾದ್ವಯನೇ ಆಗಿರುತ್ತಾನೆ. ಅವನಿಂದ ಪ್ರಪಂಚವು ಹುಟ್ಟಿರುವದೆಂದು ಶ್ರುತಿಯಲ್ಲಿ ಹೇಳಿರುವದು**

ಮಂದಮಧ್ಯಮಾಧಿಕಾರಿಗಳಿಗಾಗಿ. ವೇದಾಂತದಲ್ಲಿ ಅದ್ವಿತೀಯಾತ್ಮನು ಜಗಜ್ಜನ್ಮಾದಿಕಾರಣನೆಂದು ಒಪ್ಪಿರುವದು ಅವಿದ್ಯಾಕಲ್ಪಿತನಾಮರೂಪವಮಾಯೆಯನ್ನವಲಂಬಿಸಿ. ಶ್ರುತಿಗೆ ಸೃಷ್ಟಿಯಲ್ಲಿ ತಾತ್ಪರ್ಯವೇ ಇಲ್ಲ, ಆತ್ಮೈಕತ್ವದಲ್ಲಿಯೇ ತಾತ್ಪರ್ಯ.

ಈ ಅಭಿಪ್ರಾಯವನ್ನು ಅರಿಯದಿರುವದರಿಂದ ಆತ್ಮ, ಅವಿದ್ಯೆ ಅಥವಾ ಮಾಯೆ–ಇವೆರಡೂ ಜಗತ್ಕಾರಣಗಳು ; ಆತ್ಮನು ನಿಮಿತ್ತಕಾರಣ, ಅವಿದ್ಯೆಯು ಉಪಾದಾನಕಾರಣ–ಎಂದು ಮುಂತಾಗಿ ಕಾರ್ಯಕಾರಣಭಾವವನ್ನು ಕಲ್ಪಿಸಿ ಹೇಳುವ ವಾದಗಳು ಹುಟ್ಟಿಕೊಂಡಿವೆ.

೧೨. ಬ್ರಹ್ಮಜ್ಞಾನಕ್ಕೆ ಶಾಸ್ತ್ರೀಯಕರ್ಮಗಳು ಸಾಧನವಾಗಿವೆಯಾದರೂ ವಿಕಲ್ಪಿತವಾಗಿವೆ, ಶಮದಮಾದಿಗಳು ಅಂತರಂಗಸಾಧನವಾಗಿವೆ. ಜ್ಞಾನವು ದೃಷ್ಟಫಲವುಳ್ಳದ್ದಾದ್ದರಿಂದ ಅನಿಷಿದ್ಧರಾದವರೆಲ್ಲರೂ ಶ್ರವಣಾದಿಗಳಿಗೆ ಅಧಿಕಾರಿಗಳು. ಶೂದ್ರಾದಿಗಳು ಇತಿಹಾಸಪುರಾಣಾದಿಶ್ರವಣಕ್ಕೆ ಅಧಿಕಾರಿಗಳು.

ಇದನ್ನರಿಯದ್ದರಿಂದ ಬ್ರಾಹ್ಮಣರಲ್ಲದವರಿಗೆ ವೇದಾಂತವಿಚಾರಕ್ಕೇ ಅಧಿಕಾರವಿಲ್ಲವೆಂದು ವಾದಿಸುವವರೂ ಇದ್ದಾರೆ. ಶಾಸ್ತ್ರೀಯಕರ್ಮಗಳು ಈಗ್ಗೆ ಸಾಧ್ಯವಲ್ಲವಾದ್ದರಿಂದ ಜ್ಞಾನವು ಯಾರಿಗೂ ದಕ್ಕುವದಿಲ್ಲ ಎನ್ನುವವರೂ ಇದ್ದಾರೆ.

೧೩. ಜ್ಞಾನಕ್ಕೆ ಪೂರ್ವಜನ್ಮದಲ್ಲಿ ಅನುಷ್ಠಾನಮಾಡಿದ ಕರ್ಮಗಳೂ ಸಾಕಾಗಬಹುದು. ಸಂನ್ಯಾಸಿಗಳಿಗೆ ಕೇವಲ ಜ್ಞಾನನಿಷ್ಠೆಯೇ ಧರ್ಮವಾಗಿರುವದರಿಂದ ಜ್ಞಾನಕ್ಕೆ ಮೋಕ್ಷವನ್ನು ಕೊಡುವದಕ್ಕೆ ಕರ್ಮದ ಸಹಾಯವು ಬೇಕೇಬೇಕು– ಎಂಬುದು ಸರಿಯಾಗುವದಿಲ್ಲ.

ಇದನ್ನು ತಿಳಿಯದಿರುವವರು ಗೃಹಸ್ಥರಿಗೆ ಸಂನ್ಯಾಸವಿಲ್ಲದೆ ಜ್ಞಾನವುಂಟಾಗುವದೇ ಇಲ್ಲವೆಂದು ವಾದಿಸುತ್ತಾರೆ. ಇನ್ನು ಕೆಲವರು ಪರಮಹಂಸಸಂನ್ಯಾಸಿಗಳಿಗೆ ಶ್ರವಣಾದಿಗಳಲ್ಲದೆ ಬೇರೆಯ ಕರ್ಮಗಳೂ ಅತ್ಯವಶ್ಯವೆಂದು ಹೇಳುತ್ತಿದ್ದಾರೆ.

೧೪. ಶ್ರವಣಾದಿಗಳಿಂದ ಈ ಜನ್ಮದಲ್ಲಿಯೇ ಜ್ಞಾನವುಂಟಾಗಬೇಕೆಂಬ ನಿಯಮವಿಲ್ಲ ; ಪ್ರತಿಬಂಧವೇನಾದರೂ ಇದ್ದರೆ ಮುಂದಿನ ಜನ್ಮದಲ್ಲಿಯೂ ಆಗಬಹುದು. ಜ್ಞಾನವಾದಬಳಿಕ ಮುಕ್ತಿಯು ಆಗಿಯೇತೀರುವದು.

ಇದನ್ನರಿಯದ್ದರಿಂದ (1) ವೇದಾಂತಗ್ರಂಥಗಳ ಅಭ್ಯಾಸಮಾಡಿದವರೆಲ್ಲರೂ ಜ್ಞಾನಿಗಳೆಂಬ ಭಾವನೆ ಕೆಲವರಲ್ಲಿದೆ ; ಜ್ಞಾನವಾದದ್ದೂ ಇಲ್ಲದ್ದೂ ಅವರವರ ಅನುಭವಕ್ಕೆ ಗೋಚರವೆಂಬುದನ್ನು ಅಂಥವರು ಮರೆತುಬಿಡುತ್ತಾರೆ. (2) ಜ್ಞಾನವಾದಬಳಿಕವೂ ಒಂದಿಷ್ಟು ಅಜ್ಞಾನ ಇರುವದೆಂದು ವಾದಿಸುವವರೂ ಕೆಲವರಿರುತ್ತಾರೆ.

**೧೫. ಜ್ಞಾನಿಯು ಬ್ರಹ್ಮವೇ ಆಗಿದ್ದು ಮುಂದೆ ಬ್ರಹ್ಮದಲ್ಲಿಯೇ ಸೇರಿಹೋಗುತ್ತಾನೆಂದು ಶ್ರುತಿಯಲ್ಲಿದೆ. ಜ್ಞಾನಿಗೆ ಪುನರ್ಜನ್ಮವಿಲ್ಲ ಎಂಬರ್ಥದಲ್ಲಿಯೇ ಬ್ರಹ್ಮದಲ್ಲಿ ಸೇರುವನೆಂದು ಉಪಚಾರಕ್ಕೆ ಹೇಳಿದೆಯೇ ಹೊರತು ಶರೀರವು ಬಿದ್ದಬಳಿಕ ವಿಶೇಷರೀತಿಯ ಮುಕ್ತಿಯಾಗುವದೆಂಬುದೇನೂ ವಿವಕ್ಷಿತವಲ್ಲ. ಜ್ಞಾನಿಯು ಈಗಲೂ ಅಶರೀರನಾಗಿಯೇ ಇರುತ್ತಾನೆ.**

ಇದನ್ನರಿಯದವರು (1) ಜೀವನ್ಮುಕ್ತಿಯು ಗೌಣವೆಂದೂ ಸತ್ತಬಳಿಕ ಆಗುವ ವಿದೇಹಮುಕ್ತಿಯೇ ಮುಖ್ಯವೆಂದೂ ವಾದಿಸುತ್ತಾರೆ. (2) ಅಜ್ಞಾನವು ತೀರ ಹೋಗಿಬಿಟ್ಟ ಜ್ಞಾನಿಗಳಿಗೆ ಜ್ಞಾನಸಮಕಾಲದಲ್ಲಿಯೇ ಶರೀರಪಾತವಾಗುವದೆಂಬ ಸದ್ಯೋಮುಕ್ತಿಯಾಗುವದೆಂದೂ ಕೆಲವರು ವಾದಿಸುತ್ತಿದಾರೆ.

**೧೬. ಬ್ರಹ್ಮತತ್ತ್ವವನ್ನು ಅರಿತುಕೊಂಡವನೇ ಜ್ಞಾನಿಯು. ಜ್ಞಾನದಲ್ಲಿ ಸ್ವಭಾವತಾರತಮ್ಯವಿಲ್ಲ. ಜ್ಞಾನಿಯು ಕೃತಕೃತ್ಯನು, ಅವನು ಮುಂದೆ ಮಾಡತಕ್ಕದ್ದೇನೂ ಉಳಿದಿರುವದಿಲ್ಲ.**

ಈ ತತ್ತ್ವವನ್ನು ಅರಿತುಕೊಳ್ಳದೆ ಇರುವವರು (1) ಜ್ಞಾನಿಗಳಲ್ಲಿ ಬ್ರಹ್ಮವಿತ್, ಬ್ರಹ್ಮವಿದ್ವರ– ಎಂದುಮುಂತಾಗಿ ಅಂತಸ್ತುಗಳನ್ನು ಕಲ್ಪಿಸುತ್ತಾರೆ. (2) ಜ್ಞಾನವಾದಮೇಲೂ ಸಾಕ್ಷಾತ್ಕಾರಕ್ಕಾಗಿ ಮಾಡತಕ್ಕದ್ದು ಉಳಿದಿದೆಯೆಂದೂ ಕೆಲವರು ವಾದಿಸುತ್ತಾರೆ.

ಈ ಮೇಲೆ ಅತಿಸಂಕ್ಷಿಪ್ತವಾಗಿ ಕೊಟ್ಟಿರುವ ಈ ವಿಷಯಗಳನ್ನು ಇನ್ನಷ್ಟು ವಿಶದವಾಗಿ ತಿಳಿಯಬೇಕೆನ್ನುವವರು ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳವರು ಅನುಗ್ರಹಿಸಿರುವ '**ಶಾಂಕರವೇದಾಂತಪ್ರಕ್ರಿಯೆ**' ಎಂಬ ಹೆಸರಿನಿಂದ ಇಷ್ಟರಲ್ಲಿಯೇ ಅಚ್ಚಾಗಲಿರುವ ಪುಟ್ಟಪುಸ್ತಕವನ್ನು ಓದಬೇಕು. ಆ ಗ್ರಂಥದಲ್ಲಿ (೧) ಬ್ರಹ್ಮವು ಸಾಕ್ಷಿರೂಪನಾದ ಆತ್ಮ, (೨) ಆತ್ಮನಲ್ಲಿ ಪ್ರಮಾತೃಪ್ರಮಾಣ ಪ್ರಮೇಯವಿಭಾಗವು ಸತ್ಯವಾಗಿಲ್ಲ, (೩) ಆತ್ಮನ ವಿಷಯಕ್ಕೆ ಶಾಸ್ತ್ರವೇ ಪ್ರಮಾಣ, (೪) ಆತ್ಮಾನುಭವಕ್ಕೆ ಬೇಕಾದ ತರ್ಕ, (೫) ನಿದಿಧ್ಯಾಸನ, (೬) ಆತ್ಮನಲ್ಲಿ ವೇದಾಂತವಾಕ್ಯಸಮನ್ವಯ, (೭) ಆತ್ಮನು ಅವಸ್ಥಾತ್ರಯ ರಹಿತನು, (೮) ಆತ್ಮನು ಅಜನು, ಅದ್ವಯನು, (೯) ಆತ್ಮಜ್ಞಾನಕ್ಕೆ ಸಾಧನಗಳೂ ಫಲವೂ, (೧೦) ಪರಮತಗಳ ವಿಮರ್ಶೆ– ಎಂಬ ಹತ್ತು ಖಂಡಗಳಿವೆ. ಒಂದುನೂರು ಹದಿನಾಲ್ಕು ಪ್ರಘಟ್ಟಗಳಲ್ಲಿ ವಿಷಯವನ್ನು ವಿವೇಚಿಸಿದೆ. ಮೇಲೆ ಕೊಟ್ಟಿರುವ ಹದಿನಾರು ತತ್ತ್ವಗಳನ್ನು ಪರಿಶಿಷ್ಟವಾಗಿ ಜೋಡಿಸಿದೆ. ಆ ಗ್ರಂಥದಲ್ಲಿ ಪ್ರತಿಯೊಂದು ವಿಷಯವೂ ಶ್ರೀಶಂಕರಭಗವತ್ಪಾದರ ಸಂಮತಿಯುಳ್ಳದ್ದೆಂದು ತೋರಿಸುವದಕ್ಕೆ ಕೊನೆಯಪಕ್ಷಕ್ಕೆ ಒಂದೊಂದು ಪ್ರಮಾಣವಚನವನ್ನಾದರೂ

ಭಾಷ್ಯಗ್ರಂಥಗಳಿಂದ ಆರಿಸಿ ಉದಾಹರಿಸಿದೆ; ಆ ವಚನಗಳು ಎಲ್ಲಿರುವವೆಂಬು ದನ್ನು ಸ್ಥಾನನಿರ್ದೇಶಕಸಂಖ್ಯೆಗಳಿಂದ ತಿಳಿಸಿರುತ್ತದೆ. **ಅಲ್ಲಿ ಪರಮತಗಳ ಖಂಡನೆಯ ಗೋಜಿಗೆ ಹೋಗದೆ ಶ್ರುತ್ಯನುಭವಯುಕ್ತಿಗಳಿಂದ ಶಾಂಕರಪ್ರಕ್ರಿಯೆಯ ಹೆಚ್ಚುಗಾರಿಕೆಯನ್ನು ತೋರಿಸುವದಕ್ಕೆ ಮಾತ್ರವೇ ಪ್ರಯತ್ನವನ್ನು ಮಾಡಿರುತ್ತದೆ.**

ಗ್ರಂಥವನ್ನು "ಅಧ್ಯಾತ್ಮಪ್ರಕಾಶ"ಮಾಸಪತ್ರಿಕೆಯಲ್ಲಿ ಸುಮಾರು ನಾಲ್ಕು ತಿಂಗಳೊಳಗೆ ಪ್ರಕಟಿಸಿ ಮುಗಿಸಲಾಗುವದರಿಂದ ಆ ಪತ್ರಿಕೆಯ ಚಂದಾದಾರರಿಗೆ ಗ್ರಂಥವು ದೊರಕಿಯೇದೊರಕುವದು. ತತ್ತ್ವರತ್ನಗಳ ಭರಣಿಯಂತಿರುವ ಆ ಅನರ್ಘವಾದ ಪುಸ್ತಕವು ಮುಮುಕ್ಷುಗಳಿಗೆಲ್ಲ ದೊರಕುವಂತೆ ಮಾಡುವದಕ್ಕೆ ಅಧ್ಯಾತ್ಮಪ್ರಕಾಶಕಾರ್ಯಾಲಯದವರು ಒಂದು ಯೋಜನೆಯನ್ನು ಮಾಡಿರುತ್ತಾರೆ. ಪತ್ರಿಕೆಯಲ್ಲಿ ಅಚ್ಚಾಗುವ ಗ್ರಂಥಭಾಗದ ಮರಿಯಚ್ಚಾಗಿ ೧೦೦೦ ಪ್ರತಿಗಳನ್ನು ತೆಗೆಯಲಾಗುವದು. ವೇದಾಂತವಿಚಾರದಲ್ಲಿ ಆಸಕ್ತಿಯುಳ್ಳ ಮುಮುಕ್ಷುಗಳಿಗೆ ಧರ್ಮಾರ್ಥವಾಗಿ ಹಂಚುವದಕ್ಕೆ ಬಯಸುವ ಉದಾರಾಶಯರ ಹೆಸರಿನಲ್ಲಿ ಅವರು ಅಪೇಕ್ಷಿಸುವಷ್ಟು ಪ್ರತಿಗಳನ್ನು ಅವರವರ ಹೆಸರಿನಲ್ಲಿ ಪ್ರಕಟಿಸುವಂತೆ ರಕ್ಷಾಪತ್ರಗಳನ್ನು ಅಚ್ಚುಮಾಡಿಸಿ ಜೋಡಿಸಿಕೊಡುವೆವು. ಸುಮಾರು ೭೦ ಪುಟಗಳಿರುವ ಈ ಪುಸ್ತಕದ ಐವತ್ತು ಪ್ರತಿಗಳಿಗೆ ರೂ. 15-0-0 ಆಗಬಹುದು; ಅಂಚೆಯ ವೆಚ್ಚ ಬೇರೆ. ತಮ್ಮ ಹೆಸರಿನಲ್ಲಿ ಪುಸ್ತಕಗಳನ್ನು ಉಚಿತವಾಗಿ ಹಂಚುವ ಅಭಿಲಾಷೆಯುಳ್ಳ ಧರ್ಮಾತ್ಮರು ಕೂಡಲೆ ಕಾರ್ಯಾಲಯಕ್ಕೆ ಈ ಮೊಬಲಗನ್ನು ಮನಿಆರ್ಡರು ಮಾಡಿ ಪತ್ರವನ್ನು ಬರೆಯಬೇಕಾಗಿ ಕೋರಿದೆ.

ಮಹಾಜನರು ಹೀಗೆ ಉಚಿತವಾಗಿ ಹಂಚಿ ಉಳಿಯುವ ಪುಸ್ತಕಗಳನ್ನು ನಾಮಮಾತ್ರಕ್ಕೆ ಇಡುವ ಬೆಲೆಗೆ ಮಾರಲಾಗುವದು. ಹೆಚ್ಚಿಗೆ ವಿಷಯಗಳಿಗೆ ಈ ಕೆಳಗೆ ಕಂಡ ವಿಳಾಸಕ್ಕೆ ಬರೆದುಕೊಳ್ಳಬೇಕಾಗಿ ಪ್ರಾರ್ಥನೆ.

ಅಧ್ಯಾತ್ಮಪ್ರಕಾಶಕಾರ್ಯಾಲಯ,
ಹೊಳೆನರಸೀಪುರ.

**H. S. ಲಕ್ಷ್ಮೀನರಸಿಂಹಮೂರ್ತಿ,**
ಅಧ್ಯಾತ್ಮವಿದ್ಯಾಪ್ರವೀಣ

---

**ಈ ಪುಸ್ತಕವನ್ನು ಇಂಗ್ಲಿಷು, ಸಂಸ್ಕೃತ, ಹಿಂದಿ, ತೆಲುಗು ಮತ್ತು ತಮಿಳು— ಈ ಭಾಷೆಗಳಲ್ಲಿ ಅನುವಾದಮಾಡಿ ಪ್ರಕಟಿಸಬೇಕೆಂಬ ಸಂಕಲ್ಪವಿದೆ. ಇದನ್ನು ತೆಲುಗಿನಲ್ಲಿ ಪ್ರಕಟಿಸುವ ಸೂಚನೆಯೊಂದು ಆಗಲೆ ನಮ್ಮಲ್ಲಿಗೆ ಬಂದಿದೆ; ಹಿಂದಿ, ತಮಿಳು— ಈ ಭಾಷೆಗಳಿಗೆ ಅನುವಾದಮಾಡಿ ಪ್ರಕಟಿಸುವ ಅಭಿಲಾಷೆಯುಳ್ಳವರು ಕಾರ್ಯಾಲಯಕ್ಕೆ ಬರೆದುಕೊಳ್ಳಬಹುದು.**

---

ಅಧ್ಯಾತ್ಮಪ್ರಕಾಶ ಮುದ್ರಣಾಲಯ, ಹೊಳೆನರಸೀಪುರ.

ನೀರು ಚಲಿಸಿದರೆ (ತಾನೂ) ಚಲಿಸುತ್ತದೆ. ನೀರು ಬೇರೆಬೇರೆಯಾದರೆ ತಾನೂ ಬೇರೆಬೇರೆಯಾಗುತ್ತದೆ– ಹೀಗೆ ನೀರಿನ ಧರ್ಮವನ್ನೇ (ಅದು) ಅನುಸರಿಸುತ್ತದೆ. (ಇಷ್ಟೇ ಹೊರತು) ನಿಜವಾಗಿ ಸೂರ್ಯನಿಗೆ ಆ ರೂಪವೇ ಇರುವದಿಲ್ಲ. ಹೀಗೆಯೇ ಬ್ರಹ್ಮವು ನಿಜವಾಗಿ ವಿಕಾರವಿಲ್ಲದ ಒಂದೇ ರೂಪವಾಗಿದ್ದರೂ ದೇಹವೇ ಮುಂತಾದ ಉಪಾಧಿಗಳೊಳಗೆ ಇರುವವರಿಂದ (ಆ) ಉಪಾಧಿಗಳ ಧರ್ಮಗಳಾದ ವೃದ್ಧಿಹ್ರಾಸವೇ ಮುಂತಾದವನ್ನು ಪಡೆಯುವಂತೆ ಇರುತ್ತದೆ ಹೀಗೆ ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಹೊಂದಿಕೆಯಿರುವದರಿಂದ (ಯಾವ) ವಿರೋಧವೂ (ಇರುವ)ದಿಲ್ಲ.

**ದರ್ಶನಾಚ್ಚ ॥ ೨೦ ॥**

೨೦. (ಶ್ರುತಿಯು) ತಿಳಿಸುವದರಿಂದಲೂ (ಹೀಗೆ).

## ಬ್ರಹ್ಮವೇ ಜೀವರೂಪದಿಂದ ಒಳಹೊಕ್ಕಿದೆ ಎಂದು ಶ್ರುತಿ

(ಭಾಷ್ಯ)

೪೮೮. ದರ್ಶಯತಿ ಚ ಶ್ರುತಿಃ ಪರಸ್ಯೈವ ಬ್ರಹ್ಮಣೋ ದೇಹಾದಿಷು ಉಪಾಧಿಷು ಅನ್ತರನುಪ್ರವೇಶಮ್ "ಪುರಶ್ಚಕ್ರೇ ದ್ವಿಪದಃ ಪುರಶ್ಚಕ್ರೇ ಚತುಷ್ಪದಃ । ಪುರಃ ಸ ಪಕ್ಷೀ ಭೂತ್ವಾ ಪುರಃ ಪುರುಷ ಆವಿಶತ್" (ಬೃ. ೨-೫-೧೮) ಇತಿ ॥ "ಅನೇನ ಜೀವೇನಾತ್ಮನಾನುಪ್ರವಿಶ್ಯ" (ಛಾಂ.೬-೩-೨) ಇತಿ ಚ । ತಸ್ಮಾತ್ ಯುಕ್ತಮೇತತ್ "ಅತ ಏವ ಚೋಪಮಾ ಸೂರ್ಯಕಾದಿವತ್" (೩-೨-೧೮) ಇತಿ । ತಸ್ಮಾತ್ ನಿರ್ವಿಕಲ್ಪಕೈಕಲಿಙ್ಗಮೇವ ಬ್ರಹ್ಮ, ನೋಭಯಲಿಙ್ಗಂ ವಿಪರೀತಲಿಙ್ಗಂ ಚ[1] ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಮತ್ತು ಪರಬ್ರಹ್ಮವೇ ದೇಹಾದಿಗಳೆಂಬ ಉಪಾಧಿಗಳಲ್ಲಿ ಒಳಹೊಕ್ಕಿದೆ ಎಂದು "ಎರಡು ಕಾಲಿನ ಪುರಗಳನ್ನು ಮಾಡಿದನು, ನಾಲ್ಕುಕಾಲಿನ ಪುರಗಳನ್ನು ಮಾಡಿದನು; ಮೊದಲು ಪಕ್ಷಿಯಾಗಿ ಆ ಪುರುಷನು ಪುರಗಳನ್ನು ಹೊಕ್ಕನು" (ಬೃ.೨-೫-೧೮) ಎಂದೂ "ಈ ಜೀವನ ರೂಪದಿಂದ ಒಳಹೊಕ್ಕು ...." (ಛಾಂ. ೬-೩-೨) ಎಂದೂ ಶ್ರುತಿಯು ತಿಳಿಸುತ್ತದೆ. ಆದ್ದರಿಂದ "ಆದ್ದರಿಂದಲೇ ಸೂರ್ಯಕಾದಿಗಳಂತೆ ಎಂಬ ಉಪಮಾನವನ್ನು ಕೊಟ್ಟಿದೆ" (೩-೨-೧೮) ಎಂಬಿದು ಯುಕ್ತವೇ.

ಆದ್ದರಿಂದ ಬ್ರಹ್ಮವು ನಿರ್ವಿಕಲ್ಪಕವಾದ ಒಂದೇ ಲಿಂಗವುಳ್ಳದ್ದು, ಎರಡೂ ಲಿಂಗವುಳ್ಳದ್ದಲ್ಲ. (ನಿರ್ವಿಕಲ್ಪಕ್ಕೆ) ವಿಪರೀತವಾದ ಲಿಂಗವುಳ್ಳದ್ದೂ ಅಲ್ಲ– ಎಂದು ಸಿದ್ಧವಾಯಿತು.

---

1. ಇದು 'ವಾ' ಎಂದಿದ್ದರೆ ಚೆನ್ನಾಗಿರುತ್ತಿತ್ತೆಂದು ತೋರುತ್ತದೆ.

## ಏಕದೇಶಿಗಳ ಅಧಿಕರಣವಿಭಾಗಕ್ರಮದ ಖಂಡನೆ

(ಭಾಷ್ಯ)

೨೮೯. ಅತ್ರ ಕೇಚಿತ್ ದ್ವೇ ಅಧಿಕರಣೇ ಕಲ್ಪಯನ್ತಿ। ಪ್ರಥಮಂ ತಾವತ್ ಕಿಂ ಪ್ರತ್ಯಸ್ತಮಿತಾಶೇಷಪ್ರಪಞ್ಚಮ್ ಏಕಾಕಾರಂ ಬ್ರಹ್ಮ, ಉತ ಪ್ರಪಞ್ಚವತ್ ಅನೇಕಾಕಾರೋಪೇತಮ್ ಇತಿ। ದ್ವಿತೀಯಂ ತು ಸ್ಥಿತೇ ಪ್ರತ್ಯಸ್ತಮಿತಪ್ರಪಞ್ಚತ್ವೇ ಕಿಂ ಸಲ್ಲಕ್ಷಣಂ ಬ್ರಹ್ಮ, ಉತ ಬೋಧಲಕ್ಷಣಮ್, ಉತ ಉಭಯಲಕ್ಷಣಮ್ ಇತಿ। ಅತ್ರ ವಯಂ ವದಾಮಃ ಸರ್ವಥಾಪಿ ಆನರ್ಥಕ್ಯಮ್ ಅಧಿಕರಣಾನ್ತರಾರಮ್ಭಸ್ಯ ಇತಿ। ಯದಿ ತಾವತ್ ಅನೇಕಲಿಙ್ಗತ್ವಂ ಪರಸ್ಯ ಬ್ರಹ್ಮಣೋ ನಿರಾಕರ್ತವ್ಯಮ್ ಇತ್ಯಯಂ ಪ್ರಯಾಸಃ, ತತ್ ಪೂರ್ವೇಣೈವ "ನ ಸ್ಥಾನತೋಽಪಿ" (೩–೨–೧೧) ಇತ್ಯನೇನ ಅಧಿಕರಣೇನ ನಿರಾಕೃತಮ್ ಇತ್ಯುತ್ತರಮ್ ಅಧಿಕರಣಂ "ಪ್ರಕಾಶವಚ್ಚ" (ಇತಿ)[1] ಏತದ್ (೩–೨–೧೫) ವ್ಯರ್ಥಮೇವ ಭವೇತ್। ನ ಚ ಸಲ್ಲಕ್ಷಣಮೇವ ಬ್ರಹ್ಮ ನ ಬೋಧಲಕ್ಷಣಮ್ ಇತಿ ಶಕ್ಯಂ ವಕ್ತುಮ್। "ವಿಜ್ಞಾನಘನ ಏವ" (ಬೃ ೨–೪–೧೨) ಇತ್ಯಾದಿಶ್ರುತಿವೈಯರ್ಥ್ಯಪ್ರಸಙ್ಗಾತ್। ಕಥಂ ವಾ ನಿರಸ್ತಚೈತನ್ಯಂ ಬ್ರಹ್ಮ ಚೇತನಸ್ಯ ಆತ್ಮತ್ವೇನ ಉಪದಿಶ್ಯೇತ? ನಾಪಿ ಬೋಧಲಕ್ಷಣಮೇವ ಬ್ರಹ್ಮ ನ ಸಲ್ಲಕ್ಷಣಮ್ ಇತಿ ಶಕ್ಯಂ ವಕ್ತುಮ್। "ಅಸ್ತೀತ್ಯೇವೋಪಲಬ್ಧವ್ಯಃ" (ಕ. ೨–೩–೧೩) ಇತ್ಯಾದಿಶ್ರುತಿವೈಯರ್ಥ್ಯಪ್ರಸಙ್ಗಾತ್। ಕಥಂ ವಾ ನಿರಸ್ತಸತ್ತಾಕೋ ಬೋಧೋಽಭ್ಯುಪಗಮ್ಯೇತ? ನಾಪಿ ಉಭಯಲಕ್ಷಣಮೇವ ಬ್ರಹ್ಮ ಇತಿ ಶಕ್ಯಂ ವಕ್ತುಮ್। ಪೂರ್ವಾಭ್ಯುಪಗಮವಿರೋಧಪ್ರಸಙ್ಗಾತ್। ಸತ್ತಾವ್ಯಾವೃತ್ತೇನ ಚ ಬೋಧೇನ ಬೋಧವ್ಯಾವೃತ್ತಯಾ ಚ ಸತ್ತಯಾ ಉಪೇತಂ ಬ್ರಹ್ಮ ಪ್ರತಿಜಾನಾನಸ್ಯ ತದೇವ ಪೂರ್ವಾಧಿಕರಣಪ್ರತಿಷಿದ್ಧಂ ಸಪ್ರಪಞ್ಚತ್ವಂ ಬ್ರಹ್ಮಣಃ ಪ್ರಸಜ್ಯೇತ। ಶ್ರುತತ್ವಾತ್ ಅದೋಷಃ ಇತಿ ಚೇತ್। ನ। ಏಕಸ್ಯ ಅನೇಕಸ್ವಭಾವತ್ವಾನುಪಪತ್ತೇಃ। ಅಥ ಸತ್ತೈವ ಬೋಧಃ, ಬೋಧ ಏವ ಚ ಸತ್ತಾ, ನಾನಯೋಃ ಪರಸ್ಪರವ್ಯಾವೃತ್ತಿರಸ್ತಿ ಇತಿ ಯದ್ಯುಚ್ಯೇತ, ತಥಾಪಿ ಕಿಂ ಸಲ್ಲಕ್ಷಣಂ ಬ್ರಹ್ಮ ಉತ ಬೋಧಲಕ್ಷಣಮ್, ಉತ ಉಭಯಲಕ್ಷಣಮ್ ಇತ್ಯೇವಂ ವಿಕಲ್ಪೋ ನಿರಾಲಮ್ಬನ ಏವ ಸ್ಯಾತ್। ಸೂತ್ರಾಣಿ ತು ಏಕಾಧಿಕರಣತ್ವೇನೈವ ಅಸ್ಮಾಭಿರ್ನೀತಾನಿ। ಅಪಿ ಚ ಬ್ರಹ್ಮವಿಷಯಾಸು ಶ್ರುತಿಷು ಆಕಾರವದನಾಕಾರಪ್ರತಿಪಾದನೇನ ವಿಪ್ರತಿಪನ್ನಾಸು ಅನಾಕಾರೇ ಬ್ರಹ್ಮಣಿ ಪರಿಗೃಹೀತೇ ಅವಶ್ಯಂ ವಕ್ತವ್ಯಾ ಇತರಾಸಾಂ ಶ್ರುತೀನಾಂ ಗತಿಃ। ತಾದರ್ಥ್ಯೇನ 'ಪ್ರಕಾಶವಚ್ಚ' ಇತ್ಯಾದೀನಿ ಸೂತ್ರಾಣಿ ಅರ್ಥವನ್ತರಾಣಿ ಸಂಪದ್ಯನ್ತೇ ॥

1. ಇಲ್ಲಿ ಒಂದು 'ಇತಿ'ಯು ಬೇಕೆಂದು ತೋರುತ್ತದೆ.

(ಭಾವಾರ್ಥ)

**ಇಲ್ಲಿ ಕೆಲವರು (ವೃತ್ತಿಕಾರರು) ಎರಡು ಅಧಿಕರಣಗಳನ್ನು ಕಲ್ಪಿಸು ತ್ತಾರೆ.** (ಹೇಗೆಂದರೆ) ಮೊದಲನೆಯದಾಗಿ ಬ್ರಹ್ಮವು ಯಾವ ಪ್ರಪಂಚವೂ ಇಲ್ಲದ ಏಕಾಕಾರವಾಗಿರುವದೋ. ಅಥವಾ ಪ್ರಪಂಚವುಳ್ಳದ್ದಾಗಿದ್ದು ಅನೇಕಾ ಕಾರವುಳ್ಳದ್ದಾಗಿರುವದೊ ? ಎಂಬುದು (ಒಂದು ಅಧಿಕರಣವು). ಇನ್ನು ಎರಡನೆಯ ಅಧಿಕರಣವೊ ಎಂದರೆ ಯಾವ ಪ್ರಪಂಚವೂ ಇಲ್ಲದ್ದೆಂದು ನಿರ್ಣಯವಾಗಿರುವಲ್ಲಿ ಬ್ರಹ್ಮವು ಸದ್ರೂಪವಾದದ್ದೊ, ಅಥವಾ ಬೋಧ ರೂಪವಾದದ್ದೊ, ಅಥವಾ ಎರಡೂ ರೂಪವಾದದ್ದೊ ? (ಎಂಬುದನ್ನು ನಿರ್ಣಯಿಸುತ್ತದೆ).

ಇಲ್ಲಿ ನಾವು ಹೇಳುವದೇನೆಂದರೆ ಹೇಗೇ ಆದರೂ ಮತ್ತೊಂದು ಅಧಿಕರಣ ವನ್ನು ಆರಂಭಿಸಿರುವದು ವ್ಯರ್ಥವು. ಮೊದಲನೆಯದಾಗಿ ಬ್ರಹ್ಮವು ಅನೇಕ ಲಿಂಗಗಳುಳ್ಳದ್ದೆಂಬುದನ್ನು ನಿರಾಕರಿಸುವದಕ್ಕಾಗಿ ಈ ಪ್ರಯಾಸವಾಗಿದ್ದರೆ ಅದು "ನ ಸ್ಥಾನತೋಽಪಿ" (೩-೨-೧೧) ಎಂಬೀ ಅಧಿಕರಣದಿಂದಲೇ ನಿರಾಕೃತವಾಗಿರು ವದರಿಂದ "ಪ್ರಕಾಶವಚ್ಚ" (೩-೨-೧೫) ಎಂಬೀ (ಅಧಿಕರಣವು) ವ್ಯರ್ಥವೇ ಆಗುವದು. ಬ್ರಹ್ಮವು ಸದ್ರೂಪವೇ ಹೊರತು ಬೋಧರೂಪವಾದದ್ದಲ್ಲ ಎಂದು ಹೇಳುವದಕ್ಕೂ ಆಗುವಂತಿಲ್ಲ. ಏಕೆಂದರೆ (ಆಗ) "ವಿಜ್ಞಾನಘನನೇ" (ಬೃ.೨-೪-೧೨) ಎಂದುಮುಂತಾಗಿರುವ ಶ್ರುತಿಗಳು ವ್ಯರ್ಥವೆಂಬ ಪ್ರಸಂಗವುಂಟಾಗು ತ್ತದೆ. (ಯಾವ) ಚೈತನ್ಯವೂ ಇಲ್ಲದ ಬ್ರಹ್ಮವು ಚೇತನನಾದ ಜೀವನ ಆತ್ಮ ನೆಂದು ಹೇಗೆತಾನೆ ಉಪದೇಶಮಾಡುವದಕ್ಕಾದೀತು ?[1] (ಇನ್ನು) ಬ್ರಹ್ಮವು ಬೋಧರೂಪವೇ, ಸದ್ರೂಪವಲ್ಲ ಎಂದು ಹೇಳುವದಕ್ಕೂ ಆಗುವದಿಲ್ಲ, ಏಕೆಂದರೆ (ಆಗ) "ಇದೆ ಎಂದೇ ಅರಿತ ಕೊಳ್ಳಬೇಕು" (ಕ. ೨-೩-೧೩) ಮುಂತಾದ ಶ್ರುತಿಗಳು ವ್ಯರ್ಥವಾಗುವ ಪ್ರಸಂಗವುಂಟಾಗುತ್ತದೆ. ಇರವು ಇಲ್ಲದ ಬೋಧವನ್ನು ಹೇಗೆತಾನೆ ಒಪ್ಪುವದಕ್ಕಾದೀತು ? ಇನ್ನು ಬ್ರಹ್ಮವು ಎರಡು ರೂಪದ್ದೂ ಆಗಿರುತ್ತದೆ ಎಂದೂ ಒಪ್ಪುವದಕ್ಕಾಗುವದಿಲ್ಲ ; ಏಕೆಂದರೆ (ಆಗ) ಹಿಂದೆ ಒಪ್ಪಿರುವದಕ್ಕೆ ವಿರೋಧವಾಗುವ ಪ್ರಸಂಗವುಂಟಾಗುತ್ತದೆ, (ಎಂದರೆ) ಇರವಿಲ್ಲದ ಅರಿವಿನಿಂದ ಅಥವಾ ಅರಿವಿಲ್ಲದ ಇರವಿನಿಂದ ಕೂಡಿರುವ ಬ್ರಹ್ಮವನ್ನು ಒಪ್ಪುವವನಿಗೆ ಹಿಂದಿನ ಅಧಿಕರಣದಲ್ಲಿ ಅಲ್ಲಗಳೆ ದಿರುವ ಸಪ್ರಪಂಚತ್ವವೇ ಬ್ರಹ್ಮಕ್ಕೆ ಪ್ರಸಕ್ತವಾಗುವದು.

(ಆಕ್ಷೇಪ) :— (ಉಭಯರೂಪವೂ ಆಗಿದೆ ಎಂದು) ಶ್ರುತಿಯಲ್ಲಿರು ವದರಿಂದ (ಯಾವ) ದೋಷವೂ ಇಲ್ಲ.

---

1. ಆಗಲಾರದು. ಆದ್ದರಿಂದ ಬ್ರಹ್ಮವು ಚೈತನ್ಯರೂಪವೇ.

(ಪರಿಹಾರ) :— ಹಾಗಲ್ಲ. ಏಕೆಂದರೆ ಒಂದಕ್ಕೇ ಅನೇಕ ಸ್ವಭಾವವಿರುವದೆಂಬುದು ಹೊಂದುವದಿಲ್ಲ.

ಇನ್ನು (ಹೀಗೂ ಇಲ್ಲದೆ) ಸತ್ತೆಯೇ ಬೋಧವು, ಬೋಧವೇ ಸತ್ತೆಯು ; ಇವುಗಳು ಒಂದನ್ನು ಬಿಟ್ಟು ಮತ್ತೊಂದು ಇರುವದಿಲ್ಲ —ಎನ್ನುವಿರಾದರೆ ಹಾಗಾದರೂ ಬ್ರಹ್ಮವು ಸದ್ರೂಪವೋ, ಬೋಧರೂಪವೋ, (ಅಥವಾ) ಉಭಯರೂಪವೋ ?– ಎಂಬೀ ವಿಕಲ್ಪವು ನಿರ್ವಿಷಯವೇ ಆಗಿಬಿಡುವದು.[1]

ಸೂತ್ರಗಳಾದರೆ (ಎಲ್ಲಾ) ಒಂದೇ ಅಧಿಕರಣವೆಂದು (ನಾವು ಅವುಗಳನ್ನು) ಹೊಂದಿಸಿರುತ್ತೇವೆ. ಇದಲ್ಲದೆ **ಬ್ರಹ್ಮವಿಷಯವಾದ ಶ್ರುತಿಗಳು ಆಕಾರದಂತೆ ಅನಾಕಾರವನ್ನೂ ಪ್ರತಿಪಾದಿಸುವದರಿಂದ ವಿರುದ್ಧಜ್ಞಾನವಾಗುತ್ತಿರುವಲ್ಲಿ ಬ್ರಹ್ಮವು ಅನಾಕಾರವೇ ಎಂದು ತೆಗೆದುಕೊಂಡಾಗ ಉಳಿದ ಶ್ರುತಿಗಳಿಗೆ ಗತಿಯನ್ನು ಅವಶ್ಯವಾಗಿ ಹೇಳಲೇಬೇಕಾಗುವದು. ಅದಕ್ಕಾಗಿ 'ಪ್ರಕಾಶವಚ್ಚ' ಮುಂತಾದ ಸೂತ್ರಗಳು ಹೆಚ್ಚು ಪ್ರಯೋಜನವುಳ್ಳವಾಗುತ್ತವೆ**

## ಪ್ರಪಂಚಪ್ರವಿಲಯವಾದದ ಖಂಡನೆ

(ಭಾಷ್ಯ)

೨೯೦. ಯದಪ್ಯಾಹುಃ ಆಕಾರವಾದಿನ್ಯೋಽಪಿ ಶ್ರುತಯಃ ಪ್ರಪಞ್ಚಪ್ರವಿಲಯಮುಖೇನ ಅನಾಕಾರಪ್ರತಿಪತ್ತ್ಯರ್ಥಾ ಏವ ನ ಪೃಥಗರ್ಥಾ ಇತಿ, ತದಪಿ ನ ಸಮೀಚೀನಮಿವ ಲಕ್ಷ್ಯತೇ । ಕಥಮ್ ? ಯೇ ಹಿ ಪರವಿದ್ಯಾಧಿಕಾರೇ ಕೇಚಿತ್ ಪ್ರಪಞ್ಚಾ ಉಚ್ಯನ್ತೇ ಯಥಾ "ಯುಕ್ತಾ ಹ್ಯಸ್ಯ ಹರಯಃ ಶತಾ ದಶೇತ್ಯಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಬಹೂನಿ ಚಾನನ್ತಾನಿ ಚ" (ಬೃ. ೨-೫-೧೯) ಇತ್ಯೇವಮಾದಯಃ, ತೇ ಭವನ್ತಿ ಪ್ರವಿಲಯಾರ್ಥಾಃ । "ತದೇತದ್ಬ್ರಹ್ಮಾಪೂರ್ವಮಾನಪರಮನನ್ತರಮಬಾಹ್ಯಮ್" (ಬೃ. ೨-೫-೧೯) ಇತ್ಯುಪಸಂಹಾರಾತ್ । ಯೇ ಪುನರುಪಾಸನಾಧಿಕಾರೇ ಪ್ರಪಞ್ಚಾ ಉಚ್ಯನ್ತೇ ಯಥಾ "ಮನೋಮಯಃ ಪ್ರಾಣಶರೀರೋ ಭಾರೂಪಃ" (ಛಾಂ. ೩-೧೪-೨) ಇತ್ಯಾದಯಃ, ನ ತೇಷಾಂ ಪ್ರವಿಲಯಾರ್ಥತ್ವಂ ನ್ಯಾಯ್ಯಮ್। "ಸ ಕ್ರತುಂ ಕುರ್ವೀತ" (ಛಾಂ. ೩-೧೪-೧) ಇತ್ಯೇವಂಜಾತೀಯಕೇನ ಪ್ರಕೃತೇನೈವ ಉಪಾಸನಾವಿಧಿನಾ ತೇಷಾಂ ಸಂಬನ್ಧಾತ್ । ಶ್ರುತ್ಯಾ ಚ ಏವಂಜಾತೀಯಕಾನಾಂ ಗುಣಾನಾಮುಪಾಸನಾರ್ಥತ್ವೇ ಅವಕಲ್ಪಮಾನೇನ ಲಕ್ಷಣಯಾ ಪ್ರವಿಲಯಾರ್ಥತ್ವಮ್ ಅವಕಲ್ಪ್ಯತೇ । ಸರ್ವೇಷಾಂ ಚ ಸಾಧಾರಣೇ

1 ಆದ್ದರಿಂದ ಅಧಿಕರಣವಿಭಾಗವು ವ್ಯರ್ಥ.

ಪ್ರವಿಲಯಾರ್ಥತ್ವೇ ಸತಿ "ಅರೂಪವದೇವ ಹಿ ತತ್ಪ್ರಧಾನತ್ವಾತ್" (೩-೨-೧೪) ಇತಿ ವಿನಿಗಮನಕಾರಣವಚನಮ್ ಅನವಕಾಶಂ ಸ್ಯಾತ್। ಫಲಮಪಿ ಏಷಾಂ ಯಥೋಪದೇಶಂ ಕ್ವಚಿತ್ ದುರಿತಕ್ಷಯಃ, ಕ್ವಚಿತ್ ಐಶ್ವರ್ಯಪ್ರಾಪ್ತಿಃ, ಕ್ವಚಿತ್ ಕ್ರಮಮುಕ್ತಿಃ ಇತ್ಯವಗಮ್ಯತ ಏವ ಇತ್ಯತಃ ಪಾರ್ಥಗರ್ಥ್ಯಮೇವ ಉಪಾಸನಾವಾಕ್ಯಾನಾಂ ಬ್ರಹ್ಮವಾಕ್ಯಾನಾಂ ಚ ನ್ಯಾಯ್ಯಂ ನೈಕವಾಕ್ಯತ್ವಮ್ ॥

(ಭಾಷ್ಯಾರ್ಥ)

ಮತ್ತು **ಆಕಾರವಾದಿಗಳಾದ ಶ್ರುತಿಗಳೂ ಪ್ರಪಂಚಪ್ರವಿಲಯದ ಮೂಲಕ ಅನಾಕಾರ(ರೂಪವನ್ನು) ತಿಳಿಯುವದಕ್ಕೇ ಹೊರತು ಬೇರೆಯ ಅರ್ಥವನ್ನು (ಅವು ಹೇಳು)ವದಿಲ್ಲ ಎಂದು ಇನ್ನೊಂದು (ಅಭಿಪ್ರಾಯವನ್ನು ಕೆಲವರು) ತಿಳಿಸುತ್ತಾರಲ್ಲ, ಅದೂ ಸರಿಯಾಗಿ ಕಾಣಿಸುವದಿಲ್ಲ.** ಹೇಗೆಂದರೆ, ಪರಮಾತ್ಮಜ್ಞಾನದ ಪ್ರಕರಣದಲ್ಲಿ ಕೆಲವು ಪ್ರಪಂಚಗಳನ್ನು ಹೇಳಲಾಗಿದೆಯಷ್ಟೆ ; ಉದಾಹರಣೆಗೆ "(ರಥಕ್ಕೆ) ಕಟ್ಟಿದಂತಿರುವ ಇವನ ಕುದುರೆಗಳು[1] ನೂರು, ಹತ್ತು ಇವೆಯಷ್ಟೆ ; ಇವನೇ ಆ ಕುದುರೆಗಳು, ಇವನೇ ಹತ್ತು, ಸಾವಿರ, ಬಹು(ವಾಗಿರುವವು), ಅನಂತವಾಗಿರುವವುಗಳು" (ಬೃ. ೨-೫-೧೯) ಎಂಬೀ ಮುಂತಾದ ಆ (ಪ್ರಪಂಚಗಳು) ಪ್ರವಿಲಯಕ್ಕಾಗಿ ಹೇಳಿದವುಗಳೆಂದಾಗಬಹುದು. ಏಕೆಂದರೆ "ಆ ಈ ಬ್ರಹ್ಮವು ಪೂರ್ವ(ಕಾರಣ)ವಿಲ್ಲದ್ದು, ಪರ(ಕಾರ್ಯ)ವಿಲ್ಲದ್ದು, ಒಳಗಿಲ್ಲದ್ದು, ಹೊರಗಿಲ್ಲದ್ದು" (ಬೃ. ೨-೫-೧೯) ಎಂದು (ಅಲ್ಲಿ) ಉಪಸಂಹಾರಮಾಡಿರುತ್ತದೆ. ಆದರೆ ಉಪಾಸನೆಯನ್ನು ವಿಧಾನಮಾಡುವ ಪ್ರಕರಣದಲ್ಲಿ "ಮನೋಮಯನು, ಪ್ರಾಣಶರೀರನು, ಭಾರೂಪನು" (ಛಾಂ. ೩-೧೪-೧). ಎಂದುಮುಂತಾಗಿರುವ ರೂಪದ ಪ್ರಪಂಚಗಳನ್ನು ಹೇಳಿದೆಯಲ್ಲ, ಅವುಗಳು ಪ್ರವಿಲಯಕ್ಕಾಗಿ ಹೇಳಿದೆ ಎಂಬುದು ಯುಕ್ತವಲ್ಲ. ಏಕೆಂದರೆ "ಅವನು ಕ್ರತುವನ್ನು ಮಾಡಬೇಕು" (ಛಾಂ.೩-೧೪-೧) ಎಂಬೀ ಜಾತಿಯ ಪ್ರಕೃತವಾಗಿರುವ ಉಪಾಸನಾವಿಧಿಗೇ ಅವು ಸಂಬದ್ಧವಾಗಿರುತ್ತವೆ. ಈ ವಿಧವಾದ ಗುಣಗಳು ಉಪಾಸನಾರ್ಥವಾಗಿರುವವೆಂದು ಶಬ್ದದ (ಮುಖ್ಯವೃತ್ತಿ)ಯಿಂದ ಹೊಂದುತ್ತಿರುವಲ್ಲಿ ಲಕ್ಷಣೆಯಿಂದ (ಅವುಗಳು) ಪ್ರವಿಲಯಕ್ಕಾಗಿ (ಉಕ್ತವಾಗಿವೆ) ಎಂಬುದು ಹೊಂದಲಾರದು. ಎಲ್ಲವೂ ಸಮಾನವಾಗಿಯೇ ಪ್ರವಿಲಯಾರ್ಥವಾಗಿರುವದಾದರೆ "(ಅದು) ಅರೂಪವೇ ಸರಿ ; ಏಕೆಂದರೆ (ಶ್ರುತಿಗಳು) ತತ್ಪ್ರಧಾನವಾಗಿವೆ" (೩-೨-೧೪) ಎಂದು ನಿಶ್ಚಯಿಸುವದಕ್ಕೆ ಕಾರಣವನ್ನು ಹೇಳಿರುವದು ನಿರವಕಾಶವಾಗುತ್ತದೆ. ಈ (ಉಪಾಸನಾವಾಕ್ಯ)ಗಳಿಗೆ ಉಪದೇಶಕ್ಕೆ ತಕ್ಕಂತೆ ಒಂದೊಂದು ಕಡೆಯಲ್ಲಿ

---

1. ಇಂದ್ರಿಯಗಳು. ಪ್ರಾಣಿಗಳು ಬಹಳವಿರುವದರಿಂದ ಅವು ನೂರಾರು ಇವೆ.

ಪಾಪಕ್ಷಯವು. ಒಂದೊಂದು ಕಡೆಯಲ್ಲಿ ಐಶ್ವರ್ಯಪ್ರಾಪ್ತಿ, ಒಂದೊಂದು ಕಡೆಯಲ್ಲಿ **ಕ್ರಮಮುಕ್ತಿ**– ಎಂದೀ ಬಗೆಯಲ್ಲಿ ಫಲವೂ (ಬೇರೆಯಾಗಿಯೇ) ಕಂಡುಬರುತ್ತದೆಯಾದ್ದರಿಂದ ಉಪಾಸನಾವಾಕ್ಯಗಳಿಗೂ ಬ್ರಹ್ಮವಾಕ್ಯಗಳಿಗೂ ಬೇರೆಬೇರೆಯ ತಾತ್ಪರ್ಯವನ್ನು (ಕಲ್ಪಿಸುವದೇ) ಯುಕ್ತವಾಗಿದೆ, ಏಕವಾಕ್ಯತ್ವವಿಲ್ಲ.

## ಉಪಾಸನಾವಾಕ್ಯಕ್ಕೂ ಬ್ರಹ್ಮವಾಕ್ಯಕ್ಕೂ ಏಕನಿಯೋಗಪ್ರತೀತಿಯಿಲ್ಲ

(ಭಾಷ್ಯ)

೩೯೧. ಕಥಂ ಚೈಷಾಮ್ ಏಕವಾಕ್ಯತಾ ಉತ್ಪ್ರೇಕ್ಷ್ಯತೇ ಇತಿ ವಕ್ತವ್ಯಮ್ । ಏಕನಿಯೋಗಪ್ರತೀತೇಃ ಪ್ರಯಾಜದರ್ಶಪೂರ್ಣಮಾಸವಾಕ್ಯವತ್ ಇತಿ ಚೇತ್ । ನ । ಬ್ರಹ್ಮವಾಕ್ಯೇಷು ನಿಯೋಗಾಭಾವಾತ್ । ವಸ್ತುಮಾತ್ರಪರ್ಯವಸಾಯೀನಿ ಹಿ ಬ್ರಹ್ಮವಾಕ್ಯಾನಿ ನ ನಿಯೋಗೋಪದೇಶೀನಿ ಇತ್ಯೇತದ್ ವಿಸ್ತರೇಣ ಪ್ರತಿಷ್ಠಾಪಿತಂ "ತತ್ತು ಸಮನ್ವಯಾತ್" (೧-೧-೪) ಇತ್ಯತ್ರ । ಕಿಂವಿಷಯಶ್ಚ ಅತ್ರ ನಿಯೋಗೋಽಭಿಪ್ರೇಯತೇ ಇತಿ ವಕ್ತವ್ಯಮ್। ಪುರುಷೋ ಹಿ ನಿಯುಜ್ಯಮಾನಃ ಕುರು ಇತಿ ಸ್ವವ್ಯಾಪಾರೇ ಕಸ್ಮಿಂಶ್ಚಿತ್ ನಿಯುಜ್ಯತೇ । ನನು ದ್ವೈತಪ್ರಪಞ್ಚವಿಲಯೋ ಹಿ ನಿಯೋಗವಿಷಯೋ ಭವಿಷ್ಯತಿ। ಅಪ್ರವಿಲಾಪಿತೇ ಹಿ ದ್ವೈತಪ್ರಪಞ್ಚೇ ಬ್ರಹ್ಮತತ್ತ್ವಾವಬೋಧೋ ನ ಭವತಿ । ಅತೋ ಬ್ರಹ್ಮತತ್ತ್ವಾವಬೋಧಪ್ರತ್ಯನೀಕಭೂತೋ ದ್ವೈತಪ್ರಪಞ್ಚಃ ಪ್ರವಿಲಾಪ್ಯಃ । ಯಥಾ ಸ್ವರ್ಗಕಾಮಸ್ಯ ಯಾಗಃ ಅನುಷ್ಠಾತವ್ಯ ಉಪದಿಶ್ಯತೇ ಏವಮ್ ಅಪವರ್ಗಕಾಮಸ್ಯ ಪ್ರಪಞ್ಚಪ್ರವಿಲಯಃ । ಯಥಾ ಚ ತಮಸಿ ವ್ಯವಸ್ಥಿತಂ ಘಟಾದಿತತ್ತ್ವಮ್ ಅವಬುಭುತ್ಸಮಾನೇನ ತತ್ಪ್ರತ್ಯನೀಕಭೂತಮ್ ತಮಃ ಪ್ರವಿಲಾಪ್ಯತೇ, ಏವಂ ಬ್ರಹ್ಮತತ್ತ್ವಮ್ ಅವಬುಭುತ್ಸಮಾನೇನ ತತ್ಪ್ರತ್ಯನೀಕಭೂತಃ ಪ್ರಪಞ್ಚಃ ಪ್ರವಿಲಾಪಯಿತವ್ಯಃ। ಬ್ರಹ್ಮಸ್ವಭಾವೋ ಹಿ ಪ್ರಪಞ್ಚಃ ನ ಪ್ರಪಞ್ಚಸ್ವಭಾವಂ ಬ್ರಹ್ಮ । ತೇನ ನಾಮರೂಪಪ್ರಪಞ್ಚಪ್ರವಿಲಾಪನೇನ ಬ್ರಹ್ಮತತ್ತ್ವಾವಬೋಧೋ ಭವತಿ ಇತಿ । ಅತ್ರ ವಯಂ ಪೃಚ್ಛಾಮಃ । ಕೋಽಯಂ ಪ್ರಪಞ್ಚಪ್ರವಿಲಯೋ ನಾಮ ? ಕಿಮ್ ಅಗ್ನಿಪ್ರತಾಪಸಂಪರ್ಕಾತ್ ಘೃತಕಾಠಿನ್ಯಪ್ರವಿಲಯ ಇವ ಪ್ರಪಞ್ಚಪ್ರವಿಲಯಃ ಕರ್ತವ್ಯಃ, ಆಹೋಸ್ವಿತ್ ಏಕಸ್ಮಿನ್ ಚನ್ದ್ರೇ ತಿಮಿರಕೃತಾನೇಕಚನ್ದ್ರಪ್ರಪಞ್ಚವತ್ ಅವಿದ್ಯಾಕೃತೋ ಬ್ರಹ್ಮಣಿ ನಾಮರೂಪಪ್ರಪಞ್ಚೋ ವಿದ್ಯಯಾ ಪ್ರವಿಲಾಪಯಿತವ್ಯಃ ಇತಿ। ತತ್ರ ಯದಿ ತಾವತ್ ವಿದ್ಯಮಾನೋಽಯಂ ಪ್ರಪಞ್ಚೋ ದೇಹಾದಿಲಕ್ಷಣ ಆಧ್ಯಾತ್ಮಿಕಃ, ಬಾಹ್ಯಶ್ಚ ಪೃಥಿವ್ಯಾದಿಲಕ್ಷಣಃ

ಪ್ರವಿಲಾಪಯಿತವ್ಯ ಇತ್ಯುಚ್ಯೇತ, ಸ ಪುರುಷಮಾತ್ರೇಣ ಅಶಕ್ಯಃ ಪ್ರವಿಲಾಪಯಿತುಮ್ ಇತಿ ತತ್ಪ್ರವಿಲಯೋಪದೇಶೋಽಶಕ್ಯವಿಷಯ ಏವ ಸ್ಯಾತ್ । ಏಕೇನ ಚ ಆದಿಮುಕ್ತೇನ ಪೃಥಿವ್ಯಾದಿಪ್ರವಿಲಯಃ ಕೃತಃ ಇತಿ ಇದಾನೀಂ ಪೃಥಿವ್ಯಾದಿಶೂನ್ಯಂ ಜಗತ್ ಅಭವಿಷ್ಯತ್ । ಅಥ ಅವಿದ್ಯಾಧ್ಯಸ್ತೋ ಬ್ರಹ್ಮಣಿ ಏಕಸ್ಮಿನ್ ಅಯಂ ಪ್ರಪಞ್ಚೋ ವಿದ್ಯಯಾ ಪ್ರವಿಲಾಪ್ಯತೇ ಇತಿ ಬ್ರೂಯಾತ್, ತತೋ ಬ್ರಹ್ಮೈವ ಅವಿದ್ಯಾಧ್ಯಸ್ತಪ್ರಪಞ್ಚಪ್ರತ್ಯಾಖ್ಯಾನೇನ ಆವೇದಯಿತವ್ಯಮ್ 'ಏಕಮೇವ ಅದ್ವಿತೀಯಂ ಬ್ರಹ್ಮ'. "ತತ್ಸತ್ಯಂ ಸ ಆತ್ಮಾ ತತ್ತ್ವಮಸಿ" (ಛಾಂ.೬-೮-೭) ಇತಿ । ತಸ್ಮಿನ್ ಆವೇದಿತೇ ವಿದ್ಯಾ ಸ್ವಯಮೇವ ಉತ್ಪದ್ಯತೇ। ತಯಾ ಚ ಅವಿದ್ಯಾ ಬಾಧ್ಯತೇ, ತತಶ್ಚ ಅವಿದ್ಯಾಧ್ಯಸ್ತಃ ಸಕಲೋಽಯಂ ನಾಮರೂಪಪ್ರಪಞ್ಚಃ ಸ್ವಪ್ನಪ್ರಪಞ್ಚವತ್ ಪ್ರವಿಲೀಯತೇ। ಅನಾವೇದಿತೇ ಬ್ರಹ್ಮಣಿ 'ಬ್ರಹ್ಮವಿಜ್ಞಾನಂ ಕುರು, ಪ್ರಪಞ್ಚವಿಲಯಂ ಚ' ಇತಿ ಶತಕೃತ್ವೋಽಪ್ಯುಕ್ತೇ ನ ಬ್ರಹ್ಮವಿಜ್ಞಾನಂ ಪ್ರಪಞ್ಚವಿಲಯೋ ವಾ ಜಾಯತೇ । ನನು ಆವೇದಿತೇ ಬ್ರಹ್ಮಣಿ ತದ್ವಿಜ್ಞಾನವಿಷಯಃ, ಪ್ರಪಞ್ಚಪ್ರವಿಲಯವಿಷಯೋ ವಾ ನಿಯೋಗಃ ಸ್ಯಾತ್ । ನ। ನಿಷ್ಪ್ರಪಞ್ಚಬ್ರಹ್ಮಾತ್ಮತ್ವಾವೇದನೇನೈವ ಉಭಯಪ್ರಸಿದ್ಧೇಃ । ರಜ್ಜುಸ್ವರೂಪಪ್ರಕಾಶನೇನೈವ ಹಿ ತತ್ಸ್ವರೂಪವಿಜ್ಞಾನಮ್ ಅವಿದ್ಯಾಧ್ಯಸ್ತಸರ್ಪಾದಿಪ್ರಪಞ್ಚಪ್ರವಿಲಯಶ್ಚ ಭವತಿ । ನ ಚ ಕೃತಮೇವ ಪುನಃ ಕ್ರಿಯತೇ । ನಿಯೋಜ್ಯೋಽಪಿ ಚ ಪ್ರಪಞ್ಚಾವಸ್ಥಾಯಾಂ ಯೋಽವಗಮ್ಯತೇ ಜೀವೋ ನಾಮ, ಸ ಪ್ರಪಞ್ಚಪಕ್ಷಸ್ಯೈವ ವಾ ಸ್ಯಾತ್ ಬ್ರಹ್ಮಪಕ್ಷಸ್ಯೈವ ವಾ । ಪ್ರಥಮೇ ವಿಕಲ್ಪೇ ನಿಷ್ಪ್ರಪಞ್ಚಬ್ರಹ್ಮತತ್ತ್ವಪ್ರತಿಪಾದನೇನ ಪೃಥಿವ್ಯಾದಿವತ್ ಜೀವಸ್ಯಾಪಿ ಪ್ರವಿಲಾಪಿತತ್ವಾತ್ ಕಸ್ಯ ಪ್ರಪಞ್ಚ(ಪ್ರ) ವಿಲಯೇ ನಿಯೋಗ ಉಚ್ಯೇತ ಕಸ್ಯ ವಾ ನಿಯೋಗನಿಷ್ಠತಯಾ ಮೋಕ್ಷೋಽವಾಪ್ತವ್ಯ ಉಚ್ಯೇತ ? ದ್ವಿತೀಯೇಽಪಿ ಬ್ರಹ್ಮೈವ ಅನಿಯೋಜ್ಯಸ್ವಭಾವಂ ಜೀವಸ್ಯ ಸ್ವರೂಪಮ್, ಜೀವತ್ವಂ ತು ಅವಿದ್ಯಾಕೃತಮೇವೇತಿ ಪ್ರತಿಪಾದಿತೇ ಬ್ರಹ್ಮಣಿ ನಿಯೋಜ್ಯಾಭಾವಾತ್ ನಿಯೋಗಾಭಾವ ಏವ । ದ್ರಷ್ಟವ್ಯಾದಿಶಬ್ದಾ ಅಪಿ ಪರವಿದ್ಯಾಧಿಕಾರಪಠಿತಾಃ ತತ್ತ್ವಾಭಿಮುಖೀಕರಣಪ್ರಧಾನಾಃ ನ ತತ್ತ್ವಾವಬೋಧವಿಧಿಪ್ರಧಾನಾ ಭವನ್ತಿ । ಲೋಕೇಽಪಿ 'ಇದಂ ಪಶ್ಯ', 'ಇದಮಾಕರ್ಣಯ' ಇತಿ ಚೈವಂಜಾತೀಯಕೇಷು ನಿರ್ದೇಶೇಷು ಪ್ರಣಿಧಾನಮಾತ್ರಂ ಕುರು ಇತ್ಯುಚ್ಯತೇ ನ ಸಾಕ್ಷಾತ್ ಜ್ಞಾನಮೇವ ಕುರು ಇತಿ । ಜ್ಞೇಯಾಭಿಮುಖಸ್ಯಾಪಿ ಜ್ಞಾನಂ ಕದಾಚಿತ್ ಜಾಯತೇ ಕದಾಚಿತ್ ನ ಜಾಯತೇ । ತಸ್ಮಾತ್ ತಂ ಪ್ರತಿ ಜ್ಞಾನವಿಷಯ ಏವ ದರ್ಶಯಿತವ್ಯೋ ಜ್ಞಾಪಯಿತುಕಾಮೇನ । ತಸ್ಮಿನ್ ದರ್ಶಿತೇ ಸ್ವಯಮೇವ ಯಥಾವಿಷಯಂ ಯಥಾಪ್ರಮಾಣಂ ಚ ಜ್ಞಾನಮ್ ಉತ್ಪದ್ಯತೇ। ನ ಚ ಪ್ರಮಾಣಾನ್ತರೇಣ ಅನ್ಯಥಾ

ಪ್ರಸಿದ್ಧೇ ಅರ್ಥೇ ಅನ್ಯಥಾಜ್ಞಾನಂ ನಿಯುಕ್ತಸ್ಯಾಪಿ ಉಪಪದ್ಯತೇ । ಯದಿ ಪುನಃ 'ನಿಯುಕ್ತೋಽಹಮ್' ಇತಿ ಅನ್ಯಥಾಜ್ಞಾನಂ ಕುರ್ಯಾತ್ ನ ತು ತತ್ ಜ್ಞಾನಮ್, ಕಿಂ ತರ್ಹಿ ಮಾನಸೀ ಸಾ ಕ್ರಿಯಾ । ಸ್ವಯಮೇವ ಚೇತ್ ಅನ್ಯಥಾ ಉತ್ಪದ್ಯೇತ ಭ್ರಾನ್ತಿರೇವ ಸ್ಯಾತ್ । ಜ್ಞಾನಂ ತು ಪ್ರಮಾಣಜನ್ಯಂ ಯಥಾಭೂತವಿಷಯಂ ಚ । ನ ತನ್ನಿಯೋಗಶತೇನಾಪಿ ಕಾರಯಿತುಂ ಶಕ್ಯತೇ, ನ ಚ ಪ್ರತಿಷೇಧಶತೇನಾಪಿ ವಾರಯಿತುಂ ಶಕ್ಯತೇ । ನ ಹಿ ತತ್ ಪುರುಷ ತನ್ತ್ರಮ್ । ವಸ್ತುತನ್ತ್ರಮೇವ ಹಿ ತತ್ । ಅತೋಽಪಿ ನಿಯೋಗಾಭಾವಃ । ಕಿಂ ಚಾನ್ಯತ್ ನಿಯೋಗನಿಷ್ಠತಯೈವ ಪರ್ಯವಸ್ಯತಿ ಆಮ್ನಾಯೇ ಯತ್ ಅಭ್ಯುಪಗತಮ್ ಅನಿಯೋಜ್ಯಬ್ರಹ್ಮಾತ್ಮತ್ವಂ ಜೀವಸ್ಯ ತದಪ್ರಮಾಣಕಮೇವ ಸ್ಯಾತ್ । ಅಥ ಶಾಸ್ತ್ರಮೇವ ಅನಿಯೋಜ್ಯಬ್ರಹ್ಮಾತ್ಮತ್ವಮಪಿ ಆಚಕ್ಷೀತ, ತದವಬೋಧೇ ಚ ಪುರುಷಂ ನಿಯುಞ್ಜೀತ, ತತೋ ಬ್ರಹ್ಮ ಶಾಸ್ತ್ರಸ್ಯ ಏಕಸ್ಯ ದ್ವ್ಯರ್ಥಪರತಾ ವಿರುದ್ಧಾರ್ಥಪರತಾ ಚ ಪ್ರಸಜ್ಯೇಯಾತಾಮ್ । ನಿಯೋಗ ಪರತಾಯಾಂ ಚ ಶ್ರುತಿಹಾನಿಃ ಅಶ್ರುತಕಲ್ಪನಾ ಕರ್ಮಫಲವತ್ ಮೋಕ್ಷ ಫಲಸ್ಯ ಅದೃಷ್ಟಫಲತ್ವಮ್ ಅನಿತ್ಯತ್ವಂ ಚ ಇತ್ಯೇವಮಾದಯೋ ದೋಷಾಃ ನ ಕೇನಚಿತ್ ಪರಿಹರ್ತುಂ ಶಕ್ಯಾಃ । ತಸ್ಮಾತ್ ಅವಗತಿನಿಷ್ಠಾನ್ಯೇವ ಬ್ರಹ್ಮ ವಾಕ್ಯಾನಿ ನ ನಿಯೋಗನಿಷ್ಠಾನಿ । ಅತಶ್ಚ ಏಕನಿಯೋಗಪ್ರತೀತೇಃ ಏಕ ವಾಕ್ಯತಾ ಇತ್ಯಯುಕ್ತಮ್ ॥

(ಭಾಷ್ಯಾರ್ಥ)

ಈ (ವಾಕ್ಯ)ಗಳಿಗೆ ಏಕವಾಕ್ಯತೆಯನ್ನು ಹೇಗೆ ಕಲ್ಪಿಸುತ್ತೀರಿ? –ಎಂಬು ದನ್ನು (ನೀವು) ಹೇಳಬೇಕು. ಪ್ರಯಾಜದರ್ಶಪೂರ್ಣಮಾಸವಾಕ್ಯಗಳಂತೆ ಒಂದೇ ನಿಯೋಗದ ಅರಿವಾಗುವದರಿಂದ (ಹಾಗೆಂದು ಕಲ್ಪಿಸುತ್ತೇವೆ) ಎನ್ನು ವದಾದರೆ(ಅದು) ಸರಿಯಲ್ಲ. ಏಕೆಂದರೆ **ಬ್ರಹ್ಮವಾಕ್ಯಗಳಲ್ಲಿ ನಿಯೋಗವೇ ಇಲ್ಲ. ಬ್ರಹ್ಮವಾಕ್ಯಗಳು ವಸ್ತುಮಾತ್ರದಲ್ಲಿ ಕೊನೆಗಂಡಿರುತ್ತವೆಯೇ ಹೊರತು ನಿಯೋಗವನ್ನು ತಿಳಿಸುವದಿಲ್ಲ ಎಂದು ವಿಸ್ತಾರವಾಗಿ "ತತ್ತು ಸಮನ್ವಯಾತ್" (೧–೧–೪) ಎಂಬಲ್ಲಿ ಸಾಧಿಸಲಾಗಿದೆಯಲ್ಲವೆ?**[1]

ಇಲ್ಲಿ **ನಿಯೋಗವು ಯಾವ ವಿಷಯದಲ್ಲಿ** ಎಂದು (ನಿಮ್ಮ) ಅಭಿ ಪ್ರಾಯವು ಎಂಬುದನ್ನು (ನೀವು) ಹೇಳಬೇಕು. ಏಕೆಂದರೆ ಪುರುಷನನ್ನು ನಿಯೋಜಿಸುವಾಗ '(ಇದನ್ನು) ಮಾಡು' ಎಂದು ತನ್ನ ವ್ಯಾಪಾರವಾಗಿರುವ ಯಾವದಾದರೊಂದರಲ್ಲಿ ನಿಯುಕ್ತನಾಗುತ್ತಾನೆ.

1. ಬ್ರಹ್ಮವನ್ನು ಅರಿತುಕೊ ಎಂದು ಪುರುಷನನ್ನು ಜ್ಞಾನದಲ್ಲಿ ವಾಕ್ಯವು ತೊಡ ಗಿಸುವದಿಲ್ಲ. ಬ್ರಹ್ಮವೇ ನೀನು, ಬ್ರಹ್ಮವು ನಿಷ್ಪ್ರಪಂಚವು, ಅದ್ವೈತವು– ಎಂದು ತಿಳಿಸು ವದರಲ್ಲಿಯೇ ಕೊನೆಗಂಡಿದೆ–ಎಂಬುದೇ ಸೂತ್ರದ ಅರ್ಥವೆಂದು ಭಾವ.

(ಪೂರ್ವಪಕ್ಷಿ) :— ದ್ವೈತಪ್ರಪಂಚಪ್ರವಿಲಯವೇ ನಿಯೋಗಕ್ಕೆ ವಿಷಯವಾಗಬಹುದಲ್ಲ![1] ಏಕೆಂದರೆ ದ್ವೈತಪ್ರಪಂಚವನ್ನು ಪ್ರವಿಲಯಮಾಡಿಕೊಳ್ಳದಿದ್ದರೆ ಬ್ರಹ್ಮತತ್ತ್ವದ ಅರಿವು ಆಗುವದಿಲ್ಲ[2]. ಆದ್ದರಿಂದ ಬ್ರಹ್ಮತತ್ತ್ವದ ಅರಿವಿಗೆ ಅಡ್ಡಿಯಾಗಿರುವ ದ್ವೈತಪ್ರಪಂಚವನ್ನು ಪ್ರವಿಲಯಮಾಡಿಕೊಳ್ಳಬೇಕು. ಹೇಗೆ ಸ್ವರ್ಗಕಾಮನಾದವನಿಗೆ ಯಾಗವನ್ನು ಅನುಷ್ಠಾನಮಾಡಬೇಕೆಂದು ಉಪದೇಶಿಸಿದೆಯೋ ಹಾಗೆ ಮೋಕ್ಷಕಾಮನಿಗೆ ಪ್ರಪಂಚಪ್ರಲಯವನ್ನು (ಮಾಡಬೇಕೆಂದು ವಿಧಿಸಿದೆ). ಮತ್ತು ಹೇಗೆ ಕತ್ತಲೆಯಲ್ಲಿ ಇರುವ ಗಡಿಗೆಯೇ ಮುಂತಾದದ್ದರ ತತ್ತ್ವವನ್ನು ಅರಿತುಕೊಳ್ಳಬೇಕೆನ್ನುವವನು ಆ (ಅರಿವಿಗೆ) ಅಡ್ಡಿಯಾಗಿರುವ ಕತ್ತಲೆಯನ್ನು ತೊಲಗಿಸಿಕೊಳ್ಳುವನೋ ಹಾಗೆ ಬ್ರಹ್ಮತತ್ತ್ವವನ್ನು ಅರಿತುಕೊಳ್ಳಬೇಕೆನ್ನುವವನು ಅದಕ್ಕೆ ಅಡ್ಡಿಯಾಗಿರುವ ಪ್ರಪಂಚವನ್ನು ಪ್ರವಿಲಯಮಾಡಿಕೊಳ್ಳಬೇಕು. ಏಕೆಂದರೆ ಪ್ರಪಂಚವು ಬ್ರಹ್ಮಸ್ವಭಾವವಾದದ್ದು, ಬ್ರಹ್ಮವು ಪ್ರಪಂಚಸ್ವಭಾವವಾದದ್ದಲ್ಲ; ಆದ್ದರಿಂದ ನಾಮರೂಪಪ್ರಪಂಚವನ್ನು ಪ್ರವಿಲಯಮಾಡಿಕೊಳ್ಳುವದರಿಂದ ಬ್ರಹ್ಮತತ್ತ್ವದ ಅರಿವು ಉಂಟಾಗುತ್ತದೆ.

(ಸಿದ್ಧಾಂತಿ) :— ಇಲ್ಲಿ ನಾವು ಕೇಳುವದೇನೆಂದರೆ ಈ ಪ್ರಪಂಚಪ್ರವಿಲಯವೆಂದರೆ ಯಾವದು? ಬೆಂಕಿಯ ಶಾಖವು ತಗಲಿ ತುಪ್ಪದಗಟ್ಟಿಯು ಕರಗುವಂತೆ ಪ್ರಪಂಚದ ಪ್ರವಿಲಯವನ್ನು ಮಾಡಿಕೊಳ್ಳಬೇಕೆಂದೊ, ಅಥವಾ ಒಬ್ಬ ಚಂದ್ರನಲ್ಲಿ ಕಣ್ಣುಪರೆಯಿಂದ ಕಾಣುವ ಅನೇಕ ಚಂದ್ರರ ಪ್ರಪಂಚದಂತೆ ಬ್ರಹ್ಮದಲ್ಲಿ ಅವಿದ್ಯಾಕೃತವಾಗಿರುವ ನಾಮರೂಪಪ್ರಪಂಚವನ್ನು ವಿದ್ಯೆಯಿಂದ ಪ್ರವಿಲಯಮಾಡಿಕೊಳ್ಳಬೇಕೆಂದೊ? ಇಲ್ಲಿ ಮೊದಲನೆಯದಾಗಿ ಈ ದೇಹಾದಿರೂಪವಾದ ಆಧ್ಯಾತ್ಮಿಕ ಮತ್ತು ಪೃಥಿವ್ಯಾದಿರೂಪವಾದ ಬಾಹ್ಯಪ್ರಪಂಚವು (ನಿಜವಾಗಿ) ಇದ್ದುಕೊಂಡಿದ್ದು (ಅದನ್ನು) ಪ್ರವಿಲಯಮಾಡಿಕೊಳ್ಳಬೇಕು ಎಂದು ಹೇಳುತ್ತೀರಾದರೆ ಅದನ್ನು (ಯಾವ) ಪುರುಷನೂ ಪ್ರವಿಲಯಮಾಡಲಾರನಾದ್ದರಿಂದ ಅದನ್ನು ಪ್ರವಿಲಯಮಾಡಿಕೊಳ್ಳಬೇಕೆಂದು ಉಪದೇಶಿಸುವದು ಅಶಕ್ಯವಾದ ವಿಷಯದಲ್ಲಿ ಎಂದಾಗುವದು. ಮೊಟ್ಟಮೊದಲು ಮುಕ್ತನಾಗಿರುವ ಒಬ್ಬ (ಪುರುಷನು) ಪೃಥಿವ್ಯಾದಿ(ರೂಪವಾದ ಪ್ರಪಂಚದ) ಪ್ರವಿಲಯವನ್ನು ಮಾಡಿಕೊಂಡಿರುತ್ತಾನಾದ್ದರಿಂದ ಈಗ ಜಗತ್ತು ಪೃಥಿವ್ಯಾದಿಗಳಿಂದ ರಹಿತವಾಗಿಯೇ ಆಗಬೇಕಾಗಿತ್ತು. **ಹೀಗಲ್ಲದೆ ಒಂದೇ ಆಗಿರುವ ಬ್ರಹ್ಮದಲ್ಲಿ ಅವಿದ್ಯೆ**

---

1. ದ್ವೈತಪ್ರಪಂಚವನ್ನು ಪ್ರವಿಲಯವನ್ನು ಮಾಡಿಕೊ ಎಂದು ಅದರಲ್ಲಿ ವಾಕ್ಯವು ತೊಡಗಿಸುತ್ತದೆ ಎಂದು ಅಭಿಪ್ರಾಯ.

2. ಪೂರ್ವಪಕ್ಷಿಯ ಅಭಿಪ್ರಾಯದಲ್ಲಿ ಪ್ರಪಂಚಪ್ರವಿಲಯವು ನಿಯೋಗದಿಂದ ಆಗತಕ್ಕದ್ದು; ಅದರ ಫಲವು ಮೋಕ್ಷಫಲಕವಾದ ಜ್ಞಾನ.

**ಯಿಂದ ಅಧ್ಯಸ್ತವಾದ ಈ ಪ್ರಪಂಚವನ್ನು ವಿದ್ಯೆಯಿಂದ ಪ್ರವಿಲಯ ಮಾಡಿಕೊಳ್ಳಬೇಕು ಎಂದು (ಪೂರ್ವಪಕ್ಷಿಯು) ಹೇಳುವದಾದರೆ[1] ಆಗ ಬ್ರಹ್ಮವನ್ನೇ ಅವಿದ್ಯಾಧ್ಯಸ್ತಪ್ರಪಂಚವನ್ನು ಅಲ್ಲಗಳೆದು "ಬ್ರಹ್ಮವು ತನಗೆರಡನೆಯದಿಲ್ಲದ ಒಂದೇ ; ಅದೇ ಸತ್ಯವು, ಅದೇ ಆತ್ಮನು; ಅದೇ ನೀನಾಗಿರುವೆ" (ಛಾಂ. ೬-೮-೭) ಎಂದು ತಿಳಿಸಿಕೊಡಬೇಕು. ಅದನ್ನು ತಿಳಿಸಿಕೊಟ್ಟರೆ ಜ್ಞಾನವು ಉಂಟಾಗುತ್ತದೆ. ಆದ್ದರಿಂದ ಅಜ್ಞಾನವು ತಾನೇ ಬಾಧಿತವಾಗುತ್ತದೆ ; ಮತ್ತು ಅದರಿಂದ ಅವಿದ್ಯಾಧ್ಯಸ್ತವಾದ ಈ ನಾಮರೂಪಪ್ರಪಂಚವೆಲ್ಲವೂ ಸ್ವಪ್ನಪ್ರಪಂಚದಂತೆ ತಾನೇ ಪ್ರವಿಲಯ ವಾಗುತ್ತದೆ.** ಬ್ರಹ್ಮವನ್ನು ತಿಳಿಸಿಕೊಡದೆ ಇದ್ದರೋ ಎಂದರೆ ಬ್ರಹ್ಮವಿಜ್ಞಾನ ವನ್ನು ಮಾಡಿಕೊ. ಪ್ರಪಂಚಪ್ರವಿಲಯವನ್ನು ಮಾಡಿಕೊ –ಎಂದು ನೂರು ಬಾರಿ ಹೇಳಿದರೂ ಬ್ರಹ್ಮವಿಜ್ಞಾನವಾಗ ಪ್ರಪಂಚಪ್ರವಿಲಯವಾಗಲಿ ಉಂಟಾಗ ಲಾರದು.

(ಆಕ್ಷೇಪ) :– ಬ್ರಹ್ಮವನ್ನು ತಿಳಿಸಿದಮೇಲೆ ಅದರ ವಿಜ್ಞಾನವಿಷಯದಲ್ಲಿ ಅಥವಾ ಪ್ರಪಂಚಪ್ರವಿಲಯವಿಷಯದಲ್ಲಿ ನಿಯೋಗವುಂಟಾಗಬಹುದಲ್ಲವೆ ?

(ಪರಿಹಾರ) :– ಹಾಗಲ್ಲ. ಏಕೆಂದರೆ ನಿಷ್ಪ್ರಪಂಚಬ್ರಹ್ಮಾತ್ಮತತ್ತ್ವವನ್ನು ತಿಳಿಸಿಕೊಡುವದರಿಂದಲೇ (ಈ) ಎರಡೂ ಸಿದ್ಧಿಯಾಗುವದು. ಹಗ್ಗದ ಸ್ವರೂಪ ವನ್ನು ತಿಳಿಸಿಕೊಡುವದರಿಂದಲೇ ಅದರ ಅರಿವೂ ಅವಿದ್ಯೆಯಿಂದ ಅಧ್ಯಸ್ತವಾಗಿದ್ದ ಸರ್ಪಾದಿಪ್ರಪಂಚದ ಪ್ರವಿಲಯವೂ ಆಗುತ್ತದೆಯಲ್ಲವೆ ? ಮಾಡಿದ್ದನ್ನೇ ಮತ್ತೆ ಮಾಡಬೇಕಾದದ್ದಿರುವದಿಲ್ಲ.

ಪ್ರಪಂಚಾವಸ್ಥೆಯಲ್ಲಿ **ನಿಯೋಜ್ಯನೆಂದು** ತಿಳಿದುಬರುವ ಜೀವನೆಂಬು ವನು ಇದಾನಲ್ಲ, ಅವನು ಪ್ರಪಂಚದ ಪಕ್ಷಕ್ಕೇ (ಸೇರಿದವ)ನಾಗಿರುವನೊ, ಬ್ರಹ್ಮ ಪಕ್ಷಕ್ಕೇ (ಸೇರಿರುವನೊ)? ಮೊದಲನೆಯ ವಿಕಲ್ಪ(ವನ್ನು ಅಂಗೀಕರಿಸಿದರೆ)ನಿಷ್ಪ್ರ ಪಂಚಬ್ರಹ್ಮತತ್ತ್ವವನ್ನು ತಿಳಿಸಿಕೊಡುವದರಿಂದ ಪೃಥಿವ್ಯಾದಿಗಳಂತೆ ಜೀವನನ್ನು ಪ್ರವಿಲಯಮಾಡಿದ್ದಾಗಿರುವದರಿಂದ ಯಾವನಿಗೆ ಪ್ರಪಂಚಪ್ರವಿಲಯದಲ್ಲಿ ನಿಯೋಗವನ್ನು ಹೇಳಬೇಕು ? ಯಾವನಿಗೆ ತಾನೆ, ನಿಯೋಗನಿಷ್ಠನಾಗಿ ಮೋಕ್ಷವನ್ನು ಪಡೆದುಕೊಳ್ಳತಕ್ಕದ್ದೆಂದು ಹೇಳಬೇಕು ?[2] **ಎರಡನೆಯ ಕಲ್ಪ ದಲ್ಲಿಯೂ ಬ್ರಹ್ಮವೇ ಅನಿಯೋಜ್ಯಸ್ವಭಾವವುಳ್ಳದ್ದು (ಅದೇ) ಜೀವನ ಸ್ವರೂಪವು, ಜೀವತ್ವವು ಮಾತ್ರ ಅವಿದ್ಯಾಕೃತವೇ ಆಗಿರುವದರಿಂದ**

1. ಇದೇ ಸಿದ್ಧಾಂತಿಗೆ ಸಮ್ಮತವಾದ ಪ್ರಪಂಚಪ್ರವಿಲಯವು ೧-೩-೧ (ಭಾ. ಭಾ. ೨೨೩)ವನ್ನು ನೋಡಿರಿ.

2. ಏಕೆಂದರೆ ಜ್ಞಾನವಾದ ಬಳಿಕ ದ್ವೈತವಿರುವದೇ ಇಲ್ಲ. ಮಾಂ.ಕಾ.ಭಾ. ೨-೧೮.

ಬ್ರಹ್ಮವನ್ನು ಪ್ರತಿಪಾದಿಸಿದ ಬಳಿಕ ನಿಯೋಜ್ಯವಿಲ್ಲದ್ದರಿಂದ ನಿಯೋಗ ವಿರುವದೇ ಇಲ್ಲ.[1]

'ದ್ರಷ್ಟವ್ಯಃ' ಎಂದುಮುಂತಾಗಿರುವ ಶಬ್ದಗಳೂ ಪರವಿದ್ಯೆಯ ಪ್ರಕರಣದಲ್ಲಿ ಪಠಿತವಾಗಿರುವದರಿಂದ[2] ತತ್ತ್ವದಕಡೆಗೆ ತಿರುಗಿಸು ವದರಲ್ಲಿ ತಾತ್ಪರ್ಯವುಳ್ಳವೇ ಹೊರತು ತತ್ತ್ವಜ್ಞಾನವನ್ನು ವಿಧಿಸುವ ದರಲ್ಲಿ ತಾತ್ಪರ್ಯವುಳ್ಳವೆಂದಾಗಲಾರದು.[3] ಲೋಕದಲ್ಲಿಯೂ 'ಇದನ್ನು ನೋಡು, ಇದನ್ನು ಕೇಳು' ಎಂಬೀ ಜಾತಿಯವಾದ ನಿರ್ದೇಶ ಗಳಲ್ಲಿ ಬರಿಯ ಅವಧಾನವನ್ನು ಮಾಡು ಎಂದು ಹೇಳುತ್ತಾರೆಯೇ ಹೊರತು ನೇರಾಗಿ ಜ್ಞಾನವನ್ನೇ ಮಾಡು ಎಂದೇನೂ (ಹೇಳುವ) ದಿಲ್ಲ.[4] ಜ್ಞೇಯದ ಕಡೆಗೆ ತಿರುಗಿದವನಿಗೂ ಜ್ಞಾನವು ಒಮ್ಮೊಮ್ಮೆ ಉಂಟಾಗುತ್ತದೆ, ಒಮ್ಮೊಮ್ಮೆ ಉಂಟಾಗುವದಿಲ್ಲ. ಆದ್ದರಿಂದ ಜ್ಞಾನ ವಿಷಯವನ್ನೇ ತಿಳಿಸಿಕೊಡುವಾತನು ತೋರಿಸಬೇಕು.[5] ಅದನ್ನು ತೋರಿಸಿಕೊಟ್ಟರೆ ವಿಷಯಕ್ಕನುಗುಣವಾಗಿಯೂ ಪ್ರಮಾಣಕ್ಕೆ ಅನುಗುಣವಾಗಿ ಯೂ ಜ್ಞಾನವು ತಾನೇ ಹುಟ್ಟುತ್ತದೆ. ಪ್ರಮಾಣಾಂತರದಿಂದ ಬೇರೆಯಾಗಿ ಗೊತ್ತಾಗಿರುವ ವಸ್ತುವಿನಲ್ಲಿ ನಿಯುಕ್ತನಾದವನಿಗೂ ಬೇರೊಂದು ವಿಧವಾಗಿ ಜ್ಞಾನವು ಹುಟ್ಟುವದಿಲ್ಲ.[6] ಹಾಗಿಲ್ಲದೆ ನಾನು **ನಿಯುಕ್ತನಾಗಿದೇನೆಂದು ಬೇರೆಯಾಗಿಯೇ ಜ್ಞಾನವನ್ನು ಮಾಡಿಕೊಳ್ಳುವದಾದರೆ ಅದು (ವಸ್ತು) ಜ್ಞಾನವಲ್ಲ, ಮತ್ತೇನೆಂದರೆ ಅದು ಮಾನಸಕ್ರಿಯೆ; ತಾನೇ ಬೇರೊಂದು**

---

1. ಇದೇ ಸಿದ್ಧಾಂತಿಗೆ ಸಮ್ಮತವಾದ ಪಕ್ಷವು. ೧-೩-೧೯ರ ಭಾಷ್ಯ (ಭಾ.ಭಾ. ೨೬೪ ವನ್ನು ನೋಡಿರಿ.

2. ಮೈತ್ರೇಯಿಗೆ ಜ್ಞಾನೋಪದೇಶಮಾಡಿದ ಸಂದರ್ಭದಲ್ಲಿ ಇದು ಬಂದಿದೆ; ಯಾವದೊಂದು ಉಪಾಸನೆಯನ್ನೂ ವಿಧಿಸುವದಕ್ಕೆ ಬಂದಿಲ್ಲ.

3. ಈ ವಿಷಯವನ್ನು ಹಿಂದೆ ೧-೧-೪ರ ಭಾಷ್ಯದಲ್ಲಿಯೇ (ಭಾ.ಭಾ. ೫೨) ತಿಳಿಸಿದೆ.

4. 'ಇದನ್ನು ಕೇಳು' ಎಂಬ ವಿಧಿಯಿಂದಲೇ ಮತ್ತೊಬ್ಬನಿಗೆ ಕೇಳಿಸುವದೆಂದೇನೂ ನಾವು ಭಾವಿಸುವದಿಲ್ಲ ಎಂದರ್ಥ. ಶ್ರವಣದಲ್ಲಿ ವಿಧಿಯನ್ನು ಒಪ್ಪಲೇಬೇಕು ಎಂಬ ಆಗ್ರಹವನ್ನು ತೊಟ್ಟಿರುವವರು ಈ ಭಾಷ್ಯವನ್ನು ಮನಸ್ಸಿಗೆ ತಂದುಕೊಳ್ಳಬೇಕು. ಏಕೆಂದರೆ ಶ್ರವಣಕ್ಕಾಗಿ ಬೇಕಾದ ಪ್ರಯತ್ನವನ್ನು ಮಾಡಬೇಕೆಂದು ಹೇಳಿದೆಯೇ ಹೊರತು ವಿಧಿಯೇ ಇಲ್ಲಿ ಪ್ರಧಾನವಲ್ಲ.

5. ವಿಧಿಗಾಗಿ ಬೇರೆಯ ಪ್ರಯತ್ನವನ್ನು ಹುಡುಕಬಾರದು.

6. ಏಕೆಂದರೆ ಹಾಗೆ ಹುಟ್ಟಿದರೆ ಮೊದಲಿನ ಪ್ರಮಾಣವು ಪ್ರಮಾಣವಲ್ಲದೆಹೋಗು ತ್ತದೆ. ಆದ್ದರಿಂದ ವಿಧಿಯು ವಸ್ತುಜ್ಞಾನವನ್ನುಂಟುಮಾಡುವ ಪ್ರಮಾಣವಲ್ಲವೆಂದು ತಿಳಿಯಬೇಕು.

**ಬಗೆಯಾಗಿ ಉಂಟಾದರೆ ಭ್ರಾಂತಿಯೇ ಆಗಿರುವದು. ಜ್ಞಾನವಾದರೋ ಪ್ರಮಾಣಜನ್ಯವಾಗಿರುತ್ತದೆ, ವಿಷಯವು ಇದ್ದದ್ದು ಇದ್ದಂತೆ (ತಿಳಿಸು) ವದಾಗಿರುತ್ತದೆ ; ಅದು ನೂರು ನಿಯೋಗಗಳಿಂದಲೂ ಮಾಡಿಸಿ ಕೊಡುವವಕ್ಕೆ ಆಗುವದಲ್ಲ. ನೂರು ಪ್ರತಿಷೇಧಗಳಿಂದಲೂ ತಪ್ಪಿಸು ವದಕ್ಕೂ ಆಗುವದಲ್ಲ. ಏಕೆಂದರೆ ಅದು ಪುರುಷತಂತ್ರವಲ್ಲ ; ಅದು ವಸ್ತುತಂತ್ರವೇ ಆಗಿರುವದಲ್ಲವೆ[1] ?** ಆದ್ದರಿಂದಲೂ ಇಲ್ಲಿ ನಿಯೋಗವಿಲ್ಲ.

ಮತ್ತೊಂದು ಸಂಗತಿ ಏನೆಂದರೆ, ಶಾಸ್ತ್ರವು ನಿಯೋಗನಿಷ್ಠವಾಗಿಯೇ ಕೊನೆಗಾಣುತ್ತಿರುವದಾದರೆ ಜೀವನು ಅನಿಯೋಜ್ಯಬ್ರಹ್ಮಸ್ವರೂಪನೆಂದು ಅಂಗೀಕರಿಸಿದೀರಲ್ಲ, ಅದೂ ಅಪ್ರಮಾಣವೇ ಆಗುವದು. ಹಾಗಿಲ್ಲದೆ ಶಾಸ್ತ್ರವೇ **ಅನಿಯೋಜ್ಯಬ್ರಹ್ಮಾತ್ಮತ್ವವನ್ನು ಹೇಳುತ್ತಾ ಅದರ ಜ್ಞಾನದಲ್ಲಿಯೂ ಪುರುಷನನ್ನು ನಿಯೋಜಿಸುವದಾದರೆ ಆಗ ಬ್ರಹ್ಮಶಾಸ್ತ್ರವೊಂದೇ ಎರಡು ಅರ್ಥಗಳಲ್ಲಿ ತಾತ್ಪರ್ಯವುಳ್ಳದ್ದೆಂದೂ ವಿರುದ್ಧಾರ್ಥಗಳಲ್ಲಿ ತಾತ್ಪರ್ಯವುಳ್ಳದ್ದೆಂದೂ ಪ್ರಸಕ್ತವಾಗುವದು.** ನಿಯೋಗದಲ್ಲಿಯೇ ತಾತ್ಪರ್ಯವೆಂದರೆ ಶ್ರುತಿಯಲ್ಲಿರುವದನ್ನು ಬಿಡುವದು, ಶ್ರುತಿಯಲ್ಲಿಲ್ಲದ್ದನ್ನು ಕಲ್ಪಿಸುವದು, ಕರ್ಮಫಲದಂತೆ ಮೋಕ್ಷಫಲವು ಅದೃಷ್ಟಫಲವೆನ್ನುವದು, ಅನಿತ್ಯ ವಾಗುವದು –ಎಂಬಿವೇ ಮುಂತಾದ ದೋಷಗಳನ್ನು ಯಾರಿಂದಲೂ ಪರಿಹರಿಸಿ ಕೊಳ್ಳಲು ಆಗದೆಹೋಗುವದು. **ಆದ್ದರಿಂದ ಬ್ರಹ್ಮವಾಕ್ಯಗಳಿಗೆ ಅವಗತಿ ಯಲ್ಲಿಯೇ ತಾತ್ಪರ್ಯವೇ ಹೊರತು ನಿಯೋಗದಲ್ಲಿ ತಾತ್ಪರ್ಯವಿಲ್ಲ.** ಆದ್ದರಿಂದಲೂ ಒಂದೇ ನಿಯೋಗದ ಪ್ರತೀತಿಯಾಗುವದರಿಂದ (ಇವೆರಡಕ್ಕೂ) ಏಕವಾಕ್ಯತೆಯಿದೆ, ಎನ್ನುವದು ಯುಕ್ತವಲ್ಲ.

## ನಿಯೋಗವನ್ನೊಪ್ಪಿದರೂ ಸವಿಶೇಷನಿರ್ವಿಶೇಷ ವಾಕ್ಯಗಳಲ್ಲಿ ಏಕನಿಯೋಗತ್ವವಿಲ್ಲ

**(ಭಾಷ್ಯ)**

೨೯೨. ಅಭ್ಯುಪಗಮ್ಯಮಾನೇಽಪಿ ಚ ಬ್ರಹ್ಮವಾಕ್ಯೇಷು ನಿಯೋಗ ಸದ್ಭಾವೇ ತದೇಕತ್ವಂ ನಿಷ್ಪ್ರಪಞ್ಚೋಪದೇಶೇಷು ಸಪ್ರಪಞ್ಚೋಪದೇಶೇಷು ಚ ಅಸಿದ್ಧಮ್ । ನ ಹಿ ಶಬ್ದಾನ್ತರಾದಿಭಿಃ ಪ್ರಮಾಣೈಃ ನಿಯೋಗಭೇದೇ ಅವ ಗಮ್ಯಮಾನೇ ಸರ್ವತ್ರ ಏಕೋ ನಿಯೋಗಃ ಇತಿ ಶಕ್ಯಮ್ ಆಶ್ರಯಿತುಮ್ ।

1. ಸಮ್ಯಗ್ಜ್ಞಾನವು ವಸ್ತುತಂತ್ರ, ಪ್ರಮಾಣತಂತ್ರ ; ಧ್ಯಾನವು ಶಾಸ್ತ್ರತಂತ್ರ, ಪುರುಷತಂತ್ರ ; . ಭ್ರಾಂತಿಯು ಕರಣದೋಷಾದಿತಂತ್ರ–ಎಂದು ವಿಭಾಗವನ್ನು ಹೇಳಿದಂತೆ ಆಯಿತು. ವೇದಜನಿತವಸ್ತುತಂತ್ರಜ್ಞಾನವೇ ಮೋಕ್ಷಹೇತುವೆಂಬುದು ಸಿದ್ಧಾಂತ.

ಪ್ರಯಾಜದರ್ಶಪೂರ್ಣಮಾಸವಾಕ್ಯೇಷು ತು ಅಧಿಕಾರಾಂಶೇನ ಅಭೇದಾತ್ ಯುಕ್ತಮ್ ಏಕತ್ವಮ್ । ನ ತು ಇಹ ಸಗುಣನಿರ್ಗುಣಚೋದನಾಸು ಕಶ್ಚಿತ್ ಏಕತ್ವಾಧಿಕಾರಾಂಶೋಽಸ್ತಿ । ನ ಹಿ ಭಾರೂಪತ್ವಾದಯೋ ಗುಣಾಃ ಪ್ರಪಞ್ಚಪ್ರವಿಲಯೋಪಕಾರಿಣಃ । ನಾಪಿ ಪ್ರಪಞ್ಚಪ್ರವಿಲಯಃ ಭಾರೂಪತ್ವಾದಿಗುಣೋಪಕಾರಿ । ಪರಸ್ಪರವಿರೋಧಿತ್ವಾತ್ । ನ ಹಿ ಕೃತ್ಸ್ನಪ್ರಪಞ್ಚಪ್ರವಿಲಾಪನಂ ಪ್ರಪಞ್ಚೈಕದೇಶಾಪೇಕ್ಷಣಂ ಚ ಏಕಸ್ಮಿನ್ ಧರ್ಮಿಣಿ ಯುಕ್ತಂ ಸಮಾವೇಶಯಿತುಮ್ । ತಸ್ಮಾತ್ ಅಸ್ಮದುಕ್ತ ಏವ ವಿಭಾಗಃ ಆಕಾರವದನಾಕಾರೋಪದೇಶಾನಾಂ ಯುಕ್ತತರಃ ಇತಿ ॥

(ಭಾಷ್ಯಾರ್ಥ)

ಬ್ರಹ್ಮವಾಕ್ಯಗಳಲ್ಲಿ ನಿಯೋಗವಿದೆ ಎಂದು ಒಪ್ಪಿಕೊಂಡರೂ ನಿಷ್ಪ್ರಪಂಚ (ಬ್ರಹ್ಮ)ವನ್ನು ಹೇಳುವ (ವಾಕ್ಯ)ಗಳಲ್ಲಿಯೂ ಸಪ್ರಪಂಚ(ಬ್ರಹ್ಮವನ್ನು) ಹೇಳುವ (ವಾಕ್ಯ)ಗಳಲ್ಲಿಯೂ ಆ (ನಿಯೋಗವು) ಒಂದೇ ಎಂದು ಸಿದ್ಧವಾಗುವದಿಲ್ಲ. ಏಕೆಂದರೆ **ಶಬ್ದಾಂತರವೇ ಮುಂತಾದ ಪ್ರಮಾಣಗಳಿಂದ**[1] ನಿಯೋಗವು ಬೇರೆ ಎಂದು ನಿಶ್ಚಯವಾಗುತ್ತಿರುವಲ್ಲಿ ಎಲ್ಲೆಲ್ಲಿಯೂ ಒಂದೇ ನಿಯೋಗ(ವಿದೆ) ಎಂದು ಆಶ್ರಯಿಸುವದು ಆಗಲಾರದು. ಪ್ರಯಾಜ, ದರ್ಶಪೂರ್ಣಮಾಸ– ಇವುಗಳಲ್ಲಾದರೆ ಅಧಿಕಾರವೆಂಬ ಅಂಶದಲ್ಲಿ ಭೇದವಿಲ್ಲದ್ದರಿಂದ (ಅವು) ಒಂದೇ ಎಂಬುದು ಯುಕ್ತವು[2]; ಆದರೆ ಇಲ್ಲಿ ಸಗುಣನಿರ್ಗುಣಚೋದನೆಗಳಲ್ಲಿ ಒಂದೇ ಆಗಿರುವ ಅಧಿಕಾರಾಂಶವು ಯಾವದೂ ಇರುವದಿಲ್ಲ. ಹೇಗೆಂದರೆ ಭಾರೂಪತ್ವಾದಿಗುಣಗಳು ಪ್ರಪಂಚಪ್ರವಿಲಯಕ್ಕೆ ಉಪಯೋಗವಾಗುವದಿಲ್ಲ; ಪ್ರಪಂಚಪ್ರವಿಲಯವು ಭಾರೂಪತ್ವಾದಿಗುಣಗಳಿಗೆ ಉಪಕಾರಿಯೂ ಅಲ್ಲ. ಏಕೆಂದರೆ (ಅದಕ್ಕೆ) ಒಂದಕ್ಕೊಂದಕ್ಕೆ ವಿರೋಧವಿದೆ. ಇಡಿಯ ಪ್ರಪಂಚವನ್ನು ಪ್ರವಿಲಯಮಾಡಿಕೊಳ್ಳುವದು, ಪ್ರಪಂಚದಲ್ಲಿ ಒಂದು ಭಾಗವನ್ನು ಬಯಸುವದು (ಈ ಎರಡನ್ನೂ) ಒಂದೇ ಧರ್ಮಿಯಲ್ಲಿ ಸೇರಿಸಿಕೊಳ್ಳುವದು ಯುಕ್ತವಾಗಲಾರದಷ್ಟೆ. ಆದ್ದರಿಂದ ನಾವು ಹೇಳಿರುವ ವಿಭಾಗವೇ ಆಕಾರಬ್ರಹ್ಮವನ್ನು ಹೇಳುವ ವಾಕ್ಯಗಳಿಗೂ ಮತ್ತು ಅನಾಕಾರ(ಬ್ರಹ್ಮವನ್ನು) ಹೇಳುವ (ವಾಕ್ಯಗಳಿಗೂ) ಹೆಚ್ಚು ಯುಕ್ತವಾಗಿರುತ್ತದೆ.

1. ವೇದ, ಉಪಾಸೀತ– ಎಂಬ ಶಬ್ದಭೇದದಿಂದ ಜ್ಞಾನ, ಉಪಾಸನ– ಇವುಗಳ ನಿಯೋಗವು ಬೇರೆಯಾಗುತ್ತದೆ. ರೂಪಭೇದ, ಪ್ರಕರಣಭೇದ, ಫಲಭೇದ– ಇವುಗಳಿಂದಲೂ ನಿಯೋಗವು ಬೇರೆ ಎಂದಾಗುತ್ತದೆ. ಎಂದು ಅಭಿಪ್ರಾಯ. ಇದು ಪ್ರೌಢಿವಾದದಿಂದ ವಿಧಿಯನ್ನು ಒಪ್ಪಿದ್ದು, ನಿಜವಾಗಿ ಬ್ರಹ್ಮವಾಕ್ಯದಲ್ಲಿ ನಿಯೋಗವಿಲ್ಲವೆಂಬುದೇ ಪರಮಸಿದ್ಧಾಂತವು.

2. ಪ್ರಯಾಜ, ದರ್ಶಪೂರ್ಣಮಾಸ– ಇವೆರಡಕ್ಕೂ ಒಬ್ಬನೇ ಅಧಿಕಾರಿಯಾದ್ದರಿಂದ ಅಲ್ಲಿ ಒಂದೇ ನಿಯೋಗವೆಂದು ಹೇಳಬಹುದು ಎಂದರ್ಥ.

## ೬. ಪ್ರಕೃತೈತಾವತ್ತ್ವಾಧಿಕರಣ (ಸೂ. ೨೨-೩೦)

(ಬೃ. ೨-೩-೬ರಲ್ಲಿ ಮಾಡಿರುವ ನಿಷೇಧವು ಬ್ರಹ್ಮದಲ್ಲಿ ಕೊನೆಗಾಣುವದು)

**ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ॥೨೨॥**

೨೨. ಪ್ರಕೃತವಾದ ಇಷ್ಟೆಂಬುದನ್ನೇ ಪ್ರತಿಷೇಧಿಸುತ್ತದೆ; ಆದ್ದರಿಂದ ಮತ್ತೆ ಹೇಳಿಯೂ ಇರುತ್ತದೆ.

### ನೇತಿ ನೇತಿ ಎಂಬ ವಾಕ್ಯದಲ್ಲಿ ವಿಷಯಕ್ಕೆ ಸಂಶಯ

(ಭಾಷ್ಯ)

೨೯೩. "ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ" (ಬೃ. ೨-೩-೧) ಇತ್ಯುಪಕ್ರಮ್ಯ ಪಞ್ಚಮಹಾಭೂತಾನಿ ದ್ವೈರಾಶ್ಯೇನ ಪ್ರವಿಭಜ್ಯ ಅಮೂರ್ತರಸಸ್ಯ ಚ ಪುರುಷಶಬ್ದೋದಿತಸ್ಯ ಮಾಹಾರಜನಾದೀನಿ ರೂಪಾಣಿ ದರ್ಶಯಿತ್ವಾ ಪುನಃ ಪಠ್ಯತೇ "ಅಥಾತ ಆದೇಶೋ ನೇತಿ ನೇತಿ ನ ಹ್ಯೇತಸ್ಮಾದಿತಿ ನೇತ್ಯನ್ಯತ್ ಪರಮಸ್ತಿ" (ಬೃ. ೨-೩-೬) ಇತಿ। ತತ್ರ ಕೋಽಸ್ಯ ಪ್ರತಿಷೇಧಸ್ಯ ವಿಷಯ ಇತಿ ಜಿಜ್ಞಾಸಾಮಹೇ। ನ ಹಿ ಅತ್ರ ಇದಂ ತದ್ ಇತಿ ವಿಶೇಷಿತಂ ಕಿಂಚಿತ್ ಪ್ರತಿಷೇಧ್ಯಮ್ ಉಪಲಭ್ಯತೇ। ಇತಿಶಬ್ದೇನ ತು ಅತ್ರ ಪ್ರತಿಷೇಧ್ಯಂ ಕಿಮಪಿ ಸಮರ್ಪ್ಯತೇ 'ನೇತಿ ನೇತಿ' ಇತಿ[1], ಇತಿ ಪರತ್ವಾನ್ನಞ್‌ಪ್ರಯೋಗಸ್ಯ। ಇತಿಶಬ್ದಶ್ಚ ಅಯಂ ಸಂನಿಹಿತಾಲಮ್ಬನ ಏವಂಶಬ್ದಸಮಾನವೃತ್ತಿಃ ಪ್ರಯುಜ್ಯಮಾನೋ ದೃಶ್ಯತೇ 'ಇತಿ ಹ ಸ್ಮೋಪಾಧ್ಯಾಯಃ ಕಥಯತಿ' ಇತ್ಯೇವಮಾದಿಷು। ಸಂನಿಹಿತಂ ಚ ಅತ್ರ ಪ್ರಕರಣಸಾಮರ್ಥ್ಯಾತ್ ರೂಪದ್ವಯಂ ಸಪ್ರಪಞ್ಚಂ ಬ್ರಹ್ಮಣಃ, ತಚ್ಚ ಬ್ರಹ್ಮ ಯಸ್ಯೈತೇ ದ್ವೇ ರೂಪೇ। ತತ್ರ ನಃ ಸಂಶಯ ಉಪಜಾಯತೇ ಕಿಮಯಂ ಪ್ರತಿಷೇಧಃ ರೂಪೇ ರೂಪವಚ್ಚ ಉಭಯಮಪಿ ಪ್ರತಿಷೇಧತಿ ಆಹೋಸ್ವಿತ್ ಏಕತರಮ್। ಯದಾಪಿ ಏಕತರಮ್, ತದಾಪಿ ಕಿಂ ಬ್ರಹ್ಮ ಪ್ರತಿಷೇಧಃ ರೂಪೇ ಪರಿಶಿನಷ್ಟಿ, ಆಹೋಸ್ವಿತ್ ರೂಪೇ ಪ್ರತಿಷೇಧತಿ ಬ್ರಹ್ಮ ಪರಿಶಿನಷ್ಟಿ ಇತಿ॥

(ಭಾಷ್ಯಾರ್ಥ)

"ಬ್ರಹ್ಮಕ್ಕೆ ಎರಡು ರೂಪಗಳು, ಮೂರ್ತ ಮತ್ತು ಅಮೂರ್ತ" (ಬೃ. ೨-೩-೨೧)ಎಂದು ಉಪಕ್ರಮಿಸಿ ಪಂಚಮಹಾಭೂತಗಳನ್ನು ಎರಡು ರಾಶಿಗಳಾಗಿ

---

1. ಇಲ್ಲೊಂದು 'ಇತಿ' ಬೇಕೆಂದು ಸೇರಿಸಿಕೊಂಡಿದೆ.

ವಿಂಗಡಿಸಿ ಪುರುಷಶಬ್ದೋಕ್ತವಾದ ಅಮೂರ್ತರಸಕ್ಕೆ ಮಾಹಾರಜನವೇ[1] ಮುಂತಾದ ರೂಪಗಳನ್ನು ತಿಳಿಸಿ "ಅಥಾತ ಆದೇಶೋ ನೇತಿ ನೇತಿ ನ ಹ್ಯೇತಸ್ಮಾದಿತಿ ನೇತ್ಯನ್ಯತ್ ಪರಮಸ್ತಿ"[2] (ಬೃ. ೨-೩-೬) ಎಂದು ಮತ್ತೆ ಪಠಿಸಿರುತ್ತದೆ. ಇಲ್ಲಿ ಈ ಪ್ರತಿಷೇಧಕ್ಕೆ ವಿಷಯವೇನು ?- ಎಂದು (ನಾವು) ವಿಚಾರಿಸಬೇಕಾಗಿದೆ. ಏಕೆಂದರೆ ಇಲ್ಲಿ ಇದೇ ಅದು ಎಂದು ವಿಶೇಷವಾಗಿ ಯಾವದೊಂದು ಪ್ರತಿಷೇಧ್ಯವನ್ನೂ ಹೇಳಿರುವದು ಕಂಡುಬರುವದಿಲ್ಲ. ಆದರೆ ಇಲ್ಲಿ ಇತಿಶಬ್ದದಿಂದಲಂತೂ ಯಾವದೋ ಒಂದು ಪ್ರತಿಷೇಧ್ಯವನ್ನು ತಿಳಿಸಿದೆ; ಏಕೆಂದರೆ 'ನೇತಿ ನೇತಿ" ಎಂದು ನಞ್ಪ್ರಯೋಗವು ಇತಿಪರಕವಾಗಿರುತ್ತದೆ. ಈ ಇತಿಶಬ್ದವನ್ನು ಹತ್ತಿರವಿರುವ ವಿಷಯ(ವನ್ನು ಪರಾಮರ್ಶಿಸಿ) ಏವಂಶಬ್ದ (ಹೀಗೆ ಎಂಬ ಶಬ್ದ)ಕ್ಕೆ ಸಮಾನವಾದ ವೃತ್ತಿಯುಳ್ಳದ್ದಾಗಿ ಪ್ರಯೋಗಿಸುತ್ತಾರೆಂಬುದು "ಇತಿ ಹ ಸ್ಮೋಪಾಧ್ಯಾಯಃ ಕಥಯತಿ" (ಹೀಗೆಂದು ಉಪಾಧ್ಯಾಯರು ಹೇಳಿದರಂತೆ) ಎಂಬಿದೇ ಮುಂತಾದ (ವಾಕ್ಯ)ಗಳಲ್ಲಿ ಕಂಡುಬಂದಿರುತ್ತದೆ. ಇಲ್ಲಿ ಹತ್ತಿರವಾಗಿರುವದೆಂದರೆ ಪ್ರಕರಣಸಾಮರ್ಥ್ಯದಿಂದ ಸವಿಸ್ತಾರವಾಗಿ (ಹೇಳಿ)ರುವ ಬ್ರಹ್ಮದ ರೂಪದ್ವಯ(ವೊಂದು), ಮತ್ತು ಈ ಎರಡೂ ರೂಪಗಳಾಗುಳ್ಳ ಆ ಬ್ರಹ್ಮ(ವೊಂದು). ಇಲ್ಲಿ ನಮಗೆ (ಹೀಗೆ) **ಸಂಶಯವು**ಂಟಾಗುತ್ತದೆ: ಈ ಪ್ರತಿಷೇಧವು ರೂಪಗಳು ರೂಪಿಯಾದ (ಬ್ರಹ್ಮ-ಈ) ಎರಡನ್ನೂ ಪ್ರತಿಷೇಧಿಸುತ್ತದೆಯೆ, ಅಥವಾ ಇವುಗಳಲ್ಲಿ ಒಂದನ್ನು (ಪ್ರತಿಷೇಧಿಸುತ್ತದೆಯೆ)? ಇವುಗಳಲ್ಲಿ ಒಂದನ್ನೇ ಎಂದಾಗಲೂ ಬ್ರಹ್ಮವನ್ನು ಅಲ್ಲಗಳೆದು ರೂಪಗಳನ್ನು ಉಳಿಸಿಕೊಂಡಿದೆಯೊ, ಅಥವಾ ರೂಪಗಳನ್ನು ಅಲ್ಲಗಳೆದು ಬ್ರಹ್ಮವನ್ನೇ ಉಳಿಸಿಕೊಂಡಿದೆಯೊ ?

## ಪೂರ್ವಪಕ್ಷ :
## ರೂಪರೂಪಿಗಳೆರಡನ್ನೂ ಶ್ರುತಿ ಅಲ್ಲಗಳೆಯುತ್ತದೆ

(ಭಾಷ್ಯ)

೨೯೪. ತತ್ರ ಪ್ರಕೃತತ್ವಾವಿಶೇಷಾತ್ ಉಭಯಮಪಿ ಪ್ರತಿಷೇಧತಿ ಇತ್ಯಾಶಙ್ಕಾಮಹೇ। ದ್ವೌ ಚ ಏತೌ ಪ್ರತಿಷೇಧೌ | ದ್ವಿರ್ನೇತಿ ಶಬ್ದಪ್ರಯೋಗಾತ್ । ತಯೋಃ ಏಕೇನ ಸಪ್ರಪಞ್ಚಂ ಬ್ರಹ್ಮಣೋ ರೂಪಂ ಪ್ರತಿಷಿಧ್ಯತೇ, ಅಪರೇಣ ರೂಪವದ್ ಬ್ರಹ್ಮ ಇತಿ ಭವತಿ ಮತಿಃ। ಅಥವಾ ಬ್ರಹ್ಮೈವ ರೂಪ

1. ಅರಿಶಿನಬಣ್ಣದ ವಸ್ತ್ರ.
2. ಈ ವಾಕ್ಯಕ್ಕೆ ಅನ್ವಯಭೇದದಿಂದ ಎರಡು ಅರ್ಥಗಳಾಗುತ್ತವೆ; ಭಾ. ಭಾ. ೨೯೭ನ್ನೂ ಇದರ ಅನುವಾದವನ್ನೂ ನೋಡಿ.

ವತ್ ಪ್ರತಿಷಿಧ್ಯತೇ । ತದ್ ಹಿ ವಾಙ್ಮನಸಾತೀತತ್ವಾತ್ ಅಸಂಭಾವ್ಯಮಾನ ಸದ್ಭಾವಂ ಪ್ರತಿಷೇಧಾರ್ಹಮ್ । ನ ತು ರೂಪಪ್ರಪಞ್ಚಃ ಪ್ರತ್ಯಕ್ಷಾದಿಗೋಚರ ತ್ವಾತ್ ಪ್ರತಿಷೇಧಾರ್ಹಃ । ಅಭ್ಯಾಸಸ್ತು ಆದರಾರ್ಥಃ ಇತಿ ॥

(ಭಾಷ್ಯಾರ್ಥ)

ಇಲ್ಲಿ ಪ್ರಕೃತವಾಗಿರುವದೆಂಬುದರಲ್ಲಿ (ಯಾವ) ವಿಶೇಷವೂ ಇಲ್ಲದ್ದರಿಂದ ಎರಡನ್ನೂ ಅಲ್ಲಗಳೆದಿದೆ ಎಂದು (ನಾವು) ಶಂಕಿಸಬಹುದು. ಮತ್ತು ಇವು ಎರಡು ಪ್ರತಿಷೇಧಗಳು ; ಏಕೆಂದರೆ ಎರಡು ಸಲ ನೇತಿ ಎಂಬ ಶಬ್ದದ ಪ್ರಯೋಗವು (ಬಂದಿರುತ್ತದೆ). ಅವುಗಳಲ್ಲಿ ಒಂದು (ನೇತಿಶಬ್ದ)ದಿಂದ ಸಪ್ರಪಂಚ ವಾದ ಬ್ರಹ್ಮದ ರೂಪವನ್ನು ಅಲ್ಲಗಳೆದಿದೆ, ಇನ್ನೊಂದರಿಂದ ರೂಪವುಳ್ಳ ಬ್ರಹ್ಮ ವನ್ನು (ಅಲ್ಲಗಳೆದಿದೆ) ಎಂಬ ಅಭಿಪ್ರಾಯವಾಗುತ್ತದೆ. ಅಥವಾ ರೂಪವುಳ್ಳ ಬ್ರಹ್ಮವನ್ನೇ (ಇಲ್ಲಿ) ಅಲ್ಲಗಳೆದಿದೆ ; ಏಕೆಂದರೆ ಅದು ವಾಙ್ಮನಸ್ಸುಗಳಿಗೆ ಅತೀತವಾಗಿರುವದರಿಂದ (ಅದರ) ಇರವು ಅಸಂಭಾವಿತವಾಗಿರುವದರಿಂದ ಅಲ್ಲ ಗಳೆಯುವದಕ್ಕೆ ತಕ್ಕದ್ದು ; ಆದರೆ ರೂಪಪ್ರಪಂಚವು ಪ್ರತ್ಯಕ್ಷಾದಿಗಳಿಗೆ ಗೋಚರವಾಗಿರುವದರಿಂದ ಅಲ್ಲಗಳೆಯುವದಕ್ಕೆ ತಕ್ಕದ್ದಲ್ಲ, (ಇಲ್ಲಿ) ಮತ್ತೆ ಮತ್ತೆ ಹೇಳಿರುವದೋ ಎಂದರೆ ಆದರಕ್ಕಾಗಿ ಎಂದು (ಹೇಳಬಹುದು).

## ಸಿದ್ಧಾಂತ: ಇಲ್ಲಿ ಬ್ರಹ್ಮವನ್ನೇ ಉಳಿಸಿಕೊಂಡಿದೆ

(ಭಾಷ್ಯ)

೨೯೫. ಏವಂ ಪ್ರಾಪ್ತೇ ಬ್ರೂಮಃ । ನ ತಾವತ್ ಉಭಯಪ್ರತಿಷೇಧಃ ಉಪಪದ್ಯತೇ । ಶೂನ್ಯವಾದಪ್ರಸಙ್ಗಾತ್ । ಕಿಂಚಿದ್ ಹಿ ಪರಮಾರ್ಥಮ್ ಆಲಮ್ಬ್ಯ ಅಪರಮಾರ್ಥಃ ಪ್ರತಿಷಿಧ್ಯತೇ । ಯಥಾ ರಜ್ಜ್ವಾದಿಷು ಸರ್ಪಾ ದಯಃ । ತಚ್ಚ ಪರಿಶಿಷ್ಯಮಾಣೇ ಕಸ್ಮಿಂಶ್ಚಿದ್ ಭಾವೇ ಅವಕಲ್ಪತೇ[1] । ಉಭಯ ಪ್ರತಿಷೇಧೇ ತು ಕೋಽನ್ಯೋ ಭಾವಃ ಪರಿಶಿಷ್ಯೇತ್ ? ಅಪರಿಶಿಷ್ಯಮಾಣೇ ಚ ಅನ್ಯಸ್ಮಿನ್ ಯ ಇತರಃ ಪ್ರತಿಷೇದ್ಧುಮ್ ಆರಭ್ಯತೇ ಪ್ರತಿಷೇದ್ಧುಮ ಶಕ್ಯತ್ವಾತ್ ತಸ್ಯೈವ ಪರಮಾರ್ಥತ್ವಾಪತ್ತೇಃ ಪ್ರತಿಷೇಧಾನುಪಪತ್ತಿಃ । ನಾಪಿ ಬ್ರಹ್ಮಪ್ರತಿಷೇಧಃ ಉಪಪದ್ಯತೇ । "ಬ್ರಹ್ಮ ತೇ ಬ್ರವಾಣಿ" (ಬೃ. ೨-೧-೧) ಇತ್ಯಾದ್ಯುಪಕ್ರಮವಿರೋಧಾತ್ । "ಅಸನ್ನೇವ ಸ ಭವತಿ । ಅಸದ್ಬ್ರಹ್ಮೇತಿ ವೇದ ಚೇತ್" (ತೈ. ೨-೬) ಇತ್ಯಾದಿನಿನ್ದಾವಿರೋಧಾತ್ । "ಅಸ್ತೀತ್ಯೇವೋಪ ಲಬ್ಧವ್ಯಃ" (ಕ. ೩-೩-೧೩) ಇತ್ಯವಧಾರಣವಿರೋಧಾತ್ । ಸರ್ವವೇದಾನ್ತ

1. ಕೆಲವು ಅಚ್ಚಿನ ಪುಸ್ತಕಗಳಲ್ಲಿರುವ "ಅವಕಲ್ಪ್ಯತೇ' ಎಂಬ ಪಾಠಕ್ಕಿಂತ ಇದೇ ಮೇಲು.

ವ್ಯಾಕೋಪಪ್ರಸಙ್ಗಾಚ್ಚ । ವಾಙ್ಮನಸಾತೀತತ್ವಮಪಿ ಬ್ರಹ್ಮಣಃ ನಾಭಾವಾಭಿಪ್ರಾಯೇಣ ಅಭಿಧೀಯತೇ । ನ ಹಿ ಮಹತಾ ಪರಿಕರಬನ್ಧೇನ "ಬ್ರಹ್ಮವಿದಾಪ್ನೋತಿ ಪರಮ್" (ತೈ ೨-೧), "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಇತ್ಯೇವಮಾದಿನಾ ವೇದಾನ್ತೇಷು ಬ್ರಹ್ಮ ಪ್ರತಿಪಾದ್ಯ ತಸ್ಯೈವ ಪುನರಭಾವೋಽಭಿಲಪ್ಯೇತ । "ಪ್ರಕ್ಷಾಲನಾದ್ಧಿ ಪಙ್ಕಸ್ಯ ದೂರಾದಸ್ಪರ್ಶನಂ ವರಮ್" ಇತಿ ಹಿ ನ್ಯಾಯಃ । ಪ್ರತಿಪಾದನಪ್ರಕ್ರಿಯಾ ತ್ವೇಷಾ "ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ" (ತೈ. ೨-೪) ಇತಿ । ಏತದುಕ್ತಂ ಭವತಿ । ವಾಙ್ಮನಸಾತೀತಮ್ ಅವಿಷಯಾನ್ತಃಪಾತಿ ಪ್ರತ್ಯಗಾತ್ಮಭೂತಂ ನಿತ್ಯಶುದ್ಧಬುದ್ಧಮುಕ್ತಸ್ವಭಾವಂ ಬ್ರಹ್ಮ ಇತಿ । ತಸ್ಮಾತ್ ಬ್ರಹ್ಮಣೋ ರೂಪಪ್ರಪಞ್ಚಂ ಪ್ರತಿಷೇಧತಿ, ಪರಿಶಿನಷ್ಟಿ ಬ್ರಹ್ಮ ಇತ್ಯಭ್ಯುಪಗನ್ತವ್ಯಮ್ ॥

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಮೊದಲನೆಯದಾಗಿ ಎರಡನ್ನೂ ಅಲ್ಲಗಳೆದಿದೆ ಎಂಬುದು ಹೊಂದುವದಿಲ್ಲ; ಏಕೆಂದರೆ (ಆಗ) ಶೂನ್ಯವಾದವು ಪ್ರಸಕ್ತವಾಗುವದು. **ಯಾವದಾದರೊಂದು ಪರಮಾರ್ಥವನ್ನು ಅವಲಂಬಿಸಿಕೊಂಡೇ ಅಲ್ಲವೆ, ಅಪರಮಾರ್ಥವನ್ನು ಅಲ್ಲಗಳೆಯಬೇಕು? ಉದಾಹರಣೆಗೆ ಹಗ್ಗವೇ ಮುಂತಾದವುಗಳಲ್ಲಿ ಹಾವು ಮುಂತಾದವುಗಳನ್ನು ಅಲ್ಲಗಳೆಯುತ್ತಾರೆ. ಆ (ಪ್ರತಿಷೇಧವು) ಯಾವದಾದರೊಂದು ಭಾವವು ಉಳಿದುಕೊಂಡರೇ ಯುಕ್ತವಾಗುತ್ತದೆ. ಅಷ್ಟನ್ನೂ ಅಲ್ಲಗಳೆದರಾದರೋ ಮತ್ತೆ ಯಾವ ಭಾವವು ಉಳಿಯಬೇಕು? ಇನ್ನೊಂದು ಉಳಿದುಕೊಳ್ಳದೆ ಇದ್ದರೆಯಾವ ಇನ್ನೊಂದನ್ನು ಅಲ್ಲಗಳೆಯುವದಕ್ಕೆ ಆರಂಭಿಸುವರೋ(ಅದನ್ನು) ಅಲ್ಲಗಳೆಯುವದಕ್ಕಿಲ್ಲವಾಗಿ ಅದು ಪರಮಾರ್ಥವೆಂದಾಗುವದರಿಂದ (ಅದನ್ನು) ಅಲ್ಲಗಳೆಯುವದೇ ಆಗುವದಿಲ್ಲ.**[1]

ಬ್ರಹ್ಮವನ್ನು ಅಲ್ಲಗಳೆದಿದೆ ಎಂಬುದೂ ಹೊಂದುವದಿಲ್ಲ; ಏಕೆಂದರೆ "ನಿನಗೆ ಬ್ರಹ್ಮವನ್ನು ಹೇಳುವೆನು" (ಬೃ. ೨-೧-೧), ಮುಂತಾದ ಉಪಕ್ರಮಕ್ಕೆ (ಅದು) ವಿರುದ್ಧವಾಗುವದು. "ಬ್ರಹ್ಮವು ಅಸತ್ತು ಎಂದು ತಿಳಿಯುತ್ತಾನಾದರೆ ಅವನು (ತಾನೂ) "ಅಸತ್ತೇ ಆಗುವನು" (ತೈ. ೨-೬) ಮುಂತಾದ ನಿಂದೆಗೂ (ಅದು) ವಿರುದ್ಧವಾಗುವದು. "ಇದಾನೆ ಎಂದೇ (ಅವನನ್ನು) ಅರಿತು

---

1. ಈ ಅಭಿಪ್ರಾಯವನ್ನು ಹಿಂದೆಯೇ ೨-೨-೩೧ರ ಭಾಷ್ಯದಲ್ಲಿ (ಭಾ.ಭಾ. ೬೪) ಪ್ರಕಟಿಸಿದ್ದಾಗಿದೆ.

ಕೊಳ್ಳಬೇಕು" (ಕ. ೩-೩-೧೩) ಎಂದು ಮುಂತಾಗಿ ಒತ್ತಿಹೇಳಿರುವದಕ್ಕೂ ವಿರೋಧವಾಗುತ್ತದೆ, ಮತ್ತು ಸರ್ವವೇದಾಂತಗಳಿಗೂ ವಿರೋಧವಾಗುವ ಪ್ರಸಂಗವೂ ಬರುತ್ತದೆ. ವಾಙ್ಮನಸ್ಸುಗಳಿಗೆ ಬ್ರಹ್ಮವು ಅತೀತವಾಗಿರುವದೆಂದು ಹೇಳಿರುವದೂ (ಅದು) ಇಲ್ಲವೆಂಬ ಅಭಿಪ್ರಾಯದಿಂದ ಹೇಳಿಲ್ಲ; ಏಕೆಂದರೆ ದೊಡ್ಡದಾಗಿ ಸೊಂಟವನ್ನು ಕಟ್ಟಿಕೊಂಡು "ಬ್ರಹ್ಮವನ್ನರಿತುಕೊಂಡವನು ಪರಮ (ಪುರುಷಾರ್ಥ)ವನ್ನು ಪಡೆದುಕೊಳ್ಳುತ್ತಾನೆ" (ತೈ. ೨-೧). "ಬ್ರಹ್ಮವು ಸತ್ಯವೂ ಜ್ಞಾನವೂ ಅನಂತವೂ ಆದದ್ದು" (ತೈ. ೨-೧) ಎಂದುಮುಂತಾದ (ರೂಪ) ದಿಂದ ಬ್ರಹ್ಮವನ್ನು ವೇದಾಂತಗಳಲ್ಲಿ ಪ್ರತಿಪಾದನೆಮಾಡಿ ಮತ್ತೆ ಅದರ ಅಭಾವವನ್ನೇ ಹೇಳಿರಲಾರದಷ್ಟೆ, ಏಕೆಂದರೆ "ಕೆಸರನ್ನು ತೊಳೆದುಕೊಳ್ಳುವದಕ್ಕಿಂತ ದೂರದಿಂದಲೇ ಮುಟ್ಟದಿರುವದು ಮೇಲು'' ಎಂದು ನ್ಯಾಯವಿರುತ್ತದೆ. "ಯಾವದರಿಂದ ವಾಕ್ಕುಗಳು (ಅದನ್ನು) ಪಡೆಯಲಾರದೆ ಮನಸ್ಸಿನೊಡನೆ ಹಿಂತಿರುಗುವವೋ" (ತೈ. ೨-೪) ಎಂಬುದಾದರೋ ಪ್ರತಿಪಾದನಪ್ರಕ್ರಿಯೆಯು. (ಇಲ್ಲಿ) ಇಷ್ಟನ್ನು ಹೇಳಿದಂತಾಗಿದೆ: ವಾಙ್ಮನಸ್ಸುಗಳನ್ನು ಮೀರಿರುವ, ವಿಷಯಗಳೊಳಗೆ ಸೇರಿರದ ಪ್ರತ್ಯಗಾತ್ಮಭೂತವಾಗಿ ನಿತ್ಯಶುದ್ಧಬುದ್ಧಮುಕ್ತಸ್ವಭಾವವುಳ್ಳದ್ದಾಗಿರುವದೇ ಬ್ರಹ್ಮವು. ಆದ್ದರಿಂದ ಬ್ರಹ್ಮದ ರೂಪಪ್ರಪಂಚವನ್ನು ಅಲ್ಲಗಳೆದಿದೆ, ಬ್ರಹ್ಮವನ್ನು ಉಳಿಸಿಕೊಂಡಿದೆ ಎಂದು ಒಪ್ಪಿಕೊಳ್ಳಬೇಕು.

## ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ಎಂಬುದರ ಅರ್ಥ

(ಭಾಷ್ಯ)

೨೯೬. ತದೇತದುಚ್ಯತೇ ''ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ" ಇತಿ। ಪ್ರಕೃತಂ ಯದೇತಾವತ್ ಇಯತ್ತಾಪರಿಚ್ಛಿನ್ನಂ ಮೂರ್ತಾಮೂರ್ತಲಕ್ಷಣಂ ಬ್ರಹ್ಮಣೋ ರೂಪಮ್, ತದೇಷ ಶಬ್ದಃ ಪ್ರತಿಷೇಧತಿ। ತದ್ ಹಿ ಪ್ರಕೃತಂ ಪ್ರಪಞ್ಚಿತಂ ಚ ಪೂರ್ವಸ್ಮಿನ್ ಗ್ರನ್ಥೇ ಅಧಿದೈವತಂ ಅಧ್ಯಾತ್ಮಂ ಚ। ತಜ್ಜನಿತಮೇವ ಚ ವಾಸನಾಲಕ್ಷಣಮ್ ಅಪರಂ ರೂಪಮ್ ಅಮೂರ್ತರಸಭೂತಂ ಪುರುಷಶಬ್ದೋದಿತಂ ಲಿಙ್ಗಾತ್ಮವ್ಯಪಾಶ್ರಯಂ ಮಾಹಾರಜನಾದ್ಯುಪಮಾಭಿರ್ದರ್ಶಿತಮ್। ಅಮೂರ್ತರಸಸ್ಯ ಪುರುಷಸ್ಯ ಚಕ್ಷುರ್ಗ್ರಾಹ್ಯರೂಪಯೋಗಿತ್ವಾನುಪಪತ್ತೇಃ। ತದೇತತ್ ಸಪ್ರಪಞ್ಚಂ ಬ್ರಹ್ಮಣೋ ರೂಪಂ ಸಂನಿಹಿತಾಲಮ್ಬನೇನ ಇತಿಕರಣೇನ ಪ್ರತಿಷೇಧಕಂ ನಞಂ ಪ್ರತಿ ಉಪನೀಯತೇ ಇತಿ ಗಮ್ಯತೇ। ಬ್ರಹ್ಮ ತು ರೂಪವಿಶೇಷಣತ್ವೇನ ಷಷ್ಠ್ಯಾ ನಿರ್ದಿಷ್ಟಂ ಪೂರ್ವಸ್ಮಿನ್ ಗ್ರನ್ಥೇನ ಸ್ವಪ್ರಧಾನತ್ವೇನ। ಪ್ರಪಞ್ಚಿತೇ ಚ ತದೀಯೇ ರೂಪದ್ವಯೇ ರೂಪವತಃ ಸ್ವರೂಪಜಿಜ್ಞಾಸಾಯಾಂ ಇದಮ್ ಉಪಕ್ರಾನ್ತಮ್ ''ಅಥಾತ ಆದೇಶೋ ನೇತಿ ನೇತಿ" (ಬೃ. ೨-೩-೬) ಇತಿ। ತತ್ರ ಕಲ್ಪಿತರೂಪಪ್ರತ್ಯಾಖ್ಯಾನೇನ

ಬ್ರಹ್ಮಣಃ ಸ್ವರೂಪಾವೇದನಮ್ ಇದಮ್ ಇತಿ ನಿರ್ಣೀಯತೇ । ತದಾಸ್ಪದಂ ಹಿ ಇದಂ ಸಮಸ್ತಂ ಕಾರ್ಯಂ ನೇತಿ ನೇತಿ ಇತಿ ಪ್ರತಿಷಿದ್ಧಮ್ । ಯುಕ್ತಂ ಚ ಕಾರ್ಯಸ್ಯ ವಾಚಾರಮ್ಭಣಶಬ್ದಾದಿಭ್ಯೋಽಸತ್ತ್ವಮ್ ಇತಿ 'ನೇತಿ ನೇತಿ' ಇತಿ ಪ್ರತಿಷೇಧನಂ ನ ತು ಬ್ರಹ್ಮಣಃ ; ಸರ್ವಕಲ್ಪನಾಮೂಲತ್ವಾತ್ । ನ ಚ ಅತ್ರ ಇಯಮ್ ಆಶಙ್ಕಾ ಕರ್ತವ್ಯಾ ಕಥಂ ಹಿ ಶಾಸ್ತ್ರಂ ಸ್ವಯಮೇವ ಬ್ರಹ್ಮಣೋ ರೂಪದ್ವಯಂ ದರ್ಶಯಿತ್ವಾ ಸ್ವಯಮೇವ ಪುನಃ ಪ್ರತಿಷೇಧತಿ? "ಪ್ರಕ್ಷಾಲನಾದ್ಧಿ ಪಙ್ಕಸ್ಯ ದೂರಾದಸ್ಪರ್ಶನಂ ವರಮ್" ಇತಿ । ಯತೋ ನೇದಂ ಶಾಸ್ತ್ರಂ ಪ್ರತಿಪಾದ್ಯತ್ವೇನ ಬ್ರಹ್ಮಣೋ ರೂಪದ್ವಯಂ ನಿರ್ದಿಶತಿ । ಲೋಕಪ್ರಸಿದ್ಧಂ ತು ಇದಂ ರೂಪದ್ವಯಂ ಬ್ರಹ್ಮಣಿ ಕಲ್ಪಿತಂ ಪರಾಮೃಶತಿ ಪ್ರತಿಷೇಧ್ಯತ್ವಾಯ ಶುದ್ಧಬ್ರಹ್ಮಸ್ವರೂಪಪ್ರತಿಪಾದನಾಯ ಚ ಇತಿ ನಿರವದ್ಯಮ್ । ದ್ವೌ ಚ ಏತೌ ಪ್ರತಿಷೇಧೌ ಯಥಾಸಙ್ಖ್ಯನ್ಯಾಯೇನ ದ್ವೇ ಅಪಿ ಮೂರ್ತಾಮೂರ್ತೇ ಪ್ರತಿಷೇಧತಃ । ಯದ್ವಾ ಪೂರ್ವಃ ಪ್ರತಿಷೇಧಃ ಭೂತರಾಶಿಂ ಪ್ರತಿಷೇಧತಿ, ಉತ್ತರೋ ವಾಸನಾರಾಶಿಮ್ । ಅಥವಾ 'ನೇತಿ ನೇತಿ' (ಬೃ. ೨-೩-೬) ಇತಿ ವೀಪ್ಸೇಯಮ್ ಇತೀತಿ ಯಾವತ್ ಕಿಂಚಿತ್ ಉತ್ಪ್ರೇಕ್ಷ್ಯತೇ ತತ್ಸರ್ವಂ ನ ಭವತಿ ಇತ್ಯರ್ಥಃ। ಪರಿಗಣಿತಪ್ರತಿಷೇಧೇ ಹಿ ಕ್ರಿಯಮಾಣೇ ಯದಿ ನೈತದ್ ಬ್ರಹ್ಮ ಕಿಮನ್ಯದ್ ಬ್ರಹ್ಮ ಭವೇತ್ ? ಇತಿ ಜಿಜ್ಞಾಸಾ ಸ್ಯಾತ್ । ವೀಪ್ಸಾಯಾಂ ತು ಸತ್ಯಾಂ ಸಮಸ್ತಸ್ಯ ವಿಷಯಜಾತಸ್ಯ ಪ್ರತಿಷೇಧನಾತ್ ಅವಿಷಯಃ ಪ್ರತ್ಯಗಾತ್ಮಾ ಬ್ರಹ್ಮ ಇತಿ ಜಿಜ್ಞಾಸಾ ನಿವರ್ತತೇ । ತಸ್ಮಾತ್ ಪ್ರಪಞ್ಚಮೇವ ಬ್ರಹ್ಮಣಿ ಕಲ್ಪಿತಂ ಪ್ರತಿಷೇಧತಿ ಪರಿಶಿನಷ್ಟಿ ಬ್ರಹ್ಮ ಇತಿ ನಿರ್ಣಯಃ ॥

(ಭಾಷ್ಯಾರ್ಥ)

ಇದನ್ನೇ (ಸೂತ್ರಕಾರರು) "ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ।" (ಪ್ರಕೃತವಾದ ಏತಾವತ್ತ್ವವನ್ನೇ ಪ್ರತಿಷೇಧಿಸುತ್ತದೆ) ಎಂದಿರುತ್ತಾರೆ. ಇದರ ವಿವರ) : ಪ್ರಕೃತವಾದ ಏತಾವತ್ತಾಗಿ ಇಷ್ಟೆಂಬ ಪರಿಚ್ಛೇದವುಳ್ಳದ್ದಾಗಿರುವ ಮೂರ್ತಾಮೂರ್ತರೂಪವಾದ ಬ್ರಹ್ಮದ ರೂಪವಿದೆಯಲ್ಲ, ಅದನ್ನು ಈ ಶಬ್ದವು ಅಲ್ಲಗಳೆಯುತ್ತದೆ. ಅದೇ ಅಲ್ಲವೆ, ಪ್ರಕೃತವೂ ಹಿಂದಿನ ಗ್ರಂಥದಲ್ಲಿ ಅಧಿದೈವತವೆಂದೂ ಅಧ್ಯಾತ್ಮವೆಂದೂ ವಿವರಿಸಲ್ಪಟ್ಟಿದೆ ? ಅದರಿಂದುಂಟಾದ ವಾಸನಾರೂಪವಾದ ಅಮೂರ್ತರಸವಾಗಿರುವ ಪುರುಷಶಬ್ದದಿಂದ ಉಕ್ತವಾಗಿರುವ ಲಿಂಗಾತ್ಮನನ್ನು ಆಶ್ರಯಿಸಿಕೊಂಡಿರುವ ಅರಿಶಿನ(ಬಣ್ಣದ ಬಟ್ಟೆಯೇ) ಮುಂತಾದ ಉಪಮೆಗಳಿಂದ ತಿಳಿಸಿರುವ ವಾಸನಾರೂಪವಾದದ್ದು ಮತ್ತೊಂದು (ಬ್ರಹ್ಮದ) ರೂಪವು (ಪ್ರಕೃತವಾಗಿರುತ್ತದೆ) ; ಏಕೆಂದರೆ ಅಮೂರ್ತರಸವಾಗಿ

ರುವ ಪುರುಷನಿಗೆ ಚಕ್ಷುರ್ಗ್ರಾಹ್ಯರೂಪಯೋಗಿತ್ವವು ಹೊಂದುವದಿಲ್ಲ.[1] ಆ ಈ ವಿವರಿಸಿ ಹೇಳಿರುವ ಬ್ರಹ್ಮದ ರೂಪವನ್ನು ಹತ್ತಿರವಿರುವದನ್ನೇ ವಿಷಯೀ ಕರಿಸುವ ಇತಿಶಬ್ದವನ್ನುಪಯೋಗಿಸಿರುವದರಿಂದ, ಪ್ರತಿಷೇಧಕವಾದ ನಞ್ಶಬ್ದಕ್ಕೆ (ವಿಷಯವಾಗಿ) ತಂದುಕೊಟ್ಟಂತಾಗಿದೆ ಎಂದು ಗೊತ್ತಾಗುತ್ತದೆ.

ಬ್ರಹ್ಮವಾದರೋ ಹಿಂದಿನ ಗ್ರಂಥದಲ್ಲಿ ಷಷ್ಠೀವಿಭಕ್ತಿಯಿಂದ ರೂಪಗಳ ವಿಶೇಷಣವೆಂತ ನಿರ್ದಿಷ್ಟವಾಗಿದೆಯೇ ಹೊರತು ಸ್ವಪ್ರಧಾನವಾಗಿ ನಿರ್ದಿಷ್ಟ ವಾಗಿಲ್ಲ. ಅವರ ಎರಡು ರೂಪಗಳನ್ನು ವಿಸ್ತಾರವಾಗಿ ಹೇಳಿದ್ದಾಯಿತು. ರೂಪ ವುಳ್ಳ (ಬ್ರಹ್ಮದ) ಸ್ವರೂಪವನ್ನು ತಿಳಿಯಬೇಕೆಂಬ ಇಚ್ಛೆಯುಂಟಾಗುವಲ್ಲಿ 'ಅಥಾತ ಆದೇಶೋ ನೇತಿ ನೇತಿ' (ಇನ್ನು ಆದ್ದರಿಂದ ಆದೇಶ : ಇದಲ್ಲ ಇದಲ್ಲ) ಎಂಬಿದನ್ನು ಉಪಕ್ರಮಿಸಿರುತ್ತದೆ. ಇಲ್ಲಿ ಕಲ್ಪಿತವಾದ ರೂಪಗಳನ್ನು ತಿರಸ್ಕರಿ ಸಿರುವದರಿಂದ ಇದು ಬ್ರಹ್ಮದ ಸ್ವರೂಪವನ್ನು ತಿಳಿಸಿದ್ದು ಎಂದು ನಿರ್ಣಯ ಮಾಡಬಹುದಾಗಿದೆ. ಏಕೆಂದರೆ "ಇದಲ್ಲ,ಇದಲ್ಲ" ಎಂದು ಅಲ್ಲಗಳೆದಿರುವ ಈ ಸಮಸ್ತಕಾರ್ಯಕ್ಕೂ ಅದೇ ಆಸ್ಪದವಾಗಿರುತ್ತದೆ. ಕಾರ್ಯವು ವಾಚಾರಂಭಣ ಶಬ್ದವೇ ಮುಂತಾದ (ಕಾರಣ)ಗಳಿಂದ ಅಸತ್ತಾಗಿರುವದರಿಂದ (ಅದನ್ನು) ಇದಲ್ಲ, ಇದಲ್ಲ – ಎಂದು ಅಲ್ಲಗಳೆಯುವದು ಯುಕ್ತವೂ ಆಗಿರುತ್ತದೆ ; ಆದರೆ ಬ್ರಹ್ಮವನ್ನು (ಅಲ್ಲಗಳೆಯುವದು) ಯುಕ್ತವಲ್ಲ, ಏಕೆಂದರೆ (ಅದು) ಎಲ್ಲಾ ಕಲ್ಪನೆಗಳಿಗೂ ಮೂಲವಾಗಿರುತ್ತದೆ.

ಇಲ್ಲಿ ಶಾಸ್ತ್ರವು ತಾನೇ ಬ್ರಹ್ಮಕ್ಕೆ ಎರಡು ರೂಪಗಳನ್ನು ತಿಳಿಸಿ ಮತ್ತೆ ಹೇಗೆತಾನೆ (ಅವನ್ನು) ಅಲ್ಲಗಳೆದೀತು ? ಕೆಸರನ್ನು ತೊಳೆದುಕೊಳ್ಳುವದಕ್ಕಿಂತ ದೂರದಿಂದಲೇ (ಅದನ್ನು) ಮುಟ್ಟದಿರುವದು ಒಳ್ಳೆಯದಲ್ಲವೆ ? –ಎಂಬೀ ಶಂಕೆ ಯನ್ನು ಮಾಡಬಾರದು. ಏಕೆಂದರೆ ಈ ಶಾಸ್ತ್ರವು ಬ್ರಹ್ಮದ ಎರಡು ರೂಪ ಗಳನ್ನು ಪ್ರತಿಪಾದಿಸುವದಕ್ಕಾಗಿ ತಿಳಿಸಿಲ್ಲ ; ಮತ್ತೇನೆಂದರೆ ಲೋಕಪ್ರಸಿದ್ಧವಾ ಗಿರುವ ಬ್ರಹ್ಮದಲ್ಲಿ ಕಲ್ಪಿತವಾಗಿರುವ ಈ ರೂಪದ್ವಯವನ್ನು ಅಲ್ಲಗಳೆಯುವದ ಕ್ಕಾಗಿಯೂ ಶುದ್ಧಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವದಕ್ಕಾಗಿಯೂ ತಿಳಿಸು ತ್ತದೆಯಾದ್ದರಿಂದ (ಇಲ್ಲಿ ಯಾವ) ದೋಷವೂ ಇರುವದಿಲ್ಲ.

ಈ ಪ್ರತಿಷೇಧಗಳು ಎರಡಾಗಿರುವದರಿಂದ ಯಥಾಸಂಖ್ಯನ್ಯಾಯದಿಂದ ಮೂರ್ತಾಮೂರ್ತಗಳೆರಡನ್ನೂ ಅಲ್ಲಗಳೆಯುತ್ತವೆ. ಅಥವಾ ಮೊದಲನೆಯ ಪ್ರತಿಷೇಧವು ಭೂತರಾಶಿಯನ್ನು ಅಲ್ಲಗಳೆಯುತ್ತದೆ, (ಆದರೆ) ಮುಂದಿನ

---

1. ಆದ್ದರಿಂದ ವಾಸನಾರೂಪವನ್ನು ಹೀಗೆ ಉಪಮಾನದಿಂದ ವರ್ಣಿಸಿದೆ ಎಂಬುದು ಯುಕ್ತ.

(ಪ್ರತಿಷೇಧವು) ವಾಸನಾರಾಶಿಯನ್ನು ಅಲ್ಲಗಳೆಯುತ್ತದೆ. ಅಥವಾ 'ನೇತಿ ನೇತಿ' ಎಂಬಲ್ಲಿರುವ ಇತಿಯು ವೀಪ್ಸೆ(ಯನ್ನು ಹೇಳುತ್ತದೆ). ಯಾವ ದೊಂದನ್ನು ಊಹಿಸಿದರೂ ಅದು ಯಾವದೂ ಅಲ್ಲ ಎಂದು ಅರ್ಥ. ಏಕೆಂದರೆ ಲೆಕ್ಕಮಾಡಿ (ಇಷ್ಟೆಂದು) ಅಲ್ಲಗಳೆದರೆ 'ಇದು ಬ್ರಹ್ಮವಲ್ಲದಿದ್ದರೆ ಮತ್ತೆ ಯಾವದು ಬ್ರಹ್ಮವಾಗಿದ್ದೀತು ?' –ಎಂಬ ಜಿಜ್ಞಾಸೆಯುಂಟಾಗಬಹುದು. ವೀಪ್ಸೆಯಾದರೋ ಎಂದರೆ ವಿಷಯಜಾತವೆಲ್ಲವನ್ನೂ ಅಲ್ಲಗಳೆದದ್ದರಿಂದ ವಿಷಯವಲ್ಲದ ಪ್ರತ್ಯಗಾತ್ಮನು ಬ್ರಹ್ಮವೆಂದಾಗಿ ಜಿಜ್ಞಾಸೆಯು ಇಲ್ಲವಾಗುವದು. ಆದ್ದರಿಂದ ಬ್ರಹ್ಮದಲ್ಲಿ ಕಲ್ಪಿತವಾಗಿರುವ ಪ್ರಪಂಚವನ್ನೇ ಅಲ್ಲಗಳೆದಿದೆ, ಬ್ರಹ್ಮ ವನ್ನು ಉಳಿಸಿಕೊಂಡಿದೆ ಎಂಬುದೇ ನಿರ್ಣಯವು.

## 'ತತೋ ಬ್ರವೀತಿ ಚ ಭೂಯಃ' ಎಂಬುದರ ಅರ್ಥ

(ಭಾಷ್ಯ)

೫೯೭. ಇತಶ್ಚ ಏಷ ಏವ ನಿರ್ಣಯಃ। ಯತಃ ತತಃ ಪ್ರತಿಷೇಧಾತ್ ಭೂಯೋ ಬ್ರವೀತಿ "ಅನ್ಯತ್ ಪರಮಸ್ತಿ" (ಬೃ. ೨–೩–೬) ಇತಿ। ಅಭಾವಾವ ಸಾನೇ ಹಿ ಪ್ರತಿಷೇಧೇ ಕ್ರಿಯಮಾಣೇ ಕಿಮನ್ಯತ್ ಪರಮಸ್ತಿ ಇತಿ ಬ್ರೂಯಾತ್? ತತ್ರ ಏಷಾ ಅಕ್ಷರಯೋಜನಾ। 'ನೇತಿ ನೇತಿ' ಇತಿ ಬ್ರಹ್ಮ ಆದಿಶ್ಯ ತಮೇವ ಆದೇಶಂ ಪುನರ್ನಿರ್ವಕ್ತಿ। ನೇತಿನೇತಿ ಇತ್ಯಸ್ಯ ಕೋಽರ್ಥಃ? ನ ಹಿ ಏತಸ್ಮಾತ್ ಬ್ರಹ್ಮಣೋ ವ್ಯತಿರಿಕ್ತಮಸ್ತಿ ಇತ್ಯತೋ 'ನೇತಿ ನೇತಿ' ಇತ್ಯುಚ್ಯತೇ ನ ಪುನಃ ಸ್ವಯಮೇವ ನಾಸ್ತೀತಿ[1] ಇತ್ಯರ್ಥಃ। ತಚ್ಚ ದರ್ಶಯತಿ ಅನ್ಯತ್ ಪರಮ್ ಅಪ್ರತಿಷಿದ್ಧಂ ಬ್ರಹ್ಮ ಅಸ್ತಿ ಇತಿ। ಯದಾ ಪುನಃ ಏವಮ್ ಅಕ್ಷರಾಣಿ ಯೋಜ್ಯನ್ತೇ ನ ಹಿ ಏತಸ್ಮಾದಿತಿ 'ನೇತಿ ನೇತಿ'। ನ ಹಿ ಪ್ರಪಞ್ಚಪ್ರತಿಷೇಧ ರೂಪಾತ್ ಆದೇಶನಾತ್ ಅನ್ಯತ್ ಪರಮ್ ಆದೇಶನಂ ಬ್ರಹ್ಮಣೋಽಸ್ತಿ ಇತಿ। ತದಾ 'ತತೋ ಬ್ರವೀತಿ ಚ ಭೂಯಃ' ಇತ್ಯೇತತ್ ನಾಮಧೇಯವಿಷಯಂ ಯೋಜಯಿತವ್ಯಮ್। "ಅಥ ನಾಮಧೇಯಮ್ ಸತ್ಯಸ್ಯ ಸತ್ಯಮಿತಿ। ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್" (ಬೃ. ೨–೧–೨೦) ಇತಿ ಹಿ ಬ್ರವೀತಿ ಇತಿ। ತಚ್ಚ ಬ್ರಹ್ಮಾವಸಾನೇ ಪ್ರತಿಷೇಧೇ ಸಮಞ್ಜಸಂ ಭವತಿ। ಅಭಾವಾವಸಾನೇ ತು ಪ್ರತಿಷೇಧೇ ಕಿಂ ಸತ್ಯಸ್ಯ ಸತ್ಯಮ್ ಇತ್ಯುಚ್ಯೇತ ? ತಸ್ಮಾತ್ ಬ್ರಹ್ಮಾವ ಸಾನೋಽಯಂ ಪ್ರತಿಷೇಧಃ, ನಾಭಾವಾವಸಾನಃ ಇತ್ಯಧ್ಯವಸ್ಯಾಮಃ ॥

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಇದೇ ನಿರ್ಣಯವು, ಏಕೆಂದರೆ ಆ ಪ್ರತಿಷೇಧ ವಾದ ಬಳಿಕ ಮತ್ತೂ "ಮತ್ತೊಂದು ಹೆಚ್ಚಿನದು ಇದೆ" (ಬೃ. ೨–೩–೬) ಎಂದು

---

1. ಇಲ್ಲಿ ಒಂದು ಇತಿಯು ಬೇಕಾಗಿದೆ ಎಂದು ಸೇರಿಸಿಕೊಂಡಿದೆ.

(ಶ್ರುತಿ) ಹೇಳುತ್ತದೆ. ಅಭಾವದಲ್ಲಿ ಕೊನೆಗಂಡು ಪ್ರತಿಷೇಧವನ್ನು ಮಾಡಿದ್ದರೆ, 'ಮತ್ತೊಂದು ಹೆಚ್ಚಿನದು ಇದೆ' ಎಂದು ಯಾವದನ್ನು ಹೇಳೀತು? ಇಲ್ಲಿ (ಶ್ರುತಿಯು) ಅಕ್ಷರಯೋಜನೆ ಇದು : 'ನೇತಿ ನೇತಿ' ಎಂದು ಬ್ರಹ್ಮವನ್ನು ಉಪದೇಶಿಸಿ ಅದೇ ಉಪದೇಶವನ್ನೇ ಮತ್ತೆ (ಶ್ರುತಿಯು) ನಿರ್ವಚನಮಾಡಿರುತ್ತದೆ. 'ನೇತಿ ನೇತಿ' ಎಂಬಿದರ ಅರ್ಥವೇನು? ಈ ಬ್ರಹ್ಮಕ್ಕಿಂತ ಬೇರೆಯಾದದ್ದು ಇಲ್ಲವಾದ್ದರಿಂದ 'ನೇತಿ ನೇತಿ' ಎಂದು ಹೇಳಿದೆ; ಅಷ್ಟೇ ಹೊರತು ತಾನೇ ಇಲ್ಲವೆಂದಲ್ಲ ಎಂದರ್ಥ. ಇದನ್ನು "ಇದಕ್ಕಿಂತ ಬೇರೆಯಾಗಿ ಹೆಚ್ಚಿನದು ಅಪ್ರತಿಷಿದ್ಧವಾದದ್ದು ಇದೆ" ಎಂದು ತಿಳಿಸಿರುತ್ತದೆ. ಹೀಗಿಲ್ಲದೆ (ಶ್ರುತಿಯು) ಅಕ್ಷರಗಳನ್ನು ಹೀಗೆ ಯೋಜನೆಮಾಡಿದರೂ ಎಂದರೆ, (ಹೇಗೆಂದರೆ) 'ನ ಹ್ಯೇತಸ್ಮಾದಿತಿ ನೇತಿನೇತಿ' ಪ್ರಪಂಚವನ್ನು ಅಲ್ಲಗಳೆಯುವ ರೂಪದ ಉಪದೇಶಕ್ಕಿಂತ ಬ್ರಹ್ಮಕ್ಕೆ ಮತ್ತೊಂದು ಹೆಚ್ಚಿನ ಉಪದೇಶ(ಪ್ರಕಾರ)ವು ಇರುವದಿಲ್ಲ (ಎಂದು ಯೋಜನೆಮಾಡಿದರೆ), ಆಗ ತತೋ ಬ್ರವೀತಿ ಚ ಭೂಯಃ (ಆ ಬಳಿಕ ಮತ್ತೂ ಹೇಳಿಯೂ ಇದೆ) ಎಂಬೀ (ಸೂತ್ರಭಾಗವನ್ನು) ನಾಮಧೇಯವಿಷಯವೆಂತ ಯೋಜನೆಮಾಡಬೇಕು. "ಇನ್ನು ನಾಮಧೇಯವು 'ಸತ್ಯದ ಸತ್ಯವು' ಎಂದು; ಪ್ರಾಣಗಳೇ ಸತ್ಯವು, ಅವುಗಳಿಗೆ ಈ (ಆತ್ಮನು) ಸತ್ಯವು" (ಬೃ. ೨-೧-೨೦) ಎಂದಲ್ಲವೆ, (ಶ್ರುತಿ) ಹೇಳುತ್ತದೆ? ಎಂದು (ಯೋಜನೆಮಾಡಬೇಕು). ಇದೂ ಬ್ರಹ್ಮದಲ್ಲಿ ಕೊನೆಗಾಣುವ ಪ್ರತಿಷೇಧವೆಂದರೇ ಸಮಂಜಸವಾಗುತ್ತದೆ; ಪ್ರತಿಷೇಧವು ಅಭಾವದಲ್ಲಿ ಕೊನೆಗಾಣುತ್ತದೆ ಎಂದರಾದರೋ ಯಾವದನ್ನು ಸತ್ಯದ ಸತ್ಯವು, ಎನ್ನಬೇಕು? ಆದ್ದರಿಂದ ಇದು ಬ್ರಹ್ಮದಲ್ಲಿ ಕೊನೆಗಾಣುವ ಪ್ರತಿಷೇಧವೇ, ಅಭಾವದಲ್ಲಿ ಕೊನೆಗಾಣತಕ್ಕದ್ದಲ್ಲ—ಎಂದು (ನಾವು) ನಿಶ್ಚಯಿಸಬೇಕು.

**ತದವ್ಯಕ್ತಮಾಹ ಹಿ ॥ ೨೩ ॥**

೨೩. ಅದು ಅವ್ಯಕ್ತವು; (ಹಾಗೆಂದು ಶ್ರುತಿ) ಹೇಳುತ್ತದೆಯಲ್ಲವೆ?

## ಬ್ರಹ್ಮವು ಅವ್ಯಕ್ತವಾದ್ದರಿಂದ ಅದನ್ನು ಗ್ರಹಿಸುವದಕ್ಕಾಗುವದಿಲ್ಲ

(ಭಾಷ್ಯ).

೨೪೮. ಯತ್ ಪ್ರತಿಷಿದ್ಧಾತ್ ಪ್ರಪಞ್ಚಜಾತಾತ್ ಅನ್ಯತ್ ಪರಂ ಬ್ರಹ್ಮ ತದಸ್ತಿ ಚೇತ್ ಕಸ್ಮಾತ್ ನ ಗೃಹ್ಯತ ಇತಿ? ಉಚ್ಯತೇ। ತದವ್ಯಕ್ತಮ್ ಅನಿನ್ದ್ರಿಯಗ್ರಾಹ್ಯಮ್ ಸರ್ವದೃಶ್ಯಸಾಕ್ಷಿತ್ವಾತ್ । ಆಹ ಹಿ ಏವಂ ಶ್ರುತಿಃ

"ಸ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ" (ಮುಂ. ೩-೧-೮) "ಸ ಏಷ ನೇತಿನೇತ್ಯಾತ್ಮಾಗೃಹ್ಯೋ ನ ಹಿ ಗೃಹ್ಯತೇ" (ಬೃ. ೩-೯-೨೬) "ಯತ್ತದದ್ರೇಶ್ಯಮಗ್ರಾಹ್ಯಮ್" (ಮುಂ. ೧-೧-೬) "ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇ..." (ತೈ. ೨-೭) ಇತ್ಯಾದ್ಯಾ। ಸ್ಮೃತಿರಪಿ "ಅವ್ಯಕ್ತೋಽಯಮಚಿನ್ತ್ಯೋಽಯ- ಮವಿಕಾರ್ಯೋಽಯಮುಚ್ಯತೇ" (ಗೀ. ೨-೨೫) ಇತ್ಯಾದ್ಯಾ ॥

(ಭಾಷ್ಯಾರ್ಥ)

(ಶ್ರುತಿಯಲ್ಲಿ) ಅಲ್ಲಗಳೆದಿರುವ ಪ್ರಪಂಚಜಾತಕ್ಕಿಂತ ಬೇರೆಯಾಗಿರುವ ಪರಬ್ರಹ್ಮವೆಂಬುದಿದೆಯಲ್ಲ, ಅದು ಇದೆಯಾದರೆ ಏತಕ್ಕೆ (ಅದನ್ನು) ಗ್ರಹಿಸುವದಕ್ಕಾಗುವದಿಲ್ಲ? ಎಂದರೆ ಹೇಳುತ್ತೇವೆ. **ಅದು ಅವ್ಯಕ್ತವು ಎಂದರೆ ಇಂದ್ರಿಯಗ್ರಾಹ್ಯವಲ್ಲ ; ಏಕೆಂದರೆ ಸರ್ವದೃಶ್ಯಗಳಿಗೂ ಸಾಕ್ಷಿಯಾಗಿರುತ್ತದೆ.** "ಚಕ್ಷುಸ್ಸಿನಿಂದ ಗ್ರಹಣಮಾಡುವದಕ್ಕಾಗುವದಿಲ್ಲ, ವಾಕ್ಕಿನಿಂದಲೂ ಆಗುವದಿಲ್ಲ, ಮಿಕ್ಕ ಇಂದ್ರಿಯಗಳಿಂದಲಾಗಲಿ ತಪಸ್ಸಿನಿಂದಾಗಲಿ ಕರ್ಮದಿಂದ ಲಾಗಲಿ (ಆಗುವದಿಲ್ಲ)" (ಮುಂ.೩-೧-೮), "ಆ ಈ ನೇತಿನೇತಿ ಎಂದು ಆತ್ಮನು ಅಗೃಹ್ಯನು, ಏಕೆಂದರೆ ಗ್ರಹಣಮಾಡುವದಕ್ಕಾಗುವದಿಲ್ಲ" (ಬೃ. ೩-೯-೨೬), "ಯಾವ ಅದು ಅದೃಶ್ಯವೂ ಅಗ್ರಾಹ್ಯವೂ...." (ಮುಂ. ೧-೧-೬) ಏಕೆಂದರೆ "ಯಾವಾಗ ಇವನು ಅದೃಶ್ಯವೂ ಅನಾತ್ಮ್ಯವೂ ಅನಿರುಕ್ತವೂ ಅನಿಲಯನವೂ ಆದ....." (ತೈ. ೨-೭) ಎಂದುಮುಂತಾಗಿರುವ ಶ್ರುತಿಯು ಹಾಗೆಂದಲ್ಲವೆ. ಹೇಳುತ್ತಿದೆ? "ಇವನು ಅವ್ಯಕ್ತನು, ಅಚಿಂತ್ಯನು ; ಇವನು ಅವಿಕಾರ್ಯ ನೆನಿಸುವನು"(ಗೀ. ೨-೨೫) ಮುಂತಾದ ಸ್ಮೃತಿಯೂ (ಹಾಗೆಂದು ಹೇಳುತ್ತಿದೆ).

**ಅಪಿ ಚ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್ ॥ ೨೪ ॥**

೨೪- ಇದಲ್ಲದೆ ಸಂರಾಧನದಲ್ಲಿ ( ಆತ್ಮನನ್ನು (ಕಾಣುತ್ತಾರೆ); ಪ್ರತ್ಯಕ್ಷಾನುಮಾನಗಳಿಂದ (ಹಾಗೆಂದು ತಿಳಿಯಬರುತ್ತದೆ).

## ಪರಮಾತ್ಮನನ್ನು ಧ್ಯಾನದಲ್ಲಿ ಕಾಣಬಹುದು

(ಭಾಷ್ಯ)

೪೯. ಅಪಿ ಚ ಏನಮಾತ್ಮಾನಂ ನಿರಸ್ತಸಮಸ್ತಪ್ರಪಞ್ಚಮ್ ಅವ್ಯಕ್ತಂ ಸಂರಾಧನಕಾಲೇ ಪಶ್ಯನ್ತಿ ಯೋಗಿನಃ। ಸಂರಾಧನಂ ಚ ಭಕ್ತಿಧ್ಯಾನಪ್ರಣಿಧಾನಾದ್ಯನುಷ್ಠಾನಮ್ । ಕಥಂ ಪುನರವಗಮ್ಯತೇ ಸಂರಾಧನಕಾಲೇ ಪಶ್ಯ

ನ್ತೀತಿ ? ಪ್ರತ್ಯಕ್ಷಾನುಮಾನಾಭ್ಯಾಮ್ । ಶ್ರುತಿಸ್ಮೃತಿಭ್ಯಾಮ್ ಇತ್ಯರ್ಥಃ । ತಥಾ ಹಿ ಶ್ರುತಿಃ "ಪರಾಞ್ಚಿ ಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ ಪರಾಙ್ಪಶ್ಯತಿ ನಾನ್ತರಾತ್ಮನ್ । ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತ ಚಕ್ಷುರಮೃತತ್ವಮಿಚ್ಛನ್ ।" (ಕ. ೨-೧-೧) ಇತಿ । "ಜ್ಞಾನಪ್ರಸಾದೇನ ವಿಶುದ್ಧಸತ್ತ್ವಸ್ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ" (ಮುಂ. ೩-೧-೮) ಇತಿ ಚೈವಮಾದ್ಯಾ । ಸ್ಮೃತಿರಪಿ "ಯಂ ವಿನಿದ್ರಾ ಜಿತಶ್ವಾಸಾಃ ಸಂತುಷ್ಟಾಃ ಸಂಯತೇನ್ದ್ರಿಯಾಃ । ಜ್ಯೋತಿಃ ಪಶ್ಯನ್ತಿ ಯುಞ್ಜಾನಾಸ್ತಸ್ಮೈ ಯೋಗಾತ್ಮನೇ ನಮಃ" (ಶಾಂ. ರಾ. ೪೭-೫೪) "ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್" (ಉದ್ಯೋ. ೪೬-೧) ಇತಿ ಚೈವಮಾದ್ಯಾ ॥

(ಭಾಷ್ಯಾರ್ಥ)

**ಇದಲ್ಲದೆ ಈ ಯಾವ ಪ್ರಪಂಚವೂ ಇಲ್ಲದ ಅವ್ಯಕ್ತನಾದ ಆತ್ಮನನ್ನು ಸಂರಾಧನಕಾಲದಲ್ಲಿ ಯೋಗಿಗಳು ಕಾಣುತ್ತಾರೆ ; ಸಂರಾಧನವೆಂದರೆ ಭಕ್ತಿ, ಧ್ಯಾನ, ಪ್ರಣಿಧಾನ –ಮುಂತಾದವುಗಳನ್ನು ಅನುಷ್ಠಾನಮಾಡುವದು.**

(ಪ್ರಶ್ನೆ) :– ಸಂರಾಧನಕಾಲದಲ್ಲಿ ಕಾಣುತ್ತಾರೆಂದು ಹೇಗೆ ಗೊತ್ತು ?

(ಉತ್ತರ):– 'ಪ್ರತ್ಯಕ್ಷಾನುಮಾನಗಳಿಂದ' ಶ್ರುತಿಸ್ಮೃತಿಗಳಿಂದ ಎಂದರ್ಥ. ಹೇಗೆಂದರೆ "ಸ್ವಯಂಭುವು ಇಂದ್ರಿಯಗಳನ್ನು ಹೊರಮುಖವಾಗಿ ಕೊರೆದಿರುವನು ; ಆದ್ದರಿಂದ (ಮನುಷ್ಯನು) ಹೊರಕ್ಕೆ ನೋಡುತ್ತಾನೆ, ತನ್ನೊಳಕ್ಕೆ ನೋಡುವದಿಲ್ಲ ; ಯಾವನೋ ಒಬ್ಬ ವಿವೇಕಿಯು ಅಮೃತತ್ವವನ್ನು ಬಯಸಿ ಚಕ್ಷುಸ್ಸನ್ನು ಹಿಂತಿರುಗಿಸಿಕೊಂಡು, ಪ್ರತ್ಯಗಾತ್ಮನನ್ನು ನೋಡುತ್ತಾನೆ" (ಕ. ೨-೧-೧), "ವಿಶುದ್ಧಸತ್ತ್ವನಾದವನು ಅದರಿಂದಾದರೆ ಆ ನಿಷ್ಕಲನನ್ನು ಧ್ಯಾನಮಾಡಿ ಜ್ಞಾನಪ್ರಸಾದದಿಂದ ಕಾಣುತ್ತಾನೆ" (ಮುಂ.೩-೧-೮) ಎಂದುಮುಂತಾಗಿರುವ ಶ್ರುತಿ (ಹೇಳುತ್ತದೆ). "ನಿದ್ರೆಯನ್ನು ಬಿಟ್ಟು ಶ್ವಾಸವನ್ನು ಜಯಿಸಿಕೊಂಡಿರುವ ಸಂತುಷ್ಟರೂ ಇಂದ್ರಿಯಸಂಯಮವನ್ನು ಮಾಡಿಕೊಂಡವರೂ ಆದ ಯೋಗಿಗಳು ಯೋಗವನ್ನು ಮಾಡುವಾಗ ಜ್ಯೋತೀರೂಪನಾದ ಯಾವಾತನನ್ನು ಕಾಣುತ್ತಾರೋ ಆ ಯೋಗಾತ್ಮನಿಗೆ ನಮಸ್ಕಾರ !" (ಶಾಂ.ರಾ. ೪೭–೫೪), "ಆ ಸನಾತನನಾದ ಭಗವಂತನನ್ನು ಯೋಗಿಗಳು ಕಂಡುಕೊಳ್ಳುತ್ತಾರೆ" (ಉದ್ಯೋ. ೪೬–೧) ಇದೇ ಮುಂತಾದ ಸ್ಮೃತಿಯೂ (ಹಾಗೆಂದು ಹೇಳುತ್ತದೆ)[1].

---

1. ಇಲ್ಲಿ ಹೇಳಿರುವ ಸಂರಾಧನವು ವೇದೋಕ್ತವಾದ ಧ್ಯಾನವೇ ; ತಂತ್ರೋಕ್ತವಾದ ಯೋಗವಲ್ಲ. ೨–೧–೩ರ ಭಾಷ್ಯ (ಭಾ.ಭಾ. ೪೦೭)ವನ್ನು ನೋಡಿ.

**ಪ್ರಕಾಶಾದಿವಚ್ಚಾವೈಶೇಷ್ಯಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ||೨೫||**

೨೫. ಪ್ರಕಾಶಾದಿಗಳಂತೆ ಅವಿಶೇಷತ್ವವು; ಪ್ರಕಾಶವು ಕರ್ಮದಲ್ಲಿ (ಸವಿಶೇಷವು). ಏಕೆಂದರೆ (ಅಭೇದದಲ್ಲಿ) ಅಭ್ಯಾಸವಿದೆ.

## ಆತ್ಮನ ನಿರ್ವಿಶೇಷತ್ವಕ್ಕೆ ದೃಷ್ಟಾಂತಗಳು

(ಭಾಷ್ಯ)

೩೦೦. ನನು ಸಂರಾಧ್ಯಸಂರಾಧಕಭಾವಾಭ್ಯುಪಗಮಾತ್ ಪರೇತರಾತ್ಮನೋಃ ಅನ್ಯತ್ವಂ ಸ್ಯಾತ್ ಇತಿ। ನೇತ್ಯುಚ್ಯತೇ। ಯಥಾ ಪ್ರಕಾಶಾಕಾಶಸವಿತೃಪ್ರಭೃತಯಃ ಅಙ್ಗುಲಿಕರಕೋದಕಪ್ರಭೃತಿಷು ಕರ್ಮಸು ಉಪಾಧಿಭೂತೇಷು ಸವಿಶೇಷಾ ಇವ ಅವಭಾಸನ್ತೇ। ನ ಚ ಸ್ವಾಭಾವಿಕೀಮ್ ಅವಿಶೇಷಾತ್ಮತಾಂ ಜಹತಿ, ಏವಮ್ ಉಪಾಧಿನಿಮಿತ್ತ ಏವಾಯಮ್ ಆತ್ಮಭೇದಃ। ಸ್ವತಸ್ತು ಐಕಾತ್ಮ್ಯಮೇವ। ತಥಾ ಹಿ ವೇದಾನ್ತೇಷು ಅಭ್ಯಾಸೇನ ಅಸಕೃತ್ ಜೀವಪ್ರಾಜ್ಞಯೋಃ ಅಭೇದಃ ಪ್ರತಿಪಾದ್ಯತೇ॥

(ಭಾಷ್ಯಾರ್ಥ)

(ಆಕ್ಷೇಪ):–(ಇದು) ಸಂರಾಧ್ಯ, (ಇವನು) ಸಂರಾಧಕ– ಎಂಬ ಸಂಬಂಧವನ್ನು ಒಪ್ಪಿರುವದರಿಂದ ಪರಮಾತ್ಮ, ಇನ್ನೊಬ್ಬ(ನಾದ ಜೀವಾ)ತ್ಮ– ಇವರು (ಬೇರೆ)ಬೇರೆ ಎಂದಾಗುವದಲ್ಲ !

(ಪರಿಹಾರ) :– ಇಲ್ಲ, ಎನ್ನುತ್ತೇವೆ. **ಹೇಗೆ ಪ್ರಕಾಶ, ಆಕಾಶ, ಸೂರ್ಯ– ಮುಂತಾದವು ಬೆರಳು, ಕಮಂಡಲು, ನೀರು– ಮುಂತಾದ ಉಪಾಧಿಭೂತವಾದ ಕರ್ಮಗಳಲ್ಲಿ ಸವಿಶೇಷವಾಗಿರುವಂತೆ ತೋರುತ್ತವೆಯೋ, ಆದರೂ (ತಮ್ಮ) ಸ್ವಾಭಾವಿಕವಾದ ನಿರ್ವಿಶೇಷರೂಪವನ್ನು ಬಿಟ್ಟಿರುವದಿಲ್ಲವೋ, ಹಾಗೆ ಈ ಆತ್ಮಭೇದವು ಉಪಾಧಿನಿಮಿತ್ತವೇ ಆಗಿರುತ್ತದೆ; ಸ್ವತಃ ಆತ್ಮನು ಒಬ್ಬನೇ ಆಗಿರುತ್ತಾನೆ. ಆದ್ದರಿಂದಲೇ ವೇದಾಂತಗಳಲ್ಲಿ ಅಭ್ಯಾಸದಿಂದ ಮತ್ತೆಮತ್ತೆ ಜೀವಪ್ರಾಜ್ಞರಿಗೆ ಅಭೇದವನ್ನೇ ಹೇಳಿರುತ್ತದೆ[1].**

---

1. ನಿರ್ವಿಶೇಷನಾದ ಆತ್ಮನಲ್ಲಿ ತೋರುವ ಸವಿಶೇಷತ್ವವನ್ನು ಅವಲಂಬಿಸಿ ಈ ಧ್ಯಾನವನ್ನು ಹೇಳಿದೆ; ನಿಜವಾಗಿ ಯಾವ ಭೇದವೂ ಇಲ್ಲವೇ ಇಲ್ಲ ಎಂದು ಅಭಿಪ್ರಾಯ.

**ಅತೋಽನನ್ತೇನ ತಥಾ ಹಿ ಲಿಙ್ಗಮ್ ॥ ೨೬ ॥**

೨೬. ಆದ್ದರಿಂದ ಅನಂತನೊಡನೆ (ಒಂದಾಗುತ್ತಾನೆ) ಹಾಗೆಂದೇ (ಶ್ರುತಿಯ) ಲಿಂಗವಿದೆ.

## ಜ್ಞಾನದಿಂದ ಜೀವನು ಪ್ರಾಜ್ಞನೇ ಆಗುತ್ತಾನೆ

(ಭಾಷ್ಯ)

೩೦೧. ಅತಶ್ಚ ಸ್ವಾಭಾವಿಕತ್ವಾತ್ ಅಭೇದಸ್ಯ ಅವಿದ್ಯಾಕೃತತ್ವಾಚ್ಚ ಭೇದಸ್ಯ ವಿದ್ಯಯಾ ಅವಿದ್ಯಾಂ ವಿಧೂಯ ಜೀವಃ ಪರೇಣ ಅನನ್ತೇನ ಪ್ರಾಜ್ಞೇನ ಆತ್ಮನಾ ಏಕತಾಂ ಗಚ್ಛತಿ। ತಥಾ ಹಿ ಲಿಙ್ಗಮ್ "ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ. ೩-೨-೯), "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" (ಬೃ. ೪-೪-೬) ಇತ್ಯಾದಿ ॥

(ಭಾಷ್ಯಾರ್ಥ)

**ಮತ್ತು ಆದ್ದರಿಂದಲೇ, ಅಭೇದವು ಸ್ವಾಭಾವಿಕವಾಗಿರುವದರಿಂದಲೂ ಭೇದವು ಅವಿದ್ಯಾಕೃತವಾಗಿರುವದರಿಂದಲೂ ಅವಿದ್ಯೆಯನ್ನು ವಿದ್ಯೆಯಿಂದ ನೀಗಿಕೊಂಡು ಜೀವನು ಪರಮಾತ್ಮನೊಡನೆ, ಅನಂತನಾಗಿರುವ ಪ್ರಾಜ್ಞನೊಡನೆ, ಏಕತ್ವವನ್ನು ಪಡೆಯುತ್ತಾನೆ[1].** ಹಾಗೆಂದಲ್ಲವೆ "ಯಾವನಾದರೆ ಆ ಪರಮಬ್ರಹ್ಮವನ್ನು ಅರಿತುಕೊಳ್ಳುತ್ತಾನೋ ಅವನು ಬ್ರಹ್ಮವೇ ಆಗಿಬಿಡುತ್ತಾನೆ" (ಮುಂ. ೩-೨-೯) "ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿಯೇ ಲಯವಾಗುತ್ತಾನೆ" (ಬೃ. ೪-೪-೬) ಮುಂತಾದ (ಶ್ರುತಿಯ) ಲಿಂಗವಿದೆ[2] ?

**ಉಭಯವ್ಯಪದೇಶಾತ್ತ್ವಹಿಕುಣ್ಡಲವತ್ ॥ ೨೭ ॥**

೨೭. ಆದರೆ ಉಭಯವ್ಯಪದೇಶವಿರುವದರಿಂದ ಅಹಿ ಕುಂಡಲದಂತೆ (ಇದೆ ಎನ್ನಬೇಕು).

## ಪೂರ್ವಪಕ್ಷ: ಭೇದಾಭೇದಪಕ್ಷವೇ ಯುಕ್ತ

(ಭಾಷ್ಯ)

೩೦೨. ತಸ್ಮಿನ್ನೇವ ಸಂರಾಧ್ಯಸಂರಾಧಕಭಾವೇ ಮತಾನ್ತರಮ್ ಉಪನ್ಯಸ್ಯತಿ ಸ್ವಮತವಿಶುದ್ಧಯೇ । ಕ್ವಚಿತ್ ಜೀವಪ್ರಾಜ್ಞಯೋರ್ಭೇದೋ ವ್ಯಪ

1. ಭೇದವೂ ಸತ್ಯವಾಗಿದ್ದರೆ ಇದು ಸಾಧ್ಯವಾಗಲಾರದು.

2. ಈ ಶ್ರುತಿಗಳಲ್ಲಿ ಬ್ರಹ್ಮಜ್ಞಾನಮಾತ್ರದಿಂದ ಬ್ರಹ್ಮಸ್ವರೂಪಪ್ರಾಪ್ತಿಯಾಗುವವೆಂದು ಹೇಳಿವೆ; ಭೇದವು ಅವಿದ್ಯಕವಾದರೆ ಮಾತ್ರ ಇದು ಸಾಧ್ಯ.

ದಿಶ್ಯತೇ "ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ" (ಮುಂ. ೩-೧-೮) ಇತಿ ಧ್ಯಾತೃಧ್ಯಾತವ್ಯತ್ವೇನ, ದ್ರಷ್ಟೃದ್ರಷ್ಟವ್ಯತ್ವೇನ ಚ । "ಪರಾತ್ಪರಂ ಪುರುಷ ಮುಪೈತಿ ದಿವ್ಯಮ್" (ಮುಂ ೩-೨-೮) ಇತಿ ಗನ್ತೃಗನ್ತವ್ಯತ್ವೇನ । "ಯಃ ಸರ್ವಾಣಿ ಭೂತಾನ್ಯನ್ತರೋ ಯಮಯತಿ" (ಬೃ. ಮಾ. ?) ಇತಿ ನಿಯನ್ತೃ ನಿಯನ್ತವ್ಯತ್ವೇನ । ಕ್ವಚಿತ್ತು ತಯೋರೇವ ಅಭೇದೋ ವ್ಯಪದಿಶ್ಯತೇ "ತತ್ತ್ವಮಸಿ" (ಛಾಂ ೬-೮-೭), "ಅಹಂ ಬ್ರಹ್ಮಾಸ್ಮಿ" (ಬೃ. ೧-೪-೧೦), "ಏಷ ತ ಆತ್ಮಾ ಸರ್ವಾನ್ತರಃ" (ಬೃ. ೩-೪-೧), "ಏಷ ತ ಆತ್ಮಾನ್ತರ್ಯಾಮ್ಯಮೃತಃ" (ಬೃ. ೩-೭-೩) ಇತಿ । ತತ್ರೈವಮ್ ಉಭಯವ್ಯಪದೇಶೇ ಸತಿ ಯದಿ ಅಭೇದ ಏವ ಏಕಾನ್ತತೋ ಗೃಹ್ಯತೇ ಭೇದವ್ಯಪದೇಶೋ ನಿರಾಲಮ್ಬನ ಏವ ಸ್ಯಾತ್ । ಅತಃ ಉಭಯವ್ಯಪದೇಶದರ್ಶನಾತ್ ಅಹಿಕುಣ್ಡಲವತ್ ಅತ್ರ ತತ್ತ್ವಂ ಭವಿತುಮರ್ಹತಿ। ಯಥಾ ಅಹಿರಿತ್ಯಭೇದಃ ಕುಣ್ಡಲಾಭೋಗಪ್ರಾಂಶುತ್ವಾದೀನಿ ಇತಿ ತು ಭೇದಃ, ಏವಮಿಹಾಪಿ ಇತಿ ॥

(ಭಾಷ್ಯಾರ್ಥ)

ಅದೇ ಸಂರಾಧ್ಯಸಂರಾಧಕಭಾವದಲ್ಲಿ ತಮ್ಮ ಮತವು ವಿಶುದ್ಧವಾಗಿ (ತೋರ)ಲೆಂದು ಮತಾಂತರವನ್ನು ಹೇಳುತ್ತಿದಾರೆ.

ಕೆಲವು ಕಡೆಗಳಲ್ಲಿ ಜೀವಪ್ರಾಜ್ಞರಿಗೆ ಭೇದವನ್ನು ಹೇಳಿರುತ್ತದೆ. (ಹೇಗೆಂದರೆ) "ಆದರೆ (ಜ್ಞಾನಪ್ರಸಾದದಿಂದ ಸತ್ತ್ವಶುದ್ಧಿಯನ್ನು ಮಾಡಿಕೊಂಡು) ಧ್ಯಾನಮಾಡುವಾತನು ಆದರಿಂದ ನಿಷ್ಕಲನಾದ ಆತನನ್ನು ಕಂಡುಕೊಳ್ಳುತ್ತಾನೆ" (ಮುಂ. ೩-೧-೮) ಎಂದು ಧ್ಯಾತೃ, ಧ್ಯಾತವ್ಯ- ಎಂದೂ ದ್ರಷ್ಟೃ, ದ್ರಷ್ಟವ್ಯ- ಎಂದೂ (ಭೇದವನ್ನು ತಿಳಿಸಿರುತ್ತದೆ); "ಪರಾತ್ಪರನಾದ ದಿವ್ಯಪುರುಷನನ್ನು ಬಳಿಸಾರುತ್ತಾನೆ" (ಮುಂ. ೩-೨-೮) ಎಂದು ಗಂತೃ, ಗಂತವ್ಯ- ಎಂದೂ "ಯಾವನು ಸರ್ವಭೂತಗಳನ್ನೂ ಒಳಗಿದ್ದು ನಿಯಮನ ಮಾಡುತ್ತಿರುವನೋ" (ಬೃ. ಮಾ. ?)[1] ಎಂದು ನಿಯಂತೃನಿಯಂತವ್ಯ ಎಂದೂ (ಭೇದವನ್ನು ತಿಳಿಸಿರುತ್ತದೆ). ಆದರೆ ಮತ್ತೆ ಕೆಲವು ಕಡೆಗಳಲ್ಲಿ ಅದೇ ಇಬ್ಬರಿಗೆ ಅಭೇದವನ್ನೂ ತಿಳಿಸಿದೆ. (ಹೇಗೆಂದರೆ) "ಅದೇ ನೀನಾಗಿರುವೆ" । (ಛಾಂ. ೬-೮-೭) "ನಾನು ಬ್ರಹ್ಮವಾಗಿರುತ್ತೇನೆ" (ಬೃ. ೧-೪-೧೦), "ಇವನೇ ಎಲ್ಲಕ್ಕೂ ಒಳಗಿರುವ ಸರ್ವಾಂತರನಾದ ಆತ್ಮನು" (ಬೃ.೩-೪-೧) "ಇವನೇ ನಿನ್ನ ಆತ್ಮನಾಗಿರುವ ಅಮೃತನಾದ ಅಂತರ್ಯಾಮಿಯು" (ಬೃ. ೩-೭-೩) ಎಂದು (ಹೇಳಿದೆ). ಇಲ್ಲಿ ಹೀಗೆ ಎರಡು ಬಗೆಯ ವ್ಯಪದೇಶವೂ ಇರುವಲ್ಲಿ ಅಭೇದ

1. ಇದು ಅಂತರ್ಯಾಮಿಬ್ರಾಹ್ಮಣದವಾಕ್ಯ. ೧-೨-೧೮ರ ಭಾ. ಭಾ. ೧೯೬ರ ಅನುವಾದಕ್ಕೆ ಕೊಟ್ಟಿರುವ ಟಿಪ್ಪಣಿಯನ್ನು ನೋಡಿ.

ವೊಂದನ್ನೇ ನಿಯಮವಾಗಿ ಗ್ರಹಿಸಿದರೆ ಭೇದವ್ಯಪದೇಶಕ್ಕೆ ಯಾವ ವಿಷಯವೂ ಇಲ್ಲದೆಹೋಗುವದು. ಆದ್ದರಿಂದ ಎರಡು ಬಗೆಯ ವ್ಯಪದೇಶಗಳೂ ಕಂಡುಬರುತ್ತಿರುವದರಿಂದ ಅಹಿಕುಂಡಲದಂತೆ ಇಲ್ಲಿ ತತ್ತ್ವವಿರಬೇಕು. ಹೇಗೆ ಸರ್ಪವೆಂದು ಅಭೇದವೂ ಮಂಡಲ, ಹೆಡೆ(ಎದ್ದ) ಎತ್ತರಕ್ಕೆ (ನಿಲ್ಲುವದು)– ಮುಂತಾದದ್ದೆಂದು ಭೇದವೂ (ಇರುವವೋ) ಹಾಗೆಯೇ ಇಲ್ಲಿಯೂ (ತಿಳಿಯಬೇಕು).

**ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ॥ ೨೮ ॥**

೨೮. ಪ್ರಕಾರ, ಆಶ್ರಯ --ಇವುಗಳು ತೇಜಸ್ಸೇ ಆಗಿರುವದರಿಂದ (ಅವುಗಳಂತೆಯಾ)ದರೂ (ಭೇದಾಭೇದವಾಗಬಹುದು).

## ಭೇದಾಭೇದಕ್ಕೆ ಮತ್ತೊಂದು ದೃಷ್ಟಾಂತ

(ಭಾಷ್ಯ)

೩೦೩. ಅಥವಾ ಪ್ರಕಾಶಾಶ್ರಯವತ್ ಏತತ್ ಪ್ರತಿಪತ್ತವ್ಯಮ್ । ಯಥಾ ಪ್ರಕಾಶಃ ಸಾವಿತ್ರಃ, ತದಾಶ್ರಯಶ್ಚ ಸವಿತಾ ನಾತ್ಯನ್ತಭಿನ್ನೌ ಉಭಯೋರಪಿ ತೇಜಸ್ತ್ವಾವಿಶೇಷಾತ್, ಅಥ ಚ ಭೇದವ್ಯಪದೇಶಭಾಜೌ ಭವತಃ ಏವಮಿಹಾಪೀತಿ ॥

(ಭಾಷ್ಯಾರ್ಥ)

ಅಥವಾ ಪ್ರಕಾಶಾಶ್ರಯಗಳಂತೆ ಇದನ್ನು ಅರಿಯಬೇಕು. ಹೇಗೆ ಸೂರ್ಯನ ಪ್ರಕಾಶವೂ ಅದಕ್ಕೆ ಆಶ್ರಯನಾಗಿರುವ ಸೂರ್ಯನೂ– ಎರಡಕ್ಕೂ ತೇಜಸ್ತ್ವವು ಸಮಾನವಾಗಿರುವದರಿಂದ ಅತ್ಯಂತವಾಗಿ ಭಿನ್ನವಲ್ಲವೋ, ಆದರೂ (ಅವು) ಹೇಗೆ ಭೇದವ್ಯಪದೇಶವನ್ನು ಹೊಂದುತ್ತವೆಯೋ ಹಾಗೆಯೇ ಇಲ್ಲಿಯೂ (ಆಗಬಹುದು).

**ಪೂರ್ವವದ್ವಾ ॥ ೨೯ ॥**

೨೯. ಅಥವಾ ಮೊದಲು ಹೇಳಿದ್ದಂತೆಯೇ.

## ಸಿದ್ಧಾಂತ:
## ಔಪಾಧಿಕಭೇದವೇ ಹೊರತು ಪರಮಾರ್ಥವಾಗಿಲ್ಲ

(ಭಾಷ್ಯ)

೩೦೪. ಯಥಾ ವಾ ಪೂರ್ವಮ್ ಉಪನ್ಯಸ್ತಮ್ ಪ್ರಕಾಶಾದಿವಚ್ಚ ಅವೈಶೇಷ್ಯಮ್ ಇತಿ ತಥೈವ ಏತದ್ಭವಿತುಮರ್ಹತಿ । ತಥಾ ಹಿ ಅವಿದ್ಯಾಕೃತತ್ವಾತ್ ಬನ್ಧಸ್ಯ ವಿದ್ಯಯಾ ಮೋಕ್ಷಃ ಉಪಪದ್ಯತೇ । ಯದಿ ಪುನಃ ಪರ

ಮಾರ್ಥತ ಏವ ಬದ್ಧಃ ಕಶ್ಚಿತ್ ಆತ್ಮಾ ಅಹಿಕುಣ್ಡಲನ್ಯಾಯೇನ ಪರಸ್ಯ ಆತ್ಮನಃ ಸಂಸ್ಥಾನಭೂತಃ ಪ್ರಕಾಶಾಶ್ರಯನ್ಯಾಯೇನ ಚ ಏಕದೇಶಭೂತಃ ಅಭ್ಯುಪಗಮ್ಯೇತ, ತತಃ ಪಾರಮಾರ್ಥಿಕಸ್ಯ ಬನ್ಧಸ್ಯ ತಿರಸ್ಕರ್ತುಮ್ ಅಶಕ್ಯತ್ವಾತ್ ಮೋಕ್ಷಶಾಸ್ತ್ರವೈಯರ್ಥ್ಯಂ ಪ್ರಸಜ್ಯೇತ । ನ ಚ ಅತ್ರ ಉಭಾವಪಿ ಭೇದಾಭೇದೌ ಶ್ರುತಿಸ್ತುಲ್ಯವದ್ ವ್ಯಪದಿಶತಿ । ಅಭೇದಮೇವ ಹಿ ಪ್ರತಿಪಾದ್ಯತ್ವೇನ ನಿರ್ದಿಶತಿ, ಭೇದಂ ತು ಪೂರ್ವಸಿದ್ಧಮೇವ ಅನುವದತಿ ಅರ್ಥಾನ್ತರವಿವಕ್ಷಯಾ । ತಸ್ಮಾತ್ ಪ್ರಕಾಶಾದಿವಚ್ಚ ಅವೈಶೇಷ್ಯಮ್ ಇತ್ಯೇಷ ಏವ ಸಿದ್ಧಾನ್ತಃ ॥

(ಭಾಷ್ಯಾರ್ಥ)

ಅಥವಾ ಹೇಗೆ ಮೊದಲು "ಪ್ರಕಾಶವೇ ಮುಂತಾದವುಗಳಂತೆ ನಿರ್ವಿಶೇಷವೇ" (೩–೨–೨೫) ಎಂದು ಹೇಳಲಾಗಿತ್ತೋ ಹಾಗೆಯೇ ಇದು ಆಗುವದು ಯುಕ್ತ. ಹಾಗಾದರಲ್ಲವೆ, ಬಂಧವು ಅವಿದ್ಯಾಕೃತವಾಗಿರುವದರಿಂದ ವಿದ್ಯೆಯಿಂದ ಮೋಕ್ಷವಾಗುವದೆಂಬುದು ಯುಕ್ತವಾಗುತ್ತದೆ ? **ಹೀಗಲ್ಲದೆ ನಿಜವಾಗಿಯೇ ಬದ್ಧನಾಗಿರುವ ಒಬ್ಬಾನೊಬ್ಬ ಆತ್ಮನನ್ನು[1]– ಅಹಿಕುಂಡಲನ್ಯಾಯದಿಂದ ಪರಮಾತ್ಮನ ಆಕಾರವಿಶೇಷವೆಂದಾಗಲಿ, ಪ್ರಕಾಶಾಶ್ರಯನ್ಯಾಯದಿಂದ ಒಂದು ಭಾಗವೆಂದಾಗಲಿ –ಒಪ್ಪಿದರೆ ಆಗ ಪಾರಮಾರ್ಥಿಕವಾಗಿರುವ ಬಂಧವನ್ನು ಕಳೆಯುವದಕ್ಕೆ ಆಗದೆ ಇರುವದರಿಂದ ಮೋಕ್ಷಶಾಸ್ತ್ರವು ವ್ಯರ್ಥವೆಂಬ ಪ್ರಸಂಗವು ಬರುವದು.[2]** ಇಲ್ಲಿ ಭೇದ, ಅಭೇದ– ಇವೆರಡನ್ನೂ ಸಮಾನವಾಗಿಯೇ ಶ್ರುತಿಯು ಹೇಳುತ್ತಲೂ ಇಲ್ಲ ; ಏಕೆಂದರೆ ಅಭೇದವನ್ನೇ ಪ್ರತಿಪಾದ್ಯವೆಂದು ತಿಳಿಸುತ್ತದೆ. ಭೇದವನ್ನೋ ಎಂದರೆ ಮೊದಲು ಸಿದ್ಧವಾಗಿರುವದನ್ನೇ ಮತ್ತೊಂದು ವಿಷಯವನ್ನು ತಿಳಿಸುವದಕ್ಕಾಗಿ ಅನುವಾದಮಾಡಿಕೊಂಡಿರುತ್ತದೆ. ಆದ್ದರಿಂದ "ಪ್ರಕಾಶಾದಿವಚ್ಚಾವೈಶೇಷ್ಯಮ್" ಎಂಬ (ಸೂತ್ರದಲ್ಲಿ ಹೇಳಿತ್ತಲ್ಲ), ಅದೇ ಸಿದ್ಧಾಂತವು.

**ಪ್ರತಿಷೇಧಾಚ್ಚ ॥ ೩೦ ॥**

೩೦. ಪ್ರತಿಷೇಧಮಾಡಿರುವದರಿಂದಲೂ.

## ಬ್ರಹ್ಮಕ್ಕಿಂತ ಬೇರೆಯಾದದ್ದನ್ನು ಅಲ್ಲಗಳೆದಿರುವದರಿಂದಲೂ ಅಭೇದವೇ ಸತ್ಯ

(ಭಾಷ್ಯ)

೩೦೫. ಇತಶ್ಚ ಏಷ ಏವ ಸಿದ್ಧಾನ್ತಃ । ಯತ್ಕಾರಣಂ ಪರಸ್ಮಾತ್

1. ಜೀವನನ್ನು ಎಂದರ್ಥ.  2. ಆದ್ದರಿಂದ ಜೀವತ್ವವು ಕಲ್ಪಿತವು.

ಆತ್ಮನೋಽನ್ಯಂ ಚೇತನಂ ಪ್ರತಿಷೇಧತಿ ಶಾಸ್ತ್ರಮ್ "ನಾನ್ಯೋಽತೋಽಸ್ತಿ ದ್ರಷ್ಟಾ" (ಬೃ. ೩-೭-೨೩) ಇತ್ಯೇವಮಾದಿ । "ಅಥಾತ ಆದೇಶೋ ನೇತಿ ನೇತಿ" (ಬೃ. ೨-೩-೬), ತದೇತದ್ಬ್ರಹ್ಮಾಪೂರ್ವಮನಪರಮನನ್ತರಮಬಾಹ್ಯಮ್"[1] (ಬೃ. ೨-೫-೧೯) ಇತಿ ಬ್ರಹ್ಮವ್ಯತಿರಿಕ್ತಪ್ರಪಞ್ಚನಿರಾಕರಣಾತ್ ಬ್ರಹ್ಮಮಾತ್ರಪರಿಶೇಷಾಚ್ಚ ಏಷ ಏವ ಸಿದ್ಧಾನ್ತ ಇತಿ ಗಮ್ಯತೇ ॥

(ಭಾಷ್ಯಾರ್ಥ)

ಇದರಿಂದಲೂ ಇದೇ ಸಿದ್ಧಾಂತವು. ಯಾವ ಕಾರಣದಿಂದಲೆಂದರೆ ಪರಮಾತ್ಮನಿಗಿಂತ ಬೇರೊಬ್ಬ ಚೇತನನಿಲ್ಲವೆಂದು "ಇವನಿಗಿಂತ ಬೇರೆ ದ್ರಷ್ಟೃವಿಲ್ಲ" (ಬೃ. ೩-೭-೨೩) ಎಂಬಿದೇ ಮುಂತಾದ ಶಾಸ್ತ್ರವು ಹೇಳುತ್ತಿದೆ. "ಆ ಈ ಬ್ರಹ್ಮವು ಪೂರ್ವವಿಲ್ಲದ್ದು, ಪರವಿಲ್ಲದ್ದು, ಒಳಗಿಲ್ಲದ್ದು. ಹೊರಗಿಲ್ಲದ್ದು" (ಬೃ. ೨-೫-೧೯) ಎಂದು ಬ್ರಹ್ಮಕ್ಕಿಂತ ಬೇರೆಯಾದ ಪ್ರಪಂಚವನ್ನು ನಿರಾಕರಿಸುತ್ತಿರುವದರಿಂದಲೂ[2] ಬ್ರಹ್ಮಮಾತ್ರವನ್ನು ಉಳಿಸಿಕೊಂಡಿರುವದರಿಂದಲೂ ಇದೇ ಸಿದ್ಧಾಂತವೆಂದು ಗೊತ್ತಾಗುತ್ತದೆ.

## ೭. ಪರಾಧಿಕರಣ (ಸೂ. ೩೧-೩೭)

(ಬ್ರಹ್ಮಕ್ಕಿಂತ ಬೇರೆಯ ತತ್ತ್ವವಿಲ್ಲ)

**ಪರಮತಃ ಸೇತೂನ್ಮಾನಸಂಬನ್ಧಭೇದವ್ಯಪದೇಶೇಭ್ಯಃ ॥ ೩೧ ॥**

೩೧. ಇದಕ್ಕಿಂತ ಬೇರೊಂದು (ಇದೆ) ; ಏಕೆಂದರೆ ಸೇತು, ಉನ್ಮಾನ, ಸಂಬಂಧ, ಭೇದ –ಇವುಗಳ ವ್ಯಪದೇಶಗಳಿವೆ.

### ಪೂರ್ವಪಕ್ಷ: ಬ್ರಹ್ಮಕ್ಕಿಂತ ಬೇರೆ ತತ್ತ್ವವುಂಟೆಂಬುದಕ್ಕೆ ಯುಕ್ತಿ

(ಭಾಷ್ಯ)

೩೦೬. ಯದೇತತ್ ನಿರಸ್ತಸಮಸ್ತಪ್ರಪಞ್ಚಂ ಬ್ರಹ್ಮ ನಿರ್ಧಾರಿತಮ್ ಅಸ್ಮಾತ್ ಪರಮ್ ಅನ್ಯತ್ ತತ್ತ್ವಮ್ ಅಸ್ತಿ ನಾಸ್ತಿ ಇತಿ ಶ್ರುತಿವಿಪ್ರತಿಪತ್ತೇಃ ಸಂಶಯಃ । ಕಾನಿಚಿದ್ ಹಿ ವಾಕ್ಯಾನಿ ಆಪಾತೇನೈವ ಪ್ರತಿಭಾಸಮಾನಾನಿ ಬ್ರಹ್ಮಣೋಽಪಿ ಪರಮ್ ಅನ್ಯತ್ ತತ್ತ್ವಂ ಪ್ರತಿಪಾದಯನ್ತೀವ । ತೇಷಾಂ ಹಿ[3] ಪರಿಹಾರಮ್ ಅಭಿಧಾತುಮ್ ಅಯಮ್ ಉಪಕ್ರಮಃ ಕ್ರಿಯತೇ ।

---

1. 'ಪೂರ್ವವದ್ವಾ' ಎಂಬಲ್ಲಿ ವಾ ಎಂಬುದು ಅವಧಾರಣಾರ್ಥಕವೆಂದು ಭಾವ.
2. 'ಪ್ರತಿಷೇಧಾಚ್ಚ' ಎಂಬುದಕ್ಕೆ ಇದು ಎರಡನೆಯ ಅರ್ಥ.
3. ಇಲ್ಲಿ 'ಹಿ' ಎಂಬ ಮಾತಿನ ಆವಶ್ಯಕತೆಯೇನೆಂಬುದು ತಿಳಿಯಲಿಲ್ಲ.

ಪರಮ್ ಅತೋ ಬ್ರಹ್ಮಣೋಽನ್ಯತ್ ತತ್ತ್ವಂ ಭವಿತುಮರ್ಹತಿ । ಕುತಃ ? ಸೇತುವ್ಯಪದೇಶಾತ್, ಉನ್ಮಾನವ್ಯಪದೇಶಾತ್, ಸಂಬನ್ಧವ್ಯಪದೇಶಾತ್, ಭೇದವ್ಯಪದೇಶಾಚ್ಚ ಇತಿ । ಸೇತುವ್ಯಪದೇಶಸ್ತಾವತ್ । "ಅಥ ಯ ಆತ್ಮಾ ಸ ಸೇತುರ್ವಿಧೃತಿಃ " (ಛಾಂ. ೮–೪–೧) । ಇತಿ ಆತ್ಮಶಬ್ದಾಭಿಹಿತಸ್ಯ ಬ್ರಹ್ಮಣಃ ಸೇತುತ್ವಂ ಸಂಕೀರ್ತಯತಿ । ಸೇತುಶಬ್ದಶ್ಚ ಹಿ ಲೋಕೇ ಜಲಸನ್ತಾನವಿಚ್ಛೇದಕರೇ ಮೃದ್ದಾರ್ವಾದಿಪ್ರಚಯೇ ಪ್ರಸಿದ್ಧಃ । ಇಹ ತು ಸೇತುಶಬ್ದಃ ಆತ್ಮನಿ ಪ್ರಯುಕ್ತ ಇತಿ ಲೌಕಿಕಸೇತೋರಿವ ಆತ್ಮಸೇತೋಃ ಅನ್ಯತ್ ತತ್ತ್ವಂ ಗಮಯತಿ "ಸೇತುಂ ತೀರ್ತ್ವಾ" (ಛಾಂ. ೮–೪–೨) ಇತಿ ಚ ತರತಿಶಬ್ದಪ್ರಯೋಗಾತ್ ಯಥಾ ಲೌಕಿಕಂ ಸೇತುಂ ತೀರ್ತ್ವಾ ಜಾಙ್ಗಲಮ್ ಅಸೇತುಂ ಪ್ರಾಪ್ನೋತಿ, ಏವಮ್ ಆತ್ಮಾನಂ ಸೇತುಂ ತೀರ್ತ್ವಾ ಅನಾತ್ಮಾನಮ್ ಅಸೇತುಂ ಪ್ರಾಪ್ನೋತಿ ಇತಿ ಗಮ್ಯತೇ। ಉನ್ಮಾನವ್ಯಪದೇಶಶ್ಚ ಭವತಿ ತದೇತದ್ ಬ್ರಹ್ಮ ಚತುಷ್ಪಾದಷ್ಟಾಶಫಂ ಷೋಡಶಕಲಮ್? ಇತಿ। ಯಚ್ಚ ಲೋಕೇ ಉನ್ಮಿತಮ್ ಏತಾವದಿದಮಿತಿ ಪರಿಚ್ಛಿನ್ನಂ ಕಾರ್ಷಾಪಣಾದಿ ತತೋಽನ್ಯದ್ ವಸ್ತ್ವಸ್ತಿ ಇತಿ ಪ್ರಸಿದ್ಧಮ್। ತಥಾ ಬ್ರಹ್ಮಣೋಽಪಿ ಉನ್ಮಾನಾತ್ ತತೋಽನ್ಯೇನ ವಸ್ತುನಾ ಭವಿತವ್ಯಮ್ ಇತಿ ಗಮ್ಯತೇ । ತಥಾ ಸಂಬನ್ಧವ್ಯಪದೇಶೋಽಪಿ ಭವತಿ "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾ. ೬–೮–೧) ಇತಿ, "ಶಾರೀರ ಆತ್ಮಾ" (ಬೃ. ೪–೩–೩೫),[1] "ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ" (ಬೃ. ೪–೩) ಇತಿ ಚ । ಮಿತಾನಾಂ ಚ ಮಿತೇನ ಸಂಬಂಧೋ ದೃಷ್ಟಃ ಯಥಾ ನರಾಣಾಂ ನಗರೇಣ। ಜೀವಾನಾಂ ಚ ಬ್ರಹ್ಮಣಾ ಸಂಬನ್ಧಂ ವ್ಯಪದಿಶತಿ ಸುಷುಪ್ತೌ । ಅತಸ್ತತಃ ಪರಮ್ ಅನ್ಯತ್ ಅಮಿತಮ್ ಅಸ್ತಿ ಇತಿ ಗಮ್ಯತೇ । ಭೇದವ್ಯಪದೇಶಶ್ಚ ಏತಮೇವ ಅರ್ಥಂ ಗಮಯತಿ । ತಥಾ ಹಿ "ಅಥ ಯ ಏಷೋನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ " (ಛಾಂ. ೧–೬–೬) ಇತಿ ಆದಿತ್ಯಾಧಾರಮ್ ಈಶ್ವರಂ ವ್ಯಪದಿಶ್ಯ ತತೋ ಭೇದೇನ ಅಕ್ಷ್ಯಾಧಾರಮ್ ಈಶ್ವರಂ ವ್ಯಪದಿಶತಿ "ಅಥ ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ" (ಛಾಂ. ೧–೭–೫) ಇತಿ। ಅತಿದೇಶಂ ಚ ಅಸ್ಯ ಅಮುನಾ ರೂಪಾದಿಷು ಕರೋತಿ "ತಸ್ಯೈ ತಸ್ಯ ತದೇವ ರೂಪಂ ಯದಮುಷ್ಯ ರೂಪಂ ಯಾವಮುಷ್ಯ ಗೇಷ್ಣೌ ತೌ ಗೇಷ್ಣೌ ಯನ್ನಾಮ ತನ್ನಾಮ" (ಛಾಂ. ೧–೭–೫) ಇತಿ । ಸಾವಧಿಕಂ ಚ ಈಶ್ವರತ್ವಮ್ ಉಭಯೋರ್ವ್ಯಪದಿಶತಿ "ಯೇ ಚಾಮುಷ್ಮಾತ್ ಪರಾಞ್ಚೋ ಲೋಕಾಸ್ತೇಷಾಂ ಚೇಷ್ಟೇ ದೇವಕಾಮಾನಾಂ ಚ" (ಛಾಂ.೧–೬–೮) ಇತಿ ಏಕಸ್ಯ । "ಯೇ ಚೈತಸ್ಮಾದರ್ವಾಞ್ಚೋ ಲೋಕಸ್ತೇಷಾಂ ಚೇಷ್ಟೇ ಮನುಷ್ಯಕಾಮಾನಾಂ ಚ "

1. ಇಲ್ಲಿಯೂ ಒಂದು "ಇತಿ" ಇದ್ದರೆ ಚೆನ್ನಾಗಿತ್ತೆಂದು ತೋರುತ್ತದೆ.

(ಛಾಂ. ೧–೭–೬) ಇತ್ಯೇಕಸ್ಯ । ಯಚ್ಚೇದಂ ಮಾಗಧಸ್ಯ ರಾಜ್ಯಮ್. ಇದಂ ವೈದೇಹಸ್ಯೇತಿ । ಏವಮೇತೇಭ್ಯೋ ಹೇತುಭ್ಯಃ ಸೇತ್ವಾದಿವ್ಯಪದೇಶೇಭ್ಯೋ ಬ್ರಹ್ಮಣಃ ಪರಮಸ್ತಿ ಇತಿ ॥

(ಭಾಷ್ಯಾರ್ಥ)

ಯಾವ ಪ್ರಪಂಚವೂ ಇಲ್ಲದ್ದೆಂದು ಗೊತ್ತುಮಾಡಲಾಯಿತಲ್ಲ, ಆ ಈ ಬ್ರಹ್ಮಕ್ಕಿಂತ ಪರವಾದ ಇನ್ನೊಂದು ತತ್ತ್ವವು ಇದೆಯೊ ಇಲ್ಲವೊ ಎಂದು ಶ್ರುತಿಗಳ ವಿಪ್ರತಿಪತ್ತಿಯಿರುವದರಿಂದ ಸಂಶಯವುಂಟಾಗುತ್ತದೆ. ಹೇಗೆಂದರೆ ಕೆಲವು ವಾಕ್ಯಗಳು ತಟ್ಟನೆ ನೋಡಿದರೆ ಬ್ರಹ್ಮಕ್ಕೂ ಪರವಾದ ಮತ್ತೊಂದು ತತ್ತ್ವವನ್ನು ಪ್ರತಿಪಾದಿಸುವಂತೆ (ಕಾಣಿಸುತ್ತವೆ). ಅವುಗಳ ಪರಿಹಾರವನ್ನು ಹೇಳುವದಕ್ಕೆ ಈ (ಅಧಿಕರಣದ) ಉಪಕ್ರಮವನ್ನು ಮಾಡಿರುತ್ತದೆ.

ಈ ಬ್ರಹ್ಮಕ್ಕಿಂತ ಪರವಾದ ಮತ್ತೊಂದು ತತ್ತ್ವವು ಇರಬೇಕು. ಏಕೆ? ಎಂದರೆ ಸೇತುವ್ಯಪದೇಶ, ಉನ್ಮಾನವ್ಯಪದೇಶ, ಸಂಬಂಧವ್ಯಪದೇಶ, ಭೇದ ವ್ಯಪದೇಶ– (ಇವುಗಳಿರುತ್ತವೆ). ಮೊದಲನೆಯದಾಗಿ ಸೇತುವ್ಯಪದೇಶವು (ಹೇಗೆಂದರೆ) "ಇನ್ನು ಆತ್ಮನಿದಾನಲ್ಲ, ಅವನು ವಿಧಾರಣೆಮಾಡಿಕೊಂಡಿರುವ ಸೇತು" (ಛಾಂ. ೮–೪–೧) ಎಂದು ಆತ್ಮಶಬ್ದದಿಂದ ಹೇಳಿರುವ ಬ್ರಹ್ಮವನ್ನು ಸೇತುವೆಂದು ಕರೆದಿರುತ್ತದೆ. ಲೋಕದಲ್ಲಿ ಸೇತು ಎಂಬ ಶಬ್ದವು ನೀರಿನ ಪ್ರವಾಹವೇ ಮುಂತಾದದ್ದನ್ನು ಅಡ್ಡಿಮಾಡುವ ಮಣ್ಣು, ಕಟ್ಟಿಗೆ– ಮುಂತಾ ದವುಗಳ ಒಡ್ಡು– ಎಂಬ (ಅರ್ಥ)ದಲ್ಲಿ ಪ್ರಸಿದ್ಧವಾಗಿರುತ್ತದೆ. ಇಲ್ಲಿಯಾದರೋ ಸೇತುಶಬ್ದವನ್ನು ಆತ್ಮನ (ವಿಷಯ)ದಲ್ಲಿ ಪ್ರಯೋಗಿಸಿದೆಯಾದ್ದರಿಂದ ಲೌಕಿಕ ಸೇತುವಿನಂತೆ ಆತ್ಮಸೇತುವಿಗಿಂತ ಬೇರೆ ವಸ್ತುವು ಇದೆಯೆಂದು ಗೊತ್ತಾಗು ತ್ತದೆ. "ಸೇತುವನ್ನು ದಾಟಿ" (ಛಾಂ. ೮–೪–೨) ಎಂದು ದಾಟುತ್ತಾನೆಂಬ ಶಬ್ದವನ್ನು ಪ್ರಯೋಗಮಾಡಿರುವದರಿಂದಲೂ (ಹೀಗೆಂದು ಗೊತ್ತಾಗುತ್ತದೆ). ಹೇಗೆ ಲೋಕದಲ್ಲಿ ಸೇತುವನ್ನು ದಾಟಿ ಸೇತುವಲ್ಲದ ಬಯಲನ್ನು ಸೇರುತ್ತಾರೋ ಹಾಗೆಯೇ ಆತ್ಮನೆಂಬ ಸೇತುವನ್ನು ದಾಟಿ ಆತ್ಮನಲ್ಲದ ಅಸೇತುವನ್ನು ಪಡೆಯು ತ್ತಾರೆಂದು ಗೊತ್ತಾಗುತ್ತದೆ.

ಇದರಂತೆ "ಆ ಈ ಬ್ರಹ್ಮವು ನಾಲ್ಕುಪಾದಗಳುಳ್ಳದ್ದು, ಎಂಟು ಗೊರಸು ಗಳುಳ್ಳದ್ದು, ಹದಿನಾರು ಕಲೆಗಳುಳ್ಳದ್ದು" (?)[1] ಎಂದು ಉನ್ಮಾನವ್ಯಪದೇಶವೂ ಇದೆ. ಯಾವದು ಲೋಕದಲ್ಲಿ ಉನ್ಮಿತವಾಗಿರುತ್ತದೆಯೋ ಎಂದರೆ ಇದು

---

1. ಇದು ಯಾವ ಶ್ರುತಿಯೆಂಬುದು ತಿಳಿಯದು. ಶತಪಥಬ್ರಾಹ್ಮಣವಾಗಿರ ಬಹುದು. ಈ ವಿಶೇಷಣಗಳು ಬೇರೆಬೇರೆಯ ವಾಕ್ಯಗಳಲ್ಲಿವೆಯೋ ಒಂದೇ ವಾಕ್ಯದಲ್ಲಿವೆ ಯೋ ಗೊತ್ತಿಲ್ಲ. ಛಾಂದೋಗ್ಯ ೪–೫ರಿಂದ ಒನ್ನು ನೋಡಿ.

ಇಷ್ಟೇ ಎಂದು ಅಳತೆಯಾಗಿರುತ್ತದೆಯೋ (ಆ) **ಕಾರ್ಷಾಪಣವೇ** ಮುಂತಾದ[1] ವಸ್ತುವಿಗಿಂತ ಬೇರೊಂದು ವಸ್ತುವಿರುತ್ತದೆ ಎಂಬುದು ಪ್ರಸಿದ್ಧವಾಗಿರುತ್ತದೆ. ಅದರಂತೆ ಬ್ರಹ್ಮವೂ ಅಳತೆಯುಳ್ಳದ್ದಾಗಿರುವದರಿಂದ (ಅದಕ್ಕಿಂತ ಬೇರೆಯಾದ) ಮತ್ತೊಂದು ವಸ್ತುವಿರಬೇಕು– ಎಂದು ಗೊತ್ತಾಗುತ್ತದೆ.

ಇದರಂತೆ "ಆಗ ಎಲೈ ಸೋಮ್ಯನೆ, ಸತ್ತಿನೊಡನೆ ಒಂದಾದವನಾಗುತ್ತಾನೆ" (ಛಾಂ. ೬–೮–೧) ಎಂದೂ "(ಈ) ಶಾರೀರಾತ್ಮನು (ಪ್ರಾಜ್ಞಾತ್ಮನಿಂದ ಅನ್ವಾರೂಢನಾಗಿ)" (ಬೃ. ೪–೩–೩೫) ಎಂದೂ "ಪ್ರಾಜ್ಞಾತ್ಮನಿಂದ ಆಲಿಂಗಿತನಾಗಿ" (ಬೃ. ೪–೩–೨೧) ಎಂದೂ ಸಂಬಂಧವ್ಯಪದೇಶವೂ ಇದೆ. ಮಿತವಾದ[2] (ವಸ್ತುಗಳಿಗೆ) ಮಿತ(ವಸ್ತುಗಳೊಡನೆ) ಸಂಬಂಧವಿರುವದು ಕಂಡಿದೆ; ಉದಾಹರಣೆಗೆ ಮನುಷ್ಯರಿಗೆ ನಗರದೊಡನೆ (ಸಂಬಂಧವಾಗುತ್ತದೆ). ಜೀವರುಗಳಿಗೆ ಸುಷುಪ್ತಿಯಲ್ಲಿ ಬ್ರಹ್ಮದೊಡನೆ ಸಂಬಂಧ(ವಾಗುವದೆಂದು ಶ್ರುತಿ) ಹೇಳುತ್ತದೆ. ಆದ್ದರಿಂದ ಅದಕ್ಕಿಂತ ಪರವಾದ ಮತ್ತೊಂದು ಅಮಿತವಾದ (ವಸ್ತು)ವಿದೆ ಎಂದು ಗೊತ್ತಾಗುತ್ತದೆ.

ಭೇದವ್ಯಪದೇಶವೂ ಇದೇ ಅರ್ಥವನ್ನು ತಿಳಿಸುತ್ತದೆ. ಹೇಗೆಂದರೆ "ಇನ್ನು ಈ ಆದಿತ್ಯನೊಳಗೆ ಹಿರಣ್ಮಯನಾದ ಪುರುಷನು ಕಾಣಿಸುತ್ತಾನಷ್ಟೆ" (ಛಾಂ. ೧–೬–೬) ಎಂದು ಆದಿತ್ಯಾಧಾರನಾಗಿರುವ ಈಶ್ವರನನ್ನು ಹೇಳಿ ಅವನಿಗಿಂತ ಬೇರೆಯಾಗಿ ಅಕ್ಷಿಯ ಆಧಾರವುಳ್ಳ ಈಶ್ವರನನ್ನು "ಇನ್ನು ಈ ಅಕ್ಷಿಯೊಳಗೆ ಪುರುಷನು ಕಾಣಿಸುತ್ತಾನಷ್ಟೆ" (ಛಾಂ.೧–೭–೫) ಎಂದು ಹೇಳುತ್ತದೆ. ಈ (ಪುರುಷನಿಗೆ) ಆ (ಪುರುಷನ) ರೂಪಾದಿಗಳ ವಿಷಯದಲ್ಲಿ "ಆ ಇವನಿಗೆ ಅವನಿಗೆ ಯಾವ ರೂಪವೋ ಅದೇ ರೂಪವು, ಅವನಿಗೆ ಯಾವ ಗೆಣ್ಣುಗಳಿವೆಯೋ ಅವೇ ಗೆಣ್ಣುಗಳು, (ಅವನಿಗೆ ಯಾವ) ಹೆಸರೋ ಅದೇ ಹೆಸರು" (ಛಾಂ. ೧–೭–೫) ಎಂದು ಅತಿದೇಶವನ್ನೂ ಮಾಡಿರುತ್ತದೆ. ಈ ಇಬ್ಬರ ಈಶ್ವರತ್ವವನ್ನು ಅವಧಿಯುಳ್ಳದ್ದೆಂದೇ ತಿಳಿಸುತ್ತದೆ. (ಹೇಗೆಂದರೆ) "ಅಲ್ಲಿಂದ ಆಚೆಗೆ ಲೋಕಗಳಿರುವವಲ್ಲ, ಅವುಗಳಿಗೂ ದೇವತೆಗಳ ಕಾಮಗಳಿಗೂ ಒಡೆಯನಾಗಿರುತ್ತಾನೆ" (ಛಾಂ.೧–೬–೮) ಎಂದು ಒಬ್ಬನಿಗೆ (ಹೇಳಿರುತ್ತದೆ), "ಇಲ್ಲಿಂದ ಈಚೆಗಿರುವ ಲೋಕಗಳಿವೆಯಲ್ಲ, ಅವುಗಳಿಗೂ ಮನುಷ್ಯರ ಕಾಮಗಳಿಗೂ ಒಡೆಯನಾಗಿರುತ್ತಾನೆ" (ಛಾಂ. ೧–೭–೬) ಎಂದು ಮತ್ತೊಬ್ಬನಿಗೆ (ಹೇಳಿರುತ್ತದೆ). ಹೇಗೆ "ಇದು ಮಾಗಧನ ರಾಜ್ಯವು, ಇದು ವೈದೇಹನ (ರಾಜ್ಯವು)" ಎನ್ನುವರೋ (ಹಾಗೆಯೇ ಇದು).

---

1. ಒಂದು ತೊಲೆಯ ಹದಿನಾರು ಪಣಗಳ ಬೆಲೆಯ ಚಿನ್ನದ ನಾಣ್ಯ.
2. ಪರಿಚ್ಛಿನ್ನವಾದ.

ಹೀಗೆ ಈ ಸೇತು(ವ್ಯಪದೇಶವೇ) ಮುಂತಾದ ವ್ಯಪದೇಶಗಳಿರುವದರಿಂದ ಬ್ರಹ್ಮಕ್ಕಿಂತ ಬೇರೆ (ವಸ್ತು)ವಿದೆ.

## ಸಿದ್ಧಾಂತ: ಬ್ರಹ್ಮಕ್ಕಿಂತ ಬೇರೊಂದು ತತ್ತ್ವವಿಲ್ಲ

**ಸಾಮಾನ್ಯಾತ್ತು ॥ ೩೨ ॥**

೩೨. ಆದರೆ ಹೋಲಿಕೆಯಿಂದ (ಸೇತುವೆಂದಿದೆ).

### ಬ್ರಹ್ಮಕ್ಕಿಂತ ಬೇರೊಂದಿರುವದೆಂಬುದು ಯುಕ್ತವಲ್ಲ

(ಭಾಷ್ಯ)

೩೦೭. ಏವಂ ಪ್ರಾಪ್ತೇ ಪ್ರತಿಪಾದ್ಯತೇ ("ಸಾಮಾನ್ಯಾತ್ತು"); ತುಶಬ್ದೇನ ಪ್ರದರ್ಶಿತಾಂ ಪ್ರಾಪ್ತಿಂ ನಿರುಣದ್ಧಿ । ನ ಬ್ರಹ್ಮಣೋಽನ್ಯತ್ ಕಿಂಚಿತ್ ಭವಿತುಮರ್ಹತಿ । ಪ್ರಮಾಣಾಭಾವಾತ್ । ನ ಹಿ ಅನ್ಯಸ್ಯ ಅಸ್ತಿತ್ವೇ ಕಿಂಚಿತ್ ಪ್ರಮಾಣಮ್ ಉಪಲಭಾಮಹೇ । ಸರ್ವಸ್ಯ ಹಿ ಜನಿಮತೋ ವಸ್ತುಜಾತಸ್ಯ ಜನ್ಮಾದಿ ಬ್ರಹ್ಮಣೋ ಭವತಿ ಇತಿ ನಿರ್ಧಾರಿತಮ್ । ಅನನ್ಯತ್ವಂ ಚ ಕಾರಣಾತ್ ಕಾರ್ಯಸ್ಯ । ನ ಚ ಬ್ರಹ್ಮವ್ಯತಿರಿಕ್ತಂ ಕಿಂಚಿತ್ ಅಜಂ ಸಂಭವತಿ "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ. ೬-೨-೧)ಇತ್ಯವಧಾರಣಾತ್ । ಏಕವಿಜ್ಞಾನೇನ ಚ ಸರ್ವವಿಜ್ಞಾನಪ್ರತಿಜ್ಞಾನಾತ್ ನ ಬ್ರಹ್ಮವ್ಯತಿರಿಕ್ತವಸ್ತ್ವಸ್ತಿತ್ವಮ್ ಅವಕಲ್ಪತೇ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳಲಾಗುತ್ತದೆ. ('ಸಾಮಾನ್ಯಾತ್ತು')। (ಸೂತ್ರದಲ್ಲಿರುವ) ತುಶಬ್ದದಿಂದ (ಮೇಲೆ) ತೋರಿಸಿರುವ (ಪೂರ್ವಪಕ್ಷದ) ಪ್ರಾಪ್ತಿಯನ್ನು ತೆಗೆದುಹಾಕಿರುತ್ತದೆ. ಬ್ರಹ್ಮಕ್ಕಿಂತ ಬೇರೆ ಮತ್ತೊಂದು ಯಾವದೂ ಇರಲಾರದು; ಏಕೆಂದರೆ ಪ್ರಮಾಣವಿರುವದಿಲ್ಲ. (ಇದರ ವಿವರ): ಮತ್ತೊಂದು (ವಸ್ತು)ವಿರುವದೆಂಬುದಕ್ಕೆ ಯಾವ ಪ್ರಮಾಣವನ್ನೂ ಕಾಣೆವು. ಏಕೆಂದರೆ ಜನ್ಮವುಳ್ಳ ಪ್ರತಿಯೊಂದು ವಸ್ತುವಿಗೂ ಜನ್ಮವೇ ಮುಂತಾದದ್ದು ಬ್ರಹ್ಮದಿಂದ ಆಗುತ್ತದೆ ಎಂದು ನಿರ್ಧಾರಣ ಮಾಡಿದ್ದಾಗಿದೆ; ಕಾರ್ಯವು ಕಾರಣಕ್ಕಿಂತ ಬೇರೆಯಲ್ಲವೆಂದೂ (ನಿರ್ಧಾರಣ ಮಾಡಿದ್ದಾಗಿದೆ). ಬ್ರಹ್ಮಕ್ಕಿಂತ ಬೇರೆಯಾಗಿ ಯಾವದೊಂದೂ ಜನ್ಮರಹಿತವಾದದ್ದು ಸಂಭವಿಸುವದಿಲ್ಲ; ಏಕೆಂದರೆ "ಸೋಮ್ಯನೆ, ಇದು ಮೊದಲು ಸತ್ತೊಂದೇ, ತನಗೆರಡನೆಯದಿಲ್ಲದೆ ಇತ್ತು" (ಛಾಂ. ೬-೨-೧) ಎಂದು ಒತ್ತಿ

ಹೇಳಿರುತ್ತದೆ. ಮತ್ತು ಒಂದನ್ನರಿತುಕೊಳ್ಳುವದರಿಂದ ಎಲ್ಲವನ್ನೂ ಅರಿತುಕೊಂಡಂತಾಗುವದೆಂದು ಪ್ರತಿಜ್ಞೆಮಾಡಿರುವದರಿಂದಲೂ ಬ್ರಹ್ಮಕ್ಕಿಂತ ಬೇರೆಯಾದ (ಮತ್ತೊಂದು) ವಸ್ತುವಿದೆ ಎಂಬುದು ಹೊಂದುವದಿಲ್ಲ.

## ಸೇತುವ್ಯಪದೇಶವು ದೃಷ್ಟಾಂತಕ್ಕಾಗಿ ಹೇಳಿದ್ದು

(ಭಾಷ್ಯ)

೩೦೮. ನನು ಸೇತ್ವಾದಿವ್ಯಪದೇಶಾಃ । ಬ್ರಹ್ಮವ್ಯತಿರಿಕ್ತಂ ತತ್ತ್ವಂ ಸೂಚಯನ್ತಿ ಇತ್ಯುಕ್ತಮ್ । ನೇತ್ಯುಚ್ಯತೇ । ಸೇತುವ್ಯಪದೇಶಸ್ತಾವತ್ ನ ಬ್ರಹ್ಮಣೋ ಬಾಹ್ಯಸ್ಯ ಸದ್ಭಾವಂ ಪ್ರತಿಪಾದಯಿತುಂ ಕ್ಷಮತೇ । 'ಸೇತುರಾತ್ಮಾ' ಇತಿ ಹಿ ಆಹ, ನ ತತಃ ಪರಮಸ್ತಿ ಇತಿ । ತತ್ರ ಪರಸ್ಮಿನ್ ಅಸತಿ ಸೇತುತ್ವಂ ನಾವಕಲ್ಪತೇ ಇತಿ ಪರಂ ಕಿಮಪಿ ಕಲ್ಪ್ಯೇತ । ನ ಚೈತತ್ ನ್ಯಾಯ್ಯಮ್ । ಹಠೋ ಹಿ ಅಪ್ರಸಿದ್ಧಕಲ್ಪನಾ । ಅಪಿ ಚ ಸೇತುವ್ಯಪದೇಶಾತ್ ಆತ್ಮನೋ ಲೌಕಿಕಸೇತುನಿದರ್ಶನೇನ ಸೇತುಬಾಹ್ಯವಸ್ತುತಾಂ ಪ್ರಸಞ್ಜಯತಾ ಮೃದ್ದಾರುಮಯತಾಪಿ ಪ್ರಾಸಜ್ಯೇತ । ನ ಚೈತತ್ ನ್ಯಾಯ್ಯಮ್ । ಅಜತ್ವಾದಿಶ್ರುತಿವಿರೋಧಾತ್ । ಸೇತುಸಾಮಾನ್ಯಾತ್ತು ಸೇತುಶಬ್ದಃ ಆತ್ಮನಿ ಪ್ರಯುಕ್ತಃ ಇತಿ ಶ್ಲಿಷ್ಯತೇ । ಜಗತಃ ತನ್ಮರ್ಯಾದಾನಾಂ ಚ ವಿಧಾರಕತ್ವಂ ಸೇತುಸಾಮಾನ್ಯಮ್ ಆತ್ಮನಃ । ಅತಃ ಸೇತುರಿವ ಸೇತುಃ ಇತಿ ಪ್ರಕೃತ ಆತ್ಮಾ ಸ್ತೂಯತೇ । 'ಸೇತುಂ ತೀರ್ತ್ವಾ' ಇತ್ಯಪಿ ತರತೇಃ ಅತಿಕ್ರಮಾಸಂಭವಾತ್ ಪ್ರಾಪ್ನೋತ್ಯರ್ಥ ಏವ ವರ್ತತೇ । ಯಥಾ ವ್ಯಾಕರಣಂ ತೀರ್ಣಃ ಇತಿ ಪ್ರಾಪ್ತ ಇತ್ಯುಚ್ಯತೇ[1] ನಾತಿಕ್ರಾನ್ತಃ ತದ್ವತ್ ॥

(ಭಾಷ್ಯಾರ್ಥ)

(ಆಕ್ಷೇಪ) ;— ಸೇತ್ವಾದಿವ್ಯಪದೇಶಗಳು ಬ್ರಹ್ಮಕ್ಕಿಂತ ವ್ಯತಿರಿಕ್ತವಾದ ತತ್ತ್ವವನ್ನು ಸೂಚಿಸುತ್ತವೆ ಎಂದು ಹೇಳಿದ್ದೆವಲ್ಲ !

(ಪರಿಹಾರ) :— ಹಾಗಲ್ಲ ಎನ್ನುತ್ತೇವೆ. ಮೊದಲನೆಯದಾಗಿ ಸೇತುವ್ಯಪದೇಶವಿದೆಯೆಲ್ಲ, ಬ್ರಹ್ಮಕ್ಕೆ ಹೇತುವಾಗಿರುವ (ವಸ್ತುವಿನ) ಇರುವಿಕೆಯನ್ನು ಹೇಳಲಾರದು. ಏಕೆಂದರೆ 'ಆತ್ಮನು ಸೇತು' ಎಂದೇ (ಶ್ರುತಿ) ಹೇಳುತ್ತದೆ, "ಅದಕ್ಕಿಂತ ಬೇರೊಂದು ಇದೆ' ಎಂದೇನೂ (ಹೇಳು)ತ್ತಿಲ್ಲ. ಇಲ್ಲಿ ಮತ್ತೊಂದು ಇಲ್ಲದಿದ್ದರೆ ಸೇತುವೆಂಬುದು ಹೊಂದುವದಿಲ್ಲ ಎಂಬ ಕಾರಣದಿಂದ ಮತ್ತೊಂದು ಯಾವದೋ ಒಂದು (ವಸ್ತುವನ್ನು) ಕಲ್ಪಿಸಬೇಕಾಗಿದೆ. ಆದರೆ ಇದು ಯುಕ್ತ

1. "ಪ್ರಾಪ್ತ ಉಚ್ಯತೇ" ಎಂದಿಷ್ಟೇ ಇದ್ದರೂ ಸಾಕು ; ಇಲ್ಲದಿದ್ದರೆ ನಾತಿಕ್ರಾನ್ತ ಇತಿ ಎಂದಿರಬೇಕಾಗುವದು.

ವಲ್ಲ. ಏಕೆಂದರೆ ಅಪ್ರಸಿದ್ಧವಾದದ್ದನ್ನು ಕಲ್ಪಿಸುವದು ದುರಾಗ್ರಹವಾಗಿರುತ್ತದೆ. ಇದಲ್ಲದೆ ಸೇತುವ್ಯಪದೇಶದಿಂದ ಆತ್ಮನಿಗೆ ಲೌಕಿಕಸೇತುವನ್ನು ದೃಷ್ಟಾಂತವಾಗಿ ಕೊಟ್ಟಿರುವದರಿಂದ ಸೇತುವಿಗಿಂತ ಹೊರಚ್ಚಾದ ವಸ್ತುವಿರಬೇಕೆಂಬ ಪ್ರಸಂಗವನ್ನು ತಂದವನು (ಆತ್ಮನು) ಮಣ್ಣು, ಕಟ್ಟಿಗೆ ಇವುಗಳಿಂದಾಗುತ್ತಾನೆಂಬ ಪ್ರಸಂಗವನ್ನೂ ತಂದಾನು. ಆದರೆ ಅದು ಯುಕ್ತವಲ್ಲ; ಏಕೆಂದರೆ ಅಜನು ಎಂದುಮುಂತಾಗಿ ಹೇಳುವ ಶ್ರುತಿಗೆ ವಿರೋಧವಾಗುತ್ತದೆ. ಸೇತುವಿಗೆ ಸಮಾನವಾಗಿರುವದರಿಂದಲೇ ಸೇತುಶಬ್ದವನ್ನು ಆತ್ಮನಲ್ಲಿ ಪ್ರಯೋಗಿಸಿದೆ ಎಂಬುದು ಯುಕ್ತವಾಗಿರುತ್ತದೆ. ಜಗತ್ತನ್ನೂ ಅದರ ಮರ್ಯಾದೆಗಳನ್ನೂ ನಿಲ್ಲಿಸಿಕೊಂಡಿರುವದೇ ಆತ್ಮನಲ್ಲಿ ಸೇತುವಿನ ಸಮಾನತ್ವವು. ಆದ್ದರಿಂದ ಪ್ರಕೃತನಾದ ಆತ್ಮನನ್ನು ಸೇತುವಿನಂತಿರುವದರಿಂದ ಸೇತು ಎಂದು ಹೊಗಳಿರುತ್ತದೆ. "ಸೇತುವನ್ನು ದಾಟಿ" (ಛಾಂ. ೮-೪-೨) ಎಂಬಲ್ಲಿಯೂ ತರಣಶಬ್ದವು ಮೀರುವದೆಂಬುದು ಸಂಭವಿಸದೆ ಇರುವದರಿಂದ ಪ್ರಾಪ್ತಿ ಎಂಬರ್ಥದಲ್ಲಿಯೇ ಬಂದಿರುತ್ತದೆ; ಹೇಗೆ 'ವ್ಯಾಕರಣವನ್ನು ತರಣಮಾಡಿದ್ದಾನೆ' ಎಂದು (ವ್ಯಾಕರಣವನ್ನು) ಪಡೆದುಕೊಂಡವನನ್ನೇ ಹೇಳುತ್ತಾರೋ ಅದನ್ನು ಮೀರಿದವನನ್ನು ಹೇಳುವದಿಲ್ಲವೋ ಆದರಂತೆಯೇ (ಇಲ್ಲಿಯೂ ತಿಳಿಯಬೇಕು).

**ಬುದ್ಧ್ಯರ್ಥಃ ಪಾದವತ್ ॥ ೩೩ ॥**

೩೩. ಬುದ್ಧಿಗಾಗಿ (ಉನ್ಮಾನವ್ಯಪದೇಶವು ಬಂದಿದೆ); ಪಾದದಂತೆ.

## ಬ್ರಹ್ಮಕ್ಕೆ ಪರಿಚ್ಛೇದವನ್ನು ಹೇಳಿರುವದು ಉಪಾಸನೆಗಾಗಿ

(ಭಾಷ್ಯ)

೩೯. ಯದಪ್ಯುಕ್ತಮ್ ಉನ್ಮಾನವ್ಯಪದೇಶಾತ್ ಅಸ್ತಿ ಪರಮ್ ಇತಿ । ತತ್ರ ಅಭಿಧೀಯತೇ । ಉನ್ಮಾನವ್ಯಪದೇಶೋಽಪಿ ನ ಬ್ರಹ್ಮವ್ಯತಿರಿಕ್ತವಸ್ತ್ವಸ್ತಿತ್ವಪ್ರತಿಪತ್ತ್ಯರ್ಥಃ । ಕಿಮರ್ಥಸ್ತರ್ಹಿ ? ಬುದ್ಧ್ಯರ್ಥಃ । ಉಪಾಸನಾರ್ಥಃ ಇತಿ ಯಾವತ್ । "ಚತುಷ್ಪಾದಷ್ಟಾಶಫಂ ಷೋಡಶಕಲಮ್" (?) ಇತ್ಯೇವಂರೂಪಾ ಬುದ್ಧಿಃ ಕಥಂ ನು ನಾಮ ಬ್ರಹ್ಮಣಿ ಸ್ಥಿರಾ ಸ್ಯಾತ್ ಇತಿ ವಿಕಾರದ್ವಾರೇಣ ಬ್ರಹ್ಮಣಃ ಉನ್ಮಾನಕಲ್ಪನೈವ ಕ್ರಿಯತೇ । ನ ಹಿ ಅವಿಕಾರೇ ಅನನ್ತೇ ಬ್ರಹ್ಮಣಿ ಸರ್ವೈಃ ಪುಂಭಿಃ ಶಕ್ಯಾ ಬುದ್ಧಿಃ ಸ್ಥಾಪಯಿತುಮ್ ।

1. ಜಗತ್ತಿನಲ್ಲಿರಬೇಕಾದ ವರ್ಣಾಶ್ರಮಧರ್ಮಗಳ ಕಟ್ಟನ್ನೂ ಎಂದರ್ಥ.

ಮನ್ದಮಧ್ಯಮೋತ್ತಮಬುದ್ಧಿತ್ವಾತ್ ಪುಂಸಾಮಿತಿ । ಪಾದವತ್ ಯಥಾ ಮನಆಕಾಶಯೋಃ ಅಧ್ಯಾತ್ಮಮ್ ಅಧಿದೈವತಂ ಚ ಬ್ರಹ್ಮಪ್ರತೀಕಯೋಃ ಆಮ್ನಾತಯೋಃ ಚತ್ವಾರೋ ವಾಗಾದಯಃ ಮನಃಸಂಬನ್ಧಿನಃ ಪಾದಾಃ ಕಲ್ಪ್ಯನ್ತೇ ಚತ್ವಾರಶ್ಚ ಅಗ್ನ್ಯಾದಯಃ ಆಕಾಶಸಂಬನ್ಧಿನಃ ಆಧ್ಯಾನಾಯ, ತದ್ವತ್ । ಅಥವಾ ಪಾದವತ್ ಇತಿ ಯಥಾ ಕಾರ್ಷಾಪಣೇ ಪಾದವಿಭಾಗೋ ವ್ಯವಹಾರಪ್ರಾಚುರ್ಯಾಯ ಕಲ್ಪ್ಯತೇ । ನ ಹಿ ಸಕಲೇನೈವ ಕಾರ್ಷಾಪಣೇನ ಸರ್ವದಾ ಸರ್ವೇ ಜನಾಃ ವ್ಯವಹರ್ತುಮ್ ಈಶತೇ । ಕ್ರಯವಿಕ್ರಯೇ ಪರಿಮಾಣಾನಿಯಮಾತ್ ; ತದ್ವತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಇನ್ನು ಉನ್ಮಾನವ್ಯಪದೇಶವಿರುವದರಿಂದ (ಬ್ರಹ್ಮಕ್ಕಿಂತ) ಪರವಾದ ವಸ್ತು (ಮತ್ತೊಂದು) ಇದೆ ಎಂದಿರಲ್ಲ, ಅದಕ್ಕೆ ಹೇಳುತ್ತೇವೆ. ಉನ್ಮಾನ ವ್ಯಪದೇಶವೂ ಬ್ರಹ್ಮವ್ಯತಿರಿಕ್ತವಾದ ವಸ್ತುವಿದೆ ಎಂದು ತಿಳಿಸುವದಕ್ಕೆ (ಬಂದಿಲ್ಲ). ಮತ್ತೇತಕ್ಕೆಂದರೆ ಬುದ್ಧಿಗಾಗಿ, ಎಂದರೆ ಉಪಾಸನೆಗಾಗಿ ಎಂದು ತಾತ್ಪರ್ಯ. **"ನಾಲ್ಕು ಪಾದಗಳುಳ್ಳದ್ದು, ಎಂಟು ಗೊರಸುಳ್ಳದ್ದು, ಹದಿನಾರು ಕಲೆಗಳುಳ್ಳದ್ದು" (?) ಎಂಬೀ ರೂಪದ ಉನ್ಮಾನಕಲ್ಪನೆಯನ್ನೇ (ಇಲ್ಲಿ) ಮಾಡಿರುತ್ತದೆ ; ಬುದ್ಧಿಯು ಬ್ರಹ್ಮದಲ್ಲಿ ಹೇಗಾದರೂ ಸ್ಥಿರವಾಗಿ ನಿಲ್ಲಲಿ ಎಂಬುದಕ್ಕಾಗಿ ವಿಕಾರದ್ವಾರದಿಂದ ಬ್ರಹ್ಮಕ್ಕೇ (ಹೀಗೆ ಕಲ್ಪಿಸಿದೆ). ಏಕೆಂದರೆ ಅವಿಕಾರವಾದ ಅನಂತವಾದ ಬ್ರಹ್ಮದಲ್ಲಿ ಎಲ್ಲಾ ಪುರುಷರೂ ಬುದ್ಧಿಯನ್ನು ನಿಲ್ಲಿಸುವದಕ್ಕೆ ಆಗಲಾರದಷ್ಟೆ. ಏಕೆಂದರೆ ಜನರು ಮಂದ, ಮಧ್ಯಮ, ಉತ್ತಮ –ಎಂಬ (ಮೂರು ಬಗೆಯ) ಬುದ್ಧಿಯುಳ್ಳವರಾಗಿರುತ್ತಾರೆ.**

"ಪಾದದಂತೆ" (ಎಂಬುದರ ಅಭಿಪ್ರಾಯವಿದು) : ಹೇಗೆ ಮನಸ್ಸು, ಆಕಾಶ –ಇವುಗಳು ಅಧ್ಯಾತ್ಮವಾಗಿ, ಅಧಿದೈವತವಾಗಿ ಬ್ರಹ್ಮಪ್ರತೀಕವಾಗಿರುವವೆಂದು (ಶ್ರುತಿ)ಯಲ್ಲಿ ಹೇಳಿ ವಾಗಾದಿಗಳು ಮನಃಸಂಬಂಧಿಗಳಾದ ಪಾದಗಳೆಂದೂ ಅಗ್ನ್ಯಾದಿಗಳು ಆಕಾಶಸಂಬಂಧಿಗಳಾದ ಪಾದಗಳೆಂದೂ ಉಪಾಸನೆಗಾಗಿ ಕಲ್ಪಿತವಾಗಿರುವವೋ[1] ಹಾಗೆಯೇ (ಇದು). ಅಥವಾ 'ಪಾದದಂತೆ' ಎಂದರೆ (ಈ ಅರ್ಥ) : ಹೇಗೆ ಕಾರ್ಷಾಪಣ(ನಾಣ್ಯ)ದಲ್ಲಿ ಪಾದಗಳೆಂಬ ವಿಭಾಗವನ್ನು

1. ಛಾಂ. ೩–೧೮–೧ರಲ್ಲಿ ಮನಸ್ಸು, ಆಕಾಶ –ಇವುಗಳನ್ನು ಬ್ರಹ್ಮವೆಂದು ಉಪಾಸನೆಮಾಡಬೇಕೆಂದು ವಿಧಿಸಿದೆ. ಮುಂದೆ ೨,೩,೪ರಲ್ಲಿ ಅವುಗಳ ಪಾದಗಳಾಗಿ ವಾಗಾದಿಗಳನ್ನೂ ಅಗ್ನ್ಯಾದಿಗಳನ್ನೂ ಕಲ್ಪಿಸಿದೆ. ಆ ಕಲ್ಪನೆಯು ಉಪಾಸನೆಗಾಗಿ ಹೇಳಿದ್ದು, ವಸ್ತುಸ್ವಭಾವವಲ್ಲ. ಹಾಗೆಯೇ ಇದು.

ವ್ಯವಹಾರವು ಪ್ರಚುರವಾಗಿ ನಡೆಯುವದಕ್ಕಾಗಿ ಕಲ್ಪಿಸಿರುತ್ತಾರೋ[1] ಕ್ರಯ ವಿಕ್ರಯದಲ್ಲಿ ಪರಿಮಾಣವು ಗೊತ್ತಾಗಿರುವದಿಲ್ಲವಾಗಿ ಪೂರ್ಣವಾದ ಕಾರ್ಷಾಪಣವನ್ನೇ ಯಾವಾಗಲೂ ಎಲ್ಲಾ ಜನರೂ ವ್ಯವಹಾರದಲ್ಲಿ ಬಳಸುವದಕ್ಕೆ ಶಕ್ತರಲ್ಲವೋ– ಹಾಗೆಯೇ ಎಂದರ್ಥ.

## ಸ್ಥಾನವಿಶೇಷಾತ್ ಪ್ರಕಾಶಾದಿವತ್ ॥ ೩೪ ॥

೩೪. ಸ್ಥಾನವಿಶೇಷದಿಂದ ಪ್ರಕಾಶಾದಿಗಳಂತೆ (ಆಗಬಹುದು).

### -ಸಂಬಂಧಭೇದಗಳ ವ್ಯಪದೇಶವು ಔಪಾಧಿಕ

(ಭಾಷ್ಯ)

೩೧೦. ಇಹ ಸೂತ್ರೇ ದ್ವಯೋರಪಿ ಸಂಬನ್ಧಭೇದವ್ಯಪದೇಶಯೋಃ ಪರಿಹಾರೋ ವಿಧೀಯತೇ । ಯದಪ್ಯುಕ್ತಮ್ ಸಂಬನ್ಧವ್ಯಪದೇಶಾತ್ ಭೇದವ್ಯಪದೇಶಾಚ್ಚ ಪರಮ್ ಅತಃ ಸ್ಯಾತ್ ಇತಿ, ತದಪ್ಯಸತ್ । ಯತಃ ಏಕಸ್ಯಾಪಿ ಸ್ಥಾನವಿಶೇಷಾಪೇಕ್ಷಯಾ ಏತೌ ವ್ಯಪದೇಶೌ ಉಪಪದ್ಯೇತೇ । ಸಂಬನ್ಧವ್ಯಪದೇಶೇ ತಾವತ್ ಅಯಮರ್ಥಃ । ಬುದ್ಧ್ಯಾದ್ಯುಪಾಧಿಸ್ಥಾನವಿಶೇಷಯೋಗಾತ್ ಉದ್ಭೂತಸ್ಯ ವಿಶೇಷವಿಜ್ಞಾನಸ್ಯ ಉಪಾಧ್ಯುಪಶಮೇ ಯ ಉಪಶಮಃ ಸ ಪರಮಾತ್ಮನಾ ಸಂಬನ್ಧಃ ಇತಿ ಉಪಾಧ್ಯಪೇಕ್ಷಯೈವ ಉಪಚರ್ಯತೇ, ನ ಪರಿಮಿತತ್ವಾಪೇಕ್ಷಯಾ । ತಥಾ ಭೇದವ್ಯಪದೇಶೋಽಪಿ ಬ್ರಹ್ಮಣ ಉಪಾಧಿಭೇದಾಪೇಕ್ಷಯಾ ಉಪಚರ್ಯತೇ, ನ ಸ್ವರೂಪಭೇದಾಪೇಕ್ಷಯಾ । 'ಪ್ರಕಾಶಾದಿವತ್' ಇತಿ ಉಪಮೋಪಾದಾನಮ್ । ಯಥಾ ಏಕಸ್ಯ ಪ್ರಕಾಶಸ್ಯ ಸೌರ್ಯಸ್ಯ ಚಾನ್ದ್ರಮಸಸ್ಯ ವಾ ಉಪಾಧಿಯೋಗಾತ್ ಉಪಜಾತವಿಶೇಷಸ್ಯ ಉಪಾಧ್ಯುಪಶಮಾತ್ ಸಂಬನ್ಧವ್ಯಪದೇಶೋ ಭವತಿ ಉಪಾಧಿಭೇದಾಚ್ಚ ಭೇದವ್ಯಪದೇಶಃ। ಯಥಾ ವಾ ಸೂಚೀಪಾಶಾಕಾಶಾದಿಷು ಉಪಾಧ್ಯಪೇಕ್ಷಯೈವ ಏತೌ ಸಂಬನ್ಧಭೇದವ್ಯಪದೇಶೌ ಭವತಃ, ತದ್ವತ್ ॥

(ಭಾಷ್ಯಾರ್ಥ)

ಈ ಸೂತ್ರದಲ್ಲಿ ಸಂಬಂಧ(ವ್ಯಪದೇಶ), ಭೇದವ್ಯಪದೇಶ– (ಈ) ಎರಡರ ಪರಿಹಾರವನ್ನೂ ಹೇಳಿರುತ್ತದೆ.

---

1. ಕಾರ್ಷಾಪಣವನ್ನೇ ನಾಲ್ಕು ತುಂಡುಮಾಡಿರುವದಿಲ್ಲ; ಒಂದೊಂದು ಪಾದವು ಕಾರ್ಷಾಪಣದ ನಾಲ್ಕನೆಯ ಅಂಶವೆಂದು ವ್ಯವಹಾರಕ್ಕೆ ಇಟ್ಟುಕೊಂಡಿರುತ್ತಾರೆ. ಇದರಂತೆ ಅನಂತವಾದ ಬ್ರಹ್ಮವನ್ನೇ ಅರಿತುಕೊಳ್ಳಲಾರದವರಿಗಾಗಿ ಆಯಾ ಉಪಾಸನೆಗೆ ತಕ್ಕಂತೆ ಪರಿಚ್ಛಿನ್ನವಾಗಿರುವಂತೆ ಕಲ್ಪಿಸಿ ಹೇಳಿರುತ್ತವೆ.

ಇನ್ನು ಸಂಬಂಧವ್ಯಪದೇಶವಿರುವದರಿಂದಲೂ ಭೇದವ್ಯಪದೇಶವಿರುವದರಿಂದಲೂ ಈ (ಬ್ರಹ್ಮ)ಕ್ಕಿಂತ ಬೇರೊಂದು (ವಸ್ತು)ವಿರಬಹುದು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದೂ ಸರಿಯಲ್ಲ. ಏಕೆಂದರೆ ಒಂದೇ (ಬ್ರಹ್ಮಕ್ಕೆ) ಸ್ಥಾನವಿಶೇಷದ ಅಪೇಕ್ಷೆಯಿಂದ ಈ ವ್ಯಪದೇಶಗಳೆರಡೂ ಹೊಂದುತ್ತವೆ. ಮೊದಲನೆಯದಾಗಿ ಸಂಬಂಧವ್ಯಪದೇಶ(ವನ್ನಿಟ್ಟುಕೊಂಡಾಗ ಸೂತ್ರಕ್ಕೆ) ಇದು ಅರ್ಥವು: **ಬುದ್ಧಿಯೇ ಮುಂತಾದ ಉಪಾಧಿ(ರೂಪ)ಸ್ಥಾನವಿಶೇಷದ ಸಂಬಂಧದಿಂದ ಉಂಟಾಗಿರುವ ವಿಶೇಷವಿಜ್ಞಾನವು ಉಪಾಧಿಯು ನಾಶವಾಗಲು ನಾಶವಾಗುವದಲ್ಲ, ಅದನ್ನೇ ಪರಮಾತ್ಮನೊಡನೆ ಸಂಬಂಧವು ಎಂದು ಉಪಾಧಿಯ ಅಪೇಕ್ಷೆಯಿಂದಲೇ ಉಪಚಾರಕ್ಕಾಗಿ ಹೇಳಿದೆ**[1], ಅದು ಪರಿಮಿತವಾಗಿರುವದೆಂಬ ಅಪೇಕ್ಷೆಯಿಂದಲ್ಲ.

ಇದರಂತೆ, ಬ್ರಹ್ಮಕ್ಕೆ ಭೇದವ್ಯಪದೇಶವನ್ನೂ ಉಪಾಧಿಗಳ ಭೇದದ ಅಪೇಕ್ಷೆಯಿಂದಲೇ ಉಪಚಾರಕ್ಕಾಗಿ ಹೇಳಿರುತ್ತದೆಯೇ ಹೊರತು ಸ್ವರೂಪವೇ ಬೇರೆ ಎಂಬುದರ ಅಪೇಕ್ಷೆಯಿಂದಲ್ಲ. ಪ್ರಕಾಶಾದಿಗಳಂತೆ ಎಂದು ಉಪಮಾನವನ್ನು ತೆಗೆದುಕೊಂಡು ಹೇಳಿದೆ. ಹೇಗೆ ಒಂದೇ ಆಗಿರುವ ಸೂರ್ಯ(ಪ್ರಕಾಶಕ್ಕೆ) ಅಥವಾ ಚಂದ್ರ(ಪ್ರಕಾಶಕ್ಕೆ) ಉಪಾಧಿಯ ಸಂಬಂಧದಿಂದ ವಿಶೇಷವು ಉಂಟಾದದ್ದು ಉಪಾಧಿಯು ನಾಶವಾಗಲು ಸಂಬಂಧವ್ಯಪದೇಶವಾಗುವದೋ ಮತ್ತು ಉಪಾಧಿಭೇದದಿಂದಲೇ ಭೇದವ್ಯಪದೇಶವೂ ಆಗುವದೋ, ಅಥವಾ ಹೇಗೆ ಸೂಜಿ, ಪಾಶ[2], ಇವುಗಳ ಆಕಾಶ– ಮುಂತಾದವುಗಳಲ್ಲಿ ಉಪಾಧಿಯ ಅಪೇಕ್ಷೆಯಿಂದ ಈ ಸಂಬಂಧಭೇದಗಳ ವ್ಯಪದೇಶಗಳಾಗುವವೋ ಅದರಂತೆಯೇ (ಇದು)

**ಉಪಪತ್ತೇಶ್ಚ || ೩೫ ||**

೩೫. ಹೊಂದುವದರಿಂದಲೂ ಹೀಗೆ.

---

1. ಸುಷುಪ್ತಿಯಲ್ಲಿ ಜೀವನಿಗೆ ನಿಜವಾಗಿ ಬ್ರಹ್ಮದ ಸಂಬಂಧವಾಗುವದಿಲ್ಲ ; ಏಕೆಂದರೆ ಯಾವಾಗಲೂ ಅವನು ಬ್ರಹ್ಮವೇ ಆಗಿರುತ್ತಾನೆ. ಉಪಾಧಿಯಿಂದಾಗಿದ್ದ ವಿಶೇಷವು ಹೋಗುವದನ್ನೇ ಸಂಬಂಧವೆಂದು ಕರೆಯುತ್ತಾರೆ ಎಂದು ಸ್ಪಷ್ಟವಾಗಿ ಹೇಳಿರುವದನ್ನು ಲಕ್ಷ್ಯದಲ್ಲಿಡಬೇಕು. ಸುಷುಪ್ತಿಯಲ್ಲಿ ಜೀವಬ್ರಹ್ಮವಿಭಾಗವೇ ಇರುವದೆಂದು ವಾದಿಸುವ ಈಗಿನ ವೇದಾಂತಿಗಳ ಮತವು ಈ ಭಾಷ್ಯಕ್ಕೆ ವಿರುದ್ಧವೆಂಬುದು ಸ್ಫುಟವಾಗಿರುತ್ತದೆ.

2. 'ಪಾಶವೆಂದರೆ ದಾಳವೆಂದು ಕೆಲವರೂ, ಹೊರಸಿಗೆ ಹಾಕುವ ಹಗ್ಗವೆಂದು ಕೆಲವರೂ ಹೇಳುತ್ತಾರೆ. ಹಗ್ಗದ ಕುಣಿಕೆ ಎಂದು ಅರ್ಥಮಾಡುವದು ಉತ್ತಮ. ಉಪಾಧಿಭೇದದಿಂದ ಒಂದೇ ಆಕಾಶಕ್ಕೆ ಭೇದವ್ಯಪದೇಶವಾಗುವಂತೆ ಇಲ್ಲಿಯೂ ಆಗುತ್ತದೆ ಎಂದು ಭಾವ.

## ಸುಷುಪ್ತಿಯಲ್ಲಿ ಜೀವನಿಗೆ ಸ್ವರೂಪಸಂಬಂಧ

(ಭಾಷ್ಯ)

೨೧೧. ಉಪಪದ್ಯತೇ ಚ ಅತ್ರ ಈದೃಶ ಏವ ಸಂಬನ್ಧೋ ನಾನ್ಯಾದೃಶಃ "ಸ್ವಮಪೀತೋ ಭವತಿ" (ಛಾಂ. ೬–೮–೧) ಇತಿ ಹಿ ಸ್ವರೂಪಸಂಬನ್ಧಮ್ ಏನಮ್ ಆಮನನ್ತಿ। ಸ್ವರೂಪಸ್ಯ ಚ ಅನಪಾಯಿತ್ವಾತ್ ನ ನರನಗರನ್ಯಾಯೇನ ಸಂಬನ್ಧೋ ಘಟತೇ। ಉಪಾಧಿಕೃತಸ್ವರೂಪತಿರೋಭಾವಾತ್ತು। 'ಸ್ವಮಪೀತೋ ಭವತಿ" (ಛಾಂ. ೬–೮–೧) ಇತ್ಯುಪಪದ್ಯತೇ। ತಥಾ ಭೇದೋಽಪಿ ನಾನ್ಯಾದೃಶಃ ಸಂಭವತಿ। ಬಹುತರಶ್ರುತಿಪ್ರಸಿದ್ಧೈಕೇಶ್ವರತ್ವವಿರೋಧಾತ್। ತಥಾ ಚ ಶ್ರುತಿಃ ಏಕಸ್ಯಾಪ್ಯಾಕಾಶಸ್ಯ ಸ್ಥಾನಕೃತಂ ಭೇದವ್ಯಪದೇಶಮ್ ಉಪಪಾದಯತಿ "ಯೋಽಯಂ ಬಹಿರ್ಧಾ ಪುರುಷಾದಾಕಾಶಃ" (ಛಾಂ. ೩–೧೨–೭), "ಯೋಽಯಮನ್ತಃ ಪುರುಷ ಆಕಾಶಃ" (ಛಾ. ೩–೧೨–೮) "ಯೋಽಯಮನ್ತರ್ಹೃದಯ ಆಕಾಶಃ" (ಛಾಂ. ೩–೧೨–೯) ಇತಿ ॥

(ಭಾಷ್ಯಾರ್ಥ)

**ಮತ್ತು ಇಲ್ಲಿ ಇಂಥ ಸಂಬಂಧವೇ ಹೊಂದುತ್ತದೆಯೇ ಹೊರತು ಮತ್ತೊಂದು ಬಗೆಯ (ಸಂಬಂಧವು ಹೊಂದು)ವದಿಲ್ಲ. ಏಕೆಂದರೆ "ತನ್ನಲ್ಲಿ ಲಯವಾಗುತ್ತಾನೆ" (ಛಾಂ. ೬–೮–೧) ಎಂದು ಇದನ್ನು ಸ್ವರೂಪಸಂಬಂಧವೆಂದೇ (ಶ್ರುತಿಯನ್ನು) ಪಠಿಸುತ್ತಾರೆ. ಸ್ವರೂಪವು ಎಂದಿಗೂ ಬಿಟ್ಟುಹೋಗತಕ್ಕದ್ದಲ್ಲವಾದ್ದರಿಂದ ನರನಗರನ್ಯಾಯದಿಂದ ಸಂಬಂಧವಾಗುವಹಾಗಿಲ್ಲ.** ಆದರೆ ಉಪಾಧಿಕೃತವಾಗಿ ಸ್ವರೂಪವು ಮುಚ್ಚಿಹೋಗಿರುವದರಿಂದ (ಅಲ್ಲಿ) "ತನ್ನಲ್ಲಿ ಲಯವಾಗುತ್ತಾನೆ" (ಛಾಂ. ೬–೮–೧) ಎಂಬುದು ಹೊಂದುತ್ತದೆ.

ಇದರಂತೆ ಭೇದವೂ ಬೇರೆಯ ವಿಧವಾಗಿ ಆಗುವಹಾಗಿಲ್ಲ. ಏಕೆಂದರೆ (ಹಾಗೆಂದರೆ) ಬಹುತರಶ್ರುತಿಗಳಲ್ಲಿ ಪ್ರಸಿದ್ಧವಾಗಿರುವ ಅದ್ವಿತೀಯೇಶ್ವರತ್ವಕ್ಕೆ ವಿರೋಧವಾಗುತ್ತದೆ. ಆದ್ದರಿಂದಲೇ ಶ್ರುತಿಯು "ಪುರುಷನ ಹೊರಗಿರುವ ಈ ಆಕಾಶವಿದೆಯಲ್ಲ" (ಛಾಂ. ೩–೧೨–೭), "ಪುರುಷನ ಒಳಗಿರುವ ಈ ಆಕಾಶವಿದೆಯಲ್ಲ" (ಛಾಂ. ೩–೧೨–೮), "ಈ ಹೃದಯದೊಳಗಿರುವ ಈ ಆಕಾಶವಿದೆಯಲ್ಲ" (ಛಾಂ. ೩–೧೨–೯) ಎಂದು ಒಂದೇ ಆಕಾಶಕ್ಕೇ ಸ್ಥಾನದಿಂದಾದ ಭೇದವ್ಯಪದೇಶವನ್ನು ಹೊಂದುಗಡೆಮಾಡಿರುತ್ತದೆ.[1]

1. ಸುಷುಪ್ತಿಯಲ್ಲಿ ಹೃದಯದಲ್ಲಿರುವ ಆಕಾಶವು ಸರ್ವದುಃಖನಿವೃತ್ತಿರೂಪವಾದ ಆತ್ಮನೇ; ಸ್ವಪ್ನದಲ್ಲಿ ಶರೀರದೊಳಗೆ, ಎಚ್ಚರದಲ್ಲಿ ಶರೀರದ ಹೊರಗೆ, ಇರುವ ಆಕಾಶವಾಗಿ ಕಾ[illegible]ಪವೂ ಅದೇ ಎಂದು ಶ್ರುತಿಯ ತಾತ್ಪರ್ಯ.

**ತಥಾನ್ಯಪ್ರತಿಷೇಧಾತ್ ॥ ೩೬ ॥**

೩೬. ಹಾಗೆಯೇ ಮತ್ತೊಂದನ್ನು ಅಲ್ಲಗಳೆದಿರುವದರಿಂದಲೂ (ಬ್ರಹ್ಮಕ್ಕಿಂತ ಬೇರೊಂದು ವಸ್ತುವಿಲ್ಲ).

## ಬ್ರಹ್ಮವ್ಯತಿರಿಕ್ತವಸ್ತುವಿಲ್ಲವೆಂದೇ ಶ್ರುತಿಯಲ್ಲಿದೆ

(ಭಾಷ್ಯ)

೩೧೨. ಏವಂ ಸೇತ್ವಾದಿವ್ಯಪದೇಶಾತ್ ಪರಪಕ್ಷಹೇತೂನ್ ಉನ್ಮಥ್ಯ ಸಂಪ್ರತಿ ಸ್ವಪಕ್ಷಂ ಹೇತ್ವನ್ತರೇಣ ಉಪಸಂಹರತಿ । ತಥಾ ಅನ್ಯಪ್ರತಿಷೇಧಾದಪಿ ನ ಬ್ರಹ್ಮಣಃ ಪರಂ ವಸ್ತ್ವನ್ತರಮಸ್ತಿ ಇತಿ ಗಮ್ಯತೇ। ತಥಾ ಹಿ "ಸ ಏವಾಧಸ್ತಾತ್" (ಛಾಂ ೭-೨೫-೧) "ಅಹಮೇವಾಧಸ್ತಾತ್" (ಛಾಂ. ೭-೨೫-೧), "ಆತ್ಮೈವಾಧಸ್ತಾತ್....." (ಛಾಂ. ೭-೨೫-೨), "ಸರ್ವಂ ತಂ ಪರಾದಾದ್ಯೋಽನ್ಯತ್ರಾತ್ಮನಃ ಸರ್ವಂ ವೇದ" (ಬೃ. ೨-೪-೬), "ಬ್ರಹ್ಮೈವೇದಂ ಸರ್ವಮ್" (?) "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨), "ನೇಹ ನಾನಾಸ್ತಿ ಕಿಂಚನ" (ಬೃ. ೪-೪-೧೯), "ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್" (ಶ್ವೇ. ೩-೯), "ತದೇತದ್ಬ್ರಹ್ಮಾಪೂರ್ವಮನಪರಮನನ್ತರಮಬಾಹ್ಯಮ್" (ಬೃ. ೨-೫-೧೯) ಇತ್ಯೇವಮಾದಿವಾಕ್ಯಾನಿ ಸ್ವಪ್ರಕರಣಸ್ಥಾನಿ ಅನ್ಯಾರ್ಥತ್ವೇನ ಪರಿಣೇತುಮಶಕ್ಯಾನಿ ಬ್ರಹ್ಮವ್ಯತಿರಿಕ್ತಂ ವಸ್ತ್ವನ್ತರಂ ವಾರಯನ್ತಿ । ಸರ್ವಾನ್ತರಶ್ರುತೇಶ್ಚ ನ ಪರಮಾತ್ಮನೋಽನ್ಯೋ ಅನ್ತರಾತ್ಮಾ ಅಸ್ತಿ ಇತ್ಯವಧಾರ್ಯತೇ ॥

(ಭಾಷ್ಯಾರ್ಥ)

ಹೀಗೆ ಸೇತ್ವಾದಿವ್ಯಪದೇಶಗಳಿವೆ ಎಂಬ ಪೂರ್ವಪಕ್ಷಿಯ ಹೇತುಗಳನ್ನು ಖಂಡಿಸಿದ ಬಳಿಕ ತಮ್ಮ ಪಕ್ಷವನ್ನು ಮತ್ತೊಂದು ಹೇತುವಿನಿಂದ(ಲೂ ಸ್ಥಾಪಿಸಿ) ಉಪಸಂಹಾರಮಾಡುತ್ತಾರೆ.

ಮತ್ತೊಂದನ್ನು ಅಲ್ಲಗಳೆದಿರುವದರಿಂದಲೂ ಬ್ರಹ್ಮಕ್ಕಿಂತ ಪರವಾದ ವಸ್ತ್ವಂತರವಿಲ್ಲ ಎಂದು ಗೊತ್ತಾಗುತ್ತದೆ. ಹೇಗೆಂದರೆ "ಅವನೇ ಕೆಳಗಡೆ...." (ಛಾಂ. ೭-೨೫-೨), "ನಾನೇ ಕೆಳಗಡೆ" (ಛಾ. ೭-೨೫-೧), "ಆತ್ಮನೇ ಕೆಳಗಡೆ" (ಛಾಂ. ೭-೨೫-೨), "ಆತ್ಮನಿಗಿಂತ ಬೇರೆಯಾಗಿ ಎಲ್ಲವೂ ಇದೆ ಎಂದು ಯಾವನು ಅರಿಯುವನೋ ಅವನನ್ನು ಎಲ್ಲವೂ ತಿರಸ್ಕರಿಸುತ್ತದೆ" (ಬೃ. ೨-೪-೬), "ಇದೆಲ್ಲವೂ ಬ್ರಹ್ಮವೇ" (?) "ಇದೆಲ್ಲವೂ ಆತ್ಮನೇ" (ಛಾ. ೭-೨೫-೨) "ಇಲ್ಲಿ ಬಂದಿಷ್ಟೂ ಬೇರೆಬೇರೆಯಾದದ್ದಿಲ್ಲ" (ಬೃ. ೪-೪-೧೯) "ಯಾವನಿಗಿಂತ

ಹೆಚ್ಚಿನದಾಗಲಿ ಕಡಿಮೆಯದಾಗಲಿ ಯಾವದೊಂದೂ ಇಲ್ಲವೋ" (ಶ್ವೇ ೩-೯) "ಆ ಈ ಬ್ರಹ್ಮವು ಹಿಂದಿಲ್ಲದ್ದು, ಮುಂದಿಲ್ಲದ್ದು, ಒಳಗಿಲ್ಲದ್ದು, ಹೊರಗಿಲ್ಲದ್ದು" (ಬೃ. ೨-೫-೧೯) ಎಂಬಿವೇ ಮುಂತಾದ ವಾಕ್ಯಗಳು ತಮ್ಮ ಪ್ರಕರಣದಲ್ಲಿಯೇ ಇದ್ದು ಮತ್ತೊಂದು ಅರ್ಥವುಳ್ಳವೆಂದು ಮಾರ್ಪಡಿಸಿ ತೋರಿಸುವದಕ್ಕೆ ಆಗದೆ ಇರುವದರಿಂದ ಬ್ರಹ್ಮವ್ಯತಿರಿಕ್ತವಾದ ಮತ್ತೊಂದು ವಸ್ತುವನ್ನು ಇಲ್ಲವೆನ್ನುತ್ತವೆ. ಸರ್ವಾಂತರಶ್ರುತಿಯಿರುವದರಿಂದಲೂ ಪರಮಾತ್ಮನಿಗಿಂತಲೂ ಬೇರೆಯಾದ ಮತ್ತೊಬ್ಬ ಅಂತರಾತ್ಮನು ಇಲ್ಲವೆಂದು ಒತ್ತಿಹೇಳಿದಂತಾಗಿದೆ.

**ಅನೇನ ಸರ್ವಗತತ್ವಮಾಯಾಮಶಬ್ದಾದಿಭ್ಯಃ ॥ ೩೭ ॥**

೩೭. ಇದರಿಂದ ಸರ್ವಗತತ್ವವೂ (ಸಿದ್ಧವಾಯಿತು); ಏಕೆಂದರೆ ಆಯಾಮಶಬ್ದವೇ ಮುಂತಾದವುಗಳಿವೆ.

## ಆದ್ದರಿಂದಲೇ ಬ್ರಹ್ಮವು ಸರ್ವಗತ

(ಭಾಷ್ಯ)

೩೧೩. ಅನೇನ ಸೇತ್ವಾದಿವ್ಯಪದೇಶನಿರಾಕರಣೇನ ಅನ್ಯಪ್ರತಿಷೇಧ ಸಮಾಶ್ರಯಣೇನ ಚ ಸರ್ವಗತತ್ವಮಪಿ ಆತ್ಮನಃ ಸಿದ್ಧಂ ಭವತಿ । ಅನ್ಯಥಾ ಹಿ ತನ್ನ ಸಿಧ್ಯೇತ್ । ಸೇತ್ವಾದಿವ್ಯಪದೇಶೇಷು ಹಿ ಮುಖ್ಯೇಷು ಅಙ್ಗೀಕ್ರಿಯಮಾಣೇಷು ಪರಿಚ್ಛೇದ ಆತ್ಮನಃ ಪ್ರಸಜ್ಯೇತ । ಸೇತ್ವಾದೀನಾಮ್ ಏವಮಾತ್ಮಕತ್ವಾತ್ । ತಥಾ ಅನ್ಯಪ್ರತಿಷೇಧೇಽಪಿ ಅಸತಿ ವಸ್ತು ವಸ್ತ್ವನ್ತರಾತ್ ವ್ಯಾವರ್ತತೇ ಇತಿ ಪರಿಚ್ಛೇದ ಏವ ಆತ್ಮನಃ ಪ್ರಸಜ್ಯೇತ । ಸರ್ವಗತತ್ವಂ ಚ ಅಸ್ಯ ಆಯಾಮಶಬ್ದಾದಿಭ್ಯೋ ವಿಜ್ಞಾಯತೇ । ಆಯಾಮಶಬ್ದೋ ವ್ಯಾಪ್ತಿವಚನಃ ಶಬ್ದಃ । "ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽನ್ತರ್ಹೃದಯ ಆಕಾಶಃ" (ಛಾಂ. ೮-೧-೩) "ಆಕಾಶವತ್ಸರ್ವಗತಶ್ಚ ನಿತ್ಯಃ" (ಶ. ಬ್ರಾ. ?), "ಜ್ಯಾಯಾನ್ ದಿವಃ" (ಛಾಂ. ೩-೧೪-೩), "ಜ್ಯಾಯಾನಾಕಾಶಾತ್" (?), "ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ" (ಗೀ. ೨-೨೪) ಇತ್ಯೇವಮಾದಯೋ ಹಿ ಶ್ರುತಿಸ್ಮೃತಿನ್ಯಾಯಾಃ ಸರ್ವಗತತ್ವಮ್ ಆತ್ಮನಃ ಅವಬೋಧಯನ್ತಿ ॥

(ಭಾಷ್ಯಾರ್ಥ)

ಈ ಸೇತ್ವಾದಿವ್ಯಪದೇಶನಿರೂಪಣೆಯಿಂದ ಮತ್ತು ಮತ್ತೊಂದನ್ನು ಅಲ್ಲಗಳೆದಿದೆ ಎಂಬುದನ್ನು ಆಶ್ರಯಿಸಿರುವದರಿಂದ ಆತ್ಮನು ಸರ್ವಗತನೆಂದೂ ಸಿದ್ಧವಾಗುತ್ತದೆ. ಹಾಗಿಲ್ಲದಿದ್ದರೆ ಅದು ಸಿದ್ಧವಾಗಲಾರದು. ಏಕೆಂದರೆ

ಸೇತ್ವಾದಿವ್ಯಪದೇಶಗಳು ಮುಖ್ಯವೆಂದು ಅಂಗೀಕರಿಸಿದರೆ ಆತ್ಮನಿಗೆ ಪರಿಚ್ಛೇದವು ಪ್ರಸಕ್ತವಾಗುವದು. ಏಕೆಂದರೆ ಸೇತ್ವಾದಿಗಳು ಹೀಗೆ (ಪರಿಚ್ಛಿನ್ನ) ರೂಪವಾಗಿರುತ್ತವೆ. ಇದರಂತೆ ಮತ್ತೊಂದರ ಪ್ರತಿಷೇಧವಿಲ್ಲದಿದ್ದರೂ (ಒಂದು) ವಸ್ತು ಇನ್ನೊಂದು ವಸ್ತುವಿನಿಂದ ಬೇರೆಯಾಗಿರುತ್ತದೆಯಾದ್ದರಿಂದ ಆತ್ಮನಿಗೆ ಪರಿಚ್ಛೇದವೇ ಪ್ರಸಕ್ತವಾಗುವದು.

ಈ (ಆತ್ಮನಿಗೆ) ಸರ್ವಗತತ್ವವು ಆಯಾಮಶಬ್ದವೇ ಮುಂತಾದವುಗಳಿಂದ ನಿಶ್ಚಿತವಾಗುತ್ತದೆ. ಆಯಾಮಶಬ್ದವೆಂದರೆ ವ್ಯಾಪ್ತಿಯನ್ನು ಹೇಳುವ ಶಬ್ದವು. "ಈ ಆಕಾಶವು ಎಷ್ಟಿರುವದೋ ಹೃದಯದೊಳಗಿರುವ ಈ ಆಕಾಶವು ಅಷ್ಟೇ" (ಛಾಂ. ೮-೧-೩), "ಆಕಾಶದಂತೆ ಸರ್ವಗತನೂ ನಿತ್ಯನೂ" (?), "ದ್ಯುಲೋಕಕ್ಕಿಂತ ದೊಡ್ಡವನು" (ಛಾಂ. ೩-೧೪-೩), "ಆಕಾಶಕ್ಕಿಂತ ದೊಡ್ಡವನು" (?), "ನಿತ್ಯನು, ಸರ್ವಗತನು, ಸ್ಥಿರವಾಗಿರುವವನು, ಅಚಲನು, ಇವನು ಸನಾತನನು" (ಗೀ. ೨-೨೪) ಎಂಬಿವೇ ಮುಂತಾದ ಶ್ರುತಿಸ್ಮೃತಿನ್ಯಾಯಗಳು ಆತ್ಮನು ಸರ್ವಗತನೆಂದು ತಿಳಿಸಿಕೊಡುತ್ತವೆಯಷ್ಟೆ ?

## ೮. ಫಲಾಧಿಕರಣ (ಸೂ. ೩೮-೪೧)

### ( ಈಶ್ವರನೇ ಕರ್ಮಫಲವನ್ನು ಕೊಡುವವನು )

**ಫಲಮತ ಉಪಪತ್ತೇಃ ॥ ೩೮ ॥**

೩೮. ಫಲವು ಈ (ಈಶ್ವರ)ನಿಂದ ; ಏಕೆಂದರೆ ಹೊಂದುತ್ತದೆ.

## ಈಶ್ವರನಿಂದಲೇ ಕರ್ಮಫಲವು ಸಿದ್ಧಿಸುತ್ತದೆ

(ಭಾಷ್ಯ)

೩೧೪. ತಸ್ಯೈವ ಬ್ರಹ್ಮಣಃ ವ್ಯಾವಹಾರಿಕ್ಯಾಮ್ ಈಶಿತ್ರೀಶಿತವ್ಯವಿಭಾಗಾವಸ್ಥಾಯಾಮ್ ಅಯಮ್ ಅನ್ಯಃ ಸ್ವಭಾವೋ ವರ್ಣ್ಯತೇ । ಯದೇತತ್ ಇಷ್ಟಾನಿಷ್ಟವ್ಯಾಮಿಶ್ರಲಕ್ಷಣಂ ಕರ್ಮಫಲಂ ಸಂಸಾರಗೋಚರಂ ತ್ರಿವಿಧಂ ಪ್ರಸಿದ್ಧಮ್ ಜನ್ತೂನಾಮ್, ಕಿಮೇತತ್ ಕರ್ಮಣೋ ಭವತಿ, ಆಹೋಸ್ವಿತ್ ಈಶ್ವರಾತ್ ಇತಿ ಭವತಿ ವಿಚಾರಣಾ। ತತ್ರ ತಾವತ್ ಪ್ರತಿಪಾದ್ಯತೇ[1] ಫಲಮ್ ಅತಃ ಈಶ್ವರಾತ್ ಭವಿತುಮರ್ಹತಿ । ಕುತಃ ? ಉಪಪತ್ತೇಃ । ಸ ಹಿ ಸರ್ವಾಧ್ಯಕ್ಷಃ ಸೃಷ್ಟಿಸ್ಥಿತಿಸಂಹಾರಾನ್ ವಿಚಿತ್ರಾನ್ ವಿದಧತ್ ದೇಶಕಾಲವಿಶೇಷಾಭಿಜ್ಞತ್ವಾದ್ ಕರ್ಮಿಣಾಂ ಕರ್ಮಾನುರೂಪಂ ಫಲಂ ಸಂಪಾದಯತಿ ಇತ್ಯುಪಪದ್ಯತೇ । ಕರ್ಮಣಸ್ತು ಅನುಕ್ಷಣವಿನಾಶಿನಃ ಕಾಲಾನ್ತರಭಾವಿ ಫಲಂ ಭವತಿ

1. ಇದು ಮೂಲದಲ್ಲಿ "ಪ್ರತಿಪದ್ಯತೇ" ಎಂದಿತ್ತೋ ಏನೋ ತಿಳಿಯದು.

ಇತಿ ಅನುಪಪನ್ನಮ್ । ಅಭಾವಾತ್ ಭಾವಾನುತ್ಪತ್ತೇಃ । ಸ್ಯಾದೇತತ್ । ಕರ್ಮ ವಿನಶ್ಯತ್ ಸ್ವಕಾಲಮೇವ ಸ್ವಾನುರೂಪಂ ಫಲಂ ಜನಯಿತ್ವಾ ವಿನಶ್ಯತಿ, ತತ್ ಫಲಂ ಕಾಲಾನ್ತರಿತಂ ಕರ್ತ್ರಾ ಭೋಕ್ಷ್ಯತೇ ಇತಿ। ತದಪಿ ನ ಪರಿಶುಧ್ಯತಿ। ಪ್ರಾಗ್ ಭೋಕ್ತೃಸಂಬನ್ಧಾತ್ ಫಲತ್ವಾನುಪಪತ್ತೇಃ। ಯತ್ಕಾಲಂ ಹಿ ಯತ್ ಸುಖಂ ದುಃಖಂ ವಾ ಆತ್ಮನಾ ಭುಜ್ಯತೇ ತಸ್ಯೈವ ಲೋಕೇ ಫಲತ್ವಂ ಪ್ರಸಿದ್ಧಮ್ । ನ ಹಿ ಅಸಂಬದ್ಧಸ್ಯ ಆತ್ಮನಾ ಸುಖಸ್ಯ ದುಃಖಸ್ಯ ವಾ ಫಲತ್ವಂ ಪ್ರತಿಯನ್ತಿ ಲೌಕಿಕಾಃ । ಅಥೋಚ್ಯೇತ, ಮಾಭೂತ್ ಕರ್ಮಾನನ್ತರಂ ಫಲೋತ್ಪಾದಃ ಕರ್ಮಕಾರ್ಯಾತ್ ಅಪೂರ್ವಾತ್ ಫಲಮ್ ಉತ್ಪತ್ಸ್ಯತೇ ಇತಿ । ತದಪಿ ನೋಪಪದ್ಯತೇ । ಅಪೂರ್ವಸ್ಯ ಅಚೇತನಸ್ಯ ಕಾಷ್ಠಲೋಷ್ಟಸಮಸ್ಯ ಚೇತನೇನ ಅಪ್ರವರ್ತಿತಸ್ಯ ಪ್ರವೃತ್ತ್ಯನುಪಪತ್ತೇಃ । ತದಸ್ತಿತ್ವೇ ಚ ಪ್ರಮಾಣಾಭಾವಾತ್ । ಅರ್ಥಾಪತ್ತಿಃ ಪ್ರಮಾಣಮ್ ಇತಿ ಚೇತ್ । ನ । ಈಶ್ವರಸಿದ್ಧೇರರ್ಥಾಪತ್ತಿಕ್ಷಯಾತ್ ॥

(ಭಾಷ್ಯಾರ್ಥ)

ಅದೇ ಬ್ರಹ್ಮಕ್ಕೆ ವ್ಯಾವಹಾರಿಕವಾದ ಈಶಿತೃ, ಈಶಿತವ್ಯ– ಎಂಬ ವಿಭಾಗವಿರುವ ಅವಸ್ಥೆಯಲ್ಲಿ[1] ಮತ್ತೊಂದು ಸ್ವಭಾವವನ್ನು (ಇಲ್ಲಿ) ಹೇಳಲಾಗುತ್ತದೆ.

ಇಷ್ಟ, ಅನಿಷ್ಟ, ಮಿಶ್ರ– ಎಂಬ ಸ್ವರೂಪದ ಕರ್ಮಫಲವು ಸಂಸಾರವಿಷಯದಲ್ಲಿ ಮೂರು ಬಗೆಯಾಗಿ ಜೀವರಿಗೆ ಪ್ರಸಿದ್ಧವಾಗಿರುತ್ತದೆಯಷ್ಟೆ, ಅದೇನು ಕರ್ಮದಿಂದ ಆಗುತ್ತದೆಯೊ, ಅಥವಾ ಈಶ್ವರನಿಂದ (ಆಗುತ್ತದೆಯೊ) ? ಎಂದು ವಿಚಾರವುಂಟಾಗುತ್ತದೆ.

ಈ ವಿಷಯದಲ್ಲಿ ಮೊದಲು ( ಸೂತ್ರಕಾರರು ) ಹೇಳುತ್ತಾರೇನೆಂದರೆ ಫಲವು ಈ ಈಶ್ವರನಿಂದ ಆಗುತ್ತದೆ ಎನ್ನಬೇಕು ; ಏಕೆ ? ಎಂದರೆ ಹೊಂದುವದರಿಂದ. ಆ (ಈಶ್ವರನು) ಎಲ್ಲಕ್ಕೂ ಅಧ್ಯಕ್ಷನು, ವಿಚಿತ್ರವಾದ ಸೃಷ್ಟಿಸ್ಥಿತಿಸಂಹಾರಗಳನ್ನು ಮಾಡುವವನಾಗಿರುವದರಿಂದ ದೇಶಕಾಲಗಳ ವಿಶೇಷವನ್ನು ಬಲ್ಲವನಾದ್ದರಿಂದ ಕರ್ಮಿಗಳ ಕರ್ಮಕ್ಕೆ ಅನುರೂಪವಾದ ಫಲವನ್ನು ಕೊಡುತ್ತಾನೆ ಎಂಬುದು ಹೊಂದುತ್ತದೆ. ಅಲ್ಲವೆ ? ಕರ್ಮವಾದರೊ, ಒಂದೊಂದು ಕ್ಷಣದಲ್ಲಿಯೂ ವಿನಾಶವಾಗುವದಾದ್ದರಿಂದ ಕಾಲಾಂತರದಲ್ಲಾಗುವ ಫಲವು (ಅದರಿಂದ) ಆಗುತ್ತದೆ ಎಂಬುದು ಹೊಂದದು. ಏಕೆಂದರೆ ಅಭಾವದಿಂದ ಭಾವವು ಹುಟ್ಟಲಾರದು.[2]

---

1. ಅವಿದ್ಯಾಕಲ್ಪಿತವಾದ ನಾಮರೂಪಗಳ ಉಪಾಧಿಯಿಂದಲೇ ಈಶ್ವರ, ಜೀವ– ಎಂಬ ವ್ಯವಹಾರವಾಗಿರುತ್ತದೆ. ೨–೧–೧೪, ಭಾ.ಭಾ. ೪೪೦ ನೋಡಿ.

2. ಕರ್ಮದ ನಾಶವು ಪ್ರಧ್ವಂಸಾಭಾವವು ; ಅದರಿಂದ ಫಲವು ಹೇಗೆ ?

(ಪೂರ್ವಪಕ್ಷಿಯ ಮತವು) ಇದಾಗಿರಬಹುದು : ಕರ್ಮವು ನಾಶವಾಗುವದಾಗಿದ್ದರೂ ತನ್ನ ಕಾಲದಲ್ಲಿಯೇ ತನಗೆ ಅನುರೂಪವಾದ ಫಲವನ್ನು ಉಂಟುಮಾಡಿ ವಿನಾಶವಾಗುತ್ತದೆ. ಆ ಫಲವನ್ನು ಕಾಲಾಂತರದಲ್ಲಿ ಭೋಕ್ತೃವು ಭೋಗಿಸಬಹುದಾಗಿದೆ.

ಇದೂ ಪರಶುದ್ಧವಾಗಿರುವದಿಲ್ಲ. ಏಕೆಂದರೆ ಭೋಕ್ತೃವಿನ ಸಂಬಂಧವಾಗುವ ಮುನ್ನ (ಅದು) ಫಲವು ಎಂಬುದೇ ಹೊಂದುವದಿಲ್ಲ. ಯಾವ ಕಾಲದಲ್ಲಿ ಯಾವ ಸುಖವನ್ನು ಅಥವಾ ದುಃಖವನ್ನು ತಾನು ಭೋಗಿಸುವನೋ ಅದೇ ಫಲವೆಂದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ತನಗೆ ಸಂಬದ್ಧವಾಗದ ಸುಖವಾಗಲಿ ದುಃಖವಾಗಲಿ ಫಲವೆಂದು ಲೋಕದ ಜನರು ಭಾವಿಸುವದಿಲ್ಲವಷ್ಟೆ ?

ಇನ್ನು (ಪೂರ್ವಪಕ್ಷಿಯು) ಹೀಗೆನ್ನಬಹುದು: ಕರ್ಮದ ಅನಂತರದಲ್ಲಿಯೇ ಫಲದ ಉತ್ಪತ್ತಿಯಾಗದೆ ಇದ್ದರೆ ಬೇಡ, ಕರ್ಮಕಾರ್ಯವಾದ **ಅಪೂರ್ವದಿಂದ**[1] ಫಲವು ಉತ್ಪನ್ನವಾಗಬಹುದಲ್ಲ !

ಇದೂ ಹೊಂದುವದಿಲ್ಲ. ಏಕೆಂದರೆ **ಅಚೇತನವಾದ ಅಪೂರ್ವವು ಕಟ್ಟಿಗೆ, ಮಣ್ಣುಹೆಂಟೆ– ಇವುಗಳಿಗೆ ಸಮಾನವಾಗಿರುವದರಿಂದ (ಅದನ್ನು) ಚೇತನನಾದವನು ಪ್ರವರ್ತಿಸಿದ ಹೊರತು (ಅದು) ಪ್ರವರ್ತಿಸಲಾರದು, ಮತ್ತು ಅದು ಇದೆಯೆನ್ನುವದಕ್ಕೆ ಪ್ರಮಾಣವೂ ಇಲ್ಲ. ಅರ್ಥಾಪತ್ತಿಯು ( ಅದಿರುವದೆಂಬುದಕ್ಕೆ ) ಪ್ರಮಾಣವು ಎಂದರೆ ಹಾಗಲ್ಲ; ಏಕೆಂದರೆ ಈಶ್ವರಸಿದ್ಧಿಯಿಂದ (ಆ) ಅರ್ಥಾಪತ್ತಿಯು ಕ್ಷಯವಾಗುತ್ತದೆ.**[2]

**ಶ್ರುತತ್ವಾಚ್ಚ || ೩೯ ||**

೩೯. ಶ್ರುತಿಯಲ್ಲಿ ಹೇಳಿರುವದರಿಂದಲೂ (ಹೀಗೆ).

## ಈಶ್ವರನು ಫಲಹೇತುವೆಂದು ಶ್ರುತಿ ಹೇಳುತ್ತದೆ

(ಭಾಷ್ಯ)

೩೧೫. ನ ಕೇವಲಮ್ ಉಪಪತ್ತೇರೇವ ಈಶ್ವರಂ ಫಲಹೇತುಂ ಕಲ್ಪಯಾಮಃ, ಕಿಂ ತರ್ಹಿ ಶ್ರುತತ್ವಾದಪಿ ಈಶ್ವರಮೇವ ಫಲಹೇತುಂ ಮನ್ಯಾ

1. ಕರ್ಮವು ನಾಶವಾದ ಮೇಲೆ ಅಪೂರ್ವವೆಂಬ ಅವಸ್ಥೆಯನ್ನು ಪಡೆದು ಸ್ವರ್ಗಾದಿಫಲಗಳನ್ನು ಕೊಡುತ್ತದೆ ಎಂದು ಮೀಮಾಂಸಕರ ಮತ.

2. ಕರ್ಮವು ಕ್ಷಯವಾದ್ದರಿಂದ ಒಂದು ಸ್ಥಾಯಿಯಾದ ಕಾರಣವಿಲ್ಲದೆ ಫಲವಾಗಲಾರದು ಎಂಬ ಅರ್ಥಾಪತ್ತಿಗೆ ಶ್ರುತಿಸಿದ್ಧನಾದ ಈಶ್ವರನಿರುವದೇ ಸಾಕು, ಅಪೂರ್ವವೂ ಇರಬೇಕೆಂಬುದೇನೂ ಇಲ್ಲ.

ಮಹೇ । ತಥಾ ಚ ಶ್ರುತಿರ್ಭವತಿ– "ಸ ವಾ ಏಷ ಮಹಾನಜ ಆತ್ಮಾನ್ನಾದೋ ವಸುದಾನಃ" (ಬೃ. ೪–೪–೨೪) ಇತ್ಯೇವಂಜಾತೀಯಕಾ ॥

(ಭಾಷ್ಯಾರ್ಥ)

ಹೊಂದುತ್ತದೆಯೆಂಬ ಕಾರಣದಿಂದ ಮಾತ್ರವೇ ಈಶ್ವರನು ಫಲಹೇತು ವೆಂದು ನಾವು ಕಲ್ಪಿಸುತ್ತಿಲ್ಲ, ಮತ್ತೇನೆಂದರೆ ಶ್ರುತಿಯಲ್ಲಿ ಹೇಳಿರುವದರಿಂದಲೂ ಈಶ್ವರನೇ ಫಲಕ್ಕೆ ಹೇತುವೆಂದು ತಿಳಿಯುತ್ತೇವೆ. ಆದ್ದರಿಂದಲೇ "ಆ ಈತನೇ ಮಹಾಂತನು, ಅಜನು, ಆತ್ಮನು, ಅನ್ನಾದನು, ವಸುದಾನನು" (ಬೃ. ೪–೪–೨೪) ಎಂಬೀ ಜಾತಿಯ ಶ್ರುತಿಯೂ ಇದೆ.

**ಧರ್ಮಂ ಜೈಮಿನಿರತ ಏವ ॥ ೪೦ ॥**

೪೦. ಧರ್ಮವು ಫಲಪಾತ್ರವೆಂದು ಜೈಮಿನಿಯು ಹೇಳು ತ್ತಾನೆ ; ಈ (ಶ್ರುತ್ಯುಪಪತ್ತಿ)ಗಳಿಂದಲೇ (ಹಾಗೆನ್ನುತ್ತಾನೆ).

## ಪೂರ್ವಪಕ್ಷ: ಧರ್ಮವೇ ಫಲವನ್ನು ಕೊಡುತ್ತದೆ

(ಭಾಷ್ಯ)

೩೧೬. ಜೈಮಿನಿಸ್ತು ಆಚಾರ್ಯೋ ಧರ್ಮಂ ಫಲಸ್ಯ ದಾತಾರಂ ಮನ್ಯತೇ । ಅತ ಏವ ಹೇತೋಃ, ಶ್ರುತೇಃ ಉಪಪತ್ತೇಶ್ಚ। ಶ್ರೂಯತೇ ತಾವತ್ ಅಯಮರ್ಥಃ "ಸ್ವರ್ಗಕಾಮೋ ಯಜೇತ"(?) ಇತ್ಯೇವಮಾದಿಷು ವಾಕ್ಯೇಷು। ತತ್ರ ಚ ವಿಧಿಶ್ರುತೇಃ ವಿಷಯಭಾವೋಪಗಮಾತ್ ಯಾಗಃ ಸ್ವರ್ಗಸ್ಯ ಉತ್ಪಾದಕಃ ಇತಿ ಗಮ್ಯತೇ । ಅನ್ಯಥಾ ಹಿ ಅನನುಷ್ಠಾತೃಕೋ ಯಾಗ ಆಪದ್ಯೇತ, ತತ್ರ ಅಸ್ಯ ಉಪದೇಶವೈಯರ್ಥ್ಯಂ ಸ್ಯಾತ್। ನನು ಅನುಕ್ಷಣವಿನಾಶಿನಃ ಕರ್ಮಣಃ ಫಲಂ ನೋಪಪದ್ಯತೇ ಇತಿ ಪರಿತ್ಯಕ್ತೋಽಯಂ ಪಕ್ಷಃ । ನೈಷ ದೋಷಃ । ಶ್ರುತಿಪ್ರಾಮಾಣ್ಯಾತ್ । ಶ್ರುತಿಶ್ಚೇತ್ ಪ್ರಮಾಣಂ ಯಥಾಯಂ ಕರ್ಮಫಲಸಂಬನ್ಧಃ ಶ್ರುತಃ ಉಪಪದ್ಯತೇ ತಥಾ ಕಲ್ಪಯಿತವ್ಯಃ। ನ ಚ ಅನುತ್ಪಾದ್ಯ ಕಿಮಪಿ ಅಪೂರ್ವಂ ಕರ್ಮ ವಿನಶ್ಯತ್ ಕಾಲಾನ್ತರಿತಂ ಫಲಂ ದಾತುಂ ಶಕ್ನೋತಿ। ಅತಃ ಕರ್ಮಣೋ ವಾ ಸೂಕ್ಷ್ಮಾ ಕಾಚಿತ್ ಉತ್ತರಾವಸ್ಥಾ, ಫಲಸ್ಯ ವಾ ಪೂರ್ವಾವಸ್ಥಾ ಅಪೂರ್ವಂ ನಾಮ ಅಸ್ತಿ ಇತಿ ತರ್ಕ್ಯತೇ । ಉಪಪದ್ಯತೇ ಚ ಅಯಮರ್ಥಃ ಉಕ್ತೇನ ಪ್ರಕಾರೇಣ। ಈಶ್ವರಸ್ತು ಫಲಂ ದದಾತಿ ಇತ್ಯನುಪಪನ್ನಮ್। ಅವಿಚಿತ್ರಸ್ಯ ಕಾರಣಸ್ಯ ವಿಚಿತ್ರಕಾರ್ಯಾನುಪಪತ್ತೇಃ, ವೈಷಮ್ಯನೈರ್ಘೃಣ್ಯಪ್ರಸಙ್ಗಾತ್, ಅನುಷ್ಠಾನವೈಯರ್ಥ್ಯಾಪತ್ತೇಶ್ಚ । ತಸ್ಮಾತ್ ಧರ್ಮಾದೇವ ಫಲಮಿತಿ ॥

(ಭಾಷ್ಯಾರ್ಥ)

ಆದರೆ **ಜೈಮಿನಿ** ಎಂಬ ಆಚಾರ್ಯನು ಧರ್ಮವೇ ಫಲವನ್ನು ಕೊಡತಕ್ಕದ್ದು ಎಂದು ತಿಳಿಯುತ್ತಾನೆ. (ಏಕೆಂದರೆ) ಇದೇ ಹೇತುವಿನಿಂದ, ಎಂದರೆ ಶ್ರುತಿಯಿಂದ ಮತ್ತು ಉಪಪತ್ತಿಯಿರುವದರಿಂದ. (ಇದರ ವಿವರ) : ಮೊದಲನೆಯದಾಗಿ "ಸ್ವರ್ಗಕಾಮನು ಯಾಗಮಾಡತಕ್ಕದ್ದು" ಎಂದುಮುಂತಾಗಿರುವ ಶ್ರುತಿವಾಕ್ಯಗಳಲ್ಲಿ ಈ ಅರ್ಥವನ್ನು ಹೇಳಿದೆ. ಅಲ್ಲಿ ವಿಧಿಶ್ರುತಿಗೆ ಯಾಗವು ವಿಷಯವಾಗಿರುವದೆಂದು ಒಪ್ಪಿರುವದರಿಂದ (ಅದು) ಸ್ವರ್ಗವನ್ನು ಉಂಟುಮಾಡತಕ್ಕದ್ದು ಎಂದು ಗೊತ್ತಾಗುತ್ತದೆ. ಏಕೆಂದರೆ ಹೀಗಲ್ಲದಿದ್ದರೆ ಯಾಗಕ್ಕೆ ಅನುಷ್ಠಾತೃವೇ ಇಲ್ಲವೆಂದಾಗುವದು. ಆಗ ಇದನ್ನು ಉಪದೇಶಿಸಿರುವದು ವ್ಯರ್ಥವೆಂದಾಗುವದು.

(ಆಕ್ಷೇಪ) :— ಒಂದೊಂದು ಕ್ಷಣದಲ್ಲಿಯೂ ವಿನಾಶವಾಗುತ್ತಿರುವ ಕರ್ಮಕ್ಕೆ (ಕಾಲಾಂತರದ) ಫಲವುಂ(ಟಾಗುವದು) ಹೊಂದುವದಿಲ್ಲವೆಂದು ಈ ಪಕ್ಷವನ್ನು ಕೈಬಿಟ್ಟಿದ್ದೆವಲ್ಲ !

( ಪರಿಹಾರ ) :— ಇದೇನೂ ದೋಷವಲ್ಲ. ಏಕೆಂದರೆ ಶ್ರುತಿಯು ಪ್ರಮಾಣವಾದರೆ ಶ್ರುತವಾಗಿರುವ ಈ ಕರ್ಮಫಲಸಂಬಂಧವು ಹೇಗೆ ಹೊಂದುತ್ತದೆಯೋ ಹಾಗೆ ಕಲ್ಪಿಸಬೇಕು. ವಿನಾಶವಾಗುವ ಕರ್ಮವು **ಅಪೂರ್ವ**ವೆಂಬ ಯಾವದೋ ಒಂದನ್ನು ಉಂಟುಮಾಡದೆ ಇದ್ದರೆ ಕಾಲಾಂತರದಲ್ಲಾಗುವ ಫಲವನ್ನು ಕೊಡುವದಕ್ಕೆ ಶಕ್ತವಾಗಲಾರದು. ಆದ್ದರಿಂದ ಕರ್ಮದ **ಸೂಕ್ಷ್ಮವಾದ ಯಾವದೋ ಒಂದು ಮುಂದಿನ ಅವಸ್ಥೆಯೋ ಅಥವಾ ಫಲದ ಹಿಂದಿನ ಅವಸ್ಥೆಯೋ ಆಗಿರುವ ಅಪೂರ್ವವೆಂಬುದೊಂದಿರಬೇಕೆಂದು ತರ್ಕಿಸಬೇಕಾಗಿದೆ.**

ಮೇಲೆ ಹೇಳಿದ ಪ್ರಕಾರದಿಂದ ಈ ಅರ್ಥವು ಹೊಂದುಗಡೆಯೂ ಆಗುತ್ತದೆ. ಈಶ್ವರನಾದರೋ ಫಲವನ್ನು ಕೊಡುತ್ತಾನೆ ಎಂಬುದು ಹೊಂದುವದಿಲ್ಲ. ಏಕೆಂದರೆ ವಿಚಿತ್ರವಲ್ಲದ ಕಾರಣವು ವಿಚಿತ್ರವಾದ ಕಾರ್ಯವನ್ನುಂಟುಮಾಡಲಾರದು. ( ಈಶ್ವರನಿಗೆ ) ವೈಷಮ್ಯನೈರ್ಘೃಣ್ಯಗಳೂ ಪ್ರಸಕ್ತವಾಗುತ್ತವೆ, (ಕರ್ಮವನ್ನು) ಅನುಷ್ಠಾನಮಾಡುವದು ವ್ಯರ್ಥವೆಂದೂ ಆಗುತ್ತದೆ. ಆದ್ದರಿಂದ ಧರ್ಮದಿಂದಲೇ ಫಲವಾಗುತ್ತದೆ.

**ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ॥ ೪೧ ॥**

೪೧. ಆದರೆ ಬಾದರಾಯಣನು ಹಿಂದೆ (ಹೇಳಿರುವ ಈಶ್ವರನೇ ಎಂದು ಅಭಿಪ್ರಾಯಪಡುತ್ತಾನೆ). ಏಕೆಂದರೆ ಹೇತುವೆಂದು ಹೇಳಿದೆ.

# ಸಿದ್ಧಾಂತ: ಈಶ್ವರನು ಧರ್ಮಕ್ಕೂ ಹೇತುವೆಂದು ಪ್ರಕ್ರಿಯೆ

(ಭಾಷ್ಯ)

೩೧೭. ಬಾದರಾಯಣಸ್ತು ಆಚಾರ್ಯಃ ಪೂರ್ವೋಕ್ತಮೇವ ಈಶ್ವರಂ ಫಲಹೇತುಂ ಮನ್ಯತೇ । ಕೇವಲಾತ್ ಕರ್ಮಣಃ ಅಪೂರ್ವಾದ್ ವಾ ಕೇವಲಾತ್ ಫಲಮ್ ಇತ್ಯಯಂ ಪಕ್ಷಃ ತುಶಬ್ದೇನ ವ್ಯಾವರ್ತ್ಯತೇ। ಕರ್ಮಾಪೇಕ್ಷಾತ್ ಅಪೂರ್ವಾಪೇಕ್ಷಾದ್ವಾ ಯಥಾತಥಾಸ್ತು ಈಶ್ವರಾತ್ ಫಲಮ್ ಇತಿ ಸಿದ್ಧಾನ್ತಃ ಕುತಃ ? ಹೇತುವ್ಯಪದೇಶಾತ್। ಧರ್ಮಾಧರ್ಮಯೋರಪಿ ಹಿ ಕಾರಯಿತೃತ್ವೇನ ಈಶ್ವರೋ ಹೇತುರ್ವ್ಯಪದಿಶ್ಯತೇ, ಫಲಸ್ಯ ಚ ದಾತೃತ್ವೇನ। "ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ ಏಷ. ಉ ಏವಾಸಾಧು ಕರ್ಮ ಕಾರಯತಿ ತಂ ಯಮಧೋ ನಿನೀಷತೇ" (ಕೌ.೩–೮) ಇತಿ[1] । ಸ್ಮರ್ಯತೇ ಚ ಅಯಮರ್ಥೋ ಭಗವದ್ಗೀತಾಸು "ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ । ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ । ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ । ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ।" (ಗೀ. ೭–೨೧, ೨೨) ಇತಿ । ಸರ್ವವೇದಾನ್ತೇಷು ಚ ಈಶ್ವರಹೇತುಕಾ ಏವ ಸೃಷ್ಟಯೋ ವ್ಯಪದಿಶ್ಯನ್ತೇ। ತದೇವ ಚ ಈಶ್ವರಸ್ಯ ಫಲಹೇತುತ್ವಂ ಯತ್ ಸ್ವಕರ್ಮಾನುರೂಪಾಃ ಪ್ರಜಾಃ ಸೃಜತೀತಿ । ವಿಚಿತ್ರಕರ್ಮಾನುಪಪತ್ತ್ಯಾದಯೋಽಪಿ ದೋಷಾಃ ಕೃತಪ್ರಯತ್ನಾಪೇಕ್ಷತ್ವಾತ್ ಈಶ್ವರಸ್ಯ ನ ಪ್ರಸಜ್ಯನ್ತೇ ॥

(ಭಾಷ್ಯಾರ್ಥ)

ಆದರೆ ಬಾದರಾಯಣಾಚಾರ್ಯನು ಹಿಂದೆ ಹೇಳಿರುವ ಈಶ್ವರನೇ ಫಲಹೇತುವೆಂದು ಅಭಿಪ್ರಾಯಪಡುತ್ತಾರೆ. ಬರಿಯ ಕರ್ಮದಿಂದ, ಅಥವಾ ಬರಿಯ ಅಪೂರ್ವದಿಂದ ಫಲ(ವಾಗುವ)ದೆಂಬೀ ಪಕ್ಷವನ್ನು ತುಶಬ್ದದಿಂದ ತಳ್ಳಿಹಾಕಿರುತ್ತದೆ. **ಕರ್ಮಾಪೇಕ್ಷನಾದ (ಈಶ್ವರನಿಂದಲೋ) ಅಥವಾ ಅಪೂರ್ವಾ**

1. ಇದು ಆ॥ ಪಾಠದಲ್ಲಿ ೫–೮ನೆಯ ಮಂತ್ರ; ನಾವು ಕೊಟ್ಟಿರುವದು ನಿ॥ದಲ್ಲಿ ಮುದ್ರಿತವಾಗಿರುವ ಅಷ್ಟೋತ್ತರಶತೋಪನಿಷತ್ತಿನ ಸಂಖ್ಯೆ. ಅಲ್ಲಿ "ಏಷ ಹ್ಯೇವೈನಂ ಸಾಧು ಕರ್ಮ ಕಾರಯತಿ ತಂ ಯಮನ್ವಾನುನೇಷತ್ಯೇಷ ಏವೈನಮಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯೋ ನುನುತ್ಸತ...." ಎಂದಿದೆ.

**ಪೇಕ್ಷನಾದ[1] ಈಶ್ವರನಿಂದಲೋ ಹೇಗಾದರೂ ಫಲವಾಗಲಿ ಎಂಬುದು ಸಿದ್ಧಾಂತವು.**

ಏಕೆ ? ಎಂದರೆ ಹೇತುವೆಂದು ಹೇಳಿರುವದರಿಂದ. ಧರ್ಮಾಧರ್ಮಗಳಿಗೂ (ಅವನ್ನು) ಮಾಡಿಸುವವನೆಂದು ಈಶ್ವರನನ್ನು ಹೇತುವಾಗಿ (ಶ್ರುತಿಯಲ್ಲಿ) ಹೇಳಿರುತ್ತದೆ, ಫಲವನ್ನು ಕೊಡುವವನೆಂದೂ ( ಹೇಳಿರುತ್ತದೆ ): ಯಾವನನ್ನು ಈ ಲೋಕಗಳಿಂದ ಮೇಲಕ್ಕೇರಿಸಲಿಚ್ಛಿಸುವನೋ ಅವನನ್ನು "ಈತನೇ ಒಳ್ಳೆಯ ಕರ್ಮವನ್ನು ಮಾಡುವಂತೆ ಮಾಡುತ್ತಾನೆ ; ಯಾವನನ್ನು ಕೆಳಕ್ಕೆ ಇಳಿಸಲು ಇಚ್ಛಿಸುತ್ತಾನೋ ಅವನನ್ನು ಈತನೇ ಕೆಟ್ಟ ಕರ್ಮವನ್ನು ಮಾಡುವಂತೆ ಮಾಡುತ್ತಾನೆ" (ಕೌ. ೩-೮). ಈ ಅರ್ಥವು ಭಗವದ್ಗೀತೆಯಲ್ಲಿಯೂ "ಯಾವಯಾವ ಭಕ್ತನು ಯಾವಯಾವ ತನುವನ್ನು ಶ್ರದ್ಧೆಯಿಂದ ಅರ್ಚಿಸಲಿಚ್ಛಿಸುವನೋ ಅವನವನಿಗೆ ನಾನು ಆ ಶ್ರದ್ಧೆಯನ್ನೇ ಅಚಲವಾಗಿ ಮಾಡುವೆನು. ಅವನು ಆ ಶ್ರದ್ಧೆಯಿಂದ ಯುಕ್ತನಾಗಿ ಅದರ ಆರಾಧನೆಗೆ ಪ್ರಯತ್ನಮಾಡುತ್ತಾನೆ. ಅದರಿಂದ ನಾನು ಕೊಟ್ಟ ಆ ಕಾಮಗಳನ್ನು ಪಡೆದುಕೊಳ್ಳುತ್ತಾನೆ " (ಗೀ. ೭-೨೧-೨೨) ಎಂದು ಹೇಳಿಯೂ ಇದೆ.

ಸರ್ವವೇದಾಂತಗಳಲ್ಲಿಯೂ ಈಶ್ವರಹೇತುಕವಾಗಿಯೇ ಸೃಷ್ಟಿಗಳನ್ನು ಹೇಳಿತ್ತಷ್ಟೆ. ಈಶ್ವರನು ಫಲಕ್ಕೆ ಹೇತುವೆಂದರೆ ತಮ್ಮತಮ್ಮ ಕರ್ಮಕ್ಕೆ ಅನುರೂಪವಾಗಿ ಪ್ರಜೆಗಳನ್ನು ಸೃಜಿಸುತ್ತಾನಲ್ಲ, ಅದೇ. ವಿಚಿತ್ರಕಾರ್ಯವು ಹೊಂದುವದಿಲ್ಲ ಎಂದುಮುಂತಾಗಿ (ಪೂರ್ವಪಕ್ಷಿಯು ಹೇಳಿದ) ದೋಷಗಳನ್ನು (ಜೀವನು) ಮಾಡಿದ ಪ್ರಯತ್ನಾಪೇಕ್ಷೆಯಿಂದ ಈಶ್ವರನು (ಫಲವನ್ನು ಕೊಡುವದರಿಂದ)[2] ಪ್ರಸಕ್ತವಾಗುವದಿಲ್ಲ.

---

1. ಕರ್ಮದಿಂದ ಫಲವಾಗುತ್ತದೆ ಎಂಬ ಪಕ್ಷದಲ್ಲಿ ಕರ್ಮಕ್ಕೆ ತಕ್ಕಂತೆ ಈಶ್ವರನು ಫಲವನ್ನು ಕೊಡುತ್ತಾನೆಂದು ಹೇಳಬೇಕು ; ಅಪೂರ್ವದಿಂದ ಎಂಬ ಪಕ್ಷದಲ್ಲಿ ಅಪೂರ್ವಕ್ಕೆ ತಕ್ಕಂತೆ ಎಂದು ಹೇಳಬೇಕು.

2. ಜೀವರ ಪ್ರಯತ್ನಕ್ಕೆ ತಕ್ಕಂತೆ ಸೃಷ್ಟಿವೈಚಿತ್ರ್ಯವುಂಟಾಗಬಹುದು.

# ಅಧಿಕರಣಗಳ ಸಾರ

ಈ ಪಾದದಲ್ಲಿ ಮುಖ್ಯವಾಗಿ ಜೀವನ ಅವಸ್ಥಾಭೇದಗಳನ್ನೂ ಅವನ ಪರಮಾರ್ಥಸ್ವರೂಪವಾದ ಈಶ್ವರನ ತತ್ತ್ವವನ್ನೂ ತಿಳಿಸಲಾಗಿದೆ.

## ೧. ಸಂಧ್ಯಾಧಿಕರಣ

**ಸಂಶಯ :** ಎಚ್ಚರದಷ್ಟೇ ಸ್ವಪ್ನವೂ ಸತ್ಯವೋ, ಅಥವಾ ಮಿಥ್ಯವೊ ?

**ಪೂರ್ವಪಕ್ಷ :** ಸ್ವಪ್ನಸೃಷ್ಟಿಯೂ ಸತ್ಯವೇ. ಏಕೆಂದರೆ ಶ್ರುತಿಯಲ್ಲಿ ಅಲ್ಲಿ ಸೃಷ್ಟಿಯಾಗುವದೆಂದು ಹೇಳಿದೆ ; ಪುತ್ರಾದಿಕಾಮಗಳನ್ನು ಈಶ್ವರನು ಸೃಷ್ಟಿಮಾಡುತ್ತಾನೆಂದಿದೆ ; ಸ್ವಪ್ನಜಾಗರಿತಗಳು ಸಮಾನವೆಂಬ ಶ್ರುತಿಯೂ ಇದೆ. ಏಕೆಂದರೆ ಸ್ವಪ್ನದಲ್ಲಿ ಅವೇ ಪದಾರ್ಥಗಳನ್ನೇ ನೋಡುತ್ತಾನೆಂದು ಅಲ್ಲಿ ಹೇಳಿದೆ.

**ಸಿದ್ಧಾಂತ :** ಸ್ವಪ್ನಸೃಷ್ಟಿ ಮಾಯಾಮಾತ್ರವಾಗಿದೆ ; ಏಕೆಂದರೆ ಅಲ್ಲಿ ಉಚಿತವಾದ ದೇಶಕಾಲನಿಮಿತ್ತಗಳಿಲ್ಲ. ಸ್ವಪ್ನದಲ್ಲಿ ಕಾಣುವ ಸೃಷ್ಟಿಗಳು ಎಚ್ಚರದಲ್ಲಿ ಬಾಧಿತವಾಗುತ್ತವೆ, ಸ್ವಪ್ನದಲ್ಲಿಯೂ ಸುಲಭವಾಗಿ ಬಾಧಿತವಾಗುತ್ತಿರುತ್ತವೆ. ಸ್ವಪ್ನದಲ್ಲಿ ರಥಾದಿಗಳು ನಿಜವಾಗಿರುವದಿಲ್ಲವೆಂದೂ ಶ್ರುತಿ ಹೇಳುತ್ತಿದೆ. ಶ್ರುತಿಯು ಹೇಳುವ ಸ್ವಾಪ್ನಸೃಷ್ಟಿಯು ಗೌಣವು. ಸ್ವಪ್ನದಲ್ಲಿ ಸೃಷ್ಟಿಯು ಜೀವನ ವಿಷಯುವೇ, ಈಶ್ವರನಿರ್ಮಿತವೆಂದಲ್ಲ. ಈಶ್ವರನ ವ್ಯವಹಾರವೇನೊ ಅಲ್ಲಿಯೂ ಇದ್ದೇ ಇರುತ್ತದೆ. ಸ್ವಪ್ನವು ಆಕಾಶಾದಿಗಳಂತೆ ಸತ್ಯವಲ್ಲವಾದರೂ ಮುಂದಾಗುವ ಒಳ್ಳೆಯ ಕೆಟ್ಟ ಫಲಗಳ ಸೂಚಕವಾಗಿರಬಹುದು. ಬ್ರಹ್ಮಾತ್ಮತ್ವದರ್ಶನವಾಗುವವರೆಗೆ ಆಕಾಶಾದಿಗಳು ಇದ್ದಂತೆಯೇ ಇರುತ್ತವೆಯಾದ್ದರಿಂದ ಅವಕ್ಕೆ ಹೆಚ್ಚಿನ ಸತ್ಯತ್ವವಿದೆ. ಈಶ್ವರನಿಂದ ವಿಮುಖನಾಗಿರುವದರಿಂದ ಈಶ್ವರಾಭಿನ್ನನಾದ ಜೀವನಿಗೂ ಐಶ್ವರ್ಯವು ದೇಹಾಭಿಮಾನನಿಮಿತ್ತದಿಂದ ಮರೆಯಾಗಿರುತ್ತದೆ ; ಆದ್ದರಿಂದ ಅವನ ಸ್ವಪ್ನವು ಸತ್ಯವಾದ ಸಾಂಕಲ್ಪಿಕಸೃಷ್ಟಿ ಎನ್ನುವದಕ್ಕೆ ಬರುವದಿಲ್ಲ. ಸ್ವಪ್ನಜಾಗರಿತ ವಸ್ತುಗಳು ಸಮಾನವೆಂಬುದು ಜಾಗ್ರದ್ವಾಸನೆಯಿಂದ ಸ್ವಪ್ನವಾಗಿರುವದೆಂಬ ಕಾರಣದಿಂದ.

## ೨. ತದಭಾವಾಧಿಕರಣ

**ಸಂಶಯ :** ಶ್ರುತಿಯಲ್ಲಿ ಸುಷುಪ್ತಿಸ್ಥಾನಗಳೆಂದು ಹೇಳಿರುವ ನಾಡಿಗಳು, ಪುರೀತತ್ತು, ಸದ್ಬ್ರಹ್ಮ–ಎಂಬ ಮೂರು ಪರಸ್ಪರನಿರಪೇಕ್ಷವಾದ ಸ್ಥಾನಗಳೊ, ಪರಸ್ಪರಾಪೇಕ್ಷೆಯಿಂದ ಒಂದೇ ಸ್ಥಾನವೊ ?

**ಪೂರ್ವಪಕ್ಷ :** ಇವುಗಳನ್ನು ಸಮಾನವಾಗಿಯೇ ಸುಷುಪ್ತಿಸ್ಥಾನಗಳೆಂದು ಸಪ್ತಮೀನಿರ್ದೇಶದಿಂದ ಹೇಳಿರುವದರಿಂದಲೂ ಸುಷುಪ್ತಿಯು ವಿಶೇಷವಿಜ್ಞಾನವಿಲ್ಲದ್ದೆಂಬ ಒಂದೇ ಸ್ವರೂಪವುಳ್ಳದ್ದಾದ್ದರಿಂದಲೂ ಇವು ಬೇರೆಬೇರೆಯಾಗಿಯೇ ಸುಷುಪ್ತಿಸ್ಥಾನಗಳು. ಆದ್ದರಿಂದ ಒಂದೊಂದು ವೇಳೆ ಒಂದೊಂದು ಸ್ಥಾನದಲ್ಲಿ ಸುಷುಪ್ತಿಯಾಗುತ್ತದೆ.

ಸಿದ್ಧಾಂತ: ಎಲ್ಲವೂ ಸುಷುಪ್ತಿಸ್ಥಾನವೆಂಬದ್ದರಿಂದ ವಿಕಲ್ಪವನ್ನು ಅನುಸರಿಸುವದು ಯುಕ್ತವಲ್ಲ. ಒಂದೇ ವಿಭಕ್ತಿಯಿದ್ದರೂ ನಾಡ್ಯಾದಿಗಳ ಸಮುಚ್ಚಯವಾಗಬಹುದು; ಉಪ್ಪರಿಗೆಯಮೇಲೆ ಮಲಗಿದ್ದಾನೆ, ಮಂಚದಮೇಲೆ ಮಲಗಿದ್ದಾನೆ- ಮುಂತಾದ ಪ್ರಯೋಗಗಳಲ್ಲಿ ಹಾಗೆ ಕಂಡಿದೆ. ಶ್ರುತಿಯಲ್ಲಿ ಸಮುಚ್ಚಯವನ್ನು ಹೇಳಿಯೂ ಇದೆ. ನಾಡಿಗಳನ್ನು ಹೇಳಿರುವದು ಬ್ರಹ್ಮಸಂಬದ್ಧವಾಗಿವೆಯೆಂದು ಹೊಗಳುವದಕ್ಕೆ; ಹೀಗೆಯೇ ಪುರೀತತ್ತನ್ನು ಹೇಳಿರುವದೂ ಬ್ರಹ್ಮಸಂಬಂಧಕ್ಕಾಗಿಯೇ. ಹೀಗೆ ಮೂರೂ ಸುಷುಪ್ತಿ ಸ್ಥಾನಗಳಾದರೂ ನಾಡೀಪುರೀತತ್ತುಗಳು ದ್ವಾರಮಾತ್ರವಾಗಿವೆ; ಬ್ರಹ್ಮವೊಂದೇ ಸುಷುಪ್ತಿ ಸ್ಥಾನವು. ಸುಷುಪ್ತಿಯಲ್ಲಿ ಯಾವ ಉಪಾಧಿಯೂ ಜೀವನಿಗಿರುವದಿಲ್ಲವಾದ್ದರಿಂದಲೂ ಉಪಾಧಿಯಿಲ್ಲದೆ ಬ್ರಹ್ಮಭಿನ್ನನಾದ ಜೀವನಿಗೆ ಆಧಾರವೆಂಬುದು ಹೊಂದುವದಿಲ್ಲವಾದ ರಿಂದಲೂ ಬ್ರಹ್ಮವು ಆಧಾರವೆಂದು ಹೇಳಿರುವದೂ ಬ್ರಹ್ಮತಾದಾತ್ಮ್ಯವನ್ನು ಹೊಂದಿ ಬ್ರಹ್ಮಸ್ವರೂಪದಿಂದಲೇ ಇರುವನೆಂಬ ಅಭಿಪ್ರಾಯದಿಂದ ಹೇಳಿರುವದರಿಂದಲೂ ಬ್ರಹ್ಮವೇ ಸುಪ್ತಿಸ್ಥಾನವು. ಸುಷುಪ್ತಿಯಲ್ಲಿ ವಿಶೇಷವಿಜ್ಞಾನವಿಲ್ಲದಿರುವದಕ್ಕೆ ಏಕತ್ವವೇ ಕಾರಣ. ನಾಡ್ಯಾದಿಗಳು ಸುಪ್ತಿಸ್ಥಾನವೆಂಬುದು ವಿವಕ್ಷಿತವೂ ಅಲ್ಲ: ಏಕೆಂದರೆ ಅದನ್ನು ತಿಳಿದರೆ ಯಾವ ಫಲವೂ ಇಲ್ಲ. ಬ್ರಹ್ಮವೇ ಸುಪ್ತಿಸ್ಥಾನವೆಂದು ತಿಳಿದರೆ ಜೀವನಿಗೆ ಸ್ವಪ್ನಜಾಗರಿತ ವ್ಯವಹಾರವು ನಿಜವಾಗಿ ಇಲ್ಲವೆಂದೂ ಅವನು ಬ್ರಹ್ಮಸ್ವರೂಪನೇ ಎಂದೂ ತಿಳಿಯುವ ಉತ್ತಮಫಲವಿದೆ. ಆದ್ದರಿಂದ ಬ್ರಹ್ಮವೇ ಸುಷುಪ್ತಿಸ್ಥಾನವು; ಆದ್ದರಿಂದಲೇ ಸುಷುಪ್ತಿ ಯಿಂದ ಎಚ್ಚರುವಾಗ ಬ್ರಹ್ಮದಿಂದಲೇ ಜೀವರು ಹೊರಕ್ಕೆ ಬರುತ್ತಾರೆಂದು ಹೇಳಿರುತ್ತದೆ.

## ೩. ಕರ್ಮಾನುಸ್ಮೃತಿಶಬ್ದವಿಧ್ಯಧಿಕರಣ

ಸಂಶಯ: ಸುಷುಪ್ತಿಯಲ್ಲಿ ಸತ್ತಿನಲ್ಲಿ ಸೇರಿದ ಜೀವನೇ ಎಚ್ಚರದಲ್ಲಿ ಆ ಸದ್ಬ್ರಹ್ಮ ದಿಂದ ಏಳುತ್ತಾನೊ, ಅಥವಾ ಮತ್ತೊಬ್ಬ ಜೀವನೊ ?

ಪೂರ್ವಪಕ್ಷ: ಜಲರಾಶಿಯಲ್ಲಿ ಸೇರಿಕೊಂಡ ನೀರಿನ ತೊಟ್ಟೇ ಮತ್ತೆ ಏಳುತ್ತದೆ ಎಂದು ಹೇಳುವದಕ್ಕಾಗದಿರುವಂತೆ ಪರಮಾತ್ಮನೊಡನೆ ಏಕತ್ವವನ್ನು ಹೊಂದಿದ ಅದೇ ಜೀವನೇ ಎಚ್ಚರುತ್ತಾನೆಂದು ಹೇಳುವದಕ್ಕೆ ಬರುವದಿಲ್ಲ.

ಸಿದ್ಧಾಂತ: ಅದೇ ಜೀವನೇ ಎಚ್ಚರುತ್ತಾನೆ. ಏಕೆಂದರೆ (೧) ಕರ್ಮದಲ್ಲಿ ಉಳಿದದ್ದನ್ನು ಜೀವನು ಎಚ್ಚತ್ತಬಳಿಕ ಮಾಡುವದು ಕಂಡುಬರುತ್ತದೆ. (೨) ಹಿಂದಿನ ದಿನ ಅನುಭವಿಸಿದ್ದನ್ನು ಜೀವನು ನೆನಪಿಗೆ ತಂದುಕೊಳ್ಳುತ್ತಾನೆ. (೩) ಸ್ವಾಪಪ್ರಬೋಧ ಪ್ರಕರಣದಲ್ಲಿರುವ ಶ್ರುತಿವಾಕ್ಯಗಳು ಅದೇ ಜೀವನು ಎಚ್ಚರುತ್ತಾನೆಂಬುದಕ್ಕೆ ಬೆಂಬಲ ವನ್ನು ಕೊಡುತ್ತವೆ. (೪) ಕರ್ಮೋಪಾಸನಾವಿಧಿಗಳು ಸಾರ್ಥಕವಾಗಬೇಕಾದರೆ ನಿದ್ರಿಸಿ ದವನೇ ಮತ್ತೆ ಎಚ್ಚರುತ್ತಾನೆಂದು ಒಪ್ಪಬೇಕು. ಇಲ್ಲದಿದ್ದರೆ ನಿದ್ರಿಸಿದ ಮಾತ್ರದಿಂದ ಮುಕ್ತಿಯಾಗುವದೆಂದು ಹೇಳಿದಂತಾಗುವದು. ನೀರಿನಲ್ಲಿ ಸೇರಿಕೊಂಡ ನೀರಿನ ತೊಟ್ಟನ್ನು ವಿಂಗಡಿಸುವದಕ್ಕೆ ಸಾಧನವಿಲ್ಲದ್ದರಿಂದ ಅದೇ ತೊಟ್ಟನ್ನು ಎತ್ತಿ ತೆಗೆದು ಕೊಳ್ಳುವದಕ್ಕೆ ಆಗದೆ ಇರಬಹುದು; ಆದರೆ ಇಲ್ಲಿ ಕರ್ಮ, ಅವಿದ್ಯೆ– ಎಂಬ ವಿವೇಕ ಕಾರಣವಿರುವದರಿಂದ ಹಾಗಲ್ಲ. ಇದಲ್ಲದೆ ಸದ್ಬ್ರಹ್ಮವೇ ಉಪಾಧಿಯಿಂದ ಜೀವನೆನಿಸಿರು ತ್ತದೆಯಾದ್ದರಿಂದ ಅದೇ ಉಪಾಧಿಯಿರುವವರೆಗೆ ಅದೇ ಜೀವನೆಂದು ವ್ಯವಹರಿಸುವದು ಯುಕ್ತವು.

## ೪. ಮುಗ್ಧೇಽರ್ಧಸಂಪತ್ತ್ಯಧಿಕರಣ

**ಸಂಶಯ :** ಮೂರ್ಛೆಯೆಂಬುದು ಜಾಗ್ರತ್ಸ್ವಪ್ನಸುಷುಪ್ತಿಮರಣಗಳೆಂಬ ಅವಸ್ಥೆಗಳಲ್ಲಿ ಒಂದೋ, ಬೇರೆಯೊ ?

**ಪೂರ್ವಪಕ್ಷ:** ಶ್ರುತಿಸ್ಮೃತಿಗಳಲ್ಲಿ ಇವಕ್ಕಿಂತ ಬೇರೆ ಯಾವ ಅವಸ್ಥೆಯನ್ನೂ ಹೇಳಿಲ್ಲ ; ಆದ್ದರಿಂದ ಇವುಗಳಲ್ಲಿಯೇ ಒಂದದು.

**ಸಿದ್ಧಾಂತ :** ಇಂದ್ರಿಯವ್ಯಾಪಾರವಿಲ್ಲದ್ದರಿಂದ ಇದು ಎಚ್ಚರವಲ್ಲ ; ಉಸಿರಾಡುವದೂ ಬಿಸಿಯೂ ಇರುವದರಿಂದಲೂ ಮತ್ತೆ ಎಚ್ಚರುವದರಿಂದಲೂ ಸಾವಲ್ಲ. ಬಹುಕಾಲ ಉಸಿರಾಡದೆ ನಡುಗುತ್ತಿರುವದರಿಂದಲೂ ಕಣ್ಣುಗಳನ್ನು ತೆರೆದುಕೊಂಡಿರುವದರಿಂದಲೂ ನಿದ್ರೆಯೂ ಅಲ್ಲ. ಆದ್ದರಿಂದ ಇದು ಅರ್ಧಸಂಪತ್ತಿಯು, ಎಂದರೆ ಅರ್ಧಸುಷುಪ್ತಿಯಂತೆ ಇರುವ ಒಂದು ಅವಸ್ಥೆಯು. ಸುಷುಪ್ತಿಯಂತೆಯೇ ಸುಖಿತ್ವದುಃಖಿತ್ವಪ್ರತ್ಯಯಗಳು ಇಲ್ಲದ್ದರಿಂದ ಇಲ್ಲಿಯೂ ಪೂರ್ಣವಾಗಿಯೇ ಸತ್ಸಂಪತ್ತಿಯಾಗುವದಾದರೂ ಸುಷುಪ್ತಿಗಿಂತ ವಿಲಕ್ಷಣವಾಗಿರುವದರಿಂದ ಇದು ಬೇರೆಯ ಅವಸ್ಥೆಯೇ.

## ೫. ಉಭಯಲಿಂಗಾಧಿಕರಣ

**ಸಂಶಯ :** ಬ್ರಹ್ಮವಿಷಯದ ಶ್ರುತಿಗಳು ಬ್ರಹ್ಮವು ಸವಿಶೇಷವೆಂದೂ ನಿರ್ವಿಶೇಷವೆಂದೂ ಹೇಳುತ್ತಿರುವವು. ನಿಜವಾಗಿ ಬ್ರಹ್ಮಸ್ವರೂಪವು ಯಾವದೆಂದು ತಿಳಿಯಬೇಕು ?

**ಪೂರ್ವಪಕ್ಷ :** ಶ್ರುತಿಯು ಎರಡು ವಿಧವಾಗಿ ಬಣ್ಣಿಸಿರುವದರಿಂದ ಬ್ರಹ್ಮವು ಎರಡು ರೂಪವಾಗಿಯೂ ಇದೆಯೆಂದು ತಿಳಿಯಬೇಕು.

**ಸಿದ್ಧಾಂತ :** ಬ್ರಹ್ಮಕ್ಕೆ ಸ್ವತಃ ಎರಡು ರೂಪಗಳೂ ಇರುವಂತಿಲ್ಲ ; ಏಕೆಂದರೆ ಒಂದೇ ವಸ್ತುವಿಗೆ ವಿರುದ್ಧವಾದ ಸವಿಶೇಷತ್ವ, ನಿರ್ವಿಶೇಷತ್ವ– ಎರಡೂ ಇವೆ ಎನ್ನುವದಕ್ಕಾಗುವದಿಲ್ಲ. ಪೃಥಿವಿಯೇ ಮುಂತಾದ ಉಪಾಧಿಯ ಸಂಬಂಧದಿಂದಲೂ ಬ್ರಹ್ಮಕ್ಕೆ ಸವಿಶೇಷತ್ವವುಂಟಾಗಲಾರದು ; ಏಕೆಂದರೆ ಸ್ವತಃ ನಿರ್ವಿಶೇಷವಾಗಿರುವ ವಸ್ತು ಉಪಾಧಿಯಿಂದ ಮತ್ತೊಂದು ರೂಪವನ್ನು ಪಡೆಯಲಾರದು. ಉಪಾಧಿಗಳು ಅವಿದ್ಯಾಕೃತವಾಗಿರುವದರಿಂದಲೂ ಬ್ರಹ್ಮವು ಸವಿಶೇಷವಾಗಲಾರದು. ಬ್ರಹ್ಮಸ್ವರೂಪವನ್ನು ಹೇಳುವ ಕಡೆಯಲ್ಲೆಲ್ಲ ಅದನ್ನು ನಿರ್ವಿಶೇಷವೆಂದೇ ಶ್ರುತಿಗಳು ವರ್ಣಿಸುವದರಿಂದ ಹಾಗೆಂದೇ ತಿಳಿಯುವದು ಯುಕ್ತ. ಬ್ರಹ್ಮಕ್ಕೆ ಬೇರೆಬೇರೆ ಆಕಾರಗಳನ್ನು ಶ್ರುತಿಯಲ್ಲಿ ಹೇಳಿರುವದು ನಿಜ ; ಆದರೆ ಉಪಾಧಿಭೇದದಿಂದ ಹಾಗೆ ಭಿನ್ನವಾಗಿದೆಯೆಂದೂ ನಿಜವಾಗಿ ಎಲ್ಲೆಲ್ಲಿಯೂ ಬ್ರಹ್ಮವು ಒಂದೇ ಎಂದೂ ಶ್ರುತಿಯು ಉಪದೇಶಿಸುತ್ತದೆ. ಭೇದವನ್ನು ನಿಂದಿಸಿ ಭೋಗ್ಯಭೋಕ್ತೃನಿಯಂತೃರೂಪವಾದ ಪ್ರಪಂಚವೆಲ್ಲವೂ ಒಂದೇ ಎಂದು ಉಪದೇಶಿಸಿರುತ್ತದೆ. ಆದ್ದರಿಂದ ತಾತ್ಪರ್ಯದಿಂದ ಶ್ರುತಿಯು ನಿರ್ವಿಶೇಷವೆಂದೇ ಹೇಳುವದರಿಂದ ಬ್ರಹ್ಮವನ್ನು ನಿರ್ವಿಶೇಷವೆಂದು ತಿಳಿಯಬೇಕು.

ಆಕಾರವನ್ನು ಹೇಳುವ ಶ್ರುತಿಗಳಿಗೆ ಗತಿಯೇನೆಂದರೆ ಅವು ಉಪಾಸನಾರ್ಥವಾಗಿ ಹೇಳಿದವುಗಳಾಗಿವೆ. ಬ್ರಹ್ಮವನ್ನು ಪರಪ್ರತಿಷೇಧದಿಂದಲೇ ತಿಳಿಸಿರುವದರಿಂದಲೂ ಸೂರ್ಯಾದಿಪ್ರತಿಬಿಂಬಗಳಂತೆ ಭೇದವೆಂದು ಹೇಳಿರುವದರಿಂದಲೂ ಬ್ರಹ್ಮವೇ ದೇಹಾದಿ

ಗಳಲ್ಲಿ ಪ್ರವಿಷ್ಟವಾಗಿರುವದೆಂದು ಹೇಳಿರುವದರಿಂದಲೂ ಬ್ರಹ್ಮವು ನಿರ್ವಿಶೇಷವೇ. ಉಪಾಸನೆಗಾಗಿ ಮಾತ್ರವೇ ಉಪಾಧಿನಿಮಿತ್ತವಾದ ವಿಶೇಷವನ್ನು ಹೇಳಿದೆ ಎಂಬುದೇ ಸಿದ್ಧಾಂತ.

## ೬. ಪ್ರಕೃತೈತಾವತ್ತ್ವಾಧಿಕರಣ

**ಸಂಶಯ :** "ದ್ವೇ ವಾವ ಬ್ರಹ್ಮಣೋ ರೂಪೇ" (ಬೃ. ೨-೩-೧) ಎಂದು ಉಪಕ್ರಮವಾಗಿ "ಅಥಾತ ಆದೇಶೋ ನೇತಿ ನೇತಿ" (ಇನ್ನು ಆದ್ದರಿಂದ ಉಪದೇಶವು, ಹೀಗಲ್ಲ, ಹೀಗಲ್ಲ) ಎಂಬ ವಾಕ್ಯವು ಬಂದಿದೆ. ಇಲ್ಲಿ ಮೂರ್ತಾಮೂರ್ತಗಳೆಂಬ ರೂಪಗಳೆರಡನ್ನೂ ಅಲ್ಲಗಳೆದು ರೂಪಿಯಾದ ಬ್ರಹ್ಮವನ್ನುಳಿಸಿದೆಯೊ, ರೂಪರೂಪಿಗಳೆರಡನ್ನೂ ಅಲ್ಲಗಳೆದಿದೆಯೊ ?

**ಪೂರ್ವಪಕ್ಷ :** ಎರಡನ್ನೂ ಅಲ್ಲಗಳೆದಿದೆ ಎನ್ನುವದು ಯುಕ್ತವಲ್ಲ. ಏಕೆಂದರೆ ಆಗ ಶೂನ್ಯವಾದವು ಪ್ರಸಕ್ತವಾಗುವದು ; ಯಾವದೊಂದನ್ನೂ ಉಳಿಸದೆ ಇದ್ದರೆ ಪ್ರತಿಷೇಧವೇ ಆಗುವದಾಗಿಲ್ಲ. ಬ್ರಹ್ಮವನ್ನು ಪ್ರತಿಷೇಧಮಾಡುವದಾಗಿಲ್ಲ ; ಏಕೆಂದರೆ "ಬ್ರಹ್ಮವು ಇದೆ ಎಂದೇ ತಿಳಿಯಬೇಕು, ಇಲ್ಲವೆಂದರೆ ತಾನೇ ಇಲ್ಲವಾಗುತ್ತಾನೆ"- ಎಂದು ಶ್ರುತಿ ಹೇಳುತ್ತದೆ. ಬ್ರಹ್ಮವು ವಾಙ್ಮನಸಾತೀತವಾಗಿದೆ ಎಂದಿರುವದು ಬ್ರಹ್ಮವು ಇಲ್ಲವೇ ಇಲ್ಲವೆನ್ನುವದಕ್ಕಲ್ಲ ; ಬ್ರಹ್ಮವು ವಾಙ್ಮನಸ್ಸುಗಳಿಗೆ ಅಗೋಚರವಾದ ಆತ್ಮನೇ ಎನ್ನುವದಕ್ಕೆ. ಆದ್ದರಿಂದ ಪ್ರಕೃತವಾಗಿರುವ ಪ್ರಪಂಚವಾದ ಬ್ರಹ್ಮದ ರೂಪವನ್ನು ಅಲ್ಲಗಳೆದು ಬ್ರಹ್ಮವನ್ನು ಉಳಿಸಿಕೊಂಡಿದೆ ; ಅಥವಾ ಮೊದಲನೆಯ ನಞ್ಶಬ್ದವು ಮೂರ್ತಾಮೂರ್ತರಾಶಿಗಳನ್ನೂ ಎರಡನೆಯದು ವಾಸನಾಪ್ರಪಂಚವನ್ನೂ ಅಲ್ಲಗಳೆಯುತ್ತದೆ. ಅಥವಾ ಯಾವ ಯಾವದನ್ನು ಉತ್ಪ್ರೇಕ್ಷಿಸಬಹುದೋ ಅದೆಲ್ಲವನ್ನೂ ನೇತಿ ನೇತಿ ಎಂದು ಅಲ್ಲಗಳೆದು ಬ್ರಹ್ಮವನ್ನು ಉಳಿಸಿಕೊಂಡಿದೆ. ಆದ್ದರಿಂದಲೇ ಮತ್ತೊಂದು ಇದೆ ಎಂದು ಶ್ರುತಿ ಹೇಳಿದೆ. ಬ್ರಹ್ಮವನ್ನು "ಸತ್ಯಸ್ಯ ಸತ್ಯಮ್" ಎಂದೂ ವರ್ಣಿಸಿದೆ.

ಬ್ರಹ್ಮವು ಅವ್ಯಕ್ತವಾಗಿರುವದರಿಂದ ಅದು ಗ್ರಹಿಸುವದಕ್ಕೆ ಆಗುವದಿಲ್ಲ. ಆದರೂ ಧ್ಯಾನಕಾಲದಲ್ಲಿ ಯೋಗಿಗಳು ಅದನ್ನು ಕಾಣುತ್ತಾರೆ. ಅವಿದ್ಯಾಕೃತನಾದ ಉಪಾಧಿಯಿಂದ ಈ ಧ್ಯಾತೃಧ್ಯೇಯವಿಭಾಗವಾಗಿರುತ್ತದೆ ; ಆದ್ದರಿಂದಲೇ ಅವಿದ್ಯೆಯನ್ನು ವಿದ್ಯೆಯಿಂದ ಕಳೆದುಕೊಂಡು ನಿರ್ವಿಶೇಷವಾದ ಈ ಬ್ರಹ್ಮವನ್ನು ಸೇರಿ ಒಂದಾಗಬಹುದಾಗಿದೆ. ಇದರಲ್ಲಿ ಅಹಿಕುಂಡಲನ್ಯಾಯದಿಂದಲೂ ಪ್ರಕಾಶಾಶ್ರಯನ್ಯಾಯದಿಂದಲೂ ಭೇದಾಭೇದವನ್ನು ಕೆಲವರು ಹೇಳುವದು ಶ್ರುತಿಯುಕ್ತಿಗಳಿಗೆ ವಿರುದ್ಧವಾಗಿದೆ. ಆದ್ದರಿಂದ ನಿರ್ವಿಶೇಷವಾದ ಬ್ರಹ್ಮವೊಂದನ್ನು ಬಿಟ್ಟು ಮಿಕ್ಕದ್ದೆಲ್ಲವನ್ನೂ ಇಲ್ಲಿ ನಿರಾಕರಿಸಿದೆ ಎಂಬುದೇ ಸಿದ್ಧಾಂತ.

## ೭. ಫಲಾಧಿಕರಣ

**ಸಂಶಯ :** ಇಷ್ಟಾನಿಷ್ಟಮಿಶ್ರರೂಪವಾದ ಕರ್ಮಫಲವು ಕರ್ಮದಿಂದಲೇ ಆಗುವದೊ, ಈಶ್ವರನಿಂದಾಗುವದೊ ?

**ಪೂರ್ವಪಕ್ಷ :** ಕರ್ಮವೇ ಫಲವನ್ನು ಕೊಡುತ್ತದೆ. ಏಕೆಂದರೆ ಹಾಗೆಂದು ಶ್ರುತಿಯಿದೆ, ಅದು ಯುಕ್ತಿಯುಕ್ತವೂ ಆಗಿರುತ್ತದೆ. ಯಜೇತ ಎಂಬ ವಿಧಿಶ್ರುತಿಗೆ

ವಿಷಯವಾಗಿರುವದರಿಂದ ಯಾಗದಿಂದ ಸ್ವರ್ಗಫಲವಾಗುವದೆಂದು ಒಪ್ಪಬೇಕು ; ಹಾಗಿಲ್ಲದಿದ್ದರೆ ಯಾಗಕ್ಕೆ ಅಧಿಕಾರಿಗಳೇ ಇಲ್ಲವಾಗಿ ಅದು ವ್ಯರ್ಥವಾಗುತ್ತದೆ. ಕರ್ಮವು ಕೂಡಲೆ ನಾಶವಾಗುವದಾದರೂ ಕರ್ಮದ ಉತ್ತರಾವಸ್ಥೆಯಾದ ಅಥವಾ ಫಲಕ್ಕೆ ಪೂರ್ವಾವಸ್ಥೆಯಾದ ಅಪೂರ್ವವೆಂಬ ಒಂದಾನೊಂದು ಸೂಕ್ಷ್ಮತತ್ತ್ವವನ್ನು ಅದು ಉಂಟುಮಾಡಿಯೇ ನಾಶವಾಗುತ್ತದೆ ಎಂದು ಕಲ್ಪಿಸುತ್ತೇವೆ. ಈಶ್ವರನು ವಿಚಿತ್ರಕಾರಣಸಲ್ಲದಿದ್ದವದರಿಂದ ವಿಚಿತ್ರಕಾರ್ಯವನ್ನುಂಟುಮಾಡಲಾರನು ; ಮಾಡಿದರೂ ವೈಷಮ್ಯನೈರ್ಘೃಣ್ಯಗಳು ಈಶ್ವರನಿಗೆ ಪ್ರಸಕ್ತವಾಗುತ್ತವೆ : ಜೀವರು ಕರ್ಮವನ್ನು ಮಾಡಿದರೂ ಕರ್ಮವು ಫಲಹೇತುವಲ್ಲದ್ದರಿಂದ ಕರ್ಮಾನುಷ್ಠಾನವು ವ್ಯರ್ಥವೆಂದಾಗುವದು. ಆದ್ದರಿಂದ ಕರ್ಮವೇ ಫಲಕ್ಕೆ ಹೇತು.

ಸಿದ್ಧಾಂತ : ಈಶ್ವರನೇ ಕಾರಣ. ಕರ್ಮವು ವಿನಾಶಿಯಾಗಿರುವದರಿಂದಲೂ ಅಪೂರ್ವಕ್ಕೆ ಪ್ರಮಾಣವಿಲ್ಲದ್ದರಿಂದಲೂ ಕರ್ಮಕಾರಣತ್ವವಾದವು ಸರಿಯಲ್ಲ ; ಈಶ್ವರನು ಫಲವನ್ನು ಕೊಡುತ್ತಾನೆಂಬ ಶ್ರುತಿಯೂ ಇದೆ. ಈಶ್ವರನು ಕರ್ಮಾಪೇಕ್ಷನಾಗಿಯೇ ಫಲವನ್ನು ಕೊಡುತ್ತಾನೆಂದು ಒಪ್ಪುವದರಿಂದ ಅನುಷ್ಠಾನವು ವ್ಯರ್ಥವಲ್ಲ. ಶ್ರುತಿಯಲ್ಲಿ ಕರ್ಮಹೇತುತ್ವವೂ ಫಲಹೇತುತ್ವವೂ ಉಕ್ತವಾಗಿದೆ. ಕರ್ಮಾನುರೂಪವಾಗಿ ಫಲವನ್ನು ಅವನೇ ಸೃಜಿಸುತ್ತಾನಾದ್ದರಿಂದಲೂ ಅವನೇ ಫಲಹೇತು. ಜೀವಕೃತಪ್ರಯತ್ನಾಪೇಕ್ಷನಾಗಿರುವದರಿಂದ ಈಶ್ವರಕಾರಣವಾದದಲ್ಲಿ ಪೂರ್ವಪಕ್ಷಿಯು ಶಂಕಿಸಿದ ದೋಷಗಳು ಯಾವವೂ ಉಂಟಾಗುವದಿಲ್ಲ.



# ಮೂರನೆಯ ಅಧ್ಯಾಯ - ಮೂರನೆಯ ಪಾದ

(ಉಪಾಸನಾಗುಣೋಪಸಂಹಾರಾದಿವಿಚಾರ)

## ೧. ಸರ್ವವೇದಾಂತಪ್ರತ್ಯಯಾಧಿಕರಣ (ಸೂ. ೧-೪)

(ವೇದಾಂತವಿಹಿತವಾದ ಉಪಾಸನೆಗಳೂ ಒಂದೇ).

**ಸರ್ವವೇದಾನ್ತಪ್ರತ್ಯಯಂ ಚೋದನಾದ್ಯವಿಶೇಷಾತ್ ॥ ೧ ॥**

೧. ಚೋದನಾದಿಗಳಲ್ಲಿ ವಿಶೇಷವಿಲ್ಲದ್ದರಿಂದ ಎಲ್ಲಾ ವೇದಾಂತ ವಿಧಿಗಳಲ್ಲಿಯೂ (ಆಯಾ ಉಪಾಸನೆಯು ಒಂದೇ).

### ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೩೧೮. ವ್ಯಾಖ್ಯಾತಂ ವಿಜ್ಞೇಯಸ್ಯ ಬ್ರಹ್ಮಣಸ್ತತ್ತ್ವಮ್। ಇದಾನೀಂ ತು ಪ್ರತಿವೇದಾನ್ತಂ ವಿಜ್ಞಾನಾನಿ ಭಿದ್ಯನ್ತೇ ನ ವಾ ಇತಿ ವಿಚಾರ್ಯತೇ। ನನು ವಿಜ್ಞೇಯಂ ಬ್ರಹ್ಮ ಪೂರ್ವಾಪರಾದಿಭೇದರಹಿತಮ್ ಏಕರಸಂ ಸೈನ್ಧವ ಘನವತ್ ಅವಧಾರಿತಮ್ ತತ್ರ ಕುತೋ ವಿಜ್ಞಾನಭೇದಾಭೇದಚಿನ್ತಾವತಾರಃ? ನ ಹಿ ಕರ್ಮಬಹುತ್ವವತ್ ಬ್ರಹ್ಮಬಹುತ್ವಮಪಿ ವೇದಾನ್ತೇಷು ಪ್ರತಿಪಿಪಾದ ಯಿಷಿತಮ್ ಇತಿ ಶಕ್ಯಂ ವಕ್ತುಮ್। ಬ್ರಹ್ಮಣ ಏಕತ್ವಾತ್ ಏಕರೂಪತ್ವಾಚ್ಚ। ನ ಚೈಕರೂಪೇ ಬ್ರಹ್ಮಣಿ ಅನೇಕರೂಪಾಣಿ ವಿಜ್ಞಾನಾನಿ ಸಂಭವನ್ತಿ। ನ ಹಿ ಅನ್ಯಥಾ ಅರ್ಥಃ, ಅನ್ಯಥಾ ಜ್ಞಾನಮ್ ಇತಿ ಅಭ್ರಾನ್ತಂ ಭವತಿ। ಯದಿ ಪುನಃ ಏಕಸ್ಮಿನ್ ಬ್ರಹ್ಮಣಿ ಬಹೂನಿ ವಿಜ್ಞಾನಾನಿ ವೇದಾನ್ತಾನ್ತರೇಷು ಪ್ರತಿಪಿಪಾದ ಯಿಷಿತಾನಿ ತೇಷಾಮ್ ಏಕಮ್ ಅಭ್ರಾನ್ತಮ್, ಭ್ರಾನ್ತಾನಿ ಇತರಾಣಿ ಇತಿ ಅನಾಶ್ವಾಸಪ್ರಸಙ್ಗೋ ವೇದಾನ್ತೇಷು। ತಸ್ಮಾತ್ ನ ತಾವತ್ ಪ್ರತಿವೇದಾನ್ತಂ ಬ್ರಹ್ಮವಿಜ್ಞಾನಭೇದಃ ಆಶಙ್ಕಿತುಂ ಶಕ್ಯತೇ। ನಾಪ್ಯಸ್ಯ ಚೋದನಾದ್ಯ ವಿಶೇಷಾತ್ ಅಭೇದ ಉಚ್ಯತೇ। ಬ್ರಹ್ಮವಿಜ್ಞಾನಸ್ಯ ಅಚೋದನಾಲಕ್ಷಣತ್ವಾತ್। ಅವಿಧಿಪ್ರಧಾನೈರ್ಹಿ ವಸ್ತುಪರ್ಯವಸಾಯಿಭಿಃ ಬ್ರಹ್ಮವಾಕ್ಯೈಃ ಬ್ರಹ್ಮ ವಿಜ್ಞಾನಂ ಜನ್ಯತ ಇತ್ಯವೋಚತ್ ಆಚಾರ್ಯಃ। "ತತ್ತು ಸಮನ್ವಯಾತ್" (೧-೧-೪) ಇತ್ಯತ್ರ। ತತ್ಕಥಮ್ ಇಮಾಂ ಭೇದಾಭೇದಚಿನ್ತಾಮ್ ಆರಭತ

ಇತಿ ತದುಚ್ಯತೇ ಸಗುಣಬ್ರಹ್ಮವಿಷಯಾ ಪ್ರಾಣಾದಿವಿಷಯಾ ಚ ಇಯಂ ವಿಜ್ಞಾನಭೇದಾಭೇದಚಿನ್ತಾ ಇತಿ ಅದೋಷಃ । ಅತ್ರ ಹಿ ಕರ್ಮವತ್ ಉಪಾಸನಾನಾಂ ಭೇದಾಭೇದೌ ಸಂಭವತಃ । ಕರ್ಮವದೇವ ಚ ಉಪಾಸನಾನಿ ದೃಷ್ಟಫಲಾನಿ ಅದೃಷ್ಟಫಲಾನಿ ಚ ಉಚ್ಯನ್ತೇ, ಕ್ರಮಮುಕ್ತಿಫಲಾನಿ ಚ ಕಾನಿಚಿತ್ ಸಮ್ಯಗ್ಜ್ಞಾನೋತ್ಪತ್ತಿದ್ವಾರೇಣ ತೇಷು ಏಷಾ ಚಿನ್ತಾ ಸಂಭವತಿ । ಕಿಂ ಪ್ರತಿವೇದಾನ್ತಂ ವಿಜ್ಞಾನಭೇದಃ ಆಹೋಸ್ವಿನ್ನ ಇತಿ ॥

(ಭಾಷ್ಯಾರ್ಥ)

ವಿಜ್ಞೇಯವಾಗಿರುವ ಬ್ರಹ್ಮದ ತತ್ತ್ವವನ್ನು ವ್ಯಾಖ್ಯಾನಮಾಡಿದಂತಾಯಿತು. ಈಗಲಾದರೋ, ಪ್ರತಿವೇದಾಂತದಲ್ಲಿಯೂ ವಿಜ್ಞಾನಗಳು ಬೇರೆಬೇರೆಯಾಗಿರುತ್ತವೆಯೊ ಇಲ್ಲವೊ ? ಎಂದು ವಿಚಾರಣೆಮಾಡಲಾಗುವದು.

(ಆಕ್ಷೇಪ) :– ವಿಜ್ಞೇಯವಾದ ಬ್ರಹ್ಮವು ಪೂರ್ವ, ಅಪರ– ಮುಂತಾದದ್ದು ಯಾವದೂ ಇಲ್ಲದ್ದು[1], ಉಪ್ಪಿನ ಹರಳಿನಂತೆ ಏಕರಸವಾದದ್ದು[2] ಎಂದು ನಿಶ್ಚಿತವಾಗಿರುತ್ತದೆ. ಅದರಲ್ಲಿ ವಿಜ್ಞಾನಗಳ ಭೇದಾಭೇದಚಿಂತನೆಯನ್ನು ತಂದಿಳಿಸುವದು ಹೇಗೆ ? ಕರ್ಮಬಹುತ್ವದಂತೆ ಬ್ರಹ್ಮಬಹುತ್ವವನ್ನೂ ವೇದಾಂತಿಗಳಲ್ಲಿ ಪ್ರತಿಪಾದನೆಮಾಡಬೇಕೆಂದು ಹೊರಟಿದೆ ಎಂದು ಹೇಳಲಾಗುವದಿಲ್ಲವಷ್ಟೆ ? ಏಕೆಂದರೆ ಬ್ರಹ್ಮವು ಒಂದು, ಒಂದೇ ರೂಪವಾಗಿರುತ್ತದೆ. ಒಂದೇ ರೂಪವಾಗಿರುವ ಬ್ರಹ್ಮದ (ವಿಷಯ)ದಲ್ಲಿ ಅನೇಕರೂಪವಾಗಿರುವ ವಿಜ್ಞಾನಗಳು ಸಂಭವಿಸುವದೂ ಇಲ್ಲ. ವಿಷಯವೇ ಒಂದು ತೆರನಾಗಿದೆ, ಜ್ಞಾನವೇ ಒಂದು ತೆರನಾಗಿದೆ– ಎಂಬುದು ಭ್ರಾಂತಿಯಲ್ಲದೆ ಹೋಗಲಾರದಷ್ಟೆ ? **ಒಂದೇ ಬ್ರಹ್ಮದಲ್ಲಿ ಅನೇಕ ವಿಜ್ಞಾನಗಳನ್ನು ಬೇರೆಬೇರೆಯ ವೇದಾಂತಗಳಲ್ಲಿ ಪ್ರತಿಪಾದನೆಮಾಡಲು ಹೊರಟಿದೆ ಎನ್ನುವದಾದರೆ ಅವುಗಳಲ್ಲಿ ಒಂದು ಅಭ್ರಾಂತಿಯು, ಮಿಕ್ಕವುಗಳೆಲ್ಲ ಭ್ರಾಂತಿಗಳೆಂದೇ ಆಗುವದರಿಂದ ವೇದಾಂತಗಳಲ್ಲಿ ಅವಿಶ್ವಾಸವೇ ಉಂಟಾಗುವ ಪ್ರಸಂಗವು (ಬರುವದು). ಆದ್ದರಿಂದ ಮೊದಲನೆಯದಾಗಿ ಪ್ರತಿವೇದಾಂತದಲ್ಲಿ ಬ್ರಹ್ಮವಿಜ್ಞಾನವು ಬೇರೆಬೇರೆಯಾಗಿರುತ್ತದೆ ಎಂದು ಆಶಂಕೆಮಾಡಲಾಗುವದಿಲ್ಲ. ಇದಕ್ಕೆ ಚೋದನಾದಿಗಳು ಬೇರೆಯಲ್ಲದೆ (ಒಂದೇ) ಆಗಿರುವದರಿಂದ ಅಭೇದವೆಂದು ಹೇಳುವದಕ್ಕೂ ಆಗಲಾರದು. ಏಕೆಂದರೆ ಬ್ರಹ್ಮವಿಜ್ಞಾನವು ಚೋದನಾಲಕ್ಷಣವಲ್ಲ. ಏಕೆಂದರೆ ವಿಧಿಪ್ರಧಾನವಲ್ಲದೆ ವಸ್ತು(ಸ್ವರೂಪ)ದಲ್ಲಿ ಕೊನೆಗಂಡಿರುವ**

1. ಹಿಂದುಮುಂದೆಂಬ ಭೇದಗಳು ಬ್ರಹ್ಮದಲ್ಲಿಲ್ಲ ; ಏಕೆಂದರೆ ಅದು ಅಪರಿಚ್ಛಿನ್ನ, ನಿರವಯವ. 2. ತನ್ನೊಳಗೆ ವೈಚಿತ್ರ್ಯವಿಲ್ಲದ್ದು.

**ಬ್ರಹ್ಮವಾಕ್ಯಗಳಿಂದ ಬ್ರಹ್ಮವಿಜ್ಞಾನವು ಉಂಟಾಗುತ್ತದೆ ಎಂದು ಆಚಾರ್ಯರು "ತತ್ತು ಸಮನ್ವಯಾತ್" (೧–೧–೪) ಎಂಬ (ಸೂತ್ರ) ದಲ್ಲಿ ಹೇಳಿರುತ್ತಾರೆ.** ಹೀಗಿರುವಲ್ಲಿ ಈ ಭೇದಾಭೇದವಿಚಾರವನ್ನು ಹೇಗೆ ಪ್ರಾರಂಭಿಸಿರುತ್ತಾರೆ ?

ಇದನ್ನು ಹೇಳುತ್ತೇವೆ. **ಈ ಭೇದಾಭೇದಚಿಂತೆಯು ಸಗುಣಬ್ರಹ್ಮ ವಿಷಯವೂ ಪ್ರಾಣಾದಿವಿಷಯಕವೂ (ಆಗಿರುತ್ತದೆ)**ಯಾಗಿ (ಇದರಲ್ಲಿ) ದೋಷವಿಲ್ಲ. ಏಕೆಂದರೆ ಇದರಲ್ಲಿ ಕರ್ಮಗಳಂತೆಯೇ ಉಪಾಸನೆಗಳ ಭೇದಾಭೇದಗಳೂ ಸಂಭವಿಸುತ್ತವೆ ; ಕರ್ಮಗಳಂತೆಯೇ ಉಪಾಸನೆಗಳನ್ನು ದೃಷ್ಟಫಲಕ್ಕಾಗಿಯೂ ಅದೃಷ್ಟಫಲಕ್ಕಾಗಿಯೂ ಹೇಳಿರುತ್ತದೆ. ಕೆಲವು ಸಮ್ಯಗ್ಜ್ಞಾನವನ್ನುಂಟುಮಾಡುವ ಮೂಲಕ **ಕ್ರಮಮುಕ್ತಿ** ಎಂಬ ಫಲವನ್ನು (ಕೊಡುವದಕ್ಕೂ ವಿಹಿತವಾಗಿವೆ). ಅವುಗಳಲ್ಲಿ "ಪ್ರತಿವೇದಾಂತದಲ್ಲಿಯೂ ಬೇರೆಬೇರೆ ವಿಜ್ಞಾನವೊ, ಅಲ್ಲವೊ ?" ಎಂಬೀ ವಿಚಾರವು ಸಂಭವಿಸುತ್ತದೆ.[1]

## ಪೂರ್ವಪಕ್ಷ:
## ಪ್ರತಿವೇದಾಂತದಲ್ಲಿಯೂ ಉಪಾಸನೆಯು ಬೇರೆಬೇರೆ

(ಭಾಷ್ಯ)

೩೧೯. ತತ್ರ ಪೂರ್ವಪಕ್ಷಹೇತವಸ್ತಾವತ್ ಉಪನ್ಯಸ್ಯನ್ತೇ । ನಾಮ್ನ ಸ್ತಾವತ್ ಭೇದಪ್ರತಿಪತ್ತಿಹೇತುತ್ವಂ ಪ್ರಸಿದ್ಧಂ ಜ್ಯೋತಿರಾದಿಷು। ಅಸ್ತಿ ಚಾತ್ರ ವೇದಾನ್ತಾನ್ತರವಿಹಿತೇಷು ವಿಜ್ಞಾನೇಷು ಅನ್ಯದನ್ಯನ್ನಾಮ ತೈತ್ತಿರೀಯಕಮ್, ವಾಜಸನೇಯಕಮ್, ಕೌಥುಮಕಮ್, ಶಾಟ್ಯಾಯನಕಮ್ ಇತ್ಯೇವಮಾದಿ । ತಥಾ ರೂಪಭೇದೋಽಪಿ ಕರ್ಮಭೇದಸ್ಯ ಪ್ರತಿಪಾದಕಃ ಪ್ರಸಿದ್ಧಃ "ವೈಶ್ವದೇವ್ಯಾಮಿಕ್ಷಾ ವಾಜಿಭ್ಯೋ ವಾಜಿನಮ್ ( ? ) ಇತ್ಯೇವಮಾದಿಷು ! ಅಸ್ತಿ ಚಾತ್ರ ರೂಪಭೇದಃ। ತದ್ಯಥಾ ಕೇಚಿತ್ ಶಾಖಿನಃ ಪಞ್ಚಾಗ್ನಿವಿದ್ಯಾಯಾಂ ಷಷ್ಠಮ್ ಅಪರಮ್ ಅಗ್ನಿಮ್ ಆಮನನ್ತಿ. ಅಪರೇ ಪುನಃ ಪಞ್ಚೈವ ಪಠನ್ತಿ। ತಥಾ ಪ್ರಾಣಸಂವಾದಾದಿಷು ಕೇಚಿತ್ ಊನಾನ್ ವಾಗಾದೀನ್ ಆಮನನ್ತಿ, ಕೇಚಿತ್ ಅಧಿಕಾನ್। ತಥಾ ಧರ್ಮವಿಶೇಷೋಽಪಿ ಕರ್ಮಭೇದಸ್ಯ ಪ್ರತಿಪಾದಕ ಆಶಙ್ಕಿತಃ ಕಾರೀರ್ಯಾದಿಷು । ಅಸ್ತಿ ಚಾತ್ರ ಧರ್ಮವಿಶೇಷಃ। ಯಥಾ ಆಥರ್ವಣಿಕಾನಾಂ ಶಿರೋವ್ರತಮ್ ಇತಿ। ಏವಂ ಪುನರುಕ್ತ್ಯಾದಯೋಽಪಿ ಭೇದಹೇತವೋ ಯಥಾಸಂಭವಂ ವೇದಾನ್ತಾನ್ತರೇಷು ಯೋಜಯಿತವ್ಯಾಃ। ತಸ್ಮಾತ್ ಪ್ರತಿವೇದಾನ್ತಂ ವಿಜ್ಞಾನಭೇದಃ ಇತಿ ॥

---

1. ಪಂಚಾಗ್ನಿಪ್ರಾಣದಹರಶಾಂಡಿಲ್ಯವೈಶ್ವಾನರಾದಿವಿದ್ಯೆಗಳು ಬೇರೆಬೇರೆ ಎಂದು (೩–೩–೫೮)ರಲ್ಲಿ ತಿಳಿಸಲಾಗುತ್ತದೆ. ಅವುಗಳಲ್ಲಿ ಒಂದೊಂದೂ ಬೇರೆಬೇರೆ ಶಾಖೆಯಲ್ಲಿದ್ದರೆ ಬೇರೆಬೇರೆಯೆ ಅಲ್ಲವೆ ?– ಎಂಬುದನ್ನು ಈಗ ವಿಚಾರಮಾಡಲಾಗುತ್ತದೆ.

(ಭಾಷ್ಯಾರ್ಥ)

ಇಲ್ಲಿ ಮೊದಲು ಪೂರ್ವಪಕ್ಷದ ಹೇತುಗಳನ್ನು ಹೇಳುತ್ತೇವೆ. (೧) ಮೊದಲನೆಯದಾಗಿ **ನಾಮವು** ಭೇದಜ್ಞಾನಕ್ಕೆ ಹೇತುವೆಂದು ಜ್ಯೋತಿರಾದಿಗಳಲ್ಲಿ ಪ್ರಸಿದ್ಧವಾಗಿದೆ.[1] ಇಲ್ಲಿಯೂ ವೇದಾಂತಾಂತರಗಳಲ್ಲಿ ವಿಹಿತವಾದ ವಿಜ್ಞಾನಗಳಲ್ಲಿ ಬೇರೆಬೇರೆಯ ನಾಮವು ತೈತ್ತಿರೀಯಕ, ವಾಜಸನೇಯಕ, ಕೌಥುಮಕ, ಶಾಟ್ಯಾಯನಕ– ಎಂದುಮುಂತಾಗಿ ಇರುತ್ತದೆ. ಇದರಂತೆ **ರೂಪಭೇದವೂ** ಕರ್ಮಭೇದವನ್ನು ತಿಳಿಸುತ್ತದೆ ಎಂದು "ವೈಶ್ವದೇವ್ಯಾಮಿಕ್ಷಾ ವಾಜಿಭ್ಯೋ ವಾಜಿನಮ್" (ಆಮಿಕ್ಷೆಯು ವೈಶ್ವದೇವಕವು, ವಾಜಿಗಳಿಗೆ ವಾಜಿನವು)[2] ಮುಂತಾದವುಗಳಲ್ಲಿ ಪ್ರಸಿದ್ಧವಾಗಿದೆ. ಇಲ್ಲಿ ರೂಪಭೇದವೂ ಇದೆ. ಅದು ಹೇಗೆಂದರೆ ಕೆಲವು ಶಾಖೆಯವರು ಪಂಚಾಗ್ನಿವಿದ್ಯೆಯಲ್ಲಿ ಆರನೆಯದಾದ ಮತ್ತೊಂದು ಅಗ್ನಿಯನ್ನು ಪಠಿಸುತ್ತಾರೆ, ಮತ್ತೆ ಕೆಲವರು ಐದನ್ನೇ ಪಠಿಸುತ್ತಾರೆ.[3] ಹೀಗೆಯೇ ಪ್ರಾಣಸಂವಾದಾದಿಗಳಲ್ಲಿ ಕೆಲವರು ಕಡಿಮೆಯ ಸಂಖ್ಯೆಯ ವಾಗಾದಿಗಳನ್ನು ಪಠಿಸುತ್ತಾರೆ, ಕೆಲವರು ಹೆಚ್ಚು ಸಂಖ್ಯೆಯ (ವಾಗಾದಿಗಳನ್ನು) ಪಠಿಸುತ್ತಾರೆ.[4] ಇದರಂತೆ **ಧರ್ಮವಿಶೇಷವನ್ನೂ** ಕರ್ಮಭೇದವನ್ನು

---

1. "ಅಥೈಷ ಜ್ಯೋತಿಃ ...ಅಥೈಷ ವಿಶ್ವಜ್ಯೋತಿಃ....ಅಥೈಷ ಸರ್ವಜ್ಯೋತಿಃ ಏತೇನ ಸಹಸ್ರದಕ್ಷಿಣೇನ ಯಜೇತ" (?) ಎಂಬ ವಾಕ್ಯದಲ್ಲಿ ಪ್ರಕೃತವಾಗಿರುವ ಜ್ಯೋತಿಷ್ಟೋಮವನ್ನು ನಾಮೈಕದೇಶಗ್ರಹಣದಿಂದ ಅನುವಾದಮಾಡಿಕೊಂಡು ಸಹಸ್ರದಕ್ಷಿಣೆಯೆಂಬ ಗುಣವನ್ನು ವಿಧಿಸಿವೆಯೆ, ಅಥವಾ ಇವೆರಡೂ ಕರ್ಮಾಂತರಗಳೆ ? ಎಂಬ ಸಂಶಯವಾಗಲು ಉತ್ಪತ್ತಿವಾಕ್ಯಗಳಲ್ಲಿ ನಾಮಾಂತರಗಳು ಬಂದಿರುವದರಿಂದ ಇವು ಕರ್ಮಾಂತರಗಳೇ ಎಂದು ಜೈ. ೨–೨–೨೨ರಲ್ಲಿ ನಿರ್ಣಯಿಸಿದೆ.

2. ತೈತ್ತಿರೀಯಕಾದಿಗಳು ಗ್ರಂಥನಾಮಗಳಾದರೂ ವಿಜ್ಞಾನಕ್ಕೂ ಅವು ಹೆಸರುಗಳೇ ಎಂದು ಭಾವ. ಜ್ಯೋತಿಷ್ಟೋಮದ ಸಂನಿಧಿಯಲ್ಲಿದ್ದರೂ ವಿಶ್ವಜ್ಯೋತಿ ಸರ್ವಜ್ಯೋತಿಶಬ್ದಗಳು ಬೇರೆಯ ಕರ್ಮವನ್ನು ಹೇಳುತ್ತಿರುವಲ್ಲಿ ಶಾಖಾಂತರದಲ್ಲಿ ವಿಹಿತವಾಗಿರುವ ತೈತ್ತಿರೀಯಕಾದಿವಿಜ್ಞಾನಗಳು ಬೇರೆ ಎಂಬುದನ್ನು ಹೇಳುವದೇನು ?– ಎಂದು ಭಾವ.

3. ತಪ್ತೇ ಪಯಸಿ ದಧ್ಯಾನಯತಿ ಸಾ ವೈಶ್ವದೇವ್ಯಾಮಿಕ್ಷಾ ವಾಜಿಭ್ಯೋ ವಾಜಿನಮ್" (ಕುಡಿಯುವ ಹಾಲಿಗೆ ಮೊಸರು ಹಾಕಬೇಕು ; ಆಗ ಗಟ್ಟಿಯಾದ "ಆಮಿಕ್ಷಾ" ಭಾಗವು ವಿಶ್ವೇದೇವರುಗಳಿಗೆ, ವಾಜಿಗಳಿಗೆ ನೀರಾಗಿರುವ "ವಾಜಿನ" ಭಾಗವು. ಈ ವಾಕ್ಯದಲ್ಲಿ ವಿಶ್ವೇದೇವತೆಗಳಿಗೆ ಆಮಿಕ್ಷೆಯಂತೆ ವಾಜಿನವನ್ನೂ ಕೊಡಬೇಕೆ ?– ಎಂದು ವಿಚಾರಮಾಡಿ ದ್ರವ್ಯದೇವತೆಗಳು ಬೇರೆಯಾಗಿರುವದರಿಂದ ಇದು ಮತ್ತೊಂದು ಕರ್ಮವು ಎಂದು ಜೈ. ೨–೨–೯ರಲ್ಲಿ ನಿರ್ಣಯಿಸಿದೆ.

ವಾಜಸನೇಯಿಗಳು.

ತಿಳಿಸುತ್ತದೆ ಎಂದು ಕಾರೀರ್ಯಾದಿಗಳಲ್ಲಿ ಆಶಂಕಿಸಿರುತ್ತದೆ.[1] ಇಲ್ಲಿ ಧರ್ಮ ವಿಶೇಷವೂ ಇದೆ. ಉದಾಹರಣೆಗೆ ಆಥರ್ವಣಿಕರಿಗೆ ಶಿರೋವ್ರತವು (ಧರ್ಮ ವಿಶೇಷವು)[2], ಇದರಂತೆ **ಪುನರುಕ್ತಿ ನಮುಂತಾದವುಗಳನ್ನೂ**[3] ಯಥಾ ಸಂಭವವಾಗಿ ವೇದಾಂತಗಳಲ್ಲಿ ಜೋಡಿಸಿಕೊಳ್ಳಬೇಕು. ಆದ್ದರಿಂದ ಒಂದೊಂದು ವೇದಾಂತಕ್ಕೂ ವಿಜ್ಞಾನವು ಭಿನ್ನವಾಗಿರುತ್ತದೆ.

## ಸಿದ್ಧಾಂತ: ಶಾಖಾಂತರಗಳಲ್ಲಿಯೂ ಅದೇ ವಿಜ್ಞಾನ

(ಭಾಷ್ಯ)

೩೨೦. ಏವಂ ಪ್ರಾಪ್ತೇ ಬ್ರೂಮಃ । ಸರ್ವವೇದಾನ್ತಪ್ರತ್ಯಯಾನಿ ವಿಜ್ಞಾನಾನಿ ತಸ್ಮಿನ್ ತಸ್ಮಿನ್ ವೇದಾನ್ತೇ ತಾನಿತಾನ್ಯೇವ ಭವಿತುಮರ್ಹನ್ತಿ । ಕುತಃ ? ಚೋದನಾದ್ಯವಿಶೇಷಾತ್ । ಆದಿಗ್ರಹಣೇನ ಶಾಖಾನ್ತರಾಧಿಕರಣ ಸಿದ್ಧಾನ್ತಸೂತ್ರೋದಿತಾ ಅಭೇದಹೇತವಃ ಇಹಾಕೃಷ್ಯನ್ತೇ । ಸಂಯೋಗರೂಪ ಚೋದನಾಖ್ಯಾವಿಶೇಷಾತ್ ಇತ್ಯರ್ಥಃ । ಯಥಾ ಏಕಸ್ಮಿನ್ ಅಗ್ನಿಹೋತ್ರೇ ಶಾಖಾಭೇದೇಽಪಿ ಪುರುಷಪ್ರಯತ್ನಸ್ತಾದೃಶ ಏವ ಚೋದ್ಯತೇ 'ಜುಹುಯಾತ್' ಇತಿ ಏವಮ್ "ಯೋ ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ" (ಬೃ.೬-೧-೧, ಛಾಂ.೫-೧-೧) ಇತಿ ವಾಜಸನೇಯಿನಾಂ ಛನ್ದೋಗಾನಾಂ ಚ ತಾದೃಶ್ಯೇವ ಚೋದನಾ । ಪ್ರಯೋಜನಸಂಯೋಗೋಽಪಿ ಅವಿಶಿಷ್ಟ ಏವ "ಜ್ಯೇಷ್ಠಶ್ಚ ಶ್ರೇಷ್ಠಶ್ಚ ಸ್ವಾನಾಂ ಭವತಿ" (ಬೃ. ೬-೧-೧) ಇತಿ । ರೂಪಮುಪ್ಯುಭಯತ್ರ ತದೇವ ವಿಜ್ಞಾನಸ್ಯ ಯದುತ ಜ್ಯೇಷ್ಠಶ್ರೇಷ್ಠಾದಿಗುಣವಿಶೇಷಣಾನ್ವಿತಂ ಪ್ರಾಣತತ್ತ್ವಮ್ । ಯಥಾ ಚ ದ್ರವ್ಯದೇವತೇ ಯಾಗಸ್ಯ ರೂಪಮ್ ಏವಂ ವಿಜ್ಞೇಯಂ ರೂಪಂ ವಿಜ್ಞಾನಸ್ಯ । ತೇನ ಹಿ ತದ್ ರೂಪ್ಯತೇ । ಸಮಾಖ್ಯಾಪಿ ಸೈವ 'ಪ್ರಾಣವಿದ್ಯಾ' ಇತಿ । ತಸ್ಮಾತ್ ಸರ್ವವೇದಾನ್ತಪ್ರತ್ಯಯತ್ವಂ ವಿಜ್ಞಾನಾನಾಮ್ । ಏವಂ ಪಞ್ಚಾಗ್ನಿವಿದ್ಯಾವೈಶ್ವಾನರವಿದ್ಯಾ ಶಾಣ್ಡಿಲ್ಯವಿದ್ಯಾ ಇತ್ಯೇವಮಾದಿಷು ಯೋಜಯಿತವ್ಯಮ್ । ಯೇ ತು ನಾಮರೂಪಾದಯೋ

---

1. ಕಾರೀರೀವಾಕ್ಯಗಳನ್ನು ಅಧ್ಯಯನಮಾಡುವಾಗ ತೈತ್ತಿರೀಯರು ನೆಲದಮೇಲೆ ಊಟಮಾಡುವರು, ಮಿಕ್ಕವರು ಮಾಡುವದಿಲ್ಲ ; ಅಶ್ವಮೇಧವನ್ನು ಅಧ್ಯಯನಮಾಡುವಾಗ ಕೆಲವರು ಕುದುರೆಗೆ ಹುಲ್ಲನ್ನು ತಂದು ಮೇಯಿಸುತ್ತಾರೆ, ಕೆಲವರು ಇಲ್ಲ- ಹೀಗೆಲ್ಲ ಧರ್ಮಭೇದವನ್ನು ಉದಾಹರಿಸಿ ಕರ್ಮವು ಬೇರೆ ಎಂದು ಜೈ. ೨-೪-೮ರ ಭಾಷ್ಯದಲ್ಲಿ ಆಶಂಕಿಸಿದೆ. 2. ಮುಂ. ಭಾ. ೩-೨-೧೦ ನೋಡಿ.

3. ಮುಂತಾದವು ಎಂದರೆ ನಿಂದ್ಯಾಽಶಕ್ತಿಸಮಾಪ್ತಿವಚನಪ್ರಾಯಶ್ಚಿತ್ತಾನ್ಯಾರ್ಥ ದರ್ಶನಗಳು. ಇವುಗಳನ್ನೂ ಹೊಂದಿದಷ್ಟು ಇಲ್ಲಿ ತೆಗೆದುಕೊಳ್ಳಬೇಕೆಂದು ಅಭಿಪ್ರಾಯ. ಜೈ. ೨-೪-೮ರ ಭಾಷ್ಯವನ್ನು ನೋಡಿ.

ಭೇದಹೇತ್ವಾಭಾಸಾಃ ತೇ ಪ್ರಥಮ ಏವ ಕಾಣ್ಡೇ "ನ ನಾಮ್ನಾ ಸ್ಯಾದಚೋದನಾಭಿಧಾನತ್ವಾತ್" (ಜೈ. ೨-೪-೧೦) ಇತ್ಯಾರಭ್ಯ ಪರಿಹೃತಾಃ[1] ॥

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ ಎಲ್ಲಾ ವೇದಾಂತಗಳಲ್ಲಿಯೂ ಕಂಡುಬರುವ ವಿಜ್ಞಾನಗಳು ಆಯಾ ವೇದಾಂತದಲ್ಲಿ ಅವವೇ ಆಗಿರಬೇಕು.[2] ಏಕೆ ? ಎಂದರೆ ಚೋದನಾದಿಗಳಲ್ಲಿ ವಿಶೇಷವಿಲ್ಲದ್ದರಿಂದ. ಇಲ್ಲಿ (ಸೂತ್ರದಲ್ಲಿ) ಆದಿ (ಎಂಬ ಮಾತನ್ನು) ಗ್ರಹಿಸಿರುವದರಿಂದ **ಶಾಖಾಂತರಾಧಿಕರಣದ** ಸಿದ್ಧಾಂತಸೂತ್ರದಲ್ಲಿ ಹೇಳಿರುವ ಅಭೇದಹೇತುಗಳನ್ನು ಇಲ್ಲಿ ಎಳೆದುಕೊಳ್ಳಬೇಕು.[3] ಸಂಯೋಗರೂಪಚೋದನಾಖ್ಯೆಗಳಲ್ಲಿ ವಿಶೇಷವಿಲ್ಲದ್ದರಿಂದ ಎಂದರ್ಥ. (ಇದರ ವಿವರ) : ಹೇಗೆ ಒಂದು ಅಗ್ನಿಹೋತ್ರದಲ್ಲಿ ಶಾಖಾಭೇದವಾದಾಗಲೂ ಅದೇ ಪ್ರಕಾರದ ಪುರುಷಪ್ರಯತ್ನವನ್ನೇ 'ಜುಹುಯಾತ್' (ಹೋಮಮಾಡಬೇಕು) ಎಂದು ಚೋದನವಾಡಿರುತ್ತದೆಯೊ, ಹಾಗೆಯೇ "ಯಾವನು ಜ್ಯೇಷ್ಠನನ್ನೂ ಶ್ರೇಷ್ಠನನ್ನೂ ಅರಿತುಕೊಳ್ಳುವನೋ " (ಬೃ. ೬-೧-೧, ಛಾಂ.೫-೧-೧)ಎಂದು ವಾಜಸನೇಯಿಗಳಿಗೂ ಛಂದೋಗರಿಗೂ ಅದೇ ಪ್ರಕಾರದ **ಚೋದನೆ**ಯಿರುತ್ತದೆ. **ಪ್ರಯೋಜನಸಂಯೋಗವೂ** "ತಮ್ಮವರಲ್ಲಿ ಜ್ಯೇಷ್ಠನೂ ಶ್ರೇಷ್ಠನೂ ಆಗುವನು" (ಬೃ. ೬-೧-೧)[4] ಎಂದು ಸಮಾನವಾಗಿಯೇ ಇರುತ್ತದೆ.[4] **ರೂಪವೂ** ಎರಡು ಕಡೆಯಲ್ಲಿಯೂ ವಿಜ್ಞಾನಕ್ಕೆ ಅದೇ ; ಯಾವದೆಂದರೆ ಜ್ಯೇಷ್ಠಶ್ರೇಷ್ಠಾದಿಗುಣಗಳಿಂದ ಕೂಡಿರುವ ಪ್ರಾಣತತ್ತ್ವವು. ದ್ರವ್ಯದೇವತೆಗಳು ಯಾಗದ ರೂಪವೆಂಬುದು ಹೇಗೋ ಹಾಗೆಯೇ ವಿಜ್ಞೇಯವಾದದ್ದು ವಿಜ್ಞಾನದ ರೂಪವು ; ಏಕೆಂದರೆ ಅದರಿಂದಲೇ ಅದು ರೂಪಿಸಲ್ಪಡುತ್ತದೆ.[5] "ಪ್ರಾಣವಿದ್ಯಾ" ಎಂಬ ಸಮಾಖ್ಯೆಯೂ[6] ಅದೇ

---

1. ಈ ವಾಕ್ಯವು ಮುಂದಿನ ಸೂತ್ರಕ್ಕೇ ಹೆಚ್ಚು ಒಪ್ಪುತ್ತದೆ ಎಂದು ತೋರುತ್ತದೆ; ಅಚ್ಚಿನ ಪುಸ್ತಕಗಳಲ್ಲಿ ಇಲ್ಲಿಯೇ ಇವೆ.

2. ಒಂದು ವೇದಾಂತದಲ್ಲಿರುವ ಪ್ರಾಣವಿದ್ಯೆಯೇ ಮತ್ತೊಂದರಲ್ಲಿರುವ ಪ್ರಾಣವಿದ್ಯೆ ; ಹೀಗೆಯೇ ಶಾಂಡಿಲ್ಯವಿದ್ಯಾದಿಗಳನ್ನೂ ತಿಳಿಯಬೇಕು.

3. "ಏಕಂ ವಾ ಸಂಯೋಗರೂಪಚೋದನಾಖ್ಯಾವಿಶೇಷಾತ್" (ಜೈ. ೨-೪-೯) ಎಂಬ ಸೂತ್ರ. ಇದರ ಅಭಿಪ್ರಾಯವನ್ನು ಮುಂದೆ ಭಾಷ್ಯದಲ್ಲಿಯೇ ವಿವರಿಸಿದೆ.

4. ಛಾಂದೋಗ್ಯದಲ್ಲಿ "ಸ್ವಾನಾಂ" ಎಂಬ ಮಾತು ಇಲ್ಲದಿದ್ದರೂ "ಜ್ಯೇಷ್ಠನೂ ಶ್ರೇಷ್ಠನೂ ಆಗುತ್ತಾನೆ" ಎಂಬ ಅದೇ ಪ್ರಯೋಜನವೇ ಇದೆ.

5. ದ್ರವ್ಯದೇವತೆಗಳು ಯಾಗಸ್ವರೂಪವನ್ನು ನಿರ್ಧರಿಸುವಂತೆ ವೇದ್ಯವೇ ವಿದ್ಯಾಸ್ವರೂಪವನ್ನು ನಿರ್ಧರಿಸುತ್ತದೆ. 6. ಹೆಸರೂ.

(ಆಗಿರುತ್ತದೆ). ಆದ್ದರಿಂದ ವಿಜ್ಞಾನಗಳು ಸರ್ವವೇದಾಂತಪ್ರತ್ಯಯವಾಗಿವೆ.[1] ಹೀಗೆಯೇ ಪಂಚಾಗ್ನಿವಿದ್ಯೆ, ವೈಶ್ವಾನರವಿದ್ಯೆ, ಶಾಂಡಿಲ್ಯವಿದ್ಯೆ- ಎಂಬಿದೇ ಮುಂತಾದವುಗಳಲ್ಲಿ ಹೊಂದಿಸಿಕೊಳ್ಳಬೇಕು.[2] ಇನ್ನು ನಾಮರೂಪಾದಿಗಳೆಂಬ ಭೇದಹೇತ್ವಾಭಾಸಗಳನ್ನು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅವುಗಳನ್ನು "ನ ನಾಮ್ನಾ ಸ್ಯಾದಚೋದನಾಭಿಧಾನತ್ವಾತ್" (೨-೪-೧೦) (ನಾಮದಿಂದ ಕರ್ಮಭೇದವಿಲ್ಲ, ಏಕೆಂದರೆ ಅದು ಚೋದನೆಯನ್ನು ಹೇಳುವದಿಲ್ಲ) ಎಂದು ಮುಂತಾಗಿ ಪ್ರಥಮಕಾಂಡದಲ್ಲಿಯೇ ಪರಿಹರಿಸಲಾಗಿರುತ್ತದೆ.[3]

**ಭೇದಾನ್ನೇತಿ ಚೇನ್ನೈಕಸ್ಯಾಮಪಿ ॥ ೨ ॥**

೨. (ರೂಪ)ಭೇದವಿರುವದರಿಂದ (ಸರಿ)ಯಲ್ಲ, ಎಂದರೆ ಹಾಗಲ್ಲ; ಏಕೆಂದರೆ ಒಂದು (ವಿದ್ಯೆಯಲ್ಲಿ)ಯೂ (ಹೊಂದುತ್ತದೆ).

## ಪೂರ್ವಪಕ್ಷ: ರೂಪಭೇದದಿಂದ ಉಪಾಸನೆಯು ಬೇರೆ

(ಭಾಷ್ಯ)

೩೨೧. ಇಹಾಪಿ ಕಂಚಿದ್ವಿಶೇಷಮಾಶಙ್ಕ್ಯ ಪರಿಹರತಿ (ಭೇದಾನ್ನೇತಿ ಚೇನ್ನೈಕಸ್ಯಾಮಪಿ) । ಸ್ಯಾದೇತತ್ । ಸರ್ವವೇದಾನ್ತಪ್ರತ್ಯಯತ್ವಂ ವಿಜ್ಞಾನಾನಾಂ ಗುಣಭೇದಾನ್ನೋಪಪದ್ಯತೇ । ತಥಾ ಹಿ ವಾಜಸನೇಯಿನಃ ಪಞ್ಚಾಗ್ನಿವಿದ್ಯಾಂ ಪ್ರಸ್ತುತ್ಯ ಷಷ್ಠಮ್ ಅಪರಮಗ್ನಿಮ್ ಆಮನನ್ತಿ "ತಸ್ಯಾಗ್ನಿರೇವಾಗ್ನಿರ್ಭವತಿ" (ಬೃ. ೬-೨-೧೪) ಇತ್ಯಾದಿನಾ । ಛನ್ದೋಗಾಸ್ತು ತಂ ನಾಮನನ್ತಿ, ಪಞ್ಚಸಂಖ್ಯಯೈವ ಚ ತೇ ಉಪಸಂಹರನ್ತಿ "ಅಥ ಹ ಯ ಏತಾನೇವಂ ಪಞ್ಚಾಗ್ನೀನ್ ವೇದ" (ಛಾಂ. ೫-೧೦-೧೦) ಇತಿ । ಯೇಷಾಂ ಸ ಗುಣೋಽಸ್ತಿ

1. ಈ ವಾಕ್ಯವು ಮುಂದಿನ ವಾಕ್ಯವಾದ ಬಳಿಕ ಬಂದರೆ ಎಲ್ಲಾ ಉಪಾಸನೆಗಳಿಗೂ ಅನ್ವಯಿಸುತ್ತಿತ್ತು. ಪ್ರಕೃತದಲ್ಲಿ 'ಪ್ರಾಣವಿಜ್ಞಾನಗಳು' ಎಂದು ಅರ್ಥಮಾಡಬೇಕಾಗಿದೆ.

2. ಅವಕ್ಕೂ ಸಂಯೋಗ, ಚೋದನೆ- ಮುಂತಾದವುಗಳು ಸಮಾನವಾಗಿರುತ್ತವೆ ಎಂಬಿದನ್ನು ತೋರಿಸಬಹುದು ಎಂದರ್ಥ.

3. ಈ ಸೂತ್ರದಿಂದ ಹಿಡಿದು ಅಧ್ಯಾಯದ ಸಮಾಪ್ತಿಯಾಗುವವರೆಗೂ ಹೇತ್ವಾಭಾಸಗಳ ನಿರಾಕರಣೆಯಿದೆ. ಅಲ್ಲಿರುವ ಶಾಬರಭಾಷ್ಯವನ್ನು ನೋಡಿ. ಕರ್ಮಕಾಂಡದಲ್ಲಿ ಹೇಳಿದ ಯುಕ್ತಿಗಳನ್ನೇ ಇಲ್ಲಿಯೂ ಅನುಸರಿಸಬೇಕು ಎಂದು ಭಾವ. ಉಪಾಸನೆಗಳೂ ಮಾನಸಕರ್ಮವೇ ಆಗಿರುವದರಿಂದ ಕರ್ಮಗಳಿಗೆ ಹೊಂದುವ ನ್ಯಾಯಗಳನ್ನು ಇಲ್ಲಿ ಅನುಸರಿಸಬಹುದೆಂದು ಸೂಚಿಸಿದಂತೆ ಆಯಿತು. ವಸ್ತುಜ್ಞಾನವನ್ನು ಹೇಳುವದರಿಂದ ಈ ಶಾಸ್ತ್ರವು ಬೇರೆಯೇ ಎಂಬ ವಾದಕ್ಕೆ ಇವೇನೂ ಅಡ್ಡಿಯಲ್ಲ.

ಯೇಷಾಂ ಚ ನಾಸ್ತಿ ಕಥಮ್ ಉಭಯೇಷಾಮ್ ಏಕಾ ವಿದ್ಯಾ ಉಪಪದ್ಯೇತ? ನ ಚಾತ್ರ ಗುಣೋಪಸಂಹಾರಃ ಶಕ್ಯತೇ ಪ್ರತ್ಯೇತುಮ್ । ಪಞ್ಚಸಂಖ್ಯಾವಿರೋಧಾತ್ । ತಥಾ ಪ್ರಾಣಸಂವಾದೇ ಶ್ರೇಷ್ಠಾದನ್ಯಾಂಶ್ಚತುರಃ ಪ್ರಾಣಾನ್ ವಾಕ್ಚಕ್ಷುಃಶ್ರೋತ್ರಮನಾಂಸಿ ಛನ್ದೋಗಾ ಆಮನನ್ತಿ । ವಾಜಸನೇಯಿನಸ್ತು ಪಞ್ಚಮಮಪಿ ಆಮನನ್ತಿ "ರೇತೋ ವೈ ಪ್ರಜಾಪತಿಃ ಪ್ರಜಾಯತೇ ಹ ಪ್ರಜಯಾ ಪಶುಭಿರ್ಯ ಏವಂ ವೇದ" (ಬೃ.೬-೧-೬) ಇತಿ । ಆವಾಪೋದ್ವಾಪಭೇದಾಚ್ಚ ವೇದ್ಯಭೇದೋ ಭವತಿ ವೇದ್ಯಾಭೇದಾಚ್ಚ ವಿದ್ಯಾಭೇದಃ । ದ್ರವ್ಯದೇವತಾಭೇದಾದಿವ ಯಾಗಸ್ಯ ॥

(ಭಾಷ್ಯಾರ್ಥ)

ಇಲ್ಲಿಯೂ ಒಂದಾನೊಂದು ವಿಶೇಷವನ್ನು ಆಶಂಕಿಸಿ (ಸೂತ್ರಕಾರರು) ಪರಿಹರಿಸುತ್ತಾರೆ[1] (ಭೇದಾನ್ನೇತಿ ಚೇನ್ನೈಕಸ್ಯಾಮಪಿ) । (ಪೂರ್ವಪಕ್ಷಿಯ ಮತವು) ಇದಾಗಿರಬಹುದು: ವಿಜ್ಞಾನಗಳು ಎಲ್ಲಾ ವೇದಾಂತಗಳಲ್ಲಿ (ಒಂದೇ ಎಂದು) ವಿಹಿತವಾಗಿವೆ ಎಂಬುದು ಗುಣಭೇದವಿರುವದರಿಂದ ಹೊಂದುವದಿಲ್ಲ. ಹೇಗೆಂದರೆ, ವಾಜಸನೇಯಿಗಳು ಪಂಚಾಗ್ನಿವಿದ್ಯೆಯನ್ನು ಪ್ರಾರಂಭಿಸಿ, "ಅವನಿಗೆ ಅಗ್ನಿಯೇ ಅಗ್ನಿಯಾಗಿರುತ್ತದೆ" (ಛಾಂ. ೬-೨-೧೪) ಎಂದುಮುಂತಾಗಿರುವ (ವಾಕ್ಯ)ದಿಂದ ಆರನೆಯದಾದ ಮತ್ತೊಂದಗ್ನಿಯನ್ನೂ ಪಠಿಸುತ್ತಾರೆ. ಆದರೆ ಛಂದೋಗರು ಆ (ಅಗ್ನಿಯನ್ನು) ಪಠಿಸುವದಿಲ್ಲ., ಇನ್ನು "ಯಾವನು ಈ ಪಂಚಾಗ್ನಿಗಳನ್ನು ಅರಿತುಕೊಂಡಿರುತ್ತಾನೋ" (ಛಾಂ. ೫-೧೦-೧೦) ಎಂದು ಐದು ಸಂಖ್ಯೆಯಿಂದಲೇ ಮುಗಿಸಿರುತ್ತಾರೆ. ಯಾರಿಗೆ ಆ ಗುಣವು ಇದೆಯೋ, ಯಾರಿಗೆ ಇಲ್ಲವೋ ಅವರಿಬ್ಬರಿಗೂ (ಅದು) ಒಂದೇ ವಿದ್ಯೆಯು ಎಂದು ಹೇಗೆ ಹೊಂದೀತು[2] ? ಇಲ್ಲಿ ಗುಣೋಪಸಂಹಾರವನ್ನು (ಮಾಡಬೇಕೆಂದು) ತಿಳಿಯುವದಕ್ಕೂ ಆಗುವದಿಲ್ಲ; ಏಕೆಂದರೆ ಐದು ಸಂಖ್ಯೆಗೆ ವಿರೋಧವಾಗುತ್ತದೆ.[3] ಇದರಂತೆ ಪ್ರಾಣಸಂವಾದದಲ್ಲಿ ಶ್ರೇಷ್ಠ(ಪ್ರಾಣ)ಕ್ಕಿಂತ

1. ಹಿಂದಿನ ಕಾಂಡದಲ್ಲಿಯೇ ಪರಿಹಾರಮಾಡಿರುವದರಿಂದ ಮತ್ತೆ ಅದನ್ನು ಹೇಳಬೇಕಾದದ್ದಿಲ್ಲದಿದ್ದರೂ ಅದೇ ನ್ಯಾಯವೆಂದು ತಿಳಿಸುವದಕ್ಕೆ ಒಂದೆರಡು ಸ್ಥಲಗಳನ್ನು ಉದಾಹರಿಸಿರುತ್ತಾರೆ ಎಂದರ್ಥ. ಇಲ್ಲಿ ಅಗ್ನಿಗಳಲ್ಲಿ ಉತ್ಪತ್ತಿವಿಧಿಯಿಂದಲೇ ಗುಣಭೇದವು ತೋರುತ್ತದೆ ಎಂಬುದು ವಿಶೇಷ- ಎಂದು ಭಾಮತೀ.

2. ಆರನೆಯ ಅಗ್ನಿ ಎಂಬ ಗುಣವು ವಾಜಸನೇಯಿಗಳಿಗೆ ಇರುತ್ತದೆ, ಛಂದೋಗರಿಗೆ ಇಲ್ಲ. ಹೀಗಿದ್ದರೂ ಒಂದೇ ವಿದ್ಯೆ ಹೇಗಾದೀತು ?

3. ಛಂದೋಗರೂ ಆರನೆಯ ಅಗ್ನಿಯನ್ನು ಸೇರಿಸಿಕೊಂಡು ಉಪಾಸನೆಮಾಡುವದಕ್ಕಾಗುವದಿಲ್ಲ; ಏಕೆಂದರೆ ಛಾಂದೋಗ್ಯದಲ್ಲಿ ಐದು ಅಗ್ನಿಗಳೆಂದು ಸ್ಪಷ್ಟವಾಗಿ ಹೇಳಿದೆ.

ಬೇರೆಯಾಗಿ ವಾಕ್ಕು, ಚಕ್ಷುಸ್ಸು, ಶ್ರೋತ್ರ, ಮನಸ್ಸು –ಎಂಬ ನಾಲ್ಕು ಪ್ರಾಣಗಳನ್ನು ಛಂದೋಗರು ಪಠಿಸುತ್ತಾರೆ[1] ; ವಾಜಸನೇಯಿಗಳಾದರೋ "ರೇತಸ್ಸೇ ಪ್ರಜಾಪತಿಯು ; ಯಾವನು ಹೀಗೆಂದು ಅರಿಯುವನೋ ಅವನು ಪ್ರಜೆಯಿಂದಲೂ ಪಶುಗಳಿಂದಲೂ ಕೂಡಿದವನಾಗುತ್ತಾನೆ" (ಬೃ. ೬–೧–೬) ಎಂದು ಐದನೆಯ (ಪ್ರಾಣ)ವನ್ನು ಪಠಿಸುತ್ತಾರೆ. (ಹೀಗೆ) ಸೇರಿಸಿಕೊಳ್ಳುವದು, ತೆಗೆದುಹಾಕುವದು– ಎಂಬ ಭೇದವಿರುವದರಿಂದ ವೇದ್ಯವು ಬೇರೆಯಾಗುತ್ತದೆ; ವೇದ್ಯಭೇದದಿಂದ ವಿದ್ಯಾಭೇದವಾಗುತ್ತದೆ. ದ್ರವ್ಯದೇವತೆಗಳು ಬೇರೆಯಾಗುವದರಿಂದ ಯಾಗವು (ಬೇರೆಯಾಗು)ವಂತೆಯೇ (ಇದು).

## ಸಿದ್ಧಾಂತ: ಅತ್ಯಲ್ಪರೂಪಭೇದವು ವಿದ್ಯೈಕ್ಯಕ್ಕೆ ವಿರೋಧಿಯಲ್ಲ

(ಭಾಷ್ಯ)

೩೨೨. ಇತಿ ಚೇತ್ । ನೈಷ ದೋಷಃ । ಯತಃ ಏಕಸ್ಯಾಮಪಿ ವಿದ್ಯಾಯಾಮ್ ಏವಂ ಜಾತೀಯಕೋ ಗುಣಭೇದಃ ಉಪಪದ್ಯತೇ । ಯದ್ಯಪಿ ಷಷ್ಠಸ್ಯ ಅಗ್ನೇಃ ಉಪಸಂಹಾರೋ ನ ಸಂಭವತಿ । ತಥಾಪಿ ದ್ಯುಪ್ರಭೃತೀನಾಂ ಪಞ್ಚಾನಾಮ್ ಅಗ್ನೀನಾಮ್ ಉಭಯತ್ರ ಪ್ರತ್ಯಭಿಜ್ಞಾಯಮಾನತ್ವಾತ್ ನ ವಿದ್ಯಾಭೇದೋ ಭವಿತುಮರ್ಹತಿ । ನ ಹಿ ಷೋಡಶಿಗ್ರಹಣಾಗ್ರಹಣಯೋಃ ಅತಿರಾತ್ರೋ ಭಿದ್ಯತೇ । ಪಠ್ಯತೇಽಪಿ ಚ ಷಷ್ಠೋಽಗ್ನಿಃ ಛನ್ದೋಗೈಃ "ತಂ ಪ್ರೇತಂ ದಿಷ್ಟಮಿತೋಽಗ್ನಯ ಏವಂ ಹರನ್ತಿ" (ಛಾಂ. ೫–೯–೨) ಇತಿ । ವಾಜಸನೇಯಿನಸ್ತು ಸಾಂಪಾದಿಕೇಷು ಪಞ್ಚಸು ಅಗ್ನಿಷು ಅನುವೃತ್ತಾಯಾಃ ಸಮಿದ್ಧೂಮಾದಿಕಲ್ಪನಾಯಾಃ ನಿವೃತ್ತಯೇ "ತಸ್ಯಾಗ್ನಿರೇವಾಗ್ನಿರ್ಭವತಿ ಸಮಿತ್ಸಮಿದ್" (ಬೃ. ೬–೨–೧೪) ಇತ್ಯಾದಿ ಸಮಾಮನನ್ತಿ । ಸ ನಿತ್ಯಾನುವಾದಃ । ಅಥಾಪಿ ಉಪಾಸನಾರ್ಥ ಏಷ ವಾದಃ । ತಥಾಪಿ ಸ ಗುಣಃ ಶಕ್ಯತೇ ಛನ್ದೋಗೈರಪಿ ಉಪಸಂಹರ್ತುಮ್ । ನ ಚಾತ್ರ ಪಞ್ಚಸಂಖ್ಯಾವಿರೋಧ ಆಶಙ್ಕ್ಯಃ । ಸಾಂಪಾದಿಕಾಗ್ನ್ಯಭಿಪ್ರಾಯಾ ಹ್ಯೇಷಾ ಪಞ್ಚ ಸಂಖ್ಯಾ ನಿತ್ಯಾನುವಾದಭೂತಾ ನ ವಿಧಿಸಮವಾಯಿನೀ ಇತ್ಯದೋಷಃ । ಏವಂ ಪ್ರಾಣಸಂವಾದೇಽಪಿ ಅಧಿಕಸ್ಯ ಗುಣಸ್ಯ ಇತರತ್ರೋಪಸಂಹಾರೋ ನ ವಿರುಧ್ಯತೇ । ನ ಚ ಆವಾಪೋದ್ವಾಪಭೇದಾತ್ ವೇದ್ಯಭೇದೋ ವಿದ್ಯಾಭೇದಶ್ಚ ಆಶಙ್ಕ್ಯಃ । ಕಸ್ಯಚಿತ್ ವೇದ್ಯಾಂಶಸ್ಯ ಆವಾಪೋದ್ವಾಪಯೋರಪಿ ಭೂಯಸೋ ವೇದ್ಯರಾಶೇರಭೇದಾವಗಮಾತ್ । ತಸ್ಮಾದೈಕವಿದ್ಯಮೇವ ॥

---

1. ಛಾಂ. ೫–೧–೬ರಿಂದ ೧೧.

(ಭಾಷ್ಯಾರ್ಥ)

ಹೀಗೆಂದರೆ (ಇದಕ್ಕೆ ಪರಿಹಾರವೇನೆಂದರೆ) ಇದು ದೋಷವಲ್ಲ. ಏಕೆಂದರೆ ಒಂದೇ ವಿದ್ಯೆಯಲ್ಲಿಯೂ ಈ ಜಾತಿಯ ಗುಣಭೇದವು ಇರಬಹುದಾಗಿದೆ. (ಮೊದಲನೆಯದಾಗಿ) ಆರನೆಯ ಅಗ್ನಿಯ ಉಪಸಂಹಾರವು ಸಂಭವಿಸುವದಿಲ್ಲವೆಂದರೂ ದ್ಯುಲೋಕವೇ ಮುಂತಾದ ಐದು ಅಗ್ನಿಗಳು ಎರಡು ಕಡೆಯಲ್ಲಿಯೂ ಅವೇ ಎಂಬ ಗೊತ್ತಾಗಿರುವದರಿಂದ ವಿದ್ಯಾಭೇದವಾಗಲಾರದು. ಷೋಡಶಿಯನ್ನು ಗ್ರಹಿಸುವದು, ಅಥವಾ ಗ್ರಹಿಸದಿರುವದು– ಇಷ್ಟರಿಂದ ಅತಿರಾತ್ರವು ಬೇರೆಯ (ಕರ್ಮ)ವಾಗಲಾರದಷ್ಟೆ[1]? ಛಂದೋಗರು ಆರನೆಯ ಅಗ್ನಿಯನ್ನು ಪಠಿಸಿಯೂ ಇರುತ್ತಾರೆ: "ಇಲ್ಲಿಂದ ಪರಲೋಕಕ್ಕೆ ಹೋಗುವ ಅವನನ್ನು ಅಗ್ನಿಗಳೇ ಒಯ್ಯುತ್ತವೆ" (ಛಾಂ· ೫–೯–೨) ಎಂದು (ಅವರು ಪಠಿಸುತ್ತಾರೆ). ವಾಜಸನೇಯಿಗಳಾದರೋ ಸಾಂಪಾದಿಕವಾಗಿರುವ[2] ಐದು ಅಗ್ನಿಗಳಲ್ಲಿ ಅನುವೃತ್ತವಾಗಿರುವ ಸಮಿತ್ತು, ಧೂಮ– ಮುಂತಾದ ಕಲ್ಪನೆಯು ತೊಲಗಲೆಂದು[3] "ಅವನಿಗೆ ಅಗ್ನಿಯೇ ಅಗ್ನಿಯಾಗಿರುತ್ತದೆ, ಸಮಿತ್ತೇ ಸಮಿತ್ತು ....." (ಬೃ. ೬–೨–೧೪) ಎಂದುಮುಂತಾಗಿ ಪಠಿಸಿರುತ್ತಾರೆ; ಅದು ನಿತ್ಯಾನುವಾದವು[4]. ಒಂದುವೇಳೆ ಉಪಾಸನೆಗಾಗಿ ಈ (ಅಗ್ನಿಯನ್ನು) ಹೇಳಿದೆ ಎಂದರೂ[5] ಆ ಗುಣವನ್ನು ಛಂದೋಗರೂ ಉಪಸಂಹಾರಮಾಡಿಕೊಳ್ಳುವದಕ್ಕೆ ಆಗುತ್ತದೆ. ಇಲ್ಲಿ ಐದೆಂಬ ಸಂಖ್ಯೆಗೆ ವಿರೋಧ(ವಾಗುವದೆಂದು) ಆಶಂಕಿಸುವಂತೆಯೂ ಇಲ್ಲ. ಏಕೆಂದರೆ ಈ ಐದೆಂಬ ಸಂಖ್ಯೆಯು ಸಾಂಪಾದಿಕವಾದ ಅಗ್ನಿಗಳ ಅಭಿಪ್ರಾಯದಿಂದ (ಹೇಳಿದ್ದು). (ಆದರೆ) ನಿತ್ಯಾನುವಾದಭೂತವಾದ (ಅಗ್ನಿಯೋ) ವಿಧಿಗೆ ಸಂಬಂಧಪಟ್ಟಿದ್ದಲ್ಲವಾದ್ದರಿಂದ ಯಾವ ದೋಷವೂ ಇರುವದಿಲ್ಲ. ಇದರಂತೆ ಪ್ರಾಣಸಂವಾದದಲ್ಲಿಯೂ ಅಧಿಕವಾಗಿರುವ (ಪ್ರಾಣರೂಪವಾದ) ಗುಣವನ್ನು ಇನ್ನೊಂದು ಕಡೆಯಲ್ಲಿಯೂ ಉಪಸಂಹಾರಮಾಡಿಕೊಳ್ಳುವದರಲ್ಲಿ (ಯಾವ) ವಿರೋಧವೂ ಇರುವದಿಲ್ಲ. (ಗುಣಗಳನ್ನು) ಹೆಚ್ಚಾಗಿಟ್ಟುಕೊಳ್ಳುವದು, ತೆಗೆದುಹಾಕುವದು– ಇವುಗಳಿಂದ ವೇದ್ಯಭೇದವೂ ವಿದ್ಯಾಭೇದವೂ (ಆಗುವ

---

1. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಗ್ರಹಣಾಗ್ರಹಣವನ್ನು ಮಾಡುತ್ತಾರೆಂಬ ವಿಕಲ್ಪವಿದ್ದರೂ ಅತಿರಾತ್ರವು ಒಂದೇ.

2. ಅಗ್ನಿಯೆಂದು ಮನಸ್ಸಿನಿಂದ ಚಿಂತನೆಗಾಗಿ ಕಲ್ಪಿಸಿರುವ.

3. ಅಗ್ನಿಯಲ್ಲದ್ದನ್ನು ಅಗ್ನಿಯೆಂದೂ ಸಮಿತ್ತಲ್ಲದ್ದನ್ನು ಸಮಿತ್ತೆಂದು ಮುಂತಾಗಿಯೂ ಹಿಂದೆ ಕಲ್ಪಿಸಿದೆ; ಈಗ ಅಂಥ ಕಲ್ಪನೆಯೇನೂ ಇಲ್ಲವೆಂದು ತಿಳಿಸುವದಕ್ಕಾಗಿ.

4. ಎಲ್ಲರಿಗೂ ಇರುವ ಅಗ್ನ್ಯಾದಿಗಳನ್ನೇ ಅನುವಾದಮಾಡಿದೆಯೋ ಹೊರತು ಉಪಾಸನೆಗಾಗಿ ವಿಧಿಸಿಲ್ಲ.

5. ಇದು ಅಂಗೀಕರಿಸಿ ಹೇಳಿದ್ದು.

ದೆಂದು) ಆಶಂಕಿಸುವದಕ್ಕೂ ಬರುವದಿಲ್ಲ. **ಏಕೆಂದರೆ ಯಾವದೋ ಒಂದು ವೇದ್ಯಾಂಶದ ಆವಾಪೋದ್ವಾಪಗಳಿದ್ದರೂ ಹೆಚ್ಚಿನ ಭಾಗದ ವೇದ್ಯ ರಾಶಿಯು ಭಿನ್ನವಲ್ಲದಿರುವದರಿಂದ ಅಭೇದವೇ ನಿಶ್ಚಿತವಾಗುತ್ತದೆ. ಆದ್ದರಿಂದ (ಇಲ್ಲಿ) ಒಂದೇ ವಿದ್ಯೆಯಿದೆ.**

**ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಸವವಚ್ಚ ತನ್ನಿಯಮಃ ॥ ೩ ॥**

೩. ಹಾಗೆಂದೇ ಸಮಾಚಾರದಲ್ಲಿ ಅಧಿಕಾರ(ವಿರು)ವದರಿಂದಲೂ ಸ್ವಾಧ್ಯಾಯದ (ಧರ್ಮವು). ಸವದಂತೆಯೂ ಆ ನಿಯಮವು.

## ಧರ್ಮಭೇದದಿಂದಲೂ ವಿದ್ಯಾಭೇದವಿಲ್ಲ

(ಭಾಷ್ಯ)

೩೨೩. ಯದಪ್ಯುಕ್ತಮ್ ಆಥರ್ವಣಿಕಾನಾಂ ವಿದ್ಯಾಂ ಪ್ರತಿ ಶಿರೋವ್ರತಾದ್ಯಪೇಕ್ಷಣಾತ್ ಅನ್ಯೇಷಾಂ ಚ ತದನಪೇಕ್ಷಣಾತ್ ವಿದ್ಯಾಭೇದಃ ಇತಿ। ತತ್ ಪ್ರತ್ಯುಚ್ಯತೇ। ಸ್ವಾಧ್ಯಾಯಸ್ಯ ಏಷ ಧರ್ಮೋ ನ ವಿದ್ಯಾಯಾಃ। ಕಥಮಿದಮ್ ಅವಗಮ್ಯತೇ ? ಯತಸ್ತಥಾತ್ವೇನ ಸ್ವಾಧ್ಯಾಯಧರ್ಮತ್ವೇನ ಸಮಾಚಾರೇ ವೇದವ್ರತೋಪದೇಶಪರೇ ಗ್ರನ್ಥೇ ಆಥರ್ವಣಿಕಾ "ಇದಮಪಿ ವೇದವ್ರತತ್ವೇನ ವ್ಯಾಖ್ಯಾತಮ್" (?) ಇತಿ ಸಮಾಮನನ್ತಿ। "ನೈತದಚೀರ್ಣವ್ರತೋಽಧೀತೇ" (ಮುಂ. ೩-೨-೧೧) ಇತಿ ಚ ಅಧಿಕೃತವಿಷಯಾತ್ ಏತಚ್ಛಬ್ದ ಅಧ್ಯಯನಶಬ್ದಾಚ್ಚ ಸ್ವೋಪನಿಷದಧ್ಯಯನಧರ್ಮ ಏವೈಷಃ ಇತಿ ನಿರ್ಧಾರ್ಯತೇ। ನನು ಚ "ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್" (ಮುಂ. ೩-೨-೧೦) ಇತಿ ಬ್ರಹ್ಮವಿದ್ಯಾಸಂಯೋಗಶ್ರವಣಾತ್ ಏಕೈವ ಸರ್ವತ್ರ ಬ್ರಹ್ಮವಿದ್ಯಾ ಇತಿ ಸಂಕೀರ್ಯೇತ ಏಷ ಧರ್ಮ। ನ। ತತ್ರಾಪಿ "ಏತಾಮ್" ಇತಿ ಪ್ರಕೃತಪ್ರತ್ಯವಮರ್ಶಾತ್। ಪ್ರಕೃತತ್ವಂ ಚ ಬ್ರಹ್ಮವಿದ್ಯಾಯಾಃ ಗ್ರನ್ಥವಿಶೇಷಾಪೇಕ್ಷಮ್ ಇತಿ ಗ್ರನ್ಥವಿಶೇಷಸಂಯೋಗ್ಯೇವೈಷ ಧರ್ಮಃ। 'ಸವವಚ್ಚ ತನ್ನಿಯಮಃ' ಇತಿ ನಿದರ್ಶನನಿರ್ದೇಶಃ। ಯಥಾ ಚ ಸವಾಃ ಸಪ್ತ ಸೌರ್ಯಾದಯಃ ಶತೌದನಪರ್ಯನ್ತಾಃ ವೇದಾನ್ತರೋದಿತತ್ರೇತಾಗ್ನ್ಯನಭಿಸಂಬನ್ಧಾತ್ ಆಥರ್ವಣೋದಿತೈಕಾಗ್ನ್ಯಭಿಸಂಬನ್ಧಾಚ್ಚ ಆಥರ್ವಣಿಕಾನಾಮೇವ ನಿಯಮ್ಯನ್ತೇ ತಥೈವ ಅಯಮಪಿ ಧರ್ಮಃ ಸ್ವಾಧ್ಯಾಯವಿಶೇಷಸಂಬನ್ಧಾತ್ ತತ್ರೈವ ನಿಯಮ್ಯತೇ। ತಸ್ಮಾದಪಿ ಅನವದ್ಯಂ ವಿದ್ಯೈಕತ್ವಮ್ ॥

(ಭಾಷ್ಯಾರ್ಥ)

ಇನ್ನು "ಆಥರ್ವಣಿಕರು ವಿದ್ಯೆಗಾಗಿ ಶಿರೋವ್ರತವೇ ಮುಂತಾದವುಗಳನ್ನು ಅಪೇಕ್ಷಿಸುವದರಿಂದಲೂ ಮಿಕ್ಕವರಿಗೆ (ಅವು) ಬೇಕಿಲ್ಲದಿರುವದರಿಂದಲೂ ವಿದ್ಯೆಗಳು ಬೇರೆಬೇರೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದಕ್ಕೆ ಪ್ರತ್ಯುತ್ತರವನ್ನು ಹೇಳಲಾಗುತ್ತದೆ.[1] ಇದು ಸ್ವಾಧ್ಯಾಯದ ಧರ್ಮವು, ವಿದ್ಯೆಯ ಧರ್ಮವಲ್ಲ.[2] ಇದು ಹೇಗೆ ಗೊತ್ತು ? ಏಕೆಂದರೆ, ಹಾಗೆಂದೇ, (ಇದು) ಸ್ವಾಧ್ಯಾಯಧರ್ಮವೆಂದೇ, **ಸಮಾಚಾರದಲ್ಲಿ**, ವೇದವ್ರತೋಪದೇಶ ಮಾಡುವದರಲ್ಲಿ ತಾತ್ಪರ್ಯವುಳ್ಳ ಗ್ರಂಥದಲ್ಲಿ[3] "ಇದೂ ವೇದವ್ರತವೆಂದು ಹೇಳಿದ್ದಾಯಿತು"[4] (?) ಎಂದು ಆಥರ್ವಣಿಕರು ಪಠಿಸಿರುತ್ತಾರೆ. "ಇದನ್ನು ವ್ರತವನ್ನು ಆಚರಿಸದವನು ಅಧ್ಯಯನಮಾಡತಕ್ಕದ್ದಲ್ಲ" (ಮುಂ. ೩-೨-೧೧) ಎಂಬುದು ಪ್ರಕೃತವಿಷಯಕವಾದ ಏತತ್ (ಈ) ಎಂಬ ಶಬ್ದವಿರುವದರಿಂದಲೂ ಅಧ್ಯಯನವನ್ನು ಹೇಳುವ ಮಾತು ಇರುವದರಿಂದಲೂ ತಮ್ಮ ಉಪನಿಷತ್ತನ್ನು ಅಧ್ಯಯನಮಾಡುವಪಕ್ಕೆ ಬೇಕಾದ ಧರ್ಮವೇ ಇದು ಎಂದು ಗೊತ್ತಾಗುತ್ತದೆ.

(ಆಕ್ಷೇಪ) : "ಯಾರಾದರೆ ಶಿರೋವ್ರತವನ್ನು ವಿಧಿವತ್ತಾಗಿ ಆಚರಿಸುವರೋ ಅವರಿಗೇ ಈ ಬ್ರಹ್ಮವಿದ್ಯೆಯನ್ನು ಹೇಳತಕ್ಕದ್ದು" (ಮುಂ. ೩-೨-೧೦) ಎಂದು ಬ್ರಹ್ಮವಿದ್ಯೆಗೆ ಸಂಬಂಧಪಟ್ಟಂತೆ ಶ್ರುತಿಯಿರುವದರಿಂದ, ಎಲ್ಲೆಲ್ಲಿಯೂ ಬ್ರಹ್ಮವಿದ್ಯೆಯು ಒಂದೇ ಆಗಿದೆಯಾಗಿ ಈ ಧರ್ಮವು (ಎಲ್ಲಾ ಕಡೆಯಲ್ಲಿಯೂ) ಬೆರೆಯುವದಿಲ್ಲವೆ ?[5]

(ಪರಿಹಾರ):- ಹಾಗಲ್ಲ. ಅಲ್ಲಿಯೂ 'ಈ' ಎಂದು ಪ್ರಕೃತವಾದದ್ದನ್ನೇ ಪರಾಮರ್ಶಿಸಿರುತ್ತದೆ. ಬ್ರಹ್ಮವಿದ್ಯೆಯು ಪ್ರಕೃತವಾಗುವದು ಗ್ರಂಥವಿಶೇಷದ ಅಪೇಕ್ಷೆಯಿಂದಲೇ ಆಗಿರುವದರಿಂದ ಈ (ಶಿರೋವ್ರತ)ಧರ್ಮವು ಗ್ರಂಥಕ್ಕೆ ಸಂಬಂಧಪಟ್ಟದ್ದೇ ಆಗಿರುತ್ತದೆ.

---

1. ನಿರ್ಗುಣವಿದ್ಯೆಯಲ್ಲಿ ವಿದ್ಯಾಭೇದಕ್ಕೆ ಕಾರಣವೇ ಇಲ್ಲವೆಂದು ಭಾಷ್ಯಕಾರರು ಆಗಲೆ ಹೇಳಿರುತ್ತಾರಾದರೂ ಕೆಲವು ಕಡೆಗಳಲ್ಲಿ ಹೇಳಿರುವ ಇಂಥ ಧರ್ಮಾಭಾಸಗಳಿಗೆ ಗತಿಯೇನೆಂಬುದನ್ನು ತಿಳಿಸುವದು ಅವಶ್ಯ ; ಇಲ್ಲದಿದ್ದರೆ ವೇದಾಂತಗಳಲ್ಲಿ ಒಂದೇ ಬ್ರಹ್ಮವಿದ್ಯೆಯನ್ನು ಹೇಳಿದೆ ಎಂಬ ಸಿದ್ಧಾಂತವು ನಿಲ್ಲುವದಿಲ್ಲ, ವೇದಾಂತಪ್ರಾಮಾಣ್ಯವೂ ಉಳಿಯುವದಿಲ್ಲ.

2. ಬ್ರಹ್ಮವಿದ್ಯೆಗೆ ಶಿರೋವ್ರತವು ಅವಶ್ಯವಾಗಿ ಬೇಕೆಂಬುದೇನೂ ಇಲ್ಲ.

3. ಮುಂದೆ 'ಮಾಮನಸ್ತಿ' ಎಂದಿರುವ ಪದವನ್ನು ನೋಡಿದರೆ 'ಸಮಾಚಾರ' ವೆಂಬುದು ಶ್ರುತಿಭಾಗವೆಂದು ಕಲ್ಪಿಸುವದಕ್ಕೆ ಅವಕಾಶವಿದೆ.

4 ಗೋದಾನಾದಿಗಳಂತೆ ಶಿರೋವ್ರತವೂ ವೇದವ್ರತವೇ ಎಂದರ್ಥ.

5. ಶಿರೋವ್ರತವನ್ನು ಎಲ್ಲರೂ ಆಚರಿಸಬೇಕೆಂದಾಗುವದಿಲ್ಲವೆ ? ಎಂದರ್ಥ.

"ಸವದಂತೆಯೂ ಆ ನಿಯಮವು" ಎಂದು ದೃಷ್ಟಾಂತವನ್ನು ಹೇಳಿರುತ್ತದೆ. **ಹೇಗೆ ಸೌರ್ಯವೇ ಮುಂತಾದ ಶತೌದನದವರೆಗಿರುವ ಏಳು ಸವಗಳು**[1] ಬೇರೆಯ ವೇದಗಳಲ್ಲಿ ಹೇಳಿರುವ ತ್ರೇತಾಗ್ನಿಗೆ ಸಂಬಂಧವಿಲ್ಲದೆ ಇರುವವ ರಿಂದಲೂ ಆಥರ್ವಣದಲ್ಲಿ ಹೇಳಿರುವ ಏಕಾಗ್ನಿಗೆ[2] ಸಂಬಂಧಪಟ್ಟಿರುವದರಿಂದಲೂ ಆಥರ್ವಣಿಕರಿಗೇ ಎಂದು ನಿಯಮಿತವಾಗಿರುವವೋ ಹಾಗೆಯೇ ಈ ಧರ್ಮವೂ ಸ್ವಾಧ್ಯಾಯವೆಂಬ ವಿಶೇಷದ ಸಂಬಂಧವಿರುವದರಿಂದ ಅದಕ್ಕೇ ನಿಯಮಿತ ವಾಗಿರುತ್ತದೆ. ಆದ್ದರಿಂದಲೂ ವಿದ್ಯೆಯು ಒಂದೇ ಎಂಬುದು ನಿರ್ದುಷ್ಟವು[3]

**ದರ್ಶಯತಿ ಚ ॥ ೪ ॥**

೪. (ಶ್ರುತಿಯು) ತಿಳಿಸಿಯೂ ಇರುತ್ತದೆ.

## ಶ್ರುತಿಯಲ್ಲಿಯೂ ವಿದ್ಯೈಕತ್ವವನ್ನು ಹೇಳಿದೆ

(ಭಾಷ್ಯ)

೩೨೪. ದರ್ಶಯತಿ ಚ ವೇದೋಽಪಿ ವಿದ್ಯೈಕತ್ವಂ ಸರ್ವವೇದಾನ್ತೇಷು ವೇದ್ಯೈಕತ್ವೋಪದೇಶಾತ್ "ಸರ್ವೇ ವೇದಾ ಯತ್ಪದಮಾಮನನ್ತಿ" (ಕ. ೧-೨-೧೧) ಇತಿ । ತಥಾ "ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸ್ಯ ನ್ತೇ ಏತಮಗ್ನಾವಾಧ್ವರ್ಯವ ಏತಂ ಮಹಾವ್ರತೇ ಛನ್ದೋಗಾಃ" (ಐ. ಆ. ೩-೨-೩) ಇತಿ ಚ । ತಥಾ "ಮಹದ್ಭಯಂ ವಜ್ರಮುದ್ಯತಮ್" (ಕ. ೨-೩-೨) ಇತಿ ಕಾಠಕೇ ಉಕ್ತಸ್ಯ ಈಶ್ವರಗುಣಸ್ಯ ಭಯಹೇತುತ್ವಸ್ಯ ತೈತ್ತಿರೀಯಕೇ ಭೇದದರ್ಶನನಿನ್ದಾಯೈ ಪರಾಮರ್ಶೋ ದೃಶ್ಯತೇ "ಯದಾ ಹ್ಯೇವೈಷ ಏತಸ್ಮಿನ್ನುದರಮನ್ತರಂ ಕುರುತೇ । ಅಥ ತಸ್ಯ ಭಯಂ ಭವತಿ । ತತ್ತ್ವೇವ

1. ಇವುಗಳು ಯಾವವೆಂಬುದು ತಿಳಿಯಲಿಲ್ಲ.

2. ಏಕರ್ಷಿ ಎಂಬ ಅಗ್ನಿಗೆ.

3. ರೂಪ, ಧರ್ಮಗಳಂತೆಯೇ ಪೂರ್ವಪಕ್ಷದಲ್ಲಿ ಹೇಳಿದ ಮಿಕ್ಕ ಭೇದಹೇತು ಗಳಿಗೂ ಪರಿಹಾರವನ್ನು ಕಲ್ಪಿಸಬೇಕು. (೧) ಕಾಠಕವೇ ಮುಂತಾದ ಸಮಾಖ್ಯೆ (ಹೆಸರು)ಗಳು ಆಯಾ ಶಾಖೆಗಳಿಗೆ ಸೇರಿರುತ್ತವೆ, ಉಪಾಸನೆಗಳಿಗಲ್ಲ; (೨) ಅಭ್ಯಾಸ (ಮತ್ತೆ ಮತ್ತೆ ಹೇಳಿರುವದು) ಶಾಖಾಂತರದಲ್ಲಿರುವದರಿಂದ ಬೇರೆ ಅಧ್ಯೇತೃಗಳಿಗಾಗಿ ಹೇಳಿದ್ದಾಗಿರುವದರಿಂದ ಉಪಾಸನಾಭೇದಕವಲ್ಲ. (೩) ಅಶಕ್ತಿ (ಎಲ್ಲಾ ಗುಣಗಳನ್ನು ಉಪಸಂಹಾರಮಾಡಲಾಗದೆ ಇರುವದು) ಭೇದಕವಲ್ಲ; ಬಲ್ಲವರಿಂದ ತಿಳಿದುಕೊಂಡು ಉಪಸಂಹಾರಮಾಡಬಹುದಾಗಿದೆ. (೪) ಸಮಾಪ್ತಿ (ಅಲ್ಲಲ್ಲಿಗೇ ಸಮಾಪ್ತಿಯಾಗಿರುವದು) ಆಯಾ ಸಂಬಂಧದ ಭಾಗವು ಮುಗಿಯಿತೆಂದು ಹೇಳುವದಕ್ಕೆ, ಉಪಾಸನೆಯೂ ಬೇರೆ ಎನ್ನುವದಕ್ಕಲ್ಲ ಎಂದು ಭಾಮತೀವ್ಯಾಖ್ಯಾನ

ಭಯಂ ವಿದುಷೋಽಮನ್ವಾನಸ್ಯ" (ತೈ. ೨-೭) ಇತಿ । ತಥಾ ವಾಜಸನೇಯಕೇ ಪ್ರಾದೇಶಮಾತ್ರಸಂಪಾದಿತಸ್ಯ ವೈಶ್ವಾನರಸ್ಯ ಛಾಂದೋಗ್ಯೇ ಸಿದ್ಧವದುಪಾದಾನಮ್ "ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ" (ಛಾಂ. ೫-೧೮-೧) ಇತಿ । ತಥಾ ಸರ್ವವೇದಾನ್ತಪ್ರತ್ಯಯತ್ವೇ ಅನ್ಯತ್ರ ವಿಹಿತಾನಾಮ್ ಉಕ್ಥಾದೀನಾಮ್ ಅನ್ಯತ್ರೋಪಾಸನವಿಧಾನಾಯ ಉಪಾದಾನಾತ್ ಪ್ರಾಯದರ್ಶನನ್ಯಾಯೇನ ಉಪಾಸನಾನಾಮಪಿ ಸರ್ವವೇದಾನ್ತಪ್ರತ್ಯಯತ್ವಸಿದ್ಧಿಃ ॥

(ಭಾಷ್ಯಾರ್ಥ)

ವೇದವೂ "ಎಲ್ಲಾ ವೇದಗಳೂ ಯಾವ ಪದವನ್ನು ತಿಳಿಸುತ್ತವೆಯೋ" (ಕ. ೧-೨-೧೫) ಎಂದು ವೇದ್ಯನ ಏಕತ್ವವನ್ನು ಉಪದೇಶಿಸುವದರಿಂದ ವಿದ್ಯೈಕತ್ವವನ್ನು ತಿಳಿಸುತ್ತದೆ. ಹೀಗೆಯೇ "ಈತನನ್ನೇ ಬಹ್ವೃಚರು ದೊಡ್ಡದಾದ ಉಕ್ಥದಲ್ಲಿ ವಿಚಾರಮಾಡುತ್ತಾರೆ. ಇವನನ್ನೇ ಅಧ್ವರ್ಯುಗಳು ಅಗ್ನಿಯಲ್ಲಿ (ವಿಚಾರಮಾಡುತ್ತಾರೆ), ಇವನನ್ನೇ ಛಂದೋಗರು ಮಹಾವ್ರತದಲ್ಲಿ (ವಿಚಾರಮಾಡುತ್ತಾರೆ)" (ಐ. ಆ. ೩-೨-೩) ಎಂದೂ (ತಿಳಿಸಿದೆ). ಹೀಗೆಯೇ "ಮಹಾಭಯವು, ಎತ್ತಿದ ವಜ್ರವು" (ಕ ೨-೩-೨) ಎಂದು ಕಾಠಕದಲ್ಲಿ ಹೇಳಿರುವ ಈಶ್ವರಗುಣವಾದ[1] ಭಯಹೇತುತ್ವವನ್ನು ತೈತ್ತಿರೀಯಕದಲ್ಲಿ ಭೇದದರ್ಶನವನ್ನು ನಿಂದೆಮಾಡುವದಕ್ಕಾಗಿ "ಯಾವಾಗಲಾದರೆ ಇವನು ಈ ಬ್ರಹ್ಮದಲ್ಲಿ ಒಂದಿಷ್ಟಾದರೂ ಭೇದವನ್ನು ಮಾಡಿಕೊಳ್ಳುವನೋ ಆಗ ಅವನಿಗೆ ಭಯವು ಉಂಟಾಗುವದು, (ಹೀಗೆಂದು) ತಿಳಿಯುವ (ಏಕತ್ವವನ್ನು) ಅರಿತುಕೊಳ್ಳದವನಿಗೆ ಅದೇ ಭಯವು" (ತೈ. ೨-೭) ಎಂದು ಪರಾಮರ್ಶಮಾಡಿರುವದು ಕಂಡುಬರುತ್ತದೆ.[2] ಇದರಂತೆ ವಾಜಸನೇಯಕದಲ್ಲಿ ಪ್ರಾದೇಶಮಾತ್ರನೆಂದು ಸಂಪಾದನೆಮಾಡಿರುವ[3] ವೈಶ್ವಾನರನನ್ನು ಛಾಂದೋಗ್ಯದಲ್ಲಿ "ಯಾವನಾದರೆ ಈ ಪ್ರಾದೇಶಮಾತ್ರನಾಗಿರುವ ಅಭಿಮಾನನಾದ ವೈಶ್ವಾನರ ಆತ್ಮನನ್ನು ಹೀಗೆ ಉಪಾಸನೆಮಾಡುವನೋ" (ಛಾಂ. ೫-೧೮-೧) ಎಂದು (ಆಗಲೆ) ಸಿದ್ಧವಾದಂತೆ ತೆಗೆದುಕೊಂಡು (ಹೇಳಿರುತ್ತದೆ).[4] ಹೀಗೆಯೇ ಸರ್ವವೇದಾಂತಗಳಲ್ಲಿಯೂ (ಒಂದೇ ಎಂದು) ತಿಳಿಯಬರುವದರಿಂದ ಒಂದು ಕಡೆ ವಿಧಿಸಿರುವ ಉಕ್ಥಾದಿಗಳನ್ನು ಮತ್ತೊಂದು ಕಡೆ ಉಪಾಸನೆಗೆಂದು

1. ಇಲ್ಲಿ ಗುಣವೆಂದರೆ ಉಪಾಸನೆಗಳಂತೆ ಶಾಸ್ತ್ರದಿಂದ ಆರೋಪಿತವಾದ ಕಾರ್ಯಧರ್ಮಗಳಲ್ಲ ; ಸ್ವರೂಪವನ್ನೇ ಧರ್ಮವೆಂದಿದೆ.

2. ಆದ್ದರಿಂದ ಬ್ರಹ್ಮವಿದ್ಯೆಯು ಎಲ್ಲೆಲ್ಲಿಯೂ ಒಂದೇ.

3. ಉಪಾಸನೆಗಾಗಿ ಕಲ್ಪಿಸಿರುವ.

4 ಆದ್ದರಿಂದ ಅದೇ ವೈಶಾನ್ವರವಿದ್ಯೆಯನ್ನೇ ಇಲ್ಲಿ ಹೇಳಿದೆಯೆಂದಾಯಿತು.

ವಿಧಿಸಿರುವದರಿಂದ[1] ಪ್ರಾಯದರ್ಶನನ್ಯಾಯದಿಂದ[2] ಉಪಾಸನೆಗಳೂ ಸರ್ವ ವೇದಾಂತಗಳಲ್ಲಿ (ಒಂದೇ ಆಗಿ) ತಿಳಿಯಬೇಕೆಂದು ಸಿದ್ಧವಾಯಿತು.

## ೨. ಉಪಸಂಹಾರಾಧಿಕರಣ

(ವಿಜ್ಞಾನಗುಣಗಳನ್ನು ಬೇರೆಯ ಕಡೆಯಿಂದಲೂ ಸೇರಿಸಿಕೊಳ್ಳಬೇಕು.)

**ಉಪಸಂಹಾರೋಽರ್ಥಾಭೇದಾದ್ ವಿಧಿಶೇಷವತ್ ಸಮಾನೇ ಚ ॥ ೫ ॥**

೫. ವಿಧಿಶೇಷದಂತೆ ಗುಣಗಳನ್ನು ಉಪಸಂಹಾರ(ಮಾಡಿಕೊಳ್ಳಬೇಕು) ; ಏಕೆಂದರೆ (ಉಪಾಸನಾರ್ಥತ್ವರೂಪವಾದ) ಅರ್ಥವು ಒಂದೇ ಆಗಿದೆ.

## ಉಪಾಸನಾಗುಣಗಳನ್ನು ಉಪಸಂಹಾರಮಾಡಿಕೊಳ್ಳಬೇಕೆಂಬುದಕ್ಕೆ ಯುಕ್ತಿ

(ಭಾಷ್ಯ)

೩-೩-೫. ಇದಂ ಪ್ರಯೋಜನಸೂತ್ರಮ್, ಸ್ಥಿತೇ ಚೈವಂ ಸರ್ವವೇದಾನ್ತಪ್ರತ್ಯಯತ್ವೇ ಸರ್ವವಿಜ್ಞಾನಮ್ ಅನ್ಯತ್ರೋದಿತಾನಾಂ ವಿಜ್ಞಾನಗುಣಾನಾಂ ಅನ್ಯತ್ರಾಪಿ ಸಮಾನೇ ವಿಜ್ಞಾನೇ ಉಪಸಂಹಾರೋ ಭವತಿ। ಅರ್ಥಾಭೇದಾತ್। ಯ ಏವ ಹಿ ತೇಷಾಂ ಗುಣಾನಾಮ್ ಏಕತ್ರಾರ್ಥವಿಶಿಷ್ಟವಿಜ್ಞಾನೋಪಕಾರಃ ಸ ಏವಾನ್ಯತ್ರಾಪಿ। ಉಭಯತ್ರಾಪಿ ಹಿ ತದೇವೈಕಂ ವಿಜ್ಞಾನಮ್। ತಸ್ಮಾತ್ ಉಪಸಂಹಾರಃ । ವಿಧಿಶೇಷವತ್। ಯಥಾ ಹಿ ವಿಧಿಶೇಷಾಣಾಮ್ ಅಗ್ನಿಹೋತ್ರಾದಿಧರ್ಮಾಣಾಂ ತದೇವೈಕಮ್ ಅಗ್ನಿಹೋತ್ರಾದಿಕಮ್ ಸರ್ವತ್ರೇತಿ ಅರ್ಥಾಭೇದಾತ್ ಉಪಸಂಹರಣಮ್ ಏವಮ್ ಇಹಾಪಿ। ಯದಿ ಹಿ ವಿಜ್ಞಾನಭೇದೋ ಭವೇತ್, ತತೋ ವಿಜ್ಞಾನಾನ್ತರನಿಬದ್ಧತ್ವಾತ್ ಗುಣಾನಾಂ ಪ್ರಕೃತಿವಿಕೃತಿಭಾವಾಭಾವಾಚ್ಚ ನ ಸ್ಯಾತ್ ಉಪಸಂಹಾರಃ। ವಿಜ್ಞಾನೈಕತ್ವೇ ತು ನೈವಮ್ ಇತಿ। ಅಸ್ಯೈವ ತು ಪ್ರಯೋಜನಸೂತ್ರಸ್ಯ ಪ್ರಪಞ್ಚಃ "ಸರ್ವಾಭೇದಾತ್" (೩-೩-೧೦) ಇತ್ಯಾರಭ್ಯ ಭವಿಷ್ಯತಿ ॥

---

1. ಉಕ್ಥಾದಿಗಳನ್ನು ಒಂದುಕಡೆ ವಿಧಿಸಿದೆ· ಅವುಗಳನ್ನೇ ಉಪಾಸನೆಗೆಂದು ಮತ್ತೊಂದು ಕಡೆ ತೆಗೆದುಕೊಂಡಿವೆ, ಬೇರೆ ಉಕ್ಥಾದಿಗಳನ್ನು ಹೇಳಿಲ್ಲ. ಇದರಂತೆ ಆಯಾ ಉಪಾಸನೆಯನ್ನು ಒಂದು ಕಡೆಯಲ್ಲಿ ಹೇಳಿರುವದನ್ನೇ ಮತ್ತೊಂದು ಕಡೆ ಹೇಳಿರಬೇಕು.

2. ಬಹುವಾಗಿ ದೊಡ್ಡವರನ್ನೇ ಬರೆದಿರುವ ಕಡೆಯಲ್ಲಿ ಯಾವನ ಹೆಸರನ್ನು ಬರೆದಿದೆಯೋ ಅವನೂ ದೊಡ್ಡವನಾಗಿರಬೇಕೆನ್ನುವೆವು; ಇದರಂತೆ ಬ್ರಹ್ಮವಿದ್ಯೆ, ಉಕ್ಥಮುಂತಾದವುಗಳಂತೆ ಉಪಾಸನೆಗಳೂ ಎಲ್ಲಾ ಕಡೆಯಲ್ಲಿಯೂ ಅವೇ ಆಗಿರಬೇಕು.

(ಭಾಷ್ಯಾರ್ಥ)

ಇದು ಪ್ರಯೋಜನಸೂತ್ರವು. ಹೀಗೆ ಎಲ್ಲಾ ವಿಜ್ಞಾನಗಳೂ ಸರ್ವವೇದಾಂತಪ್ರತ್ಯಯಗಳು ಎಂದು ಸಿದ್ಧವಾಗಿರುವದರಿಂದ ಒಂದು ಕಡೆಯಲ್ಲಿ ಹೇಳಿರುವ ವಿಜ್ಞಾನಗುಣಗಳು ಮತ್ತೊಂದು ಕಡೆಯಲ್ಲಿರುವ ಅದೇ ವಿಜ್ಞಾನದಲ್ಲಿ ಉಪಸಂಹಾರವಾಗುತ್ತವೆ. ಏಕೆಂದರೆ ಅರ್ಥವು ಬೇರೆಯಲ್ಲ. ಆ ಗುಣಗಳಿಗೆ ಒಂದು ಕಡೆಯಲ್ಲಿ ಆಯಾ ವಿಜ್ಞಾನಕ್ಕೆ ಉಪಕಾರಕವಾಗಿರುವದೆಂಬ ಯಾವ ಅರ್ಥವಿರುವದೋ ಅದೇ ಮತ್ತೊಂದು ಕಡೆಯಲ್ಲಿಯೂ ಇರುತ್ತದೆ.[1] ಎರಡು ಕಡೆಯಲ್ಲಿಯೂ ಅದೇ ವಿಜ್ಞಾನವಲ್ಲವೆ? ಆದ್ದರಿಂದ (ಗುಣಗಳ) ಉಪಸಂಹಾರ(ವಾಗಬೇಕು).

ವಿಧಿಶೇಷದಂತೆಯೇ (ಇದು): ಹೇಗೆ ವಿಧಿಶೇಷವಾಗಿರುವ ಅಗ್ನಿಹೋತ್ರಾದಿಗಳ ಧರ್ಮಗಳನ್ನು, ಅಗ್ನಿಹೋತ್ರವೇ ಮುಂತಾದ ಕರ್ಮವು ಎಲ್ಲೆಲ್ಲಿಯೂ ಅದೇ ಆಗಿರುವದರಿಂದ, ಅರ್ಥವು ಬೇರೆಯಲ್ಲವೆಂಬ ಕಾರಣದಿಂದ ಉಪಸಂಹಾರಮಾಡುತ್ತಾರೋ ಹಾಗೆಯೇ ಇಲ್ಲಿಯೂ (ಮಾಡಬೇಕು). ಏಕೆಂದರೆ ವಿಜ್ಞಾನಗಳು ಬೇರೆಬೇರೆಯಾಗಿದ್ದರೆ, ಆಗ ಗುಣಗಳು ಮತ್ತೊಂದು ವಿಜ್ಞಾನಕ್ಕೆ ಸಂಬದ್ಧವಾಗಿರುವದರಿಂದಲೂ (ವಿಜ್ಞಾನಗಳಿಗೆ) ಪ್ರಕೃತಿವಿಕೃತಿಭಾವವಿಲ್ಲದ್ದರಿಂದಲೂ[2] ಉಪಸಂಹಾರವಾಗಲಾರದು. ವಿಜ್ಞಾನವು ಒಂದೇ ಆದರೆ ಹಾಗಲ್ಲ.

ಈ ಪ್ರಯೋಜನಸೂತ್ರವನ್ನೇ 'ಸರ್ವಭೇದಾತ್' (೩–೩–೧೦) ಎಂಬ ಸೂತ್ರದಿಂದ ಮೊದಲುಮಾಡಿಕೊಂಡು ವಿವರಿಸಲಾಗುವದು.

## ೩. ಅನ್ಯಥಾತ್ವಾಧಿಕರಣ (ಸೂ. ೬–೮)

(ಛಾಂದೋಗ್ಯಕಾಣ್ವಗಳಲ್ಲಿರುವ ಉದ್ಗೀಥವಿದ್ಯೆಗಳು ಬೇರೆ)

**ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್ ॥ ೬ ॥**

೬. ಶಬ್ದ(ವು ಬೇರೆಯಾಗಿರುವದರಿಂದ ಈ ವಿದ್ಯೆಗಳು) ಬೇರೆಬೇರೆಯಾಗಿರಬೇಕು ಎಂದರೆ ಹಾಗಲ್ಲ, ಏಕೆಂದರೆ (ಯಾವ) ವಿಶೇಷವೂ ಇರುವದಿಲ್ಲ.

---

1. ಗುಣಗಳು ಒಂದೇ ವಿಜ್ಞಾನಕ್ಕೆ ಅಂಗವಾಗಿರುವವೆಂಬುದು ಸಮಾನವಾಗಿರುತ್ತದೆ.

2. ಆಗ್ನೇಯಸೌರ್ಯಗಳು ಬೇರೆಬೇರೆ ಕರ್ಮಗಳಾದರೂ ಸೌರ್ಯವು ಆಗ್ನೇಯದ ವಿಕೃತಿಯಾದ್ದರಿಂದ ಆಗ್ನೇಯದ ಇತಿಕರ್ತವ್ಯತಾಜ್ಞಾನವು ಸೌರ್ಯಕ್ಕೂ ಬರುತ್ತದೆ. ವಿಜ್ಞಾನಗಳು ಬೇರೆಬೇರೆಯಾದರೆ ಹೀಗೆ ಬರಲಾಗುವದಿಲ್ಲ.

## ಛಾಂದೋಗ್ಯಕಾಣ್ವಗಳಲ್ಲಿರುವ ಉದ್ಗೀಥವಿದ್ಯೆಯಲ್ಲಿ ಸಂಶಯ

(ಭಾಷ್ಯ)

೩೨೬. ವಾಜಸನೇಯಕೇ "ತೇ ಹ ದೇವಾ ಊಚುರ್ಹನ್ತಾಸುರಾನ್ ಯಜ್ಞ ಉದ್ಗೀಥೇನಾತ್ಯಯಾಮೇತಿ" (ಬೃ. ೧-೩-೧), "ತೇಹ ವಾಚಮೂಚುಸ್ತ್ವಂ ನ ಉದ್ಗಾಯ" (ಬೃ. ೧-೩-೨) ಇತಿ ಪ್ರಕ್ರಮ್ಯ ವಾಗಾದೀನ್ ಪ್ರಾಣಾನ್ ಅಸುರಪಾಪ್ಮವಿದ್ಧತ್ವೇನ ನಿಂದಿತ್ವಾ ಮುಖ್ಯಪ್ರಾಣಪರಿಗ್ರಹಃ ಪಠ್ಯತೇ "ಅಥ ಹೇಮಮಾಸನ್ಯಂ ಪ್ರಾಣಮೂಚುಸ್ತ್ವಂ ನ ಉದ್ಗಾಯೇತಿ ತಥೇತಿ ತೇಭ್ಯ ಏಷ ಪ್ರಾಣ ಉದಗಾಯತ್" (ಬೃ. ೧-೩-೭) ಇತಿ। ಛಾನ್ದೋಗ್ಯೇಽಪಿ "ತದ್ಧ ದೇವಾ ಉದ್ಗೀಥಮಾಜಹ್ರುರನೇನೈನಾನಭಿಭವಿಷ್ಯಾಮಃ" (ಛಾಂ. ೧-೨-೧) ಇತಿ ಪ್ರಕ್ರಮ್ಯ ಇತರಾನ್ ಪ್ರಾಣಾನ್ ಅಸುರಪಾಪ್ಮವಿದ್ಧತ್ವೇನ ನಿನ್ದಿತ್ವಾ ತಥೈವ ಮುಖ್ಯಪ್ರಾಣಪರಿಗ್ರಹಃ ಪಠ್ಯತೇ "ಅಥ ಹ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥಮುಪಾಸಾಂಚಕ್ರಿರೇ" (ಛಾಂ. ೧-೨-೭) ಇತಿ। ಉಭಯತ್ರಾಪಿ ಚ ಪ್ರಾಣಪ್ರಶಂಸಯಾ ಪ್ರಾಣವಿದ್ಯಾವಿಧಿರಧ್ಯವಸೀಯತೇ। ತತ್ರ ಸಂಶಯಃ ಕಿಮತ್ರ ವಿದ್ಯಾಭೇದಃ ಸ್ಯಾತ್ ಆಹೋಸ್ವಿತ್ ವಿದ್ಯೈಕತ್ವಮ್ ? ಇತಿ ॥

(ಭಾಷ್ಯಾರ್ಥ)

ವಾಜಸನೇಯಕದಲ್ಲಿ "ಆ ದೇವತೆಗಳು (ಹೀಗೆಂದು) ಹೇಳಿದರು : ಒಳ್ಳೆಯದು, ಅಸುರರನ್ನು ಯಜ್ಞದಲ್ಲಿ ಉದ್ಗೀಥದಿಂದ ಮೀರೋಣ" (ಬೃ.೧-೩-೧) "ಅವರು ವಾಕ್ಕನ್ನು ಕುರಿತು ನೀನು ನಮಗಾಗಿ ಉದ್ಗಾನಮಾಡು" (ಬೃ. ೧-೩-೨) ಎಂದು ಪ್ರಾರಂಭಿಸಿ ವಾಗಾದಿಪ್ರಾಣಗಳನ್ನು ಅಸುರಪಾಪವು ತಗಲಿದವರೆಂದು ನಿಂದಿಸಿ "ಈಗ ಈ ಮುಖದಲ್ಲಿರುವ ಪ್ರಾಣನನ್ನು ಕುರಿತು ನೀನು ನಮಗಾಗಿ ಉದ್ಗಾನಮಾಡು ಎಂದರು, ಹಾಗೇ ಆಗಲಿ ಎಂದು ಈ ಪ್ರಾಣನು ಅವರಿಗೋಸ್ಕರ ಉದ್ಗಾನಮಾಡಿದನು" (ಬೃ. ೧-೩-೭) ಎಂದು ಮುಖ್ಯಪ್ರಾಣವನ್ನು ಸ್ವೀಕರಿಸಿದರೆಂದು ಪಠಿತವಾಗಿರುತ್ತದೆ. ಹೀಗೆಯೇ ಛಾಂದೋಗ್ಯದಲ್ಲಿಯೂ "ಆಗ ದೇವತೆಗಳು ಇದರಿಂದ ಇವರನ್ನು ಪರಾಭವ ಮಾಡೋಣ ಎಂದು ಉದ್ಗೀಥವನ್ನು ಸ್ವೀಕರಿಸಿದರು" (ಛಾಂ. ೧-೨-೧)[1] ಎಂದು ಉಪಕ್ರಮಿಸಿ ಉಳಿದ ಪ್ರಾಣಗಳನ್ನು ಅಸುರಪಾಪವು ತಗಲಿದವರೆಂದು

1. ಉದ್ಗೀಥವೆಂದರೆ ಇಲ್ಲಿ ಉದ್ಗೀಥೋಪಲಕ್ಷಣವಾದ ಔದ್ಗಾತ್ರಕರ್ಮವು; ಜ್ಯೋತಿಷ್ಟೋಮಾದಿಕರ್ಮದಲ್ಲಿರುವ ಔದ್ಗಾತ್ರಕರ್ಮವು –ಎಂದು ಛಾಂ. ಭಾ.

ನಿಂದಿಸಿ ಹಾಗೆಯೇ ಮುಖ್ಯಪ್ರಾಣವನ್ನು ಸ್ವೀಕರಿಸಿದರೆಂದು "ಇನ್ನು ಈ ಮುಖ್ಯಪ್ರಾಣನಿದಾನಲ್ಲ, ಇವನನ್ನೇ ಉದ್ಗೀಥವೆಂದು ಉಪಾಸನೆಮಾಡಿದರು" (ಛಾಂ. ೧–೨–೭) ಎಂದು ಪಠಿತವಾಗಿದೆ ಎರಡು ಕಡೆಯಲ್ಲಿಯೂ ಪ್ರಾಣವನ್ನು ಹೊಗಳಿರುವದರಿಂದ ಪ್ರಾಣವಿದ್ಯೆಯನ್ನು ವಿಧಿಸಿದೆ ಎಂದು ನಿಶ್ಚಯವಾಗುತ್ತದೆ. ಇಲ್ಲಿ ವಿದ್ಯಾಭೇದವೋ, ಅಥವಾ ವಿದ್ಯೈಕ್ಯವೋ? –ಎಂದು ಸಂಶಯ.

## ಪೂರ್ವಪಕ್ಷ: ಇವೆರಡೂ ಒಂದೇ ಉಪಾಸನೆ

(ಭಾಷ್ಯ)

೩.೨೭. ಕಿಂ ತಾವತ್ ಪ್ರಾಪ್ತಮ್ ? ಪೂರ್ವೇಣ ನ್ಯಾಯೇನ ವಿದ್ಯೈಕತ್ವಮ್ ಇತಿ। ನನು ನ ಯುಕ್ತಂ ವಿದ್ಯೈಕತ್ವಮ್। ಪ್ರಕ್ರಮಭೇದಾತ್। ಅನ್ಯಥಾ ಹಿ ಪ್ರಕ್ರಮನ್ತೇ ವಾಜಸನೇಯಿನಃ, ಅನ್ಯಥಾ ಛನ್ದೋಗಾಃ। "ತ್ವಂ ನ ಉದ್ಗಾಯ" (ಬೃ. ೧–೩–೨) ಇತಿ ವಾಜಸನೇಯಿನಃ ಉದ್ಗೀಥಸ್ಯ ಕರ್ತೃತ್ವೇನ ಪ್ರಾಣಮ್ ಆಮನನ್ತಿ। ಛನ್ದೋಗಾಸ್ತು ಉದ್ಗೀಥತ್ವೇನ "ತಮುದ್ಗೀಥಮುಪಾಸಾಂ ಚಕ್ರಿರೇ" (ಛಾಂ. ೧–೨–೭) ಇತಿ। ತತ್ ಕಥಂ ವಿದ್ಯೈಕತ್ವಂ ಸ್ಯಾತ್ ಇತಿ ಚೇತ್। ನೈಷ ದೋಷಃ। ನ ಹಿ ಏತಾವತಾ ವಿಶೇಷೇಣ ವಿದ್ಯೈಕತ್ವಮ್ ಅವಗಚ್ಛತಿ। ಅವಿಶೇಷಸ್ಯಾಪಿ ಬಹುತರಸ್ಯ ಪ್ರತೀಯಮಾನತ್ವಾತ್। ತಥಾ ಹಿ ದೇವಾಸುರಸಂಗ್ರಾಮೋಪಕ್ರಮತ್ವಮ್, ಅಸುರಾತ್ಯಯಾಭಿಪ್ರಾಯಃ, ಉದ್ಗೀಥೋಪನ್ಯಾಸಃ, ವಾಗಾದಿಸಂಕೀರ್ತನಮ್, ತನ್ನಿನ್ದಯಾ ಮುಖ್ಯಪ್ರಾಣವ್ಯಪಾಶ್ರಯಃ, ತದ್ವೀರ್ಯಾಚ್ಚ ಅಸುರವಿಧ್ವಂಸನಮ್ ಅಶ್ಮಲೋಷ್ಟನಿದರ್ಶನೇನ—ಇತ್ಯೇವಂ ಬಹವೋ ಅರ್ಥಾಃ ಉಭಯತ್ರಾಪಿ ಅವಿಶಿಷ್ಟಾಃ ಪ್ರತೀಯನ್ತೇ। ವಾಜಸನೇಯಕೇಽಪಿ ಚ ಉದ್ಗೀಥಸಾಮಾನಾಧಿಕರಣ್ಯಂ ಪ್ರಾಣಸ್ಯ ಶ್ರುತಮ್ "ಏಷ ಉ ವಾ ಉದ್ಗೀಥಃ" (ಬೃ ೧–೨–೨೩) ಇತಿ। ತಸ್ಮಾತ್ ಛಾನ್ದೋಗ್ಯೇಽಪಿ "ಕರ್ತೃತ್ವಂ ಲಕ್ಷಯಿತವ್ಯಮ್"। ತಸ್ಮಾಚ್ಚ ವಿದ್ಯೈಕತ್ವಮಪಿ॥

(ಭಾಷ್ಯಾರ್ಥ)

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಹಿಂದಿನ ನ್ಯಾಯದಿಂದ (ಎರಡರಲ್ಲಿಯೂ) ಒಂದೇ ವಿದ್ಯೆ ಎಂದು.

(ಆಕ್ಷೇಪ) :– (ಇಲ್ಲಿ) ವಿದ್ಯೈಕತ್ವವು ಯುಕ್ತವಲ್ಲ. ಏಕೆಂದರೆ ಉಪಕ್ರಮದಲ್ಲಿ ಭೇದವಿದೆ. (ಇದರ ವಿವರ): ವಾಜಸನೇಯಿಗಳು ಉಪಕ್ರಮಿಸಿರುವದೇ ಬೇರೆಯ ಬಗೆ, ಛಂದೋಗರು (ಉಪಕ್ರಮಿಸಿರುವದೇ) ಬೇರೆಯ

ಬಗೆ: "ನೀನು ನಮಗಾಗಿ ಉದ್ಗಾನಮಾಡು" (ಬೃ. ೧-೩-೨) ಎಂದು ವಾಜಸನೇಯಿಗಳು ಪ್ರಾಣನು ಉದ್ಗೀಥಕರ್ತೃವೆಂದು ಪಠಿಸುತ್ತಾರೆ, ಛಂದೋಗರಾದರೋ "ಅವನನ್ನು ಉದ್ಗೀಥವೆಂದು ಉಪಾಸನೆಮಾಡಿದರು" (ಛಾಂ. ೧-೨-೭) ಎಂದು (ಪ್ರಾಣನು) ಉದ್ಗೀಥವೆಂದು (ಪಠಿಸುತ್ತಾರೆ). ಹೀಗಿರುವಲ್ಲಿ ಹೇಗೆ ಒಂದೇ ವಿದ್ಯೆಯಾದೀತು ?

(ಪರಿಹಾರ) :- ಹೇಗೆಂದರೆ, (ಹೇಳುತ್ತೇವೆ). ಇದೇನೂ ದೋಷವಲ್ಲ. ಇಷ್ಟು ವಿಶೇಷ(ಮಾತ್ರ)ದಿಂದ ವಿದ್ಯೆಯು ಒಂದೆಂಬುದು ಹೊಂದುವದಿಲ್ಲ. ಏಕೆಂದರೆ ಬಹುತರವಾದ ಸಾಮಾನ್ಯವೂ ತೋರುತ್ತಿದೆ. ಹೇಗೆಂದರೆ, ದೇವಾಸುರಸಂಗ್ರಾಮದಿಂದಪ್ರಾರಂಭಿಸಿರುವದು, ಅಸುರರನ್ನು ಮೀರಬೇಕೆಂಬ ಅಭಿಪ್ರಾಯ, ಉದ್ಗೀಥವನ್ನು ಪ್ರಾರಂಭದಲ್ಲಿ ಹೇಳಿರುವದು, ವಾಗಾದಿಗಳನ್ನು ತಿಳಿಸಿರುವದು, ಅವುಗಳನ್ನು ನಿಂದಿಸಿ ಮುಖ್ಯಪ್ರಾಣವನ್ನು ಆಶ್ರಯಿಸಿರುವದು, ಮತ್ತು ಅದರ ವೀರ್ಯದಿಂದ ಕಲ್ಲುಹೆಂಟೆಗಳ ದೃಷ್ಟಾಂತದಿಂದ ಅಸುರರ ನಾಶವನ್ನು (ಹೇಳಿರುವದು) ಎಂಬೀ ಪರಿಯಲ್ಲಿ ಬಹಳ ವಿಷಯಗಳು ಎರಡು ಕಡೆಯಲ್ಲಿಯೂ ಸಮಾನವಾಗಿ ತೋರಿಬರುತ್ತಿವೆ. ವಾಜಸನೇಯಕದಲ್ಲಿಯೂ "ಇವನೇ ಉದ್ಗೀಥವು" (ಬೃ. ೧-೩-೨೩) ಎಂದು (ಪ್ರಾಣನಿಗೆ) ಉದ್ಗೀಥಸಾಮಾನಾಧಿಕರಣ್ಯವು ಶ್ರುತವಾಗಿರುತ್ತದೆ. ಆದ್ದರಿಂದ ಛಾಂದೋಗ್ಯದಲ್ಲಿಯೂ (ಉದ್ಗೀಥ)ಕರ್ತೃತ್ವವನ್ನು ಲಕ್ಷಣೆಯಿಂದ (ಹೇಳ)ಬೇಕು.[1] ಆದ್ದರಿಂದ ವಿದ್ಯೈಕತ್ವವು (ಸಿದ್ಧಿಸುತ್ತದೆ).

**ನ ವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ॥ ೭ ॥**

೭. (ವಿದ್ಯೈಕತ್ವ)ವಿಲ್ಲವೇ ಇಲ್ಲ ; ಏಕೆಂದರೆ ಪ್ರಕರಣಭೇದವಿದೆ. ಪರೋವರೀಯಸ್ತ್ವಾದಿಗಳಂತೆಯೇ (ಇದು).

## ಪ್ರಕ್ರಮಭೇದವಿರುವದರಿಂದ ವಿದ್ಯೆಗಳು ಬೇರೆಬೇರೆ

(ಭಾಷ್ಯ)

೩೨೮. ನ ವಾ ವಿದ್ಯೈಕತ್ವಮತ್ರ ನ್ಯಾಯ್ಯಮ್, ವಿದ್ಯಾಭೇದ ಏವಾತ್ರ ನ್ಯಾಯ್ಯಃ। ಕಸ್ಮಾತ್ ? ಪ್ರಕರಣಭೇದಾತ್ ಇತಿ[2]। ಪ್ರಕ್ರಮಭೇದಾತ್ ಇತ್ಯರ್ಥಃ। ತಥಾ ಹಿ ಇಹ ಪ್ರಕ್ರಮಭೇದೋ ದೃಶ್ಯತೇ। ಛಾನ್ದೋಗ್ಯೇ

1. ಉದ್ಗೀಥಾವಯವವನ್ನು ಪ್ರಾರಂಭಿಸಿದ್ದರೂ ಇಲ್ಲಿ ಉದ್ಗೀಥವನ್ನೇ ಲಕ್ಷಣೆಯಿಂದ ಹಿಡಿದು, ಪ್ರಾಣವನ್ನು ಉದ್ಗೀಥಕರ್ತೃವೆಂದು ಉಪಾಸನೆಮಾಡಿದರು ಎಂದು ಅರ್ಥವನ್ನು ಮಾಡಬೇಕು ಎಂದು ಅಭಿಪ್ರಾಯ.

2. 'ಇತಿ' ಎಂಬ ಮಾತು ಇಲ್ಲದಿದ್ದರೂ ಸಾಗುತ್ತಿತ್ತು.

ತಾವತ್ "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" (ಛಾಂ. ೧-೧-೧) ಇತ್ಯೇವಮ್ ಉದ್ಗೀಥಾವಯವಸ್ಯ ಓಂಕಾರಸ್ಯ ಉಪಾಸ್ಯತ್ವಂ ಪ್ರಸ್ತುತ್ಯ ರಸತಮಾದಿಗುಣೋಪವ್ಯಾಖ್ಯಾನಂ ತತ್ರ ಕೃತ್ವಾ "ಅಥ ಖಲ್ವೇತಸ್ಯೈವಾಕ್ಷರಸ್ಯೋಪವ್ಯಾಖ್ಯಾನಂ ಭವತಿ" (ಛಾಂ ೧-೧-೧೦) ಇತಿ ಪುನರಪಿ ತಮೇವೋದ್ಗೀಥಾವಯವಮ್ ಓಂಕಾರಮನುವರ್ತ್ಯ ದೇವಾಸುರಾಖ್ಯಾಯಿಕಾದ್ವಾರೇಣ "ತಂ ಪ್ರಾಣಮುದ್ಗೀಥಮುಪಾಸಾಂಚಕ್ರಿರೇ" (ಛಾ. ೧-೨-೭)[1] ಇತ್ಯಾಹ। ತತ್ರ ಯದ್ಯುದ್ಗೀಥಶಬ್ದೇನ ಸಕಲಾ ಭಕ್ತಿರಭಿಪ್ರೇಯೇತ ತಸ್ಯಾಶ್ಚ ಕರ್ತಾ ಉದ್ಗಾತಾ ಋತ್ವಿಕ್ ತತ ಉಪಕ್ರಮಶ್ಚೋಪರುಧ್ಯೇತ ಲಕ್ಷಣಾ ಚ ಪ್ರಸಜ್ಯೇತ। ಉಪಕ್ರಮಾನುರೋಧೇನ ಚ ಏಕಸ್ಮಿನ್ ವಾಕ್ಯೇ ಉಪಸಂಹಾರೇಣ ಭವಿತವ್ಯಮ್। ತಸ್ಮಾತ್ ಅತ್ರ ತಾವತ್ ಉದ್ಗೀಥಾವಯವೇ ಓಂಕಾರೇ ಪ್ರಾಣದೃಷ್ಟಿಃ ಉಪದಿಶ್ಯತೇ। ವಾಜಸನೇಯಕೇ ತು ಉದ್ಗೀಥಶಬ್ದೇನ ಅವಯವಗ್ರಹಣೇ ಕಾರಣಾಭಾವಾತ್ ಸಕಲೈವ ಭಕ್ತಿಃ ಆವೇದ್ಯತೇ। "ತ್ವಂ ನ ಉದ್ಗಾಯ" (ಬೃ. ೧-೩-೨) ಇತ್ಯಪಿ ತಸ್ಯಾಃ ಕರ್ತಾ ಉದ್ಗಾತಾ ಋತ್ವಿಕ್ ಪ್ರಾಣತ್ವೇನ ನಿರೂಪ್ಯತೇ ಇತಿ ಪ್ರಸ್ಥಾನಾನ್ತರಮ್। ಯದಪಿ ತತ್ರ ಉದ್ಗೀಥಸಾಮಾನಾಧಿಕರಣ್ಯಂ ಪ್ರಾಣಸ್ಯ, ತದಪಿ ಉದ್ಗಾತೃತ್ವೇನೈವ ದಿದರ್ಶಯಿಷಿತಸ್ಯ ಪ್ರಾಣಸ್ಯ ಸರ್ವಾತ್ಮತ್ವಪ್ರತಿಪಾದನಾರ್ಥಮಿತಿ ನ ವಿದ್ಯೈಕತ್ವಮ್ ಆವಹತಿ। ಸಕಲಭಕ್ತಿವಿಷಯ ಏವ ಚ ತತ್ರಾಪಿ ಉದ್ಗೀಥಶಬ್ದಃ ಇತಿ ವೈಷಮ್ಯಮ್। ನ ಚ ಪ್ರಾಣಸ್ಯ ಉದ್ಗಾತೃತ್ವಮ್ ಅಸಂಭವೇನ ಹೇತುನಾ ಪರಿತ್ಯಜ್ಯತೇ। ಉದ್ಗೀಥಭಾವವತ್ ಉದ್ಗಾತೃಭಾವಸ್ಯಾಪಿ ಉಪಾಸನಾರ್ಥತ್ವೇನ ಉಪದಿಶ್ಯಮಾನತ್ವಾತ್। ಪ್ರಾಣವೀರ್ಯೇಣೈವ ಚ ಉದ್ಗಾತಾ ಔದ್ಗಾತ್ರಂ ಕರೋತೀತಿ ನಾಸ್ತ್ಯಸಂಭವಃ। ತಥಾ ಚ ತತ್ರೈವ ಶ್ರಾವಿತಮ್ "ವಾಚಾ ಚ ಹ್ಯೇವ ಸ ಪ್ರಾಣೇನ ಚೋದಗಾಯತ್" (ಬೃ. ೧-೩-೨೪) ಇತಿ। ನ ಚ ವಿವಕ್ಷಿತಾರ್ಥಭೇದೇ ಅವಗಮ್ಯಮಾನೇ ವಾಕ್ಯಚ್ಛಾಯಾನುಕಾರಮಾತ್ರೇಣ ಸಮಾನಾರ್ಥತ್ವಮ್ ಅಧ್ಯವಸಾತುಂ ಯುಕ್ತಮ್। ತಥಾ ಹಿ ಅಭ್ಯುದಯವಾಕ್ಯೇ ಪಶುಕಾಮವಾಕ್ಯೇ ಚ "ತ್ರೇಧಾ ತಣ್ಡುಲಾನ್ ವಿಭಜೇದ್ಯೇ ಮಧ್ಯಮಾಃ ಸ್ಯುಸ್ತಾನಗ್ನಯೇ ದಾತ್ರೇ ಪುರೋಡಾಶಮಷ್ಟಾಕಪಾಲಂ ಕುರ್ಯಾತ್" (?) ಇತ್ಯಾದಿನಿರ್ದೇಶಸಾಮ್ಯೇಽಪಿ ಉಪಕ್ರಮಭೇದಾತ್ ಅಭ್ಯುದಯವಾಕ್ಯೇ ದೇವತಾಪನಯೋಽಧ್ಯವಸಿತಃ, ಪಶುಕಾಮವಾಕ್ಯೇ ತು ಯಾಗವಿಧಿಃ। ತಥಾ ಇಹಾಪಿ ಉಪಕ್ರಮಭೇದಾತ್ ವಿದ್ಯಾಭೇದಃ ॥

---

1. 'ತಮುದ್ಗೀಥಮುಪಾಸಾಂಚಕ್ರಿರೇ' ಎಂದು ಪಾಠ ; ತಮ್ ಎಂಬುದಕ್ಕೆ ಪ್ರಾಣಮ್ ಎಂಬ ವಿವರಣೆಯನ್ನು ಸೇರಿಸಿ ಇಲ್ಲಿ ಭಾಷ್ಯಕಾರರು ಶ್ರುತ್ಯರ್ಥವನ್ನು ಬರೆದಿ ಷ. ೆ.

(ಭಾಷ್ಯಾರ್ಥ)

ಇಲ್ಲಿ ವಿದ್ಯೈಕತ್ವವು ಯುಕ್ತವಲ್ಲವೇ ಅಲ್ಲ. ವಿದ್ಯಾಭೇದವೇ ಯುಕ್ತ. ಏಕೆ ? ಎಂದರೆ ಪ್ರಕರಣಭೇದವಿರುವದರಿಂದ. ಉಪಕ್ರಮವು ಬೇರೆಯಾಗಿರುವದರಿಂದ ಎಂದರ್ಥ. ಹೇಗೆಂದರೆ ಇಲ್ಲಿ ಉಪಕ್ರಮಭೇದವು ಕಾಣಬರುತ್ತದೆ. ಮೊದಲನೆಯದಾಗಿ ಛಾಂದೋಗ್ಯದಲ್ಲಿ "ಓಮ್ ಎಂಬೀ ಅಕ್ಷರವಾದ ಉದ್ಗೀಥವನ್ನು ಉಪಾಸನೆಮಾಡಬೇಕು" (ಛಾಂ. ೧-೧-೧) ಎಂದಿಂತು ಉದ್ಗೀಥದ ಅವಯವವಾದ ಓಂಕಾರವನ್ನು ಉಪಾಸನೆಮಾಡಬೇಕೆಂದು ಪ್ರಾರಂಭಿಸಿ ರಸತಮಾದಿಗುಣಗಳ ಉಪವ್ಯಾಖ್ಯಾನವನ್ನು ಅಲ್ಲಿ ಮಾಡಿ[1] "ಇನ್ನು (ಈಗ) ಇದೇ ಅಕ್ಷರದ ಉಪವ್ಯಾಖ್ಯಾನವಾಗುತ್ತದೆ" (ಛಾಂ. ೧-೧-೧೦) ಎಂದು ಮತ್ತೂ ಅದೇ ಉದ್ಗೀಥಾವಯವವಾದ ಓಂಕಾರವನ್ನು ಅನುವೃತ್ತಿಮಾಡಿಕೊಂಡು ದೇವಾಸುರರ ಕಥೆಯ ಮೂಲಕ "ಆ ಪ್ರಾಣನೆಂದು ಉದ್ಗೀಥವನ್ನು ಉಪಾಸನೆಮಾಡಿದರು" (ಛಾಂ. ೧-೨-೭) ಎಂದು ಹೇಳಿರುತ್ತದೆ. ಇಲ್ಲಿ ಉದ್ಗೀಥಶಬ್ದದಿಂದ ಸಂಪೂರ್ಣವಾದ (ಉದ್ಗೀಥ)ಭಕ್ತಿಯೇ (ಅರ್ಥವೆಂದು) ಅಭಿಪ್ರಾಯಪಟ್ಟರೆ, ಅದನ್ನು ಮಾಡುವವನು ಉದ್ಗಾತೃವಾದ ಋತ್ವಿಕ್ಕೆಂದು (ಹೇಳಿದರೆ) ಆಗ ಉಪಕ್ರಮಕ್ಕೆ ವಿರೋಧವಾಗುವದು, ಲಕ್ಷಣೆಯೂ ಪ್ರಸಕ್ತವಾಗುವದು. **ಉಪಕ್ರಮಕ್ಕೆ ಅನುಗುಣವಾಗಿಯೇ ಅದೇ ವಾಕ್ಯದ ಉಪಸಂಹಾರವೂ ಇರಬೇಕು.** ಆದ್ದರಿಂದ ಇಲ್ಲಿಯಂತೂ ಉದ್ಗೀಥಾವಯವವಾದ ಓಂಕಾರದಲ್ಲಿ ಪ್ರಾಣದೃಷ್ಟಿಯನ್ನು ಉಪದೇಶಿಸಿರುತ್ತದೆ.

ವಾಜಸನೇಯಕದಲ್ಲಾದರೋ ಉದ್ಗೀಥವೆಂಬ ಶಬ್ದದಿಂದ ಅವಯವವನ್ನು ಗ್ರಹಿಸುವದಕ್ಕೆ ಕಾರಣವಿಲ್ಲವಾಗಿ ಸಂಪೂರ್ಣಭಕ್ತಿಯನ್ನೇ ತಿಳಿಸಿರುತ್ತದೆ (ಎನ್ನಬೇಕು). "ನೀನು ನಮಗಾಗಿ ಉದ್ಗಾನಮಾಡು" (ಬೃ. ೧-೩-೨) ಎಂಬುದೂ ಅದನ್ನು ಮಾಡುವ ಉದ್ಗಾತೃವೆಂಬ ಋತ್ವಿಜನು ಪ್ರಾಣನೆಂದು ಗೊತ್ತುಮಾಡಿರುತ್ತದೆಯಾದ್ದರಿಂದ (ಅದು) ಬೇರೆಂದು ಪ್ರಸ್ಥಾನವು. ಅಲ್ಲಿ ಪ್ರಾಣಕ್ಕೆ ಉದ್ಗೀಥದ ಸಾಮಾನಾಧಿಕರಣ್ಯವನ್ನು (ಹೇಳಿದೆ)ಯಲ್ಲ, ಅದೂ ಉದ್ಗಾತೃವೆಂದೇ ತಿಳಿಸಬೇಕೆಂದಿರುವ ಪ್ರಾಣವು ಸರ್ವಾತ್ಮನೆಂದು ಪ್ರತಿಪಾದಿಸುವದಕ್ಕಾಗಿ; ಆದ್ದರಿಂದ (ಅದೂ) ವಿದ್ಯೈಕತ್ವವನ್ನು ತಂದುಕೊಡುವದಿಲ್ಲ. ಅಲ್ಲಿಯೂ ಉದ್ಗೀಥಶಬ್ದವು ಸಂಪೂರ್ಣಭಕ್ತಿಯ ವಿಷಯವೇ ಆಗಿರುವದರಿಂದ (ಎರಡಕ್ಕೂ) ವೈಷಮ್ಯವಿದೆ. ಪ್ರಾಣಕ್ಕೆ ಉದ್ಗಾತೃತ್ವವು ಸಂಭವಿಸು

1. ರಸತಮತ್ವ, ಸರ್ವಕಾಮಾಪ್ತಿಗುಣತ್ವ, ಸಮೃದ್ಧಿಗುಣವತ್ತ್ವ ಮುಂತಾದ ಗುಣಗಳಿಂದ ಕೂಡಿದ್ದೆಂದು ಉಪಾಸನೆಯನ್ನು ವಿವರಿಸಿ ಎಂದರ್ಥ.

ವದಿಲ್ಲವೆಂಬ ಹೇತುವಿನಿಂದ (ಅದನ್ನು) ಬಿಡುವ ಹಾಗೂ ಇಲ್ಲ; ಏಕೆಂದರೆ ಉದ್ಗೀಥಭಾವದಂತೆ ಉದ್ಗಾತೃಭಾವವನ್ನೂ ಉಪಾಸನೆಗಾಗಿಯೇ ಉಪದೇಶ ಮಾಡಿರುತ್ತದೆ. ಇದಲ್ಲದೆ ಪ್ರಾಣವೀರ್ಯದಿಂದಲೇ ಉದ್ಗಾತೃವು ಔದ್ಗಾತ್ರವನ್ನು ಮಾಡುತ್ತಾನಾಗಿ (ಉದ್ಗಾತೃತ್ವವು) ಸಂಭವಿಸುವದಿಲ್ಲವೆಂಬುದೂ ಇಲ್ಲ. ಆದ್ದರಿಂದಲೇ ಆ (ವಾಜಸನೇಯಕ)ದಲ್ಲಿಯೇ "ವಾಕ್ಕಿನಿಂದಲೂ ಪ್ರಾಣದಿಂದಲೂ ಅಲ್ಲವೆ ಅವನು ಉದ್ಗಾನಮಾಡುವನು ?" (ಬೃ ೧-೩-೨೪) ಎಂದು ಶ್ರುತಿ ಹೇಳುತ್ತದೆ.

ವಿವಕ್ಷಿತವಾದ ಅರ್ಥವು ಬೇರೆಬೇರೆಯಾಗಿರುವಲ್ಲಿ[1] ವಾಕ್ಯದ ಛಾಯೆಯನ್ನು ಅನುಕರಿಸಿದೆ ಎಂಬ ಮಾತ್ರದಿಂದ ಎರಡಕ್ಕೂ ಒಂದೇ ಅರ್ಥವೆಂದು ನಿಶ್ಚಯಿಸುವದು ಯುಕ್ತವಾಗಲಾರದು. ಆದ್ದರಿಂದಲೇ ಅಭ್ಯುದಯವಾಕ್ಯದಲ್ಲಿಯೂ ಪಶುಕಾಮವಾಕ್ಯದಲ್ಲಿಯೂ "ತ್ರೇಧಾ ತಣ್ಡುಲಾನ್ ವಿಭಜೇದ್ ಯೇ ಮಧ್ಯಮಾಃ ಸ್ಯುಃ. ..." (ಅಕ್ಕಿಯನ್ನು ಮೂರುಭಾಗವಾಗಿ ವಿಭಾಗಿಸಬೇಕು. ನಡುವಿನಲ್ಲಿರುತ್ತದೆಯಲ್ಲ ಅದನ್ನು ಅಗ್ನಿದಾತೃವಿಗೆ, ಅಷ್ಟಾಕಪಾಲದ ಪುರೋಡಾಶವನ್ನು ಮಾಡಬೇಕು .....") (?) ಎಂದುಮುಂತಾಗಿರುವ ನಿರ್ದೇಶವು ಸಮಾನವಾಗಿದ್ದರೂ ಉಪಕ್ರಮವು ಬೇರೆಬೇರೆಯಾಗಿರುವದರಿಂದ ಅಭ್ಯುದಯವಾಕ್ಯದಲ್ಲಿ[2] ದೇವತೆಗಳನ್ನು ಬಿಡಬೇಕೆಂದು ನಿಶ್ಚಯಮಾಡಲಾಗಿರುತ್ತದೆ ; ಪಶುಕಾಮವಾಕ್ಯದಲ್ಲಾದರೊ ಯಾಗವನ್ನು ವಿಧಿಸಿದೆ ಎಂದು[3] (ನಿಶ್ಚಯ

---

1. ಒಂದರಲ್ಲಿ ಉದ್ಗೀಥಾವಯವವಾದ ಓಂಕಾರದ ಉಪಾಸನೆ, ಇನ್ನೊಂದರಲ್ಲಿ ಉದ್ಗಾನಕರ್ತೃವೆಂದು ಪ್ರಾಣನ ಉಪಾಸನೆ ಹೀಗೆ ಬೇರೆಬೇರೆಯಾಗಿದ್ದರೂ.

2. ವಿವಾ ಏತಂ ಪ್ರಜಯಾ ಪಶುಭಿರರ್ಧಯತಿ ವರ್ಧಯತ್ಯಸ್ಯ ಭ್ರಾತೃವ್ಯಂ ಯಸ್ಯ ಹವಿರ್ನಿರುಪ್ತಂ ಪುರಸ್ತಾಚ್ಚನ್ದ್ರಮಾ ಅಭ್ಯುದೇತಿ ಸ ತ್ರೇಧಾ ತಣ್ಡುಲಾನ್ ವಿಭಜೇದ್ಯೇ ಮಧ್ಯಮಾಸ್ತಾನಗ್ನಯೇ ದಾತ್ರೇ ಪುರೋಡಾಶಮಷ್ಟಾಕಪಾಲಂ ನಿರ್ವಪೇದ್ಯೇ ಸ್ಥವಿಷ್ಠಾಸ್ತಾನಿನ್ದ್ರಾಯ ಪ್ರದಾತ್ರೇ ದಧಂಶ್ಚರುಂ ಯೇ ಕ್ಷೋಧಿಷ್ಠಾಸ್ತಾನ್ ವಿಷ್ಣವೇ ಶಿಪಿವಿಷ್ಟಾಯ ಶೃತೇ ಚರುಮ್–" ಇದು ಅಭ್ಯುದಯವಾಕ್ಯವು.

3. ಚತುರ್ದಶಿಯಲ್ಲಿ ಅಮಾವಾಸ್ಯೆಯೆಂಬ ಭ್ರಮೆಯಿಂದ ದರ್ಶವನ್ನು ಮಾಡುವದಕ್ಕೆ ತೊಡಗಿದವನಿಗೆ ಹಿಂದಿನಿಂದ ಚಂದ್ರನ ಉದಯವಾದರೆ ಆ ವಿಷಯಕ್ಕೆ ಇರುವ ವಾಕ್ಯವು ಅಭ್ಯುದಯವಾಕ್ಯವು. ಅವನು ಅಕ್ಕಿಯನ್ನು ಮೂರು ಪಾಲು ಮಾಡಿ ದರ್ಶದೇವತೆಗಳನ್ನು ಬಿಟ್ಟು ಅಗ್ನಿ ದಾತೃ, ಇಂದ್ರ ಪ್ರದಾತೃ, ವಿಷ್ಣು ಶಿಪಿವಿಷ್ಟ–ಎಂಬ ಮೂರು ಬೇರೆ ದೇವತೆಗಳಿಗೆ ಕೊಡಬೇಕು ಎಂದು ವಿಧಿಸಿದೆ. ಇದೂ ದರ್ಶವೇ, ಕರ್ಮಾಂತರವೇನೂ ಅಲ್ಲ.

ಮಾಡಲಾಗಿರುತ್ತದೆ).[1] ಹಾಗೆಯೇ ಇಲ್ಲಿಯೂ ಉಪಕ್ರಮಭೇದವಿರುವದರಿಂದ ವಿದ್ಯಾಭೇದವೇ (ಯುಕ್ತ).

## ಇಲ್ಲಿ ಪರೋವರೀಯಸ್ತ್ವವೇ ಮುಂತಾದ ದೃಷ್ಟಾಂತವಿದೆ

(ಭಾಷ್ಯ)

೩೯. ಪರೋವರೀಯಸ್ತ್ವಾದಿವತ್ । ಯಥಾ ಪರಮಾತ್ಮದೃಷ್ಟ್ಯಧ್ಯಾಸಸಾಮ್ಯೇಽಪಿ "ಆಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಮ್ "(ಛಾಂ.೧–೯–೧) "ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನನ್ತಃ" (ಛಾಂ.೧–೬–೨) ಇತಿ ಪರೋವರೀಯಸ್ತ್ವ ಗುಣವಿಶಿಷ್ಟಮ್ ಉದ್ಗೀಥೋಪಾಸನಮ್, ಅಕ್ಷ್ಯಾದಿತ್ಯಗತಹಿರಣ್ಯಶ್ಮಶ್ರುತ್ವಾದಿಗುಣವಿಶಿಷ್ಟೋದ್ಗೀಥೋಪಾಸನಾದ್ ಭಿನ್ನಮ್ । ನ ಚ ಇತರೇತರಗುಣೋಪಸಂಹಾರಃ ಏಕಸ್ಯಾಮಪಿ ಶಾಖಾಯಾಮ್ । ತದ್ವತ್ ಶಾಖಾನ್ತರಸ್ಥೇಷ್ವಪಿ ಏವಂಜಾತೀಯಕೇಷು ಉಪಾಸನೇಷು ಇತಿ ॥

(ಭಾಷ್ಯಾರ್ಥ)

ಪರೋವರೀಯಸ್ತ್ವಾದಿಗಳಂತೆಯೇ (ಇದು. ಇದರ ವಿವರ): ಪರಮಾತ್ಮದೃಷ್ಟಿಯನ್ನು ಅಧ್ಯಾಸಮಾಡಿರುವದು ಸಮಾನವಾಗಿದ್ದರೂ "ಆಕಾಶವೇ ಇವುಗಳಿಗಿಂತ ದೊಡ್ಡದು. ಆಕಾಶವೇ ಪರಾಯಣವು" (ಛಾಂ. ೧–೯–೧), "ಆ ಇದು ಪರೋವರೀಯವಾದ ಉದ್ಗೀಥವು, ಆ ಇದು ಅನಂತವು" (ಛಾಂ.೧–೬–೨) ಎಂದು ಪರೋವರೀಯಸ್ತ್ವಗುಣವಿಶಿಷ್ಟವಾದ ಉದ್ಗೀಥದ ಉಪಾಸನೆಯು ಅಕ್ಷಿ, ಆದಿತ್ಯ– ಮುಂತಾದವುಗಳಲ್ಲಿರುವ ಹಿರಣ್ಯಶ್ಮಶ್ರುತ್ವಾದಿಗುಣವಿಶಿಷ್ಟವಾದ ಉದ್ಗೀಥದ ಉಪಾಸನೆಗಿಂತ ಭಿನ್ನವು; (ಅಲ್ಲಿ) ಒಂದೇ ಶಾಖೆಯಲ್ಲಿದ್ದರೂ

---

1. ಪಶುಕಾಮನಾದವನಿಗೆ "ಯಃ ಪಶುಕಾಮಃ ಸ್ಯಾತ್ ಸೋಮಾವಾಸ್ಯಾಮಿಷ್ಟ್ವಾವತ್ಸಾನಪಾಕುರ್ಯಾತ್" ಎಂದು ದರ್ಶಕರ್ಮವನ್ನು ಮುಗಿಸಿ ಹಾಲುಕರೆಯುವದಕ್ಕೆ ಕರು ಬಿಡಬೇಕೆಂದು ಉಪಕ್ರಮಿಸಿ ಅಭ್ಯುದಯವಾಕ್ಯದಂತೆಯೇ ಅಕ್ಕಿಯನ್ನು ಮೂರುಪಾಲು ಮಾಡಿ ಇಂದ್ರ, ಅಗ್ನಿ, ವಿಷ್ಣು–ಎಂಬ ದೇವತೆಗಳಿಗೆ ಕೊಡಬೇಕೆಂದು ಹೇಳಿದೆ. ಯೇಸ್ಥವಿಷ್ಠಾಸ್ತಾನಗ್ನಯೇ ಸನಿಮತೇಽಷ್ಟಾಕಪಾಲಂ ನಿರ್ವಪೇತ್ । ಯೇ ಮಧ್ಯಮಾಸ್ತಾನ್ ವಿಷ್ಣವೇ ಶಿಪಿವಿಷ್ಟಾಯ ಶೃತೇ ಚರುಮ್ । ಯೇಽಣಿಷ್ಠಾಸ್ತಾನಿನ್ದ್ರಾಯ ಪ್ರದಾತ್ರೇ ದಧ್ನಶ್ಚರುಮ್ ॥ ಇದು ಪಶುಕಾಮವಾಕ್ಯವು. ವಾಕ್ಯದ ಛಾಯೆಯು ಸಮವಾಗಿದ್ದರೂ ಇದು ಬೇರೊಂದು ಯಾಗದ ವಿಧಿ; ಅದೇ ಕರ್ಮವಲ್ಲ–ಎಂದು ನಿಶ್ಚಯಿಸಿದೆ. ಜೈ. ೬–೫–೨, ೬–೫–೫ ಇವುಗಳ ಭಾಷ್ಯವನ್ನು ನೋಡಿ. ಇದರಂತೆಯೇ ಇಲ್ಲಿಯೂ ಬೇರೆಬೇರೆಯ ಉಪಾಸನೆಗಳೆಂದು ನಿಶ್ಚಯಿಸಬೇಕು ಎಂದು ಅಭಿಪ್ರಾಯ.

ಒಂದರ ಗುಣವನ್ನು ಮತ್ತೊಂದು (ಉಪಾಸನೆಯಲ್ಲಿ) ಉಪಸಂಹಾರವನ್ನು ಮಾಡುವದೂ[1] ಇಲ್ಲ. (ಇದು) ಹೇಗೋ ಇದರಂತೆ ಶಾಖಾಂತರದಲ್ಲಿರುವ ಈ ಜಾತಿಯ ಉಪಾಸನೆಗಳಲ್ಲಿಯೂ (ಉಪಾಸನೆಯು ಬೇರೆ, ಗುಣೋಪಸಂಹಾರವೂ ಇಲ್ಲ).

**ಸಂಜ್ಞಾತಶ್ಚೇತ್ತದುಕ್ತಮಸ್ತಿ ತು ತದಪಿ ॥ ೮ ॥**

೮. ಸಂಜ್ಞೆಯಿಂದ (ಒಂದೇ ವಿದ್ಯೆ) ಎಂದರೆ ಅದನ್ನು ಹೇಳಿಯಾಗಿದೆ, ಅದೂ (ಅಲ್ಲಿ) ಇದ್ದೇ ಇದೆ.

## ಉದ್ಗೀಥವಿದ್ಯೆ ಎಂಬ ಹೆಸರಿನಿಂದ ಒಂದು ವಿದ್ಯೆಯಾಗಲಾರದು

(ಭಾಷ್ಯ)

೩೩೦. ಅಥೋಚ್ಯೇತ ಸಂಜ್ಞೈಕತ್ವಾತ್ ವಿದ್ಯೈಕತ್ವಮ್ ಅತ್ರ ನ್ಯಾಯ್ಯಮ್ । ಉದ್ಗೀಥವಿದ್ಯಾ ಇತಿ ಹಿ ಉಭಯತ್ರಾಪಿ ಏಕಾ ಸಂಜ್ಞಾ ಇತಿ । ತದಪಿ ನೋಪಪದ್ಯತೇ । ಉಕ್ತಂ ಹ್ಯೇತತ್ "ನ ವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್" (೩-೩-೭) ಇತಿ । ತದೇವ ಚಾತ್ರ ನ್ಯಾಯ್ಯತರಮ್ । ಶ್ರುತ್ಯಕ್ಷರಾನುಗತಂ ಹಿ ತತ್ । ಸಂಜ್ಞೈಕತ್ವಂ ತು ಶ್ರುತ್ಯಕ್ಷರಬಾಹ್ಯಮ್ ಉದ್ಗೀಥಶಬ್ದಮಾತ್ರಪ್ರಯೋಗಾತ್ ಲೌಕಿಕೈರ್ವ್ಯವಹರ್ತೃಭಿರುಪಚರ್ಯತೇ । ಅಸ್ತಿ ಚೈತತ್ ಸಂಜ್ಞೈಕತ್ವಂ ಪ್ರಸಿದ್ಧಭೇದೇಷ್ವಪಿ ಪರೋವರೀಯಸ್ತ್ವಾದ್ಯುಪಾಸನೇಷು ಉದ್ಗೀಥವಿದ್ಯಾ ಇತಿ । ತಥಾ ಪ್ರಸಿದ್ಧಭೇದಾನಾಮಪಿ ಅಗ್ನಿಹೋತ್ರದರ್ಶಪೂರ್ಣಮಾಸಾದೀನಾಂ ಕಾಠಕೈಕಗ್ರನ್ಥಪರಿಪಠಿತಾನಾಂ ಕಾಠಕಸಂಜ್ಞೈಕತ್ವಂ ದೃಶ್ಯತೇ । ತಥಾ ಇಹಾಪಿ ಭವಿಷ್ಯತಿ । ಯತ್ರ ತು ನಾಸ್ತಿ ಕಶ್ಚಿದೇವಂಜಾತೀಯಕೋ ಭೇದಹೇತುಃ, ತತ್ರ ಭವತು ಸಂಜ್ಞೈಕತ್ವಾತ್ ವಿದ್ಯೈಕತ್ವಮ್ । ಯಥಾಸಂವರ್ಗವಿದ್ಯಾದಿಷು ॥

(ಭಾಷ್ಯಾರ್ಥ)

ಇನ್ನು (ನೀವು) ಹೀಗೆನ್ನಬಹುದು: ಇಲ್ಲಿ ಸಂಜ್ಞೆಯು ಒಂದೇ ಆಗಿರುವದರಿಂದ ಒಂದೇ ವಿದ್ಯೆ ಎಂಬುದು ಯುಕ್ತವು. 'ಉದ್ಗೀಥವಿದ್ಯೆ' ಎಂದೇ ಅಲ್ಲವೆ, ಎರಡು ಕಡೆಯಲ್ಲಿಯೂ ಒಂದೇ ಹೆಸರಿದೆ ?

---

1. ಇಲ್ಲಿ ಒಂದು ಉಪಾಸನೆಯಲ್ಲಿ ಉದ್ಗೀಥಾವಯವವಾದ ಓಂಕಾರದಲ್ಲಿ ಪರಮಾತ್ಮದೃಷ್ಟಿಯನ್ನು ಅಧ್ಯಾಸಮಾಡಿ ಪರೋವರೀಯಸ್ತ್ವಾದಿಗುಣಗಳನ್ನು ಹೇಳಿದೆ ; ಇನ್ನೊಂದರಲ್ಲಿ ಹಿರಣ್ಯಶ್ಮಶ್ರುತ್ವಾದಿಗುಣವಿಶಿಷ್ಟವಾದ ಪರಮಾತ್ಮದೃಷ್ಟಿಯನ್ನು ಅದೇ ಅಕ್ಷರದಲ್ಲಿ ಅಧ್ಯಾಸಮಾಡಿ ಹೇಳಿದೆ. (ಈ ಉಪಾಸನೆಯ ವಿಚಾರವನ್ನು ೧-೧-೨೦ರಲ್ಲಿ ಮಾಡಿದೆ). ಆದರೂ ಇವೆರಡೂ ಬೇರೆಬೇರೆ ಉಪಾಸನೆಗಳೇ ; ಏಕೆಂದರೆ ಉದ್ಗೀಥದ ಓಂಕಾರವನ್ನೇ ಬೇರೆಬೇರೆ ಬಗೆಯಿಂದ ಉಪಾಸನೆಮಾಡಬೇಕೆಂಬುದೇ ಇಲ್ಲಿ ವಿವಕ್ಷಿತವಾಗಿದೆ.

ಅದೂ ಸರಿಹೋಗುವದಿಲ್ಲ. ಏಕೆಂದರೆ "ನ ವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್" (ಪ್ರಕ್ರಮವು ಬೇರೆಯಾಗಿರುವದರಿಂದ ಪರೋವರೀಯಸ್ತ್ವಾದಿಗಳಂತೆ ವಿದ್ಯೈಕತ್ವವಿಲ್ಲ) ಎಂಬುದನ್ನು (ಆಗಲೆ) ಹೇಳಿರುತ್ತೇವೆ. ಆದ್ದರಿಂದ ಇಲ್ಲಿ ಹೆಚ್ಚು ಯುಕ್ತವಾಗಿರುತ್ತದೆ; ಏಕೆಂದರೆ ಶ್ರುತಿಯ ಅಕ್ಷರಕ್ಕೆ ಅದು ಅನುಗುಣವಾಗಿರುತ್ತದೆ. ಒಂದೇ ಹೆಸರಿದೆ ಎಂಬುದಾದರೊ, ಶ್ರುತ್ಯಕ್ಷರಕ್ಕೆ ಹೊಂದಿಕೊಂಡಿದೆ; ಉದ್ಗೀಥವೆಂಬ ಶಬ್ದಮಾತ್ರದ ಪ್ರಯೋಗದಿಂದ ಲೋಕದ ವ್ಯವಹರ್ತೃಗಳು ಹಾಗೆಂದು) ಕರೆಯುತ್ತಾರೆ. ಇದಲ್ಲದೆ ಭೇದವು ಪ್ರಸಿದ್ಧವಾಗಿರುವ ಪರೋವರೀಯಸ್ತ್ವಾದ್ಯುಪಾಸನೆಗಳಲ್ಲಿಯೂ 'ಉದ್ಗೀಥವಿದ್ಯಾ' ಎಂಬೀ ನಾಮೈಕತ್ವವು ಇದ್ದೇ ಇದೆ. ಮತ್ತು ಭೇದವು ಪ್ರಸಿದ್ಧವಾಗಿರುವ ಅಗ್ನಿಹೋತ್ರದರ್ಶಪೌರ್ಣಮಾಸಾದಿಗಳನ್ನು ಕೂಡ ಕಾಠಕವೆಂಬ ಒಂದೇ ಗ್ರಂಥದಲ್ಲಿ ಪಠಿತವಾಗಿರುವದರಿಂದ **ಕಾಠಕವೆಂದು** ಕರೆಯುವದು ಕಂಡುಬರುತ್ತದೆ[1] ಆದರಂತೆ ಇಲ್ಲಿಯೂ ಆಗಬಹುದಾಗಿದೆ.

ಆದರೆ ಎಲ್ಲಿ ಈ ಜಾತಿಯ ಭೇದಹೇತುವು[2] ಇಲ್ಲವೋ ಅಲ್ಲಿ ಸಂಜ್ಞೈಕತ್ವದಿಂದ ವಿದ್ಯೆಯು ಒಂದೇ ಎಂದು ಆಗಲಿ; ಉದಾಹರಣೆಗೆ ಸಂವರ್ಗವಿದ್ಯಾದಿಗಳಲ್ಲಿ (ವಿದ್ಯೈಕತ್ವವು ಆಗಬಹುದು).[3]

## ೪. ವ್ಯಾಪ್ತ್ಯಧಿಕರಣ

(ಛಾಂ. ೧–೧–೧ರಲ್ಲಿ ಉದ್ಗೀಥವೆಂಬುದು ಓಂಕಾರವಿಶೇಷಣವು)

**ವ್ಯಾಪ್ತೇಶ್ಚ ಸಮಞ್ಜಸಮ್ ॥ ೯ ॥**

೯. ವ್ಯಾಪ್ತಿಯಿಂದ (ವಿಶೇಷಣವೇ) ಸಮಂಜಸವು.

### ಓಮಿತ್ಯೇದಕ್ಷರಮುದ್ಗೀಥಮ್ ಎಂಬಲ್ಲಿ ಸಂಶಯಪೂರ್ವಪಕ್ಷಗಳು

( ಭಾಷ್ಯ )

೩೩೧. "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" (ಛಾಂ. ೧–೧–೧)

1. ಇದು 'ಅಸ್ತಿ ತು ತದಪಿ' ಎಂಬುದಕ್ಕೆ ಇನ್ನೊಂದು ವ್ಯಾಖ್ಯಾನ. ಕಾಠಕವೆಂದು ಕರೆದಮಾತ್ರದಿಂದ ಎಲ್ಲವೂ ಒಂದೇ ಕರ್ಮವೆಂದಾಗಲಾರದಷ್ಟೆ; ಆದರಂತೆ ಇಲ್ಲಿಯೂ ಒಂದೇ ಉಪಾಸನೆಯಲ್ಲ ಎಂದರ್ಥ. ಜೈ. ಸೂ. ೩–೪–೧೧ರ ಭಾಷ್ಯವನ್ನು ನೋಡಿ.

2. ವಿವಕ್ಷಿತಾರ್ಥವೇ ಬೇರೆಯಾಗಿದೆ, ಉಪಕ್ರಮಪ್ರಕಾರವು ಬೇರೆ– ಎಂಬ ಹೇತು.

3. ಮುಖ್ಯಪ್ರಾಣ, ವಾಯು– ಇವರಲ್ಲಿ ಮಿಕ್ಕ ಪ್ರಾಣಗಳೂ ದೇವತೆಗಳೂ ಅಪ್ತವಾಗುತ್ತಾರೆಂದು ಬೇರೆಬೇರೆಯ ಶಾಖೆಗಳಲ್ಲಿ ಹೇಳಿರುವಲ್ಲಿ ಸಂವರ್ಗವಿದ್ಯೆ ಎಂಬ ಸಂಜ್ಞೈಕತ್ವದಿಂದ ವಿದ್ಯೆಯು ಒಂದೇ ಆಗಬಹುದು; ಹೀಗೆಯೇ ಪಂಚಾಗ್ನಿವಿದ್ಯಾದಿಗಳನ್ನೂ ತಿಳಿಯಬೇಕು. ಇವನ್ನೇ ಮೊದಲನೆಯ ಅಧಿಕರಣದಲ್ಲಿ ಸರ್ವವೇದಾಂತಪ್ರತ್ಯಯವೆಂದು ಹೇಳಿದಾನೆ.

ಇತ್ಯತ್ರ ಅಕ್ಷರೋದ್ಗೀಥಶಬ್ದಯೋಃ ಸಾಮಾನಾಧಿಕರಣ್ಯೇ ಶ್ರೂಯಮಾಣೇ ಅಧ್ಯಾಸಾಪವಾದೈಕತ್ವವಿಶೇಷಣಪಕ್ಷಾಣಾಂ ಪ್ರತಿಭಾಸನಾತ್ ಕತಮೋಽತ್ರ ಪಕ್ಷೋ ನ್ಯಾಯ್ಯಃ ಸ್ಯಾತ್ ಇತಿ ವಿಚಾರಃ। ತತ್ರ ಅಧ್ಯಾಸೋ ನಾಮ ದ್ವಯೋರ್ವಸ್ತುನೋಃ ಅನಿವರ್ತಿತಾಯಾಮೇವ ಅನ್ಯತರಬುದ್ಧೌ ಅನ್ಯತರಬುದ್ಧಿರಧ್ಯಸ್ಯತೇ। ಯಸ್ಮಿನ್ ಇತರಬುದ್ಧಿರಧ್ಯಸ್ಯತೇ ಅನುವರ್ತತ ಏವ ತಸ್ಮಿನ್ ತದ್ಬುದ್ಧಿಃ ಅಧ್ಯಸ್ತೇತರಬುದ್ಧಾವಪಿ। ಯಥಾ ನಾಮ್ನಿ ಬ್ರಹ್ಮಬುದ್ಧೌ ಅಧ್ಯಸ್ಯಮಾನಾಯಾಮಪಿ ಅನುವರ್ತತ ಏವ ನಾಮಬುದ್ಧಿಃ ನ ಬ್ರಹ್ಮಬುದ್ಧ್ಯಾ ನಿವರ್ತತೇ। ಯಥಾ ವಾ ಪ್ರತಿಮಾದಿಷು ವಿಷ್ಣ್ವಾದಿಬುದ್ಧ್ಯಧ್ಯಾಸಃ। ಏವಮ್ ಇಹಾಪಿ ಅಕ್ಷರೇ ಉದ್ಗೀಥಬುದ್ಧಿರಧ್ಯಸ್ಯತೇ ಉದ್ಗೀಥೇ ವಾ ಅಕ್ಷರಬುದ್ಧಿರಿತಿ। ಅಪವಾದೋ ನಾಮ ಯತ್ರ ಕಸ್ಮಿಂಶ್ಚಿತ್ ವಸ್ತುನಿ ಪೂರ್ವನಿವಿಷ್ಟಾಯಾಂ ಮಿಥ್ಯಾಬುದ್ಧೌ ನಿಶ್ಚಿತಾಯಾಂ ಪಶ್ಚಾತ್ ಉಪಜಾಯಮಾನಾ ಯಥಾರ್ಥಾ ಬುದ್ಧಿಃ ಪೂರ್ವನಿವಿಷ್ಟಾಯಾಃ ಮಿಥ್ಯಾಬುದ್ಧೇರ್ನಿವರ್ತಿಕಾ ಭವತಿ। ಯಥಾ ದೇಹೇನ್ದ್ರಿಯಸಂಘಾತೇ ಆತ್ಮಬುದ್ಧಿಃ ಆತ್ಮನ್ಯೇವಾತ್ಮಬುದ್ಧ್ಯಾ ಪಶ್ಚಾತ್ ಭಾವಿನ್ಯಾ "ತತ್ತ್ವಮಸಿ" (ಛಾಂ ೬-೮-೭) ಇತ್ಯನಯಾ ಯಥಾರ್ಥಬುದ್ಧ್ಯಾ ನಿವರ್ತ್ಯತೇ। ಯಥಾ ವಾ ದಿಗ್ಭ್ರಾನ್ತಿಬುದ್ಧಿಃ ದಿಗ್ಯಾಥಾತ್ಮ್ಯಬುದ್ಧ್ಯಾ ನಿವರ್ತ್ಯತೇ। ಏವಮ್ ಇಹಾಪಿ ಅಕ್ಷರಬುದ್ಧ್ಯಾ ಉದ್ಗೀಥಬುದ್ಧಿರ್ನಿವರ್ತ್ಯತೇ, ಉದ್ಗೀಥಬುದ್ಧ್ಯಾ ವಾ ಅಕ್ಷರಬುದ್ಧಿಃ ಇತಿ। ಏಕತ್ವಂ ತು ಅಕ್ಷರೋದ್ಗೀಥಶಬ್ದಯೋಃ ಅನತಿರಿಕ್ತಾರ್ಥವೃತ್ತಿತ್ವಮ್। ಯಥಾ ದ್ವಿಜೋತ್ತಮೋ ಬ್ರಾಹ್ಮಣೋ ಭೂಮಿದೇವಃ ಇತಿ। ವಿಶೇಷಣಂ ಪುನಃ ಸರ್ವವೇದವ್ಯಾಪಿನಃ ಓಮಿತ್ಯೇತಸ್ಯ ಅಕ್ಷರಸ್ಯ ಗ್ರಹಣಪ್ರಸಙ್ಗೇ ಔದ್ಗಾತ್ರವಿಶೇಷಸ್ಯ ಸಮರ್ಪಣಮ್। ಯಥಾ 'ನೀಲಂ ಯದುತ್ಪಲಂ ತದಾನಯ' ಇತಿ। ಏವಮ್ ಇಹಾಪಿ 'ಉದ್ಗೀಥೋ ಯ ಓಂಕಾರಃ ತಮ್ ಉಪಾಸೀತ' ಇತಿ। ಏವಮೇತಸ್ಮಿನ್ ಸಾಮಾನಾಧಿಕರಣ್ಯವಾಕ್ಯೇ ವಿಮೃಶ್ಯಮಾನೇ ಏತೇ ಪಕ್ಷಾಃ ಪ್ರತಿಭಾನ್ತಿ। ತತ್ರ ಅನ್ಯತಮನಿರ್ಧಾರಣಕಾರಣಾಭಾವಾತ್ ಅನಿರ್ಧಾರಣಪ್ರಾಪ್ತೌ ॥

(ಭಾಷ್ಯಾರ್ಥ)

"ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" (ಛಾಂ. ೧-೧-೧) ಎಂಬಲ್ಲಿ ಅಕ್ಷರ, ಉದ್ಗೀಥ– ಎಂಬ ಶಬ್ದಗಳಿಗೆ ಸಾಮಾನಾಧಿಕರಣ್ಯವು ಶ್ರುತಿಯಲ್ಲಿರುವದರಿಂದ ಅಧ್ಯಾಸ, ಅಪವಾದ, ಏಕತ್ವ, ವಿಶೇಷಣ– ಎಂಬ ಪಕ್ಷಗಳು ತೋರುವದರಿಂದ (ಇವುಗಳಲ್ಲಿ) ಯಾವ ಪಕ್ಷವು ಯುಕ್ತವಾಗುವದು ? ಎಂದು ವಿಚಾರ ಮಾಡಲಾಗುವದು.[1]

---

1. ಹಿಂದೆ "ಓಮಿತ್ಯೇತದಕ್ಷರಮುದ್ಗೀಥಮ್" ಎಂಬಲ್ಲಿ ಉದ್ಗೀಥಾವಯವವಾದ ಓಂಕಾರವು ಎಂಬ ಅರ್ಥವನ್ನು ಸಿದ್ಧವಾಗಿಟ್ಟುಕೊಂಡು ಎರಡು ಉಪಾಸನೆಗಳೂ ಬೇರೆ ಬೇರೆ ಎಂದು ಹೇಳಿತ್ತು ; ಈಗ ಅದನ್ನೇ ಸಾಧಿಸಿ ತೋರಿಸಲಾಗುತ್ತದೆ.

ಇಲ್ಲಿ ಅಧ್ಯಾಸವೆಂದರೆ, ಎರಡು ವಸ್ತುಗಳಲ್ಲಿ ಒಂದರ ಬುದ್ಧಿಯು ತೊಲಗದೆ ಇರುವಾಗಲೇ ಮತ್ತೊಂದರ ಬುದ್ಧಿಯನ್ನು ಮೇಲೆ ಹಾಕುತ್ತಾರೆ ; ಯಾವದರಲ್ಲಿ ಮತ್ತೊಂದರ ಬುದ್ಧಿಯನ್ನು ಅಧ್ಯಾಸಮಾಡುವರೋ ಅದರಲ್ಲಿ ಅದರ ಬುದ್ಧಿಯು ಅಧ್ಯಸ್ತವಾದ ಮತ್ತೊಂದರ ಬುದ್ಧಿಯು ಇರುವಾಗಲೂ ಅನುವರ್ತಿಸಿಕೊಂಡೇ ಇರುತ್ತದೆ. ಹೇಗೆಂದರೆ, ನಾಮದಲ್ಲಿ ಬ್ರಹ್ಮಬುದ್ಧಿಯನ್ನು ಅಧ್ಯಾಸ ಮಾಡಿರುವಲ್ಲಿಯೂ ನಾಮಬುದ್ಧಿಯು ಅನುವರ್ತಿಸಿಕೊಂಡೇ ಇರುವದೇ ಹೊರತು ಬ್ರಹ್ಮಬುದ್ಧಿಯಿಂದ ತೊಲಗುವದಿಲ್ಲ. ಅಥವಾ **ಪ್ರತಿಮಾದಿಗಳಲ್ಲಿ ವಿಷ್ಣ್ವಾದಿಬುದ್ಧಿಗಳ ಅಧ್ಯಾಸವು ಹೇಗೋ ಹಾಗೆಯೇ ಇಲ್ಲಿಯೂ ಅಕ್ಷರದಲ್ಲಿ ಉದ್ಗೀಥಬುದ್ಧಿಯನ್ನು ಅಧ್ಯಾಸಮಾಡಬೇಕು, ಅಥವಾ ಉದ್ಗೀಥದಲ್ಲಿ ಅಕ್ಷರಬುದ್ಧಿಯನ್ನು (ಅಧ್ಯಾಸಮಾಡಬೇಕು ಎಂದು ಅರ್ಥ).**

ಅಪವಾದವೆಂದರೆ ಎಲ್ಲಿ ಯಾವದಾದರೊಂದು ವಸ್ತುವಿನಲ್ಲಿ ಮೊದಲು ನಿಶ್ಚಿತವಾದ ಮಿಥ್ಯಾಬುದ್ಧಿಯಿರುವಲ್ಲಿ ಆ ಬಳಿಕ ಉಂಟಾಗುವ ಯಥಾರ್ಥಬುದ್ಧಿಯು ಮೊದಲು ಇಟ್ಟುಕೊಂಡಿದ್ದ ಮಿಥ್ಯಾಬುದ್ಧಿಯನ್ನು ತೊಲಗಿಸುವದಾಗುತ್ತದೆಯೋ (ಅದು). ಹೇಗೆಂದರೆ, ಹೇಗೆ ದೇಹೇಂದ್ರಿಯಸಂಘಾತದಲ್ಲಿ ತಾನೆಂಬ ಬುದ್ಧಿಯು ಆ ಬಳಿಕ ಉಂಟಾಗುವ 'ತತ್ತ್ವಮಸಿ" (ಅದೇ ನೀನಾಗಿರುವೆ) ಎಂಬ ಆತ್ಮನಲ್ಲಿಯೇ ತಾನೆಂಬ ಯಥಾರ್ಥಬುದ್ಧಿಯಿಂದ ತೊಲಗುತ್ತದೆಯೋ, ಅಥವಾ ಹೇಗೆ ದಿಗ್ಭ್ರಾಂತಿಬುದ್ಧಿಯು ದಿಕ್ಕುಗಳ ತತ್ತ್ವವನ್ನು (ತಿಳಿದುಕೊಂಡ) ಬುದ್ಧಿಯಿಂದ ತೊಲಗುತ್ತದೆಯೋ, ಹಾಗೆ ಇಲ್ಲಿಯೂ ಅಕ್ಷರಬುದ್ಧಿಯಿಂದ ಉದ್ಗೀಥಬುದ್ಧಿಯು ತೊಲಗುತ್ತದೆ. ಅಥವಾ ಉದ್ಗೀಥಬುದ್ಧಿಯಿಂದ ಅಕ್ಷರಬುದ್ಧಿಯು (ತೊಲಗುತ್ತದೆ ಎಂದರ್ಥ. )

ಏಕತ್ವವೆಂದರಂತೂ ಅಕ್ಷರ, ಉದ್ಗೀಥ– ಎಂಬ ಶಬ್ದಗಳಿಗೆ ಬೇರೆಯಲ್ಲದ ಅರ್ಥದಲ್ಲಿ ವೃತ್ತಿಯಿರುವದು. ಹೇಗೆಂದರೆ ದ್ವಿಜೋತ್ತಮನು, ಬ್ರಾಹ್ಮಣನು, ಭೂಮಿದೇವನು (ಎಂಬಲ್ಲಿ ಏಕತ್ವವಿದೆ).

ಇನ್ನು ವಿಶೇಷಣವಾದರೊ, ಸರ್ವವೇದಗಳನ್ನೂ ವ್ಯಾಪಿಸಿಕೊಂಡಿರುವ ಓಮ್ ಎಂಬೀ ಅಕ್ಷರವನ್ನು ಗ್ರಹಿಸುವ ಪ್ರಸಕ್ತಿಯುಂಟಾಗಲಾಗಿ ಔದ್ಗಾತ್ರ(ವಾದ ಓಂಕಾರ)ವಿಶೇಷವನ್ನು ತಿಳಿಸುವದು. ಹೇಗೆ 'ಕಪ್ಪಾಗಿರುವ ನೈದಲೆಯಿದೆಯಲ್ಲ, ಅದನ್ನು ತೆಗೆದುಕೊಂಡುಬಾ' ಎನ್ನುವರೋ ಹಾಗೆ ಇಲ್ಲಿಯೂ ಉದ್ಗೀಥವಾದ ಓಂಕಾರವಿದೆಯಲ್ಲ, ಅದನ್ನು ಉಪಾಸನೆಮಾಡಬೇಕು (ಎಂದರ್ಥ).

ಹೀಗೆ ಈ ಸಾಮಾನಾಧಿಕರಣ್ಯವಾಕ್ಯವನ್ನು ವಿಮರ್ಶೆಮಾಡಲಾಗಿ ಈ (ನಾಲ್ಕು) ಪಕ್ಷಗಳು ತೋರುತ್ತಿರುವವು. ಇವುಗಳಲ್ಲಿ ಯಾವದೋ ಒಂದೆಂದು

ಗೊತ್ತುಪಡಿಸುವದಕ್ಕೆ ಕಾರಣವಿಲ್ಲದ್ದರಿಂದ ಅನಿರ್ಧಾರಣೆ ( ಎಂಬ ಪೂರ್ವ ಪಕ್ಷವು ) ಬಂದೊದಗಲಾಗಿ —

## ಸಿದ್ಧಾಂತ: ವಿಶೇಷಣಪಕ್ಷವೇ ಇಲ್ಲಿ ಸರಿಯಾದದ್ದು

(ಭಾಷ್ಯ)

೩೩೨. ಇದಮುಚ್ಯತೇ ' ವ್ಯಾಪ್ತೇಶ್ಚ ಸಮಞ್ಜಸಮ್' ಇತಿ । ಚ ಶಬ್ದೋಽಯಂ ತುಶಬ್ದಸ್ಥಾನನಿವೇಶೀ ಪಕ್ಷತ್ರಯವ್ಯಾವರ್ತನಪ್ರಯೋಜನಃ। ತದಿಹ ತ್ರಯಃ ಪಕ್ಷಾಃ ಸಾವದ್ಯಾ ಇತಿ ಪರ್ಯುದಸ್ಯನ್ತೇ । ವಿಶೇಷಣಪಕ್ಷ ಏವ ಏಕೋ ನಿರವದ್ಯ ಇತ್ಯುಪಾದೀಯತೇ। ತತ್ರ ಅಧ್ಯಾಸೇ ತಾವದ್ ಯಾ ಬುದ್ಧಿಃ ಇತರತ್ರ ಅಧ್ಯಸ್ಯತೇ ತಚ್ಛಬ್ದಸ್ಯ ಲಕ್ಷಣಾವೃತ್ತಿತ್ವಂ ಪ್ರಸಜ್ಯೇತ, ತತ್ಫಲಂ ಚ ಕಲ್ಪ್ಯೇತ । ಶ್ರೂಯತ ಏವ ಫಲಮ್ "ಆಪಯಿತಾ ಹ ವೈ ಕಾಮಾನಾಂ ಭವತಿ" (ಛಾಂ. ೧-೧-೭) ಇತ್ಯಾದಿ ಇತಿ ಚೇತ್ । ನ। ತಸ್ಯ ಅನ್ಯಫಲತ್ವಾತ್ । ಆಪ್ತ್ಯಾದಿದೃಷ್ಟಿಫಲಂ ತತ್ ನೋದ್ಗೀಥಾಧ್ಯಾಸಫಲಮ್ । ಅಪವಾದೇಽಪಿ ಸಮಾನಃ ಫಲಾಭಾವಃ । ಮಿಥ್ಯಾಜ್ಞಾನನಿವೃತ್ತಿಃ ಫಲಮ್ ಇತಿ ಚೇತ್ । ನ। ಪುರುಷಾರ್ಥೋಪಯೋಗಾನವಗಮಾತ್ । ನ ಚ ಕದಾಚಿದಪಿ ಓಂಕಾರಾತ್ ಓಂಕಾರಬುದ್ಧಿರ್ನಿವರ್ತತೇ, ಉದ್ಗೀಥಾದ್ವಾ ಉದ್ಗೀಥಬುದ್ಧಿಃ । ನ ಚ ಇದಂ ವಾಕ್ಯಂ ವಸ್ತುತತ್ತ್ವಪ್ರತಿಪಾದನಪರಮ್ । ಉಪಾಸನಾವಿಧಿಪರತ್ವಾತ್ । ನಾಪ್ಯೇಕತ್ವಪಕ್ಷಃ ಸಂಗಚ್ಛತೇ। ನಿಷ್ಪ್ರಯೋಜನಂ ಹಿ ತದಾ ಶಬ್ದದ್ವಯೋಚ್ಚಾರಣಂ ಸ್ಯಾತ್ । ಏಕೇನೈವ ವಿವಕ್ಷಿತಾರ್ಥಸಮರ್ಪಣಾತ್ । ನ ಚ ಹೌತ್ರವಿಷಯೇ ಆಧ್ವರ್ಯವವಿಷಯೇ ವಾ ಅಕ್ಷರೇ ಓಂಕಾರಶಬ್ದವಾಚ್ಯೇ ಉದ್ಗೀಥಶಬ್ದಪ್ರಸಿದ್ಧಿರಸ್ತಿ । ನಾಪಿ ಸಕಲಾಯಾಂ ಸಾಮ್ನೋ ದ್ವಿತೀಯಾಯಾಂ ಭಕ್ತೌ ಉದ್ಗೀಥಶಬ್ದವಾಚ್ಯಾಯಾಮ್ ಓಂಕಾರಶಬ್ದಪ್ರಸಿದ್ಧಿಃ। ಯೇನ ಅನತಿರಿಕ್ತಾರ್ಥತಾ ಸ್ಯಾತ್ । ಪರಿಶೇಷಾತ್ ವಿಶೇಷಣಪಕ್ಷಃ ಪರಿಗೃಹ್ಯತೇ । ವ್ಯಾಪ್ತೇಃ ಸರ್ವವೇದಸಾಧಾರಣ್ಯಾತ್ । ಸರ್ವವ್ಯಾಪ್ಯಕ್ಷರಮ್ ಇಹ ಮಾ ಪ್ರಸಞ್ಜಿ ಇತ್ಯತಃ ಉದ್ಗೀಥಶಬ್ದೇನ ಅಕ್ಷರಂ ವಿಶೇಷ್ಯತೇ, ಕಥಂ ನಾಮ ಉದ್ಗೀಥಾವಯವಭೂತ ಓಂಕಾರೋ ಗೃಹ್ಯೇತ ಇತಿ ॥

(ಭಾಷ್ಯಾರ್ಥ)

ಈ (ಸಿದ್ಧಾಂತವನ್ನು) ಹೇಳುತ್ತೇವೆ. 'ವ್ಯಾಪ್ತೇಶ್ಚ ಸಮಞ್ಜಸಮ್'। ವ್ಯಾಪ್ತಿ ಇರುವದರಿಂದಲೇ ಸಮಂಜಸವಾಗಿದೆ. ಈ ಚಶಬ್ದವು ತುಶಬ್ದದ ಸ್ಥಾನದಲ್ಲಿ ಇದ್ದುಕೊಂಡಿರುತ್ತದೆ., ( ಇದಕ್ಕೆ ) ಮೂರು ಪಕ್ಷಗಳನ್ನು ತಳ್ಳಿಹಾಕುವದೇ ಪ್ರಯೋಜನವು. ಆದ್ದರಿಂದ ಇಲ್ಲಿ ಮೂರು ಪಕ್ಷಗಳನ್ನು ಸದೋಷವೆಂದು ತಿರಸ್ಕರಿಸಿದೆ ; ವಿಶೇಷಣಪಕ್ಷವೊಂದನ್ನೇ ನಿರ್ದೋಷವೆಂದು ತೆಗೆದುಕೊಂಡಿದೆ.

ಈ (ನಾಲ್ಕು ಪಕ್ಷಗಳಲ್ಲಿ) ಮೊದಲನೆಯದಾಗಿ ಅಧ್ಯಾಸದಲ್ಲಿ ಯಾವ ಬುದ್ಧಿಯನ್ನು ಇನ್ನೊಂದರಲ್ಲಿ ಅಧ್ಯಾಸಮಾಡಲಾಗುವದೋ ಅದರ ವಾಚಕಶಬ್ದವು ಲಕ್ಷಣಾವೃತ್ತಿಯುಳ್ಳದ್ದೆಂದು ಪ್ರಸಕ್ತವಾಗುವದು ;[1] ಅದಕ್ಕೆ ಫಲವನ್ನೂ ಕಲ್ಪಿಸಬೇಕಾಗುವದು.

(ಆಕ್ಷೇಪ):– "ಕಾಮಗಳನ್ನು ಪಡೆಯುವವನಾಗುತ್ತಾನೆ" (ಛಾಂ. ೧-೧-೭) ಎಂದುಮುಂತಾಗಿರುವ ಫಲವನ್ನು ಶ್ರುತಿಯಲ್ಲಿ ಹೇಳಿಯೇ ಇದೆಯಲ್ಲ ![2]

(ಪರಿಹಾರ):– ಹಾಗಲ್ಲ. ಏಕೆಂದರೆ ಅದು ಮತ್ತೊಂದರ ಫಲವು. (ಇದರ ವಿವರ): ಆಪ್ತಿಯೇ ಮುಂತಾದ ದೃಷ್ಟಿಯನ್ನು ಮಾಡಿದ್ದರ ಫಲವು,[3] ಉದ್ಗೀಥವನ್ನು ಅಧ್ಯಾಸಮಾಡಿದ ಫಲವಲ್ಲ.

ಅಪವಾದ(ಪಕ್ಷ)ದಲ್ಲಿಯೂ ಫಲವಿಲ್ಲವೆಂಬುದು ಸಮಾನವು.

(ಆಕ್ಷೇಪ):– ಮಿಥ್ಯಾಜ್ಞಾನದ ನಿವೃತ್ತಿಯೇ ಫಲವು.

(ಪರಿಹಾರ) :— ಹಾಗಲ್ಲ. ಏಕೆಂದರೆ (ಅದರಿಂದ) ಪುರುಷಾರ್ಥಕ್ಕೆ ಉಪಯೋಗವೇನೂ ಗೊತ್ತಾಗುವದಿಲ್ಲ.[4] ಇದಲ್ಲದೆ ಓಂಕಾರದಿಂದ ಓಂಕಾರ ಬುದ್ಧಿಯು ಎಂದಿಗೂ ನಿವೃತ್ತವಾಗುವದೆಂಬುದಿಲ್ಲ, ಉದ್ಗೀಥದಿಂದ ಉದ್ಗೀಥ ಬುದ್ಧಿಯೂ (ನಿವೃತ್ತವಾಗುವದೆಂಬುದಿಲ್ಲ)[5]. ಈ ವಾಕ್ಯವು ವಸ್ತುತತ್ತ್ವವನ್ನು ಪ್ರತಿಪಾದನೆಮಾಡುವದರಲ್ಲಿ ತಾತ್ಪರ್ಯವುಳ್ಳದ್ದೂ ಅಲ್ಲ ;

---

1. ಉದ್ಗೀಥಶಬ್ದಕ್ಕಾಗಲಿ ಅಕ್ಷರಶಬ್ದಕ್ಕಾಗಲಿ ಲಕ್ಷಣಾರ್ಥವನ್ನು ಕಲ್ಪಿಸಬೇಕಾಗುವದು ; ಮುಖ್ಯಾರ್ಥವನ್ನು ಬಿಡುವದಕ್ಕೆ ಕಾರಣವನ್ನೂ ಹೇಳಬೇಕಾಗುವದು ಎಂದರ್ಥ.

2. ಕಾಮಸಮೃದ್ಧಿಯನ್ನು ಇಲ್ಲಿ ಹೇಳಿದೆ.

3. ಸರ್ವಕಾಮಾಪ್ತಿ, ಸಮೃದ್ಧಿಗುಣ– ಎಂಬ ದೃಷ್ಟಿಗಳನ್ನು ಹಾಕಿದ್ದಕ್ಕೆ ಆ ಫಲವನ್ನು ಹೇಳಿದೆ ; ಅಕ್ಷರದಲ್ಲಿ ಉದ್ಗೀಥಾಧ್ಯಾಸವನ್ನು ಮಾಡಿದ್ದಕ್ಕೆ ಅದು ಫಲವಲ್ಲ.

4. "ತತ್ತ್ವಮಸಿ" ಮುಂತಾದ ವಾಕ್ಯದಲ್ಲಿ ಮಿಥ್ಯಾಜ್ಞಾನದ ನಿವೃತ್ತಿಯಾಗುವದರಿಂದ ಸಂಸಾರಾನರ್ಥದ ನಿವೃತ್ತಿಯಾಗುವದೆಂಬ ಪುರುಷಾರ್ಥದ ಉಪಯೋಗವಾಗುತ್ತದೆ. ಇಲ್ಲಿ ಹಾಗಿಲ್ಲ.

5. ವಾಕ್ಯದಿಂದ ಮಿಥ್ಯಾಬುದ್ಧಿಯು ನಿವೃತ್ತವಾಗುತ್ತದೆ ಎಂಬುದೇ ಅಪವಾದದ ಫಲವು. ಆದರೆ ಇಲ್ಲಿ ವಾಕ್ಯಶ್ರವಣವಾದ ಮೇಲೂ ಓಂಕಾರವನ್ನು ಓಂಕಾರವೆಂದೇ ತಿಳಿಯುತ್ತೇವೆ ; ಆದ್ದರಿಂದ ಓಂಕಾರಬುದ್ಧಿಯು ಮಿಥ್ಯಾಬುದ್ಧಿಯಲ್ಲ, ಹೀಗೆಯೇ ಉದ್ಗೀಥಬುದ್ಧಿಯೂ ಮಿಥ್ಯಾಬುದ್ಧಿಯಲ್ಲ. ಆದ್ದರಿಂದ ಇಲ್ಲಿ ಓಂಕಾರಾಧ್ಯಾಸವೂ ಇಲ್ಲ, ಉದ್ಗೀಥಾಧ್ಯಾಸವೂ ಇಲ್ಲ.

ಏಕೆಂದರೆ ಉಪಾಸನೆಯನ್ನು ವಿಧಿಸುವದರಲ್ಲಿ (ಅದಕ್ಕೆ) ತಾತ್ಪರ್ಯವಿದೆ.[1]

ಏಕತ್ವಪಕ್ಷವೂ (ಇಲ್ಲಿ) ಹೊಂದುವದಿಲ್ಲ. ; ಹೇಗೆಂದರೆ ಆಗ ಎರಡು ಶಬ್ದಗಳನ್ನು ಉಚ್ಚರಿಸುವದು ಪ್ರಯೋಜನರಹಿತವಾಗುವದು ; ಏಕೆಂದರೆ ಒಂದರಿಂದಲೇ ವಿವಕ್ಷಿತಾರ್ಥವು ಸಮರ್ಪಿತವಾಗುತ್ತದೆ.[2] ಹೌತ್ರವಿಷಯವಾದ ಅಥವಾ ಆಧ್ವರ್ಯವವಿಷಯವಾದ ಓಂಕಾರಶಬ್ದವಾಚ್ಯವಾದ ಅಕ್ಷರದಲ್ಲಿ ಉದ್ಗೀಥಶಬ್ದಪ್ರಸಿದ್ಧಿಯೂ ಇಲ್ಲ ; ಉದ್ಗೀಥಶಬ್ದವಾಚ್ಯವಾದ ಸಾಮದ ಎರಡನೆಯ ಒಟ್ಟುಭಕ್ತಿಯಲ್ಲಿ ಓಂಕಾರಶಬ್ದದ ಪ್ರಸಿದ್ಧಿಯೂ ಇಲ್ಲ ; ಹಾಗಿದ್ದರೆ ಏಕಾರ್ಥತ್ವವು ಆಗಬಹುದಾಗಿತ್ತು.[3]

ಪರಿಶೇಷದಿಂದ ವಿಶೇಷಣಪಕ್ಷವನ್ನು ಪರಿಗ್ರಹಿಸಬೇಕಾಗಿದೆ. ಏಕೆಂದರೆ ವ್ಯಾಪ್ತಿಯಿದೆ. ಎಲ್ಲಾ ವೇದಕ್ಕೂ ಸಾಧಾರಣವಾಗಿರುತ್ತದೆ. ಎಲ್ಲಾ ವೇದಕ್ಕೂ ವ್ಯಾಪಿಸಿರುವ ಅಕ್ಷರವು ಇಲ್ಲಿ ಪ್ರಸಕ್ತವಾಗದೆ ಇರಲೆಂಬೀ ಕಾರಣದಿಂದ ಉದ್ಗೀಥಶಬ್ದದಿಂದ ಅಕ್ಷರವನ್ನು ವಿಶೇಷಿಸಿರುತ್ತದೆ. ಉದ್ಗೀಥಾವಯವವಾಗಿರುವ ಓಂಕಾರವನ್ನೇ ಹೇಗಾದರೂ ಗ್ರಹಿಸಲಿ ಎಂಬುದೇ (ಅಭಿಪ್ರಾಯ).

## ಇಲ್ಲಿ ಲಕ್ಷಣೆಯಾದರೂ ದೋಷವಿಲ್ಲ

(ಭಾಷ್ಯ)

೩೩೩. ನನು ಅಸ್ಮಿನ್ನಪಿ ಪಕ್ಷೇ ಸಮಾನಾ ಲಕ್ಷಣಾ । ಉದ್ಗೀಥಶಬ್ದಸ್ಯ ಅವಯವಲಕ್ಷಣಾರ್ಥತ್ವಾತ್ । ಸತ್ಯಮ್ ಏವಮೇತತ್ । ಲಕ್ಷಣಾಯಾಮಪಿ ಸಂನಿಕರ್ಷವಿಪ್ರಕರ್ಷೌ ಭವತ ಏವ । ಅಧ್ಯಾಸಪಕ್ಷೇ ಹಿ ಅರ್ಥಾನ್ತರಬುದ್ಧಿಃ ಅರ್ಥಾನ್ತರೇ ನಿಕ್ಷಿಪ್ಯತೇ ಇತಿ ವಿಪ್ರಕೃಷ್ಟಾ ಲಕ್ಷಣಾ । ವಿಶೇಷಣಪಕ್ಷೇ ತು ಅವಯವಿವಚನೇನ ಶಬ್ದೇನ ಅವಯವಃ ಸಮರ್ಪ್ಯತೇ ಇತಿ ಸಂನಿಕೃಷ್ಟಾ । ಸಮುದಾಯೇಷು ಹಿ ಪ್ರವೃತ್ತಾಃ ಶಬ್ದಾಃ ಅವಯವೇಷ್ವಪಿ ಪ್ರವರ್ತಮಾನಾ ದೃಷ್ಟಾಃ ಪಟಗ್ರಾಮಾದಿಷು । ಅತಶ್ಚ ವ್ಯಾಪ್ತೇರ್ಹೇತೋಃ ಓಮಿತ್ಯೇತದಕ್ಷರಮಿತ್ಯೇತಸ್ಯ ಉದ್ಗೀಥಮ್ ಇತ್ಯೇತದ್ ವಿಶೇಷಣಮ್ ಇತಿ ಸಮಞ್ಜಸಮೇತತ್ । ನಿರವದ್ಯಮ್ ಇತ್ಯರ್ಥಃ ॥

---

1. ವಿಧಿಪರನಾದ ವಾಕ್ಯವು ಮಿಥ್ಯಾಬುದ್ಧಿಯನ್ನು ನಿವೃತ್ತಿಮಾಡುವದೆಂಬುದಕ್ಕೆ ಪ್ರಮಾಣವಿಲ್ಲ.

2. ಹಸ್ತಃ, ಕರಃ ಎಂದು ಒಂದೇ ವಾಕ್ಯದಲ್ಲಿ ಪ್ರಯೋಗಿಸುವದಿಲ್ಲ. ಏಕೆಂದರೆ ಹಸ್ತಃ ಎಂಬ ಒಂದೇ ಮಾತಿನಿಂದ ವಿವಕ್ಷಿತವಾದ ಕೈಯೆಂಬ ವಸ್ತುವನ್ನು ತಿಳಿಸುವದಕ್ಕಾಗುತ್ತದೆ.

3. ಇಲ್ಲಿ ಓಂಕಾರೋದ್ಗೀಥಶಬ್ದಗಳಿಗೆ ಪರ್ಯಾಯಗಳೆಂದು ಪ್ರಸಿದ್ಧಿಯೂ ಇಲ್ಲ.

(ಭಾಷ್ಯಾರ್ಥ)

(ಆಕ್ಷೇಪ) :– ಈ ಪಕ್ಷದಲ್ಲಿಯೂ ಲಕ್ಷಣೆ(ಯು ಪ್ರಸಕ್ತವಾಗುವ ದೆಂಬುದು) ಸಮಾನವಲ್ಲವೆ ? ಏಕೆಂದರೆ (ಇಲ್ಲಿ) ಉದ್ಗೀಥಶಬ್ದವನ್ನು ಅವಯುವ ದಲ್ಲಿ ಲಕ್ಷಣೆಯಿಂದ (ಪ್ರಯೋಗಿಸಿದೆಯಲ್ಲ) !

(ಸಮಾಧಾನ) :— ಇದು ಹೀಗೆಯೇ, ನಿಜ. **ಲಕ್ಷಣೆಯಲ್ಲಿಯೂ ಹತ್ತಿರ, ದೂರ ಎಂಬ ಭೇದಗಳು ಇದ್ದೇ ಇರುತ್ತವೆ.** ಹೇಗೆಂದರೆ ಅಧ್ಯಾಸಪಕ್ಷದಲ್ಲಿ ಒಂದು ವಸ್ತುವಿನ ಬುದ್ಧಿಯನ್ನು ಮತ್ತೊಂದರಲ್ಲಿ ಹಾಕಲಾಗುತ್ತದೆಯಾದ್ದರಿಂದ ಲಕ್ಷಣೆಯು ವಿಪ್ರಕೃಷ್ಟವಾಯಿತು ; ವಿಶೇಷಣಪಕ್ಷದಲ್ಲಿಯೋ ಎಂದರೆ ಅವಯವಿಯನ್ನು ಹೇಳುವ ಶಬ್ದದಿಂದ ಅವಯವವನ್ನು ತಿಳಿಸಿದಂತಾಗಿದೆಯಾಗಿ ಲಕ್ಷಣೆಯು ಸಂನಿಕೃಷ್ಟವಾಗಿದೆ.[1] ಸಮುದಾಯಗಳಲ್ಲಿ ಪ್ರವರ್ತಿಸುವ ಶಬ್ದಗಳು ಅವಯವಗಳಲ್ಲಿಯೂ ಪ್ರವರ್ತಿಸುವದು ಬಟ್ಟೆ, ಊರು— ಮುಂತಾದವುಗಳಲ್ಲಿ ಕಂಡುಬಂದಿದೆ.[2] ಆದ್ದರಿಂದಲೂ ವ್ಯಾಪ್ತಿ ಎಂಬ ಹೇತುವಿನಿಂದ 'ಓಮಿತ್ಯೇತದಕ್ಷರಮ್' (ಓಮೆಂಬೀ ಅಕ್ಷರವನ್ನು) ಎಂಬುದಕ್ಕೆ 'ಉದ್ಗೀಥಮ್' ಎಂಬಿದು ವಿಶೇಷಣವು ಎಂಬಿದೇ ಸಮಂಜಸವು ನಿರ್ದೇಶವು ಎಂದರ್ಥ.

## ೫. ಸರ್ವಾಭೇದಾಧಿಕರಣ

(ಪ್ರಾಣಸಂವಾದದಲ್ಲಿ ಕಂಡುಬರುವ ವಸಿಷ್ಠತ್ವಾದಿಗಳ ಉಪಸಂಹಾರ)

**ಸರ್ವಾಭೇದಾದನ್ಯತ್ರೇಮೇ ॥ ೧೦ ॥**

೧೦. ಎಲ್ಲವೂ ಅಭಿನ್ನವಾಗಿರುವದರಿಂದ ಈ (ಗುಣಗಳು). ಇನ್ನೊಂದೆಡೆಯಲ್ಲಿ(ಯೂ ಉಪಸಂಹಾರವಾಗತಕ್ಕವು).

---

1. ಓಂಕಾರದಲ್ಲಿ ಉದ್ಗೀಥದೃಷ್ಟಿಯನ್ನು ಹಾಕುವದು ಯಾವದಾದರೊಂದು ಸಾದೃಶ್ಯದಿಂದ ಹಾಕಬೇಕಾಗಿರುವದರಿಂದ ಇದು ದೂರದ ಲಕ್ಷಣೆ, ಓಂಕಾರವೆಂಬ ಅವಯವದಲ್ಲಿ ಸಾಮದ ಭಕ್ತಿಯೆಂಬ ಅವಯವಿವಾಚಕಶಬ್ದವನ್ನುಪಯೋಗಿಸುವದು ಅವಯವವನ್ನು ಅವಯವಿಶಬ್ದದಿಂದ ಹೇಳುವ ಪ್ರಸಿದ್ಧಿಯಿರುವದರಿಂದ ಹತ್ತಿರ. ಇಲ್ಲಿ ಗೌಣೀವೃತ್ತಿಯನ್ನೇ ಲಕ್ಷಣಾವಯವವಾಗಿರುವದರಿಂದ ಲಕ್ಷಣೆ ಎಂದಿದೆ. ಅಧ್ಯಾಸಪಕ್ಷದಲ್ಲಿರುವ ಗೌಣವೃತ್ತಿಗಿಂತ ಲಕ್ಷಣಾವೃತ್ತಿಯು ಪ್ರಬಲವಾಗಿರುವದರಿಂದ ಅಧ್ಯಾಸಪಕ್ಷಕ್ಕಿಂತ ವಿಶೇಷಣಪಕ್ಷವೇ ಮೇಲು ಎಂದು ಭಾಮತೀವ್ಯಾಖ್ಯಾನ.

2. ಬಟ್ಟೆಯ ಒಂದು ಭಾಗವನ್ನೂ ಬಟ್ಟೆ ಎನ್ನುವರು ; ಊರಿನ ಒಂದು ಭಾಗವನ್ನೂ ಊರು ಎನ್ನುವರು ಎಂದರ್ಥ.

## ಪ್ರಾಣಸಂವಾದದಲ್ಲಿ ಸಂಶಯಪೂರ್ವಪಕ್ಷಗಳು

(ಭಾಷ್ಯ)

೩೩೪. ವಾಜಿನಾಂ ಛನ್ದೋಗಾನಾಂ ಚ ಪ್ರಾಣಸಂವಾದೇ ಶ್ರೈಷ್ಠ್ಯ ಗುಣಾನ್ವಿತಸ್ಯ ಪ್ರಾಣಸ್ಯ ಉಪಾಸ್ಯತ್ವಮ್ ಉಕ್ತಮ್ । ವಾಗಾದಯೋಽಪಿ ಹಿ ತತ್ರ ವಸಿಷ್ಠತ್ವಾದಿಗುಣಾನ್ವಿತಾ ಉಕ್ತಾಃ । ತೇ ಚ ಗುಣಾಃ ಪ್ರಾಣೇ ಪುನಃ ಪ್ರತ್ಯರ್ಪಿತಾಃ- "ಯದ್ವಾ ಅಹಂ ವಸಿಷ್ಠಾಸ್ಮಿ ತ್ವಂ ತದ್ವಸಿಷ್ಠೋಽಸಿ" (ಬೃ. ೬-೧-೧೪) ಇತ್ಯಾದಿನಾ । ಅನ್ಯೇಷಾಮಪಿ ತು ಶಾಖಿನಾಂ ಕೌಷೀತಕಿ ಪ್ರಭೃತೀನಾಂ ಪ್ರಾಣಸಂವಾದೇಷು "ಅಥಾತೋ ನಿಃಶ್ರೇಯಸಾದಾನಮ್" "ಏತಾ ಹ ವೈ ದೇವತಾ ಅಹಂಶ್ರೇಯಸೇ ವಿವದಮಾನಾಃ" (ಕೌ. ೨-೧೪) ಇತ್ಯೇವಂಜಾತೀಯಕೇಷು ಪ್ರಾಣಸ್ಯ ಶ್ರೈಷ್ಠ್ಯಮುಕ್ತಮ್, ನ ತು ಇಮೇ ವಸಿಷ್ಠತ್ವಾದಯೋ ಗುಣಾಃ ಉಕ್ತಾಃ । ತತ್ರ ಸಂಶಯಃ । ಕಿಮಿಮೇ ವಸಿಷ್ಠತ್ವಾದಯೋ ಗುಣಾಃ ಕ್ವಚಿತ್ ಉಕ್ತಾಃ ಅನ್ಯತ್ರಾಪಿ ಅಸ್ಯೇರನ್ ಉತ ನಾಸ್ಯೇರನ್ ಇತಿ । ತತ್ರ ಪ್ರಾಪ್ತಂ ತಾವನ್ನಾಸ್ಯೇರನ್ ಇತಿ । ಕುತಃ ? ಏವಂ ಶಬ್ದಸಂಯೋಗಾತ್ । " ಅಥೋ ಯ ಏವಂ ವಿದ್ವಾನ್ ಪ್ರಾಣೇ ನಿಃಶ್ರೇಯಸಂ ವಿದಿತ್ವಾ"[1] (ಕೌ. ೨-೧೪) ಇತಿ ತತ್ರ ತತ್ರ ಏವಂಶಬ್ದೇನ ವೇದ್ಯಂ ವಸ್ತು ನಿವೇದ್ಯತೇ । ಏವಂಶಬ್ದಶ್ಚ ಸಂನಿಹಿತಾವಲಮ್ಬನೋ ನ ಶಾಖಾನ್ತರಪಠಿತಮ್ ಏವಂಜಾತೀಯಕಂ ಗುಣಜಾತಂ ಶಕ್ನೋತಿ ನಿವೇದಯಿತುಮ್ । ತಸ್ಮಾತ್ ಸ್ವಪ್ರಕರಣಸ್ಥೈರೇವ ಗುಣೈಃ ನಿರಾಕಾಙ್ಕ್ಷತ್ವಮ್ ಇತಿ ॥

(ಭಾಷ್ಯಾರ್ಥ)

ವಾಜಸನೇಯಿಗಳ ಮತ್ತು ಛಂದೋಗರುಗಳ (ಶಾಖೆಯ) ಪ್ರಾಣಸಂವಾದದಲ್ಲಿ[2] ಶ್ರೇಷ್ಠತ್ವಗುಣದಿಂದ ಕೂಡಿದ ಪ್ರಾಣನನ್ನು ಉಪಾಸನೆಮಾಡಬೇಕೆಂದು ಹೇಳಿದೆ. ವಾಗಾದಿಗಳನ್ನು ಅಲ್ಲಿ ವಸಿಷ್ಠತ್ವಾದಿಗುಣಗಳಿಂದ ಕೂಡಿರುವದೆಂದು ಹೇಳಿದೆ; ಆ ಗುಣಗಳನ್ನು "ನಾನು ವಸಿಷ್ಠನಾಗಿರುವೆನಲ್ಲ, ನೀನೇ ಹಾಗೆ ವಸಿಷ್ಠನಾಗಿರುವೆ" (ಬೃ. ೬-೧-೧೪)[3] ಎಂದುಮುಂತಾಗಿ - ಪ್ರಾಣನಲ್ಲಿ ಮತ್ತೆ

---

1. "ತದ್ದೇವಾಃ ಪ್ರಾಣೇ ನಿಃಶ್ರೇಯಸಂ ವಿಚಿನ್ತ್ಯ" ಎಂದು ನಿ ॥ ಪಾಠ.

2. ಛಾಂದೋಗ್ಯ ಆರನೆಯ ಅಧ್ಯಾಯಪ್ರಾರಂಭದಲ್ಲಿ ಪ್ರಾಣಸಂವಾದವಿದೆ ; ಬೃಹದಾರಣ್ಯಕದ ಅಧ್ಯಾಯದ ಪ್ರಾರಂಭದಲ್ಲಿಯೂ ಇದೇ ವಿದ್ಯೆಯಿದೆ. ಪ್ರಾಣಸಂವಾದವು ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ.

3. ಪ್ರಾಣಕ್ಕೆ ಬಲಿಯನ್ನು ಅರ್ಪಿಸುವದಕ್ಕೆಂದು ವಾಕ್ಕು ಹೇಳಿದ ವಾಕ್ಯವಿದು. ವಾಕ್ಕಿನಲ್ಲಿರುವ ವಸಿಷ್ಠತ್ವಗುಣವು ನಿಜವಾಗಿ ಪ್ರಾಣನದೇಎಂದರ್ಥ.

ಪ್ರತ್ಯರ್ಪಣೆಮಾಡಲಾಗಿರುತ್ತದೆ. ಆದರೆ ಕೌಷೀತಕಿ ಮುಂತಾದ ಬೇರೆಯ ಶಾಖೆಯವರ "ಇನ್ನು ಆದ್ದರಿಂದ ನಿಃಶ್ರೇಯಸವನ್ನು ಸ್ವೀಕರಿಸುವವು" (ಕೌ. ೨-೧೪), "ಈ ದೇವತೆಗಳು ನಾನೇ ಹೆಚ್ಚೆಂದು ತೋರಿಸುವದಕ್ಕೆ ವಿವಾದ ಮಾಡುತ್ತಾ......" (೨-೧೪)-ಎಂಬೀ ಜಾತಿಯ ಪ್ರಾಣಸಂವಾದ(ವಾಕ್ಯ)ಗಳಲ್ಲಿ ಪ್ರಾಣದ ಶ್ರೈಷ್ಠ್ಯವನ್ನು ಹೇಳಿದೆ, ಆದರೆ ಈ ವಸಿಷ್ಠತ್ವವೇ ಮುಂತಾದವು ಗಳನ್ನು ಹೇಳಿಲ್ಲ. ಅಲ್ಲಿ ಸಂಶಯವೇನೆಂದರೆ ಒಂದು ಕಡೆಯಲ್ಲಿ ಹೇಳಿರುವ ಈ ವಸಿಷ್ಠತ್ವಾದಿಗುಣಗಳನ್ನು ಇನ್ನೊಂದು ಕಡೆಯಲ್ಲಿಯೂ ಹಾಕಿಕೊಳ್ಳಬೇಕೆ. ಅಥವಾ ಹಾಕಿಕೊಳ್ಳಬಾರದೆ?

ಇಲ್ಲಿ ಹಾಕಿಕೊಳ್ಳಬಾರದು ಎಂಬ (ಪೂರ್ವಪಕ್ಷವು) ಮೊದಲು ಬಂದೊದಗುತ್ತದೆ. ಏಕೆ? ಎಂದರೆ ಏವಂ (ಹೀಗೆ) ಎಂಬ ಶಬ್ದವನ್ನು ಪ್ರಯೋಗಿಸಿರುವದರಿಂದ. "ಆದ್ದರಿಂದ ಯಾವನು ಹೀಗೆ ತಿಳಿದುಕೊಂಡವನಾಗಿ ಪ್ರಾಣನಲ್ಲಿಯೇ ನಿಃಶ್ರೇಯಸವನ್ನು ಅರಿತುಕೊಂಡು....." (ಕೌ. ೨-೧೪) ಎಂದು ಅಲ್ಲಲ್ಲಿ ಏವಂ ಶಬ್ದದಿಂದಲೇ ವೇದ್ಯವಸ್ತುವನ್ನು ತಿಳಿಸಿಕೊಟ್ಟಿರುತ್ತದೆ. ಏವಂಶಬ್ದಕ್ಕೆ ಹತ್ತಿರವಿರುವದೇ ವಿಷಯವು; (ಆದ್ದರಿಂದ ಅದು) ಶಾಖಾಂತರದಲ್ಲಿ ಹೇಳಿರುವ ಈ ಬಗೆಯಗುಣಜಾತವನ್ನು ತಿಳಿಸುವದಕ್ಕೆ ಶಕ್ತವಲ್ಲ. ಆದ್ದರಿಂದ ತಮ್ಮತಮ್ಮ ಪ್ರಕರಣದಲ್ಲಿರುವ ಗುಣಗಳಿಂದಲೇ ನಿರಾಕಾಂಕ್ಷೆಯಾಗುತ್ತದೆ.

## ಸಿದ್ಧಾಂತ: ವಿಜ್ಞಾನವು ಅಭಿನ್ನವಾಗಿರುವದರಿಂದ ಗುಣಗಳನ್ನು ಸೇರಿಸಿಕೊಳ್ಳಬೇಕು

(ಭಾಷ್ಯ)

೩೩೫. ಏವಂ ಪ್ರಾಪ್ತೇ ಪ್ರತ್ಯಾಹ। ಅಸ್ಯೇರನ್ ಇಮೇ ಗುಣಾಃ ಕ್ವಚಿದುಕ್ತಾ ವಸಿಷ್ಠತ್ವಾದಯಃ ಅನ್ಯತ್ರಾಪಿ। ಕುತಃ ? ಸರ್ವಾಭೇದಾತ್। ಸರ್ವತ್ರೈವ ಹಿ ತದೇವ ಏಕಂ ಪ್ರಾಣವಿಜ್ಞಾನಮ್ ಅಭಿನ್ನಂ ಪ್ರತ್ಯಭಿಜ್ಞಾಯತೇ । ಪ್ರಾಣಸಂವಾದಾದಿಸಾರೂಪ್ಯಾತ್। ಅಭೇದೇ ಚ ವಿಜ್ಞಾನಸ್ಯ ಕಥಮ್ ಇಮೇ ಗುಣಾಃ ಕ್ವಚಿದುಕ್ತಾಃ ಅನ್ಯತ್ರ ನಾಸ್ಯೇರನ್? ನನು ಏವಂ ಶಬ್ದಸ್ತತ್ರ ತತ್ರ ಭೇದೇನ ಏವಂಜಾತೀಯಕಂ ಗುಣಜಾತಂ ವೇದ್ಯತ್ವಾಯ ಸಮರ್ಪಯತಿ ಇತ್ಯುಕ್ತಮ್ । ಅತ್ರೋಚ್ಯತೇ। ಯದ್ಯಪಿ ಕೌಷೀತಕಿಬ್ರಾಹ್ಮಣಗತೇನ ಏವಂಶಬ್ದೇನ ವಾಜಸನೇಯಿಬ್ರಾಹ್ಮಣಗತಂ ಗುಣಜಾತಮ್ ಅಸಂಶಬ್ದಿತಮ್, ಅಸಂನಿಹಿತತ್ವಾತ್ । ತಥಾಪಿ ತಸ್ಮಿನ್ನೇವ ವಿಜ್ಞಾನೇ ವಾಜಸನೇಯಿಬ್ರಾಹ್ಮಣಗತೇನ ಏವಂಶಬ್ದೇನ ತತ್ ಸಂಶಬ್ದಿತಮ್ ಇತಿ ನ ಪರಶಾಖಾಗತಮಪಿ ಅಭಿನ್ನವಿಜ್ಞಾನಾವರುದ್ಧಂ ಗುಣಜಾತಂ ಸ್ವಶಾಖಾಗತಾತ್ ವಿಶಿಷ್ಯತೇ। ನ ಹ್ಯೇವಂ

ಸಹ ಶ್ರುತಹಾನಿಃ ಅಶ್ರುತಕಲ್ಪನಾ ವಾ ಭವತಿ। ಏಕಸ್ಯಾಮಪಿ ಹಿ ಶಾಖಾಯಾಂ ಶ್ರುತಾ ಗುಣಾಃ ಶ್ರುತಾ ಏವ ಸರ್ವತ್ರ ಭವನ್ತಿ। ಗುಣವತೋ ಭೇದಾಭಾವಾತ್; ನ ಹಿ ದೇವದತ್ತಃ ಶೌರ್ಯಾದಿಗುಣತ್ವೇನ ಸ್ವದೇಶೇ ಪ್ರಸಿದ್ಧಃ ದೇಶಾನ್ತರಂ ಗತಸ್ತದ್ದೇಶ್ಯೈಃ ಅವಿಭಾವಿತಶೌರ್ಯಾದಿಗುಣೋಽಪಿ ಅತದ್ಗುಣೋ ಭವತಿ। ಯಥಾ ಚ ತತ್ರ ಪರಿಚಯವಿಶೇಷಾತ್ ದೇಶಾನ್ತರೇಽಪಿ ದೇವದತ್ತಗುಣಾಃ ವಿಭಾವ್ಯನ್ತೇ, ಏವಮ್ ಅಭಿಯೋಗವಿಶೇಷಾತ್ ಶಾಖಾನ್ತರೇಽಪಿ ಉಪಾಸ್ಯ ಗುಣಾಃ ಶಾಖಾನ್ತರೇಽಪಿ ಅಧ್ಯೇರನ್। ತಸ್ಮಾತ್ ಏಕಪ್ರಧಾನಸಂಬದ್ಧಾ ಧರ್ಮಾಃ ಏಕತ್ರಾಪಿ ಉಚ್ಯಮಾನಾಃ ಸರ್ವತ್ರೈವ ಉಪಸಂಹರ್ತವ್ಯಾ ಇತಿ॥

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ ಪ್ರತ್ಯುತ್ತರವನ್ನು ಹೇಳು ತ್ತಾರೆ. ಒಂದು ಕಡೆಯಲ್ಲಿ ಹೇಳಿರುವ ಈ ವಸಿಷ್ಠತ್ವಾದಿಗುಣಗಳನ್ನು ಮತ್ತೊಂದು ಕಡೆಯಲ್ಲಿಯೂ ಹಾಕಿಕೊಳ್ಳಬೇಕು. ಏಕೆ? ಎಂದರೆ 'ಎಲ್ಲವೂ ಅಭಿನ್ನವಾಗಿರುವದರಿಂದ'. ಎಲ್ಲೆಲ್ಲಿಯೂ ಅದೇ ಪ್ರಾಣವಿಜ್ಞಾನವು ಒಂದೇ, ಅಭಿನ್ನವೆಂದು ತಿಳಿಯಬರುತ್ತದೆ. ಏಕೆಂದರೆ ಪ್ರಾಣಸಂವಾದಾದಿಗಳ ಸಾರೂಪ್ಯ ವಿದೆ. ವಿಜ್ಞಾನವು (ಹೀಗೆ) ಒಂದೇ ಆಗಿರುವಲ್ಲಿ ಈ ಒಂದು ಕಡೆಯಲ್ಲಿ ಹೇಳಿರುವ ಈ ಗುಣಗಳನ್ನು ಹೇಗೆತಾನೆ ಮತ್ತೊಂದು ಕಡೆ ಹಾಕಿಕೊಳ್ಳದೆ ಇರಲಾದೀತು?

(ಆಕ್ಷೇಪ):– ಅಲ್ಲಲ್ಲಿರುವ ಏವಮ್ ಎಂಬ ಮಾತು ಈ ಜಾತಿಯ ಗುಣ ಜಾತವನ್ನು ಬೇರೆಯೆಂದು ಉಪಾಸನೆಮಾಡಬೇಕೆಂದು ತಿಳಿಸುತ್ತದೆ ಎಂದು ಹೇಳಿದ್ದೆವಲ್ಲ!

(ಪರಿಹಾರ):– ಇದಕ್ಕೆ ಹೇಳುತ್ತೇವೆ. ಕೌಷೀತಕಿಬ್ರಾಹ್ಮಣದಲ್ಲಿರುವ ಏವಂಶಬ್ದದಿಂದ ವಾಜಸನೇಯಬ್ರಾಹ್ಮಣದಲ್ಲಿರುವ ಗುಣಜಾತವು ಸಮೀಪ ದಲ್ಲಿರದಿರುವದರಿಂದ ಉಕ್ತವಾಗಿಲ್ಲವಾದರೂ ಅದೇ ವಿಜ್ಞಾನದಲ್ಲಿ ವಾಜಸ ನೇಯಿಬ್ರಾಹ್ಮಣದಲ್ಲಿರುವ ಏವಂಶಬ್ದದಿಂದ ಅದು ಉಕ್ತವಾಗಿರುತ್ತದೆಯಾದ್ದ ರಿಂದ ಮತ್ತೊಂದು ಶಾಖೆಯಲ್ಲಿರುವದಾದರೂ ಅಭಿನ್ನವಾದ ವಿಜ್ಞಾನದಲ್ಲಿ ಸೇರಿಕೊಂಡಿರುವ ಗುಣಜಾತವು ಸ್ವಶಾಖೆಯಲ್ಲಿರುವ (ಗುಣಜಾತ)ಕ್ಕಿಂತ ಬೇರೆಯೆನಿಸಲಾರದು. ಹೀಗಾದರೆ ಶ್ರುತಿಹಾನಿಯಾಗಲಿ ಅಶ್ರುತಕಲ್ಪನೆ ಯಾಗಲಿ ಆಗುವದೂ ಇಲ್ಲ; ಹೇಗೆಂದರೆ ಒಂದು ಶಾಖೆಯಲ್ಲಿ ಶ್ರುತವಾಗಿರುವ ಗುಣಗಳುಕೂಡ ಎಲ್ಲೆಲ್ಲಿಯೂ ಶ್ರುತವಾಗಿದ್ದಂತೆಯೇ ಆಗಿರುತ್ತವೆ; ಏಕೆಂದರೆ ಗುಣವಂತ (ಪ್ರಾಣವಸ್ತುವು) ಬೇರೆಯಾಗಿರುವದಿಲ್ಲ. ದೇವದತ್ತನು ಶೌರ್ಯಾದಿ

ಗುಣಗಳುಳ್ಳವನೆಂದು ತನ್ನ ದೇಶದಲ್ಲಿ ಪ್ರಸಿದ್ಧನಾಗಿರುವವನು ದೇಶಾಂತರಕ್ಕೆ ಹೋದರೆ ಆ ದೇಶದವರಿಗೆ (ಅವನ) ಶೌರ್ಯಾದಿಗುಣಗಳು ತಿಳಿಯಬಂದಿಲ್ಲವಾದರೂ ಆ ಗುಣಗಳಿಲ್ಲದವನಾಗುವದಿಲ್ಲವಷ್ಟೆ ? (ಆ ದೃಷ್ಟಾಂತ)ದಲ್ಲಿ ಪರಿಚಯವಿಶೇಷದಿಂದ ದೇಶಾಂತರದಲ್ಲಿಯೂ ದೇವದತ್ತಗುಣಗಳು ತಿಳಿಯಬರುವದೋ ಹಾಗೆ (ಇಲ್ಲಿಯೂ) ಒಂದು ಶಾಖೆಯಲ್ಲಿ ಉಪನ್ಯಾಸವಾಗಿರುವ ಗುಣಗಳನ್ನು ಮತ್ತೊಂದು ಶಾಖೆಯಲ್ಲಿಯೂ ಸಂಬಂಧವಿಶೇಷದಿಂದ ಹಾಕಬಹುದಾಗುತ್ತದೆ. **ಆದ್ದರಿಂದ ಏಕಪ್ರಧಾನ(ವಸ್ತು)ವಿಗೆ ಸಂಬದ್ಧವಾಗಿರುವ ಧರ್ಮಗಳನ್ನು ಒಂದೇ ಕಡೆಯಲ್ಲಿ ಹೇಳಿದ್ದರೂ ಎಲ್ಲೆಲ್ಲಿಯೂ ಉಪಸಂಹಾರಮಾಡಿಕೊಳ್ಳಬೇಕು.**

## ೬. ಆನಂದಾದ್ಯಧಿಕರಣ (ಸೂ. ೧೧–೧೩)

(ಬ್ರಹ್ಮಧರ್ಮಗಳಾದ ಆನಂದಾದಿಗಳನ್ನು ಎಲ್ಲಾ ಕಡೆಗೂ ಸೇರಿಸಬೇಕು)

**ಆನನ್ದಾದಯಃ ಪ್ರಧಾನಸ್ಯ ॥ ೧೧ ॥**

೧೧. ಪ್ರಧಾನದ ಆನಂದಾದಿಗಳನ್ನು (ಎಲ್ಲೆಲ್ಲಿಯೂ ಸೇರಿಸಿ ತಿಳಿಯಬೇಕು).

## ಬ್ರಹ್ಮಸ್ವರೂಪವನ್ನು ಹೇಳುವ ಧರ್ಮಗಳು ಸಾರ್ವತ್ರಿಕ

(ಭಾಷ್ಯ)

೩೩೬. ಅಥ ಬ್ರಹ್ಮಸ್ವರೂಪಪ್ರತಿಪಾದನಪರಾಸು ಶ್ರುತಿಷು ಆನನ್ದರೂಪತ್ವಮ್, ವಿಜ್ಞಾನಘನತ್ವಮ್, ಸರ್ವಗತತ್ವಮ್, ಸರ್ವಾತ್ಮತ್ವಮ್– ಇತ್ಯೇವಂಜಾತೀಯಕಾ ಬ್ರಹ್ಮಣೋ ಧರ್ಮಾ ಕ್ವಚಿತ್ ಕೇಚಿತ್ ಶ್ರೂಯನ್ತೇ। ತೇಷು ಸಂಶಯಃ। ಕಿಮಾನನ್ದಾದಯೋ ಬ್ರಹ್ಮಧರ್ಮಾ ಯತ್ರ ಯಾವನ್ತಃ ತಾವನ್ತ ಏವ ತತ್ರ ಪ್ರತಿಪತ್ತವ್ಯಾಃ, ಕಿಂ ವಾ ಸರ್ವೇ ಸರ್ವತ್ರೇತಿ। ತತ್ರ ಯಥಾ ಶ್ರುತಿವಿಭಾಗಂ ಧರ್ಮಪ್ರತಿಪತ್ತೌ ಪ್ರಾಪ್ತಾಯಾಮ್, ಇದಮುಚ್ಯತೇ 'ಆನನ್ದಾದಯಃ ಪ್ರಧಾನಸ್ಯ' ಬ್ರಹ್ಮಣೋ ಧರ್ಮಾಃ ಸರ್ವೇ ಸರ್ವತ್ರ ಪ್ರತಿಪತ್ತವ್ಯಾಃ। ಕಸ್ಮಾತ್ ? ಸರ್ವಾಭೇದಾದೇವ। ಸರ್ವತ್ರ ಹಿ ತದೇವೈಕಂ ಪ್ರಧಾನಂ ವಿಶೇಷ್ಯಂ ಬ್ರಹ್ಮ ನ ಭಿದ್ಯತೇ। ತಸ್ಮಾತ್ ಸಾರ್ವತ್ರಿಕತ್ವಂ ಬ್ರಹ್ಮಧರ್ಮಾಣಾಮ್, ತೇನೈವ ಪೂರ್ವಾಧಿಕರಣೋಪೇತೇನ ದೇವದತ್ತಶೌರ್ಯಾದಿನಿದರ್ಶನೇನ ॥

(ಭಾಷ್ಯಾರ್ಥ)

ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವದರಲ್ಲಿ ತಾತ್ಪರ್ಯವುಳ್ಳ ಶ್ರುತಿಗಳಲ್ಲಿ ಆನಂದರೂಪವಾಗಿರುವದು, ವಿಜ್ಞಾನಘನವಾಗಿರುವದು, ಸರ್ವಗತವಾಗಿರುವದು, ಸರ್ವಾತ್ಮವಾಗಿರುವದು– ಎಂಬೀ ಜಾತಿಯ ಬ್ರಹ್ಮಧರ್ಮಗಳಲ್ಲಿ[1] ಕೆಲವು ಒಂದೊಂದು ಕಡೆಯಲ್ಲಿ ಶ್ರುತವಾಗಿರುತ್ತದೆ. ಅವುಗಳಲ್ಲಿ **ಸಂಶಯವು** ವೇನೆಂದರೆ ಆನಂದಾದಿಬ್ರಹ್ಮಧರ್ಮಗಳು ಎಲ್ಲಿ ಎಷ್ಟು ಶ್ರುತವಾಗಿರುವವೋ ಅಷ್ಟೇ ಅಲ್ಲಿ ತಿಳಿಯತಕ್ಕದ್ದೋ, ಅಥವಾ ಎಲ್ಲವನ್ನೂ ಎಲ್ಲಾ ಕಡೆಯಲ್ಲಿಯೂ ತಿಳಿಯಬೇಕೊ ?

ಇಲ್ಲಿ ಆಯಾ ಶ್ರುತಿಯಲ್ಲಿ ವಿಂಗಡಿಸಿ ಹೇಳಿರುವಂತೆ ಧರ್ಮಗಳನ್ನು ಅರಿಯಬೇಕೆಂದು (ಪೂರ್ವಪಕ್ಷವು) ಬಂದೊದಗಲಾಗಿ[2] ಹೇಳುತ್ತಾರೆ. "ಆನಂದಾದಯಃ ಪ್ರಧಾನಸ್ಯ" (ಆನಂದಾದಿಗಳು ಪ್ರಧಾನದ ಧರ್ಮಗಳು) –ಬ್ರಹ್ಮದ ಧರ್ಮಗಳನ್ನು ಎಲ್ಲವನ್ನೂ ಎಲ್ಲಾ ಕಡೆಯಲ್ಲಿಯೂ ತಿಳಿಯಬೇಕು. ಏಕೆ ? ಎಂದರೆ ಸರ್ವಾಭೇದವಿರುವದರಿಂದಲೇ ; ಎಲ್ಲೆಲ್ಲಿಯೂ ಪ್ರಧಾನವು ವಿಶೇಷ್ಯವಾದದ್ದು ಅದೇ ಒಂದೇ ಬ್ರಹ್ಮವೇ, ಬೇರೆಯಾಗಿರುವದಿಲ್ಲ. ಆದ್ದರಿಂದ ಬ್ರಹ್ಮಧರ್ಮಗಳು ಸಾರ್ವತ್ರಿಕವಾಗಿರುತ್ತವೆ ಎಂದು ಅದೇ ಪೂರ್ವಾಧಿಕರಣದಲ್ಲಿ ಹೇಳಿರುವ ದೇವದತ್ತಶೌರ್ಯಾದಿದೃಷ್ಟಾಂತದಿಂದ (ಸಿದ್ಧವಾಗುತ್ತದೆ).

**ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ || ೧೨ ||**

೧೨. ಪ್ರಿಯಶಿರಸ್ತ್ವಾದಿಗಳು ಮಾತ್ರ ಪ್ರಾಪ್ತವಾಗುವದಿಲ್ಲ; ಏಕೆಂದರೆ ಭೇದವಾದರೆ ಹೆಚ್ಚುಕಡಿಮೆಯಾಗುತ್ತವೆ.

## ಪ್ರಿಯಶಿರಸ್ತ್ವಾದಿಗಳು ಉಪಸಂಹೃತವಾಗತಕ್ಕವಲ್ಲ

(ಭಾಷ್ಯ)

೩೩೭. ನನು ಏವಂ ಸತಿ ಪ್ರಿಯಶಿರಸ್ತ್ವಾದಯೋಽಪಿ ಧರ್ಮಾಃ

1. ಸತ್ಯತ್ವ, ಜ್ಞಾನತ್ವ, ಆನಂದತ್ವ, ಬ್ರಹ್ಮತ್ವ ಎಂಬ ಧರ್ಮಗಳೆಂಬ ನ್ಯಾಯನಿರ್ಣಯವ್ಯಾಖ್ಯಾನವು ಈ ಭಾಷ್ಯಕ್ಕೆ ಹೊಂದುವದಿಲ್ಲ.

2. ಈ ಪಾದದ ಸಂಬಂಧಭಾಷ್ಯದಲ್ಲಿ ಹೇಳಿರುವಂತೆ ಬ್ರಹ್ಮವಾಗಲಿ ಬ್ರಹ್ಮದ ಜ್ಞಾನವಾಗಲಿ ಬೇರೆಬೇರೆಯಾದರೆ ವೇದಾಂತಗಳು ಅಪ್ರಮಾಣವೇ ಆಗುವವಾದ್ದರಿಂದ ಇಲ್ಲಿ ಸಂಶಯಪೂರ್ವಪಕ್ಷಗಳಿಗೆ ಅವಕಾಶವೇ ಇಲ್ಲವಾದರೂ ಆಯಾ ಶ್ರುತಿಯಲ್ಲಿ ಹೇಳಿರುವಷ್ಟು ಧರ್ಮಗಳಿಂದಲೇ ಬ್ರಹ್ಮಜ್ಞಾನವಾಗುವದರಿಂದ ಮತ್ತೊಂದು ಶ್ರುತಿಯಲ್ಲಿ ಹೇಳಿರುವ ಧರ್ಮಗಳನ್ನು ಸೇರಿಸಿಕೊಳ್ಳಬೇಕೆ, ಬೇಡವೆ ? ಎಂಬ ಸಂಶಯವೂ ಸೇರಿಸಿಕೊಳ್ಳಬೇಕಾವದಿಲ್ಲ ಎಂದು ಪೂರ್ವಪಕ್ಷವೂ ಆಗಬಹುದಾಗಿದೆ. ಈ ಧರ್ಮಗಳು ವಾಸ್ತವಿಕವಾದ್ದರಿಂದ ತಾವೇ ಬಂದು ಜ್ಞಾನದಲ್ಲಿ ವಿಷಯವಾಗುತ್ತವೆ ಎಂದು ಸಿದ್ಧಾಂತ.

ಸರ್ವೇ ಸರ್ವತ್ರ ಸಂಕೀರ್ಯೇರನ್ । ತಥಾ ಹಿ ತೈತ್ತಿರೀಯಕೇ ಆನನ್ದಮಯಮಾತ್ಮಾನಂ ಪ್ರಕೃತ್ಯ ಆಮ್ನಾಯತೇ "ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ ಪ್ರಮೋದ ಉತ್ತರಃ ಪಕ್ಷಃ । ಆನನ್ದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ ।" (ತೈ. ೨-೫) ಇತಿ । ಅತ ಉತ್ತರಂ ಪಠತಿ । ("ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ") ಪ್ರಿಯಶಿರಸ್ತ್ವಾದೀನಾಂ ಧರ್ಮಾಣಾಂ ತೈತ್ತಿರೀಯಕ ಆಮ್ನಾತಾನಾಂ ನಾಸ್ತಿ ಅನ್ಯತ್ರ ಪ್ರಾಪ್ತಿಃ । ಯತ್ಕಾರಣಂ ಪ್ರಿಯಂ, ಮೋದಃ, ಪ್ರಮೋದಃ, ಆನನ್ದಃ ಇತ್ಯೇತೇ ಪರಸ್ಪರಾಪೇಕ್ಷಯಾ ಭೋಕ್ತ್ರನ್ತರಾಪೇಕ್ಷಯಾ ಚ ಉಪಚಿತಾಪಚಿತರೂಪಾ ಉಪಲಭ್ಯನ್ತೇ । ಉಪಚಯಾಪಚಯೌ ಚ ಸತಿ ಭೇದೇ ಸಂಭವತಃ । ನಿರ್ಭೇದಂ ತು ಬ್ರಹ್ಮ । "ಏಕಮೇವಾದ್ವಿತೀಯಮ್" (ಛಾಂ. ೬-೨-೧) ಇತ್ಯಾದಿ ಶ್ರುತಿಭ್ಯಃ । ನ ಚೈತೇ ಪ್ರಿಯಶಿರಸ್ತ್ವಾದಯೋ ಬ್ರಹ್ಮಧರ್ಮಾಃ, ಕೋಶಧರ್ಮಾಸ್ತ್ವೇತೇ ಇತ್ಯುಪದಿಷ್ಟಮಸ್ಮಾಭಿಃ "ಆನನ್ದಮಯೋಽಭ್ಯಾಸಾತ್" (೧-೧-೧೨) ಇತ್ಯತ್ರ । ಅಪಿ ಚ ಪರಸ್ಮಿನ್ ಬ್ರಹ್ಮಣಿ ಚಿತ್ತಾವತಾರೋಪಾಯಮಾತ್ರತ್ವೇನ ಏತೇ ಪರಿಕಲ್ಪ್ಯನ್ತೇ ನ ದ್ರಷ್ಟವ್ಯತ್ವೇನ । ಏವಮಪಿ ಸುತರಾಮನ್ಯತ್ರ ಅಪ್ರಾಪ್ತಿಃ ಪ್ರಿಯಶಿರಸ್ತ್ವಾದೀನಾಮ್ ॥

(ಭಾಷ್ಯಾರ್ಥ)

(ಆಕ್ಷೇಪ) :— ಹೀಗಾದರೆ ಪ್ರಿಯಶಿರಸ್ತ್ವವೇ ಮುಂತಾದ ಧರ್ಮಗಳು ಎಲ್ಲವೂ ಎಲ್ಲಾ ಕಡೆಯಲ್ಲಿಯೂ ಸಂಕರವಾಗುವವು. ಹೇಗೆಂದರೆ ತೈತ್ತಿರೀಯಕದಲ್ಲಿ ಆನಂದಮಯಾತ್ಮನನ್ನು ಪ್ರಕರಣದಲ್ಲಿ "ಅವನಿಗೆ ಪ್ರಿಯವೇ ಶಿರವು, ಮೋದವು ದಕ್ಷಿಣಪಕ್ಷವು, ಪ್ರಮೋದವು ಉತ್ತರಪಕ್ಷವು, ಆನಂದವು ಆತ್ಮನು, ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" (ತೈ. ೨-೫) ಎಂದು ಪಠಿತವಾಗಿರುತ್ತದೆಯಲ್ಲ!

(ಪರಿಹಾರ):— ಇದಕ್ಕೆ ಉತ್ತರವನ್ನು (ಸೂತ್ರಕಾರರು) ಹೇಳುತ್ತಾರೆ. (ಪ್ರಿಯಶಿರಸ್ತ್ವಾದಿಗಳ ಪ್ರಾಪ್ತಿಯಿಲ್ಲ; ಏಕೆಂದರೆ ಭೇದವಿದ್ದಲ್ಲಿ ಉಪಚಯಾಪಚಯಗಳಿರುವವು). ತೈತ್ತಿರೀಯಕದಲ್ಲಿ ಪಠಿತವಾಗಿರುವ ಪ್ರಿಯಶಿರಸ್ತ್ವಾದಿ ಧರ್ಮಗಳಿಗೆ ಮತ್ತೊಂದು ಕಡೆಯಲ್ಲಿ ಪ್ರಾಪ್ತಿಯಿಲ್ಲ. ಯಾವ ಕಾರಣದಿಂದಲೆಂದರೆ ಪ್ರಿಯ, ಮೋದ, ಪ್ರಮೋದ, ಆನಂದ– ಎಂಬಿವು ಒಂದಕ್ಕಿಂತ ಒಂದು ಮತ್ತು ಒಬ್ಬ ಭೋಕ್ತೃವಿಗಿಂತ (ಮತ್ತೊಬ್ಬನಲ್ಲಿ) ಹೆಚ್ಚುಕಡಿಮೆಯ ರೂಪದವಾಗಿ ಕಂಡುಬರುತ್ತವೆ. ಹೆಚ್ಚುಕಡಿಮೆಗಳು ಭೇದವಿದ್ದಲ್ಲಿ ಸಂಭವಿಸುತ್ತವೆ. ಆದರೆ ಬ್ರಹ್ಮವು ಯಾವ ಭೇದವೂ ಇಲ್ಲದ್ದು; ಏಕೆಂದರೆ "ಒಂದೇ ತನಗೆರಡ

ನೆಯದಿಲ್ಲದ್ದು" (ಛಾ.೦ ೬-೨-೧) ಮುಂತಾದ ಶ್ರುತಿಗಳಿವೆ.[1]

**ಈ ಪ್ರಿಯಶಿರಸ್ತ್ವಾದಿಗಳು ಬ್ರಹ್ಮಧರ್ಮಗಳಲ್ಲವೂ ಅಲ್ಲ; ಇವು ಕೋಶಧರ್ಮಗಳೇ ಎಂದು ನಾವು "ಆನನ್ದಮಯೋಽಭ್ಯಾಸಾತ್" (೧-೧-೧೨) ಎಂಬಲ್ಲಿ ತಿಳಿಸಿಕೊಟ್ಟಿರುತ್ತೇವೆ.[2] ಇದಲ್ಲದೆ ಪರಬ್ರಹ್ಮದಲ್ಲಿ ಚಿತ್ತವನ್ನು ಇಳಿಸುವದಕ್ಕೆ ಉಪಾಯವಾಗಿ ಮಾತ್ರವೇ ಇವುಗಳನ್ನು ಕಲ್ಪಿಸಿದೆಯೇ ಹೊರತು, ದ್ರಷ್ಟವ್ಯವೆಂದು ಹೇಳಿರುವದಿಲ್ಲ.[3] ಹೀಗೂ ಪ್ರಿಯಶಿರಸ್ತ್ವಾದಿಗಳು ಮತ್ತೊಂದು ಕಡೆಯಲ್ಲಿ ಸರ್ವಥಾ ಪ್ರಾಪ್ತವಾಗುವದಿಲ್ಲ.**

## ಉಪಾಸ್ಯಧರ್ಮಗಳು ಬೇರೆ ಉಪಾಸನೆಯಲ್ಲಿ ಉಪಸಂಹಾರ್ಯವಲ್ಲ

(ಭಾಷ್ಯ)

೩೩೮. ಬ್ರಹ್ಮಧರ್ಮಾನ್ ಸ್ತ್ವೇತಾನ್ ಕೃತ್ವಾ ನ್ಯಾಯಮಾತ್ರಮಿದಮಾಚಾರ್ಯೇಣ ಪ್ರದರ್ಶಿತಮ್ । 'ಪ್ರಿಯಶಿರಸ್ತ್ವಾದ್ಯಪ್ರಾಪ್ತಿಃ' ಇತಿ । ಸ ಚ ನ್ಯಾಯಃ ಅನ್ಯೇಷು ನಿಶ್ಚಿತೇಷು ಬ್ರಹ್ಮಧರ್ಮೇಷು ಉಪಾಸನಾಯ ಉಪದಿಶ್ಯಮಾನೇಷು ನೇತವ್ಯಃ ಸಂಯದ್ವಾಮಾದಿಷು, ಸತ್ಯಕಾಮಾದಿಷು ಚ । ತೇಷು ಹಿ ಸತ್ಯಪಿ ಉಪಾಸ್ಯಸ್ಯ ಬ್ರಹ್ಮಣ ಏಕತ್ವೇ ಪ್ರಕ್ರಮಭೇದಾತ್, ಉಪಾಸನಾಭೇದೇ ಸತಿ ನಾನ್ಯೋಽನ್ಯಧರ್ಮಾಣಾಮ್ ಅನ್ಯೋನ್ಯತ್ರ ಪ್ರಾಪ್ತಿಃ । ಯಥಾ ಚ ದ್ವೇ

1. ಆನಂದಾದಿಗಳು ಬ್ರಹ್ಮದ ಸ್ವರೂಪವಾಗಿರುವಂತೆ ಪ್ರಿಯಾದಿಗಳು ಅದರ ಸ್ವರೂಪಕ್ಕೆ ಸೇರಿಲ್ಲ. ಬ್ರಹ್ಮದಲ್ಲಿ ಕಲ್ಪಿತವಾಗಿರುವ ಭೋಕ್ತೃತ್ವಕ್ಕೆ ಇವು ಉಪಾಧಿಗಳಾಗಿರುತ್ತವೆ. ಆದ್ದರಿಂದ ಬ್ರಹ್ಮಸ್ವರೂಪವನ್ನು ತಿಳಿಯುವದಕ್ಕೆ ಈ ಪ್ರಿಯಾದಿಗಳು ಬೇಕಿಲ್ಲ, ಅಡ್ಡಿಯೂ ಆಗುತ್ತವೆ. ಆದಕಾರಣ ಇವನ್ನು ಎಲ್ಲಾ ಕಡೆಯಲ್ಲಿಯೂ ಸೇರಿಸಿಕೊಳ್ಳುವದಕ್ಕಿಲ್ಲ.

2. 'ಆನಂದಮಯವು ಬ್ರಹ್ಮ' ಎಂಬ ವೃತ್ತಿಕಾರರ ಮತದಲ್ಲಿ ಹಿಂದಿನ ಶಂಕೆಯುಂಟಾಗುತ್ತದೆ. ಆದರೆ ಆನಂದಮಯವು ಕೋಶವು, ಬ್ರಹ್ಮವು ಆನಂದಮಾತ್ರವಾಗಿದೆ -ಎಂಬ ಭಾಷ್ಯಕಾರರ ಮತದಲ್ಲಿ ಪ್ರಿಯಾದಿಗಳು ಬ್ರಹ್ಮಧರ್ಮವೇ ಅಲ್ಲವಾದ್ದರಿಂದ ನಿರ್ಭೇದವಾದ ಬ್ರಹ್ಮದ ಜ್ಞಾನಕ್ಕೆ ಅವುಗಳು ಬೇಕೇ ಇಲ್ಲ.

3. ಉಪಾಧಿಗಳ ಮೂಲಕ ಜ್ಞೇಯಬ್ರಹ್ಮವನ್ನು ಹೇಳಿದ್ದರೂ ಅದಕ್ಕೆ ಉಪಾಧಿಗಳ ಸಂಬಂಧವುಂಟೆಂಬ ವಿವಕ್ಷೆಯೇನೂ ಇಲ್ಲ. ಆನಂದಮಯಾಧಿಕರಣದ ಸಂಬಂಧಭಾಷ್ಯ (ಭಾ. ಭಾ. ೯೨)ವನ್ನು ನೋಡಿ. ದ್ರಷ್ಟವ್ಯವಲ್ಲ, ಎಂದರೆ ಉಪಾಸ್ಯವಲ್ಲ ಎಂದರ್ಥ. ಒಂದೇ ಉಪಾಸನೆಯೆಂದರೆ ಉಪಾಸ್ಯಧರ್ಮಗಳು ಉಪಸಂಹೃತವಾಗಬೇಕು ಎಂಬುದು ಮಾತ್ರ ಹಿಂದಿನ ಅಧಿಕರಣದಲ್ಲಿ ಸಿದ್ಧಾಂತವಾಗಿದೆ.

ನಾರ್ಯೌ ಏಕಂ ನೃಪತಿಮ್ ಉಪಾಸಾತೇ ಛತ್ರೇಣೈಕಾ, ಚಾಮರೇಣಾನ್ಯಾ । ತತ್ರ ಉಪಾಸ್ಯೈಕತ್ವೇಽಪಿ ಉಪಾಸನಾಭೇದೋ ಧರ್ಮವ್ಯವಸ್ಥಾ ಚ ಭವತಿ, ಏವಮ್ ಇಹಾಪೀತಿ । ಉಪಚಿತಾಪಚಿತಗುಣತ್ವಂ ಹಿ ಸತಿ ಭೇದವ್ಯವಹಾರೇ ಸಗುಣೇ ಬ್ರಹ್ಮಣಿ ಉಪಪದ್ಯತೇ ನ ನಿರ್ಗುಣೇ ಪರಸ್ಮಿನ್ ಬ್ರಹ್ಮಣಿ। ಅತೋ ನ ಸತ್ಯಕಾಮತ್ವಾದೀನಾಂ ಧರ್ಮಾಣಾಂ ಕ್ವಚಿಚ್ಛ್ರುತಾನಾಂ ಸರ್ವತ್ರ ಪ್ರಾಪ್ತಿಃ ಇತ್ಯರ್ಥಃ ॥

(ಭಾಷ್ಯಾರ್ಥ)

ಆದರೆ ಇವು ಬ್ರಹ್ಮಧರ್ಮಗಳೆಂದು ಇಟ್ಟುಕೊಂಡು[1] 'ಪ್ರಿಯಶಿರಸ್ತ್ವಾದಿಗಳ ಪ್ರಾಪ್ತಿಯಿಲ್ಲ' ಎಂಬ ನ್ಯಾಯಮಾತ್ರವನ್ನು ಆಚಾರ್ಯರು ತಿಳಿಸಿಕೊಟ್ಟಿರುತ್ತಾರೆ[2] ಆ ನ್ಯಾಯವನ್ನು ಬ್ರಹ್ಮಧರ್ಮಗಳೆಂದು ನಿಶ್ಚಿತವಾಗಿ ಉಪಾಸನೆಗಾಗಿ ಉಪದೇಶಮಾಡಿರುವ ಸಂಯದ್ವಾಮಾದಿಗಳು, ಸತ್ಯಕಾಮಾದಿಗಳು (ಎಂಬಿವುಗಳಲ್ಲಿ) ಹೊಂದಿಸಿಕೊಳ್ಳಬೇಕು. ಹೇಗೆಂದರೆ ಉಪಾಸ್ಯವಾದ ಬ್ರಹ್ಮವು ಒಂದೇ ಆದರೂ ಪ್ರಕ್ರಮಭೇದವಿರುವದರಿಂದ ಉಪಾಸನೆಗಳು ಬೇರೆಬೇರೆಯಾಗಿರುವದರಿಂದ ಅನ್ಯೋನ್ಯಧರ್ಮಗಳನ್ನು ಅನ್ಯೋನ್ಯಸ್ಥಲದಲ್ಲಿ ಸೇರಿಸತಕ್ಕದ್ದಲ್ಲ.[3] ಇಬ್ಬರು ಹೆಂಗಸರು ಒಬ್ಬ ರಾಜನನ್ನು ಒಬ್ಬಳು ಛತ್ರಿಯಿಂದ, ಬೇರೊಬ್ಬಳು ಚಾಮರದಿಂದ –ಹೀಗೆ ಸೇವಿಸುತ್ತಿರುತ್ತಾರೆ; ಅಲ್ಲಿ ಉಪಾಸ್ಯನಾದ (ರಾಜನು) ಒಬ್ಬನೇ ಆದರೂ ಉಪಾಸನೆಯೂ ಬೇರೆ, ಧರ್ಮಗಳ ವ್ಯವಸ್ಥೆಯೂ ಇರುತ್ತದೆ. (ಇದು ಹೇಗೋ), ಆದರಂತೆ ಇಲ್ಲಿಯೂ (ತಿಳಿಯಬೇಕು). ಏಕೆಂದರೆ **ಹೆಚ್ಚುಕಡಿಮೆಯ ಗುಣಗಳಿರುವದೆಂಬುದು ಭೇದವ್ಯವಹಾರವಿರುವ ಸಗುಣಬ್ರಹ್ಮದಲ್ಲಿ ಹೊಂದುತ್ತದೆ, ನಿರ್ಗುಣವಾದ ಪರಬ್ರಹ್ಮದಲ್ಲಿ ಹೊಂದುವದಿಲ್ಲ.** ಆದ್ದರಿಂದ ಸತ್ಯಕಾಮತ್ವವೇ ಮುಂತಾದ

---

1. 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' ಎಂದು ಬ್ರಹ್ಮಸ್ವರೂಪವನ್ನು ತಿಳಿಸುವದಕ್ಕೆ ಹೊರಟ ಬ್ರಹ್ಮವು ಆನಂದಸ್ವರೂಪವೆಂದು ತಿಳಿಸುವದಕ್ಕಾಗಿ ಪ್ರಿಯಾದಿಗಳನ್ನು ಹೇಳಲಾಯಿತು. ಆಗ ಆ ಉಪಾಧಿಗಳೂ ಬ್ರಹ್ಮಧರ್ಮವೇ ಎಂಬ ಭ್ರಾಂತಿಯಿಂದ ಮಾಡಿದ ಶಂಕೆಗೆ ಪರಿಹಾರವಾಗಿ ಈ ಸೂತ್ರವು ಬಂತು ಎಂದರ್ಥ.

2. ಹಿಂದೆ ಹೇಳಿರುವ ಉಪಾಧಿಗಳಂತೆ ಪ್ರಿಯಶಿರಸ್ತ್ವಾದಿಗಳೂ ಬ್ರಹ್ಮಧರ್ಮವಲ್ಲವೆಂದು ತಿಳಿಯಬಹುದಾದ್ದರಿಂದ ಸೂತ್ರವು ವ್ಯರ್ಥವಾಗಲಿಲ್ಲವೆ ? ಎಂಬ ಶಂಕೆಗೆ ಇಲ್ಲಿ ಸಗುಣವಿದ್ಯೆಗೂ ಹೊಂದುವ ನ್ಯಾಯವಿದೆ ಎಂಬ ಸಮಾಧಾನವನ್ನು ಹೇಳಿದೆ.

3. ಬ್ರಹ್ಮವು ಒಂದೇ ಎಂಬ ಕಾರಣದಿಂದ ಆನಂದಾದಿಧರ್ಮಗಳನ್ನು ಸೇರಿಸಿಕೊಳ್ಳಬಹುದಾದರೆ ಸಂಯದ್ವಾಮತ್ವ (ಛಾಂ. ೪–೧೫–೩), ಸತ್ಯಕಾಮತ್ವ (ಛಾಂ. ೮–೧–೫) –ಇವುಗಳನ್ನು ಒಂದೇ ಬ್ರಹ್ಮದ ಧರ್ಮಗಳೆಂದು ಹೇಳಿದ್ದರೂ ಒಂದು ಉಪಾಸನೆಯಲ್ಲಿ ಇನ್ನೊಂದು ಧರ್ಮವನ್ನು ಉಪಸಂಹಾರಮಾಡುವಂತಿಲ್ಲವೆಂಬುದೇಕೆ ?– ಎಂಬ ಶಂಕೆಗೆ ಈ ನ್ಯಾಯದಿಂದ ಸಮಾಧಾನವನ್ನು ಹೇಳಬೇಕೆಂದು ಭಾವ.

ಒಂದು (ಉಪಾಸನೆ)ಯಲ್ಲಿ ಹೇಳಿರುವ ಧರ್ಮಗಳು ಎಲ್ಲಾ (ಉಪಾಸನೆ)ಗಳಿಗೂ ಸೇರುವದಿಲ್ಲ ಎಂದರ್ಥ.

**ಇತರೇತ್ವರ್ಥಸಾಮಾನ್ಯಾತ್ ॥ ೧೩ ॥**

೧೩. ಉಳಿದ ಧರ್ಮಗಳು (ಎಲ್ಲೆಲ್ಲಿಯೂ ಇರುತ್ತವೆ), ಏಕೆಂದರೆ ಅರ್ಥವು ಸಮಾನವಾಗಿರುತ್ತದೆ.

## ಆನಂದಾದಿಗಳು ಬ್ರಹ್ಮಸ್ವರೂಪಜ್ಞಾನಕ್ಕೆ ಅವಶ್ಯ

(ಭಾಷ್ಯ)

೩೩೯. ಇತರೇ ತು ಆನನ್ದಾದಯೋ ಧರ್ಮಾ ಬ್ರಹ್ಮಸ್ವರೂಪಪ್ರತಿಪಾದನಾಯೈವ ಉಚ್ಯಮಾನಾಃ ಅರ್ಥಸಾಮಾನ್ಯಾತ್ ಪ್ರತಿಪಾದ್ಯಸ್ಯ ಧರ್ಮಿಣಃ ಏಕತ್ವಾತ್ ಸರ್ವೇ ಸರ್ವತ್ರ ಪ್ರತೀಯೇರನ್ ಇತಿ ವೈಷಮ್ಯಮ್। ಪ್ರತಿಪತ್ತಿಮಾತ್ರಪ್ರಯೋಜನಾ ಹಿ ತೇ ಇತಿ ॥

(ಭಾಷ್ಯಾರ್ಥ)

ಆದರೆ ಮಿಕ್ಕ ಆನಂದಾದಿಧರ್ಮಗಳಾದರೋ ಬ್ರಹ್ಮಸ್ವರೂಪವನ್ನು ತಿಳಿಸುವದಕ್ಕಾಗಿಯೇ ಹೇಳಿದವಾದ್ದರಿಂದ, ಅರ್ಥಸಾಮಾನ್ಯದಿಂದ ಎಂದರೆ ಪ್ರತಿಪಾದ್ಯವಾದ ಧರ್ಮಿಯಾದ (ಬ್ರಹ್ಮವು) ಒಂದೇ ಆಗಿರುವದರಿಂದ (ಅವು) ಎಲ್ಲವನ್ನೂ ಎಲ್ಲಾ ಕಡೆಯಲ್ಲಿಯೂ ತಿಳಿಯಬೇಕು. ಇದು (ಈ ಎರಡು ಬಗೆಯ ಧರ್ಮಗಳಿಗೂ) ವೈಷಮ್ಯವು. ಏಕೆಂದರೆ (ಆನಂದಾದಿಗಳಿಗೆ) ಜ್ಞಾನಮಾತ್ರವೇ[1] ಪ್ರಯೋಜನವಾಗಿರುತ್ತದೆ.

## ೭. ಆಧ್ಯಾನಾಧಿಕರಣ (ಸೂ ೧೪–೧೫)

(ಕ.೧–೩–೧೧ರಲ್ಲಿ ಹೇಳಿದ ಇಂದ್ರಿಯಾದಿಗಳು ಪುರುಷಜ್ಞಾನಕ್ಕೆ)

**ಆಧ್ಯಾನಾಯ ಪ್ರಯೋಜನಾಭಾವಾತ್ ॥ ೧೪ ॥**

೧೪. ಆಧ್ಯಾನಕ್ಕಾಗಿ (ಹೇಳಿದೆ) ; ಏಕೆಂದರೆ ( ಬೇರೆ ) ಪ್ರಯೋಜನವಿಲ್ಲ.

---

1. ಉಪಾಸನೆಯು ವಿವಕ್ಷಿತವಲ್ಲದ ಸ್ವರೂಪಧರ್ಮಗಳು ಎಲ್ಲಾ ಕಡೆಯಲ್ಲಿಯೂ ಬ್ರಹ್ಮಸ್ವರೂಪಕ್ಕೆ ಹತ್ತಿಕೊಂಡೇ ಇರುತ್ತವೆ ; ಅದನ್ನು ತಿಳಿಯುವದಕ್ಕೆ ಉಪಾಯಮಾತ್ರವಾಗಿರುವ ಉಪಾಧಿಗಳು ಎಲ್ಲಿಯೂ ಬ್ರಹ್ಮಧರ್ಮಗಳೇ ಅಲ್ಲವಾಗಿ ಅವುಗಳ ಉಪಸಂಹಾರವಿಲ್ಲ. ಉಪಾಸ್ಯಧರ್ಮಗಳು ಆಯಾ ಉಪಾಸನೆಯಲ್ಲಿ ಮಾತ್ರ ಉಪಸಂಹಾರ್ಯ –ಎಂಬುದು ಇಲ್ಲಿ ಸಾರವು.

## ಪೂರ್ವಪಕ್ಷ: ಇಂದ್ರಿಯಾದಿಗಳನ್ನು ಸ್ವಪ್ರಧಾನವಾಗಿ ಹೇಳಿದೆ

(ಭಾಷ್ಯ)

೩೪೦. ಕಾಠಕೇ ಹಿ ಪಠ್ಯತೇ "ಇನ್ದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ । ಮನಸಸ್ತು ಪರಾ ಬುದ್ಧಿಃ" (ಕ. ೧-೩-೧೦) ಇತ್ಯಾರಭ್ಯ "ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ" (ಕ.೧-೩-೧೧) ಇತಿ । ತತ್ರ ಸಂಶಯಃ । ಕಿಮಿಮೇ ಸರ್ವ ಏವ ಅರ್ಥಾದಯಃ ತತಸ್ತತಃ ಪರತ್ವೇನ ಪ್ರತಿಪಾದ್ಯನ್ತೇ, ಉತ ಪುರುಷ ಏವೈಭ್ಯಃ ಸರ್ವೇಭ್ಯಃ ಪರಃ ಪ್ರತಿಪಾದ್ಯತ ಇತಿ ? ತತ್ರ ತಾವತ್ ಸರ್ವೇಷಾಮೇವ ಏಷಾಂ ಪರತ್ವೇನ ಪ್ರತಿಪಾದನಮ್ ಇತಿ ಭವತಿ ಮತಿಃ । ತಥಾ ಹಿ ಶ್ರೂಯತೇ ಇದಮಸ್ಮಾತ್ ಪರಮಿದಮಸ್ಮಾತ್ ಪರಮ್ ಇತಿ । ನನು ಬಹುಷ್ವರ್ಥೇಷು ಪರತ್ವೇನ ಪ್ರತಿಪಿಪಾದಯಿಷಿತೇಷು ವಾಕ್ಯಭೇದಃ ಸ್ಯಾತ್ । ನೈಷ ದೋಷಃ । ವಾಕ್ಯಬಹುತ್ವೋಪಪತ್ತೇಃ । ಬಹೂನ್ಯೇವ ಹಿ ಏತಾನಿ ವಾಕ್ಯಾನಿ ಪ್ರಭವನ್ತಿ ಬಹುವಿಷಯಾನ್ ಪರತ್ವೋಪೇತಾನ್ ಪ್ರತಿಪಾದಯಿತುಮ್ । ತಸ್ಮಾತ್ ಪ್ರತ್ಯೇಕಮ್ ಏಷಾಂ ಪರತ್ವಪ್ರತಿಪಾದನಮಿತಿ ॥

(ಭಾಷ್ಯಾರ್ಥ)

ಕಾಠಕದಲ್ಲಿ "ಇಂದ್ರಿಯಗಳಿಗಿಂತ ಅರ್ಥಗಳು ಹೆಚ್ಚಿನವೇ, ಅರ್ಥಗಳಿಗಿಂತ ಮನಸ್ಸು ಹೆಚ್ಚಿನದು, ಮನಸ್ಸಿಗಿಂತ ಬುದ್ಧಿ ಹೆಚ್ಚಿನದು" (ಕ.೧-೩-೧೧) ಎಂದು ಪಠಿತವಾಗಿರುತ್ತದೆ. ಇಲ್ಲಿ ಸಂಶಯವೇನೆಂದರೆ ಈ ಅರ್ಥಗಳೇ ಮುಂತಾದವುಗಳೆಲ್ಲ ಅದದಕ್ಕಿಂತ ಹೆಚ್ಚಿನವೆಂದು ಪ್ರತಿಪಾದಿತವಾಗಿವೆಯೆ, ಅಥವಾ ಪುರುಷನೇ ಇವೆಲ್ಲಕ್ಕಿಂತ ಪರನೆಂದು ಪ್ರತಿಪಾದಿತನಾಗಿರುತ್ತಾನೆಯೆ"[1] ?

ಇಲ್ಲಿ ಮೊದಲು ಇವುಗಳೆಲ್ಲವನ್ನೂ ಹೆಚ್ಚಿನವೆಂದು ಪ್ರತಿಪಾದಿಸಿದೆ ಎಂದೇ ಬುದ್ಧಿಯುಂಟಾಗುತ್ತದೆ. ಆದ್ದರಿಂದಲೇ ಅಲ್ಲವೆ. ಇದಕ್ಕಿಂತ, ಇದು ಹೆಚ್ಚಿನದು ಇದಕ್ಕಿಂತ ಇದು ಹೆಚ್ಚಿನದು, ಎಂದು ಶ್ರುತಿಯು ಹೇಳುತ್ತದೆ?

1. ಅಧಿಕರಣಸಂಬಂಧವನ್ನು ಹೇಳುವಾಗ ಅನುಪಸಂಹಾರ್ಯವಾದ ಅರ್ಥಾದಿ ಪರತ್ವರೂಪವನ್ನೂ ಬ್ರಹ್ಮಪ್ರತಿಪತ್ತಿಗೆ ಉಪಾಯವನ್ನೂ ಹೇಳುವದಕ್ಕೆ ಇದು ಬಂದಿದೆ ಎಂದು ನ್ಯಾ॥ನಿ॥ರ॥ಪ್ರ॥ ವ್ಯಾಖ್ಯಾನಗಳಲ್ಲಿದೆ ; ಆಗ ಪ್ರಿಯಶಿರಸ್ತ್ವಾದಿಸೂತ್ರದಿಂದಲೇ ಇದು ಗತಾರ್ಥವಾಗುತ್ತದೆ. ಆದ್ದರಿಂದ ಇಂದ್ರಿಯಾದಿಗಳಿಗಿಂತ ಅರ್ಥಾದಿಗಳು ಹೆಚ್ಚಿನವು ಎಂದು ವಾಕ್ಯಭೇದವಾದರೆ ಒಂದೊಂದೂ ಉಪಾಸ್ಯವೆಂದಾಗುವದರಿಂದ ಇದು ವಸ್ತುಪ್ರದರ್ಶನಪರವೇ, ಮಿಕ್ಕದ್ದೆಲ್ಲ ಇದಕ್ಕಾಗಿ ಬಂದಿದೆ ಎಂದು ವಿದ್ಯಾಭೇದನಿರಾಸಕ್ಕಾಗಿ ಬಂದಿದೆ ಎಂದು ಹೇಳಬೇಕೆಂದು ತೋರುತ್ತದೆ.

(ಆಕ್ಷೇಪ) :– ಬಹಳ ವಸ್ತುಗಳನ್ನು ಹೆಚ್ಚಿನವೆಂದು ಪ್ರತಿಪಾದನೆಮಾಡು ವದಿದ್ದರೆ ವಾಕ್ಯಭೇದವಾಗುವದಿಲ್ಲವೆ ?

(ಪರಿಹಾರ):– ಇದು ದೋಷವಲ್ಲ. ಏಕೆಂದರೆ ವಾಕ್ಯಗಳು ಅನೇಕ ವೆಂಬುದೇ ಹೊಂದುತ್ತದೆ. ಈ ವಾಕ್ಯಗಳು ಬಹಳವಾಗಿರುವದರಿಂದಲೇ ಬಹಳ ವಿಷಯಗಳನ್ನು ಹೆಚ್ಚಿನವೆಂದು ಪ್ರತಿಪಾದಿಸುವದಕ್ಕೆ ಸಮರ್ಥವಾಗಿರುತ್ತವೆ. ಆದ್ದರಿಂದ ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಹೆಚ್ಚಿನದೆಂಬ ಪ್ರತಿಪಾದನೆ(ಯಿದೆ).

## ಈ ವಾಕ್ಯವು ಪುರುಷನನ್ನು ಪ್ರತಿಪಾದನೆಮಾಡುವದಕ್ಕೆ ಬಂದಿದೆ

(ಭಾಷ್ಯ)

೩೪೧. ಏವಂ ಪ್ರಾಪ್ತೇ ಬ್ರೂಮಃ । ಪುರುಷ ಏವ ಹಿ ಏಭ್ಯಃ ಸರ್ವೇಭ್ಯಃ ಪರಃ ಪ್ರತಿಪಾದ್ಯತೇ ಇತಿ ಯುಕ್ತಮ್, ನ ಪ್ರತ್ಯೇಕಮ್ ಏಷಾಂ ಪರತ್ವ ಪ್ರತಿಪಾದನಮ್ । ಕಸ್ಮಾತ್ ? ಪ್ರಯೋಜನಾಭಾವಾತ್ । ನ ಹಿ ಇತರೇಷು ಪರತ್ವೇನ ಪ್ರತಿಪನ್ನೇಷು ಕಿಂಚಿತ್ ಪ್ರಯೋಜನಂ ದೃಶ್ಯತೇ ಶ್ರೂಯತೇ ವಾ । ಪುರುಷೇ ತು ಇನ್ದ್ರಿಯಾದಿಭ್ಯಃ ಪರಸ್ಮಿನ್ ಸರ್ವಾನರ್ಥವ್ರಾತಾತೀತೇ ಪ್ರತಿ ಪನ್ನೇ ದೃಶ್ಯತೇ ಪ್ರಯೋಜನಂ ಮೋಕ್ಷಸಿದ್ಧಿಃ । ತಥಾ ಚ ಶ್ರುತಿಃ "ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ" (ಕ.೧–೩–೧೫) ಇತಿ । ಅಪಿ ಚ ಪರ ಪ್ರತಿಷೇಧೇನ ಕಾಷ್ಠಾಶಬ್ದೇನ ಚ ಪುರುಷವಿಷಯಮ್ ಆದರಂ ದರ್ಶಯನ್ ಪುರುಷಪ್ರತಿಪತ್ತ್ಯರ್ಥೈವ ಪೂರ್ವಾಪರಪ್ರವಾಹೋಕ್ತಿಃ ಇತಿ ದರ್ಶಯತಿ । 'ಆಧ್ಯಾನಾಯ' ಇತಿ । ಆಧ್ಯಾನಪೂರ್ವಕಾಯ ಸಮ್ಯಗ್ದರ್ಶನಾಯ ಇತ್ಯರ್ಥಃ । ಸಮ್ಯಗ್ದರ್ಶನಾರ್ಥಮೇವೇದಂ ಹಿ ಇಹ ಆಧ್ಯಾನಮ್ ಉಪದಿಶ್ಯತೇ, ನ ತು ಆಧ್ಯಾನಮೇವ ಸ್ವಪ್ರಧಾನಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳು ತ್ತೇವೆ. ಪುರುಷನನ್ನೇ ಇವೆಲ್ಲಕ್ಕಿಂತಲೂ ಹೆಚ್ಚಿನವನೆಂದು ಪ್ರತಿಪಾದಿಸಿದೆ ಎಂಬುದೇ ಯುಕ್ತವು ; ಇವುಗಳಲ್ಲಿ ಒಂದೊಂದೂ ಹೆಚ್ಚಿನದೆಂದು ಪ್ರತಿಪಾದಿ ಸಿಲ್ಲ. ಏಕೆ ? ಎಂದರೆ ಪ್ರಯೋಜನವಿಲ್ಲದ್ದರಿಂದ. (ಇದರ ವಿವರ) : ಉಳಿ ದವನ್ನು ಹೆಚ್ಚಿನವೆಂದು ತಿಳಿದುಕೊಂಡರೆ ಯಾವ ಪ್ರಯೋಜನವೂ ಕಂಡು ಬರುವದಿಲ್ಲ, ಶ್ರುತಿಯಲ್ಲಿ ಹೇಳಿಯೂ ಇಲ್ಲ. ಆದರೆ ಪುರುಷನನ್ನು ಇಂದ್ರಿ ಯಾದಿಗಳಿಗಿಂತ ಹೆಚ್ಚಿನವನೆಂದೂ ಸರ್ವಾನರ್ಥಗಳನ್ನು ಮೀರಿರುವನೆಂದೂ

ತಿಳಿದುಕೊಂಡರೆ ಮೋಕ್ಷಸಿದ್ಧಿಯೆಂಬ ಪ್ರಯೋಜನವು ಕಂಡುಬರುತ್ತದೆ; ಹಾಗೆಂದು ಶ್ರುತಿಯೂ 'ಅವನನ್ನು ಕಂಡುಕೊಂಡರೆ ಮೃತ್ಯುಮುಖದಿಂದ ಬಿಡುಗಡೆಯಾಗುತ್ತಾನೆ" (ಕ. ೧–೩–೧೫) ಎಂದು ಹೇಳುತ್ತಿದೆ. ಇದೂ ಅಲ್ಲದೆ ಮತ್ತೊಂದನ್ನು ಅಲ್ಲಗಳೆಯುವದರಿಂದಲೂ, ಕೊನೆ (ಕಾಷ್ಠಾ) ಎಂಬ ಮಾತಿನಿಂದಲೂ ಪುರುಷವಿಷಯದಲ್ಲಿ ಆದರವನ್ನು ತೋರಿಸುವದರಿಂದ ಪುರುಷನನ್ನು ಅರಿಯುವದಕ್ಕಾಗಿಯೇ ಹಿಂದುಮುಂದಿನ ಪ್ರವಾಹವನ್ನು ಹೇಳಿದೆ ಎಂದು (ವೇದವು) ತಿಳಿಸುತ್ತದೆ.

'ಆಧ್ಯಾನಕ್ಕಾಗಿ (ಹೇಳಿದೆ)' ಎಂಬ (ಸೂತ್ರಭಾಗಕ್ಕೆ) ಆಧ್ಯಾನಪೂರ್ವಕವಾದ ಸಮ್ಯಗ್ದರ್ಶನಕ್ಕಾಗಿ ಎಂದರ್ಥ. ಸಮ್ಯಗ್ದರ್ಶನಕ್ಕಾಗಿಯಲ್ಲವೆ, ಇಲ್ಲಿ ಆಧ್ಯಾನವನ್ನು ಹೇಳಿದೆ, ಆಧ್ಯಾನವನ್ನೇ ಸ್ವಪ್ರಧಾನವನ್ನಾಗಿ ಹೇಳಿಲ್ಲ.[1]

**ಆತ್ಮಶಬ್ದಾಚ್ಚ || ೧೫ ||**

೧೫. ಆತ್ಮಶಬ್ದವಿರುವದರಿಂದಲೂ (ಹೀಗೆ).

## ಪುರುಷನನ್ನು ಆತ್ಮನೆಂದು ಕರೆದಿರುವದು ಮುಂತಾದದ್ದು ಇಲ್ಲಿ ಸಾಧಕ

(ಭಾಷ್ಯ)

೩೪೨. ಇತಶ್ಚ ಪುರುಷಪ್ರತಿಪತ್ತ್ಯರ್ಥೈವ ಇಯಮ್ ಇನ್ದ್ರಿಯಾದಿಪ್ರವಾಹೋಕ್ತಿಃ । ಯತ್ಕಾರಣಮ್ "ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ । ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ।" (ಕ. ೧–೩–೧೨) ಇತಿ ಪ್ರಕೃತಂ ಪುರುಷಮ್ 'ಆತ್ಮಾ' ಇತ್ಯಾಹ ಅತಶ್ಚ ಅನಾತ್ಮತ್ವಮಿತರೇಷಾಂ ವಿವಕ್ಷಿತಮ್ ಇತಿ ಗಮ್ಯತೇ । ತಸ್ಯೈವ ಚ ದುರ್ವಿಜ್ಞಾನತಾಂ ಸಂಸ್ಕೃತಮತಿಗಮ್ಯತಾಂ ಚ ದರ್ಶಯತಿ । ತದ್ವಿಜ್ಞಾನಾಯೈವ "ಯಚ್ಛೇದ್ ವಾಙ್ಮನಸೀ ಪ್ರಾಜ್ಞಃ" (ಕ. ೧–೩–೧೩) ಇತಿ ಆಧ್ಯಾನಂ

1. ಇಲ್ಲಿ ಆಧ್ಯಾನವೆಂದರೆ ಜ್ಞಾನವನ್ನುಂಟುಮಾಡುವ ನಿದಿಧ್ಯಾಸನವು, ಉಪಾಸನೆಯಲ್ಲ. ಉಪಾಸನೆಯನ್ನು ಸ್ವಪ್ರಧಾನವಾಗಿ ಹೇಳಿದ್ದರೆ ವಿಧಿಯಿರಬೇಕು; ಮಿಕ್ಕದ್ದೆಲ್ಲ ಅದಕ್ಕೆ ಅಂಗವಾಗಬೇಕು. ಒಂದೊಂದರಲ್ಲಿಯೂ ಉಪಾಸನೆಯನ್ನು ಹೇಳಿದ್ದರೆ ಒಂದೊಂದಕ್ಕೂ ಅದೃಷ್ಟಫಲವು ಶ್ರುತವಾಗಿರಬೇಕು. ಹಾಗಿಲ್ಲ. ತತ್ತ್ವಜ್ಞಾನಪರವಾದರೆ ಒಂದೊಂದಕ್ಕೂ ದೃಷ್ಟಪ್ರಯೋಜನವಿರಬೇಕು. ಹಾಗೂ ಇಲ್ಲ. ಆದ್ದರಿಂದ ಇಲ್ಲಿ ವಾಕ್ಯಭೇದಕ್ಕೆ ಅವಕಾಶವಿಲ್ಲ. ಏಕವಾಕ್ಯತಾಧಿಕರಣದ ಜೈ. ೨–೧–೪೬, ೪೭ ಈ ಸೂತ್ರಗಳ ಭಾಷ್ಯವನ್ನು ನೋಡಿ.

ವಿದಧಾತಿ । ತದ್ ವ್ಯಾಖ್ಯಾತಮ್ । "ಆನುಮಾನಿಕಮಪ್ಯೇಕೇಷಾಮ್" (೧-೪-೧) ಇತ್ಯತ್ರ । ಏವಮ್ ಅನೇಕಪ್ರಕಾರಃ ಆಶಯಾತಿಶಯಃ ಶ್ರುತೇಃ ಪುರುಷೇ ಲಕ್ಷ್ಯತೇ ನೇತರೇಷು । ಅಪಿ ಚ "ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್" (ಕ. ೧-೩-೯) ಇತ್ಯುಕ್ತೇ "ಕಿಂ ತದಧ್ವನಃ ಪಾರಂ ವಿಷ್ಣೋಃ ಪರಮಂ ಪದಮ್ ?" ಇತ್ಯಸ್ಯಾಮ್ ಆಕಾಂಕ್ಷಾಯಾಂ ಇನ್ದ್ರಿಯಾದ್ಯನುಕ್ರಮಣಾತ್ ಪರಮಪದಪ್ರತಿಪತ್ತ್ಯರ್ಥ ಏವ ಅಯಮಾಯಾಸಃ ಇತ್ಯವಸೀಯತೇ ॥

(ಭಾಷ್ಯಾರ್ಥ)

ಈ ಇಂದ್ರಿಯಾದಿಗಳ ಪ್ರವಾಹವನ್ನು ಹೇಳಿರುವದು ಪುರುಷಪ್ರತಿಪತ್ತಿಗಾಗಿಯೇ –ಎಂದು ಈ ಕಾರಣದಿಂದಲೂ (ತಿಳಿಯಬೇಕು). ಯಾವ ಕಾರಣದಿಂದ ಎಂದರೆ "ಈ ಆತ್ಮನು ಸರ್ವಭೂತಗಳಲ್ಲಿಯೂ ಗೂಢನಾಗಿದ್ದು ತೋರಿಕೊಳ್ಳದೆ ಇರುತ್ತಾನೆ. ಆದರೆ ಏಕಾಗ್ರವಾದ ಸೂಕ್ಷ್ಮಬುದ್ಧಿಯಿಂದ (ನೋಡುವ) ಸೂಕ್ಷ್ಮದರ್ಶಿಗಳಿಗೆ ಕಾಣಬರುತ್ತಾನೆ" (ಕ. ೧-೩-೧೨) ಎಂದು ಪ್ರಕೃತನಾದ ಪುರುಷನನ್ನು ಆತ್ಮನೆಂದು ಕರೆದಿರುತ್ತದೆ; ಆದ್ದರಿಂದ ಮಿಕ್ಕವು ಅನಾತ್ಮಗಳೆಂದು ವಿವಕ್ಷಿತವಾಗಿದೆ ಎಂದು ನಿಶ್ಚಯವಾಗುತ್ತದೆ. ಮತ್ತು ಆ (ಪುರುಷ)ನನ್ನೇ ದುರ್ವಿಜ್ಞೇಯನೆಂದೂ ಸಂಸ್ಕೃತವಾದ ಬುದ್ಧಿಗೆ ಗಮ್ಯನೆಂದೂ (ಶ್ರುತಿ) ತಿಳಿಸುತ್ತದೆ. ಅವನನ್ನು ತಿಳಿದುಕೊಳ್ಳುವದಕ್ಕಾಗಿಯೇ "ವಾಕ್ಕನ್ನು ಪ್ರಾಜ್ಞನು ಮನಸ್ಸಿನಲ್ಲಿ ಹಿಡಿದುನಿಲ್ಲಿಸಬೇಕು ...." (ಕ. ೧-೩-೧೩) ಎಂದು ಆಧ್ಯಾನವನ್ನು ವಿಧಿಸಿರುತ್ತದೆ. ಇದನ್ನು, 'ಆನುಮಾನಿಕಮಪ್ಯೇಕೇಷಾಮ್' (೧-೪-೧) ಎಂಬಲ್ಲಿ ವಿವರಿಸಲಾಗಿರುತ್ತದೆ.

ಹೀಗೆ ಶ್ರುತಿಗೆ ಅನೇಕಪ್ರಕಾರವಾದ ಹೆಚ್ಚಿನ ಅಭಿಪ್ರಾಯವು ಪುರುಷನಲ್ಲಿಯೇ (ಇದೆ ಎಂಬುದು) ಕಂಡುಬರುತ್ತದೆಯೇ ಹೊರತು ಮಿಕ್ಕ ಇಂದ್ರಿಯಾದಿಗಳಲ್ಲಿ ( ಕಾಣಬರು )ವದಿಲ್ಲ. ಇದೂ ಅಲ್ಲದೆ "ಅವನು ಆ ವಿಷ್ಣುವಿನ ಪರಮಪದವೆಂಬ ದಾರಿಯ ಕೊನೆಯನ್ನು ಮುಟ್ಟುತ್ತಾನೆ" (ಕ.೧-೩-೯) ಎಂದು ಹೇಳಲಾಗಿ ಆ ವಿಷ್ಣುವಿನ ಪದವೆಂಬ ದಾರಿಯ ಕೊನೆ ಯಾವದು ? ಎಂಬೀ ಆಕಾಂಕ್ಷೆಯುಂಟಾಗಲಾಗಿ ಇಂದ್ರಿಯಾದಿಗಳನ್ನು ಒಂದೊಂದಾಗಿ ಹೇಳಿರುವದರಿಂದ ಪರಮಪದದ ಜ್ಞಾನಕ್ಕಾಗಿಯೇ[1] ಈ ಆಯಾಸವನ್ನು (ವಹಿಸಿದೆ) ಎಂದು ನಿಶ್ಚಯವಾಗುತ್ತದೆ.

---

1. ಇಂದ್ರಿಯಾದಿಗಳನ್ನು ತಿಳಿಸುವದಕ್ಕಲ್ಲ.

## ೮. ಆತ್ಮಗೃಹೀತ್ಯಧಿಕರಣ (ಸೂ. ೧೬-೧೭)

(ಐತರೇಯದ ೧-೧ರಲ್ಲಿ ಹೇಳಿರುವದು ಪರಮಾತ್ಮನೇ)

**ಆತ್ಮಗೃಹೀತಿರಿತರವದುತ್ತರಾತ್ ॥ ೧೬ ॥**

೧೬. ಆತ್ಮನನ್ನೇ ಇತರವಾಕ್ಯದಂತೆ ಗ್ರಹಿಸಬೇಕು. ಏಕೆಂದರೆ ಮುಂದಿನ (ವಾಕ್ಯದಲ್ಲಿ ಹಾಗೆ) ಇದೆ.

### ಐತರೇಯದ ವಾಕ್ಯದಲ್ಲಿ ಸಂಶಯಪೂರ್ವಪಕ್ಷಗಳು

(ಭಾಷ್ಯ)

೩೪೩ ಐತರೇಯಕೇ ಶ್ರೂಯತೇ "ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ ಕಿಂಚನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ । ಸ ಇಮಾಲ್ಲೋಕಾನಸೃಜತ । ಅಮ್ಭೋ ಮರೀಚೀರ್ಮರಮಾಪಃ" (ಐ. ೧-೧) ಇತ್ಯಾದಿ । ತತ್ರ ಸಂಶಯಃ ಕಿಂ ಪರ ಏವ ಆತ್ಮಾ ಇಹ ಆತ್ಮಶಬ್ದೇನ ಅಭಿಲಪ್ಯತೇ ಉತ ಅನ್ಯಃ ಕಶ್ಚಿತ್ ಇತಿ । ಕಿಂ ತಾವತ್ ಪ್ರಾಪ್ತಮ್? ನ ಪರಮಾತ್ಮಾ ಇಹ ಆತ್ಮಶಬ್ದಾಭಿಲಪ್ಯೋ ಭವಿತುಮರ್ಹತೀತಿ । ಕಸ್ಮಾತ್? ವಾಕ್ಯಾನ್ವಯದರ್ಶನಾತ್ । ನನು ವಾಕ್ಯಾನ್ವಯಃ ಸುತರಾಂ ಪರಮಾತ್ಮವಿಷಯೋ ದೃಶ್ಯತೇ। ಪ್ರಾಗುತ್ಪತ್ತೇರಾತ್ಮೈಕತ್ವಾವಧಾರಣಾತ್ । ಈಕ್ಷಣಪೂರ್ವಕಸ್ರಷ್ಟೃತ್ವವಚನಾಚ್ಚ । ನೇತ್ಯುಚ್ಯತೇ । ಲೋಕಸೃಷ್ಟಿವಚನಾತ್ । ಪರಮಾತ್ಮನಿ ಹಿ ಸ್ರಷ್ಟರಿ ಪರಿಗೃಹ್ಯಮಾಣೇ ಮಹಾಭೂತಸೃಷ್ಟಿರಾದೌ ವಕ್ತವ್ಯಾ। ಲೋಕಸೃಷ್ಟಿಸ್ತು ಇಹ ಆದೌ ಉಚ್ಯತೇ। ಲೋಕಾಶ್ಚ ಮಹಾಭೂತಸನ್ನಿವೇಶವಿಶೇಷಾಃ। ತಥಾ ಚ ಅಮ್ಭಃ ಪ್ರಭೃತೀನ್ ಲೋಕತ್ವೇನೈವ ನಿರ್ಬ್ರವೀತಿ "ಅದೋಽಮ್ಭಃ ಪರೇಣ ದಿವಮ್" (ಐ. ೧-೧) ಇತ್ಯಾದಿನಾ । ಲೋಕಸೃಷ್ಟಿಶ್ಚ ಪರಮೇಶ್ವರಾಧಿಷ್ಠಿತೇನ ಅಪರೇಣ ಕೇನಚಿತ್ ಈಶ್ವರೇಣ ಕ್ರಿಯತೇ ಇತಿ ಶ್ರುತಿಸ್ಮೃತ್ಯೋಃ ಉಪಲಭ್ಯತೇ। ತಥಾ ಹಿ ಶ್ರುತಿರ್ಭವತಿ। "ಆತ್ಮೈವೇದಮಗ್ರ ಆಸೀತ್ ಪುರುಷವಿಧಃ" (ಬೃ. ೧-೪-೧) ಇತ್ಯಾದ್ಯಾ । ಸ್ಮೃತಿರಪಿ "ಸ ವೈ ಶರೀರೀ ಪ್ರಥಮಃ ಸ ವೈ ಪುರುಷ ಉಚ್ಯತೇ। ಆದಿಕರ್ತಾ ಸ ಭೂತಾನಾಂ ಬ್ರಹ್ಮಾಗ್ರೇ ಸಮವರ್ತತ" (?) ಇತಿ । ಐತರೇಯಿಣೋಽಪಿ "ಅಥಾತೋ ರೇತಸಃ ಸೃಷ್ಟಿಃ ಪ್ರಜಾಪತೇ ರೇತೋ ದೇವಾಃ" (ಐ. ಆ. ೨-೧-೩) ಇತ್ಯತ್ರ ಪೂರ್ವಸ್ಮಿನ್ ಪ್ರಕರಣೇ ಪ್ರಜಾಪತಿಕರ್ತೃಕಾಂ ವಿಚಿತ್ರಾಂ ಸೃಷ್ಟಿಂ ಆಮನನ್ತಿ । ಆತ್ಮಶಬ್ದೋಽಪಿ ತಸ್ಮಿನ್ ಪ್ರಯುಜ್ಯಮಾನೋ ದೃಶ್ಯತೇ "ಆತ್ಮೈವೇದಮಗ್ರ ಆಸೀತ್

ಪುರುಷವಿಧಃ" (ಬೃ. ೧-೪-೧) ಇತ್ಯತ್ರ । ಏಕತ್ವಾವಧಾರಣಮಪಿ ಪ್ರಾಗುತ್ಪತ್ತೇಃ ಸ್ವವಿಕಾರಾಪೇಕ್ಷಮ್ ಉಪಪದ್ಯತೇ । ಈಕ್ಷಣಮಪಿ ತಸ್ಯ ಚೇತನತ್ವಾಭ್ಯುಪಗಮಾತ್ ಉಪಪನ್ನಮ್ । ಅಪಿ ಚ "ತಾಭ್ಯೋ ಗಾಮಾನಯತ್.... ತಾಭ್ಯೋಽಶ್ವಮಾನಯತ್.... ತಾಭ್ಯಃ ಪುರುಷಮಾನಯತ್ ತಾ ಅಬ್ರುವನ್" (ಐ. ೧-೧) ಇತ್ಯೇವಂಜಾತೀಯಕೋ ಭೂಯಾನ್ ವ್ಯಾಪಾರವಿಶೇಷಃ ಲೌಕಿಕೇಷು ವಿಶೇಷವತ್ಸು ಆತ್ಮಸು ಪ್ರಸಿದ್ಧಃ ಇಹ ಅನುಗಮ್ಯತೇ । ತಸ್ಮಾದ್ ವಿಶೇಷವಾನೇವ ಕಶ್ಚಿತ್ ಆತ್ಮಾ ಸ್ಯಾತ್ ಇತಿ ॥

(ಭಾಷ್ಯಾರ್ಥ)

ಐತರೇಯದಲ್ಲಿ "ಇದು ಮೊದಲು ಆತ್ಮನೊಬ್ಬನೇ ಆಗಿತ್ತು, ಕಣ್ಣು ಮಿಣುಗಾಡಿಸುವ ಮತ್ತೆ ಯಾವದೊಂದೂ ಇರಲಿಲ್ಲ; ಅವನು ಲೋಕಗಳನ್ನು ಸೃಜಿಸುವೆನು ಎಂದು ಯೋಚಿಸಿ ನೋಡಿದನು, ಅವನು ಈ ಲೋಕಗಳನ್ನು ಸೃಜಿಸಿದನು, ಅಸ್ಭ, ಮರೀಚಿ, ಮರ, ಅಪ್ಪು ....." (ಐ. ೧-೧) ಎಂದುಮುಂತಾಗಿ ಶ್ರುತಿಯಲ್ಲಿದೆ. ಅಲ್ಲಿ ಸಂಶಯವೇನೆಂದರೆ ಇಲ್ಲಿ ಪರಮಾತ್ಮನನ್ನೇ ಆತ್ಮಶಬ್ದದಿಂದ ಹೇಳಿದೆಯೆ, ಅಥವಾ ಯಾವದಾದರೂ ಮತ್ತೊಬ್ಬನನ್ನು ಹೇಳಿದೆಯೆ?

(ಇಲ್ಲಿ) ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಪರಮಾತ್ಮನು ಇಲ್ಲಿ ಆತ್ಮಶಬ್ದದಿಂದ ಉಕ್ತನಾಗಿರಲಾರನು. ಏಕೆ ? ಎಂದರೆ ವಾಕ್ಯದ ಅನ್ವಯವು ಕಂಡುಬರುವದರಿಂದ.[1]

(ಆಕ್ಷೇಪ) :— ವಾಕ್ಯಾನ್ವಯವು ಪರಮಾತ್ಮವಿಷಯವೆಂದೇ ಇನ್ನೂ ಚೆನ್ನಾಗಿ ಕಂಡುಬರುತ್ತಿದೆಯಲ್ಲ ! ಏಕೆಂದರೆ ಉತ್ಪತ್ತಿಗಿಂತ ಮೊದಲು ಆತ್ಮೈಕತ್ವವನ್ನು ಒತ್ತಿಹೇಳಿರುವದರಿಂದಲೂ ಈಕ್ಷಣಪೂರ್ವಕವಾಗಿ ಸೃಷ್ಟಿಮಾಡಿದನೆಂದು ಹೇಳಿರುವದರಿಂದಲೂ (ಪರಮಾತ್ಮವಿಷಯದಲ್ಲಿ ವಾಕ್ಯಾನ್ವಯವಿದೆಯಲ್ಲ ) !

(ಪೂರ್ವಪಕ್ಷಿ) :— ಇಲ್ಲ ಎನ್ನುತ್ತೇವೆ. ಏಕೆಂದರೆ (ಇಲ್ಲಿ) ಲೋಕಗಳನ್ನು ಸೃಷ್ಟಿ(ಮಾಡಿದನೆಂಬ) ವಚನವಿದೆ, ಪರಮಾತ್ಮನೇ ಸ್ರಷ್ಟೃವೆಂದು ಪರಿಗ್ರಹಿಸಿದ್ದರೆ ಮಹಾಭೂತಸೃಷ್ಟಿಯನ್ನು ಮೊದಲು ಹೇಳಬೇಕು. ಆದರೆ ಇಲ್ಲಿ ಲೋಕಸೃಷ್ಟಿಯನ್ನೇ ಮೊದಲು ಹೇಳಿರುತ್ತದೆ. ಲೋಕಗಳೆಂದರೆ ಮಹಾ

1. ಇಲ್ಲಿ ಪರಮಾತ್ಮನನ್ನು ಹೇಳಿದೆ ಎಂದು ಒಪ್ಪಿದರೆ ವಾಕ್ಯಭೇದವಾಗುತ್ತದೆ ; ಆದ್ದರಿಂದ ಇದನ್ನು ಹಿಂದಿನ ವಾಕ್ಯಕ್ಕೆ ಅನುಗುಣವಾಗಿ ಸವಿಶೇಷಾತ್ಮನನ್ನೇ ಹೇಳಿದೆ ಎಂದು ಇಟ್ಟುಕೊಳ್ಳಬಹುದು ಎಂದು ಪೂರ್ವಪಕ್ಷಿಯ ಆಶಯ. ಇದು ಬ್ರಹ್ಮಾತ್ಮತ್ವವನ್ನು ಹೇಳುವ ವಸ್ತುವಾಕ್ಯವಾದ್ದರಿಂದ ಪರಮಾತ್ಮನನ್ನೇ ಗ್ರಹಿಸಬೇಕು; ಇಲ್ಲಿಯೂ ಆನಂದಾದಿಧರ್ಮಗಳನ್ನು ಉಪಸಂಹಾರಮಾಡಿಕೊಂಡು ಅರಿಯಬೇಕು ಎಂಬುದು ಸಿದ್ಧಾಂತಿಯ ಭಾವ.

ಭೂತಗಳ ಕೆಲಕೆಲವು ಸನ್ನಿವೇಶಗಳು. ಆದ್ದರಿಂದಲೇ ಅಂಭಃ ಎಂದುಮುಂತಾಗಿರುವದನ್ನು 'ದ್ಯುಲೋಕದ ಆಚೆಗಿರುವ ಆದು ಅಂಭವು' ಎಂದುಮುಂತಾದ (ವಾಕ್ಯ)ದಿಂದ ಲೋಕಗಳೆಂದೇ ಹೇಳಿರುತ್ತದೆ. **ಲೋಕಸೃಷ್ಟಿಯೋ ಪರಮೇಶ್ವರನಿಂದ ಅಧಿಷ್ಠಿತನಾದ ಯಾವನೋ ಮತ್ತೊಬ್ಬ ಈಶ್ವರನಿಂದ ಆಗುತ್ತದೆ ಎಂದು ಶ್ರುತಿಸ್ಮೃತಿಗಳಲ್ಲಿ ಕಂಡುಬರುತ್ತದೆ.** ಹಾಗೆಯೇ ಅಲ್ಲವೆ, "ಇದು ಮೊದಲು ಪುರುಷವಿಧನಾದ ಆತ್ಮನೇ ಆಗಿತ್ತು" (ಬೃ. ೧–೪–೧) ಮುಂತಾದ ಶ್ರುತಿಯಿರುತ್ತದೆ ? "ಅವನೇ ಪ್ರಥಮಶರೀರಿಯು, ಅವನೇ ಪುರುಷನೆನಿಸಿಕೊಳ್ಳುತ್ತಾನೆ ; ಭೂತಗಳ ಆದಿಕರ್ತನಾದ ಆ ಬ್ರಹ್ಮನು ಮೊದಲು ಉಂಟಾದನು" (?) ಎಂದು ಸ್ಮೃತಿಯೂ (ಇದೆ). ಐತರೇಯಿಗಳು ಕೂಡ[1] ಹಿಂದಿನ ಪ್ರಕರಣದಲ್ಲಿ "ಇನ್ನು ಆದ್ದರಿಂದ ರೇತಸ್ಸಿನಿಂದ ಸೃಷ್ಟಿ)ಯನ್ನು ಹೇಳಲಾಗುತ್ತದೆ). ದೇವತೆಗಳು ಪ್ರಜಾಪತಿಯ ರೇತಸ್ಸು...." (ಐ. ಆ. ೨–೧–೩) ಎಂಬಲ್ಲಿ ಪ್ರಜಾಪತಿಕರ್ತೃಕವಾದ ಬಗೆಬಗೆಯ ಸೃಷ್ಟಿಯನ್ನು ಪಠಿಸಿರುತ್ತಾರೆ. "ಇದು ಮೊದಲು ಪುರುಷವಿಧನಾದ ಆತ್ಮನೇ ಆಗಿತ್ತು" ( ಬೃ.೧–೪–೧ ) ಎಂಬಲ್ಲಿ (ಆ ಪ್ರಜಾಪತಿಯಲ್ಲಿ) ಆತ್ಮಶಬ್ದವನ್ನು ಪ್ರಯೋಗಿಸಿರುವದು ಕಂಡುಬರುತ್ತದೆ. ಉತ್ಪತ್ತಿಗಿಂತ ಮೊದಲು ಒಬ್ಬನೇ ( ಇದ್ದುಕೊಂಡು) ಅವಧಾರಣೆ ಮಾಡಿರುವದೂ ಅವನ ಕಾರ್ಯಗಳ ಅಪೇಕ್ಷೆಯಿಂದ ಹೊಂದುತ್ತದೆ. ಈಕ್ಷಣವೂ (ಯೋಚಿಸಿ ನೋಡಿದನೆಂಬುದೂ ) ಅವನು ಚೇತನನೆಂದು ಒಪ್ಪಿರುವದರಿಂದ ಹೊಂದುತ್ತದೆ. ಇದಲ್ಲದೆ "ಅವರಿಗೆ ಗೋವನ್ನು ತಂದನು ..... ಅವರಿಗೆ ಕುದುರೆಯನ್ನು ತಂದನು ... ಅವರಿಗೆ ಪುರುಷನನ್ನು ತಂದನು ; ಅವರು ಇಂತೆಂದರು .... " ಎಂಬೀ ಜಾತಿಯ, ಲೋಕದಲ್ಲಿ ವಿಶೇಷರಾಗಿರುವ ಆತ್ಮರುಗಳಲ್ಲಿ ಪ್ರಸಿದ್ಧವಾಗಿರುವ ವ್ಯಾಪಾರವಿಶೇಷವನ್ನೇ ಬಹಳವಾಗಿ ಇಲ್ಲಿ ಅನುಸರಿಸಿ (ಹೇಳಿರುತ್ತದೆ).[2] ಆದ್ದರಿಂದ ವಿಶೇಷವುಳ್ಳ ಯಾವನೋ ಒಬ್ಬ ಆತ್ಮನೇ ಆಗಿರಬೇಕು.

## ಸಿದ್ಧಾಂತ: ಇಲ್ಲಿ ಆತ್ಮಶಬ್ದದಿಂದ ಪರಮಾತ್ಮನನ್ನೇ ಹೇಳಿದೆ

(ಭಾಷ್ಯ)

೩೪೪. ಏವಂ ಪ್ರಾಪ್ತೇ ಬ್ರೂಮಃ । ಪರ ಏವಾತ್ಮಾ ಇಹ ಆತ್ಮಶಬ್ದೇನ ಗೃಹ್ಯತೇ । ಇತರವತ್ । ಯಥಾ ಇತರೇಷು ಸೃಷ್ಟಿವಚನೇಷು

1. ಶ್ರುತ್ಯಂತರದಲ್ಲಿ ಮಾತ್ರವೇ ಪ್ರಜಾಪತಿಯು ಸೃಷ್ಟಿಯನ್ನು ಹೇಳಿಲ್ಲ ; ಈ ಶ್ರುತಿಯಲ್ಲಿಯೂ ಹೇಳಿದೆ. ಆದ್ದರಿಂದ ಇಲ್ಲಿಯೂ ಆದನ್ನೇ ಹೇಳಿದೆ ಎಂದು ಭಾವ.

2. ಗೋವನ್ನು ತರುವದು, ದೇವತೆಗಳನ್ನು ಮಾತನಾಡಿಸುವದು– ಮುಂತಾದ ವ್ಯಾಪಾರವು ಕಾರ್ಯಕರಣಗಳಿಲ್ಲದ ಪರಮಾತ್ಮನಿಗೆ ಹೊಂದುವದಿಲ್ಲ.

“ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ” (ತೈ. ೨–೧) ಇತ್ಯೇವಮಾದಿಷು ಪರಸ್ಯ ಆತ್ಮನೋ ಗ್ರಹಣಮ್ । ಯಥಾ ಚ ಇತರಸ್ಮಿನ್ ಲೌಕಿಕಾತ್ಮಶಬ್ದಪ್ರಯೋಗೇ ಪ್ರತ್ಯಗಾತ್ಮೈವ ಮುಖ್ಯಃ ಆತ್ಮಶಬ್ದೇನ ಗೃಹ್ಯತೇ ತಥಾ ಇಹಾಪಿ ಭವಿತುಮರ್ಹತಿ । ಯತ್ರ ತು “ಆತ್ಮೈವೇದಮಗ್ರ ಆಸೀತ್” (ಬೃ ೧–೪–೧೧) ಇತ್ಯೇವಮಾದೌ ‘ಪುರುಷವಿಧಃ’ (ಬೃ. ೧–೪–೧) ಇತ್ಯೇವಮಾದಿ ವಿಶೇಷಣಾನ್ತರಂ ಶ್ರೂಯತೇ ಭವೇತ್ ತತ್ರ ವಿಶೇಷವತ ಆತ್ಮನೋ ಗ್ರಹಣಮ್ । ಅತ್ರ ಪುನಃ ಪರಮಾತ್ಮಗ್ರಹಣಾನುಗುಣಮೇವ ವಿಶೇಷಣಮಪಿ ಉತ್ತರಮ್ ಉಪಲಭ್ಯತೇ “ಸ ಈಕ್ಷತ ಲೋಕಾನ್ನು ಸೃಜಾ ಇತಿ” (ಐ.೧–೧) “ಸ ಇಮಾಲ್ಲೋಕಾನಸೃಜತ” (ಐ.೧–೧) ಇತ್ಯೇವಮಾದಿ । ತಸ್ಮಾತ್ ತಸ್ಯೈವ ಗ್ರಹಣಮ್ ನ್ಯಾಯ್ಯಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಹೇಳುತ್ತೇವೆ. ಇಲ್ಲಿ ಆತ್ಮಶಬ್ದದಿಂದ ಪರಮಾತ್ಮನನ್ನೇ ಗ್ರಹಿಸಬೇಕು. ಇತರ (ಸ್ಥಲಗಳಂತೆ) ಹೇಗೆ “ಆ ಈ ಆತ್ಮನಿಂದ ಆಕಾಶವು ಉಂಟಾಯಿತು” (ತೈ. ೨–೧) ಎಂಬಿವೇ ಮುಂತಾದ ಮಿಕ್ಕ ಸೃಷ್ಟಿವಚನಗಳಲ್ಲಿ ಪರಮಾತ್ಮನನ್ನು ಗ್ರಹಿಸುವೆವೋ; ಮತ್ತು ಹೇಗೆ ಇತರವಾದ ಲೌಕಿಕವಾದ ಆತ್ಮಶಬ್ದಪ್ರಯೋಗದಲ್ಲಿ[1] ಮುಖ್ಯಾರ್ಥವಾದ) ಪ್ರತ್ಯಗಾತ್ಮನನ್ನೇ ಆತ್ಮಶಬ್ದದಿಂದ ಗ್ರಹಿಸುವೆವೋ ಹಾಗೆ ಇಲ್ಲಿಯೂ ಆಗಬೇಕು.[2] ಎಲ್ಲಿಯಾದರೆ “ಇದು ಮೊದಲು ಆತ್ಮನೊಬ್ಬನೇ ಆಗಿತ್ತು” (ಬೃ. ೧–೪–೧) ಮುಂತಾದ ಸ್ಥಲದಲ್ಲಿ “ಪುರುಷವಿಧನಾದ” ಎಂಬೀ ಮುಂತಾದಾಗಿರುವ ಮತ್ತೊಂದು ವಿಶೇಷಣವು ಶ್ರುತಿಯಲ್ಲಿರುತ್ತದೆಯೋ ಅಲ್ಲಿ ವಿಶೇಷಸಹಿತನಾದ ಆತ್ಮನನ್ನು ಗ್ರಹಿಸುವದು ಆಗಬಹುದು; ಆದರೆ ಇಲ್ಲಿ “ಅವನು ಲೋಕಗಳನ್ನು ಸೃಜಿಸುವೆನು ಎಂದು ಯೋಚಿಸಿನೋಡಿದನು”, “ಅವನು ಈ ಲೋಕಗಳನ್ನು ಸೃಜಿಸಿದನು” (ಐ.೧–೧) ಎಂಬಿದೇ ಮುಂತಾದ, ಪರಮಾತ್ಮಗ್ರಹಣಕ್ಕೇ ಅನುಗುಣವಾದ ವಿಶೇಷಣವು ಮುಂದೆ ಸಿಕ್ಕುತ್ತದೆ. ಆದ್ದರಿಂದ ಆ(ಪರನ ಆತ್ಮ)ನನ್ನೇ ಗ್ರಹಿಸಬೇಕು ಎಂಬುದು ನ್ಯಾಯವು.

## ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ॥ ೧೭ ॥

೧೭. ಅನ್ವಯದಿಂದ (ಇದು ಸರಿಯಲ್ಲ) ಎಂದರೆ ಅವಧಾರಣೆಯಿರುವದರಿದ ಆಗಬಹುದು.

1. ಇದು ‘ಇತರವತ್’ ಎಂಬುದಕ್ಕೆ ಇನ್ನೊಂದು ವ್ಯಾಖ್ಯಾನ.

2. ಹಾಗೆಯೇ ಇಲ್ಲಿ ಸೃಷ್ಟಿವಚನವಿರುವದರಿಂದಲೂ ಆತ್ಮಶಬ್ದಪ್ರಯೋಗವಿರುವದರಿಂದಲೂ ಮುಖ್ಯಾರ್ಥವಾದ ಪರಮಾತ್ಮನನ್ನೇ ಗ್ರಹಿಸಬೇಕು.

# ಆತ್ಮೈಕತ್ವದ ಅವಧಾರಣೆಯಿರುವದರಿಂದ ಇದು ಪರಮಾತ್ಮನೇ

(ಭಾಷ್ಯ)

೩೪೫. ವಾಕ್ಯಾನ್ವಯದರ್ಶನಾತ್ ನ ಪರಮಾತ್ಮಗ್ರಹಣಮ್ ಇತಿ ಪುನರ್ಯದುಕ್ತಮ್ ತತ್ ಪರಿಹರ್ತವ್ಯಮ್ ಇತಿ । ಅತ್ರೋಚ್ಯತೇ "ಸ್ಯಾದವಧಾರಣಾತ್" ಇತಿ । ಭವೇದುಪಪನ್ನಂ ಪರಮಾತ್ಮನೋ ಗ್ರಹಣಮ್ । ಕಸ್ಮಾತ್ ? ಅವಧಾರಣಾತ್ । ಪರಮಾತ್ಮಗ್ರಹಣೇ ಹಿ ಪ್ರಾಗುತ್ಪತ್ತೇಃ ಆತ್ಮೈಕತ್ವಾವಧಾರಣಮ್ ಆಞ್ಜಸಮ್ ಅವಕಲ್ಪತೇ । ಅನ್ಯಥಾ ಹಿ ಅನಾಞ್ಜಸಂ ತತ್ ಪರಿಕಲ್ಪ್ಯೇತ । ಲೋಕಸೃಷ್ಟಿವಚನಂ ತು ಶ್ರುತ್ಯನ್ತರಸಿದ್ಧಮಹಾಭೂತಸೃಷ್ಟ್ಯನನ್ತರಮ್ ಇತಿ ಯೋಜಯಿಷ್ಯಾಮಿ । ಯಥಾ "ತತ್ತೇಜೋಽಸೃಜತ" (ಛಾಂ. ೬–೨–೩) ಇತ್ಯೇತತ್ ಶ್ರುತ್ಯನ್ತರಪ್ರಸಿದ್ಧವಿಯದ್ವಾಯುಸೃಷ್ಟ್ಯನನ್ತರಮ್ ಇತಿ ಅಯೂಯುಜಮ್ ಏವಮಿಹಾಪಿ । ಶ್ರುತ್ಯನ್ತರಪ್ರಸಿದ್ಧೋ ಹಿ ಸಮಾನವಿಷಯೋ ವಿಶೇಷಃ ಶ್ರುತ್ಯನ್ತರೇಷು ಉಪಸಂಹರ್ತವ್ಯೋ ಭವತಿ । ಯೋಽಪ್ಯಯಂ ವ್ಯಾಪಾರವಿಶೇಷಾನುಗಮಃ 'ತಾಭ್ಯೋ ಗಾಮಾನಯತ್' ಇತ್ಯೇವಮಾದಿಃ ಸೋಽಪಿ ವಿವಕ್ಷಿತಾರ್ಥಾವಧಾರಣಾನುಗುಣ್ಯೇನೈವ ಗೃಹೀತವ್ಯಃ । ನ ಹ್ಯಯಂ ಸಕಲಃ ಕಥಾಪ್ರಬನ್ಧೋ ವಿವಕ್ಷಿತಃ ಇತಿ ಶಕ್ಯತೇ ವಕ್ತುಮ್ । ತತ್ಪ್ರತಿಪತ್ತೌ ಪುರುಷಾರ್ಥಾಭಾವಾತ್ । ಬ್ರಹ್ಮಾತ್ಮತ್ವಂ ತು ಇಹ ವಿವಕ್ಷಿತಮ್ ತಥಾ ಹಿ ಅಮ್ಭಃಪ್ರಭೃತೀನಾಂ ಲೋಕಾನಾಂ ಲೋಕಪಾಲಾನಾಂ ಚ ಅಗ್ನ್ಯಾದೀನಾಂ ಸೃಷ್ಟಿಂ ಶಿಷ್ಟ್ವಾ ಕರಣಾನಿ ಕರಣಾಯತನಂ ಚ ಶರೀರಮ್ ಉಪದಿಶ್ಯ ಸ ಏವ ಸ್ರಷ್ಟಾ "ಕಥಂ ನ್ವಿದಂ ಮದೃತೇ ಸ್ಯಾತ್" (೧–೩) ಇತಿ ವೀಕ್ಷ್ಯ ಇದಂ ಶರೀರಂ ಪ್ರವಿವೇಶ ಇತಿ ದರ್ಶಯತಿ "ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ" (ಐ. ೧–೩) ಇತಿ । ಪುನಶ್ಚ "ಯದಿ ವಾಚಾಭಿವ್ಯಾಹೃತಂ ಯದಿ ಪ್ರಾಣೇನಾಭಿಪ್ರಾಣಿತಮ್" ಇತ್ಯೇವಮಾದಿನಾ ಕರಣವ್ಯಾಪಾರವಿವೇಚನಪೂರ್ವಕಂ "ಅಥ ಕೋಽಹಮ್" ಇತಿ ವೀಕ್ಷ್ಯ "ಸ ಏತಮೇವ ಬ್ರಹ್ಮ ತತಮಮಪಶ್ಯತ್" (ಐ. ೧–೩) ಇತಿ ಬ್ರಹ್ಮಾತ್ಮತ್ವದರ್ಶನಮ್ ಅವಧಾರಯತಿ । ತಥಾ ಉಪರಿಷ್ಟಾತ್ "ಏಷ ಬ್ರಹ್ಮೈಷ ಇನ್ದ್ರಃ" (ಐ. ೩–೧) ಇತ್ಯಾದಿನಾ ಸಮಸ್ತಭೇದಜಾತಂ ಸಹ ಮಹಾಭೂತೈರನುಕ್ರಮ್ಯ "ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ" (ಐ.೩–೧) ಇತಿ ಬ್ರಹ್ಮಾತ್ಮತ್ವದರ್ಶನಮೇವ ಅವಧಾರಯತಿ । ತಸ್ಮಾದ್ ಇಹ ಆತ್ಮಗೃಹೀತಿಃ ಇತ್ಯನಪವಾದಮ್ ॥

( ಭಾಷ್ಯಾರ್ಥ )

ವಾಕ್ಯಾನ್ವಯವು ಕಂಡುಬರುವದರಿಂದ ಪರಮಾತ್ಮನನ್ನು ಗ್ರಹಿಸಬಾರದು ಎಂದ. (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದನ್ನು ಪರಿಹರಿಸಬೇಕು. ಅದಕ್ಕೆ ಹೇಳುತ್ತೇವೆ. "ಸ್ಯಾದವಧಾರಣಾತ್" (ಅವಧಾರಣೆಯಿಂದ ಆಗಬಹುದು). ಪರಮಾತ್ಮನನ್ನು ಗ್ರಹಿಸುವದೇ ಉಪಪನ್ನವಾಗಿರುವದು. ಏಕೆ? ಎಂದರೆ ಅವಧಾರಣೆಮಾಡಿರುವದರಿಂದ. (ಇಲ್ಲಿ) ಪರಮಾತ್ಮನನ್ನು ಗ್ರಹಿಸಿದರೆ ಉತ್ಪತ್ತಿಗಿಂತ ಪೂರ್ವದಲ್ಲಿ ಆತ್ಮನು ಒಬ್ಬನೇ (ಇದ್ದನೆಂದು) ಅವಧಾರಣೆಮಾಡಿರುವದು ಮುಖ್ಯಾರ್ಥದಲ್ಲಿ ಹೊಂದುತ್ತದೆ. ಹಾಗಿಲ್ಲದಿದ್ದರೆ ಅದು ಅಮುಖ್ಯವೆಂದು ಕಲ್ಪಿಸಬೇಕಾಗುವದು. ಲೋಕಗಳನ್ನು ಸೃಷ್ಟಿಸಿದನೆಂದು ಹೇಳಿರುವದೋ ಎಂದರೆ ಶ್ರುತ್ಯಂತರದಲ್ಲಿ ಪ್ರಸಿದ್ಧವಾಗಿರುವ ಮಹಾಭೂತಗಳ ಸೃಷ್ಟಿಯ ಅನಂತರದಲ್ಲಿ ಎಂದು ಹೊಂದಿಸುವೆವು. ಹೇಗೆ "ಅದು ತೇಜಸ್ಸನ್ನು ಸೃಜಿಸಿತು" (ಛಾಂ. ೬-೨-೩) ಎಂಬುದು ಶ್ರುತ್ಯಂತರದಲ್ಲಿ ಪ್ರಸಿದ್ಧವಾದ ಆಕಾಶವಾಯುಗಳ ಸೃಷ್ಟಿಯಾದ ಬಳಿಕ ಎಂದು ಹೊಂದಿಸಿದೆವೋ[1] ಹಾಗೆಯೇ ಇಲ್ಲಿಯೂ. ಏಕೆಂದರೆ **ಶ್ರುತ್ಯಂತರದಲ್ಲಿ ಪ್ರಸಿದ್ಧವಾಗಿರುವ ಅದೇ ವಿಷಯದ ವಿಶೇಷವನ್ನು ಮತ್ತೊಂದು ಶ್ರುತಿಯಲ್ಲಿಯೂ ಉಪಸಂಹಾರಮಾಡಿಕೊಳ್ಳಬಹುದು.** ಇನ್ನು 'ಅವರಿಗೆ ಗೋವನ್ನು ತಂದನು' ಎಂದುಮುಂತಾಗಿರುವ ಈ ವ್ಯಾಪಾರವನ್ನು ಅನುಸರಿಸುವದಿದೆಯಷ್ಟೆ, ಅದನ್ನು ವಿವಕ್ಷಿತವಾದ ಅರ್ಥವನ್ನು ಅವಧಾರಣೆಮಾಡಿರುವದಕ್ಕೆ ಅನುಗುಣವಾಗಿಯೇ ಗ್ರಹಿಸಬೇಕು ; ಈ ಕಥಾಪ್ರಬಂಧವೆಲ್ಲವೂ ವಿವಕ್ಷಿತವಾಗಿದೆ ಎಂದು ಹೇಳುವದಕ್ಕಾಗುವದಿಲ್ಲವಷ್ಟೆ? ಏಕೆಂದರೆ ಅದನ್ನು ಅರಿತುಕೊಂಡರೆ (ಯಾವ) ಪುರುಷಾರ್ಥವೂ ಇರುವದಿಲ್ಲ.[2] ಬ್ರಹ್ಮಾತ್ಮತ್ವವಾದರೆ ಇಲ್ಲಿ ವಿವಕ್ಷಿತವಾಗಿರುತ್ತದೆ. ಹೇಗೆಂದರೆ, ಅಂಭಸ್ಸು ಮುಂತಾದ ಲೋಕಗಳನ್ನೂ ಅಗ್ನಿಯೇ ಮೊದಲಾದ ಲೋಕಪಾಲಕರನ್ನೂ ಸೃಷ್ಟಿ(ಮಾಡಿದನೆಂದು) ತಿಳಿಸಿ, ಕರಣಗಳನ್ನೂ ಕರಣಕ್ಕೆ ಆಶ್ರಯವಾಗಿರುವ ಶರೀರವನ್ನೂ ತಿಳಿಸಿ ಅದೇ ಸ್ರಷ್ಟೃವು "ಇದು ನಾನಿಲ್ಲದೆ ಹೇಗೆ ಇದ್ದೀತು?" ಎಂದು ಆಲೋಚಿಸಿಕೊಂಡು ಈ ಶರೀರವನ್ನು ಹೊಕ್ಕನು ಎಂದು "ಅವನು ಇದೇ ಎಲ್ಲೆಯನ್ನೇ ಸೀಳಿಕೊಂಡು ಈ ದ್ವಾರದಿಂದ ಒಳಹೊಕ್ಕನು" (ಐ. ೧-೩) ಎಂದು ಹೇಳಿದೆ.[3] ಮತ್ತೂ "ವಾಕ್ಕು ಮಾತನಾಡುವದಾದರೆ, ಪ್ರಾಣವು ಪ್ರಾಣನ ಕರ್ಮವನ್ನು ಮಾಡಿದರೆ" ಎಂದುಮುಂತಾಗಿ ಕರಣವ್ಯಾಪಾರ

1. ವಿಯದಧಿಕರಣನ್ಯಾಯದಿಂದ ಮಹಾಭೂತಸೃಷ್ಟಿಯಾದ ಬಳಿಕವೇ ಲೋಕಸೃಷ್ಟಿಯಾಯಿತೆಂದು ಉಪಸಂಹಾರಮಾಡಿಕೊಂಡರೆ ಯಾವ ವಿರೋಧವೂ ಇರುವದಿಲ್ಲ.

2 ಅದಕ್ಕೆ ಯಾವ ಫಲವೂ ಕಂಡುಬರುವದಿಲ್ಲ, ಶ್ರುತವಾಗಿಯೂ ಇಲ್ಲ.

3 ಆದ್ದರಿಂದ ಸ್ರಷ್ಟೃವೇ ಶರೀರದೊಳಗಿನ ಆತ್ಮನು ಎಂದಂತಾಯಿತು.

ಗಳನ್ನು ವಿವೇಚನೆಮಾಡುವದರ ಮೂಲಕವಾಗಿ "ಹಾಗಾದರೆ ನಾನು ಯಾರು?" ಎಂದು ಆಲೋಚನೆಮಾಡಿ "ಅವನು ಇದೇ ಪುರುಷನಾದ ಬ್ರಹ್ಮವು ವ್ಯಾಪಿಸಿಕೊಂಡಿರುವದನ್ನು ಕಂಡುಕೊಂಡನು" (ಐ. ೧–೩) ಎಂದು ಬ್ರಹ್ಮಾತ್ಮತ್ವದರ್ಶನವನ್ನು ಅವಧಾರಣಮಾಡಿರುತ್ತದೆ.[1] ಹಾಗೂ ಮುಂದೆ "ಇವನೇ ಬ್ರಹ್ಮ, ಇವನೇ ಇಂದ್ರ....." ಎಂದುಮುಂತಾಗಿ ಸಮಸ್ತಭೇದಜಾತವನ್ನೂ ಮಹಾಭೂತಗಳೊಡನೆ ಅನುಕ್ರಮವಾಗಿ ಹೇಳಿ "ಇದೆಲ್ಲವೂ ಪ್ರಜ್ಞಾನೇತ್ರವು, ಪ್ರಜ್ಞಾನದಲ್ಲಿ ನಿಂತಿರುವದು, ಲೋಕವು ಪ್ರಜ್ಞೆ ಎಂಬ ನೇತ್ರವುಳ್ಳದ್ದು, ಪ್ರಜ್ಞೆಯೇ ಪ್ರತಿಷ್ಠೆಯು, ಪ್ರಜ್ಞಾನವು ಬ್ರಹ್ಮವು" (ಐ. ೩–೧) ಎಂದು ಬ್ರಹ್ಮಾತ್ಮತ್ವದರ್ಶನವನ್ನೇ ಅವಧಾರಣೆಮಾಡಿರುತ್ತದೆ. ಆದ್ದರಿಂದ ಇಲ್ಲಿ ಆತ್ಮನನ್ನೇ ಗ್ರಹಿಸಬೇಕು ಎಂಬುದನ್ನು ಅಲ್ಲವೆನ್ನುವದಕ್ಕಾಗುವದಿಲ್ಲ.

(ಭಾಷ್ಯ)

ಅಪರಾ ಯೋಜನಾ—

(ಭಾಷ್ಯಾರ್ಥ)

(ಈ ಅಧಿಕರಣಕ್ಕೆ) ಮತ್ತೊಂದು (ರೀತಿಯಿಂದ) ಯೋಜನೆಮಾಡಬಹುದು :

## ವಾಜಸನೇಯ ೪–೩೭, ಛಾಂದೋಗ್ಯ ೬–೨–೧ ಇವುಗಳ ವಿಚಾರಕ್ಕೆ ಸಂಶಯಪೂರ್ವಪಕ್ಷಗಳು

**ಆತ್ಮಗೃಹೀತಿರಿತರವದುತ್ತರಾತ್ ॥ ೧೮ ॥**

೧೮. (ಛಾಂದೋಗ್ಯ ೬-೨-೧ರಲ್ಲಿ) ಮತ್ತೊಂದು ಶ್ರುತಿಯಂತೆಯೇ ಆತ್ಮನನ್ನೇ ಗ್ರಹಿಸಬೇಕು ; ಏಕೆಂದರೆ ಮುಂದೆ (ತಾದಾತ್ಮ್ಯವನ್ನು) ಹೇಳಿರುತ್ತದೆ.

(ಭಾಷ್ಯ)

೩೪೭. ವಾಜಸನೇಯಕೇ "ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯನ್ತರ್ಜ್ಯೋತಿಃ ಪುರುಷಃ" (ಬೃ. ೪–೩–೭) ಇತಿ ಆತ್ಮಶಬ್ದೇನ ಉಪಕ್ರಮ್ಯ ತಸ್ಯೈವ ಸರ್ವಸಙ್ಗವಿನಿರ್ಮುಕ್ತತ್ವಪ್ರತಿಪಾದನೇನ ಬ್ರಹ್ಮಾತ್ಮತ್ವಮ್ ಅವಧಾರಯತಿ । ತಥಾ ಹಿ ಉಪಸಂಹರತಿ "ಸ ವಾ ಏಷ ಮಹಾನಜ ಆತ್ಮಾಜರೋಽಮರೋಽಮೃತೋಽಭಯೋ ಬ್ರಹ್ಮ" (ಬೃ. ೪–೪–೨೫) ಇತಿ । ಛಾಂದೋಗ್ಯೇ ತು "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ. ೬–೨–೧) ಇತಿ ಅನ್ತರೇಣೈವ ಆತ್ಮಶಬ್ದಮ್ ಉಪಕ್ರಮ್ಯ ಉದರ್ಕೇ "ಸ ಆತ್ಮಾ ತತ್ತ್ವಮಸಿ" (ಛಾಂ. ೬–೮–೭) ಇತಿ ತಾದಾ

1. ಆತ್ಮೈಕ್ಯವನ್ನು ಅವಧಾರಣೆಮಾಡಿರುವಂತೆ ಆತ್ಮೈಕ್ಯದರ್ಶನವನ್ನೂ ಅವಧಾರಣೆಮಾಡಿದೆ.

ತ್ಮ್ಯೇವ ಉಪಸಂಹರತಿ । ತತ್ರ ಸಂಶಯಃ ತುಲ್ಯಾರ್ಥತ್ವಂ ಕಿಮನಯೋಃ ಸ್ಯಾತ್, ಅತುಲ್ಯಾರ್ಥತ್ವಂ ವಾ ಇತಿ । ಅತುಲ್ಯಾರ್ಥತ್ವಮ್ ಇತಿ ತಾವತ್ ಪ್ರಾಪ್ತಮ್ । ಅತುಲ್ಯತ್ವಾತ್ ಆಮ್ನಾನಯೋಃ । ನ ಹಿ ಆಮ್ನಾನವೈಷಮ್ಯೇ ಸತಿ ಅರ್ಥಸಾಮ್ಯಂ ಯುಕ್ತಂ ಪ್ರತಿಪತ್ತುಮ್ । ಆಮ್ನಾನತನ್ತ್ರತ್ವಾತ್ ಅರ್ಥ ಪರಿಗ್ರಹಸ್ಯ । ವಾಜಸನೇಯಕೇ ಚ ಆತ್ಮಶಬ್ದೋಪಕ್ರಮಾತ್ ಆತ್ಮತತ್ತ್ವೋಪ ದೇಶಃ ಇತಿ ಗಮ್ಯತೇ । ಛಾಂದೋಗ್ಯೇ ತು ಉಪಕ್ರಮವಿಪರ್ಯಯಾತ್ ಉಪದೇಶವಿಪರ್ಯಯಃ । ನನು ಛನ್ದೋಗಾನಾಮಪಿ ಅಸ್ತಿ ಉಪರ್ಕೇ ತಾದಾತ್ಮ್ಯೋಪದೇಶಃ ಇತ್ಯುಕ್ತಮ್ । ಸತ್ಯಮುಕ್ತಮ್ । ಉಪಕ್ರಮತನ್ತ್ರತ್ವಾತ್ ಉಪಸಂಹಾರಸ್ಯ ತಾದಾತ್ಮ್ಯಸಂಪತ್ತಿಃ ಸಾ ಇತಿ ಮನ್ಯತೇ ॥

(ಭಾಷ್ಯಾರ್ಥ)

ವಾಜಸನೇಯಕದಲ್ಲಿ "ಆತ್ಮನು ಯಾರು ? ಯಾವನು ಪ್ರಾಣಗಳಲ್ಲಿ ವಿಜ್ಞಾನಮಯನಾಗಿ ಹೃದಯದೊಳಗೆ ಜ್ಯೋತಿರ್ಮಯನಾದ ಪುರುಷನಿರು ವನೋ" (ಬೃ. ೪-೩-೭) ಎಂದು ಆತ್ಮಶಬ್ದದಿಂದ ಉಪಕ್ರಮಿಸಿ ಅವಸಿಗೆ ಸರ್ವಸಂಗರಾಹಿತ್ಯವನ್ನು ಪ್ರತಿಪಾದಿಸಿ ಬ್ರಹ್ಮಾತ್ಮತ್ವವನ್ನು ಅವಧಾರಣೆಮಾಡಿದೆ. ಆದ್ದರಿಂದಲೇ "ಈತನೇ ಮಹಾನ್ ಅಜನಾದ ಆತ್ಮನು, ಅಜರನು, ಅಮರನು, ಅಮೃತನು, ಅಭಯನು, ಬ್ರಹ್ಮವು" (ಬೃ. ೪-೪-೨೫) ಎಂದು ಉಪಸಂಹಾರ ಮಾಡಿರುತ್ತದೆ. ಛಾಂದೋಗ್ಯದಲ್ಲಾದರೋ "ಸೋಮ್ಯನೆ, ಇದು ಮೊದಲು ಸತ್ತೇ ಆಗಿತ್ತು, ತನಗೆರಡನೆಯದಿಲ್ಲದ ಒಂದೇ ಆಗಿತ್ತು" (ಛಾಂ. ೬-೨-೧) ಎಂದು ಆತ್ಮಶಬ್ದವಿಲ್ಲದೆಯೇ ಉಪಕ್ರಮಿಸಿ ಉಪಸಂಹಾರದಲ್ಲಿ "ಅದು ಆತ್ಮನು, ನೀನು ಅದಾಗಿರುವೆ" (ಛಾಂ. ೬-೮-೭) ಎಂದು ತಾದಾತ್ಮ್ಯವನ್ನು ಉಪದೇಶಿ ಸಿರುತ್ತದೆ. ಇಲ್ಲಿ ಸಂಶಯವೇನೆಂದರೆ, ಈ ಆಮ್ನಾನಗಳಿಗೆ ಸಮಾನವಾದ ಅರ್ಥವಿರುವದೊ, ಅಸಮಾನವಾದ (ಬೇರೆಬೇರೆಯ) ಅರ್ಥ(ವಿರುವದೊ) ?[1]

---

1. ಇಲ್ಲಿ ಅಧಿಕರಣಕ್ಕೆ ವ್ಯಾಖ್ಯಾಂತರವನ್ನು ಬರೆದಿರುವದೇಕೆಂಬ ಬಗ್ಗೆ ಭಾಮತಿ ಯಲ್ಲಿ ಏನನ್ನೂ ಹೇಳಿಲ್ಲ. ನ್ಯಾಯನಿರ್ಣಯದಲ್ಲಿಯೂ ರತ್ನಪ್ರಭಾವ್ಯಾಖ್ಯಾನದಲ್ಲಿಯೂ ಹಿಂದಿನ ವರ್ಣಕದಲ್ಲಿ ವಿದ್ಯೈಕ್ಯವೂ ಗುಣೋಪಸಂಹಾರವೂ ಸ್ಫುಟವಾಗಿಲ್ಲವೆಂಬ ಕಾರಣ ವನ್ನು ಕೊಟ್ಟಿದೆ. ಆದರೆ ಅಲ್ಲಿ ವಾಕ್ಯಭೇದವಾಗುವದೆಂಬ ಅನಿಷ್ಟನಿವಾರಣೆಗಾಗಿಯೂ ಲೋಕಸೃಷ್ಟಿ ಮುಂತಾದ ಲಿಂಗಗಳಿಂದ ಹಿರಣ್ಯಗರ್ಭನ ವಾಕ್ಯವದೆಂದು ಹೇಳಿದೆ; ಆದ್ದರಿಂದ ಹಿಂದಿನ ಪ್ರಕರಣದಲ್ಲಿರುವಂತೆ ಆತ್ಮವಾಕ್ಯವೂ · ಉಪಾಸನಾವಾಕ್ಯವಾಗುತ್ತದೆ. ಇಲ್ಲಿ ಉಪಕ್ರಮಭೇದದಿಂದ ವಿದ್ಯಾಭೇದವನ್ನು ಶಂಕಿಸಿ ಸಮಾಧಾನಮಾಡಿರುತ್ತದೆ. ಎರಡು ವರ್ಣಕಗಳಲ್ಲಿಯೂ ಸಗುಣವಾಕ್ಯವೊ, ನಿರ್ಗುಣವಾಕ್ಯವೊ ; ಉಪಾಸನಾವಾಕ್ಯವೊ, ವಸ್ತುಪ್ರತಿಪಾದನವಾಕ್ಯವೊ- ಎಂಬವನ್ನು ವಿವೇಚನೆಮಾಡುವದು ಸಮಾನವಾದರೂ ಸಂಶಯಪೂರ್ವಪಕ್ಷಗಳ ಬೀಜವು ಬೇರೆ ಎಂಬುದಿಷ್ಟೇ ಕಾರಣ. ಒಂದೇ ಅಧಿಕರಣದಲ್ಲಿ ಎರಡು ನ್ಯಾಯಗಳನ್ನು ಹೇಳಿದಂತಾಗುತ್ತದೆ.

ಅಸಮಾನವಾದ ಅರ್ಥವೇ ಎಂದು ಮೊದಲು (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆಂದರೆ ಆಮ್ನಾನಗಳು ಅಸಮಾನವಾಗಿರುತ್ತವೆ. ಆಮ್ನಾನವು ಸಮನಾಗಿಲ್ಲದಿರುವಾಗ ಅರ್ಥವು ಒಂದೇ ಎಂದು ತಿಳಿಯುವದು ಸರಿಯಲ್ಲ; ಏಕೆಂದರೆ ಅರ್ಥವನ್ನು ಸ್ವೀಕರಿಸುವದೆಂಬುದು ಆಮ್ನಾನಕ್ಕೆ ಅಧೀನವಾಗಿರುತ್ತದೆ. ವಾಜಸನೇಯಕದಲ್ಲಿ ಆತ್ಮಶಬ್ದದಿಂದ ಉಪಕ್ರಮಿಸಿರುವದರಿಂದ ಆತ್ಮತತ್ತ್ವದ ಉಪದೇಶವದು ಎಂದು ಗೊತ್ತಾಗುತ್ತದೆ. ಛಾಂದೋಗ್ಯದಲ್ಲಾದರೆ ಉಪಕ್ರಮವು ಬೇರೆ ವಿಧವಾಗಿರುವದರಿಂದ ಉಪದೇಶವೂ ಬೇರೆಯಾಗಿರಬೇಕು.

(ಆಕ್ಷೇಪ) :– ಛಂದೋಗರಿಗೂ ಉಪಸಂಹಾರದಲ್ಲಿ ತಾದಾತ್ಮ್ಯದ ಉಪದೇಶವೇ ಇದೆ ಎಂದು ಹೇಳಿದೆವಲ್ಲ ![1]

(ಪರಿಹಾರ) :– ನಿಜ, ಹೇಳಿದಿರಿ. (ಆದರೆ) **ಉಪಸಂಹಾರವು ಉಪಕ್ರಮಕ್ಕೆ ಅಧೀನವಾಗಿರುವದರಿಂದ ಅದು ತಾದಾತ್ಮ್ಯಸಂಪತ್ತಿಯು ಎಂದು ಗೊತ್ತುಮಾಡಬೇಕಾಗಿದೆ**[2].

## ಛಾಂದೋಗ್ಯದಲ್ಲಿ ಸಚ್ಛಬ್ದದಿಂದ ಆತ್ಮಗ್ರಹಣವನ್ನೇ ಮಾಡಬೇಕು

(ಭಾಷ್ಯ)

**೩೪೮. ತಥಾ ಪ್ರಾಪ್ತೇ ಅಭಿಧೀಯತೇ । ಆತ್ಮಗೃಹೀತಿಃ "ಸದೇವ ಸೋಮ್ಯೇದಮಗ್ರ ಆಸೀತ್" (ಛಾಂ.೬–೨–೧) ಇತ್ಯತ್ರ ಛನ್ದೋಗಾನಾಮಪಿ ಭವಿತುಮರ್ಹತಿ । ಇತರವತ್ । ಯಥಾ "ಕತಮ ಆತ್ಮಾ" (ಬೃ. ೪–೩–೭) ಇತ್ಯತ್ರ ವಾಜಸನೇಯಿನಾಮ್ ಆತ್ಮಗೃಹೀತಿಃ ತದ್ವದೇವ । ಕಸ್ಮಾತ್? ಉತ್ತರಾತ್ ತಾದಾತ್ಮ್ಯೋಪದೇಶಾತ್ ॥**

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. "ಸೋಮ್ಯನೆ, ಇದು ಮೊದಲು ಸತ್ತೇ ಆಗಿದ್ದಿತು" (ಛಾಂ.೬–೨–೧) ಎಂಬಲ್ಲಿ ಛಂದೋಗರೂ ಆತ್ಮಗ್ರಹಣವನ್ನೇ ಮಾಡಬೇಕು. ಇತರರಂತೆ·

---

1. ಇಲ್ಲಿ ತಾದಾತ್ಮ್ಯವೆಂದರೆ ಐಕ್ಯವೇ ಎಂಬುದನ್ನು ಲಕ್ಷಿಸಬೇಕು ; ಭೇದಸಹಿಷ್ಣುವಾದ ಅಭೇದವೆಂಬ ಅರ್ಥದಲ್ಲಿ ಭಾಷ್ಯಕಾರರು ಈ ಶಬ್ದವನ್ನು ಪ್ರಯೋಗಿಸುವದಿಲ್ಲ.

2. ಉಪಕ್ರಮವು ಉಪಸಂಹಾರಕ್ಕಿಂತ ಪ್ರಬಲ ; ಆದ್ದರಿಂದ ಹಾಗೆಂದು ಉಪಾಸನೆಮಾಡಬೇಕೆಂದು ನಿಶ್ಚಯಿಸಬೇಕು.

(ಇದರ ವಿವರ): ಹೇಗೆ "ಆತ್ಮನು ಯಾರು ?" (ಬೃ. ೪-೩-೭) ಎಂಬಲ್ಲಿ ವಾಜಸನೇಯಿಗಳು ಆತ್ಮನನ್ನು ಗ್ರಹಿಸಬೇಕೋ, ಹಾಗೆಯೇ. ಏಕೆ ? ಎಂದರೆ ಮುಂದೆ ಇರುವ ತಾದಾತ್ಮ್ಯೋಪದೇಶದಿಂದ[1].

**ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ॥ ೧೭ ॥**

೧೭. ಅನ್ವಯದಿಂದ (ಅಲ್ಲ) ಎಂದರೆ, ಅವಧಾರಣೆಯಿಂದ ಆಗಬಹುದು.

## ಛಾಂದೋಗ್ಯದಲ್ಲಿ ಆತ್ಮೋಪಕ್ರಮವಿಲ್ಲದಿದ್ದರೂ ಅವಧಾರಣೆಯಿಂದೆ

(ಭಾಷ್ಯ)

೩೪೯. ಯದುಕ್ತಮ್ ಉಪಕ್ರಮಾನ್ವಯಾತ್ ಉಪಕ್ರಮೇ ಚ ಆತ್ಮಶಬ್ದಶ್ರವಣಾಭಾವಾತ್ ನಾತ್ಮಗೃಹೀತಿಃ ಇತಿ ತಸ್ಯ ಕಃ ಪರಿಹಾರ ಇತಿ ಚೇತ್ ಸೋಽಭಿಧೀಯತೇ 'ಸ್ಯಾದವಧಾರಣಾತ್' ಇತಿ । ಭವೇದುಪಪನ್ನಾ ಆತ್ಮಗೃಹೀತಿಃ । ಅವಧಾರಣಾತ್ । ತಥಾ ಹಿ "ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮ್" (ಛಾಂ. ೬-೧-೩) ಇತ್ಯೇಕವಿಜ್ಞಾನೇನ ಸರ್ವವಿಜ್ಞಾನಮ್ ಅವಧಾರ್ಯ ತತ್ಸಂಪಿಪಾದಯಿಷಯಾ "ಸದೇವ" ಇತ್ಯಾಹ । ತಚ್ಚ ಆತ್ಮಗೃಹೀತೌ ಸತ್ಯಾಂ ಸಂಪದ್ಯತೇ । ಅನ್ಯಥಾ ಹಿ ಯೋಽಯಂ ಮುಖ್ಯ ಆತ್ಮಾ ಸ ನ ವಿಜ್ಞಾತ ಇತಿ ನೈವ ಸರ್ವವಿಜ್ಞಾನಂ ಸಂಪದ್ಯೇತ । ತಥಾ ಪ್ರಾಗುತ್ಪತ್ತೇರೇಕತ್ವಾವಧಾರಣಮ್ ಜೀವಸ್ಯ ಚ ಆತ್ಮಶಬ್ದೇನ ಪರಾಮರ್ಶಃ, ಸ್ವಾಪಾವಸ್ಥಾಯಾಂ ಚ ತತ್ಸ್ವಭಾವಸಂಪತ್ತಿಕಥನಮ್, ಪರಿಚೋದನಾಪೂರ್ವಕಂ ಚ ಪುನಃಪುನಃ "ತತ್ತ್ವಮಸಿ" (ಛಾಂ. ೬-೮-೭) ಇತ್ಯವಧಾರಣಮ್ ಇತಿ ಸರ್ವಮೇತತ್ ತಾದಾತ್ಮ್ಯಪ್ರತಿಪಾದನಾಯಾಮೇವ ಅವಕಲ್ಪತೇ ನ ತಾದಾತ್ಮ್ಯಸಂಪಾದನಾಯಾಮ್ ॥

(ಭಾಷ್ಯಾರ್ಥ)

ಉಪಕ್ರಮದ ಅನ್ವಯವಿರುವದರಿಂದಲೂ[2] ಉಪಕ್ರಮದಲ್ಲಿ ಆತ್ಮಶಬ್ದದ ಶ್ರವಣವಿಲ್ಲದಿರುವದರಿಂದಲೂ ಆತ್ಮನನ್ನು ಗ್ರಹಿಸತಕ್ಕದ್ದಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದಕ್ಕೆ ಪರಿಹಾರವೇನು ? ಅದನ್ನು 'ಸ್ಯಾದವಧಾರ

---

1. ಎರಡು ಕಡೆಯಲ್ಲಿಯೂ ತಾದಾತ್ಮ್ಯೋಪದೇಶವಿದೆ.

2. ಉಪಕ್ರಮವು ಉಪಸಂಹಾರದವರೆಗೂ ಇದ್ದು ಉಪಸಂಹಾರವು ಉಪಕ್ರಮಕ್ಕೆ ಅಧೀನವಾಗಿರುವದರಿಂದಲೂ.

ಣಾತ್’ (ಅವಧಾರಣೆಯಿಂದ ಆಗಬಹುದು) ಎಂದು ಹೇಳಿರುತ್ತದೆ. ಇಲ್ಲಿ ಆತ್ಮನನ್ನು ಗ್ರಹಿಸುವದೇ ಆಗಬಹುದು. ಏಕೆಂದರೆ ಅವಧಾರಣೆಯಿಡೆ. ಹೇಗೆಂದರೆ, “ಯಾವದರಿಂದ ಅಶ್ರುತವಾದದ್ದು ಶ್ರುತವಾಗುತ್ತದೆಯೋ ಅಮತವಾದದ್ದು ಮತವಾಗುತ್ತದೆಯೋ, ಅವಿಜ್ಞಾತವಾದದ್ದು ವಿಜ್ಞಾತವಾಗುತ್ತದೆಯೋ” (ಛಾಂ. ೬-೧-೩) ಎಂದು ಒಂದನ್ನು ಅರಿತುಕೊಂಡದ್ದರಿಂದ ಎಲ್ಲವನ್ನೂ ಅರಿತಂತೆ ಎಂದು ಅವಧಾರಣೆಮಾಡಿ ಅದನ್ನು ತೋರಿಸಿಕೊಡುವದಕ್ಕಾಗಿ “ಸದೇವ” (ಸತ್ತೇ) ಎಂದು ಹೇಳಿರುತ್ತದೆ. ಅದು ಆತ್ಮನನ್ನು ಗ್ರಹಿಸಿದರೇ ತೋರಿಸಿಕೊಟ್ಟಂತೆ ಆಗುತ್ತದೆ[1]. ಏಕೆಂದರೆ ಹಾಗಿಲ್ಲದಿದ್ದರೆ ಈ ಮುಖ್ಯಾತ್ಮ ನಿದಾನಲ್ಲ, ಅವನನ್ನು ಅರಿತಂತೆ ಆಗುವದಿಲ್ಲವಾಗಿ ಸರ್ವವಿಜ್ಞಾನವೇ ಆಗಲಾರದು. ಇದರಂತೆ ಉತ್ಪತ್ತಿಗಿಂತ ಪೂರ್ವದಲ್ಲಿ ಏಕತ್ವವನ್ನು ಅವಧಾರಣೆ ಮಾಡಿರುವದು[2] ಜೀವನನ್ನು ಆತ್ಮಶಬ್ದದಿಂದ ಪರಾಮರ್ಶಿಸಿರುವದು, ನಿದ್ರಾವಸ್ಥೆಯಲ್ಲಿ ಆ (ಆತ್ಮನ) ಸ್ವಭಾವವನ್ನು ಪಡೆದುಕೊಳ್ಳುತ್ತಾನೆಂದು ಹೇಳಿರುವದು, ಪ್ರಶ್ನಪೂರ್ವಕವಾಗಿ ಮತ್ತೆಮತ್ತೆ “ಅದೇ ನೀನಾಗಿರುವೆ” (ಛಾಂ. ೬-೮-೭) ಎಂದು ಅವಧಾರಣೆಮಾಡಿರುವದು[3] –ಎಂಬಿದೆಲ್ಲವೂ ತಾದಾತ್ಮ್ಯವನ್ನು ಪ್ರತಿಪಾದನೆಮಾಡಬೇಕೆಂದಿದ್ದರೇ ಹೊಂದುತ್ತದೆಯೇ ಹೊರತು ತಾದಾತ್ಮ್ಯವನ್ನು ಸಂಪಾದನೆಮಾಡಬೇಕೆಂದಿದ್ದರೆ (ಹೊಂದು)ವದಿಲ್ಲ[4].

## ಪೂರ್ವಪಕ್ಷದ ಯುಕ್ತಿಗಳ ಖಂಡನೆ

(ಭಾಷ್ಯ)

೩೫೦. ನ ಚಾತ್ರ ಉಪಕ್ರಮತನ್ತ್ರತ್ವೋಪನ್ಯಾಸೋ ನ್ಯಾಯ್ಯಃ। ನ ಹಿ ಉಪಕ್ರಮೇ ಆತ್ಮತ್ವಸಂಕೀರ್ತನಮ್ ಅನಾತ್ಮತ್ವಸಂಕೀರ್ತನಂ ವಾ ಅಸ್ತಿ। ಸಾಮಾನ್ಯೋಪಕ್ರಮಶ್ಚ ನ ವಾಕ್ಯಶೇಷಗತೇನ ವಿಶೇಷೇಣ ವಿರುಧ್ಯತೇ। ವಿಶೇಷಾಕಾಙ್ಕ್ಷಿತ್ವಾತ್ ಸಾಮಾನ್ಯಸ್ಯ। ಸಚ್ಛಬ್ದಾರ್ಥೋಽಪಿ ಚ ಪರ್ಯಾಲೋಚ್ಯಮಾನಃ ನ ಮುಖ್ಯಾದಾತ್ಮನೋಽನ್ಯಃ ಸಂಭವತಿ। ಅತೋಽನ್ಯಸ್ಯ ವಸ್ತುಜಾತಸ್ಯ ಆರಮ್ಭಣಶಬ್ದಾದಿಭ್ಯೋಽನೃತತ್ವೋಪಪತ್ತೇಃ। ಆಮ್ನಾನ

---

1. ಏಕೆಂದರೆ ಆತ್ಮನನ್ನು ಅರಿತರೆ ಎಲ್ಲವನ್ನೂ ಅರಿತಂತೆ; ಆತ್ಮನ ಕಾರ್ಯವೇ ಎಲ್ಲವೂ. 2. ಅವಧಾರಣಾತ್ ಎಂಬುದಕ್ಕೆ ಇನ್ನೊಂದರ್ಥ.

3. ಅವಧಾರಣಾತ್ ಎಂಬುದಕ್ಕೆ ಮತ್ತೊಂದು ಅರ್ಥ.

4. ಪ್ರತಿಪಾದನೆ ಎಂದರೆ ಇದ್ದದ್ದನ್ನು ಹೇಳುವದು; ಸಂಪಾದನವೆಂದರೆ ಹಾಗೆಂದು ಕಲ್ಪಿಸಿಕೊಳ್ಳುವದು.

ವೈಷಮ್ಯಮಪಿ ನಾವಶ್ಯಮ್ ಅರ್ಥವೈಷಮ್ಯಮ್ ಆವಹತಿ । 'ಆಹರ ಪಾತ್ರಮ್', 'ಪಾತ್ರಮ್ ಆಹರ'– ಇತ್ಯೇವಮಾದಿಷು ಅರ್ಥಸಾಮ್ಯೇಽಪಿ ತದ್ದರ್ಶನಾತ್ । ತಸ್ಮಾತ್ ಏವಂಜಾತೀಯಕೇಷು ವಾಕ್ಯೇಷು ಪ್ರತಿಪಾದನ ಪ್ರಕಾರಭೇದೇಽಪಿ ಪ್ರತಿಪಾದ್ಯಾರ್ಥಾಭೇದಃ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಇಲ್ಲಿ ಉಪಕ್ರಮಕ್ಕೆ (ಉಪಸಂಹಾರವು) ಅಧೀನವಾಗಿರಬೇಕೆಂಬುದನ್ನು ಹೇಳಿರುವದೂ ಯುಕ್ತವಲ್ಲ. ಏಕೆಂದರೆ ಉಪಕ್ರಮದಲ್ಲಿ ಆತ್ಮನೆಂದು ಹೇಳಿರುವದಾಗಲಿ, ಆತ್ಮನಲ್ಲವೆಂದು ಹೇಳಿರುವದಾಗಲಿ ಇಲ್ಲ. **ಸಾಮಾನ್ಯವನ್ನು ಉಪಕ್ರಮಿಸಿರುವದು ವಾಕ್ಯಶೇಷದಲ್ಲಿರುವ ವಿಶೇಷಕ್ಕೆ ವಿರುದ್ಧವಲ್ಲ**[1]**; ಏಕೆಂದರೆ ಸಾಮಾನ್ಯವು** ವಿಶೇಷವನ್ನು ಬಯಸುತ್ತದೆ. ಸಚ್ಛಬ್ದದ ಅರ್ಥವನ್ನು ಪರ್ಯಾಲೋಚನೆಮಾಡಿದರೂ ಮುಖ್ಯಾತ್ಮನಿಗಿಂತ (ಅದು) ಬೇರೆಯಾಗಲೇ ಆರದು ; ಏಕೆಂದರೆ ಈ (ಆತ್ಮನಿ)ಗಿಂತ ಬೇರೆಯಾದ ವಸ್ತುಜಾತವು ಆರಂಭಣಶಬ್ದವೇ ಮುಂತಾದವುಗಳಿಂದ ಅನೃತವೆಂಬುದೇ ಯುಕ್ತವಾಗುತ್ತದೆ. ಆಮ್ನಾನವೈಷಮ್ಯವೂ[2] ಅವಶ್ಯವಾಗಿ ಅರ್ಥವು ಅಸಮಾನವೆಂಬುದನ್ನೇ ತೋರಿಸುವದಿಲ್ಲ; ಏಕೆಂದರೆ 'ತೆಗೆದುಕೊಂಡು ಬಾ, ಪಾತ್ರವನ್ನು', 'ಪಾತ್ರವನ್ನು ತೆಗೆದುಕೊಂಡು ಬಾ' ಎಂದು ಮುಂತಾಗಿರುವ ಕಡೆಗಳಲ್ಲಿ ಅರ್ಥವು ಸಮಾನವಾಗಿದ್ದರೂ ಆ (ಪಾಠವೈಷಮ್ಯವು) ಕಂಡುಬರುತ್ತದೆ. ಆದ್ದರಿಂದ ಈ ಜಾತಿಯ ವಾಕ್ಯಗಳಲ್ಲಿ ಪ್ರತಿಪಾದನ ಪ್ರಕಾರವು ಭಿನ್ನವಾದರೂ ಪ್ರತಿಪಾದ್ಯವಾದ ಅರ್ಥವು ಬೇರೆಯಲ್ಲ ಎಂದು ಸಿದ್ಧವಾಯಿತು.

## ೮. ಕಾರ್ಯಾಖ್ಯಾನಾಧಿಕರಣ

(ಛಾಂದೋಗ್ಯಬೃಹದಾರಣ್ಯಕಗಳಲ್ಲಿರುವ ಪ್ರಾಣಸಂವಾದದಲ್ಲಿ ಅನಗ್ನತಾಬುದ್ಧಿಯೇ ವಿಹಿತವಾಗಿದೆ.)

**ಕಾರ್ಯಾಖ್ಯಾನಾದಪೂರ್ವಮ್** ॥ ೧೮ ॥

೧೮. ಕಾರ್ಯವನ್ನೇ ಹೇಳಿರುವದರಿಂದ ಅಪೂರ್ವವಾದದ್ದೇ (ವಿಹಿತವಾಗಿದೆ).

---

1. ಸತ್ತೆಂಬುದು ಸಾಮಾನ್ಯ, ಆತ್ಮನೆಂಬುದು ವಿಶೇಷ ಎಂದು ಒಪ್ಪಿ ಹೀಗೆಂದಿದೆ.
2. ಉಪಕ್ರಮವು ಬೇರೆಬೇರೆಯಾಗಿರುವದೆಂಬ ಪಾಠದ ಅಸಮಾನತೆಯು.

# ಪ್ರಾಣಸಂವಾದದಲ್ಲಿ ಆಚಮನಾನಗ್ನತಾಬುದ್ಧಿವಿಷಯಕ್ಕೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೩೫೧. ಛನ್ದೋಗಾ ವಾಜಸನೇಯಿನಶ್ಚ ಪ್ರಾಣಸಂವಾದೇ ಶ್ವಾದಿ ಮರ್ಯಾದಂ ಪ್ರಾಣಸ್ಯಾನ್ನಮ್ ಆಮ್ನಾಯ ತಸ್ಯೈವ ಅಪೋ ವಾಸ ಆಮನನ್ತಿ। ಅನನ್ತರಂ ಚ ಛನ್ದೋಗಾ ಆಮನನ್ತಿ "ತಸ್ಮಾದ್ ವಾ ಏತದಶಿಷ್ಯನ್ತಃ ಪುರಸ್ತಾಚ್ಚೋಪರಿಷ್ಟಾಚ್ಚಾದ್ಭಿಃ ಪರಿದಧತಿ" (ಛಾಂ. ೫-೨-೨) ಇತಿ। ವಾಜಸನೇಯಿನಸ್ತು ಆಮನನ್ತಿ "ತದ್ವಿದ್ವಾಂಸಃ ಶ್ರೋತ್ರಿಯಾ ಅಶಿಷ್ಯನ್ತ ಆಚಾಮನ್ತ್ಯಶಿತ್ವಾ ಚಾಚಾಮನ್ತ್ಯೇತಮೇವ ತದನಮನಗ್ನಂ ಕುರ್ವನ್ತೋ ಮನ್ಯನ್ತೇ" (ಬೃ. ೬-೧-೧೪), "ತಸ್ಮಾದೇವಂವಿದಶಿಷ್ಯನ್ನಾಚಾಮೇದಶಿತ್ವಾ ಚಾಚಾಮೇದೇತಮೇವ ತದನಗ್ನಂ ಕುರುತೇ" (ಬೃ. ೬-೨-೧೫ ಮಾ. ?) ಇತಿ[1]। ತತ್ರ ತು ಆಚಮನಮ್ ಅನಗ್ನತಾಚಿನ್ತನಂ ಚ ಪ್ರಾಣಸ್ಯ ಪ್ರತೀಯತೇ। ತತ್ ಕಿಮುಭಯಮಪಿ ವಿಧೀಯತೇ ಉತಾಚಮನಮೇವ, ಉತ ಅನಗ್ನತಾಚಿನ್ತನಮೇವ ಇತಿ ವಿಚಾರ್ಯತೇ। ಕಿಂ ತಾವತ್ ಪ್ರಾಪ್ತಮ್ ? ಉಭಯಮಪಿ ವಿಧೀಯತೇ ಇತಿ। ಕುತಃ ? ಉಭಯಸ್ಯಾಪಿ ಅವಗಮ್ಯಮಾನತ್ವಾತ್। ಉಭಯಮಪಿ ಚೈತತ್ ಅಪೂರ್ವತ್ವಾತ್ ವಿಧ್ಯರ್ಹಮ್। ಅಥವಾ ಆಚಮನಮೇವ ವಿಧೀಯತೇ। ವಿಸ್ಪಷ್ಟಾ ಹಿ ತಸ್ಮಿನ್ ವಿಧಿವಿಭಕ್ತಿಃ "ತಸ್ಮಾದೇವಂವಿದಶಿಷ್ಯನ್ನಾಚಾಮೇದಶಿತ್ವಾ ಚಾಚಾಮೇತ್" ಇತಿ। ತಸ್ಯೈವ ಸ್ತುತ್ಯರ್ಥಮ್ ಅನಗ್ನತಾಸಂಕೀರ್ತನಮಿತಿ ॥

(ಭಾಷ್ಯಾರ್ಥ)

ಛಂದೋಗರೂ ವಾಜಸನೇಯಿಗಳೂ ಪ್ರಾಣಸಂವಾದದಲ್ಲಿ ನಾಯಿಯವರೆಗೂ ಪ್ರಾಣದ ಅನ್ನವೆಂದು ಪಠಿಸಿ[2] ಆದಕ್ಕೇ ಅಪ್ಪು ಬಟ್ಟೆಯೆಂದು ಪಠಿಸುತ್ತಾರೆ. ಆಮೇಲೆ ಛಂದೋಗರು "ಆದ್ದರಿಂದಲೇ ಹೀಗೆ ಊಟಮಾಡಬೇಕೆನ್ನುವವರು ಮೊದಲೂ ಆ ಬಳಿಕವೂ ಅಪ್ಪಿನಿಂದ ಹೊದಿಸುತ್ತಾರೆ"(ಛಾಂ.೫-೨-೨) ಎಂಬ (ವಾಕ್ಯವನ್ನು) ಪಠಿಸಿರುತ್ತಾರೆ. ವಾಜಸನೇಯಿಗಳಾದರೋ "ಆದ್ದರಿಂದ ತಿಳಿದ ಶ್ರೋತ್ರಿಯರು ಊಟಮಾಡುವವರಾಗಿ ಆಚಮನಮಾಡುತ್ತಾರೆ; ಊಟಮಾಡಿದ ಬಳಿಕ ಆಚಮನಮಾಡುತ್ತಾರೆ ; ಹಾಗೆ ಈ (ಪ್ರಾಣ)ನನ್ನೇ ಅನಗ್ನನಾಗಿ ಮಾಡುವೆವೆಂದು ತಿಳಿಯುತ್ತಾರೆ" (ಬೃ. ೬-೧-೧೪), "ಆದ್ದರಿಂದ

---

1. ಮಾಧ್ಯಂದಿನಪಾಠದಲ್ಲಿ ಹೀಗಿದೆ ಎಂದು ಗ್ರಂಥಾಂತರದಿಂದ ತಿಳಿದು ಸಂಖ್ಯೆ ಹಾಕಿದೆ. ಇಲ್ಲಿ ಮಾಧ್ಯಂದಿನಪಾಠವೇ ಚರ್ಚೆಗೆ ವಿಷಯವಾಗಿದೆ.

2. ಛಾಂ. ೫-೨-೧, ಬೃ. ೬-೧-೧೪- ಇವುಗಳಲ್ಲಿ ಹೀಗೆಂದಿದೆ.

ಹೀಗೆಂದು ತಿಳಿದವನು ಊಟಮಾಡಬೇಕೆನ್ನುವವನು ಆಚಮನಮಾಡಬೇಕು. ಊಟಮಾಡಿಯೂ ಆಚಮನಮಾಡಬೇಕು; ಹಾಗೆ ಈ ಪ್ರಾಣನನ್ನೇ ಅನಗ್ನನನ್ನಾಗಿ ಮಾಡುತ್ತಾನೆ" (ಬೃ.ಮಾ. ?) ಎಂದು ಪಠಿಸುತ್ತಾರೆ. ಇಲ್ಲಿಯಾದರೆ ಆಚಮನವೂ ಪ್ರಾಣದ ಅನಗ್ನತಾಚಿಂತನವೂ ತೋರುತ್ತದೆ; ಆದ್ದರಿಂದ ಈ ಎರಡೂ ವಿಹಿತವಾಗಿದೆಯೆ, ಅಥವಾ ಆಚಮನವೇ (ವಿಹಿತವಾಗಿದೆಯೆ), ಅಥವಾ ಅನಗ್ನನೆಂದು ಚಿಂತಿಸುವದೊಂದೇ (ವಿಹಿತವಾಗಿದೆಯೆ) ?– ಎಂದು ವಿಚಾರಿಸಬೇಕಾಗಿದೆ[1]. ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? ಎರಡನ್ನೂ ವಿಧಿಸಿದೆ ಎಂದು. ಏಕೆ ? ಎಂದರೆ ಎರಡೂ ನಿಶ್ಚಿತವಾಗಿರುವದರಿಂದ, ಇವೆರಡೂ ಅಪೂರ್ವವಾಗಿರುವದರಿಂದ ವಿಧಿಗೆ ತಕ್ಕವೇ (ಆಗಿವೆ). ಅಥವಾ ಆಚಮನವೊಂದನ್ನೇ ವಿಧಿಸಿದೆ; ಏಕೆಂದರೆ "ಆದ್ದರಿಂದ ಹೀಗೆಂದು ತಿಳಿದವನು ಊಟಮಾಡುವಾಗ ಆಚಮನಮಾಡಬೇಕು, ಊಟಮಾಡಿ ಆಚಮನ ಮಾಡಬೇಕು" ಎಂದು ಸ್ಪಷ್ಟವಾಗಿ ಅದರಲ್ಲಿ ವಿಧಿವಿಭಕ್ತಿಯು (ಕಾಣುತ್ತದೆ). ಅದನ್ನು ಸ್ತೋತ್ರಮಾಡುವದಕ್ಕೇ ಅನಗ್ನತ್ವವನ್ನು ಹೇಳಿದೆ.

## ಸಿದ್ಧಾಂತ: ಅನಗ್ನತ್ವಚಿಂತನೆಯೇ ವಿಹಿತ

(ಭಾಷ್ಯ)

೩೫೨. ಏವಂ ಪ್ರಾಪ್ತೇ ಬ್ರೂಮಃ । ನಾಚಮನಸ್ಯ ವಿಧೇಯತ್ವಮ್ ಉಪಪದ್ಯತೇ । ಕಾರ್ಯಾಖ್ಯಾನಾತ್ । ಪ್ರಾಪ್ತಮೇವ ಹಿ ಇದಂ ಕಾರ್ಯತ್ವೇನ ಆಚಮನಂ ಪ್ರಾಯತ್ಯಾರ್ಥಂ ಸ್ಮೃತಿಪ್ರಸಿದ್ಧಮ್ ಅನ್ವಾಖ್ಯಾಯತೇ । ನನು ಇಯಂ ಶ್ರುತಿಸ್ತಸ್ಯಾಃ ಸ್ಮೃತೇ ಮೂಲಂ ಸ್ಯಾತ್ । ನೇತ್ಯುಚ್ಯತೇ । ವಿಷಯನಾನಾತ್ವಾತ್ । ಸಾಮಾನ್ಯವಿಷಯಾ ಹಿ ಸ್ಮೃತಿಃ ಪುರುಷಮಾತ್ರಸಂಬದ್ಧಂ ಪ್ರಾಯತ್ಯಾರ್ಥಮ್ ಆಚಮನಂ ಪ್ರಾಪಯತಿ । ಶ್ರುತಿಸ್ತು ಪ್ರಾಣವಿದ್ಯಾಪ್ರಕರಣಪಠಿತಾ ತದ್ವಿಷಯಮೇವ ಆಚಮನಂ ವಿದಧತೀ ವಿದಧ್ಯಾತ್ । ನ ಚ ಭಿನ್ನವಿಷಯಯೋಃ ಶ್ರುತಿಸ್ಮೃತ್ಯೋರ್ಮೂಲಮೂಲಿಭಾವೋಽವಕಲ್ಪತೇ । ನ ಚ ಇಯಂ ಶ್ರುತಿಃ ಪ್ರಾಣವಿದ್ಯಾಸಂಯೋಗಿ ಅಪೂರ್ವಮಾಚಮನಂ ವಿಧಾಸ್ಯತಿ ಇತಿ ಶಕ್ಯಮ್ ಆಶ್ರಯಿತುಮ್ । ಪೂರ್ವಸ್ಯೈವ ಪುರುಷಮಾತ್ರಸಂಯೋಗಿನಃ ಆಚಮನಸ್ಯ ಇಹ ಪ್ರತ್ಯಭಿಜ್ಞಾಯಮಾನತ್ವಾತ್ । ಅತ ಏವ ಚ ನೋಭಯವಿಧಾನಮ್ । ಉಭಯವಿಧಾನೇ ಚ ವಾಕ್ಯಂ ಭಿದ್ಯೇತ । ತಸ್ಮಾತ್ ಪ್ರಾಪ್ತಮೇವ ಅಶಿಶಿಷತಾಮ್ ಅಶಿತವತಾಂ ಚ ಉಭಯತ ಆಚಮನಮ್ ಅನೂದ್ಯ "ಏತಮೇವ ತದನಮನಗ್ನಂ ಕುರ್ವನ್ತೋ ಮನ್ಯನ್ತೇ" (ಬೃ.೬–೧–೧೪) ಇತಿ ಪ್ರಾಣಸ್ಯ ಅನಗ್ನತಾಕರಣಸಂಕಲ್ಪಃ ಅನೇನ ವಾಕ್ಯೇನ ಆಚಮನೀಯಾಸು ಅಪ್ಸು ಪ್ರಾಣವಿದ್ಯಾಸಂಬನ್ಧಿತ್ವೇನ ಅಪೂರ್ವಃ ಉಪದಿಶ್ಯತೇ ॥

1. ಆಚಮನವೇ ವಿಹಿತವಾದರೆ ಇದು ಕರ್ಮವಾಕ್ಯವಾಗುತ್ತದೆ.

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಆಚಮನವು ವಿಧಿಸತಕ್ಕದ್ದೆಂಬುದು ಹೊಂದುವದಿಲ್ಲ; ಏಕೆಂದರೆ (ಅದು) ಕಾರ್ಯಾಖ್ಯಾನವು. (ಇದರ ವಿವರ): ಪ್ರಾಯತ್ಯಕ್ಕಾಗಿ[1] ಮಾಡತಕ್ಕದ್ದೆಂದು ಪ್ರಾಪ್ತವೇ ಆಗಿರುವ ಸ್ಮೃತಿಪ್ರಸಿದ್ಧವಾಗಿರುವ ಈ ಆಚಮನವನ್ನೇ ಅನುವಾದಮಾಡಿಕೊಂಡಿರುತ್ತದೆ.

(ಆಕ್ಷೇಪ) :— ಈ ಶ್ರುತಿಯು ಆ ಸ್ಮೃತಿಗೆ ಮೂಲವಾಗಬಹುದಲ್ಲ![2]

(ಪರಿಹಾರ) :— ಇಲ್ಲ, ಎನ್ನುತ್ತೇವೆ. ಏಕೆಂದರೆ ವಿಷಯಗಳು ಬೇರೆ ಬೇರೆಯಾಗಿವೆ. (ಇದರ ವಿವರ): ಸ್ಮೃತಿಯು ಸಾಮಾನ್ಯವಿಷಯಕವಾಗಿದೆ; (ಅದು) ಪುರುಷಮಾತ್ರಸಂಬದ್ಧವಾಗಿರುವ ಪ್ರಾಯತ್ಯಾರ್ಥವಾದ ಆಚಮನವನ್ನು ವಿಧಿಸುತ್ತದೆ[3]; ಶ್ರುತಿಯಾದರೋ ಪ್ರಾಣವಿದ್ಯಾಪ್ರಕರಣದಲ್ಲಿ ಪಠಿತವಾಗಿರುವದರಿಂದ ಅದರ ವಿಷಯವಾದ ಆಚಮನವನ್ನು ಮಾತ್ರ ವಿಧಿಸಿದರೆ ವಿಧಿಸಬಹುದು. (ಅಷ್ಟೆ)[4]. ಆದರೆ ಭಿನ್ನವಿಷಯಕವಾದ ಶ್ರುತಿಸ್ಮೃತಿಗಳಿಗೆ ಮೂಲಮೂಲಿಭಾವವು ಹೊಂದುವದಿಲ್ಲ[5] ಈ ಶ್ರುತಿಯು ಪ್ರಾಣವಿದ್ಯೆಗೆ ಸಂಬಂಧಪಟ್ಟ ಅಪೂರ್ವವಾದ ಆಚಮನವನ್ನು ವಿಧಿಸಬಹುದಲ್ಲ ಎಂಬ (ಪಕ್ಷವನ್ನು) ಆಶ್ರಯಿಸುವದಕ್ಕೂ ಆಗುವದಿಲ್ಲ. ಏಕೆಂದರೆ ಹಿಂದೆ (ವಿಧಿಸಿರುವ) ಪುರುಷಮಾತ್ರಕ್ಕೆ ಸಂಬಂಧಪಟ್ಟ ಆಚಮನವನ್ನೇ ಇಲ್ಲಿ ಗುರುತಿಸಿ ತಿಳಿಯಬಹುದಾಗಿದೆ. ಆದ್ದರಿಂದಲೇ ಎರಡರ ವಿಧಾನವೂ (ಇಲ್ಲಿದೆ ಎನ್ನುವದಕ್ಕಿಲ್ಲ. ಎರಡನ್ನೂ ವಿಧಿಸಿದೆ ಎಂದರೆ ವಾಕ್ಯವು ಭಿನ್ನವೂ ಆಗುವದು. ಆದ್ದರಿಂದ ಊಟಮಾಡಲಿರುವವರಿಗೂ ಊಟಮಾಡಿದವರಿಗೂ ಎರಡು ಕಡೆಯಲ್ಲಿಯೂ ಪ್ರಾಪ್ತವಾಗಿರುವ ಆಚಮನವನ್ನೇ ಅನುವಾದಮಾಡಿಕೊಂಡು "ಈ (ಪ್ರಾಣನನ್ನೇ) ಹಾಗೆ ಅನಗ್ನನಾಗಿ ಮಾಡುವೆವೆಂದು ತಿಳಿಯುತ್ತಾರೆ" (ಬೃ. ೬-೧-೧೪) ಎಂಬ ಈ ವಾಕ್ಯದಲ್ಲಿ ಆಚಮನೀಯವಾದ ಅಪ್ಪಿನಲ್ಲಿ ಪ್ರಾಣನಿಗೆ ಅನಗ್ನತಾಕರಣಸಂಕಲ್ಪವನ್ನು (ಮಾಡಬೇಕೆಂದು) ಪ್ರಾಣವಿದ್ಯಾಸಂಬಂಧಿಯಾಗಿ ಅಪೂರ್ವವಾಗಿ ಉಪದಿಷ್ಟವಾಗಿರುತ್ತದೆ[6].

1. ಶುಚಿಯಾಗಿ ಕರ್ಮಕ್ಕೆ ಯೋಗ್ಯನಾಗುವದು ಪ್ರಾಯತ್ಯವು.

2. ಆಚಮನಸ್ಮೃತಿಗೆ ಈ ಶ್ರುತಿಯು ಮೂಲವೆಂದಾಗಲಿ! ಆಗ ಶ್ರುತಿಯಲ್ಲಿಯೇ ಆಚಮನವನ್ನು ವಿಧಿಸಿದೆ ಎಂದಾಗಬಹುದು ಎಂದು ಅಭಿಪ್ರಾಯ.

3. ಪ್ರಾಣವಿದ್ಯೆಯ ಸಾಧಕನಿಗೆಂದೇನೂ ಅದನ್ನು ವಿಧಿಸಿಲ್ಲ.

4. ಆದ್ದರಿಂದ ವಿಧಿಸಿದ್ದರೂ ಅದು ವಿಶೇಷವಿಷಯಕವೆಂದಾಗುತ್ತದೆ.

5. ಮೂಲಶ್ರುತಿಯು ಯಾವದನ್ನು ವಿಧಿಸುತ್ತದೆಯೋ ಅದೇ ಕ್ರಿಯೆಯನ್ನೇ ಸ್ಮೃತಿಯು ವಿಧಿಸಬೇಕು; ಹಾಗಿದ್ದರೆ ಅವೆರಡಕ್ಕೂ ಮೂಲಮೂಲಿಭಾವವು ಏರ್ಪಡುತ್ತದೆ.

6. ಅನಗ್ನತಾಸಂಕಲ್ಪವು ಪ್ರಾಪ್ತವಾಗಿಲ್ಲವಾದ್ದರಿಂದ ವಿಹಿತವಾಗಿದೆ; ಆಚಮನವಿಧಿಯು ಅನುವಾದಮಾತ್ರವಾಗಿರುವದರಿಂದ ವಿವಕ್ಷಿತವಲ್ಲ.

## ಪೂರ್ವಪಕ್ಷಯುಕ್ತಿಗಳ ಖಂಡನೆ

(ಭಾಷ್ಯ)

೩೫೩. ನ ಚಾಯಮ್ ಅನಗ್ನತಾವಾದಃ ಆಚಮನಸ್ತುತ್ಯರ್ಥಃ ಇತಿ ನ್ಯಾಯ್ಯಮ್। ಆಚಮನಸ್ಯ ಅವಿಧೇಯತ್ವಾತ್। ಸ್ವಯಂ ಚ ಅನಗ್ನತಾ ಸಂಕಲ್ಪಸ್ಯ ವಿಧೇಯತ್ವಪ್ರತೀತೇಃ। ನ ಚೈವಂ ಸತಿ ಏಕಸ್ಯ ಆಚಮನಸ್ಯ ಉಭಯಾರ್ಥತಾ ಅಭ್ಯುಪಗತಾ ಭವತಿ ಪ್ರಾಯತ್ಯಾರ್ಥತಾ ಪರಿಧಾನಾರ್ಥತಾ ಚ ಇತಿ। ಕ್ರಿಯಾನ್ತರತ್ವಾಭ್ಯುಪಗಮಾತ್। ಕ್ರಿಯಾನ್ತರಮೇವ ಹಿ ಆಚಮನಂ ನಾಮ ಪ್ರಾಯತ್ಯಾರ್ಥಂ ಪುರುಷಸ್ಯ ಅಭ್ಯುಪಗಮ್ಯತೇ। ತದೀಯಾಸು ತು ಅಪ್ಸು ವಾಸಃಸಂಕಲ್ಪನಂ ನಾಮ ಕ್ರಿಯಾನ್ತರಮೇವ ಪರಿಧಾನಾರ್ಥಂ ಪ್ರಾಣಸ್ಯ ಅಭ್ಯುಪಗಮ್ಯತೇ ಇತ್ಯನವದ್ಯಮ್। ಅಪಿ ಚ "ಯದಿದಂ ಕಿಂಚಾ ಶ್ವಭ್ಯ ಆಕ್ರಿಮಿಭ್ಯ ಆಕೀಟಪತಙ್ಗೇಭ್ಯಸ್ತತ್ತೇಽನ್ನಮ್॥ (ಬೃ. ೬-೧-೧೪) ಇತ್ಯತ್ರ ತಾವತ್ ನ ಸರ್ವಾನ್ನಾಭ್ಯವಹಾರಶ್ಚೋದ್ಯತೇ ಇತಿ ಶಕ್ಯಂ ವಕ್ತುಮ್। ಅಶಬ್ದತ್ವಾತ್ ಅಶಕ್ಯತ್ವಾಚ್ಚ। ಸರ್ವಂ ತು ಪ್ರಾಣಸ್ಯ ಅನ್ನಮ್ ಇತೀಯಮ್ ಅನ್ನದೃಷ್ಟಿಶ್ಚೋದ್ಯತೇ। ತತ್ಸಾಹಚರ್ಯಾಚ್ಚ "ಆಪೋ ವಾಸ" ಇತ್ಯತ್ರಾಪಿ ನಾಪಾಮಾಚಮನಂ ಚೋದ್ಯತೇ, ಪ್ರಸಿದ್ಧಾಸ್ವೇವ ತು ಆಚಮನೀಯಾಸು ಅಪ್ಸು ಪರಿಧಾನದೃಷ್ಟಿಶ್ಚೋದ್ಯತೇ ಇತಿ ಯುಕ್ತಮ್। ನ ಹಿ ಅರ್ಧವೈಶಸಂ ಸಂಭವತಿ। ಅಪಿ ಚ 'ಆಚಾಮನ್ತಿ' ಇತಿ ವರ್ತಮಾನಾಪದೇಶಿತ್ವಾತ್ ನಾಯಂ ಶಬ್ದೋ ವಿಧಿಕ್ಷಮಃ। ನನು 'ಮನ್ಯನ್ತೇ' ಇತ್ಯಪಿ ಸಮಾನಂ ವರ್ತಮಾನಾಪದೇಶಿತ್ವಮ್। ಸತ್ಯಮ್ ಏವಮೇತತ್। ಅವಶ್ಯವಿಧೇಯೇ ತು ಅನ್ಯತರಸ್ಮಿನ್ ವಾಸಃಕಾರ್ಯಾಖ್ಯಾನಾತ್ ಅಪಾಂ ವಾಸಃಸಂಕಲ್ಪನಮೇವ ಅಪೂರ್ವಂ ವಿಧೀಯತೇ ನಾಚಮನಮ್। ಪೂರ್ವವದ್ಧಿ ತತ್ ಇತ್ಯುಪಪಾದಿತಮ್। ಯದಪ್ಯುಕ್ತಮ್ ವಿಸ್ಪಷ್ಟಾ ಚ ಆಚಮನೇ ವಿಧಿವಿಭಕ್ತಿಃ ಇತಿ, ತದಪಿ ಪೂರ್ವವತ್ತ್ವೇನೈವ ಆಚಮನಸ್ಯ ಪ್ರತ್ಯುಕ್ತಮ್। ಅತ ಏವ ಆಚಮನಸ್ಯ ಅವಿಧಿತ್ಸಿತತ್ವಾತ್ "ಏತಮೇವ ತದನಮನಗ್ನಂ ಕುರ್ವನ್ತೋ ಮನ್ಯನ್ತೇ" ಇತ್ಯತ್ರೈವ ಕಾಣ್ವಾಃ ಪರ್ಯವಸ್ಯನ್ತಿ, ನಾಮನನ್ತಿ 'ತಸ್ಮಾದೇವಂ ವಿತ್' ಇತ್ಯಾದಿ। ತಸ್ಮಾತ್ ಮಾಧ್ಯಂದಿನಾನಾಮಪಿ ಪಾಠೇ ಆಚಮನಾನುವಾದೇನ ಏವಂವಿತ್ತ್ವಮೇವ ಪ್ರಕೃತಪ್ರಾಣವಾಸೋವಿತ್ತ್ವಂ ವಿಧೀಯತೇ ಇತಿ ಪ್ರತಿಪತ್ತವ್ಯಮ್। ಯೋಽಪ್ಯಯಮ್ ಅಭ್ಯುಪಗಮಃ ಕ್ವಚಿತ್ ಆಚಮನಂ ವಿಧೀಯತೇ ಕ್ವಚಿತ್ ವಾಸೋವಿಜ್ಞಾನಮ್ ಇತಿ, ಸೋಽಪಿ ನ ಸಾಧುಃ। "ಆಪೋವಾಸಃ" (ಬೃ ೬-೧-೧೪) ಇತ್ಯಾದಿಕಾಯಾಃ ವಾಕ್ಯಪ್ರವೃತ್ತೇಃ ಸರ್ವತ್ರ ಏಕರೂಪತ್ವಾತ್। ತಸ್ಮಾತ್ ವಾಸೋವಿಜ್ಞಾನಮೇವ ಇಹ ವಿಧೀಯತೇ ನಾಚಮನಮ್ ಇತಿ ನ್ಯಾಯ್ಯಮ್॥

(ಭಾಷ್ಯಾರ್ಥ)

ಈ ಅನಗ್ನತೆಯನ್ನು ಹೇಳಿರುವದು ಆಚಮನವನ್ನು ಹೊಗಳುವದಕ್ಕೆ (ಬಂದಿದೆ)[1] ಎಂಬುದೂ ಯುಕ್ತವಲ್ಲ. ಏಕೆಂದರೆ ಆಚಮನವನ್ನು (ಇಲ್ಲಿ) ವಿಧಿಸಿರುವದಿಲ್ಲ[2]. ಅನಗ್ನತ್ವವನ್ನು ಸಂಕಲ್ಪಿಸಬೇಕೆಂದು ವಿಧಿಸಿದೆ ಎಂದೂ ತಾನೇ ಗೊತ್ತಾಗುತ್ತದೆ. ಹೀಗಾದರೆ ಒಂದೇ ಆಚಮನವನ್ನು ಪ್ರಾಯತ್ಯಕ್ಕಾಗಿ (ಹೇಳಿರುವದು), ಹೊದಿಕೆ ಎಂದು (ಹೇಳಿರುವದು)– ಹೀಗೆ ಎರಡು ಅರ್ಥಗಳಲ್ಲಿ ತಾತ್ಪರ್ಯವುಳ್ಳದ್ದೆಂದು ಒಪ್ಪಿದಂತೆ ಆಗುವದೆಂಬುದೂ ಇಲ್ಲ[3] ; ಏಕೆಂದರೆ (ಇವನ್ನು) ಮತ್ತೊಂದು ಕ್ರಿಯೆಯೆಂದು ಒಪ್ಪಿದೆ. (ಇದರ ವಿವರ): ಆಚಮನವೆಂಬುದು ಪುರುಷನ ಪ್ರಾಯತ್ಯಕ್ಕಾಗಿ (ಹೇಳಿರುವ) ಕ್ರಿಯೆಯೆಂದೇ ಒಪ್ಪಿರುತ್ತೇವೆ ; ಆದರೆ ಆ (ಆಚಮನದ) ನೀರಿನಲ್ಲಿ ಬಟ್ಟೆಯನ್ನು ಸಂಕಲ್ಪಿಸುವದೆಂಬ ಮತ್ತೊಂದು ಕ್ರಿಯೆಯನ್ನೇ ಪ್ರಾಣನ ಹೊದಿಕೆಗಾಗಿ (ಎಂದು) ಒಪ್ಪಿರುತ್ತದೆ ; ಆದ್ದರಿಂದ ಇದು ನಿರ್ದೋಷವು[4].

ಇದೂ ಅಲ್ಲದೆ ಮೊದಲನೆಯದಾಗಿ "ನಾಯಿಗಳವರೆಗೂ ಕ್ರಿಮಿಗಳವರೆಗೂ ಹುಳುಚಿಟ್ಟೆಗಳವರೆಗೂ ಇರುವ ಇದೆಲ್ಲವೂ ನಿನ್ನ ಅನ್ನವು" (ಬೃ. ೬–೧–೧೪) ಎಂಬಲ್ಲಿ ಎಲ್ಲಾ ಅನ್ನವನ್ನೂ ತಿನ್ನಬೇಕೆಂದು ವಿಧಿಸಿದೆ ಎಂದು ಹೇಳುವದಕ್ಕಾಗುವದಿಲ್ಲವಷ್ಟೆ ; ಏಕೆಂದರೆ (ಹಾಗೆಂದು) ಶಬ್ದವಲ್ಲಿ (ಹೇಳಿಲ್ಲ, ಹಾಗೆ ಮಾಡುವದು) ಆಗುವಂತೆಯೂ ಇಲ್ಲ[5]. ಮತ್ತೇನೆಂದರೆ ಎಲ್ಲವೂ ಪ್ರಾಣನ ಅನ್ನವೆಂಬೀ ಅನ್ನದೃಷ್ಟಿಯನ್ನು ಮಾಡಬೇಕೆಂದು ವಿಧಿಸಿದೆ (ಎನ್ನಬೇಕು). ಅದರ ಸಾಹಚರ್ಯದಿಂದ 'ನೀರು ಬಟ್ಟೆ' ಎಂಬಲ್ಲಿಯೂ ನೀರನ್ನು ಆಚಮನ ಮಾಡಬೇಕೆಂದು ವಿಧಿಸಿಲ್ಲ, ಪ್ರಸಿದ್ಧವೇ ಆಗಿರುವ ಆಚಮನೀಯವಾದ ನೀರಿನಲ್ಲಿ ಹೊದಿಕೆಯ ದೃಷ್ಟಿಯನ್ನು ವಿಧಿಸಿದೆ ಎಂಬಿದೇ ಯುಕ್ತವು. ಏಕೆಂದರೆ

---

1. ಅನಗ್ನತೆಯನ್ನು ಹೇಳಿರುವದು ಅರ್ಥವಾದಮಾತ್ರ, ಆಚಮನವೇ ಮುಖ್ಯ.

2. ಆಚಮನವನ್ನು ಅನುವಾದಮಾಡಿಕೊಂಡಿದೆ, ಅಪೂರ್ವವೆಂದು ಇಲ್ಲಿ ವಿಧಿಸಿಲ್ಲ ಎಂದು ತೋರಿಸಿಕೊಟ್ಟಿರುತ್ತೇವೆ.

3. ಈ ವಾಕ್ಯದಲ್ಲಿರುವ ಆಚಮನವು ಮನುಷ್ಯನಿಗೆ ಪ್ರಾಯತ್ಯವನ್ನು (ಮಡಿಯನ್ನು) ಉಂಟುಮಾಡುವದು, ಪ್ರಾಣನಿಗೆ ಹೊದಿಕೆಯಾಗಿರುವದು– ಎಂಬ ಎರಡು ಅರ್ಥಗಳನ್ನು ಹೇಳಿದಂತಾಗುತ್ತದೆ. ಒಂದು ವಾಕ್ಯದಲ್ಲಿ ಒಂದೇ ಅರ್ಥವನ್ನು ಹೇಳುವದು ಯುಕ್ತ.

4. ಪ್ರಾಯತ್ಯಾರ್ಥವಾದ ಆಚಮನವು ಸ್ಮೃತಿಯಲ್ಲಿ ವಿಧಿಸಿದೆ ; ಇಲ್ಲಿ ಅದರ ಅನುವಾದಮಾತ್ರವಿದೆ ಎಂದಿರುವದರಿಂದ ಇಲ್ಲಿ ಎರಡು ಅರ್ಥಗಳನ್ನು ಹೇಳಿದ ದೋಷವಿಲ್ಲ.

5. ಶಬ್ದವು ತಿನ್ನಬೇಕೆಂದು ವಿಧಿಸಿಲ್ಲ, ಎಲ್ಲವನ್ನೂ ಉಪಾಸಕನು ತಿನ್ನುವದಕ್ಕೂ ಆಗುವದಿಲ್ಲ. ಸಂಕಲ್ಪವಾದರೆ ಮಾಡುವದಕ್ಕೆ ಆಗುತ್ತದೆ ; ಶಬ್ದದಿಂದ ಸೂಚಕವಾಗಿದೆ.

ಅರ್ಥವೈಶಸವು ಹೊಂದುವದಿಲ್ಲ[1]. ಇದಲ್ಲದೆ "ಆಚಮನವಾಡುತ್ತಾರೆ" ಎಂದು ವರ್ತಮಾನವನ್ನು ಹೇಳುವದರಿಂದ ಈ ಶಬ್ದವು ವಿಧಿಸುವ ಸಾಮರ್ಥ್ಯವುಳ್ಳದ್ದಲ್ಲ.

(ಆಕ್ಷೇಪ) : 'ತಿಳಿಯುತ್ತಾರೆ' ಎಂಬಲ್ಲಿಯೂ ವರ್ತಮಾನವನ್ನು ಹೇಳಿರುತ್ತದೆ ಎಂಬುದು ಸಮಾನವಲ್ಲವೆ ?

(ಪರಿಹಾರ) :– ನಿಜ, ಇದು ಹೀಗೆಯೇ, ಇವೆರಡರಲ್ಲಿ ಒಂದನ್ನು ಅವಶ್ಯವಾಗಿ ವಿಧಿಸಿದೆ ಎಂದಾಗಿರುವಲ್ಲಿ ವಾಸಸ್ಸಿನ ಕಾರ್ಯವನ್ನು ಹೇಳಿರುವದರಿಂದ[2] ನೀರು ಬಟ್ಟೆಯೆಂದು ಸಂಕಲ್ಪಿಸಬೇಕೆಂಬ ಅಪೂರ್ವ(ಕ್ರಿಯೆ)ಯನ್ನೇ ವಿಧಿಸಿರುತ್ತದೆ (ಎನ್ನಬೇಕು) ; ಆಚಮನವನ್ನು ವಿಧಿಸಿಲ್ಲ, ಏಕೆಂದರೆ ಅದು ಮೊದಲೇ (ಪ್ರಾಪ್ತ)ವಾಗಿದೆ ಎಂದು ತೋರಿಸಿಕೊಟ್ಟಿರುತ್ತೇವೆ[3]. ಇನ್ನು ಆಚಮನದಲ್ಲಿ ವಿಧಿವಿಭಕ್ತಿಯೂ ವಿಸ್ಪಷ್ಟವಾಗಿದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದನ್ನುಕೂಡ ಆಚಮನವು ಪೂರ್ವ(ಪ್ರಾಪ್ತ)ವೆಂಬದರಿಂದ ತಿರಸ್ಕರಿಸಿದಂತೆ ಆಯಿತು.

ಆದ್ದರಿಂದಲೇ ಆಚಮನವನ್ನು ವಿಧಿಸಬೇಕೆಂದಿಲ್ಲದಿರುವದರಿಂದಲೇ "ಈ (ಪ್ರಾಣ)ವನ್ನೇ ಹಾಗೆ ಅನಗ್ನನನ್ನಾಗಿ ಮಾಡುವೆವೆಂದು ತಿಳಿಯುತ್ತಾರೆ" ಎಂಬಲ್ಲಿಗೇ ಕಾಣ್ವರು ಮುಗಿಸಿರುತ್ತಾರೆ; ಆದ್ದರಿಂದ "ಹೀಗೆಂದು ತಿಳಿದವನು" ಎಂದು ಮುಂತಾಗಿರುವ (ವಾಕ್ಯವನ್ನು) ಪಠಿಸುವದಿಲ್ಲ[4]. ಆದ್ದರಿಂದ ಮಾಧ್ಯಂದಿನರ

---

1. ಅರ್ಥವೈಶಸವು ಸಂಭವಿಸುವದಿಲ್ಲ ಎಂದರೆ ಕೋಳಿಯ ಅರ್ಧವನ್ನು ಅಡಿಗೆಗೆ ಕೊಂಡು ಉಳಿದದ್ದನ್ನು ಮೊಟ್ಟೆಹಾಕುವದಕ್ಕೆ ಇಟ್ಟುಕೊಳ್ಳುವದಕ್ಕೆ ಅಗುವದಿಲ್ಲ –ಎಂಬ ನ್ಯಾಯವು ಇಲ್ಲಿ ಹೊಂದುತ್ತದೆ. ಒಂದು ಕಡೆ ದೃಷ್ಟಿ, ಇನ್ನೊಂದುಕಡೆ ಆಚಮನ– ಎಂದು ಭೇದವನ್ನು ಕಲ್ಪಿಸುವದು ಸರಿಯಲ್ಲ.

2. ಕಾರ್ಯಾಖ್ಯಾನಾತ್ ಎಂದರೆ ಆಚಮನವನ್ನು ಅನುವಾದಮಾಡಿರುವದರಿಂದ ಎಂಬರ್ಥವನ್ನು ಮೊದಲು ಮಾಡಿತ್ತು ; ಈಗ ಬಟ್ಟೆಯ ಕಾರ್ಯರೂಪವಾದ ಅನಗ್ನತೆಯನ್ನು ಹೇಳಿರುವದರಿಂದ ಎಂದು ವ್ಯಾಖ್ಯಾನಮಾಡಿದೆ. ಅನಗ್ನತಾಕರಣವೆಂಬ ಕಾರ್ಯವನ್ನು ಎಂದೂ ಭಾಷ್ಯಕ್ಕೆ ಅರ್ಥವನ್ನು ಮಾಡಬಹುದು.

3. ಅಪ್ರಾಪ್ತವಾದದ್ದನ್ನು ವಿಧಿಸಬೇಕಾಗಿರುವದರಿಂದಲೂ ವಾಸೋವಿಜ್ಞಾನವೇ ಅಪೂರ್ವವಾಗಿರುವದರಿಂದಲೂ ಅದನ್ನೇ ವಿಧಿಸಬೇಕು, ಎರಡನ್ನೂ ವಿಧಿಸಿಲ್ಲವೆಂದರೆ ಎರಡೂ ಅನುವಾದವೆಂದಾಗಿ ವಾಕ್ಯವು ವ್ಯರ್ಥವಾಗುತ್ತದೆ. ಅದ್ದರಿಂದ. ಆಚಮನಕ್ಕೆ ವಿಧಿವಿಭಕ್ತಿಯಿದ್ದರೂ ಅವಿವಕ್ಷಿತವಾದ್ದರಿಂದ ಅದನ್ನು ಬಿಡಬೇಕು. ವಾಸೋವಿಜ್ಞಾನಕ್ಕೆ ವಿಧಿವಿಭಕ್ತಿಯಿಲ್ಲದಿದ್ದರೂ ವಿಧಿಯನ್ನು ಕಲ್ಪಿಸಬೇಕು.

4 ಆಚಮನವೇ ವಿಧಿಸಬೇಕಾದದ್ದಾಗಿದ್ದರೆ ಈ ವಾಕ್ಯವನ್ನು ಬಿಡುವದಕ್ಕಾಗುತ್ತಿರಲಿಲ್ಲ.

ಪಾಠಪದ್ಧತಿಯೂ ಆಚಮನವನ್ನು ಅನುವಾದಮಾಡಿಕೊಂಡು "ಏವಂವಿತ್ಸ್ವವನ್ನೇ" (ಹೀಗೆ ತಿಳಿಯಬೇಕೆಂಬುದನ್ನೇ) ಎಂದರೆ, ಪ್ರಕೃತವಾಗಿರುವ ಪ್ರಾಣನ ಬಟ್ಟೆಯ ಉಪಾಸನೆಯನ್ನೇ ವಿಧಿಸಿದೆ ಎಂದು ತಿಳಿಯಬೇಕು. ಇನ್ನು ಒಂದು ಕಡೆಯಲ್ಲಿ ಆಚಮನವನ್ನು ವಿಧಿಸಿದೆ, ಇನ್ನೊಂದು ಕಡೆಯಲ್ಲಿ ಬಟ್ಟೆಯ (ದೃಷ್ಟಿಯ) ಉಪಾಸನೆಯನ್ನು (ವಿಧಿಸಿದೆ) ಎಂಬ ಅಭ್ಯುಪಗಮವಿದೆಯಲ್ಲ, ಅದೂ ಸರಿಯಲ್ಲ ; ಏಕೆಂದರೆ "ನೀರು ಬಟ್ಟೆಯು" (ಬೃ. ೬-೧-೧೪) ಎಂದು ಮುಂತಾಗಿರುವ. ವಾಕ್ಯಪ್ರವೃತ್ತಿಯು ಎಲ್ಲಾ ಕಡೆಯಲ್ಲಿಯೂ ಒಂದೇ ರೂಪವಾಗಿರುತ್ತದೆ[1]. ಆದ್ದರಿಂದ ವಾಸೋವಿಜ್ಞಾನವೇ ಇಲ್ಲಿ ವಿಹಿತವಾಗಿರುತ್ತದೆ, ಆಚಮನವಲ್ಲ ಎಂಬುದೇ ಯುಕ್ತವು.

## ೧೦. ಸಮಾನಾಧಿಕರಣ

(ಅಗ್ನಿರಹಸ್ಯಬೃಹದಾರಣ್ಯಕಗಳಲ್ಲಿರುವ ಶಾಂಡಿಲ್ಯವಿದ್ಯೆ ಒಂದೇ)

**ಸಮಾನ ಏವಂ ಚಾಭೇದಾತ್ ॥ ೧೯ ॥**

೧೯. ಹಾಗೆಯೇ ಒಂದು, ಏಕೆಂದರೆ ( ಉಪಾಸ್ಯವು ) ಅಭಿನ್ನವು.

## ಶಾಂಡಿಲ್ಯವಿದ್ಯೆಯ ವಿಷಯವಾಕ್ಯವೂ ಸಂಶಯವೂ

(ಭಾಷ್ಯ)

೩೫೪. ವಾಜಸನೇಯಿಶಾಖಾಯಾಮ್ ಅಗ್ನಿರಹಸ್ಯೇ ಶಾಣ್ಡಿಲ್ಯನಾಮಾಙ್ಕಿತಾ ವಿದ್ಯಾ ವಿಜ್ಞಾತಾ । ತತ್ರ ಚ ಗುಣಾಃ ಶ್ರೂಯನ್ತೇ "ಸ ಆತ್ಮಾನಮುಪಾಸೀತ ಮನೋಮಯಂ ಪ್ರಾಣಶರೀರಂ ಭಾರೂಪಮ್" (ಶ. ಬ್ರಾ. ೧೦-೬-೩-೨ ?) ಇತ್ಯೇವಮಾದಯಃ । ತಸ್ಯಾಮೇವ ಶಾಖಾಯಾಂ ಬೃಹದಾರಣ್ಯಕೇ ಪುನಃ ಪಠ್ಯತೇ "ಮನೋಮಯೋಽಯಂ ಪುರುಷೋ ಭಾಃ ಸತ್ಯಸ್ತಸ್ಮಿನ್ನನ್ತರ್ಹೃದಯೇ ಯಥಾ ವ್ರೀಹಿರ್ವಾ ಯವೋ ವಾ ಸ ಏಷ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸರ್ವಮಿದಂ ಪ್ರಶಾಸ್ತಿ ಯದಿದಂ ಕಿಂ ಚ" (ಬೃ. ೫-೬-೧) ಇತಿ । ತತ್ರ ಸಂಶಯಃ । ಕಿಮಿಯಮೇಕಾ ವಿದ್ಯಾ ಅಗ್ನಿರಹಸ್ಯಬೃಹದಾರಣ್ಯಕಯೋಃ ಗುಣೋಪಸಂಹಾರಶ್ಚ, ಉತ ದ್ವೇ ಇಮೇ ವಿದ್ಯೇ ಗುಣಾನುಪಸಂಹಾರಶ್ಚ ಇತಿ ॥

---

1. ಎರಡು ಶಾಖೆಗಳಲ್ಲಿಯೂ ಈ ವಾಕ್ಯವು ಅದ್ದೇ ಇದೆ ; ಆದ್ದರಿಂದ ವಾಸೋವಿಜ್ಞಾನವನ್ನು ಬಿಡುವದಕ್ಕೆ ಆಗುವದೇ ಇಲ್ಲ.

( ಭಾಷ್ಯಾರ್ಥ )

**ವಾಜಸನೇಯಿಶಾಖೆಯ ಅಗ್ನಿರಹಸ್ಯದಲ್ಲಿ** ಶಾಂಡಿಲ್ಯ ಎಂಬ ಹೆಸರಿನಿಂದ ಗುರುತಿಸಿರುವ ವಿದ್ಯೆಯು ತಿಳಿಯಬರುತ್ತದೆ. ಅಲ್ಲಿ "ಅವನು ಆತ್ಮನನ್ನು ಉಪಾಸನೆಮಾಡಬೇಕು. ಮನೋಮಯನು, ಪ್ರಾಣಶರೀರನು, ಭಾರೂಪನು –ಎಂದು" ( ಶತ. ಬ್ರಾ. ೧೦–೬–೩–೨ ? ) ಎಂಬಿವೇ ಮುಂತಾದ ಗುಣಗಳು ಶ್ರುತವಾಗಿವೆ. ಅದೇ ಶಾಖೆಯಲ್ಲಿ ಬೃಹದಾರಣ್ಯಕದಲ್ಲಿ "ಈ ಪುರುಷನು ಮನೋಮಯನು, ಭಾಃಸ್ವರೂಪನು, ಸತ್ಯನು, ಆ ಹೃದಯದೊಳಗಡೆಯಲ್ಲಿ ಬತ್ತದಕಾಳಿನಂತೆ ಜವೆಯಕಾಳಿನಂತೆ (ಇರುತ್ತಾನೆ); ಆ ಇವನು ಎಲ್ಲಕ್ಕೂ ಒಡೆಯನು, ಎಲ್ಲಕ್ಕೂ ಅಧಿಪತಿಯು. ಇದು ಏನೇನಿದೆಯೋ ಇದೆಲ್ಲವನ್ನೂ ಅಪ್ಪಣೆಯಲ್ಲಿಟ್ಟುಕೊಂಡಿರುತ್ತಾನೆ" (ಬೃ. ೫–೬–೧) ಎಂದು ಮತ್ತೆ ಪಠಿತವಾಗಿರುತ್ತದೆ. ಇಲ್ಲಿ **ಸಂಶಯ**ವೇನೆಂದರೆ ಅಗ್ನಿರಹಸ್ಯ, ಬೃಹದಾರಣ್ಯಕ– ಈ ಎರಡರಲ್ಲಿಯೂ (ಇರುವ) ಇದು ಒಂದೇ ವಿದ್ಯೆಯೆಂದು ಗುಣಗಳ ಉಪಸಂಹಾರವನ್ನು ಮಾಡಬೇಕೋ, ಅಥವಾ ಇವೆರಡೂ (ಬೇರೆಬೇರೆಯ) ವಿದ್ಯೆಗಳಾಗಿವೆಯೆಂದು ಗುಣಗಳನ್ನು ಉಪಸಂಹಾರಮಾಡಬಾರದೊ ?

## ಪೂರ್ವಪಕ್ಷ:
## ಒಂದೇ ಶಾಖೆಯಾದ್ದರಿಂದ ಬೇರೆಬೇರೆಯ ವಿದ್ಯೆಗಳು

(ಭಾಷ್ಯ)

೩೫೫. ಕಿಂ ತಾವತ್ ಪ್ರಾಪ್ತಮ್ ? ವಿದ್ಯಾಭೇದೋ ಗುಣವ್ಯವಸ್ಥಾ ಚ ಇತಿ । ಕುತಃ ? ಪೌನರುಕ್ತ್ಯಪ್ರಸಙ್ಗಾತ್ । ಭಿನ್ನಾಸು ಹಿ ಶಾಖಾಸು ಅಧ್ಯೇತೃವೇದಿತೃಭೇದಾತ್ ಪೌನರುಕ್ತ್ಯಪರಿಹಾರಮಾಲೋಚ್ಯ ವಿದ್ಯೈಕತ್ವಮ್ ಅಧ್ಯವಸಾಯ ಏಕತ್ರ ಅತಿರಿಕ್ತಾ ಗುಣಾಃ ಇತರತ್ರ ಉಪಸಂಹ್ರಿಯನ್ತೇ ಪ್ರಾಣಸಂವಾದಾದಿಷು ಇತ್ಯುಕ್ತಮ್ । ಏಕಸ್ಯಾಂ ಪುನಃ ಶಾಖಾಯಾಮ್ ಅಧ್ಯೇತೃವೇದಿತೃಭೇದಾಭಾವಾತ್ ಅಶಕ್ಯಪರಿಹಾರೇ ಪೌನರುಕ್ತ್ಯೇ ನ ವಿಪ್ರಕೃಷ್ಟದೇಶಸ್ಥಾ ಏಕಾ ವಿದ್ಯಾ ಭವಿತುಮರ್ಹತಿ । ನ ಚಾತ್ರ ಏಕಮಾಮ್ನಾನಂ ವಿದ್ಯಾವಿಧಾನಾರ್ಥಮ್ ಅಪರಂ ಗುಣವಿಧಾನಾರ್ಥಮ್ ಇತಿ ವಿಭಾಗಃ ಸಂಭವತಿ । ತದಾ ಹಿ ಅತಿರಿಕ್ತಾ ಏವ ಗುಣಾಃ ಇತರತ್ರೇತರತ್ರ ಚ ಆಮ್ನಾಯೇರನ್ ನ ಸಮಾನಾಃ । ಅಪಿ ತು ಉಭಯತ್ರ ಆಮ್ನಾಯನ್ತೇ ಮನೋಮಯತ್ವಾದಯಃ । ತಸ್ಮಾತ್ ನಾನ್ಯೋನ್ಯಂ ಗುಣೋಪಸಂಹಾರಃ ಇತಿ ॥

(ಭಾಷ್ಯಾರ್ಥ)

ಮೊದಲು ಯಾವ (ಪೂರ್ವಪಕ್ಷವು) ಬಂದೊಂದಗುತ್ತದೆ ? ವಿದ್ಯಾಭೇದವು, ಗುಣಗಳನ್ನು ಬೇರೆಬೇರೆ (ಉಪಾಸನೆಮಾಡಬೇಕು). ಏಕೆ ?

ಎಂದರೆ (ಹಾಗಿಲ್ಲದಿದ್ದರೆ) ಪುನರುಕ್ತಿಯು ಪ್ರಸಕ್ತವಾಗುತ್ತದೆ. (ಇದರ ವಿವರ): ಶಾಖೆಗಳು ಬೇರೆಯಾಗಿದ್ದರೆ ಅಧ್ಯಯನಮಾಡುವವರೂ (ಅರ್ಥವನ್ನು) ತಿಳಿಯುವವರೂ ಬೇರೆಬೇರೆಯಾಗಿರುವದರಿಂದ ಪುನರುಕ್ತಿಯನ್ನು ಪರಿಹರಿಸಬಹುದೆಂದು ಆಲೋಚಿಸಿ (ಬೇರೆಬೇರೆ ಶಾಖೆಗಳಲ್ಲಿ) ಒಂದೇ ವಿದ್ಯೆ ಎಂದು ನಿರ್ಣಯಿಸಿ ಪ್ರಾಣಸಂವಾದಾದಿಗಳಲ್ಲಿ ಒಂದು ಕಡೆಯಲ್ಲಿ ಹೆಚ್ಚಾಗಿರುವ ಗುಣಗಳನ್ನು ಇನ್ನೊಂದು ಕಡೆಯಲ್ಲಿ ಉಪಸಂಹಾರಮಾಡಿಕೊಳ್ಳಬೇಕು ಎಂದು ಹೇಳಲಾಯಿತು. ಆದರೆ ಶಾಖೆಯು ಒಂದೇ ಆದರೆ ಅಧ್ಯೇತೃಗಳೂ ತಿಳಿದುಕೊಳ್ಳುವವರೂ ಬೇರೆಬೇರೆಯಲ್ಲವಾಗಿ ಪುನರುಕ್ತಿ(ದೋಷ)ವನ್ನು ಪರಿಹರಿಸುವದು ಆಗದೆ ಇರುವದರಿಂದ ದೂರದೇಶದಲ್ಲಿರುವದು ಅದೇ ವಿದ್ಯೆ ಎಂದಾಗಲಾರದು. ಇಲ್ಲಿ ಒಂದು ಕಡೆಯಲ್ಲಿ ವಿದ್ಯೆಯನ್ನು ವಿಧಿಸುವದಕ್ಕೆ ಪಠಿಸಿದೆ. ಮತ್ತೊಂದು ಕಡೆಯಲ್ಲಿ ಗುಣಗಳನ್ನು ವಿಧಿಸುವದಕ್ಕೆ ಪಠಿಸಿದೆ ಎಂದು ವಿಂಗಡಿಸುವದಕ್ಕೂ ಆಗುವದಿಲ್ಲ. ಏಕೆಂದರೆ ಆಗ ಬೇರೆಬೇರೆಯ ಗುಣಗಳನ್ನೇ ಬೇರೆಬೇರೆಯ ಕಡೆಗಳಲ್ಲಿಯೂ ಪಠಿಸಬೇಕಾಗಿತ್ತೇ ಹೊರತು ಅದೇ (ಗುಣಗಳನ್ನೇ ಪಠಿಸುತ್ತಿರ)ಲಿಲ್ಲ. ಆದರೆ (ಇಲ್ಲಿ) ಎರಡು ಕಡೆಗಳಲ್ಲಿಯೂ ಮನೋಮಯತ್ವವೇ ಮುಂತಾದ (ಅದೇ) ಗುಣಗಳನ್ನೇ ಪಠಿಸಿದೆ. ಆದ್ದರಿಂದ ಒಂದರಲ್ಲೊಂದರ ಗುಣಗಳನ್ನು ಉಪಸಂಹಾರಮಾಡತಕ್ಕದ್ದಲ್ಲ.

## ಸಿದ್ಧಾಂತ: ಉಪಾಸ್ಯವು ಅಭಿನ್ನವಾಗಿರುವದರಿಂದ ಗುಣೋಪಸಂಹಾರ

(ಭಾಷ್ಯ)

೩೫೬. ಏವಂ ಪ್ರಾಪ್ತೇ ಬ್ರೂಮಹೇ– ಯಥಾ ಭಿನ್ನಾಸು ಶಾಖಾಸು ವಿದ್ಯೈಕತ್ವಂ ಗುಣೋಪಸಂಹಾರಶ್ಚ ಭವತಿ ಏವಮ್ ಏಕಸ್ಯಾಮಪಿ ಶಾಖಾಯಾಂ ಭವಿತುಮರ್ಹತಿ । ಉಪಾಸ್ಯಾಭೇದಾತ್ । ತದೇವ ಹಿ ಬ್ರಹ್ಮ ಮನೋಮಯತ್ವಾದಿಗುಣಕಮ್ ಉಭಯತ್ರಾಪಿ ಉಪಾಸ್ಯಮ್ ಅಭಿನ್ನಂ ಪ್ರತ್ಯಭಿಜಾನೀಮಃ । ಉಪಾಸ್ಯಂ ಚ ರೂಪಂ ವಿದ್ಯಾಯಾಃ । ನ ಚ ವಿದ್ಯಮಾನೇ ರೂಪಾಭೇದೇ ವಿದ್ಯಾಭೇದಮ್ ಅಧ್ಯವಸಾತುಂ ಶಕ್ನುಮಃ । ನಾಪಿ ವಿದ್ಯಾಭೇದೇ ಗುಣವ್ಯವಸ್ಥಾನಮ್ । ನನು ಪೌನರುಕ್ತ್ಯಪ್ರಸಙ್ಗಾತ್ ವಿದ್ಯಾಭೇದೋಽಧ್ಯವಸಿತಃ । ನೇತ್ಯುಚ್ಯತೇ । ಅರ್ಥವಿಭಾಗೋಪಪತ್ತೇಃ । ಏಕಂ ಹಿ ಆಮ್ನಾನಮ್ ವಿದ್ಯಾವಿಧಾನಾರ್ಥಮ್, ಅಪರಂ ಗುಣವಿಧಾನಾರ್ಥಮ್ ಇತಿ ನ ಕಿಂಚಿತ್ ನೋಪಪದ್ಯತೇ । ನನು ಏವಂ ಸತಿ ಯದಪಠಿತಮ್ ಅಗ್ನಿರಹಸ್ಯೇ ತದೇವ ಬೃಹದಾರಣ್ಯಕೇ ಪಠಿತವ್ಯಮ್ 'ಸ ಏಷ ಸರ್ವಸ್ಯೇಶಾನಃ' ಇತ್ಯಾದಿ । ಯತ್ತು ಪಠಿತಮೇವ 'ಮನೋಮಯಃ' ಇತ್ಯಾದಿ ತನ್ನ

ಪಠಿತವ್ಯಮ್ । ನೈಷ ದೋಷಃ । ತದ್ಬಲೇನೈವ ಪ್ರದೇಶಾನ್ತರಪಠಿತವಿದ್ಯಾ ಪ್ರತ್ಯಭಿಜ್ಞಾನಾತ್ । ಸಮಾನಗುಣಾಮ್ನಾನೇನ ಹಿ ವಿಪ್ರಕೃಷ್ಟದೇಶಾಂ ಶಾಣ್ಡಿಲ್ಯವಿದ್ಯಾಂ ಪ್ರತ್ಯಭಿಜ್ಞಾಪ್ಯ ತಸ್ಯಾಮ್ ಈಶಾನತ್ವಾದಿ ಉಪದಿಶ್ಯತೇ । ಅನ್ಯಥಾ ಹಿ ಕಥಂ ತಸ್ಯಾಮಯಂ ಗುಣವಿಧಿರಭಿಧೀಯತೇ ಅಪಿ ಚ ಅಪ್ರಾಪ್ತಾಂಶೋಪದೇಶೇನ ಅರ್ಥವತಿ ವಾಕ್ಯೇ ಸಂಜಾತೇ ಪ್ರಾಪ್ತಾಂಶಪರಾಮರ್ಶಸ್ಯ ನಿತ್ಯಾನುವಾದತಯಾಪಿ ಉಪಪದ್ಯಮಾನತ್ವಾತ್ ನ ತದ್ಬಲೇನ ಪ್ರತ್ಯಭಿಜ್ಞಾ ಅಪೋದಿತುಂ ಶಕ್ಯತೇ । ತಸ್ಮಾತ್ ಅತ್ರ ಸಮಾನಾಯಾಮಪಿ ಶಾಖಾಯಾಂ ವಿದ್ಯೈಕತ್ವಂ ಗುಣೋಪಸಂಹಾರಶ್ಚ ಇತ್ಯುಪಪನ್ನಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಹೇಗೆ ಬೇರೆಬೇರೆಯ ಶಾಖೆಗಳಲ್ಲಿ ವಿದ್ಯೆಯು ಒಂದೇ (ಆಗಿರುವದೋ) ಗುಣೋಪಸಂಹಾರವೂ ಆಗುತ್ತದೆಯೋ, ಹಾಗೆಯೇ ಒಂದೇ ಶಾಖೆಯಲ್ಲಿಯೂ ಆಗಬೇಕು. ಏಕೆಂದರೆ ಉಪಾಸ್ಯವು ಅಭಿನ್ನವಾಗಿರುತ್ತದೆ. ಅದೇ ಮನೋಮಯತ್ವಾದಿಗುಣಗಳುಳ್ಳ ಬ್ರಹ್ಮವಲ್ಲವೆ, ಎರಡು ಕಡೆಗಳಲ್ಲಿಯೂ ಉಪಾಸ್ಯವೆಂದು ಅಭಿನ್ನವಾಗಿ ಗುರುತಿಸುತ್ತೇವೆ? ವಿದ್ಯೆಗೆ ಉಪಾಸ್ಯವೇ ರೂಪವು. (ಹೀಗೆ ವಿದ್ಯೆಯ) ರೂಪವು ಅಭಿನ್ನವಾಗಿರುತ್ತಿರುವಲ್ಲಿ ವಿದ್ಯೆಯು ಬೇರೆಬೇರೆ ಎಂದು ನಿಶ್ಚಯಿಸುವದು ನಮ್ಮಿಂದಾಗಲಾರದು, ವಿದ್ಯೆಯು ಅಭಿನ್ನವಾಗಿರುವಲ್ಲಿ ಗುಣಗಳು ಬೇರೆಬೇರೆಯಾಗಿಯೇ (ಇರಬೇಕೆಂದು ನಿಶ್ಚಯಿಸಲೂ) ಆರೆವು.

(ಆಕ್ಷೇಪ) :– ಪುನರುಕ್ತಿ(ದೋಷವು) ಪ್ರಸಕ್ತವಾಗುವದರಿಂದ ವಿದ್ಯೆಯು ಬೇರೆಬೇರೆ ಎಂದು (ನಾವು) ನಿರ್ಣಯಿಸಿದ್ದೇವಲ್ಲ !

(ಪರಿಹಾರ) :– ಹಾಗಲ್ಲ ಎನ್ನುತ್ತೇವೆ. ಏಕೆಂದರೆ ಅರ್ಥವನ್ನು ವಿಂಗಡಿಸಿ (ಹೇಳ)ಬಹುದಾಗಿದೆ. ಹೇಗೆಂದರೆ ಒಂದು ಪಾಠವು ವಿದ್ಯೆಯನ್ನು ವಿಧಿಸುವದಕ್ಕಾಗಿ (ಬಂದಿದೆ), ಇನ್ನೊಂದು ಗುಣಗಳನ್ನು ವಿಧಿಸುವದಕ್ಕೆ (ಬಂದಿದೆ); ಆದ್ದರಿಂದ (ಇಲ್ಲಿ) ಯಾವದೂ ಅನುಪಪನ್ನವಾಗಿರುವದಿಲ್ಲ.

(ಆಕ್ಷೇಪ) :– ಹಾಗಾದರೆ ಅಗ್ನಿರಹಸ್ಯದಲ್ಲಿ ಯಾವದನ್ನು ಪಠಿಸಿಲ್ಲವೋ ಅದನ್ನುಮಾತ್ರವೇ ಬೃಹದಾರಣ್ಯಕದಲ್ಲಿ "ಆ ಇವನು ಎಲ್ಲಕ್ಕೂ ಒಡೆಯನು" ಎಂದುಮುಂತಾಗಿ ಪಠಿಸಬೇಕಿತ್ತು; ಇನ್ನು (ಮೊದಲು) ಪಠಿತವಾಗಿಯೇ ಇತ್ತಲ್ಲ, "ಮನೋಮಯನು" ಮುಂತಾಗಿ, ಅದನ್ನು (ಇಲ್ಲಿ) ಪಠಿಸಬಾರದಾಗಿತ್ತಲ್ಲ !

(ಪರಿಹಾರ) :– ಇದು ದೋಷವಲ್ಲ. ಏಕೆಂದರೆ ಆ (ಮನೋಮಯಾದಿಗಳ) ಬಲದಿಂದಲೇ ಪ್ರದೇಶಾಂತರದಲ್ಲಿ ಪಠಿತವಾಗಿರುವ ವಿದ್ಯೆ ಎಂದು ಗುರುತಿಸಬೇಕಾಗಿದೆ. (ಇದರ ವಿವರ): ಅದೇ ಗುಣಗಳನ್ನೇ ಪಠಿಸಿರುವದರಿಂದಲೇ ಅಲ್ಲವೆ, ದೂರದೇಶದಲ್ಲಿ ಪಠಿತವಾದ ಶಾಂಡಿಲ್ಯವಿದ್ಯೆ (ಎಂದು) ಗುರುತಿಸಿಕೊಟ್ಟು ಅದರಲ್ಲಿ ಈಶಾನತ್ವಾದಿಗಳನ್ನು ಉಪದೇಶಮಾಡಿರುತ್ತದೆ? ಹಾಗಿಲ್ಲದಿದ್ದರೆ ಅದರ (ವಿಷಯ)ದಲ್ಲಿ ಇದು ಗುಣವಿಧಿ ಎಂದು ಹೇಗೆತಾನೆ ಹೇಳಲಾದೀತು? ಇದೂ ಅಲ್ಲದೆ ಅಪ್ರಾಪ್ತವಾದ ಅಂಶವನ್ನು ಉಪದೇಶಮಾಡುವದರಿಂದ (ಈ) ವಾಕ್ಯವು ಅರ್ಥವತ್ತೆಂದಾಗುತ್ತಿರುವಲ್ಲಿ ಪ್ರಾಪ್ತಾಂಶವನ್ನು ಪರಾಮರ್ಶಿಸಿರುವದು ನಿತ್ಯಾನುವಾದವೆಂದೂ ಹೊಂದುವದರಿಂದ ಅದರ ಬಲದಿಂದ (ಇದು ಅದೇ ವಿದ್ಯೆ ಎಂಬ) ಪ್ರತ್ಯಭಿಜ್ಞೆಯನ್ನು ಅಲ್ಲಗಳೆಯುವದು ಆಗಲಾರದು. ಆದ್ದರಿಂದ ಇಲ್ಲಿ ಅದೇ ಶಾಖೆಯಲ್ಲಿದ್ದರೂ ವಿದ್ಯೆಯು ಒಂದೇ, ಗುಣಗಳ ಉಪಸಂಹಾರವನ್ನು ಮಾಡತಕ್ಕದ್ದು– ಎಂಬುದು ಯುಕ್ತ.

## ೧೧. ಸಂಬಂಧಾಧಿಕರಣ (ಸೂ. ೨೦–೨೧)

(ಬೃಹದಾರಣ್ಯಕದಲ್ಲಿ ಹೇಳಿರುವ ಸತ್ಯವಿದ್ಯೆಗಳು ಬೇರೆಬೇರೆ)

**ಸಂಬನ್ಧಾದೇವಮನ್ಯತ್ರಾಪಿ ॥ ೨೦ ॥**

೨೦. ಸಂಬಂಧವಿರುವದರಿಂದ ಮತ್ತೊಂದು ಕಡೆಯಲ್ಲಿಯೂ ಹೀಗೆಯೇ.

### ಬೃಹದಾರಣ್ಯಕದಲ್ಲಿ ಸತ್ಯವಿದ್ಯೆಗಳು ಒಂದೊ, ಬೇರೆಬೇರೆಯೊ ?

(ಭಾಷ್ಯ)

೩೫೭. ಬೃಹದಾರಣ್ಯಕೇ "ಸತ್ಯಂ ಬ್ರಹ್ಮ" (ಬೃ. ೫–೫–೧) ಇತ್ಯುಪಕ್ರಮ್ಯ "ತದ್ಯತ್ ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ ಮಣ್ಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷನ್ ಪುರುಷಃ" (ಬೃ. ೫–೫–೨) ಇತಿ ತಸ್ಯೈವ ಸತ್ಯಸ್ಯ ಬ್ರಹ್ಮಣಃ ಅಧಿದೈವತಮ್ ಅಧ್ಯಾತ್ಮಂ ಚ ಆಯತನವಿಶೇಷಮ್ ಉಪದಿಶ್ಯ ವ್ಯಾಹೃತಿಶರೀರತ್ವಂ ಚ ಸಂಪಾದ್ಯ ದ್ವೇ ಉಪನಿಷದಾವುಪದಿಶ್ಯೇತೇ । "ತಸ್ಯೋಪನಿಷದಹರಿತಿ ..." (ಬೃ. ೫–೫–೩) ಇತ್ಯಧಿದೈವತಮ್, "ತಸ್ಯೋಪನಿಷದಹಮಿತಿ" (ಬೃ. ೫–೫–೪) ಇತ್ಯಧ್ಯಾತ್ಮಮ್ । ತತ್ರ ಸಂಶಯಃ ಕಿಮ್ ಅವಿಭಾಗೇನೈವ ಉಭೇ ಅಪಿ ಉಪನಿಷದೌ ಉಭಯತ್ರ ಅನುಸಂಧಾತವ್ಯೇ ಉತ ವಿಭಾಗೇನ ಏಕಾ ಅಧಿದೈವಮ್, ಏಕಾ ಅಧ್ಯಾತ್ಮಮ್ ಇತಿ ॥

(ಭಾಷ್ಯಾರ್ಥ)

ಬೃಹದಾರಣ್ಯಕದಲ್ಲಿ "ಸತ್ಯವೆಂಬ ಬ್ರಹ್ಮವು" (ಬೃ. ೫-೫-೧) ಎಂದು ಉಪಕ್ರಮಿಸಿ "ಸತ್ಯವೆಂಬುದಿದೆಯಲ್ಲ, ಅದೇ ಆ ಆದಿತ್ಯನು, ಆ ಇವನೇ ಈ ಮಂಡಲದಲ್ಲಿರುವ ಪುರುಷನು, ಮತ್ತು ಬಲಗಣ್ಣಿನಲ್ಲಿರುವ ಪುರುಷನೂ (ಇವನೇ)" (ಬೃ. ೫-೫-೨) ಎಂದು ಅದೇ ಸತ್ಯಬ್ರಹ್ಮಕ್ಕೆ ಅಧಿದೈವತವಾಗಿಯೂ ಅಧ್ಯಾತ್ಮವಾಗಿಯೂ ಆಯತನವಿಶೇಷವನ್ನು ತಿಳಿಸಿ[1] ವ್ಯಾಹೃತಿಶರೀರತ್ವವನ್ನು ಸಂಪಾದನೆಮಾಡಿ[2] ಎರಡು ಉಪನಿಷತ್ತುಗಳು — "ಅಹಸ್ಸೆಂದು ಅವನ ಉಪನಿಷತ್ತು" (ಬೃ. ೫-೫-೩) ಎಂದು ಅಧಿದೈವತವಾಗಿಯೂ "ಅಹವೆಂದು ಅವನ ಉಪನಿಷತ್ತು" ಎಂದು ಅಧ್ಯಾತ್ಮವಾಗಿಯೂ- ಉಪದಿಷ್ಟವಾಗಿರುತ್ತವೆ. ಅಲ್ಲಿ ಸಂಶಯುವೇನೆಂದರೆ (ಅ) ಎರಡು ಉಪನಿಷತ್ತುಗಳನ್ನೂ, ವಿಂಗಡಿಸದೆ ಎರಡು ಕಡೆಯಲ್ಲಿಯೂ ಅನುಸಂಧಾನಮಾಡಬೇಕೆ ? ಅಥವಾ ವಿಂಗಡಿಸಿ ಕೊಂಡು ಒಂದು ಅಧಿದೈವದಲ್ಲಿ, ಒಂದು ಅಧ್ಯಾತ್ಮದಲ್ಲಿ- ಎಂದು (ಅನುಸಂಧಾನ ಮಾಡಬೇಕೆ) ?

## ಪೂರ್ವಪಕ್ಷ: ಸತ್ಯವಿದ್ಯೆಯೊಂದೇ, ಆದ್ದರಿಂದ ಗುಣೋಪಸಂಹಾರ

(ಭಾಷ್ಯ)

೩೫೮. ತತ್ರ ಸೂತ್ರೇಣೈವ ಉಪಕ್ರಮತೇ । ಯಥಾ ಶಾಂಡಿಲ್ಯವಿದ್ಯಾಯಾಂ ವಿಭಾಗೇನಾಪಿ ಅಧೀತಾಯಾಂ ಗುಣೋಪಸಂಹಾರ ಉಕ್ತಃ ಏವಮ್ ಅನ್ಯತ್ರಾಪಿ ಏವಂಜಾತೀಯಕೇ ವಿಷಯೇ ಭವಿತುಮರ್ಹತಿ । ಏಕವಿದ್ಯಾಭಿಸಂಬನ್ಧಾತ್ । ಏಕಾ ಹಿ ಇಯಂ ಸತ್ಯವಿದ್ಯಾ ಅಧಿದೈವಮ್ ಅಧ್ಯಾತ್ಮಂ ಚ ಅಧೀತಾ । ಉಪಕ್ರಮಾಭೇದಾತ್, ವ್ಯತಿರಿಕ್ತಪಾಠಾಚ್ಚ । ಕಥಂ ತಸ್ಯಾಮ್ ಉದಿತೋ ಧರ್ಮಃ ತಸ್ಯಾಮೇವ ನ ಸ್ಯಾತ್ ? ಯೋ ಹಿ ಆಚಾರ್ಯೇ ಕಶ್ಚಿತ್ ಅನುಗಮನಾದಿರಾಚಾರಶ್ಚೋದಿತಃ ಸ ಗ್ರಾಮಗವನೇ ಅರಣ್ಯಗವನೇ ಚ ತುಲ್ಯವದೇವ ಭವತಿ । ತಸ್ಮಾದುಭಯೋರಪಿ ಉಪನಿಷದೋಃ ಉಭಯತ್ರ ಪ್ರಾಪ್ತಿಃ ಇತಿ ॥

(ಭಾಷ್ಯಾರ್ಥ)

ಇಲ್ಲಿ ಸೂತ್ರದಿಂದಲೇ (ಪೂರ್ವಪಕ್ಷವನ್ನು) ಉಪಕ್ರಮಿಸಿರುತ್ತಾರೆ. ಹೇಗೆ ಶಾಂಡಿಲ್ಯವಿದ್ಯೆಯಲ್ಲಿ ವಿಂಗಡಿಸಿ (ಬೇರೆಬೇರೆ ಕಡೆಯಲ್ಲಿ) ಅಧ್ಯಯನ

1. ಸೂರ್ಯಮಂಡಲ, ಚಕ್ಷುಸ್ಸು- ಎಂಬ ಆಯತನಗಳನ್ನು ಉಪದೇಶಿಸಿ.

2. ಭೂರಿತಿ ಶಿರಃ, ಭುವ ಇತಿ ಬಾಹೂ, ಸ್ವರಿತಿ ಪ್ರತಿಷ್ಠಾ- ಎಂದು ವ್ಯಾಹೃತಿಗಳನ್ನು ಶರೀರದ ಅವಯವಗಳೆಂದು ಎರಡು ಕಡೆಯಲ್ಲಿಯೂ ಹೇಳಿದೆ. (ಬೃ. ೫-೫-೩,೪)

ಮಾಡಿದ್ದರೂ ಗುಣಗಳ ಉಪಸಂಹಾರವನ್ನು ಹೇಳಿದೆಯೋ ಹಾಗೆಯೇ ಆ ಜಾತಿಯ ಮತ್ತೊಂದು ವಿಷಯದಲ್ಲಿಯೂ ಆಗತಕ್ಕದ್ದು ಯುಕ್ತ. ಏಕೆಂದರೆ ಒಂದೇ ವಿದ್ಯೆಯ ಸಂಬಂಧವಿರುತ್ತದೆ. ಅಧಿದೈವವಾಗಿಯೂ ಅಧ್ಯಾತ್ಮವಾಗಿಯೂ ಅಧೀತವಾಗಿರುವ ಈ ಸತ್ಯವಿದ್ಯೆಯು ಒಂದೇ[1]; ಏಕೆಂದರೆ ಉಪಕ್ರಮವು ಒಂದೇ ಆಗಿದೆ. (ಅಕ್ಷ್ಯಾದಿತ್ಯಪುರುಷರನ್ನು) ಸಂಬಂಧಿಸಿದ ಪಾಠವೂ (ಎರಡರಲ್ಲಿದೆ). (ಹೀಗಿರುವಲ್ಲಿ) ಆ ವಿದ್ಯೆಯಲ್ಲಿ ಹೇಳಿರುವ ಧರ್ಮವು ಅದೇ (ವಿದ್ಯೆಯಲ್ಲಿಯೇ) ಹೇಗೆತಾನೆ ಆಗದೆ ಇದ್ದೀತು[2]? ಆಚಾರ್ಯನ ವಿಷಯದಲ್ಲಿ ಅನುಗಮನವೇ ಮುಂತಾದ ಯಾವ ಆಚಾರವನ್ನು ವಿಧಿಸಿರುತ್ತದೆಯೋ (ಆ ಆಚಾರ್ಯನು) ಊರಿನಲ್ಲಿರಲಿ, ಗ್ರಾಮದಲ್ಲಿರಲಿ ಸಮಾನವಾಗಿಯೇ ಇರುತ್ತದೆಯಲ್ಲವೇ[3] ? ಆದ್ದರಿಂದ ಈ ಎರಡು ಉಪನಿಷತ್ತುಗಳಿಗೂ ಎರಡು ಕಡೆಗಳಲ್ಲಿಯೂ ಪ್ರಾಪ್ತಿಯಾಗುತ್ತದೆ.

ನ ವಾ ವಿಶೇಷಾತ್ ॥ ೨೧ ॥

೨೧. (ಪ್ರಾಪ್ತಿ)ಯಿಲ್ಲವೇ ಇಲ್ಲ; ಏಕೆಂದರೆ ವಿಶೇಷವಿದೆ.

## ಉಪಾಸನಸ್ಥಾನಗಳೇ ಬೇರೆಯಾಗಿರುವದರಿಂದ ಉಪಸಂಹಾರವಿಲ್ಲ

(ಭಾಷ್ಯ)

೩೫೫. ನ ವಾ ಉಭಯೋಃ ಉಭಯತ್ರ ಪ್ರಾಪ್ತಿಃ । ಕಸ್ಮಾತ್ ? ವಿಶೇಷಾತ್ । ಉಪಾಸನಸ್ಥಾನವಿಶೇಷೋಪನಿಬನ್ಧಾತ್ ಇತ್ಯರ್ಥಃ । ಕಥಂ ಸ್ಥಾನವಿಶೇಷೋಪನಿಬನ್ಧಃ ಇತಿ ? ಉಚ್ಯತೇ । "ಯ ಏಷ ಏತಸ್ಮಿನ್ ಮಣ್ಡಲೇ ಪುರುಷಃ" (ಬೃ. ೫-೫-೩) ಇತಿ ಹಿ ಆಧಿದೈವಿಕಂ ಪುರುಷಂ

---

1. ಸತ್ಯವೆಂಬ ಬ್ರಹ್ಮವು ಎರಡು ಕಡೆಯಲ್ಲಿಯೂ ಒಂದೇ; ಆದ್ದರಿಂದ ಸತ್ಯವಿದ್ಯೆಯೂ ಒಂದೇ.

2. ಒಂದೇ ಶಾಖೆಯಲ್ಲಿ ಹೇಳಿರುವ ಅದೇ ವಿದ್ಯೆಯ ಗುಣಗಳು ಉಪಸಂಹಾರವಾಗತಕ್ಕವೆಂದು ಶಾಂಡಿಲ್ಯವಿದ್ಯೆಯ ವಿಷಯದಲ್ಲಿ ಗೊತ್ತುಮಾಡಿದೆ. ಅದರಂತೆ ಅಹಸ್ಸೆಂಬ ಉಪನಿಷತ್ತು, ಅಹಮ್ ಎಂಬ ಉಪನಿಷತ್ತು– ಈ ಎರಡು ಉಪನಿಷತ್ತು (ಹೆಸರು)ಗಳೂ ಎರಡು ಕಡೆಯಲ್ಲಿಯೂ ಉಪಸಂಹಾರವಾಗತಕ್ಕವು.

3. ಆಚಾರ್ಯನು ಅವನೇ ಆಗಿರುವದರಿಂದ ಸ್ಥಾನವಿಶೇಷದಿಂದ ಅವನನ್ನು ಹಿಂಬಾಲಿಸಬೇಕೆಂದು ವಿಧಿಸಿರುವ ವಾಕ್ಯವು ಅನ್ವಯಿಸದೆ ಹೋಗುವದಿಲ್ಲ.

ಪ್ರಕೃತ್ಯ ತಸ್ಯೋಽಪನಿಷದಹರಿತಿ ಶ್ರಾವಯತಿ ।[1] "ಯೋಽಯಂ ದಕ್ಷಿಣೇಽಕ್ಷನ್ ಪುರುಷಃ" ( ಬೃ. ೫-೫-೪ ) ಇತಿ ಹಿ ಆಧ್ಯಾತ್ಮಿಕಂ ಪುರುಷಂ ಪ್ರಕೃತ್ಯ ತಸ್ಯೋಽಪನಿಷದಹಮಿತಿ । 'ತಸ್ಯ' ಇತಿ ಚೈತತ್ ಸಂನಿಹಿತಾವಲಮ್ಬನಂ ಸರ್ವನಾಮ । ತಸ್ಮಾತ್ ಆಯತನವಿಶೇಷವ್ಯಪಾಶ್ರಯೇಣೈವ ಏತೇ ಉಪನಿಷದೌ ಉಪದಿಶ್ಯೇತೇ । ಕುತ ಉಭಯೋರುಭಯತ್ರ ಪ್ರಾಪ್ತಿಃ ? ನನು ಏಕ ಏವಾಯಮ್ ಅಧಿದೈವತಮ್ ಅಧ್ಯಾತ್ಮಂ ಚ ಪುರುಷಃ । ಏಕಸ್ಯೈವ ಸತ್ಯಸ್ಯ ಬ್ರಹ್ಮಣಃ ಆಯತನದ್ವಯಪ್ರತಿಪಾದನಾತ್ । ಸತ್ಯಮೇವಮೇತತ್ । ಏಕಸ್ಯಾಪಿ ತು ಅವಸ್ಥಾವಿಶೇಷೋಪಾದಾನೇನೈವ ಉಪನಿಷದ್ವಿಶೇಷೋಪದೇಶಾತ್ ತದವಸ್ಥಸ್ಯೈವ ಸಾ ಭವಿತುಮರ್ಹತಿ । ಅಸ್ತಿ ಚಾಯಂ ದೃಷ್ಟಾನ್ತಃ ಸತ್ಯಪಿ ಆಚಾರ್ಯಸ್ವರೂಪಾನಪಾಯೇ ಯದಾಚಾರ್ಯಸ್ಯ ಆಸೀನಸ್ಯ ಅನುವರ್ತನಮುಕ್ತಮ್, ನ ತತ್ ತಿಷ್ಠತೋ ಭವತಿ । ಯಚ್ಚ ತಿಷ್ಠತ ಉಕ್ತಮ್, ನ ತದಾಸೀನಸ್ಯ ಇತಿ । ಗ್ರಾಮಾರಣ್ಯಯೋಸ್ತು ಆಚಾರ್ಯಸ್ವರೂಪಾನಪಾಯಾತ್ ತತ್ಸ್ವರೂಪಾನುಬದ್ಧಸ್ಯ ಚ ಧರ್ಮಸ್ಯ ಗ್ರಾಮಾರಣ್ಯಕೃತವಿಶೇಷಾಭಾವಾತ್ ಉಭಯತ್ರ ತುಲ್ಯವದ್ಭಾವಃ ಇತಿ ಅದೃಷ್ಟಾನ್ತಃ ಸಃ । ತಸ್ಮಾತ್ ವ್ಯವಸ್ಥಾ ಅನಯೋರುಪನಿಷದೋಃ ॥

(ಭಾಷ್ಯಾರ್ಥ)

ಎರಡಕ್ಕೂ ಎರಡು ಕಡೆಗಳಲ್ಲಿಯೂ ಪ್ರಾಪ್ತಿಯಿಲ್ಲವೇ ಇಲ್ಲ. ಏಕೆ ? ಎಂದರೆ ವಿಶೇಷವಿರುವದರಿಂದ; ಉಪಾಸನಸ್ಥಾನವಿಶೇಷಗಳ ಸಂಬಂಧವಿರುವದರಿಂದ ಎಂದರ್ಥ. ಸ್ಥಾನವಿಶೇಷಗಳ ಸಂಬಂಧವಿದೆ ಎಂಬುದು ಹೇಗೆ ? ಎಂದರೆ ಹೇಳುತ್ತೇವೆ. "ಈ ಮಂಡಲದಲ್ಲಿರುವ ಪುರುಷನಿದಾನಲ್ಲ...." (ಬೃ. ೫-೫-೩) ಎಂದಲ್ಲವೆ, ಆಧಿದೈವಿಕಪುರುಷನನ್ನು (ಹೇಳುವದಕ್ಕೆ) ಆರಂಭಿಸಿ ಅವನ ಉಪನಿಷತ್ತು ಅಹಸ್ಸು ಎಂದು ಹೇಳಿದೆ; "ಈ ಬಲಗಣ್ಣಿನಲ್ಲಿರುವ ಪುರುಷನಿದಾನಲ್ಲ" (ಬೃ. ೫-೫-೪) ಎಂದು ಆಧ್ಯಾತ್ಮಿಕಪುರುಷನನ್ನು (ಹೇಳುವದಕ್ಕೆ) ಆರಂಭಿಸಿ ಅವನ ಉಪನಿಷತ್ತು ಅಹಮ್ ಎಂದು (ಹೇಳಿದೆ)? 'ಅವನ' ಎಂಬುದು ಹತ್ತಿರವಿರುವ ವಿಷಯದ ಸರ್ವನಾಮವು. ಆದ್ದರಿಂದ ಆಯತನವಿಶೇಷವನ್ನು ಆಶ್ರಯಿಸಿಕೊಂಡೇ ಈ ಉಪನಿಷತ್ತುಗಳನ್ನು ಉಪದೇಶಿಸಿದೆ ; ಎರಡಕ್ಕೂ ಎರಡು ಕಡೆಯಲ್ಲಿಯೂ ಪ್ರಾಪ್ತಿ ಹೇಗಾದೀತು ?

---

1. ಇಲ್ಲಿ ಶ್ರುತಿಯನ್ನೇ ಉದಾಹರಿಸಿದೆ ಎಂದು ಇಟ್ಟುಕೊಂಡರೆ 'ತಸ್ಯೋಽಪನಿಷದಹರಿತಿ' (ಇತಿ) ಎಂದು ಒಂದು ಇತಿಯು ಹೆಚ್ಚಾಗಿ ಬೇಕಾಗುವದು ; ಉಪನಿಷದ್ವಾಕ್ಯಾರ್ಥದ ಅನುವಾದಮಾತ್ರವಿದೆಂದು ಭಾವಿಸಿದರೆ ಇನ್ನೊಂದು ಇತಿಯು ಬೇಕಾಗುವದಿಲ್ಲ ; ಮುಂದಿನ ವಾಕ್ಯವನ್ನೂ ಹೀಗೆಯೇ ತಿಳಿಯಬೇಕು.

(ಆಕ್ಷೇಪ) :– ಅಧಿದೈವತವಾಗಿಯೂ ಅಧ್ಯಾತ್ಮವಾಗಿಯೂ ಇರುವ ಈ ಪುರುಷನು ಒಬ್ಬನೇ ಅಲ್ಲವೆ ? ಒಂದೇ ಸತ್ಯಬ್ರಹ್ಮಕ್ಕೆ ಎರಡು ಆಯತನಗಳನ್ನು ಹೇಳಿದೆಯಲ್ಲ !

(ಪರಿಹಾರ) :– ಇದು ನಿಜವೇ. ಆದರೆ ಒಬ್ಬನೇ (ಪುರುಷನಿಗೆ) ಬೇರೆ ಬೇರೆಯ ಅವಸ್ಥೆಯನ್ನು ಸ್ವೀಕರಿಸಿಯೇ ಆಯಾ ಉಪನಿಷತ್ತನ್ನು ತಿಳಿಸಿರುವದರಿಂದ ಈ ಅವಸ್ಥೆಯಲ್ಲಿರುವ (ಪುರುಷ)ನಿಗೇ ಆ (ಉಪನಿಷತ್ತು) ಆಗಬೇಕು. (ಇದಕ್ಕೆ) ಈ ದೃಷ್ಟಾಂತವೂ ಇದೆ: ಆಚಾರ್ಯನ ಸ್ವರೂಪವು ಬೇರೆಯಾಗಲಿಲ್ಲವೆಂದೇ ಇದ್ದರೂ ಕುಳಿತಿರುವ ಆಚಾರ್ಯನ ಅನುವರ್ತನೆಯೆಂದು ಯಾವದನ್ನು ಹೇಳಿರುತ್ತದೆಯೋ ಅದು ನಿಂತ (ಆಚಾರ್ಯನ ಅನುವರ್ತನೆ)ಯಾಗುವದಿಲ್ಲ. ಯಾವದು ನಿಂತಿರುವ (ಆಚಾರ್ಯನ ಅನುವರ್ತನೆಯೆಂದು) ಹೇಳಿದೆಯೋ ಅದು ಕುಳಿತಿರುವ (ಆಚಾರ್ಯನ ಅನುವರ್ತನೆಯಾಗುವದಿಲ್ಲ). ಊರು, ಕಾಡು– ಇವುಗಳಲ್ಲಾದರೋ ಆಚಾರ್ಯನ ಸ್ವರೂಪವು ಬೇರೆಯಾಗದ್ದರಿಂದಲೂ ಸ್ವರೂಪಕ್ಕೆ ಸಂಬಂಧಿಸಿದ ಧರ್ಮಕ್ಕೆ ಗ್ರಾಮಾರಣ್ಯಕೃತವಿಶೇಷವು (ಯಾವದೂ) ಇಲ್ಲದ್ದರಿಂದಲೂ ಎರಡು ಕಡೆಯಲ್ಲಿಯೂ ಒಂದೇ ಸಮನಾದ (ಅನುವರ್ತನೆ) ಯಿರಬಹುದಾದ್ದರಿಂದ ಅದು (ಪ್ರಕೃತಕ್ಕೆ) ದೃಷ್ಟಾಂತವಲ್ಲ. ಆದ್ದರಿಂದ ಈ ಎರಡು ಉಪನಿಷತ್ತುಗಳೂ ಬೇರೆಬೇರೆಯೇ (ಇರತಕ್ಕವು).

**ದರ್ಶಯತಿ ಚ ॥ ೨೨ ॥**

೨೨. (ಶ್ರುತಿಯು) ತಿಳಿಸಿಯೂಕೊಡುತ್ತದೆ.

## ಉಪನಿಷತ್ತುಗಳು ವ್ಯವಸ್ಥಿತವೆಂಬುದಕ್ಕೆ ಶ್ರೌತಲಿಂಗ

(ಭಾಷ್ಯ)

೩೬೦. ಅಪಿ ಚ ಏವಂಜಾತೀಯಕಾನಾಂ ಧರ್ಮಾಣಾಂ ವ್ಯವಸ್ಥಾ ಇತಿ ಲಿಙ್ಗದರ್ಶನಂ ಭವತಿ "ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಂ ಯಾವಮುಷ್ಯ ಗೇಷ್ಣೌ ತೌ ಗೇಷ್ಣೌ ಯನ್ನಾಮ ತನ್ನಾಮ" (ಛಾಂ.೧–೭–೫) ಇತಿ । ಕಥಮಸ್ಯ ಲಿಙ್ಗತ್ವಮ್ ಇತಿ ? ತದುಚ್ಯತೇ । ಅಕ್ಷ್ಯಾದಿತ್ಯಸ್ಥಾನಭೇದಭಿನ್ನಾನ್ ಧರ್ಮಾನ್ ಅನ್ಯೋನ್ಯಸ್ಮಿನ್ ಅನುಪಸಂಹಾರ್ಯಾನ್ ಪಶ್ಯನ್ ಇಹಾತಿದೇಶೇನ ಆದಿತ್ಯಪುರುಷಗತಾನ್ ರೂಪಾದೀನ್ ಅಕ್ಷಿಪುರುಷೇ ಉಪಸಂಹರತಿ"ತಸ್ಯೈತಸ್ಯ ತದೇವ ರೂಪಮ್" (ಛಾಂ. ೧–೭–೫) ಇತ್ಯಾದಿನಾ । ತಸ್ಮಾತ್ ವ್ಯವಸ್ಥಿತೇ ಏವ ಏತೇ ಉಪನಿಷದೌ ಇತಿ ನಿರ್ಣಯಃ ॥

(ಭಾಷ್ಯಾರ್ಥ)

ಇದಲ್ಲದೆ ಈ ಜಾತಿಯ ಧರ್ಮಗಳು ವ್ಯವಸ್ಥಿತವಾಗಿಯೇ ಇರುತ್ತವೆ ಎಂಬುದಕ್ಕೆ ಲಿಂಗದರ್ಶನವೂ ಇರುತ್ತದೆ. "ಆ ಇವನಿಗೆ, ಅವನಿಗೆ ಯಾವ ರೂಪವೋ, ಅದೇ ರೂಪವು; ಅವನಿಗೆ ಯಾವ ಗೇಷ್ಣಗಳೋ ಅವೇ ಗೇಷ್ಣಗಳು; ಯಾವ ಹೆಸರೋ ಅದೇ ಹೆಸರು" (ಛಾಂ. ೧-೭-೫) ಎಂಬುದೇ (ಆ ಲಿಂಗವು).[1]

(ಪ್ರಶ್ನೆ):- ಇದು ಹೇಗೆ (ಅದಕ್ಕೆ) ಲಿಂಗವು ?

(ಉತ್ತರ):- ಅದನ್ನು ಹೇಳುತ್ತೇವೆ. ಅಕ್ಷಿ, ಆದಿತ್ಯ- ಎಂಬ ಸ್ಥಾನಗಳು ಬೇರೆಯಾಗಿರುವದರಿಂದ ಭಿನ್ನವಾಗಿರುವ ಧರ್ಮಗಳು ಒಂದರವನ್ನು ಇನ್ನೊಂದರಲ್ಲಿ ಉಪಸಂಹಾರಮಾಡಿಕೊಳ್ಳುವಹಾಗಿಲ್ಲವೆಂದು ತಿಳಿದು ಇಲ್ಲಿ ಅತಿದೇಶದಿಂದ ಆದಿತ್ಯಪುರುಷನಲ್ಲಿರುವ ರೂಪಾದಿಗಳನ್ನು ಅಕ್ಷಿಪುರುಷನಲ್ಲಿ "ಆ ಇವನಿಗೆ ಅದೇ ರೂಪವು" (ಛಾಂ. ೧-೭-೫) ಮುಂತಾದ (ವಾಕ್ಯ)ದಿಂದ ಉಪಸಂಹಾರಮಾಡಿರುತ್ತದೆ.[2] ಆದ್ದರಿಂದ ಈ ಉಪನಿಷತ್ತುಗಳು ವ್ಯವಸ್ಥಿತವಾಗಿಯೇ (ಇರುತ್ತವೆ).[3]

## ೧೨. ಸಂಭೃತ್ಯಧಿಕರಣ

(ರಾಣಾಯನಶಾಖೆಯಲ್ಲಿರುವ ವಿಭೂತಿಗಳು ಶಾಂಡಿಲ್ಯಾದಿಗಳಲ್ಲಿ ಉಪಸಂಹಾರವಾಗುವದಿಲ್ಲ.)

## ರಾಣಾಯನೀಯದಲ್ಲಿರುವ ಬ್ರಹ್ಮವಿಭೂತಿಗಳ ಬಗ್ಗೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೩೬೧. "ಬ್ರಹ್ಮಜ್ಯೇಷ್ಠಾ ವೀರ್ಯಾ ಸಂಭೃತಾನಿ ಬ್ರಹ್ಮಾಗ್ರೇ ಜ್ಯೇಷ್ಠಂ

---

1. ಗಮಕವು. ಈ ಶ್ರುತಿಯ ಅರ್ಥವನ್ನು ಪರ್ಯಾಲೋಚಿಸಿದರೆ ಸ್ಥಾನವಿಶೇಷಗತಧರ್ಮಗಳ ಉಪಸಂಹಾರವಿಲ್ಲವೆಂದು ತಿಳಿಯುತ್ತದೆ ಎಂದಭಿಪ್ರಾಯ.

2. ಆದಿತ್ಯಪುರುಷನ ರೂಪವು ಅಕ್ಷಿಪುರುಷನಿಗೆ ಸೇರುವದೆಂಬ ನಿಯಮವಿದ್ದರೆ ಈ ಅತಿದೇಶವು ಬೇಕಿರಲಿಲ್ಲ; ಅತಿದೇಶಮಾಡಿರುವದರಿಂದ ಹೀಗೆ ಅತಿದೇಶಮಾಡಿ ಹೇಳದ ಕಡೆಗಳಲ್ಲಿ ಧರ್ಮಗಳು ವ್ಯವಸ್ಥಿತವಾಗಿರುವವೆಂದು ಏರ್ಪಡುತ್ತದೆ.

3. ವಿದ್ಯೆಯು ಒಂದೇ ಆದರೂ ಧರ್ಮಗಳ ಉಪಸಂಹಾರವಿಲ್ಲ; ಆಯಾ ಸ್ಥಾನಗಳಲ್ಲಿ ಆಯಾ ಧರ್ಮಗಳಿಂದಲೇ ಉಪಾಸನೆಮಾಡಬೇಕು. ವ್ಯಾಹೃತ್ಯವಯವಗಳುಳ್ಳ ಶರೀರವನ್ನು ಎರಡು ಕಡೆಯಲ್ಲಿಯೂ ಹೇಳಿರುವದು ವಿದ್ಯೈಕ್ಯವನ್ನು ತಿಳಿಸುತ್ತದೆ, ಉಪನಿಷತ್ತುಗಳು ಬೇರೆಬೇರೆ ಎಂಬುದು ಅವು ವ್ಯವಸ್ಥಿತವಾಗಿರುವವೆಂದು ತಿಳಿಸುತ್ತದೆ ಎಂದು ಅಭಿಪ್ರಾಯ.

ದಿವಮಾತತಾನ" (?) ಇತ್ಯೇವಂ **ರಾಣಾಯನೀಯಾನಾಂ ಖಿಲೇಷು** ವೀರ್ಯಸಂಭೃತಿದ್ಯುನಿವೇಶಪ್ರಭೃತಯೋ ಬ್ರಹ್ಮಣೋ ವಿಭೂತಯಃ ಪಠ್ಯಂತೇ। ತೇಷಾಮೇವ ಚ ಉಪನಿಷದಿ ಶಾಣ್ಡಿಲ್ಯವಿದ್ಯಾಪ್ರಭೃತಯಃ ಬ್ರಹ್ಮವಿದ್ಯಾಃ ಪಠ್ಯಂತೇ। ತಾಸು ಬ್ರಹ್ಮವಿದ್ಯಾಸು ತಾ ಬ್ರಹ್ಮವಿಭೂತಯಃ ಉಪಸಂಹ್ರಿಯೇರನ್ ನ ವಾ ಇತಿ ವಿಚಾರಣಾಯಾಂ ಬ್ರಹ್ಮಸಂಬನ್ಧಾತ್ ಉಪಸಂಹಾರಪ್ರಾಪ್ತೌ ಏವಂ ಪಠತಿ ॥

(ಭಾಷ್ಯಾರ್ಥ)

"ಬ್ರಹ್ಮಜ್ಯೇಷ್ಠವಾದ ವೀರ್ಯಗಳು (ತಡೆಯಿಲ್ಲದೆ) ಧರಿಸಲ್ಪಟ್ಟಿವೆ, ಜ್ಯೇಷ್ಠವಾದ ಬ್ರಹ್ಮವು ಮೊದಲು ದ್ಯುಲೋಕವನ್ನು ವ್ಯಾಪಿಸಿಕೊಂಡಿರುತ್ತದೆ"[1] (?) ಎಂದಿಂತು **ರಾಣಾಯನೀಯರ** ಖಿಲ(ಗ್ರಂಥಗಳಲ್ಲಿ)[2] ವೀರ್ಯಸಂಭೃತಿ, ದ್ಯುನಿವೇಶ– ಮುಂತಾದ ಬ್ರಹ್ಮದ ವಿಭೂತಿಗಳನ್ನು ಪಠಿಸಿದೆ. ಆ (ರಾಣಾಯನೀಯರ) ಉಪನಿಷತ್ತಿನಲ್ಲಿಯೇ ಶಾಂಡಿಲ್ಯವಿದ್ಯೆಯೇ ಮುಂತಾದ ಬ್ರಹ್ಮವಿದ್ಯೆಗಳನ್ನು[3] ಪಠಿಸಿದೆ. ಆ ಬ್ರಹ್ಮವಿದ್ಯೆಗಳಲ್ಲಿ (ಈ) ಬ್ರಹ್ಮದ ವಿಭೂತಿಗಳನ್ನು ಉಪಸಂಹಾರಮಾಡಬೇಕೋ, ಕೂಡದೋ ?– ಎಂಬ ವಿಚಾರವುಂಟಾದಲ್ಲಿ ಬ್ರಹ್ಮಸಂಬಂಧದಿಂದ ಉಪಸಂಹಾರವು ಪ್ರಾಪ್ತವಾಗಲಾಗಿ ಹೀಗೆಂದು, (ಸೂತ್ರವನ್ನು) ಪಠಿಸಿರುತ್ತಾರೆ :

**ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ॥ ೨೩ ॥**

೨೩. ಸಂಭೃತಿ, ದ್ಯುವ್ಯಾಪ್ತಿ – (ಇವು)ಗಳೂ ಆದ್ದರಿಂದಲೇ (ಉಪಸಂಹಾರವಾಗತಕ್ಕವಲ್ಲ).

## ಸ್ಥಾನವಿಶೇಷವಿರುವದರಿಂದ ವಿದ್ಯಾಂತರಗಳಲ್ಲಿ ಉಪಸಂಹಾರವಿಲ್ಲ

(ಭಾಷ್ಯ)

೩೬೨. (ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ) । ಸಂಭೃತಿದ್ಯುವ್ಯಾಪ್ತಿಪ್ರಭೃತಯೋ ವಿಭೂತಯಃ ಶಾಣ್ಡಿಲ್ಯವಿದ್ಯಾಪ್ರಭೃತಿಷು ನೋಪಸಂಹರ್ತವ್ಯಾಃ।

1. ಬ್ರಹ್ಮದ ಪರಾಕ್ರಮಗಳು ಬ್ರಹ್ಮದಿಂದಲೇ ಬಂದಿವೆ, ಅದು ಅವನ್ನು ನಿರ್ವಿಘ್ನವಾಗಿ ಕಾಪಾಡಿಕೊಂಡುಬರುತ್ತಿದೆ. ಬ್ರಹ್ಮಕ್ಕಿಂತ ಮೊದಲು ಹುಟ್ಟಿದ್ದು ಯಾವದೂ ಇಲ್ಲ, ಅದು ದ್ಯುಲೋಕಾದಿಗಳನ್ನೂ ವ್ಯಾಪಿಸಿಕೊಂಡಿದೆ– ಎಂದು ಶ್ರುತಿಯ ಅರ್ಥ. "ಬ್ರಹ್ಮಭೂತಾನಾಂ ಪ್ರಥಮಂ ತು ಜಜ್ಞೇ ತೇನಾರ್ಹತಿ ಬ್ರಹ್ಮಣಾ ಸ್ಪರ್ಧಿತುಂ ಕಃ" ಎಂದು ವಾಕ್ಯಶೇಷ. ಬ್ರಹ್ಮವೇ ಭೂತಗಳಿಗೆಲ್ಲ ಮೊದಲು; ಆದರಿಂದ ಬ್ರಹ್ಮದೊಡನೆ ಸ್ಪರ್ಧಿಸಲಾಗಬಲ್ಲವನು ಯಾರು ?– ಎಂದು ಅರ್ಥ.

2. ಪರಿಶಿಷ್ಟರೂಪಗ್ರಂಥಭಾಗಗಳಲ್ಲಿ. 3 ಉಪಾಸನೆಗಳನ್ನು.

ಅತ ಏವ ಚ ಆಯತನವಿಶೇಷಯೋಗಾತ್ । ತಥಾ ಹಿ ಶಾಣ್ಡಿಲ್ಯವಿದ್ಯಾಯಾಂ ಹೃದಯಾಯತನತ್ವಂ ಬ್ರಹ್ಮಣ ಉಕ್ತಮ್ "ಏಷ ಮ ಆತ್ಮಾಽನ್ತರ್ಹೃದಯೇ" (ಛಾಂ. ೩–೧೪–೩) ಇತಿ । ತದ್ವದೇವ ದಹರವಿದ್ಯಾಯಾಮಪಿ "ದಹರಂ ಪುಣ್ಡರೀಕಂ ವೇಶ್ಮ ದಹರೋಽಸ್ಮಿನ್ನನ್ತರಾಕಾಶಃ" (ಛಾಂ. ೮–೧–೧) ಇತಿ ; ಉಪಕೋಸಲವಿದ್ಯಾಯಾಂ ತು ಅಕ್ಷ್ಯಾಯತನತ್ವಮ್ "ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ" (ಛಾಂ. ೪–೧೫–೧) ಇತಿ । ಏವಂ ತತ್ರ ತತ್ರ ತತ್ತತ್ ಆಧ್ಯಾತ್ಮಿಕಮ್ ·ಆಯತನಮ್ ಏತಾಸು ವಿದ್ಯಾಸು ಪ್ರತೀಯತೇ । ಆಧಿದೈವಿಕ್ಯಸ್ತು ಏತಾ ವಿಭೂತಯಃ ಸಂಭೃತಿದ್ಯುವ್ಯಾಪ್ತಿಪ್ರಭೃತಯಃ । ತಾಸಾಂ ಕುತ ಏತಾಸು ಪ್ರಾಪ್ತಿಃ ? ನನು ಏತಾಸ್ವಪಿ ಆಧಿದೈವಿಕ್ಯೋ ವಿಭೂತಯಃ ಶ್ರೂಯನ್ತೇ । "ಜ್ಯಾಯಾನ್ ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ" (ಛಾಂ. ೩–೧೪–೩), "ಏಷ ಉ ಏವ ಭಾಮನೀರೇಷ ಹಿ ಸರ್ವೇಷು ಲೋಕೇಷು ಭಾತಿ" (ಛಾಂ. ೪–೧೫–೪) "ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽನ್ತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅನ್ತರೇವ ಸಮಾಹಿತೇ" (ಛಾಂ. ೮–೧–೩) ಇತ್ಯೇವಮಾದ್ಯಾಃ । ಸನ್ತಿ ಚ ಅನ್ಯಾ ಆಯತನವಿಶೇಷಹೀನಾಃ ಅಪಿ ಇಹ ಬ್ರಹ್ಮವಿದ್ಯಾಃ ಷೋಡಶಕಲಾದ್ಯಾಃ । ಸತ್ಯಮೇವಮೇತತ್ । ತಥಾಪಿ ಅತ್ರ ವಿದ್ಯತೇ ವಿಶೇಷಃ ಸಂಭೃತ್ಯಾದ್ಯನುಪಸಂಹಾರಹೇತುಃ । ಸಮಾನಗುಣಾಮ್ನಾನೇನ ಹಿ ಪ್ರತ್ಯುಪಸ್ಥಾಪಿತಾಸು ವಿಪ್ರಕೃಷ್ಟದೇಶಾಸ್ವಪಿ ವಿದ್ಯಾಸು ವಿಪ್ರಕೃಷ್ಟದೇಶಾ ಗುಣಾಃ ಉಪಸಂಹ್ರಿಯೇರನ್ ಇತಿ ಯುಕ್ತಮ್ । ಸಂಭೃತ್ಯಾದಯಸ್ತು ಶಾಣ್ಡಿಲ್ಯಾದಿವಾಕ್ಯಗೋಚರಾಶ್ಚ ಮನೋಮಯತ್ವಾದಯೋ ಗುಣಾಃ ಪರಸ್ಪರವ್ಯಾವೃತ್ತಸ್ವರೂಪತ್ವಾತ್ ನ ಪ್ರದೇಶಾನ್ತರವರ್ತಿವಿದ್ಯಾಪ್ರತ್ಯುಪಸ್ಥಾಪನಕ್ಷಮಾಃ । ನ ಚ ಬ್ರಹ್ಮ ಸಂಬನ್ಧಮಾತ್ರೇಣ ಪ್ರದೇಶಾನ್ತರವರ್ತಿವಿದ್ಯಾಪ್ರತ್ಯುಪಸ್ಥಾಪನಮ್ ಇತ್ಯುಚ್ಯತೇ । ವಿದ್ಯಾಭೇದೇಽಪಿ ತದುಪಪತ್ತೇಃ । ಏಕಮಪಿ ಹಿ ಬ್ರಹ್ಮ ವಿಭೂತಿಭೇದೈಃ ಅನೇಕಧಾ ಉಪಾಸ್ಯತೇ ಇತಿ ಸ್ಥಿತಿಃ । ಪರೋವರೀಯಸ್ತ್ವಾದಿವತ್ ಭೇದದರ್ಶನಾತ್ । ತಸ್ಮಾತ್ ವೀರ್ಯಸಂಭೃತ್ಯಾದೀನಾಂ ಶಾಣ್ಡಿಲ್ಯವಿದ್ಯಾದಿಷು ಅನುಪಸಂಹಾರಃ ಇತಿ ॥

(ಭಾಷ್ಯಾರ್ಥ)

ಸಂಭೃತಿ, ದ್ಯುವ್ಯಾಪ್ತಿ–[1] ಮುಂತಾದ ವಿಭೂತಿಗಳನ್ನು ಶಾಂಡಿಲ್ಯವಿದ್ಯೆಯೇ ಮುಂತಾದವುಗಳಲ್ಲಿ ಉಪಸಂಹಾರಮಾಡತಕ್ಕದ್ದಲ್ಲ. (ಏಕೆಂದರೆ)

1. ವೀರ್ಯಗಳನ್ನು ಧರಿಸಿಟ್ಟುಕೊಂಡಿರುವದು, ದ್ಯುಲೋಕವನ್ನು ವ್ಯಾಪಿಸಿಕೊಂಡಿರುವದು– ಮುಂತಾದ.

ಈ ಕಾರಣದಿಂದಲೇ ಎಂದರೆ ಆಯತನವಿಶೇಷದ ಸಂಬಂಧವಿರುವದರಿಂದಲೇ (ಎಂಬರ್ಥ). ಹೇಗೆಂದರೆ **ಶಾಂಡಿಲ್ಯವಿದ್ಯೆಯಲ್ಲಿ** "ಈತನು ಹೃದಯದೊಳಗಿರುವ ನನ್ನ ಆತ್ಮನು" (ಛಾಂ. ೩-೧೪-೩) ಎಂದು ಬ್ರಹ್ಮಕ್ಕೆ ಹೃದಯವೆಂಬ ಆಯತನವನ್ನು ಹೇಳಿದೆ: ಅದರಂತೆಯೇ ದಹರವಿದ್ಯೆಯಲ್ಲಿಯೂ "ಅಲ್ಪವಾದ ಕಮಲವು ಮನೆ, ಇದರೊಳಗೆ ಅಲ್ಪವಾದ ಆಕಾಶವು...." (ಛಾಂ. ೩-೧೪-೩) ಎಂದು (ಹೇಳಿದೆ). ಉಪಕೋಸಲವಿದ್ಯೆಯಲ್ಲಾದರೋ "ಅಕ್ಷಿಯಲ್ಲಿ ಈ ಪುರುಷನು ಕಾಣಬರುತ್ತಾನಷ್ಟೆ" (ಛಾಂ. ೪-೧೫-೧) ಎಂದು ಅಕ್ಷಿ ಎಂಬ ಆಯತನವನ್ನು ಹೇಳಿದೆ, ಹೀಗೆಯೇ ಅಲ್ಲಲ್ಲಿ ಆಯಾ ಆಧ್ಯಾತ್ಮಿಕವಾದ ಆಯತನವು ಈ ವಿದ್ಯೆಗಳಲ್ಲಿ ತಿಳಿಯಬರುತ್ತದೆ. ಆದರೆ ಈ ಸಂಭೃತಿ, ದ್ಯುವ್ಯಾಪ್ತಿ- ಮುಂತಾದವು ಆಧಿದೈವಿಕವಿಭೂತಿಗಳು; ಅವುಗಳಿಗೆ ಈ (ವಿದ್ಯೆ) ಗಳಲ್ಲಿ ಹೇಗೆ ಪ್ರಾಪ್ತಿ(ಯುಂಟಾದೀತು)?

(ಆಕ್ಷೇಪ) :- ಈ ವಿದ್ಯೆಗಳಲ್ಲಿಯೂ "ದ್ಯುಲೋಕಕ್ಕಿಂತ ದೊಡ್ಡವನು, ಈ ಲೋಕಗಳಿಗಿಂತ ದೊಡ್ಡವನು" (ಛಾಂ. ೩-೧೪-೩), "ಈತನೇ ಭಾಮನಿಯು, ಏಕೆಂದರೆ ಈತನೇ ಸರ್ವಲೋಕಗಳಲ್ಲಿ ಹೊಳೆಯುತ್ತಿರುವನು" (ಛಾಂ. ೪-೧೫-೪) "ಈ ಆಕಾಶವು ಎಷ್ಟಿರುವದೋ, ಹೃದಯದೊಳಗೆ ಇರುವ ಈ ಆಕಾಶವು ಅಷ್ಟೇ; ಇದರೊಳಗೆ ದ್ಯಾವಾಪೃಥಿವಿಗಳೆರಡೂ ಸಮಾಹಿತವಾಗಿರುತ್ತವೆ" (ಛಾಂ. ೮-೧-೩) ಎಂದುಮುಂತಾಗಿ ಆಧಿದೈವಿಕವಿಭೂತಿಗಳು ಶ್ರುತವಾಗಿವೆಯಲ್ಲ! ಇದಲ್ಲದೆ ಇಲ್ಲಿ ಆಯತನವಿಶೇಷವೇ ಇಲ್ಲದ ಷೋಡಶಕಲ (ವಿದ್ಯೆಯೇ) ಮುಂತಾದ ಬ್ರಹ್ಮವಿದ್ಯೆಗಳೂ ಇರುತ್ತವೆಯಲ್ಲ!

(ಪರಿಹಾರ) :- ನಿಜ, ಇದು ಹೀಗೆಯೇ. ಆದರೂ ಇಲ್ಲಿ ಸಂಭೃತಿ, ಮುಂತಾದವುಗಳನ್ನು ಉಪಸಂಹಾರಮಾಡಬಾರದೆಂಬುದಕ್ಕೆ ಹೇತುವಾದ ವಿಶೇಷವುಂಟು. ಅದೇನೆಂದರೆ ಸಮಾನವಾದ ಗುಣಗಳನ್ನು ಪಠಿಸುವದರಿಂದಲ್ಲವೆ, ದೂರದಲ್ಲಿರುವ ವಿದ್ಯೆಗಳನ್ನು ಕೂಡ ತಂದೊಡ್ಡಲಾಗಿ ದೂರದೇಶ(ದ ವಿದ್ಯೆಗಳಲ್ಲಿರುವ) ಗುಣಗಳನ್ನು ಉಪಸಂಹಾರಮಾಡಿಕೊಳ್ಳಬೇಕು ಎಂಬುದು ಯುಕ್ತವಾಗುವದು? ಆದರೆ **ಸಂಭೃತ್ಯಾದಿಗಳೂ ಶಾಂಡಿಲ್ಯಾದಿ (ವಿದ್ಯಾ) ವಾಕ್ಯಗಳಿಗೆ ವಿಷಯವಾಗಿರುವ ಮನೋಮಯತ್ವಾದಿಗುಣಗಳೂ ಒಂದನ್ನೊಂದು ತಳ್ಳಿಹಾಕುವ ಸ್ವರೂಪವುಳ್ಳವಾಗಿರುವದರಿಂದ ಮತ್ತೊಂದು ಕಡೆಯಿರುವ ವಿದ್ಯೆಯನ್ನು ತಂದೊಡ್ಡುವ ಶಕ್ತಿಯುಳ್ಳವಾಗಿರುವದಿಲ್ಲ.** ಬರಿಯ ಬ್ರಹ್ಮಸಂಬಂಧವಿದ್ದದ್ದರಿಂದಲೇ ಮತ್ತೊಂದು ಕಡೆಯಿರುವ ವಿದ್ಯೆಯನ್ನು ತಂದೊಡ್ಡಬಹುದು ಎನ್ನುವಹಾಗಿಲ್ಲ; ಏಕೆಂದರೆ ಬೇರೆ ವಿದ್ಯೆಯಾದರೂ ಆ (ಸಂಬಂಧವು) ಹೊಂದುತ್ತದೆ. ಹೇಗೆಂದರೆ **ಒಂದೇ ಬ್ರಹ್ಮವೇ (ತನ್ನ) ವಿಭೂತಿಗಳಿಂದ ಬಲುಬಗೆಯಿಂದ ಉಪಾಸ್ಯವಾಗಿರುತ್ತದೆ**

ಎಂಬುದು ಸಿದ್ಧಾಂತವು. ಏಕೆಂದರೆ ಪರೋವರೀಯಸ್ತ್ವಾದಿಗಳಂತೆ ಭೇದವು ಕಂಡುಬರುತ್ತದೆ. ಆದ್ದರಿಂದ -ವೀರ್ಯ, ಸಂಭೃತಿ -ಮುಂತಾದವುಗಳನ್ನು ಶಾಂಡಿಲ್ಯವಿದ್ಯೆ ಮುಂತಾದವುಗಳಲ್ಲಿ ಉಪಸಂಹಾರಮಾಡಿಕೊಳ್ಳತಕ್ಕದ್ದಲ್ಲ.

## ೧೩. ಪುರುಷವಿದ್ಯಾಧಿಕರಣ

(ತೈತ್ತಿರೀಯಕದಲ್ಲಿ ಇತರ ಪುರುಷಯಜ್ಞರ ಧರ್ಮಗಳ ಉಪಸಂಹಾರವಿಲ್ಲ.)

**ಪುರುಷವಿದ್ಯಾಯಾಮಿವ ಚೇತರೇಷಾಮನಾಮ್ನಾನಾತ್ ॥ ೨೪ ॥**

೨೪. ಪುರುಷವಿದ್ಯೆಯಂತೆ ಇತರ ಶಾಖೆಗಳಲ್ಲಿ ಪಾಠವಿಲ್ಲದ್ದರಿಂದ (ಉಪಸಂಹಾರವಿಲ್ಲ.)

### ಪೂರ್ವಪಕ್ಷ: ತೈತ್ತಿರೀಯದ ಪುರುಷವಿದ್ಯೆಗೂ ಇತರ ಪುರುಷವಿದ್ಯೆಗಳಿಗೂ ಭೇದವಿಲ್ಲ

(ಭಾಷ್ಯ)

೩೬೩. ಅಸ್ತಿ ತಾಣ್ಡಿನಾಂ ಪೈಙ್ಗಿನಾಂ ಚ ರಹಸ್ಯಬ್ರಾಹ್ಮಣೇ ಪುರುಷವಿದ್ಯಾ। ತತ್ರ ಪುರುಷೋ ಯಜ್ಞಃ ಕಲ್ಪಿತಃ। ತದೀಯಮಾಯುಸ್ತ್ರೇಧಾ ವಿಭಜ್ಯ ಸವನತ್ರಯಂ ಕಲ್ಪಿತಮ್। ಅಶಿಶಿಷಾದೀನಿ ಚ ದೀಕ್ಷಾದಿಭಾವೇನ ಕಲ್ಪಿತಾನಿ। ಅನ್ಯೇ ಚ ಧರ್ಮಾಃ ತತ್ರ ಸಮಧಿಗತಾಃ ಆಶೀರ್ಮನ್ತ್ರಪ್ರಯೋಗಾದಯಃ। ತೈತ್ತಿರೀಯಕಾ ಅಪಿ ಕಂಚಿತ್ ಪುರುಷಯಜ್ಞಂ ಕಲ್ಪಯನ್ತಿ "ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ ಶ್ರದ್ಧಾ ಪತ್ನೀ" (ತೈ. ನಾ. ೮೦) ಇತ್ಯೇತೇನ ಅನುವಾಕೇನ। ತತ್ರ ಸಂಶಯಃ ಕಿಂ ಯ ಇತರತ್ರೋಕ್ತಾಃ ಪುರುಷಯಜ್ಞಸ್ಯ ಧರ್ಮಾಃ, ತೇ ತೈತ್ತಿರೀಯಕೇಷು ಉಪಸಂಹರ್ತವ್ಯಾಃ ಕಿಂ ವಾ ನೋಪಸಂಹರ್ತವ್ಯಾಃ ಇತಿ। ಪುರುಷಯಜ್ಞತ್ವಾವಿಶೇಷಾತ್ ಉಪಸಂಹಾರಪ್ರಾಪ್ತೌ-

(ಭಾಷ್ಯಾರ್ಥ)

**ತಾಂಡಿಗಳ ಮತ್ತು ಪೈಂಗಿಗಳ ರಹಸ್ಯಬ್ರಾಹ್ಮಣದಲ್ಲಿ**[1] ಪುರುಷವಿದ್ಯೆಯಿದೆ. ಅಲ್ಲಿ ಪುರುಷನನ್ನು ಯಜ್ಞವೆಂದು ಕಲ್ಪಿಸಿದೆ. ಅವನ ಆಯುಸ್ಸನ್ನು ಮೂರು ಭಾಗವಾಗಿ ವಿಂಗಡಿಸಿ ಸವನತ್ರಯವೆಂದು ಕಲ್ಪಿಸಿದೆ.[2] ಹಸಿವು

1. ತಾಂಡಿ, ಪೈಂಗಿ – ಎಂಬವು ಸಾಮವೇದದ ಶಾಖಾಭೇದಗಳು.

2. ಛಾಂ. ೩–೧೬–೧ರಿಂದ ಐನೆಯ ಮಂತ್ರದವರೆಗೆ ಈ ಸವನಗಳನ್ನು ವರ್ಣಿಸಿದೆ. ೨೪ ವರ್ಷಗಳು ಪ್ರಾತಃಸವನ, ೪೪ ವರ್ಷಗಳು ಮಾಧ್ಯಂದಿನಸವನ, ೪೮ ವರ್ಷಗಳು ಮೂರನೆಯ ಸವನ–ಅಂತೂ ೧೧೬ ವರ್ಷಗಳು ಆಯುಸ್ಸೆಂದು ಪರಿಗಣಿಸಿ ಪುರುಷನನ್ನು ಯಜ್ಞವೆಂದು ಕಲ್ಪಿಸಿದೆ ಎಂದರ್ಥ.

ಮುಂತಾದವುಗಳನ್ನು ದೀಕ್ಷಾದಿಗಳೆಂದು ಕಲ್ಪಿಸಿದೆ.[1] ಆಶೀರ್ಮಂತ್ರಪ್ರಯೋಗವೇ ಮುಂತಾದ ಬೇರೆಯ ಧರ್ಮಗಳೂ ಅಲ್ಲಿ ತಿಳಿಯಬರುತ್ತವೆ.[2] ತೈತ್ತಿರೀಯಕರೂ "ಹೀಗೆಂದು ತಿಳಿಯುವ ಆ ಯಜ್ಞ(ರೂಪ)ನಿಗೆ ಅಥವಾ (ಹೀಗೆಂದು ತಿಳಿಯುವವನ ಯಜ್ಞಕ್ಕೆ) ಆತ್ಮನೇ (ತಾನೇ) ಯಜಮಾನನು, ಶ್ರದ್ಧೆಯು ಪತ್ನಿಯು"[3] (ತೈ. ನಾ ೮೦) ಎಂಬೀ ಅನುವಾಕದಿಂದ ಒಂದಾನೊಂದು ಪುರುಷಯಜ್ಞವನ್ನು ಕಲ್ಪಿಸಿರುತ್ತಾರೆ.

ಇಲ್ಲಿ **ಸಂಶಯವು** ವೇನೆಂದರೆ ಬೇರೆಕಡೆಯಲ್ಲಿ ಹೇಳಿರುವ ಪುರುಷಯಜ್ಞದ ಧರ್ಮಗಳಿವೆಯಲ್ಲ, ಅವುಗಳನ್ನು ಉಪಸಂಹಾರಮಾಡಬೇಕೊ, ಅಥವಾ ಉಪಸಂಹಾರಮಾಡಬಾರದೊ ? (ಎರಡೂ) ಪುರುಷಯಜ್ಞವೆಂಬುದು ಸಮಾನವಾಗಿರುವದರಿಂದ ಉಪಸಂಹಾರ(ವನ್ನು ಮಾಡಬೇಕು ಎಂಬ ಪೂರ್ವಪಕ್ಷವು) ಬಂದೊದಗಲಾಗಿ—

## ತೈತ್ತಿರೀಯಪುರುಷಯಜ್ಞದಲ್ಲಿ ಇತರ ಪುರುಷಯಜ್ಞದ ಧರ್ಮಗಳನ್ನು ಉಪಸಂಹಾರಮಾಡಬಾರದು

(ಭಾಷ್ಯ)

೩೭೪. ಆಚಕ್ಷ್ಮಹೇ ನೋಪಸಂಹರ್ತವ್ಯಾ ಇತಿ । ಕಸ್ಮಾತ್ ? ತದ್ರೂಪಪ್ರತ್ಯಭಿಜ್ಞಾನಾಭಾವಾತ್ । ತದಾಹ ಆಚಾರ್ಯಃ "ಪುರುಷವಿದ್ಯಾಯಾಮಿವ...." ಇತಿ । ಯಥಾ ಏಕೇಷಾಂ ಶಾಖಿನಾಂ ತಾಣ್ಡಿನಾಂ ಪೈಙ್ಗಿನಾಂ ಚ ಪುರುಷವಿದ್ಯಾಯಾಮ್ ಆಮ್ನಾನಮ್, ನೈವಮ್ ಇತರೇಷಾಂ ತೈತ್ತಿರೀಯಾ

1. ಹಸಿವಾಗುವದು, ಬಾಯಾರಿಕೆಯಾಗುವದು, ಬೇಸರವಾಗುವದು — ಇಂಥ ದುಃಖಗಳ ಅನುಭವವೇ ದೀಕ್ಷೆ; ತಿನ್ನುವದು, ನೀರುಕುಡಿಯುವದು, ರತಿಯನ್ನು ಪಡೆಯುವದು — ಇವು ಉಪಸದಗಳು; ನಗುವದು, ತಿನ್ನುವದು, ಮೈಥುನಾಚಾರ — ಇವು ಸ್ತುತಶಸ್ತ್ರಗಳು; ತಪಸ್ಸು, ದಾನ, ಆರ್ಜವ, ಅಹಿಂಸೆ, ಸತ್ಯವಚನ — ಇವು ದಕ್ಷಿಣೆಗಳು; ಸಾವೇ ಅವಭೃಥವು ಎಂದು ಕಲ್ಪಿಸಿದೆ.

2. "ಪ್ರಾಣಾ ವಸವ ಇದಂ ಮೇ ಪ್ರಾತಃಸವನಂ ಮಾಧ್ಯಂದಿನಂ ಸವನಮನುಸಂತನುತ", "ಪ್ರಾಣಾ ರುದ್ರಾ ಇದಂ ಮೇ ಮಾಧ್ಯಂದಿನಂ ದ್ವಿತೀಯಂ ಸವನಮನುಸಂತನುತ", "ಪ್ರಾಣಾ ಆದಿತ್ಯಾ ಇದಂ ಮೇ ತೃತೀಯಸವನಮಾಯುರನುಸಂತನುತ" — ಎಂದು ಸವನಗಳನ್ನು ಸಂತತವಾಗಿರಿಸಲು ಪ್ರಾರ್ಥಿಸುವ ಮಂತ್ರಗಳು, ೧೧೬ ವರ್ಷಗಳು ಬದುಕಿರುವದೆಂಬ ಫಲ — ಇವನ್ನು ಕಲ್ಪಿಸಿದೆ; ಅಂತವೇಳೆಯಲ್ಲಿ 'ಅಕ್ಷಿತಮಸಿ', 'ಅಚ್ಯುತಮಸಿ' 'ಪ್ರಾಣಸಂಶಿತಮಸಿ' —ಎಂಬ ಮೂರು ಮಂತ್ರಗಳನ್ನು ಜಪಿಸುವದು.

3. ಇಲ್ಲಿ ವಾಕ್ಯಕ್ಕೆ ಎರಡೂ ಅರ್ಥವಾಗುವಂತೆ ತೋರುತ್ತವೆ; ಕಂಸದಲ್ಲಿಟ್ಟಿರುವದೇ ಸಿದ್ಧಾಂತಿಗೆ ಸಮ್ಮತವಾದದ್ದೆಂಬುದು ಮುಂದೆ ಸ್ಪಷ್ಟವಾಗುವದು.

ಣಾಮ್ ಆಮ್ನಾನಮಸ್ತಿ । ತೇಷಾಂ ಹಿ ಇತರವಿಲಕ್ಷಣಮೇವ ಯಜ್ಞ ಸಂಪಾದನಮ್ ದೃಶ್ಯತೇ ಪತ್ನೀ ಯಜಮಾನವೇದವೇದಿಬರ್ಹಿರ್ಯೂಪಾಜ್ಯ ಪಶ್ವೃತ್ವಿಗಾದ್ಯನುಕ್ರಮಣಾತ್ । ಯದಪಿ ಸವನಸಂಪಾದನಮ್ ತದಪಿ ಇತರ ವಿಲಕ್ಷಣಮೇವ । "ಯತ್ ಪ್ರಾತರ್ಮಧ್ಯಂ ದಿನಗ್ಂ ಸಾಯಂ ಚ ತಾನಿ" (ತೈ. ನಾ. ೮೦) ಇತಿ। ಯದಪಿ ಕಿಂಚಿನ್ಮರಣಾವಭೃಥತ್ವಾದಿಸಾಽಮ್ಯಮ್ ತದಪಿ ಅಲ್ಪೀಯಸ್ತ್ವಾತ್ ಭೂಯಸಾ ವೈಲಕ್ಷಣ್ಯೇನ ಅಭಿಭೂಯಮಾನಂ ನ ಪ್ರತ್ಯಭಿ ಜ್ಞಾಪನಕ್ಷಮಮ್। ನ ಚ ತೈತ್ತಿರೀಯಕೇ ಪುರುಷಸ್ಯ ಯಜ್ಞತ್ವಂ ಶ್ರೂಯತೇ। ವಿದುಷೋ ಯಜ್ಞಸ್ಯ ಇತಿ ಹಿ ನ ಚ ಏತೇ ಸಮಾನಾಧಿಕರಣೇ ಷಷ್ಠ್ಯೌ ವಿದ್ವಾ ನೇವ ಯೋ ಯಜ್ಞಃ ತಸ್ಯ ಇತಿ । ನ ಹಿ ಪುರುಷಸ್ಯ ಮುಖ್ಯಂ ಯಜ್ಞತ್ವ ಮಸ್ತಿ । ವ್ಯಧಿಕರಣೇ ತು ಏತೇ ಷಷ್ಠ್ಯೌ ವಿದುಷೋ ಯೋ ಯಜ್ಞಸ್ತಸ್ಯ ಇತಿ। ಭವತಿ ಹಿ ಪುರುಷಸ್ಯ ಮುಖ್ಯೋ ಯಜ್ಞಸಂಬನ್ಧಃ । ಸತ್ಯಾಂ ಚ ಗತೌ ಮುಖ್ಯ ಏವಾರ್ಥ ಆಶ್ರಯಿತವ್ಯಃ ನ ಭಾಕ್ತಃ । 'ಆತ್ಮಾ ಯಜಮಾನ' ಇತಿ ಚ ಯಜಮಾನತ್ವಂ ಪುರುಷಸ್ಯ ನಿಬ್ರುವನ್ ವೈಯಧಿಕರಣ್ಯೇನೈವ ಅಸ್ಯ ಯಜ್ಞ ಸಂಬನ್ಧಂ ದರ್ಶಯತಿ । ಅಪಿ ಚ 'ತಸ್ಯೈವಂ ವಿದುಷಃ' ಇತಿ ಸಿದ್ಧವದನು ವಾದಶ್ರುತೌ ಸತ್ಯಾಂ ಪುರುಷಸ್ಯ ಯಜ್ಞಭಾವಮ್ ಆತ್ಮಾದೀನಾಂ ಚ ಯಜ ಮಾನಾದಿಭಾವಂ ಪ್ರತಿಪಿತ್ಸಮಾನಸ್ಯ ವಾಕ್ಯಭೇದಃ ಸ್ಯಾತ್ । ಅಪಿ ಚ ಸಸಂನ್ಯಾಸಾಮ್ ಆತ್ಮವಿದ್ಯಾಂ ಪುರಸ್ತಾತ್ ಉಪದಿಶ್ಯ ಅನನ್ತರಂ ತಸ್ಯೈವಂವಿದುಷಃ ಇತ್ಯಾದ್ಯನುಕ್ರಮಣಂ ಪಶ್ಯನ್ತಃ ಪೂರ್ವಶೇಷ ಏವೈಷ ಆಮ್ನಾಯಃ ನ ಸ್ವತನ್ತ್ರಃ ಇತಿ ಪ್ರತೀಮಃ | ತಥಾ ಚ ಏವಮೇವ ಫಲಮ್ ಉಭಯೋರಪ್ಯನುವಾಕಯೋರುಪಲಭಾಮಹೇ "ಬ್ರಹ್ಮಣೋ ಮಹಿ ಮಾನಮಾಪ್ನೋತಿ" (ತೈ. ನಾ. ೭೯, ೮೦) ಇತಿ । ಇತರೇಷಾಂ ತು ಅನನ್ಯ ಶೇಷಃ ಪುರುಷವಿದ್ಯಾಮ್ನಾಯಃ । ಆಯುರಭಿವೃದ್ಧಿಫಲೋ ಹ್ಯಸೌ" ಸ ಹ ......ಷೋಡಶಂ ವರ್ಷಶತಂ ಜೀವತಿ ಯ ಏವಂ ವೇದ" (ಛಾಂ. ೩-೧೬-೭) ಇತಿ ಸಮಭಿವ್ಯಾಹಾರಾತ್ । ತಸ್ಮಾತ್ ಶಾಖಾನ್ತರಾಧೀತಾನಾಂ ಪುರುಷ ವಿದ್ಯಾಧರ್ಮಾಣಾಮ್ ಆಶೀರ್ಮನ್ತ್ರಾದೀನಾಮ್ ಅಪ್ರಾಪ್ತಿಸ್ತೈತ್ತಿರೀಯಕೇ ॥

(ಭಾಷ್ಯಾರ್ಥ)

(ಇದಕ್ಕೆ ಸಿದ್ಧಾಂತವನ್ನು) ಹೇಳುತ್ತೇವೆ. (ಆ ಧರ್ಮಗಳನ್ನು ಇಲ್ಲಿ) ಉಪಸಂಹಾರಮಾಡಿಕೊಳ್ಳತಕ್ಕದ್ದಲ್ಲ. ಏಕೆ ? ಎಂದರೆ ಅದೇ ರೂಪದ ಪ್ರತ್ಯಭಿ ಜ್ಞೆಯು (ಇಲ್ಲಿ) ಆಗದೆ ಇರುವದರಿಂದ. ಅದನ್ನು ಆಚಾರ್ಯರು (ಇಲ್ಲಿ) "ಪುರುಷವಿದ್ಯಾಯಾಮಿವ......" (ಪುರುಷವಿದ್ಯೆಯಂತೆ...... ಎಂದು ಸೂತ್ರದಲ್ಲಿ) ಹೇಳಿಸುತ್ತಾರೆ. ಹೇಗೆ ತಾಂಡಿಗಳು ಪೈಂಗಿಗಳು ಎಂಬ ಕೆಲವು (ಶಾಖೆಯವರ)

ಪುರುಷವಿದ್ಯೆಯಲ್ಲಿ ಪಾಠವಿದೆಯೋ ಹಾಗೆ ಮತ್ತೊಂದು (ಶಾಖೆಯವರ) ಎಂದರೆ ತೈತ್ತಿರೀಯರ (ವಿದ್ಯೆಯಲ್ಲಿ) ಪಾಠವಿಲ್ಲ. ಏಕೆಂದರೆ ಅವರಿಗೆ ಮಿಕ್ಕವರಿಗಿಂತ ವಿಲಕ್ಷಣವಾಗಿಯೇ ಯಜ್ಞವನ್ನು ಸಂಪಾದನೆಮಾಡಿರುವದು ಕಂಡುಬರುತ್ತದೆ; ಏಕೆಂದರೆ (ಅಲ್ಲಿ) ಪತ್ನಿ, ಯಜಮಾನ, ವೇದ, ವೇದಿ, ಬರ್ಹಿಸ್ಸು, ಯೂಪ, ಆಜ್ಯ, ಪಶು, ಋತ್ವಿಜರು —ಮುಂತಾದವರನ್ನು ಅನುಕ್ರಮವಾಗಿ ಹೇಳಿರುತ್ತದೆ. ಸವನದ ಸಂಪಾದನವಿದೆಯಲ್ಲ, ಅದೂ ಇತರವಿಲಕ್ಷಣವಾಗಿಯೇ "ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ —(ಇವೇ ಸವನಗಳು)" (ತೈ. ನಾ. ೮೦) ಎಂದಿದೆ. ಇನ್ನು ಸಾವು ಅವಭೃಥವು ಎಂದುಮುಂತಾಗಿ ಒಂದಿಷ್ಟು ಹೋಲಿಕೆಯು (ಎರಡಕ್ಕೂ) ಇದೆಯಷ್ಟೆ, ಅದು ಬಹಳ ಸ್ವಲ್ಪವಿರುವದರಿಂದ ಬಹಳ ವೈಲಕ್ಷಣ್ಯದಿಂದ ಅಭಿಭೂತವಾಗಿರುವದರಿಂದ (ಎರಡೂ ಒಂದೇ ವಿದ್ಯೆ ಎಂದು) ಪ್ರತ್ಯಭಿಜ್ಞೆಯನ್ನುಂಟುಮಾಡಲಾರದು.

ತೈತ್ತಿರೀಯಕದಲ್ಲಿ ಪುರುಷನು ಯಜ್ಞವೆಂದು ಶ್ರುತಿಯಲ್ಲಿಲ್ಲವೂ ಇಲ್ಲ. ಏಕೆಂದರೆ 'ವಿದುಷೋ ಯಜ್ಞಸ್ಯ' (ತಿಳಿದವನ ಯಜ್ಞಕ್ಕೆ) ಎಂದಲ್ಲವೆ, (ಅಲ್ಲಿದೆ)? (ಈ ಷಷ್ಠಿಗಳು) 'ತಿಳಿದವನೆಂಬ ಯಜ್ಞ(ರೂಪನಿಧಾನಲ್ಲ), ಅವನಿಗೆ' ಎಂದು ಸಮಾನಾಧಿಕರಣವಾದ ಷಷ್ಠಿಗಳಲ್ಲ; ಏಕೆಂದರೆ ಪುರುಷನು ಮುಖ್ಯಾರ್ಥದಲ್ಲಿ ಯಜ್ಞವೆಂಬುದಿಲ್ಲ. ಮತ್ತೇನೆಂದರೆ 'ತಿಳಿದವನ ಯಜ್ಞವಿದೆಯಲ್ಲ, ಅದಕ್ಕೆ' ಎಂದು ವ್ಯಧಿಕರಣವಾದ ಷಷ್ಠಿಗಳಿವು; ಏಕೆಂದರೆ ಪುರುಷನಿಗೆ ಯಜ್ಞಸಂಬಂಧವು ಮುಖ್ಯಾರ್ಥದಲ್ಲಿಯೇ ಇರುತ್ತದೆ. ಗತಿಯಿರುವಲ್ಲಿ ಮುಖ್ಯಾರ್ಥವನ್ನೇ ಆಶ್ರಯಿಸಬೇಕು, ಗೌಣವನ್ನಲ್ಲ. 'ತಾನೇ ಯಜಮಾನನು' ಎಂದು ಪುರುಷನಿಗೆ ಯಜಮಾನತ್ವವನ್ನು ಹೇಳಿರುವದರಿಂದ ಇವನಿಗೆ ಯಜ್ಞಸಂಬಂಧವು ವ್ಯಧಿಕರಣವೆಂದೇ ತಿಳಿಸಿರುತ್ತದೆ.

ಇದೂ ಅಲ್ಲದೆ 'ಹೀಗೆಂದು ತಿಳಿದ ಅವನಿಗೆ' ಎಂದು ಸಿದ್ಧವಾಗಿರುವಂತೆ ಅನುವಾದಮಾಡಿರುವ ಶ್ರುತಿಯಿರುವಲ್ಲಿ ಪುರುಷನು ಯಜ್ಞನೆಂದೂ ಆತ್ಮಾದಿಗಳು ಯಜಮಾನಾದಿರೂಪಗಳೆಂದೂ ತಿಳಿಯುವವನ (ಮತ)ವಲ್ಲಿ ವಾಕ್ಯಭೇದವಾಗುವದು.[1] ಇದಲ್ಲದೆ ಸಂನ್ಯಾಸಸಹಿತವಾದ ಆತ್ಮವಿದ್ಯೆಯನ್ನು ಮೊದಲು ಹೇಳಿ ಬಳಿಕ 'ಹೀಗೆಂದು ತಿಳಿಯುದ ಅವನಿಗೆ' ಎಂದುಮುಂತಾಗಿ ಅನುಕ್ರಮವಾಗಿ ಹೇಳಿರುವದನ್ನು ಕಂಡರೆ ಈ ಆಮ್ನಾಯವು ಹಿಂದಿನ (ಗ್ರಂಥಕ್ಕೆ) ಶೇಷವು, ಸ್ವತಂತ್ರವಲ್ಲ— ಎಂದು (ನಮಗೆ) ತೋರುತ್ತದೆ. ಆದ್ದರಿಂದಲೇ ಈ (ಎರಡು) ಅನುವಾಕಗಳಲ್ಲಿಯೂ "ಬ್ರಹ್ಮದ ಮಹಿಮೆಯನ್ನು ಹೊಂದು

---

1. ಹಿಂದೆ ಹೇಳುವ ಜ್ಞಾನವೇ [illegible] ವಿದ್ಯೆಯೋ ಬೇರೆ ಎಂದಾಗುವದು.

ತ್ತಾನೆ" (ತೈ. ನಾ. ೭೯, ೭೦) ಎಂದು ಒಂದೇ ಫಲವು (ನಮಗೆ) ತಿಳಿಯುಬರು ತ್ತದೆ. ಆದರೆ ಇತರ ಶಾಖೆ(ಯವರಿಗೋ) (ಎಂದರೆ ಅವರ) ಪುರುಷವಿದ್ಯಾ ಫಾಲವು ಮತ್ತೊಂದಕ್ಕೆ ಶೇಷವಲ್ಲ. ಏಕೆಂದರೆ "ಯಾವನು ಹೀಗೆಂದು ತಿಳಿಯು ವನೋ ಅವನು ... ನೂರುಹದಿನಾರು ವರ್ಷಗಳು ಜೀವಿಸುತ್ತಾನೆ" (ಛಾಂ. ೩-೧೬-೭) ಎಂದೇ (ಅದರ ಜೊತೆಗೆ) ಹೇಳಿರುತ್ತದೆ. ಆದ್ದರಿಂದ ಶಾಖಾಂತರ ದಲ್ಲಿ ಅಧೀತವಾಗಿರುವ ಪುರುಷವಿದ್ಯೆಯ ಧರ್ಮಗಳಾದ ಆಶೀರ್ಮಂತ್ರವೇ ಮುಂತಾದವುಗಳು ತೈತ್ತಿರೀಯಕದಲ್ಲಿ ಬಂದೊದಗುವದಿಲ್ಲ.

## ೧೪. ವೇಧಾದ್ಯಧಿಕರಣ

(ವೇಧಾದಿಗಳು ಆತ್ಮವಿದ್ಯೆಗೆ ಸಂಬಂಧಪಟ್ಟಿಲ್ಲ)

**ವೇಧಾದ್ಯರ್ಥಭೇದಾತ್ ॥ ೨೫ ॥**

೨೫. ವೇಧಾದಿಗಳ (ಉಪಸಂಹಾರವಿಲ್ಲ) ; ಏಕೆಂದರೆ ಅರ್ಥ ಭೇದವಿದೆ.

## ವಿದ್ಯಾಸಂನಿಧಿಯಲ್ಲಿರುವ ಮಂತ್ರಾದಿಗಳ ವಿಷಯದಲ್ಲಿ ಸಂಶಯ

(ಭಾಷ್ಯ)

೩೬೫. ಅಸ್ತಿ ಆಥರ್ವಣಿಕಾನಾಮ್ ಉಪನಿಷದಾರಮ್ಭೇ ಮನ್ತ್ರಸಮಾ ಮ್ನಾಯಃ "ಸರ್ವಂ ಪ್ರವಿಧ್ಯ, ಹೃದಯಂ ಪ್ರವಿಧ್ಯ, ಧಮನೀಃ ಪ್ರವೃಜ್ಯ, ಶಿರೋಽಭಿಪ್ರವೃಜ್ಯ ತ್ರಿಧಾ ವಿಪೃಕ್ತಃ"(?) ಇತ್ಯಾದಿಃ । ತಾಣ್ಡಿನಾಮ್ "ದೇವ ಸವಿತಃ ಪ್ರಸುವ ಯಜ್ಞಮ್" (?) ಇತ್ಯಾದಿಃ । ಶಾಟ್ಯಾಯನಿನಾಮ್ "ಶ್ವೇತಾಶ್ವೋ ಹರಿತನೀಲೋಽಸಿ" (?) ಇತ್ಯಾದಿಃ । ಕಠಾನಾಂ ತೈತ್ತಿರೀಯಕಾಣಾಂ ಚ "ಶಂ ನೋ ಮಿತ್ರಃ ಶಂ ವರುಣಃ" (ತೈ. ೧-೧) ಇತ್ಯಾದಿಃ । ವಾಜಸನೇಯಿ ನಾಂ ತು ಉಪನಿಷದಾರಮ್ಭೇ ಪ್ರವರ್ಗ್ಯಬ್ರಾಹ್ಮಣಂ ಪಠ್ಯತೇ "ದೇವಾ ಹ ವೈ ಸತ್ರಂ ನಿಷೇದುಃ" (?) ಇತ್ಯಾದಿ । ಕೌಷೀತಕಿನಾಮಪಿ ಅಗ್ನಿಷ್ಟೋಮ ಬ್ರಾಹ್ಮಣಮ್ "ಬ್ರಹ್ಮ ವಾ ಅಗ್ನಿಷ್ಟೋಮೋ ಬ್ರಹ್ಮೈವ ತದಹರ್ಬ್ರಹ್ಮಣೈವ ತೇ ಬ್ರಹ್ಮೋಪಯನ್ತಿ ತೇಽಮೃತತ್ವಮಾಪ್ನುವನ್ತಿ ಯ ಏತದಹರುಪಯನ್ತಿ" (?) ಇತಿ । ಕಿಮಿಮೇ ಸರ್ವೇ ಪ್ರವಿಧ್ಯಾದಯೋ ಮನ್ತ್ರಾಃ ಪ್ರವರ್ಗ್ಯಾದೀನಿ ಚ ಕರ್ಮಾಣಿ ವಿದ್ಯಾಸು ಉಪಸಂಹ್ರಿಯೇರನ್ ಕಿಂ ವಾ ನೋಪಸಂಹ್ರಿ ಯೇರನ್ ಇತಿ ಮೀಮಾಂಸಾಮಹೇ ॥

(ಭಾಷ್ಯಾರ್ಥ)

**ಆಥರ್ವಣಿಕರ ಉಪನಿಷತ್ತಿನ ಆರಂಭದಲ್ಲಿ** "(ಶತ್ರುವಿನ) ಎಲ್ಲಾ (ಅಂಗ)ವನ್ನೂ ಸೀಳು. ಹೃದಯವನ್ನು ಸೀಳು ! ನಾಡಿಗಳನ್ನು ಹರಿ ! ತಲೆಯನ್ನು ಒಡೆ ! ಮೂರು ಬಗೆಯಲ್ಲಿ ಚೂರಾಗಲಿ !" (?) ಮುಂತಾದ (ಅರ್ಥವುಳ್ಳ) ಮಂತ್ರಪಾಠವಿದೆ. **ತಾಂಡಿಗಳ** (ಉಪನಿಷದಾರಂಭದಲ್ಲಿ) "ಸವಿತೃದೇವನೆ, ಯಜ್ಞವನ್ನು (ಯಜ್ಞಪತಿಯನ್ನು) ಉಂಟುಮಾಡು !" (?) ಮುಂತಾದ (ಮಂತ್ರಪಾಠವಿದೆ). **ಶಾಟ್ಯಾಯನಿಗಳ** (ಉಪನಿಷದಾರಂಭದಲ್ಲಿ) "(ಇಂದ್ರನೆ), ಬಿಳಿಯಕುದುರೆಯುವನು, ನೀಲವರ್ಣನಾಗಿರುವೆ" (?) ಎಂದು ಮುಂತಾದ (ಪಾಠವಿದೆ). ಕಠ(ಶಾಖೆಯವರ) ಮತ್ತು ತೈತ್ತಿರೀಯರ (ಉಪನಿಷದಾರಂಭದಲ್ಲಿ) "ಮಿತ್ರನು ನಮಗೆ ಸುಖಕರನಾಗಲಿ ! ವರುಣನು ಸುಖಕರನಾಗಲಿ !" (ತೈ. ೧-೧), **ವಾಜಸನೇಯಿಗಳ** ಉಪನಿಷದಾರಂಭದಲ್ಲಿ "ದೇವತೆಗಳು ಸತ್ರವನ್ನು (ಮಾಡುವದಕ್ಕೆ) ಕುಳಿತರು" (ಶತ. ಬ್ರಾ. ೧೪-೧-೧?) ಎಂದುಮುಂತಾದ ಪ್ರವರ್ಗ್ಯಬ್ರಾಹ್ಮಣವು ಪಠಿತವಾಗಿದೆ. **ಕೌಶೀತಕಿಗಳ** ಶಾಖೆಯಲ್ಲಿ "ಅಗ್ನಿಷ್ಟೋಮವು ಬ್ರಹ್ಮವೇ ; ಆ ದಿನವು ಬ್ರಹ್ಮವೇ; ಬ್ರಹ್ಮವೆಂಬ ಸಾಧನದಿಂದ ಅವರು ಬ್ರಹ್ಮವನ್ನೇ ಪಡೆಯುವರು. ಈ ದಿನದಲ್ಲಿ ಯಾರು (ಅನುಷ್ಠಾನವನ್ನು) ಮಾಡುವರೋ ಅವರು ಅಮೃತತ್ವವನ್ನು ಪಡೆದುಕೊಳ್ಳುವರು" ಎಂದು ಅಗ್ನಿಷ್ಟೋಮಬ್ರಾಹ್ಮಣವು (ಪಠಿತವಾಗಿದೆ).

ಈ ಪ್ರವಿಧ್ಯ (ಸೀಳು) ಮುಂತಾದ ಮಂತ್ರಗಳನ್ನೂ ಪ್ರವರ್ಗ್ಯಾದಿ ಕರ್ಮಗಳನ್ನೂ ವಿದ್ಯೆಗಳಲ್ಲಿ ಉಪಸಂಹಾರಮಾಡಿಕೊಳ್ಳಬೇಕೊ, ಅಥವಾ ಮಾಡಿಕೊಳ್ಳಬಾರದೊ ? –ಎಂದು ವಿಚಾರಮಾಡುತ್ತೇವೆ.[1]

## ಪೂರ್ವಪಕ್ಷ: ಉಪನಿಷತ್ತಿನ ಆರಂಭದಲ್ಲಿರುವದರಿಂದ ವಿದ್ಯೆಗೆ ಸೇರಿವೆ

(ಭಾಷ್ಯ)

೩೬೬. ಕಿಂ ತಾವನ್ನಃ ಪ್ರತಿಭಾತಿ ? ಉಪಸಂಹಾರ ಏವ ಏಷಾಂ ವಿದ್ಯಾಸು ಇತಿ । ಕುತಃ ? ವಿದ್ಯಾಪ್ರಧಾನಾನಾಮ್ ಉಪನಿಷದ್ಗ್ರನ್ಥಾನಾಂ ಸಮೀಪೇ ಪಾಠಾತ್ । ನನು ಏಷಾಂ ವಿದ್ಯಾರ್ಥತಯಾ ವಿಧಾನಂ ನೋಪಲಭಾಮಹೇ । ಬಾಢಮ್ । ಅನುಪಲಭಮಾನಾ ಅಪಿ ತು ಅನುಮಾಸ್ಯಾ

1. ವಿದ್ಯಾಸಂನಿಧಿಯಲ್ಲಿ ಪಠಿತವಾಗಿರುವದರಿಂದ ವಿದ್ಯೆಗೆ ಸಂಬಂಧಪಟ್ಟಿವೆ ಎಂದು ತೋರುತ್ತದೆ, ವಿದ್ಯೆಗೆ ಯಾವ ಬಗೆಯಿಂದಲೂ ಉಪಕಾರವಾಗಿಲ್ಲವಾದ್ದರಿಂದ ಅವುಗಳಿಗೆ ಶೇಷವಿಲ್ಲ ಎಂದು ತೋರುತ್ತದೆ. ಆದ್ದರಿಂದ ಇದನ್ನು ನಿರ್ಣಯಿಸುವದಕ್ಕೆ ವಿಚಾರವು ಅವಶ್ಯ ಎಂದು ಭಾವ.

ಮಹೇ ಸಂನಿಧಿಸಾಮರ್ಥ್ಯಾತ್ । ನ ಹಿ ಸಂನಿಧೇರರ್ಥವತ್ತ್ವೇ ಸಂಭವತಿ ಅಕಸ್ಮಾತ್ ಅಸಾವನಾಶ್ರಯಿತುಂ ಯುಕ್ತಃ। ನನು ನೈಷಾಂ ಮನ್ತ್ರಾಣಾಂ ವಿದ್ಯಾವಿಷಯಂ ಕಿಂಚಿತ್ ಸಾಮರ್ಥ್ಯಂ ಪಶ್ಯಾಮಃ । ಕಥಂ ಚ ಪ್ರವರ್ಗ್ಯಾದೀನಿ ಕರ್ಮಾಣಿ ಅನ್ಯಾರ್ಥತ್ವೇನೈವ ವಿನಿಯುಕ್ತಾನಿ ಸನ್ತಿ ವಿದ್ಯಾರ್ಥತ್ವೇನಾಪಿ ಪ್ರತಿಪದ್ಯೇಮಹಿ ಇತಿ ? ನೈಷ ದೋಷಃ । ಸಾಮರ್ಥ್ಯಂ ತಾವತ್ ಮನ್ತ್ರಾಣಾಂ ವಿದ್ಯಾವಿಷಯಮಪಿ ಕಿಂಚಿತ್ ಶಕ್ಯಂ ಕಲ್ಪಯಿತುಮ್ । ಹೃದಯಾದಿಸಂಕೀರ್ತನಾತ್ । ಹೃದಯಾದೀನಿ ಹಿ ಪ್ರಾಯೇಣ ಉಪಾಸನೇಷು ಆಯತನಾದಿಭಾವೇನ ಉಪದಿಷ್ಟಾನಿ । ತದ್ದ್ವಾರೇಣ ಚ "ಹೃದಯಂ ಪ್ರವಿಧ್ಯ" ಇತ್ಯೇವಂಜಾತೀಯಕಾನಾಂ ಮನ್ತ್ರಾಣಾಮ್ ಉಪಪನ್ನಮ್ ಉಪಾಸನಾಙ್ಗತ್ವಮ್ । ದೃಷ್ಟಶ್ಚ ಉಪಾಸನೇಷ್ವಪಿ ಮನ್ತ್ರವಿನಿಯೋಗಃ "ಭೂಃ ಪ್ರಪದ್ಯೇಽಮುನಾಮುನಾಮುನಾ" (ಛಾಂ. ೩-೧೫-೩) ಇತ್ಯೇವಮಾದಿಃ । ತಥಾ ಪ್ರವರ್ಗ್ಯಾದೀನಾಂ ಕರ್ಮಣಾಮ್ ಅನ್ಯತ್ರಾಪಿ ವಿನಿಯುಕ್ತಾನಾಂ ಸತಾಮ್ ಅವಿರುದ್ಧೋ ವಿದ್ಯಾಸು ವಿನಿಯೋಗಃ ವಾಜಪೇಯೇ ಇವ ಬೃಹಸ್ಪತಿಸವಸ್ಯ ಇತಿ ॥

(ಭಾಷ್ಯಾರ್ಥ)

ಮೊದಲು ನಮಗೆ ಯಾವ (ಪೂರ್ವಪಕ್ಷವು) ತೋರುತ್ತದೆ ? ಇವುಗಳನ್ನು ವಿದ್ಯೆಗಳಲ್ಲಿ ಉಪಸಂಹಾರವನ್ನೇ ಮಾಡಿಕೊಳ್ಳಬೇಕು[1]– ಎಂದು. ಏಕೆ ? ಎಂದರೆ ವಿದ್ಯಾಪ್ರಧಾನವಾಗಿರುವ ಉಪನಿಷದ್ಗ್ರಂಥಗಳ ಸಮೀಪದಲ್ಲಿ ಇವನ್ನು ಪಠಿಸಿರುವದರಿಂದ.

(ಆಕ್ಷೇಪ) :— ಇವುಗಳನ್ನು ವಿದ್ಯೆಗಳಿಗಾಗಿ ವಿಧಿಸಿರುವದು ಕಾಣುವದಿಲ್ಲವಲ್ಲ !

(ಪರಿಹಾರ) :— ನಿಜ. ಕಾಣದೆ ಇದ್ದರೂ ಸಂನಿಧಿಯ ಸಾಮರ್ಥ್ಯದಿಂದ (ಇವು ವಿದ್ಯೆಗಳಿಗೆ ಸೇರಿರುವವೆಂದು ನಾವು) ಅನುಮಾನಿಸಬಹುದು.[2] ಸಂನಿಧಿಗೆ ಪ್ರಯೋಜನವು ಸಂಭವಿಸುತ್ತಿರುವಲ್ಲಿ ಕಾರಣವಿಲ್ಲದೆ ಆ (ಸಂನಿಧಿಯನ್ನು) ಆಶ್ರಯಿಸದೆ (ಕೈಬಿಡುವದು) ಯುಕ್ತವಲ್ಲವಷ್ಟೆ ?

(ಆಕ್ಷೇಪ) :— ಈ ಮಂತ್ರಗಳಿಗೆ ವಿದ್ಯಾವಿಷಯದಲ್ಲಿ ಯಾವ ಸಾಮರ್ಥ್ಯವೂ ನಮಗೆ ಕಾಣಿಸುವದಿಲ್ಲವಲ್ಲ[3]! ಇದಲ್ಲದೆ ಪ್ರವರ್ಗ್ಯವೇ

---

1. ಇವುಗಳು ವಿದ್ಯೆಗೆ ಅಂಗವಾಗಿರುತ್ತವೆ; ಈ ಮಂತ್ರಗಳನ್ನೂ ಕರ್ಮಗಳನ್ನೂ ಉಪಯೋಗಿಸದೆ ಇದ್ದರೆ ವಿದ್ಯೆಯು ಪೂರ್ಣವಾಗಲಾರದು–ಎಂದು ಪೂರ್ವಪಕ್ಷಿಯ ಭಾವ.

2. ವಿದ್ಯೆಗಳ ಸಮೀಪದಲ್ಲಿರುವ ಮಂತ್ರಾದಿಗಳು ವಿದ್ಯೆಗಳಿಗಾಗಿ ಹೇಳಿದವೆಂದು ಕಲ್ಪಿಸುವದು ನ್ಯಾಯವಾಗಿದೆ.

3. ಆಯಾ ಪ್ರಯೋಗಕ್ಕೆ ಸಂಬಂಧಪಟ್ಟ ಅರ್ಥವನ್ನು ತಿಳಿಸುವದೇ ಮಂತ್ರಗಳ ಉಪಯೋಗವೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದೆ; ಇಲ್ಲಿ ವಿದ್ಯೆಗೆ ಸಂಬಂಧಪಟ್ಟ ಯಾವ ವಸ್ತುವನ್ನೂ ಇವು ತಿಳಿಸುವದಿಲ್ಲವಲ್ಲ !– ಎಂದು ಆಕ್ಷೇಪ.

ಮುಂತಾದ ಕರ್ಮಗಳು ಬೇರೊಂದಕ್ಕೋಸ್ಕರವಾಗಿ ವಿನಿಯುಕ್ತವಾಗಿರುವಲ್ಲಿ[1] ವಿದ್ಯೆಗೋಸ್ಕರವಾಗಿಯೂ (ವಿಹಿತವಾಗಿವೆ) ಎಂದು ಹೇಗೆತಾನೆ (ನಾವು) ತಿಳಿಯುವದು ?

(ಪರಿಹಾರ) :– ಇದೇನೂ ದೋಷವಲ್ಲ. ಮೊದಲನೆಯದಾಗಿ ಮಂತ್ರಗಳಿಗೆ ವಿದ್ಯೆಗಳ ವಿಷಯದಲ್ಲಿಯೂ ಯಾವದೋ ಒಂದು ಸಾಮರ್ಥ್ಯ(ವಿದೆಯೆಂದು) ಕಲ್ಪಿಸುವದಕ್ಕೆ ಆಗುತ್ತದೆ; ಏಕೆಂದರೆ (ಇಲ್ಲಿ) ಹೃದಯುವೇ ಮುಂತಾದವುಗಳನ್ನು ಹೇಳಿರುತ್ತದೆ. (ಇದರ ವಿವರ) : ಹೃದಯುವೇ ಮುಂತಾದವುಗಳು ಬಲುಮಟ್ಟಿಗೆ ಉಪಾಸನೆಗಳಲ್ಲಿ ಆಶ್ರಯಸ್ಥಾನವೆಂದು ಮುಂತಾಗಿ ಉಪದಿಷ್ಟವಾಗಿವೆ; ಆ ಮೂಲಕ "ಹೃದಯಂ ಪ್ರವಿಧ್ಯ" (ಹೃದಯುವನ್ನು ಸೀಳು) ಎಂಬೀ ಜಾತಿಯ ಮಂತ್ರಗಳು ಉಪಾಸನೆಗೆ ಅಂಗವಾಗಿಬಹುದೆಂದಾಗುತ್ತದೆ. "ಭೂಃ ಪ್ರಪದ್ಯೇಽಮುನಾಮುನಾಮುನಾ" (ಛಾಂ. ೩–೧೫–೩ ಇವನೊಡನೆ, ಇವನೊಡನೆ, ಇವನೊಡನೆ ಭೂಃ ಎಂಬ ಲೋಕವನ್ನು ಪಡೆಯುವೆನು)[2] ಎಂಬಿದೇ ಮುಂತಾದ ಮಂತ್ರವಿನಿಯೋಗವು ಉಪಾಸನೆಯಲ್ಲಿಯೂ (ಆಗಿರುವದು) ಕಂಡುಬಂದಿರುತ್ತದೆ. ಹೀಗೆಯೇ ಪ್ರವರ್ಗ್ಯಾದಿಕರ್ಮಗಳು ಮತ್ತೊಂದರಲ್ಲಿ ವಿನಿಯೋಗವಾಗಿದ್ದರೂ ವಿದ್ಯೆಗಳಲ್ಲಿ ವಿನಿಯೋಗವಾಗುವದು ವಿರುದ್ಧವಲ್ಲ; ಬೃಹಸ್ಪತಿಸವವನ್ನು ವಾಜಪೇಯದಲ್ಲಿ (ವಿನಿಯೋಗಿಸಿರುವಂತೆಯೇ ಇದು.[3]

---

1. ಪ್ರವರ್ಗ್ಯಕರ್ಮವು ಜ್ಯೋತಿಷ್ಟೋಮಕ್ಕೆ ಸಂಬಂಧಪಟ್ಟವುಗಳೆಂದು ವೇದವೇ ತಿಳಿಸಿರುತ್ತದೆ.

2. ಈ ಮಂತ್ರವನ್ನು ಮಗನು ದೀರ್ಘಾಯುವಾಗುವದಕ್ಕಾಗಿ ತಂದೆಯು ಹೇಳತಕ್ಕದ್ದು. "ಇವನೊಡನೆ" ಎಂಬಲ್ಲಿ ಆಯಾ ಪುತ್ರನ ಹೆಸರನ್ನು ಹೇಳಬೇಕು; ಮೂರು ಲೋಕಗಳನ್ನು ಕೋಶಗಳೆಂದು ಕಲ್ಪಿಸಿ ಉಪಾಸನೆಮಾಡಬೇಕು –ಎಂದು ಛಾಂದೋಗ್ಯಭಾಷ್ಯದಲ್ಲಿದೆ.

3. "ಬ್ರಹ್ಮವರ್ಚಸಕಾಮನಾದವನು ಬೃಹಸ್ಪತಿಸವದಿಂದ ಯಾಗಮಾಡಬೇಕು" ಎಂಬ ವಾಕ್ಯವು ಬ್ರಹ್ಮವರ್ಚಸಫಲದಲ್ಲಿ ವಿನಿಯೋಗಿಸಿದ್ದರೂ ಬೃಹಸ್ಪತಿಸವವನ್ನು "ವಾಜಪೇಯದಿಂದ ಯಾಗಮಾಡಿ ಬೃಹಸ್ಪತಿಸವದಿಂದ ಯಾಗಮಾಡಬೇಕು" ಎಂದು ವಾಜಪೇಯಪ್ರಕರಣದ ವಾಕ್ಯವು ವಾಜಪೇಯದ ಉತ್ತರಾಂಗವಾಗಿ ವಿನಿಯೋಗಿಸಿರುವದರಿಂದ ವಿನಿಯುಕ್ತವಿನಿಯೋಗವೆಂಬ ವಿರೋಧವಿಲ್ಲ. ಇಲ್ಲಿ ಒಂದೇ ವಾಕ್ಯವು ಪ್ರಕರಣಾಂತರದಲ್ಲಿರುವ ಬೃಹಸ್ಪತಿಸವವನ್ನು ಗುರುತಿಸಿ ಅದನ್ನು ಅಂಗವಾಗಿಯೂ ವಿಧಿಸಿದೆ ಎಂಬುದು ಸರಿಯಾಗುವದಿಲ್ಲ; ಏಕೆಂದರೆ ಆಗ ವಾಕ್ಯಭೇದವಾಗುತ್ತದೆಯಾದ್ದರಿಂದ ಬೃಹಸ್ಪತಿಸವವೆಂಬ ಅಂಗವು ಕರ್ಮಾಂತರವೇ ಎಂದು ಮೀಮಾಂಸಕರು ಅನ್ನುತ್ತಾರಾದರೂ ಒಂದು ಕಡೆಯಲ್ಲಿ ಹೇಳಿರುವ ಕರ್ಮವನ್ನೇ ಹೆಸರಿನಿಂದ ಮತ್ತೊಂದು ಕಡೆ ಗುರುತಿಸಿ ತಿಳಿಸಿರುವದಕ್ಕೆ ಉದಾಹರಣೆಗಳಿವೆಯಾದ್ದರಿಂದ ವಿರೋಧವಿಲ್ಲ. ವಿನಿಯುಕ್ತವಿನಿಯೋಗಕ್ಕೆ ಸರ್ವಸಮ್ಮತವಾದ ಉದಾಹರಣೆಗಳೂ ಇವೆ– ಎಂಬ ಅಭಿಪ್ರಾಯದಿಂದ ಈ ದೃಷ್ಟಾಂತವನ್ನು ಕೊಟ್ಟಿದೆ ಎಂದು ರ॥ ಪ್ರ॥.

# ಪ್ರವಿಧ್ಯಾದಿಗಳಿಗೂ ಪ್ರವರ್ಗ್ಯಾದಿಗಳಿಗೂ ವಿದ್ಯೆಗಳಲ್ಲಿ ಉಪಸಂಹಾರವಿಲ್ಲ

(ಭಾಷ್ಯ)

೩೬೭. ಏವಂ ಪ್ರಾಪ್ತೇ ಬ್ರೂಮಃ। ನೈಷಾಮ್ ಉಪಸಂಹಾರೋ ವಿದ್ಯಾಸು ಇತಿ। ಕಸ್ಮಾತ್? ವೇಧಾದ್ಯರ್ಥಭೇದಾತ್। 'ಹೃದಯಂ ಪ್ರವಿಧ್ಯ' ಇತ್ಯೇವಂಜಾತೀಯಕಾನಾಂ ಹಿ ಮನ್ತ್ರಾಣಾಂ ಯೇ ಅರ್ಥಾಃ ಹೃದಯವೇಧಾದಯಃ ಭಿನ್ನಾಃ ಅನಭಿಸಂಬದ್ಧಾಸ್ತೇ ಉಪನಿಷದುದಿತಾಭಿರ್ವಿದ್ಯಾಭಿಃ। ನ ತೇಷಾಂ ತಾಭಿಃ ಸಂಗನ್ತುಂ ಸಾಮರ್ಥ್ಯಮಸ್ತಿ। ನನು ಹೃದಯಸ್ಯ ಉಪಾಸನೇಷ್ವಪಿ ಉಪಯೋಗಾತ್ ತದ್ದ್ವಾರಕಃ ಉಪಾಸನಾಸಂಬನ್ಧಃ ಉಪನ್ಯಸ್ತಃ। ನೇತ್ಯುಚ್ಯತೇ। ಹೃದಯಮಾತ್ರಸಂಕೀರ್ತನಸ್ಯ ಹಿ ಏವಮ್ ಉಪಯೋಗಃ ಕಥಂಚಿತ್ ಉತ್ಪ್ರೇಕ್ಷ್ಯೇತ। ನ ಚ ಹೃದಯಮಾತ್ರಮ್ ಅತ್ರ ಮನ್ತ್ರಾರ್ಥಃ ಹೃದಯಂ ಪ್ರವಿಧ್ಯ ಧಮನೀಃ ಪ್ರವೃಜ್ಯ ಇತ್ಯೇವಂಜಾತೀಯಕೋ ಹಿ ನ ಸಕಲೋ ಮನ್ತ್ರಾರ್ಥಃ ವಿದ್ಯಾಭಿರಭಿಸಂಬಧ್ಯತೇ। ಆಭಿಚಾರಿಕವಿಷಯೋ ಹಿ ಏಷೋಽರ್ಥಃ। ತಸ್ಮಾತ್ ಆಭಿಚಾರಿಕೇಣ ಕರ್ಮಣಾ 'ಸರ್ವಂ ಪ್ರವಿಧ್ಯ' ಇತ್ಯೇತಸ್ಯ ಮನ್ತ್ರಸ್ಯ ಅಭಿಸಂಬನ್ಧಃ। ತಥಾ "ದೇವ ಸವಿತಃ ಪ್ರಸುವ ಯಜ್ಞಮ್" ಇತ್ಯಸ್ಯ ಯಜ್ಞಪ್ರಸವಲಿಙ್ಗತ್ವಾತ್ ಯಜ್ಞೇನ ಕರ್ಮಣಾ ಸಂಬನ್ಧಃ। ತದ್ವಿಶೇಷಸಂಬನ್ಧಸ್ತು ಪ್ರಮಾಣಾನ್ತರಾತ್ ಅನುಸರ್ತವ್ಯಃ। ಏವಮ್ ಅನ್ಯೇಷಾಮಪಿ ಮನ್ತ್ರಾಣಾಂ ಕೇಷಾಂಚಿತ್ ಲಿಙ್ಗೇನ ಕೇಷಾಂಚಿತ್ ವಚನೇನ ಕೇಷಾಂಚಿತ್ ಪ್ರಮಾಣಾನ್ತರೇಣ ಇತ್ಯೇವಮ್ ಅರ್ಥಾನ್ತರೇಷು ವಿನಿಯುಕ್ತಾನಾಂ ರಹಸ್ಯಪಠಿತಾನಾಮಪಿ ಸತಾಂ ನ ಸಂನಿಧಿಮಾತ್ರೇಣ ವಿದ್ಯಾಶೇಷತ್ವೋಪಪತ್ತಿಃ। ದುರ್ಬಲೋ ಹಿ ಸಂನಿಧಿಃ ಶ್ರುತ್ಯಾದಿಭ್ಯ ಇತ್ಯುಕ್ತಂ ಪ್ರಥಮೇ ತನ್ತ್ರೇ "ಶ್ರುತಿಲಿಙ್ಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್" (ಜೈ. ಸೂ. ೩-೩-೧೪) ಇತ್ಯತ್ರ। ತಥಾ ಕರ್ಮಣಾಮಪಿ ಪ್ರವರ್ಗ್ಯಾದೀನಾಮ್ ಅನ್ಯತ್ರ ವಿನಿಯುಕ್ತಾನಾಂ ನ ವಿದ್ಯಾಶೇಷತ್ವೋಪಪತ್ತಿಃ। ನ ಹಿ ಏಷಾಂ ವಿದ್ಯಾಭಿಃ ಸಹ ಐಕಾರ್ಥ್ಯಂ ಕಿಂಚಿದಸ್ತಿ। ವಾಜಪೇಯೇ ತು ಬೃಹಸ್ಪತಿಸವಸ್ಯ ಸ್ಪಷ್ಟಂ ವಿನಿಯೋಗಾನ್ತರಮ್ "ವಾಜಪೇಯೇನೇಷ್ಟ್ವಾ ಬೃಹಸ್ಪತಿಸವೇನ ಯಜೇತ" ಇತಿ। ಅಪಿ ಚ ಏಕೋಽಯಂ ಪ್ರವರ್ಗ್ಯಃ ಸಕೃತ್ ಉತ್ಪನ್ನಃ ಬಲೀಯಸಾ ಪ್ರಮಾಣೇನ ಅನ್ಯತ್ರ ವಿನಿಯುಕ್ತಃ, ನ ದುರ್ಬಲೇನ ಪ್ರಮಾಣೇನ ಅನ್ಯತ್ರಾಪಿ ವಿನಿಯೋಗಮರ್ಹತಿ। ಅಗೃಹ್ಯಮಾಣವಿಶೇಷತ್ವೇ ಹಿ ಪ್ರಮಾಣಯೋಃ ಏತದೇವಂ ಸ್ಯಾತ್।

ನ ತು ಬಲವದಬಲವತೋಃ ಪ್ರಮಾಣಯೋಃ ಅಗೃಹ್ಯಮಾಣವಿಶೇಷತಾ ಸಂಭವತಿ । ಬಲವದಬಲವತ್ತ್ವವಿಶೇಷಾದೇವ । ತಸ್ಮಾದೇವಂಜಾತೀಯಕಾನಾಂ ಮನ್ತ್ರಾಣಾಂ ಕರ್ಮಣಾಂ ವಾ ನ ಸಂನಿಧಿಪಾಠಮಾತ್ರೇಣ ವಿದ್ಯಾಶೇಷತ್ವಮ್ ಆಶಙ್ಕಿತವ್ಯಮ್ । ಅರಣ್ಯಾನುವಚನಾದಿಧರ್ಮಸಾಮಾನ್ಯಾತ್ತು ಸಂನಿಧಿಪಾಠಃ ಇತಿ ಸಂತೋಷ್ಟವ್ಯಮ್ ॥

(ಭಾಷ್ಯಾರ್ಥ)

ಹೀಗೆಂಬ ಪೂರ್ವಪಕ್ಷವು ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಇವುಗಳನ್ನು ವಿದ್ಯೆಗಳಲ್ಲಿ ಉಪಸಂಹಾರಮಾಡತಕ್ಕದ್ದಲ್ಲ. ಏಕೆ ? ಎಂದರೆ ವೇಧ (ಸೀಳುವದೇ) ಮುಂತಾದವುಗಳ ಅರ್ಥವು ಬೇರೆಯಾಗಿರುವದರಿಂದ. (ಇದರ ವಿವರ) : "ಹೃದಯಂ ಪ್ರವಿಧ್ಯ" (ಹೃದಯವನ್ನು ಸೀಳು) ಎಂಬೀ ಜಾತಿಯ ಮಂತ್ರಗಳಿಗೆ ಅರ್ಥವಾಗಿರುವ ಹೃದಯವೇಧವೇ ಮುಂತಾದವುಗಳಿವೆಯಲ್ಲ, ಅವು ಬೇರೆಯಾಗಿರುತ್ತವೆ, ಉಪನಿಷತ್ತಿನಲ್ಲಿ ಹೇಳಿರುವ ವಿದ್ಯೆಗಳಿಗೆ ಸಂಬದ್ಧವಾಗಿರುವದಿಲ್ಲ; ಅವುಗಳಿಗೆ ಆ (ವಿದ್ಯೆ)ಗಳೊಡನೆ ಸಂಗತವಾಗುವ ಸಾಮರ್ಥ್ಯವಿರುವದಿಲ್ಲ.

(ಆಕ್ಷೇಪ):— ಹೃದಯವು ಉಪಾಸನೆಗಳಲ್ಲಿಯೂ ಉಪಯೋಗವಾಗಿರುವದರಿಂದ, ಅದರ ಮೂಲಕವಾಗಿ ಉಪಾಸನೆಗಳಿಗೆ ಸಂಬಂಧವಿದೆ ಎಂದು ಹೇಳಿದೆವಲ್ಲ !

(ಪರಿಹಾರ) :— ಹಾಗಲ್ಲ, ಎನ್ನುತ್ತೇವೆ. ಹೃದಯಮಾತ್ರವನ್ನು ಹೇಳಿರುವದಕ್ಕೆ ಉಪಯೋಗ(ವಿದೆಂದು) ಹೇಗೋ ಊಹಿಸಿ (ಕಲ್ಪಿಸಿ)ದಂತೆ ಆದೀತು ; ಆದರೆ ಬರಿಯ ಹೃದಯವೇನೂ ಇಲ್ಲಿ ಮಂತ್ರದ ಅರ್ಥವಲ್ಲ. "ಹೃದಯವನ್ನು ಸೀಳು, ನಾಡಿಗಳನ್ನು ಹರಿ" ಎಂಬೀ ಜಾತಿಯ ಮಂತ್ರಾರ್ಥವೆಲ್ಲವೂ ವಿದ್ಯೆಗಳೊಡನೆ ಸಂಬದ್ಧವಾಗಿರುವದಿಲ್ಲ. ಏಕೆಂದರೆ ಈ ಅರ್ಥವು ಆಭಿಚಾರಿಕ (ಕರ್ಮದ) ವಿಷಯವಾದದ್ದು ; ಆದ್ದರಿಂದ ಆಭಿಚಾರಿಕಕರ್ಮಕ್ಕೆ "ಹೃದಯಂ ಪ್ರವಿಧ್ಯ" ಎಂಬ ಮಂತ್ರದ ಸಂಬಂಧವಿರುತ್ತದೆ. ಹೀಗೆಯೇ "ಸವಿತೃದೇವನೆ, ಯಜ್ಞವನ್ನು ಉಂಟುಮಾಡು" ಎಂಬೀ ಮಂತ್ರದಲ್ಲಿ ಯಜ್ಞವನ್ನುಂಟುಮಾಡುವದೆಂಬದರ ಲಿಂಗವಿರುವದರಿಂದ ಯಜ್ಞವೆಂಬ ಕರ್ಮದೊಡನೆ ಸಂಬಂಧವಿದೆ. ಆ (ಯಜ್ಞ)ವಿಶೇಷದ ಸಂಬಂಧವೋ ಎಂದರೆ ಮತ್ತೊಂದು ಪ್ರಮಾಣವನ್ನು ಅನುಸರಿಸಿ (ಅದ)ರಿಂದ ತಿಳಿದುಕೊಳ್ಳತಕ್ಕದ್ದಾಗಿರುತ್ತದೆ[1]. ಹೀಗೆಯೇ (ಉಳಿದ)

1. "ಪ್ರದಕ್ಷಿಣತೋಽಗ್ನಿಂ ಪರ್ಯುಕ್ಷೇತ್" ಎಂಬ ವಾಕ್ಯದಿಂದ ಇದು ಅಗ್ನಿಯನ್ನು ಪರ್ಯುಕ್ಷಣಮಾಡುವದರಲ್ಲಿ ಸಂಬಂಧವನ್ನೂ "ಸಾವಿತ್ರಂ ಜುಹೋತಿ ಕರ್ಮಣಃ ಪುರಸ್ತಾತ್ ಸವನೇ ಸವನೇ ಜುಹೋತಿ" ಎಂಬ ವಾಕ್ಯದಿಂದ ವಾಜಪೇಯವೆಂಬ ಕರ್ಮವಿಶೇಷದಲ್ಲಿಯೂ ಸಂಬಂಧವನ್ನೂ ತಿಳಿದುಕೊಳ್ಳಬೇಕು— ಎಂದು ರ॥ ಪ್ರ॥ .

ಬೇರೆಯ ಮಂತ್ರಗಳಿಗೂ, ಕೆಲವಕ್ಕೆ ಲಿಂಗದಿಂದ, ಕೆಲವಕ್ಕೆ ವಚನದಿಂದ, ಕೆಲವಕ್ಕೆ ಮತ್ತೊಂದು ಪ್ರಮಾಣದಿಂದ– ಎಂದಿಂತು[1] ಬೇರೆ ಅರ್ಥಗಳಲ್ಲಿ ವಿನಿಯೋಗವಾಗಿರುವದರಿಂದ (ಅವನ್ನು) ರಹಸ್ಯಗಳಲ್ಲಿ[2] ಪಠಿಸಿದ್ದರೂ ಸಂನಿಧಿಮಾತ್ರದಿಂದ ವಿದ್ಯೆಗಳಿಗೆ ಅಂಗವೆಂದು (ಹೇಳುವದು) ಹೊಂದುವದಿಲ್ಲ. ಏಕೆಂದರೆ ಶ್ರುತಿ ಮುಂತಾದವುಗಳಿಗಿಂತ ಸಂನಿಧಿಯು ದುರ್ಬಲವೆಂಬುದು "ಶ್ರುತಿಲಿಙ್ಗವಾಕ್ಯಪ್ರಕರಣಸ್ಥಾನಸಮಾಖ್ಯೆಗಳು ಸೇರಿರುವಲ್ಲಿ ಮುಂದಿನದು ದುರ್ಬಲವು; ಏಕೆಂದರೆ (ಅದಕ್ಕೆ) ಅರ್ಥವು ದೂರವಾಗಿರುತ್ತದೆ[3]" (ಜೈ. ಸೂ. ೩-೩-೧೩) ಎಂದು ಮೊದಲನೆಯ ತಂತ್ರ(ಪೂರ್ವಮೀಮಾಂಸ)ದಲ್ಲಿ ಹೇಳಿರುತ್ತದೆ.

---

1. "ಶ್ವೇತಾಶ್ವೋ ಹರಿತನೀಲೋಽಸಿ" ಮುಂತಾದವುಗಳಿಗೂ ಅರ್ಥವನ್ನು ಹೀಗೆ ಕಲ್ಪಿಸಬೇಕು ಎಂಬುದನ್ನು ಇಂತು ಎಂಬ ಶಬ್ದವು ಸೂಚಿಸುತ್ತದೆ.

2. ಉಪನಿಷತ್ತುಗಳಲ್ಲಿ.

3. ಪದಾಂತರವನ್ನು ಬಯಸದ ಪದವು ಶ್ರುತಿ; ಪದದ ಭಾವದಿಂದ ಗೊತ್ತಾಗುವ ಶಕ್ತಿಯು ಲಿಂಗವು; ಒಟ್ಟುಗೂಡಿ ಅರ್ಥವನ್ನು ಹೇಳುವ ಪದಸಮೂಹವು ವಾಕ್ಯವು; ಲಿಂಗೋಕ್ತಿಯನ್ನು ಬಯಸುವ ಪ್ರಧಾನವಾಕ್ಯವು ಪ್ರಕರಣವು; ಸಮಾನವಾದ ದೇಶದಲ್ಲಿರುವದು ಸ್ಥಾನವು (ಕ್ರಮವು); ಯೌಗಿಕಶಬ್ದವು ಸಮಾಖ್ಯೆ. ಇವುಗಳು ಒಂದೇ ವಿಷಯದಲ್ಲಿದ್ದು ಒಂದಕ್ಕೊಂದು ವಿರುದ್ಧವಾದರೆ ಮುಂದಿನದಕ್ಕೆ ದೌರ್ಬಲ್ಯವುಂಟಾಗುತ್ತದೆ; ಎಂದರೆ ಶ್ರುತಿಗೆ ವಿರೋಧವಾದರೆ ಲಿಂಗಕ್ಕೆ, ಲಿಂಗಕ್ಕೆ ವಿರೋಧವಾದರೆ ವಾಕ್ಯಕ್ಕೆ, ವಾಕ್ಯಕ್ಕೆ ವಿರೋಧವಾದರೆ ಪ್ರಕರಣಕ್ಕೆ, ಪ್ರಕರಣಕ್ಕೆ ವಿರೋಧವಾದರೆ ಸ್ಥಾನಕ್ಕೆ, ಸ್ಥಾನಕ್ಕೆ ವಿರೋಧವಾದರೆ ಸಮಾಖ್ಯೆಗೆ ದೌರ್ಬಲ್ಯವು. ಏಕೆಂದರೆ ಅವು ಆಗ ತಮ್ಮತಮ್ಮ ಅರ್ಥವನ್ನು ತಿಳಿಸುವದಕ್ಕೆ ಹಿಂದುಹಿಂದಿನ ಸ್ಥಾನಾದಿಗಳನ್ನು ಬಯಸುವದರಿಂದ ವಿಲಂಬದಿಂದ ಅರ್ಥವನ್ನು ತಿಳಿಸುವವಾಗಿರುತ್ತವೆ– ಎಂಬುದು ಸೂತ್ರದ ಅರ್ಥ.

(೧) ಶ್ರುತಿಲಿಂಗಗಳಿಗೆ ವಿರೋಧವು ಹೇಗೆಂದರೆ: "ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ" ಎಂಬಲ್ಲಿ ಗಾರ್ಹಪತ್ಯವನ್ನು ಎಂದು ದ್ವಿತೀಯೆಯಿರುವದರಿಂದ ಗಾರ್ಹಪತ್ಯವು ಕರ್ಮವಾಗುವದರಿಂದ ಶೇಷಿ; ಐಂದ್ರಿಯಿಂದ ಎಂದು ತೃತೀಯೆಯಿರುವದರಿಂದ "ಕದಾಚನಸ್ತರೀರಸಿ" ಮುಂತಾಗಿರುವ ಐಂದ್ರಿಯೆಂಬ ಋಕ್ಕು ಕರಣವಾಗಿರುವದರಿಂದ ಶೇಷ. ಈ ಶ್ರುತಿರೂಪವಾದ ಶೇಷಶೇಷಿಭಾವವು "ಕದಾಚನ" ಎಂಬ ಋಕ್ಕು ಇಂದ್ರದೇವತೆಯನ್ನು ಹೇಳುತ್ತದೆ ಎಂಬ ಸಾಮರ್ಥ್ಯಲಿಂಗಕ್ಕೆ ವಿರುದ್ಧವಾಗುತ್ತದೆ. ಇಲ್ಲಿ ಶ್ರುತ್ಯನುಸಾರವಾಗಿಯೇ ಲಿಂಗವನ್ನು ತಿರುಗಿಸಬೇಕು. (೨) ಲಿಂಗವಾಕ್ಯಗಳಿಗೆ ವಿರೋಧವು ಹೇಗೆಂದರೆ "ಸ್ಯೋನಂ ತೇ ಸದನಂ ಕರೋಮಿ ಘೃತಸ್ಯ ಧಾರಯಾ ಸುಶೇವಂ ಕಲ್ಪಯಾಮಿ ತಸ್ಮಿನ್ ಸೀದಾಮೃತೇ ಪ್ರತಿತಿಷ್ಠ ವ್ರೀಹೀಣಾಂ ಮೇಧ ಸುಮನಸ್ಯಮಾನಃ" ಎಂಬಲ್ಲಿ ಲಿಂಗ(ಸಾಮರ್ಥ್ಯ)ದಿಂದ ಕಲ್ಪಯಾಮಿ ಎಂಬವರೆಗಿನ ಭಾಗವನ್ನು ಉಪಸ್ತರಣದಲ್ಲಿಯೂ ಉಳಿದದ್ದನ್ನು ಪುರೋಡಾಶಾಸಾದನದಲ್ಲಿಯೂ ಪ್ರಯೋಗಿಸಬೇಕೆಂದು ತೋರುತ್ತದೆ; ಆದರೆ ಎಲ್ಲವನ್ನೂ ಉಪಸ್ತರಣದಲ್ಲಿಯೂ ಪುರೋಡಾಶಾಸಾದನದಲ್ಲಿಯೂ ಪ್ರಯೋಗಿಸಬೇಕೆಂದು ಏಕವಾಕ್ಯತೆಯಿಂದ ತೋರುತ್ತದೆ. ಇಲ್ಲಿ

ಲಿಂಗಾನುಸಾರವಾಗಿಯೇ ಬೇರೆಬೇರೆಯಾಗಿ ಪ್ರಯೋಗಿಸಬೇಕು; ಏಕೆಂದರೆ ಲಿಂಗವು ಬೇಗನೆ ತನ್ನ ಮೂಲವಾದ ಶ್ರುತಿಯನ್ನು ಕಲ್ಪಿಸುತ್ತದೆ. (೩) ವಾಕ್ಯಪ್ರಕರಣಗಳಿಗೆ ವಿರೋಧವು ಹೇಗೆಂದರೆ, ಸೂಕ್ತವಾಕದಲ್ಲಿ ಪೌರ್ಣಮಾಸೀ ದೇವತೆಗಳನ್ನೂ ಅಮಾವಾಸ್ಯಾದೇವತೆಗಳನ್ನೂ ಹೇಳಿದೆ. ಅವೆರಡನ್ನೂ ಏಕವಾಕ್ಯದಲ್ಲಿಡುವದು ಅಗಲಾದದ್ದರಿಂದ ಪೌರ್ಣಮಾಸೀಯಾಗದಿಂದ 'ಇಂದ್ರಾಗ್ನೀ' ಎಂಬ ಶಬ್ದವನ್ನು ತೆಗೆದು ಹಾಕಿ ಅಮಾವಾಸ್ಯೆಯಲ್ಲಿ ಸಂಬಂಧವಿರುವದರಿಂದ ಅದನ್ನು ಪ್ರಯೋಗಿಸಬೇಕು. ಅಲ್ಲಿ ಇಂದ್ರಾಗ್ನಿಪದನೊಡನೆ ಏಕವಾಕ್ಯತೆಯನ್ನು ಹೊಂದಿರುವ "ಅವೀವೃಧೇಥಾಂ ಮಹೋ ಜ್ಯಾಯೋಽಕ್ರಾತಾಮ್" ಎಂಬಿದನ್ನೂ ತೆಗೆದುಹಾಕಬೇಕೆ ಅಥವಾ ಬಿಟ್ಟುಬಿಡಬೇಕೆ? –ಎಂಬ ಸಂಶಯವುಂಟಾಗಲಾಗಿ ಪ್ರಕರಣವು ವಾಕ್ಯವನ್ನು ಬಯಸಿಯೇ ಈ ವಾಕ್ಯವನ್ನು ವಿನಿಯೋಗಿಸಬೇಕಾಗಿರುವದರಿಂದ ಮೊದಲೇ ಪ್ರವೃತ್ತವಾಗಿರುವ ವಾಕ್ಯದಿಂದ ಏಕವಾಕ್ಯತೆಯಿಂದ ದೇವತೆಗಳನ್ನು ತೆಗೆದುಹಾಕಿದ ಬಳಿಕ ಅವಕ್ಕೆ ಸಂಬಂಧಪಟ್ಟಿರುವವನ್ನೂ ತೆಗೆದುಹಾಕಬೇಕು. (೪) ಪ್ರಕರಣಸ್ಥಾನಗಳಿಗೆ ವಿರೋಧವು ಹೇಗೆಂದರೆ, ರಾಜಸೂಯಪ್ರಕರಣದಲ್ಲಿ ಅಭಿಷೇಚನೀಯಸಮೀಪದಲ್ಲಿ ಶೌನಃಶೇಫೋಪಾಖ್ಯಾನವನ್ನು ಪಠಿಸಿರುತ್ತದೆ. ಶುನಃಶೇಫನೆಂಬ ಋಷಿಪುತ್ರನನ್ನು ಹರಿಶ್ಚಂದ್ರಪುತ್ರನು ಪುರುಷಮೇಧಕ್ಕಾಗಿ ಪಶುವಾಗಿ ತಂದಿದ್ದನು; ಅವನನ್ನು ವರುಣನಿಗೆ ಬಲಿಕೊಡುವದಕ್ಕೆ ಆರಂಭಿಸಿದಾಗ ವರುಣನನ್ನು ಸ್ತುತಿಸಲು ವರುಣನು ಇವನನ್ನು ರಕ್ಷಿಸಿದನು –ಎಂಬುದು ಆಖ್ಯಾನವು. ರಾಜಸೂಯದಲ್ಲಿ ಬಗೆಬಗೆಯ ಇಷ್ಟಿಗಳೂ ಪಶುಗಳೂ ಸೋಮಯಾಗವೂ ಸೇರಿವೆ; ಅವುಗಳಲ್ಲಿ ಅಭಿಷೇಚನೀಯವೆಂಬುದು ಸೋಮಯಾಗವು. ಅದರ ಸಮೀಪದಲ್ಲಿ ಈ ಆಖ್ಯಾನವಿದೆ. ಅಕ್ಷದ್ಯೂತಾದಿಗಳೂ ಪಠಿತವಾಗಿವೆ. ಈ ಆಖ್ಯಾನವನ್ನು ಎಲ್ಲಾ ರಾಜಸೂಯಕ್ಕೂ ಅಂಗವೆಂದು ಭಾವಿಸಬೇಕೆ, ಅಥವಾ ಅಭಿಷೇಚನೀಯಕ್ಕೆ ಮಾತ್ರ ಅಂಗವೆಂದು ಭಾವಿಸಬೇಕೆ? ಎಂದರೆ ಸಂನಿಧಿಯನ್ನು ಪ್ರಕರಣವು ಬಾಧಿಸುತ್ತದೆ; ಆದ್ದರಿಂದ ರಾಜಸೂಯಕ್ಕೆ ಅಂಗವು ಎಂದು ನಿಶ್ಚಯಿಸಬೇಕು. (೫) ಸ್ಥಾನಸಮಾಖ್ಯೆಗಳಿಗೆ ವಿರೋಧವು ಹೇಗೆಂದರೆ ಪೌರೋಡಾಶಿಕವೆಂಬ ಸಮಾಖ್ಯೆಯ ಕಾಂಡದಲ್ಲಿ ಆಗ್ನೇಯಾದಿಕರ್ಮಗಳ ಮಂತ್ರಗಳನ್ನು ಕ್ರಮವಾಗಿ ಪಠಿಸಿದೆ. ಅಲ್ಲಿ ದಧಿಪಯೋರೂಪವಾದ ಸಾಂನಾಯ್ಯದ ಕ್ರಮದಲ್ಲಿರುವ "ಶುನ್ಧಧ್ವಂ ದೈವ್ಯಾಯ ಕರ್ಮಣೇ" ಎಂದು ಶುದ್ಧಿಗಾಗಿರುವ ಮಂತ್ರವು ಸಾಂನ್ನಾಯ್ಯಪಾತ್ರಗಳ ಶುದ್ಧಿಗೆ ಉಪಯೋಗಿಸತಕ್ಕದ್ದೆ ಅಥವಾ 'ಪೌರೋಡಾಶಿಕ' ಎಂಬ ಸಮಾಖ್ಯೆಯಿರುವದರಿಂದ ಪುರೋಡಾಶಪಾತ್ರೆಗಳ ಶುದ್ಧಿಗೆ ಉಪಯೋಗಿಸಬೇಕೆ? –ಎಂಬ ಸಂಶಯವಾದಲ್ಲಿ ಸಮಾಖ್ಯೆಗಿಂತ ಪ್ರಕರಣವೇ ಪ್ರಬಲವಾದ್ದರಿಂದ ಸಾಂನಾಯ್ಯಪಾತ್ರೆಗಳ ಶುದ್ಧಿಗೇ ಉಪಯೋಗಿಸತಕ್ಕದ್ದೆಂದು ನಿರ್ಣಯಿಸಬೇಕು.

ಈ ಬಲಾಬಲನಿರ್ಣಯಕ್ರಮವನ್ನು ಪೂರ್ವಮೀಮಾಂಸದಲ್ಲಿ ನಿರ್ಣಯಿಸಿರುವದನ್ನು ವ್ಯಾಖ್ಯಾನಕಾರರು ಸಂಗ್ರಹಿಸಿಕೊಟ್ಟಿರುತ್ತಾರೆ. ನಾವು ಅದರ ಸಾರವನ್ನು ಮಾತ್ರ ಇಲ್ಲಿ ಬರೆದಿರುತ್ತೇವೆ. ಮೀಮಾಂಸಾಶಾಸ್ತ್ರವನ್ನು ಬಲ್ಲವರಿಂದಲೇ ಚರ್ಚೆಯ ವಿವರವನ್ನು ತಿಳಿದುಕೊಳ್ಳಬೇಕು.

ಸಮಾಖ್ಯೆಯು ಸ್ಥಾನ(ಕ್ರಮ), ಪ್ರಕರಣ, ವಾಕ್ಯ, ಲಿಂಗ –ಇವುಗಳನ್ನು ಒಂದೊಂದಾಗಿ ಕಲ್ಪಿಸಿ ತನಗೆ ಮೂಲವಾಗಿರುವ ಶ್ರುತಿಯನ್ನು ಕಲ್ಪಿಸುತ್ತದೆ; ಸ್ಥಾನವೂ ಪ್ರಕರಣ, ವಾಕ್ಯ, ಲಿಂಗ –ಎಂಬ ಪರಂಪರೆಯಿಂದ ಶ್ರುತಿಯನ್ನು ಕಲ್ಪಿಸುತ್ತದೆ; ಪ್ರಕರಣವು ವಾಕ್ಯ ಲಿಂಗ –ಇವುಗಳ ಪರಂಪರೆಯಿಂದ ಶ್ರುತಿಯನ್ನು ಕಲ್ಪಿಸುತ್ತದೆ; ವಾಕ್ಯವು ಲಿಂಗದ

ಹೀಗೆಯೇ ಪ್ರವರ್ಗ್ಯವೇ ಮುಂತಾದ ಕರ್ಮಗಳೂ ಬೇರೊಂದರಲ್ಲಿ ವಿನಿಯುಕ್ತವಾಗಿರುವದರಿಂದ, ವಿದ್ಯೆಗಳಿಗೆ ಅಂಗವಾಗಲಾರವು ; ಏಕೆಂದರೆ ಇವುಗಳಿಗೂ ವಿದ್ಯೆಗಳಿಗೂ ಯಾವ ಐಕಾರ್ಥ್ಯವೂ ಇರುವದಿಲ್ಲ[1]. ವಾಜಪೇಯದಲ್ಲಿಯಾದರೆ "ವಾಜಪೇಯದಿಂದ ಯಾಗವನ್ನು ಮಾಡಿ ಬೃಹಸ್ಪತಿಸವದಿಂದ ಯಾಗ ಮಾಡಬೇಕು" (?) ಎಂಬ (ವಾಕ್ಯದಲ್ಲಿ) ಬೃಹಸ್ಪತಿಸವಕ್ಕೆ ಸ್ಪಷ್ಟವಾಗಿ ಬೇರೊಂದು ವಿನಿಯೋಗವು ಕಂಡಿರುತ್ತದೆ[2]. ಇದಲ್ಲದೆ ಈ ಪ್ರವರ್ಗ್ಯವೆಂಬ (ಕರ್ಮವು) ಒಂದೇ ಒಂದು ಸಲ ಉತ್ಪನ್ನವಾಗಿದ್ದುಕೊಂಡು[3], ಪ್ರಬಲವಾದ ಪ್ರಮಾಣದಿಂದ ಮತ್ತೊಂದರಲ್ಲಿ ವಿನಿಯುಕ್ತವಾಗಿರುವದರಿಂದ ದುರ್ಬಲವಾದ ಪ್ರಮಾಣದಿಂದ ಮತ್ತೊಂದರಲ್ಲಿಯೂ ವಿನಿಯೋಗಿಸತಕ್ಕದ್ದಾಗುವದಿಲ್ಲ[4]. (ಎರಡು) ಪ್ರಮಾಣ

---

ಮೂಲಕ ಶ್ರುತಿಯನ್ನು ಕಲ್ಪಿಸುತ್ತದೆ; ಲಿಂಗವು ನೇರಾಗಿ ತನ್ನ ಮೂಲವಾದ ಶ್ರುತಿಯನ್ನು ಕಲ್ಪಿಸುತ್ತದೆ. ಹೀಗೆ ಮೂಲಶ್ರುತಿಯನ್ನು ಕಲ್ಪಿಸುವದಕ್ಕೆ ಸಮಾಖ್ಯಾದಿಗಳಿಗೆ ಹೆಚ್ಚು ವಿಲಂಬವೂ ಅದಕ್ಕಿಂತ ಹಿಂದುಹಿಂದಿನವಕ್ಕೆ ಶೀಘ್ರಕಾಲವೂ ಬೇಕಾಗುವದರಿಂದ ವಿಲಂಬಿತವಾಗಿ ಶ್ರುತಿಯನ್ನು ಕಲ್ಪಿಸುವದಕ್ಕಿಂತ ಶೀಘ್ರವಾಗಿ ಕಲ್ಪಿಸುವವು ಪ್ರಬಲವೆಂಬುದು ಸೂತ್ರದ ಅಭಿಪ್ರಾಯವು. ಇಲ್ಲಿ ಶ್ರುತಿಯು ಯಾವಾಗಲೂ ಬಾಧಕವು; ಸಮಾಖ್ಯೆಯು ಯಾವಾಗಲೂ ಬಾಧ್ಯವು. ಮಿಕ್ಕವುಗಳು ಎಂದರೆ ಲಿಂಗ, ವಾಕ್ಯ, ಪ್ರಕರಣ, ಸ್ಥಾನ –ಇವು ಸೂತ್ರದಲ್ಲಿ ತಮ್ಮ ಮುಂದೆ ಹೇಳಿರುವವುಗಳಿಗೆ ಬಾಧಕಗಳು, ತಮ್ಮ ಹಿಂದೆ ಹೇಳಿರುವವುಗಳಿಂದ ಬಾಧ್ಯಗಳು, ಎಂದು ತಿಳಿಯಬೇಕು. ಪ್ರಕೃತವಿಚಾರದಲ್ಲಿ ಉಪನಿಷತ್ತುಗಳ ಸಮೀಪದಲ್ಲಿರುವದೆಂಬ ಸ್ಥಾನಬಲದಿಂದ ಉಪಾಸನೆಗಳಿಗೆ ಮಂತ್ರಗಳನ್ನು ಸೇರಿಸಿಕೊಳ್ಳಬೇಕೆಂದು ಪೂರ್ವಪಕ್ಷಿ ಹೇಳುತ್ತಾನೆ: ಆದರೆ ಲಿಂಗ, ವಾಕ್ಯ, ಪ್ರಕರಣ –ಮುಂತಾದವುಗಳಿಂದ ಇವನ್ನು ಬೇರೊಂದಕ್ಕೆ ಸೇರಿಸಿಕೊಂಡಿವೆ ಎಂದು ನಿಶ್ಚಯಿಸುವಾಗ ಅವಕ್ಕಿಂತ ದುರ್ಬಲವಾಗಿರುವ ಬರಿಯ ಸಂನಿಧಿಯ ಬಲದಿಂದ ಉಪಾಸನೆಗೆ ಸೇರಿದವೆಂದು ನಿಶ್ಚಯಿಸುವದು ಎಂದಿಗೂ ಸರಿಯಾಗಲಾರದು ಎಂದು ಸಿದ್ಧಾಂತಿ ನಿರ್ಣಯಿಸುತ್ತಾನೆ.

1. ಯಾವದು ಯಾವದಕ್ಕೆ ಉಪಕಾರವೋ ಅದು ಅದಕ್ಕೆ ಅಂಗವಾಗಿರುತ್ತದೆ. ಇಲ್ಲಿ ಪ್ರವರ್ಗ್ಯವೇ ಮುಂತಾದ ಕರ್ಮಗಳಿಂದ ಆಗಬಹುದಾದ ಯಾವ ಉಪಕಾರವೂ ಇರುವದಿಲ್ಲ; ಪ್ರವರ್ಗ್ಯವನ್ನು ಮಾಡದೆ ಉಪಾಸನೆಯನ್ನು ಮಾಡಬಾರದು ಎಂಬ ಶಾಸ್ತ್ರವೇನೂ ಇಲ್ಲ.

2. ಈ ವಾಕ್ಯದಲ್ಲಿ ಬೃಹಸ್ಪತಿಸವವು ವಾಜಪೇಯಕ್ಕೆ ಉತ್ತರಾಂಗವೆಂದು ಸ್ಪಷ್ಟವಾಗಿ ಹೇಳಿರುವದರಿಂದ ಮತ್ತೊಂದು ವಿನಿಯೋಗವಾಗಬಹುದು. ಪ್ರವರ್ಗ್ಯಕ್ಕೆ ಹೀಗೆ ವಿನಿಯೋಜಕವಾಕ್ಯವಿಲ್ಲ.

3. ಬೃಹಸ್ಪತಿಸವದಂತೆ ಎರಡು ಸಲ ಶಾಸ್ತ್ರದಲ್ಲಿ ಹೇಳದೆ ಇರುವಾಗ ಎಂದರ್ಥ.

4. ಜ್ಯೋತಿಷ್ಟೋಮಾದಿಗಳಲ್ಲಿ ವಿನಿಯೋಗಿಸಿರುವ ಶ್ರುತಿಯು ಪ್ರಬಲ ; ವಿದ್ಯೆಯ ಬಳಿ ಪ್ರವರ್ಗ್ಯವನ್ನು ಹೇಳಿದೆ ಎಂಬ ಸಂನಿಧಿಯು ದುರ್ಬಲ. ಆದ್ದರಿಂದ ವಿದ್ಯೆಯಲ್ಲಿ ಅವುಗಳ ವಿನಿಯೋಗವಾಗಲಾರದು.

ಗಳಲ್ಲಿ ಯಾವ ವಿಶೇಷವೂ ತೋರದಿದ್ದರಲ್ಲವೆ, ಇದು ಹೀಗಾಗಬಹುದು ? ಆದರೆ ಪ್ರಬಲವಾಗಿರುವದು, ದುರ್ಬಲವಾಗಿರುವದು– (ಹೀಗಿರುವ ಎರಡು) ಪ್ರಮಾಣ ಗಳಿಗೆ (ಯಾವ) ವಿಶೇಷವೂ ತೋರುವದಿಲ್ಲವೆಂಬುದು ಸಂಭವಿಸಲಾರದು ; ಏಕೆಂದರೆ ಪ್ರಬಲತ್ವದುರ್ಬಲತ್ವವೆಂಬ ವಿಶೇಷವೇ (ಅಲ್ಲಿರುತ್ತದೆ). ಆದ್ದರಿಂದ ಈ ಜಾತಿಯ ಮಂತ್ರಗಳಾಗಲಿ ಕರ್ಮಗಳಾಗಲಿ ಸಂನಿಧಿಪಾಠಮಾತ್ರದಿಂದ ವಿದ್ಯೆಗೆ ಶೇಷವಾಗಿರುವವೆಂದು ಶಂಕಿಸತಕ್ಕದ್ದಲ್ಲ. ಅರಣ್ಯದಲ್ಲಿ ಅಧ್ಯಯನ ಮಾಡುವದೇ ಮುಂತಾದ ಧರ್ಮಗಳು ಸಮಾನವಾಗಿವೆ ಎಂಬುದರಿಂದಲೇ (ಉಪನಿಷತ್ತುಗಳ) ಸಂನಿಧಿಯಲ್ಲಿ (ಅವುಗಳನ್ನು) ಪಠಿಸಿದೆ ಎಂದು ತೃಪ್ತಿಪಟ್ಟು ಕೊಳ್ಳಬೇಕಾಗಿದೆ.

## ೧೫. ಹಾನ್ಯಧಿಕರಣ

(ಶ್ರುತಿಗಳಲ್ಲಿ ಹೇಳಿರುವ ಪಾಪಪುಣ್ಯಗಳ ಹಾನದ ಜೊತೆಗೆ ಉಪಾದಾನವನ್ನೂ ಸೇರಿಸಿಕೊಳ್ಳಬೇಕು.)

**ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಛನ್ದಸ್ಸ್ತುತ್ಯುಪಗಾನವತ್ ತದುಕ್ತಮ್ ॥ ೨೬ ॥**

೨೬. ಬಿಡುವದರಲ್ಲಾದರೆ, (ಉಪಾದಾನವನ್ನೂ ಸೇರಿಸಿಕೊಳ್ಳಬೇಕು). ಏಕೆಂದರೆ (ಅದು) ಉಪಾಯನಶಬ್ದಶೇಷವಾಗಿರುತ್ತದೆ. ಕುಶಗಳು, ಛಂದಸ್ಸುಗಳು, ಸ್ತುತಿ, ಉಪಗಾನ– ಇವುಗಳಂತೆ (ಯೇ ಇದು). ಅದನ್ನು (ಪೂರ್ವಮೀಮಾಂಸದಲ್ಲಿ) ಹೇಳಿರುತ್ತದೆ.

## ಪಾಪಪುಣ್ಯಗಳ ಸ್ವೀಕಾರದ ವಿಷಯದಲ್ಲಿ ಪೂರ್ವಪಕ್ಷ

(ಭಾಷ್ಯ)

೩೬೮. ಅಸ್ತಿ ತಾಣ್ಡಿನಾಂ ಶ್ರುತಿಃ "ಅಶ್ವ ಇವ ರೋಮಾಣಿ ವಿಧೂಯ ಪಾಪಂ ಚನ್ದ್ರ ಇವ ರಾಹೋರ್ಮುಖಾತ್ ಪ್ರಮುಚ್ಯ ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮಿ" (ಛಾಂ. ೮–೧೩–೧) ಇತಿ। ತಥಾ ಆಥರ್ವಣಿಕಾನಾಮ್ "ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್'' (ಮುಂ. ೩–೨–೮) ಇತಿ। ತಥಾ ಶಾಟ್ಯಾಯನಿನಃ ಪಠನ್ತಿ "ತಸ್ಯ ಪುತ್ರಾ ದಾಯಮುಪಯನ್ತಿ ಸುಹೃದಃ ಸಾಧುಕೃತ್ಯಾಂ ದ್ವಿಷನ್ತಃ ಪಾಪಕೃತ್ಯಾಮ್" (?) ಇತಿ। ತಥೈವ ಕೌಷೀತಕಿನಃ 'ತತ್ಸುಕೃತದುಷ್ಕೃತೇ ವಿಧೂನುತೇ। ತಸ್ಯ ಪ್ರಿಯಾ ಜ್ಞಾತಯಃ ಸುಕೃತ

ಮುಪಯನ್ತ್ಯಪ್ರಿಯಾ ದುಷ್ಕೃತಮ್'' (ಕೌ. ೧-೪) ಇತಿ । ತದಿಹ ಕ್ವಚಿತ್ ಸುಕೃತದುಷ್ಕೃತಯೋರ್ಹಾನಂ ಶ್ರೂಯತೇ, ಕ್ವಚಿತ್ ತಯೋರೇವ ವಿಭಾಗೇನ ಪ್ರಿಯೈರಪ್ರಿಯೈಶ್ಚ ಉಪಾಯನಮ್ । ಕ್ವಚಿತ್ತು ಉಭಯಮಪಿ ಹಾನಮ್ ಉಪಾಯನಂ ಚ । ತದ್ಯತ್ರ ಉಭಯಂ ಶ್ರೂಯತೇ, ತತ್ರ ತಾವತ್ ನ ಕಿಂಚಿದ್ ವಕ್ತವ್ಯಮ್ ಅಸ್ತಿ । ಯತ್ರಾಪಿ ಉಪಾಯನಮೇವ ಶ್ರೂಯತೇ ನ ಹಾನಮ್ ತತ್ರಾಪಿ ಅರ್ಥಾದೇವ ಹಾನಂ ಸಂನಿಪತತಿ । ಅನ್ಯೈಃ ಆತ್ಮೀಯಯೋಃ ಸುಕೃತದುಷ್ಕೃತಯೋಃ ಉಪೇಯಮಾನಯೋಃ ಆವಶ್ಯಕತ್ವಾತ್ ಹಾನಸ್ಯ । ಯತ್ರ ತು ಹಾನಮೇವ ಶ್ರೂಯತೇ ನೋಪಾಯನಮ್, ತತ್ರ ಉಪಾಯನಂ ಸಂನಿಪತೇದ್ವಾ ನ ವಾ ಇತಿ ವಿಚಿಕಿತ್ಸಾಯಾಮ್ ಅಶ್ರವಣಾತ್ ಅಸಂನಿಪಾತಃ ವಿದ್ಯಾನ್ತರಗೋಚರತ್ವಾಚ್ಚ ಶಾಖಾನ್ತರೀಯಸ್ಯ ಶ್ರವಣಸ್ಯ । ಅಪಿ ಚ ಆತ್ಮಕರ್ತೃಕಂ ಸುಕೃತದುಷ್ಕೃತಯೋರ್ಹಾನಮ್, ಪರಕರ್ತೃಕಂ ತು ಉಪಾಯನಮ್ । ತಯೋಃ ಅಸತ್ಯಾವಶ್ಯಕಭಾವೇ ಕಥಂ ಹಾನೇನ ಉಪಾಯನಮ್ ಆಕ್ಷಿಪ್ಯೇತ ? ತಸ್ಮಾತ್ ಅಸಂನಿಪಾತೋ ಹಾನೌ ಉಪಾಯನಸ್ಯೇತಿ ॥

(ಭಾಷ್ಯಾರ್ಥ)

ತಾಂಡಿಗಳ ಶ್ರುತಿಯು (ಹೀಗೆ) ಇದೆ. "ಅಶ್ವವು ರೋಮಗಳನ್ನು ಹೇಗೊ ಹಾಗೆ ಪಾಪವನ್ನು ಕೊಡವಿಕೊಂಡು, ಚಂದ್ರನು ರಾಹುವಿನ ಮುಖದಿಂದ ಬಿಡುಗಡೆಹೊಂದುವಂತೆ ಶರೀರವನ್ನು ಕೊಡವಿಹಾಕಿಕೊಂಡು, ಕೃತಾತ್ಮನಾದ(ನಾನು) ಅಕೃತವಾದ ಬ್ರಹ್ಮಲೋಕವನ್ನು ಪಡೆದುಕೊಳ್ಳುವೆನು" (ಛಾಂ.೮-೧೩-೧), ಹೀಗೆಯೇ ಆರ್ಥರ್ವಣಿಕರ ಶ್ರುತಿಯೂ ಹೀಗೆಂದಿದೆ: "ಹಾಗೆ ವಿದ್ವಾಂಸನು ನಾಮರೂಪಗಳಿಂದ ವಿಮುಕ್ತನಾಗಿ ಪರಾತ್ಪರನಾದ ದಿವ್ಯಪುರುಷನನ್ನು ಸೇರುತ್ತಾನೆ" (ಮುಂ.೩-೨-೮). ಹೀಗೆಯೇ ಶಾಟ್ಯಾಯನಿಗಳು ಪಠಿಸುತ್ತಾರೆಂತೆಂದರೆ "ಅವನ ಮಕ್ಕಳು ಅವನ ಸ್ವತ್ತನ್ನು ಹೊಂದುವರು, ಸ್ನೇಹಿತರು ಒಳ್ಳೆಯ ಕರ್ಮವನ್ನು (ಹೊಂದುವರು), ದ್ವೇಷಿಗಳು ಕೆಟ್ಟಕರ್ಮವನ್ನು (ಹೊಂದುವರು)" (?). ಹೀಗೆಯೇ ಕೌಷೀತಕಿಗಳು ಪಠಿಸುತ್ತಾರೆ: "ಆಗ ಸುಕೃತದುಷ್ಕೃತಗಳನ್ನು ಕೊಡವಿಕೊಳ್ಳುತ್ತಾನೆ. ಅವನಿಗೆ ಇಷ್ಟವಾದ ಜ್ಞಾತಿಗಳು ಅವನ ಸುಕೃತವನ್ನು ಹೊಂದುವರು, ಅಪ್ರಿಯರಾದವರು ದುಷ್ಕೃತವನ್ನು (ಹೊಂದುವರು)" (ಕೌ. ೧-೪).

ಆ ಈ (ವಾಕ್ಯಗಳ)ಲ್ಲಿ ಕೆಲವು ಕಡೆ ಸುಕೃತದುಷ್ಕೃತಗಳ ತ್ಯಾಗವು ಶ್ರುತಿಯಲ್ಲಿರುತ್ತದೆ; ಕೆಲವು ಕಡೆ ಅವುಗಳನ್ನೇ ಹಂಚಿಕೊಂಡು ಪ್ರಿಯರೂ ಅಪ್ರಿಯರೂ ತೆಗೆದುಕೊಳ್ಳುತ್ತಾರೆಂದು (ಶ್ರುತಿಯಲ್ಲಿದೆ). ಇನ್ನು ಕೆಲವು ಕಡೆಯಲ್ಲಾದರೋ (ಸುಕೃತದುಷ್ಕೃತಗಳನ್ನು) ಬಿಡುವದು, ತೆಗೆದುಕೊಳ್ಳುವದು ಎಂಬೆರ

ಡೂ (ಶ್ರುತಿಯಲ್ಲಿದೆ). ಇವುಗಳಲ್ಲಿ ಎಲ್ಲಿ ಎರಡೂ ಶ್ರುತಿಯಲ್ಲಿವೆಯೋ ಅಲ್ಲಂತೂ ಏನೂ ಹೇಳಬೇಕಾದದ್ದಿರುವದಿಲ್ಲ. ಇನ್ನು ಎಲ್ಲಿ (ಬರಿಯ) ಸ್ವೀಕಾರವೇ ಶ್ರುತಿಯಲ್ಲಿದೆಯೋ ತ್ಯಾಗವು ಇಲ್ಲವೋ ಅಲ್ಲಿಯೂ ಅರ್ಥ (ವಶ)ದಿಂದಲೇ ತ್ಯಾಗವು ಸೇರಿಕೊಳ್ಳುತ್ತದೆ; ಏಕೆಂದರೆ ಮತ್ತೊಬ್ಬರು ತನ್ನ ಸುಕೃತದುಷ್ಕೃತಗಳನ್ನು ತೆಗೆದುಕೊಳ್ಳುತ್ತಿರುವಲ್ಲಿ (ಅವನ್ನು ತಾನು) ಬಿಡ ಬೇಕೆಂಬುದು ಅವಶ್ಯವಾಗಿರುತ್ತದೆ. ಆದರೆ ಎಲ್ಲಿ (ಅವನ್ನು) ಬಿಡುವದೊಂದೇ ಶ್ರುತಿಯಲ್ಲಿದೆಯೋ, (ಮತ್ತೊಬ್ಬರು) ತೆಗೆದುಕೊಳ್ಳುವರೆಂಬುದು (ಶ್ರುತಿ) ಯಲ್ಲಿಲ್ಲವೋ ಅಲ್ಲಿ ತೆಗೆದುಕೊಳ್ಳುವದನ್ನು ಸೇರಿಸಿಕೊಳ್ಳಬೇಕೋ, ಇಲ್ಲವೋ ?– ಎಂಬ ಸಂಶಯವು ಬರಲಾಗಿ ಶ್ರುತಿಯಲ್ಲಿಲ್ಲವಾದ್ದರಿಂದ ಸೇರಿಸಿಕೊಳ್ಳಬಾರದು. ಮತ್ತೊಂದು ಶಾಖೆಯಲ್ಲಿರುವ ಶ್ರುತಿಗೆ ಮತ್ತೊಂದು ವಿದ್ಯೆಯು ವಿಷಯ ವಾಗಿರುವದರಿಂದಲೂ (ಸೇರಿಸಿಕೊಳ್ಳಬಾರದು)[1]. ಇದೂ ಅಲ್ಲದೆ ಸುಕೃತ ದುಷ್ಕೃತಗಳ ಬಿಡುವಿಕೆಗೆ ತಾನು ಕರ್ತೃ, (ಅವನ್ನು) ತೆಗೆದುಕೊಳ್ಳುವಿಕೆಗೋ ಎಂದರೆ ಮತ್ತೊಬ್ಬರು ಕರ್ತೃ. ಅವೆರಡೂ ಅವಶ್ಯವಾಗಿ ಆಗಿಯೇತೀರಬೇಕಾದ ದ್ದೇನೂ ಇಲ್ಲವಾದ್ದರಿಂದ[2] (ಅವನ್ನು) ಬಿಡುವದನ್ನು (ಹೇಳಿದಮಾತ್ರ)ದಿಂದ ತೆಗೆದುಕೊಳ್ಳುವದನ್ನೂ ಸೇರಿಸಿಕೊಳ್ಳಲೇಬೇಕೆಂಬುದು ಹೇಗೆತಾನೆ (ಸರಿ)ಯಾ ದೀತು? ಆದ್ದರಿಂದ (ಸುಕೃತದುಷ್ಕೃತಗಳ) ಬಿಡುವಿಕೆಗೆ (ಅವನ್ನು) ತೆಗೆದು ಕೊಳ್ಳುವದನ್ನು ಸೇರಿಸಬೇಕಾದದ್ದಿಲ್ಲ.

## ಸಿದ್ಧಾಂತ: ಸುಕೃತದುಷ್ಕೃತಗಳ ಹಾನ್ಯುಪಾದಾನಗಳು ವಿದ್ಯಾಸ್ತುತ್ಯರ್ಥ

(ಭಾಷ್ಯ)

೩೬೯. ಅಸ್ಯಾಂ ಪ್ರಾಪ್ತೌ ಪಠತಿ "ಹಾನೌ ತು" ಇತಿ। ಹಾನೌ ತು ಏತಸ್ಯಾಂ ಕೇವಲಾಯಾಮಪಿ ಶ್ರೂಯಮಾಣಾಯಾಮ್ ಉಪಾಯನಂ

---

1. ಕೌಷೀತಕಿಶ್ರುತಿಯಲ್ಲಿ ಇತರರು ತೆಗೆದುಕೊಳ್ಳುತ್ತಾರೆಂದು ಹೇಳಿರುವದರಿಂದ ತಾಂಡ್ಯಶ್ರುತಿಯಲ್ಲಿಯೂ ಅದನ್ನು ಉಪಸಂಹಾರಮಾಡಿಕೊಳ್ಳಬೇಕಲ್ಲವೆ ?– ಎಂಬ ಶಂಕೆಗೆ ಉತ್ತರವಿದು. ಕೌಷೀತಕಿಯಲ್ಲಿರುವ ಪರ್ಯಂಕವಿದ್ಯೆಯು ಸಗುಣವಿದ್ಯೆ, ತಾಂಡ್ಯಶ್ರುತಿ ಯು ನಿರ್ಗುಣವಿದ್ಯೆ; ಹೀಗೆ ವಿದ್ಯಾಭೇದವಿರುವದರಿಂದ ಉಪಸಂಹಾರವನ್ನು ಮಾಡ ಬಾರದು ಎಂದರ್ಥ.

2. ತಾನು ಪುಣ್ಯಪಾಪಗಳನ್ನು ಬಿಟ್ಟಮಾತ್ರದಿಂದ ಇತರರು ಅವನ್ನು ಪಡೆಯಲೇ ಬೇಕೆಂಬ ನಿಯಮವೇನೂ ಇಲ್ಲದ್ದರಿಂದ ಎಂದರ್ಥ. ತಾನು ಏನನ್ನಾದರೂ ಬಿಟ್ಟರೆ ತನಗೆ ಅದರಿಂದ ಫಲವಾಗಬೇಕಾದದ್ದು ಅವಶ್ಯ, ಮತ್ತೊಬ್ಬರಿಗೆ ಆಗಬೇಕಾದದ್ದು ಅವಶ್ಯವಲ್ಲ ಎಂದು ಭಾವ.

ಸಂನಿಪತಿತುಮರ್ಹತಿ । ತಚ್ಛೇಷತ್ವಾತ್ । ಹಾನಶಬ್ದಶೇಷೋ ಹಿ ಉಪಾಯನಶಬ್ದಃ ಸಮಧಿಗತಃ ಕೌಷೀತಕಿರಹಸ್ಯೇ । ತಸ್ಮಾತ್ ಅನ್ಯತ್ರ ಕೇವಲಹಾನಶಬ್ದಶ್ರವಣೇಽಪಿ ಉಪಾಯನಾನುವೃತ್ತಿಃ । ಯದುಕ್ತಮ್ ಅಶ್ರವಣಾತ್, ವಿದ್ಯಾನ್ತರಗೋಚರತ್ವಾತ್, ಅನಾವಶ್ಯಕತ್ವಾಚ್ಚ ಅಸಂನಿಪಾತಃ ಇತಿ । ತದುಚ್ಯತೇ । ಭವೇದೇಷಾ ವ್ಯವಸ್ಥೋಕ್ತಿಃ ಯದ್ಯನುಷ್ಠೇಯಾ ಕಿಂಚಿದನ್ಯತ್ರ ಶ್ರುತಮನ್ಯತ್ರ ನಿನೀಷ್ಯೇತ । ನ ತ್ವಿಹ ಹಾನಮ್ ಉಪಾಯನಂ ವಾ ಅನುಷ್ಠೇಯತ್ವೇನ ಸಂಕೀರ್ತ್ಯತೇ । ವಿದ್ಯಾಸ್ತುತ್ಯರ್ಥಂ ತ್ವನಯೋಃ ಸಂಕೀರ್ತನಮ್। ಇತ್ಥಂಮಹಾಭಾಗಾ ವಿದ್ಯಾ ಯತ್ಸಾಮರ್ಥ್ಯಾತ್ ಅಸ್ಯ ವಿದುಷಃ ಸುಕೃತದುಷ್ಕೃತೇ ಸಂಸಾರಕಾರಣಭೂತೇ ವಿಧೂಯೇತೇ, ತೇ ಚ ಅಸ್ಯ ಸುಹೃದ್ದ್ವಿಷತ್ಸು ನಿವಿಶೇತೇ ಇತಿ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು) "ಹಾನೌ ತು" (ಎಂಬ ಸೂತ್ರವನ್ನು) ಹೇಳಿರುತ್ತಾರೆ. ಈ (ಸುಕೃತದುಷ್ಕೃತಗಳ) ಬಿಡುವಿಕೆಯೊಂದನ್ನೇ ಶ್ರುತಿಯಲ್ಲಿ ಹೇಳಿದ್ದರೂ (ಅವನ್ನು ಇತರರು) ತೆಗೆದುಕೊಳ್ಳುವರೆಂಬುದನ್ನೂ ಸೇರಿಸಿಕೊಳ್ಳಬೇಕೆಂಬುದು ಯುಕ್ತ. ಏಕೆಂದರೆ ಅದಕ್ಕೆ ಶೇಷವಾಗಿರುವದರಿಂದ. (ಇದರ ವಿವರ) : ಹಾನಶಬ್ದಕ್ಕೆ ಶೇಷವಾಗಿಯಲ್ಲವೆ, ಉಪಾಯನವೆಂಬ ಶಬ್ದವು ಕೌಷೀತಕಿರಹಸ್ಯದಲ್ಲಿ ತಿಳಿಯಬಂದಿದೆ [1]? ಆದ್ದರಿಂದ ಮತ್ತೊಂದು (ವಾಕ್ಯದಲ್ಲಿ) ಬರಿಯ ಹಾನಶಬ್ದವು ಶ್ರುತವಾಗಿದ್ದರೂ ಉಪಾಯನ ಎಂಬುದು ಬಂದು ಸೇರಿಕೊಳ್ಳುತ್ತದೆ.

ಇನ್ನು ಶ್ರುತಿಯಲ್ಲಿಲ್ಲದ್ದರಿಂದಲೂ ಮತ್ತೊಂದು ವಿದ್ಯೆಯ ವಿಷಯವಾದ್ದರಿಂದಲೂ. ಅನಾವಶ್ಯಕವಾದ್ದರಿಂದಲೂ ( ಸುಕೃತದುಷ್ಕೃತಗಳ ಸ್ವೀಕಾರವು ಅವುಗಳ ತ್ಯಾಗಕ್ಕೆ) ಸೇರತಕ್ಕದ್ದಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದಕ್ಕೆ ಹೇಳುತ್ತೇವೆ. ಒಂದು ಕಡೆಯಲ್ಲಿ ಹೇಳಿರುವ ಯಾವದಾದರೊಂದು ಅನುಷ್ಠೇಯವನ್ನು ಮತ್ತೊಂದು ಕಡೆಯಲ್ಲಿ ತಂದು (ಸೇರಿಸಿಕೊಳ್ಳಬೇಕೆಂಬ) ಅಭಿಪ್ರಾಯವಿದ್ದಿದ್ದರೆ, ಈ (ನೀವು) ಹೇಳುವ ವ್ಯವಸ್ಥೆಯ ಮಾತು (ಸರಿ)ಯಾಗುತ್ತಿತ್ತು [2]. ಆದರೆ ಇಲ್ಲಿ (ಸುಕೃತದುಷ್ಕೃತಗಳ)

---

1. ಸೂತ್ರದಲ್ಲಿರುವ "ಉಪಾಯನಶಬ್ದಶೇಷತ್ವಾತ್" ಎಂಬುದನ್ನು ಉಪಾಯನವೆಂಬ ಶಬ್ದವನ್ನು ಶೇಷವಾಗಿ ಉಳ್ಳದ್ದಾದ್ದರಿಂದ ಎಂದು ಹಾನಿಶಬ್ದಕ್ಕೆ ವಿಶೇಷಣವಾಗಿಯೇ ಅರ್ಥಮಾಡಿಕೊಳ್ಳಬಹುದು. ಭಾಷ್ಯದಲ್ಲಿ ಅದರ ಅಭಿಪ್ರಾಯವನ್ನು ವರ್ಣಿಸಿದೆ.

2. ವಿದ್ಯೆಯು ಬೇರೆಯಾದ್ದರಿಂದ ಗುಣಗಳನ್ನು ಉಪಸಂಹಾರಮಾಡಬಾರದು ಎಂಬ ವ್ಯವಸ್ಥೆಯು ಸರಿ ; ಏಕೆಂದರೆ ಆ ಗುಣಗಳು ಅನುಷ್ಠೇಯವಾಗಿರುತ್ತವೆ.

ಹಾನವಾಗಲಿ ಉಪಾದಾನವಾಗಲಿ ಅನುಷ್ಠೇಯವೆಂದೇನೂ ಹೇಳಿರುವದಿಲ್ಲ. ಮತ್ತೇನೆಂದರೆ ಇವೆರಡನ್ನೂ ಹೇಳಿರುವದು ವಿದ್ಯೆಯನ್ನು ಹೊಗಳುವದಕ್ಕೆ, (ಈ) ವಿದ್ಯೆಯು ಇಂಥ ಮಹತ್ತ್ವದ್ದು, ಇದರ ಸಾಮರ್ಥ್ಯದಿಂದ ಈ ಜ್ಞಾನಿಯ ಸಂಸಾರಕಾರಣವಾಗಿರುವ ಸುಕೃತದುಷ್ಕೃತಗಳು ಕೊಡವಿಹೋಗುತ್ತವೆ, ಮತ್ತು ಅವೆರಡೂ ಇವನ ಸ್ನೇಹಿತರು, ದ್ವೇಷಿಗಳು– ಇವರಲ್ಲಿ (ಬಂದು) ಸೇರಿಕೊಳ್ಳುತ್ತವೆ ಎಂದು (ವಿದ್ಯೆಯನ್ನು ಹೊಗಳುವದಕ್ಕೆ ಇವನ್ನು ಹೇಳಿದೆ)[1]

## ಸೂತ್ರದಲ್ಲಿ ಸ್ತುತಿಯ ಉಪಸಂಹಾರವಿದೆ, ಗುಣೋಪಸಂಹಾರವಲ್ಲ

(ಭಾಷ್ಯ)

೩೭೦. ಸ್ತುತ್ಯರ್ಥೇ ಚ ಅಸ್ಮಿನ್ ಸಂಕೀರ್ತನೇ ಹಾನಾನನ್ತರಭಾವಿತ್ವೇನ ಉಪಾಯನಸ್ಯ ಕ್ವಚಿಚ್ಛ್ರುತತ್ವಾತ್ ಅನ್ಯತ್ರಾಪಿ ಹಾನಶ್ರುತೌ ಉಪಾಯನಾನುವೃತ್ತಿಂ ಮನ್ಯತೇ ಸ್ತುತಿಪ್ರಕರ್ಷಲಾಭಾಯ। ಪ್ರಸಿದ್ಧಾ ಚ ಅರ್ಥವಾದಾನ್ತರಾಪೇಕ್ಷಾ ಅರ್ಥವಾದಾನ್ತರಪ್ರವೃತ್ತಿಃ "ಏಕವಿಂಶೋ ವಾ ಇತೋಽಸಾವಾದಿತ್ಯಃ" (ಛಾಂ. ೨–೧೦–೫) ಇತ್ಯೇವಮಾದಿಷು। ಕಥಂ ಹಿ ಇಹ ಏಕವಿಂಶತಾ ಆದಿತ್ಯಸ್ಯ ಅಭಿಧೀಯೇತ ಅನಪೇಕ್ಷ್ಯಮಾಣೇ ಅರ್ಥವಾದಾನ್ತರೇ "ದ್ವಾದಶ ಮಾಸಾಃ ಪಞ್ಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಂಶಃ" (ತೈ. ಸ. ೭–೩–೧೦) ಇತ್ಯೇತಸ್ಮಿನ್। ತಥಾ "ತ್ರಿಷ್ಟುಭೌ ಭವತಃ ಸೇನ್ದ್ರಿಯತ್ವಾಯ" (?) ಇತ್ಯೇವಮಾದಿವಾದೇಷು "ಇನ್ದ್ರಿಯಂ ವೈ ತ್ರಿಷ್ಟುಪ್" (ತೈ.ಸ. ೫–೧–೩) ಇತ್ಯೇವಮಾದ್ಯರ್ಥವಾದಾನ್ತರಾಪೇಕ್ಷಾ ದೃಶ್ಯತೇ। ವಿದ್ಯಾಸ್ತುತ್ಯರ್ಥತ್ವಾಚ್ಚ ಅಸ್ಯ ಉಪಾಯನವಾದಸ್ಯ ಕಥಮ್ ಅನ್ಯದೀಯೇ ಸುಕೃತದುಷ್ಕೃತೇ ಅನ್ಯೈರುಪೇಯೇತೇ ಇತಿ ನಾತೀವ ಅಭಿನಿವೇಷ್ಟವ್ಯಮ್। 'ಉಪಾಯನಶಬ್ದಶೇಷತ್ವಾತ್' ಇತಿ ತು ಶಬ್ದಶಬ್ದಂ ಸಮುಚ್ಚಾರಯನ್ ಸ್ತುತ್ಯರ್ಥಮೇವ ಹಾನೌ ಉಪಾಯನಾನುವೃತ್ತಿಂ ಸೂಚಯತಿ। ಗುಣೋಪಸಂಹಾರವಿವಕ್ಷಾಯಾಂ ಹಿ ಉಪಾಯನಾರ್ಥಸ್ಯೈವ ಹಾನಾನುವೃತ್ತಿಂ ಬ್ರೂಯಾತ್। ತಸ್ಮಾತ್ ಗುಣೋಪಸಂಹಾರವಿಚಾರಪ್ರಸಙ್ಗೇನ ಸ್ತುತ್ಯುಪಸಂಹಾರಪ್ರದರ್ಶನಾರ್ಥಮ್ ಇದಂ ಸೂತ್ರಮ್ ॥

(ಭಾಷ್ಯಾರ್ಥ)

(ವಿದ್ಯೆಯನ್ನು) ಹೊಗಳುವದಕ್ಕಾಗಿ ಈ (ಹಾನೋಪಾದಾನಗಳನ್ನು) ಹೇಳಿದೆಯಾದ್ದರಿಂದ ಹಾನವಾದ ಬಳಿಕ ಉಪಾದಾನವನ್ನೂ ಒಂದು ಕಡೆಯಲ್ಲಿ

1. ನಿರ್ಗುಣವಿದ್ಯೆಯನ್ನು ಹೊಗಳುವದಕ್ಕಾಗಿ ಸಗುಣವಿದ್ಯೆಯಲ್ಲಿ ಹೇಳಿರುವ ಸುಕೃತದುಷ್ಕೃತೋಪಾದಾನಗಳನ್ನು ಉಪಸಂಹಾರಮಾಡಿಕೊಂಡಿರುತ್ತದೆ ಎಂದರ್ಥ.

ಹೇಳಿರುವದರಿಂದ ಮತ್ತೊಂದು ಕಡೆಯಲ್ಲಿಯೂ[1] (ಸುಕೃತದುಷ್ಕೃತಗಳ) ಉಪಾದಾನವು ಬಂದು ಸೇರಿಕೊಳ್ಳಬೇಕು, (ಅದರಿಂದ) ಸ್ತುತಿಯ ಹೆಚ್ಚಿಗೆಯಾಗುವದು ಎಂದು (ಸೂತ್ರಕಾರರು) ಅಭಿಪ್ರಾಯಪಟ್ಟಿರುತ್ತಾರೆ[2]. ಒಂದು ಅರ್ಥವಾದವನ್ನು ಅಪೇಕ್ಷಿಸಿ ಮತ್ತೊಂದು ಅರ್ಥವಾದವು ಬಂದಿರುವದು ಪ್ರಸಿದ್ಧವಾಗಿರುತ್ತದೆ[3]. "ಈ (ಲೋಕ)ದಿಂದ ಆ ಆದಿತ್ಯನು ಇಪ್ಪತ್ತೊಂದನೆಯವನೇ" (ಛಾಂ. ೨-೧೦-೫) ಮುಂತಾದವುಗಳಲ್ಲಿ (ಇದು ಪ್ರಸಿದ್ಧ). ಹೇಗೆಂದರೆ ಇಲ್ಲಿ ಆದಿತ್ಯನು ಇಪ್ಪತ್ತೊಂದನೆಯವನು ಎಂದು ಹೇಳಿರುವದು "ಹನ್ನೆರಡುಮಾಸಗಳು ಐದು ಋತುಗಳು[4], ಇವು ಮೂರು ಲೋಕಗಳು, ಆ ಆದಿತ್ಯನು ಇಪ್ಪತ್ತೊಂದನೆಯವನು" (ತೈ.ಸಂ) ಎಂಬೀ ಮತ್ತೊಂದು ಅರ್ಥವಾದವನ್ನು ಬಯಸದೆ ಇದ್ದಲ್ಲಿ ಹೇಗೆ ಸರಿಯಾದೀತು ? ಇದರಂತೆ "(ಎರಡು) ತ್ರಿಷ್ಟುಪ್ಪುಗಳು ಸೇಂದ್ರಿಯತ್ವಕ್ಕಾಗಿ ಇರುತ್ತವೆ" (?)[5] ಮುಂತಾದ ಅರ್ಥವಾದಗಳಲ್ಲಿ "ತ್ರಿಷ್ಟುಪ್ಪು ಇಂದ್ರಿಯವೇ" (ತೈ.ಸಂ. )[6] ಎಂಬಿದೇ ಮುಂತಾದ ಮತ್ತೊಂದು ಅರ್ಥವಾದದ ಅಪೇಕ್ಷೆಯು ಕಾಣಬರುತ್ತದೆ. ಈ (ಸುಕೃತದುಷ್ಕೃತಗಳನ್ನು) ತೆಗೆದುಕೊಳ್ಳುವದೆಂಬ (ಅರ್ಥ)ವಾದವು ವಿದ್ಯೆಯನ್ನು ಹೊಗಳುವದಕ್ಕಾಗಿ ಬಂದಿರುವದರಿಂದ ಒಬ್ಬನ ಸುಕೃತದುಷ್ಕೃತಗಳನ್ನು ಮತ್ತೊಬ್ಬರು ತೆಗೆದುಕೊಳ್ಳುವದು ಹೇಗೆ ? ಎಂದು ಅತಿಯಾಗಿ ಒತ್ತಿ ಕೇಳಬೇಕಾದದ್ದಿಲ್ಲ[7]. 'ಉಪಾಯನಶಬ್ದಶೇಷತ್ವಾತ್' ಎಂದು

1. ಅದನ್ನು ಹೇಳದೆ ಇರುವ ತಾಂಡ್ಯಶ್ರುತಿಯೇ ಮುಂತಾದ ಕಡೆಯಲ್ಲಿಯೂ.

2. ಗುಣೋಪಸಂಹಾರದಿಂದ ಉಪಾಸನೆಯು ಸಮಗ್ರವಾಗುವದು ; ಇಲ್ಲಿ ಹೀಗೆ ಹಾನದ ಜೊತೆಗೆ ಉಪಾದಾನವನ್ನು ಉಪಸಂಹಾರಮಾಡಿದ್ದರ ಪ್ರಯೋಜನವಾದರೂ ಏನು? —ಎಂಬ ಆಕ್ಷೇಪಕ್ಕೆ ಪರಿಹಾರವಿದು. ವಿದ್ಯೆಯ ಸಾಮರ್ಥ್ಯದಿಂದ ತನ್ನ ಸುಕೃತದುಷ್ಕೃತಗಳ ಫಲವು ಮತ್ತೊಬ್ಬರಿಗೆ ಹೋಗುತ್ತದೆ. ಪುತ್ರನು ಮಾಡುವ ಶ್ರಾದ್ಧದಿಂದ ತಂದೆಗೆ ಫಲವಾಗುವಲ್ಲಿರುವಂತೆ ಜ್ಞಾನಿಯ ಉದ್ದೇಶವೇನೂ ಇಲ್ಲಿ ಬೇಕಿಲ್ಲ ಎಂಬುದು ವಿದ್ಯಾಸ್ತುತಿ.

3. ಅರ್ಥವಾದವು ವಿಧಿಗೆ ಸಂಬದ್ಧವಾಗಿರುತ್ತದೆಯೇ ಹೊರತು ಮತ್ತೊಂದು ಅರ್ಥವಾದಕ್ಕೆ ಸಂಬದ್ಧವಾಗಿರಲಾರದಲ್ಲ ! —ಎಂಬ ಆಕ್ಷೇಪಕ್ಕೆ ಸಮಾಧಾನವಿದು.

4. ಹೇಮಂತಶಿಶಿರಗಳೆರಡನ್ನೂ ಒಂದೆಂದು ಭಾವಿಸಿ ಐದು ಋತುಗಳೆಂದು ಹೇಳಿದೆ ಎಂದು ವ್ಯಾಖ್ಯಾನಗಳಲ್ಲಿದೆ.

5. ಈ ವಾಕ್ಯವು ಬಹ್ವೃಚಬ್ರಾಹ್ಮಣದಲ್ಲಿದೆ ಎಂದು ನ್ಯಾ॥ನಿ॥ ಮತ್ತು ರ॥ಪ್ರ॥. ಯಜ್ಞಕ್ಕೆ ಪುರುಷಾಕಾರವನ್ನು ಕಲ್ಪಿಸುವಲ್ಲಿ ಎರಡು ತ್ರಿಷ್ಟುಭಗಳೂ ಇಂದ್ರಿಯವಾಗುತ್ತವೆ ಎಂದು ವಾಕ್ಯದ ಅರ್ಥ.

6. ಈ ವಾಕ್ಯವು ವಾಜಸನೇಯಿದಲ್ಲಿದೆ ಎಂದು ನ್ಯಾ॥ನಿ॥ ತೈತ್ತಿರೀಯ ೫-೧-೩ ರಲ್ಲಿಯೂ ಇದೆ.

7. ಜ್ಞಾನಿಯ ಸೇವೆಯಿಂದ ಪುಣ್ಯವೂ ದ್ವೇಷದಿಂದ ಪಾಪವೂ ಬರುತ್ತವೆ ; ಅವು ಜ್ಞಾನಿಯ ಪುಣ್ಯಪಾಪಗಳಿಗೆ ಸಮಾನಫಲವನ್ನು ಕೊಡುತ್ತವೆ ಎಂದು ಹೇಗೋ ಕಲ್ಪಿಸಬಹುದು. ರ॥ಪ್ರ॥

'ಶಬ್ದ' ವೆಂಬ ಶಬ್ದವನ್ನು ಉಚ್ಚಾರಣೆಮಾಡಿರುವದರಿಂದ (ಸುಕೃತದುಷ್ಕೃತಗಳ) ಹಾನಿಯಲ್ಲಿ ಉಪಾಯನವೂ ಸೇರಿಕೊಂಡಿರುವದೆಂಬುದು ಸ್ತುತಿಗಾಗಿಯೇ ಹೇಳಿದ್ದು ಎಂದು (ಸೂತ್ರಕಾರರು) ಸೂಚಿಸಿರುತ್ತಾರೆ. (ಇಲ್ಲಿ) ಗುಣಗಳ ಉಪಸಂಹಾರವನ್ನೇ ಹೇಳಬೇಕೆಂದಿದ್ದರೆ ಉಪಾಯನವೆಂಬ ಅರ್ಥವೇ ಹಾನಿಯಲ್ಲಿ ಸೇರಿಕೊಂಡಿರುತ್ತದೆ ಎಂದು ಹೇಳುತ್ತಿದ್ದರು[1]. **ಆದ್ದರಿಂದ ಗುಣಗಳ ಉಪಸಂಹಾರದ ವಿಚಾರದ ಪ್ರಸಕ್ತಿಯಿಂದ ಸ್ತುತಿಯ ಉಪಸಂಹಾರವನ್ನು ತಿಳಿಸುವದಕ್ಕೇ (ಈ) ಸೂತ್ರವು (ಬಂದಿರುತ್ತದೆ)[2].**

## ಒಂದು ಶ್ರುತಿಯಲ್ಲಿ ಮತ್ತೊಂದು ಶ್ರುತಿಯಲ್ಲಿನ ವಿಶೇಷವನ್ನು ತೆಗೆದುಕೊಳ್ಳಬೇಕೆಂಬುದಕ್ಕೆ ದೃಷ್ಟಾಂತ

(ಭಾಷ್ಯ)

೩೭೧. 'ಕುಶಾಛನ್ದಸ್ಸ್ತುತ್ಯುಪಗಾನವತ್' ಇತ್ಯುಪಮೋಪಾದಾನಮ್। ತದ್ಯಥಾ ಭಾಲ್ಲವಿನಾಮ್ "ಕುಶಾ ವಾನಸ್ಪತ್ಯಾಃ ಸ್ಥ ತಾ ಮಾ ಪಾತ" (?) ಇತ್ಯೇತಸ್ಮಿನ್ ನಿಗಮೇ ಕುಶಾನಾಮ್ ಅವಿಶೇಷೇಣ ವನಸ್ಪತಿಯೋನಿತ್ವೇನ ಶ್ರವಣೇ ಶಾಟ್ಯಾಯನಿನಾಮ್ "ಔದುಮ್ಬರಾಃ ಕುಶಾಃ" (?) ಇತಿ ವಿಶೇಷವಚನಾತ್ ಔದುಮ್ಬರ್ಯಃ ಕುಶಾಃ ಆಶ್ರೀಯನ್ತೇ (?) ಯಥಾ ಚ ಕ್ವಚಿದ್ದೇವಾಸುರಚ್ಛನ್ದಸಾಮ್ ಅವಿಶೇಷೇಣ ಪೌರ್ವಾಪರ್ಯಪ್ರಸಙ್ಗೇ "ದೇವಚ್ಛನ್ದಾಂಸಿ ಪೂರ್ವಾಣಿ" (?) ಇತಿ ಪೈಙ್ಗ್ಯಾಮ್ನಾನಾತ್ ಪ್ರತೀಯನ್ತೇ। ಯಥಾ ಚ ಷೋಡಶಿಸ್ತೋತ್ರೇ ಕೇಷಾಂಚಿತ್ ಕಾಲಾವಿಶೇಷಪ್ರಾಪ್ತೌ "ಸಮಯಾಧ್ಯುಷಿತೇ ಸೂರ್ಯೇ" (?) ಇತ್ಯಾರ್ಚಶ್ರುತೇಃ ಕಾಲವಿಶೇಷಪ್ರತಿಪತ್ತಿಃ। ಯಥೈವ ಚ ಅವಿಶೇಷೇಣ ಉಪಗಾನಂ ಕೇಚಿತ್ ಸಮಾಮನನ್ತಿ, ವಿಶೇಷೇಣ ಭಾಲ್ಲವಿನಃ। ಯಥಾ ಏತೇಷು ಕುಶಾದಿಷು ಶ್ರುತ್ಯನ್ತರಗತವಿಶೇಷಾನ್ವಯಃ ಏವಂ ಹಾನಾವಪಿ ಉಪಾಯನಾನ್ವಯಃ ಇತ್ಯರ್ಥಃ। ಶ್ರುತ್ಯನ್ತರಕೃತಂ ಹಿ ವಿಶೇಷಂ ಶ್ರುತ್ಯನ್ತರೇ ಅನಭ್ಯುಪಗಚ್ಛತಃ ಸರ್ವತ್ರೈವ ವಿಕಲ್ಪಃ ಸ್ಯಾತ್। ಸ ಚ ಅನ್ಯಾಯ್ಯಃ ಸತ್ಯಾಂ ಗತೌ। ತದುಕ್ತಂ ದ್ವಾದಶ

1. ಉಪಾಸನೆಯಲ್ಲಿ ಹೀಗೆಂದು ಗುಣೋಪಸಂಹಾರವನ್ನು ಮಾಡಿಕೊಳ್ಳಬೇಕೆಂಬ ಅಭಿಪ್ರಾಯವಿದ್ದರೆ ಉಪಾಯನಶಬ್ದವನ್ನು ಸೇರಿಸಿಕೊಳ್ಳಬೇಕೆಂದು ಹೇಳುತ್ತಿರಲಿಲ್ಲ. ಹಾಗೆಂದು ಹೇಳಿರುವದೇ ಸ್ತುತಿಯ ಉಪಸಂಹಾರವಿದೆಂದು ತಿಳಿಸುತ್ತದೆ ಎಂದು ಅಭಿಪ್ರಾಯ.

2. ನಿರ್ಗುಣವಿದ್ಯೆಯಲ್ಲಿ ಗುಣೋಪಸಂಹಾರದ ಪ್ರಸಕ್ತಿಯೇ ಇಲ್ಲದ್ದರಿಂದಲೂ ಹೀಗೆಂದು ತಿಳಿಯಬೇಕು.

ಲಕ್ಷಣ್ಯಾಮ್ “ ಅಪಿ ತು ವಾಕ್ಯಶೇಷತ್ವಾದಿತರಪರ್ಯುದಾಸಃ ಸ್ಯಾತ್ಪ್ರತಿಷೇಧೇ ವಿಕಲ್ಪಃ ಸ್ಯಾತ್ ” (ಜೈ. ಸೂ. ೧೦–೮–೧೫) ಇತಿ ॥

(ಭಾಷ್ಯಾರ್ಥ)

‘ಕುಶಾಛನ್ದಸ್ಸ್ತುತ್ಯುಪಗಾನವದಂತೆ’ ಎಂದು (ಸೂತ್ರದಲ್ಲಿ) ಉಪಮಾನವನ್ನು ಕೊಟ್ಟಿರುತ್ತದೆ. ಅದು ಹೇಗೆಂದರೆ (ಹೇಗೆ) **ಭಾಲ್ಲವಿಶಾಖೆಯವರ** “ಕುಶಗಳೆ, (ನೀವು) ವನಸ್ಪತಿಯಿಂದಾಗಿರುತ್ತೀರಷ್ಟೆ, ಆ (ನೀವು ನನ್ನನ್ನು ಕಾಪಾಡಿರಿ ! ” (?) ಎಂಬೀ ವಾಕ್ಯದಲ್ಲಿ ಕುಶಗಳು ಅವಿಶೇಷವಾಗಿ (ಎಲ್ಲವೂ) ವನಸ್ಪತಿಯಿಂದಾಗಿರುವವೆಂದು ಶ್ರುತಿಯಲ್ಲಿರುವಲ್ಲಿ, **ಶಾಟ್ಯಾಯನಿಗಳ** “ಉದುಂಬರಮರದಿಂದಾಗಿರುವ ಕುಶಗಳೇ,” (?) ಎಂದು ವಿಶೇಷವಚನದಿಂದ ಅತ್ತಿಯ ಕುಶಗಳನ್ನೇ ಆಶ್ರಯಿಸಿರುತ್ತದೆಯೋ[1], ಹೇಗೆ ದೇವಾಸುರಚ್ಛಂದಸ್ಸುಗಳನ್ನು ಯಾವ ವಿಶೇಷವೂ ಇಲ್ಲದೆ ಅನುಕ್ರಮಿಸಬಹುದೆಂಬ ಪ್ರಸಕ್ತಿಯುಂಟಾಗಲು “ದೇವಚ್ಛಂದಸ್ಸುಗಳು ಮೊದಲು” (?) ಎಂದು ಪೈಂಗಿಶ್ರುತಿಯಿಂದ ನಿಶ್ಚಿತವಾಗುತ್ತದೆಯೋ[2], ಹೇಗೆ ಷೋಡಶಿಸ್ತೋತ್ರದಲ್ಲಿ[3] ಕೆಲವು ಶಾಖೆಯವರ (ಶ್ರುತಿಯಲ್ಲಿ) ಕಾಲದಲ್ಲಿ ಯಾವ ವಿಶೇಷವೂ ಇಲ್ಲವೆಂದು ಪ್ರಾಪ್ತವಾಗಿರುವಲ್ಲಿ “ಸೂರ್ಯನು ಅರ್ಧಮಟ್ಟಿಗೆ ಉದಯವಾಗಿರುವಾಗ” (?) ಎಂಬ ಋಗ್ವೇದಶ್ರುತಿಯಿಂದ ಕಾಲವಿಶೇಷವು ನಿಶ್ಚಿತವಾಗುತ್ತದೆಯೋ, ಮತ್ತು ಹೇಗೆ ಉಪಗಾನವನ್ನು ಯಾವ ವಿಶೇಷವೂ ಇಲ್ಲದೆ ಕೆಲವರು ಪಠಿಸಿರುತ್ತಾರೋ, ಭಾಲ್ಲವಿಗಳು (ಮಾತ್ರ) ವಿಶೇಷ(ಪೂರ್ವಕವಾಗಿ ಪಠಿಸಿರುತ್ತಾರೋ)[4], ಹೇಗೆ ಈ ಕುಶಾದಿಗಳಲ್ಲಿ ಬೇರೆಯ ಶ್ರುತಿಗಳಲ್ಲಿರುವ ವಿಶೇಷವನ್ನೂ ಅನ್ವಯಿಸಿಕೊಳ್ಳುವರೋ ಹಾಗೆಯೇ ಹಾನಿಯನ್ನು ಹೇಳಿರುವಲ್ಲಿಯೂ ಉಪಾಯನವನ್ನು ಅನ್ವಯಿಸಿಕೊಳ್ಳಬೇಕು ಎಂದರ್ಥ. ಒಂದು ಶ್ರುತಿಯಲ್ಲಿರುವ ವಿಶೇಷವನ್ನು ಮತ್ತೊಂದು ಶ್ರುತಿಯಲ್ಲಿ ಒಪ್ಪದೆ ಇರುವವನಿಗೆ ಎಲ್ಲೆಲ್ಲಿಯೂ

---

1. ಇಲ್ಲಿ ಕುಶಗಳೆಂದರೆ ಸಮಿತ್ತುಗಳು ; ಆದ್ದರಿಂದ ಸ್ತ್ರೀಲಿಂಗವೆಂದು ಔದುಂಬರ್ಯಃ ಎಂದು ಸ್ತ್ರೀಲಿಂಗಸೂಚಕಶಬ್ದವನ್ನುಪಯೋಗಿಸಿದೆ ಎಂದು ಕೆಲವರ ಮತ. ಇವನ್ನು ಭಾಮತಿಯಲ್ಲಿ ಒಪ್ಪದೆ ‘ಕುಶಾಚ್ಛನ್ದ’ ಎಂಬ ಸೂತ್ರಪಾಠವನ್ನು ಕಲ್ಪಿಸಿದೆ ; ಅದನ್ನು ಕಲ್ಪತರುವಿನಲ್ಲಿ ಸಮರ್ಥಿಸಿದೆ.

2. ಪತ್ತಕ್ಷರದವು ದೇವಚ್ಛಂದಸ್ಸುಗಳು, ಒಂಬತ್ತಕ್ಷರದವು ಆಸುರಚ್ಛಂದಸ್ಸುಗಳು. ಒಂದು ಕಡೆಯಲ್ಲಿ ‘ಛಂದಸ್ಸುಗಳಿಂದ ಸ್ತೋತ್ರಮಾಡಬೇಕು’ ಎಂಬ ಸಾಮಾನ್ಯವಚನವಿದೆ ; ಪೈಂಗಿಶ್ರುತಿಯಲ್ಲಿ ದೇವಚ್ಛಂದಸ್ಸುಗಳೇ ಮೊದಲು ಬರಬೇಕೆಂದಿದೆ. ನ್ಯಾ॥ ನಿ॥

3. ಷೋಡಶಿ ಎಂಬ ಪಾತ್ರಗ್ರಹಣದ ಅಂಗವಾಗಿರುವ ಸ್ತೋತ್ರದ ವಿಷಯದಲ್ಲಿ ಛಂದೋಗಾದಿಗಳಲ್ಲಿ ಕಾಲವಿಶೇಷವಿಲ್ಲ ; ಋಗ್ವೇದಿಗಳಲ್ಲಿ ವಿಶೇಷವನ್ನು ಹೇಳಿದೆ. ನ್ಯಾ॥ ನಿ॥

4. ಋತ್ವಿಜರು ಉಪಗಾನಮಾಡಬೇಕು ಎಂಬುದು ಸಾಮಾನ್ಯವಾಕ್ಯ, ಅಧ್ವರ್ಯುವು ಉಪಗಾನಮಾಡಬಾರದು ಎಂಬುದು ವಿಶೇಷವಾಕ್ಯ.

ವಿಕಲ್ಪವೇ ಉಂಟಾಗುವದು[1]. ಆದರೆ ಅದು ಅಯುಕ್ತವು[2]. ಹೀಗೆಂದು **ದ್ವಾದಶಲಕ್ಷಣಿಯಲ್ಲಿ** "ಆದರೆ ವಾಕ್ಯಶೇಷವಿರುವದರಿಂದ ಮತ್ತೊಂದರ ಪರ್ಯುದಾಸವಾಗುವದು; ಪ್ರತಿಷೇಧವಾದರೆ ವಿಕಲ್ಪವಾದೀತು" (ಜೈ. ಸೂ. ೧೦-೮-೧೫) ಎಂಬಲ್ಲಿ ಹೇಳಿರುತ್ತದೆ[3].

## ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ

(ಭಾಷ್ಯ)

೩೭೨. ಅಥವಾ ಏತಾಸ್ವೇವ ವಿಧೂನನಶ್ರುತಿಷು ಏತೇನ ಸೂತ್ರೇಣ ಏತಚ್ಚಿಂತ್ಯಯಿತವ್ಯಮ್। ಕಿಮನೇನ ವಿಧೂನನವಚನೇನ ಸುಕೃತದುಷ್ಕೃತ ಹಾನಮ್ ಅಭಿಧೀಯತೇ, ಕಿಂ ವಾ ಅರ್ಥಾನ್ತರಮಿತಿ? ತತ್ರ ಚ ಏವಂ ಪ್ರಾಪಯಿತವ್ಯಮ್। ನ ಹಾನಂ ವಿಧೂನನಮಭಿಧೀಯತೇ 'ಧೂಞ್ ಕಮ್ಪನೇ' ಇತಿ ಸ್ಮರಣಾತ್ "ದೋಧೂಯನ್ತೇ ಧ್ವಜಾಗ್ರಾಣಿ" (?) ಇತಿ ಚ ವಾಯುನಾ ಚಾಲ್ಯಮಾನೇಷು ಧ್ವಜಾಗ್ರೇಷು ಪ್ರಯೋಗದರ್ಶನಾತ್। ತಸ್ಮಾತ್ ಚಾಲನಂ ವಿಧೂನನಮ್ ಅಭಿಧೀಯತೇ। ಚಾಲನಂ ತು ಸುಕೃತದುಷ್ಕೃತಯೋಃ

---

1. ಸಾಮಾನ್ಯವಿಶೇಷಗಳಿಗೆ ಏಕವಾಕ್ಯತೆಮಾಡಬಹುದೆಂಬ ಗತಿಯಿದ್ದರೂ ವಾಕ್ಯಭೇದವನ್ನು ಮಾಡಿಕೊಂಡರೆ "ಅಧ್ವರ್ಯುವು ಗಾನಮಾಡತಕ್ಕದ್ದಲ್ಲ" ಎಂದು ನಿಷೇಧವಾಕ್ಯದಿಂದ, "ಗಾನಮಾಡಬೇಕು" ಎಂದು ಸಾಮಾನ್ಯವಾಕ್ಯದಿಂದ– ಹೀಗೆ ವಿಕಲ್ಪವಾಗುತ್ತದೆ– ಹೀಗೆಯೇ ಮಿಕ್ಕಕಡೆಗಳಲ್ಲಿಯೂ ತಿಳಿಯಬೇಕು.

2. ವಿಕಲ್ಪದಲ್ಲಿ ಅಷ್ಟದೋಷಗಳಿರುವವೆಂದು ಮೀಮಾಂಸಕರು ಹೇಳುತ್ತಾರೆ. ಇನ್ನು ಯಾವ ಗತಿಯೂ ಇಲ್ಲದಿದ್ದರೆ ಎಂಟು ದೋಷಗಳಿಂದೊಡಗೂಡಿದ ವಿಕಲ್ಪವನ್ನೂ ಆಶ್ರಯಿಸಬೇಕಾಗುವದು. ಎಂಟು ದೋಷಗಳು ಹೇಗೆಂದರೆ: ಯವ, ವ್ರೀಹಿ– ಎಂಬಿವು ಎರಡೂ ಶಾಸ್ತ್ರದಲ್ಲಿವೆ. ವ್ರೀಹಿಯನ್ನು ಅನುಷ್ಠಾನಕ್ಕೆ ತೆಗೆದುಕೊಂಡರೆ ಯವ ಶಾಸ್ತ್ರಪ್ರಾಮಾಣ್ಯವನ್ನು ಬಿಟ್ಟಂತೆ ಆಗುವದು; ಅದರ ಅಪ್ರಾಮಾಣ್ಯವನ್ನು ಸ್ವೀಕರಿಸಿದಂತಾಗುವದು; ಮತ್ತೆ ಯವವನ್ನು ತೆಗೆದುಕೊಂಡರೆ ಆದರ ಶಾಸ್ತ್ರವು ಅಪ್ರಾಮಾಣ್ಯವೆಂದದ್ದನ್ನು ತ್ಯಜಿಸಿದಂತಾಗುವದು; ಬಿಟ್ಟಿದ್ದ ಪ್ರಾಮಾಣ್ಯವನ್ನು ತೆಗೆದುಕೊಂಡಂತೆ ಆಗುವದು. ವ್ರೀಹ್ಯನುಷ್ಠಾನದಂತೆ ಯವಾನುಷ್ಠಾನದಲ್ಲಿಯೂ ನಾಲ್ಕು ದೋಷಗಳು ಇರುವವು. ಆದರೂ, ಮತ್ತೊಂದು ಗತಿಯಿಲ್ಲದ್ದರಿಂದ ಅಲ್ಲಿ ವಿಕಲ್ಪವನ್ನು ಸ್ವೀಕರಿಸಿದೆ. ಪ್ರಕೃತದಲ್ಲಿ ಸಾಮಾನ್ಯವಿಶೇಷಗಳ ಏಕವಾಕ್ಯತೆಯೆಂಬ ಗತಿಯಿರುವದರಿಂದ ವಿಕಲ್ಪವನ್ನು ಬಿಡಬೇಕು.

3. ದೀಕ್ಷಿತನು ಹೋಮಮಾಡಬಾರದು ಎಂಬುದು ನಿಷೇಧವಾದರೆ ಯಾವಜ್ಜೀವವೂ ಅಗ್ನಿಹೋತ್ರಹೋಮಮಾಡಬೇಕು ಎಂಬ ವಾಕ್ಯದಿಂದ ಅನುಷ್ಠಾನವೂ ಪ್ರಾಪ್ತವಾಗುವದರಿಂದ ವಿಕಲ್ಪವಾಗುತ್ತದೆ; ಇದು ಯುಕ್ತವಲ್ಲ. ಆದ್ದರಿಂದ ದೀಕ್ಷಿತನಲ್ಲದವನು ಯಾವಜ್ಜೀವವೂ ಹೋಮಮಾಡಬೇಕು ಎಂದು ಪರ್ಯುದಾಸಪಕ್ಷವನ್ನು ಸ್ವೀಕರಿಸಬೇಕು –ಎಂದು ಸೂತ್ರದ ಅರ್ಥ.

ಕಂಚಿತ್ ಕಾಲಂ ಫಲಪ್ರತಿಬನ್ಧನಾತ್ ಇತಿ। ಏವಂ ಪ್ರಾಪಯ್ಯ ಪ್ರತಿವಕ್ತವ್ಯಮ್। ಹಾನಾವೇವ ಏಷ ವಿಧೂನನಶಬ್ದೋ ವರ್ತಿತುಮರ್ಹತಿ। ಉಪಾಯನಶಬ್ದಶೇಷತ್ವಾತ್। ನ ಹಿ ಪರಪರಿಗ್ರಹಭೂತಯೋಃ ಸುಕೃತದುಷ್ಕೃತಯೋಃ ಅಪ್ರಹೀಣಯೋಃ ಪರೈರುಪಾಯನಂ ಸಂಭವತಿ। ಯದ್ಯಪಿ ಇದಂ ಪರಕೀಯಯೋಃ ಸುಕೃತದುಷ್ಕೃತಯೋಃ ಪರೈರುಪಾಯನಂ ನಾಞ್ಜಸಂ ಸಂಭಾವ್ಯತೇ, ತಥಾಪಿ ತತ್ಸಂಕೀರ್ತನಾತ್ ತಾವತ್ ತದಾನುಗುಣ್ಯೇನ ಹಾನಮೇವ ವಿಧೂನನಂ ನಾಮ ಇತಿ ನಿರ್ಣೇತುಂ ಶಕ್ಯತೇ। ಕ್ವಚಿದಪಿ ಚ ಇದಂ ವಿಧೂನನಸಂನಿಧೌ ಉಪಾಯನಂ ಶ್ರೂಯಮಾಣಂ ಕುಶಾಛನ್ದಸ್ತುತ್ಯುಪಗಾನವತ್ ವಿಧೂನನಶ್ರುತ್ಯಾ ಸರ್ವತ್ರ ಅಪೇಕ್ಷ್ಯಮಾಣಂ ಸಾರ್ವತ್ರಿಕಂ ನಿರ್ಣಯಕಾರಣಂ ಸಂಪದ್ಯತೇ। ನ ಚ ಚಾಲನಂ ಧ್ವಜಾಗ್ರವತ್ ಸುಕೃತದುಷ್ಕೃತಯೋರ್ಮುಖ್ಯಂ ಸಂಭವತಿ। ಅದ್ರವ್ಯತ್ವಾತ್। ಅಶ್ವಶ್ಚ ರೋಮಾಣಿ ವಿಧೂನ್ವಾನಸ್ತ್ಯಜನ್ ರಜಃ ಸಹೈವ ತೇನ ರೋಮಾಣ್ಯಪಿ ಜೀರ್ಣಾನಿ ಶಾತಯತಿ। "ಅಶ್ವ ಇವ ರೋಮಾಣಿ ವಿಧೂಯ ಪಾಪಮ್" (ಛಾಂ. ೮–೧೩–೧) ಇತಿ ಚ ಬ್ರಾಹ್ಮಣಮ್। ಅನೇಕಾರ್ಥತ್ವಾಭ್ಯುಪಗಮಾಚ್ಚ ಧಾತೂನಾಂ ನ ಸ್ಮರಣವಿರೋಧಃ। ತದುಕ್ತಮ್ ಇತಿ ವ್ಯಾಖ್ಯಾತಮ್॥

(ಭಾಷ್ಯಾರ್ಥ)

ಅಥವಾ ಇದೇ ವಿಧೂನನಶ್ರುತಿಗಳ (ವಿಷಯದಲ್ಲಿ)[1] ಈ ಸೂತ್ರದಿಂದ ಇದನ್ನು ವಿಚಾರಮಾಡಬಹುದು: ಈ ವಿಧೂನನವೆಂಬ ಮಾತಿನಿಂದ ಸುಕೃತದುಷ್ಕೃತಗಳ ಹಾನವನ್ನು ಹೇಳಿದೆಯೆ, ಅಥವಾ ಮತ್ತೇನನ್ನಾದರೂ ಹೇಳಿದೆಯೆ[2]? ಅಲ್ಲಿ ಹೀಗೆ (ಪೂರ್ವಪಕ್ಷವನ್ನು) ತಂದೊಡ್ಡಬಹುದು. ವಿಧೂನನವೆಂದರೆ ಹಾನವನ್ನು ಹೇಳಿಲ್ಲ; ಏಕೆಂದರೆ 'ಧೂಞ್ ಕಂಪನೇ' ಎಂದು (ಪಾಣಿನಿ) ಸ್ಮರಣವಿದೆ; 'ದೋಧೂಯನ್ತೇ ಧ್ವಜಾಗ್ರಾಣಿ' (ಬಾವುಟದ ತುದಿಗಳು ಅಲುಗಾಡುತ್ತವೆ) ಎಂದು ಗಾಳಿಯಿಂದ ಅಲುಗಾಡುತ್ತಿರುವ ಧ್ವಜಾಗ್ರಗಳಲ್ಲಿ (ಈ ಧೂಞ್ ಧಾತುವನ್ನು) ಪ್ರಯೋಗಿಸಿರುವದೂ ಕಂಡುಬರುತ್ತದೆ. ಆದ್ದರಿಂದ ಚಾಲನವು (ಅಲುಗಾಡಿಸುವದೇ) ವಿಧೂನನ(ಶಬ್ದದಿಂದ) ಇಲ್ಲಿ ಉಕ್ತವಾಗಿದೆ. (ಇಲ್ಲಿ) ಚಾಲನವೆಂಬುದಾದರೋ ಸುಕೃತದುಷ್ಕೃತಗಳ ಫಲಕ್ಕೆ ಕೆಲವು ಕಾಲ ತಡೆದಿರುವದರಿಂದ (ಆಗುತ್ತದೆ.)

---

1. "ಸುಕೃತದುಷ್ಕೃತೇ ವಿಧೂನುತೇ" ಮುಂತಾದ ಶ್ರುತಿಗಳಲ್ಲಿ.

2. ಹಿಂದಿನ ವರ್ಣಕದಲ್ಲಿ ವಿಧೂನನ (ಕೆಡಹುವದು) ಎಂದರೆ ಕರ್ಮವನ್ನು ಬಿಡುವದು ಎಂಬರ್ಥವೆಂದಿಟ್ಟುಕೊಂಡು ಮತ್ತೊಬ್ಬರು ಅದನ್ನು ತೆಗೆದುಕೊಳ್ಳುವದು ಎಂಬುದನ್ನು ಉಪಸಂಹಾರಮಾಡಿತ್ತು. ಈ ವರ್ಣಕದಲ್ಲಿ ಅದನ್ನೇ ಸಿದ್ಧಪಡಿಸಲಾಗುತ್ತದೆ.

ಹೀಗೆಂಬ (ಪೂರ್ವಪಕ್ಷವನ್ನು) ಒಡ್ಡಿ (ಹೀಗೆ) ಪ್ರತ್ಯುತ್ತರವನ್ನು ಹೇಳಬಹುದು. ಈ ವಿಧೂನನಶಬ್ದಕ್ಕೆ ಹಾನಿ (ಬಿಡುವದು) ಎಂಬರ್ಥದಲ್ಲಿಯೇ ವೃತ್ತಿಯಿರಬೇಕು. ಏಕೆಂದರೆ (ಇದು) ಉಪಾಯನಶಬ್ದಶೇಷವಾಗಿರುತ್ತದೆ. ಮತ್ತೊಬ್ಬರು ಸ್ವೀಕರಿಸುವವಾಗಿರುವ ಸುಕೃತದುಷ್ಕೃತಗಳನ್ನು (ಇವರು) ಬಿಡದೆ ಇದ್ದರೆ ಮತ್ತೊಬ್ಬರು ಸ್ವೀಕರಿಸುವದು ಆಗಲಾರದಷ್ಟೆ. ಒಬ್ಬರ ಸುಕೃತದುಷ್ಕೃತಗಳನ್ನು ಮತ್ತೊಬ್ಬರು ಸ್ವೀಕರಿಸುವದೆಂಬುದು ಮುಖ್ಯಾರ್ಥದಲ್ಲಿ ಹೊಂದಲಾರದೆಂಬುದು (ನಿಜ); ಆದರೂ ಆ (ಸ್ವೀಕಾರ)ವನ್ನು ಹೇಳಿರುವದರಿಂದಲಂತೂ ಅದಕ್ಕೆ ಅನುಗುಣವಾಗಿ ಹಾನವೇ ವಿಧೂನನವೆಂಬುದು ಎಂದು ನಿಶ್ಚಯಿಸಬಹುದಾಗಿದೆ. ಎಲ್ಲಿಯೋ ಒಂದು ಕಡೆಯಲ್ಲಿ ವಿಧೂನನಸಂನಿಧಿಯಲ್ಲಿ ಈ ಉಪಾಯನವನ್ನು ಶ್ರುತಿಯಲ್ಲಿ ಹೇಳಿದ್ದರೂ ಕುಶಾಛಂದಸ್ಸ್ತುತ್ಯುಪಗಾನಗಳಂತೆ ವಿಧೂನನಶ್ರುತಿಯಿಂದ ಎಲ್ಲೆಲ್ಲಿಯೂ ಅಪೇಕ್ಷಿತವಾಗುವದರಿಂದ ಸಾರ್ವತ್ರಿಕವಾದ ನಿರ್ಣಯಕ್ಕೆ[1] ಕಾರಣವಾಗುತ್ತದೆ. ಬಾವುಟದ ತುದಿಗಳಂತೆ ಚಾಲನಮಾಡುವದೆಂಬುದು ಸುಕೃತದುಷ್ಕೃತಗಳಲ್ಲಿ ಮುಖ್ಯಾರ್ಥದಲ್ಲಿ ಸಂಭವಿಸುವದಿಲ್ಲ. ಏಕೆಂದರೆ (ಅವು) ದ್ರವ್ಯವಲ್ಲ. ಕುದುರೆಯೂ ಕೂದಲುಗಳನ್ನು ಕೊಡಹುವಾಗ ಧೂಳನ್ನು ಬಿಡಿಸಿಕೊಂಡು ಅವರೊಡನೆಯೇ ಕಳೆಯು ಕೂದಲನ್ನು ಕೊಡವಿಹಾಕುತ್ತದೆ[2]. ಅಶ್ವವು ರೋಮಗಳನ್ನು (ಕೊಡಹುವಂತೆ) ಪಾಪವನ್ನು ಕೊಡಹಿಕೊಂಡು" (ಛಾಂ. ೮–೧೩–೧) ಎಂದೇ ಬ್ರಾಹ್ಮಣವಿದೆ[3]. ಧಾತುಗಳಿಗೆ ಅನೇಕಾರ್ಥಗಳಿರುವವೆಂದು ಒಪ್ಪಿರುವದರಿಂದ (ಪಾಣಿನಿಯ) ಸ್ಮರಣಕ್ಕೆ ವಿರೋಧವಿಲ್ಲ[4]. 'ತದುಕ್ತಮ್' ಎಂಬ (ಸೂತ್ರಭಾಗಕ್ಕೆ ಮೊದಲೇ) ಅರ್ಥವನ್ನು ಹೇಳಿದೆ[5].

---

1. ಎಲ್ಲೆಲ್ಲಿಯೂ ಹಾನವೆಂಬುದೇ ಅರ್ಥವೆಂದು ನಿಶ್ಚಯಿಸುವದಕ್ಕೆ.

2. ಆದ್ದರಿಂದ ಅಲ್ಲಿ ಧೂಳನ್ನು ಬಿಡುವವೆಂಬರ್ಥವೂ ಇದೆ.

3. ಆದ್ದರಿಂದ ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಹೋಲಿಕೆಯಿರುವದರಿಂದ ಅಲ್ಲಿಯೂ ಹಾನವೆಂಬರ್ಥವನ್ನು ಇಟ್ಟುಕೊಳ್ಳಬಹುದು ಎಂದು ಭಾವ. ಇಲ್ಲಿ ಮುಖ್ಯಾರ್ಥಾನುಪಪತ್ತಿಯೂ ಮುಖ್ಯಾರ್ಥಸಂಬಂಧವೂ ಲಕ್ಷಣಾರ್ಥಕ್ಕೆ ನಿಮಿತ್ತವಾಗಿರುತ್ತದೆ ಎಂದು ತಿಳಿಸಿದಂತೆ ಆಯಿತು.

4. ಧೂಞ್ ಕಂಪನೇ ಎಂದು ಸ್ಪಷ್ಟವಾಗಿ ಚಾಲನಾರ್ಥದಲ್ಲಿಯೇ ಪಾಣಿನಿಸ್ಮರಣವಿದೆಯಲ್ಲ ಎಂಬ ಆಕ್ಷೇಪಕ್ಕೆ ಉತ್ತರವಿದು. ಧಾತುಗಳಿಗೆ ಅನೇಕಾರ್ಥಗಳಿರುವವೆಂದು ವೈಯಾಕರಣರೇ ಒಪ್ಪಿರುತ್ತಾರೆ; ಆದ್ದರಿಂದ ಹಾನವೆಂಬರ್ಥವೂ ಆಗಬಹುದು. ಆದ್ದರಿಂದ ಮುಖ್ಯಾರ್ಥವೆಂದಿಟ್ಟುಕೊಂಡರೂ ಬಾಧಕವಿಲ್ಲ ಎಂದು ಭಾವ.

5 ಪೂರ್ವಮೀಮಾಂಸದಲ್ಲಿ ಹೇಳಿದೆ ಎಂದರ್ಥ. ಶ್ರುತ್ಯಂತರದಲ್ಲಿರುವ ವಿಶೇಷವನ್ನು ಶ್ರುತ್ಯಂತರದಲ್ಲಿ ತೆಗೆದುಕೊಳ್ಳದೆ ಇದ್ದರೆ ವಿಕಲ್ಪವಾಗುತ್ತದೆ. ಅದು ಅಯುಕ್ತ. ಆದ್ದರಿಂದ ಎಲ್ಲಾ ಶ್ರುತಿಗಳಲ್ಲಿಯೂ ವಿಧೂನನಶಬ್ದಕ್ಕೆ ಹಾನವೆಂಬರ್ಥವನ್ನೇ ಇಟ್ಟುಕೊಳ್ಳಬೇಕು. ನ್ಯಾಯವನ್ನು ಮೀಮಾಂಸದಂತೆ ಅನುಸರಿಸಬೇಕು ಎಂದಭಿಪ್ರಾಯ.

## ೧೬. ಸಾಂಪರಾಯಾಧಿಕರಣ (ಸೂ. ೨೭–೨೮)

(ಸುಕೃತದುಷ್ಕೃತಗಳ ಹಾನವು ದೇಹತ್ಯಾಗಕಾಲದಲ್ಲಿಯೇ)

**ಸಾಂಪರಾಯೇ ತರ್ತವ್ಯಾಭಾವಾತ್ ತಥಾ ಹ್ಯನ್ಯೇ ॥ ೨೭ ॥**

೨೭. ಹೊರಟುಹೋಗುವಾಗಲೇ (ಹಾನವು); ಏಕೆಂದರೆ ಪಡೆಯತಕ್ಕದ್ದೇನೂ ಇಲ್ಲ. ಹಾಗೆಂದಲ್ಲವೆ, ಮತ್ತೆ ಬೇರೆಯ (ಶಾಖೆ) ಯವರು (ಪಠಿಸುತ್ತಾರೆ)?

### ದೇಹವನ್ನು ಬಿಡುವಾಗಲೇ ಪುಣ್ಯಪಾಪತ್ಯಾಗ

(ಭಾಷ್ಯ)

೩೭೩. ದೇವಯಾನೇನ ಪಥಾ ಪರ್ಯಙ್ಕಸ್ಥಂ ಬ್ರಹ್ಮ ಅಭಿಪ್ರಸ್ಥಿತಸ್ಯ ವ್ಯಧ್ವನಿ ಸುಕೃತದುಷ್ಕೃತಯೋರ್ವಿಯೋಗಂ ಕೌಷೀತಕಿನಃ ಪರ್ಯಙ್ಕವಿದ್ಯಾಯಾಮ್ ಆಮನನ್ತಿ "ಸ ಏತಂ ದೇವಯಾನಂ ಪನ್ಥಾನಮಾಸಾದ್ಯಾಗ್ನಿಲೋಕಮಾಗಚ್ಛತಿ" (ಕೌ. ೧–೩) ಇತ್ಯುಪಕ್ರಮ್ಯ "ಸ ಆಗಚ್ಛತಿ ವಿರಜಾಂ ನದೀಂ ತಾಂ ಮನಸೈವಾತ್ಯೇತಿ ತತ್ಸುಕೃತದುಷ್ಕೃತೇ ವಿಧೂನುತೇ" (ಕೌ. ೧–೪) ಇತಿ। ತತ್ ಕಿಂ ಯಥಾಶ್ರುತಂ ವ್ಯಧ್ವನ್ಯೇವ ವಿಯೋಗವಚನಂ ಪ್ರತಿಪತ್ತವ್ಯಮ್, ಆಹೋಸ್ವಿತ್ ಆದಾವೇವ ದೇಹಾದಪಸರ್ಪಣೇ? ಇತಿ ವಿಚಾರಣಾಯಾಂ ಶ್ರುತಿಪ್ರಾಮಾಣ್ಯಾತ್ ಯಥಾಶ್ರುತಿಪ್ರತಿಪತ್ತಿಪ್ರಸಕ್ತೌ ಪಠತಿ–"ಸಾಂಪರಾಯೇ" ಇತಿ। ಸಾಂಪರಾಯೇ ಗಮನೇ ಏವ ದೇಹಾದಪಸರ್ಪಣೇ ಇದಂ ವಿದ್ಯಾಸಾಮರ್ಥ್ಯಾತ್ ಸುಕೃತದುಷ್ಕೃತಹಾನಂ ಭವತಿ ಇತಿ ಪ್ರತಿಜಾನೀತೇ। ಹೇತುಂ ಚ ಆಚಷ್ಟೇ "ತರ್ತವ್ಯಾಭಾವಾತ್" ಇತಿ। ನ ಹಿ ವಿದುಷಃ ಸಂಪರೇತಸ್ಯ ವಿದ್ಯಯಾ ಬ್ರಹ್ಮ ಸಂಪ್ರೇಪ್ಸತಃ ಅನ್ತರಾಲೇ ಸುಕೃತದುಷ್ಕೃತಾಭ್ಯಾಂ ಕಿಂಚಿತ್ ಪ್ರಾಪ್ತವ್ಯಮಸ್ತಿ ಯದರ್ಥಂ ಕತಿಚಿತ್ ಕ್ಷಣಾನ್ ಅಕ್ಷೀಣೇ ತೇ ಕಲ್ಪ್ಯೇಯಾತಾಮ್। ವಿದ್ಯಾವಿರುದ್ಧಫಲತ್ವಾತ್ ತು ವಿದ್ಯಾಸಾಮರ್ಥ್ಯೇನ ತಯೋಃ ಕ್ಷಯಃ। ಸ ಚ ಯದೈವ ವಿದ್ಯಾ ಫಲಾಭಿಮುಖೀ ತದೈವ ಭವಿತುಮರ್ಹತಿ। ತಸ್ಮಾತ್ ಪ್ರಾಗೇವ ಸನ್ ಅಯಂ ಸುಕೃತದುಷ್ಕೃತಕ್ಷಯಃ ಪಶ್ಚಾತ್ ಪಠ್ಯತೇ। ತಥಾ ಹಿ ಅನ್ಯೇಽಪಿ ಶಾಖಿನಃ ತಾಣ್ಡಿನಃ ಶಾಟ್ಯಾಯನಿನಶ್ಚ ಪ್ರಾಗವಸ್ಥಾಯಾಮೇವ ಸುಕೃತದುಷ್ಕೃತಹಾನಮ್ ಆಮನನ್ತಿ "ಅಶ್ವ ಇವ ರೋಮಾಣಿ ವಿಧೂಯ ಪಾಪಮ್" (ಛಾಂ. ೮–೧೩–೧) ಇತಿ, "ತಸ್ಯ ಪುತ್ರಾ ದಾಯಮುಪಯನ್ತಿ ಸುಹೃದಃ ಸಾಧುಕೃತ್ಯಾಂ ದ್ವಿಷನ್ತಃ ಪಾಪಕೃತ್ಯಾಮ್" (?) ಇತಿ ಚ ॥

(ಭಾಷ್ಯಾರ್ಥ)

ದೇವಯಾನಮಾರ್ಗದಿಂದ ಪರ್ಯಂಕದಲ್ಲಿರುವ ಬ್ರಹ್ಮವನ್ನು ಕುರಿತು ಹೊರಟವನಿಗೆ ನಡುದಾರಿಯಲ್ಲಿ ಸುಕೃತದುಷ್ಕೃತಗಳ ನಾಶವು ಆಗುವದೆಂದು ಕೌಷೀತಕಿ(ಶಾಖೆ)ಯವರು ಪರ್ಯಂಕವಿದ್ಯೆಯಲ್ಲಿ "ಅವನು ಈ ದೇವಯಾನವೆಂಬ ಮಾರ್ಗವನ್ನು ಪಡೆದು ಅಗ್ನಿಲೋಕಕ್ಕೆ ಬರುತ್ತಾನೆ" (ಕೌ. ೧-೩) ಎಂದು ಉಪಕ್ರಮಿಸಿ "ಅವನು ವಿರಜಾನದಿಗೆ ಬರುತ್ತಾನೆ; ಅದನ್ನು ಮನಸ್ಸಿನಿಂದಲೇ ದಾಟುತ್ತಾನೆ; ಅಲ್ಲಿ ಸುಕೃತದುಷ್ಕೃತಗಳನ್ನು ಕೊಡವಿಕೊಳ್ಳುತ್ತಾನೆ" (ಕೌ. ೧-೪) ಎಂದು ಪಠಿಸುತ್ತಾರೆ. ಅಲ್ಲಿ ಹೇಗೆ ಶ್ರುತಿಯಲ್ಲಿದೆಯೋ ಹಾಗೆ ನಡುಹಾದಿಯಲ್ಲಿಯೇ (ಸುಕೃತದುಷ್ಕೃತಗಳ) ಆಗಲುವಿಕೆಯು ಮಾತನ್ನು ತಿಳಿಯಬೇಕೊ, ಅಥವಾ ಮೊದಲೇ ದೇಹದಿಂದ ಹೊರಡುವಾಗ (ಆಗುವದೆಂದು ತಿಳಿಯಬೇಕೊ) ? -ಎಂದು ವಿಚಾರಮಾಡುವಲ್ಲಿ ಶ್ರುತಿಪ್ರಾಮಾಣ್ಯಕ್ಕಾಗಿ ಶ್ರುತಿಯಂತೆ ತಿಳಿಯಬೇಕೆಂಬ ಪ್ರಸಕ್ತಿಯುಂಟಾಗಲು (ಸೂತ್ರಕಾರರು) 'ಸಾಂಪರಾಯೇ' (ಎಂದು) ಪಠಿಸಿರುತ್ತಾರೆ. ಸಾಂಪರಾಯದಲ್ಲಿ ಎಂದರೆ ದೇಹವನ್ನು ಬಿಟ್ಟು ಹೊರಟುಹೋಗುವ ಕಾಲದಲ್ಲಿಯೇ ಈ ಸುಕೃತದುಷ್ಕೃತಗಳ ಹಾನವು ವಿದ್ಯೆಯ ಬಲದಿಂದ ಆಗುವದೆಂದು ಪ್ರತಿಜ್ಞೆಮಾಡಿರುತ್ತಾರೆ.

(ಅದಕ್ಕೆ) ಹೇತುವನ್ನೂ ತರ್ತವ್ಯಾಭಾವಾತ್ (ದಾಟುವದೇನೂ ಇಲ್ಲದ್ದರಿಂದ) ಎಂದು ಹೇಳಿರುತ್ತಾರೆ. (ಇದರ ವಿವರ): ಜ್ಞಾನಿಯಾದವನು ದೇಹವನು ಬಿಟ್ಟು ಹೊರಟು ವಿದ್ಯೆಯಿಂದ ಬ್ರಹ್ಮವನ್ನು ಪಡೆಯಬೇಕೆಂದಿರುವನಾದ್ದರಿಂದ (ಅವನಿಗೆ)[1] ನಡುವೆ ಸುಕೃತದುಷ್ಕೃತಗಳಿಂದ ಪಡೆದುಕೊಳ್ಳಬೇಕಾದದ್ದು ಯಾವದೊಂದೂ ಇರುವದಿಲ್ಲವಷ್ಟೆ. (ಹಾಗೆ ಇದ್ದಿದ್ದರೆ) ಅದಕ್ಕಾಗಿ ಕೆಲವು ಕ್ಷಣಗಳವರೆಗೆ ಅವು ಕ್ಷಯವಾಗುವದಿಲ್ಲ ಎಂದು ಕಲ್ಪಿಸಬಹುದಾಗಿತ್ತು. ಅವುಗಳ ಫಲವು ವಿದ್ಯೆಗೆ ವಿರುದ್ಧವಾಗಿರುವದರಿಂದ ಮಾತ್ರವೇ ವಿದ್ಯೆಯ ಸಾಮರ್ಥ್ಯದಿಂದ ಅವುಗಳ ಕ್ಷಯವು (ಆಗುತ್ತದೆ ಎನ್ನಬೇಕು). ಅದು ಯಾವಾಗ ವಿದ್ಯೆಯು ಫಲದ ಕಡೆಗೆ ತಿರುಗುವದೋ ಆಗಲೇ ಆಗುವದು ಯುಕ್ತ.[2] ಆದ್ದರಿಂದ, ಈ ಸುಕೃತದುಷ್ಕೃತಕ್ಷಯವೆಂಬುದು ಮೊದಲೇ ಆಗುವದಾದರೂ ಆಮೇಲೆ (ಈ ಶ್ರುತಿಯಲ್ಲಿ) ಪಠಿತವಾಗಿರುತ್ತದೆ (ಎನ್ನಬೇಕಾಯಿತು). ಆದ್ದರಿಂದಲೇ ತಾಂಡಿಗಳು ಶಾಟ್ಯಾಯನಿಗಳು ಎಂಬ ಬೇರೆಯ ಶಾಖೆಯವರೂ "ಅಶ್ವವು ರೋಮಗಳನ್ನು (ಕೊಡವಿಕೊಳ್ಳು)ವಂತೆ ಪಾಪವನ್ನು ಕೊಡವಿಕೊಂಡು"

1. ಉಪಾಸಕನಿಗೆ ಎಂದರ್ಥ.

2. ಸಾಕ್ಷಾತ್ಕಾರವಾದಕೂಡಲೆ ಉಪಾಸನೆಯು ಫಲಾಭಿಮುಖವಾಗುತ್ತವೆ. ಆದ್ದರಿಂದ ಆಗಲೆ ಸುಕೃತದುಷ್ಕೃತಗಳ ಕ್ಷಯವಾಗುತ್ತವೆ ಎಂಬುದು ಯುಕ್ತ ಎಂದರ್ಥ.

(ಛಾಂ. ೮-೧೩-೧) ಎಂದೂ "ಅವನ ಪುತ್ರರು ಅವನ ಸ್ವತ್ತನ್ನು ಪಡೆಯು ವರು, ಸ್ನೇಹಿತರು ಪುಣ್ಯಕರ್ಮವನ್ನು (ಪಡೆಯುವರು), ದ್ವೇಷಿಗಳು ಪಾಪ ಕೃತ್ಯವನ್ನು ಪಡೆಯುವರು" (?) ಎಂದೂ ಮೊದಲಿನ ಅವಸ್ಥೆಯಲ್ಲಿಯೇ ಸುಕೃತದುಷ್ಕೃತಗಳ ತ್ಯಾಗವನ್ನು ಪಠಿಸಿರುತ್ತಾರೆ.

**ಛನ್ದತ ಉಭಯಾವಿರೋಧಾತ್ ॥ ೨೮ ॥**

೨೮. ಇಚ್ಛೆಯಿಂದ (ಆಗಬಹುದು); ಏಕೆಂದರೆ ಎರಡಕ್ಕೂ ವಿರೋಧವಿರುವದಿಲ್ಲ.

## ಪುರುಷಪ್ರಯತ್ನವು ಸಾಧಕಾವಸ್ಥೆಯಲ್ಲಿಯೇ ಸಾಧ್ಯ

(ಭಾಷ್ಯ)

೩೭೪. ಯದಿ ಚ ದೇಹಾದಪಸೃಪ್ತಸ್ಯ ದೇವಯಾನೇನ ಪಥಾ ಪ್ರಸ್ಥಿತಸ್ಯ ಅರ್ಧಪಥೇ ಸುಕೃತದುಷ್ಕೃತಕ್ಷಯೋಽಭ್ಯುಪಗಮ್ಯೇತ, ತತಃ ಪತಿತೇ ದೇಹೇ ಯಮನಿಯಮವಿದ್ಯಾಭ್ಯಾಸಾತ್ಮಕಸ್ಯ ಸುಕೃತದುಷ್ಕೃತಕ್ಷಯಹೇತೋಃ ಪುರುಷಪ್ರಯತ್ನಸ್ಯ ಇಚ್ಛಾತೋಽನುಷ್ಠಾನಾನುಪಪತ್ತೇಃ ಅನುಪಪತ್ತಿರೇವ ತದ್ಧೇತುಕಸ್ಯ ಸುಕೃತದುಷ್ಕೃತಕ್ಷಯಸ್ಯ ಸ್ಯಾತ್ । ತಸ್ಮಾತ್ ಪೂರ್ವಮೇವ ಸಾಧಕಾವಸ್ಥಾಯಾಂ ಛನ್ದತಃ ಅನುಷ್ಠಾನಂ ತಸ್ಯ ಸ್ಯಾತ್ । ತತ್ಪೂರ್ವಕಂ ಚ ಸುಕೃತದುಷ್ಕೃತಹಾನಮ್ ಇತಿ ದ್ರಷ್ಟವ್ಯಮ್ । ಏವಂ ನಿಮಿತ್ತನೈಮಿತ್ತಿಕಯೋಃ ಉಪಪತ್ತಿಃ, ತಾಣ್ಡಿಶಾಟ್ಯಾಯನಿಶ್ರುತ್ಯೋಶ್ಚ ಸಂಗತಿಃ ಇತಿ ॥

(ಭಾಷ್ಯಾರ್ಥ)

ದೇಹವನ್ನು ಬಿಟ್ಟು ದೇವಯಾನಮಾರ್ಗದಿಂದ ಹೊರಟಿರುವವನಿಗೆ ಅರ್ಧದಾರಿಯಲ್ಲಿ ಪುಣ್ಯಪಾಪಗಳ ಕ್ಷಯವಾಗುವದೆಂದು ಒಪ್ಪಿದರೆ[1] ಆಗ ದೇಹವು ಬಿದ್ದಮೇಲೆ ಯಮನಿಯಮಗಳು, ಉಪಾಸನೆಯ ಅಭ್ಯಾಸ– ಇವುಗಳ ರೂಪವಾದ, ಸುಕೃತದುಷ್ಕೃತಕ್ಷಯಕ್ಕೆ ಕಾರಣವಾದ, ಪುರುಷಪ್ರಯತ್ನವನ್ನು ಇಚ್ಛೆಯಿಂದ ಮಾಡುವದು ಆಗಲಾರದಾದ್ದರಿಂದ ಆ ಕಾರಣದಿಂದ ಬೇಕಾದ ಸುಕೃತದುಷ್ಕೃತಕ್ಷಯವೂ ಆಗಲೇ ಆರದೆಂದಾಗುವದು.[2] ಆದ್ದರಿಂದ ಮೊದಲೇ (ಇನ್ನೂ) ಸಾಧಕನಾಗಿರುವ ಅವಸ್ಥೆಯಲ್ಲಿಯೇ ಆ ಪ್ರಯತ್ನವನ್ನು ಸ್ವೇಚ್ಛೆ

1. ದೇವಯಾನಮಾರ್ಗದಿಂದ ಹೊರಟವನಿಗೇ ಬ್ರಹ್ಮಪ್ರಾಪ್ತಿಯಾಗುವಂತೆ ಆ ಮಾರ್ಗದಲ್ಲಿಯೇ ಪುಣ್ಯಪಾಪಗಳ ನಾಶವೂ ಆಗಬಹುದಲ್ಲವೆ?– ಎಂಬ ಆಕ್ಷೇಪಕ್ಕೆ ಸೂತ್ರವು ಸಮಾಧಾನವನ್ನು ಹೇಳಿದೆ ಎಂದು ಭಾವ.

2. 'ಛನ್ದತಃ' ಎಂಬುದಕ್ಕೆ ಅರ್ಧದಾರಿಯಲ್ಲಿ ಸಾಧನಾನುಷ್ಠಾನವನ್ನು ಇಚ್ಛೆಯಿಂದ ಮಾಡಲಾಗುವದಿಲ್ಲ ಎಂಬರ್ಥವನ್ನು ಹೇಳಿದಂತೆ ಆಯಿತು.

ಯಿಂದ ಅನುಷ್ಠಾನಮಾಡಬಹುದಾಗಿದೆ ; ಆದರಿಂದಾಗಿ ಸುಕೃತದುಷ್ಕೃತಗಳ ತ್ಯಾಗವೂ ಆಗುತ್ತದೆ ಎಂದು ತಿಳಿಯಬೇಕು.[1] ಹೀಗಾದರೆ ನಿಮಿತ್ತನೈಮಿತ್ತಿಕ ಗಳೆರಡೂ ಹೊಂದುವವು, ತಾಂಡಿಶಾಟ್ಯಾಯನಿಶ್ರುತಿಗಳೆರಡೂ ಹೊಂದಿಕೊಳ್ಳು ವವು.[2]

## ೧೭. ಗತೇರರ್ಥವತ್ತ್ವಾಧಿಕರಣ (ಸೂ. ೨೯-೩೦)

(ದೇವಯಾನಗತಿಯು ಎಲ್ಲಾ ವಿದ್ಯೆಗೂ ಹೊಂದುವದಿಲ್ಲ)

**ಗತೇರರ್ಥವತ್ತ್ವಮುಭಯಥಾಽನ್ಯಥಾ ಹಿ ವಿರೋಧಃ ॥ ೨೯ ॥**

೨೯. ಗತಿಗೆ ಅರ್ಥವತ್ತ್ವವು ಎರಡು ಬಗೆಯಿಂದ ಆಗುವದು ; ಏಕೆಂದರೆ ಬೇರೆಯಾದರೆ ವಿರೋಧವಾಗುತ್ತದೆ.

## ಪುಣ್ಯಪಾಪಹಾನವಿದ್ದಲ್ಲೆಲ್ಲ ಗತಿಯಿಲ್ಲ

(ಭಾಷ್ಯ)

೩೭೫. ಕ್ವಚಿತ್ ಪುಣ್ಯಪಾಪಹಾನಸಂನಿಧೌ ದೇವಯಾನಃ ಪನ್ಥಾಃ ಶ್ರೂಯತೇ ಕ್ವಚಿನ್ನ। ತತ್ರ ಸಂಶಯಃ। ಕಿಂ ಹಾನೌ ಅವಿಶೇಷೇಣ ದೇವ ಯಾನಃ ಪನ್ಥಾಃ ಸಂನಿಪತೇತ್ ಉತ ವಿಭಾಗೇನ, ಕ್ವಚಿತ್ ಸಂನಿಪತೇತ್ ಕ್ವಚಿನ್ನ ಇತಿ। ಯಥಾ ತಾವತ್ ಹಾನೌ ಅವಿಶೇಷೇಣೈವ ಉಪಾಯನಾನು ವೃತ್ತಿರುಕ್ತಾ, ಏವಂ ದೇವಯಾನಾನುವೃತ್ತಿರಪಿ ಭವಿತುಮರ್ಹತಿ ಇತಿ। ಅಸ್ಯಾಂ ಪ್ರಾಪ್ತೌ ಆಚಕ್ಷ್ಮಹೇ। ಗತೇರ್ದೇವಯಾನಸ್ಯ ಪಥಃ ಅರ್ಥವತ್ತ್ವಮ್ ಉಭ ಯಥಾ ವಿಭಾಗೇನ ಭವಿತುಮರ್ಹತಿ। ಕ್ವಚಿತ್ ಅರ್ಥವತೀ ಗತಿಃ ಕ್ವಚಿನ್ನ ಇತಿ, ನಾವಿಶೇಷೇಣ। ಅನ್ಯಥಾ ಹಿ ಅವಿಶೇಷೇಣೈವ ಏತಸ್ಯಾಂ ಗತೌ ಅಙ್ಗೀಕ್ರಿಯ ಮಾಣಾಯಾಂ ವಿರೋಧಃ ಸ್ಯಾತ್। "ಪುಣ್ಯಪಾಪೇ ವಿಧೂಯ ನಿರಞ್ಜನಃ ಪರ ಮಂ ಸಾಮ್ಯಮ್ ಉಪೈತಿ" (ಮುಂ. ೩-೧-೩) ಇತ್ಯಸ್ಯಾಂ ಶ್ರುತೌ ದೇಶಾ ನ್ತರಪ್ರಾಪಣೀ ಗತಿರ್ವಿರುಧ್ಯೇತ। ಕಥಂ ಹಿ ನಿರಞ್ಜನೋಽಗನ್ತಾ ದೇಶಾನ್ತರಂ ಗಚ್ಛೇತ್। ಗನ್ತವ್ಯಂ ಚ ಪರಮಂ ಸಾಮ್ಯಮ್ ನ ದೇಶಾನ್ತರಪ್ರಾಪ್ತ್ಯಾಯತ್ತಮ್ ಇತಿ ಆನರ್ಥಕ್ಯಮೇವ ಅತ್ರ ಗತೇರ್ಮನ್ಯಾಮಹೇ ॥

---

1. 'ಛನ್ದತಃ' ಎಂಬುದಕ್ಕೆ ದೇಹಪಾತವಾಗುವ ಮೊದಲೇ ಸಾಧಕನು ಸಾಧ ನಾನುಷ್ಠವನ್ನು ಪ್ರಯತ್ನಪೂರ್ವಕವಾಗಿ ಮಾಡುವದು ಸಾಧ್ಯ; ಆದರಿಂದ ಸುಕೃತದುಷ್ಕೃತ ಗಳೂ ಹೋಗಬಹುದು –ಎಂಬರ್ಥವನ್ನು ಹೇಳಿದಂತೆ ಆಯಿತು.

2. 'ಉಭಯಾವಿರೋಧ'ವೆಂದರೆ ಸಾಧನಾನುಷ್ಠಾನತತ್ಫಲವಾದ ಸುಕೃತದುಷ್ಕೃತ ಹಾನಿ –ಎಂಬಿವೆರಡೂ ವಿರೋಧವಿಲ್ಲದೆ ಹೊಂದಿಕೊಳ್ಳುವವು ಎಂಬರ್ಥವನ್ನೂ ತಾಂಡಿ ಶಾಟ್ಯಾಯನಿಶ್ರುತಿಗಳೆರಡೂ ವಿರೋಧವಿಲ್ಲದೆ ಹೊಂದಿಕೊಳ್ಳುವವು ಎಂಬರ್ಥವನ್ನೂ ಹೇಳಿದಂತೆ ಆಯಿತು.

(ಭಾಷ್ಯಾರ್ಥ)

ಪುಣ್ಯಪಾಪಗಳ ತ್ಯಾಗವನ್ನು ಹೇಳುವ (ವಾಕ್ಯ)ಸಂನಿಧಾನದಲ್ಲಿ ಕೆಲವು ಕಡೆ ದೇವಯಾನವನ್ನು ಹೇಳಿರುತ್ತದೆ; ಕೆಲವು ಕಡೆ ಹೇಳಿರುವದಿಲ್ಲ. ಅಲ್ಲಿ ಸಂಶಯವೇನೆಂದರೆ ಹಾನವನ್ನು (ಹೇಳು)ವಲ್ಲಿ (ಯಾವ) ವಿಶೇಷವೂ ಇಲ್ಲದೆ ದೇವಯಾನಮಾರ್ಗವನ್ನು ಸೇರಿಸಿಕೊಳ್ಳಬೇಕೆ, ಅಥವಾ ಕೆಲವು ಕಡೆ ಸೇರಿಸಬೇಕು, ಕೆಲವು ಕಡೆ ಸೇರಿಸಬಾರದು ಎಂದು ವಿಂಗಡಿಸಿ (ಸೇರಿಸಿಕೊಳ್ಳಬೇಕೆ) ?

ಮೊದಲನೆಯದಾಗಿ ಹಾನವನ್ನು (ಹೇಳಿರುವ ಕಡೆ)ಯಲ್ಲಿ ಉಪಾದಾನವನ್ನು ಯಾವ ವಿಶೇಷವೂ ಇಲ್ಲದೆ ಸೇರಿಸಿಕೊಳ್ಳಬೇಕೆಂದು ಹೇಗೆ ಹೇಳಲಾಯಿತೊ, ಹಾಗೆಯೆ ದೇವಯಾನವೂ ಅನುಸರಿಸಿಕೊಂಡು ಬರುವದೆಂದಾಗಲಿ ಎಂಬ ಪೂರ್ವಪಕ್ಷವು ಬಂದೊದಗಲಾಗಿ[1] (ಸಿದ್ಧಾಂತವನ್ನು) ಹೇಳುತ್ತೇವೆ. ಗತಿಗೆ, ಎಂದರೆ ದೇವಯಾನವೆಂಬ ಮಾರ್ಗಕ್ಕೆ ಅರ್ಥವತ್ತ್ವವು ಎರಡು ಬಗೆಯಿಂದ, ಎಂದರೆ ಕೆಲವು ಕಡೆ ಸಾರ್ಥಕವಾಗುತ್ತದೆ, ಕೆಲವು ಕಡೆ (ಆಗುವ)ದಿಲ್ಲ– ಎಂದು ವಿಭಾಗದಿಂದ (ಆಗುತ್ತದೆ, ಯಾವ) ವಿಶೇಷವೂ ಇಲ್ಲದೆ (ಎಲ್ಲೆಲ್ಲಿಯೂ) ಆಗುವದಿಲ್ಲ. ಏಕೆಂದರೆ ಹೀಗಿಲ್ಲದೆ ಇದ್ದರೆ, ಎಂದರೆ (ಯಾವ) ವಿಶೇಷವೂ ಇಲ್ಲದೆಯೇ ಈ ಗತಿಯನ್ನು ಅಂಗೀಕರಿಸುವದಾದರೆ ವಿರೋಧವಾಗುತ್ತದೆ. (ಹೇಗೆಂದರೆ) "ಪುಣ್ಯಪಾಪಗಳನ್ನು ಕೊಡವಿಹಾಕಿ ನಿರಂಜನನಾಗಿ ಪರಮಸಾಮ್ಯವನ್ನು ಹೊಂದುವನು" (ಮುಂ. ೩–೧–೩) ಎಂಬೀ ಶ್ರುತಿಯಲ್ಲಿ ದೇಶಾಂತರವನ್ನು ಪಡೆಯಿಸುವ ಗತಿಯು ವಿರುದ್ಧವಾಗುತ್ತದೆ. ನಿರಂಜನನಾದವನು, ಗಂತೃವಲ್ಲದವನು ಹೇಗೆತಾನೆ ದೇಶಾಂತರಕ್ಕೆ ಹೋದಾನು[2]? ಗಂತವ್ಯವಾಗಿರುವ ಪರಮಸಾಮ್ಯವೂ ಮತ್ತೊಂದು ದೇಶಾಂತರಪ್ರಾಪ್ತಿಗೆ ಅಧೀನವಾಗಿರುವದಿಲ್ಲವಾದ್ದರಿಂದಲೂ ಗತಿಯು (ಅಲ್ಲಿ) ಅನರ್ಥಕವೆಂದೇ ನಮ್ಮ ಮತವು.[3]

**ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ॥ ೩೦ ॥**

೩೦. (ಇದು) ಯುಕ್ತವಾಗಿದೆ; ಏಕೆಂದರೆ ತಲ್ಲಕ್ಷಣಾರ್ಥವು ಕಂಡುಬರುತ್ತಿದೆ. ಲೋಕದಂತೆಯೇ (ಇದು).

---

1. ಹಾನ್ಯಧಿಕರಣದ ದೃಷ್ಟಾಂತದಿಂದ ಇಲ್ಲಿಯೂ ಮಾರ್ಗದ ಉಪಸಂಹಾರವನ್ನು ಮಾಡಬೇಕೆಂದು ಪೂರ್ವಪಕ್ಷಿ ಭಾವಿಸಿರುತ್ತಾನೆ.

2. ಲಿಂಗದೇಹದ ಸಂಬಂಧವಿರುವವನು ಎಲ್ಲಿಗಾದರೂ ಹೋದಾನು, ಒಂದು ದೇಶಕ್ಕೆ ಹೋಗಿಯೇ ಪಡೆಯಬೇಕಾಗಿರುವದು ಏನಾದರೂ ಇದ್ದರೆ ಹೋಗಬಹುದು. ಮುಂಡಕಶ್ರುತಿಯಲ್ಲಿ ಹೇಳಿರುವ ಬ್ರಹ್ಮಪ್ರಾಪ್ತಿಯಲ್ಲಿ ಇವೆರಡೂ ಇಲ್ಲ. ಜೀವನು ಜ್ಞಾನದಿಂದ ಮತ್ತೊಂದರ ಸಂಬಂಧವೇ ಇಲ್ಲದೆ ಬ್ರಹ್ಮದ ಚೈತನ್ಯರೂಪವನ್ನು ಜ್ಞಾನದಿಂದಲೇ ಪಡೆದುಕೊಳ್ಳುತ್ತಾನೆ; ಅದು ನಿತ್ಯಪ್ರಾಪ್ತವಾದದ್ದು.

3. ಏಕೆಂದರೆ ಇದ್ದಲ್ಲಿಯೇ ಸಾಮ್ಯವನ್ನು ಪಡೆಯುವದಕ್ಕೆ ಅಡ್ಡಿಯಿಲ್ಲ.

# ಗತಿಯೋಗ್ಯವಾದ ಪ್ರಾಪ್ತಿಯಾದರೆ ಮಾತ್ರ ಗತಿ ಸಾರ್ಥಕ

(ಭಾಷ್ಯ)

೩೭೬. ಉಪಪನ್ನಶ್ಚಾಯಮ್ ಉಭಯಥಾಭಾವಃ ಕ್ವಚಿತ್ ಅರ್ಥವತೀ ಗತಿಃ ಕ್ವಚಿತ್ ನ ಇತಿ। ತಲ್ಲಕ್ಷಣಾರ್ಥೋಪಲಬ್ಧೇಃ। ಗತಿಕಾರಣಭೂತೋ ಹ್ಯರ್ಥಃ ಪರ್ಯಙ್ಕವಿದ್ಯಾದಿಷು ಸಗುಣೇಷು ಉಪಾಸನೇಷು ಉಪಲಭ್ಯತೇ। ತತ್ರ ಹಿ ಪರ್ಯಙ್ಕಾರೋಹಣಂ ಪರ್ಯಙ್ಕಸ್ಥೇನ ಬ್ರಹ್ಮಣಾ ಸಂವದನಂ ವಿಶಿಷ್ಟಗನ್ಧಾದಿಪ್ರಾಪ್ತಿಶ್ಚ ಇತ್ಯೇವಮಾದಿ ಬಹು ದೇಶಾನ್ತರಪ್ರಾಪ್ಯಾಯತ್ತಂ ಶ್ರೂಯತೇ ತತ್ರ ಅರ್ಥವತೀ ಗತಿಃ | ನ ಹಿ ಸಮ್ಯಗ್ದರ್ಶನೇ ತಲ್ಲಕ್ಷಣಾರ್ಥೋಪಲಬ್ಧಿರಸ್ತಿ। ನ ಹಿ ಆತ್ಮೈಕತ್ವದರ್ಶಿನಾಮ್ ಆಪ್ತಕಾಮಾನಾಮ್ ಇಹೈವ ದಗ್ಧಾಶೇಷಕ್ಲೇಶಬೀಜಾನಾಮ್ ಆರಬ್ಧಭೋಗಕರ್ಮಾಶಯಕ್ಷಪಣವ್ಯತಿರೇಕೇಣ ಅಪೇಕ್ಷಿತವ್ಯಂ ಕಿಂಚಿದಸ್ತಿ। ತತ್ರ ಅನರ್ಥಿಕಾ ಗತಿಃ। ಲೋಕವಚ್ಚೈಷ ವಿಭಾಗೋ ದ್ರಷ್ಟವ್ಯಃ। ಯಥಾ ಲೋಕೇ ಗ್ರಾಮಪ್ರಾಪ್ತೌ ದೇಶಾನ್ತರಪ್ರಾಪಣಃ ಪನ್ಥಾಃ ಅಪೇಕ್ಷ್ಯತೇ ನಾರೋಗ್ಯಪ್ರಾಪ್ತೌ, ಏವಮ್ ಇಹಾಪಿ ಇತಿ। ಭೂಯಶ್ಚ ಏನಂ ವಿಭಾಗಂ ಚತುರ್ಥಾಧ್ಯಾಯೇ ನಿಪುಣತರಮ್ ಉಪಪಾದಯಿಷ್ಯಾಮಃ ॥

(ಭಾಷ್ಯಾರ್ಥ)

ಕೆಲವು ಕಡೆಯಲ್ಲಿ ಗತಿಯು ಸಾರ್ಥಕ, ಕೆಲವು ಕಡೆಯಲ್ಲಿ ಅಲ್ಲ ಎಂಬೀ ವಿಭಾಗವು ಯುಕ್ತವೂ ಆಗಿದೆ.[1] (ಹೇಗೆಂದರೆ), ತಲ್ಲಕ್ಷಣಾರ್ಥದ ಉಪಲಬ್ಧಿಯಿರುವದರಿಂದ. ಗತಿಗೆ ಕಾರಣವಾಗಿರುವ ಅರ್ಥವು ಪರ್ಯಂಕವಿದ್ಯಾದಿ ಸಗುಣೋಪಾಸನೆಗಳಲ್ಲಿ ಕಂಡುಬರುತ್ತದೆ. (ಇದರ ವಿವರ): ಅಲ್ಲಿ ಪರ್ಯಂಕವನ್ನು ಏರುವದು, ಪರ್ಯಂಕದಲ್ಲಿರುವ ಬ್ರಹ್ಮನೊಡನೆ ಸಂವಾದ, ವಿಶಿಷ್ಟವಾದ ಗಂಧಾದಿಗಳನ್ನು ಪಡೆದುಕೊಳ್ಳುವದು —ಎಂಬಿವೇ ಮುಂತಾದ ದೇಶಾಂತರಪ್ರಾಪ್ತಿಗೇ ಅಧೀನವಾಗಿರುವ ಫಲವು ಶ್ರುತಿಯಲ್ಲಿರುತ್ತದೆ.[2] ಅಲ್ಲಿ ಗತಿಯು ಸಾರ್ಥಕವಾಗುತ್ತದೆ.

ಆದರೆ ಸಮ್ಯಗ್ದರ್ಶನದಲ್ಲಿ ತಲ್ಲಕ್ಷಣೆಯ ಉಪಲಬ್ಧಿಯಿರುವದಿಲ್ಲ. ಏಕೆಂದರೆ ಆತ್ಮೈಕತ್ವವನ್ನು ಕಂಡುಕೊಂಡಿರುವ ಆಪ್ತಕಾಮರಾದ, ಇಲ್ಲಿಯೇ ಎಲ್ಲಾ ಕ್ಲೇಶಬೀಜಗಳನ್ನೂ ಸುಟ್ಟುಹಾಕಿಕೊಂಡಿರುವ (ಜ್ಞಾನಿಗಳಿಗೆ) ಆರಬ್ಧ(ಕರ್ಮ

1. ಯಾವ ಧರ್ಮವೂ ಇಲ್ಲದವನಿಗೆ ಗತಿಯನ್ನು ಹೇಳುವದು ವಿರುದ್ಧವೆಂಬುದು ಮಾತ್ರವೇ ಅಲ್ಲ ; ಸಗುಣವಿದ್ಯೆಯಲ್ಲಿ ಸಾರ್ಥಕ್ಯಕ್ಕೆ ಬೇಕಾದ ಪ್ರಾಪ್ಯವಿಷಯಗಳಿವೆ ಎಂಬ ಯುಕ್ತಿಯೂ ಇದೆ ಎಂದರ್ಥ.

2. ಕೌ. ೧–೩ರಿಂದ ಅಧ್ಯಾಯಾಂತದವರೆಗಿನ ವರ್ಣನೆಯನ್ನು ನೋಡಿರಿ.

ಫಲದ) ಉಪಭೋಗಕರ್ಮಾಶಯವನ್ನು ಕ್ಷಯಗೊಳಿಸಿಕೊಳ್ಳುವದೆಂಬುದೊಂದನ್ನು ಬಿಟ್ಟು[1] ಮತ್ತೇನೂ ಬೇಕಾದದ್ದಿರುವದಿಲ್ಲ. (ಆದ್ದರಿಂದ) ಅಲ್ಲಿ ಗತಿಯು ನಿರರ್ಥಕವು.

ಈ ವಿಭಾಗವನ್ನು ಲೋಕದಂತೆ ತಿಳಿಯಬೇಕು. (ಹೇಗೆಂದರೆ) ಹೇಗೆ ಲೋಕದಲ್ಲಿ ಗ್ರಾಮಪ್ರಾಪ್ತಿಗೆ ದೇಶಾಂತರವನ್ನು ಪಡೆಯಿಸುವ ಮಾರ್ಗದ ಅಪೇಕ್ಷೆಯಿರುತ್ತದೆಯೋ ಆದರೆ ಆರೋಗ್ಯಪ್ರಾಪ್ತಿಗೆ ಇರುವದಿಲ್ಲವೋ (ಹಾಗೆಯೇ ಇಲ್ಲಿಯೂ ತಿಳಿಯಬೇಕು).[2] ಈ ವಿಭಾಗವನ್ನು ಮತ್ತೊಮ್ಮೆ ಇನ್ನೂ ಚೆನ್ನಾಗಿ ನಾಲ್ಕನೆಯ ಅಧ್ಯಾಯದಲ್ಲಿ ಹೊಂದಿಸಿ ತೋರಿಸುವೆವು.[3]

## ೧೮. ಅನಿಯಮಾಧಿಕರಣ

(ಸಗುಣವಿದ್ಯೆಗಳಲ್ಲಿ ಕೆಲವಕ್ಕೇ ಗತಿಯ ನಿಯಮವೆಂಬುದಿಲ್ಲ)

**ಅನಿಯಮಃ ಸರ್ವಾಸಾಮವಿರೋಧಃ ಶಬ್ದಾನುಮಾನಾಭ್ಯಾಮ್ ॥೩೧॥**

೩೧. ಯಾವ ವಿದ್ಯೆಗಳಿಗೂ ನಿಯಮವೆಂಬುದಿಲ್ಲ; ವಿರೋಧವಿಲ್ಲ; ಏಕೆಂದರೆ ಶಬ್ದಾನುಮಾನಗಳಿವೆ.

### ಪೂರ್ವಪಕ್ಷ:

### ಸಗುಣವಿದ್ಯೆಗಳಲ್ಲಿಯೂ ಕೆಲವಕ್ಕೆ ಮಾತ್ರ ದೇವಯಾನ

(ಭಾಷ್ಯ)

೩೭೭. ಸಗುಣಾಸು ವಿದ್ಯಾಸು ಗತಿರರ್ಥವತೀ, ನ ನಿರ್ಗುಣಾಯಾಂ ಪರಮಾತ್ಮವಿದ್ಯಾಯಾಮ್ ಇತ್ಯುಕ್ತಮ್ । ಸಗುಣಾಸ್ವಪಿ ವಿದ್ಯಾಸು ಕಾಸುಚಿದ್ ಗತಿಃ ಶ್ರೂಯತೇ ಯಥಾ ಪರ್ಯಙ್ಕವಿದ್ಯಾಯಾಮ್, ಉಪಕೋಸಲವಿದ್ಯಾಯಾಮ್, ಪಞ್ಚಾಗ್ನಿವಿದ್ಯಾಯಾಮ್, ದಹರವಿದ್ಯಾಯಾಮ್ ಇತಿ । ನಾನ್ಯಾಸು

---

1. ಇದೂ ವ್ಯವಹಾರದೃಷ್ಟಿಯಿಂದ ಹೇಳಿದ್ದು; ಏಕೆಂದರೆ ಶರೀರವೇ ಮಿಥ್ಯಾಭಿಮಾನದಿಂದಾಗಿರುವದರಿಂದ ಪ್ರಾರಬ್ಧಕರ್ಮಭೋಗವೂ ಆವಿದ್ಯಕವೆಂಬುದು ಜ್ಞಾನಿಯ ದೃಷ್ಟಿ.

2. ನಿರ್ಗುಣಬ್ರಹ್ಮಪ್ರಾಪ್ತಿಗೆ ಗತಿಯು ಬೇಡ, ಸಗುಣಬ್ರಹ್ಮಪ್ರಾಪ್ತಿಗೆ ಬೇಕು–ಎಂದು ಪ್ರಾಪ್ಯವಸ್ತುಸ್ವಭಾವದಿಂದ ನಿರ್ಣಯಿಸಬೇಕು ಎಂದು ಭಾವ.

3. ಇಲ್ಲಿ ಸಾಧನದೃಷ್ಟಿಯಿಂದ ಗತಿಯನ್ನು ವಿಚಾರಿಸಿದೆ, ಅಲ್ಲಿ ಫಲದೃಷ್ಟಿಯಿಂದ ವಿಚಾರಿಸಲಾಗುತ್ತದೆ. ಭಾಷ್ಯಕಾರರು ಪೂರ್ಣವಿಚಾರವನ್ನು ಅಲ್ಲಿಯೇ ಮಾಡಿರುವದರಿಂದ 'ನಿಪುಣತರವಾಗಿ ಉಪಪಾದನೆಮಾಡುವೆವು' ಎಂದಿದಾರೆ. ೪–೩–೭ರಿಂದ ೧೪ನೆಯ ಸೂತ್ರಗಳವರೆಗಿನ ಭಾಷ್ಯವನ್ನು ನೋಡಿರಿ.

ಯಥಾ ಮಧುವಿದ್ಯಾಯಾಮ್, ಶಾಣ್ಡಿಲ್ಯವಿದ್ಯಾಯಾಮ್, ಷೋಡಶಕಲವಿದ್ಯಾಯಾಮ್, ವೈಶ್ವಾನರವಿದ್ಯಾಯಾಮ್ ಇತಿ। ತತ್ರ ಸಂಶಯಃ। ಕಿಂ ಯಾಸ್ವೇವ ಏಷಾ ಗತಿಃ ಶ್ರೂಯತೇ ತಾಸ್ವೇವ ನಿಯಮ್ಯೇತ ಉತ ಅನಿಯಮೇನ ಸರ್ವಾಭಿರೇವಂಜಾತೀಯಕಾಭಿರ್ವಿದ್ಯಾಭಿಃ ಅಭಿಸಂಬಧ್ಯೇತ ಇತಿ? ಕಿಂ ತಾವತ್ ಪ್ರಾಪ್ತಮ್? ನಿಯಮ ಇತಿ। ಯತ್ರೈವ ಶ್ರೂಯತೇ ತತ್ರೈವ ಭವಿತುಮರ್ಹತಿ। ಪ್ರಕರಣಸ್ಯ ನಿಯಾಮಕತ್ವಾತ್। ಯದಿ ಅನ್ಯತ್ರ ಶ್ರೂಯಮಾಣಾಪಿ ಗತಿರ್ವಿದ್ಯಾನ್ತರಂ ಗಚ್ಛೇತ್ ಶ್ರುತೀನಾಂ ಪ್ರಾಮಾಣ್ಯಂ ಹೀಯೇತ। ಸರ್ವಸ್ಯ ಸರ್ವಾರ್ಥತ್ವಪ್ರಸಙ್ಗಾತ್। ಅಪಿ ಚ ಅರ್ಚಿರಾದಿಕಾ ಏಕೈವ ಗತಿಃ ಉಪಕೋಸಲವಿದ್ಯಾಯಾಂ ಪಞ್ಚಾಗ್ನಿವಿದ್ಯಾಯಾಂ ಚ ತುಲ್ಯವತ್ ಪಠ್ಯತೇ। ತತ್ಸರ್ವಾರ್ಥತ್ವೇ ಅನರ್ಥಕಂ ಪುನರ್ವಚನಂ ಸ್ಯಾತ್। ತಸ್ಮಾತ್ ನಿಯಮಃ ಇತಿ ॥

(ಭಾಷ್ಯಾರ್ಥ)

ಸಗುಣವಿದ್ಯೆಗಳಲ್ಲಿ ಗತಿಯು ಸಾರ್ಥಕವಾಗಿದೆ, ನಿರ್ಗುಣವಾದ ಪರಮಾತ್ಮವಿದ್ಯೆಯುಲ್ಲಿ (ಸಾರ್ಥಕ) ವಲ್ಲ ಎಂದು ಹೇಳಿದೆಯಷ್ಟೆ. ಸಗುಣವಿದ್ಯೆಗಳಲ್ಲಿಯೂ ಕೆಲವು (ವಿದ್ಯೆಗಳಲ್ಲಿ) ಗತಿಯನ್ನು ಶ್ರುತಿಯಲ್ಲಿ ಹೇಳಿರುತ್ತದೆ. ಉದಾಹರಣೆಗೆ ಪರ್ಯಂಕವಿದ್ಯೆಯಲ್ಲಿ[1], ಉಪಕೋಸಲವಿದ್ಯೆಯಲ್ಲಿ[2], ಪಂಚಾಗ್ನಿವಿದ್ಯೆಯಲ್ಲಿ[3], ದಹರವಿದ್ಯೆಯಲ್ಲಿ[4], ಇತ್ಯಾದಿ. (ಆದರೆ) ಮಿಕ್ಕ (ವಿದ್ಯೆ)ಗಳಲ್ಲಿ ಹೇಳಿಲ್ಲ; ಉದಾಹರಣೆಗೆ ಮಧುವಿದ್ಯೆಯಲ್ಲಿ[5], ಶಾಂಡಿಲ್ಯವಿದ್ಯೆಯಲ್ಲಿ[6], ಷೋಡಶಕಲವಿದ್ಯೆಯಲ್ಲಿ[7], ವೈಶ್ವಾನರವಿದ್ಯೆಯಲ್ಲಿ[8]. ಇಲ್ಲಿ ಸಂಶಯವೇನೆಂದರೆ ಯಾವ ವಿದ್ಯೆಗಳಲ್ಲಿ ಈ ಗತಿಯನ್ನು ಶ್ರುತಿ ಹೇಳಿದೆಯೋ ಅವುಗಳಲ್ಲಿ ಮಾತ್ರ (ಉಂಟೆಂದು) ನಿಯಮಮಾಡಬೇಕೊ, ಅಥವಾ (ಯಾವ) ನಿಯಮವೂ ಇಲ್ಲದೆ ಈ ಜಾತಿಯ ಎಲ್ಲಾ ವಿದ್ಯೆಗಳಿಗೂ ಇದನ್ನು ಸಂಬಂಧಿಸಿಕೊಳ್ಳಬೇಕೊ?

1. ಕೌ. ೧–೩ನ್ನು ನೋಡಿ. 2. ಉಪಕೋಸಲನಿಗೆ ಸತ್ಯಕಾಮಜಾಬಾಲನು ಹೇಳಿದ ಅಕ್ಷಿಪುರುಷವಿದ್ಯೆ; ಛಾಂ. ೪–೧೧ರಿಂದ ೧೫ನೆಯ ಖಂಡಗಳು.

3. ಶ್ವೇತಕೇತುವಿಗೆ ಜೈವಲಿಯು ಹೇಳಿದ್ದು; ಇದು ಬ್ರಹ್ಮವಿದ್ಯೆಯಲ್ಲದಿದ್ದರೂ ಇವನ್ನು ಉಪಚಾರಕ್ಕೆ ಆತ್ಮವಿದ್ಯೆ ಎಂದು ಕರೆಯುತ್ತಾರೆ. ಛಾಂ. ೫–೩ನ್ನು ನೋಡಿ.

4. ಛಾ. ೮ರಲ್ಲಿ ಹೇಳಿರುವ ಉಪಾಸನೆ.

5. ಛಾಂ. ೩ನೆಯ ಅಧ್ಯಾಯದಲ್ಲಿ ಹೇಳಿರುವ ವಿದ್ಯೆ.

6. ಛಾಂ. ೩–೧೪ರಲ್ಲಿ ತಿಳಿಸಿರುವ ವಿದ್ಯೆ.

7. ಹಾರಿದ್ರುಮತಗೌತಮನು ಸತ್ಯಕಾಮಜಾಬಾಲನಿಗೆ ಹೇಳಿದ ವಿದ್ಯೆ. ೪–೪ನ್ನು ನೋಡಿ.

8. ಪ್ರಾಚೀನಶಾಲಾದಿಗಳಿಗೆ ಅಶ್ವಪತಿ ಹೇಳಿದ್ದು. ಛಾಂ. ೫–೧೧ನ್ನು ನೋಡಿ.

(ಇಲ್ಲಿ) ಮೊದಲು ಬಂದೊದಗುವ ಪೂರ್ವಪಕ್ಷವು ಯಾವದೆಂದರೆ, ನಿಯಮ(ವಿರಬೇಕು). ಎಲ್ಲಿ ಶ್ರುತಿಯಿದೆಯೋ ಅಲ್ಲಿಯೇ (ದೇವಯಾನಗತಿ) ಯಿರಬೇಕು. ಏಕೆಂದರೆ ಪ್ರಕರಣವು (ವಿಷಯಕ್ಕೆ) ನಿಯಾಮಕವಾಗಿರುತ್ತದೆ. ಒಂದು ಕಡೆ ಶ್ರುತವಾಗಿರುವ ಗತಿಯೂ ಮತ್ತೊಂದು ವಿದ್ಯೆಗೆ ಹೋಗಿ ಸೇರಿ ಕೊಳ್ಳುವದಾದರೆ ಶ್ರುತ್ಯಾದಿಗಳಿಗೆ ಪ್ರಾಮಾಣ್ಯವು ಇಲ್ಲದೆಹೋಗುವದು ; ಏಕೆಂದರೆ (ಆಗ) ಎಲ್ಲಾ ಕಡೆಯಲ್ಲಿಯೂ ಎಲ್ಲಾ ಅರ್ಥಗಳೂ (ಇವೆ) ಎಂದಾಗು ವದು.[1] ಇದಲ್ಲದೆ ಅರ್ಚಿರಾದಿಕವಾದ ಒಂದೇ ಗತಿಯನ್ನು ಉಪಕೋಸಲ ವಿದ್ಯೆಯಲ್ಲಿಯೂ ಪಂಚಾಗ್ನಿವಿದ್ಯೆಯಲ್ಲಿಯೂ ಸಮಾನವಾಗಿ ಪಠಿಸಿರುತ್ತದೆ. ಆ ಪುನರ್ವಚನವು ಎಲ್ಲಾ (ವಿದ್ಯೆಗಳಲ್ಲಿಯೂ ಈ) ಅರ್ಥವು ಇದೆಯೆಂದಾದರೆ ವ್ಯರ್ಥವಾಗುವದು.[2] ಆದ್ದರಿಂದ (ಗತಿಯನ್ನು) ನಿಯಮ(ವಾಗಿಟ್ಟುಕೊಳ್ಳ ಬೇಕು).

## ಸಿದ್ಧಾಂತ :

## ಸಗುಣವಿದ್ಯೆಗಳಿಗೆಲ್ಲ ಗತಿಯು ಅನ್ವಯಿಸುತ್ತದೆ

( ಭಾಷ್ಯ )

೩೭೮. ಏವಂ ಪ್ರಾಪ್ತೇ ಪಠತಿ 'ಅನಿಯಮಃ' ಇತಿ। ಸರ್ವಾಸಾಮೇವ ಅಭ್ಯುದಯಪ್ರಾಪ್ತಿಫಲಾನಾಂ ಸಗುಣಾನಾಂ ವಿದ್ಯಾನಾಮ್ ಅವಿಶೇಷೇಣ ಏಷಾ ದೇವಯಾನಾಖ್ಯಾ ಗತಿರ್ಭವಿತುಮರ್ಹತಿ। ನನು ಅನಿಯಮಾಭ್ಯುಪಗಮೇ ಪ್ರಕರಣವಿರೋಧ ಉಕ್ತಃ। ನೈಷೋಽಸ್ತಿ ವಿರೋಧಃ। ಶಬ್ದಾನುಮಾನಾಭ್ಯಾಮ್। ಶ್ರುತಿಸ್ಮೃತಿಭ್ಯಾಮ್ ಇತ್ಯರ್ಥಃ। ತಥಾ ಹಿ ಶ್ರುತಿಃ "ತದ್ಯ ಇತ್ಥಂ ವಿದುಃ" (ಛಾಂ. ೫-೧೦-೧) ಇತಿ ಪಞ್ಚಾಗ್ನಿವಿದ್ಯಾವತಾಂ ದೇವಯಾನಂ ಪನ್ಥಾನಮ್ ಅವತಾರಯನ್ತೀ "ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ" (ಛಾಂ. ೫-೧೦-೧) ಇತಿ ವಿದ್ಯಾನ್ತರಶೀಲಿನಾಮಪಿ ಪಞ್ಚಾಗ್ನಿವಿದ್ಯಾವದ್ಭಿಃ ಸಮಾನಮಾರ್ಗತಾಂ ಗಮಯತಿ। ಕಥಂ ಪುನರವಗಮ್ಯತೇ ವಿದ್ಯಾನ್ತರಶೀಲಿ ನಾಮ್ ಇಯಂ ಗತಿಃ ಇತಿ ? ನನು ಶ್ರದ್ಧಾತಪಃಪರಾಯಣಾನಾಮೇವ ಸ್ಯಾತ್ ತನ್ಮಾತ್ರಶ್ರವಣಾತ್। ನೈಷ ದೋಷಃ। ನ ಹಿ ಕೇವಲಾಭ್ಯಾಂ ಶ್ರದ್ಧಾ

1. ಯಾವ ಪ್ರಕರಣದಲ್ಲಿದೆಯೋ ಅದಕ್ಕೆ ಮಾತ್ರ ಧರ್ಮವನ್ನು ಹೊಂದಿಸದೆ ಇದ್ದರೆ ಪ್ರತಿಯೊಂದು ಕರ್ಮಕ್ಕೂ ಮಿಕ್ಕ ಕರ್ಮಗಳ ಧರ್ಮಗಳನ್ನೆಲ್ಲ ಸೇರಿಸಬೇಕೆಂದಾಗು ವದು, ಅದು ಅಸಾಧ್ಯವೂ ಆಗಿದೆ. ಮತ್ತು ಶ್ರುತಿಲಿಂಗಾದಿಗಳಿಂದ ನಿಯಮಿಸಬೇಕಾದ ದ್ದೇನೂ ಇಲ್ಲದ್ದರಿಂದ ಅವು ಪ್ರಮಾಣವೇ ಆಗದೆಹೋಗುವವು.

2. ಉಪಸಂಹಾರದಿಂದಲೇ ಎಲ್ಲಾ ವಿದ್ಯೆಗಳಿಗೂ ದೇವಯಾನಮಾರ್ಗವು ಸಿದ್ಧ ವಾಗುವದಾದರೆ ಪುನರ್ವಚನವೇತಕ್ಕೆ ?

ತಪೋಭ್ಯಾಮ್ ಅನ್ತರೇಣ ವಿದ್ಯಾಬಲಮ್ ಏಷಾ ಗತಿರ್ಲಭ್ಯತೇ। "ವಿದ್ಯಯಾ ತದಾರೋಹನ್ತಿ ಯತ್ರ ಕಾಮಾಃ ಪರಾಗತಾಃ । ನ ತತ್ರ ದಕ್ಷಿಣಾ ಯನ್ತಿ ನಾವಿದ್ವಾಂಸಸ್ತಪಸ್ವಿನಃ" (ಶತ. ಬ್ರಾ. ?) ಇತಿ ಶ್ರುತ್ಯನ್ತರಾತ್। ತಸ್ಮಾತ್ ಇಹ ಶ್ರದ್ಧಾತಪೋಭ್ಯಾಂ ವಿದ್ಯಾನ್ತರೋಪಲಕ್ಷಣಮ್। ವಾಜಸನೇಯಿನಸ್ತು ಪಞ್ಚಾಗ್ನಿವಿದ್ಯಾಧಿಕಾರೇ ಅಧೀಯತೇ "ಯ ಏವಮೇತದ್ವಿದುರ್ಯೇ ಚಾಮೀ ಅರಣ್ಯೇ ಶ್ರದ್ಧಾಂ ಸತ್ಯಮುಪಾಸತೇ" (ಬೃ. ೬–೨–೧೫) ಇತಿ। ತತ್ರ ಶ್ರದ್ಧಾವನ್ತೋ ಯೇ ಸತ್ಯಂ ಬ್ರಹ್ಮ ಉಪಾಸತೇ ಇತಿ ವ್ಯಾಖ್ಯೇಯಮ್। ಸತ್ಯಶಬ್ದಸ್ಯ ಬ್ರಹ್ಮಣಿ ಅಸಕೃತ್ ಪ್ರಯುಕ್ತತ್ವಾತ್। ಪಞ್ಚಾಗ್ನಿವಿದ್ಯಾವಿದಾಂ ಚ ಇತ್ಥಂವಿತ್ತಯೈವ ಉಪಾತ್ತತ್ವಾತ್ ವಿದ್ಯಾನ್ತರಪರಾಯಣಾನಾಮೇವ ಏತದುಪಾದಾನಂ ನ್ಯಾಯ್ಯಮ್। "ಅಥ ಯ ಏತೌ ಪನ್ಥಾನೌ ನ ವಿದುಸ್ತೇ ಕೀಟಾಃ ಪತಙ್ಗಾ ಯದಿದಂ ದನ್ದಶೂಕಮ್" (ಬೃ. ೬–೨–೧೬) ಇತಿ ಚ ಮಾರ್ಗದ್ವಯಭ್ರಷ್ಟಾನಾಂ ಕಷ್ಟಾಮ್ ಅಧೋಗತಿಂ ಗಮಯನ್ತೀ ಶ್ರುತಿಃ ದೇವಯಾನಪಿತೃಯಾಣಯೋರೇವ ಏನಾನ್ ಅನ್ತರ್ಭಾವಯತಿ । ತತ್ರಾಪಿ ವಿದ್ಯಾವಿಶೇಷಾತ್ ಏಷಾಂ ದೇವಯಾನಪ್ರತಿಪತ್ತಿಃ। ಸ್ಮೃತಿರಪಿ "ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ। ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ" (ಭ. ಗೀ. ೮–೨೬) ಇತಿ। ಯತ್ ಪುನರ್ದೇವಯಾನಸ್ಯ ಪಥೋ ದ್ವಿರಾಮ್ನಾನಮ್ ಉಪಕೋಸಲವಿದ್ಯಾಯಾಂ ಪಞ್ಚಾಗ್ನಿವಿದ್ಯಾಯಾಂ ಚ ತದುಭಯತ್ರಾಪಿ ಅನುಚಿನ್ತನಾರ್ಥಮ್। ತಸ್ಮಾತ್ ಅನಿಯಮಃ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲು 'ಅನಿಯಮಃ' (ನಿಯಮವಿಲ್ಲ) ಎಂದು (ಸೂತ್ರಕಾರರು) ಪಠಿಸಿರುತ್ತಾರೆ. ಅಭ್ಯುದಯಪ್ರಾಪ್ತಿ ಎಂಬ ಫಲವುಳ್ಳ ಎಲ್ಲಾ ಸಗುಣವಿದ್ಯೆಗಳಿಗೂ (ಯಾವ) ವಿಶೇಷವೂ ಇಲ್ಲದೆ ಈ ದೇವಯಾನವೆಂಬ ಗತಿಯು ಆಗಬೇಕು.

(ಆಕ್ಷೇಪ) :– ಅನಿಯಮವನ್ನೊಪ್ಪಿದರೆ ಪ್ರಕರಣಕ್ಕೆ ವಿರೋಧವಾಗುವದೆಂದು ಹೇಳಿದ್ದೆವಲ್ಲ !

(ಪರಿಹಾರ) :– ಈ ವಿರೋಧವೇನೂ ಇಲ್ಲ. ಏಕೆಂದರೆ 'ಶಬ್ದಾನುಮಾನಗಳಿವೆ' ; ಶ್ರುತಿಸ್ಮೃತಿಗಳಿವೆ ಎಂದರ್ಥ. ಹೇಗೆಂದರೆ ಶ್ರುತಿಯು "ಅವರಲ್ಲಿ ಯಾರು ಹೀಗೆಂದು ಅರಿತಿರುವರೋ" (ಛಾ. ೫–೧೦–೧) ಎಂದು ಪಂಚಾಗ್ನಿವಿದ್ಯೆಯವರಿಗೆ ದೇವಯಾನಮಾರ್ಗವನ್ನು ಹೇಳುವದಕ್ಕೆ ಪ್ರಾರಂಭಿಸಿ "ಮತ್ತು ಯಾರುಯಾರು ಶ್ರದ್ಧಾ, ತಪಸ್ಸು –ಎಂಬೀ ಪ್ರಕಾರವಾಗಿ ಉಪಾಸನೆಮಾಡುತ್ತಾರೋ ಇವರು...." (ಛಾಂ. ೫–೧೦–೧) ಎಂದು ವಿದ್ಯಾಂತರವನ್ನು

ಅನುಷ್ಠಾನಮಾಡುವವರಿಗೂ ಪಂಚಾಗ್ನಿವಿದ್ಯೆಯನ್ನು ಬಲ್ಲವರಿಗಾಗುವ ಸಮಾನಮಾರ್ಗವನ್ನು ತಿಳಿಸುತ್ತದೆ[1].

(ಆಕ್ಷೇಪ) :– ಈ ಗತಿಯನ್ನು ವಿದ್ಯಾಂತರವನ್ನು ಅನುಷ್ಠಾನಮಾಡುವವರಿಗೆ (ಹೇಳಿದೆ) ಎಂದು ಹೇಗೆ ಗೊತ್ತು ? ಇದು ಶ್ರದ್ಧಾತಪಸ್ಸುಗಳ ತತ್ಪರರಾಗಿರುವವರಿಗೆ ಮಾತ್ರವೇ ಆದೀತು, ಏಕೆಂದರೆ ಅಷ್ಟುಮಾತ್ರವೇ (ಇಲ್ಲಿ) ಶ್ರುತಿಯಲ್ಲಿದೆ. ಅಲ್ಲವೆ ?

(ಪರಿಹಾರ) :– ಇದೇನೂ ದೋಷವಲ್ಲ. ಬರಿಯ ಶ್ರದ್ಧಾತಪಸ್ಸುಗಳಿಂದ ವಿದ್ಯಾಬಲವಿಲ್ಲದೆಯೇ ಈ ಗತಿಯು ಸಿಕ್ಕಲೇ ಆರದು. ಏಕೆಂದರೆ "ಎಲ್ಲಿ ಕಾಮಗಳೆಲ್ಲವೂ ಹೋಗಿಬಿಡುವವೋ ಆ (ಸ್ಥಾನವನ್ನು) ವಿದ್ಯೆಯಿಂದ ಏರುತ್ತಾರೆ; ಅಲ್ಲಿಗೆ ದಕ್ಷಿಣ(ಮಾರ್ಗದವರು) ಹೋಗುವದಿಲ್ಲ. ಉಪಾಸಕರಲ್ಲದ ತಪಸ್ವಿಗಳೂ ಹೋಗುವದಿಲ್ಲ" (ಶತ. ಬ್ರಾ. ?) ಎಂದು ಶ್ರುತಿಯಿರುತ್ತದೆ. ಆದ್ದರಿಂದ ಇಲ್ಲಿ ಶ್ರದ್ಧಾತಪಸ್ಸುಗಳನ್ನು ವಿದ್ಯಾಂತರಕ್ಕೆ ಉಪಲಕ್ಷಣವಾಗಿ ಹೇಳಿದೆ (ಎನ್ನಬೇಕು). ವಾಜಸನೇಯಿಶಾಖೆಯವರಾದರೋ ಪಂಚಾಗ್ನಿವಿದ್ಯಾಪ್ರಕರಣದಲ್ಲಿ "ಯಾರು ಹೀಗೆ ಇದನ್ನು ತಿಳಿದಿರುವರೋ ಮತ್ತು ಅರಣ್ಯದಲ್ಲಿ ಶ್ರದ್ಧೆಯನ್ನೂ ಸತ್ಯವನ್ನೂ ಯಾರುಯಾರು ಉಪಾಸನೆಮಾಡುತ್ತಿರುವರೋ" (ಬೃ. ೬–೨–೧೫) ಎಂದು ಅಧ್ಯಯನಮಾಡುತ್ತಾರೆ. ಅಲ್ಲಿ ಶ್ರದ್ಧಾಲುಗಳಾಗಿ ಸತ್ಯವೆಂಬ ಬ್ರಹ್ಮವನ್ನು ಉಪಾಸನೆಮಾಡುತ್ತಾರಲ್ಲ, ಅವರು– ಎಂದು ವ್ಯಾಖ್ಯಾನಮಾಡಬೇಕು. ಏಕೆಂದರೆ ಸತ್ಯಶಬ್ದವು ಬ್ರಹ್ಮದಲ್ಲಿ ಅನೇಕ ಸಲ ಪ್ರಯುಕ್ತವಾಗಿರುತ್ತದೆ.[2] ಪಂಚಾಗ್ನಿವಿದ್ಯೆಯನ್ನು ಬಲ್ಲವರನ್ನು ಹೀಗೆ ತಿಳಿದಿರುವವರು ಎಂಬ (ಶಬ್ದ)ದಿಂದಲೇ ತೆಗೆದುಕೊಂಡಿರುವದರಿಂದ ವಿದ್ಯಾಂತರದಲ್ಲಿ ನಿರತರಾದವರನ್ನೇ ಈ (ಶಬ್ದದಿಂದ) ತೆಗೆದುಕೊಂಡಿದೆ ಎಂಬುದೇ ಯುಕ್ತ. ಇದಲ್ಲದೆ "ಇನ್ನು ಈ ಮಾರ್ಗಗಳೆರಡನ್ನೂ ಯಾರು ಅರಿಯರೋ, ಅವರು ಹುಳುಗಳು, ಜಿಟ್ಟೆಗಳು, ಈ ಹರಿದಾಡುವ (ಹಾವು)" (ಬೃ. ೬–೨–೧೬) ಎಂದು ಮಾರ್ಗದ್ವಯವೂ ತಪ್ಪಿದವರಿಗೆ ಕಷ್ಟವಾದ ಕೀಳುಗತಿಯನ್ನು ತಿಳಿಸುವದರಿಂದ ಶ್ರುತಿಯು ಇವರನ್ನು ದೇವಯಾನಪಿತೃಯಾಣಗಳೊಳಗೇ ಸೇರಿಸಿದೆ ಎಂದಾಗುತ್ತದೆ.[3] ಅದರಲ್ಲಿಯೂ ಒಂದಾ

---

1. ವಾಕ್ಯದಲ್ಲಿ ಗತಿಯು ಸಾರ್ವತ್ರಿಕವಾಗಿರುವದರಿಂದ ಪ್ರಕರಣದುರ್ಬಲ ಎಂದು ಭಾವ.

2. ಹಿಂದೆ ಉಪಲಕ್ಷಣದಿಂದ ವಿದ್ಯಾಂತರದಲ್ಲಿ ನಿರತರಾದವರನ್ನು ಹೇಳಿತ್ತು ; ಇಲ್ಲಿ ಸತ್ಯವೆಂಬ ಶಬ್ದದಿಂದ ಬ್ರಹ್ಮವನ್ನೇ ಹೇಳಿರುವದರಿಂದಲೂ ಸತ್ಯಶಬ್ದವು 'ಸತ್ಯಂ ಜ್ಞಾನಮನನ್ತಮ್', 'ತತ್ಸತ್ಯಮ್' 'ಸತ್ಯಸ್ಯ ಸತ್ಯಮ್' ಮುಂತಾದವುಗಳಲ್ಲಿ ಬ್ರಹ್ಮಪರವಾಗಿ ಕಂಡಿರುವದರಿಂದಲೂ ವಿದ್ಯಾಂತರನಿರತರನ್ನೇ ವಾಜಸನೇಯಿಶ್ರುತಿ ಹೇಳುವದೆಂತ ತಿಳಿಸಿದೆ.

3. ಇದು ಲಿಂಗವು. ಮಾರ್ಗದ್ವಯಕ್ಕಿಂತ ಬೇರೆಯಾದವರನ್ನು ಈ ವಾಕ್ಯದಲ್ಲಿ ಹೇಳಿರುವದರಿಂದ 'ಯೇ ಚೇಮೇಽರಣ್ಯೇ' ಎಂಬಲ್ಲಿರುವದನ್ನು ಮಾರ್ಗದ್ವಯದಲ್ಲಿಯೇ ಸೇರಿಸಿಕೊಂಡಿದೆ ಎಂದಾಗುವದು ಎಂದು ಅಭಿಪ್ರಾಯ.

ನೊಂದು ವಿದ್ಯೆಯಿಂದ ಇವರಿಗೆ ದೇವಯಾನಪ್ರಾಪ್ತಿ (ಎಂದಾಗುತ್ತದೆ)[1] ಸ್ಮೃತಿಯೂ "ಶುಕ್ಲಕೃಷ್ಣಗಳೆಂಬ ಈ ಎರಡೂ ಗತಿಗಳೂ ಜಗತ್ತಿಗೆ ಶಾಶ್ವತವಾಗಿರುತ್ತವೆ; ಅವುಗಳಲ್ಲೊಂದರಿಂದ ಅನಾವೃತ್ತಿಯನ್ನು ಹೊಂದುತ್ತಾನೆ; ಮತ್ತೊಂದರಿಂದ ಹಿಂದಕ್ಕೆ ತೆರಳುತ್ತಾನೆ" (ಭ. ಗೀ. ೮–೨೬) ಎಂದು (ಹೇಳುತ್ತದೆ).

ಇನ್ನು ದೇವಯಾನಮಾರ್ಗವನ್ನು ಎರಡು ಸಲ ಉಪಕೋಸಲವಿದ್ಯೆಯಲ್ಲಿಯೂ ಪಂಚಾಗ್ನಿವಿದ್ಯೆಯಲ್ಲಿಯೂ ಹೇಳಿದೆಯಲ್ಲ ಅದೂ ಅನುಚಿಂತನೆಗಾಗಿ (ಹೇಳಿದ್ದು)[2]. ಆದ್ದರಿಂದ ಮಾರ್ಗವು ಇಂಥ ವಿದ್ಯೆಗಳಿಗೇ ಎಂಬ ನಿಯಮವಿಲ್ಲ.

## ೧೯. ಯಾವದಧಿಕಾರಾಧಿಕರಣ

(ಆಧಿಕಾರಿಕಪುರುಷರಿಗೆ ಅಧಿಕಾರಸಮಾಪ್ತಿಯಾಗುತ್ತಲೂ ಮೋಕ್ಷ)

**ಯಾವದಧಿಕಾರಿಕಮವಸ್ಥಿತಿರಾಧಿಕಾರಿಕಾಣಾಮ್ ॥ ೩೨ ॥**

೩೨. ಆಧಿಕಾರಕ(ಪುರುಷ)ರಿಗೆ ಅಧಿಕಾರವಿರುವವರೆಗೂ ಅವಸ್ಥಿತಿಯಿರುತ್ತದೆ.

## ಜ್ಞಾನಿಗೆ ಮುಕ್ತಿಯು ಆಗುವದೆ? ಎಂಬ ಸಂಶಯ

(ಭಾಷ್ಯ)

೩೭೯. ವಿದುಷೋ ವರ್ತಮಾನದೇಹಪಾತಾನನ್ತರಂ ದೇಹಾನ್ತರಮ್ ಉತ್ಪದ್ಯತೇ ನ ವಾ ಇತಿ ಚಿನ್ತ್ಯತೇ। ನನು ವಿದ್ಯಾಯಾಃ ಸಾಧನಭೂತಾಯಾಃ ಸಂಪತ್ತೌ ಕೈವಲ್ಯನಿರ್ವೃತ್ತಿಃ ಸ್ಯಾತ್ ನ ವಾ ಇತಿ ನೇಯಂ ಚಿನ್ತಾ ಉಪಪದ್ಯತೇ। ನ ಹಿ ಪಾಕಸಾಧನಸಂಪತ್ತೌ ಓದನೋ ಭವೇತ್ ನ ವಾ ಇತಿ ಚಿನ್ತಾ ಸಂಭವತಿ। ನಾಪಿ ಭುಞ್ಜಾನಸ್ತೃಪ್ಯೇತ್ ನ ವಾ ಇತಿ ಚಿನ್ತ್ಯತೇ। ಉಪಪನ್ನಾ ತ್ವಿಯಂ ಚಿನ್ತಾ। ಬ್ರಹ್ಮವಿದಾಮಪಿ ಕೇಷಾಂಚಿತ್ ಇತಿಹಾಸಪುರಾಣಯೋಃ ದೇಹಾನ್ತರೋತ್ಪತ್ತಿದರ್ಶನಾತ್। ತಥಾ ಹಿ ಅಪಾನ್ತರತಮಾ ನಾಮ ವೇದಾಚಾರ್ಯಃ ಪುರಾಣರ್ಷಿಃ ವಿಷ್ಣುನಿಯೋಗಾತ್ ಕಲಿದ್ವಾಪರಯೋಃ ಸನ್ಧೌ ಕೃಷ್ಣದ್ವೈಪಾಯನಃ ಸಂಬಭೂವ ಇತಿ ಸ್ಮರನ್ತಿ। ವಸಿಷ್ಠಶ್ಚ ಬ್ರಹ್ಮಣೋ ಮಾನಸಃ ಪುತ್ರಃ ಸನ್ ನಿಮಿಶಾಪಾತ್ ಅಪಗತಪೂರ್ವದೇಹಃ ಪುನರ್ಬ್ರಹ್ಮಾದೇಶಾತ್ ಮಿತ್ರಾವರುಣಾಭ್ಯಾಂ

---

1. ಇವರಿಗೆ ಪಿತೃಯಾಣವೇಕಾಗಬಾರದು ಎಂಬುದಕ್ಕೆ ಸಮಾಧಾನವಿರುವದು.

2. ಉಪಾಸನೆಯಲ್ಲಿ ಮಾರ್ಗವನ್ನು ಚಿಂತನೆಮಾಡಬೇಕೆಂದು ವಿಧಿಸುವದಕ್ಕಾಗಿ ಹೇಳಿದ್ದು ಎಂದರ್ಥ.

ಸಂಬಭೂವ ಇತಿ। ಭೃಗ್ವಾದೀನಾಮಪಿ ಬ್ರಹ್ಮಣ ಏವ ಮಾನಸಪುತ್ರಾಣಾಂ ವಾರುಣೇ ಯಜ್ಞೇ ಪುನರುತ್ಪತ್ತಿಃ ಶ್ರೂಯತೇ। ಸನತ್ಕುಮಾರೋಽಪಿ ಬ್ರಹ್ಮಣ ಏವ ಮಾನಸಃ ಪುತ್ರಃ ಸ್ವಯಂ ರುದ್ರಾಯ ವರಪ್ರದಾನಾತ್ ಸ್ಕನ್ದತ್ವೇನ ಪ್ರಾದುರ್ಬಭೂವ। ಏವಮೇವ ದಕ್ಷನಾರದಪ್ರಭೃತೀನಾಂ ಭೂಯಸೀ ದೇಹಾನ್ತರೋತ್ಪತ್ತಿಃ ಕಥ್ಯತೇ ತೇಸ ತೇನ ನಿಮಿತ್ತೇನ ಸ್ಮೃತೌ। ಶ್ರುತಾವಪಿ ಮನ್ತ್ರಾರ್ಥವಾದಯೋಃ ಪ್ರಾಯೇಣ ಉಪಲಭ್ಯತೇ। ತೇ ಚ ಕೇಚಿತ್ ಪತಿತೇ ಪೂರ್ವದೇಹೇ ದೇಹಾನ್ತರಮ್ ಆದದತೇ। ಕೇಚಿತ್ತು ಸ್ಥಿತ ಏವ ತಸ್ಮಿನ್ ಯೋಗೈಶ್ವರ್ಯವಶಾತ್ ಅನೇಕದೇಹಾದಾನನ್ಯಾಯೇನ। ಸರ್ವೇ ಚೈತೇ ಸಮಧಿಗತಸಕಲವೇದಾರ್ಥಾಃ ಸ್ಮರ್ಯನ್ತೇ। ತದೇತೇಷಾಂ ದೇಹಾನ್ತರೋತ್ಪತ್ತಿದರ್ಶನಾತ್ ಪ್ರಾಪ್ತಂ ಬ್ರಹ್ಮವಿದ್ಯಾಯಾಃ ಪಾಕ್ಷಿಕಂ ಮೋಕ್ಷಹೇತುತ್ವಮ್ ಅಹೇತುತ್ವಂ ವಾ ಇತಿ ॥

(ಭಾಷ್ಯಾರ್ಥ)

ಜ್ಞಾನಿಗೆ ಈಗಿನ ದೇಹವು ಬಿದ್ದಬಳಿಕ ಮತ್ತೊಂದು ದೇಹವು ಹುಟ್ಟುವದೊ ಇಲ್ಲವೊ ?– ಎಂದು (ಇಲ್ಲಿ) ಚಿಂತಿಸಲಾಗುತ್ತದೆ[1].

(ಆಕ್ಷೇಪ) :– ಸಾಧನವಾಗಿರುವ ಜ್ಞಾನವು ಉಂಟಾದ ಬಳಿಕ ಕೈವಲ್ಯಸಿದ್ಧಿಯು ಆಗುವದೊ ಇಲ್ಲವೊ ಎಂಬೀ ಚಿಂತೆಯು ಯುಕ್ತವಲ್ಲ. ಅಡಿಗೆಯಾದ ಬಳಿಕ ಅನ್ನವಾದೀತೊ ಇಲ್ಲವೊ ಎಂಬ ವಿಚಾರವು ಸಂಭವಿಸುವದಿಲ್ಲವಷ್ಟೆ. ಊಟಮಾಡಿದವನಿಗೆ ತೃಪ್ತಿಯಾಗುವದೊ ಇಲ್ಲವೊ ಎಂದು ವಿಚಾರಮಾಡುವದೂ ಇಲ್ಲವಷ್ಟೆ ?

(ಪರಿಹಾರ) :– ಆದರೆ ಈ ವಿಚಾರವು (ಇಲ್ಲಿ) ಯುಕ್ತವಾಗಿರುತ್ತದೆ. ಏಕೆಂದರೆ ಬ್ರಹ್ಮಜ್ಞಾನಿಗಳಾದವರಿಗೂ ಕೆಲವರಿಗೆ ಮತ್ತೊಂದು ದೇಹವುಂಟಾಯಿತೆಂದು ಇತಿಹಾಸಪುರಾಣಗಳಲ್ಲಿ (ಹೇಳಿರುವದು) ಕಂಡುಬರುತ್ತದೆ. ಹೇಗೆಂದರೆ **ಅಪಾಂತರತಮ**ನೆಂಬ ವೇದಾಚಾರ್ಯನಾದ ಪುರಾತನ ಋಷಿಯು ವಿಷ್ಣುವಿನ ಅಪ್ಪಣೆಯಿಂದ ಕಲಿದ್ವಾಪರಗಳ ಸಂಧಿ(ಕಾಲ)ದಲ್ಲಿ ಕೃಷ್ಣದ್ವೈಪಾಯನನಾಗಿ ಹುಟ್ಟಿದನು ಎಂದು ಸ್ಮೃತಿಯಿದೆ ; **ವಸಿಷ್ಠ**ನು ಬ್ರಹ್ಮನ ಮಾನಸಪುತ್ರನಾಗಿದ್ದರೂ ನಿಮಿಶಾಪದಿಂದ ಹಿಂದಿನ ದೇಹವನ್ನು ಬಿಟ್ಟು ಮತ್ತೆ ಬ್ರಹ್ಮನ

---

1. ದೇಹವಿರುವದು ಸತ್ಯವೆಂದು ಇಟ್ಟುಕೊಂಡು ಇಲ್ಲಿ ವಿಚಾರಮಾಡಿದೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಇದು ಕ್ರಮಮುಕ್ತಿಗೂ ಅನ್ವಯಿಸಲಿ ಎಂಬ ಉದ್ದೇಶವು ಆಚಾರ್ಯರಿಗೆ ಇದ್ದಿರಬಹುದು. ಜ್ಞಾನದಿಂದ ಸದ್ಯೋಮುಕ್ತಿಯಿಲ್ಲವೆಂಬುದು ಸಿದ್ಧವಾದರೆ ದೇವಯಾನವು ಸಗುಣವಿದ್ಯೆಯವರಿಗೇ ನಿರ್ಗುಣವಿದ್ಯೆಯವರಿಗಲ್ಲ ಎಂಬ ಅಧಿಕರಣಸಿದ್ಧಾಂತವು ಹೋಗುತ್ತದೆ ; ಸದ್ಯೋಗತಿಯುಂಟೆಂಬಾದರೆ ಆ ಅಧಿಕರಣಸಿದ್ಧಾಂತವು ಬಲವಾಗುತ್ತದೆ.

ಅಪ್ಪಣೆಯಿಂದ ಮಿತ್ರಾವರುಣರಿಂದ ಹುಟ್ಟಿದನು ಎಂದು (ಸ್ಮೃತಿಯಿದೆ). **ಭೃಗು** ಮೊದಲಾದವರೂ ಬ್ರಹ್ಮನಿಗೇ ಮಾನಸಪುತ್ರರಾಗಿದ್ದು ವಾರುಣಯಜ್ಞದಲ್ಲಿ ಮತ್ತೆ ಹುಟ್ಟಿದರೆಂದು ಶ್ರುತಿಯಿದೆ. **ಸನತ್ಕುಮಾರನೂ** ಬ್ರಹ್ಮನ ಮಾನಸಪುತ್ರನೇ ಆಗಿದ್ದು ತಾನೇ ರುದ್ರನಿಗೆ ವರವನ್ನು ಕೊಟ್ಟಿದ್ದರಿಂದ ಸ್ಕಂದನಾಗಿ ಹುಟ್ಟಿದನು. ಹೀಗೆಯೇ **ದಕ್ಷ, ನಾರದ** ಮೊದಲಾದವರಿಗೂ ಆಯಾ ನಿಮಿತ್ತದಿಂದ ಜನ್ಮವುಂಟಾಯಿತೆಂದು ಸ್ಮೃತಿಯಲ್ಲಿ ಬಹಳವಾಗಿ ಹೇಳಿರುತ್ತದೆ. ಶ್ರುತಿಯಲ್ಲಿಯೂ ಮಂತ್ರಾರ್ಥವಾದಗಳಲ್ಲಿ ಬಹಳವಾಗಿ ಕಂಡುಬರುತ್ತದೆ. **ಅವರಲ್ಲಿ ಕೆಲವರು ಶರೀರವು ಬಿದ್ದಬಳಿಕ ಮತ್ತೊಂದು ದೇಹವನ್ನು ಸ್ವೀಕರಿಸುತ್ತಾರೆ; ಕೆಲವರಾದರೋ ಆ (ದೇಹವು) ಇರುವಹಾಗೆಯೇ ಯೋಗೈಶ್ವರ್ಯದ ಬಲದಿಂದ ಅನೇಕ ದೇಹಾದಾನನ್ಯಾಯದಿಂದ (ಸ್ವೀಕರಿಸಿರುತ್ತಾರೆ). ಇವರೆಲ್ಲರೂ ಸಕಲವೇದಾರ್ಥಗಳನ್ನೂ ಬಲ್ಲವರೆಂದು ಸ್ಮೃತಿಯಲ್ಲಿರುತ್ತದೆ.** ಆದ್ದರಿಂದ ಇವರಿಗೆ ದೇಹಾಂತರವುಂಟಾಗಿರುವದು ಕಂಡುಬರುವದರಿಂದ ಬ್ರಹ್ಮವಿದ್ಯೆಯು ಪಾಕ್ಷಿಕವಾಗಿ ಮೋಕ್ಷಹೇತುವೆಂದೋ, ಹೇತುವೇ ಅಲ್ಲವೆಂದೋ (ಪೂರ್ವಪಕ್ಷವು) ಬಂದೊದಗುತ್ತದೆ[1].

## ಆಧಿಕಾರಿಕಪುರುಷರಿಗೆ ಕೆಲವು ಕಾಲ ಮೋಕ್ಷವಾಗದೆ ಇರಲು ಕಾರಣ

(ಭಾಷ್ಯ)

೩೮೦. ಅತ ಉತ್ತರಮುಚ್ಯತೇ । ನ । ತೇಷಾಮಪಾನ್ತರತಮಃಪ್ರಭೃತೀನಾಂ ವೇದಪ್ರವರ್ತನಾದಿಷು ಲೋಕಸ್ಥಿತಿಹೇತುಷು ಅಧಿಕಾರೇಷು ನಿಯುಕ್ತಾನಾಮ್ ಅಧಿಕಾರತನ್ತ್ರತ್ವಾತ್ ಸ್ಥಿತೇಃ । ಯಥಾ ಅಸೌ ಭಗವಾನ್ ಸವಿತಾ ಸಹಸ್ರಯುಗಪರ್ಯನ್ತಂ ಜಗತೋಽಧಿಕಾರಂ ಚರಿತ್ವಾ ತದವಸಾನೇ ಉದಯಾಸ್ತಮಯವರ್ಜಿತಂ ಕೈವಲ್ಯಮ್ ಅನುಭವತಿ "ಅಥ ತತ ಊರ್ಧ್ವ ಉದೇತ್ಯ ನೈವೋದೇತಾ ನಾಸ್ತಮೇತಾ ಏಕಲ ಏವ ಮಧ್ಯೇ ಸ್ಥಾತಾ" (ಛಾಂ. ೩-೧೧-೧) ಇತಿ ಶ್ರುತೇಃ । ಯಥಾ ಚ ವರ್ತಮಾನಾ ಬ್ರಹ್ಮವಿದಃ ಆರಬ್ಧಭೋಗಕ್ಷಯೇ ಕೈವಲ್ಯಮ್ ಅನುಭವನ್ತಿ। "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ" (ಛಾಂ. ೬-೧೪-೨) ಇತಿ ಶ್ರುತೇಃ । ಏವಮಪಾನ್ತರತಮಃಪ್ರಭೃತಯೋಽಪೀಶ್ವರಾಃ ಪರಮೇಶ್ವರೇಣ ತೇಷು ತೇಷು ಅಧಿಕಾರೇಷು

---

1. ವಿದ್ಯೆಯಿಂದ ಮೋಕ್ಷವು ಆದರೂ ಆಗಬಹುದು, ಕೆಲವರಿಗೆ ಆಗದೆಯೂ ಇರಬಹುದು— ಎಂಬುದು ಪಾಕ್ಷಿಕಹೇತುತ್ವದ ಫಲವು. ಮೋಕ್ಷವು ಆಗುವದೇ ಇಲ್ಲ ಎಂಬುದು ಹೇತುವಲ್ಲವೆಂಬುದರ ಫಲವು.

ನಿಯುಕ್ತಾಃ ಸನ್ತಃ ಸತ್ಯಪಿ ಸಮ್ಯಗ್ದರ್ಶನೇ ಕೈವಲ್ಯಹೇತೌ ಅಕ್ಷೀಣಕರ್ಮಾಣೋ ಯಾವದಧಿಕಾರಮ್ ಅವತಿಷ್ಠನ್ತೇ ತದವಸಾನೇ ಚ ಅಪವೃಜ್ಯನ್ತ ಇತ್ಯವಿರುದ್ಧಮ್ । ಸಕೃತ್ಪ್ರವೃತ್ತಮೇವ ಹಿ ತೇ ಫಲದಾನಾಯ ಕರ್ಮಾಶಯಮ್ ಅತಿವಾಹಯನ್ತಃ ಸ್ವಾತನ್ತ್ರ್ಯೇಣೈವ ಗೃಹಾದಿವ ಗೃಹಾನ್ತರಮ್ ಅನ್ಯಮನ್ಯಂ ದೇಹಂ ಸಂಚರನ್ತಃ ಸ್ವಾಧಿಕಾರನಿರ್ವರ್ತನಾಯ ಅಪರಿಮುಷಿತಸ್ಮೃತಯ ಏವ ದೇಹೇನ್ದ್ರಿಯಪ್ರಕೃತಿವಶಿತ್ವಾತ್ ನಿರ್ಮಾಯ ದೇಹಾನ್ ಯುಗಪತ್ ಕ್ರಮೇಣ ವಾ ಅಧಿತಿಷ್ಠನ್ತಿ । ನ ಚೈತೇ ಜಾತಿಸ್ಮರಾ ಇತ್ಯುಚ್ಯನ್ತೇ 'ತ ಏವೈತೇ' ಇತಿ ಸ್ಮೃತಿಪ್ರಸಿದ್ಧೇಃ । ಯಥಾ ಹಿ ಸುಲಭಾ ನಾಮ ಬ್ರಹ್ಮವಾದಿನೀ ಜನಕೇನ ವಿವದಿತುಕಾಮಾ ಅವ್ಯುದಸ್ಯ ಸ್ವಂ ದೇಹಂ ಜಾನಕಂ ದೇಹಮಾವಿಶ್ಯ ವ್ಯುದ್ಯ ತೇನ ಪಶ್ಚಾತ್ ಸ್ವಮೇವ ದೇಹಮ್ ಆವಿವೇಶ ಇತಿ ಸ್ಮರ್ಯತೇ । ಯದಿ ಹಿ ಉಪಯುಕ್ತೇ ಸಕೃತ್ ಪ್ರವೃತ್ತೇ ಕರ್ಮಣಿ ಕರ್ಮಾನ್ತರಂ ದೇಹಾನ್ತರಾರಮ್ಭಕಾರಣಮ್ ಆವಿರ್ಭವೇತ್ ತತೋಽನ್ಯದಪ್ಯದಗ್ಧಬೀಜಂ ಕರ್ಮಾನ್ತರಂ ತದ್ವದೇವ ಪ್ರಸಜ್ಯೇತ ಇತಿ ಬ್ರಹ್ಮವಿದ್ಯಾಯಾಃ ಪಾಕ್ಷಿಕಂ ಮೋಕ್ಷಹೇತುತ್ವಮ್ ಅಹೇತುತ್ವಂ ವಾ ಆಶಙ್ಕ್ಯೇತ । ನ ತ್ವಿಯಮಾಶಙ್ಕಾ ಯುಕ್ತಾ । ಜ್ಞಾನಾತ್ ಕರ್ಮಬೀಜದಾಹಸ್ಯ ಶ್ರುತಿಸ್ಮೃತಿಪ್ರಸಿದ್ಧತ್ವಾತ್ । ತಥಾ ಹಿ ಶ್ರುತಿಃ "ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ । ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ" (ಮುಂ. ೨-೨-೮) ಇತಿ । "ಸ್ಮೃತಿಲಮ್ಭೇ ಸರ್ವಗ್ರನ್ಥೀನಾಂ ವಿಪ್ರಮೋಕ್ಷಃ" (ಛಾಂ. ೭-೨೬-೨) ಇತಿ ಚೈವಮಾದ್ಯಾ । ಸ್ಮೃತಿರಪಿ "ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ । ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ" (ಭ. ಗೀ. ೪-೩೭) ಇತಿ । "ಬೀಜಾನ್ಯಗ್ನ್ಯುಪದಗ್ಧಾನಿ ನ ರೋಹನ್ತಿ ಯಥಾ ಪುನಃ । ಜ್ಞಾನದಗ್ಧೈಸ್ತಥಾ ಕ್ಲೇಶೈರ್ನಾತ್ಮಾ ಸಂಪದ್ಯತೇ ಪುನಃ" (ಮೋ. ಧ. ೨೧೧-೧೭) ಇತಿ ಚೈವಮಾದ್ಯಾ । ನ ಚ ಅವಿದ್ಯಾದಿಕ್ಲೇಶದಾಹೇ ಸತಿ ಕ್ಲೇಶಬೀಜಸ್ಯ ಕರ್ಮಾಶಯಸ್ಯ ಏಕದೇಶದಾಹಃ, ಏಕದೇಶಪ್ರರೋಹಶ್ಚ- ಇತ್ಯುಪಪದ್ಯತೇ । ನ ಹಿ ಅಗ್ನಿದಗ್ಧಸ್ಯ ಶಾಲಿಬೀಜಸ್ಯ ಏಕದೇಶಪ್ರರೋಹೋ ದೃಶ್ಯತೇ । ಪ್ರವೃತ್ತಫಲಸ್ಯ ತು ಕರ್ಮಾಶಯಸ್ಯ ಮುಕ್ತೇಷೋರಿವ ವೇಗಕ್ಷಯಾತ್ ನಿವೃತ್ತಿಃ । "ತಸ್ಯ ತಾವದೇವ ಚಿರಮ್" (ಛಾಂ. ೬-೧೪-೨) ಇತಿ ಶರೀರಪಾತಾವಧಿಕ್ಷೇಪಕರಣಾತ್ । ತಸ್ಮಾತ್ ಉಪಪನ್ನಾ ಯಾವದಧಿಕಾರಮ್ ಆಧಿಕಾರಿಕಾಣಾಮ್ ಅವಸ್ಥಿತಿಃ ॥

(ಭಾಷ್ಯಾರ್ಥ)

ಇದಕ್ಕೆ ಉತ್ತರವನ್ನು ಹೇಳುತ್ತೇವೆ. ಹೀಗಲ್ಲ, ಏಕೆಂದರೆ ಆ ಅಪಾಂತರತಮಃಸ್ಸೇ ಮುಂತಾದವರು ವೇದ(ಸಂಪ್ರದಾಯ)ಪ್ರವರ್ತನವೇ ಮುಂತಾದ

ಲೋಕಸ್ಥಿತಿಕಾರಣವಾದ ಅಧಿಕಾರಗಳಲ್ಲಿ ನಿಯುಕ್ತರಾಗಿರುವದರಿಂದ (ಅವರು ಹಾಗೇ) ಇದ್ದುಕೊಂಡಿರುವದು (ಅವರ) ಅಧಿಕಾರಕ್ಕೆ ಅಧೀನವಾಗಿರುತ್ತದೆ. ಹೇಗೆ ಈ ಸೂರ್ಯಭಗವಂತನು ಸಾವಿರಯುಗಗಳವರೆಗೂ ಜಗತ್ತಿನ ಅಧಿಕಾರವನ್ನು ನಡೆಯಿಸಿ ಅದು ಮುಗಿಯುತ್ತಲೂ ಉದಯಾಸ್ತಮಯಗಳಿಲ್ಲದ ಕೈವಲ್ಯವನ್ನು ಅನುಭವಿಸುತ್ತಾನೋ "ಆ ಬಳಿಕ ಮೇಲೆಯೇ ಇದ್ದುಕೊಂಡು (ತನ್ನಲ್ಲಿಯೇ) ಉದಯಿಸಿ ಉದಯವಾಗದೆಯೇ ಇರುವನು, ಅಸ್ತವಾಗದೆಯೇ ಇರುವನು, ತಾನೊಬ್ಬನೇ ನಡುವೆ ಇದ್ದುಕೊಂಡಿರುವನು" (ಛಾಂ. ೩-೧೧-೧) ಎಂಬ ಶ್ರುತಿ(ಪ್ರಮಾಣದಿಂದ), ಮತ್ತು ಹೇಗೆ ಈಗಿನ ಬ್ರಹ್ಮಜ್ಞಾನಿಗಳು "ಅವನಿಗೆ ಎಲ್ಲಿಯವರಿಗೆ ದೇಹದಿಂದ ಬಿಡುಗಡೆಯಾಗುವದಿಲ್ಲವೋ ಅಲ್ಲಿಯವರಿಗೇ ತಡ, ಆ ಬಳಿಕ (ಬ್ರಹ್ಮದಲ್ಲಿ) ಒಂದಾಗಿಬಿಡುವನು" (ಛಾಂ. ೬-೧೪-೨) ಎಂಬ ಶ್ರುತಿ(ಪ್ರಮಾಣ)ದಿಂದ ಆರಬ್ಧ(ಕರ್ಮಫಲದ) ಭೋಗವು ಮುಗಿಯಲು ಕೈವಲ್ಯವನ್ನು ಅನುಭವಿಸುತ್ತಾರೋ, ಹೀಗೆಯೇ ಅಪಾಂತರತಮಸ್ಸೇ ಮುಂತಾದವರು ಸ್ವತಂತ್ರರೇ ಆದರೂ ಪರಮೇಶ್ವರನಿಂದ ಆಯಾ ಅಧಿಕಾರಗಳಲ್ಲಿ ನಿಯುಕ್ತರಾಗಿ ಕೈವಲ್ಯಹೇತುವಾದ ಸಮ್ಯಗ್ದರ್ಶನವು ಆದಮೇಲೂ ಕರ್ಮವು ಕ್ಷಯವಾಗದೆ ಅಧಿಕಾರವಿರುವವರೆಗೂ (ಹಾಗೇಯೇ) ಇದ್ದುಕೊಂಡಿರುವರು, ಅದು ಮುಗಿಯಲು ಮುಕ್ತರಾಗುವರು ; ಆದ್ದರಿಂದ (ಇದೇನೂ) ವಿರುದ್ಧವಲ್ಲ, ಏಕೆಂದರೆ ಒಂದು ಸಲ ಫಲವನ್ನು ಕೊಡುವದಕ್ಕೆ ತೊಡಗಿರುವ ಕರ್ಮಾಶಯವನ್ನೇ ಅವರು ಮುಂದೆ ಸಾಗಿಸುತ್ತಾ ಸ್ವತಂತ್ರರಾಗಿಯೇ ಮನೆಯಿಂದ ಮನೆಗೆ (ಹೋಗುವಂತೆ) ಬೇರೆಬೇರೆಯ ದೇಹಕ್ಕೆ ಹೋಗುತ್ತಾ ತಮ್ಮ ಅಧಿಕಾರವನ್ನು ನಡೆಯಿಸುವದಕ್ಕಾಗಿ ಸ್ಮರಣ(ಶಕ್ತಿಯು) ಹೋಗದೆಯೇ ದೇಹೇಂದ್ರಿಯಪ್ರವೃತ್ತಿಯನ್ನು ವಶದಲ್ಲಿಟ್ಟುಕೊಂಡು[1] ದೇಹಗಳನ್ನು ಒಂದೇ ಸಲಕ್ಕೆ ಅಥವಾ ಕ್ರಮಕ್ರಮವಾಗಿ ನಿರ್ಮಿಸಿಕೊಂಡವರಾಗಿ ಆಳುತ್ತಿರುತ್ತಾರೆ. ಇವರು ಜಾತಿಸ್ಮರರೆಂದೇನೂ ಎನಿಸುವದಿಲ್ಲ[2]. ಏಕೆಂದರೆ 'ಅವರೇ ಇವರು' ಎಂದು ಸ್ಮೃತಿಯಲ್ಲಿ ಪ್ರಸಿದ್ಧರಾಗಿರುತ್ತಾರೆ[3]. ಹೇಗೆ ಸುಲಭೆ ಎಂಬ ಬ್ರಹ್ಮವಾದಿನಿಯು

---

1. ಆದ್ದರಿಂದ ಇದು ಕರ್ಮಾಧೀನವಾಗಿ ಮತ್ತೊಂದು ಜನ್ಮವನ್ನು ಪಡೆಯುವ ಸಂಸಾರಿಗಳ ದೇಹಧಾರಣೆಯಂತಲ್ಲ.

2. ಹಿಂದಿನ ಜನ್ಮದ ಸ್ಥಿತಿಯನ್ನು ಈ ಜನ್ಮದಲ್ಲಿ ನೆನಪಿನಲ್ಲಿಟ್ಟುಕೊಂಡಿರುವವರು ಜಾತಿಸ್ಮರರೆನಿಸುವರು.

3. ಜಾತಿಸ್ಮರನೊಬ್ಬನು ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿದ್ದು ಈಗ ಶೂದ್ರನಾಗಿ ಹುಟ್ಟಿದ್ದರೆ ಆ ಶೂದ್ರನನ್ನು ಬ್ರಾಹ್ಮಣನೆಂದೇನೂ ಜನರು ಎಣಿಸುವದಿಲ್ಲ : ಆದರೆ ಆಧಿಕಾರಿಕ ಪುರುಷರು ಅವರೇ ಇವರು ಎಂದು ಪುರಾಣಾದಿಗಳಲ್ಲಿ ಪ್ರಸಿದ್ಧರಾಗಿರುತ್ತಾರೆ.

ಜನಕನೊಡನೆ ವಿಚಾರಮಾಡಬೇಕೆಂಬ ಇಚ್ಛೆಯಿಂದ ತನ್ನ ದೇಹವನ್ನು ಬಿಟ್ಟು ಬಿಡದೆಯೇ ಜನಕನ ದೇಹವನ್ನು ಹೊಕ್ಕು ಅವನೊಡನೆ ವಿಚಾರಮಾಡಿದ ಬಳಿಕ ತನ್ನ ದೇಹವನ್ನೇ ಹೊಕ್ಕಳು ಎಂದು ಸ್ಮೃತಿಯಲ್ಲಿದೆಯೋ ಹಾಗೆಯೇ ಇದು.

ಒಂದ ಸಲ ಪ್ರವೃತ್ತವಾದ ಕರ್ಮವು ಉಪಯೋಗವಾದ ಬಳಿಕ ದೇಹಾಂತರಕ್ಕೆ ಕಾರಣವಾದ ಮತ್ತೊಂದು ಕರ್ಮವು ತೋರಿಕೊಳ್ಳುವದಾದರೆ ಆಗ ಮತ್ತೊಂದು ಕರ್ಮವೂ ಬೀಜದಾಹವಾಗದೆ ಹಾಗೆಯೇ ಪ್ರಸಕ್ತವಾಗ ಬಹುದಾಗಿ ಬ್ರಹ್ಮವಿದ್ಯೆಯು ಪಾಕ್ಷಿಕವಾಗಿ ಮೋಕ್ಷಹೇತುವೆಂದೋ ಹೇತುವೇ ಅಲ್ಲವೆಂದೋ ಆಶಂಕಿಸಬಹುದಾಗಿತ್ತು ; ಆದರೆ ಈ ಆಶಂಕೆಯು ಯುಕ್ತ ವಲ್ಲ, ಏಕೆಂದರೆ ಜ್ಞಾನದಿಂದ ಕರ್ಮಬೀಜವು ಸುಟ್ಟುಹೋಗುವದೆಂಬುದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುತ್ತದೆ. ಹೇಗೆಂದರೆ "ಆ ಪರಾವರನನ್ನು ಕಂಡು ಕೊಂಡರೆ ಹೃದಯಗ್ರಂಥಿಯು ನಾಶವಾಗುತ್ತದೆ, ಎಲ್ಲಾ ಸಂಶಯಗಳೂ ಕತ್ತರಿಸಿಹೋಗುತ್ತವೆ, ಇವನ ಕರ್ಮಗಳೂ ಕ್ಷಯವಾಗುತ್ತವೆ" (ಮುಂ. ೨-೨-೮) ಎಂದು ಶ್ರುತಿಯಿದೆ, "ಸ್ಮೃತಿಯು ಲಾಭವಾದರೆ ಎಲ್ಲಾ ಗ್ರಂಥಿಗಳ ಬಿಡುಗಡೆಯೂ ಆಗುತ್ತದೆ" (ಛಾಂ. ೭-೨೬-೨) ಎಂದು ಮುಂತಾಗಿರುವ (ಶ್ರುತಿಯೂ ಇದೆ). "ಅರ್ಜುನನೆ, ಹೊತ್ತಿಕೊಂಡ ಬೆಂಕಿಯು ಹೇಗೆ ಕಟ್ಟಿಗೆ ಗಳನ್ನು ಬೂದಿಗೈಯುತ್ತದೆಯೋ, ಹಾಗೆಯೇ ಜ್ಞಾನಾಗ್ನಿಯು ಎಲ್ಲಾ ಕರ್ಮ ಗಳನ್ನೂ ಬೂದಿಗೈಯುತ್ತದೆ" (ಭ.ಗೀ. ೪-೩೭), "ಹೇಗೆ ಅಗ್ನಿಯಿಂದ ಸುಟ್ಟು ಹೋಗಿರುವ ಬೀಜಗಳು ಮತ್ತೆ ಮೊಳಕೆಯಾಗುವದಿಲ್ಲವೋ ಹಾಗೆಯೇ ಜ್ಞಾನ ದಿಂದ ಸುಟ್ಟುಹೋಗಿರುವ ಕ್ಲೇಶಗಳು ಆತ್ಮನಿಗೆ ಮತ್ತೆ ಬಂದು ಸೇರುವದಿಲ್ಲ" (ಮೋ.ಧ. ೨೧೧-೧೭) ಎಂದು ಮುಂತಾದ ಸ್ಮೃತಿಯೂ (ಇದೆ). ಅವಿದ್ಯೆಯೇ ಮುಂತಾದ ಕ್ಲೇಶಗಳು ಸುಟ್ಟುಹೋದರೆ ಕ್ಲೇಶಗಳಿಗೆ ಕಾರಣವಾಗಿರುವ ಕರ್ಮಾ ಶಯದಲ್ಲಿ ಒಂದು ಭಾಗವು ಸುಟ್ಟುಹೋಗುತ್ತದೆ, ಮತ್ತೊಂದು ಭಾಗವು ಮೊಳಕೆಯಾಗುತ್ತದೆ ಎಂಬುದು ಯುಕ್ತವೂ ಆಗುವದಿಲ್ಲ. ಬೆಂಕಿಯಿಂದ ಸುಟ್ಟುಹೋದ ಭತ್ತದಬೀಜದಲ್ಲಿ ಒಂದು ಭಾಗವು ಮೊಳಕೆಯಾಗುವದೆಂಬುದು ಕಂಡುಬಂದಿಲ್ಲವಷ್ಟೆ. ಫಲವನ್ನು ಕೊಡುವದಕ್ಕೆ ಪ್ರಾರಂಭಿಸಿರುವ ಕರ್ಮಾ ಶಯವಾದರೋ ಬಿಟ್ಟ ಬಾಣದಂತೆ ವೇಗವು ಕ್ಷಯವಾದಮೇಲೆ ತೊಲಗುತ್ತದೆ ; ಏಕೆಂದರೆ "ಆವನಿಗೆ ಅಲ್ಲಿಯವರೆಗೇ ತಡ" (ಛಾಂ.೬-೧೪-೨) ಎಂದು ಶರೀರವು ಬೀಳುವವರೆಗೂ ಎಂದು ಕಾಲವಿಲಂಬವನ್ನು ಹೇಳಿರುತ್ತದೆ. ಆದ್ದರಿಂದ ಆಧಿ ಕಾರಿಕರು ಅಧಿಕಾರವಿರುವವರೆಗೂ (ಹಾಗೆಯೇ ಮೋಕ್ಷವಿಲ್ಲದೆ) ಇದ್ದು

ಕೊಂಡಿರುವರೆಂಬುದು ಯುಕ್ತವಾಗಿರುತ್ತದೆ.[1]

## ಜ್ಞಾನದ ಫಲವು ಅನಿಯತವೆಂಬುದಿಲ್ಲ

(ಭಾಷ್ಯ)

೩೮೧. ನ ಚ ಜ್ಞಾನಫಲಸ್ಯ ಅನೈಕಾನ್ತಿಕತಾ। ತಥಾ ಚ ಶ್ರುತಿಃ ಅವಿಶೇಷೇಣೈವ ಸರ್ವೇಷಾಂ ಜ್ಞಾನಾತ್ ಮೋಕ್ಷಂ ದರ್ಶಯತಿ "ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ ತಥರ್ಷೀಣಾಂ ತಥಾ ಮನುಷ್ಯಾಣಾಮ್" (ಬೃ. ೧–೪–೧೦) ಇತಿ। ಜ್ಞಾನಾನ್ತರೇಷು ಚ ಐಶ್ವರ್ಯಾದಿಫಲೇಷು ಆಸಕ್ತಾಃ ಸ್ಯುರ್ಮಹರ್ಷಯಃ। ತೇ ಪಶ್ಚಾತ್ ಐಶ್ವರ್ಯ ಕ್ಷಯದರ್ಶನೇನ ನಿರ್ವಿಣ್ಣಾಃ ಪರಮಾತ್ಮಜ್ಞಾನೇ ಪರಿನಿಷ್ಠಾಃ ಕೈವಲ್ಯಂ ಪ್ರಾಪುಃ ಇತ್ಯುಪಪದ್ಯತೇ। "ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ। ಪರಸ್ಯಾನ್ತೇ ಕೃತಾತ್ಮಾನಃ ಪ್ರವಿಶನ್ತಿ ಪರಂ ಪದಮ್" (?)[2] ಇತಿ ಸ್ಮರಣಾತ್। ಪ್ರತ್ಯಕ್ಷಫಲತ್ವಾಚ್ಚ ಜ್ಞಾನಸ್ಯ ಫಲವಿರಹಶಙ್ಕಾನುಪಪತ್ತಿಃ। ಕರ್ಮಫಲೇ ಹಿ ಸ್ವರ್ಗಾದಾವನುಭವಾನಾರೂಢೇ ಸ್ಯಾದಾಶಙ್ಕಾ ಭವೇದ್ವಾ ನ ವಾ ಇತಿ। ಅನುಭವಾರೂಢಂ ತು ಜ್ಞಾನಫಲಮ್ ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ" (ಬೃ ೩–೪–೧) ಇತಿ ಶ್ರುತೇಃ। "ತತ್ತ್ವಮಸಿ," (ಛಾಂ.೬–೮–೭) ಇತಿ ಚ ಸಿದ್ಧವದುಪದೇಶಾತ್। ನ ಹಿ 'ತತ್ತ್ವಮಸಿ' ಇತ್ಯಸ್ಯ ವಾಕ್ಯಸ್ಯಾರ್ಥಃ ತತ್ತ್ವಂ ಮೃತೋ ಭವಿಷ್ಯಸಿ ಇತ್ಯೇವಂ ಪರಿಣೇತುಂ ಶಕ್ಯಃ। "ತದ್ಧೈತತ್ ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚ" (ಬೃ. ೧–೪–೧೦) ಇತಿ ಚ ಸಮ್ಯಗ್ದರ್ಶನಕಾಲಮೇವ ತತ್ಫಲಂ ಸರ್ವಾತ್ಮತ್ವಂ ದರ್ಶಯತಿ। ತಸ್ಮಾತ್ ಐಕಾನ್ತಿಕೀ ವಿದುಷಃ ಕೈವಲ್ಯಸಿದ್ಧಿಃ॥

(ಭಾಷ್ಯಾರ್ಥ)

ಜ್ಞಾನದ ಫಲವು ಅನಿಯತವೆಂದೂ ಆಗುವದಿಲ್ಲ.[3] ಆದ್ದರಿಂದಲೇ (ಯಾವ) ವಿಶೇಷವೂ ಇಲ್ಲದೆ ಎಲ್ಲರಿಗೂ ಜ್ಞಾನದಿಂದ ಮೋಕ್ಷವಾಗುವದೆಂದು

---

1. ಜ್ಞಾನಿಗೆ ಹೇಗೆ ಒಂದು ಜನ್ಮದಲ್ಲಿ ಶರೀರಪಾತದವರೆಗೂ ತಡವಾಗುವದೋ ಅದರಂತೆ ಆಧಿಕಾರಿಕಪುರುಷರಿಗೆ ಅಧಿಕಾರವು ಮುಗಿಯುವವರೆಗೂ ಇರಬಹುದು ಎಂದರ್ಥ. ಈ ಪ್ರಾರಬ್ಧಕರ್ಮದ ಭೋಗವೂ ಮಿಥ್ಯಾಜ್ಞಾನಕೃತಸಂಸ್ಕಾರದ ಅನುವೃತ್ತಿಯು; ಅದೂ ಜ್ಞಾನದಿಂದ ಬಾಧಿತವಾಗಿಯೇ ಇರುತ್ತದೆ ಎಂದು ೪–೧–೧೫ರಲ್ಲಿ ಹೇಳುತ್ತಾರೆ.

2. ಇದು ಯಾವ ಸ್ಮೃತಿಯಲ್ಲಿದೆ ಎಂಬುದು ತಿಳಿಯಲಿಲ್ಲ; ಮುಂದೆ ೪–೩–೧೦ನೆ ಭಾಷ್ಯದಲ್ಲಿಯೂ ಉದಾಹೃತವಾಗಿದೆ.

3. ಆಧಿಕಾರಿಕಪುರುಷರಿಗೆ ಅಧಿಕಾರನಿಮಿತ್ತದಿಂದ ಮೋಕ್ಷಪ್ರಾಪ್ತಿಯು ತಡವಾದ ಮಾತ್ರದಿಂದ ಜ್ಞಾನವು ಮೋಕ್ಷಕ್ಕೆ ಕಾರಣವಲ್ಲವೆಂದೇನೂ ಆಗುವದಿಲ್ಲ.

"ಅಲ್ಲಿ ದೇವತೆಗಳೊಳಗೆ ಯಾವಯಾವನು ಅರಿತುಕೊಂಡನೋ ಅವನೇ ಅದಾದನು; ಹಾಗೆಯೇ ಋಷಿಗಳೊಳಗೆ, ಹಾಗೆಯೇ ಮನುಷ್ಯರೊಳಗೆ" (ಬೃ. ೧–೪ ೧೦) ಎಂಬ ಶ್ರುತಿಯು ತಿಳಿಸುತ್ತದೆ. ಇದಲ್ಲದೆ ಮಹರ್ಷಿಗಳು ಐಶ್ವರ್ಯವೇ ಮುಂತಾದ ಫಲವನ್ನು ಕೊಡುವ ಜ್ಞಾನಾಂತರಗಳಲ್ಲಿ ಆಸಕ್ತರಾಗಿದ್ದಿರಬಹುದು; ಅವರು ಆ ಬಳಿಕ ಐಶ್ವರ್ಯಕ್ಷಯವನ್ನು ಕಂಡು ವೈರಾಗ್ಯದಿಂದ ಪರಮಾತ್ಮಜ್ಞಾನದಲ್ಲಿ ನೆಲೆನಿಂತು ಕೈವಲ್ಯವನ್ನು ಪಡೆದಿರಬಹುದು –ಎಂಬುದು ಯುಕ್ತವಾಗಿರುತ್ತದೆ.[1] ಏಕೆಂದರೆ "ಅವರೆಲ್ಲರೂ ಪ್ರಲಯವು ಪ್ರಾಪ್ತವಾಗಲು (ಎಲ್ಲರಿಗೂ) ಹೆಚ್ಚಿನ ಅಂತಕಾಲದಲ್ಲಿ (ಆ) ಬ್ರಹ್ಮದೊಡನೆ ಅಂತಃಕರಣಶುದ್ಧಿ(ಯಿಂದ ಜ್ಞಾನ)ವುಳ್ಳವರಾಗಿ ಪರಮಪದವನ್ನು ಸೇರುವರು" ( ? ) ಎಂಬ ಸ್ಮೃತಿಯು ಇದಕ್ಕೆ ಪ್ರಮಾಣವು.[2] ಜ್ಞಾನದ ಫಲವು ಪ್ರತ್ಯಕ್ಷವಾಗಿರುವದರಿಂದಲೂ (ಅದಕ್ಕೆ) ಫಲವಾಗಲಾರದೆಂಬ ಶಂಕೆಯು ಹೊಂದುವದಿಲ್ಲ. ಕರ್ಮಫಲವಾದ ಸ್ವರ್ಗಾದಿಯು ಅನುಭವಕ್ಕೆ ಹತ್ತುವದಿಲ್ಲವಾದ್ದರಿಂದ ಅದೀತೊ ಇಲ್ಲವೊ ಎಂಬ ಶಂಕೆಯು ಉಂಟಾಗಬಹುದು.[3] ಆದರೆ ಜ್ಞಾನದ ಫಲವು ಅನುಭವಕ್ಕೆ ಹತ್ತತಕ್ಕದ್ದು. "ಯಾವದು ನೇರಾದ ಅಪರೋಕ್ಷವಾದ ಬ್ರಹ್ಮವೋ" (ಬೃ. ೩–೪–೧) ಎಂಬ ಶ್ರುತಿಯು (ಇದಕ್ಕೆ ಪ್ರಮಾಣ). "ಅದು ನೀನಾಗಿರುವೆ" (ಛಾಂ. ೬–೧–೭) ಎಂದು (ಈಗಲೆ) ಇದ್ದುಕೊಂಡಿರುವಂತೆ ಉಪದೇಶಮಾಡಿರುವದರಿಂದಲೂ (ಹೀಗೆ). "ಅದೇ ನೀನಾಗಿರುವೆ" (ಛಾಂ. ೬–೮–೭) ಎಂಬೀ ವಾಕ್ಯದ ಅರ್ಥವನ್ನು ನೀನು ಸತ್ತು ಅದಾಗುವೆ ಎಂದು ತಿರುಗಿಸುವದಕ್ಕೆ ಆಗಲಾರದಷ್ಟೆ. ಮತ್ತು "ಆ ಇದನ್ನು ಕಂಡುಕೊಂಡ ವಾಮದೇವನು ನಾನು ಮನುವಾದೆನು, ಸೂರ್ಯ(ನಾದೆನು) ಎಂದು ತಿಳಿದುಕೊಂಡನು" (ಬೃ. ೧–೪–೧೦) ಎಂದು ಸಮ್ಯಗ್ದರ್ಶನಕಾಲದಲ್ಲಿಯೇ ಅದರ ಫಲವಾದ ಸರ್ವಾತ್ಮತ್ವವನ್ನು (ಶ್ರುತಿಯು) ತಿಳಿಸುತ್ತದೆ.[4] ಆದ್ದರಿಂದ ಜ್ಞಾನಿಗೆ ಕೈವಲ್ಯಸಿದ್ಧಿಯು ನಿಯಮದಿಂದ ಆಗುತ್ತದೆ (ಎಂದು ಸಿದ್ಧವಾಯಿತು).

1. ಆದ್ದರಿಂದ ಅಧಿಕಾರದಲ್ಲಿರುವ ಪುರುಷರೆಲ್ಲರೂ ಆತ್ಮಜ್ಞಾನಿಗಳೇ ಎಂಬ ನಿಯಮವೇನೂ ಇಲ್ಲವಾಗಿ ಪೂರ್ವಪಕ್ಷವು ಅವ್ಯಾಪಕವೂ ಆಯಿತು

2. ಇದರಿಂದ ಜ್ಞಾನವುಂಟಾದ್ದಾಗ ಅವರಿಗೂ ಕ್ರಮಮುಕ್ತಿಯಾಗಿರಬಹುದೆಂದಾಗುತ್ತದೆ.

3. "ಕೋ ಹಿ ತದ್ವೇದ ಯದಮುಷ್ಮಿಲ್ಲೋಕೇಽಸ್ತಿ ವಾ ನ ವಾ" (ಆ ಲೋಕದಲ್ಲಿ ಫಲವುಂಟೊ ಇಲ್ಲವೊ ಯಾವನು ಬಲ್ಲನು ?) ಎಂಬ ತೈ. ಸಂ. ೬–೩–೩ ಅರ್ಥವಾದದಲ್ಲಿ ಈ ಸಂಶಯವನ್ನು ಸೂಚಿಸಿರುತ್ತದೆ. ಅಲ್ಲಿ ವೇದಪ್ರಾಮಾಣ್ಯದಿಂದ ಸ್ವರ್ಗಫಲವಾಗುವದೆಂದು ನಂಬಬೇಕಾಗಿದೆ.

4. ಆದ್ದರಿಂದ ಮೋಕ್ಷವು ಸ್ವರ್ಗಾದಿಗಳಂತೆ ಸಂಶಯಗ್ರಸ್ತವೂ ಅಲ್ಲ; ಕೇವಲ ಆಪ್ತವಾಕ್ಯದಿಂದ ನಂಬತಕ್ಕದ್ದೂ ಅಲ್ಲ.

## ೨೦. ಅಕ್ಷರಾಧಿಕರಣ

(ಬ್ರಹ್ಮಧರ್ಮವಿಶೇಷನಿಷೇಧಶ್ರುತಿಗಳನ್ನು ಉಪಸಂಹಾರಮಾಡಿಕೊಳ್ಳಬೇಕು)

**ಅಕ್ಷರಧಿಯಾಂ ತ್ವವರೋಧಃಸಾಮಾನ್ಯ ತದ್ಭಾವಾಭ್ಯಾಮೌ ಪಸದವತ್ ತದುಕ್ತಮ್ ॥ ೩೩ ॥**

೩೩. ಅಕ್ಷರ(ವಿಷಯಕವಾದ) ಪ್ರತ್ಯಯಗಳನ್ನು ಉಪಸಂಹಾರ ಮಾಡಿಕೊಳ್ಳಬೇಕು. ಏಕೆಂದರೆ ಸಮಾನತ್ವವೂ ತದ್ಭಾವವೂ ಇರುತ್ತವೆ. ಔಪಸದಗಳಂತೆ (ಇದನ್ನು) ತಿಳಿಯಬೇಕು ; ಇದನ್ನು (ಪೂರ್ವಮೀಮಾಂಸದಲ್ಲಿ) ಹೇಳಿರುತ್ತದೆ.

## ಬ್ರಹ್ಮದಲ್ಲಿ ವಿಶೇಷನಿಷೇಧಗಳನ್ನೆಲ್ಲ ಸೇರಿಸಿ ಅರಿಯಬೇಕು

(ಭಾಷ್ಯ)

೩೮೨. ವಾಜಸನೇಯಕೇ ಶ್ರೂಯತೇ "ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದನ್ತ್ಯಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹಮ್" (ಬೃ. ೩–೮–೮) ಇತ್ಯಾದಿ। ತಥಾ ಆಥರ್ವಣೇ ಶ್ರೂಯತೇ "ಅಥ ಪರಾ ಯಯಾ ತದಕ್ಷರಮಧಿಗಮ್ಯತೇ। ಯತ್ತದದ್ರೇಶ್ಯಮಗೋತ್ರಮವರ್ಣಮ್" (ಮುಂ. ೧–೧–೫) ಇತ್ಯಾದಿ। ತಥೈವ ಅನ್ಯತ್ರಾಪಿ ವಿಶೇಷನಿರಾಕರಣದ್ವಾರೇಣ ಅಕ್ಷರಂ ಪರಂ ಬ್ರಹ್ಮ ಶ್ರಾವ್ಯತೇ। ತತ್ರ ಚ ಕ್ವಚಿತ್ ಕೇಚಿತ್ ಅತಿರಿಕ್ತಾ ವಿಶೇಷಾಃ ಪ್ರತಿಷಿಧ್ಯನ್ತೇ। ತಾಸಾಂ ವಿಶೇಷಪ್ರತಿಷೇಧಬುದ್ಧೀನಾಂ ಕಿಂ ಸರ್ವಾಸಾಂ ಸರ್ವತ್ರ ಪ್ರಾಪ್ತಿಃ, ಉತ ವ್ಯವಸ್ಥಾ ಇತಿ ಸಂಶಯೇ ಶ್ರುತಿವಿಭಾಗಾದ್ ವ್ಯವಸ್ಥಾಪ್ರಾಪ್ತೌ ಉಚ್ಯತೇ। ಅಕ್ಷರವಿಷಯಾಸ್ತು ವಿಶೇಷಪ್ರತಿಷೇಧಶ್ರುತಯಃ ಸರ್ವಾಃ ಸರ್ವತ್ರ ಅವರೋದ್ಧವ್ಯಾಃ। ಸಾಮಾನ್ಯತದ್ಭಾವಾಭ್ಯಾಮ್। ಸಮಾನೋ ಹಿ ಸರ್ವತ್ರ ವಿಶೇಷನಿರಾಕರಣರೂಪೋ ಬ್ರಹ್ಮಪ್ರತಿಪಾದನಪ್ರಕಾರಃ। ತದೇವ ಚ ಸರ್ವತ್ರ ಪ್ರತಿಪಾದ್ಯಂ ಬ್ರಹ್ಮ ಅಭಿನ್ನಂ ಪ್ರತ್ಯಭಿಜ್ಞಾಯತೇ ತತ್ರ ಕಿಮಿತಿ ಅನ್ಯತ್ರ ಕೃತಾ ಬುದ್ಧಯಃ ಅನ್ಯತ್ರ ನ ಸ್ಯುಃ? ತಥಾ ಚ "ಆನನ್ದಾದಯಃ ಪ್ರಧಾನಸ್ಯ "(೩–೩–೧೧) ಇತ್ಯತ್ರ ವ್ಯಾಖ್ಯಾತಮ್। ತತ್ರ ವಿಧಿರೂಪಾಣಿ ವಿಶೇಷಣಾನಿ ಚಿನ್ತಿತಾನಿ ಇಹ ಪ್ರತಿಷೇಧರೂಪಾಣಿ ಇತಿ ವಿಶೇಷಃ। ಪ್ರಪಞ್ಚಾರ್ಥಶ್ಚಾಯಂ ಚಿನ್ತಾಭೇದಃ ॥

(ಭಾಷ್ಯಾರ್ಥ)

ವಾಜಸನೇಯಕದಲ್ಲಿ ಶ್ರುತವಾಗಿರುವದೇನೆಂದರೆ "ಗಾರ್ಗಿಯೇ, ಇದೇ ಆ ಅಕ್ಷರವೆಂದು ಬ್ರಾಹ್ಮಣರು ಹೇಳುತ್ತಾರೆ. ಅಸ್ಥೂಲವು, ಅನಣು, ಅಹ್ರಸ್ವವು,

ಅದೀರ್ಘವು, ಅಲೋಹಿತವು ; ಅಸ್ನೇಹವು" (ಬೃ. ೩-೮-೮) ಇತ್ಯಾದಿ. ಇದರಂತೆ ಆಥರ್ವಣದಲ್ಲಿಯೂ "ಇನ್ನು ಪರ(ವಿದ್ಯೆಯು), ಅದರಿಂದ ಅದೃಶ್ಯವೂ ಅಗ್ರಾಹ್ಯವೂ ಅಗೋತ್ರವೂ ಅವರ್ಣವೂ.....ಆಗಿರುವ ಆ ಅಕ್ಷರವು ತಿಳಿಯಬರುತ್ತದೆ" (ಮುಂ. ೧-೧-೩) ಎಂದು ಮುಂತಾಗಿ ಶ್ರುತವಾಗಿದೆ. ಹೀಗೆಯೇ ಬೇರೆ ಕಡೆಯಲ್ಲಿಯೂ[1] ವಿಶೇಷನಿರಾಕರಣಪೂರ್ವಕವಾಗಿ ಅಕ್ಷರವು ಎಂದರೆ ಪರಬ್ರಹ್ಮವು ಶ್ರುತವಾಗಿರುತ್ತದೆ. ಆದರೆ ಅಲ್ಲಿ ಒಂದೊಂದು ಕಡೆಯಲ್ಲಿ ಕೆಲ ಕೆಲವು ಬೇರೆಯ ವಿಶೇಷಗಳನ್ನು ನಿಷೇಧಿಸಿರುತ್ತದೆ. ವಿಶೇಷಗಳನ್ನು ಪ್ರತಿಷೇಧಿಸಿರುವ ಬುದ್ಧಿಗಳು ಎಲ್ಲವೂ ಎಲ್ಲಾ ಕಡೆಯಲ್ಲಿಯೂ ಸೇರಬೇಕೊ, ಅಥವಾ (ಅಲ್ಲಲ್ಲಿಗೇ ಇರಬೇಕೆಂಬ) ವ್ಯವಸ್ಥೆಯಿರಬೇಕೊ ? ಎಂಬ ಸಂಶಯವುಂಟಾಗಲು ಶ್ರುತಿವಿಭಾಗದಿಂದ ವ್ಯವಸ್ಥೆಯೆಂದೇ (ಪೂರ್ವಪಕ್ಷವು) ಬಂದೊದಗಲಾಗಿ (ಈ ಸಿದ್ಧಾಂತವನ್ನು) ಹೇಳಿರುತ್ತದೆ.

ಅಕ್ಷರವಿಷಯಕವಾದ ವಿಶೇಷಗಳನ್ನು ಪ್ರತಿಷೇಧಮಾಡುವ ಬುದ್ಧಿಗಳು ಎಲ್ಲವನ್ನೂ ಎಲ್ಲಾ ಕಡೆಯಲ್ಲಿಯೂ ಸೇರಿಸಿಕೊಳ್ಳಬೇಕು. ಏಕೆಂದರೆ ಸಾಮಾನ್ಯ ತದ್ಭಾವಗಳಿವೆ. (ಇದರ ವಿವರ) :- ವಿಶೇಷಗಳನ್ನು ನಿರಾಕರಿಸುವದೆಂಬ ಬ್ರಹ್ಮ ಪ್ರತಿಪಾದನಪ್ರಕಾರವು ಎಲ್ಲೆಲ್ಲಿಯೂ ಸಮಾನವಾಗಿರುತ್ತದೆ ; ಪ್ರತಿಪಾದ್ಯವಾದ ಬ್ರಹ್ಮವು ಅದೇ, ಬೇರೆಯಲ್ಲ -ಎಂದು ಎಲ್ಲೆಲ್ಲಿಯೂ ಗೊತ್ತಾಗಿರುತ್ತದೆ. ಹೀಗಿರುವಲ್ಲಿ ಒಂದು ಕಡೆಯಲ್ಲಿ ಮಾಡಿದ ಬುದ್ಧಿಗಳು ಮತ್ತೊಂದು ಕಡೆಯಲ್ಲಿಯೂ ಏತಕ್ಕೆ ಆಗದೆ ಇದ್ದಾವು? "ಆನನ್ದಾದಯಃ ಪ್ರಧಾನಸ್ಯ" (೩-೩-೧೧) ಎಂಬಲ್ಲಿ ಹೀಗೆಯೇ ವ್ಯಾಖ್ಯಾನಮಾಡಿದ್ದಾಗಿದೆ. ಅಲ್ಲಿ ವಿಧಿರೂಪವಾದ ವಿಶೇಷಣಗಳನ್ನು ಕುರಿತು ವಿಚಾರಮಾಡಲಾಗಿದೆ ; ಇಲ್ಲಿ ಪ್ರತಿಷೇಧರೂಪವಾದವುಗಳನ್ನು ವಿಚಾರ ಮಾಡಲಾಗಿದೆ ಎಂಬುದು ವಿಶೇಷವು. ಈ ಚಿಂತಾಭೇದವು (ಅದನ್ನೇ) ವಿವರಿಸುವದಕ್ಕೆ.[2]

---

1. ಕಠ, ಮಾಂಡೂಕ್ಯ- ಮುಂತಾದವುಗಳಲ್ಲಿಯೂ.

2. ಆನಂದಾದಿಗಳು ಬ್ರಹ್ಮಸ್ವರೂಪವಾಗಿದ್ದರೂ ನಿಷೇಧಗಳು ಅನಾತ್ಮವಾಗಿರುವದರಿಂದಲೂ ನಿಷೇಧ್ಯಗಳು ಅನಂತವಾಗಿರುವದರಿಂದ ಅವೂ ಅನಂತವಾಗಿರುವದರಿಂದ ಒಂದೇ ಕಡೆಯಲ್ಲಿ ಅವನ್ನು ಉಪಸಂಹಾರಮಾಡುವದು ಅಶಕ್ಯವಾದ್ದರಿಂದಲೂ ಕೆಲವು ಗುಣಗಳನ್ನು ಉಪಸಂಹಾರಮಾಡಬೇಕೆಂದರೆ ಒಂದು ಕಡೆ ಹೇಳಿರುವ ನಿಷೇಧಗಳನ್ನೇ ಎಲ್ಲಾ ನಿಷೇಧಗಳಿಗೂ ಉಪಲಕ್ಷಣವಾಗಿ ಗ್ರಹಿಸಬಹುದಾದ್ದರಿಂದ ನಿಷೇಧಗಳೆಲ್ಲವನ್ನೂ ಉಪಸಂಹಾರಮಾಡಿಕೊಳ್ಳಬೇಕೆಂಬುದು ವ್ಯರ್ಥ- ಎಂದು ಶಂಕಿಸಿ ನಿಷೇಧಗಳು ಅನಾತ್ಮವಾದರೂ ನಿರ್ವಿಶೇಷವಾಗಿರುವ ಬ್ರಹ್ಮವನ್ನು ತಿಳಿಯುವದಕ್ಕೆ ಸಹಾಯವಾಗಿರುವದರಿಂದಲೂ ಅವು ಅನಂತವಾದರೂ ಭೂತಭೌತಿಕಾದಿರೂಪದಿಂದ ಮಿತವಾಗಿರುವದರಿಂದಲೂ ಉಪಸಂಹಾರವು ಬೇಕು ಎಂಬ ಸಮಾಧಾನವನ್ನು ನ್ಯಾ. ನಿ. ವ್ಯಾಖ್ಯಾನದಲ್ಲಿ ಹೇಳಿದೆ. ಇದಕ್ಕೆ ಸೂತ್ರಭಾಷ್ಯಗಳ ಆಧಾರವೇನೂ ಇರುವಂತೆ ತೋರಲಿಲ್ಲ. ಆದರದ್ದೇ ವಿವರಣೆಯಿದು ಎಂದು ಭಾಷ್ಯದಲ್ಲಿ ಸ್ಪಷ್ಟವಾಗಿ ಬರೆದೂ ಇದೆ.

# ಶಾಖಾಂತರದಲ್ಲಿ ಹೇಳಿದ ಧರ್ಮಗಳನ್ನು ಉಪಸಂಹಾರ ಮಾಡಬೇಕೆಂಬುದಕ್ಕೆ ನಿದರ್ಶನ

(ಭಾಷ್ಯ)

೩೮೩. 'ಔಪಸದವತ್' ಇತಿ ನಿದರ್ಶನಮ್ । ಯಥಾ ಜಾಮದಗ್ನ್ಯೇ ಅಹೀನೇ ಪುರೋಡಾಶಿನೀಷು ಉಪಸತ್ಸು ಚೋದಿತಾಸು ಪುರೋಡಾಶಪ್ರಧಾನ ಮನ್ತ್ರಾಣಾಮ್ "ಅಗ್ನೇರ್ವೇಹೋತ್ರಂ ವೇರಧ್ವರಮ್" (ತಾಂ.ಬ್ರಾ. ೨೧–೧೦–೧೧) ಇತ್ಯೇವಮಾದೀನಾಮುದ್ಗಾತೃವೇದೋತ್ಪನ್ನಾನಾಮಪಿ ಅಧ್ವರ್ಯುಭಿರಭಿಸಂಬನ್ಧೋ ಭವತಿ । ಅಧ್ವರ್ಯುಕರ್ತೃಕತ್ವಾತ್ ಪುರೋಡಾಶಪ್ರಧಾನಸ್ಯ ಪ್ರಧಾನತನ್ತ್ರತ್ವಾಚ್ಚಾಙ್ಗಾನಾಮ್ । ಏವಮ್ ಇಹಾಪಿ ಅಕ್ಷರತನ್ತ್ರತ್ವಾತ್ ತದ್ವಿಶೇಷಣಾನಾಂ ಯತ್ರ ಕ್ವಚಿದಪಿ ಉತ್ಪನ್ನಾನಾಮ್ ಅಕ್ಷರೇಣ ಸರ್ವತ್ರ ಅಭಿಸಂಬನ್ಧಃ ಇತ್ಯರ್ಥಃ । ತದುಕ್ತಂ ಪ್ರಥಮೇ ಕಾಣ್ಡೇ "ಗುಣಮುಖ್ಯವ್ಯತಿಕ್ರಮೇ ತದರ್ಥತ್ವಾನ್ಮುಖ್ಯೇನ ವೇದಸಂಯೋಗಃ" (ಜೈ. ಸೂ. ೩–೩–೯) ಇತ್ಯತ್ರ ॥

(ಭಾಷ್ಯಾರ್ಥ)

'ಔಪಸದಗಳಂತೆ' ಎಂಬುದು ಉದಾಹರಣೆ. ಜಾಮದಗ್ನ್ಯ ಅಹೀನ (ಯಾಗ)ದಲ್ಲಿ ಪುರೋಡಾಶಗಳಿಂದಾಗಬೇಕಾದ ಉಪಸತ್ತುಗಳು ಚೋದಿತವಾಗಿರುವಲ್ಲಿ[1] ಪುರೋಡಾಶಪ್ರದಾನದ ಮಂತ್ರಗಳೂ "ಅಗ್ನೇರ್ವೇಹೋತ್ರಂ ವೇರಧ್ವರಮ್'' (ತಾಂ.ಬ್ರಾ. ೨೧–೧೦–೧೧) ದೇವಗಣದ ಹೋತ್ರವು ಅಗ್ನಿಯಿಂದಲೇ, ಅಧ್ವರ(ಕರ್ಮ)ವೂ (ಅಗ್ನಿಯಿಂದಲೇ....) ಮುಂತಾದವು ಉದ್ಗಾತ (ಸಾಮ)ವೇದದಲ್ಲಿ ಉತ್ಪನ್ನವಾಗಿದ್ದರೂ ಪುರೋಡಾಶವನ್ನು ಕೊಡುವದು ಅಧ್ವರ್ಯುಕರ್ತೃಕವಾಗಿರುವದರಿಂದಲೂ ಅಂಗಗಳು ಪ್ರಧಾನಕ್ಕೆ ಅಧೀನ್ಯವಾಗಿರುವದರಿಂದಲೂ[2] ಅಧ್ವರ್ಯುಗಳಿಗೇ ಹೇಗೆ ಸಂಬಂಧಪಟ್ಟಿರುತ್ತವೆಯೋ, ಹಾಗೆ ಇಲ್ಲಿಯೂ ಅಕ್ಷರದ ವಿಶೇಷಣಗಳು ಅದಕ್ಕೇ ಅಧೀನವಾಗಿರುವದರಿಂದ ಎಲ್ಲೆಲ್ಲಿ ಅವುಗಳನ್ನು ಹೇಳಿದ್ದರೂ ಎಲ್ಲಾ ಕಡೆಯಲ್ಲಿಯೂ ಅಕ್ಷರಕ್ಕೆ ಸಂಬಂಧಿಸಿ

---

1. ತೈ. ಸಂ. ೭–೧–೯ರಲ್ಲಿ ನಾಲ್ಕು ದಿನಗಳವರೆಗೆ ಅಖಂಡವಾಗಿ ನಡೆಯುವ ಜಾಮದಗ್ನ್ಯವೆಂಬ ಕ್ರತುವಿದೆ. ಅದರಲ್ಲಿ ಪುರೋಡಾಶದ ಉಪಸತ್ತುಗಳನ್ನು ಕೊಡಬೇಕೆಂದು ವಿಧಿಸಿದೆ. ಪುರೋಡಾಶಪ್ರದಾನದಿಂದ ಪಶುಗಳು, ಅನ್ನ– ಎಂಬ ಫಲವಾಗುವದೆಂದು ಅಲ್ಲಿ ಹೇಳಿದೆ.

2. ಅಂಗವಾಗಿರುವ ಪುರೋಡಾಶಪ್ರದಾನಮಂತ್ರಗಳು ಪ್ರಧಾನವಾದ ಅಧ್ವರ್ಯುಕರ್ಮಕ್ಕೆ ಅಧೀನವಾಗಿರುವದು ಯುಕ್ತ; ಉದ್ಗಾತೃವಿಗೆ ಈ ಕರ್ಮವಿಲ್ಲದ್ದರಿಂದ ಮಂತ್ರಗಳನ್ನು ಅವನು ಹೇಳತಕ್ಕದ್ದಲ್ಲ.

ಕೊಳ್ಳಬೇಕು ಎಂದರ್ಥ.[1] ಇದನ್ನು ಪ್ರಥಮಕಾಂಡದಲ್ಲಿ "ಗುಣಮುಖ್ಯಗಳ ವಿರೋಧವಾದರೆ ವೇದಸಂಬಂಧವು ಮುಖ್ಯಕ್ಕೆ ಆಗಬೇಕು, ಏಕೆಂದರೆ (ಗುಣವು) ಅದಕ್ಕಾಗಿರುತ್ತದೆ" (ಜೈ. ಸೂ. ೩-೩-೯) ಎಂಬಲ್ಲಿ ಹೇಳಿರುತ್ತದೆ.[2]

## ೨೧. ಇಯದಧಿಕರಣ

(ಮುಂಡಕಕಠಗಳಲ್ಲಿರುವ ವಿದ್ಯೆಯು ಒಂದೇ)

**ಇಯದಾಮನನಾತ್ ॥ ೩೪ ॥**

೩೪. ಇಷ್ಟೇ ಎಂದು ಪಠಿಸಿರುವದರಿಂದ (ವಿದ್ಯೆಯು ಒಂದೇ).

### ಪೂರ್ವಪಕ್ಷ: 'ದ್ವಾ ಸುಪರ್ಣಾ', 'ಗುಹಾಂ ಪ್ರವಿಷ್ಟೌ' ಇವೆರಡೂ ಬೇರೆಬೇರೆ ವಿದ್ಯೆಗಳು

(ಭಾಷ್ಯ)

೩೮೪. "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ। ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿ ಚಾಕಶೀತಿ" (ಮುಂ.೩-೧-೧) ಇತ್ಯಧ್ಯಾತ್ಮಾಧಿಕಾರೇ ಮನ್ತ್ರಮ್ ಆಥರ್ವಣಿಕಾಃ ಶ್ವೇತಾಶ್ವತರಾಶ್ಚ ಪಠನ್ತಿ। ತಥಾ ಕಠಾಃ "ಋತಂ ಪಿಬನ್ತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ। ಛಾಯಾತಪೌ ಬ್ರಹ್ಮವಿದೋ ವದನ್ತಿ ಪಞ್ಚಾಗ್ನಯೋ ಯೇ ಚ ತ್ರಿಣಾಚಿಕೇತಾಃ" (ಕ. ೧-೩-೧) ಇತಿ। ಕಿಮತ್ರ ವಿದ್ಯೈಕತ್ವಮ್ ಉತ ವಿದ್ಯಾನಾನಾತ್ವಮ್ ಇತಿ ಸಂಶಯಃ। ಕಿಂ ತಾವತ್ ಪ್ರಾಪ್ತಮ್? ವಿದ್ಯಾನಾನಾತ್ವಮಿತಿ। ಕುತಃ? ವಿಶೇಷದರ್ಶನಾತ್।

---

1. ಇದು ಗುಣೋಪಸಂಹಾರಮಾಡಿಕೊಂಡು ಉಪಾಸನೆಮಾಡತಕ್ಕದ್ದೇನೂ ಅಲ್ಲವಾದ್ದರಿಂದ ಯಾವ ವಿಶೇಷವೂ ಆತ್ಮನಲ್ಲಿಲ್ಲವೆಂದು ತಿಳಿಯಬೇಕು ಎಂಬುದೇ ಇಲ್ಲಿ ವಿವಕ್ಷಿತ.

2. ಯಜುರ್ವೇದಕ್ಕೆ ಸಂಬಂಧಪಟ್ಟ ಅಗ್ನ್ಯಾಧಾನದಲ್ಲಿ ವಾರವಂತೀಯವೇ ಮುಂತಾದ ಸಾಮಗಳನ್ನು ಗಾನಮಾಡಬೇಕಾಗುತ್ತದೆ; ಅಲ್ಲಿ ಗಟ್ಟಿಯಾಗಿ ಸಾಮವೇದದಂತೆ ಗಾನಮಾಡಬೇಕೆ, ಅಥವಾ ಉಪಾಂಶುವಾಗಿ ಯಜುರ್ವೇದದಂತೆ ಗಾನಮಾಡಬೇಕೆ? —ಎಂಬ ಸಂಶಯ ಬರಲು ಸಾಮಗಾನವು ಗುಣವಾಗಿರುವದರಿಂದಲೂ ಅಗ್ನ್ಯಾಧಾನವು ಮುಖ್ಯವಾಗಿರುವದರಿಂದಲೂ ಮುಖ್ಯವಾದ ಯಜುರ್ವೇದಕರ್ಮಕ್ಕೆ ತಕ್ಕಂತೆ ಉಪಾಂಶುವಾಗಿಯೇ ಗಾನಮಾಡಬೇಕು; ಸಾಮಗಾನವನ್ನು ಗಟ್ಟಿಯಾಗಿ ಮಾಡಬೇಕೆಂಬ ನಿಯಮವನ್ನನುಸರಿಸಬಾರದೆಂದು ಶಾ. ಭಾ. ದಲ್ಲಿ ಹೇಳಿದೆ. ಇಲ್ಲಿ ಮುಖ್ಯವನ್ನು ಗುಣವು ಅನುಸರಿಸಬೇಕೆಂಬುದಿಷ್ಟೇ ವಿವಕ್ಷಿತ.

"ದ್ವಾ ಸುಪರ್ಣಾ" ಇತ್ಯತ್ರ ಹಿ ಏಕಸ್ಯ ಭೋಕ್ತೃತ್ವಂ ದೃಶ್ಯತೇ। ಏಕಸ್ಯ ಚ ಅಭೋಕ್ತೃತ್ವಂ ದೃಶ್ಯತೇ। 'ಋತಂ ಪಿಬನ್ತೌ'. ಇತ್ಯತ್ರ ಉಭಯೋರಪಿ ಭೋಕ್ತೃತ್ವಮೇವ ದೃಶ್ಯತೇ। ತದ್ವೇದ್ಯರೂಪಂ ಭಿದ್ಯಮಾನಂ ವಿದ್ಯಾಂ ಭಿನ್ದ್ಯಾತ್ ಇತಿ ॥

(ಭಾಷ್ಯಾರ್ಥ)

"ಜೊತೆಯಲ್ಲಿರುವ ಸಖರಾದ ಎರಡು ಹಕ್ಕಿಗಳು ಒಂದೇ ಮರವನ್ನು ಆಲಂಬಿಸಿಕೊಂಡಿರುತ್ತವೆ. ಅವುಗಳಲ್ಲಿ ಒಂದು ಪಿಪ್ಪಲವನ್ನು ಸವಿದು ತಿನ್ನುತ್ತದೆ; ಇನ್ನೊಂದು ತಿನ್ನದೆ ನೋಡುತ್ತಿರುತ್ತದೆ" (ಮುಂ. ೩-೧-೧, ಶ್ವೇ. ೪-೬) ಎಂಬ ಮಂತ್ರವನ್ನು ಅಧ್ಯಾತ್ಮಪ್ರಕರಣದಲ್ಲಿ ಆಥರ್ವಣಿಕರೂ ಶ್ವೇತಾಶ್ವತರರೂ ಪಠಿಸುತ್ತಾರೆ. ಇದರಂತೆ ಕಠರು "ಸುಕೃತದ ಸತ್ಯ(ಫಲವನ್ನು) ಲೋಕದಲ್ಲಿ ಪಾನಮಾಡುತ್ತಾ ಪರಸ್ಥಾನದಲ್ಲಿ ಗುಹೆಯನ್ನು ಹೊಕ್ಕಿರುವ (ಇಬ್ಬರನ್ನು) ನೆರಳುಬಿಸಿಲುಗಳೆಂದು ಬ್ರಹ್ಮವಿದರೂ, ಪಂಚಾಗ್ನಿಗಳೂ ತ್ರಿಣಾಚಿಕೇತರೂ ಹೇಳುವರು" (ಕ. ೧-೩-೧) ಎಂದು (ಪಠಿಸುತ್ತಾರೆ). ಇಲ್ಲಿ ವಿದ್ಯೈಕತ್ವವೆ, ಅಥವಾ ವಿದ್ಯಾನಾನಾತ್ವವೆ ? ಎಂದು ಸಂಶಯವು.

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ವಿದ್ಯೆಗಳು ಬೇರೆ ಎಂದು. ಏಕೆ ? ಎಂದರೆ ವಿಶೇಷವು ಕಂಡುಬರುವದರಿಂದ. "ಎರಡು ಹಕ್ಕಿಗಳು" ಎಂಬಲ್ಲಿ ಒಂದಕ್ಕೆ ಭೋಕ್ತೃತ್ವವು ಕಾಣುತ್ತದೆ. ಮತ್ತೊಂದಕ್ಕೆ ಅಭೋಕ್ತೃತ್ವವು ಕಾಣುತ್ತದೆ. (ಆದರೆ) "(ಸುಕೃತದ) ಸತ್ಯವನ್ನು ಪಾನಮಾಡುತ್ತಾ" ಎಂಬಲ್ಲಿ ಇಬ್ಬರಿಗೂ ಭೋಕ್ತೃತ್ವವೇ ಕಾಣಿಸುತ್ತಿದೆ. ಹೀಗೆ ವೇದ್ಯದ ರೂಪವು ಬೇರೆಬೇರೆಯಾಗಿರುವದರಿಂದ ವಿದ್ಯೆಯನ್ನು ಬೇರೆಬೇರೆಯಾಗಿ ಮಾಡಬಹುದಾಗಿದೆ.

## ಸಿದ್ಧಾಂತ: ವಿದ್ಯೆಗಳೆರಡೂ ಒಂದೇ

(ಭಾಷ್ಯ)

೩೮೫. ಏವಂ ಪ್ರಾಪ್ತೇ ಬ್ರವೀತಿ ವಿದ್ಯೈಕತ್ವಮಿತಿ। ಕುತಃ ? ಯತಃ ಉಭಯೋರಪಿ ಅನಯೋರ್ಮನ್ತ್ರಯೋಃ ಇಯತ್ತಾಪರಿಚ್ಛಿನ್ನಂ ದ್ವಿತ್ವೋಪೇತಂ ವೇದರೂಪಮ್ ಅಭಿನ್ನಮ್ ಆಮನನ್ತಿ। ನನು ದರ್ಶಿತೋ ರೂಪಭೇದಃ । ನೇತ್ಯುಚ್ಯತೇ । ಉಭಾವಪ್ಯೇತೌ ಮನ್ತ್ರೌ ಜೀವದ್ವಿತೀಯಮ್ ಈಶ್ವರಂ ಪ್ರತಿಪಾದಯತಃ, ನಾರ್ಥಾನ್ತರಮ್ । "ದ್ವಾ ಸುಪರ್ಣಾ" ಇತ್ಯತ್ರ ತಾವತ್ "ಅನಶ್ನನ್ನನ್ಯೋ ಅಭಿಚಾಕಶೀತಿ" ಇತ್ಯಶನಾಯಾದ್ಯತೀತಃ ಪರಮಾತ್ಮಾ ಪ್ರತಿಪಾದ್ಯತೇ। ವಾಕ್ಯಶೇಷೇಽಪಿ ಚ ಸ ಏವ ಪ್ರತಿಪಾದ್ಯಮಾನೋ ದೃಶ್ಯತೇ। "ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮ್"

(ಮುಂ. ೩–೧–೨, ಶ್ವೇ. ೪–೭)ಇತಿ। "ಋತಂ ಪಿಬನ್ತೌ" ಇತ್ಯತ್ರ ತು ಜೀವೇ ಪಿಬತಿ ಅಶನಾಯಾದ್ಯತೀತಃ ಪರಮಾತ್ಮಾಪಿ ಸಾಹಚರ್ಯಾತ್ ಛತ್ರಿನ್ಯಾಯೇನ 'ಪಿಬತಿ' ಇತ್ಯುಪಚರ್ಯತೇ। ಪರಮಾತ್ಮಪ್ರಕರಣಂ ಹಿ ಏತತ್ "ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್" (ಕ.೧–೨–೧೪) ಇತ್ಯುಪಕ್ರಮಾತ್। ತದ್ವಿಷಯ ಏವ ಚ ಅತ್ರಾಪಿ ವಾಕ್ಯಶೇಷೋ ಭವತಿ "ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ಪರಮ್" (ಕ.೧–೩–೨) ಇತಿ। "ಗುಹಾಂ ಪ್ರವಿಷ್ಟಾವಾತ್ಮಾನೌ ಹಿ" (೧–೨–೧೧) ಇತ್ಯತ್ರ ಚ ಏತತ್ ಪ್ರಪಞ್ಚಿತಮ್। ತಸ್ಮಾತ್ ನಾಸ್ತಿ ವೇದ್ಯಭೇದಃ। ತಸ್ಮಾಚ್ಚ ವಿದ್ಯೈಕತ್ವಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು ಇಲ್ಲಿ) ವಿದ್ಯೆಯು ಒಂದೇ ಎಂದು ಹೇಳಿರುತ್ತಾರೆ. ಏಕೆ ? ಎಂದರೆ ಈ ಎರಡು ಮತಗಳಲ್ಲಿಯೂ ಇಷ್ಟೆಂಬ ಪರಿಚ್ಛೇದವುಳ್ಳ, ದ್ವಿತ್ವದಿಂದೊಡಗೂಡಿದ, ಅದೇ ವೇದ್ಯ ರೂಪವನ್ನೇ ಪಠಿಸಿರುತ್ತಾರೆ.

(ಆಕ್ಷೇಪ) :– (ವೇದ್ಯಕ್ಕೆ) ರೂಪಭೇದವನ್ನು ತೋರಿಸಿಕೊಟ್ಟಿವೆಯಲ್ಲ !

(ಪರಿಹಾರ) :– ಇಲ್ಲ ಎನ್ನುತ್ತೇವೆ. ಈ ಎರಡು ಮಂತ್ರಗಳೂ ಜೀವನಿಗೆ ಎರಡನೆಯವನಾದ[1] ಈಶ್ವರನನ್ನು ಪ್ರತಿಪಾದಿಸುತ್ತವೆಯೇ ಹೊರತು ಬೇರೊಂದು ವಿಷಯವನ್ನು (ತಿಳಿಸು)ವದಿಲ್ಲ. ಮೊದಲನೆಯದಾಗಿ "ದ್ವಾ ಸುಪರ್ಣಾ" (ಎರಡು ಹಕ್ಕಿಗಳು) ಎಂಬಲ್ಲಿ "ಮತ್ತೊಂದು ತಿನ್ನದೆ ನೋಡುತ್ತಿರುತ್ತದೆ" ಎಂದು ಹಸಿವು ಮುಂತಾದವುಗಳನ್ನು ಮೀರಿರುವ ಪರಮಾತ್ಮನನ್ನು ಪ್ರತಿಪಾದಿಸಿರುತ್ತದೆ ; ವಾಕ್ಯಶೇಷದಲ್ಲಿಯೂ "ಯಾವಾಗ ಸೇವಿಸಲ್ಪಟ್ಟ ಮತ್ತೊಬ್ಬನಾದ ಈಶ್ವರನನ್ನು ಇವನ ಮಹಿಮೆಯೆಂದು ಕಂಡುಕೊಳ್ಳುವನೋ......" (ಮುಂ. ೩–೧–೨, ಶ್ವೇ. ೪–೭) ಎಂದು ಅವನನ್ನೇ ಪ್ರತಿಪಾದಿಸಿರುವದು ಕಂಡುಬರುತ್ತದೆ. "ಋತಂ ಪಿಬನ್ತೌ" (ಸತ್ಯಫಲವನ್ನು ಪಾನಮಾಡುತ್ತಾ) ಎಂಬಲ್ಲಿಯಾದರೋ ಜೀವನು ಪಾನಮಾಡುತ್ತಿರುವಲ್ಲಿ ಹಸಿವು ಮುಂತಾದವುಗಳನ್ನು ಮೀರಿರುವ ಪರಮಾತ್ಮನು ಸಾಹಚರ್ಯದಿಂದ ಛತ್ರಿನ್ಯಾಯದಿಂದ[2] ಗೌಣವಾಗಿ 'ಕುಡಿಯುತ್ತಾನೆ' ಎಂದಿದೆ. ಏಕೆಂದರೆ "ಧರ್ಮಕ್ಕಿಂತ ಬೇರೆಯಾಗಿ ಅಧರ್ಮ

1. ಜೀವನಿಗಿಂತ ವಿಲಕ್ಷಣವಾದ ಎಂದರ್ಥ ; ಜೀವನೊಬ್ಬನು, ಈಶ್ವರನೊಬ್ಬನು ಎಂಬ ಅಭಿಪ್ರಾಯವಿಲ್ಲ. ದ್ವಿತ್ವೋಪೇತನೆಂಬಲ್ಲಿ ಮಾಯಾಸಂಖ್ಯಾದ್ವಿತೀಯತ್ವವನ್ನು ಸ್ವೀಕರಿಸಬೇಕು.

2. ಒಬ್ಬನು ಛತ್ರಿಯನ್ನು ಹಿಡಿದಿದ್ದರೂ ಗುಂಪಿನವರೆಲ್ಲರನ್ನೂ ಛತ್ರಿಗಳು ಎಂದು ಕರೆಯುವಂತೆ ಎಂದರ್ಥ.

ಕ್ಕಿಂತ ಬೇರೆಯಾಗಿ" (ಕ. ೧–೨–೧೪) ಎಂದು ಉಪಕ್ರಮಿಸಿರುವದರಿಂದ ಇದು ಪರಮಾತ್ಮಪ್ರಕರಣವೇ ಆಗಿದೆ. ಇಲ್ಲಿಯೂ (ಆ ಪರಮಾತ್ಮನ) ವಿಷಯವಾಗಿಯೇ "ಯಾವನು ಯಾಗಮಾಡುವವರಿಗೆ ಸೇತುವೋ, ಯಾವದು ಪರವಾದ ಅಕ್ಷರವೋ....." (ಕ. ೧–೩–೨) ಎಂಬ ವಾಕ್ಯಶೇಷವಿದೆ. "ಗುಹಾಂ ಪ್ರವಿಷ್ಟಾವಾತ್ಮಾನೌ ಹಿ" (೧–೨–೧೧) ಎಂಬಲ್ಲಿಯೂ ಇದನ್ನು ವಿವರಿಸಿದ್ದಾಗಿದೆ.[1] ಆದ್ದರಿಂದ ವೇದ್ಯದ ಭೇದವಿಲ್ಲ; ಆದ್ದರಿಂದಲೂ ವಿದ್ಯೆಯು ಒಂದೇ.

## ಇದು ಪರಮಾತ್ಮವಿದ್ಯೆಯಾದ್ದರಿಂದಲೂ ವಿದ್ಯಾಭೇದವಿಲ್ಲ

(ಭಾಷ್ಯ)

೩೮೬. ಅಪಿ ಚ ತ್ರಿಷ್ವಪ್ಯೇತೇಷು ವೇದಾನ್ತೇಷು ಪೌರ್ವಾಪರ್ಯಾಲೋಚನೇ ಪರಮಾತ್ಮವಿದ್ಯೈವ ಅವಗಮ್ಯತೇ ತಾದಾತ್ಮ್ಯವಿವಕ್ಷಯೈವ ಜೀವೋಪಾದಾನಂ ನಾರ್ಥಾನ್ತರವಿವಕ್ಷಯಾ। ನ ಚ ಪರಮಾತ್ಮವಿದ್ಯಾಯಾಂ ಭೇದಾಭೇದವಿಚಾರಾವತಾರೋಽಸ್ತಿ ಇತ್ಯುಕ್ತಮ್। ತಸ್ಮಾತ್ ಪ್ರಪಞ್ಚಾರ್ಥ ಏವೈಷ ಯೋಗಃ। ತಸ್ಮಾಚ್ಚ ಅಧಿಕಧರ್ಮೋಪಸಂಹಾರಃ ಇತಿ॥

(ಭಾಷ್ಯಾರ್ಥ)

ಇದಲ್ಲದೆ ಈ ಮೂರು ವೇದಾಂತ(ವಾಕ್ಯ)ಗಳಲ್ಲಿಯೂ[2] ಹಿಂದುಮುಂದಿನ ಸಂದರ್ಭವನ್ನು ಆಲೋಚಿಸಿದರೆ ಪರಮಾತ್ಮವಿದ್ಯೆಯನ್ನೇ (ಹೇಳಿದೆಯೆಂದು) ನಿಶ್ಚಯವಾಗುತ್ತದೆ; (ಜೀವಪರಮಾತ್ಮರಿಗೆ) ತಾದಾತ್ಮ್ಯವನ್ನು ಹೇಳಬೇಕೆಂದೇ ಜೀವನನ್ನು ಹೇಳಿದೆಯೇ ಹೊರತು ಮತ್ತೆಯಾವ ವಿಷಯವನ್ನೂ ಹೇಳಬೇಕೆಂದುಹೊರಟಿಲ್ಲ.[3] ಪರಮಾತ್ಮವಿದ್ಯೆಯಲ್ಲಿ ಭೇದಾಭೇದಗಳ ವಿಚಾರವು ಬರು

---

1. ಗುಹಾಧಿಕರಣದಲ್ಲಿ ಕೊಟ್ಟಿರುವ ವ್ಯಾಖ್ಯಾಂತರವನ್ನು ಇಲ್ಲಿ ಪ್ರಸ್ತಾಪಿಸದೆ ಇರುವದರಿಂದ ಮೊದಲನೆಯ ವ್ಯಾಖ್ಯಾನವು ಭಾಷ್ಯಕಾರರಿಂದ ತಿರಸ್ಕೃತವಾಗಿದೆ ಎಂಬ ಟೀಕಾಕಾರರ ಅಭಿಪ್ರಾಯವು ಸರಿಯಲ್ಲವೆಂದು ತೋರುತ್ತದೆ. ಒಂದನೆಯ ಸಂಪುಟದ ೧೭೪ನೆಯ ಭಾ. ಭಾ. ದ ಅನುವಾದದಲ್ಲಿರುವ ಟಿಪ್ಪಣಿಯನ್ನು ನೋಡಿರಿ. ಗುಹಾಧಿಕರಣದಲ್ಲಿ ಸಿದ್ಧವಾಗಿರುವದನ್ನೇ ಇಲ್ಲಿ ವಿಸ್ತರಿಸಿದ್ದರೂ ಪುನರುಕ್ತಿಯಿಲ್ಲ. ಅಲ್ಲಿ ಈ ಮಂತ್ರಗಳೆಲ್ಲ ಜೀವನಿಗಿಂತ ವಿಲಕ್ಷಣನಾದ ಪರಮೇಶ್ವರನನ್ನು ಹೇಳುತ್ತವೆ ಎಂಬುದನ್ನು ಪ್ರತಿಪಾದಿಸಿತ್ತು; ಇಲ್ಲಿ ಪ್ರತಿಪಾದ್ಯನಾದ ಪರಮೇಶ್ವರನ ರೂಪಗಳು ಬೇರೆಯಾದ್ದರಿಂದ ಇವು ಬೇರೆಬೇರೆಯ ವಿದ್ಯೆಗಳು ಎಂಬ ಆಕ್ಷೇಪಕ್ಕೆ ಪರಿಹಾರವನ್ನು ಕೊಟ್ಟಿದೆ. ಆದ್ದರಿಂದ ಅಲ್ಲಿ ಸಿದ್ಧವಾಗಿದ್ದುದಕ್ಕೇ ಇಲ್ಲಿ ಅಧಿಕಾಶಂಕೆಯ ಪರಿಹಾರಮೂಲಕ ವಿವರಣವನ್ನು ಕೊಟ್ಟಿದೆ.

2. ಮುಂಡಕ, ಶ್ವೇತಾಶ್ವತರ, ಕಠ–ಇವುಗಳಲ್ಲಿ.

3. ಪರಮಾತ್ಮನ ವಿಷಯವಲ್ಲದೆ ಜೀವಾದಿಗಳ ವಿಷಯವೇನೂ ಇಲ್ಲಿ ವಿವಕ್ಷಿತವಾಗಿಲ್ಲ; ಇದು ಹಿಂದುಮುಂದಿನ ಸಂದರ್ಭದಿಂದ ಗೊತ್ತಾಗುತ್ತದೆ.

ವಂತೆಯೇ ಇಲ್ಲ ಎಂದು (ಹಿಂದೆಯೇ) ಹೇಳಿದೆ[1] ಆದ್ದರಿಂದ ಈ ಸೂತ್ರವು (ವಿಷಯವನ್ನು) ವಿವರಿಸುವದಕ್ಕಾಗಿಯೇ; ಆದ್ದರಿಂದಲೂ ಹೆಚ್ಚಾಗಿರುವ ಧರ್ಮಗಳನ್ನು ಉಪಸಂಹಾರಮಾಡಬೇಕು.[2]

## ೨೨. ಅಂತರಾಧಿಕರಣ (ಸೂ. ೩೫-೩೬)

### ಅನ್ತರಾ ಭೂತಗ್ರಾಮವತ್ ಸ್ವಾತ್ಮನಃ ॥ ೩೫ ॥

೩೫. ಭೂತಗ್ರಾಮದಂತೆ ಆತ್ಮನು ಒಳಗಿರುವದರಿಂದ (ವಿದ್ಯೆಗಳು ಒಂದೇ).

## ಉಶಸ್ತಕಹೋಲಪ್ರಶ್ನೆಗಳಲ್ಲಿ ಒಂದೇ ಬ್ರಹ್ಮವನ್ನು ಹೇಳಿದೆ

(ಭಾಷ್ಯ)

೩೮೭. "ಯತ್ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾನ್ತರಃ" (ಬೃ. ೩-೪-೧, ೩-೫-೧) ಇತ್ಯೇವಂ ದ್ವಿರುಷಸ್ತಕಹೋಲಪ್ರಶ್ನಯೋರ್ನೈರನ್ತರ್ಯೇಣ ವಾಜಸನೇಯಿನಃ ಸಮಾಮನನ್ತಿ। ತತ್ರ ಸಂಶಯಃ। ವಿದ್ಯೈಕತ್ವಂ ವಾ ಸ್ಯಾತ್, ವಿದ್ಯಾನಾನಾತ್ವಂ ವಾ ಇತಿ। ವಿದ್ಯಾನಾನಾತ್ವಮಿತಿ ತಾವತ್ ಪ್ರಾಪ್ತಮ್। ಅಭ್ಯಾಸಸಾಮರ್ಥ್ಯಾತ್। ಅನ್ಯಥಾ ಹಿ ಅನ್ಯೂನಾನತಿರಿಕ್ತಾರ್ಥೇ ದ್ವಿರಾಮ್ನಾನಮ್ ಅನರ್ಥಕಮೇವ ಸ್ಯಾತ್। ತಸ್ಮಾತ್ ಯಥಾ ಅಭ್ಯಾಸಾತ್ ಕರ್ಮಭೇದಃ ಏವಮ್ ಅಭ್ಯಾಸಾತ್ ವಿದ್ಯಾಭೇದಃ ಇತಿ ಏವಂ ಪ್ರಾಪ್ತೇ ಪ್ರತ್ಯಾಹ- ಅನ್ತರಾಮ್ನಾನಾವಿಶೇಷಾತ್ ಸ್ವಾತ್ಮನೋ ವಿದ್ಯೈಕತ್ವಮ್ ಇತಿ। ಸರ್ವಾನ್ತರೋ ಹಿ ಸ್ವಾತ್ಮಾ ಉಭಯತ್ರಾಪಿ ಅವಿಶಿಷ್ಟಃ ಪೃಚ್ಛ್ಯತೇ ಚ ಪ್ರತ್ಯುಚ್ಯತೇ ಚ। ನ ಹಿ ದ್ವೌ ಆತ್ಮಾನೌ ಏಕಸ್ಮಿನ್ ದೇಹೇ ಸರ್ವಾನ್ತರೌ ಸಂಭವತಃ। ತದಾ ಹಿ ಏಕಸ್ಯ ಆಞ್ಜಸಂ ಸರ್ವಾನ್ತರತ್ವಮ್

---

1. ಈ ಪಾದದ ಮೊದಲನೆಯ ಸೂತ್ರದ ಭಾಷ್ಯದಲ್ಲಿ.

2. ಈ ಸೂತ್ರದಲ್ಲಿ ವಿದ್ಯಾಭೇದಾಭೇದಚಿಂತೆಯೇ ವಿವಕ್ಷಿತವಲ್ಲ. ಏಕೆಂದರೆ ನಿರ್ಗುಣಪರಮಾತ್ಮಜ್ಞಾನದಲ್ಲಿ ಭೇದಕ್ಕೆ ಅವಕಾಶವೇ ಇಲ್ಲ. ಆದ್ದರಿಂದ ಪರಮಾತ್ಮಧರ್ಮಗಳನ್ನು ಎಲ್ಲಿ ಹೇಳಿದ್ದರೂ ಹಾಗೆಯೇ ತಿಳಿದುಕೊಳ್ಳುವದು ಜ್ಞಾನಕ್ಕೆ ಅವಶ್ಯವಾಗಿರುತ್ತದೆ. ಉಪಾಸ್ಯದ ಗುಣೋಪಸಂಹಾರವೇ ಪಾದಕ್ಕೆ ವಿಷಯವಾದರೂ ಆ ಪ್ರಸಂಗದಿಂದ ಪರಮಾತ್ಮಜ್ಞಾನದ ಧರ್ಮಗಳನ್ನೂ ಉಪಸಂಹಾರಮಾಡಿಕೊಂಡು ಅರಿಯಬೇಕೆಂದು ಹೇಳಿದೆ.

ಅವಕಲ್ಪೇತ । ಏಕಸ್ಯ ತು ಭೂತಗ್ರಾಮವತ್ ಸ್ವೈವ ತು ಸರ್ವಾನ್ತರತ್ವಂ ಸ್ಯಾತ್। ಯಥಾ ಚ ಪಞ್ಚಭೂತಸಮೂಹೇ ದೇಹೇ ಪೃಥಿವ್ಯಾ ಆಪೋ ಅನ್ತರಾಃ ಅದ್ಭ್ಯಸ್ತೇಜೋಽನ್ತರಮ್ ಇತಿ ಸತ್ಯಪಿ ಆಪೇಕ್ಷಿಕೇ ಅನ್ತರತ್ವೇ ನೈವ ಮುಖ್ಯಂ ಸರ್ವಾನ್ತರತ್ವಂ ಭವತಿ। ತಥಾ ಇಹಾಪಿ ಇತ್ಯರ್ಥಃ। ಅಥವಾ 'ಭೂತಗ್ರಾಮವತ್' ಇತಿ ಶ್ರುತ್ಯನ್ತರಂ ನಿದರ್ಶಯತಿ। ಯಥಾ "ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ" (ಶ್ವೇ. ೬–೧೧) ಇತ್ಯಸ್ಮಿನ್ ಮನ್ತ್ರೇ ಸಮಸ್ತೇಷು ಭೂತಗ್ರಾಮೇಷು ಏಕ ಏವ ಸರ್ವಾನ್ತರ ಆತ್ಮಾ ಆಮ್ನಾಯತೇ । ಏವಮ್ ಅನಯೋರಪಿ ಬ್ರಾಹ್ಮಣಯೋಃ ಇತ್ಯರ್ಥಃ। ತಸ್ಮಾತ್ ವೇದ್ಯೈಕತ್ವಾತ್ ವಿದ್ಯೈಕತ್ವಮ್ ಇತಿ ॥

(ಭಾಷ್ಯಾರ್ಥ)

"ಯಾವದು ನೇರಾದ ಅಪರೋಕ್ಷವಾದ ಬ್ರಹ್ಮವೋ, ಯಾವನು ಸರ್ವಾಂತರನಾದ ಆತ್ಮನೋ" (ಬೃ. ೩–೪–೧, ೩–೫–೧) ಎಂದಿಂತು ಎರಡು ಸಲ ಉಷಸ್ತಕಹೋಲಪ್ರಶ್ನೆಗಳಲ್ಲಿ ಒಂದಾಗುತ್ತಲೊಂದಾಗಿ ವಾಜಸನೇಯಿಗಳು ಪಠಿಸಿರುತ್ತಾರೆ. ಅಲ್ಲಿ ಸಂಶಯವೇನೆಂದರೆ (ಇವೆರಡಕ್ಕೂ) ವಿದ್ಯೈಕತ್ವವು ಆಗುವದೊ, ಅಥವಾ ವಿದ್ಯಾನಾನಾತ್ವವೊ ?

ಮೊದಲು ವಿದ್ಯಾನಾನಾತ್ವವೆಂಬ (ಪೂರ್ವಪಕ್ಷವು) ಬಂದೊದಗುತ್ತದೆ. ಅಭ್ಯಾಸದ ಸಾಮರ್ಥ್ಯದಿಂದ[1] (ಹೀಗೆಂದಾಗುತ್ತದೆ). ಹೀಗಿಲ್ಲದಿದ್ದರೆ ಹೆಚ್ಚು ಕಡಿಮೆಯೇನೂ ಇಲ್ಲದ ಅರ್ಥವನ್ನು ಎರಡು ಸಲ ಹೇಳುವದು ವ್ಯರ್ಥವೇ ಆಗುತ್ತದೆಯಲ್ಲವೆ? ಆದ್ದರಿಂದ ಹೇಗೆ ಅಭ್ಯಾಸದಿಂದ ಕರ್ಮಗಳು ಬೇರೆಬೇರೆಯಾಗುವವೋ ಹಾಗೆಯೇ ಅಭ್ಯಾಸದಿಂದ ವಿದ್ಯೆಗಳು ಬೇರೆಬೇರೆ(ಯಾಗಿರಬೇಕು).

ಹೀಗೆಂಬ (ಪೂರ್ವಪಕ್ಷವು) ಬಂದೊದಗಲು ಉತ್ತರವನ್ನು ಹೇಳುತ್ತಾರೆ. ಸ್ವಾತ್ಮನು ಒಳಗೆ (ಇದಾನೆಂದು) ಪಠಿಸಿರುವದು[2] ಸಮಾನವಾಗಿರುವದರಿಂದ ವಿದ್ಯೆಯೂ ಒಂದೇ. ಎಲ್ಲಕ್ಕೂ ಒಳಗಿರುವ ಸ್ವಾತ್ಮನನ್ನು ಎರಡು ಕಡೆಯಲ್ಲಿಯೂ ಸಮಾನವಾಗಿಯೇ ಕೇಳಿರುತ್ತದೆ, ಮತ್ತು ಉತ್ತರದಲ್ಲಿ ಹೇಳಿರುತ್ತದೆ. ಇಬ್ಬರು

---

1. ಸಮಿಧೋ ಯಜತಿ, ತನೂನಪಾತಂ ಯಜತಿ–ಮುಂತಾದ ವಾಕ್ಯಗಳಲ್ಲಿ ಯಜತಿ ಶಬ್ದದ ಅಭ್ಯಾಸವಿರುವದರಿಂದ ಕರ್ಮಗಳು ಬೇರೆಬೇರೆ ಎಂಬ ಸಿದ್ಧಾಂತ. ಜೈ. ಸೂ. ೨–೨–೨ರ ಭಾಷ್ಯವನ್ನು ನೋಡಿ.

2. ಆಮ್ನಾನಾತ್ ಎಂಬ ಮಾತನ್ನು ಹಿಂದಿನ ಸೂತ್ರದಿಂದ ಅನುವೃತ್ತಿಮಾಡಿಕೊಳ್ಳಬೇಕು ಎಂದು ಭಾವ. 'ಅಂತರಾ' ಎಂಬ ಶಬ್ದವನ್ನು ಒಳಗೆ ಎಂಬರ್ಥದಲ್ಲಿ ಸೂತ್ರದಲ್ಲಿ ಉಪಯೋಗಿಸಿದೆ ಎಂದು ಹೇಳಿದಂತಾಯಿತು.

ಆತ್ಮರು ಒಂದೇ ದೇಹದಲ್ಲಿ ಸರ್ವಾಂತರರಾಗಿರಲಾರರು.[1] ಏಕೆಂದರೆ ಆಗ ಒಬ್ಬನಿಗೆ ಮುಖ್ಯವಾದ ಸರ್ವಾಂತರತ್ವವು ಯುಕ್ತವಾದೀತು, ಮತ್ತೊಬ್ಬನಿಗೆ ಭೂತಗ್ರಾಮದಂತೆ ಸರ್ವಾಂತರತ್ವವು ಆಗಲೇ ಆರದು ; ಹೇಗೆ ಪಂಚಭೂತಗಳ ಸಮೂಹವಾದ ದೇಹದಲ್ಲಿ ಪೃಥಿವಿಗಿಂತ ಅಪ್ಪು ಒಳಗೆ, ಅಪ್ಪಿಗಿಂತ ತೇಜಸ್ಸು ಒಳಗೆ ಎಂದು ಆಪೇಕ್ಷಿಕವಾದ ಅಂತರತ್ವವು ಇದ್ದರೂ ಮುಖ್ಯವಾದ ಸರ್ವಾಂತರತ್ವವು ಹೇಗೆ ಇರಲೇ ಆರದೋ[2] ಹಾಗೆಯೇ ಇಲ್ಲಿಯೂ (ಆಗಲಾರದು) ಎಂದರ್ಥ.

ಅಥವಾ (ಸೂತ್ರದಲ್ಲಿ) 'ಭೂತಗ್ರಾಮದಂತೆ' ಎಂಬ ಮಾತು ಶ್ರುತ್ಯಂತರವನ್ನು ನಿದರ್ಶನವಾಗಿ ಹೇಳಿದೆ (ಎಂದೂ ಅರ್ಥಮಾಡಬಹುದು). ಹೇಗೆ "ಒಬ್ಬನೇ ದೇವನು ಸರ್ವಭೂತಗಳಲ್ಲಿಯೂ ಗೂಢನಾಗಿರುತ್ತಾನೆ, (ಅವನು) ಸರ್ವವ್ಯಾಪಿಯು, ಸರ್ವಭೂತಗಳ ಅಂತರಾತ್ಮನು" (ಶ್ವೇ. ೬–೧೧) ಎಂಬೀ ಮಂತ್ರದಲ್ಲಿ ಎಲ್ಲಾ ಭೂತಗ್ರಾಮಗಳಲ್ಲಿಯೂ ಒಬ್ಬನೇ ಸರ್ವಾಂತರನಾದ ಆತ್ಮನೆಂದು ಪಠಿತವಾಗಿರುತ್ತದೆಯೋ ಹಾಗೆ ಈ (ಎರಡು) ಬ್ರಾಹ್ಮಣಗಳಲ್ಲಿಯೂ (ಒಬ್ಬನನ್ನೇ ಹೇಳಿದೆ) ಎಂದರ್ಥ. ಆದ್ದರಿಂದ ವೇದ್ಯವು ಒಂದೇ ಆಗಿರುವದರಿಂದ ವಿದ್ಯೆಯು ಒಂದೇ.[3]

**ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶಾನ್ತರವತ್ ॥ ೩೬ ॥**

೩೬. ಹೀಗಲ್ಲದಿದ್ದರೆ ಭೇದವು ಹೊಂದುವದಿಲ್ಲ ಎಂದರೆ, ಹಾಗಲ್ಲ; ಏಕೆಂದರೆ ಉಪದೇಶಾಂತರದಂತೆ (ಆಗಬಹುದಾಗಿದೆ).

## ಅದೇ ಆತ್ಮನನ್ನು ಮತ್ತೆ ಮತ್ತೆ ಹೇಳಿರುವದಕ್ಕೆ ಗತಿ

(ಭಾಷ್ಯ)

೩೮೮. ಅಥ ಯದುಕ್ತಮ್ ಅನಭ್ಯುಪಗಮ್ಯಮಾನೇ ವಿದ್ಯಾಭೇದೇ ಆಮ್ನಾನಭೇದಾನುಪಪತ್ತಿಃ ಇತಿ, ತತ್ ಪರಿಹರ್ತವ್ಯಮ್ । ಅತ್ರೋಚ್ಯತೇ ।

---

1. ಸರ್ವಾಂತರನಾದ ಆತ್ಮನನ್ನು ಹೇಳು, ಅವನೇ ನಿನ್ನ ಸರ್ವಾಂತರನಾದ ಆತ್ಮನು ಎಂಬ ಪ್ರಶ್ನೋತ್ತರಗಳು ಎರಡಕ್ಕೂ ಸಮಾನವಾಗಿವೆ. ಒಬ್ಬರಿಗೆ ಇಬ್ಬರು ಸರ್ವಾಂತರಾತ್ಮರು ಇರಲಾರರು; ಉಷಸ್ತನಿಗೊಬ್ಬ, ಕಹೋಲನಿಗೊಬ್ಬ– ಎಂದೂ ಹೇಳುವದಕ್ಕಿಲ್ಲ. ಏಕೆಂದರೆ ಅಪರೋಕ್ಷವಾದ ಮುಖ್ಯಾತ್ಮನು ಒಬ್ಬನೇ ಹೊರತು ಇಬ್ಬರಾಗಲಾರರು.

2. ಆಕಾಶವೇ ಸರ್ವಾಂತರವಾಗಿರುವದೋ. ಮಿಕ್ಕವುಗಳು ಆಪೇಕ್ಷಿಕವಾಗಿ ಒಂದರೊಳಗೊಂದು ಇರುವವೋ ಎಂದರ್ಥ.

3. ಇಲ್ಲಿಯೂ ಪರಮಾತ್ಮವಿದ್ಯೆಯಾದ್ದರಿಂದ ಭೇದಾಭೇದಚಿಂತೆಗೆ ಅವಕಾಶವಿಲ್ಲವೆಂಬ ಯುಕ್ತಿಯನ್ನು ಹೊಂದಿಸಿಕೊಳ್ಳಬೇಕು.

ನಾಯಂ ದೋಷಃ । ಉಪದೇಶಾನ್ತರವತ್ ಉಪಪತ್ತೇಃ । ಯಥಾ ತಾಣ್ಡಿನಾಮ್ ಉಪನಿಷದಿ ಷಷ್ಠೇ ಪ್ರಪಾಠಕೇ "ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ" (ಛಾಂ. ೬-೮-೭) ಇತಿ ನವಕೃತ್ವೋಽಪಿ ಉಪದೇಶೇ ನ ವಿದ್ಯಾಭೇದೋ ಭವತಿ । ಏವಮ್ ಇಹಾಪಿ ಭವಿಷ್ಯತಿ । ಕಥಂ ಚ ನವಕೃತ್ವೋಽಪ್ಯುಪದೇಶೇ ವಿದ್ಯಾಭೇದೋ ನ ಭವತಿ? ಉಪಕ್ರಮೋಪಸಂಹಾರಾಭ್ಯಾಮ್ ಏಕಾರ್ಥತಾವಗಮಾತ್ । "ಭೂಯ ಏವ ಮಾ ಭಗವಾನ್ ವಿಜ್ಞಾಪಯತು" (ಛಾಂ. ೬-೫-೪) ಇತಿ ಚ ಏಕಸ್ಯೈವ ಅರ್ಥಸ್ಯ ಪುನಃ ಪುನಃ ಪ್ರತಿಪಿಪಾದಯಿಷಿತತ್ವೇನ ಉಪಕ್ಷೇಪಾತ್ । ಆಶಙ್ಕಾನ್ತರನಿರಾಕರಣೇನ ಚ ಅಸಕೃತ್ ಉಪದೇಶೋಪಪತ್ತೇಃ । ಏವಮ್ ಇಹಾಪಿ ಪ್ರಶ್ನರೂಪಾಭೇದಾತ್ "ಅತೋಽನ್ಯದಾರ್ತಮ್" (ಬೃ. ೩-೪-೨, ೩-೫-೧) ಇತಿ ಪರಿಸಮಾಪ್ತ್ಯವಿಶೇಷಾತ್ ಉಪಕ್ರಮೋಪಸಂಹಾರೌ ತಾವದೇಕಾರ್ಥವಿಷಯೌ ದೃಶ್ಯೇತೇ । "ಯದೇವ ಸಾಕ್ಷಾದಪರೋಕ್ಷಾದ್ಬ್ರಹ್ಮ" (ಬೃ. ೩-೫-೧) ಇತಿ ದ್ವಿತೀಯೇ ಪ್ರಶ್ನೇ ಏವಕಾರಂ ಪ್ರಯುಞ್ಜಾನಃ ಪೂರ್ವಪ್ರಶ್ನಗತಮೇವ ಅರ್ಥಮ್ ಉತ್ತರತ್ರ ಅನುಕೃಷ್ಯಮಾಣಂ ದರ್ಶಯತಿ । ಪೂರ್ವಸ್ಮಿಂಶ್ಚ ಬ್ರಾಹ್ಮಣೇ ಕಾರ್ಯಕರಣವ್ಯತಿರಿಕ್ತಸ್ಯ ಆತ್ಮನಃ ಸದ್ಭಾವಃ ಕಥ್ಯತೇ, ಉತ್ತರಸ್ಮಿಂಸ್ತು ತಸ್ಯೈವ ಅಶನಾಯಾದಿಸಂಸಾರಧರ್ಮಾತೀತತ್ವಂ ಕಥ್ಯತೇ ಇತ್ಯೇಕಾರ್ಥತೋಪಪತ್ತಿಃ । ತಸ್ಮಾದೇವಾವಿದ್ಯೇತಿ ॥

(ಭಾಷ್ಯಾರ್ಥ)

ಇನ್ನು ವಿದ್ಯೆಗಳು ಬೇರೆಬೇರೆ ಎಂದು ಒಪ್ಪದಿದ್ದರೆ ಬೇರೆಬೇರೆಯಾಗಿ (ಎರಡು ಸಲ) ಪಠಿಸಿರುವದು ಹೊಂದುವದಿಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದಕ್ಕೆ ಹೇಳುತ್ತೇವೆ. ಇದು ದೋಷವಲ್ಲ, ಏಕೆಂದರೆ ಮತ್ತೊಂದು ಉಪದೇಶದಂತೆ (ಇದು) ಹೊಂದುತ್ತದೆ. (ಇದರ ವಿವರ) : ಹೇಗೆ ತಾಂಡಿಗಳ (ಛಾಂದೋಗ್ಯ) ಉಪನಿಷತ್ತಿನಲ್ಲಿ ಆರನೆಯ ಪ್ರಪಾಠಕದಲ್ಲಿ "ಅದೇ ಆತ್ಮನು, ಶ್ವೇತಕೇತುವೆ, ಅದೇ ನೀನು" (ಛಾಂ. ೬-೮-೭) ಎಂದು ಒಂಬತ್ತು ಸಲ ಉಪದೇಶಮಾಡಿದ್ದರೂ ವಿದ್ಯೆಗಳು ಬೇರೆಬೇರೆಯೆಂದಾಗುವದಿಲ್ಲವೋ ಹಾಗೆಯೇ ಇಲ್ಲಿಯೂ ಆಗಬಹುದಾಗಿದೆ.

(ಆಕ್ಷೇಪ) :— ಒಂಬತ್ತು ಸಲ ಉಪದೇಶಿಸಿದ್ದರೂ (ಅಲ್ಲಿ) ವಿದ್ಯೆಗಳು ಭಿನ್ನವೆಂದಾಗುವದಿಲ್ಲವೆಂಬುದು ಹೇಗೆ ?

(ಪರಿಹಾರ) :— ಉಪಕ್ರಮೋಪಸಂಹಾರಗಳಿಂದ ಒಂದೇ ಅರ್ಥವೆಂದು ನಿಶ್ಚಯುವಾಗುವದರಿಂದ, ಮತ್ತು "ಪೂಜ್ಯರಾದ ತಾವು ಮತ್ತೂ ನನಗೆ ತಿಳಿಸಿಕೊಡಬೇಕು" (ಛಾಂ. ೬-೫-೪, ೬-೬-೫....) ಎಂದು ಒಂದೇ ವಿಷಯುವನ್ನು

ಮತ್ತೆಮತ್ತೆ ಪ್ರತಿಪಾದನಮಾಡಿರುತ್ತದೆ ಎಂಬುದನ್ನು ಸೂಚಿಸಿರುವದರಿಂದ. ಬೇರೆಬೇರೆಯ ಆಶಂಕೆಗಳನ್ನು ನಿರಾಕರಣೆಮಾಡುವದರಿಂದ ಅನೇಕಸಾರಿ ಉಪದೇಶಮಾಡಿರುವದೂ ಹೊಂದುತ್ತದೆ ಹಾಗೆಯೇ ಇಲ್ಲಿಯೂ ಪ್ರಶ್ನೆಯ ರೂಪವು ಬೇರೆಯಾಗದೆ ಇರುವದರಿಂದಲೂ "ಇದಕ್ಕಿಂತ ಬೇರೆಯಾದದ್ದು ವಿನಾಶಿಯಾದದ್ದು'' (ಬೃ. ೩-೪-೨, ೩-೫-೧) ಎಂದು ಪರಿಸಮಾಪ್ತಿಯನ್ನು ಮಾಡಿರುವದರಲ್ಲಿಯೂ (ಯಾವ) ವಿಶೇಷವೂ ಇಲ್ಲದಿರುವದರಿಂದಲೂ ಉಪಕ್ರಮೋಪಸಂಹಾರಗಳಂತೂ ಒಂದೇ ವಿಷಯದವು ಎಂದು ಕಂಡುಬರುತ್ತದೆ. "ಯಾವದು ನೇರಾದ ಅಪರೋಕ್ಷಬ್ರಹ್ಮವೋ (ಅದನ್ನೇ)'' (ಬೃ. ೩-೫-೧) ಎಂದು ಎರಡನೆಯ ಪ್ರಶ್ನೆಯಲ್ಲಿ ಏವಕಾರವನ್ನು ಪ್ರಯೋಗಿಸಿರುವದರಿಂದ ಹಿಂದಿನ ಪ್ರಶ್ನೆಯಲ್ಲಿರುವ ಅರ್ಥವನ್ನೇ ಮುಂದಿನ (ಪ್ರಶ್ನೆ)ಯಲ್ಲಿಯೂ ಎಳೆದುಕೊಂಡಿದೆ ಎಂದು ತಿಳಿಸಿರುತ್ತದೆ. ಇದಲ್ಲದೆ ಹಿಂದಿನ ಬ್ರಾಹ್ಮಣದಲ್ಲಿ ಕಾರ್ಯಕಾರಣವ್ಯತಿರಿಕ್ತನಾದ ಆತ್ಮನು ಇದಾನೆಂದು ಹೇಳಿದೆ; ಮುಂದಿನ (ಬ್ರಾಹ್ಮಣ)ದಲ್ಲಿಯೋ ಎಂದರೆ ಅವನೇ ಹಸಿವು ಮುಂತಾದ ಸಂಸಾರಧರ್ಮಗಳನ್ನೂ ಮೀರಿರುತ್ತಾನೆ ಎಂದು ಹೇಳಿದೆ; ಆದ್ದರಿಂದ (ಇವೆರಡಕ್ಕೂ) ಒಂದೇ ವಿಷಯವೆಂಬುದು ಯುಕ್ತವಾಗಿದೆ. ಆದ್ದರಿಂದ (ಇದು) ಒಂದೇ ವಿದ್ಯೆ.

## ೨೩. ವ್ಯತಿಹಾರಾಧಿಕರಣ

(ಐತರೇಯಜಾಬಾಲಗಳಲ್ಲಿ ಉಪಾಸನೆಯು ಎರಡು ಬಗೆ)

### ವ್ಯತಿಹಾರೋ ವಿಶಿಂಷನ್ತಿ ಹೀತರವತ್ ॥ ೩೭ ॥

೩೭. ವಿನಿಮಯದಿಂದ (ಉಪಾಸನೆಯನ್ನು ಮಾಡಬೇಕು); ಏಕೆಂದರೆ ಇತರ (ಗುಣ)ಗಳಂತೆಯೇ ವಿಶೇಷವಾಗಿ ಹೇಳಿರುತ್ತಾರೆ.

## ಜೀವೇಶ್ವರೈಕ್ಯವಾಕ್ಯಗಳ ಬಗ್ಗೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

"[1] ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮ್" (ಐ.ಆ.೨-೨-೪) ಇತ್ಯಾದಿತ್ಯಪುರುಷಂ ಪ್ರಕೃತ್ಯ ಐತರೇಯಿಣಃ ಸಮಾಮನನ್ತಿ। ತಥಾ ಜಾಬಾಲಾಃ "ತ್ವಂ ವಾ ಅಹಮಸ್ಮಿ ಭಗವೋ ದೇವತೇಽಹಂ ವೈ ತ್ವಮಸಿ" (")[2] ಇತಿ। ತತ್ರ ಸಂಶಯಃ। ಕಿಮಿಹ ವ್ಯತಿಹಾರೇಣ ಉಭಯರೂಪಾ ಮತಿಃ ಕರ್ತವ್ಯಾ,

1. ಅಚ್ಚಿನ ಪುಸ್ತಕಗಳಲ್ಲಿರುವ 'ತಥಾ' ಹೆಚ್ಚೆಂದು ಬಿಟ್ಟುಬಿಟ್ಟಿದೇವೆ.

2. ಅಚ್ಚಿನ ಜಾಬಾಲೋಪನಿಷತ್ತಿನಲ್ಲಿ ಈ ವಾಕ್ಯವು ಕಾಣಬರುವದಿಲ್ಲ. ೪-೧-೩ರ ಭಾಷ್ಯದಲ್ಲಿ ಇದನ್ನು ಮತ್ತೆ ಉದಾಹರಿಸಿದೆ.

ಉತ ಏಕರೂಪ್ಯೈವ ಇತಿ ? ಏಕರೂಪ್ಯೈವ ಇತಿ ತಾವದಾಹ । ನ ಹಿ ಅತ್ರ ಆತ್ಮನ ಈಶ್ವರೇಣ ಏಕತ್ವಂ ಮುಕ್ತ್ವಾ ಅನ್ಯತ್ ಕಿಂಚಿತ್ ಚಿನ್ತಯಿತವ್ಯಮ್ ಅಸ್ತಿ । ಯದಿ ಚ ಏವಂ ಚಿನ್ತಯಿತವ್ಯೋ ವಿಶೇಷಃ ಪರಿಕಲ್ಪ್ಯೇತ ಸಂಸಾರಿಣಶ್ಚ ಈಶ್ವರಾತ್ಮತ್ವಮ್, ಈಶ್ವರಸ್ಯ (ಚ)[1] ಸಂಸಾರ್ಯಾತ್ಮತ್ವಮ್ ಇತಿ। ತತ್ರ ಸಂಸಾರಿಣಸ್ತಾವತ್ ಈಶ್ವರಾತ್ಮತ್ವೇ ಉತ್ಕರ್ಷೋ ಭವೇತ್ ಈಶ್ವರಸ್ಯ ತು ಸಂಸಾರ್ಯಾತ್ಮತ್ವೇ ನಿಕರ್ಷಃ ಕೃತಃ ಸ್ಯಾತ್ । ತಸ್ಮಾತ್ ಏಕರೂಪ್ಯಮೇವ ಮತೇಃ । ವ್ಯತಿಹಾರಾಮ್ನಾಯಸ್ತು ಏಕತ್ವದೃಢೀಕಾರಾರ್ಥಃ ಇತಿ ॥

(ಭಾಷ್ಯಾರ್ಥ)

"ಆದ್ದರಿಂದ ನಾನು ಯಾವನೋ ಇವನು ಅವನೇ; ಇವನು ಯಾವನೋ ಅವನೇ ನಾನು" (ಐ. ಆ. ೨-೨-೪) ಎಂದು ಆದಿತ್ಯಪುರುಷನ ಪ್ರಕರಣದಲ್ಲಿ **ಐತರೇಯರು** ಪಠಿಸುತ್ತಾರೆ. ಹಾಗೆಯೇ **ಜಾಬಾಲರು** "ಪೂಜ್ಯನಾದ ದೇವತೆಯೆ, ನೀನೇ ನಾನಾಗಿರುವೆನು, ನಾನೇ ನೀನಾಗಿರುವೆ'' (?) ಎಂದು (ಪಠಿಸುತ್ತಾರೆ). ಇಲ್ಲಿ ಸಂಶಯವೇನೆಂದರೆ ಇಲ್ಲೇನು ವಿನಿಮಯದಿಂದ ಎರಡು ರೂಪವಾದ ಭಾವನೆಯನ್ನು ಮಾಡಬೇಕೊ, ಅಥವಾ ಏಕರೂಪವಾದ (ಭಾವನೆಯನ್ನೇ) ಮಾಡಬೇಕೊ ?

(ಪೂರ್ವಪಕ್ಷಿಯು) ಮೊದಲು ಹೇಳುತ್ತಾನೇನೆಂದರೆ ಒಂದೇ ರೂಪವಾದ (ಭಾವನೆಯನ್ನು) ಮಾಡಬೇಕು. ಏಕೆಂದರೆ ಇಲ್ಲಿ ಆತ್ಮನು ಈಶ್ವರನೊಂದಿಗೆ ಒಂದಾಗಿರುತ್ತಾನೆಂಬುದನ್ನು ಬಿಟ್ಟರೆ ಮತ್ತೇನನ್ನೂ ಚಿಂತಿಸಬೇಕಾದದ್ದು ಇರುವದಿಲ್ಲವಷ್ಟೆ. ಇನ್ನು ಸಂಸಾರಿಗೆ ಈಶ್ವರತ್ವವನ್ನೂ ಈಶ್ವರನಿಗೆ ಸಂಸಾರಿಸ್ವರೂಪವನ್ನೂ (ಚಿಂತಿಸಬೇಕು) ಎಂದಿಂತು ಚಿಂತಿಸುವದು ವಿಶೇಷವೆಂದು ಕಲ್ಪಿಸುವದಾದರೆ, ಅಲ್ಲಿ ಮೊದಲನೆಯದಾಗಿ ಸಂಸಾರಿಗೆ ಈಶ್ವರಸ್ವರೂಪತ್ವವೆಂದರೆ ಹೆಚ್ಚುಗಾರಿಕೆಯಾಗುವದು, ಆದರೆ ಈಶ್ವರನಿಗೆ ಸಂಸಾರಿಸ್ವರೂಪತ್ವವೆಂದರೆ ಕೀಳ್ಮೆಯಾಗುವದು. ಆದ್ದರಿಂದ ಭಾವನೆಯು ಒಂದೇ ರೂಪವಾಗಿರಬೇಕು. ವಿನಿಮಯದಿಂದ ಪಠಿಸಿರುವದೋ ಎಂದರೆ ಏಕತ್ವವನ್ನು ಗಟ್ಟಿಗೊಳಿಸುವದಕ್ಕೆ.

## ಸಿದ್ಧಾಂತ :

## ಎರಡು ಬಗೆಯಿಂದ ಏಕತ್ವವನ್ನು ಚಿಂತಿಸಬೇಕು

(ಭಾಷ್ಯ)

೬೫೦. ಏವಂ ಪ್ರಾಪ್ತೇ ಪ್ರತ್ಯಾಹ– ವ್ಯತಿಹಾರೋಽಯಮ್ ಆಧ್ಯಾನಾಯ ಆಮ್ನಾಯತೇ ಇತರವತ್ । ಯಥಾ ಇತರೇ ಸರ್ವಾತ್ಮತ್ವಪ್ರಭೃತಯಃ ಆಧ್ಯಾನಾಯ ಆಮ್ನಾಯನ್ತೇ ತದ್ವತ್। ತಥಾ ಹಿ ವಿಶಿಂಷನ್ತಿ ಸಮಾಮ್ನಾತಾರಃ

1. ಇಲ್ಲೊಂದು 'ಚ' ಇರಬೇಕೆಂದು ಕಾಣುತ್ತದೆ.

ಉಭಯೋಚ್ಚಾರಣೇನ 'ತ್ವಮಹಮಸ್ಮಿ ಅಹಂ ಚ ತ್ವಮಸಿ' ಇತಿ। ತಚ್ಚ ಉಭಯರೂಪಾಯಾಂ ಮತೌ ಕರ್ತವ್ಯಾಯಾಮ್ ಅರ್ಥವದ್ ಭವತಿ। ಅನ್ಯಥಾ ಹಿ ಇದಂ ವಿಶೇಷೇಣ ಉಭಯಾಮ್ನಾನಮ್ ಅನರ್ಥಕಂ ಸ್ಯಾತ್। ಏಕೇನೈವ ಕೃತತ್ವಾತ್। ನನು ಉಭಯಾಮ್ನಾನಸ್ಯ ಅರ್ಥವಿಶೇಷೇ ಪರಿಕಲ್ಪ್ಯಮಾನೇ ದೇವತಾಯಾಃ ಸಂಸಾರ್ಯಾತ್ಮತ್ವಾಪತ್ತೇರ್ನಿಕರ್ಷಃ ಪ್ರಸಜ್ಯೇತ ಇತ್ಯುಕ್ತಮ್। ನೈಷ ದೋಷಃ। ಐಕಾತ್ಮ್ಯಸ್ಯೈವ ಅನೇನ ಪ್ರಕಾರೇಣ ಅನುಚಿನ್ತ್ಯಮಾನತ್ವಾತ್। ನನು ಏವಂ ಸತಿ ಸ ಏವ ಏಕತ್ವದೃಢೀಕಾರ ಆಪದ್ಯೇತ। ನ ವಯಮ್ ಏಕತ್ವದೃಢೀಕಾರಂ ವಾರಯಾಮಃ, ಕಿಂ ತರ್ಹಿ ವ್ಯತಿಹಾರೇಣ ಇಹ ದ್ವಿರೂಪಾ ಮತಿಃ ಕರ್ತವ್ಯಾ ವಚನಪ್ರಾಮಾಣ್ಯಾತ್, ನೈಕರೂಪಾ ಇತ್ಯೇತಾವತ್ ಉಪಪಾದಯಾಮಃ। ಫಲತಸ್ತು ಏಕತ್ವಮಪಿ ದೃಢೀಭವತಿ। ಯಥಾ ಆಧ್ಯಾನಾರ್ಥೇಽಪಿ ಸತ್ಯಕಾಮಾದಿಗುಣೋಪದೇಶೇ ತದ್ಗುಣ ಈಶ್ವರಃ ಪ್ರಸಿಧ್ಯತಿ, ತದ್ವತ್। ತಸ್ಮಾತ್ ಅಯಮ್ ಆಧ್ಯಾತವ್ಯೋ ವ್ಯತಿಹಾರಃ ಸಮಾನೇ ಚ ವಿಷಯೇ ಉಪಸಂಹರ್ತವ್ಯೋ ಭವತಿ ಇತಿ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಪ್ರತ್ಯುತ್ತರವನ್ನು (ಸೂತ್ರಕಾರರು) ಹೇಳುತ್ತಾರೆ. ಈ ವ್ಯತಿಹಾರವನ್ನು ಧ್ಯಾನಕ್ಕಾಗಿ ಪಠಿಸಿರುತ್ತದೆ. ಇತರ (ಗುಣಗ)ಳಂತೆ ಹೇಗೆ ಇತರ ಗುಣಗಳಾದ ಸರ್ವಾತ್ಮತ್ವವೇ ಮುಂತಾದವುಗಳನ್ನು ಆಧ್ಯಾನಕ್ಕಾಗಿ ಪಠಿಸಿದೆಯೋ ಅದರಂತೆ. ಆದ್ದರಿಂದಲೇ ಅಲ್ಲವೆ, ಪಠಿಸುವವರು "ನೀನೇ ನಾನಾಗಿರುವೆನು, ನಾನು ನೀನಾಗಿರುವೆ" ಎಂದು ಎರಡನ್ನೂ ಉಚ್ಚರಿಸಿ ವಿಶೇಷವಾಗಿ ಹೇಳಿರುತ್ತಾರೆ, ಹಾಗೆ (ಹೇಳಿರುವದು) ಎರಡು ರೂಪದಲ್ಲಿ ಮತಿಯನ್ನು ಮಾಡಬೇಕು ಎಂದಾದರೆ ಸಾರ್ಥಕವಾಗುತ್ತದೆ. ಏಕೆಂದರೆ ಹಾಗಿಲ್ಲದೆ ಇದ್ದರೆ ಒಂದೇ ಸಾಕಾಗಿರುವದರಿಂದ ಈ ಎರಡನ್ನೂ ವಿಶೇಷವಾಗಿ ಪಠಿಸಿರುವದು ಅನರ್ಥವಾಗುವದು.

(ಆಕ್ಷೇಪ) :– ಎರಡು ಬಗೆಯಲ್ಲಿ ಪಠಿಸಿರುವದಕ್ಕೆ ಬೇರೆಬೇರೆಯ ಅರ್ಥವನ್ನು ಕಲ್ಪಿಸುವದಾದರೆ ದೇವತೆಯು[1] ಸಂಸಾರಿಸ್ವರೂಪದ್ದು ಎಂದಾಗುವದರಿಂದ (ಅದಕ್ಕೆ) ಕೀಳ್ಮೆಯುಂಟಾಗುವದು ಎಂದು ಹೇಳಿದೆವಲ್ಲ ?

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಈ ಪ್ರಕಾರದಿಂದ ಏಕಸ್ವರೂಪತ್ವವನ್ನೇ ಅನುಚಿಂತನೆಮಾಡಲಾಗುತ್ತದೆ.

---

1. ಈಶ್ವರನು.

(ಆಕ್ಷೇಪ) :– ಹೀಗಾದರೆ ಏಕತ್ವದೃಢೀಕಾರವೆಂಬುದೇ ಬಂದುಬಿಡುತ್ತದೆಯಲ್ಲ !

(ಪರಿಹಾರ) :– ನಾನೇನೂ ಏಕತ್ವದೃಢೀಕಾರವನ್ನು ಬೇಡವೆನ್ನುತ್ತಿಲ್ಲ, ಮತ್ತೇನೆಂದರೆ ಇಲ್ಲಿ ವಚನಪ್ರಾಮಾಣ್ಯದಿಂದ ಎರಡು ರೂಪವಾದ ಮತಿಯನ್ನೇ ವ್ಯತಿಹಾರದಿಂದ ಮಾಡಬೇಕು, ಒಂದೇ ರೂಪವಾದ ಮತಿಯನ್ನು (ಮಾಡ) ಬಾರದು ಎನ್ನುತ್ತಿದೇವೆ. ಆದರೆ (ಇದರಿಂದ) ಫಲವಾಗಿ ಏಕತ್ವವೂ ಗಟ್ಟಿಯಾಗುತ್ತದೆ. **ಹೇಗೆ ಆಧ್ಯಾನಕ್ಕಾಗಿ ಸತ್ಯಕಾಮಾದಿಗುಣಗಳನ್ನು ಉಪದೇಶಿಸಿದರೂ ಆ ಗುಣಗಳುಳ್ಳ ಈಶ್ವರನು ಸಿದ್ಧನಾಗುತ್ತಾನೋ ಅದರಂತೆ(ಯೇ ಇದು)**[1]. ಆದ್ದರಿಂದ ಒಂದೇ ವಿಷಯದಲ್ಲಿಯೇ ಈ ಆಧ್ಯಾನಮಾಡಬೇಕಾದ ವ್ಯತಿಹಾರವನ್ನು ಒಟ್ಟುಗೂಡಿಸಿಕೊಳ್ಳಬೇಕೆಂದಾಯಿತು.

## ೨೪. ಸತ್ಯಾದ್ಯಧಿಕರಣ

**(ಬೃ. ೫–೪–೧, ೫–೫–೨ರಲ್ಲಿ ಹೇಳಿರುವ ಸತ್ಯವಿದ್ಯೆ ಒಂದೇ)**

**ಸೈವ ಹಿ ಸತ್ಯಾದಯಃ ॥ ೩೮ ॥**

೩೮. (ಸತ್ಯವಿದ್ಯೆಯು) ಅದೇ ; ಸತ್ಯಾದಿಗಳನ್ನು (ಉಪಸಂಹಾರಮಾಡಿಕೊಳ್ಳಬೇಕು).

## ಪೂ. ಪ: ಬೃಹದಾರಣ್ಯಕದಲ್ಲಿರುವ ಸತ್ಯವಿದ್ಯೆಗಳು ಎರಡು

(ಭಾಷ್ಯ)

೩೯೧. "ಸ ಯೋ ಹೈತಂ ಮಹದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮ[2]" (ಬೃ. ೪–೪–೧) ಇತ್ಯಾದಿನಾ ವಾಜಸನೇಯಕೇ ಸತ್ಯವಿದ್ಯಾಂ ಸನಾಮಾಕ್ಷರೋಪಾಸನಾಂ ವಿಧಾಯ ಅನನ್ತರಮ್ ಆಮ್ನಾಯತೇ "ತದ್ಯತ್ತತ್ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ ಮಣ್ಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷನ್ ಪುರುಷಃ" (ಬೃ. ೫–೫–೨) ಇತ್ಯಾದಿ । ತತ್ರ

1. ಉಪಾಸನಾರ್ಥವಾಗಿ ಗುಣಗಳನ್ನು ವಿಧಿಸಿದ್ದರೂ ಅದೇ ವಾಕ್ಯದಲ್ಲಿ ಗುಣಿಯಾದ ಈಶ್ವರನು ಸಿದ್ಧನಾಗುವಂತೆ ಇಲ್ಲಿಯೂ ಏಕಾತ್ಮತ್ವವು ಸಿದ್ಧವಾಗುತ್ತದೆ. ವಾಕ್ಯಭೇದವೋ ಏಕಾತ್ಮತ್ವವನ್ನು ಪ್ರತಿಪಾದನೆಮಾಡುವುದಕ್ಕೆ ಬಂದಿಲ್ಲ. ಎರಡು ಬಗೆಯಿಂದಲೂ ಉಪಾಸನೆಮಾಡಬೇಕೆಂದು ಹೇಳುವುದಕ್ಕೆ ಬಂದಿದೆ.

2. ಸತ್ಯಂ ಬ್ರಹ್ಮೇತಿ ಎಂದು ಮೂಲದಲ್ಲಿದೆ ; ಸೂತ್ರಭಾಷ್ಯದಲ್ಲಿ ಇತಿಯನ್ನು ಬಿಟ್ಟೇ ಇದೆಯೋ ಲೇಖಕರು ಕೈಬಿಟ್ಟಿದ್ದಾರೋ ತಿಳಿಯದು.

ಸಂಶಯಃ ಕಿಂ ದ್ವೇ ಏತೇ ಸತ್ಯವಿದ್ಯೇ ಕಿಂ ವಾ ಏಕೈವ ಇತಿ? ದ್ವೇ ಇತಿ ತಾವತ್ ಪ್ರಾಪ್ತಮ್। ಭೇದೇನ ಹಿ ಫಲಸಂಯೋಗೋ ಭವತಿ "ಜಯತೀಮಾಲ್ಲೋಕಾನ್" (ಬೃ. ೫-೪-೧) ಇತಿ ಪುರಸ್ತಾತ್। "ಹನ್ತಿ ಪಾಪ್ಮಾನಂ ಜಹಾತಿ ಚ" (ಬೃ.೫-೫-೩,೪) ಇತಿ ಉಪರಿಷ್ಟಾತ್। ಪ್ರಕೃತಾಕರ್ಷಣಂ ತು ಉಪಾಸ್ಯೈಕತ್ವಾತ್ ಇತಿ ॥

( ಭಾಷ್ಯಾರ್ಥ )

ವಾಜಸನೇಯಕದಲ್ಲಿ "ಯಾವನೇ ಆಗಲಿ ಈ ಮೊದಲು ಹುಟ್ಟಿದ ಮಹಾಯಕ್ಷನನ್ನು 'ಸತ್ಯಬ್ರಹ್ಮವು' ಎಂದು ಅರಿತುಕೊಳ್ಳುವನೋ", (ಬೃ. ೫-೪-೧) ಎಂದು ಮುಂತಾಗಿರುವ (ಗ್ರಂಥದಿಂದ) ನಾಮಾಕ್ಷರಗಳ ಉಪಾಸನೆಯೊಡನೆ[1] ಸತ್ಯವಿದ್ಯೆಯನ್ನು ವಿಧಿಸಿದಬಳಿಕ "(ಈ) ಸತ್ಯವೆಂಬುದಿದೆಯಲ್ಲ, ಅದೇ ಆ ಆದಿತ್ಯನು, ಈ ಮಂಡಲದಲ್ಲಿರುವ ಪುರುಷನಿದಾನಲ್ಲ, ಮತ್ತು ಈ ಬಲಗಣ್ಣಿನಲ್ಲಿರುವ ಪುರುಷನಿದಾನಲ್ಲ, (ಆ ಇಬ್ಬರೂ ಒಬ್ಬರಲ್ಲೊಬ್ಬರು ನಿಂತಿರುತ್ತಾರೆ ......)" (ಬೃ. ೫-೫-೨) ಎಂದು ಪಠಿಸಿರುತ್ತದೆ. ಇಲ್ಲಿ ಸಂಶಯವೇನೆಂದರೆ ಈ ಸತ್ಯವಿದ್ಯೆಗಳು ಎರಡೊ ಅಥವಾ ಒಂದೇಯೊ ?

ಮೊದಲು ಬಂದೊದಗುವ (ಪೂರ್ವಪಕ್ಷವೇನೆಂದರೆ) ಎರಡು ವಿದ್ಯೆ (ಗಳಿವು) ಎಂದು. ಏಕೆಂದರೆ ಫಲಸಂಯೋಗವು ಬೇರೆಬೇರೆಯಿದೆ; "ಈ ಲೋಕಗಳನ್ನು ಗೆದ್ದುಕೊಳ್ಳುವನು" (ಬೃ. ೫-೪-೧) ಎಂದು ಮೊದಲು, ಅವನು ಪಾಪವನ್ನು ನಾಶಗೊಳಿಸಿಕೊಂಡು ಬಿಟ್ಟುಬಿಡುತ್ತಾನೆ" (ಬೃ. ೫-೫-೩,೪) ಎಂದು ಮುಂದೆ (ಹೀಗೆ ಭೇದವಿದೆ). (ಈ ಸತ್ಯವೆಂಬುದಿದೆಯಲ್ಲ ಎಂದು) ಪ್ರಕೃತಪರಾಮರ್ಶೆಮಾಡಿರುವದೋ ಎಂದರೆ ಉಪಾಸ್ಯ(ದೇವತೆಯು) ಒಂದಾಗಿರುವದರಿಂದ[2].

## ಸಿದ್ಧಾಂತ: ಇಲ್ಲಿ ಒಂದೇ ಸತ್ಯವಿದ್ಯೆಯನ್ನು ಹೇಳಿದೆ

(ಭಾಷ್ಯ)

೩೯೨. ಏವಂ ಪ್ರಾಪ್ತೇ ಬ್ರೂಮಃ। ಏಕೈವ ಇಯಂ ಸತ್ಯವಿದ್ಯಾ ಇತಿ। ಕುತಃ? 'ತದ್ಯತ್ ತತ್ಸತ್ಯಮ್' (ಬೃ. ೫-೫-೨) ಇತಿ ಪ್ರಕೃತಾಕರ್ಷಣಾತ್। ನನು ವಿದ್ಯಾಭೇದೇಽಪಿ ಪ್ರಕೃತಾಕರ್ಷಣಮ್ ಉಪಾಸ್ಯೈಕತ್ವಾತ್

1. ಸ, ತಿ, ಯಮ್ - ಎಂಬ ಅಕ್ಷರಗಳ ಉಪಾಸನೆಯನ್ನು ೫-೫-೧ರಲ್ಲಿ ವಿಧಿಸಿದೆ. ಮೊದಲನೆಯ ಕೊನೆಯ ಅಕ್ಷರಗಳು ಸತ್ಯವೆಂದೂ ನಡುವಿನ ತಿ ಎಂಬುದು ಅನೃತವೆಂದೂ ಉಪಾಸನೆಮಾಡಬೇಕೆಂದು ಅಲ್ಲಿ ಹೇಳಿದೆ.

2. ಸತ್ಯವೆಂಬ ಹೆಸರಿನಿಂದ ಕರೆದಷ್ಟರಿಂದಲೇ ವಿದ್ಯೈಕ್ಯವಾಗುವದಿಲ್ಲ; ದೇವತೆಯು ಒಂದೆಂಬ ಕಾರಣದಿಂದಲೂ ಆ ಹೆಸರನ್ನು ಉಪಯೋಗಿಸಬಹುದಾಗಿದೆ ಎಂದರ್ಥ.

ಉಪಪದ್ಯತ ಇತ್ಯುಕ್ತಮ್ । ನೈತದೇವಮ್ । ಯತ್ರ ತು ವಿಸ್ಪಷ್ಟಾತ್ ಕಾರಣಾನ್ತರಾತ್ ವಿದ್ಯಾಭೇದಃ ಪ್ರತೀಯತೇ, ತತ್ರ ಏತದೇವಂ ಸ್ಯಾತ್ । ಅತ್ರ ತು ಉಭಯಥಾ ಸಂಭವೇ 'ತದ್ಯತ್ ತತ್ಸತ್ಯಮ್' ಇತಿ ಪ್ರಕೃತಾಕರ್ಷಣಾತ್ ಪೂರ್ವವಿದ್ಯಾಸಂಬದ್ಧಮೇವ ಸತ್ಯಮ್ ಉತ್ತರತ್ರ ಆಕೃಷ್ಯತೇ ಇತಿ ಏಕವಿದ್ಯಾತ್ವನಿಶ್ಚಯಃ । ಯತ್ಪುನರುಕ್ತಂ ಫಲಾನ್ತರಶ್ರವಣಾತ್ ವಿದ್ಯಾನ್ತರಮಿತಿ | ಅತ್ರೋಚ್ಯತೇ । ತಸ್ಯೋಪನಿಷತ್ ಅಹರಹಮಿತಿ ಚ ಅಙ್ಗಾನ್ತರೋಪದೇಶಸ್ಯ ಸ್ತಾವಕಮಿದಂ ಫಲಾನ್ತರಶ್ರವಣಮಿತ್ಯದೋಷಃ । ಅಪಿ ಚ ಅರ್ಥವಾದಾದೇವ ಫಲೇ ಕಲ್ಪಯಿತವ್ಯೇ ಸತಿ ವಿದ್ಯೈಕತ್ವೇ ಚ ಅವಯವೇಷು ಶ್ರೂಯಮಾಣಾನಿ ಬಹೂನ್ಯಪಿ ಫಲಾನಿ ಅವಯವಿನ್ಯಾಮೇವ ವಿದ್ಯಾಯಾಮ್ ಉಪಸಂಹರ್ತವ್ಯಾನಿ ಭವನ್ತಿ । ತಸ್ಮಾತ್ ಸೈವೇಯಮ್ ಏಕಾ ಸತ್ಯವಿದ್ಯಾ ತೇನ ತೇನ ವಿಶೇಷಣೋಪೇತಾ ಆಮ್ನಾತಾ ಇತ್ಯತಃ ಸರ್ವ ಏವ ಸತ್ಯಾದಯೋ ಗುಣಾಃ ಏಕಸ್ಮಿನ್ನೇವ ಪ್ರಯೋಗೇ ಉಪಸಂಹರ್ತವ್ಯಾಃ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತ)ವನ್ನು ಹೇಳುತ್ತೇವೆ. ಇದು ಒಂದೇ ಸತ್ಯವಿದ್ಯೆಯು. ಏಕೆ ? ಎಂದರೆ 'ಆ ಸತ್ಯವೆಂಬುದಿದೆಯಲ್ಲ' (ಬೃ. ೫-೫-೨) ಎಂದು ಪ್ರಕೃತವಾದದ್ದನ್ನೇ ಎಳೆದುಕೊಂಡು ಹೇಳಿರುವದರಿಂದ.

(ಆಕ್ಷೇಪ) :- ವಿದ್ಯೆಗಳು ಬೇರೆಬೇರೆಯಾದರೂ ಪ್ರಕೃತವಾದದ್ದನ್ನು ಎಳೆದುಕೊಂಡು ಹೇಳಿರುವದು ಉಪಾಸ್ಯವು ಒಂದೆಂಬ ಕಾರಣದಿಂದ ಯುಕ್ತವಾಗುತ್ತದೆ ಎಂದು ಹೇಳಿದ್ದೆವಲ್ಲ!

(ಪರಿಹಾರ):- ಇದು ಹಾಗಲ್ಲ. ಎಲ್ಲಿ ವಿಸ್ಪಷ್ಟವಾಗಿರುವ ಮತ್ತೊಂದು ಕಾರಣದಿಂದ[1] ವಿದ್ಯಾಭೇದವು ತೋರುತ್ತದೆಯೋ ಅಲ್ಲಿ ಇದು ಹೀಗೆಂದಾಗಬಹುದು. ಆದರೆ ಇಲ್ಲಿ ಎರಡು ರೀತಿಯಲ್ಲಿಯೂ ಆಗಬಹುದಾಗಿರುವದರಿಂದ 'ಆ ಸತ್ಯವೆಂಬುದಿದೆಯಲ್ಲ' ಎಂದು ಪ್ರಕೃತವಾಗಿರುವದನ್ನೇ ಎಳೆದುಕೊಂಡು ಹೇಳಿರುವದರಿಂದ ಹಿಂದಿನ ವಿದ್ಯೆಗೆ ಸಂಬದ್ಧವಾಗಿರುವ ಸತ್ಯವನ್ನೇ ಮುಂದೆ ಎಳೆದುಕೊಂಡು ಹೇಳಿದೆ ಎಂದು ಒಂದೇ ವಿದ್ಯೆಯಿದೆಂದು ನಿಶ್ಚಯಿಸಬೇಕಾಗಿದೆ[2].

---

1. ಬೇರೆಯ ಪ್ರಕರಣವಾಗಿರುವದು ಮುಂತಾದ ಕಾರಣದಿಂದ.

2. ವಿದ್ಯೆಗಳು ಬೇರೆಯಾದರೂ ಆಗಬಹುದು, ಒಂದಾದರೂ ಆಗಬಹುದು ಎಂಬುದು ಸಾಮಾನ್ಯವಾಗಿ ಸಿದ್ಧವಾದರೂ ಇಲ್ಲಿ 'ಆ ಸತ್ಯವೆಂಬುದಿದೆಯಲ್ಲ' ಎಂಬ ಮಾತಿನಿಂದ ಮಹದ್ಯಕ್ಷತ್ವವೇ ಮುಂತಾದ ರೂಪದಿಂದ ಹೇಳಿದ ಸತ್ಯವನ್ನೇ ತೆಗೆದುಕೊಂಡು ಅವನೇ ಈ ಮಂಡಲದಲ್ಲಿಯೂ ಅಕ್ಷಿಯಲ್ಲಿಯೂ ಇರುವ ಪುರುಷನೆಂದು ಎಳೆದುಕೊಂಡಿರುವದರಿಂದ ಒಂದೇ ವಿದ್ಯೆಯೆಂದು ನಿಶ್ಚಯಿಸಬೇಕು.

ಇನ್ನು ಬೇರೆಯ ಫಲವನ್ನು ಶ್ರುತಿಯಲ್ಲಿ ಹೇಳಿರುವದರಿಂದ ಬೇರೆಯ ವಿದ್ಯೆ (ಎಂದು ನಿಶ್ಚಯಿಸಬೇಕು) ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ ; ಅದಕ್ಕೆ ಹೇಳುತ್ತೇವೆ. "ಅವನ ಉಪನಿಷತ್ತು ಅಹರೆಂದು (ಹಗಲೆಂದು) (ಬೃ. ೫-೫-೩), "ಅಹಮೆಂದು" (ಬೃ. ೫-೫-೪) ಮತ್ತೊಂದು ಅಂಗವನ್ನು ಉಪದೇಶಿಸಿರುವದನ್ನು ಹೊಗಳುವದಕ್ಕಾಗಿ ಈ ಫಲಾಂತರವನ್ನು ಶ್ರುತಿಯಲ್ಲಿ ಹೇಳಿದೆಯಾದ್ದರಿಂದ (ಅದರಲ್ಲಿ) ಯಾವ ದೋಷವೂ ಇಲ್ಲ.[1] ಇದಲ್ಲದೆ ಅರ್ಥವಾದದಿಂದಲೇ ಫಲವನ್ನು ಕಲ್ಪಿಸಬೇಕಾಗಿದ್ದೂ ವಿದ್ಯೆಯು ಒಂದೇ ಆಗಿರುವಲ್ಲಿ ಅವಯವಗಳಲ್ಲಿ ಶ್ರುತವಾಗಿರುವ ಬಹುಫಲಗಳನ್ನೂ ಅವಯವಿಯಾದ ವಿದ್ಯೆಯಲ್ಲಿಯೇ ಸೇರಿಸಿಕೊಳ್ಳಬೇಕಾಗುತ್ತದೆ.[2] ಆದ್ದರಿಂದ ಈ ಆದೇ ಒಂದು ಸತ್ಯವಿದ್ಯೆಯೇ ಆಯಾ ವಿಶೇಷಣದಿಂದೊಡಗೂಡಿ ಪಠಿತವಾಗಿರುತ್ತದೆ; ಆದ್ದರಿಂದ ಸತ್ಯವೇ ಮುಂತಾದ ಗುಣಗಳೆಲ್ಲವೂ ಒಂದೇ (ಉಪಾಸನೆಯ) ಪ್ರಯೋಗದಲ್ಲಿ ಸೇರಿಸಿಕೊಳ್ಳತಕ್ಕವಾಗಿರುತ್ತವೆ.[3]

## ಸೂತ್ರಕ್ಕೆ ಏಕದೇಶಿಗಳು ಮಾಡಿರುವ ಅಪವ್ಯಾಖ್ಯಾನ

(ಭಾಷ್ಯ)

೩೯೩. ಕೇಚಿತ್ ಪುನಃ ಅಸ್ಮಿನ್ ಸೂತ್ರೇ ಇದಂ ಚ ವಾಜಸನೇಯಕಮ್ ಅಕ್ಷ್ಯಾದಿತ್ಯಪುರುಷವಿಷಯಂ ವಾಕ್ಯಮ್, ಛಾನ್ದೋಗ್ಯೇ ಚ "ಅಥ ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ" (ಛಾಂ. ೧-೬-೬) "ಅಥ ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ" (ಛಾಂ.೧-೭-೫) ಇತ್ಯುದಾಹೃತ್ಯ ಸೈವೇಯಮ್ ಅಕ್ಷ್ಯಾದಿತ್ಯಪುರುಷವಿಷಯಾ ವಿದ್ಯಾ ಉಭಯತ್ರ ಏಕೈವ ಇತಿ ಕೃತ್ವಾ ಸತ್ಯಾದೀನ್ ಗುಣಾನ್ ವಾಜಸನೇಯಿಭ್ಯಃ ಛನ್ದೋಗಾನಾಮ್ ಉಪಸಂಹಾರ್ಯಾನ್ ಮನ್ಯನ್ತೇ। ತನ್ನ ಸಾಧು ಲಕ್ಷ್ಯತೇ। ಛಾನ್ದೋಗ್ಯೇ ಹಿ ಜ್ಯೋತಿಷ್ಟೋಮಕರ್ಮಸಂಬನ್ಧಿನೀ ಇಯಮ್ ಉದ್ಗೀಥವ್ಯಪಾಶ್ರಯಾ ವಿದ್ಯಾ

---

1. ಆದಿತ್ಯಪುರುಷನನ್ನು ಅಹರ್ ಎಂದು ತಿಳಿದುಕೊಂಡದ್ದಕ್ಕೂ ಅಕ್ಷಿಪುರುಷನನ್ನು ಅಹಮ್ ಎಂದು ತಿಳಿದುಕೊಂಡದ್ದಕ್ಕೂ ಫಲವಿವು. ಅಷ್ಟುಮಾತ್ರದಿಂದ ಪ್ರಧಾನವಿದ್ಯೆ ಬೇರೆಯಾಗುವದಿಲ್ಲ.

2. ಪ್ರಧಾನವಿದ್ಯೆಗೆ ಬೇರೆಯ ಫಲವನ್ನು ಹೇಳದೆ ಇರುವಾಗ ಅರ್ಥವಾದದಿಂದಲೇ ಫಲವನ್ನು ಕಲ್ಪಿಸಬೇಕಾಗುತ್ತದೆ ಎಂಬುದು ರಾತ್ರಿಸತ್ರನ್ಯಾಯ. ಜೈ. ಸೂ. ೪-೩-೮-೧೮ನ್ನು ನೋಡಿ. ಈ ನ್ಯಾಯದಿಂದ ಇಲ್ಲಿರುವ ಫಲಗಳನ್ನೆಲ್ಲ ಸತ್ಯವಿದ್ಯೆಯ ಫಲಗಳೆಂದಲೇ ಕಲ್ಪಿಸಬೇಕೆಂದು ಭಾವ. ಇಲ್ಲಿ ಫಲಶ್ರುತಿಯು ಅರ್ಥವಾದವೆಂಬ ಪಕ್ಷವನ್ನು ಕೈಬಿಟ್ಟಿದೆ.

3. ಈ ವಾಕ್ಯವು ಸೂತ್ರದ ಅಕ್ಷರಯೋಜನೆಯನ್ನು ತಿಳಿಸುತ್ತದೆ.

ವಿಜ್ಞಾಯತೇ। ತತ್ರ ಹಿ ಆದಿಮಧ್ಯಾವಸಾನೇಷು[1] ಕರ್ಮಸಂಬನ್ಧಿ ಚಿಹ್ನಾನಿ ಭವನ್ತಿ "ಇಯಮೇವರ್ಗಗ್ನಿಃ ಸಾಮ" (ಛಾಂ. ೧-೬-೧) ಇತ್ಯುಪಕ್ರಮೇ, "ತಸ್ಯರ್ಕ್ಚ ಸಾಮ ಚ ಗೇಷ್ಣೌ ತಸ್ಮಾದುದ್ಗೀಥಃ" (ಛಾಂ. ೧-೬-೮) ಇತಿ ಮಧ್ಯೇ, "ಯ ಏವಂ ವಿದ್ವಾನ್ ಸಾಮ ಗಾಯತಿ" (ಛಾಂ. ೧-೭-೯) ಇತ್ಯುಪಸಂಹಾರೇ। ನೈವಂ ವಾಜಸನೇಯಕೇ ಕಿಂಚಿತ್ ಕರ್ಮಸಂಬನ್ಧಿ ಚಿಹ್ನಮಸ್ತಿ। ತತ್ರ ಪ್ರಕ್ರಮಭೇದಾತ್ ವಿದ್ಯಾಭೇದೇ ಸತಿ ಗುಣವ್ಯವಸ್ಥೈವ ಯುಕ್ತಾ ಇತಿ॥

(ಭಾಷ್ಯಾರ್ಥ)

ಕೆಲವರಾದರೋ ಈ ಸೂತ್ರದಲ್ಲಿ ಅಕ್ಷ್ಯಾದಿತ್ಯವಿಷಯಕವಾದ ಈ ವಾಜಸನೇಯಕವಾಕ್ಯವನ್ನೂ ಛಾಂದೋಗ್ಯದಲ್ಲಿರುವ "ಇನ್ನು ಯಾವ ಈ ಹಿರಣ್ಮಯ ಪುರುಷನು ಆದಿತ್ಯನೊಳಗೆ ಕಾಣಿಸುವನೋ" (ಛಾ. ೧-೬-೬) "ಈ ಅಕ್ಷಿಯಲ್ಲಿ ಯಾವ ಪುರುಷನು ಕಾಣುತ್ತಿರುವನೋ" (ಛಾ.೧-೭-೫) ಎಂಬ (ವಾಕ್ಯವನ್ನೂ) ಉದಾಹರಿಸಿಕೊಂಡು ಅಕ್ಷ್ಯಾದಿತ್ಯಪುರುಷನ ವಿಷಯವಾದ ಅದೇ ವಿದ್ಯೆಯೇ ಎರಡು (ಶ್ರುತಿಗಳಲ್ಲಿಯೂ) ಒಂದೇ ಎಂದು ನಿಶ್ಚಯಿಸಿ ಸತ್ಯವೇ ಮುಂತಾದ ಗುಣಗಳನ್ನು ವಾಜಸನೇಯಿ(ಶಾಖೆ)ಯವರಿಂದ ಛಂದೋಗರು ಉಪಸಂಹಾರ ಮಾಡಿ(ಕೊಂಡು ಉಪಾಸನೆಮಾಡಬೇಕು) ಎಂದು ಅಭಿಪ್ರಾಯಪಟ್ಟಿರುತ್ತಾರೆ.

ಅದು ಸರಿಯೆಂದು ಕಾಣಿಸುವದಿಲ್ಲ. ಏಕೆಂದರೆ ಛಾಂದೋಗ್ಯದಲ್ಲಿ ಜ್ಯೋತಿಷ್ಟೋಮಕರ್ಮಕ್ಕೆ ಸಂಬಂಧಪಟ್ಟು ಈ ಉದ್ಗೀಥವನ್ನಾಶ್ರಯಿಸಿರುವ ವಿದ್ಯೆಯನ್ನು ಹೇಳಿರುತ್ತದೆ. ಹೇಗೆಂದರೆ ಅಲ್ಲಿ ಆದಿಮಧ್ಯಾಂತಗಳಲ್ಲಿ ಕರ್ಮಸಂಬಂಧಿಯಾದ ಚಿಹ್ನಗಳು ಕಾಣಬರುತ್ತವೆ "ಈ ಪೃಥಿವಿಯೇ ಋಕ್ಕು, ಅಗ್ನಿಯು ಸಾಮವು" (ಛಾಂ. ೧-೬-೧) ಎಂದು ಉಪಕ್ರಮದಲ್ಲಿ, "ಆ (ಪುರುಷ) ನಿಗೆ ಋಕ್ಕೂ ಸಾಮವೂ ಗೇಷ್ಣಗಳು, ಆದ್ದರಿಂದ (ಅವನು) ಉದ್ಗೀಥನು" (ಛಾಂ. ೧-೬-೮) ಎಂದು ನಡುವೆ, "ಯಾವನು ಹೀಗೆಂದು ಅರಿತುಕೊಂಡು ಸಾಮವನ್ನು ಗಾನಮಾಡುತ್ತಾನೋ" (ಛಾಂ. ೧-೭-೯) ಎಂದು ಉಪಸಂಹಾರದಲ್ಲಿ (ಹೀಗೆ ಕರ್ಮಚಿಹ್ನಗಳಿವೆ. ಆದರೆ) ಹೀಗೇನೂ ವಾಜಸನೇಯಕದಲ್ಲಿ ಯಾವ ಕರ್ಮಸಂಬಂಧಿಯಾದ ಚಿಹ್ನೆಯೂ ಇರುವದಿಲ್ಲ. ಆದ್ದರಿಂದ ಪ್ರಕ್ರಮ ಮಾಡಿರುವದು ಬೇರೆಬೇರೆಯಾಗಿರುವದರಿಂದ ವಿದ್ಯೆಗಳು ಬೇರೆಬೇರೆ ಎಂದು (ನಿಶ್ಚಯ)ವಾಗಿರುವಲ್ಲಿ ಗುಣಗಳು (ಆಯಾ ವಿದ್ಯೆಗೇ) ವ್ಯವಸ್ಥಿತವಾಗಿರುವದೇ ಯುಕ್ತವು.

---

1. ಅಚ್ಚಿನ ಪುಸ್ತಕದಲ್ಲಿ ಇಲ್ಲೊಂದು 'ಹಿ' ಹೆಚ್ಚಾಗಿದೆ ಎಂದು ಅದನ್ನು ಬಿಟ್ಟಿದೇವೆ.

## ೨೫ ಕಾಮಾದ್ಯಧಿಕರಣ

(ಸಗುಣನಿರ್ಗುಣವಿದ್ಯೆಗಳಲ್ಲಿ ಗುಣೋಪಸಂಹಾರ)

**ಕಾಮಾದೀತರತ್ರ ತತ್ರ ಚಾಯತನಾದಿಭ್ಯಃ || ೩೯ ||**

೩೯. ಕಾಮಾದಿಗಳನ್ನು ಇನ್ನೊಂದು ಕಡೆಯಲ್ಲಿಯೂ ಅಲ್ಲಿರುವ (ಧರ್ಮಗಳನ್ನು ಇನ್ನೊಂದು ಕಡೆಯಲ್ಲಿಯೂ ಸೇರಿಸಿಕೊಳ್ಳಬೇಕು) ; ಏಕೆಂದರೆ ಆಯತನವೇ ಮುಂತಾದವುಗಳು (ಸಮಾನವಾಗಿವೆ).

### ದಹರವಿದ್ಯೆಯ ಗುಣಗಳನ್ನು ಬೃಹದಾರಣ್ಯಕದಲ್ಲಿ ಸೇರಿಸಿಕೊಳ್ಳಬೇಕು

(ಭಾಷ್ಯ)

೩೯೪. "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ ದಹರೋಽಸ್ಮಿನ್ನನ್ತರಾಕಾಶಃ" (ಛಾಂ. ೮-೧-೧) ಇತಿ ಪ್ರಸ್ತುತ್ಯ ಛನ್ದೋಗಾ ಅಧೀಯತೇ "ಏಷ ಆತ್ಮಾಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ" (ಛಾಂ. ೮-೧-೫) ಇತ್ಯಾದಿ। ತಥಾ ವಾಜಸನೇಯಿನಃ "ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿಞ್ಛೇತೇ ಸರ್ವಸ್ಯ ವಶೀ" (ಬೃ. ೪-೪-೨೨) ಇತ್ಯಾದಿ। ತತ್ರ ವಿದ್ಯೈಕತ್ವಂ ಪರಸ್ಪರಗುಣಯೋಗಶ್ಚ, ಕಿಂ ವಾ ನ ಇತಿ ಸಂಶಯೇ ವಿದ್ಯೈಕತ್ವಮಿತಿ[1] । ತತ್ರೇದಮುಚ್ಯತೇ 'ಕಾಮಾದೀತಿ' । ಸತ್ಯಕಾಮಾದಿ ಇತ್ಯರ್ಥಃ। ಯಥಾ ದೇವದತ್ತೋ ದತ್ತಃ ಸತ್ಯಭಾಮಾ ಭಾಮಾ ಇತಿ। ಯದೇತತ್ ಛಾನ್ದೋಗ್ಯೇ ಹೃದಯಾಕಾಶಸ್ಯ ಸತ್ಯಕಾಮತ್ವಾದಿಗುಣಜಾತಮುಪಲಭ್ಯತೇ। ತದಿತರತ್ರ ವಾಜಸನೇಯಕೇ "ಸ ವಾ ಏಷ ಮಹಾನಜ ಆತ್ಮಾ" ಇತ್ಯತ್ರ ಸಂಬಧ್ಯತೇ। ಯಚ್ಚ ವಾಜಸನೇಯಕೇ ವಶಿತ್ವಾದಿ ಉಪಲಭ್ಯತೇ ತದಪಿ ಇತರತ್ರ ಛಾನ್ದೋಗ್ಯೇ "ಏಷ ಆತ್ಮಾಪಹತಪಾಪ್ಮಾ" ಇತ್ಯತ್ರ ಸಂಬಧ್ಯತೇ । ಕುತಃ ? ಆಯತನಾದಿಸಾಮಾನ್ಯಾತ್ । ಸಮಾನಂ ಹಿ ಉಭಯತ್ರಾಪಿ

---

1. 'ವಿದ್ಯೈಕತ್ವಮಿತಿ' ಎಂಬ ಮಾತು ಮೂಲಭಾಷ್ಯದಲ್ಲಿತ್ತೋ ಇಲ್ಲವೋ ಹೇಳುವದಕ್ಕೆ ಬರುವಂತಿಲ್ಲ ; ವ್ಯಾಖ್ಯಾನಕಾರರು ಯಾರೂ ಈ ಪ್ರತೀಕವನ್ನು ಹಿಡಿದು ವಿವರಿಸಿಲ್ಲ. ಇದು ಇಲ್ಲದಿದ್ದರೇ ಒಳ್ಳೆಯದಾಗಿತ್ತೆಂದು ತೋರುತ್ತದೆ.

ಹೃದಯಮ್ ಆಯತನಮ್। ಸಮಾನಶ್ಚ ವೇದ್ಯ ಈಶ್ವರಃ। ಸಮಾನಂ ಚ ತಸ್ಯ ಸೇತುತ್ವಂ ಲೋಕಾಸಂಭೇದಪ್ರಯೋಜನಮ್ ಇತ್ಯೇವಮಾದಿ ಬಹು ಸಾಮಾನ್ಯಂ ದೃಶ್ಯತೇ। ನನು ವಿಶೇಷೋಽಪಿ ದೃಶ್ಯತೇ ಛಾನ್ದೋಗ್ಯೇ ಹೃದಯಾಕಾಶಸ್ಯ ಗುಣಯೋಗಃ, ವಾಜಸನೇಯಕೇ ತು ಆಕಾಶಾಶ್ರಯಸ್ಯ ಬ್ರಹ್ಮಣ ಇತಿ। ನ। "ದಹರ ಉತ್ತರೇಭ್ಯಃ" (೧-೩-೧೪) ಇತ್ಯತ್ರ ಛಾನ್ದೋಗ್ಯೇಽಪಿ ಆಕಾಶಶಬ್ದಂ ಬ್ರಹ್ಮೈವೇತಿ ಪ್ರತಿಷ್ಠಾಪಿತತ್ವಾತ್ ॥

(ಭಾಷ್ಯಾರ್ಥ)

"ಇನ್ನು ಈ ಬ್ರಹ್ಮಪುರದಲ್ಲಿ ದಹರವಾದ ಪುಂಡರೀಕವೆಂಬ ಈ ಮನೆಯಿದೆಯಲ್ಲ, ಇದರಲ್ಲಿರುವ ದಹರವಾದ ಆಕಾಶವಿದೆಯಲ್ಲ...." (ಛಾಂ.೮-೧-೫) ಎಂದು ಪ್ರಾರಂಭಿಸಿ ಛಂದೋಗರು "ಈ ಆತ್ಮನು ಅಪಹತಪಾಪ್ಮನು, ವಿಜರನು, ವಿಮೃತ್ಯು, ವಿಶೋಕನು, ಹಸಿವಿಲ್ಲದವನು, ಬಾಯಾರಿಕೆಯಿಲ್ಲದವನು, ಸತ್ಯಕಾಮನು, ಸತ್ಯಸಂಕಲ್ಪನು, ....." (ಛಾಂ. ೮-೧-೫) ಎಂದು ಮುಂತಾಗಿ ಅಧ್ಯಯನಮಾಡುತ್ತಾರೆ. ಇದರಂತೆ ವಾಜಸನೇಯಿಗಳು "ಪ್ರಾಣಗಳಲ್ಲಿ ಈ ವಿಜ್ಞಾನಮಯನಿದಾನಲ್ಲ, ಆ ಈತನೇ ಮಹಾನ್ ಅಜನು, ಆತ್ಮನು ; ಹೃದಯದೊಳಗೆ ಈ ಆಕಾಶವಿದೆಯಲ್ಲ ಅದರಲ್ಲಿರುತ್ತಾನೆ, ಎಲ್ಲವನ್ನೂ ವಶದಲ್ಲಿಟ್ಟುಕೊಂಡಿರುವಾತನು........." (ಬೃ. ೪-೪-೨೨) ಎಂದು ಮುಂತಾಗಿ ಅಧ್ಯಯನ ಮಾಡುತ್ತಾರೆ. ಇಲ್ಲಿ ವಿದ್ಯೆಯು ಒಂದು ಒಂದರ ಗುಣವನ್ನೊಂದಕ್ಕೆ ಸಂಬಂಧಿಸಿಕೊಳ್ಳಬೇಕು ಎನ್ನಬೇಕೊ, ಅಥವಾ ಇಲ್ಲವೊ ?– ಎಂಬ ಸಂಶಯವುಂಟಾಗಲು ವಿದ್ಯೆಯು ಒಂದೇ[1] –ಎಂಬ (ಅಭಿಪ್ರಾಯದಿಂದ) ಇಲ್ಲಿ ಇದನ್ನು ಹೇಳಲಾಗುತ್ತದೆ.

'ಕಾಮಾದಿ' ಎಂದರೆ ಸತ್ಯಕಾಮಾದಿ ಎಂದರ್ಥ. ದೇವದತ್ತನನ್ನು ದತ್ತನೆಂದೂ ಸತ್ಯಭಾಮೆಯನ್ನು ಭಾಮೆಯೆಂದೂ ಕರೆಯುವಂತೆಯೇ ಇದು. (ಸೂತ್ರದ ಅರ್ಥ): ಛಾಂದೋಗ್ಯದಲ್ಲಿ ಹೃದಯಾಕಾಶದಲ್ಲಿ ಈ ಸತ್ಯಕಾಮತ್ವವೇ ಮುಂತಾದ ಗುಣಜಾತವನ್ನು (ಹೇಳಿರುವದು) ಕಂಡುಬರುತ್ತದೆಯಷ್ಟೆ, ಅದನ್ನು ಇತರತ್ರ ಮತ್ತೊಂದು ಕಡೆಯಲ್ಲಿಯೂ ಎಂದರೆ "ಆ ಈತನೇ ಮಹಾನ್ ಅಜನು, ಆತ್ಮನು" ಎಂಬಲ್ಲಿಯೂ ಸಂಬಂಧಿಸಿಕೊಳ್ಳಬೇಕು. ಮತ್ತು ವಾಜಸನೇಯಕದಲ್ಲಿ

1. 'ವಿದ್ಯೈಕತ್ವಮಿತಿ' ಎಂಬ ಭಾಷ್ಯವಾಕ್ಯದ ಅಭಿಪ್ರಾಯವಿದು. ಈ ವಾಕ್ಯವು ಮೂಲದಲ್ಲಿರಲಿಲ್ಲ, ಲೇಖಕರ ಪ್ರಮಾದದಿಂದ ಸೇರಿದೆ– ಎಂದಾಗಲಿ ಅಥವಾ ಒಬ್ಬ ವೃತ್ತಿಕಾರರ ಮತದಂತೆ ಇಲ್ಲಿ ವಿದ್ಯೈಕತ್ವವನ್ನು ಒಪ್ಪಿದೆ ಎಂದಾಗಲಿ ವ್ಯಾಖ್ಯಾನಮಾಡಬೇಕು. ಮುಂದಿನ ಭಾ.ಭಾ. ವನ್ನು ನೋಡಿ. 'ಕಿಂ ವಾ ನ ವಿದ್ಯೈಕತ್ವಮಿತಿ' ಎಂದೇ ಭಾಷ್ಯಕಾರರು ಬರೆದಿದ್ದಾರೆಂದು ಊಹಿಸುವದಕ್ಕೂ ಅವಕಾಶವಿದೆ.

ವಶಿತ್ವವೇ ಮುಂತಾದ (ಗುಣಜಾತವನ್ನು ಹೇಳಿರುವದು) ಕಂಡುಬರುತ್ತದೆಯಷ್ಟೆ, ಅದನ್ನು ಇನ್ನೊಂದು ಕಡೆಯಲ್ಲಿ ಎಂದರೆ ಛಾಂದೋಗ್ಯದಲ್ಲಿ "ಈ ಆತ್ಮನು ಅಪಹತಪಾಪ್ಮನು" ಎಂಬಲ್ಲಿ ಸಂಬಂಧಿಸಿಕೊಳ್ಳಬೇಕು. ಏಕೆ ? ಎಂದರೆ ಆಯತನವೇ ಮುಂತಾದ ಹೋಲಿಕೆಯಿರುವದರಿಂದ. (ಇದರ ವಿವರ) ; ಎರಡು ಕಡೆಯಲ್ಲಿಯೂ ಹೃದಯವೆಂಬ ಆಯತನ(ವನ್ನು ಹೇಳಿರುವದು) ಸಮಾನವಾಗಿದೆ ; ವೇದ್ಯನಾದವನು ಈಶ್ವರನೇ ಎಂಬುದೂ ಸಮಾನವಾಗಿದೆ. ಅವನು ಲೋಕಗಳು ನಾಶವಾಗದಂತೆ ಇರುವ ಪ್ರಯೋಜನವುಳ್ಳ ಸೇತುವೆಂಬುದೂ (ಛಾಂ. ೮-೪-೧, ಬೃ. ೪-೪-೨೨) ಇದೇ ಮುಂತಾದ ಬಹಳ ಹೋಲಿಕೆಯೂ ಕಂಡುಬರುತ್ತದೆ.

(ಆಕ್ಷೇಪ) :- (ಇವೆರಡಕ್ಕೂ) ವಿಶೇಷವೂ ಕಂಡುಬರುತ್ತದೆಯಲ್ಲ ! (ಹೇಗೆಂದರೆ) ಛಾಂದೋಗ್ಯದಲ್ಲಿ ಹೃದಯಾಕಾಶಕ್ಕೆ (ಈ) ಗುಣಗಳ ಸಂಬಂಧವಿದೆ, ವಾಜಸನೇಯಕದಲ್ಲಾದರೋ, ಆಕಾಶವನ್ನು ಆಶ್ರಯಿಸಿಕೊಂಡಿರುವ ಬ್ರಹ್ಮಕ್ಕೆ (ಸಂಬಂಧವಿದೆ)[1]

(ಪರಿಹಾರ) :-ಹಾಗಲ್ಲ. ಏಕೆಂದರೆ "ದಹರ ಉತ್ತರೇಭ್ಯಃ" (ಛಾಂ. (೧-೩-೧೪) ಎಂಬಲ್ಲಿ ಛಾಂದೋಗ್ಯದಲ್ಲಿಯೂ ಆಕಾಶಶಬ್ದದಿಂದ ಹೇಳಿರುವದು ಬ್ರಹ್ಮವೇ ಎಂದು ಸ್ಥಾಪಿಸಿದ್ದಾಗಿದೆ[2]

## ಸಗುಣನಿರ್ಗುಣವಿದ್ಯೆಗಳಲ್ಲಿ ಗುಣೋಪಸಂಹಾರದ ಫಲ

(ಭಾಷ್ಯ)

೩೯೫. ಅಯಂ ತು ಅತ್ರ ವಿದ್ಯತೇ ವಿಶೇಷಃ । ಸಗುಣಾ ಹಿ ಬ್ರಹ್ಮವಿದ್ಯಾ ಛಾನ್ದೋಗ್ಯೇ ಉಪದಿಶ್ಯತೇ "ಅಥ ಯ ಇಹಾತ್ಮಾನಮನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾನ್" (ಛಾಂ. ೮-೧-೬) ಇತ್ಯಾತ್ಮವತ್ ಕಾಮಾನಾಮಪಿ ವೇದ್ಯತ್ವಶ್ರವಣಾತ್ । ವಾಜಸನೇಯಕೇ ತು ನಿರ್ಗುಣಮೇವ ಪರಂ ಬ್ರಹ್ಮ ಉಪದಿಶ್ಯಮಾನಂ ದೃಶ್ಯತೇ "ಅತ ಊರ್ಧ್ವಂ ವಿಮೋಕ್ಷಾಯ ಬ್ರೂಹಿ" (ಬೃ.೪-೩-೧೪) "ಅಸಙ್ಗೋ ಹ್ಯಯಂ ಪುರುಷಃ" (ಬೃ.೪-೩-೧೫) ಇತ್ಯಾದಿಪ್ರಶ್ನಪ್ರತಿವಚನಸಮನ್ವಯಾತ್ । ವಶಿತ್ವಾದಿ ತು ತತ್ಸ್ತು

1. ಆದ್ದರಿಂದ ಇವೆರಡೂ ಬೇರೆಬೇರೆ ವಿಷಯವಾದ್ದರಿಂದ ಗುಣೋಪಸಂಹಾರವನ್ನು ಮಾಡಬಾರದು ಎಂದಾಗುವದಿಲ್ಲವೆ ?

2. ಆದ್ದರಿಂದ ಎರಡೂ ಕಡೆಯಲ್ಲಿಯೂ ಬ್ರಹ್ಮದ ಗುಣಗಳನ್ನೇ ಹೇಳಿದೆಯಾಗಿ ಉಪಸಂಹಾರಮಾಡಿಕೊಳ್ಳಬಹುದು.

ತ್ಯರ್ಥಮೇವ ಗುಣಜಾತಂ ವಾಜಸನೇಯಕೇ ಸಂಕೀರ್ತ್ಯತೇ । ತಥಾ ಚ ಉಪರಿಷ್ಟಾತ್ "ಸ ಏಷ ನೇತಿ ನೇತ್ಯಾತ್ಮಾ" (ಬೃ. ೩-೯-೨೬) ಇತ್ಯಾದಿನಾ ನಿರ್ಗುಣಮೇವ ಬ್ರಹ್ಮ ಉಪಸಂಹರತಿ । ಗುಣವತಸ್ತು ಬ್ರಹ್ಮಣ ಏಕತ್ವಾತ್ ವಿಭೂತಿಪ್ರದರ್ಶನಾಯ ಅಯಂ ಗುಣೋಪಸಂಹಾರಃ ಸೂತ್ರಿತೋ ನೋಪಾಸನಾಯ ಇತಿ ದ್ರಷ್ಟವ್ಯಮ್ ॥

(ಭಾಷ್ಯಾರ್ಥ)

ಆದರೆ ಇಲ್ಲಿ ಈ ವಿಶೇಷವಿರುತ್ತದೆ. ಏನೆಂದರೆ ಛಾಂದೋಗ್ಯದಲ್ಲಿ ಸಗುಣ ಬ್ರಹ್ಮವಿದ್ಯೆಯನ್ನು ಉಪದೇಶಿಸಿರುತ್ತದೆ. ಏಕೆಂದರೆ "ಇನ್ನು ಇಲ್ಲಿ ಯಾರು ಆತ್ಮನನ್ನೂ ಈ ಸತ್ಯಕಾಮಗಳನ್ನೂ ಅರಿತುಕೊಂಡು ಹೊರಟುಹೋಗುತ್ತಾರೋ ...." (ಛಾಂ. ೮-೧-೬) ಎಂದು ಆತ್ಮನಂತೆ ಕಾಮಗಳನ್ನೂ ಅರಿತುಕೊಳ್ಳಬೇಕೆಂದು (ಅಲ್ಲಿ) ಹೇಳಿರುತ್ತದೆ[1]. ಆದರೆ ವಾಜಸನೇಯಕದಲ್ಲಿ ನಿರ್ಗುಣವಾದ ಪರಬ್ರಹ್ಮವನ್ನೇ ಉಪದೇಶಿಸಿರುವದು ಕಂಡುಬರುತ್ತದೆ. "ಇನ್ನುಮೇಲೆ ವಿಮೋಕ್ಷಕ್ಕೇ ಹೇಳು" (ಬೃ. ೪-೩-೧೪) ; "ಈ ಪುರುಷನು ಅಸಂಗನಲ್ಲವೆ?" (ಬೃ. ೪-೩-೧೫) ಮುಂತಾದ ಪ್ರಶ್ನೋತ್ತರಗಳು (ಹಾಗಾದರೇ) ಹೊಂದುಗಡೆಯಾಗುತ್ತವೆ. ವಾಜಸನೇಯಕದಲ್ಲಿ ಹೇಳಿರುವ ವಶಿತ್ವವೇ ಮುಂತಾದ ಗುಣಜಾತವೋ ಎಂದರೆ ಆ (ನಿರ್ಗುಣಬ್ರಹ್ಮದ) ಸ್ತುತಿಗಾಗಿಯೇ ಹೇಳಿದ್ದಾಗಿದೆ[2] ಆದ್ದರಿಂದಲೇ ಮುಂದೆಯೂ "ಆ ಇವನು ನೇತಿ ನೇತಿ ಎಂದ ಆತ್ಮನು" (ಬೃ.೩-೯-೨೬) ಎಂದುಮುಂತಾಗಿರುವ (ವಚನ)ದಿಂದ ನಿರ್ಗುಣಬ್ರಹ್ಮವನ್ನೇ ಉಪಸಂಹಾರಮಾಡಿರುತ್ತದೆ[3]. **ಗುಣಗಳುಳ್ಳ ಬ್ರಹ್ಮವು ಒಂದೇ ಆಗಿರುವದರಿಂದ ಈ ಗುಣೋಪಸಂಹಾರವನ್ನು ಸೂತ್ರದಲ್ಲಿ ಹೇಳಿರುವದು ವಿಭೂತಿಯನ್ನು ತಿಳಿಸುವದಕ್ಕೇ, ಉಪಾಸನೆಗಲ್ಲ ಎಂದು ತಿಳಿಯಬೇಕು[4].**

---

1. ಗುಣಗಳನ್ನು ಉಪಾಸನೆಮಾಡಿದವನಿಗೇ ಅಲ್ಲಿ ಫಲವನ್ನು ಹೇಳಿರುವದರಿಂದ ಗುಣಗಳೂ ವಿವಕ್ಷಿತವಾಗಿವೆ.

2. ಉಪಾಸನೆಗಾಗಿ ಹೇಳಿಲ್ಲ.

3. ಎಲ್ಲಿಯೂ ಗುಣಗಳು ವಿವಕ್ಷಿತವಾಗಿಲ್ಲವಾದ್ದರಿಂದ ಅದು ನಿರ್ಗುಣವಿದ್ಯೆಯೇ.

4. ಇಲ್ಲಿ ದಹರವಿದ್ಯೆಯಲ್ಲಿ ವಶಿತ್ವಾದಿಗಳು ಬ್ರಹ್ಮದಲ್ಲಿ ಸಾಮರ್ಥ್ಯವಶದಿಂದ ಸೇರಿಕೊಳ್ಳಬಹುದು ; ಆದರೆ ಅವುಗಳನ್ನು ಉಪಾಸನೆಮಾಡಬೇಕೆಂಬುದೇನೂ ವಿವಕ್ಷಿತವಲ್ಲ. ಏಕೆಂದರೆ ವಿಧಿಯಿಲ್ಲದೆ ಇರುವಲ್ಲಿ ಉಪಾಸನೆಮಾಡುವದಕ್ಕಿಲ್ಲ, ನಿರ್ಗುಣವಿದ್ಯೆಯಲ್ಲಂತೂ ಉಪಾಸನೆಯ ಪ್ರಸಕ್ತಿಯೇ ಇಲ್ಲ.

## ೨೬. ಆದರಾಧಿಕರಣ (ಸೂ. ೪೦-೪೧)

### (ಭೋಜನವಿಲ್ಲದಾಗ ಪ್ರಾಣಾಗ್ನಿಹೋತ್ರವಿಲ್ಲ)

**ಆದರಾದಲೋಪಃ ॥ ೪೦ ॥**

೪೦. ಆದರವಿರುವದರಿಂದ (ಪ್ರಾಣಾಗ್ನಿಹೋತ್ರಕ್ಕೆ) ಲೋಪವಿಲ್ಲ.

### ಪೂರ್ವಪಕ್ಷ:

### ಭೋಜನವಿಲ್ಲದಾಗಲೂ ಪ್ರಾಣಾಗ್ನಿಹೋತ್ರವುಂಟು

(ಭಾಷ್ಯ)

೩೯೬. ಛಾಂದೋಗ್ಯೇ ವೈಶ್ವಾನರವಿದ್ಯಾಂ ಪ್ರಕೃತ್ಯ ಶ್ರೂಯತೇ– ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ ತದ್ಧೋಮೀಯಂ ಸ ಯಾಂ ಪ್ರಥಮಾ ಮಾಹುತಿಂ ಜುಹುಯಾತ್ತಾಂ ಜುಹುಯಾತ್ ಪ್ರಾಣಾಯ ಸ್ವಾಹೇತಿ[1]" (ಛಾಂ. ೫-೧೯-೧) ಇತ್ಯಾದಿ। ತತ್ರ ಪಞ್ಚ ಪ್ರಾಣಾಹುತಯೋ ವಿಹಿತಾಃ। ತಾಸು ಚ ಪರಸ್ತಾತ್ ಅಗ್ನಿಹೋತ್ರಶಬ್ದಃ ಪ್ರಯುಕ್ತಃ "ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ" (ಛಾಂ. ೫-೨೪-೨) ಇತಿ, "ಯಥೇಹ ಕ್ಷುಧಿತಾ ಬಾಲಾ ಮಾತರಂ ಪರ್ಯುಪಾಸತ ಏವಗ್ಂ ಸರ್ವಾಣಿ ಭೂತಾನ್ಯಗ್ನಿಹೋತ್ರಮುಪಾಸತ (ಇತಿ)[2]" (ಛಾಂ. ೫-೨೪-೫) ಇತಿ ಚ। ತತ್ರೇದಂ ವಿಚಾರ್ಯತೇ "ಕಿಂ ಭೋಜನಲೋಪೇ ಲೋಪಃ ಪ್ರಾಣಾಗ್ನಿಹೋತ್ರಸ್ಯ, ಉತ ಅಲೋಪಃ ಇತಿ। 'ತದ್ಯದ್ಭಕ್ತಮ್' ಇತಿ ಭಕ್ತಾಗಮನಸಂಯೋಗಶ್ರವಣಾತ್ ಭಕ್ತಾಗಮನಸ್ಯ ಚ ಭೋಜನಾರ್ಥತ್ವಾತ್ ಭೋಜನಲೋಪೇ ಲೋಪಃ ಪ್ರಾಣಾಗ್ನಿಹೋತ್ರಸ್ಯ ಇತ್ಯೇವಂ ಪ್ರಾಪ್ತೇ ನ ಲುಪ್ಯೇತ ಇತಿ ತಾವದಾಹ। ಕಸ್ಮಾತ್ ? ಆದರಾತ್। ತಥಾ ಹಿ ವೈಶ್ವಾನರವಿದ್ಯಾಯಾಮೇವ **ಜಾಬಾಲಾನಾಂ ಶ್ರುತಿಃ** "ಪೂರ್ವೋಽತಿಥಿಭ್ಯೋಽಶ್ನೀಯಾತ್। ಯಥಾ ಹ ವೈ ಸ್ವಯಮಹುತ್ವಾಽಗ್ನಿಹೋತ್ರಂ ಪರಸ್ಯ ಜುಹುಯಾದೇವಂ ತತ್[3]" (?) ಇತಿ ಅತಿಥಿಭೋಜನಸ್ಯ ಪ್ರಾಥಮ್ಯಂ ನಿನ್ದಿತ್ವಾ ಸ್ವಾಮಿಭೋಜನಂ ಪ್ರಥಮಂ ಪ್ರಾಪಯನ್ತೀ ಪ್ರಾಣಾಗ್ನಿಹೋತ್ರೇ ಆದರಂ ಕರೋತಿ। ಯಾ ಹಿ ನ ಪ್ರಾಥಮ್ಯಲೋಪಂ ಸಹತೇ

---

1. ಇಲ್ಲಿ ಒಂದು ಇತಿ ಬಿಟ್ಟುಹೋಗಿದೆ.
2. ಉಪನಿಷತ್ತಿನ ಮೂಲದಲ್ಲಿ ಇಲ್ಲಿಯೂ ಒಂದು ಇತಿ ಇದೆ.
3. ಇದು ಅಚ್ಚಿನ ಜಾಬಾಲೋಪನಿಷತ್ತಿನಲ್ಲಿಲ್ಲ. ಆಚಾರ್ಯರ ಪಾಠದಲ್ಲಿದ್ದ ಉಪನಿಷತ್ತು ಇನ್ನೂ ದೊಡ್ಡದಾಗಿತ್ತೋ ಅಥವಾ ಜಾಬಾಲಶಾಖೆಯ ಬ್ರಾಹ್ಮಣಭಾಗದಲ್ಲಿ ಈ ವಾಕ್ಯವಿದೆಯೋ ತಿಳಿಯದು.

ನತರಾಂ ಸಾ ಪ್ರಾಥಮ್ಯವತೋಽಗ್ನಿಹೋತ್ರಸ್ಯ ಲೋಪಂ ಸಹೇತ ಇತಿ ಮನ್ಯತೇ । ನನು ಭೋಜನಾರ್ಥಭಕ್ತಾಗಮನಸಂಯೋಗಾದ್ ಭೋಜನ ಲೋಪೇ ಲೋಪಃ ಪ್ರಾಪಿತಃ । ನ । ತಸ್ಯ ದ್ರವ್ಯವಿಶೇಷವಿಧಾನಾರ್ಥತ್ವಾತ್ । ಪ್ರಾಕೃತೇ ಹಿ ಅಗ್ನಿಹೋತ್ರೇ ಪಯಃಪ್ರಭೃತೀನಾಂ ದ್ರವ್ಯಾಣಾಂ ನಿಯತತ್ವಾತ್ ಇಹಾಪಿ ಅಗ್ನಿಹೋತ್ರಶಬ್ದಾತ್ ಕೌಣ್ಡಪಾಯಿನಾಮ್ ಅಯನವತ್ ತದ್ಧರ್ಮ ಪ್ರಾಪ್ತೌ ಸತ್ಯಾಂ ಭಕ್ತದ್ರವ್ಯೈಕತಾಗುಣವಿಶೇಷವಿಧಾನಾರ್ಥಮಿದಂ ವಾಕ್ಯಂ 'ತದ್ಯದ್ಭಕ್ತಮ್' ಇತಿ । ಅತೋ "ಗುಣಲೋಪೇ ನ ಮುಖ್ಯಸ್ಯ" (ಜೈ. ಸೂ. ೧೦-೨-೨೬-೬೩) ಇತ್ಯೇವಂ ಪ್ರಾಪ್ತಮ್ । ಭೋಜನಲೋಪೇಽಪಿ ಅದ್ಭಿರ್ವಾ ಅನ್ಯೇನ ವಾ ದ್ರವ್ಯೇಣ ಪ್ರತಿನಿಧಾನನ್ಯಾಯೇನ ಪ್ರಾಣಾಗ್ನಿಹೋತ್ರಸ್ಯ ಅನು ಷ್ಠಾನಮ್ ಇತಿ ॥

(ಭಾಷ್ಯಾರ್ಥ)

ಛಾಂದೋಗ್ಯದಲ್ಲಿ ವೈಶ್ವಾನರವಿದ್ಯೆಯ ಪ್ರಕರಣದಲ್ಲಿ "ಹೀಗಿರುವಲ್ಲಿ ಯಾವ ಅನ್ನವು ಮೊದಲು ಬರುವದೋ ಅದನ್ನು ಹೋಮಮಾಡತಕ್ಕದ್ದು; ಅವನು ಒಂದನೆಯ ಆಹುತಿಯನ್ನು ಹೋಮಮಾಡುತ್ತಾನಷ್ಟೆ, ಆದನ್ನು 'ಪ್ರಾಣಾಯ ಸ್ವಾಹಾ' (ಪ್ರಾಣಕ್ಕೆ ಹುತವಾಗಲಿ!) ಎಂದು ಹೋಮಮಾಡ ಬೇಕು'' (ಛಾಂ. ೫-೧೯-೧) ಎಂದು ಮುಂತಾಗಿ ಶ್ರುತವಾಗಿರುತ್ತದೆ. ಅಲ್ಲಿ ಐದು ಪ್ರಾಣಾಹುತಿಗಳನ್ನು ವಿಧಿಸಿರುತ್ತದೆ. ಮತ್ತು "ಯಾವನು ಹೀಗೆಂದು ತಿಳಿದು ಈ ಅಗ್ನಿಹೋತ್ರವನ್ನು ಹೋಮಮಾಡುತ್ತಾನೋ'' (ಛಾಂ. ೫-೨೪-೨), ಎಂದೂ "ಹೇಗೆ ಇಲ್ಲಿ ಹಸಿವಾಗಿರುವ ಬಾಲಕರು ತಾಯಿಯನ್ನು ಸುತ್ತು ವರಿದು ಕುಳಿತಿರುತ್ತಾರೋ, ಹಾಗೆ ಎಲ್ಲಾ ಭೂತಗಳೂ (ಈ) ಅಗ್ನಿಹೋತ್ರ ವನ್ನು ಸುತ್ತುವರಿದು ಕುಳತಿರುತ್ತಾರೆ" (ಛಾಂ.೫-೨೪-೨) ಎಂದು ಆ (ಆಹುತಿ) ಗಳಲ್ಲಿ ಅಗ್ನಿಹೋತ್ರಶಬ್ದವನ್ನು ಮುಂದೆ ಪ್ರಯೋಗಿಸಿರುತ್ತದೆ. ಇಲ್ಲಿ ಇದನ್ನು ವಿಚಾರಿಸಲಾಗುವದು; ಭೋಜನವು ಇಲ್ಲವಾದರೆ ಪ್ರಾಣಾಗ್ನಿಹೋತ್ರವೂ ಇಲ್ಲ ವಾಗುವದೊ, ಅಥವಾ ಇಲ್ಲವಾಗುವದಿಲ್ಲವೊ[1] ?

"ಹೀಗಿರುವಲ್ಲಿ ಯಾವ ಅನ್ನವು (ಮೊದಲು ಬರುವದೋ)" ಎಂದು ಅನ್ನವು ಬರುವದೆಂಬ ಸಂಯೋಗವು ಶ್ರುತಿಯಲ್ಲಿರುವದರಿಂದಲೂ ಅನ್ನವು ಬರುವದು ಭೋಜನಕ್ಕಾಗಿಯಾದ್ದರಿಂದಲೂ ಭೋಜನವು ಲೋಪವಾದರೆ

---

1. ಇಲ್ಲಿ ಉಪಾಸನೆಯ ಚಿಂತೆಯನ್ನು ನೇರಾಗಿ ಮಾಡಿಲ್ಲವಾದರೂ ಅದಕ್ಕೆ ಸಂಬದ್ಧವಾಗಿರುವ ಭೋಜನದ ವಿಚಾರದ ಚರ್ಚೆಯನ್ನು ಮಾಡಿರುವದರಿಂದ ಪಾದಕ್ಕೆ ಸಂಗತಿಯಿದೆ ಎಂದು ಭಾಮತೀವ್ಯಾಖ್ಯಾನ.

ಪ್ರಾಣಾಗ್ನಿಹೋತ್ರಕ್ಕೂ ಲೋಪ(ವಾಗಬೇಕು) ಎಂದು ಬಂದೊದಗಲಾಗಿ ಲೋಪವಾಗಲಾರದು ಎಂದು ಮೊದಲು (ಪೂರ್ವಪಕ್ಷಿ) ಹೇಳುತ್ತಾನೆ. ಏಕೆ ? ಎಂದರೆ ಆದರ(ವನ್ನು ತೋರಿಸಿರುವದರಿಂದ). ಹೇಗೆಂದರೆ **ವೈಶ್ವಾನರವಿದ್ಯೆಯಲ್ಲಿಯೇ ಜಾಬಾಲರ ಶ್ರುತಿ** (ಹೀಗಿದೆ) : "ಅತಿಥಿಗಳಿಗಿಂತ ಮುಂಚೆ ಊಟ ಮಾಡಬೇಕು. (ಹಾಗಿಲ್ಲದಿದ್ದರೆ) ಹೇಗೆ ತಾನು ಹೋಮಮಾಡದೆ ಮತ್ತೊಬ್ಬನಿಗಾಗಿ ಅಗ್ನಿಹೋತ್ರವನ್ನು ಹೋಮಮಾಡುವನೋ ಹಾಗೇ ಇದು (ಆಗುವದು)" (?) ಎಂದು ಅತಿಥಿಭೋಜನವನ್ನು ಮೊದಲು (ಮಾಡಿಸಬೇಕೆಂಬುದನ್ನು)ನಿಂದಿಸಿ ಯಜಮಾನನ ಭೋಜನವು ಮೊದಲಾಗಬೇಕೆಂದು ತಿಳಿಸುವ (ಆ) ಶ್ರುತಿಯು ಪ್ರಾಣಾಗ್ನಿಹೋತ್ರದಲ್ಲಿ ಆದರವನ್ನು ಮಾಡುತ್ತದೆ. ಏಕೆಂದರೆ ಯಾವದು ಪ್ರಾಥಮ್ಯದ ಲೋಪವನ್ನೇ ತಡೆಯಲಾರದೆ ಇರುವದೋ ಆ (ಶ್ರುತಿಯು) ಪ್ರಾಥಮ್ಯವಿರುವ ಅಗ್ನಿಹೋತ್ರದ ಲೋಪವನ್ನು ಇನ್ನೂ ತಡೆಯಲಾರದು ಎಂದು ತೋರುತ್ತದೆ.

(ಆಕ್ಷೇಪ) :— ಭೋಜನಕ್ಕಾಗಿ ಅನ್ನವು ಬರಬೇಕೆಂಬ ಸಂಯೋಗವಿರುವದರಿಂದ ಭೋಜನವು ಲೋಪವಾದರೆ (ಅಗ್ನಿಹೋತ್ರಕ್ಕೂ) ಲೋಪವಾಗಬೇಕೆಂದು (ಪೂರ್ವಪಕ್ಷದಲ್ಲಿ) ತಂದೊದಗಿಸಿತ್ತಲ್ಲ !

(ಪರಿಹಾರ) :— (ಅದು) ಸರಿಯಲ್ಲ. ಏಕೆಂದರೆ ಅದು ದ್ರವ್ಯವಿಶೇಷವನ್ನು ವಿಧಿಸುವದಕ್ಕಾಗಿ ಬಂದದ್ದು. ಪ್ರಕೃತಿರೂಪವಾದ ಅಗ್ನಿಹೋತ್ರದಲ್ಲಿ ಹಾಲು ಮುಂತಾದ ದ್ರವ್ಯಗಳು ನಿಯತವಾಗಿರುವದರಿಂದಲೂ ಇಲ್ಲಿಯೂ ಅಗ್ನಿಹೋತ್ರಶಬ್ದವನ್ನು (ಪ್ರಯೋಗಿಸಿರುವದ)ರಿಂದಲೂ ಕೌಂಡಪಾಯಿಗಳ ಅಯನದಂತೆ[1] ಅದರ ಧರ್ಮಗಳೇ ಪ್ರಾಪ್ತವಾಗಲು ಭಕ್ತದ್ರವ್ಯವೊಂದೇ ಎಂದು ಗುಣವಿಶೇಷವನ್ನು ವಿಧಿಸುವದಕ್ಕಾಗಿ 'ತದ್ಯದ್ಭಕ್ತಮ್' ಎಂಬೀ ವಾಕ್ಯವು (ಬಂದಿರುತ್ತದೆ). ಆದ್ದರಿಂದ ಗುಣವು ಲೋಪವಾದರೂ ಮುಖ್ಯವಾದ (ಅಗ್ನಿಹೋತ್ರದ ಲೋಪ)

1. ಕೌಂಡಪಾಯಿಸತ್ರದಲ್ಲಿ "ಮಾಸಮಗ್ನಿಹೋತ್ರಂ ಜುಹ್ವತಿ" ಎಂದು ವಿಹಿತವಾಗಿರುವ ಮಾಸಾಗ್ನಿಹೋತ್ರವೆಂಬ ಒಂದು ತಿಂಗಳು ಮಾಡತಕ್ಕ ಹೋಮವಿದೆ. ಅದನ್ನು ಅಗ್ನಿಹೋತ್ರವೆಂದು ಗೌಣವಾಗಿ ಕರೆದಿರುವದರಿಂದ ಅಗ್ನಿಹೋತ್ರದಲ್ಲಿರತಕ್ಕ ಹಾಲು ಮುಂತಾದ ಧರ್ಮಗಳೂ ಅದರಲ್ಲಿ ಪ್ರಾಪ್ತವಾಗುತ್ತವೆ. ಜೈ. ಸೂ. ೭–೩–೧. ಇದರಂತೆ ಪ್ರಾಣಾಹುತಿಗಳಲ್ಲಿ ಅಗ್ನಿಹೋತ್ರಶಬ್ದವನ್ನು ಪ್ರಯೋಗಿಸಿರುವದರಿಂದ ಅಗ್ನಿಹೋತ್ರಧರ್ಮಗಳೂ ಪ್ರಾಪ್ತವಾಗುವದರಿಂದ ಇಲ್ಲಿ ಭೋಜನಾರ್ಥಭಕ್ತದ್ರವ್ಯವನ್ನು ವಿಧಿಸಿ ಆ ಪ್ರಾಪ್ತಿಯನ್ನು ಅಲ್ಲಗಳೆದಿದೆ.

ವಿಲ್ಲ[1] ಎಂಬ (ಪೂರ್ವಪಕ್ಷವು) ಬಂದೊದಗುತ್ತದೆ. ಭೋಜನವು ಲೋಪವಾದರೂ ನೀರಿನಿಂದಲೋ ಅಥವಾ ಮತ್ತೊಂದು ದ್ರವ್ಯದಿಂದಲೋ ಪ್ರತಿನಿಧಾನನ್ಯಾಯದಿಂದ[2] ಪ್ರಾಣಾಗ್ನಿಹೋತ್ರವನ್ನು ಅನುಷ್ಠಾನಮಾಡಬೇಕು (ಎಂಬುದು ಈ ಪೂರ್ವಪಕ್ಷದ ತೀರ್ಮಾನವು).

**ಉಪಸ್ಥಿತೇಽತಸ್ತದ್ವಚನಾತ್ ॥ ೪೧ ॥**

೪೧. (ಭೋಜನವು) ಬಂದೊದಗಲು ಅದರಿಂದಲೇ (ಪ್ರಾಣಾಗ್ನಿಹೋತ್ರವನ್ನು ಮಾಡಬೇಕು), ಏಕೆಂದರೆ ಆ ವಚನವಿದೆ.

## ಸಿದ್ಧಾಂತ :
## ಭೋಜನಲೋಪವಾದರೆ ಪ್ರಾಣಾಗ್ನಿಹೋತ್ರಲೋಪವೇ

( ಭಾಷ್ಯ )

೩೯೭. ಅತ ಉತ್ತರಂ ಪಠತಿ ( "ಉಪಸ್ಥಿತೇಽತಸ್ತದ್ವಚನಾತ್" ) । ಉಪಸ್ಥಿತೇ ಭೋಜನೇ ಅತಃ ತಸ್ಮಾದೇವ ಭೋಜನದ್ರವ್ಯಾತ್ ಪ್ರಥಮೋಪನಿಪತಿತಾತ್ ಪ್ರಾಣಾಗ್ನಿಹೋತ್ರಂ ನಿರ್ವರ್ತಯಿತವ್ಯಮ್ । ಕಸ್ಮಾತ್? ತದ್ವಚನಾತ್ । ತಥಾ ಹಿ "ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಮ್" (ಛಾಂ. ೫–೧೯–೧) ಇತಿ ಸಿದ್ಧವದ್ಭಕ್ತೋಪನಿಪಾತಪರಾಮರ್ಶೇನ ಪರಾರ್ಥದ್ರವ್ಯಸಾಧ್ಯತಾಂ ಪ್ರಾಣಾಹುತೀನಾಂ ವಿದಧಾತಿ । ತಾ ಅಪ್ರಯೋಜಕಲಕ್ಷಣಾಪನ್ನಾಃ ಸತ್ಯಃ ಕಥಂ ಭೋಜನಲೋಪೇ ದ್ರವ್ಯಾನ್ತರಂ ಪ್ರತಿನಿಧಾಪಯೇಯುಃ? ನ ಚಾತ್ರ ಪ್ರಾಕೃತಾಗ್ನಿಹೋತ್ರಧರ್ಮಪ್ರಾಪ್ತಿರಸ್ತಿ । ಕುಣ್ಡಪಾಯಿನಾಮ್

1. ಅಗ್ನ್ಯಾಧಾನದಲ್ಲಿ ಪವಮಾನೇಷ್ಟಿಗಳನ್ನು ಮಾಡಬೇಕು. ಪವಮಾನಾಗ್ನಿಗೆ ಅಷ್ಟಾಕಪಾಲವ ಪುರೋಡಾಶವನ್ನು ನಿರ್ವಾಪಮಾಡಬೇಕು– ಎಂದು ಅಲ್ಲಿ ವಿಧಿಸಿದೆ. ಹವಿಸ್ಸುಗಳನ್ನು ಅಗ್ನಿಹೋತ್ರಹವಣಿಯಿಂದಲೇ ನಿರ್ವಾಪಮಾಡಬೇಕೆಂಬ ನಿಯಮವಿದ್ದರೂ ಆಧಾನಕಾಲದಲ್ಲಿ ಅಗ್ನಿಹೋತ್ರವಿಲ್ಲದ್ದರಿಂದ ಪ್ರಕೃತಿಯಲ್ಲಿ ವಿಹಿತವಾಗಿರುವ ಆ ಹವಣಿಯನ್ನು ಉಪಯೋಗಿಸಲಿಕ್ಕಿಲ್ಲ ; ಆದರೆ ಅಷ್ಟುಮಾತ್ರದಿಂದ ನಿರ್ವಾಪವನ್ನು ಬಿಡುವದಿಲ್ಲ, ಏಕೆಂದರೆ ಅದು ಮುಖ್ಯ. ಗುಣಲೋಪವಾದರೂ ಮುಖ್ಯವನ್ನು ಅನುಷ್ಠಾನಮಾಡಬೇಕು ಎಂಬ ನ್ಯಾಯವಿದು. ಜೈ. ಸೂ. "ಗುಣಲೋಪೇ ಚ ಮುಖ್ಯಸ್ಯ ೧೦–೨–೬೩ ನೋಡಿ. ಇಲ್ಲಿ ಭೋಜನದ್ರವ್ಯವು ಗುಣವುಮಾತ್ರವೆಂದು ಪೂರ್ವಪಕ್ಷಿಯ ಭಾವ.

2. ಆರಬ್ಧವಾಗಿರುವ ನಿತ್ಯಕರ್ಮಕ್ಕೆ ಬೇಕಾದ ದ್ರವ್ಯವಿಲ್ಲದಿದ್ದರೂ ಅದರ ಸ್ಥಾನದಲ್ಲಿ ಹೇಳಿರುವ ಮತ್ತೊಂದು ದ್ರವ್ಯವನ್ನು ಇಟ್ಟುಕೊಂಡು ಕರ್ಮವನ್ನು ಮಾಡಬೇಕು. ಎಂಬುದು ಪ್ರತಿನಿಧಾನನ್ಯಾಯ. ಜೈ. ಸೂ. ೩–೬–೩೮,೪೯ ಇವನ್ನು ನೋಡಿರಿ ; ಅಲ್ಲಿ ವ್ರೀಹಿಸ್ಥಾನದಲ್ಲಿ ನೀವಾರ, ಸೋಮಸ್ಥಾನದಲ್ಲಿ ಪೂತೀಕ– ಇವನ್ನು ಪ್ರತಿನಿಧಿಯಾಗಿ ತಿಳಿಸಿದೆ.

ಅಯನೇ ಹಿ "ಮಾಸಮಗ್ನಿಹೋತ್ರಂ ಜುಹೋತಿ" (?) ಇತಿ ವಿಧ್ಯುದ್ದೇಶಗತೋಽಗ್ನಿಹೋತ್ರಶಬ್ದಸ್ತದ್ವದ್ಭಾವಂ ವಿಧಾಪಯೇತ್ ಇತಿ ಯುಕ್ತಾ ತದ್ಧರ್ಮಪ್ರಾಪ್ತಿಃ । ಇಹ ಪುನಃ ಅರ್ಥವಾದಗತೋಽಗ್ನಿಹೋತ್ರಶಬ್ದೋ ನ ತದ್ವದ್ಭಾವಂ ವಿಧಾಪಯಿತುಮರ್ಹತಿ । ತದ್ಧರ್ಮಪ್ರಾಪ್ತೌ ಅಭ್ಯುಪಗಮ್ಯಮಾನಾಯಾಮ್ ಅಗ್ನ್ಯುದ್ಧರಣಾದಯೋಽಪಿ ಪ್ರಾಪ್ಯೇರನ್ । ನ ಚಾಸ್ತಿ ಸಂಭವಃ । ಅಗ್ನ್ಯುದ್ಧರಣಂ ತಾವತ್ ಹೋಮಾಧಿಕರಣಭಾವಾಯ । ನ ಚಾಯಮ್ ಅಗ್ನೌ ಹೋಮಃ । ಭೋಜನಾರ್ಥತಾವ್ಯಾಘಾತಪ್ರಸಙ್ಗಾತ್ । ಭೋಜನೋಪನೀತದ್ರವ್ಯಸಂಬನ್ಧಾಚ್ಚ ಆಸ್ಯ ಏವೈಷ ಹೋಮಃ । ತಥಾ ಚ ಜಾಬಾಲಶ್ರುತಿಃ "ಪೂರ್ವೋಽತಿಥಿಭ್ಯೋಽಶ್ನೀಯಾತ್" (?) ಇತ್ಯಾಸ್ಯಾಧಾರಾಮೇವ ಇಮಾಂ ಹೋಮನಿರ್ವೃತ್ತಿಂ ದರ್ಶಯತಿ । ಅತ ಏವ ಚ ಇಹಾಪಿ ಸಾಂಪಾದಿಕಾನ್ಯೇವ ಅಗ್ನಿಹೋತ್ರಾಙ್ಗಾನಿ ದರ್ಶಯತಿ "ಉರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯಮಾಹವನೀಯಃ" (ಛಾಂ.೫-೧೮-೨) ಇತಿ । ವೇದಿಶ್ರುತಿಶ್ಚ ಅತ್ರ ಸ್ಥಣ್ಡಿಲಮಾತ್ರೋಪಲಕ್ಷಣಾರ್ಥಾ ದ್ರಷ್ಟವ್ಯಾ । ಮುಖ್ಯಾಗ್ನಿಹೋತ್ರೇ ವೇದ್ಯಭಾವಾತ್ । ತದಙ್ಗಾನಾಂ ಚ ಇಹ ಸಂಪಿಪಾದಯಿಷಿತತ್ವಾತ್ । ಭೋಜನೇನೈವ ಚ ಕೃತಕಾಲೇನ ಸಂಯೋಗಾತ್ ನಾಗ್ನಿಹೋತ್ರಕಾಲಾವರೋಧಸಂಭವಃ । ಏವಮನ್ಯೇಽಪಿ ಉಪಸ್ಥಾನಾದಯೋ ಧರ್ಮಾಃ ಕೇಚಿತ್ ಕಥಂಚಿತ್ ವಿರುಧ್ಯನ್ತೇ । ತಸ್ಮಾತ್ ಭೋಜನಪಕ್ಷ ಏವೈತೇ ಮನ್ತ್ರದ್ರವ್ಯದೇವತಾಸಂಯೋಗಾತ್ ಪಞ್ಚಹೋಮಾಃ ನಿರ್ವರ್ತಯಿತವ್ಯಾಃ । ಯತ್ತು ಆದರದರ್ಶನವಚನಂ ತದ್ ಭೋಜನಪಕ್ಷೇ ಪ್ರಾಥಮ್ಯ ವಿಧಾನಾರ್ಥಮ್ । ನ ಹ್ಯಸ್ತಿ ವಚನಸ್ಯ ಅತಿಭಾರಃ । ನ ತು ಅನೇನ ಆಸ್ಯ ನಿತ್ಯತಾ ಶಕ್ಯತೇ ದರ್ಶಯಿತುಮ್ । ತಸ್ಮಾತ್ ಭೋಜನಲೋಪೇ ಲೋಪ ಏವ ಪ್ರಾಣಾಗ್ನಿಹೋತ್ರಸ್ಯ ಇತಿ ॥

(ಭಾಷ್ಯಾರ್ಥ)

ಇದಕ್ಕೆ ಉತ್ತರವನ್ನು ಹೇಳುತ್ತಾರೆ: ("ಉಪಸ್ಥಿತೇಽತಸ್ತದ್ವಚನಾತ್)" ಭೋಜನವು ಬಂದೊದಗಿದರೆ ಅದರಿಂದ, ಮೊದಲು ಬಂದ ಆ ಭೋಜನದ್ರವ್ಯದಿಂದಲೇ, ಪ್ರಾಣಾಗ್ನಿಹೋತ್ರವನ್ನು ಮಾಡಬೇಕು. ಏಕೆ ? ಎಂದರೆ ಆ ವಚನವಿರುವದರಿಂದ. ಆದ್ದರಿಂದಲೇ ಅಲ್ಲವೆ, "ಹೀಗಿರುವಲ್ಲಿ ಯಾವ ಅನ್ನವು ಮೊದಲು ಬರುವದೋ ಅದನ್ನು ಹೋಮಮಾಡತಕ್ಕದ್ದು" (ಛಾ. ೫-೧೯-೧)ಎಂದು ಸಿದ್ಧವಾದಂತೆ ಅನ್ನವು ಬಂದೊದಗುವದನ್ನು ಪರಾಮರ್ಶಿಸಿರುವದರಿಂದ[1] ಮತ್ತೊಂದ

1. ಅನ್ನವು ಭೋಜನನಿಮಿತ್ತದಿಂದ ತಾನೇ ಸಿದ್ಧವಾಗಿರುತ್ತದೆ; ಅದನ್ನೇನೂ ಇಲ್ಲಿ ವಿಧಿಸಿಲ್ಲ 'ಅದನ್ನು' ಎಂಬ ಸರ್ವನಾಮವು ಪ್ರಕೃತವಾಗಿರುವ ಭೋಜನಾನ್ನವನ್ನು ಪರಾಮರ್ಶಿಸುತ್ತದೆ. ಅಷ್ಟೆ.

ಕ್ಕಾಗಿರುವ[1] ದ್ರವ್ಯದಿಂದಲೇ ಪ್ರಾಣಾಹುತಿಗಳು ಆಗತಕ್ಕವೆಂದು ವಿಧಾನಮಾಡಿರುತ್ತದೆ. (ಹೀಗೆ) ಅವು ಅಪ್ರಯೋಜಕಸ್ವರೂಪವನ್ನು[2] ಪಡೆದಿರುವದರಿಂದ ಭೋಜನವು ಇಲ್ಲವಾದರೆ ಹೇಗೆತಾನೆ ಮತ್ತೊಂದು ದ್ರವ್ಯವನ್ನು ಪ್ರತಿನಿಧಿಯಾಗಿ ಮಾಡಿಸಿಯಾವು[3] ?

ಇಲ್ಲಿ ಪ್ರಾಕೃತವಾದ ಅಗ್ನಿಹೋತ್ರದ ಧರ್ಮಗಳ ಪ್ರಾಪ್ತಿಯೂ ಇಲ್ಲ.[4] ಹೇಗೆಂದರೆ ಕುಂಡಪಾಯಿಗಳ ಅಯನದಲ್ಲಿ "ಮಾಸಮಗ್ನಿಹೋತ್ರಂ ಜುಹೋತಿ" (ತಿಂಗಳುವರೆಗೆ ಅಗ್ನಿಹೋತ್ರವನ್ನು ಹೋಮಮಾಡಬೇಕು) ಎಂದು ವಿಧ್ಯುದ್ದೇಶದಲ್ಲಿರುವದರಿಂದ ಅಗ್ನಿಹೋತ್ರಶಬ್ದವು ಅದರಂತೆಯೇ ಇದು ಎಂದು ವಿಧಿಸಬಹುದಾಗಿ[5] (ಅಲ್ಲಿ) ಆ (ಅಗ್ನಿಹೋತ್ರದ) ಧರ್ಮಗಳು ಬಂದೊದಗುವದು ಯುಕ್ತವು. ಆದರೆ ಇಲ್ಲಿ ಅಗ್ನಿಹೋತ್ರಶಬ್ದವು ಅರ್ಥವಾದದಲ್ಲಿರುವದರಿಂದ ಅದರಂತೆ ಇದೆಂದು ವಿಧಾನಮಾಡಲಾರದು. ಅದರ ಧರ್ಮಗಳು (ಪ್ರಾಣಾಗ್ನಿಹೋತ್ರಕ್ಕೆ) ಬರುವವೆಂದು ಒಪ್ಪಿದರೆ ಅಗ್ನಿಯನ್ನು ಉದ್ಧರಣಮಾಡುವದು[6] ಮುಂತಾದವೂ ಬರಬೇಕೆಂದಾಗುವದು. ಆದರೆ (ಅದಕ್ಕೆ ಇಲ್ಲಿ) ಸಂಭವವಿಲ್ಲ. ಮೊದಲನೆಯದಾಗಿ ಅಗ್ನ್ಯುದ್ಧರಣವೆಂಬುದು ಹೋಮಕ್ಕೆ ಆಧಾರವಾಗಲೆಂದು ; ಆದರೆ ಇದು ಅಗ್ನಿಯಲ್ಲಿ (ಮಾಡುವ) ಹೋಮವಲ್ಲ, ಏಕೆಂದರೆ (ಆಗ ಅನ್ನವು) ಭೋಜನಕ್ಕೆ ಎಂಬುದು ತಪ್ಪಿಹೋಗುವ ಪ್ರಸಕ್ತಿಯುಂಟಾಗುವದು. ಭೋಜನಕ್ಕಾಗಿ ತಂದಿರುವ (ಅನ್ನ)ದ್ರವ್ಯದ ಸಂಬಂಧವಿರುವದರಿಂದ ಮುಖದಲ್ಲಿಯೇ (ಈ) ಹೋಮ(ವಾಗಬೇಕು.) ಆದ್ದರಿಂದಲೇ ಜಾಬಾಲಶ್ರುತಿಯು "ಅತಿಥಿಗಳಿಗಿಂತ ಮುಂಚೆಯೇ ಊಟಮಾಡಬೇಕು" ಎಂದು ಈ ಹೋಮವನ್ನು ಮುಖವೆಂಬ ಆಧಾರದಲ್ಲಿಯೇ ಮಾಡಬೇಕೆಂದು

---

1. ಭೋಜನಕ್ಕಾಗಿರುವ, ಅಗ್ನಿಹೋತ್ರಕ್ಕಾಗಿ ವಿಧಿಸಿರುವದಲ್ಲದ.

2. ಪ್ರಾಣಾಹುತಿಗಳು ಸ್ವತಂತ್ರವಾಗಿದ್ದು ಅಗ್ನಿಹೋತ್ರಕ್ಕೆ ಸಾಧಕವಾಗಿಲ್ಲ.

3. ಅಗ್ನಿಹೋತ್ರವು ನಿತ್ಯವಾಗಿದ್ದರೆ ಅದಕ್ಕೆ ಬೇಕಾದ ಸಾಧನವು ಇಲ್ಲದಾಗ ಪ್ರತಿನಿಧಿಯನ್ನಾದರೂ ಇಟ್ಟುಕೊಂಡು ಮಾಡಬೇಕು ಎಂದಾದೀತು. ಆದರೆ ಹಾಗಿಲ್ಲ.

4. ಅಗ್ನಿಹೋತ್ರವು ಪ್ರಕೃತಿ ಎಂದಾಗಿ ಪ್ರಾಣಾಗ್ನಿಹೋತ್ರವು ಅದರ ವಿಕೃತಿಯಾಗಿದ್ದರೆ ಪ್ರಕೃತಿಯ ಧರ್ಮಗಳೆಲ್ಲವನ್ನೂ ಇಲ್ಲಿ ಅತಿದೇಶಮಾಡಿದೆ ಎನ್ನಬಹುದಾಗಿತ್ತು. ಹಾಗಿಲ್ಲ. ಭೋಜನದಲ್ಲಿ ಅಗ್ನಿಹೋತ್ರತ್ವವನ್ನು ಸಂಪಾದನೆಮಾಡಿರುತ್ತದೆ. ಅಷ್ಟೆ.

5. ನಿತ್ಯಾಗ್ನಿಹೋತ್ರದ ಧರ್ಮಗಳೇ ಈ ಅಗ್ನಿಹೋತ್ರಕ್ಕೂ ಇರುವವು ಎಂದು ವಿಧಿಸಬಹುದು.

6. ಗಾರ್ಹಪತ್ಯದಿಂದ ತೆಗೆದುಕೊಂಡು ಮಿಕ್ಕೆರಡು ಅಗ್ನಿಗಳಿಗೆ ಉಪಯೋಗಿಸುವದು.

ತಿಳಿಸಿರುತ್ತದೆ. ಆದ್ದರಿಂದಲೇ[1] ಇಲ್ಲಿಯೂ ಸಾಂಪಾದಿಕವಾದ[2] ಅಗ್ನಿಹೋತ್ರಾಂಗಗಳನ್ನೇ "ಎದೆಯೇ ವೇದಿಯು, ಲೋಮಗಳು ದರ್ಭೆ, ಹೃದಯವು ಗಾರ್ಹಪತ್ಯವು, ಮನಸ್ಸು ಅನ್ವಾಹಾರ್ಯಪಚನವು, ಮುಖವು ಆಹವನೀಯವು" (ಛಾಂ. ೫-೧೮-೨) ಎಂದು ತಿಳಿಸಿರುತ್ತದೆ.[3] ಈ (ವಾಕ್ಯ)ದಲ್ಲಿ ವೇದಿ ಎಂಬ ಶ್ರುತಿಯು ಮಟ್ಟವಾದ ನೆಲವನ್ನು ಮಾತ್ರ ಉಪಲಕ್ಷಣದಿಂದ ತಿಳಿಸುತ್ತದೆ ಎಂದು ಗ್ರಹಿಸಬೇಕು ; ಏಕೆಂದರೆ ಮುಖ್ಯಾಗ್ನಿಹೋತ್ರದಲ್ಲಿ ವೇದಿಯಿರುವದಿಲ್ಲ, ಅಪರ ಅಂಗಗಳನ್ನೇ ಇಲ್ಲಿ ಸಂಪಾದನೆಮಾಡಬೇಕೆಂದು ಹೊರಟಿರುತ್ತದೆ.[4] ಇಲ್ಲಿ ಗೋತ್ತಾದ ಕಾಲದ ಭೋಜನಕ್ಕೇ ಸಂಬಂಧಪಟ್ಟಿರುವದರಿಂದ ಅಗ್ನಿಹೋತ್ರದ ಕಾಲವನ್ನು ಸೇರಿಸಿಕೊಳ್ಳುವಹಾಗಿಲ್ಲ.[5] ಹೀಗೆಯೇ ಉಪಸ್ಥಾನವೇ ಮುಂತಾದ ಧರ್ಮಗಳೂ ಕೆಲವು ಒಂದೊಂದು ರೀತಿಯಿಂದ ವಿರುದ್ಧವಾಗುತ್ತವೆ.[6] ಆದ್ದರಿಂದ ಭೋಜನ(ಮಾಡುವ) ಪಕ್ಷದಲ್ಲಿಯೇ ಮಂತ್ರ, ದ್ರವ್ಯ, ದೇವತೆ– ಇವುಗಳ ಸಂಯೋಗದಿಂದ[7] ಈ ಐದು ಹೋಮಗಳನ್ನು ಮಾಡಬೇಕು. ಇನ್ನು ಆದರವನ್ನು ತೋರಿಸುವ ವಚನವಿದೆಯಲ್ಲ, ಅದು ಭೋಜನ (ಮಾಡುವ) ಪಕ್ಷದಲ್ಲಿ ಮೊದಲು ಆಗತಕ್ಕದ್ದೆಂಬುದನ್ನು ವಿಧಿಸುವದಕ್ಕೆ.[8] ವಚನಕ್ಕೆ ಹೆಚ್ಚಿನ ಭಾರವೇನೂ ಇಲ್ಲವಷ್ಟೆ.[9] ಆದರೆ ಇದರಿಂದ ಈ (ಪ್ರಾಣಾಗ್ನಿಹೋತ್ರವು) ನಿತ್ಯವೆಂದು ತೋರಿಸಿಕೊಡುವದು ಆಗಲಾರದು. ಆದ್ದರಿಂದ ಭೋಜನವು ಲೋಪವಾದರೆ ಪ್ರಾಣಾಗ್ನಿಹೋತ್ರಕ್ಕೂ ಲೋಪವೇ.

---

1. ನಿತ್ಯಾಗ್ನಿಹೋತ್ರದ ಧರ್ಮಗಳು ಪ್ರಾಣಾಗ್ನಿಹೋತ್ರಕ್ಕೆ ಸೇರುವಹಾಗಿಲ್ಲವಾದ್ದರಿಂದಲೇ.

2. ನಿತ್ಯಾಗ್ನಿಹೋತ್ರದ ಅಂಗಗಳಂತೆಯೇ ಇವುಗಳನ್ನು ವೇದಿ ಮುಂತಾದವುಗಳೆಂದು ಭಾವಿಸಬೇಕೆಂದು ಅವುಗಳ ಧರ್ಮವನ್ನು ಬುದ್ಧಿಯಿಂದ ಸಂಪಾದಿಸಿರುವ.

3. ನಿತ್ಯಾಗ್ನಿಹೋತ್ರದ ಧರ್ಮಗಳೇ ಇದಕ್ಕೂ ಬರುವಂತಿದ್ದರೆ ಸಾಂಪಾದಿಕವಾದ ಅಂಗಗಳನ್ನು ಹೇಳಬೇಕಾದದ್ದೇನೂ ಇರಲಿಲ್ಲ.

4. ವೇದಿಯು ಮುಖ್ಯಾಗ್ನಿಹೋತ್ರದಲ್ಲಿರುವದಿಲ್ಲವಾಗಿ ಅದನ್ನು ಸಂಪಾದನೆ ಮಾಡುವದಕ್ಕೂ ಬರುವದಿಲ್ಲ. ಆದ್ದರಿಂದ ವೇದಿ ಎಂದರೆ ಸ್ಥಂಡಿಲಮಾತ್ರವೇ.

5. ಭೋಜನದ ಕಾಲವು ಅಗ್ನಿಹೋತ್ರದ ಕಾಲವಲ್ಲ.

6. ಉಪಸ್ಥಾನಕ್ಕೆ ನಿಲ್ಲಬೇಕು, ಪರಿಸ್ತರಣಮಾಡುವದಕ್ಕೆ ದರ್ಭೆಗಳನ್ನಾಗಲಿ ಅಗ್ನಿಯನ್ನಾಗಲಿ ಇಲ್ಲಿ ಉಪಯೋಗಿಸುವಂತಿಲ್ಲ. ಇತ್ಯಾದಿ.

7. ಮಂತ್ರ, ದ್ರವ್ಯ, ದೇವತೆ– ಎಂಬ ಗುಣಗಳನ್ನು ಹೇಳಿರುವದರಿಂದ ಇದು ಮಾಡಬೇಕಾದ ಒಂದು ಕರ್ಮವೆಂದು ಏರ್ಪಡುತ್ತದೆ.

8. ಅತಿಥಿಗಳಿಗಿಂತ ಮೊದಲೇ ಭೋಜನಮಾಡಬೇಕೆಂದು ತಿಳಿಸುವದಕ್ಕೆ.

9. ಯಜಮಾನನು ಅತಿಥಿಗಳುಂಡ ಬಳಿಕ ಭೋಜನಮಾಡಬೇಕೆಂಬ ವಚನವನ್ನು ಬಾಧಿಸುವದಲ್ಲ !– ಎಂಬ ಆಕ್ಷೇಪಕ್ಕೆ ಸಮಾಧಾನವಿದು. ವಚನವು ವಚನದಿಂದ ಬಾಧಿತವಾಗಬಹುದು.

## ೨೭. ತನ್ನಿರ್ಧಾರಣಾಧಿಕರಣ

(ಕರ್ಮಾಂಗೋಪಾಸನೆಗಳು ಅನಿತ್ಯ)

**ತನ್ನಿರ್ಧಾರಣಾನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬನ್ಧಃ ಫಲಮ್ ॥**

೪೨. ಅವುಗಳ ನಿರ್ಧಾರಣಗಳು ನಿಯತವಲ್ಲ; ಏಕೆಂದರೆ ಹಾಗೆಂದು (ಶ್ರುತಿಯಲ್ಲಿ) ಕಂಡಿದೆ. (ಕರ್ಮಫಲಕ್ಕಿಂತಲೂ) ಬೇರೆಯಾಗಿ ಅಪ್ರತಿಬಂಧವೆಂಬ ಫಲವಿದೆಯಷ್ಟೆ.

### ಪೂರ್ವಪಕ್ಷ: ಕರ್ಮಾಂಗೋಪಾಸನೆಗಳು ನಿತ್ಯ

(ಭಾಷ್ಯ)

೫೯೮. ಸನ್ತಿ ಕರ್ಮಾಙ್ಗವ್ಯಪಾಶ್ರಯಾಣಿ ವಿಜ್ಞಾನಾನಿ "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" (ಛಾಂ. ೧-೧-೧) ಇತ್ಯೇವಮಾದೀನಿ। ಕಿಂ ತಾನಿ ನಿತ್ಯಾನ್ಯೇವ ಸ್ಯುಃ ಕರ್ಮಸು ಪರ್ಣಮಯೀತ್ವಾದಿವತ್, ಉತ ಅನಿತ್ಯಾನಿ ಗೋದೋಹನಾದಿವತ್ ಇತಿ ವಿಚಾರಯಾಮಃ। ಕಿಂ ತಾವತ್ ಪ್ರಾಪ್ತಮ್ ? ನಿತ್ಯಾನೀತಿ। ಕುತಃ ? ಪ್ರಯೋಗವಚನಪರಿಗ್ರಹಾತ್। ಅನಾರಭ್ಯಾಧೀತಾನ್ಯಪಿ ಹಿ ಏತಾನಿ ಉದ್ಗೀಥಾದಿದ್ವಾರೇಣ ಕ್ರತುಸಂಬನ್ಧಾತ್ ಕ್ರತುಪ್ರಯೋಗವಚನೇನೈವ ಅಙ್ಗಾನ್ತರವತ್ ಸಂಸ್ಪೃಶ್ಯನ್ತೇ। ಯತ್ತು ಏಷಾಂ ಸ್ವವಾಕ್ಯೇಷು ಫಲಶ್ರವಣಮ್ "ಆಪಯಿತಾ ಹ ವೈ ಕಾಮಾನಾಂ ಭವತಿ" (ಛಾಂ. ೧-೧-೭) ಇತ್ಯಾದಿ, ತದ್ ವರ್ತಮಾನಾಪದೇಶರೂಪತ್ವಾತ್ ಅರ್ಥವಾದಮಾತ್ರಮೇವ ಅಪಾಪಶ್ಲೋಕಶ್ರವಣಾದಿವತ್ ನ ಫಲಪ್ರಧಾನಮ್। ತಸ್ಮಾತ್ ಯಥಾ "ಯಸ್ಯ ಪರ್ಣಮಯೀ ಜುಹೂರ್ಭವತಿ ನ ಸ ಪಾಪಂ ಶ್ಲೋಕಂ ಶೃಣೋತಿ" (?) ಇತ್ಯೇವಮಾದೀನಾಮ್ ಅಪ್ರಕರಣಪಠಿತಾನಾಮಪಿ ಜುಹ್ವಾದಿದ್ವಾರೇಣ ಕ್ರತುಪ್ರವೇಶಾತ್ ಪ್ರಕರಣಪಠಿತವತ್ ನಿತ್ಯತಾ ಏವಮ್ ಉದ್ಗೀಥಾದ್ಯುಪಾಸನಾನಾಮಪಿ ಇತಿ ॥

(ಭಾಷ್ಯಾರ್ಥ)

ಕರ್ಮಾಂಗವನ್ನು ಆಶ್ರಯಿಸಿಕೊಂಡಿರುವ "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" (ಓಮ್ ಎಂಬೀ ಉದ್ಗೀಥಾಕ್ಷರವನ್ನು ಉಪಾಸನೆಮಾಡಬೇಕು (ಛಾಂ. ೧-೧-೧) ಎಂಬಿವೇ ಮುಂತಾದ ಉಪಾಸನೆಗಳುಂಟು. ಅವು 'ಪರ್ಣಮಯೀತ್ವವೇ' ಮುಂತಾದವುಗಳಂತೆ ಕರ್ಮಗಳಲ್ಲಿ ನಿತ್ಯವಾಗಿರಬೇಕೊ, ಅಥವಾ

'ಗೋದೋಹನಾದಿಗಳಂತೆ' ಅನಿತ್ಯವೋ[1] ? –ಎಂಬಿದನ್ನು ವಿಚಾರಮಾಡುವೆವು.

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? (ಅವು) ನಿತ್ಯವೇ. ಏಕೆ ? ಎಂದರೆ ಪ್ರಯೋಗವಚನದಿಂದ ಪರಿಗ್ರಹಿಸಲ್ಪಟ್ಟಿರುವದರಿಂದ. (ಇದರ ವಿವರ): ಇವು ಅನಾರಭ್ಯಾಧೀತ (ಯಾವದೊಂದು ವಿಶೇಷವಿಷಯವನ್ನೂ ಕುರಿತು ಹೇಳಿಲ್ಲದವು)ಗಳಾದರೂ ಉದ್ಗೀಥವೇ ಮುಂತಾದವುಗಳ ದ್ವಾರದಿಂದ ಕ್ರತುಸಂಬದ್ಧವಾಗಿರುವದರಿಂದ ಕ್ರತುಪ್ರಯೋಗವಚನದಿಂದಲೇ ಮಿಕ್ಕ ಅಂಗಗಳಂತೆ ಸಂಬದ್ಧವಾಗಿರುತ್ತವೆ[2]. ಇನ್ನು ಇವುಗಳಿಗೆ ತಮ್ಮ ವಾಕ್ಯಗಳಲ್ಲಿ "ಕಾಮಗಳನ್ನು ಪಡೆಯುವವನೇ ಆಗಿರುತ್ತಾನೆ" (ಛಾಂ. ೧–೧–೭) ಎಂದು ಮುಂತಾಗಿ ಫಲಶ್ರವಣವಿದೆಯಲ್ಲ, ಅದು ವರ್ತಮಾನಾಪದೇಶದ ರೂಪದಲ್ಲಿರುವದರಿಂದ[3] ಕೆಟ್ಟ ಹೆಸರು ಕೇಳದೆ ಇರುವದೇ ಮುಂತಾದ್ದರಂತೆ ಬರಿಯ ಅರ್ಥವಾದವೇ ಹೊರತು[4] ಫಲಪ್ರಧಾನವಾದದ್ದಲ್ಲ[5]. ಆದ್ದರಿಂದ "ಯಾವನಿಗೆ ಮುತ್ತುಗದ ಮರದಿಂದಾದ ಜುಹೂ ಇರುತ್ತದೆಯೋ ಅವನು ಕೆಟ್ಟವಾರ್ತೆಯನ್ನು ಕೇಳುವದಿಲ್ಲ"[6] ಎಂಬಿದೇ ಮುಂತಾದ ಪ್ರಕರಣದಲ್ಲಿ ಪಠಿತವಾಗದೆ ಇರುವ ವಾಕ್ಯಗಳಿಗೂ ಜುಹೂ ಮುಂತಾದವುಗಳ[7] ದ್ವಾರದಿಂದ ಕ್ರತುಪ್ರವೇಶವಾಗುವದರಿಂದ ಪ್ರಕರಣ

---

1. ಉದ್ಗೀಥಾದ್ಯುಪಾಸನೆಗಳನ್ನು ಆಯಾ ಕರ್ಮದ ಪ್ರಕರಣದಲ್ಲಿ ಹೇಳಿಲ್ಲವಾದರೂ ಪರ್ಣಮಯಿಯಾದ ಜುಹೂಪಾತ್ರೆಯು ಕರ್ಮಕ್ಕೆ ನಿತ್ಯವಾಗಿ ಸಂಬದ್ಧವಾಗಿರುವಂತೆ ಉದ್ಗಾತೃಕರ್ಮದ್ವಾರದಿಂದ ಕರ್ಮಕ್ಕೆ ನಿತ್ಯವಾಗಿ ಇವು ಸಂಬದ್ಧವಾಗಿರುತ್ತವೆ ಎಂಬುದು ಒಂದು ಪಕ್ಷ. ಪಶುಕಾಮನಾದವನು ಗೋದೋಹನದಿಂದ ಅಪ್ಪ್ರಣಯನಮಾಡಬೇಕು– ಎಂಬಲ್ಲಿ ಪಶುಕಾಮನು ಮಾತ್ರ ಗೋದೋಹನವನ್ನು ಪಯೋಗಿಸಬೇಕು, ಮಿಕ್ಕವರು ಚಮಸವನ್ನು ಪಯೋಗಿಸಬೇಕು– ಎಂಬಂತೆ ಈ ಉಪಾಸನೆಗಳು ಇಲ್ಲಿ ಹೇಳಿರುವ ಫಲವು ಬೇಕಾದವರಿಗೆ ಮಾತ್ರ ಆಯಾ ಕರ್ಮಗಳಲ್ಲೆಲ್ಲ ನಿತ್ಯವಾಗಿರಬೇಕಾಗಿಲ್ಲ ಎಂಬುದು ಇನ್ನೊಂದು ಪಕ್ಷ. (ಜೈ. ಸೂ. ೩–೬–೧, ೪–೧–೨ ನೋಡಿ). ಈ ಎರಡು ಪಕ್ಷಗಳಲ್ಲಿ ಯಾವದು ಯುಕ್ತ?– ಎಂದು ಸಂಶಯ.

2. ಹೇಗೆ ಮಿಕ್ಕಅಂಗಗಳು ಕ್ರತುವಿಗೆ ಸಂಬದ್ಧವೆಂದು ಪ್ರಯೋಗವಚನದಿಂದ ಗೊತ್ತಾಗುವದೋ ಹಾಗೆಯೇ ಉದ್ಗೀಥವು ಕ್ರತುವಿಗೆ ಸಂಬಂಧಪಟ್ಟಿರುವದರಿಂದ ಅವುಗಳ ಮೂಲಕ ಈ ಉಪಾಸನೆಗಳೂ ಸಂಬಂಧಪಟ್ಟಿರುತ್ತವೆ.

3. ವಿಧಿರೂಪದಲ್ಲಿಲ್ಲವಾದ್ದರಿಂದ.

4. ಪರ್ಣಮಯವಾದ ಜುಹೂವನ್ನು ಉಪಯೋಗಿಸಬೇಕೆಂದು ವಿಧಿಸಿರುವದನ್ನು ಹೊಗಳುವದೇ ಹೊರತು ಅಂಥ ಫಲವು ಅವಶ್ಯವಾಗಿ ಆಗುವದೆಂದೇನೂ ಅಭಿಪ್ರಾಯವಿಲ್ಲದಿರುವಂತೆ ಇಲ್ಲಿಯೂ ಉದ್ಗೀಥಾದ್ಯುಪಾಸನೆಗಳನ್ನು ಹೊಗಳುವದಕ್ಕೆ ಈ ಫಲಸಂಬಂಧವನ್ನು ಹೇಳಿದೆ ಎಂದರ್ಥ. ಮುಂದಿನ ವಾಕ್ಯದಲ್ಲಿ ಇದರ ವಿವರವಿದೆ.

5. ಈ ಉಪಾಸನೆಗೂ ಈ ಫಲಕ್ಕೂ ಸಾಧ್ಯಸಾಧನಭಾವವನ್ನು ಹೇಳುವದಕ್ಕೆ ಬಂದಿಲ್ಲ.

6. ಅವನಿಗೆ ಜನರು ಕೆಟ್ಟಹೆಸರಿಡುವದಿಲ್ಲ ಎಂದರ್ಥ.

7. ಮುಂತಾದ ಎಂಬ ಮಾತಿನಿಂದ ಕರ್ತೃವನ್ನು ಸೇರಿಸಿಕೊಳ್ಳಬೇಕು. ನ್ಯಾ॥ ನಿ॥

ಪಠಿತವಾದವುಗಳಂತೆ ಹೇಗೆ ನಿತ್ಯತ್ವವು (ಸಿದ್ಧ)ವಾಗಿರುವದೋ ಇದರಂತೆಯೇ ಉದ್ಗೀಥಾದ್ಯುಪಾಸನೆಗಳಿಗೂ ನಿತ್ಯತ್ವವು (ಸಿದ್ಧವಾಗುತ್ತದೆ).

## ಸಿದ್ಧಾಂತ: ಕರ್ಮಾಂಗೋಪಾಸನೆಗಳು ಕರ್ಮದಲ್ಲಿ ನಿತ್ಯಸಂಬದ್ಧವಲ್ಲ

(ಭಾಷ್ಯ)

೩೯೯. ಏವಂ ಪ್ರಾಪ್ತೇ ಬ್ರೂಮಃ 'ತನ್ನಿರ್ಧಾರಣಾನಿಯಮಃ' ಇತಿ। ಯಾನ್ಯೇತಾನಿ ಉದ್ಗೀಥಾದಿಕರ್ಮಗುಣಯಾಥಾತ್ಮ್ಯನಿರ್ಧಾರಣಾನಿ ರಸತಮಃ, ಆಪ್ತಿಃ, ಸಮೃದ್ಧಿಃ, ಮುಖ್ಯಪ್ರಾಣಃ, ಆದಿತ್ಯಃ ಇತ್ಯೇವಮಾದೀನಿ, ನೈತಾನಿ ನಿತ್ಯವತ್ ಕರ್ಮಸು ನಿಯಮ್ಯೇರನ್। ಕುತಃ? ತದ್ದೃಷ್ಟೇಃ। ತಥಾ ಹಿ ಅನಿಯತತ್ವಮ್ ಏವಂಜಾತೀಯಕಾನಾಂ ದರ್ಶಯತಿ ಶ್ರುತಿಃ "ತೇನೋಭೌ ಕುರುತೋ ಯಶ್ಚೈತದೇವಂ ವೇದ ಯಶ್ಚ ನ ವೇದ" (ಛಾಂ. ೧-೧-೧೦) ಇತಿ ಅವಿದುಷೋಽಪಿ ಕ್ರಿಯಾಭ್ಯನುಜ್ಞಾನಾತ್। ಪ್ರಸ್ತಾವಾದಿದೇವತಾವಿಜ್ಞಾನವಿಹೀನಾನಾಮಪಿ ಪ್ರಸ್ತೋತ್ರಾದೀನಾಂ ಯಾಜನಾಧ್ಯವಸಾನದರ್ಶನಾತ್ "ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಸ್ತೋಷ್ಯಸಿ'' (ಛಾಂ. ೧-೧೦-೯), "ತಾಂ ಚೇದವಿದ್ವಾನುದ್ಗಾಸ್ಯಸಿ" (ಛಾಂ. ೧-೧೦-೧೦), "ತಾಂ ಚೇದವಿದ್ವಾನ್ ಪ್ರತಿಹರಿಷ್ಯಸಿ" (ಛಾಂ. ೧-೧೦-೧೧) ಇತಿ ಚ। ಅಪಿ ಚ ಏವಂಜಾತೀಯಕಸ್ಯ ಕರ್ಮವ್ಯಪಾಶ್ರಯಸ್ಯ ವಿಜ್ಞಾನಸ್ಯ ಪೃಥಗೇವ ಕರ್ಮಣಃ ಫಲಮ್ ಉಪಲಭ್ಯತೇ ಕರ್ಮಫಲಸಿದ್ಧ್ಯಪ್ರತಿಬನ್ಧಃ, ತತ್ಸಮೃದ್ಧಿಃ, ಅತಿಶಯವಿಶೇಷಃ ಕಶ್ಚಿತ್ "ತೇನೋಭೌ ಕುರುತೋಯಶ್ಚೈತದೇವಂ ವೇದ ಯಶ್ಚ ನ ವೇದ। ನಾನಾ ತು ವಿದ್ಯಾ ಚಾವಿದ್ಯಾ ಚ ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ" (ಛಾಂ. ೧-೧-೧೦) ಇತಿ। ತತ್ರ 'ನಾನಾ ತು' ಇತಿ ವಿದ್ವದವಿದ್ವತ್ಪ್ರಯೋಗಯೋಃ ಪೃಥಕ್ಕರಣಾತ್ 'ವೀರ್ಯವತ್ತರಮ್' ಇತಿ ಚ ತರಪ್ಪ್ರತ್ಯಯಪ್ರಯೋಗಾತ್, ವಿದ್ಯಾವಿಹೀನಮಪಿ ಕರ್ಮವೀರ್ಯವತ್ ಇತಿ ಗಮ್ಯತೇ। ತಚ್ಚ ಅನಿತ್ಯತ್ವೇ ವಿದ್ಯಾಯಾ ಉಪಪದ್ಯತೇ ನಿತ್ಯತ್ವೇ ತು ಕಥಂ ತದ್ವಿಹೀನಂ ಕರ್ಮ ವೀರ್ಯವತ್ ಇತ್ಯನುಜ್ಞಾಯೇತ? ಸರ್ವಾಙ್ಗೋಪಸಂಹಾರೇ ಹಿ ವೀರ್ಯವತ್ ಕರ್ಮ ಇತಿ ಸ್ಥಿತಿಃ। ತಥಾ ಲೋಕಸಾಮಾದಿಷು ಪ್ರತಿನಿಯತಾನಿ ಪ್ರತ್ಯುಪಾಸನಂ ಫಲಾನಿ ಶಿಷ್ಯನ್ತೇ "ಕಲ್ಪನ್ತೇ ಹಾಸ್ಮೈ ಲೋಕಾ ಊರ್ಧ್ವಾಶ್ಚಾವೃತ್ತಾಶ್ಚ" (ಛಾಂ. ೨-೨-೩) ಇತ್ಯೇವಮಾದೀನಿ। ನ ಚೇದಂ ಫಲಶ್ರವಣಮ್ ಅರ್ಥವಾದಮಾತ್ರಂ ಯುಕ್ತಂ ಪ್ರತಿಪತ್ತುಮ್। ತಥಾ ಹಿ

ಗುಣವಾದ ಆಪದ್ಯೇತ । ಫಲೋಪದೇಶೇ ತು ಮುಖ್ಯವಾದೋಪಪತ್ತಿಃ । ಪ್ರಯಾಜಾದಿಷು ತು ಸ್ಥಿತಿಕರ್ತವ್ಯತಾಕಾಙ್ಕ್ಷಸ್ಯ ಕ್ರತೋಃ ಪ್ರಕೃತತ್ವಾತ್ ತಾದರ್ಥ್ಯೇ ಸತಿ ಯುಕ್ತಂ ಫಲಶ್ರುತೇರರ್ಥವಾದತ್ವಮ್ । ತಥಾ ಅನಾರಭ್ಯಾಧೀತೇಷ್ವಪಿ ಪರ್ಣಮಯೀತ್ವಾದಿಷು। ನ ಹಿ ಪರ್ಣಮಯೀತ್ವಾದೀನಾಮ್ ಅಕ್ರಿಯಾತ್ಮಕಾನಾಮ್ ಆಶ್ರಯಮನ್ತರೇಣ ಫಲಸಂಬನ್ಧ ಅವಕಲ್ಪತೇ। ಗೋದೋಹನಾದೀನಾಂ ಹಿ ಪ್ರಕೃತಾಪ್ಪ್ರಣಯನಾದ್ಯಾಶ್ರಯಲಾಭಾತ್ ಉಪಪನ್ನಃ ಫಲವಿಧಿಃ । ತಥಾ ಬೈಲ್ವಾದೀನಾಮಪಿ ಪ್ರಕೃತಯೂಪಾದ್ಯಾಶ್ರಯಲಾಭಾತ್ ಉಪಪನ್ನಃ ಫಲವಿಧಿಃ । ನ ತು ಪರ್ಣಮಯೀತ್ವಾದಿಷು ಏವಂವಿಧಃ ಕಶ್ಚಿತ್ ಆಶ್ರಯಃ ಪ್ರಕೃತೋಽಸ್ತಿ । ವಾಕ್ಯೇನೈವ ತು ಜುಹ್ವಾದ್ಯಾಶ್ರಯತಾಂ ವಿವಕ್ಷಿತ್ವಾ ಫಲೇಽಪಿ ವಿಧಿಂ ವಿವಕ್ಷತಃ ವಾಕ್ಯಭೇದಃ ಸ್ಯಾತ್ । ಉಪಾಸನಾನಾಂ ತು ಕ್ರಿಯಾತ್ಮಕತ್ವಾತ್ ವಿಶಿಷ್ಟವಿಧಾನೋಪಪತ್ತೇಃ ಉದ್ಗೀಥಾದ್ಯಾಶ್ರಯಾಣಾಂ ಫಲೇ ವಿಧಾನಂ ನ ವಿರುಧ್ಯತೇ । ತಸ್ಮಾತ್ ಯಥಾ ಕ್ರತ್ವಾಶ್ರಯಾಣ್ಯಪಿ ಗೋದೋಹನಾದೀನಿ ಫಲಸಂಯೋಗಾತ್ ಅನಿತ್ಯಾನಿ, ಏವಮ್ ಉದ್ಗೀಥಾದ್ಯುಪಾಸನಾನ್ಯಪಿ ಇತಿ ದ್ರಷ್ಟವ್ಯಮ್ । ಅತ ಏವ ಚ ಕಲ್ಪಸೂತ್ರಕಾರಾಃ ನೈವಂಜಾತೀಯಕಾನಿ ಉಪಾಸನಾನಿ ಕ್ರತುಷು ಕಲ್ಪಯಾಂಚಕ್ರುಃ ॥

(ಭಾಷ್ಯಾರ್ಥ)

ಹೀಗೆಂಬ ಪೂರ್ವಪಕ್ಷವು ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. 'ತನ್ನಿರ್ಧಾರಣಾನಿಯಮಃ' (ಅವುಗಳ ನಿರ್ಧಾರಣೆಗಳ ನಿಯಮವಿಲ್ಲ. ಇದರ ವಿವರ) : ಉದ್ಗೀಥವೇ ಮುಂತಾದ ಕರ್ಮಗುಣಗಳ ಯಾಥಾತ್ಮ್ಯವನ್ನು ನಿರ್ಧರಿಸುವ, ರಸತಮ (ಛಾಂ. ೧-೧-೩), (ಕಾಮಗಳ) ಆಪ್ತಿ (ಛಾಂ.೧-೧-೭), ಸಮೃದ್ಧಿ (ಛಾಂ. ೧-೧-೮), ಮುಖ್ಯಪ್ರಾಣ (ಛಾಂ .೧-೨-೭), ಆದಿತ್ಯ (ಛಾಂ. ೧-೩-೧) ಇವೇ ಮುಂತಾದವುಗಳಿವೆಯಲ್ಲ[1], ಅವು ಕರ್ಮಗಳಲ್ಲಿ ನಿತ್ಯವಾಗಿ ನಿಯತವಾಗಿರುವದಿಲ್ಲ. ಏಕೆ ? ಎಂದರೆ ಆ ದೃಷ್ಟಿಯಿರುವದರಿಂದ. (ಇದರ ವಿವರ) : ಹಾಗೆಂದಲ್ಲವೆ, ಈ ಜಾತಿಯ (ಉಪಾಸನೆಗಳು) ನಿಯತವಲ್ಲವೆಂದು ಶ್ರುತಿ ತಿಳಿಸುತ್ತದೆ ? ಏಕೆಂದರೆ "ಆ (ಅಕ್ಷರದಿಂದ) ಅದನ್ನು ಹೀಗೆಂದು ತಿಳಿದವನು, ಮತ್ತು ತಿಳಿಯದವನು ಇಬ್ಬರೂ (ಕರ್ಮ)ವನ್ನು ಮಾಡುತ್ತಾರೆ" (ಛಾಂ. ೧-೧-೧೦) ಎಂದು ಉಪಾಸನೆಮಾಡದವನಿಗೂ ಕ್ರಿಯೆಯನ್ನು (ಮಾಡಬಹುದೆಂದು) ಒಪ್ಪಿರುತ್ತದೆ. ಮತ್ತು ಪ್ರಸ್ತಾವವೇ

1. ಅಮೃತಾಭಯಗುಣತ್ವ (೧-೪-೧) ಮುಂತಾದವುಗಳನ್ನೂ ಇಲ್ಲಿ ಗ್ರಹಿಸಬೇಕು ಎಂದಭಿಪ್ರಾಯ.

ಮುಂತಾದವುಗಳ ದೇವತೆಗಳ ಉಪಾಸನೆಯಿಲ್ಲದ ಪ್ರಸ್ತೋತೃ ಮುಂತಾದವರೂ ಯಾಗಮಾಡಿಸುವ ನಿಶ್ಚಯಮಾಡಿರುವದು "ಪ್ರಸ್ತೋತೃವೆ, ಯಾವ ದೇವತೆಯು ಪ್ರಸ್ತಾವವನ್ನು ಹೊಂದಿಕೊಂಡಿರುವದೋ ಆ (ದೇವತೆಯನ್ನು) ಅರಿಯದೆ ಪ್ರಸ್ತಾವಮಾಡುವೆಯಾದರೆ" (ಛಾಂ. ೧-೧೦-೯), (ಎಂದೂ) "ಆ (ಉದ್ಗೀಥದೇವತೆಯನ್ನು) ಅರಿಯದೆ ಉದ್ಗಾನಮಾಡುವೆಯಾದರೆ" (ಛಾಂ. ೧-೧೦-೧೦ ಎಂದೂ) "ಆ (ಪ್ರತಿಹಾರದೇವತೆಯನ್ನು) ಅರಿಯದೆ ಪ್ರತಿಹರಣಮಾಡುವೆಯಾದರೆ....." (ಛಾಂ ೧-೧೦-೧೧) ಎಂದೂ (ಶ್ರುತಿಯಲ್ಲಿ) ಕಂಡುಬರುತ್ತದೆಯಾದ್ದರಿಂದಲೂ (ಹೀಗೆ)[1].

ಇದಲ್ಲದೆ ಈ ಜಾತಿಯ ಕರ್ಮಾಶ್ರಯವಾದ ಉಪಾಸನೆಗೆ ಕರ್ಮ(ಫಲ)ಕ್ಕಿಂತಲೂ ಬೇರೆಯಾಗಿಯೇ ಫಲವನ್ನು ಕರ್ಮಫಲವು ಸಿದ್ಧಿಯಾಗುವದಕ್ಕೆ ಪ್ರತಿಬಂಧವಿಲ್ಲದಿರುವದು, ಅದು ಸಮೃದ್ಧವಾಗುವದು -ಎಂಬ ಒಂದಾನೊಂದು ಅತಿಶಯವಿಶೇಷವನ್ನು "ಅದರಿಂದ ಇಬ್ಬರೂ, ಯಾವನು ಇದನ್ನು ಹೀಗೆಂದು ಅರಿತುಕೊಂಡಿರುವನೋ ಮತ್ತು ಯಾವನು ಅರಿತುಕೊಂಡಿರುವದಿಲ್ಲವೋ, ಇಬ್ಬರೂ ಮಾಡುತ್ತಾರೆ ; ಆದರೆ ವಿದ್ಯೆಯೂ ಅವಿದ್ಯೆಯೂ ಬೇರೆ ಬೇರೆ, ಯಾವದನ್ನು ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಚಿತ್ತಸಮಾಧಾನದಿಂದಲೂ ಕೂಡಿ ಮಾಡುತ್ತಾನೋ ಅದೇ ವೀರ್ಯವತ್ತರವಾಗುತ್ತದೆ" (ಛಾಂ.೧-೧-೧೦) ಎಂದು (ಹೇಳಿರುವದು) ಕಂಡುಬರುತ್ತದೆ. ಇಲ್ಲಿ 'ಬೇರೆಬೇರೆ' ಎಂದು ಜ್ಞಾನ್ಯಜ್ಞಾನಿಗಳನ್ನು ವಿಂಗಡಿಸಿರುವದರಿಂದಲೂ 'ವೀರ್ಯವತ್ತರ' ವೆಂದು 'ತರಪ್' ಪ್ರತ್ಯಯವನ್ನು ಪ್ರಯೋಗಿಸಿರುವದರಿಂದಲೂ ವಿದ್ಯೆಯಿಲ್ಲದೆ (ಬರಿಯ) ಕರ್ಮವೂ ವೀರ್ಯವಂತವಾಗಿರುತ್ತದೆ ಎಂದು ನಿಶ್ಚಿತವಾಗುತ್ತದೆ. ಅದು ಉಪಾಸನೆಯು ಅನಿತ್ಯವೆಂಬ (ಪಕ್ಷದಲ್ಲಿ) ಹೊಂದುಗಡೆಯಾಗುತ್ತದೆ. (ಅದು) ನಿತ್ಯವೆಂದಾದರೋ ಅದು ಇಲ್ಲದ ಕರ್ಮವು ವೀರ್ಯವಂತವಾಗಿರುವದೆಂದು ಹೇಗೆತಾನೆ (ಶ್ರುತಿಯು) ಒಪ್ಪೀತು[2]? (ಕರ್ಮದ) ಎಲ್ಲಾ ಅಂಗಗಳನ್ನೂ ಸೇರಿಸಿ (ಮಾಡಿದರೇ) ಕರ್ಮವು ವೀರ್ಯವಂತವಾಗುತ್ತದೆ ಎಂದಲ್ಲವೆ, (ಕರ್ಮ)ಸಿದ್ಧಾಂತ ? ಇದರಂತೆ ಲೋಕಸಾಮ[3] ಮುಂತಾದವುಗಳಲ್ಲಿಯೂ ಒಂದೊಂದು ಉಪಾಸನೆಗೂ ಗೊತ್ತಾದ- "ಇವನಿಗೆ ಮೇಲಿನ ಮತ್ತು ಹಿಂತಿರುಗುವ (ಸ್ವಭಾವವುಳ್ಳ) ಲೋಕಗಳು ಆಗುತ್ತವೆ"

1. ಉಪಾಸಕರಲ್ಲದವರು ಕರ್ಮವನ್ನು ಮಾಡಿಸುವಹಾಗಿಲ್ಲದಿದ್ದರೆ ಈ ವಾಕ್ಯಗಳು ವ್ಯರ್ಥವಾಗುತ್ತಿದ್ದವು. ಆದ್ದರಿಂದಲೂ ಈ ಉಪಾಸನೆಗಳು ನಿತ್ಯವಾಗಿ ಕರ್ಮಕ್ಕೆ ಸಂಬಂಧಪಟ್ಟಿಲ್ಲವೆಂದಾಯಿತು.

2. ಉಪಾಸನೆಯೂ ಸೇರಿಯೇ ಅಲ್ಲವೇ ಕರ್ಮವು ಪೂರ್ಣವಾಗುವದು ?

3. ಲೋಕದೃಷ್ಟಿಯಿಂದ ಉಪಾಸನೆಮಾಡುವ ಸಾಮ. ಛಾಂ. ೨-೨-೧.

(ಛಾಂ. ೨-೨-೩) ಎಂದು ಮುಂತಾದ (ಆಯಾ) ಫಲಗಳನ್ನು ಹೇಳಿರುತ್ತದೆ[1]. ಈ ಫಲಶ್ರವಣವು ಅರ್ಥವಾದಮಾತ್ರವೆಂದು ತಿಳಿಯುವದಕ್ಕಾಗುವದೂ ಇಲ್ಲ. ಏಕೆಂದರೆ ಆಗ (ಅದು) ಗುಣವಾದವೆಂದಾಗುವದು, ಫಲೋಪದೇಶವೆಂದರೋ ಮುಖ್ಯವಾದವೆಂಬುದು ಹೊಂದುತ್ತದೆ[2]. ಪ್ರಯಾಜಾದಿಗಳಲ್ಲಾದರೋ ಇತಿ ಕರ್ತವ್ಯತೆಯ ಆಕಾಂಕ್ಷೆಯುಳ್ಳ ಕ್ರತುವು ಪ್ರಕೃತವಾಗಿರುವದರಿಂದ[3] (ಅಲ್ಲಿ) ಫಲಶ್ರುತಿಯೂ ಅರ್ಥವಾದವೆಂದು (ನಿಶ್ಚಯಿಸುವದು) ಯುಕ್ತವಾಗಿರುತ್ತದೆ[4]. ಹೀಗೆಯೇ ಅನಾರಭ್ಯಾಧೀತವಾಗಿರುವ[5] ಪರ್ಣಮಯೀತ್ವವೇ ಮುಂತಾದವುಗಳಲ್ಲಿಯೂ (ಯುಕ್ತವಾಗಿರುತ್ತದೆ). ಏಕೆಂದರೆ ಪರ್ಣಮಯೀತ್ವವೇ ಮುಂತಾದವು ಕ್ರಿಯಾತ್ಮಕವಲ್ಲವಾಗಿ ಆಶ್ರಯವಿಲ್ಲದೆ ಫಲಸಂಬಂಧವು ಹೊಂದುವದಿಲ್ಲ[6]. (ಇದರ ವಿವರ): ಗೋದೋಹನವೇ ಮುಂತಾದವುಗಳಿಗೆ ಪ್ರಕೃತವಾಗಿರುವ ಅಪ್ಪ್ರಣಯನವೇ ಮುಂತಾದವುಗಳ ಆಶ್ರಯವಿರುವದರಿಂದ ಫಲವಿಧಿಯೂ ಹೊಂದುತ್ತದೆ ; ಹೀಗೆಯೇ ಬೈಲ್ವಾದಿಗಳಿಗೂ ಪ್ರಕೃತವಾದ ಯೂಪವೇ ಮುಂತಾದ ಆಶ್ರಯಗಳು ದೊರಕುವದರಿಂದ ಫಲವನ್ನು

---

1. ಆದ್ದರಿಂದ ಉಪಾಸನೆಗಳೇ ಬೇರೆ, ಕರ್ಮಗಳೇ ಬೇರೆ. ಹೀಗಲ್ಲದಿದ್ದರೆ ಉಪಾಸನೆಗಳಿಗೆ ಬೇರೆಯ ಫಲವನ್ನು ಹೇಳಲು ಕಾರಣವಿಲ್ಲ.

2. ಅರ್ಥವಾದಮಾತ್ರವಾದರೆ, ವಿಧಾನಮಾಡಿದ ಉಪಾಸನೆಯನ್ನು ಹೊಗಳುವದಕ್ಕೆ ಫಲವನ್ನು ಹೇಳಿದೆ ಎಂದರೆ ಲಕ್ಷಣಾವೃತ್ತಿಯನ್ನು ಆಶ್ರಯಿಸಿದಂತೆ ಆಗುವದು ; ವಾಕ್ಯವು ಫಲಪರವೆಂದರೆ ಮುಖ್ಯವೃತ್ತಿಯನ್ನು ಆಶ್ರಯಿಸಿದಂತೆ ಆಗುವದು. ಆದ್ದರಿಂದ ಅದನ್ನೇ ಸ್ವೀಕರಿಸುವದು ಯುಕ್ತ.

3. ಪ್ರಯಾಜಾದಿಗಳು ದರ್ಶಪೂರ್ಣಮಾಸಗಳಿಗೆ ಅಂಗವಾಗಿರುವವೆಂದು ಗೊತ್ತಾಗಿರುವದರಿಂದ ಅವಕ್ಕೆ ಬೇರೆ ಫಲವಿರುವಹಾಗಿಲ್ಲವಾಗಿ ಅಲ್ಲಿ ಅರ್ಥವಾದವೆಂದು ಕಲ್ಪಿಸಬಹುದು. ದರ್ಶಪೂರ್ಣಮಾಸಕ್ಕೆ ಇತಿಕರ್ತವ್ಯತೆಯ ಆಕಾಂಕ್ಷೆಯಿರುವದರಿಂದ ಪ್ರಯಾಜಾದಿಗಳು ಅಂಗವೆಂದು ನಿಶ್ಚಿತವಾಗಿರುತ್ತದೆ.

4. ಪ್ರಯಾಜಾನುಯಾಜಗಳನ್ನು ಮಾಡುವದರಿಂದ ಯಜ್ಞಕ್ಕೆ ಕವಚವನ್ನು ಮಾಡಿದಂತಾಗುತ್ತದೆ, ಯಜಮಾನನಿಗೆ ದಾಯಾದಿಗಳ ಅಭಿಭವಕ್ಕೆ ತಕ್ಕ ಕವಚವನ್ನು ಮಾಡಿದಂತೆ ಆಗುತ್ತದೆ- ಎಂಬ ಫಲೋಕ್ತಿಯು ಅರ್ಥವಾದವು. ಏಕೆಂದರೆ ಪ್ರಯಾಜಾದಿಗಳು ಪರಾರ್ಥವಾದ ಕರ್ಮಗಳು.

5. ಯಾವದೊಂದು ಪ್ರಕರಣದಲ್ಲಿಯೂ ಹೇಳದೆ ಇರುವ.

6. ಪರ್ಣಮಯವಾಗಿರುವದೆಂಬುದಕ್ಕೆ ಸ್ವತಂತ್ರವಾಗಿ ಯಾಗಾದಿಗಳಂತೆ ಫಲಸಂಬಂಧವಾಗುವಂತಿಲ್ಲ, ಏಕೆಂದರೆ ಅದು ಕ್ರಿಯಾತ್ಮಕವಲ್ಲ.

ವಿಧಿಸುವದು ಹೊಂದುತ್ತದೆ[1]. ಆದರೆ ಪರ್ಣಮಯಾತ್ವವೇ ಮುಂತಾದವು ಗಳಿಗೆ ಈ ಬಗೆಯ ಯಾವದೊಂದು ಆಶ್ರಯವೂ ಪ್ರಕೃತವಾಗಿರುವದಿಲ್ಲ ವಾಕ್ಯದಿಂದಲೇ ಜುಹೂ ಮುಂತಾದವುಗಳನ್ನು ಆಶ್ರಯಿಸಿಕೊಂಡು ಫಲದಲ್ಲಿ ಯೂ ವಿಧಿಯಿದೆ ಎನ್ನುವವನ ಮತದಲ್ಲಿ ವಾಕ್ಯಭೇದವುಂಟಾಗುವದು[2]. ಉಪಾಸನೆಗಳಾದರೋ ಕ್ರಿಯಾರೂಪವಾಗಿರುವದರಿಂದ ಅಸಾಧಾರಣವಾಗಿ ವಿಧಾನಮಾಡಬಹುದಾಗಿರುವದರಿಂದ ಉದ್ಗೀಥವೇ ಮುಂತಾದ ಆಶ್ರಯವುಳ್ಳ (ಆ ಉಪಾಸನೆಗಳ) ಫಲವನ್ನು ವಿಧಾನಮಾಡುವದು ವಿರುದ್ಧವಲ್ಲ[3]. ಆದ್ದರಿಂದ ಕ್ರತ್ವಾಶ್ರಯವಾಗಿದ್ದರೂ ಗೋದೋಹನಾದಿಗಳಿಗೆ ಫಲಸಂಯೋಗವಿರುವದರಿಂದ (ಅವು) ಹೇಗೆ ಅನಿತ್ಯವೋ ಹಾಗೆಯೇ ಉದ್ಗೀಥಾದ್ಯುಪಾಸನೆಗಳೂ (ಅನಿತ್ಯವೇ) ಎಂದು ತಿಳಿಯಬೇಕು. ಆದ್ದರಿಂದಲೇ[4] **ಕಲ್ಪಸೂತ್ರಕಾರರು** ಈ ಜಾತಿಯ ಉಪಾಸನೆಗಳನ್ನು ಕ್ರತುಗಳಲ್ಲಿ ಮಾಡಬೇಕೆಂದು ತಿಳಿಸಿರುವದಿಲ್ಲ.

## ೨೯. ಪ್ರದಾನಾಧಿಕರಣ

**(ಬೃಹದಾರಣ್ಯಕಛಾಂದೋಗ್ಯಗಳಲ್ಲಿ ವಾಯುಪ್ರಾಣಗಳ ಉಪಾಸನೆ ಬೇರೆಬೇರೆ)**

**ಪ್ರದಾನವದೇವ ತದುಕ್ತಮ್** ॥ ೪೩ ॥

೪೩. (ವಾಯುಪ್ರಾಣಗಳ ಉಪಾಸನೆಗಳು ಬೇರೆಬೇರೆ), ಪ್ರದಾನದಂತೆಯೇ. ಅದನ್ನು (ಸಂಕರ್ಷದಲ್ಲಿ) ಹೇಳಿದೆ.

---

1. ಪಶುಕಾಮನಾದವನು ಗೋದೋಹನವನ್ನುಪಯೋಗಿಸಬೇಕು ಎಂಬಲ್ಲಿ ಗೋದೋಹನವು ಕ್ರಿಯೆಯಲ್ಲದಿದ್ದರೂ ಅಪ್ಪ್ರಣಯನ (ನೀರುತುಂಬುವದು)ವೆಂಬ ಕ್ರಿಯೆಯು ಪ್ರಕೃತವಾಗಿರುತ್ತದೆ; ಅದನ್ನು ಗೋದೋಹನದಿಂದ ಮಾಡಿದರೆ ಈ ಫಲವೆಂದು ವಿಧಿಸಬಹುದಾಗಿದೆ. ಬಿಲ್ವದ್ದಾಗಿರುವದೆಂಬುದು ಕ್ರಿಯೆಯಲ್ಲದಿದ್ದರೂ ಕ್ರತುಸಂಬದ್ಧವಾದ ಯೂಪದ ಆಶ್ರಯದಿಂದ ಅನ್ನಾದ್ಯಕಾಮನಾದವನು ಬಿಲ್ವದ ಯೂಪವನ್ನುಪಯೋಗಿಸಬೇಕು ಎಂದು ಫಲಸಂಬಂಧವನ್ನು ಹೇಳಬಹುದು. ಈವರೆಗಿನ ದೃಷ್ಟಾಂತಗಳಲ್ಲಿ ಕ್ರಿಯಾಸಂಬಂಧವಿರುವದರಿಂದ ಫಲಪರತ್ವವನ್ನು ಕಲ್ಪಿಸಬಹುದಾಗಿದೆ.

2. ಆದರೆ ಪರ್ಣಮಯೀತ್ವಕ್ಕೆ ಇಂಥ ಆಶ್ರಯವಿಲ್ಲದ್ದರಿಂದ ಫಲವಚನವು ಅರ್ಥವಾದಮಾತ್ರವಾಗಿದೆ. ಪರ್ಣಮಯೀ ವಾಕ್ಯದಲ್ಲಿ ಗೋದೋಹನಾದಿಗಳಂತೆ ಈ ಕರ್ಮಸಂಬಂಧವು ಪ್ರಕೃತವಾಗಿಲ್ಲದಿದ್ದರೂ ವಾಕ್ಯದಿಂದಲೇ ಜುಹೂ ಎಂಬ ಕ್ರಿಯಾಸಂಬದ್ಧವಾದ ಪಾತ್ರೆಯ ಆಶ್ರಯವನ್ನು ಕಲ್ಪಿಸೋಣ ಎಂದರೆ ಆಗ ಕ್ರಿಯಾಸಂಬಂಧವನ್ನು ಹೇಳುವದು, ಫಲವನ್ನು ಹೇಳುವದು– ಎಂದು ಎರಡು ವಾಕ್ಯಗಳಾಗುವವು ಎಂದರ್ಥ. ಪರ್ಣಮಯೀವಾಕ್ಯದ ಚರ್ಚೆಯನ್ನು ಜೈ.ಸೂ. ೪–೩–೧ರಿಂದ ೩ರಲ್ಲಿ ಮಾಡಿದೆ.

3. ಉಪಾಸನೆಯು ಕ್ರಿಯೆಯೇ ಆದ್ದರಿಂದ ಅದಕ್ಕೆ ಫಲಸಂಬಂಧವು ಮತ್ತೊಂದು ಕರ್ಮದ ಆಶ್ರಯವಿಲ್ಲದೆಯೇ ಆಗಬಹುದು.

4. ಕರ್ಮಾಂಗವಲ್ಲದ್ದರಿಂದಲೇ.

## ಸಂಶಯ : ಪ್ರಾಣವಾಯೂಪಾಸನೆಗಳು ಒಂದೊ, ಬೇರೆಬೇರೆಯೊ ?

( ಭಾಷ್ಯ )

೪೦೦. ವಾಜಸನೇಯಕೇ "ವದಿಷ್ಯಾಮ್ಯೇವಾಹಮಿತಿ ವಾಗ್ದಧ್ರೇ" (ಬೃ. ೧-೫-೨೧) ಇತ್ಯತ್ರ ಅಧ್ಯಾತ್ಮಂ ವಾಗಾದೀನಾಂ ಪ್ರಾಣಃ ಶ್ರೇಷ್ಠೋಽವಧಾರಿತಃ । ಅಧಿದೈವತಮ್ ಅಗ್ನ್ಯಾದೀನಾಂ ವಾಯುಃ । ತಥಾ ಛಾನ್ದೋಗ್ಯೇ "ವಾಯುರ್ವಾವ ಸಂವರ್ಗಃ" (ಛಾಂ. ೪-೩-೧) ಇತ್ಯತ್ರ ಅಧಿದೈವತಮ್ ಅಗ್ನ್ಯಾದೀನಾಂ ವಾಯುಃ ಸಂವರ್ಗೋಽವಧಾರಿತಃ । 'ಪ್ರಾಣೋ ವಾವ ಸಂವರ್ಗಃ' (ಛಾಂ. ೪-೩-೩) ಇತ್ಯತ್ರ ಅಧ್ಯಾತ್ಮಂ ವಾಗಾದೀನಾಂ ಪ್ರಾಣಃ । ತತ್ರ ಸಂಶಯಃ । ಕಿಂ ಪೃಥಗೇವ ಇಮೌ ವಾಯುಪ್ರಾಣೌ ಉಪಗನ್ತವ್ಯೌ ಸ್ಯಾತಾಮ್ ಅಪೃಥಗ್ವಾ ಇತಿ ?

(ಭಾಷ್ಯಾರ್ಥ)

ವಾಜಸನೇಯಕದಲ್ಲಿ "ನಾನು ಮಾತನಾಡುತ್ತಲೇ ಇರುವೆನು ಎಂದು ವಾಕ್ಕು ನಿಶ್ಚಯಿಸಿತು" ಎಂದು ಅಧ್ಯಾತ್ಮವಾಗಿ ವಾಗಾದಿಗಳೊಳಗೆ ಪ್ರಾಣವು ಶ್ರೇಷ್ಠವೆಂದು ನಿಶ್ಚಯಮಾಡಲಾಗಿದೆ ; ಅಧಿದೈವತವಾಗಿ ಅಗ್ನ್ಯಾದಿಗಳೊಳಗೆ ವಾಯು (ಶ್ರೇಷ್ಠವೆಂದು ನಿಶ್ಚಯಮಾಡಲಾಗಿದೆ). ಹೀಗೆಯೇ ಛಾಂದೋಗ್ಯದಲ್ಲಿ "ವಾಯುವೇ ಸಂವರ್ಗವು" (ಛಾಂ. ೪-೩-೩) ಎಂಬಲ್ಲಿ ಅಧಿದೈವತವಾಗಿ ಅಗ್ನ್ಯಾದಿಗಳಲ್ಲಿ ವಾಯು ಸಂವರ್ಗವೆಂದು ನಿಶ್ಚಯಿಸಲಾಗಿದೆ ; "ಪ್ರಾಣವೇ ಸಂವರ್ಗವು" (ಛಾಂ.೪-೩-೩) ಎಂಬಲ್ಲಿ ಅಧ್ಯಾತ್ಮವಾಗಿ ವಾಗಾದಿಗಳೊಳಗೆ ಪ್ರಾಣವು (ಸಂವರ್ಗವೆಂದು ನಿಶ್ಚಯಿಸಲಾಗಿದೆ). ಇಲ್ಲಿ ಸಂಶಯವೇನೆಂದರೆ ಈ ವಾಯುಪ್ರಾಣಗಳನ್ನು ಬೇರೆಬೇರೆಯಾಗಿಯೇ ಉಪಾಸನೆಮಾಡಬೇಕೊ, ಒಟ್ಟಿಗೆಯಾಗಿಯೇ (ಉಪಾಸನೆಮಾಡಬೇಕೊ) ?

## ಪೂರ್ವಪಕ್ಷ : ವಾಯುಪ್ರಾಣಗಳನ್ನು ಒಟ್ಟಿಗೇ ಚಿಂತಿಸಬೇಕು

(ಭಾಷ್ಯ)

೪೦೧. ಅಪೃಥಗೇವೇತಿ ತಾವತ್ ಪ್ರಾಪ್ತಮ್ । ತತ್ತ್ವಾಭೇದಾತ್ । ನ ಹಿ ಅಭಿನ್ನೇ ತತ್ತ್ವೇ ಪೃಥಗನುಚಿನ್ತನಂ ನ್ಯಾಯ್ಯಮ್ । ದರ್ಶಯತಿ ಚ ಶ್ರುತಿಃ ಅಧ್ಯಾತ್ಮಮ್ ಅಧಿದೈವತಂ ಚ ತತ್ತ್ವಾಭೇದಮ್ "ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್" (ಐ. ೧-೨) ಇತ್ಯಾರಭ್ಯ । ತಥಾ "ತ ಏತೇ ಸರ್ವ ಏವ ಸಮಾಃ ಸರ್ವೇಽನನ್ತಾಃ" (ಬೃ. ೧-೫-೧೩) ಇತ್ಯಾಧ್ಯಾತ್ಮಿಕಾನಾಂ ಪ್ರಾಣಾನಾಮ್ ಆಧಿದೈವಿಕೀಂ ವಿಭೂತಿಮ್ ಆತ್ಮಭೂತಾಂ ದರ್ಶಯತಿ । ತಥಾ ಅನ್ಯತ್ರಾಪಿ ತತ್ರ ತತ್ರ ಅಧ್ಯಾತ್ಮಮ್ ಅಧಿದೈವತಂ ಚ ಬಹುಧಾ ತತ್ತ್ವಾ

ಭೇದದರ್ಶನಂ ಭವತಿ । ಕ್ವಚಿಚ್ಚ "ಯಃ ಪ್ರಾಣಃ ಸ ವಾಯುಃ" (? ) ಇತಿ ಸ್ಪಷ್ಟಮೇವ ವಾಯುಂ ಪ್ರಾಣಂ ಚ ಏಕಂ ಕರೋತಿ । ತಥಾ ಉದಾಹೃತೇಽಪಿ ವಾಜಸನೇಯಿಬ್ರಾಹ್ಮಣೇ "ಯತಶ್ಚೋದೇತಿ ಸೂರ್ಯಃ" (ಬೃ. ೧-೫-೨೩) ಇತ್ಯಸ್ಮಿನ್ ಉಪಸಂಹಾರಶ್ಲೋಕೇ "ಪ್ರಾಣಾದ್ವಾ ಏಷ ಉದೇತಿ ಪ್ರಾಣೇಽಸ್ತಮೇತಿ" (ಬೃ. ೧-೫-೨೩) ಇತಿ ಪ್ರಾಣೇನೈವ ಉಪಸಂಹರನ್ ಏಕತ್ವಂ ದರ್ಶಯತಿ । "ತಸ್ಮಾದೇಕಮೇವ ವ್ರತಂ ಚರೇತ್ ಪ್ರಾಣ್ಯಾಚ್ಚೈವಾಪಾನ್ಯಾಚ್ಚ" (ಬೃ. ೧-೫-೨೩) ಇತಿ ಚ ಪ್ರಾಣವ್ರತೇನ ಏಕೇನ ಉಪಸಂಹರನ್ ಏತದೇವ ದ್ರಢಯತಿ । ತಥಾ ಛಾನ್ದೋಗ್ಯೇಽಪಿ ಪರಸ್ತಾತ್ "ಮಹಾತ್ಮನಶ್ಚತುರೋ ದೇವ ಏಕಃ ಸ ಜಗಾರ ಭುವನಸ್ಯ ಗೋಪಾಃ" (ಛಾಂ. ೪-೩-೬) ಇತ್ಯೇಕಮೇವ ಸಂವರ್ಗಂ ಗಮಯತಿ ನ ಬ್ರವೀತ್ಯೇಕ ಏಕೇಷಾಂ ಚತುರ್ಣಾಂ ಸಂವರ್ಗಃ, ಅಪರೋಽಪರೇಷಾಮ್ ಇತಿ । ತಸ್ಮಾತ್ ಅಪೃಥಕ್ತ್ವಮ್ ಉಪಗಮನಸ್ಯ ಇತಿ ॥

(ಭಾಷ್ಯಾರ್ಥ)

ಒಟ್ಟಿಗೇ (ಚಿಂತನೆಮಾಡಬೇಕು) ಎಂದು ಮೊದಲು (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆಂದರೆ ತತ್ತ್ವವು ಬೇರೆಬೇರೆಯಲ್ಲ. ತತ್ತ್ವವು ಬೇರೆಯಲ್ಲದಿರುವಾಗ ಬೇರೆಬೇರೆಯಾಗಿ ಅನುಚಿಂತನೆಮಾಡುವದು ಯುಕ್ತವಲ್ಲವಷ್ಟೆ. ಶ್ರುತಿಯು ಅಧ್ಯಾತ್ಮವಾಗಿಯೂ ಅಧಿದೈವತವಾಗಿಯೂ (ಪ್ರಾಣವಾಯುಗಳು) ಒಂದೇ ತತ್ತ್ವವೆಂದು "ಅಗ್ನಿಯು ವಾಕ್ಕಾಗಿ ಮುಖವನ್ನು ಪ್ರವೇಶಿಸಿದನು" (ಐ. ೧-೨) ಎಂದು ಪ್ರಾರಂಭಿಸಿ ತಿಳಿಸಿಯೂ ಇದೆ[1]. ಹೀಗೆಯೇ "ಆ ಇವರು ಸರ್ವರೂ ಸಮರು, ಸರ್ವರೂ ಅನಂತರು" (ಬೃ. ೧-೫-೧೩) ಎಂದು ಆಧ್ಯಾತ್ಮಿಕವಾದ ಪ್ರಾಣಗಳಿಗೆ ಆಧಿದೈವಿಕವಿಭೂತಿಯೂ ಸೇರಿದ್ದೆಂದು ತಿಳಿಸಿರುತ್ತದೆ. ಹೀಗೆಯೇ ಬೇರೆಯ ಕಡೆಯಲ್ಲಿಯೂ ಅಲ್ಲಲ್ಲಿ ಅಧ್ಯಾತ್ಮವಾಗಿಯೂ ಅಧಿದೈವತವಾಗಿಯೂ ಬಹುಬಗೆಯಿಂದ ತತ್ತ್ವದ ಅಭೇದವನ್ನು ತಿಳಿಸಿದ್ದಿದೆ. ಒಂದೊಂದು ಕಡೆಯಲ್ಲಿ "ಪ್ರಾಣವೆಂಬುದಿದೆಯಲ್ಲ, ಅದೇ ವಾಯು" (?) ಎಂದು ಸ್ಪಷ್ಟವಾಗಿಯೇ ವಾಯುವನ್ನೂ ಪ್ರಾಣವನ್ನೂ ಒಂದುಮಾಡಿ (ಹೇಳಿರು)ತ್ತದೆ. ಇದರಂತೆ (ಮೇಲೆ) ಉದಾಹರಿಸಿರುವ ವಾಜಸನೇಯಿಬ್ರಾಹ್ಮಣದಲ್ಲಿ "ಯಾವದರಿಂದ ಸೂರ್ಯನು ಉದಯಿಸುತ್ತಾನೋ....." (ಬೃ. ೧-೫-೨೩) ಎಂಬೀ ಉಪಸಂಹಾರಶ್ಲೋಕದಲ್ಲಿ ಪ್ರಾಣದಿಂದಲೇ ಇವನು ಉದಯಿಸುತ್ತಾನೆ, ಪ್ರಾಣದಲ್ಲಿಯೇ ಲಯವಾಗುತ್ತಾನೆ" (೧-೫-೨೩) ಎಂದು ಪ್ರಾಣದಿಂದಲೇ ಉಪಸಂಹಾರಮಾಡಿರುವದರಿಂದ

1. ವಾಯುವು ಪ್ರಾಣವಾಗಿ ನಾಸಿಕೆಗಳನ್ನು ಹೊಕ್ಕನು ಎಂಬ ವಾಕ್ಯವು ಇದರಲ್ಲಿದೆ.

(ಎರಡೂ) ಒಂದೇ ಎಂದು ತಿಳಿಸಿರುತ್ತದೆ. "ಆದ್ದರಿಂದ ಒಂದೇ ವ್ರತವನ್ನು ಆಚರಿಸಬೇಕು, ಪ್ರಾಣನಮಾಡಬೇಕು. ಅಪಾನವನ್ನು ಮಾಡಬೇಕು" (ಬೃ. ೧-೫-೨೩) ಎಂದು ಪ್ರಾಣವ್ರತವೊಂದರಿಂದಲೇ ಉಪಸಂಹಾರಮಾಡಿರುವದರಿಂದಲೂ ಇದನ್ನೇ ತಿಳಿಸಿದೆ. ಹೀಗೆಯೇ ಛಾಂದೋಗ್ಯದಲ್ಲಿಯೂ ಮುಂದೆ "ಒಬ್ಬನೇ ದೇವನಾದ (ಯಾವ) ಪ್ರಜಾಪತಿಯು ನಾಲ್ಕು ಜನ ಮಹಾತ್ಮರನ್ನು ನುಂಗಿದನೋ (ಸರ್ವ)ಭುವನಕ್ಕೂ ರಕ್ಷಕನಾಗಿರುವನೋ" (ಛಾಂ. ೪-೩-೬) ಎಂದು ಒಂದೇ ಸಂವರ್ಗವನ್ನು ತಿಳಿಸಿದೆಯೇ ಹೊರತು ಒಂದು (ಗುಂಪಿನ) ನಾಲ್ವರಿಗೆ ಒಂದು ಸಂವರ್ಗವು, ಮತ್ತೊಂದು ಮಿಕ್ಕ (ನಾಲ್ವರಿಗೆ) ಎಂದು ಹೇಳಿರುವದಿಲ್ಲ. ಆದ್ದರಿಂದ ಉಪಾಸನೆಯು ಬೇರೆಬೇರೆಯಾಗಿಲ್ಲ.

## ಸಿದ್ಧಾಂತ: ವಾಯುಪ್ರಾಣಗಳ ಉಪಾಸನೆಗಳನ್ನು ಬೇರೆಬೇರೆ ಮಾಡಬೇಕು

(ಭಾಷ್ಯ)

೪೧೨. ಏವಂ ಪ್ರಾಪ್ತೇ ಬ್ರೂಮಃ। ಪೃಥಗೇವ ವಾಯುಪ್ರಾಣೌ ಉಪಗನ್ತವ್ಯೌ ಇತಿ। ಕಸ್ಮಾತ್ ? ಪೃಥಗುಪದೇಶಾತ್। ಆಧ್ಯಾನಾರ್ಥೋ ಹಿ ಅಯಮ್ ಅಧ್ಯಾತ್ಮಾಧಿದೈವವಿಭಾಗೋಪದೇಶಃ। ಸೋಽಸತಿ ಆಧ್ಯಾನಪೃಥಕ್ತ್ವೇ ಅನರ್ಥಕ ಏವ ಸ್ಯಾತ್। ನನು ಉಕ್ತಂ ನ ಪೃಥಗನುಚಿನ್ತನಮ್ ತತ್ತ್ವಾಭೇದಾತ್ ಇತಿ। ನೈಷ ದೋಷಃ। ತತ್ತ್ವಾಭೇದೇಽಪಿ ಅವಸ್ಥಾಭೇದಾತ್ ಉಪದೇಶಭೇದವಶೇನ ಅನುಚಿನ್ತನಭೇದೋಪಪತ್ತೇಃ। ಶ್ಲೋಕೋಪನ್ಯಾಸಸ್ಯ ಚ ತತ್ತ್ವಾಭೇದಾಭಿಪ್ರಾಯೇಣಾಪ್ಯುಪಪದ್ಯಮಾನಸ್ಯ ಪೂರ್ವೋದಿತಧ್ಯೇಯಭೇದನಿರಾಕರಣಸಾಮರ್ಥ್ಯಾಭಾವಾತ್। "ಸ ಯಥೈಷಾಂ ಪ್ರಾಣಾನಾಂ ಮಧ್ಯಮಃ ಪ್ರಾಣ ಏವಮೇತಾಸಾಂ ದೇವತಾನಾಂ ವಾಯುಃ" (ಬೃ.೧-೫-೨೨) ಇತಿ ಚ ಉಪಮಾನೋಪಮೇಯಕರಣಾತ್। ಏತೇನ ವ್ರತೋಪದೇಶೋ ವ್ಯಾಖ್ಯಾತಃ। "ಏಕಮೇವ ವ್ರತಮ್" (ಬೃ.೧-೫-೨೩) ಇತಿ ಚ ಏವಕಾರೋ ವಾಗಾದಿವ್ರತನಿವರ್ತನೇನ ಪ್ರಾಣವ್ರತಪ್ರತಿಪತ್ತ್ಯರ್ಥಃ। ಭಗ್ನವ್ರತಾನಿ ಹಿ ವಾಗಾದೀನ್ಯುಕ್ತಾನಿ "ತಾನಿ ಮೃತ್ಯುಃ ಶ್ರಮೋ ಭೂತ್ವೋಪಯೇಮೇ" (ಬೃ. ೧-೫-೨೧) ಇತಿ ಶ್ರುತೇಃ। ನ ವಾಯುವ್ರತನಿವೃತ್ತ್ಯರ್ಥಃ। "ಅಥಾತೋ ವ್ರತಮೀಮಾಂಸಾ" (ಬೃ. ೧-೫-೨೧) ಇತಿ ಪ್ರಸ್ತುತ್ಯ ತುಲ್ಯವತ್ ವಾಯುಪ್ರಾಣಯೋರಭಗ್ನವ್ರತತ್ವಸ್ಯ ನಿರ್ಧಾರಿತತ್ವಾತ್। "ಏಕಮೇವ ವ್ರತಂ ಚರೇತ್" (ಬೃ. ೧-೫-೨೩) ಇತಿ ಚೋಕ್ತ್ವಾ "ತೇನೋ ಏತಸ್ಯೈ ದೇವತಾಯೈ ಸಾಯುಜ್ಯಂ ಸಲೋಕತಾಂ ಜಯತಿ" (ಬೃ. ೧-೫-೨೩) ಇತಿ ವಾಯುಪ್ರಾಪ್ತಿಂ ಫಲಂ ಬ್ರುವನ್ ವಾಯುವ್ರತಮ್ ಅನಿವರ್ತಿತಂ ದರ್ಶಯತಿ।

'ದೇವತಾ' ಇತ್ಯತ್ರ ವಾಯುಃ ಸ್ಯಾತ್ ಅಪರಿಚ್ಛಿನ್ನಾತ್ಮಕತ್ವಸ್ಯ ಪ್ರೇಪ್ಸಿತತ್ವಾತ್। ಪುರಸ್ತಾತ್ ಪ್ರಯೋಗಾಚ್ಚ "ಸೈಷಾನಸ್ತಮಿತಾ ದೇವತಾ ಯದ್ವಾಯುಃ" (ಬೃ. ೧-೫-೨೨) ಇತಿ । ತಥಾ "ತೌ ವಾ ಏತೌ ದ್ವೌ ಸಂವರ್ಗೌ ವಾಯುರೇವ ದೇವೇಷು ಪ್ರಾಣಃ ಪ್ರಾಣೇಷು" (ಛಾಂ. ೪-೩-೪) ಇತಿ ಭೇದೇನ ವ್ಯಪದಿಶತಿ "ತೇ ವಾ ಏತೇ ಪಞ್ಚಾನ್ಯೇ ಪಞ್ಚಾನ್ಯೇ ದಶ ಸನ್ತಸ್ತತ್ಕೃತಮ್" (ಛಾಂ. ೪-೩-೮) ಇತಿ ಭೇದೇನೈವ ಉಪಸಂಹರತಿ । ತಸ್ಮಾತ್ ಪೃಥಗೇವ ಉಪಗಮನಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊಡಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ವಾಯುಪ್ರಾಣಗಳನ್ನು ಬೇರೆಬೇರೆಯಾಗಿಯೇ ಉಪಾಸನೆಮಾಡಬೇಕು. ಏಕೆ ? ಎಂದರೆ ಬೇರೆಬೇರೆಯಾಗಿ ಉಪದೇಶಮಾಡಿರುವದರಿಂದ ಆಧ್ಯಾನಕ್ಕಾಗಿಯಲ್ಲವೆ, ಅಧ್ಯಾತ್ಮ, ಅಧಿದೈವ- ಎಂಬೀ ವಿಭಾಗದ ಉಪದೇಶವನ್ನು ಮಾಡಿರುವದು ? ಆಧ್ಯಾನಗಳು ಬೇರೆಬೇರೆಯಾಗಿಲ್ಲದೆ ಇದ್ದರೆ ಆ (ಉಪದೇಶವು) ವ್ಯರ್ಥವೇ ಆಗುವದು.

(ಆಕ್ಷೇಪ) :- ತತ್ತ್ವವು ಬೇರೆಯಲ್ಲವಾದ್ದರಿಂದ ಬೇರೆಬೇರೆ ಅನುಚಿಂತನ ಮಾಡಬೇಕಾದದ್ದಿಲ್ಲವೆಂದು ಹೇಳಿದೆವಲ್ಲ !

(ಪರಿಹಾರ) :- ಇದೇನೂ ದೋಷವಲ್ಲ. ತತ್ತ್ವವು ಬೇರೆಯಲ್ಲವಾದರೂ ಅವಸ್ಥೆಗಳು ಬೇರೆಬೇರೆಯಾಗಿರುವದರಿಂದ ಅನುಚಿಂತನೆಗಳು ಬೇರೆಬೇರೆಯಾಗಿರಬಹುದಾಗಿದೆ. ಶ್ಲೋಕವನ್ನು ಹೇಳಿರುವದು ತತ್ತ್ವವು ಬೇರೆಯಲ್ಲ ಎಂಬ ಅಭಿಪ್ರಾಯದಿಂದಲೂ ಆಗಬಹುದಾದ್ದರಿಂದ ಹಿಂದೆ ಹೇಳಿದ ಧ್ಯೇಯಭೇದವನ್ನು ತಿರಸ್ಕರಿಸುವದಕ್ಕೆ (ಅದಕ್ಕೆ) ಸಾಮರ್ಥ್ಯವಿರುವದಿಲ್ಲ[1]. "ಈ ಪ್ರಾಣಗಳೊಳಗೆ ಆ ಮಧ್ಯಮಪ್ರಾಣನು ಹೇಗೋ ಈ ದೇವತೆಗಳೊಳಗೆ ವಾಯು ಹಾಗೆ" (ಬೃ. ೧-೫-೨೨) ಎಂದು (ಅವುಗಳೆರಡನ್ನೂ) ಉಪಮಾನೋಪಮೇಯಗಳನ್ನಾಗಿ ಮಾಡಿರುವದರಿಂದಲೂ (ಹೀಗೆಂದು ತಿಳಿಯಬೇಕು), ಇದರಿಂದ ವ್ರತೋಪದೇಶವನ್ನು ವಿವರಿಸಿ ಹೇಳಿದಂತೆ ಆಯಿತು. "ಒಂದೇ ವ್ರತವನ್ನು (ಆಚರಿಸಬೇಕು)" (ಬೃ. ೧-೫-೨೩) ಎಂದು ಏವಕಾರವನ್ನು (ಪ್ರಯೋಗಿಸಿರುವದು) ವಾಕ್ಕೇ ಮುಂತಾದ ವ್ರತಗಳನ್ನು ಬಿಡಿಸಿ ಪ್ರಾಣವ್ರತವನ್ನೇ ತೆಗೆದುಕೊಳ್ಳಲಿ ಎಂದು. ವಾಗಾದಿಗಳು ಭಗ್ನವ್ರತಗಳಾದವೆಂದಲ್ಲವೆ (ಹಿಂದೆ) ಹೇಳಿದೆ? "ಅವನ್ನು ಮೃತ್ಯುವು ಶ್ರಮ(ರೂಪ)ನಾಗಿ ಬಂದು ಹಿಡಿದುಕೊಂಡನು" (ಬೃ.೧-೫-೨೧) ಎಂಬ ಶ್ರುತಿಯು (ಇದಕ್ಕೆ ಪ್ರಮಾಣವು); ಅಷ್ಟೇ ಹೊರತು ವಾಯುವ್ರತವನ್ನು ಬಿಡಿಸುವದಕ್ಕಲ್ಲ, (ಇದನ್ನು ಹೇಳಿರುವದು). "ಇನ್ನು ಆದ್ದರಿಂದ ವ್ರತ

---

1. ಆಧ್ಯಾನಗಳು ಬೇರೆಯಾಗಿರುವದರಿಂದ ಧ್ಯೇಯಗಳೂ ಬೇರೆಬೇರೆ ಎಂಬುದನ್ನು.

ಮೀಮಾಂಸೆಯನ್ನು (ಮಾಡಲಾಗುವದು)" (ಬೃ. ೧-೫-೨೧) ಎಂದು ಪ್ರಾರಂಭಿಸಿ ವಾಯುಪ್ರಾಣಗಳೆರಡನ್ನೂ ಸಮವಾಗಿಯೇ ಅಭಗ್ನವ್ರತಗಳೆಂದು ನಿರ್ಧರಿಸಲಾಗಿರುವದರಿಂದ (ಹೀಗೆಂದಾಗುತ್ತದೆ). "ಒಂದೇ ವ್ರತವನ್ನು ಮಾಡಬೇಕು" (ಬೃ. ೧-೫-೨೩) ಎಂದು ಹೇಳಿ "ಆ (ವ್ರತ)ದಿಂದ ಈ ದೇವತೆಯ ಸಾಯುಜ್ಯವನ್ನೋ ಸಾಲೋಕ್ಯವನ್ನೋ ಗೆದ್ದುಕೊಳ್ಳುತ್ತಾನೆ" (ಬೃ.೧-೫-೨೩) ಎಂದು ವಾಯುಪ್ರಾಪ್ತಿ ಎಂಬ ಫಲವನ್ನು ಹೇಳುವದರಿಂದ ವಾಯುವ್ರತವನ್ನು ಕೈಬಿಡಲಿಲ್ಲವೆಂದು ತಿಳಿಸಿದಂತಾಗಿದೆ. (ಇಲ್ಲಿ) ದೇವತೆ ಎಂಬಲ್ಲಿ ವಾಯುವಾಗಬೇಕು, ಏಕೆಂದರೆ ಅಪರಿಚ್ಛಿನ್ನಸ್ವರೂಪವನ್ನೇ ಪಡೆಯಬೇಕೆಂಬುದು ಇಷ್ಟವಾಗಿದೆ. ಮೊದಲು "ಈ ವಾಯುವೆಂಬುದೇ ಅನಸ್ತಮಿತವಾದ ದೇವತೆಯು" (ಬೃ.೧-೫-೨೨) ಎಂದು (ವಾಯುವಿನಲ್ಲಿ ದೇವತಾಶಬ್ದನನ್ನು) ಪ್ರಯೋಗಿಸಿರುವದರಿಂದಲೂ (ಹೀಗೆಂದಾಗುತ್ತದೆ). ಹೀಗೆಯೇ "ಆ ಈ ಎರಡೂ ಸಂವರ್ಗಗಳು, ದೇವತೆಗಳಲ್ಲಿ ವಾಯುವೇ, ಪ್ರಾಣಗಳಲ್ಲಿ (ಮುಖ್ಯ)ಪ್ರಾಣವು" (ಛಾಂ. ೪-೩-೪) ಎಂದು (ಇವೆರಡನ್ನೂ) ಬೇರೆಬೇರೆಯಾಗಿ ಹೇಳಿರುತ್ತದೆ. "ಆ ಈ ಐದು ಬೇರೆ, (ಮತ್ತೆ) ಐದು ಬೇರೆ- ಹೀಗೆ ಹತ್ತಾಗುವದರಿಂದ ಅದು ಕೃತವಾಯಿತು" (ಛಾಂ. ೪-೩-೮) ಎಂದು ಬೇರೆಬೇರೆಯಾಗಿಯೇ (ಇವನ್ನು) ಉಪಸಂಹಾರಮಾಡಿರುತ್ತದೆ. ಆದ್ದರಿಂದ ಬೇರೆಬೇರೆಯಾಗಿಯೇ ಉಪಾಸನೆ (ಮಾಡಬೇಕು)

## ತತ್ತ್ವಭೇದದಲ್ಲಿಯೂ ಭೇದಾನುಷ್ಠಾನಕ್ಕೆ ದೃಷ್ಟಾಂತ

(ಭಾಷ್ಯ)

೪೦೩. ಪ್ರದಾನವತ್ । ಯಥಾ "ಇನ್ದ್ರಾಯ ರಾಜ್ಞೇ ಪುರೋಡಾಶಮೇಕಾದಶಕಪಾಲಮಿನ್ದ್ರಾಯಾಧಿರಾಜಾಯೇನ್ದ್ರಾಯ ಸ್ವರಾಜ್ಞೇ" (ತೈ. ಸಂ. ೨-೩-೬) ಇತ್ಯಸ್ಯಾಂ ತ್ರಿಪುರೋಡಾಶಿನ್ಯಾಮ್ ಇಷ್ಟೌ "ಸರ್ವೇಷಾಮಭಿಗಮಯನ್ನವದ್ಯತ್ಯಛಂಬಟ್ಕಾರಮ್" (ತೈ.ಸಂ. ೨-೩-೬) ಇತ್ಯತೋ ವಚನಾತ್ ಇನ್ದ್ರಭೇದಾಚ್ಚ ಸಹಪ್ರದಾನಾಶಙ್ಕಾಯಾಂ ರಾಜಾದಿಗುಣಭೇದಾತ್ ಯಾಜ್ಯಾನುವಾಕ್ಯವ್ಯತ್ಯಾಸವಿಧಾನಾಚ್ಚ ಯಥಾನ್ಯಾಸಮೇವ ದೇವತಾಪೃಥಕ್ತ್ವಾತ್ ಪ್ರದಾನಪೃಥಕ್ತ್ವಂ ಭವತಿ । ಏವಂ ತತ್ತ್ವಭೇದೇಽಪಿ ಆಧ್ಯೇಯಾಂಶಪೃಥಕ್ತ್ವಾತ್ ಆಧ್ಯಾನಪೃಥಕ್ತ್ವಮ್ ಇತ್ಯರ್ಥಃ । ತದುಕ್ತಂ ಸಂಕರ್ಷೇ "ನಾನಾ ವಾ ದೇವತಾ ಪೃಥಗ್ಜ್ಞಾನಾತ್" (?) ಇತಿ । ತತ್ರ ತು ದ್ರವ್ಯದೇವತಾಭೇದಾತ್ ಯಾಗಭೇದೋ ವಿದ್ಯತೇ, ನೈವಮಿಹ ವಿದ್ಯಾಭೇದೋಽಸ್ತಿ । ಉಪಕ್ರಮೋಪಸಂಹಾರಾಭ್ಯಾಮ್ ಅಧ್ಯಾತ್ಮಾಧಿದೈವೋಪದೇಶೇಷು ಏಕವಿದ್ಯಾ

ವಿಧಾನಪ್ರತೀತೇಃ । ವಿದ್ಯೈಕ್ಯೇಽಪಿ ತು ಅಧ್ಯಾತ್ಮಾಧಿದೈವಭೇದಾತ್ ಪ್ರವೃತ್ತಿಭೇದೋ ಭವತಿ । ಅಗ್ನಿಹೋತ್ರ ಇವ ಸಾಯಂಪ್ರಾತಃಕಾಲಭೇದಾತ್ ಇತ್ಯೇತಾವದಭಿಪ್ರೇತ್ಯ 'ಪ್ರದಾನವತ್' ಇತ್ಯುಕ್ತಮ್ ॥

( ಭಾಷ್ಯಾರ್ಥ )

ಪ್ರದಾನದಂತೆಯೇ (ಇದು). ಹೇಗೆ "ಇಂದ್ರ ರಾಜನಿಗೆ ಏಕಾದಶಕಪಾಲದ ಪುರೋಡಾಶವನ್ನು, ಇಂದ್ರ ಅಧಿರಾಜನಿಗೆ, ಇಂದ್ರ ಸ್ವರಾಜನಿಗೆ" (ತೈ. ಸಂ. ೨-೩-೬) ಎಂಬೀ ಮೂರು ಪುರೋಡಾಶಗಳ ಇಷ್ಟಿಯಲ್ಲಿ[1] "ಎಲ್ಲಾ ದೇವತೆಗಳಿಗೂ (ಪುರೋಡಾಶವನ್ನು) ದೊರಕಿಸುವವನಾಗಿ ಹವಿಸ್ಸನ್ನು ತೆಗೆದುಕೊಳ್ಳಬೇಕು. (ಇದು) ವ್ಯರ್ಥವಾಗದೆ ಇರುವದಕ್ಕಾಗಿ[2]" (ತೈ. ೨-೩-೬) ಎಂಬೀ ವಚನದಿಂದಲೂ ಇಂದ್ರನು ಬೇರೆಬೇರೆಯಲ್ಲವಾದ್ದರಿಂದಲೂ ಒಟ್ಟಿಗೆ ಕೊಡಬೇಕು ಎಂಬ ಶಂಕೆಯುಂಟಾಗಲಾಗಿ ರಾಜನೇ ಮುಂತಾದ[3] ಗುಣಗಳು ಬೇರೆಬೇರೆಯಾಗಿರುವದರಿಂದಲೂ ಯಾಜ್ಯಾನುವಾಕ್ಯಗಳ ವ್ಯತ್ಯಾಸವನ್ನು ವಿಧಿಸಿರುವದರಿಂದಲೂ[4] (ಇಲ್ಲಿ) ಹೇಳಿರುವಂತೆಯೇ ದೇವತೆಗಳು ಬೇರೆಬೇರೆಯಾಗಿರುವರಾಗಿ ಪ್ರದಾನಗಳೂ ಬೇರೆಬೇರೆ ಎಂದಾಗುತ್ತದೆಯೋ ಹಾಗೆಯೇ ತತ್ತ್ವಗಳು ಬೇರೆಬೇರೆಯಿಲ್ಲದಿದ್ದರೂ ಆಧ್ಯೇಯವಾದ ಅಂಶಗಳು ಬೇರೆಬೇರೆಯಾಗಿರುವದರಿಂದ ಆಧ್ಯಾನಗಳು ಬೇರೆಬೇರೆ ಎಂದರ್ಥ. ಇದನ್ನು "ನಾನಾ ವಾ ದೇವತಾ ಪೃಥಗ್ಜ್ಞಾನಾತ್" (?) ಬೇರೆಬೇರೆಯಾಗಿ (ದೇವತೆಗಳ) ಜ್ಞಾನವಾಗುವದ

---

1. ಅನ್ನವನ್ನು ಜೀರ್ಣಿಸಿಕೊಳ್ಳುವ ಶಕ್ತಿಯುಳ್ಳವನಿಗಾಗಿ ತ್ರಿಧಾತುವೆಂಬ ಯಾಗವನ್ನು ಇಲ್ಲಿ ವಿಧಿಸಿದೆ. ಅಲ್ಲಿ ಮೂರು ಪುರೋಡಾಶಗಳನ್ನು ಕೊಡಬೇಕಾಗುವದು.

2. ಎಲ್ಲಾ ದೇವತೆಗಳಿಗೂ ಕೊಡಬೇಕು ಎಂಬ ವಚನವಿರುವದರಿಂದ ಒಟ್ಟಿಗೆ ಕೊಡಬೇಕು ಎಂದು ಶಂಕೆ. ಇಲ್ಲಿ "ಅಚ್ಛಂಬಟ್ಕಾರಮ್" ಎಂಬ ಮಾತಿಗೆ ವ್ಯಾಖ್ಯಾನಗಳಲ್ಲಿ ಬೇರೆಬೇರೆ ಅರ್ಥವನ್ನು ಕೊಟ್ಟಿದೆ; ನ್ಯಾ.ನಿ. ದಲ್ಲಿರುವ ಅರ್ಥವು ಅವ್ಯರ್ಥತೆಗಾಗಿ ಎಂದು. ಒಬ್ಬ ದೇವತೆಗೆಂದು ಮೊದಲು ಕೊಟ್ಟರೆ ಮಿಕ್ಕದ್ದು ಯಾಗಾನರ್ಹವಾಗುತ್ತದೆ ಎಂದು ಭಾವ.

3. ರಾಜ, ಅಧಿರಾಜ, ಸ್ವರಾಜ– ಎಂಬ.

4. ಯಜ ಎಂಬ ಪ್ರೈಷವನ್ನು ಕೊಡಲು ಹೇಳುವ ಮಂತ್ರವು "ಯಾಜ್ಯ"; "ಅನುಬ್ರೂಹಿ" ಎಂಬ ಪ್ರೈಷದ ಅನಂತರದಲ್ಲಿ ಹೇಳುವದು ಪುರೋಽನುವಾಕ್ಯ. ಮೊದಲನೆಯ ಪ್ರದಾನದಲ್ಲಿರುವ ಯಾಜ್ಯವು ಎರಡನೆಯದರಲ್ಲಿ ಪುರೋಽನುವಾಕ್ಯವಾಗಬೇಕು, ಅಲ್ಲಿರುವ ಪುರೋಽನುವಾಕ್ಯವು ಇಲ್ಲಿ ಯಾಜ್ಯವಾಗಬೇಕು ಎಂದು "ವ್ಯತ್ಯಾಸಮನ್ವಾಹಾನಿರ್ದಾಹಾಯ" ಎಂಬ ವಚನದಲ್ಲಿ ವಿಹಿತವಾಗಿದೆ. ಇದು ಬೇರೆಬೇರೆಯ ಪ್ರದಾನಗಳೆಂಬ ಪಕ್ಷಕ್ಕೆ ಹೊಂದುತ್ತದೆ ಎಂದು ಸಿದ್ಧಾಂತ.

ರಿಂದ ದೇವತೆಯು ಬೇರೆಬೇರೆಯೇ[1] ಎಂದು **ಸಂಕರ್ಷದಲ್ಲಿ**[2] ಹೇಳಿರುತ್ತದೆ. **ಆದರೆ ಅಲ್ಲಿ ದ್ರವ್ಯದೇವತೆಗಳು ಬೇರೆಬೇರೆಯಾಗಿರುವದರಿಂದ ಯಾಗಗಳೂ ಬೇರೆಬೇರೆ ಎಂಬುದಿದೆ; ಇಲ್ಲಿ ಹಾಗೆ ವಿದ್ಯಾಭೇದವೇನೂ ಇರುವದಿಲ್ಲ, ಏಕೆಂದರೆ ಉಪಕ್ರಮೋಪಸಂಹಾರಗಳಿಂದ ಅಧ್ಯಾತ್ಮಾಧಿದೈವಗಳನ್ನು ಹೇಳಿರುವಲ್ಲಿ ಒಂದೇ ವಿದ್ಯೆಯನ್ನು ವಿಧಾನಮಾಡಿದೆಯೆಂಬ ಅರಿವಾಗುತ್ತಿದೆ. ವಿದ್ಯೆಯು ಒಂದೇ ಆದರೂ ಅಧ್ಯಾತ್ಮ, ಅಧಿದೈವ– ಎಂಬ ಭೇದದಿಂದ ಪ್ರವೃತ್ತಿಗಳ ಭೇದವೂ ಆಗುತ್ತದೆ. ಸಾಯಂಕಾಲ, ಪ್ರಾತಃಕಾಲ ಎಂಬ ಭೇದದಿಂದ ಅಗ್ನಿಹೋತ್ರದಲ್ಲಿ ಭೇದವಾಗುತ್ತದೆಯಷ್ಟೆ, ಅದರಂತೆ. ಇಷ್ಟನ್ನು ಮಾತ್ರ ಅಭಿಪ್ರಾಯ**ದಲ್ಲಿಟ್ಟುಕೊಂಡು 'ಪ್ರದಾನದಂತೆ' ಎಂದು (ಸೂತ್ರದಲ್ಲಿ) ಹೇಳಿರುತ್ತದೆ.

## ೨೯. ಲಿಙ್ಗಭೂಯಸ್ತ್ವಾಧಿಕರಣ (ಸೂ. ೪೪–೫೨)

(ಅಗ್ನಿರಹಸ್ಯಬ್ರಾಹ್ಮಣದಲ್ಲಿರುವ ಮಾನಸಿಕಾಗ್ನಿವಿದ್ಯೆಯು ಸ್ವತಂತ್ರವು)

**ಲಿಙ್ಗಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ ॥ ೪೪ ॥**

೪೪. (ಮಾನಸಾಗ್ನಿಗಳು ಸ್ವತಂತ್ರವಾಗಿವೆ) ; ಏಕೆಂದರೆ ಲಿಂಗಗಳು ಬಹಳವಾಗಿರುತ್ತವೆ. ಅದು ಬಲೀಯವಷ್ಟೆ, ಅದನ್ನೂ (ಹಿಂದಿನ ಕಾಂಡದಲ್ಲಿ ಹೇಳಿದೆ.

### ವಿಷಯವೂ ಸಂಶಯವೂ

(ಭಾಷ್ಯ)

೪೦೪. ವಾಜಸನೇಯಿನೋಽಗ್ನಿರಹಸ್ಯೇ "ನೈವ ವಾ ಇದಮಗ್ರೇ ಸದಾಸೀತ್" (?        ) ಇತ್ಯೇತಸ್ಮಿನ್ ಬ್ರಾಹ್ಮಣೇ ಮನೋಽಧಿಕೃತ್ಯ ಅಧೀಯತೇ "ತತ್ ಷಟ್ತ್ರಿಂಶತ್ಸಹಸ್ರಾಣ್ಯಪಶ್ಯದಾತ್ಮನೋಽಗ್ನೀನರ್ಕಾನ್

1. ಉತ್ಪತ್ತಿವಾಕ್ಯದಲ್ಲಿಯೇ ರಾಜಾಧಿರಾಜಾಧಿಗುಣಗಳು ಬೇರೆಬೇರೆ ಎಂದು ತಿಳಿದುಬರುವದರಿಂದ ಆಯಾ ಗುಣವಿಶಿಷ್ಟದೇವತೆಗಳೂ ಬೇರೆಯೇ ಎಂದರ್ಥ.

2. ಸಂಕರ್ಷಕ್ಕೆ ದೇವತಾಕಾಂಡವೆಂಬ ಹೆಸರು ಪ್ರಸಿದ್ಧಿಯಿದ್ದರೂ ಅದರಲ್ಲಿ ದೇವತಾವಿಷಯವೇನೂ ಪ್ರಧಾನವಾಗಿಲ್ಲ; ಜೈ. ಸೂ. ದಲ್ಲಿ ವಿಚಾರಮಾಡದೆ ಇರುವ ವಿಷಯಗಳನ್ನು ವಿಚಾರಮಾಡುವದರಿಂದ ಪೂರ್ವಮೀಮಾಂಸದ ಪರಿಶಿಷ್ಟರೂಪವಾಗಿದೆ ಎಂದು ಅಪ್ಪಯ್ಯದೀಕ್ಷಿತಕೃತ ಪರಿಮಳದಲ್ಲಿ ಬರೆದಿದೆ. ಸಂಕರ್ಷಗ್ರಂಥವು ನಮಗೆ ದೊರೆತಿಲ್ಲ.

ಮನೋಮಯಾನ್ ಮನಶ್ಚಿತಃ" (ಶತ. ಬ್ರಾ. ೧೦–೫–೩–೩)[1] ಇತ್ಯಾದಿ। ತಥೈವ "ವಾಕ್ಚಿತಃ ಪ್ರಾಣಚಿತಶ್ಚಕ್ಷುಶ್ಚಿತಃ ಶ್ರೋತ್ರಚಿತಃ ಕರ್ಮಚಿತೋಽಗ್ನಿ ಚಿತಃ" (?) ಇತಿ ಪೃಥಕ್ ಅಗ್ನೀನ್ ಆಮನನ್ತಿ ಸಾಂಪಾದಿಕಾನ್। ತೇಷು ಸಂಶಯಃ। ಕಿಮೇತೇ ಮನಶ್ಚಿದಾದಯಃ ಕ್ರಿಯಾನುಪ್ರವೇಶಿನಸ್ತಚ್ಛೇಷ ಭೂತಾಃ। ಉತ ಸ್ವತನ್ತ್ರಾಃ ಕೇವಲವಿದ್ಯಾತ್ಮಕಾಃ ಇತಿ ॥

(ಭಾಷ್ಯಾರ್ಥ)

ವಾಜಸನೇಯಿಗಳ ಅಗ್ನಿರಹಸ್ಯದಲ್ಲಿ "ಇದು ಮೊದಲು ಸತ್ತೂ ಆಗಿರಲಿಲ್ಲ (ಅಸತ್ತೂ ಆಗಿರಲಿಲ್ಲ.....)" (?) ಎಂಬೀ ಬ್ರಾಹ್ಮಣದಲ್ಲಿ ಮನಸ್ಸನ್ನು ಕುರಿತು "ಅದು ಮೂವತ್ತಾರುಸಾವಿರ[2] ಮನೋಮಯವಾದ ಮನಸ್ಸಿನಿಂದ ಏರ್ಪಡಿಸಿದ ಪೂಜ್ಯವಾದ ತನ್ನ ಅಗ್ನಿಗಳನ್ನು ಕಂಡಿತು" (ಶತ.ಬ್ರಾ. ೧೦–೫–೩–೩) ಎಂದು ಮುಂತಾಗಿ ಪಠಿಸುತ್ತಾರೆ. ಇದರಂತೆಯೇ "ವಾಕ್ಕಿನಿಂದ ಏರ್ಪಡಿಸಿದ, ಪ್ರಾಣ ದಿಂದ ಏರ್ಪಡಿಸಿದ, ಚಕ್ಷುಸ್ಸಿನಿಂದ ಏರ್ಪಡಿಸಿದ, ಶ್ರೋತ್ರಗಳಿಂದ ಏರ್ಪಡಿಸಿದ, ಕರ್ಮೇಂದ್ರಿಯಗಳಿಂದ ಏರ್ಪಡಿಸಿದ, ಅಗ್ನಿಯಿಂದ ಏರ್ಪಡಿಸಿದ......"(?)ಎಂದು ಬೇರೆ ಸಾಂಪಾದಿಕವಾದ[3] ಅಗ್ನಿಗಳನ್ನು ಹೇಳಿರುತ್ತಾರೆ. ಈ (ಅಗ್ನಿ)ಗಳ ವಿಷಯದಲ್ಲಿ ಸಂಶಯವೇನೆಂದರೆ ಈ ಮನಶ್ಚಿದಾದಿ ಅಗ್ನಿಗಳು ಕ್ರಿಯೆಯೊಳಗೆ ಸೇರಿಕೊಂಡು ಆ (ಕ್ರಿಯೆಗೆ) ಶೇಷವಾಗಿರುವವೊ, ಅಥವಾ ಸ್ವತಂತ್ರವಾಗಿ ಬರಿಯ ಉಪಾಸನಾತ್ಮಕವಾದವುಗಳೊ ?

## ಮನಶ್ಚಿದಾದಿಗಳು ಸ್ವತಂತ್ರಾಗ್ನಿಗಳು

(ಭಾಷ್ಯ)

೪೦೫. ತತ್ರ ಪ್ರಕರಣಾತ್ ಕ್ರಿಯಾನುಪ್ರವೇಶೇ ಪ್ರಾಪ್ತೇ ಸ್ವಾತನ್ತ್ರ್ಯಂ ತಾವತ್ ಪ್ರತಿಜಾನೀತೇ "ಲಿಙ್ಗಭೂಯಸ್ತ್ವಾತ್" ಇತಿ। ಭೂಯಾಂಸಿ ಹಿ

1. ಇಲ್ಲಿ ಕೊಟ್ಟಿರುವ ಶತಪಥಬ್ರಾಹ್ಮಣದ ಸಂಖ್ಯೆಗಳು ಆನಂದಾಶ್ರಮಮುದ್ರಿತ ಬ್ರಹ್ಮಾಮೃತವರ್ಷಿಣೀಟೀಕೆಯಿಂದ ತೆಗೆದುಕೊಂಡವು. ಈ ಸಂಖ್ಯೆಗಳು ಸರಿಯಾಗಿವೆಯೋ ಇಲ್ಲವೋ ಗೊತ್ತಿಲ್ಲ. ಈ ಅಧಿಕರಣದ ವಿಷಯವಾಗಿರುವ ಗ್ರಂಥಭಾಗವಾದ ಅಗ್ನಿರಹಸ್ಯವನ್ನು ನಾವು ಸಾಕ್ಷಾತ್ತಾಗಿ ನೋಡಿಲ್ಲವಾದ್ದರಿಂದ ಸಂಬಂಧವನ್ನು ಸ್ಪಷ್ಟವಾಗಿ ತಿಳಿಸುವದು ಆಗಿಲ್ಲ.

2. ಮೊದಲು ಸೃಷ್ಟಿಯಾದ ಮನಸ್ಸು ತನ್ನನ್ನೇ ತಾನು ನೋಡಲು ಆದರಲ್ಲಿ ಈ ಮನೋಮಯವಾದ ಅಗ್ನಿಗಳು ಕಂಡುಬಂದವು. ಮನುಷ್ಯನಿಗೆ ನೂರುವರ್ಷ ಆಯುಸ್ಸಾದ್ದರಿಂದ ೩೬೦ ದಿನಗಳ ವರ್ಷವೆಂದು ಲೆಕ್ಕಹಾಕಿ ೩೬೦೦೦ ವೃತ್ತಿಗಳಲ್ಲಿ ಎಲ್ಲಾ ವೃತ್ತಿಗಳನ್ನೂ ಅಡಕಮಾಡಿದೆ. ಇಲ್ಲಿ ಮನೋವೃತ್ತಿಗಳು, ವಾಗ್ವೃತ್ತಿಗಳು– ಮುಂತಾದ ಕಲ್ಪಿತವಾದ ಇಟ್ಟಿಗೆಗಳಿಂದ ಕಲ್ಪಿಸಿದ ಅಗ್ನಿಸ್ಥಾನಗಳನ್ನು ಹೇಳಿದೆ.

3. ಅಗ್ನಿಗಳೆಂದು ಮನಸ್ಸಿನ ಕಲ್ಪನೆಯಿಂದ ಅಗ್ನಿಗುಣವನ್ನು ಅವುಗಳಲ್ಲಿ ಸಂಪಾದನೆ ಮಾಡಿದೆ.

ಲಿಙ್ಗಾನಿ ಅಸ್ಮಿನ್ ಬ್ರಾಹ್ಮಣೇ ಕೇವಲವಿದ್ಯಾತ್ಮಕತ್ವಮೇಷಾಮ್ ಉಪೋದ್ಬಲಯನ್ತಿ ದೃಶ್ಯನ್ತೇ "ತದ್ಯತ್ಕಿಂಚೇಮಾನಿ ಭೂತಾನಿ ಮನಸಾ ಸಂಕಲ್ಪಯನ್ತಿ ತೇಷಾಮೇವ ಸಾ ಕೃತಿಃ" (ಶತ. ಬ್ರಾ. ೧೦-೫-೩-೩) ಇತಿ । "ತಾನ್ ಹೈತಾನೇವಂವಿದೇ ಸರ್ವದಾ ಸರ್ವಾಣಿ ಭೂತಾನಿ ಚಿನ್ವನ್ತ್ಯಪಿ ಸ್ವಪತೇ" (ಶತ.ಬ್ರಾ. ೧೦-೫-೩-೧೨) ಇತಿ ಚೈವಂಜಾತೀಯಕಾನಿ। ತದ್ಧಿ ಲಿಙ್ಗಂ ಪ್ರಕರಣಾದ್ ಬಲೀಯಃ। ತದಪ್ಯುಕ್ತಂ ಪೂರ್ವಸ್ಮಿನ್ ಕಾಣ್ಡೇ "ಶ್ರುತಿಲಿಙ್ಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್" (ಜೈ. ಸೂ. ೩-೩-೧೩) ಇತಿ ॥

(ಭಾಷ್ಯಾರ್ಥ)

ಇಲ್ಲಿ ಪ್ರಕರಣದಿಂದ[1] ಕ್ರಿಯೆಗೆ ಸಂಬಂಧಪಟ್ಟ(ವಿವು) ಎಂಬ (ಪೂರ್ವಪಕ್ಷವು) ಬಂದೊದಗಲಾಗಿ "ಲಿಙ್ಗಗಳು ಹೆಚ್ಚಿಗೆ ಇರುವದರಿಂದ" ಎಂದು. (ಇವು) ಸ್ವತಂತ್ರವಾದವುಗಳೆಂದು ಮೊದಲು (ಸೂತ್ರಕಾರರು) ಪ್ರತಿಜ್ಞೆಮಾಡುತ್ತಾರೆ. ಈ ಬ್ರಾಹ್ಮಣದಲ್ಲಿ ಈ (ಅಗ್ನಿಗಳು) ಕೇವಲ ವಿಧ್ಯಾತ್ಮಕವಾದವು (ಕ್ರಿಯೆಗೆ ಸಂಬಂಧಪಟ್ಟವಲ್ಲ) ಎಂಬುದನ್ನು ಬಲಗೊಳಿಸುವವಾಗಿ ಬಹಳ ಲಿಂಗಗಳು[2] ಕಂಡುಬರುತ್ತವೆಯಲ್ಲವೆ? "ಈ ಭೂತಗಳು ಮನಸ್ಸಿನಿಂದ ಏನೇನನ್ನು ಸಂಕಲ್ಪಿಸುತ್ತವೆಯೋ ಆ (ಅಗ್ನಿ)ಗಳ ಕೃತ್ಯವೇ ಅದು" (ಶತ. ಬ್ರಾ ೧೦-೫-೩-೩) ಮತ್ತು "ಆ ಈ (ಅಗ್ನಿಗಳನ್ನು) ಹೀಗೆಂದು ತಿಳಿದಾತನಿಗಾಗಿ ಯಾವಾಗಲೂ ಎಲ್ಲಾ ಭೂತಗಳೂ (ಅವನು) ನಿದ್ರಿಸುತ್ತಿದ್ದರೂ (ಅವನಿಗಾಗಿ) ಏರ್ಪಡಿಸುತ್ತಿರುತ್ತವೆ" (ಶತ. ಬ್ರಾ. ೧೦-೫-೩-೨) ಎಂಬೀ ಜಾತಿಯ (ಲಿಂಗಗಳು ಕಾಣಬರುತ್ತಿವೆ).[3] ಈ ಲಿಂಗವು ಪ್ರಕರಣಕ್ಕಿಂತ ಬಲಿಷ್ಠವಾದದ್ದು; ಇದನ್ನೂ ಪೂರ್ವಕಾಂಡದಲ್ಲಿ "ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯೆಗಳು ಸೇರಿರುವಾಗ ಮುಂದಿನದು ದುರ್ಬಲವಾಗಿರುತ್ತದೆ, ಏಕೆಂದರೆ ಅವಕ್ಕೆ ಅರ್ಥವು ದೂರವಾಗಿರುತ್ತದೆ" (ಜೈ. ಸೂ. ೩-೩-೧೩) ಎಂದೂ ಹೇಳಿದೆ.

---

1. ಇಲ್ಲಿ ಮನಶ್ಚಿದಾದಿಗಳನ್ನು ವಿನಿಯೋಗಿಸುವ ಕ್ರತುಪ್ರಕರಣವೇನೂ ಇಲ್ಲದಿದ್ದರೂ ಕ್ರತ್ವಂಗವಾದ ಅಗ್ನಿಯ ಪ್ರಕರಣವಿದು. ಕ್ರತ್ವಂಗವನ್ನು ಹೆಚ್ಚಾಗಿ ಹೇಳುವ ಸಂನಿಧಿಯನ್ನೇ ಇಲ್ಲಿ ಪ್ರಕರಣವೆಂದಿದೆ – ಎಂದು ಪರಿಮಳ.

2. ಮುಂದೆ ಉದಾಹರಿಸಿರುವ ವಾಕ್ಯಗಳಲ್ಲಿ ಅಗ್ನಿಗಳು ಕೇವಲ ಕಲ್ಪಿತವೆಂದೇ ತೋರಿಬರುತ್ತದೆ.

3. ಕರ್ಮಾಂಗವು ಏನನ್ನಾದರೂ ಮಾಡಿದರೂ ಸಿದ್ಧವಾಗಲಾರದು; ಚೋದಿತ ಕಾಲವಲ್ಲಲ್ಲದೆ ಯಾವಾಗಲೂ ಅದನ್ನು ಎಲ್ಲರೂ ಮಾಡಲಾರರು– ಇವೆರಡೂ ಈ ಅಗ್ನಿಗಳು ಕರ್ಮಾಂಗವಲ್ಲವೆಂಬುದಕ್ಕೆ ಲಿಂಗಗಳು ಎಂದು ಭಾವ.

**ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾ ಮಾನಸವತ್ ॥ ೪೫ ॥**

೪೫. ಪ್ರಕರಣದಿಂದ ಹಿಂದಿನದರ ವಿಕಲ್ಪವೇ ಆಗುವದು. ಮಾನಸದಂತೆ ಕ್ರಿಯೆ(ಯದು).

## ಪೂರ್ವಪಕ್ಷ:

## ಮನಶ್ಚಿದಾದಿಗಳು ಹಿಂದಿನ ಕ್ರಿಯಾವಿಷಯಕ್ಕೇ ಸೇರಿವೆ

(ಭಾಷ್ಯ)

೪೦೬. ನೈತದ್ ಯುಕ್ತಂ ಸ್ವತನ್ತ್ರಾ ಏತೇಽಗ್ನಯೋಽನನ್ಯಶೇಷಭೂತಾ ಇತಿ । ಪೂರ್ವಸ್ಯ ಕ್ರಿಯಾಮಯಸ್ಯ ಅಗ್ನೇಃ ಪ್ರಕರಣಾತ್ ತದ್ವಿಷಯ ಏವಾಯಂ ವಿಕಲ್ಪವಿಶೇಷೋಪದೇಶಃ ಸ್ಯಾತ್ ನ ಸ್ವತಂತ್ರಃ । ನನು ಪ್ರಕರಣಾತ್ ಲಿಙ್ಗಂ ಬಲೀಯಃ । ಸತ್ಯಮ್ ಏವಮೇತತ್ । ಲಿಙ್ಗಮಪಿ ತು ಏವಂಜಾತೀಯಕಂ ನ ಪ್ರಕರಣಾತ್ ಬಲೀಯೋ ಭವತಿ । ಅನ್ಯಾರ್ಥದರ್ಶನಂ ಹ್ಯೇತತ್ । ಸಾಂಪಾದಿಕಾಗ್ನಿಪ್ರಶಂಸಾರೂಪತ್ವಾತ್ । ಅನ್ಯಾರ್ಥದರ್ಶನಂ ಚ ಅಸತ್ಯಾಮ್ ಅನ್ಯಸ್ಯಾಂ ಪ್ರಾಪ್ತೌ ಗುಣವಾದೇನಾಪಿ ಉಪಪದ್ಯಮಾನಂ ನ ಪ್ರಕರಣಂ ಬಾಧಿತುಮುತ್ಸಹತೇ । ತಸ್ಮಾತ್ ಸಾಂಪಾದಿಕಾ ಅಪಿ ಏತೇಽಗ್ನಯಃ ಪ್ರಕರಣಾತ್ ಕ್ರಿಯಾನುಪ್ರವೇಶಿನ ಏವ ಸ್ಯುಃ । ಮಾನಸವತ್ । ಯಥಾ ದಶರಾತ್ರಸ್ಯ ದಶಮೇಽಹನಿ ಅವಿವಾಕ್ಯೇ ಪೃಥಿವ್ಯಾ ಪಾತ್ರೇಣ ಸಮುದ್ರಸ್ಯ ಸೋಮಸ್ಯ ಪ್ರಜಾಪತಯೇ ದೇವತಾಯೈ ಗೃಹ್ಯಮಾಣಸ್ಯ ಗ್ರಹಣಾಸಾದನ ಹವನಾಹರಣೋಪಹ್ವಾನಭಕ್ಷಣಾನಿ ಮಾನಸಾನ್ಯೇವ ಆಮ್ನಾಯನ್ತೇ । ಸ ಚ ಮಾನಸೋಽಪಿ ಗ್ರಹಕಲ್ಪಃ ಕ್ರಿಯಾಪ್ರಕರಣಾತ್ ಕ್ರಿಯಾಶೇಷ ಏವ ಭವತಿ, ಏವಮಯಮಪಿ ಅಗ್ನಿಕಲ್ಪಃ ಇತ್ಯರ್ಥಃ ॥

(ಭಾಷ್ಯಾರ್ಥ)

ಈ ಅಗ್ನಿಗಳು ಸ್ವತಂತ್ರವಾದವು, ಮತ್ತೊಂದಕ್ಕೆ ಶೇಷವಾದವುಗಳಲ್ಲ ಎಂಬುದು ಸರಿಯಲ್ಲ. ಏಕೆಂದರೆ ಹಿಂದಿನ ಕ್ರಿಯಾಮಯವಾದ ಅಗ್ನಿಯ ಪ್ರಕರಣವಿದಾದ್ದರಿಂದ ಅದರ ವಿಷಯದಲ್ಲಿಯೇ ವಿಕಲ್ಪವಿಶೇಷವನ್ನು ಉಪದೇಶಮಾಡಿದ್ದು[1] ಇದು ಎಂದಾದೀತೇ ಹೊರತು ಸ್ವತಂತ್ರವಾಗಲಾರದು.

(ಆಕ್ಷೇಪ) :– ಪ್ರಕರಣಕ್ಕಿಂತ ಲಿಂಗವು ಬಲವಲ್ಲವೆ?

(ಪರಿಹಾರ) :– ಇದು ನಿಜವೇ. ಆದರೆ ಈ ಜಾತಿಯ ಲಿಂಗವೂ ಪ್ರಕರಣಕ್ಕಿಂತ ಪ್ರಬಲವಾಗುವದಿಲ್ಲ. ಏಕೆಂದರೆ ಸಾಂಪಾದಿಕವಾದ ಅಗ್ನಿಗಳ

1. ಒಂದಾನೊಂದು ಪ್ರಕಾರವನ್ನು ಉಪದೇಶಿಸಿರುವದು.

ಸ್ತುತಿರೂಪವಾಗಿರುವದರಿಂದ ಮತ್ತೊಂದಕ್ಕಾಗಿ ಹೇಳಿದ್ದು[1]. ಅನ್ಯಾರ್ಥವಾದ ದರ್ಶನವು, ಮತ್ತೊಂದು ಪ್ರಾಪ್ತಿಯಿಲ್ಲದೆ ಇದ್ದರೆ ಗುಣವಾದವೆಂದೂ ಆಗಬಹುದಾಗಿ[2] ಪ್ರಕರಣವನ್ನು ಬಾಧಿಸಲಾರದು. ಆದ್ದರಿಂದ ಸಾಂಪಾದಿಕವಾದರೂ ಈ ಅಗ್ನಿಗಳು ಕ್ರಿಯೆಗೆ ಸಂಬಂಧಪಟ್ಟವೇ ಆಗಿರುವವು (ಎಂದು) ಪ್ರಕರಣದಿಂದ (ಗೊತ್ತುಮಾಡಬೇಕು).

**ಮಾನಸದಂತೆ;** (ಇದರ ವಿವರ) : ಹೇಗೆ (ದ್ವಾದಶಾಹಾನ್ತರ್ಗತವಾದ) ದಶರಾತ್ರದ[3] ಅವಿವಾಕ್ಯವೆಂಬ ಹತ್ತನೆಯ ದಿನದಲ್ಲಿ[4] ಪೃಥಿವಿ ಎಂಬ ಪಾತ್ರೆಯಿಂದ ಪ್ರಜಾಪತಿದೇವತೆಗೆ ತೆಗೆದುಕೊಡುವ ಸಮುದ್ರವೆಂಬ ಸೋಮವನ್ನು (ಪಾತ್ರದ) ಗ್ರಹಣ (ತೆಗೆದುಕೊಳ್ಳುವದು), ಆಸಾದನ (ತನ್ನ ಸ್ಥಾನದಲ್ಲಿಡುವದು), ಹವನ (ಸೋಮವನ್ನು ಹೋಮಮಾಡುವದು), ಆಹರಣ (ಹುತಶೇಷವನ್ನು ತೆಗೆದುಕೊಳ್ಳುವದು), ಉಪಹ್ವಾನ (ಇದನ್ನು ಕುಡಿಯಬೇಕೆಂದು ಒಬ್ಬರನ್ನೊಬ್ಬರು ಕೇಳುವದು), ಭಕ್ಷಣ (ಸೋಮವನ್ನು ಕುಡಿಯುವದು)– ಎಂಬಿವು ಮಾನಸವಾಗಿಯೇ ಪಠಿತವಾಗಿರುತ್ತವೆ[5]. ಆ **ಗ್ರಹಕಲ್ಪವು** ಮಾನಸವಾಗಿದ್ದರೂ ಕ್ರಿಯಾಪ್ರಕರಣದಲ್ಲಿರುವದರಿಂದ ಕ್ರಿಯಾಶೇಷವೇ ಆಗಿರುತ್ತದೆಯೋ ಹಾಗೆಯೇ **ಈ ಅಗ್ನಿಕಲ್ಪವೂ** (ಕ್ರಿಯಾಶೇಷವಾಗಿರುತ್ತದೆ) ಎಂದರ್ಥ.

**ಅತಿದೇಶಾಚ್ಚ ॥ ೪೬ ॥**

೪೬. ಅತಿದೇಶಮಾಡಿರುವದರಿಂದಲೂ.

## ಅಗ್ನಿಗಳನ್ನು ಅತಿದೇಶಮಾಡಿರುವದರಿಂದ ಕ್ರಿಯಾಶೇಷತ್ವ

(ಭಾಷ್ಯ)

೪೦೭. ಅತಿದೇಶಶ್ಚೈಷಾಮಗ್ನೀನಾಂ ಕ್ರಿಯಾನುಪ್ರವೇಶಮುಪೋ

---

1. ಸ್ವಪ್ರಧಾನವಾಗಿ ಹೇಳಿದ್ದಲ್ಲವಾದ್ದರಿಂದ ಆ ಅರ್ಥದಲ್ಲಿ ಅವಶ್ಯವಾಗಿ ತಾತ್ಪರ್ಯವಿಲ್ಲ.

2. ಮುಖ್ಯಾರ್ಥವನ್ನೇ ತೆಗೆದುಕೊಳ್ಳಬೇಕೆಂಬ ನಿಯಮವೇನೂ ಇಲ್ಲವಾಗಿ.

3. ದ್ವಾದಶಾಹದ ಮೊದಲುಕೊನೆಯ ದಿನಗಳನ್ನು ಬಿಟ್ಟರೆ ಉಳಿದ ಹತ್ತು ದಿನದ ಯಾಗವೇ ದ್ವಿರಾತ್ರಾದಿಗಳಿಗೆ ಪ್ರಕೃತಿಯಾಗುತ್ತದೆ.

4. ಅಂದರೆ ದ್ವಾದಶರಾತ್ರದ ಹನ್ನೊಂದನೆಯ ದಿನದಲ್ಲಿ; ಇಲ್ಲಿ ಋತ್ವಿಜರು ಮಾತನಾಡುವದಿಲ್ಲವಾದ್ದರಿಂದ ಇದಕ್ಕೆ ಅವಿವಾಕ್ಯವೆಂಬ ಹೆಸರು ಬಂದಿದೆ.

5. "ಅನಯಾ ತ್ವಾ ಪಾತ್ರೇಣ ಸಮುದ್ರಂ ರಸಯಾ ಪ್ರಾಜಾಪತ್ಯಂ ಮನೋಗ್ರಹಂ ಗೃಹ್ಣಾಮಿ" ಈ ಪೃಥಿವಿಯೆಂಬ ಪಾತ್ರೆಯಿಂದ ಎಲೈ ಸಮುದ್ರವೆ, ನಿನ್ನಿಂದ ಪ್ರಾಜಾಪತ್ಯ (ದೇವತಾಕ)ವಾದ ಮನೋಗ್ರಹವನ್ನು ತೆಗೆದುಕೊಳ್ಳುತ್ತೇನೆ ಎಂಬ ಮಂತ್ರವು ಇದನ್ನು ಸೂಚಿಸುತ್ತದೆ. ಹೀಗೆ ಋತ್ವಿಜರು ಧ್ಯಾನಮಾಡುತ್ತಿರುವದರಿಂದಲೇ ಈ ದಿನಕ್ಕೆ ಅವಿವಾಕ್ಯವೆಂಬ ಹೆಸರೆಂದು ಹಿಂದೆ ತಿಳಿಸಲಾಗಿದೆ.

ದ್ಬಲಯತಿ– "ಷಟ್ತ್ರಿಂಶತ್ಸಹಸ್ರಾಣ್ಯಗ್ನಯೋಽರ್ಕಾಸ್ತೇಷಾಮೇಕೈಕ ಏವ ತಾವಾನ್ ಯಾವಾನಸೌ ಪೂರ್ವಃ" (?) ಇತಿ । ಸತಿ ಹಿ ಸಾಮಾನ್ಯೇಽತಿದೇಶಃ ಪ್ರವರ್ತತೇ । ತತಶ್ಚ ಪೂರ್ವೇಣ ಇಷ್ಟಕಾಚಿತೇನ ಕ್ರಿಯಾನುಪ್ರವೇಶಿನಾ ಅಗ್ನಿನಾ ಸಾಂಪಾದಿಕಾನ್ ಅಗ್ನೀನ್ ಅತಿದಿಶನ್ ಕ್ರಿಯಾನುಪ್ರವೇಶಮೇವ ಏಷಾಂ ದ್ಯೋತಯತಿ ॥

(ಭಾಷ್ಯಾರ್ಥ)

ಈ ಅಗ್ನಿಗಳನ್ನು "ಮೂವತ್ತಾರು ಸಾವಿರ ಅಗ್ನಿಗಳು ಅರ್ಕಗಳು ; ಅವುಗಳಲ್ಲಿ ಒಂದೊಂದೂ ಈ ಹಿಂದಿನ ಅಗ್ನಿಯು ಎಷ್ಟು (ಮಹಿಮೆಯುದೋ) ಅಷ್ಟು ಮಹಿಮೆಯುಳ್ಳದ್ದು[1]"(?) ಎಂದು ಅತಿದೇಶಮಾಡಿರುವದೂ ಈ ಅಗ್ನಿಗಳಿಗೆ ಕ್ರಿಯಾನುಪ್ರವೇಶವೇ ಇದೆ ಎಂಬುದನ್ನು ಬಲಪಡಿಸುತ್ತದೆ. (ಎರಡಕ್ಕೂ) ಹೋಲಿಕೆಯಿದ್ದರಲ್ಲವೆ, ಅತಿದೇಶವು ಬರುವದು ? ಹೀಗಿರುವದರಿಂದ ಹಿಂದಿನ ಇಷ್ಟಕಾಚಿತವಾದ ಕರ್ಮಸಂಬದ್ಧವಾದ ಅಗ್ನಿಯು (ಧರ್ಮಗಳನ್ನು ಕೊಟ್ಟು) ಸಾಂಪಾದಿಕಾಗ್ನಿಗಳನ್ನು ಅತಿದೇಶಮಾಡಿರುವದರಿಂದ ಇವುಗಳು ಕ್ರಿಯಾನುಪ್ರವೇಶಿಗಳೇ ಎಂಬುದನ್ನು ತೋರಿಸುತ್ತದೆ.

**ವಿದ್ಯೈವ ತು ನಿರ್ಧಾರಣಾತ್ ॥ ೪೭ ॥**

೪೭. ವಿದ್ಯೆಯೇ, ಏಕೆಂದರೆ ಹಾಗೆಂದು ನಿರ್ಧರಿಸಿರುತ್ತದೆ.

## ಸಿದ್ಧಾಂತ :

## ಈ ಅಗ್ನಿಗಳು ವಿದ್ಯಾತ್ಮಕಗಳೇ ಎಂದು ಒತ್ತಿ ಹೇಳಿದೆ

(ಭಾಷ್ಯ)

೪೦೮. ತುಶಬ್ದಃ ಪಕ್ಷಂ ವ್ಯಾವರ್ತಯತಿ । ವಿದ್ಯಾತ್ಮಕಾ ಏವೈತೇ ಸ್ವತನ್ತ್ರಾಃ ಮನಶ್ಚಿದಾದಯೋಽಗ್ನಯಃ ಸ್ಯುಃ ನ ಕ್ರಿಯಾಶೇಷಭೂತಾಃ । ತಥಾ ಹಿ ನಿರ್ಧಾರಯತಿ "ತೇ ಹೈತೇ ವಿದ್ಯಾಚಿತ ಏವ" (?) ಇತಿ । "ವಿದ್ಯಯಾ ಹ್ಯೇವೈತ ಏವಂವಿದಶ್ಚಿತಾ ಭವನ್ತಿ" (ಶತ. ಬ್ರಾ. ೧೦–೫–೩–೧೨) ಇತಿ ಚ ॥

(ಭಾಷ್ಯಾರ್ಥ)

(ಸೂತ್ರದಲ್ಲಿರುವ) ತುಶಬ್ದವು (ಪೂರ್ವಪಕ್ಷವನ್ನು) ಅಲ್ಲಗಳೆಯುತ್ತದೆ. ಈ ಮನಶ್ಚಿದಾದಿ ಅಗ್ನಿಗಳು ವಿದ್ಯಾತ್ಮಗಳೇ, ಸ್ವತಂತ್ರಗಳೇ, ಆಗಿರುವವು, ಕ್ರಿಯಾಶೇಷವಾದವುಗಳಲ್ಲ. ಹಾಗೆಂದಲ್ಲವೆ, (ಶ್ರುತಿಯು) "ಆ ಈ (ಅಗ್ನಿಗಳು) ವಿದ್ಯೆ

1. ಮನಶ್ಚಿತವೇ ಮುಂತಾದ ಪ್ರತಿಯೊಂದು ಅಗ್ನಿಗೂ ಅಷ್ಟೇ ಮಹಿಮೆಯಿರುತ್ತದೆ.

ಯಿಂದ ಏರ್ಪಟ್ಟಿವೆ" (?) ಎಂದೂ "ವಿದ್ಯೆಯಿಂದಲೇ ಹೀಗೆಂದು ಅರಿತವನಿಗೆ ಈ (ಅಗ್ನಿಗಳು) ಏರ್ಪಟ್ಟಿರುತ್ತವೆ" (ಶತ. ಬ್ರಾ. ೧೦-೫-೩-೧೨) ಎಂದೂ ಒತ್ತಿ ಹೇಳಿರುತ್ತದೆ ?

**ದರ್ಶನಾಚ್ಚ ॥ ೪೮ ॥**

೪೮. ಕಂಡಿರುವದರಿಂದಲೂ (ಹೀಗೆ).

(ಭಾಷ್ಯ)

೪೮೯. ದೃಶ್ಯತೇ ಚೈಷಾಂ ಸ್ವಾತನ್ತ್ರ್ಯೇ ಲಿಙ್ಗಮ್ । ತತ್ ಪುರಸ್ತಾತ್ ದರ್ಶಿತಮ್ "ಲಿಙ್ಗಭೂಯಸ್ತ್ವಾತ್" (೩-೩-೪೪) ಇತ್ಯತ್ರ ॥

(ಭಾಷ್ಯಾರ್ಥ)

ಇವು ಸ್ವತಂತ್ರವೆಂಬುದಕ್ಕೆ ಲಿಂಗವೂ ಕಂಡುಬರುತ್ತದೆ. ಇದನ್ನು "ಲಿಙ್ಗಭೂಯಸ್ತ್ವಾತ್" (೩-೩-೪೪) ಎಂಬಲ್ಲಿ ತಿಳಿಸಿಕೊಟ್ಟಿದ್ದಾಗಿದೆ.

**ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ॥ ೪೯ ॥**

೪೯. ಶ್ರುತ್ಯಾದಿಗಳು ಪ್ರಬಲವಾಗಿರುವದರಿಂದಲೂ ಬಾಧವಿಲ್ಲ.

ಮನಶ್ಚಿದಾದಿಗಳು ಸ್ವತಂತ್ರವೆಂಬುದಕ್ಕೆ ಶ್ರುತ್ಯಾದಿ

( ಭಾಷ್ಯ )

೪೧೦. ನನು ಲಿಙ್ಗಮಪಿ ಅಸತ್ಯಾಮ್ ಅನ್ಯಸ್ಯಾಂ ಪ್ರಾಪ್ತೌ ಅಸಾಧಕಂ ಕಸ್ಯಚಿದರ್ಥಸ್ಯ ಇತಿ ಅಪಾಸ್ಯ ತತ್ ಪ್ರಕರಣಸಾಮರ್ಥ್ಯಾತ್ ಕ್ರಿಯಾಶೇಷತ್ವಮ್ ಅಧ್ಯವಸಿತಮ್ ಇತ್ಯತ ಉತ್ತರಂ ಪಠತಿ- ("ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ) । ನೈವಂ ಪ್ರಕರಣಸಾಮರ್ಥ್ಯಾತ್ ಕ್ರಿಯಾಶೇಷತ್ವಮ್ ಅಧ್ಯವಸಾಯ ಸ್ವಾತನ್ತ್ರ್ಯಪಕ್ಷೋ ಬಾಧಿತವ್ಯಃ । ಶ್ರುತ್ಯಾದೇರ್ಬಲೀಯಸ್ತ್ವಾತ್ । ಬಲೀಯಾಂಸಿ ಹಿ ಪ್ರಕರಣಾತ್ ಶ್ರುತಿಲಿಙ್ಗವಾಕ್ಯಾನಿ ಇತಿ ಸ್ಥಿತಂ ಶ್ರುತಿಲಿಙ್ಗಸೂತ್ರೇ । ತಾನಿ ಚೇಹ ಸ್ವಾತನ್ತ್ರ್ಯಪಕ್ಷಂ ಸಾಧಯನ್ತಿ ದೃಶ್ಯನ್ತೇ । ಕಥಮ್? ಶ್ರುತಿಸ್ತಾವತ್ "ತೇ ಹೈತೇ ವಿದ್ಯಾಚಿತ ಏವ'' (?) ಇತಿ । ತಥಾ ಲಿಙ್ಗಮ್ "ಸರ್ವದಾ ಸರ್ವಾಣಿ ಭೂತಾನಿ ಚಿನ್ವನ್ತ್ಯಪಿ ಸ್ವಪತೇ" (ಶತ. ಬ್ರಾ. ೧೦-೫-೩-೧೨) ಇತಿ । ತಥಾ ವಾಕ್ಯಮಪಿ "ವಿದ್ಯಯಾ ಹೈವೈತೇ ಏವಂವಿದಶ್ಚಿತಾ ಭವನ್ತಿ" (ಶತ. ಬ್ರಾ. ೧೦-೫-೩-೧೨) "ವಿದ್ಯಾಚಿತ ಏವ" ಇತಿ ಹಿ ಸಾವಧಾರಣೇಯಂ ಶ್ರುತಿಃ ಕ್ರಿಯಾನುಪ್ರವೇಶೇ ಅಪೀಡಾನಾಮ್ ಅಭ್ಯುಪಗಮ್ಯ

ಮಾನೇ ಪೀಡಿತಾ ಸ್ಯಾತ್ । ನನು ಅಬಾಹ್ಯಸಾಧನತ್ವಾಭಿಪ್ರಾಯಮಿದಮ್ ಅವಧಾರಣಂ ಭವಿಷ್ಯತಿ । ನೇತ್ಯುಚ್ಯತೇ। ತದಭಿಪ್ರಾಯತಾಯಾಂ ಹಿ ವಿದ್ಯಾಚಿತ ಇತೀಯತಾ ಸ್ವರೂಪಸಂಕೀರ್ತನೇನೈವ ಕೃತತ್ವಾತ್ ಅನರ್ಥಕಮ್ ಅವಧಾರಣಂ ಭವೇತ್ । ಸ್ವರೂಪಮೇವ ಹಿ ಏಷಾಮ್ ಅಬಾಹ್ಯಸಾಧನಮ್ ಇತಿ । ಅಬಾಹ್ಯಸಾಧನತ್ವೇಽಪಿ ತು ಮಾನಸಗ್ರಹವತ್ ಕ್ರಿಯಾನುಪ್ರವೇಶಶಙ್ಕಾಯಾಂ ತನ್ನಿವೃತ್ತಿಫಲಮ್ ಅವಧಾರಣಮ್ ಅರ್ಥವದ್ ಭವಿಷ್ಯತಿ । ತಥಾ 'ಸ್ವಪತೇ ಜಾಗ್ರತೇ ಚ ಏವಂವಿದೇ ಸರ್ವದಾ ಸರ್ವಾಣಿ ಭೂತಾನ್ಯೇತಾನಗ್ನೀಂಶ್ಚಿನ್ವನ್ತಿ' ಇತಿ ಸಾತತ್ಯದರ್ಶನಮ್ ಏಷಾಂ ಸ್ವಾತನ್ತ್ರ್ಯೇ ಅವಕಲ್ಪತೇ । ಯಥಾ ಸಾಂಪಾದಿಕೇ ವಾಕ್ಪ್ರಾಣಮಯೇ ಅಗ್ನಿಹೋತ್ರೇ "ಪ್ರಾಣಂ ತದಾ ವಾಚಿ ಜುಹೋತಿ.... ವಾಚಂ ತದಾ ಪ್ರಾಣೇ ಜುಹೋತಿ" (ಕೌ. ೨-೫) ಇತಿ ಚೋಕ್ತ್ವೋಚ್ಯತೇ "ಏತೇ ಅನನ್ತೇ ಅಮೃತೇ ಆಹುತೀ ಜಾಗ್ರಚ್ಚ ಸ್ವಪಂಶ್ಚ ಸತತಂ ಜುಹೋತಿ'' (ಕೌ.೨-೫)[1] ಇತಿ । ತದ್ವತ್ । ಕ್ರಿಯಾನುಪ್ರವೇಶೇ ತು ಕ್ರಿಯಾನುಪ್ರಯೋಗಸ್ಯ ಅಲ್ಪಕಾಲತ್ವೇನ ನ ಸಾತತ್ಯೇನ ಏಷಾಂ ಪ್ರಯೋಗಃ ಕಲ್ಪ್ಯೇತ। ನ ಚೇದಮ್ ಅರ್ಥವಾದಮಾತ್ರಮ್ ಇತಿ ನ್ಯಾಯ್ಯಮ್ । ಯತ್ರ ಹಿ ವಿಸ್ಪಷ್ಟೋ ವಿಧಾಯಕೋ ಲಿಙ್ಗಾದಿರುಪಲಭ್ಯತೇ ಯುಕ್ತಂ ತತ್ರ ಸಂಕೀರ್ತನಮಾತ್ರಸ್ಯ ಅರ್ಥವಾದತ್ವಮ್ । ಇಹ ತು ವಿಸ್ಪಷ್ಟವಿಧ್ಯನ್ತರಾನುಪಲಬ್ಧೇಃ ಸಂಕೀರ್ತನಾದೇವ ಏಷಾಂ ವಿಜ್ಞಾನವಿಧಾನಂ ಕಲ್ಪನೀಯಮ್ । ತಚ್ಚ ಯಥಾಸಂಕೀರ್ತನಮೇವ ಕಲ್ಪಯಿತುಂ ಶಕ್ಯತ ಇತಿ ಸಾತತ್ಯದರ್ಶನಾತ್ ತಥಾಭೂತಮೇವ ಕಲ್ಪ್ಯತೇ । ತತಶ್ಚ ಸಾಮರ್ಥ್ಯಾತ್ ಏಷಾಂ ಸ್ವಾತನ್ತ್ರ್ಯಸಿದ್ಧಿಃ । ಏತೇನ "ತದ್ಯತ್ಕಿಂಚೇಮಾನಿ ಭೂತಾನಿ ಮನಸಾ ಸಂಕಲ್ಪಯನ್ತಿ ತೇಷಾಮೇವ ಸಾ ಕೃತಿಃ'' (ಶತ. ೧೦-೫-೩-೩) ಇತ್ಯಾದಿ ವ್ಯಾಖ್ಯಾತಮ್ । ತಥಾ ವಾಕ್ಯಮಪಿ "ಏವಂ ವಿದೇ" ಇತಿ ಪುರುಷವಿಶೇಷಸಂಬನ್ಧಮೇವ ಏಷಾಮ್ ಆಚಕ್ಷಾಣಂ ನ ಕ್ರತುಸಂಬನ್ಧಂ ಮೃಷ್ಯತೇ । ತಸ್ಮಾತ್ ಸ್ವಾತನ್ತ್ರ್ಯಪಕ್ಷ ಏವ ಜ್ಯಾಯಾನ್ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ಲಿಂಗವೂ ಮತ್ತೊಂದು ಪ್ರಾಪ್ತಿಯಿಲ್ಲದಿದ್ದರೆ ಯಾವದೊಂದು ಅರ್ಥವನ್ನೂ ಸಾಧಿಸಿಕೊಡಲಾರದು –ಎಂದು ಆ (ಲಿಂಗ)ವನ್ನು ತಿರಸ್ಕರಿಸಿ ಪ್ರಕರಣದ ಸಾಮರ್ಥ್ಯದಿಂದ (ಇದು) ಕ್ರಿಯಾಶೇಷವೇ ಎಂದು ನಿಶ್ಚಯಿಸಿದೆವಲ್ಲ !

1. 'ಸನ್ತತಂ ಜುಹೋತಿ' ಎಂದು ಆ ಮುದ್ರಿತ ಶಾಂಖಾಯನಾರಣ್ಯಕದ ಪಾಠ ; 'ಸನ್ತತಮವ್ಯವಚ್ಛಿನ್ನಂ ಜುಹೋತಿ' ಎರಡನೆ ಪಾಠ.

ಇದಕ್ಕೆ ಉತ್ತರವನ್ನು ಹೇಳುತ್ತಾರೆ: ("ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ") ಹೀಗೆ ಪ್ರಕರಣದ ಸಾಮರ್ಥ್ಯದಿಂದ ಕ್ರಿಯಾಶೇಷವೆಂದು ನಿಶ್ಚಯಿಸಿ ಸ್ವಾತಂತ್ರ್ಯಪಕ್ಷವನ್ನು ಬಾಧಿಸಬಾರದು. ಏಕೆಂದರೆ ಶ್ರುತ್ಯಾದಿಗಳು ಪ್ರಬಲವಾಗಿರುತ್ತವೆ. ಪ್ರಕರಣಕ್ಕಿಂತಲೂ ಶ್ರುತಿಲಿಂಗವಾಕ್ಯಗಳು ಪ್ರಬಲವೆಂದಲ್ಲವೆ, ಶ್ರುತಿಲಿಂಗಸೂತ್ರದಲ್ಲಿ (ಜೈ. ೩-೩-೧೩) ಸ್ಥಾಪಿಸಿದೆ ? ಆ (ಶ್ರುತ್ಯಾದಿಗಳು) ಇಲ್ಲಿ ಸ್ವಾತಂತ್ರ್ಯಪಕ್ಷವನ್ನು ಸಾಧಿಸಿಕೊಡುವದು ಕಾಣುತ್ತದೆ. ಹೇಗೆಂದರೆ, ಮೊದಲನೆಯದಾಗಿ ಶ್ರುತಿಯು "ಆ ಇವು ವಿದ್ಯೆಯಿಂದೇರ್ಪಟ್ಟವೇ" ಎಂದಿದೆ. ಹೀಗೆಯೇ **ಲಿಂಗವೂ** "ಯಾವಾಗಲೂ ಎಲ್ಲಾ ಭೂತಗಳೂ (ಅವನು) ನಿದ್ರಿಸುತ್ತಿದ್ದರೂ (ಅವನಿಗಾಗಿ ಅಗ್ನಿಗಳನ್ನು) ಏರ್ಪಡಿಸುತ್ತಿರುತ್ತವೆ" (ಶತ. ಬ್ರಾ. ೧೦-೫-೩-೨) ಎಂದಿದೆ. ಹೀಗೆಯೇ **ವಾಕ್ಯವೂ** "ವಿದ್ಯೆಯಿಂದಲೇ ಈ ಹೀಗೆಂದು ಅರಿತವನಿಗೆ ಏರ್ಪಟ್ಟಿರುತ್ತವೆ" ಎಂದಿದೆ. "ವಿದ್ಯೆಯಿಂದೇರ್ಪಟ್ಟವೆ" ಎಂಬೀ ಸಾವಧಾರಣವಾದ ಶ್ರುತಿಯೂ ಇವುಗಳಿಗೆ ಕ್ರಿಯಾನುಪ್ರವೇಶವನ್ನು ಒಪ್ಪಿದರೆ ವಿರುದ್ಧವಾಗುತ್ತದೆ.

(ಆಕ್ಷೇಪ) :- ಹೊರಗಿನ ಸಾಧನಗಳಿಲ್ಲವೆಂಬ ಅಭಿಪ್ರಾಯದಿಂದ ಈ ಅವಧಾರಣವು (ಬಂದಿದೆ) ಎಂದಾಗಬಹುದಲ್ಲ !

(ಪರಿಹಾರ) :- ಇಲ್ಲ, ಎನ್ನುತ್ತೇವೆ, ಏಕೆಂದರೆ ಆ ಅಭಿಪ್ರಾಯವನ್ನು ಒಪ್ಪಿದರೆ 'ವಿದ್ಯೆಯಿಂದೇರ್ಪಟ್ಟವು' ಎಂದಿಷ್ಟು ಸ್ವರೂಪವನ್ನು ಹೇಳಿದರೂ ಸಾಕಾಗುವದರಿಂದ (ಏವ ಎಂಬ) ಅವಧಾರಣೆಯು ವ್ಯರ್ಥವಾಗುವದು. ಏಕೆಂದರೆ ಬಾಹ್ಯಸಾಧನಗಳಿಂದಾಗುವದಿಲ್ಲವೆಂಬುದು ಇವುಗಳ ಸ್ವರೂಪವೇ ಆಗಿದೆ. ಬಾಹ್ಯಸಾಧನಗಳಿಂದಾಗುವದಿಲ್ಲವೆಂದಾದರೂ ಮಾನಸಗ್ರಹದಂತೆ ಕ್ರಿಯಾನುಪ್ರವೇಶ(ವಾಗಬಹುದೆಂಬ) ಶಂಕೆ ಬರಲಾಗಿ ಆ (ಶಂಕೆಯ) ನಿವೃತ್ತಿ ಎಂಬ ಫಲವುಳ್ಳದ್ದೆಂದಾದರೆ ಅವಧಾರಣವು ಸಾರ್ಥಕವಾಗುವದು, ಇದರಂತೆ ನಿದ್ರಿಸುತ್ತಿರುವಾಗಲೂ ಎಚ್ಚತ್ತಿರುವಾಗಲೂ ಹೀಗೆಂದು ಅರಿತಿರುವವನಿಗೆ ಯಾವಾಗಲೂ ಎಲ್ಲಾ ಭೂತಗಳೂ ಈ ಅಗ್ನಿಗಳನ್ನು ಏರ್ಪಡಿಸುತ್ತಿರುತ್ತವೆ ಎಂದು ಸಾತತ್ಯವನ್ನು ತಿಳಿಸಿರುವದೂ ಈ (ಅಗ್ನಿಗಳು) ಸ್ವತಂತ್ರವೆಂಬ (ಪಕ್ಷದಲ್ಲಿ) ಸರಿಹೋಗುತ್ತದೆ. ಹೇಗೆ ಸಾಂಪಾದಿಕವಾದ ವಾಕ್ಪ್ರಾಣಮಯವಾದ ಅಗ್ನಿಹೋತ್ರದಲ್ಲಿ "ಆಗ ಪ್ರಾಣವನ್ನು ವಾಕ್ಕಿನಲ್ಲಿ ಹೋಮಮಾಡುತ್ತಾನೆ.... ಆಗ ವಾಕ್ಕನ್ನು ಪ್ರಾಣದಲ್ಲಿ ಹೋಮಮಾಡುತ್ತಾನೆ" (ಕೌ. ೨-೫) ಎಂದು ಹೇಳಿ "ಈ ಅನಂತವಾದ ಅಮೃತವಾದ ಆಹುತಿಗಳನ್ನು ಎಚ್ಚರವಾಗಿರುವಾಗಲೂ ನಿದ್ರಿಸುವಾಗಲೂ ಸತತವಾಗಿ ಹೋಮಮಾಡುತ್ತಾನೆ" (ಕೌ. ೨-೫) ಎಂದು ಹೇಳಿದೆಯೋ ಹಾಗೆಯೇ (ಇದು). ಕ್ರಿಯಾನುಪ್ರವೇಶ(ವನ್ನು ಒಪ್ಪಿದರೋ

ಎಂಪರೆ) ಕರ್ಮಪ್ರಯೋಗಕ್ಕೆ ಸ್ವಲ್ಪವೇ ಕಾಲವಿರುವದರಿಂದ ಇವುಗಳನ್ನು ಸತತವಾಗಿ ಪ್ರಯೋಗಮಾಡುವದೆಂಬುದು ಹೊಂದಲಾರದು. ಇದು ಬರಿಯ ಅರ್ಥವಾದವು ಎನ್ನುವದು ಯುಕ್ತವಲ್ಲ. ಎಲ್ಲಿ ಸ್ಪಷ್ಟವಾದ (ಬೇರೊಂದು) ವಿಧಾಯಕವಾದ ಲಿಙಾದಿ(ವಿಭಕ್ತಿಯು) ಕಾಣಬರುತ್ತದೆಯೋ ಅಲ್ಲಿ ಸುಮ್ಮನೆ ಹೇಳಿರುವದು ಅರ್ಥವಾದಮಾತ್ರವೆಂಬುದು ಯುಕ್ತ. ಆದರೆ ಇಲ್ಲಿಯೋ ಎಂದರೆ ವಿಸ್ಪಷ್ಟವಾದ ಮತ್ತೊಂದು ವಿಧಿಯು ಕಾಣದೆ ಇರುವದರಿಂದ ಸುಮ್ಮನೆ ಹೇಳಿರುವದರಿಂದಲೇ ಈ (ಅಗ್ನಿಗಳ) ಉಪಾಸನೆಯನ್ನು ವಿಧಾನಮಾಡಿದೆ ಎಂದು ಕಲ್ಪಿಸಬೇಕು. ಆ (ವಿಧಿಯನ್ನು) ಹೇಗೆ ಹೇಳಿದೆಯೋ ಹಾಗೆಯೇ ಕಲ್ಪಿಸುವದು ಆಗುತ್ತದೆಯಾಗಿ ಸಾತತ್ಯವು (ಇಲ್ಲಿ) ಶ್ರುತವಾಗಿರುವದರಿಂದ ಹಾಗೆಯೇ ಅದನ್ನು ಕಲ್ಪಿಸಬೇಕು. ಅದರಿಂದ ಸಾಮರ್ಥ್ಯದಿಂದ ಇವುಗಳು ಸ್ವತಂತ್ರವೆಂಬುದೂ ಸಿದ್ಧವಾಗುತ್ತದೆ. ಇದರಿಂದ "ಈ ಭೂತಗಳು ಏನೇನನ್ನು ಮನಸ್ಸಿನಿಂದ ಸಂಕಲ್ಪಿಸುತ್ತವೆಯೋ ಆ (ಅಗ್ನಿಗಳ) ಕೃತ್ಯವೇ ಅದು" (ಶತ. ಬ್ರಾ. ೧೦-೫-೩-೩) ಎಂಬುದೇ ಮುಂತಾದದ್ದನ್ನು ಬಿಡಿಸಿಹೇಳಿದಂತೆ ಆಯಿತು. ಇದರಂತೆ ವಾಕ್ಯವೂ "ಹೀಗೆಂದು ಅರಿತಿರುವವನಿಗೆ" ಎಂದು ಗೊತ್ತಾದ (ಒಬ್ಬ) ಪುರುಷನಿಗೇ ಇವು ಸಂಬಂಧಪಟ್ಟಿವೆ ಎಂದು ಹೇಳುವದರಿಂದ ಕ್ರತುಸಂಬಂಧವನ್ನು ಸಹಿಸುವದಿಲ್ಲ. ಆದ್ದರಿಂದ ಸ್ವಾತಂತ್ರ್ಯಪಕ್ಷವೇ ಮೇಲು.

**ಅನುಬನ್ಧಾದಿಭ್ಯಃ ಪ್ರಜ್ಞಾನ್ತರಪೃಥಕ್ತ್ವವದ್ ದೃಷ್ಟಶ್ಚ ತದುಕ್ತಮ್ ||**

೫೦. ಅನುಬಂಧವೇ ಮುಂತಾದವುಗಳಿಂದ (ಇವು ಸ್ವತಂತ್ರವಾಗಿವೆ). ಪ್ರಜ್ಞಾಂತರಗಳು ಬೇರೆಯಾಗಿರುವಂತೆಯೇ ಇದು. ಹೀಗೆ (ಪ್ರಕರಣ)ವನ್ನು ಬಿಟ್ಟು (ಅರಿಯುವದು) ಕಂಡೂ ಇದೆ. ಇದನ್ನು (ಪೂರ್ವಮೀಮಾಂಸದಲ್ಲಿ) ಹೇಳಿರುತ್ತದೆ.

## ಅನುಬಂಧವೇ ಮುಂತಾದ ಕಾರಣಗಳಿಂದ ಇವು ಸ್ವತಂತ್ರ

(ಭಾಷ್ಯ)

೪೧೧. ಇತಶ್ಚ ಪ್ರಕರಣಮ್ ಉಪಮೃದ್ಯ ಸ್ವಾತನ್ತ್ರ್ಯಂ ಮನಶ್ಚಿದಾದೀನಾಂ ಪ್ರತಿಪತ್ತವ್ಯಮ್ । ಯತ್ ಕ್ರಿಯಾವಯವಾನ್ ಮನಆದಿವ್ಯಾಪಾರೇಷು ಅನುಬಧ್ನಾತಿ "ತೇ ಮನಸೈವಾಧೀಯನ್ತ ಮನಸಾ ಚೀಯನ್ತ ಮನಸೈವ ಗ್ರಹಾ ಅಗೃಹ್ಯನ್ತ ಮನಸಾ ಽಸ್ತುವನ್ ಮನಸಾಽಶಂಸನ್ ಯತ್ಕಿಂಚ ಯಜ್ಞೇ ಕರ್ಮ ಕ್ರಿಯತೇ ಯತ್ಕಿಂಚ ಯಜ್ಞೇ ಕರ್ಮ ಕ್ರಿಯತೇ ಯತ್ಕಿಂಚ ಯಜ್ಞಿಯಂ

ಕರ್ಮ ಮನಸೈವ ತೇಷು ತನ್ಮನೋಮಯೇಷು ಮನಶ್ಚಿತ್ಸು ಮನೋಮಯ ಮೇವ ಕ್ರಿಯತೇ[1]" (ಶತ. ಬ್ರಾ. ೧೦-೫-೩-೩) ಇತ್ಯಾದಿನಾ । ಸಂಪತ್ಫಲೋ ಹ್ಯಯಮ್ ಅನುಬನ್ಧಃ । ನ ಚ ಪ್ರತ್ಯಕ್ಷಾಃ ಕ್ರಿಯಾವಯವಾಃ ಸನ್ತಃ ಸಂಪದಾ ಲಿಪ್ಸಿತವ್ಯಾಃ । ನ ಚಾತ್ರ ಉದ್ಗೀಥಾದ್ಯುಪಾಸನವತ್ ಕ್ರಿಯಾಙ್ಗಸಂಬನ್ಧಾತ್ ತದನುಪ್ರವೇಶಿತ್ವಮ್ ಆಶಙ್ಕಿತವ್ಯಮ್ । ಶ್ರುತಿವೈರೂಪ್ಯಾತ್ । ನ ಹಿ ಅತ್ರ ಕ್ರಿಯಾಙ್ಗಂ ಕಿಂಚಿದಾದಾಯ ತಸ್ಮಿನ್ ಅದೋ ನಾಮಾಧ್ಯಸಿತವ್ಯಮ್ ಇತಿ ವದತಿ । ಷಟ್ತ್ರಿಂಶತ್ಸಹಸ್ರಾಣಿ ತು ಮನೋವೃತ್ತಿಭೇದಾನ್ ಆದಾಯ ತೇಷ್ವಗ್ನಿತ್ವಂ ಗ್ರಹಾದೀಂಶ್ಚ ಕಲ್ಪಯತಿ ಪುರುಷಯಜ್ಞಾದಿವತ್ । ಸಂಖ್ಯಾ ಚೇಯಂ ಪುರುಷಾಯುಷಸ್ಯ ಅಹಃಸು ದೃಷ್ಟಾ ಸತೀ । ತತ್ಸಂಬನ್ಧಿನೀಷು ಮನೋವೃತ್ತಿಷು ಆರೋಪ್ಯತೇ ಇತಿ ದ್ರಷ್ಟವ್ಯಮ್। ಏವಮ್ ಅನುಬನ್ಧಾತ್ ಸ್ವಾತನ್ತ್ರ್ಯಂ ಮನಶ್ಚಿದಾದೀನಾಮ್। ಆದಿಶಬ್ದಾತ್ ಅತಿದೇಶಾದ್ಯಪಿ ಯಥಾಸಂಭವಂ ಯೋಜಯಿತವ್ಯಮ್। ತಥಾ ಹಿ "ತೇಷಾಮೇಕೈಕ ಏವ ತಾವಾನ್ ಯಾವಾನಸೌ ಪೂರ್ವಃ" (?) ಇತಿ ಕ್ರಿಯಾಮಯಸ್ಯ ಅಗ್ನೇರ್ಮಾಹಾತ್ಮ್ಯಂ ಜ್ಞಾನಮಯಾನಾಮೇಕೈಕಸ್ಯ ಅತಿದಿಶನ್ ಕ್ರಿಯಾಯಾಮ್ ಅನಾದರಂ ದರ್ಶಯತಿ । ನ ಚ ಸತ್ಯೇವ ಕ್ರಿಯಾಸಂಬನ್ಧೇ ವಿಕಲ್ಪಃ ಪೂರ್ವೇಣೋತ್ತರೇಷಾಮ್ ಇತಿ ಶಕ್ಯಂ ವಕ್ತುಮ್। ನ ಹಿ ಯೇನ ವ್ಯಾಪಾರೇಣ ಆಹವನೀಯಧಾರಣಾದಿನಾ ಪೂರ್ವಃ ಕ್ರಿಯಾಯಾಮ್ ಉಪಕರೋತಿ ತೇನ ಉತ್ತರೇ ಉಪಕರ್ತುಂ ಶಕ್ನುವನ್ತಿ। ಯತ್ತು ಪೂರ್ವಪಕ್ಷೇಽಪಿ ಅತಿದೇಶಃ ಉಪೋದ್ಬಲಕ ಇತ್ಯುಕ್ತಮ್ ಸತಿ ಹಿ ಸಾಮಾನ್ಯೇ ಅತಿದೇಶಃ ಪ್ರವರ್ತತೇ ಇತಿ। ತದಸ್ಮತ್ಪಕ್ಷೇ ಅಗ್ನಿತ್ವಸಾಮಾನ್ಯೇನ ಅತಿದೇಶಸಂಭವಾತ್ ಪ್ರತ್ಯುಕ್ತಮ್ । ಅಸ್ತಿ ಹಿ ಸಾಂಪಾದಿಕಾನಾಮಪಿ ಅಗ್ನೀನಾಮಗ್ನಿತ್ವಮಿತಿ। ಶ್ರುತ್ಯಾದೀನಿ ಚ ಕಾರಣಾನಿ ದರ್ಶಿತಾನಿ। ಏವಮ್ ಅನುಬನ್ಧಾದಿಭ್ಯಃ ಕಾರಣೇಭ್ಯಃ ಸ್ವಾತನ್ತ್ರ್ಯಂ ಮನಶ್ಚಿದಾದೀನಾಮ್ ॥

(ಭಾಷ್ಯಾರ್ಥ)

ಈ ಕಾರಣದಿಂದಲೂ ಪ್ರಕರಣವನ್ನು ಬಾಧಿಸಿ ಮನಶ್ಚಿದಾದಿಗಳು ಸ್ವತಂತ್ರವೆಂದು ತಿಳಿಯಬೇಕು. ಏಕೆಂದರೆ ಕರ್ಮದ ಅವಯವಗಳನ್ನು ಮನಆದಿವ್ಯಾಪಾರಗಳಲ್ಲಿ "ಆ (ಅಗ್ನಿಗಳು) ಮನಸ್ಸಿನಿಂದಲೇ ಚಯನ ಮಾಡಲ್ಪಟ್ಟಿರುತ್ತವೆ, ಮನಸ್ಸಿನಿಂದಲೇ ಆಧಾನಮಾಡಲ್ಪಟ್ಟಿವೆ, ಮನಸ್ಸಿನಿಂದಲೇ ಗ್ರಹಗಳನ್ನು ಗ್ರಹಿಸಿರುತ್ತದೆ, ಮನಸ್ಸಿನಿಂದ ಸ್ತೋತ್ರಮಾಡಿರುತ್ತಾರೆ, ಮನಸ್ಸಿನಿಂದಲೇ ಶಂಸನಮಾಡಿರುತ್ತಾರೆ, ಯಜ್ಞದಲ್ಲಿ ಯಾವ ಯಾವ ಕರ್ಮವನ್ನು ಮಾಡುತ್ತಾರೋ ಯಾವ ಯಾವ ಯಜ್ಞಸಂಬಂಧವಾದ ಕರ್ಮವಿರುವದೋ

1. 'ಮನೋಮಯಮ್ಕ್ರಿಯತೆ' ಎಂಬ ಪಾಠವು "ಬ್ರಹ್ಮಾನೃತವರ್ಷಿಣಿ" ಯಲ್ಲಿದೆ. ಮೂಲವು ಹೇಗಿದೆಯೋ ತಿಳಿಯದು.

ಅದು ಮನಸ್ಸಿನಿಂದಲೇ ಮನೋಮಯವಾದ ಆ ಮನಶ್ಚಿತಾಗ್ನಿಗಳಲ್ಲಿ ಮನೋಮಯವಾಗಿಯೇ ಮಾಡಲ್ಪಡುತ್ತದೆ" (?) ಮುಂತಾದ (ವಾಕ್ಯದಿಂದ) ಅನುಬಂಧವನ್ನು ಮಾಡಿರುತ್ತದೆ. ಈ ಅನುಬಂಧಕ್ಕೆ ಸಂಪತ್ತೇ[1] ಫಲವು. ಪ್ರತ್ಯಕ್ಷವಾಗಿ ಕರ್ಮದ ಅವಯವಗಳಾಗಿದ್ದರೆ ಸಂಪತ್ತಿನಿಂದ (ಇವನ್ನು) ಪಡೆದುಕೊಳ್ಳಬೇಕಾದದ್ದೇನೂ ಇರುವದಿಲ್ಲ. ಇಲ್ಲಿ ಉದ್ಗೀಥಾದ್ಯುಪಾಸನೆಗಳಂತೆ ಕ್ರಿಯಾಂಗಸಂಬಂಧವಿರುವದರಿಂದ ಆ (ಕ್ರಿಯೆಯಲ್ಲಿ) ಅನುಪ್ರವೇಶವಾಗಿರುವದೆಂದು ಶಂಕಿಸುವ ಹಾಗೂ ಇಲ್ಲ; ಏಕೆಂದರೆ ಶ್ರುತಿಗಳೆರಡೂ ಬೇರೆಬೇರೆ ರೂಪದಲ್ಲಿವೆ. ಹೇಗೆಂದರೆ ಇಲ್ಲಿ ಯಾವ ಕ್ರಿಯಾಂಗವನ್ನಾದರೂ ತೆಗೆದುಕೊಂಡು ಅದರಲ್ಲಿ ಇಂಥದ್ದೊಂದನ್ನು ಅಧ್ಯಾಸಮಾಡಬೇಕೆಂದು ಹೇಳಿಲ್ಲ. ಮತ್ತೇನೆಂದರೆ ಮೂವತ್ತಾರು ಸಹಸ್ರ ಮನೋವೃತ್ತಿವಿಶೇಷಗಳನ್ನು ತೆಗೆದುಕೊಂಡು ಅವುಗಳಲ್ಲಿ ಅಗ್ನಿತ್ವವನ್ನೂ ಗ್ರಹಾದಿಗಳನ್ನೂ ಪುರುಷಯಜ್ಞವೇ ಮುಂತಾದವುಗಳಲ್ಲಿ ಕಲ್ಪಿಸಿರುವಂತೆ[2] ಕಲ್ಪಿಸಿರುತ್ತದೆ. ಈ ಸಂಖ್ಯೆಯು ಪುರುಷನ ಆಯುಸ್ಸಿನ ದಿನಗಳಲ್ಲಿ ಕಂಡುಬಂದಿರುವದಾಗಿದ್ದು ಅದಕ್ಕೆ ಸಂಬಂಧಪಟ್ಟಿರುವ ಮನೋವೃತ್ತಿಗಳಲ್ಲಿ ಆರೋಪಿತವಾಗಿದೆ ಎಂದು ತಿಳಿಯಬೇಕು. ಈ ರೀತಿಯಲ್ಲಿ ಅನುಬಂಧದಿಂದ ಮನಶ್ಚಿದಾದಿಗಳು ಸ್ವತಂತ್ರವೆಂದಾಗುತ್ತದೆ.

(ಸೂತ್ರದಲ್ಲಿರುವ) ಆದಿಶಬ್ದದಿಂದ ಯಥಾಸಂಭವವಾಗಿ ಅತಿದೇಶಾದಿಗಳನ್ನೂ ಹೊಂದಿಸಿಕೊಳ್ಳಬೇಕು. ಹೇಗೆಂದರೆ "ಆ ಹಿಂದಿನ (ಅಗ್ನಿಯು) ಎಷ್ಟೋ ಇವುಗಳಲ್ಲಿ ಒಂದೊಂದೂ ಅಷ್ಟು" (?) ಎಂದು ಕ್ರಿಯಾಮಯವಾದ ಅಗ್ನಿಯ ಮಾಹಾತ್ಮ್ಯವನ್ನು ಜ್ಞಾನಮಯವಾದ (ಅಗ್ನಿಗಳಲ್ಲಿ) ಒಂದೊಂದಕ್ಕೆ ಅತಿದೇಶ ಮಾಡಿರುವದರಿಂದ ಕ್ರಿಯೆಯಲ್ಲಿ ಅನಾದರವನ್ನು ತೋರಿಸಿರುತ್ತದೆ. ಕ್ರಿಯಾಸಂಬಂಧವಿರುವದರಿಂದಲೇ ಹಿಂದಿನ (ಅಗ್ನಿ)ಯೊಡನೆ ಮುಂದಿನ (ಮನಶ್ಚಿದಾದಿಗಳಿಗೆ) ವಿಕಲ್ಪವು ಹೊಂದುತ್ತದೆ ಎನ್ನುವದಕ್ಕಾಗುವದಿಲ್ಲ. ಏಕೆಂದರೆ ಯಾವ ವ್ಯಾಪಾರದಿಂದ ಎಂದರೆ ಆಹವನೀಯಧಾರಣವೇ ಮುಂತಾದವುಗಳಿಂದ ಹಿಂದೆ ಹೇಳಿದ (ಅಗ್ನಿಯು) ಕ್ರಿಯೆಗೆ ಉಪಕಾರವನ್ನು ಮಾಡುತ್ತಿರುವದೋ ಆ ವ್ಯಾಪಾರದಿಂದ (ಈ) ಮುಂದಿನ (ಅಗ್ನಿಗಳು) ಉಪಕಾರಮಾಡಲಾರವು[3] ಇನ್ನು ಪೂರ್ವಪಕ್ಷದಲ್ಲಿಯೂ ಅತಿದೇಶವು ಉಪೋದ್ಬಲಕವಾಗಿರುತ್ತದೆ; ಹೋಲಿಕೆಯಿದ್ದರಲ್ಲವೆ, ಅತಿದೇಶವು ಬರುವದು? ಎಂದು ಹೇಳುತ್ತಿಷ್ಟೆ. ನಮ್ಮ ಪಕ್ಷದಲ್ಲಿ

1. ಸಂಪಾದನಮಾಡಿ ಉಪಾಸನೆಮಾಡುವದೇ ಫಲವು.

2. ಪುರುಷನು ಯಜ್ಞವೆಂದು ಕಲ್ಪಿಸಿದೆಯೇ ಹೊರತು ನಿಜವಾಗಿ ಅವನು ಯಜ್ಞವಲ್ಲ; ಇದರಂತೆ ಇವು ನಿಜವಾಗಿ ಅಗ್ನಿಗಳಲ್ಲ.

3. ಹಾಗಿದ್ದರೆ ವ್ರೀಹಿಸ್ಥಾನದಲ್ಲಿ ಯವವನ್ನು ವಿಕಲ್ಪಿಸಿ ಹೇಳಿರುವಂತೆ ಇಲ್ಲಿಯೂ ಹೇಳಿದೆ ಎನ್ನಬಹುದಿತ್ತು.

ಅಗ್ನಿತ್ವಸಾಮಾನ್ಯದಿಂದಲೇ ಅತಿದೇಶವಾಗಬಹುದಾಗಿರುವದರಿಂದ ಅದನ್ನು ತಿರಸ್ಕರಿಸಿದಂತೆ ಆಯಿತು. ಸಾಂಪಾದಿಕಾಗ್ನಿಗಳಿಗೂ ಅಗ್ನಿತ್ವವು ಇದೆಯಷ್ಟೆ. ಶ್ರುತಿ ಮುಂತಾದ ಕಾರಣಗಳನ್ನೂ (ಆಗಲೆ) ತಿಳಿಸಿರುತ್ತೇವೆ. (ಅಂತೂ) ಹೀಗೆ ಅನುಬಂಧವೇ ಮುಂತಾದ ಕಾರಣಗಳಿಂದ ಮನಶ್ಚಿದಾದಿಗಳಿಗೆ ಸ್ವಾತಂತ್ರ್ಯವು (ಸಿದ್ಧಿಸುತ್ತದೆ).

## ಅನುಬಂಧದಿಂದ ಸ್ವತಂತ್ರವಾಗಿರಬಹುದೆಂಬುದಕ್ಕೆ ದೃಷ್ಟಾಂತಪ್ರಮಾಣಗಳು

(ಭಾಷ್ಯ)

೪೧೨. ಪ್ರಜ್ಞಾನ್ತರಪೃಥಕ್ತ್ವವತ್। ಯಥಾ ಪ್ರಜ್ಞಾನ್ತರಾಣಿ ಶಾಣ್ಡಿಲ್ಯವಿದ್ಯಾಪ್ರಭೃತೀನಿ ಸ್ವೇನ ಸ್ವೇನ ಅನುಬನ್ಧೇನ ಅನುಬಧ್ಯಮಾನಾನಿ ಪೃಥಗೇವ ಕರ್ಮಭ್ಯಃ ಪ್ರಜ್ಞಾನ್ತರೇಭ್ಯಶ್ಚ ಸ್ವತನ್ತ್ರಾಣಿ ಭವನ್ತಿ ಏವಮಿತಿ। ದೃಷ್ಟಶ್ಚ ಅವೇಷ್ಟೇಃ ರಾಜಸೂಯಾಪ್ರಕರಣಪಠಿತಾಯಾಃ ಪ್ರಕರಣಾತ್ ಉತ್ಕರ್ಷಃ ವರ್ಣತ್ರಯಾನುಬನ್ಧಾತ್ ರಾಜಯಜ್ಞತ್ವಾಚ್ಚ ರಾಜಸೂಯಸ್ಯ। ತದುಕ್ತಂ ಪ್ರಥಮೇ ಕಾಣ್ಡೇ "ಕ್ರತ್ವರ್ಥಾಯಾಮ್ ಇತಿ ಚೇನ್ನ ವರ್ಣತ್ರಯಸಂಯೋಗಾತ್" (ಜೈ.ಸೂ. ೧೧-೪-೭) ಇತಿ ॥

(ಭಾಷ್ಯಾರ್ಥ)

ಪ್ರಜ್ಞಾಂತರಗಳು ಪೃಥಕ್ಕಾಗಿರುವಂತೆ. (ಇದರ ವಿವರ) : ಹೇಗೆ ಶಾಂಡಿಲ್ಯವಿದ್ಯೆಯೇ ಮುಂತಾದ ಬೇರೆಯ ಪ್ರಜ್ಞೆಗಳು[1] ತಮ್ಮ ತಮ್ಮ ಅನುಬಂಧಕ್ಕೆ ಅನುಬದ್ಧವಾಗಿರುವದರಿಂದ ಕರ್ಮಗಳಿಗಿಂತಲೂ ಪ್ರಜ್ಞಾಂತರಗಳಿಗಿಂತಲೂ ಬೇರೆಯೇ ಆಗಿ ಸ್ವತಂತ್ರವೇ ಆಗಿರುವವೋ ಹಾಗೆ(ಯೇ ಇದು). ರಾಜಸೂಯಪ್ರಕರಣದಲ್ಲಿ ಪಠಿತವಾಗಿರುವ ಅವೇಷ್ಟಿಯನ್ನು[2]- ವರ್ಣತ್ರಯದ ಅನುಬಂಧವಿರುವದರಿಂದಲೂ ರಾಜಸೂಯವು ರಾಜನು ಮಾಡತಕ್ಕ ಯಜ್ಞವಾದ್ದರಿಂದಲೂ- ಪ್ರಕರಣದಿಂದ ಬಿಡಿಸಿ (ತಿಳಿಯಬೇಕೆಂದು ನಿರ್ಣಯಿಸಿರುವದು) ಕಂಡೂ ಇರುತ್ತದೆ[3]. ಇದನ್ನು ಮೊದಲನೆಯ ಕಾಂಡದಲ್ಲಿ (ಹೀಗೆಂದು) ಹೇಳಿರುತ್ತದೆ ;

1. ವಿದ್ಯೆಗಳು. 2. ಅವೇಷ್ಟಿ ಎಂಬ ಇಷ್ಟಿಯನ್ನು.

3. ರಾಜಸೂಯವು ರಾಜಕರ್ತೃಕವಾಗಿರುತ್ತದೆ ; ಬ್ರಾಹ್ಮಣಾದಿಗಳಿಗೆ ಅಧಿಕಾರವಿಲ್ಲ. ಆದರೂ ಅದರಲ್ಲಿ ಹೇಳಿರುವ ಅವೇಷ್ಟಿ ಎಂಬ ಇಷ್ಟಿಯಲ್ಲಿ ಮಾತ್ರ ವರ್ಣತ್ರಯಾನುಬಂಧವಿರುವದರಿಂದ ಬ್ರಾಹ್ಮಣಾದಿಕರ್ತೃಕವಾದ ಕರ್ಮಾಂತರಗಳನ್ನು ವಿಧಿಸಿದೆ ಎಂದು ನಿಶ್ಚಯಿಸಬೇಕು- ಎಂದು ದ್ವಿತೀಯಾಧ್ಯಾಯದಲ್ಲಿ (ಜೈ. ೨-೩-೨ರಲ್ಲಿ) ನಿರ್ಣಯಿಸಿದೆ. ಅಲ್ಲಿ ರಾಜಸೂಯಪ್ರಕರಣವಾದರೂ ಅವೇಷ್ಟಿ ಎಂಬುದು ಬೇರೆಯ ಕರ್ಮವೆಂದು ನಿರ್ಣಯಿಸಿರುವಂತೆ ಇಲ್ಲಿಯೂ ಮನಶ್ಚಿದಾದಿಗಳು ಕರ್ಮಪ್ರಕರಣವನ್ನು ಬಿಡುವದು ಆಗಬಹುದು- ಎಂದರ್ಥ.

"ಕ್ರತ್ವರ್ಥಾಯಾಮಿತಿ ಚೇನ್ನ ವರ್ಣತ್ರಯಸಂಯೋಗಾತ್" (ಜೈ.ಸೂ. ೧೧–೪–೭ ಕ್ರತ್ವರ್ಥವಾದ ಅವೇಷ್ಟಿಯಲ್ಲಿಯೂ ಆಗಲಿ, ಎಂದರೆ ಹಾಗಲ್ಲ, ಏಕೆಂದರೆ ವರ್ಣತ್ರಯಸಂಯೋಗವಿದೆ)[1].

**ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ॥೫೧॥**

೫೧. ಸಾಮಾನ್ಯದಿಂದಲೂ (ಕ್ರಿಯಾಶೇಷತ್ವವನ್ನು ಹೇಳಬಾರದು); ಏಕೆಂದರೆ (ಪುರುಷಾರ್ಥತ್ವವು) ಕಾಣಬರುತ್ತದೆ. ಮೃತ್ಯುವಿನಂತೆಯೇ ಇದು; ಲೋಕಕ್ಕೆ (ಅಗ್ನಿ)ಭಾವವಿಲ್ಲವಷ್ಟೆ.

## ಅಗ್ನಿಸಾಮಾನ್ಯದಿಂದ ಕ್ರಿಯಾಶೇಷತ್ವವಿಲ್ಲವೆಂಬುದಕ್ಕೆ ದೃಷ್ಟಾಂತ

(ಭಾಷ್ಯ)

೪೧೩. ಯದುಕ್ತಂ ಮಾನಸವದ್ ಇತಿ ತತ್ ಪ್ರತ್ಯುಚ್ಯತೇ– ಮಾನಸಗ್ರಹಸಾಮಾನ್ಯಾದಪಿ ಮನಶ್ಚಿದಾದೀನಾಂ ಕ್ರಿಯಾಶೇಷತ್ವಂ ಕಲ್ಪ್ಯಮ್। ಪೂರ್ವೋಕ್ತೇಭ್ಯಃ ಶ್ರುತ್ಯಾದಿಹೇತುಭ್ಯಃ ಕೇವಲಪುರುಷಾರ್ಥತ್ವೋಪಲಬ್ಧೇಃ। ನ ಹಿ ಕಿಂಚಿತ್ ಕಸ್ಯಚಿತ್ ಕೇನಚಿತ್ ಸಾಮಾನ್ಯಂ ನ ಸಂಭವತಿ। ನ ಚ ತಾವತಾ ಯಥಾಸ್ವಂ ವೈಷಮ್ಯಂ ನಿವರ್ತತೇ। ಮೃತ್ಯುವತ್। ಯಥಾ "ಸ ವಾ ಏಷ ಏವ ಮೃತ್ಯುರ್ಯ ಏಷ ಏತಸ್ಮಿನ್ ಮಣ್ಡಲೇ ಪುರುಷಃ"

1. ಅವೇಷ್ಟಿಯಲ್ಲಿ ಅಂಗಗಳನ್ನು ಬೇರೆಬೇರೆ ಮಾಡಬೇಕೆ, ಒಟ್ಟಿಗೆ ಅನುಷ್ಠಾನ ಮಾಡಬೇಕೆ?– ಎಂಬ ಸಂಶಯವುಂಟಾಗಲು "ಆಗ್ನೇಯವಾದ ಅಷ್ಟಾಕಪಾಲವನ್ನು ಕೊಡಬೇಕು, ಹಿರಣ್ಯವು ದಕ್ಷಿಣೆ; ಬಾರ್ಹಸ್ಪತ್ಯ ಚರುವನ್ನು ಕೊಡಬೇಕು, ಶಿತಿಪೃಷ್ಠವು ದಕ್ಷಿಣೆ; ಐಂದ್ರವು ಏಕಾದಶಕಪಾಲವು, ಋಷಭವು ದಕ್ಷಿಣೆ– ಎಂದು ಹೇಳಿ ಬ್ರಾಹ್ಮಣನಾದರೆ ಬಾರ್ಹಸ್ಪತ್ಯವನ್ನು ನಡುವೆ ಮಾಡಿಕೊಂಡು ಪ್ರತ್ಯಾಹುತಿಯನ್ನೂ ಹೋಮಮಾಡಿ ಅಭಿಘಾರಮಾಡಬೇಕು– ಎಂದು ಮುಂತಾಗಿ ವರ್ಣಭೇದಕ್ಕನುಗುಣವಾಗಿ ಪ್ರಯೋಗಭೇದವನ್ನು ಹೇಳಿದೆ. ಇಲ್ಲಿ ಆಗ್ನೇಯ, ಐಂದ್ರಪುರೋಡಾಶಗಳ ನಡುವೆ ಬಾರ್ಹಸ್ಪತ್ಯವನ್ನೂ ಇಡುವದೆಂಬುದು ರಾಜಸೂಯಕವಲ್ಲದ ವರ್ಣತ್ರಯಕರ್ತೃಕವಾದ ಕಾಮ್ಯವಾದ ಅವೇಷ್ಟಿಯಲ್ಲಿಯೇ; ಏಕೆಂದರೆ ವರ್ಣತ್ರಯಸಂಬದ್ಧವಾದ ಅವೇಷ್ಟಿಯಲ್ಲಿಯೇ ಈ ನಡುವೆ ಇಟ್ಟುಕೊಳ್ಳುವದೆಂಬುದೇ ಮುಂತಾದ ಲಿಂಗವಿದೆ, ಅನ್ನಾದ್ಯಕಾಮನು ಇದನ್ನು ಯಾಗಮಾಡಬೇಕು ಎಂಬ ಏಕವಚನವಿದೆ. ಆಗ ದಕ್ಷಿಣೆಗಳೆಲ್ಲವನ್ನೂ ಕೂಡಿಸಿಕೊಡಬೇಕು. ಆದರೆ ರಾಜಕರ್ತೃಕರಾಜಸೂಯದಲ್ಲಿ ಮಾಡುವ ಅವೇಷ್ಟಿಯಲ್ಲಿ ಮಾತ್ರ ಈ ಲಿಂಗವಿಲ್ಲವಾದ್ದರಿಂದ ಈ ಅಂಗಗಳನ್ನು ಬೇರೆಬೇರೆಯೇ ಮಾಡಬೇಕು ಎಂದು ಜೈ. ಸೂ. ಭಾ. ೧೧–೪–೫ರಲ್ಲಿ ನಿರ್ಧರಿಸಿದೆ.

(ಶತ.ಬ್ರಾ. ೧೦–೫–೨–೩) ಇತಿ। "ಅಗ್ನಿರ್ವೈ ಮೃತ್ಯುಃ" (ಬೃ. ೩–೨–೧೦) ಇತಿ ಚ ಅಗ್ನ್ಯಾದಿತ್ಯಪುರುಷಯೋಃ ಸಮಾನೇಽಪಿ ಮೃತ್ಯುಶಬ್ದಪ್ರಯೋಗೇ ನಾತ್ಯನ್ತಸಾಮ್ಯಾಪತ್ತಿಃ। ಯಥಾ ಚ "ಅಸೌ ವಾವ ಲೋಕೋ ಗೌತಮಾಗ್ನಿಸ್ತಸ್ಯಾದಿತ್ಯ ಏವ ಸಮಿತ್" (ಛಾಂ. ೫–೪–೧) ಇತ್ಯತ್ರ ನ ಸಮಿದಾದಿಸಾಮಾನ್ಯಾತ್ ಲೋಕಸ್ಯಾಗ್ನಿಭಾವಾಪತ್ತಿಃ, ತದ್ವತ್ ॥

(ಭಾಷ್ಯಾರ್ಥ)

ಇನ್ನು 'ಮಾನಸ(ಗ್ರಹ)ದಂತೆ' ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದಕ್ಕೆ (ಉತ್ತರವನ್ನು) ಹೇಳುತ್ತೇವೆ. ಮಾನಸಗ್ರಹದ ಸಾಮಾನ್ಯದಿಂದಲೂ ಮನಶ್ಚಿದಾದಿಗಳು ಕ್ರಿಯಾಶೇಷವೆಂದು ಕಲ್ಪಿಸತಕ್ಕದ್ದಲ್ಲ. ಏಕೆಂದರೆ ಹಿಂದೆ ಹೇಳಿರುವ ಶ್ರುತಿಯೇ ಮುಂತಾದ ಹೇತುಗಳಿಂದ (ಅವು) ಕೇವಲ ಪುರುಷಾರ್ಥವಾಗಿರುವದು[1] ಕಂಡುಬರುತ್ತದೆ. ಏಕೆಂದರೆ ಯಾವದೊಂದಕ್ಕೂ ಮತ್ತೊಂದರೊಡನೆ ಯಾವದಾದರೊಂದು ಹೋಲಿಕೆಯು ಇರುವದಿಲ್ಲ ಎನ್ನುವಹಾಗಿಲ್ಲ; ಅಷ್ಟುಮಾತ್ರದಿಂದ ಅದದಕ್ಕೆ ವೈಷಮ್ಯವು ತಪ್ಪಿಹೋಗುವದೂ ಇಲ್ಲ[2]. ಮೃತ್ಯುವಿನಂತೆ (ಇದನ್ನು ತಿಳಿಯಬೇಕು). ಹೇಗೆ "ಯಾವ ಈ ಮಂಡಲದಲ್ಲಿರುವ ಪುರುಷನಿರುವನೋ ಆ ಇವನೇ ಮೃತ್ಯು" (ಶತ. ಬ್ರಾ. ೧೦–೫–೨–೩), "ಅಗ್ನಿಯೇ ಮೃತ್ಯು" (ಬೃ. ೩–೨–೧೦) ಎಂದು ಅಗ್ನಿ, ಆದಿತ್ಯಪುರುಷ–ಇಬ್ಬರಿಗೂ ಮೃತ್ಯುವೆಂಬ ಶಬ್ದದ ಪ್ರಯೋಗವು ಸಮಾನವಾಗಿದ್ದರೂ ಅತ್ಯಂತವಾಗಿ ಸಾಮ್ಯವಾಗುವದಿಲ್ಲವೋ ಮತ್ತು ಹೇಗೆ "ಎಲೈ ಗೌತಮನೆ, (ದ್ಯು) ಲೋಕವೇ, ಅಗ್ನಿಯು; ಆದಕ್ಕೆ ಆದಿತ್ಯನೇ ಸಮಿತ್ತು" (ಛಾಂ. ೫–೪–೧) ಎಂಬಲ್ಲಿ ಸಮಿದಾದಿಗಳ ಹೋಲಿಕೆಯಿರುವದರಿಂದ ಲೋಕವು ಅಗ್ನಿಭಾವವನ್ನೇ ಹೊಂದುವದಿಲ್ಲವೋ (ಹಾಗೆ).

**ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬನ್ಧಃ ॥ ೫೨ ॥**

೫೨. ಮುಂದೂ ಶಬ್ದಕ್ಕೆ ತಾದ್ವಿಧ್ಯವು. (ಸಂಪಾದ್ಯವಾದ ಅವಯವಗಳು) ಬಹಳವಾಗಿರುವದರಿಂದಲೇ (ಅಗ್ನಿಯ) ಅನುಬಂಧ (ವಿದೆ).

---

1. ಸ್ವತಂತ್ರವಾಗಿಯೇ ಫಲವನ್ನು ಕೊಡುವ ಉಪಾಸನೆಗಳಾಗಿರುವದು.

2. ಆದ್ದರಿಂದ ಮಾನಸತ್ವಸಾಮ್ಯವಿದ್ದರೂ ಮಾನಸವು ಕ್ರಿಯಾಶೇಷವಾಗಿರಬಹುದು, ಮನಶ್ಚಿದಾದಿಗಳು ಸ್ವತಂತ್ರವಾಗಿಯೂ ಇರಬಹುದು.

# ಪೂರ್ವಾಪರಸಂದರ್ಭದಿಂದಲೂ ವಿದ್ಯಾವಿಧಿಯೆಂದು ತಿಳಿಯುಬರುತ್ತದೆ

(ಭಾಷ್ಯ)

೪೧೪. ಪರಸ್ತಾದಪಿ "ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ" (ಶತ. ಬ್ರಾ. ೧೦-೫-೪-೧) ಇತ್ಯಸ್ಮಿನ್ ಅನನ್ತರೇ ಬ್ರಾಹ್ಮಣೇ ತಾದ್ವಿಧ್ಯಂ ಕೇವಲವಿದ್ಯಾವಿಧಿತ್ವಂ ಶಬ್ದಸ್ಯ ಪ್ರಯೋಜನಂ ಲಕ್ಷ್ಯತೇ ನ ಶುದ್ಧಕರ್ಮಾಙ್ಗ ವಿಧಿತ್ವಮ್ । ತತ್ರ ಹಿ "ವಿದ್ಯಯಾ ತದಾರೋಹನ್ತಿ ಯತ್ರ ಕಾಮಾಃ ಪರಾ ಗತಾಃ। ನ ತತ್ರ ದಕ್ಷಿಣಾ ಯನ್ತಿ ನಾವಿದ್ವಾಂಸಸ್ತಪಸ್ವಿನಃ" (ಶತ.ಬ್ರಾ. ೧೦-೫-೪-೧೬?) ಇತ್ಯನೇನ ಶ್ಲೋಕೇನ ಕೇವಲಂ ಕರ್ಮ ನಿಂದನ್ ವಿದ್ಯಾಂ ಚ ಪ್ರಶಂಸನ್ ಇದಂ ಗಮಯತಿ । ತಥಾ ಪುರಸ್ತಾದಪಿ "ಯದೇತನ್ಮಣ್ಡಲಂ ತಪತಿ" ( ಶತ. ಬ್ರಾ. ೧೦-೫-೨-೧ ) ಇತ್ಯೇತಸ್ಮಿನ್ ಬ್ರಾಹ್ಮಣೇ ವಿದ್ಯಾ ಪ್ರಧಾನತ್ವಮೇವ ಲಕ್ಷ್ಯತೇ । "ಸೋಽಮೃತೋ ಭವತಿ ಮೃತ್ಯುರ್ಹ್ಯಸ್ಯಾತ್ಮಾ ಭವತಿ" (ಶತ. ಬ್ರಾ. ೧೦-೫-೨-೨೩ ?) ಇತಿ ವಿದ್ಯಾಫಲೇನೈವ ಉಪ ಸಂಹಾರಾತ್ ನ ಕರ್ಮಪ್ರಧಾನತಾ । ತತ್ಸಾಮಾನ್ಯಾದಿಹಾಪಿ ತಥಾತ್ವಮ್ । ಭೂಯಾಂಸಸ್ತು ಅಗ್ನ್ಯವಯವಾಃ ಸಂಪಾದಯಿತವ್ಯಾ ವಿದ್ಯಾಯಾಮ್ ಇತ್ಯೇ ತಸ್ಮಾತ್ ಕಾರಣಾತ್ ಅಗ್ನಿನಾ ಅನುಬಧ್ಯತೇ ವಿದ್ಯಾ ನ ಕರ್ಮಾಙ್ಗತ್ವಾತ್ । ತಸ್ಮಾತ್ ಮನಶ್ಚಿದಾದೀನಾಂ ಕೇವಲವಿದ್ಯಾತ್ಮಕತ್ವಸಿದ್ಧಿಃ ॥

(ಭಾಷ್ಯಾರ್ಥ)

ಮುಂದೆಯೂ "ಈ ಲೋಕವೇ ಈ ಚಿತವಾದ ಅಗ್ನಿಯು"[1] (ಶತ.ಬ್ರಾ. ೧೦-೫-೪-೧) ಎಂಬೀ ಮುಂದಿನ ಬ್ರಾಹ್ಮಣದಲ್ಲಿ, ತಾದ್ವಿಧ್ಯವು, ಎಂದರೆ ಬರಿಯ ವಿದ್ಯಾವಿಧಿತ್ವವು, ಶಬ್ದಕ್ಕೆ ಪ್ರಯೋಜನವೆಂದು ಕಾಣುತ್ತದೆಯೇ ಹೊರತು ಬರಿಯ ಕರ್ಮಾಂಗವನ್ನು ವಿಧಿಸುವದೆಂದು (ಕಾಣಿಸುವದಿಲ್ಲ).[2] ಏಕೆಂದರೆ ಅಲ್ಲಿ "ಎಲ್ಲಿ ಕಾಮಗಳು ಹೊರಟುಹೋಗಿರುವವೋ ಅದನ್ನು ವಿದ್ಯೆ ಯಿಂದ ಏರುವರು; ಅಲ್ಲಿಗೆ ದಕ್ಷಿಣ(ಮಾರ್ಗದವರು) ಹೋಗುವದಿಲ್ಲ, ವಿದ್ವಾಂಸ ರಲ್ಲದ ತಪಸ್ವಿಗಳೂ ಹೋಗುವದಿಲ್ಲ" (ಶತ. ಬ್ರಾ. ೧೦-೫-೪-೧೬) ಎಂಬೀ ಶ್ಲೋಕದಿಂದ ಬರಿಯ ಕರ್ಮವನ್ನು ನಿಂದಿಸಿರುವದರಿಂದಲೂ ವಿದ್ಯೆಯನ್ನು ಹೊಗಳಿರುವದರಿಂದಲೂ ಇದನ್ನೇ ತಿಳಿಸುತ್ತಿದೆ. ಹಾಗೆಯೇ (ಇದರ) ಮುಂಚೆ

1. ಲೋಕವನ್ನು ಅಗ್ನಿಯೆಂದು ಇಲ್ಲಿ ಕಲ್ಪಿಸಿದೆ ಎಂಬುದು ಸ್ಪಷ್ಟ.

2. ಕರ್ಮಾಂಗವಾದ ಅಗ್ನಿಯನ್ನು ಹೇಳಿದೆ ಎಂದು ತಿಳಿಯುವದಕ್ಕೆ ಇಲ್ಲಿ ಕಾರಣ ವಿಲ್ಲ.

ಯೂ ಎಂದರೆ "ಯದೇತನ್ಮಣ್ಡಲಂ ತಪತಿ" (ಯಾವ ಈ ಮಂಡಲವು ಸುಡುತ್ತಿದೆಯೋ ಶತ. ಬ್ರಾ. ೧೦-೫-೨-೧) ಎಂಬೀ ಬ್ರಾಹ್ಮಣದಲ್ಲಿ "ಇವನು ಅಮೃತನಾಗುತ್ತಾನೆ, ಮೃತ್ಯುವು ಇವನ ಆತ್ಮನಾಗುತ್ತಾನೆ" ಎಂದು ವಿದ್ಯಾಫಲವನ್ನೇ ಉಪಸಂಹಾರಮಾಡಿರುವದರಿಂದ ವಿದ್ಯಾಪ್ರಾಧಾನ್ಯವೇ ಕಾಣಿಸುತ್ತಿದೆಯೇ ಹೊರತು ಕರ್ಮಪ್ರಾಧಾನ್ಯವು (ಕಾಣಿಸು)ತ್ತಿಲ್ಲ. ಅದರ ಸಾದೃಶ್ಯದಿಂದ ಇಲ್ಲಿಯೂ ಹಾಗೆಂದೇ (ತಿಳಿಯಬೇಕು). ಆದರೆ (ಈ) ವಿದ್ಯೆಯಲ್ಲಿ ಬಹಳ ಅಗ್ನ್ಯವಯವಗಳನ್ನು ಸಂಪಾದನೆಮಾಡಬೇಕಾಗಿರುವದೆಂಬೀ ಕಾರಣದಿಂದ ವಿದ್ಯೆಗೆ ಅಗ್ನಿಯ ಅನುಬಂಧವಿದೆಯೇ ಹೊರತು (ಇದು) ಕರ್ಮಾಂಗವೆಂಬುದರಿಂದಲ್ಲ. ಆದ್ದರಿಂದ ಮನಶ್ಚಿದಾದಿಗಳು ಕೇವಲವಿದ್ಯಾತ್ಮಕಗಳಾಗಿರುತ್ತವೆ ಎಂದು ಸಿದ್ಧವಾಯಿತು.

## ೩೦. ಐಕಾತ್ಮ್ಯಾಧಿಕರಣ (ಸೂ. ೫೩-೫೪)

(ದೇಹಕ್ಕಿಂತ ಬೇರೆಯಾದ ಆತ್ಮನುಂಟು)

**ಏಕ ಆತ್ಮನಃ ಶರೀರೇ ಭಾವಾತ್ || ೫೩ ||**

೫೩. ಕೆಲವರು ಆತ್ಮನು (ಶರೀರವೆಂದೇ ತಿಳಿಯುತ್ತಾರೆ); ಏಕೆಂದರೆ ಶರೀರವಿದ್ದರೆ ಇರುತ್ತದೆ.

### ಈ ಗ್ರಂಥದ ಸಂಬಂಧ

(ಭಾಷ್ಯ)

೪೧೫. ಇಹ ದೇಹವ್ಯತಿರಿಕ್ತಸ್ಯ ಆತ್ಮನಿ ಸದ್ಭಾವಃ ಸಮರ್ಥ್ಯತೇ ಬನ್ಧಮೋಕ್ಷಾಧಿಕಾರಸಿದ್ಧಯೇ । ನ ಹಿ ಅಸತಿ ದೇಹವ್ಯತಿರಿಕ್ತಾತ್ಮನಿ ಪರಲೋಕಫಲಾಶ್ಚೋದನಾಃ ಉಪಪದ್ಯೇರನ್ । ಕಸ್ಯ ವಾ ಬ್ರಹ್ಮಾತ್ಮತ್ವಮ್ ಉಪದಿಶ್ಯೇತ ? ನನು ಶಾಸ್ತ್ರಪ್ರಮುಖ ಏವ ಪ್ರಥಮೇ ಪಾದೇ ಶಾಸ್ತ್ರಫಲೋಪಭೋಗಯೋಗ್ಯಸ್ಯ ದೇಹವ್ಯತಿರಿಕ್ತಸ್ಯಾತ್ಮನೋಽಸ್ತಿತ್ವಮ್ ಉಕ್ತಮ್ । ಸತ್ಯಮುಕ್ತಮ್ ಭಾಷ್ಯಕೃತಾ । ನ ತು ತತ್ರ ಆತ್ಮಾಸ್ತಿತ್ವೇ ಸೂತ್ರಮಸ್ತಿ । ಇಹ ತು ಸ್ವಯಮೇವ ಸೂತ್ರಕೃತಾ ತದಸ್ತಿತ್ವಮ್ ಆಕ್ಷೇಪಪುರಃಸರಂ ಪ್ರತಿಷ್ಠಾಪಿತಮ್ । ಇತ ಏವ ಚ ಆಕೃಷ್ಯ ಆಚಾರ್ಯೇಣ ಶಬರಸ್ವಾಮಿನಾ ಪ್ರಮಾಣಲಕ್ಷಣೇ ವರ್ಣಿತಮ್ । ಅತ ಏವ ಭಗವತಾ ಉಪವರ್ಷೇಣ ಪ್ರಥಮೇ ತನ್ತ್ರೇ ಆತ್ಮಾಸ್ತಿತ್ವಾಭಿಧಾನಪ್ರಸಕ್ತೌ ಶಾರೀರಕೇ ವಕ್ಷ್ಯಾಮಃ ಇತಿ ಉದ್ಧಾರಃ ಕೃತಃ । ಇಹ ಚ ಇದಂ ಚೋದನಾಲಕ್ಷಣೇಷು ಉಪಾಸನೇಷು ವಿಚಾರ್ಯಮಾಣೇಷು ಆತ್ಮಾಸ್ತಿತ್ವಂ ವಿಚಾರ್ಯತೇ ಕೃತ್ಸ್ನಶಾಸ್ತ್ರಶೇಷತ್ವಪ್ರದರ್ಶನಾಯ । ಅಪಿ ಚ

ಪೂರ್ವಸ್ಮಿನ್ ಅಧಿಕರಣೇ ಪ್ರಕರಣೋತ್ಕರ್ಷಾಭ್ಯುಪಗಮೇನ ಮನಶ್ಚಿದಾದೀನಾಂ ಪುರುಷಾರ್ಥತ್ವಂ ವರ್ಣಿತಮ್। ಕೋಽಸೌ ಪುರುಷೋ ಯದರ್ಥಾ ಏತೇ ಮನಶ್ಚಿದಾದಯಃ ಇತ್ಯಸ್ಯಾಂ ಪ್ರಸಕ್ತೌ ಇದಂ ದೇಹವ್ಯತಿರಿಕ್ತಸ್ಯ ಆತ್ಮನೋಽಸ್ತಿತ್ವಮ್ ಉಚ್ಯತೇ। ತದಸ್ತಿತ್ವಾಕ್ಷೇಪಾರ್ಥಂ ಚ ಇದಮಾದಿಮಂ ಸೂತ್ರಮ್। ಆಕ್ಷೇಪಪೂರ್ವಿಕಾ ಹಿ ಪರಿಹಾರೋಕ್ತಿಃ ವಿವಕ್ಷಿತೇಽರ್ಥೇ ಸ್ಥೂಣಾನಿಖನನನ್ಯಾಯೇನ ದೃಢಾಂ ಬುದ್ಧಿಮ್ ಉತ್ಪಾದಯತಿ ॥

(ಭಾಷ್ಯಾರ್ಥ)

ಇಲ್ಲಿ ದೇಹವ್ಯತಿರಿಕ್ತನಾಗಿರುವ ಆತ್ಮನ ಇರವನ್ನು ಬಂಧಮೋಕ್ಷಾಧಿಕಾರವು ಸಿದ್ಧಿಸುವದಕ್ಕಾಗಿ ಸಮರ್ಥಿಸಲಾಗುತ್ತದೆ. ದೇಹವ್ಯತಿರಿಕ್ತನಾದ ಆತ್ಮನು ಇಲ್ಲದಿದ್ದರೆ ಪರಲೋಕವೆಂಬ ಫಲವುಳ್ಳ ಚೋದನೆಗಳು ಹೊಂದುವದಿಲ್ಲವಷ್ಟೆ. (ಇದಲ್ಲದೆ ಆತ್ಮನಿಲ್ಲದಿದ್ದರೆ) ಯಾವನಿಗೆ ಬ್ರಹ್ಮಾತ್ಮವನ್ನು ಉಪದೇಶಿಸಬೇಕು ?

(ಆಕ್ಷೇಪ) :— ಶಾಸ್ತ್ರದ[1] ಮೊದಲಿನಲ್ಲಿಯೇ ಮೊದಲಿನ ಪಾದದಲ್ಲಿ ಶಾಸ್ತ್ರಫಲವನ್ನು ಅನುಭವಿಸುವದಕ್ಕೆ ತಕ್ಕ ದೇಹವ್ಯತಿರಿಕ್ತನಾದ ಆತ್ಮನ ಅಸ್ತಿತ್ವವನ್ನು ಹೇಳಿದೆಯಲ್ಲವೆ ?

(ಪರಿಹಾರ) :— ನಿಜ, ಭಾಷ್ಯಕಾರರಿಂದ ಉಕ್ತವಾಗಿದೆ; ಆದರೆ ಅಲ್ಲಿ ಆತ್ಮನು ಇದಾನೆಂಬುದಕ್ಕೆ ಸೂತ್ರವಿಲ್ಲ, ಇಲ್ಲಿಯಾದರೊ ಸೂತ್ರಕಾರರು ತಾವೇ ಆ (ಆತ್ಮನ) ಅಸ್ತಿತ್ವವನ್ನು ಆಕ್ಷೇಪಪುರಃಸರವಾಗಿ ಪ್ರತಿಷ್ಠಾಪನಮಾಡಿರುತ್ತಾರೆ. ಇಲ್ಲಿಂದಲೇ (ಈ ವಿಷಯುವನ್ನು) ಎಳೆದುಕೊಂಡು ಆಚಾರ್ಯಶಬರಸ್ವಾಮಿಗಳು ಪ್ರಮಾಣಲಕ್ಷಣದಲ್ಲಿ ಹೇಳಿರುತ್ತಾರೆ. ಆದ್ದರಿಂದಲೇ ಭಗವಂತರಾದ **ಉಪವರ್ಷರು** ಮೊದಲನೆಯದಾದ (ಮೀಮಾಂಸಾ)ಶಾಸ್ತ್ರದಲ್ಲಿ ಆತ್ಮನ ಅಸ್ತಿತ್ವವನ್ನು ಹೇಳುವ ಪ್ರಸಕ್ತಿಯು ಬರಲಾಗಿ ಶಾರೀರಕದಲ್ಲಿ ಹೇಳುವೆವು"[2] ಎಂದು (ಅಲ್ಲಿಗೇ) ಕೈಬಿಟ್ಟಿರುತ್ತಾರೆ. ಇಲ್ಲಿಯಾದರೋ ಚೋದನಾಲಕ್ಷಣವಾದ ಉಪಾಸನೆಗಳನ್ನೂ ವಿಚಾರಮಾಡುತ್ತಿರುವಲ್ಲಿ ಈ ಆತ್ಮಾಸ್ತಿತ್ವವನ್ನು ಇಡಿಯ ಶಾಸ್ತ್ರಕ್ಕೇ (ಇದು) ಶೇಷವೆಂಬುದನ್ನು ತಿಳಿಸುವದಕ್ಕಾಗಿ ವಿಚಾರಮಾಡಲಾಗುವದು.[3] ಇದಲ್ಲದೆ[4]

1. ಕರ್ಮಶಾಸ್ತ್ರದ.

2. ಉಪವರ್ಷರು ಎರಡು ಮೀಮಾಂಸಗಳಿಗೂ ವೃತ್ತಿಯನ್ನು ಬರೆದಿದ್ದರೆಂದು ಇದು ಸೂಚಿಸುತ್ತದೆ.

3. ಈ ಉತ್ತರಮೀಮಾಂಸದಲ್ಲಿ ಈವರೆಗೆ ವಿಚಾರಮಾಡದೆ ಈ ಪಾದದಲ್ಲಿಯೇ ಇದನ್ನು ವಿಚಾರಿಸಿರುವದೇಕೆ ? —ಎಂಬ ಆಕ್ಷೇಪಕ್ಕೆ ಉತ್ತರವಿದು. ಇದು ಕರ್ಮಶಾಸ್ತ್ರಕ್ಕೂ ಬೇಕಾದದ್ದು ಎಂಬುದನ್ನು ಸೂಚಿಸುವದಕ್ಕೆ ಇಲ್ಲಿ ಚರ್ಚಿಸಿದೆ ಎಂದು ಅಭಿಪ್ರಾಯ.

4. ಈ ಅಧಿಕರಣಾರ್ಥದಲ್ಲಿಯೇ ಏಕೆ ವಿಚಾರ ? —ಎಂಬುದಕ್ಕೆ ಉತ್ತರವಿದು.

ಹಿಂದಿನ ಅಧಿಕರಣದಲ್ಲಿ ಪ್ರಕರಣವನ್ನು ಬಿಡುವದೆಂಬುದನ್ನು ಒಪ್ಪಿ ಮನಶ್ಚಿದಾದಿಗಳು ಪುರುಷಾರ್ಥವೇ ಎಂದು ಹೇಳಿರುತ್ತದೆ(ಯುಷ್ಟಿ); ಈ ಮನಶ್ಚಿದಾದಿಗಳು ಯಾವನಿಗೆ (ಫಲವನ್ನು) ಹೇಳುವದಕ್ಕಾಗಿ ಬಂದಿವೆಯೆನ್ನುವಿರೋ ಆ ಪುರುಷನು ಯಾರು ? –ಎಂಬೀ ಪ್ರಸಂಗವು ಬರಲಾಗಿ ಈ ದೇಹವ್ಯತಿರಿಕ್ತನಾದ ಆತ್ಮನ ಅಸ್ತಿತ್ವವನ್ನು (ಇಲ್ಲಿ) ಹೇಳಿರುತ್ತದೆ. ಆ (ಆತ್ಮನು) ಇದಾನೆಂಬ (ವಿಷಯದ) ಆಕ್ಷೇಪಕ್ಕಾಗಿ ಈ ಮೊದಲನೆಯ ಸೂತ್ರವು ಬಂದಿದೆ. ಆಕ್ಷೇಪಪೂರ್ವಕವಾಗಿ ಪರಿಹಾರವನ್ನು ಹೇಳಿದರಲ್ಲವೆ, ವಿವಕ್ಷಿತಾರ್ಥದಲ್ಲಿ ಗೂಟಕ್ಕೆ ಕೂಲಿರಿದಂತೆ ದೃಢಬುದ್ಧಿಯನ್ನು ಉಂಟುಮಾಡುತ್ತದೆ ?

## ಪೂರ್ವಪಕ್ಷ: ಆತ್ಮನು ಶರೀರಾವ್ಯತಿರಿಕ್ತನು

(ಭಾಷ್ಯ)

೪೧೬. ಅತ್ರೈಕೇ ದೇಹಮಾತ್ರಾತ್ಮದರ್ಶಿನೋ ಲೋಕಾಯತಿಕಾಃ ದೇಹವ್ಯತಿರಿಕ್ತಸ್ಯ ಆತ್ಮನೋಽಭಾವಂ ಮನ್ಯಮಾನಾಃ ಸಮಸ್ತವ್ಯಸ್ತೇಷು ಬಾಹ್ಯೇಷು ಪೃಥಿವ್ಯಾದಿಷು ಅದೃಷ್ಟಮಪಿ ಚೈತನ್ಯಂ ಶರೀರಾಕಾರಪರಿಣತೇಷು ಭೂತೇಷು ಸ್ಯಾತ್ ಇತಿ ಸಂಭಾವಯನ್ತಃ ತೇಭ್ಯಶ್ಚೈತನ್ಯಂ ಮದಶಕ್ತಿವದ್ ವಿಜ್ಞಾನಮ್, ಚೈತನ್ಯವಿಶಿಷ್ಟಃ ಕಾಯಃ ಪುರುಷಃ ಇತಿ ಚಾಹುಃ। ನ ಸ್ವರ್ಗಗಮನಾಯ ಅಪವರ್ಗಗಮನಾಯ ವಾ ಸಮರ್ಥೋ ದೇಹವ್ಯತಿರಿಕ್ತ ಆತ್ಮಾ ಅಸ್ತಿ ಯತ್ಕೃತಂ ಚೈತನ್ಯಂ ದೇಹೇ ಸ್ಯಾತ್। ದೇಹ ಏವ ತು ಚೇತನಶ್ಚ ಆತ್ಮಾ ಚ ಇತಿ ಪ್ರತಿಜಾನತೇ। ಹೇತುಂ ಚ ಆಚಕ್ಷತೇ ಶರೀರೇ ಭಾವಾತ್ ಇತಿ। ಯದ್ಧಿ ಯಸ್ಮಿನ್ ಸತಿ ಭವತಿ ಅಸತಿ ಚ ನ ಭವತಿ ತತ್ ತದ್ಧರ್ಮತ್ವೇನ ಅಧ್ಯವಸೀಯತೇ ಯಥಾ ಅಗ್ನಿಧರ್ಮೌ ಔಷ್ಣ್ಯಪ್ರಕಾಶೌ। ಪ್ರಾಣಚೇಷ್ಟಾಚೈತನ್ಯಸ್ಮೃತ್ಯಾದಯಶ್ಚ ಆತ್ಮಧರ್ಮತ್ವೇನ ಅಭಿಮತಾಃ ಆತ್ಮವಾದಿನಾಮ್। ತೇಽಪಿ ಅನ್ತರೇವ ದೇಹೇ ಉಪಲಭ್ಯಮಾನಾ ಬಹಿಶ್ಚ ಅನುಪಲಭ್ಯಮಾನಾ ಅಸಿದ್ಧೇ ದೇಹವ್ಯತಿರಿಕ್ತೇ ಧರ್ಮಿಣಿ ದೇಹಧರ್ಮಾ ಏವ ಭವಿತುಮರ್ಹನ್ತಿ। ತಸ್ಮಾತ್ ಅವ್ಯತಿರೇಕೋ ದೇಹಾತ್ ಆತ್ಮನಃ ಇತಿ ॥

(ಭಾಷ್ಯಾರ್ಥ)

ಇಲ್ಲಿ ಕೆಲವರು, ದೇಹಮಾತ್ರವೇ ಆತ್ಮನೆಂದು ತಿಳಿದಿರುವ ಲೋಕಾಯತಿಕರು, ದೇಹವ್ಯತಿರಿಕ್ತನಾದ ಆತ್ಮನು ಇಲ್ಲವೆಂಬ ಅಭಿಪ್ರಾಯವುಳ್ಳವರಾಗಿ ಚೈತನ್ಯವು ಸಮಷ್ಟಿವ್ಯಷ್ಟಿರೂಪವಾಗಿರುವ ಹೊರಗಿನ ಪೃಥಿವ್ಯಾದಿಗಳಲ್ಲಿ ಕಾಣದೆ ಇದ್ದಾಗ್ಯೂ ಶರೀರಾಕಾರದಿಂದ ಪರಿಣಾಮವಾಗಿರುವ ಭೂತಗಳಲ್ಲಿ ಇರಬಹುದು.

ಎಂದು ಸಂಭಾವನೆಯನ್ನು ಮಾಡಿಕೊಂಡವರಾಗಿ ಅವುಗಳಿಂದ ಆಗಿರುವ ಚೈತನ್ಯವು ಮದಶಕ್ತಿಯಂತೆ ಆಗಿರುವ ವಿಜ್ಞಾನವು ಎಂದೂ ಚೈತನ್ಯವಿಶಿಷ್ಟವಾಗಿರುವ ಶರೀರವೇ ಪುರುಷನು ಎಂದೂ ಹೇಳುತ್ತಾರೆ. ಸ್ವರ್ಗವನ್ನು ಪಡೆಯುವದಕ್ಕಾಗಲಿ ಮೋಕ್ಷವನ್ನು ಪಡೆಯುವದಕ್ಕಾಗಲಿ ಸಮರ್ಥನಾಗಿರುವ ದೇಹವ್ಯತಿರಿಕ್ತನಾಗಿರುವ ಆತ್ಮನು ಇರುವದಿಲ್ಲ. ಹಾಗೆ ಇದ್ದಿದ್ದರೆ ದೇಹದಲ್ಲಿ ಅವನಿಂದ ಚೈತನ್ಯವುಂಟಾಗಿದೆ ಎನ್ನಬಹುದಾಗಿತ್ತು. ಮತ್ತೇನೆಂದರೆ ದೇಹವೇ ಚೇತನವು ಮತ್ತು ಆತ್ಮನು ಎಂದು ಪ್ರತಿಜ್ಞೆಮಾಡುತ್ತಾರೆ. (ಇದಕ್ಕೆ) 'ಶರೀರದಲ್ಲಿರುವದರಿಂದ' ಎಂಬ ಹೇತುವನ್ನು ಹೇಳುತ್ತಿದಾರೆ. ಹೇಗೆಂದರೆ ಯಾವದು ಇದ್ದರೆ ಯಾವದು ಇರುತ್ತದೆಯೋ, (ಯಾವದು) ಇಲ್ಲದಿದ್ದರೆ (ತಾನೂ) ಇರುವದಿಲ್ಲವೋ, ಅದು ಅದರ ಧರ್ಮವೆಂದು ನಿಶ್ಚಯಿಸುತ್ತೇವೆ; ಉದಾಹರಣೆಗೆ ಬಿಸಿಬೆಳಕುಗಳು ಬೆಂಕಿಯ ಧರ್ಮಗಳು (ಎಂದು ಈ ಕಾರಣದಿಂದ ನಿಶ್ಚಯಿಸುತ್ತೇವೆ). ಪ್ರಾಣ, ಚೇಷ್ಟೆ, ಚೈತನ್ಯ, ಸ್ಮೃತಿ – ಮುಂತಾದವು ಆತ್ಮಧರ್ಮಗಳೆಂದು ಆತ್ಮವಾದಿಗಳು ಒಪ್ಪಿರುವರಷ್ಟೆ[1]; ಅವೂ ದೇಹದ ಒಳಗಡೆಯಲ್ಲಿಯೇ ಕಾಣುವದರಿಂದಲೂ ಹೊರಗೆ ಕಾಣಬಾರದಿರುವದರಿಂದಲೂ ದೇಹವ್ಯತಿರಿಕ್ತವಾದ (ಆತ್ಮನೆಂಬ) ಧರ್ಮಿಯು ಅಸಿದ್ಧವಾಗಿರುವದರಿಂದ ದೇಹಧರ್ಮಗಳೇ ಆಗಿರಬೇಕು. ಆದ್ದರಿಂದ ಆತ್ಮನು ದೇಹಕ್ಕಿಂತ ಅವ್ಯತಿರಿಕ್ತನು.

**ವ್ಯತಿರೇಕಸ್ತದ್ಭಾವಾಭಾವಿತ್ವಾನ್ನ ತೂಪಲಬ್ಧಿವತ್ ॥ ೫೪ ॥**

೫೪. ವ್ಯತಿರೇಕವಾಗಿರುವನು, ಏಕೆಂದರೆ ಅದಿದ್ದರೂ ಇರುವದಿಲ್ಲ. ಆದರೆ (ಅವ್ಯತಿರೇಕವಿಲ್ಲ), ಉಪಲಬ್ಧಿಯಂತೆ.

## ದೇಹವಿದ್ದರೂ ಆತ್ಮಧರ್ಮಗಳಿಲ್ಲದ್ದರಿಂದ ದೇಹಾವ್ಯತಿರೇಕವಿಲ್ಲ

(ಭಾಷ್ಯ)

೪೧೭. ಏವಂ ಪ್ರಾಪ್ತೇ ಬ್ರೂಮಃ । ನ ತ್ವೇತದಸ್ತಿ ಯದುಕ್ತಮ್ ಅವ್ಯತಿರೇಕೋ ದೇಹಾದಾತ್ಮನ ಇತಿ । ವ್ಯತಿರೇಕ ಏವಾಸ್ಯ ದೇಹಾತ್ ಭವಿತುಮರ್ಹತಿ । ತದ್ಭಾವಾಭಾವಿತ್ವಾತ್ । ಯದಿ ದೇಹಭಾವೇ ಭಾವಾತ್ ದೇಹಧರ್ಮಿತ್ವಮ್ ಆತ್ಮಧರ್ಮಾಣಾಂ ಮನ್ಯೇತ, ತತೋ ದೇಹಭಾವೇಽಪ್ಯ

1. ಹೀಗೆಂದು ತಾರ್ಕಿಕರು ಒಪ್ಪಿರುತ್ತಾರೆ.

ಭಾವಾತ್ ಅತದ್ಧರ್ಮತ್ವಮೇವ ಏತೇಷಾಂ ಕಿಂ ನ ಮನ್ಯೇತ ? ದೇಹಧರ್ಮ ವೈಲಕ್ಷಣ್ಯಾತ್ । ಯೇ ಹಿ ದೇಹಧರ್ಮಾಃ ರೂಪಾದಯಃ ತೇ ಯಾವದ್ದೇಹಂ ಭವನ್ತಿ। ಪ್ರಾಣಚೇಷ್ಟಾದಯಸ್ತು ಸತ್ಯಪಿ ದೇಹೇ ಮೃತಾವಸ್ಥಾಯಾಂ ನ ಭವನ್ತಿ । ದೇಹಧರ್ಮಾಶ್ಚ ರೂಪಾದಯಃ ಪರೈರಪಿ ಉಪಲಭ್ಯನ್ತೇ ನ ತು ಆತ್ಮಧರ್ಮಾಶ್ಚೈತನ್ಯಸ್ಮೃತ್ಯಾದಯಃ । ಅಪಿ ಚ ಸತಿ ಹಿ ತಾವತ್ ದೇಹೇ ಜೀವದವಸ್ಥಾಯಾಮ್ ಏಷಾಂ ಭಾವಃ ಶಕ್ಯತೇ ನಿಶ್ಚೇತುಮ್, ನ ತು ಅಸತಿ ಅಭಾವಃ । ಪತಿತೇಽಪಿ ಕದಾಚಿತ್ ಅಸ್ಮಿನ್ ದೇಹೇ ದೇಹಾನ್ತರ ಸಂಚಾರೇಣ ಆತ್ಮಧರ್ಮಾ ಅನುವರ್ತೇರನ್ । ಸಂಶಯಮಾತ್ರೇಣಾಪಿ ಪರಪಕ್ಷಃ ಪ್ರತಿಷಿಧ್ಯತೇ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ದೇಹಕ್ಕಿಂತ ಆತ್ಮನು ವ್ಯತಿರಿಕ್ತನಲ್ಲ ಎಂದಿರಲ್ಲ, ಇದು ಸರಿಯಲ್ಲ. ಇವನು ದೇಹಕ್ಕಿಂತ ವ್ಯತಿರಿಕ್ತನೇ ಆಗಿರಬೇಕು, ಏಕೆಂದರೆ ತದ್ಭಾವಾಭಾವಿತ್ವದಿಂದ. ದೇಹವಿದ್ದರೆ ಇರುವದರಿಂದ ಆತ್ಮಧರ್ಮಗಳು ದೇಹದ ಧರ್ಮವು ಎಂದು ಬಗೆಯುವದಾದರೆ, ಆಗ ದೇಹವು ಇರುವಾಗಲೂ ಇಲ್ಲದಿರುವದರಿಂದ ಅವು ಅದರ ಧರ್ಮವಲ್ಲವೇ ಅಲ್ಲ ಎಂದೇಕೆ ಬಗೆಯಬಾರದು ? ಏಕೆಂದರೆ (ಅವು) ದೇಹಧರ್ಮಗಳಿಗಿಂತ ವಿಲಕ್ಷಣವಾಗಿರುತ್ತವೆ. ರೂಪವೇ ಮುಂತಾದ ದೇವಧರ್ಮಗಳಿರುವವಲ್ಲ, ಅವು ದೇಹವಿರುವವರೆಗೂ ಇದ್ದುಕೊಂಡಿರುತ್ತವೆ; ಪ್ರಾಣಚೇಷ್ಟೆಯೇ ಮುಂತಾದವುಗಳೋ ಎಂದರೆ ದೇಹವಿದ್ದರೂ ಮೃತಾವಸ್ಥೆಯಲ್ಲಿ ಇರುವದಿಲ್ಲ.[1] ಇದಲ್ಲದೆ ದೇಹಧರ್ಮಗಳಾದ ರೂಪಾದಿಗಳು ಮತ್ತೊಬ್ಬರಿಗೂ ಕಾಣಿಸುತ್ತವೆ ; ಆದರೆ ಆತ್ಮನ ಧರ್ಮಗಳಾದ ಚೈತನ್ಯ, ಸ್ಮೃತಿ – ಮುಂತಾದವುಗಳು ಕಾಣಿಸುವದಿಲ್ಲ.[2] ಇದೂ ಅಲ್ಲದೆ ಮೊದಲನೆಯದಾಗಿ ದೇಹವು ಇರುವಾಗ ಬದುಕಿರುವ ಅವಸ್ಥೆಯಲ್ಲಿ ಇವುಗಳು ಇವೆಯೆಂದು ನಿಶ್ಚಯಿಸುವದಕ್ಕೆ ಆಗುತ್ತದೆಯೇ ಹೊರತು, (ಅದು) ಇಲ್ಲದಿದ್ದರೆ (ಇವೂ) ಇರುವದಿಲ್ಲವೆಂದು (ನಿಶ್ಚಯಿಸುವದ)ಕ್ಕಾಗುವದಿಲ್ಲ. ಈ ದೇಹವು ಬಿದ್ದುಹೋದರೂ ಒಂದುವೇಳೆ ದೇಹಾಂತರಕ್ಕೆ ಹೋಗಿ ಆತ್ಮಧರ್ಮಗಳು ಇದ್ದುಕೊಂಡಿರಬಹು

---

1. ಪ್ರಾಣಚೇಷ್ಟೆಯೇ ಮುಂತಾದವು ಜೀವನ ಧರ್ಮಗಳು ; ಅವು ದೇಹದ ಧರ್ಮವೇ ಆಗಿದ್ದರೆ ದೇಹವಿರುವಾಗಲೇ ಹೋಗಿಬಿಡುತ್ತಿರಲಿಲ್ಲ.

2. ದೇಹಧರ್ಮಗಳಾದ ರೂಪಾದಿಗಳಿಗಿಂತ ಆತ್ಮಧರ್ಮದಲ್ಲಿ ಇದೂ ಒಂದು ವೈಲಕ್ಷಣ್ಯವು.

ದಾಗಿದೆ. (ಈ) ಬರಿಯ ಸಂಶಯದಿಂದಲೂ ಪರಪಕ್ಷವನ್ನು ಅಲ್ಲಗಳೆದಂತೆ ಆಗುತ್ತದೆ.[1]

## ವಿಷಯಿಯಾದ್ದರಿಂದಲೂ ಆತ್ಮನು ದೇಹಧರ್ಮವಲ್ಲ

(ಭಾಷ್ಯ)

೪೧೮. ಕಿಮಾತ್ಮಕಂ ಚ ಪುನರಿದಂ ಚೈತನ್ಯಂ ಮನ್ಯತೇ ಯಸ್ಯ ಭೂತೇಭ್ಯ ಉತ್ಪತ್ತಿಮ್ ಇಚ್ಛತಿ ಇತಿ ಪರಃ ಪರ್ಯನುಯೋಕ್ತವ್ಯಃ। ನ ಹಿ ಭೂತಚತುಷ್ಟಯವ್ಯತಿರೇಕೇಣ ಲೋಕಾಯತಿಕಃ ಕಿಂಚಿತ್ ತತ್ತ್ವಂ ಪ್ರತ್ಯೇತಿ। ಯದನುಭವನಂ ಭೂತಭೌತಿಕಾನಾಂ ತತ್ ಚೈತನ್ಯಮ್ ಇತಿ ಚೇತ್ ? ತರ್ಹಿ ವಿಷಯತ್ವಾತ್ ತೇಷಾಂ ನ ತದ್ಧರ್ಮತ್ವಮ್ ಅಶ್ನುವೀತ ಸ್ವಾತ್ಮನಿ ಕ್ರಿಯಾವಿರೋಧಾತ್। ನ ಹಿ ಅಗ್ನಿರುಷ್ಣಃ ಸನ್ ಸ್ವಾತ್ಮಾನಂ ದಹತಿ। ನ ಹಿ ನಟಃ ಶಿಕ್ಷಿತಃ ಸನ್ ಸ್ವಸ್ಕಂಧಮ್ ಅಧಿರೋಕ್ಷ್ಯತಿ। ನ ಹಿ ಭೂತಭೌತಿಕಧರ್ಮೇಣ ಸತಾ ಚೈತನ್ಯೇನ ಭೂತಭೌತಿಕಾನಿ ವಿಷಯೀಕ್ರಿಯೇರನ್। ನ ಹಿ ರೂಪಾದಿಭಿಃ ಸ್ವರೂಪಂ ಪರರೂಪಂ ವಾ ವಿಷಯೀಕ್ರಿಯತೇ। ವಿಷಯೀಕ್ರಿಯಂತೇ ತು ಬಾಹ್ಯಾಧ್ಮಿಕಾನಿ ಭೂತಭೌತಿಕಾನಿ ಚೈತನ್ಯೇನ। ಅತಶ್ಚ ಯಥೈವಾಸ್ಯಾ ಭೂತಭೌತಿಕವಿಷಯಾಯಾಃ ಉಪಲಬ್ಧೇರ್ಭಾವೋಽಭ್ಯುಪಗಮ್ಯತೇ ಏವಂ ವ್ಯತಿರೇಕೋಽಪಿ ಅಸ್ಯಾಸ್ತೇಭ್ಯೋಽಭ್ಯುಪಗಂತವ್ಯಃ। ಉಪಲಬ್ಧಿಸ್ವರೂಪ ಏವ ಚ ನ ಆತ್ಮಾ ಇತಿ ಆತ್ಮನೋ ದೇಹವ್ಯತಿರಿಕ್ತತ್ವಮ್। ನಿತ್ಯತ್ವಂ ಚ। ಉಪಲಬ್ಧೇಃ ಐಕರೂಪ್ಯಾತ್। ಅಹಮಿದಮದ್ರಾಕ್ಷಮ್ ಇತಿ ಚ ಅವಸ್ಥಾಂತರಯೋಗೇಽಪಿ ಉಪಲಬ್ಧೃತ್ವೇನ ಪ್ರತ್ಯಭಿಜ್ಞಾನಾತ್। ಸ್ಮೃತ್ಯಾದ್ಯುಪಪತ್ತೇಶ್ಚ ॥

(ಭಾಷ್ಯಾರ್ಥ)

ಈ ಚೈತನ್ಯವೆಂಬುದು – ಯಾವದರ ಉತ್ಪತ್ತಿಯು ಭೂತಗಳಿಂದಾಗುವದೆಂದು ಒಪ್ಪುತ್ತೀಯೋ (ಅದು) –ಯಾವ ಸ್ವರೂಪದ್ದು ? –ಎಂದು ಈ ಪರ(ವಾದಿ)ಯನ್ನು ಕೇಳಬೇಕು. ಏಕೆಂದರೆ ನಾಲ್ಕು ಭೂತಗಳಿಗಿಂತ ಬೇರೆಯಾಗಿರುವ ಯಾವದೊಂದು ತತ್ತ್ವವನ್ನೂ **ಲೋಕಾಯತಿಕನು** ಅಂಗೀಕರಿಸಿರುವದಿಲ್ಲ.

---

1. ಆತ್ಮನು ದೇಹಾಂತರದಲ್ಲಿರಬಹುದೆಂದು ನಾವು ಪ್ರಮಾಣದಿಂದ ನಿಶ್ಚಯಿಸುವದಕ್ಕೆ ಆಗದೆ ಇದ್ದರೂ ಒಂದುವೇಳೆ ಇರಬಹುದೆಂಬ ಸಂಶಯಮಾತ್ರದಿಂದಲೇ ಪರಪಕ್ಷಕ್ಕೆ ಅಡ್ಡಿಯಾಗುತ್ತದೆ ಎಂದು ಭಾವ. ಇಲ್ಲಿ ಶ್ರುತಿಯನ್ನು ಚಾರ್ವಾಕನು ಒಪ್ಪದೆ ಇರುವದರಿಂದ ಅದನ್ನು ಉದಾಹರಿಸಿಲ್ಲ.

(ಲೋಕಾಯತಿಕ) :– ಭೂತಭೌತಿಕಗಳನ್ನು ಅನುಭವಿಸುವದಿದೆಯಲ್ಲ, ಅದೇ ಚೈತನ್ಯವು ಎಂದರೆ ?

(ಸಿದ್ಧಾಂತಿ) :– ಹಾಗಾದರೆ ಅವುಗಳು ವಿಷಯವಾಗಿರುವದರಿಂದ (ಚೈತನ್ಯವು) ಅವುಗಳ ಧರ್ಮತ್ವವನ್ನು ಹೊಂದಲಾರದು ; ಏಕೆಂದರೆ ತನ್ನ ಸ್ವರೂಪದಲ್ಲಿಯೇ (ತನ್ನ) ಕ್ರಿಯೆಯಾಗುವದೆಂಬುದು ವಿರುದ್ಧವು. ಬೆಂಕಿಯು ಬಿಸಿಯಾಗಿದ್ದುಕೊಂಡು ತನ್ನನ್ನೇ ಸುಟ್ಟುಕೊಳ್ಳಲಾರದಷ್ಟೆ. ನಟನು ಶಿಕ್ಷಿತನಾದರೆ ತನ್ನ ಹೆಗಲನ್ನೇ ಏರಿಕೊಳ್ಳಲಾರನಷ್ಟೆ ? (ಹೀಗೆಯೇ) ಭೂತಭೌತಿಕಧರ್ಮವಾಗಿರುವ ಚೈತನ್ಯದಿಂದ ಭೂತಭೌತಿಕಗಳೇ ವಿಷಯೀಕೃತವಾಗಲಾರವು ; ಏಕೆಂದರೆ ರೂಪಾದಿಗಳಿಂದ ತಮ್ಮ ರೂಪವಾಗಲಿ ಮತ್ತೊಂದರ ರೂಪವಾಗಲಿ ವಿಷಯೀಕೃತವಾಗಲಾರದು. ಆದರೆ ಹೊರಗಿನ ಮತ್ತು ಒಳಗಿನ ಭೂತಭೌತಿಕಗಳು ಚೈತನ್ಯದಿಂದ ವಿಷಯೀಕೃತವಾಗುತ್ತವೆ. ಆದ್ದರಿಂದ **ಭೂತಭೌತಿಕ(ವಸ್ತು)ವಿಷಯವಾದ ಅರಿವು ಇದೆ ಎಂದು ಹೇಗೆ ಒಪ್ಪುತ್ತೀರೋ ಹಾಗೆಯೇ ಇದು ಅವುಗಳಿಗಿಂತ ವ್ಯತಿರೇಕವಾಗಿದೆ ಎಂದೂ ಒಪ್ಪಬೇಕು. (ಈ) ಅರಿವಿನ ಸ್ವರೂಪವೇ ನಮ್ಮ ಆತ್ಮನು ; ಆದ್ದರಿಂದ ಆತ್ಮನು ದೇಹಕ್ಕಿಂತ ವ್ಯತಿರಿಕ್ತನಾಗಿರುತ್ತಾನೆ. (ಈ) ಅರಿವು ನಿತ್ಯವೂ ಆಗಿರುತ್ತದೆ (ಎಂದು ಒಪ್ಪಬೇಕು) ; ಏಕೆಂದರೆ (ಅದು) ಒಂದೇ ರೂಪವಾಗಿದೆ, 'ನಾನು ಇದನ್ನು ಅರಿತೆನು' ಎಂದು ಅವಸ್ಥಾಂತರಸಂಬಂಧವಾದಾಗಲೂ ಜ್ಞಾತೃವೆಂದು ಪ್ರತ್ಯಭಿಜ್ಞೆಯಾಗುತ್ತದೆ.** ಸ್ಮೃತ್ಯಾದಿಗಳು ಕಂಡುಬರುವದರಿಂದಲೂ (ಹೀಗೆ).[1]

## ಶರೀರದಲ್ಲಿದ್ದಮಾತ್ರದಿಂದ ಅರಿವು ಶರೀರದ ಧರ್ಮವಾಗಲಾರದು

(ಭಾಷ್ಯ)

೪೮೯. ಯತ್ತು ಉಕ್ತಮ್ ಶರೀರೇ ಭಾವಾತ್ ಶರೀರಧರ್ಮಃ ಉಪಲಬ್ಧಿಃ ಇತಿ, ತತ್ ವರ್ಣಿತೇನ ಪ್ರಕಾರೇಣ ಪ್ರತ್ಯುಕ್ತಮ್ । ಅಪಿ ಚ ಸತ್ಸು ಪ್ರದೀಪಾದಿಷು ಉಪಕರಣೇಷು ಉಪಲಬ್ಧಿರ್ಭವತಿ, ಅಸತ್ಸು ನ ಭವತಿ । ನ ಚೈತಾವತಾ ಪ್ರದೀಪಧರ್ಮ ಏವ ಉಪಲಬ್ಧಿರ್ಭವತಿ । ಉಪಕರಣತ್ವಮಾತ್ರೇಣಾಪಿ ಪ್ರದೀಪವತ್ ದೇಹೋಪಯೋಗೋಪಪತ್ತೇಃ । ನ ಚ ಅತ್ಯನ್ತಂ ದೇಹಸ್ಯ ಉಪಲಬ್ಧೌ ಉಪಯೋಗೋಽಪಿ ದೃಶ್ಯತೇ । ನಿಶ್ಚೇಷ್ಟೇಽಪಿ ಅಸ್ಮಿನ್

1. ವಿಷಯದ ಸ್ಮೃತಿಯು ಆಗುವದಕ್ಕೆ ಅನುಭವಸ್ಮೃತಿಗಳಿಗೆರಡಕ್ಕೂ ಆಶ್ರಯನಾಗಿ ಒಬ್ಬನೇ ಕರ್ತೃವಿರಬೇಕೆಂದು ಏರ್ಪಡುತ್ತದೆ.

ದೇಹೇ ಸ್ವಪ್ನೇ ನಾನಾವಿಧೋಪಲಬ್ಧಿದರ್ಶನಾತ್। ತಸ್ಮಾತ್ ಅನವದ್ಯಂ ದೇಹವ್ಯತಿರಿಕ್ತಸ್ಯ ಆತ್ಮನೋಽಸ್ತಿತ್ವಮ್ ॥

(ಭಾಷ್ಯಾರ್ಥ)

ಇನ್ನು ಶರೀರದಲ್ಲಿರುವದರಿಂದ ಅರಿವು ಶರೀರಧರ್ಮವು ಎಂದು ಪೂರ್ವಪಕ್ಷಿಯು ಹೇಳಿದ್ದನಷ್ಟೆ. ಅದನ್ನು (ಈವರೆಗೆ) ಹೇಳಿರುವ ಪ್ರಕಾರದಿಂದಲೇ ತಿರಸ್ಕರಿಸಿದಂತಾಯಿತು. ಇದಲ್ಲದೆ ಪ್ರದೀಪವೇ ಮುಂತಾದ ಉಪಕರಣಗಳು ಇದ್ದರೆ ಅರಿವು ಆಗುತ್ತದೆ, (ಅವು) ಇಲ್ಲದಿದ್ದರೆ ಆಗುವದಿಲ್ಲ. ಇಷ್ಟು ಮಾತ್ರದಿಂದ ಅರಿವು ಪ್ರದೀಪಾದಿಗಳ ಧರ್ಮವೇ ಆಗುವದಿಲ್ಲ. ಹೀಗಿರುವಲ್ಲಿ ದೇಹವಿದ್ದರೆ ಅರಿವಾಗುತ್ತದೆ, ಇಲ್ಲದಿದ್ದರೆ ಆಗುವದಿಲ್ಲ(ವೆಂಬ ಕಾರಣ)ದಿಂದ ದೇಹಧರ್ಮವೇ ಆಗಲಾರದು. ಏಕೆಂದರೆ ಪ್ರದೀಪಾದಿಗಳಂತೆ ಉಪಕರಣವಾಗಿದೆ ಎಂಬ ಮಾತ್ರದಿಂದಲೂ ದೇಹದ ಉಪಯೋಗವಾಗಬಹುದಾಗಿದೆ. ಇದಲ್ಲದೆ ದೇಹವು ಅರಿವಾಗುವದಕ್ಕೆ ಅತ್ಯಂತವಾಗಿ ಉಪಯೋಗವಾಗುತ್ತದೆ ಎಂಬುದೂ ಇಲ್ಲ; ಏಕೆಂದರೆ ಈ ದೇಹವು ನಿರ್ವ್ಯಾಪಾರವಾಗಿದ್ದರೂ ಕನಸಿನಲ್ಲಿ ಬಗೆಬಗೆಯ ಅರಿವುಗಳು (ಆಗುವದು) ಕಂಡುಬರುತ್ತದೆ. ಆದ್ದರಿಂದ ದೇಹವ್ಯತಿರಿಕ್ತನಾಗಿರುವ ಆತ್ಮನು ಇದಾನೆಂಬುದು ನಿರ್ದುಷ್ಟವಾಗಿದೆ.

## ೩೧. ಅಙ್ಗಾವಬದ್ಧಾಧಿಕರಣ (ಸೂ. ೫೫–೫೬)

(ಅಂಗಾವಬದ್ಧೋಪಾಸನೆಗಳನ್ನು ಎಲ್ಲಾ ಶಾಖೆಗಳಿಗೂ ಅನ್ವಯಿಸಬೇಕು)

**ಅಙ್ಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ ॥ ೫೫ ॥**

೫೫. ಅಂಗಾವಬದ್ಧ(ಉಪಾಸನೆ)ಗಳಾದರೋ ಪ್ರತಿವೇದದ (ಆಯಾ) ಶಾಖೆಗಳಲ್ಲಿ ಮಾತ್ರ (ವ್ಯವಸ್ಥಿತವಾಗಿರು)ವದಿಲ್ಲ.

## ಪೂರ್ವಪಕ್ಷ:

## ಅಂಗಾವಬದ್ಧೋಪಾಸನೆಗಳು ಆಯಾ ವೇದಕ್ಕೇ ಸೇರಿದವು

(ಭಾಷ್ಯ)

೪೨೦. ಸಮಾಪ್ತಾ ಪ್ರಾಸಙ್ಗಿಕೀ ಕಥಾ। ಸಂಪ್ರತಿ ತು ಪ್ರಕೃತಮೇವ ಅನುವರ್ತಾಮಹೇ। "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" (ಛಾಂ.೧–೧–೧), "ಲೋಕೇಷು ಪಞ್ಚವಿಧಂ ಸಾಮೋಪಾಸೀತ" (ಛಾಂ.೨–೧–೧) "ಉಕ್ಥಮುಕ್ಥಮಿತಿ ವೈ ಪ್ರಜಾ ವದನ್ತಿ ತದಿದಮೇವೋಕ್ಥಮಿಯಮೇವ

ಪೃಥಿವೀ" (ಐ. ಆ. ೨-೧-೨), "ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ" (ಶತ. ಬ್ರಾ. ೨-೧-೨-೧) ಇತ್ಯೇವಮಾದ್ಯಾ ಯೇ ಉದ್ಗೀಥಾದಿಕರ್ಮಾಙ್ಗಾವಬದ್ಧಾಃ ಪ್ರತ್ಯಯಾಃ ಪ್ರತಿವೇದಂ ಶಾಖಾಭೇದೇಷು ವಿಹಿತಾಃ, ತೇ ತತ್ತಚ್ಛಾಖಾಗತೇಷ್ವೇವ ಉದ್ಗೀಥಾದಿಷು ಭವೇಯುಃ, ಅಥವಾ ಸರ್ವಶಾಖಾಗತೇಷು ಇತಿ ವಿಶಯಃ। ಪ್ರತಿಶಾಖಂ ಚ ಸ್ವರಾದಿಭೇದಾತ್ ಉದ್ಗೀಥಾದಿಭೇದಾನ್ ಉಪಾದಾಯ ಅಯಮ್ ಉಪನ್ಯಾಸಃ। ಕಿಂ ತಾವತ್ ಪ್ರಾಪ್ತಮ್ ? ಸ್ವಶಾಖಾಗತೇಷ್ವೇವ ಉದ್ಗೀಥಾದಿಷು ವಿಧೀಯೇರನ್ ಇತಿ। ಕುತಃ ? ಸಂನಿಧಾನಾತ್। "ಉದ್ಗೀಥಮುಪಾಸೀತ" (ಛಾಂ. ೧-೧-೧) ಇತಿ ಹಿ ಸಾಮಾನ್ಯವಿಹಿತಾನಾಂ ವಿಶೇಷಾಕಾಙ್ಕ್ಷಾಯಾಂ ಸಂನಿಕೃಷ್ಟೇನೈವ ಸ್ವಶಾಖಾಗತೇನ ವಿಶೇಷೇಣ ಆಕಾಙ್ಕ್ಷಾವಿನಿವೃತ್ತೇಃ ತದತಿಲಙ್ಘನೇನ ಶಾಖಾನ್ತರವಿಹಿತವಿಶೇಷೋಪಾದಾನೇ ಕಾರಣಂ ನಾಸ್ತಿ। ತಸ್ಮಾತ್ ಪ್ರತಿಶಾಖಂ ವ್ಯವಸ್ಥಾ ಇತಿ॥

(ಭಾಷ್ಯಾರ್ಥ)

ಪ್ರಾಸಂಗಿಕವಾದ ಚರ್ಚೆ ಮುಗಿಯಿತು. ಈಗಲಾದರೆ ಪ್ರಕೃತ ಚರ್ಚೆಯನ್ನೇ ಮುಂದುವರಿಸುತ್ತೇವೆ. "ಓಮೆಂಬೀ ಅಕ್ಷರವಾದ ಉದ್ಗೀಥವನ್ನು ಉಪಾಸನೆಮಾಡಬೇಕು" (ಛಾಂ. ೧-೧-೧), "ಲೋಕಗಳ (ದೃಷ್ಟಿಯಿಂದ) ಪಂಚವಿಧಸಾಮವನ್ನು ಉಪಾಸನೆಮಾಡಬೇಕು" (ಛಾಂ ೨-೧-೧), "ಉಕ್ಥ, ಉಕ್ಥ- ಎಂದು ಜನರು ಹೇಳುತ್ತಾರಷ್ಟೆ, ಆ ಇದೇ ಉಕ್ಥವು, ಈ ಭೂಮಿಯೇ (ಉಕ್ಥವು)"[1] (ಐ. ಆ. ೨-೧-೨) "ಈ ಚಿತಾಗ್ನಿಯಿದೆಯಲ್ಲ, ಇದೇ ಈ ಲೋಕವು" (ಶತ. ಬ್ರಾ. ೨-೧-೨-೧) ಎಂಬಿವೇ ಮುಂತಾದ ಉದ್ಗೀಥವೇ ಮುಂತಾದ ಕರ್ಮಾಂಗಗಳಿಗೆ ಸಂಬದ್ಧವಾದ ಪ್ರತ್ಯಯಗಳು ಪ್ರತಿವೇದದಲ್ಲಿಯೂ ಬೇರೆಬೇರೆ ಶಾಖೆಗಳಲ್ಲಿ ವಿಹಿತವಾಗಿರುವವಷ್ಟೆ, ಅವು ಆಯಾ ಶಾಖೆಯಲ್ಲಿರುವ ಉದ್ಗೀಥಾದಿಗಳಲ್ಲಿ ಮಾತ್ರ (ವ್ಯವಸ್ಥಿತ)ವಾಗಿರುವವೋ ಅಥವಾ ಎಲ್ಲಾ ಶಾಖೆಗಳಲ್ಲಿಯೂ ಇರುವ (ಉದ್ಗೀಥಾದಿಗಳಿಗೆ) ಅನ್ವಯಿಸುವವೋ- ಎಂಬುದು ಸಂಶಯವು. ಪ್ರತಿಶಾಖೆಯಲ್ಲಿಯೂ ಸ್ವರಾದಿಗಳು ಬೇರೆಬೇರೆಯಾಗಿರುವದರಿಂದ ಉದ್ಗೀಥಾದಿಗಳು ಬೇರೆಬೇರೆ ಎಂದು ಹಿಡಿದು (ಈ ಸಂಶಯವನ್ನು) ತೆಗೆದಿರುತ್ತದೆ.

ಇಲ್ಲಿ ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? ತಮ್ಮ ತಮ್ಮ ಶಾಖೆಯಲ್ಲಿರುವ ಉದ್ಗೀಥಾದಿಗಳ ವಿಷಯಕ್ಕೇ (ಇವು) ವಿಹಿತವಾಗಿರಬೇಕು. ಏಕೆ? ಎಂದರೆ ಸಂನಿಧಾನದಲ್ಲಿರುವದರಿಂದ. "ಉದ್ಗೀಥವನ್ನು ಉಪಾಸನೆ ಮಾಡಬೇಕು" (ಛಾಂ. ೧-೧-೧) ಎಂದು ಸಾಮಾನ್ಯವಾಗಿ ವಿಹಿತವಾಗಿರುವದ

1. ಪೃಥಿವೀದೃಷ್ಟಿಯನ್ನು ಮಾಡಬೇಕು ಎಂದರ್ಥ.

ರಿಂದ ವಿಶೇಷದ ಆಕಾಂಕ್ಷೆಯುಂಟಾಗುವಲ್ಲಿ ಹತ್ತಿರವಿರುವ ಸ್ವಶಾಖಾಗತವಾದ ವಿಶೇಷದಿಂದ ಆಕಾಂಕ್ಷೆಯು ತೊಲಗುತ್ತದೆಯಾಗಿ ಅದನ್ನು ದಾಟಿ ಶಾಖಾಂತರ ದಲ್ಲಿ ವಿಹಿತವಾಗಿರುವ ವಿಶೇಷವನ್ನು ತೆಗೆದುಕೊಳ್ಳುವವಕ್ಕೆ ಕಾರಣವಿರುವದಿಲ್ಲ. ಆದ್ದರಿಂದ ಆಯಾ ಶಾಖೆಗೇ (ಉಪಾಸನೆಯು) ವ್ಯವಸ್ಥೆಯಾಗಬೇಕು.

## ಸಿದ್ಧಾಂತ : ಅಂಗಾವಬದ್ಧೋಪಾಸನೆಗಳು ಎಲ್ಲಾ ಶಾಖೆಗಳಿಗೂ ಸೇರಿರುತ್ತವೆ

(ಭಾಷ್ಯ)

೪೨೧ ಏವಂ ಪ್ರಾಪ್ತೇ ಬ್ರವೀತಿ 'ಅಙ್ಗಾವಬದ್ಧಾಸ್ತು' ಇತಿ । ತು ಶಬ್ದಃ ಪಕ್ಷಂ ವ್ಯಾವರ್ತಯತಿ । ನೈತೇ ಪ್ರತಿವೇದಂ ಸ್ವಶಾಖಾಸ್ವೇವ ವ್ಯವ ತಿಷ್ಠೇರನ್। ಅಪಿ ತು ಸರ್ವಶಾಖಾಸು ಅನುವರ್ತೇರನ್ । ಕುತಃ? ಉದ್ಗೀಥಾದಿ ಶ್ರುತ್ಯವಿಶೇಷಾತ್ । ಸ್ವಶಾಖಾವ್ಯವಸ್ಥಾಯಾಂ ಹಿ 'ಉದ್ಗೀಥಮ್ ಉಪಾಸೀತ' ಇತಿ ಸಾಮಾನ್ಯಶ್ರುತಿಃ ಅವಿಶೇಷಪ್ರವೃತ್ತಾ ಸತೀ ಸಂನಿಧಾನವಶೇನ ವಿಶೇಷೇ ವ್ಯವಸ್ಥಾಪ್ಯಮಾನಾ ಪೀಡಿತಾ ಸ್ಯಾತ್। ನ ಚೈತನ್ನ್ಯಾಯ್ಯಮ್। ಸಂನಿಧಾನಾತ್ ತು ಶ್ರುತಿರ್ಬಲೀಯಸೀ। ನ ಚ ಸಾಮಾನ್ಯಾಶ್ರಯಃ ಪ್ರತ್ಯಯೋ ನೋಪಪದ್ಯತೇ। ತಸ್ಮಾತ್ ಸ್ವರಾದಿಭೇದೇ ಸತ್ಯಪಿ ಉದ್ಗೀಥತ್ವಾದ್ಯವಿಶೇಷಾತ್ ಸರ್ವಶಾಖಾಗತೇ ಷ್ವೇವ ಉದ್ಗೀಥಾದಿಷು ಏವಂಜಾತೀಯಕಾಃ ಪ್ರತ್ಯಯಾಃ ಸ್ಯುಃ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು) ಹೇಳು ತ್ತಾರೆ; "ಅಙ್ಗಾವಬದ್ಧಾಸ್ತು" (ಅಂಗಾವಬದ್ಧೋಪಾಸನೆಗಳಾದರೋ) ಎಂದು. (ಇಲ್ಲಿರುವ) ತುಶಬ್ದವು (ಪೂರ್ವ)ಪಕ್ಷವನ್ನು ತಳ್ಳಿಹಾಕುತ್ತದೆ. (ಈ ಉಪಾಸನೆ ಗಳು) ಪ್ರತಿವೇದದಲ್ಲಿ ಸ್ವಶಾಖೆಗಳಲ್ಲಿಯೇ ವ್ಯವಸ್ಥಿತವಾಗಿರುವದಿಲ್ಲ ; ಮತ್ತೇ ನೆಂದರೆ ಎಲ್ಲಾ ಶಾಖೆಗಳಲ್ಲಿಯೂ ಅನುವೃತ್ತವಾಗಿರುತ್ತವೆ. ಏಕೆ ? ಎಂದರೆ ಉದ್ಗೀಥವೇ ಮುಂತಾದ ಶ್ರುತಿಗಳು ಸಮಾನವಾಗಿರುವದರಿಂದ. ಸ್ವಶಾಖೆಗೇ ವ್ಯವಸ್ಥೆಮಾಡಿದರೆ 'ಉದ್ಗೀಥವನ್ನು ಉಪಾಸನೆಮಾಡಬೇಕು' ಎಂಬೀ ಸಾಮಾನ್ಯಶ್ರುತಿಯು ಅವಿಶೇಷವಾಗಿ ಪ್ರವೃತ್ತವಾಗಿದ್ದು ಸಂನಿಧಾನವಶದಿಂದ ವಿಶೇಷಕ್ಕೆ ಕಟ್ಟುಮಾಡಿದರೆ (ಅದಕ್ಕೆ) ವಿರೋಧವಾಗುವದು. ಆದರೆ ಇದು ಯುಕ್ತವಲ್ಲ ; ಏಕೆಂದರೆ ಸಂನಿಧಾನಕ್ಕಿಂತ ಶ್ರುತಿಯೇ ಪ್ರಬಲವಾಗಿರುತ್ತದೆ.[1] ಸಾಮಾನ್ಯವನ್ನಾಶ್ರಯಿಸಿರುವ ಉಪಾಸನೆಯು ಹೊಂದುವದಿಲ್ಲವೆಂಬುದೂ ಇಲ್ಲ. ಆದ್ದರಿಂದ ಸ್ವರಾದಿಗಳ ಭೇದವು ಇದ್ದರೂ ಉದ್ಗೀಥತ್ವವೇ ಮುಂತಾದವು

---

1. ಇಲ್ಲಿ ಶ್ರುತಿಸಂನಿಧಿಗಳಿಗೆ ವಿರೋಧವನ್ನು ಒಪ್ಪಿ ಸಮಾಧಾನವನ್ನು ಹೇಳಿದೆ. ಮುಂದಿನ ಸೂತ್ರದಲ್ಲಿ ವಿರೋಧವೇ ಇಲ್ಲವೆಂದು ತಿಳಿಸಿದೆ.

ಸಮಾನವಾಗಿರುವದರಿಂದ ಎಲ್ಲಾ ಶಾಖೆಗಳಲ್ಲಿಯೂ ಇರುವ ಉದ್ಗೀಥಾದಿಗಳಲ್ಲಿಯೂ ಈ ಜಾತಿಯ ಉಪಾಸನೆಗಳು ಆಗುವವು.

**ಮನ್ತ್ರಾದಿವದ್ವಾಽವಿರೋಧಃ ॥ ೫೬ ॥**

೫೬. ಅಥವಾ ಮಂತ್ರಾದಿಗಳಂತೆ (ಇಲ್ಲಿಯೂ) ವಿರೋಧವಿರುವದಿಲ್ಲ.

## ಶಾಖಾಂತರಗಳಿಗೂ ಉದ್ಗೀಥಾದ್ಯುಪಾಸನೆಗಳು ಹೊಂದಬಹುದೆಂಬುದಕ್ಕೆ ದೃಷ್ಟಾಂತ

(ಭಾಷ್ಯ)

೪೨೨. ಅಥವಾ ನೈವಾತ್ರ ವಿರೋಧಃ ಶಙ್ಕಿತವ್ಯಃ। ಕಥಮ್ ಅನ್ಯಶಾಖಾಗತೇಷು ಉದ್ಗೀಥಾದಿಷು ಅನ್ಯಶಾಖಾವಿಹಿತಾಃ ಪ್ರತ್ಯಯಾ ಭವೇಯುಃ ಇತಿ। ಮನ್ತ್ರಾದಿವತ್ ಅವಿರೋಧೋಪಪತ್ತೇಃ। ತಥಾ ಹಿ ಮನ್ತ್ರಾಣಾಂ ಕರ್ಮಣಾಂ ಗುಣಾನಾಂ ಚ ಶಾಖಾನ್ತರೋತ್ಪನ್ನಾನಾಮಪಿ ಶಾಖಾನ್ತರೇ ಉಪಸಂಗ್ರಹೋ ದೃಶ್ಯತೇ। ಯೇಷಾಮಪಿ ಹಿ ಶಾಖಿನಾಂ 'ಕುಟರುರಸಿ'(ಮೈ. ಸಂ. ೧–೬–೬) ಇತ್ಯಶ್ಮಾದಾನಮನ್ತ್ರೋ ನಾಮ್ನಾತಃ, ತೇಷಾಮಪಿ ಅಸೌ ವಿನಿಯೋಗೋ ದೃಶ್ಯತೇ "ಕುಕ್ಕುಟೋಽಸೀತ್ಯಶ್ಮಾನಮಾದತ್ತೇ ಕುಟರುರಸೀತಿ ವಾ" (?) ಇತಿ। ಯೇಷಾಮಪಿ ಸಮಿದಾದಯಃ ಪ್ರಯಾಜಾ ನಾಮ್ನಾತಾಃ ತೇಷಾಮಪಿ ತೇಷು ಗುಣವಿಧಿರಾಮ್ನಾಯತೇ "ಋತವೋ ವೈ ಪ್ರಯಾಜಾಃ ಸಮಾನತ್ರ ಹೋತವ್ಯಾಃ"[1] (?) ಇತಿ। ತಥಾ ಯೇಷಾಮಪಿ "ಅಜೋಽಗ್ನೀಷೋಮೀಯಃ" (?) ಇತಿ ಜಾತಿವಿಶೇಷೋಪದೇಶೋ ನಾಸ್ತಿ, ತೇಷಾಮಪಿ ತದ್ವಿಷಯೋ ಮನ್ತ್ರವರ್ಣಃ ಉಪಲಭ್ಯತೇ "ಛಾಗಸ್ಯ ವಪಯಾ ಮೇದಸೋಽನುಬ್ರೂಹಿ" (?) ಇತಿ। ತಥಾ ವೇದಾನ್ತರೋತ್ಪನ್ನಾನಾಮಪಿ "ಅಗ್ನೇರ್ವೋ ಹೋತ್ರಂ ವೇರಧ್ವರಮ್" (ತಾಂ. ಬ್ರಾ. ೨೧–೧೦–೧೧) ಇತ್ಯೇವಮಾದಿಮನ್ತ್ರಾಣಾಂ ವೇದಾನ್ತರೇ ಪರಿಗ್ರಹೋ ದೃಷ್ಟಃ। ತಥಾ ಬ್ರಹ್ವೃಚಪಠಿತಸ್ಯ "ಯೋ ಜಾತ ಏವ ಪ್ರಥಮೋಮನಸ್ವಾನ್" (ಋ. ಸು. ೨–೬–೭) ಇತ್ಯಸ್ಯ "ಅಧ್ವರ್ಯವೇ ಸಜನೀಯಂ ಶಸ್ಯಮ್" ಇತ್ಯತ್ರ (?) ಪರಿಗ್ರಹೋ ದೃಷ್ಟಃ। ತಸ್ಮಾತ್ ಯಥಾ ಆಶ್ರಯಾಣಾಂ ಕರ್ಮಾಙ್ಗಾನಾಂ ಸರ್ವತ್ರಅನುವೃತ್ತಿಃ, ಏವಮ್ ಆಶ್ರಿತಾನಾಮಪಿ ಪ್ರತ್ಯಯಾನಾಮ್ ಇತ್ಯವಿರೋಧಃ ॥

---

1. ಭಾಷ್ಯಾರ್ಥದಲ್ಲಿ ಟಿಪ್ಪಣಿಯನ್ನು ನೋಡಿ.

(ಭಾಷ್ಯಾರ್ಥ)

ಅಥವಾ ಒಂದು ಶಾಖೆಯಲ್ಲಿರುವ ಉದ್ಗೀಥಾದಿಗಳಲ್ಲಿ ಮತ್ತೊಂದು ಶಾಖೆಯಲ್ಲಿ ವಿಹಿತವಾಗಿರುವ ಪ್ರತ್ಯಯಗಳು ಹೇಗೆ .ಆದಾವು? –ಎಂಬೀ ವಿರೋಧವನ್ನು ಶಂಕಿಸಲೇಬಾರದು. ಏಕೆಂದರೆ ಮಂತ್ರಾದಿಗಳಂತೆ ಇಲ್ಲಿಯೂ ಅವಿರೋಧವು ಆಗಬಹುದಾಗಿದೆ. ಹೇಗೆಂದರೆ ಮಂತ್ರಗಳು, ಕರ್ಮಗಳು, ಮತ್ತು ಗುಣಗಳು ಒಂದು ಶಾಖೆಯಲ್ಲಿ ಉತ್ಪನ್ನವಾಗಿದ್ದರೂ ಬೇರೊಂದು ಶಾಖೆಯಲ್ಲಿ ಉಪಸಂಗ್ರಹಮಾಡಿರುವದು ಕಂಡುಬರುತ್ತದೆ (ಹೇಗೆಂದರೆ) ಯಾವ ಶಾಖೆಯವರಲ್ಲಿ 'ಕುಟರುರಸಿ' (?) ಕುಟರುವಾಗಿದ್ದೀಯೆ –ಎಂಬ **ಅಶ್ಮಾದಾನಮಂತ್ರವು**[1] ಪಠಿತವಾಗಿಲ್ಲವೋ ಅವರಿಗೂ "ಕುಕ್ಕುಟೋಽಸೀತ್ಯಶ್ಮಾನಮಾದತ್ತೇ ಕುಟರುರಸೀತಿ ವಾ" (ಕುಕ್ಕುಟವಾಗಿದ್ದೀಯೆ ಎಂದೋ ಕುಟರುವಾಗಿದ್ದೀಯೆ ಎಂದೋ ಅಶ್ಮವನ್ನು ತೆಗೆದುಕೊಳ್ಳಬೇಕು) ಎಂಬ ವಿನಿಯೋಗ (ವಾಕ್ಯವು) ಕಂಡುಬರುತ್ತದೆ. ಯಾರ (ಪಾಠದಲ್ಲಿ)[2] ಸಮಿದಾದಿಪ್ರಯಾಜಗಳು ಪಠಿತವಾಗಿಲ್ಲವೋ ಅವರ (ಶಾಖೆಯಲ್ಲಿಯೂ) ಅವುಗಳಲ್ಲಿ **ಗುಣವಿಧಿಯನ್ನು** "ಋತುಗಳೇ ಪ್ರಯಾಜಗಳು, (ಅವುಗಳನ್ನು) ಒಂದೇ ಕಡೆಯಲ್ಲಿ[3] ಹೋಮಮಾಡಬೇಕು" (?) ಎಂದು ಪಠಿಸಿರುತ್ತದೆ. ಇದರಂತೆ "ಅಜವೇ ಅಗ್ನೀಷೋಮದ ಪಶುವು" (?) ಎಂದು ಯಾವ (ಶಾಖೆಯವರಲ್ಲಿ) ಗೊತ್ತಾದ ಜಾತಿಯ (ಪಶುವನ್ನು) ಹೇಳಿರುವದಿಲ್ಲವೋ ಆ (ಶಾಖೆಯವರಿಗೂ) ಆದರ ವಿಷಯದ **ಮಂತ್ರವರ್ಣವು** "ಮೇಕೆಯ ವಪೆಯ ಮೇದಸ್ಸಿನ (ಹೋಮವನ್ನು ಮಾಡುವ ಅನುವಾಕ್ಯವನ್ನು) ಹೇಳು" (?) ಎಂಬ (ವಾಕ್ಯದಲ್ಲಿ) ಕಂಡು

---

1. ಅಕ್ಕಿಯನ್ನು ಅರೆಯುವದಕ್ಕೆ ಕಲ್ಲನ್ನು ತೆಗೆದುಕೊಳ್ಳುವಾಗ ಹೇಳುವ ಮಂತ್ರವು ಇದು ಮೈತ್ರಾಯಣೀಯಶಾಖೆಯ (೧–೧–೬) ಸಂಹಿತೆಯಲ್ಲಿದೆ. 'ಕುಕ್ಕುಟೋಽಸಿ' ಎಂಬ ಮಂತ್ರವು ಯಾವ ಶಾಖೆಯಲ್ಲಿದೆ ಎಂಬುದು ಗೊತ್ತಿಲ್ಲ. ಜೈ. ಸೂ. ೩–೧–೩೦ರ ಭಾಷ್ಯದಲ್ಲಿ ಇದೇ ಮಂತ್ರವನ್ನು ಉದಾಹರಿಸಿದೆ.

2. ಇದನ್ನು ಶಾ. ಭಾ. ೩–೧–೩೦ರಲ್ಲಿ ಉದಾಹರಿಸಿದೆ; ಅಲ್ಲಿ ಮೈತ್ರಾಯಣೀಯ ಶಾಖೆಯಲ್ಲಿ ಈ ಮಂತ್ರವಿರುವದಾಗಿ ಉದಾಹರಿಸಿದೆ.

3. 'ಸಮಾನೀಯ ಹೋತವ್ಯಾಃ' ಎಂದು ಮುದ್ರಿತಶಾಬರಭಾಷ್ಯದ ಪಾಠ 'ಸಮಾನತ್ರ' ಎಂದಿಲ್ಲ. ಮೈತ್ರಾಯಣೀಯಸಂಹಿತೆಯಲ್ಲಿ "ಋತವೋ ವೈ ಪ್ರಯಾಜಾಃ" (೧–೭–೩) ಎಂಬ ಮಂತ್ರವಿದೆ; ಮುಂದಿನ ಭಾಗವು ಅಲ್ಲಿ ಕಾಣುವದಿಲ್ಲ. ಆನಂದಗಿರಿ ವ್ಯಾಖ್ಯಾನದಲ್ಲಿ 'ಸಮಾನತ್ರ' ಎಂದೇ ಪಾಠವನ್ನು ಹಿಡಿದಿದೆ; ಕಲ್ಪತರುಪರಿಮಳದಲ್ಲಿಯೂ ಇದೇ ಪಾಠವಿದೆ. ಮುದ್ರಿತಭಾಷ್ಯಕ್ಕೂ ವ್ಯಾಖ್ಯಾನಗಳಿಗೂ ಅನುಗುಣವಾಗಿಯೇ ನಾವು ಕನ್ನಡಿಸಿದೇವೆ.

ಬರುತ್ತದೆ.[1] ಇದರಂತೆ ಒಂದು ವೇದದಲ್ಲಿ ಉತ್ಪನ್ನವಾಗಿರುವ "ಅಗ್ನೀರ್ವೇ ಹೋತ್ರಂ ವೇರಧ್ವರಮ್" (ತಾಂ. ಭಾ. ೨೧-೧೦-೧೧) ದೇವಗಣದ ಹೋತ್ರವು ಅಗ್ನಿಯಿಂದಲೇ, ಅವರ ಅಧ್ವರ (ಕರ್ಮವೂ ಅಗ್ನಿಯಿಂದಲೇ)[2] —ಎಂದು ಮುಂತಾಗಿರುವ ಮಂತ್ರಗಳನ್ನು ಕೂಡ ವೇದಾಂತರದಲ್ಲಿ ಪರಿಗ್ರಹಿಸಿರುವದು ಕಂಡುಬರುತ್ತದೆ.[3] ಇದರಂತೆ ಋಗ್ವೇದದಲ್ಲಿ ಪಠಿತವಾಗಿರುವ "ಯೋ ಜಾತ ಏವ ಪ್ರಥಮೋ ಮನಸ್ವಾನ್...... (ಋ. ಸು. ೨-೬-೭) ಯಾವನು ಹುಟ್ಟುತ್ತಲೇ ಶ್ರೇಷ್ಠನಾಗಿರುವನೋ ವಿವೇಕಿಯಾಗಿರುವನೋ (ಅವನೇ ಎಲೈ ಜನರೇ ಇಂದ್ರನು) —ಎಂಬುದನ್ನು "ಅಧ್ವರ್ಯುರ್ವಿಗೋಸ್ಕರ ಸಜನೀಯವನ್ನು[4] ಶಂಸನ ಮಾಡಬೇಕು" (?) ಎಂಬಲ್ಲಿ ಸ್ವೀಕರಿಸಿರುವದು ಕಂಡುಬರುತ್ತದೆ. ಆದ್ದರಿಂದ ಹೇಗೆ ಆಶ್ರಯವಾಗಿರುವ ಕರ್ಮಾಂಗಗಳಿಗೆ ಎಲ್ಲಾ (ಶಾಖೆಗಳಲ್ಲಿಯೂ) ಅನುವೃತ್ತಿಯಾಗುವದೋ ಹಾಗೆ ಆಶ್ರಿತವಾಗಿರುವ ಉಪಾಸನೆಗಳಿಗೂ (ಅನುವೃತ್ತಿಯಾಗುವದು ಯುಕ್ತ)ವಾದ್ದರಿಂದ[5] (ಯಾವ) ವಿರೋಧವೂ ಇಲ್ಲ.

## ೩೨. ಭೂಮಜ್ಯಾಯಸ್ತ್ವಾಧಿಕರಣ

(ಸಮಸ್ತವೈಶ್ವಾನರೋಪಾಸನೆಯೇ ೫-೧೮-೨ ರಲ್ಲಿ ವಿವಕ್ಷಿತ)

**ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಹಿ ದರ್ಶಯತಿ ॥ ೫೭ ॥**

೫೭. ಭೂಮ(ರೂಪವಾದ ಉಪಾಸನೆಗೇ) ಮೇಲ್ಮೆಯು, ಕ್ರತುಗಳಂತೆ. ಹಾಗೆಂದಲ್ಲವೆ (ಶ್ರುತಿ) ತಿಳಿಸುತ್ತದೆ ?

---

1. ಜೈ. ೬-೮-೩೦, ೩೧ ಈ ಸೂತ್ರಗಳಲ್ಲಿ ಇದರ ವಿವರವಿದೆ. "ಅಗ್ನೀಷೋಮೀಯ ಪಶು" ಎಂದಿಷ್ಟೇ ಇರುವ ಶಾಖೆಗಳಲ್ಲಿಯೂ ಮೇಕೆಯನ್ನೇ ಉಪಯೋಗಿಸಬೇಕೆಂದು ಅಲ್ಲಿ ನಿರ್ಣಯಿಸಿದೆ.

2. ಈ ಮಂತ್ರವನ್ನು ಭಾ. ಭಾ. ೩೮೩ ರಲ್ಲಿಯೂ ಉದಾಹರಿಸಿದೆ.

3. ಸಾಮವೇದದಲ್ಲಿರುವದನ್ನು ಯಜುರ್ವೇದದಲ್ಲಿ ಪರಿಗ್ರಹಿಸಿದೆ ಎಂದು ನ್ಯಾ॥ನಿ॥

4. "ಸ ಜನಾಸ ಇನ್ದ್ರಃ" ಎಂದು ಮಂತ್ರದಲ್ಲಿ ಬರುವದರಿಂದ ಈ ಸೂಕ್ತವನ್ನು ಸಜನೀಯವೆಂದಿದೆ.

5. ಕರ್ಮಾಂಗವಾದ ಉಪಾಸನೆಗಳು ಆ ಅಂಗಗಳನ್ನು ಆಶ್ರಯಿಸಿಕೊಂಡಿವೆ; ಅಂಗಗಳು ಎಲ್ಲಾ ಶಾಖೆಗಳಲ್ಲಿಯೂ ಒಂದೇ ಎಂಬುದಕ್ಕೆ ಮೀಮಾಂಸದಲ್ಲಿ ಕಾರಣವನ್ನು ಹೇಳಿದೆ. ಆ ನ್ಯಾಯವನ್ನು ಆಶ್ರಿತವಾದ ಉಪಾಸನೆಗಳಿಗೂ ಉಪಯೋಗಿಸಬಹುದಾಗಿದೆ ಎಂದು ಭಾವ.

## ವೈಶ್ವಾನರವಾಕ್ಯದಲ್ಲಿ ಸಂಶಯಪೂರ್ವಪಕ್ಷಗಳು

(ಭಾಷ್ಯ)

೪೨೩. "ಪ್ರಾಚೀನಶಾಲ ಔಪಮನ್ಯವಃ" (ಛಾಂ. ೫-೧೧-೧) ಇತ್ಯಸ್ಯಾಮ್ ಆಖ್ಯಾಯಿಕಾಯಾಂ ವ್ಯಸ್ತಸ್ಯ ಸಮಸ್ತಸ್ಯ ಚ ವೈಶ್ವಾನರಸ್ಯ ಉಪಾಸನಂ ಶ್ರೂಯತೇ । ವ್ಯಸ್ತೋಪಾಸನಂ ತಾವತ್ "ಔಪಮನ್ಯವ ಕಂ ತ್ವಮಾತ್ಮಾನಮುಪಾಸ್ಸ ಇತಿ ದಿವಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಸುತೇಜಾ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ" (ಛಾಂ. ೫-೧೨-೧) ಇತ್ಯಾದಿ। ತಥಾ ಸಮಸ್ತೋಪಾಸನಮಪಿ "ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದೌ" (ಛಾಂ. ೫-೧೮-೨) ಇತ್ಯಾದಿ। ತತ್ರ ಸಂಶಯಃ। ಕಿಮಿಹ ಉಭಯಥಾಪಿ ಉಪಾಸನಂ ಸ್ಯಾತ್ ವ್ಯಸ್ತಸ್ಯ ಸಮಸ್ತಸ್ಯ ಚ, ಉತ ಸಮಸ್ತಸ್ಯೈವ ಇತಿ । ಕಿಂ ತಾವತ್ ಪ್ರಾಪ್ತಮ್ ? ಪ್ರತ್ಯವಯವಂ ಸುತೇಜಃಪ್ರಭೃತಿಷು ಉಪಾಸ್ಸೇ ಇತಿ ಕ್ರಿಯಾಪದಶ್ರವಣಾತ್, "ತಸ್ಮಾತ್ ತವ ಸುತಂ ಪ್ರಸುತಮಾಸುತಂ ಕುಲೇ ದೃಶ್ಯತೇ" (ಛಾ. ೫-೧೨-೧) ಇತ್ಯಾದಿಫಲಭೇದಶ್ರವಣಾಚ್ಚ ವ್ಯಸ್ತಾನಿ ಉಪಾಸನಾನಿ ಸ್ಯುಃ ಇತಿ ಪ್ರಾಪ್ತಮ್ ॥

(ಭಾಷ್ಯಾರ್ಥ)

"ಪ್ರಾಚೀನಶಾಲ ಔಪಮನ್ಯವನು" (ಛಾಂ. ೫-೧೧-೧) ಎಂಬೀ ಆಖ್ಯಾಯಿಕೆಯಲ್ಲಿ ವ್ಯಸ್ತವಾದ ಮತ್ತು ಸಮಸ್ತವಾದ[1] ವೈಶ್ವಾನರನ ಉಪಾಸನೆಯನ್ನು ಶ್ರುತಿಯಲ್ಲಿ ಹೇಳಿರುತ್ತದೆ. ಮೊದಲನೆಯದಾಗಿ ವ್ಯಸ್ತೋಪಾಸನೆ ಹೇಗೆಂದರೆ: "ಔಪಮನ್ಯವನೆ, ನೀನು ಯಾವನನ್ನು ಆತ್ಮನೆಂದು ಉಪಾಸನೆ ಮಾಡುತ್ತಿದೀಯೆ ? ಎಂದು (ಕೇಳಿದನು). ಪೂಜ್ಯನಾದ ರಾಜನೆ, ದ್ಯುಲೋಕವನ್ನೇ (ಉಪಾಸನೆಮಾಡುತ್ತೇನೆ) ಎಂದು (ಹೇಳಿದನು). ನೀನು ಉಪಾಸನೆ ಮಾಡುತ್ತಿರುವೆಯಲ್ಲ, ಇವನೇ ಸುತೇಜನೆಂಬ ಆತ್ಮನಾದ ವೈಶ್ವಾನರನು" (ಛಾಂ. ೫-೧೨-೧) ಎಂದು ಮುಂತಾಗಿದೆ. ಇದರಂತೆ ಸಮಸ್ತೋಪಾಸನೆಯನ್ನೂ "ಆ ಈ ಆತ್ಮನಾದ ವೈಶ್ವಾನರನಿಗೆ ಸುತೇಜವು ಮೂರ್ಧವೇ, ವಿಶ್ವರೂಪನು ಕಣ್ಣು, ಪೃಥಗ್ವರ್ತ್ಮಾತ್ಮನು ಪ್ರಾಣವು, ಬಹುಲವು ಸಂದೇಹವು,

1. ಬಿಡಿಬಿಡಿಯಾದ ಅವಯವಗಳ ಉಪಾಸನೆಯು ವ್ಯಸ್ತೋಪಾಸನೆ, ಒಟ್ಟುಗೂಡಿದ ಅವಯವಿಯ ಉಪಾಸನೆಯು ಸಮಸ್ತೋಪಾಸನೆ.

ರಯಿಯು ಬಸ್ತಿಯೇ, ಪೃಥಿವಿಯೇ ಪಾದಗಳು"[1] (ಛಾ. ೫-೧೮-೨) ಎಂದು ಮುಂತಾಗಿದೆ

ಇಲ್ಲಿ ಸಂಶಯವೇನೆಂದರೆ, ಇಲ್ಲಿ ಎರಡೂ ರೀತಿಯಿಂದ ಉಪಾಸನೆಯನ್ನು ವ್ಯಸ್ತನ ಮತ್ತು ಸಮಸ್ತನ (ಈ ಎರಡು ಉಪಾಸನೆಗಳನ್ನೂ) -ಹೇಳಿರಬಹುದೆ, ಅಥವಾ ಸಮಸ್ತನ (ಉಪಾಸನೆಯನ್ನು) ಮಾತ್ರ (ಹೇಳಿರಬಹುದೆ) ? ಮೊದಲು ಯಾವ ಪೂರ್ವಪಕ್ಷವು ಬಂದೊದಗುತ್ತದೆ? ಪ್ರತಿಯೊಂದು ಅವಯವದಲ್ಲಿಯೂ ಸುತೇಜನೇ ಮುಂತಾದವುಗಳಲ್ಲಿ "ಉಪಾಸನೆಮಾಡುತ್ತಿರುವೆ" ಎಂಬ ಕ್ರಿಯಾ ಪದವು ಶ್ರುತಿಯಲ್ಲಿರುವದರಿಂದಲೂ[2] "ಆದ್ದರಿಂದ ನಿನ್ನ ಮನೆಯಲ್ಲಿ (ಸೋಮದ) ಸುತ, ಪ್ರಸುತ, ಆಸುತ - (ಇವು) ಕಂಡುಬರುತ್ತಿವೆ"[3] (ಛಾಂ. ೫-೧೨-೨) ಎಂದು ಮುಂತಾಗಿ ಬೇರೆಬೇರೆಯ ಫಲವನ್ನು ಶ್ರುತಿಯಲ್ಲಿ ಹೇಳಿರುವದರಿಂದಲೂ ವ್ಯಸ್ತವಾದ ಉಪಾಸನೆಗಳೂ (ಉಕ್ತ)ವಾಗಿರಬಹುದು ಎಂದು ಬಂದೊದಗುತ್ತದೆ.

## ಸಮಸ್ತವೈಶ್ವಾನರೋಪಾಸನೆಯೇ ಇಲ್ಲಿ ವಿವಕ್ಷಿತ

(ಭಾಷ್ಯ)

೪೨೪. ತತೋಽಭಿಧೀಯತೇ। ಭೂಮ್ನಃ ಪದಾರ್ಥೋಪಚಯಾತ್ಮಕಸ್ಯ ಸಮಸ್ತಸ್ಯ ವೈಶ್ವಾನರೋಪಾಸನಸ್ಯ ಜ್ಯಾಯಸ್ತ್ವಂ ಪ್ರಾಧಾನ್ಯಮ್ ಅಸ್ಮಿನ್ ವಾಕ್ಯೇ ವಿವಕ್ಷಿತಂ ಭವಿತುಮರ್ಹತಿ, ನ ಪ್ರತ್ಯೇಕಮ್ ಅವಯವೋಪಾಸನಾನಾಮಪಿ। ಕ್ರತುವತ್। ಯಥಾ ಕ್ರತುಷು ದರ್ಶಪೂರ್ಣಮಾಸಪ್ರಭೃತಿಷು ಸಾಮಸ್ತ್ಯೇನ ಸಾಙ್ಗಪ್ರಧಾನಪ್ರಯೋಗ ಏವ ಏಕೋ ವಿವಕ್ಷ್ಯತೇ, ನ ವ್ಯಸ್ತಾನಾಮಪಿ ಪ್ರಯೋಗಃ ಪ್ರಯಾಜಾದೀನಾಮ್। ನಾಪಿ ಏಕದೇಶಾಙ್ಗಯುಕ್ತಸ್ಯ, ಪ್ರಧಾನಸ್ಯ ತದ್ವತ್। ಕುತ ಏತತ್ ಭೂಮ್ನೈವ ಜ್ಯಾಯಾನ್ ಇತಿ? ತಥಾ ಹಿ ಶ್ರುತಿರ್ಭೂಮ್ನೋ ಜ್ಯಾಯಸ್ತ್ವಂ ದರ್ಶಯತಿ। ಏಕವಾಕ್ಯತಾವಗಮಾತ್। ಏಕಂ ಹೀದಂ ವಾಕ್ಯಂ ವೈಶ್ವಾನರವಿದ್ಯಾವಿಷಯಂ ಪೌರ್ವಾ

---

1. (೧-೨-೨೪) ಭಾ.ಭಾ. ೨೦೭ರಲ್ಲಿ ಈ ವಾಕ್ಯದ ಅನುವಾದದ ಕೆಳಗೆ ಕೊಟ್ಟಿರುವ ಟಿಪ್ಪಣಿಗಳನ್ನು ನೋಡಿರಿ. ಆ ಅಧಿಕರಣದ ಸಿದ್ಧಾಂತವನ್ನೇ ಇಲ್ಲಿ ಮುಖ್ಯವೆಂದು ನಿರ್ಣಯಿಸಿರುವದು.

2. ಕ್ರಿಯಾಪದವು ವರ್ತಮಾನರೂಪದಲ್ಲಿದ್ದರೂ ಅಪೂರ್ವವಾದ ಅರ್ಥವನ್ನು ಹೇಳುವದರಿಂದ ವಿಧಿಯೆಂದು ಕಲ್ಪಿಸಬಹುದು- ಎಂದು ಪೂರ್ವಪಕ್ಷಿಯ ಭಾವ.

3. ಸೋಮಯಾಗದ ಸಾಧನಸಂಪತ್ತಿಯು ನಿನಗಿದೆ ಎಂದರ್ಥ. ಸುತ, ಪ್ರಸುತ, ಮುತಾ -ಆಸ-ಸೋಮವನ್ನು ಹಿಂಡಿದ ಅವಸ್ಥಾವಿಶೇಷಗಳನ್ನು ತಿಳಿಸುತ್ತವೆ.

ಪರ್ಯಾಲೋಚನಾತ್ ಪ್ರತೀಯತೇ। ತಥಾ ಹಿ। ಪ್ರಾಚೀನಶಾಲ ಪ್ರಭೃತಯಃ ಉದ್ದಾಲಕಾವಸಾನಾಃ ಷಡ್ ಋಷಯೋ ವೈಶ್ವಾನರವಿದ್ಯಾಯಾಂ ಪರಿನಿಷ್ಠಾಮ್ ಅಪ್ರತಿಪದ್ಯಮಾನಾಃ ಅಶ್ವಪತಿಂ ಕೈಕೇಯಂ ರಾಜಾನಮ್ ಅಭ್ಯಾಜಗ್ಮುಃ ಇತ್ಯುಪಕ್ರಮ್ಯ ಏಕೈಕಸ್ಯ ಋಷೇಃ ಉಪಾಸ್ಯಂ ದ್ಯುಪ್ರಭೃತೀನಾಮ್ ಏಕೈಕಂ ಶ್ರಾವಯಿತ್ವಾ "ಮೂರ್ಧಾ ತ್ವೇಷ ಆತ್ಮನ ಇತಿ ಹೋವಾಚ" (ಛಾಂ.೫-೧೨-೨) ಇತ್ಯಾದಿನಾ ಮೂರ್ಧಾದಿಭಾವಂ ತೇಷಾಂ ವಿದಧಾತಿ। "ಮೂರ್ಧಾ ತೇ ವ್ಯಪತಿಷ್ಯದ್ಯನ್ಮಾಂ ನಾಗಮಿಷ್ಯಃ" (ಛಾಂ. ೫-೧೨-೨) ಇತ್ಯಾದಿನಾ ಚ ವ್ಯಸ್ತೋಪಾಸನಮ್ ಅಪವದತಿ। ಪುನಶ್ಚ ವ್ಯಸ್ತೋಪಾಸನಂ ವ್ಯಾವರ್ತ್ಯ ಸಮಸ್ತೋಪಾಸನಮೇವ ಅನುವರ್ತ್ಯ "ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ" (ಛಾಂ. ೫-೧೮-೧) ಇತಿ ಭೂಮಾಶ್ರಯಮೇವ ಫಲಂ ದರ್ಶಯತಿ। ಯತ್ತು ಪ್ರತ್ಯೇಕಂ ಸುತೇಜಃಪ್ರಭೃತಿಷು ಫಲಭೇದಶ್ರವಣಮ್ ತತ್ ಏವಂ ಸತಿ ಅಙ್ಗಫಲಾನಿ ಪ್ರಧಾನ ಏವ ಅಭ್ಯುಪಗತಾನಿ ಇತಿ ದ್ರಷ್ಟವ್ಯಮ್। ತಥಾ ಉಪಾಸ್ಸೇ ಇತ್ಯಪಿ ಪ್ರತ್ಯವಯವಮ್ ಆಖ್ಯಾತಶ್ರವಣಂ ಪರಾಭಿಪ್ರಾಯಾನುವಾದಾರ್ಥಮ್, ನ ವ್ಯಸ್ತೋಪಾಸನ ವಿಧಾನಾರ್ಥಮ್। ತಸ್ಮಾತ್ ಸಮಸ್ತೋಪಾಸನಪಕ್ಷ ಏವ ಶ್ರೇಯಾನಿತಿ ॥

(ಭಾಷ್ಯಾರ್ಥ)

ಈ (ಪೂರ್ವಪಕ್ಷವು ಬಂದೊದಗಲು ಸಿದ್ಧಾಂತವನ್ನು) ಹೇಳಲಾಗುತ್ತದೆ. ಭೂಮಕ್ಕೇ–ಪದಾರ್ಥಗಳ ಹೆಚ್ಚಿಗೆಯ ರೂಪವಾಗಿರುವ ಸಮಸ್ತ ವೈಶ್ವಾನರೋಪಾಸನೆಗೇ– ಮೇಲ್ಮೆಯು ಪ್ರಾಧಾನ್ಯವು ಈ ವಾಕ್ಯದಲ್ಲಿ ವಿವಕ್ಷಿತವಾಗಿರಬೇಕು, ಒಂದೊಂದಾಗಿ ಅವಯವೋಪಾಸನೆಗಳಿಗೂ (ಪ್ರಾಧಾನ್ಯವು ವಿವಕ್ಷಿತವಾಗಿಲ್ಲ), ಕ್ರತುಗಳಂತೆ(ಯೇ ಇದು). ಹೇಗೆ ದರ್ಶಪೂರ್ಣಮಾಸವೇ ಮುಂತಾದ ಕ್ರತುಗಳಲ್ಲಿ ಸಮಸ್ತವಾಗಿ ಅಂಗಗಳಿಂದೊಡಗೂಡಿದ ಪ್ರಧಾನ (ಯಾಗದ) ಪ್ರಯೋಗವೊಂದೇ ವಿವಕ್ಷಿತವಾಗಿರುತ್ತದೆಯೇ ಹೊರತು ವ್ಯಸ್ತವಾಗಿರುವ ಪ್ರಯಾಜಾದಿಗಳಿಗೂ (ಬೇರೆಯ ಪ್ರಯೋಗವು ವಿವಕ್ಷಿತ)ವಾಗಿರುವದಿಲ್ಲವೋ, ಒಂದಂಶದ ಅಂಗವನನ್ನೊಡಗೂಡಿದ ಪ್ರಧಾನದ (ಪ್ರಯೋಗ)ವೂ ವಿವಕ್ಷಿತವಾಗಿರುವದಿಲ್ಲವೋ ಆದರಂತೆ.

ಭೂಮ(ರೂಪವೈಶ್ವಾನರೋಪಾಸನೆಯೇ) ಮೇಲು ಎಂಬಿದು ಯಾವ ಕಾರಣದಿಂದ? ಎಂದರೆ ಹಾಗೆಂದಲ್ಲವೆ, ಭೂಮವೇ ಮೇಲೆಂದು ಶ್ರುತಿಯು ತೋರಿಸಿಕೊಡುತ್ತಿದೆ? ಏಕವಾಕ್ಯತೆಯ ನಿರ್ಧಾರದಿಂದ (ಇದು ಗೊತ್ತಾಗುತ್ತದೆ). ಇದು ವೈಶ್ವಾನರವಿದ್ಯೆಯ ವಿಷಯದಲ್ಲಿರುವ ಒಂದೇ ವಾಕ್ಯವೆಂದಲ್ಲವೆ, ಹಿಂದುಮುಂದಿನ (ಗ್ರಂಥಸಂದರ್ಭವನ್ನು) ಆಲೋಚಿಸುವದರಿಂದ ತೋರುತ್ತದೆ? ಹೇಗೆಂದರೆ **ಪ್ರಾಚೀನಶಾಲನೇ** ಮೊದಲಾಗಿ **ಉದ್ದಾಲಕನವರೆಗಿನ**

ಆರು ಮಂದಿ ಋಷಿಗಳು ವೈಶ್ವಾನರವಿದ್ಯೆಯಲ್ಲಿ ನಿಲುಗಡೆಯನ್ನು ಪಡೆಯದೆ ಇದ್ದದ್ದರಿಂದ **ಅಶ್ವಪತಿಕೈಕೇಯನೆಂಬ** ರಾಜನ ಬಳಿಗೆ (ಶಿಷ್ಯರಾಗಿ) ಬಂದರು –ಎಂದು ಉಪಕ್ರಮಿಸಿ ಒಬ್ಬೊಬ್ಬ ಋಷಿಗೂ ಉಪಾಸ್ಯವಾಗಿದ್ದ ದ್ಯುಲೋಕವೇ ಮುಂತಾದ ಒಂದೊಂದು (ವೈಶ್ವಾನರನನ್ನು) ಹೇಳಿದ ಬಳಿಕ "ಆದರೆ ಇದು ಆತ್ಮನ ತಲೆ ಮಾತ್ರ ಎಂದು ನುಡಿದನು" (ಛಾಂ. ೫–೧೨–೨) ಎಂದು ಮುಂತಾಗಿರುವ (ವಾಕ್ಯದಿಂದ) ಅವು ತಲೆಯೇ ಮುಂತಾದ ರೂಪದವುಗಳೆಂದು ಹೇಳಿರುತ್ತದೆ. "(ನೀನು) ನನ್ನ ಬಳಿಗೆ ಬಾರದೆ ಇದ್ದಿದ್ದರೆ ನಿನ್ನ ತಲೆಯು ಬಿದ್ದುಹೋಗುತ್ತಿತ್ತು" (ಛಾಂ. ೫–೧೨–೨) ಎಂಬಿದೇ ಮುಂತಾದ (ವಾಕ್ಯ) ದಿಂದ ವ್ಯಸ್ತೋಪಾಸನೆಯನ್ನು ನಿಂದಿಸಿರುತ್ತದೆ. ಮತ್ತು ವ್ಯಸ್ತೋಪಾಸನೆ ಯನ್ನು ಬಿಟ್ಟು ಸಮಸ್ತೋಪಾಸನೆಯನ್ನೇ ಮುಂದುವರಿಸಿ "ಅವನು ಸರ್ವಲೋಕಗಳಲ್ಲಿಯೂ ಸರ್ವಭೂತಗಳಲ್ಲಿಯೂ ಸರ್ವಆತ್ಮಗಳಲ್ಲಿಯೂ ಅನ್ನ ವನ್ನು ತಿನ್ನುತ್ತಾನೆ" (ಛಾಂ. ೫–೧೮–೧) ಎಂದು ಭೂಮ(ರೂಪೋಪಾಸನೆ) ಯನ್ನಾಶ್ರಯಿಸಿಯೇ ಫಲವನ್ನು ತಿಳಿಸಿರುತ್ತದೆ. ಇನ್ನು ಒಂದೊಂದಾಗಿ ಸು ತೇಜಸ್ಸೇ ಮುಂತಾದ (ವೈಶ್ವಾನರೋಪಾಸನೆಗಳಲ್ಲಿ) ಬೇರೆಬೇರೆಯ ಫಲವನ್ನು ಶ್ರುತಿಯಲ್ಲಿ ಹೇಳಿದೆ (ಎಂದಿ)ರಲ್ಲ, ಅದನ್ನು ಈ ಪಕ್ಷದಲ್ಲಿ ಅಂಗಫಲಗಳನ್ನು ಪ್ರಧಾನೋ(ಪಾಸನೆಗೇ) ಒಪ್ಪಿ (ಹೇಳಿದ್ದು) ಎಂದು ಇಟ್ಟುಕೊಳ್ಳಬೇಕು. ಹೀಗೆಯೇ 'ಉಪಾಸನೆಮಾಡುತ್ತಿರುವೆ' ಎಂದು ಒಂದೊಂದು ಅವಯವೋ (ಪಾಸನೆಗೂ) ಆಖ್ಯಾತವನ್ನು ಶ್ರುತಿಯಲ್ಲಿ ಹೇಳಿರುವದೂ (ಪ್ರಾಚೀನಶಾಲನೇ ಮೊದಲಾದ) ಇನ್ನೊಬ್ಬನ ಅಭಿಪ್ರಾಯವನ್ನು ಅನುವಾದಮಾಡಿಕೊಳ್ಳುವದ ಕ್ಕಾಗಿ ಹೇಳಿದ್ದೇ ಹೊರತು ವ್ಯಸ್ತೋಪಾಸನೆಯನ್ನು ವಿಧಿಸುವದಕ್ಕಲ್ಲ. ಆದ್ದ ರಿಂದ ಸಮಸ್ತೋಪಾಸನಪಕ್ಷವೇ ಮೇಲು.

## ಏಕದೇಶಿಗಳ ಪಕ್ಷದಲ್ಲಿ ದೋಷ

(ಭಾಷ್ಯ)

೪೨೫. ಕೇಚಿತ್ತು ಅತ್ರ ಸಮಸ್ತೋಪಾಸನಪಕ್ಷಂ ಜ್ಯಾಯಾಂಸಂ ಪ್ರತಿಷ್ಠಾಪ್ಯ ಜ್ಯಾಯಸ್ತ್ವವಚನಾದೇವ ಕಿಲ ವ್ಯಸ್ತೋಪಾಸನಪಕ್ಷಮಪಿ ಸೂತ್ರ ಕಾರೋಽನುಮನ್ಯತೇ ಇತಿ ಕಥಯನ್ತಿ। ತದಯುಕ್ತಮ್। ಏಕವಾಕ್ಯತಾವ ಗತೌ ಸತ್ಯಾಂ ವಾಕ್ಯಭೇದಕಲ್ಪನಸ್ಯ ಅನ್ಯಾಯ್ಯತ್ವಾತ್। "ಮೂರ್ಧಾ ತೇ ವ್ಯಪತಿಷ್ಯತ್" (ಛಾಂ. ೫–೧೨–೨) ಇತಿ ಚೈವಮಾದಿನಿನ್ದಾವಚನವಿರೋ ಧಾತ್। ಸ್ಪಷ್ಟೇ ಚ ಉಪಸಂಹಾರಸ್ಥೇ ಸಮಸ್ತೋಪಾಸನಾವಗಮೇ ತದಭಾವ ಸ್ಯ ಪೂರ್ವಪಕ್ಷೇ ವಕ್ತುಮ್ ಅಶಕ್ಯತ್ವಾತ್। ಸೌತ್ರಸ್ಯ ಚ ಜ್ಯಾಯಸ್ತ್ವ ವಚನಸ್ಯ ಪ್ರಮಾಣವತ್ತ್ವಾಭಿಪ್ರಾಯೇಣಾಪಿ ಉಪಪದ್ಯಮಾನತ್ವಾತ್ ॥

(ಭಾಷ್ಯಾರ್ಥ)

**ಕೆಲವರಾದರೋ** ಇಲ್ಲಿ ಸಮಸ್ತೋಪಾಸನಪಕ್ಷವೇ ಮೇಲೆಂದು ಸ್ಥಾಪಿಸಿದ ಬಳಿಕ 'ಮೇಲು' ಎಂದು ಹೇಳಿರುವದರಿಂದಲೇ ವ್ಯಸ್ತೋಪಾಸನಾ ಪಕ್ಷಕ್ಕೂ ಸೂತ್ರಕಾರರು ಅನುಮತಿಕೊಟ್ಟಿರುತ್ತಾರೆ ಎಂದು ಹೇಳುತ್ತಾರೆ. ಅದು ಸರಿಯಲ್ಲ. ಏಕೆಂದರೆ (ಇದೆಲ್ಲವೂ) ಒಂದು ವಾಕ್ಯವೆಂಬ ನಿಶ್ಚಯವಾಗುತ್ತಿರುವಲ್ಲಿ ಬೇರೆಬೇರೆ ವಾಕ್ಯಗಳೆಂದು ಕಲ್ಪಿಸುವದು ಅನ್ಯಾಯವಾಗಿರುತ್ತದೆ. "ನಿನ್ನ ತಲೆಯು ಬಿದ್ದುಹೋಗುತ್ತಿತ್ತು" (ಛಾಂ. ೫–೧೨–೨) ಎಂದು ಮುಂತಾಗಿರುವ ನಿಂದಾವಚನಕ್ಕೆ (ಈ ಪಕ್ಷವು) ವಿರುದ್ಧವೂ ಆಗಿರುತ್ತದೆ. ಉಪಸಂಹಾರದಲ್ಲಿ ಸಮಸ್ತೋಪಾಸನೆಯು ಸ್ಪಷ್ಟವಾಗಿರುವಲ್ಲಿ ಹಾಗಿಲ್ಲವೆಂದು ಪೂರ್ವಪಕ್ಷದಲ್ಲಿ ಹೇಳುವದೂ ಆಗಲಾರದು.[1] ಸೂತ್ರದಲ್ಲಿರುವ 'ಮೇಲು' ಎಂಬ ಮಾತು ಪ್ರಮಾಣವುಳ್ಳದ್ದು ಎಂಬ ಅಭಿಪ್ರಾಯದಿಂದಲೂ ಇರಬಹುದಾಗಿದೆಯಾದ್ದರಿಂದಲೂ (ಹೀಗೆ).

## ೩೩. ಶಬ್ದಾದಿಭೇದಾಧಿಕರಣ

(ಉಪಾಸನೆಗಳು ಬೇರೆಬೇರೆ ಎಂಬುದಕ್ಕೆ ಶಬ್ದಾದಿಭೇದವೇ ಹೇತು)

**ನಾನಾಶಬ್ದಾದಿಭೇದಾತ್ ॥ ೫೮ ॥**

೫೮. (ವಿದ್ಯೆಗಳು) ಬೇರೆಬೇರೆಯೇ, ಏಕೆಂದರೆ ಶಬ್ದಾದಿಗಳ ಭೇದವಿದೆ.

### ಪೂರ್ವಪಕ್ಷ: ಉಪಾಸನೆಗಳು ಬೇರೆಬೇರೆಯಲ್ಲ

(ಭಾಷ್ಯ)

೪೨೬. ಪೂರ್ವಸ್ಮಿನ್ ಅಧಿಕರಣೇ ಸತ್ಯಾಮಪಿ ಸುತೇಜಃ ಪ್ರಭೃತೀನಾಂ ಫಲಭೇದಶ್ರುತೌ ಸಮಸ್ತೋಪಾಸನಂ ಜ್ಯಾಯಃ ಇತ್ಯುಕ್ತಮ್ । ಅತಃ ಪ್ರಾಪ್ತಾ ಬುದ್ಧಿಃ ಅನ್ಯಾನ್ಯಪಿ ಭಿನ್ನಶ್ರುತೀನಿ ಉಪಾಸನಾನಿ ಸಮಸ್ಯ ಉಪಾಸಿಷ್ಯನ್ತೇ ಇತಿ। ಅಪಿ ಚ ನೈವ ವೇದ್ಯಾಭೇದೇ ವಿದ್ಯಾಭೇದೋ ವಿಜ್ಞಾತುಂ ಶಕ್ಯತೇ । ವೇದ್ಯಂ ಹಿ ರೂಪಂ ವಿದ್ಯಾಯಾಃ, ದ್ರವ್ಯದೈವತಮಿವ ಯಾಗಸ್ಯ । ವೇದ್ಯಶ್ಚ

---

1. ಎರಡು ಬಗೆಯಿಂದಲೂ ಉಪಾಸನೆಮಾಡಬೇಕೆಂಬುದು ಸಿದ್ಧಾಂತವಾದರೆ ವ್ಯಸ್ತೋಪಾಸನೆಯನ್ನೇ ಮಾಡಬೇಕು ಎಂದಲ್ಲವೆ, ಪೂರ್ವಪಕ್ಷವಾಗಬೇಕು; ಆ ಪೂರ್ವಪಕ್ಷವು ಹೊಂದುವದೇ ಇಲ್ಲ, ಏಕೆಂದರೆ ಸಮಸ್ತೋಪಾಸನಾವಿಧಿಯು ಸ್ಪಷ್ಟವಾಗಿ ಕಾಣಬರುತ್ತಿದೆ.

ಏಕ ಏವ ಈಶ್ವರಃ ಶ್ರುತಿನಾನಾತ್ವೇಽಪಿ ಅವಗಮ್ಯತೇ "ಮನೋಮಯಃ ಪ್ರಾಣಶರೀರಃ" (ಛಾಂ. ೩-೧೪-೨), "ಕಂ ಬ್ರಹ್ಮಖಂ ಬ್ರಹ್ಮ" (ಛಾಂ. ೪-೧೦-೫) "ಸತ್ಯಕಾಮಃ ಸತ್ಯಸಂಕಲ್ಪಃ" (ಛಾಂ. ೮-೧-೫) ಇತ್ಯೇವಮಾದಿಷು। ತಥಾ ಏಕ ಏವ ಪ್ರಾಣಃ "ಪ್ರಾಣೋ ವಾವ ಸಂವರ್ಗಃ" (ಛಾಂ. ೪-೩-೩), "ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ" (ಛಾಂ. ೫-೧-೧), "ಪ್ರಾಣೋ ಹ ಪಿತಾ ಪ್ರಾಣೋ ಮಾತಾ" (ಛಾಂ. ೭-೧೫-೧) ಇತ್ಯೇವಮಾದಿಷು । ವೇದ್ಯೈಕತ್ವಾಚ್ಚ ವಿದ್ಯೈಕತ್ವಮ್। ಶ್ರುತಿನಾನಾತ್ವಮಪಿ ಅಸ್ಮಿನ್ ಪಕ್ಷೇ ಗುಣಾನ್ತರಪರತ್ವಾನ್ನಾನರ್ಥಕಮ್। ತಸ್ಮಾತ್ ಸ್ವಪರಶಾಖಾವಿಹಿತಮ್ ಏಕವೇದ್ಯವ್ಯಪಾಶ್ರಯಂ ಗುಣಜಾತಮ್ ಉಪಸಂಹರ್ತವ್ಯಂ ವಿದ್ಯೈಕತ್ವಾದಿತಿ ॥

(ಭಾಷ್ಯಾರ್ಥ)

ಹಿಂದಿನ ಅಧಿಕರಣದಲ್ಲಿ ಸುತೇಜಸ್ಸೇ ಮುಂತಾದ (ಉಪಾಸನೆಗಳಿಗೆ) ಫಲಭೇದವನ್ನು (ಹೇಳುವ) ಶ್ರುತಿಯಿದ್ದರೂ ಸಮಸ್ತೋಪಾಸನವೇ ಮೇಲು ಎಂದು ಹೇಳಿದ್ದಾಗಿವೆ. ಆದ್ದರಿಂದ ಬೇರೆಯ ಶ್ರುತಿಗಳಲ್ಲಿರುವ ಮಿಕ್ಕ ಉಪಾಸನೆಗಳನ್ನೂ ಒಟ್ಟುಗೂಡಿಸಿ ಉಪಾಸನೆಮಾಡಬಹುದು ಎಂಬ ಬುದ್ಧಿಯು ಬಂದೊದಗುತ್ತದೆ. ಇದಲ್ಲದೆ ವೇದ್ಯವು ಅಭಿನ್ನವಾಗಿರುವಲ್ಲಿ ವಿದ್ಯೆಗಳು ಬೇರೆ ಬೇರೆ ಎಂದು ನಿರ್ಣಯಿಸುವದಕ್ಕೆ ಆಗಲೇ ಆರದು. ಏಕೆಂದರೆ ಹೇಗೆ ದ್ರವ್ಯ ದೈವತವು ಯಾಗಕ್ಕೆ (ರೂಪವೋ ಹಾಗೆ) ವೇದ್ಯವೇ ವಿದ್ಯೆಗೆ ರೂಪವು[1]. ಆದರೆ "ಮನೋಮಯನು, ಪ್ರಾಣಶರೀರನು" (ಛಾಂ. ೩-೧೪-೨), "ಸುಖವು ಬ್ರಹ್ಮವು, ಆಕಾಶವು ಬ್ರಹ್ಮವು" (ಛಾಂ. ೪-೧೦-೩), "ಸತ್ಯಕಾಮನು ಸತ್ಯಸಂಕಲ್ಪನು" (ಛಾಂ. ೮-೧-೫) ಇವೇ ಮುಂತಾದವುಗಳಲ್ಲಿ ಶ್ರುತಿಯು ಭಿನ್ನಭಿನ್ನವಾಗಿದ್ದರೂ ವೇದ್ಯನಾಗಿರುವ ಈಶ್ವರನು ಒಬ್ಬನೇ ಎಂದು ನಿಶ್ಚಯವಾಗಿರುತ್ತದೆ. ಇದರಂತೆ "ಪ್ರಾಣವೇ ಸಂವರ್ಗವು" (ಛಾಂ. ೪-೩-೩), "ಪ್ರಾಣವೇ ಶ್ರೇಷ್ಠವೂ ಜ್ಯೇಷ್ಠವೂ" (ಛಾಂ. ೫-೧-೧) "ಪ್ರಾಣವೇ ತಂದೆ, ಪ್ರಾಣವೇ ತಾಯಿ" (ಛಾಂ. ೭-೧೫-೧) ಎಂಬಿವೇ ಮುಂತಾದವುಗಳಲ್ಲಿ ಪ್ರಾಣವು ಒಂದೇ ಆಗಿರುತ್ತದೆ. (ಹೀಗೆ) ವೇದ್ಯವು ಒಂದೇ ಆಗಿರುವದರಿಂದ ವಿದ್ಯೆಯು ಒಂದೇ ಆಗಿರುತ್ತದೆ. ಈ ಪಕ್ಷದಲ್ಲಿ ಶ್ರುತಿಗಳು ಬೇರೆಬೇರೆಯಾಗಿರುವದು ಬೇರೆಬೇರೆ ಗುಣಗಳನ್ನು (ವಿಧಾನಮಾಡುವದಕ್ಕೋಸ್ಕರವಾದ್ದರಿಂದ)

---

1. ದ್ರವ್ಯವೂ ದೇವತೆಯೂ ಬೇರೆಯಿಂದಾದರೆ ಯಾಗವೂ ಬೇರೆಯಿಂಯೆಂಥಾಗುವಂತೆ ವೇದ್ಯವು ಬೇರೆಯೆಂದಾದರೆ ವಿದ್ಯೆಗಳು ಬೇರೆಬೇರೆಯೆಂದಾಗುವದು ಯುಕ್ತ ವಾಗಿ ತಪ್ಪವೆ ದು ಎಂದು ಭಾವ.

ವ್ಯರ್ಥವಾಗಿರುವದಿಲ್ಲ[1] ಆದ್ದರಿಂದ ತಮ್ಮ ಮತ್ತು ಮತ್ತೊಬ್ಬರ ಶಾಖೆಗಳಲ್ಲಿ ಯೂ ವಿಹಿತವಾಗಿರುವ ಒಂದೇ ವೇದ್ಯವನ್ನಾಶ್ರಯಿಸಿಕೊಂಡಿರುವ ಗುಣಜಾತ ವನ್ನು ವಿದ್ಯೆಯ ಸಂಪೂರ್ಣತೆಗಾಗಿ ಉಪಸಂಹಾರಮಾಡಿಕೊಳ್ಳಬೇಕು ಎಂದಾ ಯಿತು.

## ಉಪಾಸನೆಗಳು ಶಬ್ದಾದಿಭೇದವಿರುವದರಿಂದ ಬೇರೆಬೇರೆ

(ಭಾಷ್ಯ)

೪೨೭. ಏವಂ ಪ್ರಾಪ್ತೇ ಪ್ರತಿಪಾದ್ಯತೇ 'ನಾನಾ' ಇತಿ । ವೇದ್ಯಾ ಭೇದೇಽಪಿ ಏವಂಜಾತೀಯಕಾ ವಿದ್ಯಾ ಭಿನ್ನಾ ಭವಿತುಮರ್ಹತಿ । ಕುತಃ ? ಶಬ್ದಾದಿಭೇದಾತ್ । ಭವತಿ ಹಿ ಶಬ್ದಭೇದಃ 'ವೇದ', 'ಉಪಾಸೀತ', 'ಸ ಕ್ರತುಂ ಕುರ್ವೀತ' ಇತ್ಯೇವಮಾದಿಃ । ಶಬ್ದಭೇದಶ್ಚ ಕರ್ಮಭೇದಹೇತುಃ ಸಮಧಿಗತಃ ಪುರಸ್ತಾತ್ "ಶಬ್ದಾನ್ತರೇ ಕರ್ಮಭೇದಃ ಕೃತಾನುಬನ್ಧತ್ವಾತ್" (ಜೈ.ಸೂ. ೨-೨-೧) ಇತಿ । ಆದಿಗ್ರಹಣಾತ್ ಗುಣಾದಯೋಽಪಿ ಯಥಾಸಂಭವಂ ಭೇದ ಹೇತವೋ ಯೋಜಯಿತವ್ಯಾಃ । ನನು "ವೇದ" ಇತ್ಯಾದಿಷು ಶಬ್ದಭೇದ ಏವ ಅವಗಮ್ಯತೇ ನ ಯಜತಿ ಇತ್ಯಾದಿವತ್ ಅರ್ಥಭೇದಃ । ಸರ್ವೇಷಾಮೇವೈಷಾಂ ಮನೋವೃತ್ತ್ಯರ್ಥತ್ವಾಭೇದಾತ್, ಅರ್ಥಾನ್ತರಾಸಂಭವಾಚ್ಚ । ತತ್ ಕಥಂ ಶಬ್ದಭೇದಾತ್ ವಿದ್ಯಾಭೇದಃ ಇತಿ ? ನೈಷ ದೋಷಃ । ಮನೋವೃತ್ತ್ಯರ್ಥತ್ವಾ ಭೇದೇಽಪಿ ಅನುಬನ್ಧಭೇದಾತ್ ವೇದ್ಯಭೇದೇ ಸತಿ ವಿದ್ಯಾಭೇದೋಪಪತ್ತೇಃ । ಏಕಸ್ಯಾಪಿ ಈಶ್ವರಸ್ಯ ಉಪಾಸ್ಯಸ್ಯ ಪ್ರತಿಪ್ರಕರಣಂ ವ್ಯಾವೃತ್ತಾ ಗುಣಾಃ ಶಿಷ್ಯನ್ತೇ । ತಥಾ ಏಕಸ್ಯಾಪಿ ಪ್ರಾಣಸ್ಯ ತತ್ರ ತತ್ರ ಉಪಾಸ್ಯಸ್ಯ ಅಭೇದೇಽಪಿ ಅನ್ಯಾ ದೃಗ್ಗುಣೋಽನ್ಯತ್ರೋಪಾಸಿತವ್ಯಃ, ಅನ್ಯಾದೃಗ್ಗುಣಶ್ಚಾನ್ಯತ್ರ ಇತ್ಯೇವಮ್ ಅನು ಬನ್ಧಭೇದಾತ್ ವೇದ್ಯಭೇದೇ ಸತಿ ವಿದ್ಯಾಭೇದೋ ವಿಜ್ಞಾಯತೇ । ನ ಚಾತ್ರ ಏಕೋ ವಿದ್ಯಾವಿಧಿಃ ಇತರೇ ಗುಣವಿಧಯಃ ಇತಿ ಶಕ್ಯಂ ವಕ್ತುಮ್ । ವಿನಿಗಮನಾಯಾಂ ಹೇತ್ವಭಾವಾತ್ । ಅನೇಕತ್ವಾಚ್ಚ ಪ್ರತಿಪ್ರಕರಣಂ ಗುಣಾನಾಂ ಪ್ರಾಪ್ತವಿದ್ಯಾನುವಾದೇನ ವಿಧಾನಾನುಪಪತ್ತೇಃ । ನ ಚ ಅಸ್ಮಿನ್ ಪಕ್ಷೇ ಸಮಾನಾಃ ಸನ್ತಃ ಸತ್ಯಕಾಮಾದಯೋ ಗುಣಾಃ ಅಸಕೃತ್ ಶ್ರಾವಯಿ ತವ್ಯಾಃ । ಪ್ರತಿಪ್ರಕರಣಂ ಚ ಇದಂಕಾಮೇನ ಇದಮುಪಾಸಿತವ್ಯಮ್,

---

1. ಒಂದೊಂದು ಕಡೆಯಲ್ಲಿಯೂ ಬೇರೆಬೇರೆಯ ಗುಣಗಳನ್ನು ಹೇಳಿರುವದರಿಂದ ಈ ಎಲ್ಲಾ ಗುಣಗಳೂ ಒಬ್ಬ ಪರಮೇಶ್ವರನವು ಎಂದು ಒಟ್ಟುಗೂಡಿಸಿ ಉಪಾಸನೆಮಾಡ ಬೇಕೆಂಬ ತಾತ್ಪರ್ಯವನ್ನು ಕಲ್ಪಿಸಿದಂತೆ ಆಗುವದರಿಂದ ಎಲ್ಲಾ ಶ್ರುತಿಗಳೂ ಸಾರ್ಥಕ ವಾಗುವವು ಎಂದು ಅಭಿಪ್ರಾಯ.

ಇದಂಕಾಮೇನ ಚೇದಮ್ ಇತಿ ನೈರಾಕಾಙ್ಕ್ಷ್ಯಾವಗಮಾತ್ ನೈಕವಾಕ್ಯತಾ ಪತ್ತಿಃ। ನ ಚಾತ್ರ ವೈಶ್ವಾನರವಿದ್ಯಾಯಾಮಿವ ಸಮಸ್ತಚೋದನಾ ಅಪರಾ ಅಸ್ತಿ ಯದ್ಬಲೇನ ಪ್ರತಿಪ್ರಕರಣವರ್ತೀನಿ ಅವಯವೋಪಾಸನಾನಿ ಭೂತ್ವಾ ಏಕವಾಕ್ಯತಾಮ್ ಇಯುಃ। ವೇದ್ಯೈಕತ್ವನಿಮಿತ್ತೇ ಚ ವಿದ್ಯೈಕತ್ವೇ ಸರ್ವತ್ರ ನಿರಙ್ಕುಶೇ ಪ್ರತಿಜ್ಞಾಯಮಾನೇ ಸಮಸ್ತಗುಣೋಪಸಂಹಾರೋಽಶಕ್ಯಃ ಪ್ರತಿ ಜ್ಞಾಯೇತ। ತಸ್ಮಾತ್ ಸುಷ್ಠೂಚ್ಯತೇ "ನಾನಾಶಬ್ದಾದಿಭೇದಾತ್" ಇತಿ। ಸ್ಥಿತೇ ಚ ಏತಸ್ಮಿನ್ನಧಿಕರಣೇ ಸರ್ವವೇದಾನ್ತಪ್ರತ್ಯಯಮ್ ಇತ್ಯಾದಿ ದ್ರಷ್ಟವ್ಯಮ್ ॥

(ಭಾಷ್ಯಾರ್ಥ)

ಹೀಗೆಂಬ ಪೂರ್ವಪಕ್ಷವು ಬಂದೊದಗಲಾಗಿ "ನಾನಾ" (ಬೇರೆಬೇರೆ) ಎಂದು (ಸೂತ್ರಕಾರರು) ಹೇಳಿರುತ್ತಾರೆ. ವೇದ್ಯವು ಅಭಿನ್ನವಾದರೂ ಈ ಜಾತಿಯ ವಿದ್ಯೆಗಳು ಬೇರೆಬೇರೆಯಾಗಿರಬೇಕು ; ಏಕೆ ? ಎಂದರೆ ಶಬ್ದಾದಿಗಳು ಬೇರೆಬೇರೆಯಾಗಿರುವದರಿಂದ. 'ವೇದ' (ತಿಳಿಯಬೇಕು), 'ಉಪಾಸೀತ' (ಉಪಾಸನೆಮಾಡಬೇಕು), 'ಸ ಕ್ರತುಂ ಕುರ್ವೀತ' (ಅವನು ನಿಶ್ಚಯವನ್ನು ಮಾಡಬೇಕು) –ಎಂಬಿವೇ ಮುಂತಾದ ಶಬ್ದಗಳ ಭೇದವು (ಇಲ್ಲಿ) ಇರುತ್ತದೆ ಯಷ್ಟೆ. ಶಬ್ದಭೇದವು ಕರ್ಮಭೇದಕ್ಕೆ ಕಾರಣವೆಂದು ಹಿಂದಿನ (ಕಾಂಡದಲ್ಲಿ) "ಶಬ್ದಾನ್ತರೇ ಕರ್ಮಭೇದಃ ಕೃತಾನುಬನ್ಧತ್ವಾತ್" (ಜೈ. ಸೂ. ೨-೨-೧) ಮತ್ತೊಂದು ಶಬ್ದವಿದ್ದರೆ ಕರ್ಮಭೇದವಾಗುತ್ತದೆ, ಏಕೆಂದರೆ (ಅದಕ್ಕೆ) ಅನು ಬಂಧವನ್ನು ಸೇರಿಸಿಕೊಂಡಿರುತ್ತದೆ[1] –ಎಂಬ (ಸೂತ್ರದಲ್ಲಿ) ನಿಶ್ಚಯವಾಗಿರು ತ್ತದೆ. (ಈ ಪ್ರಕೃತಸೂತ್ರದಲ್ಲಿ) ಆದಿ ಎಂಬ ಮಾತನ್ನು ಇಟ್ಟಿರುವದರಿಂದ **ಗುಣವೇ ಮುಂತಾದ ಭೇದಹೇತುಗಳನ್ನು**[2] ಸಂಭವಿಸಿದಂತೆ ಹೊಂದಿಸಿ ಕೊಳ್ಳಬೇಕು.

(ಆಕ್ಷೇಪ) :– 'ವೇದ' ಮುಂತಾದವುಗಳಲ್ಲಿ ಶಬ್ದಭೇದವು ಮಾತ್ರ ಕಂಡುಬರುತ್ತದೆಯೇ ಹೊರತು 'ಯಜತಿ' ಮುಂತಾದವುಗಳಲ್ಲಿರುವಂತೆ ಅರ್ಥಭೇದವು (ಕಾಣಿಸು)ವದಿಲ್ಲವಲ್ಲ ! ಏಕೆಂದರೆ ಈ (ವೇದ, ಉಪಾಸೀತ) –ಮುಂತಾದವುಗಳಿಗೆಲ್ಲ ಮನೋವೃತ್ತಿ ಎಂಬ ಒಂದೇ ಅರ್ಥವಿರುತ್ತದೆ.

---

1. ಯಜತಿ, ಜುಹೋತಿ, ದದಾತಿ –ಮುಂತಾದ ಶಬ್ದಗಳು ಬೇರೆಬೇರೆಯಾಗಿರು ವವು ; ಏಕೆಂದರೆ ಯಾಗಾದಿಗಳಿಗೆ ಆಯಾ ಕಾರಕಗಳ ಅನುಬಂಧವಿರುತ್ತದೆ ಎಂಬುದು ಸೂತ್ರದ ಅಭಿಪ್ರಾಯ.

2. ಗುಣ, ಸಂಯೋಗ, ರೂಪ, ಸಮಾಖ್ಯೆ –ಮುಂತಾದವು ಕರ್ಮಭೇದಕ್ಕೆ ಹೇತು ಗಳು. ಇದರಂತೆ ಇಲ್ಲಿಯೂ ವಿದ್ಯಾಭೇದಕ್ಕೆ ಅವನ್ನು ಹೇತುವೆನ್ನಬಹುದು.

ಮತ್ತೊಂದು ಅರ್ಥವು ಹೊಂದುವದೂ ಇಲ್ಲ.[1] ಹೀಗಿರುವಲ್ಲಿ ಶಬ್ದಭೇದದಿಂದ ವಿದ್ಯೆಗಳು ಬೇರೆಬೇರೆ ಎಂಬುದು ಹೇಗೆ (ಸರಿ) ?

(ಪರಿಹಾರ) :— ಇದೇನೂ ದೋಷವಲ್ಲ. ಮನೋವೃತ್ತಿ ಎಂಬ ಅರ್ಥವು ಬೇರೆಯಲ್ಲದಿದ್ದರೂ ಅನುಬಂಧವು ಬೇರೆಯಾಗಿರುವದರಿಂದ ವೇದ್ಯವು ಬೇರೆಯಾಗಿರುವದರಿಂದ ವಿದ್ಯಾಭೇದವು ಉಪಪನ್ನವಾಗಿರುತ್ತದೆ. ಉಪಾಸ್ಯನಾದ ಈಶ್ವರನು ಒಬ್ಬನೇ ಆದರೂ ಪ್ರತಿಪ್ರಕರಣದಲ್ಲಿಯೂ ಬೇರೆಬೇರೆಯ ಗುಣಗಳನ್ನು ಉಪದೇಶಿಸಿರುತ್ತದೆ. ಇದರಂತೆ ಅಲ್ಲಲ್ಲಿ ಉಪಾಸ್ಯವಾಗಿರುವ ಪ್ರಾಣವು ಒಂದೇ ಆದರೂ ಒಂದು ಕಡೆಯಲ್ಲಿ ಒಂದು ಬಗೆಯ ಗುಣವುಳ್ಳದ್ದೆಂದು ಉಪಾಸನೆಮಾಡಬೇಕಾಗಿರುತ್ತದೆ, ಮತ್ತೊಂದು ಕಡೆಯಲ್ಲಿ ಮತ್ತೊಂದು ವಿಧವಾದ ಗುಣಗಳುಳ್ಳದ್ದೆಂದು (ಉಪಾಸನೆಮಾಡಬೇಕಾಗಿರುತ್ತದೆ). ಹೀಗೆ ಅನುಬಂಧವು ಬೇರೆಯಾಗಿರುವದರಿಂದ ವೇದ್ಯವು ಬೇರೆಯಾಗಿರುವದರಿಂದ ವಿದ್ಯೆಗಳೂ ಬೇರೆಬೇರೆ ಎಂದು ಗೊತ್ತಾಗುತ್ತದೆ. ಇಲ್ಲಿ ಒಂದು ವಿದ್ಯೆಯ ವಿಧಿಯು ; ಮಿಕ್ಕವು (ಅದರ) ಗುಣಗಳ ವಿಧಿಗಳು ಎಂದು ಹೇಳುವದಕ್ಕೂ ಬರುವದಿಲ್ಲ. ಏಕೆಂದರೆ (ಹಾಗೆಂದು) ನಿರ್ಣಯಿಸುವದಕ್ಕೆ ಹೇತುವೇನೂ ಇರುವದಿಲ್ಲ.[2] ಪ್ರತಿಯೊಂದು ಪ್ರಕರಣದಲ್ಲಿಯೂ ಗುಣಗಳು ಬೇರೆಬೇರೆಯಾಗಿರುವದರಿಂದ ಪ್ರಾಪ್ತವಾಗಿರುವ ವಿದ್ಯೆಯನ್ನು ಅನುವಾದಮಾಡಿಕೊಂಡು ಅವನ್ನು ವಿಧಿಸಿದೆ ಎಂಬುದು ಹೊಂದುವದಿಲ್ಲ.[3] ಇದಲ್ಲದೆ ಈ ಪಕ್ಷದಲ್ಲಿ ಸತ್ಯಕಾಮಾದಿಗುಣಗಳು ಸಮಾನವಾಗಿರುವದರಿಂದ ಅವನ್ನು ಅನೇಕ ವೇಳೆ ಶ್ರುತಿಯಲ್ಲಿ ಹೇಳತಕ್ಕದ್ದೇನೂ ಇಲ್ಲ.[4] ಪ್ರತಿಯೊಂದು ಪ್ರಕರಣದಲ್ಲಿಯೂ ಈ ಕಾಮವುಳ್ಳವನು ಇದನ್ನು ಉಪಾಸನೆಮಾಡಬೇಕು, ಈ ಕಾಮವುಳ್ಳವನು ಇದನ್ನು (ಉಪಾಸನೆಮಾಡಬೇಕು), ಎಂದು ಆಕಾಂಕ್ಷಾರಾಹಿತ್ಯವೇ ಕಂಡುಬರುವದರಿಂದ ಏಕವಾಕ್ಯತೆಯೇ ಆಗುವಂತಿಲ್ಲ[5]. ಇಲ್ಲಿ ವೈಶ್ವಾನರವಿದ್ಯೆಯಲ್ಲಿರು

1. ಒಂದು ಕಡೆ ಜ್ಞಾನವೆಂದೂ ಒಂದು ಕಡೆ ಧ್ಯಾನವೆಂದೂ ಅರ್ಥವನ್ನು ಮಾಡುವದಕ್ಕೆ ಬರುವದಿಲ್ಲ ; ಏಕೆಂದರೆ ಜ್ಞಾನವನ್ನು ವಿಧಿಸುವದಕ್ಕೆ ಬರುವದಿಲ್ಲ.

2. ಎಲ್ಲವೂ ಸ್ವತಂತ್ರವಾಗಿಯೇ ಆಯಾ ಉಪಾಸನೆಯನ್ನು ವಿಧಿಸುವದು ಕಂಡುಬರುತ್ತದೆ.

3. 'ಉಪಾಸನೆಮಾಡಬೇಕು' ಎಂದು ಸಾಮಾನ್ಯವಾಗಿ ಪ್ರಾಪ್ತವಾಗಿರುವಲ್ಲಿ ಆಯಾ ಗುಣಗಳನ್ನು ವಿಧಿಸಿದೆ ಎಂದರೆ ವಾಕ್ಯಭೇದವಾಗುತ್ತದೆ ; ಏಕೆಂದರೆ ಇಂಥ ಗುಣಗಳು ಒಂದೊಂದು ಕಡೆಯಲ್ಲಿಯೂ ಬೇರೆಯಿವೆ.

4. ಅದೇ ವಿದ್ಯೆ ಎಂದು ತಿಳಿಸುವದಕ್ಕೆ ಅವನ್ನು ಹೇಳಿದೆ ಎನ್ನುವದಕ್ಕಿಲ್ಲ ; ಏಕೆಂದರೆ ಪೂರ್ವಪಕ್ಷಿಯ ಪ್ರಕಾರ ವೇದ್ಯವೊಂದಾಗಿರುವದರಿಂದಲೇ ವಿದ್ಯೈಕತ್ವವು ಸಿದ್ಧವಾಗಿದೆ.

5. ಫಲಭೇದವನ್ನು ಹೇಳಿರುವದರಿಂದ ಇವೆಲ್ಲವೂ ಒಂದೇ ವಿದ್ಯೆ ಎನ್ನುವದಕ್ಕೆ ಬರುವದಿಲ್ಲ.

ವಂತೆ ಮತ್ತೊಂದು ಸಮಸ್ತ(ಗುಣಗಳ ಉಪಾಸನೆಯನ್ನು) ವಿಧಿಸಿರುವದೂ ಇಲ್ಲ; ಹಾಗಿದ್ದಿದ್ದರೆ ಅದರ ಬಲದಿಂದ ಪ್ರತಿಯೊಂದು ಪ್ರಕರಣದಲ್ಲಿರುವ (ಉಪಾಸನೆಗಳು) ಅವಯವೋಪಾಸನೆಗಳಾಗಿ ಏಕವಾಕ್ಯತೆಯನ್ನು ಹೊಂದಬಹುದಾಗಿತ್ತು.[1] ಇದಲ್ಲದೆ ವೇದ್ಯವು ಒಂದೇ ಎಂಬ ನಿಮಿತ್ತದಿಂದ ವಿದ್ಯೆಯು ಒಂದೇ ಎಂದು ಎಲ್ಲೆಲ್ಲಿಯೂ ನಿರಂಕುಶವಾಗಿ ಹೇಳುವದಾದರೆ ಎಲ್ಲಾ ಗುಣಗಳನ್ನೂ ಉಪಸಂಹಾರಮಾಡಿಕೊಂಡು (ಉಪಾಸನೆಮಾಡಬೇಕೆಂದು) ಅಶಕ್ಯವಾದದ್ದನ್ನೇ ವಿಧಿಸಿದಂತಾದೀತು.[2] ಆದ್ದರಿಂದ ಶಬ್ದಾದಿಗಳು ಬೇರೆಬೇರೆಯಾಗಿರುವದರಿಂದ (ಉಪಾಸನೆಗಳು) ಬೇರೆಬೇರೆಯೇ ಎಂದು ಹೇಳಿದ್ದೇ ಸರಿ.

ಈ ಅಧಿಕರಣವು ಸ್ಥಾಪಿತವಾಗಿರುವಲ್ಲಿ "ಸರ್ವವೇದಾನ್ತಪ್ರತ್ಯಯಮ್" (೩–೩–೧) ಎಂದುಮುಂತಾಗಿರುವ (ಅಧಿಕರಣವು) ವಿಚಾರಣೀಯವಾಗುವದು.[3]

## ೩೪. ವಿಕಲ್ಪಾಧಿಕರಣ

(ಉಪಾಸನೆಗಳನ್ನು ವಿಕಲ್ಪದಿಂದ ಅನುಷ್ಠಾನಮಾಡಬೇಕು)

**ವಿಕಲ್ಪೋऽವಿಶಿಷ್ಟಫಲತ್ವಾತ್ ॥ ೫೯ ॥**

೫೯. (ಉಪಾಸನೆಗಳಿಗೆ) ವಿಕಲ್ಪ; ಏಕೆಂದರೆ ಫಲದಲ್ಲಿ (ಯಾವ) ವಿಶೇಷವೂ ಇರುವದಿಲ್ಲ.

### ಪೂರ್ವಪಕ್ಷ:

### ಇಷ್ಟೇ ಉಪಾಸನೆಗಳನ್ನು ಮಾಡಬೇಕೆಂಬ ನಿಯಮವಿಲ್ಲ

**(ಭಾಷ್ಯ)**

**೬೨೮. ಸ್ಥಿತೇ ವಿದ್ಯಾಭೇದೇ ವಿಚಾರ್ಯತೇ ಕಿಮ್ ಆಸಾಮ್ ಇಚ್ಛಯಾ ಸಮುಚ್ಚಯಃ ವಿಕಲ್ಪೋ ವಾ ಸ್ಯಾತ್, ಅಥವಾ ವಿಕಲ್ಪ ಏವ**

1. ವೈಶ್ವಾನರವಿದ್ಯೆಯಲ್ಲಿ ಅವಯವೋಪಾಸನೆಗಳನ್ನು ಬೇರೆಬೇರೆ ಹೇಳಿ ಅವುಗಳನ್ನು ನಿಂದಿಸಿ ಒಟ್ಟುಗೂಡಿಸಿ ಸಮಸ್ತೋಪಾಸನೆಯನ್ನು ವಿಧಿಸಿದೆ. ಇಲ್ಲಿ ಹಾಗಿಲ್ಲ.

2. ಎಲ್ಲವನ್ನೂ ಉಪಸಂಹಾರಮಾಡಬಲ್ಲ ಅಧಿಕಾರಿಯೇ ಇಲ್ಲವಾಗಿ ವಿಧಿಯು ವ್ಯರ್ಥವಾಗುವದು.

3. ವಿದ್ಯೆಗಳು ಬೇರೆಬೇರೆ ಎಂದು ನಿಶ್ಚಯವಾಗಿರುವಲ್ಲಿ ಬೇರೆಬೇರೆ ಶಾಖೆಗಳಲ್ಲಿರುವ ಆಯಾ ಶಾಂಡಿಲ್ಯಾದಿವಿದ್ಯೆಗಳು ಒಂದೊ ಬೇರೆಯೊ, ಪ್ರಾಣವಿದ್ಯೆಗಳು ಬೇರೆಬೇರೆಯೊ ಒಂದೊ? –ಎಂಬ ಚರ್ಚೆಯನ್ನು ಮಾಡಬೇಕಾಗಿಬರುತ್ತದೆ. ಆದ್ದರಿಂದ ಈ ಅಧಿಕರಣವು ಪಾದದ ಮೊದಲಲ್ಲಿಯೇ ಬರತಕ್ಕದ್ದಿತ್ತು. ಇಲ್ಲಿ ಪ್ರಸಂಗವಶದಿಂದ ಬಂದಿದೆ ಎಂದು ಭಾವ.

ನಿಯಮೇನ ಇತಿ । ತತ್ರ ಸ್ಥಿತತ್ವಾತ್ ತಾವದ್ ವಿದ್ಯಾಭೇದಸ್ಯ ನ ಸಮುಚ್ಚಯ ನಿಯಮೇ ಕಿಂಚಿತ್ ಕಾರಣಮಸ್ತಿ । ನನು ಭಿನ್ನಾನಾಮಪಿ ಅಗ್ನಿಹೋತ್ರದರ್ಶ ಪೂರ್ಣಮಾಸಾದೀನಾಂ ಸಮುಚ್ಚಯನಿಯಮೋ ದೃಶ್ಯತೇ । ನೈಷ ದೋಷಃ । ನಿತ್ಯತಾಶ್ರುತಿರ್ಹಿ ತತ್ರ ಕಾರಣಮ್, ನೈವಂ ವಿದ್ಯಾನಾಂ ಕಿಂಚಿತ್ ನಿತ್ಯತಾ ಶ್ರುತಿರಸ್ತಿ । ತಸ್ಮಾತ್ ನ ಸಮುಚ್ಚಯನಿಯಮಃ । ನಾಪಿ ವಿಕಲ್ಪನಿಯಮಃ । ವಿದ್ಯಾನ್ತರಾಧಿಕೃತಸ್ಯ ವಿದ್ಯಾನ್ತರಾಪ್ರತಿಷೇಧಾತ್ । ಪಾರಿಶೇಷ್ಯಾತ್ ಯಾಥಾ ಕಾಮ್ಯಮ್ ಆಪದ್ಯತೇ । ನನು ಅವಿಶಿಷ್ಟಫಲತ್ವಾತ್ ಆಸಾಂ ವಿಕಲ್ಪೋ ನ್ಯಾಯ್ಯಃ । ತಥಾ ಹಿ "ಮನೋಮಯಃ ಪ್ರಾಣಶರೀರಃ" (ಛಾಂ. ೩-೧೪-೨), "ಕಂ ಬ್ರಹ್ಮ ಖಂ ಬ್ರಹ್ಮ" (ಛಾಂ. ೪-೧೦-೫) "ಸತ್ಯಕಾಮಃ ಸತ್ಯಸಂಕಲ್ಪಃ" (ಛಾಂ. ೮-೧-೫) ಇತ್ಯೇವಮಾದ್ಯಾಃ ತುಲ್ಯವತ್ ಈಶ್ವರಪ್ರಾಪ್ತಿಫಲಾ ಲಕ್ಷ್ಯನ್ತೇ । ನೈಷ ದೋಷಃ । ಸಮಾನಫಲೇಷ್ವಪಿ ಸ್ವರ್ಗಾದಿಸಾಧನೇಷು ಕರ್ಮಸು ಯಾಥಾಕಾಮ್ಯದರ್ಶನಾತ್ ॥

(ಭಾಷ್ಯಾರ್ಥ)

(ಹೀಗೆ) ಉಪಾಸನೆಗಳು ಬೇರೆಬೇರೆ ಎಂದು ಸಿದ್ಧವಾಗಿರುವಲ್ಲಿ (ಈ) ವಿಚಾರವನ್ನು ಮಾಡಲಾಗುವದು : ಈ (ವಿದ್ಯೆಗಳನ್ನು) ಇಚ್ಛೆಯಂತೆ ಸಮುಚ್ಚಯವನ್ನಾದರೂ ವಿಕಲ್ಪವನ್ನಾದರೂ (ಮಾಡಿ ಉಪಾಸನೆಮಾಡ ಬಹುದೊ) ? ಅಥವಾ ನಿಯಮದಿಂದ ವಿಕಲ್ಪವೇ (ಆಗಬೇಕೊ) ? ಇಲ್ಲಿ ಮೊದಲನೆಯದಾಗಿ ವಿದ್ಯೆಗಳು ಬೇರೆಬೇರೆ ಎಂದು ಸಿದ್ಧವಾಗಿರುವದರಿಂದ (ಇವುಗಳ) ಸಮುಚ್ಚಯವನ್ನು ನಿಯಮದಿಂದ (ಅನುಷ್ಠಾನಮಾಡಬೇಕೆಂಬು ದಕ್ಕೆ) ಕಾರಣವಿರುವದಿಲ್ಲ.

(ಆಕ್ಷೇಪ):- ಬೇರೆಬೇರೆಯಾಗಿರುವ ಅಗ್ನಿಹೋತ್ರ, ದರ್ಶಪೂರ್ಣಮಾಸ ಮುಂತಾದವುಗಳು ಸಮುಚ್ಚಯಮಾಡಿಕೊಂಡು (ಅನುಷ್ಠಾನಮಾಡಬೇಕೆಂಬ) ನಿಯಮವು ಕಂಡುಬರುತ್ತದೆಯಲ್ಲ ![1]

(ಪರಿಹಾರ);- ಇದೇನೂ ದೋಷವಲ್ಲ. ಏಕೆಂದರೆ ಅಲ್ಲಿ (ಆ ಕರ್ಮಗಳು) ನಿತ್ಯವೆಂಬ ಶ್ರುತಿಯೇ (ಸಮುಚ್ಚಯಕ್ಕೆ) ಕಾರಣವು. ಆದರೆ ವಿದ್ಯೆಗಳು ನಿತ್ಯ ವೆಂಬುದಕ್ಕೆ ಯಾವ ಶ್ರುತಿಯೂ ಇರುವದಿಲ್ಲ. ಆದ್ದರಿಂದ (ಇವುಗಳ) ಸಮುಚ್ಚಯವನ್ನು (ಮಾಡಬೇಕೆಂಬ) ನಿಯಮವಿಲ್ಲ.

ಇವುಗಳನ್ನು ವಿಕಲ್ಪದಿಂದ(ಲೇ ಮಾಡಬೇಕೆಂಬ) ನಿಯಮವೂ ಇಲ್ಲ. ಏಕೆಂದರೆ ಒಂದು ವಿದ್ಯೆಯಲ್ಲಿ ಅಧಿಕೃತನಾದವನಿಗೆ ಮತ್ತೊಂದು ವಿದ್ಯೆಯನ್ನು

1. ಕಾಮ್ಯಕರ್ಮಗಳನ್ನೂ ಫಲಾತಿಶಯಕ್ಕಾಗಿ ಸಮುಚ್ಚಯಮಾಡುವದೂ ಕಂಡಿವೆ ಎಂದು ಭಾವ.

ಮಾಡಕೂಡದೆಂದೇನೂ ಹೇಳಿಲ್ಲ. ಪರಿಶೇಷನ್ಯಾಯದಿಂದ ಇಷ್ಟಬಂದಂತೆ (ಮಾಡಬಹುದು) ಎಂದಾಗುತ್ತದೆ.

(ಆಕ್ಷೇಪ) :– (ಎಲ್ಲಕ್ಕೂ) ಸಮಾನಫಲವೇ ಇರುವದರಿಂದ ಇವುಗಳನ್ನು ವಿಕಲ್ಪ(ದಿಂದ ಅನುಷ್ಠಾನಮಾಡತಕ್ಕದ್ದು) ಯುಕ್ತವಲ್ಲವೆ ? "ಮನೋಮಯನು, ಪ್ರಾಣಶರೀರನು" (ಛಾಂ.೩–೧೪–೨), "ಸುಖವು ಬ್ರಹ್ಮವು, ಆಕಾಶವು ಬ್ರಹ್ಮವು" (ಛಾಂ. ೪–೧೦–೫), "ಸತ್ಯಕಾಮನು, ಸತ್ಯಸಂಕಲ್ಪನು" (ಛಾಂ. ೮–೧–೫) ಇವೇ ಮುಂತಾದ (ವಿದ್ಯೆಗಳಿಗೆ) ಸಮವಾಗಿಯೇ ಈಶ್ವರಪ್ರಾಪ್ತಿ ಎಂಬ ಒಂದೇ ಫಲವುಳ್ಳವಾಗಿರುವದು ಕಂಡುಬರುತ್ತದೆಯಲ್ಲ !

(ಪರಿಹಾರ) :– ಇದೇನೂ ದೋಷವಲ್ಲ. ಒಂದೇ ಫಲವುಳ್ಳ ಸ್ವರ್ಗಾದಿಗಳಿಗೆ ಸಾಧನವಾದ ಕರ್ಮಗಳನ್ನು ಇಚ್ಛೆಗನುಸಾರವಾಗಿ (ಸಮುಚ್ಚಯವಾಗುವದು ಅಥವಾ ವಿಕಲ್ಪವಾಗಿ ಅನುಷ್ಠಾನಮಾಡುವದು) ಕಂಡಿರುತ್ತದೆ.

## ಉಪಾಸನೆಗಳನ್ನು ವಿಕಲ್ಪದಿಂದಲೇ ಮಾಡಬೇಕು

(ಭಾಷ್ಯ)

೪೨೯. ತಸ್ಮಾತ್ ಯಾಥಾಕಾಮ್ಯಪ್ರಾಪ್ತೌ ಉಚ್ಯತೇ । ವಿಕಲ್ಪ ಏವಾಸಾಂ ಭವಿತುಮರ್ಹತಿ । ನ ಸಮುಚ್ಚಯಃ । ಕಸ್ಮಾತ್ ? ಅವಿಶಿಷ್ಟಫಲತ್ವಾತ್ । ಅವಿಶಿಷ್ಟಂ ಹಿ ಆಸಾಂ ಫಲಮ್ ಉಪಾಸ್ಯವಿಷಯಸಾಕ್ಷಾತ್ಕರಣಮ್। ಏಕೇನ ಚ ಉಪಾಸನೇನ ಸಾಕ್ಷಾತ್ಕೃತೇ ಉಪಾಸ್ಯೇ ವಿಷಯೇ ಈಶ್ವರಾದೌ ದ್ವಿತೀಯಮ್ ಅನರ್ಥಕಮ್ । ಅಪಿ ಚ ಅಸಂಭವಃ । ಸಾಕ್ಷಾತ್ಕರಣಸ್ಯ ಸಮುಚ್ಚಯಪಕ್ಷೇ ಚಿತ್ತವಿಕ್ಷೇಪಹೇತುತ್ವಾತ್ । ಸಾಕ್ಷಾತ್ಕರಣಸಾಧ್ಯಂ ಚ ವಿದ್ಯಾಫಲಂ ದರ್ಶಯನ್ತಿ ಶ್ರುತಯಃ — "ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಸ್ತಿ" (ಛಾಂ. ೩–೧೪–೪) ಇತಿ, "ದೇವೋ ಭೂತ್ವಾ ದೇವಾನಪ್ಯೇತಿ" (ಬೃ. ೪–೧–೨) ಇತಿ ಚೈವಮಾದ್ಯಾಃ । ಸ್ಮೃತಯಶ್ಚ "ಸದಾ ತದ್ಭಾವಭಾವಿತಃ" (ಗೀ. ೮–೬) ಇತ್ಯೇವಮಾದ್ಯಾಃ । ತಸ್ಮಾತ್ ಅವಿಶಿಷ್ಟಫಲಾನಾಂ ವಿದ್ಯಾನಾಮ್ ಅನ್ಯತಮಾಮ್ ಆದಾಯ ತತ್ಪರಂ ಸ್ಯಾತ್ ಯಾವದುಪಾಸ್ಯವಿಷಯಸಾಕ್ಷಾತ್ಕರಣೇನ ತತ್ಫಲಂ ಪ್ರಾಪ್ತಮ್ ಇತಿ ॥

(ಭಾಷ್ಯಾರ್ಥ)

ಆದ್ದರಿಂದ ಇಚ್ಛೆಯಂತೆ (ಸಮುಚ್ಚಯವಿಕಲ್ಪ)ಗಳಾಗಬಹುದು ಎಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳಲಾಗುತ್ತದೆ. ಈ (ವಿದ್ಯೆಗಳಿಗೆ) ವಿಕಲ್ಪವೇ ಆಗತಕ್ಕದ್ದು ಯುಕ್ತ, (ಇದರ ವಿವರ) : ಸಮುಚ್ಚಯವಲ್ಲ. ಏಕೆ ? ಎಂದರೆ, (ಇವಕ್ಕೆ) ಸಮಾನವಾದ ಫಲವಿರುವದರಿಂದ. ಈ

ವಿದ್ಯೆಗಳಿಗೆ ಉಪಾಸ್ಯವಿಷಯದ ಸಾಕ್ಷಾತ್ಕಾರವೆಂಬುದು ಸಮಾನವಾಗಿರುತ್ತದೆಯಲ್ಲವೆ ? **ಒಂದು ಉಪಾಸನೆಯಿಂದ ಈಶ್ವರಾದಿಗಳನ್ನು ಸಾಕ್ಷಾತ್ಕಾರ ಮಾಡಿಕೊಂಡರೆ ಎರಡನೆಯ (ಉಪಾಸನೆಯು) ವ್ಯರ್ಥ. ಇದಲ್ಲದೆ (ಸಮುಚ್ಚಯವು) ಸಂಭವಿಸುವದೂ ಇಲ್ಲ. ಏಕೆಂದರೆ ಸಮುಚ್ಚಯ ಪಕ್ಷದಲ್ಲಿ ಸಾಕ್ಷಾತ್ಕಾರಕ್ಕೆ (ಮತ್ತೊಂದು ಉಪಾಸನೆಯು) ಚಿತ್ತವಿಕ್ಷೇಪಕ್ಕೂ ಕಾರಣವಾಗುತ್ತದೆ.** "ಯಾವನಿಗೆ ವಿಸ್ಪಷ್ಟವಾಗಿರುವದೋ ಸಂಶಯವಿರುವದಿಲ್ಲವೋ" (ಛಾಂ. ೩-೧೪-೪) ಎಂದೂ "ದೇವನೇ ಆಗಿ ದೇವತೆಗಳಲ್ಲಿ ಲಯವಾಗುತ್ತಾನೆ" (ಬೃ. ೪-೧-೨) ಎಂದು ಮುಂತಾಗಿಯೂ ಇರುವ **ಶ್ರುತಿಗಳು ವಿದ್ಯಾಫಲವು ಸಾಕ್ಷಾತ್ಕಾರದಿಂದಲೇ ಆಗತಕ್ಕದ್ದೆಂದು ತಿಳಿಸುತ್ತವೆ.**[1] "ಯಾವಾಗಲೂ ಆ ಭಾವದಿಂದ ಭಾವಿತನಾಗಿದ್ದು ಅದದನ್ನು ಪಡೆದುಕೊಳ್ಳುತ್ತಾನೆ" (ಗೀ. ೮-೬) ಎಂಬಿವೇ ಮುಂತಾದ ಸ್ಮೃತಿಗಳೂ (ಹಾಗೆಂದು ತಿಳಿಸುತ್ತವೆ). **ಆದ್ದರಿಂದ ಸಮಾನಫಲವುಳ್ಳ ವಿದ್ಯೆಗಳಲ್ಲಿ ಯಾವದಾದರೊಂದನ್ನು ತೆಗೆದುಕೊಂಡು ಉಪಾಸ್ಯವಿಷಯದ ಸಾಕ್ಷಾತ್ಕಾರದಿಂದ ಅದರ ಫಲವು ಆಗುವವರೆಗೂ ಅದರಲ್ಲಿಯೇ ತಾತ್ಪರ್ಯವುಳ್ಳವನಾಗಿರಬೇಕು.**

## ೩೬. ಕಾಮ್ಯಾಧಿಕರಣ

(ಕಾಮ್ಯೋಪಾಸನೆಗಳಲ್ಲಿ ವಿಕಲ್ಪವಿರುವದಿಲ್ಲ)

### ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ನ ವಾ ಪೂರ್ವಹೇತ್ವಭಾವಾತ್ ॥ ೬೦ ॥

೬೦. ಕಾಮ್ಯೋಪಾಸನೆಗಳನ್ನಾದರೋ ಇಚ್ಛೆಯಂತೆ ಸಮುಚ್ಚಯಮಾಡಿಕೊಳ್ಳಬಹುದು, ಅಥವಾ ಮಾಡದಿರಬಹುದು; ಏಕೆಂದರೆ (ಅಲ್ಲಿ) ಹಿಂದೆ ಹೇಳಿದ ಹೇತುವಿರುವದಿಲ್ಲ.

---

1. ಛಾಂ. ೩-೧೪-೪ರಲ್ಲಿ ವಿಸ್ಪಷ್ಟವಾಗಿರುವದು ಎಂದರೆ ಉಪಾಸ್ಯನಾದ ಬ್ರಹ್ಮವು ನನ್ನ ಆತ್ಮನೇ ಎಂದು ಸ್ಪಷ್ಟವಾಗಿ ತಿಳಿದಿರುವದು ; ಬೃ. ೪-೧-೨ರಲ್ಲಿ ದೇವನೇ ಆಗಿ ಎಂದರೆ ಉಪಾಸ್ಯದೇವತೆಯೇ ನಾನೆಂಬ ಮನಸ್ಸುಳ್ಳವನಾಗಿರುವದು. ಭಾವನೆಯು ಗಟ್ಟಿಯಾಗುವದೇ ಉಪಾಸನೆಯಲ್ಲಾಗಬೇಕಾದ ಸಾಕ್ಷಾತ್ಕಾರವು. ಈ ಶರೀರಾಭಿಮಾನಿಯಾದ ಜೀವನೇ ನಾನೆಂದು ಈಗ ದೃಢವಿಶ್ವಾಸವಿರುವಂತೆ ಭಾವನಾತಿಶಯದಿಂದ ಉಪಾಸ್ಯದೇವತೆಯೇ ನಾನೆಂಬ ಅಭಿಮಾನವುಂಟಾಗಬೇಕು.

## ಕಾಮ್ಯೋಪಾಸನೆಗಳು ಒಂದೊಂದೇ ಇರಬೇಕೆಂಬ ನಿಯಮವಿಲ್ಲ

(ಭಾಷ್ಯ)

೪೩೦. ಅವಿಶಿಷ್ಟಫಲತ್ವಾತ್ ಇತ್ಯಸ್ಯ ಪ್ರತ್ಯುದಾಹರಣಮ್ । ಯಾಸು ಪುನಃ ಕಾಮ್ಯಾಸು ವಿದ್ಯಾಸು "ಸ ಯ ಏತಮೇವಂ ವಾಯುಂ ದಿಶಾಂ ವತ್ಸಂ ವೇದ ನ ಪುತ್ರರೋದಂ ರೋದಿತಿ" (ಛಾಂ. ೩–೧೫–೨), "ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ" (ಛಾಂ. ೭–೧–೫) ಇತಿ ಚೈವಮಾದ್ಯಾಸು ಕ್ರಿಯಾವತ್ ಅದೃಷ್ಟೇನಾತ್ಮನಾ ಆತ್ಮೀಯಂ ಫಲಂ ಸಾಧಯನ್ತೀಷು ಸಾಕ್ಷಾತ್ಕರಣಾಪೇಕ್ಷಾ ನಾಸ್ತಿ, ತಾ ಯಥಾಕಾಮಂ ಸಮುಚ್ಚೀಯೇರನ್ ನ ವಾ ಸಮುಚ್ಚೀಯೇರನ್ ಪೂರ್ವಹೇತ್ವಭಾವಾತ್ । ಪೂರ್ವಸ್ಯ ಅವಿಶಿಷ್ಟಫಲತ್ವಾತ್ ಇತ್ಯಸ್ಯ ವಿಕಲ್ಪಹೇತೋಃ ಅಭಾವಾತ್ ॥

(ಭಾಷ್ಯಾರ್ಥ)

'ಸಮಾನಫಲವುಳ್ಳವಾಗಿರುವದರಿಂದ' ಎಂಬುದಕ್ಕೆ ಪ್ರತ್ಯುದಾಹರಣೆಯನ್ನು (ಹೇಳುವ) ಸೂತ್ರವಿದು. "ಯಾವನು ಈ ವಾಯುವನ್ನು ದಿಕ್ಕನ್ನು ಮಗುವನ್ನು ಹೀಗೆಂದು ಉಪಾಸನೆಮಾಡುವನೋ ಅವನಿಗೆ ಪುತ್ರರೋದನದ ಅಳುವು ಬರುವದಿಲ್ಲ." (ಛಾಂ. ೩–೧೫–೫), "ಯಾವನು ನಾಮವನ್ನು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನಿಗೆ ನಾಮದ ವ್ಯಾಪ್ತಿ ಎಲ್ಲಿಯವರೆಗೆ ಇರುವದೋ ಅಲ್ಲೆಲ್ಲ ಕಾಮಚಾರವಿರುವದು" (ಛಾಂ. ೭–೧–೫) ಎಂಬಿವೇ ಮುಂತಾದ ಕಾಮ್ಯವಿದ್ಯೆಗಳಿರುವವಲ್ಲ, ಕರ್ಮದಂತೆ ಅದೃಷ್ಟರೂಪದಿಂದ ತಮ್ಮ ಫಲಗಳನ್ನು ಸಾಧಿಸಿಕೊಡುವವಾದ್ದರಿಂದ ಸಾಕ್ಷಾತ್ಕಾರದ ಅಪೇಕ್ಷೆಯು ಅವುಗಳಲ್ಲಿರುವದಿಲ್ಲವಷ್ಟೆ, ಅವುಗಳನ್ನು ಇಚ್ಛೆಯಿದ್ದಂತೆ (ಬೇಕಾದರೆ) ಸಮುಚ್ಚಯಮಾಡಿಕೊಳ್ಳಬಹುದು, ಅಥವಾ ಸಮುಚ್ಚಯಮಾಡಿಕೊಳ್ಳದೆಯೂ ಇರಬಹುದು; ಏಕೆಂದರೆ ಹಿಂದಿನ ಹೇತುವು ಇರುವದಿಲ್ಲ, ಸಮಾನಫಲವಿರುವದೆಂಬೀ ಹಿಂದೆ (ಹೇಳಿದ) ವಿಕಲ್ಪಹೇತುವು (ಅವುಗಳಲ್ಲಿ)ರುವದಿಲ್ಲ.

## ೩೬. ಯಥಾಶ್ರಯಭಾವಾಧಿಕರಣ (ಸೂ. ೬೧–೬೬)

(ಅಂಗಾಶ್ರಯೋಪಾಸನೆಗಳಿಗೂ ಯಥೇಚ್ಛೆಯಾಗಿ ಸಮುಚ್ಚಯವಿಕಲ್ಪಗಳು)

**ಅಙ್ಗೇಷು ಯಥಾಶ್ರಯಭಾವಃ ॥ ೬೧ ॥**

೬೧. ಅಂಗಗಳಲ್ಲಿ ಆಶ್ರಯಗಳಂತೆ ಇರುವದು.

## ಪೂರ್ವಪಕ್ಷ:
## ಕರ್ಮಾಂಗೋಪಾಸನೆಗಳು ಕರ್ಮಗಳನ್ನನುಸರಿಸಿರುವವು

( ಭಾಷ್ಯ )

೪೩೧. ಕರ್ಮಾಙ್ಗೇಷು ಯ ಉದ್ಗೀಥಾದೀಷು ಆಶ್ರಿತಾಃ ಪ್ರತ್ಯಯಾಃ ವೇದತ್ರಯವಿಹಿತಾಃ, ಕಿಂ ತೇ ಸಮುಚ್ಚೀಯೇರನ್ ಕಿಂ ವಾ ಯಥಾಕಾಮಂ ಸ್ಯುಃ ? ಇತಿ ಸಂಶಯೇ ಯಥಾಶ್ರಯಭಾವ ಇತ್ಯಾಹ। ಯಥೈವ ಏಷಾಮ್ ಆಶ್ರಯಾಃ ಸ್ತೋತ್ರಾದಯಃ ಸಂಭವನ್ತಿ, ಏವಂ ಪ್ರತ್ಯಯಾ ಅಪಿ। ಆಶ್ರಯ ತನ್ತ್ರತ್ವಾತ್ ಪ್ರತ್ಯಯಾನಾಮ್ ॥

(ಭಾಷ್ಯಾರ್ಥ)

ಕರ್ಮಾಂಗವಾದ ಉದ್ಗೀಥಾದಿಗಳಲ್ಲಿ ಆಶ್ರಯಿಸಿಕೊಂಡಿರುವ ಪ್ರತ್ಯಯಗಳು ವೇದತ್ರಯದಲ್ಲಿಯೂ ವಿಹಿತವಾಗಿರುವವಷ್ಟೆ, ಅವನ್ನೇನು ಸಮುಚ್ಚಯ ಮಾಡಿಕೊಳ್ಳಬೇಕೊ, ಅಥವಾ ಯಥೇಚ್ಛೆಯಿಂದ ಅನುಷ್ಠಿಸಬಹುದೊ? ಎಂಬ ಸಂಶಯವುಂಟಾಗಲು ಯಥಾಶ್ರಯಭಾವವೇ ಎಂದು (ಪೂರ್ವಪಕ್ಷಿ) ಹೇಳುತ್ತಾನೆ. (ಇದರ ವಿವರ): ಇವುಗಳಗೆ ಆಶ್ರಯವಾಗಿರುವ ಸ್ತೋತ್ರಾದಿಗಳು ಹೇಗೆ ಒಟ್ಟುಗೂಡಿಯೇ ಇರುತ್ತವೆಯೋ ಹೀಗೆಯೇ ಪ್ರತ್ಯಯಗಳೂ (ಒಟ್ಟುಗೂಡಿಯೇ ಇರಬೇಕು). ಏಕೆಂದರೆ (ಈ) ಪ್ರತ್ಯಯಗಳು ಆಶ್ರಯಗಳಿಗೆ ಅಧೀನವಾಗಿರುತ್ತವೆ.

**ಶಿಷ್ಟೇಶ್ಚ ॥ ೬೨ ॥**

೬೨. ಉಪದೇಶಮಾಡಿರುವದರಿಂದಲೂ (ಹೀಗೆ).

(ಭಾಷ್ಯ)

೪೩೨. ಯಥಾ ವಾ ಆಶ್ರಯಾಃ ಸ್ತೋತ್ರಾದಯಃ ತ್ರಿಷು ಶಿಷ್ಯನ್ತೇ ಏವಮ್ ಆಶ್ರಿತಾಃ ಅಪಿ ಪ್ರತ್ಯಯಾಃ। ನೋಪದೇಶಕೃತೋಽಪಿ ಕಶ್ಚಿತ್ ವಿಶೇಷೋಽಙ್ಗಾನಾಂ ತದಾಶ್ರಯಾಣಾಂ ಚ ಪ್ರತ್ಯಯಾನಾಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹೇಗೆ ಆಶ್ರಯವಾಗಿರುವ ಸ್ತೋತ್ರಾದಿಗಳು ಮೂರು (ವೇದಗಳಲ್ಲಿಯೂ) ಶಿಷ್ಟವಾಗಿರುತ್ತವೆಯೋ ಹಾಗೆಯೇ ಆಶ್ರಿತವಾಗಿರುವ ಪ್ರತ್ಯಯಗಳೂ ಶಿಷ್ಟವಾಗಿರುತ್ತವೆ. ಉಪದೇಶದಿಂದಾಗಿಯೂ ಅಂಗಗಳಿಗೂ ಅವುಗಳನ್ನಾಶ್ರಯಿಸಿರುವ ಪ್ರತ್ಯಯಗಳಿಗೂ ಯಾವ ವಿಶೇಷವೂ ಇರುವದಿಲ್ಲ ಎಂದರ್ಥ.

**ಸಮಾಹಾರಾತ್ ॥ ೬೩ ॥**

೬೩. ಸರಿಪಡಿಸುವಿಕೆಯಿಂದಲೂ (ಹೀಗೆ).

(ಭಾಷ್ಯ)

೪೩೩. "ಹೋತೃಷದನಾದ್ಧ್ಯೇವಾಪಿ ದುರುದ್ಗೀಥಮನುಸಮಾಹರತಿ" (ಛಾಂ. ೧-೫-೫) ಇತಿ ಚ ಪ್ರಣವೋದ್ಗೀಥೈಕತ್ವವಿಜ್ಞಾನಮಾಹಾತ್ಮ್ಯಾತ್ ಉದ್ಗಾತಾ ಸ್ವಕರ್ಮಣಿ ಉತ್ಪನ್ನಂ ಕ್ಷತಂ ಹೌತ್ರಾತ್ ಕರ್ಮಣಃ ಪ್ರತಿಸಮಾದಧಾತಿ ಇತಿ ಬ್ರುವನ್ ವೇದಾನ್ತರೋದಿತಸ್ಯ ಪ್ರತ್ಯಯಸ್ಯ ವೇದಾನ್ತರೋದಿತಪದಾರ್ಥಸಂಬನ್ಧಸಾಮಾನ್ಯಾತ್ ಸರ್ವವೇದೋದಿತಪ್ರತ್ಯಯೋಪಸಂಹಾರಂ ಸೂಚಯತಿ ಇತಿ ಲಿಙ್ಗದರ್ಶನಮ್ ||

(ಭಾಷ್ಯಾರ್ಥ)

"ಹೋತೃಷದನದಿಂದ[1] ತಪ್ಪಾಗಿ (ಗಾನಮಾಡಿದ) ಉದ್ಗೀಥವನ್ನು ಕೂಡ ಅನುಸಮಾಹರಣಮಾಡಿಕೊಳ್ಳುತ್ತಾನೆ" (ಛಾ. ೧-೫-೫) ಎಂದು ಪ್ರಣವ, ಉದ್ಗೀಥ –ಇವೆರಡೂ ಒಂದೇ ಎಂಬ ವಿಜ್ಞಾನದ ಮಹಿಮೆಯಿಂದ ಉದ್ಗಾತೃವು ತನ್ನ ಕರ್ಮದಲ್ಲಿ ಉಂಟಾದ ಕೊರತೆಯನ್ನು ಹೌತ್ರಕರ್ಮದಿಂದ[2] ಸರಿಪಡಿಸಿಕೊಳ್ಳುತ್ತಾನೆ ಎಂದು ಹೇಳಿರುವದರಿಂದ ಒಂದು ವೇದದಲ್ಲಿ ಹೇಳಿರುವ ಪ್ರತ್ಯಯಕ್ಕೆ ಮತ್ತೊಂದು ವೇದದಲ್ಲಿ ಹೇಳಿರುವ ಪದಾರ್ಥಸಂಬಂಧವಿರುವದೆಂಬ ಹೋಲಿಕೆಯಿಂದ[3] ಎಲ್ಲಾ ವೇದಗಳಲ್ಲಿಯೂ ಹೇಳಿರುವ ಪ್ರತ್ಯಯಗಳ ಉಪಸಂಹಾರವನ್ನು ಸೂಚಿಸಿರುತ್ತದೆ –ಎಂದು ಲಿಂಗವನ್ನು ತಿಳಿಸಿದಂತೆ (ಆಯಿತು).

**ಗುಣಸಾಧಾರಣ್ಯಶ್ರುತೇಶ್ಚ || ೬೪ ||**

೬೪. ಗುಣವು ಸಾಧಾರಣವಾಗಿದೆ ಎಂದು ಶ್ರುತಿಯಲ್ಲಿರುವದರಿಂದಲೂ.

(ಭಾಷ್ಯ)

೪೩೪. ವಿದ್ಯಾಗುಣಂ ಚ ವಿದ್ಯಾಶ್ರಯಂ ಸನ್ತಮ್ ಓಂಕಾರಂ ವೇದತ್ರಯಸಾಧಾರಣಂ ಶ್ರಾವಯತಿ "ತೇನೇಯಂ ತ್ರಯೀ ವಿದ್ಯಾ ವರ್ತತ ಓಮಿತ್ಯಾಶ್ರಾವಯತ್ಯೋಮಿತಿ ಶಂಸತ್ಯೋಮಿತ್ಯುದ್ಗಾಯತಿ" (ಛಾಂ.೧-೧-೯) ಇತಿ ಚ । ತತಶ್ಚ ಆಶ್ರಯಸಾಧಾರಣ್ಯಾತ್ ಆಶ್ರಿತಸಾಧಾರಣ್ಯಮ್ ಇತಿ ಲಿಙ್ಗ

1. ಹೋತೃವು ಶಂಸನಮಾಡುವ ಸ್ಥಲದಿಂದ.

2. ಹೋತೃಷದನವೆಂಬ ಮಾತು ಇಲ್ಲಿ ಹೋತೃವಿನ ಶಂಸನವನ್ನೇ ಹೇಳುತ್ತದೆ ಎಂದು ಭಾವ.

3. ಸಾಮವೇದದಲ್ಲಿ ಹೇಳಿರುವ ಉಪಾಸನೆಗಳು ಋಗ್ವೇದದಲ್ಲಿ ಹೇಳಿರುವ ಪ್ರಣವಸಂಬಂಧವಿರುವದೆಂಬುದೇ ಎಲ್ಲಾ ವೇದಗಳ ಎಲ್ಲಾ ಉಪಾಸನೆಗಳ ಸಮುಚ್ಚಯಕ್ಕೆ ಲಿಂಗವು ಎಂದರ್ಥ. ವೇದಾಂತದಲ್ಲಿ ಹೇಳಿರುವದೆಂಬ ಸಾದೃಶ್ಯದಿಂದ ಇದು ಸಿದ್ಧವಾಗುತ್ತದೆ ಎಂದು ಭಾವ.

ದರ್ಶನಮೇವ । ಅಥವಾ 'ಗುಣಸಾಧಾರಣ್ಯಶ್ರುತೇಶ್ಚ' ಇತಿ ಯದೀಮೇ ಕರ್ಮಗುಣಾಃ ಉದ್ಗೀಥಾದಯಃ ಸರ್ವೇ ಸರ್ವಪ್ರಯೋಗಸಾಧಾರಣಾ ನ ಸ್ಯುಃ ನ ಸ್ಯಾತ್ ತತಸ್ತದಾಶ್ರಯಾಣಾಂ ಪ್ರತ್ಯಯಾನಾಂ ಸಹಭಾವಃ । ತೇ ತು ಉದ್ಗೀಥಾದಯಃ ಸರ್ವಾಙ್ಗಗ್ರಾಹಿಣಾ ಪ್ರಯೋಗವಚನೇನ ಸರ್ವೇ ಸರ್ವ ಪ್ರಯೋಗಸಾಧಾರಣಾಃ ಶ್ರಾವ್ಯನ್ತೇ । ತತಶ್ಚ ಆಶ್ರಯಸಹಭಾವಾತ್ ಪ್ರತ್ಯಯ ಸಹಭಾವಃ ಇತಿ ॥

( ಭಾಷ್ಯಾರ್ಥ )

ವಿದ್ಯೆಗೆ ಗುಣವಾದ ವಿದ್ಯಾಶ್ರಯವಾದ ಓಂಕಾರವನ್ನು "ಈ (ಅಕ್ಷರ) ದಿಂದ ಈ ತ್ರಯಿೀವಿದ್ಯೆಯು ನಡೆಯುತ್ತಿದೆ. (ಹೇಗೆಂದರೆ) ಓಮೆಂದು ಆಶ್ರವಣ ಮಾಡಿಸುತ್ತಾನೆ, ಓಮೆಂದು ಶಂಸನಮಾಡುತ್ತಾನೆ, ಓಮೆಂದು ಉದ್ಗಾನ ಮಾಡುತ್ತಾನೆ" (ಛಾಂ. ೧-೧-೯) ಎಂದು ವೇದತ್ರಯಕ್ಕೂ[1] ಸಮಾನವಾಗಿರು ವಂತೆ ಶ್ರುತಿ ಹೇಳುತ್ತಿದೆ. ಆದ್ದರಿಂದ ಆಶ್ರಯವಾದ (ಓಂಕಾರವು) ಸಾಧಾರಣ ವಾಗಿರುವದರಿಂದ ಆಶ್ರಿತವಾದ (ಉಪಾಸನೆಯೂ) ಸಾಧಾರಣವೆಂದು (ತಿಳಿಯ ಬೇಕು) ಎಂಬುದೂ, ಲಿಂಗವನ್ನು ತಿಳಿಸಿದ್ದೇ (ಆಗಿದೆ).

ಅಥವಾ 'ಗುಣಸಾಧಾರಣ್ಯಶ್ರುತೇಶ್ಚ' ಎಂಬ (ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನವಿದು): ಈ ಕರ್ಮಗುಣವಾದ ಉದ್ಗೀಥಾದಿಗಳೆಲ್ಲ ಎಲ್ಲಾ ಪ್ರಯೋಗ ಗಳಿಗೂ ಸಾಧಾರಣವಾಗಿಲ್ಲದೆ ಇದ್ದರೆ ಆಗ ಅವನ್ನು ಆಶ್ರಯಿಸಿಕೊಂಡಿರುವ ಪ್ರತ್ಯಯಗಳಿಗೂ ಸಹಭಾವವಿಲ್ಲವೆನ್ನಬಹುದಾಗಿತ್ತು. ಆದರೆ ಆ ಉದ್ಗೀಥಾದಿ ಗಳು ಸರ್ವಾಂಗಗಳನ್ನೂ ತಿಳಿಸುವ ಪ್ರಯೋಗವಚನದಿಂದ ಎಲ್ಲವೂ ಸರ್ವ ಪ್ರಯೋಗಗಳಿಗೂ ಸಾಧಾರಣವಾಗಿವೆ ಎಂದು ಶ್ರುತಿ ಹೇಳುತ್ತಿದೆ. ಆದ್ದರಿಂದ ಆಶ್ರಯಗಳಿಗೆ ಸಹಭಾವವಿರುವದರಿಂದ (ಆಶ್ರಿತವಾದ) ಪ್ರತ್ಯಯಗಳಿಗೂ ಸಹಭಾವ(ವುಂಟೆಂದು ನಿಶ್ಚಯವಾಗುತ್ತದೆ)[1].

## ನ ವಾ ತತ್ಸಹಭಾವಾಶ್ರುತೇಃ ॥ ೬೫ ॥

೬೫. (ಈ ಉಪಾಸನೆಗಳಿಗೆ ಯಥಾಶ್ರಯಭಾವ)ವಿಲ್ಲ; ಏಕೆಂದರೆ ಅವುಗಳ ಸಹಭಾವಕ್ಕೆ ಶ್ರುತಿಯಿಲ್ಲ.

---

1. ಈ ಸೂತ್ರಕ್ಕೆ ಗುಣವು ವೇದತ್ರಯಸಾಧಾರಣವಾದ್ದರಿಂದ ಉಪಾಸನೆಯೂ ಸಾಧಾರಣ ಎಂದು ಮೊದಲು ಅನ್ವಯಮುಖದಿಂದ ವ್ಯಾಖ್ಯಾನಮಾಡಿತ್ತು; ಈಗ ವ್ಯತಿರೇಕ ಮುಖದಿಂದ ವ್ಯಾಖ್ಯಾನಮಾಡಿದೆ.

# ಸಿದ್ಧಾಂತ: ಇಚ್ಛೆಯಿದ್ದಂತೆ ಅಂಗಾವಬದ್ಧೋಪಾಸನೆಗಳಿಗೆ ವಿಕಲ್ಪಸಮುಚ್ಚಯಗಳು

(ಭಾಷ್ಯ)

೪೩೫. 'ನ ವಾ' ಇತಿ ಪಕ್ಷವ್ಯಾವರ್ತನಮ್ । ನ ಯಥಾಶ್ರಯಭಾವಃ ಆಶ್ರಿತಾನಾಮ್ ಉಪಾಸನಾನಾಂ ಭವಿತುಮರ್ಹತಿ। ಕುತಃ ? ತತ್ಸಹಭಾವಾಶ್ರುತೇಃ । ಯಥಾ ಹಿ ತ್ರಿವೇದೀವಿಹಿತಾನಾಮ್ ಅಙ್ಗಾನಾಂ ಸಹಭಾವಃ ಶ್ರೂಯತೇ "ಗ್ರಹಂ ವಾ ಗೃಹೀತ್ವಾ ಚಮಸಂ ವೋನ್ನೀಯ ಸ್ತೋತ್ರಮನುಶಂಸತಿ ಪ್ರಸ್ತೋತಃ ಸಾಮ ಗಾಯ ಹೋತರೇತದ್ಯಜ" (ತೈ. ಸಂ. ೩-೧-೨ ?)[1] ಇತ್ಯಾದಿನಾ। ನೈವಮುಪಾಸನಾನಾಂ ಸಹಭಾವಶ್ರುತಿರಸ್ತಿ। ನನು ಪ್ರಯೋಗವಚನ ಏಷಾಂ ಸಹಭಾವಂ ಪ್ರಾಪಯೇತ್। ನೇತಿ ಬ್ರೂಮಃ। ಪುರುಷಾರ್ಥತ್ವಾತ್ ಉಪಾಸನಾನಾಮ್। ಪ್ರಯೋಗವಚನೋ ಹಿ ಕ್ರತ್ವರ್ಥಾನಾಮ್ ಉದ್ಗೀಥಾದೀನಾಂ ಸಹಭಾವಂ ಪ್ರಾಪಯೇತ್। ಉದ್ಗೀಥಾದ್ಯುಪಾಸನಾನಿ ಕ್ರತ್ವರ್ಥಾಶ್ರಯಾಣ್ಯಪಿ ಗೋದೋಹನಾದಿವತ್ ಪುರುಷಾರ್ಥಾನಿ ಇತ್ಯವೋಚಾಮ "ಪೃಥಗ್ಘ್ಯಪ್ರತಿಬನ್ಧಃ ಫಲಮ್" (೩-೩-೪೨) ಇತ್ಯತ್ರ । ಅಯಮೇವ ಚ ಉಪದೇಶಾಶ್ರಯೋ ವಿಶೇಷೋಽಙ್ಗಾನಾಂ ತದಾಲಂಬನಾನಾಂ ಚ ಉಪಾಸನಾನಾಂ ಯದೇಕೇಷಾಂ ಕ್ರತ್ವರ್ಥತ್ವಮ್ ಏಕೇಷಾಂ ಪುರುಷಾರ್ಥತ್ವಮ್ ಇತಿ। ಪರಂ ಚ ಲಿಙ್ಗದ್ವಯಮ್ ಅಕಾರಣಮ್ ಉಪಾಸನಸಹಭಾವಸ್ಯ ಶ್ರುತಿನ್ಯಾಯಾಭಾವಾತ್। ನ ಚ ಪ್ರತಿಪ್ರಯೋಗಮ್ ಆಶ್ರಯಕಾತ್ಸ್ನ್ಯೋಪಸಂಹಾರಾತ್ ಆಶ್ರಿತಾನಾಮಪಿ ತಥಾತ್ವಂ ವಿಜ್ಞಾತುಂ ಶಕ್ಯಮ್। ಅತತ್ಪ್ರಯುಕ್ತತ್ವಾತ್ ಉಪಾಸನಾನಾಮ್। ಆಶ್ರಯತನ್ತ್ರಾಣ್ಯಪಿ ಹಿ ಉಪಾಸನಾನಿ ಕಾಮಮ್ ಆಶ್ರಯಭಾವೇ ಮಾಭೂವನ್, ನ ತು ಆಶ್ರಯಸಹಭಾವೇನ ಸಹಭಾವನಿಯಮಮರ್ಹನ್ತಿ। ತತ್ಸಹಭಾವಾಶ್ರುತೇರೇವ। ತಸ್ಮಾತ್ ಯಥಾಕಾಮಮೇವ ಉಪಾಸನಾನಿ ಅನುಷ್ಠೀಯೇರನ್ ॥

(ಭಾಷ್ಯಾರ್ಥ)

(ಸೂತ್ರದಲ್ಲಿರುವ) 'ನ ವಾ' ಎಂಬುದರಿಂದ (ಪೂರ್ವ)ಪಕ್ಷವನ್ನು ತಳ್ಳಿಹಾಕಿರುತ್ತದೆ. ಆಶ್ರಿತವಾದ ಉಪಾಸನೆಗಳಿಗೆ ಆಶ್ರಯಗಳಂತೆಯೇ (ಸಹ) ಭಾವವು ಇರಬಾರದು. ಏಕೆ ? ಎಂದರೆ ಅವುಗಳ ಸಹಭಾವಕ್ಕೆ ಶ್ರುತಿಯಿಲ್ಲದಿರುವದರಿಂದ. (ಇದರ ವಿವರ) : ವೇದತ್ರಯದಲ್ಲಿಯೂ ವಿಹಿತ

---

1. ಈ ವಾಕ್ಯವು ತೈತ್ತಿರೀಯದಲ್ಲಿ ಹೀಗಿದೆ : "ಗ್ರಹಂ ವಾ ಗೃಹೀತ್ವಾ ಚಮಸಂ ವೋನ್ನೀಯ ಸ್ತೋತ್ರಮುಪಾಕುರ್ಯಾತ್ ಪ್ರತ್ಯೇವ ಸೋಮಗ್ಂ ಸ್ಥಾಪಯತಿ..." ಇಲ್ಲಿ[illegible]ದು ಯಾವ ಸಂಹಿತೆಯಲ್ಲಿದೆಯೋ ತಿಳಿಯದು.

ವಾಗಿರುವ ಸ್ತೋತ್ರಾದ್ಯಂಗಗಳಿಗೆ ಸಹಭಾವವನ್ನು "ಗ್ರಹವನ್ನು ತೆಗೆದುಕೊಂಡು ಅಥವಾ ಚಮಸವನ್ನು ಎತ್ತಿಹಿಡಿದುಕೊಂಡು ಸ್ತೋತ್ರವನ್ನು ಪ್ರಾರಂಭಿಸಬೇಕು. ಸ್ತೋತ್ರವಾದ ಬಳಿಕ (ಹೀಗೆ) ಅನುಶಂಸನಮಾಡಬೇಕು : ಪ್ರಸ್ತೋತೃವೆ, ಸಾಮವನ್ನು ಗಾನಮಾಡು. ಹೋತೃವೆ, ಇವರ ಯಾಜ್ಯವನ್ನು ಹೇಳು ....." ಮುಂತಾದ ವಾಕ್ಯದಿಂದ ಶ್ರುತಿಯಲ್ಲಿ ಹೇಗೆ ಹೇಳಿದೆಯೋ ಹೀಗೆ ಉಪಾಸನಗಳಿಗೆ ಸಹಭಾವವನ್ನು ಹೇಳುವ ಶ್ರುತಿಯಿರುವದಿಲ್ಲ.

(ಆಕ್ಷೇಪ) :– ಪ್ರಯೋಗವಿಧಿಯೇ ಇವುಗಳಿಗೆ ಸಹಭಾವವನ್ನು ತಂದು ಕೊಡಬಹುದಲ್ಲ !

(ಪರಿಹಾರ) :– ಹಾಗಲ್ಲ ಎನ್ನುತ್ತೇವೆ. ಏಕೆಂದರೆ ಉಪಾಸನೆಗಳು ಪುರುಷಾರ್ಥವಾಗಿವೆ. (ಇದರ ವಿವರ) : ಪ್ರಯೋಗವನ್ನು ಹೇಳುವ ವಿಧಿಯು ಕ್ರತ್ವರ್ಥವಾಗಿರುವ ಉದ್ಗೀಥಾದಿಗಳಿಗೆ ಸಹಭಾವವನ್ನು ತಂದುಕೊಟ್ಟೀತು.[1] ಉದ್ಗೀಥವೇ ಮುಂತಾದವುಗಳ ಉಪಾಸನೆಗಳು ಕ್ರತ್ವರ್ಥವಾದ (ಅಂಗಗಳನ್ನು) ಆಶ್ರಯಿಸಿಕೊಂಡಿದ್ದರೂ ಗೋದೋಹನಾದಿಗಳಂತೆ ಪುರುಷಾರ್ಥಗಳಾಗಿವೆ ಎಂದು 'ಪೃಥಗ್ಘ್ಯಪ್ರತಿಬನ್ಧಃ ಫಲಮ್' (೩–೩–೪೨) ಎಂಬಲ್ಲಿ ಹೇಳಿರುತ್ತೇವೆ.[2] ಅಂಗಗಳಿಗೂ ಅವುಗಳನ್ನಾಶ್ರಯಿಸಿರುವ ಉಪಾಸನೆಗಳಿಗೂ ಉಪದೇಶವನ್ನಾಶ್ರಯಿಸಿರುವ ವಿಶೇಷವೇನೆಂದರೆ ಅವುಗಳಿಗೆ ಕ್ರತ್ವರ್ಥವಿದೆ, ಇವುಗಳಿಗೆ ಪುರುಷಾರ್ಥತ್ವವಿದೆ ಎಂಬುದೇ (ಆಗಿದೆ).

ಮತ್ತೊಂದೇನೆಂದರೆ, ಉಪಾಸನೆಗಳಿಗೆಲ್ಲ ಸಹಭಾವವೆಂಬುದಕ್ಕೆ (ಪೂರ್ವಪಕ್ಷದಲ್ಲಿ ಹೇಳಿದ) ಎರಡು ಲಿಂಗವೂ ಕಾರಣವಲ್ಲ: ಏಕೆಂದರೆ (ಅದಕ್ಕೆ) ಶ್ರುತಿಯಾಗಲಿ ನ್ಯಾಯವಾಗಲಿ ಇರುವದಿಲ್ಲ. ಒಂದೊಂದು ಪ್ರಯೋಗದಲ್ಲಿ ಆಶ್ರಯವಾಗಿರುವ (ಅಂಗಗಳನ್ನು) ಒಟ್ಟುಗೂಡಿಸಬೇಕಾಗಿರುವದರಿಂದ ಆಶ್ರಿತವಾದ (ಉಪಾಸನೆಗಳಿಗೂ) ಹಾಗೆಯೇ ಎಂದು ನಿಶ್ಚಯಿಸುವದು ಆಗಲಾರದು. ಏಕೆಂದರೆ ಉಪಾಸನೆಗಳು ಆ (ಅಂಗ)ಪ್ರಯುಕ್ತವಾಗಿ (ವಿಹಿತ)ವಾಗಿಲ್ಲ. ಉಪಾಸನೆಗಳು ಆಶ್ರಯತಂತ್ರವಾಗಿದ್ದರೂ ಆಶ್ರಯ(ವಾದ ಅಂಗಗಳು) ಇಲ್ಲದಿದ್ದರೆ (ತಾವೂ) ಇರುವದಿಲ್ಲವೆಂದು ಬೇಕಾದರೆ ಆಗಬಹುದು ; ಆದರೆ ಆಶ್ರಯಗಳ ಸಹಭಾವದಿಂದ (ತಾವೂ) ಸಹಭಾವನಿಯಮಕ್ಕೆ (ಒಳಪಡ)ಬೇಕೆಂಬುದು ಸರಿಯಲ್ಲ, ಏಕೆಂದರೆ ಅವುಗಳ ಸಹಭಾವಶ್ರುತಿಯಿಲ್ಲವೆಂಬುದೇ (ಇದಕ್ಕೊ

1. ಏಕೆಂದರೆ ಅವುಗಳಿಲ್ಲದೆ ಕರ್ಮವು ಪೂರ್ತಿಯಾಗುವದಿಲ್ಲ.

2. ಆದ್ದರಿಂದ ಪುರುಷಾರ್ಥಗಳಿರುವ ಉಪಾಸನೆಗಳು ಕರ್ಮದ ಜೊತೆಯಲ್ಲಿಯೇ ಇರಬೇಕೆಂಬ ನಿಯಮವೇನೂ ಇಲ್ಲ.

ಕಾರಣವಾಗಿದೆ). ಆದ್ದರಿಂದ (ಈ) ಉಪಾಸನೆಗಳನ್ನು (ಅವರವರ) ಇಚ್ಛೆಯಂತೆಯೇ ಅನುಷ್ಠಾನಮಾಡಬಹುದಾಗಿದೆ.

**ದರ್ಶನಾಚ್ಚ ॥ ೬೬ ॥**

೬೬. (ಶ್ರುತಿಯಲ್ಲಿ) ತಿಳಿಸಿರುವದರಿಂದಲೂ ಹೀಗೆ.

(ಭಾಷ್ಯ)

೪೩೬. ದರ್ಶಯತಿ ಚ ಶ್ರುತಿಃ ಅಸಹಭಾವಂ ಪ್ರತ್ಯಯಾನಾಮ್ "ಏವಂವಿದ್ಧ ವೈ ಬ್ರಹ್ಮಾ ಯಜ್ಞಂ ಯಜಮಾನಂ ಸರ್ವಾಂಶ್ಚರ್ತ್ವಿಜೋಽಭಿರಕ್ಷತಿ" (ಛಾಂ. ೪–೧೭–೧೦) ಇತಿ । ಸರ್ವಪ್ರತ್ಯಯೋಪಸಂಹಾರೇ ಹಿ ಸರ್ವೇ ಸರ್ವವಿದಃ ಇತಿ ನ ವಿಜ್ಞಾನವತಾ ಬ್ರಹ್ಮಣಾ ಪರಿಪಾಲ್ಯತ್ವಮ್ ಇತರೇಷಾಂ ಸಂಕೀರ್ತ್ಯೇತ । ತಸ್ಮಾತ್ ಯಥಾಕಾಮಮ್ ಉಪಾಸನಾನಾಂ ಸಮುಚ್ಚಯೋ ವಿಕಲ್ಪೋ ವಾ ಇತಿ ॥

(ಭಾಷ್ಯಾರ್ಥ)

"ಹೀಗೆಂದು ಅರಿತಿರುವ ಬ್ರಹ್ಮನೇ ಯಜ್ಞವನ್ನೂ ಯಜಮಾನನನ್ನೂ ಸರ್ವಋತ್ವಿಜರನ್ನೂ ಕಾಪಾಡುತ್ತಾನೆ" (ಛಾಂ. ೪–೧೭–೧೦) ಎಂದು (ಈ) ಪ್ರತ್ಯಯಗಳಿಗೆ ಸಹಭಾವವಿಲ್ಲವೆಂದು ತಿಳಿಸಿಯೂ ಇದೆ. ಎಲ್ಲಾ ಪ್ರತ್ಯಯಗಳನ್ನೂ ಉಪಸಂಹಾರಮಾಡಬಹುದು ಎಂಬ (ಪಕ್ಷ)ದಲ್ಲಿ (ಋತ್ವಿಜರೂ) ಎಲ್ಲವನ್ನೂ ತಿಳಿದವರಾಗುವರಾದ್ದರಿಂದ ವಿಜ್ಞಾನವುಳ್ಳ ಬ್ರಹ್ಮನಿಂದ ಇತರ (ಋತ್ವಿಜರು) ಪರಿಪಾಲಿತರಾಗುವರೆಂದು ಹೇಳುತ್ತಿರಲಿಲ್ಲ. ಆದ್ದರಿಂದ (ಅವರವರ) ಇಚ್ಛೆಯಂತೆ ಉಪಾಸನೆಗಳನ್ನು ಸಮುಚ್ಚಯಮಾಡಿಕೊಳಬಹುದು; ಅಥವಾ ವಿಕಲ್ಪ(ದಿಂದಲೂ ಅನುಷ್ಠಾನಮಾಡಬಹುದು).

---

# ಅಧಿಕರಣಗಳ ಸಾರ

ಈ ಪಾದದಲ್ಲಿ ಮುಖ್ಯವಾಗಿ ಸಗುಣಬ್ರಹ್ಮವಿಷಯವಾದ ಮತ್ತು ಪ್ರಾಣಾದಿವಿಷಯವಾದ ವಿದ್ಯೆಗಳ ಭೇದಾಭೇದದ ವಿಚಾರವನ್ನು ಮಾಡ ಲಾಗಿದೆ.

## ೧. ಸರ್ವವೇದಾಂತಪ್ರತ್ಯಯಾಧಿಕರಣ

**ಸಂಶಯ:** ಬೇರೆಬೇರೆಯ ವೇದಾಂತಾದಿಗಳಲ್ಲಿ ಹೇಳಿರುವ ಪಂಚಾಗ್ನಿವಿದ್ಯೆ, ವೈಶ್ವಾನರ ವಿದ್ಯೆ, ಶಾಂಡಿಲ್ಯವಿದ್ಯೆ- ಮುಂತಾದ ಉಪಾಸನೆಗಳು ಬೇರೆಬೇರೆಯೊ, ಅಥವಾ ಅದೇ ಒಂದೇ ವಿದ್ಯೆಯೊ ?

**ಪೂರ್ವಪಕ್ಷ:** ನಾಮರೂಪಾದಿಗಳು ಬೇರೆಬೇರೆಯಾಗಿರುವದರಿಂದ ಈ ವಿದ್ಯೆಗಳು ಬೇರೆಬೇರೆಯೇ. ಒಂದೊಂದು ಉಪನಿಷತ್ತಿನಲ್ಲಿ ಹೇಳಿರುವ ಗುಣಗಳು ಬೇರೆಬೇರೆಯಾಗಿರು ವದರಿಂದಲೂ ಶಿರೋವ್ರತವೇ ಮುಂತಾದ ಧರ್ಮಗಳು ಬೇರೆಬೇರೆಯಿರುವದರಿಂದಲೂ ಈ ವಿದ್ಯೆಗಳು ಬೇರೆಬೇರೆಯೇ.

**ಸಿದ್ಧಾಂತ:** ನಾಮರೂಪಾದಿಗಳು ಭೇದಕ್ಕೆ ಹೇತುಗಳಲ್ಲವೆಂಬುದನ್ನು ಕರ್ಮ ಕಾಂಡದಲ್ಲಿಯೇ ತೋರಿಸಿಕೊಟ್ಟಿದೆ. ಚೋದನೆಯು ಒಂದೇ ರೂಪವಾಗಿರುವದರಿಂದಲೂ ಉಪಾಸನೆಯ ರೂಪವಾದ ಉಪಾಸ್ಯತತ್ತ್ವವು ಒಂದೇ ಆಗಿರುವದರಿಂದಲೂ ಪ್ರಾಣವಿದ್ಯೆ, ಶಾಂಡಿಲ್ಯವಿದ್ಯೆ– ಮುಂತಾದ ಸಮಾಖ್ಯೆಯು ಒಂದೇ ಆಗಿರುವದರಿಂದಲೂ ಈ ಉಪಾಸನೆ ಗಳು ಬೇರೆಬೇರೆಯಲ್ಲ. ಪಂಚಾಗ್ನಿವಿದ್ಯೆಯಲ್ಲಿರುವ ಸಂಖ್ಯಾದಿಗಳನ್ನು ಅವಿರೋಧವಾಗಿ ಹೊಂದಿಸಿಕೊಳ್ಳಬಹುದು. ಉಪಾಸನೆಗಾಗಿ ಹೇಳಿರುವವೆಂದಿಟ್ಟುಕೊಂಡರೆ ಗುಣೋಪ ಸಂಹಾರವನ್ನು ಮಾಡಿಕೊಂಡು ಉಪಾಸನೆಮಾಡಬಹುದಾಗಿರುವದರಿಂದ ವಿದ್ಯೈಕ್ಯಕ್ಕೆ ಯಾವ ವಿರೋಧವೂ ಇಲ್ಲ. ವೇದ್ಯಧರ್ಮಗಳು ಒಂದಿಷ್ಟು ಹೆಚ್ಚುಕಡಿಮೆಯಿದ್ದರೂ ಬಹುಮಟ್ಟಿನ ವೇದ್ಯರಾಶಿಯು ಅಭಿನ್ನವಾಗಿರುವದರಿಂದ ವಿದ್ಯೈಕ್ಯವೇ. ಶಿರೋವ್ರತವೇ ಮುಂತಾದವು ಅಧ್ಯಯನಧರ್ಮವೇ ಹೊರತು ವಿದ್ಯೆಯ ಧರ್ಮವಲ್ಲ. ವೇದ್ಯವು ಏಕವೆಂದು ಉಪದೇಶಮಾಡುವದರ ಮೂಲಕ ವಿದ್ಯೈಕತ್ವವನ್ನು ಶ್ರುತಿಯಲ್ಲಿಯೂ ತಿಳಿಸಿರುತ್ತದೆ. ಆದ್ದರಿಂದ ಇಂಥ ವಿದ್ಯೆಗಳು ಭಿನ್ನಭಿನ್ನವಲ್ಲ.

## ೨. ಉಪಸಂಹಾರಾಧಿಕರಣ

ಈ ಸರ್ವೋಪಾಸನೆಗಳೂ ಹೀಗೆ ಒಂದೇ ವಿದ್ಯೆಯನ್ನು ಹೇಳುತ್ತಿರುವದರಿಂದ ಸಮಾನವಿದ್ಯೆಯಲ್ಲಿ ಹೇಳಿರುವ ಉಪಾಸನಾಗುಣಗಳನ್ನು ಉಪಸಂಹಾರಮಾಡಿಕೊಂಡು ಉಪಾಸನೆಮಾಡಬೇಕು. ಅಗ್ನಿಹೋತ್ರಾದಿಧರ್ಮಗಳನ್ನೆಲ್ಲ ಉಪಸಂಹಾರಮಾಡಿಕೊಂಡ ಅನುಷ್ಠಾನಮಾಡುವಂತೆಯೇ ಈ ಉಪಾಸನೆಗಳ ವಿಷಯವನ್ನು ಅರಿಯಬೇಕು.

# ೩. ಅನ್ಯಥಾತ್ವಾಧಿಕರಣ

**ಸಂಶಯ :** ಬೃಹದಾರಣ್ಯಕದಲ್ಲಿ ( ೧-೩-೧ ) ಯೂ ಛಾಂದೋಗ್ಯದಲ್ಲಿಯೂ (೧-೨-೧) ಹೇಳಿರುವ ಪ್ರಾಣವಿದ್ಯೆಯು ಒಂದೊ, ಬೇರೆಬೇರೆಯೊ ?

**ಪೂರ್ವಪಕ್ಷ :** ಹಿಂದಿನ ಅಧಿಕರಣದ ನ್ಯಾಯದಿಂದ ಇವೆರಡೂ ಒಂದೇ ಎನ್ನುವದು ಯುಕ್ತ. ಇವೆರಡು ಕಡೆಗಳಲ್ಲಿಯೂ ದೇವಾಸುರಸಂಗ್ರಾಮ, ಅಸುರರನ್ನು ಮೀರಬೇಕೆಂದು ಉದ್ಗೀಥವನ್ನು ಪ್ರಾರಂಭಿಸಿರುವದು, ವಾಗಾದಿಗಳನ್ನು ನಿಂದಿಸಿ ಮುಖ್ಯಪ್ರಾಣವನ್ನು ಆಶ್ರಯಿಸಿರುವದು- ಮುಂತಾದ ಅನೇಕ ಸಮಾನಾಂಶಗಳಿವೆ. ಉದ್ಗೀಥವಿದ್ಯೆಯೆಂಬ ಹೆಸರೂ ಇವೆರಡಕ್ಕೂ ಸಮಾನವಾಗಿದೆ.

**ಸಿದ್ಧಾಂತ :** ಇವೆರಡಕ್ಕೂ ಪ್ರಕ್ರಮಭೇದವಿರುವದರಿಂದ ಇವು ಬೇರೆಬೇರೆ ವಿದ್ಯೆಗಳೇ. ಛಾಂದೋಗ್ಯದಲ್ಲಿ ಉದ್ಗೀಥಾವಯವವಾದ ಓಂಕಾರದ ಉಪಾಸನೆಯನ್ನು ಉಪಕ್ರಮಿಸಿ ಮುಂದೆಯೂ ಅದನ್ನೇ ಅನುವರ್ತಿಸಿಕೊಂಡಿರುವದರಿಂದ ಉದ್ಗೀಥಾವಯವವಾದ ಓಂಕಾರದಲ್ಲಿ ಪ್ರಾಣದೃಷ್ಟಿಯನ್ನು ಉಪದೇಶಿಸಿದೆ ಎನ್ನಬೇಕು. ಬೃಹದಾರಣ್ಯಕದಲ್ಲಾದರೆ ಉದ್ಗೀಥವೆಂದು ಪೂರ್ಣಭಕ್ತಿಯನ್ನೇ ಹೇಳಿದೆ ; ಆ ಉದ್ಗೀಥದ ಕರ್ತೃವಾದ ಋತ್ವಿಜನನ್ನು ಪ್ರಾಣನೆಂದು ಹೇಳಿದೆ. ಹೇಗೆ ಛಾಂದೋಗ್ಯದಲ್ಲಿಯೇ ಪರೋವರೀಯಸ್ತ್ವಾದಿಗುಣವಿಶಿಷ್ಟವಾದ ಉದ್ಗೀಥೋಪಾಸನೆಯು ಅಕ್ಷ್ಯಾದಿತ್ಯಗತಹಿರಣ್ಯಶ್ಮಶ್ರುತ್ವಾದಿಗುಣವಿಶಿಷ್ಟವಾದ ಉದ್ಗೀಥೋಪಾಸನೆಗಿಂತ ಭಿನ್ನವೋ ಹಾಗೆಯೇ ಇಲ್ಲಿಯೂ ಉಪಕ್ರಮಭೇದದಿಂದ ಉಪಾಸನಾಭೇದವೆಂದೇ ತಿಳಿಯಬೇಕು. ಉದ್ಗೀಥವಿದ್ಯೆ ಎಂಬ ಹೆಸರು ಒಂದೇ ಆಗಿದ್ದರೂ ಶ್ರುತ್ಯಕ್ಷರಕ್ಕೆ ಹೊಂದದಿರುವದರಿಂದ ಈ ಲೌಕಿಕಸಂಜ್ಞೆಯಿಂದ ವಿದ್ಯೈಕತ್ವವಾಗುವದಿಲ್ಲ.

# ೪. ವ್ಯಾಪ್ತ್ಯಧಿಕರಣ

**ವಿಷಯವೂ ಸಂಶಯವೂ :** "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" (ಛಾಂ. ೧-೧-೧) ಎಂಬಲ್ಲಿ ಅಕ್ಷರೋದ್ಗೀಥಗಳಿಗೆ ಅಧ್ಯಾಸ, ಅಪವಾದ, ಏಕತ್ವ, ವಿಶೇಷಣ- ಈ ನಾಲ್ಕರಲ್ಲಿ ಯಾವ ಪಕ್ಷವು ಹೊಂದುತ್ತದೆ ?

**ಪೂರ್ವಪಕ್ಷ :** ಈ ನಾಲ್ಕರಲ್ಲಿ ಇಂಥದ್ದೊಂದನ್ನು ಸ್ವೀಕರಿಸಬೇಕೆಂಬುದಕ್ಕೆ ಕಾರಣವಿಲ್ಲ. ಯಾವದಾದರೂ ಆಗಬಹುದು.

**ಸಿದ್ಧಾಂತ :** ಇಲ್ಲಿ ಅಧ್ಯಾಸವೆಂದರೆ ಓಂಕಾರದಲ್ಲಿ ಉದ್ಗೀಥಬುದ್ಧಿಯನ್ನು ಆಧ್ಯಾಸ ಮಾಡಬೇಕಾಗುವದರಿಂದ ಉದ್ಗೀಥಶಬ್ದವನ್ನು ಲಕ್ಷಣಾವೃತ್ತಿಯಿಂದ ಉಪಯೋಗಿಸಿದೆ ಎಂದಾಗುವದು ; ಅದಕ್ಕೆ ಫಲವನ್ನೂ ಕಲ್ಪಿಸಬೇಕಾಗುವದು. ಇದು ವಸ್ತುತತ್ತ್ವಪ್ರತಿಪಾದನಪರವಲ್ಲವಾದ್ದರಿಂದ ಮಿಥ್ಯಾಜ್ಞಾನನಿವೃತ್ತಿ ಎಂಬ ಫಲವನ್ನು ಕಲ್ಪಿಸುವದೂ ಆಗುವ ಹಾಗಿಲ್ಲ. ಅಪವಾದಪಕ್ಷದಲ್ಲಿಯೂ ಹೀಗೆಯೇ ಫಲವಿಲ್ಲ. ಏಕತ್ವಪಕ್ಷವೂ ಹೊಂದುವದಿಲ್ಲ; ಏಕೆಂದರೆ ಆಗ ಒಂದೇ ಶಬ್ದವು ಸಾಕಾಗಿರುವದರಿಂದ ಮತ್ತೊಂದು ವ್ಯರ್ಥವೆಂದಾಗುವದು. ಋಗ್ವೇದ ಅಥವಾ ಯಜುರ್ವೇದದ ಓಂಕಾರದಲ್ಲಿ ಉದ್ಗೀಥಶಬ್ದಪ್ರಸಿದ್ಧಿಯೂ ಇಲ್ಲ. ಆದ್ದರಿಂದ ವಿಶೇಷಣಪಕ್ಷವೇ ಇಲ್ಲಿ ನ್ಯಾಯ. ಓಂ ಎಂಬೀ ಉದ್ಗೀಥಾವಯವವಾದ ಅಕ್ಷರ

ವನ್ನು ಉಪಾಸನೆಮಾಡಬೇಕು; ಇದರಿಂದ ಸರ್ವವ್ಯಾಪಿಯಾದ ಓಂಕಾರವನ್ನು ಬಿಟ್ಟು ಉದ್ಗೀಥಾವಯವವನ್ನೇ ತೆಗೆದುಕೊಳ್ಳಬೇಕು ಎಂದಂತೆ ಆಗುವದು.

## ೫. ಸರ್ವಾಭೇದಾಧಿಕರಣ

ವಿಷಯವೂ ಸಂಶಯವೂ: ಬೃಹದಾರಣ್ಯಕಛಾಂದೋಗ್ಯದಲ್ಲಿ ಶ್ರೈಷ್ಠ್ಯಗುಣಾನ್ವಿತ ಪ್ರಾಣದ ಉಪಾಸನೆಯನ್ನು ಹೇಳಿದೆ. ಕೌಷೀತಕಿ ಮುಂತಾದ ಶಾಖೆಗಳಲ್ಲಿಯೂ ಪ್ರಾಣಕ್ಕೆ ಶ್ರೈಷ್ಠ್ಯಗುಣವನ್ನು ಹೇಳಿದೆ; ಆದರೆ ಅಲ್ಲಿ ಬೃಹದಾರಣ್ಯಕಛಾಂದೋಗ್ಯಗಳಂತೆ ವಾಗಾದಿಗಳಿಗೆ ವಸಿಷ್ಠತ್ವಾದಿಗುಣಗಳನ್ನು ಹೇಳಿ ಪ್ರಾಣಕ್ಕೆ ಅವನ್ನು ತಿಳಿಸಿಲ್ಲ. ಅಲ್ಲಿಯೂ ಈ ವಸಿಷ್ಠತ್ವಾದಿಗಳನ್ನು ಸೇರಿಸಿಕೊಳ್ಳಬೇಕೊ, ಬಾರದೊ?

ಪೂರ್ವಪಕ್ಷ: ಬಾರದು. ಏಕೆಂದರೆ ಅಲ್ಲಿ "ಯಾವನು ಹೀಗೆಂದು ತಿಳಿಯುವನೋ" ಎಂದು ಹೀಗೆಂದು ಎಂಬ ಸಂನಿಹಿತವಿಷಯಕವಾದ ಶಬ್ದವನ್ನು ಪ್ರಯೋಗಿಸಿದೆ.

ಸಿದ್ಧಾಂತ: ಸೇರಿಸಿಕೊಳ್ಳಬೇಕು. ಏಕೆಂದರೆ ಪ್ರಾಣವಿಜ್ಞಾನವು ಈ ಎಲ್ಲಾ ಕಡೆಯಲ್ಲಿಯೂ ಒಂದೇ ಆಗಿರುತ್ತದೆ; ಪ್ರಾಣಸಂವಾದಾದಿಗಳು ಒಂದೇಸಮನಾಗಿರುವದರಿಂದ ಒಂದೇ ವಿಜ್ಞಾನವೆಂದು ಗೊತ್ತಾಗುತ್ತದೆ. ಕೌಶೀತಕಿಶಾಖೆಯ ಏವಂಶಬ್ದವು ಬೃಹದಾರಣ್ಯಕದಲ್ಲಿರುವ ಗುಣಗಳನ್ನು ಹೇಳದಿದ್ದರೂ ಬೃಹದಾರಣ್ಯಕದಲ್ಲಿಯೇ ಇರುವ ಏವಂಶಬ್ದವು ಅದನ್ನು ಹೇಳುತ್ತದೆ. ಗುಣವುಳ್ಳ ಪ್ರಾಣವು ಅಭಿನ್ನವಾಗಿರುವದರಿಂದ ಒಂದು ಶಾಖೆಯಲ್ಲಿ ಹೇಳಿದ ಗುಣಗಳನ್ನು ಎಲ್ಲಾ ಕಡೆಯಲ್ಲಿಯೂ ಹೇಳಿದಂತೆಯೇ ಆಗಿರುತ್ತದೆ. ಆದ್ದರಿಂದ ಹೀಗೆ ಒಂದು ಪ್ರಧಾನವಸ್ತುವಿಗೆ ಸಂಬದ್ಧವಾಗಿ ಒಂದು ಕಡೆಯಲ್ಲಿ ಹೇಳಿರುವ ಧರ್ಮಗಳನ್ನು ಮತ್ತೊಂದು ಕಡೆಯಲ್ಲಿಯೂ ಉಪಸಂಹಾರಮಾಡಿಕೊಳ್ಳಬೇಕು.

## ೬. ಆನಂದಾದ್ಯಧಿಕರಣ

ವಿಷಯವೂ ಸಂಶಯವೂ: ಬ್ರಹ್ಮಸ್ವರೂಪವನ್ನು ಹೇಳುವ ಶ್ರುತಿಗಳಲ್ಲಿ ಆನಂದರೂಪತ್ವ, ವಿಜ್ಞಾನಘನತ್ವ, ಸರ್ವಗತತ್ವ— ಎಂಬೀ ಜಾತಿಯ ಧರ್ಮಗಳು ಎಲ್ಲಿ ಎಷ್ಟನ್ನು ಹೇಳಿದೆಯೋ ಅಷ್ಟನ್ನೇ ತಿಳಿಯಬೇಕೊ, ಅಥವಾ ಎಲ್ಲವನ್ನೂ ಎಲ್ಲಾ ಕಡೆಯಲ್ಲಿಯೂ ತಿಳಿಯಬೇಕೊ?

ಪೂರ್ವಪಕ್ಷ: ಆಯಾ ಶ್ರುತಿಯಲ್ಲಿ ಹೇಳಿದಷ್ಟನ್ನೇ ಅಲ್ಲಲ್ಲಿ ತೆಗೆದುಕೊಳ್ಳಬೇಕು.

ಸಿದ್ಧಾಂತ: ಎಲ್ಲಾ ಕಡೆಯಲ್ಲಿಯೂ ವಿಶೇಷವಾದ ಬ್ರಹ್ಮವು ಒಂದೇ ಆಗಿರುವದರಿಂದ ಈ ಬ್ರಹ್ಮಧರ್ಮಗಳನ್ನು ಎಲ್ಲಾ ಕಡೆಯಲ್ಲಿಯೂ ಎಲ್ಲವನ್ನೂ ಗ್ರಹಿಸಬೇಕು. ಆದರೆ ಉಪಾಸನೆಗಾಗಿ ಹೇಳಿದ ಸತ್ಯಕಾಮತ್ವಾದಿಗಳನ್ನು ಮಾತ್ರ ಒಂದು ಕಡೆ ಹೇಳಿದ್ದನ್ನು ಮತ್ತೊಂದು ಕಡೆ ತಿಳಿಯಬಾರದು. ಏಕೆಂದರೆ ಭೇದವ್ಯವಹಾರವಿರುವಲ್ಲಿ ಸಗುಣಬ್ರಹ್ಮದಲ್ಲಿ ಮಾತ್ರ ಉಪಚಿತಾಪಚಿತಗುಣತ್ವವು ಹೊಂದುತ್ತದೆ, ನಿರ್ಗುಣಬ್ರಹ್ಮದಲ್ಲಿ ಹೊಂದುವದಿಲ್ಲ. ಆನಂದಾದಿಗಳು ಮಾತ್ರ ಪ್ರತಿಪಾದ್ಯಬ್ರಹ್ಮದ ಸ್ವರೂಪವನ್ನು ತಿಳಿಸುವದಕ್ಕೇ ಉಪಯುಕ್ತವಾಗಿರುವದರಿಂದಲೂ ಆ ಬ್ರಹ್ಮವು ಒಂದೇ ಆಗಿರುವದರಿಂದಲೂ ಅವನ್ನು ಎಲ್ಲಾ ಕಡೆಯಲ್ಲಿಯೂ ತೆಗೆದುಕೊಳ್ಳಬೇಕು.

# ೭. ಆಧ್ಯಾನಾಧಿಕರಣ

**ವಿಷಯವೂ ಸಂಶಯವೂ:** ಕಠದಲ್ಲಿ "ಇಂದ್ರಿಯಗಳಿಗಿಂತ ಅರ್ಥಗಳು ಹೆಚ್ಚು, ಅರ್ಥಗಳಿಗಿಂತ ಮನಸ್ಸು ಹೆಚ್ಚಿನದು; ಮನಸ್ಸಿಗಿಂತ ಬುದ್ಧಿ ಹೆಚ್ಚು" ಎಂದು ಆರಂಭಿಸಿ "ಪುರುಷನಿಗಿಂತ ಹೆಚ್ಚಿನದು ಯಾವದೂ ಇಲ್ಲ, ಅದೇ ಕೊನೆ, ಅದೇ ಪರಗತಿ" (ಕ.೩–೧೧) ಎಂದು ಹೇಳಿದೆ. ಇಲ್ಲಿ ಅರ್ಥಾದಿಗಳನ್ನೆಲ್ಲ ಆಯಾ ಪದಾರ್ಥಗಳಿಗಿಂತ ಹೆಚ್ಚೆಂದು ತಿಳಿಯ ಬೇಕೆಂದು ಹೇಳಿದೆಯೆ, ಅಥವಾ ಪುರುಷನೇ ಎಲ್ಲಕ್ಕಿಂತಲೂ ಹೆಚ್ಚೆಂದು ಪ್ರತಿಪಾದಿಸಿದೆಯೆ?

**ಪೂರ್ವಪಕ್ಷ:** ಇವೆಲ್ಲವೂ ಹೆಚ್ಚೆಂದೇ ಪ್ರತಿಪಾದಿಸಿದೆ; ಏಕೆಂದರೆ ಶ್ರುತಿಯಲ್ಲಿ ಹಾಗೆಂದಿದೆ.

**ಸಿದ್ಧಾಂತ:** ಪುರುಷನನ್ನೇ ಎಲ್ಲಕ್ಕಿಂತಲೂ ಮಿಗಿಲೆಂದು ಪ್ರತಿಪಾದಿಸಿದೆ. ಮಿಕ್ಕವು ಗಳ ಪರತ್ವವನ್ನು ಹೇಳುವದರಲ್ಲಿ ಪ್ರಯೋಜನವೇನೂ ಇಲ್ಲ. ಪುರುಷಪರತ್ವವನ್ನು ತಿಳಿದರೆ ಮೋಕ್ಷವೆಂಬ ಪ್ರಯೋಜನವಾಗುತ್ತದೆ; ಹಾಗೆಂದು ಶ್ರುತಿಯೂ ಹೇಳುತ್ತಿದೆ. ಅದಕ್ಕಿಂತ ಹೆಚ್ಚಿನದಿಲ್ಲವೆಂದೂ ಅದೇ ಕೊನೆಯೆಂದೂ ಹೇಳಿರುವದರಿಂದ ಪುರುಷನ ವಿಷಯದಲ್ಲಿ ಆದರವನ್ನು ಶ್ರುತಿ ತೋರಿಸಿರುತ್ತದೆ. ಇದರಿಂದ ಸಮ್ಯಗ್ದರ್ಶನವೆಂಬ ಫಲವಾಗುತ್ತದೆ. ಪುರುಷನಲ್ಲಿ ಆತ್ಮಶಬ್ದವನ್ನುಪಯೋಗಿಸಿರುವದರಿಂದಲೂ ಅದನ್ನು ತಿಳಿಯುವದು ಸಾಮಾನ್ಯರಿಗೆ ಕಷ್ಟವೆಂದು ಅದನ್ನು ತಿಳಿಯುವದಕ್ಕೆ ಅಧ್ಯಾತ್ಮಯೋಗವನ್ನು ವಿಧಿಸಿರುವದ ರಿಂದಲೂ "ಆ ವಿಷ್ಣುವಿನ ಪರಮಪದವನ್ನು ಪಡೆಯುತ್ತಾನೆ" (ಕ.೩–೭) ಎಂದು ಹೇಳಲು ಆ ಪರಮಪದವು ಯಾವದು ಎಂಬ ಆಕಾಂಕ್ಷೆಯುಂಟಾಗಲಾಗಿ ಈ ಇಂದ್ರಿಯಾದಿ ಗಳನ್ನು ಹೇಳಿರುವದರಿಂದಲೂ ಪರಮಪದದ ಜ್ಞಾನಕ್ಕಾಗಿಯೇ ಈ ವಾಕ್ಯವು ಬಂದಿದೆ ಎಂದು ನಿಶ್ಚಯಿಸಬೇಕಾಗಿದೆ.

# ೮. ಆತ್ಮಗೃಹೀತ್ಯಧಿಕರಣ

## ಒಂದನೆಯ ವರ್ಣಕ

**ವಿಷಯವೂ ಸಂಶಯವೂ:** ಐತರೇಯಕದಲ್ಲಿ "ಇದು ಮೊದಲು ಆತ್ಮನೊಬ್ಬನೇ ಆಗಿತ್ತು ಮತ್ತೆ ಯಾವದೊಂದೂ ಇರಲಿಲ್ಲ, ಅವನು ಲೋಕಗಳನ್ನು ಸೃಜಿಸುವೆನು ಎಂದು ಯೋಚಿಸಿಕೊಂಡನು" (ಐ. ೧–೧) ಎಂದು ಮುಂತಾಗಿರುವ ವಾಕ್ಯವಿದೆ. ಅಲ್ಲಿ ಪರಮಾತ್ಮ ನನ್ನೇ ಆತ್ಮಶಬ್ದದಿಂದ ಹೇಳಿದೆಯೆ, ಅಥವಾ ಮತ್ತೆ ಯಾವದನ್ನಾದರೂ ಹೇಳಿದೆಯೆ?

**ಪೂರ್ವಪಕ್ಷ:** ಇಲ್ಲಿ ಲೋಕಸೃಷ್ಟಿಯನ್ನು ಹೇಳಿರುವದರಿಂದ ಇದು ಪ್ರಜಾಪತಿಯ ವಿಷಯವಾಗಿರಬೇಕು, ಆತ್ಮಶಬ್ದವನ್ನು ಪ್ರಜಾಪತಿಗೂ ಉಪಯೋಗಿಸುವದುಂಟು. ಒಬ್ಬನೇ ಇದ್ದನು ಎಂಬುದು ಪ್ರಜಾಪತಿಯ ಕಾರ್ಯದ ಅಪೇಕ್ಷೆಯಿಂದ ಪ್ರಯೋಗಿಸಿದ್ದಾ ಗಿದೆ. "ಅವರಿಗೆ ಗೋವನ್ನು ತಂದನು" ಮುಂತಾಗಿ ಸವಿಶೇಷಾತ್ಮರಿಗೆ ಒಪ್ಪಾಗುವ ವ್ಯಾಪಾರ ವಿಶೇಷವನ್ನು ಇಲ್ಲಿ ಹೇಳಿದೆ. ಆದ್ದರಿಂದ ಪರಮಾತ್ಮನಲ್ಲ.

**ಸಿದ್ಧಾಂತ:** ಇತರ ಸೃಷ್ಟಿಶ್ರುತಿಗಳಲ್ಲಿ ಹೇಗೆ ಆತ್ಮನೆಂದರೆ ಪರಮಾತ್ಮನನ್ನೇ ಗ್ರಹಿಸು ವೆವೋ ಲೋಕದಲ್ಲಿ ಆತ್ಮಶಬ್ದವನ್ನು ಪ್ರಯೋಗಿಸಿದರೆ ಹೇಗೆ ಪ್ರತ್ಯಗಾತ್ಮನನ್ನೇ ತೆಗೆದು

ಕೊಳ್ಳುವೆವೋ ಹಾಗೆಯೇ ಇಲ್ಲಿ ಮುಖ್ಯನಾದ ಪರಮಾತ್ಮನನ್ನೇ ಸ್ವೀಕರಿಸುವದು ಯುಕ್ತ. "ಪುರುಷವಿಧಃ" ಮುಂತಾದ ವಿಶೇಷಣವಿರುವಲ್ಲಿ ಸವಿಶೇಷಾತ್ಮನನ್ನು ಸ್ವೀಕರಿಸುವದು ಸರಿ; ಆದರೆ ಇಲ್ಲಿ ಪರಮಾತ್ಮಗ್ರಹಣಕ್ಕೆ ತಕ್ಕ ವಿಶೇಷಣವೇ ಮುಂದಿನ ವಾಕ್ಯಭಾಗದಲ್ಲಿ ಕಾಣಬರುತ್ತದೆ. ಸೃಷ್ಟಿಗಿಂತ ಪೂರ್ವದಲ್ಲಿ "ಆತ್ಮನೊಬ್ಬನೇ ಇದ್ದನು" ಎಂಬ ಅವಧಾರಣ ವಿರುವದರಿಂದ ಮುಖ್ಯಾತ್ಮನನ್ನೇ ತೆಗೆದುಕೊಳ್ಳುವದು ಯುಕ್ತ. ಲೋಕಸೃಷ್ಟಿವಚನ ವನ್ನು "ಮಹಾಭೂತಗಳನ್ನು ಸೃಜಿಸಿದ ಬಳಿಕ" ಎಂದು ಹೊಂದಿಸಿಕೊಳ್ಳಬಹುದಾಗಿದೆ; ಏಕೆಂದರೆ ಒಂದೇ ವಿಷಯದಲ್ಲಿ ಒಂದು ಶ್ರುತಿಯಲ್ಲಿರುವ ವಿಶೇಷವನ್ನು ಇನ್ನೊಂದು ಶ್ರುತಿಗೂ ಉಪಸಂಹಾರಮಾಡಿಕೊಳ್ಳಬೇಕು. ಗೋವನ್ನು ತಂದನು ಮುಂತಾದದ್ದು ಅರ್ಥವಾದ ಮಾತ್ರ; ಏಕೆಂದರೆ ಅದರ ಜ್ಞಾನದಿಂದ ಯಾವ ಪುರುಷಾರ್ಥವೂ ಇರುವದಿಲ್ಲ. ಬ್ರಹ್ಮಾತ್ಮತ್ವವೇ ಇಲ್ಲಿ ವಿವಕ್ಷಿತವಾಗಿರುತ್ತದೆ. ಲೋಕಲೋಕಪಾಲರ ಸೃಷ್ಟಿಯನ್ನು ಹೇಳಿ, ಕರಣಗಳನ್ನೂ ಕರಣಾಯತನಗಳನ್ನೂ ಹೇಳಿ ಸ್ರಷ್ಟೃವು ಈ ಶರೀರವನ್ನು ಹೊಕ್ಕನೆಂದು ಇಲ್ಲಿ ಹೇಳಿದೆ. ಕರಣವ್ಯಾಪಾರವಿವೇಚನಪೂರ್ವಕವಾಗಿ ಬ್ರಹ್ಮಾತ್ಮತ್ವವನ್ನೇ ಅವಧಾರಣ ಮಾಡಿದೆ. ಆದ್ದರಿಂದ ಇಲ್ಲಿ ಪರಮಾತ್ಮನನ್ನೇ ಗ್ರಹಿಸಬೇಕು.

## ಎರಡನೆಯ ವರ್ಣಕ

**ವಿಷಯವೂ ಸಂಶಯವೂ :** ಬೃಹದಾರಣ್ಯಕದಲ್ಲಿ "ಆತ್ಮನು ಯಾವನು? ಪ್ರಾಣ ಗಳಲ್ಲಿ ವಿಜ್ಞಾನಮಯನಾಗಿ ಹೃದಯದಲ್ಲಿ ಅಂತರ್ಜ್ಯೋತಿಯಾಗಿರುವ ಈ ಪುರುಷನಿದಾನಲ್ಲ (ಅವನು)" (ಬೃ. ೪-೩-೭) ಎಂದು ಆತ್ಮಶಬ್ದದಿಂದ ಪ್ರಾರಂಭಿಸಿ ಸರ್ವಸಂಗರಹಿತನೆಂದು ಪ್ರತಿಪಾದಿಸುವ ಮೂಲಕ ಬ್ರಹ್ಮಾತ್ಮತ್ವವನ್ನೇ ಹೇಳಿರುತ್ತದೆ. ಆದ್ದರಿಂದ "ಈ ಆತ್ಮನು ಅಜರನೂ ಅಮರನೂ ಅಮೃತನೂ ಅಭಯನೂ ಬ್ರಹ್ಮವೂ ಆಗಿರುತ್ತಾನೆ" ಎಂದು ಉಪ ಸಂಹಾರಮಾಡಿದೆ. ಛಾಂದೋಗ್ಯದಲ್ಲಾದರೋ "ಸೋಮ್ಯನೆ, ಇದು ಮೊದಲು ಎರಡನೆಯ ದಿಲ್ಲದ ಸತ್ತೊಂದೇ ಆಗಿತ್ತು" (ಛಾಂ. ೬-೨-೧) ಎಂದು ಆತ್ಮಶಬ್ದವಿಲ್ಲದೆಯೇ ಉಪ ಕ್ರಮಿಸಿ "ಅದೇ ಆತ್ಮನು, ಅದೇ ನೀನು" (ಛಾಂ. ೬-೮-೭) ಎಂದು ತಾದಾತ್ಮ್ಯವನ್ನು ಉಪದೇಶಿಸಿರುತ್ತದೆ. ಇಲ್ಲಿ ಸಂಶಯವೇನೆಂದರೆ ಈ ಎರಡು ಶ್ರುತಿಗಳಿಗೂ ಒಂದೇ ಅರ್ಥವೊ, ಅಥವಾ ಬೇರೆಬೇರೆ ಅರ್ಥವೊ?

**ಪೂರ್ವಪಕ್ಷ :** ಇವುಗಳಿಗೆ ಸಮಾನಾರ್ಥವಿಲ್ಲ; ಏಕೆಂದರೆ ಶ್ರುತಿಗಳು ಸಮಾನ ವಾಗಿರುವದಿಲ್ಲ. ಬೃಹದಾರಣ್ಯಕದಲ್ಲಿ ಉಪಕ್ರಮದಲ್ಲಿ ಆತ್ಮಶಬ್ದವಿದೆ; ಛಾಂದೋಗ್ಯದ ಲ್ಲಿಲ್ಲ. ಉಪಸಂಹಾರದಲ್ಲಿ ಆತ್ಮಶಬ್ದವಿದ್ದರೂ ಉಪಕ್ರಮಕ್ಕನುಗುಣವಾಗಿ ಅದನ್ನು ತಾದಾತ್ಮ್ಯಸಂಪತ್ತಿ ಎಂದು ತಿಳಿಯಬೇಕು.

**ಸಿದ್ಧಾಂತ :** ಛಾಂದೋಗ್ಯದಲ್ಲಿಯೂ ಬೃಹದಾರಣ್ಯಕದಂತೆ ಆತ್ಮಗ್ರಹಣವನ್ನು ಮಾಡಬೇಕು. ಏಕೆಂದರೆ ಮುಂದೆ ಆತ್ಮಶಬ್ದೋಪದೇಶವಿದೆ. ಉಪಕ್ರಮದಲ್ಲಿ ಆತ್ಮ ಶಬ್ದವಿಲ್ಲದಿದ್ದರೂ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಅವಧಾರಣೆಮಾಡಿದ ಬಳಿಕ "ಸತ್ತೇ ಆಗಿತ್ತು" ಎಂದಿರುವದರಿಂದ ಇಲ್ಲಿಯೂ ಆತ್ಮನೆಂದೇ ಗ್ರಹಿಸಬೇಕು. ಸೃಷ್ಟಿಗೆ ಪೂರ್ವದಲ್ಲಿ ಏಕತ್ವವನ್ನು ಅವಧಾರಣೆಮಾಡಿರುವದು, ಜೀವನನ್ನು ಆತ್ಮಶಬ್ದದಿಂದ ಪರಾ ಮರ್ಶಿಸಿರುವದು, ಸುಷುಪ್ತಿಯಲ್ಲಿ ಆತ್ಮಸ್ವಭಾವಸಂಪತ್ತಿಯನ್ನು ಹೇಳಿರುವದು, ಮತ್ತೆ

ಮತ್ತೆ "ತತ್ತ್ವಮಸಿ" (ಅದೇ ನೀನಾಗಿರುವೆ) ಎಂದು ಅವಧಾರಣೆಮಾಡಿರುವದು– ಇದೆಲ್ಲವೂ ಪರಮಾತ್ಮತಾದಾತ್ಮ್ಯವನ್ನೇ ಇಲ್ಲಿ ಉಪದೇಶಿಸಿದೆ ಎಂಬುದಕ್ಕೆ ಗಮಕವಾಗಿವೆ. ಉಪಕ್ರಮದಲ್ಲಿ "ಸದೇವ" ಎಂದು ಸಾಮಾನ್ಯವಾಗಿ ಹೇಳಿ ವಿಶೇಷವಾದ ಆತ್ಮಶಬ್ದದಿಂದ ಉಪಸಂಹಾರಮಾಡಿರುವದರಿಂದ ಸಚ್ಛಬ್ದವೂ ಮುಖ್ಯಾತ್ಮನನ್ನೇ ಹೇಳುವದರಿಂದಲೂ ಇಲ್ಲಿ ಆತ್ಮನನ್ನೇ ಗ್ರಹಿಸಬೇಕು. ಪಾಠವೈಷಮ್ಯವಿದ್ದರೂ 'ತೆಗೆದುಕೊಂಡು ಬಾ ಪಾತವನ್ನು', 'ಪಾತ್ರವನ್ನು ತೆಗೆದುಕೊಂಡು ಬಾ' ಮುಂತಾದ ವಾಕ್ಯಗಳಲ್ಲಿ ಅರ್ಥಭೇದವೇನೂ ಇರುವದಿಲ್ಲವಾದ್ದರಿಂದ ಶ್ರುತಿಗಳ ಉಪಕ್ರಮವೈಷಮ್ಯದಿಂದ ಅರ್ಥವೈಷಮ್ಯವೂ ಸಿದ್ಧವಾಗಲಾರದು.

# ೯. ಕಾರ್ಯಾಖ್ಯಾನಾಧಿಕರಣ

**ವಿಷಯವೂ ಸಂಶಯವೂ :** ಪ್ರಾಣಸಂವಾದದಲ್ಲಿ ಶ್ವಾದಿಗಳವರೆಗೂ ಪ್ರಾಣನ ಅನ್ನವೆಂದು ಛಾಂದೋಗ್ಯಬೃಹದಾರಣ್ಯಕಗಳಲ್ಲಿ ಹೇಳಿದೆ. ಛಾಂದೋಗ್ಯದಲ್ಲಿ ಭೋಜನಕ್ಕೆ ಪೂರ್ವದಲ್ಲಿಯೂ ಉತ್ತರದಲ್ಲಿಯೂ ಆಚಮನವನ್ನು ವಿಧಿಸಿದೆ. ಬೃಹದಾರಣ್ಯಕದಲ್ಲಾದರೋ 'ಆಚಮನವನ್ನು ಮಾಡಿ ಇದು ಪ್ರಾಣನ ಅನಗ್ನತೆ ಎಂದು ತಿಳಿಯುತ್ತಾರೆ' ಎಂದು ಹೇಳಿದೆ. ಇಲ್ಲಿ ಆಚಮನ, ಅನಗ್ನತಾಚಿಂತನ– ಇವೆರಡನ್ನೂ ವಿಧಿಸಿದೆಯೆ, ಅಥವಾ ಇವುಗಳೆರಡರಲ್ಲಿ ಒಂದನ್ನೇ ವಿಧಿಸಿದೆಯೆ ?

**ಪೂರ್ವಪಕ್ಷ:** ಎರಡನ್ನೂ ವಿಧಿಸಿದೆ. ಅಪೂರ್ವವಾಗಿರುವದರಿಂದ ಎರಡೂ ವಿಧಿಗೆ ತಕ್ಕವು, ಅಥವಾ ಆಚಮನದಲ್ಲಿ ವಿಧಿವಿಭಕ್ತಿಯು ಸ್ಪಷ್ಟವಾಗಿರುವದರಿಂದ ಅದನ್ನು ವಿಧಿಸಿದೆ ; ಅದನ್ನು ಹೊಗಳುವದಕ್ಕೆ ಅನಗ್ನತೆಯನ್ನು ಹೇಳಿದೆ.

**ಸಿದ್ಧಾಂತ :** ಆಚಮನವು ಸ್ಮೃತಿವಿಹಿತವಾಗಿ ಪ್ರಾಪ್ತವಾಗಿದೆ ; ಶ್ರುತಿಯಲ್ಲಿ ಪ್ರಾಣವಿದ್ಯೆಯನ್ನೇ ವಿಧಿಸಿದೆ. ಆದ್ದರಿಂದಲೇ ಎರಡನ್ನೂ ವಿಧಿಸಿರುತ್ತದೆ ಎನ್ನುವದೂ ಸರಿಯಲ್ಲ ; ಎರಡನ್ನೂ ವಿಧಿಸಿದರೆ ವಾಕ್ಯಭೇದವಾಗುವದೆಂಬ ದೋಷವೂ ಇರುತ್ತದೆ. ಆದ್ದರಿಂದ ಆಚಮನೀಯವಾದ ಜಲದಲ್ಲಿ ಅನಗ್ನತಾಚಿಂತನೆಯನ್ನು ಪ್ರಾಣವಿದ್ಯೆಗೆ ಸಂಬಂಧಪಟ್ಟಂತೆ ಉಪದೇಶಿಸಿರುತ್ತದೆ. ಆಚಮನವು ವಿಹಿತವಾಗಿರುವದಿಲ್ಲವಾದ್ದರಿಂದ ಅದನ್ನು ಹೊಗಳುವದಕ್ಕೆ ಅನಗ್ನತೆಯನ್ನು ಹೇಳಿದೆ ಎಂಬುದೂ ಸರಿಯಲ್ಲ. ಆಚಮನವೂ ಪ್ರಾಣನಿಗೆ ಪರಿಧಾನಕ್ಕಾಗಿ ಹೊಸದಾಗಿ ಹೇಳಿದ್ದಾದ್ದರಿಂದ ಕ್ರಿಯಾಂತರವಾಗುತ್ತದೆಯಾಗಿ ಒಂದೇ ಆಚಮನವನ್ನು ಎರಡಕ್ಕೂ ಉಪಯೋಗಿಸುವದೆಂಬ ದೋಷವೂ ಇಲ್ಲ. ಆದ್ದರಿಂದ ಇಲ್ಲಿ ಆಚಮನವನ್ನು ಹೊದಿಕೆಯೆಂದು ಸಂಕಲ್ಪಿಸುವದನ್ನೇ ವಿಧಿಸಿದೆ ಎಂಬುದು ಯುಕ್ತ.

# ೧೦. ಸಮಾನಾಧಿಕರಣ

**ವಿಷಯವೂ ಸಂಶಯವೂ :** ಅಗ್ನಿರಹಸ್ಯದಲ್ಲಿರುವ ಶಾಂಡಿಲ್ಯವಿದ್ಯೆಯೂ ಬೃಹದಾರಣ್ಯಕದಲ್ಲಿರುವ "ಮನೋಮಯೋಽಯಂ ಪುರುಷಃ" (ಬೃ. ೫–೬–೧) ಒಂದೇ ವಿದ್ಯೆಯೊ, ಬೇರೆಬೇರೆಯೊ ?

**ಪೂರ್ವಪಕ್ಷ:** ಈ ವಿದ್ಯೆಗಳು ಬೇರೆಬೇರೆ, ಗುಣಗಳೂ ಆಯಾ ವಿದ್ಯೆಗೇ ಸೇರತಕ್ಕವು. ಏಕೆಂದರೆ ಒಂದೇ ವಿದ್ಯೆಯೆಂದರೆ ಒಂದೇ ಶಾಖೆಯಲ್ಲಿ ಅಧ್ಯೇತೃಗಳೂ ಅದೂ

ಸಕರೂ ಬೇರೆಬೇರೆಯಲ್ಲವಾಗಿ ಪುನರುಕ್ತಿಯೇ ಆಗುವದು. ಇಲ್ಲಿ ಒಂದು ಕಡೆಯಲ್ಲಿ ವಿದ್ಯೆಯನ್ನು ವಿಧಿಸಿ ಮತ್ತೊಂದು ಕಡೆಯಲ್ಲಿ ಗುಣವನ್ನು ಹೇಳಿದೆ ಎನ್ನುವದಕ್ಕಿಲ್ಲ; ಏಕೆಂದರೆ ಮನೋಮಯತ್ವಾದಿಗುಣಗಳನ್ನು ಎರಡು ಕಡೆಯಲ್ಲಿಯೂ ಸಮಾನವಾಗಿಯೇ ಹೇಳಿದೆ.

ಸಿದ್ಧಾಂತ : ಒಂದೇ ಶಾಖೆಯಲ್ಲಿಯೂ ಇಲ್ಲಿ ವಿದ್ಯೈಕ್ಯವೇ. ಏಕೆಂದರೆ ಉಪಾಸ್ಯವು ಅದೇ ಆಗಿರುವದರಿಂದ ರೂಪಾಭೇದವಿರುವಲ್ಲಿ ವಿದ್ಯೆಗಳು ಬೇರೆಬೇರೆ ಎನ್ನುವದು ಯುಕ್ತವಾಗಲಾರದು. ಒಂದು ಕಡೆಯಲ್ಲಿ ವಿದ್ಯೆಯನ್ನು ವಿಧಿಸಿ ಮತ್ತೊಂದು ಕಡೆಯಲ್ಲಿ ಗುಣಗಳನ್ನು ವಿಧಿಸಿದೆ ಎನ್ನುವದೇ ಸರಿ; ಸಮಾನವಾಗಿ ಎರಡೂ ಕಡೆಯಲ್ಲಿ ಕೆಲವು ಗುಣಗಳನ್ನು ಪಠಿಸಿರುವದು ಅದೇ ವಿದ್ಯೆ ಎಂದು ಗುರುತಿಸುವದಕ್ಕಾದ್ದರಿಂದ ಪುನರುಕ್ತಿದೋಷವೇನೂ ಇಲ್ಲ.

# ೧೧. ಸಂಬಂಧಾಧಿಕರಣ

ವಿಷಯವೂ ಸಂಶಯವೂ : ಬೃಹದಾರಣ್ಯಕದಲ್ಲಿ "ಸತ್ಯಂ ಬ್ರಹ್ಮ" (೫-೫-೧) ಎಂದು ಉಪಕ್ರಮಿಸಿ ಅಧ್ಯಾತ್ಮವಾಗಿಯೂ ಅಧಿದೈವತವಾಗಿಯೂ ಆಯತನಗಳನ್ನೂ ವ್ಯಾಹೃತಿಶರೀರತ್ವವನ್ನೂ ಹೇಳಿದೆ "ಅಹರಿತಿ", "ಅಹಮಿತಿ" ಎಂದು ಎರಡು ಉಪನಿಷತ್ತುಗಳನ್ನು ಹೇಳಿದೆಯಷ್ಟೆ; ಇವೆರಡನ್ನೂ ಎರಡು ಕಡೆಯಲ್ಲಿಯೂ ಉಪಸಂಹಾರಮಾಡಿಕೊಳ್ಳಬೇಕೆ, ಅಥವಾ ಅಲ್ಲಲ್ಲಿಗೆ ಆಯಾ ಉಪನಿಷತ್ತನ್ನೇ ಚಿಂತಿಸಿಕೊಳ್ಳಬೇಕೆ?

ಪೂರ್ವಪಕ್ಷ : ಶಾಂಡಿಲ್ಯವಿದ್ಯೆಯ ನ್ಯಾಯದಿಂದ ಅವರಂತಿರುವ ಇಂಥ ಸ್ಥಲಗಳಲ್ಲೆಲ್ಲ ಗುಣೋಪಸಂಹಾರವೇ ನ್ಯಾಯ. ಇಲ್ಲಿಯೂ ಸತ್ಯವಿದ್ಯೆ ಎಂಬ ಒಂದೇ ವಿದ್ಯೆ; ಉಪಕ್ರಮವೂ ಅಭಿನ್ನವಾಗಿದೆ. ಆದ್ದರಿಂದ ಎರಡು ಉಪನಿಷತ್ತುಗಳನ್ನೂ ಸೇರಿಸಿಕೊಂಡು ಉಪಾಸನೆಮಾಡಬೇಕು.

ಸಿದ್ಧಾಂತ : ಈ ಜಾತಿಯ ಗುಣಗಳನ್ನು ಬೇರೆಬೇರೆಯಾಗಿಯೇ ಚಿಂತನೆಮಾಡಬೇಕು. ಏಕೆಂದರೆ ಉಪಾಸನಸ್ಥಾನಗಳು ಬೇರೆಬೇರೆಯಾಗಿವೆ. ಆಯಾ ಸ್ಥಾನದ ಪುರುಷನಿಗೆ ಆಯಾ ಉಪನಿಷತ್ತನ್ನು ಹೇಳಿದೆ ಎಂಬುದು "ತಸ್ಯ" (ಅವನಿಗೆ) ಎಂಬ ಸಂನಿಹಿತ ಪರಾಮರ್ಶಕವಾದ ಸರ್ವನಾಮದಿಂದ ಗೊತ್ತಾಗುತ್ತದೆ. ಉಪಾಸ್ಯನಾದ ಸತ್ಯಪುರುಷನು ಒಬ್ಬನೇ ಆದರೂ ಆಯಾ ಅವಸ್ಥೆಯಲ್ಲಿ ಆಯಾ ಉಪನಿಷತ್ತನ್ನು ಉಪದೇಶಿಸಿರುವದರಿಂದ ವ್ಯವಸ್ಥೆಯೇ ಯುಕ್ತ. ಛಾಂದೋಗ್ಯದಲ್ಲಿ ಉದ್ಗೀಥವಿದ್ಯೆಯಲ್ಲಿ "ಅವನ ರೂಪವೇ ಇವನ ರೂಪವು" ಎಂದು ಅಕ್ಷ್ಯಾದಿತ್ಯಸ್ಥಾನಗಳಲ್ಲಿರುವ ಪುರುಷರಿಗೆ ರೂಪನಾಮಗಳು ಅವೇ ಎಂದು ಶ್ರುತಿ ಹೇಳುವದರಿಂದ ಹೀಗೆ ಅತಿದೇಶಮಾಡದೆ ಇರುವ ಸ್ಥಲಗಳಲ್ಲಿ ಇಂಥ ಧರ್ಮಗಳು ಅಲ್ಲಲ್ಲಿಗೇ ವ್ಯವಸ್ಥಿತವಾಗಿರುವವೆಂದು ಹೇಳಿದಂತಾಗುತ್ತದೆ. ಆದ್ದರಿಂದ ಈ ಉಪನಿಷತ್ತುಗಳನ್ನು ಉಪಸಂಹಾರಮಾಡಕೂಡದು.

# ೧೨. ಸಂಭೃತ್ಯಧಿಕರಣ

ವಿಷಯವೂ ಸಂಶಯವೂ : ರಾಣಾಯನೀಯಶಾಖೆಯ ಖಿಲಭಾಗದಲ್ಲಿ ಬ್ರಹ್ಮಕ್ಕೆ ವೀರ್ಯಸಂಭೃತ್ಯಾದಿ ವಿಭೂತಿಗಳನ್ನು ಹೇಳಿದೆ. ಅವರ ಉಪನಿಷತ್ತಿನಲ್ಲಿ ಶಾಂಡಿಲ್ಯ

ವಿದ್ಯೆಯೇ ಮುಂತಾದ ಬ್ರಹ್ಮವಿದ್ಯೆಗಳನ್ನು ಹೇಳಿದೆ. ಆ ವಿದ್ಯೆಗಳಲ್ಲಿ ಈ ವಿಭೂತಿಗಳನ್ನು ಉಪಸಂಹಾರಮಾಡಿಕೊಳ್ಳಬೇಕೆ ? ಬಾರದೆ ?

**ಪೂರ್ವಪಕ್ಷ:** ಉಪಾಸ್ಯವಾದ ಬ್ರಹ್ಮವು ಒಂದೇ ಆದ್ದರಿಂದ ಉಪಸಂಹಾರ ಮಾಡಿಕೊಳ್ಳಬೇಕು.

**ಸಿದ್ಧಾಂತ:** ಹಿಂದಿನ ಅಧಿಕರಣದಂತೆ ಇಲ್ಲಿಯೂ ಹೃದಯ, ಅಕ್ಷಿ ಮುಂತಾದ ಆಯತನವಿಶೇಷಗಳನ್ನು ಹೇಳಿರುವದರಿಂದ ಅಲ್ಲಿ ಆಧಿದೈವಿಕವಾದ ಈ ವಿಭೂತಿಗಳನ್ನು ಉಪಸಂಹಾರಮಾಡಿಕೊಳ್ಳುವದಕ್ಕೆ ಅವಕಾಶವಿಲ್ಲ, ಸಂಭೃತ್ಯಾದಿಗಳೂ ಶಾಂಡಿಲ್ಯಾದಿವಿದ್ಯೆಗಳಲ್ಲಿ ಹೇಳಿರುವ ಗುಣಗಳೂ ಭಿನ್ನಭಿನ್ನವಾಗಿಯೇ ಇರುವದರಿಂದ ಈ ಗುಣಗಳನ್ನು ಉಪಸಂಹಾರಮಾಡುವದಕ್ಕೆ ವಿದ್ಯೈಕತ್ವವನ್ನು ಸೂಚಿಸುವ ಸಮಾನಗುಣಗಳು ಪಠಿತವಾಗಿಲ್ಲವಾದ್ದರಿಂದಲೂ ಗುಣೋಪಸಂಹಾರಕ್ಕೆ ಕಾರಣವಿಲ್ಲ. ಬ್ರಹ್ಮವು ಒಂದೇ ಆದರೂ ಬೇರೆಬೇರೆ ವಿಭೂತಿಗಳಿಂದೊಡಗೂಡಿ ಬೇರೆಬೇರೆಯಾಗಿ ಉಪಾಸ್ಯವಾಗಿರುತ್ತದೆಯಾದ್ದರಿಂದ ಬ್ರಹ್ಮೈಕ್ಯವೂ ಉಪಸಂಹಾರಕ್ಕೆ ಕಾರಣವಲ್ಲ.

## ೧೩. ಪುರುಷಾದ್ಯಧಿಕರಣ

**ವಿಷಯವೂ ಸಂಶಯವೂ:** ತಾಂಡಿಪೈಂಗಿಶಾಖೆಯವರ ರಹಸ್ಯಬ್ರಾಹ್ಮಣದಲ್ಲಿ ಪಠಿತವಾಗಿರುವ ಪುರುಷಯಜ್ಞ, ತೈತ್ತಿರೀಯಕದಲ್ಲಿ ಪಠಿತವಾಗಿರುವ ಪುರುಷಯಜ್ಞ– ಇವುಗಳಲ್ಲಿ ತೈತ್ತಿರೀಯದಲ್ಲಿರುವ ಯಜ್ಞಕ್ಕೆ ಮಿಕ್ಕ ಕಡೆಗಳಲ್ಲಿ ಹೇಳಿರುವ ಪುರುಷಯಜ್ಞಧರ್ಮಗಳನ್ನು ಉಪಸಂಹಾರಮಾಡಿಕೊಳ್ಳಬೇಕೊ, ಬಾರದೊ ?

**ಪೂರ್ವಪಕ್ಷ:** ಎರಡೂ ಪುರುಷಯಜ್ಞವಾಗಿರುವದರಿಂದ ಉಪಸಂಹಾರಮಾಡಿಕೊಳ್ಳಬೇಕು.

**ಸಿದ್ಧಾಂತ:** ಕೂಡದು. ಏಕೆಂದರೆ ತೈತ್ತಿರೀಯದಲ್ಲಿ ಮಿಕ್ಕಕಡೆಗಳಲ್ಲಿರುವಂತೆ ಪಾಠವಿಲ್ಲ. ಅಲ್ಲಿ ಪತ್ನಿ, ಯಜಮಾನ, ವೇದ, ವೇದಿ– ಮುಂತಾದವುಗಳನ್ನು ಅನುಕ್ರಮವಾಗಿ ಹೇಳಿದೆ. ಅಲ್ಲಿ ಹೇಳಿರುವ ಸವನಗಳೂ ಪ್ರಾತರ್ಮಧ್ಯಾಹ್ನಸಾಯಂಕಾಲರೂಪಗಳಾಗಿ ವಿಲಕ್ಷಣವಾಗಿಯೇ ಇವೆ. ಮರಣವೇ ಅವಭೃಥ– ಎಂದು ಮುಂತಾಗಿ ಹೇಳಿರುವ ಸ್ವಲ್ಪ ಸಾಮ್ಯವಿದ್ದರೂ ವೈಲಕ್ಷಣ್ಯವು ಬಹಳವಾಗಿರುವದರಿಂದ ಇವೆರಡೂ ಒಂದೇ ಎನ್ನುವದಕ್ಕೆ ಬರುವದಿಲ್ಲ. ತೈತ್ತಿರೀಯಕದಲ್ಲಿ ಪುರುಷನು ಯಜ್ಞವೆಂದಿಲ್ಲ ; ಪುರುಷನ ಯಜ್ಞವೆಂದಿದೆ. ಸಂನ್ಯಾಸಸಹಿತವಾದ ಆತ್ಮಜ್ಞಾನವನ್ನು ಮೊದಲು ಹೇಳಿ "ಹೀಗೆಂದು ತಿಳಿದವನ ಯಜ್ಞಕ್ಕೆ...." ಎಂದಿರುವ ಈ ಶ್ರುತಿಯು ಹಿಂದೆ ಹೇಳಿದ್ದಕ್ಕೇ ಶೇಷವೆಂದು ನಿಶ್ಚಯವಾಗುತ್ತದೆ. ಆದ್ದರಿಂದ ಹಿಂದಿನ ಅನುವಾಕದಲ್ಲಿಯೂ ಈ ಅನುವಾಕದಲ್ಲಿಯೂ ಬ್ರಹ್ಮಮಹಿಮೆಯ ಪ್ರಾಪ್ತಿ ಎಂಬ ಒಂದೇ ಫಲವನ್ನು ಹೇಳಿದೆ. ಆದರೆ ತಾಂಡಿಪೈಂಗಿಗಳಲ್ಲಿ ಪುರುಷಯಜ್ಞವು ಸ್ವತಂತ್ರವಾಗಿದೆ ; ಆಯುರಭಿವೃದ್ಧಿಯೇ ಅದಕ್ಕೆ ಫಲವು. ಆದ್ದರಿಂದ ತೈತ್ತಿರೀಯಕದಲ್ಲಿ ಈ ಪುರುಷವಿದ್ಯೆಗಳ ಧರ್ಮಗಳ ಉಪಸಂಹಾರವಿಲ್ಲ.

# ೧೪. ವೇಧಾದ್ಯಧಿಕರಣ

**ವಿಷಯವೂ ಸಂಶಯವೂ :** ಅಥರ್ವಣಿಕರ ಉಪನಿಷತ್ತಿನ ಆರಂಭದಲ್ಲಿ "ಸರ್ವಂ ಪ್ರವಿಧ್ಯ" ಎಂದು ಮುಂತಾಗಿರುವ ಮಂತ್ರಪಾಠವಿದೆ. ಹೀಗೆಯೇ ತಾಂಡಿಗಳ, ಶಾಠ್ಯಾಯನಿಗಳ, ಕಠತೈತ್ತಿರೀಯಶಾಖೆಯವರ, ಉಪನಿಷತ್ತಿನ ಆರಂಭದಲ್ಲಿ ಬೇರೆಬೇರೆಯ ಮಂತ್ರಗಳಿವೆ. ವಾಜಸನೇಯಿಶಾಖೆಯವರ ಉಪನಿಷದಾರಂಭದಲ್ಲಿ ಪ್ರವರ್ಗ್ಯಕರ್ಮವಿಚಾರವೂ ಕೌಷೀತಕಿಯವರ ಉಪನಿಷತ್ತಿನ ಆರಂಭದಲ್ಲಿ ಅಗ್ನಿಷ್ಟೋಮವಿಚಾರವೂ ಇದೆ. ಈ ಮಂತ್ರಗಳೂ ಕರ್ಮಗಳೂ ವಿದ್ಯೆಗಳಲ್ಲಿ ಉಪಸಂಹಾರವಾಗತಕ್ಕವೆ, ಅಲ್ಲವೆ ?

**ಪೂರ್ವಪಕ್ಷ :** ವಿದ್ಯಾಪ್ರಧಾನವಾಗಿರುವ ಉಪನಿಷತ್ತುಗಳ ಆರಂಭದಲ್ಲಿರುವದರಿಂದ ಸಂನಿಧಿಸಾಮರ್ಥ್ಯದಿಂದ ಇವನ್ನು ಉಪಸಂಹಾರಮಾಡುವದೇ ಸರಿ ಎಂದು ತೋರುತ್ತದೆ. ಮಂತ್ರಗಳಿಗೆ ವಿದ್ಯಾವಿಷಯದಲ್ಲಿ ಹೇಗೋ ಸಾಮರ್ಥ್ಯವನ್ನು ಕಲ್ಪಿಸಿಕೊಳ್ಳಬೇಕು. ಕರ್ಮಗಳು ಬೇರೆಯಾಗಿ ವಿನಿಯೋಗವಾಗಿದ್ದರೂ ವಾಜಪೇಯವನ್ನು ಬೃಹಸ್ಪತಿಸವದಲ್ಲಿ ವಿನಿಯೋಗವಾಗುವಂತೆ ವಿದ್ಯೆಗಳಲ್ಲಿಯೂ ವಿನಿಯೋಗವಾಗಬಹುದು.

**ಸಿದ್ಧಾಂತ :** ಇವುಗಳಿಗೆ ವಿದ್ಯೆಗಳಲ್ಲಿ ಉಪಸಂಹಾರವಿಲ್ಲ. ಏಕೆಂದರೆ ಇವುಗಳಲ್ಲಿ ಹೇಳಿರುವ ಹೃದಯವೇಧವೇ ಮುಂತಾದವುಗಳಿಗೆ ವಿದ್ಯೆಗಳೊಡನೆ ಸಂಗತವಾಗುವ ಸಾಮರ್ಥ್ಯವಿಲ್ಲ. ಇವು ಬೇರೆ ಅರ್ಥಗಳಲ್ಲಿ ಪಠಿತವಾಗಿರುತ್ತವೆಯಾಗಿ ಸಂನಿಧಿಮಾತ್ರದಿಂದ ವಿದ್ಯೆಗೆ ಸಂಬಂಧಪಟ್ಟಿಲ್ಲ. ಹೀಗೆಯೇ ಪ್ರವರ್ಗ್ಯಾದಿಕರ್ಮಗಳಿಗೂ ವಿದ್ಯೆಗಳಿಗೂ ಯಾವ ಸಂಬಂಧವೂ ಇಲ್ಲ. ಬೃಹಸ್ಪತಿಸವಕ್ಕೆ ವಿನಿಯೋಗಾಂತರವನ್ನು ಸ್ಪಷ್ಟವಾಗಿ ಶ್ರುತಿಯಲ್ಲಿ ಹೇಳಿರುವದರಿಂದ ಆಗಬಹುದು. ಸಂನಿಧಿಯೋ ದುರ್ಬಲವಾಗಿರುವದರಿಂದ ಬೇರೊಂದರಲ್ಲಿ ವಿನಿಯುಕ್ತವಾಗಿರುವದನ್ನು ಅದರ ಬಲದಿಂದ ವಿದ್ಯೆಯಲ್ಲಿ ವಿನಿಯೋಗಿಸುವದು ಆಗಲಾರದು. ಆದ್ದರಿಂದ ಸಂನಿಧಿಪಾಠವು ಅರಣ್ಯಾನುವಚನವೇ ಮುಂತಾದ ಧರ್ಮಸಾಮಾನ್ಯದಿಂದ ಎಂದು ಕಲ್ಪಿಸಿಕೊಳ್ಳಬೇಕು.

# ೧೫. ಹಾನ್ಯಧಿಕರಣ

## ಒಂದನೆಯ ವರ್ಣಕ

**ವಿಷಯವೂ ಸಂಶಯವೂ :** ಕೆಲವು ಶ್ರುತಿಗಳಲ್ಲಿ ಸುಕೃತದುಷ್ಕೃತಗಳ ಹಾನವನ್ನು ಹೇಳಿದೆ, ಮತ್ತೆ ಕೆಲವುಕಡೆಗಳಲ್ಲಿ ಅವನ್ನೇ ಪ್ರಿಯರೂ ಅಪ್ರಿಯರೂ ಹಂಚಿಕೊಳ್ಳುತ್ತಾರೆಂದು ಹೇಳಿದೆ. ಇನ್ನು ಕೆಲವು ಕಡೆಗಳಲ್ಲಿ ಎರಡನ್ನೂ ಹೇಳಿದೆ. ಎಲ್ಲಿ ಬರಿಯ ಹಾನವನ್ನು ಹೇಳಿದೆಯೋ ಅಲ್ಲಿ ಸ್ವೀಕಾರವನ್ನು ಉಪಸಂಹಾರಮಾಡಿಕೊಳ್ಳಬೇಕೆ, ಬಾರದೆ ?

**ಪೂರ್ವಪಕ್ಷ:** ಶ್ರುತಿಯಲ್ಲಿಲ್ಲದ್ದರಿಂದ ಸೇರಿಸಿಕೊಳ್ಳಬಾರದು. ಶಾಖಾಂತರದಲ್ಲಿ ಹೇಳಿರುವ ಉಪಾಯನವು ವಿದ್ಯಾಂತರದ ವಿಷಯವಾದ್ದರಿಂದಲೂ ಸುಕೃತದುಷ್ಕೃತಗಳನ್ನು ಬಿಡುವವನು ತಾನು, ತೆಗೆದುಕೊಳ್ಳುವವರು ಮತ್ತೊಬ್ಬರು; ಇವೆರಡರಲ್ಲಿ ಒಂದಾದರೆ ಇನ್ನೊಂದಾಗಬೇಕೆಂಬ ಆವಶ್ಯಕತೆಯೇನೂ ಇಲ್ಲ. ಆದ್ದರಿಂದ ಹಾನವನ್ನು ಹೇಳಿರುವಲ್ಲಿ ಉಪಾಯನವನ್ನು ಸೇರಿಸಿಕೊಳ್ಳುವಹಾಗಿಲ್ಲ.

**ಸಿದ್ಧಾಂತ :** ಹಾನಶಬ್ದಕ್ಕೆ ಶೇಷವಾಗಿ ಉಪಾಯನಶಬ್ದವನ್ನು ಕೌಷೀತಕ್ಯುಪನಿಷತ್ತಿನಲ್ಲಿ ಹೇಳಿದೆ. ಆದ್ದರಿಂದ ಮಿಕ್ಕಕಡೆಗಳಲ್ಲಿ ಬರಿಯ ಹಾನಶಬ್ದವಿದ್ದರೂ ಉಪಾಯನವೂ ಸೇರಿಕೊಂಡು ಬರುತ್ತದೆ. ಇಲ್ಲಿ ಯಾವ ಅನುಷ್ಠೇಯವನ್ನೂ ಹೇಳಿಲ್ಲ; ವಿದ್ಯೆಯನ್ನು ಹೊಗಳುವದಕ್ಕಾಗಿಯೇ ಸುಕೃತದುಷ್ಕೃತಗಳ ಹಾನೋಪಾಯಗಳನ್ನು ಹೇಳಿದೆ. ಆದ್ದರಿಂದ ಸ್ತುತಿಪ್ರಕರ್ಷಕ್ಕಾಗಿ ಬರಿಯ ಹಾನವಿರುವಲ್ಲಿ ಉಪಾಯನವನ್ನು ಸೇರಿಸಿಕೊಳ್ಳುವದು ಯುಕ್ತ; ಏಕೆಂದರೆ ಒಂದು ಅರ್ಥವಾದಕ್ಕೆ ಮತ್ತೊಂದರ ಅಪೇಕ್ಷೆಯಿರುವದು ಶ್ರುತಿಪ್ರಸಿದ್ಧವಾಗಿದೆ. ಒಂದು ಶ್ರುತಿಯಲ್ಲಿರುವ ವಿಶೇಷವನ್ನು ಶ್ರುತ್ಯಂತರದಲ್ಲಿ ಸೇರಿಸಿಕೊಳ್ಳಕೂಡದೆಂದು ಹೇಳಿದರೆ ಎಲ್ಲೆಲ್ಲಿಯೂ ವಿಕಲ್ಪವೇ ಪ್ರಸಕ್ತವಾಗುತ್ತದೆ.

## ಎರಡನೆಯ ವರ್ಣಕ

**ವಿಷಯವೂ ಸಂಶಯವೂ :** "ಅಶ್ವ ಇವ ರೋಮಾಣಿ ವಿಧೂಯ" ಮುಂತಾದ ಶ್ರುತಿಗಳಲ್ಲಿ ವಿಧೂನನಶಬ್ದದಿಂದ ಸುಕೃತದುಷ್ಕೃತಗಳ ಹಾನವನ್ನು ಹೇಳಿದೆಯೆ, ಇಲ್ಲವೆ ?

**ಪೂರ್ವಪಕ್ಷ :** "ಧೂಞ್ ಕಂಪನೇ" ಎಂಬ ಧಾತುವಿನ ಅರ್ಥದಲ್ಲಿ ಅಲುಗಾಡುವದೆಂಬರ್ಥವಿದೆ. "ದೋಧೂಯನ್ತೇ ಧ್ವಜಾಗ್ರಾಣಿ" ಎಂಬಲ್ಲಿ ಗಾಳಿಯಿಂದ ಧ್ವಜಾಗ್ರಗಳು ಅಲುಗಾಡುತ್ತಿವೆ ಎಂಬರ್ಥದಲ್ಲಿ ಪ್ರಯೋಗವಿದೆ. ಆದ್ದರಿಂದ ಅಲುಗಾಡಿಸುವದೇ ವಿಧೂನನಶಬ್ದಾರ್ಥವು; ಕೆಲವುಕಾಲ ಫಲಕ್ಕೆ ಅಡ್ಡಿಮಾಡುವದೇ ಇಲ್ಲಿ ಚಾಲನವು.

**ಸಿದ್ಧಾಂತ :** ವಿಧೂನನಶಬ್ದಕ್ಕೆ ಹಾನವೆಂದೇ ಅರ್ಥ. ಏಕೆಂದರೆ ಒಬ್ಬನು ಬಿಡದೆ ಮತ್ತೊಬ್ಬರು ಸುಕೃತದುಷ್ಕೃತಗಳನ್ನು ತೆಗೆದುಕೊಳ್ಳುವದಾಗುವದಿಲ್ಲ. ಆದರೆ ತೆಗೆದುಕೊಳ್ಳುತ್ತಾರೆಂದು ಇಲ್ಲಿ ಹೇಳಿದೆ. ಒಬ್ಬರ ಸುಕೃತದುಷ್ಕೃತಗಳನ್ನು ಮತ್ತೊಬ್ಬರು ಮುಖ್ಯಾರ್ಥದಲ್ಲಿ ತೆಗೆದುಕೊಳ್ಳಲಾರರಾದರೂ ಶ್ರುತಿಯಲ್ಲಿ ಹಾಗೆಂದಿರುವದರಿಂದ ವಿಧೂನನವು ಹಾನವೆಂದೇ ನಿಶ್ಚಯವಾಗುತ್ತದೆ. ಒಂದು ಕಡೆಯಲ್ಲಿ ಮಾತ್ರ ಈ ಉಪಾಯನಶ್ರುತಿಯಿದ್ದರೂ ಎಲ್ಲಾ ಕಡೆಯಲ್ಲಿಯೂ ಹೀಗೆಂದು ನಿಶ್ಚಯಿಸುವದಕ್ಕೆ ಇದು ಸಾಕಾಗುತ್ತದೆ. ಇದಲ್ಲದೆ ಸುಕೃತದುಷ್ಕೃತಗಳು ದ್ರವ್ಯವಲ್ಲವಾದ್ದರಿಂದ ಅವನ್ನು ಅಲುಗಾಡಿಸುವದು ಆಗುವಂತಿಲ್ಲ. ಧಾತುಗಳಿಗೆ ಅನೇಕಾರ್ಥವಿರುವದೆಂದು ಒಪ್ಪಿರುವದರಿಂದ ಅಲುಗಾಡಿಸುವದು ಎಂಬರ್ಥವನ್ನು ವ್ಯಾಕರಣದಲ್ಲಿ ಹೇಳಿರುವದಕ್ಕೆ ಇದೇನೂ ವಿರುದ್ಧವಲ್ಲ.

# ೧೬. ಸಾಂಪರಾಯಾಧಿಕರಣ

**ವಿಷಯವೂ ಸಂಶಯವೂ :** ಕೌಶೀತಕ್ಯುಪನಿಷತ್ತಿನಲ್ಲಿರುವ ಪರ್ಯಂಕವಿದ್ಯೆಯಲ್ಲಿ ನಡುದಾರಿಯಲ್ಲಿ ಸುಕೃತದುಷ್ಕೃತಗಳ ತ್ಯಾಗವನ್ನು ಹೇಳಿದೆ. ಅದನ್ನು ನಡುವೆಯೇ ಬಿಡುವದೆಂದು ತಿಳಿಯಬೇಕೊ, ದೇಹವನ್ನು ಬಿಡುವಾಗಲೆ ಎಂದು ತಿಳಿಯಬೇಕೊ ?

**ಪೂರ್ವಪಕ್ಷ :** ಪ್ರಮಾಣವಾದ ಶ್ರುತಿಯಲ್ಲಿರುವಂತೆ ತಿಳಿಯುವದೇ ಯುಕ್ತ.

**ಸಿದ್ಧಾಂತ :** ದೇಹವನ್ನು ಬಿಡುವಾಗಲೇ ಸುಕೃತದುಷ್ಕೃತವಿನಿಯೋಗವಾಗುವದೆಂದು ತಿಳಿಯಬೇಕು. ಏಕೆಂದರೆ ಉಪಾಸಕನು ನಡುವೆ ಪಡೆದುಕೊಳ್ಳತಕ್ಕದ್ದೇನೂ ಇರುವದಿಲ್ಲ. ವಿದ್ಯೆಗೆ ವಿರೋಧವಾಗಿರುವದರಿಂದಲೇ ಅವುಗಳು ಕ್ಷಯವಾಗಬೇಕಷ್ಟೆ;

ಆದ್ದರಿಂದ ವಿದ್ಯೆಯು ಫಲಾಭಿಮುಖವಾದ ಕೂಡಲೆ ಅವು ತೊಲಗುವವೆಂಬುದು ಯುಕ್ತ. ಹೀಗೆಂದೇ ಬೇರೆ ಶಾಖೆಯವರು ಪಠಿಸಿಯೂ ಇರುತ್ತಾರೆ. ನಡುಹಾದಿಯಲ್ಲಿಯೇ ಇವುಗಳ ತ್ಯಾಗವನ್ನು ಅಂಗೀಕರಿಸುವದಾದರೆ ದೇಹತ್ಯಾಗವಾದ ಬಳಿಕ ಯಮನಿಯಮವಿದ್ಯಾಭ್ಯಾಸಗಳನ್ನು ಮಾಡುವದಕ್ಕೆ ಆಗುವಂತಿರುವದಿಲ್ಲವಾದ್ದರಿಂದ ಆ ಸಾಧನಗಳಿಂದ ಇವುಗಳನ್ನು ತ್ಯಜಿಸುವದು ಆಗಲೇ ಆರದು. ಆದ್ದರಿಂದ ಮೊದಲೇ ಇವುಗಳ ತ್ಯಾಗವಾಗುವದೆಂದೇ ಶ್ರುತಿಯುಕ್ತಿಗಳಿಗೆ ಹೊಂದುಗಡೆಯಾಗುವಂತೆ ಅಂಗೀಕರಿಸಬೇಕು.

## ೧೭. ಗತೇರರ್ಥವತ್ತ್ವಾಧಿಕರಣ

ವಿಷಯವೂ ಸಂಶಯವೂ : ಪುಣ್ಯಪಾಪಗಳ ಹಾನವನ್ನು ಹೇಳುವಲ್ಲಿ ಕೆಲವು ಕಡೆಗಳಲ್ಲಿ ದೇವಯಾನಮಾರ್ಗವನ್ನು ಶ್ರುತಿಯಲ್ಲಿ ಹೇಳಿದೆ, ಕೆಲವು ಕಡೆಗಳಲ್ಲಿ ಇಲ್ಲ. ಇದನ್ನು ಎಲ್ಲಾ ಕಡೆಯಲ್ಲಿಯೂ ಸೇರಿಸಿಕೊಳ್ಳಬೇಕೊ, ಬಾರದೊ ?

ಪೂರ್ವಪಕ್ಷ : ಹಾನಕ್ಕೆ ಉಪಾಯನವನ್ನು ಎಲ್ಲೆಲ್ಲಿಯೂ ಸೇರಿಸಿಕೊಂಡಂತೆ ಇಲ್ಲಿಯೂ ದೇವಯಾನವನ್ನು ಎಲ್ಲಾ ಕಡೆಗಳಲ್ಲಿಯೂ ಸೇರಿಸಿಕೊಳ್ಳಬೇಕು.

ಸಿದ್ಧಾಂತ : ಹೊಂದುವ ಕಡೆ ಇವನ್ನು ಸೇರಿಸಿಕೊಳ್ಳಬೇಕು ; ಮಿಕ್ಕ ಕಡೆ ಸೇರಿಸಿಕೊಳ್ಳಬಾರದು. ಏಕೆಂದರೆ "ಪುಣ್ಯಪಾಪಗಳನ್ನು ಕೊಡವಿಕೊಂಡು ನಿರಂಜನವಾಗಿ ಪರಮಸಾಮ್ಯವನ್ನು ಹೊಂದುತ್ತಾನೆ" (ಮುಂ. ೩-೧-೩) ಇಂಥ ಶ್ರುತಿಯಿರುವಲ್ಲಿ ದೇಶಾಂತರಕ್ಕೆ ಹೋಗುವ ಗತಿಯು ಹೊಂದುವದೇ ಇಲ್ಲ. ಸಗುಣೋಪಾಸನೆಗಳನ್ನು ಹೇಳಿರುವಲ್ಲಿ ಈ ಗತಿಯು ಹೊಂದುತ್ತದೆ. ಆದ್ದರಿಂದ ಎಲ್ಲಾ ಕಡೆಯಲ್ಲಿಯೂ ದೇವಯಾನವನ್ನು ಸೇರಿಸಿಕೊಳ್ಳಬಾರದು.

## ೧೮. ಅನಿಯಮಾಧಿಕರಣ

ವಿಷಯವೂ ಸಂಷಯವೂ : ಸಗುಣವಿದ್ಯೆಗಳಲ್ಲಿಯೂ ಕೆಲವು ಕಡೆಗಳಲ್ಲಿ ಗತಿಯನ್ನು ಹೇಳಿದೆ, ಕೆಲವು ಕಡೆಗಳಲ್ಲಿ ಹೇಳಿಲ್ಲ. ಅಲ್ಲಿ ಎಲ್ಲಾ ಕಡೆಯಲ್ಲಿಯೂ ಈ ಗತಿಯನ್ನು ಸೇರಿಸಿಕೊಳ್ಳಬೇಕೊ, ಬಾರದೊ ?

ಪೂರ್ವಪಕ್ಷ : ಎಲ್ಲಿ ಶ್ರುತಿಯಿದೆಯೋ ಅಲ್ಲಿಗೇ ಗತಿಯುನ್ನು ಇಟ್ಟುಕೊಳ್ಳಬೇಕು. ಒಂದೇ ಗತಿಯನ್ನು ಉಪಕೋಸಲವಿದ್ಯೆ, ಪಂಚಾಗ್ನಿವಿದ್ಯೆ- ಇವುಗಳೆರಡರಲ್ಲಿಯೂ ಹೇಳಿದೆ; ಗತಿಯನ್ನು ಎಲ್ಲಾ ಕಡೆಯಲ್ಲಿಯೂ ಸೇರಿಸಿಕೊಳ್ಳಬೇಕಾಗಿದ್ದರೆ ಈ ಪುನರುಕ್ತಿಗೆ ಕಾರಣವಿಲ್ಲ.

ಸಿದ್ಧಾಂತ : ಸಗುಣವಿದ್ಯೆಗಳಿಗೆಲ್ಲ ಈ ದೇವಯಾನಗತಿಯನ್ನು ಸೇರಿಸಿಕೊಳ್ಳಬೇಕು. ಏಕೆಂದರೆ ಶ್ರುತಿಸ್ಮೃತಿಗಳಲ್ಲಿ ಹಾಗೆಂದಿದೆ. ಛಾಂದೋಗ್ಯದಲ್ಲಿ ಪಂಚಾಗ್ನಿವಿದ್ಯೆಯಲ್ಲಿ ದೇವಯಾನಮಾರ್ಗವನ್ನು ಹೇಳಿರುವದಲ್ಲದೆ ಬೇರೆ ಉಪಾಸನೆಗಳಲ್ಲಿ ನಿರತರಾದವರಿಗೂ ಈ ಗತಿಯನ್ನು ಹೇಳಿರುತ್ತದೆ. ಬೃಹದಾರಣ್ಯಕದಲ್ಲಿಯೂ ಸತ್ಯರೂಪವಾದ ಬ್ರಹ್ಮವನ್ನು ಉಪಾಸನೆಮಾಡುವವರಿಗೆ ಈ ಗತಿಯಾಗುವದೆಂದು ಹೇಳಿದೆ. ಈ ಪಿತೃಯಾಣ ದೇವಯಾನಗಳಿಲ್ಲದವರಿಗೆ ಅಧೋಗತಿಯನ್ನು ಶ್ರುತಿಯು ಹೇಳುವದರಿಂದ ಉಪಾಸಕರಿಗೆ ವಿದ್ಯಾಬಲದಿಂದ ದೇವಯಾನಪ್ರಾಪ್ತಿಯೇ ಆಗುವದೆಂದು ಸೂಚಿಸಿರುತ್ತದೆ. ಗೀತೆಯಲ್ಲಿಯೂ ಉಪಾಸಕರಿಗೆ ದೇವಯಾನವನ್ನು ಹೇಳಿದೆ. ಪಂಚಾಗ್ನಿವಿದ್ಯೆಯಲ್ಲಿಯೂ ಉಪ

ಕೋಸಲವಿದ್ಯೆಯಲ್ಲಿಯೂ ದೇವಯಾನವನ್ನು ಹೇಳಿರುವದು ಆ ಎರಡು ಕಡೆಯಲ್ಲಿಯೂ ಅನುಚಿಂತನೆಮಾಡಬೇಕೆಂಬುದಕ್ಕೆ. ಆದ್ದರಿಂದ ಶ್ರುತಿಯಲ್ಲಿ ಹೇಳಿರುವಷ್ಟಕ್ಕೇ ಈ ಮಾರ್ಗವನ್ನು ನಿಯತವೆಂದು ಭಾವಿಸಬಾರದು.

## ೧೯. ಯಾವದಧಿಕಾರಾಧಿಕರಣ

**ವಿಷಯವೂ ಸಂಶಯವೂ :** ಜ್ಞಾನಿಗೆ ಈ ದೇಹವು ಬಿದ್ದುಹೋದ ಬಳಿಕ ದೇಹಾಂತರವು ಉತ್ಪನ್ನವಾಗುವದೊ, ಇಲ್ಲವೊ ? ಬ್ರಹ್ಮಜ್ಞಾನಿಗಳೂ ಕೆಲವರು ದೇಹಾಂತರವನ್ನು ಸ್ವೀಕರಿಸಿದರೆಂದು ಶ್ರುತಿಸ್ಮೃತಿಗಳಲ್ಲಿ ಕಂಡುಬರುವದರಿಂದ ಈ ಸಂಶಯವುಂಟಾಗುತ್ತದೆ.

**ಪೂರ್ವಪಕ್ಷ :** ಉಕ್ತದೃಷ್ಟಾಂತಗಳಿಂದ ಬ್ರಹ್ಮಜ್ಞಾನಿಗಳಿಗೂ ಮೋಕ್ಷವು ಆಗದೆ ಇರಬಹುದು, ಅಥವಾ ಮೋಕ್ಷಕ್ಕೆ ಜ್ಞಾನವು ಕಾರಣವಲ್ಲದೆ ಹೋಗಬಹುದು.

**ಸಿದ್ಧಾಂತ :** ದೃಷ್ಟಾಂತಗಳಲ್ಲಿ ಹೇಳಿರುವ ಪುರುಷರು ಆಧಿಕಾರಿಕಪುರುಷರು. ಪರಮೇಶ್ವರನಿಯುಕ್ತವಾದ ಅಧಿಕಾರವನ್ನು ನಿರ್ವಹಿಸಿದ ಬಳಿಕ, ಈಗಿನ ಬ್ರಹ್ಮಜ್ಞಾನಿಗಳು ಆರಬ್ಧಭೋಗಾಂತದಲ್ಲಿ ಕೈವಲ್ಯವನ್ನು ಅನುಭವಿಸುವಂತೆ, ಅವರೂ ಮೋಕ್ಷವನ್ನು ಪಡೆದುಕೊಳ್ಳುತ್ತಾರೆ. ಒಂದು ಸಲ ಪ್ರಾರಂಭವಾಗಿರುವ ಕರ್ಮಾಶಯವೇ ಅವರಿಗೆ ದೇಹಾಂತರಗಳನ್ನು ಕೊಡುತ್ತದೆ. ಅವಿದ್ಯಾದಿಗಳು ಜ್ಞಾನದಿಂದ ಸುಟ್ಟುಹೋದ ಬಳಿಕ ಕರ್ಮದಲ್ಲಿ ಒಂದು ಭಾಗವು ಉಳಿದುಕೊಳ್ಳುವದೆಂದು ಕಲ್ಪಿಸುವದು ಯುಕ್ತಿವಿರುದ್ಧ. ಕೆಲವರು ಋಷಿಗಳು ಐಶ್ವರ್ಯವೇ ಮುಂತಾದವುಗಳನ್ನು ಕೊಡುವ ಬೇರೆಯ ಉಪಾಸನೆಗಳಲ್ಲಿ ನಿರತರಾಗಿದ್ದು ಆ ಐಶ್ವರ್ಯವು ಕ್ಷಯವಾಗಲು ವಿರಕ್ತರಾಗಿ ಪರಮಾತ್ಮಜ್ಞಾನದಿಂದ ಮುಕ್ತರಾದರು ಎಂದೂ ಕಲ್ಪಿಸಬಹುದು. "ತತ್ತ್ವಮಸಿ" ಎಂಬ ಜ್ಞಾನದ ಫಲವು ಪ್ರತ್ಯಕ್ಷವಾಗಿರುವದರಿಂದ ಜ್ಞಾನದಿಂದ ಮುಕ್ತರಾಗುವರೊ, ಇಲ್ಲವೊ– ಎಂಬ ಶಂಕೆಗೂ ಕಾರಣವಿಲ್ಲ.

## ೨೦. ಅಕ್ಷರಧ್ಯಧಿಕರಣ

**ವಿಷಯವೂ ಸಂಶಯವೂ :** ಪರಬ್ರಹ್ಮದ ವಿಷಯಕ್ಕೆ ಬೃಹದಾರಣ್ಯಕ (೩–೮–೮) ದಲ್ಲಿರುವ 'ಅಸ್ಥೂಲಮನಣು' ಮುಂತಾದ ಧರ್ಮಗಳನ್ನೂ ಮುಂಡಕದಲ್ಲಿರುವ "ಯತ್ತದದ್ರೇಶ್ಯಮಗ್ರಾಹ್ಯಮ್" ಮುಂತಾದ ಧರ್ಮಗಳನ್ನೂ ಹೀಗೆಯೇ ಮಿಕ್ಕ ಶ್ರುತಿಗಳಲ್ಲಿರುವ ವಿಶೇಷನಿಷೇಧರೂಪವಿಶೇಷಣಗಳನ್ನೂ ಎಲ್ಲಾ ಕಡೆಯಲ್ಲಿಯೂ ಸೇರಿಸಿಕೊಳ್ಳಬೇಕೆ,ಬಾರದೆ?

**ಪೂರ್ವಪಕ್ಷ:** ಬೇರೆಬೇರೆ ಶ್ರುತಿಗಳಲ್ಲಿ ಹೇಳಿರುವದರಿಂದ ಅಲ್ಲಲ್ಲಿ ಅಷ್ಟಷ್ಟೇ ವಿಶೇಷಣಗಳನ್ನು ತಿಳಿಯಬೇಕು.

**ಸಿದ್ಧಾಂತ :** ವಿಶೇಷನಿರಾಕರಣರೂಪವಾದ ಬ್ರಹ್ಮಪ್ರತಿಪಾದನೆಯು ಎಲ್ಲಾ ಕಡೆಯಲ್ಲಿಯೂ ಒಂದೇ ಆಗಿದೆ. ಪ್ರತಿಪಾದ್ಯಬ್ರಹ್ಮವೂ ಒಂದೇ ಆಗಿದೆ. ಸಾಮವೇದದಲ್ಲಿ ಹೇಳಿರುವ ಪುರೋಡಾಶಪ್ರದಾನಮಂತ್ರಗಳನ್ನು ಅಧ್ವರ್ಯುಗಳು ಉಪಯೋಗಿಸುವದು ; ಏಕೆಂದರೆ ಪುರೋಡಾಶಪ್ರದಾನವು ಅಧ್ವರ್ಯುಕರ್ತೃಕವಾಗಿದೆ, ಪ್ರಧಾನಕ್ಕೆ ಅಂಗಗಳು ಅಧೀನವಾಗಿವೆ. ಇದರಂತೆ ಇಲ್ಲಿಯೂ ಅಕ್ಷರವೆಂಬ ಪರಬ್ರಹ್ಮದ ವಿಶೇಷಣಗಳು ಎಲ್ಲಿದ್ದರೂ ಅಕ್ಷರಕ್ಕೆ ಸೇರಿಸಿಕೊಳ್ಳಬೇಕು.

## ೨೧. ಇಯದಧಿಕರಣ

**ವಿಷಯವೂ ಸಂಶಯವೂ :** "ದ್ವಾ ಸುಪರ್ಣಾ" ಎಂಬ ಮಂತ್ರವು ಮುಂಡಕ ಶ್ವೇತಾಶ್ವರಗಳಲ್ಲಿದೆ; "ಋತಂ ಪಿಬನ್ತೌ" ಎಂದು ಕಠದಲ್ಲಿದೆ. ಇವೆರಡರಲ್ಲಿಯೂ ಒಂದೇ ವಿದ್ಯೆಯನ್ನು ಹೇಳಿವೆಯೆ, ಬೇರೆಬೇರೆ ವಿದ್ಯೆಗಳನ್ನು ಹೇಳಿವೆಯೆ ?

**ಪೂರ್ವಪಕ್ಷ:** ಬೇರೆಬೇರೆ ವಿದ್ಯೆಗಳಿವು. "ದ್ವಾ ಸುಪರ್ಣಾ" ಎಂಬಲ್ಲಿ ಒಬ್ಬನು ಭೋಕ್ತೃ, ಋತಂ ಪಿಬನ್ತೌ ಎಂಬಲ್ಲಿ ಇಬ್ಬರೂ ಭೋಕ್ತೃಗಳು. ಆದ್ದರಿಂದ ವೇದ್ಯ ರೂಪವು ಬೇರೆಬೇರೆಯಾಗಿರುವದರಿಂದ ವಿದ್ಯೆಗಳೂ ಬೇರೆಬೇರೆ.

**ಸಿದ್ಧಾಂತ :** ವಿದ್ಯೆಯು ಒಂದೇ. ಏಕೆಂದರೆ ಇವೆರಡು ಕಡೆಗಳಲ್ಲಿಯೂ ಜೀವ ದ್ವಿತೀಯನಾದ ಈಶ್ವರನನ್ನು ಪ್ರತಿಪಾದಿಸಿದೆ. ಇದು ಪರಮಾತ್ಮಪ್ರಕರಣವು. ಇದಲ್ಲದೆ ಪರಮಾತ್ಮನೊಡನೆ ತಾದಾತ್ಮ್ಯವನ್ನು ಹೇಳುವದಕ್ಕೆ ಜೀವನನ್ನು ತೆಗೆದುಕೊಂಡಿದೆ. ಪರಮಾತ್ಮವಿದ್ಯೆಯಲ್ಲಿ ಭೇದಾಭೇದಚಿಂತೆಯಿಲ್ಲ. ಆದ್ದರಿಂದ ಈ ಮೂರು ಕಡೆಗಳಲ್ಲಿಯೂ ಬ್ರಹ್ಮಧರ್ಮಗಳನ್ನು ಉಪಸಂಹಾರಮಾಡಿಕೊಂಡು ತಿಳಿಯಬೇಕು.

## ೨೨. ಅಂತರತ್ವಾಧಿಕರಣ

**ವಿಷಯವೂ ಸಂಶಯವೂ :** ಬೃಹದಾರಣ್ಯಕದಲ್ಲಿ ಉಷಸ್ತಕಹೋಲಪ್ರಶ್ನೆಗಳಲ್ಲಿ "ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ" ಎಂದು ಹೇಳಿರುವದು ಒಂದೇ ವಿದ್ಯೆಯೋ, ಬೇರೆಬೇರೆಯೊ ?

**ಪೂರ್ವಪಕ್ಷ:** ಎರಡು ಸಲ ಹೇಳಿರುವದರಿಂದ ಬೇರೆಬೇರೆ. ಅಭ್ಯಾಸದಿಂದ ಕರ್ಮಭೇದವಾಗುವಂತೆ ಅಭ್ಯಾಸದಿಂದ ವಿದ್ಯಾಭೇದವೆಂದೊಪ್ಪಬೇಕು.

**ಸಿದ್ಧಾಂತ:** ಸರ್ವಾಂತರನಾದ ಆತ್ಮನನ್ನೇ ಎರಡು ಕಡೆಯಲ್ಲಿಯೂ ಹೇಳಿದೆ. ಇಬ್ಬರು ಆತ್ಮರು ಒಂದೇ ದೇಹದಲ್ಲಿರುವಂತಿಲ್ಲ. ಸರ್ವಭೂತಗಳಲ್ಲಿಯೂ ಒಬ್ಬನೇ ಸರ್ವಾಂತರಾತ್ಮನಿರುವನೆಂದು ಶ್ರುತಿಯೂ ಇದೆ. ತಾಂಡಿಗಳ ಉಪನಿಷತ್ತಿನಲ್ಲಿ "ತತ್ತ್ವಮಸಿ" ಎಂದು ಒಂಬತ್ತು ಸಲ ಹೇಳಿದ್ದರೂ ಆಶಂಕಾಂತರನಿರಾಕರಣಕ್ಕಾಗಿ ಒಬ್ಬನನ್ನೇ ಹೇಳಿದೆ ಎಂದು ನಿರ್ಣಯಿಸುವಂತೆ ಇಲ್ಲಿಯೂ ಮೊದಲನೆಯ ಬ್ರಾಹ್ಮಣದಲ್ಲಿ ಆತ್ಮನ ಅಸ್ತಿತ್ವವನ್ನೂ ಎರಡನೆಯ ಬ್ರಾಹ್ಮಣದಲ್ಲಿ ಅವನಿಗೇ ಅಶನಾಯಾದ್ಯತೀತತ್ವವನ್ನೂ ಹೇಳಿದೆ ಎಂದು ನಿರ್ಣಯಿಸಬಹುದು. ಆದ್ದರಿಂದ ಒಂದೇ ವಿದ್ಯೆ.

## ೨೩. ವ್ಯತಿಹಾರಾಧಿಕರಣ

**ವಿಷಯವೂ ಸಂಶಯವೂ :** ಐತರೇಯಿಗಳೂ ಜಾಬಾಲರೂ ಜೀವನು ಈಶ್ವರರೂಪನೆಂದೂ ಈಶ್ವರನೇ ಜೀವನೆಂದೂ ಪಠಿಸಿದಾರೆ. ಇಲ್ಲಿ ಎರಡೂ ರೂಪವಾದ ಮತಿಯನ್ನು ಮಾಡಬೇಕೆ, ಒಂದೇ ರೂಪವಾಗಿ ಮಾಡಿದರೆ ಸಾಕೆ ?

**ಪೂರ್ವಪಕ್ಷ :** ಒಂದೇ ರೂಪವಾಗಿ ಚಿಂತಿಸಬೇಕು. ಏಕೆಂದರೆ ಇಲ್ಲಿ ಏಕತ್ವವೊಂದನ್ನೇ ಹೇಳಿದೆ. ಮತ್ತೇನಾದರೂ ವಿಶೇಷವನ್ನು ಹೇಳಿದೆ ಎನ್ನುವದಾದರೆ, ಆಗ ದೋಷವುಂಟಾಗುವದು. ಹೇಗೆಂದರೆ ಸಂಸಾರಿಯನ್ನು ಈಶ್ವರನೆಂದು ಚಿಂತಿಸಿದರೆ

ಉತ್ಕರ್ಷವಾಗುವದು, ಈಶ್ವರನನ್ನು ಜೀವನೆಂದು ಚಿಂತಿಸಿದರೆ ನಿಕರ್ಷವಾಗುವದು. ಆದ್ದರಿಂದ ಒಂದೇ ಮತಿಯನ್ನು ಮಾಡಬೇಕು. ಎರಡು ಬಗೆಯಲ್ಲಿ ಪಠಿಸಿರುವದು ಏಕತ್ವದ ದೃಢೀಕಾರಕ್ಕೆ.

ಸಿದ್ಧಾಂತ : ಸರ್ವಾತ್ಮತ್ವವೇ ಮುಂತಾದ ಗುಣಗಳಂತೆ ಇಲ್ಲಿ ಎರಡು ಬಗೆಯಿಂದಲೂ ಚಿಂತನೆಮಾಡಬೇಕೆಂಬೇ ಹೇಳಿದೆ. ಹಾಗಿಲ್ಲದಿದ್ದರೆ ಎರಡು ಬಗೆಯ ಪಾಠವು ವ್ಯರ್ಥವಾಗುವದು. ಈ ಪ್ರಕಾರದಿಂದ ಏಕತ್ವವನ್ನೇ ಚಿಂತನೆಮಾಡಿದಂತೆ ಆಗುತ್ತವೆ; ಶ್ರುತಿಗನುಸಾರವಾಗಿ ಎರಡು ಬಗೆಯಿಂದಲೂ ಚಿಂತಿಸಬೇಕು, ಅದರ ಫಲವಾಗಿ ಏಕತ್ವ ದೃಢೀಕಾರವು ತಾನೇ ಸಿದ್ಧಿಸುತ್ತವೆ.

## ೨೪. ಸತ್ಯಾದ್ಯಧಿಕರಣ

ವಿಷಯವೂ ಸಂಶಯವೂ : ಬೃಹದಾರಣ್ಯಕದಲ್ಲಿ ಸತ್ಯವಿದ್ಯೆಯನ್ನು ವಿಧಿಸಿದ ಬಳಿಕ "ತದ್ಯತ್ತತ್ಸತ್ಯಮ್" ಎಂದು ಪಠಿಸಿರುವದು ಬೇರೆ ವಿದ್ಯೆಯನ್ನು ಹೇಳುವದೆ, ಒಂದೇ ವಿದ್ಯೆಯನ್ನು ಹೇಳುವದೆ ?

ಪೂರ್ವಪಕ್ಷ: ಇವು ಎರಡು ವಿದ್ಯೆಗಳು. ಏಕೆಂದರೆ ಬೇರೆಬೇರೆ ಫಲಗಳನ್ನು ಹೇಳಿದೆ. "ತದ್ಯತ್ತತ್ಸತ್ಯಮ್" ಎಂದು ಪ್ರಕೃತಾಕರ್ಷಣಮಾಡಿರುವದು ಉಪಾಸ್ಯವು ಒಂದೇ ಎಂಬ ಕಾರಣದಿಂದ.

ಸಿದ್ಧಾಂತ : ಒಂದೇ ಸತ್ಯವಿದ್ಯೆಯಿಂದು. ಏಕೆಂದರೆ ಪ್ರಕೃತಾಕರ್ಷಣವಿದೆ. ವಿದ್ಯೆಗಳು ಬೇರೆ ಬೇರೆ ಎಂಬುದಕ್ಕೆ ಇಲ್ಲಿ ಕಾರಣಾಂತರವು ಯಾವದೂ ಇಲ್ಲವಾದ್ದರಿಂದ ಹಿಂದಿನ ವಿದ್ಯೆಗೆ ಸೇರಿಯೇ ಪ್ರಕೃತಾಕರ್ಷಣವನ್ನು ಮಾಡಿದೆ ಎಂದು ನಿರ್ಣಯಿಸುವದು ಯುಕ್ತ. ಅಹರಿತಿ ಅಹಮಿತಿ– ಎಂದು ಅಂಗಾಂತರವನ್ನು ಹೇಳಿರುವದನ್ನು ಹೊಗಳುವದಕ್ಕಾಗಿ ಫಲಭೇದವನ್ನು ಹೇಳಿದೆ. ಅರ್ಥವಾದದಿಂದಲೇ ಫಲವನ್ನು ಕಲ್ಪಿಸಬೇಕಾಗಿರುವದರಿಂದಲೂ ಇದು ಒಂದೇ ವಿದ್ಯೆಯಾಗಿರುವದರಿಂದಲೂ ಬಹುಫಲಗಳನ್ನು ಆ ವಿದ್ಯೆಗೇ ಸೇರಿಸಿಕೊಳ್ಳುವದು ಯುಕ್ತ. ಆದ್ದರಿಂದ ಇದೊಂದೇ ಸತ್ಯವಿದ್ಯೆ.

## ೨೫. ಕಾಮಾದ್ಯಧಿಕರಣ

ವಿಷಯವೂ ಸಂಶಯವೂ : ಛಾಂದೋಗ್ಯದಲ್ಲಿ "ಏಷ ಆತ್ಮಾ ಅಪಹತಪಾಪ್ಮಾ" (ಛಾಂ. ೮–೧–೫) ಎಂದು ಮುಂತಾಗಿ ಹೇಳಿರುವದೂ ಬೃಹದಾರಣ್ಯಕದಲ್ಲಿ "ಸ ವಾ ಏಷ ಮಹಾನಜ ಆತ್ಮಾ" (ಬೃ. ೪–೪–೨೨) ಎಂದು ಮುಂತಾಗಿ ಹೇಳಿರುವದೂ ಒಂದೇ ವಿದ್ಯೆಯೆ, ಅಥವಾ ಬೇರೆಬೇರೆಯೆ ?

ಪೂರ್ವಪಕ್ಷ : ಬೇರೆಬೇರೆ; ಏಕೆಂದರೆ ಶ್ರುತಿಗಳಲ್ಲಿ ಬೇರೆಬೇರೆ ಹೇಳಿದೆ.

ಸಿದ್ಧಾಂತ : ಹೃದಯವೆಂಬ ಆಯತನವು ಸಮಾನವಾಗಿದೆ, ವೇದ್ಯನಾದ ಈಶ್ವರನೂ ಸಮಾನವಾಗಿರುತ್ತಾನೆ, ಅವನಿಗೆ ಹೇಳಿರುವ ಸೇತುತ್ವಾದಿಧರ್ಮಗಳೂ ಸಮಾನವಾಗಿವೆ. ಆದರೆ ಇಲ್ಲಿ ಛಾಂದೋಗ್ಯದಲ್ಲಿ ಸಗುಣವಿದ್ಯೆಯನ್ನು ಹೇಳಿದೆ, ಬೃಹದಾರಣ್ಯಕದಲ್ಲಿ ನಿರ್ಗುಣವಿದ್ಯೆಯನ್ನೇ ಹೇಳಿದೆ. ಗುಣವುಳ್ಳ ಬ್ರಹ್ಮವು ಒಂದೇ ಆಗಿರುವದರಿಂದ ಅದರ ವಿಭೂತಿಗಳನ್ನು ತಿಳಿಸುವದಕ್ಕಾಗಿ ಇಲ್ಲಿ ಗುಣೋಪಸಂಹಾರವನ್ನು ಹೇಳಿದೆಯೇ ಹೊರತು ಉಪಾಸನೆಗಲ್ಲ.

## ೨೬. ಆದರಾಧಿಕರಣ

**ವಿಷಯವೂ ಸಂಶಯವೂ :** ವೈಶ್ವಾನರವಿದ್ಯೆಯಲ್ಲಿ ಹೇಳಿರುವ ಪ್ರಾಣಾಗ್ನಿಹೋತ್ರವು ಭೋಜನಲೋಪವಾದರೆ ತಾನೂ ಇಲ್ಲವಾಗುವದೊ, ಅಥವಾ ಉಳಿದುಕೊಂಡಿರುವದೊ ?

**ಪೂರ್ವಪಕ್ಷ :** ಅದನ್ನು ಆಗಲೂ ಮಾಡಬೇಕು. ಏಕೆಂದರೆ ಶ್ರುತಿಯಲ್ಲಿ ಅತಿಥಿಭೋಜನವನ್ನು ಮೊದಲು ಮಾಡಿಸಬಾರದೆಂದು ನಿಂದಿಸಿ ಪ್ರಾಣಾಗ್ನಿಹೋತ್ರವನ್ನು ಮಾಡುವ ಯಜಮಾನನಿಗೇ ಮೊದಲು ಭೋಜನವಾಗಬೇಕೆಂದು ಹೇಳಿ ಅದರಲ್ಲಿ ಆದರವನ್ನು ತೋರಿಸುತ್ತದೆ. ಆದ್ದರಿಂದ ಭೋಜನಲೋಪವಾದರೂ ದ್ರವ್ಯಾಂತರದಿಂದ ಅಗ್ನಿಹೋತ್ರವನ್ನು ಮಾಡಬೇಕು.

**ಸಿದ್ಧಾಂತ :** ಭೋಜನದ್ರವ್ಯದಿಂದಲೇ ಮಾಡಬೇಕು ಎಂದು ಹೇಳಿರುವದರಿಂದ ಭೋಜನಲೋಪವಾದರೆ ಅದಕ್ಕೂ ಲೋಪವೇ. ಇದರಲ್ಲಿ ಪ್ರಾಕೃತಾಗ್ನಿಹೋತ್ರದ ಧರ್ಮಗಳೇನೂ ಇಲ್ಲ. ಭೋಜನಕಾಲವನ್ನೇ ಇದಕ್ಕೆ ಹೇಳಿರುವದರಿಂದ ಅಗ್ನಿಹೋತ್ರದ ಕಾಲವೂ ಇದಕ್ಕಿಲ್ಲ. ಆದರಶ್ರುತಿಯು ಭೋಜನಪಕ್ಷದಲ್ಲಿ ಪ್ರಾಥಮ್ಯವನ್ನು ಹೇಳುವದಕ್ಕೆ ಬಂದಿದೆಯೇ ಹೊರತು ಈ ಅಗ್ನಿಹೋತ್ರವು ನಿತ್ಯವೆಂದು ತಿಳಿಸುವದಕ್ಕೆ ಬಂದಿಲ್ಲ.

## ೨೭. ತನ್ನಿರ್ಧಾರಣಾಧಿಕರಣ

**ವಿಷಯವೂ ಸಂಶಯವೂ :** ಕರ್ಮಾಂಗವನ್ನವಲಂಬಿಸಿದ ಉದ್ಗೀಥವೇ ಮುಂತಾದವುಗಳ ಉಪಾಸನೆಗಳಿವೆಯಷ್ಟೆ. ಅವು ನಿತ್ಯವೊ, ಅನಿತ್ಯವೊ ?

**ಪೂರ್ವಪಕ್ಷ :** ನಿತ್ಯವೇ. ಏಕೆಂದರೆ ಅನಾರಭ್ಯಾಧೀತವಾಗಿದ್ದರೂ ಇವು ಉದ್ಗೀಥಾದಿದ್ವಾರದಿಂದ ಕ್ರತುಸಂಬದ್ಧವಾಗಿರುವದರಿಂದ ಮಿಕ್ಕ ಅಂಗಗಳಂತೆ ಇವೂ ಕ್ರತುಪ್ರಯೋಗವಚನಕ್ಕೇ ಸಂಬಂಧಿಸಿರುತ್ತವೆ. ಇವಕ್ಕೆ ಫಲವನ್ನು ಹೇಳಿರುವದು ಅರ್ಥವಾದಮಾತ್ರ. ಆದ್ದರಿಂದ "ಪರ್ಣಮಯೀ ಜುಹೂರ್ಭವತಿ" ಮುಂತಾದವುಗಳಂತೆ ಇವನ್ನು ನಿತ್ಯವೆಂದು ಎಣಿಸಬೇಕು.

**ಸಿದ್ಧಾಂತ :** ಇವು ಕರ್ಮಗಳಿಗೆ ನಿತ್ಯವಾಗಿ ಸಂಬದ್ಧವಾಗಿರುವದಿಲ್ಲ. ಇವುಗಳು ಅನಿಯತವೆಂಬುದನ್ನು "ತೇನೋಭೌ ಕುರುತೋ ಯಶ್ಚೈತದೇವಂ ವೇದ ಯಶ್ಚ ನ ವೇದ" ಎಂಬುದೇ ಮುಂತಾದ ಶ್ರುತಿಯು ತಿಳಿಸುತ್ತದೆ. ಈ ಬಗೆಯ ಉಪಾಸನೆಗೆ ಬೇರೆ ಫಲವನ್ನು ಹೇಳಿದೆ. ಪರ್ಣಮಯೀತ್ವಾದಿಗಳು ಕ್ರಿಯಾರೂಪವಲ್ಲದ್ದರಿಂದಲೂ ಅವಕ್ಕೆ ಸ್ವತಂತ್ರಫಲವನ್ನೂ ಕಲ್ಪಿಸುವದು ಆಗುವಂತಿಲ್ಲವಾದ್ದರಿಂದಲೂ ಅವುಗಳಿಗೆ ಕ್ರತುಪ್ರವೇಶವು ಯುಕ್ತವು. ಆದರೆ ಉಪಾಸನೆಗಳು ಕ್ರಿಯಾತ್ಮಕವಾಗಿರುವದರಿಂದಲೂ ಅವನ್ನು ಬೇರೆಯಾಗಿ ವಿಧಿಸಬಹುದಾಗಿದೆ ; ಅವಕ್ಕೆ ಫಲವೂ ಬೇರೆಯಾಗಿರಬಹುದಾಗಿದೆ. ಆದ್ದರಿಂದ ಕ್ರತ್ವಾಶ್ರಯವಾದ ಗೋದೋಹನಾದಿಗಳಂತೆ ಇವೂ ಅನಿತ್ಯವೇ. ಆದ್ದರಿಂದಲೇ ಇವನ್ನು ಕಲ್ಪಸೂತ್ರಗಳಲ್ಲಿ ಸೇರಿಸಿಲ್ಲ.

## ೨೮. ಪ್ರದಾನಾಧಿಕರಣ

**ವಿಷಯವೂ ಸಂಶಯವೂ :** ಬೃಹದಾರಣ್ಯಕದಲ್ಲಿ "ವದಿಷ್ಯಾಮ್ಯೇವೇಹಾಮಿತಿ ವಾಗ್ದಧ್ರೇ" ಎಂದು ಪ್ರಾರಂಭಿಸಿ ಅಧ್ಯಾತ್ಮವಾಗಿ ಪ್ರಾಣವನ್ನೂ ಅಧಿದೈವವಾಗಿ ವಾಯು

ವನ್ನೂ ಶ್ರೇಷ್ಠನೆಂದು ಗೊತ್ತುಪಡಿಸಿದೆ. ಹೀಗೆಯೇ ಛಾಂದೋಗ್ಯದಲ್ಲಿ ಪ್ರಾಣವಾಯು ಗಳನ್ನು ಸಂವರ್ಗಗಳೆಂದು ನಿರ್ಧರಿಸಿದೆ. ಈ ವಾಯುಪ್ರಾಣಗಳು ಬೇರೆಬೇರೆಯೋ, ಒಂದೆ ?

**ಪೂರ್ವಪಕ್ಷ:** ಒಂದೇ. ಏಕೆಂದರೆ ಇವು ಒಂದೇ ತತ್ತ್ವವೆಂದು ಶ್ರುತಿಯಲ್ಲಿ ಹೇಳಿದೆ.

**ಸಿದ್ಧಾಂತ:** ಇವುಗಳನ್ನು ಬೇರೆಬೇರೆಯೇ ಉಪಾಸನೆಮಾಡಬೇಕು. ಏಕೆಂದರೆ ಇವನ್ನು ಬೇರೆಬೇರೆಯಾಗಿ ಉಪಾಸನೆಮಾಡಬೇಕೆಂದು ಉಪದೇಶಿಸಿದೆ. ತತ್ತ್ವತಃ ಭೇದ ವಿಲ್ಲದಿದ್ದರೂ ಅವಸ್ಥಾಭೇದವಿರುವದರಿಂದ ಉಪದೇಶಭೇದವಶದಿಂದ ಬೇರೆಬೇರೆಯಾಗಿ ಚಿಂತಿಸುವದೇ ಯುಕ್ತ. ತ್ರಿಪುರೋಡಾಶೇಷ್ಟಿಯಲ್ಲಿ ಇಂದ್ರ ರಾಜ, ಇಂದ್ರ ಅಧಿರಾಜ ಇಂದ್ರ ಸ್ವರಾಜ – ಎಂದು ಬೇರೆಬೇರೆ ದೇವತೆಗಳೆಂದು ಪ್ರದಾನಪೃಥಕ್ತ್ವವನ್ನು ಹೇಳಿರುವಂತೆ ಇಲ್ಲಿಯೂ ಬೇರೆಬೇರೆ ಎಂದೇ ಚಿಂತಿಸಬೇಕೆಂದು ನಿಶ್ಚಯಿಸಬೇಕು

# ೨೯. ಲಿಂಗಭೂಯಸ್ತ್ವಾಧಿಕರಣ

**ವಿಷಯವೂ ಸಂಶಯವೂ:** ಅಗ್ನಿರಹಸ್ಯದಲ್ಲಿ ಹೇಳಿರುವ ಮನಶ್ಚಿದಾದಿಗಳು ಕ್ರಿಯಾನುಪ್ರವೇಶಿಗಳೆಂದು ತಿಳಿಯಬೇಕೊ, ಅಥವಾ ಸ್ವತಂತ್ರವಾಗಿ ವಿದ್ಯಾತ್ಮಕಗಳೆಂದು ತಿಳಿಯಬೇಕೊ ?

**ಪೂರ್ವಪಕ್ಷ:** ಕ್ರಿಯಾಪ್ರಕರಣದಲ್ಲಿರುವದರಿಂದ ಇವು ಕ್ರಿಯಾನುಪ್ರವೇಶಿಗಳು.

**ಸಿದ್ಧಾಂತ:** ಇವು ವಿದ್ಯಾತ್ಮಕಗಳೆನ್ನುವದಕ್ಕೆ ಇಲ್ಲಿ ಅನೇಕ ಲಿಂಗಗಳಿವೆ. ಇವು ಸಾಂಪಾದಿಕಾಗ್ನಿಪ್ರಶಂಸಾರೂಪವಾಗಿರುವದರಿಂದಲೂ 'ಇಲ್ಲಿ ಸಾಂಪಾದಿಕಾಗ್ನಿಗಳನ್ನು ಹಿಂದೆ ಹೇಳಿರುವ ಕ್ರಿಯಾನುಪ್ರವೇಶಿಯಾದ ಅಗ್ನಿಯಿಂದ ಅತಿದೇಶಮಾಡಿರುವದರಿಂದಲೂ ಇದು ಯುಕ್ತವಲ್ಲವೆನ್ನಬಾರದು; ಏಕೆಂದರೆ ಇವು ವಿದ್ಯಾತ್ಮಕವೇ ಎಂದು ಶ್ರುತಿಯು ಸ್ಪಷ್ಟವಾಗಿ ಹೇಳಿದೆ. ಶ್ರುತ್ಯಾದಿಗಳು ಪ್ರಕರಣಕ್ಕಿಂತ ಪ್ರಬಲವೆಂದು ಹಿಂದಿನ ಕಾಂಡದಲ್ಲಿಯೇ ಹೇಳಿದೆ. ಇವುಗಳು ವಿದ್ಯಾಚಿತಗಳೆಂದೇ ಶ್ರುತಿಯಲ್ಲಿದೆ; ಈ ಜ್ಞಾನಿಗೆ ಸತತವಾಗಿ ಸರ್ವ ಭೂತಗಳೂ ಈ ಅಗ್ನಿಚಯನವನ್ನು ಮಾಡುವವು ಎಂದು ಇವುಗಳ ಸಾತತ್ಯವನ್ನೂ ಹೇಳಿದೆ. ಇದೆಲ್ಲ ಅರ್ಥವಾದವೆಂದು ಹೇಳುವದು ಯುಕ್ತವಲ್ಲ; ಏಕೆಂದರೆ ಇಲ್ಲಿ ಮತ್ತೊಂದು ವಿಸ್ಪಷ್ಟವಾದ ವಿಧಿಯಿಲ್ಲ. ಮನಆದಿವ್ಯಾಪಾರಗಳಲ್ಲಿ ಕರ್ಮದ ಅವಯವ ಗಳನ್ನು ಸಂಪಾದನೆಮಾಡಿರುತ್ತದೆ. ನಿಜವಾಗಿ ಕರ್ಮಾಂಗವಾಗಿದ್ದರೆ ಹೀಗೆ ಸಂಪಾದನೆ ಮಾಡತಕ್ಕದ್ದೇನೂ ಇರಲಿಲ್ಲ. ಹೀಗೆ ಕ್ರಿಯಾವಯವಗಳ ಅನುಬಂಧವೇ ಮುಂತಾದ ಕಾರಣಗಳಿಂದ ಮನಶ್ಚಿದಾದಿಗಳು ಸ್ವತಂತ್ರವೆಂದೇ ಕಾಣುತ್ತದೆ. ಉಪಾಸನಾಂತರ ಗಳಲ್ಲಿ ಆಯಾ ಅನುಬಂಧವಿರುವದರಿಂದ ಹೇಗೆ ಕರ್ಮಕ್ಕೆ ಸಂಬಂಧವಿಲ್ಲವೋ ಹಾಗೆಯೇ ಇಲ್ಲಿಯೂ ತಿಳಿಯಬೇಕು. ಮಾನಸಗ್ರಹದಂತೆ ಇವೂ ಕ್ರಿಯೆಗೆ ಸಂಬಂಧ ಪಟ್ಟಿರುವವೆಂದು ಹೇಳುವದು ಈ ಶ್ರುತ್ಯಾದಿಗಳಿಗೆ ವಿರುದ್ಧವಾಗಿರುತ್ತದೆ. ಹಿಂದು ಮುಂದಿನ ಬ್ರಾಹ್ಮಣಗಳಲ್ಲಿ ವಿದ್ಯಾವಿಷಯವೇ ಇರುವದರಿಂದ ಇಲ್ಲಿಯೂ ಹಾಗೆಯೇ ಎಂದು ಗೊತ್ತುಪಡಿಸುವದು ಯುಕ್ತವಾಗಿದೆ. ಅಗ್ನಿಯ ಅವಯವಗಳು ಅನೇಕವನ್ನು ಇಲ್ಲಿ ಸಂಪಾದನೆಮಾಡಬೇಕೆಂಬ ಕಾರಣದಿಂದ ಮಾತ್ರವೇ ಇವಕ್ಕೆ ಅಗ್ನಿಯ ಸಂಬಂಧ ವೇ ಹೊರತು ಕರ್ಮಾಂಗವೆಂಬ ಕಾರಣದಿಂದಲ್ಲ.

## ೩೦. ಐಕಾತ್ಮ್ಯಾಧಿಕರಣ

ವಿಷಯವೂ ಸಂಶಯವೂ : ದೇಹವ್ಯತಿರಿಕ್ತನಾದ ಆತ್ಮನೊಬ್ಬನು ಇದಾನೆಯೆ, ಇಲ್ಲವೆ ?

ಪೂರ್ವಪಕ್ಷ : ಶರೀರಾಕಾರರೂಪವಾಗಿ ಪರಿಣತವಾದ ಭೂತಗಳಿಂದ ಮದಶಕ್ತಿಯಂತೆ ಚೈತನ್ಯವುಂಟಾಗಬಹುದು. ಚೈತನ್ಯವಿಶಿಷ್ಟವಾದ ಶರೀರವೇ ಪುರುಷನು. ಏಕೆಂದರೆ ಶರೀರವಿದ್ದರೇ ಚೈತನ್ಯವಿರುತ್ತದೆ. ಪ್ರಾಣಚೇಷ್ಟೆಯೇ ಮುಂತಾದ ಆತ್ಮಧರ್ಮಗಳೂ ಹಾಗೆಯೇ ದೇಹದಲ್ಲಿಯೇ ಕಾಣುತ್ತವೆ.

ಸಿದ್ಧಾಂತ : ದೇಹಕ್ಕಿಂತ ವ್ಯತಿರಿಕ್ತನಾದ ಆತ್ಮನಿದಾನೆ. ದೇಹವಿದ್ದರೂ ಆತ್ಮಧರ್ಮಗಳು ಅದರಲ್ಲಿ ಕಾಣಿಸುವದಿಲ್ಲ; ಏಕೆಂದರೆ ಸತ್ತ ಶರೀರದಲ್ಲಿ ಅವು ಇರುವದಿಲ್ಲ. ಶರೀರವು ಪಾತವಾದ ಬಳಿಕ ಅವು ಇಲ್ಲವೆಂದು ನಿರ್ಣಯಿಸುವದಕ್ಕೆ ಕಾರಣವಿಲ್ಲ; ದೇಹಾಂತರದಲ್ಲಿ ಅವು ಇರಬಹುದೆಂಬ ಸಂಶಯವೇ ಪೂರ್ವಪಕ್ಷದ ನಿರಾಕರಣೆಗೆ ಸಾಕಾಗಿದೆ. ಚೈತನ್ಯವು ವಿಷಯಿ, ಭೂತಭೌತಿಕಗಳು ವಿಷಯ; ಆದ್ದರಿಂದ ಅದು ಅವುಗಳ ಧರ್ಮವಾಗಲಾರದು. ಚೈತನ್ಯಸ್ವರೂಪನೇ ಆತ್ಮನೆಂಬುದು ನಮ್ಮ ಮತ. ದೇಹವಿದ್ದರೇ ಚೈತನ್ಯವು ಕಾಣುವದೆಂಬುದು ಪ್ರದೀಪಾದಿಗಳಂತೆ ಅದು ಉಪಕರಣವಾಗಿರುವದರಿಂದ. ದೇಹವು ನಿಶ್ಚೇಷ್ಟವಾಗಿರುವ ಸ್ವಪ್ನದಲ್ಲಿಯೂ ಅರಿವು ಕಾಣುತ್ತದೆ. ಆದ್ದರಿಂದ ದೇಹವ್ಯತಿರಿಕ್ತನಾದ ಆತ್ಮನುಂಟೆಂಬ ವಾದದಲ್ಲಿ ದೋಷವಿಲ್ಲ.

## ೩೧. ಅಂಗಾವಬದ್ಧಾಧಿಕರಣ

ವಿಷಯವೂ ಸಂಶಯವೂ : ಅಂಗಾವಬದ್ಧವಾದ ಉದ್ಗೀಥಾದ್ಯುಪಾಸನೆಗಳು ಆಯಾ ಶಾಖೆಗಳಿಗೇ ಇಟ್ಟುಕೊಳ್ಳತಕ್ಕವೊ, ಎಲ್ಲಾ ಶಾಖೆಗಳಿಗೂ ಹೊಂದುವವೊ ?

ಪೂರ್ವಪಕ್ಷ : ಸಾಮಾನ್ಯವಾಗಿ ವಿಹಿತವಾಗಿರುವ ಉದ್ಗೀಥಾದಿಗಳ ಆಕಾಂಕ್ಷೆಯು ಆಯಾ ಶಾಖೆಯ ವಿಶೇಷವನ್ನು ತೆಗೆದುಕೊಂಡರೇ ಪೂರ್ತಿಯಾಗುಗ್ತದೆ. ಶಾಖಾಂತರ ವಿಹಿತವಾದ ವಿಶೇಷವನ್ನು ತೆಗೆದುಕೊಳ್ಳುವದಕ್ಕೆ ಕಾರಣವಿಲ್ಲ. ಆದ್ದರಿಂದ ಆಯಾ ಶಾಖೆಗೇ ಇವನ್ನು ಇಟ್ಟುಕೊಳ್ಳತಕ್ಕದ್ದು ಯುಕ್ತ.

ಸಿದ್ಧಾಂತ : ಸಾಮಾನ್ಯಶ್ರುತಿಯನ್ನು ಸ್ವಶಾಖೆಯ ವಿಶೇಷಕ್ಕೆ ನಿಲ್ಲಿಸುವದು ಯುಕ್ತವಲ್ಲ. ಶ್ರುತಿಯು ಸಂನಿಧಿಗಿಂತ ಪ್ರಬಲವಾದ್ದರಿಂದ ಸಂನಿಧಿಯಿಂದ ಆಯಾ ಶಾಖೆಯ ಉದ್ಗೀಥಾದಿಗಳೆಂದು ಗೊತ್ತುಪಡಿಸುವದು ಸರಿಯಲ್ಲ. ಮಂತ್ರಗಳು, ಕರ್ಮಗಳು, ಗುಣಗಳು– ಇವನ್ನು ಒಂದು ಶಾಖೆಯಲ್ಲಿ ಹೇಳಿದ್ದರೂ ಶಾಖಾಂತರದಲ್ಲಿ ತೆಗೆದುಕೊಂಡಿರುವದು ಶ್ರುತಿಯಲ್ಲಿ ಕಂಡುಬಂದಿರುವಂತೆ ಇಲ್ಲಿಯೂ ಆಗಬಹುದು. ಆಶ್ರಯವಾದ ಕರ್ಮಾಂಗಗಳು ಹೇಗೆ ಎಲ್ಲೆಲ್ಲಿಯೂ ಅನುವೃತ್ತವಾಗಿರುವವೋ ಹಾಗೆಯೇ ಅವುಗಳನ್ನಾಶ್ರಯಿಸಿಕೊಂಡಿರುವ ಉಪಾಸನೆಗಳೂ ಅನುವೃತ್ತವಾಗಿರಬಹುದಾಗಿದೆ. ಆದ್ದರಿಂದ ಈ ಉಪಾಸನೆಗಳು ಎಲ್ಲಾ ಶಾಖೆಗಳಿಗೂ ಅನ್ವಯಿಸುವವು.

## ೩೨. ಭೂಮಜ್ಯಾಯಸ್ತ್ವಾಧಿಕರಣ

**ವಿಷಯವೂ ಸಂಶಯವೂ :** "ಪ್ರಾಚೀನಶಾಲ ಔಪಮನ್ಯವಃ" (ಛಾಂ.೫-೧೧-೧) ಎಂದು ಮುಂತಾಗಿರುವ ಆಖ್ಯಾಯಿಕೆಯಲ್ಲಿ ಕಾಣುವ ವೈಶ್ವಾನರೋಪಾಸನೆಯು ವ್ಯಸ್ತವಾಗಿಯೂ ಸಮಸ್ತವಾಗಿಯೂ ಪಠಿತವಾಗಿವೆ. ಇವೆರಡೂ ವಿವಕ್ಷಿತವೆ, ಅಥವಾ ಇವುಗಳಲ್ಲೊಂದೇ ವಿವಕ್ಷಿತವೆ ?

**ಪೂರ್ವಪಕ್ಷ :** "ಉಪಾಸ್ಸೇ" ಎಂದು ಪ್ರತಿವ್ಯಸ್ತೋಪಾಸನೆಯಲ್ಲಿಯೂ ಕ್ರಿಯಾಪದವನ್ನು ಶ್ರುತಿಯಲ್ಲಿ ಹೇಳಿರುವದರಿಂದಲೂ ಬೇರೆಬೇರೆಯ ಫಲವನ್ನು ಹೇಳಿರುವದರಿಂದಲೂ ವ್ಯಸ್ತೋಪಾಸನೆಗಳು, ಸಮಸ್ತೋಪಾಸನೆ- ಈ ಎರಡೂ ವಿವಕ್ಷಿತ.

**ಸಿದ್ಧಾಂತ :** ಸಮಸ್ತೋಪಾಸನೆಯೇ ಇಲ್ಲಿ ವಿವಕ್ಷಿತ. ಏಕೆಂದರೆ ವ್ಯಸ್ತೋಪಾಸನೆಗಳು ಇದಕ್ಕೆ ಅಂಗವಾಗಿರುತ್ತವೆ. ಇವೆಲ್ಲ ಸೇರಿ ಏಕವಾಕ್ಯತೆಯಾಗಿರುತ್ತದೆ. ಇಲ್ಲಿ ವ್ಯಸ್ತೋಪಾಸನೆಗಳನ್ನು ನಿಂದಿಸಿರುತ್ತದೆ. ಸಮಸ್ತೋಪಾಸನೆಗೇ ಫಲವನ್ನು ಹೇಳಿದೆ. ಪ್ರತಿಯೊಂದು ವ್ಯಸ್ತೋಪಾಸನೆಗೂ ಕ್ರಿಯಾಪದವನ್ನು ಹೇಳಿರುವದು ಅಪರವಶ ಅಭಿಪ್ರಾಯವನ್ನು ಅನುವಾದಮಾಡಿಕೊಳ್ಳುವದಕ್ಕೇ ಹೊರತು ವ್ಯಸ್ತೋಪಾಸನೆಗಳನ್ನು ವಿಧಿಸುವದಕ್ಕಲ್ಲ. ಅವುಗಳ ಫಲಗಳನ್ನು ಸಮಸ್ತೋಪಾಸನೆಗೇ ಸೇರಿಸಿಕೊಳ್ಳಬೇಕು.

## ೩೩. ಶಬ್ದಾದಿಭೇದಾಧಿಕರಣ

**ವಿಷಯವೂ ಸಂಶಯವೂ :** ಬೇರೆಬೇರೆ ಶ್ರುತಿಗಳಲ್ಲಿ ಹೇಳಿರುವ ಉಪಾಸನೆಗಳನ್ನು ವೈಶ್ವಾನರವಿದ್ಯೆಯಂತೆ ಒಟ್ಟುಗೂಡಿಸಿ ಉಪಾಸನೆಮಾಡಬೇಕೆ, ಬೇರೆಬೇರೆ ಮಾಡಬೇಕೆ ?

**ಪೂರ್ವಪಕ್ಷ :** ವೇದ್ಯವು ಒಂದೇ ಆಗಿರುವದರಿಂದ ವಿದ್ಯೆಯೂ ಒಂದೇ. ಶ್ರುತಿನಾನಾತ್ವವನ್ನು ಗುಣಾಂತರವಿಧಾನಪರವೆಂದು ತಿಳಿಯಬಹುದು.

**ಸಿದ್ಧಾಂತ :** ವೇದ್ಯವು ಒಂದೇ ಆದರೂ ಇವು ಬೇರೆಬೇರೆಯೇ. ಏಕೆಂದರೆ ಶಬ್ದಗುಣಾದಿಗಳು ಭಿನ್ನಭಿನ್ನವಾಗಿವೆ. ವೇದ, ಉಪಾಸೀತ- ಮುಂತಾದ ಶಬ್ದಭೇದದಲ್ಲಿ ಅರ್ಥವು ಮನೋವೃತ್ತಿ ಎಂಬುದೇ ಆಗಿರುತ್ತದೆಯಾದರೂ ಆಯಾ ಗುಣವಿಶಿಷ್ಟವಾಗಿರುವ ವೇದ್ಯವು ಬೇರೆಯಾಗಿರುವದರಿಂದ ವಿದ್ಯೆಗಳೂ ಬೇರೆಬೇರೆಯಾಗಿರುತ್ತದೆ. ಬೇರೆಬೇರೆ ಗುಣಗಳಿಂದ ವಿಶಿಷ್ಟವಾಗಿ ಬ್ರಹ್ಮವು ಬೇರೆಬೇರೆಯಾಗಿ ಉಪಾಸ್ಯವಾಗಿರುತ್ತದೆ. ಇವುಗಳಲ್ಲಿ ಒಂದು ವಿದ್ಯಾವಿಧಿ, ಮಿಕ್ಕವು ಗುಣವಿಧಿಗಳು- ಎಂದು ಗೊತ್ತುಪಡಿಸುವದಕ್ಕೆ ಪ್ರಮಾಣವೇನೂ ಇಲ್ಲ. ಸತ್ಯಕಾಮಾದಿಗಳನ್ನು ಮತ್ತೆಮತ್ತೆ ಹೇಳಿರುವದಕ್ಕೆ ಏಕವಿದ್ಯಾಪಕ್ಷದಲ್ಲಿ ಕಾರಣವಿರುವದಿಲ್ಲ. ಬೇರೆಬೇರೆ ಫಲಗಳನ್ನು ಹೇಳುವದರಿಂದ ಇವಕ್ಕೆ ಏಕವಾಕ್ಯತೆಯೂ ಇಲ್ಲ. ವೈಶ್ವಾನರವಿದ್ಯೆಯಂತೆ ಸಮಸ್ತವಿದ್ಯಾಚೋದನೆಯೂ ಇಲ್ಲಿಲ್ಲ. ಆದ್ದರಿಂದ ಇವು ಬೇರೆಬೇರೆಯೇ.

## ೩೪. ವಿಕಲ್ಪಾಧಿಕರಣ

**ವಿಷಯವೂ ಸಂಶಯವೂ :** ಉಪಾಸನೆಗಳನ್ನು ತನ್ನ ಇಚ್ಛೆಯಂತೆ ಒಂದೊಂದಾಗಿ ಅಥವಾ ಎರಡುಮೂರನ್ನು ಕೂಡಿಸಿಕೊಂಡು ಅನುಷ್ಠಾನಮಾಡಬಹುದೋ, ಅಥವಾ ಒಂದೊಂದನ್ನೇ ಅನುಷ್ಠಾನಮಾಡಬೇಕೋ ?

**ಪೂರ್ವಪಕ್ಷ :** ಅಗ್ನಿಹೋತ್ರಾದಿಗಳಂತೆ ಇವು ನಿತ್ಯವಲ್ಲವಾದ್ದರಿಂದ ಸಮುಚ್ಚಯ ನಿಯಮವಿಲ್ಲ, ಒಂದು ವಿದ್ಯೆಗೆ ಅಧಿಕಾರಿಯಾದವನು ಇನ್ನೊಂದು ವಿದ್ಯೆಗೆ ಅಧಿಕಾರಿಯಲ್ಲ ವೆಂದು ಹೇಳಿಲ್ಲವಾದ್ದರಿಂದ ವಿಕಲ್ಪನಿಯಮವೂ ಇಲ್ಲ. ಆದ್ದರಿಂದ ತನ್ನ ಇಚ್ಛೆಯಂತೆ ಅನುಷ್ಠಾನಮಾಡಬಹುದು.

**ಸಿದ್ಧಾಂತ :** ಇವಕ್ಕೆಲ್ಲ ಸಾಕ್ಷಾತ್ಕಾರ ಒಂದೇ ಫಲ. ಒಂದುಪಾಸನೆಯಿಂದ ಸಾಕ್ಷಾತ್ಕಾರಮಾಡಿಕೊಂಡವನಿಗೆ ಮಿಕ್ಕವು ವ್ಯರ್ಥ. ಇವಲ್ಲದೆ ಸಾಕ್ಷಾತ್ಕಾರಕ್ಕೆ ಸಮುಚ್ಚಯವು ವಿಘಾತಕವಾಗಿರುತ್ತದೆ. ಏಕೆಂದರೆ ಅದರಿಂದ ಚಿತ್ತವಿಕ್ಷೇಪವಾಗುತ್ತದೆ. ಆದ್ದರಿಂದ ಸಾಕ್ಷಾತ್ಕಾರಮೂಲಕವಾಗಿ ಫಲಪ್ರಾಪ್ತಿಯಾಗುವವರೆಗೂ ಒಂದೇ ವಿದ್ಯೆಯನ್ನು ಅನುಷ್ಠಾನ ಮಾಡಬೇಕು.

## ೩೫. ಕಾಮ್ಯಾಧಿಕರಣ

**ಸಂಶಯ :** ಅಹಂಗ್ರಹೋಪಾಸನೆಗಳೂ ಅಲ್ಲದೆ, ಕರ್ಮಾಂಗಾವಬದ್ಧಗಳೂ ಅಲ್ಲದೆ ಇರುವ ಉಪಾಸನೆಗಳಲ್ಲಿ ಯಾವದಾದರೊಂದನ್ನೇ ನಿಯಮದಿಂದ ಮಾಡಬೇಕೋ, ಅಥವಾ ಇಷ್ಟಬಂದಂತೆ ಎರಡು ಮೂರನ್ನೂ ಮಾಡಬಹುದೋ ?

**ಪೂರ್ವಪಕ್ಷ :** ಇವೂ ಅಹಂಗ್ರಹೋಪಾಸನೆಗಳಂತೆ ಉಪಾಸನೆಯೇ. ಆದ್ದರಿಂದ ಯಾವದಾದರೊಂದನ್ನೇ ನಿಯಮದಿಂದ ಮಾಡಬೇಕು.

**ಸಿದ್ಧಾಂತ :** ಈ ಉಪಾಸನೆಗಳಿಗೆ ಬೇರೆಬೇರೆಯ ಫಲಗಳಿರುತ್ತವೆ. ಇವುಗಳಿಗೆ ಸಾಕ್ಷಾತ್ಕಾರದ ಆವಶ್ಯಕತೆಯೂ ಇಲ್ಲ. ಆದ್ದರಿಂದ ತನ್ನ ಕಾಮವಿದ್ದಂತೆ ಬೇಕಾದಷ್ಟನ್ನು ಸಮುಚ್ಚಯಮಾಡಿಕೊಂಡು ಉಪಾಸನೆಮಾಡಬಹುದು, ಅಥವಾ ಒಂದೊಂದನ್ನೇ ಬೇಕಾದರೂ ಮಾಡಬಹುದು.

## ೩೬. ಯಥಾಶ್ರಯಭಾವಾಧಿಕರಣ

**ವಿಷಯವೂ ಸಂಶಯವೂ :** ಅಂಗಾಶ್ರಯೋಪಾಸನೆಗಳನ್ನು ಸಮುಚ್ಚಯ ಮಾಡಬಹುದೋ, ಬಾರದೋ ?

**ಪೂರ್ವಪಕ್ಷ :** ಆಶ್ರಯವಾಗಿರುವ ಅಂಗಗಳಂತೆಯೇ ಇವನ್ನು ಒಟ್ಟುಗೂಡಿಸ ಬೇಕು. ಇವೆರಡಕ್ಕೂ ಉಪದೇಶಕೃತವಾದ ಭೇದವೇನೂ ಇಲ್ಲ. ಪ್ರಣವೋದ್ಗೀಥೈಕತ್ವ ವನ್ನು ಅರಿತ ಉಪಾಸಕನು ತನ್ನ ಕರ್ಮದಲ್ಲಾದ ವೈಗುಣ್ಯವನ್ನು ಹೌತ್ರಕರ್ಮದಿಂದ ಸರಿ ಪಡಿಸಿಕೊಳ್ಳಬಲ್ಲನು ಎಂದು (ಛಾಂ. ೧-೫-೫) ಶ್ರುತಿಯಲ್ಲಿರುವದು ಒಂದು ವೇದಾಂತ ದಲ್ಲಿ ವಿಹಿತವಾದ ಉಪಾಸನೆಗೆ ಮತ್ತೊಂದು ವೇದಾಂತದಲ್ಲಿ ಹೇಳಿರುವ ಪದಾರ್ಥದ ಸಂಬಂಧವು ಉಂಟೆಂದು ತಿಳಿಸುತ್ತದೆ ; ಇದರಿಂದ ಪ್ರತ್ಯಯೋಪಸಂಹಾರವು ಸೂಚಿತ

ವಾಗಿದೆ. ವಿದ್ಯಾಶ್ರಯವಾಗಿರುವ ಓಂಕಾರವನ್ನು ವೇದತ್ರಯಕ್ಕೆ ಸಾಧಾರಣವೆಂದು ಶ್ರುತಿ ಹೇಳುತ್ತವೆ (ಛಾಂ. ೧–೧–೯). ಆದ್ದರಿಂದ ಆಶ್ರಿತೋಪಾಸನೆಯೂ ವೇದತ್ರಯ ಸಾಧಾರಣವೆಂದಾಗುವದು.

ಸಿದ್ಧಾಂತ : ಉಪಾಸನೆಗಳನ್ನು ಒಟ್ಟಿಗೆ ಮಾಡಬೇಕೆಂದು ಶ್ರುತಿಯಿಲ್ಲ ; ಅಂಗಗಳಿಗೆ ಸಹಭಾವವನ್ನು ಶ್ರುತಿಯಲ್ಲಿ ಹೇಳಿದೆ. ಈ ಉಪಾಸನೆಗಳು ಗೋದೋಹನಾದಿಗಳಂತೆ ಪುರುಷಾರ್ಥವಾಗಿವೆ ಎಂಬುದನ್ನು ಆಗಲೆ (೩–೩–೪೨) ಹೇಳಿದ್ದಾಗಿದೆ. ಈ ಪುರುಷಾರ್ಥವಾಗಿರುವದೆಂಬುದೇ ಇವುಗಳಲ್ಲಿ ಅಂಗಗಳಿಗಿಂತ ಬೇರೆಯಾಗಿರುವ ವಿಶೇಷವು. ಆಶ್ರಯವಾದ ಅಂಗಗಳನ್ನುಪಸಂಹಾರಮಾಡಿದರೆ ಆಶ್ರಿತೋಪಾಸನೆಗಳನ್ನೂ ಉಪಸಂಹಾರಮಾಡಿಕೊಳ್ಳಬೇಕೆಂಬುದಕ್ಕೆ ಕಾರಣವಿಲ್ಲ. ಆಶ್ರಯವಿಲ್ಲದಿದ್ದರೆ ಇವು, ಇರುವದಿಲ್ಲವೆಂಬುದು ನಿಜ ; ಆದರೆ ಆಶ್ರಯಗಳ ಸಹಭಾವದಿಂದ ಇವುಗಳೂ ಒಟ್ಟಿಗೆ ಇರಬೇಕೆಂಬುದು ಸರಿಯಲ್ಲ, ಏಕೆಂದರೆ ಹಾಗೆಂದು ಶ್ರುತಿಯಿಲ್ಲ. ಆದ್ದರಿಂದ ಈ ಉಪಾಸನೆಗಳನ್ನು ಇಚ್ಛೆಯಂತೆ ಅನುಷ್ಠಾನಮಾಡಬಹುದು. "ಸರ್ವವಿದನಾದ ಬ್ರಹ್ಮನು ಯಜಮಾನನನ್ನೂ ಋತ್ವಿಜರನ್ನೂ ರಕ್ಷಿಸುತ್ತಾನೆ" ಎಂಬ (ಛಾಂ. ೪–೧೭–೧೦) ಶ್ರುತಿಯು ಇವಕ್ಕೆ ನಿಯತವಾದ ಸಹಭಾವವಿಲ್ಲವೆಂಬುದನ್ನು ಸೂಚಿಸುತ್ತದೆ. ಏಕೆಂದರೆ ಸಹಭಾವವಿದ್ದರೆ ಎಲ್ಲರೂ ಸರ್ವವಿದರೇ ಆಗಿರುತ್ತಿದ್ದರು, ಬ್ರಹ್ಮನೇ ಸರ್ವವಿದನೆಂಬುದಕ್ಕೆ ಕಾರಣವಿರಲಿಲ್ಲ. ಆದ್ದರಿಂದ ಈ ಉಪಾಸನೆಗಳನ್ನು ಇಚ್ಛೆಯಂತೆ ಸಮುಚ್ಚಯಮಾಡಿಕೊಂಡು ಅಥವಾ ವಿಕಲ್ಪದಿಂದ ಒಂದೊಂದನ್ನೇ ಅನುಷ್ಠಾನಮಾಡಬಹುದು.

---

# ಮೂರನೆಯ ಅಧ್ಯಾಯ- ನಾಲ್ಕನೆಯಪಾದ

(ವಿದ್ಯೆಯ ಸಾಧನೆಗಳ ವಿಚಾರ)

## ೧. ಪುರುಷಾರ್ಥಾಧಿಕರಣ (ಸೂ. ೧-೧೭)

**ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ॥ ೧ ॥**

೧. ಇದರಿಂದ ಪುರುಷಾರ್ಥವು (ಸಿದ್ಧಿಸುತ್ತದೆ) ; ಏಕೆಂದರೆ (ಹಾಗೆಂದು) ಶಬ್ದವಿದೆ ಎಂದು ಬಾದರಾಯಣರು (ಅಭಿಪ್ರಾಯಪಡುತ್ತಾರೆ).

## ವಿದ್ಯೆಯಿಂದಲೇ ಪರಮಪುರುಷಾರ್ಥ

(ಭಾಷ್ಯ)

೪೩೭. ಅಥೇದಾನೀಮ್ ಔಪನಿಷದಮ್ ಆತ್ಮಜ್ಞಾನಂ ಕಿಮ್ ಅಧಿಕಾರಿದ್ವಾರೇಣ ಕರ್ಮಣ್ಯೇವ ಅನುಪ್ರವಿಶತಿ ಆಹೋಸ್ವಿತ್ ಸ್ವತನ್ತ್ರಮೇವ ಪುರುಷಾರ್ಥಸಾಧನಂ ಭವತಿ ಇತಿ ಮೀಮಾಂಸಮಾನಃ ಸಿದ್ಧಾನ್ತೇನೈವ ತಾವತ್ ಉಪಕ್ರಮತೇ "ಪುರುಷಾರ್ಥೋಽತಃ" ಇತಿ। ಅಸ್ಮಾತ್ ವೇದಾನ್ತವಿಹಿತಾತ್ ಆತ್ಮಜ್ಞಾನಾತ್ ಸ್ವತನ್ತ್ರಾತ್ ಪುರುಷಾರ್ಥಃ ಸಿಧ್ಯತಿ ಇತಿ ಬಾದರಾಯಣ ಆಚಾರ್ಯೋ ಮನ್ಯತೇ। ಕುತ ಏತದವಗಮ್ಯತೇ? ಶಬ್ದಾತ್ ಇತ್ಯಾಹ। ತಥಾ ಹಿ "ತರತಿ ಶೋಕಮಾತ್ಮವಿತ್" (ಛಾಂ ೭-೧-೩) "ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ.೩-೨-೯) "ಬ್ರಹ್ಮವಿದಾಪ್ನೋತಿ ಪರಮ್" (ತೈ. ೨-೧), "ಆಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ" (ಛಾಂ. ೬-೧೪-೨) ಇತಿ। "ಯ ಆತ್ಮಾಽಪಹತಪಾಪ್ಮಾ" (ಛಾಂ. ೮-೭-೧) ಇತ್ಯುಪಕ್ರಮ್ಯ "ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಯಸ್ತಮಾತ್ಮಾನಮನುವಿದ್ಯ ವಿಜಾನಾತಿ" (ಛಾಂ.೮-೭-೧) ಇತಿ। "ಆತ್ಮಾ ವಾ ಅರೇ ದ್ರಷ್ಟವ್ಯಃ" (ಬೃ. ೪-೫-೬) ಇತ್ಯುಪಕ್ರಮ್ಯ "ಏತಾವದರೇ ಖಲ್ವಮೃತತ್ವಮ್" (ಬೃ. ೪-೫-೧೫) ಇತ್ಯೇವಂಜಾತೀಯಕಾ ಶ್ರುತಿಃ ಕೇವಲಾಯಾ ವಿದ್ಯಾಯಾಃ ಪುರುಷಾರ್ಥಹೇತುತ್ವಂ ಶ್ರಾವಯತಿ ॥

(ಭಾಷ್ಯಾರ್ಥ)

ಇನ್ನು ಈಗ ಉಪನಿಷತ್ತುಗಳಲ್ಲಿ ಹೇಳಿರುವ ಆತ್ಮಜ್ಞಾನವು ಅಧಿಕಾರಿ

ದ್ವಾರದಿಂದ ಕರ್ಮದಲ್ಲಿಯೇ ಅನುಪ್ರವಿಷ್ಟವಾಗುವದೊ,[1] ಅಥವಾ ಸ್ವತನ್ತ್ರವಾಗಿಯೇ ಪುರುಷಾರ್ಥಸಾಧನವಾಗಿರುವದೊ[2] ಎಂದು ವಿಚಾರಮಾಡಬೇಕಾಗಿರುವದರಿಂದ ಮೊದಲು "ಪುರುಷಾರ್ಥೋಽತಃ" ಎಂದು ಸಿದ್ಧಾಂತದಿಂದಲೇ ಉಪಕ್ರಮಿಸಿರುತ್ತಾರೆ. ಈ ವೇದಾಂತವಿಹಿತವಾಗಿರುವ ಆತ್ಮಜ್ಞಾನದಿಂದ ಸ್ವತಂತ್ರವಾಗಿಯೇ ಪುರುಷಾರ್ಥವು ಸಿದ್ಧಿಸುತ್ತದೆ ಎಂದು **ಬಾದರಾಯಣಾಚಾರ್ಯರು** ಅಭಿಪ್ರಾಯಪಡುತ್ತಾರೆ. ಇದು ಏತರಿಂದ ಗೊತ್ತಾಗುತ್ತದೆ? ಎಂದರೆ ಶಬ್ದದಿಂದ ಎಂದು ಹೇಳುತ್ತಾರೆ. ಹೇಗೆಂದರೆ "ಆತ್ಮನನ್ನು ಬಲ್ಲವನು ಶೋಕವನ್ನು ದಾಟುತ್ತಾನೆ" (ಛಾಂ. ೭–೧–೩) "ಯಾವನಾದರೆ ಆ ಪರಮಬ್ರಹ್ಮವನ್ನು ಅರಿತುಕೊಳ್ಳುತ್ತಾನೋ ಅವನು ಬ್ರಹ್ಮವೇ ಆಗುವನು" (ಮುಂ. ೩–೨–೯), "ಬ್ರಹ್ಮಜ್ಞಾನಿಯು ಪರ(ಪುರುಷಾರ್ಥವನ್ನು) ಪಡೆದುಕೊಳ್ಳುತ್ತಾನೆ" (ತೈ. ೨–೧–೧); "ಆಚಾರ್ಯವಂತನಾದ ಪುರುಷನು ಅರಿತುಕೊಳ್ಳುತ್ತಾನೆ. ಅವನಿಗೆ ಎಲ್ಲಿಯವರೆಗೆ ದೇಹದಿಂದ ಬಿಡುಗಡೆಯಾಗುವದಿಲ್ಲವೋ ಅಲ್ಲಿಯವರೆಗೇ ತಡ, ಆ ಕೂಡಲೆ ಸೇರಿಕೊಳ್ಳುತ್ತಾನೆ" (ಛಾಂ. ೬–೧೪–೨) ಎಂದು (ಶ್ರುತಿಯಿದೆ). "ಯಾವನು ಅಪಹತಪಾಪ್ಮನಾದ ಆತ್ಮನೋ" (ಛಾಂ. ೮–೭–೧) ಎಂದು ಉಪಕ್ರಮಿಸಿ "ಯಾವನು ಆ ಆತ್ಮನನ್ನು ಅನುವೇದನದಿಂದ ಅರಿತುಕೊಳ್ಳುವನೋ (ಅವನು) ಸರ್ವಲೋಕಗಳನ್ನೂ ಪಡೆದುಕೊಳ್ಳುತ್ತಾನೆ, ಸರ್ವಕಾಮಗಳನ್ನೂ ಪಡೆದುಕೊಳ್ಳುತ್ತಾನೆ" (ಛಾಂ. ೮–೭–೧) ಎಂದು "ಎಲೆ, ಆತ್ಮನನ್ನೇ ಕಂಡುಕೊಳ್ಳಬೇಕು" (ಬೃ. ೪–೫–೬) ಎಂದು ಉಪಕ್ರಮಿಸಿ "ಎಲೆ, ಇಷ್ಟೇ ಅಮೃತತ್ವವು" (ಬೃ. ೪–೫–೧೫) ಎಂದು (ಶ್ರುತಿ ಹೇಳುತ್ತದೆ). ಈ ಜಾತಿಯ ಶ್ರುತಿಯು ಕೇವಲವಿದ್ಯೆಯೇ ಪುರುಷಾರ್ಥಕ್ಕೆ ಹೇತುವೆಂದು ತಿಳಿಸುತ್ತಿದೆ.

**ಶೇಷತ್ವಾತ್ ಪುರುಷಾರ್ಥವಾದೋ ಯಥಾನ್ಯೇಷ್ವಿತಿ ಜೈಮಿನಿಃ ॥ ೨ ॥**

೨. (ಕರ್ಮ)ಶೇಷವಾಗಿರುವದರಿಂದ ಪುರುಷಾರ್ಥವನ್ನು ಹೇಳುವ ಅರ್ಥವಾದವಿದು. ಹೇಗೆ ಮಿಕ್ಕ(ಕಡೆ)ಗಳಲ್ಲಿ (ಅರ್ಥವಾದವಾಗಿದೆಯೋ ಹಾಗೆಯೇ ಇದು) ಎಂದು ಜೈಮಿನಿಗಳು (ಅಭಿಪ್ರಾಯಪಡುತ್ತಾರೆ).

---

1. ಕ್ರತುವಿಗೆ ಬೇಕಾಗಿರುವ ಕರ್ತೃವನ್ನು ಹೇಳುವ ಮೂಲಕ ಕ್ರತ್ವರ್ಥವಾಗಿರುವದೊ?– ಎಂದರ್ಥ.

2. ಮೋಕ್ಷವೆಂಬ ಪುರುಷಾರ್ಥವನ್ನು ಕೊಡುವದರಿಂದ ಪುರುಷಾರ್ಥವಾಗಿರುವದೋ?"– ಎಂದರ್ಥ.

## ಪೂರ್ವಪಕ್ಷ: ಆತ್ಮಜ್ಞಾನವು ಕರ್ಮಸಂಬಂಧಿ

(ಭಾಷ್ಯ)

೪೩೮. ಕರ್ತೃತ್ವೇನ ಆತ್ಮನಃ ಕರ್ಮಶೇಷತ್ವಾತ್ ತದ್ವಿಜ್ಞಾನಮಪಿ ವ್ರೀಹಿಪ್ರೋಕ್ಷಣಾದಿವತ್ ವಿಷಯದ್ವಾರೇಣ ಕರ್ಮಸಂಬನ್ಧ್ಯೇವ ಇತ್ಯತಃ ತಸ್ಮಿನ್ ಅವಗತಪ್ರಯೋಜನೇ ಆತ್ಮಜ್ಞಾನೇ ಯಾ ಫಲಶ್ರುತಿಃ ಸಾರ್ಥವಾದಃ ಇತಿ ಜೈಮಿನಿರಾಚಾರ್ಯೋ ಮನ್ಯತೇ। ಯಥಾ ಅನ್ಯೇಷು ದ್ರವ್ಯಸಂಸ್ಕಾರ ಕರ್ಮಸು "ಯಸ್ಯ ಪರ್ಣಮಯೀ ಜುಹೂರ್ಭವತಿ ನ ಸ ಪಾಪಗ್ಂ ಶ್ಲೋಕಗ್ಂ ಶೃಣೋತಿ।" (ತೈ. ಸಂ. ೩-೫-೭ ?) ಯದಙ್ಕ್ತೇ ಚಕ್ಷುರೇವ ಭ್ರಾತೃವ್ಯಸ್ಯ ವೃಙ್ಕ್ತೇ" (ತೈ.ಸಂ. ೬-೧-೧೨ ?) "ಯತ್ಪ್ರಯಾಜಾನುಯಾಜಾ ಇಜ್ಯನ್ತೇ ಕರ್ಮ ವಾ ಏತದ್ಯಜ್ಞಸ್ಯ ಕ್ರಿಯತೇ ವರ್ಮ ಯಜಮಾನಸ್ಯ ಭ್ರಾತೃವ್ಯಾಭಿಭೂತ್ಯೈ" (ತೈ. ಸೂ. ೨-೬-೧ ?)[1] "ಇತ್ಯೇವಂಜಾತೀಯಕಾ ಫಲಶ್ರುತಿರರ್ಥವಾದಃ, ತದ್ವತ್। ಕಥಂ ಪುನರಸ್ಯ ಅನಾರಭ್ಯಾಧೀತಸ್ಯ ಆತ್ಮಜ್ಞಾನಸ್ಯ ಪ್ರಕರಣಾದೀನಾಮನ್ಯತಮೇನಾಪಿ ಹೇತುನಾ ವಿನಾ ಕ್ರತುಪ್ರವೇಶ ಆಶಙ್ಕ್ಯತೇ? ಕರ್ತೃದ್ವಾರೇಣ ವಾಕ್ಯಾತ್ ತದ್ವಿಜ್ಞಾನಸ್ಯ ಕ್ರತುಸಂಬನ್ಧಃ ಇತಿ ಚೇತ್। ನ। ವಾಕ್ಯಾದ್ ವಿನಿಯೋಗಾನುಪಪತ್ತೇಃ। ಅವ್ಯಭಿಚಾರಿಣಾ ಹಿ ಕೇನಚಿತ್ ದ್ವಾರೇಣ ಅನಾರಭ್ಯಾಧೀತಾನಾಮಪಿ ವಾಕ್ಯನಿಮಿತ್ತಃ ಕ್ರತುಸಂಬನ್ಧೋಽವಕಲ್ಪತೇ। ಕರ್ತಾ ತು ವ್ಯಭಿಚಾರಿದ್ವಾರಂ ಲೌಕಿಕವೈದಿಕ ಕರ್ಮಸಾಧಾರಣ್ಯಾತ್। ತಸ್ಮಾತ್ ನ ತದ್ದ್ವಾರೇಣ ಆತ್ಮಜ್ಞಾನಸ್ಯ ಕ್ರತುಸಂಬನ್ಧಸಿದ್ಧಿಃ ಇತಿ। ನ। ವ್ಯತಿರೇಕವಿಜ್ಞಾನಸ್ಯ ವೈದಿಕೇಭ್ಯಃ ಕರ್ಮಭ್ಯೋಽನ್ಯತ್ರ ಅನುಪಯೋಗಾತ್। ನ ಹಿ ದೇಹವ್ಯತಿರಿಕ್ತಾತ್ಮಜ್ಞಾನಂ ಲೌಕಿಕೇಷು ಕರ್ಮಸು ಉಪಯುಜ್ಯತೇ। ಸರ್ವಥಾ ದೃಷ್ಟಾರ್ಥಪ್ರವೃತ್ತ್ಯುಪಪತ್ತೇಃ। ವೈದಿಕೇಷು ತು ದೇಹಪಾತೋತ್ತರಕಾಲಫಲೇಷು ದೇಹವ್ಯತಿರಿಕ್ತಾತ್ಮಜ್ಞಾನಮನ್ತರೇಣ ಪ್ರವೃತ್ತಿರ್ನೋಪಪದ್ಯತೇ ಇತ್ಯುಪಯುಜ್ಯತೇ ವ್ಯತಿರೇಕ ವಿಜ್ಞಾನಮ್ ॥

(ಭಾಷ್ಯಾರ್ಥ)

ಕರ್ತೃವಾಗಿರುವದರಿಂದ ಆತ್ಮನು ಕರ್ಮಶೇಷವಾಗಿರುವದರಿಂದ ಆ (ಆತ್ಮನ) ವಿಜ್ಞಾನವೂ ವ್ರೀಹಿಪ್ರೋಕ್ಷಣಾದಿಗಳಂತೆ[2] ವಿಷಯದ್ವಾರದಿಂದ

1. ತೈ. ಸಂ. ಯಲ್ಲಿ ಈ ವಾಕ್ಯಗಳ ಪಾಠವು ಸ್ವಲ್ಪ ಬೇರೆಯಾಗಿದೆ.

2. ಪ್ರೋಕ್ಷಣಮಾಡಿದ ಮೇಲೆಯೇ ವ್ರೀಹಿಯು ಕರ್ಮಕ್ಕೆ ಅಂಗವಾಗುತ್ತದೆ. ಇದರಂತೆ ಔಪನಿಷದಾತ್ಮಜ್ಞಾನಸಂಸ್ಕೃತನಾದ ಕರ್ತೃವೇ ಪಾರಲೌಕಿಕಫಲವನ್ನು ಅನುಭವಿಸುವದಕ್ಕೆ ಯೋಗ್ಯನಾಗುತ್ತಾನೆ; ಆದ್ದರಿಂದ ಜ್ಞಾನವೂ ಶ್ರದ್ಧೆಯೂ ಇರುವವನೇ ಕ್ರತುವಿಗೆ ಯೋಗ್ಯನಾಗುತ್ತಾನೆ ಎಂದರ್ಥ. ತಂತ್ರವಾರ್ತಿಕ ೧-೩-೨೭ದಲ್ಲಿ ಆತ್ಮಜ್ಞಾನವು ಕ್ರತ್ವರ್ಥವೂ ಪುರುಷಾರ್ಥವೂ ಆಗಿದೆ ಎಂಬ ಪಕ್ಷವನ್ನು ಉಪಪಾದನೆಮಾಡಿರುವದನ್ನು ನೋಡಿ.

ಕರ್ಮಸಂಬಂಧಿಯೇ ಆಗಿರುವದರಿಂದ ಹಾಗೆ ಪ್ರಯೋಜನವು ನಿಶ್ಚಯವಾಗಿರುವ ಆತ್ಮಜ್ಞಾನದಲ್ಲಿ (ಹೇಳಿರುವ) ಫಲಶ್ರುತಿಯಿರುವೆಯಲ್ಲ, ಅದು ಅರ್ಥವಾದವೇ ; ಮಿಕ್ಕ ದ್ರವ್ಯಸಂಸ್ಕಾರಕರ್ಮಗಳಲ್ಲಿ[1] "ಯಾವನಿಗೆ ಪರ್ಣಮಯವಾದ ಜುಹೂ ಇರುವದೋ ಅವನು ಕೆಟ್ಟ ಹೆಸರನ್ನು ಕೇಳುವದಿಲ್ಲ" (?) "ಅಂಜನ ಮಾಡಿಕೊಳ್ಳುತ್ತಾನಲ್ಲ, ಅದರಿಂದ ದಾಯಾದಿಯ ಕಣ್ಣನ್ನೇ ತೆಗೆದುಹಾಕುತ್ತಾನೆ" (?) "ಪ್ರಯಾಜಾನುಯಾಜಗಳನ್ನು ಮಾಡುತ್ತಾರಲ್ಲ, ಅದು ಯಜ್ಞಕ್ಕೆ ಕವಚವನ್ನು ಮಾಡಿದಂತೆ" (ತೈ. ?) ಎಂಬೀ ಜಾತಿಯ ಫಲಶ್ರುತಿಯೂ ಹೇಗೆ ಅರ್ಥವಾದವೋ ಹಾಗೆ[2] –ಎಂದು ಜೈಮಿನ್ಯಾಚಾರ್ಯರು ಅಭಿಪ್ರಾಯಪಟ್ಟಿರುತ್ತಾರೆ.

(ಆಕ್ಷೇಪ) :– ಅನಾರಭ್ಯಾಧೀತವಾಗಿರುವ[3] ಈ ಆತ್ಮಜ್ಞಾನಕ್ಕೆ ಪ್ರಕರಣವೇ ಮುಂತಾದವುಗಳಲ್ಲಿ[4] ಒಂದು ಹೇತುವೂ ಇಲ್ಲದೆ ಕ್ರತುಪ್ರವೇಶವನ್ನು ಶಂಕಿಸುವದು ಹೇಗೆ (ಸರಿ) ? ಕರ್ತೃದ್ವಾರದಿಂದ ವಾಕ್ಯ(ಪ್ರಮಾಣ) ದಿಂದಲೇ ಆ (ಆತ್ಮ) ವಿಜ್ಞಾನಕ್ಕೆ ಕ್ರತುಸಂಬಂಧವನ್ನು ಹೇಳಬಹುದಲ್ಲ,[5] ಎಂದರೆ (ಅದು) ಸರಿಯಲ್ಲ; ಏಕೆಂದರೆ, ವಾಕ್ಯದಿಂದ ವಿನಿಯೋಗವಾಗಲಾರದು. ಅವ್ಯಭಿಚಾರಿಯಾದ ಯಾವದಾದರೊಂದು ದ್ವಾರವಿರುವದರಿಂದಲ್ಲವೆ, ಅನಾರಭ್ಯಾಧೀತವಾದವುಗಳಿಗೂ ವಾಕ್ಯನಿಮಿತ್ತದಿಂದ ಕ್ರತುಸಂಬಂಧವನ್ನು ಹೇಳಬಹುದಾಗಿರುತ್ತದೆ ? ಕರ್ತೃವಾದರೋ ವ್ಯಭಿಚರಿತವಾಗಿರುವ ದ್ವಾರವು ; ಏಕೆಂದರೆ ಲೌಕಿಕ ವೈದಿಕಕರ್ಮಗಳೆರಡಕ್ಕೂ (ಅವನು) ಸಾಧಾರಣವಾಗಿರುತ್ತಾನೆ.[6] ಆದ್ದರಿಂದ ಆ ದ್ವಾರದಿಂದ ಆತ್ಮಜ್ಞಾನಕ್ಕೆ ಕ್ರತುಸಂಬಂಧವು ಸಿದ್ಧಿಸುವದಿಲ್ಲವಲ್ಲ !

---

1. "ದ್ರವ್ಯಕರ್ಮಸಂಸ್ಕಾರಕರ್ಮಸು ಪರಾರ್ಥತ್ವಾತ್ ಫಲಶ್ರುತಿರರ್ಥವಾದಃ ಸ್ಯಾತ್" (ಜೈ. ಸೂ. ೪–೩–೧) ಎಂಬ ಸೂತ್ರದ ಭಾಷ್ಯದಲ್ಲಿ ಈ ಉದಾಹರಣೆಗಳನ್ನು ಕೊಟ್ಟಿದೆ. "ಪರ್ಣಮಯ ಜುಹೂ" ಎಂಬುದು ದ್ರವ್ಯ, "ಅಂಜನಮಾಡಿಕೊಳ್ಳುವದು" ಸಂಸ್ಕಾರ, "ಪ್ರಯಾಜಾನುಯಾಜಗಳು" ಕರ್ಮಗಳು. ಇವುಗಳಿಗೆ ಹೇಳಿರುವ ಫಲವು ಫಲಕ್ಕಾಗಿಯಲ್ಲ ; ಏಕೆಂದರೆ ಅವು ಮತ್ತೊಂದಕ್ಕಾಗಿ ಹೇಳಿದವು. ಆದ್ದರಿಂದ ಇದು ಅರ್ಥವಾದವೇ– ಎಂಬುದು ಸೂತ್ರಾರ್ಥ.

2. ಆತ್ಮಜ್ಞಾನಕ್ಕೆ ಫಲವನ್ನು ಹೇಳಿದರೂ ಅರ್ಥವಾದ ; ಏಕೆಂದರೆ ಆತ್ಮನೂ ಕ್ರತ್ವರ್ಥ. 3. ಕ್ರತುವನ್ನು ಪ್ರಾರಂಭಿಸಿ ಅದರ ಪ್ರಕರಣದಲ್ಲಿ ಹೇಳದೆ ಇರುವ.

4. ಜುಹೂಮೂಲಕವಾಗಿ ಪರ್ಣಮಯತ್ವವು ಕ್ರತುಸಂಬಂಧವನ್ನು ಅದರ ವಾಕ್ಯದಿಂದಲೇ ಕಲ್ಪಿಸುವಂತೆ ಆತ್ಮಜ್ಞಾನವು ಕರ್ತೃಮೂಲಕವಾಗಿ ಇಲ್ಲಿಯೂ ಕಲ್ಪಿಸಬಹುದಲ್ಲ!

5. ಪ್ರಕರಣ, ಸ್ಥಾನ, ಸಮಾಖ್ಯ ಎಂಬಿವುಗಳಲ್ಲಿ ; ಎಂದರ್ಥ ; ೩–೩–೪೪ರ ಭಾಷ್ಯವನ್ನು ನೋಡಿ.

6. ಲೌಕಿಕಕರ್ಮಗಳಿಗೂ ಕರ್ತೃ ಬೇಕು ; ಆದ್ದರಿಂದ ಕರ್ತೃವಿದ್ದಮಾತ್ರಕ್ಕೆ ಕ್ರತುವನ್ನೇ ಬಯಸಬೇಕೆಂಬುದಿಲ್ಲ.

(ಪರಿಹಾರ) :— ಹಾಗಲ್ಲ. ಏಕೆಂದರೆ ವ್ಯತಿರೇಕವಿಜ್ಞಾನವು ವೈದಿಕ ಕರ್ಮಗಳಲ್ಲಲ್ಲದೆ ಮತ್ತೆಲ್ಲಿಯೂ ಉಪಯೋಗಕ್ಕೆ ಬರುವಂತಿಲ್ಲ. ದೇಹವ್ಯತಿರಿಕ್ತನಾದ ಆತ್ಮನ ಜ್ಞಾನವು ಲೌಕಿಕಕರ್ಮಗಳಲ್ಲಿ ಉಪಯೋಗವಾಗುವದೇ ಇಲ್ಲ. ಏಕೆಂದರೆ ದೃಷ್ಟಾರ್ಥವಾದ ಪ್ರವೃತ್ತಿಯು ಹೇಗಾದರೂ[1] ಆಗಬಹುದಾಗಿರುತ್ತದೆ. ಆದರೆ ದೇಹವು ಬಿದ್ದಮೇಲಿನ ಕಾಲದಲ್ಲಿ ಫಲವನ್ನು ಕೊಡುವ ವೈದಿಕ (ಕರ್ಮ)ಗಳಲ್ಲಿ ದೇಹವ್ಯತಿರಿಕ್ತಾತ್ಮಜ್ಞಾನವಿಲ್ಲದೆ ಪ್ರವೃತ್ತಿಯಾಗುವದು ಹೊಂದುವದೇ ಇಲ್ಲವಾದ್ದರಿಂದ ವ್ಯತಿರಿಕ್ತವಿಜ್ಞಾನವು (ಅಲ್ಲಿ) ಉಪಯೋಗವಾಗುತ್ತದೆ.[2]

## ಈ ಪೂರ್ವಪಕ್ಷದ ಉದ್ದೇಶ

(ಭಾಷ್ಯ)

೪೩೯. ನನು ಅಪಹತಪಾಪ್ಮತ್ವಾದಿವಿಶೇಷಣಾತ್ ಅಸಂಸಾರ್ಯಾತ್ಮವಿಷಯಮ್ ಔಪನಿಷದಂ ದರ್ಶನಂ ನ ಪ್ರವೃತ್ತ್ಯಙ್ಗಂ ಸ್ಯಾತ್ । ನ । ಪ್ರಿಯಾದಿಸಂಸೂಚಿತಸ್ಯ ಸಂಸಾರಿಣ ಏಕಾತ್ಮನೋ ದ್ರಷ್ಟವ್ಯತ್ವೇನ ಉಪದೇಶಾತ್ । ಅಪಹತಪಾಪ್ಮತ್ವಾದಿವಿಶೇಷಣಂ ತು ಸ್ತುತ್ಯರ್ಥಂ ಭವಿಷ್ಯತಿ । ನನು ತತ್ರತತ್ರ ಪ್ರಸಾಧಿತಮೇತತ್ ಅಧಿಕಮ್ ಅಸಂಸಾರಿ ಬ್ರಹ್ಮ ಜಗತ್ಕಾರಣಮ್ । ತದೇವ ಚ ಸಂಸಾರಿಣ ಆತ್ಮನಃ ಪಾರಮಾರ್ಥಿಕಂ ಸ್ವರೂಪಮ್ ಉಪನಿಷತ್ಸು ಉಪದಿಶ್ಯತ ಇತಿ । ಸತ್ಯಂ ಪ್ರಸಾಧಿತಮ್ । ತಸ್ಯೈವ ತು ಸ್ಥೂಣಾನಿಖನನವತ್ ಫಲದ್ವಾರೇಣ ಆಕ್ಷೇಪಸಮಾಧಾನೇ ಕ್ರಿಯೇತೇ ದಾರ್ಢ್ಯಾಯ ॥

(ಭಾಷ್ಯಾರ್ಥ)

(ಆಕ್ಷೇಪ) :— ಅಪಹತಪಾಪ್ಮತ್ವವೇ ಮುಂತಾದ ವಿಶೇಷಣಗಳಿರುವದರಿಂದ ಅಸಂಸಾರಿಯಾದ ಆತ್ಮನ ವಿಷಯದ ಔಪನಿಷದಜ್ಞಾನವು ಪ್ರವೃತ್ತಿಗೆ ಅಂಗವಾಗಲಾರದಲ್ಲ[3] !

(ಪರಿಹಾರ) :— ಹಾಗಲ್ಲ. ಪ್ರಿಯಾದಿಸಂಸೂಚಿತನಾದ ಸಂಸಾರಿಯಾದ ಆತ್ಮನನ್ನೇ ದರ್ಶನಮಾಡಿಕೊಳ್ಳಬೇಕೆಂದು ವಿಧಿಸಿದೆ.[4] ಅಪಹತಪಾಪ್ಮತ್ವವೇ

---

1. ದೇಹವೇ ತಾನೆಂದು ನಂಬಿದ್ದರೂ.
2. ಏಕೆಂದರೆ ಪರಲೋಕದ ಫಲವನ್ನನುಭವಿಸುವದಕ್ಕೆ ದೇಹವ್ಯತಿರಿಕ್ತಾತ್ಮನೇ ಬೇಕು.
3. ಸಂಸಾರಿಯು ಕರ್ಮದಲ್ಲಿ ಪ್ರವರ್ತಿಸುತ್ತಾನೆ ; ಅಪಹತಪಾಪ್ಮನಾದ ಅಸಂಸಾರಿಯು ಪ್ರವರ್ತಿಸಲಾರನು.
4. ಗಂಡ, ಹೆಂಡತಿ, ಮಗ— ಮುಂತಾದ ಪ್ರಿಯವಸ್ತುಗಳಿಗಿಂತಲೂ ಆತ್ಮನು ಪ್ರಿಯನು ; ಅವನನ್ನೇ ಕಂಡುಕೊಳ್ಳಬೇಕು— ಎಂದು ಶ್ರುತಿಯಲ್ಲಿದೆ. ಆದ್ದರಿಂದ ಸಂಸಾರಿ ವಿದ್ಯೆಯನ್ನೇ ಅಲ್ಲಿ ಹೇಳಿದೆ.

ಮುಂತಾದ ವಿಶೇಷಣವೋ ಎಂದರೆ ಸ್ತುತಿಗಾಗಿಯೂ ಆಗಬಹುದು.[1]

(ಆಕ್ಷೇಪ) :– ಅಧಿಕವಾದ ಅಸಂಸಾರಿಯಾದ ಬ್ರಹ್ಮವೇ ಜಗತ್ಕಾರಣವು, ಅದೇ ಸಂಸಾರಿಯಾದ ಆತ್ಮನ ಪಾರಮಾರ್ಥಿಕಸ್ವರೂಪವು– ಎಂದು ಉಪನಿಷತ್ತುಗಳಲ್ಲಿ ಉಪದೇಶಿಸಿದೆ ಎಂದು ಅಲ್ಲಲ್ಲಿ ಸಾಧಿಸಿಕೊಟ್ಟಿರುತ್ತದೆಯಲ್ಲ ![2]

(ಪರಿಹಾರ) :– ನಿಜ. ಸಾಧಿಸಿಕೊಟ್ಟಿರುತ್ತದೆ. ಅದನ್ನೇ ಗೂಟಕ್ಕೆ ಕೂಲಿರಿದಂತೆ ಗಟ್ಟಿಗೊಳಿಸುವದಕ್ಕಾಗಿ ಇಲ್ಲಿ ಫಲದ್ವಾರದಿಂದ ಆಕ್ಷೇಪಸಮಾಧಾನಗಳನ್ನು ಮಾಡಿರುತ್ತದೆ.[3]

**ಆಚಾರದರ್ಶನಾತ್ ॥ ೩ ॥**

೩. ಆಚಾರವು ಕಂಡುಬರುವದರಿಂದಲೂ (ಕರ್ಮಸಂಬಂಧಿಯೇ).

## ಪೂರ್ವಪಕ್ಷ:

## ಜ್ಞಾನಿಗಳೂ ಕರ್ಮವನ್ನು ಮಾಡುತ್ತಿದ್ದರೆಂಬ ಲಿಂಗವಿದೆ

(ಭಾಷ್ಯ)

೪೪೦. "ಜನಕೋ ಹ ವೈದೇಹೋ ಬಹುದಕ್ಷಿಣೇನ ಯಜ್ಞೇನೇಜೇ" (ಬೃ. ೩–೧–೧), "ಯಕ್ಷ್ಯಮಾಣೋ ಹ ವೈ ಭಗವನ್ತೋಽಹಮಸ್ಮಿ" (ಛಾ. ೫–೧೧–೮) ಇತ್ಯೇವಮಾದೀನಿ ಬ್ರಹ್ಮವಿದಾಮಪಿ ಅನ್ಯಪರೇಷು ವಾಕ್ಯೇಷು ಕರ್ಮಸಂಬನ್ಧದರ್ಶನಾನಿ ಭವನ್ತಿ । ತಥಾ ಉದ್ದಾಲಕಾದೀನಾಮಪಿ ಪುತ್ರಾನುಶಾಸನಾದಿದರ್ಶನಾತ್ ಗಾರ್ಹಸ್ಥ್ಯಸಂಬನ್ಧೋಽವಗಮ್ಯತೇ । ಕೇವಲಾಚ್ಚೇಜ್ಜ್ಞಾನಾತ್ ಪುರುಷಾರ್ಥಸಿದ್ಧಿಃ ಸ್ಯಾತ್ ಕಿಮರ್ಥಮ್ ಅನೇಕಾಯಾಸಸಮನ್ವಿತಾನಿ ಕರ್ಮಾಣಿ ತೇ ಕುರ್ಯುಃ ? "ಅರ್ಕೇ ಚೇನ್ಮಧು ವಿನ್ದೇತ ಕಿಮರ್ಥಂ ಪರ್ವತಂ ವ್ರಜೇತ್" ಇತಿ ನ್ಯಾಯಾತ್ ॥

(ಭಾಷ್ಯಾರ್ಥ)

"ವೈದೇಹಜನಕನು ಬಹುದಕ್ಷಿಣೆಯ ಯಜ್ಞದಿಂದ ಯಾಗವನ್ನು ಮಾಡಿದನು" (ಬೃ. ೩–೧–೧) "ಪೂಜ್ಯರೆ, ನಾನು ಯಾಗಮಾಡುವವನಾಗಿರು

---

1. ಆತ್ಮಜ್ಞಾನವನ್ನು ಹೊಗಳುವದಕ್ಕಾಗಿ ಅಪಹತಪಾಪ್ಮತ್ವಾದಿಗಳನ್ನು ಹೇಳಿದೆ.

2. ಆದ್ದರಿಂದ ಅಸಂಸಾರಿಯಾದ ಆತ್ಮನ ವಿದ್ಯೆಯೂ ಇದೆ ಎಂದಾಯಿತಲ್ಲ !

3. ಒಂದು ದೃಷ್ಟಿಯಿಂದ ಸಾಧಿಸಿದ್ದನ್ನೇ ಮತ್ತೊಂದು ದೃಷ್ಟಿಯಿಂದ ಆಕ್ಷೇಪಿಸಿ ಮತ್ತೆ ಸಾಧಿಸುವದು ಪುನರುಕ್ತಿಯಲ್ಲ. ಪ್ರಕೃತದಲ್ಲಿ ಆತ್ಮಜ್ಞಾನದ ಫಲವು ವಿವಕ್ಷಿತವೆ, ಅಲ್ಲವೆ ?– ಎಂಬುದನ್ನು ವಿಚಾರಮಾಡಿ ಅಸಂಸಾರ್ಯಾತ್ಮವಿದ್ಯೆಯೂ ಇದೆ ಎಂಬುದನ್ನು ಗಟ್ಟಿಗೊಳಿಸುತ್ತದೆಯಾದ್ದರಿಂದ ಈ ಆಕ್ಷೇಪವನ್ನು ಮತ್ತೆ ಒಡ್ಡಿರುವದು ತಪ್ಪಲ್ಲ.

ತ್ರೇನೆ” (ಛಾಂ.೫–೧೧–೫) ಎಂಬಿವೇ ಮುಂತಾಗಿ ಬ್ರಹ್ಮಜ್ಞಾನಿಗಳಿಗೂ ಕರ್ಮ ಸಂಬಂಧವಾದ ದರ್ಶನಗಳು ಅನ್ಯಪರವಾದ ವಾಕ್ಯಗಳಲ್ಲಿ ಇರುತ್ತವೆ.[1] ಹೀಗೆಯೇ ಉದ್ದಾಲಕನೇ ಮೊದಲಾದವರು ಪುತ್ರಾನುಶಾಸನವೇ ಮುಂತಾದ ದ್ದನ್ನು ಮಾಡಿದರು ಎಂದು ಕಂಡುಬರುವದರಿಂದ ಗಾರ್ಹಸ್ಥ್ಯಸಂಬಂಧವು ನಿಶ್ಚಯವಾಗುತ್ತದೆ.[2] ಬರಿಯ ಜ್ಞಾನದಿಂದಲೇ ಪುರುಷಾರ್ಥಸಿದ್ಧಿಯಾಗುವ ದಿದ್ದರೆ ಅವರು ಬಹಳ ಆಯಾಸದಿಂದ ಕೂಡಿರುವ ಕರ್ಮಗಳನ್ನು ಏತಕ್ಕಾಗಿ ಮಾಡುತ್ತಿದ್ದರು ? “ಎಕ್ಕದ ಗಿಡದಲ್ಲಿ ಜೇನುತುಪ್ಪವು ಸಿಕ್ಕುವಂತಿದ್ದರೆ ಏತಕ್ಕೆ ಪರ್ವತಕ್ಕೆ ಹೋಗಿಯಾನು ?” ಎಂಬ ನ್ಯಾಯವಿದೆಯಷ್ಟೆ.[3]

### ತಚ್ಛ್ರುತೇಃ ॥ ೪ ॥

೪. ಆ ಶ್ರುತಿಯಿರುವದರಿಂದಲೂ (ಕರ್ಮಸಂಬಂಧಿಯೇ).

## ವಿದ್ಯೆಯು ಕರ್ಮಶೇಷವೆಂಬ ಶ್ರುತಿಯಿದೆ

(ಭಾಷ್ಯ)

೪೪೧. “ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ” (ಛಾಂ. ೧–೧–೧೦) ಇತಿ ಚ ಕರ್ಮಶೇಷತ್ವಶ್ರವ ಣಾತ್ ವಿದ್ಯಾಯಾ ನ ಕೇವಲಾಯಾಃ ಪುರುಷಾರ್ಥಹೇತುತ್ವಮ್ ॥

---

1. ಈ ಶ್ರುತಿಗಳು ಆಯಾ ವಿದ್ಯೆಯನ್ನು ತಿಳಿಸುವದಕ್ಕೆ ಸಂಬಂಧವಾದ ಆಖ್ಯಾನ ಗಳಲ್ಲಿವೆಯಾದರೂ ಜನಕನೂ ಯಜ್ಞವನ್ನು ಮಾಡಿದನು, ಅಶ್ವಪತಿಯೂ ಯಜ್ಞದಲ್ಲಿ ತೊಡಗಿದ್ದನು– ಎಂದು ಬ್ರಹ್ಮಜ್ಞಾನಿಗಳಿಗೂ ಕರ್ಮಸಂಬಂಧವನ್ನು ಹೇಳುತ್ತವೆ ಎಂಬ ಲಿಂಗವಿದೆ.

2. ಉದ್ದಾಲಕನು ಮಗನಿಗೂ ಯಾಜ್ಞವಲ್ಕ್ಯನು ಹೆಂಡತಿಗೂ ಉಪದೇಶಮಾಡಿರು ವದರಿಂದ ಗೃಹಸ್ಥರಿಗೂ ಜ್ಞಾನವುಂಟು, ಆದ್ದರಿಂದ ಜ್ಞಾನಕ್ಕೆ ಕರ್ಮಸಂಬಂಧವಿದೆ ಎಂದು ಸೂಚಿಸಿದಂತಾಗಿದೆ.

3. ದಾರಿಯಲ್ಲಿರುವ ಎಕ್ಕದ ಗಿಡದಲ್ಲಿಯೇ ಜೇನುತುಪ್ಪವು ಸಿಕ್ಕುವಂತಿದ್ದರೆ ಯಾರೂ ಬೆಟ್ಟವನ್ನು ಹತ್ತುವ ಆಯಾಸವನ್ನು ವಹಿಸುವದಿಲ್ಲ ; ಇದರಂತೆ ಜ್ಞಾನವೊಂದೇ ಮುಕ್ತಿಗೆ ಸಾಕಾಗಿದ್ದರೆ ಕರ್ಮವನ್ನೇಕೆ ಮಾಡಬೇಕು ? ಈ ನ್ಯಾಯವನ್ನು ಜೈ. ೧–೨–೪ರಲ್ಲಿ ಶಾ. ಭಾ. ದಲ್ಲಿ ಉಪಯೋಗಿಸಿದೆ. ಬರಿಯ ಜ್ಞಾನವು ಪುರುಷಾರ್ಥಪ್ರದವಲ್ಲವೆಂಬುದಕ್ಕೆ ಇದೊಂದು ಲಿಂಗವೆಂದು ಪೂರ್ವಪಕ್ಷಿಯ ಭಾವ. ತಂ. ವಾ. ೧–೩–೨೭ರಲ್ಲಿ (ಪು. ೨೮೭) ಅಶ್ವಮೇಧವಿಜ್ಞಾನಕ್ಕೆ ಇರುವ ಫಲಶ್ರುತಿಯು ತತ್ಪರವಲ್ಲವೆಂಬುದಕ್ಕೆ ಇದೇ ಯುಕ್ತಿ ಯನ್ನು ಉಪಯೋಗಿಸಿದೆ.

(ಭಾಷ್ಯಾರ್ಥ)

"ಯಾವದನ್ನು ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಸಮಾಧಾನದಿಂದಲೂ ಮಾಡುತ್ತಾನೋ ಅದೇ ವೀರ್ಯವತ್ತರವಾಗುತ್ತದೆ" (ಛಾಂ. ೧-೧-೧೦) ಎಂದು ಕರ್ಮಶೇಷತ್ವವನ್ನು ಶ್ರುತಿಯಲ್ಲಿ ಹೇಳಿರುವದರಿಂದಲೂ ಬರಿಯ ವಿದ್ಯೆಯು ಪುರುಷಾರ್ಥಹೇತುವಲ್ಲ.

**ಸಮನ್ವಾರಮ್ಭಣಾತ್ ॥ ೫ ॥**

೫. ಜೊತೆಯಲ್ಲಿ (ಫಲವನ್ನು) ಆರಂಭಿಸುವದರಿಂದಲೂ (ಕರ್ಮಶೇಷ).

## ಪೂರ್ವಪಕ್ಷ: ವಿದ್ಯೆಯೂ ಕರ್ಮವೂ ಸೇರಿ ಫಲವನ್ನು ಕೊಡುವವೆಂದು ಶ್ರುತಿ

(ಭಾಷ್ಯ)

೪೪೨. "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ" (ಬೃ. ೪-೪-೨) ಇತಿ ಚ ವಿದ್ಯಾಕರ್ಮಣೋಃ ಫಲಾರಮ್ಭೇ ಸಹಕಾರಿತ್ವದರ್ಶನಾತ್ ನ ಸ್ವಾತನ್ತ್ರ್ಯಂ ವಿದ್ಯಾಯಾಃ ॥

(ಭಾಷ್ಯಾರ್ಥ)

"ಅವನನ್ನು ವಿದ್ಯಾಕರ್ಮಗಳೆರಡೂ ಜೊತೆಯಲ್ಲಿ ಹಿಂಬಾಲಿಸುವವು" (ಬೃ. ೪-೪-೨) ಎಂದು ವಿದ್ಯಾಕರ್ಮಗಳು ಫಲವನ್ನುಂಟುಮಾಡುವಲ್ಲಿ ಸಹಕಾರಿಗಳಾಗಿರುವವೆಂದು ಶ್ರುತಿಯಲ್ಲಿರುವದರಿಂದಲೂ ವಿದ್ಯೆಗೆ ಸ್ವಾತಂತ್ರ್ಯವಿಲ್ಲ.

**ತದ್ವತೋ ವಿಧಾನಾತ್ ॥ ೬ ॥**

೬. ಆ (ಜ್ಞಾನ)ವುಳ್ಳವನಿಗೇ (ಕರ್ಮ)ವನ್ನು ವಿಧಾನಮಾಡಿರುವದರಿಂದಲೂ (ಕರ್ಮಶೇಷ).

## ಆತ್ಮಜ್ಞಾನವುಳ್ಳವನಿಗೇ ಕರ್ಮವನ್ನು ವಿಧಿಸಿದೆ

( ಭಾಷ್ಯ )

೪೪೩. "ಆಚಾರ್ಯಕುಲಾದ್ ವೇದಮಧೀತ್ಯ ಯಥಾವಿಧಾನಂ ಗುರೋಃ ಕರ್ಮಾತಿಶೇಷೇಣ ಅಭಿಸಮಾವೃತ್ಯ ಕುಟುಮ್ಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನಃ" (ಛಾಂ. ೮-೧೫-೧) ಇತಿ ಚೈವಂಜಾತೀಯಕಾ

ಶ್ರುತಿಃ ಸಮಸ್ತವೇದಾರ್ಥವಿಜ್ಞಾನವತಃ ಕರ್ಮಾಧಿಕಾರಂ ದರ್ಶಯತಿ । ತಸ್ಮಾದಪಿ ನ ವಿಜ್ಞಾನಸ್ಯ ಸ್ವಾತನ್ತ್ರ್ಯೇಣ ಫಲಹೇತುತ್ವಮ್ । ನನ್ವತ್ರ 'ಅಧೀತ್ಯ' ಇತ್ಯಧ್ಯಯನಮಾತ್ರಂ ವೇದಸ್ಯ ಶ್ರೂಯತೇ ನಾರ್ಥವಿಜ್ಞಾನಮ್ । ನೈಷ ದೋಷಃ । ದೃಷ್ಟಾರ್ಥತ್ವಾತ್ ವೇದಾಧ್ಯಯನಮ್ ಅರ್ಥಾವಬೋಧ ಪರ್ಯನ್ತಮ್ ಇತಿ ಸ್ಥಿತಮ್ ॥

(ಭಾಷ್ಯಾರ್ಥ)

"ಆಚಾರ್ಯಕುಲದಿಂದ ವೇದವನ್ನು ಅಧ್ಯಯನಮಾಡಿಕೊಂಡು ಯಥಾ ವಿಧಿಯಾಗಿ ಗುರುವಿನ ಕರ್ಮವನ್ನು (ಮಾಡಿ) ಉಳಿದ (ಕಾಲದಲ್ಲಿ ಅಧ್ಯಯನ ಮಾಡಿಕೊಂಡು) ಹಿಂತಿರುಗಿ ಬಂದು ಕುಟುಂಬದಲ್ಲಿ ಶುಚಿಯಾದ ದೇಶದಲ್ಲಿ ಸ್ವಾಧ್ಯಾಯವನ್ನು ಅಧ್ಯಯನಮಾಡುತ್ತಾ......" (ಛಾಂ. ೮-೧೫-೧) ಎಂಬೀ ಜಾತಿಯ ಶ್ರುತಿಯು ಸಮಸ್ತವೇದಾರ್ಥವನ್ನೂ ಬಲ್ಲವನಿಗೇ ಕರ್ಮಾಧಿಕಾರ ವನ್ನು ತಿಳಿಸುತ್ತದೆ. ಆದ್ದರಿಂದಲೂ (ಆತ್ಮ)ವಿಜ್ಞಾನವು ಸ್ವಾತಂತ್ರ್ಯದಿಂದ ಫಲಹೇತುವಲ್ಲ.

(ಆಕ್ಷೇಪ) :– ಇಲ್ಲಿ 'ಅಧ್ಯಯನಮಾಡಿಕೊಂಡು' ಎಂದು ವೇದದ ಅಧ್ಯಯನಮಾತ್ರವನ್ನೇ ಶ್ರುತಿಯಲ್ಲಿ ಹೇಳಿದೆಯೇ ಹೊರತು ಅರ್ಥವಿಜ್ಞಾನ ವನ್ನು ಹೇಳಿಲ್ಲವಲ್ಲ !

(ಪರಿಹಾರ) :– ಇದೇನೂ ದೋಷವಲ್ಲ. ವೇದಾಧ್ಯಯನವು ದೃಷ್ಟಾರ್ಥ ವಾಗಿರುವದರಿಂದ[1] (ಅದು) ಅರ್ಥಜ್ಞಾನಪರ್ಯಂತವಾಗಿಯೇ ಇರುತ್ತದೆ ಎಂಬುದು ಸಿದ್ಧ.

**ನಿಯಮಾಚ್ಚ ॥ ೭ ॥**

೭. ನಿಯಮವಿರುವದರಿಂದಲೂ (ಕರ್ಮಶೇಷವೇ).

## ಪೂರ್ವಪಕ್ಷ :
## ಬದುಕಿರುವವರೆಗೂ ಕರ್ಮಮಾಡಬೇಕೆಂಬ ನಿಯಮವಿದೆ

(ಭಾಷ್ಯ)

೪೪೪. "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ । ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ" (ಈ. ೨) ಇತಿ, ತಥಾ "ಏತದ್ವೈ ಜರಾಮರ್ಯಂ ಸತ್ರಂ ಯದಗ್ನಿಹೋತ್ರಂ ಜರಯಾ ವಾ ಹ್ಯೇವಾಸ್ಮಾನ್ಮುಚ್ಯತೇ ಮೃತ್ಯುನಾ ವಾ" (ಶತ.ಬ್ರಾ.೧೨-೪-೧-೧) ಇತ್ಯೇವಂ ಜಾತೀಯಕಾತ್ ನಿಯಮಾದಪಿ ಕರ್ಮಶೇಷತ್ವಮೇವ ವಿದ್ಯಾಯಾ ಇತಿ ॥

---

1. ವೇದವು ಕರ್ಮವನ್ನು ತಿಳಿಸುವದೆಂಬ ದೃಷ್ಟಪ್ರಯೋಜನವುಳ್ಳದ್ದಾಗಿದೆ ; ಆದ್ದ ರಿಂದ ವೇದಾರ್ಥವನ್ನು ವಿಚಾರಮಾಡದಿದ್ದರೆ ಈ ಪ್ರಯೋಜನವು ಸಿದ್ಧಿಸುವದಿಲ್ಲ.

(ಭಾಷ್ಯಾರ್ಥ)

"ಇಲ್ಲಿ ಕರ್ಮಗಳನ್ನು ಮಾಡುತ್ತಲೇ ನೂರು ವರ್ಷ ಬಾಳಲೆಳಸಬೇಕು" (ಈ. ೨) ಎಂದು, ಹೀಗೆಯೇ "ಈ ಅಗ್ನಿಹೋತ್ರವೆಂಬುದಿದೆಯಲ್ಲ, ಇದೇ ಜರಾಮರ್ಯಸತ್ರವು, ಮುಪ್ಪಿನಲ್ಲಿಯೇ ಬಿಡುಗಡೆಯಾಗುತ್ತಾನೆ, ಮೃತ್ಯುವಿನಿಂದಾದರೂ ಇದರಿಂದ (ಬಿಡುಗಡೆಯಾಗುತ್ತಾನೆ)" (ಶತ. ಬ್ರಾ. ೧೨-೪-೧-೧) ಎಂಬೀ ಜಾತಿಯ ನಿಯಮದಿಂದಲೂ ವಿದ್ಯೆಗೆ ಕರ್ಮಶೇಷತ್ವವೇ (ನಿಶ್ಚಯವಾಗುತ್ತದೆ).

## ಸಿದ್ಧಾಂತಸೂತ್ರಗಳು

**ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ॥ ೮ ॥**

೮. ಆದರೆ ಅಧಿಕೋಪದೇಶವಿರುವದರಿಂದ ಬಾದರಾಯಣರ (ಮತವೇ ಸರಿ). ಏಕೆಂದರೆ ಹಾಗೆಂದು ಶ್ರುತಿಯಲ್ಲಿ ಹೇಳಿದೆ.

### ಜೀವನಿಗಿಂತ ಅಧಿಕನಾದ ಆತ್ಮನನ್ನು ಶ್ರುತಿ ಹೇಳುತ್ತದೆ

(ಭಾಷ್ಯ)

೪೪೫. ಏವಂ ಪ್ರಾಪ್ತೇ ಪ್ರತಿವಿಧತ್ತೇ। (ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್)। ತುಶಬ್ದಾತ್ ಪಕ್ಷೋ ವಿಪರಿವರ್ತತೇ। ಯದುಕ್ತಮ್ "ಶೇಷತ್ವಾತ್ ಪುರುಷಾರ್ಥವಾದಃ" (ಬ್ರ. ೩-೪-೨) ಇತಿ ತನ್ನೋಪಪದ್ಯತೇ। ಕಸ್ಮಾತ್ ? ಅಧಿಕೋಪದೇಶಾತ್। ಯದಿ ಸಂಸಾರ್ಯೇವಾತ್ಮಾ ಶಾರೀರಃ ಕರ್ತಾ ಭೋಕ್ತಾ ಚ ಶರೀರಮಾತ್ರವ್ಯತಿರೇಕೇಣ ವೇದಾಂತೇಷು ಉಪದಿಷ್ಟಃ ಸ್ಯಾತ್ ತತೋ ವರ್ಣಿತೇನ ಪ್ರಕಾರೇಣ ಫಲಶ್ರುತೇರರ್ಥವಾದತ್ವಂ ಸ್ಯಾತ್। ಅಧಿಕಸ್ತಾವತ್ ಶಾರೀರಾತ್ ಆತ್ಮನೋಽಸಂಸಾರೀ ಈಶ್ವರಃ ಕರ್ತೃತ್ವಾದಿಸಂಸಾರಿಧರ್ಮರಹಿತೋಽಪಹತಪಾಪ್ಮತ್ವಾದಿವಿಶೇಷಣಃ ಪರಮಾತ್ಮಾ ವೇದ್ಯತ್ವೇನ ಉಪದಿಶ್ಯತೇ ವೇದಾಂತೇಷು। ನ ಚ ತದ್ವಿಜ್ಞಾನಂ ಕರ್ಮಣಾಂ ಪ್ರವರ್ತಕಂ ಭವತಿ ಪ್ರತ್ಯುತ ಕರ್ಮಾಣಿ ಉಚ್ಛಿನತ್ತಿ ಇತಿ ವಕ್ಷ್ಯತಿ "ಉಪಮರ್ದಂ ಚ" (೩-೪-೧೬) ಇತ್ಯತ್ರ। ತಸ್ಮಾತ್ "ಪುರುಷಾರ್ಥೋಽತಃ ಶಬ್ದಾತ್" (೩-೪-೧) ಇತಿ ಯನ್ಮತಂ ಭಗವತೋ ಬಾದರಾಯಣಸ್ಯ ತತ್ ತಥೈವ ತಿಷ್ಠತಿ ನ ಶೇಷತ್ವಪ್ರಭೃತಿಭಿರ್ಹೇತ್ವಾಭಾಸೈಶ್ಚಾಲಯಿತುಂ ಶಕ್ಯತೇ। ತಥಾ ಹಿ ತಮ್ ಅಧಿಕಂ ಶಾರೀರಾತ್ ಈಶ್ವರಮ್ ಆತ್ಮಾನಂ ದರ್ಶಯನ್ತಿ ಶ್ರುತಯಃ "ಯಃ ಸರ್ವಜ್ಞಃ ಸರ್ವವಿತ್" (ಮುಂ. ೧-೧-೯) "ಭೀಷಾಽಸ್ಮಾದ್ವಾತಃ ಪವತೇ" (ತೈ. ೨-೮-೧), "ಮಹದ್ಭಯಂ ವಜ್ರಮುದ್ಯತಮ್"

(ಕ. ೨-೩-೨), "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ" (ಬೃ. ೩-೮-೯) "ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ" (ಛಾಂ.೬-೨-೩) ಇತ್ಯೇವಮಾದ್ಯಾಃ । ಯತ್ತು ಪ್ರಿಯಾದಿಸಂಸೂಚಿತಸ್ಯ ಸಂಸಾರಿಣ ಏವ ಆತ್ಮನೋ ವೇದ್ಯತಯಾ ಅನುಕರ್ಷಣಮ್ "ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ। ಆತ್ಮಾ ವಾ ಅರೇ ದ್ರಷ್ಟವ್ಯಃ" (ಬೃ. ೨-೪-೫), "ಯಃ ಪ್ರಾಣೇನ ಪ್ರಾಣಿತಿ ಸ ತ ಆತ್ಮಾ ಸರ್ವಾನ್ತರಃ" (ಬೃ. ೩-೪-೧), "ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ" (ಛಾಂ. ೮-೭-೪) ಇತ್ಯುಪಕ್ರಮ್ಯ "ಏತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ" (ಛಾಂ. ೮-೯-೩) ಇತಿ ಚೈವಮಾದಿ, ತದಪಿ "ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದಃ" (ಬೃ. ೨-೪-೧೦) "ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ" (ಬೃ. ೩-೫-೧), "ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ" (ಛಾಂ. ೮-೧೨-೩) ಇತ್ಯೇವಮಾದಿಭಿರ್ವಾಕ್ಯಶೇಷೈಃ ಸತ್ಯಾಮೇವ ಅಧಿಕೋಪದಿದಿಕ್ಷಾಯಾಮ್ ಅತ್ಯನ್ತಾಭೇದಾಭಿಪ್ರಾಯಮ್ ಇತ್ಯವಿರೋಧಃ । ಪಾರಮೇಶ್ವರಮೇವ ಹಿ ಶಾರೀರಸ್ಯ ಪಾರಮಾರ್ಥಿಕಂ ಸ್ವರೂಪಮ್ । ಉಪಾಧಿಕೃತಂ ತು ಶಾರೀರತ್ವಮ್ । "ತತ್ತ್ವಮಸಿ" (ಛಾಂ. ೬-೮-೭) "ನಾನ್ಯದತೋಽಸ್ತಿ ದ್ರಷ್ಟೃ" (ಬೃ. ೩-೮-೧೧) ಇತ್ಯಾದಿಶ್ರುತಿಭ್ಯಃ। ಸರ್ವಂ ಚೈತದ್ ವಿಸ್ತರೇಣಾಸ್ಮಾಭಿಃ ಪುರಸ್ತಾತ್ ತತ್ರ ತತ್ರ ವರ್ಣಿತಮ್ ॥

(ಭಾಷ್ಯಾರ್ಥ)

ಹೀಗೆಂಬ ಪೂರ್ವಪಕ್ಷವು ಬಂದೊದಗಲಾಗಿ (ಇದಕ್ಕೆ) ಪ್ರತಿಯಾಗಿ ಹೇಳುತ್ತಾರೆ: ('ಅಧಿಕೋಪಾದೇಶಾತ್ತು'..... ಅಧಿಕವಾದ ಆತ್ಮನನ್ನು ಉಪದೇಶ ಮಾಡುವದರಿಂದ ಬಾದರಾಯಣನ ಮತವೇ ಸರಿ, ಏಕೆಂದರೆ ಹಾಗೆ ಕಂಡಿದೆ). (ಸೂತ್ರದಲ್ಲಿರುವ) ತುಶಬ್ದದಿಂದ ಪಕ್ಷವು ನಿರಾಕೃತವಾಗಿದೆ. 'ಶೇಷವಾಗಿರುವದರಿಂದ ಪುರುಷಾರ್ಥವಾದವಿದು' (೩-೪-೨) ಎಂದು ಹೇಳಿದಿರಲ್ಲ, ಅದು ಹೊಂದುವದಿಲ್ಲ. ಏಕೆ? ಎಂದರೆ ಅಧಿಕೋಪದೇಶವಿರುವದರಿಂದ ಬರಿಯ ಸಂಸಾರ್ಯಾತ್ಮನಾದ ಶಾರೀರನೇ, ಕರ್ತೃವೂ ಭೋಕ್ತೃವೂ ಆಗಿ ಬರಿಯ ಶರೀರಕ್ಕಿಂತ ವ್ಯತಿರಿಕ್ತನು (ಆದ ಜೀವನೇ), ವೇದಾಂತಗಳಲ್ಲಿ ಉಪದಿಷ್ಟನಾಗಿದ್ದರೆ ಆಗ (ಪೂರ್ವಪಕ್ಷದಲ್ಲಿ) ವರ್ಣಿತವಾಗಿರುವ ರೀತಿಯಿಂದ ಫಲಶ್ರುತಿಯು ಅರ್ಥವಾದವೆಂದಾಗಬಹುದಾಗಿತ್ತು. ಮೊದಲನೆಯದಾಗಿ ಶಾರೀರಾತ್ಮನಿಗಿಂತ ಅಧಿಕನಾದ ಅಸಂಸಾರಿಯಾದ ಈಶ್ವರನೇ, ಕರ್ತತ್ವಾದಿಸಂಸಾರಿಧರ್ಮರಹಿತನೂ ಅಪಹತಪಾಪ್ಮತ್ವಾದಿವಿಶೇಷಣಗಳುಳ್ಳವನೂ ಆದ ಪರಮಾತ್ಮನೇ ವೇದ್ಯನೆಂದು ವೇದಾಂತಗಳಲ್ಲಿ ಉಪದೇಶಮಾಡಿರುತ್ತದೆ. ಆದರೆ ಆ (ಆತ್ಮನ) ವಿಜ್ಞಾನವು ಕರ್ಮಗಳಿಗೆ

ಪ್ರವರ್ತಕವಾಗಲಾರದು, ಇದಕ್ಕೆ ಬದಲು ಕರ್ಮಗಳನ್ನೇ ಬಾಧಿಸುತ್ತದೆ ಎಂದು "ಉಪಮರ್ದಂ ಚ" (೩-೪-೧೬) ಎಂಬಲ್ಲಿ ಮುಂದೆ ಹೇಳುವರು. ಆದ್ದರಿಂದ "ಪುರುಷಾರ್ಥವು ಈ ವಿದ್ಯೆಯಿಂದಲೇ ಆಗುತ್ತದೆ, ಏಕೆಂದರೆ (ಹಾಗೆಂದು) ಶಬ್ದವಿದೆ" (೩-೪-೧) ಎಂಬ ಭಗವಂತರಾದ ಬಾದರಾಯಣರ ಮತವಿದೆಯಲ್ಲ, ಅದು ಹಾಗೆಯೇ ನಿಲ್ಲುತ್ತದೆ ; ಶೇಷತ್ವವೇ ಮುಂತಾದ ಹೇತ್ವಾಭಾಸಗಳಿಂದ (ಅದನ್ನು) ಅಲುಗಾಡಿಸುವದಕ್ಕೆ ಆಗುವದಿಲ್ಲ.

ಆದ್ದರಿಂದಲೇ ಆ ಶಾರೀರನಿಗಿಂತ ಅಧಿಕನಾಗಿರುವ ಈಶ್ವರಾತ್ಮನನ್ನು "ಯಾವನು ಸರ್ವಜ್ಞನೂ ಸರ್ವವಿದನೂ (ಆಗಿರುವನೋ)......" (ಮುಂ ೧-೧-೯) "ಇವನ ಭಯದಿಂದ ವಾಯುವು ಬೀಸುತ್ತಾನೆ" (ತೈ. ೨-೮-೧), "ದೊಡ್ಡ ಭಯವಾಗಿ ಎತ್ತಿದ ವಜ್ರದಂತಿರುವ" (ಕ. ೨-೩-೩), "ಗಾರ್ಗಿಯೆ, ಈ ಅಕ್ಷರದ ಪ್ರಶಾಸನದಲ್ಲಿ (ಸೂರ್ಯಚಂದ್ರರು) ನಿಂತಿರುತ್ತಾರೆ" (ಬೃ. ೩-೮-೯) "ಅದು ನಾನು ಬಹುವಾಗುವೆನು, ಉತ್ಪನ್ನನಾಗುವೆನು ಎಂದು ಯೋಚಿಸಿತು, ಅದು ತೇಜಸ್ಸನ್ನು ಸೃಜಿಸಿತು" (ಛಾಂ. ೬-೨-೩) ಎಂಬಿವೇ ಮುಂತಾದ ಶ್ರುತಿಗಳು ತಿಳಿಸುತ್ತಿವೆ.

ಇನ್ನು "ಆತ್ಮನ ಕಾಮಕ್ಕಾಗಿಯೇ ಸರ್ವವೂ ಪ್ರಿಯವಾಗಿರುತ್ತದೆ ; ಎಲೆ, ಆತ್ಮನೇ ದರ್ಶನಮಾಡಿಕೊಳ್ಳತಕ್ಕವನು" (ಬೃ. ೨-೪-೫) "ಯಾವನು ಪ್ರಾಣದಿಂದ ಪ್ರಾಣನಮಾಡುತ್ತಾನೋ ಅವನೇ ನಿನ್ನ ಸರ್ವಾಂತರ ಆತ್ಮನು" (ಬೃ. ೩-೪-೧), "ಕಣ್ಣಿನಲ್ಲಿ ಈ ಪುರುಷನು ಕಾಣಬರುತ್ತಾನಲ್ಲ" (ಛಾಂ. ೮-೭-೪) ಎಂದು ಉಪಕ್ರಮಿಸಿ "ಇವನನ್ನೇ ನಿನಗೆ ಮತ್ತೂ ಅನುವ್ಯಾಖ್ಯಾನ ಮಾಡುವೆನು" (ಛಾಂ. ೮-೯-೩) ಎಂದು ಮುಂತಾಗಿ ಪ್ರಿಯಸಂಸೂಚಿತನಾಗಿರುವ ಸಂಸಾರಿಯಾದ ಆತ್ಮನನ್ನೇ ವೇದ್ಯನೆಂದು ಅನುಕರ್ಷಣಮಾಡಿ (ಹೇಳಿ)ದೆಯಲ್ಲ, ಅದೂ "ಈ ಮಹಾಭೂತದ ನಿಃಶ್ವಾಸವೇ ಈ ಋಗ್ವೇದ (.....)" (ಬೃ. ೨-೪-೧೦), "ಯಾವನು ಹಸಿವುಬಾಯಾರಿಕೆಗಳನ್ನೂ ಶೋಕವನ್ನೂ ಮೋಹವನ್ನೂ ಮುಪ್ಪನ್ನೂ ಮರಣವನ್ನೂ ಮೀರಿರುವನೋ" (ಬೃ. ೩-೫-೧), "ಹೆಚ್ಚಿನ ಜ್ಯೋತಿಯನ್ನು ಸೇರಿಕೊಂಡು ತನ್ನ ರೂಪದಿಂದ ಸಿದ್ಧನಾಗುವನು, ಅವನೇ ಉತ್ತಮಪುರುಷನು" (ಛಾಂ. ೮-೧೨-೩) ಎಂದು ಮುಂತಾಗಿರುವ ವಾಕ್ಯಶೇಷಗಳಿಂದ ಅಧಿಕೋಪದೇಶವನ್ನು ಮಾಡಬೇಕೆಂಬ ವಿವಕ್ಷೆಯಿರುವದರಿಂದಲೇ (ಇಬ್ಬರಿಗೂ) ಅತ್ಯಂತಾಭೇದ(ವನ್ನು ಹೇಳುವ) ಅಭಿಪ್ರಾಯದಿಂದ (ಆಡಿದ ಮಾತು). ಆದ್ದರಿಂದ (ಯಾವ) ವಿರೋಧವೂ ಇರುವದಿಲ್ಲ. "ಶಾರೀರನಿಗೆ ಪರಮೇಶ್ವರರೂಪವೇ ಅಲ್ಲವೆ, ಪರಮಾರ್ಥವಾದದ್ದು ? ಶಾರೀರತ್ವವೋ ಎಂದರೆ ಉಪಾಧಿಕೃತವಾದದ್ದು. "ಇದಕ್ಕಿಂತ ಬೇರೆಯಾದ ದ್ರಷ್ಟೃವಿಲ್ಲ"

(ಬೃ. ೩-೮-೧೧) ಮುಂತಾದ ಶ್ರುತಿಗಳು (ಇದಕ್ಕೆ ಪ್ರಮಾಣವು). ಇದೆಲ್ಲ ವನ್ನೂ ವಿಸ್ತಾರವಾಗಿ ನಾವು (ಈ) ಮುಂಚೆ ಅಲ್ಲಲ್ಲಿ ವರ್ಣಿಸಿರುತ್ತೇವೆ.

**ತುಲ್ಯಂ ತು ದರ್ಶನಮ್ ॥ ೯ ॥**

೯. (ಆಚಾರ)ದರ್ಶನವಾದರೋ ಸಮಾನವಾಗಿರುತ್ತದೆ.

## ಜ್ಞಾನವು ಕರ್ಮಶೇಷವಲ್ಲವೆಂಬುದಕ್ಕೆ ಆಚಾರದರ್ಶನವಿದೆ

(ಭಾಷ್ಯ)

೪೪೭. ಯುತ್ತೂಕ್ತಮ್ ಆಚಾರದರ್ಶನಾತ್ ಕರ್ಮಶೇಷೋ ವಿದ್ಯೇತಿ । ಅತ್ರ ಬ್ರೂಮಃ । ತುಲ್ಯಮ್ ಆಚಾರದರ್ಶನಮ್ ಅಕರ್ಮಶೇಷತ್ವೇಽಪಿ ವಿದ್ಯಾಯಾಃ । ತಥಾ ಹಿ ಶ್ರುತಿರ್ಭವತಿ "ಏತದ್ಧ ಸ್ಮ ವೈ ತದ್ವಿದ್ವಾಂಸ ಆಹುಃ ಋಷಯಃ ಕಾವಷೇಯಾಃ ಕಿಮರ್ಥಾ ವಯಮಧ್ಯೇಷ್ಯಾಮಹೇ ಕಿಮರ್ಥಾ ವಯಂ ಯಕ್ಷ್ಯಾಮಹೇ" (ಐ.ಆ.೩-೨-೬), ಏತದ್ಧ ಸ್ಮ ವೈ ತತ್ಪೂರ್ವೇ ವಿದ್ವಾಂಸೋಽಗ್ನಿಹೋತ್ರಂ[1] ಜುಹವಾಂಚಕ್ರಿರೇ" (ಕೌ. ೨-೫), "ಏತಂ ವೈ ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ" (ಬೃ. ೩-೫-೧) ಇತ್ಯೇವಂ ಜಾತೀಯಕಾ । , ಯಾಜ್ಞವಲ್ಕ್ಯಾದೀನಾಮಪಿ ಬ್ರಹ್ಮವಿದಾಮ್ ಅಕರ್ಮನಿಷ್ಠತ್ವಂ ದೃಶ್ಯತೇ "ಏತಾವದರೇ ಖಲ್ವಮೃತತ್ವಮಿತಿ ಹೋಕ್ತ್ವಾ ಯಾಜ್ಞವಲ್ಕ್ಯೋ ವಿಜಹಾರ" (ಬೃ. ೪-೫-೧೫) ಇತ್ಯಾದಿಶ್ರುತಿಭ್ಯಃ । ಅಪಿ ಚ ಯಕ್ಷ್ಯಮಾಣೋ ವೈ ಭಗವನ್ತೋಽಹಮಸ್ಮಿ" (ಛಾಂ.೫-೧೧-೫) ಇತ್ಯೇತಲ್ಲಿಙ್ಗ ದರ್ಶನಂ ವೈಶ್ವಾನರವಿದ್ಯಾವಿಷಯಮ್ । ಸಂಭವತಿ ಚ ಸೋಪಾಧಿಕಾಯಾಂ ಬ್ರಹ್ಮವಿದ್ಯಾಯಾಂ ಕರ್ಮಸಾಹಿತ್ಯದರ್ಶನಮ್ । ನ ತ್ವತ್ರಾಪಿ ಕರ್ಮಾಙ್ಗತ್ವಮಸ್ತಿ । ಪ್ರಕರಣಾದ್ಯಭಾವಾತ್ ॥

(ಭಾಷ್ಯಾರ್ಥ)

ಇನ್ನು ಆಚಾರವು ಕಂಡುಬರುವದರಿಂದ ವಿದ್ಯೆಯು ಕರ್ಮಶೇಷವು ಎಂದು ಹೇಳಿದಿರಲ್ಲ, ಅದಕ್ಕೆ ಹೇಳುತ್ತೇವೆ. ವಿದ್ಯೆಯು ಕರ್ಮಶೇಷವಲ್ಲ ಎಂಬದಕ್ಕೂ ಆಚಾರದರ್ಶನವಿರುವದು ಸಮಾನವಾಗಿರುತ್ತದೆ. ಹಾಗೆಂದಲ್ಲವೆ, "ಆ ಇದನ್ನೇ ಅರಿತದ್ದರಿಂದಲೇ ಹಿಂದಿನ ಕಾವಷೇಯ ಋಷಿಗಳು ಹೀಗೆಂದು ಹೇಳು

---

1. ಇಲ್ಲಿ ಅಚ್ಚಿನ ಪುಸ್ತಕಗಳಲ್ಲಿರುವ ನಕಾರವನ್ನು ಬಿಟ್ಟಿದೆ; ಅನುವಾದದ ಟಿಪ್ಪಣಿಯನ್ನು ನೋಡಿರಿ.

ತ್ತಿದ್ದರು: ನಾವು ಏತಕ್ಕೋಸ್ಕರ ಅಧ್ಯಯನಮಾಡೋಣ? ಏತಕ್ಕೋಸ್ಕರ ಯಾಗಮಾಡೋಣ?" (ಐ.ಆ.೩–೨–೬), "ಹಾಗೆ ಅರಿತದ್ದರಿಂದಲೇ ಹಿಂದಿನ ವಿದ್ವಾಂಸರು ಈ ಅಗ್ನಿಹೋತ್ರವನ್ನೇ ಮಾಡುತ್ತಿದ್ದರು" (ಕೌ.೨–೫)[1], "ಆ ಈ ಆತ್ಮನನ್ನೇ ಅರಿತುಕೊಂಡು ಬ್ರಾಹ್ಮಣರು ಪುತ್ರೈಷಣೆಯನ್ನೂ ವಿತ್ತೈಷಣೆಯನ್ನೂ ಲೋಕೈಷಣೆಯನ್ನೂ ಬಿಟ್ಟಿದ್ದು ಇನ್ನು ಭಿಕ್ಷಾಚರ್ಯೆಯನ್ನು ಆಚರಿಸುತ್ತಾರೆ" (ಬೃ. ೩–೫–೩) ಎಂಬೀ ಜಾತಿಯ ಶ್ರುತಿಯೂ ಹೇಳುತ್ತದೆ? ಯಾಜ್ಞವಲ್ಕ್ಯನೇ ಮುಂತಾದ ಬ್ರಹ್ಮಜ್ಞಾನಿಗಳು ಅಕರ್ಮನಿಷ್ಠರಾಗಿದ್ದರೆಂದು "ಎಲೆ, ಇಷ್ಟೇ ಅಮೃತತ್ವವು– ಎಂದು ಹೇಳಿ ಯಾಜ್ಞವಲ್ಕ್ಯನು (ಸಂನ್ಯಾಸಕ್ಕೆ) ಹೊರಟುಹೋದನು" (ಬೃ. ೪–೫–೧೫) ಮುಂತಾದ ಶ್ರುತಿಗಳಿಂದ ಕಂಡು ಬರುತ್ತದೆ.[2]

ಇದಲ್ಲದೆ "ಪೂಜ್ಯರೆ, ನಾನು ಯಜ್ಞಮಾಡಲಿರುವೆನು" (ಛಾಂ. ೫–೧೧–೫) ಎಂಬೀ ಲಿಂಗದರ್ಶನವು ವೈಶ್ವಾನರವಿದ್ಯಾವಿಷಯವಾದದ್ದು. ಸೋಪಾಧಿಕ ಬ್ರಹ್ಮವಿದ್ಯೆಯಲ್ಲಿ ಕರ್ಮದೊಡನಿರುವ ದರ್ಶನವು ಹೊಂದಿಯೂ ಹೊಂದುತ್ತದೆ. ಆದರೆ ಇಲ್ಲಿಯೂ ಕರ್ಮಾಂಗತ್ವವಿಲ್ಲ. ಏಕೆಂದರೆ ಪ್ರಕರಣವೇ ಮುಂತಾದವುಗಳು ಯಾವವೂ ಇಲ್ಲ.[3]

## ಅಸಾರ್ವತ್ರಿಕೀ ॥ ೧೦ ॥

### ೧೦. ಸರ್ವತ್ರ (ಸಂಬಂಧಿಸಿದ್ದ)ಲ್ಲ.

## ವಿದ್ಯೆಯೂ ಕರ್ಮವೂ ಎಲ್ಲಾ ಕಡೆಗಳಲ್ಲಿಯೂ ಜೊತೆಯಾಗಿಲ್ಲ

(ಭಾಷ್ಯ)

೪೪೭. ಯತ್ಪುನರುಕ್ತಮ್ 'ತಚ್ಛ್ರುತೇಃ' (೩–೪–೪) ಇತಿ। ಅತ್ರ ಬ್ರೂಮಃ। "ಯದೇವ ವಿದ್ಯಯಾ ಕರೋತಿ" (ಛಾಂ. ೧–೧–೧೦) ಇತ್ಯೇಷಾ

---

1. ಅ॥ ಪಾಠದಲ್ಲಿ 'ತದ್ಧ ನೈತತ್ ಪೂರ್ವೇ ವಿದ್ವಾಂಸೋಽಗ್ನಿಹೋತ್ರಂ ಜುಹವಾಂಚಕ್ರುಃ' ಎಂದಿದೆ, ಶಿ॥ ಪಾಠದಲ್ಲಿ 'ನ'ಕಾರವಿಲ್ಲ. "ಏತದ್ಧ ಸ್ಮ ವೈ ಪೂರ್ವೇ ವಿದ್ವಾಂಸೋಽಗ್ನಿಹೋತ್ರಂ ಜುಹವಾಂಚಕ್ರುಃ" ಎಂದಿವೆ. ಈ ಪ್ರಕರಣದಲ್ಲಿ ಪ್ರಾಣಾಗ್ನಿಹೋತ್ರಗಳನ್ನು ಒಂದರಲ್ಲೊಂದನ್ನು ಸಂತತವಾಗಿ ಹೋಮಮಾಡುವದೆಂಬ ಅಗ್ನಿಹೋತ್ರವು ಪ್ರಕೃತವಾಗಿರುವದರಿಂದ ನಕಾರರಹಿತಪಾಠವೇ ಉತ್ತಮವೆಂದು ನಮ್ಮ ಅಭಿಪ್ರಾಯ.

2. ತುಲ್ಯಂ ತು ದರ್ಶನಮ್ ಎಂಬುದಕ್ಕೆ ಇದು ಮತ್ತೊಂದು ವ್ಯಾಖ್ಯಾನ.

3. ತುಶಬ್ದದಿಂದ ತೋರುವ ಪೂರ್ವಪಕ್ಷಖಂಡನಯುಕ್ತಿಯಿದ್ದು, ಎರಡಕ್ಕೂ ದರ್ಶನವಿದೆ ಎಂದು ಒಪ್ಪಿರುವದು ಪೂರ್ವಪಕ್ಷದ ದೌರ್ಬಲ್ಯಕ್ಕಾಗಿ ಎಂದು ಭಾವ.

ಶ್ರುತಿರ್ನ ಸರ್ವವಿದ್ಯಾವಿಷಯಾ । ಪ್ರಕೃತವಿದ್ಯಾಭಿಸಂಬನ್ಧಾತ್ । ಪ್ರಕೃತಾ ಚೋದ್ಗೀಥವಿದ್ಯಾ “ಓಮಿತ್ಯೇತದಕ್ಷರಮುದ್ಗೀಥಮುಪಾಸೀತ” (ಛಾಂ. ೧-೧-೧) ಇತ್ಯತ್ರ ॥

(ಭಾಷ್ಯಾರ್ಥ)

ಇನ್ನು ‘ಆ (ಶ್ರುತಿ) ಯಿರುವದರಿಂದ’ (೩-೪-೪) ಎಂದು ಹೇಳಿದಿರಲ್ಲ, ಅದಕ್ಕೆ ಹೇಳುತ್ತೇವೆ: “ಯಾವದನ್ನು ವಿದ್ಯೆಯಿಂದ ಮಾಡುತ್ತಾನೋ (ಅದೇ)” (ಛಾಂ. ೧-೧-೧೦) ಎಂಬೀ ಶ್ರುತಿಯು ಎಲ್ಲಾ ವಿದ್ಯೆಗಳ ವಿಷಯವಲ್ಲ. ಏಕೆಂದರೆ ಪ್ರಕೃತವಾದ ವಿದ್ಯೆಗೆ ಸಂಬಂಧಪಟ್ಟಿರುತ್ತದೆ. “ಓಮಿತ್ಯೇತದಕ್ಷರಮುದ್ಗೀಥಮುಪಾಸೀತ” (ಛಾಂ. ೧-೧-೧) ಎಂಬಲ್ಲಿ ಉದ್ಗೀಥವಿದ್ಯೆಯೇ ಪ್ರಕೃತವಾಗಿರುತ್ತದೆ.

**ವಿಭಾಗಃ ಶತವತ್ ॥ ೧೧ ॥**

೧೧. ನೂರರ (ದೃಷ್ಟಾಂತದಂತೆ) ವಿಭಾಗವನ್ನು (ತಿಳಿಯಬೇಕು).

## ವಿದ್ಯಾಕರ್ಮಗಳು ಕಾರ್ಯಾರಂಭಕವೆಂದರೆ ವಿಭಾಗದಿಂದ

(ಭಾಷ್ಯ)

೪೪೮. ಯದಪ್ಯುಕ್ತಮ್ “ತಂ ವಿದ್ಯಾಕರ್ಮಣೀ ಸಮನ್ವಾರಭೇತೇ” (ಬೃ. ೪-೪-೧) ಇತ್ಯೇತತ್ ಸಮನ್ವಾರಮ್ಭವಚನಮ್ ಅಸ್ವಾತನ್ತ್ರ್ಯೇ ವಿದ್ಯಾಯಾ ಲಿಙ್ಗಮಿತಿ । ತತ್ ಪ್ರತ್ಯುಚ್ಯತೇ । ವಿಭಾಗೋಽತ್ರ ದ್ರಷ್ಟವ್ಯಃ ವಿದ್ಯಾನ್ಯಂ ಪುರುಷಮನ್ವಾರಭತೇ ಕರ್ಮಾನ್ಯಮ್ ಇತಿ । ಶತವತ್ । ಯಥಾ ‘ಶತಮಾಭ್ಯಾಂ ದೀಯತಾಮ್’ ಇತ್ಯುಕ್ತೇ ವಿಭಜ್ಯ ದೀಯತೇ ಪಞ್ಚಾಶದೇತಸ್ಮೈ ಪಞ್ಚಾಶದಪರಸ್ಮೈ, ತದ್ವತ್ । ನ ಚೇದಂ ಸಮನ್ವಾರಮ್ಭವಚನಂ ಮುಮುಕ್ಷುವಿಷಯಮ್ । “ಇತಿ ನು ಕಾಮಯಮಾನಃ” (ಬೃ. ೪-೪-೬) ಇತಿ ಸಂಸಾರಿವಿಷಯತ್ವೋಪಸಂಹಾರಾತ್ । “ಅಥಾಕಾಮಯಮಾನಃ” (ಬೃ. ೪-೪-೬) ಇತಿ ಚ ಮುಮುಕ್ಷೋಃ ಪೃಥಗುಪಕ್ರಮಾತ್ । ತತ್ರ ಸಂಸಾರಿವಿಷಯೇ ವಿದ್ಯಾ ವಿಹಿತಾ ಪ್ರತಿಷಿದ್ಧಾ ಚ ಪರಿಗೃಹ್ಯತೇ ವಿಶೇಷಾಭಾವಾತ್ । ಕರ್ಮಾಪಿ ವಿಹಿತಂ ಪ್ರತಿಷಿದ್ಧಂ ಚ । ಯಥಾಪ್ರಾಪ್ತಾನುವಾದಿತ್ವಾತ್ । ಏವಂ ಸತಿ ಅವಿಭಾಗೇನಾಪಿ ಇದಂ ಸಮನ್ವಾರಂಭವಚನಮ್ ಅವಕಲ್ಪತೇ ॥

(ಭಾಷ್ಯಾರ್ಥ)

ಇನ್ನು “ಅವನನ್ನು ವಿದ್ಯಾಕರ್ಮಗಳು ಹಿಂಬಾಲಿಸುತ್ತವೆ” (ಬೃ. ೪-೪-೨) ಎಂಬೀ ಸಮನ್ವಾರಂಭವಚನವು ವಿದ್ಯೆಯು ಸ್ವತಂತ್ರವಲ್ಲವೆಂಬುದಕ್ಕೆ

ಲಿಂಗವು ಎಂದು ಹೇಳಿತ್ತಲ್ಲ, ಅದಕ್ಕೆ ಪ್ರತ್ಯುತ್ತರವನ್ನು ಹೇಳುತ್ತೇವೆ. ಇಲ್ಲಿ ವಿದ್ಯೆಯು ಒಬ್ಬ ಪುರುಷನನ್ನು ಹಿಂಬಾಲಿಸುತ್ತದೆ, ಕರ್ಮವು ಮತ್ತೊಬ್ಬನನ್ನು ಹಿಂಬಾಲಿಸುತ್ತದೆ –ಎಂದು ವಿಭಾಗವನ್ನು ಗ್ರಹಿಸಬೇಕು. 'ಇವರಿಬ್ಬರಿಗೂ ನೂರು (ಹಣವನ್ನು) ಕೊಡಿರಿ' ಎಂದರೆ ಹೇಗೆ ಒಬ್ಬನಿಗೆ ಐವತ್ತನ್ನೂ ಮತ್ತೊಬ್ಬನಿಗೆ ಐವತ್ತನ್ನೂ ಕೊಡುವರೋ ಅದರಂತೆಯೇ ಇದು-

ಇದಲ್ಲದೆ ಈ ಸಮನ್ವಾರಂಭವಚನವು ಮುಮುಕ್ಷುವಿನ ವಿಷಯಾದ್ದಲ್ಲ. ಏಕೆಂದರೆ "ಹೀಗೆ ಕಾಮಿಸುವವನ (ವಿಷಯವಾಯಿತು)" (ಬೃ. ೪–೪–೬) ಎಂದು ಸಂಸಾರಿತ್ವವಿಷಯವಾಗಿಯೇ ಉಪಸಂಹಾರಮಾಡಿರುತ್ತದೆ, "ಇನ್ನು ಕಾಮಿಸದೇ ಇರುವವನ (ವಿಷಯ)" (ಬೃ. ೪–೪–೬) ಎಂದು ಮುಮುಕ್ಷುವನ್ನು ಬೇರೆಯಾಗಿಯೇ ಉಪಕ್ರಮಿಸಿದೆ. ಇಲ್ಲಿ ಸಂಸಾರಿವಿಷಯದಲ್ಲಿ ವಿಹಿತ ವಿದ್ಯೆಯನ್ನೂ ಪ್ರತಿಷೇಧಿಸಿರುವ ವಿದ್ಯೆಯನ್ನೂ ತೆಗೆದುಕೊಳ್ಳಬೇಕು ; ಏಕೆಂದರೆ (ಇಲ್ಲಿ ಯಾವ) ವಿಶೇಷ(ವಚನ)ವೂ ಇರುವದಿಲ್ಲ. ಕರ್ಮವನ್ನೂ ವಿಹಿತವಾದದ್ದು ಪ್ರತಿಷಿದ್ಧವಾದದ್ದು (ಎರಡನ್ನೂ ತೆಗೆದುಕೊಳ್ಳಬೇಕು.). ಏಕೆಂದರೆ (ಈ ವಾಕ್ಯವು) ಪ್ರಾಪ್ತವಾದದ್ದನ್ನೇ ಅನುವಾದಮಾಡುತ್ತದೆ. ಹೀಗಿರುವಲ್ಲಿ ಈ ಸಮನ್ವಾರಂಭವಚನವನ್ನು ಅವಿಭಾಗದಿಂದಲೂ ಹೊಂದಿಸುವದಕ್ಕಾಗುತ್ತದೆ.[1]

**ಅಧ್ಯಯನಮಾತ್ರವತಃ ॥ ೧೨ ॥**

೧೨. ಬರಿಯ ಅಧ್ಯಯನಮಾಡಿದವನಿಗೇ (ಕರ್ಮವಿಧಿ).

## ಕರ್ಮಕ್ಕೆ ವೇದಾಂತಜ್ಞಾನವೇನೂ ಬೇಕಿಲ್ಲ

**(ಭಾಷ್ಯ)**

೪೪೯. ಯದಪ್ಯುಕ್ತಮ್ 'ತದ್ವತೋ ವಿಧಾನಾತ್' (೩–೪–೬) ಇತಿ। ಅತ ಉತ್ತರಂ ಪಠತಿ । "ಆಚಾರ್ಯಕುಲಾದ್ವೇದಮಧೀತ್ಯ" (ಛಾಂ. ೮–೧೫–೧) ಇತ್ಯತ್ರ ಅಧ್ಯಯನಮಾತ್ರಸ್ಯ ಶ್ರವಣಾತ್ ಅಧ್ಯಯನಮಾತ್ರವತ ಏವ ಕರ್ಮವಿಧಿಃ ಇತ್ಯಧ್ಯವಸ್ಯಾಮಃ । ನನ್ವೇವಂ ಸತಿ ಅವಿದ್ಯತ್ವಾತ್ ಅನಧಿಕಾರಃ ಕರ್ಮಸು ಪ್ರಸಜ್ಯೇತ । ನೈಷ ದೋಷಃ । ನ ವಯಮ್ ಅಧ್ಯಯನಪ್ರಭವಂ ಕರ್ಮಾವಬೋಧನಮ್ ಅಧಿಕಾರಕಾರಣಂ ವಾರಯಾಮಃ । ಕಿಂ ತರ್ಹಿ ಔಪನಿಷದಮ್ ಆತ್ಮಜ್ಞಾನಂ ಸ್ವಾತನ್ತ್ರ್ಯೇಣೈವ ಪ್ರಯೋಜನವತ್ ಪ್ರತೀಯಮಾನಂ ನ ಕರ್ಮಾಧಿಕಾರಕಾರಣತಾಂ ಪ್ರತಿಪದ್ಯತೇ ಇತ್ಯೇತಾವತ್ ಪ್ರತಿ

1. ಸೂತ್ರದಲ್ಲಿ ಹೇಳಿರುವದು ಸಾಮಾನ್ಯವಿದ್ಯಾಕರ್ಮಗಳಿಗೇ ಜೊತೆಯಿರಬೇಕೆಂಬ ನಿಯಮವಿಲ್ಲ ಎಂಬ ಅಭಿಪ್ರಾಯದಿಂದ ಇರಬಹುದು –ಎಂದು ಭಾವ.

ಪಾದಯಾಮಃ । ಯಥಾ ಚ ನ ಕ್ರತ್ವಂತರಜ್ಞಾನಂ ಕ್ರತ್ವಂತರಾಧಿಕಾರೇಣ ಅಪೇಕ್ಷ್ಯತೇ, ಏವಮೇತದಪಿ ದ್ರಷ್ಟವ್ಯಮ್ ಇತಿ ॥

( ಭಾಷ್ಯಾರ್ಥ )

ಇನ್ನು "ಆ (ಜ್ಞಾನ)ವಿರುವವನಿಗೇ (ಕರ್ಮವನ್ನು) ವಿಧಿಸಿರುವದರಿಂದ" (೩-೪-೬) ಎಂಬೀ (ಪೂರ್ವಪಕ್ಷವಿದೆಯಲ್ಲ); ಅದಕ್ಕೂ ಉತ್ತರವನ್ನು ಹೇಳುತ್ತಾರೆ. ('ಅಧ್ಯಯನಮಾತ್ರವತಃ') । "ಆಚಾರ್ಯಕುಲದಿಂದ ಅಧ್ಯಯನವನ್ನು ಮಾಡಿಕೊಂಡು (ಬಂದು)" (ಛಾಂ. ೮-೧೫-೧) ಎಂಬಲ್ಲಿ ಅಧ್ಯಯನಮಾತ್ರವೇ ಶ್ರುತವಾಗಿರುವದರಿಂದ ಅಧ್ಯಯನಮಾತ್ರವುಳ್ಳವನಿಗೇ ಕರ್ಮವಿಧಿ ಎಂದು ನಾವು ನಿಶ್ಚಯಿಸಬೇಕಾಗಿದೆ.

(ಆಕ್ಷೇಪ) :– ಹೀಗಾದರೆ ವಿದ್ಯೆಯಿಲ್ಲದವನಾದ್ದರಿಂದ ಕರ್ಮಗಳಲ್ಲಿ ಅಧಿಕಾರವೇ ಇಲ್ಲವೆಂಬ ಪ್ರಸಕ್ತಿಯುಂಟಾಗುವದಲ್ಲ[1] !

(ಪರಿಹಾರ) :– ಇದೇನೂ ದೋಷವಲ್ಲ. ಅಧ್ಯಯನದಿಂದುಂಟಾಗುವ ಕರ್ಮದ ತಿಳಿವಳಿಕೆಯು ಅಧಿಕಾರಕ್ಕೆ ಕಾರಣವೆಂಬುದನ್ನೇನೂ ನಾವು ಇಲ್ಲಿ ಅಲ್ಲಗಳೆಯುತ್ತಿಲ್ಲ; ಮತ್ತೇನೆಂದರೆ ಔಪನಿಷದವಾದ ಆತ್ಮಜ್ಞಾನವು ಸ್ವತಂತ್ರವಾಗಿಯೇ ಪ್ರಯೋಜನವುಳ್ಳದ್ದೆಂದು ತಿಳಿದುಬರುತ್ತಿರುವದರಿಂದ ಅದು ಕರ್ಮಕ್ಕೆ ಅಧಿಕಾರಕಾರಣವೆನ್ನುವದು ಹೊಂದಲಾರದು[2] –ಎಂದಿಷ್ಟೇ ಪ್ರತಿಪಾದಿಸುತ್ತಿದೇವೆ. ಒಂದು ಕ್ರತುವಿನ ಜ್ಞಾನವು ಮತ್ತೊಂದು ಕ್ರತುವಿನ ಅಧಿಕಾರಕ್ಕೆ ಹೇಗೆ ಬೇಕಿಲ್ಲವೋ ಹಾಗೆಯೇ ಇದೂ ಎಂದು ತಿಳಿಯಬೇಕು.[3]

**ನಾವಿಶೇಷಾತ್ ॥ ೧೩ ॥**

೧೩. ವಿಶೇಷವೇನೂ (ಶ್ರುತಿಯಲ್ಲಿ)ಲ್ಲದ್ದರಿಂದ (ಕರ್ಮಾಂಗ)ವಲ್ಲ.

## ಕರ್ಮವನ್ನು ಮಾಡಬೇಕೆಂಬ ನಿಯಮವು ಜ್ಞಾನಿಗಿಲ್ಲ

(ಭಾಷ್ಯ)

೪೫೦. ಯದಪ್ಯುಕ್ತಂ 'ನಿಯಮಾಚ್ಚ' (೩-೪-೭) ಇತಿ, ಅತ್ರಾಭಿಧೀಯತೇ। "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್" (ಈ. ೨) ಇತ್ಯೇವ

1. ಅರ್ಥಿ, ಸಮರ್ಥ, ವಿದ್ವಾನ್ –ಎಂದು ಅಧಿಕಾರಲಕ್ಷಣದಲ್ಲಿ ಹೇಳಿದೆಯಲ್ಲ! –ಎಂದು ಭಾವ.

2. ಸ್ವತಂತ್ರವಾಗಿ ಫಲವಿಲ್ಲದಿದ್ದರೆ ಜ್ಞಾನವು ಕರ್ಮಕ್ಕೆ ಅಂಗವೆಂದೂ ಅದಕ್ಕೆ ಕರ್ಮದ ಮೂಲಕವಾಗಿ ಫಲವುಂಟಾಗುವದೆಂದೂ ಕಲ್ಪಿಸಬಹುದಾಗಿತ್ತು.

3. ಒಂದೊಂದು ಕರ್ಮದ ಜ್ಞಾನವೂ ಆಯಾ ಕರ್ಮವನ್ನು ಮಾಡುವದಕ್ಕೆ ಮಾತ್ರ ಬೇಕಾಗಿರುತ್ತದೆ.

ಮಾದಿಷು ನಿಯಮಶ್ರವಣೇಷು ನ ವಿದುಷ ಇತಿ ವಿಶೇಷೋಽಸ್ತಿ। ಅವಿಶೇಷೇಣ ನಿಯಮವಿಧಾನಾತ್ ॥

(ಭಾಷ್ಯಾರ್ಥ)

ಇನ್ನು 'ನಿಯಮವಿರುವದರಿಂದಲೂ' (೩-೪-೭) ಎಂದು ಹೇಳಿದಿರಲ್ಲ, ಆದಕ್ಕೆ ಹೇಳುತ್ತೇವೆ. "ಕರ್ಮಗಳನ್ನು ಮಾಡುತ್ತಲೇ ಜೀವಿಸಲೆಳಸಬೇಕು" (ಈ. ೨) ಎಂಬಿವೇ ಮುಂತಾದ ನಿಯಮಶ್ರವಣಗಳಲ್ಲಿ 'ಜ್ಞಾನಿಗೆ' ಎಂಬ ವಿಶೇಷವೇನೂ ಇಲ್ಲ. ಏಕೆಂದರೆ ಸಾಮಾನ್ಯವಾಗಿಯೇ ನಿಯಮವನ್ನು (ಅಲ್ಲಿ) ವಿಧಿಸಿದೆ.

## ಸ್ತುತಯೇಽನುಮತಿರ್ವಾ ॥ ೧೪ ॥

೧೪. ಸ್ತುತಿಗಾಗಿ (ಹೇಳಿದ್ದು), ಅನುಮತಿ(ಯಿದು) ಎಂದಾದರೂ (ಆಗಬಹುದು).

## ಕರ್ಮವನ್ನು ಜ್ಞಾನಿಗೆ ಹೇಳಿರುವದೇಕೆ?

(ಭಾಷ್ಯ)

೪೫೧. "ಕುರ್ವನ್ನೇವೇಹ ಕರ್ಮಾಣಿ" (ಈ. ೨) ಇತ್ಯತ್ರ ಅಪರೋ ವಿಶೇಷ ಆಖ್ಯಾಯತೇ। ಯದ್ಯಪ್ಯತ್ರ ಪ್ರಕರಣಸಾಮರ್ಥ್ಯಾತ್ ವಿದ್ವಾನೇವ ಕುರ್ವನ್ ಇತಿ ಸಂಬಧ್ಯೇತ, ತಥಾಪಿ ವಿದ್ಯಾಸ್ತುತಯೇ ಕರ್ಮಾನುಜ್ಞಾನಮೇತತ್ ದ್ರಷ್ಟವ್ಯಮ್ "ನ ಕರ್ಮ ಲಿಪ್ಯತೇ ನರೇ" (ಈ. ೨) ಇತಿ ಹಿ ವಕ್ಷ್ಯತಿ। ಏತದುಕ್ತಂ ಭವತಿ। ಯಾವಜ್ಜೀವಂ ಕರ್ಮ ಕುರ್ವತ್ಯಪಿ ವಿದುಷಿ ಪುರುಷೇ ನ ಕರ್ಮ ಲೇಪಾಯ ಭವತಿ ವಿದ್ಯಾಸಾಮರ್ಥ್ಯಾತ್ ಇತಿ। ತದೇವಂ ವಿದ್ಯಾ ಸ್ತೂಯತೇ ॥

(ಭಾಷ್ಯಾರ್ಥ)

"ಕುರ್ವನ್ನೇವೇಹ ಕರ್ಮಾಣಿ" (ಈ. ೨) 'ಕರ್ಮವನ್ನು ಮಾಡುತ್ತಲೇ ಇಲ್ಲಿ......' ಎಂಬಲ್ಲಿ ಮತ್ತೊಂದು ವಿಶೇಷವನ್ನು (ಇಲ್ಲಿ) ಹೇಳಲಾಗಿದೆ. ಇಲ್ಲಿ ಪ್ರಕರಣದ ಸಾಮರ್ಥ್ಯದಿಂದ ಜ್ಞಾನಿಗೇ ಕುರ್ವನ್ (ಮಾಡುವವನು) ಎಂಬ ಮಾತು ಸಂಬಂಧಿಸುತ್ತದೆ ಎಂದರೂ[1] ಆಗಲೂ ವಿದ್ಯೆಯನ್ನು ಹೊಗಳುವದ

---

1. ಸರಿಯಾಗಿ ನೋಡಿದರೆ ಮೊದಲನೆಯ ಮಂತ್ರವು ಜ್ಞಾನವನ್ನೂ ಎರಡನೆಯದು ಅದಕ್ಕೆ ಅಶಕ್ತನಾದವನಿಗೆ ಕರ್ಮವನ್ನೂ ಹೇಳುತ್ತದೆ; ಮುಂದೆ ಜ್ಞಾನಕರ್ಮಗಳನ್ನು ಕ್ರಮವಾಗಿ ವಿವರಿಸಿದೆಯಾದ್ದರಿಂದ ಎರಡನೆಯ ಮಂತ್ರವು ಅಜ್ಞನ ವಿಷಯವೆಂಬುದೇ ಸರಿ. ಆದರೂ ಮೊದಲನೆಯ ಮಂತ್ರದಲ್ಲಿ ಜ್ಞಾನವು ಪ್ರಕೃತವಾಗಿರುವದರಿಂದ ಎರಡನೆಯದೂ, ಜ್ಞಾನಿಯ ವಿಷಯವೇ ಎಂದೊಪ್ಪಿದರೂ – ಎಂಸರ್ಥ.

ಕ್ಕಾಗಿ ಈ ಕರ್ಮಾನುಮತಿಯನ್ನು (ಕೊಟ್ಟಿದೆ) ಎಂದು ತಿಳಿಯಬೇಕು. ಏಕೆಂದರೆ "ಮನುಷ್ಯನಿಗೆ ಕರ್ಮವು ಲೇಪವಾಗುವದಿಲ್ಲ" (ಈ ೨) ಎಂದಲ್ಲವೆ, ಮುಂದೆ ಹೇಳಿದೆ ? (ಇಲ್ಲಿ) ಇಷ್ಟನ್ನು ಹೇಳಿದಂತಾಗಿದೆ: ಜ್ಞಾನಿಯಾದ ಪುರುಷನು ಬದುಕಿರುವವರೆಗೂ ಕರ್ಮವನ್ನು ಮಾಡುತ್ತಿದ್ದರೂ ವಿದ್ಯೆಯ ಸಾಮರ್ಥ್ಯದಿಂದ ಕರ್ಮವು ಲೇಪಕ್ಕಾಗುವದಿಲ್ಲ.[1] (ಎಂದು ಅಭಿಪ್ರಾಯ). ಆದ್ದರಿಂದ ಹೀಗೆಂದು ವಿದ್ಯೆಯನ್ನು (ಇಲ್ಲಿ) ಸ್ತುತಿಸಿರುತ್ತದೆ.

**ಕಾಮಕಾರೇಣ ಚೈಕೇ ॥ ೧೫ ॥**

೧೫. ಕಾಮಕಾರ(ಶ್ರುತಿಯಿಂದ) ಕೆಲವರು (ಕರ್ಮದ ನಿಷ್ಪ್ರಯೋಜನತ್ವವನ್ನು ಹೇಳುತ್ತಾರೆ).

## ಕರ್ಮದಿಂದ ಜ್ಞಾನಿಗೆ ಪ್ರಯೋಜನವಿಲ್ಲವೆಂಬ ಶ್ರುತಿ

(ಭಾಷ್ಯ)

೪೫೨. ಅಪಿ ಚೈಕೇ ವಿದ್ವಾಂಸಃ ಪ್ರತ್ಯಕ್ಷೀಕೃತವಿದ್ಯಾಫಲಾಃ ಸನ್ತಃ, ತದವಷ್ಟಮ್ಭಾತ್ ಫಲಾನ್ತರಸಾಧನೇಷು ಪ್ರಜಾದಿಷು ಪ್ರಯೋಜನಾಭಾವಂ ಪರಾಮೃಶನ್ತಿ । 'ಕಾಮಕಾರೇಣ' ಇತಿ ಶ್ರುತಿರ್ಭವತಿ ವಾಜಸನೇಯಿನಾಮ್ "ಏತದ್ಧಸ್ಮ ವೈ ತತ್ಪೂರ್ವೇ ವಿದ್ವಾಂಸಃ ಪ್ರಜಾಂ ನ ಕಾಮಯನ್ತೇ ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಽಯಂ ಲೋಕಃ" (ಬೃ. ೪-೪-೨೨) ಇತಿ । ಅನುಭವಾರೂಢಮೇವ ಚ ವಿದ್ಯಾಫಲಂ ನ ಕ್ರಿಯಾಫಲವತ್ ಕಾಲಾನ್ತರಭಾವಿ ಇತ್ಯಸಕೃತ್ ಅವೋಚಾಮ । ಅತೋಽಪಿ ನ ವಿದ್ಯಾಯಾಃ ಕರ್ಮಶೇಷತ್ವಂ ನಾಪಿ ತದ್ವಿಷಯಾಯಾಃ ಫಲಶ್ರುತೇರರ್ಥವಾದತ್ವಂ ಶಕ್ಯಮ್ ಆಶ್ರಯಿತುಮ್ ॥

(ಭಾಷ್ಯಾರ್ಥ)

ಇದಲ್ಲದೆ ಕೆಲವರು ಜ್ಞಾನಿಗಳು ಜ್ಞಾನದ ಫಲವನ್ನು ಪ್ರತ್ಯಕ್ಷವಾಗಿಸಿಕೊಂಡವರಾಗಿ ಅದನ್ನಾಶ್ರಯಿಸಿಕೊಂಡು ಫಲಾಂತರಕ್ಕೆ ಸಾಧನವಾದ ಪ್ರಜಾದಿಗಳಲ್ಲಿ ಪ್ರಯೋಜನವಿಲ್ಲವೆಂದು ಪರಾಮರ್ಶಿಸಿರುತ್ತಾರೆ. 'ಕಾಮಕಾರದಿಂದ' ಎಂದಿದೆಯಷ್ಟೆ. ವಾಜಸನೇಯಿಗಳ "ಏತದ್ಧಸ್ಮ ವೈ ತತ್ಪೂರ್ವೇ ವಿದ್ವಾಂಸಃ ಪ್ರಜಾಂ ನ ಕಾಮಯನ್ತೇ ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯ

---

1. ಹೀಗೆ ನೀನು ಮಾಡುತ್ತಿದ್ದರೂ ನಿನಗೆ ಬ್ರಹ್ಮಭಾವದಿಂದ ಅನ್ಯಥಾತ್ವವಾಗಲಾರದು ; ಏಕೆಂದರೆ ಕರ್ಮವು ನಿನಗೆ ಲೇಪವಾಗುವದಿಲ್ಲ -ಎಂದು ಜ್ಞಾನದ ಸ್ತುತಿಯಿದು; "ಕರ್ಮಣ್ಯಕರ್ಮ" ಎಂಬ ಗೀತೋಕ್ತಿಯ ಅಭಿಪ್ರಾಯವೇ ಇದು - ಎಂದಭಿಪ್ರಾಯ.

ಮಾತ್ಮಾಽಯಂ ಲೋಕಃ" (ಬೃ. ೪-೪-೨೨) ಇದರಿಂದಲೇ ಹಾಗೆ ಹಿಂದಿನ ಜ್ಞಾನಿಗಳು ಪ್ರಜೆಯನ್ನು ಕಾಮಿಸಲಿಲ್ಲ. ಯಾವ ನಮಗೆ ಇವನೇ ಆತ್ಮನು, ಇವನೇ ಲೋಕವು; ಆದ್ದರಿಂದ ನಾವು ಪ್ರಜೆಯಿಂದ ಏನು ಮಾಡೋಣ?" ಎಂಬ ಶ್ರುತಿಯಿದೆ (ಎಂದರ್ಥ). **ವಿದ್ಯೆಯ ಫಲವು ಅನುಭವಾರೂಢವೇ ಆಗಿರುತ್ತದೆಯೇ ಹೊರತು ಕರ್ಮಫಲದಂತೆ ಕಾಲಾಂತರದಲ್ಲಾಗುವದಿಲ್ಲ ಎಂದು ಅನೇಕವೇಳೆ ಹೇಳಿರುತ್ತೇವೆ. ಆದ್ದರಿಂದಲೂ ವಿದ್ಯೆಯು ಕರ್ಮಶೇಷವೆಂದಾಗಲಿ ಅದರ ವಿಷಯವಾದ ಫಲಶ್ರುತಿಯು ಯಥಾರ್ಥವಲ್ಲವೆಂದಾಗಲಿ ಆಶ್ರಯಿಸುವದಕ್ಕೆ ಆಗಲಾರದು.**[1]

**ಉಪಮರ್ದಂ ಚ ॥ ೧೬ ॥**

೧೬. (ಕರ್ಮದ) ಉಪಮರ್ದವನ್ನೂ (ಪಠಿಸಿರುತ್ತಾರೆ).

## ಜ್ಞಾನದಿಂದ ಕ್ರಿಯೆಕಾರಕಫಲವಿಭಾಗವು ಬಾಧಿತವಾಗುತ್ತದೆ

(ಭಾಷ್ಯ)

೪೫೩. ಅಪಿ ಚ ಕರ್ಮಾಧಿಕಾರಹೇತೋಃ ಕ್ರಿಯಾಕಾರಕಫಲಲಕ್ಷಣಸ್ಯ ಸಮಸ್ತಸ್ಯ ಪ್ರಪಞ್ಚಸ್ಯ ಅವಿದ್ಯಾಕೃತಸ್ಯ ವಿದ್ಯಾಸಾಮರ್ಥ್ಯಾತ್ ಸ್ವರೂಪೋಪಮರ್ದಮ್ ಆಮನನ್ತಿ "ಯತ್ರ ವಾ ಅಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್ ತತ್ಕೇನ ಕಂ ಜಿಘ್ರೇತ್" (ಬೃ. ೨-೪-೧೪) ಇತ್ಯಾದಿನಾ । ವೇದಾನ್ತೋದಿತಾತ್ಮಜ್ಞಾನಪೂರ್ವಿಕಾಂ ತು ಕರ್ಮಾಧಿಕಾರಸಿದ್ಧಿಂ ಪ್ರತ್ಯಾಶಾಸಾನಸ್ಯ ಕರ್ಮಾಧಿಕಾರೋಚ್ಛಿತ್ತಿರೇವ ಪ್ರಸಜ್ಯೇತ । ತಸ್ಮಾದಪಿ ಸ್ವಾತನ್ತ್ರ್ಯಂ ವಿದ್ಯಾಯಾಃ ॥

(ಭಾಷ್ಯಾರ್ಥ)

ಇದಲ್ಲದೆ ಕರ್ಮಾಧಿಕಾರಕ್ಕೆ ಕಾರಣವಾಗಿರುವ ಕ್ರಿಯಾಕಾರಕಫಲಲಕ್ಷಣವಾಗಿರುವ ಸಮಸ್ತಪ್ರಪಂಚವೂ ಅವಿದ್ಯಾಕೃತವಾಗಿರುವದರಿಂದ ವಿದ್ಯೆಯ ಸಾಮರ್ಥ್ಯದಿಂದ ಸ್ವರೂಪೋಪಮರ್ದವೇ ಆಗುವದೆಂದು "ಎಲ್ಲಿಯಾದರೆ ಇವನಿಗೆ ಸರ್ವವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ಕಂಡಾನು?

---

1. ಇದುವರೆಗೂ ಕರ್ಮಶ್ರುತಿಯೂ ಜ್ಞಾನಶ್ರುತಿಯೂ ಶ್ರುತಿವಾಕ್ಯಮಾತ್ರವೆಂದಿಟ್ಟುಕೊಂಡು ಮೀಮಾಂಸಾನ್ಯಾಯಗಳನ್ನು ಹೇಳಿದ್ದಾಯಿತು. ಆದರೆ ಬ್ರಹ್ಮವಿದ್ಯೆಯು ಅನುಭವಾವಸಾನವಾಗಿರುತ್ತದೆ; ಅದು ಕರ್ಮಕ್ಕೆ ಶೇಷವಲ್ಲ ಎಂದು ಅನುಭವದಲ್ಲಿ ಗೊತ್ತಿರುವಾಗ ಈ ಶಂಕೆಯೇ ಹುಟ್ಟುವದಿಲ್ಲ ಎಂದು ಪೂರ್ವಪಕ್ಷವನ್ನು ೧೫,೧೬ನೆಯ ಸೂತ್ರಗಳಲ್ಲಿ ತಳ್ಳಿಹಾಕಿರುತ್ತದೆ.

ಅಲ್ಲಿ ಏತರಿಂದ ಯಾರನ್ನು ಮೂಸಿಯಾನು ?...." (ಬೃ. ೩-೪-೧೪) ಇತ್ಯಾದಿ (ವಾಕ್ಯದಿಂದ) ಪಠಿಸುತ್ತಾರೆ. **ವೇದಾಂತದಲ್ಲಿ ಹೇಳಿರುವ ಆತ್ಮ ಜ್ಞಾನಪೂರ್ವಕವಾಗಿಯೋ ಕರ್ಮದಲ್ಲಿ ಅಧಿಕಾರಸಿದ್ಧಿಯನ್ನು ಆಶಿಸುತ್ತಿರುವವನಿಗೋ ಎಂದರೆ ಕರ್ಮಾಧಿಕಾರದ ನಾಶವೇ ಆಗುವದು. ಆದರಿಂದಲೂ ವಿದ್ಯೆಗೆ (ಫಲವನ್ನು ಕೊಡುವದರಲ್ಲಿ) ಸ್ವಾತಂತ್ರ್ಯ (ವಿದೆ).**

**ಊರ್ಧ್ವರೇತಃಸು ಚ ಶಬ್ದೇ ಹಿ ॥ ೧೭ ॥**

೧೭. ಊರ್ಧ್ವರೇತರುಗಳಲ್ಲಿಯೂ (ವಿದ್ಯೆಯನ್ನು ಶ್ರುತಿ ಹೇಳುತ್ತದೆ) ; ಶಬ್ದದಲ್ಲಿ (ಊರ್ಧ್ವರೇತಸ್ಕರ ಆಶ್ರಮಗಳೂ ಇವೆ).

## ಸಂನ್ಯಾಸಿಗಳಿಗೆ ಬ್ರಹ್ಮವಿದ್ಯೆಯನ್ನು ಹೇಳಿದೆ

(ಭಾಷ್ಯ)

೪೫೪. ಊರ್ಧ್ವರೇತಃಸು ಚಾಶ್ರಮೇಷು ವಿದ್ಯಾ ಶ್ರೂಯತೇ । ನ ಚ ತತ್ರ ಕರ್ಮಾಙ್ಗತ್ವಂ ವಿದ್ಯಾಯಾ ಉಪಪದ್ಯತೇ । ಕರ್ಮಾಭಾವಾತ್ । ನ ಹಿ ಅಗ್ನಿಹೋತ್ರಾದೀನಿ ವೈದಿಕಾನಿ ಕರ್ಮಾಣಿ ತೇಷಾಂ ಸನ್ತಿ । ಸ್ಯಾದೇತತ್ । ಊರ್ಧ್ವರೇತಸಃ ಆಶ್ರಮಾ ನ ಶ್ರೂಯನ್ತೇ ವೇದ ಇತಿ । ತದಪಿ ನಾಸ್ತಿ । ತೇಽಪಿ ಹಿ ವೈದಿಕೇಷು ಶಬ್ದೇಷು ಅವಗಮ್ಯನ್ತೇ "ತ್ರಯೋ ಧರ್ಮಸ್ಕನ್ಧಾಃ" (ಛಾಂ. ೨-೨೩-೧) "ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ" (ಛಾಂ.೫-೧೦-೧), "ತಪಃಶ್ರದ್ಧೇ ಯೇ ಹ್ಯುಪವಸನ್ತ್ಯರಣ್ಯೇ" (ಮುಂ. ೧-೨-೧೧), "ಏತಮೇವ ಪ್ರವ್ರಾಜಿನೋ ಲೋಕಮಿಚ್ಛನ್ತಃ ಪ್ರವ್ರಜನ್ತಿ" (ಬೃ. ೪-೪-೨೨), "ಬ್ರಹ್ಮಚರ್ಯಾದೇವ ಪ್ರವ್ರಜೇತ್" (ಜಾ.) ಇತ್ಯೇವಮಾದಿಷು । ಪ್ರತಿಪನ್ನಾಪ್ರತಿಪನ್ನಗಾರ್ಹಸ್ಥ್ಯಾನಾಮ್ ಅಪಾಕೃತಾನಪಾಕೃತರ್ಣತ್ರಯಾಣಾಂ ಚ ಊರ್ಧ್ವರೇತಸ್ತ್ವಂ ಶ್ರುತಿಸ್ಮೃತಿಪ್ರಸಿದ್ಧಮ್ । ತಸ್ಮಾದಪಿ ಸ್ವಾತನ್ತ್ರ್ಯಂ ವಿದ್ಯಾಯಾಃ ॥

(ಭಾಷ್ಯಾರ್ಥ)

ಊರ್ಧ್ವರೇತಸ್ಸಂದರಾದವರ ಆಶ್ರಮಗಳಲ್ಲಿಯೂ ವಿದ್ಯೆಯು ಶ್ರುತಿಯಲ್ಲಿ (ಉಕ್ತವಾಗಿದೆ). ಆದರೆ ಅಲ್ಲಿ ವಿದ್ಯೆಗೆ ಕರ್ಮಾಂಗತ್ವವೂ ಹೊಂದುವದಿಲ್ಲ; ಏಕೆಂದರೆ (ಅವರಿಗೆ) ಕರ್ಮಗಳಿಲ್ಲ, (ಇದರ ವಿವರ): ಅಗ್ನಿಹೋತ್ರವೇ ಮುಂತಾದ ವೈದಿಕಕರ್ಮಗಳು ಅವರಿಗೆ ಇಲ್ಲವಷ್ಟೆ.[1]

1. ಗೃಹಸ್ಥಾಶ್ರಮದ ಕರ್ಮಗಳನ್ನೇ ಇಲ್ಲಿ ಪೂರ್ವಪಕ್ಷಿ ಹಿಡಿದಿರುತ್ತಾನೆ.

(ಪೂರ್ವಪಕ್ಷಿಯ ಮತವು) ಇದಾಗಿರಬಹುದು. ಊರ್ಧ್ವರೇತಸ್ಸಿನ ಆಶ್ರಮ ಗಳು ವೇದದಲ್ಲಿ ಶ್ರುತವಾಗಿಲ್ಲ ಎಂದು (ಅವನು ಹೇಳಬಹುದು). ಅದೂ ಇಲ್ಲ; ಏಕೆಂದರೆ ಆ (ಆಶ್ರಮಗಳೂ ಇವೆಯೆಂದು) "ಧರ್ಮಸ್ಕಂಧಗಳು ಮೂರು" (ಛಾಂ.೨-೨೩-೧), "ಮತ್ತು ಯಾರು ಅರಣ್ಯದಲ್ಲಿ ಶ್ರದ್ಧೆ, ತಪಸ್ಸು ಮುಂತಾ ದವುಗಳನ್ನು ಅನುಷ್ಠಾನಮಾಡುತ್ತಿರುವರೋ'' (ಛಾಂ. ೫-೧೦-೧), "ತಪಃ ಶ್ರದ್ಧೆಗಳನ್ನು ಯಾರು ಅರಣ್ಯದಲ್ಲಿ ಅನುಷ್ಠಾನಮಾಡುತ್ತಿರುವರೋ'' (ಮುಂ. ೧-೨-೧೧) "ಈ ಲೋಕವನ್ನೇ ಇಚ್ಛಿಸುವವರಾಗಿ ಪ್ರವ್ರಾಜಿಗಳು (ಗಾರ್ಹಸ್ಥ್ಯ ದಿಂದ) ಹೊರಟುಹೋಗುತ್ತಾರೆ[1]" (ಬೃ. ೪-೪-೨೨) "ಬ್ರಹ್ಮಚರ್ಯದಿಂದಲೇ ಸಂನ್ಯಾಸಮಾಡಬೇಕು" (ಜಾ.೪) ಎಂಬಿವೇ ಮುಂತಾದ ವೈದಿಕಶಬ್ದಗಳಲ್ಲಿ ನಿಶ್ಚಿತವಾಗಿರುತ್ತವೆ. ಗಾರ್ಹಸ್ಥ್ಯವನ್ನು ಪಡೆದವರೂ ಪಡೆಯದವರೂ[2] ಋಣತ್ರಯವನ್ನು ತೀರಿಸಿಕೊಂಡವರೂ ತೀರಿಸಿಕೊಳ್ಳದವರೂ ಊರ್ಧ್ವರೇ ತಸ್ತ್ವವನ್ನು (ಪಡೆಯಬಹುದೆಂದು) ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರು ತ್ತದೆ. ಆದ್ದರಿಂದಲೂ ವಿದ್ಯೆಗೆ ಸ್ವಾತಂತ್ರ್ಯವಿದೆ.

## ೨. ಪರಾಮರ್ಶಾಧಿಕರಣ (ಸೂ. ೧೮-೨೦)

(ಶ್ರುತಿಯಲ್ಲಿ ಸಂನ್ಯಾಸಾಶ್ರಮವನ್ನು ಹೇಳಿದೆ).

**ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ ॥ ೧೮ ॥**

೧೮. (ಇದು) ಪರಾಮರ್ಶವೆಂದೂ (ಇದಕ್ಕೆ) ವಿಧಿಯಿಲ್ಲ ವೆಂದೂ ಜೈಮಿನಿಗಳು (ಹೇಳುತ್ತಾರೆ). ಏಕೆಂದರೆ (ಶ್ರುತಿಯು ಆಶ್ರಮಾಂತರವನ್ನು) ನಿಂದಿಸಿದೆ.

### ಪೂರ್ವಪಕ್ಷ: ಸಂನ್ಯಾಸಾಶ್ರಮಕ್ಕೆ ಶ್ರೌತವಿಧಿಯಿಲ್ಲ

(ಭಾಷ್ಯ)

೪೫೫. "ತ್ರಯೋ ಧರ್ಮಸ್ಕನ್ಧಾಃ" (ಛಾಂ.೨-೨೩-೧) ಇತ್ಯಾದಯೋ ಯೇ ಶಬ್ದಾಃ ಊರ್ಧ್ವರೇತಸಾಮ್ ಆಶ್ರಮಾಣಾಂ ಸದ್ಭಾವಾಯ ಉದಾಹೃತಾಃ, ನ ತೇ ತತ್ಪ್ರತಿಪಾದನಾಯ ಪ್ರಭವನ್ತಿ । ಯತಃ ಪರಾಮರ್ಶಮೇಷು ಶಬ್ದೇಷು

1. ಗೃಹಸ್ಥಾಶ್ರಮದ ಸಂಬಂಧವಿಲ್ಲದೆಯೇ ತುರೀಯಾಶ್ರಮವನ್ನು ಪಡೆಯ ಬಹುದೆಂದದ್ದರಿಂದ ಜ್ಞಾನಕ್ಕೆ ಕರ್ಮಸಂಬಂಧವಿಲ್ಲವೆಂದಂತಾಯಿತು.

2. ಜೈ. ಸೂ. ೬-೨-೩೧ರಲ್ಲಿ ಋಣತ್ರಯಶ್ರುತಿಯಿರುವದರಿಂದ ಕರ್ಮಗಳು ನಿತ್ಯವೆಂದು ಹೇಳಿದೆ.

ಆಶ್ರಮಾನ್ತರಾಣಾಂ ಜೈಮಿನಿರಾಚಾರ್ಯೋ ಮನ್ಯತೇ ನ ವಿಧಿಮ್। ಕುತಃ? ನ ಹ್ಯತ್ರ ಲಿಙಾದೀನಾಮನ್ಯತಮಶ್ಚೋದನಾಶಬ್ದೋಽಸ್ತಿ। ಅರ್ಥಾನ್ತರಪರತ್ವಂ ಚೈಷು ಪ್ರತ್ಯೇಕಮ್ ಉಪಲಭ್ಯತೇ। "ತ್ರಯೋ ಧರ್ಮಸ್ಕನ್ಧಾಃ" ಇತ್ಯತ್ರ ತಾವತ್ "ಯಜ್ಞೋಽಧ್ಯಯನಂ ದಾನಮಿತಿ ಪ್ರಥಮಸ್ತಪ ಏವ ದ್ವಿತೀಯೋ ಬ್ರಹ್ಮಚಾರ್ಯಾಚಾರ್ಯಕುಲವಾಸೀ ತೃತೀಯೋಽತ್ಯನ್ತಮಾತ್ಮಾನಮಾಚಾರ್ಯಕುಲೇಽವಸಾದಯನ್ ಸರ್ವ ಏತೇ ಪುಣ್ಯಲೋಕಾ ಭವನ್ತಿ" (ಛಾಂ.೨–೨೩–೧) ಇತಿ ಪರಾಮರ್ಶಪೂರ್ವಕಮ್ ಆಶ್ರಮಾಣಾಮ್ ಅನಾತ್ಯನ್ತಿಕಫಲತ್ವಂ ಸಂಕೀರ್ತ್ಯ ಆತ್ಯನ್ತಿಕಫಲತಯಾ ಬ್ರಹ್ಮಸಂಸ್ಥತಾ ಸ್ತೂಯತೇ "ಬ್ರಹ್ಮಸಂಸ್ಥೋಽಮೃತತ್ವಮೇತಿ" (ಛಾಂ. ೨–೨೩–೧) ಇತಿ। ನನು ಪರಾಮರ್ಶೇಽಪ್ಯಾಶ್ರಮಾ ಗಮ್ಯನ್ತ ಏವ। ಸತ್ಯಂ ಗಮ್ಯನ್ತೇ। ಸ್ಮೃತ್ಯಾಚಾರಾಭ್ಯಾಂ ತು ತೇಷಾಂ ಪ್ರಸಿದ್ಧಿರ್ನ ಪ್ರತ್ಯಕ್ಷಶ್ರುತೇಃ। ಅತಶ್ಚ ಪ್ರತ್ಯಕ್ಷಶ್ರುತಿವಿರೋಧೇ ಸತಿ ಅನಾದರಣೀಯಾಸ್ತೇ ಭವಿಷ್ಯನ್ತಿ। ಅನಧಿಕೃತವಿಷಯಾ ವಾ। ನನು ಗಾರ್ಹಸ್ಥ್ಯಮಪಿ ಸಹೈವ ಊರ್ಧ್ವರೇತೋಭಿಃ ಪರಾಮೃಷ್ಟಂ "ಯಜ್ಞೋಽಧ್ಯಯನಂ ದಾನಮಿತಿ ಪ್ರಥಮಃ" ಇತಿ। ಸತ್ಯಮೇವಮ್। ತಥಾಪಿ ತು ಗೃಹಸ್ಥಂ ಪ್ರತ್ಯೇವಾಗ್ನಿಹೋತ್ರಾದೀನಾಂ ಕರ್ಮಣಾಂ ವಿಧಾನಾತ್ ಶ್ರುತಿಪ್ರಸಿದ್ಧಮೇವ ಹಿ ತದಸ್ತಿತ್ವಮ್। ತಸ್ಮಾತ್ ಸ್ತುತ್ಯರ್ಥ ಏವಾಯಂ ಪರಾಮರ್ಶೋ ನ ಚೋದನಾರ್ಥಃ॥

(ಭಾಷ್ಯಾರ್ಥ)

"ಧರ್ಮಸ್ಕಂಧಗಳು ಮೂರು" (ಛಾಂ. ೨–೨೩–೧) ಎಂದು ಮುಂತಾಗಿರುವ ಶಬ್ದಗಳನ್ನು ಊರ್ಧ್ವರೇತಸ್ಕರ ಆಶ್ರಮಗಳು ಇವೆಯೆಂದು ತೋರಿಸುವದಕ್ಕೆ ಉದಾಹರಿಸಿದಿರಷ್ಟೆ, ಅವು ಅದನ್ನು ಪ್ರತಿಪಾದಿಸುವದಕ್ಕೆ ಸಮರ್ಥವಲ್ಲ. ಏಕೆಂದರೆ ಈ ಶಬ್ದಗಳಲ್ಲಿ ಆಶ್ರಮಾಂತರಗಳ ಪರಾಮರ್ಶವು (ಮಾತ್ರ) ಇದೆ, ವಿಧಿಯಿಲ್ಲ– ಎಂದು ಜೈಮಿನಿ ಎಂಬ ಆಚಾರ್ಯರು ಅಭಿಪ್ರಾಯಪಡುತ್ತಾರೆ. ಏಕೆ? ಎಂದರೆ ಲಿಙಾದಿಗಳಲ್ಲಿ ಒಂದು ಚೋದನಾಶಬ್ದವೂ ಇಲ್ಲಿಲ್ಲ[1]. ಇವುಗಳಲ್ಲಿ ಒಂದೊಂದರಲ್ಲಿಯೂ ಅರ್ಥಾಂತರಪರವಾಗಿರುವದು ಕಂಡುಬರುತ್ತದೆ. ಮೊದಲನೆಯದಾಗಿ "ಧರ್ಮಸ್ಕಂಧಗಳು ಮೂರು" ಎಂಬಲ್ಲಿ ಯಜ್ಞ, ಅಧ್ಯಯನ, ದಾನ –ಎಂಬುದು ಮೊದಲನೆಯದು, ತಪಸ್ಸೇ ಎರಡನೆಯದು, ಆಚಾರ್ಯಕುಲದಲ್ಲಿ ಅತ್ಯಂತವಾಗಿ ಶರೀರವನ್ನು ಸವೆಯಿಸುವ ಆಚಾರ್ಯಕುಲವಾಸಿಯಾದ ಬ್ರಹ್ಮಚಾರಿಯು[2] ಮೂರನೆಯವನು –ಇವರೆಲ್ಲರೂ ಪುಣ್ಯಲೋಕ(ವನ್ನು

1. ಲಿಙ್, ಲೋಟ್, ತವ್ಯ, ಭವೇತ್, ಸ್ಯಾತ್– ಎಂಬೀ ಶಬ್ದಗಳು ವಿಧಿಯನ್ನು ತಿಳಿಸುತ್ತವೆ; ಇವುಗಳಲ್ಲಿ ಒಂದೂ ಈ ವಾಕ್ಯದಲ್ಲಿಲ್ಲ.

2. ನೈಷ್ಠಿಕಬ್ರಹ್ಮಚಾರಿಯು ಎಂದರ್ಥ.

ಪಡೆಯುವ)ರಾಗುವರು" (ಛಾಂ. ೨-೨೩-೧) ಎಂದು ಪರಾಮರ್ಶಪೂರ್ವಕವಾಗಿ ಆಶ್ರಮಗಳಿಗೆ ಆತ್ಯಂತಿಕಫಲವಿಲ್ಲವೆಂದು ಹೇಳಿ "ಬ್ರಹ್ಮಸಂಸ್ಥನು ಅಮೃತತ್ವವನ್ನು ಹೊಂದುತ್ತಾನೆ" (ಛಾಂ.೨-೨೩-೧) ಎಂದು ಬ್ರಹ್ಮಸಂಸ್ಥತ್ವವು ಆತ್ಯಂತಿಕಫಲವುಳ್ಳದ್ದೆಂದು[1] ಹೊಗಳಿರುತ್ತದೆ.

(ಆಕ್ಷೇಪ) :- ಪರಾಮರ್ಶವಾದರೂ ಆಶ್ರಮಗಳಿರುವವೆಂದು ತಿಳಿಯುವದಿಲ್ಲವೆ ?

(ಪರಿಹಾರ) :- ನಿಜ, ತಿಳಿದುಬರುತ್ತದೆ. ಆದರೆ ಅವುಗಳ ಪ್ರಸಿದ್ಧಿಯು ಸ್ಮೃತ್ಯಾಚಾರಗಳಿಂದಲೇ ಹೊರತು, ಪ್ರತ್ಯಕ್ಷಶ್ರುತಿಯಿಂದಲ್ಲ. ಆದ್ದರಿಂದ ಪ್ರತ್ಯಕ್ಷಶ್ರುತಿಗೆ ವಿರುದ್ಧವಾದ್ದರಿಂದ[2] ಅವುಗಳನ್ನು ಅನಾದರಮಾಡತಕ್ಕದ್ದು, ಅಥವಾ **ಆ (ಆಶ್ರಮಗಳು) ಅನಧಿಕೃತರ ವಿಷಯವಾದವುಗಳು** (ಎಂದು ನಿರ್ಣಯಿಸಬೇಕು).[3]

(ಆಕ್ಷೇಪ) :- ಗಾರ್ಹಸ್ಥ್ಯವನ್ನು ಕೂಡ ಊರ್ಧ್ವರೇತಸ್ಕರೊಡನೆಯೇ "ಯಜ್ಞವು, ಅಧ್ಯಯನವು, ದಾನವು- ಎಂದು ಮೊದಲನೆಯದು" ಎಂದು ಪರಾಮರ್ಶಮಾಡಿದೆಯಲ್ಲವೆ ?

(ಪರಿಹಾರ) :- ನಿಜ, ಹೀಗೆಯೇ ಸರಿ. ಆದರೂ ಗೃಹಸ್ಥನಿಗಾಗಿಯೇ ಅಗ್ನಿಹೋತ್ರಾದಿಕರ್ಮಗಳನ್ನು ವಿಧಾನಮಾಡಿರುವದರಿಂದ ಅದು ಇದೆ ಎಂಬುದು ಶ್ರುತಿಪ್ರಸಿದ್ಧವೇ (ಆಗಿರುತ್ತದೆ). ಆದ್ದರಿಂದ (ಬ್ರಹ್ಮಸಂಸ್ಥನ) ಸ್ತುತಿಗಾಗಿಯೇ ಹೊರತು ಈ ಪರಾಮರ್ಶವು ಚೋದನೆಗಾಗಿಯಲ್ಲ.

## ಪೂರ್ವಪಕ್ಷ: ಸಂನ್ಯಾಸವನ್ನು ಶ್ರುತಿ ನಿಂದಿಸುತ್ತದೆ

(ಭಾಷ್ಯ)

೪೫೬. ಅಪಿ ಚ ಅಪವದತಿ ಹಿ ಪ್ರತ್ಯಕ್ಷಾ ಶ್ರುತಿಃ ಆಶ್ರಮಾನ್ತರಮ್ "ವೀರಹಾ ವಾ ಏಷ ದೇವಾನಾಂ ಯೋಽಗ್ನಿಮುದ್ವಾಸಯತೇ" (ತೈ. ಸಂ. ೧-೫-೨) "ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತನ್ತುಂ ಮಾ ವ್ಯವಚ್ಛೇತ್ಸೀಃ" (ತೈ. ೧-೧೧), "ನಾಪುತ್ರಸ್ಯ ಲೋಕೋಽಸ್ತೀತಿ ತತ್ಸರ್ವೇ ಪಶವೋ ವಿದುಃ" (ಐ. ಬ್ರಾ. ೭-೧೩-೨) ಇತ್ಯೇವಮಾದ್ಯಾ। ತಥಾ "ಯೋ

1. ನಿತ್ಯವಾದ ಮೋಕ್ಷಫಲವುಳ್ಳದ್ದೆಂದು.
2. ಯಾವಜ್ಜೀವಾದಿಶ್ರುತಿವಿರುದ್ಧವಾದ್ದರಿಂದ.
3. ಗೃಹಸ್ಥಾಶ್ರಮದ ಕರ್ಮವನ್ನು ಮಾಡಲಾರದ ಕುರುಡ, ಹೆಳವ- ಮುಂತಾದವರಿಗೇ ನೈಷ್ಠಿಕಬ್ರಹ್ಮಚರ್ಯ, ಸಂನ್ಯಾಸಗಳನ್ನು ಹೇಳಿದೆ- ಎಂಬ ಪಕ್ಷವನ್ನು ತಂ. ವಾ. ಜೈ. ಸೂ. ೧-೩-೯ (ಪು. ೧೯೨)ರಲ್ಲಿ ಪ್ರತಿಪಾದಿಸಿದೆ.

ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ" (ಛಾಂ. ೫-೧೦-೧), "ತಪಃ ಶ್ರದ್ಧೇ ಯೇ ಹ್ಯುಪವಸನ್ತ್ಯರಣ್ಯೇ" (ಮುಂ.೧-೨-೧೧) ಇತಿ ಚ ದೇವಯಾನೋಪದೇಶೋ ನಾಶ್ರಮಾನ್ತರೋಪದೇಶಃ। ಸಂದಿಗ್ಧಂ ಚಾಽಶ್ರಮಾನ್ತರಾಭಿಧಾನಮ್ "ತಪ ಏವ ದ್ವಿತೀಯಃ" (ಛಾಂ. ೨-೨೩-೧) ಇತ್ಯೇವಮಾದಿಷು। ತಥಾ "ಏತಮೇವ ಪ್ರವ್ರಾಜಿನೋ ಲೋಕಮಿಚ್ಛನ್ತಃ ಪ್ರವ್ರಜನ್ತಿ" (ಬೃ ೪-೪-೨೨) ಇತಿ ಲೋಕಸಂಸ್ತವೋಽಯಂ ನ ಪಾರಿವ್ರಾಜ್ಯವಿಧಿಃ। ನನು "ಬ್ರಹ್ಮಚರ್ಯಾದೇವ ಪ್ರವ್ರಜೇತ್" (ಜಾ. ೪) ಇತಿ ವಿಸ್ಪಷ್ಟಮಿದಂ ಪ್ರತ್ಯಕ್ಷಂ ಪಾರಿವ್ರಾಜ್ಯವಿಧಾನಂ ಜಾಬಾಲಾನಾಮ್। ಸತ್ಯಮೇವಮೇತತ್। ಅನಪೇಕ್ಷ್ಯ ತು ಏತಾಂ ಶ್ರುತಿಮ್ ಅಯಂ ವಿಚಾರಃ ಇತಿ ದ್ರಷ್ಟವ್ಯಮ್ ॥

(ಭಾಷ್ಯಾರ್ಥ)

ಇದಲ್ಲದೆ "ಯಾವನು ಅಗ್ನಿಯನ್ನು ಬಿಟ್ಟುಹೋಗುವನೋ ಅವನು ದೇವತೆಗಳ ವೀರರನ್ನು ಕೊಂದವನಾಗುವನು" (ತೈ. ಸಂ. ೧೦-೫-೨), ಆಚಾರ್ಯನಿಗೆ ಪ್ರಿಯವಾದ ಧನವನ್ನು ತಂದುಕೊಟ್ಟು ಪ್ರಜಾತಂತುವನ್ನು ಕಡಿದುಹಾಕದೆ ಇರು" (ತೈ. ೧-೧೧), "ಅಪುತ್ರನಿಗೆ ಲೋಕವಿಲ್ಲವೆಂಬುದನ್ನು ಸರ್ವಪಶುಗಳೂ ಬಲ್ಲವು" (ಐ. ಬ್ರಾ. ೭-೧೩-೨) ಎಂಬುದೇ ಮುಂತಾದ ಪ್ರತ್ಯಕ್ಷಶ್ರುತಿಯು ಆಶ್ರಮಾಂತರವನ್ನು ನಿಂದಿಸಿರುತ್ತದೆ. ಹೀಗೆಯೇ "ಅರಣ್ಯದಲ್ಲಿ ಯಾರು ಶ್ರದ್ಧೆ, ತಪಸ್ಸು -ಮುಂತಾದವುಗಳನ್ನು ಅನುಷ್ಠಾನಮಾಡುವರೋ......" (ಛಾಂ. ೫-೧೦-೧), ಎಂಬುದೂ "ಯಾರು ಅರಣ್ಯದಲ್ಲಿ ತಪಃಶ್ರದ್ಧೆಗಳನ್ನು ಆಚರಿಸುವರೋ" (ಮುಂ. ೧-೨-೧೧) ಎಂಬುದೂ **ದೇವಯಾನದ** ಉಪದೇಶವೇ[1] ಹೊರತು ಆಶ್ರಮಾಂತರದ ಉಪದೇಶವಲ್ಲ.[2] ಇದಲ್ಲದೆ "ತಪಸ್ಸೇ ಎರಡನೆಯದು" (ಛಾಂ. ೨-೨೩-೧) ಮುಂತಾದ (ವಾಕ್ಯ)ಗಳಲ್ಲಿ ಆಶ್ರಮಾಂತರವನ್ನು ಹೇಳಿರುವದು ಸಂದಿಗ್ಧವೂ ಆಗಿದೆ.[3] ಹೀಗೆಯೇ "ಇದೇ ಲೋಕವನ್ನು ಇಚ್ಛಿಸುವ ಪ್ರವ್ರಾಜಿಗಳೇ ಹೊರಟುಹೋಗುತ್ತಾರೆ" (ಬೃ. ೪-೪-೨೨) -ಎಂಬುದು ಲೋಕದ ಸ್ತುತಿಯೇ, ಪಾರಿವ್ರಾಜ್ಯವಿಧಿಯಲ್ಲ.[4]

---

1. ವಾಕ್ಯಶೇಷದಿಂದ ಇದು ದೇವಯಾನಪರವೆಂದು ಗೊತ್ತಾಗುವದರಿಂದ ಆಶ್ರಮಾಂತರವನ್ನು ಹೇಳುವದೆಂದಿಟ್ಟುಕೊಂಡರೆ ವಾಕ್ಯಭೇದವಾಗುತ್ತದೆ ಎಂದು ಭಾವ.

2. ಏಕೆಂದರೆ ಇಲ್ಲಿ ಆಶ್ರಮವಾಚಕಪದವಿಲ್ಲ; ಆಶ್ರಮದ ಹೆಸರುಗಳೂ ಸ್ಪಷ್ಟವಾಗಿಲ್ಲ ಎಂದು ಭಾವ.

3. ಆತ್ಮಲೋಕವು ಎಷ್ಟು ದೊಡ್ಡದೆಂದರೆ ಇದಕ್ಕಾಗಿ ಪ್ರವ್ರಜ್ಯೆಯನ್ನು ಕೂಡ ಮಾಡುವರು ಎಂದು ಲೋಕವನ್ನು ಹೊಗಳಿದೆ ಎಂದರ್ಥ.

4. ಏಕೆಂದರೆ ಇಲ್ಲಿ ವಿಧಿವಿಭಕ್ತಿಯಿಲ್ಲ.

(ಆಕ್ಷೇಪ) :– "ಬ್ರಹ್ಮಚರ್ಯದಿಂದಲೇ ಪ್ರವ್ರಜ್ಯೆಯನ್ನು ಮಾಡಬೇಕು" (ಜಾ. ೪) ಎಂಬೀ ಪ್ರತ್ಯಕ್ಷಪಾರಿವ್ರಾಜ್ಯವಿಧಾನವು ಜಾಬಾಲ(ಶಾಖೆ) ಯವರಲ್ಲಿದೆಯಲ್ಲ !

(ಪರಿಹಾರ) :– ನಿಜ, ಇದು ಹೀಗೆಯೇ (ಸರಿ). ಆದರೆ ಈ ಶ್ರುತಿಯನ್ನು ಲೆಕ್ಕಕ್ಕೆ ತಾರದೆಯೇ ಈ ವಿಚಾರವು (ಹೊರಟಿದೆ) ಎಂದು ತಿಳಿಯಬೇಕು.

**ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ॥ ೧೯ ॥**

೧೯. (ಸಂನ್ಯಾಸವು) ಅನುಷ್ಠೇಯವೆಂದು ಬಾದರಾಯಣರು (ಅಭಿಪ್ರಾಯಪಡುತ್ತಾರೆ. ಏಕೆಂದರೆ) ಶ್ರುತಿಯು ಸಮಾನವಾಗಿದೆ.

## ಆಶ್ರಮಾಂತರಕ್ಕೂ ಗಾರ್ಹಸ್ಥ್ಯದಂತೆಯೇ ಪರಾಮರ್ಶವಿದೆ

(ಭಾಷ್ಯ)

೪೫೭. ಅನುಷ್ಠೇಯಮ್ ಆಶ್ರಮಾನ್ತರಂ ಬಾದರಾಯಣ ಆಚಾರ್ಯೋ ಮನ್ಯತೇ। ವೇದೇ ಶ್ರವಣಾತ್। ಅಗ್ನಿಹೋತ್ರಾದೀನಾಂ ಚ ಅವಶ್ಯಾನುಷ್ಠೇಯತ್ವಾತ್, ತದ್ವಿರೋಧಾದನಧಿಕೃತಾನುಷ್ಠೇಯಮ್ ಆಶ್ರಮಾನ್ತರಮ್ ಇತಿ ಹೀಮಾಂ ಮತಿಂ ನಿರಾಕರೋತಿ ಗಾರ್ಹಸ್ಥ್ಯವದೇವ ಆಶ್ರಮಾನ್ತರಮಪಿ ಅನಿಚ್ಛತಾ ಪ್ರತಿಪತ್ತವ್ಯಮ್ ಇತಿ ಮನ್ಯಮಾನಃ। ಕುತಃ ? ಸಾಮ್ಯಶ್ರುತೇಃ। ಸಮಾ ಹಿ ಗಾರ್ಹಸ್ಥ್ಯೇನ ಆಶ್ರಮಾನ್ತರಸ್ಯ ಪರಾಮರ್ಶಶ್ರುತಿರ್ದೃಶ್ಯತೇ "ತ್ರಯೋ ಧರ್ಮಸ್ಕನ್ಧಾಃ" (ಛಾಂ. ೨–೨೩–೧) ಇತ್ಯಾದ್ಯಾ। ಯಥೇಹ ಶ್ರುತ್ಯನ್ತರವಿಹಿತಮೇವ ಗಾರ್ಹಸ್ಥ್ಯಂ ಪರಾಮೃಷ್ಟಮ್ ಏವಮ್ ಆಶ್ರಮಾನ್ತರಮಪಿ ಇತಿ ಪ್ರತಿಪತ್ತವ್ಯಮ್। ಯಥಾ ಚ ಶಾಸ್ತ್ರಾನ್ತರಪ್ರಾಪ್ತಯೋರೇವ ನಿವೀತಪ್ರಾಚೀನಾವೀತಯೋಃ ಪರಾಮರ್ಶ ಉಪವೀತವಿಧಿಪರೇ ವಾಕ್ಯೇ। ತಸ್ಮಾತ್ ತುಲ್ಯಮನುಷ್ಠೇಯತ್ವಂ ಗಾರ್ಹಸ್ಥ್ಯೇನ ಆಶ್ರಮಾನ್ತರಸ್ಯ। ತಥಾ "ಏತಮೇವ ಪ್ರವ್ರಾಜಿನೋ ಲೋಕಮಿಚ್ಛನ್ತಃ ಪ್ರವ್ರಜನ್ತಿ" (ಬೃ. ೪–೪–೨೨) ಇತ್ಯಸ್ಯ ವೇದಾನುವಚನಾದಿಭಿಃ ಸಮಭಿವ್ಯಾಹಾರಃ। "ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ" (ಛಾಂ. ೫–೧೦–೧) ಇತ್ಯಸ್ಯ ಪಞ್ಚಾಗ್ನಿವಿದ್ಯಯಾ। ಯತ್ತೂಕ್ತಮ್ "ತಪ ಏವ ದ್ವಿತೀಯಃ" (ಛಾಂ. ೨–೨೩–೧) ಇತ್ಯಾದಿಷು ಆಶ್ರಮಾನ್ತರಾಭಿಧಾನಂ ಸಂದಿಗ್ಧಮ್ ಇತಿ। ನೈಷ ದೋಷಃ। ನಿಶ್ಚಯಕಾರಣಸದ್ಭಾವಾತ್। "ತ್ರಯೋ ಧರ್ಮಸ್ಕನ್ಧಾಃ" (ಛಾಂ. ೨–೨೩–೧) ಇತಿ ಹಿ ಧರ್ಮಸ್ಕನ್ಧತ್ರಿತ್ವಂ ಪ್ರತಿಜ್ಞಾತಮ್। ನ ಚ ಯಜ್ಞಾದಯೋ ಭೂಯಾಂಸೋ ಧರ್ಮಾ ಉತ್ಪತ್ತಿಭಿನ್ನಾಃ ಸನ್ತೋಽನ್ಯತ್ರಾಶ್ರಮಸಂಬನ್ಧಾತ್ ತ್ರಿತ್ವೇಽನ್ತ

ಧಾರಯಿತುಂ ಶಕ್ಯತೇ । ತತ್ರ ಯಜ್ಞಾದಿಲಿಙ್ಗೋ ಗೃಹಾಶ್ರಮ ಏಕೋ ಧರ್ಮಸ್ಕನ್ಧೋ ನಿರ್ದಿಷ್ಟಃ, 'ಬ್ರಹ್ಮಚಾರೀ' ಇತಿ ಸ್ಪಷ್ಟಃ ಆಶ್ರಮನಿರ್ದೇಶಃ, 'ತಪಃ' ಇತ್ಯಪಿ ಕೋಽನ್ಯಸ್ತಪಃಪ್ರಧಾನಾತ್ ಆಶ್ರಮಾತ್ ಧರ್ಮಸ್ಕನ್ಧೋಽಭ್ಯುಪಗಮ್ಯೇತ? । "ಯೇ ಚೇಮೇಽರಣ್ಯೇ" (ಛಾಂ. ೫-೧೦-೧) ಇತಿ ಚಾರಣ್ಯಲಿಙ್ಗಾತ್ ಶ್ರದ್ಧಾತಪೋಭ್ಯಾಮ್ ಆಶ್ರಮಗೃಹೀತಿಃ । ತಸ್ಮಾತ್ ಪರಾಮರ್ಶೇಽಪಿ ಅನುಷ್ಠೇಯಮ್ ಆಶ್ರಮಾನ್ತರಮ್ ॥

(ಭಾಷ್ಯಾರ್ಥ)

ಆಶ್ರಮಾಂತರವು ಅನುಷ್ಠೇಯವು ಎಂದು ಬಾದರಾಯಣಾಚಾರ್ಯನು ಅಭಿಪ್ರಾಯಪಡುತ್ತಾನೆ. ಏಕೆಂದರೆ ವೇದದಲ್ಲಿ (ಅದು) ಶ್ರುತವಾಗಿದೆ. ಅಗ್ನಿಹೋತ್ರವೇ ಮುಂತಾದವು ಅವಶ್ಯವಾಗಿ ಅನುಷ್ಠಾನಮಾಡತಕ್ಕವುಗಳಾಗಿರುವದರಿಂದ ಆ (ಶ್ರುತಿಗೆ) ವಿರೋಧವಾಗಿರುವವರಿಂದ ಅನಧಿಕೃತರಾದವರು ಆಶ್ರಮಾಂತರವನ್ನು ಮಾಡತಕ್ಕದ್ದು (ಎಂದು ನಿಶ್ಚಯಿಸಬೇಕು) ಎಂಬೀ ಬುದ್ಧಿಯನ್ನು ಗಾರ್ಹಸ್ಥ್ಯದಂತೆಯೇ ಆಶ್ರಮಾಂತರವನ್ನು ಇಚ್ಛೆಯಿಲ್ಲದಿದ್ದರೂ ಒಪ್ಪಬೇಕು ಎಂಬ ಅಭಿಪ್ರಾಯದಿಂದ ತಿರಸ್ಕರಿಸಿರುತ್ತಾರೆ. ಏಕೆ? ಎಂದರೆ ಸಾಮ್ಯಶ್ರುತಿ(ಯಿರುವದ)ರಿಂದ. "ತ್ರಯೋ ಧರ್ಮಸ್ಕನ್ಧಾಃ (ಮೂರು ಧರ್ಮಸ್ಕಂಧಗಳು)" (ಛಾಂ. ೨-೨೩-೧) ಮುಂತಾದ (ಕಡೆಯಲ್ಲಿ) ಆಶ್ರಮಾಂತರವನ್ನೂ ಗಾರ್ಹಸ್ಥ್ಯದಂತೆಯೇ ಪರಾಮರ್ಶಮಾಡುವ ಶ್ರುತಿಯು ಸಮಾನವಾಗಿರುತ್ತದೆ. ಹೇಗೆ ಇಲ್ಲಿ ಶ್ರುತ್ಯಂತರವಿಹಿತವಾಗಿರುವ ಗಾರ್ಹಸ್ಥ್ಯವನ್ನೇ ಪರಾಮರ್ಶಮಾಡಿರುತ್ತದೆಯೋ ಹಾಗೆಯೇ ಆಶ್ರಮಾಂತರವನ್ನೂ (ಪರಾಮರ್ಶಿಸಿರುತ್ತದೆ) ಎಂದು ತಿಳಿಯಬೇಕು. ಮತ್ತು ಹೇಗೆ ಶಾಸ್ತ್ರಾಂತರಪ್ರಾಪ್ತವಾದ ನಿವೀತಪ್ರಾಚೀನಾವೀತಗಳನ್ನೇ ಉಪವೀತವಿಧಿಪರವಾದ ವಾಕ್ಯದಲ್ಲಿ ಪರಾಮರ್ಶಿಸಿರುತ್ತದೆಯೋ[1] (ಹಾಗೆಯೇ ಇಲ್ಲಿಯೂ ಆಶ್ರಮಾಂತರಪರಾಮರ್ಶವನ್ನು ತಿಳಿಯಬೇಕು). ಆದ್ದರಿಂದ ಆಶ್ರಮಾಂತರವು ಅನುಷ್ಠೇಯವೆಂಬುದು ಗಾರ್ಹಸ್ಥ್ಯಕ್ಕೆ ಸಮಾನವಾಗಿದೆ. ಹೀಗೆಯೇ "ಈ ಲೋಕವನ್ನು ಇಚ್ಛಿಸುವ

---

1. ಜೈ. ಸೂ. ೩-೪-೯ರಲ್ಲಿ ಇದನ್ನು ನಿಶ್ಚಯಿಸಿದೆ. ತೈ. ಸಂ. ೨-೫-೧೧ರಲ್ಲಿ 'ಉಪವೀತಂ ದೇವಾನಾಮ್' ಎಂಬಲ್ಲಿ ದೇವಕರ್ಮದಲ್ಲಿ ಉಪವೀತವನ್ನು ವಿಧಿಸಿರುವಲ್ಲಿ 'ನಿವೀತಂ ಮನುಷ್ಯಾಣಾಂ ಪ್ರಾಚೀನಾವೀತಂ ಪಿತೄಣಾಮುಪವೀತಂ ದೇವಾನಾಮ್' ಎಂದು ನಿವೀತಪ್ರಾಚೀನಾವೀತಗಳನ್ನು ಅನುವಾದಮಾಡಿಕೊಂಡಿದೆ. ನಿವೀತವು ಯಾವ ಶಾಸ್ತ್ರದಲ್ಲಿ ವಿಹಿತವಾಗಿದೆ ಎಂಬುದು ತಿಳಿಯದು ; ಅದು ಸ್ವಾಭಾವಿಕವಾಗಿ ಮನುಷ್ಯರು ಬಳಸುವದಾದ್ದರಿಂದ ಪ್ರಾಪ್ತವಾಗಿದೆ ಎಂದು ಜೈ. ೩-೪-೨ರ ಶಾ. ಭಾ. ದಲ್ಲಿದೆ. ಪ್ರಾಚೀನಾವೀತವು ಪಿತೃದೇವತ್ಯವಾದ ಮೃತಾಗ್ನಿಹೋತ್ರದಲ್ಲಿ ಶ್ರುತವಾಗಿದೆ ಎಂದು ತಂ. ವಾ. (ಜೈ. ೩-೪-೯ರ ಮುಂದಿನ ಹೆಚ್ಚಿನ ಸೂತ್ರ)ದಲ್ಲಿದೆ

ಪ್ರವ್ರಾಜಿಗಳು ಹೊರಟುಹೋಗುತ್ತಾರೆ" (ಬೃ. ೪-೪-೨೨) ಎಂಬಲ್ಲಿ ಈ (ಪಾರಿವ್ರಾಜ್ಯವನ್ನು) ವೇದಾನುವಚನಾದಿಗಳೊಡನೆ ಹೇಳಿರುತ್ತದೆ.[1] "ಮತ್ತು ಯಾವ ಇವರು ಅರಣ್ಯದಲ್ಲಿ ಶ್ರದ್ಧೆ, ತಪಸ್ಸು -ಮುಂತಾದವನ್ನು ಅನುಷ್ಠಾನ ಮಾಡುವರೋ" (ಛಾಂ. ೫-೧೦-೧) ಎಂಬಿದನ್ನು ಪಂಚಾಗ್ನಿವಿದ್ಯೆಯೊಡನೆ (ಹೇಳಿರುತ್ತದೆ).[2] ಇನ್ನು "ತಪಸ್ಸೇ ಎರಡನೆಯದು" (ಛಾಂ. ೨-೨೩-೧) ಮುಂತಾದವುಗಳಲ್ಲಿ ಆಶ್ರಮಾಂತರವನ್ನು ಹೇಳಿರುವದು ಸಂದಿಗ್ಧವಾಗಿದೆ ಎಂದರಲ್ಲ; ಆ ದೋಷವಿಲ್ಲ. ಏಕೆಂದರೆ (ಅಲ್ಲಿ) ನಿಶ್ಚಯಕ್ಕೆ ಕಾರಣವಿದೆ. ಹೇಗೆಂದರೆ "ಧರ್ಮಸ್ಕಂಧಗಳು ಮೂರು" ( ಛಾಂ. ೨-೨೩-೧ ) ಎಂದು (ವಾಕ್ಯದಲ್ಲಿ) ಧರ್ಮಸ್ಕಂಧಗಳು ಮೂರೆಂದು ಪ್ರತಿಜ್ಞೆಮಾಡಿರುತ್ತದೆ. ಆದರೆ ಯಜ್ಞವೇ ಮುಂತಾದ ಅನೇಕ ಧರ್ಮಗಳು ಉತ್ಪತ್ತಿಯಿಂದ ಭಿನ್ನವಾಗಿರುವದರಿಂದ[3] ಆಶ್ರಮಸಂಬಂಧವಿಲ್ಲದೆ (ಅವನ್ನು) ಮೂರರಲ್ಲಿಯೇ ಅಡಕಮಾಡುವದಕ್ಕೆ ಆಗುವಂತಿಲ್ಲ. (ಇವುಗಳಲ್ಲಿ) ಯಜ್ಞಾದಿಲಿಂಗಗಳಿಂದ (ತಿಳಿಯಬರುವ) ಗೃಹಾಶ್ರಮವು ಒಂದು ಧರ್ಮಸ್ಕಂಧವೆಂದು ನಿರ್ದಿಷ್ಟವಾಗಿದೆ (ಎನ್ನಬೇಕು) ; 'ಬ್ರಹ್ಮಚಾರಿ' ಎಂಬುದಂತೂ ಸ್ಪಷ್ಟವಾದ ಆಶ್ರಮನಿರ್ದೇಶವೇ; 'ತಪಸ್ಸು' ಎನ್ನುವದೂ ತಪಃಪ್ರಧಾನವಾದ ಆಶ್ರಮಕ್ಕಿಂತ ಬೇರೆ ಯಾವ ಧರ್ಮಸ್ಕಂಧವೆಂದು ಒಪ್ಪಬಹುದು ? "ಯೇ ಚೇಮೇಽರಣ್ಯೇ ( ಯಾವ ಇವರು ಅರಣ್ಯದಲ್ಲಿ)" (ಛಾಂ. ೫-೧೦-೧) ಎಂದು ಅರಣ್ಯವೆಂಬ ಲಿಂಗವಿರುವದರಿಂದ ಶ್ರದ್ಧಾತಪಸ್ಸುಗಳಿಂದ ಆಶ್ರಮವನ್ನೇ ಗ್ರಹಿಸಬೇಕು. ಆದ್ದರಿಂದ (ಇದು) ಪರಾಮರ್ಶವಾದರೂ ಅನುಷ್ಠೇಯವಾದ ಆಶ್ರಮಾಂತರವೇ.

**ವಿಧಿರ್ವಾ ಧಾರಣವತ್ ॥ ೨೦ ॥**

೨೦. ಅಥವಾ ಇದು ವಿಧಿಯೇ, ಧಾರಣದಂತೆಯೇ (ಇದನ್ನು ತಿಳಿಯಬೇಕು).

## ಆಶ್ರಮಾಂತರವನ್ನು ವಿಧಿಸಿದೆ ಎಂದೇ ಹೇಳಬಹುದು

(ಭಾಷ್ಯ)

೪೫೮. ವಿಧಿರ್ವಾ ಅಯಮಾಶ್ರಮಾನ್ತರಸ್ಯ, ನ ಪರಾಮರ್ಶಮಾತ್ರಮ್। ನನು ವಿಧಿತ್ವಾಭ್ಯುಪಗಮೇ ಏಕವಾಕ್ಯತಾಪ್ರತೀತಿರುಪರುಧ್ಯೇತ। ಪ್ರತೀಯತೇ

1. ವೇದಾನುವಚನಾದಿಗಳು ಅನುಷ್ಠೇಯವಾಗಿರುವದರಿಂದ ಇದೂ ಅನುಷ್ಠೇಯವೇ.

2. ಆದ್ದರಿಂದ ಪಂಚಾಗ್ನಿವಿದ್ಯೆಯಂತೆ ತಪಸ್ಸು ಎಂಬ ವಾನಪ್ರಸ್ಥವೂ ಅನುಷ್ಠೇಯವೇ.

3. ಯಜೇತ, ಅಧ್ಯೇತವ್ಯಮ್, ದದ್ಯಾತ್- ಎಂದು ಬೇರೆಬೇರೆ ವಿಹಿತವಾಗಿರುವದರಿಂದ.

ಚಾತ್ರೈಕವಾಕ್ಯತಾ, ಪುಣ್ಯಲೋಕಫಲಾಸ್ತ್ರಯೋ ಧರ್ಮಸ್ಕನ್ಧಾಃ, ಬ್ರಹ್ಮಸಂಸ್ಥತಾ ತ್ವಮೃತತ್ವಫಲಾ ಇತಿ। ಸತ್ಯಮೇತತ್ । ಸತೀಮಪಿ ತ್ವೇಕವಾಕ್ಯತಾಪ್ರತೀತಿಂ ಪರಿತ್ಯಜ್ಯ ವಿಧಿರೇವ ಅಭ್ಯುಪಗನ್ತವ್ಯಃ। ಅಪೂರ್ವತ್ವಾತ್। ವಿಧ್ಯನ್ತರಸ್ಯಾದರ್ಶನಾತ್ । ವಿಸ್ಪಷ್ಟಾಚ್ಚಾಶ್ರಮಾನ್ತರಪ್ರತ್ಯಯಾತ್ ಗುಣವಾದಕಲ್ಪನಯಾ ಏಕವಾಕ್ಯತ್ವಯೋಜನಾನುಪಪತ್ತೇಃ। ಧಾರಣವತ್। ಯಥಾ "ಅಧಸ್ತಾತ್ ಸಮಿಧಂ ಧಾರಯನ್ನನುದ್ರವೇದುಪರಿ ಹಿ ದೇವೇಭ್ಯೋ ಧಾರಯತಿ" (?) ಇತ್ಯತ್ರ ಸತ್ಯಾಮಪ್ಯಧೋಧಾರಣೇನ ಏಕವಾಕ್ಯತಾಪ್ರತೀತೌ ವಿಧೀಯತ ಏವೋಪರಿಧಾರಣಮ್ ಅಪೂರ್ವತ್ವಾತ್। ತಥಾ ಚೋಕ್ತಂ ಶೇಷಲಕ್ಷಣೇ "ವಿಧಿಸ್ತು ಧಾರಣೇಽಪೂರ್ವತ್ವಾತ್" (ಜೈ.ಸೂ. ೩-೪)[1] ಇತಿ।, ತದ್ವದಿಹಾಪಿ ಆಶ್ರಮಪರಾಮರ್ಶಶ್ರುತಿರ್ವಿಧಿರೇವ ಇತಿ ಕಲ್ಪ್ಯತೇ ॥

(ಭಾಷ್ಯಾರ್ಥ)

ಅಥವಾ ಇದು ಆಶ್ರಮಾಂತರದ ವಿಧಿಯೇ, ಬರಿಯ ಪರಾಮರ್ಶವಲ್ಲ.

(ಆಕ್ಷೇಪ) :– ವಿಧಿಯೆಂದೊಪ್ಪಿದರೆ ಏಕವಾಕ್ಯತೆಯ ಅರಿವಿಗೆ ವಿರುದವಾಗುವದಲ್ಲ! ಇಲ್ಲಿ ಮೂರು ಧರ್ಮಸ್ಕಂಧಗಳಿಗೆ ಪುಣ್ಯಲೋಕಫಲವು, ಆದರೆ ಬ್ರಹ್ಮಸಂಸ್ಥತೆಗೆ ಅಮೃತತ್ವವೇ ಫಲವು – ಎಂದು ಏಕವಾಕ್ಯತೆಯು ತೋರುತ್ತಿದೆಯಲ್ಲ!

(ಪರಿಹಾರ) :– ಇದು ನಿಜ. ಏಕವಾಕ್ಯತೆಯು ತೋರುತ್ತಲಿದ್ದರೂ ಅದನ್ನು ಬಿಟ್ಟು ವಿಧಿಯನ್ನೇ ಅಂಗೀಕರಿಸಬೇಕು ; ಏಕೆಂದರೆ ಬೇರೊಂದು (ಆಶ್ರಮಾಂತರ)ವಿಧಿಯು ಕಾಣಬರುವದಿಲ್ಲವಾಗಿ (ಅದು) ಅಪೂರ್ವವಾಗಿರುತ್ತದೆ.[2] ಇದಲ್ಲದೆ ಆಶ್ರಮಾಂತರವು ವಿಸ್ಪಷ್ಟವಾಗಿ ತೋರುತ್ತಿರುವೆಡೆಯಲ್ಲಿ ಗುಣವಾದವನ್ನು ಕಲ್ಪಿಸಿ[3] ಏಕವಾಕ್ಯತೆಯನ್ನು ಮಾಡುವದು ಸರಿಯೂ ಅಲ್ಲ. ಧಾರಣದಂತೆ (ಇದನ್ನು ಅರಿಯಬೇಕು. ಇದರ ವಿವರ) : ಹೇಗೆ "ಕೆಳಗೆ ಸಮಿತ್ತನ್ನಿಟ್ಟುಕೊಂಡು ಹೋಗಬೇಕು ; ಏಕೆಂದರೆ ದೇವತೆಗಳಿಗೇ ಮೇಲೆ ಇಟ್ಟುಕೊಂಡುಹೋಗುವರು" (?)[4] ಎಂಬಲ್ಲಿ ಅಧೋಧಾರಣಕ್ಕೂ (ತನಗೂ)

---

1. ಇದು ಜೈ. ಸೂ. ೩-೪-೯ ಆದಮೇಲೆ ಭಾಷ್ಯಕಾರರ ಪಾಠದಲ್ಲಿಲ್ಲದ ೬ನೆಯ ಸೂತ್ರವು. ತಂತ್ರವಾರ್ತಿಕದಲ್ಲಿ ವ್ಯಾಖ್ಯಾತವಾಗಿದೆ.

2. ಮೊದಲು ವಿಧಿಯಿಂದ ಪ್ರಾಪ್ತವಾದದ್ದನ್ನು ಪರಾಮರ್ಶಮಾಡುವದಕ್ಕೆ ಬರುತ್ತದೆ ; ಇಲ್ಲದಿದ್ದರೆ ಇದೂ ಒಂದು ವಿವಕ್ಷಿತವೆಂದೇ ತಿಳಿಯಬೇಕಾಗುತ್ತದೆ.

3. ವಿಸ್ಪಷ್ಟವಾಗಿ ತೋರುವಲ್ಲಿ ವಿಧಿಯನ್ನು ಕಲ್ಪಿಸುವದೇ ಯುಕ್ತ ; ಇಲ್ಲದಿದ್ದರೆ ಇದು ಗುಣವಾದರೂಪವಾದ ಅರ್ಥವಾದಮಾತ್ರವಾಗುವದು.

4. ಈ ವಾಕ್ಯವು ಮೃತಾಗ್ನಿಹೋತ್ರದಲ್ಲಿದೆ ಎಂದು ಕೆಲವರು, ಮಹಾಪಿತೃಯಜ್ಞದಲ್ಲಿದೆ ಎಂದು ಕೆಲವರು. ತಂ. ವಾ. ಪು. ೮೯೭ನ್ನು ನೋಡಿ.

ಏಕವಾಕ್ಯತೆಯು ತೋರುತ್ತಿಸ್ವರೂ (ಈ ವಾಕ್ಯವು) ಉಪರಿಧಾರಣವನ್ನು ಅಪೂರ್ವವಾಗಿರುವದಾದ್ದರಿಂದ ವಿಧಿಸಿಯೇ ಇದೆ (ಎಂದು ನಿಶ್ಚಯಿಸು ವೆವೋ)[1] ಹೀಗೆಂದಲ್ಲವೆ, ಶೇಷಲಕ್ಷಣದಲ್ಲಿ "ಧಾರಣದಲ್ಲಿ ವಿಧಿಯಿದೆ ; ಏಕೆಂದರೆ ಅದು ಅಪೂರ್ವವಾಗಿರುತ್ತದೆ" (ಜೈ. ೩-೪) ಎಂಬ (ಸೂತ್ರ)ದಲ್ಲಿ ಹೇಳಿದೆ ? ಇದರಂತೆಯೇ ಇಲ್ಲಿಯೂ ಆಶ್ರಮಪರಾಮರ್ಶಶ್ರುತಿಯೂ ವಿಧಿಯೇ ಎಂದು ಕಲ್ಪಿಸಬೇಕು.

## ಈ ಶ್ರುತಿಯಲ್ಲಿ ಸಂನ್ಯಾಸವನ್ನಂತೂ ವಿಧಿಸಿಯೇ ಇದೆ

(ಭಾಷ್ಯ)

೪೫೫. ಯದ್ಯಪಿ ಪರಾಮರ್ಶ ಏವಾಯಮ್ ಆಶ್ರಮಾನ್ತರಾಣಾಮ್, ತಥಾಪಿ ಬ್ರಹ್ಮಸಂಸ್ಥತಾ ತಾವತ್ ಸಂಸ್ತವಸಾಮರ್ಥ್ಯಾದ್ ಅವಶ್ಯಂ ವಿಧೇಯಾ ಅಭ್ಯುಪಗನ್ತವ್ಯಾ। ಸಾ ಚ ಕಿಂ ಚತುರ್ಷ್ವಾಶ್ರಮೇಷು ಯಸ್ಯ ಕಸ್ಯಚಿತ್, ಆಹೋಸ್ವಿತ್ ಪರಿವ್ರಾಜಕಸ್ಯೈವೇತಿ ವಿವೇಕ್ತವ್ಯಮ್। ಯದಿ ಚ ಬ್ರಹ್ಮಚರ್ಯಾನ್ತೇಷು ಆಶ್ರಮೇಷು ಪರಾಮೃಶ್ಯಮಾನೇಷು ಪರಿವ್ರಾಜಕೋಽಪಿ ಪರಾಮೃಷ್ಟಃ, ತತಶ್ಚತುರ್ಣಾಮಪಿ ಆಶ್ರಮಾಣಾಂ ಪರಾಮೃಷ್ಟತ್ವಾವಿಶೇಷಾತ್ ಅನಾಶ್ರಮಿತ್ವಾನುಪಪತ್ತೇಶ್ಚ ಯಃ ಕಶ್ಚಿಚ್ಚತುರ್ಷ್ವಾಶ್ರಮೇಷು ಬ್ರಹ್ಮಸಂಸ್ಥೋ ಭವಿಷ್ಯತಿ। ಅಥ ನ ಪರಾಮೃಷ್ಟಃ, ತತಃ ಪರಿಶಿಷ್ಯಮಾಣಃ ಪರಿವ್ರಾಡೇವ ಬ್ರಹ್ಮಸಂಸ್ಥೋ ಭವಿಷ್ಯತಿ। ತತ್ರ ತಪಃಶಬ್ದೇನ ವೈಖಾನಸಗ್ರಾಹಿಣಾ ಪರಾಮೃಷ್ಟಃ ಪರಿವ್ರಾಡಪಿ ಇತಿ ಕೇಚಿತ್। ತದಯುಕ್ತಮ್। ನ ಹಿ ಸತ್ಯಾಂ ಗತೌ ವಾನಪ್ರಸ್ಥವಿಶೇಷಣೇನ ಪರಿವ್ರಾಜಕೋ ಗ್ರಹಣಮರ್ಹತಿ। ಯಥಾತ್ರ ಬ್ರಹ್ಮಚಾರಿಗೃಹಮೇಧಿನೌ ಅಸಾಧಾರಣೇನೈವ ಸ್ವೇನ ಸ್ವೇನ ವಿಶೇಷಣೇನ ವಿಶೇಷಿತೌ ಏವಂ ಭಿಕ್ಷುವೈಖಾನಸಾವಪಿ ಇತಿ ಯುಕ್ತಮ್। ತಪಶ್ಚ ಅಸಾಧಾರಣೋ ಧರ್ಮೋ ವಾನಪ್ರಸ್ಥಾನಾಂ ಕಾಯಕ್ಲೇಶಪ್ರಧಾನತ್ವಾತ್। ತಪಃಶಬ್ದಸ್ಯ (ಚ) ತತ್ರ ರೂಢೇಃ। ಭಿಕ್ಷೋಸ್ತು ಧರ್ಮಃ ಇನ್ದ್ರಿಯಸಂಯಮಾದಿ

---

1. ಸ್ರುಕ್ಕಿನಲ್ಲಿ ಹಾಕಿದ ಹವಿಸ್ಸನ್ನು ಆಹವನೀಯಕ್ಕೆ ತೆಗೆದುಕೊಂಡು ಹೋಗುವಾಗ ಅದನ್ನು ಏತರಿಂದಲಾದರೂ ಮುಚ್ಚಬೇಕಾಗಿರುವದರಿಂದ ಸಮಿತ್ತಿನಿಂದ 'ಮುಚ್ಚಬೇಕು ಎಂದು ನಿಯಮಿಸಿ ಪ್ರಾಪ್ತವಾದದ್ದನ್ನೇ ಅನುವಾದಮಾಡಿದ ,ಅರ್ಥವಾದವು 'ಉಪರಿ ಹಿ' ಎಂಬುದು. ಇಲ್ಲಿ ವರ್ತಮಾನಾಪದೇಶವಿರುವದರಿಂದಲೂ 'ಹಿ' ಎಂಬ ಅವ್ಯಯವಿರುವದರಿಂದಲೂ ಇವನ್ನು ಅನುವಾದಮಾಡಿಕೊಂಡು ಕೆಳಗೆ ಸಮಿತ್ತನ್ನಿಟ್ಟು ಕೊಂಡು ಹೋಗಬೇಕೆಂಬ ವಿಧಿಯನ್ನು ಹೇಳಿದೆ ಎಂಬ ರೀತಿಯಿಂದ ಏಕವಾಕ್ಯತೆಯನ್ನು ಮಾಡಬಹುದಾದರೂ ಸಮಿಧಾಚ್ಛಾದನವು ಪ್ರಾಪ್ತವಲ್ಲದ್ದರಿಂದ ಅಪೂರ್ವವಾಗಿರುವದರಿಂದ ಇದು ವಿಧಿಯೇ ಎಂದು ಶೇಷಲಕ್ಷಣದಲ್ಲಿ ನಿಶ್ಚಯಿಸಿದೆ. ತಂ. ವಾ. ಪು. ೮೫೮ ನೋಡಿ.

2. ಏಕೆಂದರೆ ಮತ್ತೆಲ್ಲಿಯೂ ಆಶ್ರಮಗಳನ್ನು ವಿಧಿಸಿಲ್ಲ.

ಲಕ್ಷಣೋ ನೈವ ತಪಃಶಬ್ದೇನಾಭಿಲಪ್ಯತೇ। ಚತುಷ್ಟ್ವೇನ ಚ ಪ್ರಸಿದ್ಧಾ ಆಶ್ರಮಾಸ್ತ್ರಿತ್ವೇನ ಪರಾಮೃಶ್ಯಂತೇ ಇತ್ಯನ್ಯಾಯ್ಯಮ್ । ಅಪಿ ಚ ಭೇದವ್ಯಪದೇಶೋಽತ್ರ ಭವತಿ "ತ್ರಯ ಏತೇ ಪುಣ್ಯಲೋಕಭಾಜಃ, ಏಕೋಽಮೃತತ್ವಭಾಕ್" ಇತಿ। ಪೃಥಕ್ತ್ವೇ ಚ ಭೇದವ್ಯಪದೇಶೋಽವಕಲ್ಪತೇ। ನ ಹ್ಯೇವಂ ಭವತಿ 'ದೇವದತ್ತಯಜ್ಞದತ್ತೌ ಮಂದಪ್ರಜ್ಞೌ ಅನ್ಯತರಸ್ತ್ವನಯೋರ್ಮಹಾಪ್ರಜ್ಞಃ' ಇತಿ। ಭವತಿ ತ್ವೇವಮ್ 'ದೇವದತ್ತಯಜ್ಞದತ್ತೌ ಮಂದಪ್ರಜ್ಞೌ ವಿಷ್ಣುಮಿತ್ರಸ್ತು ಮಹಾಪ್ರಜ್ಞಃ' ಇತಿ। ತಸ್ಮಾತ್ ಪೂರ್ವೇ ತ್ರಯ ಆಶ್ರಮಿಣಃ ಪುಣ್ಯಲೋಕಭಾಜಃ, ಪರಿಶಿಷ್ಯಮಾಣಃ ಪರಿವ್ರಾಡೇವ ಅಮೃತತ್ವಭಾಕ್ ॥

(ಭಾಷ್ಯಾರ್ಥ)

ಇದು ಆಶ್ರಮಾಂತರಗಳ ಪರಾಮರ್ಶವೇ ಎಂದು ಯಾವಾಗ (ಹಿಡಿಯುವೆವೋ) ಆಗಲೂ[1] ಬ್ರಹ್ಮಸಂಸ್ಥತ್ವವನ್ನಂತೂ ಸ್ತುತಿಯ ಸಾಮರ್ಥ್ಯದಿಂದ ವಿಧಿಸಿದೆ –ಎಂದು ಅವಶ್ಯವಾಗಿ ಒಪ್ಪಲೇಬೇಕಾಗುವದು. ಆ ಬ್ರಹ್ಮಸಂಸ್ಥತ್ವವೆಂಬುದು ನಾಲ್ಕು ಆಶ್ರಮಗಳಲ್ಲಿ ಯಾವನಾದರೊಬ್ಬನಿಗೆ (ಆಗಬಹುದೆ), ಅಥವಾ ಪರಿವ್ರಾಜಕನಿಗೆ ಮಾತ್ರವೇ (ಹೊಂದತಕ್ಕದ್ದೆ)? –ಎಂಬುದನ್ನು ವಿವೇಚನೆಮಾಡಬೇಕಾಗುತ್ತದೆ. ಬ್ರಹ್ಮಚಾರಿ ಎಂಬವರೆಗಿನ ಆಶ್ರಮಗಳನ್ನು ಪರಾಮರ್ಶಮಾಡುವಲ್ಲಿ ಪರಿವ್ರಾಜಕನನ್ನು ಪರಾಮರ್ಶಿಸಿದೆಯಾದರೆ ಆಗ ನಾಲ್ಕು ಆಶ್ರಮಗಳಿಗೂ ಪರಾಮರ್ಶಮಾಡಿರುವದು ಸಮಾನವಾಗಿರುವದರಿಂದಲೂ ಅನಾಶ್ರಮಿಯಾಗಿರುವದು ಹೊಂದುವದಿಲ್ಲವಾದ್ದರಿಂದಲೂ[2] ನಾಲ್ಕು ಆಶ್ರಮಗಳಲ್ಲಿ ಯಾವನಾದರೊಬ್ಬನು ಬ್ರಹ್ಮಸಂಸ್ಥನಾಗಿರಬಹುದೆಂದಾಗುವದು. ಹೀಗಲ್ಲದೆ (ಪರಿವ್ರಾಜಕನನ್ನು) ಪರಾಮರ್ಶಿಸಿಲ್ಲ ಎಂದಾದರೆ (ನಾಲ್ಕರೊಳಗೆ) ಉಳಿಯುವ ಪರಿವ್ರಾಜಕನೇ ಬ್ರಹ್ಮಸಂಸ್ಥನು ಎಂದು ಸಿದ್ಧವಾಗುವದು.

ಇಲ್ಲಿ ವಾನಪ್ರಸ್ಥನನ್ನು ಹೇಳುವ ತಪಃಶಬ್ದದಿಂದ ಪರಿವ್ರಾಜಕನನ್ನೂ ಪರಾಮರ್ಶಿಸಿದೆ ಎಂದು ಕೆಲವರು (ಹೇಳುತ್ತಾರೆ). ಅದು ಯುಕ್ತವಲ್ಲ. ಏಕೆಂದರೆ (ಬೇರೊಂದು) ಗತಿಯಿರುವಾಗ ವಾನಪ್ರಸ್ಥನ ವಿಶೇಷಣ(ವಾದ ತಪಃಶಬ್ದ)ದಿಂದ ಪರಿವ್ರಾಜಕನನ್ನು ಗ್ರಹಿಸುವದು (ಸರಿ)ಯಾಗಲಾರದು. ಬ್ರಹ್ಮಚಾರಿ, ಗೃಹಸ್ಥ –ಇವರನ್ನು ಹೇಗೆ ಅಸಾಧಾರಣವಾದ ತಮ್ಮ ತಮ್ಮ ವಿಶೇಷಣದಿಂದಲೇ ವಿಶೇಷವಾಗಿ ಹೇಳಿದೆಯೋ ಇದರಂತೆ ಭಿಕ್ಷುವೈಖಾನಸರನ್ನೂ[3] ಹೇಳಿದೆ ಎಂಬುದು ಯುಕ್ತವು. **ತಪಸ್ಸೆಂಬುದು ವಾನಪ್ರಸ್ಥರಿಗೆ ಅಸಾಧಾರಣಧರ್ಮವು;**

---

1. ಈ ಪಕ್ಷವನ್ನೇ ಛಾಂದೋಗ್ಯಭಾಷ್ಯದಲ್ಲಿ ಹಿಡಿದಿದೆ. ಹಿಂದಿನ ವಿಧಿಪಕ್ಷವನ್ನು ಅಲ್ಲಿ ಏಕೆ ಕೈಬಿಟ್ಟಿದೆಯೋ ತಿಳಿಯದು.

2. ದ್ವಿಜನಾದವನು ಅನಾಶ್ರಮಿಯಾಗಿ ಒಂದು ಕ್ಷಣವೂ ಇರಕೂಡದೆಂದು ಸ್ಮೃತಿ.

3. ಸಂನ್ಯಾಸಿವಾನಪ್ರಸ್ಥರನ್ನು.

**ಏಕೆಂದರೆ (ಅವರಿಗೆ) ಕಾಯಕ್ಲೇಶವೇ ಮುಖ್ಯವು; ತಪಃಶಬ್ದವು ಆ (ಕಾಯಕ್ಲೇಶವೆಂಬರ್ಥ)ದಲ್ಲಿ ರೂಢವಾಗಿಯೂ (ಇದೆ). ಭಿಕ್ಷುವಿನ ಧರ್ಮವೋ ಎಂದರೆ ಇಂದ್ರಿಯಸಂಯಮವೇ ಮುಂತಾದ ರೂಪದ್ದು; (ಅದನ್ನು) ತಪಃಶಬ್ದವು ಹೇಳಲೇ ಆರದು**[1] ನಾಲ್ಕೆಂದು ಪ್ರಸಿದ್ಧವಾಗಿರುವ ಆಶ್ರಮಗಳನ್ನು ಮೂರೆಂದು ಪರಾಮರ್ಶಿಸಿದೆ ಎಂಬುದೂ ನ್ಯಾಯವಲ್ಲ.

ಇದಲ್ಲದೆ 'ಈ ಮೂವರೂ' ಪುಣ್ಯಲೋಕವನ್ನು ಪಡೆಯುತ್ತಾರೆ, ಒಬ್ಬನಿಗೆ ಅಮೃತತ್ವವು ಸಿಕ್ಕುವದು' ಎಂದು ಭೇದವ್ಯಪದೇಶವೂ ಇಲ್ಲಿದೆ. (ಬ್ರಹ್ಮಸಂಸ್ಥನು) ಪೃಥಕ್ಕಾಗಿದ್ದರೆ ಈ ಭೇದವ್ಯಪದೇಶವು ಹೊಂದುತ್ತದೆ. ಹೇಗೆಂದರೆ 'ದೇವದತ್ತಯಜ್ಞದತ್ತರಿಬ್ಬರೂ ಅಲ್ಪಪ್ರಜ್ಞರು, ಇವರಿಬ್ಬರಲ್ಲಿ ಒಬ್ಬನಾದರೆ ಮಹಾಪ್ರಾಜ್ಞನು' ಎಂದಿಂತು (ವ್ಯವಹಾರ)ವಾಗುವದಿಲ್ಲ; ದೇವದತ್ತಯಜ್ಞದತ್ತರು ಅಲ್ಪಪ್ರಜ್ಞರು, ವಿಷ್ಣುಮಿತ್ರನಾದರೆ ಮಹಾಪ್ರಜ್ಞನು' ಎಂದಿಂತು (ವ್ಯವಹಾರ)ವಾಗುತ್ತದೆ. ಅಲ್ಲವೆ? ಆದ್ದರಿಂದ ಮೊದಲಿನ ಮೂರು ಆಶ್ರಮದವರೂ ಪುಣ್ಯಲೋಕವನ್ನು ಪಡೆಯುತ್ತಾರೆ, ಉಳಿದಿರುವ ಪರಿವ್ರಾಜಕನೇ ಅಮೃತತ್ವವನ್ನು ಹೊಂದುತ್ತಾನೆ (ಎಂಬುದೇ ಸರಿ).

## ಬ್ರಹ್ಮಸಂಸ್ಥನೆಂಬ ಶಬ್ದವು ಪರಿವ್ರಾಜಕನಿಗೇ ಹೊಂದುತ್ತದೆ

(ಭಾಷ್ಯ)

೪೬೦. ಕಥಂ ಪುನರ್ಬ್ರಹ್ಮಸಂಸ್ಥಶಬ್ದೋ ಯೋಗಾತ್ ಪ್ರವರ್ತಮಾನಃ ಸರ್ವತ್ರ ಸಂಭವನ್ ಪರಿವ್ರಾಜಕ ಏವಾವತಿಷ್ಠೇತ ? ರೂಢ್ಯಭ್ಯುಪಗಮೇ ಚ ಆಶ್ರಮಮಾತ್ರಾತ್ ಅಮೃತತ್ವಪ್ರಾಪ್ತೇರ್ಜ್ಞಾನಾನರ್ಥಕ್ಯಪ್ರಸಙ್ಗಃ ಇತಿ। ಅತ್ರೋಚ್ಯತೇ 'ಬ್ರಹ್ಮಸಂಸ್ಥಃ' ಇತಿ ಹಿ ಬ್ರಹ್ಮಣಿ ಪರಿಸಮಾಪ್ತಿಃ ಅನನ್ಯವ್ಯಾಪಾರತಾರೂಪಂ ತನ್ನಿಷ್ಠತ್ವಮ್ ಅಭಿಧೀಯತೇ । ತಚ್ಚ ತ್ರಯಾಣಾಮ್ ಆಶ್ರಮಿಣಾಂ ನ ಸಂಭವತಿ। ಸ್ವಾಶ್ರಮವಿಹಿತಕರ್ಮಾನನುಷ್ಠಾನೇ ಪ್ರತ್ಯವಾಯಶ್ರವಣಾತ್। ಪರಿವ್ರಾಜಕಸ್ಯ ತು ಸರ್ವಕರ್ಮಸಂನ್ಯಾಸಾತ್ ಪ್ರತ್ಯವಾಯೋ ನ ಸಂಭವತ್ಯನನುಷ್ಠಾನನಿಮಿತ್ತಃ। ಶಮದಮಾದಿಸ್ತು ತದೀಯೋ ಧರ್ಮೋ ಬ್ರಹ್ಮಸಂಸ್ಥತಾಯಾ ಉಪೋದ್ಬಲಕೋ ನ ವಿರೋಧೀ। ಬ್ರಹ್ಮನಿಷ್ಠತ್ವಮೇವ ಹಿ ತಸ್ಯ ಶಮದಮಾದ್ಯುಪಬೃಂಹಿತಂ ಸ್ವಾಶ್ರಮವಿಹಿತಂ ಕರ್ಮ, ಯಜ್ಞಾದೀನಿ ಚೇತರೇಷಾಮ್। ತದ್ವ್ಯತಿಕ್ರಮೇ ಚ ತಸ್ಯ ಪ್ರತ್ಯವಾಯಃ। ತಥಾ ಚ

1. ತಪಃಶಬ್ದವೂ ಆಶ್ರಮಮಾತ್ರಶರಣರಾದ ಸಂನ್ಯಾಸಿಗಳನ್ನು ಹೇಳಬಹುದು. ಆದರೆ ಬ್ರಹ್ಮಸಂಸ್ಥನಾದ ಪರಮಹಂಸನನ್ನು ಹೇಳಲಾರದು—ಎಂದು ಛಾಂದೋಗ್ಯಭಾಷ್ಯದಲ್ಲಿ ಒಪ್ಪಿದೆ.

"ನ್ಯಾಸ ಇತಿ ಬ್ರಹ್ಮಾ ಬ್ರಹ್ಮಾ ಹಿ ಪರಃ ಪರೋ ಹಿ ಬ್ರಹ್ಮಾ ತಾನಿ ವಾ ಏತಾನ್ಯವರಾಣಿ ತಪಾಂಸಿ ನ್ಯಾಸ ಏವಾತ್ಯರೇಚಯತ್" (ತೈ. ನಾ. ೭೮), "ವೇದಾನ್ತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ" (ಮುಂ. ೩-೨-೬) ಇತ್ಯಾದ್ಯಾಃ ಶ್ರುತಯಃ। ಸ್ಮೃತಯಶ್ಚ "ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ" (ಗೀ.೫-೧೭) ಇತ್ಯಾದ್ಯಾ ಬ್ರಹ್ಮಸಂಸ್ಥಸ್ಯ ಕರ್ಮಾಭಾವಂ ದರ್ಶಯನ್ತಿ । ತಸ್ಮಾತ್ ಪರಿವ್ರಾಜಕಸ್ಯಾಶ್ರಮಮಾತ್ರಾದಮೃತತ್ವಪ್ರಾಪ್ತೇರ್ಜ್ಞಾನಾನರ್ಥಕ್ಯಪ್ರಸಙ್ಗಃ ಇತ್ಯೇಷೋಽಪಿ ದೋಷೋ ನಾವತರತಿ। ತದೇವಂ ಪರಾಮರ್ಶೇಽಪಿತರೇಷಾಮಾಶ್ರಮಾಣಾಂ ಪಾರಿವ್ರಾಜ್ಯಂ ತಾವದ್ಬ್ರಹ್ಮಸಂಸ್ಥತಾಲಕ್ಷಣಂ ಲಭ್ಯೇತೈವ ॥

(ಭಾಷ್ಯಾರ್ಥ)

(ಆಕ್ಷೇಪ) :- ಬ್ರಹ್ಮಸಂಸ್ಥಶಬ್ದವು ಯೋಗದಿಂದ ಪ್ರವರ್ತಿಸುವದಾದ್ದರಿಂದ[1] ಎಲ್ಲರಿಗೂ ಸಂಭವಿಸುತ್ತಿರುವಲ್ಲಿ ಪರಿವ್ರಾಜಕನಲ್ಲಿಯೇ ನಿಲ್ಲುವದು ಹೇಗೆ? ರೂಢಿಯನ್ನು ಒಪ್ಪಿದರಾದರೋ ಆಶ್ರಮಮಾತ್ರದಿಂದ ಅಮೃತತ್ವವು ಪ್ರಾಪ್ತವಾಗುವದೆಂ(ದಾಗುವದರಿಂದ) ಜ್ಞಾನವು ವ್ಯರ್ಥವೆಂಬ ಪ್ರಸಂಗವು ಬರುವದಲ್ಲ !

(ಪರಿಹಾರ) :- ಇದಕ್ಕೆ ಹೇಳುತ್ತೇವೆ. 'ಬ್ರಹ್ಮಸಂಸ್ಥ' ಎಂಬ (ಮಾತು) ಬ್ರಹ್ಮದಲ್ಲಿ ಪರಿಸಮಾಪ್ತಿಯನ್ನು, 'ಮತ್ತೊಂದು ವ್ಯಾಪಾರವಿಲ್ಲದ ರೂಪದ ಆ (ಬ್ರಹ್ಮ)ನಿಷ್ಠತ್ವವನ್ನು, ಹೇಳುತ್ತದೆಯಷ್ಟೆ. ಅದು (ಮಿಕ್ಕ) ಮೂರು ಆಶ್ರಮಗಳಿಗೂ ಸಂಭವಿಸುವದಿಲ್ಲ. ಏಕೆಂದರೆ ತಮ್ಮ ತಮ್ಮ ಆಶ್ರಮಕ್ಕೆ ವಿಹಿತವಾಗಿರುವ ಕರ್ಮವನ್ನು ಅನುಷ್ಠಾನಮಾಡದಿದ್ದರೆ ಪ್ರತ್ಯವಾಯವಾಗುವದೆಂಬ ಶ್ರುತಿಯಿದೆ.[2] **ಪರಿವ್ರಾಜಕನಿಗಾದರೋ ಸರ್ವಕರ್ಮಗಳನ್ನೂ ಸಂನ್ಯಾಸಮಾಡಿರುವದರಿಂದ ಅನುಷ್ಠಾನಮಾಡಲಿಲ್ಲವೆಂಬ ನಿಮಿತ್ತದಿಂದ (ಯಾವ) ಪ್ರತ್ಯವಾಯವೂ ಸಂಭವಿಸುವದಿಲ್ಲ. ಶಮದಮಾದಿಗಳೆಂಬ ಅವನ ಧರ್ಮವು ಬ್ರಹ್ಮಸಂಸ್ಥಿತಿಗೆ ಉಪೋದ್ಬಲಕವೇ ಹೊರತು ವಿರೋಧಿಯಲ್ಲ. ಶಮದಮಾದಿಗಳಿಂದ ಬೆಳೆದ ಬ್ರಹ್ಮನಿಷ್ಠತ್ವವೇ ಅಲ್ಲವೆ, ಅವನ ಆಶ್ರಮಕ್ಕೆ ವಿಹಿತವಾಗಿರುವ ಕರ್ಮವು? ಯಜ್ಞಾದಿಗಳು ಇತರರಿಗೆ ಕರ್ಮವು. ಆ (ಬ್ರಹ್ಮನಿಷ್ಠತ್ವವನ್ನು) ಮೀರಿದರೆ**

1. ಬ್ರಹ್ಮದಲ್ಲಿಯೇ ನಿಂತವನು ಬ್ರಹ್ಮಸಂಸ್ಥನು ಎಂದು ಯೋಗದಿಂದ ಈ ಶಬ್ದವು ಪ್ರವರ್ತಿಸುತ್ತದೆ.

2. ಏಕೆಂದರೆ ಕರ್ತೃತ್ವವಿದ್ದವರು ಮಾಡಬೇಕಾದ ಒಂದು ಕರ್ಮವನ್ನು ಬಿಟ್ಟರೆ ಮಾಡಬಾರದ ಮತ್ತೊಂದು ಕರ್ಮವನ್ನು ಮಾಡಿಯೇತೀರುತ್ತಾರೆ; ಅದರಿಂದ ಪ್ರತ್ಯವಾಯವುಂಟಾಗುತ್ತದೆ.

**ಮಾತ್ರ ಅವರಿಗೆ ಪ್ರತ್ಯವಾಯವು**[1]. ಆದ್ದರಿಂದಲೇ "ನ್ಯಾಸವೆಂಬುದು ಬ್ರಹ್ಮನು, ಬ್ರಹ್ಮನು ಹೆಚ್ಚಿನವನಲ್ಲವೆ ? ಹೆಚ್ಚಿನವನೇ ಅಲ್ಲವೆ, ಬ್ರಹ್ಮನು ? ಆ ಇವು ಕಡಿಮೆಯ ತಪಸ್ಸುಗಳು, ನ್ಯಾಸವೇ (ಇವೆಲ್ಲಕ್ಕಿಂತ) ಮಿಗಿಲಾದದ್ದು" (ತೈ. ನಾ. ೭೮), "ವೇದಾಂತವಿಜ್ಞಾನದಿಂದ ಸುನಿಶ್ಚಿತವಾದ ಅರ್ಥವುಳ್ಳವರೂ ಸಂನ್ಯಾಸಯೋಗದಿಂದ ಶುದ್ಧಸತ್ತ್ವರೂ ಆದ ಯತಿಗಳು..." (ಮುಂ ೩-೨-೬) ಮುಂತಾದ **ಶ್ರುತಿಗಳೂ** "ಅದರಲ್ಲಿಯೇ ಇಟ್ಟ ಬುದ್ಧಿಯವರಾಗಿ, ಅದೇ ಆತ್ಮನೆಂದು ತಿಳಿದುಕೊಂಡವರಾಗಿ ಅದರಲ್ಲಿಯೇ ನಿಷ್ಠೆಯುಳ್ಳವರಾಗಿ ಅದೇ ಪರಾಯಣರಾದವರಾಗಿ ಜ್ಞಾನದಿಂದ ಕಲ್ಮಷವನ್ನೆಲ್ಲ ತೊಲಗಿಸಿಕೊಂಡು ಅಪುನರಾವೃತ್ತಿಯನ್ನು ಹೊಂದುವರು" (ಗೀ. ೫-೧೭) ಎಂಬಿವೇ ಮುಂತಾದ **ಸ್ಮೃತಿಗಳೂ ಬ್ರಹ್ಮಸಂಸ್ಥನಿಗೆ ಕರ್ಮವಿಲ್ಲವೆಂಬುದು ತಿಳಿಸುತ್ತವೆ. ಆದ್ದರಿಂದ ಪರಿವ್ರಾಜಕನಿಗೆ ಆಶ್ರಮಮಾತ್ರದಿಂದಲೇ ಅಮೃತತ್ವವು ದೊರೆಯುವದರಿಂದ ಜ್ಞಾನವು ವ್ಯರ್ಥವಾಗುವ ಪ್ರಸಂಗವು ಬರುವದು ಎಂಬೀ ದೋಷವೂ ಬಂದಿಳಿಯುವದಿಲ್ಲ**[2].

ಅಂತೂ ಹೀಗೆ ಉಳಿದ ಆಶ್ರಮವನ್ನು ಪರಾಮರ್ಶಮಾಡಿದೆ ಎಂದರೂ ಬ್ರಹ್ಮಸಂಸ್ಥತಾರೂಪವಾದ ಪಾರಿವ್ರಾಜ್ಯವ(ನ್ನಂತೂ ಹೊಗಳಿರುವದರಿಂದ ಅದು) ಪ್ರಾಪ್ತವಾಗಿಯೇ ತೀರುವದು.

## ಪಾರಿವ್ರಾಜ್ಯವಿಧಿಯು ಪ್ರತ್ಯಕ್ಷವಾಗಿಯೂ ಇದೆ

(ಭಾಷ್ಯ)

೪೬೧. ಅನಪೇಕ್ಷ್ಯೈವ ಜಾಬಾಲಶ್ರುತಿಮ್ ಆಶ್ರಮಾನ್ತರವಿಧಾಯಿನೀಮ್ ಅಯಮಾಚಾರ್ಯೇಣ ವಿಚಾರಃ ಪ್ರವರ್ತಿತಃ । ವಿದ್ಯತ ಏವ ತ್ವಾಶ್ರಮಾನ್ತರವಿಧಿಶ್ರುತಿಃ ಪ್ರತ್ಯಕ್ಷಾ । "ಬ್ರಹ್ಮಚರ್ಯಂ ಪರಿಸಮಾಪ್ಯ ಗೃಹೀ ಭವೇದ್ ಗೃಹೀ ಭೂತ್ವಾ ವನೀ ಭವೇದ್ ವನೀ ಭೂತ್ವಾ ಪ್ರವ್ರಜೇತ್ । ಯದಿ ವೇತರಥಾ ಬ್ರಹ್ಮಚರ್ಯಾದೇವ ಪ್ರವ್ರಜೇದ್ಗೃಹಾದ್ವಾ ವನಾದ್ವಾ" (ಜಾ. ೪) ಇತಿ । ನ ಚೇಯಂ ಶ್ರುತಿರನಧಿಕೃತವಿಷಯಾ ಶಕ್ಯಾ ವಕ್ತುಮ್ । ಅವಿಶೇಷಶ್ರವಣಾತ್ । ಪೃಥಗ್ವಿಧಾನಾಚ್ಚಾನಧಿಕೃತಾನಾಮ್ "ಅಥ ಪುನರೇವ ವ್ರತೀ

---

1. ಇದು ಸಾಧಕನಾದ ಪರಿವ್ರಾಜಕನಿಗೆ ಹೇಳಿದ್ದು ; ಜ್ಞಾನಿಗಲ್ಲ. ಬ್ರಹ್ಮನಿಷ್ಠತ್ವವೇ ಲಕ್ಷಣವಾಗಿರುವದರಿಂದ ಅವನು ಅದನ್ನು ಮೀರುವ ಸಂಭವವೇ ಇಲ್ಲ.

2. ಏಕೆಂದರೆ ಬ್ರಹ್ಮನಿಷ್ಠತ್ವವೇ ಪಾರಿವ್ರಾಜ್ಯವು ; ಅದು ಬರಿಯ ಆಶ್ರಮವಲ್ಲವೇ ಅಲ್ಲ ; ಆಶ್ರಮಸಂನ್ಯಾಸಗಳು ಶ್ರೌತವಲ್ಲವೆಂಬ ಅಭಿಪ್ರಾಯದಿಂದ ಹೀಗೆ ಹೇಳಿದೆ ಎಂದು ತಿಳಿಯಬೇಕು. ಇಲ್ಲಿ ಅವನ್ನು ಲೆಕ್ಕಕ್ಕೆ ಹಿಡಿದಿಲ್ಲ.

ವಾಽವ್ರತೀ ವಾ[1] ಸ್ನಾತಕೋಽವಾಸ್ನಾತಕೋ ವೋತ್ಸನ್ನಾಗ್ನಿರನಗ್ನಿಕೋ ವಾ" (ಜಾ. ೪) ಇತ್ಯಾದಿನಾ। ಬ್ರಹ್ಮಜ್ಞಾನಪರಿಪಾಕಾಙ್ಗತ್ವಾಚ್ಚ ಪಾರಿವ್ರಾಜ್ಯಸ್ಯ ನಾನಧಿಕೃತವಿಷಯತ್ವಮ್। ತಚ್ಚ ದರ್ಶಯತಿ "ಅಥ ಪರಿವ್ರಾಡ್ವಿವರ್ಣವಾಸಾ ಮುಣ್ಡೋಽಪರಿಗ್ರಹಃ ಶುಚಿರದ್ರೋಹೀ ಭೈಕ್ಷಾಣೋ ಬ್ರಹ್ಮಭೂಯಾಯ ಭವತಿ'' (ಜಾ.೫) ಇತಿ। ತಸ್ಮಾತ್ ಸಿದ್ಧಾ ಊರ್ಧ್ವರೇತಸಾಮ್ ಆಶ್ರಮಾಃ। ಸಿದ್ಧಂ ಚೋರ್ಧ್ವರೇತಃಸು ವಿಧಾನಾದ್ ವಿದ್ಯಾಯಾಃ ಸ್ವಾತನ್ತ್ರ್ಯಮಿತಿ॥

(ಭಾಷ್ಯಾರ್ಥ)

**ಆಶ್ರಮಾಂತರವನ್ನು ವಿಧಿಸುವ ಜಾಬಾಲಶ್ರುತಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆಯೇ ಈ ವಿಚಾರವನ್ನು ನಡೆಯಿಸಲಾಗಿರುತ್ತದೆ. ಆಶ್ರಮಾಂತರವನ್ನು ಪ್ರತ್ಯಕ್ಷವಾಗಿ ವಿಧಿಸುವ ಶ್ರುತಿಯು ಇದ್ದೇ ಇದೆ.** "ಬ್ರಹ್ಮಚರ್ಯವನ್ನು ಮುಗಿಸಿ ಗೃಹಿಯಾಗಬೇಕು; ಗೃಹಿಯಾದಬಳಿಕ ವನಿಯಾಗಬೇಕು ; ವನಿಯಾದಬಳಿಕ ಪ್ರವ್ರಜನಮಾಡಬೇಕು. ಅಥವಾ ಅನ್ಯಪ್ರಕಾರದಿಂದಲೇ (ಪ್ರವ್ರಜವನ್ನು) ಮಾಡಬೇಕು "ಬ್ರಹ್ಮಚರ್ಯದಿಂದಲೇ, ಅಥವಾ ಗೃಹದಿಂದ ಅಥವಾ ವನದಿಂದ ಪ್ರವ್ರಜನಮಾಡಬೇಕು" (ಜಾ. ೪) ಎಂಬುದು (ಆ ವಿಧಿಯು). ಈ ಶ್ರುತಿಯು ಅನಧಿಕೃತರಾದವರಿಗೆ ಎಂದು ಹೇಳುವದಕ್ಕೆ ಆಗುವಂತಿಲ್ಲ; ಏಕೆಂದರೆ (ಯಾವ) ವಿಶೇಷವೂ ಇಲ್ಲದೆ (ಇಲ್ಲಿ ಸಂನ್ಯಾಸವು) ಶ್ರುತವಾಗಿದೆ.[2] "ಇನ್ನು ವ್ರತಿಯಾಗಲಿ ಅವ್ರತಿಯಾಗಲಿ ಸ್ನಾತಕನಾಗಲಿ ಅಸ್ನಾತಕನಾಗಲಿ ಉತ್ಸನ್ನಾಗ್ನಿಯಾಗಲಿ ಅನಗ್ನಿಯಾಗಲಿ" (ಜಾ. ೪) ಎಂದು ಅನಧಿಕೃತರನ್ನು ಬೇರೆಯಾಗಿಯೇ ಹೇಳಿರುವದರಿಂದ (ಅನಧಿಕೃತವಿಷಯವಿದಲ್ಲ). **ಪಾರಿವ್ರಾಜ್ಯವು ಬ್ರಹ್ಮಜ್ಞಾನದ ಪರಿಪಾಕಕ್ಕೆ ಅಂಗವಾಗಿರುವದರಿಂದಲೂ (ಅದು) ಅನಧಿಕೃತರ ವಿಷಯವಲ್ಲ.** ಅದನ್ನು (ಶ್ರುತಿಯು) "ಇನ್ನು ಪರಿವ್ರಾಜಕನು ; ವಿವರ್ಣದ ಬಟ್ಟೆಯನ್ನುಟ್ಟು ಬೋಳಿಸಿದ ತಲೆಯವನಾಗಿ ಪರಿಗ್ರಹವಿಲ್ಲದವನಾಗಿ ಶುಚಿಯೂ ಅದ್ರೋಹಿಯೂ ಭಿಕ್ಷಾಚರ್ಯವನ್ನು ಮಾಡುವವನೂ ಆಗಿರುವವನು ಬ್ರಹ್ಮಭೂಯಕ್ಕೆ ತಕ್ಕವನಾಗಿರುತ್ತಾನೆ" (ಜಾ. ೫) ಎಂದು ತಿಳಿಸುತ್ತದೆ.

ಆದ್ದರಿಂದ ಊರ್ಧ್ವರೇತಸ್ಕರ ಆಶ್ರಮಗಳು ಸಿದ್ಧವಾದವು. ಊರ್ಧ್ವರೇತಸ್ಕರಲ್ಲಿ ವಿಧಿಸಿರುವದರಿಂದ ವಿದ್ಯೆಯೂ (ಫಲವಿಷಯದಲ್ಲಿ) ಸ್ವತಂತ್ರವೆಂದೂ ಸಿದ್ಧವಾಯಿತು.

---

1. 'ಅಥ ಪುನರವ್ರತೀ ವಾ ವ್ರತೀ ವಾ' ಎಂದು ಅಚ್ಚಿನ ನಿ॥ದ ಅಷ್ಟೋತ್ತರಶತೋಪನಿಷತ್ತಿನ ಪಾಠ.

2. ಅನಧಿಕೃತರಿಗೆಂದು ಸವಿಶೇಷಣವಾಗಿ ಹೇಳಿಲ್ಲ.

## ೩. ಸ್ತುತಿಮಾತ್ರಾಧಿಕರಣ (ಸೂ. ೨೧–೨೨)

(ಉದ್ಗೀಥಾದಿಶ್ರುತಿಗಳು ವಿಧಾನಾರ್ಥವಾಗಿವೆ)

**ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್ || ೨೧ ||**

೨೧. (ಈ ಶ್ರುತಿಗಳು) ಬರಿಯ ಸ್ತುತಿಯು, ಏಕೆಂದರೆ (ಕರ್ಮಾಂಗವನ್ನು) ತೆಗೆದುಕೊಂಡಿದೆ ಎಂದರೆ ಹಾಗಲ್ಲ, ಏಕೆಂದರೆ ಅಪೂರ್ವವಾಗಿವೆ.

### ಸಂಶಯಪೂರ್ವಪಕ್ಷಗಳು

(ಭಾಷ್ಯ)

೪೬೨. "ಸ ಏಷ ರಸಾನಾಂ ರಸತಮಃ ಪರಮಃ ಪರಾರ್ಧ್ಯೋಽಷ್ಟಮೋ ಯದುದ್ಗೀಥಃ" (ಛಾಂ. ೧–೧–೩), "ಇಯಮೇವರ್ಗಗ್ನಿಃ ಸಾಮಃ" (ಛಾಂ. ೧–೬–೨), "ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ" (ಶತ. ಬ್ರಾ ೧೦-೧–೨–೨) "ತದಿದಮೇವೋಕ್ಥಮಿಯಮೇವ ಪೃಥಿವೀ" (ಐ. ಆ. ೨–೧–೨) ಇತ್ಯೇವಂಜಾತೀಯಕಾಃ ಶ್ರುತಯಃ ಕಿಮುದ್ಗೀಥಾದೇಃ ಸ್ತುತ್ಯರ್ಥಾಃ, ಆಹೋಸ್ವಿತ್ ಉಪಾಸನಾವಿಧ್ಯರ್ಥಾಃ ? ಇತ್ಯಸ್ಮಿನ್ ಸಂಶಯೇ ಸ್ತುತ್ಯರ್ಥಾ ಇತಿ ಯುಕ್ತಮ್ । ಉದ್ಗೀಥಾದೀನಿ ಕರ್ಮಾಙ್ಗಾನ್ಯುಪಾದಾಯ ಶ್ರವಣಾತ್ । ಯಥಾ "ಇಯಮೇವ ಜುಹೂರಾದಿತ್ಯಃ ಕೂರ್ಮಃ ಸ್ವರ್ಗೋ ಲೋಕ ಆಹವನೀಯಃ" (?) ಇತ್ಯಾದ್ಯಾ ಜುಹ್ವಾದಿಸ್ತುತ್ಯರ್ಥಾಃ, ತದ್ವತ್ ॥

(ಭಾಷ್ಯಾರ್ಥ)

"ಆ ಈ ಎಂಟನೆಯ ಉದ್ಗೀಥವೆಂಬುದು ರಸಗಳಲ್ಲೆಲ್ಲ ರಸತಮವಾದದ್ದು, ಹೆಚ್ಚಿನದು, ಪರಮಸ್ಥಾನಕ್ಕೆ ತಕ್ಕದ್ದು" (ಛಾಂ, ೧–೧–೩), "ಈ (ಪೃಥಿವಿ)ಯೇ ಋಕ್ಕು, ಅಗ್ನಿಯೇ[1] ಸಾಮವು" (ಛಾಂ. ೧–೬–೨), "ಈ ಚಿತವಾದ ಅಗ್ನಿಯು ಈ ಲೋಕವೇ" (ಶತ. ಬ್ರಾ. ೧೦–೧–೨–೨), "ಈ ಉಕ್ಥವು ಈ ಪೃಥಿವಿಯೇ" (ಐ. ಆ. ೨–೧–೨) ಈ ಜಾತಿಯ ಶ್ರುತಿಗಳು ಉದ್ಗೀಥಾದಿಗಳ ಸ್ತುತಿಗಾಗಿ ಬಂದಿವೆಯೆ:, ಅಥವಾ ಉಪಾಸನಾವಿಧಿಗಾಗಿ ಬಂದಿವೆಯೆ ?– ಎಂಬೀ ಸಂಶಯವುಂಟಾಗಲಾಗಿ (ಇವು) ಸ್ತುತ್ಯರ್ಥಗಳು ಎಂಬಿವೇ ಯುಕ್ತ; ಏಕೆಂದರೆ ಉದ್ಗೀಥವೇ ಮುಂತಾದ ಕರ್ಮಾಂಗಗಳನ್ನು ತೆಗೆದುಕೊಂಡು ಶ್ರುತವಾಗಿವೆ. ಹೇಗೆ "ಜುಹೂವು ಈ (ಪೃಥಿವಿಯೇ), ಕೂರ್ಮವು[2] ಆಧಿತ್ಯನು,

1. ಪೃಥಿವ್ಯಾದಿರಸಗಳಲ್ಲಿ ಎಂಟನೆಯದು.
2. ಚಯನದಲ್ಲಿರುವ ಕೂರ್ಮವು ಆದಿತ್ಯನು ಎಂದು ಹೊಗಳಿದೆ.

ಆಹವನೀಯವು ಸ್ವರ್ಗಲೋಕವು'' ಎಂಬಿದೇ ಮುಂತಾದ (ಶ್ರುತಿಗಳು) ಜುಹೂ ಮುಂತಾದವುಗಳನ್ನು ಹೊಗಳುವದಕ್ಕೆ ಬಂದಿರುತ್ತವೆಯೋ ಹಾಗೆ.

## ಸಿದ್ಧಾಂತ: ಉದ್ಗೀಥಾದಿಶ್ರುತಿಗಳು ವಿಧ್ಯರ್ಥವಾಗಿವೆ

(ಭಾಷ್ಯ)

೪೬೩. ಇತಿ ಚೇತ್ । ನೇತ್ಯಾಹ । ನ ಹಿ ಸ್ತುತಿಮಾತ್ರಮ್ ಆಸಾಂ ಶ್ರುತೀನಾಂ ಪ್ರಯೋಜನಂ ಯುಕ್ತಮ್ । ಅಪೂರ್ವತ್ವಾತ್ । ವಿಧ್ಯರ್ಥತಾಯಾಂ ಹಿ ಅಪೂರ್ವೋಽರ್ಥೋ ವಿಹಿತೋ ಭವತಿ, ಸ್ತುತ್ಯರ್ಥತಾಯಾಂ ತು ಆನರ್ಥಕ್ಯಮೇವ ಸ್ಯಾತ್ । ವಿಧಾಯಕಸ್ಯ ಹಿ ಶಬ್ದಸ್ಯ ವಾಕ್ಯಶೇಷಭಾವಂ ಪ್ರತಿಪದ್ಯಮಾನಾ ಸ್ತುತಿರುಪಯುಜ್ಯತ ಇತ್ಯುಕ್ತಮ್ "ವಿಧಿನಾ ತ್ವೇಕವಾಕ್ಯತ್ವಾತ್ ಸ್ತುತ್ಯರ್ಥೇನ ವಿಧೀನಾಂ ಸ್ಯುಃ" (ಜೈ.ಸೂ. ೧-೨-೭) ಇತ್ಯತ್ರ । ಪ್ರದೇಶಾನ್ತರವಿಹಿತಾನಾಂ ತೂದ್ಗೀಥಾದೀನಾಮಿಯಂ ಪ್ರದೇಶಾನ್ತರಪಠಿತಾ ಸ್ತುತಿಃ ವಾಕ್ಯಶೇಷಭಾವಮ್ ಅಪ್ರತಿಪದ್ಯಮಾನಾ ಅನರ್ಥಿಕೈವ ಸ್ಯಾತ್ । "ಇಯಮೇವ ಜುಹೂಃ" ಇತ್ಯಾದಿ ತು ವಿಧಿಸಂನಿಧಾವೇವಾಮ್ನಾತಮ್ ಇತಿ ವೈಷಮ್ಯಮ್ । ತಸ್ಮಾತ್ ವಿಧ್ಯರ್ಥಾ ಏವೈವಂಜಾತೀಯಕಾಃ ಶ್ರುತಯಃ ॥

(ಭಾಷ್ಯಾರ್ಥ)

ಹೀಗೆಂದರೆ 'ಹಾಗಲ್ಲ' ಎನ್ನುತ್ತಾರೆ. ಈ ಶ್ರುತಿಗಳಿಗೆ ಸ್ತುತಿಮಾತ್ರವೇ ಪ್ರಯೋಜನವೆಂದು ಹೇಳುವದು ಯುಕ್ತವಲ್ಲ; ಏಕೆಂದರೆ (ವಿಷಯವು) ಅಪೂರ್ವವಾಗಿರುತ್ತದೆ. (ಇವು) ವಿಧ್ಯರ್ಥವೆಂದರೆ ಅಪೂರ್ವವಾದ ಅರ್ಥವನ್ನು ವಿಧಿಸುತ್ತವೆ ಎಂದಾಗುವದು ; ಆದರೆ ಸ್ತುತ್ಯರ್ಥವಾಗಿ (ಬಂದಿವೆ) ಎಂದರೆ ವ್ಯರ್ಥವೇ ಆಗುವವು. ವಿಧಾಯಕಶಬ್ದಕ್ಕೆ ವಾಕ್ಯಶೇಷತ್ವವನ್ನು ಪಡೆದರೆ ಸ್ತುತಿಯು ಉಪಯುಕ್ತವಾಗುತ್ತದೆ ಎಂದು "ಆದರೆ ವಿಧಿಯೊಡನೆ ಏಕವಾಕ್ಯತೆಯಿರುವದರಿಂದ ವಿಧಿಗಳ ಸ್ತುತಿಯೆಂಬ ಅರ್ಥದಿಂದ (ಪ್ರಮಾಣ) ವಾಗಿರುವವು" (ಜೈ.ಸೂ. ೧-೨-೭) ಎಂಬಲ್ಲಿ ಹೇಳಿರುತ್ತದೆಯಲ್ಲವೆ? ಆದರೆ ಒಂದು ಪ್ರದೇಶದಲ್ಲಿ ವಿಧಿಸಿರುವ ಉದ್ಗೀಥಾದಿಗಳಿಗೆ ಮತ್ತೊಂದು ಪ್ರದೇಶದಲ್ಲಿ ಹೇಳಿರುವ ಸ್ತುತಿಯು ವಾಕ್ಯಶೇಷತ್ವವನ್ನೇ ಪಡೆಯದಾಗಿ ವ್ಯರ್ಥವೇ ಆಗಿಬಿಡುವದು. ''ಜುಹೂ ಎಂಬುದು ಈ ಪೃಥಿವಿಯೇ" (?) ಎಂಬುದಾದರೋ ವಿಧಿಸಂನಿಧಿಯಲ್ಲಿಯೇ ಪಠಿತವಾಗಿರುವದರಿಂದ (ಇದಕ್ಕೂ ಅದಕ್ಕೂ) ಸಾಮ್ಯವಿಲ್ಲ. ಆದ್ದರಿಂದ ಈ ಜಾತಿಯ ಶ್ರುತಿಗಳು ವಿಧ್ಯರ್ಥವೇ.

## ಭಾವಶಬ್ದಾಚ್ಚ || ೨೨ ||

೨೩. ಭಾವಶಬ್ದವಿರುವದರಿಂದಲೂ (ಇವು ವಿಧಿ).

## ವಿಧಾಯಕಶಬ್ದಗಳೂ ಫಲಗಳೂ ಇರುವದರಿಂದ ಇವು ವಿಧಿಯೇ

(ಭಾಷ್ಯ)

೪೬೪. "ಉದ್ಗೀಥಮುಪಾಸೀತ" (ಛಾಂ. ೧-೧-೧), "ಸಾಮೋಪಾಸೀತ" (ಛಾಂ.೨-೨-೧), "ಅಹಮುಕ್ಥಮಸ್ಮೀತಿ ವಿದ್ಯಾತ್" (ಐ ಆ.೨-೧-೨) ಇತ್ಯಾದಯಶ್ಚ ವಿಸ್ಪಷ್ಟಾ ವಿಧಿಶಬ್ದಾಃ ಶ್ರೂಯನ್ತೇ । ತೇ ಚ ಸ್ತುತಿಮಾತ್ರ ಪ್ರಯೋಜನತಾಯಾಂ ವ್ಯಾಹನ್ಯೇರನ್ । ತಥಾ ಚ ನ್ಯಾಯವಿದಾಂ ಸ್ಮರಣಮ್ "ಕುರ್ಯಾತ್ ಕ್ರಿಯೇತ ಕರ್ತವ್ಯಂ ಭವೇತ್ ಸ್ಯಾದಿತಿ ಪಞ್ಚಮಮ್ । ಏತತ್ಸ್ಯಾತ್ ಸರ್ವವೇದೇಷು ನಿಯತಂ ವಿಧಿಲಕ್ಷಣಮ್" (?)[1] ಇತಿ । ಲಿಙಾದ್ಯರ್ಥೋ ವಿಧಿರಿತಿ ಮನ್ಯಮಾನಾಸ್ತೇ ಏವಂ ಸ್ಮರನ್ತಿ । ಪ್ರತಿಪ್ರಕರಣಂ ಚ ಫಲಾನಿ ಶ್ರಾವ್ಯನ್ತೇ "ಆಪಯಿತಾ ಹ ವೈ ಕಾಮಾನಾಂ ಭವತಿ" (ಛಾಂ. ೧-೧-೭), "ಏಷ ಹ್ಯೇವ ಕಾಮಾಗಾನಸ್ಯೇಷ್ಟೇ" (ಛಾಂ.೧-೭-೯), "ಕಲ್ಪನ್ತೇ ಹಾಸ್ಮೈ ಲೋಕಾ ಊರ್ಧ್ವಾಶ್ಚಾವೃತ್ತಾಶ್ಚ" (ಛಾಂ.೨-೨-೩) ಇತ್ಯಾದೀನಿ। ತಸ್ಮಾದಪಿ ಉಪಾಸನವಿಧಾನಾರ್ಥಾ ಉದ್ಗೀಥಾದಿಶ್ರುತಯಃ ॥

(ಭಾಷ್ಯಾರ್ಥ)

"ಉದ್ಗೀಥವನ್ನು ಉಪಾಸನೆಮಾಡಬೇಕು" (ಛಾಂ. ೧-೧-೧), "ಸಾಮವನ್ನು ಉಪಾಸನೆಮಾಡಬೇಕು" (ಛಾಂ. ೨-೨-೧), "ನಾನು ಉಕ್ಥವಾಗಿದೇನೆ ಎಂದು ತಿಳಿಯಬೇಕು" (ಐ. ಆ. ೨-೧-೨) ಇವೇ ಮುಂತಾದ ವಿಸ್ಪಷ್ಟವಾದ ವಿಧಿಶಬ್ದಗಳು[2] ಶ್ರುತಿಯಲ್ಲಿವೆ. (ಇವಕ್ಕೆ) ಬರಿಯ ಸ್ತುತಿಮಾತ್ರವೇ ಪ್ರಯೋಜನವೆಂದರೆ ಆ (ವಿಧಿಗಳಿಗೆ) ವಿರುದ್ಧವಾಗುವದು, ಆದ್ದರಿಂದಲೇ ನ್ಯಾಯವನ್ನು ಬಲ್ಲವರು "ಕುರ್ಯಾತ್, ಕ್ರಿಯೇತ, ಕರ್ತವ್ಯಮ್, ಭವೇತ್, ಸ್ಯಾತ್ –ಎಂಬ ಐದನೆಯದು. ವೇದಗಳಲ್ಲೆಲ್ಲ ಇದು ನಿಯತವಾದ ವಿಧಿಯ ಲಕ್ಷಣವು" (?) ಎಂದು ಹೇಳಿರುತ್ತಾರೆ, ಲಿಙಾದಿಗಳಿಗೆ ವಿಧಿಯು ಅರ್ಥ ಎಂದು ತಿಳಿದುಕೊಂಡವರಾಗಿ ಅವರು ಹೀಗೆ ಹೇಳಿರುತ್ತಾರೆ. ಒಂದೊಂದು

1. ಇದು ಯಾರ ವಾಕ್ಯವೆಂಬುದು ತಿಳಿಯದು. ಶಾಬರಭಾಷ್ಯದಲ್ಲಿಯೂ "ಪದವಾಕ್ಯಾರ್ಥನ್ಯಾಯವಿದಃ ಶ್ಲೋಕಮಾಮನನ್ತಿ" (ಜೈ.ಸೂ.ಭಾ. ೪-೩-೩) ಎಂದಿದೆ.

2 "ಭಾವಶಬ್ದಾತ್" ಎಂಬ ಸೂತ್ರದಲ್ಲಿರುವ ಪದಕ್ಕೆ ಅರ್ಥವಿದು.

ಪ್ರಕರಣದಲ್ಲಿಯೂ "(ಹೀಗೆಂದು ಉಪಾಸನೆಮಾಡಿದವನು) ಕಾಮಗಳನ್ನು (ಯಜಮಾನನಿಗೆ) ಪಡೆಯಿಸುವವನಾಗುತ್ತಾನೆ'' (ಛಾಂ.೧-೧-೭), "ಇವನೇ ಕಾಮಗಳನ್ನು ಆಗಾನಮಾಡಲು ಸಮರ್ಥನಾಗುತ್ತಾನೆ'' (ಛಾಂ.೧-೭-೯), "ಇವನಿಗೆ ಊರ್ಧ್ವಲೋಕಗಳೂ ಈ ಕಡೆಗೆ ಬರುವ (ಲೋಕಗಳೂ) ದೊರಕುವವು'' (ಛಾಂ. ೨-೨-೩) ಎಂಬಿವೇ ಮುಂತಾದ ಫಲಗಳೂ ಶ್ರುತಿಯಲ್ಲಿವೆ. ಆದ್ದರಿಂದ ಉದ್ಗೀಥಾದಿಶ್ರುತಿಗಳು ಉಪಾಸನವನ್ನು ವಿಧಿಸುವದಕ್ಕೇ ಬಂದಿವೆ.[1]

## ೪. ಪಾರಿಪ್ಲವಾಧಿಕರಣ (ಸೂ. ೨೩-೨೪)

(ವೇದಾಂತಗಳಲ್ಲಿರುವ ಆಖ್ಯಾನಗಳು ಪಾರಿಪ್ಲವಾರ್ಥವಲ್ಲ)

**ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್ ॥ ೨೩ ॥**

೨೩. (ಆಖ್ಯಾನಗಳು) ಪಾರಿಪ್ಲವಾರ್ಥ ಎಂದರೆ ಹಾಗಲ್ಲ ; ಏಕೆಂದರೆ (ಅವನ್ನು) ವಿಶೇಷವಾಗಿ (ಹೇಳಿದೆ).

## ಪೂರ್ವಪಕ್ಷ: ವೇದಾಂತಾಖ್ಯಾನಗಳು ಪಾರಿಪ್ಲವಾರ್ಥ

(ಭಾಷ್ಯ)

೪೬೫. "ಅಥ ಹ ಯಾಜ್ಞವಲ್ಕ್ಯಸ್ಯ ದ್ವೇ ಭಾರ್ಯೇ ಬಭೂವತುರ್ಮೈತ್ರೇಯೀ ಚ ಕಾತ್ಯಾಯನೀ ಚ" (ಬೃ. ೪-೫-೧), "ಪ್ರತರ್ದನೋ ಹ ವೈ ದೈವೋದಾಸಿರಿನ್ದ್ರಸ್ಯ ಪ್ರಿಯಂ ಧಾಮೋಪಜಗಾಮ" (ಕೌ. ೩-೧), "ಜಾನಶ್ರುತಿರ್ಹ ಪೌತ್ರಾಯಣಃ ಶ್ರದ್ಧಾದೇಯೋ ಬಹುದಾಯೀ ಬಹುಪಾಕ್ಯ ಆಸ" (ಛಾಂ. ೪-೧-೧) ಇತ್ಯೇವಮಾದಿಷು ವೇದಾನ್ತಪಠಿತೇಷು ಆಖ್ಯಾನೇಷು ಸಂಶಯಃ।ಕಿಮಿಮಾನಿ ಪಾರಿಪ್ಲವಪ್ರಯೋಗಾರ್ಥಾನಿ ಆಹೋಸ್ವಿತ್ ಸಂನಿಹಿತ ವಿದ್ಯಾಪ್ರತಿಪತ್ತ್ಯರ್ಥಾನಿ ಇತಿ। ಪಾರಿಪ್ಲವಾರ್ಥಾ ಇಮಾ ಆಖ್ಯಾನಶ್ರುತಯಃ। ಆಖ್ಯಾನಸಾಮಾನ್ಯಾತ್। ಆಖ್ಯಾನಪ್ರಯೋಗಸ್ಯ ಚ ಪಾರಿಪ್ಲವೇ ಚೋದಿತತ್ವಾತ್। ತತಶ್ಚ ವಿದ್ಯಾಪ್ರಧಾನತ್ವಂ ವೇದಾನ್ತಾನಾಂ ನ ಸ್ಯಾತ್। ಮನ್ತ್ರವತ್ ಪ್ರಯೋಗಶೇಷತ್ವಾತ್ ॥

---

1. ಕರ್ಮಾಂಗಸಂಬಂಧವಾಗಿರುವ ಉದ್ಗೀಥಾದಿಗಳೇ ಸ್ತುತಿಯಲ್ಲ, ಇನ್ನು ಸ್ವಪ್ರಕರಣದಲ್ಲಿರುವ ಬ್ರಹ್ಮವಿದ್ಯೆಯ ಫಲವು ಸ್ತುತಿಯಲ್ಲವೆಂಬುದನ್ನು ಹೇಳುವದೇನು ? ಎಂದು ಭಾವ.

(ಭಾಷ್ಯಾರ್ಥ)

"ಯಾಜ್ಞವಲ್ಕ್ಯರಿಗೆ ಮೈತ್ರೇಯಿ, ಕಾತ್ಯಾಯಿನಿ –ಎಂಬ ಇಬ್ಬರು ಹೆಂಡಿರು ಇದ್ದರಂತೆ" (ಬೃ. ೪–೫–೧) "ಪ್ರತರ್ದನನೆಂಬ ಪ್ರಸಿದ್ಧನಾದ ದೈವೋದಾಸಿಯು ಇಂದ್ರನ ಪ್ರಿಯಲೋಕಕ್ಕೆ ಹೋದನು" (ಕೌ. ೩–೧), "ಜಾನಶ್ರುತಿಪೌತ್ರಾಯಣನು, ಶ್ರದ್ಧೆಯಿಂದ ದಾನಮಾಡುವವನು, ಬಹುವಾಗಿ ದಾನಮಾಡುವವನೂ ಬಹುವಾಗಿ ಪಾಕಮಾಡಿಸುವವನೂ ಆಗಿದ್ದನು" (ಛಾಂ ೪–೧–೧) ಎಂಬಿವೇ ಮುಂತಾದ ವೇದಾಂತಪಠಿತವಾದ ಆಖ್ಯಾನಗಳಲ್ಲಿ ಈ (ಆಖ್ಯಾನಗ)ಳೇನು ಪಾರಿಪ್ಲವಪ್ರಯೋಗಕ್ಕಾಗಿ[1] (ಬಂದಿವೆಯೆ), ಅಥವಾ ಸಂನಿಹಿತವಾದ ವಿದ್ಯೆಯನ್ನು ತಿಳಿಸುವದಕ್ಕಾಗಿ (ಬಂದಿವೆಯೆ) ? ಎಂಬುದು ಸಂಶಯ.

(ಪೂರ್ವಪಕ್ಷ) :– ಈ ಆಖ್ಯಾನಶ್ರುತಿಗಳು ಪಾರಿಪ್ಲವಾರ್ಥವಾಗಿ ಬಂದಿವೆ. ಏಕೆಂದರೆ (ಇವು) ಆಖ್ಯಾನವೆಂಬುದು ಸಮಾನವಾಗಿದೆ ; ಪಾರಿಪ್ಲವದಲ್ಲಿ ಆಖ್ಯಾನಪ್ರಯೋಗವನ್ನು ವಿಧಿಸಿದೆ. ಹೀಗಿರುವದರಿಂದ ವೇದಾಂತಗಳಿಗೆ ವಿದ್ಯಾಪ್ರಧಾನತ್ವವಿಲ್ಲವೆಂದಾಯಿತು ; ಏಕೆಂದರೆ (ಇವು) ಮಂತ್ರಗಳಂತೆ (ಕರ್ಮ)ಪ್ರಯೋಗಕ್ಕೆ ಶೇಷವಾಗಿರುತ್ತವೆ.

## ಸಿದ್ಧಾಂತ: ವೇದಾಂತಾಖ್ಯಾನಗಳು ಪಾರಿಪ್ಲವಕ್ಕಲ್ಲ

(ಭಾಷ್ಯ)

೪೬೬. ಇತಿ ಚೇತ್ । ತನ್ನ । ಕಸ್ಮಾತ್? ವಿಶೇಷಿತತ್ವಾತ್। "ಪಾರಿಪ್ಲವಮಾಚಕ್ಷೀತ" ಇತಿ ಹಿ ಪ್ರಕೃತ್ಯ "ಮನುರ್ವೈವಸ್ವತೋ ರಾಜಾ" (ಶತ. ಬ್ರಾ. ೧೩–೪–೩–೩ ?) ಇತ್ಯೇವಮಾದೀನಿ ಕಾನಿಚಿದೇವ ಆಖ್ಯಾನಾನಿ ತತ್ರ ವಿಶೇಷ್ಯನ್ತೇ। ಆಖ್ಯಾನಸಾಮಾನ್ಯಾಚ್ಚೇತ್ ಸರ್ವಗೃಹೀತಿಃ ಸ್ಯಾತ್ ಅನರ್ಥಕಮೇವೇದಂ ವಿಶೇಷಣಂ ಭವೇತ್। ತಸ್ಮಾನ್ನ ಪಾರಿಪ್ಲವಾರ್ಥಾ ಏತಾ ಆಖ್ಯಾನಶ್ರುತಯಃ ॥

(ಭಾಷ್ಯಾರ್ಥ )

ಹೀಗೆಂದರೆ ಇದು ಸರಿಯಲ್ಲ. ಏಕೆ ? ಎಂದರೆ ವಿಶೇಷವಾಗಿ ಹೇಳಿರುವದರಿಂದ. "ಪಾರಿಪ್ಲವವನ್ನು ಹೇಳಬೇಕು" ಎಂದು ಪ್ರಾರಂಭಿಸಿ "ಮನುರ್ವೈವಸ್ವತೋ ರಾಜಾ" (ಶತ. ಬ್ರಾ. ೧೩–೪–೩–೩ ?) ಎಂಬಿದೇ ಮುಂತಾದ ಕೆಲವೇ ಆಖ್ಯಾನಗಳನ್ನು[2] ಅಲ್ಲಿ ವಿಶೇಷವಾಗಿ ಹೇಳಿರುತ್ತದೆ. ಆಖ್ಯಾನಸಾಮಾನ್ಯ

1. ಅಶ್ವಮೇಧದಲ್ಲಿ ಹೇಳಬೇಕಾದ ಕಥೆಗಳು ಪಾರಿಪ್ಲವವೆನಿಸುವವು.

2. ಪುತ್ರಾಮಾತ್ಯಸಹಿತನಾದ ಅರಸನಿಗೆ ಪಾರಿಪ್ಲವವನ್ನು ಹೇಳಬೇಕು ಎಂಬ ವಿಧಿಯ ವಾಕ್ಯಶೇಷದಲ್ಲಿ ಮೊದಲನೆಯ ದಿನ ಮನುರ್ವೈವಸ್ವತೋ ರಾಜಾ ಎಂಬುದನ್ನು ಹೇಳಬೇಕು; ಎರಡನೆಯ ದಿನ ಯಮೋ ವೈವಸ್ವತ ಎಂಬುದನ್ನು ಹೇಳಬೇಕು; ಮೂರನೆಯ ದಿನ ವರುಣ ಆದಿತ್ಯ ಎಂಬಿದನ್ನು ಹೇಳಬೇಕು ಎಂದು ವಿಶೇಷವಾಗಿ ವಿಧಿಸಿದೆ

ವಿರುವದರಿಂದ ಎಲ್ಲಾ (ಆಖ್ಯಾನ)ಗಳನ್ನೂ ತೆಗೆದುಕೊಳ್ಳುವದಾದರೆ ಈ ವಿಶೇಷಣವು ವ್ಯರ್ಥವೇ ಆದೀತು. ಆದ್ದರಿಂದ ಈ ಆಖ್ಯಾನಶ್ರುತಿಗಳು ಪಾರಿಪ್ಲವಕ್ಕಾಗಿ (ಬಂದವು)ಗಳಲ್ಲ.

**ತಥಾ ಚೈಕವಾಕ್ಯತೋಪಬನ್ಧಾತ್ ॥ ೨೪ ॥**

೨೪. ಹೀಗಿರುವದರಿಂದ ಏಕವಾಕ್ಯತೆಯ, ಸಂಬಂಧವಿರುವದರಿಂದ (ಇವು ವಿದ್ಯಾರ್ಥವೇ ಆಗಿರುತ್ತವೆ).

## ವಿದ್ಯಾಪ್ರತಿಪಾದನೆಗಾಗಿಯೇ ವೇದಾಂತಾಖ್ಯಾನಗಳು ಬಂದಿವೆ

(ಭಾಷ್ಯ)

೪೬೭. ಅಸತಿ ಚ ಪಾರಿಪ್ಲವಾರ್ಥತ್ವೇ ಆಖ್ಯಾನಾನಾಂ ಸಂನಿಹಿತವಿದ್ಯಾಪ್ರತಿಪಾದನೋಪಯೋಗಿತೈವ ನ್ಯಾಯ್ಯಾ । ಏಕವಾಕ್ಯತೋಪಬನ್ಧಾತ್। ತಥಾ ಹಿ ತತ್ರತತ್ರ ಸಂನಿಹಿತಾಭಿರ್ವಿದ್ಯಾಭಿಃ ಏಕವಾಕ್ಯತಾ ದೃಶ್ಯತೇ । ಪ್ರರೋಚನೋಪಯೋಗಾತ್, ಪ್ರತಿಪತ್ತಿಸೌಕರ್ಯೋಪಯೋಗಾಚ್ಚ। ಮೈತ್ರೇಯೀಬ್ರಾಹ್ಮಣೇ ತಾವತ್ "ಆತ್ಮಾ ವಾ ಅರೇ ದ್ರಷ್ಟವ್ಯಃ" (ಬೃ.೪-೫-೬) ಇತ್ಯಾದ್ಯಯಾ ವಿದ್ಯಯಾ ಏಕವಾಕ್ಯತಾ ದೃಶ್ಯತೇ। ಪ್ರಾತರ್ದನೇಽಪಿ "ಪ್ರಾಣೋಽಸ್ಮಿ ಪ್ರಜ್ಞಾತ್ಮಾ" (ಕೌ. ೩-೨) ಇತ್ಯಾದ್ಯಯಾ । 'ಜಾನಶ್ರುತಿಃ' ಇತ್ಯತ್ರಾಪಿ "ವಾಯುರ್ವಾವ ಸಂವರ್ಗಃ" (ಛಾಂ. ೪-೩-೧) ಇತ್ಯಾದ್ಯಯಾ । ಯಥಾ "ಸ ಆತ್ಮನೋವಪಾಮುದಖಿದತ್" (ತೈ. ಸಂ. ೨-೧-೪) ಇತ್ಯೇವಮಾದೀನಾಂ ಕರ್ಮಶ್ರುತಿಗತಾನಾಮ್ ಆಖ್ಯಾನಾನಾಂ ಸಂನಿಹಿತವಿಧಿಸ್ತುತ್ಯರ್ಥತಾ ತದ್ವತ್। ತಸ್ಮಾತ್ ನ ಪಾರಿಪ್ಲವಾರ್ಥತ್ವಮ್ ॥

(ಭಾಷ್ಯಾರ್ಥ)

ಪಾರಿಪ್ಲವಕ್ಕಾಗಿ (ಬಂದಿಲ್ಲ)ವೆಂದಾದಮೇಲೆ (ಈ) ಆಖ್ಯಾನಗಳು ಸಮೀಪದಲ್ಲಿರುವ ವಿದ್ಯೆಗಳನ್ನು ಪ್ರತಿಪಾದನೆಮಾಡುವದಕ್ಕೆ ಉಪಯುಕ್ತವಾಗಿವೆ ಎಂಬುದೇ ನ್ಯಾಯವು. ಏಕೆಂದರೆ ಏಕವಾಕ್ಯತೆಯ ಸಂಬಂಧವಿದೆ. ಆದ್ದರಿಂದಲೇ ಅಲ್ಲವೆ, ಅಲ್ಲಲ್ಲಿ ಸಂನಿಹಿತವಾದ (ಆಯಾ) ವಿದ್ಯೆಗಳೊಡನೆ (ಆ ವಿದ್ಯೆಗಳಲ್ಲಿ) ರುಚಿಯನ್ನುಂಟುಮಾಡುವದಕ್ಕೆ ಉಪಯುಕ್ತವಾಗಿರುವದರಿಂದಲೂ ಜ್ಞಾನಕ್ಕೆ ಸೌಕರ್ಯವನ್ನುಂಟುಮಾಡುವದಕ್ಕೆ ಉಪಯುಕ್ತವಾಗಿರುವದರಿಂದಲೂ (ಇವಕ್ಕೆ) ಏಕವಾಕ್ಯತೆಯು ಕಂಡುಬರುತ್ತದೆ? ಮೊದಲನೆಯದಾಗಿ ಮೈತ್ರೇಯೀಬ್ರಾಹ್ಮಣದಲ್ಲಿ "ಎಲೆ, ಆತ್ಮನನ್ನೇ ಕಂಡುಕೊಳ್ಳಬೇಕು" (ಬೃ. ೪-೫-೬) ಎಂಬಿದೇ ಮುಂತಾದ ವಿದ್ಯೆಯೊಡನೆ ಏಕವಾಕ್ಯತೆಯು ಕಾಣುತ್ತದೆ.

ಪ್ರಾತರ್ದನದಲ್ಲಿಯೂ "ಪ್ರಜ್ಞಾತ್ಮನಾದ ಪ್ರಾಣನಾಗಿದೇನೆ" (ಕೌ. ೩-೨) ಎಂಬ (ವಿದ್ಯೆಯೊಡನೆ ಏಕವಾಕ್ಯತೆ ಕಾಣುತ್ತದೆ). ಜಾನಶ್ರುತಿಃ ಎಂಬ (ಆಖ್ಯಾನದಲ್ಲಿಯೂ) "ವಾಯುವೇ ಸಂವರ್ಗವು" (ಛಾಂ.೪-೩-೧) ಎಂಬಿವೇ ಮುಂತಾದ ವಿದ್ಯೆಯೊಡನೆ ಏಕವಾಕ್ಯತೆಯು ಕಾಣುತ್ತದೆ. ಹೇಗೆ "ಅವನು ತನ್ನ ವಪೆಯನ್ನು ಕಿತ್ತುತೆಗೆದುಕೊಂಡನು" (ತೈ. ಸಂ. ೨-೧-೪) ಎಂಬಿವೇ ಮುಂತಾದ ಕರ್ಮಶ್ರುತಿಗಳಲ್ಲಿರುವ ಆಖ್ಯಾನಗಳು ಸಂನಿಹಿತವಾದ ವಿಧಿಗಳನ್ನು ಹೊಗಳುವದಕ್ಕೆ (ಬಂದಿವೆಯೋ) ಅದರಂತೆ. ಆದ್ದರಿಂದ (ಇವು) ಪಾರಿಪ್ಲವಾರ್ಥವಾಗಿ ಬಂದಿಲ್ಲ

## ೫. ಅಗ್ನೀನ್ಧನಾದ್ಯಧಿಕರಣ

(ವಿದ್ಯೆಗೆ ಫಲಪ್ರದಾನಕ್ಕೆ ಕರ್ಮವು ಬೇಕಿಲ್ಲ)

**ಅತ ಏವ ಚಾಗ್ನೀನ್ಧನಾದ್ಯನಪೇಕ್ಷಾ ॥ ೨೫ ॥**

೨೫. ಆದ್ದರಿಂದಲೇ ಅಗ್ನೀಂಧನಾದಿಗಳ ಅಪೇಕ್ಷೆಯಿಲ್ಲ.

### ಜ್ಞಾನವು ಕರ್ಮನಿರಪೇಕ್ಷವಾಗಿ ಫಲವನ್ನು ಕೊಡುವದು

(ಭಾಷ್ಯ)

**೪೬೮. "ಪುರುಷಾರ್ಥೋಽತಃಶಬ್ದಾತ್" (೩-೪-೧) ಇತ್ಯೇತತ್ ವ್ಯವಹಿತಮಪಿ ಸಂಭವಾತ್ ಅತ ಇತಿ ಪರಾಮೃಶ್ಯತೇ । ಅತ ಏವ ಚ ವಿದ್ಯಾಯಾಃ ಪುರುಷಾರ್ಥಹೇತುತ್ವಾತ್ ಅಗ್ನೀನ್ಧನಾದೀನಿ ಆಶ್ರಮಕರ್ಮಾಣಿ ವಿದ್ಯಯಾ ಸ್ವಾರ್ಥಸಿದ್ಧೌ ನಾಪೇಕ್ಷಿತವ್ಯಾನಿ ಇತಿ ಆದ್ಯಸ್ಯೈವ ಅಧಿಕರಣಸ್ಯ ಫಲಮ್ ಉಪಸಂಹರತಿ ಅಧಿಕವಿವಕ್ಷಯಾ ॥**

(ಭಾಷ್ಯಾರ್ಥ)

(ಸೂತ್ರದಲ್ಲಿ) ಅತಃ (ಆದ್ದರಿಂದಲೇ) ಎಂದು "ಪುರುಷಾರ್ಥೋಽತಃ ಶಬ್ದಾತ್" (೩-೪-೧) ಎಂಬಿದನ್ನು ವ್ಯವಧಾನದಿಂದ (ದೂರದಲ್ಲಿ)ದ್ದರೂ ಪರಾಮರ್ಶಿಸಿರುತ್ತದೆ; ಏಕೆಂದರೆ (ಅದೇ) ಹೊಂದುತ್ತದೆ. ಆದ್ದರಿಂದಲೇ, ಎಂದರೆ ವಿದ್ಯೆಯು ಪುರುಷಾರ್ಥಕ್ಕೆ ಹೇತುವಾಗಿರುವದರಿಂದಲೇ ಅಗ್ನಿ, ಇಂಧನ -ಮುಂತಾದವುಗಳನ್ನು ಎಂದರೆ ಆಶ್ರಮಕರ್ಮಗಳನ್ನು ವಿದ್ಯೆಯು ತನ್ನ ಫಲಸಿದ್ಧಿಗೆ ಅಪೇಕ್ಷಿಸುವದಿಲ್ಲ -ಎಂದು ಮೊದಲನೆಯ ಅಧಿಕರಣದ ಫಲವನ್ನೇ (ಮುಂದೆ) ಅಧಿಕ(ವಿಷಯವನ್ನು) ಹೇಳುವ ಇಚ್ಛೆಯಿಂದ (ಇಲ್ಲಿ) ಉಪಸಂಹಾರ ಮಾಡಿರುತ್ತದೆ.

## ೬. ಸರ್ವಾಪೇಕ್ಷಾಧಿಕರಣ (ಸೂ. ೨೬-೨೭)

(ಜ್ಞಾನೋತ್ಪತ್ತಿಗೆ ಕರ್ಮಗಳು ಬೇಕು)

**ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ ॥ ೨೬ ॥**

೨೬. ಸರ್ವ(ಕರ್ಮಗಳ) ಅಪೇಕ್ಷೆಯೂ (ವಿದ್ಯೆಗೆ) ಇದೆ. ಏಕೆಂದರೆ ಯಜ್ಞಾದಿಶ್ರುತಿಯಿದೆ. ಕುದುರೆಯ (ದೃಷ್ಟಾಂತ)ದಂತೆ.

### ಜ್ಞಾನಕ್ಕೆ ಕರ್ಮಗಳು ಬೇಕು

(ಭಾಷ್ಯ)

೪೬೯. ಇದಮಿದಾನೀಂ ಚಿನ್ತ್ಯತೇ ಕಿಂ ವಿದ್ಯಾಯಾ ಅತ್ಯನ್ತಮೇವ ಅನಪೇಕ್ಷಾ ಆಶ್ರಮಕರ್ಮಣಾಮ್, ಉತಾಸ್ತಿ ಕಾಚಿದಪೇಕ್ಷಾ ಇತಿ। ತತ್ರ ಅತ ಏವ ಅಗ್ನೀನ್ಧನಾದೀನಿ ಆಶ್ರಮಕರ್ಮಾಣಿ ವಿದ್ಯಯಾ ಸ್ವಾರ್ಥಸಿದ್ಧೌ ನಾಪೇಕ್ಷ್ಯನ್ತೇ[1] ಏವಮ್ ಅತ್ಯನ್ತಮೇವ ಅನಪೇಕ್ಷಾಯಾಂ ಪ್ರಾಪ್ತಾಯಾಮ್ ಇದಮುಚ್ಯತೇ "ಸರ್ವಾಪೇಕ್ಷಾ ಚ" ಇತಿ। ಅಪೇಕ್ಷತೇ ಚ ವಿದ್ಯಾ ಸರ್ವಾಣಿ ಆಶ್ರಮಕರ್ಮಾಣಿ ನಾತ್ಯನ್ತಮನಪೇಕ್ಷೈವ। ನನು ವಿರುದ್ಧಮಿದಂ ವಚನಮ್ ಅಪೇಕ್ಷತೇ ಚಾಶ್ರಮಕರ್ಮಾಣಿ ವಿದ್ಯಾ ನಾಪೇಕ್ಷತೇ ಚ ಇತಿ। ನೇತಿ ಬ್ರೂಮಃ। ಉತ್ಪನ್ನಾ ಹಿ ವಿದ್ಯಾ ಫಲಸಿದ್ಧಿಂ ಪ್ರತಿ ನ ಕಿಂಚಿದನ್ಯದಪೇಕ್ಷತೇ, ಉತ್ಪತ್ತಿಂ ಪ್ರತಿ ತ್ವಪೇಕ್ಷತೇ। ಕುತಃ? ಯಜ್ಞಾದಿಶ್ರುತೇಃ। ತಥಾ ಹಿ ಶ್ರುತಿಃ "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾಽನಾಶಕೇನ" (ಬೃ. ೪-೪-೨೨) ಇತಿ ಯಜ್ಞಾದೀನಾಂ ವಿದ್ಯಾಸಾಧನಭಾವಂ ದರ್ಶಯತಿ। ವಿವಿದಿಷಾ ಸಂಯೋಗಾಚ್ಚ ಏಷಾಮ್ ಉತ್ಪತ್ತಿಸಾಧನಭಾವೋಽವಸೀಯತೇ। "ಅಥ ಯದ್ಯಜ್ಞ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ ತತ್" (ಛಾಂ. ೮-೫-೧) ಇತ್ಯತ್ರ ಚ ವಿದ್ಯಾಸಾಧನಭೂತಸ್ಯ ಬ್ರಹ್ಮಚರ್ಯಸ್ಯ ಯಜ್ಞಾದಿಭಿಃ ಸಂಸ್ತವಾತ್ ಯಜ್ಞಾದೀನಾಮಪಿ ಹಿ ಸಾಧನಭಾವಃ ಸೂಚ್ಯತೇ। "ಸರ್ವೇ ವೇದಾ ಯತ್ಪದಮಾಮನನ್ತಿ ತಪಾಂಸಿ ಸರ್ವಾಣಿ ಚ ಯದ್ವದನ್ತಿ। ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ ತತ್ತೇ ಪದಂ ಸಂಗ್ರಹೇಣ ಬ್ರವೀಮಿ" (ಕ. ೧-೨-೧೫) ಇತ್ಯೇವಮಾದ್ಯಾ ಚ ಶ್ರುತಿಃ ಆಶ್ರಮಕರ್ಮಣಾಂ ವಿದ್ಯಾಸಾಧನಭಾವಂ ಸೂಚಯತಿ। ಸ್ಮೃತಿರಪಿ "ಕಷಾಯಪಕ್ತಿಃ ಕರ್ಮಾಣಿ ಜ್ಞಾನಂ ತು ಪರಮಾ ಗತಿಃ। ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತ

---

1. ಇದರ ಹಿಂದೆ ಬಿಟ್ಟಿದ್ದು 'ಯಥಾ' ಇದ್ದರೆ ಒಳ್ಳೆಯದೆಂದು ಕಾಣುತ್ತದೆ.

ತೇ"[1] (ಮೋ. ಧ. ೨೭೦-೩೮) ಇತ್ಯೇವಮಾದ್ಯಾ। ಅಶ್ವವತ್ ಇತಿ ಯೋಗ್ಯತಾನಿದರ್ಶನಮ್। ಯಥಾ ಚ ಯೋಗ್ಯತಾವಶೇನ ಅಶ್ವೋ ನ ಲಾಙ್ಗಲಾಕರ್ಷಣೇ ಯುಜ್ಯತೇ ರಥಚರ್ಯಾಯಾಂ ತು ಯುಜ್ಯತೇ। ಏವಮಾಶ್ರಮಕರ್ಮಾಣಿ ವಿದ್ಯಯಾ ಫಲಸಿದ್ಧೌ ನಾಪೇಕ್ಷ್ಯನ್ತೇ, ಉತ್ಪತ್ತೌ ಚ ಅಪೇಕ್ಷ್ಯನ್ತೇ ಇತಿ ॥

(ಭಾಷ್ಯಾರ್ಥ)

ವಿದ್ಯೆಗೆ ಆಶ್ರಮಕರ್ಮಗಳು ಸ್ವಲ್ಪವೂ ಬೇಕೇ ಇಲ್ಲವೆ, ಅಥವಾ ಏನಾದರೂ (ಸ್ವಲ್ಪ) ಬೇಕೆ? ಎಂಬಿದನ್ನು ಈಗ ಚಿಂತಿಸಲಾಗುವದು. ಇಲ್ಲಿ ಅಗ್ನಿ, ಇಂಧನ -ಮುಂತಾದ ಆಶ್ರಮಕರ್ಮಗಳು ವಿದ್ಯೆಗೆ ಹೇಗೆ ಸ್ವಫಲಸಿದ್ಧಿಗೆ ಬೇಕಾಗುವದಿಲ್ಲವೋ ಹಾಗೆಯೇ ಒಂದಿಷ್ಟೂ (ಅದಕ್ಕೆ ಕರ್ಮಗಳು) ಬೇಕಾಗುವದಿಲ್ಲ ಎಂಬ (ಪೂರ್ವಪಕ್ಷವು) ಬಂದೊದಗಲಾಗಿ "ಸರ್ವಾಪೇಕ್ಷಾ ಚ" ಎಂಬೀ (ಸೂತ್ರ) ವನ್ನು ಹೇಳಿರುತ್ತದೆ. ವಿದ್ಯೆಗೆ ಎಲ್ಲಾ ಆಶ್ರಮಕರ್ಮಗಳೂ ಬೇಕು, ಅತ್ಯಂತವಾಗಿ ಬೇಡವೇಬೇಡವೆಂಬುದಿಲ್ಲ.

(ಆಕ್ಷೇಪ) :- ವಿದ್ಯೆಗೆ ಕರ್ಮಗಳು ಬೇಕೂಬೇಕು, ಬೇಡವೂ ಬೇಡ -ಎಂಬಿದು ವಿರುದ್ಧವಾದ ಮಾತಲ್ಲವೆ?

(ಪರಿಹಾರ) :- ಹಾಗಲ್ಲ. **ವಿದ್ಯೆಯು ಹುಟ್ಟಿದಮೇಲೆ ಫಲಸಿದ್ಧಿಗೆ ಮತ್ತೊಂದನ್ನು ಯಾವದನ್ನೂ ಬಯಸುವದಿಲ್ಲ; ಆದರೆ ಹುಟ್ಟುವದಕ್ಕೆ ಬಯಸುತ್ತದೆ.** (ಅದು) ಹೇಗೆ? ಎಂದರೆ ಯಜ್ಞಾದಿಶ್ರುತಿಯಿರುವದರಿಂದ. ಆದ್ದರಿಂದಲೇ ಶ್ರುತಿಯು "ಆ ಈ (ಆತ್ಮನನ್ನು) ವೇದಾನುವಚನದಿಂದಲೂ ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಅನಶನದಿಂದಲೂ ತಿಳಿಯಲಿಚ್ಛಿಸುತ್ತಾರೆ" (ಬೃ. ೪-೪-೨೨) ಎಂದು ಯಜ್ಞಾದಿಗಳು ವಿದ್ಯೆಗೆ ಸಾಧನವಾಗಿರುವವೆಂದು ತಿಳಿಸುತ್ತದೆ. ('ವಿವಿದಿಷನ್ತಿ' ತಿಳಿಯಲಿಚ್ಛಿಸುತ್ತಾರೆ ಎಂದು) ವಿವಿದಿಷಾಸಂಯೋಗವಿರುವದರಿಂದ ಇವುಗಳು (ಜ್ಞಾನದ) ಉತ್ಪತ್ತಿಗೆ ಸಾಧನವಾಗಿರುವವೆಂದು ನಿಶ್ಚಯವಾಗುತ್ತದೆ. "ಇನ್ನು ಯಜ್ಞವೆಂದು ಹೇಳುತ್ತಾರಲ್ಲ, ಅದು ಬ್ರಹ್ಮಚರ್ಯವೇ" (ಛಾಂ. ೮-೫-೧) ಎಂಬಲ್ಲಿ ವಿದ್ಯೆಗೆ ಸಾಧನವಾಗಿರುವ ಬ್ರಹ್ಮಚರ್ಯವನ್ನು ಯಜ್ಞಾದಿಗಳೆಂದು ಹೊಗಳಿರುವದರಿಂದ ಯಜ್ಞಾದಿಗಳೂ ಸಾಧನವೆಂದೇ ಸೂಚಿತವಾಗಿರುತ್ತದೆ. "ಎಲ್ಲಾ ವೇದಗಳೂ ಯಾವ ಪದವನ್ನು ಹೇಳುತ್ತವೆಯೋ ಎಲ್ಲಾ ತಪಸ್ಸುಗಳೂ ಯಾವದನ್ನು

---

1. "ಶರೀರಪಕ್ತಿಃ ಕರ್ಮಾಣಿ ಜ್ಞಾನಂ ತು ಪರಮಾ ಗತಿಃ। ಕಷಾಯೇ ಕರ್ಮಭಿಃ ಪಕ್ವೇ ರಸಜ್ಞಾನೇ ಚ ತಿಷ್ಠತಿ" ಎಂದು ಬೊಂಬಾಯಿ ಅಚ್ಚಿನ ಪುಸ್ತಕದ ಪಾಠ; "ಪಕ್ವೇ ಕಷಾಯವಿಜ್ಞಾನಂ ಯಥಾ ಜ್ಞಾನೇ ಚ ತಿಷ್ಠತಿ" ಎಂದು ಕುಂಭಕೋಣ ಪುಸ್ತಕದ ಪಾಠ.

ತಿಳಿಸುತ್ತವೆಯೋ ಯಾವದನ್ನು ಬಯಸಿ ಬ್ರಹ್ಮಚರ್ಯವನ್ನು ಆಚರಿಸುವರೋ ಆ ಪದವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ" (ಕ. ೧-೨-೧೫) ಎಂಬಿದೇ ಮುಂತಾದ ಶ್ರುತಿಯು ಆಶ್ರಮಕರ್ಮಗಳಿಗೆ ವಿದ್ಯಾಸಾಧನತ್ವವನ್ನು ಸೂಚಿಸುತ್ತದೆ. "ಕರ್ಮಗಳು ಕಷಾಯಪಾಕ(ಕ್ಕೆ ಹೇತುವಾಗಿವೆ) ; ಜ್ಞಾನವೇ ಪರಮಗತಿಯು ; ಕಷಾಯವು ಕರ್ಮಗಳಿಂದ ಪಕ್ವವಾಗಲು ಆ ಬಳಿಕ ಜ್ಞಾನವುಂಟಾಗುತ್ತದೆ" (ಮೋ. ಧ. ೨೭೦-೩೮) ಎಂಬಿದೇ ಮುಂತಾದ ಶ್ರುತಿಯೂ (ಇದನ್ನು ಸೂಚಿಸುತ್ತದೆ).

'ಕುದುರೆಯಂತೆ' ಎಂಬಿದು ಯೋಗ್ಯತೆಗೆ ನಿದರ್ಶನವು. ಹೇಗೆ ಯೋಗ್ಯತೆಯ ವಶದಿಂದ ಕುದುರೆಯನ್ನು ನೇಗಿಲನ್ನು ಎಳೆಯುವದಕ್ಕೆ ಉಪಯೋಗಿಸುವದಿಲ್ಲವೋ, ರಥವನ್ನು ಎಳೆಯುವದಕ್ಕೆ ಉಪಯೋಗಿಸುತ್ತಾರೋ ಇದರಂತೆ ಆಶ್ರಮಕರ್ಮಗಳು ವಿದ್ಯೆಗೆ ಫಲಸಿದ್ಧಿಗೆ ಬೇಡ, ಉತ್ಪತ್ತಿಗಾದರೆ ಬೇಕು ಎಂದು (ನಿದರ್ಶನವು).

**ಶಮದಮಾದ್ಯುಪೇತಃ ಸ್ಯಾತ್ ತಥಾಪಿ ತು ತದ್ವಿಧೇಸ್ತದಙ್ಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ॥ ೨೭ ॥**

೨೭. ಹಾಗಿದ್ದರೂ ಶಮದಮಾದಿಗಳಿಂದೊಡಗೂಡಿರಬೇಕು; ಏಕೆಂದರೆ ಅವುಗಳನ್ನು ವಿಧಿಸಿರುತ್ತದೆ, ಅದಕ್ಕೆ ಅಂಗವಾಗಿ ಅವು ಅವಶ್ಯವಾಗಿ ಅನುಷ್ಠೇಯವಾಗಿವೆ.

## ಜಿಜ್ಞಾಸುವು ಶಮದಮಾದಿಗಳುಳ್ಳವನಾಗಿರಬೇಕು

(ಭಾಷ್ಯ)

೪೭೦. ಯದಿ ಕಶ್ಚಿನ್ಮನ್ಯೇತ ಯಜ್ಞಾದೀನಾಂ ವಿದ್ಯಾಸಾಧನಭಾವೋ ನ ನ್ಯಾಯ್ಯಃ। ವಿಧ್ಯಭಾವಾತ್। "ಯಜ್ಞೇನ ವಿವಿದಷನ್ತಿ" ಇತ್ಯೇವಂಜಾತೀಯಕಾ ಹಿ ಶ್ರುತಿರನುವಾದಸ್ವರೂಪಾ ವಿದ್ಯಾಭಿಷ್ಟವಪರಾ ನ ಯಜ್ಞಾದಿವಿಧಿಪರಾ। ಇತ್ಥಂ ಮಹಾಭಾಗಾ ವಿದ್ಯಾ ಯದ್ಯಜ್ಞಾದಿಭಿರೇತಾಮ್ ಅವಾಪ್ತುಮಿಚ್ಛನ್ತಿ ಇತಿ।• ತಥಾಪಿ ತು ಶಮದಮಾದ್ಯುಪೇತಃ ಸ್ಯಾತ್ ವಿದ್ಯಾರ್ಥೀ। "ತಸ್ಮಾದೇವಂವಿಚ್ಛಾನ್ತೋ ದಾನ್ತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾತ್ಮನ್ಯೇವಾತ್ಮಾನಂ ಪಶ್ಯತಿ" (ಬೃ. ೪-೪-೨೩) ಇತಿ ವಿದ್ಯಾಸಾಧನತ್ವೇನ ಶಮದಮಾದೀನಾಂ ವಿಧಾನಾತ್ ವಿಹಿತಾನಾಂ ಚಾವಶ್ಯಾನುಷ್ಠೇಯತ್ವಾತ್। ನನ್ವತ್ರಾಪಿ ಶಮಾದ್ಯುಪೇತೋ ಭೂತ್ವಾ ಪಶ್ಯತೀತಿ ವರ್ತಮಾನಾಪದೇಶ ಉಪಲಭ್ಯತೇ

ನ ವಿಧಿಃ । ನೇತಿ ಬ್ರೂಮಃ । ತಸ್ಮಾತ್ ಇತಿ ಪ್ರಕೃತಪ್ರಶಂಸಾಪರಿಗ್ರಹಾತ್ ವಿಧಿತ್ವಪ್ರತೀತೇಃ । 'ಪಶ್ಯೇತ್' ಇತಿ ಚ ಮಾಧ್ಯಂದಿನಾ ವಿಸ್ಪಷ್ಟಮೇವ ವಿಧಿಮ್ ಅಧೀಯತೇ । ತಸ್ಮಾತ್ ಯಜ್ಞಾದ್ಯನಪೇಕ್ಷಾಯಾಮಪಿ ಶಮಾದೀನ್ಯಪೇಕ್ಷಿತವ್ಯಾನಿ ॥

(ಭಾಷ್ಯಾರ್ಥ)

ಯಾವನಾದರೂ ಹೀಗೆಂದು ತಿಳಿಯಬಹುದು : ಯಜ್ಞಾದಿಗಳು ವಿದ್ಯೆಗೆ ಸಾಧನವೆಂಬುದು ಸರಿಯಲ್ಲ ; ಏಕೆಂದರೆ (ಅವುಗಳಿಗೆ) ವಿಧಿಯಿರುವದಿಲ್ಲ. "ಯಜ್ಞದಿಂದ ತಿಳಿಯಲಿಚ್ಛಿಸುತ್ತಾರೆ" (ಬೃ. ೪-೪-೨೨) ಎಂಬೀ ಜಾತಿಯ ಶ್ರುತಿಯು ಅನುವಾದಸ್ವರೂಪವಾಗಿರುತ್ತದೆಯಾದ್ದರಿಂದ ವಿದ್ಯೆಯು ಎಷ್ಟು ದೊಡ್ಡದೆಂದರೆ ಅದನ್ನು ಯಜ್ಞಾದಿಗಳಿಂದ ಪಡೆಯಲಿಚ್ಛಿಸುತ್ತಾರೆ -ಎಂದು ವಿದ್ಯೆಯನ್ನು ಹೊಗಳುವದರಲ್ಲಿ ತಾತ್ಪರ್ಯವುಳ್ಳದ್ದೇ ಹೊರತು ಯಜ್ಞಾದಿಗಳನ್ನು ವಿಧಿಸುವದರಲ್ಲಿ ತಾತ್ಪರ್ಯವುಳ್ಳದ್ದಲ್ಲ. -ಎಂದು (ಅವನು ಅಭಿಪ್ರಾಯ ಪಡಬಹುದು).

ಹಾಗಾದರೂ ವಿದ್ಯೆಯನ್ನು ಬಯಸುವಾತನು ಶಮದಮಾದಿಗಳಿಂದೊಡಗೂಡಿದವನಾಗಿರಬೇಕು. ಏಕೆಂದರೆ "ಆದ್ದರಿಂದ ಹೀಗೆಂದು ತಿಳಿದವನು ಶಾಂತನಾಗಿ ದಾಂತನಾಗಿ ಉಪರತನಾಗಿ ತಿತಿಕ್ಷುವಾಗಿ ಸಮಾಹಿತನಾಗಿದ್ದುಕೊಂಡು ತನ್ನಲ್ಲಿಯೇ ಆತ್ಮನನ್ನು ಕಂಡುಕೊಳ್ಳುತ್ತಾನೆ" (ಬೃ. ೪-೪-೨೩) ಎಂದು ವಿದ್ಯೆಗೆ ಸಾಧನವೆಂತ ಶಮದಮಾದಿಗಳನ್ನು ವಿಧಿಸಿರುತ್ತದೆ; ವಿಹಿತವಾದವುಗಳನ್ನು ಅವಶ್ಯವಾಗಿ ಮಾಡಲೇಬೇಕು.

(ಆಕ್ಷೇಪ) :- ಇಲ್ಲಿಯೂ 'ಶಮಾದಿಗಳಿಂದ ಕೂಡಿದವನಾಗಿ ಕಂಡುಕೊಳ್ಳುತ್ತಾನೆ' ಎಂದು ವರ್ತಮಾನಾಪದೇಶವೇ ಕಾಣಬರುತ್ತಿದೆಯೇ ಹೊರತು ಕಾಣುವದಿಲ್ಲವಲ್ಲ !

(ಪರಿಹಾರ) :- ಹಾಗಲ್ಲ, ಎನ್ನುತ್ತೇವೆ. ಆದ್ದರಿಂದ ಎಂದು ಪ್ರಕೃತವಾದದ್ದರ ಪ್ರಶಂಸೆಯನ್ನು ಸ್ವೀಕರಿಸಿರುವದರಿಂದ (ಇದು) ವಿಧಿಯೆಂದು ಕಾಣುತ್ತದೆ.[1] ಇದಲ್ಲದೆ 'ಕಾಣಬೇಕು' ಎಂದು ಮಾಧ್ಯಂದಿನರು ಸ್ಪಷ್ಟವಾಗಿಯೇ ವಿಧಿಯನ್ನು ಪಠಿಸುತ್ತಾರೆ. ಆದ್ದರಿಂದ ಯಜ್ಞಾದಿಗಳ ಅಪೇಕ್ಷೆಯಿಲ್ಲವೆಂದರೂ ಶಮಾದಿಗಳನ್ನು ಬಯಸಬೇಕು.

---

1. ಹೀಗೆ ಆತ್ಮನನ್ನು ಅರಿತುಕೊಂಡರೆ ಪಾಪಕರ್ಮದಿಂದ ಲಿಪ್ತನಾಗುವದಿಲ್ಲವಾದ್ದರಿಂದ ಜಿಜ್ಞಾಸುವಾದವನು ಶಮಾದಿಗಳಿಂದ ಕೂಡಿರಬೇಕು -ಎಂದು ಪ್ರಕೃತವಾದದ್ದನ್ನು ಹೊಗಳಿರುತ್ತದೆ; ಆದ್ದರಿಂದ ಇಲ್ಲಿ ವಿಧಿಯಿರಬೇಕು, ಇಲ್ಲದಿದ್ದರೆ ಅದನ್ನು ಹೊಗಳಿದು ವ್ಯರ್ಥವಾಗುತ್ತದೆ. ನ್ಯಾ. ನಿ.

# ಯಜ್ಞಾದಿಗಳೂ ವಿದ್ಯೆಗೆ ಬೇಕು

(ಭಾಷ್ಯ)

೪೭೧. ಯಜ್ಞಾದೀನ್ಯಪಿ ತ್ವಪೇಕ್ಷಿತವ್ಯಾನಿ[1] । ಯಜ್ಞಾದಿಶ್ರುತೇರೇವ । ನನೂಕ್ತಮ್ ಯಜ್ಞಾದಿಭಿರ್ವಿವಿದಿಷನ್ತಿ ಇತ್ಯತ್ರ ನ ವಿಧಿರುಪಲಭ್ಯತೇ ಇತಿ । ಸತ್ಯಮುಕ್ತಮ್ । ತಥಾಪಿ ತ್ವಪೂರ್ವತ್ವಾತ್ ಸಂಯೋಗಸ್ಯ ವಿಧಿಃ ಪರಿಕಲ್ಪ್ಯತೇ । ನ ಹ್ಯಯಂ ಯಜ್ಞಾದೀನಾಂ ವಿವಿದಿಷಾಸಂಯೋಗಃ ಪೂರ್ವಂ ಪ್ರಾಪ್ತಃ, ಯೇನಾನೂದ್ಯೇತ । ಅತಸ್ಮಾತ್ ಪೂಷಾ ಪ್ರಪಿಷ್ಟಭಾಗೋಽದನ್ತಕೋ ಹಿ" (ತೈ. ಸಂ. ೨-೬-೮) ಇತ್ಯೇವಮಾದಿಷು ಚ ಅಶ್ರುತವಿಧಿಕೇಷ್ವಪಿ ವಾಕ್ಯೇಷು ಅಪೂರ್ವತ್ವಾತ್ ವಿಧಿಂ ಪರಿಕಲ್ಪ್ಯ "ಪೌಷ್ಣಂ ಪೇಷಣಂ ವಿಕೃತೌ ಪ್ರತೀಯೇತ" (ಜೈ. ಸೂ. ೩-೩-೩೪) ಇತ್ಯಾದಿ ವಿಚಾರಃ ಪ್ರಥಮೇ ತನ್ತ್ರೇ ಪ್ರವರ್ತಿತಃ । ತಥಾ ಚೋಕ್ತಮ್ "ವಿಧಿರ್ವಾ ಧಾರಣವತ್" (೩-೪-೨೦) ಇತಿ । ಸ್ಮೃತಿಷ್ವಪಿ ಭಗವದ್ಗೀತಾದ್ಯಾಸು ಅನಭಿಸಂಧಾಯ ಫಲಮ್ ಅನುಷ್ಠಿತಾನಿ ಯಜ್ಞಾದೀನಿ ಮುಮುಕ್ಷೋರ್ಜ್ಞಾನಸಾಧನಾನಿ ಭವನ್ತೀತಿ ಪ್ರಪಞ್ಚಿತಮ್ । ತಸ್ಮಾತ್ ಯಜ್ಞಾದೀನಿ ಶಮದಮಾದೀನಿ ಚ ಯಥಾಶ್ರಮಮ್ ಸರ್ವಾಣ್ಯೇವ ಆಶ್ರಮಕರ್ಮಾಣಿ ವಿದ್ಯೋತ್ಪತ್ತೌ ಅಪೇಕ್ಷಿತವ್ಯಾನಿ । ತತ್ರಾಪಿ ಏವಂವಿತ್ ಇತಿ ವಿದ್ಯಾಸಂಯೋಗಾತ್ ಪ್ರತ್ಯಾಸನ್ನಾನಿ ವಿದ್ಯಾಸಾಧನಾನಿ ಶಮಾದೀನಿ । ವಿವಿದಿಷಾಸಂಯೋಗಾತ್ತು ಬಾಹ್ಯತರಾಣಿ ಯಜ್ಞಾದೀನಿ ಇತಿ ವಿವೇಕ್ತವ್ಯಮ್ ॥

(ಭಾಷ್ಯಾರ್ಥ)

ಯಜ್ಞಾದಿಗಳನ್ನೂ (ಜ್ಞಾನವು) ಬಯಸಲೇಬೇಕು ; ಯಜ್ಞಾದಿಶ್ರುತಿಯೇ (ಇದಕ್ಕೆ ಪ್ರಮಾಣವು).

(ಆಕ್ಷೇಪ) :– "ಯಜ್ಞವೇ ಮುಂತಾದವುಗಳಿಂದ ತಿಳಿಯಲಿಚ್ಛಿಸುತ್ತಾರೆ" (ಬೃ. ೪-೪-೨೨) ಎಂಬಲ್ಲಿ ವಿಧಿಯೇನೂ ಕಾಣುವದಿಲ್ಲ ಎಂದು ಹೇಳಿದ್ದೆವಲ್ಲ !

(ಪರಿಹಾರ) :– ನಿಜ, ಹೇಳಿದ್ದಿರಿ. ಆದರೂ ಸಂಯೋಗವು ಅಪೂರ್ವವಾಗಿರುವದರಿಂದ ವಿಧಿಯನ್ನು ಕಲ್ಪಿಸಬೇಕು. ಯಜ್ಞಾದಿಗಳಿಗೆ (ಇಲ್ಲಿರುವ) ಈ ವಿವಿದಿಷಾಸಂಯೋಗವು (ಮೊದಲು) ಪ್ರಾಪ್ತವಾಗಿರುವದಿಲ್ಲ; ಹಾಗಿದ್ದರಲ್ಲವೆ, ಅದನ್ನು (ಇಲ್ಲಿ) ಅನುವಾದಮಾಡಿಕೊಂಡಿದೆ (ಎನ್ನಬಹುದು) ? "ಆದ್ದರಿಂದ ಪೂಷನು ಪ್ರಪಿಷ್ಟಭಾಗವುಳ್ಳವನು ; ಅವನಿಗೆ ಹಲ್ಲಿಲ್ಲವಷ್ಟೆ ?" (ತೈ. ಸಂ. ೩-೩-೩೪) ಎಂಬಿದೇ ಮುಂತಾದ ವಾಕ್ಯಗಳಲ್ಲಿ ವಿಧಿಶ್ರುತಿಯು ಇಲ್ಲದಿದ್ದರೂ

1. ಇಲ್ಲಿ ಒಂದು ಇತಿಯು ಮುದ್ರಿತಪುಸ್ತಕದಲ್ಲಿ ಹೆಚ್ಚಾಗಿದೆ.

ಅಪೂರ್ವವಾಗಿರುವದರಿಂದ[1] ವಿಧಿಯನ್ನು ಕಲ್ಪಿಸಿ "ಪೌಷ್ಣಂ ಪೇಷಣಂ ವಿಕೃತೌ ಪ್ರತೀಯೇತ" (ಜೈ.ಸೂ. ೩–೩–೩೪) ಪೂಷನ ಪೇಷಣವನ್ನು ವಿಕೃತಿಯಲ್ಲಿ ತಿಳಿಯತಕ್ಕದ್ದು[2] –ಎಂಬಿದೇ ಮುಂತಾದ ವಿಚಾರವನ್ನು ಪ್ರಥಮತಂತ್ರದಲ್ಲಿ[3] ಮಾಡಲಾಗಿದೆ. ಆದ್ದರಿಂದಲೇ "ಧಾರಣದಂತೆ ವಿಧಿಯೇ" (೩–೪–೨೦) ಎಂದು (ಇಲ್ಲಿಯೂ ಹಿಂದೆ) ಹೇಳಿದ್ದು. ಭಗವದ್ಗೀತೆಯೇ ಮುಂತಾದ ಸ್ಮೃತಿಗಳಲ್ಲಿಯೂ ಫಲದ ಇಚ್ಛೆಯಿಲ್ಲದೆ ಯಜ್ಞಾದಿಗಳನ್ನು ಅನುಷ್ಠಾನಮಾಡಿದರೆ ಮುಮುಕ್ಷುಗಳಿಗೆ ಜ್ಞಾನಕ್ಕೆ ಸಾಧನವಾಗುತ್ತವೆ ಎಂದು ವಿವರಿಸಿ ಹೇಳಿರುತ್ತದೆ. ಆದ್ದರಿಂದ ಆಯಾ ಆಶ್ರಮಕ್ಕೆ ತಕ್ಕಂತೆ ಯಜ್ಞಾದಿಗಳು ಶಮದಮಾದಿಗಳು ಮತ್ತು ಈ ಆಶ್ರಮಕರ್ಮಗಳೆಲ್ಲ ವಿದ್ಯೋತ್ಪತ್ತಿಗಾಗಿ ಬೇಕಾಗಿರುತ್ತವೆ. ಅದರಲ್ಲಿಯೂ 'ಹೀಗೆಂದು ತಿಳಿದವನು' ಎಂದು ವಿದ್ಯಾಸಂಯೋಗವಿರುವದರಿಂದ ಶಮಾದಿಗಳು ಹತ್ತಿರದ ವಿದ್ಯಾಸಾಧನಗಳು, ಯಜ್ಞಾದಿಗಳಾದರೋ ವಿವಿದಿಷಾಸಂಯೋಗವಿರುವದರಿಂದ ಹೊರಗಿನ (ಸಾಧನಗಳು) ಎಂದು ವಿವೇಚನೆಮಾಡಿ (ತಿಳಿಯ)ಬೇಕು.

## ೭. ಸರ್ವಾನ್ನಾನುಮತ್ಯಧಿಕರಣ (ಸೂ. ೨೮–೩೧)

### (ಪ್ರಾಣೋಪಾಸಕನಿಗೆ ಸರ್ವಾನ್ನಾಶನವಿಧಿಯಿಲ್ಲ)

**ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ॥ ೨೮ ॥**

೨೮. ಸರ್ವಾನ್ನಾನುಮತಿಯು ಪ್ರಾಣಾತ್ಯಯಕಾಲದಲ್ಲಿ, ಏಕೆಂದರೆ ಹಾಗೆಂದು ಶ್ರುತಿಯಿದೆ.

---

1. ಪೂಷವಾಕ್ಯವು ದರ್ಶಪೂರ್ಣಮಾಸಪ್ರಕರಣದಲ್ಲಿದೆ ; ಆದರೆ ದರ್ಶಪೂರ್ಣಮಾಸಗಳಲ್ಲಿ ಪೂಷನೆಂಬ ದೇವತೆಯಾಗಲಿ ಹಿಟ್ಟಿನ ಭಾಗವಾಗಲಿ ಇರುವದಿಲ್ಲ. ಆದ್ದರಿಂದ ಅದು ಅಪೂರ್ವ, ಮೊದಲು ಪ್ರಾಪ್ತವಾದದ್ದಲ್ಲ.

2. ಪ್ರಪಿಷ್ಟಭಾಗಃ ಎಂಬ ಸಮಾಸದಲ್ಲಿ ಪೂಷನಿಗೆ ಪ್ರಪಿಷ್ಟಸಂಬಂಧವು ತೋರುತ್ತದೆ; ಅದರಲ್ಲಿ ಯಾವ ಕಾಲದ ಪರಾಮರ್ಶವೂ ಇಲ್ಲ. ಆದ್ದರಿಂದ ಈ ದ್ರವ್ಯದೇವತಾಸಂಬಂಧವು ಯಾಗವಿಧಿಯನ್ನು ತಂದೊಡ್ಡುತ್ತದೆ. ಆದ್ದರಿಂದ ಇಲ್ಲಿ ವಿಧಿಕಲ್ಪಿಸಬೇಕು ; ಇದನ್ನು ವಿಕೃತಿಯಲ್ಲಿ ಪ್ರಯೋಗಮಾಡತಕ್ಕದ್ದು ಎಂದು ಸೂತ್ರದ ಅಭಿಪ್ರಾಯ. ರ.ಪ್ರ.

3. ಪೂರ್ವಮೀಮಾಂಸದಲ್ಲಿ.

## ಪೂರ್ವಪಕ್ಷ:
## ಸರ್ವಾನ್ನಭಕ್ಷಣವು ಪ್ರಾಣೋಪಾಸಕನಿಗೆ ವಿಹಿತ

(ಭಾಷ್ಯ)

೪೭೨. ಪ್ರಾಣಸಂವಾದೇ ಶ್ರೂಯತೇ ಛನ್ದೋಗಾನಾಮ್ "ನ ಹ ವಾ ಏವಂವಿದಿ ಕಿಂಚನಾನನ್ನಂ ಭವತಿ" (ಛಾಂ. ೫–೨–೧) ಇತಿ। ತಥಾ ವಾಜಸನೇಯಿನಾಮ್ "ನ ಹ ವಾ ಅಸ್ಯಾನನ್ನಂ ಜಗ್ಧಂ ಭವತಿ ನಾನನ್ನಂ ಪ್ರತಿಗೃಹೀತಮ್" (ಬೃ. ೬–೧–೧೪) ಇತಿ। ಸರ್ವಮೇವಾಸ್ಯ ಅದನೀಯಮೇವ ಭವತೀತ್ಯರ್ಥಃ। ಕಿಮಿದಂ ಸರ್ವಾನ್ನಾನುಜ್ಞಾನಂ ಶಮಾದಿವತ್ ವಿದ್ಯಾಙ್ಗಂ ವಿಧೀಯತೇ ಉತ ಸ್ತುತ್ಯರ್ಥಂ ಸಂಕೀರ್ತ್ಯತೇ ಇತಿ ಸಂಶಯೇ ವಿಧಿರಿತಿ ತಾವತ್ ಪ್ರಾಪ್ತಮ್। ತಥಾ ಹಿ ಪ್ರವೃತ್ತಿವಿಶೇಷಕರ ಉಪದೇಶೋ ಭವತಿ। ಅತಃ ಪ್ರಾಣವಿದ್ಯಾಸಂನಿಧಾನಾತ್ ತದಙ್ಗತ್ವೇನ ಇಯಂ ನಿಯಮನಿವೃತ್ತಿರುಪದಿಶ್ಯತೇ। ನನ್ವೇವಂ ಸತಿ ಭಕ್ಷ್ಯಾಭಕ್ಷ್ಯವಿಭಾಗಶಾಸ್ತ್ರವ್ಯಾಘಾತಃ ಸ್ಯಾತ್। ನೈಷ ದೋಷಃ। ಸಾಮಾನ್ಯವಿಶೇಷಭಾವಾದ್ ಬಾಧೋಪಪತ್ತೇಃ। ಯಥಾ ಪ್ರಾಣಿಹಿಂಸಾಪ್ರತಿಷೇಧಸ್ಯ ಪಶುಸಂಜ್ಞಪನವಿಧಿನಾ ಬಾಧಃ। ಯಥಾ ಚ "ನ ಕಾಂಚನ ಪರಿಹರೇತ್ ತದ್ವ್ರತಮ್" (ಛಾಂ. ೨–೧೩–೨) ಇತ್ಯನೇನ ವಾಮದೇವ್ಯವಿದ್ಯಾವಿಷಯೇಣ ಸರ್ವಸ್ತ್ರ್ಯಪರಿಹಾರವಚನೇನ ತತ್ಸಾಮಾನ್ಯವಿಷಯಂ ಗಮ್ಯಾಗಮ್ಯವಿಭಾಗಶಾಸ್ತ್ರಂ ಬಾಧ್ಯತೇ। ಏವಮ್ ಅನೇನಾಪಿ ಪ್ರಾಣವಿದ್ಯಾವಿಷಯೇಣ ಸರ್ವಾನ್ನಭಕ್ಷಣವಚನೇನ ಭಕ್ಷ್ಯಾಭಕ್ಷ್ಯವಿಭಾಗಶಾಸ್ತ್ರಂ ಬಾಧ್ಯೇತ ಇತಿ ॥

(ಭಾಷ್ಯಾರ್ಥ)

ಛಂದೋಗರ (ಶಾಖೆಯ) ಪ್ರಾಣಸಂವಾದದಲ್ಲಿ "ಹೀಗೆಂದು ಅರಿತಿರುವವನಿಗೆ ಯಾವದೂ ಅನನ್ನವಾಗುವದಿಲ್ಲ" (ಛಾಂ. ೫–೨–೧) ಎಂದು ಶ್ರುತಿಯಲ್ಲಿದೆ. ಹೀಗೆಯೇ ವಾಜಸನೇಯಿಗಳ (ಶಾಖೆಯಲ್ಲಿಯೂ) "ಇವನಿಗೆ ಅನನ್ನವನ್ನು ತಿಂದದ್ದೆಂಬುದಿಲ್ಲ, ಅನನ್ನವನ್ನು ಪರಿಗ್ರಹಿಸಿದ್ದೆಂಬುದೂ ಇಲ್ಲ" (ಬೃ. ೬–೧–೧೪) ಎಂದು (ಹೇಳಿದೆ). ಎಲ್ಲವೂ ಇವನಿಗೆ ತಿನ್ನಬಹುದಾದದ್ದೇ ಆಗಿರುತ್ತದೆ ಎಂದರ್ಥ. ಈ ಸರ್ವಾನ್ನಾನುಜ್ಞಾನವಿದೆಯಲ್ಲ (ಇದು) ಶಮಾದಿಗಳಂತೆ ವಿದ್ಯೆಗೆ ಅಂಗವಾಗಿ ವಿಹಿತವಾಗಿರುತ್ತದೆಯೆ, ಅಥವಾ ಸ್ತುತಿಗಾಗಿ ಹೇಳಿದೆಯೆ ?– ಎಂಬ ಸಂಶಯವುಂಟಾಗಲಾಗಿ[1] ವಿಧಿ(ಯಿದೆಂಬ ಪೂರ್ವಪಕ್ಷವು)

1. ಅಪೂರ್ವವಾಗಿರುವದರಿಂದ ಶಮಾದಿಗಳಂತೆ ವಿಧಿಯಾಗಬಹುದು ; ವಿಧಿಶ್ರುತಿಯಿಲ್ಲದ್ದರಿಂದ ಇದು ಅರ್ಥವಾದವೆನ್ನಲೂಬಹುದು. ಅದ್ದರಿಂದ ಇಲ್ಲಿ ಸಂಶಯ.

ಮೊದಲು ಬಂದೊದಗುತ್ತದೆ ಏಕೆಂದರೆ ಹಾಗಾದರೆ ಒಂದಾನೊಂದು ಪ್ರವೃತ್ತಿಯನ್ನುಂಟುಮಾಡುವ ಉಪದೇಶ(ವಿದಿ)ದಾಗುತ್ತದೆ. ಆದ್ದರಿಂದ ಪ್ರಾಣವಿದ್ಯೆಯ ಸಂನಿಧಿಯಲ್ಲಿರುವದರಿಂದ ಅದಕ್ಕೆ ಅಂಗವಾಗಿದೆ ಈ ನಿಯಮನಿವೃತ್ತಿಯನ್ನು ಉಪದೇಶಮಾಡಿದೆ (ಎನ್ನಬೇಕು).

(ಆಕ್ಷೇಪ) :– ಹೀಗಾದರೆ ಭಕ್ಷ್ಯಾಭಕ್ಷ್ಯವಿಭಾಗವನ್ನು ಮಾಡಿರುವ ಶಾಸ್ತ್ರಕ್ಕೆ ವಿರುದ್ಧವಾಗುವದಲ್ಲ !

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಸಾಮಾನ್ಯವಿಶೇಷಭಾವವಿರುವದರಿಂದ (ಅದು) ಬಾಧಿತವಾಗಬಹುದಾಗಿದೆ. ಹೇಗೆ ಪ್ರಾಣಿಗಳನ್ನು ಹಿಂಸೆಮಾಡಬಾರದೆಂಬ ಪ್ರತಿಷೇಧವು ಪಶುವನ್ನು (ಯಜ್ಞದಲ್ಲಿ) ಕೊಲ್ಲಬೇಕೆಂಬ ವಿಧಿಯಿಂದ ಬಾಧಿತವಾಗುತ್ತದೆಯೋ ಮತ್ತು ಹೇಗೆ "ಯಾರೊಬ್ಬಳನ್ನೂ ತ್ಯಜಿಸಬಾರದು, ಅದು ವ್ರತವು" (ಛಾಂ. ೨–೧೩–೨) ಎಂಬೀ ವಾಮದೇವ್ಯವಿಷಯವಾದ ಯಾವ ಸ್ತ್ರೀಯನ್ನೂ ಪರಿಹರಿಸಬಾರದೆಂಬ (ವಿಶೇಷ) ವಚನದಿಂದ ಆ ಸಾಮಾನ್ಯದ ವಿಷಯವಾದ ಗಮ್ಯಾಗಮ್ಯವಿಭಾಗಶಾಸ್ತ್ರವು ಬಾಧಿತವಾಗುತ್ತದೆಯೋ[1] ಹಾಗೆಯೇ ಎಲ್ಲಾ ಅನ್ನವನ್ನೂ ಭಕ್ಷಿಸಬಹುದೆಂಬ ಪ್ರಾಣವಿದ್ಯಾವಿಷಯದ ಈ ವಚನದಿಂದಲೂ ಭಕ್ಷ್ಯಾಭಕ್ಷ್ಯವಿಭಾಗಶಾಸ್ತ್ರವು ಬಾಧಿತವಾಗಬಹುದಾಗಿದೆ.

## ಸಿದ್ಧಾಂತ: ಸರ್ವಾನ್ನಾನುಮತಿಯು ಅರ್ಥವಾದ, ವಿಧಿಯಲ್ಲ

(ಭಾಷ್ಯ)

೪೭೩. ಏವಂ ಪ್ರಾಪ್ತೇ ಬ್ರೂಮಃ। ನೇದಂ ಸರ್ವಾನ್ನಾನುಜ್ಞಾನಂ ವಿಧೀಯತ ಇತಿ। ನ ಹ್ಯತ್ರ ವಿಧಾಯಕಃ ಶಬ್ದ ಉಪಲಭ್ಯತೇ। "ನ ಹ ವಾ ಏವಂ ವಿದಿ ಕಿಂಚನಾನನ್ನಂ ಭವತಿ" (ಛಾಂ. ೫–೨–೧) ಇತಿ ವರ್ತಮಾನಾಪದೇಶಾತ್। ನ ಚಾಸತ್ಯಾಮಪಿ ವಿಧಿಪ್ರತೀತೌ ಪ್ರವೃತ್ತಿವಿಶೇಷಕರತ್ವಲೋಭೇನೈವ ವಿಧಿರಭ್ಯುಪಗನ್ತುಂ ಶಕ್ಯತೇ। ಅಪಿ ಚ ಶ್ವಾದಿಮರ್ಯಾದಂ ಪ್ರಾಣಸ್ಯಾನ್ನಮಿತ್ಯುಕ್ತ್ವಾ ಇದಮುಚ್ಯತೇ ನೈವಂವಿದಃ ಕಿಂಚಿದನನ್ನಂ ಭವತಿ ಇತಿ। ನ ಚ ಶ್ವಾದಿಮರ್ಯಾದಮನ್ನಂ ಮಾನುಷೇಣ ದೇಹೇನೋಪಭೋಕ್ತುಂ

---

1. ವಾಮದೇವ್ಯಸಾಮವನ್ನು ಉಪಾಸನೆಮಾಡುವವನು ಸಮಾಗಮಕ್ಕಾಗಿ ತನ್ನ ಬಳಿಗೆ ಬಂದ ಯಾವಳನ್ನೂ ಬಿಡಕೂಡದು –ಎಂಬುದೊಂದು ವ್ರತವನ್ನು ಉಪದೇಶಿಸಿದೆ. ಸ್ತ್ರೀಯರಲ್ಲಿ ಇವರು ಗಮ್ಯರು ಇವರು ಅಗಮ್ಯರು –ಎಂಬ ಸಾಮಾನ್ಯ ಶಾಸ್ತ್ರಕ್ಕೆ ಇದು ಬಾಧಕವೆಂದು ಅಭಿಪ್ರಾಯ.

ಶಕ್ಯತೇ। ಶಕ್ಯತೇ ತು ಪ್ರಾಣಸ್ಯಾನ್ನಮಿದಂ ಸರ್ವಮಿತಿ ವಿಚಿನ್ತಯಿತುಮ್। ತಸ್ಮಾತ್ ಪ್ರಾಣಾನ್ನವಿಜ್ಞಾನಪ್ರಶಂಸಾರ್ಥೋಽಯಮರ್ಥವಾದಃ, ನ ಸರ್ವಾನ್ನಾನುಜ್ಞಾನವಿಧಿಃ, ತದ್ದರ್ಶಯತಿ 'ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ' ಇತಿ। ಏತದುಕ್ತಂ ಭವತಿ। ಪ್ರಾಣಾತ್ಯಯ ಏವ ಹಿ ಪರಸ್ಯಾಮಾಪದಿ ಸರ್ವಮನ್ನಮ್ ಅದನೀಯತ್ವೇನಾಭ್ಯನುಜ್ಞಾಯತೇ। ತದ್ದರ್ಶನಾತ್। ತಥಾ ಹಿ ಶ್ರುತಿಃ ಚಾಕ್ರಾಯಣಸ್ಯ ಋಷೇಃ ಕಷ್ಟಾಯಾಮವಸ್ಥಾಯಾಮ್ ಅಭಕ್ಷ್ಯಭಕ್ಷಣೇ ಪ್ರವೃತ್ತಿಂ ದರ್ಶಯತಿ "ಮಟಚೀಹತೇಷು ಕುರುಷು" (ಛಾಂ. ೧–೧೦–೧) ಇತ್ಯಸ್ಮಿನ್ ಬ್ರಾಹ್ಮಣೇ। ಚಾಕ್ರಾಯಣಃ ಕಿಲ ಋಷಿಃ ಆಪದ್ಗತ ಇಭ್ಯೇನ ಸಾಮಿಖಾದಿತಾನ್ ಕುಲ್ಮಾಷಾನ್ ಚಖಾದ। ಅನುಪಾನಂ ತು ತದೀಯಮ್ ಉಚ್ಛಿಷ್ಟದೋಷಾತ್ ಪ್ರತ್ಯಾಚಚಕ್ಷೇ। ಕಾರಣಂ ಚಾತ್ರೋವಾಚ "ನ ವಾ ಅಜೀವಿಷ್ಯಮಿಮಾನಖಾದನ್" (ಛಾಂ. ೧–೧೦–೪) ಇತಿ। "ಕಾಮೋ ಮ ಉದಪಾನಮ್" (ಛಾಂ. ೧–೧೦–೪) ಇತಿ ಚ। ಪುನಶ್ಚೋತ್ತರೇದ್ಯುಸ್ತಾನೇವ ಸ್ವಪರೋಚ್ಛಿಷ್ಟಾನ್ ಪರ್ಯುಷಿತಾನ್ ಕುಲ್ಮಾಷಾನ್ ಭಕ್ಷಯಾಂಬಭೂವ ಇತಿ। ತದೇತತ್ ಉಚ್ಛಿಷ್ಟೋಚ್ಛಿಷ್ಟಪರ್ಯುಷಿತಭಕ್ಷಣಂ ದರ್ಶಯನ್ತ್ಯಾಃ ಶ್ರುತೇಃ ಆಶಯಾತಿಶಯೋ ಲಕ್ಷ್ಯತೇ ಪ್ರಾಣಾತ್ಯಯಪ್ರಸಙ್ಗೇ ಪ್ರಾಣಸಂಧಾರಣಾಯ ಅಭಕ್ಷ್ಯಮಪಿ ಭಕ್ಷಯಿತವ್ಯಮ್ ಇತಿ। ಸ್ವಸ್ಥಾವಸ್ಥಾಯಾಂ ತು ತನ್ನ ಕರ್ತವ್ಯಂ ವಿದ್ಯಾವತಾಪಿ ಇತ್ಯನುಪಾನಪ್ರತ್ಯಾಖ್ಯಾನಾದ್ ಗಮ್ಯತೇ। ತಸ್ಮಾತ್, ಅರ್ಥವಾದೋ "ನ ಹ ವಾ ಏವಂವಿದಿ" (ಛಾಂ. ೫–೨–೧) ಇತ್ಯೇವಮಾದಿಃ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತ)ವನ್ನು ಹೇಳುತ್ತೇವೆ. ಈ ಸರ್ವಾನ್ನಾನುಮತಿಯು ವಿಹಿತವಾಗಿ(ರುವದ)ಲ್ಲ; ಏಕೆಂದರೆ ಇಲ್ಲಿ ವಿಧಾಯಕಶಬ್ದವು ಕಾಣುವದಿಲ್ಲ, "ಹೀಗೆಂದು ತಿಳಿದಿರುವವನಿಗೆ ಯಾವದೂ ಅನನ್ನವಾಗುವದಿಲ್ಲ" (ಛಾಂ. ೫–೨–೧) ಎಂದು ವರ್ತಮಾನಾಪದೇಶವಿರುವದರಿಂದ (ಅದು ವಿಧಿಯಲ್ಲ). ವಿಧಿಯ ಪ್ರತೀತಿಯು ಇಲ್ಲದಿರುವಾಗಲೂ ಪ್ರವೃತ್ತಿವಿಶೇಷವನ್ನುಂಟುಮಾಡುವದೆಂಬ ಆಶೆಯಿಂದಲೇ ವಿಧಿಯನ್ನು ಒಪ್ಪುವದಾಗಲಾರದು. ಇದಲ್ಲದೆ ನಾಯಿಯವರೆಗೂ ಪ್ರಾಣನಿಗೆ ಅನ್ನವೆಂದು ಹೇಳಿದ ಬಳಿಕ "ಹೀಗೆಂದು ತಿಳಿದವನಿಗೆ ಯಾವದೂ ಅನನ್ನವಾಗುವದಿಲ್ಲ" ಎಂದಿದೆ. ಆದರೆ ನಾಯಿಯವರೆಗಿನ ಅನ್ನವನ್ನು ಮಾನುಷದೇಹದಿಂದ ಉಪಭೋಗಿಸುವದಕ್ಕೆ ಆಗಲಾರದು, ಆದರೆ ಇದೆಲ್ಲವೂ ಪ್ರಾಣನಿಗೆ ಆದರೆ ಅನ್ನವೇ ಎಂದು ಚಿಂತನೆಮಾಡುವದಕ್ಕೆ ಆಗುತ್ತದೆ. ಆದ್ದರಿಂದ ಪ್ರಾಣಾನ್ನವಿಜ್ಞಾನವನ್ನು

ಹೊಗಳುವದಕ್ಕಾಗಿ ಬಂದಿರುವ ಅರ್ಥವಾದವಿದು, ಸರ್ವಾನ್ನವೂ (ಆಗ ಬಹುದೆಂಬ) ಅನುಜ್ಞಾನದ ವಿಧಿಯಲ್ಲ.

ಇದನ್ನು 'ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ' (ಸರ್ವಾನ್ನಕ್ಕೂ ಅನುಮತಿಯಿತ್ತಿರುವದೂ ಪ್ರಾಣವು ಹೋಗುವ ಕಾಲದಲ್ಲಿ) ಎಂದು (ಸೂತ್ರಕಾರರು) ತಿಳಿಸಿರುತ್ತಾರೆ. (ಇಲ್ಲಿ) ಇಷ್ಟನ್ನು ಹೇಳಿದಂತಾಗಿದೆ: ಪ್ರಾಣವು ಹೋಗುವ ಪರಮಾಪತ್ತಿನಲ್ಲಿಯೇ ಅಭಕ್ಷ್ಯಭಕ್ಷಣದಲ್ಲಿ ಪ್ರವೃತ್ತಿಯನ್ನು "ಕುರುದೇಶದ (ಪೈರುಗಳು) ಸಿಡಿಲಿನಿಂದ ನಾಶವಾಗಿರುವಲ್ಲಿ....." (ಛಾಂ. ೧-೧೦-೧) ಎಂಬೀ ಬ್ರಾಹ್ಮಣದಲ್ಲಿ ತಿಳಿಸಿರುತ್ತದೆ. ಚಾಕ್ರಾಯಣನೆಂಬ ಋಷಿಯು ಆಪತ್ತನ್ನು ಹೊಂದಿ ಮಾವಟಿಗನು ಅರ್ಧತಿಂದಿದ್ದ ಹುರುಳಿಯನ್ನು ತಿಂದನು; ಆದರೆ (ತಿಂದ)ಬಳಿಕ ಕುಡಿಯುವ (ನೀರ)ನ್ನು ಬೇಡವೆಂದನು. (ಇದಕ್ಕೆ) ಕಾರಣವನ್ನು "ಇದನ್ನು ತಿನ್ನದಿದ್ದರೆ ಬದುಕುತ್ತಲೇ ಇರಲಿಲ್ಲ" ಎಂದೂ "ನನಗೆ ಕುಡಿಯುವ ನೀರುಮಾತ್ರ ಹೇಗಾದರೂ (ಸಿಕ್ಕುತ್ತದೆ)" (ಛಾಂ.೧-೧೦-೪) ಎಂದೂ ಹೇಳಿದನು. ಮತ್ತೆ ಮಾರನೆಯ ದಿನ ತನ್ನ ಮತ್ತು ಮತ್ತೊಬ್ಬರ ಉಚ್ಛಿಷ್ಟವೂ ತಂಗಳೂ ಆಗಿದ್ದ ಅದೇ (ಹುರುಳಿ)ಯನ್ನೇ ತಿಂದನು ಎಂದು (ಅಲ್ಲಿ ಹೇಳಿದೆ). ಈ ಉಚ್ಛಿಷ್ಟದಲ್ಲಿಯೂ ಉಚ್ಛಿಷ್ಟವಾಗಿ ತಂಗಳಾಗಿದ್ದದ್ದನ್ನು ತಿಂದನೆಂದು ತಿಳಿಸುವ ಶ್ರುತಿಗೆ ಪ್ರಾಣವು ಹೋಗುವ ಪ್ರಸಂಗವಿರುವಲ್ಲಿ ಪ್ರಾಣಧಾರಣೆಗಾಗಿ ಅಭಕ್ಷ್ಯವನ್ನಾದರೂ ತಿನ್ನಬಹುದು ಎಂದು ಆಶಯವಿಶೇಷವು ಕಂಡುಬರುತ್ತದೆ. ಸ್ವಸ್ಥಾವಸ್ಥೆಯಲ್ಲಾದರೆ ಜ್ಞಾನಿಯೂ ಇದನ್ನು ಮಾಡಬಾರದೆಂಬುದು ಅನುಪಾನತಿರಸ್ಕಾರದಿಂದ ನಿಶ್ಚಿತವಾಗುತ್ತದೆ.

ಆದ್ದರಿಂದ "ಹೀಗೆಂದು ತಿಳಿದಿರುವವನಿಗೆ......" (ಛಾಂ. ೫-೨-೧) ಎಂಬಿದೇ ಮುಂತಾದದ್ದು ಅರ್ಥವಾದವೇ.

**ಅಬಾಧಾಚ್ಚ ॥ ೨೯ ॥**

೨೯. ಬಾಧಿಸದಿರುವದರಿಂದಲೂ (ಹೀಗೆ).

## ಸರ್ವಾನ್ನಾನುಮತಿಯು ಅರ್ಥವಾದವೆಂದರೆ ಪ್ರಯೋಜನ

**(ಭಾಷ್ಯ)**

**೪೭೩. ಏವಂ ಚ ಸತಿ "ಆಹಾರಶುದ್ಧೌ ಸತ್ತ್ವಶುದ್ಧಿಃ" (ಛಾಂ. ೭-೨೬-೨) ಇತ್ಯೇವಮಾದಿ ಭಕ್ಷ್ಯಾಭಕ್ಷ್ಯವಿಭಾಗಶಾಸ್ತ್ರಮ್ ಅಬಾಧಿತಂ ಭವಿಷ್ಯತಿ ॥**

(ಭಾಷ್ಯಾರ್ಥ)

ಮತ್ತು ಹೀಗಾದರೆ "ಆಹಾರಶುದ್ಧಿಯಾದರೆ ಸತ್ತ್ವಶುದ್ಧಿ" (ಛಾಂ. ೭–೨೬–೨) ಎಂಬಿದೇ ಮುಂತಾದ ಭಕ್ಷ್ಯಾಭಕ್ಷ್ಯವಿಭಾಗದ ಶಾಸ್ತ್ರವೂ ಬಾಧಿತವಾಗದೆ ಇರುತ್ತದೆ.

**ಅಪಿ ಚ ಸ್ಮರ್ಯತೇ ॥ ೩೦ ॥**

೩೦. ಇದಲ್ಲದೆ ಸ್ಮೃತಿಯೂ ಇದೆ.

## ಅನನ್ನವರ್ಜನಕ್ಕೆ ಸ್ಮೃತಿಪ್ರಮಾಣ

(ಭಾಷ್ಯ)

೪೭೪. ಅಪಿ ಚ ಆಪದಿ ಸರ್ವಾನ್ನಭಕ್ಷಣಮಪಿ ಸ್ಮರ್ಯತೇ ವಿದುಷೋಽವಿದುಷಶ್ಚಾವಿಶೇಷೇಣ "ಜೀವಿತಾತ್ಯಯಮಾಪನ್ನೋ ಯೋಽನ್ನಮತ್ತಿ ಯತಸ್ತತಃ। ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಮ್ಭಸಾ" (ಮನು. ೧೦–೧೦೪?)[1] ಇತಿ। ತಥಾ "ಮದ್ಯಂ ನಿತ್ಯಂ ಬ್ರಾಹ್ಮಣಃ" (ಗೌ. ಧ. ೨–೨೬, ೧–೨–೨೫) "ಸುರಾಪಸ್ಯ ಬ್ರಾಹ್ಮಣಸ್ಯೋಷ್ಣಮಾಸಿಞ್ಚೇಯುಃ......" (ಗೌ.ಧ. ೨–೩–೧, ೩–೫–೧), "ಸುರಾಪಾಃ ಕೃಮಯೋ ಭವನ್ತ್ಯಭಕ್ಷ್ಯಭಕ್ಷಣಾತ್" (ಮನು. ೧೨–೫೬ ?) ಇತಿ ಚ ಸ್ಮರ್ಯತೇ ವರ್ಜನಮನನ್ನಸ್ಯ ॥

(ಭಾಷ್ಯಾರ್ಥ)

ಇದಲ್ಲದೆ ಆಪತ್ತಿನಲ್ಲಿ ಜ್ಞಾನಿಯೂ ಅಜ್ಞಾನಿಯೂ ಸಮಾನವಾಗಿಯೇ ಎಲ್ಲಾ ಅನ್ನವನ್ನೂ ತಿನ್ನಬಹುದೆಂದೂ "ಪ್ರಾಣಾತ್ಯಯವನ್ನು ಪಡೆದವನು ಯಾವನಿಂದ ಅನ್ನವನ್ನು ತಿಂದರೂ ಕಮಲದೆಲೆಗೆ ನೀರಿನಿಂದ ಲೇಪವಾಗದಿರುವಂತೆ ಅವನಿಗೆ ಅದರಿಂದ ಲೇಪವಾಗುವದಿಲ್ಲ" (ಮನು. ೧೦–೧೦೪) ಎಂಬ ಸ್ಮೃತಿಯುಲ್ಲಿದೆ. ಇದರಂತೆ "ಬ್ರಾಹ್ಮಣನು ಯಾವಾಗಲೂ ಮದ್ಯವನ್ನು (ಬಿಡಬೇಕು)" (ಗೌ. ಧ. ೨–೨೬), "ಸುರಾಪಾನಮಾಡಿದ ಬ್ರಾಹ್ಮಣನಿಗೆ ಬಿಸಿಯ (ಸುರೆಯನ್ನು) ಹಾಕಬೇಕು" (ಗೌ.ಧ. ೨೩–೧), "ಸುರಾಪಾನಮಾಡಿದವರು ಅಭಕ್ಷ್ಯಭಕ್ಷಣದಿಂದ ಕ್ರಿಮಿಗಳಾಗುತ್ತಾರೆ" (ಮನು. ೧೨–೫೬ ?)[2] ಎಂದೂ ಅನನ್ನವನ್ನು ತ್ಯಜಿಸಬೇಕೆಂದು ಸ್ಮೃತಿಯುಲ್ಲಿದೆ.

---

1. ಅಚ್ಚಿನ ಮನುಸ್ಮೃತಿಯಲ್ಲಿ 'ಆಕಾಶಮಿವ ಪಙ್ಕೇನ ನ ಸ ಪಾಪೇನ ಲಿಪ್ಯತೇ' ಎಂದು ಉತ್ತರಾರ್ಧವಿದೆ. ಭಾರತದಲ್ಲಿ ಅಥವಾ ಮತ್ತೊಂದು ಸ್ಮೃತಿಯಲ್ಲಿ ಭಾಷ್ಯದ ಪಾಠವಿದ್ದರೂ ಇರಬಹುದು.

2. "ಕ್ರಿಮಿಕೀಟಪತಙ್ಗಾನಾಮ್" ಎಂದು ಮುಂತಾಗಿ ಮನುವಾಕ್ಯ; ಭಾಷ್ಯಮೂಲದಲ್ಲಿ 'ಕ್ರಿಮ್ಯಾದಯೋ ಭವನ್ತಿ' ಎಂದಿತ್ತೋ ಕ್ರಿಮಯೋ ಎಂದೇ ಇತ್ತೋ ತಿಳಿಯದು.

**ಶಬ್ದಶ್ಚಾತೋಽಕಾಮಕಾರೇ ॥ ೩೧ ॥**

೩೧. ಆದ್ದರಿಂದ ಕಾಮಕಾರವನ್ನು ಮಾಡಬಾರದು ಎಂಬ ಶಬ್ದವೂ ಇದೆ.

## ಸ್ವೇಚ್ಛಾಚರಣನಿಷೇಧಕಶ್ರುತಿಯೂ ಇದೆ

(ಭಾಷ್ಯ)

೪೭೫. ಶಬ್ದಶ್ಚ ಅನನ್ನಸ್ಯ ಪ್ರತಿಷೇಧಕಃ ಕಾಮಕಾರನಿವೃತ್ತಿಪ್ರಯೋಜನಃ **ಕಾಠಕಾನಾಂ ಸಂಹಿತಾಯಾಂ** ಶ್ರೂಯತೇ "ತಸ್ಮಾದ್ ಬ್ರಾಹ್ಮಣಃ ಸುರಾಂ ನ ಪಿಬತಿ" (ಕಾ. ಸಂ. ೧೨–೧೨–೪)[1] ಇತಿ । ಸೋಽಪಿ "ನ ಹ ವಾ ಏವಂ ವಿದಿ" (ಛಾಂ. ೫–೨–೧) ಇತ್ಯಸ್ಯಾರ್ಥವಾದತ್ವಾತ್ ಉಪಪನ್ನತರೋ ಭವತಿ । ತಸ್ಮಾತ್ ಏವಂ ಜಾತೀಯಕಾ ಅರ್ಥವಾದಾಃ, ನ ವಿಧಯ ಇತಿ ॥

(ಭಾಷ್ಯಾರ್ಥ)

ಯಥೇಷ್ಟಪ್ರವೃತ್ತಿಯನ್ನು ತೊಲಗಿಸುವ ಪ್ರಯೋಜನವುಳ್ಳದ್ದಾಗಿ ಅನನ್ನವನ್ನು ಪ್ರತಿಷೇಧಿಸುವ ಶಬ್ದವೂ **ಕಾಠಕಸಂಹಿತೆಯಲ್ಲಿ** ಶ್ರುತವಾಗಿರುತ್ತದೆ. (ಅಲ್ಲಿ) "ಆದ್ದರಿಂದ ಬ್ರಾಹ್ಮಣನು (ನನಗೆ ಪಾಪದ ಸಂಸರ್ಗವಾದೀತೆಂಬ ಅಂಜಿಕೆಯಿಂದ) ಸುರೆಯನ್ನು ಕುಡಿಯುವದಿಲ್ಲ" (ಕಾ. ಸಂ. ೧೨–೧೨–೪) ಎಂದಿದೆ. ಅದೂ "ಹೀಗೆಂದು ತಿಳಿದಿರುವವನಿಗೆ (ಯಾವದೂ ಅನನ್ನವಾಗುವದಿಲ್ಲ" (ಛಾಂ. ೫–೨–೧) ಎಂಬಿದು ಅರ್ಥವಾದವಾಗಿರುವದರಿಂದ ಯುಕ್ತತರವಾಗುತ್ತದೆ. ಆದ್ದರಿಂದ ಈ ಜಾತಿಯ (ವಾಕ್ಯ)ಗಳು ಅರ್ಥವಾದವೇ ಹೊರತು ವಿಧಿಗಳಲ್ಲ.

### ೮. ಆಶ್ರಮಕರ್ಮಾಧಿಕರಣ (ಸೂ. ೩೨–೩೫)

(ಅಮುಮುಕ್ಷುಗಳೂ ಆಶ್ರಮಕರ್ಮವನ್ನು ಮಾಡಬೇಕು)

**ವಿಹಿತತ್ವಾಚ್ಚಾಶ್ರಮಕರ್ಮಾಪಿ ॥ ೩೨ ॥**

೩೨. ವಿಧಿಸಿರುವದರಿಂದ ಆಶ್ರಮಕರ್ಮವು (ಅಮುಮುಕ್ಷು)ವಿಗೂ (ಉಂಟು).

1. "ತಸ್ಮಾಜ್ಜ್ಯಾಯಾಂಶ್ಚ ಕನೀಯಾಗ್ಂಶ್ಚ ಸ್ನುಷಾ ಚ ಶ್ವಶುರಶ್ಚ ಸುರಾಂ ಪೀತ್ವಾ ಸಹ ಲಾಲಪತ ಆಸತೇ ಪಾಪ್ಮಾ ವೈ ಮಾಲ್ವ್ಯಂ ತಸ್ಮಾದ್ ಬ್ರಾಹ್ಮಣಃ ಸುರಾಂ ನ ಪಿಬತಿ ಪಾಪ್ಮನಾ ನೇತ್ಸಂಸೃಜ್ಯಾ ಇತಿ" ಎಂಬುದು ಸಂಹಿತಾವಾಕ್ಯಶೇಷ; ಬರೆದವರ ಕೈತಪ್ಪಿನಿಂದ 'ಪಿಬೇತ್' ಎಂದಾಗಿರಬೇಕೆಂದು ನಿಶ್ಚಯಿಸಿ 'ಪಿಬೇತ್' ಎಂಬುದನ್ನು ಪಿಬತಿ ಎಂದು ತಿದ್ದಿಕೊಂಡಿದೆ.

(ಭಾಷ್ಯ)

೪೭೬. "ಸರ್ವಾಪೇಕ್ಷಾ ಚ..." (೩-೪-೨೬) ಇತ್ಯತ್ರ ಆಶ್ರಮ ಕರ್ಮಣಾಂ ವಿದ್ಯಾಸಾಧನತ್ವಮ್ ಅವಧಾರಿತಮ್। ಇದಾನೀಂ ತು ಕಿಮ್ ಅಮುಮುಕ್ಷೋರಪಿ ಆಶ್ರಮಮಾತ್ರನಿಷ್ಠಸ್ಯ ವಿದ್ಯಾಮ್ ಅಕಾಮಯಮಾನಸ್ಯ ತಾನ್ಯನುಷ್ಠೇಯಾನಿ ಉತಾಹೋ ನೇತಿ ಚಿನ್ತ್ಯತೇ। ತತ್ರ "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ" (ಬೃ. ೪-೪-೨೨) ಇತ್ಯಾದಿನಾ ಆಶ್ರಮ ಕರ್ಮಣಾಂ ವಿದ್ಯಾಸಾಧನತ್ವೇನ ವಿಹಿತತ್ವಾತ್ ವಿದ್ಯಾಮ್ ಅನಿಚ್ಛತಃ ಫಲಾನ್ತರಂ ಕಾಮಯಮಾನಸ್ಯ ನಿತ್ಯಾನಿ ಅನನುಷ್ಠೇಯಾನಿ। ಅಥ ತಸ್ಯಾಪ್ಯನುಷ್ಠೇಯಾನಿ ನ ತರ್ಹಿ ಏಷಾಂ ವಿದ್ಯಾಸಾಧನತ್ವಂ ನಿತ್ಯಾನಿತ್ಯಸಂಯೋಗ ವಿರೋಧಾತ್ ಇತಿ। ಅಸ್ಯಾಂ ಪ್ರಾಪ್ತೌ ಪಠತಿ। (ವಿಹಿತತ್ವಾಚ್ಚಾಶ್ರಮ ಕರ್ಮಾಪಿ)। ಆಶ್ರಮಮಾತ್ರನಿಷ್ಠಸ್ಯಾಪಿ ಅಮುಮುಕ್ಷೋಃ ಕರ್ತವ್ಯಾನ್ಯೇವ ನಿತ್ಯಾನಿ ಕರ್ಮಾಣಿ "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" (ಐ.ಬ್ರಾ. ?) ಇತ್ಯಾದಿನಾ ವಿಹಿತತ್ವಾತ್। ನ ಹಿ ವಚನಸ್ಯ ಅತಿಭಾರೋ ನಾಮ ಕಶ್ಚಿದಸ್ತಿ ॥

(ಭಾಷ್ಯಾರ್ಥ)

"ಸರ್ವಾಪೇಕ್ಷಾ ಚ" (೩-೪-೨೬) ಎಂಬ (ಸೂತ್ರ)ದಲ್ಲಿ ಆಶ್ರಮಕರ್ಮಗಳು ವಿದ್ಯೆಗೆ ಸಾಧನವೆಂದು ನಿರ್ಧರಿಸಿದ್ದಾಯಿತು. ಈಗಲಾದರೋ ಮುಮುಕ್ಷುವಲ್ಲದೆ ಆಶ್ರಮಮಾತ್ರದಲ್ಲಿ ನಿಷ್ಠನಾಗಿ ವಿದ್ಯೆಯನ್ನು ಬಯಸದವನೂ ಅವನ್ನು ಮಾಡಬೇಕೆ, ಅಥವಾ ಬಾರದೆ? -ಎಂಬಿದನ್ನು ವಿಚಾರ ಮಾಡಲಾಗುತ್ತದೆ. ಇಲ್ಲಿ (ಮೊದಲು ತೋರುವದೇನೆಂದರೆ), "ಆ ಇವನನ್ನು ಬ್ರಾಹ್ಮಣರು ವೇದಾನುವಚನದಿಂದ ತಿಳಿಯಲಿಚ್ಛಿಸುತ್ತಾರೆ" (ಬೃ.೪-೪-೨೨) ಎಂದು ಮುಂತಾಗಿರುವ ವಾಕ್ಯದಿಂದ ವಿದ್ಯೆಗೆ ಸಾಧನವಾಗಿಯೇ (ಇವನ್ನು) ವಿಧಿಸಿರುವದರಿಂದ ವಿದ್ಯೆಯನ್ನು ಬಯಸದೆ ಮತ್ತೆ ಬೇರೊಂದು ಫಲವನ್ನು ಬಯಸುತ್ತಿರುವವನು ನಿತ್ಯ(ಕರ್ಮ)ಗಳನ್ನು ಮಾಡಬೇಕಾದದ್ದಿಲ್ಲ. ಹಾಗಿಲ್ಲದೆ ಅವನೂ (ಅವನ್ನು) ಮಾಡಬೇಕು ಎನ್ನುವದಾದರೆ ಅವು ವಿದ್ಯೆಗೆ ಸಾಧನವಾಗಲಾರವು; ಏಕೆಂದರೆ (ಆಗ) ನಿತ್ಯಾನಿತ್ಯಸಂಯೋಗವೆಂಬ ವಿರೋಧವುಂಟಾಗುವದು[2].

---

1. ಇದು ಬಹ್ವೃಚಬ್ರಾಹ್ಮಣದಲ್ಲಿದೆ ಎಂದು ಶಾಬರಭಾಷ್ಯದಲ್ಲಿದೆ; ನಮಗೆ ಸ್ಥಾನವು ದೊರೆತಿಲ್ಲ.

2. ಜ್ಞಾನಕ್ಕಾಗಿ ಮಾಡಿದರೆ ಇವು ಅನಿತ್ಯ; ಏಕೆಂದರೆ ಆ ಕಾಮವು ಎಲ್ಲರಿಗೂ ಬರುವಂತಿಲ್ಲ. ಯಾವಜ್ಜೀವಶ್ರುತಿಯಿಂದ ಇವು ನಿತ್ಯ -ಹೀಗೆ ಎರಡೂ ಒಕ್ಕಡೆಯಲ್ಲಿ ಸೇರುವದೆಂಬ ವಿರೋಧವಾಗುವದು.

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು ವಿಹಿತತ್ವಾಚ್ಚಾಶ್ರಮಕರ್ಮಾಪಿ ಎಂಬ ಸೂತ್ರವನ್ನು) ಪಠಿಸಿರುತ್ತಾರೆ. (ಇದರ ಅರ್ಥವೇನೆಂದರೆ), ಆಶ್ರಮಮಾತ್ರನಿಷ್ಠನಾಗಿರುವ ಅಮುಮುಕ್ಷುವೂ ನಿತ್ಯಕರ್ಮಗಳನ್ನು ಮಾಡಲೇಬೇಕು ; ಏಕೆಂದರೆ ಬದುಕಿರುವವರೆಗೂ ಅಗ್ನಿಹೋತ್ರ ಹೋಮವನ್ನು ಮಾಡಬೇಕು" (ಐ. ಬ್ರಾ. ?)— ಎಂಬಿದೇ ಮುಂತಾದ (ವಾಕ್ಯದಿಂದ ಅವನ್ನು) ವಿಧಿಸಿರುತ್ತದೆ, ವಚನಕ್ಕೆ ಭಾರವೆನ್ನುವದು ಯಾವದೂ ಇಲ್ಲವಷ್ಟೆ[1].

**ಸಹಕಾರಿತ್ವೇನ ಚ || ೩೩ ||**

೩೩. ಸಹಕಾರಿಗಳಾಗಿಯೂ (ಇರಬಹುದು).

## ಕರ್ಮಗಳ ವಿದ್ಯೆಗೆ ಸಹಕಾರಿಗಳೂ ಆಗಿರುತ್ತವೆ

( ಭಾಷ್ಯ )

೪೭೭. ಅಥ ಯದುಕ್ತಂ ನೈವಂ ಸತಿ ವಿದ್ಯಾಸಾಧನತ್ವಮ್ ಏಷಾಂ ಸ್ಯಾತ್ ಇತಿ। ಅತ ಉತ್ತರಂ ಪಠತಿ। ಸಹಕಾರಿತ್ವೇನ ಚ ವಿದ್ಯಾಸಹಕಾರೀಣಿ ಚ ಏತಾನಿ ಸ್ಯುರ್ವಿಹಿತತ್ವಾದೇವ "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ" (ಬೃ. ೪–೪–೨೨) ಇತ್ಯಾದಿನಾ। ತದುಕ್ತಮ್ "ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್" (೩–೪–೨೬) ಇತಿ। •ನ ಚೇದಂ ವಿದ್ಯಾಸಹಕಾರಿತ್ವವಚನಮ್ ಆಶ್ರಮಕರ್ಮಣಾಂ ಪ್ರಯಾಜಾದಿವದ್ ವಿದ್ಯಾಫಲವಿಷಯಂ ಮನ್ತವ್ಯಮ್। ಅವಿಧಿಲಕ್ಷಣತ್ವಾತ್ ವಿದ್ಯಾಯಾಃ। ಅಸಾಧ್ಯತ್ವಾಚ್ಚ ವಿದ್ಯಾಫಲಸ್ಯ। ವಿಧಿಲಕ್ಷಣಂ ಹಿ ಸಾಧನಂ ದರ್ಶಪೂರ್ಣಮಾಸಾದಿ ಸ್ವರ್ಗಫಲಸಿಷಾಧಯಿಷಯಾ ಸಹಕಾರಿಸಾಧನಾನ್ತರಮ್ ಅಪೇಕ್ಷತೇ। ನೈವಂ ವಿದ್ಯಾ। ತಥಾ ಚೋಕ್ತಮ್ "ಅತ ಏವ ಚಾಗ್ನೀನ್ಧನಾದ್ಯನಪೇಕ್ಷಾ" (೩–೪–೨೫) ಇತಿ। ತಸ್ಮಾತ್ ಉತ್ಪತ್ತಿಸಾಧನತ್ವ ಏವೈಷಾಂ ಸಹಕಾರಿತ್ವವಾಚೋ ಯುಕ್ತಿಃ। ನ ಚಾತ್ರ ನಿತ್ಯಾನಿತ್ಯಸಂಯೋಗವಿರೋಧ ಆಶಙ್ಕ್ಯಃ। ಕರ್ಮಾಭೇದೇಽಪಿ ಸಂಯೋಗಭೇದಾತ್। ನಿತ್ಯೋ ಹ್ಯೇಕಃ ಸಂಯೋಗೋ ಯಾವಜ್ಜೀವಾದಿವಾಕ್ಯಕಲ್ಪಿತಃ, ನ ತಸ್ಯ ವಿದ್ಯಾಫಲತ್ವಮ್। ಅನಿತ್ಯಸ್ತು ಅಪರಃ ಸಂಯೋಗಃ "ತಮೇತಂ ವೇದಾನುವಚನೇನ" (ಬೃ. ೪–೪–೨೨) ಇತ್ಯಾದಿವಾಕ್ಯಕಲ್ಪಿತಃ।

1. ನಿತ್ಯವಾಗಿ ವಿಧಿಸುವದನ್ನೇ ಜ್ಞಾನಕ್ಕಾಗಿ ವಿಧಿಸಿದರೆ ಗೌರವದೋಷವಿಲ್ಲವೆ ? ಎಂಬ ಶಂಕೆಗೆ ಪರಿಹಾರವಿದು. ಶ್ರುತಿಯು ಹೇಗೆ ಬೇಕಾದರೂ ವಿಧಿಸಬಹುದು ; ಅದರ ಮೇಲೆ ಶಂಕೆಯನ್ನು ಮಾಡುವದಕ್ಕೆ ಬರುವದಿಲ್ಲ ಎಂದಭಿಪ್ರಾಯ.

ತಸ್ಯ ವಿದ್ಯಾಫಲತ್ವಮ್ । ಯಥೈಕಸ್ಯಾಪಿ ಖಾದಿರತ್ವಸ್ಯ ನಿತ್ಯೇನ ಸಂಯೋಗೇನ ಕ್ರತ್ವರ್ಥತ್ವಮ್ । ಅನಿತ್ಯೇನ ಸಂಯೋಗೇನ ಪುರುಷಾರ್ಥತ್ವಮ್ । ತದ್ವತ್ ॥

(ಭಾಷ್ಯಾರ್ಥ)

ಇನ್ನು ಹೀಗಾದರೆ ಇವುಗಳು ವಿದ್ಯೆಗೆ ಸಾಧನವೆಂಬುದು ಆಗಲಾರದು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದಕ್ಕೆ ಉತ್ತರವನ್ನು ಹೇಳುತ್ತಾರೆ : (ಸಹಕಾರಿತ್ವೇನ ಚ)। ಈ (ಕರ್ಮ)ಗಳು ವಿದ್ಯಾಸಹಕಾರಿಗಳೂ ಆಗಿರಬಹುದು ; ಏಕೆಂದರೆ "ಆ ಇವನನ್ನು ವೇದಾನುವಚನದಿಂದ ಬ್ರಾಹ್ಮಣರು ತಿಳಿಯಲಿಚ್ಛಿಸುತ್ತಾರೆ" (ಬೃ. ೪-೪-೨೨) ಮುಂತಾದ ವಾಕ್ಯದಿಂದ ಅವು ವಿಹಿತವಾಗಿವೆ ಎಂಬುದೇ ಇದಕ್ಕೆ ಕಾರಣವಾಗಿದೆ. ಇದನ್ನೇ "ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್" (೩-೪-೨೬) ಎಂಬ (ಸೂತ್ರದಲ್ಲಿ) ಹೇಳಿರುತ್ತದೆ. **ಆಶ್ರಮಕರ್ಮಗಳು ವಿದ್ಯಾಸಹಕಾರಿಗಳೆಂಬೀ ವಚನವು ಪ್ರಯಾಜಾದಿಗಳಂತೆ**[1] **ವಿದ್ಯೆಯ ಫಲದ ವಿಷಯದಲ್ಲಿ ಎಂದು ತಿಳಿಯಬಾರದು. ಏಕೆಂದರೆ ವಿದ್ಯೆಯು ವಿಧಿಪ್ರಮಾಣ(ಗೋಚರ)ವಲ್ಲ, ವಿದ್ಯೆಯ ಫಲವು ಸಾಧ್ಯವೂ ಅಲ್ಲ.** ವಿಧಿಲಕ್ಷಣವಾಗಿರುವ ದರ್ಶಪೂರ್ಣಮಾಸವೇ ಮುಂತಾದ ಸಾಧನವು ಸ್ವರ್ಗವೆಂಬ ಫಲವನ್ನು ಸಾಧಿಸುವದಕ್ಕೆ (ಪ್ರಯಾಜವೇ ಮುಂತಾದ) ಬೇರೆ ಸಾಧನಗಳನ್ನು ಬಯಸ(ಬಹುದಾ)ಗಿದೆ ; (ಆದರೆ) ವಿದ್ಯೆಯು ಹೀಗಿಲ್ಲ. ಆದ್ದರಿಂದಲೇ "ಅತ ಏವ ಚಾಗ್ನೀನ್ಧನಾದ್ಯನಪೇಕ್ಷಾ" (ಆದ್ದರಿಂದಲೇ ಅಗ್ನಿ, ಇಂಧನ -ಮುಂತಾದವುಗಳ ಬಯಕೆಯಿಲ್ಲ ೩-೪-೨೫) ಎಂದು (ಹಿಂದೆ) ಹೇಳಿದ್ದು. **ಆದ್ದರಿಂದ ಉತ್ಪತ್ತಿಗೆ ಸಾಧನವೆಂಬರ್ಥದಲ್ಲಿಯೇ ಇವು ಸಹಕಾರಿಗಳು**[2] **ಎಂಬ ಮಾತನ್ನಾಡಿರುತ್ತದೆ.** ಇಲ್ಲಿ ನಿತ್ಯಾನಿತ್ಯ ಸಂಯೋಗಗಳ ವಿರೋಧವನ್ನೂ ಶಂಕಿಸುವಂತಿಲ್ಲ. ಏಕೆಂದರೆ ಕರ್ಮಗಳು ಬೇರೆಯಲ್ಲವಾದರೂ ಸಂಯೋಗಗಳು ಬೇರೆ(ಬೇರೆ)ಯಾಗಿರುತ್ತವೆ. (ಇವುಗಳಲ್ಲಿ) ಒಂದು ಸಂಯೋಗವು ನಿತ್ಯವು, (ಅದನ್ನು) ಯಾವಜ್ಜೀವಾದಿವಾಕ್ಯದಿಂದ ಕಲ್ಪಿಸಿರುತ್ತದೆ ; ಅದಕ್ಕೆ ವಿದ್ಯೆ ಎಂಬ ಫಲವಿಲ್ಲ[3]. ಇನ್ನೊಂದು ಸಂಯೋಗವು ಅನಿತ್ಯವು, ಅದನ್ನು "ಆ ಇವನನ್ನು ವೇದಾನುವಚನದಿಂದ....." (ಬೃ.೪-೪-೨೨) ಮುಂತಾದ ವಾಕ್ಯದಿಂದ ಕಲ್ಪಿಸಿರುತ್ತದೆ ; ಅದಕ್ಕೆ ವಿದ್ಯೆಯು ಫಲವು. ಹೇಗೆ

1. ಪ್ರಯಾಜಾದಿಗಳು ದರ್ಶಪೂರ್ಣಮಾಸಾದಿಗಳಿಗೆ ಸಹಕಾರಿಗಳಾಗಿರುವಂತೆ.

2. ಕತ್ತೆಯು ತನ್ನ ಮರಿಗಳೊಡನೆ ಭಾರವನ್ನು ಹೊರುತ್ತದೆ-ಎಂಬಲ್ಲಿ ಕತ್ತೆಯೊಂದೇ ಹೊರುವಂತೆ ಕರ್ಮಗಳಿದ್ದರೇ ವಿದ್ಯೆಯು ತನ್ನ ಫಲವನ್ನು ಕೊಡುತ್ತದೆ ಎಂಬ ಅಭಿಪ್ರಾಯದಿಂದ ಅವನ್ನು ಸಹಕಾರಿಗಳೆಂದು ಕರೆದಿದೆ. ನ್ಯಾ. ನಿ.

3. ಆಶ್ರಮನಿಷ್ಠರು ಮಾತ್ರ ಮಾಡತಕ್ಕದ್ದಾಗಿದೆ, ಆ ಕರ್ಮ.

ಖಾದಿರತ್ವವು ಒಂದೇ ಆದರೂ ನಿತ್ಯಸಂಯೋಗದಿಂದ ಕ್ರತ್ವರ್ಥತ್ವವೂ ಅನಿತ್ಯ ಸಂಯೋಗದಿಂದ ಪುರುಷಾರ್ಥತ್ವವೂ (ಇರುವವೋ) ಹಾಗೆಯೇ (ಇದು) [1]

**ಸರ್ವಥಾಪಿ ತ ಏವೋಭಯಲಿಙ್ಗಾತ್ ॥ ೩೪ ॥**

೩೪. ಸರ್ವಪ್ರಕಾರದಿಂದಲೂ ಅವೇ; ಏಕೆಂದರೆ ಎರಡು ವಿಧದ ಲಿಂಗವೂ (ಇದೆ).

## ಆಶ್ರಮಿಗಳಿಗೂ ಮುಮುಕ್ಷುಗಳಿಗೂ ಅದೇ ಕರ್ಮವನ್ನು ವಿಧಿಸಿದೆ

(ಭಾಷ್ಯ)

೪೭೮. ಸರ್ವಥಾಪಿ ಆಶ್ರಮಕರ್ಮತ್ವಪಕ್ಷೇ ವಿದ್ಯಾಸಹಕಾರಿತ್ವಪಕ್ಷೇ ಚ ತ ಏವಾಗ್ನಿಹೋತ್ರಾದಯೋ ಧರ್ಮಾ ಅನುಷ್ಠೇಯಾಃ । 'ತ ಏವ' ಇತ್ಯವಧಾರಯನ್ ಆಚಾರ್ಯಃ ಕಿಂ ನಿವರ್ತಯತಿ? ಕರ್ಮಭೇದಶಙ್ಕಾಮ್ ಇತಿ ಬ್ರೂಮಃ । ಯಥಾ ಕುಣ್ಡಪಾಯಿನಾಮ್ ಅಯನೇ "ಮಾಸಮಗ್ನಿಹೋತ್ರಂ ಜುಹ್ವತಿ" (?) ಇತ್ಯತ್ರ ನಿತ್ಯಾತ್ ಅಗ್ನಿಹೋತ್ರಾದ್ ಕರ್ಮಾನ್ತರಮ್ ಉಪದಿಶ್ಯತೇ ನೈವಮಿಹ ಕರ್ಮಭೇದೋಽಸ್ತಿ ಇತ್ಯರ್ಥಃ । ಕುತಃ? ಉಭಯಲಿಙ್ಗಾತ್ । ಶ್ರುತಿಲಿಙ್ಗಾತ್ ಸ್ಮೃತಿಲಿಙ್ಗಾಚ್ಚ । ಶ್ರುತಿಲಿಙ್ಗಂ ತಾವತ್ "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ" (ಬ. ೪-೪-೨೨) ಇತಿ ಸಿದ್ಧವದುತ್ಪನ್ನರೂಪಾಣ್ಯೇವ ಯಜ್ಞಾದೀನಿ ವಿವಿದಿಷಾಯಾಂ ವಿನಿಯುಙ್ಕ್ತೇ । ನ ತು "ಜುಹ್ವತಿ" (?)[2] ಇತ್ಯಾದಿವತ್ ಅಪೂರ್ವಮೇಷಾಂ ರೂಪಮುತ್ಪಾದಯತೀತಿ । ಸ್ಮೃತಿಲಿಙ್ಗಮಪಿ "ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ" (ಗೀ. ೬-೧) ಇತಿ ವಿಜ್ಞಾತಕರ್ತವ್ಯತಾಕಮೇವ ಕರ್ಮ ವಿದ್ಯೋತ್ಪತ್ತ್ಯರ್ಥಂ ದರ್ಶಯತಿ । "ಯಸ್ಯೈತೇಽಷ್ಟಾಚತ್ವಾರಿಂಶತ್ ಸಂಸ್ಕಾರಾಃ" (ಗೌ. ಧ. ೮-೨೨, ೧-೮-೨೫) ಇತ್ಯಾದ್ಯಾ ಚ ಸಂಸ್ಕಾರತ್ವಪ್ರಸಿದ್ಧಿರ್ವೈದಿಕೇಷು ಕರ್ಮಸು, ತತ್ಸಂಸ್ಕೃತಸ್ಯ ವಿದ್ಯೋತ್ಪತ್ತಿಮಭಿಪ್ರೇತ್ಯ ಸ್ಮೃತೌ ಭವತಿ । ತಸ್ಮಾತ್ ಸಾಧ್ವಿದಮಭೇದಾವಧಾರಣಮ್ ॥

---

1. 'ಖಾದಿರಯೂಪದಲ್ಲಿ ಪಶುವನ್ನು ಕಟ್ಟಬೇಕು'-ಎಂಬುದು ನಿತ್ಯಸಂಯೋಗ; ಅದು ಕ್ರತ್ವರ್ಥ. "ವೀರ್ಯಕಾಮನಿಗೆ ಖಾದಿರಯೂಪವನ್ನು ಮಾಡಬೇಕು" ಎಂಬುದು ಅನಿತ್ಯಸಂಯೋಗವು, ಅದು ಪುರುಷಾರ್ಥಕ್ಕೆ. ಜೈ. ಸೂ. ೪-೩-೫ರ ಭಾಷ್ಯವನ್ನು ನೋಡಿ.
2. ಅನುವಾದದ ಟಿಪ್ಪಣಿಯನ್ನು ನೋಡಿ.

(ಭಾಷ್ಯಾರ್ಥ)

ಸರ್ವಪ್ರಕಾರದಿಂದಲೂ, ಎಂದರೆ ಆಶ್ರಮಕರ್ಮತ್ವಪಕ್ಷದಲ್ಲಿಯೂ ವಿದ್ಯಾ ಸಹಕಾರಿತ್ವಪಕ್ಷದಲ್ಲಿಯೂ ಅದೇ ಅಗ್ನಿಹೋತ್ರಾದಿಧರ್ಮಗಳನ್ನೇ ಅನುಷ್ಠಾನ ಮಾಡತಕ್ಕದ್ದು. "ಅವೇ" ಎಂದು (ಸೂತ್ರದಲ್ಲಿ) ಹೇಳಿರುವದರಿಂದ (ಬಾದ ರಾಯಣಾ)ಚಾರ್ಯರು ಯಾವದನ್ನಲ್ಲವೆಂದಿರುತ್ತಾರೆ ? ಎಂದರೆ ಕರ್ಮಭೇದ ಶಂಕೆಯನ್ನು (ಅಲ್ಲಗಳೆದಿರುತ್ತಾರೆ) ಎನ್ನುತ್ತೇವೆ. ಹೇಗೆ ಕುಂಡಪಾಯಿಗಳ ಅಯನದಲ್ಲಿ "ತಿಂಗಳುವರೆಗೆ ಅಗ್ನಿಹೋತ್ರವನ್ನು ಹೋಮಮಾಡುತ್ತಾರೆ" (ಕಾತ್ಯಾ.ಶ್ರೌ. ೨೪-೪-೨೪ ?)[1] ಎಂಬಲ್ಲಿ ನಿತ್ಯಾಗ್ನಿಹೋತ್ರಕ್ಕಿಂತ ಬೇರೆಯಾದ ಕರ್ಮವನ್ನು ಉಪದೇಶಮಾಡಿರುತ್ತದೆಯೋ, ಹಾಗೆ ಇಲ್ಲಿ ಕರ್ಮಭೇದವಿರು ವದಿಲ್ಲ ಎಂದರ್ಥ. ಏಕೆ ? ಎಂದರೆ ಉಭಯಲಿಂಗವಿರುವದರಿಂದ, ಎಂದರೆ ಶ್ರುತಿಲಿಂಗವಿರುವದರಿಂದಲೂ ಸ್ಮೃತಿಲಿಂಗವಿರುವದರಿಂದಲೂ (ಎಂದರ್ಥ). ಮೊದಲನೆಯದಾಗಿ ಶ್ರುತಿಲಿಂಗವು ಯಾವದೆಂದರೆ, "ಆ ಇವನನ್ನು ವೇದಾನು ವಚನದಿಂದ ಬ್ರಾಹ್ಮಣರು ತಿಳಿಯಲಿಚ್ಛಿಸುತ್ತಾರೆ'' (ಬೃ.೪-೪-೨೨) ಎಂದು ಸಿದ್ಧವಾಗಿರುವಂತೆ ಉತ್ಪನ್ನರೂಪದ ಯಜ್ಞಗಳನ್ನೇ ವಿವಿದಿಷೆಯಲ್ಲಿವಿನಿಯೋಗಿ ಸಿರುತ್ತದೆ, ಹೋಮಮಾಡುತ್ತಾರೆ ಎಂಬಲ್ಲಿರುವಂತೆ ಅವಕ್ಕೆ (ಮತ್ತೊಂದು) ಹೊಸ ರೂಪವನ್ನೇನೂ ಉಂಟುಮಾಡಿಲ್ಲ (ಎಂಬುದು)[2]. ಸ್ಮೃತಿಲಿಂಗವೂ (ಇದೆ. ಯಾವದೆಂದರೆ) ''ಕರ್ಮಫಲವನ್ನು ಆಶ್ರಯಿಸದೆಯೇ ಮಾಡಬೇಕಾಗಿ ರುವ ಕರ್ಮವನ್ನು ಯಾವನು ಮಾಡುತ್ತಾನೋ" (ಗೀ. ೬-೧) ಎಂದು ಮಾಡ ಬೇಕೆಂದು (ಮೊದಲೇ) ಗೊತ್ತಾಗಿರುವ ಕರ್ಮವನ್ನೇ ವಿದ್ಯೆಯ ಉತ್ಪತ್ತಿಗೆಂದು ಹೇಳಿರುತ್ತದೆಯಲ್ಲ (ಅದು). "ಯಾವನಿಗೆ ಈ ನಲವತ್ತೆಂಟು ಸಂಸ್ಕಾರಗಳು...." (ಗೌ.ಧ. ೮-೨೨, ೧-೮-೨೫)[3] ಎಂದು ಮುಂತಾಗಿರುವ ವೈದಿಕಕರ್ಮಗಳು

---

1. ಇಲ್ಲಿ ಯಾವದೋ ಶ್ರುತಿಯನ್ನೇ ಹೇಳಿರುವಂತೆ ತೋರುತ್ತದೆ. ಇದೇ ವಿಷಯದ ಜೈ. ಸೂ. ೨-೩-೩೪ರ ಭಾಷ್ಯರಲ್ಲಿ 'ಮಾಸಮಗ್ನಿಹೋತ್ರಂ ಜುಹೋತಿ', 'ಮಾಸಂ ದರ್ಶ ಪೂರ್ಣಮಾಸಾಭ್ಯಾಂ ಯಜತೇ' ಎಂದು ಏಕವಚನಪಾಠವನ್ನೇ ಉದಾಹರಿಸಿದೆ ; ಆದರೆ ಈ ಭಾಷ್ಯದಲ್ಲಿ ಎರಡು ಸಲವೂ ಜುಹ್ವತಿ ಎಂದೇ ಇದೆ.

2. ಮಾಸಾಗ್ನಿಹೋತ್ರದಲ್ಲಿ ಕರ್ಮಾಂತರವನ್ನು ವಿಧಿಸಿರುವಂತೆ ಇಲ್ಲಿ ವಿಧಿಸಿಲ್ಲ ಎಂದರ್ಥ. ಜೈ. ಸೂ. ೭-೩-೧೨ರ ಭಾಷ್ಯವನ್ನು ನೋಡಿ.

3. ಗೌತಮಧರ್ಮಸೂತ್ರದಲ್ಲಿ ನಲವತ್ತು ಸಂಸ್ಕಾರಗಳನ್ನೂ ಎಂಟು ಆತ್ಮಗುಣ ಗಳನ್ನೂ (೮, ೧೯, ೨೦), "ಯಸ್ಯೈತೇ ಚತ್ವಾರಿಂಶತ್ಸಂಸ್ಕಾರಾ ನ ಚಾಷ್ಟಾವಾತ್ಮ ಗುಣಾಃ...." ಎಂದೇ ಸೂತ್ರವಿದೆ. ಈ ನಲವತ್ತೆಂಟನ್ನೇ ಸಂಸ್ಕಾರಗಳೆಂದು ಕೆಲವರು ಪರಿಗಣಿಸಿರುತ್ತಾರೆ. ಆದರೆ ನ್ಯಾ.ನಿ. ದಲ್ಲಿ ಬೇರೆಯ ಎಂಟು ಸಂಸ್ಕಾರಗಳನ್ನು ನಲವತ್ತಕ್ಕೆ ಸೇರಿಸಿ ಬರೆದಿದೆ. ಅದಕ್ಕೆ ಮೂಲವು ಯಾವದೋ ತಿಳಿಯದು.

ಸಂಸ್ಕಾರವೆಂಬ ಪ್ರಸಿದ್ಧಿಯು ಅವುಗಳಿಂದ ಸಂಸ್ಕೃತನಾದವನಿಗೆ ವಿದ್ಯೋತ್ಪತ್ತಿಯಾಗುವದೆಂಬ ಅಭಿಪ್ರಾಯದಿಂದಲೇ ಸ್ಮೃತಿಯಲ್ಲಿರುತ್ತದೆ. ಆದ್ದರಿಂದ (ಈ ಎರಡು ವಿಷಯದಲ್ಲಿಯೂ ಕರ್ಮಗಳು) ಅಭಿನ್ನವೇ ಎಂದು ಒತ್ತಿಹೇಳಿರುವದು ಸರಿಯೇ (ಆಗಿದೆ).

**ಅನಭಿಭವಂ ಚ ದರ್ಶಯತಿ || ೩೫ ||**

೩೫. (ಕ್ಲೇಶಗಳಿಂದ) ಅಭಿಭವವಾಗುವದಿಲ್ಲವೆಂದೂ (ಶ್ರುತಿ) ಹೇಳುತ್ತದೆ.

## ಅಮುಮುಕ್ಷುಮುಮುಕ್ಷುಗಳಿಗೆ ಅದೇ ಕರ್ಮಗಳೆಂಬುದಕ್ಕೆ ಶ್ರೌತಲಿಂಗ

(ಭಾಷ್ಯ)

೪೭೯. ಸಹಕಾರಿತ್ವಸ್ಯೈವ ಏತದುಪೋದ್ಬಲಕಂ ಲಿಙ್ಗದರ್ಶನಮ್ । 'ಅನಭಿಭವಂ ಚ ದರ್ಶಯತಿ' ಶ್ರುತಿರ್ಬ್ರಹ್ಮಚರ್ಯಾದಿಸಾಧನಸಂಪನ್ನಸ್ಯ ರಾಗಾದಿಭಿಃ ಕ್ಲೇಶೈಃ "ಏಷ ಹ್ಯಾತ್ಮಾ ನ ನಶ್ಯತಿ ಯಂ ಬ್ರಹ್ಮಚರ್ಯೇಣಾನುವಿನ್ದತೇ" (ಛಾಂ. ೮-೫-೩) ಇತ್ಯಾದಿನಾ । ತಸ್ಮಾತ್ ಯಜ್ಞಾದೀನ್ಯಾಶ್ರಮಕರ್ಮಾಣಿ ಚ ಭವನ್ತಿ ವಿದ್ಯಾಸಹಕಾರೀಣಿ ಚೇತಿ ನಿಶ್ಚಿತಮ್ ॥

(ಭಾಷ್ಯಾರ್ಥ)

ಇದು (ಕರ್ಮಗಳು ವಿದ್ಯಾ)ಸಹಕಾರಿ ಎಂಬುದಕ್ಕೇ ಉಪೋದ್ಬಲಕವಾದ ಲಿಙ್ಗದರ್ಶನವು. ಶ್ರುತಿಯು ಬ್ರಹ್ಮಚರ್ಯಸಾಧನಗಳಿಂದೊಡಗೂಡಿರುವವನಿಗೆ ರಾಗಾದಿಕ್ಲೇಶಗಳ ಹೊಡೆತವಿರುವದಿಲ್ಲವೆಂದು "ಯಾವ ಆತ್ಮನನ್ನು ಬ್ರಹ್ಮಚರ್ಯದಿಂದ ಪಡೆದುಕೊಳ್ಳುತ್ತಾನೋ ಅವನು ನಾಶವಾಗುವದಿಲ್ಲ" (ಛಾಂ. ೮-೫-೩) ಎಂಬುದೇ ಮುಂತಾದ (ವಾಕ್ಯ)ದಿಂದ ತಿಳಿಸುತ್ತದೆ. ಆದ್ದರಿಂದ ಯಜ್ಞವೇ ಮುಂತಾದವು ಆಶ್ರಮಕರ್ಮಗಳೂ ಆಗಿರುತ್ತವೆ, ವಿದ್ಯಾಸಹಕಾರಿಗಳೂ ಆಗಿರುತ್ತವೆ ಎಂದು ನಿಶ್ಚಯವಾಯಿತು.

## ೯. ವಿಧುರಾಧಿಕರಣ (ಸೂ. ೩೬-೩೯)

(ಆಶ್ರಮವಿಲ್ಲದವರಿಗೂ ವಿದ್ಯೆಯಲ್ಲಿ ಅಧಿಕಾರ)

**ಅನ್ತರಾ ಚಾಪಿ ತು ತದ್ದೃಷ್ಟೇಃ || ೩೬ ||**

೩೬. (ಆಶ್ರಮ)ವಿಲ್ಲದೆಯೂ (ವಿದ್ಯೆಯಲ್ಲಿ ಅಧಿಕಾರವುಂಟು); ಏಕೆಂದರೆ ಹಾಗೆಂದು ಕಂಡುಬಂದಿರುತ್ತದೆ.

## ವಿಧುರಾದಿಗಳಿಗೂ ವಿದ್ಯಾಧಿಕಾರವುಂಟೆಂಬುದಕ್ಕೆ ನಿದರ್ಶನ

(ಭಾಷ್ಯ)

೪೮೦. ವಿಧುರಾದೀನಾಂ ದ್ರವ್ಯಾದಿಸಂಪದ್ರಹಿತಾನಾಂ ಚ ಅನ್ಯತಮಾಶ್ರಮಪ್ರತಿಪತ್ತಿಹೀನಾನಾಮ್ ಅನ್ತರಾಲವರ್ತಿನಾಂ ಕಿಂ ವಿದ್ಯಾಯಾಮ್ ಅಧಿಕಾರೋಽಸ್ತಿ ಕಿಂವಾ ನಾಸ್ತಿ ಇತಿ ಸಂಶಯೇ ನಾಸ್ತೀತಿ ತಾವತ್ ಪ್ರಾಪ್ತಮ್ । ಆಶ್ರಮಕರ್ಮಣಾಂ ವಿದ್ಯಾಹೇತುತ್ವಾವಧಾರಣಾತ್ ಆಶ್ರಮಕರ್ಮಾಸಂಭವಾಚ್ಚ ಏತೇಷಾಮ್ ಇತಿ । ಏವಂ ಪ್ರಾಪ್ತೇ ಇದಮಾಹ--- 'ಅನ್ತರಾ ಚಾಪಿ ತು' ಅನಾಶ್ರಮಿತ್ವೇನ ವರ್ತಮಾನೋಽಪಿ ವಿದ್ಯಾಯಾಮಧಿಕ್ರಿಯತೇ। ಕುತಃ ? ತದ್ದೃಷ್ಟೇಃ । ರೈಕ್ವವಾಚಕ್ನವೀಪ್ರಭೃತೀನಾಮ್ ಏವಂಭೂತಾನಾಮಪಿ ಬ್ರಹ್ಮವಿತ್ತ್ವಶ್ರುತ್ಯುಪಲಬ್ಧೇಃ ॥

(ಭಾಷ್ಯಾರ್ಥ)

ವಿಧುರರೇ ಮುಂತಾದವರೂ ದ್ರವ್ಯವೇ ಮುಂತಾದವುಗಳ ಸಂಪತ್ತು ಇಲ್ಲದವರೂ ಆಗಿ ಯಾವ ಆಶ್ರಮದ ಪ್ರಾಪ್ತಿಯೂ ಇಲ್ಲದೆ ಮಧ್ಯದಲ್ಲಿದ್ದುಕೊಂಡಿರುವವರಿಗೆ ವಿದ್ಯೆಯಲ್ಲಿ ಅಧಿಕಾರವು ಇದೆಯೆ, ಅಥವಾ ಇಲ್ಲವೆ?– ಎಂಬ ಸಂಶಯವುಂಟಾಗುವಲ್ಲಿ ಇಲ್ಲ ಎಂಬ (ಪೂರ್ವಪಕ್ಷವು) ಮೊದಲು ಬಂದೊದಗುತ್ತದೆ; ಏಕೆಂದರೆ ಆಶ್ರಮಕರ್ಮಗಳು ವಿದ್ಯೆಗೆ ಹೇತುವಾಗಿರುತ್ತವೆಯೆಂದು ನಿಶ್ಚಯವಾಗಿರುತ್ತದೆ, ಇವರಿಗೆ ಆಶ್ರಮಕರ್ಮವು ಸಂಭವಿಸುವದಿಲ್ಲ.

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಈ (ಸೂತ್ರವನ್ನು) ಹೇಳಿರುತ್ತಾರೆ. 'ಅನ್ತರಾ ಚಾಪಿ' (ಇಲ್ಲದಿದ್ದರೂ,) ಎಂದರೆ ಅನಾಶ್ರಮಿಯಾಗಿ ಇರುತ್ತಿದ್ದರೂ ವಿದ್ಯೆಗೆ ಅಧಿಕಾರಿಯಾಗಿರುತ್ತಾನೆ. ಹೇಗೆ? ಎಂದರೆ ಅದು ಕಂಡು ಬಂದಿರುವದರಿಂದ. ಹೀಗಿದ್ದ ರೈಕ್ವ, ವಾಚಕ್ನವಿ– ಮುಂತಾದವರೂ ಬ್ರಹ್ಮಜ್ಞಾನಿಗಳಾಗಿದ್ದರೆಂದು ಶ್ರುತಿಯಲ್ಲಿ ಕಂಡುಬಂದಿರುವದರಿಂದ[1] (ಎಂದರ್ಥ).

**ಅಪಿ ಚ ಸ್ಮರ್ಯತೇ ॥ ೩೭ ॥**

೩೭. ಇದಲ್ಲದೆ ಸ್ಮೃತಿಯಲ್ಲಿಯೂ ಇದೆ.

## ಆಶ್ರಮಕರ್ಮವಿಲ್ಲದವರೂ ಮಹಾಯೋಗಿಗಳಾಗಿದ್ದರು

(ಭಾಷ್ಯ)

೪೮೧. ಸಂವರ್ತಪ್ರಭೃತೀನಾಂ ಚ ನಗ್ನಚರ್ಯಾದಿಯೋಗಾತ್ ಅನಪೇಕ್ಷಿತಾಶ್ರಮಕರ್ಮಣಾಮಪಿ ಮಹಾಯೋಗಿತ್ವಂ ಸ್ಮರ್ಯತೇ ಇತಿಹಾಸೇ ॥

1. ರೈಕ್ವನು ಬ್ರಹ್ಮಚಾರಿಯಾಗಿದ್ದರೂ ಗೃಹಸ್ಥಾಶ್ರಮದ ಯಜ್ಞಾದಿರಹಿತನಾಗಿದ್ದರೂ ಸಂವರ್ಗವಿದ್ಯೆಯನ್ನು ಬಲ್ಲವನಾಗಿದ್ದನೆಂದು ಛಾಂದೋಗ್ಯಶ್ರುತಿಯಲ್ಲಿದೆ. ವಾಚಕ್ನವಿಯು ಕರ್ಮರಹಿತಳಾದ ಸ್ತ್ರೀಯಾಗಿದ್ದರೂ ಬ್ರಹ್ಮವಿದ್ಯೆಯನ್ನು ಬಲ್ಲವಳಾಗಿದ್ದಳು.

(ಭಾಷ್ಯಾರ್ಥ)

**ಸಂವರ್ತನೇ** ಮೊದಲಾದವರಿಗೆ ಬೆತ್ತಲೆ ಇರುವದೇ ಮುಂತಾದವುಗಳ ಸಂಬಂಧವಿರುವದರಿಂದ (ಅವರು) ಆಶ್ರಮಕರ್ಮವನ್ನು ಬಯಸದಿದ್ದವರಾದರೂ ಮಹಾಯೋಗಿಯಾಗಿದ್ದದ್ದು **ಇತಿಹಾಸದಲ್ಲಿ** ಸ್ಮೃತವಾಗಿದೆ.[1]

**ವಿಶೇಷಾನುಗ್ರಹಶ್ಚ ॥ ೩೮ ॥**

೩೮. (ಧರ್ಮ)ವಿಶೇಷದ ಅನುಗ್ರಹವೂ (ಇದೆ)

## ವಿಧುರಾದಿಗಳಿಗೂ ವಿದ್ಯೆಗೆ ಬೇಕಾದ ಸಾಧನಗಳಿರುವವು

(ಭಾಷ್ಯ)

೪೮೨. ನನು ಲಿಙ್ಗಮಿದಂ ಶ್ರುತಿಸ್ಮೃತಿದರ್ಶನಮುಪನ್ಯಸ್ತಮ್, ಕಾ ನು ಖಲು ಪ್ರಾಪ್ತಿಃ ಇತಿ ? ತೇಷಾಮಪಿ ಚ ವಿಧುರಾದೀನಾಮವಿರುದ್ಧೈಃ ಪುರುಷಮಾತ್ರಸಂಬನ್ಧಿಭಿಃ ಜಪೋಽಪವಾಸದೇವತಾರಾಧನಾದಿಭಿಃ ಧರ್ಮವಿಶೇಷೈಃ ಅನುಗ್ರಹೋ ವಿದ್ಯಾಯಾಃ ಸಂಭವತಿ । ತಥಾ ಚ ಸ್ಮೃತಿಃ– "ಜಪ್ಯೇನೈವ ತು ಸಂಸಿಧ್ಯೇದ್ ಬ್ರಾಹ್ಮಣೋ ನಾತ್ರ ಸಂಶಯಃ । ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ" (ಮನು. ೨–೮೭) ಇತ್ಯಸಂಭವದಾಶ್ರಮಕರ್ಮಣೋಽಪಿ ಜಪ್ಯೇಽಧಿಕಾರಂ ದರ್ಶಯತಿ । ಜನ್ಮಾನ್ತರಾನುಷ್ಠಿತೈರಪಿ ಚಾಶ್ರಮಕರ್ಮಭಿಃ ಸಂಭವತ್ಯೇವ ವಿದ್ಯಾಯಾ ಅನುಗ್ರಹಃ । ತಥಾ ಚ ಸ್ಮೃತಿಃ– "ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್" (ಗೀ. ೬–೪೫) ಇತಿ ಜನ್ಮಾನ್ತರಸಂಚಿತಾನಪಿ ಸಂಸ್ಕಾರವಿಶೇಷಾನ್ ಅನುಗ್ರಹೀತೄನ್ ವಿದ್ಯಾಯಾಂ ದರ್ಶಯತಿ । ದೃಷ್ಟಾರ್ಥಾ ಚ ವಿದ್ಯಾ ಪ್ರತಿಷೇಧಾಭಾವಮಾತ್ರೇಣಾಪ್ಯರ್ಥಿನಮ್ ಅಧಿಕರೋತಿ ಶ್ರವಣಾದಿಷು । ತಸ್ಮಾತ್ ವಿಧುರಾದೀನಾಮಪಿ ಅಧಿಕಾರೋ ನ ವಿರುಧ್ಯತೇ ॥

(ಭಾಷ್ಯಾರ್ಥ)

**(ಆಕ್ಷೇಪ)** :– ಶ್ರುತಿಸ್ಮೃತಿಗಳಲ್ಲಿ ಕಂಡಿರುವದನ್ನು (ಹೇಳಿದ್ದಿದು) ಲಿಂಗ (ವಾಯಿತು). ಪ್ರಾಪ್ತಿ ಯಾವದು ?

**(ಸಮಾಧಾನ)** :– ಅದನ್ನು ಹೇಳುತ್ತೇವೆ.

---

1. ಅಣ್ಣನಾದ ಬೃಹಸ್ಪತ್ಯಾಚಾರ್ಯರಿಂದ ಕ್ಲೇಶಗಳನ್ನು ಅನುಭವಿಸಿದ ಸಂವರ್ತನು ದಿಗಂಬರನಾಗಿ ವನವಾಸಕ್ಕೆ ತೆರಳಿದನೆಂದೂ ಮುಂದೆ ಮರುತ್ತರಾಯನ ಯಜ್ಞದಲ್ಲಿ ತನ್ನ ವಿದ್ಯಾಬಲದಿಂದ ಇಂದ್ರಾದಿಗಳನ್ನು ಸ್ತಂಭನಮಾಡಿದನೆಂದೂ (ಅಶ್ವ. ೧೦) ಮಹಾಭಾರತದಲ್ಲಿದೆ.

ಆ ವಿಧುರಾದಿಗಳಿಗೂ ವಿರುದ್ಧವಲ್ಲದ **ಪುರುಷಸಾಮಾನ್ಯಕ್ಕೆ ಹೊಂದುವ ಜಪ, ಉಪವಾಸ, ದೇವತಾರಾಧನೆ– (ಇವೇ) ಮುಂತಾದ ಧರ್ಮವಿಶೇಷಗಳಿಂದ ವಿದ್ಯೆಯ ಅನುಗ್ರಹವು** ಆಗಬಹುದಾಗಿದೆ. ಆದ್ದರಿಂದಲೇ ಸ್ಮೃತಿಯು "ಬ್ರಾಹ್ಮಣನು ಜಪ್ಯದಿಂದಲೇ ಸಂಸಿದ್ಧನಾಗುವನು, ಇದರಲ್ಲಿ ಸಂಶಯವಿಲ್ಲ; ಮತ್ತೊಂದು (ಕರ್ಮವನ್ನು) ಮಾಡಲಿ ಬಿಡಲಿ, ಮೈತ್ರನಾದವನು ಬ್ರಾಹ್ಮಣನೆನಿಸುವನು" (ಮನು. ೨–೮೭) ಎಂದು **ಆಶ್ರಮಕರ್ಮವನ್ನು ಹೊಂದದವನಿಗೂ ಜಪ್ಯದಲ್ಲಿ ಅಧಿಕಾರವನ್ನು** ಹೇಳುತ್ತದೆ. **ಜನ್ಮಾಂತರದಲ್ಲಿ ಮಾಡಿದ ಆಶ್ರಮಕರ್ಮಗಳಿಂದಲೂ ವಿದ್ಯೆಯ ಅನುಗ್ರಹವು ಆಗಬಹುದಾಗಿದೆ.** ಆದ್ದರಿಂದಲೇ ಸ್ಮೃತಿಯು "ಅನೇಕ ಜನ್ಮಗಳಲ್ಲಿ ಸಂಸಿದ್ಧನಾಗಿ ಆ ಬಳಿಕ ಪರಗತಿಯನ್ನು ಹೊಂದುತ್ತಾನೆ" (ಗೀ. ೬–೪೫) ಎಂದು **ಜನ್ಮಾಂತರಗಳಲ್ಲಿ ಸಂಚಿತವಾಗಿದ್ದ ಸಂಸ್ಕಾರವಿಶೇಷಗಳೂ ವಿದ್ಯೆಗೆ ಅನುಗ್ರಾಹಕವಾಗಬಹುದೆಂದು ತಿಳಿಸಿದೆ.** ಇದಲ್ಲದೆ **ವಿದ್ಯೆಯು ದೃಷ್ಟಪ್ರಯೋಜನವುಳ್ಳದ್ದು[1]; (ಆದ್ದರಿಂದ) ಪ್ರತಿಷೇಧವಿಲ್ಲವೆಂಬಿಷ್ಟೇ ಕಾರಣದಿಂದಲೇ ಅರ್ಥಿಯಾದವನನ್ನು ಶ್ರವಣಾದಿಗಳಲ್ಲಿ ಅಧಿಕಾರಿಯನ್ನಾಗಿ ಮಾಡುತ್ತದೆ.**[2] ಆದ್ದರಿಂದ ವಿಧುರಾದಿಗಳಿಗೂ (ವಿದ್ಯೆಯಲ್ಲಿ) ಅಧಿಕಾರ(ವಿರುವ)ದೆಂಬುದು ವಿರುದ್ಧವಲ್ಲ.

**ಅತಸ್ತ್ವಿತರಜ್ಜ್ಯಾಯೋ ಲಿಙ್ಗಾಚ್ಚ ॥ ೩೯ ॥**

೩೯. ಅದಕ್ಕಿಂತ ಇನ್ನೊಂದು ಉತ್ತಮ, (ಶ್ರುತಿಸ್ಮೃತಿ) ಲಿಂಗವಿರುವದರಿಂದಲೂ (ಹೀಗೆ).

## ಆಶ್ರಮಿತ್ವವು ಅನಾಶ್ರಮಿತ್ವಕ್ಕಿಂತ ಮೇಲು

**(ಭಾಷ್ಯ)**

೪೮೩. ಅತಸ್ತು ಅನ್ತರಾಲವರ್ತಿತ್ವಾತ್ ಇತರತ್ ಆಶ್ರಮವರ್ತಿತ್ವಂ ಜ್ಯಾಯೋ ವಿದ್ಯಾಸಾಧನಮ್ । ಶ್ರುತಿಸ್ಮೃತಿಸಂದೃಷ್ಟತ್ವಾತ್ । ಶ್ರುತಿಲಿಙ್ಗಾಚ್ಚ "ತೇನೈತಿ ಬ್ರಹ್ಮವಿತ್ ಪುಣ್ಯಕೃತ್ತೈಜಸಶ್ಚ" (ಬೃ. ೪–೪–೯) ಇತಿ । "ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ" ( ? )

---

1. ವಿದ್ಯೆಗೆ ಈ ಲೋಕದಲ್ಲಿಯೇ ಮುಕ್ತಿಯೆಂಬ ಫಲವಾಗುತ್ತದೆ.; ಕರ್ಮಗಳಿಂದಾಗುವಂತೆ ಲೋಕಾಂತರದಲ್ಲಿ ಫಲವಾಗುವದಿಲ್ಲ.

2. ಶೂದ್ರಾದಿಗಳಿಗೆ ವೇದಾದಿಶ್ರವಣಕ್ಕೆ ಅಧಿಕಾರವಿಲ್ಲದಿದ್ದರೂ ಇತಿಹಾಸಾದಿಗಳ ಶ್ರವಣಕ್ಕೆ ಅಧಿಕಾರವಿರುತ್ತದೆ. ಆದ್ದರಿಂದಲೇ ಅವರಿಗೆ ಜ್ಞಾನವು ಉಂಟಾಗಬಹುದಾಗಿದೆ.

"ಸಂವತ್ಸರಮನಾಶ್ರಮೀ ಸ್ಥಿತ್ವಾ ಕೃಚ್ಛ್ರಮೇಕಂ ಚರೇತ್'' ( ? ) ಇತಿ ಚ ಸ್ಮೃತಿಲಿಙ್ಗಾತ್ ॥

(ಭಾಷ್ಯಾರ್ಥ)

(ಹೀಗೆ) ನಡುವೆ ಇರುವ ಇದಕ್ಕಿಂತ ಇನ್ನೊಂದು, ಎಂದರೆ ಆಶ್ರಮದಲ್ಲಿರುವದು ಹೆಚ್ಚಿನ ವಿದ್ಯಾಸಾಧನವು. ಏಕೆಂದರೆ (ಹಾಗೆಂದು) ಶ್ರುತಿಸ್ಮೃತಿಗಳಲ್ಲಿ ತಿಳಿಸಿದೆ. "ಬ್ರಹ್ಮವಿದನೂ ಪುಣ್ಯವನ್ನು ಮಾಡಿದವನೂ ತೈಜಸನೂ (ಆದ ಆತನು) ಆ (ಬ್ರಹ್ಮವಿದ್ಯಾಮಾರ್ಗ)ದಿಂದ ಹೋಗುತ್ತಾನೆ" (ಬೃ. ೪-೪-೯) ಎಂಬ ಶ್ರುತಿಲಿಂಗದಿಂದಲೂ (ಹೀಗೆಂದು ತಿಳಿಯುತ್ತದೆ). "ಒಂದು ದಿನವುಕೂಡ ದ್ವಿಜನಾದವನು ಅನಾಶ್ರಮಿಯಾಗಿರಬಾರದು" (?), ಮತ್ತು "(ಒಂದು) ಸಂವತ್ಸರದವರೆಗೂ ಅನಾಶ್ರಮಿಯಾಗಿದ್ದರೆ ಒಂದು ಕೃಚ್ಛ್ರವನ್ನು (ಪ್ರಾಯಶ್ಚಿತ್ತಕ್ಕಾಗಿ) ಮಾಡಬೇಕು'' ( ? ) ಎಂಬ ಸ್ಮೃತಿಲಿಂಗದಿಂದಲೂ (ಹೀಗೆಂದು ನಿಶ್ಚಯಿಸಬೇಕು).

## ೧೦. ತದ್ಭೂತಾಧಿಕರಣ

(ಊರ್ಧ್ವರೇತಸ್ಕರ ಆಶ್ರಮಕ್ಕೇರಿದವನು ಹಿಂದಕ್ಕಿಳಿಯಬಾರದು)

**ತದ್ಭೂತಸ್ಯ ತು ನಾತದ್ಭಾವೋ ಜೈಮಿನೇರಪಿ ನಿಯಮಾ-
ತದ್ರೂಪಾಭಾವೇಭ್ಯಃ ॥ ೪೦ ॥**

೪೦. (ಆ ಸ್ಥಿತಿಯನ್ನು) ಪಡೆದವನಿಗಾದರೆ ಜೈಮಿನಿಯ ಮತದಲ್ಲಿಯೂ ತದ್ಭಾವವಿಲ್ಲವೆಂಬುದಿಲ್ಲ ; ನಿಯಮಗಳೂ ಅತದ್ರೂಪಾಭಾವವೂ (ಇದಕ್ಕೆ ಪ್ರಮಾಣ).

### ಮೇಲಿನ ಆಶ್ರಮಕ್ಕೆ ಹೋದವನು ಗೃಹಸ್ಥಾಶ್ರಮಕ್ಕೆ ಬರಬಾರದು

(ಭಾಷ್ಯ)

೪೮೪. ಸನ್ತ್ಯೂರ್ಧ್ವರೇತಸ ಆಶ್ರಮಾಃ ಇತಿ ಸ್ಥಾಪಿತಮ್ । ತಾಂಸ್ತು ಪ್ರಾಪ್ತಸ್ಯ ಕಥಂಚಿತ್ ತತಃ ಪ್ರಚ್ಯುತಿರಸ್ತಿ ನಾಸ್ತಿ ವಾ ಇತಿ ಸಂಶಯಃ । ಪೂರ್ವಕರ್ಮಸ್ವನುಷ್ಠಾನಚಿಕೀರ್ಷಯಾ ವಾ ರಾಗಾದಿವಶೇನ ವಾ ಪ್ರಚ್ಯುತೋಽಪಿ ಸ್ಯಾದ್ ವಿಶೇಷಾಭಾವಾದಿತ್ಯೇವಂ ಪ್ರಾಪ್ತೇ ಉಚ್ಯತೇ । ತದ್ಭೂತಸ್ಯ ತು ಪ್ರತಿಪನ್ನೋರ್ಧ್ವರೇತೋಭಾವಸ್ಯ ನ ಕಥಂಚಿದಪಿ ಅತದ್ಭಾವೋ ನ ತತಃ

ಪ್ರಚ್ಯುತಿಃ ಸ್ಯಾತ್ । ಕುತಃ ? ನಿಯಮಾತದ್ರೂಪಾಭಾವೇಭ್ಯಃ । ತಥಾ ಹಿ "ಅತ್ಯನ್ತಮಾತ್ಮಾನಮಾಚಾರ್ಯಕುಲೇಽವಸಾದಯನ್" (ಛಾಂ. ೨–೨೩–೧) ಇತಿ, "ಅರಣ್ಯಮಿಯಾದಿತಿ ಪದಂ ತತೋ ನ ಪುನರೇಯಾದಿತ್ಯುಪನಿಷತ್" (?), "ಆಚಾರ್ಯೇಣಾಭ್ಯನುಜ್ಞಾತಶ್ಚತುರ್ಣಾಮೇಕಮಾಶ್ರಮಮ್ । ಆ ವಿಮೋಕ್ಷಾಚ್ಛರೀರಸ್ಯ ಸೋಽನುತಿಷ್ಠೇದ್ಯಥಾವಿಧಿ" (ಮೋ.ಧ. ?) ಇತಿ ಚೈವಂ ಜಾತೀಯಕೋ ನಿಯಮಃ ಪ್ರಚ್ಯುತ್ಯಭಾವಂ ದರ್ಶಯತಿ । ಯಥಾ ಚ "ಬ್ರಹ್ಮಚರ್ಯಂ ಸಮಾಪ್ಯ ಗೃಹೀ ಭವೇತ್" (ಜಾ. ೪) "ಬ್ರಹ್ಮಚರ್ಯಾದೇವ ಪ್ರವ್ರಜೇತ್" (ಜಾ. ೪) ಇತಿ ಚೈವಮಾದೀನಿ ಆರೋಹರೂಪಾಣಿ ವಚಾಂಸ್ಯುಪಲಭ್ಯನ್ತೇ ನೈವಂ ಪ್ರತ್ಯವರೋಹರೂಪಾಣಿ । ನ ಚೈವಮ್ ಆಚಾರಾಃ ಶಿಷ್ಟಾ ವಿದ್ಯನ್ತೇ । ಯತ್ತು ಪೂರ್ವಕರ್ಮಸ್ವನುಷ್ಠಾನಚಿಕೀರ್ಷಯಾ ಪ್ರತ್ಯವರೋಹಣಮಿತಿ, ತದಸತ್ । "ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್" (ಗೀ. ೩–೩೫) ಇತಿ ಸ್ಮರಣಾತ್ । ನ್ಯಾಯಾಚ್ಚ । ಯೋ ಹಿ ಯಂ ಪ್ರತಿ ವಿಧೀಯತೇ ಸ ತಸ್ಯ ಧರ್ಮೋ ನ ತು ಯೋ ಯೇನ ಸ್ವನುಷ್ಠಾತುಂ ಶಕ್ಯತೇ । ಚೋದನಾಲಕ್ಷಣತ್ವಾತ್ ಧರ್ಮಸ್ಯ । ನ ಚ ರಾಗಾದಿವಶಾತ್ ಪ್ರಚ್ಯುತಿಃ । ನಿಯಮಶಾಸ್ತ್ರಸ್ಯ ಬಲೀಯಸ್ತ್ವಾತ್ । "ಜೈಮಿನೇರಪಿ" ಇತ್ಯಪಿಶಬ್ದೇನ ಜೈಮಿನಿಬಾದರಾಯಣಯೋರತ್ರ ಸಂಪ್ರತಿಪತ್ತಿಂ ಶಾಸ್ತಿ ಪ್ರತಿಪತ್ತಿದಾರ್ಢ್ಯಾಯ ॥

(ಭಾಷ್ಯಾರ್ಥ)

ಊರ್ಧ್ವರೇತಸ್ಕನಾದವನ ಆಶ್ರಮಗಳೂ ಇವೆ ಎಂದು ಸಾಧಿಸಿದ್ದಾಗಿದೆ. ಆದರೆ ಅವುಗಳನ್ನು ಹೊಂದಿದವನು ಯಾವದಾದರೊಂದು ನಿಮಿತ್ತದಿಂದ (ಅಲ್ಲಿಂದ) ಜಾರುವದಾಗಬಹುದೊ, ಇಲ್ಲವೊ ?– ಎಂದು ಸಂಶಯ(ವಾಗುತ್ತದೆ). ಹಿಂದಿನ (ಆಶ್ರಮದ) ಕರ್ಮಗಳನ್ನು ಚೆನ್ನಾಗಿ ಮಾಡಬೇಕೆಂಬ ಆಶೆಯಿಂದಲೋ ರಾಗಾದಿಗಳ ವಶದಿಂದಲೋ ಜಾರಲೂಬಹುದು, ಏಕೆಂದರೆ (ಅವುಗಳಲ್ಲಿ) ಯಾವ ವಿಶೇಷವೂ ಇಲ್ಲ.[1]

ಈ (ಪೂರ್ವಪಕ್ಷವು) ಬಂದೊದಗಲಾಗಿ (ಈ ಸಿದ್ಧಾಂತವನ್ನು ಹೇಳಲಾಗಿದೆ). ತದ್ಭೂತನಾದವನಿಗೆ ಎಂದರೆ ಊರ್ಧ್ವರೇತೋಭಾವವನ್ನು ಪಡೆದುಕೊಂಡವನಿಗೆ ಹೇಗೂ ಅತದ್ಭಾವವು ಎಂದರೆ ಅದರಿಂದ ಜಾರುವದು ಆಗಲಾರದು. ಏಕೆ? ಎಂದರೆ ನಿಯಮ, ಅತದ್ರೂಪಾಭಾವ– ಇವುಗಳಿಂದ. ಹೇಗೆಂದರೆ, ಶರೀರವನ್ನು ಅತ್ಯಂತವಾಗಿ ಆಚಾರ್ಯಕುಲದಲ್ಲಿ ಸವೆಯಿಸುವ (ಬ್ರಹ್ಮ)ಚಾರಿಯು" (ಛಾಂ. ೨–೨೩–೧) ಎಂದೂ "ಅರಣ್ಯಕ್ಕೆ ಹೋಗಬೇಕು

1. ಯಾವ ಆಶ್ರಮದಲ್ಲಿದ್ದರೂ ಯಾವ ಹೆಚ್ಚುಕಡಿಮೆಯೂ ಇರುವದಿಲ್ಲ ಎಂದರ್ಥ.

ಎಂಬುದು ಹಾದಿಯು, ಮತ್ತೆ ಅಲ್ಲಿಂದ ಬರಬಾರದು, ಎಂಬಿದು ಉಪನಿಷತ್ತು" (?)[1]; ಮತ್ತು "ಆಚಾರ್ಯನಿಂದ ಅನುಜ್ಞಪ್ತನಾಗಿ ನಾಲ್ಕರಲ್ಲಿ ಒಂದು ಆಶ್ರಮವನ್ನು ಶರೀರವು ಬಿಟ್ಟುಹೋಗುವವರೆಗೂ ವಿಧಿವತ್ತಾಗಿ ಅನುಷ್ಠಾನಮಾಡುತ್ತಿರಬೇಕು" (ವೋ. ಧ. ?) ಎಂಬೀ ಜಾತಿಯ ನಿಯಮವು ಕೆಳಕ್ಕೆಜಾರುವದಾಗಲಾರದೆಂದು ತಿಳಿಸುತ್ತದೆ. ಮತ್ತು ಹೇಗೆ "ಬ್ರಹ್ಮಚರ್ಯವನ್ನು ಮುಗಿಸಿ ಗೃಹಿಯಾಗಬೇಕು" (ಜಾ. ೪), "ಬ್ರಹ್ಮಚರ್ಯದಿಂದಲೇ ಸಂನ್ಯಾಸಮಾಡಬೇಕು" (ಜಾ. ೪) ಎಂಬಿವೇ ಮುಂತಾದ ಆರೋಹರೂಪವಾದ ವಚನಗಳು ಕಾಣಬರುತ್ತವೆಯೋ ಹಾಗೆ ಇಳಿಯುವ ರೂಪವಾದ (ವಚನಗಳು) ಕಾಣಬರುತ್ತಿಲ್ಲ. ಹೀಗೆ ಶಿಷ್ಟಾಚಾರಗಳೂ ಇರುವದಿಲ್ಲ.[2]

ಇನ್ನು ಹಿಂದಿನ ಕರ್ಮಗಳನ್ನು ಚೆನ್ನಾಗಿ ಮಾಡಬೇಕೆಂಬಿಚ್ಛೆಯಿಂದ ಇಳಿಯಬಹುದು ಎಂದು (ಪೂರ್ವಪಕ್ಷ)ದಲ್ಲಿ ಹೇಳಿತ್ತಲ್ಲ, ಅದು ಸರಿಯಲ್ಲ. ಏಕೆಂದರೆ "ವಿಗುಣವಾದ ತನ್ನ ಧರ್ಮವೇ ಚೆನ್ನಾಗಿ ಅನುಷ್ಠಾನಮಾಡಿದ ಪರಧರ್ಮಕ್ಕಿಂತಲೂ ಮೇಲು" (ಗೀ. ೩-೩೫) ಎಂದು ಸ್ಮೃತಿಯಿದೆ. ನ್ಯಾಯದಿಂದಲೂ (ಹೀಗೆಂದು ಸಿದ್ಧವಾಗುತ್ತದೆ. ಹೇಗೆಂದರೆ). ಯಾವನಿಗೆ ಯಾವದನ್ನು ವಿಧಿಸಿರುತ್ತದೆಯೋ ಅದು ಅವನ ಧರ್ಮವೇ ಹೊರತು, ಯಾವನಿಗೆ ಯಾವದನ್ನು ಚೆನ್ನಾಗಿ ಮಾಡುವದಕ್ಕೆ ಆಗುತ್ತದೆಯೋ (ಅದ)ಲ್ಲ. ಏಕೆಂದರೆ ಧರ್ಮಕ್ಕೆ ಚೋದನೆಯೇ ಪ್ರಮಾಣವು. ರಾಗಾದಿಗಳ ವಶದಿಂದಲೂ ಜಾರುವಂತಿಲ್ಲ; ಏಕೆಂದರೆ ನಿಯಮಶಾಸ್ತ್ರವು ಅದಕ್ಕಿಂತ ಬಲವಾಗಿರುತ್ತದೆ. (ಸೂತ್ರದಲ್ಲಿ) 'ಜೈಮಿನಿಯ (ಮತದಲ್ಲಿ) ಕೂಡ' ಎಂದು ಅಪಿಶಬ್ದವನ್ನು ಉಪಯೋಗಿಸಿರುವದರಿಂದ ಜೈಮಿನಿಬಾದರಾಯಣ(ರಿಬ್ಬ)ರಿಗೂ (ಇದರಲ್ಲಿ) ಸಮ್ಮತಿಯಿದೆ ಎಂದು ಜ್ಞಾನವು ಗಟ್ಟಿಯಾಗಲೆಂದು ತಿಳಿಸಿದಂತಾಗಿದೆ.

## ೧೧. ಅಧಿಕಾರಾಧಿಕರಣ (ಸೂ. ೪೧-೪೨)

(ಮೇಲಿನ ಆಶ್ರಮದಿಂದ ಪ್ರಚ್ಯುತನಾದವನಿಗೆ ಪ್ರಾಯಶ್ಚಿತ್ತವುಂಟು)

**ನ ಚಾಧಿಕಾರಿಕಮಪಿ ಪತನಾನುಮಾನಾತ್ತದಯೋಗಾತ್ ॥ ೪೧ ॥**

೪೧. ಅಧಿಕಾರಲಕ್ಷಣದಲ್ಲಿ ಹೇಳಿರುವ ಪ್ರಾಯಶ್ಚಿತ್ತವೂ (ನೈಷ್ಠಿಕನಿ)ಗಿಲ್ಲ; ಏಕೆಂದರೆ ಪತನಸ್ಮೃತಿಯಿದೆಯಾದ್ದರಿಂದ ಅದು ಹೊಂದುವದಿಲ್ಲ.

---

1. ಇದು ಯಾವ ಶ್ರುತಿಯೆಂಬುದು ತಿಳಿಯಲಿಲ್ಲ; ಈ. ಭಾ. ೨ತಲ್ಲಿಯೂ ಇದನ್ನು ಉದಾಹರಿಸಿದೆ.

2. ನಿಯಮ, (ಅಲ್ಲಿಂದ ಮತ್ತೆ ಹಿಂತಿರುಗಬಾರದು ಮುಂತಾದದ್ದು), ಉಪದೇಶ (ಬ್ರಹ್ಮಚರ್ಯದಿಂದ ಮೇಲಿನ ಆಶ್ರಮಕ್ಕೆ ಹೋಗಬಹುದೆಂದಿರುವಂತೆ ಇಳಿಯುವದಕ್ಕೆ ಇಲ್ಲದ್ದು), ಅಭಾವ (ಶಿಷ್ಟಾಚಾರವಿಲ್ಲದಿರುವದು)–ಎಂದು ಮೂರನ್ನೂ ವಿವರಿಸಿದಂತೆ ಆಯಿತು.

# ಪೂರ್ವಪಕ್ಷ: ನೈಷ್ಠಿಕಬ್ರಹ್ಮಚಾರಿ ಪ್ರಚ್ಯುತನಾದರೆ ಪ್ರಾಯಶ್ಚಿತ್ತವಿಲ್ಲ

(ಭಾಷ್ಯ)

೪೮೫. ಯದಿ ನೈಷ್ಠಿಕೋ ಬ್ರಹ್ಮಚಾರೀ ಪ್ರಮಾದಾತ್ ಅವಕೀರ್ಯೇತ ಕಿಂ ತಸ್ಯ "ಬ್ರಹ್ಮಚಾರ್ಯವಕೀರ್ಣೀ ನೈರ್ಋತಂ ಗರ್ದಭಮಾಲಭೇತ"(?) ಇತ್ಯೇತತ್ ಪ್ರಾಯಶ್ಚಿತ್ತಂ ಸ್ಯಾತ್, ಉತ ನ ಇತಿ? ನೇತ್ಯುಚ್ಯತೇ। ಯದಪಿ ಅಧಿಕಾರಲಕ್ಷಣೇ ನಿರ್ಣೀತಂ ಪ್ರಾಯಶ್ಚಿತ್ತಮ್ "ಅವಕೀರ್ಣಿಪಶುಶ್ಚ ತದ್ವದಾಧಾನಸ್ಯಾಪ್ರಾಪ್ತಕಾಲತ್ವಾತ್" (ಜೈ.ಸೂ. ೬–೮–೨೨) ಇತಿ। ತದಪಿ ನ ನೈಷ್ಠಿಕಸ್ಯ ಭವಿತುಮರ್ಹತಿ। ಕಿಂ ಕಾರಣಮ್? "ಆರೂಢೋ ನೈಷ್ಠಿಕಂ ಧರ್ಮಂ ಯಸ್ತು ಪ್ರಚ್ಯವತೇ ಪುನಃ। ಪ್ರಾಯಶ್ಚಿತ್ತಂ ನ ಪಶ್ಯಾಮಿ ಯೇನ ಶುದ್ಧ್ಯೇತ್ ಸ ಆತ್ಮಹಾ" ( ? ) ಇತ್ಯಪ್ರತಿಸಮಾಧೇಯಪತನಸ್ಮರಣಾತ್ ಛಿನ್ನಶಿರಸ ಇವ ಪ್ರತಿಕ್ರಿಯಾನುಪಪತ್ತೇಃ। ಉಪಕುರ್ವಾಣಸ್ಯ ತು ತಾದೃಕ್ಪತನಸ್ಮರಣಾಭಾವಾತ್ ಉಪಪದ್ಯತೇ ತತ್ಪ್ರಾಯಶ್ಚಿತ್ತಮ್॥

(ಭಾಷ್ಯಾರ್ಥ)

ನೈಷ್ಠಿಕಬ್ರಹ್ಮಚಾರಿಯು ಪ್ರಮಾದದಿಂದ ಅವಕೀರ್ಣನಾದರೆ[1] "ಅವಕೀರ್ಣಿಯಾದ ಬ್ರಹ್ಮಚಾರಿಯು ನಿರ್ಋತಿದೇವತಾಕವಾದ ಗರ್ದಭವನ್ನು ಬಲಿಕೊಡಬೇಕು" (?) ಎಂಬೀ ಪ್ರಾಯಶ್ಚಿತ್ತವು ಆಗಬಹುದೆ, ಇಲ್ಲವೆ? (ಎಂಬುದು ಸಂಶಯ). (ಪೂರ್ವಪಕ್ಷದಲ್ಲಿ) ಇಲ್ಲ, ಎಂದು ಹೇಳುತ್ತೇವೆ. "ಅವಕೀರ್ಣಿಪಶುವೂ ಹಾಗೆಯೇ; ಏಕೆಂದರೆ ಆಧಾನವು ಪ್ರಾಪ್ತಕಾಲವಾಗಿರುವದಿಲ್ಲ"[2] (ಜೈ.ಸೂ. ೬–೮–೨೨) ಎಂದು ಅಧಿಕಾರಲಕ್ಷಣದಲ್ಲಿ ನಿರ್ಣಯವಾಗಿದೆಯಷ್ಟೆ, ಅದೂ ನೈಷ್ಠಿಕನಿಗೆ ಆಗಲಾರದು. ಕಾರಣವೇನು? ಎಂದರೆ "ನೈಷ್ಠಿಕಧರ್ಮವನ್ನು ಏರಿದವನು ಯಾವನು ಮತ್ತೆ ಪ್ರಚ್ಯುತನಾಗುತ್ತಾನೋ ಆ ಆತ್ಮಘ್ನನು ಶುದ್ಧಿಯಾಗುವ ಪ್ರಾಯಶ್ಚಿತ್ತವನ್ನೇ ಕಾಣೆನು" (?) ಎಂದು ನೇರ್ಪಡಿಸಲಾಗದ ಪತನವಿದೆಂಬ ಸ್ಮೃತಿಯಿರುವದರಿಂದ ತಲೆಯನ್ನು ಕತ್ತರಿಸಿಕೊಂಡವನಿಗೆ ಹೇಗೋ ಹಾಗೆ (ಇವನಿಗೂ) ಪ್ರತಿಕ್ರಿಯೆ ಹೊಂದುವಹಾಗಿರು

---

1. ಯಾವಜ್ಜೀವವೂ ಬ್ರಹ್ಮಚಾರಿಯಾಗಿರಬೇಕೆನ್ನುವವನು ನಿಷಿದ್ಧಸ್ತ್ರೀಸಂಯೋಗವನ್ನು ಮಾಡಿದರೆ.

2. ಆದ್ದರಿಂದ ಲೌಕಿಕಾಗ್ನಿಯಲ್ಲಿಯೇ ಈ ಗರ್ದಭಾಲಂಭವನ್ನು ಮಾಡಬೇಕು ಎಂದರ್ಥ.

ವದಿಲ್ಲ. ಆದರೆ ಉಪಕುರ್ವಾಣ (ಬ್ರಹ್ಮಚಾರಿಗೋ)[1] ಎಂದರೆ ಇಂಥ ಪತನ ಸ್ಮರಣವಿಲ್ಲದೆ ಇರುವದರಿಂದ ಆ ಪ್ರಾಯಶ್ಚಿತ್ತವು ಹೊಂದುತ್ತದೆ.

**ಉಪಪೂರ್ವಮಪಿ ತ್ವೇಕೇ ಭಾವಮಶನವತ್ ತದುಕ್ತಮ್ ॥೪೨॥**

೪೨. ಕೆಲವರು (ಇದನ್ನು) ಉಪಪೂರ್ವ(ಪಾತಕ)ವೆಂದು (ಹೇಳುತ್ತಾರೆ; ಆದ್ದರಿಂದ ಪ್ರಾಯಶ್ಚಿತ್ತ)ವಿದೆ, ಆಶನದಂತೆ (ಇದು). ಹಾಗೆಂದು (ಪ್ರಮಾಣಲಕ್ಷಣದಲ್ಲಿ) ಹೇಳಿದೆ.

## ಅವಕೀರ್ಣಿತ್ವಕ್ಕೂ ಪ್ರಾಯಶ್ಚಿತ್ತವಿದೆ

(ಭಾಷ್ಯ)

೪೮೬. ಅಪಿ ತ್ವೇಕ ಆಚಾರ್ಯಾಃ ಉಪಪಾತಕಮೇವೈತದಿತಿ ಮನ್ಯನ್ತೇ ಯನ್ನೈಷ್ಠಿಕಸ್ಯ ಗುರುದಾರಾದಿಭ್ಯೋಽನ್ಯತ್ರ ಬ್ರಹ್ಮಚರ್ಯಂ ವಿಶೀರ್ಯೇತ ನ ತನ್ಮಹಾಪಾತಕಂ ಭವತಿ ಗುರುತಲ್ಪಾದಿಷು ಮಹಾಪಾತಕೇಷು ಅಪರಿಗಣನಾತ್ । ತಸ್ಮಾತ್ ಉಪಕುರ್ವಾಣವತ್ ನೈಷ್ಠಿಕಸ್ಯಾಪಿ ಪ್ರಾಯಶ್ಚಿತ್ತಸ್ಯ ಭಾವಮಿಚ್ಛನ್ತಿ ಬ್ರಹ್ಮಚಾರಿತ್ವಾವಿಶೇಷಾತ್, ಅವಕೀರ್ಣಿತ್ವಾವಿಶೇಷಾಚ್ಚ । ಅಶನವತ್ । ಯಥಾ ಬ್ರಹ್ಮಚಾರಿಣೋ ಮಧುಮಾಂಸಾಶನೇ ವ್ರತಲೋಪಃ ಪುನಃಸಂಸ್ಕಾರಶ್ಚ ಏವಮಿತಿ । ಯೇ ಹಿ ಪ್ರಾಯಶ್ಚಿತ್ತಸ್ಯಾಭಾವಮಿಚ್ಛನ್ತಿ ತೇಷಾಂ ನ ಮೂಲಮ್ ಉಪಲಭ್ಯತೇ । ಯೇ ತು ಭಾವಮಿಚ್ಛನ್ತಿ ತೇಷಾಂ ಬ್ರಹ್ಮಚರ್ಯವಕೀರ್ಣೀತ್ಯೇತದವಿಶೇಷಶ್ರವಣಂ ಮೂಲಮ್ । ತಸ್ಮಾತ್ ಭಾವೋ ಯುಕ್ತತರಃ । ತದುಕ್ತಂ ಪ್ರಮಾಣಲಕ್ಷಣೇ "ಸಮಾ ವಿಪ್ರತಿಪತ್ತಿಃ ಸ್ಯಾತ್" (ಜೈ.ಸೂ. ೧-೩-೮), "ಶಾಸ್ತ್ರಸ್ಥಾ ವಾ ತನ್ನಿಮಿತ್ತತ್ವಾತ್" (ಜೈ.ಸೂ. ೧-೩-೯) ಇತಿ । ಪ್ರಾಯಶ್ಚಿತ್ತಾಭಾವಸ್ಮರಣಂ ತ್ವೇವಂ ಸತಿ ಯತ್ನಗೌರವೋತ್ಪಾದನಾರ್ಥಮ್ ಇತಿ ವ್ಯಾಖ್ಯಾತವ್ಯಮ್ । ಏವಂ ಭಿಕ್ಷುವೈಖಾನಸಯೋರಪಿ "ವಾನಪ್ರಸ್ಥೋ ದೀಕ್ಷಾಭೇದೇ ಕೃಚ್ಛ್ರಂ ದ್ವಾದಶರಾತ್ರಂ ಚರಿತ್ವಾ ಮಹಾಕಕ್ಷಂ ವರ್ಧಯೇತ್" (?) "ಭಿಕ್ಷುರ್ವಾನಪ್ರಸ್ಥವತ್ ಸೋಮವಲ್ಲಿವರ್ಜಂ ಸ್ವಶಾಸ್ತ್ರಸಂಸ್ಕಾರಶ್ಚ" (?) ಇತ್ಯೇವಮಾದಿಪ್ರಾಯಶ್ಚಿತ್ತಸ್ಮರಣಮ್ ಅನುಸ್ಮರ್ತವ್ಯಮ್ ॥

(ಭಾಷ್ಯಾರ್ಥ)

ಆದರೆ ಕೆಲವರು ಆಚಾರ್ಯರು ಇದು ಉಪಪಾತಕವೆಂದೇ ಅಭಿಪ್ರಾಯ ಪಟ್ಟಿರುತ್ತಾರೆ.[2] ನೈಷ್ಠಿಕ(ಬ್ರಹ್ಮಚಾರಿಗೆ) ಗುರುಪತ್ನಿಯೇ ಮುಂತಾದವರನ್ನು

1. ಅಧ್ಯಯನಾರ್ಥವಾಗಿ ಬ್ರಹ್ಮಚಾರಿಯಾಗಿರುವವನಿಗೆ.
2. ಗೌ. ಧ. ೩-೩-೧೧ರಲ್ಲಿ ಅವಕೀರ್ಣಿತ್ವವು ಉಪಪಾತಕವೆಂದು ಹೇಳಿದೆ.

ಬಿಟ್ಟು ಮಿಕ್ಕವರಲ್ಲಿ ಬ್ರಹ್ಮಚರ್ಯವು ತಪ್ಪಿದರೆ ಅದು ಮಹಾಪಾತಕವಾಗುವದಿಲ್ಲ, ಏಕೆಂದರೆ ಗುರುತಲ್ಪವೇ ಮುಂತಾದ ಮಹಾಪಾತಕಗಳಲ್ಲಿ ಅವನ್ನು ಸೇರಿಸಿ ಎಣಿಸಿರುವದಿಲ್ಲ. ಅದ್ದರಿಂದ ಉಪಕುರ್ವಾಣನಂತೆ ನೈಷ್ಠಿಕನಿಗೂ (ಅವನೂ) ಬ್ರಹ್ಮಚಾರಿಯಾಗಿರುವನೆಂಬುದು ಸಮಾನವಾಗಿರುವದರಿಂದಲೂ ಅವಕೀರ್ಣಿಯಾಗಿರುವನೆಂಬುದೂ ಸಮಾನವಾಗಿರುವದರಿಂದಲೂ ಪ್ರಾಯಶ್ಚಿತ್ತವುಂಟು (ಎಂದು ಅವರು) ಅಭಿಪ್ರಾಯಪಡುತ್ತಾರೆ. ಅಶನದಂತೆಯೇ (ಇದು). ಹೇಗೆ ಬ್ರಹ್ಮಚಾರಿಯು ಮಧುಮಾಂಸಗಳನ್ನು ತಿಂದರೆ ವ್ರತವು ಲೋಪವಾಗುತ್ತದೆಯೋ ಪುನಃ ಸಂಸ್ಕಾರವಾಗಬಹುದೋ ಹಾಗೆಯೇ ಇದು.

ಯಾರು ಪ್ರಾಯಶ್ಚಿತ್ತವು ಇಲ್ಲವೆಂದು ಅಭಿಪ್ರಾಯಪಟ್ಟಿರುವರೋ ಅವರಿಗೆ ಮೂಲ(ಪ್ರಮಾಣ)ವು ಕಾಣುವದಿಲ್ಲ ; ಆದರೆ ಯಾರು ಉಂಟೆಂದು ಅಭಿಪ್ರಾಯಪಡುತ್ತಾರೋ ಅವರಿಗೆ "ಬ್ರಹ್ಮಚಾರ್ಯವಕೀರ್ಣೀ......" ಎಂಬ ಸಾಮಾನ್ಯಪ್ರಮಾಣವು ಮೂಲವಾಗಿರುತ್ತದೆ. ಆದ್ದರಿಂದ (ಪ್ರಾಯಶ್ಚಿತ್ತವಿದೆ ಎಂಬುದೇ) ಹೆಚ್ಚು ಯುಕ್ತವಾಗಿರುತ್ತದೆ.[1] ಇದನ್ನು ಪ್ರಮಾಣಲಕ್ಷಣದಲ್ಲಿ "ಸಮವಾಗಿರುವದರಿಂದ ವಿಪ್ರತಿಪತ್ತಿಯಾಗುತ್ತದೆ (ಜೈ. ಸೂ.೧-೩-೮) ಶಾಸ್ತ್ರಸ್ಥರಾದವರೇ (ಪ್ರಮಾಣವು) ; ಏಕೆಂದರೆ ಅದಕ್ಕೆ (ಅವರೇ ಶ್ರುತಿಸ್ಮೃತಿನಿರ್ಧಾರಣೆ ಮಾಡುವದಕ್ಕೆ) ಕಾರಣವಾಗಿರುತ್ತಾರೆ" (ಜೈ. ಸೂ. ೧-೩-೯) ಎಂಬಲ್ಲಿ[2] ಹೇಳಿರುತ್ತದೆ. ಪ್ರಾಯಶ್ಚಿತ್ತವಿಲ್ಲವೆಂಬ ಸ್ಮೃತಿಯೋ ಎಂದರೆ (ಆಶ್ರಮಕರ್ಮದಲ್ಲಿ) ಯತ್ನಗೌರವವನ್ನುಂಟುಮಾಡುವದಕ್ಕಾಗಿ ಹೇಳಿದ್ದು ಎಂದು ವ್ಯಾಖ್ಯಾನಮಾಡಬೇಕು. ಹೀಗೆಯೇ ಭಿಕ್ಷುವೈಖಾನಸರಿಗೂ "ವಾನಪ್ರಸ್ಥನು ದೀಕ್ಷಾಭೇದವಾದರೆ[3] ಕೃಚ್ಛ್ರವನ್ನು ಹನ್ನೆರಡು ರಾತ್ರಿಗಳವರೆಗೆ ಆಚರಿಸಿ ಮಹಾಕಕ್ಷವನ್ನು[4] ಬೆಳೆಯಿಸಬೇಕು" (?), "ಭಿಕ್ಷುವಾನಪ್ರಸ್ಥರು ಸೋಮದ ಬಳ್ಳಿಯನ್ನು ಬಿಟ್ಟು (ಮಹಾಕಕ್ಷವನ್ನು ಬೆಳೆಯಿಸಬೇಕು), ತಮ್ಮ

1. ಆದ್ದರಿಂದ ಪ್ರಾಯಶ್ಚಿತ್ತವಾದ ಬಳಿಕ ಬ್ರಹ್ಮಚಾರಿಯು ಮಾಡುವ ಕರ್ಮವು ವಿದ್ಯೆಗೆ ಸಾಧನವಾಗಬಹುದು. ಸಂನ್ಯಾಸದಿಂದ ಚ್ಯುತರಾದವರ ಕರ್ಮವು ವಿದ್ಯೆಗೆ ಸಾಧನವಾಗಲಾರದೆಂಬ ಹಿಂದಿನ ಅಧಿಕರಣದ ನ್ಯಾಯವು ಇಲ್ಲಿಲ್ಲ.

2. ಇಲ್ಲಿ ಶಾಸ್ತ್ರಸಿದ್ಧವಾದದ್ದೇ ಪ್ರಮಾಣವೆಂದು ನಿರ್ಣಯಿಸಿದೆ. ಯವವಾದಹವೇತಸಶಬ್ದಗಳಿಗೆ ವ್ಯವಹಾರದಲ್ಲಿ ಬೇರೆಬೇರೆ ಅರ್ಥವಿದ್ದರೂ ಶಾಸ್ತ್ರದಲ್ಲಿ ಇರುವಂತೆಯೇ ಅರ್ಥಮಾಡಬೇಕು-ಎಂಬುದು ಅಲ್ಲಿಯ ವಿಚಾರವಿಷಯ.

3. ವಾನಪ್ರಸ್ಥದೀಕ್ಷೆಯು ನಷ್ಟವಾದರೆ.

4. ಬಹುತೃಣಕಾಷ್ಠಗಳಿರುವ ಸ್ಥಲವನ್ನು ನೀರು ಹಾಕುವದೇ ಮುಂತಾದ ಕಾರಣಗಳಿಂದ ಬೆಳೆಯಿಸಬೇಕು. ರ. ಪ್ರ.

(ಆಶ್ರಮಕ್ಕೆ ವಿಧಿಸಿರುವ) ಶಾಸ್ತ್ರಸಂಸ್ಕಾರವನ್ನೂ [1] ಮಾಡಬೇಕು'' (?)– ಎಂಬಿವೇ ಮುಂತಾದ ಪ್ರಾಯಶ್ಚಿತ್ತವನ್ನು ಸ್ಮೃತಿಯಲ್ಲಿ ಹೇಳಿರುವದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

## ೧೨. ಬಹಿರಧಿಕರಣ

(ಊರ್ಧ್ವರೇತಸ್ಕರು ಸ್ವಾಶ್ರಮಧರ್ಮದಿಂದ ಪ್ರಚ್ಯುತರಾದರೆ ಬಹಿಷ್ಕಾರ).

**ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ || ೪೩ ||**

೪೩. ಆದರೆ ಎರಡು ಪಕ್ಷದಲ್ಲಿಯೂ ಬಹಿ(ಷ್ಕಾರ)ಮಾಡಬೇಕು ; ಏಕೆಂದರೆ ಸ್ಮೃತಿಯಿದೆ, ಆಚಾರವೂ ಇದೆ.

### ಆಶ್ರಮಧರ್ಮದಿಂದ ಪ್ರಚ್ಯುತರಾದ ಮೇಲಿನ ಆಶ್ರಮದವರನ್ನು ಬಹಿಷ್ಕಾರಮಾಡಬೇಕು

(ಭಾಷ್ಯ)

೪೮೭. ಯದಿ ಊರ್ಧ್ವರೇತಸಾಂ ಸ್ವಾಶ್ರಮೇಭ್ಯಃ ಪ್ರಚ್ಯವನಂ ಮಹಾಪಾತಕಂ ಯದಿ ವಾ ಉಪಪಾತಕಮ್, ಉಭಯಥಾಪಿ ಶಿಷ್ಟೈಃ ತೇ ಬಹಿಷ್ಕರ್ತವ್ಯಾಃ । "ಆರೂಢೋ ನೈಷ್ಠಿಕಂ ಧರ್ಮಂ ಯಸ್ತು ಪ್ರಚ್ಯವತೇ ಪುನಃ । ಪ್ರಾಯಶ್ಚಿತ್ತಂ ನ ಪಶ್ಯಾಮಿ ಯೇನ ಶುಧ್ಯೇತ್ ಸ ಆತ್ಮಹಾ" (?) ಇತಿ, "ಆರೂಢಪತಿತಂ ವಿಪ್ರಂ ಮಣ್ಡಲಾಚ್ಚ ವಿನಿಃಸೃತಮ್ । ಉದ್ಬದ್ಧಂ ಕೃಮಿದಷ್ಟಂ ಚ ಸ್ಪೃಷ್ಟ್ವಾ ಚಾನ್ದ್ರಾಯಣಂ ಚರೇತ್" (?) ಇತಿ ಚೈವಮಾದಿನಿನ್ದಾತಿಶಯಸ್ಮೃತಿಭ್ಯಃ । ಶಿಷ್ಟಾಚಾರಾಚ್ಚ । ನ ಹಿ ಯಜ್ಞಾಧ್ಯಯನವಿವಾಹಾದೀನಿ ತೈಃ ಸಹ ಆಚರನ್ತಿ ಶಿಷ್ಟಾಃ ॥

(ಭಾಷ್ಯಾರ್ಥ)

ಊರ್ಧ್ವರೇತಸ್ಕರು ತಮ್ಮ ಆಶ್ರಮದಿಂದ ಪ್ರಚ್ಯುತಿಯಾಗುವದು ಮಹಾಪಾತಕವೇ ಆಗಲಿ, ಉಪಪಾತಕವೇ ಆಗಲಿ, ಎರಡು ಪ್ರಕಾರದಲ್ಲಿಯೂ ಶಿಷ್ಟರಾದವರು ಅವರನ್ನು ಬಹಿಷ್ಕರಿಸಬೇಕು. "ನೈಷ್ಠಿಕಧರ್ಮವನ್ನು ಏರಿದವನು ಯಾವನು ಮತ್ತೆ ಜಾರಿಬೀಳುವನೋ ಆ ಆತ್ಮಘ್ನನು ಶುದ್ಧಿಯಾಗಬಹುದಾದ ಪ್ರಾಯಶ್ಚಿತ್ತವನ್ನು ಕಾಣೆನು'' (?) "ಆರೂಢಪತಿತನಾದ ಬ್ರಾಹ್ಮಣನನ್ನೂ

1. ಪರಮಾತ್ಮಧ್ಯಾನವನ್ನು ಮಾಡಬೇಕು. ರ. ಪ್ರ. ಇಲ್ಲಿ ಕೊಟ್ಟಿರುವ ಪ್ರಮಾಣವಚನಗಳು ಎಲ್ಲಿಯವೆಂಬುದು ತಿಳಿಯಲಿಲ್ಲ.

(ತನ್ನ) ಆಶ್ರಮದಿಂದ ಹೊರಕ್ಕೆ ಬಂದಿರುವವನನ್ನೂ (?) ಗಲ್ಲಿಗೆ ಬಿದ್ದವನನ್ನೂ, ಕ್ರಿಮಿಗಳು ಕಡಿದವನನ್ನೂ ಮುಟ್ಟಿದರೆ ಚಾಂದ್ರಾಯಣವನ್ನು ಮಾಡಬೇಕು" (?) ಎಂಬಿವೇ ಮುಂತಾದ ಹೆಚ್ಚಿನ ನಿಂದೆಯನ್ನು ಹೇಳುವ ಸ್ಮೃತಿಗಳಿಂದ (ಇದು ಸಿದ್ಧವಾಗುತ್ತದೆ). ಶಿಷ್ಟಾಚಾರದಿಂದಲೂ (ಸಿದ್ಧವಾಗುತ್ತದೆ) ; ಏಕೆಂದರೆ ಶಿಷ್ಟರು ಅವರೊಡನೆ ಯಜ್ಞ, ಅಧ್ಯಯನ, ವಿವಾಹ - ಮುಂತಾದವನ್ನು ಮಾಡುವದೇ ಇಲ್ಲ.

## ೧೩. ಸ್ವಾಮ್ಯಧಿಕರಣ (ಸೂ. ೪೪–೪೬)

( ಅಂಗೋಪಾಸನೆಗಳು ಋತ್ವಿಜರ ಕರ್ಮಗಳು )

**ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ॥ ೪೪ ॥**

೪೪. (ಇದು) ಯಜಮಾನನ (ಕರ್ಮವು), ಏಕೆಂದರೆ ಫಲಶ್ರುತಿಯಿದೆ ಎಂದು ಆತ್ರೇಯನು (ಅಭಿಪ್ರಾಯಪಡುತ್ತಾನೆ).

### ಪೂರ್ವಪಕ್ಷ:

## ಅಂಗೋಪಾಸನೆಯು ಯಜಮಾನನ ಕರ್ಮ

(ಭಾಷ್ಯ)

೪೮೮. ಅಙ್ಗೋಪಾಸನೇಷು ಸಂಶಯಃ । ಕಿಂ ತಾನಿ ಯಜಮಾನಕರ್ಮಾಣಿ, ಆಹೋಸ್ವಿತ್ ಋತ್ವಿಕ್ಕರ್ಮಾಣಿ ? ಇತಿ । ಕಿಂ ತಾವತ್ ಪ್ರಾಪ್ತಮ್ ? ಯಜಮಾನಕರ್ಮಾಣೀತಿ । ಕುತಃ ? ಫಲಶ್ರುತೇಃ । ಫಲಂ ಹಿ ಶ್ರೂಯತೇ । "ವರ್ಷತಿ ಹಾಸ್ಮೈ ವರ್ಷಯತಿ ಹ ಯ ಏತದೇವಂ ವಿದ್ವಾನ್ ವೃಷ್ಟೌ ಪಞ್ಚವಿಧಂ ಸಾಮೋಪಾಸ್ತೇ" (ಛಾಂ. ೨–೩–೨) ಇತ್ಯಾದಿ । ತಚ್ಚ ಸ್ವಾಮಿಗಾಮಿ ನ್ಯಾಯ್ಯಮ್ । ತಸ್ಯ ಸಾಙ್ಗೇ ಪ್ರಯೋಗೇಽಧಿಕೃತತ್ವಾತ್ । ಅಧಿಕೃತಾಧಿಕಾರತ್ವಾಚ್ಚೈವಂಜಾತೀಯಕಸ್ಯ । ಫಲಂ ಚ ಕರ್ತರ್ಯುಪಾಸನಾನಾಂ ಶ್ರೂಯತೇ । "ವರ್ಷತ್ಯಸ್ಮೈ ಯ ಉಪಾಸ್ತೇ" ಇತ್ಯಾದಿ । ನನು ಋತ್ವಿಜೋಽಪಿ ಫಲಂ ದೃಷ್ಟಮ್ "ಆತ್ಮನೇ ವಾ ಯಜಮಾನಾಯ ವಾ ಯಂ ಕಾಮಂ ಕಾಮಯತೇ ತಮಾಗಾಯತಿ" (ಬೃ. ೧–೩–೨೮) ಇತಿ । ನ । ತಸ್ಯ ವಾಚನಿಕತ್ವಾತ್ । ತಸ್ಮಾತ್ ಸ್ವಾಮಿನ ಏವ ಫಲವತ್ಸೂಪಾಸನೇಷು ಕರ್ತೃತ್ವಮ್ ಇತ್ಯಾತ್ರೇಯ ಆಚಾರ್ಯೋ ಮನ್ಯತೇ ॥

(ಭಾಷ್ಯಾರ್ಥ)

ಅಂಗಗಳಲ್ಲಿ ಮಾಡುವ ಉಪಾಸನೆಗಳ ವಿಷಯದಲ್ಲಿ (ಈ) ಸಂಶಯವುಂಟಾಗುತ್ತದೆ: ಅವೇನು ಯಜಮಾನನ ಕರ್ಮಗಳೆ, ಅಥವಾ ಋತ್ವಿಜನ

ಕರ್ಮಗಳೆ ? ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? (ಅವು) ಯಜಮಾನನ ಕರ್ಮಗಳೆಂದು. ಏಕೆ ? ಎಂದರೆ ಫಲಶ್ರುತಿಯಿರುವದರಿಂದ. (ಯಾವನು ವೃಷ್ಟಿಯಲ್ಲಿ ಐದು ಬಗೆಯ ಸಾಮವನ್ನು ಹೀಗೆಂದರಿತು ಉಪಾಸನೆಮಾಡುತ್ತಾನೋ ಅವನಿಗೆ (ಬೇಕಾದಂತೆ) ಮಳೆ ಬರುತ್ತದೆ ; (ಮತ್ತೊಬ್ಬರಿಗೂ ಅವನು) ಮಳೆಬರಿಸುತ್ತಾನೆ" (ಛಾಂ. ೨-೩-೨) ಎಂದು ಮುಂತಾಗಿ ಫಲವು ಶ್ರುತವಾಗಿದೆಯಲ್ಲವೆ ? ಅದು ಯಜಮಾನನಿಗೆ ಸೇರತಕ್ಕದ್ದೆಂಬುದು ನ್ಯಾಯವು ; ಏಕೆಂದರೆ ಅವನೇ ಸಾಂಗಪ್ರಯೋಗಕ್ಕೆ ಅಧಿಕಾರಿಯಾಗಿರುತ್ತಾನೆ. ಈ ಜಾತಿಯ (ಉಪಾಸನೆಯಲ್ಲಿ ಕರ್ಮದಲ್ಲಿ) ಅಧಿಕೃತನೇ ಅಧಿಕಾರಿಯಾಗಿರುತ್ತಾನೆ. "ಯಾವನು ಉಪಾಸನೆಮಾಡುತ್ತಾನೋ ಅವನಿಗೆ ಮಳೆಯಾಗುತ್ತದೆ" ಎಂದು ಫಲವು ಕರ್ತೃವಿಗೆ ಆಗುತ್ತದೆಯೆಂದೇ ಶ್ರುತಿಯಲ್ಲಿದೆ.

(ಆಕ್ಷೇಪ) :- "ತನಗಾಗಲಿ ಯಜಮಾನನಿಗಾಗಲಿ ಯಾವ ಕಾಮವನ್ನು ಇಚ್ಛಿಸುತ್ತಾನೋ ಅದನ್ನು ಆಗಾನಮಾಡುತ್ತಾನೆ" (ಬೃ. ೧-೩-೨೮) ಎಂದು ಋತ್ವಿಜನಿಗೂ ಫಲವನ್ನು ಹೇಳಿರುವದು ಕಂಡಿದೆಯಲ್ಲ !

(ಪರಿಹಾರ) :- ಹಾಗಲ್ಲ. ಏಕೆಂದರೆ ಆ (ಫಲವು) ವಾಚನಿಕವಾಗಿದೆ.[1] ಆದ್ದರಿಂದ ಯಜಮಾನನಿಗೇ ಫಲವುಳ್ಳ ಉಪಾಸನೆಗಳಲ್ಲಿ ಕರ್ತೃತ್ವವಿರುತ್ತದೆ ಎಂದು ಆತ್ರೇಯರೆಂಬ ಆಚಾರ್ಯರು ಅಭಿಪ್ರಾಯಪಡುತ್ತಾರೆ.

**ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರೀಯತೇ ॥ ೪೫ ॥**

೪೫. ಋತ್ವಿಕ್ಕರ್ಮ(ವೇ ಇದು), ಏಕೆಂದರೆ ಅದಕ್ಕಾಗಿಯಲ್ಲವೆ, (ಋತ್ವಿಕ್ಕನನ್ನು) ಪರಿಕ್ರಯಮಾಡಿಕೊಳ್ಳುವದು ?- ಎಂದು ಔಡುಲೋಮಿಯು (ಅಭಿಪ್ರಾಯಪಡುತ್ತಾನೆ).

## ಸಿದ್ಧಾಂತ: ಅಂಗೋಪಾಸನೆಗಳು ಋತ್ವಿಕ್ಕರ್ಮ

(ಭಾಷ್ಯ)

೪೮೯. ನೈತದಸ್ತಿ ಸ್ವಾಮಿಕರ್ಮಾಣಿ ಉಪಾಸನಾನೀತಿ । ಋತ್ವಿಕ್ಕರ್ಮಾಣಿ ಏತಾನಿ ಸ್ಯುಃ ಇತ್ಯೌಡುಲೋಮಿರಾಚಾರ್ಯೋ ಮನ್ಯತೇ । ಕಿಂ ಕಾರಣಮ್? ತಸ್ಮೈ ಹಿ ಸಾಙ್ಗಾಯ ಕರ್ಮಣೇ ಯಜಮಾನೇನ ಋತ್ವಿಕ್ ಪರಿಕ್ರೀಯತೇ । ತತ್ಪ್ರಯೋಗಾನ್ತಃಪಾತೀನಿ ಚ ಉದ್ಗೀಥಾದ್ಯುಪಾಸನಾನಿ।

---

1. ಆ ವಚನದಲ್ಲಿ ಸ್ಪಷ್ಟವಾಗಿ ಹಾಗೆಂದು ಹೇಳಿದೆ ; ಆದ್ದರಿಂದ ಅಲ್ಲಿ ಹಾಗಾಗಬಹುದು.

ಅಧಿಕೃತಾಧಿಕಾರತ್ವಾತ್ । ತಸ್ಮಾತ್ ಗೋದೋಹನಾದಿನಿಯಮವದೇವ ಋತ್ವಿಗ್ಭಿರ್ನಿರ್ವರ್ತ್ಯೇರನ್। ತಥಾ ಚ "ತಂ ಹ ಬಕೋ ದಾಲ್ಭ್ಯೋ ವಿದಾಂಚಕಾರ ಸ ಹ ನೈಮಿಶೀಯಾನಾಮುದ್ಗಾತಾ ಬಭೂವ" ( ಛಾಂ. ೧-೨-೧೩ ) ಇತಿ ಉದ್ಗಾತೃಕರ್ತೃಕತಾಂ ವಿಜ್ಞಾನಸ್ಯ ದರ್ಶಯತಿ । ಯತ್ತೂಕ್ತಮ್ ಕರ್ತ್ರಾಶ್ರಯಂ ಫಲಂ ಶ್ರೂಯತ ಇತಿ । ನೈಷ ದೋಷಃ । ಪರಾರ್ಥತ್ವಾದೃತ್ವಿಜಃ ಅನ್ಯತ್ರ ವಚನಾತ್ ಫಲಸಂಬನ್ಧಾನುಪಪತ್ತೇಃ ॥

(ಭಾಷ್ಯಾರ್ಥ)

(ಈ) ಉಪಾಸನೆಗಳು ಯಜಮಾನನ ಕರ್ಮಗಳು ಎಂಬುದು (ಸರಿ) ಯಲ್ಲ. ಇವು ಋತ್ವಿಜರ ಕರ್ಮಗಳೇ ಆಗಿರಬಹುದು ಎಂದು ಔಡುಲೋಮಿ ಎಂಬ ಆಚಾರ್ಯರು ಅಭಿಪ್ರಾಯಪಡುತ್ತಾನೆ. ಕಾರಣವೇನು ? ಎಂದರೆ ಆ ಸಾಂಗಕರ್ಮಕ್ಕಾಗಿಯಲ್ಲವೆ, ಯಜಮಾನನಿಂದ ಋತ್ವಿಜನು ಪರಿಕ್ರೀತನಾಗಿರುವದು[1] ? ಆ (ಕರ್ಮದ) ಪ್ರಯೋಗದೊಳಗೇ ಉದ್ಗೀಥವೇ ಮುಂತಾದ ಉಪಾಸನೆಗಳು ಅಡಕವಾಗಿರುತ್ತವೆ, ಏಕೆಂದರೆ (ಕರ್ಮದಲ್ಲಿ) ಅಧಿಕೃತರಾದವರಿಗೆ (ಅವುಗಳಲ್ಲಿ) ಅಧಿಕಾರವಿರುತ್ತದೆ. ಆದ್ದರಿಂದ ಗೋದೋಹನಾದಿ ನಿಯಮದಂತೆಯೇ[2] (ಇವನ್ನು) ಋತ್ವಿಜರು ಮಾಡಬೇಕು.[3] ಆದ್ದರಿಂದಲೇ "ಆ (ಉದ್ಗೀಥವೆಂಬ ಪ್ರಣವವನ್ನು) ಬಕದಾಲ್ಭ್ಯನು ಉಪಾಸನೆಮಾಡಿದನು ; ಅವನು ನೈಮಿಶೀಯರಿಗೆ ಉದ್ಗಾತೃವಾದನು" ( ಛಾಂ. ೧-೨-೧೩) ಎಂದು ಉಪಾಸನೆಗೆ ಉದ್ಗಾತೃವೇ ಕರ್ತೃವೆಂದು (ಶ್ರುತಿ) ತಿಳಿಸುತ್ತದೆ. ಕರ್ತೃವನ್ನಾಶ್ರಯಿಸಿದ ಫಲವನ್ನೇ ಶ್ರುತಿಯಲ್ಲಿ ಹೇಳಿದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದೇನೂ ದೋಷವಲ್ಲ. ಏಕೆಂದರೆ ಋತ್ವಿಜನು ಮತ್ತೊಬ್ಬನಿಗಾಗಿರುವನಾದ್ದರಿಂದ ವಚನವಿಲ್ಲದ ಕಡೆಯಲ್ಲಿ (ಅವನಿಗೆ) ಫಲದ ಸಂಬಂಧವು ಹೊಂದಲಾರದು.[4]

## ಶ್ರುತೇಶ್ಚ ॥ ೪೭ ॥

೪೭. ಶ್ರುತಿಯಿರುವದರಿಂದಲೂ (ಹೀಗೆ).

1. ದಕ್ಷಿಣೆಯನ್ನು ಕೊಟ್ಟು ಈ ಕರ್ಮಭಾಗವನ್ನು ನನಗಾಗಿ ಮಾಡಬೇಕು ಎಂದು ಋತ್ವಿಜನನ್ನು ಯಜಮಾನನು ಕೇಳಿಕೊಂಡಿರುತ್ತಾನೆ.

2. ಪಶುಕಾಮನಾದವನಿಗೇ ಗೋದೋಹನಾದಿಗಳು ಎಂದು ನಿಯಮಿಸಿರುವದು ಅಪ್ಪ್ರಣಯನಕ್ಕೆ ಅಧಿಕಾರಿಯಾದವನಿಗೇ ಹೊರತು ಮತ್ತೊಬ್ಬನಿಗಲ್ಲದಿರುವಂತೆ.

3. ಏಕೆಂದರೆ ಅವರೇ ಉದ್ಗಾನಾದಿಕರ್ಮಕ್ಕೆ ಅಧಿಕಾರಿಗಳು.

4. ಋತ್ವಿಜನಿಗೇ ಫಲವೆಂದು ಹೇಳಿದ ಕಡೆಯಲ್ಲಿ ವಚನಪ್ರಾಮಾಣ್ಯದಿಂದ ಆಗಬಹುದು.

## ಋತ್ವಿಜನ ಕರ್ಮವಿದೆಂಬ ಶ್ರುತಿಯೂ ಇದೆ

(ಭಾಷ್ಯ)

೪೯೦. "ಯಾಂ ವೈ ಕಾಂಚನ ಯಜ್ಞ ಋತ್ವಿಜ ಆಶಿಷಮಾಶಾಸತ ಇತಿ ಯಜಮಾನಾಯ್ಯೈವ ತಾಮಾಶಾಸತ ಇತಿ ಹೋವಾಚೇತಿ" (ಶತ. ಬ್ರಾ. ೧-೩-೧-೨೬ ?)[1], "ತಸ್ಮಾದು ಹೈವಂವಿದುದ್ಗಾತಾ ಬ್ರೂಯಾತ್ ಕಂ ತೇ ಕಾಮಮಾಗಾಯಾನಿ" (ಛಾಂ. ೧-೭-೮) ಇತಿ । ತಚ್ಚ ಋತ್ವಿಕ್ಕರ್ತೃಕಸ್ಯ ವಿಜ್ಞಾನಸ್ಯ ಯಜಮಾನಗಾಮಿ ಫಲಂ ದರ್ಶಯತಿ । ತಸ್ಮಾತ್ ಅಙ್ಗೋಪಾಸನಾನಾಮ್ ಋತ್ವಿಕ್ಕರ್ಮತ್ವಸಿದ್ಧಿಃ ॥

(ಭಾಷ್ಯಾರ್ಥ)

"ಯಜ್ಞದಲ್ಲಿ ಋತ್ವಿಜರು ಯಾವದೊಂದು ಫಲವನ್ನು ಬಯಸಿದರೂ ಯಜಮಾನನಿಗೇ ಅದನ್ನು ಬಯಸುತ್ತಾರೆ- ಎಂದು (ಅವನು) ಹೇಳಿದನು" (ಶತ. ಬ್ರಾ. ೧-೩-೧-೨೬) ಎಂದೂ "ಆದ್ದರಿಂದ ಹೀಗೆಂದು ತಿಳಿದ ಉದ್ಗಾತೃವು ನಿನಗೆ ಯಾವ ಕರ್ಮವನ್ನು ಆಗಾನಮಾಡಲಿ ? ಎಂದು ಕೇಳಬೇಕು" (ಛಾಂ. ೧-೭-೮) ಎಂದೂ (ಶ್ರುತಿಯಿದೆ). ಅದು ಋತ್ವಿಜನು ಮಾಡುವ ಉಪಾಸನೆಯ ಫಲವು ಯಜಮಾನನನ್ನೇ ಸೇರುವದೆಂದು ತಿಳಿಸುತ್ತದೆ. ಆದ್ದರಿಂದ ಅಂಗೋಪಾಸನೆಗಳು ಋತ್ವಿಕ್ಕರ್ಮವೆಂದು ಸಿದ್ಧವಾಯಿತು.

## ಸಹಕಾರ್ಯನ್ತರವಿಧ್ಯಧಿಕರಣ (ಸೂ. ೪೭-೪೯)

( ಬೃ. ೩-೫-೧ರಲ್ಲಿ ಮೌನವನ್ನು ವಿಧಿಸಿದೆ )

**ಸಹಕಾರ್ಯನ್ತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ॥**

೪೭. ಮೂರನೆಯದನ್ನು ಮತ್ತೊಂದು ಸಹಕಾರಿಯೆಂದು (ಒಂದು) ಪಕ್ಷದಲ್ಲಿ ವಿಧಿಸಿದೆ ; ಆ (ವಿದ್ಯಾವಂತ)ನಿಗೇ (ಇದು). ವಿಧ್ಯಾದಿಗಳಂತೆ.

## ಪೂರ್ವಪಕ್ಷ:

## ಪಾಂಡಿತ್ಯಬಾಲ್ಯಗಳ ಜೊತೆಗೆ ಮೌನವನ್ನು ವಿಧಿಸಿಲ್ಲ

(ಭಾಷ್ಯ)

೪೯೧. "ತಸ್ಮಾದ್ಬ್ರಾಹ್ಮಣಃ ಪಾಣ್ಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇದ್ ಬಾಲ್ಯಂ ಚ ಪಾಣ್ಡಿತ್ಯಂ ಚ ನಿರ್ವಿದ್ಯಾಥ ಮುನಿರಮೌನಂ ಚ ಮೌನಂ

---

1. ಇದು ಡಾಯ್ಸನ್ ಎಂಬಾತನು ಕೊಟ್ಟ ಸಂಖ್ಯೆ, ನಮ್ಮಲ್ಲಿರುವ ಮಾಧ್ಯಂದನೀಯ ಶತ. ಬ್ರಾ. ೧-೨-೪-೨೬ರಲ್ಲಿ "ಯಾಂ ವೈ ಕಾಂಚ ಯಜ್ಞ ಋತ್ವಿಜ ಆಶಿಷಮಾಶಾಸತೇ ಯಜಮಾನಸ್ಯೈವ ಸಾ" ಎಂದಿದೆ.

ಚ ನಿರ್ವಿದ್ಯಾಥ ಬ್ರಾಹ್ಮಣಃ" (ಬೃ. ೩-೫-೧) ಇತಿ ಬೃಹದಾರಣ್ಯಕೇ ಶ್ರೂಯತೇ। ತತ್ರ ಸಂಶಯಃ। ಮೌನಂ ವಿಧೀಯತೇ ನ ವಾ ಇತಿ। ನ ವಿಧೀಯತ ಇತಿ ತಾವತ್ ಪ್ರಾಪ್ತಮ್। ಬಾಲ್ಯೇನ ತಿಷ್ಠಾಸೇತ್ ಇತ್ಯತ್ರೈವ ವಿಧೇರವಸಿತತ್ವಾತ್। ನ ಹಿ "ಅಥ ಮುನಿಃ" ಇತ್ಯತ್ರ ವಿಧಾಯಿಕಾ ವಿಭಕ್ತಿರುಪಲಭ್ಯತೇ। ತಸ್ಮಾತ್ ಅಯಮನುವಾದೋ ಯುಕ್ತಃ। ಕುತಃ ಪ್ರಾಪ್ತಿರಿತಿ ಚೇತ್। ಮುನಿಪಣ್ಡಿತಶಬ್ದಯೋರ್ಜ್ಞಾನಾರ್ಥತ್ವಾತ್ ಪಾಣ್ಡಿತ್ಯಂ ನಿರ್ವಿದ್ಯೇತ್ಯೇವಂ ಪ್ರಾಪ್ತಂ ಮೌನಮ್। ಅಪಿ ಚ "ಅಮೌನಂ ಚ ಮೌನಂ ಚ ನಿರ್ವಿದ್ಯಾಥ ಬ್ರಾಹ್ಮಣಃ" ಇತ್ಯತ್ರ ತಾವತ್ ನ ಬ್ರಾಹ್ಮಣತ್ವಂ ವಿಧೀಯತೇ ಪ್ರಾಗೇವ ಪ್ರಾಪ್ತತ್ವಾತ್। ತಸ್ಮಾತ್ "ಅಥ ಬ್ರಾಹ್ಮಣಃ" ಇತಿ ಪ್ರಶಂಸಾವಾದಃ। ತಥೈವ "ಅಥ ಮುನಿಃ" ಇತ್ಯಪಿ ಭವತಿ ಸಮಾನನಿರ್ದೇಶತ್ವಾತ್ ಇತಿ ॥

(ಭಾಷ್ಯಾರ್ಥ)

"ಆದ್ದರಿಂದ ಬ್ರಾಹ್ಮಣನು ಪಾಂಡಿತ್ಯವನ್ನು ಮುಗಿಸಿಕೊಂಡು ಬಾಲ್ಯದಿಂದ ನಿಲ್ಲುವದಕ್ಕೆ ಇಚ್ಛಿಸಬೇಕು; ಬಾಲ್ಯವನ್ನೂ ಪಾಂಡಿತ್ಯವನ್ನೂ ಮುಗಿಸಿಕೊಂಡು ಬಳಿಕ ಮುನಿಯು, ಅಮೌನವನ್ನೂ ಮೌನವನ್ನೂ ಮುಗಿಸಿದ ಬಳಿಕ ಬ್ರಾಹ್ಮಣನು" (ಬೃ. ೩-೫-೧) ಎಂದು ಬೃಹದಾರಣ್ಯಕದಲ್ಲಿ ಶ್ರುತವಾಗಿದೆ. ಅಲ್ಲಿ ಸಂಶಯವೇನೆಂದರೆ: ಮೌನವು ವಿಹಿತವಾಗಿದೆಯೆ, ಇಲ್ಲವೆ?

ವಿಹಿತವಾಗಿಲ್ಲ ಎಂದು ಮೊದಲು (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆಂದರೆ "ಬಾಲ್ಯದಿಂದ ನಿಂತಿರಲು ಇಚ್ಛಿಸಬೇಕು" ಎಂಬಲ್ಲಿಗೇ ವಿಧಿಯು ಮುಗಿದಿರುತ್ತದೆ. ಏಕೆಂದರೆ 'ಅಥ ಮುನಿಃ' (ಬಳಿಕ ಮುನಿಯು) ಎಂಬಲ್ಲಿ ವಿಧಾಯಕವಿಭಕ್ತಿ ಯಾವದೂ ಕಾಣುವದಿಲ್ಲವಷ್ಟೆ? ಆದ್ದರಿಂದ ಇದು ಅನುವಾದವೆಂಬುದು ಯುಕ್ತವು. ಈ ಮೌನವು ಹೇಗೆ ಪ್ರಾಪ್ತವಾಗಿದೆ? ಎಂದರೆ ಮುನಿಪಂಡಿತಶಬ್ದಗಳೆರಡಕ್ಕೂ ಜ್ಞಾನವೆಂದೇ ಅರ್ಥವಾಗಿರುವದರಿಂದ 'ಪಾಂಡಿತ್ಯವನ್ನು ಮುಗಿಸಿ' ಎಂಬದರಿಂದಲೇ ಮೌನವು ಪ್ರಾಪ್ತವಾಗಿರುತ್ತದೆ. ಇದಲ್ಲದೆ 'ಅಮೌನವನ್ನೂ ಮೌನವನ್ನೂ ಮುಗಿಸಿದ ಬಳಿಕ ಬ್ರಾಹ್ಮಣನು' ಎಂಬಲ್ಲಂತೂ ಬ್ರಾಹ್ಮಣತ್ವವನ್ನು ವಿಧಿಸಿಲ್ಲ; ಏಕೆಂದರೆ (ಬ್ರಾಹ್ಮಣ್ಯವು) ಮೊದಲೇ ಪ್ರಾಪ್ತವಾಗಿರುತ್ತದೆ. ಆದ್ದರಿಂದ 'ಬಳಿಕ ಬ್ರಾಹ್ಮಣನು' ಎಂದು ಹೊಗಳಿಕೆಗಾಗಿ ಹೇಳಿದ್ದೆಂದಾಯಿತು. ಹಾಗೆಯೇ "ಬಳಿಕ ಮುನಿ" ಎಂಬಲ್ಲಿಯೂ ಆಗಬೇಕಾದದ್ದು ಯುಕ್ತ; ಏಕೆಂದರೆ ನಿರ್ದೇಶವು ಎರಡಕ್ಕೂ ಸಮಾನವಾಗಿದೆ.

## ಸಿದ್ಧಾಂತ: ಮೌನವನ್ನು ವಿಧಿಸಿದೆ

(ಭಾಷ್ಯ)

೪೯೨. ಏವಂ ಪ್ರಾಪ್ತೇ ಬ್ರೂಮಃ। ಸಹಕಾರ್ಯನ್ತರವಿಧಿರಿತಿ।

ವಿದ್ಯಾಸಹಕಾರಿಣೋ ಮೌನಸ್ಯ ಬಾಲ್ಯಪಾಣ್ಡಿತ್ಯವತ್ ವಿಧಿರೇವ ಆಶ್ರಯಿತವ್ಯೋಽಪೂರ್ವತ್ವಾತ್ । ನನು ಪಾಣ್ಡಿತ್ಯಶಬ್ದೇನೈವ ಮೌನಸ್ಯಾವಗತತ್ವಮುಕ್ತಮ್। ನೈಷ ದೋಷಃ। ಮುನಿಶಬ್ದಸ್ಯ ಜ್ಞಾನಾತಿಶಯಾರ್ಥತ್ವಾತ್। ಮನನಾನ್ಮುನಿಃ ಇತಿ ಚ ವ್ಯುತ್ಪತ್ತಿಸಂಭವಾಚ್ "ಮುನೀನಾಮಪ್ಯಹಂ ವ್ಯಾಸಃ" (ಗೀ. ೧೦-೩೭) ಇತಿ ಚ ಪ್ರಯೋಗದರ್ಶನಾತ್। ನನು ಮುನಿಶಬ್ದಃ ಉತ್ತಮಾಶ್ರಮವಚನೋಽಪಿ ಶ್ರೂಯತೇ "ಗಾರ್ಹಸ್ಥ್ಯಮಾಚಾರ್ಯಕುಲಂ ಮೌನಂ ವಾನಪ್ರಸ್ಥಮ್" (ಆ.ಧ. ೨-೯-೨೧-೧) ಇತ್ಯತ್ರ । ನ । "ವಾಲ್ಮೀಕಿರ್ಮುನಿಪುಙ್ಗವಃ" (ವಾ.ರಾ. ೧-೧-೧) ಇತ್ಯಾದಿಷು ವ್ಯಭಿಚಾರದರ್ಶನಾತ್। ಇತರಾಶ್ರಮಸಂನಿಧಾನಾತ್ ತು ಪಾರಿಶೇಷ್ಯಾತ್ ತತ್ರೋತ್ತಮಾಶ್ರಮೋಪಾದಾನಮ್, ಜ್ಞಾನಪ್ರಧಾನತ್ವಾದುತ್ತಮಾಶ್ರಮಸ್ಯ। ತಸ್ಮಾತ್ ಬಾಲ್ಯಪಾಣ್ಡಿತ್ಯಾಪೇಕ್ಷಯಾ ತೃತೀಯಮಿದಂ ಮೌನಂ ಜ್ಞಾನಾತಿಶಯರೂಪಂ ವಿಧೀಯತೇ। ಯತ್ತು ಬಾಲ್ಯ ಏವ ವಿಧೇಃ ಪರ್ಯವಸಾನಮಿತಿ, ತಥಾಪಿ ಅಪೂರ್ವತ್ವಾನ್ಮುನಿತ್ವಸ್ಯ ವಿಧೇಯತ್ವಮಾಶ್ರೀಯತೇ ಮುನಿಃ ಸ್ಯಾದಿತಿ। ನಿರ್ವೇದನೀಯತ್ವನಿರ್ದೇಶಾದಪಿ ಮೌನಸ್ಯ ಬಾಲ್ಯಪಾಣ್ಡಿತ್ಯವದ್ ವಿಧೇಯತ್ವಾಶ್ರಯಣಮ್। ತದ್ವತಃ ವಿದ್ಯಾವತಃ ಸಂನ್ಯಾಸಿನಃ। ಕಥಂ ಚ ವಿದ್ಯಾವತಃ ಸಂನ್ಯಾಸಿನ ಇತ್ಯವಗಮ್ಯತೇ? ತದಧಿಕಾರಾತ್ "ಆತ್ಮಾನಂ ವಿದಿತ್ವಾ ಪುತ್ರಾದ್ಯೇಷಣಾಭ್ಯೋ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ" ಇತಿ। ನನು ಸತಿ ವಿದ್ಯಾವತ್ತ್ವೇ ಪ್ರಾಪ್ನೋತ್ಯೇವ ತತ್ರಾತಿಶಯಃ ಕಿಂ ಮೌನವಿಧಿನಾ ಇತಿ ? ಅತ ಆಹ- 'ಪಕ್ಷೇಣ' ಇತಿ। ಏತದುಕ್ತಂ ಭವತಿ। ಯಸ್ಮಿನ್ ಪಕ್ಷೇ ಭೇದದರ್ಶನಪ್ರಾಬಲ್ಯಾತ್ ನ ಪ್ರಾಪ್ನೋತಿ ತಸ್ಮಿನ್ನೇಷ ವಿಧಿಃ ಇತಿ। ವಿಧ್ಯಾದಿವತ್। ಯಥಾ ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ" (ಐ ಬ್ರಾ. ?) ಇತ್ಯೇವಂಜಾತೀಯಕೇ ವಿಧ್ಯಾದೌ ಸಹಕಾರಿತ್ವೇನ ಅಗ್ನ್ಯನ್ವಾಧಾನಾದಿಕಮ್ ಅಙ್ಗಜಾತಂ ವಿಧೀಯತೇ, ಏವಮ್ ಅವಿಧಿಪ್ರಧಾನೇಽಪ್ಯಸ್ಮಿನ್ ವಿದ್ಯಾವಾಕ್ಯೇ ಮೌನವಿಧಿಃ ಇತ್ಯರ್ಥಃ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಹೇಳುತ್ತೇವೆ: (ಇದು) ಸಹಕಾರ್ಯಂತರವಿಧಿಯು. ವಿದ್ಯೆಗೆ ಸಹಕಾರಿಯಾದ ಮೌನಕ್ಕೂ ಬಾಲ್ಯಪಾಂಡಿತ್ಯಗಳಂತೆ ವಿಧಿಯನ್ನೇ ಆಶ್ರಯಿಸಬೇಕು; ಏಕೆಂದರೆ (ಅದು) ಅಪೂರ್ವವಾಗಿದೆ.

(ಆಕ್ಷೇಪ) :- ಪಾಂಡಿತ್ಯಶಬ್ದದಿಂದಲೇ ಮೌನವೂ ತಿಳಿದುಬಂದಿರುವದೆಂದು ಹೇಳಿದೆವಲ್ಲ!

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಮುನಿ ಎಂಬ ಶಬ್ದವನ್ನು ಜ್ಞಾನಾತಿಶಯಾರ್ಥವಾಗಿ (ಪ್ರಯೋಗಿಸಿದೆ). ಮನನದಿಂದ ಮುನಿ ಎಂದು (ಅದಕ್ಕೆ) ವ್ಯುತ್ಪತ್ತಿಯೂ ಸಂಭವಿಸುತ್ತದೆ ; "ಮುನಿಗಳಲ್ಲಿ ನಾನು ವ್ಯಾಸನು" (ಗೀ. ೧೦–೩೭) ಎಂದು ಪ್ರಯೋಗಮಾಡಿರುವದೂ ಕಂಡು ಬರುತ್ತದೆ.

( ಆಕ್ಷೇಪ ) :– ಮುನಿಶಬ್ದವು ಉತ್ತಮಾಶ್ರಮವನ್ನು ಹೇಳುವದಕ್ಕೆ (ಪ್ರಯುಕ್ತ)ವಾಗಿರುವದೂ "ಗಾರ್ಹಸ್ಥ್ಯಮಾಚಾರ್ಯಕುಲಂ ಮೌನಂ ವಾನಪ್ರಸ್ಥಮ್'' (ಆ.ಧ. ೨–೯–೨೧–೧) ಎಂಬಲ್ಲಿ ಕಂಡುಬರುತ್ತಿದೆಯಲ್ಲ !

(ಪರಿಹಾರ) :– ಹಾಗಲ್ಲ. "ವಾಲ್ಮೀಕಿರ್ಮುನಿಪುಙ್ಗವಃ" (ಮುನಿಶ್ರೇಷ್ಠನಾದ ವಾಲ್ಮೀಕಿಯು ವಾ.ರಾ. ೧–೧–೧) ಎಂಬಿದೇ ಮುಂತಾದ (ಪ್ರಯೋಗ)ಗಳಲ್ಲಿ ಅದು ಬೇರ್ಪಟ್ಟಿರುವದು ಕಂಡಿದೆ.[1] ಆದರೆ ಆ (ನೀವು ಹೇಳಿರುವ ಉದಾಹರಣೆ)ಯಲ್ಲಿ ಮಿಕ್ಕ ಆಶ್ರಮಗಳು ಸಮೀಪದಲ್ಲಿರುವದರಿಂದ ಪಾರಿಶೇಷ್ಯದಿಂದ ಉತ್ತಮಾಶ್ರಮ(ವೆಂಬರ್ಥವನ್ನು)[2] ತೆಗೆದುಕೊಳ್ಳಬೇಕಾಗಿದೆ; ಏಕೆಂದರೆ ಉತ್ತಮಾಶ್ರಮವು ಜ್ಞಾನಪ್ರಧಾನವಾಗಿರುತ್ತದೆ. ಆದ್ದರಿಂದ ಬಾಲ್ಯ, ಪಾಂಡಿತ್ಯಗಳಿಗೆ ಮೂರನೆಯದಾದ ಈ ಮೌನವೆಂಬ ಜ್ಞಾನಾತಿಶಯವನ್ನು (ಇಲ್ಲಿ) ವಿಧಿಸಿದೆ. ಇನ್ನು ಬಾಲ್ಯವೆಂಬಲ್ಲಿಯೇ ವಿಧಿಯು ಕೊನೆಗಂಡಿದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, (ಅಲ್ಲಿ) ಹಾಗಿದ್ದರೂ[3] ಮುನಿತ್ವವು ಅಪೂರ್ವವಾಗಿರುವದರಿಂದ (ಅದನ್ನು) "ಮುನಿಯಾಗಬೇಕು" ಎಂದು ವಿಧಿಸಿದೆ ಎಂದೇ ಆಶ್ರಯಿಸಬೇಕು. ಅದನ್ನು ಮುಗಿಸಬೇಕು ('ನಿರ್ವಿದ್ಯ') ಎಂದು ನಿರ್ದೇಶ ಮಾಡಿರುವದರಿಂದಲೂ ಬಾಲ್ಯಪಾಂಡಿತ್ಯಗಳಂತೆ (ಅದನ್ನೂ) ವಿಧಿಸಿದೆ ಎಂದು ಆಶ್ರಯಿಸಬೇಕು.[4]

---

1. ವಾಲ್ಮೀಕಿಯೆಂಬುದೇನೂ ಒಬ್ಬ ಉತ್ತಮಾಶ್ರಮದವನ (ಸಂನ್ಯಾಸಿಯ) ಹೆಸರಲ್ಲ.

2. ಆಪಸ್ತಂಬಸೂತ್ರದಲ್ಲಿ ಗಾರ್ಹಸ್ಥ್ಯ, ಆಚಾರ್ಯಕುಲ, ವಾನಪ್ರಸ್ಥ– ಎಂಬ ಮೂರು ಆಶ್ರಮಗಳನ್ನು ಹೇಳುವ ಬಳಿಯಲ್ಲಿ 'ಮೌನ'ವನ್ನು ಹೇಳಿದೆ. ಆದ್ದರಿಂದ ಮೌನವೆಂದರೆ ವಿಚಾರಪ್ರಧಾನವಾದ ಸಂನ್ಯಾಸ ಎಂದೇ ನಿರ್ಣಯಿಸಬೇಕಾಗಿದೆ.

3. ವಿಧಿವಿಭಕ್ತಿಯಿಲ್ಲದಿದ್ದರೂ.

4. ಬಾಲ್ಯಪಾಂಡಿತ್ಯಗಳಿಗೆ "ನಿರ್ವಿದ್ಯ" (ಮುಗಿಸಿಕೊಂಡು) ಎಂಬ ಉಪದೇಶವನ್ನು ಸೇರಿಸಿರುವಂತೆ ಮೌನಕ್ಕೂ ಸೇರಿಸಿದೆ ; ಆದ್ದರಿಂದ ಅವುಗಳಂತೆ ಇದನ್ನೂ ವಿಧಿಸಿರಬೇಕು ಎಂದು ಊಹಿಸಬಹುದಾಗಿದೆ.

ಸೂತ್ರನಲ್ಲಿ 'ತದ್ವತಃ' (ಅದನ್ನುಳ್ಳವನಿಗೆ ಎಂಬ ಮಾತಿಗೆ) ವಿದ್ಯಾವಂತನಾದ ಸಂನ್ಯಾಸಿಗೆ (ಎಂದರ್ಥ).

(ಆಕ್ಷೇಪ) :– (ಇದು) ವಿದ್ಯಾವಂತನಾದ ಸಂನ್ಯಾಸಿಗೆ ಎಂಬುದು ಹೇಗೆ ಗೊತ್ತು ?

ಪರಿಹಾರ :– ಏಕೆಂದರೆ (ಇದು) "ಆತ್ಮನನ್ನು ತಿಳಿದುಕೊಂಡು ಪುತ್ರಾದ್ಯೇಷಣೆಗಳನ್ನು ಬಿಟ್ಟಿದ್ದು ಭಿಕ್ಷಾಚರ್ಯೆಯನ್ನು ಮಾಡುತ್ತಾರೆ" (ಬೃ. ೩–೫–೧ರ ಅರ್ಥ) ಎಂದು ಅವನನ್ನೇ (ಕುರಿತ) ಪ್ರಕರಣವಾಗಿರುತ್ತದೆ.

ಆಕ್ಷೇಪ :– ಜ್ಞಾನವುಂಟಾದರೆ ಅದರ ಅತಿಶಯವೂ (ತಾನೇ) ಪ್ರಾಪ್ತವಾಗುವದಲ್ಲ, ಮೌನವನ್ನು (ಮತ್ತೆ) ವಿಧಿಸಬೇಕಾದದ್ದೇನು ?

(ಪರಿಹಾರ) :– ಇದಕ್ಕೆ (ಸೂತ್ರಕಾರರು) 'ಪಕ್ಷೇಣ' (ಒಂದು ಪಕ್ಷದಲ್ಲಿ) ಎಂಬ (ಪರಿಹಾರ)ವನ್ನು ಹೇಳಿರುತ್ತಾರೆ. (ಇಲ್ಲಿ) ಇಷ್ಟನ್ನು ಹೇಳಿದಂತೆ ಆಯಿತು. ಯಾವ ಪಕ್ಷದಲ್ಲಿ ಭೇದದರ್ಶನದ ಪ್ರಾಬಲ್ಯದಿಂದ (ಇದು) ಪ್ರಾಪ್ತವಾಗುವದಿಲ್ಲವೋ ; ಅದರಲ್ಲಿ ಈ ವಿಧಿಯು (ಬೇಕಾಗುತ್ತದೆ).[1] ವಿಧ್ಯಾದಿಯಂತೆ (ಇದರ ವಿವರ): "ದರ್ಶಪೂರ್ಣಮಾಸಗಳಿಂದ ಸ್ವರ್ಗಕಾಮನಾದವನು ಯಾಗ ಮಾಡಬೇಕು." (ಐ. ಬ್ರಾ.) ಎಂಬೀ ಜಾತಿಯ ವಿಧ್ಯಾದಿಯಲ್ಲಿ[2] ಸಹಕಾರಿಯಾಗಿ ಅಗ್ನ್ಯನ್ವಾಧಾನವೇ ಮುಂತಾದ ಅಂಗಜಾತವನ್ನು ವಿಧಿಸಿದೆಯೋ ಹೀಗೆಯೇ[3] ವಿಧಿಪ್ರಧಾನವಲ್ಲದ ಈ ವಿದ್ಯಾವಾಕ್ಯದಲ್ಲಿ ಮೌನವಿಧಿ(ಯಿರಬಹುದು) ಎಂದರ್ಥ.[4]

**ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ॥ ೪೮ ॥**

೪೮. ಆದರೆ ಕೃತ್ಸ್ನಭಾವದಿಂದ ಗೃಹಸ್ಥನಿಂದಲೇ ಉಪಸಂಹಾರಮಾಡಿದೆ.

---

1. ಪ್ರಾರಬ್ಧಕರ್ಮಬಲದಿಂದ ವಾಙ್ಮನಃಕಾಯಗಳು ಪ್ರವೃತ್ತವಾಗಬಹುದು, ಆಗ ಜ್ಞಾನಪ್ರವೃತ್ತಿಯು ದುರ್ಬಲವಾಗಬಹುದು. ಆ ಪಕ್ಷದಲ್ಲಿ ಜ್ಞಾನವನ್ನೇ ನಿಲ್ಲಿಸಿಕೊಳ್ಳಬೇಕು– ಎಂದು ವಿಧಿ. ಬೃ. ಭಾ. ೧–೪–೨೧ರಲ್ಲಿ "ವಿಜ್ಞಾಯ ಪ್ರಜ್ಞಾಂ ಕುರ್ವೀತ" ಎಂಬ ವಾಕ್ಯದ ವಿವರವನ್ನು ನೋಡಿ.

2. "ವಿಧಿಯ ಆದಿಯು ಎಂದರೆ ಮುಖ್ಯವಿಧಿಯು ದರ್ಶಪೂರ್ಣಮಾಸವು ; ಪ್ರಯಾಜಯಾಗವಾದ ಸಮಿದಾದಿಗಳನ್ನು ವಿಧ್ಯಂತವೆಂದು ಕರೆಯಬಹುದು. ಅಲ್ಲಿ ವಿಧಿಯಿಲ್ಲದಿದ್ದರೂ ವಿಧಿಯನ್ನು ಕಲ್ಪಿಸಿದೆ. ಅದರಂತೆ" ಎಂದು ನ್ಯಾ. ನಿ.

3. ಪ್ರಧಾನವಾದ ವಿಧಿಗೆ ಅಂಗಗಳನ್ನು ವಿಧಿಸಿರುವಹಾಗೆಯೇ ಎಂದರ್ಥ.

4. ಇಲ್ಲಿ ವಿದ್ಯೆಯೇ ಪ್ರಧಾನ ; ಇದಕ್ಕೆ ಅಂಗವಾಗಿ ವಿದ್ಯೋತ್ಪತ್ತಿಗೆ ಬೇಕಾದ ಪಾಂಡಿತ್ಯಾದಿಗಳನ್ನು ವಿಧಿಸಿದೆ.

## ಛಾಂದೋಗ್ಯದಲ್ಲಿ ಗೃಹಸ್ಥನನ್ನೇ ಹೇಳಿಮುಗಿಸಿರುವ ಕಾರಣ

(ಭಾಷ್ಯ)

೪೮. ಏವಂ ಬಾಲ್ಯಾದಿವಿಶಿಷ್ಟೇ ಕೈವಲ್ಯಾಶ್ರಮೇ ಶ್ರುತಿಮತಿ ವಿದ್ಯಮಾನೇ ಕಸ್ಮಾತ್ ಛಾನ್ದೋಗ್ಯೇ ಗೃಹಿಣಾ ಉಪಸಂಹಾರಃ "ಅಭಿಸಮಾವೃತ್ಯಕುಟುಮ್ಬೇ" (ಛಾಂ. ೮–೧೫–೧) ಇತ್ಯತ್ರ ? ತೇನ ಹಿ ಉಪಸಂಹರನ್ ತದ್ವಿಷಯಮ್ ಆದರಂ ದರ್ಶಯತಿ ಇತಿ। ಅತ ಉತ್ತರಂ ಪಠತಿ– (ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ)। ತುಶಬ್ದೋ ವಿಶೇಷಣಾರ್ಥಃ। ಕೃತ್ಸ್ನಭಾವೋಽಸ್ಯ ವಿಶೇಷ್ಯತೇ। ಬಹುಲಾಯಾಸಾನಿ ಹಿ ಬಹೂನ್ಯಾಶ್ರಮಕರ್ಮಾಣಿ ಯಜ್ಞಾದೀನಿ ತಂ ಪ್ರತಿ ಕರ್ತವ್ಯತಯಾ ಉಪದಿಷ್ಟಾನಿ, ಆಶ್ರಮಾನ್ತರಕರ್ಮಾಣಿ ಚ ಯಥಾಸಂಭವಮ್ ಅಹಿಂಸೇನ್ದ್ರಿಯಸಂಯಮಾದೀನಿ ತಸ್ಯ ವಿದ್ಯನ್ತೇ। ತಸ್ಮಾತ್ ಗೃಹಮೇಧಿನಾ ಉಪಸಂಹಾರೋ ನ ವಿರುಧ್ಯತೇ ॥

(ಭಾಷ್ಯಾರ್ಥ)

ಹೀಗೆ ಬಾಲ್ಯವೇ ಮುಂತಾದ (ಸಾಧನ)ಗಳಿಂದೊಡಗೂಡಿದ ಕೈವಲ್ಯಾಶ್ರಮವು ಶ್ರುತಿಪ್ರಮಾಣಕವಾಗಿ ಇರುತ್ತಿರುವಲ್ಲಿ "(ಗುರುಕುಲದಿಂದ) ಹಿಂತಿರುಗಿ ಕುಟುಂಬದಲ್ಲಿದ್ದುಕೊಂಡು" (ಛಾಂ. ೮–೧೫–೧) ಎಂಬಲ್ಲಿ ಗೃಹಸ್ಥಾಶ್ರಮಿಯನ್ನು (ಹೇಳುವದರಿಂದಲೇ) ಉಪಸಂಹಾರಮಾಡಿರುವದೇಕೆ ? ಆ (ಗೃಹಸ್ಥನಿಂದ) ಉಪಸಂಹಾರಮಾಡಿರುವದರಿಂದ ಅವನ ವಿಷಯದಲ್ಲಿ ಆದರವನ್ನು ತೋರಿಸಿದಂತೆ ಆಗಿಲ್ಲವೆ ?

ಇದಕ್ಕೆ (ಸೂತ್ರಕಾರರು) ಉತ್ತರವನ್ನು ಹೇಳುತ್ತಾರೆ. ('ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ' ಸೂತ್ರದಲ್ಲಿರುವ) ತುಶಬ್ದವು ವಿಶೇಷವನ್ನು ತಿಳಿಸುವದಕ್ಕೆ. ಸಂಪೂರ್ಣತೆಯು ಇವನಿಗೆ ವಿಶೇಷವಾಗಿರುತ್ತದೆ. ಬಹಳ ಆಯಾಸದಿಂದ (ಮಾಡತಕ್ಕ) ಯಜ್ಞವೇ ಮುಂತಾದ ಬಹಳ ಆಶ್ರಮಕರ್ಮಗಳು ಅವನಿಗೆ ಕರ್ತವ್ಯವೆಂದು ಉಪದಿಷ್ಟವಾಗಿವೆ; ಅಹಿಂಸೆ, ಇಂದ್ರಿಯಸಂಯಮ– ಮುಂತಾದ ಆಶ್ರಮಾಂತರದ ಕರ್ಮಗಳೂ ಅವನಿಗೆ ಯಥಾಸಂಭವವಾಗಿ ಉಂಟು. ಆದ್ದರಿಂದ ಗೃಹಸ್ಥನಿಂದ ಉಪಸಂಹಾರಮಾಡಿರುವದು ವಿರುದ್ಧವಲ್ಲ.

**ಮೌನವದಿತರೇಷಾಮಪ್ಯುಪದೇಶಾತ್ ॥ ೪೯ ॥**

೪೯. ಮೌನದಂತೆ ಉಳಿದವನ್ನೂ ಉಪದೇಶಮಾಡಿರುವದರಿಂದ.

## ಎಲ್ಲಾ ಆಶ್ರಮಗಳೂ ಉಪದಿಷ್ಟವಾಗಿವೆ

(ಭಾಷ್ಯ)

೪೯೪. ಯಥಾ ಮೌನಂ ಗಾರ್ಹಸ್ಥ್ಯಂ ಚೇತ್ಯೇತೌ[1] ಆಶ್ರಮೌ ಶ್ರುತಿಮನ್ತೌ ಏವಮ್ ಇತರಾವಪಿ ವಾನಪ್ರಸ್ಥಗುರುಕುಲವಾಸೌ। ದರ್ಶಿತಾ ಹಿ ಪುರಸ್ತಾತ್ ಶ್ರುತಿಃ "ತಪ ಏವ ದ್ವಿತೀಯೋ ಬ್ರಹ್ಮಚರ್ಯಾಚಾರ್ಯಕುಲವಾಸೀ ತೃತೀಯಃ" (ಛಾಂ. ೨-೨೩-೧) ಇತ್ಯಾದ್ಯಾ। ತಸ್ಮಾತ್ ಚತುರ್ಣಾಮಪಿ ಆಶ್ರಮಾಣಾಮ್ ಉಪದೇಶಾವಿಶೇಷಾತ್ ತುಲ್ಯವತ್ ವಿಕಲ್ಪಸಮುಚ್ಚಯಾಭ್ಯಾಂ ಪ್ರತಿಪತ್ತಿಃ। ಇತರೇಷಾಮಿತಿ ದ್ವಯೋರಾಶ್ರಮಯೋಃ ಬಹುವಚನಂ ವೃತ್ತಿಭೇದಾಪೇಕ್ಷಯಾ ಅನುಷ್ಠಾತೃಭೇದಾಪೇಕ್ಷಯಾ ವಾ ಇತಿ ದ್ರಷ್ಟವ್ಯಮ್॥

(ಭಾಷ್ಯಾರ್ಥ)

ಹೇಗೆ ಮೌನ, ಗಾರ್ಹಸ್ಥ್ಯ- ಎಂಬೀ ಆಶ್ರಮಗಳು ಶ್ರುತಿಪ್ರಮಾಣಕವಾಗಿರುತ್ತವೆಯೋ ಹಾಗೆಯೇ ವಾನಪ್ರಸ್ಥ, ಗುರುಕುಲವಾಸ- ಎಂಬಿವೂ (ಶ್ರುತಿಪ್ರಮಾಣಕವಾಗಿರುತ್ತವೆ). "ತಪಸ್ಸೇ ಎರಡನೆಯದು, ಆಚಾರ್ಯಕುಲದಲ್ಲಿ ವಾಸವಾಗಿರುವ ಬ್ರಹ್ಮಚಾರಿಯು ಮೂರನೆಯವನು" (ಛಾಂ. ೨-೨೩-೧) ಎಂಬಿವೇ ಮುಂತಾದ ಶ್ರುತಿಯನ್ನು (ಈ) ಮೊದಲೇ ತಿಳಿಸಿರುತ್ತೇವಷ್ಟೆ. ಆದ್ದರಿಂದ ನಾಲ್ಕು ಆಶ್ರಮಗಳನ್ನೂ ಉಪದೇಶಿಸಿರುವದು ಸಮಾನವಾಗಿರುವದರಿಂದ ಸಮವಾಗಿಯೇ ವಿಕಲ್ಪಸಮುಚ್ಚಯಗಳಿಂದ[2] ಅನುಷ್ಠಾನಮಾಡತಕ್ಕದ್ದು. 'ಇತರೇಷಾಮ್' ಎಂದು ಎರಡು ಆಶ್ರಮಗಳಿಗೆ ಬಹುವಚನವನ್ನು (ಸೂತ್ರದಲ್ಲಿ ಪ್ರಯೋಗಿಸಿರುವದು ಈ) ವೃತ್ತಿಗಳ ಭೇದದಿಂದಲೋ, ಅನುಷ್ಠಾತೃಗಳ ಭೇದದಿಂದಲೋ, ಎಂದು ತಿಳಿಯಬೇಕು.

## ೧೫. ಅನಾವಿಷ್ಕಾರಾಧಿಕರಣ

(ಬಾಲ್ಯವೆಂದರೆ ಮಕ್ಕಳಂತೆ ಭಾವವಿಶುದ್ಧಿಯಿರುವದು)

**ಅನಾವಿಷ್ಕುರ್ವನ್ನನ್ವಯಾತ್ ॥೫೦॥**

೫೦. ತೋರಿಸಿಕೊಳ್ಳದೆ (ಇರಬೇಕು) ; ಏಕೆಂದರೆ (ವಾಕ್ಯದ) ಅನ್ವಯವಾಗುತ್ತದೆ.

---

1. 'ಚೇತೌ' ಎಂಬ ಅಚ್ಚಿನಪಾಠವನ್ನು ಹೀಗೆ ಬರೆದುಕೊಂಡಿದೆ.

2. ಆಶ್ರಮಗಳನ್ನು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ-ಎಂದು ಒಂದೊಂದಾಗಿ ಆಶ್ರಯಿಸಿ ಅನುಷ್ಠಾನಮಾಡುವದು ಸಮುಚ್ಚಯ; ಬ್ರಹ್ಮಚರ್ಯದಿಂದಲೇ, ಅಥವಾ ಗಾರ್ಹಸ್ಥ್ಯದಿಂದಲೇ ನೇರಾಗಿ ಸಂನ್ಯಾಸವನ್ನು ಪಡೆಯುವದು ವಿಕಲ್ಪ. ಎರಡಕ್ಕೂ ಶಾಸ್ತ್ರಪ್ರಮಾಣವಿದೆ.

# ಪೂರ್ವಪಕ್ಷ: ಬಾಲ್ಯವೆಂದರೆ ಯಥೇಷ್ಟಾಚಾರ

(ಭಾಷ್ಯ)

೪೯೫. "ತಸ್ಮಾದ್ಬ್ರಾಹ್ಮಣಃ ಪಾಣ್ಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ" (ಬೃ. ೩—೫—೩) ಇತಿ ಬಾಲ್ಯಮ್ ಅನುಷ್ಠೇಯತಯಾ ಶ್ರೂಯತೇ । ತತ್ರ ಬಾಲಸ್ಯ ಭಾವಃ ಕರ್ಮ ವಾ ಬಾಲ್ಯಮ್ ಇತಿ ತದ್ಧಿತೇ ಸತಿ ಬಾಲಭಾವಸ್ಯ ವಯೋವಿಶೇಷಸ್ಯ ಇಚ್ಛಯಾ ಸಂಪಾದಯಿತುಮ್ ಅಶಕ್ಯತ್ವಾತ್ ಯಥೋಪಪಾದಮೂತ್ರಪುರೀಷತ್ವಾದಿ[1] ಬಾಲಚರಿತಮ್, ಅನ್ತರ್ಗತಾ[2] ಭಾವವಿಶುದ್ಧಿಃ ಅಪ್ರರೂಢೇನ್ದ್ರಿಯತ್ವಾತ್[3] ದಮ್ಭದರ್ಪಾದಿರಹಿತತ್ವಂ ವಾ ಬಾಲ್ಯಂ ಸ್ಯಾತ್ ಇತಿ ಸಂಶಯಃ । ಕಿಂ ತಾವತ್ ಪ್ರಾಪ್ತಮ್? ಕಾಮಚಾರವಾದಭಕ್ಷಣತಾ ಯಥೋಪಪಾದಮೂತ್ರಪುರೀಷತ್ವಂ ಚ ಪ್ರಸಿದ್ಧತರಂ ಲೋಕೇ ಬಾಲ್ಯಮ್ ಇತಿ ತದ್ಗ್ರಹಣಂ ಯುಕ್ತಮ್। ನನು ಪತಿತತ್ವಾದಿದೋಷಪ್ರಾಪ್ತೇರ್ನ ಯುಕ್ತಂ ಕಾಮಚಾರತಾದ್ಯಾಶ್ರಯಣಮ್ । ನ । ವಿದ್ಯಾವತಃ ಸಂನ್ಯಾಸಿನೋ ವಚನಸಾಮರ್ಥ್ಯಾತ್ ದೋಷನಿವೃತ್ತೇಃ ಪಶುಹಿಂಸಾದಿಷ್ವಿವೇತಿ ॥

(ಭಾಷ್ಯಾರ್ಥ)

"ಆದ್ದರಿಂದ ಬ್ರಾಹ್ಮಣನು ಪಾಂಡಿತ್ಯವನ್ನು ಮುಗಿಸಿ ಬಾಲ್ಯದಿಂದ ನಿಲ್ಲಲಿಚ್ಛಿಸಬೇಕು" (ಬೃ. ೩—೫—೩) ಎಂದು ಬಾಲ್ಯವನ್ನು ಅನುಷ್ಠಾನಮಾಡಬೇಕೆಂದು ಶ್ರುತಿಯಲ್ಲಿ ಹೇಳಿದೆ. ಅಲ್ಲಿ ಬಾಲನ ಭಾವವು, ಅಥವಾ ಕರ್ಮವು, ಬಾಲ್ಯವು ಎಂದು ತದ್ಧಿತಪ್ರತ್ಯಯವಾಗಿರುವಲ್ಲಿ, ಬಾಲಭಾವವೆಂಬ ವಯೋವಿಶೇಷವನ್ನು ಇಚ್ಛೆಯಿಂದ ಸಂಪಾದಿಸಿಕೊಳ್ಳುವದು ಆಗಲಾರದಾಗಿ ಹೊಂದಿದಂತೆ ಮೂತ್ರಪುರೀಷ(ಗಳನ್ನು ಬಿಡುವದೇ) ಮುಂತಾದ[4] ಬಾಲಚರ್ಯೆಯೊ, ಅಥವಾ ಒಳಗಿನ ಭಾವವಿಶುದ್ಧಿಯೂ, ಇಂದ್ರಿಯಗಳು ಬೆಳೆದುಕೊಂಡಿಲ್ಲದ್ದ

---

1. ಗೌ. ಸೂ. (೧—೨—೪, ೨—೪) ಆ॥ ಪಾಠದಲ್ಲಿ "ಯಥೋಪಪಾದಿತ" ಎಂದಿದ್ದರೂ ಮೈ॥ ಪಾಠದಂತೆ "ಯಥೋಪಪಾದ" ಎಂದಿದ್ದರೆ ಸಾಕು. ಭಾಷ್ಯದಲ್ಲಿ ಯಥೋಪಪಾದಂ ಎಂದಿರುವ ಅಚ್ಚಿನ ಪಾಠದಲ್ಲಿ ಅನುಸ್ವಾರ ಹೆಚ್ಚೆಂದು ಬಿಟ್ಟಿದೆ.

2. ಈ ಮಾತಿನ ಮುಂದಿರುವ "ವಾ" ಎಂಬ ಮಾತು ಹೆಚ್ಚೆಂದು ಬಿಟ್ಟಿದೇವೆ.

3. "ಅಪ್ರರೂಢೇನ್ದ್ರಿಯತ್ವಂ" ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

4. ಗೌ. ಧ. ಸೂ. ೧—೨—೪, ಮುಂತಾದವುಗಳಲ್ಲಿ ಹೇಳಿರುವಂತೆ ಇಂಥ ದಿಕ್ಕಿಗೇ ತಿರುಗಿಕೊಂಡು ಮೂತ್ರೋತ್ಸರ್ಗವನ್ನು ಮಾಡಬೇಕು, ಹೀಗೆ ಮಾಡಬೇಕು– ಎಂಬ ವಿಧಿಯಿಲ್ಲದಿರುವದು ಎಂದರ್ಥ.

ರಿಂದ[1] ದಂಭ, ದರ್ಪ- ಮುಂತಾದವುಗಳು ಇಲ್ಲದಿರುವದೂ ಬಾಲ್ಯವಾದೀತೊ?- ಎಂಬ ಸಂಶಯು(ವುಂಟಾಗುತ್ತದೆ).

ಇಲ್ಲಿ ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? ಕಾಮಚಾರವಾದ ಭಕ್ಷಣಗಳಿರುವದು ಮತ್ತು ಹೊಂದಿದಂತೆ ಮೂತ್ರಪುರೀಷ(ಗಳನ್ನು ಬಿಡುವದು) ಎಂದು ಲೋಕದಲ್ಲಿ ಬಹಳ ಪ್ರಸಿದ್ಧವಾಗಿರುವದೇ ಬಾಲ್ಯವು; ಆದ್ದರಿಂದ ಅದನ್ನೇ (ಇಲ್ಲಿ) ಗ್ರಹಿಸುವದು ಯುಕ್ತವು.

(ಆಕ್ಷೇಪ) :- ಪತಿತತ್ವಾದಿದೋಷಗಳು[2] ಬಂದೊದಗುವದರಿಂದ ಕಾಮಚಾರತ್ವವೇ ಮುಂತಾದವನ್ನು ಗ್ರಹಿಸುವದು ಸರಿಯಲ್ಲವಲ್ಲವೆ ?

(ಪರಿಹಾರ) :- ಹಾಗಲ್ಲ, ಏಕೆಂದರೆ ಜ್ಞಾನಿಯಾದ ಸಂನ್ಯಾಸಿಗೆ ವಚನಸಾಮರ್ಥ್ಯದಿಂದ ಪಶುಹಿಂಸಾದಿಗಳಲ್ಲಿ ಹೇಗೋ ಹಾಗೆ[3] ದೋಷವು ಇರುವದಿಲ್ಲ[4].

## ಸಿದ್ಧಾಂತ: ಬಾಲ್ಯವೆಂದರೆ ಒಳಗಿನ ಭಾವವಿಶೇಷವು

(ಭಾಷ್ಯ)

೪೯೬. ಏವಂ ಪ್ರಾಪ್ತೇ ಅಭಿಧೀಯತೇ । ನ । ವಚನಸ್ಯ ಗತ್ಯನ್ತರಸಂಭವಾತ್ । ಅವಿರುದ್ಧೇ ಹಿ ಅನ್ಯಸ್ಮಿನ್ ಬಾಲ್ಯಶಬ್ದಾಭಿಲಪ್ಯೇ ಲಭ್ಯಮಾನೇ ನ ವಿಧ್ಯನ್ತರವ್ಯಾಘಾತಕಲ್ಪನಾ ಯುಕ್ತಾ । ಪ್ರಧಾನೋಪಕಾರಾಯ ಚ ಅಙ್ಗಂ ವಿಧೀಯತೇ । ಜ್ಞಾನಾಭ್ಯಾಸಶ್ಚ ಪ್ರಧಾನಮ್ ಇಹ ಯತೀನಾಮ್ ಅನುಷ್ಠೇಯಮ್ । ನ ಚ ಸಕಲಾಯಾಂ ಬಾಲಚರ್ಯಾಯಾಂ ಅಙ್ಗೀಕ್ರಿಯಮಾಣಾಯಾಂ ಜ್ಞಾನಾಭ್ಯಾಸಃ ಸಂಭಾವ್ಯತೇ । ತಸ್ಮಾತ್ ಆನ್ತರೋ ಭಾವವಿಶೇಷೋ ಬಾಲಸ್ಯ ಅಪ್ರರೂಢೇನ್ದ್ರಿಯತ್ವಾದಿರಿಹ ಬಾಲ್ಯಮಾಶ್ರೀಯತೇ । ತದಾಹ- "ಅನಾವಿಷ್ಕುರ್ವನ್" ಇತಿ । ಜ್ಞಾನಾಧ್ಯಯನಧಾರ್ಮಿಕತ್ವಾದಿಭಿರಾತ್ಮಾ

---

1. ಅಪ್ರರೂಢೇನ್ದ್ರಿಯತ್ವಮ್- ಎಂಬುದನ್ನು ಇಂದ್ರಿಯಗಳು ಬೆಳೆದುಕೊಂಡಿಲ್ಲದಿರುವದು ಎಂದು ಕನ್ನಡಿಸಬೇಕಾಗುವದು; ಆದರೆ ಅದನ್ನು ಅನುಷ್ಠಾನಮಾಡುವದು ಆಗುವಂತಿಲ್ಲವಾದ್ದರಿಂದ ಇಂದ್ರಿಯಗಳನ್ನು ಹರಿಯಬಿಡದಿರುವದು ಎಂಬ ಲಾಕ್ಷಣಿಕಾರ್ಥವನ್ನು ಸ್ವೀಕರಿಸಬೇಕಾಗುವದು.

2. "ಪ್ರಾಗುಪನಯನಾನ್ ಕಾಮಚಾರವಾದಭಕ್ಷಃ" (ಗೌ. ಧ. ಸೂ. ೨-೧) ಎಂಬ ಮೈ॥ ಪಾಠವೇ ಭಾಷ್ಯಕ್ಕೆ ಹೊಂದುತ್ತದೆ. ಮನಸ್ಸಿಗೆ ಬಂದಂತೆ ನಡೆಯುವದು, ನುಡಿಯುವದು, ತಿನ್ನುವದು- ಇವು ಮಕ್ಕಳ ಸ್ವಭಾವವು. ಅವರಿಗೆ ಅಸ್ಪೃಶ್ಯಸ್ಪರ್ಶಾದಿದೋಷವೂ ಇಲ್ಲ.

3. ಆದಿ ಎಂದದ್ದರಿಂದ ಶಿಷ್ಟರ ನಿಂದೆ ಮುಂತಾದದ್ದನ್ನು ಗ್ರಹಿಸಬೇಕು.

4. ಅಹಿಂಸೆಯನ್ನು ಹೇಳುವ ಸಾಮಾನ್ಯವಚನವು ಯಜ್ಞಪಶುಹಿಂಸಾವಾಕ್ಯದಿಂದ ಬಾಧಿತವಾಗುವಂತೆ.

ನಮ್ ಅವಿಖ್ಯಾಪಯನ್ ದಮ್ಭದರ್ಪಾದಿರಹಿತೋ ಭವೇತ್ । ಯಥಾ ಬಾಲೋಽಪ್ರರೂಢೇನ್ದ್ರಿಯತಯಾ ನ ಪರೇಷಾಮ್ ಆತ್ಮಾನಮ್ ಆವಿಷ್ಕರ್ತುಮೀಹತೇ ತದ್ವತ್ । ಏವಂ ಹ್ಯಸ್ಯ ವಾಕ್ಯಸ್ಯ ಪ್ರಧಾನೋಪಕಾರ್ಯರ್ಥಾನುಗಮಃ ಉಪಪದ್ಯತೇ । ತಥಾ ಚೋಕ್ತಂ ಸ್ಮೃತಿಕಾರೈಃ– "ಯಂ ನ ಸನ್ತಂ ನ ಚಾಸನ್ತಂ ನಾಶ್ರುತಂ ನ ಬಹುಶ್ರುತಮ್ । ನ ಸುವೃತ್ತಂ ನ ದುರ್ವೃತ್ತಂ ವೇದ ಕಶ್ಚಿತ್ ಸ ಬ್ರಾಹ್ಮಣಃ" (?), "ಗೂಢಧರ್ಮಾಶ್ರಿತೋ ವಿದ್ವಾನಜ್ಞಾತಚರಿತಂ ಚರೇತ್ । ಅನ್ಧವಜ್ಜಡವಚ್ಚಾಪಿ ಮೂಕವಚ್ಚ ಮಹೀಂ ಚರೇತ್" (?), "ಅವ್ಯಕ್ತಲಿಙ್ಗೋಽವ್ಯಕ್ತಾಚಾರಃ" (?) ಇತಿ ಚೈವಮಾದಿ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಹೇಳುತ್ತೇವೆ. ಹೀಗಲ್ಲ, ಏಕೆಂದರೆ ಈ ವಚನಕ್ಕೆ ಮತ್ತೊಂದು ಗತಿಯು ಆಗಬಹುದಾಗಿದೆ. ಬಾಲ್ಯಶಬ್ದದಿಂದ ವಾಚ್ಯವಾಗಿರುವ ಮತ್ತೊಂದು ಅವಿರುದ್ಧವಾದ (ಅರ್ಥವು) ಸಿಕ್ಕುತ್ತಿರುವಲ್ಲಿ ಮತ್ತೊಂದು ವಿಧಿಯನ್ನು (ಇದು) ಹೊಡೆದುಹಾಕುವದೆಂದು ಕಲ್ಪಿಸುವದು ಸರಿಯಲ್ಲ. ಅಂಗವನ್ನು ಪ್ರಧಾನದ ಉಪಕಾರಕ್ಕಾಗಿ ವಿಧಿಸಲಾಗಿರುತ್ತದೆ ; ಇಲ್ಲಿ **ಜ್ಞಾನಾಭ್ಯಾಸವೇ**[1] ಯತಿಗಳಿಗೆ ಅನುಷ್ಠೇಯವಾಗಿರುವ ಪ್ರಧಾನವು. ಎಲ್ಲಾ ಬಾಲಚರ್ಯೆಯನ್ನೂ ಅಂಗೀಕರಿಸಿದರೆ ಜ್ಞಾನಾಭ್ಯಾಸವು ಸಂಭವಿಸುವದಿಲ್ಲ.[2] ಆದ್ದರಿಂದ ಒಳಗಿನ ಭಾವವಿಶೇಷವಾದ ಬಾಲನ ಅಪ್ರರೂಢೇಂದ್ರಿಯತ್ವವೇ ಮುಂತಾದದ್ದು ಇಲ್ಲಿ ಬಾಲ್ಯವು ಎಂದು ಆಶ್ರಯಿಸಬೇಕು[3]. ಅದನ್ನೇ 'ಅನಾವಿಷ್ಕುರ್ವನ್' (ತೋರಿಸಿಕೊಳ್ಳದೆ) ಎಂದು (ಸೂತ್ರಕಾರರು) ಹೇಳಿರುತ್ತಾರೆ. ಜ್ಞಾನ, ಅಧ್ಯಯನ, ಧಾರ್ಮಿಕತ್ವ –ಮುಂತಾದವುಗಳಿಂದ ತಮ್ಮನ್ನು ತಾವೇ ತೋರಿಸಿಕೊಳ್ಳದೆ ದಂಭದರ್ಪಾದಿರಹಿತನಾಗಿರಬೇಕು. **ಹೇಗೆ ಬಾಲಕನು ಇಂದ್ರಿಯಗಳು ಬೆಳೆದುಕೊಳ್ಳದೆ ಇರುವದರಿಂದ ಮತ್ತೊಬ್ಬರಿಗೆ ತನ್ನನ್ನು ತಾನು ತೋರಿಸಿಕೊಳ್ಳಲು ಇಷ್ಟಪಡುವದಿಲ್ಲವೋ ಹಾಗೆ.** ಹೀಗಾದರಲ್ಲವೆ, ಈ ವಾಕ್ಯವು ಪ್ರಧಾನಕ್ಕೆ ಉಪಕಾರಕವಾದ ಅರ್ಥವನ್ನು ಅನುಸರಿಸುತ್ತದೆ ಎಂದು ಹೊಂದುತ್ತದೆ ? ಆದ್ದರಿಂದಲೇ ಸ್ಮೃತಿಕಾರರು "ಯಾವನನ್ನು ಸತ್ಪುರುಷನೆಂದಾಗಲಿ ಅಸತ್ಪುರುಷನೆಂದಾಗಲಿ ತಿಳಿಯದವನೆಂದಾಗಲಿ ಬಹಳ ತಿಳಿದವನೆಂದಾಗಲಿ, ಒಳ್ಳೆಯ ನಡತೆಯುವನೆಂದಾಗಲಿ

1. ಜ್ಞಾನಸಾಧನಗಳ ಅಭ್ಯಾಸವೇ ಎಂದರ್ಥ.
2. ಅದಕ್ಕೆ ವಿರೋಧವೇ ಆಗುತ್ತದೆ.
3. ಬೃ. ಭಾ. ದಲ್ಲಿ ಆತ್ಮವಿಜ್ಞಾನಬಲವನ್ನು ಆಶ್ರಯಿಸಿಕೊಂಡಿರುವದೇ 'ಬಾಲ್ಯ'ವೆಂದು ಹೇಳಿದೆ ; ಆ ಅರ್ಥವನ್ನೇಕೆ ಇಲ್ಲಿ ಸೂಚಿಸಿಲ್ಲವೆಂಬುದು ತಿಳಿಯಲಿಲ್ಲ.

ಕೆಟ್ಟ ನಡತೆಯುವನೆಂದಾಗಲಿ ಯಾವನೊಬ್ಬನೂ ಅರಿತುಕೊಳ್ಳಲಾರದೆ ಇರುವನೋ ಅವನು ಬ್ರಾಹ್ಮಣನು'' (?), "ಗೂಢವಾದ ಧರ್ಮವನ್ನಾಶ್ರಯಿಸಿ ಜ್ಞಾನಿಯು ಯಾರಿಗೆ ತಿಳಿಯದ ನಡತೆಯಿಂದ ನಡೆಯಬೇಕು. ಕುರುಡನಂತೆಯೂ ಅಜ್ಞನಂತೆಯೂ ಮೂಕನಂತೆಯೂ ಭೂಮಿಯಲ್ಲಿ ಸಂಚರಿಸುತ್ತಿರಬೇಕು" (?) "ಅವ್ಯಕ್ತಲಿಂಗನೂ ಅವ್ಯಕ್ತಾಚಾರನೂ....'' (?) ಎಂದು ಮುಂತಾಗಿ ಹೇಳಿರುತ್ತಾರೆ.

## ೧೬. ಐಹಿಕಾಧಿಕರಣ

( ಜ್ಞಾನವು ಈ ಜನ್ಮದಲ್ಲಿ ಅಥವಾ ಮತ್ತೊಂದು ಜನ್ಮದಲ್ಲಿ )

**ಐಹಿಕಮಪ್ಯಪ್ರಸ್ತುತಪ್ರತಿಬನ್ಧೇ ತದ್ದರ್ಶನಾತ್ ॥ ೫೧ ॥**

೫೧. ಪ್ರಸ್ತುತವಾದ (ಸಾಧನಕ್ಕೆ) ಅಡ್ಡಿಯಿಲ್ಲದಿದ್ದರೆ ಈ ಜನ್ಮದಲ್ಲಿಯೂ (ಆಗುವದು) ; ಏಕೆಂದರೆ ಹಾಗೆಂದು ತಿಳಿದುಬರುತ್ತದೆ.

## ಪೂರ್ವಪಕ್ಷ: ಜ್ಞಾನವು ಈ ಜನ್ಮದಲ್ಲಿಯೇ ಆಗುತ್ತದೆ

(ಭಾಷ್ಯ)

೪೯೭. "ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್" (೩-೪-೨೬) ಇತ್ಯತ ಆರಭ್ಯ ಉಚ್ಚಾವಚಂ ವಿದ್ಯಾಸಾಧನಮ್ ಅವಧಾರಿತಮ್ । ತತ್ಫಲಂ ವಿದ್ಯಾ ಸಿಧ್ಯನ್ತೀ ಕಿಮ್, ಇಹೈವ ಜನ್ಮನಿ ಸಿಧ್ಯತಿ ಉತ, ಕದಾಚಿತ್ ಅಮುತ್ರಾಪಿ ಇತಿ ಚಿನ್ತ್ಯತೇ । ಕಿಂ ತಾವತ್ ಪ್ರಾಪ್ತಮ್? ಇಹೈವೇತಿ । ಕಿಂ ಕಾರಣಮ್? ಶ್ರವಣಾದಿಪೂರ್ವಿಕಾ ಹಿ ವಿದ್ಯಾ । ನ ಚ ಕಶ್ಚಿತ್ ಅಮುತ್ರ ಮೇ ವಿದ್ಯಾ ಜಾಯತಾಮ್ ಇತ್ಯಭಿಸಂಧಾಯ ಶ್ರವಣಾದಿಷು ಪ್ರವರ್ತತೇ। ಸಮಾನ ಏವ ತು ಜನ್ಮನಿ ವಿದ್ಯಾಜನ್ಮಾಭಿಸಂಧಾಯ ಏತೇಷು ಪ್ರವರ್ತಮಾನೋ ದೃಶ್ಯತೇ । ಯಜ್ಞಾದೀನ್ಯಪಿ ಶ್ರವಣಾದಿದ್ವಾರೇಣೈವ ವಿದ್ಯಾಂ ಜನಯನ್ತಿ । ಪ್ರಮಾಣಜನ್ಯತ್ವಾತ್ ವಿದ್ಯಾಯಾಃ । ತಸ್ಮಾತ್ ಐಹಿಕಮೇವ ವಿದ್ಯಾಜನ್ಮ ಇತಿ ॥

(ಭಾಷ್ಯಾರ್ಥ)

"ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್" (೩-೪-೨೬) ಎಂಬಲ್ಲಿಂದ ಹಿಡಿದು (ಇಲ್ಲಿಯವರೆಗೂ) ಹೆಚ್ಚಿನ ಕಡಿಮೆಯ (ಬಗೆಬಗೆಯ) ವಿದ್ಯಾ

ಸಾಧನವನ್ನು ನಿಶ್ಚಯಿಸಿದ್ದಾಗಿದೆ. ಅದರ ಫಲವಾದ ವಿದ್ಯೆಯು ಸಿದ್ಧಿಸುವದಲ್ಲ, ಅದೇನು ಈ ಜನ್ಮದಲ್ಲಿಯೇ ಸಿದ್ಧಿಸುವದೊ, ಅಥವಾ ಒಂದೊಂದು ವೇಳೆ ಮುಂದಿನ ಜನ್ಮದಲ್ಲಿಯೂ (ಸಿದ್ಧಿಸಬಹುದೊ) ? ಎಂಬುದನ್ನು ಚಿಂತಿಸಲಾಗುವದು.

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಇಲ್ಲಿಯೇ ಎಂದು. ಕಾರಣವೇನು ?– ಎಂದರೆ ಜ್ಞಾನವು ಶ್ರವಣಾದಿಪೂರ್ವಕವಾಗಿ (ಉಂಟಾಗ)ತಕ್ಕದ್ದಷ್ಟೆ. ಯಾವನೂ ನನಗೆ ಆ (ಜನ್ಮ)ದಲ್ಲಿ ಜ್ಞಾನವುಂಟಾಗಲಿ ಎಂಬ ಇಚ್ಛೆಯಿಂದ ಶ್ರವಣಾದಿಗಳಲ್ಲಿ ತೊಡಗುವದಿಲ್ಲ. ಇದೇ ಜನ್ಮದಲ್ಲಿಯೇ ವಿದ್ಯೆಯುಂಟಾಗಲೆಂದು ಇಚ್ಛಿಸಿ ಅವುಗಳಲ್ಲಿ ತೊಡಗುವದು ಕಂಡುಬಂದಿರುತ್ತದೆ. ಯಜ್ಞಾದಿಗಳುಕೂಡ ಶ್ರವಣಾದಿಗಳ ದ್ವಾರದಿಂದಲೇ ವಿದ್ಯೆಯನ್ನುಂಟು ಮಾಡುತ್ತವೆ (ಎನ್ನಬೇಕು) ; ಏಕೆಂದರೆ ವಿದ್ಯೆಯು ಪ್ರಮಾಣದಿಂದ ಉಂಟಾಗುವದಾಗಿದೆ[1]. ಆದ್ದರಿಂದ ವಿದ್ಯೆಯುಂಟಾಗುವದು ಈ ಜನ್ಮದಲ್ಲಿಯೇ.

## ಸಿದ್ಧಾಂತ: ಈ ಜನ್ಮದಲ್ಲೋ ಮತ್ತೊಂದರಲ್ಲೋ ಜ್ಞಾನವಾಗಬಹುದು

(ಭಾಷ್ಯ)

೪೯೮. ಏವಂ ಪ್ರಾಪ್ತೇ ವದಾಮಃ । ಐಹಿಕಂ ವಿದ್ಯಾಜನ್ಮ ಭವತಿ ಅಸತಿ ಪ್ರಸ್ತುತಪ್ರತಿಬನ್ಧೇ ಇತಿ । ಏತದುಕ್ತಂ ಭವತಿ । ಯದಾ ಪ್ರಕ್ರಾನ್ತಸ್ಯ ವಿದ್ಯಾಸಾಧನಸ್ಯ ಕಶ್ಚಿತ್ ಪ್ರತಿಬನ್ಧೋ ನ ಕ್ರಿಯತೇ ಉಪಸ್ಥಿತವಿಪಾಕೇನ ಕರ್ಮಾನ್ತರೇಣ ತದಾ ಇಹೈವ ವಿದ್ಯಾ ಉತ್ಪದ್ಯತೇ । ಯದಾ ತು ಖಲು ತತ್ಪ್ರತಿಬನ್ಧಃ ಕ್ರಿಯತೇ ತದಾ ಅಮುತ್ರ ಇತಿ । ಉಪಸ್ಥಿತವಿಪಾಕತ್ವಂ ಚ ಕರ್ಮಣಃ ದೇಶಕಾಲನಿಮಿತ್ತೋಪನಿಪಾತಾತ್ ಭವತಿ । ಯಾನಿ ಚ ಏಕಸ್ಯ ಕರ್ಮಣೋ ವಿಪಾಚಕಾನಿ ದೇಶಕಾಲನಿಮಿತ್ತಾನಿ ತಾನ್ಯೇವ ಅನ್ಯಸ್ಯಾಪೀತಿ ನ ನಿಯನ್ತುಂ ಶಕ್ಯತೇ । ಯತೋ ವಿರುದ್ಧಫಲಾನ್ಯಪಿ ಕರ್ಮಾಣಿ ಭವನ್ತಿ । ಶಾಸ್ತ್ರಮಪಿ ಅಸ್ಯ ಕರ್ಮಣ ಇದಂ ಫಲಂ ಭವತಿ ಇತ್ಯೇತಾವತಿ ಪರ್ಯವಸಿತಮ್, ನ ದೇಶಕಾಲನಿಮಿತ್ತವಿಶೇಷಮಪಿ ಸಂಕೀರ್ತಯತಿ । ಸಾಧನವೀರ್ಯವಿಶೇಷಾತ್ತು ಅತೀನ್ದ್ರಿಯಾ ಕಸ್ಯಚಿತ್ ಶಕ್ತಿರಾವಿರ್ಭವತಿ, ತತ್ಪ್ರತಿಬದ್ಧಾ ಪರಸ್ಯ ತಿಷ್ಠತಿ । ನ ಚ ಅವಿಶೇಷೇಣ ವಿದ್ಯಾಯಾಮ್ ಅಭಿಸಂಧಿರ್ನೋತ್ಪದ್ಯತೇ । 'ಇಹಾಮುತ್ರ ವಾ ಮೇ ವಿದ್ಯಾ ಜಾಯತಾಮ್' ಇತ್ಯಭಿಸನ್ಧೇರ್ನಿರಙ್ಕುಶತ್ವಾತ್ । ಶ್ರವಣಾದಿದ್ವಾರೇಣಾಪಿ ವಿದ್ಯಾ ಉತ್ಪದ್ಯಮಾನಾ ಪ್ರತಿಬನ್ಧಕ್ಷಯಾಪೇಕ್ಷಯೈವ ಉತ್ಪದ್ಯತೇ । ತಥಾ ಚ ಶ್ರುತಿರ್ದುರ್ಬೋಧತ್ವಮ್ ಆತ್ಮನೋ

---

1. ಕರ್ಮದಿಂದಲ್ಲ.

ದರ್ಶಯತಿ "ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ। ಶೃಣ್ವನ್ತೋಽಪಿ ಬಹವೋ ಯಂ ನ ವಿದ್ಯುಃ। ಆಶ್ಚರ್ಯೋ[1] ವಕ್ತಾ ಕುಶಲೋಽಸ್ಯ ಲಬ್ಧಾಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ" (ಕ. ೧-೨-೭) ಇತಿ। ಗರ್ಭಸ್ಥ ಏವ ಚ ವಾಮದೇವಃ ಪ್ರತಿಪೇದೇ ಬ್ರಹ್ಮಭಾವಮ್ ಇತಿ ವದನ್ತೋ ಜನ್ಮಾನ್ತರಸಂಚಿತಾತ್ ಸಾಧನಾತ್ ಜನ್ಮಾನ್ತರೇ ವಿದ್ಯೋತ್ಪತ್ತಿಂ ದರ್ಶಯನ್ತಿ। ನ ಹಿ ಗರ್ಭಸ್ಥಸ್ಯೈವ ಐಹಿಕಂ ಕಿಂಚಿತ್ ಸಾಧನಂ ಸಂಭಾವ್ಯತೇ। ಸ್ಮೃತಾವಪಿ "ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ" (ಗೀ. ೬-೩೭) ಇತ್ಯರ್ಜುನೇನ ಪೃಷ್ಟೋ ಭಗವಾನ್ ವಾಸುದೇವಃ "ನ ಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ" (ಗೀ ೬-೪೦) ಇತ್ಯುಕ್ತ್ವಾ ಪುನಸ್ತಸ್ಯ ಪುಣ್ಯಲೋಕಪ್ರಾಪ್ತಿಂ ಸಾಧುಕುಲೇ ಸಂಭೂತಿಂ ಚಾಭಿಧಾಯ ಅನನ್ತರಮ್ "ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್" (ಗೀ. ೬-೪೩) ಇತ್ಯಾದಿನಾ "ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್" (ಗೀ. ೬-೪೫) ಇತ್ಯನ್ತೇನ ಏತದೇವ ದರ್ಶಯತಿ। ತಸ್ಮಾತ್ ಐಹಿಕಮ್ ಆಮುಷ್ಮಿಕಂ ವಾ ವಿದ್ಯಾಜನ್ಮ ಪ್ರತಿಬನ್ಧಕ್ಷಯಾಪೇಕ್ಷಯಾ ಇತಿ ಸ್ಥಿತಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಪ್ರಸ್ತುತವಾದದ್ದಕ್ಕೆ ಅಡ್ಡಿಯಾಗದಿದ್ದರೆ ವಿದ್ಯಾಜನ್ಮವು ಇಲ್ಲಿಯೇ ಆಗುತ್ತದೆ. (ಇಲ್ಲಿ) ಇಷ್ಟನ್ನು ಹೇಳಿದಂತಾಯಿತು. ಯಾವಾಗ ಪ್ರಾರಂಭಿಸಿರುವ ವಿದ್ಯಾಸಾಧನಕ್ಕೆ ಯಾವ ತೊಂದರೆಯೂ ಅಡ್ಡಿಯೂ ವಿಪಾಕವು ಸಮೀಪಿಸಿರುವ ಕರ್ಮಾಂತರದಿಂದ ಆಗದಿರುವದೋ ಆಗ ಇಲ್ಲಿಯೇ ವಿದ್ಯೆಯು ಹುಟ್ಟುತ್ತದೆ. ಆದರೆ ಯಾವಾಗ ಅದಕ್ಕೆ ಅಡ್ಡಿಯಾಗಿರುವದೋ ಆಗ ಮುಂದಿನ (ಜನ್ಮ)ದಲ್ಲಿ (ಆಗುವದು). ಕರ್ಮವು ವಿಪಾಕವಾಗುವದಕ್ಕೆ ಹತ್ತಿರವಿರುವದೆಂಬುದು ದೇಶ, ಕಾಲ, ನಿಮಿತ್ತಗಳ ಸೇರುವೆಯಿಂದ ಆಗುತ್ತಿದೆ. ಒಂದು ಕರ್ಮವನ್ನು ವಿಪಾಕಗೊಳಿಸುವ ದೇಶಕಾಲನಿಮಿತ್ತಗಳಿರುವವಲ್ಲ, ಅವೇ ಮತ್ತೊಂದು (ಕರ್ಮಕ್ಕೆ ವಿಪಾಚಕಗಳು) ಎಂದು ನಿಯಮದಿಂದ (ಹೇಳುವದಕ್ಕೆ) ಆಗುವದಿಲ್ಲ. ಏಕೆಂದರೆ ವಿರುದ್ಧಫಲಗಳನ್ನು ಕೊಡುವ ಕರ್ಮಗಳೂ ಉಂಟು.[2] ಶಾಸ್ತ್ರವೂ ಈ ಕರ್ಮಕ್ಕೆ ಇದು ಫಲವು ಎಂಬಿಷ್ಟರಲ್ಲಿಯೇ ಕೊನೆಗೊಂಡಿರುತ್ತದೆಯೇ ಹೊರತು (ಫಲಕ್ಕೆ ಬೇಕಾದ) ದೇಶಕಾಲನಿಮಿತ್ತವು ಇಂಥದ್ದೆಂಬುದನ್ನು (ಅದು) ಹೇಳುವದಿಲ್ಲ.

1. ಆಚ್ಚಿನ ಪುಸ್ತಕದಲ್ಲಿರುವ 'ಆಶ್ಚರ್ಯೋಽಸ್ಯ' ಎಂಬಲ್ಲಿ 'ಅಸ್ಯ' ಹೆಚ್ಚು.

2. ಬ್ರಾಹ್ಮಣಜನ್ಮವನ್ನು ಕೊಡುವ ಕರ್ಮವೂ ಸೂಕರಜನ್ಮವನ್ನು ಕೊಡುವ ಕರ್ಮವೂ ಒಂದೇ ಸಲಕ್ಕೆ ವಿಪಾಕವಾಗಲಾರವು.

ಆದರೆ ಸಾಧನದ ವೀರ್ಯವಿಶೇಷದಿಂದಲೇ ಒಂದರ ಅತೀಂದ್ರಿಯವಾದ ಶಕ್ತಿಯು ಹೊರತೋರಿಕೊಳ್ಳುತ್ತದೆ, ಮತ್ತೊಂದರ ಶಕ್ತಿಯು ಅದರಿಂದ ಅಡ್ಡಿಯಾಗಿ ಹಾಗೆಯೇ ಇರುತ್ತದೆ.

ವಿದ್ಯೆಯುಂಟಾಗುವದರಲ್ಲಿ ಸಾಮಾನ್ಯವಾಗಿ ಇಚ್ಛೆಯುಂಟಾಗುವದಿಲ್ಲ ವೆಂಬುದೂ ಇಲ್ಲ; ಏಕೆಂದರೆ "ಈ ಜನ್ಮದಲ್ಲಿಯೋ ಮುಂದಿನ ಜನ್ಮದಲ್ಲಿಯೋ ನನಗೆ ವಿದ್ಯೆಯುಂಟಾಗಲಿ" ಎಂಬ ಇಚ್ಛೆಗೆ ಯಾವ ತಡೆಯೂ ಇರುವದಿಲ್ಲ. ಶ್ರವಣಾದಿದ್ವಾರದಿಂದ ಉಂಟಾಗುವ ವಿದ್ಯೆಯುಕೂಡ ಪ್ರತಿಬಂಧಕ್ಷಯವನ್ನ ಪೇಕ್ಷಿಸಿಯೇ ಉಂಟಾಗುತ್ತದೆ ಆದ್ದರಿಂದಲೇ ಶ್ರುತಿಯು ಆತ್ಮನನ್ನು ಅರಿತು ಕೊಳ್ಳುವದು ಕಷ್ಟವೆಂದು "ಯಾವ (ಈ ಆತ್ಮನು) ಅನೇಕರಿಗೆ ಶ್ರವಣಕ್ಕೂ ಸಿಕ್ಕುವದಿಲ್ಲ; ಬಹುಜನರು ಶ್ರವಣಮಾಡಿಯೂ ಅವನನ್ನು ಅರಿಯದಿರುವರು (ಇವನನ್ನು) ತಿಳಿಸುವವನು ಆಶ್ಚರ್ಯರೂಪನು, ಇವನನ್ನು ದೊರಕಿಸಿ ಕೊಳ್ಳುವವನು ಜಾಣನು; ಕುಶಲನಾದ ಗುರುವಿನ ಅನುಶಾಸನದಿಂದ ಇವನನ್ನು ಅರಿತುಕೊಳ್ಳುವವನು ಆಶ್ಚರ್ಯರೂಪನು" (ಕ ೧-೨-೭) ಎಂಬ (ವಾಕ್ಯದಿಂದ) ತಿಳಿಸುತ್ತದೆ. ವಾಮದೇವನು ಗರ್ಭದಲ್ಲಿರುವಾಗಲೇ ಬ್ರಹ್ಮ ಭಾವನನ್ನು ಹೊಂದಿದನು ಎಂದು ಹೇಳುವ (ಐ.) ಶ್ರುತಿಯು ಜನ್ಮಾಂತರದಲ್ಲಿ ಕೂಡಿಹಾಕಿದ ಸಾಧನದಿಂದ ಮತ್ತೊಂದು ಜನ್ಮದಲ್ಲಿ ವಿದ್ಯೆಯುಂಟಾಗಬಹು ದೆಂದು ತಿಳಿಸುತ್ತದೆ. ಏಕೆಂದರೆ ಗರ್ಭದಲ್ಲಿರುವಾಗಲೇ ಯಾವ ಸಾಧನವನ್ನಾ ದರೂ (ಮಾಡಿರಬಹುದೆಂದು) ಸಂಭಾವನೆಮಾಡುವದಕ್ಕಾಗುವದಿಲ್ಲ. ಸ್ಮೃತಿ ಯಲ್ಲಿಯೂ "ಯೋಗಸಿದ್ಧಿಯನ್ನು ಪಡೆಯದೆ ಇರುವವನು, ಎಲೈ ಕೃಷ್ಣನೆ, ಯಾವ ಗತಿಯನ್ನು ಹೊಂದುವನು?" (ಗೀ. ೬-೩೭) ಎಂದು ಅರ್ಜುನನು ಕೇಳಲು ವಾಸುದೇವಭಗವಂತನು "ಅಪ್ಪ, ಕಲ್ಯಾಣವನ್ನು ಮಾಡಿದವನು ಯಾವನೂ ದುರ್ಗತಿಯನ್ನು ಹೊಂದುವಂತಿಲ್ಲವಷ್ಟೆ" (ಗೀ. ೬-೪೦) ಎಂದು ಹೇಳಿ ಮತ್ತೆ ಆ (ಯೋಗಿಗೆ) ಪುಣ್ಯಲೋಕಪ್ರಾಪ್ತಿಯನ್ನೂ ಸಾಧುಗಳ ಮನೆ ಯಲ್ಲಿ ಜನ್ಮವನ್ನೂ ಹೇಳಿದ ಬಳಿಕ "ಅಲ್ಲಿ ಪೂರ್ವದೇಹದ ಬುದ್ಧಿಯ ಸಂಬಂಧ ವನ್ನು ಪಡೆದುಕೊಳ್ಳುತ್ತಾನೆ" (ಗೀ. ೬-೪೩) ಎಂದು ಮೊದಲಾಗಿ "ಅನೇಕ ಜನ್ಮಗಳಲ್ಲಿ ಸಂಸಿದ್ಧನಾಗಿ ಆಮೇಲೆ ಪರಗತಿಯನ್ನು ಹೊಂದುವನು" (ಗೀ. ೬-೪೫) ಎಂಬವರೆಗಿನ ವಾಕ್ಯದಿಂದ ಇದನ್ನೇ ತಿಳಿಸಿರುತ್ತಾನೆ.

ಆದ್ದರಿಂದ ಪ್ರತಿಬಂಧಕ್ಷಯದ ಅಪೇಕ್ಷೆಯಿಂದ ಈ ಜನ್ಮದಲ್ಲಾಗಲಿ ಮತ್ತೊಂದು ಜನ್ಮದಲ್ಲಾಗಲಿ ವಿದ್ಯೆಯು ಜನ್ಮವಾಗಬಹುದು ಎಂದು ಸಿದ್ಧ ವಾಯಿತು.

## ೧೭. ಮುಕ್ತಿಫಲಾಧಿಕರಣ

( ಮುಕ್ತಿಫಲದಲ್ಲಿ ತಾರತಮ್ಯವಿಲ್ಲ )

**ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ ॥**

೫೨. ಹೀಗೆ ಮುಕ್ತಿಫಲದಲ್ಲ (ಯಾವ) ನಿಯಮವೂ ಇಲ್ಲ; ಏಕೆಂದರೆ ಅದೇ ಅವಸ್ಥೆಯದೆಂದು ಅವಧಾರಣಮಾಡಿರುತ್ತದೆ, ಅದೇ ಅವಸ್ಥೆಯದೆಂದು ಅವಧಾರಣಮಾಡಿರುತ್ತದೆ.

### ಮುಕ್ತಿಯಲ್ಲಿ ಯಾವ ವಿಶೇಷವೂ ಇಲ್ಲ

(ಭಾಷ್ಯ)

೪೯೯. ಯಥಾ ಮುಮುಕ್ಷೋರ್ವಿದ್ಯಾಸಾಧನಾವಲಮ್ಬಿನಃ ಸಾಧನ ವೀರ್ಯವಿಶೇಷಾತ್ ವಿದ್ಯಾಲಕ್ಷಣೇ ಫಲೇ ಐಹಿಕಾಮುಷ್ಮಿಕಫಲತ್ವಕೃತೋ ವಿಶೇಷಪ್ರತಿನಿಯಮೋ ದೃಷ್ಟಃ, ಏವಂ ಮುಕ್ತಿಲಕ್ಷಣೇಽಪಿ ಉತ್ಕರ್ಷಾಪಕರ್ಷ ಕೃತಃ ಕಶ್ಚಿತ್ ವಿಶೇಷಪ್ರತಿನಿಯಮಃ ಸ್ಯಾತ್ ಇತ್ಯಾಶಙ್ಕ್ಯ ಆಹ– "ಏವಂ ಮುಕ್ತಿಫಲಾನಿಯಮಃ" ಇತಿ । ನ ಖಲು ಮುಕ್ತಿಫಲೇ ಕಶ್ಚಿತ್ ಏವಂಭೂತೋ ವಿಶೇಷಪ್ರತಿನಿಯಮಃ ಆಶಙ್ಕಿತವ್ಯಃ । ಕುತಃ ? ತದವಸ್ಥಾವಧೃತೇಃ । ಮುಕ್ತ್ಯವಸ್ಥಾ ಹಿ ಸರ್ವವೇದಾನ್ತೇಷು ಏಕರೂಪೈವ ಅವಧಾರ್ಯತೇ । ಬ್ರಹ್ಮೈವ ಹಿ ಮುಕ್ತ್ಯವಸ್ಥಾ । ನ ಚ ಬ್ರಹ್ಮಣೋಽನೇಕಾಕಾರಯೋಗೋಽಸ್ತಿ । ಏಕಲಿಙ್ಗತ್ವಾವಧಾರಣಾತ್ "ಅಸ್ಥೂಲಮನಣು" (ಬೃ. ೩–೮–೮), "ಸ ಏಷ ನೇತಿ ನೇತ್ಯಾತ್ಮಾ" (ಬೃ. ೩–೯–೨೬) "ಯತ್ರ ನಾನ್ಯತ್ಪಶ್ಯತಿ" (ಛಾಂ. ೭–೨೪–೧), "ಬ್ರಹ್ಮೈವೇದಮಮೃತಂ ಪುರಸ್ತಾತ್" (ಮುಂ. ೨–೨–೧೧) "ಇದಂ ಸರ್ವಂ ಯದಯಮಾತ್ಮಾ" (ಬೃ. ೨–೪–೬), "ಸ ವಾ ಏಷ ಮಹಾನಜ ಆತ್ಮಾಜರೋಽಮರೋಽಮೃತೋಽಭಯೋ ಬ್ರಹ್ಮ" (ಬೃ. ೪–೪–೨೫), "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ. ೪–೫–೧೫) ಇತ್ಯಾದಿಶ್ರುತಿಭ್ಯಃ । ಅಪಿ ಚ ವಿದ್ಯಾಸಾಧನಂ ಸ್ವವೀರ್ಯವಿಶೇಷಾತ್ ಸ್ವಫಲ ಏವ ವಿದ್ಯಾಯಾಂ ಕಂಚಿದತಿಶಯಮ್ ಆಸಞ್ಜಯೇತ್ ನ ವಿದ್ಯಾಫಲೇ ಮುಕ್ತೌ । ತದ್ಧಿ ಅಸಾಧ್ಯಂ ನಿತ್ಯಸಿದ್ಧಸ್ವಭಾವಮೇವ ವಿದ್ಯಯಾ ಅಧಿಗಮ್ಯತೇ ಇತ್ಯಸಕೃದವಾದಿಷ್ಮ । ನ ಚ ತಸ್ಯಾಮ್ ಉತ್ಕರ್ಷನಿಕರ್ಷಾತ್ಮಕೋಽತಿಶಯ ಉಪಪದ್ಯತೇ । ನಿಕೃಷ್ಟಾಯಾ ವಿದ್ಯಾತ್ವಾಭಾವಾತ್ ಉತ್ಕೃಷ್ಟೈವ ಹಿ ವಿದ್ಯಾ ಭವತಿ । ತಸ್ಮಾತ್ ತಸ್ಯಾಂ ಚಿರಾಚಿರೋತ್ಪತ್ತಿರೂಪೋಽತಿಶಯೋ ಭವನ್

ಭವೇತ್ । ನ ತು ಮುಕ್ತೌ ಕಶ್ಚಿದತಿಶಯಸಂಭವೋಽಸ್ತಿ । ವಿದ್ಯಾಭೇದಾಭಾವಾದಪಿ ತತ್ಫಲಭೇದನಿಯಮಾಭಾವಃ ಕರ್ಮಫಲವತ್ ನ ಹಿ ಮುಕ್ತಿಸಾಧನಭೂತಾಯಾ ವಿದ್ಯಾಯಾ ಕರ್ಮಣಾಮಿವ ಭೇದೋಽಸ್ತೀತಿ। ಸಗುಣಾಸ್ವಿತು ವಿದ್ಯಾಸು "ಮನೋಮಯಃ ಪ್ರಾಣಶರೀರಃ" (ಛಾಂ. ೩-೧೪-೨) ಇತ್ಯಾದ್ಯಾಸು ಗುಣಾವಾಪೋದ್ವಾಪವಶಾತ್ ಭೇದೋಪಪತ್ತೌ ಸತ್ಯಾಮ್ ಉಪಪದ್ಯತೇ ಯಥಾಸ್ವಂ ಫಲಭೇದನಿಯಮಃ ಕರ್ಮಫಲವತ್। ತಥಾ ಚ ಲಿಙ್ಗದರ್ಶನಮ್ "ತಂ ಯಥಾ ಯಥೋಪಾಸತೇ ತದೇವ ಭವತಿ" (?) ಇತಿ । ನೈವಂ ನಿರ್ಗುಣಾಯಾಂ ವಿದ್ಯಾಯಾಂ ಗುಣಾಭಾವಾತ್ । ತಥಾ ಚ ಸ್ಮೃತಿಃ "ನ ಹಿ ಗತಿರಧಿಕಾಸ್ತಿ ಕಸ್ಯಚಿತ್ ಸತಿ ಹಿ ಗುಣೇ ಪ್ರವದನ್ತ್ಯತುಲ್ಯತಾಮ್" (ಮೋ. ಧ. ೧೯೪-೬೦) ಇತಿ। ತದವಸ್ಥಾವಧೃತೇಸ್ತದವಸ್ಥಾವಧೃತೇರಿತಿ ಪದಾಭ್ಯಾಸೋಽಧ್ಯಾಯಪರಿಸಮಾಪ್ತಿಂ ದ್ಯೋತಯತಿ ॥

(ಭಾಷ್ಯಾರ್ಥ)

ಹೇಗೆ ಮುಮುಕ್ಷುವಾದವನಿಗೆ ವಿದ್ಯಾಸಾಧನಗಳನ್ನು ಆಶ್ರಯಿಸುವಾಗ ಸಾಧನಗಳ ವೀರ್ಯವಿಶೇಷದಿಂದ ವಿದ್ಯಾಸ್ವರೂಪವಾದ ಫಲದಲ್ಲಿ ಇಲ್ಲಿಯೇ ಫಲವಾಗುವದು (ಅಥವಾ) ಮುಂದಿನ ಜನ್ಮದಲ್ಲಿ ಫಲವಾಗುವದು –ಎಂಬ ವಿಶೇಷವಿರುವದೆಂಬ ನಿಯಮವು ಕಂಡುಬರುತ್ತದೆಯೋ ಹಾಗೆ ಮುಕ್ತಿಸ್ವರೂಪವಾದ (ಫಲ)ದಲ್ಲಿಯೂ ಹೆಚ್ಚುಕಡಿಮೆಯ (ರೂಪದ) ಯಾವದಾದರೊಂದು ವಿಶೇಷದ ನಿಯಮವಿರಬಹುದು ಎಂದು ಶಂಕಿಸಿ (ಸೂತ್ರಕಾರರು) 'ಏವಂ ಮುಕ್ತಿಫಲಾನಿಯಮಃ' ಎಂದು ಹೇಳಿದಾರೆ. ಹೀಗೆ ಮುಕ್ತಿಫಲದಲ್ಲಿ ಯಾವ ವಿಶೇಷದ ನಿಯಮವನ್ನೂ ಶಂಕಿಸುವಹಾಗಿಲ್ಲ. ಏಕೆ? ಎಂದರೆ ಅದೇ ಅವಸ್ಥೆಯದೆಂದು ಅವಧಾರಣೆಮಾಡಿರುತ್ತದೆ. (ಇದರ ವಿವರ) : ಮುಕ್ತ್ಯವಸ್ಥೆಯನ್ನು ಎಲ್ಲಾ ವೇದಾಂತಗಳಲ್ಲಿಯೂ ಒಂದೇ ರೂಪವಾಗಿರುವದೆಂದು ಒತ್ತಿಹೇಳಿರುತ್ತದೆ. **ಬ್ರಹ್ಮವೇ ಅಲ್ಲವೆ, ಮುಕ್ತ್ಯವಸ್ಥೆ ?** ಆದರೆ ಬ್ರಹ್ಮದಲ್ಲಿ ಅನೇಕಾಕಾರಗಳ ಸಂಬಂಧವಿಲ್ಲ. ಏಕೆಂದರೆ "ಅಸ್ಥೂಲವು, ಅನಣು" (ಬೃ ೩-೮-೮), "ಆ ಇವನು ಇದಲ್ಲ, ಇದಲ್ಲ– ಎಂದ ಆತ್ಮನು" (ಬೃ.೩-೯-೨೬), "ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ...... (ಅದು ಭೂಮವು)" ( ಛಾಂ. ೭-೨೪-೧೧ ), "ಮುಂದಿರುವ ಇದು ಅಮೃತವಾದ ಬ್ರಹ್ಮವೇ" (ಮುಂ. ೨-೨-೧೧), "ಇದೆಲ್ಲವೂ ಈ ಆತ್ಮನೆಂಬುದೇ'' (ಬೃ.೨-೪-೬), ''ಈತನು ಮಹಾನ್, ಅಜನು, ಆತ್ಮನು, ಅಜರನು, ಅಮರನು, ಅಮೃತನು, ಅಭಯನು, ಬ್ರಹ್ಮವು'' (ಬೃ. ೪-೪-೨೫) ''ಎಲ್ಲಿಯಾದರೆ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ಕಂಡಾನು ?" (ಬೃ. ೪-೫-೧೫) ಮುಂತಾದ ಶ್ರುತಿಗಳಿಂದ ಏಕಲಿಂಗತ್ವವನ್ನೇ ಅವಧಾರಣೆಮಾಡಿರುತ್ತದೆ.[1]

1. ಆದ್ದರಿಂದ ಮುಕ್ತಿಯಲ್ಲಿ ಹೆಚ್ಚುಕಡಿಮೆ ಇರುವದಕ್ಕೆ ಅವಕಾಶವಿಲ್ಲ.

ಇದಲ್ಲದೆ ವಿದ್ಯೆಯ ಸಾಧನವು ತನ್ನ ವೀರ್ಯದ ವಿಶೇಷದಿಂದ ತನ್ನ ಫಲವಾದ ವಿದ್ಯೆಯಲ್ಲಿಯೇ ಯಾವದಾದರೊಂದು ಅತಿಶಯವನ್ನು ಉಂಟುಮಾಡೀತೇ ಹೊರತು ವಿದ್ಯಾಫಲವಾದ ಮುಕ್ತಿಯಲ್ಲಿ (ಉಂಟು ಮಾಡಲಾರದು). ಏಕೆಂದರೆ ಅದು ಸಾಧ್ಯವಲ್ಲವೆಂದೂ ನಿತ್ಯಸಿದ್ಧವಾದ ಸ್ವಭಾವವುಳ್ಳದ್ದೇ ಆಗಿ ವಿದ್ಯೆಯಿಂದ ದೊರಕುತ್ತದೆ ಎಂದೂ ಅನೇಕ ವೇಳೆ ಹೇಳಿರುತ್ತೇವೆ. ಆ (ವಿದ್ಯೆ)ಯಲ್ಲಿಕೂಡ ಹೆಚ್ಚುಕಡಿಮೆಯ ರೂಪದ ಅತಿಶಯವು (ಇರುವದೆಂಬುದು) ಹೊಂದುವದಿಲ್ಲ; ಏಕೆಂದರೆ ಕಡಿಮೆಯಾದದ್ದು ವಿದ್ಯೆಯೇ ಅಲ್ಲ. ಹೆಚ್ಚಿನದಲ್ಲವೆ, ವಿದ್ಯೆಯಾದೀತು? ಆದ್ದರಿಂದ ಅದರಲ್ಲಿ ತಡವಾಗಿ ಅಥವಾ ಬೇಗನೆ ಉಂಟಾಗುವದೆಂಬ ರೂಪದ ಅತಿಶಯವು ಆದರೂ ಆಗಬಹುದು. ಆದರೆ ಮುಕ್ತಿಯಲ್ಲಿ ಯಾವ ಅತಿಶಯವೂ ಆಗುವ ಸಂಭವವಿರುವದಿಲ್ಲ.

ವಿದ್ಯೆಯಲ್ಲಿ ಭೇದವಿಲ್ಲದ್ದರಿಂದಲೂ ಅದರ ಫಲವಾದ (ಮುಕ್ತಿಯಲ್ಲಿ) ಕರ್ಮಫಲದಲ್ಲಿರುವಂತೆ ಭೇದವಿರುವದೆಂಬ ನಿಯಮವಿರುವಹಾಗಿಲ್ಲ. ಮುಕ್ತಿ ಸಾಧನವಾಗಿರುವ ವಿದ್ಯೆಯಲ್ಲಿ ಕರ್ಮಗಳಿಗಿರುವಂತೆ ಭೇದವು ಇಲ್ಲವಷ್ಟೆ. "ಮನೋಮಯನು, ಪ್ರಾಣಶರೀರನು" (ಛಾಂ. ೩-೧೪-೨) ಮುಂತಾದ ಸಗುಣ ವಿದ್ಯೆಗಳಲ್ಲಾದರೋ ಗುಣಗಳನ್ನು ಹಾಕುವದು, ಬಿಡುವದು- ಇವುಗಳ ವಶದಿಂದ ಭೇದ(ವಾಗ)ಬಹುದಾದ್ದರಿಂದ ಅವವಕ್ಕೆ ತಕ್ಕಂತೆ ಕರ್ಮಫಲಗಳಲ್ಲಿರುವಂತೆ ಫಲಭೇದವೂ ಇರಬಹುದೆಂಬ ನಿಯಮವೂ ಹೊಂದುತ್ತದೆ. ಇದಕ್ಕನುಗುಣವಾಗಿ "ಅವನನ್ನು ಹೇಗೆ ಉಪಾಸನೆಮಾಡುವರೋ ಅದೇ ಆಗುತ್ತದೆ" (ಶತ. ಬ್ರಾ. ?) ಎಂಬ ಲಿಂಗವು ಕಂಡುಬರುತ್ತದೆ.[1] ನಿರ್ಗುಣವಿದ್ಯೆಯಲ್ಲಿ ಹೀಗಿಲ್ಲ, ಏಕೆಂದರೆ ಅಲ್ಲಿ ಗುಣಗಳಿರುವದಿಲ್ಲ. ಆದ್ದರಿಂದಲೇ "ಯಾವನಿಗೂ ಹೆಚ್ಚಿನ ಗತಿಯಿರುವದಿಲ್ಲ, ಗುಣವಿದ್ದರಲ್ಲವೆ, ಹೆಚ್ಚುಕಡಿಮೆಯಿದೆ ಎಂದು ಹೇಳುತ್ತಾರೆ ?" (ಮೋ.ಧ. ೧೯೪-೬೦) ಎಂದು ಸ್ಮೃತಿಯೂ ಇದೆ.

'ಅದೇ ಅವಸ್ಥೆಯದೆಂದು ಅವಧಾರಣೆಮಾಡಿರುತ್ತದೆ', 'ಅದೇ ಅವಸ್ಥೆಯದೆಂದು ಅವಧಾರಣೆಮಾಡಿರುತ್ತದೆ' ಎಂದು (ತದವಸ್ಥಾವಧೃತೇಃ ಎಂಬ) ಪದವನ್ನು ಮತ್ತೆ ಹೇಳಿರುವದು ಅಧ್ಯಾಯವು ಮುಗಿಯಿತೆಂಬುದನ್ನು ತಿಳಿಸುತ್ತದೆ.

ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ
ಶ್ರೀಮಚ್ಛಂಕರಭಗವತ್ಪೂಜ್ಯಪಾದಕೃತೌ ಶಾರೀರಕಮೀಮಾಂಸಾಭಾಷ್ಯೇ
ತೃತೀಯೋಽಧ್ಯಾಯಃ



1. ಆದ್ದರಿಂದ ಆ ಫಲಗಳಲ್ಲಿ ತಾರತಮ್ಯವಿರಬಹುದಾಗಿದೆ. ಆದರೆ ಸಗುಣವಿದ್ಯೆಗೆ ಮುಖ್ಯಮುಕ್ತಿಯು ಎಂದಿಗೂ ಫಲವಲ್ಲ.

# ಅಧಿಕರಣಗಳ ಸಾರ

ಈ ಪಾದದಲ್ಲಿ ವಿದ್ಯಾಸಾಧನಗಳ ವಿಚಾರವನ್ನು ಮಾಡಿರುತ್ತದೆ.

## ೧. ಪುರುಷಾರ್ಥಾಧಿಕರಣ

**ಸಂಶಯ:** ಔಪನಿಷದಾತ್ಮನ ಜ್ಞಾನವು ಅಧಿಕಾರದ್ವಾರದಿಂದ ಕರ್ಮದಲ್ಲಿ ಸೇರತಕ್ಕದ್ದೊ, ಸ್ವತಂತ್ರವಾಗಿಯೇ ಪುರುಷಾರ್ಥಸಾಧನವೊ?

**ಪೂರ್ವಪಕ್ಷ:** ಆತ್ಮನು ಕರ್ತೃವಾಗಿರುವದರಿಂದ ಕರ್ಮಶೇಷನು. ಆದ್ದರಿಂದ ದ್ರವ್ಯಸಂಸ್ಕಾರಕರ್ಮಗಳಲ್ಲಿ ಹೇಗೆ ಫಲಶ್ರುತಿಯು ಅರ್ಥವಾದವೋ ಹಾಗೆಯೇ ಆತ್ಮಜ್ಞಾನಕ್ಕೆ ಫಲವನ್ನು ಹೇಳುವ ವಾಕ್ಯಗಳೂ ಅರ್ಥವಾದವೇ. ಲೌಕಿಕಕರ್ಮಗಳಲ್ಲಿ ಆತ್ಮಜ್ಞಾನವಿಲ್ಲದೆ ಪ್ರವೃತ್ತಿಯುಂಟಾಗಬಹುದು; ಆದರೆ ವೈದಿಕಕರ್ಮಗಳಲ್ಲಿ ಪ್ರವೃತ್ತಿಯಾಗುವದಕ್ಕೆ ಈ ಜ್ಞಾನವು ಅವಶ್ಯವಾಗಿ ಬೇಕು. ಜ್ಞಾನಿಗಳೂ ಕರ್ಮದಲ್ಲಿ ತೊಡಗಿದ್ದರೆಂದು ಶ್ರುತಿಗಳಲ್ಲಿ ಕಂಡುಬರುತ್ತದೆ; ವಿದ್ಯೆಯಿಂದ ಮಾಡಿದ್ದೇ ವೀರ್ಯವತ್ತರವಾಗುವದೆಂಬ ಶ್ರುತಿಯಿದೆ. ವಿದ್ಯಾಕರ್ಮಗಳೆರಡೂ ಸೇರಿ ಫಲವನ್ನು ಕೊಡುವವೆಂದು ವಚನವಿದೆ. ಸಮಸ್ತವೇದಾರ್ಥವನ್ನೂ ತಿಳಿದುಕೊಂಡವನಿಗೇ ಕರ್ಮಾಧಿಕಾರವನ್ನು ವೇದದಲ್ಲಿ ಹೇಳಿದೆ. ಬದುಕಿರುವವರೆಗೂ ಕರ್ಮವನ್ನೇ ಮಾಡಬೇಕೆಂದೂ ವಿಧಿಸಿದೆ. ಆದ್ದರಿಂದ ಆತ್ಮಜ್ಞಾನವು ಕ್ರತ್ವರ್ಥ.

**ಸಿದ್ಧಾಂತ:** ಇದು ಸ್ವತಂತ್ರವಾಗಿ ಪುರುಷಾರ್ಥವೇ. ಏಕೆಂದರೆ ಶ್ರುತಿಯು ಫಲವನ್ನು ಹೇಳುತ್ತದೆ. ಈ ಆತ್ಮನು ಕರ್ಮಶೇಷನಲ್ಲ; ಏಕೆಂದರೆ ಸಂಸಾರಿಧರ್ಮವಿಲ್ಲದ ಆತ್ಮಸ್ವರೂಪವನ್ನೇ ಶ್ರುತಿಯಲ್ಲಿ ಉಪದೇಶಿಸಿದೆ. ಸಂಸಾರಿಸ್ವರೂಪವನ್ನು ಬೋಧಿಸಿರುವಂತೆ ಕಾಣುವಲ್ಲಿಯೂ ವಾಕ್ಯಶೇಷದಲ್ಲಿ ಜೀವನ ಬ್ರಹ್ಮಸ್ವರೂಪವನ್ನೇ ಹೇಳಿದೆ. ಜ್ಞಾನಿಗಳು ಕರ್ಮವನ್ನು ಬಿಟ್ಟರೆಂದೂ ಶ್ರುತಿಯಲ್ಲಿ ಹೇಳಿದೆ; ವಿದ್ಯೆಯಿಂದ ಕರ್ಮವನ್ನು ಮಾಡಬೇಕೆಂಬುದು ಪ್ರಕೃತವಾದ ಉದ್ಗೀಥವಿದ್ಯೆಯ ವಿಷಯ; ಔಪನಿಷದಾತ್ಮಜ್ಞಾನವು ಕರ್ಮಾಧಿಕಾರಕ್ಕೆ ಬೇಕಿರುವದಿಲ್ಲವಾದ್ದರಿಂದ ಕರ್ಮಜ್ಞಾನವುಳ್ಳವನಿಗೇ ಕರ್ಮದಲ್ಲಿ ಅಧಿಕಾರವೆಂದು ತಿಳಿಯಬೇಕು. ಕರ್ಮವನ್ನು ಮಾಡುತ್ತಲೇ ಇರಬೇಕೆಂಬುದು ಜ್ಞಾನಿಯ ವಿಷಯವಲ್ಲ: ಅದು ಜ್ಞಾನವನ್ನು ಹೊಗಳುವದಕ್ಕೆಂದೂ ಹೇಳಬಹುದು. ಜ್ಞಾನಿಗೆ ಪ್ರಜಾದಿಗಳು ಬೇಕಿಲ್ಲವೆಂಬ ಪರಾಮರ್ಶವೂ ಶ್ರುತಿಯಲ್ಲಿದೆ. ಕ್ರಿಯಾಕಾರಕಫಲವಿಭಾಗವನ್ನೇ ಜ್ಞಾನವು ನಾಶಗೊಳಿಸುವವೆಂದೂ ಇವೆ. ಗೃಹಸ್ಥರಲ್ಲದ ಊರ್ಧ್ವರೇತಸ್ಕರಲ್ಲಿಯೂ ಜ್ಞಾನವನ್ನುಪದೇಶಿಸಿದೆ; ಅವರಿಗೆ ಕರ್ಮವಿಲ್ಲವೇ ಇಲ್ಲ. ಆದ್ದರಿಂದ ಈ ಆತ್ಮಜ್ಞಾನವು ಸ್ವತಂತ್ರವೇ.

## ೨. ಪರಾಮರ್ಶಾಧಿಕರಣ

**ಪೂರ್ವಪಕ್ಷ:** "ತ್ರಯೋ ಧರ್ಮಸ್ಕಂಧಾಃ" ಮುಂತಾದ ಶ್ರುತಿಗಳು ಊರ್ಧ್ವರೇತಸ್ಕರ ಆಶ್ರಮವನ್ನು ವಿಧಿಸಿಲ್ಲ, ಪರಾಮರ್ಶಿಸಿವೆ. ಏಕೆಂದರೆ ಅಲ್ಲಿ ವಿಧಿಶಬ್ದವಿಲ್ಲ. ಆ

ಆಶ್ರಮಗಳು ಸ್ಮೃತ್ಯಾಚಾರಮಾತ್ರಸಿದ್ಧವಾಗಿವೆ. ಶ್ರುತಿವಿರುದ್ಧವಾಗಿರುವದರಿಂದ ಅವನ್ನು ಅನುಷ್ಠಾನಮಾಡತಕ್ಕದ್ದಲ್ಲ; ಗಾರ್ಹಸ್ಥ್ಯಕ್ಕಾದರೆ ಅಗ್ನಿಹೋತ್ರಾದಿಗಳ ವಿಧಾನವಿದೆ. ಶ್ರುತಿಯಲ್ಲಿ ಅಗ್ನ್ಯುದ್ವಾಸನಮಾಡಿದವನಿಗೆ ವೀರಹತ್ಯಾದೋಷವನ್ನು ಹೇಳಿದೆ; ಬ್ರಹ್ಮಚರ್ಯವನ್ನು ಮುಗಿಸಿ ಬೇಗನೆ ಮದುವೆಯಾಗಬೇಕು, ಅಪುತ್ರನಿಗೆ ಲೋಕವಿಲ್ಲ ಎಂದೂ ಹೇಳಿದೆ; ತಪಃಶ್ರದ್ಧೆಗಳನ್ನು ಹೇಳಿರುವದು ದೇವಯಾನವನ್ನು ಹೇಳುವದಕ್ಕೆಂದು ತಿಳಿಯಬಹುದು; ಪ್ರವ್ರಜ್ಯಾಶಾಸ್ತ್ರವು 'ಲೋಕಮಿಚ್ಛನ್ತಃ' ಎಂಬ ಲೋಕವನ್ನು ಹೊಗಳುವದಕ್ಕೆ. ಆದ್ದರಿಂದ ಮಿಕ್ಕ ಆಶ್ರಮಗಳು ಅನುಷ್ಠೇಯವಲ್ಲ.

**ಸಿದ್ಧಾಂತ :** ಆ ಆಶ್ರಮಗಳನ್ನು ಅನುಷ್ಠಾನಮಾಡತಕ್ಕದ್ದು. ಧರ್ಮಸ್ಕಂಧಶ್ರುತಿಯಲ್ಲಿ ಅಪೂರ್ವವಿಷಯವಿರುವದರಿಂದ ಅದು ವಿಧಿಯೆಂದು ಗಣಿಸಬೇಕು; ವಿಧಿವಿಭಕ್ತಿಯಿಲ್ಲದಿದ್ದರೂ ಅಪೂರ್ವವಿಷಯವಿದ್ದರೆ ವಿಧಿಯೆಂದು ಕಲ್ಪಿಸುತ್ತದೆ. ಇದು ಪರಾಮರ್ಶಮಾತ್ರವೆಂದು ಒಪ್ಪಿದರೂ ಬ್ರಹ್ಮಸಂಸ್ಥನನ್ನು ಹೊಗಳುವದಕ್ಕೇ ಪರಾಮರ್ಶಿಸಿರುತ್ತದೆ. ಇಲ್ಲಿ ಬ್ರಹ್ಮಸಂಸ್ಥನೆಂದರೆ ಪರಿವ್ರಾಜಕನೇ; ಏಕೆಂದರೆ ಮಿಕ್ಕವರನ್ನು ಆಯಾ ಕರ್ಮಗಳಿಂದ ವಿಶೇಷಿಸಿ ತಿಳಿಸಿರುತ್ತದೆ. ಬ್ರಹ್ಮಸಂಸ್ಥನೆಂದರೆ ಬ್ರಹ್ಮನಿಷ್ಠನು ಎಂದರ್ಥ; ಅದು ಮಿಕ್ಕ ಮೂರು ಆಶ್ರಮದವರಿಗೂ ಹೊಂದುವದಿಲ್ಲ. ಏಕೆಂದರೆ ಅವರಿಗೆ ಅವರವರ ಕರ್ಮವಿದೆ, ಪರಿವ್ರಾಜಕನಿಗೆ ಈ ನಿಷ್ಠೆಯೇ ಕರ್ಮವು. ಜಾಬಾಲಶ್ರುತಿಯಲ್ಲಿ ಪಾರಿವ್ರಾಜ್ಯವನ್ನು ಪ್ರತ್ಯಕ್ಷವಾಗಿಯೇ ವಿಧಿಸಿದೆ. ಆದ್ದರಿಂದ ಊರ್ಧ್ವರೇತಸ್ಕರ ಆಶ್ರಮಗಳು ಅನುಷ್ಠೇಯಗಳಾಗಿವೆ. ಅವರಿಗೆ ಜ್ಞಾನದಿಂದಲೇ ಮೋಕ್ಷವಾಗುವದು.

## ೩. ಸ್ತುತಿಮಾತ್ರಾಧಿಕರಣ

**ಸಂಶಯ :** ಉದ್ಗೀಥವು ರಸತಮವು, ಈ ಪೃಥ್ವಿಯೇ ಋಕ್ಕು, ಅಗ್ನಿಯೇ ಸಾಮವು; — ಎಂದುಮುಂತಾಗಿರುವ ವಾಕ್ಯಗಳಲ್ಲಿರುವದೇನು ಸ್ತುತಿಯೊ, ಅಥವಾ ಉಪಾಸನಾವಿಧಿಯೊ ?

**ಪೂರ್ವಪಕ್ಷ :** ಇದು ಸ್ತುತಿಯೇ. ಏಕೆಂದರೆ ಕರ್ಮಾಂಗವನ್ನು ತೆಗೆದುಕೊಂಡು ಹೇಳಿದೆ.

**ಸಿದ್ಧಾಂತ :** ಇಲ್ಲಿ ಕರ್ಮಾಂಗಗಳನ್ನು ವಿಧಿಸಿಲ್ಲ; ಅವುಗಳಿಗೆ ಇದು ಸ್ತುತಿಯೆಂದರೂ ಪ್ರದೇಶಾಂತರದಲ್ಲಿ ವಿಧಿಸಿರುವ ಆ ಅಂಗಗಳಿಗೆ ಶೇಷವಾಗಲಾರದಾಗಿ ವ್ಯರ್ಥವೇ ಆಗುವದು. ಇವು ಅಪೂರ್ವವಾಗಿರುವದರಿಂದ ವಿಧಿಗಳೇ. ಇಲ್ಲಿ 'ಉಪಾಸೀತ', 'ವಿದ್ಯಾತ್' ಮೊದಲಾಗಿ ವಿಧಿಶಬ್ದಗಳಿವೆ; ಪ್ರತಿಯೊಂದು ಪ್ರಕರಣದಲ್ಲಿಯೂ ಫಲಶ್ರವಣವಿದೆ. ಆದ್ದರಿಂದಲೂ ಈ ಶ್ರುತಿಗಳು ಉಪಾಸನೆಯನ್ನು ವಿಧಿಸುವದಕ್ಕೇ ಬಂದಿವೆ.

## ೪. ಪಾರಿಪ್ಲವಾಧಿಕರಣ

**ಸಂಶಯ :** ಉಪನಿಷತ್ತುಗಳಲ್ಲಿರುವ ಆಖ್ಯಾನಗಳು ಪಾರಿಪ್ಲವಕ್ಕಾಗಿ ಬಂದಿವೆಯೆ, ವಿದ್ಯಾಶೇಷವಾಗಿವೆಯೆ ?

**ಪೂರ್ವಪಕ್ಷ :** ಇವೂ ಆಖ್ಯಾನವೇ ಆಗಿರುವದರಿಂದಲೂ ಆಖ್ಯಾನಗಳನ್ನು ಪಾರಿಪ್ಲವದಲ್ಲಿ ಹೇಳಬೇಕೆಂದು ವಿಧಿಸಿರುವದರಿಂದಲೂ ಇವು ವಿದ್ಯೆಗಾಗಿ ಬಂದಿಲ್ಲ. ಆದ್ದರಿಂದ ವೇದಾಂತವಿಹಿತವಾದ ವಿದ್ಯೆಯೂ ವೇದಾಂತಗಳಲ್ಲಿ ಪ್ರಧಾನವಿಷಯವಲ್ಲ.

ಸಿದ್ಧಾಂತ : ಯಜ್ಞದಲ್ಲಿ 'ಮನುರ್ವೈವಸ್ವತೋ ರಾಜಾ' ಮುಂತಾದ ಕಥೆಗಳನ್ನೇ ಹೇಳಬೇಕೆಂದು ವಿಶೇಷವಾದ ಆಖ್ಯಾನಗಳನ್ನು ವಿಧಿಸಿದೆ. ಆದ್ದರಿಂದ ಇವನ್ನು ಅಲ್ಲಿ ಹೇಳತಕ್ಕದ್ದಲ್ಲ. ಆಯಾ ವಿದ್ಯೆಗಳಿಗೆ ಅನುಗುಣವಾಗಿ ಇವುಗಳಿಗೆ ಏಕವಾಕ್ಯತೆಯೂ ಆಗುತ್ತದೆ. ಆದ್ದರಿಂದ ಹೇಗೆ ಕರ್ಮಶ್ರುತಿಗಳಲ್ಲಿರುವ ಅರ್ಥವಾದಗಳು ಆಯಾ ಸಂನಿಹಿತ ವಿಧಿಯನ್ನು ಹೊಗಳುತ್ತವೆಯೋ ಹಾಗೆಯೇ ಆಯಾ ವಿದ್ಯೆಯ ತಿಳಿವಳಿಕೆಗೆ ಇವು ಅನುಕೂಲ ವಾಗಿ ಹೇಳದವುಗಳಾಗಿವೆ.

## ೫. ಅಗ್ನೀಂಧನಾದ್ಯಧಿಕರಣ

ಸಿದ್ಧಾಂತ : ವಿದ್ಯೆಯು ಸ್ವತಂತ್ರವಾಗಿಯೇ ಪುರುಷಾರ್ಥಕ್ಕೆ ಕಾರಣವಾಗಿರುವದ ರಿಂದ ವಿದ್ಯೆಗೆ ತನ್ನ ಫಲವನ್ನು ಕೊಡುವದಕ್ಕೆ ಆಶ್ರಮಕರ್ಮಗಳ ಸಹಾಯವು ಬೇಕಿಲ್ಲ.

## ೬. ಸರ್ವಾಪೇಕ್ಷಾಧಿಕರಣ

ಸಂಶಯ : ಕರ್ಮಗಳು ಜ್ಞಾನಕ್ಕೆ ಸರ್ವಥಾ ಬೇಡವೊ, ಅಥವಾ ಸ್ವಲ್ಪಮಟ್ಟಿಗೆ ಬೇಕೊ ?

ಪೂರ್ವಪಕ್ಷ : ವಿದ್ಯೆಯು ಸ್ವತಂತ್ರವಾಗಿರುವದರಿಂದ ಕರ್ಮಗಳು ಅದಕ್ಕೆ ಬೇಡವೇ ಬೇಡ.

ಸಿದ್ಧಾಂತ : ವಿದ್ಯೆಯು ಹುಟ್ಟಿದ ಬಳಿಕ ಫಲವನ್ನು ಕೊಡುವಡಕ್ಕೆ ಅದಕ್ಕೆ ಕರ್ಮ ಗಳು ಬೇಡ ; ಆದರೆ ಹುಟ್ಟುವದಕ್ಕೆ ಬೇಕು. ಏಕೆಂದರೆ "ಯಜ್ಞದಿಂದಲೂ ತಪಸ್ಸಿನಿಂದಲೂ ಅನಾಶಕದಿಂದಲೂ ಆತ್ಮನನ್ನು ತಿಳಿಯಲಿಚ್ಛಿಸುತ್ತಾರೆ" ಎಂದು ಶ್ರುತಿಯಿದೆ. ವಿದ್ಯೆಗೆ ಕರ್ಮಗಳು ಸಾಧನವೆಂಬುದನ್ನು ಸೂಚಿಸುವ ಅನೇಕ ಶ್ರುತಿಗಳಿವೆ. ಕುದುರೆಯನ್ನು ನೇಗಿಲಿಗೆ ಹೂಡದಿದ್ದರೂ ರಥಕ್ಕೆ ಕಟ್ಟುವಂತೆ ಆಶ್ರಮಕರ್ಮಗಳು ವಿದ್ಯಾಫಲಕ್ಕೆ ಉಪಯೋಗವಿಲ್ಲದಿದ್ದರೂ ವಿದ್ಯೋತ್ಪತ್ತಿಗೆ ಉಪಯೋಗವಾಗುತ್ತವೆ. ಶಮದಮಾದಿ ಗಳಂತೂ ಪ್ರತ್ಯಕ್ಷವಾಗಿ ವಿಧಿಸಿರುವದರಿಂದ ವಿದ್ಯೆಗೆ ಬೇಕೇಬೇಕು. ಯಜ್ಞಾದಿಗಳನ್ನು 'ವಿವಿದಿಷನ್ತಿ' ಎಂದು ವಿವಿದಿಷೆಗೆ ಉಪಯೋಗಿಸಿರುವದರಿಂದ ಅವೂ ವಿದ್ಯೆಗಾಗಿ ವಿಧಿಸಿರು ತ್ತವೆ ಎಂದು ತಿಳಿಯಬೇಕು ; ಅವು ವಿದ್ಯೆಗೆ ಬಹಿರಂಗಸಾಧನವಾಗಿರುತ್ತವೆ, ಅಷ್ಟೆ.

## ೭. ಸರ್ವಾನ್ನಾನುಮತ್ಯಧಿಕರಣ

ಸಂಶಯ : ಪ್ರಾಣಸಂವಾದದಲ್ಲಿ ಪ್ರಾಣನನ್ನು ಅರಿತವನಿಗೆ ಎಲ್ಲವೂ ಅನ್ನವಾಗ ಬಹುದೆಂದಿದೆ, ಅದೇನು ವಿದ್ಯಾಂಗವಾಗಿ ವಿಹಿತವಾಗಿದೆಯೊ, ಸ್ತುತಿಯೊ ?

ಪೂರ್ವಪಕ್ಷ : ಪ್ರವೃತ್ತಿವಿಶೇಷಕರವಾಗುವದರಿಂದ ಇದನ್ನು ವಿಧಿಯೆಂದೇ ಎಣಿಸ ಬೇಕು. ಹಿಂಸಾದಿಪ್ರತಿಷೇಧವನ್ನು ಯಜ್ಞಪಶುಹಿಂಸೆಯೇ ಮುಂತಾದ ವಿಧಿಯು ಬಾಧಿಸು ವಂತೆ ಇದು ಭಕ್ಷ್ಯಾಭಕ್ಷ್ಯವಿಭಾಗಶಾಸ್ತ್ರವನ್ನು ಬಾಧಿಸುತ್ತದೆ.

ಸಿದ್ಧಾಂತ :– ಇದು ವಿಧಿಯಲ್ಲ, ಏಕೆಂದರೆ ಇಲ್ಲಿ ವಿಧಿಶಬ್ದವಿಲ್ಲ ; ನಾಯಿಯವರೆಗಿನ ಅನ್ನವನ್ನು ಇಲ್ಲಿ ಹೇಳಿದೆ, ಅದೆಲ್ಲವನ್ನೂ ಮನುಷ್ಯನು ಉಪಯೋಗಿಸುವದಾಗುವದಿಲ್ಲ. ಇದೆಲ್ಲವೂ ಪ್ರಾಣನ ಅನ್ನವೆಂದು ಚಿಂತನೆಮಾಡುವದಕ್ಕಾಗುತ್ತದೆ. ಆದ್ದರಿಂದ ಇದು

ಸ್ತುತಿಯೇ. ಯಾವ ಅನ್ನವನ್ನಾದರೂ ತಿನ್ನಬಹುದೆಂಬುದು ಪ್ರಾಣವು ಹೋಗುವ ಸಂಕಟವು ಪ್ರಾಪ್ತವಾದಾಗ ಮಾತ್ರ ; ಇದಕ್ಕೆ ಶ್ರೌತಲಿಂಗವೂ ಇದೆ. ಆಹಾರಶುದ್ಧಿಯಿಂದ ಸತ್ತ್ವಶುದ್ಧಿಯಾಗುವದೆಂಬ ಶ್ರುತಿಯೂ ಅನನ್ನವಚನವನ್ನು ಉಪದೇಶಿಸಿರುವ ಶ್ರುತಿಸ್ಮೃತಿಗಳೂ ಈ ಪಕ್ಷದಲ್ಲಿ ಹೊಂದುಗಡೆಯಾಗುತ್ತವೆ. ಆದ್ದರಿಂದ ಇಂಥ ವಾಕ್ಯಗಳು ಅರ್ಥವಾದಗಳೇ.

## ೮. ಆಶ್ರಮಕರ್ಮಾಧಿಕರಣ

**ಸಂಶಯ :** ಅಮುಮುಕ್ಷುವಾದವನು ಯಜ್ಞಾದಿಗಳನ್ನು ಮಾಡಬೇಕೊ, ಬಾರದೊ ?

**ಪೂರ್ವಪಕ್ಷ :** ಇವುಗಳನ್ನು ವಿದ್ಯಾಸಾಧನವಾಗಿ ವಿಧಿಸಿರುವದರಿಂದ ಫಲಾಂತರವನ್ನು ಬಯಸುವವನು ಇವನ್ನು ಮಾಡಕೂಡದು ; ಅಥವಾ ಇವನ್ನು ಮಾಡಬೇಕೆಂದಾದರೆ ಇವು ವಿದ್ಯಾಸಾಧನಗಳೇ ಅಲ್ಲ.

**ಸಿದ್ಧಾಂತ :** ಎರಡು ಬಗೆಯಲ್ಲಿಯೂ ಶ್ರುತಿಯಲ್ಲಿ ವಿಧಿಸಿರುವದರಿಂದ ಮುಮುಕ್ಷುಗಳೂ ಅಮುಮುಕ್ಷುಗಳೂ ಇಬ್ಬರೂ ಮಾಡಬೇಕು. ಇವು ವಿದ್ಯೆಗೆ ಸಹಕಾರಿ ಎಂದು ವಿಧಿಸಿರುವದರಿಂದ ವಿದ್ಯೋತ್ಪತ್ತಿಗಾಗಿಯೂ ಅನುಷ್ಠಾನಮಾಡಬೇಕು. "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" ಎಂಬ ವಿಧಿಯಿಂದ ಅಮುಮುಕ್ಷುವೂ ಮಾಡಬೇಕು. ಇವೆರಡೂ ಬೇರೆಬೇರೆಯಾದ ವಿಧಿಗಳೆಂದೇ ಭಾವಿಸಬೇಕು. ಕರ್ಮಗಳು ಮಾತ್ರ ಅವೇ. ಶ್ರುತಿಯಲ್ಲಿ ಬ್ರಹ್ಮಚರ್ಯಾದಿಸಾಧನಸಂಪನ್ನನಾದವನಿಗೆ ರಾಗಾದಿಕ್ಲೇಶಗಳ ಹೊಡೆತವಿಲ್ಲವೆಂದು ಶ್ರುತಿಯಲ್ಲಿ ಹೇಳಿರುವದೂ ಇವು ವಿದ್ಯಾಸಹಕಾರಿಗಳೆಂಬುದಕ್ಕೆ ಲಿಂಗವಾಗಿದೆ.

## ೯. ವಿಧುರಾಧಿಕರಣ

**ಸಂಶಯ :** ಆಶ್ರಮಪ್ರಾಪ್ತಿಯಿಲ್ಲದ ವಿಧುರಾದಿಗಳಿಗೆ ವಿದ್ಯೆಯಲ್ಲಿ ಅಧಿಕಾರವುಂಟೊ, ಇಲ್ಲವೊ?

**ಪೂರ್ವಪಕ್ಷ :** ಆಶ್ರಮಕರ್ಮಗಳು ವಿದ್ಯಾಹೇತುವೆಂದು ನಿಶ್ಚಿತವಾಗಿರುವದರಿಂದಲೂ ಇವರಿಗೆ ಆಶ್ರಮಕರ್ಮವಿಲ್ಲದ್ದರಿಂದಲೂ ಇವರಿಗೆ ಅಧಿಕಾರವಿಲ್ಲ.

**ಸಿದ್ಧಾಂತ :** ಇವರಿಗೂ ಉಂಟು, ಏಕೆಂದರೆ ರೈಕ್ವ, ವಾಚಕ್ನವಿ– ಮುಂತಾದವರೂ ಬ್ರಹ್ಮಜ್ಞಾನಿಗಳೆಂದು ಶ್ರುತಿಯಲ್ಲಿ ಹೇಳಿದೆ. ಸಂವರ್ತನೇ ಮುಂತಾದವರು ನಗ್ನಚರ್ಯಾದಿಗಳನ್ನು ಆಚರಿಸಿದರೂ ಮಹಾಯೋಗಿಗಳಾಗಿದ್ದರೆಂದು ಇತಿಹಾಸದಲ್ಲಿದೆ. ಇವರಿಗೂ ವ್ರತ, ಉಪವಾಸ, ಈಶ್ವರಾರಾಧನೆ– ಮುಂತಾದವುಗಳಿಂದಲೂ ವಿದ್ಯೆಯುಂಟಾಗಬಹುದಾಗಿದೆ. ಆದರೆ ಆಶ್ರಮಕರ್ಮದಲ್ಲಿರುವದು ಅಂತರಾಲವರ್ತಿತ್ವಕ್ಕಿಂತ ಉತ್ತಮವಾಗಿದೆ ಎನ್ನುವದು ಸ್ಪಷ್ಟವೇ ; ಏಕೆಂದರೆ ಅದಕ್ಕೆ ಶ್ರುತಿಸ್ಮೃತಿಗಳ ಬೆಂಬಲವಿದೆ.

## ೧೦. ತದ್ಭೂತಾಧಿಕರಣ

**ಸಂಶಯ :** ಊರ್ಧ್ವರೇತಸ್ಕರ ಆಶ್ರಮವನ್ನು ಹೊಂದಿದವರಿಗೆ ಅವುಗಳನ್ನು ಬಿಟ್ಟು ಹಿಂದಕ್ಕೆ ಬರಬಹುದೆ ?

**ಪೂರ್ವಪಕ್ಷ :** ಪೂರ್ವಾಶ್ರಮದ ಕರ್ಮಗಳನ್ನು ಮಾಡುವ ಇಚ್ಛೆಯಿಂದಲೋ ರಾಗಾದಿಗಳಿಂದಲೋ ಹಿಂದಕ್ಕೆ ಬರಲೂಬಹುದು.

ಸಿದ್ಧಾಂತ: ಹಿಂದಕ್ಕೆ ಬರಬಾರದು. ಏಕೆಂದರೆ ಹಿಂತಿರುಗಬಾರದೆಂದು ಹೇಳುವ ಶ್ರುತಿಗಳಿವೆ. ಮೇಲಿನ ಆಶ್ರಮಕ್ಕೆ ಹೋಗಬೇಕೆಂಬ ವಚನಗಳಿರುವಂತೆ ಹಿಂದಕ್ಕೆ ಬರುವದಕ್ಕೆ ಯಾವ ವಚನಗಳೂ ಇಲ್ಲ. ಹಿಂದಿನ ಕರ್ಮವನ್ನು ಚೆನ್ನಾಗಿ ಮಾಡಬೇಕೆಂಬ ಇಚ್ಛೆಯಾದರೂ ವಿಧಿಯಿಲ್ಲದ್ದರಿಂದ ಹಿಂತಿರುಗುವದಕ್ಕೆ ಬರುವದಿಲ್ಲ. ನಿಯಮಶಾಸ್ತ್ರವು ಪ್ರಬಲವಾದ್ದರಿಂದ ರಾಗಾದಿಗಳಿಂದಲೂ ಹಿಂದಕ್ಕೆ ಬರುವಂತಿಲ್ಲ.

## ೧೧. ಅಧಿಕಾರಾಧಿಕರಣ

ಸಂಶಯ: ನೈಷ್ಠಿಕಬ್ರಹ್ಮಚಾರಿಯು ಅವಕೀರ್ಣಿಯಾದರೆ ಅವನಿಗೆ ಸಾಮಾನ್ಯ ಬ್ರಹ್ಮಚಾರಿಗೆ ಹೇಳಿರುವ ಪ್ರಾಯಶ್ಚಿತ್ತವುಂಟೆ ಇಲ್ಲವೆ ?

ಪೂರ್ವಪಕ್ಷ: "ಅವನು ಆತ್ಮಘಾತುಕನು, ಅವನಿಗೆ ಯಾವ ಪ್ರಾಯಶ್ಚಿತ್ತವನ್ನೂ ಕಾಣೆನು" ಎಂಬ ಸ್ಮೃತಿವಾಕ್ಯವಿದೆ; ಆದ್ದರಿಂದ ಅವನಿಗೆ ಉಪಕುರ್ವಾಣನಾದ ಬ್ರಹ್ಮಚಾರಿಗಿರುವಂತೆ ಬ್ರಹ್ಮಚರ್ಯವನ್ನು ತಪ್ಪಿದ್ದಕ್ಕೆ ಪ್ರಾಯಶ್ಚಿತ್ತವೇ ಇಲ್ಲ.

ಸಿದ್ಧಾಂತ :— ಪ್ರಾಯಶ್ಚಿತ್ತವುಂಟು. ಏಕೆಂದರೆ ಇದು ಉಪಪಾತಕವೇ ಹೊರತು ಮಹಾಪಾತಕವಲ್ಲ. ಬ್ರಹ್ಮಚಾರಿಗೆ ಇತರ ನಿಮಿತ್ತಗಳಿಂದ ವ್ರತಲೋಪವಾದರೆ ಹೇಗೆ ಪ್ರಾಯಶ್ಚಿತ್ತವುಂಟೋ ಹಾಗೆಯೇ ಇದು. ಪ್ರಾಯಶ್ಚಿತ್ತಾಭಾವವನ್ನು ಹೇಳುವವರಿಗೆ ಯಾವ ಪ್ರಮಾಣವೂ ಇಲ್ಲ. ಹೀಗೆಯೇ ಭಿಕ್ಷುವಾನಪ್ರಸ್ಥರಿಗೂ ಪ್ರಾಯಶ್ಚಿತ್ತವುಂಟು.

## ೧೨. ಬಹಿರಧಿಕರಣ

ಸಿದ್ಧಾಂತ: ಊರ್ಧ್ವರೇತರಾದವರು ಹಿಂದಕ್ಕೆ ಜಾರಿದರೆ — ಅದು ಉಪಪಾತಕವೆಂಬ ಪಕ್ಷದಲ್ಲಿಯೂ ಮಹಾಪಾತಕವೆಂಬ ಪಕ್ಷದಲ್ಲಿಯೂ — ಶಿಷ್ಟರು ಅವನನ್ನು ಹೊರಗಿಡಬೇಕು. ಇದಕ್ಕೆ ಸ್ಮೃತಿಯಿದೆ, ಆಚಾರವೂ ಇದೆ.

## ೧೩. ಸ್ವಾಮ್ಯಧಿಕರಣ

ಸಂಶಯ: ಅಂಗೋಪಾಸನೆಗಳನ್ನು ಯಜಮಾನನು ಮಾಡಬೇಕೆ, ಋತ್ವಿಜರು ಮಾಡಬೇಕೆ ?

ಪೂರ್ವಪಕ್ಷ: ಫಲಶ್ರುತಿಯನ್ನು ಹೇಳಿರುವದರಿಂದಲೂ ಫಲವು ಕರ್ತೃಗಾಮಿಯಾದ್ದರಿಂದಲೂ ಯಜಮಾನನೇ ಮಾಡಬೇಕು. ಕೆಲವು ಕಡೆ ಋತ್ವಿಜರಿಗೇ ಫಲವನ್ನು ಹೇಳಿದೆ; ಅಂಥ ಸಂದರ್ಭದಲ್ಲಿ ಋತ್ವಿಜರೇ ಆ ಕರ್ಮದನ್ನು ಮಾಡತಕ್ಕದ್ದು.

ಸಿದ್ಧಾಂತ: ಯಜಮಾನನು ಋತ್ವಿಜರನ್ನು ಆ ಕರ್ಮಕ್ಕಾಗಿಯೇ ದಕ್ಷಿಣೆಯನ್ನು ಕೊಟ್ಟು ಗೊತ್ತುಮಾಡಿಕೊಂಡಿರುತ್ತಾನಾದ್ದರಿಂದ ಅವರವರು ಮಾಡುವ ಕರ್ಮಕ್ಕೆ ಸಂಬಂಧಪಟ್ಟ ಉಪಾಸನೆಗಳನ್ನು ಅವರೇ ಮಾಡಬೇಕು. ಋತ್ವಿಜರು ಯಜಮಾನನಿಗಾಗಿ ಕರ್ಮವನ್ನು ಮಾಡುವವರಾದ್ದರಿಂದ ಅವರಿಗೆ ಸಾಮಾನ್ಯವಾಗಿ ಆ ಫಲವು ಆಗುವದಿಲ್ಲ. ಋತ್ವಿಜನು ಮಾಡುವಉಪಾಸನೆಯ ಫಲವು ಯಜಮಾನನಿಗೂ ಬರುವದೆಂದು ತಿಳಿಸುವ ಶ್ರುತಿಯೂ ಇದೆ. ಆದ್ದರಿಂದ ಈ ಉಪಾಸನೆಗಳನ್ನು ಆಯಾ ಋತ್ವಿಜರೇ ಮಾಡಬೇಕು.

# ೧೪. ಸಹಕಾರ್ಯಂತರವಿಧ್ಯಧಿಕರಣ

**ವಿಷಯವೂ ಸಂಶಯವೂ :** "ತಸ್ಮಾದ್ಬ್ರಾಹ್ಮಣಃ ಪಾಣ್ಡಿತ್ಯಂ ನಿರ್ವಿದ್ಯ..." (ಬೃ. ೩-೫-೧) ಎಂಬ ವಾಕ್ಯದಲ್ಲಿ 'ಅಥ ಮುನಿಃ' ಎಂದಿರುವದು ವಿಧಿಯೊ, ಅಲ್ಲವೊ ?

**ಪೂರ್ವಪಕ್ಷ :** ವಿಧಿಯಲ್ಲ. ಏಕೆಂದರೆ ಬಾಲ್ಯೇನ ತಿಷ್ಠಾಸೇತ್ (ಬಾಲ್ಯದಲ್ಲಿ ನಿಲ್ಲಬೇಕು) ಎಂಬಲ್ಲಿಗೆ ವಿಧಿಯು ಮುಗಿಯಿತು. 'ಮುನಿಃ' ಎಂಬಲ್ಲಿ ವಿಧಾಯಕವಿಭಕ್ತಿಯಿಲ್ಲ. ಮುನಿ, ಪಂಡಿತ - ಇವೆರಡಕ್ಕೂ ಜ್ಞಾನಿಯೆಂದೇ ಅರ್ಥ ; ಆದ್ದರಿಂದ 'ಪಾಂಡಿತ್ಯವನ್ನು ಮುಗಿಸಿ' ಎಂಬ ವಾಕ್ಯದಿಂದಲೇ ಮೌನವು ಪ್ರಾಪ್ತವಾಗಿದೆ ; ಮುಂದಿನ ವಾಕ್ಯದಲ್ಲಿ 'ಅಥ ಬ್ರಾಹ್ಮಣಃ' (ಇನ್ನು ಬ್ರಾಹ್ಮಣನು) ಎಂಬಲ್ಲಿ ಬ್ರಾಹ್ಮಣತ್ವವನ್ನು ವಿಧಿಸಿಲ್ಲವಷ್ಟೆ ; ಏಕೆಂದರೆ ಅದು ಮೊದಲೇ ಪ್ರಾಪ್ತವಾಗಿರುತ್ತದೆ. ಆದ್ದರಿಂದ ಬ್ರಾಹ್ಮಣನು ಎಂಬುದು ಹೇಗೆ ಸ್ತುತಿಯೋ ಹಾಗೆಯೇ ಇದೂ ಸ್ತುತಿಯೇ.

**ಸಿದ್ಧಾಂತ :** ವಿದ್ಯಾಸಹಕಾರಿಯಾದ ಮೌನವನ್ನು ಬಾಲ್ಯಪಾಂಡಿತ್ಯಗಳ ಜೊತೆಗೆ ಇಲ್ಲಿ ವಿಧಿಸಿದೆ. ಮೌನವೆಂದರೆ ಜ್ಞಾನಾತಿಶಯವು. ಜ್ಞಾನಿಯಾದ ಸಂನ್ಯಾಸಿಗೆ ಭೇದದರ್ಶನ ಪ್ರಾಬಲ್ಯದಿಂದ ಯಾವಾಗ ಜ್ಞಾನಾತಿಶಯವು ಪ್ರಾಪ್ತವಾಗುವದಿಲ್ಲವೋ ಆ ಪಕ್ಷದಲ್ಲಿ ಇದನ್ನು ವಿಧಿಸಿದೆ. ದರ್ಶಪೂರ್ಣಮಾಸಪ್ರಕರಣದಲ್ಲಿ ಸಹಕಾರಿಯಾಗಿರುವ ಅಗ್ನ್ಯನ್ವಾಧಾನಾದಿಗಳನ್ನು ವಿಧಿಸಿರುವಂತೆ ಈ ವಿದ್ಯೆಗೂ ಸಹಕಾರಿಯಾಗಿ ಮೌನವನ್ನು ವಿಧಿಸಬಹುದು. ಸಂನ್ಯಾಸವು ಶ್ರುತಿಸಿದ್ಧವಾಗಿದ್ದರೂ ಛಾಂದೋಗ್ಯದಲ್ಲಿ ಗೃಹಸ್ಥನನ್ನೇ ಕೊನೆಯಲ್ಲಿ ಹೇಳಿರುವದು ಕರ್ಮಗಳೂ ಯಥಾಸಂಭವವಾಗಿ ಅಹಿಂಸಾದಿಗಳೂ ಅವನಲ್ಲಿರುವದರಿಂದ ; ಗಾರ್ಹಸ್ಥ್ಯ, ಸಂನ್ಯಾಸ- ಇವುಗಳಂತೆ ನೈಷ್ಠಿಕಬ್ರಹ್ಮಚರ್ಯ, ವಾನಪ್ರಸ್ಥಗಳೂ ಶ್ರುತ್ಯುಕ್ತವಾಗಿಯೇ ಇವೆಯಾಗಿ ಎಲ್ಲಾ ಆಶ್ರಮಗಳೂ ಅನುಷ್ಠೇಯವೇ, ಅವುಗಳಲ್ಲಿ ವಿಕಲ್ಪಸಮುಚ್ಚಯಗಳೂ ಆಗಬಹುದಾಗಿದೆ.

# ೧೫. ಅನಾವಿಷ್ಕಾರಾಧಿಕರಣ

**ವಿಷಯವೂ ಸಂಶಯವೂ :** "ಬಾಲ್ಯೇನ ತಿಷ್ಠಾಸೇತ್" (ಬೃ. ೩-೫-೧) ಎಂಬಲ್ಲಿ ವಿಹಿತವಾಗಿರುವ ಬಾಲ್ಯವು ಯಾವದು ? ಬಾಲಕನ ಆಚಾರವೆ, ಭಾವವಿಶುದ್ಧಿಯೆ ?

**ಪೂರ್ವಪಕ್ಷ :** ಬಾಲಕನಂತೆ ಕಾಮಚಾರವಾದಭಕ್ಷಣತ್ವ, ಯಥೋಪಪಾದಮೂತ್ರಪುರೀಷತ್ವ - ಮುಂತಾದ ಆಚಾರಗಳಿರುವದೇ ಬಾಲ್ಯವು ; ವಿಶೇಷಶಾಸ್ತ್ರದಿಂದ ದೋಷವು ಅಂಟುವದಿಲ್ಲವಾಗಿ ಪತಿತತ್ವವೇ ಮುಂತಾದ ದೋಷಗಳು ಜ್ಞಾನಿಯಾದ ಸಂನ್ಯಾಸಿಗೆ ಅಂಟುವದಿಲ್ಲ.

**ಸಿದ್ಧಾಂತ :** ಈ ಆಶ್ರಮದಲ್ಲಿ ಜ್ಞಾನಾಭ್ಯಾಸವೇ ಅನುಷ್ಠೇಯವಾದದ್ದು. ಆದರೆ ಬಾಲಕನ ಆಚಾರಗಳನ್ನೆಲ್ಲ ಅಂಗೀಕರಿಸಿದರೆ ಜ್ಞಾನಾಭ್ಯಾಸವು ಸಿದ್ಧಿಸುವದಿಲ್ಲ. ಆದ್ದರಿಂದ ಆಂತರವಾದ ಭಾವವಿಶೇಷವೇ ಬಾಲ್ಯವು ; ಬಾಲಕನಂತೆ ದಂಭದರ್ಪಾದಿಗಳಿಲ್ಲದೆ ಇರುವ ಭಾವಶುದ್ಧಿಯೇ ಇಲ್ಲಿ ವಿಹಿತವಾಗಿದೆ.

# ೧೬. ಐಹಿಕಾಧಿಕರಣ

**ಸಂಶಯ :** ವಿದ್ಯಾಸಾಧನವನ್ನು ಅನುಷ್ಠಾನಮಾಡುತ್ತಿದ್ದರೆ ಈ ಜನ್ಮದಲ್ಲಿಯೇ ವಿದ್ಯೆಯುಂಟಾಗುವದೊ, ಅಥವಾ ಮತ್ತೊಂದು ಜನ್ಮದಲ್ಲಿ ಉಂಟಾಗುವದೊ ?

**ಪೂರ್ವಪಕ್ಷ :** ವಿದ್ಯೆಗೆ ಶ್ರವಣಾದಿಗಳು ಸಾಕ್ಷಾತ್ಸಾಧನಗಳು, ಯಜ್ಞಾದಿಗಳು ಪರಂಪರೆಯಿಂದ ಸಾಧನಗಳು. ಶ್ರವಣಾದಿಗಳನ್ನು ಮಾಡುವವರು ತಮಗೆ ಜನ್ಮಾಂತರದಲ್ಲಿ ಫಲವಾಗಲಿ ಎಂದೇನೂ ಮಾಡುವದಿಲ್ಲ. ಆದ್ದರಿಂದ ಈ ಜನ್ಮದಲ್ಲಿಯೇ ಫಲವಾಗುತ್ತದೆ.

**ಸಿದ್ಧಾಂತ :** ಕರ್ಮಾಂತರದ ವಿಪಾಕದಿಂದ ಜ್ಞಾನಕ್ಕೆ ಯಾವ ಅಡ್ಡಿಯೂ ಆಗದೆ ಇದ್ದರೆ ಈ ಜನ್ಮದಲ್ಲಿಯೇ ಅಗುತ್ತದೆ; ಪ್ರತಿಬಂಧವಾದರೆ ಮುಂದೆ ಯಾವದಾದರೊಂದು ಜನ್ಮದಲ್ಲಿ ಉಂಟಾಗುತ್ತದೆ. ಶ್ರವಣಾದಿಗಳಿಂದ ಉಂಟಾಗುವದೂ ಪ್ರತಿಬಂಧಕ್ಷಯವಾದ ಮೇಲೆಯೇ. ಆದ್ದರಿಂದಲೇ ಶ್ರುತಿಯು ಆತ್ಮನನ್ನು ತಿಳಿಯುವದು ಕಷ್ಟವೆಂದು ಹೇಳುತ್ತದೆ; ಸ್ಮೃತಿಯಲ್ಲಿ ಮುಮುಕ್ಷುಗಳು ಅನೇಕಜನ್ಮಗಳಲ್ಲಿ ಸಂಸಿದ್ಧಿಯಾಗಿ ಪರಗತಿಯನ್ನು ಪಡೆಯುತ್ತಾರೆಂದೂ ಹೇಳಿದೆ.

## ೧೭. ಮುಕ್ತಿಫಲಾಧಿಕರಣ

**ಪೂರ್ವಪಕ್ಷ :** ಹೇಗೆ ಸಾಧನಫಲವಾದ ಜ್ಞಾನದಲ್ಲಿ ಐಹಿಕ, ಆಮುಷ್ಮಿಕ –ಎಂಬ ವಿಶೇಷನಿಯಮವುಂಟೋ ಹಾಗೆಯೇ ಮುಕ್ತಿಫಲದಲ್ಲಿಯೂ ತಾರತಮ್ಯವಿರಬಹುದು.

**ಸಿದ್ಧಾಂತ :** ಹಾಗಿಲ್ಲ. ಏಕೆಂದರೆ ಮುಕ್ತಿಯು ಒಂದೇ ರೂಪವಾಗಿರುವದೆಂದು ಶ್ರುತಿಗಳಲ್ಲಿ ಹೇಳಿದೆ. ಮುಕ್ತ್ಯವಸ್ಥೆಯೆಂದರೆ ಬ್ರಹ್ಮವೇ. ಬ್ರಹ್ಮದಲ್ಲಿ ಯಾವ ವಿಶೇಷವೂ ಇಲ್ಲವೆಂದು ಶ್ರುತಿಗಳು ಹೇಳುತ್ತವೆ. ಮುಕ್ತಿಯು ಸಾಧ್ಯವಲ್ಲದ್ದರಿಂದ ಅದರಲ್ಲಿ ಯಾವ ಹೆಚ್ಚುಕಡಿಮೆಯೂ ಇರುವಂತಿಲ್ಲ. ಸಗುಣವಿದ್ಯೆಗಳಲ್ಲಿ ಫಲಗಳ ತಾರತಮ್ಯವಿರಬಹುದಾದರೂ ಮುಖ್ಯಮುಕ್ತಿಯಲ್ಲಿ ಯಾವ ತಾರತಮ್ಯಕ್ಕೂ ಕಾರಣವಿಲ್ಲ. ಜ್ಞಾನದಲ್ಲಿಯೂ ಯಾವ ಹೆಚ್ಚುಕಡಿಮೆಯೂ ಇರುವದಿಲ್ಲ; ಏಕೆಂದರೆ ಎಲ್ಲಕ್ಕಿಂತಲೂ ಉತ್ಕೃಷ್ಟವಾದದ್ದೇ ಜ್ಞಾನವೆನಿಸುತ್ತದೆ. ಆದ್ದರಿಂದ ಅದು ದೊರಕುವದರಲ್ಲಿ ತಡವಾಗುವದು, ಆಗದೆ ಇರುವದು ಎಂಬ ತಾರತಮ್ಯವು ಮಾತ್ರ ಆಗಬಹುದು. ಆದರೆ ವಿದ್ಯೆಯಿಂದಾಗುವ ಮುಕ್ತಿಯು ನಿತ್ಯಸಿದ್ಧವಾದ್ದರಿಂದ ಅದರಲ್ಲಿ ಯಾವ ತಾರತಮ್ಯವೂ ಇರುವದಕ್ಕೆ ಅವಕಾಶವಿಲ್ಲ

---

# ನಾಲ್ಕನೆಯ ಅಧ್ಯಾಯ- ಒಂದನೆಯ ಪಾದ

(ಬ್ರಹ್ಮವಿದ್ಯೆಯ ಫಲ)

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೫೦೦ ತೃತೀಯೇಽಧ್ಯಾಯೇ ಪರಾಪರಾಸು ವಿದ್ಯಾಸು ಸಾಧನಾಶ್ರಯೋ ವಿಚಾರಃ ಪ್ರಾಯೇಣ ಅತ್ಯಗಾತ್ । ಅಥೇಹ ಚತುರ್ಥೇ ಫಲಾಶ್ರಯ ಆಗಮಿಷ್ಯತಿ । ಪ್ರಸಙ್ಗಾಗತಂ ಚ ಅನ್ಯದಪಿ ಕಿಂಚಿತ್ ಚಿನ್ತಯಿಷ್ಯತೇ । ಪ್ರಥಮಂ ತಾವತ್ ಕತಿಭಿಶ್ಚಿತ್ ಅಧಿಕರಣೈಃ ಸಾಧನಾಶ್ರಯವಿಚಾರಶೇಷಮೇವ ಅನುಸರಾಮಃ ॥

(ಭಾಷ್ಯಾರ್ಥ)

ಮೂರನೆಯ ಅಧ್ಯಾಯದಲ್ಲಿ ಪರಾಪರವಿದ್ಯೆಗಳಲ್ಲಿ ಬಹುಮಟ್ಟಿಗೆ ಸಾಧನವಿಷಯವಾದ ವಿಚಾರವೇ ಆಯಿತು. ಇನ್ನು ಈ ನಾಲ್ಕನೆಯ ಅಧ್ಯಾಯದಲ್ಲಿ ಫಲವಿಷಯವಾದ (ವಿಚಾರವು) ಬರುವದು. ಪ್ರಸಂಗದಿಂದ ಬಂದ ಬೇರೆ (ವಿಷಯವನ್ನೂ) ವಿಚಾರಮಾಡಲಾಗುವದು. ಮೊದಲನೆಯ ಕೆಲವು ಅಧಿಕರಣಗಳಲ್ಲಿ (ಮಾತ್ರ) ಸಾಧನವಿಷಯದ ವಿಚಾರದ ಶೇಷವನ್ನೇ ಅನುಸರಿಸುವೆವು.

### ಆವೃತ್ತ್ಯಧಿಕರಣ (ಸೂ. ೧-೨)

**ಆವೃತ್ತಿರಸಕೃದುಪದೇಶಾತ್ ॥ ೧ ॥**

೧. ಆವೃತ್ತಿಯನ್ನು (ಮಾಡಬೇಕು) ; ಏಕೆಂದರೆ ಅನೇಕ ವೇಳೆ ಉಪದೇಶಮಾಡಿರುತ್ತದೆ.

## ವಿದ್ಯಾಸಾಧನಗಳ ವಿಷಯಕ್ಕೆ ಸಂಶಯ

(ಭಾಷ್ಯ)

೫೦೧. "ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" (ಬೃ. ೪-೫-೬), "ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ" (ಬೃ. ೪-೪-೨೧), "ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ" (ಛಾಂ. ೮-೭-೧) ಇತಿ ಚೈವಮಾದಿಶ್ರವಣೇಷು ಸಂಶಯಃ । ಕಿಂ ಸಕೃತ್ ಪ್ರತ್ಯಯಃ ಕರ್ತವ್ಯಃ । ಆಹೋಸ್ವಿತ್ ಆವೃತ್ತ್ಯಾ ? ಇತಿ ॥

(ಭಾಷ್ಯಾರ್ಥ)

"ಎಲೆ, ಆತ್ಮನನ್ನೇ ಕಂಡುಕೊಳ್ಳಬೇಕು, ಶ್ರವಣಮಾಡಬೇಕು, ಮನನ ಮಾಡಬೇಕು, ನಿದಿಧ್ಯಾಸನಮಾಡಬೇಕು" (ಬೃ. ೪-೫-೬), "ಆತ್ಮನನ್ನೇ ಧೀರನು ಅರಿತುಕೊಂಡು ಪ್ರಜ್ಞೆಯನ್ನು ಮಾಡಿಕೊಳ್ಳಬೇಕು" (ಬೃ. ೪-೪-೨೧) ಮತ್ತು "ಅವನನ್ನು ಹುಡುಕತಕ್ಕದ್ದು, ಅವನನ್ನೇ ಅರಿತುಕೊಳ್ಳ ತಕ್ಕದ್ದು" (ಛಾಂ. ೮-೭-೧) ಎಂಬಿವೇ ಮುಂತಾದ ಶ್ರುತಿಗಳಲ್ಲಿ (ಈ) ಸಂಶಯ(ವುಂಟಾಗುತ್ತದೆ): ಒಂದೇ ಸಲ ಪ್ರತ್ಯಯವನ್ನು ಮಾಡಿಕೊಳ್ಳ ಬೇಕೊ, ಅಥವಾ ಆವೃತ್ತಿಯಿಂದ (ಮಾಡಿಕೊಳ್ಳಬೇಕೊ)[1] ?

## ಪೂ. ಪ: ಶ್ರವಣಾದಿಗಳನ್ನು ಒಂದೇ ಸಲ ಮಾಡಬೇಕು.

(ಭಾಷ್ಯ)

೫೦೨. ಕಿಂ ತಾವತ್ ಪ್ರಾಪ್ತಮ್? ಸಕೃತ್ ಪ್ರತ್ಯಯಃ ಸ್ಯಾತ್। ಪ್ರಯಾಜಾದಿವತ್। ತಾವತಾ ಶಾಸ್ತ್ರಸ್ಯ ಕೃತಾರ್ಥತ್ವಾತ್। ಅಶ್ರೂಯಮಾಣಾಯಾಂ ಹಿ ಆವೃತ್ತೌ ಕ್ರಿಯಮಾಣಾಯಾಮ್ ಅಶಾಸ್ತ್ರಾರ್ಥಃ ಕೃತೋ ಭವೇತ್। ನನು ಅಸಕೃದುಪದೇಶಾಃ ಉದಾಹೃತಾಃ "ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" ಇತ್ಯೇವಮಾದಯಃ। ಏವಮಪಿ ಯಾವಚ್ಛಬ್ದಮ್ ಆವರ್ತಯೇತ್ ಸಕೃಚ್ಛ್ರವಣಮ್, ಸಕೃನ್ಮನನಮ್, ಸಕೃನ್ನಿದಿಧ್ಯಾಸನಂ ಚ ಇತಿ, ನಾತಿರಿಕ್ತಮ್। ಸಕೃದುಪದೇಶೇಷು ತು 'ವೇದ,'[2] 'ಉಪಾಸೀತ' ಇತ್ಯೇವಮಾದಿಷು ಅನಾವೃತ್ತಿರಿತಿ॥

(ಭಾಷ್ಯಾರ್ಥ)

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? ಪ್ರಯಾಜಾದಿಗಳಂತೆ, (ಇಲ್ಲಿಯೂ) ಒಂದೇ ಪ್ರತ್ಯಯವು ಆಗಬೇಕು.[2] ಏಕೆಂದರೆ ಅಷ್ಟರಿಂದಲೇ ಶಾಸ್ತ್ರವು ಸಾರ್ಥಕವಾಗುವದು. ಆವೃತ್ತಿಯು ಶ್ರುತಿಯಲ್ಲಿಲ್ಲದಿದ್ದರೂ ಮಾಡಿದರೆ ಶಾಸ್ತ್ರಾರ್ಥವನ್ನು ಮಾಡಿದಂತೆ ಆಗುವದಿಲ್ಲ.

(ಆಕ್ಷೇಪ) :- 'ಶ್ರವಣಮಾಡಬೇಕು,' 'ಮನನಮಾಡಬೇಕು,' 'ನಿದಿಧ್ಯಾಸನಮಾಡಬೇಕು' -ಎಂಬಿವೇಮುಂತಾಗಿ ಅನೇಕವೇಳೆ ಮಾಡಿರುವ ಉಪದೇಶಗಳು (ಇವೆ ಎಂದು) ಉದಾಹರಿಸಿದೆವಲ್ಲ!

---

1. ಮತ್ತೆ ಮತ್ತೆ ಶ್ರವಣಾದಿಗಳನ್ನು ಮಾಡಬೇಕೊ?

2. "ಸಮಿಧೋ ಯಜತಿ" ಮುಂತಾದವುಗಳನ್ನು ಒಂದು ಸಲ ಮಾಡಿದರೆ ಶಾಸ್ತ್ರದಲ್ಲಿ ಹೇಳಿದ್ದನ್ನು ಮಾಡಿದಂತೆ ಆಗುತ್ತದೆ; ಮತ್ತೆ ಮಾಡಬೇಕಾದದ್ದಿಲ್ಲ. ಇಲ್ಲಿಯೂ ಶ್ರವಣಾದಿಗಳನ್ನು ಒಂದೊಂದು ಸಲ ಮಾಡಿದರಾಯಿತು.

(ಪರಿಹಾರ) :– ಹೀಗಾದರೂ ಶಬ್ದವಿರುವಷ್ಟು ಸಲ, ಎಂದರೆ ಒಂದು ಸಲ ಶ್ರವಣ, ಒಂದು ಸಲ ಮನನ, ಒಂದು ಸಲ ನಿದಿಧ್ಯಾಸನ – ಹೀಗೆ ಮಾಡಿದರಾಯಿತು. ಹೆಚ್ಚಾಗಿ(ಮಾಡ)ಬಾರದು. ಒಂದೇ ಸಲ ಹೇಳಿರುವ 'ತಿಳಿಯಬೇಕು' 'ಉಪಾಸನೆಮಾಡಬೇಕು'– ಮುಂತಾದವುಗಳಲ್ಲಂತೂ ಆವೃತ್ತಿಯಿಲ್ಲವೇ(ಇಲ್ಲ).

## ಸಿದ್ಧಾಂತ : ಈ ಪ್ರತ್ಯಯಗಳನ್ನು ಆವೃತ್ತಿಮಾಡಬೇಕು

(ಭಾಷ್ಯ)

೫೦೩. ಏವಂ ಪ್ರಾಪ್ತೇ ಬ್ರೂಮಃ । ಪ್ರತ್ಯಯಾವೃತ್ತಿಃ ಕರ್ತವ್ಯಾ ಕುತಃ ? ಅಸಕೃದುಪದೇಶಾತ್ । 'ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ' ಇತ್ಯೇವಂಜಾತೀಯಕೋ ಹಿ ಅಸಕೃದುಪದೇಶಃ ಪ್ರತ್ಯಯಾವೃತ್ತಿಂ ಸೂಚಯತಿ । ನನೂಕ್ತಂ ಯಾವಚ್ಛಬ್ದಮೇವ ಆವರ್ತಯೇತ್ ನಾಧಿಕಮಿತಿ । ನ । ದರ್ಶನಪರ್ಯವಸಿತತ್ವಾದೇಷಾಮ್ । ದರ್ಶನಪರ್ಯವಸಾನಾನಿ ಹಿ ಶ್ರವಣಾದೀನಿ ಆವರ್ತ್ಯಮಾನಾನಿ ದೃಷ್ಟಾರ್ಥಾನಿ ಭವನ್ತಿ । ಯಥಾ ಅವಘಾತಾದೀನಿ ತಣ್ಡುಲಾದಿನಿಷ್ಪತ್ತಿಪರ್ಯವಸಾನಾನಿ, ತದ್ವತ್ । ಅಪಿ ಚ ಉಪಾಸನಂ ನಿದಿಧ್ಯಾಸನಮ್ ಚ ಇತ್ಯನ್ತರ್ಣೀತಾವೃತ್ತಿಗುಣೈವ ಕ್ರಿಯಾ ಅಭಿಧೀಯತೇ। ತಥಾ ಹಿ ಲೋಕೇ 'ಗುರುಮುಪಾಸ್ತೇ', 'ರಾಜಾನಮುಪಾಸ್ತೇ' ಇತಿ ಚ ಯಸ್ತಾತ್ಪರ್ಯೇಣ ಗುರ್ವಾದೀನ್ ಅನುವರ್ತತೇ ಸ ಏವಮುಚ್ಯತೇ । ತಥಾ "ಧ್ಯಾಯತಿ ಪ್ರೋಷಿತನಾಥಾ ಪತಿಮ್" ಇತಿ ಯಾ ನಿರನ್ತರಸ್ಮರಣಾ ಪತಿಂ ಪ್ರತಿ ಸೋತ್ಕಣ್ಠಾ ಸಾ ಏವಮಭಿಧೀಯತೇ । ವಿದ್ಯುಪಾಸ್ತ್ಯೋಶ್ಚ ವೇದಾನ್ತೇಷು ಅವ್ಯತಿರೇಕೇಣ ಪ್ರಯೋಗೋ ದೃಶ್ಯತೇ। ಕ್ವಚಿತ್ ವಿದಿನಾ ಉಪಕ್ರಮ್ಯ ಉಪಾಸಿನಾ ಉಪಸಂಹರತಿ । ಯಥಾ "ಯಸ್ತದ್ವೇದ ಯತ್ ಸ ವೇದ ಸ ಮಯೈತದುಕ್ತಃ" (ಛಾಂ. ೪–೧–೪) ಇತ್ಯತ್ರ "ಅನು ಮ ಏತಾಂ ಭಗವೋ ದೇವತಾಂ ಶಾಧಿ ಯಾಂ ದೇವತಾಮುಪಾಸ್ಸೇ" (ಛಾಂ. ೪–೨–೨) ಇತಿ। ಕ್ವಚಿಚ್ಚ ಉಪಾಸಿನಾ ಉಪಕ್ರಮ್ಯ ವಿದಿನಾ ಉಪಸಂಹರತಿ। ಯಥಾ "ಮನೋ ಬ್ರಹ್ಮೇತ್ಯುಪಾಸೀತ" (ಛಾಂ. ೩–೧೮–೧) ಇತ್ಯತ್ರ "ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ" (ಛಾಂ. ೩–೧೮–೩) ಇತಿ । ತಸ್ಮಾತ್ ಸಕೃದುಪದೇಶೇಷ್ವಪಿ ಆವೃತ್ತಿಸಿದ್ಧಿಃ । ಅಸಕೃದುಪದೇಶಸ್ತು ಆವೃತ್ತೇಃ ಸೂಚಕಃ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಪ್ರತ್ಯಯಗಳನ್ನು ಆವೃತ್ತಿಮಾಡಬೇಕು. ಏಕೆ? ಎಂದರೆ "ಶ್ರವಣಮಾಡಬೇಕು", "ಮನನಮಾಡಬೇಕು",

"ನಿದಿಧ್ಯಾಸನಮಾಡಬೇಕು" ಎಂಬೀ ಜಾತಿಯ ಅನೇಕಸಲ ಮಾಡಿರುವ ಉಪದೇಶವು ಪ್ರತ್ಯಯವನ್ನು ಆವೃತ್ತಿಮಾಡಬೇಕೆಂದು ಸೂಚಿಸುತ್ತದೆ.

(ಆಕ್ಷೇಪ) :– ಶಬ್ದವು ಎಷ್ಟು ಸಲ(ವೆಂದು ಹೇಳಿದೆಯೋ) ಅಷ್ಟೇ ಸಲ ಆವೃತ್ತಿಮಾಡಬೇಕು, ಹೆಚ್ಚಿಗೆ ಮಾಡಬಾರದು– ಎಂದು ಹೇಳಿದ್ದೆವಲ್ಲ !

(ಸಮಾಧಾನ) :– ಹಾಗಲ್ಲ. ಏಕೆಂದರೆ ಇವು ದರ್ಶನದಲ್ಲಿ ಕೊನೆಗಾಣುವವಾಗಿರುತ್ತವೆ. (ಇದರ ವಿವರ) : ಶ್ರವಣಾದಿಗಳು ದರ್ಶನದಲ್ಲಿ ಕೊನೆಗಾಣತಕ್ಕವಾದ್ದರಿಂದ[1] (ಇವುಗಳನ್ನು) ಆವೃತ್ತಿಮಾಡಿದರೆ ದೃಷ್ಟಾರ್ಥವಾಗುವವು. ಹೇಗೆ ಕುಟ್ಟುವದೇ ಮುಂತಾದವು ಅಕ್ಕಿಯಾಗುವದಕ್ಕಾಗಿ ಮಾಡಬೇಕೋ ಹಾಗೆ.[2]

ಇದಲ್ಲದೆ ಉಪಾಸನೆ, ಮತ್ತು ನಿದಿಧ್ಯಾಸನ – ಇವು ತನ್ನೊಳಗೆ ಆವೃತ್ತಿ ಎಂಬ ಗುಣವನ್ನು ಅಡಗಿಸಿಕೊಂಡಿರುವ ಕ್ರಿಯೆಯನ್ನೇ ಹೇಳುತ್ತವೆ. ಹೇಗೆಂದರೆ ಲೋಕದಲ್ಲಿ 'ಗುರುವನ್ನು ಉಪಾಸನೆಮಾಡುತ್ತಿದಾನೆ', 'ರಾಜನನ್ನು ಉಪಾಸನೆಮಾಡುತ್ತಿದಾನೆ' ಎಂದು ಯಾವನು ಗುರ್ವಾದಿಗಳನ್ನು ತಾತ್ಪರ್ಯದಿಂದ ಸೇವಿಸುತ್ತಿರುವನೋ ಅವನನ್ನೇ ಈ (ಶಬ್ದಗಳಿಂದ) ಹೇಳುತ್ತಾರೆ, ಹೀಗೆಯೇ 'ಗಂಡನು ಪರಸ್ಥಳಕ್ಕೆ ಹೋಗಿರುವ (ಸ್ತ್ರೀಯು) ಪತಿಯನ್ನೇ ಧ್ಯಾನಿಸುತ್ತಿರುವಳು' ಎಂಬಲ್ಲಿ ಯಾವಳು ಪತಿಯ ವಿಷಯದಲ್ಲಿ ಕುತೂಹಲದಿಂದ ನಿರಂತರವಾಗಿ ಸ್ಮರಿಸುತ್ತಿರುವಳೋ ಆಕೆಯನ್ನು ಹೀಗೆಂದು ತಿಳಿಸುತ್ತಾರೆ. ವಿದ್, ಉಪಾಸ್ – ಈ (ಧಾತುಗಳಿಂದಾಗುವ ಕ್ರಿಯೆ)ಗಳನ್ನು ವೇದಾಂತಗಳಲ್ಲಿ ಏಕಾರ್ಥದಲ್ಲಿಯೇ ಪ್ರಯೋಗಮಾಡಿರುವದು ಕಂಡುಬರುತ್ತದೆ. ಕೆಲವು ಕಡೆಗಳಲ್ಲಿ ವಿದ್(ಧಾತುವಿನ ಕ್ರಿಯೆ)ಯಿಂದ ಉಪಕ್ರಮಿಸಿ ಉಪಾಸ್(ಧಾತುವಿನ ಕ್ರಿಯೆ)ಯಿಂದ ಉಪಸಂಹಾರಮಾಡಿರುತ್ತದೆ ; ಉದಾಹರಣೆಗೆ "ಆ (ರೈಕ್ವನು) ತಿಳಿದಿರುವದನ್ನು ಯಾವನು ತಿಳಿದಿರುವನೋ ಅವನನ್ನು ನಾನು ಹೀಗೆಂದು ಹೇಳುವೆನು" (ಛಾಂ. ೪–೧–೪) ಎಂಬಲ್ಲಿ "ಪೂಜ್ಯನೆ, ನೀನು ಯಾವ ದೇವತೆಯನ್ನು ಉಪಾಸನೆಮಾಡುತ್ತಿರುವೆಯೋ ಅದನ್ನು ಹೇಳಿಕೊಡು" (ಛಾಂ. ೪–೨–೨) ಎಂದಿದೆ. ಮತ್ತು ಕೆಲವು ಕಡೆಗಳಲ್ಲಿ ಉಪಾಸ್(ಧಾತುವಿನ ಕ್ರಿಯೆ)ಯಿಂದ ಉಪಕ್ರಮಿಸಿ ವಿದ್(ಧಾತುವಿನ ಕ್ರಿಯೆ)

1. ಶ್ರವಣಾದಿಗಳು ಯಾವದಾದರೊಂದು ಅದೃಷ್ಟಫಲಕ್ಕಾಗಿ ಮಾಡತಕ್ಕವಲ್ಲ ; ಹಾಗಿದ್ದರೆ ಪ್ರಯಾಜಾದಿಗಳಂತೆ ಶಾಸ್ತ್ರವು ಎಷ್ಟು ಸಲವೆಂದು ಹೇಳುತ್ತದೆಯೊ ಅಷ್ಟೇ ಸಲ ಮಾಡಬಹುದಾಗಿತ್ತು, ಆದರೆ ಇವುಗಳಿಂದ ದರ್ಶನವೆಂಬ ಫಲವಾಗಬೇಕು.

2. "ವ್ರೀಹೀನವಹನ್ತಿ" ಎಂಬಲ್ಲಿ ಬತ್ತವನ್ನು ಕುಟ್ಟುವದು ಅಕ್ಕಿಗಾಗಿ ; ಆದ್ದರಿಂದ ಅಕ್ಕಿಯಾಗುವವರೆಗೂ ಕುಟ್ಟಬೇಕು ಎಂದೇ ಅರ್ಥಮಾಡಬೇಕು.

ಯಿಂದ ಉಪಸಂಹಾರಮಾಡಿರುತ್ತದೆ. ಹೇಗೆಂದರೆ "ಮನಸ್ಸನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು" (ಛಾಂ. ೩-೧೮-೧) ಎಂಬಲ್ಲಿ "ಯಾವನು ಹೀಗೆಂದು ತಿಳಿದಿರುವನೋ ಆವನು ತಪಸ್ಸಿನಿಂದಲೂ ಯಶಸ್ಸಿನಿಂದಲೂ ಕೀರ್ತಿಯಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಹೊಳೆಯುವನು, ತಪಿಸುತ್ತಿರುವನು" (ಛಾಂ. ೩-೧೮-೩) ಎಂದಿದೆ. ಆದ್ದರಿಂದ ಒಂದು ಸಲ (ಮಾಡಿರುವ) ಉಪದೇಶಗಳಲ್ಲಿಯೂ ಆವೃತ್ತಿ(ಯನ್ನು ಮಾಡಬೇಕೆಂದು) ಸಿದ್ಧವಾಯಿತು[1]. ಅನೇಕವೇಳೆ ಉಪದೇಶಮಾಡಿರುವದೋ ಎಂದರೆ (ಅದು) ಆವೃತ್ತಿ(ಮಾಡಬೇಕೆಂಬುದಕ್ಕೆ) ಸೂಚಕವು.

## ಲಿಙ್ಗಾಚ್ಚ ॥ ೨ ॥

೨. ಲಿಂಗವಿರುವದರಿಂದಲೂ (ಆವೃತ್ತಿಯನ್ನು ಮಾಡಬೇಕು).

### ಪ್ರತ್ಯಯಗಳನ್ನು ಆವೃತ್ತಿಮಾಡಬೇಕೆಂಬುದಕ್ಕೆ ಶ್ರೌತಲಿಂಗ

(ಭಾಷ್ಯ)

೫೧೪. ಲಿಙ್ಗಮಪಿ ಪ್ರತ್ಯಯಾವೃತ್ತಿಂ ಪ್ರತ್ಯಾಯಯತಿ । ತಥಾ ಹಿ ಉದ್ಗೀಥವಿಜ್ಞಾನಂ ಪ್ರಸ್ತುತ್ಯ "ಆದಿತ್ಯ ಉದ್ಗೀಥಃ" (ಛಾಂ. ೧-೫-೧) ಇತ್ಯೇತತ್ ಏಕಪುತ್ರತಾದೋಷೇಣ ಅಪೋದ್ಯ "ರಶ್ಮೀಂಸ್ತ್ವಂ ಪರ್ಯಾವರ್ತಯಾತ್" (ಛಾಂ. ೧-೫-೨) ಇತಿ ರಶ್ಮಿಬಹುತ್ವವಿಜ್ಞಾನಂ ಬಹುಪುತ್ರತಾಯೈ ವಿದಧತ್ ಸಿದ್ಧವತ್ ಪ್ರತ್ಯಯಾವೃತ್ತಿಂ ದರ್ಶಯತಿ । ತಸ್ಮಾತ್ ತತ್ಸಾಮಾನ್ಯಾತ್ ಸರ್ವಪ್ರತ್ಯಯೇಷು ಆವೃತ್ತಿಸಿದ್ಧಿಃ ॥

(ಭಾಷ್ಯಾರ್ಥ)

ಲಿಂಗವೂ ಪ್ರತ್ಯಯವನ್ನು ಆವೃತ್ತಿಮಾಡಬೇಕೆಂಬುದನ್ನು ತಿಳಿಸುತ್ತದೆ. ಹೇಗೆಂದರೆ ಉದ್ಗೀಥವಿದ್ಯೆಯನ್ನು (ಹೇಳುವದಕ್ಕೆ) ಉಪಕ್ರಮಿಸಿ "ಆದಿತ್ಯನೇ ಉದ್ಗೀಥನು" (ಛಾಂ. ೧-೫-೧) ಎಂಬೀ (ಉಪಾಸನೆಯನ್ನು) ಏಕಪುತ್ರನಾಗುವನೆಂಬ ದೋಷದಿಂದ ನಿಂದಿಸಿ "ರಶ್ಮಿಗಳನ್ನು ನೀನು ಆವೃತ್ತಿಮಾಡುತ್ತಿರು" (ಛಾಂ. ೧-೫-೨) ಎಂದು ರಶ್ಮಿಬಹುತ್ವದ ಉಪಾಸನೆಯನ್ನು ಬಹಳ ಪುತ್ರರಾಗುವದಕ್ಕಾಗಿ ವಿಧಾನಮಾಡುವದರಿಂದ ಸಿದ್ಧವಾಗಿರುವಂತೆ ಪ್ರತ್ಯಯಾ

---

1. "ಉಪಾಸೀತ" ಎಂದಿದ್ದರೆ ಆವೃತ್ತಿಯಾಗಲಿ, "ವೇದ" ಎಂದು ವಿಧಿಸಿದ್ದರೆ ಒಂದೇ ಸಲ ಸಾಕು – ಎಂಬ ಶಂಕೆಗೆ ಉಪಾಸನೆಯೂ ವೇದನವೂ ಒಂದೇ ಎಂಬ ಪರಿಹಾರವನ್ನು ಹೇಳಿರುವದರಿಂದ ಇದು ಸಿದ್ಧವಾಗುತ್ತದೆ.

ವೃತ್ತಿಯನ್ನು (ಶ್ರುತಿಯು) ತಿಳಿಸುತ್ತದೆ.[1] ಆದ್ದರಿಂದ (ಅದರ) ಹೋಲಿಕೆಯಿಂದ ಸರ್ವಪ್ರತ್ಯಯಗಳಲ್ಲಿಯೂ[2] ಆವೃತ್ತಿಯು ಸಿದ್ಧವಾಯಿತು.

## ಪೂರ್ವಪಕ್ಷ: ಬ್ರಹ್ಮಜ್ಞಾನಕ್ಕಾಗಿ ಸಾಧನದ ಆವೃತ್ತಿ ಬೇಕಿಲ್ಲ

(ಭಾಷ್ಯ)

೫೦೫. ಅತ್ರಾಹ । ಭವತು ನಾಮ ಸಾಧ್ಯಫಲೇಷು ಪ್ರತ್ಯಯೇಷು ಆವೃತ್ತಿಃ । ತೇಷು ಆವೃತ್ತಿಸಾಧ್ಯಸ್ಯ ಅತಿಶಯಸ್ಯ ಸಂಭವಾತ್ । ಯಸ್ತು ಪರಬ್ರಹ್ಮವಿಷಯಃ ಪ್ರತ್ಯಯಃ ನಿತ್ಯಶುದ್ಧಬುದ್ಧಮುಕ್ತಸ್ವಭಾವಮೇವ ಆತ್ಮಭೂತಂ ಪರಂ ಬ್ರಹ್ಮ ಸಮರ್ಪಯತಿ, ತತ್ರ ಕಿಮರ್ಥಾ ಆವೃತ್ತಿರಿತಿ ? ಸಕೃಚ್ಛ್ರುತೌ ಚ ಬ್ರಹ್ಮಾತ್ಮತ್ವಪ್ರತೀತ್ಯನುಪಪತ್ತೇಃ ಆವೃತ್ತ್ಯಭ್ಯುಪಗಮಃ ಇತಿ ಚೇತ್ । ನ । ಆವೃತ್ತಾವಪಿ ತದನುಪಪತ್ತೇಃ । ಯದಿ ಹಿ 'ತತ್ತ್ವಮಸಿ' (ಛಾಂ. ೬-೮-೭) ಇತ್ಯೇವಂಜಾತೀಯಕಂ ವಾಕ್ಯಂ ಸಕೃಚ್ಛ್ರೂಯಮಾಣಂ ಬ್ರಹ್ಮಾತ್ಮತ್ವಪ್ರತೀತಿಂ ನೋತ್ಪಾದಯೇತ್, ತತಸ್ತದೇವಾವರ್ತ್ಯಮಾನಮ್ ಉತ್ಪಾದಯಿಷ್ಯತೀತಿ ಕಾ ಪ್ರತ್ಯಾಶಾ ಸ್ಯಾತ್ ? ಅಥೋಚ್ಯೇತ, ನ ಕೇವಲಂ ವಾಕ್ಯಂ ಕಂಚಿದರ್ಥಂ ಸಾಕ್ಷಾತ್ಕರ್ತುಂ ಶಕ್ನೋತಿ, ಅತೋ ಯುಕ್ತ್ಯಪೇಕ್ಷಂ ವಾಕ್ಯಮ್ ಅನುಭಾವಯಿಷ್ಯತಿ ಬ್ರಹ್ಮಾತ್ಮತ್ವಮಿತಿ । ತಥಾಪಿ ಆವೃತ್ತ್ಯಾನರ್ಥಕ್ಯಮೇವ । ಸಾಪಿ ಹಿ ಯುಕ್ತಿಃ ಸಕೃತ್ಪ್ರವೃತ್ತೈವ ಸ್ವಮರ್ಥಮ್ ಅನುಭಾವಯಿಷ್ಯತಿ । ಅಥಾಪಿ ಸ್ಯಾತ್, ಯುಕ್ತ್ಯಾ ವಾಕ್ಯೇನ ಚ ಸಾಮಾನ್ಯವಿಷಯಮೇವ ವಿಜ್ಞಾನಂ ಕ್ರಿಯತೇ, ನ ವಿಶೇಷವಿಷಯಮ್ । ಯಥಾ ಅಸ್ತಿ ಮೇ ಹೃದಯೇ ಶೂಲಮ್ ಇತ್ಯತೋ ವಾಕ್ಯಾತ್ ಗಾತ್ರಕಮ್ಪಾದಿಲಿಙ್ಗಾಚ್ಚ ಶೂಲಸದ್ಭಾವಸಾಮಾನ್ಯಮೇವ ಪರಃ ಪ್ರತಿಪದ್ಯತೇ ನ ವಿಶೇಷಮನುಭವತಿ ಯಥಾ ಸ ಏವ ಶೂಲೀ । ವಿಶೇಷಾನುಭವಶ್ಚ ಅವಿದ್ಯಾಯಾ ನಿವರ್ತಕಃ । ತತಸ್ತದರ್ಥಾ ಆವೃತ್ತಿರಿತಿ ಚೇತ್ । ನ । ಅಸಕೃದಪಿ ತಾವನ್ಮಾತ್ರೇ ಕ್ರಿಯಮಾಣೇ ವಿಶೇಷವಿಜ್ಞಾನೋತ್ಪತ್ತ್ಯಸಂಭವಾತ್ । ನ ಹಿ ಸಕೃತ್ಪ್ರಯುಕ್ತಾಭ್ಯಾಂ ಶಾಸ್ತ್ರಯುಕ್ತಿಭ್ಯಾಮ್ ಅನವಗತೋ ವಿಶೇಷಃ ಶತಕೃತ್ವೋಽಪಿ ಪ್ರಯುಜ್ಯಮಾನಾಭ್ಯಾಮ್ ಅವಗನ್ತುಂ ಶಕ್ಯತೇ । ತಸ್ಮಾತ್ ಯದಿ ಶಾಸ್ತ್ರಯುಕ್ತಿಭ್ಯಾಂ ವಿಶೇಷಃ ಪ್ರತಿಪಾದ್ಯತೇ, ಯದಿ ವಾ ಸಾಮಾನ್ಯಮೇವ ಉಭಯಥಾಪಿ ಸಕೃತ್ಪ್ರವೃತ್ತೇ ಏವ ತೇ

---

1. ರಶ್ಮಿಗಳನ್ನೂ ಆದಿತ್ಯನನ್ನೂ ಬೇರೆಬೇರೆ ಎಂದು ಇಟ್ಟುಕೊಂಡು ರಶ್ಮಿಬಹುತ್ವವನ್ನು ಆವರ್ತನೆಮಾಡು - ಎಂದು ಹೇಳಿರುವದರಿಂದ ಪ್ರತ್ಯಯಾವೃತ್ತಿರೂಪವಾದ ಉಪಾಸನೆಯು ಸಿದ್ಧವಾಗಿರುವಂತೆ ಇಟ್ಟುಕೊಂಡು ಹೇಳಿದಂತೆ ಆಯಿತು - ಎಂದರ್ಥ.

2. ಎಲ್ಲಾ ಸಗುಣನಿರ್ಗುಣಪ್ರತ್ಯಯಗಳಲ್ಲಿಯೂ ಎಂದರ್ಥ.

ಸ್ವಕಾರ್ಯಂ ಕುರುತ ಇತಿ ಆವೃತ್ತ್ಯನುಪಯೋಗಃ । ನ ಚ ಸಕೃತ್ಪ್ರಯುಕ್ತೇ ಶಾಸ್ತ್ರಯುಕ್ತೀ ಕಸ್ಯಚಿದಪಿ ಅನುಭವಂ ನೋತ್ಪಾದಯತ ಇತಿ ಶಕ್ಯತೇ ನಿಯನ್ತುಮ್ । ವಿಚಿತ್ರಪ್ರಜ್ಞತ್ವಾತ್ ಪ್ರತಿಪತ್ತೄಣಾಮ್ । ಅಪಿ ಚ ಅನೇಕಾಂಶೋಪೇತೇ ಲೌಕಿಕೇ ಪದಾರ್ಥೇ ಸಾಮಾನ್ಯವಿಶೇಷವತಿ ಏಕೇನ ಅವಧಾನೇನ ಏಕಮಂಶಮ್ ಅವಧಾರಯತಿ ಅಪರೇಣಾಪರಮ್ ಇತಿ ಸ್ಯಾದಪ್ಯಭ್ಯಾಸೋಪಯೋಗಃ । ಯಥಾ ದೀರ್ಘಪ್ರಪಾಠಕಗ್ರಹಣಾದಿಷು । ನ ತು ನಿರ್ವಿಶೇಷೇ ಬ್ರಹ್ಮಣಿ ಸಾಮಾನ್ಯವಿಶೇಷರಹಿತೇ ಚೈತನ್ಯಮಾತ್ರಾತ್ಮಕೇ ಪ್ರಮೋತ್ಪತ್ತೌ ಅಭ್ಯಾಸಾಪೇಕ್ಷಾ ಯುಕ್ತಾ ಇತಿ ॥

(ಭಾಷ್ಯಾರ್ಥ)

ಇಲ್ಲಿ (ಪೂರ್ವಪಕ್ಷಿ) ಹೇಳುತ್ತಾನೇನೆಂದರೆ, ಸಾಧ್ಯವಾದ ಫಲಗಳುಳ್ಳ ಪ್ರತ್ಯಯಗಳಲ್ಲಿ ಆವೃತ್ತಿ ಬೇಕೆಂದಾಗಲಿ; ಏಕೆಂದರೆ ಅವುಗಳಲ್ಲಿ ಆವೃತ್ತಿಯಿಂದ ಸಾಧ್ಯವಾದ ಅತಿಶಯವು ಇರಬಹುದಾಗಿದೆ.[1] ಆದರೆ **ನಿತ್ಯಶುದ್ಧಬುದ್ಧ ಮುಕ್ತಸ್ವಭಾವವುಳ್ಳ ಆತ್ಮನೇ ಆಗಿರುವ ಪರಬ್ರಹ್ಮವನ್ನು ತಿಳಿಸುವ ಪರಬ್ರಹ್ಮಪ್ರತ್ಯಯುವಿದೆಯಲ್ಲ, ಅಲ್ಲಿ ಆವೃತ್ತಿಯಿಂದಾಗಬೇಕಾದ ಪ್ರಯೋಜನವೇನು[2] ?**

ಒಂದು ಸಲ ಶ್ರವಣಮಾಡಿದ(ಮಾತ್ರ)ದಿಂದ ಬ್ರಹ್ಮವೇ ತಾನೆಂಬ ಅರಿವು ಉಂಟಾಗಲಾರದಾದ್ದರಿಂದ ಆವೃತ್ತಿಯನ್ನು ಅಂಗೀಕರಿಸಬೇಕು - ಎಂದರೆ (ಅದು) ಸರಿಯಲ್ಲ. ಏಕೆಂದರೆ ಆವೃತ್ತಿಮಾಡಿದರೂ ಅದು ಆಗಲಾರದು. "ಅದೇ ನೀನಾಗಿರುವೆ" (ಛಾಂ. ೬-೭-೮) ಎಂಬೀ ಜಾತಿಯ ವಾಕ್ಯವನ್ನು ಒಂದು ಸಲ ಶ್ರವಣಮಾಡಿದರೆ ಬ್ರಹ್ಮಾತ್ಮತ್ವದ ಜ್ಞಾನವನ್ನು ಉಂಟುಮಾಡುವ ದಿಲ್ಲವಾದರೆ ಅದನ್ನೇ ಆವೃತ್ತಿಮಾಡಿದರೆ (ಆ ಜ್ಞಾನವನ್ನು) ಉಂಟುಮಾಡುತ್ತದೆ ಎಂಬಲ್ಲಿ ಯಾವ ಪ್ರತ್ಯಾಶೆ ಇರುವದು ? ಇನ್ನು (ನೀವು) ಹೀಗೆ ಹೇಳಬಹುದು: ಬರಿಯ ವಾಕ್ಯವು ಯಾವ ಅರ್ಥವನ್ನೂ ಸಾಕ್ಷಾತ್ಕಾರಮಾಡಿಕೊಡುವದಕ್ಕೆ ಶಕ್ತವಾಗುವದಿಲ್ಲ; ಆದ್ದರಿಂದ ಯುಕ್ತ್ಯಪೇಕ್ಷವಾದ ವಾಕ್ಯವು ಬ್ರಹ್ಮಾತ್ಮತ್ವವನ್ನು ಅನುಭವಕ್ಕೆ ತಂದುಕೊಡಬಹುದು (ಎನ್ನಬಹುದು). ಹೀಗಿದ್ದರೂ ಆವೃತ್ತಿಯು ವ್ಯರ್ಥವೇ. ಏಕೆಂದರೆ ಆ ಯುಕ್ತಿಯೂ ಒಂದು ಸಲ ಪ್ರವೃತ್ತವಾದರೇ ತನ್ನ ಅರ್ಥವನ್ನು ಅನುಭವಕ್ಕೆ ತಂದುಕೊಡಬಹುದಾಗಿದೆ. ಇನ್ನು (ನಿಮ್ಮ ಮತವು) ಹೀಗೂ ಇರಬಹುದು : ಯುಕ್ತಿಯಿಂದಲೂ ವಾಕ್ಯದಿಂದಲೂ ಸಾಮಾನ್ಯವಿಷಯವಾದ ವಿಜ್ಞಾನವೇ ಆಗುತ್ತದೆ, ವಿಶೇಷವಿಷಯದ (ಜ್ಞಾನವು)

1. ಸಾಕ್ಷಾತ್ಕಾರರೂಪವಾದ ಅತಿಶಯವು ಅಭ್ಯಾಸಬಲದಿಂದಲೇ ಆಗಬೇಕಾಗಿದೆ.

2. ಆತ್ಮನೇ ಆಗಿರುವ ಬ್ರಹ್ಮವನ್ನು ವಾಕ್ಯವು ತಿಳಿಸಿದರೆ ಅದರ ಅರಿವು ಕೂಡಲೆ ಆಗಿಬಿಡಬೇಕು.

ಆಗುವದಿಲ್ಲ. ಹೇಗೆಂದರೆ "ನನ್ನ ಹೃದಯದಲ್ಲಿ ನೋವು ಇದೆ" ಎಂಬೀ ವಾಕ ದಿಂದಲೂ ಶರೀರವನ್ನು ಅಲುಗಾಡಿಸುವದೇ ಮುಂತಾದ ಗುರುತಿನಿಂದಲೂ ಹೊಟ್ಟೆಶೂಲೆ ಇದೆ ಎಂದು ಸಾಮಾನ್ಯವನ್ನೇ ಮತ್ತೊಬ್ಬನು ತಿಳಿದುಕೊಳ್ಳುವನೇ ಹೊರತು ಆ ಶೂಲೆ ಇರುವವನೇ (ತಿಳಿದುಕೊಳ್ಳುವಂತೆ) ವಿಶೇಷ(ವಾದ ಶೂಲೆ ಯನ್ನು) ಅನುಭವಿಸುವದಿಲ್ಲ. ವಿಶೇಷಾನುಭವವೇ ಅವಿದ್ಯೆಯನ್ನು ಹೋಗ ಲಾಡಿಸತಕ್ಕದ್ದು. ಆದ್ದರಿಂದ ಆ (ವಿಶೇಷಾನುಭವ)ಕ್ಕಾಗಿ ಆವೃತ್ತಿ(ಯನ್ನು ಮಾಡ)ಬೇಕು ಎಂದರೆ, ಹಾಗಲ್ಲ. ಏಕೆಂದರೆ ಅನೇಕ ಸಲ ಅಷ್ಟನ್ನೇ (ಆವೃತ್ತಿ)ಮಾಡಿದರೂ ವಿಶೇಷವಾದ ವಿಜ್ಞಾನವು ಉಂಟಾಗುವ ಸಂಭವವಿಲ್ಲ. ಒಂದು ಸಲ ಶಾಸ್ತ್ರಯುಕ್ತಿಗಳನ್ನು ಉಪಯೋಗಿಸಿಕೊಂಡದ್ದರಿಂದ ತಿಳಿಯದೆ ಇದ್ದ ವಿಶೇಷವು (ಅವನ್ನು) ನೂರು ಸಲ ಉಪಯೋಗಿಸಿದರೂ ತಿಳಿಯಬರ ಲಾರದಲ್ಲವೆ? **ಆದ್ದರಿಂದ ಶಾಸ್ತ್ರಯುಕ್ತಿಗಳು ವಿಶೇಷವನ್ನೇ ತಿಳಿಸಿ ಕೊಡಲಿ, ಸಾಮಾನ್ಯವನ್ನೇ ತಿಳಿಸಿಕೊಡಲಿ, ಎರಡು (ಪಕ್ಷ)ದಲ್ಲಿಯೂ ಒಂದು ಸಲ ಪ್ರವೃತ್ತವಾದರೇ (ಸಾಕು), ಅವು ತಮ್ಮ ಕಾರ್ಯವನ್ನು ಮಾಡಿಕೊಟ್ಟೇತೀರುವವು. ಆದ್ದರಿಂದ ಆವೃತ್ತಿಯಿಂದ (ಯಾವ) ಉಪಯೋಗವೂ ಇಲ್ಲ.**[1] ಒಂದು ಸಲ ಉಪಯೋಗಿಸಿದ ಶಾಸ್ತ್ರಯುಕ್ತಿಗಳು ಯಾವನಿಗೂ ಅನುಭವವನ್ನುಂಟುಮಾಡುವದಿಲ್ಲ ಎಂದು ನಿಯಮವನ್ನು ಹೇಳುವದಕ್ಕೆ ಆಗಲೂ ಆರದು. ಏಕೆಂದರೆ ತಿಳಿದುಕೊಳ್ಳುವವರಿಗೆ ಬಗೆಬಗೆಯ ಪ್ರಜ್ಞೆಯಿರುತ್ತದೆ. ಇದಲ್ಲದೆ ಅನೇಕ ಅಂಶಗಳಿಂದೊಡಗೂಡಿರುವ ಲೌಕಿಕ ಪದಾರ್ಥದಲ್ಲಿ ಸಾಮಾನ್ಯವಿಶೇಷಗಳಿರುವದರಿಂದ ಒಂದು ಅವಧಾನದಿಂದ ಒಂದು ಅಂಶವನ್ನು ನಿಶ್ಚಯಿಸಿಕೊಳ್ಳುತ್ತಾನೆ, ಮತ್ತೊಂದರಿಂದ ಮತ್ತೊಂದು (ಅಂಶ) ವನ್ನು ನಿಶ್ಚಯಿಸಿಕೊಳ್ಳುತ್ತಾನೆ; ಆದ್ದರಿಂದ ದೀರ್ಘಪ್ರಪಾಠಕವನ್ನು ಕಲಿಯು ವದೇ ಮುಂತಾದವುಗಳಲ್ಲಿ ಅಭ್ಯಾಸದ ಉಪಯೋಗವು ಆದರೂ ಆಗಬಹುದು. ಆದರೆ ನಿರ್ವಿಶೇಷವಾದ, ಸಾಮಾನ್ಯವಿಶೇಷಗಳಿಲ್ಲದ, ಚೈತನ್ಯಮಾತ್ರಸ್ವರೂಪ ವಾಗಿರುವ ಬ್ರಹ್ಮದಲ್ಲಿ ಪ್ರಮೆಯು ಉಂಟಾಗುವದಕ್ಕೆ ಅಭ್ಯಾಸದ ಅಪೇಕ್ಷೆಯಿದೆ ಎಂಬುದು ಸರಿಯಲ್ಲ.[2]

---

1. ಶಾಸ್ತ್ರಯುಕ್ತಿಗಳಿಂದ ವಿಶೇಷಾನುಭವವೇ ಆಗುತ್ತದೆಯಾದರೂ ಪ್ರತ್ಯಕ್ಷಾದಿ ಗಳಿಂದ ಅದು ಚಲಿತವಾಗುತ್ತದೆ; ಅಭ್ಯಾಸದಿಂದ ಅದು ಗಟ್ಟಿಯಾಗಿ ನಿಲ್ಲುತ್ತದೆ– ಎಂಬುದು ಪ್ರಸಂಖ್ಯಾನವಾದಿಗಳ ಮತ. ಇದು ಉಪ. ಸಾ. ಪದ್ಯ, ೧೮ನೆಯ ಪ್ರಕರಣದಲ್ಲಿ ಖಂಡಿತವಾಗಿದೆ. ಸಾಮಾನ್ಯಾನುಭವವು ಶಾಸ್ತ್ರದಿಂದಾಗಿ ಅಭ್ಯಾಸದಿಂದ ವಿಶೇಷಾನುಭವ ವುಂಟಾಗುವದೆಂಬುದು ಸಾಕ್ಷಾತ್ಕಾರವಾದಿಗಳ ಮತ. ಇವೆರಡನ್ನೂ ಪೂರ್ವಪಕ್ಷಿಯು ಇಲ್ಲಿ ಖಂಡಿಸಿರುತ್ತಾನೆ.

2. ಮೊದಲು ಬ್ರಹ್ಮದ ಸಾಮಾನ್ಯಜ್ಞಾನವಾಗಿ ಆಮೇಲೆ ವಿಶೇಷಜ್ಞಾನವಾಗುವದಿಲ್ಲ.

# ಪದಾರ್ಥಜ್ಞಾನಕ್ಕಾಗಿ ಆವೃತ್ತಿಯು ಬೇಕಾಗುವದು

( ಭಾಷ್ಯ )

೫೦೬. ಅತ್ರೋಚ್ಯತೇ । ಭವೇದಾವೃತ್ತ್ಯಾನರ್ಥಕ್ಯಂ ತಂ ಪ್ರತಿ ಯಸ್ತತ್ತ್ವಮಸಿ ಇತಿ ಸಕೃದುಕ್ತಮೇವ ಬ್ರಹ್ಮಾತ್ಮತ್ವಮ್ ಅನುಭವಿತುಂ ಶಕ್ನುಯಾತ್ । ಯಸ್ತು ನ ಶಕ್ನೋತಿ ತಂ ಪ್ರತ್ಯುಪಯುಜ್ಯತ ಏವಾವೃತ್ತಿಃ । ತಥಾ ಹಿ ಛಾನ್ದೋಗ್ಯೇ "ತತ್ತ್ವಮಸಿ ಶ್ವೇತಕೇತೋ" (ಛಾಂ. ೬-೮-೭) ಇತ್ಯುಪದಿಶ್ಯ "ಭೂಯ ಏವ ಮಾ ಭಗವಾನ್ ವಿಜ್ಞಾಪಯತು" (ಛಾಂ. ೬-೮-೭) ಇತಿ ಪುನಃಪುನಃ ಪರಿಚೋದ್ಯಮಾನಸ್ತತ್ತದಾಶಙ್ಕಾಕಾರಣಂ ನಿರಾಕೃತ್ಯ 'ತತ್ತ್ವಮಸಿ' ಇತ್ಯೇವ ಅಸಕೃದುಪದಿಶತಿ । ತಥಾ ಚ 'ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ' (ಬೃ. ೪-೫-೬) ಇತ್ಯಾದಿ ದರ್ಶಿತಮ್ । ನನೂಕ್ತಂ ಸಕೃಚ್ಛ್ರುತಂ ಚೇತ್ ತತ್ತ್ವಮಸಿವಾಕ್ಯಂ ಸ್ವಮರ್ಥಮನುಭಾವಯಿತುಂ ನ ಶಕ್ನೋತಿ, ತತ ಆವರ್ತ್ಯಮಾನಮಪಿ ನೈವ ಶಕ್ಷ್ಯತೀತಿ । ನೈಷ ದೋಷಃ । ನ ಹಿ ದೃಷ್ಟೇಽನುಪಪನ್ನಂ ನಾಮ । ದೃಶ್ಯನ್ತೇ ಹಿ ಸಕೃಚ್ಛ್ರುತಾದ್ ವಾಕ್ಯಾತ್ ಮನ್ದಪ್ರತೀತಂ ವಾಕ್ಯಾರ್ಥಮ್ ಆವರ್ತಯನ್ತಃ, ತತ್ತದಾಭಾಸವ್ಯುದಾಸೇನ ಸಮ್ಯಕ್ಪ್ರತಿಪದ್ಯಮಾನಾಃ । ಅಪಿ ಚ ತತ್ತ್ವಮಸಿ ಇತ್ಯೇತದ್ವಾಕ್ಯಂ ತ್ವಂಪದಾರ್ಥಸ್ಯ ತತ್ಪದಾರ್ಥಭಾವಮಾಚಷ್ಟೇ । ತತ್ಪದೇನ ಚ ಪ್ರಕೃತಂ ಸದ್ಬ್ರಹ್ಮ ಈಕ್ಷಿತೃ ಜಗತೋ ಜನ್ಮಾದಿಕಾರಣಮ್ ಅಭಿಧೀಯತೇ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧), "ವಿಜ್ಞಾನಮಾನನ್ದಂ ಬ್ರಹ್ಮ" (ಬೃ. ೩-೯-೨೮), "ಅದೃಷ್ಟಂ ದ್ರಷ್ಟೃ" (ಬೃ. ೩-೮-೧೧), "ಅವಿಜ್ಞಾತಂ ವಿಜ್ಞಾತೃ" (ಬೃ. ೩-೮-೧೧), "ಅಜಮಜರಮಮರಮ್" (ಬೃ. ೪-೪-೨೫ ?) "ಅಸ್ಥೂಲಮನಣ್ವಹ್ರಸ್ವಮದೀರ್ಘಮ್" (ಬೃ. ಮಾ. ೩-೮-೮) ಇತ್ಯಾದಿ ಶಾಸ್ತ್ರಪ್ರಸಿದ್ಧಮ್ । ತತ್ರ ಅಜಾದಿಶಬ್ದೈಃ ಜನ್ಮಾದಯೋ ಭಾವವಿಕಾರಾ ನಿವರ್ತಿತಾಃ, ಅಸ್ಥೂಲಾದಿಶಬ್ದೈಶ್ಚ ಸ್ಥೌಲ್ಯಾದಯೋ ದ್ರವ್ಯಧರ್ಮಾಃ, ವಿಜ್ಞಾನಾದಿಶಬ್ದೈಶ್ಚ ಚೈತನ್ಯಪ್ರಕಾಶಾತ್ಮಕತ್ವಮುಕ್ತಮ್ । ಏಷ ವ್ಯಾವೃತ್ತಸರ್ವಸಂಸಾರಧರ್ಮಕೋಽನುಭವಾತ್ಮಕೋ ಬ್ರಹ್ಮಸಂಜ್ಞಕಸ್ತತ್ಪದಾರ್ಥೋ ವೇದಾನ್ತಾಭಿಯುಕ್ತಾನಾಂ ಪ್ರಸಿದ್ಧಃ । ತಥಾ ತ್ವಂಪದಾರ್ಥೋಽಪಿ ಪ್ರತ್ಯಗಾತ್ಮಾ ಶ್ರೋತಾ ದೇಹಾದಾರಭ್ಯ ಪ್ರತ್ಯಗಾತ್ಮತಯಾ ಸಂಭಾವ್ಯಮಾನಶ್ಚೈತನ್ಯಪರ್ಯನ್ತತ್ವೇನ ಅವಧಾರಿತಃ । ತತ್ರ ಯೇಷಾಮ್ ಏತೌ ಪದಾರ್ಥೌ ಅಜ್ಞಾನಸಂಶಯವಿಪರ್ಯಯಪ್ರತಿಬದ್ಧೌ ತೇಷಾಂ ತತ್ತ್ವಮಸೀತ್ಯೇತದ್ವಾಕ್ಯಂ ಸ್ವಾರ್ಥೇ ಪ್ರಮಾಂ ನೋತ್ಪಾದಯಿತುಂ ಶಕ್ನೋತಿ ಪದಾರ್ಥಜ್ಞಾನಪೂರ್ವಕತ್ವಾತ್ ವಾಕ್ಯಾರ್ಥಸ್ಯ । ಇತ್ಯತಸ್ತಾನ್ ಪ್ರತಿ ಏಷ್ಟವ್ಯಃ

ಪದಾರ್ಥವಿವೇಕಪ್ರಯೋಜನಃ ಶಾಸ್ತ್ರಯುಕ್ತ್ಯಭ್ಯಾಸಃ । ಯದ್ಯಪಿ ಚ ಪ್ರತಿಪತ್ತವ್ಯ ಆತ್ಮಾ ನಿರಂಶಃ, ತಥಾಪಿ ಅಧ್ಯಾರೋಪಿತಂ ತಸ್ಮಿನ್ ಬಹ್ವಂಶತ್ವಂ ದೇಹೇನ್ದ್ರಿಯಮನೋಬುದ್ಧಿವಿಷಯವೇದನಾದಿಲಕ್ಷಣಮ್ । ತತ್ರ ಏಕೇನ ಅವಧಾನೇನ ಏಕಮಂಶಮ್ ಅಪೋಹತಿ, ಅಪರೇಣಾಪರಮ್ ಇತಿ ಯುಜ್ಯತೇ ತತ್ರ ಕ್ರಮವತೀ ಪ್ರತಿಪತ್ತಿಃ । ತತ್ತು ಪೂರ್ವರೂಪಮೇವ ಆತ್ಮಪ್ರತಿಪತ್ತೇಃ । ಯೇಷಾಂ ಪುನರ್ನಿಪುಣಮತೀನಾಂ ನಾಜ್ಞಾನಸಂಶಯವಿಪರ್ಯಯಲಕ್ಷಣಃ ಪದಾರ್ಥವಿಷಯಃ ಪ್ರತಿಬನ್ಧೋಽಸ್ತಿ, ತೇ ಶಕ್ನುವನ್ತಿ ಸಕೃದುಕ್ತಮೇವ ತತ್ತ್ವಮಸಿವಾಕ್ಯಾರ್ಥಮ್ ಅನುಭವಿತುಮ್ ಇತಿ ತಾನ್ ಪ್ರತಿ ಆವೃತ್ತ್ಯಾನರ್ಥಕ್ಯಮ್ ಇಷ್ಟಮೇವ । ಸಕೃದುತ್ಪನ್ನೈವ ಹಿ ಆತ್ಮಪ್ರತಿಪತ್ತಿಃ ಅವಿದ್ಯಾಂ ನಿವರ್ತಯತಿ ಇತಿ ನಾತ್ರ ಕಶ್ಚಿದಪಿ ಕ್ರಮೋಽಭ್ಯುಪಗಮ್ಯತೇ ॥

(ಭಾಷ್ಯಾರ್ಥ)

ಇಲ್ಲಿ (ಸಿದ್ಧಾಂತವನ್ನು) ಹೇಳುತ್ತೇವೆ : **ಯಾವನು 'ತತ್ತ್ವಮಸಿ' ಎಂದು ಒಂದು ಸಲ ಹೇಳಿದ ಬ್ರಹ್ಮಾತ್ಮತ್ವವನ್ನೇ ಅನುಭವಿಸಬಲ್ಲನೋ ಅವನ ವಿಷಯದಲ್ಲಿ ಆವೃತ್ತಿಯು ವ್ಯರ್ಥವೆಂದಾಗಬಹುದು. ಆದರೆ ಯಾವನು (ಹಾಗೆ ಅನುಭವಿಸ)ಲಾರನೋ ಅವನಿಗೆ ಆವೃತ್ತಿಯು ಉಪಯುಕ್ತವೇ ಆಗುತ್ತದೆ.** ಆದ್ದರಿಂದಲೇ ಛಾಂದೋಗ್ಯದಲ್ಲಿ "ಶ್ವೇತಕೇತುವೆ, ಅದೇ ನೀನಾಗಿರುವೆ" (ಛಾಂ. ೬-೮-೭) ಎಂದು ಉಪದೇಶಿಸಿ "ಪೂಜ್ಯನಾದ ನೀನು ಮತ್ತೂ ನನಗೆ ತಿಳಿಸಿಕೊಡಬೇಕು" (ಛಾಂ. ೬-೮-೭) ಎಂದು ಮತ್ತೆಮತ್ತೆ ಕೇಳಿಕೊಳ್ಳಲಾಗಿ ಆಯಾ ಆಶಂಕೆಯ ಕಾರಣವನ್ನು ನಿರಾಕರಿಸಿ 'ಅದೇ ನೀನಾಗಿರುವೆ' ಎಂದೇ ಅನೇಕ ವೇಳೆ ಉಪದೇಶಮಾಡಿರುತ್ತದೆ. ಆದ್ದರಿಂದಲೇ "ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು" (ಬೃ. ೪-೫-೬) ಎಂದು ಮುಂತಾಗಿ (ಅನೇಕ ವೇಳೆ ಉಪದೇಶಮಾಡಿರುವದನ್ನೂ) ತಿಳಿಸಿದ್ದಾಗಿದೆ.

(ಆಕ್ಷೇಪ) :– ಒಂದು ಸಲ ಶ್ರವಣಮಾಡಿದ ತತ್ತ್ವಮಸಿವಾಕ್ಯವು ತನ್ನ ಅರ್ಥವನ್ನು ಅನುಭವಕ್ಕೆ ತಂದುಕೊಡಲಾರದೆ ಇದ್ದರೆ, ಆಗ (ಅದನ್ನು) ಆವೃತ್ತಿ ಮಾಡಿದರೂ (ತಂದುಕೊಡ)ಲಾರದು ಎಂದು ಹೇಳಿದೆವಲ್ಲ !

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಕಂಡದ್ದರಲ್ಲಿ ಅನುಪಪತ್ತಿ ಎಂಬುದಿಲ್ಲ. ಒಂದು ಸಲ ಶ್ರವಣಮಾಡಿದ ವಾಕ್ಯದಿಂದ ಸ್ವಲ್ಪ ಮಟ್ಟಿಗೆ ತಿಳಿದಿದ್ದ ವಾಕ್ಯಾರ್ಥವನ್ನು ಆವೃತ್ತಿಮಾಡಿದವರು ಆಯಾ ಆಭಾಸಗಳನ್ನು ತಿರಸ್ಕರಿಸಿ ಸರಿಯಾಗಿ ತಿಳಿದುಕೊಳ್ಳುವದು ಕಂಡುಬರುತ್ತದೆಯಲ್ಲವೆ ? ಇದೂ ಅಲ್ಲದೆ 'ತತ್ತ್ವಮಸಿ' ಎಂಬೀ ವಾಕ್ಯವು ತ್ವಂಪದಾರ್ಥಕ್ಕೆ ತತ್ಪದಾರ್ಥತ್ವವನ್ನು ಹೇಳುತ್ತದೆ. ತತ್ಪದವು ಪ್ರಕೃತವಾದ, ಆಲೋಚನೆಮಾಡಿನೋಡಿದ

ಜಗಜ್ಜನ್ಮಾದಿಕಾರಣವಾದ ಸದ್ಬ್ರಹ್ಮವನ್ನು ಹೇಳುತ್ತದೆ. (ಆ ಬ್ರಹ್ಮವು) "ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು" (ತೈ.೨-೧-೧), "ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು" (ಬೃ. ೩-೯-೨೮), "ಅದೃಷ್ಟವಾಗಿ ದ್ರಷ್ಟೃವಾಗಿರುವದು" (ಬೃ. ೩-೮-೧೧), "ಅವಿಜ್ಞಾತವಾಗಿರುವ ವಿಜ್ಞಾತೃ" (ಬೃ. ೩-೮-೧೧) "ಅಜವು, ಅಜರವು, ಅಮರವು" (ಬೃ. ೪-೪-೨೫ ?), "ಅಸ್ಥೂಲವು, ಅನಣು, ಅಹ್ರಸ್ವವು, ಅದೀರ್ಘವು" (ಬೃ. ೩-೮-೮) -ಎಂಬಿವೇ ಮುಂತಾದ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುತ್ತದೆ. ಇಲ್ಲಿ ಅಜನೇ ಮುಂತಾದ ಶಬ್ದಗಳಿಂದ ಜನ್ಮಾದಿಭಾವವಿಕಾರಗಳನ್ನು ಅಲ್ಲಗಳೆದಿದೆ; ಅಸ್ಥೂಲವೇ ಮುಂತಾದ ಶಬ್ದಗಳಿಂದ ಸ್ಥೂಲತ್ವವೇ ಮುಂತಾದ ದ್ರವ್ಯಧರ್ಮಗಳನ್ನು (ಅಲ್ಲಗಳೆದಿದೆ). ವಿಜ್ಞಾನವೇ ಮುಂತಾದ ಶಬ್ದಗಳಿಂದ (ಬ್ರಹ್ಮವು) ಚೈತನ್ಯ ಪ್ರಕಾಶರೂಪವೆಂದು ತಿಳಿಸಿದೆ. **ಯಾವ ಸಂಸಾರಧರ್ಮಗಳೂ ಇಲ್ಲದ ಅನುಭವರೂಪವಾದ ಬ್ರಹ್ಮವೆಂಬ ಹೆಸರಿನ ಇದೇ ತತ್ಪದಾರ್ಥವೆಂದು ವೇದಾಂತವನ್ನು ಬಲ್ಲವರಲ್ಲಿ ಪ್ರಸಿದ್ಧವಾಗಿರುತ್ತದೆ.** ಹೀಗೆಯೇ **ತ್ವಂ ಪದಾರ್ಥವಾಗಿರುವ ಪ್ರತ್ಯಗಾತ್ಮನಾದ ಶ್ರೋತೃವು ದೇಹದಿಂದ ಹಿಡಿದು (ಇದು) ಪ್ರತ್ಯಗಾತ್ಮನಿರಬಹುದು ಎಂದು ಸಂಭಾವನೆಯಿಂದ (ವಿಚಾರಮಾಡಿ) ಚೈತನ್ಯದಲ್ಲಿ ಕೊನೆಗಾಣುವನೆಂದು ನಿಶ್ಚಯವಾಗಿರುತ್ತದೆ. ಇಲ್ಲಿ ಯಾರಿಗೆ ಈ ಪದಾರ್ಥಗಳು ಅಜ್ಞಾನ, ಸಂಶಯ, ಮಿಥ್ಯಾಜ್ಞಾನ -ಇವುಗಳಿಂದ ಪ್ರತಿಬದ್ಧವಾಗಿರುವವೋ ಅವರಿಗೆ 'ತತ್ತ್ವಮಸಿ' ಎಂಬೀ ವಾಕ್ಯವು ತನ್ನ ಅರ್ಥದಲ್ಲಿ ಪ್ರಮೆಯನ್ನುಂಟುಮಾಡಲಾರದು; ಏಕೆಂದರೆ ವಾಕ್ಯಾರ್ಥವು ಪದಾರ್ಥಜ್ಞಾನಪೂರ್ವಕವಾಗಿಯೇ ಆಗತಕ್ಕದ್ದಿದೆ. ಆದ್ದರಿಂದ ಅವರಿಗೆ ಪದಾರ್ಥವಿವೇಕವೆಂಬ ಪ್ರಯೋಜನವುಂಟಾಗುವದಕ್ಕಾಗಿ ಶಾಸ್ತ್ರಯುಕ್ತ್ಯಭ್ಯಾಸವನ್ನು ಒಪ್ಪಬೇಕು.** ತಿಳಿದುಕೊಳ್ಳಬೇಕಾದ ಆತ್ಮನು ಅಂಶಗಳಿಲ್ಲದವನೆಂಬುದು ನಿಜ; ಆದರೂ ಅವನಲ್ಲಿ ದೇಹ, ಇಂದ್ರಿಯ, ಮನಸ್ಸು, ಬುದ್ಧಿ, ವಿಷಯವೇದನೆ -ಮುಂತಾದ ರೂಪದ ಬಹು ಅಂಶಗಳನ್ನು ಅಧ್ಯಾರೋಪಮಾಡಿಕೊಂಡಿರುತ್ತಾರೆ ಇಲ್ಲಿ ಒಂದು ಅವಧಾನದಿಂದ ಒಂದು ಅಂಶವನ್ನು ಅಲ್ಲಗಳೆಯುತ್ತಾನೆ, ಮತ್ತೊಂದರಿಂದ ಮತ್ತೊಂದನ್ನು (ಅಲ್ಲಗಳೆಯುತ್ತಾನೆ). ಆದ್ದರಿಂದ ಅಲ್ಲಿ ಕ್ರಮಕ್ರಮವಾಗಿ ಜ್ಞಾನವು ಆಗುವದೆಂಬುದು ಹೊಂದುತ್ತದೆ. ಆದರೆ ಅದು ಆತ್ಮಜ್ಞಾನದ ಮೊದಲಿನ ರೂಪವೇ ಆಗಿರುತ್ತದೆ.[1] ಆದರೆ ಯಾವ ಕುಶಲಬುದ್ಧಿಯವರಿಗೆ

1 ಈ ವಾಕ್ಯಕ್ಕೆ ವಾಕ್ಯಾರ್ಥಪ್ರತೀತಿಯು ಸಾಕ್ಷಾತ್ಕಾರಕ್ಕೆ ಪೂರ್ವರೂಪವು ಎಂಬ ಅರ್ಥವನ್ನು ಭಾಮತೀವ್ಯಾಖ್ಯಾನದಲ್ಲಿ ತೆಗೆದಿದೆ. ಅದು ಈ ಭಾಷ್ಯಕ್ಕೆ ವಿರುದ್ಧವೆಂಬುದು ಸ್ಪಷ್ಟ. ಪೀಠಿಕೆಯನ್ನು ನೋಡಿ.

ಅಜ್ಞಾನ, ಸಂಶಯ, ವಿಪರ್ಯಯ –ಎಂಬ ಪದಾರ್ಥವಿಷಯಕವಾದ ಪ್ರತಿಬಂಧವು ಇರುವದಿಲ್ಲವೋ ಅವರು **ಒಂದು ಸಲ ಹೇಳಿದರೂ ತತ್ತ್ವಮಸಿ ವಾಕ್ಯದ ಅರ್ಥವನ್ನು ಅನುಭವಿಸುವದಕ್ಕೆ ಶಕ್ತರೇ ಆಗಿರುತ್ತಾರೆ ; ಆದ್ದರಿಂದ ಅವರಿಗೆ ಆವೃತ್ತಿಯು ವ್ಯರ್ಥವೆಂಬುದು ಇಷ್ಟವೇ. ಏಕೆಂದರೆ ಒಂದು ಸಲ ಹುಟ್ಟಿದ ಆತ್ಮಜ್ಞಾನವೇ ಅವಿದ್ಯೆಯನ್ನು ನಿವೃತ್ತಿಮಾಡುತ್ತದೆಯಾದ್ದರಿಂದ ಇಲ್ಲಿ ಯಾವ ಕ್ರಮವನ್ನೂ ಅಂಗೀಕರಿಸಬೇಕಾದದ್ದಿಲ್ಲ.**[1]

## ವಾಕ್ಯಾರ್ಥಜ್ಞಾನವು ಆಗುವದಿಲ್ಲವೆಂಬುದು ಸರಿಯಲ್ಲ

(ಭಾಷ್ಯ)

೫೦೭. ಸತ್ಯಮೇವಂ ಯುಜ್ಯೇತ, ಯದಿ ಕಸ್ಯಚಿತ್ ಏವಂ ಪ್ರತಿಪತ್ತಿರ್ಭವೇತ್ । ಬಲವತೀ ಹಿ ಆತ್ಮನೋ ದುಃಖಿತ್ವಾದಿಪ್ರತಿಪತ್ತಿಃ। ಅತೋ ನ ದುಃಖಿತ್ವಾದ್ಯಭಾವಂ ಕಶ್ಚಿತ್ ಪ್ರತಿಪದ್ಯತ ಇತಿ ಚೇತ್। ನ। ದೇಹಾದ್ಯಭಿಮಾನವದ್ದುಃಖಿತ್ವಾದ್ಯಭಿಮಾನಸ್ಯ ಮಿಥ್ಯಾಭಿಮಾನತ್ವೋಪಪತ್ತೇಃ। ಪ್ರತ್ಯಕ್ಷಂ ಹಿ ದೇಹೇ ಛಿದ್ಯಮಾನೇ ದಹ್ಯಮಾನೇ ವಾ ಅಹಂ ಛಿದ್ಯೇ ದಹ್ಯೇ ಇತಿ ಚ ಮಿಥ್ಯಾಭಿಮಾನೋ ದೃಷ್ಟಃ। ತಥಾ ಬಾಹ್ಯತರೇಷ್ವಪಿ ಪುತ್ರಮಿತ್ರಾದಿಷು ಸಂತಪ್ಯಮಾನೇಷು ಅಹಮೇವ ಸಂತಪ್ಯೇ ಇತ್ಯಧ್ಯಾರೋಪೋ ದೃಷ್ಟಃ। ತಥಾ ದುಃಖಿತ್ವಾದ್ಯಭಿಮಾನೋಽಪಿ ಸ್ಯಾತ್। ದೇಹಾದಿವದೇವ ಚೈತನ್ಯಾದ್ಬಹಿರುಪಲಭ್ಯಮಾನತ್ವಾತ್ ದುಃಖಿತ್ವಾದೀನಾಮ್। ಸುಷುಪ್ತಾದಿಷು ಚಾನನುವೃತ್ತೇಃ। ಚೈತನ್ಯಸ್ಯ ತು ಸುಷುಪ್ತೇಽಪ್ಯನುವೃತ್ತಿಮ್ ಆಮನನ್ತಿ "ಯದ್ವೈ ತನ್ನ ಪಶ್ಯತಿ ಪಶ್ಯನ್ ವೈ ತನ್ನ ಪಶ್ಯತಿ" (ಬೃ. ೪–೩–೨೩) ಇತ್ಯಾದಿನಾ। ತಸ್ಮಾತ್ ಸರ್ವದುಃಖವಿನಿರ್ಮುಕ್ತೈಕಚೈತನ್ಯಾತ್ಮಕೋಽಹಮ್ ಇತ್ಯೇಷ ಆತ್ಮಾನುಭವಃ। ನ ಚೈವಮ್ ಆತ್ಮಾನಮನುಭವತಃ ಕಿಂಚಿದನ್ಯತ್ ಕರ್ತವ್ಯಮ್ ಅವಶಿಷ್ಯತೇ। ತಥಾ ಚ ಶ್ರುತಿಃ "ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಯಂ ಲೋಕಃ" (ಬೃ.೪–೪–೨೨) ಇತ್ಯಾತ್ಮವಿದಃ ಕರ್ತವ್ಯಾಭಾವಂ ದರ್ಶಯತಿ । ಸ್ಮೃತಿರಪಿ "ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ । ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ" (ಗೀ. ೩–೧೭) ಇತಿ ॥

---

1. ಪ್ರಸಂಖ್ಯಾನವಾದಿಗಳು ಆತ್ಮಜ್ಞಾನವುಂಟಾದರೂ ಪ್ರತ್ಯಕ್ಷಾದಿಗಳು ಪ್ರಬಲವಾಗಿರುವದರಿಂದ ಅದು ಗಟ್ಟಿಯಾಗುವದಕ್ಕಾಗಿ ಪ್ರಸಂಖ್ಯಾನವನ್ನು ಮಾಡಬೇಕೆಂದು ಹೇಳುತ್ತಾರೆ. ಉಪ. ಸಾ. ಪದ್ಯ ೧೮ನ್ನು ನೋಡಿರಿ.

(ಭಾಷ್ಯಾರ್ಥ)

(ಆಕ್ಷೇಪ) :– ನಿಜ, ಯಾವನಿಗಾದರೂ ಈ ಅನುಭವವು ಉಂಟಾಗುವಂತಿದ್ದರೆ ಹೀಗೂ ಸರಿಯೆಂದಾಗುತ್ತಿತ್ತು. (ಆದರೆ) ಆತ್ಮನು ದುಃಖಿ ಎಂಬ ಅರಿವು ಬಲವಾಗಿರುತ್ತದೆಯಲ್ಲವೆ? ಆದ್ದರಿಂದ ದುಃಖಿತ್ವಾದಿಗಳು ಇಲ್ಲವೆಂಬದನ್ನು ಯಾವನೂ ಅರಿತುಕೊಳ್ಳುವದೇ ಇಲ್ಲ.[1]

(ಪರಿಹಾರ) :– ಹಾಗಲ್ಲ. ಏಕೆಂದರೆ **ದೇಹಾದಿಗಳ ಅಭಿಮಾನದಂತೆ ದುಃಖಿತ್ವಾದ್ಯಭಿಮಾನವೂ ಮಿಥ್ಯಾಭಿಮಾನವಾಗಿರಬಹುದಾಗಿದೆ.** (ಇದರ ವಿವರ): ದೇಹವನ್ನು ಕತ್ತರಿಸಿದರೆ ಅಥವಾ ಸುಟ್ಟರೆ ನನ್ನನ್ನೇ ಕತ್ತರಿಸುತ್ತಿದಾರೆ, ಸುಡುತ್ತಿದಾರೆ –ಎಂಬ ಮಿಥ್ಯಾಭಿಮಾನವು ಕಂಡುಬರುತ್ತದೆ ಹೀಗೆಯೇ ಇನ್ನೂ ಹೊರಗಿನ ಮಗ, ಗೆಳೆಯ –ಮುಂತಾದವರು ಸಂತಾಪಪಡುತ್ತಿದ್ದರೆ 'ನಾನೇ ಸಂತಾಪಪಡುತ್ತಿದೇನೆ' ಎಂಬ ಅಧ್ಯಾರೋಪವು ಕಂಡುಬರುತ್ತದೆ ಇದರಂತೆಯೇ ದುಃಖಿತ್ವಾದಿಗಳ ಅಭಿಮಾನವೂ (ಮಿಥ್ಯೆ) ಯಾಗಿರಬಹುದಾಗಿದೆ. ಏಕೆಂದರೆ (ದುಃಖಿತ್ವಾದಿಗಳೂ) ದೇಹಾದಿಗಳಂತೆ ಹೊರಗ ಕಾಣುತ್ತವೆ. ಸುಷುಪ್ತಿಯೇ ಮುಂತಾದ (ಅವಸ್ಥೆಗಳಲ್ಲಿ) ಅನುವರ್ತಿಸಿಕೊಂಡು ಬಂದಿರುವದಿಲ್ಲ. ಆದರೆ ಚೈತನ್ಯವು ಮಾತ್ರ ಸುಷುಪ್ತಿಯಲ್ಲಿಯೂ ಅನುಸರಿಸಿಕೊಂಡುಬರುತ್ತದೆ ಎಂದು "ಅಲ್ಲಿ ಕಾಣುವದಿಲ್ಲವೆಂಬುದುಂಟಲ್ಲ, ಆಗ ನೋಡುತ್ತಲೇ ಇದ್ದು ಕಾಣುವದಿಲ್ಲ" (ಬೃ. ೪–೩–೨೩) ಎಂದುಮುಂತಾದ ವಾಕ್ಯದಿಂದ ಪಠಿಸುತ್ತಾರೆ. **ಆದ್ದರಿಂದ ಯಾವ ದುಃಖವೂ ಇಲ್ಲದ ಅದ್ವಿತೀಯಚೈತನ್ಯರೂಪನೇ ನಾನು ಎಂಬಿದೇ ಆತ್ಮಾನುಭವವು.**[2] **ಹೀಗೆ ಆತ್ಮನನ್ನು ಅನುಭವಿಸುತ್ತಿರುವವರಿಗೆ ಮತ್ತೇನೂ ಮಾಡುವದು ಉಳಿದಿರುವದಿಲ್ಲ.** ಆದ್ದರಿಂದಲೇ ಶ್ರುತಿಯು "ಯಾವ ನಮಗೆ ಇವನೇ ಆತ್ಮನೋ, ಇವನೇ ಲೋಕವೋ (ಆ ನಾವು) ಪ್ರಜೆಯಿಂದ ಏನುಮಾಡೋಣ?" (ಬೃ. ೪–೪–೨೨) ಎಂದು ಆತ್ಮಜ್ಞಾನಿಗೆ ಕರ್ತವ್ಯವಿಲ್ಲವೆಂದು ತಿಳಿಸುತ್ತದೆ. "ಯಾವ ಮಾನವನಾದರೆ ಆತ್ಮನಲ್ಲಿಯೇ ರತಿಯುಳ್ಳವನೂ ಆತ್ಮನಿಂದಲೇ ತೃಪ್ತನೂ ಆಗಿರುವನೋ ಆತ್ಮನಲ್ಲಿಯೇ ಸಂತುಷ್ಟನೂ ಆಗಿರುವನೋ ಅವನಿಗೆ ಮಾಡತಕ್ಕದ್ದೇನೂ ಇರುವದಿಲ್ಲ" (ಗೀ. ೩–೧೭) ಎಂಬ ಸ್ಮೃತಿಯೂ (ಹಾಗೆಂದು ತಿಳಿಸುತ್ತದೆ

---

1. ಈ ಪೂರ್ವಪಕ್ಷವನ್ನೂ ಇದರ ಖಂಡನೆಯನ್ನೂ ತೈ. ಭಾ. ೩–೧೦ (ಭಾ. ಭಾ. ೨೫೨) ಉಪ. ಗದ್ಯ. ಖಂ. ೨೩–ಇವುಗಳಲ್ಲಿ ಕಾಣಬಹುದು.

2. ಪ್ರತ್ಯಕ್ಷದಿಂದ ಕಾಣುವ ದುಃಖಿತ್ವಾನುಭವವು ಈ ಸರಿಯಾದ ಅನುಭವದಿಂದ ಆಭಾಸೀಕೃತವಾಗುತ್ತದೆ.

# ಆವೃತ್ತಿಚರ್ಚೆಯ ಉಪಸಂಹಾರ

(ಭಾಷ್ಯ)

೫೦೮. ಯಸ್ಯ ತು ನೈಷೋಽನುಭವೋ ದ್ರಾಗಿವ ಜಾಯತೇ ತಂ ಪ್ರತ್ಯನುಭವಾರ್ಥ ಏವ ಆವೃತ್ತ್ಯಭ್ಯುಪಗಮಃ। ತತ್ರಾಪಿ ನ ತತ್ತ್ವಮಸಿ ವಾಕ್ಯಾರ್ಥಾತ್ ಪ್ರಚ್ಯಾವ್ಯ ಆವೃತ್ತೌ ಪ್ರವರ್ತಯೇತ್। ನ ಹಿ ವರಘಾತಾಯ ಕನ್ಯಾಮ್ ಉದ್ವಾಹಯನ್ತಿ। ನಿಯುಕ್ತಸ್ಯ ಚ ಅಸ್ಮಿನ್ ಅಧಿಕೃತೋಽಹಂ ಕರ್ತಾ ಮಯೇದಂ ಕರ್ತವ್ಯಮ್ ಇತ್ಯವಶ್ಯಂ ಬ್ರಹ್ಮಪ್ರತ್ಯಯಾದ್ ವಿಪರೀತ ಪ್ರತ್ಯಯ ಉತ್ಪದ್ಯತೇ। ಯಸ್ತು ಸ್ವಯಮೇವ ಮನ್ದಮತಿಃ ಅಪ್ರತಿಭಾನಾತ್ ತಂ ವಾಕ್ಯಾರ್ಥಂ ಜಿಹಾಸೇತ್ ತಸ್ಯ ಏತಸ್ಮಿನ್ನೇವ ಸ್ಥಿರೀಕಾರಃ ಆವೃತ್ತ್ಯಾದಿ ವಾಚೋಯುಕ್ತ್ಯಾ ಅಭ್ಯುಪೇಯತೇ। ತಸ್ಮಾತ್ ಪರಬ್ರಹ್ಮವಿಷಯೇಽಪಿ ಪ್ರತ್ಯಯೇ ತದುಪಾಯೋಪದೇಶೇಷು ಆವೃತ್ತಿಸಿದ್ಧಿಃ ॥

(ಭಾಷ್ಯಾರ್ಥ)

ಆದರೆ ಯಾವನಿಗೆ ಈ ಅನುಭವವು ಬೇಗನೆ ಉಂಟಾಗುವದಿಲ್ಲವೋ ಅವನಿಗೆ ಅನುಭವಾರ್ಥವಾಗಿಯೇ ಆವೃತ್ತಿಯನ್ನು ಒಪ್ಪಿರುವದು.[1] ಅದರಲ್ಲಿಯೂ ತತ್ತ್ವಮಸಿವಾಕ್ಯಾರ್ಥದಿಂದ ಕೆಳಕ್ಕೆ ಜಾರಿಸಿ (ಅವನನ್ನು) ಆವೃತ್ತಿಯಲ್ಲಿ ತೊಡಗಿಸಬಾರದು. ವರನನ್ನು ಕೊಲ್ಲಿಸುವದಕ್ಕೆ ಕನ್ಯೆಯನ್ನು ಕೊಟ್ಟು ಮದುವೆ ಮಾಡಿಸುವದಿಲ್ಲವಷ್ಟೆ.[2] ನಿಯುಕ್ತನಾದವನಿಗೆ 'ಇದಕ್ಕೆ ನಾನು ಅಧಿಕಾರಿಯು, ಕರ್ತನು ; ನಾನು ಇದನ್ನು ಮಾಡಬೇಕು' ಎಂದು ಅವಶ್ಯವಾಗಿ ಬ್ರಹ್ಮಪ್ರತ್ಯಯಕ್ಕಿಂತ ವಿಪರೀತವಾದ ಪ್ರತ್ಯಯವು ಉಂಟಾಗುತ್ತದೆ.[3] **ಆದರೆ ಯಾವನು ಅಲ್ಪಬುದ್ಧಿಯುವನಾಗಿ ಸರಿಯಾಗಿ ತಿಳಿಯದ್ದರಿಂದ ಆ ವಾಕ್ಯಾರ್ಥವನ್ನು ತಾನೇ ಬಿಡುವದಕ್ಕೆ ಹೋಗುತ್ತಾನೋ ಅವನನ್ನು ಇದೇ ವಾಕ್ಯಾರ್ಥದಲ್ಲಿ ಸ್ಥಿರಗೊಳಿಸುವದನ್ನೇ ಆವೃತ್ತಿಯೇ ಮುಂತಾದ ವಾಚೋಯುಕ್ತಿಯಿಂದ ಒಪ್ಪಿರುತ್ತದೆ.**[4] ಆದ್ದರಿಂದ ಪರಬ್ರಹ್ಮವಿಷಯಕವಾದ ಪ್ರತ್ಯಯದಲ್ಲಿಯೂ ಅದರ ಸಾಧನವನ್ನು ಉಪದೇಶಿಸುವ (ವಾಕ್ಯ)ಗಳಲ್ಲಿ ಆವೃತ್ತಿಯನ್ನು (ಮಾಡಬೇಕೆಂದು) ಸಿದ್ಧವಾಯಿತು.

---

1. ವಾಕ್ಯಾರ್ಥದ ಜ್ಞಾನವಾದಮೇಲೆ ಆವೃತ್ತಿಯಿಲ್ಲ.

2. ಕನ್ಯೆಯನ್ನು ಕೊಡುವದು ವರನೊಡನೆ ಸುಖವಾಗಿ ಬಾಳಲೆಂದು ; ವರನನ್ನು ಕೊಂದರೆ ಕನ್ಯೆಯ ಬಾಳೇ ವ್ಯರ್ಥವಾಗುವದು. ಇದರಂತೆ ವಾಕ್ಯಾರ್ಥವನ್ನು ತಪ್ಪಿಸಿ ಆವೃತ್ತಿಮಾಡಿಸಿದರೆ ಆವೃತ್ತಿಯೇ ವ್ಯರ್ಥವಾಗುವದು.

3. ಆಗ ವಾಕ್ಯಾರ್ಥದ ಅನುಭವವುಂಟಾಗುವದಕ್ಕೇ ಅಡ್ಡಿಯಾಗುವದು.

4. ಅನುಭವಕ್ಕೆ ಅಡ್ಡಿಯಾದ ಅಜ್ಞಾನಾದಿಗಳನ್ನು ಕಳೆಯುವ ಶಾಸ್ತ್ರಯುಕ್ತಿಗಳ ಅಭ್ಯಾಸವೇ ಆವೃತ್ತಿಯು ; ವಾಕ್ಯದ ಜಪವಲ್ಲ.

## ೨. ಆತ್ಮತ್ವೋಪಾಸನಾಧಿಕರಣ

(ಬ್ರಹ್ಮನನ್ನು ನಾನು ಎಂದೇ ಅರಿಯಬೇಕು)

**ಆತ್ಮೇತಿ ತೂಪಗಚ್ಛನ್ತಿ ಗ್ರಾಹಯನ್ತಿ ಚ ॥ ೩ ॥**

೩. ಆತ್ಮನೆಂದೇ (ಶ್ರುತಿಗಳು) ಒಪ್ಪಿರುತ್ತವೆ, ಮತ್ತು ತಿಳಿಸಿ, ಕೊಡುತ್ತವೆ.

## ಪೂರ್ವಪಕ್ಷ: ಪರಮಾತ್ಮನನ್ನು ನಾನೆಂದು ತಿಳಿಯಬಾರದು

(ಭಾಷ್ಯ)

೫೦೯. ಯಃ ಶಾಸ್ತ್ರೋಕ್ತವಿಶೇಷಣಃ ಪರಮಾತ್ಮಾ ಸ ಕಿಮಹಮಿತಿ ಗ್ರಹೀತವ್ಯಃ, ಕಿಂ ವಾ ಮದನ್ಯ (ಇತಿ)[1] ಇತ್ಯೇತದ್ವಿಚಾರಯತಿ । ಕಥಂ ಪುನರಾತ್ಮಶಬ್ದೇ ಪ್ರತ್ಯಗಾತ್ಮವಿಷಯೇ ಶ್ರೂಯಮಾಣೇ ಸಂಶಯ ಇತಿ ? ಉಚ್ಯತೇ । ಅಯಮಾತ್ಮಶಬ್ದೋ ಮುಖ್ಯಃ ಶಕ್ಯತೇ ಅಭ್ಯುಪಗನ್ತುಂ ಸತಿ ಜೀವೇಶ್ವರಯೋರಭೇದಸಂಭವೇ । ಇತರಥಾ ತು ಗೌಣೋಽಯಮಭ್ಯುಪಗನ್ತವ್ಯಃ ಇತಿ ಮನ್ಯತೇ । ಕಿಂ ತಾವತ್ ಪ್ರಾಪ್ತಮ್ ? ನಾಹಮಿತಿ ಗ್ರಾಹ್ಯಃ। ನ ಹಿ ಅಪಹತಪಾಪ್ಮತ್ವಾದಿಗುಣೋ ವಿಪರೀತಗುಣತ್ವೇನ ಶಕ್ಯತೇ ಗ್ರಹೀತುಮ್, ವಿಪರೀತಗುಣೋ ವಾ ಅಪಹತಪಾಪ್ಮತ್ವಾದಿಗುಣತ್ವೇನ । ಅಪಹತಪಾಪ್ಮತ್ವಾದಿಗುಣಶ್ಚ ಪರಮೇಶ್ವರಃ, ತದ್ವಿಪರೀತಗುಣಸ್ತು ಶಾರೀರಃ। ಈಶ್ವರಸ್ಯ ಚ ಸಂಸಾರ್ಯಾತ್ಮತ್ವೇ ಈಶ್ವರಾಭಾವಪ್ರಸಙ್ಗಃ। ತತಃ ಶಾಸ್ತ್ರಾನರ್ಥಕ್ಯಮ್ । ಸಂಸಾರಿಣೋಽಪಿ ಈಶ್ವರಾತ್ಮತ್ವೇ ಅಧಿಕಾರ್ಯಭಾವಾತ್ ಶಾಸ್ತ್ರಾನರ್ಥಕ್ಯಮೇವ । ಪ್ರತ್ಯಕ್ಷವಿರೋಧಶ್ಚ । ಅನ್ಯತ್ವೇಽಪಿ ತಾದಾತ್ಮ್ಯದರ್ಶನಂ ಶಾಸ್ತ್ರಾತ್ ಕರ್ತವ್ಯಂ ಪ್ರತಿಮಾದಿಷ್ವಿವ ವಿಷ್ಣ್ವಾದಿದರ್ಶನಮ್ ಇತಿ ಚೇತ್ ಕಾಮಮೇವಂ ಭವತು । ನ ತು ಸಂಸಾರಿಣೋ ಮುಖ್ಯ ಆತ್ಮಾ ಈಶ್ವರಃ ಇತ್ಯೇತನ್ನಃ ಪ್ರಾಪಯಿತವ್ಯಮ್ ॥

(ಭಾಷ್ಯಾರ್ಥ)

ಶಾಸ್ತ್ರದಲ್ಲಿ ಹೇಳಿರುವ ವಿಶೇಷಣಗಳುಳ್ಳ ಪರಮಾತ್ಮನಿದಾನಲ್ಲ, ಅವನನ್ನೇನು ನಾನು ಎಂದೇ ಗ್ರಹಿಸಬೇಕೊ, ಅಥವಾ ನನಗಿಂತ ಬೇರೆಯಾದವನು ಎಂದು (ಗ್ರಹಿಸಬೇಕೊ)? ಎಂಬಿದನ್ನು (ಇಲ್ಲಿ) ವಿಚಾರಮಾಡುತ್ತಾರೆ.

(ಆಕ್ಷೇಪ):– ಪ್ರತ್ಯಗಾತ್ಮವಿಷಯವಾಗಿರುವ ಆತ್ಮಶಬ್ದವು ಶ್ರುತಿಯಲ್ಲಿರುವಲ್ಲಿ ಸಂಶಯ(ವುಂಟಾಗುವದು) ಹೇಗೆ ?

---

1. ಇಲ್ಲೊಂದು ಇತಿಯು ಇರಬೇಕಾಗಿದ್ದು ಬಿಟ್ಟುಹೋಗಿದೆ ಎಂದು ತೋರುತ್ತದೆ.

( ಪರಿಹಾರ ) :– ಹೇಳುತ್ತೇವೆ. ಜೀವೇಶ್ವರರಿಗೆ ಅಭೇದವು ಹೊಂದುವಂತಿದ್ದರೆ ಈ ಆತ್ಮಶಬ್ದವು ಮುಖ್ಯಾರ್ಥ(ದಲ್ಲಿ ಪ್ರಯುಕ್ತವಾಗಿದೆ) ಎಂದು ಒಪ್ಪಬಹುದು. ಹಾಗಿಲ್ಲದಿದ್ದರೋ ಇದನ್ನು ಗೌಣವೆಂದು ಒಪ್ಪಬೇಕಾಗುವದು ಎಂದು (ಸಂಶಯಕಾರನ) ಅಭಿಪ್ರಾಯ.

ಇಲ್ಲಿ ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? ನಾನೆಂದು ಗ್ರಹಿಸಬಾರದು. ಏಕೆಂದರೆ ಅಪಹತಪಾಪ್ಮತ್ವವೇ ಮುಂತಾದ ಗುಣಗಳುಳ್ಳವನನ್ನು (ಅದಕ್ಕೆ) ವಿಪರೀತವಾದ ಗುಣವುಳ್ಳವನೆಂದಾಗಲಿ, ವಿಪರೀತಗುಣವುಳ್ಳವನನ್ನು ಅಪಹತಪಾಪ್ಮತ್ವಾದಿಗುಣಗಳುಳ್ಳವನೆಂದಾಗಲಿ ಗ್ರಹಿಸುವದಕ್ಕೆ ಆಗಲಾರದು. ಆದರೆ ಪರಮೇಶ್ವರನು ಅಪಹತಪಾಪ್ಮತ್ವಾದಿಗುಣಗಳುಳ್ಳವನು, ಶಾರೀರನೋ ಅದಕ್ಕೆ ವಿಪರೀತವಾದ ಗುಣಗಳುಳ್ಳವನು. **ಈಶ್ವರನು ಸಂಸಾರಿಯ ಸ್ವರೂಪನು ಎಂದರೆ ಈಶ್ವರನೇ ಇಲ್ಲವೆಂದಾಗುವದು ; ಅದರಿಂದ ಶಾಸ್ತ್ರಾನರ್ಥಕ್ಯವುಂಟಾಗುವದು. ಸಂಸಾರಿಯು ಈಶ್ವರಸ್ವರೂಪನೆಂದರೂ ಅಧಿಕಾರಿಯಿಲ್ಲದ್ದರಿಂದ ಶಾಸ್ತ್ರಾನರ್ಥಕ್ಯವೇ ಉಂಟಾಗುವದು ; ಪ್ರತ್ಯಕ್ಷಾದಿಗಳಿಗೂ ವಿರೋಧವಾಗುವದು.**[1] (ಇವರಿಬ್ಬರೂ) ಬೇರೆಯಾಗಿದ್ದರೂ ಒಂದೇ ಎಂದು ಶಾಸ್ತ್ರ(ಪ್ರಮಾಣ)ದಿಂದ ತಿಳಿಯಬೇಕು ; ಪ್ರತಿಮಾದಿಗಳನ್ನು ವಿಷ್ಣು ಮುಂತಾದವರೆಂದು (ತಿಳಿಯು)ವಂತೆಯೋ (ಇದು) –ಎನ್ನುವದಾದರೆ (ನಿಮ್ಮ) ಇಷ್ಟವಿದ್ದರೆ ಹಾಗೇ ಆಗಲಿ, ಸಂಸಾರಿಗೆ ಈಶ್ವರನು ಮುಖ್ಯಾರ್ಥದಲ್ಲಿ ಆತ್ಮನೇ ಎಂಬಿದನ್ನು ಮಾತ್ರ ನಮಗೆ ತಂದೊಡ್ಡಬೇಡಿರಿ.

## ಸಿದ್ಧಾಂತ :
## ಪರಮೇಶ್ವರನು ನಮ್ಮ ಆತ್ಮನೆಂದೇ ತಿಳಿಯಬೇಕು

**(ಭಾಷ್ಯ)**

೫೧೦. ಏವಂ ಪ್ರಾಪ್ತೇ ಬ್ರೂಮಃ । ಆತ್ಮೇತ್ಯೇವ ಪರಮೇಶ್ವರಃ ಪ್ರತಿಪತ್ತವ್ಯಃ । ತಥಾ ಹಿ ಪರಮೇಶ್ವರಪ್ರಕ್ರಿಯಾಯಾಂ ಜಾಬಾಲಾ ಆತ್ಮತ್ವೇನೈವ ಏತಮ್ ಉಪಗಚ್ಛನ್ತಿ "ತ್ವಂ ವಾ ಅಹಮಸ್ಮಿ ಭಗವೋ ದೇವತೇಽಹಂ ವೆ ತ್ವಮಸಿ ಭಗವೋ ದೇವತೇ"(?)[2] ಇತಿ। ತಥಾ ಅನ್ಯೇಽಪಿ "ಅಹಂ ಬ್ರಹ್ಮಾಸ್ಮಿ" (ಬೃ. ೧–೪–೧೦) ಇತ್ಯೇವಮಾದಯ ಆತ್ಮತ್ವೋಪಗಮಾ ದ್ರಷ್ಟವ್ಯಾಃ। ಗ್ರಾಹಯನ್ತಿ ಚಾತ್ಮತ್ವೇನೈವ ಈಶ್ವರಂ ವೇದಾನ್ತವಾಕ್ಯಾನಿ "ಏಷ ತ ಆತ್ಮಾ

1. ಗೀ. ಭಾ. ೧೩–೨ರಲ್ಲಿಯೂ ಈ ಆಕ್ಷೇಪವೂ ಅದರ ಸಮಾಧಾನವೂ ಇವೆ.

2. ಇದು ಅಚ್ಚಾಗಿರುವ ಜಾಬಾಲೋಪನಿಷತ್ತಿನಲ್ಲಿ ಕಾಣುವದಿಲ್ಲ ; ಹಿಂದೆ ೩–೩–೩೭ರಲ್ಲಿಯೂ ಇದೇ ವಾಕ್ಯವನ್ನು ಉದಾಹರಿಸಿದೆ.

ಸರ್ವಾನ್ತರಃ" (ಬೃ. ೩-೪-೧), "ಏಷ ತ ಆತ್ಮಾನ್ತರ್ಯಾಮ್ಯಮೃತಃ" (ಬೃ. ೩-೭-೩), "ತತ್ಸತ್ಯಂ ಸ ಆತ್ಮಾ ತತ್ತ್ವಮಸಿ" (ಛಾಂ. ೬-೮-೭) ಇತ್ಯೇವಮಾದೀನಿ। ಯದುಕ್ತಂ ಪ್ರತೀಕದರ್ಶನಮಿದಂ ವಿಷ್ಣುಪ್ರತಿಮಾನ್ಯಾಯೇನ ಭವಿಷ್ಯತೀತಿ। ತದಯುಕ್ತಮ್। ಗೌಣತ್ವಪ್ರಸಙ್ಗಾತ್। ವಾಕ್ಯವೈರೂಪ್ಯಾಚ್ಚ। ಯತ್ರ ಪ್ರತೀಕದೃಷ್ಟಿರಭಿಪ್ರೇಯತೇ ಸಕೃದೇವ ತತ್ರ ವಚನಂ ಭವತಿ। ಯಥಾ "ಮನೋ ಬ್ರಹ್ಮ" (ಛಾಂ. ೩-೧೮-೧) "ಆದಿತ್ಯೋ ಬ್ರಹ್ಮ" (ಛಾಂ. ೩-೧೯-೧) ಇತ್ಯಾದಿ। ಇಹ ಪುನಃ "ತ್ವಮಹಮಸ್ಮಿ, ಅಹಂ ಚ ತ್ವಮಸಿ" ಇತ್ಯಾಹ। ಅತಃ ಪ್ರತೀಕಶ್ರುತಿವೈರೂಪ್ಯಾತ್ ಅಭೇದಪ್ರತಿಪತ್ತಿಃ। ಭೇದದೃಷ್ಟ್ಯಪವಾದಾಚ್ಚ। ತಥಾ ಹಿ "ಅಥ ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ" (ಬೃ. ೧-೪-೧೦) "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (ಬೃ. ೪-೪-೧೯), "ಸರ್ವಂ ತಂ ಪರಾದಾದ್ ಯೋಽನ್ಯತ್ರಾತ್ಮನಃ ಸರ್ವಂ ವೇದ" (ಬೃ. ೪-೫-೭) ಇತ್ಯೇವಮಾದ್ಯಾ ಭೂಯಸೀ ಶ್ರುತಿರ್ಭೇದದರ್ಶನಮ್ ಅಪವದತಿ। ಯತ್ತೂಕ್ತಂ ನ ವಿರುದ್ಧಗುಣಯೋರನ್ಯೋನ್ಯಾತ್ಮತ್ವಸಂಭವಃ ಇತಿ। ನಾಯಂ ದೋಷಃ। ವಿರುದ್ಧಗುಣತಾಯಾ ಮಿಥ್ಯಾತ್ವೋಪಪತ್ತೇಃ। ಯತ್ಪುನರುಕ್ತಮ್ ಈಶ್ವರಾಭಾವಪ್ರಸಙ್ಗಃ ಇತಿ। ತದಸತ್। ಶಾಸ್ತ್ರಪ್ರಾಮಾಣ್ಯಾತ್। ಅನಭ್ಯುಪಗಮಾಚ್ಚ। ನ ಹೀಶ್ವರಸ್ಯ ಸಂಸಾರ್ಯಾತ್ಮತ್ವಂ ಪ್ರತಿಪಾದ್ಯತ ಇತ್ಯಭ್ಯುಪಗಚ್ಛಾಮಃ। ಕಿಂ ತರ್ಹಿ ಸಂಸಾರಿಣಃ ಸಂಸಾರಿತ್ವಾಪೋಹೇನ ಈಶ್ವರಾತ್ಮತ್ವಂ ಪ್ರತಿಪಿಪಾದಯಿಷಿತಮಿತಿ। ಏವಂ ಚ ಸತ್ಯಾ[1] ಅದ್ವೈತೇಶ್ವರಸ್ಯ ಅಪಹತಪಾಪ್ಮತ್ವಾದಿಗುಣತಾ, ವಿಪರೀತಗುಣತಾ ತು ಇತರಸ್ಯ ಮಿಥ್ಯಾ ಇತಿ ವ್ಯವತಿಷ್ಠತೇ। ಯದಪ್ಯುಕ್ತಮ್ ಅಧಿಕಾರ್ಯಭಾವಃ ಪ್ರತ್ಯಕ್ಷಾದಿವಿರೋಧಶ್ಚ ಇತಿ। ತದಪ್ಯಸತ್। ಪ್ರಾಕ್ಪ್ರಬೋಧಾತ್ ಸಂಸಾರಿತ್ವಾಭ್ಯುಪಗಮಾತ್। ತದ್ವಿಷಯತ್ವಾಚ್ಚ ಪ್ರತ್ಯಕ್ಷಾದಿವ್ಯವಹಾರಸ್ಯ। "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ. ೨-೪-೧೪) ಇತ್ಯಾದಿನಾ ಹಿ ಪ್ರಬೋಧೇ ಪ್ರತ್ಯಕ್ಷಾದ್ಯಭಾವಂ ದರ್ಶಯತಿ। ಪ್ರತ್ಯಕ್ಷಾದ್ಯಭಾವೇ ಶ್ರುತೇರಪ್ಯಭಾವಪ್ರಸಙ್ಗಃ ಇತಿ ಚೇತ್। ನ। ಇಷ್ಟತ್ವಾತ್। "ಅತ್ರ ಪಿತಾಽಪಿತಾ ಭವತಿ" (ಬೃ. ೪-೩-೨೨) ಇತ್ಯುಪಕ್ರಮ್ಯ "ವೇದಾ ಅವೇದಾಃ" (ಬೃ. ೪-೩-೨೨) ಇತಿ ವಚನಾತ್ ಇಷ್ಯತ ಏವಾಸ್ಮಾಭಿಃ ಶ್ರುತೇರಪ್ಯಭಾವಃ ಪ್ರಬೋಧೇ। ಕಸ್ಯ ಪುನರಯಮಪ್ರಬೋಧಃ ಇತಿ ಚೇತ್। ಯಸ್ತ್ವಂ ಪೃಚ್ಛಸಿ

1. 'ಸತ್ಯಾದ್ವೈತೇಶ್ವರಸ್ಯ' ಎಂದಿರಬೇಕಾದದ್ದು 'ಸತ್ಯದ್ವೈತೇಶ್ವರಸ್ಯ' ಎಂದು ಬರೆಯುವ ಕೈತಪ್ಪಿನಿಂದ ಆಗಿದೆ ಎಂದು ಇಟ್ಟುಕೊಳ್ಳಲಾಗಿದೆ.

ತಸ್ಯ ತ ಇತಿ ವದಾಮಃ । ನನ್ವಹಮಿಶ್ವರ ಏವೋಕ್ತಃ ಶ್ರುತ್ಯಾ । ಯದ್ಯೇವಂ ಪ್ರತಿಬುದ್ಧೋಽಸಿ, ನಾಸ್ತಿ ಕಸ್ಯಚಿದಪ್ರಬೋಧಃ । ಯೋಽಪಿ ದೋಷಶ್ಚೋದ್ಯತೇ ಕೈಶ್ಚಿತ್, ಅವಿದ್ಯಯಾ ಕಿಲಾತ್ಮನಃ ಸದ್ವಿತೀಯತ್ವಾತ್ ಅದ್ವೈತಾನುಪಪತ್ತಿರಿತಿ, ಸೋಽಪ್ಯೇತೇನ ಪ್ರತ್ಯುಕ್ತಃ । ತಸ್ಮಾತ್ ಆತ್ಮೇತ್ಯೇವ ಈಶ್ವರೇ ಮನೋ ದಧೀತ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಆತ್ಮನೆಂದೇ ಪರಮೇಶ್ವರನನ್ನು ತಿಳಿಯಬೇಕು. ಏಕೆಂದರೆ, ಪರಮೇಶ್ವರಪ್ರಕರಣದಲ್ಲಿ ಜಾಬಾಲರು "ಪೂಜ್ಯದೇವತೆಯೇ, ನೀನೇ ನಾನಾಗಿರುವೆನು ; ಪೂಜ್ಯದೇವತೆಯೆ, ನಾನೇ ನೀನಾಗಿರುವೆ" (?) ಎಂದು ಇವನನ್ನು ಆತ್ಮನೆಂದೇ ಅಂಗೀಕರಿಸಿರುತ್ತಾರೆ; ಹೀಗೆಯೇ "ನಾನು ಬ್ರಹ್ಮವಾಗಿರುವೆನು" (ಬೃ. ೧-೪-೧೦) ಮುಂತಾದ ಆತ್ಮತ್ವೋಪಗಮಗಳನ್ನೂ (ಇಲ್ಲಿ) ಸೇರಿಸಿಕೊಳ್ಳಬೇಕು. ವೇದಾಂತವಾಕ್ಯಗಳು ಈಶ್ವರನು ಆತ್ಮನೆಂದೇ "ಇವನೇ ನಿನ್ನ ಸರ್ವಾಂತರನಾದ ಆತ್ಮನು" (ಬೃ. ೩-೪-೧), "ಇವನೇ ನಿನ್ನ ಆತ್ಮನಾದ ಅಮೃತ ಅಂತರ್ಯಾಮಿಯು" (ಬೃ. ೩-೭-೩), "ಅದು ನಿತ್ಯವು, ಅದೇ ಆತ್ಮನು ; (ಶ್ವೇತಕೇತುವೆ,) ಅದೇ ನೀನಾಗಿರುವೆ" (ಛಾಂ.೬-೮-೭) ಎಂಬುದೇ ಮುಂತಾದ ವಾಕ್ಯಗಳು ತಿಳಿಸುತ್ತವೆ.

ಇದು ವಿಷ್ಣುಪ್ರತಿಮಾನ್ಯಾಯದಿಂದ ಪ್ರತೀಕದರ್ಶನವಾಗಿರಬಹುದು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದು ಸರಿಯಲ್ಲ. ಏಕೆಂದರೆ (ಆಗ ಆತ್ಮಶಬ್ದವು) ಗೌಣವಾಗಬೇಕಾಗುವದು. ವಾಕ್ಯವೈರೂಪ್ಯದಿಂದಲೂ (ಹೀಗೆಂದು ತಿಳಿಯಬೇಕು. ಇದರ ವಿವರ) : ಎಲ್ಲಿ ಪ್ರತೀಕದೃಷ್ಟಿಯನ್ನು (ಮಾಡಬೇಕೆಂಬ) ಅಭಿಪ್ರಾಯವಿರುವದೋ ಅಲ್ಲಿ ಒಂದೇ ಸಲ ವಚನವಿರುತ್ತದೆ. ಉದಾಹರಣೆಗೆ "ಮನಸ್ಸು ಬ್ರಹ್ಮವು" (ಛಾಂ.೩-೧೮-೧), "ಆದಿತ್ಯನು ಬ್ರಹ್ಮವು" (ಛಾಂ. ೩-೧೯-೧) ಇತ್ಯಾದಿ (ವಾಕ್ಯಗಳು ಪ್ರತೀಕದೃಷ್ಟಿಯವು).

ಆದರೆ ಇಲ್ಲಿ "ನೀನೇ ನಾನಾಗಿರುವೆನು, ನೀನೂ ನಾನೇ ಆಗಿರುವೆ" ಎಂದು ಹೇಳಿರುತ್ತದೆ. ಆದ್ದರಿಂದ ಪ್ರತೀಕಶ್ರುತಿಗಿಂತ ಬೇರೆಯ ರೂಪದ್ದಾಗಿರುವದರಿಂದ ಅಭೇದಜ್ಞಾನವಾಗುತ್ತದೆ. ಭೇದದೃಷ್ಟಿಯನ್ನು ನಿಂದಿಸಿರುವದರಿಂದಲೂ (ಹೀಗೆ). ಹೇಗೆಂದರೆ "ಇನ್ನು ಯಾವನು ಮತ್ತೊಂದು ದೇವತೆಯನ್ನು ಇದು ಬೇರೆ, ನಾನು ಬೇರೆಯಾಗಿರುವೆನು- ಎಂದು ಉಪಾಸನೆಮಾಡುವನೋ ಅವನು ಅರಿಯನು" (ಬೃ. ೧-೪-೧೦), "ಯಾವನು ಇಲ್ಲಿ ನಾನಾತ್ವವಿರುವಂತೆ ಕಾಣುವನೋ ಅವನು ಸಾವಿನಮೇಲೆ ಸಾವನ್ನು ಪಡೆಯುತ್ತಿರುವನು" (ಬೃ ೪-

–೪–೧೯), "ಆತ್ಮನಿಂದ ಬೇರೆಯಾಗಿ ಯಾವದನ್ನಾದರೂ ಯಾವನು ತಿಳಿಯು ವನೋ ಅವನನ್ನು ಎಲ್ಲವೂ ನಿರಾಕರಿಸುವವು" (ಬೃ. ೪–೫–೭) ಎಂಬಿದೇ ಮುಂತಾದ ಹೆಚ್ಚಿನ (ಸಂಖ್ಯೆಯ) ಶ್ರುತಿಗಳು ಭೇದದರ್ಶನವನ್ನು ನಿಂದಿಸಿರು ತ್ತವೆ.

ಇನ್ನು ವಿರುದ್ಧಗುಣವುಳ್ಳ (ಇಬ್ಬರು) ಒಬ್ಬರು ಮತ್ತೊಬ್ಬರ ಸ್ವರೂಪದ ಲ್ಲಿರುವದು ಅಸಂಭವ ಎಂದು (ಪೂರ್ವಪಕ್ಷ)ದಲ್ಲಿ ಹೇಳಿತ್ತಷ್ಟೆ, ಇದೇನೂ ದೋಷ ವಲ್ಲ ; ಏಕೆಂದರೆ ವಿರುದ್ಧಗುಣಗಳುಳ್ಳವರಾಗಿರುವರೆಂಬುದು ಹುಸಿಯಾಗಿರ ಬಹುದು. ಇನ್ನು ಈಶ್ವರನೇ ಇಲ್ಲದಂತಾಗುವ ಪ್ರಸಕ್ತಿಯುಂಟಾಗುವದು ಎಂದಿ ರಲ್ಲ, ಅದು ಸರಿಯಲ್ಲ ; ಏಕೆಂದರೆ ಶಾಸ್ತ್ರಪ್ರಾಮಾಣ್ಯದಿಂದಲೂ (ಈಶ್ವರನಿರು ತ್ತಾನೆಂದು ಸಿದ್ಧವಾಗಿದೆ. (ನಾವು) ಒಪ್ಪಿರುವದಿಲ್ಲವಾದ್ದರಿಂದಲೂ (ಈ ಪ್ರಸಕ್ತಿ ಯಿಲ್ಲ. ಇದರ ವಿವರ): **ಈಶ್ವರನಿಗೆ ಸಂಸಾರಿಸ್ವರೂಪವನ್ನು ಹೇಳಿದೆ ಎಂದು ನಾವು ಒಪ್ಪಿರುವದಿಲ್ಲ ; ಮತ್ತೇನೆಂದರೆ ಸಂಸಾರಿಯು ಸಂಸಾ ರಿತ್ವವನ್ನು ಅಲ್ಲಗಳೆದು ಈಶ್ವರಸ್ವರೂಪವನ್ನೇ (ಅವನಿಗೆ) ಹೇಳ ಬೇಕೆಂದು ಹೊರಟಿದೆ (ಎಂದು ಒಪ್ಪಿರುತ್ತೇವೆ). ಹೀಗಿರುವದರಿಂದ ಅದ್ವೈತೇಶ್ವರನು ಅಪಹತಪಾಪ್ಮತ್ವಾದಿಗುಣಗಳುಳ್ಳವನೆಂಬುದು ಸತ್ಯವು, ಇನ್ನೊಬ್ಬನಾದ (ಜೀವನು ಅದಕ್ಕೆ) ವಿಪರೀತವಾಗಿರುವ ಗುಣಗಳುಳ್ಳವನೆಂಬುದು ಹುಸಿಯು ಎಂದು ಸಿದ್ಧವಾಗುತ್ತದೆ.** ಇನ್ನು ಅಧಿಕಾರಿಯೇ ಇಲ್ಲವೆಂದಾಗುತ್ತದೆ, ಪ್ರತ್ಯಕ್ಷಾದಿಗಳಿಗೆ ವಿರೋಧವೂ ಆಗುತ್ತದೆ ಎಂದಿರಲ್ಲ, ಅದೂ ಸರಿಯಲ್ಲ. ಏಕೆಂದರೆ ಜ್ಞಾನವಾಗುವ ಮುಂಚೆ ಸಂಸಾರಿತ್ವವನ್ನು ಒಪ್ಪಿಕೊಂಡಿರುತ್ತೇವೆ, ಮತ್ತು ಪ್ರತ್ಯಕ್ಷಾದಿವ್ಯವಹಾರವು ಆ (ಸಂಸಾರಿಯು) ವಿಷಯವಾಗಿರುತ್ತದೆ. "ಎಲ್ಲಿಯಾದರೆ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ಕಂಡಾನು ?" (ಬೃ. ೨–೪ –೧೪) ಎಂದು ಮುಂತಾದ (ವಾಕ್ಯದಿಂದ **ಶ್ರುತಿಯು) ಜ್ಞಾನವಾಗು ತ್ತಲೂ ಪ್ರತ್ಯಕ್ಷಾದಿಗಳ ಅಭಾವವನ್ನು ತಿಳಿಸುತ್ತದೆ. ಪ್ರತ್ಯಕ್ಷಾದಿ ಗಳು ಇಲ್ಲವಾದರೆ ಶ್ರುತಿಯೂ ಇಲ್ಲವೆಂದಾಗುವದಲ್ಲ ! ಎಂದರೆ ಹಾಗಲ್ಲ ; ಏಕೆಂದರೆ (ಅದು) ಇಷ್ಟವಾಗಿರುತ್ತದೆ.**[1] "ಇಲ್ಲಿ ತಂದೆಯು ತಂದೆಯಲ್ಲವಾಗುತ್ತಾನೆ" (ಬೃ. ೪–೩–೨೨) ಎಂದು ಉಪಕ್ರಮಿಸಿ "ವೇದಗಳು ಅವೇದಗಳಾಗುತ್ತವೆ" (ಬೃ. ೪–೩– ೨೨) ಎಂಬ ವಚನವಿರುವದರಿಂದ ಜ್ಞಾನ ವಾಗುತ್ತಲೂ ಶ್ರುತಿಯೂ ಇರುವದಿಲ್ಲವೆಂಬುದು ನಮಗೆ ಇಷ್ಟವೇ ಆಗಿರುತ್ತದೆ.

(ಆಕ್ಷೇಪ):– ಈ ಅಜ್ಞಾನವೆಂಬುದು ಯಾರಿಗೆ ?

---

1. ಶ್ರುತಿಪ್ರಾಮಾಣ್ಯವು ಜ್ಞಾನಕ್ಕಾಗಿ ಬೇಕು ; ಜ್ಞಾನವಾದಮೇಲೆ ಅದ್ವೈತವೇ.

(ಪರಿಹಾರ):– (ಹೀಗೆಂದು) ಕೇಳುತ್ತಿರುವೆಯಲ್ಲ. ಈ ನಿನಗೇ ಎನ್ನುತ್ತೇವೆ.

(ಆಕ್ಷೇಪ):– ನಾನು ಈಶ್ವರನೇ ಎಂದು ಶ್ರುತಿಯಲ್ಲಿ ಹೇಳಿದೆಯಲ್ಲ. !

(ಪರಿಹಾರ):– **ಹೀಗೆ ಅರಿತುಕೊಂಡಿರುವೆಯಾದರೆ ಯಾವನಿಗೂ ಅಜ್ಞಾನವು ಇರುವದೇ ಇಲ್ಲ.[1] ಇನ್ನು ಕೆಲವರು ಅವಿದ್ಯೆಯಿದ್ದರೆ ಆತ್ಮನು ಸದ್ವಿತೀಯನಾಗಿರುವದರಿಂದ ಅದ್ವೈತವೆಂಬುದು ಹೊಂದುವದಿಲ್ಲ ಎಂದು ದೋಷವನ್ನು ಹಾಕುತ್ತಾರಲ್ಲ, ಅದಕ್ಕೂ ಇದರಿಂದಲೇ ಉತ್ತರವನ್ನು ಹೇಳಿದಂತೆ ಆಯಿತು.[2]**

ಆದ್ದರಿಂದ ಆತ್ಮನೆಂದೇ ಈಶ್ವರನಲ್ಲಿ ಮನಸ್ಸನ್ನು ಇಡಬೇಕು.

## ೩. ಪ್ರತೀಕಾಧಿಕರಣ

( ಪ್ರತೀಕದಲ್ಲಿ ನಾನೆಂಬ ಬುದ್ಧಿಯನ್ನು ಮಾಡಬಾರದು )

**ನ ಪ್ರತೀಕೇ ನ ಹಿ ಸಃ ॥ ೪ ॥**

೪. ಪ್ರತೀಕದಲ್ಲಿ ( ಆತ್ಮಬುದ್ಧಿ )ಯಿಲ್ಲ ; ಏಕೆಂದರೆ ಆ (ಉಪಾಸಕನು ಅದನ್ನು ತಾನೆಂದು) ತಿಳಿಯಲಾರನು.

## ಪೂ. ಪ: ಪ್ರತೀಕಗಳಲ್ಲಿಯೂ ನಾನೆಂಬ ಬುದ್ಧಿಯಿಡಬೇಕು

**(ಭಾಷ್ಯ)**

೪೧೧. **“ಮನೋ ಬ್ರಹ್ಮೇತ್ಯುಪಾಸೀತೇತ್ಯಧ್ಯಾತ್ಮಮಥಾಧಿದೈವತಮಾಕಾಶೋ ಬ್ರಹ್ಮೇತಿ ” (ಛಾಂ. ೩–೧೮–೧), ತಥಾ “ ಆದಿತ್ಯೋ ಬ್ರಹ್ಮೇತ್ಯಾದೇಶಃ ” (ಛಾಂ. ೩–೧೯–೧) “ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ” (ಛಾಂ. ೭–೧–೫) ಇತ್ಯೇವಮಾದಿಷು ಪ್ರತೀಕೋಪಾಸನೇಷು ಸಂಶಯಃ, ಕಿಂ ತೇಷ್ವಪಿ ಆತ್ಮಗ್ರಹಃ ಕರ್ತವ್ಯೋ ನ ವಾ ಇತಿ । ಕಿಂ ತಾವತ್ ಪ್ರಾಪ್ತಮ್ ? ತೇಷ್ವಪಿ ಆತ್ಮಗ್ರಹ ಏವ ಯುಕ್ತಃ । ಕಸ್ಮಾತ್ ? ಬ್ರಹ್ಮಣಃ ಶ್ರುತಿಷ್ವಾತ್ಮತ್ವೇನ ಪ್ರಸಿದ್ಧ**

---

1. ಜ್ಞಾನವಾಗುವ ಮುಂಚೆ 'ನಾನು ಅಜ್ಞಾನಿಯು, ಜ್ಞಾನದಿಂದ ಅಜ್ಞಾನವನ್ನು ತೊಲಗಿಸಿಕೊಳ್ಳಬೇಕು' ಎಂಬ ವ್ಯವಹಾರವಿರುತ್ತದೆ ; ಜ್ಞಾನವಾದ ಬಳಿಕ ಜ್ಞಾನಾಜ್ಞಾನ ವಿಭಾಗವಿಲ್ಲ.

2. ಅವಿದ್ಯೆಯಿರುವವರೆಗೆ ಆತ್ಮನು ಸದ್ವಿತೀಯನೆಂಬುದು ಇಷ್ಟವೇ ; ಜ್ಞಾನವಾದರೆ ಅವಿದ್ಯೆಯೂ ಇಲ್ಲ, ದ್ವೈತವೂ ಇಲ್ಲ.

ತ್ವಾತ್ ಪ್ರತೀಕಾನಾಮಪಿ ಬ್ರಹ್ಮವಿಕಾರತ್ವಾತ್ ಬ್ರಹ್ಮತ್ವೇ ಸತಿ ಆತ್ಮತ್ವೋಪಪತ್ತೇಃ ಇತಿ ॥

(ಭಾಷ್ಯಾರ್ಥ)

"ಮನಸ್ಸು ಬ್ರಹ್ಮವೆಂದು ಉಪಾಸನೆಮಾಡಬೇಕು, ಇದು ಅಧ್ಯಾತ್ಮವು. ಇನ್ನು ಅಧಿದೈವವು: ಆಕಾಶವೇ ಬ್ರಹ್ಮವು" ( ಛಾಂ. ೩-೧೮-೧) ಮತ್ತು "ಆದಿತ್ಯನು ಬ್ರಹ್ಮನೆಂದು ಉಪದೇಶವು" (ಛಾಂ. ೩-೧೯-೧), "ಯಾವನು ನಾಮವು ಬ್ರಹ್ಮವೆಂದು ಉಪಾಸನೆಮಾಡುತ್ತಾನೋ ಅವನು ....." (ಛಾಂ, ೭-೧-೫) ಎಂಬೀ ಮುಂತಾದ ಪ್ರತೀಕೋಪಾಸನೆಗಳಲ್ಲಿ ಸಂಶಯವೇನೆಂದರೆ, ಅವುಗಳಲ್ಲಿಯೂ ನಾನೆಂಬ ಬುದ್ಧಿಯನ್ನು ಮಾಡಬೇಕೊ (ಮಾಡ)ಬಾರದೊ ?

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಎಂದರೆ ಅವುಗಳಲ್ಲಿ ಆತ್ಮಬುದ್ಧಿಯನ್ನು ಮಾಡುವದೇ ಸರಿಯಾದದ್ದು. ಏಕೆ? ಎಂದರೆ. ಬ್ರಹ್ಮವು ಆತ್ಮನೆಂದು ಶ್ರುತಿಯಲ್ಲಿ ಪ್ರಸಿದ್ಧವಾಗಿರುತ್ತದೆ ; ಪ್ರತೀಕಗಳೂ ಬ್ರಹ್ಮದ ಕಾರ್ಯವಾಗಿರುವದರಿಂದ (ಅವೂ) ಬ್ರಹ್ಮವೇ ಆಗಿರುವದರಿಂದ (ಅವೂ) ಆತ್ಮನಾಗಬಹುದು.

## ಸಿ: ಪ್ರತೀಕಗಳಲ್ಲಿ ನಾನೆಂಬ ಬುದ್ಧಿಯನ್ನು ಮಾಡಬಾರದು

(ಭಾಷ್ಯ)

೫೨೨ ಏವಂ ಪ್ರಾಪ್ತೇ ಬ್ರೂಮಃ — ನ ಪ್ರತೀಕೇಷು ಆತ್ಮಮತಿಂ ಬಧ್ನೀಯಾತ್ ನ ಹಿ ಸ ಉಪಾಸಕಃ ಪ್ರತೀಕಾನಿ ವ್ಯಸ್ತಾನಿ ಆತ್ಮತ್ವೇನ ಆಕಲಯೇತ್ । ಯತ್ ಪುನರ್ಬ್ರಹ್ಮವಿಕಾರತ್ವಾತ್ ಪ್ರತೀಕಾನಾಂ ಬ್ರಹ್ಮತ್ವಮ್, ತತಶ್ಚ ಆತ್ಮತ್ವಮಿತಿ । ತದಸತ್ । ಪ್ರತೀಕಾಭಾವಪ್ರಸಙ್ಗಾತ್ । ವಿಕಾರಸ್ವರೂಪೋಪಮರ್ದೇನ ಹಿ ನಾಮಾದಿಜಾತಸ್ಯ ಬ್ರಹ್ಮತ್ವಮೇವಾಶ್ರಿತಂ ಭವತಿ । ಸ್ವರೂಪೋಪಮರ್ದೇ ಚ ನಾಮಾದೀನಾಂ ಕುತಃ ಪ್ರತೀಕತ್ವಮ್, ಆತ್ಮಗ್ರಹೋ ವಾ ? ನ ಚ ಬ್ರಹ್ಮಣ ಆತ್ಮತ್ವಾತ್ ಬ್ರಹ್ಮದೃಷ್ಟ್ಯುಪದೇಶೇಷು ಆತ್ಮದೃಷ್ಟಿಃ ಕಲ್ಪ್ಯಾ । ಕರ್ತೃತ್ವಾದ್ಯನಿರಾಕರಣಾತ್ । ಕರ್ತೃತ್ವಾದಿಸರ್ವಸಂಸಾರಧರ್ಮನಿರಾಕರಣೇ ಹಿ ಬ್ರಹ್ಮಣ ಆತ್ಮತ್ವೋಪದೇಶಃ ತದನಿರಾಕರಣೇನ ಚ ಉಪಾಸನವಿಧಾನಮ್ । ಅತಶ್ಚ ಉಪಾಸಕಸ್ಯ ಪ್ರತೀಕೈಃ ಸಮತ್ವಾತ್ ಆತ್ಮಗ್ರಹೋ ನೋಪಪದ್ಯತೇ । ನ ಹಿ ರುಚಕಸ್ವಸ್ತಿಕಯೋರಿತರೇತರಾತ್ಮತ್ವಮಸ್ತಿ । ಸುವರ್ಣಾತ್ಮತ್ವೇನೇವ ತು ಬ್ರಹ್ಮಾತ್ಮತ್ವೇನೈಕತ್ವೇ ಪ್ರತೀಕಾಭಾವಪ್ರಸಙ್ಗಮ್ ಅವೋಚಾಮ । ಅತೋ ನ ಪ್ರತೀಕೇಷು ಆತ್ಮದೃಷ್ಟಿಃ ಕ್ರಿಯತೇ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ: ಪ್ರತೀಕಗಳಲ್ಲಿ ಆತ್ಮಮತಿಯನ್ನು ಮಾಡಬಾರದು. ಏಕೆಂದರೆ ಆ ಉಪಾಸಕನು ಬೇರೆಬೇರೆಯಾದ ಪ್ರತೀಕಗಳನ್ನು (ತನ್ನ) ಆತ್ಮನೆಂದು ಗ್ರಹಿಸಲಾರನು.

ಇನ್ನು ಪ್ರತೀಕಗಳು ಬ್ರಹ್ಮವಿಕಾರವಾಗಿರುವದರಿಂದ (ಅವೂ) ಬ್ರಹ್ಮವೇ, ಆದ್ದರಿಂದ ಆತ್ಮನೇ –ಎಂದು (ಪೂರ್ವಪಕ್ಷಿ ಹೇಳಿದ್ದನಷ್ಟೆ), ಅದು ಸರಿಯಲ್ಲ ; ಏಕೆಂದರೆ ಪ್ರತೀಕವೇ ಇಲ್ಲವೆಂಬ ಪ್ರಸಂಗವು ಬಂದೀತು. ಕಾರ್ಯಸ್ವರೂಪವನ್ನು ನಾಶಪಡಿಸಿದರೆ ನಾಮಾದಿಗಳಿಗೆ ಬ್ರಹ್ಮತ್ವವನ್ನೇ ಆಶ್ರಯಿಸಿದಂತೆ ಆಗುತ್ತದೆ. ನಾಮಾದಿಗಳಿಗೆ ಸ್ವರೂಪವೇ ಹೋದಮೇಲೆ ಪ್ರತೀಕತ್ವವಾಗಲಿ, ಆತ್ಮಬುದ್ಧಿಯಾಗಲಿ ಎಲ್ಲಿಂದ ಬರಬೇಕು ? ಬ್ರಹ್ಮವು ಆತ್ಮನಾಗಿರುವದರಿಂದ ಬ್ರಹ್ಮದೃಷ್ಟಿಯ ಉಪದೇಶ(ವಾಕ್ಯಗಳಲ್ಲಿ) ಆತ್ಮದೃಷ್ಟಿಯನ್ನು ಮಾಡಬೇಕೆಂದು ಕಲ್ಪಿಸುವದೂ ಸರಿಯಲ್ಲ. ಏಕೆಂದರೆ ಕರ್ತೃತ್ವವೇ ಮುಂತಾದವನ್ನು ನಿರಾಕರಣೆ ಮಾಡಿರುವದಿಲ್ಲ. ಕರ್ತೃತ್ವವೇ ಮುಂತಾದ ಎಲ್ಲಾ ಸಂಸಾರಧರ್ಮಗಳನ್ನೂ ನಿರಾಕರಿಸಿದ ಮೇಲಲ್ಲವೆ, ಬ್ರಹ್ಮವು ಆತ್ಮನೆಂದು ಉಪದೇಶಿಸುವದು? ಆದರೆ ಅದನ್ನು ನಿರಾಕರಣೆಮಾಡದೆಯೇ ಉಪಾಸನೆಯನ್ನು ವಿಧಿಸಲಾಗುತ್ತದೆ. ಆದ್ದರಿಂದ ಉಪಾಸಕನು ಪ್ರತೀಕಗಳಿಗ ಸಮನೇ ಆಗಿರುವದರಿಂದ ಅವನ್ನು ತಾನೆಂದು ಗ್ರಹಿಸುವದು ಹೊಂದುವದಿಲ್ಲ. ರುಚಕ, ಸ್ವಸ್ತಿಕ –ಇವುಗಳು ಒಂದು ಇನ್ನೊಂದರ ಸ್ವರೂಪವಾಗಲಾರವಷ್ಟೆ. ಚಿನ್ನದ ರೂಪದಿಂದ (ಅವು ಒಂದೇ ಆಗಿರು)ವಂತೆ ಬ್ರಹ್ಮರೂಪದಿಂದ (ಆತ್ಮನೂ ಪ್ರತೀಕವೂ) ಒಂದೇ ಎನ್ನುವ ಪಕ್ಷದಲ್ಲಿಯಾದರೋ ಪ್ರತೀಕವೇ ಇಲ್ಲವೆಂಬ ಪ್ರಸಂಗವುಂಟಾಗುವದೆಂದು ಹೇಳಿರುತ್ತೇವೆ. ಆದ್ದರಿಂದ ಪ್ರತೀಕಗಳಲ್ಲಿ ಆತ್ಮದೃಷ್ಟಿಯನ್ನು ಮಾಡತಕ್ಕದ್ದಲ್ಲ.

## ೪. ಬ್ರಹ್ಮದೃಷ್ಟ್ಯಧಿಕರಣ

(ಆದಿತ್ಯಾದಿಪ್ರತೀಕಗಳಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಬೇಕು)

**ಬ್ರಹ್ಮದೃಷ್ಟಿರುತ್ಕರ್ಷಾತ್ ॥ ೫ ॥**

೫. (ಆದಿತ್ಯಾದಿಗಳಲ್ಲಿ) ಬ್ರಹ್ಮದೃಷ್ಟಿಯನ್ನು ಮಾಡಬೇಕು. ಏಕೆಂದರೆ (ಆಗ) ಉತ್ಕರ್ಷವಾಗುತ್ತದೆ.

# ಪ್ರತೀಕೋಪಾಸನೆಗಳಲ್ಲಿ ಸಂಶಯ

(ಭಾಷ್ಯ)

೫೧೩. ತೇಷ್ವೇವೋದಾಹರಣೇಷು ಅನ್ಯಃ ಸಂಶಯಃ – ಕಿಮಾದಿತ್ಯಾದಿ ದೃಷ್ಟಯೋ ಬ್ರಹ್ಮಣ್ಯಧ್ಯಸಿತವ್ಯಾಃ ಕಿಂವಾ ಬ್ರಹ್ಮದೃಷ್ಟಿರಾದಿತ್ಯಾದಿಷ್ವಿತಿ। ಕುತಃ ಸಂಶಯಃ? ಸಾಮಾನಾಧಿಕರಣ್ಯೇ ಕಾರಣಾನವಧಾರಣಾತ್। ಅತ್ರ ಹಿ ಬ್ರಹ್ಮಶಬ್ದಸ್ಯ ಆದಿತ್ಯಾದಿಶಬ್ದೈಃ ಸಾಮಾನಾಧಿಕರಣ್ಯಮ್ ಉಪಲಭ್ಯತೇ। 'ಆದಿತ್ಯೋ ಬ್ರಹ್ಮ', 'ಪ್ರಾಣೋ ಬ್ರಹ್ಮ,' 'ವಿದ್ಯುದ್ಬ್ರಹ್ಮ' ಇತ್ಯಾದಿ ಸಮಾನ ವಿಭಕ್ತಿನಿರ್ದೇಶಾತ್। ನ ಚಾತ್ರ ಆಞ್ಜಸಂ ಸಾಮಾನಾಧಿಕರಣ್ಯಮ್ ಅವ ಕಲ್ಪತೇ। ಅರ್ಥಾನ್ತರವಚನತ್ವಾತ್ ಬ್ರಹ್ಮಾದಿತ್ಯಾದಿಶಬ್ದಾನಾಮ್। ನ ಹಿ ಭವತಿ ಗೌರಶ್ವ ಇತಿ ಸಾಮಾನಾಧಿಕರಣ್ಯಮ್ ನನು ಪ್ರಕೃತಿವಿಕಾರಭಾವಾತ್ ಬ್ರಹ್ಮಾದಿತ್ಯಾದೀನಾಂ ಮೃಚ್ಛರಾವಾದಿವತ್ ಸಾಮಾನಾಧಿಕರಣ್ಯಂ ಸ್ಯಾತ್। ನೇತ್ಯುಚ್ಯತೇ। ವಿಕಾರಪ್ರವಿಲಯೋ ಹ್ಯೇವಂ ಪ್ರಕೃತಿಸಾಮಾನಾಧಿಕರಣ್ಯಾತ್ ಸ್ಯಾತ್। ತತಶ್ಚ ಪ್ರತೀಕಾಭಾವಪ್ರಸಙ್ಗಮವೋಚಾಮ। ಪರಮಾತ್ಮವಾಕ್ಯಂ ಚೇದಂ ತದಾನೀಂ ಸ್ಯಾತ್, ತತಶ್ಚೋಪಾಸನಾಧಿಕಾರೋ ಬಾಧ್ಯೇತ। ಪರಿ ಮಿತವಿಕಾರೋಪಾದಾನಂ ಚ ವ್ಯರ್ಥಮ್ ತಸ್ಮಾತ್ ಬ್ರಾಹ್ಮಣೋಽಗ್ನಿರ್ವೈ ಶ್ವಾನರಃ ಇತ್ಯಾದಿವತ್ ಅನ್ಯತ್ರಾನ್ಯದೃಷ್ಟ್ಯಧ್ಯಾಸೇ ಸತಿ ಕ್ವ ಕಿಂದೃಷ್ಟಿರಧ್ಯಸ್ಯ ತಾಮ್? ಇತಿ ಸಂಶಯಃ॥

(ಭಾಷ್ಯಾರ್ಥ)

ಅದೇ (ಪ್ರತೀಕೋಪಾಸನೆಯ) ಉದಾಹರಣೆಗಳ (ವಿಷಯದಲ್ಲಿ) ಮತ್ತೊಂದು ಸಂಶಯವುಂಟಾಗುತ್ತದೆ. ಆದಿತ್ಯಾದಿದೃಷ್ಟಿಗಳನ್ನು ಬ್ರಹ್ಮದಲ್ಲಿ ಹಾಕಬೇಕೆ, ಅಥವಾ ಬ್ರಹ್ಮದೃಷ್ಟಿಯನ್ನು ಆದಿತ್ಯಾದಿಗಳಲ್ಲಿ ಹಾಕಬೇಕೆ? ಸಂಶಯವೇತಕ್ಕೆ? ಎಂದರೆ ಏಕೆಂದರೆ ಈ ಸಾಮಾನಾಧಿಕರಣ್ಯಕ್ಕೆ ಕಾರಣವೇನೆಂಬುದು ನಿಶ್ಚಯವಾಗುವಂತಿಲ್ಲ. (ಇದರ ವಿವರ): ಇಲ್ಲಿ ಬ್ರಹ್ಮಶಬ್ದಕ್ಕೆ ಆದಿತ್ಯಾದಿಶಬ್ದಗಳೊಡನೆ ಸಾಮಾನಾಧಿಕರಣ್ಯವು ಕಾಣಬರುತ್ತದೆ. 'ಆದಿತ್ಯನು ಬ್ರಹ್ಮವು', 'ಪ್ರಾಣವು ಬ್ರಹ್ಮವು', 'ಮಿಂಚು ಬ್ರಹ್ಮವು'–ಮುಂತಾದ ಸಮಾನವಿಭಕ್ತಿಯ ನಿರ್ದೇಶದಿಂದ (ಸಾಮಾನಾಧಿಕರಣ್ಯವು ಕಾಣುತ್ತದೆ). ಆದರೆ ಇಲ್ಲಿ ಮುಖ್ಯಾರ್ಥದಲ್ಲಿ ಸಾಮಾನಾಧಿಕರಣ್ಯವು ಹೊಂದುವದಿಲ್ಲ; ಏಕೆಂದರೆ ಬ್ರಹ್ಮ, ಆದಿತ್ಯ ಮುಂತಾದ ಶಬ್ದಗಳು ಬೇರೆಬೇರೆಯ ಪದಾರ್ಥಗಳನ್ನು ಹೇಳುತ್ತವೆ. 'ಎತ್ತು ಕುದುರೆ' ಎಂದು ಸಾಮಾನಾಧಿಕರಣ್ಯವಾಗಲಾರದಷ್ಟೆ.

(ಆಕ್ಷೇಪ) :– ಬ್ರಹ್ಮ, ಆದಿತ್ಯಾದಿಗಳು– ಇವಕ್ಕೆ ಪ್ರಕೃತಿವಿಕಾರಭಾವವಿರುವದರಿಂದ ಮಣ್ಣು, ಶ್ರಾವೆ– ಮುಂತಾದವುಗಳಿಗಿರುವಂತೆ[1] ಸಾಮಾನಾಧಿಕರಣ್ಯವಾಗಬಹುದಲ್ಲವೆ ?

(ಪರಿಹಾರ) :– ಇಲ್ಲ, ಎನ್ನುತ್ತೇವೆ. ಏಕೆಂದರೆ ಹೀಗೆ ಪ್ರಕೃತಿಯೊಡನೆ **ಸಾಮಾನಾಧಿಕರಣ್ಯವಾಗುವದರಿಂದ ವಿಕಾರವೇ ಇಲ್ಲವಾಗುವದು. ಅದರಿಂದ ಪ್ರತೀಕವೇ ಇಲ್ಲವಾಗುವದೆಂದು (ಹಿಂದೆಯೇ) ಹೇಳಿರುತ್ತೇವೆ. ಇದಲ್ಲದೆ ಆಗ ಇದು ಪರಮಾತ್ಮವಾಕ್ಯವಾಗುವದು, ಅದರಿಂದ ಉಪಾಸನಾಪ್ರಕರಣವೂ ಬಾಧಿತವಾಗುವದು.** ಗೊತ್ತಾಗಿ (ಕೆಲವೇ) ವಿಕಾರಗಳನ್ನು ತೆಗೆದುಕೊಂಡಿರುವದೂ ವ್ಯರ್ಥವು. ಆದ್ದರಿಂದ 'ಬ್ರಾಹ್ಮಣನು ವೈಶ್ವಾನರಾಗ್ನಿಯು' ಮುಂತಾದ (ವಾಕ್ಯಗಳಂತೆ) ಒಂದರಲ್ಲಿ ಮತ್ತೊಂದರ (ದೃಷ್ಟಿಯನ್ನು ಹೇಳಿದೆ) ಎಂದಾಗುವದರಿಂದ ಎಲ್ಲಿ ಯಾವದರ ದೃಷ್ಟಿಯನ್ನು ಅಧ್ಯಾಸ ಮಾಡಬೇಕು ಎಂದು ಸಂಶಯವಾಗುತ್ತದೆ.

## ಪೂರ್ವಪಕ್ಷ: ಇಂಥದ್ದರ ದೃಷ್ಟಿ ಎಂಬ ನಿಯಮವಿಲ್ಲ, ಅಥವಾ ಆದಿತ್ಯಾದಿದೃಷ್ಟಿಯನ್ನು ಮಾಡಬೇಕು

(ಭಾಷ್ಯ)

೫೧೪. ತತ್ರ ಅನಿಯಮಃ। ನಿಯಮಕಾರಿಣಃ ಶಾಸ್ತ್ರಸ್ಯಾಭಾವಾತ್ ಇತ್ಯೇವಂ ಪ್ರಾಪ್ತಮ್। ಅಥವಾ ಆದಿತ್ಯಾದಿದೃಷ್ಟಯ ಏವ ಬ್ರಹ್ಮಣಿ ಕರ್ತವ್ಯಾಃ ಇತ್ಯೇವಂ ಪ್ರಾಪ್ತಮ್। ಏವಂ ಹಿ ಆದಿತ್ಯಾದಿದೃಷ್ಟಿಭಿರ್ಬ್ರಹ್ಮೋಪಾಸಿತಂ ಭವತಿ। ಬ್ರಹ್ಮೋಪಾಸನಂ ಚ ಫಲವತ್ ಇತಿ ಶಾಸ್ತ್ರಮರ್ಯಾದಾ। ತಸ್ಮಾತ್ ನ ಬ್ರಹ್ಮದೃಷ್ಟಿರಾದಿತ್ಯಾದಿಷ್ವಿತಿ ॥

(ಭಾಷ್ಯಾರ್ಥ)

ಇಲ್ಲಿ (ಯಾವ) ನಿಯಮವೂ ಇಲ್ಲ; ಏಕೆಂದರೆ ನಿಯಮವನ್ನುಂಟು ಮಾಡುವ ಶಾಸ್ತ್ರವೇನೂ (ಇಲ್ಲಿ) ಇಲ್ಲ ಎಂದಿಂತು ಬಂದೊದಗುತ್ತದೆ. ಅಥವಾ ಆದಿತ್ಯಾದಿದೃಷ್ಟಿಗಳನ್ನೇ ಬ್ರಹ್ಮದಲ್ಲಿ ಮಾಡಬೇಕು ಎಂದು ಬಂದೊದಗುತ್ತದೆ. ಏಕೆಂದರೆ ಹಾಗಾದರೆ ಆದಿತ್ಯಾದಿದೃಷ್ಟಿಗಳಿಂದ ಬ್ರಹ್ಮವನ್ನು ಉಪಾಸನೆಮಾಡಿದಂತೆ ಆಗುತ್ತದೆ. ಬ್ರಹ್ಮೋಪಾಸನವೇ ಫಲವುಳ್ಳದ್ದು ಎಂಬುದು ಶಾಸ್ತ್ರಮರ್ಯಾದೆ. ಆದ್ದರಿಂದ ಆದಿತ್ಯಾದಿಗಳಲ್ಲಿ ಬ್ರಹ್ಮದೃಷ್ಟಿ(ಯನ್ನು ಮಾಡತಕ್ಕ)ದ್ದಲ್ಲ.

---

1. ಶ್ರಾವೆಯೂ ಮಣ್ಣು–ಎಂದು ಕಾರ್ಯಕಾರಣಭಾವವಿರುವಲ್ಲಿ ಸಾಮಾನಾಧಿಕರಣ್ಯವಿರುವದುಂಟು, ಹಾಗೆ.

## ಸಿದ್ಧಾಂತ: ಆದಿತ್ಯಾದಿಗಳಲ್ಲಿ ಬ್ರಹ್ಮದೃಷ್ಟಿಯನ್ನೇ ಮಾಡಬೇಕು

(ಭಾಷ್ಯ)

೫೧೫. ಏವಂ ಪ್ರಾಪ್ತೇ ಬ್ರೂಮಃ । ಬ್ರಹ್ಮದೃಷ್ಟಿರೇವ ಆದಿತ್ಯಾದಿಷು ಸ್ಯಾತ್ ಇತಿ । ಕಸ್ಮಾತ್ ? ಉತ್ಕರ್ಷಾತ್ । ಏವಮ್ ಉತ್ಕರ್ಷೇಣ ಆದಿತ್ಯಾದಯೋ ದೃಷ್ಟಾ ಭವನ್ತಿ । ಉತ್ಕೃಷ್ಟದೃಷ್ಟೇಸ್ತೇಷ್ವಧ್ಯಾಸಾತ್ । ತಥಾ ಚ ಲೌಕಿಕೋ ನ್ಯಾಯೋಽನುಗತೋ ಭವತಿ । ಉತ್ಕೃಷ್ಟದೃಷ್ಟಿರ್ಹಿ ನಿಕೃಷ್ಟೇಽಧ್ಯಸಿತವ್ಯಾ ಇತಿ ಲೌಕಿಕೋ ನ್ಯಾಯಃ । ಯಥಾ ರಾಜದೃಷ್ಟಿಃ ಕ್ಷತ್ತರಿ । ಸ ಚಾನುಸರ್ತವ್ಯಃ । ವಿಪರ್ಯಯೇ ಪ್ರತ್ಯವಾಯಪ್ರಸಙ್ಗಾತ್ । ನ ಹಿ ಕ್ಷತ್ತೃದೃಷ್ಟಿಪರಿಗೃಹೀತೋ ರಾಜಾ ನಿಕರ್ಷಂ ನೀಯಮಾನಃ ಶ್ರೇಯಸೇ ಸ್ಯಾತ್ । ನನು ಶಾಸ್ತ್ರಪ್ರಾಮಾಣ್ಯಾತ್ ಅನಾಶಙ್ಕನೀಯೋಽತ್ರ ಪ್ರತ್ಯವಾಯಪ್ರಸಙ್ಗಃ । ನ ಚ ಲೌಕಿಕೇನ ನ್ಯಾಯೇನ ಶಾಸ್ತ್ರೀಯಾ ದೃಷ್ಟಿರ್ನಿಯನ್ತುಂ ಯುಕ್ತಾ ಇತಿ । ಅತ್ರೋಚ್ಯತೇ । ನಿರ್ಧಾರಿತೇ ಶಾಸ್ತ್ರಾರ್ಥೇ ಏತದೇವಂ ಸ್ಯಾತ್ । ಸಂದಿಗ್ಧೇ ತು ತಸ್ಮಿನ್ ನಿರ್ಣಯಂ ಪ್ರತಿ ಲೌಕಿಕೋಽಪಿ ನ್ಯಾಯಃ ಆಶ್ರೀಯಮಾಣೋ ನ ವಿರುಧ್ಯತೇ । ತೇನ ಚೋತ್ಕೃಷ್ಟದೃಷ್ಟ್ಯಧ್ಯಾಸೇ ಶಾಸ್ತ್ರಾರ್ಥೇ ಅವಧಾರ್ಯಮಾಣೇ ನಿಕೃಷ್ಟದೃಷ್ಟಿಮಧ್ಯಸ್ಯನ್ ಪ್ರತ್ಯವೇಯಾತ್ ಇತಿ ಶ್ಲಿಷ್ಯತೇ । ಪ್ರಾಥಮ್ಯಾಚ್ಚಾದಿತ್ಯಾದಿಶಬ್ದಾನಾಂ ಮುಖ್ಯಾರ್ಥತ್ವಮ್ ಅವಿರೋಧಾತ್ ಗ್ರಹೀತವ್ಯಮ್ । ತೈಃ ಸ್ವಾರ್ಥವೃತ್ತಿಭಿರವರುದ್ಧಾಯಾಂ ಬುದ್ಧೌ ಪಶ್ಚಾತ್ ಅವತರತೋ ಬ್ರಹ್ಮಶಬ್ದಸ್ಯ ಮುಖ್ಯಯಾ ವೃತ್ತ್ಯಾ ಸಾಮಾನಾಧಿಕರಣ್ಯಾಸಂಭವಾತ್ ಬ್ರಹ್ಮದೃಷ್ಟಿವಿಧಾನಾರ್ಥತೈವಾವತಿಷ್ಠತೇ । ಇತಿಪರತ್ವಾದಪಿ ಬ್ರಹ್ಮಶಬ್ದಸ್ಯ ಏಷ ಏವಾರ್ಥೋ ನ್ಯಾಯ್ಯಃ । ತಥಾ ಹಿ "ಬ್ರಹ್ಮೇತ್ಯಾದೇಶಃ," ಬ್ರಹ್ಮೇತ್ಯುಪಾಸೀತ', 'ಬ್ರಹ್ಮೇತ್ಯುಪಾಸ್ತೇ' ಇತಿ ಚ ಸರ್ವತ್ರ ಇತಿ ಪರಂ ಬ್ರಹ್ಮಶಬ್ದಮ್ ಉಚ್ಚಾರಯತಿ, ಶುದ್ಧಾಂಸ್ತು ಆದಿತ್ಯಾದಿಶಬ್ದಾನ್ । ತತಶ್ಚ ಯಥಾ 'ಶುಕ್ತಿಕಾಂ ರಜತಮಿತಿ ಪ್ರತ್ಯೇತಿ' ಇತ್ಯತ್ರ ಶುಕ್ತಿವಚನ ಏವ ಶುಕ್ತಿಕಾಶಬ್ದಃ । ರಜತಶಬ್ದಸ್ತು ರಜತಪ್ರತೀತಿಲಕ್ಷಣಾರ್ಥಃ । ಪ್ರತ್ಯೇತ್ಯೇವ ಹಿ ಕೇವಲಂ ರಜತಮಿತಿ ನ ತು ತತ್ರ ರಜತಮಸ್ತಿ । ಏವಮತ್ರಾಪಿ ಆದಿತ್ಯಾದೀನ್ ಬ್ರಹ್ಮೇತಿ ಪ್ರತೀಯಾತ್ ಇತಿ ಗಮ್ಯತೇ । ವಾಕ್ಯಶೇಷೋಽಪಿ ಚ ದ್ವಿತೀಯಾನಿರ್ದೇಶೇನ ಆದಿತ್ಯಾದೀನೇವ ಉಪಾಸ್ತಿಕ್ರಿಯಯಾ ವ್ಯಾಪ್ಯಮಾನಾನ್ ದರ್ಶಯತಿ । "ಸ ಯ ಏತಮೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇ" (ಛಾಂ. ೩-೧೯-೪) "ಯೋ ವಾಚಂ ಬ್ರಹ್ಮೇತ್ಯುಪಾಸ್ತೇ" (ಛಾಂ. ೭-೨-೨), "ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇ" (ಛಾಂ. ೭-೪-೩) ಇತಿ ಚ । ಯತ್ತೂಕ್ತಂ ಬ್ರಹ್ಮೋಪಾಸನಮೇವ ಅತ್ರಾದರಣೀಯಂ ಫಲತ್ವಾಯೇತಿ ।[1] ತದಯುಕ್ತಮ್ । ಉಕ್ತೇನ ನ್ಯಾಯೇನ

---

1. ಇದು 'ಫಲವತ್ತ್ವಾಯ' ಎಂದಿರಬೇಕೆಂದು ತೋರುತ್ತದೆ.

ಆದಿತ್ಯಾದೀನಾಮೇವ ಉಪಾಸ್ಯತ್ವಾವಗಮಾತ್ । ಫಲಂ ತು ಅತಿಥ್ಯಾದ್ಯುಪಾಸನ ಇವ ಆದಿತ್ಯಾದ್ಯುಪಾಸನೇಽಪಿ ಬ್ರಹ್ಮೈವ ದಾಸ್ಯತಿ। ಸರ್ವಾಧ್ಯಕ್ಷತ್ವಾತ್ । ವರ್ಣಿತಂ ಚೈತತ್ "ಫಲಮತ ಉಪಪತ್ತೇಃ" (೩-೨-೩೮) ಇತ್ಯತ್ರ । ಈದೃಶಂ ಚಾತ್ರ ಬ್ರಹ್ಮಣ ಉಪಾಸ್ಯತ್ವಂ ಯತ್ಪ್ರತೀಕೇಷು ತದ್ದೃಷ್ಟ್ಯಧ್ಯಾರೋಪಣಂ ಪ್ರತಿಮಾದಿಷ್ವಿವ ವಿಷ್ಣ್ವಾದೀನಾಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಹೀಗೆ)ನ್ನುತ್ತೇವೆ. ಬ್ರಹ್ಮದೃಷ್ಟಿಯೇ ಆದಿತ್ಯಾದಿಗಳಲ್ಲಿ ಇರಬೇಕು. ಏಕೆ ? ಎಂದರೆ ಹೆಚ್ಚಿಗೆ(ಯಾಗುತ್ತದೆ). ಹೀಗಾದರೆ ಆದಿತ್ಯಾದಿಗಳನ್ನು ಹೆಚ್ಚಿನವರೆಂದು ಕಂಡಂತೆ ಆಗುತ್ತದೆ ; ಏಕೆಂದರೆ ಅವರಲ್ಲಿ ಹೆಚ್ಚಿನ ದೃಷ್ಟಿಯನ್ನು ಅಧ್ಯಾಸಮಾಡಿದಂತೆ (ಆಗುತ್ತದೆ). ಹಾಗಾದರೆ ಲೌಕಿಕನ್ಯಾಯವನ್ನು ಅನುಸರಿಸಿವಂತೆಯೂ ಆಗುತ್ತದೆ. ಕೀಳಾದ್ದರಲ್ಲಿ ಹೆಚ್ಚಿನ ದೃಷ್ಟಿಯನ್ನು ಅಧ್ಯಾಸಮಾಡಬೇಕು ಎಂಬುದು ಲೌಕಿಕ ನ್ಯಾಯವು ; ಉದಾಹರಣೆಗೆ ಕ್ಷತ್ತೃವಿನಲ್ಲಿ[1] ರಾಜನೆಂಬ ದೃಷ್ಟಿ(ಯನ್ನು ಮಾಡಬೇಕು). ಆ (ನ್ಯಾಯ)ವನ್ನು ಅನುಸರಿಸತಕ್ಕದ್ದು (ಇಲ್ಲಿ ಯುಕ್ತ) ; ಏಕೆಂದರೆ (ಇದಕ್ಕೆ) ವಿಪರೀತವಾದರೆ ಪ್ರತ್ಯವಾಯವಾದೀತು[2]. ರಾಜನನ್ನು ಕ್ಷತ್ತೃದೃಷ್ಟಿಯಿಂದ ಗ್ರಹಿಸಿದರೆ (ಅವನನ್ನು) ಕೀಳುಮಾಡಿದಂತೆ ಆಗುವದರಿಂದ (ಅವನು ನಮಗೆ) ಒಳ್ಳೆಯ ಫಲಕ್ಕೆ (ಕಾರಣ)ವಾಗಲಾರನಷ್ಟೆ.

(ಆಕ್ಷೇಪ):- ಶಾಸ್ತ್ರಪ್ರಾಮಾಣ್ಯವಿರುವದರಿಂದ ಇಲ್ಲಿ ಪ್ರತ್ಯವಾಯಪ್ರಸಂಗವನ್ನು ಶಂಕೆಮಾಡಬಾರದಲ್ಲವೆ ? ಶಾಸ್ತ್ರೀಯದೃಷ್ಟಿಯನ್ನು ಲೌಕಿಕನ್ಯಾಯದಿಂದ (ಹೀಗಿರಬೇಕೆಂದು) ನಿಯಮಿಸುವದೂ ಸರಿಯಲ್ಲವಲ್ಲ !

(ಪರಿಹಾರ):- ಇದಕ್ಕೆ ಹೇಳುತ್ತೇವೆ. **ಶಾಸ್ತ್ರಾರ್ಥವನ್ನು ನಿಶ್ಚಯಿಸಿದ ಮೇಲೆ ಇದು ಹೀಗಾಗಬಹುದು. ಆ (ಶಾಸ್ತ್ರಾರ್ಥವು) ಸಂದಿಗ್ಧವಾಗಿರುವಲ್ಲಿ ನಿರ್ಣಯಕ್ಕಾಗಿ ಲೌಕಿಕನ್ಯಾಯವನ್ನೂ ಆಶ್ರಯಿಸಿದರೆ ವಿರುದ್ಧವಾಗುವದಿಲ್ಲ**[3]. ಆ (ನ್ಯಾಯ)ದಿಂದ ಹೆಚ್ಚಿನ ದೃಷ್ಟಿ

1. ರಾಜನಿಂದ ಶೂದ್ರಾದಿಗಳಲ್ಲಿ ಜನಿಸಿದವನು ಕ್ಷತ್ತೃ ; ರಥವನ್ನು ನಡೆಸುವವೇ ಮುಂತಾದದ್ದು ಅವನ ಕರ್ಮವು.

2. ಉತ್ಕೃಷ್ಟವಾದದ್ದನ್ನೇ ನಿಕೃಷ್ಟವಾಗಿ ಭಾವಿಸಿದರೆ ದೋಷವುಂಟಾಗುವದು.

3. ಶಾಸ್ತ್ರಾರ್ಥವು ಏನಿರಬಹುದು ? -ಎಂಬ ಸಂಶಯವುಂಟಾಗಿರುವಾಗ ಲೌಕಿಕ ನ್ಯಾಯಕ್ಕನುಸಾರವಾಗಿ ನಿರ್ಣಯಿಸಬಹುದು. ಆದರೆ ಮೊದಲೇ ನಿರ್ಣಯವಾಗಿದ್ದರೆ ನ್ಯಾಯವು ಹೇಗಿದ್ದರೂ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದದ್ದಿಲ್ಲ ಎಂದರ್ಥ.

ಯನ್ನು ಅಧ್ಯಾಸಮಾಡಬೇಕೆಂಬುದೇ ಶಾಸ್ತ್ರಾರ್ಥವೆಂದು ನಿಶ್ಚಯವಾಗುವದರಿಂದ ಕೀಳುದೃಷ್ಟಿಯನ್ನು ಅಧ್ಯಾಸಮಾಡುವವನಿಗೆ ಪ್ರತ್ಯವಾಯವನ್ನು ಹೊಂದುವದೆಂಬುದು ಯುಕ್ತವಾಗಿರುತ್ತದೆ. (ವಾಕ್ಯದಲ್ಲಿ) ಮೊದಲು ಇರುವದರಿಂದ ಆದಿತ್ಯಾದಿಶಬ್ದಗಳಿಗೆ ಮುಖ್ಯಾರ್ಥವನ್ನು ಗ್ರಹಿಸಬೇಕು ; ಏಕೆಂದರೆ (ಆಗ) ವಿರೋಧವೇನೂ ಇರುವದಿಲ್ಲ. ಆ (ಶಬ್ದ)ಗಳು ತಮ್ಮ ಅರ್ಥದಲ್ಲಿ ವ್ಯಾಪಾರವುಳ್ಳವೆಂಬುದು ಬುದ್ಧಿಯನ್ನು ಹಿಡಿದುಕೊಂಡಬಳಿಕ ಆಮೇಲೆ ಬರುವ ಬ್ರಹ್ಮಶಬ್ದಕ್ಕೆ ಮುಖ್ಯವೃತ್ತಿಯಿಂದ ಸಾಮಾನಾಧಿಕರಣ್ಯವು ಹೊಂದುವದಿಲ್ಲವಾದ್ದರಿಂದ ಬ್ರಹ್ಮದೃಷ್ಟಿಯನ್ನು ವಿಧಿಸುವದಕ್ಕೇ (ಅದು ಬಂದಿದೆ) –ಎಂದು ಸಿದ್ಧವಾಗುತ್ತದೆ. ಇತಿಪರವಾಗಿರುವದರಿಂದ ಬ್ರಹ್ಮಶಬ್ದಕ್ಕೆ ಇದೇ ಅರ್ಥವೆಂಬುದು ಯುಕ್ತವು. ಹೇಗೆಂದರೆ 'ಬ್ರಹ್ಮೇತ್ಯಾದೇಶಃ' (ಬ್ರಹ್ಮವು ಎಂದೂ ಆದೇಶವು), 'ಬ್ರಹ್ಮೇತ್ಯುಪಾಸೀತ' (ಬ್ರಹ್ಮವೆಂದು ಉಪಾಸನೆಮಾಡಬೇಕು), 'ಬ್ರಹ್ಮೇತ್ಯುಪಾಸ್ತೇ' (ಬ್ರಹ್ಮವೆಂದು ಉಪಾಸನೆಮಾಡುತ್ತಾನೋ) ಎಂದೂ ಎಲ್ಲಾ ಕಡೆಯಲ್ಲಿಯೂ ಬ್ರಹ್ಮಶಬ್ದವನ್ನು ಇತಿಪರವಾಗಿಯೇ (ಶ್ರುತಿ) ಹೇಳಿರುತ್ತದೆ, ಆದಿತ್ಯಾದಿಶಬ್ದಗಳನ್ನೋ (ಇತಿಯಿಲ್ಲದೆ) ಕೇವಲ (ಶಬ್ದಗಳನ್ನೇ) ಹೇಳಿರುತ್ತದೆ. ಇದರಿಂದ ಹೇಗೆ 'ಕಪ್ಪೆಯಚಿಪ್ಪನ್ನು ಬೆಳ್ಳಿಯೆಂದು ತಿಳಿಯುತ್ತಾನೆ' ಎಂಬಲ್ಲಿ ಕಪ್ಪೆಯಚಿಪ್ಪೆಂಬ ಶಬ್ದವು ಕಪ್ಪೆಯಚಿಪ್ಪನ್ನೇ ಹೇಳುತ್ತದೆಯೋ, ಬೆಳ್ಳಿ ಎಂಬ ಶಬ್ದವುಮಾತ್ರ ಬೆಳ್ಳಿಯೆಂಬ ತಿಳಿವಳಿಕೆಗೆ ಲಕ್ಷಣವಾಗಿ (ಪ್ರಯೋಗಿಸಿದ್ದೋ) – ಏಕೆಂದರೆ ಬೆಳ್ಳಿಯೆಂದು ಸುಮ್ಮನೆ ತಿಳಿದಿರುತ್ತಾನೆಯೇ ಹೊರತು ಅಲ್ಲಿ ಬೆಳ್ಳಿಯಿರುವದಿಲ್ಲವಷ್ಟೆ – ಹಾಗೆಯೇ ಇಲ್ಲಿಯೂ ಆದಿತ್ಯಾದಿಗಳನ್ನು ಬ್ರಹ್ಮವೆಂದು ತಿಳಿಯಬೇಕು ಎಂದು ನಿಶ್ಚಯವಾಗುತ್ತದೆ. ವಾಕ್ಯಶೇಷವೂ ದ್ವಿತೀಯಾನಿರ್ದೇಶದಿಂದ "ಯಾವನು ಹೀಗೆ ಈ ಆದಿತ್ಯನನ್ನು ಬ್ರಹ್ಮವೆಂದು ಉಪಾಸನೆಮಾಡುವನೋ" (ಛಾಂ. ೩–೧೯–೪), "ಯಾವನು ವಾಕ್ಕನ್ನು ಬ್ರಹ್ಮವೆಂದು ಉಪಾಸನೆಮಾಡುವನೋ" (ಛಾಂ. ೭–೨–೨), "ಯಾವನು ಸಂಕಲ್ಪವನ್ನು ಬ್ರಹ್ಮವೆಂದು ಉಪಾಸನೆಮಾಡುವನೋ" (ಛಾಂ. ೭–೪–೩) ಎಂದೂ ಆದಿತ್ಯಾದಿಗಳೇ ಉಪಾಸ್ತಿಕ್ರಿಯೆಗೆ ವ್ಯಾಪ್ಯರು[1] ಎಂದು ತಿಳಿಸುತ್ತದೆ. ಇನ್ನು ಬ್ರಹ್ಮೋಪಾಸನೆಯನ್ನೇ ಇಲ್ಲಿ ಫಲವತ್ತಾಗುವದಕ್ಕೋಸ್ಕರ ಆದರಿಸಬೇಕು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದು ಸರಿಯಲ್ಲ. ಏಕೆಂದರೆ (ನಾವು) ಹೇಳಿರುವ (ಲೌಕಿಕ) ನ್ಯಾಯದಿಂದ ಆದಿತ್ಯಾದಿಗಳೇ ಉಪಾಸ್ಯರೆಂದು ನಿಶ್ಚಿತವಾಗಿರುತ್ತದೆ. ಫಲವನ್ನಾದರೋ ಅತಿಥಿಯ ಉಪಾಸನೆಯೇ ಮುಂತಾದವುಗಳಲ್ಲಿ ಹೇಗೋಹಾಗೆ ಆದಿತ್ಯಾದ್ಯುಪಾಸನೆಯಲ್ಲಿಯೂ ಬ್ರಹ್ಮವೇ ಕೊಡುತ್ತದೆ ; ಏಕೆಂದರೆ (ಅದು) ಎಲ್ಲಕ್ಕೂ

1. ವಿಷಯರು.

ಅಧ್ಯಕ್ಷನಾಗಿರುತ್ತದೆ. ಇದನ್ನು "ಫಲಮತ ಉಪಪತ್ತೇಃ" (೩-೨-೩೮) ಎಂಬಲ್ಲಿ ಇದನ್ನು ತಿಳಿಸಿಕೊಟ್ಟೂ ಇರುತ್ತೇವೆ. ಇಲ್ಲಿ ಬ್ರಹ್ಮವು ಉಪಾಸ್ಯವಾಗಿರುವ ದೆಂಬುದು ಎಂಥದ್ದೆಂದರೆ ಪ್ರತಿಮಾದಿಗಳಲ್ಲಿ ವಿಷ್ಣ್ವಾದಿಗಳ (ದೃಷ್ಟಿಯನ್ನು ಆರೋಪಿಸುವಂತೆ) ಪ್ರತೀಕಗಳಲ್ಲಿ ಆ (ಬ್ರಹ್ಮದ) ದೃಷ್ಟಿಯನ್ನು ಅಧ್ಯಾರೋಪಿಸು ವದೇ ಆಗಿದೆ.

## ೫. ಆದಿತ್ಯಾದಿಮತ್ಯಧಿಕರಣ

(ಅಂಗಗಳಲ್ಲಿ ಆದಿತ್ಯಾದಿದೃಷ್ಟಿಯನ್ನು ಹಾಕಬೇಕು)

**ಆದಿತ್ಯಾದಿಮತಯಶ್ಚಾಙ್ಗ ಉಪಪತ್ತೇಃ ॥ ೬ ॥**

೬. ಅಂಗಗಳಲ್ಲಿ ಆದಿತ್ಯಾದಿಬುದ್ಧಿಗಳನ್ನು (ಮಾಡಬೇಕು) ; ಏಕೆಂದರೆ (ಅದು) ಹೊಂದುತ್ತದೆ.

## ಪೂರ್ವಪಕ್ಷ: ಅಂಗಗಳ ದೃಷ್ಟಿಯನ್ನೇ ಆದಿತ್ಯಾದಿಗಳಲ್ಲಿ ಮಾಡಬೇಕು

(ಭಾಷ್ಯ)

೫೧೬. "ಯ ಏವಾಸೌ ತಪತಿ ತಮುದ್ಗೀಥಮುಪಾಸೀತ" (ಛಾಂ. ೧-೩-೧) "ಲೋಕೇಷು ಪಞ್ಚವಿಧಂ ಸಾಮೋಪಾಸೀತ" (ಛಾಂ. ೨-೨-೧), "ವಾಚಿ ಸಪ್ತವಿಧಂ ಸಾಮೋಪಾಸೀತ" (ಛಾಂ.೨-೮-೧), "ಇಯಮೇವರ್ಗಗ್ನಿಃ ಸಾಮ" (ಛಾಂ. ೧-೬-೧) ಇತ್ಯೇವಮಾದಿಷು ಅಙ್ಗಾವಬದ್ಧೇಷೂಪಾಸನೇಷು ಸಂಶಯಃ । ಕಿಮಾದಿತ್ಯಾದಿಷು ಉದ್ಗೀಥಾದಿದೃಷ್ಟಯೋ ವಿಧೀಯನ್ತೇ, ಕಿಂವಾ ಉದ್ಗೀಥಾದಿಷ್ವೇವ ಆದಿತ್ಯಾದಿದೃಷ್ಟಯಃ ಇತಿ । ತತ್ರ ಅನಿಯಮೋ ನಿಯಮ ಕಾರಣಾಭಾವಾತ್ ಇತಿ ಪ್ರಾಪ್ತಮ್ । ನ ಹ್ಯತ್ರ ಬ್ರಹ್ಮಣ ಇವ ಕಸ್ಯಚಿತ್ ಉತ್ಕರ್ಷವಿಶೇಷೋಽವಧಾರ್ಯತೇ । ಬ್ರಹ್ಮ ಹಿ ಸಮಸ್ತಜಗತ್ಕಾರಣತ್ವಾತ್ ಅಪಹತಪಾಪ್ಮತ್ವಾದಿಗುಣಯೋಗಾಚ್ಚ ಆದಿತ್ಯಾದಿಭ್ಯ ಉತ್ಕೃಷ್ಟಮಿತಿ ಶಕ್ಯ ಮವಧಾರಯಿತುಮ್ । ನ ತ್ವಾದಿತ್ಯೋದ್ಗೀಥಾದೀನಾಂ ವಿಕಾರತ್ವಾವಿಶೇಷಾತ್ ಕಿಂಚಿದುತ್ಕರ್ಷವಿಶೇಷಾವಧಾರಣೇ ಕಾರಣಮಸ್ತಿ । ಅಥವಾ ನಿಯಮೇನ ಉದ್ಗೀಥಾದಿಮತಯ ಆದಿತ್ಯಾದಿಷ್ವಧ್ಯಸ್ಯೇರನ್ । ಕಸ್ಮಾತ್ ? ಕರ್ಮಾತ್ಮಕತ್ವಾ ದುದ್ಗೀಥಾದೀನಾಮ್, ಕರ್ಮಣಶ್ಚ ಫಲಪ್ರಾಪ್ತಿಪ್ರಸಿದ್ಧೇಃ । ಉದ್ಗೀಥಾದಿಮತಿ ಭಿರುಪಾಸ್ಯಮಾನಾ ಆದಿತ್ಯಾದಯಃ ಕರ್ಮಾತ್ಮಕಾಃ ಸನ್ತಃ ಫಲಹೇತವೋ ಭವಿ

ಷ್ಯನ್ತಿ । ತಥಾ ಚ "ಇಯಮೇವರ್ಗಗ್ನಿಃ ಸಾಮ" (ಛಾಂ. ೧–೬–೧) ಇತ್ಯತ್ರ "ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ" (ಛಾಂ. ೧-೬–೧) ಇತ್ಯೃಕ್ಛಬ್ದೇನ ಪೃಥಿವೀಂ ನಿರ್ದಿಶತಿ, ಸಾಮಶಬ್ದೇನಾಗ್ನಿಮ್ । ತಚ್ಚ ಪೃಥಿವ್ಯಗ್ನ್ಯೋರೃಕ್ಸಾಮದೃಷ್ಟಿಚಿಕೀರ್ಷಾಯಾಮ್ ಅವಕಲ್ಪತೇ, ನ ಋಕ್ಸಾಮಯೋಃ ಪೃಥಿವ್ಯಗ್ನಿದೃಷ್ಟಿಚಿಕೀರ್ಷಾಯಾಮ್ ॥ ಕ್ಷತ್ತ್ರರಿ ಹಿ ರಾಜದೃಷ್ಟಿಕರಣಾತ್ ರಾಜಶಬ್ದ ಉಪಚರ್ಯತೇ ನ ರಾಜನಿ ಕ್ಷತ್ತೃಶಬ್ದಃ । ಅಪಿ ಚ "ಲೋಕೇಷು ಪಞ್ಚವಿಧಂ ಸಾಮೋಪಾಸೀತ" (ಛಾಂ. ೨–೨–೧) ಇತ್ಯಧಿಕರಣನಿರ್ದೇಶಾತ್ ಲೋಕೇಷು ಸಾಮಾಧ್ಯಸಿತವ್ಯಮಿತಿ ಪ್ರತೀಯತೇ । "ಏತದ್ಗಾಯತ್ರಂ ಪ್ರಾಣೇಷು ಪ್ರೋತಮ್" (ಛಾಂ ೨–೧೧–೧) ಇತಿ ಚೈತದೇವಂ ದರ್ಶಯತಿ । ಪ್ರಥಮನಿರ್ದಿಷ್ಟೇಷು ಚಾದಿತ್ಯಾದಿಷು ಚರಮನಿರ್ದಿಷ್ಟಂ ಬ್ರಹ್ಮಾಧ್ಯಸ್ತಮ್ "ಆದಿತ್ಯೋ ಬ್ರಹ್ಮೇತ್ಯಾದೇಶಃ" (ಛಾಂ. ೩–೧೯–೧) ಇತ್ಯಾದಿಷು । ಪ್ರಥಮನಿರ್ದಿಷ್ಟಾಶ್ಚ ಪೃಥಿವ್ಯಾದಯಃ, ಚರಮನಿರ್ದಿಷ್ಟಾ ಹಿಂಕಾರಾದಯಃ "ಪೃಥಿವೀ ಹಿಂಕಾರಃ" (ಛಾಂ. ೨–೨–೧) ಇತ್ಯಾದಿಶ್ರುತಿಷು । ಅತೋಽನಙ್ಗೇಷ್ವಾದಿತ್ಯಾದಿಷು ಅಙ್ಗಮತಿನಿಕ್ಷೇಪಃ ಇತಿ ॥

(ಭಾಷ್ಯಾರ್ಥ)

"ಈ ಸುಡುತ್ತಿದಾನಲ್ಲ, ಅವನನ್ನು ಉದ್ಗೀಥವೆಂದು[1] ಉಪಾಸನೆಮಾಡಬೇಕು" (ಛಾಂ. ೧–೩–೧), "ಲೋಕಗಳಲ್ಲಿ ಐದು ವಿಧವಾದ ಸಾಮವನ್ನು ಉಪಾಸನೆಮಾಡಬೇಕು" (ಛಾ. ೨–೨–೧), "ವಾಕ್ಕಿನಲ್ಲಿ ಏಳು ವಿಧವಾದ ಸಾಮವನ್ನು ಉಪಾಸನೆಮಾಡಬೇಕು" (ಛಾಂ.೨–೮–೧), "ಈ (ಪೃಥಿವಿಯೇ) ಋಕ್ಕು, ಅಗ್ನಿಯು ಸಾಮ" (ಛಾ.೧೦–೬–೧) –ಎಂಬಿವೇ ಮುಂತಾದ ಅಂಗಾವಬದ್ಧವಾದ ಉಪಾಸನೆಗಳಲ್ಲಿ (ಈ) ಸಂಶಯ(ವುಂಟಾಗುತ್ತದೆ) : ಆದಿತ್ಯಾದಿಗಳಲ್ಲಿ ಉದ್ಗೀಥಾದಿದೃಷ್ಟಿಗಳನ್ನು ವಿಧಿಸಿದೆಯೆ, ಅಥವಾ ಉದ್ಗೀಥಾದಿಗಳಲ್ಲಿಯೇ ಆದಿತ್ಯಾದಿದೃಷ್ಟಿಗಳನ್ನು (ವಿಧಿಸಿದೆಯೆ) ?

ಇಲ್ಲಿ (ಯಾವ) ನಿಯಮವೂ ಇಲ್ಲ, ಏಕೆಂದರೆ ನಿಯಮಕ್ಕೆ ಕಾರಣವಿಲ್ಲ ಎಂದು ಪ್ರಾಪ್ತವಾಗುತ್ತದೆ. ಇಲ್ಲಿ ಬ್ರಹ್ಮದಂತೆ ಯಾವದಕ್ಕೇ ಆಗಲಿ ಉತ್ಕರ್ಷವಿಶೇಷವಿದೆಯೆಂದು ಗೊತ್ತಾಗಿರುವದಿಲ್ಲವಷ್ಟೆ. ಬ್ರಹ್ಮವು ಸಮಸ್ತಜಗತ್ತಿಗೂ ಕಾರಣವಾಗಿರುವದರಿಂದಲೂ ಅಪಹತಪಾಪ್ಮತ್ವವೇ ಮುಂತಾದ ಗುಣಗಳ

1. 'ಉದ್ಗೀಥವೆಂದು' ಎಂದು ಕನ್ನಡಿಸಿದ್ದರೂ 'ಎಂದು' ಎಂಬ ಮಾತಿಗೆ ಅನುಗುಣವಾಗಿ ಮೂಲದಲ್ಲಿ ಏನೂ ಇಲ್ಲ. ಇಲ್ಲಿ ಯಾವದನ್ನು ಯಾವದೆಂದು ಉಪಾಸನೆಮಾಡಬೇಕೆಂಬುದೇ ವಿಚಾರಣೀಯವಿಷಯ. ಆದಿತ್ಯನನ್ನು ಉದ್ಗೀಥವೆಂದು ಉಪಾಸನೆಮಾಡಬೇಕು ; ಉದ್ಗೀಥವನ್ನು ಆದಿತ್ಯನೆಂದು ಉಪಾಸನೆಮಾಡಬೇಕು –ಇವುಗಳಲ್ಲಿ ಯಾವ ದಾಪರೊಂದು ಅರ್ಥವಾಗುವಂತೆ ಕನ್ನಡಿಸುವದಕ್ಕೆ ಬರುವದಿಲ್ಲ.

ಸಂಬಂಧವಿರುವದರಿಂದಲೂ ಆದಿತ್ಯಾದಿಗಳಿಗಿಂತಲೂ (ಅದು) ಉತ್ಕೃಷ್ಟವೆಂದು ಗೊತ್ತುಮಾಡುವದಕ್ಕೆ ಆಗುತ್ತದೆ ; ಆದರೆ ಆದಿತ್ಯ, ಉದ್ಗೀಥ –ಮುಂತಾದವುಗಳಿಗೆ ವಿಕಾರವಾಗಿರುವದೆಂಬುದು ಸಮಾನವಾಗಿರುವದರಿಂದ ಉತ್ಕರ್ಷವಿಶೇಷವನ್ನು ಗೊತ್ತುಪಡಿಸುವದಕ್ಕೆ ಯಾವದೊಂದು ಕಾರಣವೂ ಇರುವದಿಲ್ಲ. ಅಥವಾ ನಿಯಮದಿಂದ ಉದ್ಗೀಥಾದಿಮತಿಗಳನ್ನೇ ಆದಿತ್ಯಾದಿಗಳಲ್ಲಿ ಅಧ್ಯಾಸಮಾಡಬೇಕು. ಏಕೆ ? ಎಂದರೆ ಉದ್ಗೀಥಾದಿಗಳು ಕರ್ಮಾತ್ಮಕವಾಗಿವೆ[1], ಕರ್ಮದಿಂದ ಫಲವು ಪ್ರಾಪ್ತವಾಗುವದೆಂದು ಪ್ರಸಿದ್ಧವಾಗಿರುತ್ತದೆ. ಉದ್ಗೀಥಾದಿಮತಿಗಳಿಂದ ಆದಿತ್ಯಾದಿಗಳನ್ನು ಉಪಾಸನೆಮಾಡಿದರೆ (ಅವರು) ಕರ್ಮಾತ್ಮಕರಾಗಿ ಫಲಕ್ಕೆ ಕಾರಣವಾಗುವರು. ಆದ್ದರಿಂದಲೇ "ಈ (ಪೃಥಿವಿ)ಯೇ ಋಕ್ಕು, ಅಗ್ನಿಯೇ ಸಾಮ" (ಛಾಂ. ೧–೬೧) "ಎಂಬಲ್ಲಿ ಆ ಈ ಸಾಮವು ಈ ಋಕ್ಕಿನಮೇಲೆ ಏರಿಕೊಂಡಿರುವದು" ( ಛಾ. ೧–೬–೧ ) ಎಂದು ಋಕ್ಶಬ್ದದಿಂದ ಪೃಥಿವಿಯನ್ನೂ ಸಾಮಶಬ್ದದಿಂದ ಅಗ್ನಿಯನ್ನೂ ತಿಳಿಸಿರುತ್ತದೆ; ಅದು ಪೃಥಿವಿ, ಅಗ್ನಿ –ಇವುಗಳಲ್ಲಿ ಋಕ್ಕು, ಸಾಮ –ಇವುಗಳ ದೃಷ್ಟಿಯನ್ನು ಮಾಡಬೇಕೆಂದಿದ್ದರೆ ಸರಿಯಾಗುತ್ತದೆ, ಋಕ್ಸಾಮಗಳಲ್ಲಿ ಪೃಥಿವ್ಯಗ್ನಿದೃಷ್ಟಿಗಳನ್ನು ಮಾಡಬೇಕೆಂದಿದ್ದರೆ (ಸರಿಯಾಗು)ವದಿಲ್ಲ. ಕ್ಷತ್ತೃವಿನಲ್ಲಿ ರಾಜದೃಷ್ಟಿಯನ್ನು ಮಾಡುವದರಿಂದ ರಾಜಶಬ್ದವನ್ನು (ಅವನಲ್ಲಿ) ಪ್ರಯೋಗಿಸುತ್ತಾರೆಯೇ ಹೊರತು ರಾಜನಲ್ಲಿ ಕ್ಷತ್ತೃಶಬ್ದವನ್ನು (ಪ್ರಯೋಗಿಸು)ವದಿಲ್ಲ. ಅಲ್ಲವೆ[2] ? ಇದಲ್ಲದೆ "ಲೋಕಗಳಲ್ಲಿ ಐದು ವಿಧವಾದ ಸಾಮವನ್ನು ಉಪಾಸನೆಮಾಡಬೇಕು" (ಛಾಂ. ೨–೧–೧) ಎಂದು (ಸಪ್ತಮಿಯಿಂದ) ಅಧಿಕರಣವನ್ನು ಹೇಳಿರುವದರಿಂದ ಲೋಕಗಳಲ್ಲಿ ಸಾಮವನ್ನು ಅಧ್ಯಾಸಮಾಡಬೇಕೆಂದು ತಿಳಿಯಬರುತ್ತದೆ. "ಈ ಗಾಯತ್ರವು ಪ್ರಾಣಗಳಲ್ಲಿ ಹೆಣೆದುಕೊಂಡಿರುತ್ತದೆ" (ಛಾ ೨–೧೧–೧) ಎಂಬುದೂ ಹೀಗೆಂದೇ ತಿಳಿಸುತ್ತದೆ. ಮತ್ತು "ಆದಿತ್ಯನು ಬ್ರಹ್ಮವು" (ಛಾಂ. ೩–೧೯–೧) ಎಂಬಿವೇ ಮುಂತಾದವು ಮೊದಲು ತಿಳಿಸಿರುವ ಆದಿತ್ಯಾದಿಗಳಲ್ಲಿ ಕೊನೆಗೆ ಹೇಳಿರುವ ಬ್ರಹ್ಮವನ್ನು ಅಧ್ಯಾಸಮಾಡಿರುತ್ತದೆ. "ಪೃಥಿವಿಯು ಹಿಂಕಾರವು" (ಛಾಂ.೨–೨–೧) ಮುಂತಾದ ಶ್ರುತಿಗಳಲ್ಲಿ ಮೊದಲು ಪೃಥಿವ್ಯಾದಿಗಳನ್ನು ನಿರ್ದೇಶಿಸಿರುತ್ತದೆ, ಹಿಂಕಾರಾದಿಗಳನ್ನು ಕೊನೆಯಲ್ಲಿ ನಿರ್ದೇಶಮಾಡಿರುತ್ತದೆ.[3] ಆದ್ದರಿಂದ ಅಂಗವಲ್ಲದ ಆದಿತ್ಯಾದಿಗಳಲ್ಲಿ ಅಂಗಬುದ್ಧಿಯನ್ನು ಇಡಬೇಕು.

---

1. ಉದ್ಗಾನಕರ್ಮದಲ್ಲಿ ಉಚ್ಚರಿಸತಕ್ಕದ್ದು ಉದ್ಗೀಥ.

2. ಪೂರ್ವಪಕ್ಷದಲ್ಲಿ ಹಿಂದಿನ ಅಧಿಕರಣದ ಸಿದ್ಧಾಂತಯುಕ್ತಿಗಳನ್ನೇ ಬಲುಮಟ್ಟಿಗೆ ಉಪಯೋಗಿಸಿದೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು.

3. ಹಾಗೆಯೇ ಪೃಥಿವ್ಯಗ್ನಿಗಳಲ್ಲಿ ಋಕ್ಸಾಮಶಬ್ದಗಳನ್ನು ಪ್ರಯೋಗಿಸಿವೆಯಾದ್ದರಿಂದ ಈ ಉತ್ಕೃಷ್ಟದೃಷ್ಟಿಯನ್ನು ಪೃಥಿವ್ಯಗ್ನಿಗಳಲ್ಲಿ ಮಾಡಿದೆ ಎಂದಾಯಿತು.

## ಸಿದ್ಧಾಂತ: ಆದಿತ್ಯಾದಿಬುದ್ಧಿಗಳನ್ನು ಅಂಗಗಳಲ್ಲಿಡಬೇಕು

(ಭಾಷ್ಯ)

೫೧೭. ಏವಂ ಪ್ರಾಪ್ತೇ ಬ್ರೂಮಃ। ಆದಿತ್ಯಾದಿಮತಯ ಏವ ಅಙ್ಗೇಷು ಉದ್ಗೀಥಾದಿಷು ಕ್ಷಿಪ್ಯೇರನ್। ಕುತಃ? ಉಪಪತ್ತೇಃ। ಉಪಪದ್ಯತೇ ಹ್ಯೇವಮ್ ಅಪೂರ್ವಸಂನಿಕರ್ಷಾತ್ ಆದಿತ್ಯಾದಿಮತಿಭಿಃ ಸಂಸ್ಕ್ರಿಯಮಾಣೇಷೂದ್ಗೀಥಾದಿಷು ಕರ್ಮಸಮೃದ್ಧಿಃ। "ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ" (ಛಾಂ. ೧-೧-೧೦) ಇತಿ ಚ ವಿದ್ಯಾಯಾಃ ಕರ್ಮಸಮೃದ್ಧಿಹೇತುತ್ವಂ ದರ್ಶಯತಿ। ಭವತು ಕರ್ಮಸಮೃದ್ಧಿಫಲೇಷ್ವೇವಮ್। ಸ್ವತನ್ತ್ರಫಲೇಷು ತು ಕಥಮ್ "ಯ ಏತದೇವಂ ವಿದ್ವಾಁಲ್ಲೋಕೇಷು ಪಞ್ಚವಿಧಂ ಸಾಮೋಪಾಸ್ತೇ" (ಛಾಂ. ೨-೨-೩) ಇತ್ಯಾದಿಷು? ತೇಷ್ವಪಿ ಅಧಿಕೃತಾಧಿಕಾರಾತ್ ಪ್ರಕೃತಾಪೂರ್ವಸಂನಿಕರ್ಷೇಣೈವ ಫಲಕಲ್ಪನಾ ಯುಕ್ತಾ ಗೋದೋಹನಾದಿನಿಯಮವತ್। ಫಲಾತ್ಮಕತ್ವಾಚ್ಚಾದಿತ್ಯಾದೀನಾಮ್ ಉದ್ಗೀಥಾದಿಭ್ಯಃ ಕರ್ಮಾತ್ಮಕೇಭ್ಯ ಉತ್ಕರ್ಷೋಪಪತ್ತಿಃ। ಆದಿತ್ಯಾದಿಪ್ರಾಪ್ತಿಲಕ್ಷಣಂ ಹಿ ಕರ್ಮಫಲಂ ಶಿಷ್ಯತೇ ಶ್ರುತಿಷು। ಅಪಿ ಚ "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" (ಛಾಂ. ೧-೧-೧) "ಖಲ್ವೇತಸ್ಯೈವಾಕ್ಷರಸ್ಯೋಪವ್ಯಾಖ್ಯಾನಂ ಭವತಿ" (ಛಾಂ. ೧-೧-೧೦) ಇತಿ ಚೋದ್ಗೀಥಮೇವ ಉಪಾಸ್ಯತ್ವೇನೋಪಕ್ರಮ್ಯ ಆದಿತ್ಯಾದಿಮತೀರ್ವಿದಧಾತಿ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಆದಿತ್ಯಾದಿಮತಿಗಳನ್ನೇ ಅಂಗಗಳಲ್ಲಿ ಮಾಡಬೇಕು, ಏಕೆ? ಎಂದರೆ ಹೊಂದುವದರಿಂದ. (ಇದರ ವಿವರ): ಹೀಗೆ ಆದಿತ್ಯಾದಿಮತಿಗಳಿಂದ ಉದ್ಗೀಥವೇ ಮುಂತಾದವುಗಳಿಗೆ ಸಂಸ್ಕಾರವಾಗುವದರಿಂದ ಅಪೂರ್ವಕ್ಕೆ ಸಮೀಪವಾಗುವದರಿಂದ[1] ಕರ್ಮಸಮೃದ್ಧಿಯಾಗುವದೆಂಬುದು ಹೊಂದುತ್ತದೆಯಲ್ಲವೆ? "ಯಾವದನ್ನು ವಿದ್ಯೆಯಿಂದ ಮಾಡುತ್ತಾನೋ ಶ್ರದ್ಧೆಯಿಂದಲೂ ಸಮಾಹಿತಚಿತ್ತನಾಗಿಯೂ (ಮಾಡುತ್ತಾನೋ) ಅದೇ ಹೆಚ್ಚು ವೀರ್ಯವತ್ತಾಗುತ್ತದೆ" (ಛಾಂ. ೧-೧-೧೦) ಎಂದು ವಿದ್ಯೆಯು ಕರ್ಮಸಮೃದ್ಧಿಗೆ ಕಾರಣವೆಂದು (ಶ್ರುತಿಯು) ತಿಳಿಸುತ್ತದೆ.

(ಪ್ರಶ್ನೆ):- ಕರ್ಮಸಮೃದ್ಧಿ ಎಂಬ ಫಲವುಳ್ಳ (ಉಪಾಸನೆ)ಗಳ ವಿಷಯದಲ್ಲಿ ಹೀಗೇ ಆಗಲಿ. "ಯಾವನು ಹೀಗೆಂದು ತಿಳಿದುಕೊಂಡು ಲೋಕಗಳಲ್ಲಿ

---

1. ಉಪಾಸನೆಗಳಿಗೆ ಕರ್ಮಸಮೃದ್ಧಿಯು ಫಲವೆಂದು ಶ್ರುತಿಯಲ್ಲಿದೆ. ಅವುಗಳಿಂದ ಕರ್ಮಾಂಗಗಳಿಗೆ ಸಂಸ್ಕಾರವಾಗುವದೆಂದರೆ ಕರ್ಮದ ಅಪೂರ್ವವು ಬೇಗನೆ ಉಂಟಾಗಬಹುದಾಗುತ್ತದೆ.

ಈ ಐದು ಬಗೆಯ ಸಾಮವನ್ನು ಉಪಾಸನೆಯನ್ನು ಮಾಡುತ್ತಾನೋ" (ಛಾಂ. ೨-೨-೩) ಎಂದು ಮುಂತಾಗಿರುವ ಸ್ವತಂತ್ರಫಲವುಳ್ಳ (ಉಪಾಸನೆಗಳ ವಿಷಯ) ದಲ್ಲಿ ಹೇಗೆ ?

(ಉತ್ತರ) :- ಅವುಗಳಲ್ಲಿಯೂ ಅಧಿಕೃತಾಧಿಕಾರವಿರುವದರಿಂದ[1] ಪ್ರಕೃತವಾಗಿರುವ ಅಪೂರ್ವಕ್ಕೆ[2] ಸಮೀಪವಾಗಿರುವದರಿಂದಲೇ ಫಲವೆಂದು ಗೋದೋಹನವೇ ಮುಂತಾದವುಗಳ ನಿಯಮಗಳಿರುವಂತೆ[3] ಫಲವನ್ನು ಕಲ್ಪಿಸುವದೇ ಯುಕ್ತವು[4]. ಆದಿತ್ಯಾದಿಗಳು ಫಲಸ್ವರೂಪವಾಗಿರುವದರಿಂದಲೂ ಕರ್ಮಾತ್ಮಕವಾದ ಉದ್ಗೀಥಾದಿಗಳಿಗಿಂತ (ಅವರಿಗೆ) ಉತ್ಕರ್ಷವು ಹೊಂದುತ್ತದೆ.[5] ಆದಿತ್ಯನೇ ಮುಂತಾದವನ್ನು ಪಡೆಯುವದೆಂಬ ರೂಪದ ಫಲವನ್ನೇ ಕರ್ಮಕ್ಕೆ ಶ್ರುತಿಗಳಲ್ಲಿ ಹೇಳಿದೆಯಷ್ಟೆ. ಇದಲ್ಲದೆ "ಓಮೆಂಬೀ ಅಕ್ಷರರೂಪವಾದ ಉದ್ಗೀಥವನ್ನು ಉಪಾಸನೆಮಾಡಬೇಕು" (ಛಾಂ. ೧-೧-೧) ಎಂದು ಉದ್ಗೀಥವನ್ನೇ ಉಪಾಸ್ಯವಾಗಿ ಉಪಕ್ರಮಿಸಿ ಆದಿತ್ಯಾದಿಮತಿಗಳನ್ನು ವಿಧಾನಮಾಡಿರುತ್ತದೆ.

## ಪೂರ್ವಪಕ್ಷಯುಕ್ತಿಗಳ ಖಂಡನೆ

(ಭಾಷ್ಯ)

೫೧೮. ಯತ್ತೂಕ್ತಮ್ ಉದ್ಗೀಥಾದಿಮತಿಭಿರುಪಾಸ್ಯಮಾನಾ ಆದಿತ್ಯಾದಯಃ ಕರ್ಮಭೂಯಂ ಭೂತ್ವಾ ಫಲಂ ಕರಿಷ್ಯನ್ತಿ ಇತಿ । ತದಯುಕ್ತಮ್ । ಸ್ವಯಮೇವ ಉಪಾಸನಸ್ಯ ಕರ್ಮತ್ವಾತ್ ಫಲವತ್ತ್ವೋಪಪತ್ತೇಃ । ಆದಿತ್ಯಾದಿಭಾವೇನಾಪಿ ದೃಶ್ಯಮಾನಾನಾಮ್ ಉದ್ಗೀಥಾದೀನಾಂ ಕರ್ಮಾತ್ಮಕತ್ವಾನಪಾಯಾತ್। "ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ" (ಛಾ. ೧-೬-೧) ಇತಿ ತು ಲಾಕ್ಷಣಿಕ ಏವ ಪೃಥಿವ್ಯಗ್ನ್ಯೋಃ ಋಕ್ಸಾಮಶಬ್ದಪ್ರಯೋಗಃ । ಲಕ್ಷಣಾ ಚ ಯಥಾಸಂಭವಂ ಸಂನಿಕೃಷ್ಟೇನ ವಿಪ್ರಕೃಷ್ಟೇನ ವಾ ಸ್ವಾರ್ಥಸಂಬನ್ಧೇನ ಪ್ರವರ್ತತೇ । ತತ್ರ ಯದ್ಯಪಿ ಋಕ್ಸಾಮಯೋರ್ಭೇದೇನ ಅನುಕೀರ್ತನಾತ್ ಪೃಥಿವ್ಯಗ್ನ್ಯೋಶ್ಚ ಸಂನಿಧಾನಾತ್ ತಯೋರೇವೈಷ ಋಕ್ಸಾಮಶಬ್ದಪ್ರಯೋಗ

1. ಕರ್ಮದಲ್ಲಿ ಅಧಿಕೃತನಾದವನಿಗೇ ಉಪಾಸನೆಗಳಲ್ಲಿ ಅಧಿಕಾರವಿರುವದರಿಂದ ಎಂದರ್ಥ.

2. ಕರ್ಮದ ಅಪೂರ್ವಕ್ಕೆ.

3. ಗೋದೋಹನವನ್ನು ಉಪಯೋಗಿಸಿದರೆ ಪಶುಫಲವುಂಟಾಗುವದು.

4. ಗೋದೋಹನಕ್ಕೆ ಅಂಗದ ಮೂಲಕವಾಗಿಯೇ ಫಲವಾಗುವಂತೆ, ಅವಕ್ಕೂ ಪ್ರಕೃತಕರ್ಮಾಪೂರ್ವದ ಅಂಗದ ಮೂಲಕವೇ ಫಲವಾಗುವದೆಂದು ಕಲ್ಪಿಸುವದು ಯುಕ್ತ ಎಂದರ್ಥ. 'ಉಪಪತ್ತೇಃ' ಎಂಬುದಕ್ಕೆ ಇದೊಂದು ಅರ್ಥ.

5. ಉಪಪತ್ತೇಃ ಎಂಬುದಕ್ಕೆ ಇದೂ ಒಂದು ಅರ್ಥ.

ಋಕ್ಸಾಮಸಂಬನ್ಧಾತ್ ಇತಿ ನಿಶ್ಚೀಯತೇ। ಕ್ಷತ್ತೃಶಬ್ದೋಽಪಿ ಹಿ ಕುತಶ್ಚಿತ್ ಕಾರಣಾತ್ ರಾಜಾನಮುಪಸರ್ಪನ್ ನ ನಿವಾರಯಿತುಂ ಪಾರ್ಯತೇ। "ಇಯಮೇವರ್ಕ್" (ಛಾಂ. ೧-೬-೧) ಇತಿ ಚ ಯಥಾಕ್ಷರನ್ಯಾಸಮ್ ಋಚ ಏವ ಪೃಥಿವೀತ್ವಮ್ ಅವಧಾರಯತಿ। ಪೃಥಿವ್ಯಾ ಹಿ ಋಕ್ತ್ವೇಽವಧಾರ್ಯಮಾಣೇ 'ಋಯಮೃಗೇವ' ಇತ್ಯಕ್ಷರನ್ಯಾಸಃ ಸ್ಯಾತ್। "ಯ ಏವಂ ವಿದ್ವಾನ್ ಸಾಮಗಾಯತಿ" (ಛಾಂ. ೧-೭-೭) ಇತಿ ಚಾಙ್ಗಾಶ್ರಯಮೇವ ವಿಜ್ಞಾನಮ್ ಉಪಸಂಹರತಿ, ನ ಪೃಥಿವ್ಯಾದ್ಯಾಶ್ರಯಮ್, ತಥಾ "ಲೋಕೇಷು ಪಞ್ಚವಿಧಂ ಸಾಮೋಪಾಸೀತ" (ಛಾಂ. ೨-೨-೧) ಇತಿ ಯದ್ಯಪಿ ಸಪ್ತಮೀನಿರ್ದಿಷ್ಟಾ ಲೋಕಾಃ, ತಥಾಪಿ ಸಾಮ್ನ್ಯೇವ ತೇಽಧ್ಯಸ್ಯೇರನ್। ದ್ವಿತೀಯಾನಿರ್ದೇಶೇನ ಸಾಮ್ನ ಉಪಾಸ್ಯತ್ವಾವಗಮಾತ್। ಸಾಮನಿ ಹಿ ಲೋಕೇಷು ಅಧ್ಯಸ್ಯಮಾನೇಷು ಸಾಮ ಲೋಕಾತ್ಮನಾ ಉಪಾಸಿತಂ ಭವತಿ। ಅನ್ಯಥಾ ಪುನರ್ಲೋಕಾಃ ಸಾಮಾತ್ಮನಾ ಉಪಾಸಿತಾಃ ಸ್ಯುಃ। ಏತೇನ "ಏತದ್ಗಾಯತ್ರಂ ಪ್ರಾಣೇಷು ಪ್ರೋತಮ್" (ಛಾಂ. ೨-೧೧-೧) ಇತ್ಯಾದಿ ವ್ಯಾಖ್ಯಾತಮ್। ಯತ್ರಾಪಿ ತುಲ್ಯೋ ದ್ವಿತೀಯಾನಿರ್ದೇಶಃ — "ಅಥ ಖಲ್ವಮುಮಾದಿತ್ಯಂ ಸಪ್ತವಿಧಂ ಸಾಮೋಪಾಸೀತ" (ಛಾಂ. ೨-೧-೧) ಇತಿ, ತತ್ರಾಪಿ "ಸಮಸ್ತಸ್ಯ ಖಲು ಸಾಮ್ನ ಉಪಾಸನಂ ಸಾಧು" (ಛಾ. ೨-೧-೫) "ಇತಿ ತು ಪಞ್ಚವಿಧಸ್ಯ" (ಛಾಂ. ೨-೭-೨), "ಅಥ ಸಪ್ತವಿಧಸ್ಯ" (ಛಾಂ. ೨-೮-೧) ಇತಿ ಚ ಸಾಮ್ನ ಏವೋಪಾಸ್ಯತ್ವೋಪಕ್ರಮಾತ್ ತಸ್ಮಿನ್ನೇವ ಆದಿತ್ಯಾದ್ಯಧ್ಯಾಸಃ। ಏತಸ್ಮಾದೇವ ಚ ಸಾಮ್ನ ಉಪಾಸ್ಯತ್ವಾವಗಮಾತ್, "ಪೃಥಿವೀ ಹಿಂಕಾರಃ" (ಛಾಂ.೨-೨-೧) ಇತ್ಯಾದಿನಿರ್ದೇಶವಿಪರ್ಯಯೇಽಪಿ ಹಿಂಕಾರಾದಿಷ್ವೇವ ಪೃಥಿವ್ಯಾದಿದೃಷ್ಟಿಃ। ತಸ್ಮಾತ್ ಅನಙ್ಗಾಶ್ರಯಾ ಆದಿತ್ಯಾದಿಮತಯೋಽಙ್ಗೇಷೂದ್ಗೀಥಾದಿಷು ಕ್ಷಿಪ್ಯೇರನ್ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಇನ್ನು ಉದ್ಗೀಥಾದಿಮತಿಗಳಿಂದ ಆದಿತ್ಯಾದಿಗಳನ್ನು ಉಪಾಸನೆಮಾಡಿದರೆ ಆದಿತ್ಯಾದಿಗಳು ಕರ್ಮಭಾವವನ್ನು ಪಡೆದು ಫಲವನ್ನು ಕೊಡುತ್ತಾರೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದು ಸರಿಯಲ್ಲ. ಏಕೆಂದರೆ ಉಪಾಸನೆಯು ತಾನೇ ಕರ್ಮವಾಗಿರುವದರಿಂದ (ಅದಕ್ಕೆ) ಫಲವುಂಟಾಗಬಹುದಾಗಿದೆ[1]. ಮತ್ತು ಉದ್ಗೀಥಾದಿಗಳನ್ನು ಆದಿತ್ಯಾದಿಭಾವದಿಂದ ನೋಡಿದಾಗಲೂ (ಅವಕ್ಕೆ) ಕರ್ಮಾತ್ಮಕತ್ವವೇನೂ ಹೋಗಿರುವದಿಲ್ಲ[2]. "ಆ ಈ

1. ಅದಕ್ಕೆ ಮತ್ತೊಂದು ಕರ್ಮದ ಆಸರೆ ಬೇಕಿಲ್ಲ.
2. ಆದ್ದರಿಂದ ಆಗಲೂ ಅವು ಫಲವನ್ನು ಕೊಡಬಹುದು.

ಸಾಮವು ಈ ಋಕ್ಕಿನಮೇಲೆ ಏರಿಕೊಂಡಿರುವದು" (ಛಾಂ. ೧-೬-೧) ಎಂಬಲ್ಲಾದರೊ ಪೃಥಿವಿ, ಅಗ್ನಿ -ಇವುಗಳಲ್ಲಿ ಋಕ್ಸಾಮಶಬ್ದಗಳನ್ನು ಪ್ರಯೋಗಿಸಿರುವದು ಲಕ್ಷಣೆಯಿಂದಲೇ; ಆದರೆ ಲಕ್ಷಣೆಯು ಸಂಭವವಿದ್ದಂತೆ ತನ್ನ ಅರ್ಥಕ್ಕೆ ಹತ್ತಿರದ ಅಥವಾ ದೂರದ ಸಂಬಂಧದಿಂದ ಪ್ರವರ್ತಿಸಬಹುದು[1]. ಹೀಗಿರುವಲ್ಲಿ ಋಕ್ಸಾಮಗಳಲ್ಲಿ ಪೃಥಿವ್ಯಗ್ನಿದೃಷ್ಟಿಯನ್ನು ಮಾಡಬೇಕೆಂಬ ಇಚ್ಛೆಯಿದ್ದರೂ ಪ್ರಸಿದ್ಧವಾಗಿರುವ ಋಕ್ಸಾಮಗಳನ್ನು ಜೇರೆಯಾಗಿ ಹೇಳಿರುವದರಿಂದಲೂ ಪೃಥಿವ್ಯಗ್ನಿಗಳು ಹತ್ತಿರವಿರುವದರಿಂದಲೂ ಅವುಗಳಲ್ಲಿಯೇ ಋಕ್ಸಾಮಸಂಬಂಧದಿಂದ ಋಕ್ಸಾಮಶಬ್ದಗಳನ್ನು ಹೀಗೆ (ಲಕ್ಷಣೆಯಿಂದ) ಪ್ರಯೋಗಿಸಿದೆ ಎಂದು ನಿಶ್ಚಯಿಸಬಹುದಾಗಿದೆ. ಕ್ಷತ್ತೃಶಬ್ದವು ಕೂಡ ಯಾವದಾದರೊಂದು ಕಾರಣದಿಂದ ರಾಜನಿಗೆ ಹತ್ತಿದರೆ ಅದನ್ನು ಕೂಡದೆಂದು ಹೇಳಲಾಗುವದಿಲ್ಲವಷ್ಟೇ[2]. "ಈ (ಪೃಥಿವಿಯೇ) ಋಕ್ಕು" (ಛಾಂ. ೧-೬-೧) ಎಂಬುದು ಅಕ್ಷರನ್ಯಾಸಕ್ಕನುಗುಣವಾಗಿ ಋಕ್ಕನ್ನೇ ಪೃಥಿವಿಯೆಂದು ಗೊತ್ತುಮಾಡಿ ಹೇಳುತ್ತದೆ (ಎನ್ನಬೇಕು); ಏಕೆಂದರೆ ಪೃಥಿವಿಯು ಋಕ್ಕೆಂಬುದನ್ನು ಅವಧಾರಣೆಮಾಡುವದಾಗಿದ್ದರೆ "ಈ (ಪೃಥಿವಿಯು) ಋಕ್ಕೇ" ಎಂದು ಅಕ್ಷರನ್ಯಾಸವಿರುತ್ತಿತ್ತು. "ಯಾವನು ಹೀಗೆಂದು ತಿಳಿದು ಸಾಮವನ್ನು ಗಾನಮಾಡುತ್ತಾನೋ" (ಛಾಂ. ೧-೭-೭) ಎಂಬಲ್ಲಿಯೂ ಅಂಗಾಶ್ರಯವಾಗಿಯೇ ವಿಜ್ಞಾನವನ್ನು ಉಪಸಂಹಾರ ಮಾಡಿದೆಯೇ ಹೊರತು ಪೃಥಿವಿಯೇ ಮುಂತಾದದ್ದನ್ನು ಆಶ್ರಯಿಸಿ (ಉಪಸಂಹರಿ)ಸಿಲ್ಲ. ಹೀಗೆಯೇ "ಲೋಕಗಳಲ್ಲಿ ಐದು ಬಗೆಯಿಂದ ಸಾಮವನ್ನು ಉಪಾಸನಮಾಡಬೇಕು" (ಛಾ. ೨-೨-೧) ಎಂಬಲ್ಲಿ ಲೋಕಗಳನ್ನು ಸಪ್ತಮೀವಿಭಕ್ತಿಯಿಂದ ನಿರ್ದೇಶಮಾಡಿರುವದು ನಿಜ; ಆದರೂ ಸಾಮದಲ್ಲಿಯೇ ಅವುಗಳ (ದೃಷ್ಟಿಯನ್ನು) ಹಾಕಬೇಕು; ಏಕೆಂದರೆ ದ್ವಿತೀಯಾನಿರ್ದೇಶದಿಂದ ಸಾಮವು ಉಪಾಸ್ಯವೆಂದು ನಿಶ್ಚಯವಾಗುತ್ತದೆ. ಸಾಮದಲ್ಲಿ ಲೋಕಗಳನ್ನು ಅಧ್ಯಾಸಮಾಡಿದರಲ್ಲವೆ, ಸಾಮವನ್ನು ಲೋಕಗಳ ರೂಪದಿಂದ ಉಪಾಸನೆ ಮಾಡಿದಂತೆ ಆಗುತ್ತದೆ; ಹೀಗಿಲ್ಲದಿದ್ದರೆ ಲೋಕಗಳನ್ನೇ ಸಾಮರೂಪದಿಂದ ಉಪಾಸನೆಮಾಡಿದಂತೆ ಆಗುತ್ತದೆ. ಇದರಿಂದ "ಈ ಗಾಯತ್ರ್ಯವು ಪ್ರಾಣಗಳಲ್ಲಿ

---

1. 'ಗಂಗೆಯಲ್ಲಿ ಹಳ್ಳಿ' ಎಂಬಲ್ಲಿ ಹತ್ತಿರದ ಸಂಬಂಧವಿದೆ; ಏಕೆಂದರೆ ಗಂಗೆಗೂ ದಡಕ್ಕೂ ಸಂಯೋಗಸಂಬಂಧವಿದೆ. 'ಮಾಣವಕನು ಬೆಂಕಿ' ಎಂಬಲ್ಲಿ ದೂರದ ಸಂಬಂಧವಿದೆ; ಏಕೆಂದರೆ ಬೆಂಕಿಯಲ್ಲಿರುವ ಶುಚಿತ್ವಾದಿಗುಣಗಳುಳ್ಳವನೆಂಬುದು ಪರಂಪರೆಯಿಂದ ಮಾಣವಕನಿಗೆ ಸೇರಿದೆ.

2. ರಾಜನು ತಾನೇ ಸೂತನ ಕೆಲಸವನ್ನು ಮಾಡುವಾಗ, ರಥಚರ್ಯೆಯೇ ಮುಂತಾದವುಗಳನ್ನು ಮಾಡುತ್ತಿರುವಾಗ, ಅವನನ್ನು ಕ್ಷತ್ತೃವೆನ್ನಬಹುದು. ಇದರಂತೆ ಇಲ್ಲಿಯೂ ಪೃಥಿವ್ಯಗ್ನಿಗಳಲ್ಲಿ ಋಕ್ಸಾಮಶಬ್ದಗಳನ್ನು ಪ್ರಯೋಗಿಸಬಹುದಾಗಿದೆ.

ಹೆಣೆದುಕೊಂಡಿರುತ್ತದೆ" (ಛಾ ೨-೧೧-೧) ಮುಂತಾದದ್ದನ್ನೂ ವಿವರಿಸಿದಂತೆ ಆಯಿತು[1]. ಇನ್ನು ಎಲ್ಲಿ "ಈ ಆದಿತ್ಯನನ್ನಾಗಿ ಸಪ್ತವಿಧಸಾಮವನ್ನು ಉಪಾಸನೆ ಮಾಡಬೇಕು" (ಛಾಂ. ೨-೯-೧) ಎಂದು ದ್ವಿತೀಯಾನಿರ್ದೇಶವು (ಎರಡಕ್ಕೂ) ಸಮಾನವಾಗಿರುತ್ತದೆಯೋ ಅಲ್ಲಿಯೂ "ಸಮಸ್ತಸಾಮದ ಉಪಾಸನೆಯೇ ಸಾಧು" (ಛಾಂ. ೨-೧-೧) "ಇಂತು ಪಂಚವಿಧ(ಸಾಮದ ಉಪಾಸನೆ)" (ಛಾಂ.೨-೭-೩) "ಇನ್ನು ಸಪ್ತವಿಧದ (ಸಾಮದ ಉಪಾಸನೆ)" (ಛಾಂ.೨-೮-೧) ಎಂದು ಸಾಮವೇ ಉಪಾಸ್ಯವೆಂದು ಉಪಕ್ರಮಿಸಿರುವವರಿಂದ ಅದರಲ್ಲಿಯೇ ಆದಿತ್ಯನೇ ಮುಂತಾದವರನ್ನು ಅಧ್ಯಾಸಮಾಡಬೇಕು. ಸಾಮವನ್ನು ಉಪಾಸನೆ ಮಾಡಬೇಕೆಂಬ ಈ ನಿಶ್ಚಯವಾಗಿರುವದರಿಂದಲೇ, "ಪೃಥಿವಿಯು ಹಿಂಕಾರವು" (ಛಾಂ.೨-೨-೧) ಎಂದು ಮುಂತಾಗಿ ನಿರ್ದೇಶದಲ್ಲಿ ವಿಪರ್ಯಯ ವಿದ್ದರೂ ಹಿಂಕಾರಾದಿಗಳಲ್ಲಿಯೇ ಪೃಥಿವ್ಯಾದಿಗಳ ದೃಷ್ಟಿ(ಯನ್ನು ಮಾಡಬೇಕು). ಆದ್ದರಿಂದ ಅಂಗಾಶ್ರಯವಲ್ಲದ ಆದಿತ್ಯಾದಿಗಳ ಮತಿಗಳನ್ನು ಅಂಗವಾಗಿರುವ ಉದ್ಗೀಥಾದಿಗಳಲ್ಲಿ ಹಾಕಬೇಕು ಎಂದು ಸಿದ್ಧವಾಯಿತು.

## ೬. ಆಸೀನಾಧಿಕರಣಮ್ (ಸೂ. ೭-೧೦)

(ಉಪಾಸನೆಗಳಲ್ಲಿ ಕುಳಿತುಕೊಂಡು ಮಾಡಬೇಕು)

**ಆಸೀನಃ ಸಂಭವಾತ್ ॥ ೭ ॥**

೭. ಕುಳಿತುಕೊಂಡು (ಉಪಾಸನೆಮಾಡಬೇಕು): ಏಕೆಂದರೆ (ಹಾಗಾದರೆ) ಸಂಭವಿಸುತ್ತದೆ.

## ಉಪಾಸನೆಗಳನ್ನು ಕುಳಿತುಕೊಂಡೇ ಮಾಡಬೇಕು

(ಭಾಷ್ಯ)

೫೨೦ ಕರ್ಮಾಙ್ಗಸಂಬದ್ಧೇಷು ತಾವದುಪಾಸನೇಷು ಕರ್ಮತನ್ತ್ರತ್ವಾತ್ ನಾಸನಾದಿಚಿನ್ತಾ । ನಾಪಿ ಸಮ್ಯಗ್ದರ್ಶನೇ। ವಸ್ತುತನ್ತ್ರತ್ವಾದ್ ವಿಜ್ಞಾನಸ್ಯ । ಇತರೇಷು ತೂಪಾಸನೇಷು ಕಿಮನಿಯಮೇನ ತಿಷ್ಠನ್ ಆಸೀನಃ ಶಯಾನೋ ವಾ ಪ್ರವರ್ತೇತ, ಉತ ನಿಯಮೇನ ಆಸೀನ ಏವ ? ಇತಿ ಚಿನ್ತಯತಿ। ತತ್ರ ಮಾನಸತ್ವಾತ್ ಉಪಾಸನಸ್ಯ ಅನಿಯಮಃ ಶರೀರಸ್ಥಿತೇಃ। ಇತ್ಯೇವಂ ಪ್ರಾಪ್ತೇ ಬ್ರವೀತಿ—ಆಸೀನ ಏವೋಪಾಸೀತ ಇತಿ। ಕುತಃ ? ಸಂಭವಾತ್, ಉಪಾಸನಂ ನಾಮ ಸಮಾನಪ್ರತ್ಯಯಪ್ರವಾಹಕರಣಮ್। ನ ಚ ತದ್ಗಚ್ಛತೋ ಧಾವತೋ ವಾ ಸಂಭವತಿ। ಗತ್ಯಾದೀನಾಂ ಚಿತ್ತವಿಕ್ಷೇಪಕತ್ವಾತ್। ತಿಷ್ಠತೋಽಪಿ ದೇಹ

1. ಅಲ್ಲಿಯೂ ಗಾಯತ್ರದಲ್ಲಿಯೇ ಪ್ರಾಣದೃಷ್ಟಿಯನ್ನು ಮಾಡಬೇಕು.

ಧಾರಣೇ ವ್ಯಾಪೃತಂ ಮನೋ ನ ಸೂಕ್ಷ್ಮವಸ್ತುನಿರೀಕ್ಷಣಕ್ಷಮಂ ಭವತಿ । ಶಯಾನಸ್ಯಾಪಿ ಅಕಸ್ಮಾದೇವ ನಿದ್ರಯಾ ಅಭಿಭೂಯೇತ । ಆಸೀನಸ್ಯ ತು ಏವಂಜಾತೀಯಕೋ ಭೂಯಾನ್ ದೋಷಃ ಸುಪರಿಹರ ಇತಿ ಸಂಭವತಿ ತಸ್ಯೋಪಾಸನಮ್ ॥

(ಭಾಷ್ಯಾರ್ಥ)

**ಕರ್ಮಾಂಗಕ್ಕೆ ಸಂಬಂಧಿಸಿರುವ ಉಪಾಸನೆಗಳು ಕರ್ಮಕ್ಕೆ ಅಧೀನವಾಗಿರುವದರಿಂದ ಆಸನಾದಿಗಳ ವಿಚಾರವು (ಅವುಗಳ ವಿಷಯಕ್ಕೆ) ಬೇಕಿರುವದಿಲ್ಲ[1]. ಸಮ್ಯಗ್ದರ್ಶನದಲ್ಲಿಯೂ (ಬೇಕಾಗು) ವದಿಲ್ಲ, ಏಕೆಂದರೆ (ಆ) ಅನುಭವವು ವಸ್ತುತಂತ್ರವಾಗಿರುತ್ತದೆ[2].** (ಇನ್ನು) ಮಿಕ್ಕ ಉಪಾಸನೆಗಳಲ್ಲಿ ಯಾವ ನಿಯಮವೂ ಇಲ್ಲದೆ ನಿಂತು, ಕುಳಿತು, ಅಥವಾ ಮಲಗಿಕೊಂಡು ಮಾಡಬಹುದೆ, ಅಥವಾ ನಿಯಮದಿಂದ ಕುಳಿತುಕೊಂಡೇ (ಮಾಡಬೇಕೆ) ? —ಎಂಬುದನ್ನು ವಿಚಾರಮಾಡುತ್ತಾರೆ.

ಇಲ್ಲಿ ಉಪಾಸನೆಯು ಮಾನಸವಾಗಿರುವದರಿಂದ ಶರೀರದ ಸ್ಥಿತಿಗೆ (ಯಾವ) ನಿಯಮವೂ ಇಲ್ಲ – ಎಂದು (ಪೂರ್ವಪಕ್ಷವು) ಬಂದೊದಗಲಾಗಿ ಹೇಳುತ್ತಾರೆ. ಕುಳಿತುಕೊಂಡೇ ಉಪಾಸನೆಮಾಡಬೇಕು ; ಏಕೆ ? ಎಂದರೆ ಸಂಭವಿಸುವದರಿಂದ. ಉಪಾಸನೆ ಎಂದರೆ ಸಮಾನವಾದ ಪ್ರತ್ಯಯವನ್ನು ಹರಿಯಿಸುವದು. ಅದು ನಡೆಯುತ್ತಿರುವವನಿಗಾಗಲಿ ಓಡುತ್ತಿರುವವನಿಗಾಗಲಿ ಸಂಭವಿಸುವದಿಲ್ಲ; ಏಕೆಂದರೆ ನಡೆಯುವದು ಮುಂತಾದವುಗಳು ಚಿತ್ತಕ್ಕೆ ವಿಕ್ಷೇಪವನ್ನುಂಟುಮಾಡುತ್ತವೆ. ನಿಂತುಕೊಂಡಿರುವವನಿಗೂ ಮನಸ್ಸು ದೇಹವನ್ನು ಹಿಡಿದಿಟ್ಟುಕೊಂಡಿರುವದರಲ್ಲಿ ವ್ಯಾಪೃತವಾಗಿರುತ್ತದೆಯಾದ್ದರಿಂದ ಸೂಕ್ಷ್ಮವಸ್ತುವನ್ನು ನೋಡುವದಕ್ಕೆ ಶಕ್ತವಾಗುವದಿಲ್ಲ. ಮಲಗಿರುವವನಿಗೂ ತಟ್ಟನೆ ನಿದ್ರೆಯಿಂದ ಪರವಶವಾಗಬಹುದು. ಆದರೆ **ಕುಳಿತಿರುವವನು ಈ ಜಾತಿಯ ಬಹಳ ದೋಷಗಳನ್ನು ಸುಲಭವಾಗಿ ಪರಿಹರಿಸಿಕೊಳ್ಳಬಹುದಾದ್ದರಿಂದ ಅವನಿಗೆ ಉಪಾಸನೆಯು ಸಂಭವಿಸುತ್ತದೆ.**

1. ಕರ್ಮವನ್ನು ನಿಂತು ಮಾಡಬೇಕಾಗಿದ್ದರೆ ಉಪಾಸನೆಯನ್ನು ನಿಂತೇ ಮಾಡಬೇಕಾಗುತ್ತದೆ ; ಅದನ್ನು ಕುಳಿತು ಮಾಡಬೇಕಾಗಿದ್ದರೆ ಉಪಾಸನೆಯನ್ನು ಕುಳಿತೇ ಮಾಡಬೇಕಾಗುತ್ತದೆ.

2 ಹೇಗೆ ನೋಡಿದರೂ ತತ್ತ್ವಾನುಭವವು ಒಂದೇ ಸಮನಾಗಿರುತ್ತದೆ ; ಏಕೆಂದರೆ ಅದುವಸ್ತುವಿಗೂ ಪ್ರಮಾಣಕ್ಕೂ ಅಧೀನವಾಗಿರುತ್ತದೆ ಎಂದರ್ಥ. ಇಲ್ಲಿ ವಾಕ್ಯಜ್ಞಾನಾಭ್ಯಾಸಕ್ಕೆ ಮಾತ್ರ ಆಸನವು ಬೇಕು, ಸಾಕ್ಷಾತ್ಕಾರಕ್ಕೆ ಬೇಕಿಲ್ಲ —ಎಂಬ ವಿಭಾಗವನ್ನು ಭಾಮತೀವ್ಯಾಖ್ಯಾನದಲ್ಲಿ ಮಾಡಿದೆ. ಅದು ಭಾಷ್ಯವಿರುದ್ಧ ; ಏಕೆಂದರೆ ನಿದಿಧ್ಯಾಸನರೂಪವಾದ ಧ್ಯಾನವು ವಾಕ್ಯಜ್ಞಾನಾಭ್ಯಾಸರೂಪವೆಂದು ಆಚಾರ್ಯರು ಒಪ್ಪಿರುವದಿಲ್ಲ.

## ಧ್ಯಾನಾಚ್ಚ ॥ ೮ ॥

೮. ಧ್ಯಾನವಾಗಿರುವದರಿಂದಲೂ (ಹೀಗೆ).

### ಧ್ಯಾನಕ್ಕೆ ಆಸನವು ಬೇಕೆಂಬುದು ಲೋಕಸಿದ್ಧ

(ಭಾಷ್ಯ)

೫೨೧ ಅಪಿ ಚ ಧ್ಯಾಯತ್ಯರ್ಥ ಏಷ ಯತ್ಸಮಾನಪ್ರತ್ಯಯಪ್ರವಾಹಕರಣಮ್। ಧ್ಯಾಯತಿಶ್ಚ ಪ್ರಶಿಥಿಲಾಙ್ಗಚೇಷ್ಟೇಷು ಪ್ರತಿಷ್ಠಿತದೃಷ್ಟಿಷು ಏಕವಿಷಯಾಕ್ಷಿಪ್ತಚಿತ್ತೇಷು ಉಪಚರ್ಯಮಾಣೋ ದೃಶ್ಯತೇ 'ಧ್ಯಾಯತಿ ಬಕಃ'' 'ಧ್ಯಾಯತಿ ಪ್ರೋಷಿತಬನ್ಧುಃ' ಇತಿ। ಆಸೀನಶ್ಚ ಅನಾಯಾಸೋ ಭವತಿ। ತಸ್ಮಾದಪಿ ಆಸೀನಕರ್ಮ ಉಪಾಸನಮ್ ॥

(ಭಾಷ್ಯಾರ್ಥ)

ಸಮಾನಪ್ರತ್ಯಯವನ್ನು ಹರಿಯಿಸುವದೆಂಬಿದು ಧ್ಯಾನವೆಂಬರ್ಥವೇ (ಆಗಿರುತ್ತದೆ). ಧ್ಯಾನವೆಂಬ (ಮಾತನ್ನು) ಶರೀರದ ವ್ಯಾಪಾರವನ್ನು ಸಂಪೂರ್ಣವಾಗಿ ಸಡಲಿಸಿಕೊಂಡು, ದೃಷ್ಟಿಯನ್ನು ನಿಲ್ಲಿಸಿಕೊಂಡು, ಒಂದೇ ವಿಷಯದಲ್ಲಿ ಚಿತ್ತವನ್ನು ಎಳೆದಿಟ್ಟುಕೊಂಡವರಲ್ಲಿ 'ಬಕಪಕ್ಷಿ ಧ್ಯಾನಮಾಡುತ್ತದೆ,' "ಸ್ನೇಹಿತನು ದೂರಹೋಗಿರುವದರಿಂದ ಧ್ಯಾನಿಸುತ್ತಿದಾನೆ" ಎಂದು ಪ್ರಯೋಗಿಸುವದು (ಲೋಕದಲ್ಲಿ) ಕಂಡುಬರುತ್ತದೆ. ಕುಳಿತುಕೊಂಡವನಿಗೆ (ಯಾವ) ಆಯಾಸವೂ ಇರುವದಿಲ್ಲ. ಆದ್ದರಿಂದಲೂ ಉಪಾಸನೆಯು ಕುಳಿತುಕೊಂಡಿರುವವನೇ ಮಾಡತಕ್ಕದ್ದಾಗಿದೆ.

## ಅಚಲತ್ವಂ ಚಾಪೇಕ್ಷ್ಯ ॥ ೯ ॥

೯. ಅಚಲತ್ವವನ್ನು ಅಪೇಕ್ಷಿಸಿ (ಧ್ಯಾನಶಬ್ದವನ್ನು ಪ್ರಯೋಗಿಸಿದೆ).

### ಆಸನವು ಅವಶ್ಯವೆಂಬುದಕ್ಕೆ ವೈದಿಕಲಿಂಗ

(ಭಾಷ್ಯ)

೫೨೨. ಅಪಿ ಚ "ಧ್ಯಾಯತೀವ ಪೃಥಿವೀ" (ಛಾಂ. ೭-೬-೧) ಇತ್ಯತ್ರ ಪೃಥಿವ್ಯಾದಿಷು ಅಚಲತ್ವಮೇವ ಅಪೇಕ್ಷ್ಯ ಧ್ಯಾಯತಿವಾದೋ ಭವತಿ। ತಚ್ಚ ಲಿಙ್ಗಮ್ ಉಪಾಸನಸ್ಯ ಆಸೀನಕರ್ಮತ್ವೇ ॥

(ಭಾಷ್ಯಾರ್ಥ)

ಇದಲ್ಲದೆ 'ಪೃಥಿವಿಯು ಧ್ಯಾನಮಾಡುವಂತಿದೆ' (ಛಾಂ. ೭-೬-೧) ಎಂಬಲ್ಲಿ ಅಲುಗಾಡುವದಿಲ್ಲವೆಂಬುದರ ಅಪೇಕ್ಷೆಯಿಂದಲೇ ಪೃಥಿವ್ಯಾದಿಗಳಲ್ಲಿ 'ಧ್ಯಾನಮಾಡುತ್ತವೆ' ಎಂಬ ಮಾತನ್ನು ಪ್ರಯೋಗಿಸಿರುವದು ಉಪಾಸನೆಯು ಕುಳಿತವನು ಮಾಡತಕ್ಕದ್ದೆಂಬುದಕ್ಕೆ ಲಿಂಗವಾಗಿರುತ್ತದೆ.

**ಸ್ಮರನ್ತಿ ಚ ॥ ೧೦ ॥**

೧೦. (ಆಸನವನ್ನು) ಸ್ಮೃತಿಗಳಲ್ಲಿ ಹೇಳಿಯೂ ಇರುತ್ತದೆ.

## ಆಸನವನ್ನು ಉಪಾಸನೆಗಾಗಿ ಸ್ಮೃತಿಯಲ್ಲಿ ಹೇಳಿದೆ

(ಭಾಷ್ಯ)

೫೨೩. ಸ್ಮರನ್ತ್ಯಪಿ ಚ ಶಿಷ್ಟಾ ಉಪಾಸನಾಙ್ಗತ್ವೇನಾಸನಮ್ "ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ" (ಗೀ. ೬-೧-೧) ಇತ್ಯಾದಿನಾ । ಅತ ಏವ ಪದ್ಮಕಾದೀನಾಮಾಸನವಿಶೇಷಾಣಾಮ್ ಉಪದೇಶೋ ಯೋಗ ಶಾಸ್ತ್ರೇ ॥

(ಭಾಷ್ಯಾರ್ಥ)

ಶಿಷ್ಟರು ಉಪಾಸನೆಗೆ ಅಂಗವಾಗಿ ಆಸನವನ್ನು ಸ್ಮೃತಿಯಲ್ಲಿ "ಶುಚಿಯಾದ ದೇಶದಲ್ಲಿ ಸ್ಥಿರವಾಗಿ ಆಸನವನ್ನು ಹಾಕಿಕೊಂಡು" (ಗೀ. ೬-೧೧) ಎಂದು ಮುಂತಾದ (ವಾಕ್ಯದಿಂದ) ಹೇಳಿಯೂ ಇರುತ್ತಾರೆ. ಆದ್ದರಿಂದಲೇ ಪದ್ಮಕವೇ ಮುಂತಾದ ಆಸನವಿಶೇಷಗಳನ್ನು **ಯೋಗಶಾಸ್ತ್ರದಲ್ಲಿ**[1] ಉಪದೇಶಿಸಿರುತ್ತಾರೆ.

### ೭. ಏಕಾಗ್ರತಾಧಿಕರಣ

(ಏಕಾಗ್ರತೆಯಾಗುವ ದಿಗಾದಿಗಳು ಬೇಕು)

**ಯತ್ರೈಕಾಗ್ರತಾ ತತ್ರಾವಿಶೇಷಾತ್ ॥ ೧೧ ॥**

೧೧. ಎಲ್ಲಿ ಏಕಾಗ್ರತೆಯಾಗುವದೋ ಅಲ್ಲಿ (ಉಪಾಸನೆ ಮಾಡಬೇಕು); ಏಕೆಂದರೆ (ಯಾವ) ವಿಶೇಷವೂ ಇಲ್ಲ.

---

1. ಪಾತಂಜಲಯೋಗಸೂತ್ರದಲ್ಲಿ ಈ ಆಸನಗಳನ್ನು ಹೇಳಿಲ್ಲ; ಸ್ಥಿರಸುಖವಾದ ಆಸನವನ್ನು ಪ್ರಯೋಗಿಸಬೇಕು – ಎಂದಿಷ್ಟೇ ಹೇಳಿದೆ. ಬೇರೆ ಯೋಗಗ್ರಂಥಗಳಲ್ಲಿ ಪದ್ಮಕಾದಿಗಳನ್ನು ಹೇಳಿದೆ.

# ಉಪಾಸನೆಗೆ ದಿಗಾದಿನಿಯಮವಿಲ್ಲ

(ಭಾಷ್ಯ)

೫೨೪. ದಿಗ್ದೇಶಕಾಲೇಷು ಸಂಶಯಃ— ಕಿಮಸ್ತಿ ಕಶ್ಚಿನ್ನಿಯಮೋ ನಾಸ್ತಿ ವಾ ಇತಿ । ಪ್ರಾಯೇಣ ವೈದಿಕೇಷ್ವಾರಮ್ಭೇಷು ದಿಗಾದಿನಿಯಮದರ್ಶನಾತ್ ಸ್ಯಾದಿಹಾಪಿ ಕಶ್ಚಿನ್ನಿಯಮ ಇತಿ ಯಸ್ಯ ಮತಿಃ, ತಂ ಪ್ರತ್ಯಾಹ ದಿಗ್ದೇಶಕಾಲೇಷು ಅರ್ಥಲಕ್ಷಣ ಏವ ನಿಯಮಃ । ಯತ್ರೈವಾಸ್ಯ ದಿಶಿ ದೇಶೇ ಕಾಲೇ ವಾ ಮನಸಃ ಸೌಕರ್ಯೇಣೈಕಾಗ್ರತಾ ಭವತಿ ತತ್ರೈವೋಪಾಸೀತ ಪ್ರಾಚೀದಿಕ್ ಪೂರ್ವಾಹ್ಣಪ್ರಾಚೀನಪ್ರವಣಾದಿವದ್ವಿಶೇಷಾಶ್ರವಣಾತ್ । ಏಕಾಗ್ರತಾಯಾ ಇಷ್ಟಾಯಾಃ ಸರ್ವತ್ರಾವಿಶೇಷಾತ್ । ನನು ವಿಶೇಷಮಪಿ ಕೇಚಿದಾಮನನ್ತಿ "ಸಮೇ ಶುಚೌ ಶರ್ಕರವಹ್ನಿವಾಲುಕಾವಿವರ್ಜಿತೇ ಶಬ್ದಜಲಾಶ್ರಯಾದಿಭಿಃ । ಮನೋಽನುಕೂಲೇ ನ ತು ಚಕ್ಷುಪೀಡನೇ ಗುಹಾನಿವಾತಾಶ್ರಯಣೇ ಪ್ರಯೋಜಯೇತ್" (ಶ್ವೇ. ೨–೧೦) ಇತಿ ಯಥಾ ಇತಿ। ಉಚ್ಯತೇ। ಸತ್ಯಮಸ್ತ್ಯೇವಂಜಾತೀಯಕೋ ನಿಯಮಃ । ಸತಿ ತ್ವೇತಸ್ಮಿನ್ ತದ್ಗತೇಷು ವಿಶೇಷೇಷು ಅನಿಯಮಃ ಇತಿ ಸುಹೃದ್ಭೂತ್ವಾ ಆಚಾರ್ಯ ಆಚಷ್ಟೇ । "ಮನೋಽನುಕೂಲೇ" ಇತಿ ಚೈಷಾ ಶ್ರುತಿರ್ಯತ್ರೈಕಾಗ್ರತಾ ತತ್ರೈವೇತ್ಯೇತದೇವ ದರ್ಶಯತಿ ॥

(ಭಾಷ್ಯಾರ್ಥ)

ದಿಕ್ಕು, ದೇಶ, ಕಾಲ–ಇವುಗಳ (ವಿಷಯ)ದಲ್ಲಿ (ಈ) ಸಂಶಯ(ವುಂಟಾಗುತ್ತದೆ). ಇವುಗಳ ವಿಷಯಕ್ಕೆ) ಯಾವದಾದರೊಂದು ನಿಯಮವುಂಟೊ, ಇಲ್ಲವೊ ? ಬಲುಮಟ್ಟಿಗೆ ವೈದಿಕಕರ್ಮಗಳಲ್ಲಿ ದಿಕ್ಕು ಮುಂತಾದವುಗಳ ನಿಯಮವು ಕಂಡುಬರುವದರಿಂದ ಇಲ್ಲಿಯೂ ಯಾವದಾದರೂ ನಿಯಮವಿರಬೇಕು ಎಂದು ಯಾವನಿಗೆ ತೋರುವದೋ ಅವನಿಗೆ (ಸೂತ್ರಕಾರರು) ಹೇಳುತ್ತಾರೇನೆಂದರೆ ದಿಗ್ದೇಶಕಾಲಗಳ (ವಿಷಯದಲ್ಲಿ) ಪ್ರಯೋಜನದಿಂದಲೇ ನಿಯಮವನ್ನು (ತಿಳಿಯತಕ್ಕದ್ದು) ; ಈ (ಉಪಾಸಕನಿಗೆ) ಯಾವ ದಿಕ್ಕಿನಲ್ಲಿ, ದೇಶದಲ್ಲಿ, ಅಥವಾ ಕಾಲದಲ್ಲಿ ಮನಸ್ಸಿಗೆ ಸೌಕರ್ಯದಿಂದ ಏಕಾಗ್ರತೆಯುಂಟಾಗುವದೋ ಅದರಲ್ಲಿಯೇ ಉಪಾಸನೆಮಾಡಬಹುದು. ಏಕೆಂದರೆ ಪೂರ್ವದಿಕ್ಕು, ಮಧ್ಯಾಹ್ನಕ್ಕೆ ಮುಂಚೆ, ಪೂರ್ವಕ್ಕೆ ಇಳಿಜಾರಾಗಿರುವ (ಪ್ರದೇಶ)[1] –ಇವೇ ಮುಂತಾದ

1. ಕೆಲವು ಕರ್ಮಗಳಿಗೆ ಮೂಡಲಿಗೆ ತಿರುಗಿಕೊಂಡು ಮಾಡಬೇಕೆಂಬ ನಿಯಮವಿದೆ ; ಕೆಲವಕ್ಕೆ ಮಧ್ಯಾಹ್ನವಾಗುವದರೊಳಗೇ ಮಾಡಬೇಕೆಂಬ ನಿಯಮವುಂಟು; ವೈಶ್ವದೇವಯಾಗವನ್ನು ಪೂರ್ವಕ್ಕೆ ಇಳಿಜಾರಾಗಿರುವ ಪ್ರದೇಶದಲ್ಲಿ ಮಾಡಬೇಕೆಂಬ ನಿಯಮವುಂಟು.

ವುಗಳಂತೆ (ದಿಗಾದಿಗಳ) ವಿಶೇಷದ (ನಿಯಮದ) ಶ್ರುತಿಯೇನೂ ಇರುವದಿಲ್ಲ, (ಉಪಾಸಕನಿಗೆ) ಬೇಕಾಗುವ ಏಕಾಗ್ರತೆಯು ಯಾವ (ದಿಗಾದಿಗಳಲ್ಲಿಯೂ) ಒಂದೇ (ಸಮ)ವಾಗಿ ಆಗುತ್ತದೆ.

(ಆಕ್ಷೇಪ):– "ಸಮವಾದ, ಶುಚಿಯಾದ, ಸಣ್ಣಕಲ್ಲುಬೆಂಕಿಮರಳುಗಳಿಲ್ಲದ, ಗದ್ದಲವಾಗಲಿ ಜಲಾಶಯವೇ ಮುಂತಾದವುಗಳಾಗಲಿ ಇಲ್ಲದ, ಮನಸ್ಸಿಗೆ ಅನುಕೂಲವಾದ, ಕಣ್ಣಿಗೆ ಬಾಧಕವಿಲ್ಲದ, ಗುಹೆ, ಗಾಳಿಯಿಲ್ಲದ ಪ್ರದೇಶ –ಇವುಗಳಿರುವ (ಪ್ರದೇಶದಲ್ಲಿ) ಯೋಗವನ್ನು ಮಾಡಬೇಕು" (ಶ್ವೇ. ೨–೧೦) ಎಂಬಂತೆ ಕೆಲವರು ವಿಶೇಷವನ್ನೂ ಪಠಿಸುತ್ತಾರಲ್ಲ !

(ಪರಿಹಾರ) :– ನಿಜ, ಈ ಜಾತಿಯ ನಿಯಮವಿದೆ. ಇದು ಇರುವಲ್ಲಿ ಇದರೊಳಗಿನ ವಿಶೇಷಗಳ (ವಿಷಯದಲ್ಲಿ ಯಾವ) ನಿಯಮವೂ ಇಲ್ಲ ಎಂದು ಸುಹೃದ್ಭಾವದಿಂದ ಆಚಾರ್ಯರು ತಿಳಿಸಿರುತ್ತಾರೆ. "ಮನಸ್ಸಿಗೆ ಅನುಕೂಲವಾದ" ಎಂಬೀ ಶ್ರುತಿಯೂ ಎಲ್ಲಿ ಏಕಾಗ್ರತೆಯುಂಟಾದೀತೋ ಅಲ್ಲಿಯೇ –ಎಂಬಿದನ್ನೇ ತಿಳಿಸುತ್ತದೆ.

## ೮. ಆಪ್ರಾಯಣಾಧಿಕರಣ

(ಸಾಯುವವರೆಗೂ ಉಪಾಸನೆಮಾಡುತ್ತಲೇ ಇರಬೇಕು)

**ಆಪ್ರಾಯಣಾತ್ ತತ್ರಾಪಿ ಹಿ ದೃಷ್ಟಮ್ ॥ ೧೨ ॥**

೧೨. (ಸತ್ತು) ಹೊರಟುಹೋಗುವವರೆಗೂ (ಆವೃತ್ತಿಮಾಡಬೇಕು) ; ಏಕೆಂದರೆ ಅಲ್ಲಿಯೂ ಕಂಡಿದೆ.

## ಉಪಾಸನೆಯ ಆವೃತ್ತಿಯ ವಿಷಯಕ್ಕೆ ಸಂಶಯಪೂರ್ವಪಕ್ಷಗಳು

(ಭಾಷ್ಯ)

೫೨೫. ಆವೃತ್ತಿಃ ಸರ್ವೋಪಾಸನೇಷು ಆದರ್ತವ್ಯಾ ಇತಿ ಸ್ಥಿತಮ್ ಆದ್ಯೇಽಧಿಕರಣೇ । ತತ್ರ ಯಾನಿ ತಾವತ್ ಸಮ್ಯಗ್ದರ್ಶನಾರ್ಥಾನಿ ಉಪಾಸನಾನಿ ತಾನಿ ಅವಘಾತಾದಿವತ್ ಕಾರ್ಯಪರ್ಯವಸಾನಾನೀತಿ ಜ್ಞಾತಮೇವೈಷಾಮ್ ಆವೃತ್ತಿಪರಿಮಾಣಮ್। ನ ಹಿ ಸಮ್ಯಗ್ದರ್ಶನೇ ಕಾರ್ಯೇ ನಿಷ್ಪನ್ನೇ ಯತ್ನಾನ್ತರಂ ಕಿಂಚಿಚ್ಛಾಸಿತುಂ ಶಕ್ಯಮ್ । ಅನಿಯೋಜ್ಯಬ್ರಹ್ಮಾತ್ಮತ್ವಪ್ರತಿಪತ್ತೇಃ ಶಾಸ್ತ್ರಸ್ಯಾವಿಷಯತ್ವಾತ್ । ಯಾನಿ ಪುನರಭ್ಯುದಯಫಲಾನಿ

ತೇಷ್ವೇಷಾ ಚಿನ್ತಾ ಕಿಂ ಕಿಯನ್ತಂಚಿತ್ ಕಾಲಂ ಪ್ರತ್ಯಯಮಾವರ್ತ್ಯ ಉಪರಮೇತ್, ಉತ ಯಾವಜ್ಜೀವಮಾವರ್ತಯೇತ್ ಇತಿ? ಕಿಂ ತಾವತ್ ಪ್ರಾಪ್ತಮ್ ? ಕಿಯನ್ತಂಚಿತ್ ಕಾಲಂ ಪ್ರತ್ಯಯಮಭ್ಯಸ್ಯೋತ್ಸೃಜೇತ್ । ಆವೃತ್ತಿವಿಶಿಷ್ಟಸ್ಯ ಉಪಾಸನಾಶಬ್ದಾರ್ಥಸ್ಯ ಕೃತತ್ವಾತ್ ಇತಿ ॥

(ಭಾಷ್ಯಾರ್ಥ)

ಎಲ್ಲಾ ಉಪಾಸನೆಗಳಲ್ಲಿಯೂ ಆವೃತ್ತಿಯನ್ನು ಸ್ವೀಕರಿಸಬೇಕು ಎಂಬ (ಸಿದ್ಧಾಂತವು) ಮೊದಲನೆಯ ಅಧಿಕರಣದಲ್ಲಿ ನಿಂತಿದೆಯಷ್ಟೆ. ಅವುಗಳಲ್ಲಿ ಯಾವವು ಸಮ್ಯಗ್ದರ್ಶನಕ್ಕಾಗಿ (ಮಾಡತಕ್ಕ) ಉಪಾಸನೆಗಳೋ ಅವುಗಳು **ಅವಘಾತವೇ ಮುಂತಾದವುಗಳಂತೆ[1] ಕಾರ್ಯವಾದಬಳಿಕ ಕೊನೆಗಾಣತಕ್ಕವಾದ್ದರಿಂದ ಅವುಗಳ ಆವೃತ್ತಿಯು (ಎಷ್ಟು ಕಾಲವೆಂಬ) ಪರಿಮಾಣವು ತಿಳಿದೇ ಇದೆ. ಸಮ್ಯಗ್ದರ್ಶನವೆಂಬ ಕಾರ್ಯವುಂಟಾದರೆ ಮತ್ತೆ ಯಾವದಾದರೂ ಯತ್ನವನ್ನು ಮಾಡಬೇಕೆಂದು ವಿಧಿಸುವದಕ್ಕೆ ಶಕ್ಯವಿಲ್ಲವಷ್ಟೆ; ಏಕೆಂದರೆ ಅನಿಯೋಜ್ಯವಾದ[2] ಬ್ರಹ್ಮವೇ ತಾನೆಂಬ ಅರಿವು ಶಾಸ್ತ್ರಕ್ಕೆ ವಿಷಯವಾಗಿರುವದಿಲ್ಲ.** ಇನ್ನು ಯಾವ (ಉಪಾಸನೆ)ಗಳಿಗೆ ಅಭ್ಯುದಯವೇ ಫಲವೋ ಅವುಗಳ ವಿಷಯದಲ್ಲಿ ಸ್ವಲ್ಪಕಾಲದವರೆಗೆ ಪ್ರತ್ಯಯವನ್ನು ಆವೃತ್ತಿಮಾಡಿ ಬಿಟ್ಟುಬಿಡಬೇಕೊ, ಅಥವಾ ಬದುಕಿರುವವರೆಗೂ ಆವೃತ್ತಿಮಾಡಬೇಕೊ ?– ಎಂಬೀ ವಿಚಾರವನ್ನು ಮಾಡಬೇಕಾಗಿದೆ.

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಸ್ವಲ್ಪ ಕಾಲದವರೆಗೆ ಪ್ರತ್ಯಯವನ್ನು ಆವೃತ್ತಿಮಾಡಿ ಬಿಟ್ಟುಬಿಡಬೇಕು ; ಏಕೆಂದರೆ (ಆಗ) ಆವೃತ್ತಿಯಿಂದೊಡಗೂಡಿದ ಉಪಾಸನೆ ಎಂಬೀ ಉಪಾಸನೆಯ ಶಬ್ದದರ್ಥವನ್ನು ಮಾಡಿದಂತೆ ಆಗಿಬಿಟ್ಟಿರುತ್ತದೆ.

## ಸಿದ್ಧಾಂತ :

## ಸಾಯುವವರೆಗೂ ಉಪಾಸನೆಯನ್ನು ಮಾಡುತ್ತಿರಬೇಕು

(ಭಾಷ್ಯ)

೫೨೭. ಏವಂ ಪ್ರಾಪ್ತೇ ಬ್ರೂಮಃ । ಆಪ್ರಾಯಣಾದೇವ ಆವರ್ತಯೇತ್ ಪ್ರತ್ಯಯಮ್ । ಅನ್ತ್ಯಪ್ರತ್ಯಯವಶಾತ್ ಅದೃಷ್ಟಫಲಪ್ರಾಪ್ತೇಃ । ಕರ್ಮಾಣ್ಯಪಿ ಹಿ ಜನ್ಮಾನ್ತರೋಪಭೋಗ್ಯಂ ಫಲಮ್ ಆರಭಮಾಣಾನಿ ತದನುರೂಪಂ ಭಾವನಾವಿಜ್ಞಾನಂ ಪ್ರಾಯಣಕಾಲೇ ಆಕ್ಷಿಪನ್ತಿ "ಸವಿಜ್ಞಾನೋ

---

1. ಬತ್ತವನ್ನು ಕುಟ್ಟುವದು ಅಕ್ಕಿಯೆಂಬ ಕಾರ್ಯವಾದಬಳಿಕ ಕೊನೆಗಾಣತಕ್ಕದ್ದು ; ಆದ್ದರಿಂದ ಒಂದು ಸಲ ಕುಟ್ಟಿದರೆ ಆಗುವದಿಲ್ಲ.
2. ಹೀಗೆ ಮಾಡೆಂದು ಕಟ್ಟುಮಾಡುವದಕ್ಕೆ ಬಾರದಿರುವ.

ಭವತಿ ಸವಿಜ್ಞಾನಮೇವಾನ್ವವಕ್ರಾಮತಿ" (ಬೃ.೪–೪–೨), "ಯಚ್ಚಿತ್ತಸ್ತೇನೈಷ ಪ್ರಾಣಮಾಯಾತಿ। ಪ್ರಾಣಸ್ತೇಜಸಾ ಯುಕ್ತಃ ಸಹಾತ್ಮನಾ ಯಥಾಸಂಕಲ್ಪಿತಂ ಲೋಕಂ ನಯತಿ" (ಪ್ರ.೩–೧೦), ಇತಿ ಚೈವಮಾದಿಶ್ರುತಿಭ್ಯಃ। 'ತೃಣಜಲೂಕಾ ನಿದರ್ಶನಾಚ್ಚ' (ಬೃ. ೪–೪–೩) । ಪ್ರತ್ಯಯಾಸ್ತ್ವೇತೇ ಸ್ವರೂಪಾನುವೃತ್ತಿಂ ಮುಕ್ತ್ವಾ ಕಿಮನ್ಯತ್ ಪ್ರಾಯಣಕಾಲಭಾವಿ ಭಾವನಾವಿಜ್ಞಾನಮಪೇಕ್ಷೇರನ್? ತಸ್ಮಾತ್ ಯೇ ಪ್ರತಿಪತ್ತ್ಯಫಲಭಾವನಾತ್ಮಕಾಃ ಪ್ರತ್ಯಯಾಃ, ತೇಷು ಆಪ್ರಾಯಣಾತ್ ಆವೃತ್ತಿಃ । ತಥಾ ಚ ಶ್ರುತಿಃ "ಸ ಯಾವತ್ಕ್ರತುರಯಮಸ್ಮಾಲ್ಲೋಕಾತ್ ಪ್ರೈತಿ" (ಶತ. ಬ್ರಾ. ೧೦–೬–೩–೧) ಇತಿ ಪ್ರಾಯಣಕಾಲೇಽಪಿ ಪ್ರತ್ಯಯಾನುವೃತ್ತಿಂ ದರ್ಶಯತಿ । ಸ್ಮೃತಿರಪಿ "ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್। ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ" (ಗೀ. ೮–೬) ಇತಿ, "ಪ್ರಯಾಣಕಾಲೇ ಮನಸಾಚಲೇನ" (ಗೀ. ೮–೧೦) ಇತಿ ಚ । "ಸೋಽನ್ತವೇಲಾಯಾಮೇತತ್ತ್ರಯಂ ಪ್ರತಿಪದ್ಯೇತ" (ಛಾಂ. ೩–೧೭–೬) ಇತಿ ಮರಣವೇಲಾಯಾಮಪಿ ಕರ್ತವ್ಯಶೇಷಂ ಶ್ರಾವಯತಿ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ: ಸಾಯುವವರೆಗೇ ಪ್ರತ್ಯಯವನ್ನು ಆವೃತ್ತಿಮಾಡುತ್ತಿರಬೇಕು. ಏಕೆಂದರೆ **ಅಂತ್ಯಪ್ರತ್ಯಯವಶದಿಂದ ಅದೃಷ್ಟಫಲವು ದೊರಕುತ್ತದೆ.** ಕರ್ಮಗಳುಕೂಡ ಜನ್ಮಾಂತರದಲ್ಲಿ ಉಪಭೋಗಿಸತಕ್ಕ ಫಲವನ್ನುಂಟುಮಾಡುವದಕ್ಕೆ ಅವಕ್ಕೆ ಅನುರೂಪವಾದ ಭಾವನಾವಿಜ್ಞಾನವು ಸಾಯುವ ಕಾಲಕ್ಕೆ ಇರಬೇಕೆಂಬುದನ್ನು ಬಯಸುತ್ತವೆಯಲ್ಲವೆ ? "ವಿಜ್ಞಾನದಿಂದ ಕೂಡಿಕೊಂಡಿರುತ್ತಾನೆ ; ಸವಿಜ್ಞಾನನಾಗಿಯೇ (ಪಡೆಯಬೇಕಾದ ಫಲಕ್ಕೆ) ಅನುಸರಿಸಿಹೋಗುತ್ತಾನೆ" (ಬೃ. ೪–೪–೨), "ಯಾವದರ ಚಿತ್ತವುಳ್ಳವನಾಗಿರುವನೋ ಅದರೊಡನೆ ಮುಖ್ಯಪ್ರಾಣನ ಬಳಿಗೆ ಬರುತ್ತಾನೆ ; (ಆ) ಪ್ರಾಣನು ತೇಜಸ್ಸಿನಿಂದ[1] ಕೂಡಿಕೊಂಡು ಆತ್ಮನೊಡನೆ ಸಂಕಲ್ಪವಿದ್ದ ಲೋಕಕ್ಕೆ ಒಯ್ಯುತ್ತಾನೆ" (ಪ್ರ.೩–೧೦) ಎಂಬಿದೇ ಮುಂತಾದ ಶ್ರುತಿಗಳು (ಇದಕ್ಕೆ ಪ್ರಮಾಣವು). ಹುಲ್ಲಿನ ಜಿಗಣೆಯ ದೃಷ್ಟಾಂತದಿಂದಲೂ (ಬೃ. ೩–೪–೩ ಹೀಗೆಂದು ತಿಳಿಯಬೇಕು)[2]. ಇವು

---

1. ಉದಾನವೃತ್ತಿಯಿಂದ.

2. ಜಿಗಣೆಯು ಒಂದು ಹುಲ್ಲನ್ನು ಹಿಡಿದುಕೊಂಡಿರುವಾಗಲೇ ಮತ್ತೊಂದನ್ನು ಹಿಡಿದುಕೊಳ್ಳುವಂತೆ ಮುಂದಿನ ಭಾವನೆಯ ದೀರ್ಘಭಾವವು ಕೊನೆಯಲ್ಲಿಯೂ ಇರುವದೆಂಬುದನ್ನು ಈ ದೃಷ್ಟಾಂತವು ತಿಳಿಸುವದು ಎಂದು ಭಾವ.

ಪ್ರತ್ಯಯಗಳಾದ್ದರಿಂದ ಸ್ವರೂಪದಿಂದ ಆವೃತ್ತಿಮಾಡಬೇಕೆಂಬುದನ್ನು ಬಿಟ್ಟು ಸಾಯುವಕಾಲದಲ್ಲಾಗಬೇಕಾಗಿರುವ ಮತ್ತೆ ಯಾವ ಭಾವನಾವಿಜ್ಞಾನವನ್ನು ತಾನೆ ಅಪೇಕ್ಷಿಸಿಯಾವು? ಆದ್ದರಿಂದ ಯಾವವು ಪಡೆಯಬೇಕಾಗಿರುವ ಫಲದ ಭಾವನೆಯ ಸ್ವರೂಪವಾಗಿರುವ ಪ್ರತ್ಯಯಗಳೋ ಅವು(ಗಳ ವಿಷಯ)ದಲ್ಲಿ ಸಾಯುವವರೆಗೂ ಆವೃತ್ತಿ (ಬೇಕು). ಆದ್ದರಿಂದಲೇ ಶ್ರುತಿಯು "ಅವನು ಎಷ್ಟು ಸಂಕಲ್ಪವುಳ್ಳವನಾಗಿ ಈ ಲೋಕದಿಂದ ಹೊರಡುವನೋ....." (ಶತ.ಬ್ರಾ. ೧೦-೬-೩-೧) ಎಂದು ಸಾಯುವಕಾಲದಲ್ಲಿಯೂ ಪ್ರತ್ಯಯವು ಅನುವರ್ತಿಸಿ ಕೊಂಡಿರಬೇಕೆಂದು ತಿಳಿಸುತ್ತದೆ. ಸ್ಮೃತಿಯೂ "ಯಾವ ಯಾವ ಭಾವವನ್ನು ಸ್ಮರಿಸುತ್ತಾ ಕೊನೆಯಲ್ಲಿ ಶರೀರವನ್ನು ಬಿಡುವನೋ, ಅದದನ್ನೇ ಯಾವಾಗಲೂ ಅದರ ಭಾವದಿಂದ ಭಾವಿತನಾದ ಅವನು ಪಡೆದುಕೊಳ್ಳುವನಯ್ಯ, ಕೌಂತೇಯ" (ಗೀ. ೮-೬) ಎಂದೂ "ಸಾಯುವ ಕಾಲದಲ್ಲಿ ಅಚಲವಾದ ಮನಸ್ಸಿನಿಂದ" (ಗೀ. ೮-೧೦) ಎಂದೂ (ಹೇಳುತ್ತಿದೆ). ಶ್ರುತಿಯು ಅವನು ಕೊನೆಯ ಕಾಲದಲ್ಲಿ ಈ ಮೂರು (ಮಂತ್ರಗಳನ್ನು) ಸ್ಮರಿಸಿಕೊಳ್ಳಬೇಕು" (ಛಾಂ. ೩-೧೭-೬) ಎಂದು ಮರಣಕಾಲದಲ್ಲಿಯೂ ಮಾಡತಕ್ಕದ್ದಿದೆ ಎಂದು ತಿಳಿಸುತ್ತಿದೆ.

## ೯. ತದಧಿಗಮಾಧಿಕರಣ

( ಬ್ರಹ್ಮಜ್ಞಾನವಾದ ಬಳಿಕ ಪಾಪವಿಲ್ಲ )

**ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ॥ ೧೩ ॥**

೧೩. ಅದನ್ನು ಅರಿತುಕೊಂಡರೆ ಮುಂದಿನ ಹಿಂದಿನ ಪಾಪ ಗಳಿಗೆ ಅಶ್ಲೇಷವಿನಾಶಗಳಾಗುವವು; ಏಕೆಂದರೆ ಹಾಗೆಂದು ಹೇಳಿರು ತ್ತದೆ.

## ಪೂರ್ವಪಕ್ಷ: ಜ್ಞಾನವಾದರೂ ಪಾಪವು ಹೋಗಲಾರದು

(ಭಾಷ್ಯ)

೫೨೭. ಗತಸ್ತೃತೀಯಶೇಷಃ । ಅಥೇದಾನೀಂ ಬ್ರಹ್ಮವಿದ್ಯಾಫಲಂ ಪ್ರತಿ ಚಿನ್ತಾ ಪ್ರತಾಯತೇ । ಬ್ರಹ್ಮಾಧಿಗಮೇ ಸತಿ ತದ್ವಿಪರೀತಫಲಂ ದುರಿತಂ ಕ್ಷೀಯತೇ ನ ಕ್ಷೀಯತೇ ವಾ ಇತಿ ಸಂಶಯಃ । ಕಿಂ ತಾವತ್ ಪ್ರಾಪ್ತಮ್? ಫಲಾರ್ಥತ್ವಾತ್ ಕರ್ಮಣಃ ಫಲಮದತ್ವಾ ನ ಸಂಭಾವ್ಯತೇ ಕ್ಷಯಃ । ಫಲ ದಾಯಿನೀ ಹ್ಯಸ್ಯ ಶಕ್ತಿಃ ಶ್ರುತ್ಯಾ ಸಮಧಿಗತಾ । ಯದಿ ತದನ್ತರೇಣೈವ

ಫಲೋಪಭೋಗಮ್ ಅಪವೃಜ್ಯೇತ, ಶ್ರುತಿಃ ಕದರ್ಥಿತಾ ಸ್ಯಾತ್ । ಸ್ಮರನ್ತಿ ಚ "ನ ಹಿ ಕರ್ಮ ಕ್ಷೀಯತೇ'' (ಗೌ.ಧ. ೩-೧-೫) ಇತಿ । ನನ್ವೇವಂ ಸತಿ ಪ್ರಾಯಶ್ಚಿತ್ತೋಪದೇಶೋಽನರ್ಥಕಃ ಪ್ರಾಪ್ನೋತಿ । ನೈಷ ದೋಷಃ । ಪ್ರಾಯಶ್ಚಿತ್ತಾನಾಂ ನೈಮಿತ್ತಿಕತ್ವೋಪಪತ್ತೇಃ, ಗೃಹದಾಹೇಷ್ಟ್ಯಾದಿವತ್ । ಅಪಿ ಚ ಪ್ರಾಯಶ್ಚಿತ್ತಾನಾಂ ದೋಷಸಂಯೋಗೇನ ವಿಧಾನಾತ್ ಭವೇದಪಿ ದೋಷಕ್ಷಪಣಾರ್ಥತಾ । ನ ತ್ವೇವಂ ಬ್ರಹ್ಮವಿದ್ಯಾಯಾಂ ವಿಧಾನಮಸ್ತಿ । ನನ್ವನಭ್ಯುಪಗಮ್ಯಮಾನೇ ಬ್ರಹ್ಮವಿದಃ ಕರ್ಮಕ್ಷಯೇ ತತ್ಫಲಸ್ಯ ಅವಶ್ಯಂಭೋಕ್ತವ್ಯತ್ವಾತ್ ಅನಿರ್ಮೋಕ್ಷಃ ಸ್ಯಾತ್। ನೇತ್ಯುಚ್ಯತೇ । ದೇಶಕಾಲನಿಮಿತ್ತಾಪೇಕ್ಷೋ ಮೋಕ್ಷಃ ಕರ್ಮಫಲವದ್ ಭವಿಷ್ಯತಿ । ತಸ್ಮಾನ್ನ ಬ್ರಹ್ಮಾಧಿಗಮೋ ದುರಿತನಿವೃತ್ತಿರಿತಿ ॥

(ಭಾಷ್ಯಾರ್ಥ)

ಮೂರನೆಯ ಅಧ್ಯಾಯದ ಶೇಷವು ಮುಗಿಯಿತು[1]. ಇನ್ನು ಈಗ ಬ್ರಹ್ಮವಿದ್ಯೆಯ ಫಲವನ್ನು ಕುರಿತ ವಿಚಾರವನ್ನು ಮಾಡಲಾಗುವದು. ಬ್ರಹ್ಮಜ್ಞಾನವುಂಟಾಗಲು ಅದಕ್ಕೆ ವಿಪರೀತವಾದ ಫಲವನ್ನು ಕೊಡುವ[2] ಪಾಪವು ಕ್ಷಯವಾಗುವದೊ, ಇಲ್ಲವೊ– ಎಂದು ಸಂಶಯ(ವಾಗುತ್ತದೆ).

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಕರ್ಮವನ್ನು (ಮಾಡುವದು) ಫಲಕ್ಕಾದ್ದರಿಂದ (ಅದು) ಫಲವನ್ನು ಕೊಡದೆ ಕ್ಷಯವಾಗುವ ಸಂಭವವಿಲ್ಲ. ಇದಕ್ಕೆ ಫಲವನ್ನು ಕೊಡುವ ಶಕ್ತಿಯಿದೆ ಎಂಬುದು ಶ್ರುತಿಯಿಂದ ತಿಳಿದುಬಂದಿದೆ[3]. ಅದು ಫಲದ ಉಪಭೋಗವಾಗದೆಯೇ ನಾಶವಾಗುವದಾದರೆ ಶ್ರುತಿಯು ವ್ಯರ್ಥವಾಗುವದು. "ಕರ್ಮವು ಕ್ಷಯವಾಗುವದಿಲ್ಲ'' (ಗೌ.ಧ. ೩-೧-೫) ಎಂದು ಸ್ಮೃತಿಕಾರರೂ ಹೇಳುತ್ತಿದಾರೆ.

(ಆಕ್ಷೇಪ) :– ಹೀಗಾದರೆ ಪ್ರಾಯಶ್ಚಿತ್ತವನ್ನು ಉಪದೇಶಿಸಿರುವದು ವ್ಯರ್ಥವಾಗುವದಲ್ಲ !

---

1 ಫಲಪರ್ಯಂತವಾದ ಸಾಧನವನ್ನು ತಿಳಿಸುವದಕ್ಕಾಗಿ ಈ ಅಧ್ಯಾಯದಲ್ಲಿಯೂ ಸಾಧನವನ್ನು ಹೇಳಿದ್ದಾಯಿತು.

2. ಜ್ಞಾನಕ್ಕೆ ಫಲವು ಮೋಕ್ಷ; ಕರ್ಮಕ್ಕೆ ಫಲವು ಅದಕ್ಕೆ ವಿಪರೀತವಾದ ಬಂಧ.

3. ಶ್ರುತಿಯಲ್ಲಿ ಕೆಲವು ಕರ್ಮಗಳನ್ನು ನಿಷೇಧಿಸಿರುವದರಿಂದ ಅವುಗಳನ್ನು ಮಾಡಿದರೆ ಅನಿಷ್ಟಫಲವಾಗುವದೆಂದು ನಿಶ್ಚಯಿಸಬೇಕಾಗಿದೆ. ಕೆಲವು ಕಡೆ ಅನಿಷ್ಟಫಲವನ್ನು ಹೇಳಿಯೂ ಇದೆ.

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಪ್ರಾಯಶ್ಚಿತ್ತಗಳು ಗೃಹದಾಹೇಷ್ಟಿಯೇ ಮುಂತಾದವುಗಳಂತೆ ನೈಮಿತ್ತಿಕ(ಕರ್ಮ)ವೆಂದಾಗ ಬಹುದು[1]. ಇದಲ್ಲದೆ ಪ್ರಾಯಶ್ಚಿತ್ತಗಳನ್ನು ದೋಷಸಂಯೋಗದಿಂದ ವಿಧಾನ ಮಾಡಿರುವದರಿಂದ[2] (ಅವು) ದೋಷಗಳನ್ನು ನಾಶಗೊಳಿಸುತ್ತವೆಯೆಂದು ಆದರೂ ಆಗಬಹುದು. ಆದರೆ ಹೀಗೆ[3] ಬ್ರಹ್ಮವಿದ್ಯೆಯನ್ನು ವಿಧಾನಮಾಡಿರುವದಿಲ್ಲ.

(ಆಕ್ಷೇಪ) :– ಬ್ರಹ್ಮಜ್ಞಾನಿಗೆ ಕರ್ಮವು ಕ್ಷಯ:ವಾಗುವದೆಂದು ಒಪ್ಪದಿದ್ದರೆ ಆದರ ಫಲವನ್ನು ಅವಶ್ಯವಾಗಿ ಭೋಗಿಸಲೇಬೇಕಾಗುವದರಿಂದ ಮೋಕ್ಷವೇ ಇಲ್ಲವೆಂದಾಗುವದಲ್ಲ !

(ಪರಿಹಾರ) :– ಇಲ್ಲ, ಎನ್ನುತ್ತೇವೆ. (ಏಕೆಂದರೆ) ಮೋಕ್ಷವೂ ಕರ್ಮಫಲದಂತೆ ದೇಶ, ಕಾಲ, ನಿಮಿತ್ತ– ಇವುಗಳನ್ನು ಅಪೇಕ್ಷಿಸಿ ಆಗಬಹುದಾಗಿದೆ. ಆದ್ದರಿಂದ ಬ್ರಹ್ಮಜ್ಞಾನವಾದರೆ ಪಾಪವು ತೊಲಗುವದೆಂಬುದಿಲ್ಲ.

## ಸಿದ್ಧಾಂತ : ಬ್ರಹ್ಮಜ್ಞಾನವಾದಮೇಲೆ ಪಾಪದ ಸಂಬಂಧವಿಲ್ಲ

(ಭಾಷ್ಯ)

೫೨೮. ಏವಂ ಪ್ರಾಪ್ತೇ ಬ್ರೂಮಃ । ತದಧಿಗಮೇ ಬ್ರಹ್ಮಾಧಿಗಮೇ ಸತಿ ಉತ್ತರಪೂರ್ವಯೋರಘಯೋಃ ಅಶ್ಲೇಷವಿನಾಶೌ ಭವತಃ ; ಉತ್ತರಸ್ಯ ಅಶ್ಲೇಷಃ, ಪೂರ್ವಸ್ಯ ವಿನಾಶಃ । ಕಸ್ಮಾತ್? ತದ್ವ್ಯಪದೇಶಾತ್ । ತಥಾ ಹಿ ಬ್ರಹ್ಮವಿದ್ಯಾಪ್ರಕ್ರಿಯಾಯಾಂ ಸಂಭಾವ್ಯಮಾನಸಂಬನ್ಧಸ್ಯ ಆಗಾಮಿನೋ ದುರಿತಸ್ಯ ಅನಭಿಸಂಬನ್ಧಂ ವಿದುಷೋ ವ್ಯಪದಿಶತಿ— "ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯನ್ತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ" (ಛಾಂ. ೪–೧೪–೩) ಇತಿ । ತಥಾ ವಿನಾಶಮಪಿ ಪೂರ್ವೋಪಚಿತಸ್ಯ ದುರಿತಸ್ಯ ವ್ಯಪದಿಶತಿ "ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ" (ಛಾಂ. ೫–೨೪–೩) ಇತಿ । ಅಯಮಪರಃ ಕರ್ಮಕ್ಷಯವ್ಯಪದೇಶೋ ಭವತಿ– "ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವ

1. ಆಹಿತಾಗ್ನಿಯಾದವನ ಮನೆಗೆ ಬೆಂಕಿ ಬಿದ್ದರೆ ಕ್ಷಾಮವತಿ ಎಂಬ ಇಷ್ಟಿಯನ್ನು ಮಾಡಬೇಕು– ಎಂದು ವಿಧಿಯಿದೆ. ಇದು ಬೆಂಕಿಯಿಂದ ಸುಟ್ಟಿದ್ದರ ನಿವೃತ್ತಿಗಲ್ಲ ; ಮನೆಗೆ ಬೆಂಕಿಬಿದ್ದ ನಿಮಿತ್ತದಿಂದ ಮಾಡಬೇಕಾದ ಕರ್ಮ. ಇದರಂತೆ ಪಾಪವುಳ್ಳ ಮನುಷ್ಯನಿಗೆ ಪ್ರಾಯಶ್ಚಿತ್ತಗಳನ್ನು ಹೇಳಿರುವದೂ ಪಾಪಕರ್ಮನಿಮಿತ್ತದಿಂದಾದ ಪಾಪದ ಪರಿಹಾರಕ್ಕಲ್ಲ ಎಂದರ್ಥ.

2. ಪಾಪವೆಂಬ ದೋಷವುಳ್ಳವನಿಗೆ ಪ್ರಾಯಶ್ಚಿತ್ತವನ್ನು ಹೇಳಿರುವದರಿಂದ.

3. ದೋಷವುಳ್ಳವನಿಗೆಂದು.

ಸಂಶಯಾಃ । ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ" (ಮುಂ ೨-೨-೮) ಇತಿ । ಯದುಕ್ತಮ್ ಅನುಪಭುಕ್ತಫಲಸ್ಯ ಕರ್ಮಣಃ ಕ್ಷಯಕಲ್ಪನಾಯಾಂ ಶಾಸ್ತ್ರಂ ಕದರ್ಥಿತಂ ಸ್ಯಾತ್ ಇತಿ । ನೈಷ ದೋಷಃ । ನ ಹಿ ವಯಂ ಕರ್ಮಣಃ ಫಲದಾಯಿನೀಂ ಶಕ್ತಿಮ್ ಅವಜಾನೀಮಹೇ । ವಿದ್ಯತ ಏವ ಸಾ । ಸಾ ತು ವಿದ್ಯಾದಿನಾ ಕಾರಣಾನ್ತರೇಣ ಪ್ರತಿಬಧ್ಯತ ಇತಿ ವದಾಮಃ । ಶಕ್ತಿಸದ್ಭಾವಮಾತ್ರೇ ಚ ಶಾಸ್ತ್ರಂ ವ್ಯಾಪ್ರಿಯತೇ ನ ಪ್ರತಿಬನ್ಧಾ ಪ್ರತಿಬನ್ಧಯೋರಪಿ । "ನ ಹಿ ಕರ್ಮ ಕ್ಷೀಯತೇ'' (ಗೌ. ಧ. ೩-೧-೫) ಇತ್ಯೇದಪಿ ಸ್ಮರಣಮ್ ಔತ್ಸರ್ಗಿಕಂ ನ ಭೋಗಾದ್ ಋತೇ ಕರ್ಮ ಕ್ಷೀಯತೇ, ತದರ್ಥತ್ವಾದಿತಿ । ಇಷ್ಯತ ಏವ ತು ಪ್ರಾಯಶ್ಚಿತ್ತಾದಿನಾ ತಸ್ಯ ಕ್ಷಯಃ "ಸರ್ವಂ ಪಾಪ್ಮಾನಂ ತರತಿ, ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ ಯ ಉ ಚೈನಮೇವಂ ವೇದ" (ತೈ.ಸಂ.೫-೩-೧೨) ಇತ್ಯಾದಿಶ್ರುತಿಸ್ಮೃತಿಭ್ಯಃ । ಯತ್ತೂಕ್ತಂ ನೈಮಿತ್ತಿಕಾನಿ ಪ್ರಾಯಶ್ಚಿತ್ತಾನಿ ಭವಿಷ್ಯನ್ತೀತಿ । ತದಸತ್ । ದೋಷಸಂಯೋಗೇನ ಚೋದ್ಯಮಾನಾನಾಮೇಷಾಂ ದೋಷನಿರ್ಘಾತಫಲಸಂಭವೇ ಫಲಾನ್ತರಕಲ್ಪನಾನುಪಪತ್ತೇಃ । ಯತ್ಪುನರೇತದುಕ್ತಂ ನ ಪ್ರಾಯಶ್ಚಿತ್ತವದ್ ದೋಷಕ್ಷಯೋದ್ದೇಶೇನ ವಿದ್ಯಾವಿಧಾನಮಸ್ತೀತಿ । ಅತ್ರ ಬ್ರೂಮಃ । ಸಗುಣಾಸು ತಾವದ್ವಿದ್ಯಾಸು ವಿದ್ಯತ ಏವ ವಿಧಾನಮ್। ತಾಸು ಚ ವಾಕ್ಯಶೇಷೇ ಐಶ್ವರ್ಯಪ್ರಾಪ್ತಿಃ, ಪಾಪನಿವೃತ್ತಿಶ್ಚ ವಿದ್ಯಾವತ ಉಚ್ಯತೇ । ತಯೋಶ್ಚಾವಿವಕ್ಷಾಕಾರಣಂ ನಾಸ್ತಿ ಇತ್ಯತಃ ಪಾಪ್ಮಪ್ರಹಾಣಪೂರ್ವಕೈಶ್ವರ್ಯಪ್ರಾಪ್ತಿಸ್ತಾಸಾಂ ಫಲಮಿತಿ ನಿಶ್ಚೀಯತೇ। ನಿರ್ಗುಣಾಯಾಂ ತು ವಿದ್ಯಾಯಾಂ ಯದ್ಯಪಿ ವಿಧಾನಂ ನಾಸ್ತಿ ತಥಾಪಿ ಅಕರ್ತ್ರಾತ್ಮಬೋಧಾತ್ ಕರ್ಮಪ್ರದಾಹಸಿದ್ಧಿಃ । "ಅಶ್ಲೇಷಃ" ಇತಿ ಚ ಆಗಾಮಿಷು ಕರ್ತೃತ್ವಮೇವ ನ ಪ್ರತಿಪದ್ಯತೇ ಬ್ರಹ್ಮವಿದ್ ಇತಿ ದರ್ಶಯತಿ । ಅತಿಕ್ರಾನ್ತೇಷು ತು ಯದ್ಯಪಿ ಮಿಥ್ಯಾಜ್ಞಾನಾತ್ ಕರ್ತೃತ್ವಂ ಪ್ರತಿಪೇದ ಇವ, ತಥಾಪಿ ವಿದ್ಯಾಸಾಮರ್ಥ್ಯಾತ್ ಮಿಥ್ಯಾಜ್ಞಾನನಿವೃತ್ತೇಃ ತಾನ್ಯಪಿ ಪ್ರವಿಲೀಯನ್ತ ಇತ್ಯಾಹ "ವಿನಾಶಃ" ಇತಿ । ಪೂರ್ವಸಿದ್ಧಕರ್ತೃತ್ವಭೋಕ್ತೃತ್ವವಿಪರೀತಂ ಹಿ ತ್ರಿಷ್ವಪಿ ಕಾಲೇಷು ಅಕರ್ತೃತ್ವಾಭೋಕ್ತೃತ್ವಸ್ವರೂಪಂ ಬ್ರಹ್ಮಾಹಮಸ್ಮಿ ನೇತಃ ಪೂರ್ವಮಪಿ ಕರ್ತಾ ಭೋಕ್ತಾ ವಾ ಅಹಮಾಸಮ್, ನೇದಾನೀಂ ನಾಪಿ ಭವಿಷ್ಯತ್ಕಾಲೇ ಇತಿ ಬ್ರಹ್ಮವಿದವಗಚ್ಛತಿ । ಏವಮೇವ ಚ ಮೋಕ್ಷ ಉಪಪದ್ಯತೇ । ಅನ್ಯಥಾ ಹಿ ಅನಾದಿಕಾಲಪ್ರವೃತ್ತಾನಾಂ ಕರ್ಮಣಾಂ ಕ್ಷಯಾಭಾವೇ ಮೋಕ್ಷಾಭಾವಃ ಸ್ಯಾತ್ । ನ ಚ ದೇಶಕಾಲನಿಮಿತ್ತಾಪೇಕ್ಷೋ ಮೋಕ್ಷಃ ಕರ್ಮಫಲವತ್ ಭವಿತುಮರ್ಹತಿ । ಅನಿತ್ಯತ್ವಪ್ರಸಙ್ಗಾತ್ । ಪರೋಕ್ಷತ್ವಾನುಪಪತ್ತೇಶ್ಚ ಜ್ಞಾನಫಲಸ್ಯ । ತಸ್ಮಾದ್ ಬ್ರಹ್ಮಾಧಿಗಮೇ ದುರಿತಕ್ಷಯಃ ಇತಿ ಸ್ಥಿತಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಅದನ್ನು ಅರಿತುಕೊಂಡರೆ ಎಂದರೆ ಬ್ರಹ್ಮಜ್ಞಾನವಾದರೆ ಮುಂದಿನ ಹಿಂದಿನ ಪಾಪಗಳಿಗೆ ಅಶ್ಲೇಷವಿನಾಶಗಳು ಆಗುತ್ತವೆ; ಮುಂದಿನದರ ಅಶ್ಲೇಷವು, ಹಿಂದಿನದಕ್ಕೆ ವಿನಾಶವು. ಏಕೆ ? ಎಂದರೆ ಹಾಗೆಂದು ಹೇಳಿರುತ್ತದೆ. ಹೇಗೆಂದರೆ ಬ್ರಹ್ಮವಿದ್ಯೆಯ ಪ್ರಕರಣದಲ್ಲಿ[1] ಸಂಬಂಧವಾಗಬಹುದೆಂದು ಸಂಭಾವಿತವಾಗಿರುವ ಮುಂದಿನ ಪಾಪದ ಸಂಬಂಧವು ಜ್ಞಾನಿಗೆ ಆಗುವದಿಲ್ಲವೆಂದು "ಹೇಗೆ ತಾವರೆಯ ಎಲೆಯಲ್ಲಿ ನೀರು ಅಂಟಿಕೊಳ್ಳುವದಿಲ್ಲವೋ ಹಾಗೆ ಹೀಗೆಂದು ಅರಿತಿರುವವನಿಗೆ ಪಾಪಕರ್ಮವು ಅಂಟಿಕೊಳ್ಳುವದಿಲ್ಲ" (ಛಾಂ.೪-೧೪-೩) ಎಂದು (ಶ್ರುತಿ) ಹೇಳುತ್ತದೆ. ಮತ್ತು ಹೀಗೆಯೇ ಹಿಂದೆ ಕೂಡಿಹಾಕಿಕೊಂಡಿರುವ ಪಾಪಕ್ಕೆ ವಿನಾಶವನ್ನು "ಹೇಗೆ ನೊದೆಹುಲ್ಲಿನ ತುದಿಯನ್ನು ಬೆಂಕಿಯಲ್ಲಿ ಹಾಕಿದರೆ ಸುಡುವದೋ ಹಾಗೆಯೇ ಇವನ ಎಲ್ಲಾ ಪಾಪಗಳೂ ಸುಡುತ್ತವೆ" (ಛಾಂ.೫-೨೪-೩) ಎಂದು (ಹೇಳುತ್ತದೆ) "ಆ ಪರಾವರನನ್ನು ಕಂಡುಕೊಂಡರೆ ಹೃದಯಗ್ರಂಥಿಯು ನಾಶವಾಗುತ್ತದೆ ; ಎಲ್ಲಾ ಸಂಶಯಗಳೂ ಕತ್ತರಿಸಿಹೋಗುತ್ತವೆ; ಇವನ ಕರ್ಮಗಳೂ ಕ್ಷಯವಾಗುತ್ತವೆ" (ಮುಂ. ೨-೨-೮) ಎಂಬಿದು ಮತ್ತೊಂದು ಕರ್ಮಕ್ಷಯವನ್ನು ಹೇಳುವ (ವಚನವು).

ಇನ್ನು ಉಪಭೋಗಿಸದೆ ಇರುವ ಕರ್ಮಕ್ಕೆ ಕ್ಷಯವನ್ನು ಕಲ್ಪಿಸಿದರೆ ಶಾಸ್ತ್ರವು ವ್ಯರ್ಥವೆಂದಾಗುವದು ಎಂದು (ಪೂರ್ವಪಕ್ಷ)ದಲ್ಲಿ ಹೇಳಿತ್ತಷ್ಟೆ, ಅದೇನೂ ದೋಷವಲ್ಲ. ಏಕೆಂದರೆ ಕರ್ಮಕ್ಕೆ ಫಲವನ್ನು ಕೊಡುವ ಶಕ್ತಿಯನ್ನು ನಾವೇನೂ ಅಲ್ಲಗಳೆಯುತ್ತಿಲ್ಲ. ಅದು ಇದ್ದೇ ಇದೆ. ಆದರೆ ಅದು ವಿದ್ಯೆಯೇ ಮುಂತಾದ ಬೇರೆಯ ಕಾರಣದಿಂದ ಪ್ರತಿಬದ್ಧವಾಗುತ್ತದೆ ಎನ್ನುತ್ತೇವೆ. ಶಾಸ್ತ್ರವು (ಆ) ಶಕ್ತಿಯಿದೆ ಎಂಬುದನ್ನು (ಹೇಳುವಮಟ್ಟಿಗೆ) ವ್ಯಾಪಾರಮಾಡುತ್ತದೆಯೇ ಹೊರತು, ಪ್ರತಿಬಂಧವು (ಇದೆ), ಅಥವಾ ಪ್ರತಿಬಂಧವು ಇಲ್ಲ (ಎಂಬ ವಿಷಯ)ದಲ್ಲಿಯೂ (ವ್ಯಾಪಾರಮಾಡು)ವದಿಲ್ಲ. "ಕರ್ಮವು ಕ್ಷಯವಾಗುವದೇ ಇಲ್ಲ" (ಗೌ. ಧ.) ಎಂಬ ಸ್ಮೃತಿಯೂ– ಭೋಗಮಾಡಿದ ಹೊರತು ಕರ್ಮವು ಕ್ಷಯವಾಗುವದಿಲ್ಲ ; ಏಕೆಂದರೆ (ಅದು) ಆ (ಭೋಗ)ಕ್ಕಾಗಿಯೇ (ಮಾಡಿದ್ದು) ಎಂದು– ಸಾಮಾನ್ಯ(ವಚನ)ಮಾತ್ರವಾಗಿದೆ. ಆ (ಕರ್ಮ)ಕ್ಕೆ ಪ್ರಾಯಶ್ಚಿತ್ತವೇ ಮುಂತಾದದ್ದರಿಂದ ಕ್ಷಯವಾಗುತ್ತದೆಯೆಂದು (ಶಾಸ್ತ್ರದಲ್ಲಿ) ಒಪ್ಪಿಯೇ ಇರುತ್ತದೆ; ಏಕೆಂದರೆ "ಯಾವನು ಅಶ್ವಮೇಧಯಾಗವನ್ನು ಮಾಡುತ್ತಾನೋ, ಮತ್ತು ಯಾವನು ಹೀಗೆಂದು ತಿಳಿದುಕೊಂಡಿರುವನೋ (ಅವನು)

1. ಈ ಸೂತ್ರಕ್ಕೆ ಸಗುಣಬ್ರಹ್ಮಜ್ಞಾನ, ನಿರ್ಗುಣಬ್ರಹ್ಮಜ್ಞಾನ– ಎರಡೂ ವಿವಕ್ಷಿತವಾಗಿವೆ.

ಎಲ್ಲಾ ಪಾಪವನ್ನೂ ದಾಟುತ್ತಾನೆ. ಬ್ರಹ್ಮಹತ್ಯೆಯನ್ನು ದಾಟುತ್ತಾನೆ" (ತೈ. ಸಂ. ೫-೩-೧೨) ಎಂಬಿದೇ ಮುಂತಾದ ಶ್ರುತಿಸ್ಮೃತಿಗಳಿವೆ. ಇನ್ನು ಪ್ರಾಯಶ್ಚಿತ್ತಗಳು ನೈಮಿತ್ತಿಕ(ಕರ್ಮ)ವಾಗಬಹುದು ಎಂದಿರಲ್ಲ, ಅದು ಸರಿಯಲ್ಲ; ಏಕೆಂದರೆ ದೋಷಸಂಯೋಗದಿಂದ ಚೋದಿತವಾಗಿರುವ ಇವುಗಳಿಗೆ ದೋಷವನ್ನು ನಾಶಗೊಳಿಸುವದೆಂಬ ಫಲವು ಸಂಭವಿಸುತ್ತಿರುವಲ್ಲಿ ಮತ್ತೊಂದು ಫಲವನ್ನು ಕಲ್ಪಿಸುವದು ಸರಿಯಾಗುವದಿಲ್ಲ.

ಇನ್ನು ಪ್ರಾಯಶ್ಚಿತ್ತದಂತೆ ದೋಷವು ಕ್ಷಯವಾಗಲೆಂಬ ಉದ್ದೇಶದಿಂದ ವಿದ್ಯೆಯನ್ನು ವಿಧಾನಮಾಡಿರುವದಿಲ್ಲ ಎಂದಿರಲ್ಲ, ಅದಕ್ಕೆ (ಉತ್ತರವನ್ನು) ಹೇಳುತ್ತೇವೆ. ಮೊದಲನೆಯದಾಗಿ ಸಗುಣವಿದ್ಯೆಗಳಲ್ಲಿ ವಿಧಾನವು ಇದ್ದೇ ಇದೆ. ಅವುಗಳಲ್ಲಿ ವಾಕ್ಯಶೇಷದಲ್ಲಿ ಐಶ್ವರ್ಯಪ್ರಾಪ್ತಿಯನ್ನೂ ಪಾಪನಿವೃತ್ತಿಯನ್ನೂ ಜ್ಞಾನಿಗೆ ಹೇಳಿರುತ್ತದೆ; ಅವುಗಳಲ್ಲಿ (ಶಾಸ್ತ್ರಕ್ಕೆ) ವಿವಕ್ಷೆಯಿಲ್ಲವೆಂಬುದಕ್ಕೆ ಕಾರಣವು ಇಲ್ಲವಾದ್ದರಿಂದ[1] ಪಾಪವನ್ನು ನಾಶಮಾಡುವ ಮೂಲಕ ಐಶ್ವರ್ಯಪ್ರಾಪ್ತಿಯಾಗುವದೇ ಅವುಗಳ ಫಲವೆಂದು ನಿಶ್ಚಯವಾಗುತ್ತದೆ. **ನಿರ್ಗುಣವಿದ್ಯೆಯಲ್ಲಿ (ದೋಷವು ಕ್ಷಯವಾಗಲೆಂಬ ಉದ್ದೇಶದಿಂದ ಜ್ಞಾನವನ್ನು) ವಿಧಿಸಿರುವದೇನೂ ಇಲ್ಲ; ಹೀಗಿದ್ದರೂ ಅಕರ್ತ್ರಾತ್ಮಜ್ಞಾನದಿಂದ ಕರ್ಮಗಳು ಸುಟ್ಟುಹೋಗುವವೆಂದು ಸಿದ್ಧವಾಗುತ್ತದೆ.**[2] 'ಅಶ್ಲೇಷವು' ಎಂಬ (ಮಾತಿನಿಂದ) ಮುಂದೆ ಮಾಡುವ ಕರ್ಮಗಳಲ್ಲಿ ಬ್ರಹ್ಮಜ್ಞಾನಿಯು ಕರ್ತೃತ್ವವನ್ನೇ ಪಡೆಯುವದಿಲ್ಲವೆಂದು ತಿಳಿಸಿದೆ. ಕಳೆದುಹೋಗಿರುವ (ಕರ್ಮ)ಗಳಲ್ಲಿ ಮಿಥ್ಯಾಜ್ಞಾನದಿಂದ ಕರ್ತೃತ್ವವನ್ನು ಪಡೆದಂತೆ ಇದ್ದನೆಂಬುದು ನಿಜ; ಆದರೂ ವಿದ್ಯೆಯ ಸಾಮರ್ಥ್ಯದಿಂದ ಅವುಗಳೂ ನಾಶವಾಗುತ್ತವೆ ಎಂಬುದನ್ನು 'ವಿನಾಶ' ಎಂಬ (ಮಾತು) ತಿಳಿಸುತ್ತದೆ. ಹಿಂದೆ ಸಿದ್ಧವಾಗಿದ್ದ ಕರ್ತೃತ್ವಭೋಕ್ತೃತ್ವಗಳಿಗೆ ವಿಪರೀತವಾಗಿ **"ಮೂರು ಕಾಲಗಳಲ್ಲಿಯೂ ಕರ್ತೃತ್ವವಿಲ್ಲದ ಭೋಕ್ತೃತ್ವವಿಲ್ಲದ ಸ್ವರೂಪದ ಬ್ರಹ್ಮವೇ ನಾನಾಗಿರುವೆನು, ಇದಕ್ಕೆ ಹಿಂದೆಯೂ ಕರ್ತೃವಾಗಿ ಅಥವಾ ಭೋಕ್ತೃವಾಗಿ ನಾನಿರಲಿಲ್ಲ, ಈಗಲೂ ಇಲ್ಲ, ಮುಂದೆಯೂ ಇರುವದಿಲ್ಲ" ಎಂದಲ್ಲವೆ, ಬ್ರಹ್ಮಜ್ಞಾನಿ**

1. ಇಲ್ಲಿ ಹೇಳಿರುವ ಫಲವು ಬರಿಯ ಜ್ಞಾನವನ್ನು ಹೊಗಳುವ ಅರ್ಥವಾದವೇ, ನಿಜವಾಗಿ ಆ ಫಲವಾಗುವದಿಲ್ಲ ಎಂಬುದಕ್ಕೆ ಕಾರಣವಿಲ್ಲ. ೩-೪-೨ರ ಪೂರ್ವಪಕ್ಷ ಭಾಷ್ಯದಲ್ಲಿ ಹೇಳಿದ ಕಾರಣವೂ ಇಲ್ಲಿಲ್ಲ.

2. "ಇವನ ಕರ್ಮಗಳೂ ಕ್ಷಯವಾಗುತ್ತವೆ" (ಮುಂ.) ಮುಂತಾದ ಶ್ರುತಿಗಳು ಕರ್ಮವು ನಾಶವಾಗುವದೆಂದೂ ಹೇಳುತ್ತವೆಯಾದರೂ ಜ್ಞಾನವು ಅಜ್ಞಾನವನ್ನು ಕಳೆದರೆ ಅಜ್ಞಾನದ ಕಾರ್ಯವಾದ ಕರ್ಮಗಳು ಹೋಗುವದೆಂಬುದು ತಾನೇ ಸಿದ್ಧವಾಗುವದೆಂಬ ಅಭಿಪ್ರಾಯದಿಂದ ಈ ಮಾತನ್ನು ಆಡಿದೆ. ಕರ್ಮವು ನಾಶವಾಗಲೆಂಬ ಉದ್ದೇಶದಿಂದ ಜ್ಞಾನವನ್ನು ವಿಧಾನಮಾಡಿಲ್ಲವೆಂಬುದಿಷ್ಟೇ ಇಲ್ಲಿ ವಿವಕ್ಷಿತ.

**ಯಮು ನಿಶ್ಚಯಿಸಿರುತ್ತಾನೆ?** ಹೀಗೇದಾದರೇ ಮೋಕ್ಷವು ಹೊಂದುತ್ತದೆ. ಹೀಗಲ್ಲದಿದ್ದರೆ ಅನಾದಿಕಾಲದಿಂದ ಸಾಗುತ್ತಿರುವ ಕರ್ಮಗಳು ಕ್ಷಯವಾಗದೆ ಮೋಕ್ಷವೇ ಇಲ್ಲವೆಂದಾಗುವದು. **ಮೋಕ್ಷವು ಕರ್ಮಫಲದಂತೆ ದೇಶಕಾಲ ನಿಮಿತ್ತಾಪೇಕ್ಷವಾಗಿಯೂ ಇರಲಾರದು; ಏಕೆಂದರೆ (ಆಗ ಅದು) ಅನಿತ್ಯವೆಂಬ ಪ್ರಸಂಗವು ಉಂಟಾಗುವದು. ಜ್ಞಾನದ ಫಲವು ಪರೋಕ್ಷವೆಂಬುದು ಹೊಂದುವದಿಲ್ಲವಾದ್ದರಿಂದಲೂ** (ಹೀಗೆಂದು ಒಪ್ಪ ಬೇಕು). ಆದ್ದರಿಂದ ಬ್ರಹ್ಮಜ್ಞಾನವುಂಟಾದರೆ ಪಾಪಗಳು ಕ್ಷಯವಾಗುವವು ಎಂಬುದೇ ನಿಂತಿತು.

## ೧೦. ಇತರಾಸಂಶ್ಲೇಷಾಧಿಕರಣ

(ಜ್ಞಾನಿಗೆ ಪುಣ್ಯವೂ ಇಲ್ಲ)

**ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ॥ ೧೪ ॥**

೧೪. ಇನ್ನೊಂದೂ ಹೀಗೆಯೇ ಅಂಟದೆ (ಇರುತ್ತದೆ). ಬಿದ್ದು ಹೋದರೋ (ಮುಕ್ತಿಯಾಗುವದು).

### ಪುಣ್ಯಸಂಬಂಧವೂ ಜ್ಞಾನಿಗೆ ಇರುವದಿಲ್ಲ

(ಭಾಷ್ಯ)

೫೨೯ ಪೂರ್ವಸ್ಮಿನ್ ಅಧಿಕರಣೇ ಬನ್ಧಹೇತೋರಘಸ್ಯ ಸ್ವಾಭಾವಿಕಸ್ಯ ಅಶ್ಲೇಷವಿನಾಶೌ ಜ್ಞಾನನಿಮಿತ್ತೌ ಶಾಸ್ತ್ರವ್ಯಪದೇಶಾನ್ನಿರೂಪಿತೌ। ಧರ್ಮಸ್ಯ ಪುನಃ ಶಾಸ್ತ್ರೀಯತ್ವಾತ್ ಶಾಸ್ತ್ರೀಯೇಣ ಜ್ಞಾನೇನ ಅವಿರೋಧಃ ಇತ್ಯಾಶಙ್ಕ್ಯ ತನ್ನಿರಾಕರಣಾಯ ಪೂರ್ವಾಧಿಕರಣನ್ಯಾಯಾತಿದೇಶಃ ಕ್ರಿಯತೇ। ಇತರಸ್ಯಾಪಿ ಪುಣ್ಯಸ್ಯ ಕರ್ಮಣಃ, ಏವಮ್ ಅಘವತ್, ಅಸಂಶ್ಲೇಷೋ ವಿನಾಶಶ್ಚ ಜ್ಞಾನವತೋ ಭವತಃ। ಕುತಃ? ತಸ್ಯಾಪಿ ಸ್ವಫಲಹೇತುತ್ವೇನ ಜ್ಞಾನಫಲ ಪ್ರತಿಬನ್ಧಿತ್ವಪ್ರಸಙ್ಗಾತ್। "ಉಭೇ ಉ ಹ್ಯೇವೈಷ ಏತೇ ತರತಿ" (ಬೃ.೪-೪-೨೨) ಇತ್ಯಾದಿಶ್ರುತಿಷು ಚ ದುಷ್ಕೃತವತ್ ಸುಕೃತಸ್ಯಾಪಿ ಪ್ರಣಾಶವ್ಯಪದೇಶಾತ್। ಅಕರ್ತ್ರಾತ್ಮತ್ವಬೋಧನಿಮಿತ್ತಸ್ಯ ಚ ಕರ್ಮಕ್ಷಯಸ್ಯ ಸುಕೃತದುಷ್ಕೃತಯೋಸ್ತುಲ್ಯತ್ವಾತ್। "ಕ್ಷೀಯನ್ತೇ ಚಾಸ್ಯ ಕರ್ಮಾಣಿ" (ಮುಂ. ೨-೨-೮) ಇತಿ ಚಾವಿಶೇಷಶ್ರುತೇಃ। ಯತ್ರಾಪಿ ಕೇವಲ ಏವ ಪಾಪ್ಮಶಬ್ದೋ ದೃಶ್ಯತೇ ತತ್ರಾಪಿ ತೇನೈವ ಪುಣ್ಯಮಪ್ಯಾಕಲಿತಮ್ ಇತಿ ದ್ರಷ್ಟವ್ಯಮ್। ಜ್ಞಾನಫಲಾಪೇಕ್ಷಯಾ ನಿಕೃಷ್ಟಫಲತ್ವಾತ್। ಅಸ್ತಿ ಚ ಶ್ರುತೌ ಪುಣ್ಯೇಽಪಿ ಪಾಪ್ಮಶಬ್ದಃ। ನೈವಂ ಸೇತುಮಹೋರಾತ್ರೇ ತರತಃ ಇತ್ಯತ್ರ ಸಹ ದುಷ್ಕೃತೇನ ಸುಕೃತಮಪ್ಯನುಕ್ರಮ್ಯ "ಸರ್ವೇ ಪಾಪ್ಮಾನೋಽತೋ ನಿವರ್ತನ್ತೇ" (ಛಾಂ. ೮-೪-೧) ಇತ್ಯವಿಶೇಷೇಣೈವ ಪ್ರಕೃತೇ ಪುಣ್ಯೇ ಪಾಪ್ಮಶಬ್ದಪ್ರಯೋಗಾತ್ ॥

(ಭಾಷ್ಯಾರ್ಥ)

ಹಿಂದಿನ ಅಧಿಕರಣದಲ್ಲಿ ಬಂಧಕ್ಕೆ ಹೇತುವಾಗಿರುವ ಸ್ವಾಭಾವಿಕವಾದ[1] ಪಾಪಕ್ಕೆ ಅಶ್ಲೇಷವಿನಾಶಗಳು ಜ್ಞಾನನಿಮಿತ್ತದಿಂದ (ಆಗುವವು) ಎಂದು ಶಾಸ್ತ್ರದಲ್ಲಿ ಹೇಳಿರುವ (ಕಾರಣ)ದಿಂದ ತಿಳಿಸಿದ್ದಾಗಿದೆ. ಆದರೆ ಧರ್ಮವು ಶಾಸ್ತ್ರೀಯವಾಗಿರುವದರಿಂದ ಶಾಸ್ತ್ರೀಯಜ್ಞಾನಕ್ಕೆ ಅದರಿಂದ ಯಾವ ವಿರೋಧವೂ ಇಲ್ಲ ಎಂದು ಆಶಂಕೆಮಾಡಿ ಅದನ್ನು ನಿರಾಕರಿಸುವದಕ್ಕಾಗಿ ಹಿಂದಿನ ಅಧಿಕರಣದ ನ್ಯಾಯವನ್ನೇ (ಇಲ್ಲಿ) ಅತಿದೇಶಮಾಡಲಾಗುವದು.

ಇನ್ನೊಂದಕ್ಕೂ, ಎಂದರೆ ಪುಣ್ಯಕರ್ಮಕ್ಕೂ, ಹೀಗೆ ಪಾಪದಂತೆಯೇ, ಅಶ್ಲೇಷವೂ ವಿನಾಶವೂ ಜ್ಞಾನಿಗೆ ಆಗುತ್ತವೆ. ಏಕೆ? ಎಂದರೆ ಅದೂ ತನ್ನ ಫಲಕ್ಕೆ ಕಾರಣವಾಗಿರುವದರಿಂದ ಜ್ಞಾನಫಲಕ್ಕೆ ಅಡ್ಡಿಯಾಗುವ ಪ್ರಸಂಗವಿದೆ. "ಈತನು ಇವೆರಡನ್ನೂ ದಾಟುತ್ತಾನೆ" (ಬೃ. ೪-೪-೨೨) ಮುಂತಾದ ಶ್ರುತಿಗಳಲ್ಲಿ ಪಾಪದಂತೆ ಪುಣ್ಯವೂ ನಾಶವಾಗುವದೆಂದು ಹೇಳಿದೆ. ಅಕರ್ತ್ರಾತ್ಮಜ್ಞಾನವೆಂಬ ನಿಮಿತ್ತದಿಂದಾಗುವ ಕರ್ಮಕ್ಷಯವು ಸುಕೃತದುಷ್ಕೃತಗಳೆರಡಕ್ಕೂ ಸಮಾನವಾಗಿದೆ. "ಇವನ ಕರ್ಮಗಳು ಕ್ಷಯವಾಗುತ್ತವೆ" (ಮುಂ. ೨-೨-೮) ಎಂದು (ಎರಡನ್ನೂ) ಸಮಾನವಾಗಿಯೇ ಹೇಳಿರುವದರಿಂದಲೂ (ಹೀಗೆಂದಾಗುತ್ತದೆ).

ಇನ್ನು ಎಲ್ಲಿ ಬರಿಯ ಪಾಪವೆಂಬ ಶಬ್ದವೇ ಕಂಡುಬರುತ್ತದೆಯೋ ಅಲ್ಲಿಯೂ ಆ (ಪಾಪ)ಶಬ್ದದಿಂದಲೇ ಪುಣ್ಯವನ್ನೂ ಗ್ರಹಿಸಿದೆ ಎಂದು ತಿಳಿಯಬೇಕು. ಏಕೆಂದರೆ ಜ್ಞಾನಫಲಕ್ಕಿಂತ (ಅದರ) ಫಲವು ನಿಕೃಷ್ಟವಾಗಿರುತ್ತದೆ. ಶ್ರುತಿಯಲ್ಲಿ ಪುಣ್ಯದಲ್ಲಿಯೂ ಪಾಪ(ವನ್ನು ಹೇಳುವ) ಶಬ್ದವು (ಪ್ರಯುಕ್ತವಾಗಿಯೂ) ಇರುತ್ತದೆ. "ಈ ಸೇತುವನ್ನು ಹಗಲುರಾತ್ರಿಗಳು ದಾಟುವದಿಲ್ಲ" (ಛಾಂ. ೮-೪-೧) ಎಂಬಲ್ಲಿ ದುಷ್ಕೃತದೊಡನೆ ಸುಕೃತವನ್ನೂ ತಿಳಿಸಿ "ಎಲ್ಲಾ ಪಾಪಗಳೂ ಇಲ್ಲಿಂದ ಹಿಂತಿರುಗುತ್ತವೆ" (ಛಾಂ. ೮-೪-೧) ಎಂದು ಪ್ರಕೃತವಾದ ಪುಣ್ಯದಲ್ಲಿಯೂ ಸಮಾನವಾಗಿಯೇ ಪಾಪ್ಮಶಬ್ದವನ್ನು ಪ್ರಯೋಗಿಸಿರುವದರಿಂದ (ಹೀಗೆಂದು ಗೊತ್ತಾಗುತ್ತದೆ).

## ಶರೀರಪಾತವಾದ ಬಳಿಕ ಜ್ಞಾನಿಗೆ ಮುಕ್ತಿಯೇ

(ಭಾಷ್ಯ)

೫೩೦. "ಪಾತೇ ತು" ಇತಿ ತುಶಬ್ದೋಽವಧಾರಣಾರ್ಥಃ । ಏವಂ ಧರ್ಮಾಧರ್ಮಯೋರ್ಬನ್ಧಹೇತ್ವೋರ್ವಿದ್ಯಾಸಾಮರ್ಥ್ಯಾತ್ ಅಶ್ಲೇಷವಿನಾಶಸಿದ್ಧೇಃ ಅವಶ್ಯಂಭಾವಿನೀ ವಿದುಷಃ ಶರೀರಪಾತೇ ಮುಕ್ತಿಃ ಇತ್ಯವಧಾರಯತಿ॥

1. ಅವಿದ್ಯಾಕೃತವಾದ.

(ಭಾಷ್ಯಾರ್ಥ)

"ಪಾತೇ ತು" ಎಂಬಲ್ಲಿರುವ ತುಶಬ್ದವು ಅವಧಾರಣೆಗಾಗಿ ಬಂದಿದೆ. ಹೀಗೆ ಬಂಧಹೇತುಗಳಾಗಿರುವ **ಧರ್ಮಾಧರ್ಮಗಳಿಗೆ ವಿದ್ಯೆಯ ಸಾಮರ್ಥ್ಯದಿಂದ ಅಶ್ಲೇಷವಿನಾಶಗಳು ಸಿದ್ಧವಾಗುವದರಿಂದ ಜ್ಞಾನಿಗೆ ಶರೀರಪಾತವಾದ ಬಳಿಕ ಮುಕ್ತಿಯು ಅವಶ್ಯವಾಗಿ ಆಗುವದು ಎಂದು ಅವಧಾರಣೆಮಾಡಿರುತ್ತದೆ.**[1]

## ೧೧. ಅನಾರಬ್ಧಾಧಿಕರಣ

( ಜ್ಞಾನಿಯ ಪ್ರಾರಬ್ಧಕರ್ಮವು ಫಲಭೋಗದಿಂದ ನಾಶವಾಗುವದು )

**ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ॥ ೧೫ ॥**

೧೫. ಆರಬ್ಧಕಾರ್ಯವಲ್ಲದ ಹಿಂದಿನ (ಕರ್ಮಗಳು) ಮಾತ್ರ (ನಾಶವಾಗುವವು). ಏಕೆಂದರೆ ಆ (ಶರೀರವು ಬೀಳುವದೆಂಬ) ಅವಧಿಯನ್ನು (ಶ್ರುತಿಯಲ್ಲಿ ಹೇಳಿದೆ).

### ಜ್ಞಾನಿಯ ಪ್ರಾರಬ್ಧಫಲವಲ್ಲದ ಕರ್ಮಗಳು ಮಾತ್ರ ನಾಶವಾಗುವವು

(ಭಾಷ್ಯ)

೫೩೧. ಪೂರ್ವಯೋರಧಿಕರಣಯೋಃ ಜ್ಞಾನನಿಮಿತ್ತಂ ಸುಕೃತದುಷ್ಕೃತಯೋರ್ವಿನಾಶೋಽವಧಾರಿತಃ । ಸ ಕಿಮವಿಶೇಷೇಣ ಆರಬ್ಧಕಾರ್ಯಯೋಃ ಅನಾರಬ್ಧಕಾರ್ಯಯೋಶ್ಚ ಭವತಿ, ಉತ ವಿಶೇಷೇಣ ಅನಾರಬ್ಧಕಾರ್ಯಯೋರೇವ? ಇತಿ ವಿಚಾರ್ಯತೇ । ತತ್ರ "ಉಭೇ ಉ ಹೈವೈಷ ಏತೇ ತರತಿ" (ಬೃ. ೪-೪-೨೨) ಇತ್ಯೇವಮಾದಿಶ್ರುತಿಷು ಅವಿಶೇಷಶ್ರವಣಾತ್ ಅವಿಶೇಷೇಣೈವ ಕ್ಷಯಃ ಇತಿ । ಏವಂ ಪ್ರಾಪ್ತೇ ಪ್ರತ್ಯಾಹ– 'ಅನಾರಬ್ಧಕಾರ್ಯೇ ಏವ ತು' ಇತಿ । ಅಪ್ರವೃತ್ತಫಲೇ ಏವ ಪೂರ್ವೇ . ಜನ್ಮಾನ್ತರಸಂಚಿತೇ ಅಸ್ಮಿನ್ನಪಿ ಚ ಜನ್ಮನಿ ಪ್ರಾಗ್ಜ್ಞಾನೋತ್ಪತ್ತೇಃ ಸಂಚಿತೇ ಸುಕೃತದುಷ್ಕೃತೇ ಜ್ಞಾನಾಧಿಗಮಾತ್ ಕ್ಷೀಯೇತೇ ನ ತ್ವಾರಬ್ಧಕಾರ್ಯೇ ಸಾಮಿ

1. ಶರೀರಪಾತವಾದ ಬಳಿಕವೇ ಮುಕ್ತಿಯು, ಅಥವಾ ಆ ಮುಕ್ತಿಯೇ ಮುಖ್ಯಮುಕ್ತಿಯು ಎಂಬ ಅಭಿಪ್ರಾಯವೇನೂ ಇಲ್ಲಿಲ್ಲ ; ಶರೀರಪಾತವಾದಮೇಲೂ ಮತ್ತೆ ಶರೀರಧಾರಣಕ್ಕೆ ಕಾರಣವಿಲ್ಲ ಎಂಬುದೇ ಅಭಿಪ್ರಾಯ.

ಭುಕ್ತಫಲೇ ಯಾಭ್ಯಾಮ್ ಏತದ್ಬ್ರಹ್ಮಜ್ಞಾನಾಯತನಂ ಜನ್ಮ ನಿರ್ಮಿತಮ್ । ಕುತ ಏತತ್ ? "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ" (ಛಾಂ. ೬-೧೪-೬) ಇತಿ ಶರೀರಪಾತಾವಧಿಕರಣಾತ್ ಕ್ಷೇಮಪ್ರಾಪ್ತೇಃ । ಇತರಥಾ ಹಿ ಜ್ಞಾನಾತ್ ಅಶೇಷಕರ್ಮಕ್ಷಯೇ ಸತಿ ಸ್ಥಿತಿಹೇತ್ವಭಾವಾತ್ ಜ್ಞಾನಪ್ರಾಪ್ತ್ಯನನ್ತರಮೇವ ಕ್ಷೇಮಮಶ್ನುವೀತ। ತತ್ರ ಶರೀರಪಾತಪ್ರತೀಕ್ಷಾಂ ನಾಚಕ್ಷೀತ ॥

(ಭಾಷ್ಯಾರ್ಥ)

ಹಿಂದಿನ (ಎರಡು) ಅಧಿಕರಣಗಳಲ್ಲಿ ಜ್ಞಾನನಿಮಿತ್ತದಿಂದ ಸುಕೃತದುಷ್ಕೃತಗಳು ವಿನಾಶವಾಗುವವೆಂದು ನಿಶ್ಚಯಿಸಲಾಗಿದೆ(ಯಷ್ಟೆ). ಅದೇನು ಆರಬ್ಧಕಾರ್ಯ(ಕರ್ಮ), ಅನಾರಬ್ಧಕಾರ್ಯ(ಕರ್ಮ)– ಈ (ಎರಡಕ್ಕೂ) ಸಮಾನವಾಗಿ ಆಗುವದೊ, ಅಥವಾ ವಿಶೇಷದಿಂದ ಅನಾರಬ್ಧಕಾರ್ಯ(ವಾದ ಪುಣ್ಯಪಾಪಗಳಿಗೇ ಆಗುವದೊ) ? –ಎಂಬುದನ್ನು (ಇಲ್ಲಿ) ವಿಚಾರಮಾಡಲಾಗುವದು.

ಇಲ್ಲಿ "ಈತನು ಇವೆರಡನ್ನೂ ದಾಟುತ್ತಾನೆ" (ಬೃ. ೪-೪-೨೨) ಎಂದು ಮುಂತಾಗಿರುವ ಶ್ರುತಿಗಳಲ್ಲಿ ಅವಿಶೇಷವಾಗಿ ಹೇಳಿರುವದರಿಂದ ಅವಿಶೇಷವಾಗಿಯೇ (ಇವೆರಡೂ) ಕ್ಷಯ(ವಾಗುವವು) ಎಂದು ಪ್ರಾಪ್ತವಾಗಲು (ಇದಕ್ಕೆ) ಪ್ರತಿ(ಯಾಗಿ ಸಿದ್ಧಾಂತವನ್ನು) ಹೇಳುತ್ತಾರೆ.

"ಅನಾರಬ್ಧಕಾರ್ಯೇ ಏವ ತು" (ಎಂದರೆ) ಫಲವು (ಇನ್ನೂ) ಪ್ರವೃತ್ತವಾಗದೆ ಇರುವ[1] ಹಿಂದಿನ ಜನ್ಮಾಂತರಗಳಲ್ಲಿ ಸಂಚಿತವಾಗಿದ್ದ, ಮತ್ತು ಈ ಜನ್ಮದಲ್ಲಿಯೂ ಜ್ಞಾನೋತ್ಪತ್ತಿಗಿಂತ ಪೂರ್ವದಲ್ಲಿ ಸಂಚಿತವಾಗಿದ್ದ, ಸುಕೃತದುಷ್ಕೃತಗಳೇ ಜ್ಞಾನಪ್ರಾಪ್ತಿಯಿಂದ ಕ್ಷಯವಾಗುತ್ತವೆಯೇ ಹೊರತು ಆರಬ್ಧಕಾರ್ಯವಾಗಿ, ಅರ್ಧಫಲವನ್ನು (ಮಾತ್ರ) ಭೋಗಿಸಿರುವ ಫಲವುಳ್ಳ (ಕರ್ಮಗಳು), ಜ್ಞಾನಕ್ಕೆ ಮನೆಯಾಗಿರುವ ಈ ಜನ್ಮವು ಯಾವ (ಕರ್ಮಗಳಿಂದ)

---

1. ಇಲ್ಲಿ ಶರೀರವು ಇದ್ದುಕೊಂಡಿದೆ ಎಂದಿಟ್ಟುಕೊಂಡೇ ವಿಚಾರಮಾಡುತ್ತಿದೆ ; ಕರ್ಮಗಳಿಗೆ ಫಲದಾನಸಾಮರ್ಥ್ಯವಿದೆ ಎಂಬ ವ್ಯಾವಹಾರಿಕಾಭಿಪ್ರಾಯವನ್ನೂ ಇಟ್ಟುಕೊಂಡಿದೆ. ಈಗಲೂ ಅಶರೀರತ್ವವೇ ಇದೆ ಎಂಬ ಪರಮಸಿದ್ಧಾಂತದಲ್ಲಿ ಜನ್ಮವಾಗಲಿ ಕರ್ಮವಾಗಲಿ ಸಂಭವಿಸುವದೇ ಇಲ್ಲವೆಂಬುದು ಸಮನ್ವಯಸೂತ್ರದಲ್ಲಿ ಸಿದ್ಧವಾಗಿಯೇ ಇದೆ. ಈ ಶರೀರವನ್ನಿಟ್ಟುಕೊಂಡು ಕರ್ಮಗಳು ಫಲವನ್ನು ಕೊಡುವ ಶಕ್ತಿಗೆ ಜ್ಞಾನದಿಂದ ಪ್ರತಿಬಂಧವಾಗುತ್ತದೆ ಎಂಬುದನ್ನು ಪ್ರತಿಪಾದಿಸುತ್ತಿದೆ. ಈ ವಿಚಾರದಲ್ಲಿ ಸಗುಣವಿದ್ಯೆಯೂ ಸೇರಿರುವದರಿಂದ ಅಲ್ಲಿ ಶರೀರಪಾತಾನಂತರವೇ ಫಲವೆಂದು ಇದರಿಂದ ಸಿದ್ಧವಾಗುತ್ತದೆ.

ನಿರ್ಮಿತವಾಗಿರುತ್ತದೆಯೋ (ಅವು ನಾಶವಾಗು)ವದಿಲ್ಲ. ಇದು ಏತರಿಂದ ? ಎಂದರೆ "ಅವನಿಗೆ ಎಲ್ಲಿಯುವರೆಗೆ ಶರೀರದಿಂದ ಬಿಡುಗಡೆಯಾಗದೆ ಇರುವದೋ ಅಲ್ಲಿಯುವರೆಗೇ ತಡವು, ಆಮೇಲೆ ಸೇರಿಹೋಗಿ (ಮುಕ್ತ) ನಾಗುವನು" (ಛಾಂ. ೬-೧೪-೨) ಎಂದು ಕ್ಷೇಮವು ಪ್ರಾಪ್ತವಾಗುವದಕ್ಕೆ ಶರೀರಪಾತವನ್ನು ಅವಧಿ ಯಾಗಿ ಮಾಡಿರುತ್ತದೆಯಾದ್ದರಿಂದ. ಹೀಗಲ್ಲದಿದ್ದರೆ ಜ್ಞಾನದಿಂದ ಎಲ್ಲಾ ಕರ್ಮಗಳೂ ಕ್ಷಯವಾಗುವದಾಗಿದ್ದರೆ (ಇನ್ನೂ) ಇದ್ದುಕೊಂಡಿರುವದಕ್ಕೆ ಕಾರಣ ವಿಲ್ಲವಾದ್ದರಿಂದ ಜ್ಞಾನಪ್ರಾಪ್ತಿಯಾದ ಕೂಡಲೆ ಕ್ಷೇಮವನ್ನು ಪಡೆದುಕೊಳ್ಳುವ ನೆಂದಾಗುವದು ; ಆಗ ಶರೀರಪಾತವನ್ನು ಕಾದುಕೊಂಡಿರಬೇಕೆಂದು ಹೇಳು ತ್ತಿರಲಿಲ್ಲ.

## ಅಕರ್ತ್ರಾತ್ಮಜ್ಞಾನವಾದರೂ ಪ್ರಾರಬ್ಧಕರ್ಮವು ಇರುವದೇಕೆ ?

(ಭಾಷ್ಯ)

೫೩೨. ನನು ವಸ್ತುಬಲೇನೈವಾಯಮ್ ಅಕರ್ತ್ರಾತ್ಮಾವಬೋಧಃ ಕರ್ಮಾಣಿ ಕ್ಷಪಯನ್ ಕಥಂ ಕಾನಿಚಿತ್ ಕ್ಷಪಯೇತ್ ಕಾನಿಚಿಚ್ಚೋಪೇಕ್ಷೇತ ? ನ ಹಿ ಸಮಾನೇಽಗ್ನಿಬೀಜಸಂಪರ್ಕೇ ಕೇಷಾಂಚಿದ್ ಬೀಜಶಕ್ತಿಃ ಕ್ಷೀಯತೇ, ಕೇಷಾಂಚಿನ್ನ ಕ್ಷೀಯತ ಇತಿ ಶಕ್ಯಮಙ್ಗೀಕರ್ತುಮಿತಿ । ಉಚ್ಯತೇ । ನ ತಾವದನಾಶ್ರಿತ್ಯಾರಬ್ಧಕಾರ್ಯಂ ಕರ್ಮಾಶಯಂ ಜ್ಞಾನೋತ್ಪತ್ತಿರುಪಪದ್ಯತೇ । ಆಶ್ರಿತೇ ಚ ತಸ್ಮಿನ್ ಕುಲಾಲಚಕ್ರವತ್ ಪ್ರವೃತ್ತವೇಗಸ್ಯ ಅನ್ತರಾಲೇ ಪ್ರತಿಬನ್ಧಾಸಂಭವಾತ್ ಭವತಿ ವೇಗಕ್ಷಯಪ್ರತಿಪಾಲನಮ್ । ಅಕರ್ತ್ರಾತ್ಮಬೋಧೋಽಪಿ ಹಿ ಮಿಥ್ಯಾಜ್ಞಾನಬಾಧನೇನ ಕರ್ಮಾಣ್ಯುಚ್ಛಿನತ್ತಿ । ಬಾಧಿತಮಪಿ ತು ಮಿಥ್ಯಾಜ್ಞಾನಂ ದ್ವಿಚನ್ದ್ರಜ್ಞಾನವತ್ ಸಂಸ್ಕಾರವಶಾತ್ ಕಂಚಿತ್ ಕಾಲಮನುವರ್ತತ ಏವ । ಅಪಿ ಚ ನೈವಾತ್ರ ವಿವದಿತವ್ಯಂ ಬ್ರಹ್ಮವಿದಾ ಕಂಚಿತ್ಕಾಲಂ ಶರೀರಂ ಧ್ರಿಯತೇ ನ ವಾ ಧ್ರಿಯತ ಇತಿ । ಕಥಂ ಹಿ ಏಕಸ್ಯ ಸ್ವಹೃದಯಪ್ರತ್ಯಯಂ ಬ್ರಹ್ಮವೇದನಂ ದೇಹಧಾರಣಂ ಚ ಅಪರೇಣ ಪ್ರತಿಕ್ಷೇಪ್ತುಂ ಶಕ್ಯೇತ ? ಶ್ರುತಿಸ್ಮೃತಿಷು ಚ ಸ್ಥಿತಪ್ರಜ್ಞಲಕ್ಷಣನಿರ್ದೇಶೇನ ಏತದೇವ ನಿರುಚ್ಯತೇ । ತಸ್ಮಾತ್ ಅನಾರಬ್ಧಕಾರ್ಯಯೋರೇವ ಸುಕೃತದುಷ್ಕೃತಯೋರ್ವಿದ್ಯಾಸಾಮರ್ಥ್ಯಾತ್ ಕ್ಷಯಃ ಇತಿ ನಿರ್ಣಯಃ ॥

(ಭಾಷ್ಯಾರ್ಥ)

(ಆಕ್ಷೇಪ):- ವಸ್ತುಬಲದಿಂದಲೇ ಈ ಅಕರ್ತ್ರಾತ್ಮಜ್ಞಾನವು ಕರ್ಮಗಳನ್ನು ಕ್ಷಯಿಸುತ್ತದೆಯಾದ್ದರಿಂದ, ಕೆಲವನ್ನು ಮಾತ್ರ ಕ್ಷಯಿಸುತ್ತದೆ ಮತ್ತೆ

ಕೆಲವನ್ನು ಉಪೇಕ್ಷಿಸುತ್ತವೆ ಎಂಬುದು ಹೇಗೆ ? ಬೆಂಕಿಬೀಜಗಳಿಗೆ ಸಂಪರ್ಕವು ಸಮಾನವಾಗಿರುವಲ್ಲಿ ಕೆಲವು (ಬೀಜಗಳ) ಬೀಜಶಕ್ತಿಯು ಹೋಗಿಬಿಡುತ್ತದೆ, ಕೆಲವಕ್ಕೆ ಹೋಗುವದಿಲ್ಲ ಎಂದು ಒಪ್ಪುವದಕ್ಕೆ ಆಗಲಾರದಲ್ಲವೆ[1] ?

(ಪರಿಹಾರ):– ಹೇಳುತ್ತೇವೆ, ಮೊದಲನೆಯದಾಗಿ ಆರಬ್ಧಕಾರ್ಯವಾದ ಕರ್ಮಾಶಯವನ್ನು ಆಶ್ರಯಿಸದೆ ಜ್ಞಾನವುಂಟಾಗುವದೆಂಬುದು ಹೊಂದುವದಿಲ್ಲ.[2] ಅದನ್ನು ಆಶ್ರಯಿಸಿದ ಬಳಿಕ ಕುಂಬಾರನ ತಿಗುರಿಯಂತೆ (ಅದಕ್ಕೆ) ವೇಗವು ಪ್ರವೃತ್ತವಾಗಿರುವಲ್ಲಿ[3] (ಅದಕ್ಕೆ) ಅಡ್ಡಿ ಯಾವದೂ ಸಂಭವಿಸುವದಿಲ್ಲವಾಗಿ (ಆ) ವೇಗವು ಕ್ಷಯವಾಗುವದನ್ನು ನಿರೀಕ್ಷಿಸಬೇಕೆಂದಾಗುವದು[4]. **ಅಕರ್ತ್ರಾತ್ಮಜ್ಞಾನವೂ ಮಿಥ್ಯಾಜ್ಞಾನವನ್ನು ಬಾಧಿಸುವದರಿಂದಲೇ ಕರ್ಮಗಳನ್ನು ನಾಶಗೊಳಿಸುತ್ತದೆ. ಮಿಥ್ಯಾಜ್ಞಾನವು ಬಾಧಿತವಾದ ಬಳಿಕವೂ ಇಬ್ಬರು ಚಂದ್ರರ ಜ್ಞಾನದಂತೆ ಸಂಸ್ಕಾರವಶದಿಂದ ಕೆಲವು ಕಾಲದವರೆಗೆ ಇದ್ದುಕೊಂಡೇ ಇರುತ್ತದೆ.[5] ಇದಲ್ಲದೆ ಬ್ರಹ್ಮಜ್ಞಾನಿಯು ಕೆಲವು ಕಾಲದವರೆಗೆ ದೇಹವನ್ನು ಧರಿಸಿರುತ್ತಾನೆಯೆ, ಇಲ್ಲವೆ –ಎಂಬೀ (ವಿಷಯದಲ್ಲಿ) ವಿವಾದಮಾಡುವಂತೆಯೇ ಇಲ್ಲ. ಏಕೆಂದರೆ ತನ್ನ ಹೃದಯಕ್ಕೆ (ಮಾತ್ರ) ತಿಳಿಯಬರುವ ಬ್ರಹ್ಮಜ್ಞಾನ, ಮತ್ತು ದೇಹಧಾರಣ– (ಇವನ್ನು) ಮತ್ತೊಬ್ಬನು ಹೇಗೆತಾನೆ ಇಲ್ಲವೆನ್ನುವದಕ್ಕಾದೀತು ?[6] ಶ್ರುತಿಸ್ಮೃತಿಗಳಲ್ಲಿ ಸ್ಥಿತಪ್ರಜ್ಞನ ಲಕ್ಷಣವನ್ನು ತಿಳಿಸಿರುವದ**

---

1. ಬೆಂಕಿಯ ಕಾರ್ಯವು ಎಲ್ಲಾ ದಾಹ್ಯವಸ್ತುಗಳ ಮೇಲೂ ಒಂದೇ ಆಗಿರುವದು ಕಂಡಿರುವಂತೆ, ಜ್ಞಾನದ ಕಾರ್ಯವು ಎಲ್ಲಾ ಕರ್ಮಗಳಮೇಲೂ ಒಂದೇ ಆಗಿರಬೇಕು ಎಂದು ಭಾವ.

2. ಹಿಂದಿನ ಕರ್ಮದ ಫಲವಾಗಿ ಹುಟ್ಟಿರುವ ಶರೀರದಲ್ಲಿ ಜ್ಞಾನವುಂಟಾಗುತ್ತದೆ.

3. ಕುಂಬಾರನು ತಿರುಗಿಸುವದನ್ನು ಬಿಟ್ಟಮೇಲೂ ಹಿಂದಿನ ವೇಗದಿಂದಲೇ ತಿಗುರಿಯು ತಿರುಗುತ್ತಿರುತ್ತದೆ. ಅದರಂತೆ ಜ್ಞಾನವುಂಟಾಗಿ ಕರ್ತೃಬುದ್ಧಿಯಿಲ್ಲವಾದಮೇಲೂ ಕರ್ಮದ ವೇಗದಿಂದಲೇ ಶರೀರವು ಇದ್ದುಕೊಂಡಿರುತ್ತದೆ.

4. ಏಕೆಂದರೆ ಅದನ್ನು ನಡುವೆ ನಿಲ್ಲಿಸುವ ಮತ್ತೊಂದು ಪ್ರಯತ್ನವೇನೂ ಇರುವದಿಲ್ಲ.

5. ಚಂದ್ರನು ಒಬ್ಬನೇ ಎಂದು ತಿಳಿದ ಬಳಿಕವೂ ಇಬ್ಬರು ಚಂದ್ರರಿರುವಂತೆ ಕಾಣುತ್ತಿರಬಹುದು. ಹೀಗೆಯೇ ಶರೀರವೂ ಇದ್ದುಕೊಂಡಿರುವದು ; ಅದು ಸತ್ಯವೆಂಬ ಬುದ್ಧಿಯು ಮಾತ್ರ ಜ್ಞಾನದಿಂದ ಬಾಧಿತವಾಗಿರುತ್ತದೆ. ಭಾಷ್ಯದಲ್ಲಿ ಅವಿದ್ಯಾಲೇಶವಾದವಿಲ್ಲವೆಂಬುದನ್ನು ಲಕ್ಷಿಸಬೇಕು.

6. ಜ್ಞಾನಿಯಾದವನಿಗೆ ಶರೀರವು ಕಾಣುತ್ತಿರುವದೆಂಬುದು ಅವನಿಗೇ ಗೊತ್ತು ; ಮಿಕ್ಕವರೇನು ಬಲ್ಲರು ?

**ರಿಂದ ಇದನ್ನೇ ತಿಳಿಸಿರುತ್ತದೆ.**[1] ಆದ್ದರಿಂದ ಅನಾರಬ್ಧಕಾರ್ಯವಾಗಿರುವ ಸುಕೃತದುಷ್ಕೃತಗಳಿಗೇ ವಿದ್ಯಾಸಾಮರ್ಥ್ಯದಿಂದ ಕ್ಷಯ(ವಾಗುತ್ತದೆ) ಎಂಬುದೇ ನಿರ್ಣಯವು.

## ೧೨. ಅಗ್ನಿಹೋತ್ರಾದ್ಯಧಿಕರಣ (ಸೂ. ೧೬-೧೭)

(ಹಿಂದಿನ ನಿತ್ಯಕರ್ಮವು ಜ್ಞಾನಿಯ ಮೋಕ್ಷಕ್ಕೇ ಕಾರಣವಾಗುವದು)

**ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ॥ ೧೬ ॥**

೧೬. ಅಗ್ನಿಹೋತ್ರವೇ ಮುಂತಾದದ್ದಾದರೆ ಅದರ ಕಾರ್ಯಕ್ಕೇ ಆಗುವದು ; ಏಕೆಂದರೆ ಅದು ಕಂಡುಬಂದಿರುತ್ತದೆ.

### ಜ್ಞಾನಿಯ ಹಿಂದಿನ ನಿತ್ಯಕರ್ಮಗಳಿಗೆ ಮೋಕ್ಷವೇ ಫಲ

(ಭಾಷ್ಯ)

೫೩೩. ಪುಣ್ಯಸ್ಯಾಪಿ ಅಶ್ಲೇಷವಿನಾಶಯೋಃ ಅಘನ್ಯಾಯೋಽತಿದಿಷ್ಟಃ । ಸೋಽತಿದೇಶಃ ಸರ್ವಪುಣ್ಯವಿಷಯಃ ಇತ್ಯಾಶಙ್ಕ್ಯ ಪ್ರತಿವಕ್ತಿ "ಅಗ್ನಿಹೋತ್ರಾದಿ ತು" ಇತಿ । ತುಶಬ್ದಃ ಆಶಙ್ಕಾಮ್ ಅಪನುದತಿ । ಯನ್ನಿತ್ಯಂ ಕರ್ಮ ವೈದಿಕಮ್ ಅಗ್ನಿಹೋತ್ರಾದಿ ತತ್ ತತ್ಕಾರ್ಯಾಯೈವ ಭವತಿ, ಜ್ಞಾನಸ್ಯ ಯತ್ಕಾರ್ಯಂ ತದೇವ ಅಸ್ಯಾಪಿ ಕಾರ್ಯಮ್ ಇತ್ಯರ್ಥಃ । ಕುತಃ ? "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ" (ಬೃ. ೪-೪-೨೨) ಇತ್ಯಾದಿದರ್ಶನಾತ್ । ನನು ಜ್ಞಾನಕರ್ಮಣೋರ್ವಿಲಕ್ಷಣಕಾರ್ಯತ್ವಾತ್ ಕಾರ್ಯೈಕತ್ವಾನುಪಪತ್ತಿಃ । ನೈಷ ದೋಷಃ । ಜ್ವರಮರಣಕಾರ್ಯಯೋರಪಿ ದಧಿವಿಷಯೋರ್ಗುಡಮನ್ತ್ರಸಂಯುಕ್ತಯೋಸ್ತೃಪ್ತಿಪುಷ್ಟಿಕಾರ್ಯದರ್ಶನಾತ್ । ತದ್ವತ್ ಕರ್ಮಣೋಽಪಿ ಜ್ಞಾನಸಂಯುಕ್ತಸ್ಯ ಮೋಕ್ಷಕಾರ್ಯೋಪಪತ್ತೇಃ । ನನು ಅನಾರಭ್ಯೋ ಮೋಕ್ಷಃ, ಕಥಮಸ್ಯ ಕರ್ಮಕಾರ್ಯತ್ವಮುಚ್ಯತೇ ? ನೈಷ ದೋಷಃ । ಆರಾದುಪಕಾರಕತ್ವಾತ್ ಕರ್ಮಣಃ । ಜ್ಞಾನಸ್ಯೈವ ಹಿ ಪ್ರಾಪಕಂ ಸತ್ ಕರ್ಮ ಪ್ರಣಾಡ್ಯಾ ಮೋಕ್ಷಕಾರಣಮ್ ಇತ್ಯುಪಚರ್ಯತೇ। ಅತ ಏವ ಚ ಅತಿಕ್ರಾನ್ತವಿಷಯಮೇತತ್ ಕಾರ್ಯೈಕತ್ವಾಭಿಧಾನಮ್ । ನ ಹಿ ಬ್ರಹ್ಮವಿದಃ

1. ಜ್ಞಾನಿಯ ಲಕ್ಷಣವನ್ನು ಶ್ರುತಿಗಳಲ್ಲಿಯೂ ಸ್ಮೃತಿಗಳಲ್ಲಿಯೂ ಹೇಳಿರುತ್ತದೆ ; ಬದುಕಿರುವಾಗ ಮುಕ್ತನಾಗಿರುವ ಜ್ಞಾನಿಯ ವಿಷಯವೇ ಆ ಲಕ್ಷಣವೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಆದ್ದರಿಂದಲೂ ಪ್ರಾರಬ್ಧಕಾರ್ಯವಾಗಿರುವ ಕರ್ಮವು ಜ್ಞಾನಿಗೆ ಇರಬಹುದಾಗಿದೆ ಎಂದರ್ಥ.

ಆಗಾಮಿ ಅಗ್ನಿಹೋತ್ರಾದಿ ಸಂಭವತಿ । ಅನಿಯೋಜ್ಯಬ್ರಹ್ಮಾತ್ಮತ್ವಪ್ರತಿಪತ್ತೇಃ ಶಾಸ್ತ್ರಸ್ಯ ಅವಿಷಯತ್ವಾತ್ । ಸಗುಣಾಸು ತು ವಿದ್ಯಾಸು ಕರ್ತೃತ್ವಾನತಿವೃತ್ತೇಃ ಸಂಭವತ್ಯಾಗಾಮ್ಯಪಿ ಅಗ್ನಿಹೋತ್ರಾದಿ । ತಸ್ಯಾಪಿ ನಿರಭಿಸಂಧಿನಃ ಕಾರ್ಯಾಂತರಾಭಾವಾತ್ ವಿದ್ಯಾಸಂಗತ್ಯುಪಪತ್ತಿಃ ॥

(ಭಾಷ್ಯಾರ್ಥ)

ಪುಣ್ಯಕ್ಕೂ ಅಶ್ಲೇಷವಿನಾಶಗಳಾಗುವವೆಂಬುದಕ್ಕೆ ಪಾಪದ (ವಿಷಯದ) ನ್ಯಾಯವನ್ನೇ ಅತಿದೇಶಮಾಡಿದೆ(ಯಷ್ಟೆ). ಆ ಅತಿದೇಶವು ಸರ್ವಪುಣ್ಯಗಳ ವಿಷಯವು ಎಂದು ಆಶಂಕಿಸಿ ಪ್ರತ್ಯುತ್ತರವನ್ನು ಹೇಳುತ್ತಾರೆ: "ಅಗ್ನಿಹೋತ್ರಾದಿ ತು" (ಆದರೆ ಅಗ್ನಿಹೋತ್ರವು.....). ಇಲ್ಲಿರುವ ತುಶಬ್ದವು (ಈ) ಆಶಂಕೆಯನ್ನು ನಿರಾಕರಿಸುತ್ತದೆ. ಅಗ್ನಿಹೋತ್ರವೇ ಮುಂತಾದ ವೇದೋಕ್ತವಾದ ನಿತ್ಯಕರ್ಮ ವಿದೆಯಲ್ಲ, ಅದು ಅದರ ಕಾರ್ಯಕ್ಕೇ (ಆಗುತ್ತದೆ) ; ಜ್ಞಾನಕ್ಕೆ ಯಾವದು ಕಾರ್ಯವೋ ಅದೇ ಇದಕ್ಕೂ ಕಾರ್ಯವು ಎಂದರ್ಥ. ಏಕೆ ? ಎಂದರೆ ಆ ಈ (ಪರಮಾತ್ಮನನ್ನು) ವೇದಾನುವಚನದಿಂದಲೂ ಯಜ್ಞದಿಂದಲೂ ದಾನದಿಂದಲೂ ತಿಳಿಯಲಿಚ್ಛಿಸುವರು" (ಬೃ. ೪-೪-೨೨) ಎಂದು ಮುಂತಾಗಿ (ಶ್ರುತಿಯು) ಕಂಡುಬಂದಿರುತ್ತದೆ.

(ಆಕ್ಷೇಪ) :– ಜ್ಞಾನಕರ್ಮಗಳಿಗೆ (ಒಂದಕ್ಕಿಂತ ಒಂದು) ವಿಲಕ್ಷಣವಾಗಿರುವ ಕಾರ್ಯವಿರುವದರಿಂದ (ಅವೆರಡಕ್ಕೂ) ಒಂದೇ ಕಾರ್ಯವು (ಆಗುವದೆಂಬುದು) ಹೊಂದುವದಿಲ್ಲವಲ್ಲ[1] !

(ಪರಿಹಾರ) :– ಇದೇನೂ ದೋಷವಲ್ಲ. **ಜ್ವರ, ಮರಣ– ಎಂಬ ಕಾರ್ಯಗಳನ್ನು(ಂಟುಮಾಡುವ) ಮೊಸರು, ವಿಷ– ಇವುಗಳಿಗೆ ಬೆಲ್ಲ, ಮಂತ್ರ– ಇವುಗಳನ್ನು ಬೆರಸಿದರೆ ತೃಪ್ತಿಪುಷ್ಟಿಗಳೆಂಬ ಕಾರ್ಯವಾಗುವದು ಕಂಡುಬಂದಿದೆ. ಇದರಂತೆ ಕರ್ಮಕ್ಕೂ ಜ್ಞಾನವು ಸೇರಿದರೆ ಮೋಕ್ಷವೆಂಬ ಕಾರ್ಯವಾಗಬಹುದು.**[2]

(ಆಕ್ಷೇಪ) :– ಮೋಕ್ಷವು (ಸಾಧನ)ದಿಂದ (ಹೊಸದಾಗಿ) ಉಂಟಾಗತಕ್ಕದ್ದಲ್ಲವಲ್ಲ ! ಅದು ಕರ್ಮದ ಕಾರ್ಯವೆಂದು ಹೇಗೆ ಹೇಳುತ್ತೀರಿ ?

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಕರ್ಮವು ಪರಂಪರೆಯಿಂದ ಉಪಕಾರಕವಾಗಿರುತ್ತದೆ. **ಜ್ಞಾನವನ್ನೇ ಪಡೆಯಿಸುವದಾಗಿರುವ**

---

1 ವಿರುದ್ಧಫಲವುಳ್ಳ ಕರ್ಮಜ್ಞಾನಗಳು ಸೇರಿ ಒಂದೇ ಫಲವನ್ನು ಕೊಡುವದು ಆಗದ ಮಾತು ಎಂದು ಭಾವ.

2. ಇದು ವೃತ್ತಿಕಾರರ ಮತವು.

ಕರ್ಮವನ್ನು ಪರಂಪರೆಯಿಂದ ಮೋಕ್ಷಕಾರಣವೆಂದು ಉಪಚಾರಕ್ಕಾಗಿ ಕರೆದಿದೆ.[1] ಆದ್ದರಿಂದಲೇ ಒಂದೇ ಕಾರ್ಯವನ್ನುಂಟುಮಾಡುವದೆಂದು ಹೇಳಿರುವದು (ಹಿಂದೆ) ಆಗಿಹೋಗಿರುವ (ಕರ್ಮದ) ವಿಷಯವು (ಎಂದು ತಿಳಿಯಬೇಕು). ಹೇಗೆಂದರೆ ಬ್ರಹ್ಮಜ್ಞಾನಿಗೆ ಮುಂದೆ ಅಗ್ನಿಹೋತ್ರವೇ ಮುಂತಾದವಿರುವದು ಸಂಭವಿಸುವದೇ ಇಲ್ಲ ; ಏಕೆಂದರೆ ಅನಿಯೋಜ್ಯವಾದ ಬ್ರಹ್ಮವೇ ತಾನೆಂದು ತಿಳಿದುಕೊಂಡಿರುವದರಿಂದ (ಅವನು) ಶಾಸ್ತ್ರಕ್ಕೆ ಅವಿಷಯನಾಗಿರುತ್ತಾನೆ.[2] ಸಗುಣವಿದ್ಯೆಗಳಲ್ಲಿ ಕರ್ತೃತ್ವವು ಹೋಗದೆ ಇರುವದರಿಂದ ಮುಂದೆಯೂ ಅಗ್ನಿಹೋತ್ರಾದಿ (ಕರ್ಮವು) ಇರಬಹುದಾಗಿದೆ. ಅದನ್ನೂ ಫಲೇಚ್ಛೆಯಿಲ್ಲದೆ (ಮಾಡಿದರೆ) ಕಾರ್ಯಾಂತರವಿಲ್ಲದ್ದರಿಂದಲೇ ವಿದ್ಯೆಯೊಡನೆ (ಅದು) ಇರಬಹುದಾಗಿದೆ.[3]

**ಅತೋಽನ್ಯಾಪಿ ಹ್ಯೇಕೇಷಾಮುಭಯೋಃ ॥ ೧೭ ॥**

೧೭. ಇದಕ್ಕಿಂತ ಹೇರೆಯಾದ (ಪುಣ್ಯಕರ್ಮವೂ) ಇದೆ. (ಅದನ್ನೇ) ಒಬ್ಬರ ಶಾಖೆಯಲ್ಲಿ (ಹೇಳಿರುವದು : ಇದು) ಇಬ್ಬರಿಗೂ (ಸಮ್ಮತವಾಗಿರುತ್ತದೆ).

## ಕಾಮ್ಯಕರ್ಮವು ಮಾತ್ರ ಜ್ಞಾನಿಗೆ ಸಂಬಂಧಿಸದು

(ಭಾಷ್ಯ)

೫೩೪. ಕಿಂವಿಷಯಂ ಪುನರಿದಮಶ್ಲೇಷವಿನಾಶವಚನಮ್ । ಕಿಂವಿಷಯಂ ವಾ ಅದೋ ವಿನಿಯೋಗವಚನಮೇಕೇಷಾಂ "ತಸ್ಯ ಪುತ್ರಾ ದಾಯಮುಪಯನ್ತಿ ಸುಹೃದಃ ಸಾಧುಕೃತ್ಯಾಂ ದ್ವಿಷನ್ತಃ ಪಾಪಕೃತ್ಯಾಮ್" (?)[4] ಇತಿ । ಅತ ಉತ್ತರಂ ಪಠತಿ– (ಅತೋಽನ್ಯಾಪಿ ಹ್ಯೇಕೇಷಾಮುಭಯೋಃ) । ಅತಃ ಅಗ್ನಿಹೋತ್ರಾದೇರ್ನಿತ್ಯಾತ್ ಕರ್ಮಣಃ ಅನ್ಯಾಪಿ ಹ್ಯಸ್ತಿ

1. ಇದೇ ಪರಮಸಿದ್ಧಾಂತವು.

2. ಅನಿಯೋಜ್ಯನಾದವನನ್ನು ಯಾವ ಶಾಸ್ತ್ರವೂ ಕಟ್ಟುಮಾಡಲಾರದು ಎಂದರ್ಥ. ಕರ್ಮದಲ್ಲಿ ಅಕರ್ಮದರ್ಶನದಿಂದ ಜ್ಞಾನಿಯು ಅಗ್ನಿಹೋತ್ರಾದಿಗಳನ್ನು ಮಾಡಬಹುದೆಂದು ಗೀ. ಭಾ. ೪–೧೮ ಮುಂತಾದವುಗಳಲ್ಲಿರುವದಕ್ಕೆ ಇದು ವಿರುದ್ಧವಲ್ಲ ; ಏಕೆಂದರೆ ಅಲ್ಲಿ ಹೇಳಿರುವದು ಕರ್ಮಾಭಾಸವು, ಅಹಂಕಾರಫಲಾಭಿಸಂಧಿಗಳಿಂದ ಮಾಡುವ ಕರ್ಮವಲ್ಲ.

3. ಉಪಾಸಕನು ಸಾಕ್ಷಾತ್ಕಾರವಾದ ಬಳಿಕ ಮಾಡುವ ಅಗ್ನಿಹೋತ್ರಾದಿಗಳಿಗೆ ಮೋಕ್ಷವಲ್ಲದೆ ಮತ್ತೊಂದು ಫಲವಿಲ್ಲ.

4. ಈ ಶ್ರುತಿಯಾವದೋ ತಿಳಿಯಲಿಲ್ಲ ಭಾ. ಭಾ. ೩–೩–೨೬ ಭಾ. ಭಾ. ೩೬೮ ರಲ್ಲಿಯೂ ಉದಾಹೃತವಾಗಿದೆ.

ಸಾಧುಕೃತ್ಯಾ ಯಾ ಫಲಮಭಿಸಂಧಾಯ ಕ್ರಿಯತೇ । ತಸ್ಯಾ ಏಷ ವಿನಿಯೋಗ ಉಕ್ತ ಏಕೇಷಾಂ ಶಾಖಿನಾಮ್ "ಸುಹೃದಃ ಸಾಧುಕೃತ್ಯಾಮುಪಯನ್ತಿ" ಇತಿ । ತಸ್ಯಾ ಏವ ಚೇದಮುಕ್ತವತ್ ಅಶ್ಲೇಷವಿನಾಶನಿರೂಪಣಮ್ "ಇತರಸ್ಯಾಪ್ಯೇವಮಶ್ಲೇಷಃ" (೪-೧-೧೪) ಇತಿ । ತಥಾಜಾತೀಯಕಸ್ಯ ಕಾಮ್ಯಸ್ಯ ಕರ್ಮಣಃ ವಿದ್ಯಾಂ ಪ್ರತ್ಯನುಪಕಾರಕತ್ವೇ ಸಂಪ್ರತಿಪತ್ತಿರುಭಯೋರಪಿ ಜೈಮಿನಿಬಾದರಾಯಣಯೋರಾಚಾರ್ಯಯೋಃ ॥

(ಭಾಷ್ಯಾರ್ಥ)

(ಪ್ರಶ್ನೆ) :- ಹಾಗಾದರೆ ಈ ಅಶ್ಲೇಷವಿನಾಶಗಳನ್ನು ಹೇಳಿರುವದು ಯಾವ (ಕರ್ಮದ) ವಿಷಯ? "ಅವನ ಮಕ್ಕಳು ಆಸ್ತಿಯನ್ನು ಪಡೆದುಕೊಳ್ಳುತ್ತಾರೆ; ಸ್ನೇಹಿತರು ಪುಣ್ಯಕರ್ಮವನ್ನೂ ಶತ್ರುಗಳು ಪಾಪಕರ್ಮವನ್ನೂ (ಪಡೆದುಕೊಳ್ಳುತ್ತಾರೆ)" (?) ಎಂಬ ಒಂದಾನೊಂದು ಶಾಖೆಯಲ್ಲಿ ಹೇಳಿರುವ ಆ ವಿನಿಯೋಗವಚನವು ಯಾವ (ಕರ್ಮದ) ವಿಷಯ ?

(ಉತ್ತರ) :- ಇದಕ್ಕೆ ಉತ್ತರವನ್ನು (ಸೂತ್ರಕಾರರು) ಹೇಳುತ್ತಾರೆ. ('ಅತೋಽನ್ಯಾಪಿ ಹ್ಯೇಕೇಷಾಮುಭಯೋಃ') ಈ ಅಗ್ನಿಹೋತ್ರವೇ ಮುಂತಾದ ನಿತ್ಯಕರ್ಮಕ್ಕಿಂತಲೂ ಬೇರೆಯಾದ ಪುಣ್ಯಕರ್ಮವೂ ಇದೆ; ಅದನ್ನು ಫಲಾಭಿಸಂಧಿಯೊಡನೆ ಮಾಡುತ್ತಾರೆ. ಅದಕ್ಕೆ ಒಂದಾನೊಂದು ಶಾಖೆಯಲ್ಲಿ "ಸ್ನೇಹಿತರು ಪುಣ್ಯಕರ್ಮವನ್ನು ಪಡೆದುಕೊಳ್ಳುತ್ತಾರೆ" ಎಂಬೀ ವಿನಿಯೋಗವನ್ನು ಹೇಳಲಾಗಿದೆ. "ಇನ್ನೊಂದೂ ಹೀಗೆಯೇ ಅಂಟದೆ ಇರುತ್ತದೆ" (೪-೧-೧೪) ಎಂದು ಪಾಪದಂತೆ ಅಶ್ಲೇಷವಿನಾಶಗಳನ್ನು ಹೇಳಿರುವದೂ ಅದಕ್ಕೇ. ಆ ಜಾತಿಯ ಕಾಮ್ಯಕರ್ಮವು ವಿದ್ಯೆಗೆ ಉಪಕಾರಕವಲ್ಲವೆಂಬುದಕ್ಕೆ ಜೈಮಿನಿ, ಬಾದರಾಯಣ- ಈ ಇಬ್ಬರು ಆಚಾರ್ಯರಿಗೂ ಸಮ್ಮತಿ(ಯಿದೆ).

## ೧೩. ವಿದ್ಯಾಜ್ಞಾನಸಾಧನಾಧಿಕರಣ

(ಬರಿಯ ಕರ್ಮವೂ ಬ್ರಹ್ಮಜ್ಞಾನಕ್ಕೆ ಕಾರಣ)

**ಯದೇವ ವಿದ್ಯಯೇತಿ ಹಿ ॥ ೧೮ ॥**

೧೮. ಯಾವದನ್ನು ವಿದ್ಯೆಯೊಡನೆ ಮಾಡುತ್ತಾರೋ ಎಂದಲ್ಲವೆ, (ಶ್ರುತಿ) ?

## ವಿಷಯವೂ ಸಂಶಯವೂ

(ಭಾಷ್ಯ)

೫೩೫. ಸಮಧಿಗತಮೇತದನನ್ತರಾಧಿಕರಣೇ ನಿತ್ಯಮ್ ಅಗ್ನಿಹೋತ್ರಾದಿಕಂ ಕರ್ಮ ಮುಮುಕ್ಷುಣಾ ಮೋಕ್ಷಪ್ರಯೋಜನೋದ್ದೇಶೇನ ಕೃತಮ್

ಉಪಾತ್ತದುರಿತಕ್ಷಯಹೇತುತ್ವದ್ವಾರೇಣ ಸತ್ತ್ವಶುದ್ಧಿಕಾರಣತಾಂ ಪ್ರತಿಪದ್ಯಮಾನಂ ಮೋಕ್ಷಪ್ರಯೋಜನಬ್ರಹ್ಮಾಧಿಗಮನಿಮಿತ್ತತ್ವೇನ ಬ್ರಹ್ಮವಿದ್ಯಯಾ ಸಹೈಕಕಾರ್ಯಂ ಭವತೀತಿ । ತತ್ರಾಗ್ನಿಹೋತ್ರಾದಿ ಕರ್ಮಾಙ್ಗವ್ಯಪಾಶ್ರಯವಿದ್ಯಾಸಂಯುಕ್ತಂ ಕೇವಲಂ ಚಾಸ್ತಿ । "ಯ ಏವಂ ವಿದ್ವಾನ್ ಯಜತಿ" (?) "ಯ ಏವಂ ವಿದ್ವಾಞ್ಜುಹೋತಿ" (?), "ಯ ಏವಂ ವಿದ್ವಾಞ್ಛಂಸತಿ" (?), "ಯ ಏವಂ ವಿದ್ವಾನ್ ಗಾಯತಿ" (ಛಾಂ. ೧-೭-೯.....) "ತಸ್ಮಾದೇವಂವಿದಮೇವ ಬ್ರಹ್ಮಾಣಂ ಕುರ್ವೀತ ನಾನೇವಂ ವಿದಮ್" (ಛಾಂ. ೪-೧೭-೧೦), "ತೇನೋಭೌ ಕುರುತೋ ಯಶ್ಚೈತದೇವಂ ವೇದ ಯಶ್ಚ ನ ವೇದ" (ಛಾಂ. ೧-೧-೧೦) ಇತ್ಯಾದಿವಚನೇಭ್ಯೋ ವಿದ್ಯಾಸಂಯುಕ್ತಮಸ್ತಿ, ಕೇವಲಮಪ್ಯಸ್ತಿ। ತತ್ರೇದಂ ವಿಚಾರ್ಯತೇ- ಕಿಂ ವಿದ್ಯಾಸಂಯುಕ್ತಮೇವಾಗ್ನಿಹೋತ್ರಾದಿಕಂ ಕರ್ಮ ಮುಮುಕ್ಷೋರ್ವಿದ್ಯಾಹೇತುತ್ವೇನ ತಯಾ ಸಹೈಕಕಾರ್ಯತ್ವಂ ಪ್ರತಿಪದ್ಯತೇ ನ ಕೇವಲಮ್, ಉತ ವಿದ್ಯಾಸಂಯುಕ್ತಂ ಕೇವಲಂ ಚಾವಿಶೇಷೇಣ ಇತಿ? ಕುತಃ ಸಂಶಯಃ? "ತಮೇತಮಾತ್ಮಾನಂ ಯಜ್ಞೇನ ವಿವಿದಿಷನ್ತಿ" (ಬೃ. ೪-೪-೨೨) ಇತಿ ಯಜ್ಞಾದೀನಾಮವಿಶೇಷೇಣ ಆತ್ಮವೇದನಾಙ್ಗತ್ವೇನ ಶ್ರವಣಾತ್ । ವಿದ್ಯಾಸಂಯುಕ್ತಸ್ಯ ಚ ಅಗ್ನಿಹೋತ್ರಾದೇರ್ವಿಶಿಷ್ಟತ್ವಾವಗಮಾತ್ ॥

(ಭಾಷ್ಯಾರ್ಥ)

ಹಿಂದಿನ ಅಧಿಕರಣದಲ್ಲಿ ಅಗ್ನಿಹೋತ್ರವೇ ಮುಂತಾದ ನಿತ್ಯಕರ್ಮವನ್ನು ಮುಮುಕ್ಷುವು ಮೋಕ್ಷಪ್ರಯೋಜನದ ಉದ್ದೇಶದಿಂದ ಮಾಡಿದರೆ (ಹಿಂದೆ) ಸಂಪಾದಿಸಿರುವ ದುರಿತದ ಕ್ಷಯಕ್ಕೆ ಕಾರಣವಾಗುವ ದ್ವಾರದಿಂದ ಸತ್ತ್ವಶುದ್ಧಿಯ ಕಾರಣತ್ವವನ್ನು ಪಡೆದುಕೊಂಡು ಮೋಕ್ಷವೆಂಬ ಪ್ರಯೋಜನವುಳ್ಳ ಬ್ರಹ್ಮಜ್ಞಾನಕ್ಕೆ ನಿಮಿತ್ತವಾಗಿ ಬ್ರಹ್ಮವಿದ್ಯೆಯೊಡನೆ ಒಂದೇ ಕಾರ್ಯವನ್ನುಂಟುಮಾಡುವದಾಗುತ್ತದೆ ಎಂದು ಗೊತ್ತಾಗಿರುತ್ತದೆ. ಇಲ್ಲಿ ಅಗ್ನಿಹೋತ್ರವೇ ಮುಂತಾದದ್ದು ಕರ್ಮಾಂಗವನ್ನು ಆಶ್ರಯಿಸಿರುವ ವಿದ್ಯೆಯೊಡನೆ ಕೂಡಿದ್ದೂ (ಇದೆ), ಬರಿಯ (ಕರ್ಮವೂ) ಇದೆ. "ಯಾವನು ಹೀಗೆಂದು ಅರಿತುಕೊಂಡು ಯಾಗಮಾಡುತ್ತಾನೋ" (?), "ಯಾವನು ಹೀಗೆಂದು ಅರಿತುಕೊಂಡು ಹೋಮಮಾಡುತ್ತಾನೋ", "ಯಾವನು ಹೀಗೆಂದು ಅರಿತುಕೊಂಡು ಶಂಸನಮಾಡುತ್ತಾನೋ" (?), "ಯಾವನು ಹೀಗೆಂದು ಅರಿತುಕೊಂಡು ಹಾಡುತ್ತಾನೋ" (ಛಾಂ. ೧-೭-೯..... ) "ಆದ್ದರಿಂದ ಹೀಗೆಂದು ಅರಿತುಕೊಂಡಿರುವವನನ್ನೇ ಬ್ರಹ್ಮನನ್ನಾಗಿ ಮಾಡಿಕೊಳ್ಳಬೇಕು, ಹೀಗೆಂದು ಅರಿತುಕೊಳ್ಳದಿರುವವನನ್ನು (ಮಾಡಿಕೊಳ್ಳ)ಬಾರದು" (ಛಾಂ. ೪-೧೭-೧೦), "ಆ (ಕರ್ಮವನ್ನು)

ಯಾವನು ಇದನ್ನು ಹೀಗೆಂದು ಅರಿತುಕೊಂಡಿರುವನೋ, ಯಾವನು ಅರಿತು ಕೊಂಡಿಲ್ಲವೋ ಇಬ್ಬರೂ ಮಾಡುತ್ತಾರೆ" (ಛಾಂ. ೧-೧-೧೦) ಮುಂತಾದ ವಚನಗಳ (ಪ್ರಾಮಾಣ್ಯ)ದಿಂದ ವಿದ್ಯಾಸಂಯುಕ್ತ(ಕರ್ಮ)ವೂ ಇದೆ, ಬರಿಯದೂ ಇದೆ (ಎಂದಾಗುತ್ತದೆ).

ಇಲ್ಲಿ ಇದನ್ನು ವಿಚಾರಿಸಬೇಕು. ವಿದ್ಯಾಸಂಯುಕ್ತವಾದ ಅಗ್ನಿಹೋತ್ರವೇ ಮುಂತಾದ ಕರ್ಮವೇ ಮುಮುಕ್ಷುವಿಗೆ ಜ್ಞಾನಸಹೇತುವಾಗಿ ಅದರೊಡನೆ ಏಕಕಾರ್ಯತ್ವವನ್ನು ಹೊಂದುತ್ತದೆಯೇ ಹೊರತು ಬರಿಯ (ಕರ್ಮವು) ಹಾಗಲ್ಲ ಎನ್ನಬೇಕೊ, ಅಥವಾ ವಿದ್ಯಾಸಂಯುಕ್ತವಾದ (ಕರ್ಮವೂ) ಬರಿಯ (ಕರ್ಮವೂ) ಸಮಾನವಾಗಿಯೇ (ಏಕಕಾರ್ಯತ್ವವನ್ನು ಹೊಂದುತ್ತದೆಯೊ) ? (ಇಲ್ಲಿ) ಸಂಶಯವೇಕೆ ? ಎಂದರೆ "ಆ ಈ ಆತ್ಮನನ್ನು ಯಜ್ಞದಿಂದ ತಿಳಿಯ ಲಿಚ್ಛಿಸುತ್ತಾರೆ" (ಬೃ. ೪-೪-೨೨) ಎಂದು ಯಜ್ಞಾದಿಗಳನ್ನು (ಯಾವ) ವಿಶೇಷವೂ ಇಲ್ಲದೆಯೇ ಆತ್ಮಜ್ಞಾನಕ್ಕೆ ಅಂಗವೆಂದು ಶ್ರುತಿಯಲ್ಲಿ ಹೇಳಿದೆ ; ವಿದ್ಯಾಸಂಯುಕ್ತವಾದ ಅಗ್ನಿಹೋತ್ರಾದಿಗಳು ಹೆಚ್ಚಿನವೆಂದೂ (ಶ್ರುತಿಯಿಂದ) ಗೊತ್ತಾಗಿರುತ್ತದೆ. ಆದ್ದರಿಂದ (ಸಂಶಯವು).

## ಪೂರ್ವಪಕ್ಷ: ವಿದ್ಯಾಹೀನವಾದ ಕರ್ಮವು ಜ್ಞಾನಾಂಗವಲ್ಲ

( ಭಾಷ್ಯ )

೫೩೬. ಕಿಂ ತಾವತ್ ಪ್ರಾಪ್ತಮ್ ? ವಿದ್ಯಾಸಂಯುಕ್ತಮೇವ ಕರ್ಮ ಅಗಿಹೋತ್ರಾದಿ ಆತ್ಮವಿದ್ಯಾಶೇಷತ್ವಂ ಪ್ರತಿಪದ್ಯತೇ ನ ವಿದ್ಯಾಹೀನಮ್ । ವಿದ್ಯೋಪೇತಸ್ಯ ವಿಶಿಷ್ಟತ್ವಾವಗಮಾದ್ವಿದ್ಯಾವಿಹೀನಾತ್ । "ಯದಹರೇವ ಜುಹೋತಿ ತದಹಃ ಪುನರ್ಮೃತ್ಯುಮಪಜಯತ್ಯೇವಂವಿದ್ವಾನ್" (ಬೃ ೧-೫-೨) ಇತ್ಯಾದಿಶ್ರುತಿಭ್ಯಃ "ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬನ್ಧಂ ಪ್ರಹಾಸ್ಯಸಿ" (ಗೀ.೨-೩-೯), "ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ" (ಗೀ. ೨-೪೯) ಇತ್ಯಾದಿಸ್ಮೃತಿಭ್ಯಶ್ಚ ಇತಿ ॥

(ಭಾಷ್ಯಾರ್ಥ)

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಎಂದರೆ ವಿದ್ಯೆ ಯಿಂದೊಡಗೂಡಿದ ಅಗ್ನಿಹೋತ್ರಾದಿಕರ್ಮವೇ ಆತ್ಮಜ್ಞಾನಕ್ಕೆ ಶೇಷತ್ವವನ್ನು ಹೊಂದುತ್ತದೆಯೇ ಹೊರತು ವಿದ್ಯಾರಹಿತವಾದ (ಕರ್ಮ)ವಲ್ಲ. ಏಕೆಂದರೆ ವಿದ್ಯೆಯಿಂದೊಡಗೂಡಿದ ಕರ್ಮವು ವಿದ್ಯಾರಹಿತವಾದ (ಕರ್ಮ)ಕ್ಕಿಂತ ಹೆಚ್ಚಿನ ದೆಂದು (ಶ್ರುತಿಯಿಂದ) ತಿಳಿದುಬರುತ್ತದೆ. "ಹೀಗೆಂದು ಅರಿತುಕೊಂಡಿರುವಾತನು ಯಾವ ದಿನ ಹೋಮಮಾಡುತ್ತಾನೋ ಅದೇ ದಿನವೇ ಪುನರ್ಮೃತ್ಯುವನ್ನು ಜಯಿಸುತ್ತಾನೆ" (ಬೃ. ೧-೫-೨) ಮುಂತಾದ ಶ್ರುತಿಗಳಿಂದಲೂ "ಪಾರ್ಥನೆ,

ಆ ಬುದ್ಧಿಯಿಂದ ಕೂಡಿದರೆ ಕರ್ಮಬಂಧವನ್ನು ನಾಶಗೊಳಿಸಿಕೊಳ್ಳುವೆ" (ಗೀ. ೨-೩೯), "ಧನಂಜಯನೆ, ಬುದ್ಧಿಯಿಂದ ಕೂಡಿದ (ಕರ್ಮಕ್ಕಿಂತ), ಕೀಳುಕರ್ಮವು ದೂರವಾಗಿರುತ್ತದೆ" (ಗೀ. ೨-೪೯) ಮುಂತಾದ ಸ್ಮೃತಿಗಳಿಂದಲೂ (ಹೀಗೆಂದು ಗೊತ್ತಾಗುತ್ತದೆ).

## ಸಿದ್ಧಾಂತ:

## ವಿದ್ಯಾಹೀನವಾದ ಕರ್ಮವೂ ಜ್ಞಾನಾಂಗವಾಗುತ್ತದೆ

(ಭಾಷ್ಯ)

೫೫೭. ಏವಂ ಪ್ರಾಪ್ತೇ ಪ್ರತಿಪದ್ಯತೇ "ಯದೇವ ವಿದ್ಯಯೇತಿ ಹಿ"। ಸತ್ಯಮೇತತ್ ವಿದ್ಯಾಸಂಯುಕ್ತಂ ಕರ್ಮಾಗ್ನಿಹೋತ್ರಾದಿಕಂ ವಿದ್ಯಾವಿಹೀನಾತ್ ಕರ್ಮಣೋಽಗ್ನಿಹೋತ್ರಾತ್[1] ವಿಶಿಷ್ಟಂ ವಿದ್ವಾನಿವ ಬ್ರಾಹ್ಮಣೋ ವಿದ್ಯಾವಿಹೀನಾದ್ ಬ್ರಾಹ್ಮಣಾತ್। ತಥಾಪಿ ನಾತ್ಯನ್ತಮನಪೇಕ್ಷ್ಯಂ[2] ವಿದ್ಯಾವಿಹೀನಂ ಕರ್ಮಾಗ್ನಿಹೋತ್ರಾದಿಕಮ್। ಕಸ್ಮಾತ್ ? "ತಮೇತಮಾತ್ಮಾನಂ ಯಜ್ಞೇನ ವಿವಿದಿಷನ್ತಿ" (ಬೃ. ೪-೪-೨೨) ಇತ್ಯವಿಶೇಷೇಣ ಅಗ್ನಿಹೋತ್ರಾದೇರ್ವಿದ್ಯಾಹೇತುತ್ವೇನ ಶ್ರುತತ್ವಾತ್। ನನು ವಿದ್ಯಾಸಂಯುಕ್ತಸ್ಯ ಅಗ್ನಿಹೋತ್ರಾದೇರ್ವಿದ್ಯಾವಿಹೀನಾತ್ ವಿಶಿಷ್ಟತ್ವಾವಗಮಾದ್ ವಿದ್ಯಾವಿಹೀನಮ್ ಅಗ್ನಿಹೋತ್ರಾದಿ ಆತ್ಮವಿದ್ಯಾಹೇತುತ್ವೇನ ಅನಪೇಕ್ಷ್ಯಮೇವೇತಿ[3] ಯುಕ್ತಮ್। ನೈತದೇವಮ್। ವಿದ್ಯಾಸಹಾಯಸ್ಯಾಗ್ನಿಹೋತ್ರಾದೇರ್ವಿದ್ಯಾನಿಮಿತ್ತೇನ ಸಾಮರ್ಥ್ಯಾತಿಶಯೇನ ಯೋಗಾತ್ ಆತ್ಮಜ್ಞಾನಂ ಪ್ರತಿ ಕಶ್ಚಿತ್ ಕಾರಣತ್ವಾತಿಶಯೋ ಭವಿಷ್ಯತಿ ನ ತಥಾ ವಿದ್ಯಾವಿಹೀನಸ್ಯ ಇತಿ ಯುಕ್ತಂ ಕಲ್ಪಯಿತುಮ್। ನ ತು 'ಯಜ್ಞೇನ ವಿವಿದಿಷನ್ತಿ' (ಬೃ. ೪-೪-೨೨) ಇತ್ಯತ್ರ ಅವಿಶೇಷೇಣಾತ್ಮಜ್ಞಾನಾಙ್ಗತ್ವೇನ ಶ್ರುತಸ್ಯ ಅಗ್ನಿಹೋತ್ರಾದೇರನಙ್ಗತ್ವಂ ಶಕ್ಯಮ್ ಅಭ್ಯುಪಗನ್ತುಮ್। ತಥಾ ಹಿ ಶ್ರುತಿಃ "ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ" (ಛಾಂ.೧-೧-೧೦) ಇತಿ ವಿದ್ಯಾಸಂಯುಕ್ತಸ್ಯ ಕರ್ಮಣೋಽಗ್ನಿಹೋತ್ರಾದೇರ್ವೀರ್ಯವತ್ತರತ್ವಾಭಿಧಾನೇನ ಸ್ವಕಾರ್ಯಂ ಪ್ರತಿ ಕಂಚಿದತಿಶಯಂ ಬ್ರುವಾಣಾ ವಿದ್ಯಾವಿಹೀನಸ್ಯ ತಸ್ಯೈವ ತತ್ಪ್ರಯೋಜನಂ ಪ್ರತಿ ವೀರ್ಯವತ್ತ್ವಂ ದರ್ಶಯತಿ। ಕರ್ಮಣಶ್ಚ ವೀರ್ಯವತ್ತ್ವಂ ತದ್ ಯತ್ಸ್ವಪ್ರಯೋಜನಸಾಧನಪ್ರಸಹತ್ವಮ್। ತಸ್ಮಾತ್ ವಿದ್ಯಾಸಂಯುಕ್ತಂ ನಿತ್ಯಮಗ್ನಿಹೋತ್ರಾದಿ

---

1. 'ಅಗ್ನಿಹೋತ್ರಾದಿಕಾತ್' ಎಂದಿದ್ದರೆ ಚೆನ್ನಾಗಿತ್ತು.
2. 'ಅನಪೇಕ್ಷಮ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.
3. 'ಅನಪೇಕ್ಷಮೇವ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿದೆ.

ವಿದ್ಯಾವಿಹೀನಂ ಚೋಭಯಮಪಿ ಮುಮುಕ್ಷುಣಾ ಮೋಕ್ಷಪ್ರಯೋಜನೋದ್ದೇಶೇನ ಇಹಜನ್ಮನಿ ಜನ್ಮಾನ್ತರೇ ಚ ಪ್ರಾಗ್ಜ್ಞಾನೋತ್ಪತ್ತೇಃ ಕೃತಂ ಯತ್ ತದ್ಯಥಾಸಾಮರ್ಥ್ಯಂ ಬ್ರಹ್ಮಾಧಿಗಮಪ್ರತಿಬನ್ಧಕಾರಣೋಪಾತ್ತದುರಿತಕ್ಷಯಹೇತುತ್ವದ್ವಾರೇಣ ಬ್ರಹ್ಮಾಧಿಗಮಕಾರಣತ್ವಂ ಪ್ರತಿಪದ್ಯಮಾನಂ ಶ್ರವಣಮನನಶ್ರದ್ಧಾತಾತ್ಪರ್ಯಾದ್ಯನ್ತರಙ್ಗಕಾರಣಾಪೇಕ್ಷಂ ಬ್ರಹ್ಮವಿದ್ಯಯಾ ಸಹೈಕಕಾರ್ಯಂ ಭವತಿ ಇತಿ ಸ್ಥಿತಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು) ಅಭಿಪ್ರಾಯಪಡುತ್ತಾರೇನೆಂದರೆ[1], "ಯದೇವ ವಿದ್ಯಯೇತಿ ಹಿ" (ವಿದ್ಯೆಯಿಂದ ಯಾವದನ್ನು ಮಾಡುತ್ತಾರೋ ಅದೇ ವೀರ್ಯವತ್ತರವೆಂದಲ್ಲವೆ, ಶ್ರುತಿ ?) ವಿದ್ಯಾಸಂಯುಕ್ತವಾಗಿರುವ ಅಗ್ನಿಹೋತ್ರಾದಿಕರ್ಮವು ವಿದ್ಯಾವಿಹೀನವಾಗಿರುವ ಅಗ್ನಿಹೋತ್ರಕ್ಕಿಂತ,[2] ವಿದ್ಯಾವಿಹೀನನಾದ ಬ್ರಾಹ್ಮಣನಿಗಿಂತ ವಿದ್ಯಾವಂತನಾದ ಬ್ರಾಹ್ಮಣನು (ಹೆಚ್ಚಾಗಿರುವಂತೆ), ವಿಶಿಷ್ಟವಾಗಿರುತ್ತದೆ ಎಂಬುದು ಸತ್ಯವೇ. ಆದರೂ ವಿದ್ಯಾಹೀನವಾದ ಅಗ್ನಿಹೋತ್ರಾದಿಕರ್ಮವು ಅತ್ಯಂತವಾಗಿ ಅನಪೇಕ್ಷ್ಯವಲ್ಲ. ಏಕೆ ? ಎಂದರೆ "ಆ ಈ ಆತ್ಮನನ್ನು ಯಜ್ಞದಿಂದ ತಿಳಿಯಲಿಚ್ಛಿಸುತ್ತಾರೆ" (ಬೃ. ೪-೪-೨೨) ಎಂದು ಅವಿಶೇಷವಾಗಿ (ಎಲ್ಲಾ) ಅಗ್ನಿಹೋತ್ರಾದಿ (ಕರ್ಮ)ವೂ ವಿದ್ಯಾಹೇತುವೆಂದು ಶ್ರುತಿಯಲ್ಲಿರುವದರಿಂದ.

(ಆಕ್ಷೇಪ) :– ವಿದ್ಯಾಸಂಯುಕ್ತವಾದ ಅಗ್ನಿಹೋತ್ರಾದಿ (ಕರ್ಮ)ವು ವಿದ್ಯಾವಿಹೀನವಾಗಿರುವ (ಕರ್ಮ)ಕ್ಕಿಂತ ಹೆಚ್ಚಿನದೆಂದು ಗೊತ್ತಾಗಿರುವದರಿಂದ ವಿದ್ಯಾವಿಹೀನವಾದ ಅಗ್ನಿಹೋತ್ರಾದಿ(ಕರ್ಮವು) ವಿದ್ಯಾಹೇತುವೆಂದು ಅಪೇಕ್ಷಿಸತಕ್ಕದ್ದೇ ಅಲ್ಲ ಎಂಬುದೇ ಯುಕ್ತವಲ್ಲವೆ ?

(ಪರಿಹಾರ) :– ಇದು ಹಾಗಲ್ಲ. ವಿದ್ಯೆಗೆ ಸಹಾಯವಾಗಿರುವ ಅಗ್ನಿಹೋತ್ರಾದಿ(ಕರ್ಮ)ಕ್ಕೆ ವಿದ್ಯಾನಿಮಿತ್ತದಿಂದ ಹೆಚ್ಚಿನ ಸಾಮರ್ಥ್ಯದ ಸಂಬಂಧವಿರುವದರಿಂದ ಆತ್ಮಜ್ಞಾನಕ್ಕೆ ಕಾರಣವಾಗಿರುವದರಲ್ಲಿ ಯಾವದೋ ಒಂದು ಅತಿಶಯವು ಇರುವದು, ಹಾಗೆ ವಿದ್ಯಾವಿಹೀನ(ಕರ್ಮಕ್ಕೆ) ಇರಲಾರದು ಎಂದು ಕಲ್ಪಿಸುವದೇ ಯುಕ್ತವು. (ಇಷ್ಟೇ ಹೊರತು) "ಯಜ್ಞದಿಂದ ತಿಳಿಯಲಿಚ್ಛಿಸು

1. ಈ ಸಿದ್ಧಾಂತದಲ್ಲಿ ಕೇವಲಕರ್ಮವೂ ಆತ್ಮಜ್ಞಾನಕ್ಕೆ ಕಾರಣವಾಗಬಹುದೆಂಬ ಫಲವಿದೆ.

2. ಕರ್ಮಾಂಗೋಪಾಸನೆಯಿಲ್ಲದ ಕರ್ಮಕ್ಕಿಂತ ಎಂದರ್ಥ ; ಕರ್ಮಜ್ಞಾನವಿಲ್ಲದ ಕರ್ಮಕ್ಕಿಂತ ಎಂದೇನೂ ಅರ್ಥವಲ್ಲ. ಏಕೆಂದರೆ ಕರ್ಮದ ಸ್ವರೂಪವನ್ನು ತಿಳಿದವನೇ ಕರ್ಮವನ್ನು ಮಾಡಬೇಕು.

ತ್ತಾರೆ" ಎಂಬಲ್ಲಿ (ಯಾವ) ವಿಶೇಷವೂ ಇಲ್ಲದೆ ಆತ್ಮಜ್ಞಾನಕ್ಕೆ ಅಂಗವಾಗಿ ಶ್ರುತವಾಗಿರುವ ಅಗ್ನಿಹೋತ್ರಾದಿ(ಕರ್ಮ)ವು (ಅವಕ್ಕೆ) ಅಂಗವಲ್ಲವೆಂದು ಇಟ್ಟುಕೊಳ್ಳುವದಕ್ಕೆ ಆಗಲಾರದು. ಆದ್ದರಿಂದಲೇ ಅಲ್ಲವೆ, ಶ್ರುತಿಯು "ಯಾವದನ್ನು ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಉಪನಿಷತ್ತಿನಿಂದಲೂ ಕೂಡಿ ಮಾಡುತ್ತಾನೋ ಅದೇ ವೀರ್ಯವತ್ತರವಾಗುತ್ತದೆ" (ಛಾಂ. ೧-೧-೧೦) ಎಂದು ವಿದ್ಯಾಸಂಯುಕ್ತವಾದ ಅಗ್ನಿಹೋತ್ರಾದಿಕರ್ಮವು ವೀರ್ಯವತ್ತರವಾಗುವದೆಂದು ಹೇಳಿ ತನ್ನ ಕಾರ್ಯದ ವಿಷಯದಲ್ಲಿ ಒಂದಾನೊಂದು ಅತಿಶಯವನ್ನು ಹೇಳಿರುವದರಿಂದ ವಿದ್ಯಾವಿಹೀನವಾದ ಅದೇ (ಕರ್ಮವು) ಆ ಪ್ರಯೋಜನದ (ವಿಷಯದಲ್ಲಿ) ವೀರ್ಯವುಳ್ಳದ್ದೆಂದು ತಿಳಿಸಿದಂತಾಗಿರುತ್ತದೆ. ಕರ್ಮವು ವೀರ್ಯವತ್ತಾಗಿರುವದೆಂದರೆ ತನ್ನ ಪ್ರಯೋಜನವನ್ನು ಸಾಧಿಸುವ ಶಕ್ತಿಯುಳ್ಳದ್ದಾಗಿರುವದೇ (ಆಗಿದೆ).

**ಆದ್ದರಿಂದ ಮುಮುಕ್ಷುವಾದವನು ಮೋಕ್ಷವೆಂಬ ಪ್ರಯೋಜನದ ಉದ್ದೇಶದಿಂದ ಈ ಜನ್ಮದಲ್ಲಿಯೂ ಜನ್ಮಾಂತರದಲ್ಲಿಯೂ ಜ್ಞಾನೋತ್ಪತ್ತಿಗೆ ಪೂರ್ವದಲ್ಲಿ ಮಾಡಿದ್ದನಲ್ಲ[1] (ಅ) ವಿದ್ಯಾಸಂಯುಕ್ತವಾದ ಅಗ್ನಿಹೋತ್ರವೇ ಮುಂತಾದ ನಿತ್ಯಕರ್ಮವೂ ವಿದ್ಯಾವಿಹೀನವಾದ (ಆ ಕರ್ಮವೂ) ಎರಡೂ ತನ್ನ ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಬ್ರಹ್ಮಜ್ಞಾನಕ್ಕೆ ಪ್ರತಿಬಂಧಕಾರಣವಾದ (ಹಿಂದೆ) ಸಂಪಾದಿಸಿದ್ದ ದುರಿತದ ಕ್ಷಯಕ್ಕೆ ಹೇತುವಾಗುವ ದ್ವಾರದಿಂದ ಬ್ರಹ್ಮಜ್ಞಾನಕ್ಕೆ ಕಾರಣತ್ವವನ್ನು ಹೊಂದಿ ಶ್ರವಣಮನನಶ್ರದ್ಧಾತಾತ್ಪರ್ಯಗಳೇ ಮುಂತಾದ ಅಂತರಂಗ ಕಾರಣಗಳನ್ನು ಅಪೇಕ್ಷಿಸಿಕೊಂಡು ಆ ಮೂಲಕ ಬ್ರಹ್ಮವಿದ್ಯೆಯೊಡನೆ ಏಕಕಾರ್ಯವನ್ನುಂಟುಮಾಡುವದಾಗುತ್ತದೆ ಎಂದೇ ನಿಂತಿತು.**

## ೧೪. ಇತರಕ್ಷಪಣಾಧಿಕರಣ

(ಆರಬ್ಧಫಲಕರ್ಮವು ನಾಶವಾದಬಳಿಕ ಕೈವಲ್ಯವೇ)

**ಭೋಗೇನ ತ್ವಿತರೇ ಕ್ಷಪಯಿತ್ವಾ ಸಂಪದ್ಯತೇ ॥ ೧೯ ॥**

೧೯. ಆದರೆ ಉಳಿದೆರಡನ್ನೂ ಭೋಗದಿಂದ ಕ್ಷಯಿಸಿ ಕೈವಲ್ಯವನ್ನು ಹೊಂದುತ್ತಾನೆ.

---

1. ಚ ಎಂಬುದಕ್ಕೆ ಬದಲಾಗಿ 'ವಾ' ಎಂಬ ಪಾಠವಿದ್ದರೆ ಈ ಜನ್ಮದಲ್ಲಿಯೋ ಜನ್ಮಾಂತರದಲ್ಲಿಯೋ ಎಂದು ಕನ್ನಡಿಸಬೇಕು. ಕರ್ಮವನ್ನು ಈ ಜನ್ಮದಲ್ಲಿಯೇ ಮಾಡಿರಬೇಕೆಂಬ ನಿರ್ಬಂಧವೇನೂ ಇಲ್ಲವೆಂಬ ಅರ್ಥಸ್ವಾರಸ್ಯವು ಅದರಿಂದ ಹೊರಡುತ್ತದೆ.

(ಭಾಷ್ಯ)

೫೩೮. ಅನಾರಬ್ಧಕಾರ್ಯಯೋಃ ಪುಣ್ಯಪಾಪಯೋರ್ವಿದ್ಯಾಸಾಮರ್ಥ್ಯಾತ್ ಕ್ಷಯ ಉಕ್ತಃ। ಇತರೇ ತು ಆರಬ್ಧಕಾರ್ಯೇ ಪುಣ್ಯಪಾಪೇ ಉಪಭೋಗೇನ ಕ್ಷಪಯಿತ್ವಾ ಬ್ರಹ್ಮ ಸಂಪದ್ಯತೇ "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ" (ಛಾಂ.೬–೧೪–೨) ಇತಿ "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" (ಬೃ. ೪–೪–೬) ಇತಿ ಚೈವಮಾದಿಶ್ರುತಿಭ್ಯಃ। ನನು ಸತ್ಯಪಿ ಸಮ್ಯಗ್ದರ್ಶನೇ ಯಥಾ ಪ್ರಾಗ್ದೇಹಪಾತಾದ್ ಭೇದದರ್ಶನಂ ದ್ವಿಚನ್ದ್ರದರ್ಶನನ್ಯಾಯೇನ ಅನುವೃತ್ತಮ್। ಏವಂ ಪಶ್ಚಾದಪ್ಯನುವರ್ತೇತ। ನ ನಿಮಿತ್ತಾಭಾವಾತ್ । ಉಪಭೋಗಶೇಷಕ್ಷಪಣಂ ಹಿ ತತ್ರಾನುವೃತ್ತಿನಿಮಿತ್ತಮ್ । ನ ಚ ತಾದೃಶಮತ್ರ ಕಿಂಚಿದಸ್ತಿ। ನನ್ವಪರಃ ಕರ್ಮಾಶಯೋಽಭಿನವಮ್ ಉಪಭೋಗಮ್ ಆರಪ್ಸ್ಯತೇ । ನ। ತಸ್ಯ ದಗ್ಧಬೀಜತ್ವಾತ್ । ಮಿಥ್ಯಾಜ್ಞಾನಾವಷ್ಟಮ್ಭಂ ಹಿ ಕರ್ಮಾನ್ತರಂ ದೇಹಪಾತೇ ಉಪಭೋಗಾನ್ತರಮಾರಭತೇ। ತಚ್ಚ ಮಿಥ್ಯಾಜ್ಞಾನಂ ಸಮ್ಯಗ್ಜ್ಞಾನೇನ ದಗ್ಧಮ್ ಇತ್ಯತಃ ಸಾಧ್ವೇತತ್ ಆರಬ್ಧಕಾರ್ಯಕ್ಷಯೇ ವಿದುಷಃ ಕೈವಲ್ಯಮ್ ಅವಶ್ಯಂ ಭವತೀತಿ ॥

(ಭಾಷ್ಯಾರ್ಥ)

ಕಾರ್ಯವನ್ನುಂಟುಮಾಡದಿರುವ ಪುಣ್ಯಪಾಪಗಳಿಗೆ ವಿದ್ಯಾಸಾಮರ್ಥ್ಯದಿಂದ ಕ್ಷಯವಾಗುವದೆಂದು ಹೇಳಿದ್ದಾಯಿತು.[1] ಆದರೆ ಉಳಿದ, ಕಾರ್ಯವನ್ನುಂಟುಮಾಡಿಬಿಟ್ಟಿರುವ, ಪುಣ್ಯಪಾಪಗಳನ್ನು ಉಪಭೋಗದಿಂದಲೇ ಕ್ಷಯಿಸಿ ಬ್ರಹ್ಮದಲ್ಲಿ ಒಂದಾಗುತ್ತಾನೆ. "ಅವನಿಗೆ ಎಲ್ಲಿಯವರೆಗೆ ಶರೀರದಿಂದ ಬಿಡುಗಡೆಯಾಗುವದಿಲ್ಲವೋ ಅಲ್ಲಿಯವರೆಗೇ ತಡ, ಆಮೇಲೆ ಕೂಡಲೆ ಸೇರಿ ಒಂದಾಗುತ್ತಾನೆ" (ಛಾಂ.೬–೧೪–೨), ಎಂದೂ "ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಸೇರಿಹೋಗುತ್ತಾನೆ" (ಛಾಂ. ೪–೪–೬) ಎಂದೂ ಮುಂತಾಗಿರುವ ಶ್ರುತಿಗಳಿಂದ (ಇದು ಸಿದ್ಧವಾಗಿರುತ್ತದೆ).

(ಆಕ್ಷೇಪ):– **ಸಮ್ಯಗ್ದರ್ಶನವು ಉಂಟಾದರೂ ಹೇಗೆ ದೇಹಪಾತವಾಗುವ ಮುಂಚೆ ದ್ವೈತದರ್ಶನವು ಇಬ್ಬರು ಚಂದ್ರರು ಕಾಣುವ ನ್ಯಾಯದಿಂದ[2] ಇದ್ದುಕೊಂಡೇ ಇತ್ತೋ ಅದರಂತೆ ಆಮೇಲೂ ಇರಬಹುದಲ್ಲ !**

(ಪರಿಹಾರ);– ಹಾಗಲ್ಲ. ಏಕೆಂದರೆ (ಅದಕ್ಕೆ) ನಿಮಿತ್ತವಿಲ್ಲ. (ಇದರ ವಿವರ) : **ಉಪಭೋಗಶೇಷವನ್ನು ಕ್ಷಯಿಸುವದಲ್ಲವೆ, ಅಲ್ಲಿ (ದ್ವೈತ**

1. ೪–೧–೧೫ರಲ್ಲಿ,

2. ಮಿಥ್ಯಾಜ್ಞಾನದ ಸಂಸ್ಕಾರದಿಂದ ಇಬ್ಬರು ಚಂದ್ರರು ಕಾಣುವಂತೆ ಎಂದರ್ಥ. ೪–೧–೧೫ರ ಭಾಷ್ಯವನ್ನು (ಭಾ. ಭಾ.೫೩೨) ನೋಡಿ.

ದರ್ಶನವು ಇದ್ದುಕೊಂಡಿರುವದಕ್ಕೆ) ನಿಮಿತ್ತವು[1] ? ಆದರೆ ಅಂಥದ್ದು ಇಲ್ಲಿ ಯಾವದೂ ಇರುವದಿಲ್ಲ.

(ಆಕ್ಷೇಪ):– ಮತ್ತೊಂದು ಕರ್ಮಾಶಯವು (ಈ) ದೇಹವು ಬಿದ್ದ ಮೇಲೆ ಹೊಸ ಉಪಭೋಗವನ್ನುಂಟುಮಾಡಬಹುದಲ್ಲ !

(ಪರಿಹಾರ):– ಮಾಡಲಾರದು. ಏಕೆಂದರೆ ಅದರ ಬೀಜವು ಸುಟ್ಟು ಹೋಗಿರುತ್ತದೆ. ಮಿಥ್ಯಾಜ್ಞಾನವನ್ನು ಆಶ್ರಯಿಸಿಕೊಂಡಲ್ಲವೆ, ಮತ್ತೊಂದು ಕರ್ಮವು ದೇಹಪಾತವಾದ ಬಳಿಕ ಮತ್ತೊಂದು ಉಪಭೋಗವನ್ನುಂಟುಮಾಡುವದು ? ಆದರೆ ಆ ಮಿಥ್ಯಾಜ್ಞಾನವು ಸಮ್ಯಗ್ಜ್ಞಾನದಿಂದ ಸುಟ್ಟುಹೋಗಿರುತ್ತದೆಯಾದ ಕಾರಣ ಆರಬ್ಧ ಕಾರ್ಯವು ಕ್ಷಯಿಸಲು ಜ್ಞಾನಿಗೆ ಕೈವಲ್ಯವು ಅವಶ್ಯವಾಗಿ ಆಗುತ್ತದೆ.

---

1. ಮಿಥ್ಯಾಜ್ಞಾನವು ಹೋದರೂ ಉಳಿದಿರುವ ಉಪಭೋಗವನ್ನು ಕ್ಷಯಿಸುವದಕ್ಕಾಗಿ ಸಂಸ್ಕಾರವು ದ್ವೈತವನ್ನು ತೋರಿಸುತ್ತಿರುತ್ತದೆ. ಕರ್ಮಾಶಯವೆಲ್ಲ ಮುಗಿದುಹೋದಮೇಲೆ ಸಂಸ್ಕಾರವೆಲ್ಲಿಯದು, ದ್ವೈತದರ್ಶನವೆಲ್ಲಿಯದು ?

# ಅಧಿಕರಣಗಳ ಸಾರ

ಈ ಪಾದದಲ್ಲಿ ಸಾಧನಗಳ ವಿಚಾರಶೇಷವೂ ಬ್ರಹ್ಮವಿದ್ಯಾಫಲವೂ ಚರ್ಚಿತವಾಗಿರುತ್ತದೆ.

## ೧. ಆವೃತ್ತ್ಯಧಿಕರಣ

**ವಿಷಯವೂ ಸಂಶಯವೂ:–** ಮುಕ್ತಿಸಾಧನಗಳಾದ ಶ್ರವಣಾದಿಗಳನ್ನೂ ಉಪಾಸನಗಳನ್ನೂ ಶಾಸ್ತ್ರದಲ್ಲಿ ವಿಧಿಸಿದೆಯಷ್ಟೆ. ಅವನ್ನು ಒಂದೇ ಸಲ ಮಾಡಿದರೆ ಸಾಕೊ, ಅಥವಾ ಆವೃತ್ತಿಮಾಡಬೇಕೊ ?

**ಪೂರ್ವಪಕ್ಷ:–** ಒಂದು ಸಲ ಮಾಡಿದರೆ ಸಾಕು, ಅಷ್ಟಕ್ಕೇ ಶಾಸ್ತ್ರವು ಚರಿತಾರ್ಥವಾಗುವದು. ಆವೃತ್ತಿಯು ಶ್ರುತವಾಗಿಲ್ಲದ್ದರಿಂದ ಮಾಡಬಾರದು. ಶ್ರವಣಾದಿಗಳನ್ನು ಅನೇಕವಾಗಿ ಹೇಳಿದ್ದರೂ ಒಂದೊಂದನ್ನು ಒಂದೊಂದು ಸಲ ಮಾಡಿದರಾಯಿತು.

**ಸಿದ್ಧಾಂತ:–** ಪ್ರತ್ಯಯಾವೃತ್ತಿಯನ್ನು ಮಾಡಬೇಕು. ಏಕೆಂದರೆ ಅನೇಕಸಾಧನಗಳನ್ನು ಹೇಳಿದೆ. ಉಪಾಸನ, ನಿದಿಧ್ಯಾಸನ –ವುಂತಾದ ಶಬ್ದಗಳಲ್ಲಿ ಆವೃತ್ತಿಯೆಂಬರ್ಥವೂ ಅಡಗಿದೆ. ವಿದ್, ಉಪಾಸ್ – ಧಾತುಗಳನ್ನು ಪರ್ಯಾಯವಾಗಿ ಶಾಸ್ತ್ರದಲ್ಲಿ ಉಪಯೋಗಿಸಿದೆ. ಶ್ರವಣಾದಿಗಳು ದರ್ಶನಾರ್ಥವಾಗಿರುವದರಿಂದ ದರ್ಶನವುಂಟಾಗುವವರೆಗೂ ಅವನ್ನು ಮಾಡಲೇಬೇಕು. ಶ್ರುತಿಯಲ್ಲಿಯೂ ಈ ಪ್ರತ್ಯಯಗಳನ್ನು ಆವೃತ್ತಿಮಾಡಬೇಕೆಂಬುದಕ್ಕೆ ಲಿಂಗವಿದೆ. ಉಪಾಸನೆಗಳಲ್ಲಿ ಆವೃತ್ತಿಯಿಂದ ಅತಿಶಯವುಂಟಾಗುತ್ತದೆ ; ಪರಬ್ರಹ್ಮವಿಷಯವಾದ ಪ್ರತ್ಯಯಗಳಿಂದ ಒಂದೊಂದು ಅಧ್ಯಾರೋಪಿತಾಂಶವು ಒಂದೊಂದು ಸಲಕ್ಕೆ ಹೋಗಿ ಪದಾರ್ಥವಿಷಯಕವಾದ ಅಜ್ಞಾನವು ತೊಲಗುತ್ತದೆಯಾದ್ದರಿಂದ ಅದರಿಂದ ವಾಕ್ಯಾರ್ಥಜ್ಞಾನಕ್ಕೆ ಸಹಾಯವಾಗುವದು. ಆದ್ದರಿಂದ ಒಂದು ಸಲ ಶ್ರವಣಮಾಡಿದ್ದರಿಂದಲೇ ಯಾರಿಗೆ ಜ್ಞಾನವಾಗುವದಿಲ್ಲವೋ ಅವರು ಜ್ಞಾನವಾಗುವವರೆಗೆ ಆವೃತ್ತಿ ಮಾಡಬೇಕು.

## ೨. ಆತ್ಮತ್ವೋಪಾಸನಾಧಿಕರಣ

**ಸಂಶಯ:** ಪರಮಾತ್ಮನನ್ನು ನಾನು ಎಂದು ಗ್ರಹಿಸಬೇಕೊ, ನನಗಿಂತ ಬೇರೆ ಎಂದು ಗ್ರಹಿಸಬೇಕೊ ?

**ಪೂರ್ವಪಕ್ಷ:** ನಾನೆಂದು ತಿಳಿಯಬಾರದು. ಏಕೆಂದರೆ ಈಶ್ವರನು ಅಪಹತಪಾಪ್ಮತ್ವಾದಿಗುಣಗಳುಳ್ಳವನು, ಜೀವನು ಇದಕ್ಕೆ ವಿಪರೀತವಾದ ಗುಣವುಳ್ಳವನು. ಹೀಗಿರುವದರಿಂದ ಒಬ್ಬನನ್ನು ಮತ್ತೊಬ್ಬನೆಂದು ಗ್ರಹಿಸುವದಕ್ಕೆ ಆಗುವದಿಲ್ಲ. ಈಶ್ವರನು ಸಂಸಾರಿಯೆಂದರೆ ಈಶ್ವರನೇ ಇಲ್ಲವೆಂದಾಗುವದು ; ಸಂಸಾರಿಯು ಈಶ್ವರನೆಂದರೆ ಅಧಿಕಾರಿಯೇ ಇಲ್ಲವೆಂದಾಗುವದು. ಆಗ ಶಾಸ್ತ್ರವು ವ್ಯರ್ಥವಾಗುವದು, ಪ್ರತ್ಯಕ್ಷಾದಿಗಳಿಗೆ ವಿರೋಧವೂ ಆಗುವದು.

**ಸಿದ್ಧಾಂತ:** ನಾನೆಂದೇ ಈಶ್ವರನನ್ನು ತಿಳಿಯಬೇಕು. ಏಕೆಂದರೆ ಹಾಗೆಂದೇ ಉಪನಿಷತ್ತುಗಳಲ್ಲಿ ಒಪ್ಪಿದೆ, ಮತ್ತು ಹಾಗೆಂದೇ ಉಪದೇಶಮಾಡಿರುತ್ತದೆ. ಇದು ವಿಷ್ಣುಪ್ರತಿಮಾನ್ಯಾಯದಿಂದ ಹೇಳಿದ ಪ್ರತೀಕೋಪಾಸನೆಯೆನ್ನುವ ಹಾಗಿಲ್ಲ; ಏಕೆಂದರೆ ಆಗ ಗೌಣಾರ್ಥದಲ್ಲಿ ತೆಗೆದುಕೊಂಡಂತೆ ಆಗುತ್ತವೆ; ನಾನೇ ಪರಮೇಶ್ವರನು, ಪರಮೇಶ್ವರನೇ ನಾನು –ಎಂದು ವ್ಯತಿಹಾರದಿಂದ ಹೇಳಿರುವ ಶ್ರುತಿವಾಕ್ಯವು ಪ್ರತೀಕೋಪಾಸನೆಗೆ ಹೊಂದುವದಿಲ್ಲ. ಈಶ್ವರನಿಗೆ ಸಂಸಾರಿತ್ವವನ್ನು ಶಾಸ್ತ್ರದಲ್ಲಿ ಹೇಳಿದೆ ಎಂಬುದು ನಮ್ಮ ಮತವಲ್ಲ; –ಸಂಸಾರಿಗೇ ಸಂಸಾರಿತ್ವವನ್ನು ಅಲ್ಲಗಳೆದು ಈಶ್ವರತ್ವವನ್ನು ಹೇಳಿದೆ ಎನ್ನುತ್ತೇವೆ. ಆದ್ದರಿಂದ ಶಾಸ್ತ್ರಾನರ್ಥಕ್ಯವಿಲ್ಲ. ಜ್ಞಾನವಾಗುವವರೆಗೂ ಸಂಸಾರಿತ್ವವನ್ನು ಒಪ್ಪಿರುವದರಿಂದಲೂ ಪ್ರತ್ಯಕ್ಷಾದಿಗಳಿಗೆ ಅದು ವಿಷಯವಾಗಿರುವದರಿಂದಲೂ ಪ್ರತ್ಯಕ್ಷಾದಿವಿರೋಧವೂ ಇಲ್ಲ.

## ೩. ಪ್ರತೀಕಾಧಿಕರಣ

**ಸಂಶಯ:** ಮನಸ್ಸನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು– ಮುಂತಾದ ಪ್ರತೀಕೋಪಾಸನೆಗಳಲ್ಲಿ ಅವು ನಾನೆಂದು ಗ್ರಹಿಸಬೇಕೋ, ಬಾರದೊ ?

**ಪೂರ್ವಪಕ್ಷ:** ಗ್ರಹಿಸಬೇಕು. ಏಕೆಂದರೆ ಅವೂ ಬ್ರಹ್ಮದ ವಿಕಾರವೇ ಆಗಿದೆ; ಬ್ರಹ್ಮವು ನಮ್ಮ ಆತ್ಮನಾಗಿದೆ.

**ಸಿದ್ಧಾಂತ:** ಪ್ರತೀಕಗಳನ್ನು ನಾನೆಂದು ಗ್ರಹಿಸಬಾರದು; ಏಕೆಂದರೆ ಅವು ತಾನೆಂಬ ಅರಿವು ಆಗುವದಿಲ್ಲ. ಪ್ರತೀಕಗಳೂ ಬ್ರಹ್ಮದ ಕಾರ್ಯವೇ ಆದರೂ ಅವು ಬ್ರಹ್ಮವೆಂದು ಹಿಡಿದಾಗ ಪ್ರತೀಕವೇ ಇಲ್ಲವಾಗುವದರಿಂದ ಅವು ನಾನೆಂದು ತಿಳಿಯುವದಕ್ಕೆ ಅವಕಾಶವೇ ಇರುವದಿಲ್ಲ. ಉಪಾಸನೆಗಳಲ್ಲಿ ಕರ್ತೃತ್ವಾದಿಗಳನ್ನು ಇಟ್ಟುಕೊಂಡೇ ಇರುವದರಿಂದಲೂ ಅವನ್ನು ಬ್ರಹ್ಮವೆಂದಾಗಲೂ ಅವು ನಾನೆಂದು ತಿಳಿಯುವದಕ್ಕೆ ಬರುವದಿಲ್ಲ. ಏಕೆಂದರೆ ಪ್ರತೀಕಗಳಿಗೆ ಉಪಾಸಕನೂ ಸಮನಾಗಿರುತ್ತಾನೆ.

## ೪. ಬ್ರಹ್ಮದೃಷ್ಟ್ಯಧಿಕರಣ

**ಸಂಶಯ:** ಆದಿತ್ಯನು ಬ್ರಹ್ಮ– ಎಂದು ಮುಂತಾಗಿರುವ ಸಾಮಾನಾಧಿಕರಣ್ಯದ ನಿರ್ದೇಶಗಳಲ್ಲಿ ಬ್ರಹ್ಮದಲ್ಲಿ ಆದಿತ್ಯಾದಿದೃಷ್ಟಿಗಳನ್ನು ಮಾಡಬೇಕೊ ?

**ಪೂರ್ವಪಕ್ಷ:** ಯಾವ ನಿಯಮವೂ ಇಲ್ಲ; ಏಕೆಂದರೆ ಇಂಥದ್ದರಲ್ಲಿಯೇ ಇಂಥದ್ದರ ದೃಷ್ಟಿಯನ್ನು ಮಾಡಬೇಕು ಎಂಬ ಶಾಸ್ತ್ರವೇನೂ ಇಲ್ಲ. ಅಥವಾ ಆದಿತ್ಯಾದಿದೃಷ್ಟಿಗಳನ್ನೇ ಬ್ರಹ್ಮದಲ್ಲಿ ಮಾಡಬೇಕು. ಏಕೆಂದರೆ ಬ್ರಹ್ಮವನ್ನು ಉಪಾಸನೆಮಾಡಿದರೆ ಫಲವುಂಟಾಗುವದೆಂಬುದು ಯುಕ್ತ.

**ಸಿದ್ಧಾಂತ:** ಆದಿತ್ಯಾದಿಗಳಲ್ಲಿ ಬ್ರಹ್ಮದೃಷ್ಟಿಯನ್ನೇ ಮಾಡಬೇಕು. ಏಕೆಂದರೆ ಬ್ರಹ್ಮವು ಉತ್ಕೃಷ್ಟವಾಗಿದೆ. ನಿಕೃಷ್ಟವಸ್ತುವಿನಲ್ಲಿ ಉತ್ಕೃಷ್ಟದೃಷ್ಟಿಯನ್ನು ಮಾಡುವದು ಯುಕ್ತವೆಂಬುದು ಲೋಕಸಿದ್ಧವಾಗಿದೆ. ಉದಾಹರಣೆ ಕ್ಷತ್ತೃವಿನಲ್ಲಿ ರಾಜದೃಷ್ಟಿಯು ಶ್ರೇಯಸ್ಕರವಾಗಿರುತ್ತವೆ. ಶಾಸ್ತ್ರದಲ್ಲಿ ಯಾವ ನಿರ್ಧಾರಣವೂ ಇಲ್ಲದ್ದರಿಂದ ಆ ನ್ಯಾಯವನ್ನು ಇಲ್ಲಿ

ಒಪ್ಪಬೇಕು. ಇದಲ್ಲದೆ "ಆದಿತ್ಯನು ಬ್ರಹ್ಮ" ಎಂಬಲ್ಲಿ ಆದಿತ್ಯಶಬ್ದವು ಮೊದಲು ಬರುವದರಿಂದ ಅದಕ್ಕೆ ಮುಖ್ಯಾರ್ಥವನ್ನು ತೆಗೆದುಕೊಳ್ಳಬೇಕು; ಆಮೇಲೆ ಬ್ರಹ್ಮಶಬ್ದವನ್ನು ಮುಖ್ಯಾರ್ಥದಲ್ಲಿ ತೆಗೆದುಕೊಂಡರೆ ಹೊಂದುವದಿಲ್ಲವಾದ್ದರಿಂದ ಬ್ರಹ್ಮದೃಷ್ಟಿಯನ್ನು ವಿಧಿಸುವದಕ್ಕೆ ಬಂದಿದೆ ಎಂದಿಟ್ಟುಕೊಳ್ಳುವದು ಯುಕ್ತ. ಇತ್ಯುಪಾಸೀತ ಎಂದು ಬ್ರಹ್ಮಶಬ್ದವು ಇತಿಪರವಾಗಿರುವದರಿಂದಲೂ ಇದೇ ಯುಕ್ತ. ವಾಕ್ಯಶೇಷದಲ್ಲಿಯೂ ಆದಿತ್ಯಾದಿಗಳನ್ನು ಉಪಾಸನೆಮಾಡಬೇಕೆಂದು ದ್ವಿತೀಯಾವಿಭಕ್ತಿಯಿಂದ ತಿಳಿಸಿದೆ. ಆದಿತ್ಯನಲ್ಲಿ ಬ್ರಹ್ಮದೃಷ್ಟಿಯ ಅಧ್ಯಾರೋಪಮಾಡುವದೆಂಬುದೂ ಬ್ರಹ್ಮದ ಉಪಾಸನೆಯೇ ಆದ್ದರಿಂದ ಬ್ರಹ್ಮವೇ ಉಪಾಸನೆಗೆ ಫಲವನ್ನು ಕೊಡಬಹುದಾಗಿದೆ.

## ೫. ಆದಿತ್ಯಾದಿಮತ್ಯಧಿಕರಣ

**ಸಂಶಯ:** ಅಂಗಾವಬದ್ಧೋಪಾಸನೆಗಳಲ್ಲಿ ಉದ್ಗೀಥಾದಿದೃಷ್ಟಿಗಳನ್ನು ಆದಿತ್ಯಾದಿಗಳಲ್ಲಿ ಮಾಡಬೇಕೊ; ಉದ್ಗೀಥಾದಿಗಳಲ್ಲಿ ಆದಿತ್ಯಾದಿದೃಷ್ಟಿಗಳನ್ನು ಮಾಡಬೇಕೊ?

**ಪೂರ್ವಪಕ್ಷ:** ಹೇಗೆ ಬೇಕಾದರೂ ಮಾಡಬಹುದು; ಏಕೆಂದರೆ ಹೀಗೆಂಬ ನಿಯಮಕ್ಕೆ ಕಾರಣವಿರುವದಿಲ್ಲ, ಅಥವಾ ಆದಿತ್ಯಾದಿಗಳಲ್ಲಿ ಉದ್ಗೀಥಾದಿದೃಷ್ಟಿಗಳನ್ನೇ ಮಾಡಬೇಕು. ಏಕೆಂದರೆ ಉದ್ಗೀಥಾದಿಗಳು ಕರ್ಮಾತ್ಮಕವಾಗಿವೆ. ಇದಲ್ಲದೆ "ಇಯಮೇವರ್ಗಗ್ನಿಃ ಸಾಮ" ಮುಂತಾದವುಗಳಲ್ಲಿ ಪೃಥಿವ್ಯಗ್ನಿಗಳಲ್ಲಿ ಋಕ್ಸಾಮದೃಷ್ಟಿಯನ್ನು ಮಾಡಬೇಕೆಂದೇ ಅರ್ಥಮಾಡುವದು ಯುಕ್ತವೆಂದು ಹಿಂದಿನ ಅಧಿಕರಣದ ಸಿದ್ಧಾಂತದ ಯುಕ್ತಿಗಳಿಂದ ಸಿದ್ಧವಾಗುತ್ತದೆ.

**ಸಿದ್ಧಾಂತ:** ಆದಿತ್ಯಾದಿಮತಿಗಳನ್ನೇ ಉದ್ಗೀಥಾದಿಗಳಲ್ಲಿಡಬೇಕು. ಏಕೆಂದರೆ ಅಪೂರ್ವಸಂನಿಕರ್ಷದಿಂದ ಉದ್ಗೀಥಾದಿಗಳಿಗೆ ಆ ಮತಿಗಳಿಂದ ಸಂಸ್ಕಾರವಾಗಿ ಕರ್ಮಸಮೃದ್ಧಿಯಾಗುತ್ತದೆ ಎಂಬುದು ಉಪಪನ್ನವಾಗಿರುತ್ತದೆ. "ಲೋಕಗಳಲ್ಲಿ ಪಂಚವಿಧಸಾಮವನ್ನು ಯಾವನು ಉಪಾಸನೆಮಾಡುತ್ತಾನೋ" ಮುಂತಾದ ಸ್ವತಂತ್ರಫಲವುಳ್ಳ ಉಪಾಸನೆಗಳಲ್ಲಿ ಅಧಿಕೃತಾಧಿಕಾರವಿರುವದರಿಂದ ಅಲ್ಲಿಯೂ ಅಪೂರ್ವಸಂನಿಕರ್ಷದಿಂದಲೇ ಫಲವನ್ನು ಕಲ್ಪಿಸುವದು ಯುಕ್ತ. ಕರ್ಮಾಂಗವಾದ ಉದ್ಗೀಥಾದಿಗಳಿಗಿಂತ ಫಲಾತ್ಮಕವಾದ ಆದಿತ್ಯಾದಿಗಳು ಉತ್ಕೃಷ್ಟವಾಗಿವೆ ಎಂಬುದೂ ಉಪಪನ್ನವಾಗಿದೆ. ಉದ್ಗೀಥಾದಿದೃಷ್ಟಿಗಳಿಂದ ಆದಿತ್ಯಾದಿಗಳನ್ನು ಉಪಾಸನೆಮಾಡಿದರೆ ಅವು ಕರ್ಮಾತ್ಮಕವಾಗಿ ಫಲವನ್ನು ಕೊಡುತ್ತವೆ ಎಂದದ್ದೂ ಸರಿಯಲ್ಲ; ಏಕೆಂದರೆ ಉಪಾಸನೆಯೇ ಕರ್ಮವಾಗಿರುವದರಿಂದ ಅದೇ ಫಲವನ್ನು ಕೊಡಬಹುದಾಗಿದೆ. "ಇಯಮೇವರ್ಗಗ್ನಿಃ ಸಾಮ" ಎಂಬಲ್ಲಿ ಅಕ್ಷರನ್ಯಾಸವು ಋಕ್ಕಿನಲ್ಲಿ ಪೃಥಿವೀದೃಷ್ಟಿಯನ್ನು ಮಾಡಬೇಕು ಎಂಬರ್ಥಕ್ಕೆ ಹೊಂದುಗೆಯಾಗಿದೆ ಹಾಗಿಲ್ಲದಿದ್ದರೆ ಋಗೇವ ಎಂದಿರಬೇಕಾಗುತ್ತಿತ್ತು. ಇದಕ್ಕನುಗುಣವಾಗಿ ಹಿಂಕಾರವೇ ಮುಂತಾದ ಮಿಕ್ಕ ಕಡೆಗಳಲ್ಲಿಯೂ ಹೀಗೆಯೇ ಕಲ್ಪಿಸಬೇಕು. ಆದ್ದರಿಂದ ಆದಿತ್ಯಾದಿಬುದ್ಧಿಗಳನ್ನೇ ಅಂಗಗಳಲ್ಲಿ ಮಾಡಬೇಕು.

## ೬. ಆಸೀನಾಧಿಕರಣ

**ಸಂಶಯ:** ಉಪಾಸನೆಗಳನ್ನು ಹೇಗೆ ಬೇಕಾದರೂ ಮಾಡಬಹುದೊ, ಕುಳಿತುಕೊಂಡೇ ಮಾಡಬೇಕೊ?

**ಪೂರ್ವಪಕ್ಷ :** ಉಪಾಸನೆಯು ಮಾನಸವಾದ್ದರಿಂದ ಹೇಗೆಬೇಕಾದರೂ ಮಾಡಬಹುದು.

**ಸಿದ್ಧಾಂತ:** ಉಪಾಸನೆಯೆಂದರೆ ಸಮಾನಪ್ರತ್ಯಯವನ್ನು ಪ್ರವಾಹವಾಗಿ ನಡೆಯಿಸುವದು. ಅದು ಕುಳಿತುಕೊಂಡೇಮಾಡಿದರೆ ಸಾಗುತ್ತದೆ ; ಇಲ್ಲದಿದ್ದರೆ ಚಿತ್ತವಿಕ್ಷೇಪವೋ ನಿದ್ರೆಯೋ ಆಗಬಹುದು. ಉಪಾಸನಾಶಬ್ದಕ್ಕೆ ಪರ್ಯಾಯವಾದ ಧ್ಯಾಯತಿಶಬ್ದವನ್ನು ಏಕಾಗ್ರತೆಯಿಂದ ಚಿತ್ತನನ್ನಿಟ್ಟಿರುವವನಿಗೇ ಉಪಯೋಗಿಸುತ್ತಾರೆ : ಅದು ಕುಳಿತುಕೊಂಡವರಿಗೇ ಹೊಂದುತ್ತದೆ. ಶ್ರುತಿಸ್ಮೃತಿಲಿಂಗಗಳೂ ಇದಕ್ಕೆ ಅನುಗುಣವಾಗಿವೆ. ಆದ್ದರಿಂದ ಕುಳಿತುಕೊಂಡೇ ಉಪಾಸನೆಮಾಡಬೇಕು.

## ೭. ಏಕಾಗ್ರತಾಧಿಕರಣ

**ಸಂಶಯ :** ಉಪಾಸನೆಗೆ ದಿಗ್ದೇಶಕಾಲಾದಿನಿಯಮಗಳಿವೆಯೆ, ಇಲ್ಲವೆ ?

**ಪೂರ್ವಪಕ್ಷ:** ವೈದಿಕಕರ್ಮವಾದ್ದರಿಂದ ಇದಕ್ಕೂ ನಿಯಮವಿದೆ.

**ಸಿದ್ಧಾಂತ :** ಏಕಾಗ್ರತೆಯಾಗುವ ಯಾವ ದಿಗಾದಿಗಳಲ್ಲಿಯಾದರೂ ಮಾಡಬಹುದು. ಶ್ರುತಿಯಲ್ಲಿ ಹೇಳಿರುವದೂ ಇದಕ್ಕೆ ಅನುಗುಣವಾಗಿದೆ.

## ೮. ಆಪ್ರಾಯಣಾಧಿಕರಣ

**ಸಂಶಯ :** ಉಪಾಸನೆಗಳನ್ನು ಸ್ವಲ್ಪಕಾಲದವರೆಗೆ ಮಾಡಿ ಬಿಟ್ಟುಬಿಡಬಹುದೊ, ಅಥವಾ ಬದುಕಿರುವವರೆಗೂ ಮಾಡಬೇಕೊ ?

**ಪೂರ್ವಪಕ್ಷ:** ಉಪಾಸನೆ ಎಂಬ ಶಬ್ದವು ಆವೃತ್ತಿವಿಶಿಷ್ಟವಾಗಿರುವದರಿಂದ ಸ್ವಲ್ಪಕಾಲದವರೆಗೆ ಮಾಡಿಬಿಟ್ಟರೆ ಸಾಕಾಗುತ್ತದೆ.

**ಸಿದ್ಧಾಂತ :** ಸಾಯುವವರೆಗೂ ಮಾಡಬೇಕು. ಏಕೆಂದರೆ ಅಂತ್ಯಪ್ರತ್ಯಯವಶದಿಂದ ಅದೃಷ್ಟಫಲವು ದೊರಕುತ್ತದೆ. ಕರ್ಮಗಳಿಗೆ ಸಾಯುವ ಕಾಲಕ್ಕೆ ಭಾವನಾವಿಜ್ಞಾನವಿರಬೇಕೆಂದು ಶ್ರುತಿಯಿದೆ ; ಉಪಾಸನೆಗಳಿಗೂ ಆವೃತ್ತಿರೂಪವಾದ ಭಾವನಾವಿಜ್ಞಾನವಿರಬೇಕೆಂಬುದು ಇದರಿಂದ ಸಿದ್ಧವಾಗುತ್ತದೆ. ಇದಕ್ಕೆ ಶ್ರುತಿಸ್ಮೃತಿಗಳ ಬೆಂಬಲವೂ ಇದೆ.

## ೯. ತದಧಿಗಮಾಧಿಕರಣ

**ಸಂಶಯ :** ಬ್ರಹ್ಮಜ್ಞಾನವುಂಟಾಗಲು ಪಾಪವು ನಾಶವಾಗುವದೊ, ಇಲ್ಲವೊ ?

**ಪೂರ್ವಪಕ್ಷ:** ಕರ್ಮಕ್ಕೆ ಫಲವನ್ನು ಕೊಡುವ ಶಕ್ತಿಯಿದೆ ; ಆದ್ದರಿಂದ ಅದು ಭೋಗದಿಂದಲೇ ನಾಶವಾಗಬೇಕು. ಪ್ರಾಯಶ್ಚಿತ್ತಗಳನ್ನು ದುರಿತಕರ್ಮನಾಶಕ್ಕೆ ವಿಧಿಸಿದೆ ಎಂಬುದನ್ನು ಒಪ್ಪಿದರೂ ಅವನ್ನು ದೋಷಸಂಯೋಗದಿಂದ ವಿಧಿಸಿದೆ ; ಆದರೆ ಬ್ರಹ್ಮಜ್ಞಾನವನ್ನು ದುರಿತನಾಶಕ್ಕೆಂದು ವಿಧಿಸಿಲ್ಲ. ಆದ್ದರಿಂದ ಕರ್ಮವು ನಾಶವಾಗಲಾರದು. ಮೋಕ್ಷವೂ ಕರ್ಮಫಲದಂತೆಯೇ ದೇಶಕಾಲಾಪೇಕ್ಷವೆಂದೇ ಆಗಲಿ !

**ಸಿದ್ಧಾಂತ :** ಬ್ರಹ್ಮಜ್ಞಾನವಾಗಲು ಹಿಂದುಮುಂದಿನ ಪಾಪಗಳು ಇಲ್ಲವಾಗುತ್ತವೆ ; ಹಿಂದಿನದು ನಾಶವಾಗುವದು, ಮುಂದಿನದು ಅಂಟದೆ ಹೋಗುವದು. ಕರ್ಮಕ್ಕೆ ಫಲ

ವನ್ನು ಕೊಡುವ ಶಕ್ತಿಯಿದೆಯಾದರೂ ಜ್ಞಾನದಿಂದ ಅದಕ್ಕೆ ಅಡ್ಡಿಯಾಗುತ್ತದೆ. ಬ್ರಹ್ಮ ಜ್ಞಾನವನ್ನು ಪಾಪವಿನಾಶಕ್ಕೆಂದು ವಿಧಿಸಿಲ್ಲವೆಂಬುದು ಸರಿಯಲ್ಲ; ಏಕೆಂದರೆ ಸಗುಣವಿದ್ಯೆ ಗಳಲ್ಲಿ ಪಾಪನಿವೃತ್ತಿ ಎಂಬ ಫಲವನ್ನು ವಿಧಿಸಿದೆ. ನಿರ್ಗುಣವಿದ್ಯೆಯಲ್ಲಿ ವಿಧಿಯಿಲ್ಲವಾದರೂ ಬ್ರಹ್ಮಜ್ಞಾನಿಗೆ "ನಾನು ಮೂರುಕಾಲದಲ್ಲಿಯೂ ಕರ್ತೃತ್ವಭೋಕ್ತೃತ್ವವಿಲ್ಲದ ಬ್ರಹ್ಮವು" ಎಂಬ ನಿಶ್ಚಯವಾಗಿರುವದರಿಂದ ಕರ್ಮವು ಅವನಿಗೆ ಇಲ್ಲವಾಗುತ್ತದೆ.

## ೧೦. ಇತರಾಸಂಶ್ಲೇಷಾಧಿಕರಣ

**ಸಂಶಯ:** ಪುಣ್ಯವು ಬ್ರಹ್ಮಜ್ಞಾನದಿಂದ ನಾಶವಾಗುವದೊ, ಇಲ್ಲವೊ ?

**ಪೂರ್ವಪಕ್ಷ:** ಶಾಸ್ತ್ರೀಯವಾದ ಪುಣ್ಯಕರ್ಮವನ್ನು ಶಾಸ್ತ್ರೀಯವಾದ ಜ್ಞಾನವು ನಾಶಗೊಳಿಸಲಾರದು.

**ಸಿದ್ಧಾಂತ:** ಪಾಪದಂತೆ ಪುಣ್ಯವೂ ಹಿಂದಿನದು ನಾಶವಾಗುತ್ತದೆ, ಮುಂದಿನದು ಅಂಟದೆಹೋಗುತ್ತದೆ. ಏಕೆಂದರೆ ಅದೂ ಪಾಪದಂತೆಯೇ ತನ್ನ ಫಲವನ್ನು ಕೊಟ್ಟು ಜ್ಞಾನಫಲಕ್ಕೆ ಪ್ರತಿಬಂಧಕವಾಗಿರುತ್ತದೆ. ಶ್ರುತಿಯಲ್ಲಿ ಪುಣ್ಯಪಾಪಗಳೆರಡನ್ನೂ ಜ್ಞಾನಿಯು ದಾಟುವನೆಂದು ಹೇಳಿದೆ; ಅಕರ್ತಾತ್ಮಜ್ಞಾನವು ಪಾಪದಂತೆ ಪುಣ್ಯಕ್ಕೂ ನಾಶಕಾರಕ ವಾಗಿದೆ. ಶ್ರುತಿಯಲ್ಲಿ ಪಾಪಶಬ್ದವನ್ನೇ ಪುಣ್ಯಕ್ಕೂ ಉಪಯೋಗಿಸಿಯೂ ಇದೆ. ಆದ್ದ ರಿಂದ ಪುಣ್ಯಾಪುಣ್ಯಗಳು ಜ್ಞಾನದಿಂದ ನಾಶವಾಗಲು ಜ್ಞಾನಿಗೆ ಕೈವಲ್ಯವು ಆಗಿಯೇ ತೀರುವದು, ಜನ್ಮಾಂತರವಾಗಲಾರದು.

## ೧೧. ಅನಾರಬ್ಧಾಧಿಕರಣ

**ಸಂಶಯ:** ಎಲ್ಲಾ ಕರ್ಮಗಳೂ ಜ್ಞಾನದಿಂದ ನಾಶವಾಗುವವೊ, ಇಲ್ಲವೊ ?

**ಪೂರ್ವಪಕ್ಷ:** ಶ್ರುತಿಯಲ್ಲಿ ಯಾವ ವಿಶೇಷವೂ ಕಾಣುವದಿಲ್ಲವಾಗಿ ಎಲ್ಲಾ ಕರ್ಮ ಗಳೂ ನಾಶವಾಗುವವು.

**ಸಿದ್ಧಾಂತ:** ಪ್ರಾರಬ್ಧಫಲವುಳ್ಳ ಕರ್ಮಗಳನ್ನುಳಿದು ಮಿಕ್ಕ ಕರ್ಮಗಳಿಗೆ ಮಾತ್ರ ಅಶ್ಲೇಷವಿನಾಶಗಳಾಗುವವು. ಏಕೆಂದರೆ ಶ್ರುತಿಯಲ್ಲಿ ಶರೀರಪಾತವಾಗುವವರೆಗೇ ತಡ ಎಂದು ಮೋಕ್ಷಕ್ಕೆ ಅವಧಿಯನ್ನು ಹೇಳಿದೆ. ಜ್ಞಾನವೂ ಒಂದು ಕರ್ಮಾಶಯವನ್ನಾಶ್ರ ಯಿಸಿಯೇ ಉಂಟಾಗಬೇಕಷ್ಟೆ. ಆ ಕರ್ಮವು ತನ್ನ ವೇಗವು ಕ್ಷಯವಾಗುವವರೆಗೂ ಇರುವದೆಂದು ತಿಳಿಯುವದು ಯುಕ್ತ. ಅಕರ್ತಾತ್ಮಜ್ಞಾನವಾದರೂ ಮಿಥ್ಯಾಜ್ಞಾನದ ಸಂಸ್ಕಾರದಿಂದ ಕೆಲವು ಕಾಲದವರೆಗೆ ಬಾಧಿತವಾಗಿಯೂ ಇದ್ದುಕೊಂಡಿರಬಹುದು.

## ೧೨. ಅಗ್ನಿಹೋತ್ರಾದ್ಯಧಿಕರಣ

**ಸಂಶಯ:** ಪುಣ್ಯವೂ ಬ್ರಹ್ಮಜ್ಞಾನವಾದಮೇಲೆ ಪಾಪದಂತೆಯೇ ನಾಶವಾಗುತ್ತದೆ, ಅಂಟುವದಿಲ್ಲ– ಎಂಬುದು ಎಲ್ಲಾ ಪುಣ್ಯಕರ್ಮಗಳ ವಿಷಯವೊ, ಅಲ್ಲವೊ ?

**ಪೂರ್ವಪಕ್ಷ:–** ನ್ಯಾಯವು ಸಮಾನವಾಗಿರುವದರಿಂದ ಎಲ್ಲಾ ಪುಣ್ಯಗಳೂ ಜ್ಞಾನ ದಿಂದ ನಾಶವಾಗುವವು.

ಸಿದ್ಧಾಂತ:– ಅಗ್ನಿಹೋತ್ರಾದಿನಿತ್ಯಕರ್ಮವು ಜ್ಞಾನದ ಕಾರ್ಯವಾದ ಮೋಕ್ಷವನ್ನು ಕೊಡುವದರಲ್ಲಿಯೇ ವಿನಿಯೋಗವಾಗುವದು. ಮೋಕ್ಷವು ಕಾರ್ಯವಲ್ಲವಾದರೂ ಕರ್ಮವು ಜ್ಞಾನೋತ್ಪತ್ತಿದ್ವಾರದಿಂದ ಮೋಕ್ಷಕಾರಣವೆನಿಸುತ್ತದೆ; ಆದ್ದರಿಂದ ಜ್ಞಾನಕ್ಕೆ ಹಿಂದೆ ಮಾಡಿದ ನಿತ್ಯಕರ್ಮದ ವಿಷಯವಿದು. ಸಗುಣವಿದ್ಯೆಗಳಲ್ಲಿ ಜ್ಞಾನಿಗೂ ಕರ್ಮವುಂಟು; ಫಲಾಭಿಸಂಧಿಯಿಲ್ಲದೆ ಮಾಡಿದ ಕರ್ಮವು ಜ್ಞಾನದೊಡನೆ ಒಂದೇ ಕಾರ್ಯವಾದ ಮೋಕ್ಷವನ್ನು ಕೊಡುವದೆಂಬುದು ಅವನ ವಿಷಯದಲ್ಲಿ ಹೊಂದುತ್ತದೆ. ಏಕೆಂದರೆ ಅವನಿಗೆ ಆಗುವದು ಆಪೇಕ್ಷಿಕಮುಕ್ತಿ. ಆದ್ದರಿಂದ ಕಾಮ್ಯಕರ್ಮಗಳಿಗೇ ಜ್ಞಾನದಿಂದ ಅಶ್ಲೇಷ ವಿನಾಶಗಳನ್ನು ಹೇಳಿರುವದು; ಏಕೆಂದರೆ ಅದು ಜ್ಞಾನಕ್ಕೆ ಉಪಕಾರಕವಲ್ಲ.

## ೧೩. ವಿದ್ಯಾಜ್ಞಾನಸಾಧನಾಧಿಕರಣ

**ಸಂಶಯ**:– ಬರಿಯ ಅಗ್ನಿಹೋತ್ರಾದಿಕರ್ಮವೂ ವಿದ್ಯೆಗೆ ಸಾಧನವಾಗುವದೆ, ಕರ್ಮಾಂಗೋಪಾಸನಾಯುಕ್ತವಾದ ಕರ್ಮವೇ ಸಾಧನವಾಗುವದೆ ?

**ಪೂರ್ವಪಕ್ಷ**: ಉಪಾಸನಾಸಂಯುಕ್ತವಾದ ಕರ್ಮವೇ ಜ್ಞಾನಕ್ಕೆ ಸಾಧನವು; ಏಕೆಂದರೆ ವಿದ್ಯೆಯಿಂದ ಕೂಡಿದ ಕರ್ಮವೇ ವೀರ್ಯವತ್ತರವೆಂದು ಶ್ರುತಿಯಲ್ಲಿದೆ, ಸ್ಮೃತಿಯಲ್ಲಿಯೂ ಇದೇ ಅರ್ಥವನ್ನು ಹೇಳಿದೆ.

**ಸಿದ್ಧಾಂತ**: ಬರಿಯ ಕರ್ಮವು ವಿದ್ಯೆಗೆ ಅತ್ಯಂತವಾಗಿ ಬೇಕೇಇಲ್ಲವೆನ್ನುವಹಾಗಿಲ್ಲ. ಏಕೆಂದರೆ "ಯಜ್ಞದಿಂದ ತಿಳಿಯಲಿಚ್ಛಿಸುತ್ತಾರೆ'' ಎಂಬ ಶ್ರುತಿಯಲ್ಲಿ ಯಾವ ವಿಶೇಷವೂ ಇಲ್ಲದೆ ಯಜ್ಞಸಾಮಾನ್ಯವನ್ನೇ ವಿದ್ಯೆಗೆ ಅಂಗವಾಗಿ ಹೇಳಿದೆ. ವಿದ್ಯೆಯಿಂದ ಕೂಡಿರುವ ಕರ್ಮವು ವೀರ್ಯವತ್ತರವೆಂದಿರುವದು ಅದು ಹೆಚ್ಚಿನದೆಂಬುದಕ್ಕೆ ಕಾರಣವಾಗಬಹುದು; ಆದರೆ ಬರಿಯ ಕರ್ಮವೂ ವೀರ್ಯವತ್ತಾಗಿರುವದೆಂದು ಅದರಿಂದಲೇ ಗೊತ್ತಾಗುತ್ತದೆ. ಆದ್ದರಿಂದ ಈ ಜನ್ಮದಲ್ಲಿಯೂ ಜನ್ಮಾಂತರದಲ್ಲಿಯೂ ಮಾಡಿದ ಕರ್ಮವು ದುರಿತಕ್ಷಯದ್ವಾರದಿಂದ ಜ್ಞಾನಕ್ಕೆ ಪರಂಪರೆಯಿಂದ ಎಂದರೆ ಶ್ರವಣಾದಿಗಳ ಮೂಲಕ ಕಾರಣವಾಗಿರುತ್ತದೆ.

## ಇತರಕ್ಷಪಣಾಧಿಕರಣ

**ಸಂಶಯ**: ಜ್ಞಾನಿಗೆ ಪ್ರಾರಬ್ಧಕರ್ಮವು ಕ್ಷಯವಾದ ಬಳಿಕ ಕೈವಲ್ಯವು ಆಗುವದೊ, ಇಲ್ಲವೊ ?

**ಪೂರ್ವಪಕ್ಷ**: ದ್ವಿಚಂದ್ರದರ್ಶನದಂತೆ ಬಾಧಿತವಾದ ಮಿಥ್ಯಾಜ್ಞಾನನಿಮಿತ್ತವಾದ ದ್ವೈತದರ್ಶನವು ಜ್ಞಾನವಾದಮೇಲೂ ಸಂಸ್ಕಾರದಿಂದ ಇದ್ದುಕೊಂಡಿರುವಂತೆ ಆಮೇಲೂ ಇರಬಹುದು. ಈ ಕರ್ಮಾಶಯವು ಮುಗಿದರೆ ಮತ್ತೊಂದು ಹೊಸಭೋಗಕ್ಕೆ ಕಾರಣವಾಗಲೂಬಹುದು.

**ಸಿದ್ಧಾಂತ**: ಪ್ರಾರಬ್ಧಫಲದ ಉಪಭೋಗಕ್ಕಾಗಿ ಜ್ಞಾನವಾದಬಳಿಕವೂ ದ್ವೈತದರ್ಶನವು ಉಳಿದಿತ್ತು. ಆದರೆ ಅದು ಕ್ಷಯವಾದ ಬಳಿಕ ಜ್ಞಾನಿಗೆ ಜನ್ಮಾಂತರಕ್ಕೆ ಕಾರಣವಿಲ್ಲ. ಮಿಥ್ಯಾಜ್ಞಾನದಿಂದಲೇ ಕರ್ಮಾಂತರದಿಂದ ದೇಹಾಂತರಪ್ರಾಪ್ತಿಯಾಗುವದು; ಆದರೆ ಆ ಮಿಥ್ಯಾಜ್ಞಾನವು ಸಮ್ಯಗ್ಜ್ಞಾನದಿಂದ ನಾಶವಾಗಿರುವದರಿಂದ ಜನ್ಮಾಂತರಕ್ಕೆ ಕಾರಣವೇ ಇರುವದಿಲ್ಲ.

---

# ನಾಲ್ಕನೆಯ ಅಧ್ಯಾಯ - ಎರಡನೆಯ ಪಾದ

( ಸಾಧಕನ ಉತ್ಕ್ರಾಂತಿಯ ವಿಚಾರ )

## ೧. ವಾಗಧಿಕರಣ (ಸೂ. ೧-೨)

**ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ॥ ೧ ॥**

೧. ವಾಕ್ಕು ಮನಸ್ಸಿನಲ್ಲಿ (ಲಯವಾಗುತ್ತದೆ) ; ಏಕೆಂದರೆ (ಹಾಗೆ) ಕಂಡಿದೆ, ಶಬ್ದವೂ ಇದೆ.

### ಪೂರ್ವಪಕ್ಷ:
### ವಾಗಾದಿಗಳೇ ಮನಆದಿಗಳಲ್ಲಿ ಲಯವಾಗುತ್ತವೆ

(ಭಾಷ್ಯ)

೫೩೯. ಅಥಾಪರಾಸು ವಿದ್ಯಾಸು ಫಲಪ್ರಾಪ್ತಯೇ ದೇವಯಾನಂ ಪನ್ಥಾನಮ್ ಅವತಾರಯಿಷ್ಯನ್ ಪ್ರಥಮಂ ತಾವತ್ ಯಥಾಶಾಸ್ತ್ರಮ್ ಉತ್ಕ್ರಾನ್ತಿಕ್ರಮಮ್ ಅನ್ವಾಚಷ್ಟೇ । ಸಮಾನಾ ಹಿ ವಿದ್ವದವಿದುಷೋ ರುತ್ಕ್ರಾನ್ತಿರಿತಿ ವಕ್ಷ್ಯತಿ । ಅಸ್ತಿ ಪ್ರಾಯಣವಿಷಯಾ ಶ್ರುತಿಃ । "ಅಸ್ಯ ಸೋಮ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ" (ಛಾಂ. ೬-೮-೬) ಇತಿ । ಕಿಮಿಹ ವಾಚ ಏವ ವೃತ್ತಿಮತ್ಯಾ ಮನಸಿ ಸಂಪತ್ತಿರುಚ್ಯತೇ ಉತ ವಾಗ್ವೃತ್ತೇರಿತಿ ವಿಶಯಃ । ತತ್ರ ವಾಗೇವ ತಾವನ್ಮನಸಿ ಸಂಪದ್ಯತ ಇತಿ ಪ್ರಾಪ್ತಮ್ । ತಥಾ ಹಿ ಶ್ರುತಿರನುಗೃಹೀತಾ ಭವತಿ । ಇತರಥಾ ಲಕ್ಷಣಾ ಸ್ಯಾತ್ । ಶ್ರುತಿಲಕ್ಷಣಾವಿಶಯೇ ಚ ಶ್ರುತಿರ್ನ್ಯಾಯ್ಯಾ ನ ಲಕ್ಷಣಾ । ತಸ್ಮಾತ್ ವಾಚ ಏವಾಯಂ ಮನಸಿ ಪ್ರಲಯ ಇತಿ ॥

(ಭಾಷ್ಯಾರ್ಥ)

ಇನ್ನು ಅಪರವಿದ್ಯೆಗಳಲ್ಲಿ[1] ಫಲದ ಪ್ರಾಪ್ತಿಗಾಗಿ ದೇವಯಾನವೆಂಬ ಮಾರ್ಗವನ್ನು ತಿಳಿಸುವದಕ್ಕೆ ಹೊರಟು ಸದ್ಯಕ್ಕೆ ಮೊದಲು ಶಾಸ್ತ್ರದಂತೆ

---

1. ಉಪಾಸನೆಗಳಲ್ಲಿ ಎಂದರ್ಥ. ಪರವಿದ್ಯೆಯಲ್ಲಿ ಫಲವು ಆತ್ಮಸ್ವರೂಪವೇ ಆಗಿರುತ್ತದೆಯಾಗಿ ಮಾರ್ಗವು ಬೇಕಿಲ್ಲ,

ಉತ್ಕ್ರಾಂತಿಕ್ರಮವನ್ನು ಅನುವಾದಮಾಡುತ್ತಾರೆ. ತಿಳಿದವರಿಗೂ ತಿಳಿಯದವರಿಗೂ[1] ಉತ್ಕ್ರಾಂತಿಯು ಸಮಾನವಾಗಿರುವದೆಂದು (ಮುಂದೆ ಳನೆಯ ಅಧಿಕರಣದಲ್ಲಿ) ಹೇಳುತ್ತಾರೆ. ಸಾಯುವದನ್ನು ಕುರಿತ (ಒಂದು) ಶ್ರುತಿಯು ಹೀಗಿದೆ : "ಸೋಮ್ಯನೆ, ಹೊರಟುಹೋಗುತ್ತಿರುವ ಈ ಪುರುಷನ ವಾಕ್ಕು ಮನಸ್ಸಿನಲ್ಲಿ ಸೇರಿಹೋಗುತ್ತದೆ, ಮನಸ್ಸು ಪ್ರಾಣದಲ್ಲಿ, ಪ್ರಾಣವು ತೇಜಸ್ಸಿನಲ್ಲಿ, ತೇಜಸ್ಸು ಪರದೇವತೆಯಲ್ಲಿ (ಸೇರಿಹೋಗುತ್ತದೆ)" (ಛಾಂ.೬-೮-೬) ಇಲ್ಲೇನು ವೃತ್ತಿಯುಳ್ಳ ವಾಕ್ಕಿಗೇ ಮನಸ್ಸಿನಲ್ಲಿ ಸಂಪತ್ತಿಯನ್ನು ಹೇಳಿದೆಯೆ, ಅಥವಾ ವಾಗ್ವೃತ್ತಿಗೆ ಹೇಳಿದೆಯೆ ?- ಎಂಬುದು ಸಂಶಯ.

ಇಲ್ಲಿ ಮೊದಲನೆಯದಾಗಿ ವಾಕ್ಕೇ ಮನಸ್ಸಿನಲ್ಲಿ ಸೇರಿಹೋಗುತ್ತದೆ ಎಂದು (ಪೂರ್ವಪಕ್ಷವು) ಬಂದೊದಗುತ್ತದೆ. ಹಾಗಾದರಲ್ಲವೆ, ಶ್ರುತಿಯನ್ನು ಮನ್ನಿಸಿದಂತೆ ಆಗುತ್ತದೆ ? ಹಾಗಿಲ್ಲದಿದ್ದರೆ ಲಕ್ಷಣೆಯಾಗುವದು. ಶ್ರುತಿ, ಲಕ್ಷಣೆ- ಈ ಎರಡರ(ವಿಷಯದ) ಸಂಶಯವಾದರೆ ಶ್ರುತಿಯೇ ಯುಕ್ತವಾಗಿರುತ್ತದೆಯೇ ಹೊರತು ಲಕ್ಷಣೆಯಲ್ಲ. ಆದ್ದರಿಂದ ಇದು ವಾಕ್ಕಿಗೇ ಮನಸ್ಸಿನಲ್ಲಿ (ಆಗುವ) ಪ್ರಲಯವು.

## ಸಿದ್ಧಾಂತ: ವಾಗ್ವೃತ್ತಿಯೇ ಮನಸ್ಸಿನಲ್ಲಿ ಸೇರಿಕೊಳ್ಳುತ್ತದೆ

(ಭಾಷ್ಯ)

೫೪೦. ಏವಂ ಪ್ರಾಪ್ತೇ ಬ್ರೂಮಃ । ವಾಗ್ವೃತ್ತಿರ್ಮನಸಿ ಸಂಪದ್ಯತ ಇತಿ । ಕಥಂ ವಾಗ್ವೃತ್ತಿರಿತಿ ವ್ಯಾಖ್ಯಾಯತೇ ? ಯಾವತಾ "ವಾಙ್ಮನಸಿ" ಇತ್ಯೇವ ಆಚಾರ್ಯಃ ಪಠತಿ । ಸತ್ಯಮೇತತ್ । ಪಠಿಷ್ಯತಿ ತು ಪರಸ್ತಾತ್ "ಅವಿಭಾಗೋ ವಚನಾತ್" (೪-೨-೧೬) ಇತಿ । ತಸ್ಮಾತ್ ಅತ್ರ ವೃತ್ತ್ಯುಪಶಮಮಾತ್ರಂ ವಿವಕ್ಷಿತಮ್ ಇತಿ ಗಮ್ಯತೇ । ತತ್ತ್ವಪ್ರಲಯವಿವಕ್ಷಾಯಾಂ ತು ಸರ್ವತ್ರೈವ ಅವಿಭಾಗಸಾಮ್ಯಾತ್ ಕಿಂ ಪರತ್ರೈವ ವಿಶಿಂಷ್ಯಾತ್ "ಅವಿಭಾಗಃ" ಇತಿ ? ತಸ್ಮಾತ್ ಅತ್ರ ವೃತ್ತ್ಯುಪಸಂಹಾರವಿವಕ್ಷಾ । ವಾಗ್ವೃತ್ತಿಃ ಪೂರ್ವಮುಪಸಂಹ್ರಿಯತೇ ಮನೋವೃತ್ತೌ ಅವಸ್ಥಿತಾಯಾಮ್ ಇತ್ಯರ್ಥಃ । ಕಸ್ಮಾತ್ ? ದರ್ಶನಾತ್ । ದೃಶ್ಯತೇ ಹಿ ವಾಗ್ವೃತ್ತೇಃ ಪೂರ್ವೋಪಸಂಹಾರೋ ಮನೋವೃತ್ತೌ ವಿದ್ಯಮಾನಾಯಾಮ್ । ನ ತು ವಾಚ ಏವ ವೃತ್ತಿಮತ್ಯಾ ಮನಸ್ಯುಪಸಂಹಾರಃ ಕೇನಚಿದಪಿ ದ್ರಷ್ಟುಂ ಶಕ್ಯತೇ । ನನು ಶ್ರುತಿಸಾಮರ್ಥ್ಯಾತ್ ವಾಚ ಏವಾಯಂ ಮನಸ್ಯಪ್ಯಯೋ ಯುಕ್ತಃ ಇತ್ಯುಕ್ತಮ್ । ನೇತ್ಯಾಹ । ಅತತ್ಪ್ರಕೃತಿತ್ವಾತ್ । ಯಸ್ಯ ಹಿ ಯತ ಉತ್ಪತ್ತಿಃ, ತಸ್ಯ ತತ್ರ

1. ಉಪಾಸಕರಿಗೂ ಸಾಮಾನ್ಯರಿಗೂ ಎಂದರ್ಥ.

ಪ್ರಲಯೋ ನ್ಯಾಯ್ಯಃ। ಮೃದೀವ ಶರಾವಸ್ಯ। ನ ಚ ಮನಸೋ ವಾಗುತ್ಪದ್ಯತ ಇತಿ ಕಿಂಚನ ಪ್ರಮಾಣಮಸ್ತಿ। ವೃತ್ತ್ಯುದ್ಭವಾಭಿಭವೌ ತು ಅಪ್ರಕೃತಿಸಮಾಶ್ರಯಾವಪಿ ದೃಶ್ಯೇತೇ। ಪಾರ್ಥಿವೇಭ್ಯೋ ಹಿ ಇನ್ಧನೇಭ್ಯಃ ತೈಜಸಸ್ಯಾಗ್ನೇರ್ವೃತ್ತಿರುದ್ಭವತಿ। ಅಪ್ಸು ಚೋಪಶಾಮ್ಯತಿ। ಕಥಂ ತರ್ಹಿ ಅಸ್ಮಿನ್ ಪಕ್ಷೇ ಶಬ್ದಃ, "ವಾಙ್ಮನಸಿ ಸಂಪದ್ಯತೇ" (ಛಾಂ ೬-೮-೬) ಇತಿ? ಅತ ಆಹ- "ಶಬ್ದಾಚ್ಚ" ಇತಿ। ಶಬ್ದೋಽಪ್ಯಸ್ಮಿನ್ ಪಕ್ಷೇ ಅವಕಲ್ಪತೇ ವೃತ್ತಿವೃತ್ತಿಮತೋರಭೇದೋಪಚಾರಾತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಹೇಳುತ್ತೇವೆ. ವಾಗ್ವೃತ್ತಿಯು (ಮಾತ್ರ) ಮನಸ್ಸಿನಲ್ಲಿ ಸೇರಿಹೋಗುತ್ತದೆ.

(ಆಕ್ಷೇಪ) :- (ಸೂತ್ರಕಾರರಾದ) ಆಚಾರ್ಯರು "ವಾಙ್ಮನಸಿ" ಎಂದೇ ಹೇಳಿರುತ್ತಾರಲ್ಲ! "ವಾಗ್ವೃತ್ತಿಯು" ಎಂದು ವ್ಯಾಖ್ಯಾನಮಾಡಿದ್ದು ಹೇಗೆ (ಸರಿ)?

(ಪರಿಹಾರ) :- ಇದು ನಿಜ. ಆದರೆ ಮುಂದೆ "ಅವಿಭಾಗೋ ವಚನಾತ್" (೪-೨-೧೬) ಎಂದು (ಅವಿಭಾಗವನ್ನು) ಹೇಳಿರುತ್ತಾರೆ; ಆದ್ದರಿಂದ ಇಲ್ಲಿ ವೃತ್ತಿಯು ನಿಲ್ಲುವದು ಮಾತ್ರ ವಿವಕ್ಷಿತವಾಗಿದೆ ಎಂದು ಗೊತ್ತಾಗುತ್ತದೆ. ತತ್ತ್ವವೇ ಪ್ರಲಯವಾಗುವದೆಂಬ ವಿವಕ್ಷೆಯಿದ್ದರೆ ಎಲ್ಲೆಲ್ಲಿಯೂ ಅವಿಭಾಗವಾಗುವದು ಸಮವಾಗಿರುವಾಗ, ಮುಂದೆಯೇ "ಅವಿಭಾಗ"ವೆಂದು ವಿಶೇಷವನ್ನೇಕೆ ಹೇಳಿಯಾರು? ಆದ್ದರಿಂದ ಇಲ್ಲಿ ವೃತ್ತಿಯ ಉಪಸಂಹಾರವೇ ವಿವಕ್ಷಿತವಾಗಿದೆ.

ಮನೋವೃತ್ತಿಯು ಇದ್ದುಕೊಂಡಿರುವಾಗಲೇ ವಾಗ್ವೃತ್ತಿಯು ಮೊದಲು ಉಪಸಂಹಾರವಾಗುತ್ತದೆ ಎಂದರ್ಥ. ಏಕೆ? ಎಂದರೆ ಕಂಡಿರುವದರಿಂದ; ಮನೋವೃತ್ತಿಯು ಇದ್ದುಕೊಂಡಿರುವಾಗಲೇ ವಾಗ್ವೃತ್ತಿಯು ಉಪಸಂಹಾರವಾಗುವದು ಕಂಡುಬರುತ್ತದೆಯಲ್ಲವೆ? ಆದರೆ ವೃತ್ತಿಯೊಡಗೂಡಿದ ವಾಕ್ಕೇ ಮನಸ್ಸಿನಲ್ಲಿ ಉಪಸಂಹಾರವಾಗುವದನ್ನು ಯಾರಿಂದಲೂ ಕಾಣುವದಕ್ಕೆ ಶಕ್ಯವಲ್ಲ.

(ಆಕ್ಷೇಪ) :- ಶ್ರುತಿಯ ಸಾಮರ್ಥ್ಯದಿಂದ ಇದು ವಾಕ್ಕಿಗೇ ಮನಸ್ಸಿನಲ್ಲಿ ಆಗುವ ಪ್ರಲಯವು (ಎಂದು ತಿಳಿಯಬೇಕು) ಎಂದು ಹೇಳಿದೆವಲ್ಲ!

(ಪರಿಹಾರ) :- ಇಲ್ಲ, ಎನ್ನುತ್ತಾನೆ, (ಸಿದ್ಧಾಂತಿ). ಏಕೆಂದರೆ ಅದು (ಅದಕ್ಕೆ) ಪ್ರಕೃತಿಯಲ್ಲ. ಯಾವದಕ್ಕೆ ಏತರಿಂದ ಉತ್ಪತ್ತಿಯಾಗುವದೋ

ಅದಕ್ಕೆ ಅದರಲ್ಲಿ ಪ್ರಲಯವಾಗುವದು ಯುಕ್ತವು. ಉದಾಹರಣೆಗೆ ಮಣ್ಣಿನಲ್ಲಿ ಶರಾವೆಗೆ (ಪ್ರಲಯವಾಗುತ್ತದೆ). ಆದರೆ ಮನಸ್ಸಿನಿಂದ ವಾಕ್ಕು ಉಂಟಾಗುತ್ತದೆ ಎಂಬುದಕ್ಕೆ ಯಾವ ಪ್ರಮಾಣವೂ ಇರುವದಿಲ್ಲ. ವೃತ್ತಿಯು ಹುಟ್ಟಿ, ಮರೆಯಾಗುವದು– ಇವುಗಳಾದರೆ ಪ್ರಕೃತಿಯಲ್ಲದ್ದನ್ನು ಆಶ್ರಯಿಸಿಕೊಂಡೂ ಆಗುವದು ಕಂಡುಬಂದಿರುತ್ತದೆ. ಹೇಗೆಂದರೆ ಪಾರ್ಥಿವವಾದ ಕಟ್ಟಿಗೆಯಿಂದ ತೈಜಸವಾದ ಬೆಂಕಿಯ ವೃತ್ತಿಯು ಉಂಟಾಗುತ್ತದೆ, ನೀರಿನಲ್ಲಿ ಉಪಶಾಂತವಾಗುತ್ತದೆ.

(ಆಕ್ಷೇಪ) :– ಹಾಗಾದರೆ ಈ ಪಕ್ಷದಲ್ಲಿ "ವಾಙ್ಮನಸಿ ಸಂಪದ್ಯತೇ" (ವಾಕ್ಕು ಮನಸ್ಸಿನಲ್ಲಿ ಸೇರಿಕೊಳ್ಳುತ್ತದೆ. ಛಾಂ. ೬–೮–೬) ಎಂಬ ಶಬ್ದವು ಹೇಗೆ (ಹೊಂದುಗಡೆಯಾಗಬೇಕು)? ಎಂಬೀ (ಆಕ್ಷೇಪಕ್ಕೆ ಸೂತ್ರಕಾರರು ಹೇಳುತ್ತಾರೆ) : "ಶಬ್ದಾಚ್ಚ" (ಶಬ್ದದಿಂದಲೂ ಹೀಗೆ). ಶಬ್ದವೂ ಈ ಪಕ್ಷದಲ್ಲಿ ವೃತ್ತಿ, ವೃತ್ತಿಯುಳ್ಳದ್ದು–ಇವುಗಳಿಗೆ ಅಭೇದವನ್ನು ಉಪಚಾರಕ್ಕಾಗಿ (ಹೇಳಿರುವದರಿಂದ) ಹೊಂದುಗಡೆಯಾಗಿರುತ್ತದೆ ಎಂದರ್ಥ.

## ಅತ ಏವ ಸರ್ವಾಣ್ಯನು ॥ ೨ ॥

೨. ಆದ್ದರಿಂದಲೇ ಎಲ್ಲವೂ (ಮನಸ್ಸನ್ನು) ಅನುಸರಿಸುತ್ತವೆ.

## ವಾಕ್ಕಿನಂತೆಯೇ ಮಿಕ್ಕ ಇಂದ್ರಿಯಗಳ ವೃತ್ತಿಗಳು

(ಭಾಷ್ಯ)

೫೪೧. "ತಸ್ಮಾದುಪಶಾನ್ತತೇಜಾಃ । ಪುನರ್ಭವಮಿನ್ದ್ರಿಯೈರ್ಮನಸಿ ಸಂಪದ್ಯಮಾನೈಃ" (ಪ್ರ. ೩–೯) ಇತ್ಯತ್ರ ಅವಿಶೇಷೇಣ ಸರ್ವೇಷಾಮೇವ ಇನ್ದ್ರಿಯಾಣಾಂ ಮನಸಿ ಸಂಪತ್ತಿಃ ಶ್ರೂಯತೇ । ತತ್ರಾಪ್ಯೇತ ಏವ ವಾಚ ಇವ ಚಕ್ಷುರಾದೀನಾಮಪಿ ಸವೃತ್ತಿಕೇ ಮನಸ್ಯವಸ್ಥಿತೇ ವೃತ್ತಿಲೋಪದರ್ಶನಾತ್ ತತ್ತ್ವಪ್ರಲಯಾಸಂಭವಾತ್ ಶಬ್ದೋಪಪತ್ತೇಶ್ಚ ವೃತ್ತಿದ್ವಾರೇಣೈವ ಸರ್ವಾಣೀನ್ದ್ರಿಯಾಣಿ ಮನೋಽನುವರ್ತನ್ತೇ । ಸರ್ವೇಷಾಂ ಕರಣಾನಾಂ ಮನಸ್ಯುಪಸಂಹಾರಾವಿಶೇಷೇ ಸತಿ ವಾಚಃ ಪೃಥಗ್ಗ್ರಹಣಂ "ವಾಙ್ಮನಸಿ ಸಂಪದ್ಯತೇ" ಇತ್ಯುದಾಹರಣಾನುರೋಧೇನ ॥

(ಭಾಷ್ಯಾರ್ಥ)

"ಆದ್ದರಿಂದ (ಅವನ) ತೇಜಸ್ಸು ಉಪಶಾಂತವಾಗುವದು. ಮನಸ್ಸಿನಲ್ಲಿ ಒಂದಾಗುವ ಇಂದ್ರಿಯಗಳೊಡನೆ ಮತ್ತೊಂದು ಜನ್ಮವನ್ನು (ಪಡೆಯುತ್ತಾನೆ)"

(ಪ್ರ. ೩–೯) ಎಂಬಲ್ಲಿ (ಯಾವ) ವಿಶೇಷವೂ ಇಲ್ಲದೆ ಎಲ್ಲಾ ಇಂದ್ರಿಯಗಳಿಗೂ ಮನಸ್ಸಿನಲ್ಲಿ ಸಂಪತ್ತಿಯಾಗುವದೆಂದು ಶ್ರುತಿಯು (ಹೇಳು)ತ್ತದೆ. ಅಲ್ಲಿಯೂ ಈ (ಕಾರಣ)ದಿಂದಲೇ ಎಂದರೆ ವಾಕ್ಕಿನಂತೆ, ಚಕ್ಷುರಾದಿಗಳಿಗೂ ವೃತ್ತಿಸಹಿತವಾದ ಮನಸ್ಸು ಇದ್ದುಕೊಂಡಿರುವಾಗಲೇ ವೃತ್ತಿಯು ಇಲ್ಲವಾಗುವದು ಕಂಡುಬಂದಿರುವದರಿಂದಲೂ ತತ್ತ್ವವೇ ಪ್ರಲಯವಾಗುವದು ಸಂಭವಿಸುವದಿಲ್ಲವಾದ್ದರಿಂದಲೂ ಶಬ್ದವೂ ಹೊಂದುಗಡೆಯಾಗುವದರಿಂದಲೂ, ವೃತ್ತಿದ್ವಾರದಿಂದಲೇ ಎಲ್ಲಾ ಇಂದ್ರಿಯಗಳೂ ಮನಸ್ಸನ್ನು ಅನುಸರಿಸುತ್ತವೆ (ಎಂದು ನಿಶ್ಚಯಿಸಬೇಕು). ಎಲ್ಲಾ ಕರಣಗಳೂ[1] ಮನಸ್ಸಿನಲ್ಲಿ ಉಪಸಂಹಾರವಾಗುವದು ಸಮಾನವಾಗಿದ್ದರೂ ವಾಕ್ಕನ್ನೇ ಬೇರೆಯಾಗಿ ಹೇಳಿರುವದು "ವಾಙ್ಮನಸಿ ಸಂಪದ್ಯತೇ" (ಛಾಂ.) ಎಂಬ (ಶ್ರುತಿಯ) ಉದಾಹರಣೆಗೆ ಅನುಸಾರವಾಗಿ.

## ೨. ಮನೋಽಧಿಕರಣ

(ಉತ್ಕ್ರಾಂತಿಯಲ್ಲಿ ಮನೋವೃತ್ತಿಯು ಪ್ರಾಣದಲ್ಲಿ ಲಯವಾಗುತ್ತದೆ)

**ತನ್ಮನಃ ಪ್ರಾಣ ಉತ್ತರಾತ್ ॥ ೩ ॥**

೩. ಆ ಮನಸ್ಸು ಪ್ರಾಣದಲ್ಲಿ (ಲಯವಾಗುತ್ತದೆ); ಮುಂದಿನ ವಾಕ್ಯದಿಂದ (ಹೀಗೆಂದು ಗೊತ್ತಾಗುತ್ತದೆ).

## ಪೂರ್ವಪಕ್ಷ: ವೃತ್ತಿಯಿಂದೊಡಗೂಡಿದ ಮನಸ್ಸಿಗೆ ಪ್ರಾಣದಲ್ಲಿ ಲಯ

(ಭಾಷ್ಯ)

೫೪೨. ಸಮಧಿಗತಮೇತತ್ "ವಾಙ್ಮನಸಿ ಸಂಪದ್ಯತೇ" (ಛಾಂ. ೬–೮–೬) ಇತ್ಯತ್ರ ವೃತ್ತಿಸಂಪತ್ತಿವಿವಕ್ಷಾ ಇತಿ। ಅಥ ಯದುತ್ತರವಾಕ್ಯಮ್ "ಮನಃ ಪ್ರಾಣೇ" (ಛಾಂ. ೬–೮–೬) ಇತಿ। ಕಿಮತ್ರಾಪಿ ವೃತ್ತಿಸಂಪತ್ತಿರೇವ ವಿವಕ್ಷ್ಯತೇ ಉತ ವೃತ್ತಿಮತ್ಸಂಪತ್ತಿಃ? ಇತಿ ವಿಚಿಕಿತ್ಸಾಯಾಂ ವೃತ್ತಿಮತ್ಸಂಪತ್ತಿರೇವಾತ್ರ ಇತಿ ಪ್ರಾಪ್ತಮ್। ಶ್ರುತ್ಯನುಗ್ರಹಾತ್, ತತ್ಪ್ರಕೃತಿಕತ್ವೋಪಪತ್ತೇಶ್ಚ। ತಥಾ ಹಿ "ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಃ" (ಛಾಂ. ೬–೫–೪) ಇತ್ಯನ್ನಯೋನಿಂ ಮನ ಆಮನನ್ತಿ, ಅಬ್ಯೋನಿಂ ಚ ಪ್ರಾಣಮ್। "ಆಪಶ್ಚಾನ್ನಮಸೃಜನ್ತ" (ಛಾಂ ೬–೨–೪) ಇತಿ ಶ್ರುತಿಃ। ಅತಶ್ಚ ಯನ್ಮನಃ ಪ್ರಾಣೇ ಪ್ರಲೀಯತೇ। ಅನ್ನಮೇವ ತದಪ್ಸು ಪ್ರಲೀಯತೇ। ಅನ್ನಂ ಹಿ ಮನಃ, ಆಪಶ್ಚ ಪ್ರಾಣಃ, ಪ್ರಕೃತಿವಿಕಾರಾಭೇದಾತ್ ಇತಿ ॥

1. ಕರಣವ್ಯಾಪಾರಗಳೂ ಎಂದರ್ಥ.

(ಭಾಷ್ಯಾರ್ಥ)

"ವಾಕ್ಕು ಮನಸ್ಸಿನಲ್ಲಿ ಸೇರಿಹೋಗುತ್ತದೆ'' (ಛಾಂ. ೬–೮–೬) ಎಂಬಲ್ಲಿ ವೃತ್ತಿಯು ಸೇರಿಹೋಗುತ್ತದೆ ಎಂದೇ ವಿವಕ್ಷಿತವಾಗಿದೆ ಎಂದು ನಿಶ್ಚಯವಾಯಿತಷ್ಟೆ. ಇನ್ನು ಮುಂದಿನ ವಾಕ್ಯದಲ್ಲಿ "ಮನಸ್ಸು ಪ್ರಾಣದಲ್ಲಿ (ಸೇರಿಹೋಗುತ್ತದೆ)" (ಛಾಂ. ೬–೮–೬) ಎಂದಿದೆಯಲ್ಲ, ಅಲ್ಲಿಯೂ ವೃತ್ತಿಯ ಸಂಪತ್ತಿಯೇ ವಿವಕ್ಷಿತವಾಗಿದೆಯೆ, ಅಥವಾ ವೃತ್ತಿಯಿಂದೊಡಗೂಡಿದ (ಮನಸ್ಸಿನ) ಸಂಪತ್ತಿಯು (ವಿವಕ್ಷಿತವೆ) ?– ಎಂಬ ಸಂಶಯವುಂಟಾಗಲು ಇಲ್ಲಿ ವೃತ್ತಿಯಿಂದೊಡಗೂಡಿದ (ಮನಸ್ಸಿನ) ಸಂಪತ್ತಿಯೇ ಎಂಬ (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆಂದರೆ (ಆಗ) ಶ್ರುತಿಯನ್ನು ಅನುಸರಿಸಿದಂತೆ (ಆಗುತ್ತದೆ), ತತ್ಪ್ರಕೃತಿಕತ್ವವೆಂಬುದೂ ಹೊಂದುತ್ತದೆ. ಹೇಗೆಂದರೆ, "ಸೋಮ್ಯನೆ, ಮನಸ್ಸು ಅನ್ನಮಯವಲ್ಲವೆ, ಪ್ರಾಣವು ಅಮ್ಮಯ(ವಲ್ಲವೆ)?" (ಛಾಂ. ೬–೫–೪) ಎಂದು ಮನಸ್ಸಿಗೆ ಅನ್ನವು ಕಾರಣವೆಂದೂ ಪ್ರಾಣಕ್ಕೆ ಅಪ್ಪು ಕಾರಣವೆಂದೂ ಪಠಿಸುತ್ತಾರೆ. "ಅಪ್ಪು ಅನ್ನವನ್ನು ಸೃಜಿಸಿತು" (ಛಾಂ. ೬–೨–೪) ಎಂದು ಶ್ರುತಿಯಿದೆ. ಆದ್ದರಿಂದ ಮನಸ್ಸು ಪ್ರಾಣದಲ್ಲಿ ಪ್ರಲಯವಾಗುತ್ತದೆ ಎಂದರೆ ಅನ್ನವೇ ಅಪ್ಪಿನಲ್ಲಿ ಪ್ರಲಯವಾಗುತ್ತದೆ (ಎಂದು ಆದರ ಅರ್ಥ). ಹೇಗೆಂದರೆ ಮನಸ್ಸೆಂದರೆ ಅನ್ನವೇ, ಪ್ರಾಣವೆಂದರೆ ಅಪ್ಪೇ ; ಏಕೆಂದರೆ ಪ್ರಕೃತಿವಿಕಾರಗಳಿಗೆ (ಒಂದಕ್ಕೊಂದಕ್ಕೆ) ಭೇದವಿರುವದಿಲ್ಲ.

## ಸಿದ್ಧಾಂತ: ಮನಸ್ಸು ವೃತ್ತಿದ್ವಾರದಿಂದಲೇ ಪ್ರಾಣದಲ್ಲಿ ಲಯವಾಗುತ್ತದೆ

(ಭಾಷ್ಯ)

೫೪೩. ಏವಂ ಪ್ರಾಪ್ತೇ ಬ್ರೂಮಃ । ತದಪಿ ಅಗೃಹೀತಬಾಹ್ಯೇನ್ದ್ರಿಯವೃತ್ತಿ ಮನಃ ವೃತ್ತಿದ್ವಾರೇಣೈವ ಪ್ರಾಣೇ ಪ್ರಲೀಯತೇ ಇತಿ ಉತ್ತರಾದ್ ವಾಕ್ಯಾತ್ ಅವಗನ್ತವ್ಯಮ್ । ತಥಾ ಹಿ ಸುಷುಪ್ಸೋಃ ಮುಮೂರ್ಷೋಶ್ಚ ಪ್ರಾಣವೃತ್ತೌ ಪರಿಸ್ಪನ್ದಾತ್ಮಿಕಾಯಾಮ್ ಅವಸ್ಥಿತಾಯಾಂ ಮನೋವೃತ್ತೀನಾಮ್ ಉಪಶಮೋ ದೃಶ್ಯತೇ । ನ ಚ ಮನಸಃ ಸ್ವರೂಪಾಪ್ಯಯಃ ಪ್ರಾಣೇ ಸಂಭವತಿ। ಅತತ್ಪ್ರಕೃತಿತ್ವಾತ್ । ನನು ದರ್ಶಿತಂ ಮನಸಃ ಪ್ರಾಣಪ್ರಕೃತಿತ್ವಮ್ ನೈತತ್ಸಾರಮ್। ನ ಹೀದೃಶೇನ ಪ್ರಾಣಾಡಿಕೇನ ತತ್ಪ್ರಕೃತಿತ್ವೇನ ಮನಃ ಪ್ರಾಣೇ ಸಂಪತ್ತುಮರ್ಹತಿ । ಏವಮಪಿ ಹಿ ಅನ್ನೇ ಮನಃ ಸಂಪದ್ಯೇತ, ಅಪ್ಸು ಚಾನ್ನಮ್ । ಅಪ್ಸ್ವೇವ ಚ ಪ್ರಾಣಃ। ನ ಹಿ ಏತಸ್ಮಿನ್ನಪಿ ಪಕ್ಷೇ ಪ್ರಾಣಭಾವಪರಿಣತಾಭ್ಯೋಽದ್ಭ್ಯೋ ಮನೋ ಜಾಯತೇ ಇತಿ ಕಿಂಚನ ಪ್ರಮಾಣಮಸ್ತಿ। ತಸ್ಮಾತ್

ನ ಮನಸಃ ಪ್ರಾಣೇ ಸ್ವರೂಪಾಪ್ಯಯಃ । ವೃತ್ತ್ಯಪ್ಯಯೇಽಪಿ ತು ಶಬ್ದೋಽವ ಕಲ್ಪತೇ । ವೃತ್ತಿವೃತ್ತಿಮತೋರಭೇದೋಪಚಾರಾತ್ ಇತಿ ದರ್ಶಿತಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಹೊರಗಿನ ಇಂದ್ರಿಯಗಳ ವೃತ್ತಿಗಳನ್ನು ತೆಗೆದುಕೊಂಡು (ಸೇರಿಸಿಕೊಂಡಿರುವ) ಆ ಮನಸ್ಸುಕೂಡ ವೃತ್ತಿದ್ವಾರದಿಂದಲೇ ಪ್ರಾಣದಲ್ಲಿ ಪ್ರಲಯವಾಗುತ್ತದೆ ಎಂದು ಮುಂದಿನ ವಾಕ್ಯದಿಂದ ನಿಶ್ಚಯಿಸಬೇಕು. ಆದ್ದರಿಂದಲೇ ಅಲ್ಲವೆ, ನಿದ್ರೆಮಾಡುವವಕ್ಕೆ ಹೊರಡುವವನಿಗೂ ಸಾಯುವದರಲ್ಲಿರುವವನಿಗೂ ಪರಿಸ್ಪಂದರೂಪವಾದ ಪ್ರಾಣವೃತ್ತಿಯು ಇದ್ದುಕೊಂಡಿದ್ದರೂ ಮನೋವೃತ್ತಿಗಳ ನಾಶವು ಕಾಣುತ್ತದೆ? ಮನಸ್ಸಿಗೆ ಪ್ರಾಣದಲ್ಲಿ ಸ್ವರೂಪಲಯವೂ ಸಂಭವಿಸುವದಿಲ್ಲ. ಏಕೆಂದರೆ ಅದಕ್ಕೆ (ಆ ಪ್ರಾಣವು) ಪ್ರಕೃತಿಯಲ್ಲ.

(ಆಕ್ಷೇಪ) :– ಮನಸ್ಸಿಗೆ ಪ್ರಾಣವು ಪ್ರಕೃತಿಯೆಂಬುದನ್ನು ನಾವು ತಿಳಿಸಿಕೊಟ್ಟಿದ್ದೇವಲ್ಲ !

(ಪರಿಹಾರ) :– ಇದು ಸರಿಯಲ್ಲ. ಏಕೆಂದರೆ ಇಂಥ ಪರಂಪರೆಯ ತತ್ಪ್ರಕೃತಿತ್ವದಿಂದ[1] ಮನಸ್ಸು ಪ್ರಾಣದಲ್ಲಿ ಒಂದಾಗಲಾರದು. ಹೀಗಾದರೂ[2] ಅನ್ನದಲ್ಲಿ ಮನಸ್ಸು ಒಂದಾಗಬೇಕು, ಮತ್ತು ಅಪ್ಪಿನಲ್ಲಿ ಅನ್ನವೂ ಅಪ್ಪಿನಲ್ಲಿಯೇ ಪ್ರಾಣವೂ ( ಒಂದಾಗಬೇಕು ). ಈ ಪಕ್ಷದಲ್ಲಿಯೂ ಪ್ರಾಣರೂಪದಿಂದ ಪರಿಣಾಮವಾಗಿರುವ ಅಪ್ಪಿನಿಂದ ಮನಸ್ಸು ಹುಟ್ಟುತ್ತದೆ ಎಂಬದಕ್ಕೆ ಯಾವ ಪ್ರಮಾಣವೂ ಇಲ್ಲವೇ ಇಲ್ಲ. ಆದ್ದರಿಂದ ಮನಸ್ಸಿಗೆ ಪ್ರಾಣದಲ್ಲಿ ಸ್ವರೂಪಲಯವಿಲ್ಲ. (ಮನಃ ಪ್ರಾಣೇ ಎಂಬ) ಶಬ್ದವಾದರೋ ವೃತ್ತಿಲಯದ (ಪಕ್ಷ)ದಲ್ಲಿಯೂ ಉಪಪನ್ನವಾಗುತ್ತದೆ; ಏಕೆಂದರೆ ವೃತ್ತಿ, ವೃತ್ತಿಯುಳ್ಳದ್ದು– ಇವುಗಳಿಗೆ ಅಭೇದವನ್ನು ಗೌಣವಾಗಿ ಹೇಳಿದೆ ಎಂದು ಕಲ್ಪಿಸಬಹುದೆಂದು (ಹಿಂದೆಯೇ) ತಿಳಿಸಿರುತ್ತೇವೆ.

## ೩. ಅಧ್ಯಕ್ಷಾಧಿಕರಣ (ಸೂ. ೪–೬)

### ಸೋಽಧ್ಯಕ್ಷೇ ತದುಪಗಮಾದಿಭ್ಯಃ ॥ ೪ ॥

೪. ಆ (ಪ್ರಾಣನು) ಅಧ್ಯಕ್ಷನಲ್ಲಿ (ನಿಲ್ಲುತ್ತಾನೆ); ಅವನ ಬಳಿಗೆ ಬರುವದೇ ಮುಂತಾದವುಗಳಿಂದ (ಹೀಗೆಂದು ಗೊತ್ತಾಗುತ್ತದೆ).

---

1. ಒಂದಕ್ಕೊಂದು ಹೀಗೋ ಪ್ರಕೃತಿಯಾಗಿರುವದರಿಂದ ಎಂದರ್ಥ ; ಮನಸ್ಸಿಗೆ ಪ್ರಾಣವು ನೇರಾಗಿ ಪ್ರಕೃತಿಯಲ್ಲ.

2. ನೀವು ಹೇಳುವಂತೆ ತತ್ಪ್ರಕೃತಿತ್ವವನ್ನು ಒಪ್ಪಿಕೊಂಡರೂ.

(ಭಾಷ್ಯ)

೫೪೪. ಸ್ಥಿತಮೇತತ್ ಯಸ್ಯ ಯತೋ ಸೋತ್ಪತ್ತಿಃ ತಸ್ಯ ತಸ್ಮಿನ್ ವೃತ್ತಿಪ್ರಲಯಃ, ನ ಸ್ವರೂಪಪ್ರಲಯಃ ಇತಿ। ಇದಮಿದಾನೀಂ "ಪ್ರಾಣಸ್ತೇಜಸಿ" (ಛಾಂ. ೬-೮-೬) ಇತ್ಯತ್ರ ಚಿನ್ತ್ಯತೇ। ಕಿಂ ಯಥಾಶ್ರುತಿ ಪ್ರಾಣಸ್ಯ ತೇಜಸ್ಯೇವ ವೃತ್ತ್ಯುಪಸಂಹಾರಃ, ಕಿಂವಾ ದೇಹೇನ್ದ್ರಿಯಪಞ್ಜರಾಧ್ಯಕ್ಷೇ ಜೀವೇ ಇತಿ। ತತ್ರ ಶ್ರುತೇರನತಿಶಙ್ಕ್ಯತ್ವಾತ್ ಪ್ರಾಣಸ್ಯ ತೇಜಸ್ಯೇವ ಸಂಪತ್ತಿಃ ಸ್ಯಾತ್ ಅಶ್ರುತಕಲ್ಪನಾಯಾ ಅನ್ಯಾಯ್ಯತ್ವಾತ್ ಇತಿ। ಏವಂ ಪ್ರಾಪ್ತೇ ಪ್ರತಿಪದ್ಯತೇ ಸೋಽಧ್ಯಕ್ಷ ಇತಿ। ಸ ಪ್ರಕೃತಃ ಪ್ರಾಣಃ ಅಧ್ಯಕ್ಷೇ, ವಿದ್ಯಾಕರ್ಮಪೂರ್ವಪ್ರಜ್ಞೋಪಾಧಿಕೇ ವಿಜ್ಞಾನಾತ್ಮನಿ ಅವತಿಷ್ಠತೇ। ತತ್ಪ್ರಧಾನಾ ಪ್ರಾಣವೃತ್ತಿರ್ಭವತಿ ಇತ್ಯರ್ಥಃ। ಕುತಃ? ತದುಪಗಮಾದಿಭ್ಯಃ। "ಏವಮೇವೇಮಮಾತ್ಮಾನಮನ್ತಕಾಲೇ ಸರ್ವೇ ಪ್ರಾಣಾ ಅಭಿಸಮಾಯನ್ತಿ ಯತ್ರೈತದೂರ್ಧ್ವೋಚ್ಛ್ವಾಸೀ ಭವತಿ" (ಬೃ. ೪-೩-೩೮) ಇತಿ ಹಿ ಶ್ರುತ್ಯನ್ತರಮ್ ಅಧ್ಯಕ್ಷೋಪಗಾಮಿನಃ ಸರ್ವಾನ್ ಪ್ರಾಣಾನ್ ಅವಿಶೇಷೇಣ ದರ್ಶಯತಿ। ವಿಶೇಷೇಣ ಚ "ತಮುತ್ಕ್ರಾಮನ್ತಂ ಪ್ರಾಣೋಽನೂತ್ಕ್ರಾಮತಿ" (ಬೃ. ೪-೪-೨) ಇತಿ ಪಞ್ಚವೃತ್ತೇಃ ಪ್ರಾಣಸ್ಯ ಅಧ್ಯಕ್ಷಾನುಗಾಮಿತಾಂ ದರ್ಶಯತಿ। ತದನುವೃತ್ತಿತಾಂ ಚೇತರೇಷಾಮ್ "ಪ್ರಾಣಮನೂತ್ಕ್ರಾಮನ್ತಂ ಸರ್ವೇ ಪ್ರಾಣಾ ಅನೂತ್ಕ್ರಾಮನ್ತಿ" (ಬೃ. ೪-೪-೨) ಇತಿ। "ಸವಿಜ್ಞಾನೋ ಭವತಿ" (ಬೃ. ೪-೪-೨) ಇತಿ ಚಾಧ್ಯಕ್ಷಸ್ಯ ಅನ್ತರ್ವರ್ತಿವಿಜ್ಞಾನವತ್ತ್ವಪ್ರದರ್ಶನೇನ ತಸ್ಮಿನ್ನಪೀತಕರಣಗ್ರಾಮಸ್ಯ ಪ್ರಾಣಸ್ಯ ಅವಸ್ಥಾನಂ ಗಮಯತಿ। ನನು "ಪ್ರಾಣಸ್ತೇಜಸಿ" (ಛಾಂ. ೬-೮-೬) ಇತಿ ಶ್ರೂಯತೇ, ಕಥಂ "ಪ್ರಾಣೋಽಧ್ಯಕ್ಷೇ" ಇತಿ ಅಧಿಕಾವಾಪಃ ಕ್ರಿಯತೇ? ನೈಷ ದೋಷಃ। ಅಧ್ಯಕ್ಷಪ್ರಧಾನತ್ವಾತ್ ಉತ್ಕ್ರಮಣಾದಿವ್ಯವಹಾರಸ್ಯ। ಶ್ರುತ್ಯನ್ತರಗತಸ್ಯಾಪಿ ಚ ವಿಶೇಷಸ್ಯ ಅಪೇಕ್ಷಣೀಯತ್ವಾತ್ ॥

(ಭಾಷ್ಯಾರ್ಥ)

ಯಾವದಕ್ಕೆ ಏತರಿಂದ ಉತ್ಪತ್ತಿಯಿಲ್ಲವೋ ಅದಕ್ಕೆ ಅದರಲ್ಲಿ ವೃತ್ತಿಪ್ರಲಯವೇ ಹೊರತು ಸ್ವರೂಪಪ್ರಲಯವಿಲ್ಲ ಎಂದು ನಿಂತಿತಷ್ಟೆ. "ಪ್ರಾಣವು ತೇಜಸ್ಸಿನಲ್ಲಿ (ಲಯವಾಗುತ್ತದೆ)" (ಛಾಂ. ೬-೮-೬) ಎಂಬಲ್ಲಿ ಇದನ್ನು ಈಗ ವಿಚಾರಿಸಲಾಗುತ್ತದೆ ಶ್ರುತಿಯಿರುವಂತೆಯೇ ಪ್ರಾಣಕ್ಕೆ ತೇಜಸ್ಸಿನಲ್ಲಿಯೇ ವೃತ್ತಿಯ ಉಪಸಂಹಾರವಾಗುತ್ತದೆಯೆ, ಅಥವಾ ದೇಹೇಂದ್ರಿಯಪಂಜರದ ಅಧ್ಯಕ್ಷನಾದ ಜೀವನದಲ್ಲಿ (ಉಪಸಂಹಾರವಾಗುತ್ತದೆಯೆ)? -ಎಂಬಿದನ್ನು ಈಗ ಚಿಂತಿಸಲಾಗುತ್ತದೆ.

ಇಲ್ಲಿ ಶ್ರುತಿಯನ್ನು ಮೀರಿ ಶಂಕಿಸುವದು ಸರಿಯಲ್ಲವಾದ್ದರಿಂದ ಪ್ರಾಣಕ್ಕೆ ತೇಜಸ್ಸಿನಲ್ಲಿಯೇ ಸಂಪತ್ತಿಯಾಗುವದು (ಎನ್ನಬೇಕು); ಏಕೆಂದರೆ ಶ್ರುತಿಯಲ್ಲಿ ಹೇಳದಿರುವದನ್ನು ಕಲ್ಪಿಸುವದು ಅನ್ಯಾಯವಾಗಿದೆ ಎಂದಾಗುತ್ತದೆ.

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು) ಅಭಿಪ್ರಾಯಪಡುತ್ತಾರೇನೆಂದರೆ "ಅದು ಅಧ್ಯಕ್ಷನಲ್ಲಿ (ನಿಲ್ಲುತ್ತದೆ)." ಆ ಪ್ರಕೃತವಾದ ಪ್ರಾಣವು ಅಧ್ಯಕ್ಷನಲ್ಲಿ ಎಂದರೆ ವಿದ್ಯೆ[1], ಕರ್ಮ, ಪೂರ್ವಪ್ರಜ್ಞೆ —ಎಂಬೀ ಉಪಾಧಿಗಳುಳ್ಳ ವಿಜ್ಞಾನಾತ್ಮನಲ್ಲಿ ನಿಂತಿರುತ್ತದೆ; ಅವನನ್ನು ಪ್ರಧಾನವಾಗಿ ಮಾಡಿಕೊಂಡು ಪ್ರಾಣವೃತ್ತಿಯು ಇರುತ್ತದೆ ಎಂದರ್ಥ. ಏಕೆ ? ಎಂದರೆ ಅವನ ಬಳಿಗೆ ಬರುವದೇ ಮುಂತಾದವುಗಳಿಂದ[2] (ಹೀಗೆನ್ನಬೇಕು)[3]. "ಹೀಗೆಯೇ ಈ ಆತ್ಮನನ್ನು ಅಂತಕಾಲದಲ್ಲಿ ಎಲ್ಲಾ ಪ್ರಾಣಗಳೂ, ಯಾವಾಗ ಹೀಗೆ ಮೇಲುಸಿರನವನಾಗುವನೋ (ಆಗ), ಬಳಿಸಾರುವವು" (ಬೃ.೪–೩–೩೮) ಎಂದಲ್ಲವೆ, ಮತ್ತೊಂದು ಶ್ರುತಿಯು, ಎಲ್ಲಾ ಪ್ರಾಣಿಗಳೂ (ಯಾವ) ವಿಶೇಷವೂ ಇಲ್ಲದೆ ಅಧ್ಯಕ್ಷನ ಬಳಿಗೆ ಬರುವವೆಂದು ತಿಳಿಸುತ್ತದೆ[4] ? ಅದರಲ್ಲಿಯೂ ಪಂಚವೃತ್ತಿಗಳ ಪ್ರಾಣವು ಅಧ್ಯಕ್ಷನನ್ನು ಅನುಸರಿಸಿಹೋಗುವನೆಂದು "ಅವನು ಉತ್ಕ್ರಾಂತನಾದಾಗ ಪ್ರಾಣವೂ ಅನುಸರಿಸಿ ಉತ್ಕ್ರಾಂತವಾಗುವದು" (ಬೃ. ೪–೪–೨) ಎಂದು ಹೇಳುತ್ತದೆ. "ಪ್ರಾಣವು ಅನುಸರಿಸಿ ಉತ್ಕ್ರಾಂತವಾಗಲು ಎಲ್ಲಾ ಪ್ರಾಣಗಳೂ ಅನುಸರಿಸಿ ಉತ್ಕ್ರಾಂತವಾಗುವವು" (ಬೃ. ೪–೪–೨) ಎಂದು ಉಳಿದ ಪ್ರಾಣಗಳು ಅವನನ್ನು ಅನುವರ್ತಿಸುವವೆಂದು (ತಿಳಿಸುತ್ತದೆ)[5]. "ಸವಿಜ್ಞಾನನಾಗಿರುತ್ತಾನೆ" (ಬೃ. ೪–೪–೨) ಎಂದು ಅಧ್ಯಕ್ಷನು ತನ್ನೊಳಗೆ ವಿಜ್ಞಾನವುಳ್ಳವನಾಗಿರುತ್ತಾನೆಂದು ತಿಳಿಸುವದರಿಂದ ಅವನಲ್ಲಿ ಕರಣಗ್ರಾಮವು ಪ್ರಲಯವಾಗಿರುವ ಪ್ರಾಣವು ಇದ್ದುಕೊಂಡಿರುತ್ತದೆ ಎಂದು ತಿಳಿಸುತ್ತದೆ[6].

(ಆಕ್ಷೇಪ) :— "ಪ್ರಾಣವು ತೇಜಸ್ಸಿನಲ್ಲಿ (ಸೇರಿಹೋಗುತ್ತದೆ)" (ಛಾಂ. ೬–೮–೬) ಎಂದೇ ಶ್ರುತಿಯಲ್ಲಿದೆ. "ಪ್ರಾಣವು ಅಧ್ಯಕ್ಷನಲ್ಲಿ (ಇರುತ್ತದೆ) ಎಂದು ಹೆಚ್ಚಿಗೆಯನ್ನು ಸೇರಿಸಿರುವದು ಹೇಗೆ ಸರಿ ?

---

1. 'ವಿದ್ಯೆ' ಎಂದೇ ಶ್ರುತಿಯಲ್ಲಿದೆ; ವ್ಯಾಖ್ಯಾನಕಾರರು 'ಅವಿದ್ಯೆ' ಎಂಬ ಪಾಠವನ್ನು ಅನುಸರಿಸಿರುತ್ತಾರೆ.

2. ಉಪಗಮ, ಅನುಗಮನ, ಅವಸ್ಥಾನ —ಎಂಬ ಹೇತುಗಳಿಂದ.

3. ರಾಜನು ಹೊರಟುಹೋಗುವಾಗ ದಂಡಾಧಿಕಾರಿಗಳು ಸೂತರು ಮುಂತಾದವರು ಹಿಂಬಾಲಿಸುವಂತೆ.

4. ಇದು ಉಪಗಮನಶ್ರುತಿ.

5. ಇದು ಅನುಗಮನಶ್ರುತಿ.

6. ಇದು ಅವಸ್ಥಾನಶ್ರುತಿ.

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಉತ್ಕ್ರಮಣವೇ ಮುಂತಾದ ವ್ಯವಹಾರಕ್ಕೆ ಅಧ್ಯಕ್ಷನೇ ಮುಖ್ಯ ; ಮತ್ತು ಶ್ರುತ್ಯಂತರದಲ್ಲಿರುವ ವಿಶೇಷವನ್ನು (ಇಲ್ಲಿ) ಅಪೇಕ್ಷಿಸತಕ್ಕದ್ದಾಗಿದೆ.

**ಭೂತೇಷು ತಚ್ಛ್ರುತೇಃ ॥ ೫ ॥**

೫. ಏಕೆಂದರೆ ಹಾಗೆಂದು ಶ್ರುತಿಯುಂಟು.

## ಜೀವನು ಸೂಕ್ಷ್ಮಭೂತಗಳಲ್ಲಿದ್ದುಕೊಂಡಿರುತ್ತಾನೆ

(ಭಾಷ್ಯ)

೫೪೫. ಕಥಂ ತರ್ಹಿ "ಪ್ರಾಣಸ್ತೇಜಸಿ" ಇತಿ ಶ್ರುತಿರಿತಿ ? ಅತ ಆಹ— ಸ ಪ್ರಾಣಸಂಪೃಕ್ತೋಽಧ್ಯಕ್ಷಃ ತೇಜಃಸಹಚರಿತೇಷು ಭೂತೇಷು ದೇಹಬೀಜಭೂತೇಷು ಸೂಕ್ಷ್ಮೇಷು ಅವತಿಷ್ಠತ ಇತ್ಯವಗನ್ತವ್ಯಮ್ । "ಪ್ರಾಣಸ್ತೇಜಸಿ" ಇತಿ ಶ್ರುತೇಃ । ನನು ಚೇಯಂ ಶ್ರುತಿಃ ಪ್ರಾಣಸ್ಯ ತೇಜಸಿ ಸ್ಥಿತಿಂ ದರ್ಶಯತಿ, ನ ಪ್ರಾಣಸಂಪೃಕ್ತಸ್ಯ ಅಧ್ಯಕ್ಷಸ್ಯ । ನೈಷ ದೋಷಃ । "ಸೋಽಧ್ಯಕ್ಷೇ" ಇತಿ ಅಧ್ಯಕ್ಷಸ್ಯಾಪಿ ಅನ್ತರಾಲೇಽಪ್ಯುಪಸಂಖ್ಯಾತತ್ವಾತ್ । ಯೋಽಪಿ ಹಿ ಸ್ರುಘ್ನಾತ್ ಮಥುರಾಂ ಗತ್ವಾ, ಮಥುರಾಯಾಃ ಪಾಟಲಿಪುತ್ರಂ ವ್ರಜತಿ ಸೋಽಪಿ 'ಸ್ರುಘ್ನಾತ್ ಪಾಟಲಿಪುತ್ರಂ ಯಾತಿ' ಇತಿ ಶಕ್ಯತೇ ವದಿತುಮ್ । ತಸ್ಮಾತ್ 'ಪ್ರಾಣಸ್ತೇಜಸಿ' ಇತಿ ಪ್ರಾಣಸಂಯುಕ್ತಸ್ಯೈವಾಧ್ಯಕ್ಷಸ್ಯೈತತ್ ತೇಜಃಸಹಚರಿತೇಷು ಭೂತೇಷ್ವವಸ್ಥಾನಮ್ ॥

(ಭಾಷ್ಯಾರ್ಥ)

(ಆಕ್ಷೇಪ) :– ಹಾಗಾದರೆ "ಪ್ರಾಣವು ತೇಜಸ್ಸಿನಲ್ಲಿ" ಎಂಬ ಶ್ರುತಿಯು ಹೇಗೆ (ಹೊಂದುಗಡೆಯಾಗುತ್ತದೆ) ? ಎಂದರೆ ಅದಕ್ಕೆ ಸೂತ್ರಕಾರರು ಹೇಳುತ್ತಾರೆ : ('ಭೂತೇಷು ತಚ್ಛ್ರುತೇಃ' ಅವನು ಭೂತಗಳಲ್ಲಿ ಇದ್ದುಕೊಂಡಿರುತ್ತಾನೆನ್ನಬೇಕು. ಏಕೆಂದರೆ ಹಾಗೆಂದು ಶ್ರುತಿಯಿದೆ). ಆ ಪ್ರಾಣಸಂಯುಕ್ತನಾದ ಅಧ್ಯಕ್ಷನು ತೇಜಸ್ಸಿನೊಡನಿರುವ ಭೂತಗಳಲ್ಲಿ, ಎಂದರೆ ದೇಹಬೀಜವಾಗಿರುವ ಸೂಕ್ಷ್ಮಭೂತಗಳಲ್ಲಿ, ಇದ್ದುಕೊಂಡಿರುತ್ತಾನೆ ಎಂದು ನಿಶ್ಚಯಿಸಬೇಕು. ಏಕೆಂದರೆ "ಪ್ರಾಣವು ತೇಜಸ್ಸಿನಲ್ಲಿ (ಇರುತ್ತದೆ)" ಎಂದು ಶ್ರುತಿಯಿದೆ.

(ಆಕ್ಷೇಪ) :– ಈ ಶ್ರುತಿಯು ಪ್ರಾಣವು ತೇಜಸ್ಸಿನಲ್ಲಿರುತ್ತದೆ ಎಂದು ತಿಳಿಸುತ್ತದೆಯೇ ಹೊರತು ಪ್ರಾಣದಿಂದೊಡಗೂಡಿರುವ ಅಧ್ಯಕ್ಷ(ನಿರುತ್ತಾನೆ ಎಂದು ತಿಳಿಸು)ವದಿಲ್ಲವಲ್ಲ !

(ಪರಿಹಾರ):– ಇದೇನೂ ದೋಷವಲ್ಲ. ಏಕೆಂದರೆ (ಆ ಪ್ರಾಣವು) ಅಧ್ಯಕ್ಷನಲ್ಲಿ (ಇರುತ್ತದೆ) ಎಂದು ಅಧ್ಯಕ್ಷನನ್ನೂ ನಡುವೆ ಸೇರಿಸಿಕೊಂಡಿರುತ್ತೇವೆ. ಯಾವನು **ಸ್ರುಘ್ನದಿಂದ ಮಥುರೆಗೆ** ಹೋಗಿ ಮಥುರೆಯಿಂದ **ಪಾಟಲಿಪುತ್ರಕ್ಕೆ** ಹೋಗುತ್ತಾನೋ ಅವನನ್ನೂ 'ಸ್ರುಘ್ನದಿಂದ ಪಾಟಲಿಪುತ್ರಕ್ಕೆ ಹೋಗುತ್ತಾನೆ' ಎಂದು ಹೇಳುವದಕ್ಕೆ ಬರುತ್ತದೆಯಲ್ಲವೆ? ಆದ್ದರಿಂದ "ಪ್ರಾಣವು ತೇಜಸ್ಸಿನಲ್ಲಿ" ಎಂದು ಪ್ರಾಣಸಂಪೃಕ್ತನಾಗಿರುವ ಅಧ್ಯಕ್ಷನೇ, ತೇಜಸ್ಸಿನಿಂದೊಡಗೂಡಿರುವ ಭೂತಗಳಲ್ಲಿದ್ದುಕೊಂಡಿರುತ್ತಾನೆಂಬುದನ್ನು ಇಲ್ಲಿ (ಹೇಳಿದೆಯೆಂದಾಯಿತು).

**ನೈಕಸ್ಮಿನ್ ದರ್ಶಯತೋ ಹಿ ॥ ೬ ॥**

೬. ಒಂದರಲ್ಲಿಯೇ ಅಲ್ಲ, ಏಕೆಂದರೆ (ಪ್ರಶ್ನಪ್ರತಿವಚನಗಳು ಇದನ್ನು) ತಿಳಿಸುತ್ತವೆ.

(ಭಾಷ್ಯ)

೫೪೬. ಕಥಂ ತೇಜಃಸಹಚರಿತೇಷು ಭೂತೇಷು ಇತ್ಯುಚ್ಯತೇ? ಯಾವತಾ ಏಕಮೇವ ತೇಜಃ ಶ್ರೂಯತೇ "ಪ್ರಾಣಸ್ತೇಜಸಿ" (ಛಾಂ.೬–೧೬–೨) ಇತಿ। ಅತ ಆಹ। ನೈಕಸ್ಮಿನ್ನೇವ ತೇಜಸಿ ಶರೀರಾನ್ತರಪ್ರೇಪ್ಸಾವೇಲಾಯಾಂ ಜೀವೋಽವತಿಷ್ಠತೇ। ಕಾರ್ಯಸ್ಯ ಶರೀರಸ್ಯ ಅನೇಕಾತ್ಮಕತ್ವದರ್ಶನಾತ್। ದರ್ಶಯತಶ್ಚೈತಮರ್ಥಂ ಪ್ರಶ್ನಪ್ರತಿವಚನೇ "ಆಪಃ ಪುರುಷವಚಸಃ" (ಛಾಂ. ೫–೪–೩) ಇತಿ। ತದ್ವ್ಯಾಖ್ಯಾತಮ್ "ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್"(೩–೧–೨) ಇತ್ಯತ್ರ। ಶ್ರುತಿಸ್ಮೃತೀ ಚೈತಮರ್ಥಂ ದರ್ಶಯತಃ। ಶ್ರುತಿಃ"ಪೃಥ್ವೀಮಯ ಆಪೋಮಯೋ ವಾಯುಮಯ ಆಕಾಶಮಯಸ್ತೇಜೋಮಯಃ ....." (ಬೃ. ೪–೪–೫) ಇತ್ಯಾದ್ಯಾ। ಸ್ಮೃತಿರಪಿ "ಅಣ್ವ್ಯೋ ಮಾತ್ರಾ ವಿನಾಶಿನ್ಯೋ ದಶಾರ್ಧಾನಾಂ ತು ಯಾಃ ಸ್ಮೃತಾಃ। ತಾಭಿಃ ಸಾರ್ಧಮಿದಂ ಸರ್ವಂ ಸಂಭವತ್ಯನುಪೂರ್ವಶಃ" (ಮನು. ೧–೨೭) ಇತ್ಯಾದ್ಯಾ। ನನು ಚ ಉಪಸಂಹೃತೇಷು ವಾಗಾದಿಷು ಕರಣೇಷು ಶರೀರಾನ್ತರಪ್ರೇಪ್ಸಾವೇಲಾಯಾಂ "ಕ್ವಾಯಂ ತದಾ ಪುರುಷೋ ಭವತಿ" (ಬೃ. ೩–೨–೧೩) ಇತ್ಯುಪಕ್ರಮ್ಯ ಶ್ರುತ್ಯನ್ತರಂ ಕರ್ಮಾಶ್ರಯತಾಂ ನಿರೂಪಯತಿ "ತೌ ಹ ಯದೂಚತುಃ ಕರ್ಮ ಹೈವ ತದೂಚತುರಥ ಯತ್ ಪ್ರಶಶಂಸತುಃ ಕರ್ಮ ಹೈವ ತತ್ಪ್ರಶಶಂಸತುಃ" (ಬೃ. ೩–೨–೧೩) ಇತಿ। ಅತ್ರೋಚ್ಯತೇ। ತತ್ರ ಕರ್ಮಪ್ರಯುಕ್ತಸ್ಯ ಗ್ರಹಾತಿಗ್ರಹಸಂಜ್ಞಕಸ್ಯ ಇನ್ದ್ರಿಯವಿಷಯಾತ್ಮಕಸ್ಯ ಬನ್ಧನಸ್ಯ ಪ್ರವೃತ್ತಿಃ ಇತಿ ಕರ್ಮಾಶ್ರಯತಾ ಉಕ್ತಾ। ಇಹ ಪುನಃ ಭೂತೋಪಾದಾನಾತ್ ದೇಹಾನ್ತರೋತ್ಪತ್ತಿರಿತಿ ಭೂತಾಶ್ರಯತ್ವಮುಕ್ತಮ್। ಪ್ರಶಂಸಾಶಬ್ದಾದಪಿ ತತ್ರ ಪ್ರಾಧಾನ್ಯ

ಮಾತ್ರಂ ಕರ್ಮಣಃ ಪ್ರದರ್ಶಿತಮ್ ನ ತ್ವಾಶ್ರಯಾನ್ತರಂ ನಿವಾರಿತಮ್ । ತಸ್ಮಾತ್ ಅವಿರೋಧಃ ॥

(ಭಾಷ್ಯಾರ್ಥ)

(ಆಕ್ಷೇಪ) :– 'ತೇಜಸ್ಸಿನಿಂದೊಡಗೂಡಿರುವ ಭೂತಗಳಲ್ಲಿ' ಎಂದು ಹೇಳಿದ್ದು ಹೇಗೆ ಸರಿ ? "ಪ್ರಾಣವು ತೇಜಸ್ಸಿನಲ್ಲಿ" (ಛಾಂ. ೬–೧೬–೨) ಎಂದು ತೇಜಸ್ಸೊಂದನ್ನೇ ಶ್ರುತಿಯಲ್ಲಿ ಹೇಳಿದೆಯಲ್ಲ !

(ಪರಿಹಾರ) :– ಇದಕ್ಕೆ (ಸೂತ್ರಕಾರರು) ಹೇಳುತ್ತಾರೆ :

ತೇಜಸ್ಸೊಂದರಲ್ಲಿಯೇ ಜೀವನು ಶರೀರಾಂತರವನ್ನು ಪಡೆಯುವ ವೇಳೆಯಲ್ಲಿ ಇದ್ದುಕೊಂಡಿರುವದಿಲ್ಲ; ಏಕೆಂದರೆ ಕಾರ್ಯವಾದ ಶರೀರವು ಅನೇಕಾತ್ಮಕವಾಗಿರುತ್ತದೆ. ಈ ಅರ್ಥವನ್ನು ಪ್ರಶ್ನಪ್ರತಿವಚನಗಳು "ಅಪ್ಪು ಪುರುಷಶಬ್ದವಾಚ್ಯವಾಗುತ್ತದೆ" (ಛಾಂ.೫–೩–೩) ಎಂಬಲ್ಲಿ ತಿಳಿಸುತ್ತವೆ. ಇದನ್ನು "ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್" (೩–೧–೨) ಎಂಬೀ (ಸೂತ್ರ)ದಲ್ಲಿ ವಿವರಿಸಿರುತ್ತದೆ. ಶ್ರುತಿಸ್ಮೃತಿಗಳೂ[1] ಈ ಅರ್ಥವನ್ನು ತಿಳಿಸುತ್ತವೆ. "ಪೃಥ್ವೀಮಯನು, ಆಪೋಮಯನು, ವಾಯುಮಯನು, ಆಕಾಶಮಯನು, ತೇಜೋಮಯನು" (ಬೃ. ೪–೪–೫) ಮುಂತಾದ ಶ್ರುತಿಯು (ಹೀಗೆಂದು ತಿಳಿಸುತ್ತದೆ). ಐದು (ಭೂತಗಳ) ಪರಿಣಾಮಶೀಲವಾದ[2] ಸೂಕ್ಷ್ಮವಾದ (ತನ್ಮಾತ್ರೆಗಳು) ಇವೆಯಲ್ಲ, ಅವುಗಳಿಂದೊಡಗೂಡಿಯೇ ಇದೆಲ್ಲ ಒಂದೊಂದಾಗಿ ಆಗುತ್ತದೆ" (ಮನು. ೧–೨೭) ಎಂದು ಮುಂತಾಗಿರುವ ಸ್ಮೃತಿಯೂ (ಇದನ್ನು ಹೇಳುತ್ತದೆ).

(ಆಕ್ಷೇಪ) :– ವಾಗಾದಿಕರಣಗಳು ಉಪಸಂಹಾರವಾಗಿ ಮತ್ತೊಂದು ಶರೀರವನ್ನು ಪಡೆಯಬೇಕೆನ್ನುವ ವೇಳೆಯಲ್ಲಿ "ಈ ಪುರುಷನು ಆಗ ಎಲ್ಲಿರುತ್ತಾನೆ?" (ಬೃ.೩–೨–೧೩) ಎಂದು ಉಪಕ್ರಮಿಸಿ ಶ್ರುತ್ಯಂತರದಲ್ಲಿ "ಅವರಿಬ್ಬರೂ ಹೇಳಿದರಲ್ಲ, ಅದು ಕರ್ಮವನ್ನೇ ಹೇಳಿದ್ದು; ಇನ್ನು ಯಾವದನ್ನು ಹೊಗಳಿದರೋ ಅದು ಕರ್ಮವನ್ನೇ ಹೊಗಳಿದ್ದು" (ಬೃ. ೩–೨–೧೩) ಎಂದು ಕರ್ಮಾಶ್ರಯತ್ವವನ್ನು ಹೇಳಿದೆಯಲ್ಲ !

---

1. ಪ್ರಶ್ನಪ್ರತಿವಚನಗಳೆರಡೂ ಅಪ್ಶಬ್ದವಾಚ್ಯವಾದ ಭೂತಗಳನ್ನೇ ಹೇಳುತ್ತವೆ ; ಶ್ರುತಿಸ್ಮೃತಿಗಳೆರಡೂ ಭೂತಗಳನ್ನೇ ತಿಳಿಸುತ್ತವೆ ಎಂದು ಸೂತ್ರಕ್ಕೆ ಎರಡು ವ್ಯಾಖ್ಯಾನವಾಯಿತು.

2. ವಿನಾಶಿನ್ಯಃ ಎಂಬುದನ್ನು ಪಂಚಮಹಾಭೂತಗಳ ರೂಪದಿಂದ ಪರಿಣಮಿಸುತ್ತಿರುವ ಎಂದು ವ್ಯಾಖ್ಯಾನುಸಾರವಾಗಿ ಕನ್ನಡಿಸಿದೆ. 'ಅವಿನಾಶಿನ್ಯಃ' ಎಂಬ ಪಾಠಕ್ಕಿಂತ ಇದೇ ಮೇಲೆಂದು ತೋರುತ್ತದೆ. 'ಮೋಕ್ಷವಾಗುವ ಮುಂಚೆ 'ವಿನಾಶವಾಗದ' ಎಂದು ಆ. ಗ., ರ. ಪ್ರ.

(ಪರಿಹಾರ) :– ಇದಕ್ಕೆ ಹೇಳುತ್ತೇವೆ. ಅಲ್ಲಿ ಕರ್ಮಪ್ರಯುಕ್ತವಾಗಿರುವ ಗ್ರಹಾತಿಗ್ರಹವೆಂಬ ಹೆಸರಿನ ಇಂದ್ರಿಯವಿಷಯರೂಪವಾದ ಬಂಧನದ ಪ್ರವೃತ್ತಿ (ಯನ್ನು ಹೇಳುವದಕ್ಕಾಗಿ) ಕರ್ಮವೇ ಆಶ್ರಯವೆಂದು ಹೇಳಿದೆ.[1] ಆದರೆ ಇಲ್ಲಿ ಭೂತಗಳೆಂಬ ಉಪಾದಾನದಿಂದ ದೇಹಾಂತರವು ಉಂಟಾಗುತ್ತದೆಯಾದ್ದರಿಂದ ಭೂತಗಳನ್ನು ಆಶ್ರಯವೆಂದಿದೆ. ಹೊಗಳುವದೆಂಬ ಶಬ್ದವಿರುವದರಿಂದಲೂ ಅಲ್ಲಿ ಕರ್ಮಕ್ಕೆ ಪ್ರಾಧಾನ್ಯವನ್ನು ಮಾತ್ರ ತಿಳಿಸಿದೆಯೇ ಹೊರತು ಮತ್ತೊಂದು ಆಶ್ರಯವಿದೆ ಎಂಬುದನ್ನೇನೂ ತಪ್ಪಿಸಿಲ್ಲ. ಆದ್ದರಿಂದ ( ಇವೆರಡಕ್ಕೂ ) ವಿರೋಧವಿಲ್ಲ.

## ೪. ಆಸೃತ್ಯುಪಕ್ರಮಾಧಿಕರಣ

( ಈ ಉತ್ಕ್ರಾಂತಿಕ್ರಮವು ಅಜ್ಞರಿಗೂ ಉಪಾಸಕರಿಗೂ ಸಮಾನವು )

**ಸಮಾನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ॥ ೭ ॥**

೭. ಇದು ಮಾರ್ಗವು ಉಪಕ್ರಮಿಸುವವರೆಗೂ ಸಮಾನವು; (ಈ) ಅಮೃತತ್ವವು ಸುಡದೆ ಇರುವಾಗಿನದು.

## ಪೂರ್ವಪಕ್ಷ: ಉತ್ಕ್ರಾಂತಿಕ್ರಮವು ಅಜ್ಞನಿಗೆ ಮಾತ್ರ

( ಭಾಷ್ಯ )

೫೪೭. ಸೇಯಮ್ ಉತ್ಕ್ರಾನ್ತಿಃ ಕಿಂ ವಿದ್ವದವಿದುಷೋಃ ಸಮಾನಾ ಕಿಂವಾ ವಿಶೇಷವತೀ ಇತಿ ವಿಶಯಾನಾನಾಂ ವಿಶೇಷವತೀತಿ ತಾವತ್ ಪ್ರಾಪ್ತಮ್ । ಭೂತಾಶ್ರಯವಿಶಿಷ್ಟಾ ಹ್ಯೇಷಾ । ಪುನರ್ಭವಾಯ ಚ ಭೂತಾನಿ ಆಶ್ರೀಯನ್ತೇ । ನ ಚ ವಿದುಷಃ ಪುನರ್ಭವಃ ಸಂಭವತಿ । ಅಮೃತತ್ವಂ ಹಿ ವಿದ್ವಾನ್ ಅಶ್ನುತ ಇತಿ ಸ್ಥಿತಿಃ। ತಸ್ಮಾತ್ ಅವಿದುಷ ಏವೈಷಾ ಉತ್ಕ್ರಾನ್ತಿಃ । ನನು ವಿದ್ಯಾಪ್ರಕರಣೇ ಸಮಾಮ್ನಾನಾತ್ ವಿದುಷ ಏವೈಷಾ ಭವೇತ್ । ನ । ಸ್ವಾಪಾದಿವದ್ ಯಥಾಪ್ರಾಪ್ತಾನುಕೀರ್ತನಾತ್ । ತಥಾ ಹಿ "ಯತ್ರೈತತ್ ಪುರುಷಃ ಸ್ವಪಿತಿ ನಾಮ" (ಛಾಂ. ೬–೮–೫) "ಅಶಿಶಿಷತಿ ನಾಮ" (ಛಾಂ. ೬–೮–೩), "ಪಿಪಾಸತಿ ನಾಮ" (ಛಾ. ೬–೮–೫) ಇತಿ ಚ ಸರ್ವಪ್ರಾಣಿಸಾಧಾರಣಾ ಏವ ಸ್ವಾಪಾದಯೋಽನುಕೀರ್ತ್ಯನ್ತೇ ವಿದ್ಯಾಪ್ರಕರಣೇಽಪಿ ಪ್ರತಿಪಿಪಾದಯಿಷಿತವಸ್ತುಪ್ರತಿಪಾದನಾನುಗುಣ್ಯೇನ, ನ ತು ವಿದುಷೋ

1. ಕರ್ಮವನ್ನು ಆಶ್ರಯಿಸಿ ಇಂದ್ರಿಯವಿಷಯಗಳು ಪ್ರವರ್ತಿಸುವವೆಂದು ಹೇಳಿದೆ ಎಂದರ್ಥ.

ವಿಶೇಷವನ್ತೋ ವಿಧಿತ್ಸ್ಯನ್ತೇ । ಏವಮ್ ಇಯಮಪಿ ಉತ್ಕ್ರಾನ್ತಿರ್ಮಹಾಜನಗತೈವ ಅನುಕೀರ್ತ್ಯತೇ, ಯಸ್ಯಾಂ ಪರಸ್ಯಾಂ ದೇವತಾಯಾಂ ಪುರುಷಸ್ಯ ಪ್ರಯತಸ್ತೇಜಃ ಸಂಪದ್ಯತೇ ಸ ಆತ್ಮಾ ತತ್ತ್ವಮಸಿ ಇತ್ಯೇತತ್ ಪ್ರತಿಪಾದಯಿತುಮ್। ಪ್ರತಿಷಿದ್ಧಾ ಚೈಷಾ ವಿದುಷಃ "ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ" (ಬ. ೪-೪-೬) ಇತಿ । ತಸ್ಮಾತ್ ಅವಿದುಷ ಏವೈಷಾ ಇತಿ ॥

(ಭಾಷ್ಯಾರ್ಥ)

ಆ ಈ ಉತ್ಕ್ರಾನ್ತಿಯು ಜ್ಞಾನ್ಯಜ್ಞಾನಿಗಳಿಗೆ ಸಮಾನವಾಗಿರುವದೊ, ಅಥವಾ ಇದರಲ್ಲೇನಾದರೂ ವಿಶೇಷವುಂಟೊ ?- ಎಂಬ ಸಂಶಯವುಳ್ಳವರಿಗೆ ವಿಶೇಷವುಂಟೆಂದು ಮೊದಲು (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆಂದರೆ ಈ (ಉತ್ಕ್ರಾಂತಿಯು) ಭೂತಗಳೆಂಬ ಆಶ್ರಯದಿಂದ ಕೂಡಿರುತ್ತದೆ; ಭೂತಗಳನ್ನು ಆಶ್ರಯಿಸುವದೆಂಬುದು ಮತ್ತೊಂದು ಜನ್ಮಕ್ಕಾಗಿ. ಆದರೆ ಜ್ಞಾನಿಗೆ ಪುನರ್ಜನ್ಮವು ಸಂಭವಿಸುವದಿಲ್ಲ. ಅಮೃತತ್ವವನ್ನಲ್ಲವೆ, ಜ್ಞಾನಿಯು ಹೊಂದುತ್ತಾನೆಂದು ಸಿದ್ಧವಾಗಿರುವದು? ಆದ್ದರಿಂದ ಅಜ್ಞಾನಿಗೇ ಈ ಉತ್ಕ್ರಾಂತಿ (ಯನ್ನು ಹೇಳಿದೆ).

(ಆಕ್ಷೇಪ) :- ವಿದ್ಯಾಪ್ರಕರಣದಲ್ಲಿ ಹೇಳಿರುವದರಿಂದ ಇದು ಜ್ಞಾನಿಗೇ ಎಂದಾಗಬಹುದಲ್ಲ !

(ಪರಿಹಾರ) :- ಹಾಗಲ್ಲ. ಏಕೆಂದರೆ ನಿದ್ರೆಯೇ ಮುಂತಾದವುಗಳಂತೆ (ಇದನ್ನು) ಪ್ರಾಪ್ತವಾಗಿರುವದನ್ನೇ ಅನುವಾದಮಾಡಿಕೊಂಡಿರುತ್ತದೆ. ಆದ್ದರಿಂದಲೇ "ಎಲ್ಲಿ ಈ ಪುರುಷನು 'ನಿದ್ರಿಸುತ್ತಾನೆ'(ಸ್ವಪಿತಿ) ಎನ್ನಿಸಿಕೊಳ್ಳುವನೋ" (ಛಾಂ. ೬-೮-೧) 'ಹಸಿವುಳ್ಳವನಾಗಿರುತ್ತಾನೆ' (ಅಶಿಶಿಷತಿ) ಎನ್ನಿಸಿಕೊಳ್ಳುವನೋ" (ಛಾಂ. ೬-೮-೩), 'ನೀರಡಿಕೆಯುಳ್ಳವನಾಗಿರುತ್ತಾನೆ' ('ಪಿಪಾಸತಿ') ಎನ್ನಿಸಿಕೊಳ್ಳುತ್ತಾನೋ" (ಛಾಂ. ೬-೮-೫) ಎಂದೂ- **ವಿದ್ಯಾಪ್ರಕರಣದಲ್ಲಿಯೂ ಪ್ರತಿಪಾದನೆಮಾಡಬೇಕೆಂದಿರುವ ವಸ್ತುವಿನ ಪ್ರತಿಪಾದನೆಗೆ ಅನುಗುಣವಾಗಿ- ಸರ್ವಪ್ರಾಣಿಗಳಿಗೂ ಸಾಧಾರಣವಾಗಿರುವ ನಿದ್ರಾದಿಗಳನ್ನೇ ಅನುವಾದಮಾಡಿಕೊಂಡಿದೆಯೇ ಹೊರತು ಜ್ಞಾನಿಗೆ ಇವು ಬೇರೆಯಾಗಿರುವದೆಂದೇನೂ ಹೇಳುವದಕ್ಕೆ ಹೊರಟಿಲ್ಲ.** ಇದರಂತೆಯೇ ಸಾಯುತ್ತಿರುವ ಪುರುಷನ ತೇಜಸ್ಸು ಯಾವ ಪರದೇವತೆಯಲ್ಲಿ ಒಂದಾಗುವದೋ ಅದೇ ಆತ್ಮನು ಅದೇ ನೀನು ಎಂಬುದನ್ನು ಪ್ರತಿಪಾದನೆಮಾಡುವದಕ್ಕಾಗಿ ಬಹುಜನರಿಗೆ ಸೇರಿರುವಂತೆಯೇ ಈ ಉತ್ಕ್ರಾಂತಿಯನ್ನು ಅನುವಾದಮಾಡಿಕೊಂಡಿರುತ್ತದೆ. ಜ್ಞಾನಿಗೆ ಈ (ಉತ್ಕ್ರಾಂತಿಯು) ಇಲ್ಲವೆಂದೂ "ಅವನ

ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ" (ಬೃ. ೪-೪-೬) ಎಂಬ (ಶ್ರುತಿಯಲ್ಲಿ) ಹೇಳಿದೆ. ಆದ್ದರಿಂದ ಇದು ಅಜ್ಞಾನಿಗೇ (ಎಂಬುದು ಪೂರ್ವಪಕ್ಷವು).

## ಸಿದ್ಧಾಂತ: ಉತ್ಕ್ರಾಂತಿಯು ಜ್ಞಾನ್ಯಜ್ಞಾನಿಗಳಿಗೆ ಸಮಾನ

(ಭಾಷ್ಯ)

೫೪೮. ಏವಂ ಪ್ರಾಪ್ತೇ ಬ್ರೂಮಃ। ಸಮಾನಾ ಚೈಷಾ ಉತ್ಕ್ರಾನ್ತಿ ರ್ವಾಙ್ಮನಸಿ ಇತ್ಯಾದ್ಯಾ ವಿದ್ವದವಿದುಷೋಃ ಆಸೃತ್ಯುಪಕ್ರಮಾತ್ ಭವಿತು ಮರ್ಹತಿ। ಅವಿಶೇಷಶ್ರವಣಾತ್। ಅವಿದ್ವಾನ್ ದೇಹಬೀಜಭೂತಾನಿ ಭೂತ ಸೂಕ್ಷ್ಮಾಣಿ ಆಶ್ರಿತ್ಯ ಕರ್ಮಪ್ರಯುಕ್ತೋ ದೇಹಗ್ರಹಣಮ್ ಅನುಭವಿತುಂ ಸಂಸರತಿ। ವಿದ್ವಾಂಸ್ತು ಜ್ಞಾನಪ್ರಕಾಶಿತಂ ಮೋಕ್ಷನಾಡೀದ್ವಾರಮ್ ಆಶ್ರಯ ತೇ। ತದೇತತ್ 'ಆಸೃತ್ಯುಪಕ್ರಮಾತ್' ಇತ್ಯುಕ್ತಮ್। ನನ್ವಮೃತತ್ವಂ ಹಿ ವಿದುಷಾ ಪ್ರಾಪ್ತವ್ಯಮ್। ನ ಚ ತದ್ದೇಶಾನ್ತರಾಯತ್ತಮ್। ತತ್ರ ಕುತೋ ಭೂತಾಶ್ರಯತ್ವಂ ಸೃತ್ಯುಪಕ್ರಮೋ ವಾ ಇತಿ ? ಅತ್ರೋಚ್ಯತೇ। ಅನುಪೋಷ್ಯ ಚೇದಮ್। ಅದಗ್ಧ್ವಾ ಅತ್ಯನ್ತಮ್ ಅವಿದ್ಯಾದೀನ್ ಕ್ಲೇಶಾನ್ ಅಪರವಿದ್ಯಾ ಸಾಮರ್ಥ್ಯಾತ್ ಆಪೇಕ್ಷಿಕಮಮೃತತ್ವಂ ಪ್ರೇಪ್ಸತೇ। ಸಂಭವತಿ ತತ್ರ ಸೃತ್ಯುಪ ಕ್ರಮೋ ಭೂತಾಶ್ರಯತ್ವಂ ಚ। ನ ಹಿ ನಿರಾಶ್ರಯಾಣಾಂ ಪ್ರಾಣಾನಾಂ ಗತಿರುಪಪದ್ಯತೇ। ತಸ್ಮಾತ್ ಅದೋಷಃ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳು ತ್ತೇವೆ. "ವಾಕ್ಕು ಮನಸ್ಸಿನಲ್ಲಿ" ಎಂದು ಮುಂತಾಗಿ (ಹೇಳಿರುವ) ಈ ಉತ್ಕ್ರಾಂತಿಯು ಜ್ಞಾನ್ಯಜ್ಞಾನಿಗಳಿಗೆ– ಮಾರ್ಗದ ಪ್ರಾರಂಭದವರೆಗೂ– ಸಮಾನವಾಗಿಯೇ ಇರಬೇಕು. ಏಕೆಂದರೆ (ಯಾವ) ವಿಶೇಷವೂ ಇಲ್ಲದೆ (ಇದನ್ನು) ಶ್ರುತಿಯಲ್ಲಿ ಹೇಳಿದೆ. ಅಜ್ಞಾನು ದೇಹಕ್ಕೆ ಬೀಜವಾಗಿರುವ ಭೂತ ಸೂಕ್ಷ್ಮಗಳನ್ನು ಆಶ್ರಯಿಸಿಕೊಂಡು ಕರ್ಮಪ್ರೇರಿತನಾಗಿ ದೇಹಗ್ರಹಣವನ್ನು ಅನುಭವಿಸುವದಕ್ಕೋಸ್ಕರ ಮುಂದಕ್ಕೆ ಹೋಗುತ್ತಾನೆ. ಆದರೆ ಜ್ಞಾನಿಯು ಜ್ಞಾನಪ್ರಕಾಶಿತವಾದ ಮೋಕ್ಷನಾಡಿಯ[1] ದ್ವಾರವನ್ನು ಆಶ್ರಯಿಸುತ್ತಾನೆ. ಆ ಇದನ್ನು "ಮಾರ್ಗವು ಉಪಕ್ರಮಿಸುವವರೆಗೂ" ಎಂಬ (ಸೂತ್ರಭಾಗದಲ್ಲಿ ಹೇಳಿದೆ).

(ಆಕ್ಷೇಪ) :– ಅಮೃತತ್ವವನ್ನಲ್ಲವೆ, ಜ್ಞಾನಿಯು ಪಡೆಯಬೇಕಾಗಿರು ವದು ? ಆದರೆ ಅದು ದೇಶಾಂತರಕ್ಕೆ ಅಧೀನವಾಗಿರುವದಿಲ್ಲ. ಹೀಗಿರುವಲ್ಲಿ,

1. ಸುಷುಮ್ನಾನಾಡಿಯ.

ಭೂತಗಳನ್ನು ಆಶ್ರಯಿಸುವದಾಗಲಿ, ಮಾರ್ಗವನ್ನು ಪ್ರಾರಂಭಿಸುವದಾಗಲಿ ಎಲ್ಲಿಂದ (ಬಂತು) ?

(ಪರಿಹಾರ) :– ಇದಕ್ಕೆ (ಉತ್ತರವನ್ನು) ಹೇಳುತ್ತೇವೆ. ಇದು ಸುಡದೆ ಇರುವಾಗಿನದು; ಅವಿದ್ಯೆಯೇ ಮುಂತಾದ ಕ್ಲೇಶಗಳನ್ನು ತೀರ ಸುಡದೆ ಅಪರ ವಿದ್ಯೆಯ ಬಲದಿಂದ ಆಪೇಕ್ಷಿಕವಾದ ಅಮೃತತ್ವವನ್ನು ಪಡೆಯಲಿಚ್ಛಿಸುತ್ತಾನಲ್ಲ, ಅಲ್ಲಿ ಮಾರ್ಗವು ಪ್ರಾರಂಭವಾಗುವದೂ ಭೂತಗಳನ್ನು ಆಶ್ರಯಿಸುವದೂ ಸಂಭವಿಸುತ್ತವೆ. (ಯಾವ) ಆಶ್ರಯವೂ ಇಲ್ಲದೆ ಪ್ರಾಣಗಳಿಗೆ ಗತಿಯು ಹೊಂದುವದಿಲ್ಲವಷ್ಟೆ[1] ; ಆದ್ದರಿಂದ (ಯಾವ) ದೋಷವೂ ಇಲ್ಲ.

## ೫. ಸಂಸಾರವ್ಯಪದೇಶಾಧಿಕರಣ (ಸೂ. ೮–೧೧)

(ಉತ್ಕ್ರಾಂತಿಯಲ್ಲಿ ಪರದೇವತೆಯಲ್ಲಿ ಸೇರುವದು ಆತ್ಯಂತಿಕವಲ್ಲ)

**ತದಾಪೀತೇಃ ಸಂಸಾರವ್ಯಪದೇಶಾತ್ ॥ ೮ ॥**

೮. ಅದು ಮೋಕ್ಷವಾಗುವವರೆಗೂ (ಹಾಗೆಯೇ ಇರುತ್ತದೆ); ಏಕೆಂದರೆ ಸಂಸಾರವನ್ನು ಹೇಳಿರುತ್ತದೆ.

### ಮರಣಕಾಲದಲ್ಲಾಗುವ ಸತ್ಸಂಪತ್ತಿಯು ಸಬೀಜ

(ಭಾಷ್ಯ)

೫೪೯. "ತೇಜಃ ಪರಸ್ಯಾಂ ದೇವತಾಯಾಮ್" (ಛಾಂ. ೬–೮–೬) ಇತ್ಯತ್ರ ಪ್ರಕರಣಸಾಮರ್ಥ್ಯಾತ್ ತದ್ ಯಥಾಪ್ರಕೃತಂ ತೇಜಃ ಸಾಧ್ಯಕ್ಷಂ ಸಪ್ರಾಣಂ ಸಕರಣಗ್ರಾಮಂ ಭೂತಾನ್ತರಸಹಿತಂ ಪ್ರಯತಃ ಪುಂಸಃ ಪರಸ್ಯಾಂ ದೇವತಾಯಾಂ ಸಂಪದ್ಯತ ಇತ್ಯೇತದುಕ್ತಂ ಭವತಿ । ಕೀದೃಶೀ ಪುನರಿಯಂ ಸಂಪತ್ತಿಃ ಸ್ಯಾದಿತಿ ಚಿನ್ತ್ಯತೇ । ತತ್ರ ಆತ್ಯನ್ತಿಕ ಏವ ತಾವತ್ ಸ್ವರೂಪ ಪ್ರವಿಲಯಃ ಇತಿ ಪ್ರಾಪ್ತಮ್ । ತತ್ಪ್ರಕೃತಿತ್ವೋಪಪತ್ತೇಃ । ಸರ್ವಸ್ಯ ಹಿ ಜನಿಮತೋ ವಸ್ತುಜಾತಸ್ಯ ಪ್ರಕೃತಿಃ ಪರಾ ದೇವತಾ ಇತಿ ಪ್ರತಿಷ್ಠಾಪಿತಮ್ । ತಸ್ಮಾತ್ ಆತ್ಯನ್ತಿಕೀ ಇಯಮ್ ಅವಿಭಾಗಾಪತ್ತಿರಿತಿ । ಏವಂ ಪ್ರಾಪ್ತೇ ಬ್ರೂಮಃ। ತತ್ ತೇಜಆದಿ ಭೂತಸೂಕ್ಷ್ಮಂ ಶ್ರೋತ್ರಾದಿಕರಣಾಶ್ರಯಭೂತಮ್ ಆ ಅಪೀತೇಃ ಆಸಂಸಾರಮೋಕ್ಷಾತ್ ಸಮ್ಯಗ್ಜ್ಞಾನನಿಮಿತ್ತಾತ್ ಅವತಿಷ್ಠತೇ । "ಯೋನಿಮನ್ಯೇ ಪ್ರಪದ್ಯನ್ತೇ ಶರೀರತ್ವಾಯ ದೇಹಿನಃ । ಸ್ಥಾಣುಮನ್ಯೇಽನುಸಂಯನ್ತಿ ಯಥಾಕರ್ಮ ಯಥಾಶ್ರುತಮ್ ।" (ಕ. ೫–೭) ಇತ್ಯಾದಿಸಂಸಾರವ್ಯಪದೇಶಾತ್ । ಅನ್ಯಥಾ ಹಿ ಸರ್ವಃ ಪ್ರಾಯಣಸಮಯ ಏವ ಉಪಾಧಿ

---

1. ಪ್ರಾಣಗಳು ಸ್ವತಂತ್ರವಾಗಿ ಕೆಲಸಮಾಡುವದೇ ಇಲ್ಲ.

ಪ್ರತ್ಯಸ್ತಮಯಾತ್ ಅತ್ಯನ್ತಂ ಬ್ರಹ್ಮ ಸಂಪದ್ಯೇತ । ತತ್ರ ವಿಧಿಶಾಸ್ತ್ರಮ್ ಅನರ್ಥಕಂ ಸ್ಯಾತ್, ವಿದ್ಯಾಶಾಸ್ತ್ರಂ ಚ । ಮಿಥ್ಯಾಜ್ಞಾನನಿಮಿತ್ತಶ್ಚ ಬನ್ಧೋ ನ ಸಮ್ಯಗ್ಜ್ಞಾನಾದ್ ಋತೇ ವಿಸ್ರಂಸಿತುಮರ್ಹತಿ । ತಸ್ಮಾತ್ ತತ್ಪ್ರಕೃತಿತ್ವೇಽಪಿ ಸುಷುಪ್ತಪ್ರಲಯವತ್ ಬೀಜಭಾವಾವಶೇಷೈವ ಏಷಾ ಸತ್ಸಂಪತ್ತಿರಿತಿ ॥

(ಭಾಷ್ಯಾರ್ಥ)

**"ತೇಜಸ್ಸು ಪರದೇವತೆಯಲ್ಲಿ" (ಛಾಂ. ೬-೮-೬) ಎಂಬಲ್ಲಿ ಪ್ರಕರಣಸಾಮರ್ಥ್ಯದಿಂದ ಅದು, ಪ್ರಕೃತವಾಗಿತ್ತಲ್ಲ (ಆ) ತೇಜಸ್ಸು, ಸಾಧ್ಯಕ್ಷವಾಗಿ, ಸಪ್ರಾಣವಾಗಿ, ಸಕರಣಗ್ರಾಮವಾಗಿ, ಉಳಿದ ಭೂತಗಳೊಡನೆ ಸೇರಿಕೊಂಡು ಪುರುಷನು ಸಾಯುವ ಕಾಲದಲ್ಲಿ ಪರದೇವತೆಯಲ್ಲಿ ಸೇರಿ ಒಂದಾಗುತ್ತದೆ ಎಂದು ಹೇಳಿದಂತಾಗಿದೆ.** ಈ ಸಂಪತ್ತಿಯು ಎಂಥದ್ದಾಗಿರಬೇಕು ಎಂಬುದನ್ನು (ಈಗ) ವಿಚಾರಮಾಡಲಾಗುವದು.

ಇಲ್ಲಿ (ಇದು) ಆತ್ಯಂತಿಕವಾದ ಸ್ವರೂಪಪ್ರವಿಲಯವೇ ಎಂದು ಮೊದಲು (ಪೂರ್ವಪಕ್ಷವು) ಬಂದೊದಗುತ್ತವೆ. ಏಕೆಂದರೆ ಅದೇ (ಇದಕ್ಕೆ) ಪ್ರಕೃತಿಯಾಗಿರುವದು (ಆಗ) ಹೊಂದುತ್ತದೆ. ಹುಟ್ಟುವ ವಸ್ತುಜಾತಕ್ಕೆಲ್ಲ ಪ್ರಕೃತಿಯು ಪರದೇವತೆಯೇ ಎಂದು (ಹಿಂದೆ) ಸ್ಥಾಪಿಸಲಾಗಿದೆ. ಆದ್ದರಿಂದ ಇದು ಅತ್ಯಂತವಾದ ಅವಿಭಾಗಪ್ರಾಪ್ತಿಯೇ.

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಹೇಳುತ್ತೇವೆ. ಶ್ರೋತ್ರಾದಿ ಕರಣಗಳಿಗೆ ಆಶ್ರಯವಾಗಿರುವ ಆ ತೇಜಸ್ಸೇ ಮುಂತಾದ ಭೂತಸೂಕ್ಷ್ಮವು ಅಪೀತಿಯಾಗುವವರೆಗೆ ಎಂದರೆ ಸಮ್ಯಗ್ಜ್ಞಾನದ ನಿಮಿತ್ತದಿಂದ ಸಂಸಾರದಿಂದ ಬಿಡುಗಡೆಯಾಗುವವರೆಗೂ (ಹಾಗೆಯೇ) ಇದ್ದುಕೊಂಡಿರುತ್ತದೆ. ಏಕೆಂದರೆ "ಕೆಲವರು ದೇಹಿಗಳು ಶರೀರಿಗಳಾಗುವದಕ್ಕೆ ಯೋನಿಯನ್ನು ಹೊಂದುತ್ತಾರೆ; ಮತ್ತೆ ಕೆಲವರು ಸ್ಥಾಣುವನ್ನು ಅನುಸರಿಸುತ್ತಾರೆ. (ಇದು) ಅವರವರ ಕರ್ಮ, ಅವರವರ ಜ್ಞಾನ– ಇದಕ್ಕನುಗುಣವಾಗಿರುತ್ತದೆ" (ಕ. ೨-೨-೭) ಎಂದು ಮುಂತಾಗಿ ಸಂಸಾರವನ್ನು ಹೇಳಿದೆ. **ಹಾಗಿಲ್ಲದೆ ಇದ್ದರೆ ಪ್ರತಿಯೊಬ್ಬನೂ ಸಾಯುವ ಕಾಲದಲ್ಲಿಯೇ ಉಪಾಧಿಯು ನಾಶವಾಗುವದರಿಂದ ಅತ್ಯಂತವಾಗಿ ಬ್ರಹ್ಮವನ್ನು ಸೇರಿಕೊಳ್ಳಬೇಕಾಗುತ್ತಿತ್ತು ; ಆಗ ವಿಧಿಶಾಸ್ತ್ರವೂ ಜ್ಞಾನಶಾಸ್ತ್ರವೂ ವ್ಯರ್ಥವಾಗುತ್ತಿತ್ತು[1].** ಇದಲ್ಲದೆ ಮಿಥ್ಯಾ

---

1. ಇದನ್ನು ಮಾಡಿದರೆ ಮುಂದೆ ಇಂಥ ಜನ್ಮವು ಬರುವದು, ಇಂಥ ಲೋಕವು ಪ್ರಾಪ್ತವಾಗುವದು– ಎಂಬ ವಿಧಿಶಾಸ್ತ್ರಕ್ಕೆ ಗತಿಯಿಲ್ಲದೆಹೋಗುತ್ತಿತ್ತು ; ಏಕೆಂದರೆ ಸತ್ತಕೂಡಲೆ ಪುನರಾವೃತ್ತಿಯಿಲ್ಲದ ಬ್ರಹ್ಮಪ್ರಾಪ್ತಿಯಾಗಿಬಿಡುತ್ತಿತ್ತು. ಹೀಗೆಯೇ ಜ್ಞಾನದಿಂದಲೇ ಮೋಕ್ಷವೆಂಬ ಶಾಸ್ತ್ರಕ್ಕೂ ಅಧಿಕಾರಿಗಳಿರುತ್ತಿರಲಿಲ್ಲ.

ಜ್ಞಾನನಿಮಿತ್ತದಿಂದಾಗಿರುವ ಬಂಧವು ಸಮ್ಯಗ್ಜ್ಞಾನವಿಲ್ಲದೆ ಸಡಿಲವಾಗಲಾರದು[1]. ಆದ್ದರಿಂದ ಆದೇ ಪ್ರಕೃತಿಯಾಗಿದ್ದರೂ[2] **ಸುಷುಪ್ತಪ್ರಲಯಗಳಲ್ಲಾಗುವಂತೆ ಬೀಜಭಾವದಿಂದ ಉಳಿದುಕೊಂಡಿರುವ ಸತ್ಸಂಪತ್ತಿಯೇ ಇದು**[3].

**ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ॥ ೯ ॥**

೯. (ಅದು) ಪ್ರಮಾಣದಿಂದಲೂ ಸೂಕ್ಷ್ಮವು; ಏಕೆಂದರೆ ಹಾಗೆ ಕಂಡುಬರುತ್ತದೆ.

## ಸಾಯುವ ಜೀವನು ಆಶ್ರಯಿಸಿರುವ ಭೂತಗಳು ಸೂಕ್ಷ್ಮವಾದವು

(ಭಾಷ್ಯ)

೫೫೦. ತಚ್ಚ ಇತರಭೂತಸಹಿತಂ ತೇಜಃ ಜೀವಸ್ಯ ಅಸ್ಮಾತ್ ಶರೀರಾತ್ ಪ್ರವಸತಃ ಆಶ್ರಯಭೂತಂ ಸ್ವರೂಪತಃ ಪ್ರಮಾಣತಶ್ಚ ಸೂಕ್ಷ್ಮಂ ಭವಿತುಮರ್ಹತಿ । ತಥಾ ಹಿ – ನಾಡೀನಿಷ್ಕ್ರಮಣಶ್ರವಣಾದಿಭ್ಯೋಽಸ್ಯ ಸೌಕ್ಷ್ಮ್ಯಮ್ ಉಪಲಭ್ಯತೇ । ತತ್ರ ತನುತ್ವಾತ್ ಸಂಚಾರೋಪಪತ್ತಿಃ । ಸ್ವಚ್ಛತ್ವಾಚ್ಚ ಅಪ್ರತಿಘಾತೋಪಪತ್ತಿಃ । ಅತ ಏವ ಚ ದೇಹಾನ್ನಿರ್ಗಚ್ಛನ್ ಪಾರ್ಶ್ವಸ್ಥೈರ್ನೋಪಲಭ್ಯತೇ ॥

---

1. ಎಲ್ಲರೂ ಬ್ರಹ್ಮಸ್ವರೂಪರಾಗಿರುತ್ತಾರೆ; ಮಿಥ್ಯಾಜ್ಞಾನದಿಂದ ಮಾತ್ರವೇ ಶರೀರೇಂದ್ರಿಯಾದಿಗಳ ಸಂಬಂಧರೂಪವಾದ ಬಂಧವಾಗಿದೆ. ಹೀಗಿರುವಲ್ಲಿ ಬಂಧವು ಸೂಕ್ಷ್ಮರೂಪವನ್ನು ಹೊಂದಿದ ಮಾತ್ರಕ್ಕೆ ಆದು ಜ್ಞಾನವಿಲ್ಲದೆ ಹೇಗೆ ಹೋದೀತು ?

2. ಬ್ರಹ್ಮವೇ ಉಪಾದಾನಕಾರಣವಾಗಿದ್ದರೂ ಮಡಕೆಯು ಮಣ್ಣಿನಲ್ಲಿ ಸೇರಿದಂತೆ ನಾವು ಅದರಲ್ಲಿ ಸೇರಿದ ಮಾತ್ರದಿಂದ ಮುಕ್ತಿಯಾಗಲಾರದು.

3. ಸುಷುಪ್ತಿಪ್ರಲಯಗಳಲ್ಲಿಯೂ ಮರಣದಂತೆ ಜೀವನು ಬ್ರಹ್ಮದಲ್ಲಿಯೇ ಸೇರಿಬಿಡುತ್ತಾನೆ. ಆದರೂ ಅದರ ಜ್ಞಾನವುಂಟಾಗದೆ ಇರುವದರಿಂದ ಮತ್ತೆ ಎಚ್ಚರವೂ ಸೃಷ್ಟಿಯೂ ಆಗುತ್ತವೆ. ಇದರಂತೆ ಇಲ್ಲಿಯೂ ಜ್ಞಾನವಾಗದ್ದರಿಂದ ಜನ್ಮಕ್ಕೆ ಕಾರಣವಿದ್ದೇ ಇರುತ್ತದೆ. ಸುಷುಪ್ತಿಪ್ರಲಯಮರಣಗಳಲ್ಲಿ ಮೂಲಾಜ್ಞಾನವಿರುವದೇ ಬೀಜದ ಶೇಷವೆಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಅಜ್ಞಾನದಿಂದಾಗಿರುವ ಕಾರಣಭಾವವು ಹೋಗಿರುವದಿಲ್ಲವೆಂಬುದೇ ಇಲ್ಲಿ ಪ್ರಕೃತವೆಂಬುದನ್ನು ಭಾಷ್ಯಾಕ್ಷರಗಳಿಂದ ನಿರ್ಧರಿಸಬಹುದು.

(ಭಾಷ್ಯಾರ್ಥ)

ಆ ಉಳಿದ ಭೂತಗಳೊಡನೆ ಸೇರಿಕೊಂಡಿರುವ ತೇಜಸ್ಸು, ಈ ಶರೀರದಿಂದ ಹೊರಕ್ಕೆ ಹೋಗುತ್ತಿರುವ ಜೀವನಿಗೆ ಆಶ್ರಯಭೂತ(ವಾಗಿರುವದಲ್ಲ, ಅದು ತನ್ನ) ಸ್ವರೂಪದಿಂದಲೂ ಪ್ರಮಾಣದಿಂದಲೂ ಸೂಕ್ಷ್ಮವಾಗಿರಬೇಕು. (ಇದು) ಹೇಗೆ (ಗೊತ್ತೆಂದರೆ), ನಾಡಿಯಿಂದ ಬಿಟ್ಟು ಹೊರಡುವನೆಂಬ ಶ್ರುತಿಯೇ ಮುಂತಾದವುಗಳಿಂದ ಇದು ಸೂಕ್ಷ್ಮವೆಂಬುದು ತಿಳಿಯುಬರುತ್ತದೆ. ಇಲ್ಲಿ (ಅದು) ಸೂಕ್ಷ್ಮವಾಗಿರುವದರಿಂದ ಸಂಚರಿಸುವದೆಂಬುದು[1] ಹೊಂದುತ್ತದೆ ; ಸ್ವಚ್ಛವಾಗಿರುವದರಿಂದ ಅದಕ್ಕೆ ಯಾವ ಅಡ್ಡಿಯೂ ಆಗುವದಿಲ್ಲವೆಂಬುದು ಹೊಂದುತ್ತದೆ[2], ಆದ್ದರಿಂದಲೇ ದೇಹದಿಂದ ಹೊರಕ್ಕೆ ಹೊರಟಾಗ ಪಕ್ಕದಲ್ಲಿರುವವರಿಗೆ (ಅದು) ಕಾಣುವದಿಲ್ಲ.

**ನೋಪಮರ್ದೇನಾತಃ ॥ ೧೦ ॥**

೧೦. ಆದ್ದರಿಂದ (ಇದರ) ನಾಶದಿಂದ (ಅದರ ನಾಶ)ವಿಲ್ಲ.

## ಶರೀರವು ನಾಶವಾದರೂ ಜೀವಾಶ್ರಯಭೂತಗಳಿಗೆ ನಾಶವಿಲ್ಲ

(ಭಾಷ್ಯ)

೫೫೧. ಅತ ಏವ ಸೂಕ್ಷ್ಮತ್ವಾತ್ ನಾಸ್ಯ ಸ್ಥೂಲಸ್ಯ ಶರೀರಸ್ಯ ಉಪಮರ್ದೇನ ದಾಹಾದಿನಿಮಿತ್ತೇನ ಇತರತ್ ಸೂಕ್ಷ್ಮಂ ಶರೀರಮ್ ಉಪವ್ಯದ್ಯತೇ ॥

(ಭಾಷ್ಯಾರ್ಥ)

ಆದ್ದರಿಂದಲೇ, ಎಂದರೆ (ಇದು) ಸೂಕ್ಷ್ಮವಾಗಿರುವದರಿಂದಲೇ ಈ ಸ್ಥೂಲವಾದ ಶರೀರಕ್ಕೆ ಸುಡುವದೇ ಮುಂತಾದ ಕಾರಣದಿಂದ ನಾಶವಾದರೆ (ಆ) ಇನ್ನೊಂದು ಸೂಕ್ಷ್ಮಶರೀರವು ನಾಶವಾಗುವದಿಲ್ಲ.

**ಅಸ್ಯೈವ ಚೋಪಪತ್ತೇರೇಷ ಊಷ್ಮಾ ॥ ೧೧ ॥**

೧೧. ಈ (ಶರೀರದ್ದೇ) ಈ ಬಿಸಿಯು ; ಏಕೆಂದರೆ (ಅದಕ್ಕೆ) ಉಪಪತ್ತಿಯಿದೆ.

---

1. ಶರೀರವನ್ನು ಬಿಟ್ಟು ಲೋಕಾಂತರಕ್ಕೂ ಶರೀರಾಂತರಕ್ಕೂ ಹೋಗುವದೆಂಬುದು. ಇದು ಪರಿಮಾಣಸೌಕ್ಷ್ಮ್ಯದ ಫಲ.

2. ಇಲ್ಲದಿದ್ದರೆ ಅದಕ್ಕೆ ಯಾವದಾದರೂ ತಡೆಯಾಗಬೇಕಾಗಿತ್ತು. ಇದು ಸ್ವರೂಪಸೌಕ್ಷ್ಮ್ಯದ ಫಲ.

## ಶರೀರದ ಬಿಸಿಯು ಸೂಕ್ಷ್ಮಶರೀರದ್ದು

(ಭಾಷ್ಯ)

೫೫೨. ಅಸ್ಯೈವ ಚ ಸೂಕ್ಷ್ಮಸ್ಯ ಶರೀರಸ್ಯ ಏಷ ಊಷ್ಮಾ ಯಮ್ ಏತಸ್ಮಿನ್ ಶರೀರೇ ಸಂಸ್ಪರ್ಶೇನ ಊಷ್ಮಾಣಂ ವಿಜಾನನ್ತಿ। ತಥಾ ಹಿ ಮೃತಾವಸ್ಥಾಯಾಮ್ ಅವಸ್ಥಿತೇಽಪಿ ದೇಹೇ ವಿದ್ಯಮಾನೇಷ್ವಪಿ ಚ ರೂಪಾದಿಷು ದೇಹಗುಣೇಷು ನೋಷ್ಮಾ ಉಪಲಭ್ಯತೇ, ಜೀವದವಸ್ಥಾಯಾಮೇವ ತು ಉಪಲಭ್ಯತೇ। ಇತ್ಯತಃ ಉಪಪದ್ಯತೇ ಪ್ರಸಿದ್ಧಶರೀರವ್ಯತಿರಿಕ್ತವ್ಯಪಾಶ್ರಯ ಏವೈಷ ಊಷ್ಮಾ ಇತಿ। ತಥಾ ಚ ಶ್ರುತಿಃ "ಉಷ್ಣ ಏವ ಜೀವಿಷ್ಯಞ್ಛೀತೋ ಮರಿಷ್ಯನ್" (? ಶತ. ಬ್ರಾ. ೮-೭-೨-೧೧) ಇತಿ ॥

(ಭಾಷ್ಯಾರ್ಥ)

ಈ ಶರೀರದಲ್ಲಿ ಮುಟ್ಟಿ ಬಿಸಿಯನ್ನು ಅನುಭವಿಸುತ್ತಾರಲ್ಲ, ಆ ಬಿಸಿಯು ಈ ಸೂಕ್ಷ್ಮಶರೀರದ್ದೇ. ಆದ್ದರಿಂದಲೇ ಅಲ್ಲವೆ, ಸತ್ತ ಅವಸ್ಥೆಯಲ್ಲಿ ದೇಹವು ಇದ್ದರೂ ದೇಹದ ಗುಣವಾದ ರೂಪಾದಿಗಳು ಇದ್ದುಕೊಂಡಿದ್ದರೂ ಬಿಸಿಯು ಕಾಣಬರುವದಿಲ್ಲ, ಆದರೆ ಬದುಕಿರುವ ಅವಸ್ಥೆಯಲ್ಲಿಯೇ ಕಾಣಬರುತ್ತದೆ. ಹೀಗಿರುವದರಿಂದ ಈ ಬಿಸಿಯು ಪ್ರಸಿದ್ಧವಾಗಿರುವ (ಸ್ಥೂಲ)ಶರೀರಕ್ಕಿಂತ ಬೇರೆಯಾದ (ಶರೀರವನ್ನು) ಆಶ್ರಯಿಸಿರತಕ್ಕದ್ದೇ ಎಂದು (ಆಗುತ್ತದೆ). ಆದ್ದರಿಂದಲೇ ಶ್ರುತಿಯು "ಬದುಕಿರುವಾಗ ಬಿಸಿಯಾಗಿಯೇ ಇರುತ್ತಾನೆ, ಸತ್ತಾಗ ತಣ್ಣಗಿರುತ್ತಾನೆ" (ಶತ.ಬ್ರಾ. ?) ಎಂದು (ಹೇಳುತ್ತದೆ)[1]

## ೬. ಪ್ರತಿಷೇಧಾಧಿಕರಣ (ಸೂ. ೧೨-೧೪)

(ಬ್ರಹ್ಮಜ್ಞಾನಿಗೆ ಗತ್ಯುತ್ಕ್ರಾಂತಿಗಳಿಲ್ಲ)

**ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ॥ ೧೨ ॥**

೧೨. ಪ್ರತಿಷೇಧವಿರುವದರಿಂದ (ಉತ್ಕ್ರಾಂತಿಯಿಲ್ಲ) ಎಂದರೆ ಹಾಗಲ್ಲ: ಏಕೆಂದರೆ ಶಾರೀರನಿಂದ (ಉತ್ಕ್ರಾಂತಿಯನ್ನು ನಿಷೇಧಿಸಿದೆ).

---

1. ಈ ಬಿಸಿಯು ಸೂಕ್ಷ್ಮಶರೀರಕ್ಕೆ ಸೇರಿದ್ದಾದರೂ "ತೇಜಸ್ಸು ಪರದೇವತೆಯಲ್ಲಿ ಸೇರುತ್ತದೆ" (ಛಾಂ. ೬-೮-೬) ಮುಂತಾದ ಶ್ರುತಿಯಿಂದ ಕೊನೆಗೆ ಪರಮಾಣನಲ್ಲಿ ಒಂದಾಗುತ್ತದೆ ಎಂದು ಮುಂದೆ ೪-೨-೧೫ರಲ್ಲಿ ಹೇಳಿದೆ. ಈ ಕಾರಣದಿಂದಲೇ ಈ ಬಿಸಿಯು ಉಪಾಸನೆಗೆ ಬ್ರಹ್ಮದ ಲಿಂಗವೆಂದು ೧-೧-೨೪ರಲ್ಲಿ ನಿರ್ಣಯಿಸಿದೆ.

## ಪೂರ್ವಪಕ್ಷ:
## ಉತ್ಕ್ರಾಂತಿಪ್ರತಿಷೇಧಶ್ರುತಿಗೆ ಅಭಿಪ್ರಾಯವು ಬೇರೆ

(ಭಾಷ್ಯ)

೫೫೩. "ಅಮೃತತ್ವಂ ಚಾನುಪೋಷ್ಯ" (೪–೨–೭) ಇತ್ಯತೋ ವಿಶೇಷಣಾತ್ ಆತ್ಯನ್ತಿಕೇ ಅಮೃತತ್ವೇ ಗತ್ಯುತ್ಕ್ರಾನ್ತ್ಯೋರಭಾವೋಽಭ್ಯುಪಗತಃ । ತತ್ರಾಪಿ ಕೇನಚಿತ್ ಕಾರಣೇನ ಉತ್ಕ್ರಾನ್ತಿಮ್ ಆಶಙ್ಕ್ಯ ಪ್ರತಿಷೇಧತಿ । "ಅಥಾಕಾಮಯಮಾನೋ ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮೋ ಭವತಿ ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" (ಬೃ. ೪–೪–೬) ಇತ್ಯತಃ ಪರವಿದ್ಯಾವಿಷಯಾತ್ ಪ್ರತಿಷೇಧಾತ್ ನ ಪರಬ್ರಹ್ಮವಿದೋ ದೇಹಾತ್ ಪ್ರಾಣಾನಾಮ್ ಉತ್ಕ್ರಾನ್ತಿರಸ್ತಿ ಇತಿ ಚೇತ್। ನೇತ್ಯುಚ್ಯತೇ । ಯತಃ ಶಾರೀರಾತ್ ಆತ್ಮನ ಏಷ ಉತ್ಕ್ರಾನ್ತಿಪ್ರತಿಷೇಧಃ ಪ್ರಾಣಾನಾಂ ನ ಶರೀರಾತ್ । ಕಥಮವಗಮ್ಯತೇ ? "ನ ತಸ್ಮಾತ್ ಪ್ರಾಣಾ ಉತ್ಕ್ರಾಮನ್ತಿ" (ಬೃ. ಮಾ.) ಇತಿ ಶಾಖಾನ್ತರೇ ಪಞ್ಚಮೀಪ್ರಯೋಗಾತ್ । ಸಂಬನ್ಧಸಾಮಾನ್ಯವಿಷಯಾ ಹಿ ಷಷ್ಠೀ ಶಾಖಾನ್ತರಗತಯಾ ಪಞ್ಚಮ್ಯಾ ಸಂಬನ್ಧವಿಶೇಷೇ ವ್ಯವಸ್ಥಾಪ್ಯತೇ। 'ತಸ್ಮಾತ್' ಇತಿ ಚ ಪ್ರಾಧಾನ್ಯಾತ್ ಅಭ್ಯುದಯನಿಃಶ್ರೇಯಸಾಧಿಕೃತೋ ದೇಹೀ ಸಂಬಧ್ಯತೇ ನ ದೇಹಃ । ನ ತಸ್ಮಾತ್ ಉಚ್ಚಿಕ್ರಮಿಷೋರ್ಜೀವಾತ್ ಪ್ರಾಣಾ ಅಪಕ್ರಾಮನ್ತಿ, ಸಹೈವ ತೇನ ಭವನ್ತಿ ಇತ್ಯರ್ಥಃ ॥

(ಭಾಷ್ಯಾರ್ಥ)

"(ಈ) ಅಮೃತತ್ವವು ಸುಡದೆ ಇರುವಾಗಿನದು" (೪–೨–೭) ಎಂಬೀ ವಿಶೇಷಣದಿಂದ ಆತ್ಯಂತಿಕವಾದ ಅಮೃತತ್ವದಲ್ಲಿ ಗತ್ಯುತ್ಕ್ರಾಂತಿಗಳು ಇಲ್ಲವೆಂದು ಒಪ್ಪಿರುತ್ತದೆ(ಯಷ್ಟೆ). ಅಲ್ಲಿಯೂ ಯಾವದಾದರೂ ಒಂದು ಕಾರಣದಿಂದ ಉತ್ಕ್ರಾಂತಿ(ಯಾಗಬಹುದೆಂದು) ಆಶಂಕಿಸಿ ಅಲ್ಲಗಳೆಯುತ್ತಿದಾರೆ:

"ಇನ್ನು ಕಾಮಿಸದವನ (ವಿಷಯ): ಯಾವನು ಅಕಾಮನೂ ನಿಷ್ಕಾಮನೂ ಆಪ್ತಕಾಮನೂ ಆತ್ಮಕಾಮನೂ ಆಗಿರುತ್ತಾನೋ ಅವನ ಪ್ರಾಣಗಳುಉತ್ಕ್ರಾಂತವಾಗುವದಿಲ್ಲ, ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಲಯವಾಗುತ್ತಾನೆ" (ಬೃ. ೪–೪–೬) ಎಂಬೀ ಪರವಿದ್ಯೆಯ ವಿಷಯದಲ್ಲಿ (ಉತ್ಕ್ರಾಂತಿಯನ್ನು) ಪ್ರತಿಷೇಧ (ಮಾಡಿರುವದ)ರಿಂದ ಪರಬ್ರಹ್ಮಜ್ಞಾನಿಗೆ ಪ್ರಾಣಗಳು ದೇಹದಿಂದ ಉತ್ಕ್ರಾಂತಿಯಾಗುವದೆಂಬುದಿಲ್ಲ ಎಂದರೆ, ಹಾಗಲ್ಲ ಎನ್ನುತ್ತೇವೆ. ಏಕೆಂದರೆ ಶಾರೀರನಾದ ಆತ್ಮನಿಂದಲೇ (ಪ್ರಾಣಗಳಿಗೆ) ಉತ್ಕ್ರಾಂತಿಯನ್ನು ನಿಷೇಧಿಸಿದೆಯೇ ಹೊರತು ಶರೀರದಿಂದ ನಿಷೇಧಿಸಿಲ್ಲ.

(ಪ್ರಶ್ನೆ) :– (ಇದು) ಹೇಗೆ ಗೊತ್ತು ?

(ಉತ್ತರ) :– ಮತ್ತೊಂದು ಶಾಖೆಯಲ್ಲಿ "ಅವನಿಂದ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ" (ಬೃ. ಮಾ. ೪–೪–೬ ?) ಎಂದು ಪಂಚಮೀ (ವಿಭಕ್ತಿಯನ್ನು) ಪ್ರಯೋಗಿಸಿದೆ. ಸಂಬಂಧಸಾಮಾನ್ಯವನ್ನು ಹೇಳುವ ಷಷ್ಠೀ ವಿಭಕ್ತಿಯು (ಈ) ಶಾಖಾಂತರದಲ್ಲಿರುವ ಪಂಚಮಿಯಿಂದ ಒಂದು ಗೊತ್ತಾದ ಸಂಬಂಧದಲ್ಲಿ ವ್ಯವಸ್ಥಿತವಾಗುತ್ತದೆಯಷ್ಟೆ[1]. "ಅವನಿಂದ" ಎಂಬಲ್ಲಿ ಅಭ್ಯುದಯ ನಿಃಶ್ರೇಯಸಗಳಲ್ಲಿ ಅಧಿಕೃತನಾದ ದೇಹಿಯನ್ನೇ ಸಂಬಂಧಿಸಿಕೊಳ್ಳಬೇಕು ; ಏಕೆಂದರೆ (ಅವನಿಗೆ) ಪ್ರಾಧಾನ್ಯವಿದೆ, ದೇಹವನ್ನು ಸಂಬಂಧಿಸಿಕೊಳ್ಳಬಾರದು. ಆ ಉತ್ಕ್ರಾಂತನಾಗಲಿರುವ ಜೀವನಿಂದ ಪ್ರಾಣಗಳು ಬಿಟ್ಟು ಹೊರಟುಹೋಗುವದಿಲ್ಲ, ಅವನೊಡನೆಯೇ ಇರುತ್ತವೆ ಎಂದರ್ಥ.

**ಸ್ಪಷ್ಟೋ ಹ್ಯೇಕೇಷಾಮ್ ॥ ೧೩ ॥**

೧೩. ಏಕೆಂದರೆ ಕೆಲವರು (ಶಾಖೆಯವರ ಪಾಠದಲ್ಲಿ ನಿಷೇಧವು) ಸ್ಪಷ್ಟವೇ ಆಗಿರುತ್ತದೆ.

## ಜ್ಞಾನಿಯ ದೇಹದಿಂದ ಪ್ರಾಣೋತ್ಕ್ರಮಣವಿಲ್ಲವೆಂಬುದಕ್ಕೆ ಸ್ಪಷ್ಟಶ್ರುತಿಯಿದೆ

( ಭಾಷ್ಯ )

೫೫೪. ಸಪ್ರಾಣಸ್ಯ ಚ ಪ್ರವಸತೋ ಭವತ್ಯುತ್ಕ್ರಾನ್ತಿರ್ದೇಹಾತ್ ಇತ್ಯೇವಂ ಪ್ರಾಪ್ತೇ ಪ್ರತ್ಯುಚ್ಯತೇ । ("ಸ್ಪಷ್ಟೋ ಹ್ಯೇಕೇಷಾಮ್")। ನ ತದಸ್ತಿ ಯದುಕ್ತಂ ಪರಬ್ರಹ್ಮವಿದೋಽಪಿ ದೇಹಾತ್ ಅಸ್ತ್ಯುತ್ಕ್ರಾನ್ತಿಃ, ಉತ್ಕ್ರಾನ್ತಿ ಪ್ರತಿಷೇಧಸ್ಯ ದೇಹ್ಯಪಾದಾನತ್ವಾದಿತಿ । ಯತೋ ದೇಹಾಪಾದಾನ ಏವ ಉತ್ಕ್ರಾನ್ತಿಪ್ರತಿಷೇಧ ಏಕೇಷಾಂ ಸಮಾಮ್ನಾತೄಣಾಂ ಸ್ಪಷ್ಟ ಉಪಲಭ್ಯತೇ। ತಥಾ ಹಿ ಆರ್ತಭಾಗಪ್ರಶ್ನೇ "ಯತ್ರಾಯಂ ಪುರುಷೋ ಮ್ರಿಯತ ಉದಸ್ಮಾತ್ ಪ್ರಾಣಾಃ ಕ್ರಾಮನ್ತ್ಯಾಹೋ ನೇತಿ" (ಬೃ. ೩–೨–೧೧) ಇತ್ಯತ್ರ "ನೇತಿ ಹೋವಾಚ ಯಾಜ್ಞವಲ್ಕ್ಯಃ" (ಬೃ. ೩–೨–೧೧) ಇತ್ಯನುತ್ಕ್ರಾನ್ತಿಪಕ್ಷಂ ಪರಿಗೃಹ್ಯ ನ ತರ್ಹಿ ಅಯಮ್ ಅನುತ್ಕ್ರಾನ್ತೇಷು ಪ್ರಾಣೇಷು ಮ್ರಿಯತ ಇತ್ಯಸ್ಯಾಮ್ ಆಶಙ್ಕಾಯಾಮ್ "ಅತ್ರೈವ ಸಮವನೀಯನ್ತೇ" (ಬೃ. ೩–೨–೧೧)।

---

1. ಸಾಮಾನ್ಯಕ್ಕಿಂತ ವಿಶೇಷವು ಪ್ರಬಲವಾದ್ದರಿಂದ ಶಾರೀರನಿಂದ ಎಂಬ ವಿಶೇಷಾರ್ಥವನ್ನು ಅಂಗೀಕರಿಸಬೇಕು ಎಂದರ್ಥ.

ಇತಿ ಪ್ರವಿಲಯಂ ಪ್ರಾಣಾನಾಂ ಪ್ರತಿಜ್ಞಾಯ ತತ್ಸಿದ್ಧಯೇ "ಸ ಉಚ್ಛ್ವಯತ್ಯಾಧ್ಮಾಯತ್ಯಾಧ್ಮಾತೋ ಮೃತಃ ಶೇತೇ" (ಬೃ. ೩-೨-೧೧) ಇತಿ ಸಶಬ್ದಪರಾಮೃಷ್ಟಸ್ಯ ಪ್ರಕೃತಸ್ಯ ಉತ್ಕ್ರಾನ್ತ್ಯವಧೇಃ ಉಚ್ಛ್ವಯನಾದೀನಿ ಸಮಾಮನನ್ತಿ। ದೇಹಸ್ಯ ಚೈತಾನಿ ಸ್ಯುರ್ನ ದೇಹಿನಃ। ತತ್ಸಾಮಾನ್ಯಾತ್ "ನ ತಸ್ಮಾತ್ ಪ್ರಾಣಾ ಉತ್ಕ್ರಾಮನ್ತ್ಯತ್ರೈವ ಸಮವನೀಯನ್ತೇ" (ಬೃ. ಮಾ. ೪-೪-೬?) ಇತ್ಯಾಪಿ ಅಭೇದೋಪಚಾರೇಣ ದೇಹಾಪಾದಾನಸ್ಯೈವ ಉತ್ಕ್ರಮಣಸ್ಯ ಪ್ರತಿಷೇಧಃ, ಯದ್ಯಪಿ ಪ್ರಾಧಾನ್ಯಂ ದೇಹಿನಃ ಇತಿ ವ್ಯಾಖ್ಯೇಯಂ ಯೇಷಾಂ ಪಞ್ಚಮೀಪಾಠಃ। ಯೇಷಾಂ ತು ಷಷ್ಠೀಪಾಠಃ ತೇಷಾಂ ವಿದ್ವತ್ಸಂಬನ್ಧಿನ್ಯುತ್ಕ್ರಾನ್ತಿಃ ಪ್ರತಿಷಿಧ್ಯತ ಇತಿ ಪ್ರಾಪ್ತೋತ್ಕ್ರಾನ್ತಿಪ್ರತಿಷೇಧಾರ್ಥತ್ವಾತ್ ಅಸ್ಯ ವಾಕ್ಯಸ್ಯ, ದೇಹಾಪಾದಾನೈವ ಸಾ ಪ್ರತಿಷಿದ್ಧಾ ಭವತಿ। ದೇಹಾದುತ್ಕ್ರಾನ್ತಿಃ ಪ್ರಾಪ್ತಾ ನ ದೇಹಿನಃ ॥

(ಭಾಷ್ಯಾರ್ಥ)

ಪ್ರಾಣಸಹಿತನಾಗಿ ಹೊರಡುವವನಿಗೆ (ಎಲ್ಲವನಿಗೂ) ದೇಹದಿಂದ ಉತ್ಕ್ರಾಂತಿಯಾಗುತ್ತದೆ –ಎಂದು ಪ್ರಾಪ್ತವಾಗಲಾಗಿ (ಅದಕ್ಕೆ) ಪ್ರತಿಯಾಗಿ ಹೇಳುತ್ತಾರೆ. (ಸ್ಪಷ್ಟೋ ಹ್ಯೇಕೇಷಾಮ್ । ಒಬ್ಬರ ಪಾಠದಲ್ಲಿ ನಿಷೇಧವು ಸ್ಪಷ್ಟವಾಗಿಯೇ ಇದೆ). ಪರಬ್ರಹ್ಮಜ್ಞಾನಿಗೂ ದೇಹದಿಂದ ಉತ್ಕ್ರಾಂತಿಯುಂಟು; ಏಕೆಂದರೆ ಉತ್ಕ್ರಾಂತಿಯನ್ನು ಅಲ್ಲಗಳೆದಿರುವದಕ್ಕೆ ದೇಹಿಯೇ ಅಪಾದಾನವು –ಎಂದು ಹೇಳಿದಿರಲ್ಲ, ಅದು ಇಲ್ಲ. ಏಕೆಂದರೆ ಕೆಲವರು ಅಧ್ಯಯನಶಾಖೆಯವರ (ಪಾಠದಲ್ಲಿ) ಉತ್ಕ್ರಾಂತಿಪ್ರತಿಷೇಧವು ದೇಹಾಪಾದಾನವಾಗಿಯೇ (ಇರುವದು) ಸ್ಪಷ್ಟವಾಗಿ ಕಾಣಬರುತ್ತದೆ. ಹೇಗೆಂದರೆ **ಆರ್ತಭಾಗಪ್ರಶ್ನದಲ್ಲಿ** "ಯಾವಾಗ ಈ ಪುರುಷನು ಮೃತನಾಗುತ್ತಾನೋ (ಆಗ) ಅವನಿಂದ ಪ್ರಾಣಗಳು ಉತ್ಕ್ರಾಂತವಾಗುತ್ತವೆಯೊ ಇಲ್ಲವೊ ?" (ಬೃ. ೩-೨-೧೧) ಎಂಬಲ್ಲಿ "ಇಲ್ಲ, ಇಲ್ಲ" ಎಂದು ಯಾಜ್ಞವಲ್ಕ್ಯನು ನುಡಿದನು" (ಬೃ ೩-೨-೧೧) ಎಂದು ಅನುತ್ಕ್ರಾಂತಿಪಕ್ಷವನ್ನು ಸ್ವೀಕರಿಸಿ, ಹಾಗಾದರೆ ಪ್ರಾಣಗಳು ಉತ್ಕ್ರಾಂತವಾಗದೆ ಇದ್ದರೆ ಇವನು ಸಾಯುವದಿಲ್ಲವೆಂದಾಯಿತು –ಎಂಬೀ ಆಶಂಕೆಯುಂಟಾಗಲು "ಇಲ್ಲಿಯೇ ಒಂದಾಗಿಬಿಡುತ್ತವೆ" (ಬೃ. ೩-೨-೧೧) ಎಂದು ಪ್ರಾಣಗಳಿಗೆ ಪ್ರವಿಲಯವನ್ನು ಹೇಳಿ, ಅದು ಸಿದ್ಧವಾಗುವದಕ್ಕಾಗಿ "ಅವನು ಉಬ್ಬಿಕೊಳ್ಳುತ್ತಾನೆ, (ವಾಯುವನ್ನು) ತುಂಬಿಕೊಳ್ಳುತ್ತಾನೆ, ತುಂಬಿಕೊಂಡು ಸತ್ತುಬಿದ್ದಿರುತ್ತಾನೆ" (ಬೃ. ೩-೨-೧೧), ಎಂದು ಶಬ್ದಪೂರ್ವಕವಾಗಿ ಪರಾಮೃಷ್ಟನಾಗಿರುವ ಪ್ರಕೃತನಾಗಿರುವ ಉತ್ಕ್ರಾಂತ್ಯವಧಿಯಾದವನಿಗೆ[1]

1. ಎಲ್ಲಿಂದ ಉತ್ಕ್ರಾಂತಿಯಾಗಬೇಕೋ ಅದು ಅವಧಿಯು. ಅದನ್ನೇ ಇಲ್ಲಿ 'ಸಃ' ಎಂದು ಪರಾಮರ್ಶಿಸಿದೆ, ಅದು ದೇಹವೇ.

ಉಬ್ಬಿಕೊಳ್ಳುವದೇ ಮುಂತಾದವುಗಳನ್ನು ಪಠಿಸಿರುತ್ತಾರೆ. ಈ (ಉಬ್ಬಿಕೊಳ್ಳುವದೇ ಮುಂತಾದವುಗಳು) ದೇಹಕ್ಕೆ ಆಗಬಹುದೇ ಹೊರತು ದೇಹಿಗೆ (ಆಗ) ಲಾರವು. ಅದಕ್ಕೆ ಸಮಾನವಾಗಿರುವದರಿಂದ "ಅವನಿಂದ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ, ಇಲ್ಲಿಯೇ ಒಂದಾಗಿಬಿಡುವವು" (ಬೃ. ಮಾ.) ಎಂಬಲ್ಲಿಯೂ ದೇಹಿಗೆ ಪ್ರಾಧಾನ್ಯವಿದ್ದರೂ ಅಭೇದೋಪಚಾರದಿಂದ[1] ದೇಹಾಪಾದಾನವಾದ ಉತ್ಕ್ರಾಂತಿಗೇ ಪ್ರತಿಷೇಧವನ್ನು (ಹೇಳಿದೆ), ಎಂದು ಪಂಚಮೀ ವಿಭಕ್ತಿಯ ಪಾಠವಿರುವ (ಮಾಧ್ಯಂದಿನರ ಪಕ್ಷದಲ್ಲಿ) ವ್ಯಾಖ್ಯಾನಮಾಡಬೇಕು. ಇನ್ನು ಯಾವ (ಕಾಣ್ವರಲ್ಲಿ) ಷಷ್ಠೀಪಾಠವಿರುತ್ತದೆಯೋ ಅವರ (ಪಕ್ಷದಲ್ಲಿ) ಜ್ಞಾನಿಗೆ ಸಂಬಂಧಪಟ್ಟ ಉತ್ಕ್ರಾಂತಿಯನ್ನು ಪ್ರತಿಷೇಧಮಾಡಿರುತ್ತದೆಯಾಗಿ ಈ ವಾಕ್ಯವು ಪ್ರಾಪ್ತವಾಗಿರುವ ಉತ್ಕ್ರಾಂತಿಯನ್ನು ಪ್ರತಿಷೇಧಿಸುವದಕ್ಕೇ (ಬಂದಿರು)ವದರಿಂದ ಆ (ಉತ್ಕ್ರಾಂತಿಯು) ದೇಹಾಪಾದಾನವಾಗಿಯೇ ಪ್ರತಿಷಿದ್ಧವಾಗಿದೆ ಎಂದಾಗುವದು, (ಏಕೆಂದರೆ) ದೇಹದಿಂದ ಉತ್ಕ್ರಾಂತಿ (ಯಾಗುವದು) ಪ್ರಾಪ್ತವಾಗಿರುತ್ತದೆಯೇ ಹೊರತು ದೇಹಿಗೆ ಪ್ರಾಪ್ತವಾಗಿಲ್ಲ.[2]

## ಬ್ರಹ್ಮಜ್ಞಾನಿಗೆ ಉತ್ಕ್ರಾಂತಿಯಿಲ್ಲವೆಂಬುದಕ್ಕೆ ಪ್ರಮಾಣಾಂತರ

(ಭಾಷ್ಯ)

೫೫೫. ಅಪಿ ಚ "ಚಕ್ಷುಷ್ಟೋ ವಾ ಮೂರ್ಧ್ನೋ ವಾನ್ಯೇಭ್ಯೋ ವಾ ಶರೀರದೇಶೇಭ್ಯಸ್ತಮುತ್ಕ್ರಾಮನ್ತಂ ಪ್ರಾಣೋಽನೂತ್ಕ್ರಾಮತಿ ಪ್ರಾಣಮನೂತ್ಕ್ರಾಮನ್ತಂ ಸರ್ವೇ ಪ್ರಾಣಾ ಅನೂತ್ಕ್ರಾಮನ್ತಿ" (ಬೃ. ೪-೪-೨) ಇತ್ಯೇವಮ್ ಅವಿದ್ವದ್ವಿಷಯಂ ಸಪ್ರಪಞ್ಚಮುತ್ಕ್ರಮಣಂ ಸಂಸಾರಗಮನಂ ಚ ದರ್ಶಯಿತ್ವಾ "ಇತಿ ನು ಕಾಮಯಮಾನಃ" (ಬೃ. ೪-೪-೬) ಇತ್ಯುಪಸಂಹೃತ್ಯ ಅವಿದ್ವತ್ಕಥಾಮ್, "ಅಥಾಕಾಮಯಮಾನಃ" (ಬೃ. ೪-೪-೬) ಇತಿ ವ್ಯಪದಿಶ್ಯ ವಿದ್ವಾಂಸಂ ಯದಿ ತದ್ವಿಷಯೇಽಪಿ ಉತ್ಕ್ರಾನ್ತಿಮೇವ ಪ್ರಾಪಯೇತ್ ಅಸಮಞ್ಜಸ ಏವ ವ್ಯಪದೇಶಃ ಸ್ಯಾತ್। ತಸ್ಮಾತ್ ಅವಿದ್ವದ್ವಿಷಯೇ ಪ್ರಾಪ್ತಯೋರ್ಗತ್ಯುತ್ಕ್ರಾನ್ತ್ಯೋರ್ವಿದ್ವದ್ವಿಷಯೇ ಪ್ರತಿಷೇಧಃ ಇತ್ಯೇವಮೇವ ವ್ಯಾಖ್ಯೇಯಂ ವ್ಯಪದೇಶಾರ್ಥವತ್ತ್ವಾಯ। ನ ಚ ಬ್ರಹ್ಮವಿದಃ ಸರ್ವಗತಬ್ರಹ್ಮಾತ್ಮಭೂತಸ್ಯ ಪ್ರಕ್ಷೀಣಕರ್ಮಣಃ ಉತ್ಕ್ರಾನ್ತಿರ್ಗತಿರ್ವಾ ಉಪಪದ್ಯತೇ। ನಿಮಿತ್ತಾಭಾವಾತ್, "ಅತ್ರ ಬ್ರಹ್ಮ ಸಮಶ್ನುತೇ" (ಬೃ. ೪-೪-೭) ಇತಿ ಚೈವಂಜಾತೀಯಕಾಃ ಶ್ರುತಯಃ ಗತ್ಯುತ್ಕ್ರಾನ್ತ್ಯೋರಭಾವಂ ಸೂಚಯನ್ತಿ ॥

---

1. ದೇಹದೇಹಿಗಳನ್ನು ಒಂದೆಂದು ಗೌಣವಾಗಿ ಹಿಡಿದು.

2. ದೇಹದಿಂದ ಪ್ರಾಣವು ಹೋಗುವದು ಮಿಕ್ಕವರಿಗೆ ಪ್ರಾಪ್ತವಾಗಿದೆ; ಅದನ್ನೇ ಇಲ್ಲಿ ನಿಷೇಧಮಾಡಿದೆ ಎಂಬುದು ಯುಕ್ತ.

(ಭಾಷ್ಯಾರ್ಥ)

ಇದಲ್ಲದೆ ಕಣ್ಣಿನಿಂದಲಾಗಲಿ ನೆತ್ತಿಯಿಂದಾಗಲಿ ಅಥವಾ ಬೇರೆಯ ಶರೀರ ದೇಶಗಳಿಂದಾಗಲಿ ಉತ್ಕ್ರಾಂತನಾಗುತ್ತಿರುವ ಅವನನ್ನು ಪ್ರಾಣವು ಬೆಂಬಿಡಿದು ಉತ್ಕ್ರಾಂತನಾಗುವದು. ಪ್ರಾಣವು ಬೆಂಬಿಡಿದು ಉತ್ಕ್ರಾಂತವಾಗುತ್ತಿರಲು ಪ್ರಾಣಗಳೆಲ್ಲ ಬೆಂಬಿಡಿದು ಉತ್ಕ್ರಾಂತವಾಗುವವು" (ಬೃ. ೪-೪-೨) ಎಂದಿಂತು ಅಜ್ಞಾನ ವಿಷಯದ ಉತ್ಕ್ರಾಂತಿಯನ್ನೂ ಸಂಸಾರಗತಿಯನ್ನೂ ವಿಸ್ತಾರವಾಗಿ ತಿಳಿಸಿ "ಹೀಗೆ ಕಾಮಿಸುವಾತನು" (ಬೃ ೪-೪-೬) ಎಂದು ಅಜ್ಞಾನ ವಿಚಾರವನ್ನು ಉಪಸಂಹಾರಮಾಡಿ "ಇನ್ನು ಕಾಮಿಸದಿರುವವನು" (ಬೃ ೪-೪-೬) ಎಂದು ಜ್ಞಾನಿಯನ್ನು ಹೇಳಿ ಅವನ ವಿಷಯದಲ್ಲಿಯೂ ಉತ್ಕ್ರಾಂತಿಯನ್ನೇ ತಂದೊದಗಿಸಿದರೆ (ಆ) ವ್ಯಪದೇಶವು ಅಸಮಂಜಸವೇ ಆಗುವದು. ಆದ್ದರಿಂದ ಅಜ್ಞಾನ ವಿಷಯದಲ್ಲಿ ಪ್ರಾಪ್ತವಾಗಿರುವ ಗತ್ಯುತ್ಕ್ರಾಂತಿಗಳನ್ನು ಜ್ಞಾನಿಯ ವಿಷಯದಲ್ಲಿ ಪ್ರತಿಷೇಧಿಸಿದೆ- ಎಂದಿಂತೇ (ಈ) ವ್ಯಪದೇಶವು ಸಾರ್ಥಕವಾಗುವದಕ್ಕಾಗಿ ವ್ಯಾಖ್ಯಾನಮಾಡಬೇಕು. **ಸರ್ವಗತನಾದ ಬ್ರಹ್ಮಾತ್ಮನೇ ಆಗಿರುವ, ಕರ್ಮವೆಲ್ಲ ಕ್ಷಯವಾಗಿರುವ, ಬ್ರಹ್ಮಜ್ಞಾನಿಗೆ ಉತ್ಕ್ರಾಂತಿಯಾಗಲಿ ಗತಿಯಾಗಲಿ ಹೊಂದುವದೂ** ಇಲ್ಲ. "ಇಲ್ಲಿಯೇ ಬ್ರಹ್ಮವನ್ನು ಹೊಂದುವನು" (ಬೃ. ೪-೪-೭) ಎಂಬೀ ಜಾತಿಯ ಶ್ರುತಿಗಳೂ ಗತ್ಯುತ್ಕ್ರಾಂತಿಗಳ ಅಭಾವವನ್ನು ಸೂಚಿಸುತ್ತವೆ.

**ಸ್ಮರ್ಯತೇ ಚ ॥ ೧೪ ॥**

೧೪. ಸ್ಮೃತಿಯಲ್ಲಿಯೂ ಇರುತ್ತದೆ.

## ಮಹಾಭಾರತದಲ್ಲಿ ಗತ್ಯುತ್ಕ್ರಾಂತ್ಯಭಾವಸ್ಮರಣ

(ಭಾಷ್ಯ)

೫೫೬. ಸ್ಮರ್ಯತೇಽಪಿ ಚ ಮಹಾಭಾರತೇ ಗತ್ಯುತ್ಕ್ರಾನ್ತ್ಯೋರಭಾವಃ "ಸರ್ವಭೂತಾತ್ಮಭೂತಸ್ಯ ಸಮ್ಯಗ್ಭೂತಾನಿ ಪಶ್ಯತಃ। ದೇವಾಽಪಿ ಮಾರ್ಗೇ ಮುಹ್ಯನ್ತ್ಯಪದಸ್ಯ ಪದೈಷಿಣಃ" (ಮೋ.ಧ. ೨೬೨-೨೨) ಇತಿ । ನನು ಗತಿರಪಿ ಬ್ರಹ್ಮವಿದಃ ಸರ್ವಗತಬ್ರಹ್ಮಾತ್ಮಭೂತಸ್ಯ ಸ್ಮರ್ಯತೇ । ಶುಕಃ ಕಿಲ ವೈಯಾಸಕಿಃ ಮುಮುಕ್ಷುರಾದಿತ್ಯಮಣ್ಡಲಮಭಿಪ್ರತಸ್ಥೇ । ಪಿತ್ರಾ ಚಾನುಗಮ್ಯಾಹೂತೋ ಭೋ ಇತಿ ಪ್ರತಿಶುಶ್ರಾವ (ಮೋ. ಧ. ೩೩೩-೨೩, ೨೪) ಇತಿ । ನ । ಸಶರೀರಸ್ಯೈವಾಯಂ ಯೋಗಬಲೇನ ವಿಶಿಷ್ಟದೇಶಪ್ರಾಪ್ತಿಪೂರ್ವಕಃ ಶರೀರೋತ್ಸರ್ಗಃ ಇತಿ ದ್ರಷ್ಟವ್ಯಮ್ । ಸರ್ವಭೂತದೃಶ್ಯತ್ವಾದ್ಯುಪನ್ಯಾಸಾತ್ । ನ ಹಿ ಅಶರೀರಂ ಗಚ್ಛನ್ತಂ ಸರ್ವಭೂತಾನಿ ದ್ರಷ್ಟುಂ ಶಕ್ನುಯುಃ । ತಥಾ ಚ ತತ್ರೈವ ಉಪ

ಸಂಹೃತಮ್ "ಶುಕಸ್ತು ಮಾರುತಾಚ್ಛೀಘ್ರಾಂ ಗತಿಂ ಕೃತ್ವಾನ್ತರಿಕ್ಷಗಃ। ದರ್ಶಯಿತ್ವಾ ಪ್ರಭಾವಂ ಸ್ವಂ ಸರ್ವಭೂತಗತೋಽಭವತ್" (ಮೋ. ಧ. ೩೩೩–೧೯, ೨೦) ಇತಿ[1] । ತಸ್ಮಾದಭಾವಃ ಪರಬ್ರಹ್ಮವಿದೋ ಗತ್ಯುತ್ಕ್ರಾನ್ತ್ಯೋಃ । ಗತಿಶ್ರುತೀನಾಂ ತು ವಿಷಯಮುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥

(ಭಾಷ್ಯಾರ್ಥ)

ಮಹಾಭಾರತದಲ್ಲಿ "ಸರ್ವಭೂತಗಳಿಗೂ ಆತ್ಮನಾಗಿ ಸರಿಯಾಗಿ ಭೂತಗಳನ್ನೆಲ್ಲ ಕಾಣುತ್ತಿರುವ (ಜ್ಞಾನಿಯ) ಮಾರ್ಗದ ವಿಷಯದಲ್ಲಿ ಹೆಜ್ಜೆಯ ಗುರುತಿಲ್ಲದ ಹೆಜ್ಜೆಯನ್ನು ಹುಡುಕುತ್ತಾ ದೇವತೆಗಳೂ ಮುಗ್ಧರಾಗುವರು" (ಮೋ. ಧ. ೨೬೨–೩೩) ಎಂದು ಗತ್ಯುತ್ಕ್ರಾಂತಿಗಳಿಲ್ಲವೆಂಬ ಸ್ಮರಣವೂ ಇದೆ.

(ಆಕ್ಷೇಪ) :– ಸರ್ವಗತಬ್ರಹ್ಮಾತ್ಮನೇ ಆಗಿರುವಾತನಿಗೆ ಗತಿಯನ್ನು (ಹೇಳುವ) "ವ್ಯಾಸಪುತ್ರನಾದ ಶುಕನು ಮೋಕ್ಷವನ್ನು ಪಡೆಯಲೆಳಸಿ ಆದಿತ್ಯಮಂಡಲದ ಕಡೆಗೆ ಹೊರಟನು ; ತಂದೆಯು ಬಂದು ಕೂಗಿ ಕರೆಯಲು 'ಭೋಃ' (ಏನಪ್ಪ ?) ಎಂದು ಉತ್ತರಕೊಟ್ಟನು" (ಮೋ.ಧ. ೩೩೩–೨೨–೨೪) ಎಂಬದು[2] (ಮಹಾಭಾರತದಲ್ಲಿ) ಸ್ಮರಣವೂ ಇದೆಯಲ್ಲ !

(ಪರಿಹಾರ) : ಹಾಗಲ್ಲ. ಸಶರೀರನಾದ (ಶುಕನಿಗೇ) ಯೋಗಬಲದಿಂದ ಒಂದಾನೊಂದು ದೇಶವನ್ನು ಹೊಂದುವ ಮೂಲಕ ಹೀಗೆ ಶರೀರತ್ಯಾಗವನ್ನು (ಹೇಳಿದೆ) ಎಂದು ತಿಳಿಯಬೇಕು. ಏಕೆಂದರೆ ಸರ್ವಭೂತಗಳಿಗೂ (ಶುಕನು) ದೃಶ್ಯನಾಗಿದ್ದನೆಂದು ಮುಂತಾಗಿ (ಅಲ್ಲಿ) ಹೇಳಿದೆ ಅಶರೀರನಾಗಿ ಹೋಗುತ್ತಿರುವನನ್ನು ಎಲ್ಲಾ ಪ್ರಾಣಿಗಳೂ ನೋಡಲಾರವಷ್ಟೆ. ಆದ್ದರಿಂದಲೇ "ಶುಕನಾದರೋ ಗಾಳಿಗಿಂತಲೂ ವೇಗವಾದ ಗತಿಯನ್ನು ಮಾಡಿಕೊಂಡು ಅಂತರಿಕ್ಷವನ್ನು ಸೇರಿ ತನ್ನ ಪ್ರಭಾವವನ್ನು ತೋರಿಸಿಕೊಟ್ಟು ಸರ್ವಭೂತಗಳನ್ನೂ ಹೊಂದಿದವನಾದನು" (ಮೋ. ಧ. ೩೩೩–೧೯, ೨೦) ಎಂದು ಅಲ್ಲಿಯೇ ಉಪಸಂಹಾರ ಮಾಡಿರುತ್ತದೆ.[3] ಆದ್ದರಿಂದ ಪರಬ್ರಹ್ಮಜ್ಞಾನಿಗೆ ಗತ್ಯುತ್ಕ್ರಾಂತಿಗಳು ಇಲ್ಲ. ಗತಿಶ್ರುತಿಗಳ ವಿಷಯ(ವೇನೆಂಬು)ದನ್ನಾದರೆ ಮುಂದೆ ವಿವರಿಸುವೆವು.

---

1. ಅಚ್ಚಿನ ಭಾರತದಲ್ಲಿ ಪಾಠವು ಹೀಗಿದೆ : "ಶುಕಸ್ತು ಮಾರುತಾದೂರ್ಧ್ವಂ ಗತಿಂ ಕೃತ್ವಾನ್ತರಿಕ್ಷಗಾವತ್ । ದರ್ಶಯಿತ್ವಾ ಪ್ರಭಾವಂ ಸ್ವಂ ಬ್ರಹ್ಮಭೂತೋಽಭವತ್ ತದಾ".

2. ಅಚ್ಚಿನ ಭಾರತದಲ್ಲಿ ಕಾಣಬರುವ ವಿವರವು ಸ್ವಲ್ಪ ಹೆಚ್ಚುಕಡಿಮೆಯಿದೆ.

3. ಬ್ರಹ್ಮಜ್ಞಾನಿಯು ಯೋಗಿಯೂ ಆಗಿದ್ದಾಗ ಮಾಡಿದ ಕೃತ್ಯವಿದು. ಜ್ಞಾನಿಗಳಿಗೆಲ್ಲ ಯೋಗಾನುಷ್ಠಾನವಿರಬೇಕೆಂಬ ನಿಯಮವೇನೂ ಇಲ್ಲ ಎಂದು ಭಾವ.

## ೭. ವಾಗಾದಿಲಯಾಧಿಕರಣ

### (ಜ್ಞಾನಿಯ ಪ್ರಾಣಗಳು ಆತ್ಮನಲ್ಲಿ ಲಯ)

**ತಾನಿ ಪರೇ ತಥಾಹ್ಯಾಹ ॥ ೧೫ ॥**

೧೫. ಅವು ಪರ(ಮಾತ್ಮನಲ್ಲಿ ಲಯವಾಗುತ್ತವೆ) ; ಹಾಗೆಂದಲ್ಲವೆ, ಹೇಳಿದೆ ?

## ಪ್ರಾಣಗಳೆಲ್ಲವೂ ಪರಮಾತ್ಮನಲ್ಲಿ ಲಯವಾಗುತ್ತವೆ

(ಭಾಷ್ಯ)

೫೫೭. ತಾನಿ ಪುನಃ ಪ್ರಾಣಶಬ್ದೋದಿತಾನಿ ಇನ್ದ್ರಿಯಾಣಿ ಭೂತಾನಿ ಚ ಪರಬ್ರಹ್ಮವಿದಃ ಪರಸ್ಮಿನ್ ಆತ್ಮನಿ ಪ್ರಲೀಯನ್ತೇ । ಕಸ್ಮಾತ್? ತಥಾ ಹ್ಯಾಹ ಶ್ರುತಿಃ "ಏವಮೇವಾಸ್ಯ ಪರಿದ್ರಷ್ಟುರಿಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛನ್ತಿ" (ಪ್ರ. ೬-೫) ಇತಿ । ನನು "ಗತಾಃ ಕಲಾ ಪಞ್ಚದಶ ಪ್ರತಿಷ್ಠಾಃ" (ಮುಂ. ೩-೨-೭) ಇತಿ ವಿದ್ವದ್ವಿಷಯೈವ ಅಪರಾ ಶ್ರುತಿಃ ಪರಸ್ಮಾತ್ ಆತ್ಮನೋಽನ್ಯತ್ರಾಪಿ ಕಲಾನಾಂ ಪ್ರಲಯಮಾಹ ಸ್ಮ । ನ । ಸಾ ಖಲು ವ್ಯವಹಾರಾಪೇಕ್ಷಾ ಪಾರ್ಥಿವಾದ್ಯಾಃ ಕಲಾಃ ಪೃಥಿವ್ಯಾದೀರೇವ ಸ್ವಪ್ರಕೃತೀರುಪಯನ್ತೀತಿ । ಇತರಾ ತು ವಿದ್ವತ್ಪ್ರತಿಪತ್ತ್ಯಪೇಕ್ಷಾ ಕೃತ್ಸ್ನಂ ಕಲಾಜಾತಂ ಪರಬ್ರಹ್ಮವಿದೋ ಬ್ರಹ್ಮೈವ ಸಂಪದ್ಯತ ಇತಿ ತಸ್ಮಾತ್ ಅದೋಷಃ ॥

(ಭಾಷ್ಯಾರ್ಥ)

ಇನ್ನು ಪರಬ್ರಹ್ಮಜ್ಞಾನಿಯ ಆ ಪ್ರಾಣಶಬ್ದವಾಚ್ಯವಾದ ಇಂದ್ರಿಯಗಳೂ ಭೂತಗಳೂ ಪರಮಾತ್ಮನಲ್ಲಿ ಪ್ರಲಯವಾಗುತ್ತವೆ. ಏಕೆ ? ಎಂದರೆ ಹಾಗೆಂದಲ್ಲವೆ, "ಈ ಜ್ಞಾನಿಯ ಈ ಹದಿನಾರು ಕಲೆಗಳು ಪುರುಷನಲ್ಲಿ ಸೇರಬೇಕಾಗಿರುವವುಗಳಾಗಿದ್ದು ಪುರುಷನನ್ನು ಪಡೆದು ಮರೆಯಾಗುವವು" (ಪ್ರ. ೬-೫) ಎಂಬ ಶ್ರುತಿಯು ಹೇಳುತ್ತದೆ ?

(ಆಕ್ಷೇಪ) :- ''ಹದಿನೈದು ಕಲೆಗಳು ಪ್ರತಿಷ್ಠೆಗಳನ್ನು ಸೇರುತ್ತವೆ'' (ಮುಂ ೩-೨-೭) ಎಂದು ಜ್ಞಾನಿಯ ವಿಷಯವೇ ಆಗಿರುವ ಮತ್ತೊಂದು ಶ್ರುತಿಯು ಪರಮಾತ್ಮನಿಗಿಂತ ಬೇರೊಂದು ಕಡೆಯಲ್ಲಿಯೂ ಕಲೆಗಳ ಪ್ರಲಯವನ್ನು ಹೇಳಿದೆಯಲ್ಲ !

(ಪರಿಹಾರ) :- ಹಾಗಲ್ಲ. ಏಕೆಂದರೆ **ಪಾರ್ಥಿವವೇ ಮುಂತಾದ ಕಲೆಗಳು ಪೃಥಿವಿಯೇ ಮುಂತಾದ ತಮ್ಮತಮ್ಮ ಪ್ರಕೃತಿಗಳನ್ನೇ ಸೇರಿ**

**ಕೊಳ್ಳುತ್ತವೆಯೆಂದು ಹೇಳುವ ಆ (ಶ್ರುತಿಯು) ವ್ಯವಹಾರದ ಅಪೇಕ್ಷೆ (ಯಿಂದ ಹೇಳಿದ್ದು). ಪರಬ್ರಹ್ಮಜ್ಞಾನಿಯ ಕಲಾಜಾತವೆಲ್ಲ ಬ್ರಹ್ಮ ದಲ್ಲಿಯೇ ಬೆರೆತುಹೋಗುವದೆಂಬ ಇನ್ನೊಂದು ಶ್ರುತಿಯಾದರೋ ಜ್ಞಾನಿಯ ಜ್ಞಾನದ ಅಪೇಕ್ಷೆಯಿಂದ ಹೇಳಿದ್ದು.** ಆದ್ದರಿಂದ (ಯಾವ) **ದೋಷವೂ ಇಲ್ಲ.**

## ೮. ಅವಿಭಾಗಾಧಿಕರಣ

(ಜ್ಞಾನಿಯ ಕಲೆಗಳ ಪ್ರಲಯವು ನಿರವಶೇಷ)

**ಅವಿಭಾಗೋ ವಚನಾತ್ ॥ ೧೬ ॥**

೧೬. ಅವಿಭಾಗವಾಗುತ್ತದೆ. ಏಕೆಂದರೆ (ಹಾಗೆಂದು) ವಚನ ವಿದೆ.

## ಜ್ಞಾನಿಯ ಕಲೆಗಳು ಆತ್ಯಂತಿಕವಾಗಿ ಪ್ರಲಯವಾಗುತ್ತವೆ

(ಭಾಷ್ಯ)

೫೫೮. ಸ ಪುನರ್ವಿದುಷಃ ಕಲಾಪ್ರಲಯಃ ಕಿಮಿತರೇಷಾಮಿವ ಸಾವ ಶೇಷೋ ಭವತಿ, ಆಹೋಸ್ವಿತ್ ನಿರವಶೇಷಃ ಇತಿ। ತತ್ರ ಪ್ರಲಯಸಾಮಾನ್ಯಾತ್ ಶಕ್ತ್ಯವಶೇಷತಾಪ್ರಸಕ್ತೌ ಬ್ರವೀತಿ "ಅವಿಭಾಗಾಪತ್ತಿಃ" ಇತಿ। ಕುತಃ? ವಚ ನಾತ್। ತಥಾ ಹಿ ಕಲಾಪ್ರಲಯಮುಕ್ತ್ವಾ "ಭಿದ್ಯೇತೇ ತಾಸಾಂ ನಾಮ ರೂಪೇ ಪುರುಷ ಇತ್ಯೇವಂ ಪ್ರೋಚ್ಯತೇ ಸ ಏಷೋಽಕಲೋಽಮೃತೋ ಭವತಿ" (ಪ್ರ.೬-೫) ಇತಿ। ಅವಿದ್ಯಾನಿಮಿತ್ತಾನಾಂ ಚ ಕಲಾನಾಂ ನ ವಿದ್ಯಾನಿಮಿತ್ತೇ ಪ್ರಲಯೇ ಸಾವಶೇಷತ್ವೋಪಪತ್ತಿಃ। ತಸ್ಮಾತ್ ಅವಿಭಾಗ ಏವೇತಿ ॥

(ಭಾಷ್ಯಾರ್ಥ)

ಇನ್ನು ಜ್ಞಾನಿಗೆ (ಆಗುವ) ಈ ಕಲಾಪ್ರಲಯವು ಮಿಕ್ಕವರಿ(ಗಾಗು)ವಂತೆ ಸಾವಶೇಷವಾಗಿ ಆಗುತ್ತದೆಯೊ, ಅಥವಾ ನಿರವಶೇಷವಾಗಿ (ಆಗುತ್ತದೆಯೊ)? ಎಂದು (ಸಂಶಯವಾಗುತ್ತದೆ). ಇಲ್ಲಿ ಪ್ರಲಯವೆಂಬುದು ಸಮಾನವಾಗಿರುವದ ರಿಂದ ಶಕ್ತಿಯು ಉಳಿದುಕೊಳ್ಳುತ್ತದೆ[1]. ಎಂಬ ಪ್ರಸಕ್ತಿಯುಂಟಾಗಲು 'ಅವಿ ಭಾಗವೇ ಆಗುತ್ತದೆ' ಎಂದು (ಸೂತ್ರಕಾರರು) ಹೇಳಿರುತ್ತಾರೆ, ಏಕೆ? ಎಂದರೆ

---

1. ಸುಷುಪ್ತ್ಯಾದಿಗಳಲ್ಲಿ ಪ್ರಲಯವಾದರೂ ಮತ್ತೆ ಎಚ್ಚರವೇ ಮುಂತಾದವು ಗಳು ಆಗುವದು ಕಂಡಿದೆ ; ಆದ್ದರಿಂದ ಜ್ಞಾನಿಗೆ ಕಲೆಗಳು ಪ್ರಲಯವಾದರೂ ಮತ್ತೆ ಅವನೂ ಜನ್ಮಾಂತರದಲ್ಲಿ ದೇಹಾಂತರವನ್ನು ಪಡೆಯಬೇಕು ಎಂದು ಪೂರ್ವಪಕ್ಷಿಯ ಭಾವ.

ವಚನವಿರುವದರಿಂದ. ಹಾಗೆಂದಲ್ಲವೆ, ಕಲಾಪ್ರಲಯವನ್ನು ಹೇಳಿದಬಳಿಕ "ಅವುಗಳ ನಾಮರೂಪಗಳೂ ನಾಶವಾಗುತ್ತವೆ; ಪುರುಷನೆಂದಿಂತು ಎನ್ನಿಸಿಕೊಳ್ಳುತ್ತಾನೆ: ಆ ಇವನು ಕಲೆಗಳಿಲ್ಲದವನೂ, ಅಮೃತನೂ ಆಗುತ್ತಾನೆ" (ಪ್ರ. ೬-೫) ಎಂಬ (ಶ್ರುತಿಯು) ಹೇಳುತ್ತದೆ? ಅವಿದ್ಯೆಯ ನಿಮಿತ್ತದಿಂದಾಗಿರುವ ಕಲೆಗಳು ವಿದ್ಯಾನಿಮಿತ್ತದಿಂದಾಗುವ ಪ್ರಲಯದಲ್ಲಿ ಸಾವಶೇಷವಾಗಿರುವದು ಹೊಂದುವದಿಲ್ಲ. ಆದ್ದರಿಂದ ಅವಿಭಾಗವೇ.

## ೯. ತದೋಕೋಽಧಿಕರಣ

( ಉಪಾಸಕನು ಮೂರ್ಧನ್ಯನಾಡಿಯಿಂದ ಉತ್ಕ್ರಾಂತನಾಗುತ್ತಾನೆ)

**ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ॥ ೧೭ ॥**

೧೭. ಅದರ ಸ್ಥಾನದ ಅಗ್ರವು ಹೊತ್ತಿಕೊಂಡುರಿಯುತ್ತದೆ, ಅದರಿಂದ ದ್ವಾರವು ಪ್ರಕಾಶಿತವಾಗಿ ವಿದ್ಯೆಯ ಸಾಮರ್ಥ್ಯವಿರುವದರಿಂದಲೂ ತಚ್ಛೇಷಗತ್ಯನುಸ್ಮೃತಿಯ ಯೋಗದಿಂದಲೂ ಹಾರ್ದಾನುಗೃಹೀತನಾಗಿ ನೂರಕ್ಕಿಂತ ಹೆಚ್ಚಿನ (ನಾಡಿಯಿಂದ ಉತ್ಕ್ರಾಂತನಾಗುತ್ತಾನೆ).

## ಉಪಾಸಕನ ಉತ್ಕ್ರಾಂತಿಯ ವಿಷಯದಲ್ಲಿ ಸಂಶಯಪೂರ್ವಪಕ್ಷಗಳು

(ಭಾಷ್ಯ)

೫೫೯. **ಸಮಾಪ್ತಾ ಪ್ರಾಸಙ್ಗಿಕೀ ಪರವಿದ್ಯಾಗತಾ ಚಿನ್ತಾ । ಸಂಪ್ರತಿ ತು ಅಪರವಿದ್ಯಾವಿಷಯಾಮೇವ ಚಿನ್ತಾಮ್ ಅನುವರ್ತಯತಿ । ಸಮಾನಾ ಚ ಆಸೃತ್ಯುಪಕ್ರಮಾದ್ ವಿದ್ವದವಿದುಷೋರುತ್ಕ್ರಾನ್ತಿಃ (೪-೨-೭) ಇತ್ಯುಕ್ತಮ್ । ತಮಿದಾನೀಂ ಸೃತ್ಯುಪಕ್ರಮಂ ದರ್ಶಯತಿ । ತಸ್ಯ ಉಪಸಂಹೃತವಾಗಾದಿಕಲಾಪಸ್ಯ ಉಚ್ಚಿಕ್ರಮಿಷತೋ ವಿಜ್ಞಾನಾತ್ಮನಃ ಓಕಃ ಆಯತನಂ ಹೃದಯಮ್। "ಸ ಏತಾಸ್ತೇಜೋಮಾತ್ರಾಃ ಸಮಭ್ಯಾದದಾನೋ ಹೃದಯಮೇವಾನ್ವವಕ್ರಾಮತಿ" (ಬೃ. ೪-೪-೧) ಇತಿ ಶ್ರುತೇಃ । ತದಗ್ರಜ್ವಲನಪೂರ್ವಿಕಾ**

ಚಕ್ಷುರಾದಿಸ್ಥಾನಾಪಾದಾನಾ ಚ ಉತ್ಕ್ರಾನ್ತಿಃ ಶ್ರೂಯತೇ "ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷ್ಟೋ ವಾ ಮೂರ್ಧ್ನೋ ವಾನ್ಯೇಭ್ಯೋ ವಾ ಶರೀರದೇಶೇಭ್ಯಃ" (ಬೃ. ೪-೪-೨) ಇತಿ। ಸಾ ಕಿಮನಿಯಮೇನೈವ ವಿದ್ವದವಿದುಷೋ ರ್ಭವತಿ, ಅಥಾಸ್ತಿ ಕಶ್ಚಿದ್ವಿದುಷೋ ವಿಶೇಷನಿಯಮಃ ಇತಿ ವಿಚಿಕಿತ್ಸಾಯಾಂ ಶ್ರುತ್ಯವಿಶೇಷಾತ್ ಅನಿಯಮಪ್ರಾಪ್ತಾ ಆಚಷ್ಟೇ ॥

(ಭಾಷ್ಯಾರ್ಥ)

ಪ್ರಸಂಗದಿಂದ ಬಂದಿದ್ದ ಪರವಿದ್ಯಾವಿಷಯದ ಚಿಂತೆಯು ಮುಗಿಯಿತು. ಈಗಲಾದರೋ ಅಪರವಿದ್ಯಾವಿಷಯದ ಚಿಂತೆಯನ್ನೇ ಮುಂದೆ ಸಾಗಿಸುತ್ತಾರೆ. ಮಾರ್ಗವು ಉಪಕ್ರಮವಾಗುವವರೆಗೆ ಉಪಾಸಕನಿಗೂ ಅಜ್ಞನಿಗೂ ಉತ್ಕ್ರಾಂತಿಯು ಸಮಾನವು (೪-೨-೭) ಎಂದು ಹೇಳಲಾಗಿದೆಯಷ್ಟೆ. ಆ ಮಾರ್ಗೋಪಕ್ರಮವನ್ನು ಈಗ ತಿಳಿಸುತ್ತಾರೆ.

ಆ ವಾಗಾದಿಕಲಾಪವನ್ನು ಉಪಸಂಹಾರಮಾಡಿಕೊಂಡು ಉತ್ಕ್ರಾಂತನಾಗಲಿರುವ ವಿಜ್ಞಾನಾತ್ಮನ ಓಕವು ಎಂದರೆ ಹೃದಯವೆಂಬ ಆಯತನವು. "ಅವನು ಈ ತೇಜೋಮಾತ್ರೆಗಳನ್ನು ತೆಗೆದುಕೊಂಡವನಾಗಿ ಹೃದಯವನ್ನೇ ಸೇರಿಕೊಳ್ಳುತ್ತಾನೆ" (ಬೃ. ೪-೪-೧) ಎಂಬ ಶ್ರುತಿಯು (ಇದಕ್ಕೆ ಪ್ರಮಾಣವು). ಅದರ ಅಗ್ರವು ಹೊತ್ತಿಕೊಂಡುರಿಯುವದರ ಪೂರ್ವಕವಾಗಿ ಚಕ್ಷುರಾದಿಸ್ಥಾನಗಳೆಂಬ ಅಪಾದಾನದಿಂದ ಉತ್ಕ್ರಾಂತಿಯಾಗುವದೆಂದು "ಆ ಈತನ ಹೃದಯದ ಅಗ್ರವು ಹೊಳೆಯುತ್ತದೆ; ಆ ಬೆಳಕಿನಿಂದ ಈ ಆತ್ಮನು ಚಕ್ಷುಸ್ಸಿನಿಂದಲೋ ಮೂರ್ಧದಿಂದಲೋ ಅಥವಾ ಬೇರೆಯ ಶರೀರದೇಶಗಳಿಂದಲೋ ಹೊರಹೊರಡುತ್ತಾನೆ" (ಬೃ. ೪-೪-೨) ಎಂದು ಶ್ರುತಿಯಲ್ಲಿದೆ. ಆ (ಉತ್ಕ್ರಾಂತಿಯು) ಯಾವ ನಿಯಮವೂ ಇಲ್ಲದೆಯೇ ಜ್ಞಾನಿಗೂ ಅಜ್ಞಾನಿಗೂ ಆಗುತ್ತದೆಯೆ, ಅಥವಾ ಜ್ಞಾನಿಗೆ ಯಾವದಾದರೊಂದು ವಿಶೇಷದ ನಿಯಮವಿದೆಯೆ ?- ಎಂಬ ಸಂಶಯವುಂಟಾಗಲು ಶ್ರುತಿಯು ಸಮಾನವಾಗಿರುವದರಿಂದ ಅನಿಯಮವು ಬಂದೊದಗಲಾಗಿ (ಮುಂದಿನ ಸಿದ್ಧಾಂತವನ್ನು) ಹೇಳುತ್ತಾರೆ.

(ಭಾಷ್ಯ)

ಸಮಾನೋಽಪಿ ಹಿ ವಿದ್ವದವಿದುಷೋರ್ಹೃದಯಾಗ್ರಪ್ರದ್ಯೋತನೇ ತತ್ಪ್ರಕಾಶಿತದ್ವಾರತ್ವೇ ಚ ಮೂರ್ಧಸ್ಥಾನಾದೇವ ವಿದ್ವಾನ್ ನಿಷ್ಕ್ರಾಮತಿ ಸ್ಥಾನಾನ್ತರೇಭ್ಯಸ್ತು ಇತರೇ। ಕುತಃ ? ವಿದ್ಯಾಸಾಮರ್ಥ್ಯಾತ್ । ಯದಿ ವಿದ್ವಾನಪಿ ಇತರವದ್ ಯತಃ ಕುತಶ್ಚಿದ್ ದೇಹದೇಶಾತ್ ಉತ್ಕ್ರಾಮೇತ್ ನೈವ ಉತ್ಕೃಷ್ಟಂ ಲೋಕಂ ಲಭ್ಯೇತ। ತತ್ರ ಅನರ್ಥಿಕೈವ ವಿದ್ಯಾ ಸ್ಯಾತ್ ।

ತಚ್ಛೇಷಗತ್ಯನುಸ್ಮೃತಿಯೋಗಾಚ್ಚ। ವಿದ್ಯಾಶೇಷಭೂತಾ ಚ ಮೂರ್ಧನ್ಯನಾಡೀಸಂಬದ್ಧಾ ಗತಿರನುಶೀಲಯಿತವ್ಯಾ ವಿದ್ಯಾವಿಶೇಷೇಷು ವಿಹಿತಾ। ತಾಮಭ್ಯಸ್ಯನ್ ತಯೈವ ಪ್ರತಿಷ್ಠತ ಇತಿ ಯುಕ್ತಮ್। ತಸ್ಮಾತ್ ಹೃದಯಾಲಯೇನ ಬ್ರಹ್ಮಣಾ ಸೂಪಾಸಿತೇನ ಅನುಗೃಹೀತಃ, ತದ್ಭಾವಂ ಸಮಾಪನ್ನೋ ವಿದ್ವಾನ್ ಮೂರ್ಧನ್ಯಯೈವ ಶತಾಧಿಕಯಾ ಶತಾದತಿರಿಕ್ತಯಾ ಏಕಶತತಮ್ಯಾ ನಾಡ್ಯಾ ನಿಷ್ಕ್ರಾಮತಿ ಇತರಾಭಿರಿತರೇ। ತಥಾ ಹಿ ಹಾರ್ದವಿದ್ಯಾಂ ಪ್ರಕೃತ್ಯ ಸಮಾಮನನ್ತಿ "ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ । ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ" (ಛಾಂ. ೮-೬-೬) ಇತಿ ॥

(ಭಾಷ್ಯಾರ್ಥ)

ಜ್ಞಾನಿಗೂ ಅಜ್ಞಾನಿಗೂ ಹೃದಯಾಗ್ರವು ಹೊತ್ತಿಕೊಂಡುರಿಯುವದೂ ಅದರಿಂದ ದ್ವಾರವು ಪ್ರಕಾಶಿತವಾಗುವದೂ ಸಮಾನವಾಗಿದ್ದರೂ ಮೂರ್ಧಸ್ಥಾನದಿಂದಲೇ ಜ್ಞಾನಿಯು ಹೊರಡುತ್ತಾನೆ, ಉಳಿದವರು ಮಿಕ್ಕ ಸ್ಥಾನಗಳಿಂದ ಹೊರಡುತ್ತಾರೆ (ಎನ್ನಬೇಕು). ಏಕೆ? ಎಂದರೆ ವಿದ್ಯಾಸಾಮರ್ಥ್ಯವಿರುವದರಿಂದ[1]. (ಇದರ ವಿವರ): ಜ್ಞಾನಿಯೂ ಮಿಕ್ಕವರಂತೆ ಯಾವದಾದರೊಂದು ದೇಹದೇಶದಿಂದ ಉತ್ಕ್ರಾಂತನಾಗುವದಾದರೆ ಉತ್ಕೃಷ್ಟಲೋಕವನ್ನು ಪಡೆಯುವದೇ ಇಲ್ಲವೆಂದಾಗುವದು, ಆಗ ವಿದ್ಯೆಯು ವ್ಯರ್ಥವೇ ಆಗುವದು. ಅದರ ಶೇಷವಾಗಿರುವ ಗತಿಯ ಅನುಸ್ಮೃತಿಯ ಯೋಗದಿಂದಲೂ (ಹೀಗೆನ್ನಬೇಕು, ಇದರ ವಿವರ): (ಅ) ವಿದ್ಯೆಯ ಶೇಷಭೂತವಾಗಿರುವ ಮೂರ್ಧನ್ಯನಾಡಿಗೆ ಸಂಬದ್ಧವಾಗಿರುವ ಗತಿಯನ್ನು ಅನುಸ್ಮರಣೆಮಾಡುತ್ತಿರಬೇಕೆಂದು ಆಯಾ ವಿದ್ಯೆಗಳಲ್ಲಿ ವಿಹಿತವಾಗಿರುತ್ತದೆ. ಅದನ್ನು ಅಭ್ಯಾಸಮಾಡುತ್ತಿರುವವನು ಆ (ನಾಡಿಯ ದ್ವಾರ)ದಿಂದಲೇ ಹೊರಡುತ್ತಾನೆ ಎಂಬುದು ಯುಕ್ತವು. ಆದ್ದರಿಂದ ಹೃದಯದಲ್ಲಿದ್ದುಕೊಂಡಿರುವ ಬ್ರಹ್ಮವನ್ನು ಚೆನ್ನಾಗಿ ಉಪಾಸನೆಮಾಡಿರುವದರಿಂದ (ಆ ಬ್ರಹ್ಮದಿಂದ) ಅನುಗೃಹೀತನಾಗಿ ಅದರ ಸ್ವರೂಪವನ್ನೇ ಪಡೆದುಕೊಂಡಿರುವದರಿಂದ ಜ್ಞಾನಿಯು ಮೂರ್ಧನ್ಯವಾದ ಶತಾಧಿಕವಾದ ಎಂದರೆ ನೂರಕ್ಕಿಂತ ಹೆಚ್ಚಿನ ನೂರೊಂದನೆಯ ನಾಡಿಯಿಂದಲೇ ಹೊರಟುಹೋಗುತ್ತಾನೆ, ಬೇರೆಯ ನಾಡಿಗಳಿಂದ ಮಿಕ್ಕವರು (ಹೊರಡುತ್ತಾರೆ). ಆದ್ದರಿಂದಲೇ ಹಾರ್ದವಿದ್ಯೆಯ ಪ್ರಕರಣದಲ್ಲಿ "ಹೃದಯಕ್ಕೆ ನೂರೂ ಒಂದೂ ನಾಡಿಗಳಿವೆ;

1. ವಿದ್ಯೆಯ ಸಾರ್ಥಕ್ಯಕ್ಕಾಗಿ ಎಂದರ್ಥ. ಇದೇ ಅರ್ಥವೆಂಬುದು ಮುಂದಿನ ವಿವರಣವಾಕ್ಯದಿಂದ ಸ್ಪಷ್ಟವಾಗುತ್ತದೆ. ಅಥವಾ ವಿದ್ಯೆಯ ಸಾಮರ್ಥ್ಯಕ್ಕೆ ಹೆಚ್ಚಿಗೆಯ ಫಲ ವಿರಬೇಕಾದ್ದರಿಂದ ಎಂದರ್ಥ.

ಅವುಗಳಲ್ಲಿ ಒಂದು ಮೂರ್ಧವನ್ನು ಒಡೆದುಕೊಂಡು ಹೋಗಿರುತ್ತದೆ. ಆದರಿಂದ ಮೇಲಕ್ಕೆ ಹೋಗುವವನು ಅಮೃತತ್ವವನ್ನು ಹೊಂದುತ್ತಾನೆ, ಉತ್ಕ್ರಮಣದಲ್ಲಿ ಮಿಕ್ಕವುಗಳು ನಾನಾಗತಿಗಳುಳ್ಳವಾಗಿರುವವು (ಛಾಂ. ೮-೬-೬) ಎಂದು ಪಠಿಸಿರುತ್ತಾರೆ.

## ೧೦. ರಶ್ಮ್ಯಧಿಕರಣ (ಸೂ. ೧೮-೧೯)

(ಉತ್ಕ್ರಾಂತನಾದ ಉಪಾಸಕನು ರಶ್ಮಿಗಳನ್ನನುಸರಿಸಿಕೊಂಡು ಹೋಗುತ್ತಾನೆ)

**ರಶ್ಮ್ಯನುಸಾರೀ ॥ ೧೮ ॥**

೧೨. ರಶ್ಮಿಗಳನ್ನು ಅನುಸರಿಸಿದವನಾಗಿ (ಹೋಗುತ್ತಾನೆ).

### ಉಪಾಸಕನು ಉತ್ಕ್ರಾಂತನಾಗುವಾಗ ರಶ್ಮಿಗಳನ್ನನುಸರಿಸುತ್ತಾನೆ

(ಭಾಷ್ಯ)

೫೬೦. ಅಸ್ತಿ ಹಾರ್ದವಿದ್ಯಾ "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ" (ಛಾಂ. ೮-೧-೧) ಇತ್ಯುಪಕ್ರಮ್ಯ ವಿಹಿತಾ। ತತ್ಪ್ರಕ್ರಿಯಾಯಾಮ್ "ಅಥ ಯಾ ಏತಾ ಹೃದಯಸ್ಯ ನಾಡ್ಯಃ" (ಛಾಂ. ೮-೬-೧) ಇತ್ಯುಪಕ್ರಮ್ಯ ಸಪ್ರಪಞ್ಚಂ ನಾಡೀರಶ್ಮಿಸಂಬನ್ಧಮ್ ಉಕ್ತ್ವಾ ಉಕ್ತಮ್ "ಅಥ ಯತ್ರೈತದಸ್ಮಾಚ್ಛರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವಮಾಕ್ರಮತೇ" (ಛಾಂ. ೮-೬-೫) ಇತಿ। ಪುನಶ್ಚೋಕ್ತಮ್ "ತಯೋರ್ಧ್ವಮಾಯನ್ನಮೃತತ್ವಮೇತಿ" (ಛಾಂ. ೮-೬-೬) ಇತಿ। ತಸ್ಮಾತ್ ಶತಾಧಿಕಯಾ ನಾಡ್ಯಾ ನಿಷ್ಕ್ರಾಮನ್ ರಶ್ಮ್ಯನುಸಾರೀ ನಿಷ್ಕ್ರಾಮತೀತಿ ಗಮ್ಯತೇ। ತತ್ಕಿಮವಿಶೇಷೇಣೈವ ಅಹನಿ ರಾತ್ರೌ ವಾ ಮ್ರಿಯಮಾಣಸ್ಯ ರಶ್ಮ್ಯನುಸಾರಿತ್ವಮ್ ಆಹೋಸ್ವಿತ್ ಅಹನ್ಯೇವ ಇತಿ ಸಂಶಯೇ ಸತಿ ಅವಿಶೇಷಶ್ರವಣಾತ್ ಅವಿಶೇಷೇಣೈವ ತಾವದ್ ರಶ್ಮ್ಯನುಸಾರೀ ಇತಿ ಪ್ರತಿಜ್ಞಾಯತೇ ॥

(ಭಾಷ್ಯಾರ್ಥ)

"ಇನ್ನು ಈ ಬ್ರಹ್ಮಪುರದಲ್ಲಿ ಸಣ್ಣ ಪುಂಡರೀಕವೇಶ್ಮವಿದೆಯಷ್ಟೆ" (ಛಾಂ.೮-೧-೧) ಎಂದು ಉಪಕ್ರಮಿಸಿ ವಿಹಿತವಾಗಿರುವ ಹಾರ್ದವಿದ್ಯೆಯಿದೆ[1]. ಅದರ ಪ್ರಕರಣದಲ್ಲಿ "ಇನ್ನು ಈ ಹೃದಯದ ನಾಡಿಗಳಿವೆಯಷ್ಟೆ" (ಛಾಂ. ೮-೬-೧) ಎಂದು ಉಪಕ್ರಮಿಸಿ ವಿಸ್ತಾರವಾಗಿ ನಾಡೀರಶ್ಮಿಸಂಬಂಧವನ್ನು ಹೇಳಿದ

1. ಹೃದಯದಲ್ಲಿ ಬ್ರಹ್ಮವನ್ನು ಚಿಂತಿಸುವ ಉಪಾಸನೆ.

ಬಳಿಕ "ಇನ್ನು ಯಾವಾಗ ಹೀಗೆ ಈ ಶರೀರದಿಂದ ಉತ್ಕ್ರಮಿಸುತ್ತಾನೋ ಆಗ ಇದೇ ರಶ್ಮಿಗಳಿಂದ ಮೇಲಕ್ಕೇರುತ್ತಾನೆ" (ಛಾಂ.೮-೬-೫) ಎಂದು ಹೇಳಿರುತ್ತದೆ. ಮತ್ತೆ "(ನಾಡಿಯಿಂದ) ಮೇಲಕ್ಕೆ ಹೋಗುವವನು ಅಮೃತತ್ವವನ್ನು ಹೊಂದುತ್ತಾನೆ" (ಛಾಂ. ೮-೬-೬) ಎಂದು ಹೇಳಿರುತ್ತದೆ. ಆದ್ದರಿಂದ ನೂರಕ್ಕಿಂತ ಹೆಚ್ಚಿನದಾದ ನಾಡಿಯಿಂದ ಹೊರಡುವಾಗ ರಶ್ಮಿಗಳನ್ನು ಅನುಸರಿಸಿ ಹೊರಡುತ್ತಾನೆ ಎಂದು ನಿಶ್ಚಿತವಾಗುತ್ತದೆ. ಇದೇನು ಹಗಲಾಗಲಿ ರಾತ್ರಿಯಾಗಲಿ (ಯಾವ) ವಿಶೇಷವೂ ಇಲ್ಲದೆ (ಯಾವಾಗ) ಸತ್ತರೂ ರಶ್ಮಿಗಳ ಅನುಸರಣೆಯೊಂದಿರುತ್ತದೆಯೊ, ಅಥವಾ ಹಗಲೇಯೊ ? -ಎಂಬ ಸಂಶಯವುಂಟಾಗಲು ಯಾವ ವಿಶೇಷವನ್ನೂ ಶ್ರುತಿಯಲ್ಲಿ ಹೇಳದಿರುವದರಿಂದ (ಯಾವ) ವಿಶೇಷವೂ ಇಲ್ಲದೆಯೇ "ರಶ್ಮ್ಯನುಸಾರಿಯಾಗಿ" ಹೋಗುತ್ತಾನೆ ಎಂದು ಮೊದಲು ಪ್ರತಿಜ್ಞೆಮಾಡಿರುತ್ತದೆ.

**ನಿಶಿ ನೇತಿ ಚೇನ್ನ ಸಂಬನ್ಧಸ್ಯ ಯಾವದ್ದೇಹಭಾವಿತ್ವಾದ್ದರ್ಶಯತಿ ಚ॥**

೧೯. ರಾತ್ರಿಯಲ್ಲಿ ಇಲ್ಲ ಎಂದರೆ ಹಾಗಲ್ಲ ; ಏಕೆಂದರೆ (ನಾಡೀರಶ್ಮಿ)ಸಂಬಂಧವು ದೇಹವಿರುವವರೆಗೂ ಇರುತ್ತದೆ. (ಶ್ರುತಿಯು ಹಾಗೆಂದು) ತಿಳಿಸುತ್ತಲೂ ಇದೆ.

## ರಾತ್ರಿಯಲ್ಲಿಯೂ ರಶ್ಮ್ಯನುಸಾರಿತ್ವವಿದೆ

(ಭಾಷ್ಯ)

೫೬೧. ಅಸ್ತ್ಯಹನಿ ನಾಡೀರಶ್ಮಿಸಂಬನ್ಧಃ ಇತ್ಯಹನಿ ಮೃತಸ್ಯ ಸ್ಯಾದ್ ರಶ್ಮ್ಯನುಸಾರಿತ್ವಮ್। ರಾತ್ರೌ ತು ಪ್ರೇತಸ್ಯ ನ ಸ್ಯಾತ್। ನಾಡೀರಶ್ಮಿಸಂಬನ್ಧವಿಚ್ಛೇದಾತ್ ಇತಿ ಚೇತ್। ನ। ನಾಡೀರಶ್ಮಿಸಂಬನ್ಧಸ್ಯ ಯಾವದ್ದೇಹಭಾವಿತ್ವಾತ್। ಯಾವದ್ದೇಹಭಾವೀ ಹಿ ಶಿರಾಕಿರಣಸಂಪರ್ಕಃ। ದರ್ಶಯತಿ ಚ ಏತಮರ್ಥಂ ಶ್ರುತಿಃ "ಅಮುಷ್ಮಾದಾದಿತ್ಯಾತ್ ಪ್ರತಾಯನ್ತೇ ತಾ ಆಸು ನಾಡೀಷು ಸೃಪ್ತಾ ಆಭ್ಯೋ ನಾಡೀಭ್ಯಃ ಪ್ರತಾಯನ್ತೇ ತೇಽಮುಷ್ಮಿನ್ನಾದಿತ್ಯೇ ಸೃಪ್ತಾಃ" (ಛಾಂ. ೮-೬-೨) ಇತಿ। ನಿದಾಘಸಮಯೇ ಚ ನಿಶಾಸ್ವಪಿ ಕಿರಣಾನುವೃತ್ತಿರುಪಲಭ್ಯತೇ । ಪ್ರತಾಪಾದಿಕಾರ್ಯದರ್ಶನಾತ್। ಸ್ತೋಕಾನುವೃತ್ತೇಸ್ತು ದುರ್ಲಕ್ಷ್ಯತ್ವಮ್ ಋತ್ವನ್ತರರಜನೀಷು ಶೈಶಿರೇಷ್ವಿವ ದುರ್ದಿನೇಷು। "ಅಹರೇವೈತದ್ರಾತ್ರೌ ದಧಾತಿ" (?) ಇತಿ ಚ ಏತದೇವ ದರ್ಶಯತಿ। ಯದಿ ಚ ರಾತ್ರೌ ಪ್ರೇತೋ ವಿನೈವ ರಶ್ಮ್ಯನುಸಾರೇಣ ಊರ್ಧ್ವಮಾಕ್ರಮೇತ ರಶ್ಮ್ಯನುಸಾರಾನರ್ಥಕ್ಯಂ ಭವೇತ್। ನ ಹ್ಯೇತದ್ ವಿಶಿಷ್ಯಾಧೀಯತೇ ಯೋ

ದಿವಾ ಪ್ರೈತಿ ಸ ರಶ್ಮೀನಪೇಕ್ಷ್ಯ ಊರ್ಧ್ವಮಾಕ್ರಮತೇ, ಯಸ್ತು ರಾತ್ರೌ ಸೋಽನಪೇಕ್ಷ್ಯೈವ ಇತಿ । ಅಥ ತು ವಿದ್ವಾನಪಿ ರಾತ್ರಿಪ್ರಾಯಣಾಪರಾಧಮಾತ್ರೇಣ ನೋರ್ಧ್ವಮಾಕ್ರಮೇತ, ಪಾಕ್ಷಿಕಫಲಾ ವಿದ್ಯಾ ಇತ್ಯಪ್ರವೃತ್ತಿರೇವ ತಸ್ಯಾಂ ಸ್ಯಾತ್ । ಮೃತ್ಯುಕಾಲಾನಿಯಮಾತ್ । ಅಥಾಪಿ ರಾತ್ರೌ ಉಪರತೋಽಹರಾಗಮಮುದೀಕ್ಷೇತ, ಅಹರಾಗಮೇಽಪ್ಯಸ್ಯ ಕದಾಚಿದರಶ್ಮಿಸಂಬನ್ಧಾರ್ಹಂ ಶರೀರಂ ಸ್ಯಾತ್ ಪಾವಕಾದಿಸಂಪರ್ಕಾತ್ । "ಸ ಯಾವತ್ ಕ್ಷಿಪ್ಯೇನ್ಮನಸ್ತಾವದಾದಿತ್ಯಂ ಗಚ್ಛತಿ" (ಛಾಂ. ೮-೬-೫) ಇತಿ ಚ ಶ್ರುತಿರನುದೀಕ್ಷಾಂ ದರ್ಶಯತಿ। ತಸ್ಮಾತ್ ತದವಿಶೇಷೇಣೈವೇದಂ[1] ರಾತ್ರಿಂದಿವಂ ರಶ್ಮ್ಯನುಸಾರಿತ್ವಮ್ ॥

(ಭಾಷ್ಯಾರ್ಥ)

ಹಗಲು ನಾಡೀರಶ್ಮಿಗಳ ಸಂಬಂಧವಿರುತ್ತದೆಯಾಗಿ ಹಗಲು ಸತ್ತವನಿಗೆ ರಶ್ಮಿಗಳ ಅನುಸರಣೆಯು ಆಗಬಹುದು, ಆದರೆ ರಾತ್ರಿಯಲ್ಲಿ ಸತ್ತವನಿಗೆ ಅದು ಆಗಲಾರದು ; ಏಕೆಂದರೆ ನಾಡೀರಶ್ಮಿಗಳ ಸಂಬಂಧವು (ಆಗ) ಕಡಿದು ಹೋಗಿರುತ್ತದೆ ಎಂದರೆ ಹಾಗಲ್ಲ. ಏಕೆಂದರೆ ನಾಡೀರಶ್ಮಿಗಳ ಸಂಬಂಧವು ದೇಹವಿರುವವರೆಗೂ ಇರುತ್ತದೆ. "ಆ ಆದಿತ್ಯಮಂಡಲದಿಂದ ಹರಡಿಕೊಂಡಿರುತ್ತವೆ. ಅವು ಈ ನಾಡಿಗಳಲ್ಲಿ ಸೇರಿಕೊಂಡಿರುತ್ತವೆ. ಈ ನಾಡಿಗಳಿಂದ ಹೊರಟಿರುವ ಅವು ಆ ಆದಿತ್ಯನಲ್ಲಿ ಸೇರಿಕೊಂಡಿರುತ್ತವೆ" (ಛಾಂ. ೮-೬-೨) ಎಂಬ ಶ್ರುತಿಯು ಈ ಅರ್ಥವನ್ನು ತಿಳಿಸುತ್ತದೆ. ಬೇಸಗೆಯ ಕಾಲದಲ್ಲಿ ರಾತ್ರಿಗಳಲ್ಲಿಯೂ ಸೆಕೆಯೇ ಮುಂತಾದ ಕಾರ್ಯವು ಕಂಡುಬರುವದರಿಂದ ಕಿರಣಗಳ ಅನುವೃತ್ತಿಯು (ಇದೆಯೆಂದು) ತಿಳಿದುಬರುತ್ತದೆ. ಮಿಕ್ಕ ಋತುಗಳ ರಾತ್ರಿಗಳಲ್ಲಿ, ಚಳಿಗಾಲದ ಮೋಡದ ದಿನಗಳಲ್ಲಿ ಹೇಗೋಹಾಗೆ ಸ್ವಲ್ಪವೇ ಅನುವೃತ್ತವಾಗಿರುವದರಿಂದ ಚೆನ್ನಾಗಿ ಕಂಡುಬರುವದಿಲ್ಲ. "ಈ ಹಗಲನ್ನೇ ರಾತ್ರಿಯಲ್ಲಿ ಧರಿಸುತ್ತಾನೆ" (?) ಎಂಬ (ಶ್ರುತಿಯು) ಇದನ್ನೇ ತಿಳಿಸುತ್ತದೆ. ಇದಲ್ಲದೆ ರಾತ್ರಿಯಲ್ಲಿ ಸತ್ತವನು ರಶ್ಮಿಗಳ ಅನುಸರಣವಿಲ್ಲದೆಯೇ ಮೇಲಕ್ಕೇರುವದಾದರೆ ರಶ್ಮಿಯನ್ನು ಅನುಸರಿಸುವದೆಂಬುದು ವ್ಯರ್ಥವೇ ಆಗುವದು. 'ಯಾವನು ಹಗಲು ಸಾಯುತ್ತಾನೋ ಅವನು ರಶ್ಮಿಗಳ ಅಪೇಕ್ಷೆಯಿಂದ ಮೇಲಕ್ಕೇರುತ್ತಾನೆ, ಆದರೆ ಯಾವನು ರಾತ್ರಿಯಲ್ಲಿ (ಸಾಯುತ್ತಾನೋ) ಅವನು (ಅದರ) ಅಪೇಕ್ಷೆಯಿಲ್ಲದೆಯೇ (ಏರುತ್ತಾನೆ)' ಎಂದು ವಿಶೇಷವಾಗಿಯೇನೂ ಪಾಠವಿಲ್ಲವಷ್ಟೆ. ಹೀಗಲ್ಲದೆ ಉಪಾಸಕನೂ ರಾತ್ರಿಯಲ್ಲಿ ಸತ್ತನೆಂಬ ಅಪರಾಧಮಾತ್ರದಿಂದ ಮೇಲಕ್ಕೇರದೆ ಇದ್ದರೆ ವಿದ್ಯೆಯು ಪಾಕ್ಷಿಕಫಲವುಳ್ಳದ್ದೆಂದಾಗಿ[2] ಆ (ವಿದ್ಯೆಯಲ್ಲಿ) ಪ್ರವೃತ್ತಿಯೇ

1. 'ತಸ್ಮಾದವಿಶೇಷೇಣೈವೇದಂ' ಎಂದಿದ್ದರೇ ಸಾಕೆಂದು ತೋರುತ್ತದೆ.

2. ಒಂದು ಪಕ್ಷದಲ್ಲಿ, ರಶ್ಮಿಗಳ ಸಂಬಂಧವಿದ್ದರೆ, ಉಂಟು ; ಇಲ್ಲದಿದ್ದರೆ ಇಲ್ಲ ಎಂದಾಗಿ.

ಇಲ್ಲದಂತೆ ಆಗುವದು. ಏಕೆಂದರೆ ಮರಣಕಾಲವು (ಇಂಥದ್ದು) ಎಂಬ ನಿಯಮ ವೇನೂ ಇರುವದಿಲ್ಲ[1]. ಇನ್ನು ರಾತ್ರಿಯಲ್ಲಿ ಸತ್ತವನು (ರಶ್ಮಿಗಳಿಗಾಗಿ) ಹಗ ಲಾಗುವವರೆಗೂ ನಿರೀಕ್ಷಿಸುತ್ತಾನೆಂದು (ಹೇಳುವದಾದರೆ) ಹಗಲು ಬಂದರೂ ಅವನಿಗೆ ಒಂದೊಂದು ವೇಳೆ ಅಗ್ನಿಯೇ ಮುಂತಾದದ್ದರ ಸಂಪರ್ಕದಿಂದ[2] ರಶ್ಮಿಸಂಬಂಧಕ್ಕೆ ಶರೀರವು ಅನರ್ಹವೂ ಆಗಬಹುದು. "ಅವನು ಮನಸ್ಸನ್ನು ಹಾಕುವದರೊಳಗೆಯೇ ಆದಿತ್ಯನಲ್ಲಿಗೆ ಹೋಗುತ್ತಾನೆ" ( ಛಾಂ. ೮-೬-೫ ) ಎಂದು ಶ್ರುತಿಯು ನಿರೀಕ್ಷಣೆಯಿಲ್ಲವೆಂದೂ ಹೇಳುತ್ತಲಿದೆ. ಆದ್ದರಿಂದ ಯಾವ ವಿಶೇಷವೂ ಇಲ್ಲದೆಯೇ ಹಗಲೂ ಇರಳೂ ರಶ್ಮಿಗಳ ಅನುಸರಣೆಯನ್ನು (ಹೇಳಿದೆ ಎಂಬುದೇ ಯುಕ್ತ).

## ೧೧. ದಕ್ಷಿಣಾಯನಾಧಿಕರಣ (ಸೂ. ೨೦-೨೧)

(ದಕ್ಷಿಣಾಯನದಲ್ಲಿ ಸತ್ತ ಉಪಾಸಕರಿಗೂ ಫಲಪ್ರಾಪ್ತಿ)

**ಅತಶ್ಚಾಯನೇಽಪಿ ದಕ್ಷಿಣೇ ॥೨೦॥**

೨೧. ಆದ್ದರಿಂದಲೇ ದಕ್ಷಿಣಾಯನದಲ್ಲಿಯೂ (ಫಲಪ್ರಾಪ್ತಿ ಯುಂಟು).

## ದಕ್ಷಿಣಾಯನದಲ್ಲಿ ಮೃತರಾದರೂ ವಿದ್ಯಾಫಲವುಂಟು

(ಭಾಷ್ಯ)

೫೬೨. ಅತ ಏವ ಚ ಉದೀಕ್ಷಾನುಪಪತ್ತೇಃ, ಅಪಾಕ್ಷಿಕಫಲತ್ವಾಚ್ಚ ವಿದ್ಯಾಯಾಃ, ಅನಿಯತಕಾಲತ್ವಾಚ್ಚ ಮೃತ್ಯೋಃ ದಕ್ಷಿಣಾಯನೇಽಪಿ ಮ್ರಿಯ ಮಾಣೋ ವಿದ್ವಾನ್ ಪ್ರಾಪ್ನೋತ್ಯೇವ ವಿದ್ಯಾಫಲಮ್ । ಉತ್ತರಾಯಣಮರಣ ಪ್ರಾಶಸ್ತ್ಯಪ್ರಸಿದ್ಧೇರ್ಭೀಷ್ಮಸ್ಯ ಚ ಪ್ರತೀಕ್ಷಾದರ್ಶನಾತ್ "ಆಪೂರ್ಯಮಾಣ ಪಕ್ಷಾದ್ಯಾನ್ ಷಡುದಙ್ಙೇತಿ ಮಾಸಾಂಸ್ತಾನ್" (ಛಾಂ. ೪-೧೫-೫) ಇತಿ ಚ ಶ್ರುತೇರಪೇಕ್ಷಿತವ್ಯಮ್ ಉತ್ತರಾಯಣಮಿತೀಮಾಮಾಶಙ್ಕಾಮ್ ಅನೇನ ಸೂತ್ರೇಣ ಅಪನುದತಿ । ಪ್ರಾಶಸ್ತ್ಯಪ್ರಸಿದ್ಧಿರವಿದ್ವದ್ವಿಷಯಾ । ಭೀಷ್ಮಸ್ಯ ಪ್ರತಿ ಪಾಲನಮ್ ಆಚಾರಪ್ರತಿಪಾಲನಾರ್ಥಂ ಪಿತೃಪ್ರಸಾದಲಬ್ಧಸ್ವಚ್ಛನ್ದಮೃತ್ಯುತಾ ಖ್ಯಾಪನಾರ್ಥಂ ಚ । ಶ್ರುತೇಸ್ತ್ವರ್ಥಂ ವಕ್ಷ್ಯತಿ "ಆತಿವಾಹಿಕಾಸ್ತಲ್ಲಿಙ್ಗಾತ್" (೪-೩-೪) ಇತಿ ॥

---

1. ರಾತ್ರಿಯಲ್ಲಿ ಸಾಯಬಾರದೆಂಬ ನಿಯಮವೇನೂ ಇಲ್ಲ.

2. ಹೂತರೆ, ಮಣ್ಣಿನ ಸಂಪರ್ಕದಿಂದ– ಎಂಬುದನ್ನು 'ಮುಂತಾದದ್ದರ' ಎಂಬ ಮಾತು ಸೂಚಿಸುತ್ತದೆ.

(ಭಾಷ್ಯಾರ್ಥ)

ಆದ್ದರಿಂದಲೇ, ನಿರೀಕ್ಷಣೆಯು ಹೊಂದುವದಿಲ್ಲವಾದ್ದರಿಂದಲೂ ವಿದ್ಯೆಗೆ ಪಾಕ್ಷಿಕಫಲವಿಲ್ಲದ್ದರಿಂದೂ ಮರಣಕ್ಕೆ ನಿಯತವಾದ ಕಾಲವಿಲ್ಲದ್ದರಿಂದಲೂ ದಕ್ಷಿಣಾಯನದಲ್ಲಿ ಸತ್ತ ಜ್ಞಾನಿಯೂ ವಿದ್ಯಾಫಲವನ್ನು ಪಡೆದೇತೀರುತ್ತಾನೆ. ಉತ್ತರಾಯಣದಲ್ಲಿ ಸಾಯುವದು ಪ್ರಶಸ್ತವೆಂಬ ಪ್ರಸಿದ್ಧಿಯಿರುವದರಿಂದಲೂ ಭೀಷ್ಮನಿಗೆ ಪ್ರತೀಕ್ಷೆಯಿದ್ದದ್ದು (ಇತಿಹಾಸದಲ್ಲಿ) ಕಂಡುಬರುವದರಿಂದಲೂ (ಚಂದ್ರನು) ತುಂಬಿಕೊಳ್ಳುವ (ಶುಕ್ಲ)ಪಕ್ಷದಿಂದ (ಸೂರ್ಯನು) ಉತ್ತರಕ್ಕೆ ಹೋಗುವನಲ್ಲ, ಆ ಆರು ಮಾಸಗಳನ್ನು" (ಛಾಂ. ೪-೧೫-೫) ಎಂಬ ಶ್ರುತಿಯಿರುವದರಿಂದಲೂ ಉತ್ತರಾಯಣದ ಅಪೇಕ್ಷೆಯಿದೆ ಎಂಬೀ ಆಶಂಕೆಯನ್ನು ಈ ಸೂತ್ರದಿಂದ ತೆಗೆದುಹಾಕಿರುತ್ತದೆ.

ಪ್ರಶಸ್ತವೆಂಬ ಪ್ರಸಿದ್ಧಿಯು ಉಪಾಸಕರಲ್ಲದವರ ವಿಷಯವಾಗಿರುತ್ತದೆ. ಭೀಷ್ಮರು ನಿರೀಕ್ಷೆಮಾಡಿಕೊಂಡಿದ್ದರೆಂಬುದು ಶಿಷ್ಟಾಚಾರವನ್ನು ಕಾಪಾಡುವದಕ್ಕಾಗಿಯೂ ತಂದೆಯ ಅನುಗ್ರಹದಿಂದ ಪಡೆದುಕೊಂಡಿದ್ದ ಸ್ವೇಚ್ಛಾಮರಣದ (ವರವನ್ನು) ತೋರಿಸಿಕೊಳ್ಳುವದಕ್ಕಾಗಿಯೂ (ಮಾಡಿದ್ದು). ಶ್ರುತಿಯ ಅರ್ಥವನ್ನಾದರೋ "ಆತಿವಾಹಿಕಾಸ್ತಲ್ಲಿಙ್ಗಾತ್" (೪-೩-೪) ಎಂಬಲ್ಲಿ ತಿಳಿಸುತ್ತಾರೆ.

**ಯೋಗಿನಃ ಪ್ರತಿ ಚ ಸ್ಮರ್ಯತೇ ಸ್ಮಾರ್ತೇ ಚೈತೇ ॥ ೨೧ ॥**

೨೧. (ಇದು) ಯೋಗಿಗಳಾಗಿ ಸ್ಮೃತಿಯಲ್ಲಿರತಕ್ಕದ್ದು. (ಇವು) ಸ್ಮಾರ್ತವಾಗಿಯೂ ಇವೆ.

## ಶ್ರುತಿಯ ವಚನವು ಗೀತಾವಚನಕ್ಕೆ ವಿರುದ್ಧವಲ್ಲ

(ಭಾಷ್ಯ)

೫೬೩. ನನು ಚ "ಯತ್ರ ಕಾಲೇತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ । ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ" (ಗೀ. ೮-೩) ಇತಿ ಕಾಲಪ್ರಾಧಾನ್ಯೇನ ಉಪಕ್ರಮ್ಯ ಅಹರಾದಿಕಾಲವಿಶೇಷಃ ಸ್ಮೃತಾವಪುನರಾವೃತ್ತಯೇ ನಿಯಮಿತಃ। ಕಥಂ ರಾತ್ರೌ ದಕ್ಷಿಣಾಯನೇ ವಾ ಪ್ರಯಾತೋಽನಾವೃತ್ತಿಂ ಯಾಯಾದಿತಿ। ಅತ್ರೋಚ್ಯತೇ-ಯೋಗಿನಃ ಪ್ರತಿಚಾಯಮ್ ಅಹರಾದಿ ಕಾಲವಿನಿಯೋಗಃ ಅನಾವೃತ್ತಯೇ ಸ್ಮರ್ಯತೇ । ಸ್ಮಾರ್ತೇ ಚೈತೇ ಯೋಗಸಾಂಖ್ಯೇ ನ ಶ್ರೌತೇ। ಅತೋ ವಿಷಯಭೇದಾತ್ ಪ್ರಮಾಣವಿಶೇಷಾಚ್ಚ ನಾಸ್ಯ ಸ್ಮಾರ್ತಸ್ಯ ಕಾಲವಿನಿಯೋಗಸ್ಯ ಶ್ರೌತೇಷು ವಿಜ್ಞಾನೇಷ್ವವತಾರಃ। ನನು "ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್" (ಗೀ. ೮-೨೪),

"ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್" (ಗೀ. ೮–೨೫) ಇತಿ ಚ ಶ್ರೌತಾವೇತೌ ದೇವಯಾನಪಿತೃಯಾಣೌ ಪ್ರತ್ಯಭಿಜ್ಞಾಯೇತೇ ಸ್ಮೃತಾವಪೀತಿ । ಉಚ್ಯತೇ "ತಂ ಕಾಲಂ ವಕ್ಷ್ಯಾಮಿ" (ಗೀ. ೮–೨೩) ಇತಿ ಸ್ಮೃತೌ ಕಾಲಪ್ರತಿಜ್ಞಾನಾತ್ ವಿರೋಧಮಾಶಙ್ಕ್ಯ ಪರಿಹಾರ ಉಕ್ತಃ। ಯದಾ ಪುನಃ ಸ್ಮೃತಾವಪಿ ಅಗ್ನ್ಯಾದ್ಯಾಃ ದೇವತಾ ಏವಾತಿವಾಹಿಕ್ಯೋ ಗೃಹ್ಯನ್ತೇ ತದಾ ನ ಕಶ್ಚಿದ್ ವಿರೋಧ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ಯಾವ ಕಾಲದಲ್ಲಿ ಸತ್ತ ಯೋಗಿಗಳು ಅನಾವೃತ್ತಿಯನ್ನೂ ಆವೃತ್ತಿಯನ್ನೂ ಪಡೆಯುವರೋ ಆ ಕಾಲವನ್ನು ಹೇಳುವೆನಯ್ಯ, ಭರತರ್ಷಭನೆ" (ಗೀ. ೮–೨೩) ಎಂದು ಕಾಲಪ್ರಾಧಾನ್ಯದಿಂದ ಉಪಕ್ರಮಿಸಿ ಹಗಲೇ ಮುಂತಾದ ಕಾಲವಿಶೇಷವನ್ನು ಸ್ಮೃತಿಯಲ್ಲಿ ಅಪುನರಾವೃತ್ತಿಫಲಕವೆಂದು ಗೊತ್ತುಪಡಿಸಿದೆ. (ಹೀಗಿರುವಲ್ಲಿ) ರಾತ್ರಿಯಲ್ಲಿ ಅಥವಾ ದಕ್ಷಿಣಾಯನದಲ್ಲಿ ಸತ್ತವನು ಹೇಗೆ ಅನಾವೃತ್ತಿಯನ್ನು ಹೊಂದಿಯಾನು ?

(ಪರಿಹಾರ) :– ಇದಕ್ಕೆ ಹೇಳುತ್ತೇವೆ. ಈ ಹಗಲು ಮುಂತಾದ ಕಾಲವಿನಿಯೋಗವನ್ನು ಅನಾವೃತ್ತಿಫಲವೆಂದು ಸ್ಮೃತಿಯಲ್ಲಿ ಹೇಳಿರುವದು ಯೋಗಿಗಳಿಗಾಗಿ ; ಈ ಯೋಗಸಾಂಖ್ಯಗಳೆಂಬಿವು **ಸ್ಮಾರ್ತವೇ** ಹೊರತು ಶ್ರೌತವಲ್ಲ, ಆದ್ದರಿಂದ ವಿಷಯವು ಬೇರೆಬೇರೆಯಾಗಿರುವದರಿಂದಲೂ ಪ್ರಮಾಣವು ಬೇರೆಯಾಗಿರುವದರಿಂದಲೂ ಈ ಸ್ಮಾರ್ತವಾದ ಕಾಲವಿನಿಯೋಗವು ಶ್ರೌತವಾಗಿರುವ ಉಪಾಸನೆಗಳಿಗೆ ಹತ್ತುವದಿಲ್ಲ.

(ಆಕ್ಷೇಪ) :– "ಅಗ್ನಿ, ಜ್ಯೋತಿ, ಹಗಲು, ಶುಕ್ಲಪಕ್ಷ, ಉತ್ತರಾಯಣದ ಆರು ಮಾಸಗಳು" (ಗೀ. ೮–೨೪), "ಹೊಗೆ, ರಾತ್ರಿ, ಹಾಗೂ ಕೃಷ್ಣಪಕ್ಷವೂ ದಕ್ಷಿಣಾಯನದ ಆರು ತಿಂಗಳು" (ಗೀ. ೮–೨೫) ಎಂಬೀ ಶ್ರುತಿಯಲ್ಲಿರುವ ಈ ದೇವಯಾನಪಿತೃಯಾಣಗಳೇ ಸ್ಮೃತಿಯಲ್ಲಿಯೂ ಪ್ರತ್ಯಭಿಜ್ಞೆಯಿಂದ ತಿಳಿದು ಬರುತ್ತಿವೆಯಲ್ಲ !

(ಪರಿಹಾರ) :– "ಆ ಕಾಲವನ್ನು ಹೇಳುವೆನು" (ಗೀ ೮–೨–೩) ಎಂದು ಸ್ಮೃತಿಯಲ್ಲಿ ಕಾಲವನ್ನು ಪ್ರತಿಜ್ಞೆಮಾಡಿರುವದರಿಂದ ವಿರೋಧವಾಗುವದೆಂಬ ಶಂಕೆಯನ್ನು ತಂದು ಪರಿಹಾರವನ್ನು ಹೇಳಿದ್ದಾಗಿದೆ. ಆದರೆ ಸ್ಮೃತಿಯಲ್ಲಿಯೂ ಅಗ್ನಿಯೇ ಮುಂತಾದವುಗಳು ಆತಿವಾಹಿಕದೇವತೆಗಳೆಂದೇ ಗ್ರಹಿಸಲಾಗುತ್ತದೆಯೋ ಆಗ ಯಾವ ವಿರೋಧವೂ ಇರುವದಿಲ್ಲ.

---

# ಅಧಿಕರಣಗಳ ಸಾರ

**ಈ ಪಾದದಲ್ಲಿ ಉತ್ಕ್ರಾಂತಿಗತಿಗಳ ವಿಚಾರವನ್ನು ಮಾಡಲಾಗುವದು.**

## ೧. ವಾಗಧಿಕರಣ

**ವಿಷಯವೂ ಸಂಶಯವೂ :** "ಅಸ್ಯ ಸೋಮ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ ಸಂಪದ್ಯತೇ" (ಛಾಂ.೬-೮-೬) ಎಂಬಲ್ಲಿ ಸಾಯುವವನ ವಾಕ್ಕೇ ಮನಸ್ಸಿನಲ್ಲಿ ಸೇರುತ್ತದೆ ಎಂದು ಹೇಳಿದೆಯೆ, ಅಥವಾ ವಾಗ್ವೃತ್ತಿಯು ಸೇರುತ್ತದೆಯೆಂದು ಹೇಳಿದೆಯೆ ?

**ಪೂರ್ವಪಕ್ಷ :** ವಾಕ್ಕೆಂಬ ಶಬ್ದವೇ ಇರುವದರಿಂದ ವಾಕ್ಕೇ ಸೇರುತ್ತದೆ ಎಂದು ತಿಳಿಯುವದು ಯುಕ್ತ. ಹೀಗಲ್ಲದಿದ್ದರೆ ಅನವಶ್ಯವಾಗಿ ಲಕ್ಷಣಾವೃತ್ತಿಯನ್ನು ಒಪ್ಪಿದಂತೆ ಆಗುತ್ತದೆ.

**ಸಿದ್ಧಾಂತ :** ಮನೋವೃತ್ತಿಯು ಹಾಗೆಯೇ ಇರುವಲ್ಲಿ ವಾಗ್ವೃತ್ತಿಯು ಮೊದಲು ಉಪಸಂಹಾರವಾಗುತ್ತದೆ. ಲಕ್ಷಣಾವೃತ್ತಿಯನ್ನು ಆಶ್ರಯಿಸುವದು ಸರಿಯಲ್ಲ ಎಂಬ ಆಕ್ಷೇಪವು ಯುಕ್ತವಲ್ಲ. ಏಕೆಂದರೆ ಮನಸ್ಸು ವಾಕ್ಕಿಗೆ ಉಪಾದಾನಕಾರಣವಲ್ಲ; ಆದ್ದರಿಂದ ಅದರಲ್ಲಿ ವಾಕ್ಕು ಲಯವಾಗುವದಕ್ಕೆ ಪ್ರಮಾಣವಿಲ್ಲ. ಪಾರ್ಥಿವವಾದ ಕಟ್ಟಿಗೆಯಿಂದ ತೈಜಸವಾದ ಅಗ್ನಿಯ ವೃತ್ತಿಯು ಹುಟ್ಟುತ್ತದೆ, ಅಪ್ಪಿನಲ್ಲಿ ಉಪಶಾಂತವಾಗುವದು ಕಂಡಿದೆ. ಆದ್ದರಿಂದ ವಾಗ್ವೃತ್ತಿ ಮನಸ್ಸಿನಲ್ಲಿ ಲಯವಾಗಬಹುದು. ವೃತ್ತಿ, ವೃತ್ತಿಯುಳ್ಳದ್ದು- ಇವುಗಳ ಅಭೇದೋಪಚಾರದಿಂದ ವಾಕ್ಕು ಮನಸ್ಸಿನಲ್ಲಿ ಸೇರುತ್ತದೆ ಎಂದು ಶ್ರುತಿಯು ಹೇಳಬಹುದಾಗಿದೆ. ಇದರಂತೆ ಶ್ರುತ್ಯಂತರದಲ್ಲಿ "ಇನ್ದ್ರಿಯೈರ್ಮನಸಿ ಸಂಪದ್ಯಮಾನೈಃ" (ಪ್ರ. ೩-೯) ಎಂಬಲ್ಲಿ ಎಲ್ಲಾ ಇಂದ್ರಿಯಗಳಿಗೂ ಮನಸ್ಸಿನಲ್ಲಿ ಸಂಪತ್ತಿಯನ್ನು ಹೇಳಿರುವದೂ ವೃತ್ತಿಯ ಲಯವನ್ನೇ ಎನ್ನಬೇಕು.

## ೨. ಮನೋಽಧಿಕರಣ

**ವಿಷಯವೂ ಸಂಶಯವೂ :** ಮೇಲೆ ಉದಾಹರಿಸಿರುವ ಶ್ರುತಿಯಲ್ಲಿ "ಮನಃ ಪ್ರಾಣೇ" (ಛಾಂ. ೬-೮-೬) ಎಂದಿದೆ. ಅಲ್ಲಿಯೂ ವೃತ್ತಿಸಂಪತ್ತಿಯನ್ನು ಹೇಳಿದೆಯೆ, ಮನಸ್ಸಿನ ಸಂಪತ್ತಿಯನ್ನೇ ಹೇಳಿದೆಯೆ ?

**ಪೂರ್ವಪಕ್ಷ:** ಇಲ್ಲಿ ವೃತ್ತಿಗಳುಳ್ಳ ಮನಸ್ಸಿನ ಸಂಪತ್ತಿಯನ್ನೇ ಹೇಳಿದೆ. ಶ್ರುತಿಯಲ್ಲಿ ಅನ್ನದಿಂದ ಮನವೂ ಅಪ್ಪಿನಿಂದ ಪ್ರಾಣವೂ ಆಗಿವೆಯೆಂದು (ಛಾಂ.೬-೫-೪) ಹೇಳಿದೆ. ಆದ್ದರಿಂದ ಮನಸ್ಸು ಪ್ರಾಣದಲ್ಲಿ ಲಯವಾಗುತ್ತದೆಯೆಂದರೆ ಅನ್ನವೇ ಅಪ್ಪಿನಲ್ಲಿ ಲಯವಾದಂತೆ ಆಯಿತು. ಆದ್ದರಿಂದ ವಿಕಾರವಾದದ್ದು ಪ್ರಕೃತಿಯಲ್ಲಿ ಲಯವಾದಂತೆಯೇ ಆಗುವದು.

**ಸಿದ್ಧಾಂತ :** ಮನಸ್ಸು ವೃತ್ತಿದ್ವಾರದಿಂದಲೇ ಪ್ರಾಣದಲ್ಲಿ ಲಯವಾಗುತ್ತದೆ ಎಂದು ಮುಂದಿನ ವಾಕ್ಯದಿಂದ ತಿಳಿಯಬಹುದು. ಆದ್ದರಿಂದಲೇ ಸಾಯುವವನಿಗೂ ನಿದ್ರೆಗೆ

ಹೋಗುವವನಿಗೂ ಪ್ರಾಣವೃತ್ತಿಯು ಇದ್ದರೂ ಮನೋವೃತ್ತಿಗಳ ಲಯವಾಗುವದು ಕಂಡಿರುತ್ತದೆ. ಮನಸ್ಸೇ ಪ್ರಾಣದಲ್ಲಿ ಲಯವಾಗಲಾರದು; ಏಕೆಂದರೆ ಅದಕ್ಕೆ ಪ್ರಾಣವು ಪ್ರಕೃತಿಯಲ್ಲ. ಪೂರ್ವಪಕ್ಷಿಯು ಹೇಳಿದ ಶ್ರುತಿಯಂತೆ ಪ್ರಕೃತಿವಿಕಾರಭಾವವನ್ನೊಪ್ಪಿದರೆ ಅನ್ನದಲ್ಲಿ ಮನಸ್ಸೂ, ಅಪ್ಪಿನಲ್ಲಿ ಅನ್ನವೂ, ಅಪ್ಪಿನಲ್ಲಿಯೇ ಪ್ರಾಣವೂ ಲಯವಾಗಬೇಕಾಗುವದು. ಪ್ರಾಣಭಾವವನ್ನು ಹೊಂದಿದ ಅಪ್ಪಿನಿಂದ ಮನಸ್ಸು ಹುಟ್ಟುವದೆಂಬದಕ್ಕೆ ಪ್ರಮಾಣವೂ ಇಲ್ಲ. ಆದ್ದರಿಂದ ಇಲ್ಲಿಯೂ ವೃತ್ತಿಲಯವೇ.

## ೩. ಅಧ್ಯಕ್ಷಾಧಿಕರಣ

**ವಿಷಯಸಂಶಯಗಳು :** "ಪ್ರಾಣಸ್ತೇಜಸಿ" (ಛಾಂ. ೬-೮-೬) ಎಂಬ ವಾಕ್ಯದಲ್ಲಿ ಹೇಳಿರುವಂತೆ ಪ್ರಾಣದ ವೃತ್ತಿಯು ತೇಜಸ್ಸಿನಲ್ಲಿಯೇ ಉಪಸಂಹಾರವಾಗುವದೋ, ಜೀವನಲ್ಲಾಗುವದೊ ?

**ಪೂರ್ವಪಕ್ಷ :** ಶ್ರುತಿಯ ಅಕ್ಷರಾರ್ಥವನ್ನೇ ತೆಗೆದುಕೊಂಡು ತೇಜಸ್ಸಿನಲ್ಲಿಯೇ ಲಯವಾಗುವದೆಂದು ತಿಳಿಯಬೇಕು.

**ಸಿದ್ಧಾಂತ:** ಪ್ರಾಣವು ಜೀವನಲ್ಲಿಯೇ ಲಯವಾಗುತ್ತದೆ. ಏಕೆಂದರೆ ಬೃ.೪-೩-೩೮ರಲ್ಲಿ ಎಲ್ಲಾ ಪ್ರಾಣಗಳೂ ಜೀವನನ್ನು ಸೇರುತ್ತವೆಯೆಂದು ಹೇಳಿದೆ. ಜೀವನು ಉತ್ಕ್ರಾಂತನಾಗುವಾಗ ಮುಖ್ಯಪ್ರಾಣವು ಅವನನ್ನು ಹಿಂಬಾಲಿಸುವದೆಂದೂ (ಬೃ.೪-೪-೨) ಹೇಳಿದೆ; ಇಂದ್ರಿಯಗಳು ಮುಖ್ಯಪ್ರಾಣವನ್ನು ಹಿಂಬಾಲಿಸುವವೆಂದೂ ಹೇಳಿದೆ (ಬೃ. ೪-೪-೨) 'ಸವಿಜ್ಞಾನನಾಗಿರುತ್ತಾನೆ' ಎಂದಿರುವದರಿಂದ ಕರಣಗ್ರಾಮವು ಲಯವಾಗಿರುವ ಪ್ರಾಣವು ಆ ಜೀವನಲ್ಲಿಯೇ ಇರುತ್ತದೆ ಎಂದು ಗೊತ್ತಾಗುತ್ತದೆ. ಶ್ರುತಿಯಲ್ಲಿ ತೇಜಸ್ಸಿನಲ್ಲಿ ಲಯವೆಂದು ಹೇಳಿದ್ದರೂ ಉತ್ಕ್ರಮಣಾದಿವ್ಯವಹಾರವು ಅಧ್ಯಕ್ಷನಾದ ಜೀವನಿಗೇ ಮುಖ್ಯವಾಗಿ ಸೇರತಕ್ಕದ್ದಾದ್ದರಿಂದ ನಾವು ಹೇಳಿರುವ ಅರ್ಥವೇ ಸರಿ. ಆ ಪ್ರಾಣಸಹಿತನಾದ ಜೀವನು ತೇಜಸ್ಸೇ ಮುಂತಾದ ದೇಹಬೀಜಭೂತನಾದ ಭೂತಗಳಲ್ಲಿರುತ್ತಾನೆಂದು ಶ್ರುತಿಗೆ ಅರ್ಥ. ಶರೀರವು ಅನೇಕಾತ್ಮಕವಾಗಿರುವದರಿಂದ ಬರಿಯ ತೇಜಸ್ಸಿನಲ್ಲಿ ಎಂದು ಅರ್ಥಮಾಡುವದಕ್ಕೆ ಬರುವದಿಲ್ಲ.

## ೪. ಆಸೃತ್ಯುಪಕ್ರಮಾಧಿಕರಣ

**ಸಂಶಯ :** ಈ ಉತ್ಕ್ರಾಂತಿಯು ಉಪಾಸಕರಿಗೂ ಮಿಕ್ಕವರಿಗೂ ಸಮಾನವೊ ಅಥವಾ ವಿಶೇಷವುಂಟೊ ?

**ಪೂರ್ವಪಕ್ಷ :** ಇದು ಅಜ್ಞಾನಿಗೇ ಹೊರತು ಉಪಾಸಕನಿಗಲ್ಲ. ಏಕೆಂದರೆ ಭೂತಾಶ್ರಯವಿಶಿಷ್ಟವಾಗಿ ಉತ್ಕ್ರಾಂತಿಯನ್ನು ಹೇಳಿದೆ; ಜನ್ಮಾಂತರಕ್ಕೆ ಭೂತಗಳು ಬೇಕು. ಉಪಾಸಕನಿಗೆ ಜನ್ಮಾಂತರವೂ ಇಲ್ಲ. ಉಪಾಸನೆಯ ಪ್ರಕರಣದಲ್ಲಿ ಹೇಳಿರುವ ಇದು ಉಪಾಸಕನಿಗೇ ಆಗಿರಬೇಕೆಂಬುದು ಸರಿಯಲ್ಲ. ಏಕೆಂದರೆ ನಿದ್ರೆಯೇ ಮುಂತಾದವುಗಳಂತೆ ಇದೂ ಪ್ರಾಪ್ತವಾಗಿಯೇ ಇದ್ದದ್ದನ್ನು ಅನುವಾದಮಾಡಿಕೊಂಡಿದೆ ಎಂದು ಹೇಳುವದು ಯುಕ್ತ. ಜ್ಞಾನಿಗೆ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ- ಎಂದೂ ಶ್ರುತಿಯಲ್ಲಿದೆ. ಆದ್ದರಿಂದ ಇದು ಅಜ್ಞಾನಿಗೇ.

ಸಿದ್ಧಾಂತ : ಇದು ಅಜ್ಞನಿಗೂ ಉಪಾಸಕನಿಗೂ ದೇವಯಾನಮಾರ್ಗವು ಪ್ರಾರಂಭ ವಾಗುವವರೆಗೆ ಸಮಾನವಾಗಿರುತ್ತದೆ. ಅಜ್ಞನಾದವನು ಭೂತಸೂಕ್ಷ್ಮಗಳನ್ನಾಶ್ರಯಿಸಿ ಜನ್ಮಾಂತರವನ್ನು ಹೊಂದುತ್ತಾನೆ; ಆದರೆ ಉಪಾಸಕನು ಜ್ಞಾನಪ್ರಕಾಶಿತವಾದ ನಾಡೀ ದ್ವಾರವನ್ನು ಸೇರುತ್ತಾನೆ. ಮೋಕ್ಷವು ದೇಶಾಂತರದಲ್ಲಾಗತಕ್ಕದ್ದಲ್ಲವಲ್ಲ ಎಂಬ ಶಂಕೆ ಸರಿಯಲ್ಲ; ಏಕೆಂದರೆ ಈ ಅಮೃತತ್ವವು ಅವಿದ್ಯೆಯನ್ನು ಜ್ಞಾನದಿಂದ ಸುಡದೆಯೇ ಉಪಾಸನೆಯ ಸಾಮರ್ಥ್ಯದಿಂದ ಪಡೆಯತಕ್ಕ ಆಪೇಕ್ಷಿಕಾಮೃತತ್ವವಾಗಿದೆ.

## ೫. ಸಂಸಾರವ್ಯಪದೇಶಾಧಿಕರಣ

ಸಂಶಯ : "ತೇಜಃ ಪರಸ್ಯಾಂ ದೇವತಾಯಾಮ್" (ಛಾಂ. ೬-೮-೬) ಎಂಬಲ್ಲಿ ತೇಜಸ್ಸು ಜೀವ, ಪ್ರಾಣ, ಕರಣಗಳು - ಇವುಗಳೊಡನೆ ಭೂತಾಂತರಸಹಿತವಾಗಿ ಪರಮಾತ್ಮ ನಲ್ಲಿ ಸೇರುತ್ತದೆಯಷ್ಟೆ. ಇದು ಆತ್ಯಂತಿಕವೊ, ಅಲ್ಲವೊ ?

ಪೂರ್ವಪಕ್ಷ : ಇದು ಆತ್ಯಂತಿಕವೇ; ಏಕೆಂದರೆ ಎಲ್ಲಕ್ಕೂ ಪರಮಾತ್ಮನೇ ಪ್ರಕೃತಿ, ಪ್ರಕೃತಿಯನ್ನು ಸೇರಿದಮೇಲೆ ಆತ್ಯಂತಿಕವೇ ಆಗಿರಬೇಕು.

ಸಿದ್ಧಾಂತ : ಇದೂ ಸುಷುಪ್ತಪ್ರಲಯಗಳಂತೆ ಬೀಜಭಾವದಿಂದುಳಿದುಕೊಳ್ಳುವ ಸತ್ಸಂಪತ್ತಿಯೇ; ಏಕೆಂದರೆ ಸತ್ಸಂಪನ್ನನಾದವನಿಗೆ ಸಂಸಾರವನ್ನು ಹೇಳಿದೆ. ಸಂಸಾರ ವಿರುವವರೆಗೂ ತೇಜಆದಿಭೂತಸೂಕ್ಷ್ಮವು ಜೀವನಿಗೆ ಇದ್ದೇ ಇರುತ್ತದೆ ಎನ್ನಬೇಕು. ಇಲ್ಲದಿದ್ದರೆ ವಿಧಿಶಾಸ್ತ್ರವೂ ವಿದ್ಯಾಶಾಸ್ತ್ರವೂ ವ್ಯರ್ಥವಾಗುವದು. ಈ ತೇಜಸ್ಸು ಸೂಕ್ಷ್ಮ ವಾಗಿರುತ್ತದೆ. ; ಏಕೆಂದರೆ ನಾಡಿಯಿಂದ ಹೊರಡುತ್ತದೆ ಎಂದು ಮುಂತಾಗಿ ಶ್ರುತಿಯಲ್ಲಿದೆ. ಇದು ಸೂಕ್ಷ್ಮವಾಗಿರುವದರಿಂದಲೇ ಶರೀರದ ದಾಹದಿಂದ ಇದಕ್ಕೆ ನಾಶವಿಲ್ಲ. ಈ ಶರೀರ ದಿಂದಲೇ ಬದುಕಿರುವವನ ಶರೀರದಲ್ಲಿ ಬಿಸಿಯಿರುತ್ತದೆ.

## ೬. ಪ್ರತಿಷೇಧಾಧಿಕರಣ

ಸಂಶಯ : ಪರಬ್ರಹ್ಮಜ್ಞಾನಿಯ ಪ್ರಾಣಗಳಿಗೆ ಉತ್ಕ್ರಾಂತಿಯುಂಟೆ ?

ಪೂರ್ವಪಕ್ಷ : ಉಂಟು. ಅವನ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ ಎಂದು ಶ್ರುತಿಯಲ್ಲಿದ್ದರೂ ಜೀವನಿಂದ ಹೊರಡುವದಿಲ್ಲ ಎಂದೇ ಅರ್ಥ. ಶರೀರದಿಂದ ಹೊರಡು ವದಿಲ್ಲ ಎಂದೇನೂ ಅರ್ಥವಲ್ಲ. ಆದ್ದರಿಂದಲೇ "ನ ತಸ್ಮಾತ್ಪ್ರಾಣಾ ಉತ್ಕ್ರಾಮನ್ತಿ" ಎಂದು ಮಾಧ್ಯಂದಿನಶ್ರುತಿಯಲ್ಲಿ ವಿಶೇಷಸಂಬಂಧವನ್ನೇ ಹೇಳಿದೆ. ಅವನಿಂದ ಎಂದರೆ ಅಲ್ಲಿ ಪ್ರಧಾನನಾದ ದೇಹಿಯನ್ನೇ ತೆಗೆದುಕೊಳ್ಳುವದು ಯುಕ್ತ.

ಸಿದ್ಧಾಂತ : ಆರ್ತಭಾಗಪ್ರಶ್ನದಲ್ಲಿ ಈ ಪುರುಷನು ಸಾಯುವಾಗ ಅವನ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲವೆಂದು ಹೇಳಿ ಇಲ್ಲಿಯೇ ಸೇರಿಹೋಗುತ್ತವೆ ಎಂದು ಹೇಳಿ ಅದರ ಸಿದ್ಧಿಗಾಗಿ "ಅವನು ಉಬ್ಬಿಕೊಳ್ಳುತ್ತಾನೆ, ಗಾಳಿಯನ್ನು ತುಂಬಿಕೊಳ್ಳುತ್ತಾನೆ...." ಎಂದು ಮುಂತಾಗಿ ದೇಹಧರ್ಮಗಳನ್ನು ಹೇಳಿದೆ. ಆದ್ದರಿಂದ "ನೇತಿ ಹೋವಾಚ ಯಾಜ್ಞವಲ್ಕ್ಯಃ" (ಬೃ. ೩-೨-೧೧) ಎಂಬಲ್ಲಿ ಶರೀರದಿಂದ ಪ್ರಾಣಗಳು ಉತ್ಕ್ರಾಂತ ವಾಗುವದಿಲ್ಲವೆಂದೇ ಹೇಳಿದೆ ಎನ್ನಬೇಕು. ಇಲ್ಲಿರುವಂತೆ ಮಾಧ್ಯಂದಿನಶ್ರುತಿಯಲ್ಲಿಯೂ

ಪಂಚಮೀವಿಭಕ್ತಿಯು ದೇಹಾಪಾದಾನವಾಗಿಯೇ ಪ್ರಾಣೋತ್ಕ್ರಾಂತಿಯನ್ನು ನಿಷೇಧಿಸಿವೆ ಎಂಬುದು ಯುಕ್ತ. "ಅವನ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ" ಎಂಬ ಕಾಣ್ವಪಾಠದಲ್ಲಿ ಷಷ್ಠೀವಿಭಕ್ತಿಯಿದೆ; ಅಲ್ಲಿ ಜ್ಞಾನಿಗೆ ಉತ್ಕ್ರಾಂತಿಯನ್ನು ಪ್ರತಿಷೇಧಿಸಿದೆ. ದೇಹದಿಂದ ಉತ್ಕ್ರಾಂತಿಯು ಪ್ರಾಪ್ತವಾಗಿರುವದರಿಂದ ಅಲ್ಲಿ ಅದನ್ನೇ ಪ್ರತಿಷೇಧಿಸಿದೆ ಎಂಬುದು ಯುಕ್ತ. ಅಜ್ಞರಿಗೆ ಉತ್ಕ್ರಾಂತಿಯನ್ನು ಹೇಳಿದ ಬಳಿಕ ಜ್ಞಾನಿಯ ಪ್ರಕರಣವನ್ನು ಬೇರೆಯಾಗಿ ಪ್ರಾರಂಭಿಸಿ ಅವನಿಗೂ ಉತ್ಕ್ರಾಂತಿಯನ್ನೇ ಹೇಳಿದರೆ ಸಮಂಜಸವಾಗಲಾರದು; ಇಲ್ಲಿಯೇ ಬ್ರಹ್ಮಪ್ರಾಪ್ತಿಯನ್ನು ಹೇಳುವ ಶ್ರುತಿಗಳಿಗೂ ಹೊಂದುಗಡೆಯಾಗಲಾರದು. ಮಹಾಭಾರತದಲ್ಲಿ ಜ್ಞಾನಿಗೆ ಗತ್ಯುತ್ಕ್ರಾಂತಿಗಳಿಲ್ಲವೆಂದು ಹೇಳಿಯೂ ಇದೆ. ಅದ್ದರಿಂದ ಬ್ರಹ್ಮಜ್ಞಾನಿಗೆ ಗತ್ಯುತ್ಕ್ರಾಂತಿಗಳಿಲ್ಲ ಎಂಬುದೇ ಸರಿ.

## ೭. ವಾಗಾದಿಲಯಾಧಿಕರಣ

**ಸಂಶಯ :** ಜ್ಞಾನಿಯ ಇಂದ್ರಿಯಗಳೂ ಭೂತಗಳೂ ಬ್ರಹ್ಮದಲ್ಲಿ ಲಯವಾಗುತ್ತವೆಯೆ, ತಮ್ಮ ತಮ್ಮ ಪ್ರಕೃತಿಯಾಗಿರುವ ಕಾರಣದಲ್ಲಿ ಲಯವಾಗುತ್ತವೆಯೆ ?

**ಪೂರ್ವಪಕ್ಷ :** ಕಲೆಗಳು ತಮ್ಮತಮ್ಮ ಮೂಲಕಾರಣಗಳಲ್ಲಿ ಲಯವಾಗುವವೆಂದು ಶ್ರುತಿಯಲ್ಲಿ (ಮುಂ. ೩-೨-೭) ಹೇಳಿದೆಯಾದ್ದರಿಂದ ಹಾಗೆಂದು ನಿಶ್ಚಯಿಸಬೇಕು.

**ಸಿದ್ಧಾಂತ:** ಆ ಶ್ರುತಿಯು ವ್ಯಾವಹಾರಿಕದೃಷ್ಟಿಯಿಂದ ಹೇಳಿದ್ದು. ಪ್ರಶ್ನೋಪನಿಷತ್ತಿನಲ್ಲಿ ಪುರುಷಶಬ್ದವಾಚ್ಯನಾದ ಪರಬ್ರಹ್ಮದಲ್ಲಿ ಕಲೆಗಳು ಲಯವಾಗುವವೆಂದು ಹೇಳಿದೆ. ಅದೇ ಜ್ಞಾನಿಯ ದೃಷ್ಟಿ. ಅದ್ದರಿಂದ ಬ್ರಹ್ಮದಲ್ಲಿ ಲಯವಾಗುವವೆಂದೇ ತಿಳಿಯಬೇಕು.

## ೮. ಅವಿಭಾಗಾಧಿಕರಣ

**ಸಂಶಯ :** ಜ್ಞಾನಿಗೆ ಆಗುವ ಕಲಾಪ್ರಲಯವು ಸಾವಶೇಷವೊ, ನಿರವಶೇಷವೊ ?

**ಪೂರ್ವಪಕ್ಷ :** ಮಿಕ್ಕ ಪ್ರಲಯದಂತೆ ಇದೂ ಪ್ರಲಯವಾದ್ದರಿಂದ ಸಾವಶೇಷವಾಗಿಯೇ ಆಗುತ್ತದೆ ಎನ್ನಬೇಕು.

**ಸಿದ್ಧಾಂತ :** ಕಲೆಗಳು ಅವಿದ್ಯೆಯಿಂದಾಗಿರುವದರಿಂದ ವಿದ್ಯೆಯಿಂದ ನಿರವಶೇಷವಾಗಿ ಪ್ರಲಯವಾಗುತ್ತವೆ ಎಂಬುದೇ ಯುಕ್ತ. ಹಾಗೆಂದು (ಪ್ರ.೬-೫) ಶ್ರುತಿಯಲ್ಲಿಯೂ ಹೇಳಿದೆ.

## ೯. ತದೋಕೋಽಧಿಕರಣ

**ಸಂಶಯ :** ಉತ್ಕ್ರಾಂತಿಯನ್ನು ಹೇಳುವಾಗ ಹೃದಯದ ಕೊನೆಯು ಹೊತ್ತಿಕೊಂಡು ಉರಿಯುತ್ತದೆಯೆಂದೂ ಚಕ್ಷುರಾದಿಸ್ಥಾನದಿಂದ ಉತ್ಕ್ರಾಂತಿಯಾಗುವವೆಂದೂ (ಬೃ ೪-೪-೨) ಶ್ರುತಿಯಲ್ಲಿ ಹೇಳಿದೆ. ಇದು ಜ್ಞಾನ್ಯಜ್ಞಾನಿಗಳಿಗೆ ಸಮಾನವೊ, ವಿಶೇಷವೇನಾದರೂ ಇದೆಯೊ ?

**ಪೂರ್ವಪಕ್ಷ :** ಶ್ರುತಿಯಲ್ಲಿ ಯಾವ ವಿಶೇಷವನ್ನೂ ಹೇಳಿಲ್ಲವಾಗಿ ವಿಶೇಷನಿಯಮವೇನೂ ಇಲ್ಲ.

**ಸಿದ್ಧಾಂತ :** ಹೃದಯದ ಅಗ್ರವು ಬೆಳಗುವದು ಎಲ್ಲರಿಗೂ ಸಮಾನವಾಗಿರುತ್ತದೆ; ಅದರಿಂದ ದ್ವಾರಗಳು ಪ್ರಕಾಶಿತವಾಗುತ್ತವೆ ಎಂಬುದೂ ಸಮಾನವಾಗಿರುತ್ತದೆ. ಅದರೆ ಉಪಾಸಕನು ಮಾತ್ರ ಮೂರ್ಧಸ್ಥಾನದ ನೂರೊಂದನೆಯ ನಾಡಿಯಿಂದಲೇ ಉತ್ಕ್ರಾಂತ

ನಾಗುತ್ತಾನೆ ; ನಿಂಕ್ಕ ದ್ವಾರಗಳಿಂದ ಉಳಿದವರು ಹೊರಡುತ್ತಾರೆ. ಏಕೆಂದರೆ ವಿದ್ಯೆಯ ಸಾಮರ್ಥ್ಯದಿಂದ ಹೀಗೆಂದು ನಿಶ್ಚಯಿಸಬೇಕು ; ಹಾಗಿಲ್ಲದಿದ್ದರೆ ವಿದ್ಯೆಯು ವ್ಯರ್ಥವಾಗು ವದು.

## ೧೦. ರಶ್ಮ್ಯಧಿಕರಣ

**ಸಂಶಯ :** ಹಾರ್ದವಿದ್ಯೆಯಲ್ಲಿ ನಾಡೀರಶ್ಮಿಗಳಿಗೆ ಸಂಬಂಧವನ್ನು ಹೇಳಿ ರಶ್ಮ್ಯನು ಸಾರಿಯಾಗಿ ಉಪಾಸಕನು ಹೊರಡುತ್ತಾನೆಂದಿದೆ. ಅವೇನು ಹಗಲಿಗೆ ಮಾತ್ರ ಸೇರಿದ್ದೋ, ರಾತ್ರೆಗೂ ಅನ್ವಯಿಸುತ್ತದೆಯೊ ?

**ಪೂರ್ವಪಕ್ಷ :** ಹಗಲಿನಲ್ಲಿ ರಶ್ಮಿಸಂಬಂಧವಿದೆ ; ರಾತ್ರೆಯಲ್ಲಿರುವದಿಲ್ಲ. ಆದ್ದರಿಂದ ರಾತ್ರೆ ಸತ್ತ ಉಪಾಸಕನಿಗೆ ರಶ್ಮಿಗಳ ಅನುಸರಣೆಯಿಲ್ಲ.

**ಸಿದ್ಧಾಂತ :** ನಾಡಿಗಳಿಂದ ಆದಿತ್ಯನವರೆಗೂ ರಶ್ಮಿಗಳ ಸಂಬಂಧವು ದೇಹವಿರುವ ವರೆಗೂ ಇರುತ್ತದೆಯೆಂದು ಶ್ರುತಿ ಹೇಳುತ್ತದೆ. ರಾತ್ರೆಯಲ್ಲಿಯೂ ರಶ್ಮಿಗಳ ಅನುವೃತ್ತಿ ಯಿರುತ್ತದೆಯಾದರೂ ಸ್ವಲ್ಪವಾಗಿರುವ ಸಮಯಗಳಲ್ಲಿ ಕಾಣುವದಿಲ್ಲ. ರಾತ್ರೆ ಸತ್ತ ಉಪಾಸಕನು ರಶ್ಮಿಗಳ ಹಂಗಿಲ್ಲದೆ ಊರ್ಧ್ವಗತಿಯನ್ನು ಪಡೆಯುತ್ತಾನೆಂದರೆ ರಶ್ಮಿಗಳ ಅನುಸರಣೆಯು ವ್ಯರ್ಥವಾಗುವದು. ಹಾಗಿಲ್ಲದೆ ಹಗಲಾಗುವವರೆಗೂ ಕಾದಿರಬೇಕಾಗುವ ದೆಂದರೆ ದೇಹದಾಹವೇ ಮುಂತಾದ ನಿಮಿತ್ತದಿಂದ ಆ ಸಂಬಂಧವು ತಪ್ಪಿಹೋಗಬಹುದು. ರಾತ್ರೆ ಸತ್ತ ಉಪಾಸಕನಿಗೆ ಊರ್ಧ್ವಗತಿಯಿಲ್ಲವೇ ಇಲ್ಲ ಎನ್ನುವದಾದರೆ ವಿದ್ಯೆಗೆ ನಿಯಮ ದಿಂದ ಫಲಪ್ರಾಪ್ತಿಯಿಲ್ಲವೆಂದಾಗಿ ಯಾರೂ ಅದರಲ್ಲಿ ಪ್ರವರ್ತಿಸದೆ ಹೋಗಬಹುದು. ಆದ್ದರಿಂದ ಹಗಲಾಗಲಿ ರಾತ್ರಿಯಾಗಲಿ ಸತ್ತ ಉಪಾಸಕನಿಗೆ ರಶ್ಮ್ಯನುಸಾರಿತ್ವವಿದ್ದೇ ಇರುತ್ತದೆ.

## ೧೧. ದಕ್ಷಿಣಾಯನಾಧಿಕರಣ

**ಸಂಶಯ :–** ದಕ್ಷಿಣಾಯನದಲ್ಲಿ ಸತ್ತ ಉಪಾಸಕನಿಗೆ ವಿದ್ಯಾಫಲವುಂಟೋ, ಇಲ್ಲವೊ?

**ಪೂರ್ವಪಕ್ಷ :–** ಉತ್ತರಾಯಣದ ಮರಣವು ಪ್ರಶಸ್ತವೆಂದು ಪ್ರಸಿದ್ಧಿಯಿದೆ. ಭೀಷ್ಮರು ಉತ್ತರಾಯಣವು ಬರುವವರೆಗೂ ಕಾದಿದ್ದರೆಂದು ಇತಿಹಾಸದಲ್ಲಿದೆ. ಶ್ರುತಿಯಲ್ಲಿ ಉತ್ತರಾಯಣವನ್ನು ಹೇಳಿದೆ. ಗೀತಾಸ್ಮೃತಿಯಲ್ಲಿಯೂ ಉತ್ತರಾಯಣವನ್ನು ಗೊತ್ತು ಮಾಡಿ ಹೇಳಿದೆ. ಆದ್ದರಿಂದ ಉತ್ತರಾಯಣವೂ ವಿದ್ಯಾಫಲಕ್ಕೆ ಬೇಕು.

**ಸಿದ್ಧಾಂತ :–** ಪ್ರಾಶಸ್ತ್ಯಪ್ರಸಿದ್ಧಿಯು ಅಜ್ಞರ ವಿಷಯ. ಭೀಷ್ಮರ ನಿರೀಕ್ಷಣೆಯು ಆಚಾರರಕ್ಷಣೆಗೂ ಸ್ವೇಚ್ಛಾಮರಣವರದ ಖ್ಯಾಪನೆಗೂ ಮಾಡಿದ್ದು. ಶ್ರುತಿಯು ಕಾಲ ಪರವಲ್ಲ. ಸ್ಮೃತಿಯಲ್ಲಿ ಕಾಲವನ್ನು ಹೇಳಿದ್ದರೂ ಅಲ್ಲಿ ಯೋಗಿಗಳ ವಿಷಯವನ್ನು ಹೇಳಿರು ವದರಿಂದ ಶ್ರೌತಪಕ್ಷಕ್ಕೆ ಅದರ ವಿರೋಧವನ್ನೊಡ್ಡಬಾರದು. ಅಥವಾ ಅಲ್ಲಿಯೂ ಶ್ರುತ್ಯನು ಸಾರವಾಗಿ ಅರ್ಥವನ್ನು ಮಾಡಬಹುದು. ಉತ್ತರಾಯಣದವರೆಗೂ ಉಪಾಸಕನು ಕಾದು ಕೊಂಡಿರುವನೆಂಬುದು ಹೊಂದುವದಿಲ್ಲವಾದ್ದರಿಂದಲೂ ಹೀಗಲ್ಲದಿದ್ದರೆ ವಿದ್ಯೆಗೆ ಪ್ರಾಕ್ಷಿಕ ಫಲವೆಂದಾಗುವದರಿಂದಲೂ ಮರಣಕಾಲವು ಅನಿಯತವಾಗಿರುವದರಿಂದಲೂ ದಕ್ಷಿಣಾಯನ ದಲ್ಲಿ ಮೃತನಾದ ಉಪಾಸಕನಿಗೂ ವಿದ್ಯಾಫಲವುಂಟೆಂದೇ ನಿರ್ಣಯಿಸಬೇಕು.

# ನಾಲ್ಕನೆಯ ಅಧ್ಯಾಯ- ಮೂರನೆಯ ಪಾದ

( ಸಗುಣೋಪಾಸಕನಿಗೆ ಉತ್ತರಾಯಣಮಾರ್ಗ )

## ೧. ಅರ್ಚಿರಾದ್ಯಧಿಕರಣ

(ಅರ್ಚಿರಾದಿಮಾರ್ಗವೊಂದೇ ಉಪಾಸಕರಿಗೆ ಹೇಳಿದ್ದು)

**ಅರ್ಚಿರಾದಿನಾ ತತ್ಪ್ರಥಿತೇಃ ॥ ೧ ॥**

೧. ಅ ರ್ಚಿ ರಾ ದಿ(ಮಾರ್ಗ)ದಿಂದಲೇ ( ಮುಮುಕ್ಷುವು ) ಹೋಗುತ್ತಾನೆ ; ಏಕೆಂದರೆ ಅದು ಪ್ರಸಿದ್ಧವಾಗಿರುತ್ತದೆ.

### ಉಪಾಸಕರ ಮಾರ್ಗವಿಷಯದಲ್ಲಿ ಸಂಶಯಪೂರ್ವಪಕ್ಷಗಳು

(ಭಾಷ್ಯ)

೫೬೪. ಆಸೃತ್ಯುಪಕ್ರಮಾತ್ ಸಮಾನಾ ಉತ್ಕ್ರಾನ್ತಿಃ ಇತ್ಯುಕ್ತಮ್ । ಸೃತಿಸ್ತು ಶ್ರುತ್ಯನ್ತರೇಷು ಅನೇಕಧಾ ಶ್ರೂಯತೇ । ನಾಡೀರಶ್ಮಿಸಂಬನ್ಧೇ ನೈಕಾ "ಅಥೈತೈರೇವ ರಶ್ಮಿಭಿರೂರ್ಧ್ವ ಆಕ್ರಮತೇ" (ಛಾಂ. ೮-೬-೫) ಇತಿ । ಅರ್ಚಿರಾದಿಕೈಕಾ "ತೇಽರ್ಚಿಷಮಭಿಸಂಭವನ್ತ್ಯರ್ಚಿಷೋಽಹಃ" (ಛಾಂ. ೫-೧೦-೨) ಇತಿ । "ಸ ಏತಂ ದೇವಯಾನಂ ಪನ್ಥಾನಮಾಸಾದ್ಯಾಗ್ನಿಲೋಕಮಾಗಚ್ಛತಿ" (ಕೌ.೧-೩) ಇತ್ಯಾದ್ಯಾ। "ಯದಾ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ" (ಬೃ. ೫-೧೦-೧) ಇತ್ಯಪರಾ । "ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾನ್ತಿ" (ಮುಂ. ೧-೨-೧೧) ಇತಿ ಚಾಪರಾ। ತತ್ರ ಸಂಶಯಃ । ಕಿಂ ಪರಸ್ಪರಂ ಭಿನ್ನಾ ಏತಾಃ ಸೃತಯಃ ಕಿಂ ವಾ ಏಕೈವ ಅನೇಕವಿಶೇಷಣಾ ಇತಿ । ತತ್ರ ಪ್ರಾಪ್ತಂ ತಾವತ್ ಭಿನ್ನಾ ಏತಾಃ ಸೃತಯ ಇತಿ । ಭಿನ್ನಪ್ರಕರಣತ್ವಾತ್ । ಭಿನ್ನೋಪಾಸನಾಶೇಷತ್ವಾಚ್ಚ । ಅಪಿ ಚ "ಅಥೈತೈರೇವ ರಶ್ಮಿಭಿಃ" (ಛಾಂ. ೮-೬-೮) ಇತ್ಯವಧಾರಣಮ್ ಅರ್ಚಿರಾದ್ಯಪೇಕ್ಷಾಯಾಮ್ ಉಪರುಧ್ಯೇತ । ತ್ವರಾವಚನಂ ಚ ಪೀಡ್ಯೇತ "ಸ ಯಾವತ್ ಕ್ಷಿಪ್ಯೇನ್ಮನಸ್ತಾವದಾದಿತ್ಯಂ ಗಚ್ಛತಿ" (ಛಾಂ. ೮-೬-೫) ಇತಿ । ತಸ್ಮಾತ್ ಅನ್ಯೋನ್ಯಭಿನ್ನಾ ಏವೈತೇ ಪನ್ಥಾನಃ ಇತಿ ॥

(ಭಾಷ್ಯಾರ್ಥ)

ಉತ್ಕ್ರಾಂತಿಯು ಮಾರ್ಗವು ಪ್ರಾರಂಭವಾಗುವವರೆಗೂ (ಜ್ಞಾನ್ಯಜ್ಞಾನಿಗಳಿಗೆ) ಸಮಾನವೆಂದು ( ೪-೨-೭ ) ಹೇಳಿದ್ದಾಯಿತಷ್ಟೆ. ಆದರೆ

(ಆ) ಮಾರ್ಗವು ಶ್ರುತಿಗಳಲ್ಲಿ (ಹೇಳಿರುವದು) ಅನೇಕಬಗೆಯಾಗಿರುತ್ತದೆ. "ಇನ್ನು ಈ ರಶ್ಮಿಗಳಿಂದಲೇ ಮೇಲಕ್ಕೇರುತ್ತಾನೆ" (ಛಾಂ. ೮-೬-೫) ಎಂದು ನಾಡೀರಶ್ಮಿಸಂಬಂಧವನ್ನು ಹೇಳಿರುವ (ಮಾರ್ಗ) ಒಂದು. "ಅವರು ಅರ್ಚಿಯನ್ನು ಸೇರುತ್ತಾರೆ, ಅರ್ಚಿಯಿಂದ ಹಗಲನ್ನು....." (ಛಾಂ. ೫-೧೦-೨) ಎಂದು (ಹೇಳಿರುವ) ಅರ್ಚಿರಾದಿಯಾದ (ಮಾರ್ಗ)ವೊಂದು. "ಅವನು ಈ ದೇವಯಾನಮಾರ್ಗವನ್ನು ಪಡೆದು ಅಗ್ನಿಲೋಕಕ್ಕೆ ಬರುತ್ತಾನೆ" (ಕೌ. ೧-೩) ಎಂದಿರುವದು ಇನ್ನೊಂದು. "ಯಾವಾಗ ಪುರುಷನು ಈ ಲೋಕವನ್ನು ಬಿಟ್ಟು ಹೋಗುತ್ತಾನೋ ಅವನು ವಾಯುವಿಗೆ ಬರುತ್ತಾನೆ...." (ಬೃ. ೫-೧೦-೧) ಎಂಬಿದು ಮತ್ತೊಂದು. "ಸೂರ್ಯದ್ವಾರದಿಂದ ಅವರು ವಿರಜಸ್ಕರಾಗಿ ಹೊರಟುಹೋಗುತ್ತಾರೆ'' (ಮುಂ. ೧-೨-೧೧) ಎಂಬಿದೂ ಮತ್ತೊಂದು. ಇಲ್ಲಿ **ಸಂಶಯವು**ವೇನೆಂದರೆ ಈ ಮಾರ್ಗಗಳು ಒಂದಕ್ಕಿಂತ ಒಂದು ಬೇರೆ ಯಾಗಿರುವವೆ, ಅಥವಾ ಒಂದೇ (ಮಾರ್ಗವೇ) ಅನೇಕ ವಿಶೇಷಣಗಳಿಂದೊಡ ಗೂಡಿರುವದೆ ?

ಇಲ್ಲಿ (ಮೊದಲು) ಬಂದೊದಗುವ (ಪಕ್ಷ)ವೇನೆಂದರೆ, ಈ ಮಾರ್ಗಗಳು ಭಿನ್ನವಾಗಿರುತ್ತವೆ. ಏಕೆಂದರೆ (ಅವು) ಬೇರೆಬೇರೆಯ ಪ್ರಕರಣದಲ್ಲಿವೆ. ಬೇರೆಬೇರೆಯ ಉಪಾಸನೆಗಳಿಗೆ ಶೇಷವಾಗಿಯೂ ಇವೆ. ಇದಲ್ಲದೆ "ಇನ್ನು ಇದೇ ರಶ್ಮಿಗಳಿಂದ ...." (ಛಾಂ. ೮-೬-೫) ಎಂಬ ಅವಧಾರಣೆಯು ಅರ್ಚಿರಾದಿ ಗಳನ್ನು ಬಯಸುವದಾದರೆ ವಿರುದ್ಧವಾಗುವದು ; "ಅವನು ಎಷ್ಟರೊಳಗೆ ಮನಸ್ಸನ್ನು ಹಾಕುವನೋ ಅಷ್ಟರೊಳಗೆ ಆದಿತ್ಯನನ್ನು ಸೇರುತ್ತಾನೆ" (ಛಾಂ. ೮-೬-೫) ಎಂದು ತ್ವರೆಯನ್ನು ಹೇಳಿರುವದಕ್ಕೂ ವಿರೋಧವಾಗುವದು. ಆದ್ದ ರಿಂದ ಈ ಮಾರ್ಗಗಳು ಒಂದಕ್ಕಿಂತ ಒಂದು ಭಿನ್ನವೇ.

## ಸಿದ್ಧಾಂತ:

## ಅರ್ಚಿರಾದಿಯೆಂಬುದೊಂದೇ ಬ್ರಹ್ಮಪ್ರಾಪ್ತಿಮಾರ್ಗ

(ಭಾಷ್ಯ)

೫೬೫. ಏವಂ ಪ್ರಾಪ್ತೇ ಅಭಿದಧ್ಮಹೇ - 'ಅರ್ಚಿರಾದಿನಾ' ಇತಿ । ಸರ್ವೋ ಬ್ರಹ್ಮಪ್ರೇಪ್ಸುಃ ಅರ್ಚಿರಾದಿನೈವಾಧ್ವನಾ ರಂಹತೀತಿ ಪ್ರತಿಜಾನೀಮಹೇ। ಕುತಃ? ತತ್ಪ್ರಥಿತೇಃ। ಪ್ರಥಿತೋ ಹ್ಯೇಷ ಮಾರ್ಗಃ ಸರ್ವೇಷಾಂ ವಿದುಷಾಮ್ । ತಥಾ ಹಿ ಪಞ್ಚಾಗ್ನಿವಿದ್ಯಾಪ್ರಕರಣೇ "ಯೇ ಚಾಮೀ ಅರಣ್ಯೇ ಶ್ರದ್ಧಾಂ ಸತ್ಯ ಮುಪಾಸತೇ" (ಬೃ. ೬-೨-೧೫) ಇತಿ ವಿದ್ಯಾನ್ತರಶೀಲಿನಾಮಪಿ ಅರ್ಚಿರಾದಿಕ ಸೃತಿಃ ಶ್ರಾವ್ಯತೇ । ಸ್ಯಾದೇತತ್ । ಯಾಸು ವಿದ್ಯಾಸು ನ ಕಾಚಿದ್ ಗತಿರುಚ್ಯತೇ

ತಾಸ್ವಿಯಮ್ ಅರ್ಚಿರಾದಿಕಾ ಉಪತಿಷ್ಠತಾಮ್ । ಯಾಸು ತು ಅನ್ಯಾ ಶ್ರಾವ್ಯತೇ ತಾಸು ಕಿಮಿತಿ ಅರ್ಚಿರಾದ್ಯಾಶ್ರಯಣಮ್ ಇತಿ ? ಅತ್ರೋಚ್ಯತೇ । ಭವೇದೇತದೇವಂ ಯದ್ಯತ್ಯನ್ತಭಿನ್ನಾ ಏವೈತಾಃ ಸೃತಯಃ ಸ್ಯುಃ । ಏಕೈವ ತ್ವೇಷಾ ಸೃತಿರನೇಕವಿಶೇಷಣಾ ಬ್ರಹ್ಮಲೋಕಪ್ರಪದನೀ ಕ್ವಚಿತ್ ಕೇನಚಿದ್ ವಿಶೇಷಣೇನ ಉಪಲಕ್ಷಿತಾ ಇತಿ ವದಾಮಃ । ಸರ್ವತ್ರೈಕದೇಶಪ್ರತ್ಯಭಿಜ್ಞಾನಾತ್ ಇತರೇತರವಿಶೇಷಣವಿಶೇಷ್ಯಭಾವೋಪಪತ್ತೇಃ । ಪ್ರಕರಣಭೇದೇಽಪಿ ಹಿ ವಿದ್ಯೈಕತ್ವೇ ಭವತಿ ಇತರೇತರವಿಶೇಷಣೋಪಸಂಹಾರವತ್ ಗತಿವಿಶೇಷಣಾನಾಮಪಿ ಉಪಸಂಹಾರಃ । ವಿದ್ಯಾಭೇದೇಽಪಿ ತು ಗತ್ಯೇಕದೇಶಪ್ರತ್ಯಭಿಜ್ಞಾನಾತ್ ಗನ್ತವ್ಯಾಭೇದಾಚ್ಚ ಗತ್ಯಭೇದ ಏವ । ತಥಾ ಹಿ "ತೇ ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸನ್ತಿ" (ಬೃ. ೬-೨-೧೫), "ತಸ್ಮಿನ್ ವಸನ್ತಿ ಶಾಶ್ವತೀಃ ಸಮಾಃ" (ಬೃ. ೫-೧೦-೧), "ಸಾ ಯಾ ಬ್ರಹ್ಮಣೋ ಜಿತಿರ್ಯಾ ವ್ಯುಷ್ಟಿಸ್ತಾಂ ಜಿತಿಂ ಜಯತಿ ತಾಂ ವ್ಯುಷ್ಟಿಂ ವ್ಯಶ್ನುತೇ" (ಕೌ. ೧-೭)[1] "ತದ್ಯ ಏವೈತಂ ಬ್ರಹ್ಮಲೋಕಂ ಬ್ರಹ್ಮಚರ್ಯೇಣಾನುವಿನ್ದನ್ತಿ"[2] (ಛಾಂ. ೮-೪-೩) ಇತಿ ಚ ತತ್ರ ತತ್ರ ತದೇವೈಕಂ ಫಲಂ ಬ್ರಹ್ಮಲೋಕಪ್ರಾಪ್ತಿಲಕ್ಷಣಂ ಪ್ರದರ್ಶ್ಯತೇ । ಯತ್ತು 'ಏತೈರೇವ' ಇತ್ಯವಧಾರಣಮ್ ಅರ್ಚಿರಾದ್ಯಾಶ್ರಯಣೇ ನ ಸ್ಯಾದಿತಿ । ನೈಷ ದೋಷಃ । ರಶ್ಮಿಪ್ರಾಪ್ತಿಪರತ್ವಾತ್ ಅಸ್ಯ । ನ ಹ್ಯೇಕ ಏವ ಶಬ್ದೋ ರಶ್ಮೀಂಶ್ಚ ಪ್ರಾಪಯಿತುಮರ್ಹತಿ, ಅರ್ಚಿರಾದೀಂಶ್ಚ ವ್ಯಾವರ್ತಯಿತುಮ್ । ತಸ್ಮಾತ್ ರಶ್ಮಿಸಂಬನ್ಧ ಏವಾಯಮ್ ಅವಧಾರ್ಯತ ಇತಿ ದ್ರಷ್ಟವ್ಯಮ್ । ತ್ವರಾವಚನಂ ತು ಅರ್ಚಿರಾದ್ಯಪೇಕ್ಷಾಯಾಮಪಿ ಗನ್ತವ್ಯಾನ್ತರಾಪೇಕ್ಷಯಾ ಶೈಘ್ರ್ಯಾರ್ಥತ್ವಾತ್ ನೋಪರುಧ್ಯತೇ। ಯಥಾ ನಿಮಿಷಮಾತ್ರೇಣ ಅಗಮ್ಯತ ಇತಿ । ಅಪಿ ಚ "ಅಥೈತಯೋಃ ಪಥೋರ್ನ ಕತರೇಣ ಚನ" (ಛಾಂ. ೫-೧೦-೮) ಇತಿ ಮಾರ್ಗದ್ವಯಭ್ರಷ್ಟಾನಾಂ ಕಷ್ಟಂ ತೃತೀಯಂ ಸ್ಥಾನಮ್ ಆಚಕ್ಷಾಣಾ ಪಿತೃಯಾಣವ್ಯತಿರಿಕ್ತಮ್ ಏಕಮೇವ ದೇವಯಾನಮ್ ಅರ್ಚಿರಾದಿಪರ್ವಾಣಂ ಪನ್ಥಾನಂ ಪ್ರಥಯತಿ । ಭೂಯಾಂಸಿ ಅರ್ಚಿರಾದಿಸೃತೌ ಮಾರ್ಗಪರ್ವಾಣಿ ಅಲ್ಪೀಯಾಂಸಿ ತು ಅನ್ಯತ್ರ । ಭೂಯಸಾಂ ಚ ಆನುಗುಣ್ಯೇನ ಅಲ್ಪೀಯಸಾಂ ನಯನಂ ನ್ಯಾಯ್ಯಮ್ ಇತ್ಯತೋಽಪಿ ಅರ್ಚಿರಾದಿನಾ ತತ್ಪ್ರಥಿತೇಃ ಇತ್ಯುಕ್ತಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ "ಅರ್ಚಿರಾದಿ(ಮಾರ್ಗ) ದಿಂದಲೇ ...." ಎಂಬ (ಸಿದ್ಧಾಂತವನ್ನು) ಹೇಳುತ್ತೇವೆ. ಬ್ರಹ್ಮವನ್ನು ಪಡೆಯು

---

1. ನಿ. ಸಾ. ಮುದ್ರಣದಲ್ಲಿಯೂ ಆ.ಮುದ್ರಣ(೩-೭)ದಲ್ಲಿಯೂ 'ವ್ಯಷ್ಟಿಃ, ವ್ಯಷ್ಟಿಂ' ಎಂದೇ ಪಾಠವಿದೆ. 2. ಉಪನಿಷತ್ತಿನ ಮೂಲಕ್ಕೆ ಅನುಗುಣವಾಗಿ ತಿದ್ದಿಕೊಂಡಿದೆ.

ಲಿರುವ ಪ್ರತಿಯೊಬ್ಬನೂ ಅರ್ಚಿರಾದಿಮಾರ್ಗದಿಂದಲೇ ಹೋಗುತ್ತಾನೆ ಎಂದು (ನಾವು) ಅಭಿಪ್ರಾಯಪಡುತ್ತೇವೆ. ಏಕೆ ? ಎಂದರೆ (ತತ್ಪ್ರಥಿತೇಃ) ಅದು ಪ್ರಸಿದ್ಧವಾಗಿರುವದರಿಂದ; ಈ ಮಾರ್ಗವೇ ಎಲ್ಲಾ ಉಪಾಸಕರಿಗೂ ಪ್ರಸಿದ್ಧವಾದದ್ದಷ್ಟೆ. ಹೇಗೆಂದರೆ ಪಂಚಾಗ್ನಿವಿದ್ಯೆಯ ಪ್ರಕರಣದಲ್ಲಿ "ಇನ್ನು ಯಾವ ಇವರು ಅರಣ್ಯದಲ್ಲಿ ಶ್ರದ್ಧೆಯನ್ನೂ ಸತ್ಯವನ್ನೂ ಉಪಾಸನೆಮಾಡುತ್ತಿರುವರೋ[1]"(ಬೃ. ೬-೨-೧೫) ಎಂದು ಬೇರೆಯ ಉಪಾಸನೆಯನ್ನು ಮಾಡುವವರಿಗೂ ಅರ್ಚಿರಾದಿಮಾರ್ಗವನ್ನು ಶ್ರುತಿಯಲ್ಲಿ ಹೇಳಿದೆ.

(ಪೂರ್ವಪಕ್ಷಿಯ ಮತವು) ಇದಾಗಿರಬಹುದು : ಯಾವ ಉಪಾಸನೆಗಳಲ್ಲಿ ಯಾವದೊಂದು ಗತಿಯನ್ನೂ ಹೇಳಿಲ್ಲವೋ ಅವುಗಳಲ್ಲಿ ಈ ಅರ್ಚಿರಾದಿಗತಿಯು ಬಂದು ಎದುರಾಗಲಿ. ಆದರೆ ಯಾವ (ಉಪಾಸನೆ)ಗಳಲ್ಲಿ ಮತ್ತೊಂದು (ಗತಿ)ಯನ್ನು ಶ್ರುತಿಯಲ್ಲಿ ಹೇಳಿದೆಯೋ ಅವುಗಳಲ್ಲಿ ಏತಕ್ಕೆ ಅರ್ಚಿರಾದಿಗತಿ ಯನ್ನು) ಆಶ್ರಯಿಸಬೇಕು ?

ಇದಕ್ಕೆ (ಈ ಉತ್ತರವನ್ನು) ಹೇಳುತ್ತೇವೆ : ಈ ಮಾರ್ಗಗಳು ಅತ್ಯಂತ ಭಿನ್ನವೇ ಆಗಿದ್ದರೆ ಹೀಗೂ ಆಗಬಹುದಾಗಿತ್ತು. ಆದರೆ ಬ್ರಹ್ಮಲೋಕಪ್ರಾಪ್ತಿಯನ್ನು ಕೊಡುವ ಈ ಮಾರ್ಗವು ಒಂದೇ, (ಇದಕ್ಕೆ) ಅನೇಕವಿಶೇಷಣಗಳಿರುತ್ತವೆ; ಒಂದೊಂದು ಕಡೆಯಲ್ಲಿ ಒಂದೊಂದು ವಿಶೇಷಣದಿಂದ (ಅದು) ಉಪಲಕ್ಷಿತವಾಗಿರುತ್ತದೆ ಎನ್ನುತ್ತೇವೆ. ಏಕೆಂದರೆ (ಈ) ಎಲ್ಲಾ ಕಡೆಯಲ್ಲಿಯೂ (ವಿಶೇಷಣಗಳಲ್ಲಿ) ಒಂದು ಭಾಗದಿಂದ (ಅದರ) ಗುರುತು ಸಿಕ್ಕುವದರಿಂದ ಒಂದಕ್ಕೊಂದಕ್ಕೆ ವಿಶೇಷಣವಿಶೇಷ್ಯಭಾವವು ಆಗಬಹುದಾಗಿರುತ್ತದೆ. ಪ್ರಕರಣಗಳು ಬೇರೆಬೇರೆಯಾಗಿದ್ದರೂ ವಿದ್ಯೆಯು ಒಂದೇ ಆಗಿದ್ದರೆ ಒಂದರ ವಿಶೇಷಣವನ್ನು ಮತ್ತೊಂದರಲ್ಲಿ ಉಪಸಂಹಾರಮಾಡಿಕೊಳ್ಳುವಂತೆಯೇ ಗತಿವಿಶೇಷಣಗಳನ್ನೂ ಉಪಸಂಹಾರಮಾಡಿಕೊಳ್ಳಬಹುದಾಗಿರುತ್ತದೆ. ಇನ್ನು ವಿದ್ಯೆಗಳು ಬೇರೆಬೇರೆಯೇ ಆಗಿದ್ದರೂ ಗತಿಯಲ್ಲಿ ಒಂದು ಭಾಗದಿಂದ (ಅದರ) ಗುರುತು ಸಿಕ್ಕುವದರಿಂದಲೂ ಗಂತವ್ಯ(ವಾದ ಬ್ರಹ್ಮಲೋಕವು) ಬೇರೆಯಲ್ಲವಾದ್ದರಿಂದಲೂ ಗತಿಯೂ ಬೇರೆಯಲ್ಲವೆಂದೇ (ಆಗುತ್ತದೆ). ಆದ್ದರಿಂದಲೇ "ಅವರು ಆ ಬ್ರಹ್ಮಲೋಕಗಳಲ್ಲಿ[2] ಉತ್ಕೃಷ್ಟರಾಗಿ ಉತ್ಕೃಷ್ಟವಾದ (ಅನೇಕ) ವರ್ಷಗಳವರೆಗೆ[3]

---

1. ಅರಣ್ಯದಲ್ಲಿದ್ದುಕೊಂಡಿರುವ ವಾನಪ್ರಸ್ಥರೂ ಪರಿವ್ರಾಜಕರೂ ಶ್ರದ್ಧಾಯುಕ್ತರಾಗಿ ಸತ್ಯವೆಂಬ ಹಿರಣ್ಯಗರ್ಭವನ್ನು ಉಪಾಸನೆಮಾಡುತ್ತಿರುವರೋ ಎಂದರ್ಥ.

2. ಬ್ರಹ್ಮಲೋಕಗಳಲ್ಲಿ ಮೇಲುಕೀಳಿನ ಅನೇಕ ಅಂತಸ್ತುಗಳಿರುವವೇನೆಂಬುದನ್ನು ಈ ಬಹುವಚನವು ಹೇಳುತ್ತದೆಯೆಂದು ಬೃ. ಭಾಷ್ಯದಲ್ಲಿದೆ.

3. ಅಂದರೆ ಬ್ರಹ್ಮಕಲ್ಪದವರೆಗೂ.

ವಾಸವಾಗಿರುವರು" (ಬೃ. ೬-೨-೧೫), "ಅದರಲ್ಲಿ ಶಾಶ್ವತವಾದ (ಅನೇಕ) ವರ್ಷಗಳವರೆಗೆ ವಾಸವಾಗಿರುವರು" (ಬೃ. ೫-೧೦-೧), "ಯಾವದು ಬ್ರಹ್ಮನ ಜಯವೋ, ಯಾವದು ಬ್ರಹ್ಮನ ಮಹಿಮೆಯೋ[1] ಆ ಜಯವನ್ನು ಗೆದ್ದು ಕೊಳ್ಳುವನು, ಆ ಮಹಿಮೆಯನ್ನು ಪಡೆದುಕೊಳ್ಳುತ್ತಾನೆ" (ಕೌ. ೧-೭) ಮತ್ತು "ಅಲ್ಲಿ ಯಾರು ಈ ಬ್ರಹ್ಮಲೋಕವನ್ನು ಬ್ರಹ್ಮಚರ್ಯದಿಂದ ಪಡೆದುಕೊಳ್ಳುವರೋ" (ಛಾ. ೮-೪-೩) ಎಂದು ಅಲ್ಲಲ್ಲಿ ಬ್ರಹ್ಮಲೋಕಪ್ರಾಪ್ತಿರೂಪವಾದ ಆ ಒಂದೇ ಫಲವನ್ನೇ ತಿಳಿಸಿರುತ್ತದೆ.

ಇನ್ನು "ಇದೇ ರಶ್ಮಿಗಳಿಂದ" (ಛಾಂ. ೮-೬-೫) ಎಂಬ ಅವಧಾರಣೆಯು ಅರ್ಚಿರಾದಿ(ಮಾರ್ಗ)ವನ್ನೇ ಆಶ್ರಯಿಸಿದರೆ (ಹೊಂದಿಕೆ)ಯಾಗಲಾರದಲ್ಲ ಎಂದಿರಷ್ಟೆ, ಅದೇನೂ ದೋಷವಲ್ಲ. ಏಕೆಂದರೆ ಅದು ರಶ್ಮಿಪ್ರಾಪ್ತಿಯಲ್ಲಿ ತಾತ್ಪರ್ಯವುಳ್ಳದ್ದಾಗಿರುತ್ತದೆ. ಒಂದೇ ಏವಶಬ್ದವು ರಶ್ಮಿಪ್ರಾಪ್ತಿಯನ್ನೂ ಹೇಳುವದು, ಅರ್ಚಿರಾದಿಗಳನ್ನೂ ಅಲ್ಲಗಳೆಯುವದು- (ಈ ಎರಡನ್ನೂ) ಮಾಡಲಾರದಷ್ಟೆ. ಆದ್ದರಿಂದ ಇಲ್ಲಿ ರಶ್ಮಿಸಂಬಂಧವನ್ನೇ ಅವಧಾರಣೆಮಾಡಿರುತ್ತದೆ ಎಂದು ತಿಳಿಯಬೇಕು. 'ಅವನು ಮನಸ್ಸುಮಾಡುವಷ್ಟರೊಳಗೆ' ಎಂಬ (ಛಾಂ. ೮-೬-೫) ತ್ವರೆಯನ್ನು ಹೇಳುವ ವಚನವಾದರೋ ಅರ್ಚಿರಾದಿ(ಗತಿಯು) ಅಪೇಕ್ಷೆಯಿದ್ದರೂ ಮತ್ತೊಂದು ಗಂತವ್ಯಕ್ಕಿಂತ ಬೇಗ ಎಂಬ ಅರ್ಥವನ್ನು ಹೇಳುವದಕ್ಕೆ ಬಂದಿರುವದರಿಂದ[2] (ಇದು ಅದಕ್ಕೆ) ವಿರುದ್ಧವಾಗುವದಿಲ್ಲ. 'ನಿಮಿಷ ಮಾತ್ರದಲ್ಲಿ ಇಲ್ಲಿಗೆ ಬರುತ್ತಾರೆ' ಎನ್ನುತ್ತಾರಲ್ಲ, ಹಾಗೆಯೇ ಇದು.[3]

ಇದೂ ಅಲ್ಲದೆ "ಇನ್ನು ಈ ಎರಡು ಮಾರ್ಗಗಳಲ್ಲಿ ಯಾವದೊಂದರಿಂದಲೂ (ಹೋಗುವದಿಲ್ಲ)" (ಛಾಂ. ೫-೧೦-೮) ಎಂದು (ಈ) ಎರಡು ಮಾರ್ಗಗಳಿಂದಲೂ ಭ್ರಷ್ಟರಾದವರಿಗೆ ಕಷ್ಟವಾದ ಮೂರನೆಯ ಸ್ಥಾನವನ್ನು ಹೇಳುವ (ಶ್ರುತಿಯು) ಪಿತೃಯಾಣಕ್ಕಿಂತ ಬೇರೆಯಾಗಿ ಅರ್ಚಿರಾದಿಗಳೆಂಬ ಪರ್ವಗಳುಳ್ಳ ದೇವಯಾನವೆಂಬ ಒಂದೇ ಮಾರ್ಗವನ್ನು ಪ್ರಕಟಿಸುತ್ತದೆ.[4] ಅರ್ಚಿರಾದಿ ಮಾರ್ಗದಲ್ಲಿ ಮಾರ್ಗಪರ್ವಗಳು ಹೆಚ್ಚಾಗಿವೆ, ಮಿಕ್ಕ (ಮಾರ್ಗ)ಗಳಲ್ಲಿ ಕಡಿಮೆ

1. ವ್ಯಷ್ಟಿ ಎಂಬುದಕ್ಕೆ ವ್ಯಾಪ್ತಿಯೆಂಬರ್ಥವನ್ನೇ ವ್ಯಾಖ್ಯಾನಕಾರರು ಕೊಟ್ಟಿರುತ್ತಾರೆ. ಕರ್ಮದ ಅಥವಾ ಉಪಾಸನೆಯ ಫಲವೆಂಬರ್ಥದಲ್ಲಿ ವೈದಿಕರೂಢಿಯಿದೆ.

2 ಲೋಕದಲ್ಲಿ ಗಂತವ್ಯಸ್ಥಾನವನ್ನು ಪಡೆಯುವದಕ್ಕೆ ಬೇಕಾಗುವ ಕಾಲಕ್ಕಿಂತ ಬೇಗನೆ ಎಂಬುದನ್ನು ತಿಳಿಸುವದಕ್ಕೆ ಬಂದಿರುವದರಿಂದ ಎಂದರ್ಥ ಎಂದು ರ. ಪ್ರ. ಕಾಶ್ಮೀರದಿಂದ ಮಧುರೆಗೆ ಬೇಗನೆ ಹೋಗಬಹುದು ಎಂಬಂತೆ ಮತ್ತೊಂದು ದಾರಿಗಿಂತ ಇದು ಬೇಗನೆ ಬ್ರಹ್ಮಲೋಕಕ್ಕೊಯ್ಯುವ ಮಾರ್ಗ ಎಂದರ್ಥ- ಎಂದು ಭಾಮತೀ.

3. ಇಲ್ಲಿ ನಿಮಿಷವೆಂಬ ಕಾಲವಿಶೇಷವು ಮುಖ್ಯವಲ್ಲ ; ಬೇಗನೆ ಎಂಬುದು ವಿವಕ್ಷಿತ.

4. ದೇವಯಾನ, ಪಿತೃಯಾಣ- ಎಂಬಿವನ್ನು ಬಿಟ್ಟರೆ ಮೂರನೆಯದು ಕೀಳುಗತಿ ಎಂದದ್ದರಿಂದ ದೇವಯಾನದಲ್ಲಿಯೇ ಮಿಕ್ಕ ಗತಿಗಳನ್ನೆಲ್ಲ ಸೇರಿಸಿ ಹೇಳಿದಂತಾಗಿದೆ.

ಯಿವೆ; ಹೆಚ್ಚಿನ (ಸಂಖ್ಯೆಗೆ) ಅನುಗುಣವಾಗಿ ಸ್ವಲ್ಪ (ಸಂಖ್ಯೆಯ ಮಾರ್ಗ) ಗಳನ್ನು ನಯಿಸುವದು ಯುಕ್ತವಾಗಿರುವದರಿಂದ[1] "ಅರ್ಚಿರಾದಿಮಾರ್ಗದಿಂದ ಹೋಗುತ್ತಾನೆ; ಏಕೆಂದರೆ ಅದು ಪ್ರಸಿದ್ಧವಾಗಿದೆ" ಎಂದು (ಸೂತ್ರದಲ್ಲಿ) ಹೇಳಿರುತ್ತದೆ.

## ೨. ವಾಯ್ವಧಿಕರಣ

(ದೇವಯಾನದಲ್ಲಿ ವಾಯುವನ್ನು ಸಂವತ್ಸರವಾದಮೇಲೆ ಸೇರಿಸಿಕೊಳ್ಳಬೇಕು)

**ವಾಯುಮಬ್ದಾದವಿಶೇಷವಿಶೇಷಾಭ್ಯಾಮ್ ॥ ೨ ॥**

೨. ಸಂವತ್ಸರದಿಂದ ವಾಯುವನ್ನು (ಸೇರುತ್ತಾನೆ); ಏಕೆಂದರೆ ಅವಿಶೇಷವಿಶೇಷಗಳಿರುವದರಿಂದ.

### ದೇವಯಾನದಲ್ಲಿ ವಾಯುವಿನ ವಿಷಯಕ್ಕೆ ಸಂಶಯ

(ಭಾಷ್ಯ)

೫೬೬. ಕೇನ ಪುನಃ ಸಂನಿವೇಶವಿಶೇಷೇಣ ಗತಿವಿಶೇಷಣಾನಾಮ್ ಇತರೇತರವಿಶೇಷಣವಿಶೇಷ್ಯಭಾವ ಇತಿ? ತದೇತತ್ ಸುಹೃದ್ಭೂತ್ವಾ ಆಚಾರ್ಯೋ ಪ್ರಥಯತಿ । "ಸ ಏತಂ ದೇವಯಾನಂ ಪನ್ಥಾನಮಾಪದ್ಯಾಗ್ನಿಲೋಕಮಾಗಚ್ಛತಿ ಸ ವಾಯುಲೋಕಂ ಸ ವರುಣಲೋಕಂ ಸ ಇನ್ದ್ರಲೋಕಂ ಸ ಪ್ರಜಾಪತಿಲೋಕಂ ಸ ಬ್ರಹ್ಮಲೋಕಮ್" (ಕೌ. ೧-೩) ಇತಿ ಕೌಷೀತಕಿನಾಂ ದೇವಯಾನಃ ಪನ್ಥಾಃ ಪಠ್ಯತೇ । ತತ್ರ ಅರ್ಚಿರಗ್ನಿಲೋಕಶಬ್ದೌ ತಾವತ್ ಏಕಾರ್ಥೌ । ಜ್ವಲನವಚನತ್ವಾತ್- ಇತಿ ನಾತ್ರ ಸಂನಿವೇಶಕ್ರಮಃ ಕ್ವಚಿತ್ ಅನ್ವೇಷ್ಯಃ । ವಾಯುಸ್ತು ಅರ್ಚಿರಾದೌ ವರ್ತ್ಮನಿ ನ ಶ್ರುತಃ ಕತಮಸ್ಮಿನ್ ಸ್ಥಾನೇ ನಿವೇಶಯಿತವ್ಯಃ ಇತಿ ॥

(ಭಾಷ್ಯಾರ್ಥ)

ಹಾಗಾದರೆ ಯಾವ ಗೊತ್ತಾದ ಸಂನಿವೇಶದಿಂದ ಗತಿವಿಶೇಷಣಗಳನ್ನೂ ಒಂದಕ್ಕೊಂದಕ್ಕೆ ವಿಶೇಷಣವಿಶೇಷ್ಯಭಾವವನ್ನೂ (ಮಾಡಬೇಕು)?- ಎಂದರೆ ಆ ಇದನ್ನು ಸುಹೃದ್ಭಾವದಿಂದ ಆಚಾರ್ಯರು (ಸೂತ್ರದಿಂದ) ತಿಳಿಸುತ್ತಾರೆ.

"ಅವನು ಈ ದೇವಯಾನವೆಂಬ ಮಾರ್ಗವನ್ನು ಹೊಂದಿ ಅಗ್ನಿಲೋಕಕ್ಕೆ ಬರುತ್ತಾನೆ, ಅವನು ವಾಯುಲೋಕಕ್ಕೆ (ಬರುತ್ತಾನೆ), ಅವನು ವರುಣ

---

1. ಅರ್ಚಿರಾದಿಮಾರ್ಗವನ್ನು ಮತ್ತೊಂದರಲ್ಲಿ ಅಡಕಮಾಡುವದಕ್ಕೆ ಆಗುವದಿಲ್ಲ; ಏಕೆಂದರೆ ಅದರಲ್ಲಿ ಬಹಳ ಪರ್ವಗಳಿವೆ.

ಲೋಕಕ್ಕೆ (ಬರುತ್ತಾನೆ), ಅವನು ಇಂದ್ರಲೋಕಕ್ಕೆ (ಬರುತ್ತಾನೆ), ಅವನು ಪ್ರಜಾಪತಿಲೋಕಕ್ಕೆ (ಬರುತ್ತಾನೆ), ಅವನು ಬ್ರಹ್ಮಲೋಕಕ್ಕೆ (ಬರುತ್ತಾನೆ)" (ಕೌ.೧-೩) ಎಂದು **ಕೌಶೀತಕಿಗಳ** (ಶಾಖೆಯಲ್ಲಿ) ದೇವಯಾನಮಾರ್ಗವನ್ನು ಪಠಿಸಿದೆ. ಇಲ್ಲಿ ಅರ್ಚಿ, ಅಗ್ನಿ– ಎಂಬೀ ಶಬ್ದಗಳು ಸಮಾನಾರ್ಥಕಗಳಾಗಿವೆ; ಏಕೆಂದರೆ (ಅವು) ಬೆಂಕಿಯನ್ನು ಹೇಳುವ (ಮಾರ್ಗಗಳು). ಆದ್ದರಿಂದ ಇಲ್ಲಿ ಸಂನಿವೇಶಕ್ರಮವನ್ನು ಎಲ್ಲಿಯೂ ಹುಡುಕಬೇಕಾಗಿಲ್ಲ, ಆದರೆ ವಾಯುವು ಅರ್ಚಿರಾದಿಮಾರ್ಗದಲ್ಲಿ ಶ್ರುತವಾಗಿಲ್ಲವಲ್ಲ, (ಅದನ್ನು) ಯಾವ ಸ್ಥಾನದಲ್ಲಿಟ್ಟು ಕೊಳ್ಳಬೇಕು ?

## ವಾಯುವನ್ನು ಸಂವತ್ಸರವಾದಬಳಿಕ ಸೇರಿಸಿಕೊಳ್ಳಬೇಕು

( ಭಾಷ್ಯ )

೫೬೭. ಉಚ್ಯತೇ। "ತೇಽರ್ಚಿಷಮೇವಾ[1]ಭಿಸಂಭವನ್ತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ಷಡುದಙ್ಙೇತಿ ಮಾಸಾಂಸ್ತಾನ್ । ಮಾಸೇಭ್ಯಃ ಸಂವತ್ಸರಂ ಸಂವತ್ಸರಾದಾದಿತ್ಯಮ್" (ಛಾಂ. ೫–೧೦–೧೨) ಇತ್ಯತ್ರ ಸಂವತ್ಸರಾದ್ ಪರಾಞ್ಚಮ್ ಆದಿತ್ಯಾದ್ ಅರ್ವಾಞ್ಚಂ ವಾಯುಮ್ ಅಭಿಸಂಭವನ್ತಿ । ಕಸ್ಮಾತ್ ? ಅವಿಶೇಷವಿಶೇಷಾಭ್ಯಾಮ್ । ತಥಾ ಹಿ । 'ಸ ವಾಯುಲೋಕಮ್' (ಕೌ. ೧–೩) ಇತ್ಯತ್ರ ಅವಿಶೇಷೋಪದಿಷ್ಟಸ್ಯ ವಾಯೋಃ ಶ್ರುತ್ಯನ್ತರೇ ವಿಶೇಷೋಪದೇಶೋ ದೃಶ್ಯತೇ "ಯದಾ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮ್ ಆಗಚ್ಛತಿ ತಸ್ಮೈ ಸ ತತ್ರ ವಿಜಹೀತೇ ಯಥಾ ರಥಚಕ್ರಸ್ಯ ಖಂ ತೇನ ಸ ಊರ್ಧ್ವಮಾಕ್ರಮತೇ ಸ ಆದಿತ್ಯಮಾಗಚ್ಛತಿ" ( ಬೃ. ೫–೧೦–೧ ) ಇತಿ । ಏತಸ್ಮಾದಾದಿತ್ಯಾದ್ ವಾಯೋಃ ಪೂರ್ವತ್ವದರ್ಶನಾದ್ ವಿಶೇಷಾತ್ ಅಬ್ದಾದಿತ್ಯಯೋರನ್ತರಾಲೇ ವಾಯುರ್ನಿವೇಶಯಿತವ್ಯಃ । ಕಸ್ಮಾತ್ ಪುನರಗ್ನೇಃ ಪರತ್ವದರ್ಶನಾದ್ ವಿಶೇಷಾತ್ ಅರ್ಚಿಷೋಽನನ್ತರಂ ವಾಯುರ್ನ ನಿವೇಶ್ಯತೇ ? ನೈಷೋಽಸ್ತಿ ವಿಶೇಷ ಇತಿ ವದಾಮಃ। ನನು ಉದಾಹೃತಾ ಶ್ರುತಿಃ "ಸ ಏತಂ ದೇವಯಾನಂ ಪನ್ಥಾನಮಾಪದ್ಯಾಗ್ನಿಲೋಕಮಾಗಚ್ಛತಿ ಸ ವಾಯುಲೋಕಂ ಸ ವರುಣಲೋಕಮ್" (ಕೌ. ೧–೩) ಇತಿ। ಉಚ್ಯತೇ। ಕೇವಲೋಽತ್ರ ಪಾಠಃ ಪೌರ್ವಾಪರ್ಯೇಣಾವಸ್ಥಿತಃ। ನಾತ್ರ ಕ್ರಮವಚನಃ ಕಶ್ಚಿಚ್ಛಬ್ದೋಽಸ್ತಿ। ಪದಾರ್ಥೋಪದರ್ಶನಮಾತ್ರಂ ಹಿ ಅತ್ರ ಕ್ರಿಯತೇ ಏತಮೇತಂ ಚಾಗಚ್ಛತಿ ಇತಿ ।

---

1. ೪–೧೫–೫ರಲ್ಲಿ "ಅರ್ಚಿಷಮೇವ" ಎಂದಿಷ್ಟೇ ಇದೆ, ತೇ ಇಲ್ಲ ; ೫–೧೦–೧೨ರಲ್ಲಿ ತೇಽರ್ಚಿಷಮ್ ಎಂದಿದೆ, ಏವ ಇಲ್ಲ; ಬೃ.೬–೨–೧೫ರಲ್ಲಿ ತೇಽರ್ಚಿರಭಿಸಂಭವನ್ತಿ ಎಂದಿದೆ. ಪ್ರಕೃತಭಾಷ್ಯದಲ್ಲಿ ಏವ ಎಂಬುದು ಹೇಗೆ ಬಂದಿರಬಹುದೆಂಬುದು ವಿಚಾರಣೀಯವಾಗಿದೆ.

ಇತರತ್ರ ಪುನರ್ವಾಯುಪ್ರತ್ತೇನ ರಥಚಕ್ರಮಾತ್ರೇಣ ಚ್ಛಿದ್ರೇಣ ಊರ್ಧ್ವ ಮಾಕ್ರಮ್ಯ ಆದಿತ್ಯಮಾಗಚ್ಛತಿ ಇತ್ಯವಗಮ್ಯತೇ ಕ್ರಮಃ। ತಸ್ಮಾತ್ ಸೂಕ್ತಮ್ ಅವಿಶೇಷವಿಶೇಷಾಭ್ಯಾಮ್ ಇತಿ । ವಾಜಸನೇಯಿನಸ್ತು "ಮಾಸೇಭ್ಯೋ ದೇವ ಲೋಕಂ ದೇವಲೋಕಾದಾದಿತ್ಯಮ್" (ಬೃ. ೬-೨-೧೫) ಇತಿ ಸಮಾಮನನ್ತಿ। ತತ್ರ ಆದಿತ್ಯಾನನ್ತರ್ಯಾಯ ದೇವಲೋಕಾದ್ ವಾಯುಮ್ ಅಭಿಸಂಭವೇಯುಃ। 'ವಾಯುಮಬ್ದಾತ್' ಇತಿ ತು ಛನ್ದೋಗಶ್ರುತ್ಯಪೇಕ್ಷಯಾ ಉಕ್ತಮ್। ಛಾನ್ದೋಗ್ಯವಾಜಸನೇಯಕಯೋಸ್ತು ಏತತ್ರ ದೇವಲೋಕೋ ನ ವಿದ್ಯತೇ ಪರತ್ರ ಸಂವತ್ಸರಃ। ತತ್ರ ಶ್ರುತಿದ್ವಯಪ್ರತ್ಯಯಾತ್ ಉಭಾವಪ್ಯುಭಯತ್ರ ಗ್ರಥಯಿತವ್ಯೌ। ತತ್ರಾಪಿ ಮಾಸಸಂಬನ್ಧಾತ್ ಸಂವತ್ಸರಃ ಪೂರ್ವಃ ಪಶ್ಚಿಮೋ ದೇವಲೋಕಃ ಇತಿ ವಿವೇಕವ್ಯಮ್ ॥

(ಭಾಷ್ಯಾರ್ಥ)

(ಇದಕ್ಕೆ) ಹೇಳುತ್ತೇವೆ. "ಅವರು ಅರ್ಚಿಯನ್ನೇ ಸೇರುತ್ತಾರೆ. ಅರ್ಚಿಯಿಂದ ಅಹಸ್ಸನ್ನು, ಅಹಸ್ಸಿನಿಂದ ಅಪೂರ್ಯಮಾಣಪಕ್ಷವನ್ನು; ಅಪೂರ್ಯಮಾಣಪಕ್ಷದಿಂದ ಉತ್ತರದಿಕ್ಕಿಗೆ (ಸೂರ್ಯನು) ಹೋಗುತ್ತಾನಲ್ಲ, ಆ ಆರು ಮಾಸಗಳನ್ನು, ಮಾಸಗಳಿಂದ ಸಂವತ್ಸರವನ್ನು, ಸಂವತ್ಸರದಿಂದ ಆದಿತ್ಯನನ್ನು" (ಛಾಂ.೫-೧೦-೧೨) ಎಂಬಲ್ಲಿ ಸಂವತ್ಸರದಿಂದ ಆಚೆಗಿರುವ (ಮತ್ತು) ಆದಿತ್ಯನಿಗಿಂತ ಈಚೆಗಿರುವ ವಾಯುವನ್ನು ಸೇರುತ್ತಾರೆ. ಯಾವ ಕಾರಣದಿಂದ (ಇದು ಗೊತ್ತಾಗುತ್ತದೆ) ? ಎಂದರೆ ಅವಿಶೇಷವಿಶೇಷಗಳಿಂದ. ಹೇಗೆಂದರೆ, "ಅವನು ವಾಯುಲೋಕವನ್ನು" (ಕೌ. ೧-೩) ಎಂಬಲ್ಲಿ ಯಾವ ವಿಶೇಷವೂ ಇಲ್ಲದೆ ಉಪದಿಷ್ಟವಾಗಿರುವ ವಾಯುವಿಗೆ ಮತ್ತೊಂದು ಶ್ರುತಿಯಲ್ಲಿ "ಯಾವಾಗಲಾದರೆ ಪುರುಷನು ಈ ಲೋಕದಿಂದ ಹೊರಟುಹೋಗುತ್ತಾನೋ (ಆಗ) ಅವನು ವಾಯುವಿಗೆ ಬರುತ್ತಾನೆ. ಅವನಿಗೆ ಆ (ವಾಯುವು) ರಥಚಕ್ರದ ರಂಧ್ರದಷ್ಟು (ದ್ವಾರವನ್ನು) ಬಿಟ್ಟುಕೊಡುತ್ತಾನೆ; ಅದರಿಂದ ಅವನು ಮೇಲಕ್ಕೇರುತ್ತಾನೆ. ಅವನು ಆದಿತ್ಯನ ಬಳಿಗೆ ಬರುತ್ತಾನೆ" (ಬೃ. ೫-೧೦-೧) ಎಂದು ವಿಶೇಷವನ್ನು (ಹೇಳಿರುವದು) ಕಂಡುಬರುತ್ತದೆ. ಆದಿತ್ಯನಿಗಿಂತ ವಾಯುವು ಮೊದಲಿರುವದೆಂಬ ಈ ವಿಶೇಷ(ಶ್ರುತಿ)ಯಿಂದ ಅಬ್ದ, ಆದಿತ್ಯ – ಇವುಗಳ ನಡುವೆ ವಾಯುವನ್ನು ಇಟ್ಟುಕೊಳ್ಳಬೇಕು.

(ಆಕ್ಷೇಪ) :– ಅಗ್ನಿಯಾದ ಬಳಿಕ (ವಾಯುವನ್ನು ಹೇಳಿರುವದೆಂಬ) ವಿಶೇಷದಿಂದ ಅರ್ಚಿಯಾದ ಬಳಿಕ ವಾಯುವನ್ನೇಕೆ ಇಡುವದಿಲ್ಲ ?

(ಪರಿಹಾರ) :– ಇದು ವಿಶೇಷ(ಶ್ರುತಿ)ಯಲ್ಲ ಎನ್ನುತ್ತೇವೆ.

(ಆಕ್ಷೇಪ) :– "ಅವನು ಈ ದೇವಯಾನಮಾರ್ಗವನ್ನು ಸೇರಿ ಅಗ್ನಿ ಲೋಕಕ್ಕೆ ಬರುತ್ತಾನೆ.; ಅವನು ವಾಯುಲೋಕಕ್ಕೆ (ಬರುತ್ತಾನೆ), ಅವನು ವರುಣಲೋಕಕ್ಕೆ (ಬರುತ್ತಾನೆ)" (ಕೌ. ೧-೩) ಎಂಬ ಶ್ರುತಿಯನ್ನು ಉದಾ ಹರಿಸಿತ್ತಲ್ಲ!

(ಪರಿಹಾರ):– (ಇದಕ್ಕೆ) ಹೇಳುತ್ತೇವೆ: ಇಲ್ಲಿ ಬರಿಯ ಪಾಠವೇ ಹಿಂದು ಮುಂದಿನ (ಕ್ರಮ)ದಲ್ಲಿಯೇ ಹೊರತು ಕ್ರಮವನ್ನು ಹೇಳುವ ಯಾವ ಶಬ್ದವೂ ಇರುವದಿಲ್ಲ. ಇಂಥಿಂಥದ್ದಕ್ಕೆ ಬಂದು ಸೇರುತ್ತಾನೆ ಎಂದು ಪದಾರ್ಥವನ್ನು ಮಾತ್ರ ತೋರಿಸಿದೆಯಲ್ಲವೆ? ಆದರೆ ಇನ್ನೊಂದು (ಶ್ರುತಿ)ಯಲ್ಲಿಯೊ ಎಂದರೆ ವಾಯುವು ಕೊಟ್ಟ ರಥಚಕ್ರದಗಲದ ರಂಧ್ರದಿಂದ ಮೇಲೆಕ್ಕೇರಿ .ಆದಿತ್ಯನನ್ನು ಬಂದು ಸೇರುತ್ತಾನೆ ಎಂದು ಕ್ರಮವು ತಿಳಿದುಬರುತ್ತದೆ. ಆದ್ದರಿಂದ 'ಅವಿಶೇಷ ವಿಶೇಷಗಳಿರುವದರಿಂದ' ಎಂದು ಹೇಳಿದ್ದು ಸರಿಯಾಗಿದೆ.

ಆದರೆ ವಾಜಸನೇಯಿಗಳು "ಮಾಸಗಳಿಂದ ದೇವಲೋಕವನ್ನು, ದೇವ ಲೋಕದಿಂದ ಆದಿತ್ಯನನ್ನು" (ಬೃ. ೬-೨-೧೫) ಎಂದು ಪಠಿಸುತ್ತಾರೆ. ಅಲ್ಲಿ ಆದಿತ್ಯನಾದ ಬಳಿಕ ಎಂಬುದನ್ನು ಅನುಸರಿಸಿ ದೇವಲೋಕವಾದ ಬಳಿಕ ವಾಯು ವನ್ನು ಸೇರುತ್ತಾರೆಂದು (ನಿರ್ಣಯಿಸ)ಬೇಕಾಗುವದು. 'ವಾಯುಮಬ್ದಾತ್' (ಸಂವತ್ಸರವಾದ ಬಳಿಕ ವಾಯುವನ್ನು) ಎಂಬುದಾದರೋ ಛಂದೋಗಶ್ರುತಿಯ ಅಪೇಕ್ಷೆಯಿಂದ ಹೇಳಿದ್ದು. ಆದರೆ ಛಾಂದೋಗ್ಯ, ವಾಜಸನೇಯಕ –ಇವೆರಡ ರಲ್ಲಿ ಒಂದರಲ್ಲಿ ದೇವಲೋಕವು ಇಲ್ಲ, ಮತ್ತೊಂದುಕಡೆ ಸಂವತ್ಸರ(ವಿಲ್ಲ). ಇಲ್ಲಿ ಎರಡೂ ಶ್ರುತಿಗಳ ಪ್ರಾಮಾಣ್ಯದಿಂದ (ಈ) ಎರಡನ್ನೂ ಎರಡು ಕಡೆಗೂ ಸೇರಿಸಿಕೊಳ್ಳಬೇಕು. ಅದರಲ್ಲಿಯೂ ಮಾಸಸಂಬಂಧವಿರುವದರಿಂದ ಸಂವತ್ಸರವು ಮೊದಲು, ದೇವಲೋಕವು ಆಮೇಲೆ– ಎಂದು ವಿವೇಚನೆ ಮಾಡಿಕೊಳ್ಳಬೇಕು.[1]

## ೩. ತಡಿದಧಿಕರಣ

### (ಅರ್ಚಿರಾದಿಮಾರ್ಗದಲ್ಲಿ ವರುಣಾದಿಗಳ ಸ್ಥಾನ)

**ತಡಿತೋಽಧಿ ವರುಣಃ ಸಂಬನ್ಧಾತ್ ॥ ೩ ॥**

೩. ವರುಣನು ಮಿಂಚಿನಿಂದಾಚೆಗೆ; ಏಕೆಂದರೆ ಸಂಬಂಧ ವಿದೆ.

1. ಏಕೆಂದರೆ ಸಂವತ್ಸರವು ಕಾಲವಾಚಕಶಬ್ದವಾಗಿದೆ.

# ವರುಣಲೋಕವನ್ನು ಮಿಂಚಿನ ಆಚೆಗೆ ಸೇರಿಸಿಕೊಳ್ಳಬೇಕು

(ಭಾಷ್ಯ)

೫೬೮. "ಆದಿತ್ಯಾಚ್ಚನ್ದ್ರಮಸಂ ಚನ್ದ್ರಮಸೋ ವಿದ್ಯುತಮ್" (ಛಾಂ. ೫-೧೦-೧) ಇತ್ಯಸ್ಯಾ ವಿದ್ಯುತ ಉಪರಿಷ್ಟಾತ್ "ಸ ವರುಣಲೋಕಮ್" (ಕೌ. ೧-೩) ಇತ್ಯಯಂ ವರುಣಃ ಸಂಬಧ್ಯತೇ। ಅಸ್ತಿ ಹಿ ಸಂಬನ್ಧೋ ವಿದ್ಯುದ್ವರುಣಯೋಃ। ಯದಾ ಹಿ ವಿಶಾಲಾ ವಿದ್ಯುತಸ್ತೀವ್ರಸ್ತನಿತನಿರ್ಘೋಷಾ ಜೀಮೂತೋದರೇಷು ಪ್ರನೃತ್ಯನ್ತಿ ಅಥಾಪಃ ಪ್ರಪತನ್ತಿ। "ವಿದ್ಯೋತತೇ ಸ್ತನಯತಿ ವರ್ಷಿಷ್ಯತಿ ವಾ" (ಛಾಂ. ೭-೧೧-೧) ಇತಿ ಚ ಬ್ರಾಹ್ಮಣಮ್। ಅಪಾಂ ಚಾಧಿಪತಿರ್ವರುಣಃ ಇತಿ ಶ್ರುತಿಸ್ಮೃತಿಪ್ರಸಿದ್ಧಿಃ। ವರುಣಾದಧಿ ಇನ್ದ್ರಪ್ರಜಾಪತೀ। ಸ್ಥಾನಾನ್ತರಾಭಾವಾತ್, ಪಾಠಸಾಮರ್ಥ್ಯಾಚ್ಚ। ಆಗನ್ತುಕತ್ವಾದಪಿ ವರುಣಾದೀನಾಮನ್ತ ಏವ ನಿವೇಶಃ। ವೈಶೇಷಿಕಸ್ಥಾನಾಭಾವಾತ್। ವಿದ್ಯುಚ್ಚಾನ್ತ್ಯಾ ಅರ್ಚಿರಾದೌ ವರ್ತ್ಮನಿ॥

(ಭಾಷ್ಯಾರ್ಥ)

"ಆದಿತ್ಯನಿಂದ ಚಂದ್ರನನ್ನು, ಚಂದ್ರನಿಂದ ಮಿಂಚನ್ನು" (ಛಾಂ. ೪-೧೫-೫) ಎಂಬೀ ಮಿಂಚಿನ ಮುಂದೆ "ಅವನು ವರುಣಲೋಕವನ್ನು (ಕೌ. ೧-೩) ಎಂಬೀ ವರುಣನು ಸಂಬದ್ಧವಾಗತಕ್ಕದ್ದು. ಏಕೆಂದರೆ ಮಿಂಚಿಗೂ ವರುಣನಿಗೂ ಸಂಬಂಧವಿರುತ್ತದೆ. ಹೇಗೆಂದರೆ ಯಾವಾಗ ವಿಶಾಲವಾದ ಮಿಂಚುಗಳು ಬಲವಾದ ಗುಡುಗಿನ ಧ್ವನಿಯಿಂದೊಡಗೂಡಿ ಮೋಡಗಳೊಳಗಡೆಯಲ್ಲಿ ಕುಣಿಯುತ್ತವೆಯೋ ಆಗ ನೀರು ಬೀಳುತ್ತದೆ. "ಮಿಂಚುತ್ತದೆ, ಗುಡುಗುತ್ತದೆ, ಅಥವಾ ಮಳೆಗರೆಯುತ್ತದೆ" (ಛಾಂ. ೭-೧೧-೧) ಎಂದು (ಛಂದೋಗ) ಬ್ರಾಹ್ಮಣವೂ (ಇದೆ). ಅಪ್ಪಿಗೆ ವರುಣನು ಅಧಿಪತಿ ಎಂದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ. ವರುಣನಾದಮೇಲೆ ಇಂದ್ರಪ್ರಜಾಪತಿಗಳನ್ನು (ಸೇರಿಸಿಕೊಳ್ಳಬೇಕು); ಏಕೆಂದರೆ (ಅವರಿಗೆ) ಬೇರೆಯ ಸ್ಥಾನವಿಲ್ಲ. ಪಾಠಸಾಮರ್ಥ್ಯದಿಂದಲೂ (ಇಲ್ಲಿ ಅವರನ್ನು ಸೇರಿಸಿಕೊಳ್ಳಬೇಕು). ವರುಣಾದಿಗಳು ಆಗಂತುಕರಾಗಿರುವದರಿಂದಲೂ (ಅವಕ್ಕೆ) ಗೊತ್ತಾದ ಸ್ಥಾನವಿಲ್ಲವಾದ್ದರಿಂದಲೂ (ಅವುಗಳನ್ನು) ಕೊನೆಯಲ್ಲಿಯೇ ಇಡಬೇಕು; ಅರ್ಚಿರಾದಿಮಾರ್ಗದಲ್ಲಿ ಮಿಂಚು ಕೊನೆಯದಾಗಿದೆ[1].

---

1. ಆಗಂತುಕರನ್ನು ಕೊನೆಯಲ್ಲಿ ಕೂರಿಸತಕ್ಕದ್ದು ಎಂಬ ನ್ಯಾಯವಿದೆ; ಆದ್ದರಿಂದಲೂ ವರುಣಾದಿಗಳನ್ನು ಮಿಂಚಿನ ಬಳಿಕ ಇಟ್ಟುಕೊಳ್ಳಬೇಕು.

## ೪. ಆತಿವಾಹಿಕಾಧಿಕರಣ (ಸೂ. ೪–೬)

( ಅರ್ಚಿರಾದಿಗಳು ಆತಿವಾಹಿಕರು )

**ಆತಿವಾಹಿಕಾಸ್ತಲ್ಲಿಙ್ಗಾತ್ ॥ ೪ ॥**

೪. (ಅರ್ಚಿರಾದಿಗಳು) ಆತಿವಾಹಿಕರು, ಏಕೆಂದರೆ ಆ ಲಿಂಗ (ಏದೆ).

## ಪೂರ್ವಪಕ್ಷ: ಅರ್ಚಿರಾದಿಗಳು ಮಾರ್ಗಚಿಹ್ನಗಳು ಅಥವಾ ಭೋಗಭೂಮಿಗಳು

(ಭಾಷ್ಯ)

೫೬೯. ತೇಷ್ವೇವ ಅರ್ಚಿರಾದಿಷು ಸಂಶಯಃ । ಕಿಮೇತಾನಿ ಮಾರ್ಗ ಚಿಹ್ನಾನಿ । ಉತ ಭೋಗಭೂಮಯಃ, ಅಥವಾ ನೇತಾರೋ ಗನ್ತ್ರೂಣಾಮ್ ಇತಿ । ತತ್ರ ಮಾರ್ಗಲಕ್ಷಣಭೂತಾ ಅರ್ಚಿರಾದಯಃ ಇತಿ ತಾವತ್ ಪ್ರಾಪ್ತಮ್ ತತ್ಸ್ವರೂಪತ್ವಾತ್ ಉಪದೇಶಸ್ಯ । ಯಥಾ ಹಿ ಲೋಕೇ ಕಶ್ಚಿದ್ ಗ್ರಾಮಂ ನಗರಂ ವಾ ಪ್ರತಿಷ್ಠಾಸಮಾನೋಽನುಶಿಷ್ಯತೇ 'ಗಚ್ಛೇತಸ್ತ್ವಮ್ ಅಮುಂ ಗಿರಿಮ್, ತತೋ ನ್ಯಗ್ರೋಧಮ್, ತತೋ ನದೀಮ್, ತತೋ ಗ್ರಾಮಮ್, ನಗರಂ[1] ವಾ ಪ್ರಾಪ್ಸ್ಯಸಿ' ಇತಿ, ಏವಮಿಹಾಪಿ 'ಅರ್ಚಿಷೋಽಹ ರಹ್ನ ಆಪೂರ್ಯಮಾಣಪಕ್ಷಮ್' ಇತ್ಯಾದ್ಯಾಹ । ಅಥವಾ ಭೋಗಭೂಮಯಃ ಇತಿ ಪ್ರಾಪ್ತಮ್ । ತಥಾ ಹಿ ಲೋಕಶಬ್ದೇನ ಅಗ್ನ್ಯಾದೀನ್ ಅನುಬಧ್ನಾತಿ "ಅಗ್ನಿಲೋಕಮಾಗಚ್ಛತಿ" (ಕೌ. ೧–೩) ಇತ್ಯಾದಿ। ಲೋಕಶಬ್ದಶ್ಚ ಪ್ರಾಣಿನಾಂ ಭೋಗಾಯತನೇಷು ಭಾಷ್ಯತೇ "ಮನುಷ್ಯಲೋಕಃ, ಪಿತೃಲೋಕಃ, ದೇವ ಲೋಕಃ" (ಬೃ. ೧–೫–೧೬) ಇತಿ ಚ । ತಥಾ ಚ ಬ್ರಾಹ್ಮಣಮ್– "ಅಹೋ ರಾತ್ರೇಷು ತೇ ಲೋಕೇಷು ಸಜ್ಜನ್ತೇ" (ಶತ.ಬ್ರಾ. ೧೦–೨–೬–೮) ಇತ್ಯಾದಿ । ತಸ್ಮಾತ್ ನಾತಿವಾಹಿಕಾ ಅರ್ಚಿರಾದಯಃ । ಅಚೇತನತ್ವಾದಪಿ ಏತೇಷಾಮ್ ಆತಿವಾಹಿಕತ್ವಾನುಪಪತ್ತಿಃ । ಚೇತನಾ ಹಿ ಲೋಕೇ ರಾಜನಿಯುಕ್ತಾಃ ಪುರುಷಾಃ ದುರ್ಗೇಷು ಮಾರ್ಗೇಷು ಅತಿವಾಹ್ಯಾನ್ ಅತಿವಾಹಯನ್ತಿ ॥

(ಭಾಷ್ಯಾರ್ಥ)

ಇದೇ ಅರ್ಚಿರಾದಿಗಳ ವಿಷಯಕ್ಕೆ ಸಂಶಯ(ವೇನೆಂದರೆ) ಈ (ಅರ್ಚಿರಾದಿ ಗಳು) ಮಾರ್ಗಚಿಹ್ನೆಗಳೊ, ಅಥವಾ ಭೋಗಭೂಮಿಗಳೊ, ಅಥವಾ ಹೋಗ ತಕ್ಕವರನ್ನು ಕರೆದುಕೊಂಡು ಹೋಗುವವರೊ ?

1. ಇಲ್ಲಿ 'ತತೋ' ಹೆಚ್ಚಾಗಿದೆಯೆಂದು ತೋರುತ್ತದೆ.

ಇಲ್ಲಿ ಅರ್ಚಿರಾದಿಗಳು ಮಾರ್ಗದ ಗುರುತುಗಳು ಎಂಬ (ಪೂರ್ವಪಕ್ಷವು) ಮೊದಲು ಬಂದೊದಗುತ್ತದೆ. ಏಕೆಂದರೆ (ಶ್ರುತಿಯು) ಉಪದೇಶವು ಅವುಗಳ ಸ್ವರೂಪದಲ್ಲಿರುತ್ತದೆ. ಹೇಗೆಂದರೆ, ಹೇಗೆ ಲೋಕದಲ್ಲಿ (ಒಂದು) ಊರನ್ನೋ ನಗರವನ್ನೋ ಕುರಿತು ಹೊರಟಿರುವನೊಬ್ಬನಿಗೆ "ಇಲ್ಲಿಂದ ನೀನು ಆ ಬೆಟ್ಟಕ್ಕೆ ಹೋಗು, ಅಲ್ಲಿಂದ ಆಲದಮರಕ್ಕೆ (ಹೋಗು). ಅಲ್ಲಿಂದ ನದಿಗೆ ಹೋಗು, ಅಲ್ಲಿಂದ ಊರಿಗೆ ಅಥವಾ ನಗರಕ್ಕೆ ಹೋಗಿ ಸೇರುವೆ ಎಂದು ಹೇಳುತ್ತಾರೋ ಹಾಗೆಯೇ ಇಲ್ಲಿಯೂ "ಅರ್ಚಿಯಿಂದ ಅಹಸ್ಸು, ಅಹಸ್ಸಿನಿಂದ ಆಪೂರ್ಯಮಾಣಪಕ್ಷ- ಎಂದು ಮುಂತಾಗಿ (ಶ್ರುತಿಯು) ಹೇಳಿರುತ್ತದೆ. ಅಥವಾ (ಇವು) ಭೋಗಭೂಮಿಗಳು ಎಂಬ (ಪೂರ್ವಪಕ್ಷವು) ಬಂದೊದಗುತ್ತದೆ. ಇದಕ್ಕೆ ಅನುಗುಣವಾಗಿ (ಶ್ರುತಿಯಲ್ಲಿ) ಅಗ್ನಿ ಮುಂತಾದವುಗಳಿಗೆ ಲೋಕಶಬ್ದವನ್ನು ಸಂಬಂಧಿಸಿ 'ಅಗ್ನಿಲೋಕಕ್ಕೆ ಬರುತ್ತಾನೆ' (ಕೌ. ೧-೩) ಎಂದು ಮುಂತಾಗಿ (ಹೇಳಿರುತ್ತದೆ). ಲೋಕಶಬ್ದವಾದರೊ, ಪ್ರಾಣಿಗಳ ಭೋಗಸ್ಥಾನಗಳಲ್ಲಿ 'ಮನುಷ್ಯಲೋಕ, ಪಿತೃಲೋಕ, ದೇವಲೋಕ" (ಬೃ. ೧-೫-೧೬) ಎಂದು ಪ್ರಯುಕ್ತವಾಗಿದೆ. ಆದ್ದರಿಂದಲೇ "ಅಹೋರಾತ್ರಗಳೆಂಬ ಲೋಕಗಳಲ್ಲಿ ಅವರು ಸಕ್ತರಾಗಿರುತ್ತಾರೆ" (ಶತ.ಬ್ರಾ.೧೦-೨-೬-೮) ಎಂದು ಮುಂತಾಗಿ ಬ್ರಾಹ್ಮಣವಿದೆ. ಆದ್ದರಿಂದ ಅರ್ಚಿರಾದಿಗಳು ಆತಿವಾಹಿಕರಲ್ಲ. ಇವು ಅಚೇತನವಾಗಿರುವದರಿಂದಲೂ ಆತಿವಾಹಿಕರೆಂಬುದು ಹೊಂದುವಂತಿಲ್ಲ. ಲೋಕದಲ್ಲಿ ರಾಜರುಗಳಿಂದ ನಿಯುಕ್ತರಾಗಿರುವ ಚೇತನಪುರುಷರಲ್ಲವೆ, ದುರ್ಗಮವಾದ ಮಾರ್ಗಗಳಲ್ಲಿ ಕರೆದುಕೊಂಡುಹೋಗಿ ದಾಟಿಸಬೇಕಾಗಿರುವ (ಜನರನ್ನು ದಾಟಿಸುವ) ಆತಿವಾಹಿಕರಾಗಿರುತ್ತಾರೆ?

## ಸಿದ್ಧಾಂತ: ಅರ್ಚಿರಾದಿಗಳು ಆತಿವಾಹಿಕರೇ

(ಭಾಷ್ಯ)

೫೭೦. ಏವಂ ಪ್ರಾಪ್ತೇ ಬ್ರೂಮಃ । ಆತಿವಾಹಿಕಾ ಏವೈತೇ ಭವಿತುಮರ್ಹನ್ತಿ । ಕುತಃ? ತಲ್ಲಿಙ್ಗಾತ್ । ತಥಾ ಹಿ "ಚನ್ದ್ರಮಸೋ ವಿದ್ಯುತಂ ತತ್ಪುರುಷೋಽಮಾನವಃ ಸ ಏತಾನ್ ಬ್ರಹ್ಮ ಗಮಯತಿ" (ಛಾಂ. ೪-೧೫-೫) ಇತಿ ಸಿದ್ಧವತ್ ಗಮಯಿತೃತ್ವಂ ದರ್ಶಯತಿ । ತದ್ವಚನಂ ತದ್ವಿಷಯಮೇವೋಪಕ್ಷೀಣಮ್ ಇತಿ ಚೇತ್ । ನ । ಪ್ರಾಪ್ತಮಾನವತ್ವನಿವೃತ್ತಿಪರತ್ವಾದ್ ವಿಶೇಷಣಸ್ಯ । ಯದಿ ಅರ್ಚಿರಾದಿಷು ಪುರುಷಾ ಗಮಯಿತಾರಃ ಪ್ರಾಪ್ತಾಃ, ತೇ ಚ ಮಾನವಾಃ, ತತೋ ಯುಕ್ತಂ ತನ್ನಿವೃತ್ತ್ಯರ್ಥಂ ಪುರುಷವಿಶೇಷಣಮ್ ಅಮಾನವ ಇತಿ ॥

(ಭಾಷ್ಯಾರ್ಥ)

ಹೀಗೆಂದು ಪ್ರಾಪ್ತವಾಗಲು (ಸಿದ್ಧಾಂತವನ್ನು) ಹೇಳುತ್ತೇವೆ. ಇವರು ಆತಿವಾಹಿಕರೇ ಆಗಿರಬೇಕು. ಏಕೆ? ಎಂದರೆ ಆ ಲಿಂಗವಿರುವದರಿಂದ. ಆದ್ದರಿಂದಲೇ "ಚಂದ್ರನಿಂದ ಮಿಂಚನ್ನೇ ಸೇರುತ್ತಾರೆ. ಅಲ್ಲಿ ಅಮಾನವನಾದ ಪುರುಷನು (ಇರುತ್ತಾನೆ); ಅವನು ಇವರನ್ನು ಬ್ರಹ್ಮವನ್ನು ಸೇರಿಸುತ್ತಾನೆ" (ಛಾಂ. ೪–೧೫–೫) ಎಂದು ಸಿದ್ಧವಾಗಿರುವಂತೆ ಗಮಯಿತೃತ್ವವನ್ನು ತಿಳಿಸಿರುತ್ತದೆ.[1]

(ಆಕ್ಷೇಪ) :– ಆ ವಚನವು ಅದರ ವಿಷಯದಲ್ಲಿಯೇ ಕೊನೆಗಂಡಿರುತ್ತದೆ.[2]

(ಪರಿಹಾರ) :– ಹಾಗಲ್ಲ. ಏಕೆಂದರೆ (ಈ) ವಿಷಯವು (ಹಿಂದೆ) ಪ್ರಾಪ್ತವಾಗಿರುವ ಮಾನವತ್ವವನ್ನು ಇಲ್ಲವೆನ್ನುವದಕ್ಕಾಗಿ (ಬಂದಿದೆ). ಅರ್ಚಿರಾದಿಗಳಲ್ಲಿ ಗಮಯಿತೃಗಳಾದ ಪುರುಷರು ಬಂದೊದಗಿದ್ದರೆ, ಅವರು ಮಾನವರೆಂದೂ (ಬಂದೊದಗಿದ್ದರೆ) ಆಗ ಅದನ್ನು ಅಲ್ಲಗಳೆಯುವದಕ್ಕಾಗಿ 'ಅಮಾನವ' ನೆಂಬ ವಿಶೇಷಣವು (ಬಂದಿದೆ) ಎಂಬುದು ಯುಕ್ತವಾಗುತ್ತದೆ.[3]

**ಉಭಯವ್ಯಾಮೋಹಾತ್ ತತ್ಸಿದ್ಧೇಃ ॥ ೫ ॥**

೫. ಇಬ್ಬರಿಗೂ ವ್ಯಾಮೋಹವಾಗಿರುವದರಿಂದ ಅದು ಸಿದ್ಧವಾಗುವದರಿಂದ (ಹೀಗೆಂದು ತಿಳಿಯಬೇಕು).

(ಭಾಷ್ಯ)

೫೭೧. ನನು ತಲ್ಲಿಙ್ಗಮಾತ್ರಮ್ ಅಗಮಕಮ್ । ನ್ಯಾಯಾಭಾವಾತ್ । ನೈಷ ದೋಷಃ। ಯೇ ತಾವತ್ ಅರ್ಚಿರಾದಿಮಾರ್ಗಾಃ ತೇ ದೇಹವಿಯೋಗಾತ್ ಸಂಪಿಣ್ಡಿತಕರಣಗ್ರಾಮಾಃ ಇತ್ಯಸ್ವತನ್ತ್ರಾಃ । ಅರ್ಚಿರಾದೀನಾಮಪಿ ಅಚೇತನತ್ವಾತ್ ಅಸ್ವಾತನ್ತ್ರ್ಯಮ್ ಇತ್ಯತೋಽರ್ಚಿರಾದ್ಯಭಿಮಾನಿನಶ್ಚೇತನಾ ದೇವತಾವಿಶೇಷಾಃ ಅತಿಯಾತ್ರಾಯಾಂ ನಿಯುಕ್ತಾಃ ಇತಿ ಗಮ್ಯತೇ। ಲೋಕೇಽಪಿ ಹಿ ಮತ್ತಮೂರ್ಛಿತಾದಯಃ ಸಂಪಿಣ್ಡಿತಕರಣಾಃ ಪರಪ್ರಯುಕ್ತವರ್ತ್ಮಾನೋ ಭವನ್ತಿ। ಅನವಸ್ಥಿತತ್ವಾದಪಿ ಅರ್ಚಿರಾದೀನಾಂ ನ ಮಾರ್ಗಲಕ್ಷಣತ್ವೋಪ

1. ಆದ್ದರಿಂದ ಹಿಂದೆ ಹೇಳಿರುವವರೂ ಕರೆದುಕೊಂಡು ಹೋಗುವ ಪುರುಷರೇ ಆಗಿರಬೇಕು.

2. ಆದ್ದರಿಂದ ಮಿಕ್ಕ ಸ್ಥಲದಲ್ಲಿ ಆತಿವಾಹಕರೆಂಬರ್ಥವನ್ನು ಮಾಡಬೇಕಾದದ್ದಿಲ್ಲವೆಂದು ಭಾವ.

3. ಆದ್ದರಿಂದ "ಅಮಾನವ" ಎಂಬ ವಿಶೇಷಣದ ಸಾರ್ಥಕ್ಯಕ್ಕಾಗಿ ಹಿಂದಿನವರು ಆತಿವಾಹಿಕರೆನ್ನಬೇಕು.

ಪತ್ತಿಃ । ನ ಹಿ ರಾತ್ರೌ ಪ್ರೇತಸ್ಯ ಅಹಃಸ್ವರೂಪಾಭಿಸಂಭವ ಉಪಪದ್ಯತೇ । ನ ಚ ಪ್ರತಿಪಾಲನಮಸ್ತಿ ಇತ್ಯುಕ್ತಮ್ ಪುರಸ್ತಾತ್ । ಧ್ರುವತ್ವಾತ್ತು ದೇವತಾತ್ಮನಾಂ ನಾಯಂ ದೋಷೋ ಭವತಿ । ಅರ್ಚಿರಾದಿಶಬ್ದತಾ ಚೈಷಾಮ್ ಅರ್ಚಿರಾದ್ಯಭಿಮಾನಾತ್ ಉಪಪದ್ಯತೇ । "ಅರ್ಚಿಷೋಽಹಃ" (ಛಾಂ. ೪–೧೫–೫) ಇತ್ಯಾದಿನಿರ್ದೇಶಸ್ತು ಆತಿವಾಹಿಕತ್ವೇಽಪಿ ನ ವಿರುಧ್ಯತೇ । ಅರ್ಚಿಷಾ ಹೇತುನಾ ಅಹರಭಿಸಂಭವತಿ, ಅಹ್ನಾ ಹೇತುನಾ ಆಪೂರ್ಯಮಾಣಪಕ್ಷಮಿತಿ । ತಥಾ ಚ ಲೋಕೇ ಪ್ರಸಿದ್ಧೇಷ್ವಪಿ ಆತಿವಾಹಿಕೇಷು ಏವಂಜಾತೀಯಕ ಉಪದೇಶೋ ದೃಶ್ಯತೇ । ಗಚ್ಛ ತ್ವಮಿತೋ ಬಲವರ್ಮಾಣಮ್, ತತೋ ಜಯಸಿಂಹಮ್, ತತಃ ಕೃಷ್ಣಗುಪ್ತಮಿತಿ । ಅಪಿ ಚ ಉಪಕ್ರಮೇ "ತೇಽರ್ಚಿರಭಿಸಂಭವನ್ತಿ" (ಬೃ. ೬–೨–೧೫) ಇತಿ ಸಂಬನ್ಧಮಾತ್ರಮುಕ್ತಮ್, ನ ಸಂಬನ್ಧವಿಶೇಷಃ ಕಶ್ಚಿತ್ । ಉಪಸಂಹಾರೇ ತು "ಸ ಏತಾನ್ ಬ್ರಹ್ಮ ಗಮಯತಿ" (ಛಾಂ. ೪–೧೫–೬) ಇತಿ ಸಂಬನ್ಧವಿಶೇಷೋಽತಿವಾಹ್ಯಾತಿವಾಹಕತ್ವಲಕ್ಷಣ ಉಕ್ತಃ । ತೇನ ಸ ಏವ ಉಪಕ್ರಮೇಽಪಿ ಇತಿ ನಿರ್ಧಾರ್ಯತೇ । ಸಂಪಿಣ್ಡಿತಕರಣತ್ವಾದೇವ ಚ ಗನ್ತೄಣಾಂ ನ ತತ್ರೋಪಭೋಗಸಂಭವಃ । ಲೋಕಶಬ್ದಸ್ತು ಅನುಪಭುಞ್ಜಾನೇಷ್ವಪಿ ಗನ್ತೃಷು ಗಮಯಿತುಂ ಶಕ್ಯತೇ । ಅನ್ಯೇಷಾಂ ತಲ್ಲೋಕವಾಸಿನಾಂ ಭೋಗಭೂಮಿತ್ವಾತ್ । ಅತಃ ಅಗ್ನಿಸ್ವಾಮಿಕಂ ಲೋಕಂ ಪ್ರಾಪ್ತಃ ಅಗ್ನಿನಾ ಅತಿವಾಹ್ಯತೇ । ವಾಯುಸ್ವಾಮಿಕಂ ಪ್ರಾಪ್ತೋ ವಾಯುನಾ ಇತಿ ಯೋಜಯಿತವ್ಯಮ್ ॥

(ಭಾಷ್ಯಾರ್ಥ)

(ಆಕ್ಷೇಪ):– ಬರಿಯ ಆ ಲಿಂಗವಿದ್ದರೆ ಗಮಕವಾಗಲಾರದು ; ಏಕೆಂದರೆ (ಅದಕ್ಕೆ) ನ್ಯಾಯವಿಲ್ಲವಲ್ಲ !

(ಪರಿಹಾರ):– ಇದೇನೂ ದೋಷವಲ್ಲ. ಮೊದಲನೆಯದಾಗಿ ಅರ್ಚಿರಾದಿ ಮಾರ್ಗದಿಂದ ಹೋಗುತ್ತಾರಲ್ಲ, ಅವರು ದೇಹವನ್ನು ಬಿಟ್ಟಿರುವದರಿಂದ(ಅವರ) ಕರಣಗಳು ಒಟ್ಟುಗೂಡಿ ಮುದ್ದೆಯಾಗಿಬಿಟ್ಟಿರುವದರಿಂದ ಅಸ್ವತಂತ್ರರಾಗಿರುತ್ತಾರೆ. ಅರ್ಚಿರಾದಿಗಳೂ ಅಚೇತನವಾಗಿರುವದರಿಂದ ಅಸ್ವತಂತ್ರವಾಗಿರುತ್ತವೆ. ಆದ್ದರಿಂದ ಅರ್ಚಿರಾದ್ಯಭಿಮಾನಿಗಳಾದ ಚೇತನರಾದ ದೇವತೆಗಳು (ಅವರನ್ನು) ಕರೆದುಕೊಂಡುಹೋಗುವದಕ್ಕೆ ನಿಯುಕ್ತರಾಗಿರುತ್ತಾರೆ ಎಂದು ತಿಳಿಯಬೇಕಾಗಿದೆ. ಲೋಕದಲ್ಲಿಯೂ ಮತ್ತರು, ಮೂರ್ಛಿತರು ಮುಂತಾದವರು (ತಮ್ಮ) ಕರಣಗಳು ಒಟ್ಟುಗೂಡಿ ಘುದ್ದೆಯಾಗಿಬಿಟ್ಟಿರುವದರಿಂದ ಮತ್ತೊಬ್ಬರು ಪ್ರೇರಿಸಿದ ದಾರಿಯಲ್ಲಿ ಹೋಗುವವರಾಗುತ್ತಾರೆ. ವ್ಯವಸ್ಥಿತವಾಗಿಲ್ಲದ್ದರಿಂದಲೂ ಅರ್ಚಿರಾದಿಗಳು ಮಾರ್ಗಚಿಹ್ನಗಳೆನ್ನುವದಕ್ಕೆ ಬರುವದಿಲ್ಲ. ಏಕೆಂದರೆ ರಾತ್ರಿಯಲ್ಲಿ ಸತ್ತವನಿಗೆ ಹಗಲಿನ ಸ್ವರೂಪವನ್ನು ಪಡೆಯುವದು ಆಗುವಂತಿಲ್ಲ; (ಹಗ

ಲಾಗುವವರೆಗೂ) ಕಾದುಕೊಂಡಿರಲಿ ಎಂಬುವಂತೆಯೂ ಇಲ್ಲವೆಂದು (ಹಿಂದೆ ೪-೨-೧೯ರಲ್ಲಿ) ಹೇಳಿರುತ್ತೇವೆ. ದೇವತಾರೂಪರಾದ (ಅರ್ಚಿರಾದಿಗಳು) ಯಾವಾಗಲೂ ಇದ್ದುಕೊಂಡಿರುವದರಿಂದ (ಅವರಪಕ್ಷದಲ್ಲಿ) ಈ ದೋಷವುಂಟಾಗುವದಿಲ್ಲ. ಅವರನ್ನು ಅರ್ಚಿರಾದಿಶಬ್ದಗಳಿಂದ ಕರೆದಿರುವದು ಅರ್ಚಿರಾದಿಗಳ ಅಭಿಮಾನಗಳೆಂಬುದರಿಂದ ಯುಕ್ತವಾಗುತ್ತದೆ. "ಅರ್ಚಿಯಿಂದ ಅಹಸ್ಸನ್ನು" (ಛಾಂ. ೪-೧೫-೫) ಮುಂತಾದ ನಿರ್ದೇಶವೋ ಎಂದರೆ (ಅರ್ಚಿರಾದಿಗಳು) ಆತಿವಾಹಿಕರೆಂದಾದರೂ ವಿರುದ್ಧವಲ್ಲ; (ಏಕೆಂದರೆ) 'ಅರ್ಚಿ ಎಂಬ ಹೇತುವಿನಿಂದ ಅಹಸ್ಸನ್ನು ಪಡೆಯುತ್ತಾನೆ; ಅಹಸ್ಸೆಂಬ ಹೇತುವಿನಿಂದ ಆಪೂರ್ಯಮಾಣಪಕ್ಷವನ್ನು (ಸೇರುತ್ತಾನೆ) ಎಂದು (ಅರ್ಥವನ್ನು ಮಾಡಬಹುದಾಗಿದೆ). ಇದಕ್ಕನುಗುಣವಾಗಿ ಲೋಕದಲ್ಲಿ ಪ್ರಸಿದ್ಧರಾಗಿರುವ ಆತಿವಾಹಿಕರ (ವಿಷಯ)ದಲ್ಲಿ ಈ ಜಾತಿಯ ಉಪದೇಶವನ್ನು (ಮಾಡುವದೂ) ಕಂಡುಬರುತ್ತದೆ: "ಇಲ್ಲಿಂದ ಬಲವರ್ಮನ ಬಳಿಗೆ ಹೋಗು, ಅಲ್ಲಿಂದ ಜಯಸಿಂಹನ ಬಳಿಗೆ (ಹೋಗು), ಅಲ್ಲಿಂದ ಕೃಷ್ಣಗುಪ್ತನ ಬಳಿಗೆ (ಹೋಗು)" (ಎಂದು ಹೇಳುತ್ತಾರೆ). ಇದಲ್ಲದೆ ಉಪಕ್ರಮದಲ್ಲಿ "ಅವರು ಅರ್ಚಿಯನ್ನು ಸೇರುತ್ತಾರೆ" (ಬೃ. ೬-೨-೧೫) ಎಂದು ಸಂಬಂಧಸಾಮಾನ್ಯವನ್ನು ಹೇಳಿದೆಯೇ ಹೊರತು ಯಾವದಾದರೊಂದು ಗೊತ್ತಾದ ಸಂಬಂಧವನ್ನು ಹೇಳಿಲ್ಲ; ಆದರೆ ಉಪಸಂಹಾರದಲ್ಲಿ "ಅವನು ಇವರನ್ನು ಬ್ರಹ್ಮವನ್ನು ಸೇರಿಸುತ್ತಾನೆ" (ಛಾಂ. ೪-೧೫-೬) ಎಂದು ಅತಿವಾಹ್ಯಾತಿವಾಹಕತ್ವರೂಪವಾದ ವಿಶೇಷವಾದ ಸಂಬಂಧವನ್ನು ಹೇಳಿರುತ್ತದೆ. ಆದರಿಂದ ಆ (ಸಂಬಂಧವೇ) ಉಪಕ್ರಮದಲ್ಲಿಯೂ ಇರಬೇಕು ಎಂದು ನಿಶ್ಚಯಿಸಬಹುದಾಗಿದೆ. ಹೋಗುವವರಿಗೆ ಕರಣಗಳು ಒಟ್ಟುಗೂಡಿ ಮುದ್ದೆಯಾಗಿರುವದರಿಂದಲೇ ಅಲ್ಲಿ ಉಪಭೋಗವು ಸಂಭವಿಸುವದಿಲ್ಲ. ಲೋಕಶಬ್ದವನ್ನಾದರೋ (ಅರ್ಚಿರಾದಿಮಾರ್ಗದಲ್ಲಿ) ಹೋಗುವವರು (ಅಲ್ಲಿ) ಉಪಭೋಗಮಾಡದೆ ಇದ್ದರೂ ಹೊಂದಿಸುವದಕ್ಕೆ ಬರುತ್ತದೆ; ಏಕೆಂದರೆ ಆ ಲೋಕದಲ್ಲಿರುವ ಬೇರೆಯ ನಿವಾಸಿಗಳಿಗೆ (ಅವು) ಭೋಗಭೂಮಿಯಾಗಿರುತ್ತವೆ. ಆದ್ದರಿಂದ ಅಗ್ನಿಸ್ವಾಮಿಕವಾದ ಲೋಕವನ್ನು ಸೇರಿದವನನ್ನು ಅಗ್ನಿಯು ಕರೆದುಕೊಂಡು ಹೋಗುತ್ತಾನೆ, ವಾಯುಸ್ವಾಮಿಕವಾದ (ಲೋಕವನ್ನು ಸೇರಿದವನನ್ನು) ವಾಯುವು (ಕರೆದುಕೊಂಡು ಹೋಗುತ್ತಾನೆ) ಎಂದು ಯೋಜನೆಮಾಡಬೇಕು.

**ವೈದ್ಯುತೇನೈವ ತತಸ್ತಚ್ಛ್ರುತೇಃ ॥ ೬ ॥**

೬. ಅಲ್ಲಿಂದ ವೈದ್ಯುತ(ಪುರುಷನಿಂದಲೇ ಅತಿವಾಹಿತರಾಗಿ) ಹೋಗುತ್ತಾರೆ; ಏಕೆಂದರೆ ಆ ಶ್ರುತಿಯಿದೆ.

# ವಿದ್ಯುಲ್ಲೋಕದಿಂದ ಅಮಾನವಪುರುಷನೇ ಮುಂದಕ್ಕೆ ಒಯ್ಯುತ್ತಾನೆ

(ಭಾಷ್ಯ)

೫೭೨. ಕಥಂ ಪುನರಾತಿವಾಹಿಕತ್ವಪಕ್ಷೇ ವರುಣಾದಿಷು ತತ್ಸಂಭವಃ? ವಿದ್ಯುತೋ ಹ್ಯಧಿ ವರುಣಾದಯಃ ಉಪಕ್ಷಿಪ್ತಾಃ । ವಿದ್ಯುತಸ್ತ್ವನನ್ತರಮ್ ಆ ಬ್ರಹ್ಮಪ್ರಾಪ್ತೇಃ ಅಮಾನವಸ್ಯೈವ ಪುರುಷಸ್ಯ ಗಮಯಿತೃತ್ವಂ ಶ್ರುತಮಿತಿ। ಅತ ಉತ್ತರಂ ಪಠತಿ- (ವೈದ್ಯುತೇನೈವ ತತಸ್ತಚ್ಛ್ರುತೇಃ। ತತೋ ವಿದ್ಯುದಭಿಸಂಭವನಾದೂರ್ಧ್ವಂ ವಿದ್ಯುದನನ್ತರವರ್ತಿನೈವ ಅಮಾನವೇನ ಪುರುಷೇಣ ವರುಣಲೋಕಾದಿಷು ಅತಿವಾಹ್ಯಮಾನಾಃ ಬ್ರಹ್ಮಲೋಕಂ ಗಚ್ಛನ್ತಿ ಇತ್ಯವಗನ್ತವ್ಯಮ್ । "ತಾನ್ ವೈದ್ಯುತಾತ್ ಪುರುಷೋಽಮಾನವಃ ಸ[1] ಏತ್ಯ ಬ್ರಹ್ಮಲೋಕಂ ಗಮಯತಿ (? ಬೃ. ೬-೨-೧೫) ಇತಿ ತಸ್ಯೈವ ಗಮಯಿತೃತ್ವಶ್ರುತೇಃ। ವರುಣಾದಯಸ್ತು ತಸ್ಯೈವ ಅಪ್ರತಿಬನ್ಧಕರಣೇನ ಸಾಹಾಯ್ಯಾನುಷ್ಠಾನೇನ ವಾ ಕೇನಚಿತ್ ಅನುಗ್ರಾಹಕಾ ಇತ್ಯವಗನ್ತವ್ಯಮ್ । ತಸ್ಮಾತ್ ಸಾಧೂಕ್ತಮ್ ಆತಿವಾಹಿಕಾ ದೇವತಾತ್ಮಾನೋಽರ್ಚಿರಾದಯಃ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :– (ಇವರು) ಆತಿವಾಹಿಕರೆಂಬ ಪಕ್ಷದಲ್ಲಿ ವರುಣಾದಿಗಳಲ್ಲಿ ಅದು ಹೇಗೆ ಸಂಭವಿಸಬೇಕು? ವಿದ್ಯುತ್ತಿನಮೇಲೆ ವರುಣಾದಿಗಳನ್ನು ಇಡಬೇಕೆಂದು (೪-೩-೩ರಲ್ಲಿ ಹೇಳಿದ್ದಾಯಿತು). ಆದರೆ ವಿದ್ಯುತ್ತಿನಿಂದ ಬ್ರಹ್ಮಪ್ರಾಪ್ತಿಯಾಗುವವರೆಗೂ ಅಮಾನವಪುರುಷನೇ ಕರೆದುಕೊಂಡು ಹೋಗುವನೆಂದು ಶ್ರುತಿಯುಲ್ಲಿದೆಯಲ್ಲ! ಇದಕ್ಕೆ ಉತ್ತರವನ್ನು ಹೇಳುತ್ತಾರೆ: ('ವೈದ್ಯುತೇನೈವ ತತಸ್ತಚ್ಛ್ರುತೇಃ') ಅಲ್ಲಿಂದ ವೈದ್ಯುತ(ಪುರುಷನಿಂದಲೇ ಅತಿವಾಹಿತವಾಗಿ ಹೋಗುತ್ತಾರೆ; ಏಕೆಂದರೆ ಹಾಗೆಂದು ಶ್ರುತಿಯಿದೆ). ಅಲ್ಲಿಂದ ಎಂದರೆ ವಿದ್ಯುತ್ತನ್ನು ಸೇರಿದಮೇಲೆ ವಿದ್ಯುತ್ತಿನ ಆಮೇಲೆ ಇರುವ ಅಮಾನವಪುರುಷನಿಂದಲೇ ವರುಣಲೋಕವೇ ಮುಂತಾದವುಗಳಲ್ಲಿ ಅತಿವಾಹಿತರಾಗಿ ಬ್ರಹ್ಮಲೋಕವನ್ನು ಸೇರುತ್ತಾನೆ ಎಂದು ನಿಶ್ಚಯಿಸಬೇಕು. ಅವರನ್ನು ವಿದ್ಯುಲ್ಲೋಕದಿಂದ ಆಮಾನವಪುರುಷನಿದಾನಲ್ಲ, ಅವನು ಬಂದು ಬ್ರಹ್ಮಲೋಕವನ್ನು

---

1. ಅಚ್ಚಿನಪುಸ್ತಕದಲ್ಲಿ "ಸ ಏತ್ಯ" ಎಂದೇ ಇದೆ; ಅನುವಾದವನ್ನೂ ಟಿಪ್ಪಣಿಯನ್ನೂ ನೋಡಿ.

ಮುಟ್ಟಿಸುತ್ತಾನೆ" (ಬೃ. ?)[1] ಎಂದು ಅವನೇ ಕರೆದುಕೊಂಡುಹೋಗುವವನೆಂದು ಶ್ರುತಿಯಿರುವದರಿಂದ (ಹೀಗೆ ನಿಶ್ಚಯಿಸಬೇಕು). ವರುಣಾದಿಗಳಾದರೋ ಅವನಿಗೇ ಅಡ್ಡಿಮಾಡದಿರುವದರಿಂದಲೋ ಯಾವದೋ ಒಂದು ಸಹಾಯವನ್ನು ಮಾಡುವದರಿಂದಲೋ ಅನುಗ್ರಾಹಕರಾಗಿರುತ್ತಾರೆಂದು ನಿಶ್ಚಯಿಸಬೇಕು. ಆದ್ದರಿಂದ ಅರ್ಚಿರಾದಿಗಳು ಆತಿವಾಹಿಕರಾದ ದೇವತಾತ್ಮರು ಎಂದು ಹೇಳಿದ್ದು ಸರಿಯಾಯಿತು.

## ೫. ಕಾರ್ಯಾಧಿಕರಣ (ಸೂ. ೭–೧೪)

(ಅಮಾನವಪುರುಷನು ಕಾರ್ಯಬ್ರಹ್ಮಕ್ಕೇ ಒಯ್ಯುತ್ತಾನೆ)

**ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ‖ ೭ ‖**

೭. ಕಾರ್ಯ(ಬ್ರಹ್ಮವನ್ನು ಸೇರಿಸುತ್ತಾನೆಂದು) ಬಾದರಿ (ಹೇಳುತ್ತಾನೆ) ; ಏಕೆಂದರೆ ಅದಕ್ಕೆ ಗತಿಯು ಹೊಂದುತ್ತದೆ.

## ಕಾರ್ಯಬ್ರಹ್ಮಕ್ಕೇ ಉಪಾಸಕರು ಹೋಗುತ್ತಾರೆ

(ಭಾಷ್ಯ)

೫೭೩. "ಸ ಏತಾನ್ ಬ್ರಹ್ಮ ಗಮಯತಿ" (ಛಾಂ. ೪–೧೫–೫) ಇತ್ಯತ್ರ ವಿಚಿಕಿತ್ಸ್ಯತೇ, ಕಿಂ ಕಾರ್ಯಮ್ ಅಪರಂ ಬ್ರಹ್ಮ ಗಮಯತಿ, ಆಹೋಸ್ವಿತ್ ಪರಮೇವಾವಿಕೃತಂ ಮುಖ್ಯಂ ಬ್ರಹ್ಮ ಇತಿ ? ಕುತಃ ಸಂಶಯಃ ? ಬ್ರಹ್ಮಶಬ್ದಪ್ರಯೋಗಾತ್, ಗತಿಶ್ರುತೇಶ್ಚ । ತತ್ರ ಕಾರ್ಯಮೇವ ಸಗುಣಮ್ ಅಪರಂ ಬ್ರಹ್ಮ ಏನಾನ್ ಗಮಯತಿ ಅಮಾನವಃ ಪುರುಷಃ ಇತಿ ಬಾದರಿರಾಚಾರ್ಯೋ ಮನ್ಯತೇ। ಕುತಃ ? ಅಸ್ಯ ಗತ್ಯುಪಪತ್ತೇಃ । ಅಸ್ಯ ಹಿ ಕಾರ್ಯಬ್ರಹ್ಮಣೋ ಗನ್ತವ್ಯತ್ವಮುಪಪದ್ಯತೇ ಪ್ರದೇಶವತ್ತ್ವಾತ್ । ನ ತು ಪರಸ್ಮಿನ್

---

1. ಈ ಶ್ರುತಿಯನ್ನು ರತ್ನಪ್ರಭಾವ್ಯಾಖ್ಯಾನಕ್ಕನುಗುಣವಾಗಿ ಬರೆದುಕೊಂಡಿದೇವೆ; ಅಚ್ಚಿನ ಪುಸ್ತಕಗಳಲ್ಲಿ ಹೀಗೆಯೇ ಇವೆ. ಆದರೆ ಬೃ. ೬–೨–೧೫ರಲ್ಲಿ "ತಾನ್ ವೈದ್ಯುತಾನ್ ಪುರುಷೋ ಮಾನಸ ಏತ್ಯ ಬ್ರಹ್ಮಲೋಕಾನ್ ಗಮಯತಿ" (ಆ ವಿದ್ಯುಲ್ಲೋಕಕ್ಕೆ ಬಂದವರನ್ನು ಮಾನಸಪುರುಷನು ಬಂದು ಬ್ರಹ್ಮಲೋಕಗಳಿಗೆ ಕರೆದುಕೊಂಡು ಹೋಗುತ್ತಾನೆ) ಎಂದಿದೆ. ಭಾಷ್ಯವೂ ಹಾಗೆಯೇ ಇದೆ. ಭಾಮತೀನ್ಯಾಯನಿರ್ಣಯಗಳಲ್ಲಿ ಯಾವ ಪಾಠವನ್ನು ಒಪ್ಪಿದೆ ಎಂಬುದು ಗೊತ್ತಾಗುವದಿಲ್ಲ. ಸೂತ್ರಭಾಷ್ಯದಲ್ಲಿ ರತ್ನಪ್ರಭಾವ್ಯಾಖ್ಯಾನಸಮ್ಮತವಾದ ಪಾಠವೇ ಇತ್ತೋ, ಉಪನಿಷತ್ತಿನ ಪಾಠವಿದ್ದು ಲೇಖಕರು ತಿದ್ದಿ ಬರೆದುಕೊಂಡಿರುತ್ತಾರೋ ತಿಳಿಯದು.

ಬ್ರಹ್ಮಣಿ ಗನ್ತೃತ್ವಂ ಗನ್ತವ್ಯತ್ವಂ ಗತಿರ್ವಾ ಅವಕಲ್ಪತೇ । ಸರ್ವಗತತ್ವಾತ್ ಪ್ರತ್ಯಗಾತ್ಮತ್ವಾಚ್ಚ ಗನ್ತೄಣಾಮ್ ॥

(ಭಾಷ್ಯಾರ್ಥ)

"ಅವನು ಇವರನ್ನು ಬ್ರಹ್ಮವನ್ನು ಸೇರಿಸುತ್ತಾನೆ" (ಛಾಂ. ೪-೧೫-೫) ಎಂಬಲ್ಲಿ ಸಂಶಯುವಾಗುತ್ತದೆ. ಕಾರ್ಯವಾದ ಅಪರಬ್ರಹ್ಮವನ್ನು ಸೇರಿಸು ತ್ತಾನೊ, ಅಥವಾ ವಿಕಾರವಾಗದ ಮುಖ್ಯವಾದ ಪರಬ್ರಹ್ಮವನ್ನೇ ಸೇರಿಸು ತ್ತಾನೊ ?

(ಪ್ರಶ್ನೆ):- ಸಂಶಯವೇಕೆ ?

(ಉತ್ತರ):- ಬ್ರಹ್ಮಶಬ್ದವನ್ನು ಪ್ರಯೋಗಿಸಿರುವದರಿಂದಲೂ ಗತಿಶ್ರುತಿ ಯಿರುವದರಿಂದಲೂ (ಸಂಶಯುವುಂಟಾಗುತ್ತದೆ).

ಇಲ್ಲಿ ಕಾರ್ಯ(ಬ್ರಹ್ಮವನ್ನೇ), ಸಗುಣವಾದ ಅಪರ(ಬ್ರಹ್ಮ)ವನ್ನೇ ಅಮಾನವಪುರುಷನು ಇವರನ್ನು ಸೇರಿಸುತ್ತಾನೆ ಎಂದು ಆಚಾರ್ಯಬಾದರಿ ಯು ಅಭಿಪ್ರಾಯಪಡುತ್ತಾನೆ. ಏಕೆ? ಎಂದರೆ ಅದಕ್ಕೆ ಗತಿಯು ಹೊಂದು ವದರಿಂದ; ಈ ಕಾರ್ಯಬ್ರಹ್ಮಕ್ಕಲ್ಲವೆ, (ಅದು) ಪ್ರದೇಶವುಳ್ಳದ್ದಾದ್ದರಿಂದ ಗಂತವ್ಯತ್ವವೆಂಬುದು ಹೊಂದುತ್ತದೆ? ಆದರೆ ಪರಬ್ರಹ್ಮದಲ್ಲಿ ಗಂತೃತ್ವವಾಗಲಿ ಗಂತವ್ಯತ್ವವಾಗಲಿ ಗತಿಯಾಗಲಿ ಹೊಂದುವದಿಲ್ಲ. ಏಕೆಂದರೆ (ಅದು ಸರ್ವಗತ ವಾಗಿದೆ, ಗಂತೃಗಳ ಪ್ರತ್ಯಗಾತ್ಮನೇ (ಆಗಿರುತ್ತದೆ).

**ವಿಶೇಷಿತತ್ವಾಚ್ಚ ॥ ೮ ॥**

೮. ವಿಶೇಷಣವನ್ನು ಕೊಟ್ಟಿರುವದರಿಂದಲೂ (ಇದು ಕಾರ್ಯಬ್ರಹ್ಮವೇ).

## ಶ್ರುತಿಯಲ್ಲಿರುವ ವಿಶೇಷಣವು ಕಾರ್ಯಬ್ರಹ್ಮಕ್ಕೆ ಹೊಂದುತ್ತದೆ

(ಭಾಷ್ಯ)

೫೭೪. "ಬ್ರಹ್ಮಲೋಕಾನ್ ಗಮಯತಿ। ತೇ ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸನ್ತಿ" (ಬೃ. ೬-೨-೧೫) ಇತಿ ಚ ಶ್ರುತ್ಯನ್ತರೇ ವಿಶೇಷಿತತ್ವಾತ್ ಕಾರ್ಯಬ್ರಹ್ಮವಿಷಯೈವ ಗತಿರಿತಿ ಗಮ್ಯತೇ। ನ ಹಿ ಬಹುವಚ ನೇನ ವಿಶೇಷಣಂ ಪರಸ್ಮಿನ್ ಬ್ರಹ್ಮಣಿ ಅವಕಲ್ಪತೇ। ಕಾರ್ಯೇ ತು ಅವಸ್ಥಾ

ಭೇದೋಪಪತ್ತೇಃ ಸಂಭವತಿ ಬಹುವಚನಮ್ । ಲೋಕಶ್ರುತಿರಪಿ ವಿಕಾರಗೋಚರಾಯಾಮೇವ ಸಂನಿವೇಶವಿಶಿಷ್ಟಾಯಾಂ ಭೋಗಭೂಮೌ ಆಞ್ಜಸೀ । ಗೌಣೀ ತ್ವನ್ಯತ್ರ "ಬ್ರಹ್ಮೈವ ಲೋಕ ಏಷ ಸಮ್ರಾಟ್" (ಬೃ.೪-೪-೨೩) ಇತ್ಯಾದಿಷು । ಅಧಿಕರಣಾಧಿಕರ್ತವ್ಯತಾನಿರ್ದೇಶೋಽಪಿ ಪರಸ್ಮಿನ್ ಬ್ರಹ್ಮಣಿ ಅನಾಞ್ಜಸಃ ಸ್ಯಾತ್ । ತಸ್ಮಾತ್ ಕಾರ್ಯವಿಷಯಮೇವೇದಂ ನಯನಮ್ ॥

(ಭಾಷ್ಯಾರ್ಥ)

"ಬ್ರಹ್ಮಲೋಕಗಳಿಗೆ ಕೊಂಡೊಯ್ಯುತ್ತಾನೆ. ಅವರು ಆ ಬ್ರಹ್ಮಲೋಕಗಳಲ್ಲಿ ಉತ್ಕೃಷ್ಟವಾಗಿ ಉತ್ಕೃಷ್ಟವಾದ ಅನೇಕ (ಸಂವತ್ಸರಗಳ)ವರೆಗೆ ವಾಸವಾಗಿರುತ್ತಾರೆ" (ಬೃ. ೬-೨-೧೫) ಎಂಬ ಶ್ರುತ್ಯಂತರದಲ್ಲಿ ವಿಶೇಷಣವನ್ನು ಕೊಟ್ಟಿರುವದರಿಂದ (ಈ) ಗತಿಯು ಕಾರ್ಯಬ್ರಹ್ಮದ ವಿಷಯವೇ ಎಂದು ಗೊತ್ತಾಗುತ್ತದೆ. ಬಹುವಚನದ ವಿಶೇಷಣವನ್ನು (ಕೊಟ್ಟಿರುವದು) ಪರಬ್ರಹ್ಮಕ್ಕೆ ಹೊಂದುವದಿಲ್ಲವಷ್ಟೆ. ಕಾರ್ಯ(ಬ್ರಹ್ಮಕ್ಕಾದರೆ) ಬೇರೆಬೇರೆಯ ಅವಸ್ಥೆಗಳಿರಬಹುದಾದ್ದರಿಂದ ಬಹುವಚನವೂ ಆಗಬಹುದು. 'ಲೋಕ' ಎಂಬ ಶ್ರುತಿಯೂ ಕಾರ್ಯವಿಷಯಕವಾದ ಸಂನಿವೇಶದಿಂದೊಡಗೂಡಿದ ಭೋಗಭೂಮಿಗೇ ಮುಖ್ಯಾರ್ಥದಲ್ಲಿ (ಹೊಂದುತ್ತದೆ)[1] "ಸಮ್ರಾಜನೆ, ಇದು ಬ್ರಹ್ಮವೆಂಬ ಲೋಕವೇ" (ಬೃ.೪-೪-೨೩) ಮುಂತಾದ ಕಡೆಯಲ್ಲಿ ಗೌಣವಾಗಿರುತ್ತದೆ. ಅಧಿಕರಣ, ಅಧಿಕರ್ತವ್ಯ -ಎಂಬ ನಿರ್ದೇಶವೂ[2] ಪರಬ್ರಹ್ಮಕ್ಕೆ ಮುಖ್ಯಾರ್ಥದಲ್ಲಿ ಹೊಂದುವದಿಲ್ಲ. ಆದ್ದರಿಂದ ಈ (ಅಮಾನವನು) ಒಯ್ಯುವದೆಂಬುದು ಕಾರ್ಯ(ಬ್ರಹ್ಮದ) ವಿಷಯವೇ.

**ಸಾಮೀಪ್ಯಾತ್ತು ತದ್ವ್ಯಪದೇಶಃ ॥ ೯ ॥**

೯. ಆದರೆ ಸಾಮೀಪ್ಯದಿಂದ ಆ ವ್ಯಪದೇಶವಾಗುತ್ತದೆ.

## ಅಪರಬ್ರಹ್ಮವನ್ನು ಬ್ರಹ್ಮವೆಂದು ಕರೆಯಬಹುದು

(ಭಾಷ್ಯ)

೫೭೫. ನನು ಕಾರ್ಯವಿಷಯೇಽಪಿ ಬ್ರಹ್ಮಶಬ್ದೋ ನೋಪಪದ್ಯತೇ ಸಮನ್ವಯೇ ಹಿ ಸಮಸ್ತಸ್ಯ ಜಗತೋ ಜನ್ಮಾದಿಕಾರಣಂ ಬ್ರಹ್ಮ ಇತಿ

1. ವಿಶೇಷಿತತ್ವಾಚ್ಚ ಎಂಬುದಕ್ಕೆ ಇವೆಲ್ಲ ಅರ್ಥಗಳು.

2. ಯಾವದರಲ್ಲಿರುವದೋ ಅದು ಅಧಿಕರಣ, ಯಾರು ಇರುವರೋ ಅವರು ಅಧಿಕರ್ತವ್ಯರು.

ಸ್ಥಾಪಿತಮ್ ಇತಿ। ಅತ್ರೋಚ್ಯತೇ (ಸಾಮೀಪ್ಯಾತ್ತು ತದ್ವ್ಯಪದೇಶಃ)। ತುಶಬ್ದ ಆಶಙ್ಕಾವ್ಯಾವೃತ್ತ್ಯರ್ಥಃ। ಪರಬ್ರಹ್ಮಸಾಮೀಪ್ಯಾತ್ ಅಪರಸ್ಯ ಬ್ರಹ್ಮಣ ಸ್ತಸ್ಮಿನ್ನಪಿ ಬ್ರಹ್ಮಶಬ್ದಪ್ರಯೋಗೋ ನ ವಿರುಧ್ಯತೇ। ಪರಮೇವ ಹಿ ಬ್ರಹ್ಮ ವಿಶುದ್ಧೋಪಾಧಿಸಂಬನ್ಧಂ ಕ್ವಚಿತ್ ಕೈಶ್ಚಿತ್ ವಿಕಾರಧರ್ಮೈರ್ಮನೋಮಯ ತ್ವಾದಿಭಿಃ ಉಪಾಸನಾಯ ಉಪದಿಶ್ಯಮಾನಮ್ ಅಪರಮಿತಿ ಸ್ಥಿತಿಃ ॥

(ಭಾಷ್ಯಾರ್ಥ)

(ಆಕ್ಷೇಪ) :– ಕಾರ್ಯವಿಷಯದಲ್ಲಿಯೂ ಬ್ರಹ್ಮಶಬ್ದವು ಹೊಂದುವ ದಿಲ್ಲವಲ್ಲ! ಸಮನ್ವಯ(ದ ಅಧ್ಯಾಯದಲ್ಲಿ) ಸಮಸ್ತಜಗತ್ತಿಗೂ ಬ್ರಹ್ಮವು ಜನ್ಮಾದಿಗಳ ಕಾರಣವೆಂದು ಸ್ಥಾಪನೆಮಾಡಿದ್ದಾಯಿತಷ್ಟೆ.[1]

(ಪರಿಹಾರ) :– ಇದಕ್ಕೆ ಹೇಳುತ್ತೇವೆ. ('ಸಾಮೀಪ್ಯಾತ್ತು ತದ್ವ್ಯಪ ದೇಶಃ' ಸಾಮೀಪ್ಯದಿಂದಲೇ ಆ ವ್ಯಪದೇಶವು). ತುಶಬ್ದವು ಆಶಂಕೆಯನ್ನು ತಳ್ಳಿಹಾಕುವದಕ್ಕೆ. ಅಪರಬ್ರಹ್ಮವು ಬ್ರಹ್ಮಕ್ಕೆ ಹತ್ತಿರವಿರುವದರಿಂದ ಅದರಲ್ಲಿ ಯೂ ಬ್ರಹ್ಮಶಬ್ದಪ್ರಯೋಗವು ವಿರುದ್ಧವಲ್ಲ. **ಪರಬ್ರಹ್ಮವೇ ವಿರುದ್ಧವಾದ ಉಪಾಧಿಯ ಸಂಬಂಧದಿಂದ ಕೆಲವು ಕಡೆಗಳಲ್ಲಿ ಕೆಲಕೆಲವು ವಿಕಾರ ಗಳ ಧರ್ಮಗಳಾದ ಮನೋಮಯತ್ವವೇ ಮುಂತಾದವುಗಳಿಂದ ಕೂಡಿ ಉಪಾಸನೆಗೆಂದು ಉಪದೇಶಮಾಡಿರುವಾಗ ಅಪರ(ವೆನಿಸು ತ್ತದೆ) ಎಂಬುದು ಸ್ಥಿತಿಯು.**

**ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್** ॥೧೦॥

೧೦. ಕಾರ್ಯವು ಮುಗಿಯಲು ಅದರ ಅಧ್ಯಕ್ಷನಿಂದೊಡ ಗೂಡಿ ಅದಕ್ಕಿಂತ ಹೆಚ್ಚಿನ (ಸ್ಥಾನವನ್ನು ಸೇರುತ್ತಾರೆ). ಏಕೆಂದರೆ (ಹಾಗೆಂದು) ಶ್ರುತಿಯ ಅಭಿಧಾನವಿದೆ.

## ಕಾರ್ಯಬ್ರಹ್ಮವನ್ನು ಪಡೆದವರಿಗೆ ಅನಾವೃತ್ತಿಯಾಗುವ ಬಗೆ

(ಭಾಷ್ಯ)

೫೭೬. ನನು ಕಾರ್ಯಪ್ರಾಪ್ತೌ ಅನಾವೃತ್ತಿಶ್ರವಣಂ ನ ಘಟತೇ। ನ ಹಿ ಪರಸ್ಮಾದ್ ಬ್ರಹ್ಮಣೋಽನ್ಯತ್ರ ಕ್ವಚಿನ್ನಿತ್ಯತಾಂ ಸಂಭಾವಯನ್ತಿ। ದರ್ಶಯತಿ ಚ ದೇವಯಾನೇನ ಪಥಾ ಪ್ರಸ್ಥಿತಾನಾಮ್ ಅನಾವೃತ್ತಿಮ್ "ಏತೇನ ಪ್ರತಿಪದ್ಯ

1. ಕಾರಣವಾಗಿರಬೇಕಾದ ಬ್ರಹ್ಮವನ್ನು ಕಾರ್ಯವೆಂದು ಎಣಿಸುವದು ಹೇಗೆ?
2. ಛಾಂ. ೩–೧೪–೨ನ್ನು ನೋಡಿ.

ಮಾನಾ ಇಮಂ ಮಾನವಮಾವರ್ತಂ ನಾವರ್ತನ್ತೇ" (ಛಾಂ. ೪-೧೫-೬) ಇತಿ, "ತೇಷಾಮಿಹ ನ ಪುನರಾವೃತ್ತಿರಸ್ತಿ" (ಬೃ. ೬-೨-೧೫ ಮಾಂ ?)[1] "ತಯೋರ್ಧ್ವಮಾಯನ್ನಮೃತತ್ವಮೇತಿ" (ಛಾಂ. ೮-೬-೬) ಇತಿ ಚೇತ್[2] । ಅತ್ರ ಬ್ರೂಮಃ । (ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ।) ಕಾರ್ಯಬ್ರಹ್ಮಲೋಕಪ್ರಲಯಪ್ರತ್ಯುಪಸ್ಥಾನೇ ಸತಿ ತತ್ರೈವ ಉತ್ಪನ್ನಸಮ್ಯಗ್ದರ್ಶನಾಃ ಸನ್ತಸ್ತದಧ್ಯಕ್ಷೇಣ ಹಿರಣ್ಯಗರ್ಭೇಣ ಸಹ ಅತಃ ಪರಂ ಪರಿಶುದ್ಧಂ ವಿಷ್ಣೋಃ ಪರಮಂ ಪದಂ ಪ್ರತಿಪದ್ಯನ್ತ ಇತಿ। ಇತ್ಥಂ ಕ್ರಮಮುಕ್ತಿರನಾವೃತ್ತ್ಯಾದಿಶ್ರುತ್ಯಭಿಧಾನೇಭ್ಯೋಽಭ್ಯುಪಗನ್ತವ್ಯಾ। ನ ಹಿ ಅಞ್ಜಸೈವ ಗತಿಪೂರ್ವಿಕಾ ಪರಪ್ರಾಪ್ತಿಃ ಸಂಭವತಿ ಇತ್ಯುಪಪಾದಿತಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಕಾರ್ಯ(ಬ್ರಹ್ಮ)ವನ್ನು ಪಡೆಯುವದಾದರೆ ಅನಾವೃತ್ತಿಯು ಹೊಂದುವದಿಲ್ಲ; ಏಕೆಂದರೆ ಪರಬ್ರಹ್ಮವನ್ನು ಬಿಟ್ಟರೆ ಮಿಕ್ಕ(ಕಡೆಗಳಲ್ಲಿ) ಎಲ್ಲಿಯೂ ನಿತ್ಯತ್ವವು ಸಂಭಾವಿತವೆಂದು (ಯಾರೂ) ಎಣಿಸುವದಿಲ್ಲವಷ್ಟೆ. ಆದರೆ ದೇವಯಾನಮಾರ್ಗದಿಂದ ಹೊರಟವರಿಗೆ "ಇದರಿಂದ ಪಡೆದವರು ಈ ಮಾನವದ ಆವರ್ತವನ್ನು ಮರಳಿ ಪಡೆಯುವದಿಲ್ಲ" (ಛಾಂ.೪-೧೫-೬) ಎಂದೂ "ಅವರಿಗೆ ಇಲ್ಲಿಗೆ ಪುನರಾವೃತ್ತಿ ಇಲ್ಲ" (ಬೃ. ೬-೨-೧೫ ಮಾಂ ?), "ಆ (ನಾಡಿಯಿಂದ) ಮೇಲಕ್ಕೆ ಹೋಗುವವನು ಅಮೃತತ್ವವನ್ನು ಹೊಂದುತ್ತಾನೆ" (ಛಾಂ. ೮-೬-೬) ಎಂದೂ ಅನಾವೃತ್ತಿಯನ್ನು (ಶ್ರುತಿ) ಹೇಳುತ್ತದೆಯಲ್ಲ!

(ಪರಿಹಾರ) :- ಇದಕ್ಕೆ ಹೇಳುತ್ತೇವೆ. '(ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್') । ಕಾರ್ಯ(ಲೋಕ)ವು ಮುಗಿಯಲು ಅದರ ಅಧ್ಯಕ್ಷನೊಡನೆ ಅದಕ್ಕಿಂತ ಹೆಚ್ಚಿನ (ಸ್ಥಾನವನ್ನು ಸೇರುತ್ತಾರೆ); ಏಕೆಂದರೆ (ಹಾಗೆಂದು ಹೇಳಿದೆ). **ಕಾರ್ಯಬ್ರಹ್ಮಲೋಕದ ಪ್ರಲಯವು ಬಂದೊದಗಲು ಅಲ್ಲಿಯೇ ಸಮ್ಯಗ್ದರ್ಶನವುಂಟಾಗಿ ಅದರ ಅಧ್ಯಕ್ಷನಾದ ಹಿರಣ್ಯಗರ್ಭನೊಡನೆ ಅದಕ್ಕಿಂತ ಹೆಚ್ಚಿನ ಪರಿಶುದ್ಧವಾದ ವಿಷ್ಣುವಿನ ಪರಮಪದವನ್ನು ಸೇರುತ್ತಾರೆ[3]. ಹೀಗೆ ಕ್ರಮಮುಕ್ತಿ**ಯಾಗುವದೆಂದು ಅನಾ

---

1. ಇಲ್ಲೊಂದು 'ಇತಿ' ಬೇಕು; ಇದೇ ವಚನವನ್ನು ಛಾಂ. ೫-೧೦-೨ರ ಭಾಷ್ಯದಲ್ಲಿ ಉದಾಹರಿಸಿರುವದನ್ನೂ ಆ ಭಾಷ್ಯದಲ್ಲಿ ಇಹಶಬ್ದಕ್ಕೆ ಕೊಟ್ಟಿರುವ ಅರ್ಥವನ್ನೂ ನೋಡಿರಿ. ಬೃ. ಭಾ. ೪-೧೫-೬ರ ಭಾಷ್ಯವನ್ನು ನೋಡಿರಿ.

2. 'ಇತಿ ಚ' ಎಂದಿದ್ದರೆ ಚೆನ್ನಾಗಿ ಅನ್ವಯವಾಗುವದು. ಅಚ್ಚಿನ ಪುಸ್ತಕಗಳಲ್ಲೆಲ್ಲ ಚೇತ್ ಎಂದೇ ಪಾಠವಿದೆ.

3. ಕೆಲವರು ಹಿಂತಿರುಗುವವರೂ ಉಂಟೆಂದು ಛಾಂದೋಗ್ಯಬೃಹದಾರಣ್ಯಕಭಾಷ್ಯಗಳಲ್ಲಿ ಹೇಳಿದೆ; ಅದು ಜ್ಞಾನವುಂಟಾದವರ ವಿಷಯವೆಂದು ತಿಳಿಯಬೇಕು.

ವೃತ್ತಿಯೇ ಮುಂತಾದದ್ದನ್ನು (ತಿಳಿಸುವ) ಶ್ರುತಿಯ ಹೇಳಿಕೆಗಳಿಂದ ಒಪ್ಪಬೇಕು. ಏಕೆಂದರೆ ಮುಖ್ಯಾರ್ಥದಲ್ಲಿಯೇ ಗತಿಪೂರ್ವಕವಾಗಿ ಪರಪ್ರಾಪ್ತಿಯಾಗುವದೆಂಬುದು ಸಂಭವಿಸುವದಿಲ್ಲ ಎಂದು (ಆಗಲೇ) ಪ್ರತಿಪಾದಿಸಿದ್ದಾಗಿದೆ.

**ಸ್ಮೃತೇಶ್ಚ ॥ ೧೧ ॥**

೧೧. ಸ್ಮೃತಿಯಿಂದಲೂ (ಹೀಗೆಂದು ಒಪ್ಪಬೇಕು).

## ಕ್ರಮಮುಕ್ತಿಯನ್ನು ಹೇಳುವ ಸ್ಮೃತಿಯೂ ಇದೆ

(ಭಾಷ್ಯ)

೫೭೭ ಸ್ಮೃತಿರಪ್ಯೇತಮರ್ಥಮ್ ಅನುಜಾನಾತಿ –"ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ । ಪರಸ್ಯಾನ್ತೇ ಕೃತಾತ್ಮಾನಃ ಪ್ರವಿಶನ್ತಿ ಪರಂ ಪದಮ್" (?)[1] ಇತಿ । ತಸ್ಮಾತ್ ಕಾರ್ಯಬ್ರಹ್ಮವಿಷಯಾ ಗತಿಃ ಶ್ರೂಯತ ಇತಿ ಸಿದ್ಧಾನ್ತಃ ॥

(ಭಾಷ್ಯಾರ್ಥ)

"ಅವರೆಲ್ಲರೂ ಪ್ರತಿಸಂಚರವು ಪ್ರಾಪ್ತವಾಲು ಪರ(ನಾದ ಹಿರಣ್ಯಗರ್ಭನ) ಕೊನೆಯಲ್ಲಿ ಸಂಸ್ಕೃತಾತ್ಮರಾಗಿ ಪರಮಪದವನ್ನು ಹೊಗುತ್ತಾರೆ" (?) ಎಂಬ ಸ್ಮೃತಿಯೂ ಈ ಅರ್ಥವನ್ನು ಒಪ್ಪುತ್ತದೆ. ಆದ್ದರಿಂದ ಕಾರ್ಯಬ್ರಹ್ಮವಿಷಯದಲ್ಲಿಯೇ ಗತಿಯನ್ನು ಶ್ರುತಿಯಲ್ಲಿ ಹೇಳಿದೆ ಎಂದೇ ಸಿದ್ಧಾಂತವು.

**ಪರಂ ಜೈಮಿನಿರ್ಮುಖ್ಯತ್ವಾತ್ ॥ ೧೨ ॥**

೧೨. ಪರಬ್ರಹ್ಮವನ್ನೇ (ಸೇರಿಸುತ್ತಾನೆಂದು) ಜೈಮಿನಿಯು (ಅಭಿಪ್ರಾಯಪಡುತ್ತಾನೆ) ; ಏಕೆಂದರೆ (ಅದರಲ್ಲಿ ಬ್ರಹ್ಮಶಬ್ದವು) ಮುಖ್ಯವಾಗಿದೆ.

## ಪೂರ್ವಪಕ್ಷ :
## ಅರ್ಚಿರಾದಿಮಾರ್ಗದಿಂದ ಬ್ರಹ್ಮವನ್ನೇ ಸೇರುತ್ತಾರೆ

(ಭಾಷ್ಯ)

೫೭೮. ಕಂ ಪುನಃ ಪೂರ್ವಪಕ್ಷಮ್ ಆಶಙ್ಕ್ಯ ಅಯಂ ಸಿದ್ಧಾನ್ತಃ ಪ್ರತಿಷ್ಠಾಪಿತಃ 'ಕಾರ್ಯಂ ಬಾದರಿಃ' ಇತ್ಯಾದಿನಾ ಇತಿ ? ಸ ಇದಾನೀಂ ಸೂತ್ರೈರೇವ ಉಪದರ್ಶ್ಯತೇ—

1. ಇದು ಯಾವ ಗ್ರಂಥದ ವಾಕ್ಯವೆಂಬುದು ತಿಳಿಯಲಿಲ್ಲ ; ಭಾರತದಲ್ಲಿರಬಹುದು.

(ಪರಂ ಜೈಮಿನಿರ್ಮುಖ್ಯತ್ವಾತ್) । ಜೈಮಿನಿಸ್ತು ಆಚಾರ್ಯಃ "ಸ ಏನಾನ್ ಬ್ರಹ್ಮ ಗಮಯತಿ" (ಛಾಂ. ೪-೧೫-೬) ಇತ್ಯತ್ರ ಪರಮೇವ ಬ್ರಹ್ಮ ಪ್ರಾಪಯತಿ ಇತಿ ಮನ್ಯತೇ । ಕುತಃ ? ಮುಖ್ಯತ್ವಾತ್ । ಪರಂ ಹಿ ಬ್ರಹ್ಮ ಬ್ರಹ್ಮಶಬ್ದಸ್ಯ ಮುಖ್ಯಮ್ ಆಲಮ್ಬನಮ್, ಗೌಣಮಪರಮ್ । ಮುಖ್ಯಗೌಣಯೋಶ್ಚ ಮುಖ್ಯೇ ಸಂಪ್ರತ್ಯಯೋ ಭವತಿ ॥

(ಭಾಷ್ಯಾರ್ಥ)

(ಪ್ರಶ್ನೆ) :- ಯಾವ ಪೂರ್ವಪಕ್ಷವನ್ನು ಆಶಂಕೆಮಾಡಿ ಈ 'ಕಾರ್ಯಂ ಬಾದರಿಃ' ಮುಂತಾದ ಸೂತ್ರಗಳಿಂದ ಹೇಳಿರುವ ಸಿದ್ಧಾಂತವನ್ನು ಸ್ಥಾಪಿಸಲಾಗಿದೆ ? ಎಂದರೆ ಆ (ಪೂರ್ವಪಕ್ಷವನ್ನು) ಈಗ ಸೂತ್ರಗಳಿಂದಲೇ ತೋರಿಸುತ್ತಾರೆ :

(ಪರಂ ಜೈಮಿನಿರ್ಮುಖ್ಯತ್ವಾತ್) । ಜೈಮಿನಿ ಎಂಬ ಆಚಾರ್ಯರಾದರೋ "ಅವನು ಇವರನ್ನು ಬ್ರಹ್ಮವನ್ನು ನೇರಿಸುತ್ತಾನೆ" (ಛಾಂ. ೪-೧೫-೬) ಎಂಬಲ್ಲಿ ಪರಬ್ರಹ್ಮವನ್ನೇ ಪಡೆಯಿಸುತ್ತಾನೆ ಎಂದು ಅಭಿಪ್ರಾಯಪಡುತ್ತಾರೆ. ಏಕೆ ? ಎಂದರೆ ಮುಖ್ಯವಾಗಿರುವದರಿಂದ. ಪರಬ್ರಹ್ಮವೇ ಬ್ರಹ್ಮಶಬ್ದಕ್ಕೆ ಮುಖ್ಯವಿಷಯವು, ಅಪರಬ್ರಹ್ಮವು ಗೌಣ(ವಿಷಯವು). ಮುಖ್ಯ, ಗೌಣ- ಇವೆರಡರಲ್ಲಿ ಮುಖ್ಯಾರ್ಥದಲ್ಲಿಯೇ (ಮೊದಲು) ಬುದ್ಧಿಯುಂಟಾಗುತ್ತದೆ.

**ದರ್ಶನಾಚ್ಚ ॥ ೧೩ ॥**

೧೩. ದರ್ಶನವಿರುವದರಿಂದಲೂ (ಹೀಗೆ).

## ಗತಿಪೂರ್ವಕವಾಗಿಯೇ ಅಮೃತತ್ವವನ್ನು ಶ್ರುತಿ ಹೇಳುತ್ತದೆ

(ಭಾಷ್ಯ)

೫೭೯. "ತಯೋರ್ಧ್ವಮಾಯನ್ನಮೃತತ್ವಮೇತಿ" (ಛಾಂ. ೮-೬-೬) ಇತಿ ಚ ಗತಿಪೂರ್ವಕಮಮೃತತ್ವಂ ದರ್ಶಯತಿ । ಅಮೃತತ್ವಂ ಚ ಪರಸ್ಮಿನ್ ಬ್ರಹ್ಮಣಿ ಉಪಪದ್ಯತೇ, ನ ಕಾರ್ಯೇ । ವಿನಾಶಿತ್ವಾತ್ ಕಾರ್ಯಸ್ಯ । "ಅಥ ಯತ್ರಾನ್ಯತ್ ಪಶ್ಯತಿ.....ತದಲ್ಪಂ ತನ್ಮರ್ತ್ಯಮ್" (ಛಾಂ. ೭-೨೪-೧) ಇತಿ ಪ್ರವಚನಾತ್[1] । ಪರವಿಷಯೈವ ಚೈಷಾ ಗತಿಃ ಕಠವಲ್ಲೀಷು ಪಠ್ಯತೇ । ನ ಹಿ ತತ್ರ ವಿದ್ಯಾನ್ತರಪ್ರಕ್ರಮೋಽಸ್ತಿ । "ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್" (ಕ. ೧-೨-೧೪) ಇತಿ ಪರಸ್ಯೈವ ಬ್ರಹ್ಮಣಃ ಪ್ರಕ್ರಾನ್ತತ್ವಾತ್ ॥

---

1. ಇಲ್ಲಿ 'ವಚನಾತ್' ಎಂದಿಷ್ಟೇ ಮೂಲಭಾಷ್ಯದಲ್ಲಿದ್ದಿರಬಹುದೆ ? ಎಂಬುದು ವಿಚಾರಣೀಯವಾಗಿದೆ.

(ಭಾಷ್ಯಾರ್ಥ)

"ಆ (ನಾಡಿಯಿಂದ) ಮೇಲಕ್ಕೆ ಹೋದವನು ಅಮೃತತ್ವವನ್ನು ಪಡೆಯುತ್ತಾನೆ" (ಛಾಂ. ೮-೬-೬) ಎಂದು ಗತಿಪೂರ್ವಕವಾಗಿ ಅಮೃತತ್ವ(ವಾಗುವದೆಂದು) ಶ್ರುತಿಯು ತಿಳಿಸುತ್ತದೆ. ಅಮೃತತ್ವವು ಪರಬ್ರಹ್ಮಕ್ಕೆ ಹೊಂದುತ್ತದೆಯೇ ಹೊರತು ಕಾರ್ಯ(ಬ್ರಹ್ಮ)ಕ್ಕೆ ಹೊಂದುವದಿಲ್ಲ; ಏಕೆಂದರೆ ಕಾರ್ಯವು ವಿನಾಶಿಯಾಗಿರುತ್ತದೆ. "ಇನ್ನು ಎಲ್ಲಿ ಮತ್ತೊಂದನ್ನು ಕಾಣುತ್ತಾನೋ.... ಅದು ಅಲ್ಪವು, ಅದು ಮರ್ತ್ಯವು" (ಛಾಂ. ೭-೨೪-೧) ಎಂದು ವಿವರಿಸಿ ಹೇಳಿರುವದರಿಂದ (ಹೀಗೆಂದು ಸಿದ್ಧವಾಗುತ್ತದೆ). ಕಠವಲ್ಲಿಗಳಲ್ಲಿ ಈ ಗತಿಯು (ಪರಬ್ರಹ್ಮ)ವಿಷಯವಾಗಿಯೇ ಪಠಿತವಾಗಿರುತ್ತದೆ. ಅಲ್ಲಿ ಮತ್ತೊಂದು ವಿದ್ಯೆಯ ಪ್ರಕ್ರಮವೇ ಇರುವದಿಲ್ಲ; ಏಕೆಂದರೆ "ಧರ್ಮಕ್ಕಿಂತಲೂ ಬೇರೆಯಾಗಿ, ಅಧರ್ಮಕ್ಕಿಂತಲೂ ಬೇರೆಯಾಗಿ...." (ಕ. ೧-೨-೧೪) ಎಂದು ಪರಬ್ರಹ್ಮವನ್ನೇ ಉಪಕ್ರಮಿಸಿರುತ್ತದೆ.

**ನ ಚ ಕಾರ್ಯೇ ಪ್ರತಿಪತ್ತ್ಯಭಿಸನ್ಧಿಃ ॥ ೧೪ ॥**

೧೪. ಕಾರ್ಯವಿಷಯದಲ್ಲಿ ಪ್ರಾಪ್ತಿಯ ಅಭಿಸಂಧಿ(ಯಿರಲಾರದು).

## ಪೂರ್ವಪಕ್ಷ: ಕಾರ್ಯಪ್ರಾಪ್ತಿಯ ವಿಷಯದ ಅಭಿಸಂಧಿಯನ್ನು ಶ್ರುತಿ ಹೇಳಿಲ್ಲ

(ಭಾಷ್ಯ)

೫೮೦. "ಅಪಿ ಚ ಪ್ರಜಾಪತೇಃ ಸಭಾಂ ವೇಶ್ಮ ಪ್ರಪದ್ಯೇ" (ಛಾಂ. ೮-೧೪-೧) ಇತಿ ನಾಯಂ ಕಾರ್ಯವಿಷಯಃ ಪ್ರತಿಪತ್ತ್ಯಭಿಸನ್ಧಿಃ "ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ಬ್ರಹ್ಮ" (ಛಾಂ. ೮-೧೪-೧) ಇತಿ ಕಾರ್ಯವಿಲಕ್ಷಣಸ್ಯ ಪರಸ್ಯೈವ ಬ್ರಹ್ಮಣಃ ಪ್ರಕೃತತ್ವಾತ್ । "ಯಶೋಽಹಂ ಭವಾಮಿ ಬ್ರಾಹ್ಮಣಾನಾಮ್" (ಛಾಂ. ೮-೧೪-೧) ಇತಿ ಚ ಸರ್ವಾತ್ಮತ್ವೇನ ಉಪಕ್ರಮಣಾತ್ । "ನ ತಸ್ಯ ಪ್ರತಿಮಾ ಅಸ್ತಿ ಯಸ್ಯ ನಾಮ ಮಹದ್ಯಶಃ" (ಶ್ವೇ. ೪-೧೯) ಇತಿ ಚ ಪರಸ್ಯೈವ ಬ್ರಹ್ಮಣೋ ಯಶೋನಾಮತ್ವಪ್ರಸಿದ್ಧೇಃ। ಸಾ ಚೇಯಂ ವೇಶ್ಮಪ್ರತಿಪತ್ತಿರ್ಗತಿಪೂರ್ವಿಕಾ ಹಾರ್ದವಿದ್ಯಾಯಾಮ್ ಉದಿತಾ "ತದಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಂ ಹಿರಣ್ಮಯಮ್" (ಛಾಂ. ೮-೫-೪) ಇತ್ಯತ್ರ । ಪದೇರಪಿ ಚ ಗತ್ಯರ್ಥತ್ವಾತ್ ಮಾರ್ಗಾಪೇಕ್ಷಾ ಅವಸೀಯತೇ । ತಸ್ಮಾತ್ ಪರಬ್ರಹ್ಮವಿಷಯಾ ಗತಿಶ್ರುತಯಃ ಇತಿ ಪಕ್ಷಾನ್ತರಮ್ ॥

(ಭಾಷ್ಯಾರ್ಥ)

ಇದಲ್ಲದೆ "ಪ್ರಜಾಪತಿಯು ಸಭೆಯನ್ನು, ವೇಶ್ಮವನ್ನು, (ಕುರಿತು) ಹೋಗುವೆನು" (ಛಾಂ. ೮-೧೪-೧) ಎಂಬುದು ಕಾರ್ಯ(ಬ್ರಹ್ಮ)ವಿಷಯದ ಪ್ರಾಪ್ತಿಯ ಸಂಕಲ್ಪವಾಗಲಾರದು ; ಏಕೆಂದರೆ "(ಆಕಾಶವೇ) ನಾಮರೂಪಗಳ ನಿರ್ವಾಹವನ್ನು ಮಾಡತಕ್ಕದ್ದು ; ಅವುಗಳು ಯಾವದರಲ್ಲಿರುವವೋ ಅದು ಬ್ರಹ್ಮವು" (ಛಾಂ. ೮-೧೪-೧) ಎಂದು ಕಾರ್ಯವಿಲಕ್ಷಣವಾದ ಪರಬ್ರಹ್ಮವೇ ಪ್ರಕೃತವಾಗಿದೆ[1] ; "ನಾನು ಬ್ರಾಹ್ಮಣರುಗಳ ಯಶಸ್ಸಾಗುವೆನು" (ಛಾಂ. ೮-೧೪-೧) ಎಂದು ಸರ್ವಾತ್ಮತ್ವದಿಂದಲೇ ಉಪಕ್ರಮವಾಗಿರುತ್ತದೆ. "ಯಾವನ ಹೆಸರು ದೊಡ್ಡ ಯಶಸ್ಸೋ ಅವನಿಗೆ ಸಮಾನವಾದದ್ದಿಲ್ಲ" (ಶ್ವೇ. ೪-೧೯) ಎಂದು ಪರಬ್ರಹ್ಮಕ್ಕೇ ಯಶಸ್ಸೆಂಬ ಹೆಸರೆಂದು (ಶ್ರುತಿಯಲ್ಲಿ) ಪ್ರಸಿದ್ಧವಾಗಿರುತ್ತದೆ. ಗತಿಪೂರ್ವಕವಾಗಿ ವೇಶ್ಮವನ್ನು ಪಡೆದುಕೊಳ್ಳುವದೆಂಬ ಆ ಇದು ಹಾರ್ದವಿದ್ಯೆಯಲ್ಲಿ "ಅಲ್ಲಿ ಬ್ರಹ್ಮನ ಅಪರಾಜಿತವೆಂಬ ಪುರವೂ ಪ್ರಭುನಿರ್ಮಿತವಾದ ಹಿರಣ್ಮಯ(ವೇಶ್ಮವೂ)" (ಛಾಂ. ೮-೫-೩) ಎಂಬಲ್ಲಿ ಇರುತ್ತದೆ.[2] ಪದ್ ಧಾತುವಿಗೂ ಗತ್ಯರ್ಥವೇ ಇರುವದರಿಂದ ಮಾರ್ಗದ ಅಪೇಕ್ಷೆಯಿದೆಯೆಂದು ನಿಶ್ಚಿತವಾಗುತ್ತದೆ.[3] ಆದ್ದರಿಂದ ಗತಿಶ್ರುತಿಗಳು ಪರಬ್ರಹ್ಮವಿಷಯವೇ ಎಂಬುದು ಮತ್ತೊಂದು ಪಕ್ಷವು.

## ಅಪರಬ್ರಹ್ಮವಿಷಯದಲ್ಲಿಯೇ ಗತಿಶ್ರುತಿಗಳು ಹೊಂದುತ್ತವೆ

(ಭಾಷ್ಯ)

೫೮೧. ತಾವೇತೌ ದ್ವೌ ಪಕ್ಷೌ ಆಚಾರ್ಯೇಣ ಸೂತ್ರಿತೌ ಗತ್ಯುಪಪತ್ತ್ಯಾದಿಭಿರೇಕಃ, ಮುಖ್ಯತ್ವಾದಿಭಿರಪರಃ । ತತ್ರ ಗತ್ಯುಪಪತ್ತ್ಯಾದಯಃ ಪ್ರಭವನ್ತಿ ಮುಖ್ಯತ್ವಾದೀನ್ ಆಭಾಸಯಿತುಮ್, ನ ತು ಮುಖ್ಯತ್ವಾದಯೋ ಗತ್ಯುಪಪತ್ತ್ಯಾದೀನ್ ಇತ್ಯಾದ್ಯ ಏವ ಸಿದ್ಧಾನ್ತೋ ವ್ಯಾಖ್ಯಾತೋ ದ್ವಿತೀಯಃ ಪೂರ್ವಪಕ್ಷಃ । ನ ಹಿ ಅಸತ್ಯಪಿ ಸಂಭವೇ ಮುಖ್ಯಸ್ಯೈವಾರ್ಥಸ್ಯ ಗ್ರಹಣಮ್ ಇತಿ ಕಶ್ಚಿತ್ ಆಜ್ಞಾಪಯಿತಾ ವಿದ್ಯತೇ। ಪರವಿದ್ಯಾಪ್ರಕರಣೇಽಪಿ ಚ

1. ನಾಮರೂಪವ್ಯಾಕರಣವನ್ನು ಮಾಡುವದು ಪರಬ್ರಹ್ಮವೇ, ಅಪರವಲ್ಲ' (ಸೂ. ಭಾ. ೧-೩-೪೧, ೨-೪-೨೦) -ಇವನ್ನು ನೋಡಿ.

2. 'ಯ ಇಹಾತ್ಮಾನಮನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾನ್' (ಛಾಂ. ೮-೧-೬) ಎಂದು ಗತಿಯನ್ನು ಹೇಳಿ ಪಡೆಯುವ ಬ್ರಹ್ಮಲೋಕವನ್ನೂ ವೇಶ್ಮವನ್ನೂ ಇಲ್ಲಿ ವರ್ಣಿಸಿದೆ. ಆದ್ದರಿಂದ "ಪ್ರಜಾಪತೇಃ ಸಭಾಂ ವೇಶ್ಮ ಪ್ರಪದ್ಯೇ" (ಛಾಂ. ೮-೧೪-೧) ಎಂಬಲ್ಲಿಯೂ ಗತಿಪೂರ್ವಕವೇ ಎಂದು ನಿರ್ಣಯಿಸಬೇಕು.

3. "ಪ್ರಪದ್ಯೇ" ಎಂಬ ಶಬ್ದವೇ ಗತಿಯನ್ನು ತಿಳಿಸುತ್ತದೆಯಾದ್ದರಿಂದಲೂ ಇಲ್ಲಿ ಮಾರ್ಗದ ಅಪೇಕ್ಷೆಯಿದೆ.

ತತ್ಸ್ತುತ್ಯರ್ಥಂ ವಿದ್ಯಾನ್ತರಾಶ್ರಯಗತ್ಯನುಕೀರ್ತನಮ್ ಉಪಪದ್ಯತೇ "ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ" (ಛಾಂ.೮-೬-೬) ಇತಿವತ್ । "ಪ್ರಜಾಪತೇಃ ಸಭಾಂವೇಶ್ಮ ಪ್ರಪದ್ಯೇ" (ಛಾಂ.೮-೧೪-೧) ಇತಿ ತು ಪೂರ್ವವಾಕ್ಯವಿಚ್ಛೇದೇನ ಕಾರ್ಯೇಽಪಿ ಪ್ರತಿಪತ್ತ್ಯಭಿಸನ್ಧಿರ್ನ ವಿರುಧ್ಯತೇ । ಸಗುಣೇಽಪಿ ಚ ಬ್ರಹ್ಮಣಿ ಸರ್ವಾತ್ಮತ್ವಸಂಕೀರ್ತನಂ "ಸರ್ವಕರ್ಮಾ ಸರ್ವಕಾಮಃ" (ಛಾಂ. ೩-೧೪-೨) ಇತ್ಯಾದಿವತ್ ಅವಕಲ್ಪತೇ । ತಸ್ಮಾತ್ ಅಪರವಿಷಯಾ ಏವ ಗತಿಶ್ರುತಯಃ ॥

(ಭಾಷ್ಯಾರ್ಥ)

ಗತ್ಯುಪಪತ್ತಿಯೇ ಮುಂತಾದ (ಹೇತುಗಳಿಂದ) ಒಂದು (ಪಕ್ಷ), ಮುಖ್ಯತ್ವಾದಿ(ಹೇತು)ಗಳಿಂದ ಇನ್ನೊಂದು (ಪಕ್ಷ)– ಹೀಗೆ ಆ ಈ ಎರಡು ಪಕ್ಷಗಳು (ಬಾದರಾಯಣಾ)ಚಾರ್ಯರಿಂದ ಸೂತ್ರಿತವಾಗಿವೆಯಷ್ಟೆ. ಇವುಗಳಲ್ಲಿ ಗತ್ಯುಪಪತ್ತಿಯೇ ಮುಂತಾದವುಗಳು ಮುಖ್ಯತ್ವಾದಿಗಳನ್ನು ಆಭಾಸಗೊಳಿಸುವದಕ್ಕೆ[1] ಶಕ್ತವಾಗಿರುತ್ತವೆಯೇ ಹೊರತು ಮುಖ್ಯತ್ವಾದಿ(ಹೇತು)ಗಳು ಗತ್ಯುಪಪತ್ತ್ಯಾದಿಗಳನ್ನು (ಆಭಾಸಗೊಳಿಸಲು ಶಕ್ತ)ವಾಗಿಲ್ಲವಾದ್ದರಿಂದ ಮೊದಲನೆಯದೇ ಸಿದ್ಧಾಂತವೆಂದೂ, ಎರಡನೆಯದು ಪೂರ್ವಪಕ್ಷವೆಂದೂ (ನಾವು) ವ್ಯಾಖ್ಯಾನಮಾಡಿರುತ್ತೇವೆ. ಏಕೆಂದರೆ ಹೊಂದದೆಯೇ ಇದ್ದರೂ ಮುಖ್ಯಾರ್ಥವನ್ನೇ ಗ್ರಹಿಸಬೇಕು ಎಂದು ಅಪ್ಪಣೆಮಾಡುವವರು ಯಾರೂ ಇಲ್ಲವಷ್ಟೆ. ಪರವಿದ್ಯಾಪ್ರಕರಣದಲ್ಲಿಯೂ ಅದನ್ನು ಹೊಗಳುವದಕ್ಕಾಗಿ ಮತ್ತೊಂದು ವಿದ್ಯೆಯನ್ನು[2] ಆಶ್ರಯಿಸಿಕೊಂಡಿರುವ ಗತಿಯನ್ನು ಅನುವಾದ ಮಾಡಿಕೊಂಡಿರುವದು "ಮಿಕ್ಕವು ಉತ್ಕ್ರಮಣಕ್ಕೆ (ದ್ವಾರ)ಗಳಾಗುವವು" (ಛಾಂ. ೮-೬-೬) ಎಂಬಂತೆ ಹೊಂದುತ್ತದೆ.[3] "ಪ್ರಜಾಪತಿಯ ಸಭೆಯನ್ನು, ವೇಶ್ಮವನ್ನು, ಸೇರುವೆನು" (ಛಾಂ. ೮-೧೪-೧) ಎಂಬುದಾದರೋ ಹಿಂದಿನ ವಾಕ್ಯವನ್ನು ಬಿಡಿಸಿಯೇ ಕಾರ್ಯದಲ್ಲಿ ಪ್ರಾಪ್ತಿಯ ಸಂಕಲ್ಪವು (ಎಂದು ಅರ್ಥಮಾಡಿದರೆ) ವಿರುದ್ಧವಾಗುವದಿಲ್ಲ[4]. ಸಗುಣಬ್ರಹ್ಮದಲ್ಲಿಯೂ 'ಸರ್ವಕರ್ಮನು',

1. ಸಲ್ಲದ ಹೇತುಗಳೆಂದು ತೋರಿಸುವದಕ್ಕೆ ಎಂದರ್ಥ. ಮುಂದೆ ಭಾಷ್ಯದಲ್ಲಿ ಇದನ್ನು ತೋರಿಸಿದೆ.

2. ಸಗುಣವಿದ್ಯೆಯನ್ನೂ ಪಂಚಾಗ್ನಿವಿದ್ಯೆಯನ್ನೂ.

3. ಸುಷುಮ್ನಾನಾಡಿಯಿಂದ ಹೋಗುವವರಿಗೆ ಅಮೃತತ್ವವಾಗುವದೆಂಬುದನ್ನು ಹೊಗಳುವದಕ್ಕೆ ಮಿಕ್ಕ ನಾಡಿಗಳಿಂದ ಹೋಗುವವರನ್ನು ಛಾಂದೋಗ್ಯದಲ್ಲಿ ಅನುಕೀರ್ತನ ಮಾಡಿರುವಂತೆ ಕಠೋಪನಿಷತ್ತಿನಲ್ಲಿ (೧-೨-೧೪) ಪರವಿದ್ಯೆಯನ್ನು ಹೊಗಳುವದಕ್ಕೆ ಸಗುಣವಿದ್ಯೆಗೆ ಸಂಬಂಧಪಟ್ಟ ಗತಿಯನ್ನು ಅನುಕೀರ್ತನೆಮಾಡಿದೆ ಎಂದು ಹೇಳಬಹುದು.

4. ಆದ್ದರಿಂದ ಉಪಕ್ರಮದಲ್ಲಿ ಪರಬ್ರಹ್ಮವಾಕ್ಯವಿದ್ದರೂ ಗತಿಯು ಅದರ ವಿಷಯವೆನ್ನುವದಕ್ಕೆ ಕಾರಣವಿಲ್ಲ.

ಸರ್ವಕಾಮನು' (ಛಾಂ. ೩-೧೪-೨) ಎಂದು ಮುಂತಾಗಿರುವಂತೆ ಸರ್ವಾತ್ಮತ್ವವನ್ನು ಹೇಳಿರುವದು ಹೊಂದುತ್ತದೆ[1]. ಆದ್ದರಿಂದ ಗತಿಶ್ರುತಿಗಳು ಅಪರ (ಬ್ರಹ್ಮದ) ವಿಷಯವಾದವುಗಳೇ.

## ಗತಿಯು ಪರಬ್ರಹ್ಮವಿಷಯವೆಂಬವರ ಮತದ ಖಂಡನೆ

(ಭಾಷ್ಯ)

೫೮೨. ಕೇಚಿತ್ ಪುನಃ ಪೂರ್ವಾಣಿ ಪೂರ್ವಪಕ್ಷಸೂತ್ರಾಣಿ ಭವನ್ತಿ, ಉತ್ತರಾಣಿ ಸಿದ್ಧಾನ್ತಸೂತ್ರಾಣಿ ಇತ್ಯೇತಾಂ ವ್ಯವಸ್ಥಾಮ್ ಅನುರುಧ್ಯಮಾನಾಃ ಪರವಿಷಯಾ ಏವ ಗತಿಶ್ರುತೀಃ ಪ್ರತಿಷ್ಠಾಪಯನ್ತಿ । ತದನುಪಪನ್ನಮ್ । ಗನ್ತವ್ಯತ್ವಾನುಪಪತ್ತೇರ್ಬ್ರಹ್ಮಣಃ । ಯತ್ ಸರ್ವಗತಂ ಸರ್ವಾನ್ತರಂ ಸರ್ವಾತ್ಮಕಂ ಚ ಪರಂ ಬ್ರಹ್ಮ "ಆಕಾಶವತ್ಸರ್ವಗತಶ್ಚ ನಿತ್ಯಃ" (?) "ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ ಯ ಆತ್ಮಾ ಸರ್ವಾನ್ತರಃ" (ಬೃ. ೩-೪-೧), "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨), "ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್"[2] (ಮುಂ. ೨-೨-೧೧) ಇತ್ಯಾದಿಶ್ರುತಿನಿರ್ಧಾರಿತವಿಶೇಷಂ ತಸ್ಯ ಗನ್ತವ್ಯತಾ ನ ಕದಾಚಿದಪಿ ಉಪಪದ್ಯತೇ । ನ ಹಿ ಗತಮೇವ ಗಮ್ಯತೇ । ಅನ್ಯೋ ಹಿ ಅನ್ಯದ್ ಗಚ್ಛತೀತಿ ಪ್ರಸಿದ್ಧಂ ಲೋಕೇ । ನನು ಲೋಕೇ ಗತಸ್ಯಾಪಿ ಗನ್ತವ್ಯತಾ ದೇಶಾನ್ತರವಿಶಿಷ್ಟಾ ದೃಷ್ಟಾ । ಯಥಾ ಪೃಥಿವೀಸ್ಥ ಏವ ಪೃಥಿವೀಂ ದೇಶಾನ್ತರದ್ವಾರೇಣ ಗಚ್ಛತೀತಿ । ತಥಾ ಅನನ್ಯತ್ವೇಽಪಿ ಬಾಲಸ್ಯ ಕಾಲಾನ್ತರವಿಶಿಷ್ಟಂ ವಾರ್ಧಕಂ ಸ್ವಾತ್ಮಭೂತಮೇವ ಗನ್ತವ್ಯಂ ದೃಷ್ಟಮ್ । ತದ್ವದ್ ಬ್ರಹ್ಮಣೋಽಪಿ ಸರ್ವಶಕ್ತ್ಯುಪೇತತ್ವಾತ್ ಕಥಂಚಿತ್ ಗನ್ತವ್ಯತಾ ಸ್ಯಾದಿತಿ । ನ । ಪ್ರತಿಷಿದ್ಧಸರ್ವವಿಶೇಷತ್ವಾದ್ ಬ್ರಹ್ಮಣಃ । "ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಞ್ಜನಮ್" (ಶ್ವೇ. ೬-೧೯), "ಅಸ್ಥೂಲಮನಣ್ವಹ್ರಸ್ವಮದೀರ್ಘಮ್" (ಬೃ. ೩-೮-೮) "ಸ ಬಾಹ್ಯಾಭ್ಯನ್ತರೋ ಹ್ಯಜಃ" (ಮುಂ. ೨-೧-೨), "ಸ ವಾ ಏಷ ಮಹಾನಜ ಆತ್ಮಾಜರೋಽಮರೋಽಮೃತೋಽಭಯೋ ಬ್ರಹ್ಮ" (ಬೃ. ೪-೪-೨೫), "ಸ ಏಷ ನೇತಿ ನೇತ್ಯಾತ್ಮಾ" (ಬೃ. ೩-೯-೨೬) ಇತ್ಯಾದಿಶ್ರುತಿಸ್ಮೃತಿನ್ಯಾಯೇಭ್ಯೋ ನ ದೇಶಕಾಲಾದಿವಿಶೇಷಯೋಗಃ ಪರಮಾತ್ಮನಿ ಕಲ್ಪಯಿತುಂ ಶಕ್ಯತೇ । ಯೇನ ಭೂಪ್ರದೇಶವಯೋಽವಸ್ಥಾನ್ಯಾಯೇನ ಅಸ್ಯ ಗನ್ತವ್ಯತಾ ಸ್ಯಾತ್ । ಭೂವಯಸೋಸ್ತು ಪ್ರದೇಶಾವಸ್ಥಾದಿವಿಶೇಷಯೋಗಾತ್ ಉಪಪದ್ಯತೇ ದೇಶಕಾಲವಿಶಿಷ್ಟಾ ಗನ್ತವ್ಯತಾ ॥

---

1. ಇದೂ ಉಪಾಸ್ಯತ್ವವನ್ನು ತಿಳಿಸುತ್ತದೆ ಎಂದು ಅಭಿಪ್ರಾಯ.

2. 'ಬ್ರಹ್ಮೈವೇದಂ ವಿಶ್ವಮ್' ಎಂಬ ಪಾಠವನ್ನು ಇಲ್ಲಿ ಸ್ವೀಕರಿಸಿದೆ; ಮಿಕ್ಕ ಕಡೆಗಳಲ್ಲಿ 'ಬ್ರಹ್ಮೈವೇದಂ ಸರ್ವಮ್' ಎಂದೇ ಆಚಾರ್ಯರು ಬರೆದಿರುತ್ತಾರೆ. ಈ ಎರಡನೆಯದು ಯಾವ ಶ್ರುತಿಯೆಂಬುದು ತಿಳಿಯಲಿಲ್ಲ.

(ಭಾಷ್ಯಾರ್ಥ)

ಆದರೆ ಕೆಲವರು ಮೊದಲಿರುವವು ಪೂರ್ವಪಕ್ಷಸೂತ್ರಗಳಾಗಿರುತ್ತವೆ, ಮುಂದೆ ಇರುವವು ಸಿದ್ಧಾಂತಸೂತ್ರಗಳು– ಎಂಬೀ ವ್ಯವಸ್ಥೆಯನ್ನನುಸರಿಸಿ[1] ಗತಿಶ್ರುತಿಗಳು ಪರ(ಬ್ರಹ್ಮ)ವಿಷಯವೇ ಎಂದು ಸ್ಥಾಪನೆಮಾಡಿರುತ್ತಾರೆ. ಅದು ಹೊಂದುವದಿಲ್ಲ; ಏಕೆಂದರೆ ಬ್ರಹ್ಮವು ಗಂತವ್ಯವೆಂಬುದು ಹೊಂದುವದಿಲ್ಲ. ಯಾವದು ಸರ್ವಗತವೂ ಸರ್ವಾಂತರವೂ ಸರ್ವಾತ್ಮಕವೂ ಆಗಿ "ಆಕಾಶದಂತೆ ಸರ್ವಗತನೂ ನಿತ್ಯನೂ (ಆಗಿರುತ್ತಾನೆ)" (?), "ಯಾವದು ಸಾಕ್ಷಾತ್ತಾಗಿ ಅಪರೋಕ್ಷವಾಗಿರುವ ಬ್ರಹ್ಮವೋ, ಯಾವನೇ ಎಲ್ಲಕ್ಕೂ ಒಳಗಿನ ಆತ್ಮನೋ" (ಬೃ. ೩–೪–೧), "ಇದೆಲ್ಲವೂ ಆತ್ಮನೇ" (ಛಾಂ. ೭–೨೫–೨), "ಈ ವಿಶ್ವವು, ಈ ಶ್ರೇಷ್ಠತಮವಾದ ಬ್ರಹ್ಮವೇ" (ಮುಂ. ೨–೨–೧೧) ಎಂದು ಮುಂತಾಗಿರುವ ಶ್ರುತಿಗಳಿಂದ ನಿರ್ಧಾರಿತವಾಗಿರುವ ವಿಶೇಷರೂಪವಾಗಿರುವ ಪರಬ್ರಹ್ಮವೋ ಅದು ಗಂತವ್ಯವೆಂಬುದು ಎಂದಿಗೂ ಹೊಂದುವದಿಲ್ಲ. ಏಕೆಂದರೆ ಗತವಾದದ್ದೇ ಗಂತವ್ಯವಾಗಲಾರದು. ಒಬ್ಬನು ಮತ್ತೊಂದಕ್ಕೆ ಹೋಗುತ್ತಾನೆಂದು ಲೋಕದಲ್ಲಿ ಪ್ರಸಿದ್ಧವಾಗಿದೆಯಷ್ಟೆ ?

(ಆಕ್ಷೇಪ) :– ಗತವಾದದ್ದೇ ಮತ್ತೊಂದು ದೇಶದಿಂದ ಕೂಡಿದರೆ ಗಂತವ್ಯವಾಗಿರುವದೂ ಕಂಡಿದೆಯಲ್ಲ ! ಉದಾಹರಣೆಗೆ ಭೂಮಿಯ ಮೇಲಿರುವವನೇ ದೇಶಾಂತರದ್ವಾರದಿಂದ ಪೃಥಿವಿಯನ್ನೇ ಹೋಗಿ ಸೇರುವದುಂಟು. ಹೀಗೆಯೇ ಅನನ್ಯವಾಗಿದ್ದರೂ ಹುಡುಗನು ಕಾಲಾಂತರವಿಶಿಷ್ಟವಾದ ತನ್ನ ಸ್ವರೂಪವೇ ಆಗಿರುವ ವಾರ್ಧಕವನ್ನು ಸೇರಬೇಕಾಗಿದೆಯೆಂಬುದು ಕಂಡಿರುತ್ತದೆ. ಇದರಂತೆ **ಬ್ರಹ್ಮವೂ ಸರ್ವಶಕ್ತ್ಯುಪೇತವಾಗಿರುವದರಿಂದ ಹೇಗೋ ಗಂತವ್ಯವೆಂಬುದು ಹೊಂದುತ್ತದೆಯಲ್ಲ** ![2]

(ಪರಿಹಾರ) :– **ಹಾಗಲ್ಲ. ಏಕೆಂದರೆ ಬ್ರಹ್ಮವು ಯಾವ ವಿಶೇಷವೂ ಇಲ್ಲದ್ದು.** "ನಿಷ್ಕಲನು, ನಿಷ್ಕ್ರಿಯನು, ಶಾಂತನು, ನಿರ್ದೋಷನು, ನಿರ್ಲೇಪನು" (ಶ್ವೇ. ೬–೧೯) "ಸ್ಥೂಲವಲ್ಲದ್ದು, ಅಣುವಲ್ಲದ್ದು, ಮೋಟವಲ್ಲದ್ದು, ಉದ್ದವಲ್ಲದ್ದು ....." (ಬೃ. ೩–೮–೮), "ಹೊರಗುಒಳಗುಗಳಿಂದ ಕೂಡಿಯೂ ಅಜವೇ" (ಮುಂ.೨–೧–೨), "ಆ ಈತನೇ ಮಹಾನ್ ಅಜನಾದ ಆತ್ಮನು ; ಅಜರನು, ಅಮರನು, ಅಮೃತನು, ಅಭಯನು, ಬ್ರಹ್ಮವು" (ಬೃ. ೪–೪–೨೫), "ಆ ಈತನು ನೇತಿನೇತಿ ಎಂದ ಆತ್ಮನು" (ಬೃ. ೩–೯–೨೬)

1. ಇದು ಪ್ರಾಯಿಕವಾದ ವ್ಯವಸ್ಥೆ.

2. ಬ್ರಹ್ಮವು ಸರ್ವಶಕ್ತ್ಯುಪೇತವಾಗಿರುವದರಿಂದ ತನಗಭಿಮತವಾದ ದೇಶಕಾಲಗಳಲ್ಲಿದ್ದುಕೊಂಡು ಗಂತವ್ಯವೂ ಆಗಬಹುದು ಎಂದು ಅಭಿಪ್ರಾಯ. ಈಚಿನ ಭಾಷ್ಯಕಾರರು ಕೆಲವರು ಈ ಮತವನ್ನು ಅವಲಂಬಿಸಿರುತ್ತಾರೆ.

ಇತ್ಯಾದಿ ಶ್ರುತಿಸ್ಮೃತಿನ್ಯಾಯಗಳಿಂದ ದೇಶಕಾಲಾದಿವಿಶೇಷಗಳ ಸಂಬಂಧವನ್ನು ಪರಮಾತ್ಮನಲ್ಲಿ ಕಲ್ಪಿಸುವದಕ್ಕೆ ಆಗಲಾರದು. ಹಾಗೆ ಕಲ್ಪಿಸ(ಬಹುದಾ)ಗಿದ್ದರೆ ಭೂಪ್ರದೇಶ, ವಯೋಽವಸ್ಥೆ –ಇವುಗಳ ದೃಷ್ಟಾಂತದಿಂದ ಈ (ಬ್ರಹ್ಮವೂ) ಗಂತವ್ಯವೆಂದಾಗಬಹುದಾಗಿತ್ತು. ಭೂಮಿ, ವಯಸ್ಸು –ಇವುಗಳಿಗೋ ಎಂದರೆ ಪ್ರದೇಶ, ಅವಸ್ಥೆ –ಮುಂತಾದ ವಿಶೇಷಗಳಿರುವದರಿಂದ ದೇಶಕಾಲಗಳ ವಿಶೇಷವುಳ್ಳ ಗಂತವ್ಯತ್ವವು ಯುಕ್ತವಾಗಿದೆ.

## ಬ್ರಹ್ಮದಲ್ಲಿ ಅನೇಕ ಶಕ್ತಿಗಳಿರುವದರಿಂದ ಗಂತವ್ಯವೆಂಬುದು ಸರಿಯಲ್ಲ

(ಭಾಷ್ಯ)

೫೮೩. ಜಗದುತ್ಪತ್ತಿಸ್ಥಿತಿಪ್ರಲಯಹೇತುತ್ವಶ್ರುತೇರನೇಕಶಕ್ತಿತ್ವಂ ಬ್ರಹ್ಮಣ ಇತಿ ಚೇತ್ । ನ। ವಿಶೇಷನಿರಾಕರಣಶ್ರುತೀನಾಮನನ್ಯಾರ್ಥತ್ವಾತ್। ಉತ್ಪತ್ತ್ಯಾದಿಶ್ರುತೀನಾಮಪಿ ಸಮಾನಮ್ ಅನನ್ಯಾರ್ಥತ್ವಮಿತಿ ಚೇತ್ । ನ । ತಾಸಾಮ್ ಏಕತ್ವಪ್ರತಿಪಾದನಪರತ್ವಾತ್ । ಮೃದಾದಿದೃಷ್ಟಾನ್ತೈರ್ಹಿ ಸತೋ ಬ್ರಹ್ಮಣ ಏಕಸ್ಯ ಸತ್ಯತ್ವಂ ವಿಕಾರಸ್ಯ ಚಾನೃತತ್ವಂ ಪ್ರತಿಪಾದಯತ್ ಶಾಸ್ತ್ರಂ ನೋತ್ಪತ್ತ್ಯಾದಿಪರಂ ಭವಿತುಮರ್ಹತಿ। ಕಸ್ಮಾತ್ ಪುನರುತ್ಪತ್ತ್ಯಾದಿಶ್ರುತೀನಾಂ ವಿಶೇಷನಿರಾಕರಣಶ್ರುತಿಶೇಷತ್ವಮ್, ನ ಪುನರಿತರಶೇಷತ್ವಮಿತರಾಸಾಮಿತಿ ? ಉಚ್ಯತೇ । ವಿಶೇಷನಿರಾಕರಣಶ್ರುತೀನಾಂ ನಿರಾಕಾಙ್ಕ್ಷಾರ್ಥತ್ವಾತ್ । ನ ಹಿ ಆತ್ಮನಃ ಏಕತ್ವನಿತ್ಯತ್ವಶುದ್ಧತ್ವಾದ್ಯವಗತೌ ಸತ್ಯಾಂ ಭೂಯಃ ಕಾಚಿದಾಕಾಙ್ಕ್ಷಾ ಉಪಜಾಯತೇ। ಪುರುಷಾರ್ಥಸಮಾಪ್ತಿಬುದ್ಧ್ಯುಪಪತ್ತೇಃ। "ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ(ಈ.೭), "ಅಭಯಂ ವೈ ಜನಕ ಪ್ರಾಪ್ತೋಽಸಿ" (ಬೃ. ೪–೨–೪), "ವಿದ್ವಾನ್ನ ಬಿಭೇತಿ ಕುತಶ್ಚನ । ಏತಂ ಹ ವಾವ ನ ತಪತಿ ಕಿಮಹಂ ಸಾಧು ನಾಕರವಂ ಕಿಮಹಂ ಪಾಪಮಕರವಮ್" (ತೈ. ೨–೯) ಇತ್ಯಾದಿಶ್ರುತಿಭ್ಯಃ । ತಥೈವ ಚ ವಿದುಷಾಂ ತುಷ್ಟ್ಯನುಭವಾದಿದರ್ಶನಾತ್ । ವಿಕಾರಾನೃತಾಭಿಸಂಧ್ಯಪವಾದಾಚ್ಚ "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (ಬೃ. ೪–೪–೯) ಇತಿ । ಅತೋ ನ ವಿಶೇಷನಿರಾಕರಣಶ್ರುತೀನಾಮ್ ಅನ್ಯಶೇಷತ್ವಮ್ ಅವಗನ್ತುಂ ಶಕ್ಯತೇ । ನೈವಮ್ ಉತ್ಪತ್ತ್ಯಾದಿಶ್ರುತೀನಾಂ ನಿರಾಕಾಙ್ಕ್ಷಾರ್ಥಪ್ರತಿಪಾದನಸಾಮರ್ಥ್ಯಮಸ್ತಿ । ಪ್ರತ್ಯಕ್ಷಂ ತು ತಾಸಾಮ್ ಅನ್ಯಾರ್ಥತ್ವಂ ಸಮನುಗಮ್ಯತೇ। ತಥಾ ಹಿ "ತತ್ರೈತಚ್ಛುಙ್ಗಮುತ್ಪತಿತಂ ಸೋಮ್ಯ ವಿಜಾನೀಹಿ ನೇದಮಮೂಲಂ ಭವಿಷ್ಯತಿ" (ಛಾಂ. ೬–೮–೩) ಇತ್ಯುಪನ್ಯಸ್ಯ ಉದರ್ಕೇ ಸತ ಏವ ಏಕಸ್ಯ ಜಗನ್ಮೂಲಸ್ಯ

ವಿಜ್ಞೇಯತ್ವಂ ದರ್ಶಯತಿ "ಯತೋ ವಾ ಇಮಾನಿ ಭೂತಾನಿ ಜಾಯನ್ತೇ। ಯೇನಜಾತಾನಿ ಜೀವನ್ತಿ। ಯತ್ಪ್ರಯನ್ತ್ಯಭಿಸಂವಿಶನ್ತಿ। ತದ್ವಿಜಿಜ್ಞಾಸಸ್ವ। ತದ್ಬ್ರಹ್ಮ" (ತೈ. ೩-೧) ಇತಿ ಚ। ಏವಮ್ ಉತ್ಪತ್ತ್ಯಾದಿಶ್ರುತೀನಾಮ್ ಐಕಾತ್ಮ್ಯಾವಗಮಪರತ್ವಾತ್ ನಾನೇಕಶಕ್ತಿಯೋಗೋ ಬ್ರಹ್ಮಣಃ। ಅತಶ್ಚ ಗನ್ತ್ರವ್ಯತ್ವಾನುಪಪತ್ತಿಃ। "ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" (ಬೃ. ೪-೪-೬) ಇತಿ ಚ ಪರಸ್ಮಿನ್ ಬ್ರಹ್ಮಣಿ ಗತಿಂ ನಿವಾರಯತಿ। ತದ್ವ್ಯಾಖ್ಯಾತಮ್ "ಸ್ಪಷ್ಟೋ ಹ್ಯೇಕೇಷಾಮ್" (೪-೨-೧೩) ಇತ್ಯತ್ರ ॥

(ಭಾಷ್ಯಾರ್ಥ)

(ಆಕ್ಷೇಪ) :- ಜಗತ್ತಿನ ಉತ್ಪತ್ತಿಸ್ಥಿತಿಪ್ರಲಯಗಳಿಗೆ ಕಾರಣವಾಗಿರುವದೆಂದು ಶ್ರುತಿಯು ತಿಳಿಸುವದರಿಂದ ಬ್ರಹ್ಮಕ್ಕೆ ಅನೇಕ ಶಕ್ತಿಗಳುಂಟು.[1]

(ಪರಿಹಾರ) :- ಹಾಗಲ್ಲ. ಏಕೆಂದರೆ ವಿಶೇಷಗಳನ್ನು ಅಲ್ಲಗಳೆದಿರುವ ಶ್ರುತಿಗಳು ಮತ್ತೊಂದು ಪ್ರಯೋಜನಕ್ಕಾಗಿ ಬಂದಿಲ್ಲ.

(ಆಕ್ಷೇಪ) :- ಉತ್ಪತ್ತಿಯೇ ಮುಂತಾದ ಶ್ರುತಿಗಳಿಗೂ (ಅವು) ಮತ್ತೊಂದು ಪ್ರಯೋಜನಕ್ಕಾಗಿ ಬಂದಿಲ್ಲವೆಂಬುದು ಸಮಾನವೇ.

(ಪರಿಹಾರ) :- ಹಾಗಲ್ಲ. ಏಕೆಂದರೆ ಅವುಗಳು ಏಕತ್ವವನ್ನು ತಿಳಿಸುವದರಲ್ಲಿಯೇ ತಾತ್ಪರ್ಯವುಳ್ಳವಾಗಿವೆ.

(ಇದರ ವಿವರ) :- ಮಣ್ಣು ಮುಂತಾದ ದೃಷ್ಟಾಂತಗಳಿಂದ ಸದ್ರೂಪವಾದ ಬ್ರಹ್ಮವೊಂದೇ ಸತ್ಯವೆಂದೂ ವಿಕಾರವು ಅನೃತವೆಂದೂ ಪ್ರತಿಪಾದಿಸುತ್ತಿರುವ ಶಾಸ್ತ್ರವು ಉತ್ಪತ್ತ್ಯಾದಿಪರವಾಗಲಾರದು.

(ಆಕ್ಷೇಪ) :- ಉತ್ಪತ್ತ್ಯಾದಿಶ್ರುತಿಗಳು ವಿಶೇಷನಿರಾಕರಣೆಯನ್ನು ಮಾಡುವ ಶ್ರುತಿಗಳಿಗೆ ಶೇಷವೇ ಹೊರತು ಇತರ (ಶ್ರುತಿ)ಗಳು[2] ಮಿಕ್ಕ(ಶ್ರುತಿ)ಗಳಿಗೆ[3] ಶೇಷವಲ್ಲವೆಂದೂ (ಗೊತ್ತುಮಾಡುವದಾದರೂ) ಯಾವ ಕಾರಣದಿಂದ?

(ಸಮಾಧಾನ) :- (ಇದಕ್ಕೆ) ಹೇಳುತ್ತೇವೆ. ಏಕೆಂದರೆ ವಿಶೇಷಗಳನ್ನು ನಿರಾಕರಿಸುವ ಶ್ರುತಿಗಳು ಯಾವ ಆಕಾಂಕ್ಷೆಯೂ ಇಲ್ಲದವಾಗಿವೆ. ಆತ್ಮನಿಗೆ ಏಕತ್ವ, ನಿತ್ಯತ್ವ, ಶುದ್ಧತ್ವ –ಮುಂತಾದವುಗಳು ನಿಶ್ಚಯವಾದಮೇಲೆ ಮತ್ತೆ ಯಾವ ಆಕಾಂಕ್ಷೆಯೂ ಉಂಟಾಗುವದಿಲ್ಲವಷ್ಟೆ. ಏಕೆಂದರೆ "ಅಲ್ಲಿ ಏಕತ್ವವನ್ನು

1. ಆದ್ದರಿಂದ ಅದರಲ್ಲಿ ಕಾಲದೇಶಾದಿಕೃತವಿಶೇಷವಿರಬಹುದು ಎಂದು ಭಾವ. ಜನ್ಮಾದಿಕಾರಣತ್ವವು ಸತ್ಯವೇ ಎಂದು ಪೂರ್ವಪಕ್ಷಿಯ ಆಶಯ.

2. ವಿಶೇಷನಿರಾಕರಣೆಯನ್ನು ಮಾಡುವ ಶ್ರುತಿಗಳು.

3. ಉತ್ಪತ್ತ್ಯಾದಿಶ್ರುತಿಗಳಿಗೆ ಎಂದರ್ಥ. ವಿಶೇಷನಿರಾಕರಣೆಯನ್ನು ಮಾಡುವ ಶ್ರುತಿಗಳೇ ಪ್ರಧಾನವೆಂದೇಕೆ ಎಣಿಸಬೇಕು ? ಎಂದು ಆಕ್ಷೇಪ.

ಕಂಡುಕೊಂಡವನಿಗೆ ಯಾವ ಮೋಹವು, ಯಾವ ಶೋಕವು ?" (ಈ. ೭), "ಜನಕನೆ, ಅಭಯವನ್ನೇ ಪಡೆದಿದ್ದೀಯೆ" (ಬೃ. ೪-೨-೪), "ತಿಳಿದವನು ಏತಕ್ಕೂ ಅಂಜುವದಿಲ್ಲ. ನಾನು ಪುಣ್ಯವನ್ನೇಕೆ ಮಾಡಲಿಲ್ಲ, ನಾನು ಪಾಪ ವನ್ನೇಕೆ ಮಾಡಿದೆನು ? -ಎಂದು ಇವನನ್ನು ತಪಿಸುವದೇ ಇಲ್ಲ" (ತೈ. ೨-೯) ಎಂದು ಮುಂತಾಗಿರುವ ಶ್ರುತಿಗಳ (ಪ್ರಮಾಣದಿಂದ) ಪುರುಷಾರ್ಥವು ಮುಗಿಯಿ ತೆಂಬ ಬುದ್ಧಿಯೇ ಉಂಟಾಗುತ್ತದೆ. ಹೀಗೆಯೇ ಜ್ಞಾನಿಗಳಿಗೆ ತುಷ್ಟಿಯು ಅನುಭವವೇ -ಮುಂತಾದದ್ದು[1] (ಆಗುವದು) ಕಂಡುಬರುತ್ತದೆ.[2] ವಿಕಾರರೂಪ ವಾದ ಅನೃತದ ಅಭಿಸಂಧಿಯನ್ನು "ಯಾವನು ಇಲ್ಲಿ ಬೇರೆಬೇರೆಯಿರುವಂತೆ ಕಾಣುತ್ತಾನೋ ಅವನು ಸಾವಿನಮೇಲೆ ಸಾವನ್ನು ಹೊಂದುತ್ತಾನೆ" (ಬೃ. ೪-೪-೧೯) ಎಂದು ನಿಂದಿಸಿರುವದರಿಂದಲೂ (ಹೀಗೆ). ಆದ್ದರಿಂದ ವಿಶೇಷ ನಿರಾಕರಣೆಮಾಡುವ ಶ್ರುತಿಗಳು ಬೇರೆಯ(ವಾದ ಸೃಷ್ಟಿ)ಶ್ರುತಿಗಳಿಗೆ ಶೇಷವೆಂದು ನಿಶ್ಚಯಿಸುವದು ಆಗಲಾರದು. (ಆದರೆ) ಹೀಗೆ ಉತ್ಪತ್ತಿಯೇ ಮುಂತಾದ (ದ್ದನ್ನು ಹೇಳುವ) ಶ್ರುತಿಗಳಿಗೆ ಯಾವ ಆಕಾಂಕ್ಷೆಯೂ ಇಲ್ಲದ ಅರ್ಥವನ್ನು ಪ್ರತಿಪಾದನೆಮಾಡುವ ಸಾಮರ್ಥ್ಯವು ಇರುವದಿಲ್ಲ. ಅವುಗಳಿಗೆ ಮತ್ತೊಂದು ಪ್ರಯೋಜನವಿರುವದು ಪ್ರತ್ಯಕ್ಷವಾಗಿಯೇ ಕಂಡುಬರುತ್ತದೆ. ಹೇಗೆಂದರೆ, "ಇಲ್ಲಿ ಈ ಕಾರ್ಯವು ಹುಟ್ಟಿರುತ್ತದೆ. ಸೋಮ್ಯನೆ, (ಇದನ್ನು) ತಿಳಿದುಕೊ, ಇದು ಮೂಲವಿಲ್ಲದೆ ಇರಲಾರದು" (ಛಾಂ. ೬-೮-೩) ಎಂದು ಪ್ರಾರಂಭಿಸಿ ಉಪಸಂಹಾರದಲ್ಲಿ ಸದ್ರೂಪವಾದ ಜಗನ್ಮೂಲವೊಂದನ್ನೇ ಅರಿತುಕೊಳ್ಳಬೇಕೆಂದು ತಿಳಿಸಿರುತ್ತದೆ. "ಈ ಭೂತಗಳು ಏತರಿಂದ ಹುಟ್ಟುತ್ತವೆಯೋ ಯಾವದರಿಂದ ಹುಟ್ಟಿದವು ಬದುಕಿರುತ್ತವೆಯೋ ಯಾವದನ್ನು ಕುರಿತುಹೋಗಿ ಸೇರಿಕೊಳ್ಳು ತ್ತವೆಯೋ ಅದನ್ನು ತಿಳಿದುಕೊ. ಅದು ಬ್ರಹ್ಮವು" (ತೈ. ೩-೧) ಎಂದೂ (ಅದೇ ವಿಜ್ಞೇಯವೆಂದು ಹೇಳಿದೆ). ಹೀಗೆ ಉತ್ಪತ್ತ್ಯಾದಿಶ್ರುತಿಗಳು ಐಕಾತ್ಮ್ಯವನ್ನು ತಿಳಿಸುವದರಲ್ಲಿ ತಾತ್ಪರ್ಯವುಳ್ಳವಾಗಿರುವದರಿಂದ ಬ್ರಹ್ಮಕ್ಕೆ ಅನೇಕ ಶಕ್ತಿಗಳ ಸಂಬಂಧವಿದೆ (ಎನ್ನುವದು ಸರಿ)ಯಲ್ಲ. ಆದ್ದರಿಂದಲೂ (ಅದು) ಗಂತವ್ಯ ವೆಂಬುದು ಹೊಂದುವದಿಲ್ಲ. "ಅವನ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ; (ಅವನು) ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಸೇರಿಹೋಗುತ್ತಾನೆ" (ಬೃ.೪-೨-೧೩) ಎಂದೂ ಪರಬ್ರಹ್ಮದಲ್ಲಿ ಗತಿಯನ್ನು ನಿವಾರಿಸಿರುತ್ತದೆ. ಇದನ್ನು "ಸ್ಪಷ್ಟೋ ಹ್ಯೇಕೇಷಾಮ್" (೪-೨-೧೩) ಎಂಬಲ್ಲಿ ವಿವರಿಸಲಾಗಿದೆ.

---

1. ಮುಂತಾದದ್ದು ಎಂದರೆ ಅಭಯ, ಶೋಕಮೋಹಗಳಿಲ್ಲದಿರುವದು ಮುಂತಾದದ್ದು

2. ಶ್ರುತಿಯು ಹೇಳುವಂತೆ ಅನುಭವವೂ ಆಗುವದರಿಂದ ಶ್ರುತಿಯು ಅರ್ಥವಾದ ವಲ್ಲ, ಪ್ರಮಾಣವೇ ಎಂದು ಭಾವ.

# ಗತಿಕಲ್ಪನೆಯಲ್ಲಿ ದೋಷಗಳು

(ಭಾಷ್ಯ)

೫೮೪. ಗತಿಕಲ್ಪನಾಯಾಂ ಚ ಗನ್ತಾ ಜೀವಃ ಗನ್ತವ್ಯಸ್ಯ ಬ್ರಹ್ಮಣಃ ಅವಯವಃ, ವಿಕಾರೋ ವಾ ಅನ್ಯೋ ವಾ ತತಃ ಸ್ಯಾತ್। ಅತ್ಯನ್ತತಾದಾತ್ಮ್ಯೇ ಗಮನಾನುಪಪತ್ತೇಃ। ಯದ್ಯೇವಂ ತತಃ ಕಿಂ ಸ್ಯಾತ್ ?. ಉಚ್ಯತೇ। ಯದ್ಯೇಕದೇಶಃ, ತೇನೈಕದೇಶಿನೋ ನಿತ್ಯಪ್ರಾಪ್ತತ್ವಾತ್ ನ ಪುನರ್ಬ್ರಹ್ಮಗಮನಮ್ ಉಪಪದ್ಯತೇ। ಏಕದೇಶೈಕದೇಶಿತ್ವಕಲ್ಪನಾ ಚ ಬ್ರಹ್ಮಣಿ ಅನುಪಪನ್ನಾ। ನಿರವಯವತ್ವಪ್ರಸಿದ್ಧೇಃ। ವಿಕಾರಪಕ್ಷೇಽಪಿ ಏತತ್ ತುಲ್ಯಮ್। ವಿಕಾರೇಣಾಪಿ ವಿಕಾರಿಣೋ ನಿತ್ಯಪ್ರಾಪ್ತತ್ವಾತ್। ನ ಹಿ ಘಟೋ ಮೃದಾತ್ಮತಾಂ ಪರಿತ್ಯಜ್ಯ ಅವತಿಷ್ಠತೇ। ಪರಿತ್ಯಾಗೇ ವಾ ಅಭಾವಪ್ರಾಪ್ತೇಃ। ವಿಕಾರಾವಯವಪಕ್ಷಯೋಶ್ಚ ತದ್ವತಃ ಸ್ಥಿರತ್ವಾತ್ ಬ್ರಹ್ಮಣಃ ಸಂಸಾರಗಮನಮಪಿ ಅನವಕ್ಲಿಪ್ತಮ್। ಅಥ ಅನ್ಯ ಏವ ಜೀವೋ ಬ್ರಹ್ಮಣಃ। ಸೋಽಣುಃ, ವ್ಯಾಪೀ, ಮಧ್ಯಮಪರಿಮಾಣೋ ವಾ ಭವಿತುಮರ್ಹತಿ। ವ್ಯಾಪಿತ್ವೇ ಗಮನಾನುಪಪತ್ತಿಃ। ಮಧ್ಯಮಪರಿಮಾಣತ್ವೇ ಚ ಅನಿತ್ಯತ್ವಪ್ರಸಙ್ಗಃ। ಅಣುತ್ವೇ ಕೃತ್ಸ್ನಶರೀರವೇದನಾನುಪಪತ್ತಿಃ। ಪ್ರತಿಷಿದ್ಧೇ ಚ ಅಣುತ್ವಮಧ್ಯಮಪರಿಮಾಣತ್ವೇ ವಿಸ್ತರೇಣ ಪುರಸ್ತಾತ್। ಪರಸ್ಮಾಚ್ಚ ಅನ್ಯತ್ವೇ ಜೀವಸ್ಯ "ತತ್ತ್ವಮಸಿ" (ಛಾಂ. ೬-೮-೭) ಇತ್ಯಾದಿಶಾಸ್ತ್ರಬಾಧಪ್ರಸಙ್ಗಃ। ವಿಕಾರಾವಯವಪಕ್ಷಯೋರಪಿ ಸಮಾನೋಽಯಂ ದೋಷಃ। ವಿಕಾರಾವಯವಯೋಸ್ತದ್ವತೋಽನನ್ಯತ್ವಾತ್ ಅದೋಷಃ ಇತಿ ಚೇತ್। ನ। ಮುಖ್ಯೈಕತ್ವಾನುಪಪತ್ತೇಃ। ಸರ್ವೇಷ್ವೇತೇಷು ಪಕ್ಷೇಷು ಅನಿರ್ಮೋಕ್ಷಪ್ರಸಙ್ಗಃ। ಸಂಸಾರ್ಯಾತ್ಮತ್ವಾನಿವೃತ್ತೇಃ। ನಿವೃತ್ತೌ ವಾ ಸ್ವರೂಪನಾಶಪ್ರಸಙ್ಗಃ। ಬ್ರಹ್ಮಾತ್ಮತ್ವಾನಭ್ಯುಪಗಮಾಚ್ಚ ॥

(ಭಾಷ್ಯಾರ್ಥ)

ಗತಿಯನ್ನು ಕಲ್ಪಿಸಿದರೆ ಗಂತೃವಾದ ಜೀವನು ಗಂತವ್ಯವಾಗಿರುವ ಬ್ರಹ್ಮದ ಅವಯವವೋ, ವಿಕಾರವೋ, ಅದಕ್ಕಿಂತ ಬೇರೆಯೋ ಆಗಿರಬೇಕು. ಏಕೆಂದರೆ ಅತ್ಯಂತವಾಗಿ (ಇವೆರಡಕ್ಕೂ) ತಾದಾತ್ಮ್ಯವಿದ್ದರೆ (ಬ್ರಹ್ಮದ ಬಳಿಗೆ) ಹೋಗುವದೆಂಬುದು ಹೊಂದುವದಿಲ್ಲ.

(ಪ್ರಶ್ನೆ) :- ಹೀಗೆ ಆದರೆ ಅದರಿಂದ ಏನಾಗುವದು ?

(ಉತ್ತರ) :- ಹೇಳುತ್ತೇವೆ. (ಮೊದಲನೆಯದಾಗಿ) ಏಕದೇಶವು[1] ಎಂದರೆ ಅವನಿಗೆ ಏಕದೇಶಿಯು ನಿತ್ಯಪ್ರಾಪ್ತವಾಗಿರುವದರಿಂದ ಮತ್ತೆ ಬ್ರಹ್ಮದ

1. ಅವಯವವು.

ಬಳಿಗೆ ಹೋಗುವದೆಂಬುದು ಹೊಂದುವದಿಲ್ಲ. ಬ್ರಹ್ಮದಲ್ಲಿ ಏಕದೇಶ, ಏಕದೇಶಿ– ಎಂಬ ವಿಭಾಗವನ್ನು ಕಲ್ಪಿಸುವದೂ ಯುಕ್ತವಲ್ಲ, ಏಕೆಂದರೆ (ಅದು) ನಿರವಯವ ವೆಂದು ಪ್ರಸಿದ್ಧವಾಗಿರುತ್ತದೆ. ವಿಕಾರಪಕ್ಷದಲ್ಲಿಯೂ ಇದು ಸಮಾನವಾಗಿದೆ. ಏಕೆಂದರೆ ವಿಕಾರಿಗೂ ವಿಕಾರಿಯಾದದ್ದು ನಿತ್ಯಪ್ರಾಪ್ತವಾಗಿರುತ್ತದೆ. ಏಕೆಂದರೆ ಗಡಿಗೆಯು ಮಣ್ಣಿನ ಸ್ವರೂಪವನ್ನು ಬಿಟ್ಟು ಇರುವದೇ ಇಲ್ಲವಷ್ಟೆ. ಏಕೆಂದರೆ (ಒಂದುವೇಳೆ) ಬಿಟ್ಟಿದ್ದರೆ (ಅದು) ಅಭಾವವನ್ನೇ ಹೊಂದುತ್ತದೆ. ವಿಕಾರ, ಅವಯವ– ಎಂಬೀ (ಎರಡು) ಪಕ್ಷಗಳಲ್ಲಿ ಆ (ವಿಕಾರಾವಯವಗಳುಳ್ಳ) ಬ್ರಹ್ಮವು ಸ್ಥಿರವಾಗಿರುವದರಿಂದ ಸಂಸಾರವನ್ನು ಹೊಂದುವದೆಂಬುದೂ ಯುಕ್ತ ವಾಗುವದಿಲ್ಲ.[1] ಇನ್ನು ಜೀವನು ಬ್ರಹ್ಮಕ್ಕಿಂತ ಬೇರೆಯೇ ಎನ್ನುವದಾದರೆ ಆ (ಜೀವನು) ಅಣುವೋ ವ್ಯಾಪಿಯೋ ಮಧ್ಯಮಪರಿಮಾಣದವನೋ ಆಗಿರ ಬೇಕಷ್ಟೆ. ವ್ಯಾಪಿಯಾಗಿದ್ದರೆ (ಅವನಿಗೆ) ಗಮನವು ಹೊಂದುವದಿಲ್ಲ. ಮಧ್ಯಮಪರಿಮಾಣದವನಾದರೆ ಅನಿತ್ಯನಾಗಬೇಕಾಗುವದು. ಅಣುವಾದರೆ ಇಡಿಯ ಶರೀರದ ವೇದನೆಯು (ಅವನಿಗೆ) ಹೊಂದುವದಿಲ್ಲ. (ಜೀವನು) ಅಣು, ಮಧ್ಯಮಪರಿಮಾಣದವನು (ಎಂಬೀ ಪಕ್ಷಗಳನ್ನು) ವಿಸ್ತಾರವಾಗಿ ಹಿಂದೆ[2] ಖಂಡಿಸಿಯೂ ಇದೆ. ಪರಮಾತ್ಮನಿಗಿಂತ ಜೀವನು ಬೇರೆಯಾದರೆ "ಅದು ನೀನಾಗಿರುವೆ" (ಛಾಂ. ೬–೮–೭) ಮುಂತಾದ ಶಾಸ್ತ್ರವು ಬಾಧಿತವಾಗುವ ಪ್ರಸಂಗವುಂಟಾಗುವದು. ವಿಕಾರಾವಯವಪಕ್ಷಗಳಲ್ಲಿಯೂ ಈ ದೋಷವು ಸಮಾನವಾಗಿರುತ್ತದೆ.

(ಆಕ್ಷೇಪ) :– ವಿಕಾರಾವಯವಗಳು ಅವುಗಳನ್ನುಳ್ಳ (ಬ್ರಹ್ಮಕ್ಕಿಂತ) ಬೇರೆಯಲ್ಲವಾದ್ದರಿಂದ ದೋಷವಿಲ್ಲ ಎಂದರೊ ?

(ಪರಿಹಾರ) :– ಹಾಗಲ್ಲ, ಏಕೆಂದರೆ (ಆಗ) ಮುಖ್ಯಾರ್ಥದ ಏಕತ್ವವು ಹೊಂದುವದಿಲ್ಲ.

ಈ ಎಲ್ಲಾ ಪಕ್ಷಗಳಲ್ಲಿಯೂ ಮೋಕ್ಷವು ಆಗುವದೇ ಇಲ್ಲವೆಂಬ ಪ್ರಸಂಗವೂ (ಉಂಟು). ಏಕೆಂದರೆ ಸಂಸಾರಿಸ್ವರೂಪದ ನಿವೃತ್ತಿಯೇ ಆಗುವದಿಲ್ಲ. ಅಥವಾ (ಅದರ) ನಿವೃತ್ತಿಯಾದರೆ ಸ್ವರೂಪಕ್ಕೆ ನಾಶವಾಗುವ ಪ್ರಸಂಗವು ಬರುವದು. ಬ್ರಹ್ಮಸ್ವರೂಪವೇ ತಾನೆಂಬುದನ್ನು ಒಪ್ಪದಿರುವದರಿಂದಲೂ (ಈ ದೋಷವು ಬರುವದು).

---

1. ಬ್ರಹ್ಮವು ಯಾವಾಗಲೂ ಸಾವಯವವಾಗಿ ಸವಿಕಾರವಾಗಿಯೇ ಇರುವದರಿಂದ ಒಂದು ಕಾಲದಲ್ಲಿ ಅದು ಸಂಸಾರವನ್ನು ಹೊಂದಿತೆಂಬುದು ಯುಕ್ತವಾಗುವದಿಲ್ಲ ; ಆದ್ದ ರಿಂದ ಮೋಕ್ಷಶಾಸ್ತ್ರವೂ ವ್ಯರ್ಥವಾಗುತ್ತದೆ.

2. ೨–೩–೩೪, ೨–೩–೨೯ ಈ ಸೂತ್ರಗಳ ಭಾಷ್ಯಗಳನ್ನು ನೋಡಿರಿ.

## ಕರ್ಮದಿಂದಲೇ ಮೋಕ್ಷವೆಂಬ ವಾದದ ತಿರಸ್ಕಾರ

(ಭಾಷ್ಯ)

೫೮೫. ಯತ್ತು ಕೈಶ್ಚಿತ್ ಜಲ್ಪ್ಯತೇ ನಿತ್ಯಾನಿ ನೈಮಿತ್ತಿಕಾನಿ[1] ಕರ್ಮಾಣಿ ಅನುಷ್ಠೀಯನ್ತೇ ಪ್ರತ್ಯವಾಯಾನುತ್ಪತ್ತಯೇ । ಕಾಮ್ಯಾನಿ ಪ್ರತಿಷಿದ್ಧಾನಿ ಚ ಪರಿಹ್ರಿಯನ್ತೇ ಸ್ವರ್ಗನರಕಾನಾವಾಪ್ತಯೇ । ಸಾಂಪ್ರತದೇಹೋಪಭೋಗ್ಯಾನಿ ಚ ಕರ್ಮಾಣಿ ಉಪಭೋಗೇನೈವ ಕ್ಷಪ್ಯನ್ತೇ ಇತ್ಯತೋ ವರ್ತಮಾನದೇಹಪಾತಾದೂರ್ಧ್ವಂ ದೇಹಾನ್ತರಪ್ರತಿಸಂಧಾನಕಾರಣಾಭಾವಾತ್ ಸ್ವರೂಪಾವಸ್ಥಾನಲಕ್ಷಣಂ ಕೈವಲ್ಯಂ ವಿನಾಪಿ ಬ್ರಹ್ಮಾತ್ಮತಯಾ ಏವಂವೃತ್ತಸ್ಯ ಸೇತ್ಸ್ಯತೀತಿ । ತದಸತ್ । ಪ್ರಮಾಣಾಭಾವಾತ್ । ನ ಹ್ಯೇತಚ್ಛಾಸ್ತ್ರೇಣ ಕೇನಚಿತ್ ಪ್ರತಿಪಾದಿತಂ ಮೋಕ್ಷಾರ್ಥೀ ಇತ್ಥಂ ಸಮಾಚರೇತ್ ಇತಿ । ಸ್ವಮನೀಷಯಾ ತ್ವೇತತ್ತರ್ಕಿತಮ್ ಯಸ್ಮಾತ್ ಕರ್ಮನಿಮಿತ್ತಃ ಸಂಸಾರಃ, ತಸ್ಮಾತ್ ನಿಮಿತ್ತಾಭಾವಾತ್ ನ ಭವಿಷ್ಯತೀತಿ । ನ ಚೈತತ್ ತರ್ಕಯಿತುಮಪಿ ಶಕ್ಯತೇ । ನಿಮಿತ್ತಾಭಾವಸ್ಯ ದುರ್ಜ್ಞಾನತ್ವಾತ್ । ಬಹೂನಿ ಹಿ ಕರ್ಮಾಣಿ ಜಾತ್ಯನ್ತರಸಂಚಿತಾನಿ ಇಷ್ಟಾನಿಷ್ಟವಿಪಾಕಾನಿ ಏಕೈಕಸ್ಯ ಜನ್ತೋಃ ಸಂಭಾವ್ಯನ್ತೇ । ತೇಷಾಂ ವಿರುದ್ಧಫಲಾನಾಂ ಯುಗಪದುಪಭೋಗಾಸಂಭವಾತ್ ಕಾನಿಚಿತ್ ಲಬ್ಧಾವಸರಾಣಿ ಇದಂ ಜನ್ಮ ನಿರ್ಮಿಮತೇ । ಕಾನಿಚಿತ್ತು ದೇಶಕಾಲನಿಮಿತ್ತಪ್ರತೀಕ್ಷಾಣಿ ಆಸತೇ । ಇತ್ಯತಸ್ತೇಷಾಮವಶಿಷ್ಟಾನಾಂ ಸಾಂಪ್ರತೇನೋಪಭೋಗೇನ ಕ್ಷಪಣಾಸಂಭವಾತ್ ನ ಯಥಾವರ್ಣಿತಚರಿತಸ್ಯಾಪಿ ವರ್ತಮಾನದೇಹಪಾತೇ ದೇಹಾನ್ತರನಿಮಿತ್ತಾಭಾವಃ ಶಕ್ಯತೇ ನಿಶ್ಚೇತುಮ್ । ಕರ್ಮಶೇಷಸದ್ಭಾವಸಿದ್ಧಿಶ್ಚ । "ತದ್ಯ ಇಹ ರಮಣೀಯಚರಣಾಃ" (ಛಾಂ. ೫-೧೦-೭), "ತತಃ ಶೇಷೇಣ" (ಗೌ. ಧ. ೨-೨-೨೯) ಇತ್ಯಾದಿಶ್ರುತಿಸ್ಮೃತಿಭ್ಯಃ । ಸ್ಯಾದೇತತ್ । ನಿತ್ಯನೈಮಿತ್ತಿಕಾನಿ ತೇಷಾಂ ಕ್ಷೇಪಕಾಣಿ ಭವಿಷ್ಯನ್ತೀತಿ । ತನ್ನ । ವಿರೋಧಾಭಾವಾತ್ । ಸತಿ ಹಿ ವಿರೋಧೇ ಕ್ಷೇಪ್ಯಕ್ಷೇಪಕಭಾವೋ ಭವತಿ । ನ ಚ ಜನ್ಮಾನ್ತರಸಂಚಿತಾನಾಂ ಸುಕೃತಾನಾಂ ನಿತ್ಯನೈಮಿತ್ತಿಕೈರಸ್ತಿ ವಿರೋಧಃ । ಶುದ್ಧಿರೂಪತ್ವಾವಿಶೇಷಾತ್ । ದುರಿತಾನಾಂ ತು ಅಶುದ್ಧಿರೂಪತ್ವಾತ್ ಸತಿ ವಿರೋಧೇ ಭವತು ಕ್ಷಪಣಮ್ । ನ ತು ತಾವತಾ ದೇಹಾನ್ತರನಿಮಿತ್ತಾಭಾವಸಿದ್ಧಿಃ । ಸುಕೃತನಿಮಿತ್ತತ್ವೋಪಪತ್ತೇಃ । ದುಶ್ಚರಿತಸ್ಯಾಪಿ ಅಶೇಷಕ್ಷಪಣಾನವಗಮಾತ್ । ನ ಚ ನಿತ್ಯನೈಮಿತ್ತಿಕಾನುಷ್ಠಾನಾತ್ ಪ್ರತ್ಯವಾಯಾನುತ್ಪತ್ತಿಮಾತ್ರಮ್, ನ ಪುನಃ ಫಲಾನ್ತರೋತ್ಪತ್ತಿರಿತಿ ಪ್ರಮಾಣಮಸ್ತಿ । ಫಲಾನ್ತರಸ್ಯಾಪ್ಯನುನಿಷ್ಪಾದಿನಃ ಸಂಭವಾತ್ । ಸ್ಮರತಿ ಹ್ಯಾಪಸ್ತಮ್ಬಃ "ತದ್ಯಥಾಮ್ರೇ ಫಲಾರ್ಥೇ

1. ಇಲ್ಲಿ ಒಂದು 'ಚ' ಇರಬೇಕು ; ಅಥವಾ ನಿತ್ಯನೈಮಿತ್ತಿಕಾನಿ ಎಂದು ಇದ್ದರೂ ಚೆನ್ನಾಗುತ್ತದೆ.

ನಿಮಿತ್ತೇ ಛಾಯಾಗನ್ಧಾವನೂತ್ಪದ್ಯೇತೇ ಏವಂ ಧರ್ಮಂ ಚರ್ಯಮಾಣ ಮರ್ಥಾ ಅನೂತ್ಪದ್ಯನ್ತೇ” (ಆ. ಧ. ೧-೭-೨೦-೩)[1] ಇತಿ। ನ ಚ ಸತಿ ಸಮ್ಯಗ್ದರ್ಶನೇ ಸರ್ವಾತ್ಮನಾ ಕಾಮ್ಯಪ್ರತಿಷಿದ್ಧವರ್ಜನಂ ಜನ್ಮಪ್ರಾಯಣಾನ್ತಕಾಲೇ ಕೇನಚಿತ್ ಪ್ರತಿಜ್ಞಾತುಂ ಶಕ್ಯಮ್ । ಸುನಿಪುಣಾನಾಮಪಿ ಸೂಕ್ಷ್ಮಾಪರಾಧದರ್ಶನಾತ್। ಸಂಶಯಿತವ್ಯಂ ತು ಭವತಿ। ತಥಾಪಿ ನಿಮಿತ್ತಾಭಾವಸ್ಯ ದುರ್ಜ್ಞಾನತ್ವಮೇವ। ನ ಚ ಅನಭ್ಯುಪಗಮ್ಯಮಾನೇ ಜ್ಞಾನಗಮ್ಯೇ ಬ್ರಹ್ಮಾತ್ಮತ್ವೇ ಕರ್ತೃತ್ವಭೋಕ್ತೃತ್ವಸ್ವಭಾವಸ್ಯ ಆತ್ಮನಃ ಕೈವಲ್ಯಮ್ ಆಕಾಙ್ಕ್ಷಿತುಂ ಶಕ್ಯಮ್ । ಅಗ್ನ್ಯೌಷ್ಣ್ಯವತ್ ಸ್ವಭಾವಸ್ಯ ಅಪರಿಹಾರ್ಯತ್ವಾತ್। ಸ್ಯಾದೇತತ್। ಕರ್ತೃತ್ವಭೋಕ್ತೃತ್ವಕಾರ್ಯಮ್ ಅನರ್ಥೋ ನ ತಚ್ಛಕ್ತಿಃ। ತೇನ ಶಕ್ತ್ಯವಸ್ಥಾನೇಽಪಿ ಕಾರ್ಯಪರಿಹಾರಾತ್ ಉಪಪನ್ನೋ ಮೋಕ್ಷಃ ಇತಿ। ತಚ್ಚ ನ। ಶಕ್ತಿಸದ್ಭಾವೇ ಕಾರ್ಯಪ್ರಸವಸ್ಯ ದುರ್ನಿವಾರತ್ವಾತ। ಅಥಾಪಿ ಸ್ಯಾತ್ ನ ಕೇವಲಾ ಶಕ್ತಿಃ ಕಾರ್ಯಮಾರಭತೇ ಅನಪೇಕ್ಷ್ಯ ಅನ್ಯಾನಿ ನಿಮಿತ್ತಾನಿ। ಅತಃ ಏಕಾಕಿನೀ ಸಾ ಸ್ಥಿತಾಪಿ ನಾಪರಾಧ್ಯತಿ ಇತಿ। ತಚ್ಚ ನ। ನಿಮಿತ್ತಾನಾಮಪಿ ಶಕ್ತಿಲಕ್ಷಣೇನ ಸಂಬನ್ಧೇನ ನಿತ್ಯಸಂಬದ್ಧತ್ವಾತ್। ತಸ್ಮಾತ್ ಕರ್ತೃತ್ವಭೋಕ್ತೃತ್ವಸ್ವಭಾವೇ ಸತಿ ಆತ್ಮನಿ, ಅಸತ್ಯಾಂ ವಿದ್ಯಾಗಮ್ಯಾಯಾಂ ಬ್ರಹ್ಮಾತ್ಮತಾಯಾಂ ನ ಕಥಂಚನ ಮೋಕ್ಷಂ ಪ್ರತ್ಯಾಶಾ ಅಸ್ತಿ। ಶ್ರುತಿಶ್ಚ "ನಾನ್ಯಃ ಪನ್ಥಾ ವಿದ್ಯತೇಽಯನಾಯ।'' (ಶ್ವೇ. ೩-೮) ಇತಿ ಜ್ಞಾನಾದನ್ಯಂ ಮೋಕ್ಷಮಾರ್ಗಂ ವಾರಯತಿ। ಪರಸ್ಮಾತ್ ಅನನ್ಯತ್ವೇಽಪಿ ಜೀವಸ್ಯ ಸರ್ವವ್ಯವಹಾರಲೋಪಪ್ರಸಙ್ಗಃ। ಪ್ರತ್ಯಕ್ಷಾದಿಪ್ರಮಾಣಾಪ್ರವೃತ್ತೇಃ ಇತಿ ಚೇತ್। ನ। ಪ್ರಾಕ್ ಪ್ರಬೋಧಾತ್ ಸ್ವಪ್ನವ್ಯವಹಾರವತ್ ತದುಪಪತ್ತೇಃ। ಶಾಸ್ತ್ರಂ ಚ "ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ" (ಬೃ.೪-೫-೧೫) ಇತ್ಯಾದಿನಾ ಅಪ್ರಬುದ್ಧವಿಷಯೇ ಪ್ರತ್ಯಕ್ಷಾದಿವ್ಯವಹಾರಮ್ ಉಕ್ತ್ವಾ ಪುನಃ ಪ್ರಬುದ್ಧವಿಷಯೇ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ. ೪-೫-೧೫) ಇತ್ಯಾದಿನಾ ತದಭಾವಂ ದರ್ಶಯತಿ ॥

(ಭಾಷ್ಯಾರ್ಥ)

ಇನ್ನು ಕೆಲವರು ನಿತ್ಯನೈಮಿತ್ತಿಕಕರ್ಮಗಳನ್ನು ಅನುಷ್ಠಾನಮಾಡುವದರಿಂದ ಪ್ರತ್ಯವಾಯವು ಉಂಟಾಗುವದಿಲ್ಲ; ಕಾಮ್ಯ(ಕರ್ಮ)ಗಳನ್ನೂ ನಿಷಿದ್ಧ ಕರ್ಮಗಳನ್ನೂ ಬಿಟ್ಟುಬಿಡುವದರಿಂದ ಸ್ವರ್ಗನರಕಗಳ ಪ್ರಾಪ್ತಿಯಾಗುವದಿ.. ಈಗಿನ ದೇಹದಲ್ಲಿ ಉಪಭೋಗಿಸಬೇಕಾಗಿರುವ ಕರ್ಮಗಳನ್ನು ಉಪಭೋಗದಿಂದಲೇ ಕ್ಷಯಿಸಿಬಿಟ್ಟರೆ (ಆಯಿತು). ಇದರಿಂದ ಈಗಿನ ದೇಹವು ಬಿದ್ದಮೇಲೆ ಮತ್ತೊಂದು ದೇಹವನ್ನು ಪಡೆಯುವ ಕಾರಣವಿಲ್ಲದ್ದರಿಂದ ಸ್ವರೂಪದಲ್ಲಿಯೇ

1. 'ಛಾಯಾಗನ್ಧ ಇತ್ಯನೂತ್ಪದ್ಯೇತೇ' ಎಂದು ಮೈ॥ ಪಾಠ.

ನಿಂತುಬಿಡುವದೆಂಬ ಕೈವಲ್ಯವು ಬ್ರಹ್ಮಾತ್ಮತ್ವವಿಲ್ಲದೆಯೂ ಈ ನಡೆಯುವವನಿಗೆ ಸಿದ್ಧವಾಗುವದು– ಎಂದು ಹೇಳುತ್ತಾರಷ್ಟೆ[1].

ಇದು ಸರಿಯಲ್ಲ. ಏಕೆಂದರೆ ಪ್ರಮಾಣವಿಲ್ಲ. (ಇದರ ವಿವರ): ಮೋಕ್ಷವನ್ನು ಬಯಸುವವನು ಹೀಗೆ ಮಾಡಬೇಕು ಎಂಬುದು ಯಾವ ಶಾಸ್ತ್ರದಲ್ಲಿಯೂ ಪ್ರತಿಪಾದಿತವಾಗಿರುವದಿಲ್ಲ: ಮತ್ತೇನೆಂದರೆ ಸಂಸಾರವು ಕರ್ಮನಿಮಿತ್ತವಷ್ಟೆ, ಆದ್ದರಿಂದ (ಆ) ನಿಮಿತ್ತವಿಲ್ಲದಿದ್ದರೆ (ಅದೂ) ಇಲ್ಲವಾಗುವದು– ಎಂದು ಸ್ವಬುದ್ಧಿಯಿಂದಲೇ ತರ್ಕಿಸಿದ್ದಾಗಿದೆ. ಅಲ್ಲವೆ? ಇದನ್ನು ತರ್ಕಿಸುವದಕ್ಕೂ ಆಗುವಂತಿಲ್ಲ; ಏಕೆಂದರೆ ನಿಮಿತ್ತವಿಲ್ಲವೆಂಬುದನ್ನು ತಿಳಿಯುವದಕ್ಕೆ ಆಗುವದಿಲ್ಲ. ಹೇಗೆಂದರೆ ಬೇರೆ ಜನ್ಮಗಳಲ್ಲಿ ಕೂಡಿಹಾಕಿರುವ ಇಷ್ಟಾನಿಷ್ಟವಿಪಾಕವುಳ್ಳ ಅನೇಕ ಕರ್ಮಗಳು ಒಬ್ಬೊಬ್ಬ ಜೀವನಿಗೂ ಇರಬಹುದಾಗಿದೆ. ಆ ವಿರುದ್ಧ ಫಲವುಳ್ಳ (ಕರ್ಮಗಳನ್ನು) ಒಮ್ಮೆಗೇ ಉಪಭೋಗಿಸುವದು ಆಗಲಾರದಾದ್ದರಿಂದ ಅವಕಾಶವು ಸಿಕ್ಕಿದ ಕೆಲವು (ಕರ್ಮಗಳು) ಈ ಜನ್ಮವನ್ನು ನಿರ್ಮಿಸುತ್ತವೆ, ಮತ್ತೆ ಕೆಲವು ದೇಶಕಾಲನಿಮಿತ್ತಗಳನ್ನು ಎದುರುನೋಡಿಕೊಂಡು (ಹಾಗೆಯೇ) ಇರುತ್ತವೆ. ಆದ್ದರಿಂದ ಆ ಉಳಿದಿರುವ (ಕರ್ಮಗಳನ್ನು) ಈಗಿನ ಉಪಭೋಗದಿಂದ ಕ್ಷಯಿಸುವದು ಆಗಲಾರದಾದ್ದರಿಂದ ಮೇಲೆ ವರ್ಣಿಸಿರುವ ನಡತೆಯುವನಿಗೂ ಈಗಿನ ದೇಹವು ಬಿದ್ದುಹೋದಮೇಲೆ ಮತ್ತೊಂದು ದೇಹಕ್ಕೆ ನಿಮಿತ್ತವಿಲ್ಲವೆಂದು ನಿಶ್ಚಯಿಸುವದು ಶಕ್ಯವಲ್ಲ. ಇದಲ್ಲದೆ ಕರ್ಮಶೇಷವೂ ಇರುತ್ತದೆ ಎಂಬುದು "ಅವರಲ್ಲಿ ಯಾರು ಇಲ್ಲಿ ಒಳ್ಳೆಯ ಕರ್ಮಗಳನ್ನು ಮಾಡಿರುವರೋ ....." (ಛಾಂ. ೫–೧೦–೭), "ಅದರಮೇಲೆ ಉಳಿದಿರುವ (ಕರ್ಮದಿಂದ)..." (ಗೌ.ಧ. ೨–೨–೨೯) ಮುಂತಾದ ಶ್ರುತಿಸ್ಮೃತಿಗಳಿಂದ ಸಿದ್ಧಿಸುತ್ತದೆ.

(ಪೂರ್ವಪಕ್ಷಿಯು) ಮತವು ಹೀಗಿರಬಹುದು: ನಿತ್ಯನೈಮಿತ್ತಿಕಕರ್ಮಗಳೇ ಅವುಗಳಿಗೆ ನಾಶಕಗಳಾಗುತ್ತವೆ ಎಂದು (ಅವನೆನ್ನಬಹುದು). ಅದು ಸರಿಯಲ್ಲ; ಏಕೆಂದರೆ ವಿರೋಧವಿರುವದಿಲ್ಲ. (ಇದರ ವಿವರ): ವಿರೋಧವಿದ್ದರಲ್ಲವೆ, ನಾಶ್ಯನಾಶಕಭಾವವಿರುವದು? ಜನ್ಮಾಂತರಗಳಲ್ಲಿ ಕೂಡಿಹಾಕಿಕೊಂಡಿರುವ ಪುಣ್ಯಗಳಿಗೆ ನಿತ್ಯನೈಮಿತ್ತಿಕಕರ್ಮಗಳೊಡನೆ ವಿರೋಧವಿರುವದಿಲ್ಲ. ಏಕೆಂದರೆ (ಇವೆರಡಕ್ಕೂ) ಶುದ್ಧರೂಪದವುಗಳಾಗಿವೆ ಎಂಬುದು ಸಮಾನವಾಗಿರುತ್ತದೆ. ಪಾಪಗಳಾದರೆ ಅಶುದ್ಧರೂಪದವುಗಳಾಗಿರುವದರಿಂದ ವಿರೋಧವಿದ್ದರೆ ಕ್ಷಯ

---

1. ಇಲ್ಲಿ ಅನುವಾದಮಾಡಿಕೊಂಡಿರುವ ಮೀಮಾಂಸಕರ ಪೂರ್ವಪಕ್ಷವನ್ನು ತೈ. ಭಾ. ದ ಅವತರಣಿಕೆಯಲ್ಲಿಯೂ ಗೀ. ಭಾ. ೧೮–೬೬ ರಲ್ಲಿಯೂ ಅನುವಾದಮಾಡಿಕೊಂಡು ಖಂಡಿಸಿದೆ.

ವಾದರೂ ಅಗಲಿ; ಆದರೆ ಅಷ್ಟರಿಂದ ದೇಹಾಂತರಕ್ಕೆ ನಿಮಿತ್ತವಿಲ್ಲವೆಂದು ಏರ್ಪಡುವದಿಲ್ಲ, ಏಕೆಂದರೆ ಪುಣ್ಯವೆಂಬ ನಿಮಿತ್ತವು ಇರಬಹುದಾಗಿದೆ. ಪಾಪವು ಕೂಡ ಎಲ್ಲವೂ ನಾಶವಾಯಿತೆಂದು ನಿಶ್ಚಯವಾಗುವದಿಲ್ಲವಾದ್ದರಿಂದಲೂ (ಹೀಗೆ). ನಿತ್ಯನೈಮಿತ್ತಿಕ(ಕರ್ಮ)ಗಳನ್ನು ಮಾಡುವದರಿಂದ ಪ್ರತ್ಯವಾಯವು ಉಂಟಾಗದೆ ಇರುವದು ಮಾತ್ರವೇ ಹೊರತು ಬೇರೆ (ಯಾವ) ಫಲವೂ ಉಂಟಾಗುವದಿಲ್ಲವೆಂಬುದಕ್ಕೆ ಪ್ರಮಾಣವಿರುವದಿಲ್ಲ; ಏಕೆಂದರೆ ಅದರ ಜೊತೆಯಲ್ಲಿಯೇ ಆಗುವ ಬೇರೆಯ ಫಲವೂ ಇರಬಹುದಾಗಿದೆ. ಆಪಸ್ತಂಬರು "ಅದು ಹೇಗೆಂದರೆ ಹೇಗೆ ಮಾವನ್ನು ಹಣ್ಣಿಗಾಗಿ ಹುಟ್ಟಿಹಾಕಿದರೆ ನೆರಳು ವಾಸನೆಗಳು ಹಿಂದೆಯೇ ಉಂಟಾಗುತ್ತವೆಯೋ ಹಾಗೆಯೇ ಧರ್ಮವನ್ನು ಆಚರಿಸಿದರೆ ಅರ್ಥಗಳು (ಅದರ) ಹಿಂಗಡೆಯಿಂದ ಹುಟ್ಟುತ್ತವೆ" (ಆ.ಧ. ೧-೭-೨೦-೩) ಸಮ್ಯಗ್ದರ್ಶನವು ಇಲ್ಲದಿರುವಾಗ ಹುಟ್ಟುಸಾವುಗಳ ನಡುವೆ ಎಲ್ಲಾ ರೀತಿಯಿಂದಲೂ ಕಾಮ್ಯಪ್ರತಿಷಿದ್ಧಗಳನ್ನು ಬಿಟ್ಟಿರುವೆನೆಂದು ಯಾವನೂ ಪ್ರತಿಜ್ಞೆ ಮಾಡಲಾರನು[1]. ಏಕೆಂದರೆ ಅತ್ಯಂತನಿಪುಣರಾದವರಲ್ಲಿಯೂ ಸೂಕ್ಷ್ಮವಾದ ಅಪರಾಧಗಳು ಕಾಣಬರುತ್ತವೆ[2]. ಸಂಶಯವೇನೋ ಉಂಟಾಗಬಹುದು[3]; ಆದರೂ ನಿಮಿತ್ತವಿಲ್ಲವೆಂಬುದು ಗೊತ್ತಾಗುವದೇ ಇಲ್ಲ[4] **ಜ್ಞಾನದಿಂದ ಪ್ರಾಪ್ತವಾಗುವ ಬ್ರಹ್ಮಾತ್ಮತ್ವವನ್ನು ಒಪ್ಪದೆ ಇರುವ (ಪಕ್ಷದಲ್ಲಿ) ಕರ್ತೃತ್ವಭೋಕ್ತೃತ್ವಗಳು ಸ್ವಭಾವವಾಗಿರುವ ಆತ್ಮನಿಗೆ ಕೈವಲ್ಯವಾಗುವದೆಂಬ ಆಶೆಯಿಟ್ಟುಕೊಳ್ಳುವದು ಆಗಲಾರದು. ಏಕೆಂದರೆ ಬೆಂಕಿಯು ಬಿಸಿಯಂತೆ ಸ್ವಭಾವವಾಗಿರುವದನ್ನು ಪರಿಹರಿಸಿಕೊಳ್ಳುವದು ಆಗಲಾರದು.**

(ಪೂರ್ವಪಕ್ಷಿಯ ಮತವು) ಹೀಗಿರಬಹುದು: ಕರ್ತೃತ್ವಭೋಕ್ತೃತ್ವದ ಕಾರ್ಯವು ಅನರ್ಥವೇ ಹೊರತು ಅದರ ಶಕ್ತಿಯೇನೂ (ಅನರ್ಥ)ವಲ್ಲ. ಆದ್ದರಿಂದ (ಕರ್ತೃತ್ವ)ಶಕ್ತಿಯು ಇದ್ದುಕೊಂಡಿದ್ದರೂ ಕಾರ್ಯವನ್ನು ಪರಿಹರಿಸಿಕೊಳ್ಳುವದರಿಂದ ಮೋಕ್ಷವು ಸಿದ್ಧವಾಗಬಹುದಲ್ಲ!

---

1. ಸಮ್ಯಗ್ದರ್ಶಿಯಾದವನು ವಿರಕ್ತಿಯಿಂದ ಕಾಮ್ಯನಿಷಿದ್ಧಗಳನ್ನು ಬಿಟ್ಟರೂ ಪ್ರಮಾದದಿಂದ ಮಾಡಿದ್ದನ್ನು ಸಮ್ಯಗ್ದರ್ಶನದಿಂದಲೇ ಕಳೆದುಕೊಳ್ಳುತ್ತಾನೆ; ಜ್ಞಾನ ಪರಿಪಾಕವಾದರೆ ಮಾಡುವದೇ ಇಲ್ಲ- ಎಂದು ಭಾಮತಿ. ಪರಿಪಕ್ವಜ್ಞಾನವುಳ್ಳವನನ್ನೇ ಭಾಷ್ಯದಲ್ಲಿ ಸಮ್ಯಗ್ದರ್ಶಿಯೆಂದು ಕರೆದಿದೆ ಎಂದು ತೋರುತ್ತದೆ. ಅಜ್ಞನು ಕರ್ತೃತ್ವ ಬುದ್ಧಿಯಿರುವದರಿಂದ ಮಾಡುತ್ತಾನೆ.

2. ಧರ್ಮರಾಯ, ಅಣೀಮಾಂಡವ್ಯ- ಮುಂತಾದವರ ಉದಾಹರಣೆಯನ್ನು ಇಲ್ಲಿ ಕೊಡಬಹುದು.

3. ಕಾಮ್ಯನಿಷಿದ್ಧಗಳನ್ನು ಮಾಡಿರುವ ನಿಶ್ಚಯವಿಲ್ಲದೆ ಇರಬಹುದು.

4. ಜನ್ಮಾಂತರಕ್ಕೆ ಕಾರಣವಿಲ್ಲವೆನ್ನಲಾಗುವದಿಲ್ಲ.

(ಸಿದ್ಧಾಂತಿ) :– ಇದೂ ಸರಿಯಲ್ಲ : ಏಕೆಂದರೆ **ಶಕ್ತಿಯು ಇದ್ದು ಕೊಂಡಿದ್ದರೆ ಕಾರ್ಯವುಂಟಾಗುವದನ್ನು ತಡೆಯುವದಕ್ಕೆ ಆಗುವದಿಲ್ಲ.** ಇನ್ನು (ಹೀಗೆಂದು ಪೂರ್ವಪಕ್ಷಿಯ ಮತವು) ಇದ್ದರೂ ಇರಬಹುದು. ಬರಿಯ ಶಕ್ತಿಯಿದ್ದರೂ (ಅದು) ಬೇರೆಯ ನಿಮಿತ್ತಗಳನ್ನು[1] ಬಯಸದೆ ಕಾರ್ಯವನ್ನುಂಟುಮಾಡಲಾರದು (ಎಂದು ಅವನು ಹೇಳಬಹುದು). ಅದೂ ಸರಿಯಲ್ಲ ಏಕೆಂದರೆ **ನಿಮಿತ್ತಗಳೂ ಶಕ್ತಿರೂಪವಾದ ಸಂಬಂಧದಿಂದ ನಿತ್ಯವಾಗಿ ಸಂಬದ್ಧವಾಗಿರುತ್ತವೆ[2].** ಆದ್ದರಿಂದ ಕರ್ತೃತ್ವಭೋಕ್ತೃತ್ವವೆಂಬ ಸ್ವಭಾವವು ಆತ್ಮನಲ್ಲಿ ಇದ್ದುಕೊಂಡಿದ್ದು ವಿದ್ಯಾಪ್ರಾಪ್ಯವಾದ ಬ್ರಹ್ಮಾತ್ಮತ್ವವು ಇಲ್ಲದಿರುವಲ್ಲಿ ಹೇಗೆ (ನೋಡಿದರೂ) ಮೋಕ್ಷದ ಪ್ರತ್ಯಾಶೆಯಿರುವದಿಲ್ಲ. ಶ್ರುತಿಯೂ "(ಅದನ್ನು) ಪಡೆಯುವದಕ್ಕೆ ಮತ್ತೊಂದು ಹಾದಿಯಿರುವದಿಲ್ಲ" (ಶ್ವೇ.೩–೮) ಎಂದು ಜ್ಞಾನಕ್ಕಿಂತ ಬೇರೆಯ ಮೋಕ್ಷಮಾರ್ಗವು ಇಲ್ಲವೆನ್ನುತ್ತದೆ.

(ಆಕ್ಷೇಪ) :– ಜೀವನು ಪರಮಾತ್ಮನಿಗಿಂತ ಭಿನ್ನನಲ್ಲವೆಂದರೂ ಎಲ್ಲಾ ವ್ಯವಹಾರವೂ ಲೋಪವಾಗುವ ಪ್ರಸಂಗವಿದೆ ; ಏಕೆಂದರೆ ಆಗ ಪ್ರತ್ಯಕ್ಷಾದಿ ಪ್ರಮಾಣಗಳು ಪ್ರವರ್ತಿಸುವ (ಹಾಗೇ) ಇಲ್ಲ.

(ಪರಿಹಾರ) :– **ಹಾಗಲ್ಲ. ಏಕೆಂದರೆ ಜ್ಞಾನವಾಗುವ ಮುಂಚೆ ಸ್ವಪ್ನವ್ಯವಹಾರದಂತೆ ಅದು ಆಗಬಹುದಾಗಿದೆ. ಶಾಸ್ತ್ರವುಕೂಡ "ಎಲ್ಲಿ ದ್ವೈತದಂತೆ ಇರುತ್ತದೆಯೋ ಅಲ್ಲಿ ಒಬ್ಬನು ಇನ್ನೊಬ್ಬನನ್ನು ನೋಡುತ್ತಾನೆ" (ಬೃ.೪–೫–೧೫) ಎಂದು ಮುಂತಾಗಿ ಅಜ್ಞಾನಿಯ ವಿಷಯದಲ್ಲಿ ಪ್ರತ್ಯಕ್ಷಾದಿವ್ಯವಹಾರವನ್ನು ಹೇಳಿ ಮತ್ತೆ ಜ್ಞಾನಿಯ ವಿಷಯದಲ್ಲಿ "ಎಲ್ಲಿಯಾದರೆ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ನೋಡಿಯಾನು ?" (ಬೃ.೪-೫-೧೫) ಎಂದು ಮುಂತಾಗಿರುವ (ವಾಕ್ಯ)ದಿಂದ ಆ (ವ್ಯವಹಾರವು) ಇಲ್ಲವೆಂಬುದನ್ನು ತಿಳಿಸಿರುತ್ತದೆ[3].**

## ಗತಿಶ್ರುತಿಗಳಿಗೆ ವಿಷಯ

( ಭಾಷ್ಯ )

೫೮೬. ತದೇವಂ ಪರಬ್ರಹ್ಮವಿದೋ ಗನ್ತವ್ಯಾದಿವಿಜ್ಞಾನಸ್ಯ ಬಾಧಿತತ್ವಾತ್ ನ ಕಥಂಚನ ಗತಿರುಪಪಾದಯಿತುಂ ಶಕ್ಯಾ । ಕಿಂವಿಷಯಾಃ ಪುನರ್ಗತಿ

1. ಅದೃಷ್ಟ, ದೇಶ, ಕಾಲ– ಮುಂತಾದವುಗಳನ್ನು.

2. ಶಕ್ತಿಯೂ ನಿಮಿತ್ತಗಳೂ ಕೂಡಿಕೊಂಡೇ ಇರುವದರಿಂದ ಕಾರ್ಯವಾಗುವದು ತಪ್ಪಿದ್ದಲ್ಲ.

3. ಅಜ್ಞಾನದಿಂದಲೇ ಪ್ರಮಾಣಪ್ರಮೇಯವ್ಯವಹಾರವಾಗಿದೆ ಎಂಬ ಅಧ್ಯಾಸಭಾಷ್ಯದ ಅಭಿಪ್ರಾಯವೇ ಇದು.

ಶ್ರುತಯ ಇತಿ ? ಉಚ್ಯತೇ । ಸಗುಣವಿದ್ಯಾವಿಷಯಾ ಭವಿಷ್ಯನ್ತಿ । ತಥಾ ಹಿ ಕ್ವಚಿತ್ ಪಞ್ಚಾಗ್ನಿವಿದ್ಯಾಂ ಪ್ರಕೃತ್ಯ ಗತಿರುಚ್ಯತೇ । ಕ್ವಚಿತ್ ಪರ್ಯಙ್ಕ ವಿದ್ಯಾಮ್, ಕ್ವಚಿದ್ ವೈಶ್ವಾನರವಿದ್ಯಾಮ್ । ಯತ್ರಾಪಿ ಬ್ರಹ್ಮ ಪ್ರಕೃತ್ಯ ಗತಿರುಚ್ಯತೇ ಯಥಾ "ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ" (ಛಾಂ. ೪-೧೦-೫) ಇತಿ, "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ" (ಛಾಂ. ೮-೧-೧) ಇತಿ ಚ, ತತ್ರಾಪಿ ವಾಮನೀತ್ವಾದಿಭಿಃ ಸತ್ಯ ಕಾಮಾದಿಭಿಶ್ಚ ಗುಣೈಃ ಸಗುಣಸ್ಯೈವ ಉಪಾಸ್ಯತ್ವಾತ್ ಸಂಭವತಿ ಗತಿಃ । ನ ಕ್ವಚಿತ್ ಪರಬ್ರಹ್ಮವಿಷಯಾ ಗತಿಃ ಶ್ರಾವ್ಯತೇ, ಯಥಾ ಗತಿಪ್ರತಿಷೇಧಃ ಶ್ರಾವಿತಃ "ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ" (ಬೃ. ೪-೪-೬) ಇತಿ । "ಬ್ರಹ್ಮ ವಿದಾಪ್ನೋತಿ ಪರಮ್" (ತೈ. ೨-೧) ಇತ್ಯಾದಿಷು ತು ಸತ್ಯಪಿ ಆಪ್ನೋತೇ ರ್ಗತ್ಯರ್ಥತ್ವೇ ವರ್ಣಿತೇನ ನ್ಯಾಯೇನ ದೇಶಾನ್ತರಪ್ರಾಪ್ತ್ಯಸಂಭವಾತ್ ಸ್ವರೂಪಪ್ರತಿಪತ್ತಿರೇವೇಯಮ್ ಅವಿದ್ಯಾಧ್ಯಾರೋಪಿತನಾಮರೂಪಪ್ರವಿ ಲಯಾಪೇಕ್ಷಯಾ ಅಭಿಧೀಯತೇ "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" (ಬೃ. ೪-೪-೬) ಇತ್ಯಾದಿವತ್ ಇತಿ ದ್ರಷ್ಟವ್ಯಮ್ । ಅಪಿ ಚ ಪರವಿಷಯಾ ಗತಿ ರ್ವ್ಯಾಖ್ಯಾಯಮಾನಾ ಪ್ರರೋಚನಾಯ ವಾ ಸ್ಯಾತ್ ಅನುಚಿನ್ತನಾಯ ವಾ । ತತ್ರ ಪ್ರರೋಚನಂ ತಾವದ್ ಬ್ರಹ್ಮವಿದೋ ನ ಗತ್ಯುಕ್ತ್ಯಾ ಕ್ರಿಯತೇ ಸ್ವಸಂ ವೇದ್ಯೇನೈವ ಅವ್ಯವಹಿತೇನ ವಿದ್ಯಾಸಮರ್ಪಿತೇನ ಸ್ವಾಸ್ಥ್ಯೇನ ತತ್ಸಿದ್ಧೇಃ । ನ ಚ ನಿತ್ಯಸಿದ್ಧನಿಃಶ್ರೇಯಸನಿವೇದನಸ್ಯ ಅಸಾಧ್ಯಫಲಸ್ಯ ವಿಜ್ಞಾನಸ್ಯ ಗತ್ಯನು ಚಿನ್ತನೇ ಕಾಚಿದಪೇಕ್ಷಾ ಉಪಪದ್ಯತೇ । ತಸ್ಮಾತ್, ಅಪರಬ್ರಹ್ಮವಿಷಯಾ ಗತಿಃ । ತತ್ರ ಪರಾಪರಬ್ರಹ್ಮವಿವೇಕಾನವಧಾರಣೇನ ಅಪರಸ್ಮಿನ್ ಬ್ರಹ್ಮಣಿ ವರ್ತಮಾನಾ ಗತಿಶ್ರುತಯಃ ಪರಸ್ಮಿನ್ ಅಧ್ಯಾರೋಪ್ಯನ್ತೇ ॥

(ಭಾಷ್ಯಾರ್ಥ)

ಅಂತೂ ಹೀಗೆ ಪರಬ್ರಹ್ಮಜ್ಞಾನಿಗೆ ಗಂತವ್ಯವೇ ಮುಂತಾದದ್ದರ ಅರಿವು ಬಾಧಿತವಾಗಿರುವದರಿಂದ ಹೀಗೂ (ಅವನಿಗೆ) ಗತಿಯನ್ನು ಹೊಂದಿಸುವದಕ್ಕಾಗಲಾರದು.

(ಪ್ರಶ್ನೆ) :– ಹಾಗಾದರೆ ಗತಿಶ್ರುತಿಗಳು ಯಾವ ವಿಷಯದಲ್ಲಿ (ಹೊಂದುತ್ತವೆ) ?

(ಉತ್ತರ) :– ಹೇಳುತ್ತೇವೆ. (ಅವು) ಸಗುಣವಿದ್ಯಾವಿಷಯವಾಗಿ ಆಗಬಹುದು, ಆದ್ದರಿಂದಲೇ ಒಂದು ಕಡೆಯಲ್ಲಿ[1] ಪಂಚಾಗ್ನಿವಿದ್ಯೆಯನ್ನು ಪ್ರಾರಂಭಿಸಿ ಗತಿಯನ್ನು ಹೇಳಿರುತ್ತದೆ ; ಒಂದು ಕಡೆಯಲ್ಲಿ[2] ಪರ್ಯಂಕ ವಿದ್ಯೆಯನ್ನೂ ಒಂದು ಕಡೆಯಲ್ಲಿ[3] ವೈಶ್ವಾನರವಿದ್ಯೆಯನ್ನೂ ಪ್ರಾರಂಭಿಸಿ

1. ಛಾಂ. ೫-೧೦-೧,೨. 2. ಕೌ. ೧-೩. 3. ಛಾಂ. ೫-೧೮-೧.

(ಹೇಳಿರುತ್ತದೆ). ಇನ್ನು ಎಲ್ಲಿ ಬ್ರಹ್ಮದ ಪ್ರಕರಣದಲ್ಲಿಯೇ ಗತಿಯನ್ನು ಹೇಳಿದೆಯೋ – ಉದಾಹರಣೆಗೆ "ಪ್ರಾಣವು ಬ್ರಹ್ಮವು, ಸುಖವು ಬ್ರಹ್ಮವು, ಆಕಾಶವು ಬ್ರಹ್ಮವು" (ಛಾಂ. ೪–೧೦–೫) ಎಂಬಲ್ಲಿಯೂ "ಇನ್ನು ಈ ಬ್ರಹ್ಮಪುರದಲ್ಲಿ ಅಲ್ಪವಾದ ಪುಂಡರೀಕದ ವೇಶ್ಮವಿರುತ್ತದೆಯಲ್ಲ" (ಛಾ. ೮–೧–೧) ಎಂಬಲ್ಲಿಯೂ (ಹೀಗೆ ಹೇಳಿದೆಯಷ್ಟೆ), ಅಲ್ಲಿಯೂ ವಾಮನೀತ್ವಾದಿಗುಣಗಳಿಂದಲೂ ಸತ್ಯಕಾಮಾದಿಗುಣಗಳಿಂದಲೂ (ಕೂಡಿರುವ) ಸಗುಣ(ಬ್ರಹ್ಮವೇ) ಉಪಾಸ್ಯವಾಗಿರುವದರಿಂದ ಗತಿಯು ಸಂಭವಿಸುತ್ತದೆ. ಎಲ್ಲಿಯೂ ಪರಬ್ರಹ್ಮವಿಷಯದಲ್ಲಿ "ಅವನ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ" (ಬೃ.೪–೪–೬) ಎಂದು ಹೇಗೆ ಗತಿಪ್ರತಿಷೇಧವನ್ನು ಶ್ರುತಿಯಲ್ಲಿ ಹೇಳಿದೆಯೋ ಹಾಗೆ ಗತಿಯನ್ನು ಶ್ರುತಿಯಲ್ಲಿ ಹೇಳಿರುವದಿಲ್ಲ. "ಬ್ರಹ್ಮವನ್ನು ಬಲ್ಲವನು ಹೆಚ್ಚಿನ (ಸ್ಥಾನವನ್ನು) ಪಡೆಯುತ್ತಾನೆ" (ತೈ. ೨–೧) ಎಂಬುದೇ ಮುಂತಾದ (ಸ್ಥಲಗಳಲ್ಲಿಯೋ) ಎಂದರೆ ಆಪ್ (ಪಡೆ) ಎಂಬ (ಧಾತುವಿಗೆ) ಗತಿ ಎಂಬರ್ಥವು ಇದ್ದರೂ (ನಾವು) ಹೇಳಿರುವ ನ್ಯಾಯದಿಂದ ದೇಶಾಂತರಪ್ರಾಪ್ತಿಯು ಸಂಭವಿಸುವದಿಲ್ಲವಾದ್ದರಿಂದ "ಬ್ರಹ್ಮವೇ ಆಗಿದ್ದುಕೊಂಡು ಬ್ರಹ್ಮದಲ್ಲಿ ಸೇರಿಹೋಗುತ್ತಾನೆ" (ಬೃ. ೪–೪–೬) ಮುಂತಾದವುಗಳಂತೆ ಅವಿದ್ಯಾಧ್ಯಾರೋಪಿತವಾಗಿರುವ ನಾಮರೂಪಗಳನ್ನು (ವಿದ್ಯೆಯಿಂದ) ಪ್ರವಿಲಯಮಾಡಿದ್ದರ ಅಪೇಕ್ಷೆಯಿಂದಾದ ಸ್ವರೂಪಪ್ರಾಪ್ತಿಯನ್ನೇ ಹೀಗೆ ಹೇಳಿದೆ ಎಂದು ತಿಳಿಯಬೇಕು.

ಇದಲ್ಲದೆ ಪರ(ಬ್ರಹ್ಮದ) ವಿಷಯದಲ್ಲಿಯೇ ಗತಿ ಎಂದು ವ್ಯಾಖ್ಯಾನಮಾಡಿದರೆ (ಅದು) ರುಚಿಯನ್ನುಂಟುಮಾಡುವದಕ್ಕೋ ಅನುಚಿಂತನೆಮಾಡುವದಕ್ಕೋ ಆಗಿರಬೇಕಷ್ಟೆ. ಇಲ್ಲಿ ಗತಿಯನ್ನು ಹೇಳಿರುವದರಿಂದ ಬ್ರಹ್ಮಜ್ಞಾನಿಗೆ ಪ್ರರೋಚನೆಯನ್ನು ಮಾಡಿದೆ ಎನ್ನುವದು ಸರಿಯಲ್ಲ ; ಏಕೆಂದರೆ ಜ್ಞಾನದಿಂದ ಉಂಟಾಗಿರುವ ಸ್ವಸ್ಥತೆಯು ಅವ್ಯವಹಿತವಾಗಿರುವದರಿಂದ ತನಗೇ ಅನುಭವದಲ್ಲಿರುವದರಿಂದಲೇ ಅದು ಸಿದ್ಧವಾಗಿರುತ್ತದೆ. ನಿತ್ಯಸಿದ್ಧವಾಗಿರುವ ಮುಕ್ತಿಯ ಜ್ಞಾನಕ್ಕೆ ಸಾಧ್ಯವಾದ ಫಲವು (ಯಾವದೂ) ಇಲ್ಲವಾದ್ದರಿಂದ ಗತಿಯ ಅನುಚಿಂತನೆಯಲ್ಲಿ ಯಾವ ಅಪೇಕ್ಷೆಯೂ ಉಂಟಾಗುವಂತಿಲ್ಲ. ಆದ್ದರಿಂದ ಅಪರಬ್ರಹ್ಮವಿಷಯದಲ್ಲಿಯೇ ಗತಿ(ಯನ್ನು ಹೇಳಿದೆ ಎನ್ನಬೇಕು). ಇಲ್ಲಿ ಪರಾಪರಬ್ರಹ್ಮಗಳನ್ನು ವಿಂಗಡಿಸಿ ಗೊತ್ತುಮಾಡಿಕೊಳ್ಳದೆ ಇರುವದರಿಂದ ಅಪರಬ್ರಹ್ಮದ ವಿಷಯದಲ್ಲಿರುವ ಗತಿಶ್ರುತಿಗಳನ್ನು ಪರ(ಬ್ರಹ್ಮ)ದಲ್ಲಿ ಅಧ್ಯಾರೋಪಿಸಿಕೊಂಡಿರುತ್ತಾರೆ, (ಅಷ್ಟೆ).

## ಉಪಸಂಹಾರ

(ಭಾಷ್ಯ)

೫೮೭. ಕಿಂ ದ್ವೇ ಬ್ರಹ್ಮಣೀ ಪರಮ್ ಅಪರಂ ಚೇತಿ ? ಬಾಢಮ್

ದ್ವೇ । "ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ" (ಪ್ರ. ೫–೨) ಇತ್ಯಾದಿದರ್ಶನಾತ್ । ಕಿಂ ಪುನಃ ಪರಂ ಬ್ರಹ್ಮ ಕಿಮಪರಮಿತಿ ? ಉಚ್ಯತೇ । ಯತ್ರ ಅವಿದ್ಯಾಕೃತನಾಮರೂಪಾದಿವಿಶೇಷಪ್ರತಿಷೇಧಾತ್ ಅಸ್ಥೂಲಾದಿಶಬ್ದೈರ್ಬ್ರಹ್ಮೋಪದಿಶ್ಯತೇ, ತತ್ಪರಮ್ । ತದೇವ ಯತ್ರ ನಾಮ ರೂಪಾದಿವಿಶೇಷೇಣ ಕೇನಚಿದ್ ವಿಶಿಷ್ಟಮ್ ಉಪಾಸನಾಯ ಉಪದಿಶ್ಯತೇ "ಮನೋಮಯಃ ಪ್ರಾಣಶರೀರೋ ಭಾರೂಪಃ" (ಛಾಂ.೩–೧೪–೨) ಇತ್ಯಾದಿ ಶಬ್ದೈಃ, ತದಪರಮ್ । ನನ್ವೇವಮ್ ಅದ್ವಿತೀಯಶ್ರುತಿರುಪರುಧ್ಯೇತ । ನ । ಅವಿದ್ಯಾಕೃತನಾಮರೂಪೋಪಾಧಿಕತಯಾ ಪರಿಹೃತತ್ವಾತ್ । ತಸ್ಯ ಚ ಅಪರ ಬ್ರಹ್ಮೋಪಾಸನಸ್ಯ ತತ್ಸಂನಿಧೌ ಶ್ರೂಯಮಾಣಮ್ "ಸ ಯದಿ ಪಿತೃಲೋಕ ಕಾಮೋ ಭವತಿ" (ಛಾಂ.೮–೨–೧) ಇತ್ಯಾದಿ ಜಗದೈಶ್ವರ್ಯಲಕ್ಷಣಂ ಸಂಸಾರ ಗೋಚರಮೇವ ಫಲಂ ಭವತಿ । ಅನಿವರ್ತಿತತ್ವಾದವಿದ್ಯಾಯಾಃ । ತಸ್ಯ ಚ ದೇಶವಿಶೇಷಾವಬದ್ಧತ್ವಾತ್ ತತ್ಪ್ರಾಪ್ತ್ಯರ್ಥಂ ಗಮನಮ್ ಅವಿರುದ್ಧಮ್ । ಸರ್ವಗತತ್ವೇಽಪಿ ಚಾತ್ಮನಃ ಆಕಾಶಸ್ಯೇವ ಘಟಾದಿಗಮನೇ ಬುದ್ಧ್ಯಾದ್ಯುಪಾಧಿ ಗಮನೇ ಗಮನಪ್ರಸಿದ್ಧಿರಿತ್ಯವಾದಿಷ್ಮ "ತದ್ಗುಣಸಾರತ್ವಾತ್" (೨–೩–೨೯) ಇತ್ಯತ್ರ । ತಸ್ಮಾತ್ "ಕಾರ್ಯಂ ಬಾದರಿಃ" (೪–೩–೭) ಇತ್ಯೇಷ ಏವ ಸ್ಥಿತಃ ಪಕ್ಷಃ । "ಪರಂ ಜೈಮಿನಿಃ" (೪–೩–೧೨) ಇತಿ ತು ಪಕ್ಷಾನ್ತರಪ್ರತಿಭಾನಮಾತ್ರ ಪ್ರದರ್ಶನಂ ಪ್ರಜ್ಞಾವಿಕಾಸನಾಯ ಇತಿ ದ್ರಷ್ಟವ್ಯಮ್ ॥

(ಭಾಷ್ಯಾರ್ಥ)

(ಪ್ರಶ್ನೆ) :– **ಪರ(ಬ್ರಹ್ಮ), ಅಪರ(ಬ್ರಹ್ಮ) –ಎಂದು ಎರಡು ಬ್ರಹ್ಮಗಳೇನು ?**

(ಉತ್ತರ) :– **ಹೌದು, ಎರಡು. "ಸತ್ಯಕಾಮನೆ, ಈ ಓಂಕಾರವಿದೆ ಯಲ್ಲ, ಇದೇ ಪರ(ಬ್ರಹ್ಮವೂ) ಅಪರಬ್ರಹ್ಮವೂ (ಆಗಿರುತ್ತದೆ)" (ಪ್ರ. ೫–೨) ಎಂಬುದೇ ಮುಂತಾದ ಶ್ರುತಿಯಿಂದ (ಇದು ಸಿದ್ಧ ವಾಗುತ್ತದೆ).**

(ಪ್ರಶ್ನೆ) :– ಹಾಗಾದರೆ ಪರಬ್ರಹ್ಮವೆಂದರೆ ಯಾವದು, ಅಪರ(ಬ್ರಹ್ಮ) ವೆಂದರೆ ಯಾವದು ?

(ಉತ್ತರ) :– ಹೇಳುತ್ತೇವೆ. **ಎಲ್ಲಿ ಅವಿದ್ಯಾಕೃತವಾಗಿರುವ ನಾಮ, ರೂಪ– ಮುಂತಾದ ವಿಶೇಷಗಳನ್ನು ಅಲ್ಲಗಳೆದು ಅಸ್ಥೂಲವೇ ಮುಂತಾದ ಶಬ್ದಗಳಿಂದ ಬ್ರಹ್ಮವನ್ನು ಉಪದೇಶಿಸಿರುತ್ತದೆಯೋ, ಅದು ಪರವು; ಅದೇ(ಬ್ರಹ್ಮವನ್ನು)·ಎಲ್ಲಿ ನಾಮ, ರೂಪ–ಮುಂತಾದ ಯಾವದೋ ಒಂದು ವಿಶೇಷದಿಂದ ವಿಶಿಷ್ಟವಾಗಿ ಉಪಾಸನೆ**

**ಗೋಸ್ಕರ "ಮನೋಮಯನು, ಪ್ರಾಣಶರೀರನು, ಭಾರೂಪನು" (ಛಾಂ. ೩-೧೪-೨) -ಮುಂತಾದ ಶಬ್ದಗಳಿಂದ ಉಪದೇಶಿಸಿರುತ್ತದೆಯೋ ಅದು ಅಪರ(ಬ್ರಹ್ಮವು).**

(ಆಕ್ಷೇಪ) :- ಹೀಗಾದರೆ ಅದ್ವೈತಶ್ರುತಿಗೆ ವಿರುದ್ಧವಾಗುವದಿಲ್ಲವೆ?

(ಪರಿಹಾರ) :- ಹಾಗಲ್ಲ. ಏಕೆಂದರೆ ಅವಿದ್ಯಾಕೃತವಾದ ನಾಮರೂಪಗಳ ಉಪಾಧಿಯುಳ್ಳದ್ದೆಂದು (ಇದನ್ನು) ಆಗಲೇ ಪರಿಹರಿಸಿದ್ದಾಗಿದೆ. ಆ ಅಪರ ಬ್ರಹ್ಮದ ಉಪಾಸನೆಗೆ ಅದರ ಸಂನಿಧಿಯಲ್ಲಿ "ಅವನು ಪಿತೃಲೋಕಕಾಮನಾಗಿದ್ದರೆ" (ಛಾಂ. ೮-೨-೧) ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿರುವ ಜಗದೈಶ್ವರ್ಯರೂಪವಾದ ಸಂಸಾರಗೋಚರವಾಗಿರುವ ಫಲವೇ ಆಗುತ್ತದೆ. ಏಕೆಂದರೆ ಅವಿದ್ಯೆಯು ಇನ್ನೂ ತೊಲಗಿರುವದಿಲ್ಲ. ಮತ್ತು ಅದು ಒಂದಾನೊಂದು ದೇಶಕ್ಕೆ ಸಂಬದ್ಧವಾಗಿರುವದರಿಂದ ಅದರ ಪ್ರಾಪ್ತಿಗಾಗಿ (ಇಲ್ಲಿಂದ ಮತ್ತೊಂದು ಕಡೆಗೆ) ಹೋಗುವದೂ ವಿರುದ್ಧವಲ್ಲ. **ಆತ್ಮನು ಸರ್ವಗತನಾಗಿದ್ದರೂ ಗಡಿಗೆ ಮುಂತಾದದ್ದು ಓಡಾಡಿದರೆ ಆಕಾಶ(ವೇ ಓಡಾಡುವದೆಂಬ ವ್ಯವಹಾರವಾಗು)ವಂತೆ ಬುದ್ಧಿಯೇ ಮುಂತಾದ ಉಪಾಧಿಗಳು ಓಡಾಡಲು (ಅವನೂ) ಓಡಾಡುತ್ತಾನೆಂಬ ಪ್ರಸಿದ್ಧಿಯುಂಟಾಗುತ್ತದೆ ಎಂದು "ತದ್ಗುಣಸಾರತ್ವಾತ್" (೨-೩-೨೯) ಎಂಬ (ಸೂತ್ರಭಾಷ್ಯ)ದಲ್ಲಿ ಹೇಳಿರುತ್ತೇವೆ.**

ಆದ್ದರಿಂದ "**ಕಾರ್ಯವನ್ನು (ಸೇರಿಸುತ್ತಾನೆಂದು) ಬಾದರಿ(ಯ ಮತವು)**" (೪-೩-೭) ಎಂಬಿದೇ (ಕೊನೆಗೆ) ನಿಲ್ಲುವ ಪಕ್ಷವು. "ಪರಬ್ರಹ್ಮವನ್ನು ಸೇರಿಸುತ್ತಾನೆಂದು ಜೈಮಿನಿ (ಯ ಮತವು)" ಎಂಬಿದಾದರೋ ಮತ್ತೊಂದು ಪಕ್ಷವೂ ತೋರುತ್ತದೆಯೆಂದು ಬುದ್ಧಿವಿಕಾಸಕ್ಕಾಗಿ (ಹೇಳಿದ್ದು) ಎಂದು ತಿಳಿಯಬೇಕು.

## ೬. ಅಪ್ರತೀಕಾಲಂಬನಾಧಿಕರಣ (ಸೂ. ೧೫-೧೬)

(ಪ್ರತೀಕೋಪಾಸಕರಿಗೆ ಬ್ರಹ್ಮಲೋಕವಿಲ್ಲ)

**ಅಪ್ರತೀಕಾಲಮ್ಬನಾನ್ನಯತೀತಿ ಬಾದರಾಯಣ ಉಭಯಥಾ ದೋಷಾತ್ ತತ್ಕ್ರತುಶ್ಚ ॥ ೧೫ ॥**

೧೫. ಪ್ರತೀಕಾಲಂಬನರಲ್ಲದವರನ್ನು ಒಯ್ಯುತ್ತಾನೆ ಎಂದು ಬಾದರಾಯಣನು (ಅಭಿಪ್ರಾಯಪಡುತ್ತಾನೆ). ಏಕೆಂದರೆ ಎರಡು ಬಗೆಯ ದೋಷವಿರುವದಿಲ್ಲ; ತತ್ಕ್ರತುವಾಗಿರುವದೆಂಬ (ಹೇತುವೂ ಇದೆ).

## ಪೂರ್ವಪಕ್ಷ:
## ಕಾರ್ಯಬ್ರಹ್ಮೋಪಾಸಕರಿಗೆಲ್ಲ ಬ್ರಹ್ಮಲೋಕಗತಿ

(ಭಾಷ್ಯ)

೫೮೮. ಸ್ಥಿತಮೇತತ್ ಕಾರ್ಯವಿಷಯಾ ಗತಿರ್ನ ಪರವಿಷಯಾ ಇತಿ। ಇದಮಿದಾನೀಂ ಸಂದಿಹ್ಯತೇ— ಕಿಂ ಸರ್ವಾನ್ ವಿಕಾರಾಲಮ್ಬನಾನ್ ಅವಿಶೇಷೇಣೈವ ಅಮಾನವಃ ಪುರುಷಃ ಪ್ರಾಪಯತಿ ಬ್ರಹ್ಮಲೋಕಮ್, ಉತ ಕಾಂಶ್ಚಿದೇವ ಇತಿ। ಕಿಂ ತಾವತ್ ಪ್ರಾಪ್ತಮ್? ಸರ್ವೇಷಾಮೇವೈಷಾಂ ವಿದುಷಾಮ್ ಅನ್ಯತ್ರ ಪರಸ್ಮಾದ್ ಬ್ರಹ್ಮಣೋ ಗತಿಃ ಸ್ಯಾತ್। ತಥಾ ಹಿ "ಅನಿಯಮಃ ಸರ್ವಾಸಾಮ್......" (೩–೩–೩೧) ಇತ್ಯತ್ರ ಅವಿಶೇಷೇಣೈವ ಏಷಾಂ ವಿದ್ಯಾನ್ತರೇಷು ಅವತಾರಿತಾ ಇತಿ ॥

(ಭಾಷ್ಯಾರ್ಥ)

ಗತಿಯು ಕಾರ್ಯ(ಬ್ರಹ್ಮ)ವಿಷಯವಾದದ್ದೇ ಹೊರತು ಪರ(ಬ್ರಹ್ಮ) ವಿಷಯಕವಲ್ಲವೆಂದು ನಿಂತಿತಷ್ಟೆ. ಈಗ ಇದರ ಸಂದೇಹವಾಗುತ್ತದೆ: ವಿಕಾರಾಲಂಬನರಾಗಿರುವವರನ್ನು ಯಾವ ವಿಶೇಷವೂ ಇಲ್ಲದೆ ಎಲ್ಲರನ್ನೂ ಅಮಾನವ ಪುರುಷನು ಬ್ರಹ್ಮಲೋಕಕ್ಕೆ ಒಯ್ಯುತ್ತಾನೆಯೆ, ಅಥವಾ ಕೆಲವರನ್ನು ಮಾತ್ರ (ಒಯ್ಯುತ್ತಾನೆಯೆ) ?

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಪರಬ್ರಹ್ಮ (ಜ್ಞಾನಿಗಳನ್ನು) ಬಿಟ್ಟರೆ ಈ ಜ್ಞಾನಿಗಳೆಲ್ಲರಿಗೂ ಗತಿಯಾಗುವದು.[1] ಆದ್ದರಿಂದಲೇ "ಅನಿಯಮಃ ಸರ್ವಾಸಾಮ್......" (೩–೩–೩೧) ಎಂಬಲ್ಲಿ ಇವರಲ್ಲಿ ಯಾವ ವಿಶೇಷವೂ ಇಲ್ಲದೆಯೇ (ಗತಿಯನ್ನು) ಮಿಕ್ಕ ವಿದ್ಯೆಗಳಿಗೂ ಸಂಬಂಧಿಸಿರುತ್ತದೆ.

## ಸಿದ್ಧಾಂತ: ಪ್ರತೀಕೋಪಾಸಕರಿಗೆ ಬ್ರಹ್ಮಲೋಕವಿಲ್ಲ

(ಭಾಷ್ಯ)

೫೮೯. ಏವಂ ಪ್ರಾಪ್ತೇ ಪ್ರತ್ಯಾಹ। ಅಪ್ರತೀಕಾಲಮ್ಬನಾನ್ ಇತಿ। ಪ್ರತೀಕಾಲಮ್ಬನಾನ್ ವರ್ಜಯಿತ್ವಾ ಸರ್ವಾನನ್ಯಾನ್ ವಿಕಾರಾಲಮ್ಬನಾನ್ ನಯತಿ ಬ್ರಹ್ಮಲೋಕಮ್ ಇತಿ ಬಾದರಾಯಣ ಆಚಾರ್ಯೋ ಮನ್ಯತೇ। ನ ಹ್ಯೇವಮ್ ಉಭಯಥಾಭಾವಾಭ್ಯುಪಗಮೇ ಕಶ್ಚಿತ್ ದೋಷೋಽಸ್ತಿ। ಅನಿಯಮನ್ಯಾಯಸ್ಯ ಪ್ರತೀಕವ್ಯತಿರಿಕ್ತೇಷ್ವಪಿ ಉಪಾಸನೇಷು ಉಪಪತ್ತೇಃ।

1. 'ಪರಬ್ರಹ್ಮದಿಂದ ಬೇರೆಯ ಕಡೆಗೆ ಎಂದರೆ ಕಾರ್ಯಬ್ರಹ್ಮಕ್ಕೆ ಗತಿಯಾಗುವದು' ಎಂದು ಆ॥ ಟೀ॥.

ತತ್ಕ್ರತುಶ್ಚ ಅಸ್ಯ ಉಭಯಥಾಭಾವಸ್ಯ ಸಮರ್ಥಕೋ ಹೇತುರ್ದ್ರಷ್ಟವ್ಯಃ। ಯೋ ಹಿ ಬ್ರಹ್ಮಕ್ರತುಃ ಸ ಬ್ರಾಹ್ಮಮ್ ಐಶ್ವರ್ಯಮ್ ಆಸೀದೇತ್ ಇತಿ ಶ್ಲಿಷ್ಯತೇ "ತಂ ಯಥಾ ಯಥೋಪಾಸತೇ ತದೇವ ಭವತಿ" (ಶತ. ಬ್ರಾ. ?) ಇತಿ ಶ್ರುತೇಃ। ನ ತು ಪ್ರತೀಕೇಷು ಬ್ರಹ್ಮಕ್ರತುತ್ವಮಸ್ತಿ। ಪ್ರತೀಕಪ್ರಧಾನತ್ವಾತ್ ಉಪಾಸನಸ್ಯ। ನನು ಅಬ್ರಹ್ಮಕ್ರತುರಪಿ ಬ್ರಹ್ಮ ಗಚ್ಛತಿ ಇತಿ ಶ್ರೂಯತೇ ಯಥಾ ಪಞ್ಚಾಗ್ನಿವಿದ್ಯಾಯಾಮ್ "ಸ ಏನಾನ್ ಬ್ರಹ್ಮ ಗಮಯತಿ" (ಛಾಂ. ೪–೧೫–೫) ಇತಿ। ಭವತು ಯತ್ರೈವಮ್ ಆಹತ್ಯವಾದ ಉಪಲಭ್ಯತೇ। ತದಭಾವೇ ತು ಔತ್ಸರ್ಗಿಕೇಣ ತತ್ಕ್ರತುನ್ಯಾಯೇನ ಬ್ರಹ್ಮಕ್ರತೂನಾಮೇವ ತತ್ಪ್ರಾಪ್ತಿರ್ನೇತರೇಷಾಮ್ ಇತಿ ಗಮ್ಯತೇ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಇದಕ್ಕೆ) ಪ್ರತಿಯಾಗಿ ಹೇಳುತ್ತಾರೆ: "ಅಪ್ರತೀಕಾಲಂಬನರನ್ನು......" ಎಂದು. (ಇದರ ವಿವರ): ಪ್ರತೀಕಾಲಂಬನರಾಗಿರುವವರನ್ನು ಬಿಟ್ಟು ಮಿಕ್ಕ ವಿಕಾರವನ್ನಾಶ್ರಯಿಸಿರುವವರೆಲ್ಲರನ್ನೂ ಬ್ರಹ್ಮಲೋಕಕ್ಕೆ ಒಯ್ಯುತ್ತಾನೆ ಎಂದು ಬಾದರಾಯಣಾಚಾರ್ಯರು ಅಭಿಪ್ರಾಯಪಡುತ್ತಾರೆ. ಏಕೆಂದರೆ ಹೀಗೆ ಎರಡು ಬಗೆಯೆಂದು ಒಪ್ಪಿದರೆ ಯಾವ ದೋಷವೂ ಇರುವದಿಲ್ಲ; ಅನಿಯಮವೆಂಬ ನ್ಯಾಯವು ಪ್ರತೀಕಕ್ಕಿಂತ ಬೇರೆಯಾಗಿರುವ ಉಪಾಸನೆಗಳಿಗೂ ಹೊಂದಬಹುದಾಗಿದೆ.

ತತ್ಕ್ರತುವೆಂಬುದೂ[1] ಈ ಎರಡು ಬಗೆಗೆ ಸಮರ್ಥಕವಾದ ಹೇತುವೆಂದು ತಿಳಿಯಬೇಕು. ಹೇಗೆಂದರೆ ಯಾವನು ಬ್ರಹ್ಮಕ್ರತುವಾಗಿರುವನೋ ಅವನಿಗೆ ಬ್ರಹ್ಮದ ಐಶ್ವರ್ಯವು ದೊರಕುತ್ತದೆ ಎಂಬುದು ಯುಕ್ತವಾಗಿರುತ್ತದೆ. ಏಕೆಂದರೆ "ಅವನನ್ನು ಹೇಗೆ ಉಪಾಸನೆಮಾಡುತ್ತಾರೋ ಅದೇ ಆಗುತ್ತದೆ" (?) ಎಂದು ಶ್ರುತಿಯಿದೆ. ಆದರೆ ಪ್ರತೀಕ(ಗಳ ಉಪಾಸನೆಗಳಲ್ಲಿ) ಬ್ರಹ್ಮಕ್ರತುವಿರುವದಿಲ್ಲ; ಏಕೆಂದರೆ (ಅಲ್ಲಿ) ಉಪಾಸನೆಗೆ ಪ್ರತೀಕವೇ ಮುಖ್ಯವಾಗಿರುತ್ತದೆ.

(ಆಕ್ಷೇಪ) :– ಬ್ರಹ್ಮಕ್ರತುವಲ್ಲದವನೂ ಬ್ರಹ್ಮವನ್ನು ಪಡೆಯುತ್ತಾನೆ ಎಂದು ಶ್ರುತಿಯಿದೆಯಲ್ಲ! ಉದಾಹರಣೆಗೆ, ಪಂಚಾಗ್ನಿವಿದ್ಯೆಯಲ್ಲಿ "ಅವನು ಇವರನ್ನು ಬ್ರಹ್ಮವನ್ನು ಸೇರಿಸುತ್ತಾನೆ" (ಛಾಂ. ೪–೧೫–೫) ಎಂದಿದೆಯಲ್ಲ!

(ಪರಿಹಾರ) :– ಎಲ್ಲಿ ಹೀಗೆ ಸ್ಪಷ್ಟವಾಗಿ ಹೇಳಿರುವದು ಕಂಡುಬರುತ್ತದೆಯೋ ಅಲ್ಲಿ (ಹಾಗೇ) ಆಗಲಿ. ಆದರೆ ಅದು ಇಲ್ಲದಿರುವಲ್ಲಿ ಸಾಮಾನ್ಯನಿಯಮವಾಗಿರುವ ತತ್ಕ್ರತುನ್ಯಾಯದಿಂದ ಬ್ರಹ್ಮಕ್ರತುವಾಗಿರುವವರಿಗೇ ಅದರ ಪ್ರಾಪ್ತಿಯಾಗುತ್ತದೆಯೇ ಹೊರತು ಬೇರೆಯವರಿಗಿಲ್ಲ ಎಂದು ಗೊತ್ತಾಗುತ್ತದೆ.

---

1. ಅದರ ಧ್ಯಾನವಿರುವದು ಎಂದರ್ಥ.

**ವಿಶೇಷಂ ಚ ದರ್ಶಯತಿ ॥ ೧೬ ॥**

೧೬. (ಫಲ)ವಿಶೇಷವನ್ನು ತಿಳಿಸಿರುತ್ತದೆ.

## ಪ್ರತೀಕೋಪಾಸನೆಗೆ ಬೇರೆ ಫಲವನ್ನು ಹೇಳಿದೆ

(ಭಾಷ್ಯ)

೫೯೦. ನಾಮಾದಿಷು ಪ್ರತೀಕೋಪಾಸನೇಷು ಪೂರ್ವಸ್ಮಾತ್ ಪೂರ್ವಸ್ಮಾತ್ ಫಲವಿಶೇಷಮ್ ಉತ್ತರಸ್ಮಿನ್ ಉತ್ತರಸ್ಮಿನ್ ಉಪಾಸನೇ ದರ್ಶಯತಿ "ಯಾವನ್ನಾಮ್ನೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ" (ಛಾಂ. ೭-೧-೫) "ವಾಗ್ವಾವ ನಾಮ್ನೋ ಭೂಯಸೀ" (ಛಾಂ. ೭-೨-೧), "ಯಾವದ್ವಾಚೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ" (ಛಾಂ.೭-೨-೨), "ಮನೋ ವಾವ ವಾಚೋ ಭೂಯಃ" (ಛಾಂ. ೭-೩-೧) ಇತ್ಯಾದಿನಾ । ಸ ಚಾಯಂ ಫಲವಿಶೇಷಃ ಪ್ರತೀಕತನ್ತ್ರತ್ವಾತ್ ಉಪಾಸನಾನಾಮ್ ಉಪಪದ್ಯತೇ ; ಬ್ರಹ್ಮತನ್ತ್ರತ್ವೇ ತು ಬ್ರಹ್ಮಣೋಽವಿಶಿಷ್ಟತ್ವಾತ್ ಕಥಂ ಫಲವಿಶೇಷಃ ಸ್ಯಾತ್ ? ತಸ್ಮಾನ್ನ ಪ್ರತೀಕಾಲಮ್ಬನಾನಾಮಿತರೈಸ್ತುಲ್ಯಫಲತ್ವಮಿತಿ ॥

(ಭಾಷ್ಯಾರ್ಥ)

ನಾಮವೇ ಮುಂತಾದ ಪ್ರತೀಕೋಪಾಸನೆಗಳಲ್ಲಿ ಹಿಂದುಹಿಂದಿನ (ಉಪಾಸನೆ)ಗಿಂತ ಮುಂದುಮುಂದಿನ ಉಪಾಸನೆಯಲ್ಲಿ (ಒಂದೊಂದು) ವಿಶೇಷ ಫಲವನ್ನು "ಎಲ್ಲಿಯವರೆಗೆ ನಾಮವು ವ್ಯಾಪಿಸಿರುವದೋ ಅಲ್ಲಿ ಅವನಿಗೆ ಕಾಮಚಾರವಿರುತ್ತದೆ" (ಛಾಂ.೮-೧೫), "ವಾಕ್ಕೇ ನಾಮಕ್ಕಿಂತ ಹೆಚ್ಚಿನದು...... ಎಲ್ಲಿಯವರೆಗೆ ವಾಕ್ಕು ವ್ಯಾಪಿಸಿರುತ್ತದೆಯೋ ಅಲ್ಲಿ ಅವನಿಗೆ ಕಾಮಚಾರವಿರುತ್ತದೆ" (ಛಾಂ. ೭-೨-೧, ೭-೨-೨), "ಮನಸ್ಸೇ ವಾಕ್ಕಿಗಿಂತ ಹೆಚ್ಚಿನದು......" (ಛಾಂ. ೭-೩-೧) ಎಂದು ಮುಂತಾಗಿರುವ (ವಾಕ್ಯ)ದಿಂದ (ಶ್ರುತಿಯು) ಹೇಳಿರುತ್ತದೆ. ಆ ಈ ಫಲವಿಶೇಷವು ಉಪಾಸನೆಗಳು ಪ್ರತೀಕಕ್ಕೆ ಅಧೀನವಾಗಿರುವದರಿಂದ ಹೊಂದುತ್ತದೆ; ಆದರೆ (ಉಪಾಸನೆಯು) ಬ್ರಹ್ಮಕ್ಕೆ ಅಧೀನವೆಂದಾದರೆ ಬ್ರಹ್ಮವು (ಎಲ್ಲಾ ಉಪಾಸನೆಯಲ್ಲಿಯೂ) ಸಮಾನವಾಗಿರುವದರಿಂದ ಹೇಗೆ ಫಲವಿಶೇಷವು ಆದೀತು ? ಆದ್ದರಿಂದ ಪ್ರತೀಕಾಲಂಬನರಾಗಿರುವವರಿಗೆ ಮಿಕ್ಕ (ಉಪಾಸಕರ) ಸಮಾನವಾದ ಫಲವುಂಟಾಗುವದಿಲ್ಲ.

---

# ಅಧಿಕರಣಗಳ ಸಾರ

ಈ ಪಾದದಲ್ಲಿ ಸಗುಣೋಪಾಸಕರಿಗೆ ಆಗುವ ಉತ್ತರಮಾರ್ಗಗತಿಯ ವಿಚಾರವಿದೆ.

## ೧. ಅರ್ಚಿರಾದ್ಯಧಿಕರಣ

**ಸಂಶಯವೂ ಪೂರ್ವಪಕ್ಷವೂ :–** ನಾಡೀರಶ್ಮಿಸಂಬಂಧದ ಗತಿ, ಅರ್ಚಿರಾದಿಗತಿ, ಮುಂತಾದ ಅನೇಕ ಗತಿಗಳನ್ನು ಶ್ರುತಿಗಳಲ್ಲಿ ಹೇಳಿದೆಯಲ್ಲ, ಅವುಗಳು ಬೇರೆಬೇರೆಯ ಮಾರ್ಗಗಳೆ, ಅಥವಾ ಒಂದೇ ಮಾರ್ಗಕ್ಕೆ ಬೇರೆಬೇರೆಯ ಈ ವಿಶೇಷಣಗಳಿವೆಯೆ ? –ಎಂಬುದು ಸಂಶಯವು. ಬೇರೆಬೇರೆಯ ಪ್ರಕರಣಗಳಲ್ಲಿರುವದರಿಂದಲೂ ಬೇರೆಬೇರೆಯ ಉಪಾಸನೆಗಳಿಗೆ ಶೇಷವಾಗಿರುವದರಿಂದಲೂ ಇವು ಬೇರೆಬೇರೆಯೇ. ಈ ರಶ್ಮಿಗಳಿಂದಲೇ (ಛಾಂ. ೮–೬–೫) ಎಂದು ಅವಧಾರಣೆಮಾಡಿರುವದೂ "ಮನಸ್ಸುಹಾಕುವದರೊಳಗೆ ಆದಿತ್ಯಲೋಕಕ್ಕೆ ಹೋಗುತ್ತಾನೆ" (ಛಾಂ. ೮–೬–೫) ಎಂದು ತ್ವರೆಯನ್ನು ಹೇಳಿರುವದೂ ಮತ್ತೊಂದು ಮಾರ್ಗಕ್ಕೆ ಹೊಂದುವದಿಲ್ಲ. ಆದ್ದರಿಂದ ಬೇರೆಬೇರೆಯ ಮಾರ್ಗಗಳಿವು ಎಂಬುದು ಪೂರ್ವಪಕ್ಷ.

**ಸಿದ್ಧಾಂತ :–** ಬ್ರಹ್ಮಲೋಕಕ್ಕೆ ಹೋಗುವವರೆಲ್ಲರೂ ಅರ್ಚಿರಾದಿಮಾರ್ಗದಿಂದಲೇ ಹೋಗುತ್ತಾರೆ. ಏಕೆಂದರೆ ಅದೇ ಎಲ್ಲಾ ಉಪಾಸಕರ ವಿಷಯದಲ್ಲಿಯೂ ಶ್ರುತಿಪ್ರಸಿದ್ಧವಾಗಿದೆ. ಬೇರೆಬೇರೆಯ ಮಾರ್ಗಗಳೆಂದು ಪೂರ್ವಪಕ್ಷಿ ಹೇಳುವದೆಲ್ಲ ಒಂದೇ ಮಾರ್ಗವೇ; ಒಂದೊಂದು ಕಡೆಯಲ್ಲಿ ಒಂದೊಂದು ವಿಶೇಷಣವನ್ನು ಅದಕ್ಕೆ ಹೇಳಿರುತ್ತದೆ, ಅಷ್ಟೆ. ಪ್ರಕರಣವು ಬೇರೆಯಾದರೂ ಒಂದೇ ವಿದ್ಯೆಯಾದರೆ ಉಪಾಸನೆಗಳಲ್ಲಿ ಗುಣೋಪಸಂಹಾರವನ್ನು ಮಾಡಿಕೊಳ್ಳುವಂತೆ ಗತಿವಿಶೇಷಣಗಳ ಉಪಸಂಹಾರವನ್ನೂ ಮಾಡಿಕೊಳ್ಳಬಹುದು. ವಿದ್ಯೆಗಳು ಬೇರೆಯಾದರೂ ಮಾರ್ಗದ ಒಂದು ಭಾಗದ ಪ್ರತ್ಯಭಿಜ್ಞೆಯಿಂದಲೂ ಗಂತವ್ಯವು ಬೇರೆಯಲ್ಲವಾದ್ದರಿಂದಲೂ ಗತಿಯೂ ಒಂದೇ ಆಗಿರುತ್ತದೆ. 'ಈ ರಶ್ಮಿಗಳಿಂದಲೇ' ಎಂಬ ವಾಕ್ಯವು ರಶ್ಮಿಪರವಾಗಿರುವದರಿಂದ ಮಿಕ್ಕಗತಿಗಳನ್ನು ಅಲ್ಲಗಳೆಯಲಾರದು ; ತ್ವರೆಯನ್ನು ಹೇಳಿರುವದೂ ಇತರಗಂತವ್ಯಾಪೇಕ್ಷೆಯಿಂದ ಬಹಳ ಬೇಗ ಹೋಗುತ್ತಾನೆ ಎಂಬರ್ಥದಲ್ಲಿ ಹೊಂದುತ್ತದೆ. ಅರ್ಚಿರಾದಿಮಾರ್ಗದಲ್ಲಿ ಬಹಳ ಪರ್ವಗಳಿರುವದರಿಂದ ಮಿಕ್ಕ ಗತಿಗಳನ್ನೆಲ್ಲ ಅದರಲ್ಲಿ ಅಡಕಮಾಡಬಹುದಾಗಿದೆ.

## ೨. ವಾಯ್ವಧಿಕರಣ

**ಸಂಶಯ :–** ಕೌಶೀತಕಿಬ್ರಾಹ್ಮಣೋಪನಿಷತ್ತಿನಲ್ಲಿ "ಅವನು ಈ ದೇವಯಾನಮಾರ್ಗವನ್ನು ಸೇರಿ ಅಗ್ನಿಲೋಕಕ್ಕೆ ಬರುತ್ತಾನೆ, ಅವನು ವರುಣಲೋಕಕ್ಕೆ (ಬರುತ್ತಾನೆ)" (ಕೌ. ೧–೩) ಎಂದಿದೆ. ಅರ್ಚಿರಾದಿಮಾರ್ಗದಲ್ಲಿ ಅಗ್ನಿಶಬ್ದದಿಂದ ಅರ್ಚಿಯನ್ನು ಹೇಳಿದೆಯೆನ್ನಬಹುದು. ವಾಯುವು ಮಾತ್ರ ಅಲ್ಲಿಲ್ಲವಲ್ಲ !

**ಸಿದ್ಧಾಂತ :–** ಅವನು ವಾಯುಲೋಕಕ್ಕೆ ಬರುತ್ತಾನೆ –ಎಂದು ಅವಿಶೇಷವಾಗಿ ಕೌಶೀತಕಿಯಲ್ಲಿ ಹೇಳಿದ್ದನ್ನು ವಿಶೇಷವಾಗಿ ವಾಯುವಾದ ಬಳಿಕ ಆದಿತ್ಯಲೋಕಕ್ಕೆ

ಹೋಗುತ್ತಾನೆಂದು (ಬೃ. ೫-೧೦-೧) ಎಂದು ವಿಶೇಷವಾಗಿ ಬೃಹದಾರಣ್ಯಕದಲ್ಲಿ ಹೇಳಿರುತ್ತದೆ. ಆದ್ದರಿಂದ ಸಂವತ್ಸರ, ಆದಿತ್ಯ – ಇವರ ನಡುವೆ ವಾಯುವನ್ನು ಸೇರಿಸಿಕೊಳ್ಳಬೇಕು. ಕೌಶೀತಕಿಯಲ್ಲಿ ಅಗ್ನಿಯಾದ ಬಳಿಕ ವಾಯುವನ್ನು ಹೇಳಿವೆಯಾದರೂ ಅಲ್ಲಿ ಕ್ರಮವಚನವಿಲ್ಲ; ಬೃಹದಾರಣ್ಯಕದಲ್ಲಿ ವಿಶೇಷವಚನವಿದೆ. ದೇವಲೋಕದಿಂದ ಆದಿತ್ಯಲೋಕಕ್ಕೆ ಹೋಗುತ್ತಾರೆಂದು ಬೃ. ೬-೨-೧೫ರಲ್ಲಿರುವದರಿಂದ ದೇವಲೋಕವಾದ ಬಳಿಕ ವಾಯುವೆಂದು ತಿಳಿಯಬೇಕು. ಸಂವತ್ಸರವಾದ ಬಳಿಕ ಎಂಬುದು ಛಾಂದೋಗ್ಯಶ್ರುತಿಯನ್ನನುಸರಿಸಿ ಹೇಳಿದ್ದು; ಛಾಂದೋಗ್ಯಬೃಹದಾರಣ್ಯಕಗಳಿಗೆ ಏಕವಾಕ್ಯತೆಯನ್ನು ಮಾಡಿದರೆ ಮಾಸ, ದೇವಲೋಕ, ವಾಯು -ಎಂದು ಕ್ರಮವನ್ನು ಕಲ್ಪಿಸಬೇಕಾಗುವದು.

## ೩. ತಡಿದಧಿಕರಣ

**ಸಂಶಯ :–** "ಅವನು ವರುಣಲೋಕಕ್ಕೆ ಬರುತ್ತಾನೆ" ಎಂಬ ಕೌಶೀತಕ್ಯುಪನಿಷತ್ತಿನ ವರುಣಲೋಕವನ್ನು ಎಲ್ಲಿ ಸೇರಿಸಿಕೊಳ್ಳಬೇಕು ?

**ಸಿದ್ಧಾಂತ :–** "ಆದಿತ್ಯನಿಂದ ಚಂದ್ರನನ್ನು, ಚಂದ್ರನಿಂದ ವಿದ್ಯುತ್ತನ್ನು" (ಛಾಂ. ೪-೧೫-೫) ಎಂಬಲ್ಲಿರುವ ವಿದ್ಯುತ್ತಿನ ಬಳಿಕ ವರುಣಲೋಕವನ್ನು ಸೇರಿಸಿಕೊಳ್ಳಬೇಕು. ಏಕೆಂದರೆ ಮಿಂಚಿಗೂ ವರುಣನಿಗೂ ನೀರಿನ ದ್ವಾರದಿಂದ ಸಂಬಂಧವಿದೆ. ವರುಣನಾದ ಬಳಿಕ ಇಂದ್ರಪ್ರಜಾಪತಿಗಳನ್ನು ಸೇರಿಸಿಕೊಳ್ಳಬೇಕು ; ಏಕೆಂದರೆ ಹಾಗೆ (ಕೌ.) ಪಾಠವಿದೆ. ಅವರಿಗೆ ಬೇರೆ ಸ್ಥಾನವೂ ಇಲ್ಲ. ವರುಣಾದಿಗಳು ಆಗಂತುಕರಾಗಿರುವದರಿಂದಲೂ ಅರ್ಚಿರಾದಿಮಾರ್ಗದ ಕೊನೆಯಲ್ಲಿ ಸೇರಿಸಿಕೊಳ್ಳಬೇಕು.

## ೪. ಆತಿವಾಹಿಕಾಧಿಕರಣ

**ಸಂಶಯ :–** ಅರ್ಚಿರಾದಿಗಳು ಮಾರ್ಗಚಿಹ್ನಗಳೆ, ಭೋಗಭೂಮಿಗಳೆ, ಉಪಾಸಕರನ್ನು ಕರೆದುಕೊಂಡು ಹೋಗುವ ಆತಿವಾಹಿಕರೆ ?

**ಪೂರ್ವಪಕ್ಷ :–** ಮಾರ್ಗಚಿಹ್ನಗಳನ್ನು ಉಪದೇಶಮಾಡುವಂತೆ ಇಲ್ಲಿ ಉಪದೇಶಮಾಡಿರುವದರಿಂದ ಇವೂ ಚಿಹ್ನಗಳೇ. ಅಥವಾ ಲೋಕಶಬ್ದವನ್ನುಪಯೋಗಿಸಿರುವದರಿಂದ ಇವು ಭೋಗಭೂಮಿಗಳು. ಇವು ಅಚೇತನವಾದ್ದರಿಂದ ಆತಿವಾಹಿಕರಲ್ಲ.

**ಸಿದ್ಧಾಂತ :–** 'ತತ್ಪುರುಷೋ ಅಮಾನವಃ ಪುರುಷಃ' ಎಂದು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗುವ ಅಮಾನವಪುರುಷನನ್ನು ತಿಳಿಸಿರುವದರಿಂದ ಈ ಮಾರ್ಗದಲ್ಲಿ ಮಾನವಪುರುಷರು ಇರುತ್ತಾರೆಂದು ಗೊತ್ತಾಗುತ್ತದೆ. ಈ ಮಾರ್ಗದಲ್ಲಿ ಹೋಗುವವರಿಗೆ ದೇಹವಿಲ್ಲದ್ದರಿಂದಲೂ ಕರಣಗಳಿಲ್ಲದ್ದರಿಂದಲೂ ಅಚೇತನರಾಗಿರುತ್ತಾರೆ ; ಅರ್ಚಿರಾದಿಗಳೂ ಅಚೇತನರಾದರೆ ಗತಿಯು ಸಿದ್ಧವಾಗುವದಿಲ್ಲ. ರಾತ್ರಿಯಲ್ಲಿ ಸತ್ತವರಿಗೆ ಅಹಸ್ಸು ಸಿಕ್ಕುವದು ಕಷ್ಟ. ಆದ್ದರಿಂದ ಅಹರಭಿಮಾನಿದೇವತೆಯೆಂದೇ ಅರ್ಥಮಾಡಬೇಕು. 'ಅರ್ಚಿಷಃ' (ಅರ್ಚಿಯಿಂದ) ಎಂಬ ಪಂಚಮಿಯನ್ನು ಹೇತ್ವರ್ಥದಲ್ಲಿಯೂ ತೆಗೆದುಕೊಳ್ಳಬಹುದು ; ಅಗ್ನಿಲೋಕವೇ ಮುಂತಾದ ಲೋಕಶಬ್ದಗಳನ್ನು ಅಗ್ನಿಸ್ವಾಮಿಕವಾದ ಲೋಕ ಎಂದೂ ಅರ್ಥಮಾಡಿಕೊಳ್ಳಬಹುದು. ವರುಣಾದಿಲೋಕಗಳಲ್ಲಿ ಅಮಾನವಪುರುಷನೇ ಪ್ರಧಾನನಾಗಿರುತ್ತಾನೆಂದು ಅರ್ಥಮಾಡಿಕೊಂಡರೆ ಯಾವ ದೋಷವೂ ಇರುವದಿಲ್ಲ. ಈ ಎಲ್ಲಾ ಕಾರಣಗಳಿಂದ ಅರ್ಚಿರಾದಿಗಳು ಆತಿವಾಹಿಕರೇ.

# ೫. ಕಾರ್ಯಾಧಿಕರಣ

**ಸಂಶಯ :** ಅಮಾನವಪುರುಷನು ಬ್ರಹ್ಮದ ಬಳಿಗೆ ಕರೆದೊಯ್ಯುತ್ತಾನೆ ಎಂಬಲ್ಲಿ ಕಾರ್ಯಬ್ರಹ್ಮವನ್ನು ಹೇಳಿದೆಯೊ, ಕಾರಣವಾದ ಪರಬ್ರಹ್ಮವನ್ನು ಹೇಳಿದೆಯೆ ?

**ಪೂರ್ವಪಕ್ಷ :–** ಪರಬ್ರಹ್ಮವನ್ನೇ ಇಲ್ಲಿ ಹೇಳಿದೆ. ಏಕೆಂದರೆ ಬ್ರಹ್ಮಶಬ್ದವು ಮುಖ್ಯಾರ್ಥದಲ್ಲಿ ಪರಬ್ರಹ್ಮವನ್ನೇ ಹೇಳಿದೆ. ಶ್ರುತಿಯಲ್ಲಿ ಸುಷುಮ್ನಾನಾಡಿಯ ಮೂಲಕ ಉತ್ಕ್ರಾಂತರಾದವರಿಗೆ ಅಮೃತತ್ವವು ದೊರೆಯುವದೆಂದು ಹೇಳಿದೆ. "ಪ್ರಜಾಪತಿಯ ಸಭೆಯನ್ನು ಪಡೆಯುತ್ತೇನೆ" (ಛಾಂ. ೮–೧೪–೧) ಎಂಬ ಸಂಕಲ್ಪವಾಕ್ಯವು ಪರಬ್ರಹ್ಮ ಪ್ರಕರಣದಲ್ಲಿ ಬಂದಿದೆ. ಯಶಸ್ಸೆಂಬ ಪರಬ್ರಹ್ಮನಾಮವೂ ಬಂದಿದೆ. ಈ ವೇಶ್ಮಪ್ರತಿಪತ್ತಿಯು ಗತಿಪೂರ್ವಕವೆಂದು ಹಾರ್ದವಿದ್ಯೆಯಲ್ಲಿ ಹೇಳಿದೆ. ಪ್ರಪದ್ಯೇ ಎಂಬಲ್ಲಿರುವ ಧಾತುವಿಗೂ ಗತಿಯೆಂದೇ ಅರ್ಥ. ಆದ್ದರಿಂದಲೂ ಇದು ಪರಬ್ರಹ್ಮವೇ.

**ಸಿದ್ಧಾಂತ :–** ಕಾರ್ಯಬ್ರಹ್ಮವೇ ಇದು. ಏಕೆಂದರೆ ಅದರ ವಿಷಯಕ್ಕೆ ಗತಿಯು ಹೊಂದುತ್ತದೆ. 'ಬ್ರಹ್ಮಲೋಕೇಷು' (ಬೃ. ೧–೬–೨೫) ಎಂಬ ಬಹುವಚನವೂ ಲೋಕ ಶ್ರುತಿಯೂ ಅಧಿಕರಣಶ್ರುತಿಯೂ ಕಾರ್ಯಬ್ರಹ್ಮಕ್ಕೇ ಹೊಂದುತ್ತವೆ. ಕಾರ್ಯಬ್ರಹ್ಮವು ಪರಬ್ರಹ್ಮಕ್ಕೆ ಹತ್ತಿರವಿರುವದರಿಂದ ಅದನ್ನೂ ಬ್ರಹ್ಮವೆಂದು ಕರೆಯಬಹುದು. ಅಮೃತತ್ವ ಶ್ರುತಿಯು ಜ್ಞಾನದ ದ್ವಾರದಿಂದ ಕ್ರಮಮುಕ್ತಿಯಾಗುವದೆಂಬುದನ್ನು ಸೂಚಿಸುತ್ತದೆ. ನಾಡಿಯ ಮೂಲಕವಾದ ಗತಿಯನ್ನು ಹೇಳಿರುವದು ಬ್ರಹ್ಮವಿದ್ಯೆಯ ಸ್ತುತಿಗಾಗಿ ; 'ಪ್ರಜಾಪತಿಯ ಸಭೆಯನ್ನು' ಎಂಬ ವಾಕ್ಯವು ಪ್ರಕರಣವನ್ನು ಬಿಡಿಸಿ ಕಾರ್ಯಬ್ರಹ್ಮವನ್ನೇ ಹೇಳುತ್ತದೆಯೆಂದು ಅರ್ಥಮಾಡಬೇಕು.

# ೬. ಅಪ್ರತೀಕಾಲಂಬನಾಧಿಕರಣ

**ಸಂಶಯ :–** ಬ್ರಹ್ಮಲೋಕಕ್ಕೆ ಎಲ್ಲಾ ಉಪಾಸಕರನ್ನೂ ಅಮಾನವಪುರುಷನು ಒಯ್ಯುತ್ತಾನೊ, ಕೆಲವರನ್ನು ಮಾತ್ರ ಒಯ್ಯುತ್ತಾನೊ ?

**ಪೂರ್ವಪಕ್ಷ :–** 'ಅನಿಯಮಃ ಸರ್ವಾಸಾಮ್' ಎಂಬಲ್ಲಿ ಉಪಾಸಕರ ನಿಯಮವಿಲ್ಲದ ಗತಿಯನ್ನು ಹೊಂದಿಸಿದ್ದಾಗಿದೆಯಾದ್ದರಿಂದ ಎಲ್ಲರನ್ನೂ ಒಯ್ಯುತ್ತಾನೆ.

**ಸಿದ್ಧಾಂತ :–** ಪ್ರತೀಕಾಲಂಬನರಲ್ಲದ ಉಪಾಸಕರನ್ನು ಮಾತ್ರ ಒಯ್ಯುತ್ತಾನೆ. ಹಿಂದೆ ಹೇಳಿದ ನ್ಯಾಯವೂ ಅವರನ್ನು ಬಿಟ್ಟೇ ನಿರ್ಣಯಿಸಿದ್ದು. ಪ್ರತೀಕಾಲಂಬನರು ಬ್ರಹ್ಮವನ್ನು ಪ್ರಧಾನವಾಗಿ ಉಪಾಸನೆಮಾಡಿರುವದಿಲ್ಲ ; ಪ್ರತೀಕೋಪಾಸನೆಗೆ ಬೇರೆಬೇರೆಯ ಫಲವನ್ನು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ಎಲ್ಲಿ ಬಾಯಿಬಿಟ್ಟು ಶ್ರುತಿಯಲ್ಲಿ ಬ್ರಹ್ಮಲೋಕವನ್ನು ಮಿಕ್ಕ ಉಪಾಸಕರಿಗೂ ಹೇಳಿದೆಯೋ ಅಲ್ಲಿ ಆಗಬಹುದು. ಮಿಕ್ಕ ಕಡೆಗಳಲ್ಲಿ ಪ್ರತೀಕೋಪಾಸಕರಲ್ಲದ ಬ್ರಹ್ಮೋಪಾಸಕರನ್ನೇ ಒಯ್ಯುತ್ತಾನೆ ಎಂದು ತಿಳಿಯಬೇಕು.

---

# ನಾಲ್ಕನೆಯ ಅಧ್ಯಾಯ - ನಾಲ್ಕನೆಯ ಪಾದ

( ಬ್ರಹ್ಮಪ್ರಾಪ್ತಿವಿಚಾರ )

## ೧. ಸಂಪದ್ಯಾವಿರ್ಭಾವಾಧಿಕರಣ (ಸೂ. ೧-೩)

(ಮುಕ್ತಿಯು ಜೀವನ ಸ್ವರೂಪವೇ)

**ಸಂಪದ್ಯಾವಿರ್ಭಾವಃ ಸ್ವೇನಶಬ್ದಾತ್ ॥ ೧ ॥**

೧. ಸಂಪತ್ತಿಯಾಗಲು (ತನ್ನ ರೂಪದಿಂದ) ಆವಿರ್ಭಾವ (ವಾಗುತ್ತದೆ) ; ಏಕೆಂದರೆ 'ಸ್ವೇನ' ಎಂಬ ಶಬ್ದವಿದೆ.

### ಮುಕ್ತಿಯಲ್ಲಿ ತನ್ನ ರೂಪವೇ ಪ್ರಾಪ್ತವಾಗುತ್ತದೆ

(ಭಾಷ್ಯ)

೫೯೧. "ಏವಮೇವೈಷಃ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" (ಛಾಂ.೮-೫-೩) ಇತಿ ಶ್ರೂಯತೇ। ತತ್ರ ಸಂಶಯಃ। ಕಿಂ ದೇವಲೋಕಾದ್ಯುಪಭೋಗಸ್ಥಾನೇಷ್ವಿವ ಆಗನ್ತುಕೇನ ಕೇನಚಿದ್ ವಿಶೇಷೇಣ ಅಭಿನಿಷ್ಪದ್ಯತೇ, ಆಹೋಸ್ವಿತ್ ಆತ್ಮಮಾತ್ರೇಣ ಇತಿ। ಕಿಂ ತಾವತ್ ಪ್ರಾಪ್ತಮ್ ? ಸ್ಥಾನಾನ್ತರೇಷ್ವಿವ ಆಗನ್ತುಕೇನ ಕೇನಚಿದ್ ರೂಪೇಣ ಅಭಿನಿಷ್ಪತ್ತಿಃ ಸ್ಯಾತ್। ಮೋಕ್ಷಸ್ಯಾಪಿ ಫಲತ್ವಪ್ರಸಿದ್ಧೇಃ। ಅಭಿನಿಷ್ಪದ್ಯತ ಇತಿ ಚ ಉತ್ಪತ್ತಿಪರ್ಯಾಯತ್ವಾತ್। ಸ್ವರೂಪಮಾತ್ರೇಣ ಚೇತ್ ಅಭಿನಿಷ್ಪತ್ತಿಃ, ಪೂರ್ವಾಸ್ವಪಿ ಅವಸ್ಥಾಸು ಸ್ವರೂಪಾನಪಾಯಾತ್ ವಿಭಾವ್ಯೇತ, ತಸ್ಮಾತ್ ವಿಶೇಷೇಣ ಕೇನಚಿತ್ ಅಭಿನಿಷ್ಪದ್ಯತ ಇತಿ, ಏವಂ ಪ್ರಾಪ್ತೇ ಬ್ರೂಮಃ। ಕೇವಲೇನೈವ ಆತ್ಮನಾ ಆವಿರ್ಭವತಿ ನ ಧರ್ಮಾನ್ತರೇಣ ಇತಿ। ಕುತಃ ? "ಸ್ವೇನ ರೂಪೇಣಾಭಿನಿಷ್ಪದ್ಯತೇ" ಇತಿ ಸ್ವಶಬ್ದಾತ್। ಅನ್ಯಥಾ ಹಿ ಸ್ವಶಬ್ದೇನ[1] ವಿಶೇಷಣಮ್ ಅನವಕ್ಲಿಪ್ತಂ ಸ್ಯಾತ್। ನನ್ವಾತ್ಮೀಯಾಭಿಪ್ರಾಯಃ ಸ್ವಶಬ್ದೋ ಭವಿಷ್ಯತಿ। ನ। ತಸ್ಯಾವಚನೀಯತ್ವಾತ್। ಯೇನೈವ ಹಿ ಕೇನಚಿದ್ ರೂಪೇಣಾಭಿನಿಷ್ಪದ್ಯತೇ ತಸ್ಯೈವ ಆತ್ಮೀಯತ್ವೋಪಪತ್ತೇಃ 'ಸ್ವೇನ' ಇತಿ ವಿಶೇಷಣಮ್ ಅನರ್ಥಕಂ ಸ್ಯಾತ್। ಆತ್ಮವಚನತಾಯಾಂ ತು ಅರ್ಥವತ್ ಕೇವಲೇನೈವ ಆತ್ಮರೂಪೇಣ ಅಭಿನಿಷ್ಪದ್ಯತೇ ನಾಗನ್ತುಕೇನ ಅಪರರೂಪೇಣಾಪಿ ಇತಿ ॥

(ಭಾಷ್ಯಾರ್ಥ)

"ಹೀಗೆಯೇ ಈ ಸಂಪ್ರಸಾದನು ಈ ಶರೀರವನ್ನು ಬಿಟ್ಟೆದ್ದು ಹೆಚ್ಚಿನ ಜ್ಯೋತಿಯನ್ನು ಸೇರಿ ತನ್ನ ರೂಪದಿಂದ ಸಿದ್ಧವಾಗುತ್ತಾನೆ" (ಛಾಂ.೮-೧೨-೩)

1. ಇದರ ಮುಂದಿರುವ ಇತಿಯು ಬೇಕಿಲ್ಲ.

ಎಂದು ಶ್ರುತಿಯಲ್ಲಿದೆ. ಅಲ್ಲಿ ಸಂಶಯವೇನೆಂದರೆ, ದೇವಲೋಕವೇ ಮುಂತಾದ ಉಪಭೋಗಸ್ಥಾನಗಳಲ್ಲಿ ಆಗುವಂತೆ ಯಾವದೋ ಒಂದು ಆಗಂತುಕವಾದ ವಿಶೇಷ(ರೂಪ)ದಿಂದ ಸಿದ್ಧವಾಗುತ್ತಾನೊ, ಅಥವಾ ತನ್ನ (ರೂಪ)ಮಾತ್ರ ದಿಂದಲೇ (ಉಂಟಾಗುತ್ತಾನೊ) ?

ಇಲ್ಲಿ ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಸ್ಥಾನಾಂತರ ಗಳಲ್ಲಿ ಆಗುವಂತೆ ಆಗಂತುಕವಾದ ಯಾವದೋ ಒಂದು ವಿಶೇಷರೂಪದಿಂದ ಸಿದ್ಧವಾಗುತ್ತಾನೆ ಎನ್ನಬೇಕು. ಏಕೆಂದರೆ ಮೋಕ್ಷವೂ ಫಲವೆಂದು ಪ್ರಸಿದ್ಧ ವಾಗಿರುತ್ತದೆ. 'ಸಿದ್ಧವಾಗುತ್ತಾನೆ' (ಅಭಿನಿಷ್ಪದ್ಯತೇ) ಎಂಬುದು ಉತ್ಪತ್ತಿಗೆ ಪರ್ಯಾಯವಾಗಿರುತ್ತದೆ. ಸ್ವರೂಪಮಾತ್ರದಿಂದಲೇ ಅಭಿನಿಷ್ಪತ್ತಿಯಾಗಿದ್ದರೆ ಹಿಂದಿನ ಅವಸ್ಥೆಗಳಲ್ಲಿಯೂ (ಬಿಟ್ಟು) ಹೋಗದೆ ಇರುವದರಿಂದ (ಅದು ಆಗಲೂ) ತಿಳಿಯಬರಬೇಕಾಗುತ್ತಿತ್ತು. ಆದ್ದರಿಂದ ಯಾವದೋ ಒಂದು (ಆಗಂತುಕ ವಾದ) ವಿಶೇಷದಿಂದ ಸಿದ್ಧವಾಗುತ್ತಾನೆ.

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳು ತ್ತೇವೆ. ಬರಿಯ ತನ್ನ (ಸ್ವರೂಪ)ದಿಂದಲೇ ಆವಿರ್ಭೂತನಾಗುತ್ತಾನೆಯೇ ಹೊರತು ಮತ್ತೊಂದು ಧರ್ಮದಿಂದ (ಕೂಡಿ ಆವಿರ್ಭೂತನಾಗು)ವದಿಲ್ಲ. ಏಕೆ ? ಎಂದರೆ "ಸ್ವೇನ ರೂಪೇಣ ಅಭಿನಿಷ್ಪದ್ಯತೇ" (ತನ್ನ ರೂಪದಿಂದ ಸಿದ್ಧನಾಗು ತ್ತಾನೆ) ಎಂದು ಸ್ವಶಬ್ದವಿರುವದರಿಂದ. ಹೀಗಿಲ್ಲದಿದ್ದರೆ ಸ್ವಶಬ್ದದಿಂದ ವಿಶೇಷಣ ವನ್ನು (ಕೊಟ್ಟಿರುವದು) ಹೊಂದುತ್ತಿರಲಿಲ್ಲ.

(ಆಕ್ಷೇಪ) :– ಸ್ವಶಬ್ದವು ತನ್ನದೆಂಬ ಅಭಿಪ್ರಾಯದಿಂದ ಹೇಳಿದ್ದು ಎಂದಾಗಬಹುದಲ್ಲ !

(ಪರಿಹಾರ) :– ಹಾಗಲ್ಲ. ಏಕೆಂದರೆ ಅದನ್ನು ಹೇಳಬೇಕಾದದ್ದಿಲ್ಲ. ಯಾವ ರೂಪದಿಂದ ಸಿದ್ಧನಾಗುತ್ತಾನೋ ಅದೇ ತನ್ನದಾಗಬಹುದಾದ್ದರಿಂದ (ಆ ಅರ್ಥದಲ್ಲಿ) ಸ್ವೇನ ಎಂದು ವಿಶೇಷಣವನ್ನು ಕೊಡುವದು ವ್ಯರ್ಥವಾಗು ವದು. (ಸ್ವ ಎಂಬುದು) ತಾನು ಎಂಬುದನ್ನು ಹೇಳುತ್ತದೆ ಎಂದರೆ ಬರಿಯ ತನ್ನ ರೂಪದಿಂದ ಸಿದ್ಧವಾಗುತ್ತಾನೆಯೇ ಹೊರತು ಆಗಂತುಕವಾದ ಕೀಳುರೂಪ ದಿಂದಲ್ಲ ಎಂದು (ವಿಶೇಷಣವು) ಸಾರ್ಥಕವಾಗುತ್ತದೆ.

**ಮುಕ್ತಃ ಪ್ರತಿಜ್ಞಾನಾತ್ ॥ ೨ ॥**

೨. (ಈಗ) ಮುಕ್ತನಾಗಿರುತ್ತಾನೆ ; ಏಕೆಂದರೆ (ಹಾಗೆಂಬ) ಪ್ರತಿಜ್ಞೆ ಇದೆ.

# ತನ್ನ ರೂಪವನ್ನು ಪಡೆದಾಗ ಮುಕ್ತನು

(ಭಾಷ್ಯ)

೫೯೨. ಕಂ ಪುನರ್ವಿಶೇಷಃ ಪೂರ್ವಾಸ್ವವಸ್ಥಾಸು ಇಹ ಚ ಸ್ವರೂಪಾನಪಾಯಸಾಮ್ಯೇ ಸತೀತಿ ? ಅತ ಆಹ। (ಮುಕ್ತಃ ಪ್ರತಿಜ್ಞಾನಾತ್)। ಯೋಽತ್ರ 'ಅಭಿನಿಷ್ಪದ್ಯತೇ' ಇತ್ಯುಕ್ತಃ ಸ ಸರ್ವಬನ್ಧವಿನಿರ್ಮುಕ್ತಃ ಶುದ್ಧೇನೈವ ಆತ್ಮನಾ ಅವತಿಷ್ಠತೇ। ಪೂರ್ವತ್ರ ತು "ಅನ್ಧೋ ಭವತಿ" (ಛಾಂ. ೮-೯-೨) "ಅಪಿ ರೋದಿತೀವ" (ಛಾಂ. ೮-೧೦-೪), "ವಿನಾಶಮೇವಾಪೀತೋ ಭವತಿ" (ಛಾಂ. ೮-೧೧-೨) ಇತಿ ಚ ಅವಸ್ಥಾತ್ರಯಕಲುಷಿತೇನಾತ್ಮನಾ ಇತ್ಯಯಂ ವಿಶೇಷಃ। ಕಥಂ ಪುನರವಗಮ್ಯತೇ ಮುಕ್ತೋಽಯಮ್ ಇದಾನೀಂ ಭವತೀತಿ? ಪ್ರತಿಜ್ಞಾನಾತ್ ಇತ್ಯಾಹ। ತಥಾ ಹಿ। "ಏತಂ ತ್ವೇವ ತೇ ಭೂಯೋಽನು ವ್ಯಾಖ್ಯಾಸ್ಯಾಮಿ" (ಛಾಂ.೮-೯-೩, ೮-೧೦-೪, ೮-೧೧-೩) ಇತ್ಯವಸ್ಥಾತ್ರಯ ದೋಷವಿಹೀನಮ್ ಆತ್ಮಾನಂ ವ್ಯಾಖ್ಯೇಯತ್ವೇನ ಪ್ರತಿಜ್ಞಾಯ "ಅಶರೀರಂ ವಾವ ಸನ್ತಂ ನ ಪ್ರಿಯಾಪ್ರಿಯೇ ಸ್ಪೃಶತಃ" (ಛಾಂ.೮-೧೨-೧) ಇತಿ ಚೋಪ ನ್ಯಸ್ಯ "ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ" (ಛಾಂ. ೮-೧೨-೩) ಇತಿ ಚೋಪಸಂಹರತಿ। ತಥಾ ಆಖ್ಯಾಯಿಕೋಪಕ್ರಮೇಽಪಿ "ಯ ಆತ್ಮಾಪಹತಪಾಪ್ಮಾ" (ಛಾಂ. ೮-೭-೩) ಇತ್ಯಾದಿ ಮುಕ್ತಾತ್ಮವಿಷಯ ಮೇವ ಪ್ರತಿಜ್ಞಾನಮ್। ಫಲತ್ವಪ್ರಸಿದ್ಧಿರಪಿ ಮೋಕ್ಷಸ್ಯ ಬನ್ಧನಿವೃತ್ತಿಮಾತ್ರಾ ಪೇಕ್ಷಾ ನಾಪೂರ್ವೋಪಜನಾಪೇಕ್ಷಾ। ಯದಪಿ 'ಅಭಿನಿಷ್ಪದ್ಯತೇ' ಇತಿ ಉತ್ಪತ್ತಿಪರ್ಯಾಯತ್ವಮ್ ತದಪಿ ಪೂರ್ವಾವಸ್ಥಾಪೇಕ್ಷಮ್। ಯಥಾ ರೋಗನಿವೃತ್ತೌ ಅರೋಗೋಽಭಿನಿಷ್ಪದ್ಯತೇ ಇತಿ ತದ್ವತ್। ತಸ್ಮಾತ್ ಅದೋಷಃ ॥

(ಭಾಷ್ಯಾರ್ಥ)

(ಆಕ್ಷೇಪ) :- ಹಿಂದಿನ ಅವಸ್ಥೆಗಳಲ್ಲಿಯೂ ಇಲ್ಲಿಯೂ ತನ್ನರೂಪವು ಹೋಗಿರುವದೇ ಇಲ್ಲ ಎಂಬುದು ಸಮಾನವಾಗಿರುವಲ್ಲಿ (ಇಲ್ಲಿ) ವಿಶೇಷವೇನು ?

(ಪರಿಹಾರ):- ಇದಕ್ಕೆ ಹೇಳುತ್ತಾರೆ. (ಮುಕ್ತಃ ಪ್ರತಿಜ್ಞಾನಾತ್)। ಯಾವನನ್ನು ಇಲ್ಲಿ ಸಿದ್ಧವಾಗುತ್ತಾನೆ ಎಂದು ಹೇಳಿದೆಯೋ ಅವನು ಎಲ್ಲಾ ಬಂಧಗಳಿಂದಲೂ ವಿನಿರ್ಮುಕ್ತನಾಗಿ ಶುದ್ಧವಾದ ತನ್ನ ರೂಪದಿಂದಲೇ ನಿಂತಿರುತ್ತಾನೆ. ಹಿಂದೆಯಾದರೋ "ಕುರುಡನಾಗಿರುತ್ತಾನೆ" (ಛಾಂ. ೮-೯-೨) ಎಂದೂ "ಅಳುವಂತೆಯೂ ಕಾಣುತ್ತಿರುತ್ತಾನೆ" (ಛಾಂ. ೮-೧೦-೪) ಎಂದೂ "ವಿನಾಶವನ್ನೇ ಹೊಂದಿರುತ್ತಾನೆ" (ಛಾಂ. ೮-೧೧-೨) ಎಂದೂ ಅವಸ್ಥಾತ್ರಯದಿಂದ ಕಲುಷಿತವಾಗಿರುವ ತನ್ನ ರೂಪದಿಂದ (ಇದ್ದನು) ಎಂಬುದು ವಿಶೇಷವು.

(ಪ್ರಶ್ನೆ) :- ಈಗ ಅವನು ಮುಕ್ತನಾಗಿರುತ್ತಾನೆ ಎಂಬುದು ಹೇಗೆ ಗೊತ್ತಾಗುತ್ತದೆ ?

(ಉತ್ತರ) :- ಪ್ರತಿಜ್ಞೆಮಾಡಿರುವದರಿಂದ ಎಂದು (ಸೂತ್ರಕಾರರು) ಹೇಳುತ್ತಾರೆ. ಹೇಗೆಂದರೆ "ನಿನಗೆ ಇವನನ್ನೇ ಮತ್ತೂ ಅನುವ್ಯಾಖ್ಯಾನಮಾಡು ವೆನು" (ಛಾಂ. ೮-೯-೩, ೮-೧೦-೪, ೮-೧೧-೩) ಎಂದು ಅವಸ್ಥಾತ್ರಯ ದೋಷವಿಲ್ಲದ ಆತ್ಮನನ್ನು ವ್ಯಾಖ್ಯಾನಮಾಡುವೆನೆಂದು ಪ್ರತಿಜ್ಞೆಮಾಡಿ "ಅಶರೀರ ನೇ ಆಗಿರುವವನನ್ನು ಪ್ರಿಯಾಪ್ರಿಯಗಳು ಸೋಂಕುವದಿಲ್ಲ" (ಛಾಂ ೮-೧೨-೧) ಎಂದೂ ಉಪಕ್ರಮಿಸಿ "ತನ್ನ ರೂಪದಿಂದ ಸಿದ್ಧನಾಗುತ್ತಾನೆ; ಅವನು ಉತ್ತಮಪುರುಷನು" (ಛಾಂ. ೮-೧೨-೩) ಎಂದು ಉಪಸಂಹಾರವನ್ನು ಮಾಡಿರುತ್ತದೆ. ಹೀಗೆಯೇ ಕಥೆಯ ಉಪಕ್ರಮದಲ್ಲಿಯೂ "ಯಾವ ಆತ್ಮನು ಅಪಹತಪಾಪ್ಮನೊ" (ಛಾಂ. ೮-೭-೩) ಎಂದು ಮುಕ್ತಾತ್ಮವಿಷಯದಲ್ಲಿಯೇ ಪ್ರತಿಜ್ಞೆಮಾಡಿರುತ್ತದೆ.

ಮೋಕ್ಷವು ಫಲವೆಂಬ ಪ್ರಸಿದ್ಧಿಯು ಬಂಧವೃತ್ತಿಮಾತ್ರದ ಅಪೇಕ್ಷೆಯಿಂದ ಬಂದದ್ದೇ ಹೊರತು ಹೊಸದಾದ (ಸ್ವರೂಪವು) ಹುಟ್ಟುವದೆಂಬ ಅಪೇಕ್ಷೆಯಿಂದ ಬಂದದ್ದಲ್ಲ. ಇನ್ನು 'ಸಿದ್ಧವಾಗುತ್ತಾನೆ' ಎಂದು ಉತ್ಪತ್ತಿಪರ್ಯಾಯವಿದೆ ಯಲ್ಲ, ಅದೂ ಹಿಂದಿನ ಅವಸ್ಥೆಯ ಅಪೇಕ್ಷೆಯಿಂದ ಹೇಳಿದ್ದು. ಹೇಗೆ 'ರೋಗವು ತೊಲಗಿದರೆ ಆರೋಗನಾಗುತ್ತಾನೆ' ಎನ್ನುವರೋ ಹಾಗೆ.[1] ಆದ್ದರಿಂದ (ಇಲ್ಲಿ ಯಾವ) ದೋಷವೂ ಇಲ್ಲ.[2]

## ಆತ್ಮಾ ಪ್ರಕರಣಾತ್ ॥ ೩ ॥

೩. (ಜ್ಯೋತಿ ಎಂದರೆ) ಆತ್ಮನೇ, ಏಕೆಂದರೆ (ಅವನ) ಪ್ರಕರಣ ವಾಗಿದೆ.

## ಪರಂಜ್ಯೋತಿ ಎಂದರೆ ಆತ್ಮನೇ

(ಭಾಷ್ಯ)

೫೯೩. ಕಥಂ ಪುನರ್ಮುಕ್ತ ಇತ್ಯುಚ್ಯತೇ ? ಯಾವತಾ "ಪರಂಜ್ಯೋತಿ ರುಪಸಂಪದ್ಯ" (ಛಾಂ. ೮-೧೨-೩) ಇತಿ ಕಾರ್ಯಗೋಚರಮೇವ ಏನಂ ಶ್ರಾವಯತಿ । ಜ್ಯೋತಿಃಶಬ್ದಸ್ಯ ಭೌತಿಕೇ ಜ್ಯೋತಿಷಿ ರೂಢತ್ವಾತ್ । ನ ಚ

1. ರೋಗವು ಆಗಂತುಕವು, ಆರೋಗ್ಯವು ಸ್ವಾಭಾವಿಕ.

2. ಅದೇ ಸ್ವರೂಪವು ಈಗಲೂ ಇದ್ದನು 'ಆಗುತ್ತಾನೆ' ಎಂದು ಹೇಳಿದ್ದೇನೂ ದೋಷವಲ್ಲ.

ಅನತಿವೃತ್ತೌ ವಿಕಾರವಿಷಯಾತ್ ಕಶ್ಚಿನ್ಮುಕ್ತೋ ಭವಿತುಮರ್ಹತಿ। ವಿಕಾರಸ್ಯ ಆರ್ತತ್ವಪ್ರಸಿದ್ಧೇರಿತಿ। ನೈಷ ದೋಷಃ। ಯತ ಆತ್ಮೈವಾತ್ರ ಜ್ಯೋತಿಃಶಬ್ದೇನ ಆವೇದ್ಯತೇ। ಪ್ರ ಕ ರ ಣಾ ತ್। "ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುಃ" (ಛಾಂ. ೮–೭–೧) ಇತಿ ಹಿ ಪ್ರಕೃತೇ ಪರಸ್ಮಿನ್ ಆತ್ಮನಿ ನಾಕಸ್ಮಾತ್ ಭೌತಿಕಂ ಜ್ಯೋತಿಃ ಶಕ್ಯಂ ಗ್ರಹೀತುಮ್। ಪ್ರಕೃತಹಾನಾಪ್ರಕೃತಪ್ರಕ್ರಿಯಾ ಪ್ರಸಜ್ಗಾತ್। ಜ್ಯೋತಿಃಶಬ್ದಸ್ತು ಆತ್ಮನ್ಯಪಿ ದೃಶ್ಯತೇ "ತದ್ದೇವಾ ಜ್ಯೋತಿಷಾಂ ಜ್ಯೋತಿಃ" (ಬೃ. ೪–೪–೧೬) ಇತಿ। ಪ್ರ ಪ ಞ್ಚಿ ತಂ ಚೈತತ್ "ಜ್ಯೋತಿರ್ದರ್ಶನಾತ್" (೧–೩–೪೦) ಇತ್ಯತ್ರ ॥

(ಭಾಷ್ಯಾರ್ಥ)

(ಆಕ್ಷೇಪ) :– (ಇವನು) ಮುಕ್ತನೆಂದು ಹೇಳುವದು ಹೇಗೆ? ಹೆಚ್ಚಿನ ಜ್ಯೋತಿಯನ್ನು ಸೇರಿ" (ಛಾಂ. ೮–೧೨–೩) ಎಂದು ಶ್ರುತಿಯು ಕಾರ್ಯಗೋಚರವಾದದ್ದೆಂದೇ ಅದನ್ನು ತಿಳಿಸುತ್ತದೆಯಲ್ಲ! ಜ್ಯೋತಿ ಎಂಬ ಶಬ್ದವು ಭೌತಿಕಜ್ಯೋತಿಯಲ್ಲಿಯೇ ರೂಢವಾಗಿದೆಯಲ್ಲ! ವಿಕಾರದ ವಿಷಯವನ್ನು ಮೀರದೆ ಯಾವನೂ ಮುಕ್ತನಾಗಲಾರನು. ಏಕೆಂದರೆ ವಿಕಾರವು ಆರ್ತವು[1] ಎಂದು ಪ್ರಸಿದ್ಧವಾಗಿದೆ.

(ಸಮಾಧಾನ) :– ಇದೇನೂ ದೋಷವಲ್ಲ. ಏಕೆಂದರೆ ಇಲ್ಲಿ ಜ್ಯೋತಿ ಎಂಬ ಶಬ್ದದಿಂದ ಆತ್ಮನನ್ನೇ ತಿಳಿಸಿದೆ. ಏಕೆಂದರೆ (ಅವನ) ಪ್ರಕರಣವಾಗಿದೆ. "ಯಾವ ಆತ್ಮನು ಅಪಹತಪಾಪ್ಮನೋ, ಮುಪ್ಪಿಲ್ಲದವನೋ, ಮರಣವಿಲ್ಲದವನೋ....." (ಛಾಂ. ೮–೭–೧) ಎಂದು ಪರಮಾತ್ಮನು ಪ್ರಕೃತನಾಗಿರುವಲ್ಲಿ ತಟ್ಟನೆ ಭೌತಿಕಜ್ಯೋತಿಯನ್ನು ತೆಗೆದುಕೊಳ್ಳುವದು ಆಗಲಾರದು. ಏಕೆಂದರೆ (ಆಗ) ಪ್ರಕೃತವಾದದ್ದನ್ನು ಬಿಟ್ಟು ಅಪ್ರಕೃತವಾದದ್ದನ್ನು ಪ್ರಾರಂಭಿಸಿದಂತೆ ಆಗುತ್ತದೆ. ಜ್ಯೋತಿ ಎಂಬ ಶಬ್ದವಾದರೊ, "ತದ್ದೇವಾ ಜ್ಯೋತಿಷಾಂ ಜ್ಯೋತಿಃ" (ಬೃ. ೪–೪–೬) ಆ ಜ್ಯೋತಿಗಳಿಗೆಲ್ಲ ಜ್ಯೋತಿಯಾಗಿರುವದನ್ನು ದೇವತೆಗಳು......" ಎಂದು ಆತ್ಮನಲ್ಲಿಯೂ (ಪ್ರಯುಕ್ತವಾಗಿರುವದು) ಕಂಡುಬರುತ್ತದೆ. "ಜ್ಯೋತಿರ್ದರ್ಶನಾತ್" (೧–೩–೪) ಎಂಬಲ್ಲಿ ಇದನ್ನು ವಿವರಿಸಿದ್ದೂ ಆಗಿದೆ.

## ೨. ಅವಿಭಾಗೇನದೃಷ್ಟತ್ವಾಧಿಕರಣ

(ಮುಕ್ತನು ಬ್ರಹ್ಮಕ್ಕಿಂತ ಅಭಿನ್ನನು)

**ಅವಿಭಾಗೇನ ದೃಷ್ಟತ್ವಾತ್ ॥ ೪ ॥**

೪. ವಿಭಕ್ತನಾಗದೆ (ಇರುತ್ತಾನೆ); ಏಕೆಂದರೆ (ಶ್ರುತಿಯಲ್ಲಿ ಹಾಗೆಂದು) ಕಂಡಿದೆ.

1. ಬೃ. ೩–೭–೨೩.

# ಮುಕ್ತಾತ್ಮನು ಪರಮಾತ್ಮನಿಂದ ಭಿನ್ನನಾಗಿರುವದಿಲ್ಲ

(ಭಾಷ್ಯ)

೫೯೪. "ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" ಯಃ ಸ ಕಿಂ ಪರಸ್ಮಾದಾತ್ಮನಃ ಪೃಥಗೇವ ಭವತಿ, ಉತ ಅವಿಭಾಗೇನೈವ ಅವತಿಷ್ಠತೇ ಇತಿ ವೀಕ್ಷಾಯಾಮ್ "ಸ ತತ್ರ ಪರ್ಯೇತಿ" (ಛಾಂ.೮-೧೨-೩)ಇತ್ಯಧಿಕರಣಾಧಿಕರ್ತವ್ಯನಿರ್ದೇಶಾತ್ "ಜ್ಯೋತಿರುಪಸಂಪದ್ಯ" (ಛಾಂ. ೮-೧೨-೩) ಇತಿ ಚ ಕರ್ತೃಕರ್ಮನಿರ್ದೇಶಾತ್ ಭೇದೇನೈವಾವಸ್ಥಾನಮ್ ಇತಿ ಯಸ್ಯ ಮತಿಃ, ತಂ ವ್ಯುತ್ಪಾದಯತಿ। ಅವಿಭಕ್ತ ಏವ ಪರೇಣಾತ್ಮನಾ ಮುಕ್ತೋಽವತಿಷ್ಠತೇ। ಕುತಃ? ದೃಷ್ಟತ್ವಾತ್। ತಥಾ ಹಿ "ತತ್ತ್ವಮಸಿ" (ಛಾಂ. ೬-೮-೭), "ಅಹಂ ಬ್ರಹ್ಮಾಸ್ಮಿ" (ಬೃ. ೧-೪-೧೦), "ಯತ್ರ ನಾನ್ಯತ್ ಪಶ್ಯತಿ" (ಛಾಂ. ೭-೨೪-೧), "ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ಪಶ್ಯೇತ್" (ಬೃ. ೪-೩-೨೩) ಇತ್ಯೇವಮಾದೀನಿ ವಾಕ್ಯಾನಿ ಅವಿಭಾಗೇನೈವ ಪರಮಾತ್ಮಾನಂ ದರ್ಶಯನ್ತಿ। ಯಥಾದರ್ಶನಮೇವ ಚ ಫಲಂ ಯುಕ್ತಮ್। ತತ್ಕ್ರತುನ್ಯಾಯಾತ್। "ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ। ಏವಂಮುನೇರ್ವಿಜಾನತ ಆತ್ಮಾ ಭವತಿ ಗೌತಮ" (ಕ. ೨-೧-೧೫) ಇತಿ ಚೈವಮಾದೀನಿ ಮುಕ್ತಸ್ವರೂಪನಿರೂಪಣಪರಾಣಿ ವಾಕ್ಯಾನಿ ಅವಿಭಾಗಮೇವ ದರ್ಶಯನ್ತಿ। ನದೀಸಮುದ್ರಾದಿನಿದರ್ಶನಾನಿ ಚ। ಭೇದನಿರ್ದೇಶಸ್ತು ಅಭೇದೇಽಪಿ ಉಪಚರ್ಯತೇ। ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ" (ಛಾಂ. ೭-೨೪-೧) ಇತಿ, "ಆತ್ಮರತಿರಾತ್ಮಕ್ರೀಡಃ" (ಛಾಂ. ೭-೨೫-೨) ಇತಿ ಚೈವಮಾದಿದರ್ಶನಾತ್॥

(ಭಾಷ್ಯಾರ್ಥ)

ಹೆಚ್ಚಿನ ಜ್ಯೋತಿಯನ್ನು ಸೇರಿ ತನ್ನ ರೂಪದಿಂದ ಸಿದ್ಧನಾಗುತ್ತಾನಲ್ಲ, ಅವನೇನು ಪರಮಾತ್ಮನಿಗಿಂತ ಬೇರೆಯಾಗಿಯೇ ಇರುತ್ತಾನೊ, ಅಥವಾ ಅವಿಭಾಗದಿಂದಲೇ (ಒಂದಾಗಿ) ಇರುತ್ತಾನೊ? –ಎಂಬ ವಿಚಾರವುಂಟಾಗಲಾಗಿ "ಅವನು ಅಲ್ಲಿ ಓಡಾಡುತ್ತಿರುತ್ತಾನೆ" (ಛಾಂ. ೮-೧೨-೩) ಎಂದು ಅಧಿಕರಣ, ಅಧಿಕರ್ತವ್ಯ –ಎಂಬ (ರೂಪದಲ್ಲಿ)[1] ನಿರ್ದೇಶಮಾಡಿರುವದರಿಂದಲೂ "ಜ್ಯೋತಿಯನ್ನು ಸೇರಿ" (ಛಾಂ. ೮-೧೨-೩) ಎಂದು ಕರ್ತೃಕರ್ಮನಿರ್ದೇಶವನ್ನು[2] ಮಾಡಿರುವದರಿಂದಲೂ ಬೇರೆಯಾಗಿಯೇ ಇದ್ದುಕೊಂಡಿರುತ್ತಾನೆ ಎಂದು ಯಾವನ ಅಭಿಪ್ರಾಯವಿರುವದೋ ಅವನಿಗೆ ತಿಳಿವಳಿಕೆ ಹೇಳುತ್ತಾರೆ: ಪರ

1. 'ಅಲ್ಲಿ' ಎಂದು ಅಧಿಕರಣ, 'ಓಡಾಡುತ್ತಾನೆ' ಎಂದು ಅಧಿಕರ್ತವ್ಯ. ಹೀಗೆ ಭೇದವನ್ನು ಹೇಳಿರುವದರಿಂದ ಎಂದರ್ಥ.

2. ಸೇರುವವನು ಬೇರೆ, ಸೇರಲ್ಪಡುವ ಜ್ಯೋತಿ ಬೇರೆ– ಎಂಬ ನಿರ್ದೇಶ.

ಮಾತ್ಮನೊಡನೆ ಅವಿಭಕ್ತನಾಗಿಯೇ ಮುಕ್ತನು ಇದ್ದುಕೊಂಡಿರುತ್ತಾನೆ. ಏಕೆ ? ಎಂದರೆ (ಹಾಗೆ) ಕಂಡಿರುವದರಿಂದ. ಹೇಗೆಂದರೆ "ಅದೇ ನೀನಾಗಿರುವೆ" (ಛಾಂ. ೬–೮–೭), "ನಾನು ಬ್ರಹ್ಮವಾಗಿರುವೆನು'' (ಬೃ. ೧–೪–೧೦) ''ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ" (ಛಾಂ. ೭–೨೪–೧), "ಅವನಿಗಿಂತ ಬೇರೆಯಾದ ಎರಡನೆಯದು ಇರುವದಿಲ್ಲ; ಅದಿದ್ದರಲ್ಲವೆ, ನೋಡಿಯಾನು?"[1] (ಬೃ. ೪-೩-೨೩) ಎಂಬಿವೇ ಮುಂತಾದ ವಾಕ್ಯಗಳು ಪರಮಾತ್ಮನು ಯಾವ ವಿಭಾಗವೂ ಇಲ್ಲದವನೆಂದು ತಿಳಿಸುತ್ತವೆ. (ಶ್ರುತಿಯು) ದರ್ಶನಕ್ಕನುಗುಣವಾಗಿಯೇ ಫಲವಾಗತಕ್ಕದ್ದು ಯುಕ್ತವು; ಏಕೆಂದರೆ (ಆ ವಿಷಯಕ್ಕೆ) ತತ್ಕ್ರತುನ್ಯಾಯವಿದೆ.[2] "ಶುದ್ಧವಾದ (ನೀರಿನಲ್ಲಿ) ಶುದ್ಧವಾದ ನೀರನ್ನು ಹಾಕಿದರೆ ಹೇಗೆ ಹಾಗೆಯೇ ಆಗುವದೋ ಇದರಂತೆಯೇ ಅರಿತುಕೊಂಡ ಮುನಿಯು ಆತ್ಮನು ಆಗುತ್ತಾನಯ್ಯ, ಗೌತಮನೆ" (ಕ. ೨–೧–೧೫) ಎಂಬಿದೇ ಮುಂತಾದ ಮುಕ್ತರ ಸ್ವರೂಪವನ್ನು ತಿಳಿಸುವ ವಾಕ್ಯಗಳು ಅವಿಭಾಗವನ್ನೇ ತಿಳಿಸುತ್ತವೆ. ನದೀಸಮುದ್ರವೇ ಮುಂತಾದ[3] ದೃಷ್ಟಾಂತಗಳೂ (ಅವಿಭಾಗವನ್ನೇ ತಿಳಿಸುತ್ತವೆ). ಭೇದದರ್ಶನವಾದರೋ ಅಭೇದವಿದ್ದರೂ ಉಪಚಾರಕ್ಕಾಗಿ ಇರಬಹುದಾಗಿದೆ. "ಪೂಜ್ಯನೆ, ಆ (ಭೂಮವು) ಏತರಲ್ಲಿ ನಿಂತಿರುತ್ತದೆ ? ತನ್ನ ಮಹಿಮೆಯಲ್ಲಿ" (ಛಾಂ. ೭–೨೪–೧)[4] ಎಂದೂ "ಆತ್ಮರತಿಯು, ಆತ್ಮಕ್ರೀಡನು" (ಛಾಂ. ೭–೨೫–೨)[5] ಎಂದು ಮುಂತಾಗಿಯೂ ಶ್ರುತಿಯಿರುವದರಿಂದ (ಹೀಗೆಂದು ಗೊತ್ತಾಗುತ್ತದೆ).

## ೩. ಬ್ರಾಹ್ಮಾಧಿಕರಣ (ಸೂ. ೫–೭)

(ಮುಕ್ತನು ವ್ಯವಹಾರದೃಷ್ಟಿಯಿಂದ ಸರ್ವೇಶ್ವರತ್ವವನ್ನು ಹೊಂದುತ್ತಾನೆ)

**ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ॥ ೫ ॥**

೫. ಬ್ರಾಹ್ಮರೂಪದಿಂದ (ತೋರಿಕೊಳ್ಳುತ್ತಾನೆ) ಎಂದು ಜೈಮಿನಿಯು (ಅಭಿಪ್ರಾಯಪಡುತ್ತಾನೆ) ; ಏಕೆಂದರೆ ಉಪನ್ಯಾಸಾದಿಗಳಿವೆ.

---

1. ಇದು ಸುಷುಪ್ತಿಯ ವಿಷಯದ ಶ್ರುತಿಯಾದರೂ ಅಲ್ಲಿ ಆತ್ಮನಿಗಿಂತ ಬೇರೆಯಾದ ಎರಡನೆಯದಿಲ್ಲವೆಂದಿದೆ ; ಇದೇ ಶ್ರುತಿಯಲ್ಲಿ ಆತ್ಮನು ಪ್ರಾಜ್ಞನೊಡನೆ ಒಂದಾಗಿರುತ್ತಾನೆಂದಿದೆ.

2. ಯಾವದನ್ನು ಅನುಸಂಧಾನಮಾಡುತ್ತಾನೋ ಅದನ್ನೇ ಪಡೆಯುತ್ತಾನೆಂಬ ನ್ಯಾಯ. ಇದು ಉಪಾಸನೆಯ ವಿಷಯವಾದರೂ ಜ್ಞಾನವಾಕ್ಯಕ್ಕೆ ಇನ್ನೂ ವಿಶೇಷವಾಗಿ ಹೊಂದುತ್ತದೆ.

3. ನದೀಸಮುದ್ರ (ಮುಂ. ೩–೨–೮), ಮಧುರಸ (ಛಾಂ. ೬–೮–೧) ಮುಂತಾದ ದೃಷ್ಟಾಂತಗಳು.

4. ತಾನು ತನ್ನ ಮಹಿಮೆಯಲ್ಲಿದೆ – ಎಂಬುದು ಬರಿಯ ಉಪಚಾರದ ಮಾತು ; ಏಕೆಂದರೆ ತನಗೆ ತಾನೇ ಆಧಾರವಾಗಲಾರದು.

5. ತನ್ನಲ್ಲಿ ತಾನು ರತನಾಗಿರುತ್ತಾನೆ, ಕ್ರೀಡೆಯನ್ನು ಮಾಡುತ್ತಾನೆ– ಎಂಬ ಭೇದವೂ ಉಪಚಾರದ ಮಾತು ; ಏಕೆಂದರೆ ಆತ್ಮನಲ್ಲಿ ಯಾವ ಅವಯವಗಳೂ ಇರುವದಿಲ್ಲ.

## ಮುಕ್ತನಿಗೆ ಸರ್ವೇಶ್ವರತ್ವವಿದೆ ಎಂಬ ಮತ

(ಭಾಷ್ಯ)

೫೫೫. ಸ್ಥಿತಮೇತತ್ "ಸ್ವೇನ ರೂಪೇಣ" (ಛಾಂ. ೮-೩-೪) ಇತ್ಯತ್ರ ಆತ್ಮಮಾತ್ರರೂಪೇಣ ಅಭಿನಿಷ್ಪದ್ಯತೇ ನಾಗನ್ತುಕೇನ ಅಪರರೂಪೇಣ ಇತಿ। ಅಧುನಾ ತು ತದ್ವಿಶೇಷಬುಭುತ್ಸಾಯಾಮ್ ಅಭಿಧೀಯತೇ। ಸ್ವಮಸ್ಯ ರೂಪಂ ಬ್ರಾಹ್ಮಮ್ ಅಪಹತಪಾಪ್ಮತ್ವಾದಿಸತ್ಯಸಂಕಲ್ಪತ್ವಾವಸಾನಂ ತಥಾ ಸರ್ವಜ್ಞತ್ವಂ ಸರ್ವೇಶ್ವರತ್ವಂ ಚ ತೇನ ಸ್ವರೂಪೇಣ ಅಭಿನಿಷ್ಪದ್ಯತ ಇತಿ ಜೈಮಿನಿ ರಾಚಾರ್ಯೋ ಮನ್ಯತೇ। ಕುತಃ? ಉಪನ್ಯಾಸಾದಿಭ್ಯಸ್ತಥಾತ್ವಾವಗಮಾತ್। ತಥಾ ಹಿ "ಯ ಆತ್ಮಾಽಪಹತಪಾಪ್ಮಾ" (ಛಾಂ. ೮-೭-೧) ಇತ್ಯಾದಿನಾ "ಸತ್ಯಕಾಮಃ ಸತ್ಯಸಂಕಲ್ಪಃ" (ಛಾಂ. ೮-೭-೧) ಇತ್ಯೇವಮನ್ತೇನ ಉಪನ್ಯಾಸೇನ ಏವಮಾತ್ಮಕತಾಮ್ ಆತ್ಮನೋ ಬೋಧಯತಿ। ತಥಾ "ಸ ತತ್ರ ಪರ್ಯೇತಿ ಜಕ್ಷತ್ಕ್ರೀಡನ್ ರಮಮಾಣಃ" (ಛಾಂ. ೮-೧೨-೩) ಇತ್ಯೈಶ್ವರ್ಯ ರೂಪಮಾವೇದಯತಿ। "ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ" (ಛಾಂ. ೮-೮-೧) ಇತಿ ಚ। "ಸರ್ವಜ್ಞಃ ಸರ್ವೇಶ್ವರಃ" (ಪ್ರ. ೪-೧೧, ಬೃ. ೪-೪-೨೨) ಇತ್ಯಾದಿವ್ಯಪದೇಶಾಶ್ಚ ಏವಮುಪಪನ್ನಾ ಭವಿಷ್ಯನ್ತೀತಿ ॥

(ಭಾಷ್ಯಾರ್ಥ)

"ತನ್ನ ರೂಪದಿಂದ ಸಿದ್ಧವಾಗುತ್ತಾನೆ" (ಛಾಂ. ೮-೩-೪) ಎಂಬಲ್ಲಿ ಆತ್ಮಮಾತ್ರರೂಪದಿಂದ ತೋರಿಕೊಳ್ಳುತ್ತಾನೆಯೇ ಹೊರತು ಆಗಂತುಕವಾದ ಕೀಳುರೂಪದಿಂದಲ್ಲ ಎಂದು ಸಿದ್ಧವಾಗಿದೆಯಷ್ಟೆ. ಈಗಲಾದರೋ ಅದರ ವಿಶೇಷವನ್ನು ತಿಳಿಯಬೇಕೆಂಬ ಇಚ್ಛೆಯುಂಟಾಗಲಾಗಿ[1] ಹೇಳುತ್ತಾರೆ: (ಆಗ ದೊರಕುವ) ಇವನ ಸ್ವರೂಪವು ಬ್ರಾಹ್ಮವು, ಎಂದರೆ ಅಪಹತಪಾಪ್ಮತ್ವವೇ ಮುಂತಾಗಿ ಸತ್ಯಸಂಕಲ್ಪತ್ವದವರೆಗಿನದು, ಮತ್ತು ಸರ್ವಜ್ಞತ್ವ, ಸರ್ವೇಶ್ವರತ್ವ- ಇವು; ಆ ಸ್ವರೂಪದಿಂದಲೇ ಮುಕ್ತನು ತೋರಿಕೊಳ್ಳುತ್ತಾನೆ ಎಂದು ಜೈಮಿನಿ ಎಂಬ ಆಚಾರ್ಯರು ಅಭಿಪ್ರಾಯಪಡುತ್ತಾರೆ. ಏಕೆ? ಎಂದರೆ ಉಪನ್ಯಾಸವೇ ಮುಂತಾದವುಗಳಿಂದ ಹಾಗೆಂದು ಗೊತ್ತಾಗುವದರಿಂದ. ಹೇಗೆಂದರೆ "ಯಾವ ಆತ್ಮನು ಅಪಹತಪಾಪ್ಮನೋ...." (ಛಾಂ. ೮-೭-೧) ಎಂದು ಮುಂತಾಗಿ "ಸತ್ಯಕಾಮನು, ಸತ್ಯಸಂಕಲ್ಪನು" (ಛಾಂ. ೮-೭-೧) ಎಂಬಿದರವರೆಗಿನ ಉಪನ್ಯಾಸದಿಂದಲೇ[2] ಆತ್ಮನು ಈ ಸ್ವರೂಪದವನೆಂದು (ಶ್ರುತಿಯು) ತಿಳಿಸುತ್ತಿದೆ

1. ಸಂಶಯವುಂಟಾಗಲು ಎಂದರ್ಥ.

2. ಉಪಕ್ರಮದಲ್ಲಿ ಆತ್ಮನು ಅಪಹತಪಾಪ್ಮನು, ವಿಜರನು (ಮುಪ್ಪಿಲ್ಲದವನು), ವಿಮೃತ್ಯುವು (ಸಾವಿಲ್ಲದವನು), ವಿಶೋಕನು, ವಿಜಿಘತ್ಸನು (ಹಸಿವಿಲ್ಲದವನು), ಅಪಿಪಾಸನು, (ಬಾಯಾರಿಕೆಯಿಲ್ಲದವನು), ಸತ್ಯಕಾಮನು, ಸತ್ಯಸಂಕಲ್ಪನು- ಎಂದು ಎಂಟು ಧರ್ಮಗಳನ್ನು ಆತ್ಮನಿಗೆ ಹೇಳಿದೆ.

ಮತ್ತು "ಅವನು ಅಲ್ಲಿ ತಿನ್ನುತ್ತಾ, ಕ್ರೀಡಿಸುತ್ತಾ, ರಮಿಸುತ್ತಾ...." (ಛಾಂ. ೮-೧೨-೩) ಎಂದು (ಮುಕ್ತನಿಗೆ) ಐಶ್ವರ್ಯರೂಪವನ್ನು (ಶ್ರುತಿಯು) ತಿಳಿಸುತ್ತದೆ. "ಅವನಿಗೆ ಸರ್ವಲೋಕಗಳಲ್ಲಿಯೂ ಕಾಮಚಾರವಿರುತ್ತದೆ" (ಛಾಂ. ೮-೭-೧) ಎಂದೂ (ಐಶ್ವರ್ಯರೂಪವನ್ನು ತಿಳಿಸುತ್ತದೆ)- "ಸರ್ವಜ್ಞನು, ಸರ್ವೇಶ್ವರನು" (ಪ್ರ. ೪-೧೧, ಬೃ. ೪-೪-೨೨) ಎಂಬಿದೇ ಮುಂತಾದ ವ್ಯಪದೇಶಗಳೂ (ಹೀಗಾದರೆ) ಹೊಂದುಗಡೆಯಾಗುತ್ತವೆ.

**ಚಿತಿತನ್ಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ॥ ೬ ॥**

೬. ಚೈತನ್ಯಮಾತ್ರ(ರೂಪದಿಂದ ತೋರಿಕೊಳ್ಳುತ್ತಾನೆ) ; ಏಕೆಂದರೆ (ಆತ್ಮನು) ಆ ರೂಪದವನಾಗಿರುತ್ತಾನೆ ಎಂದು ಔಡುಲೋಮಿಯು (ಅಭಿಪ್ರಾಯ)ಪಡುತ್ತಾನೆ.

## ಮುಕ್ತನು ಚೈತನ್ಯಮಾತ್ರಸ್ವರೂಪದಲ್ಲಿರುತ್ತಾನೆ

(ಭಾಷ್ಯ)

೫೯೬. ಯದ್ಯಪಿ ಅಪಹತಪಾಪ್ಮತ್ವಾದಯೋ ಭೇದೇನೈವ ಧರ್ಮಾಃ ನಿರ್ದಿಶ್ಯನ್ತೇ ತಥಾಪಿ ಶಬ್ದವಿಕಲ್ಪಜಾ ಏವೈತೇ। ಪಾಪ್ಮಾದಿನಿವೃತ್ತಿಮಾತ್ರಂ ಹಿ ತತ್ರ ಗಮ್ಯತೇ। ಚೈತನ್ಯಮೇವ ತು ಅಸ್ಯಾತ್ಮನಃ ಸ್ವರೂಪಮ್ ಇತಿ ತನ್ಮಾತ್ರೇಣ ಸ್ವರೂಪೇಣ ಅಭಿನಿಷ್ಪತ್ತಿರ್ಯುಕ್ತಾ । ತಥಾ ಚ ಶ್ರುತಿಃ "ಏವಂ ವಾ ಅರೇಽಯಮಾತ್ಮಾನನ್ತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ" (ಬೃ. ೪-೫-೧೩) ಇತ್ಯೇವಂಜಾತೀಯಕಾ ಅನುಗೃಹೀತಾ ಭವಿಷ್ಯತಿ। ಸತ್ಯಕಾಮತ್ವಾದಯಸ್ತು ಯದ್ಯಪಿ ವಸ್ತುಸ್ವರೂಪೇಣೈವ ಧರ್ಮಾ ಉಚ್ಯನ್ತೇ ಸತ್ಯಾಃ ಕಾಮಾಃ ಅಸ್ಯೇತಿ। ತಥಾಪಿ ಉಪಾಧಿಸಂಬನ್ಧಾಧೀನತ್ವಾತ್ ತೇಷಾಂ ನ ಚೈತನ್ಯವತ್ ಸ್ವರೂಪತ್ವಸಂಭವಃ। ಅನೇಕಾಕಾರತ್ವಪ್ರತಿಷೇಧಾತ್। ಪ್ರತಿಷಿದ್ಧಂ ಹಿ ಬ್ರಹ್ಮಣೋಽನೇಕಾಕಾರತ್ವಮ್ "ನ ಸ್ಥಾನತೋಽಪಿ ಪರಸ್ಯೋಭಯಲಿಙ್ಗಮ್" (೩-೨-೧೧) ಇತ್ಯತ್ರ। ಅತ ಏವ ಚ ಜಕ್ಷಣಾದಿಸಂಕೀರ್ತನಮಪಿ ದುಃಖಾಭಾವಮಾತ್ರಾಭಿಪ್ರಾಯಂ ಸ್ತುತ್ಯರ್ಥಮ್, ಆತ್ಮರತಿರಿತ್ಯಾದಿವತ್। ನ ಹಿ ಮುಖ್ಯಾನ್ಯೇವ ರತಿಕ್ರೀಡಾಮಿಥುನಾನಿ, ಆತ್ಮನಿಮಿತ್ತಾನಿ ಶಕ್ಯನ್ತೇ ವರ್ಣಯಿತುಮ್। ದ್ವಿತೀಯವಿಷಯತ್ವಾತ್ ತೇಷಾಮ್। ತಸ್ಮಾತ್ ನಿರಸ್ತಾಶೇಷಪ್ರಪಞ್ಚೇನ ಪ್ರಸನ್ನೇನ ಅವ್ಯಪದೇಶ್ಯೇನ ಬೋಧಾತ್ಮನಾ ಅಭಿನಿಷ್ಪದ್ಯತ ಇತ್ಯೌಡುಲೋಮಿರಾಚಾರ್ಯೋ ಮನ್ಯತೇ॥

---

1. ಆದ್ದರಿಂದ "ತನ್ನ ರೂಪವು" ಎಂದರೆ ಈ ಐಶ್ವರ್ಯರೂಪವೇ ಎಂದು ಅಭಿಪ್ರಾಯ.

(ಭಾಷ್ಯಾರ್ಥ)

ಅಪಹತಪಾಪ್ಮತ್ವವೇ ಮುಂತಾದ ಧರ್ಮಗಳು ಬೇರೆಬೇರೆಯಾಗಿಯೇ ನಿರ್ದಿಷ್ಟವಾಗಿವೆಯೆಂಬುದು ನಿಜ ; ಆದರೂ ಅವು ಶಬ್ದವಿಕಲ್ಪದಿಂದಲೇ ಆಗಿರುತ್ತವೆ. ಏಕೆಂದರೆ ಅಲ್ಲಿ ಪಾಪ್ಮಾದಿಗಳ ಅಭಾವಮಾತ್ರವೇ ತೋರಿಬರುತ್ತದೆ. **ಚೈತನ್ಯವೊಂದೇ ಈ ಆತ್ಮನ ಸ್ವರೂಪವಾದ್ದರಿಂದ ಅಷ್ಟುಮಾತ್ರದ ಸ್ವರೂಪದಿಂದಲೇ (ಮುಕ್ತನು) ತೋರಿಕೊಳ್ಳುತ್ತಾನೆಂಬುದು ಯುಕ್ತವಾಗಿರುತ್ತದೆ.** ಹೀಗಾದರೆ "ಎಲೆ, ಹೀಗೆಯೇ ಈ ಆತ್ಮನು ಒಳಗಿಲ್ಲದವನು, ಹೊರಗಿಲ್ಲದವನು, ಪೂರ್ಣನು, ಅರಿವಿನ ಗಟ್ಟಿಯೇ" (ಬೃ. ೪-೫-೧೩) ಎಂಬೀ ಜಾತಿಯ ಶ್ರುತಿಗೂ ಹೊಂದುಗೆಮಾಡಿದಂತೆ ಆಗುತ್ತದೆ. **ಸತ್ಯಕಾಮತ್ವವೇ ಮುಂತಾದವುಗಳೇನೋ ವಸ್ತುಸ್ವರೂಪದಿಂದಲೇ– 'ಇವನ ಕಾಮಗಳು ಸತ್ಯವಾಗಿರುತ್ತವೆ' ಎಂದು– ಧರ್ಮಗಳಾಗಿ ಉಕ್ತವಾಗಿವೆ ಎಂಬುದು ನಿಜ ; ಆದರೂ ಉಪಾಧಿಸಂಬಂಧಕ್ಕೆ ಅಧೀನವಾಗಿರುವದರಿಂದ ಚೈತನ್ಯದಂತೆ ಅವು ಸ್ವರೂಪವಾಗಿರಲಾರವು.** ಏಕೆಂದರೆ ಅನೇಕಾಕಾರತ್ವವನ್ನು ಅಲ್ಲಗಳೆದಿರುತ್ತದೆ. "ನ ಸ್ಥಾನತೋಽಪಿ ಪರಸ್ಯೋಭಯಲಿಙ್ಗಮ್" (೩-೨-೧೧) ಎಂಬಲ್ಲಿ ಬ್ರಹ್ಮಕ್ಕೆ ಅನೇಕಾಕಾರಗಳಿರುವವೆಂಬುದನ್ನು ಅಲ್ಲಗಳೆದದ್ದಾಗಿದೆಯಲ್ಲವೆ ? ಆದ್ದರಿಂದಲೇ ತಿನ್ನುವದು[1] ಮುಂತಾದವುಗಳನ್ನು ಹೇಳಿರುವದೂ ದುಃಖವಿಲ್ಲವೆಂಬ ಮಾತ್ರದ ಅಭಿಪ್ರಾಯದಿಂದ (ಹೇಳಿದ್ದು), 'ಆತ್ಮರತಿಯು' ಮುಂತಾದವುಗಳಂತೆ ಸ್ತುತಿಗಾಗಿ ಹೇಳಿದ್ದು ; ರತಿ, ಕ್ರೀಡೆ, ಮಿಥುನ– ಮುಂತಾದವುಗಳು ಮುಖ್ಯಾರ್ಥದಲ್ಲಿಯೇ ಆತ್ಮನಲ್ಲಿವೆ ಯೆಂದುವರ್ಣಿಸುವದಕ್ಕೆ ಆಗಲೇ ಆರದು, ಏಕೆಂದರೆ ಅವು ದ್ವಿತೀಯ(ವಸ್ತುವಿನ) ವಿಷಯದಲ್ಲಿ (ಆಗತಕ್ಕವು)ಗಳಾಗಿವೆ[2]. ಆದ್ದರಿಂದ ಯಾವ ಪ್ರಪಂಚವೂ ಇಲ್ಲದ ಪ್ರಸನ್ನವಾದ(ಯಾವ ಶಬ್ದದಿಂದಲೂ) ಹೇಳುವದಕ್ಕೆ ಬಾರದ ಚಿದ್ರೂಪದಿಂದಲೇ **ತೋರಿಕೊಳ್ಳುತ್ತಾನೆ** ಎಂದು **ಔಡುಲೋಮಿ** ಎಂಬ ಆಚಾರ್ಯರು ಅಭಿಪ್ರಾಯಪಡುತ್ತಾರೆ.

---

1. ಜಕ್ಷಣ– ಎಂಬುದಕ್ಕೆ ನಗುವದು ಎಂದೂ ಉಪನಿಷತ್ತಿನ ಭಾಷ್ಯದಲ್ಲಿ ಅರ್ಥಮಾಡಿದೆ.

2. ರಮಿಸುವದು, ಕ್ರೀಡಿಸುವದು– ಮುಂತಾದವುಗಳಿಗೆ ತನಗಿಂತ ಬೇರೆಯಾದ ಎರಡನೆಯ ವಸ್ತುವೂ ಬೇಕು ; ಆದ್ದರಿಂದ ತನ್ನ ಸ್ವರೂಪದಲ್ಲಿ ಇವು ಮುಖ್ಯಾರ್ಥದಲ್ಲಿರಲಾರವು ಎಂದರ್ಥ.

**ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ॥**

೭. ಹೀಗಾದರೂ ಉಪನ್ಯಾಸದಿಂದ ಹಿಂದಿನದೂ ಆಗಬಹುದಾದ್ದರಿಂದ (ಯಾವ) ವಿರೋಧವೂ ಇಲ್ಲವೆಂದು ಬಾದರಾಯಣನು (ಅಭಿಪ್ರಾಯಪಡುತ್ತಾನೆ).

## ಬ್ರಾಹ್ಮಸ್ವರೂಪವೂ ಚೈತನ್ಯಸ್ವರೂಪವೂ ಆಗಬಹುದು

(ಭಾಷ್ಯ)

೫೯೭. ಏವಮಪಿ ಪಾರಮಾರ್ಥಿಕಚೈತನ್ಯಮಾತ್ರಸ್ವರೂಪಾಭ್ಯುಪಗಮೇಽಪಿ ವ್ಯವಹಾರಾಪೇಕ್ಷಯಾ ಪೂರ್ವಸ್ಯಾಪಿ ಉಪನ್ಯಾಸಾದಿಭ್ಯೋಽವಗತಸ್ಯ ಬ್ರಾಹ್ಮಸ್ಯ ಐಶ್ವರ್ಯರೂಪಸ್ಯ ಅಪ್ರತ್ಯಾಖ್ಯಾನಾತ್ ಅವಿರೋಧಂ ಬಾದರಾಯಣ ಆಚಾರ್ಯೋ ಮನ್ಯತೇ ॥

(ಭಾಷ್ಯಾರ್ಥ)

ಹೀಗಾದರೂ ಎಂದರೆ ಪಾರಮಾರ್ಥಿಕವಾದ ಚೈತನ್ಯಮಾತ್ರಸ್ವರೂಪದಲ್ಲಿರುತ್ತಾನೆಂದು ಒಪ್ಪಿದರೂ ವ್ಯವಹಾರದ ಅಪೇಕ್ಷೆಯಿಂದ[1] ಉಪನ್ಯಾಸವೇ ಮುಂತಾದ (ಹೇತು)ಗಳಿಂದ ನಿಶ್ಚಯಿಸಿ ಹಿಂದೆ (ಹೇಳಿರುವ) ಬ್ರಾಹ್ಮದ, ಐಶ್ವರ್ಯರೂಪವನ್ನು ತಿರಸ್ಕಾರಮಾಡುವದಕ್ಕಿಲ್ಲವಾದ್ದರಿಂದ (ಯಾವ) ವಿರೋಧವೂ ಇಲ್ಲವೆಂದು ಬಾದರಾಯಣಾಚಾರ್ಯರು ಅಭಿಪ್ರಾಯಪಡುತ್ತಾನೆ.

## ೪. ಸಂಕಲ್ಪಾಧಿಕರಣ (ಸೂ. ೮-೯)

(ಸಗುಣವಿದ್ಯೆಯಿಂದ ಮುಕ್ತನಾದವನಿಗೆ ಸಂಕಲ್ಪಮಾತ್ರದಿಂದ ಇಷ್ಟಪ್ರಾಪ್ತಿ)

**ಸಂಕಲ್ಪಾದೇವ ತು ತಚ್ಛ್ರುತೇಃ ॥ ೮ ॥**

೮. ಸಂಕಲ್ಪದಿಂದಲೇ (ಕಾಮಗಳ ಪ್ರಾಪ್ತಿ) ; ಏಕೆಂದರೆ ಹಾಗೆಂಬ ಶ್ರುತಿಯಿದೆ.

---

1. ಐಶ್ವರ್ಯರೂಪವು ವ್ಯವಹಾರದೃಷ್ಟಿಯಿಂದ ಹೇಳಿದ್ದು ಎಂದದ್ದರಿಂದ ಔಡುಲೋಮಿಯ ಪಕ್ಷದಲ್ಲಿಯೇ ಆಚಾರ್ಯರಿಗೆ ಹೆಚ್ಚು ತಾತ್ಪರ್ಯವಿದೆಯೆಂದು ಹೇಳಬೇಕಾಗಿದೆ. ಈ ಶ್ರುತಿಗೆ ಉಪನಿಷದ್ಭಾಷ್ಯದಲ್ಲಿ ಮಾಡಿರುವ ವ್ಯಾಖ್ಯಾನವನ್ನು ನೋಡಿ. ಇಲ್ಲಿ ಮೂಲಾವಿದ್ಯೆಯು ಒಂದೇ ಆಗಿರುವುದರಿಂದ ಅದು ನಾಶವಾದ ಬಳಿಕ ಮಿಕ್ಕ ಜೀವರುಗಳೇ ಇರುವದಿಲ್ಲವಲ್ಲ ! ಜೀವರೇ ಇಲ್ಲದಿರುವಾಗ ಮುಕ್ತನಲ್ಲಿ ಈಶ್ವರಧರ್ಮಗಳು ಹೇಗೆ ಬಂದಾವು ? —ಎಂಬ ಆಕ್ಷೇಪವನ್ನು ಮಾಡಿಕೊಂಡು ಮೂಲಾವಿದ್ಯೆಯ ಅಂಶವು ನಾಶವಾಗುತ್ತದೆ, ಅಂಶಾಂತರದ ಉಪಾಧಿಯುಳ್ಳ ಜೀವರು ಮುಕ್ತನನ್ನು ಈಶ್ವರನೆಂದು ವ್ಯವಹರಿಸುತ್ತಾರೆ —ಎಂದು ರ॥ ಪ್ರ॥ ವ್ಯಾಖ್ಯಾನದಲ್ಲಿದೆ. ಆದಕ್ಕೆ ಭಾಷ್ಯಾಧಾರವಿಲ್ಲವೆಂಬುದು ಸ್ಪಷ್ಟ.

# ಅಪರವಿದ್ಯೆಯಿಂದ ಮುಕ್ತನಾದವನಿಗೆ ಸಂಕಲ್ಪಮಾತ್ರದಿಂದ ಸಿದ್ಧಿ

(ಭಾಷ್ಯ)

೫೯೮. ಹಾರ್ದವಿದ್ಯಾಯಾಂ ಶ್ರೂಯತೇ । "ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠನ್ತಿ" (ಛಾಂ.೮-೨-೧) ಇತ್ಯಾದಿ । ತತ್ರ ಸಂಶಯಃ । ಕಿಂ ಸಂಕಲ್ಪ ಏವ ಕೇವಲಃ ಪಿತ್ರಾದಿಸಮುತ್ಥಾನೇ ಹೇತುಃ, ಉತ ನಿಮಿತ್ತಾನ್ತರಸಹಿತಃ ಇತಿ । ತತ್ರ ಸತ್ಯಪಿ ಸಂಕಲ್ಪಾದೇವ ಇತಿ ಶ್ರವಣೇ ಲೋಕವತ್ ನಿಮಿತ್ತಾನ್ತರಾಪೇಕ್ಷತಾ ಯುಕ್ತಾ । ಯಥಾ ಲೋಕೇ ಅಸ್ಮದಾದೀನಾಂ ಸಂಕಲ್ಪಾತ್ ಗಮನಾದಿಭ್ಯಶ್ಚ ಹೇತುಭ್ಯಃ ಪಿತ್ರಾದಿಸಂಪತ್ತಿಃ ಭವತಿ ಏವಂ ಮುಕ್ತಸ್ಯಾಪಿ ಸ್ಯಾತ್ । ಏವಂ ದೃಷ್ಟವಿಪರೀತಂ ನ ಕಲ್ಪಿತಂ ಭವಿಷ್ಯತಿ । 'ಸಂಕಲ್ಪಾದೇವ' ಇತಿ ತು ರಾಜ್ಞ ಇವ ಸಂಕಲ್ಪಿತಾರ್ಥಸಿದ್ಧಿಕರೀಂ ಸಾಧನಾನ್ತರಸಾಮಗ್ರೀಂ ಸುಲಭಾಮ್ ಅಪೇಕ್ಷ್ಯ ಉಚ್ಯತೇ । ನ ಚ ಸಂಕಲ್ಪಮಾತ್ರಸಮುತ್ಥಾನಾಃ ಪಿತ್ರಾದಯೋ ಮನೋರಥವಿಜೃಮ್ಭಿತವತ್ ಚಞ್ಚಲತ್ವಾತ್ ಪುಷ್ಕಲಂ ಭೋಗಂ ಸಮರ್ಪಯಿತುಂ ಪರ್ಯಾಪ್ತಾಃ ಸ್ಯುರಿತಿ । ಏವಂ ಪ್ರಾಪ್ತೇ ಬ್ರೂಮಃ । ಸಂಕಲ್ಪಾದೇವ ತು ಕೇವಲಾತ್ ಪಿತ್ರಾದಿ ಸಮುತ್ಥಾನಮಿತಿ । ಕುತಃ ? ತಚ್ಛ್ರುತೇಃ । "ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠನ್ತಿ" (ಛಾಂ. ೮-೨-೧) ಇತ್ಯಾದಿಕಾ ಹಿ ಶ್ರುತಿಃ ನಿಮಿತ್ತಾನ್ತರಾಪೇಕ್ಷಾಯಾಂ ಪೀಡ್ಯೇತ । ನಿಮಿತ್ತಾನ್ತರಮಪಿ ತು ಯದಿ ಸಂಕಲ್ಪಾನುವಿಧಾಯ್ಯೇವ ಸ್ಯಾತ್ ಭವತು, ನ ತು ಪ್ರಯತ್ನಾನ್ತರಸಂಪಾದ್ಯಂ ನಿಮಿತ್ತಾನ್ತರಮ್ ಇತೀಷ್ಯತೇ ಪ್ರಾಕ್ ತತ್ಸಂಪತ್ತೇರ್ವನ್ಧ್ಯಸಂಕಲ್ಪತ್ವಪ್ರಸಙ್ಗಾತ್ । ನ ಚ ಶ್ರುತ್ಯವಗಮ್ಯೇಽರ್ಥೇ ಲೋಕವತ್ ಇತಿ ಸಾಮಾನ್ಯತೋದೃಷ್ಟಂ ಕ್ರಮತೇ । ಸಂಕಲ್ಪಬಲಾದೇವ ಚ ಏಷಾಂ ಯಾವತ್ ಪ್ರಯೋಜನಂ ಸ್ಥೈರ್ಯೋಪಪತ್ತಿಃ । ಪ್ರಾಕೃತಸಂಕಲ್ಪವಿಲಕ್ಷಣತ್ವಾತ್ ಮುಕ್ತಸಂಕಲ್ಪಸ್ಯ ॥

(ಭಾಷ್ಯಾರ್ಥ)

ಹಾರ್ದವಿದ್ಯೆಯಲ್ಲಿ "ಅವನು ಪಿತೃಲೋಕಕಾಮನಾದರೆ, ಸಂಕಲ್ಪದಿಂದಲೇ ಅವನ ಪಿತೃಗಳು ಎದ್ದುನಿಲ್ಲುತ್ತಾರೆ" (ಛಾಂ. ೮-೨-೧) ಎಂದುಮುಂತಾಗಿ ಶ್ರುತಿಯು ಹೇಳುತ್ತದೆ. ಅಲ್ಲಿ ಸಂಶಯವೇನೆಂದರೆ ಸಂಕಲ್ಪವೊಂದೇ ಪಿತ್ರಾದಿಗಳು ಎದ್ದುನಿಲ್ಲುವದಕ್ಕೆ ಕಾರಣವೊ, ಅಥವಾ ಬೇರೆಯ ನಿಮಿತ್ತಗಳೂ ಜೊತೆಗೆ ಇರುವವೊ ?

ಇಲ್ಲಿ 'ಸಂಕಲ್ಪದಿಂದಲೇ' ಎಂದು ಶ್ರುತಿಯಲ್ಲಿದ್ದರೂ ಲೋಕದಲ್ಲಿ ಹೇಗೊ ಹಾಗೆ (ಇಲ್ಲಿಯೂ) ಬೇರೆಯ ನಿಮಿತ್ತಗಳ ಅಪೇಕ್ಷೆಯೂ ಇದೆ ಎಂಬುದು

ಯುಕ್ತವು. ಹೇಗೆ ಲೋಕದಲ್ಲಿ ನವ್ಯಂಥವರಿಗೆ ಸಂಕಲ್ಪದಿಂದಲೂ (ಅವರಲ್ಲಿಗೆ) ಹೋಗುವದರಿಂದಲೂ ಪಿತ್ರಾದಿಗಳ ಸೇರುವಿಕೆಯಾಗುತ್ತದೆಯೋ ಹೀಗೆಯೇ ಮುಕ್ತನಾದವನಿಗೂ ಆಗಬೇಕು. ಹಾಗಾದರೆ ದೃಷ್ಟಕ್ಕೆ ವಿರುದ್ಧವಾಗಿ ಕಲ್ಪಿಸಿದಂತೆ ಆಗುವದಿಲ್ಲ. 'ಸಂಕಲ್ಪದಿಂದಲೇ' ಎಂಬ ಶ್ರುತಿಯೋ ಎಂದರೆ ಅರಸನಿಗೆ ಸಂಕಲ್ಪಿತವಾದ ಅರ್ಥವು ಸಿದ್ಧಿಸುವದಕ್ಕೆ ಬೇರೆಯ ಸಾಧನಸಾಮಗ್ರಿಯು ಹೇಗೆ ಸುಲಭವಾಗಿ ಸಿಕ್ಕುತ್ತದೆಯೊ, ಹಾಗೆ– ಎಂಬ (ಅಭಿಪ್ರಾಯದಿಂದ) ಹೇಳಿದ್ದು. ಬರಿಯ ಸಂಕಲ್ಪದಿಂದ ಎದ್ದುಬಂದರೆ ಪಿತ್ರಾದಿಗಳು ಮನೋರಥದಲ್ಲಿ ಕಂಡ (ವಸ್ತುಗಳಂತೆ) ಚಂಚಲವಾಗಿರುವದರಿಂದ (ಅವರಿಂದಾಗಬೇಕಾದ) ಪುಷ್ಕಲಭೋಗವನ್ನುಂಟುಮಾಡಲಾರರು– ಎಂಬೀ (ಪೂರ್ವಪಕ್ಷವು) ಬಂದೊದಗಲಾಗಿ (ಈ ಸಿದ್ಧಾಂತವನ್ನು) ಹೇಳುತ್ತೇವೆ :

ಬರಿಯ ಸಂಕಲ್ಪದಿಂದಲೇ ಪಿತ್ರಾದಿಗಳು ಎದ್ದುಬರುತ್ತಾರೆ. ಏಕೆ ? ಎಂದರೆ ಹಾಗೆಂದು ಶ್ರುತಿಯಿರುವದರಿಂದ. (ಇದರ ವಿವರ) : ಮತ್ತೊಂದು ನಿಮಿತ್ತವೂ ಬೇಕೆಂದರೆ "ಸಂಕಲ್ಪದಿಂದಲೇ ಇವನ ಪಿತೃಗಳು ಎದ್ದುನಿಲ್ಲುತ್ತಾರೆ" (ಛಾಂ. ೮–೨–೧) ಎಂಬಿದೇ ಮುಂತಾದ ಶ್ರುತಿಗೆ ವಿರೋಧವಾಗುವದು. ಬೇರೆ ನಿಮಿತ್ತವೂ ಸಂಕಲ್ಪಕ್ಕೆ ತಕ್ಕಂತೆಯೇ ಆಗುತ್ತದೆ ಎನ್ನುವದಾದರೆ ಆಗಲಿ, ಮತ್ತೆ ಬೇರೆಯ ಪ್ರಯತ್ನದಿಂದ ಸಂಪಾದಿಸಬೇಕಾದದ್ದು ನಿಮಿತ್ತಾಂತರವು ಎಂಬುದು ಮಾತ್ರ ಒಪ್ಪತಕ್ಕದ್ದಲ್ಲ. ಏಕೆಂದರೆ (ಆಗ) ಆ (ನಿಮಿತ್ತಾಂತರವು) ಉಂಟಾಗುವ ಮೊದಲು ಸಂಕಲ್ಪವು ವ್ಯರ್ಥವೆಂದಾಗುವದು. ಶ್ರುತಿಯಿಂದ ನಿಶ್ಚಯಿಸಬೇಕಾಗಿರುವ ಅರ್ಥದಲ್ಲಿ ಲೋಕದಲ್ಲಿರುವಂತೆ (ಇರಬೇಕು) ಎಂದು ಸಾಮಾನ್ಯವಾಗಿ ದೃಷ್ಟವಾದ (ಅನುಮಾನವು) ಕೆಲಸಮಾಡಲಾರದು. ಸಂಕಲ್ಪಬಲದಿಂದಲೇ ಇವರಿಗೆ ಪ್ರಯೋಜನವುಂಟಾಗುವವರೆಗೂ (ಪಿತ್ರಾದಿಗಳು) ಸ್ಥಿರವಾಗಿರಬಹುದಾಗಿದೆ. ಏಕೆಂದರೆ ಮುಕ್ತನ ಸಂಕಲ್ಪವು ಸಾಮಾನ್ಯರ ಸಂಕಲ್ಪಕ್ಕೆ ವಿಲಕ್ಷಣವಾದ (ಸ್ವಭಾವದ್ದಾಗಿರುತ್ತದೆ).

**ಅತ ಏವ ಚಾನನ್ಯಾಧಿಪತಿಃ ॥ ೯ ॥**

೯. ಆದ್ದರಿಂದಲೇ (ಮುಕ್ತನು) ಅನನ್ಯಾಧಿಪತಿಯು.

## ಸಂಕಲ್ಪಸೃಷ್ಟಿಯಿರುವದರಿಂದ ನಿರಂಕುಶೈಶ್ವರ್ಯ

(ಭಾಷ್ಯ)

೫೪೯. ಅತ ಏವ ಚ ಅವನ್ಧ್ಯಸಂಕಲ್ಪತ್ವಾತ್ ಅನನ್ಯಾಧಿಪತಿರ್ವಿದ್ವಾನ್ ಭವತಿ'। ನಾಸ್ಯ ಅನ್ಯೋಽಧಿಪತಿರ್ಭವತೀತ್ಯರ್ಥಃ। ನ ಹಿ ಪ್ರಾಕೃತೋಽಪಿ ಸಂಕಲ್ಪಯನ್ ಅನ್ಯಸ್ವಾಮಿಕತ್ವಮ್ ಆತ್ಮನಃ ಸತ್ಯಾಂ ಗತೌ ಸಂಕಲ್ಪಯತಿ।

ಶ್ರುತಿಶ್ಚ ಏತದ್ದರ್ಶಯತಿ–"ಅಥ ಯ ಇಹಾತ್ಮಾನಮನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾಂಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ" (ಛಾಂ. ೮–೧–೬) ಇತಿ ॥

(ಭಾಷ್ಯಾರ್ಥ)

ಆದ್ದರಿಂದಲೇ, ಎಂದರೆ ಸಂಕಲ್ಪಕ್ಕೆ (ಯಾವ) ಅಡ್ಡಿಯೂ ಇಲ್ಲದಿರುವದರಿಂದಲೇ, ಜ್ಞಾನಿಯು ಅನನ್ಯಾಧಿಪತಿಯಾಗುತ್ತಾನೆ; ಅವನಿಗೆ ಮತ್ತೊಬ್ಬನು ಅಧಿಪತಿಯು ಇರುವದಿಲ್ಲ ಎಂದರ್ಥ. ಸಾಮಾನ್ಯನು ಕೂಡ ಸಂಕಲ್ಪಿಸುವಾಗ ಗತ್ಯಂತರವಿದ್ದರೆ ತನಗೆ ಮತ್ತೊಬ್ಬರು ಒಡೆಯರಾಗಿರಬೇಕೆಂದು ಬಯಸುವದಿಲ್ಲವಷ್ಟೆ. ಶ್ರುತಿಯೂ "ಇನ್ನು ಯಾರು ಇಲ್ಲಿ ಆತ್ಮನನ್ನೂ ಈ ಸತ್ಯಕಾಮಗಳನ್ನೂ ಅರಿತುಕೊಂಡು (ಇಲ್ಲಿಂದ) ಹೋಗುವರೋ, ಅವರಿಗೆ ಸರ್ವಲೋಕಗಳಲ್ಲಿಯೂ ಕಾಮಚಾರವಿರುತ್ತದೆ" (ಛಾಂ. ೮–೧–೬) ಎಂಬುದನ್ನು ತಿಳಿಸುತ್ತದೆ.

## ೫. ಅಭಾವಾಧಿಕರಣ (ಸೂ. ೧೦–೧೪)

(ಮುಕ್ತನಿಗೆ ಸಶರೀರತ್ವ, ಅಶರೀರತ್ವ – ಎರಡೂ ಉಂಟು)

**ಅಭಾವಂ ಬಾದರಿರಾಹ ಹ್ಯೇವಮ್ ॥ ೧೦ ॥**

೧೦. (ಮುಕ್ತನಿಗೆ ಶರೀರದ) ಅಭಾವವೆಂದು ಬಾದರಿಯು (ಅಭಿಪ್ರಾಯಪಡುತ್ತಾನೆ); ಏಕೆಂದರೆ (ವೇದವು) ಹೀಗೆಂದು ಹೇಳುತ್ತದೆ.

### ಬಾದರಿಯ ಮತ: ಮುಕ್ತನಿಗೆ ಶರೀರೇಂದ್ರಿಯಗಳಿರುವದಿಲ್ಲ

(ಭಾಷ್ಯ)

೬೦೦. "ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠನ್ತಿ" (ಛಾಂ. ೮–೨–೧) ಇತ್ಯಾದಿಶ್ರುತೇರ್ಮನಸ್ತಾವತ್ ಸಂಕಲ್ಪಸಾಧನಂ ಸಿದ್ಧಮ್ । ಶರೀರೇನ್ದ್ರಿಯಾಣಿ ಪುನಃ ಪ್ರಾಪ್ತೈಶ್ವರ್ಯಸ್ಯ ವಿದುಷಃ ಸನ್ತಿ ನ ವಾ ಸನ್ತಿ ಇತಿ ಸಮಾಕ್ಷ್ಯತೇ । ತತ್ರ ಬಾದರಿಸ್ತಾವದಾಚಾರ್ಯಃ ಶರೀರಸ್ಯೇನ್ದ್ರಿಯಾಣಾಂ ಚ ಅಭಾವಂ ಮಹೀಯಮಾನಸ್ಯ ವಿದುಷೋ ಮನ್ಯತೇ । ಕಸ್ಮಾತ್ ? ಏವಂ ಹ್ಯಾಹಾಮ್ನಾಯಃ "ಮನಸೈತಾನ್ ಕಾಮಾನ್ ಪಶ್ಯನ್ ರಮತೇ । ಯ ಏತೇ ಬ್ರಹ್ಮಲೋಕೇ" (ಛಾಂ. ೮–೧೨–೫) ಇತಿ । ಯದಿ ಮನಸಾ ಶರೀರೇನ್ದ್ರಿಯೈಶ್ಚ ವಿಹರೇತ್ 'ಮನಸಾ' ಇತಿ ವಿಶೇಷಣಂ ನ ಸ್ಯಾತ್ । ತಸ್ಮಾತ್ ಅಭಾವಃ ಶರೀರೇನ್ದ್ರಿಯಾಣಾಂ ಮೋಕ್ಷೇ ॥

(ಭಾಷ್ಯಾರ್ಥ)

"ಸಂಕಲ್ಪದಿಂದಲೇ ಇವನ ಪಿತೃಗಳು ಎದ್ದುನಿಲ್ಲುತ್ತಾರೆ" (ಛಾಂ. ೮-೨-೧) ಎಂದು ಮುಂತಾಗಿ ಶ್ರುತಿಯಿರುವದರಿಂದ ಸಂಕಲ್ಪಕ್ಕೆ ಸಾಧನವಾದ ಮನಸ್ಸಂತೂ ಸಿದ್ಧವಾಯಿತಷ್ಟೆ. ಇನ್ನು ಶರೀರೇಂದ್ರಿಯಗಳು ಐಶ್ವರ್ಯವನ್ನು ಪಡೆದ (ಉಪಾಸಕ)ನಿಗೆ ಇರುತ್ತವೆಯೆ, ಇರುವದಿಲ್ಲವೆ? —ಎಂದು ವಿಚಾರ ಮಾಡಲಾಗುತ್ತದೆ.

ಇಲ್ಲಿ ಮೊದಲನೆಯದಾಗಿ ಬಾದರಿ ಎಂಬ ಆಚಾರ್ಯರು ಶರೀರವೂ ಇಂದ್ರಿಯಗಳೂ ಐಶ್ವರ್ಯವನ್ನು ಪಡೆದ ಜ್ಞಾನಿಗೆ ಇರುವದಿಲ್ಲವೆಂದು ಅಭಿಪ್ರಾಯಪಡುತ್ತಾರೆ. ಏಕೆ? ಎಂದರೆ ಬ್ರಹ್ಮಲೋಕದಲ್ಲಿರುವ ಈ ಕಾಮಗಳಿವೆಯಲ್ಲ, ಇವನ್ನು ಮನಸ್ಸಿನಿಂದ ಪಡೆದುಕೊಳ್ಳುತ್ತಾನೆ" (ಛಾಂ. ೮-೧೨-೫) ಎಂದು ಹಾಗೆಂದೇ ಶ್ರುತಿಯು ಹೇಳುತ್ತದೆಯಲ್ಲವೆ? ಮನಸ್ಸಿನಿಂದಲೂ ಶರೀರೇಂದ್ರಿಯಗಳಿಂದಲೂ ಕೂಡಿಯೇ ವಿಹರಿಸುತ್ತಿರುವನಾದರೆ 'ಮನಸ್ಸಿನಿಂದ' ಎಂಬ ವಿಶೇಷಣವು ಇರುತ್ತಿರಲಿಲ್ಲ. ಆದ್ದರಿಂದ ಮೋಕ್ಷದಲ್ಲಿ ಶರೀರೇಂದ್ರಿಯಗಳು ಇರುವದಿಲ್ಲ.

**ಭಾವಂ ಜೈಮಿನಿರ್ವಿಕಲ್ಪಾಮನನಾತ್ ॥ ೧೧ ॥**

೧೧. ಇರುತ್ತದೆಯೆಂದು ಜೈಮಿನಿ (ಅಭಿಪ್ರಾಯಪಡುತ್ತಾನೆ); ಏಕೆಂದರೆ ವಿಕಲ್ಪವನ್ನು ಪಠಿಸಿದೆ.

## ಜೈಮಿನಿಯ ಮತ : ಮೋಕ್ಷದಲ್ಲಿ ಶರೀರೇಂದ್ರಿಯಗಳುಂಟು

(ಭಾಷ್ಯ)

೬೦೧. ಜೈಮಿನಿಸ್ತು ಆಚಾರ್ಯಃ ಮನೋವತ್ ಶರೀರಸ್ಯಾಪಿ ಸೇನ್ದ್ರಿಯಸ್ಯ ಭಾವಂ ಮುಕ್ತಂ ಪ್ರತಿ ಮನ್ಯತೇ । ಯತಃ "ಸ ಏಕಧಾ ಭವತಿ ತ್ರಿಧಾ ಭವತಿ" (ಛಾಂ. ೭-೨೬-೨) ಇತ್ಯಾದಿನಾ ಅನೇಕಧಾಭಾವವಿಕಲ್ಪಮ್ ಆಮನನ್ತಿ । ನ ಹಿ ಅನೇಕವಿಧತಾ ವಿನಾ ಶರೀರಭೇದೇನ ಆಞ್ಜಸೀ ಸ್ಯಾತ್ । ಯದ್ಯಪಿ ನಿರ್ಗುಣಾಯಾಂ ಭೂಮವಿದ್ಯಾಯಾಮ್ ಅಯಮ್ ಅನೇಕಧಾಭಾವವಿಕಲ್ಪಃ ಪಠ್ಯತೇ । ತಥಾಪಿ ವಿದ್ಯಮಾನಮೇವೇದಂ ಸಗುಣಾವಸ್ಥಾಯಾಮ್ ಐಶ್ವರ್ಯಂ ಭೂಮವಿದ್ಯಾಸ್ತುತಯೇ ಸಂಕೀರ್ತ್ಯತ ಇತ್ಯತಃ ಸಗುಣವಿದ್ಯಾಫಲಭಾವೇನ ಉಪತಿಷ್ಠತ ಇತಿ ॥

(ಭಾಷ್ಯಾರ್ಥ)

ಆದರೆ ಜೈಮಿನ್ಯಾಚಾರ್ಯರು ಮನಸ್ಸಿನಂತೆ ಇಂದ್ರಿಯಗಳೊಡಗೂಡಿದ ಶರೀರವೂ ಮುಕ್ತನಿಗೆ ಇರುತ್ತದೆ ಎಂದು ಅಭಿಪ್ರಾಯಪಡುತ್ತಾರೆ. ಏಕೆಂದರೆ

"ಅವನು ಒಂದು ಬಗೆಯಾಗುತ್ತಾನೆ, ಮೂರು ಬಗೆಯಾಗುತ್ತಾನೆ....." (ಛಾಂ. ೭-೨೬-೨) ಎಂದು ಮುಂತಾಗಿ ಅನೇಕಪ್ರಕಾರದಿಂದ ಇರುವನೆಂಬ ವಿಕಲ್ಪವನ್ನು ಹರಿಸುತ್ತಾರೆ. ಶರೀರವು ಬೇರೆಬೇರೆಯಾಗದೆ ಇದ್ದರೆ ಅನೇಕಪ್ರಕಾರವೆಂಬುದು ಮುಖ್ಯಾರ್ಥದಲ್ಲಿ (ಹೊಂದ)ಲಾರದಷ್ಟೆ. ಈ ಅನೇಕಧಾಭಾವವಿಕಲ್ಪವನ್ನು ನಿರ್ಗುಣವಾದ ಭೂಮವಿದ್ಯೆಯಲ್ಲಿ ಪಠಿಸಿದೆಯಾದರೂ ಸಗುಣಾವಸ್ಥೆಯಲ್ಲಿ ಇದ್ದುಕೊಂಡಿರುವ ಈ ಐಶ್ವರ್ಯವನ್ನೇ ಭೂಮವಿದ್ಯೆಯ ಸ್ತುತಿಗಾಗಿ ಹೇಳಿರುತ್ತದೆಯಾದ್ದರಿಂದ (ಇದು) ಸಗುಣವಿದ್ಯೆಯ ಫಲವೂ ಆಗಿರುತ್ತದೆ.

**ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ॥ ೧೨ ॥**

೧೨. ಆದ್ದರಿಂದ ದ್ವಾದಶಾಹದಂತೆ ಉಭಯವಿಧವೂ (ಉಂಟು) ಎಂದು ಬಾದರಾಯಣನು ಅಭಿಪ್ರಾಯಪಡುತ್ತಾನೆ.

## ಸಿದ್ಧಾಂತ: ಮುಕ್ತನಿಗೆ ಶರೀರೇಂದ್ರಿಯಗಳಿರುವದು ವಿಕಲ್ಪ

(ಭಾಷ್ಯ)

೬೦೨. ಉಚ್ಯತೇ । ಬಾದರಾಯಣಃ ಪುನರಾಚಾರ್ಯಃ ಅತ ಏವ ಉಭಯಲಿಙ್ಗಶ್ರುತಿದರ್ಶನಾತ್ ಉಭಯವಿಧತ್ವಂ ಸಾಧು ಮನ್ಯತೇ। ಯದಾ ಸಶರೀರತಾಂ ಸಂಕಲ್ಪಯತಿ ತದಾ ಸಶರೀರೋ ಭವತಿ । ಯದಾ ತು ಅಶರೀರತಾಮ್ । ತದಾ ಅಶರೀರ ಇತಿ । ಸತ್ಯಸಂಕಲ್ಪತ್ವಾತ್ । ಸಂಕಲ್ಪವೈಚಿತ್ರ್ಯಾಚ್ಚ । ದ್ವಾದಶಾಹವತ್ । ಯಥಾ ದ್ವಾದಶಾಹಃ ಸತ್ರಮ್ ಅಹೀನಶ್ಚ ಭವತಿ, । ಉಭಯಲಿಙ್ಗಶ್ರುತಿದರ್ಶನಾತ್ । ಏವಮಿದಮಪೀತಿ ॥

(ಭಾಷ್ಯಾರ್ಥ)

(ಸಿದ್ಧಾಂತವನ್ನು) ಹೇಳುತ್ತೇವೆ. ಆದರೆ ಬಾದರಾಯಣಾಚಾರ್ಯರು ಆದ್ದರಿಂದಲೇ, ಎಂದರೆ ಎರಡುಬಗೆಯ ಲಿಂಗದ ಶ್ರುತಿಯು ಕಂಡುಬರುವದರಿಂದ ಎರಡು ವಿಧವೂ ಸರಿ ಎಂದು ಅಭಿಪ್ರಾಯಪಡುತ್ತಾರೆ, ಯಾವಾಗ ಸಶರೀರನಾಗಿರಬೇಕೆಂದು ಸಂಕಲ್ಪಿಸುತ್ತಾನೋ ಆಗ ಸಶರೀರನಾಗುತ್ತಾನೆ; ಆದರೆ ಯಾವಾಗ ಅಶರೀರನಾಗಬೇಕೆಂದು (ಸಂಕಲ್ಪಿಸುತ್ತಾನೋ) ಆಗ ಅಶರೀರನಾಗುತ್ತಾನೆ ಎಂದು (ಎರಡು ವಿಧ). ಏಕೆಂದರೆ (ಮುಕ್ತನು) ಸತ್ಯಸಂಕಲ್ಪನಾಗುತ್ತಾನೆ; ಸಂಕಲ್ಪವು ಬಗೆಬಗೆಯಾಗಿರಲೂಬಹುದಾಗಿದೆ. ದ್ವಾದಶಾಹ

**ದಂತೆ** (ಇದನ್ನು ತಿಳಿಯಬೇಕು). ಹೀಗೆ ಎರಡು ಬಗೆಯ ಅಂಗದ ಶ್ರುತಿಗಳೂ ಕಾಣಬರುವದರಿಂದ ಸತ್ರವೂ ಅಹೀನವೂ[1] ಆಗುತ್ತದೆಯೋ ಇದೂ ಹಾಗೆಯೇ.

**ತನ್ವಭಾವೇ ಸಂಧ್ಯವದುಪಪತ್ತೇಃ ॥ ೧೩ ॥**

೧೩. ಏಕೆಂದರೆ ತನುವಿಲ್ಲದಾಗ ಸಂಧ್ಯದಂತೆ ಆಗಬಹುದಾಗಿದೆ.

## ಶರೀರವಿಲ್ಲದ ಸ್ವಪ್ನದಂತೆ ಪಿತ್ರಾದಿಗಳು ತೋರುವರು

(ಭಾಷ್ಯ)

೬೦೩. ಯದಾ ತನೋಃ ಸೇನ್ದ್ರಿಯಸ್ಯ ಶರೀರಸ್ಯ ಅಭಾವಃ, ತದಾ ಯಥಾ ಸಂಧ್ಯೇ ಸ್ಥಾನೇ ಶರೀರೇನ್ದ್ರಿಯವಿಷಯೇಷು ಅವಿದ್ಯಮಾನೇಷ್ವಪಿ ಉಪಲಬ್ಧಿಮಾತ್ರಾ ಏವ ಪಿತ್ರಾದಿಕಾಮಾ ಭವನ್ತಿ ಏವಂ ಮೋಕ್ಷೇಽಪಿ ಸ್ಯುಃ । ಏವಂ ಹಿ ಏತದುಪಪದ್ಯತೇ ॥

(ಭಾಷ್ಯಾರ್ಥ)

ಯಾವಾಗ ತನುವು ಎಂದರೆ ಇಂದ್ರಿಯಗಳೊಡಗೂಡಿದ ಶರೀರದ ಅಭಾವವಿರುತ್ತದೆಯೋ ಆಗ ಹೇಗೆ ಸ್ವಪ್ನಸ್ಥಾನದಲ್ಲಿ ಶರೀರೇಂದ್ರಿಯವಿಷಯಗಳು ಇಲ್ಲದಿದ್ದರೂ ಬರಿಯ ಜ್ಞಾನರೂಪವಾಗಿಯೇ ಪಿತ್ರಾದಿಕಾಮಗಳು ಆಗುತ್ತವೆಯೋ ಹಾಗೆಯೇ ಮೋಕ್ಷದಲ್ಲಿಯೂ ಆಗಬಹುದು. ಹಾಗೆತಾನೆ, ಅದು ಹೊಂದುತ್ತದೆ ?

**ಭಾವೇ ಜಾಗ್ರದ್ವತ್ ॥ ೧೪ ॥**

೧೪. ಇರುವಾಗ ಎಚ್ಚರದಂತೆ.

---

1. 'ಯ ಏವಂ ವಿದ್ವಾಂಸಃ ಸತ್ರಮಾಸತೇ', "ಯ ಏವಂ ವಿದ್ವಾಂಸಃ ಸತ್ರಮುಪಯನ್ತಿ" –ಎಂಬ ರೀತಿಯಲ್ಲಿ ಆಸ್, ಉಪಯಿ – ಎಂಬ ಧಾತುಗಳನ್ನುಪಯೋಗಿಸಿರುವ ಚೋದನೆಯಿರುವದು ಸತ್ರವು ; ಯಜಮಾನರು ಬಹಳ ಜನವಿದ್ದರೂ ಸತ್ರವು. ಎಲ್ಲಿ 'ಯಜತಿ' ಎಂಬ ಚೋದನೆಯಿರುವದೋ ಯಾವದಕ್ಕೆ ಕರ್ತೃಗಳಿಷ್ಟೆಂಬ ನಿಯಮವಿಲ್ಲವೋ ಅದು ಅಹೀನವು (ಜೈ. ೧೦–೬–೫೯, ೬೦). ದ್ವಾದಶಾಹಕ್ಕೆ ಈ ಎರಡು ಲಕ್ಷಣಗಳೂ ಇವೆ. ಹೇಗೆಂದರೆ "ದ್ವಾದಶಾಹಮೃದ್ಧಿಕಾಮಾ ಉಪೇಯುಃ" ಉಪಯಿಧಾತುವಿನಿಂದ ಚೋದನೆಯೂ ಬಹುಕರ್ತೃಕತ್ವವೂ ಇದೆ ; "ಸಪ್ತದಶಾವರಾಶ್ಚತುರ್ವಿಂಶತಿಪರಮಾಃ ಸತ್ರಮಾಸೀರನ್" ಎಂದು ದ್ವಾದಶಾಹಪ್ರಕರಣದಲ್ಲಿ ಆಸ್‌ಧಾತುವಿನಿಂದ ಚೋದನೆಯೂ ಇದೆ. "ದ್ವಾದಶಾಹೇನ ಪ್ರಜಾಕಾಮಂ ಯಾಜಯೇತ್" ಎಂದು ಯಜಧಾತುವಿನಿಂದ ಚೋದನೆಯೂ ಇದೆ. ಹೆಚ್ಚಿನ ವಿವರಕ್ಕೆ ಭಾಮತೀಕಲ್ಪತರುಪರಿಮಳ ವ್ಯಾಖ್ಯಾನಗಳನ್ನು ನೋಡಿ.

## ಶರೀರವಿರುವಾಗ ಎಚ್ಚರದಂತೆ ನಿಜವಾಗಿ ತೋರುವದು

(ಭಾಷ್ಯ)

೬೦೪. ಭಾವೇ ಪುನಸ್ತನೋರ್ಯಥಾ ಜಾಗರಿತೇ ವಿದ್ಯಮಾನಾ ಏವ ಪಿತ್ರಾದಿಕಾಮಾ ಭವನ್ತಿ, ಏವಂ ಮುಕ್ತಸ್ಯಾಪಿ ಉಪಪದ್ಯತೇ ॥

(ಭಾಷ್ಯಾರ್ಥ)

ಆದರೆ (ಶರೀರವು) ಇರುವಾಗ– ಎಚ್ಚರದಲ್ಲಿ ಹೇಗೆ ಇರುವ ಪಿತ್ರಾದಿ ಕಾಮಗಳೇ ಇರುತ್ತವೆಯೋ– ಹಾಗೆ ಮುಕ್ತನಿಗೂ ಆಗಬಹುದಾಗಿದೆ.

### ೬. ಪ್ರದೀಪಾಧಿಕರಣ (ಸೂ. ೧೫–೧೬)

(ಮುಕ್ತನು ಅನೇಕಶರೀರಗಳಲ್ಲಿಯೂ ಒಬ್ಬನೇ ಇರುತ್ತಾನೆ)

**ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ॥ ೧೫ ॥**

೧೫. ಪ್ರದೀಪದಂತೆ ಹೊಕ್ಕಿರುತ್ತಾನೆ; ಹಾಗೆಂದಲ್ಲವೆ, ಶ್ರುತಿ ಹೇಳುತ್ತದೆ ?

## ಮುಕ್ತನು ಅನೇಕಶರೀರಗಳಲ್ಲಿ ಒಬ್ಬನೇ ಇರುತ್ತಾನೆ

(ಭಾಷ್ಯ)

೬೦೫. "ಭಾವಂ ಜೈಮಿನಿರ್ವಿಕಲ್ಪಾಮನನಾತ್" (೪–೪–೧೧) ಇತ್ಯತ್ರ ಸಶರೀರತ್ವಂ ಮುಕ್ತಸ್ಯೋಕ್ತಮ್ । ತತ್ರ ತ್ರಿಧಾಭಾವಾದಿಷು ಅನೇಕ ಶರೀರ ಸರ್ಗೇ ಕಿಂ ನಿರಾತ್ಮಕಾನಿ ಶರೀರಾಣಿ ದಾರುಯನ್ತ್ರಾಣೀವ ಸೃಜ್ಯನ್ತೇ । ಕಿಂ ವಾ ಸಾತ್ಮಕಾನಿ ಅಸ್ಮದಾದಿಶರೀರವತ್ ಇತಿ ಭವತಿ ವೀಕ್ಷಾ । ತತ್ರ ಚ ಆತ್ಮ ಮನಸೋರ್ಭೇದಾನುಪಪತ್ತೇಃ ಏಕೇನ ಶರೀರೇಣ ಯೋಗಾತ್ ಇತರಾಣಿ ಶರೀರಾಣಿ ನಿರಾತ್ಮಕಾನಿ ಇತ್ಯೇವಂ ಪ್ರಾಪ್ತೇ ಪ್ರತಿಪದ್ಯತೇ । "ಪ್ರದೀಪವದಾವೇಶಃ" ಇತಿ । ಯಥಾ ಪ್ರದೀಪ ಏಕೋಽನೇಕಪ್ರದೀಪಭಾವಮಾಪದ್ಯತೇ ವಿಕಾರಶಕ್ತಿಯೋಗಾತ್ । ಏವಮೇಕೋಽಪಿ ಸನ್ ವಿದ್ವಾನ್ ಐಶ್ವರ್ಯ ಯೋಗಾತ್ ಅನೇಕಧಾಭಾವಮ್ ಆಪದ್ಯ ಸರ್ವಾಣಿ ಶರೀರಾಣಿ ಆವಿಶತಿ । ಕುತಃ ? ತಥಾ ಹಿ ದರ್ಶಯತಿ ಶಾಸ್ತ್ರಮ್ ಏಕಸ್ಯಾನೇಕಭಾವಮ್ "ಸ ಏಕಧಾ ಭವತಿ ತ್ರಿಧಾ ಭವತಿ ಪಞ್ಚಧಾ ಸಪ್ತಧಾ ನವಧಾ'' (ಛಾಂ. ೭–೨೬–೨) ಇತ್ಯಾದಿ । ನೈತದ್ದಾರುಯನ್ತ್ರೋಪಮಾಭ್ಯುಪಗಮೇ ಅವಕಲ್ಪತೇ, ನಾಪಿ ಜೀವಾನ್ತರಾವೇಶೇ । ನ ಚ ನಿರಾತ್ಮಕಾನಾಂ ಶರೀರಾಣಾಂ ಪ್ರವೃತ್ತಿಃ ಸಂಭವತಿ । ಯತ್ತು ಆತ್ಮಮನಸೋರ್ಭೇದಾನುಪಪತ್ತೇರನೇಕಶರೀರಯೋಗಾ

ಸಂಭವ ಇತಿ । ನೈಷ ದೋಷಃ । ಏಕಮನೋಽನುವರ್ತೀನಿ ಸಮನಸ್ಕಾನ್ಯೇವ ಅಪರಾಣಿ ಶರೀರಾಣಿ ಸತ್ಯಸಂಕಲ್ಪತ್ವಾತ್ ಸ್ರಕ್ಷ್ಯತಿ । ಸೃಷ್ಟೇಷು ಚ ತೇಷು ಉಪಾಧಿಭೇದಾತ್ ಆತ್ಮನೋಽಪಿ ಭೇದೇನ ಅಧಿಷ್ಠಾತೃತ್ವಂ ಯೋಕ್ಷ್ಯತೇ । ಏಷೈವ ಚ ಯೋಗಶಾಸ್ತ್ರೇಷು ಯೋಗಿನಾಮ್ ಅನೇಕಶರೀರಯೋಗಪ್ರಕ್ರಿಯಾ॥

(ಭಾಷ್ಯಾರ್ಥ)

"ಭಾವಂ ಜೈಮಿನಿರ್ವಿಕಲ್ಪಾಮನನಾತ್" (೪–೪–೧೧) ಎಂಬಲ್ಲಿ ಮುಕ್ತನಿಗೆ ಶರೀರವಿದೆ ಎಂದು ಹೇಳಿದೆಯಷ್ಟೆ. ಅಲ್ಲಿ ಮೂರು ಬಗೆಯಾಗುವದು ಮುಂತಾಗಿ ಅನೇಕ ಶರೀರಗಳ ಸೃಷ್ಟಿಯಾಗುತ್ತದೆಯಲ್ಲ. (ಅಲ್ಲಿ) ಆತ್ಮಗಳಿಲ್ಲದ ಕಟ್ಟಿಗೆಯಂತ್ರಗಳಂತಿರುವ ಶರೀರಗಳನ್ನು ಸೃಜಿಸುತ್ತಾನೊ, ಅಥವಾ ನಮ್ಮಗಳ ಶರೀರದಂತೆ ಸಾತ್ಮಕವಾಗಿ (ಸೃಜಿಸುತ್ತಾನೊ) ?– ಎಂದು ವಿಚಾರಮಾಡಬೇಕಾಗಿರುತ್ತದೆ.

ಇಲ್ಲಿ ಆತ್ಮಮನಸ್ಸುಗಳು ಬೇರೆಬೇರೆಯಾಗಿರುವದಾದ್ದರಿಂದ (ಅವು) ಒಂದು ಶರೀರಕ್ಕೇ ಸಂಬಂಧಪಟ್ಟಿರುತ್ತವೆಯಾಗಿ ಮಿಕ್ಕ ಶರೀರಗಳಲ್ಲಿ ಆತ್ಮನಿರುವದಿಲ್ಲ ಎಂದಿಂತು (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು) ಅಭಿಪ್ರಾಯಪಡುತ್ತಾರೇನೆಂದರೆ ''ಪ್ರದೀಪದಂತೆ ಹೊಕ್ಕಿರುತ್ತಾನೆ" (ಇದರ ವಿವರ): ಹೇಗೆ ಪ್ರದೀಪವೊಂದೇ ಅನೇಕಪ್ರಕಾರವಾದ ದೀಪಗಳ ಸ್ವರೂಪವನ್ನು ವಿಕಾರಶಕ್ತಿಯ ಸಂಬಂಧದಿಂದ ಪಡೆಯುತ್ತಿರುವದೋ ಹಾಗೆಯೇ ಜ್ಞಾನಿಯು ಒಬ್ಬನೇ ಆಗಿದ್ದರೂ ಐಶ್ವರ್ಯದ ಸಂಬಂಧದಿಂದ ಅನೇಕಸ್ವರೂಪವನ್ನು ಹೊಂದಿದ ಎಲ್ಲಾ ಶರೀರಗಳನ್ನೂ ಪ್ರವೇಶಿಸುತ್ತಾನೆ.[1] ಏಕೆ ? ಎಂದರೆ ಹಾಗೆಂದೇ ಅಲ್ಲವೆ, ''ಅವನು ಒಂದು ಬಗೆಯಾಗುತ್ತಾನೆ, ಮೂರು ಬಗೆಯಾಗುತ್ತಾನೆ, ಐದುಬಗೆಯಾಗುತ್ತಾನೆ, ಏಳುಬಗೆ, ಒಂಭತ್ತುಬಗೆ(ಯಾಗುತ್ತಾನೆ)" (ಛಾಂ. ೭–೨೬–೨) ಮುಂತಾದ ಶಾಸ್ತ್ರವು ಒಬ್ಬನಿಗೇ ಅನೇಕಭಾವವನ್ನು ತಿಳಿಸುತ್ತಿದೆ ? ಇದು ಕಟ್ಟಿಗೆಯಂತ್ರಗಳ ಹೋಲಿಕೆಯನ್ನು ಒಪ್ಪಿದರೂ ಆಗುವದಿಲ್ಲ[2] ;ಅಥವಾ ಬೇರೆಯ ಜೀವರು (ಅವುಗಳಲ್ಲಿ) ಹೊಕ್ಕಿರುತ್ತಾನೆ ಎಂದರೂ ಆಗುವದಿಲ್ಲ[3]. ಆದರೆ ಆತ್ಮರಿಲ್ಲದ ಶರೀರಗಳು ಪ್ರವರ್ತಿಸುವದು ಸಂಭವಿಸುವದಿಲ್ಲ.

---

1. ಜ್ಞಾನಿಯ ಒಂದೇ ಅಂಗವು ಅನಾದಿಯಾಗಿದ್ದು ಎಲ್ಲರ ಶರೀರದಲ್ಲಿಯೂ ಪ್ರವೇಶಿಸುತ್ತದೆ. ಆ ಮೂಲಕ ಜ್ಞಾನಿಯೂ ಪ್ರವೇಶಿಸುತ್ತಾನೆಂದಂತೆ ಆಯಿತು.

2. ಅನೇಕ ಯಂತ್ರಗಳನ್ನು ನಿರ್ಮಿಸಿ ಅವುಗಳನ್ನು ಚಲಿಸುವಂತೆ ಮಾಡುತ್ತಿದ್ದರೂ ನಿರ್ಮಿಸಿದನನ್ನೇ ಅನೇಕನಾದನೆಂದೇನೂ ನಾವು ತಿಳಿಯುವದಿಲ್ಲ.

3. ಏಕೆಂದರೆ ಆಗ ಮುಕ್ತಜೀವನ ಐಶ್ವರ್ಯವಿದೆಂದು ಆಗುವದಿಲ್ಲ.

ಇನ್ನು ಆತ್ಮಮನಸ್ಸುಗಳು ಬೇರೆಬೇರೆಯಾಗಿರಲಾರವಾದ್ದರಿಂದ ಅನೇಕ ಶರೀರಗಳ ಸಂಬಂಧವು (ಅವಕ್ಕೆ ಸಂಭವಿಸುವದಿಲ್ಲ –ಎಂದು (ಪೂರ್ವಪಕ್ಷದಲ್ಲಿ ಹೇಳಿ)ತ್ತಷ್ಟೆ, ಅದು ದೋಷವಲ್ಲ. (ಏಕೆಂದರೆ) **ಒಂದೇ ಮನಸ್ಸನ್ನು ಅನುಸರಿಕೊಂಡಿರುವ (ಅನೇಕ) ಮನಃಸಹಿತವಾದ ಶರೀರಗಳನ್ನೇ ಸತ್ಯಸಂಕಲ್ಪನಾಗಿರುವದರಿಂದ ಸೃಜಿಸಿಕೊಳ್ಳಬಹುದಾಗಿದೆ**[1]. ಅವುಗಳ ಸೃಷ್ಟಿಯಾಗಲು ಆತ್ಮನೂ ಬೇರೆ ಬೇರೆಯಾಗಿ ಅವುಗಳಿಗೆ ಅಧಿಷ್ಠಾತೃವಾಗಿರುವನೆಂಬುದೂ ಹೊಂದುತ್ತದೆ[2]. **ಯೋಗಿಗಳಿಗೆ ಅನೇಕ ಶರೀರಗಳ ಸಂಬಂಧವಾಗುವದೆಂದು ಯೋಗಶಾಸ್ತ್ರಗಳಲ್ಲಿರುವ ಪ್ರಕ್ರಿಯೆಯೂ ಇದೇ**[3].

**ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ॥ ೧೬ ॥**

೧೬. ಸ್ವಾಪ್ಯಯಸಂಪತ್ತಿಗಳೆರಡರಲ್ಲಿ ಒಂದರ ಅಪೇಕ್ಷೆಯಿಂದ (ಹೇಳಿದ್ದು, ಅದು) ; ಏಕೆಂದರೆ (ಇದು ಆ ಶ್ರುತಿಯಲ್ಲಿಯೇ) ಸ್ಪಷ್ಟೀಕೃತವಾಗಿದೆ-

## ಮುಕ್ತನಿಗೆ ವಿಶೇಷಜ್ಞಾನವಿಲ್ಲವೆಂಬ ಶ್ರುತಿಗೆ ಗತಿ

(ಭಾಷ್ಯ)

**೬೦೬.** ಕಥಂ ಪುನರ್ಮುಕ್ತಸ್ಯ ಅನೇಕಶರೀರಾವೇಶಾದಿಲಕ್ಷಣಮ್ ಐಶ್ವರ್ಯಮ್ ಅಭ್ಯುಪಗಮ್ಯತೇ ? ಯಾವತಾ "ತತ್ಕೇನ ಕಂ ವಿಜಾನಿಯಾತ್?" (ಬೃ. ೪–೫–೧೫), "ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯದ್ವಿಜಾನೀಯಾತ್" (ಬೃ. ೪–೩–೩೦), "ಸಲಿಲ ಏಕೋ ದ್ರಷ್ಟಾಽದ್ವೈತೋ ಭವತಿ" (ಬೃ. ೪–೩–೩೨) ಇತಿ ಚೈವಂಜಾತೀಯಕಾ ಶ್ರುತಿರ್ವಿಶೇಷವಿಜ್ಞಾನಂ ವಾರಯತಿ ಇತ್ಯತ ಉತ್ತರಂ ಪಠತಿ । ('ಸ್ವಾಪ್ಯಯಸಂಪತ್ತ್ಯೋರನ್ಯ

---

1. ಶರೀರಭೇದದಿಂದ ಲಿಂಗಭೇದವೇ ಹೊರತು ಸ್ವತಃ ಭೇದವಿಲ್ಲ –ಎಂದು ರ॥ ಪ್ರ॥ ಅನಾದಿಲಿಂಗವಲ್ಲದೆ ಅದಕ್ಕೆ ವಶವಾಗಿರುವ ಬೇರೆಯ ಲಿಂಗಗಳನ್ನೂ ಸೃಜಿಸಿಕೊಳ್ಳುತ್ತಾನೆಂದು ಇಲ್ಲಿ ಸ್ಪಷ್ಟವಾಗಿರುವ ಭಾಷ್ಯಕ್ಕೆ ಅದು ವಿರುದ್ಧವೆಂದು ತೋರುತ್ತದೆ. ಭಾಷ್ಯದ ಈ ಅಭಿಪ್ರಾಯವನ್ನು ಆ ವ್ಯಾಖ್ಯಾನಕಾರರೂ ಒಪ್ಪಿರುತ್ತಾರೆ.

2. ಆದ್ದರಿಂದ ಬೇರೆಬೇರೆಯ ಶರೀರಗಳಿಗೆ ಬೇರೆಬೇರೆಯ ಬಗೆಯ ಪ್ರವೃತ್ತಿಗಳಾಗಬಹುದು.

3. ಅಲ್ಲಿಯೂ ಶರೀರಗಳಿಗೆ ತಕ್ಕಂತೆ ಬೇರೆಬೇರೆಯ ಮನಸ್ಸುಗಳೂ ನಿರ್ಮಾಣವಾಗುತ್ತವೆ ಎಂದು ಒಪ್ಪಬೇಕು.

ತರಾಪೇಕ್ಷಮಾವಿಷ್ಕೃತಂ ಹಿ । ') ಸ್ವಾಪ್ಯಯಃ ಸುಷುಪ್ತಮ್। "ಸ್ವಮಪೀತೋ ಭವತಿ ತಸ್ಮಾದೇನಂ ಸ್ವಪಿತೀತ್ಯಾಚಕ್ಷತೇ" (ಛಾಂ. ೬-೮-೧) ಇತಿ ಶ್ರುತೇಃ । ಸಂಪತ್ತಿಃ ಕೈವಲ್ಯಮ್। "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" (ಬೃ.೪-೪-೬) ಇತಿ ಶ್ರುತೇಃ । ತಯೋರನ್ಯತರಾಮ್ ಅವಸ್ಥಾಮ್ ಅಪೇಕ್ಷ್ಯ ಏತದ್ವಿಶೇಷಸಂಜ್ಞಾಭಾವವಚನಮ್। ಕ್ವಚಿತ್ ಸುಷುಪ್ತಾವಸ್ಥಾಮಪೇಕ್ಷ್ಯ ಉಚ್ಯತೇ, ಕ್ವಚಿತ್ ಕೈವಲ್ಯಾವಸ್ಥಾಮ್। ಕಥಮವಗಮ್ಯತೇ? ಯತಸ್ತತ್ರೈವ ಏತದಧಿಕಾರವಶಾತ್ ಆವಿಷ್ಕೃತಮ್ "ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನು ವಿನಶ್ಯತಿ ನ ಪ್ರೇತ್ಯ ಸಂಜ್ಞಾಸ್ತೀತಿ" (ಬೃ. ೨-೪-೧೨) "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್" (ಬೃ. ೨-೪-೧೪, ೪-೫-೧೫) "ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ" (ಬೃ. ೪-೩-೧೯) ಇತ್ಯಾದಿಶ್ರುತಿಭ್ಯಃ । ಸಗುಣವಿದ್ಯಾವಿಪಾಕಾವಸ್ಥಾನಂ ತ್ವೇತತ್ ಸ್ವರ್ಗಾದಿವದವಸ್ಥಾನ್ತರಂ ಯತ್ರೈತದೈಶ್ವರ್ಯಮ್ ಉಪವರ್ಣ್ಯತೇ । ತಸ್ಮಾತ್ ಅದೋಷಃ ॥

(ಭಾಷ್ಯಾರ್ಥ)

(ಆಕ್ಷೇಪ) :- ಮುಕ್ತನಿಗೆ ಅನೇಕ ಶರೀರಗಳಿರುವವೆಂಬ ಐಶ್ವರ್ಯವನ್ನು ಒಪ್ಪಿದ್ದು ಹೇಗೆ? "ಅಲ್ಲಿ ಏತರಿಂದ ಯಾರನ್ನು ಅರಿತುಕೊಂಡಾನು?" (ಬೃ.೪-೫-೧೫) "ಆದರೆ ಅದಕ್ಕಿಂತ ವಿಂಗಡಿಸಿ ಬೇರೆಯಾಗಿರುವ ಮತ್ತೊಂದು ಎರಡನೆಯದು ಇರುವದಿಲ್ಲ; ಅದಿದ್ದರೆ ಅರಿಯಬಹುದಾಗಿತ್ತು" (ಬೃ.೪-೩-೩೦) ಮತ್ತು "ನೀರಿ(ನಂತೆ ಸ್ವಚ್ಛವಾಗಿ)ರುವ ಒಬ್ಬನೇ ದ್ರಷ್ಟೃವು, ತನಗೆರಡನೆಯದಿಲ್ಲದವನಾಗಿರುತ್ತಾನೆ" (ಬೃ. ೪-೩-೩೨) ಎಂಬೀ ಜಾತಿಯ ಶ್ರುತಿಯು ವಿಶೇಷ ವಿಜ್ಞಾನವು ಇಲ್ಲವೆನ್ನುತ್ತಿದೆಯಲ್ಲ!

(ಪರಿಹಾರ) :- ಇದಕ್ಕೆ (ಸೂತ್ರಕಾರರು) ಉತ್ತರವನ್ನು ಹೇಳುತ್ತಾರೆ: ("ಸ್ವಾಪ್ಯಯಸಂಪತ್ತಿಗಳೆರಡರಲ್ಲಿ ಒಂದರ ಅಪೇಕ್ಷೆಯಿಂದ ಹೇಳಿದ್ದು ಇದು; ಏಕೆಂದರೆ ಆ ಶ್ರುತಿಯಲ್ಲಿಯೇ ಸ್ಪಷ್ಟೀಕೃತವಾಗಿದೆ"). ಸ್ವಾಪ್ಯಯವೆಂದರೆ ಸುಷುಪ್ತಿಯು; "ತನ್ನಲ್ಲಿ ಲಯವಾಗುತ್ತಾನೆ, ಆದ್ದರಿಂದ ಇವನನ್ನು 'ಸ್ವಪಿತಿ' ಎನ್ನುತ್ತಾರೆ" (ಛಾ. ೬-೮-೧) ಎಂಬ ಶ್ರುತಿಯಿಂದ (ಇದು ಗೊತ್ತಾಗುತ್ತದೆ). ಸಂಪತ್ತಿಎಂದರೆ ಕೈವಲ್ಯವು; "ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಲಯವಾಗುತ್ತಾನೆ" (ಬೃ. ೪-೪-೬) ಎಂಬ ಶ್ರುತಿಯಿಂದ (ಇದು ಗೊತ್ತಾಗುತ್ತದೆ). ಅವೆರಡರಲ್ಲಿ ಒಂದು ಅವಸ್ಥೆಯನ್ನು ಅಪೇಕ್ಷಿಸಿ ಈ ವಿಶೇಷಸಂಜ್ಞೆಯಿಲ್ಲವೆಂಬ ವಚನವು (ಬಂದಿದೆ). ಒಂದೊಂದು ಕಡೆ ಸುಷುಪ್ತಾವಸ್ಥೆಯ ಅಪೇಕ್ಷೆಯಿಂದ ಹೇಳಿದೆ, ಒಂದೊಂದು ಕಡೆ ಕೈವಲ್ಯಾವಸ್ಥೆ(ಯ ಅಪೇಕ್ಷೆಯಿಂದ ಹೇಳಿದೆ).

ಇದು ಹೇಗೆ ಗೊತ್ತು ?– ಎಂದರೆ ಅಲ್ಲಿಯೇ ಪ್ರಕರಣವಶದಿಂದ "ಈ ಭೂತಗಳಿಂದ ಎದ್ದು ಅವುಗಳನ್ನೇ ಅನುಸರಿಸಿ ನಾಶವಾಗುತ್ತಾನೆ; ಇಲ್ಲಿಂದ ಹೋದಬಳಿಕ ಸಂಜ್ಞೆ ಇರುವದಿಲ್ಲ" (ಬೃ. ೩-೨-೪-೧೨) "ಆದರೆ ಎಲ್ಲಿ ಎಲ್ಲವೂ ಆತ್ಮನೇ ಆಯಿತೋ" (ಬೃ. ೨-೪-೧೪), "ಎಲ್ಲಿ ನಿದ್ರಿಸಿದವನು ಯಾವದೊಂದು ಕಾಮವನ್ನೂ ಕಾಮಿಸುವದಿಲ್ಲವೋ ಯಾವದೊಂದು ಕನಸನ್ನೂ ಕಾಣುವದಿಲ್ಲವೋ" (ಬೃ. ೪-೩-೧೯) ಎಂದು ಮುಂತಾದ ಶ್ರುತಿಗಳಿಂದ ಇದನ್ನು ಸ್ಪಷ್ಟಪಡಿಸಿರುತ್ತದೆ.

**ಈ ಐಶ್ವರ್ಯವನ್ನು ವರ್ಣಿಸಿರುತ್ತದೆಯಲ್ಲ, ಇದು ಸಗುಣ ವಿದ್ಯೆಯ ವಿಪಾಕವಾಗಿರುವ ಸ್ವರ್ಗಾದಿಗಳಂಥ ಅವಸ್ಥಾಂತರವು; ಆದ್ದರಿಂದ (ಯಾವ) ದೋಷವೂ ಇಲ್ಲ.**[1]

## ೬. ಜಗದ್ವ್ಯಾಪಾರಾಧಿಕರಣ (ಸೂ. ೧೭-೨೨)

(ಮುಕ್ತನಿಗೆ ಜಗತ್ತಿನ ಸೃಷ್ಟ್ಯಾದಿಗಳ ಅಧಿಕಾರವಿಲ್ಲ)

**ಜಗದ್ವ್ಯಾಪಾರವರ್ಜಂ ಪ್ರಕರಣಾದಸಂನಿಹಿತತ್ವಾಚ್ಚ ॥ ೧೭ ॥**

೧೭. ಜಗದ್ವ್ಯಾಪಾರವನ್ನು ಬಿಟ್ಟು (ಮಿಕ್ಕ ಐಶ್ವರ್ಯವು ಉಂಟಾಗುತ್ತದೆ) ; ಏಕೆಂದರೆ (ಆತನ) ಪ್ರಕರಣವಾಗಿರುತ್ತದೆ, (ಅವರು) ಸಂನಿಹಿತರಲ್ಲ.

## ಮುಕ್ತರಿಗೆ ಸಂಪೂರ್ಣವಾದ ಐಶ್ವರ್ಯವಿಲ್ಲ

(ಭಾಷ್ಯ)

೬೦೭. ಯೇ ಸಗುಣಬ್ರಹ್ಮೋಪಾಸನಾತ್ ಸಹೈವ ಮನಸಾ ಈಶ್ವರಸಾಯುಜ್ಯಂ ವ್ರಜನ್ತಿ, ಕಿಂ ತೇಷಾಂ ನಿರವಗ್ರಹಮ್ ಐಶ್ವರ್ಯಂ ಭವತಿ ಆಹೋಸ್ವಿತ್ ಸಾವಗ್ರಹಮಿತಿ ಸಂಶಯಃ। ಕಿಂ ತಾವತ್ ಪ್ರಾಪ್ತಮ್ ? ನಿರಙ್ಕುಶಮೇವ ಏಷಾಮ್ ಐಶ್ವರ್ಯಂ ಭವಿತುಮರ್ಹತಿ। "ಆಪ್ನೋತಿ ಸ್ವಾರಾಜ್ಯಮ್" (ತೈ. ೧-೬) "ಸರ್ವೇಽಸ್ಮೈ ದೇವಾ ಬಲಿಮಾವಹನ್ತಿ" (ತೈ. ೧-೫) "ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ" (ಛಾ. ೮-೧-೬) ಇತ್ಯಾದಿಶ್ರುತಿಭ್ಯ ಇತಿ। ಏವಂ ಪ್ರಾಪ್ತೇ ಪಠತಿ "ಜಗದ್ವ್ಯಾಪಾರವರ್ಜಮ್" ಇತಿ। ಜಗದುತ್ಪತ್ತ್ಯಾದಿವ್ಯಾಪಾರಂ ವರ್ಜಯಿತ್ವಾ ಅನ್ಯದಣಿಮಾದ್ಯಾತ್ಮಕಮ್

1. ಜ್ಞಾನದಿಂದ ಆಗುವ ಸದ್ಯೋಮುಕ್ತಿಯಲ್ಲಿ ಆತ್ಮನು ನಿರ್ವಿಶೇಷನಾಗಿರುತ್ತಾನೆ. ಆದ್ದರಿಂದ ಅಲ್ಲಿ ವಿಶೇಷವನ್ನು ಹೇಳಿದ್ದರೆ ದೋಷವಾಗುತ್ತಿತ್ತು.

ಐಶ್ವರ್ಯಂ ಮುಕ್ತಾನಾಂ ಭವಿತುಮರ್ಹತಿ। ಜಗದ್ವ್ಯಾಪಾರಸ್ತು ನಿತ್ಯಸಿದ್ಧಸ್ಯೈವೇಶ್ವರಸ್ಯ ಕುತಃ? ತಸ್ಯ ತತ್ರ ಪ್ರಕೃತತ್ವಾತ್, ಅಸಂನಿಹಿತತ್ವಾಚ್ಚೇತರೇಷಾಮ್। ಪರ ಏವ ಹೀಶ್ವರೋ ಜಗದ್ವ್ಯಾಪಾರೇಽಧಿಕೃತಃ। ತಮೇವ ಪ್ರಕೃತ್ಯ ಉತ್ಪತ್ತ್ಯಾದ್ಯುಪದೇಶಾತ್ । ನಿತ್ಯಶಬ್ದನಿಬನ್ಧನತ್ವಾಚ್ಚ । ತದನ್ವೇಷಣವಿಜಿಜ್ಞಾಸನಪೂರ್ವಕಂ ತು ಇತರೇಷಾಮ್ ಅಣಿಮಾದ್ಯೈಶ್ವರ್ಯಂ ಶ್ರೂಯತೇ। ತೇನ ಅಸಂನಿಹಿತಾಸ್ತೇ ಜಗದ್ವ್ಯಾಪಾರೇ। ಸಮನಸ್ಕತ್ವಾದೇವ ಚ ಏತೇಷಾಮ್ ಅನೈಕಮತ್ಯೇ ಕಸ್ಯಚಿತ್ ಸ್ಥಿತ್ಯಭಿಪ್ರಾಯಃ, ಕಸ್ಯಚಿತ್ ಸಂಹಾರಾಭಿಪ್ರಾಯಃ ಇತ್ಯೇವಂ ವಿರೋಧೋಽಪಿ ಕದಾಚಿತ್ ಸ್ಯಾತ್। ಅಥ ಕಸ್ಯಚಿತ್ ಸಂಕಲ್ಪಮನು ಅನ್ಯಸ್ಯ ಸಂಕಲ್ಪ ಇತ್ಯವಿರೋಧಃ ಸಮರ್ಥ್ಯೇತ ತತಃ ಪರಮೇಶ್ವರಾಕೂತತನ್ತ್ರತ್ವಮೇವೇತರೇಷಾಮ್ ಇತಿ ವ್ಯವತಿಷ್ಠತೇ ॥

(ಭಾಷ್ಯಾರ್ಥ)

ಯಾರು ಸಗುಣಬ್ರಹ್ಮದ ಉಪಾಸನೆಯಿಂದ ಮನಸ್ಸಿನೊಂದಿಗೇ ಈಶ್ವರ ಸಾಯುಜ್ಯವನ್ನು ಹೊಂದುತ್ತಾರೋ ಅವರಿಗೆ ಯಾವ ಅಡ್ಡಿಯೂ ಇಲ್ಲದ ಐಶ್ವರ್ಯವು ಆಗುತ್ತದೆಯೊ, ಅಥವಾ ಅಡ್ಡಿಯಿರುವ (ಐಶ್ವರ್ಯವಾಗುತ್ತದೆಯೊ) ? –ಎಂದು ಸಂಶಯವು.

ಇಲ್ಲಿ ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ ? ಇವರಿಗೆ ನಿರಂಕುಶವಾದ ಐಶ್ವರ್ಯವೇ ಇರಬೇಕು ; ಏಕೆಂದರೆ "ಸ್ವಾರಾಜ್ಯವನ್ನು ಪಡೆದುಕೊಳ್ಳುತ್ತಾನೆ" (ತೈ. ೧–೬), "ಇವನಿಗೆ ಎಲ್ಲಾ ದೇವತೆಗಳೂ ಬಲಿಯನ್ನು ತಂದೊಪ್ಪಿಸುತ್ತಾರೆ" (ತೈ.೧–೫), "ಅವರಿಗೆ ಎಲ್ಲಾ ಲೋಕಗಳಲ್ಲಿಯೂ ಕಾಮಚಾರವಿರುತ್ತದೆ" (ಛಾಂ. ೮–೧–೬) ಮುಂತಾದ ಶ್ರುತಿಗಳಿರುತ್ತವೆ.

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು) "ಜಗದ್ವ್ಯಾಪಾರವನ್ನು ಬಿಟ್ಟು" ಎಂಬ (ಸೂತ್ರವನ್ನು) ಹೇಳಿರುತ್ತಾರೆ. **ಜಗತ್ತಿನ ಉತ್ಪತ್ತಿಯೇ ಮುಂತಾದ ವ್ಯಾಪಾರವನ್ನು ಬಿಟ್ಟು ಮಿಕ್ಕ ಅಣಿಮಾದಿ ಲಕ್ಷಣವಾದ ಐಶ್ವರ್ಯವೇ ಮುಕ್ತರಿಗೆ ಉಂಟಾಗಬೇಕು ; ಜಗದ್ವ್ಯಾಪಾರವು ಮಾತ್ರ ನಿತ್ಯಸಿದ್ಧನಾದ ಈಶ್ವರನಿಗೇ (ಸೇರಿದ್ದು).** ಏಕೆ ? ಎಂದರೆ ಅದರಲ್ಲಿ ಆತನೇ ಪ್ರಕೃತನಾಗಿರುತ್ತಾನೆ. ಮಿಕ್ಕವರು ಸಂನಿಹಿತರಾಗಿರುವದಿಲ್ಲ. (ಇದರ ವಿವರ): ಪರಮೇಶ್ವರನೇ ಅಲ್ಲವೆ, ಜಗದ್ವ್ಯಾಪಾರದಲ್ಲಿ ಅಧಿಕೃತನಾಗಿರುತ್ತಾನೆ[1] ? ಏಕೆಂದರೆ ಆತನ ಪ್ರಕರಣದಲ್ಲಿಯೇ ಉತ್ಪತ್ತ್ಯಾದಿಗಳನ್ನು

1. ಪ್ರಕೃತನಾಗಿರುತ್ತಾನೆ; ಬ್ರಹ್ಮವನ್ನು ಹೇಳುವದಕ್ಕುಪಕ್ರಮಿಸಿಯೇ ಸೃಷ್ಟ್ಯಾದಿಗಳನ್ನು ಹೇಳಿದೆ.

ಉಪದೇಶಿಸಿರುತ್ತದೆ; (ಅವನು) ನಿತ್ಯಶಬ್ದವೆಂಬ ಕಾರಣವುಳ್ಳವನಾಗಿರುತ್ತಾನೆ.[1] ಆದರೆ ಆತನನ್ನು ಅನ್ವೇಷಣಮಾಡಿ ವಿಜ್ಞಾನವನ್ನು ಮಾಡಿಕೊಳ್ಳುವದರಿಂದ ಮಿಕ್ಕವರಿಗೆ ಅಣಿಮಾದ್ಯೈಶ್ವರ್ಯವುಂಟಾಗುವದೆಂದು ಶ್ರುತಿಯಲ್ಲಿ ಹೇಳಿರುತ್ತದೆ.[2] ಆದ್ದರಿಂದ ಅವರು ಜಗದ್ವ್ಯಾಪಾರದಲ್ಲಿ ಸಂನಿಹಿತರಾಗಿರುವದಿಲ್ಲ.[3] ಇವರಿಗೆ ಮನಸ್ಸು ಇರುವದರಿಂದಲೇ ಐಕಮತ್ಯವಿಲ್ಲದೆಹೋಗಬಹುದಾದ್ದರಿಂದ[4] ಒಬ್ಬನಿಗೆ (ಜಗತ್ತಿನ) ಸ್ಥಿತಿಯಲ್ಲಿ ಅಭಿಪ್ರಾಯ, ಮತ್ತೊಬ್ಬನಿಗೆ ಸಂಹಾರ(ದಲ್ಲಿ) ಅಭಿಪ್ರಾಯ– ಎಂದಿಂತು ವಿರೋಧವೂ ಒಂದು ವೇಳೆ ಆಗಬಹುದಾಗಿದೆ. ಹೀಗಲ್ಲದೆ ಯಾರಾದರೊಬ್ಬನ ಸಂಕಲ್ಪವನ್ನು ಅನುಸರಿಸಿ ಮತ್ತೊಬ್ಬನ ಸಂಕಲ್ಪವಿರುವದರಿಂದ ವಿರೋಧವಿಲ್ಲವೆಂದು ಸಾಧಿಸುವದಾದರೆ, ಆಗ ಪರಮೇಶ್ವರನ ಅಭಿಪ್ರಾಯಕ್ಕಧೀನವಾಗಿಯೇ ಮಿಕ್ಕವರು ಇರುವರೆಂಬುದೇ ನಿಲ್ಲುತ್ತದೆ.

**ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿಕಾರಿಕಮಂಡಲಸ್ಥೋಕ್ತೇಃ ॥ ೧೮ ॥**

೧೮. ಪ್ರತ್ಯಕ್ಷವಾಗಿಯೇ ಉಪದೇಶವಿರುವದರಿಂದ (ನಿರಂಕುಶೈಶ್ವರ್ಯವಿರಬೇಕು) ಎಂದರೆ, ಹಾಗಲ್ಲ; ಏಕೆಂದರೆ ಆಧಿಕಾರಿಕನಾಗಿ ಮಂಡಲದಲ್ಲಿರುವವನನ್ನು ಹೇಳಿದೆ.

## ಮುಕ್ತರಿಗೆ ಹೇಳಿರುವ ಐಶ್ವರ್ಯವು ಸೂರ್ಯಮಂಡಲದಲ್ಲಿರುವ ಈಶ್ವರನಧೀನ

**(ಭಾಷ್ಯ)**

೬೦೮. ಅಥ ಯದುಕ್ತಮ್ "ಆಪ್ನೋತಿ ಸ್ವಾರಾಜ್ಯಮ್" (ತೈ. ೧–೬) ಇತ್ಯಾದಿಪ್ರತ್ಯಕ್ಷೋಪದೇಶಾತ್ ನಿರವಗ್ರಹಮೈಶ್ವರ್ಯಂ ವಿದುಷಾಂ ನ್ಯಾಯ್ಯಮಿತಿ, ತತ್ಪರಿಹರ್ತವ್ಯಮ್ । ಅತ್ರೋಚ್ಯತೇ । ನಾಯಂ ದೋಷಃ । ಆಧಿಕಾರಿಕ

1. ನಿತ್ಯವಾದ ವೇದವು ನಿತ್ಯನಾದ ಈಶ್ವರನಿಗೇ ಪ್ರಮಾಣವಾಗಿರುವದು; ಅದು ಈಚೆಗೆ ಮುಕ್ತರಾದವರನ್ನು ಹೇಳಲಾರದು; ಹಾಗೆಂದರೆ ಅವರ ನಿತ್ಯತ್ವಕ್ಕೆ ಲೋಪವು ಬರುವದು ಎಂದರ್ಥ.

2. ಹಾರ್ದವಿದ್ಯೆಯಲ್ಲಿ ಹೇಳಿರುವ ಅನ್ವೇಷ್ಟವ್ಯವಿಜಿಜ್ಞಾಸಿತವ್ಯನೇ ಪರಮೇಶ್ವರನು.

3. ಏಕೆಂದರೆ ಅವರಿಗಿಂತ ಮೊದಲೇ ಈಶ್ವರನು ಜಗದ್ವ್ಯಾಪಾರಕ್ಕೆ ಕರ್ತೃವಾಗಿ ಸಿದ್ಧನಾಗಿರುತ್ತಾನೆ.

4. ಈಶ್ವರನಿಗಾದರೆ ಜ್ಞಾನವು ಸ್ವರೂಪವೇ; ಆದ್ದರಿಂದ ಸಂಕಲ್ಪವೂ ಸ್ವರೂಪವೇ ಎಂದು ಭಾವ.

ಮಣ್ಡಲಸ್ಥೋಕ್ತೇಃ। ಆಧಿಕಾರಿಕೋ ಯಃ ಸವಿತೃಮಣ್ಡಲಾದಿಷು ವಿಶೇಷಾಯತನೇಷು ಅವಸ್ಥಿತಃ ಪರ ಈಶ್ವರಃ ತದಾಯತ್ತೈವ ಇಯಂ ಸ್ವಾರಾಜ್ಯಪ್ರಾಪ್ತಿರುಚ್ಯತೇ। ಯತ್ಕಾರಣಮ್ ಅನನ್ತರಮ್ "ಆಪ್ನೋತಿ ಮನಸಸ್ಪತಿಮ್" (ತೈ. ೧-೬) ಇತ್ಯಾಹ। ಯೋ ಹಿ ಸರ್ವಮನಸಾಂ ಪತಿಃ ಪೂರ್ವಸಿದ್ಧ ಈಶ್ವರಃ ತಂ ಪ್ರಾಪ್ನೋತಿ ಇತ್ಯೇತದುಕ್ತಂ ಭವತಿ। ತದನುಸಾರೇಣೈವ ಚ ಅನನ್ತರಂ "ವಾಕ್ಪತಿಶ್ಚಕ್ಷುಷ್ಪತಿಃ ಶ್ರೋತ್ರಪತಿರ್ವಿಜ್ಞಾನಪತಿಶ್ಚ ಭವತಿ" (ತೈ. ೧-೬) ಇತ್ಯಾಹ। ಏವಮ್ ಅನ್ಯತ್ರಾಪಿ ಯಥಾಸಂಭವಂ ನಿತ್ಯಸಿದ್ಧೇಶ್ವರಾಯತ್ತಮೇವ ಇತರೇಷಾಮ್ ಐಶ್ವರ್ಯಂ ಯೋಜಯಿತವ್ಯಮ್ ॥

(ಭಾಷ್ಯಾರ್ಥ)

ಇನ್ನು "ಸ್ವಾರಾಜ್ಯವನ್ನು ಪಡೆದುಕೊಳ್ಳುತ್ತಾನೆ" (ತೈ. ೧-೬) ಎಂದು ಮುಂತಾಗಿ ಪ್ರತ್ಯಕ್ಷವಾಗಿ ಹೇಳಿರುವದರಿಂದ ಜ್ಞಾನಿಗಳಿಗೆ ನಿರಂಕುಶವಾದ ಐಶ್ವರ್ಯವಾಗುವದೆಂಬುದೇ ಯುಕ್ತ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದನ್ನು ಪರಿಹರಿಸಬೇಕಷ್ಟೆ, ಅದಕ್ಕೆ ಹೇಳುತ್ತೇವೆ. ಇದೇನೂ ದೋಷವಲ್ಲ. ಏಕೆಂದರೆ ಆಧಿಕಾರಿಕನಾಗಿ ಮಂಡಲದಲ್ಲಿರುವವನನ್ನು ಹೇಳಿರುತ್ತದೆ. (ಇದರ ವಿವರ): ಆಧಿಕಾರಿಕನಾದ[1], ಸವಿತೃಮಂಡಲವೇ ಮುಂತಾದ ವಿಶೇಷಸ್ಥಾನಗಳಲ್ಲಿರುವ ಪರಮೇಶ್ವರನಿದಾನಲ್ಲ, ಅವನಿಗೆ ಅಧೀನವಾಗಿರುವದಾಗಿಯೇ ಈ ಸ್ವಾರಾಜ್ಯಪ್ರಾಪ್ತಿಯನ್ನು ಹೇಳಿರುತ್ತದೆ. ಏಕೆಂದರೆ (ಇದರ) ಮುಂದೆ "ಮನಸಸ್ಪತಿಯನ್ನು ಪಡೆದುಕೊಳ್ಳುತ್ತಾನೆ" ಎಂದು ಹೇಳಿರುತ್ತದೆ. ಯಾವನು ಮೊದಲೇ ಸಿದ್ಧನಾಗಿರುವ ಎಲ್ಲಾ ಮನಸ್ಸುಗಳ ಪತಿಯೋ, ಅವನನ್ನು ಪಡೆದುಕೊಳ್ಳುತ್ತಾನೆ[2] —ಎಂದು ಹೇಳಿದಂತೆ ಆಯಿತು. ಅದಕ್ಕನುಸಾರವಾಗಿಯೇ ಆಮೇಲೆ "ವಾಕ್ಪತಿಯೂ ಚಕ್ಷುಷ್ಪತಿಯೂ ಶ್ರೋತ್ರಪತಿಯೂ ವಿಜ್ಞಾನಪತಿಯೂ ಆಗುತ್ತಾನೆಂದು[3] ಹೇಳಿದೆ. ಇದರಂತೆಯೇ ಆಯಾ (ಸಂದರ್ಭಕ್ಕೆ) ಹೊಂದುವಂತೆ ನಿತ್ಯಸಿದ್ಧನಾದ ಈಶ್ವರನ ಅಧೀನವಾಗಿಯೇ ಮಿಕ್ಕವರಿಗೆ ಐಶ್ವರ್ಯ (ವುಂಟಾಗುವದೆಂದು) ಹೊಂದಿಸಿಕೊಳ್ಳಬೇಕು.

---

1. ಆದಿತ್ಯಾದಿಗಳನ್ನು ಅಧಿಕಾರದಲ್ಲಿ ನಿಯೋಜಿಸುವ ಎಂದರ್ಥ. —ಆ. ಗಿ.

2. ಆ ನಿತ್ಯಸಿದ್ಧೇಶ್ವರನನ್ನು ಪಡೆದುಕೊಳ್ಳುತ್ತಾನೆ ಎಂದದ್ದರಿಂದ ಅವನ ಅಧೀನವಾಗಿಯೇ ಇವನಿಗೆ ಐಶ್ವರ್ಯವುಂಟಾಗುತ್ತದೆ ಎಂದಂತಾಯಿತು.

3. ಈ ಶ್ರುತಿಯ ಭಾಷ್ಯದಲ್ಲಿ ಇಲ್ಲಿರುವಂತೆ ಸ್ಪಷ್ಟವಾಗಿ ಬಿಡಿಸಿ ಹೇಳದಿದ್ದರೂ ಆ ಭಾಷ್ಯಕ್ಕೂ ಇದಕ್ಕನುಗುಣವಾಗಿ ಅರ್ಥವನ್ನು ಮಾಡುವದಕ್ಕೆ ಬರುವಂತಿದೆ.

## ವಿಕಾರಾವರ್ತಿ ಚ ತಥಾ ಹಿ ಸ್ಥಿತಿಮಾಹ ॥ ೧೯ ॥

೧೯. ವಿಕಾರದಲ್ಲಿಲ್ಲದ (ಬ್ರಹ್ಮರೂಪವೂ) ಇದೆ. ಏಕೆಂದರೆ ಹಾಗೆಂದೇ (ಶ್ರುತಿಯು) ಇರುವಿಕೆಯನ್ನು ಹೇಳುತ್ತದೆ.

## ಕಾರ್ಯದಲ್ಲಿಲ್ಲದ ಬ್ರಹ್ಮಸ್ವರೂಪದಂತೆ ನಿರಂಕುಶೈಶ್ವರ್ಯವೂ ಮುಕ್ತರಿಗಿಲ್ಲ

(ಭಾಷ್ಯ)

೬೧೯. ವಿಕಾರಾವರ್ತ್ಯಪಿ ಚ ನಿತ್ಯಮುಕ್ತಂ ಪಾರಮೇಶ್ವರಂ ರೂಪಂ ನ ಕೇವಲಂ ವಿಕಾರಮಾತ್ರಗೋಚರಂ ಸವಿತೃಮಣ್ಡಲಾದ್ಯಧಿಷ್ಠಾನಮ್। ತಥಾ ಹಿ ಅಸ್ಯ ದ್ವಿರೂಪಾಂ ಸ್ಥಿತಿಮಾಹ ಆಮ್ನಾಯಃ "ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ। ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" (ಛಾಂ. ೩-೧೨-೬) ಇತ್ಯೇವಮಾದಿಃ। ನ ಚ ತನ್ನಿರ್ವಿಕಾರಂ ರೂಪಮ್ ಇತರಾಲಮ್ಬನಾಃ ಪ್ರಾಪ್ನುವನ್ತೀತಿ ಶಕ್ಯಂ ವಕ್ತುಮ್। ಅತತ್ಕ್ರತುತ್ವಾತ್ ತೇಷಾಮ್। ಅತಶ್ಚ ಯಥೈವ ದ್ವಿರೂಪೇ ಪರಮೇಶ್ವರೇ ನಿರ್ಗುಣಂ ರೂಪಮ್ ಅನವಾಪ್ಯ ಸಗುಣೇ ಏವ ಅವತಿಷ್ಠನ್ತೇ, ಏವಂ ಸಗುಣೇಽಪಿ ನಿರವಗ್ರಹಮ್ ಐಶ್ವರ್ಯಮ್ ಅನವಾಪ್ಯ ಸಾವಗ್ರಹ ಏವ ಅವತಿಷ್ಠನ್ತ ಇತಿ ದ್ರಷ್ಟವ್ಯಮ್॥

(ಭಾಷ್ಯಾರ್ಥ)

ಪರಮೇಶ್ವರನ ರೂಪವು ವಿಕಾರಮಾತ್ರಗೋಚರವಾಗಿ[1] ಸೂರ್ಯಮಂಡಲವೇ ಮುಂತಾದ ಸ್ಥಾನದಲ್ಲಿರುವದು ಮಾತ್ರವೇ ಅಲ್ಲ, ವಿಕಾರದಲ್ಲಿಲ್ಲದ ನಿತ್ಯಮುಕ್ತವಾದ (ರೂಪವೂ ಇದೆ). ಆದ್ದರಿಂದಲೇ ಈ (ಪರಮೇಶ್ವರನಿಗೆ) ಎರಡು ಬಗೆಯ ರೂಪವು ಇರುವದೆಂದು "ಇವನಿಗೆ ಅಷ್ಟೇ ಮಹಿಮೆಯು, ಅದಕ್ಕಿಂತಲೂ ಪುರುಷನು ಹೆಚ್ಚಿನವನೂ ಆಗಿರುತ್ತಾನೆ; ಎಲ್ಲಾ ಭೂತಗಳೂ ಇವನಿಗೆ (ಒಂದು) ಪಾದವು, ಇವನ ಅಮೃತವಾಗಿರುವ ಮೂರು ಪಾದವು ದ್ಯು(ಲೋಕ)ದಲ್ಲಿದೆ" (ಛಾಂ. ೩-೧೨-೧೩) ಎಂದು ಮುಂತಾದ ಶಾಸ್ತ್ರವು ಹೇಳುತ್ತದೆ. ಆದರೆ ಆ **ನಿರ್ವಿಕಾರವಾದ ರೂಪವನ್ನು (ಅದಕ್ಕಿಂತ) ಇನ್ನೊಂದಾದ (ವಿಕಾರರೂಪವನ್ನು) ಅವಲಂಬಿಸಿರುವ ಉಪಾಸಕರು ಪಡೆಯುತ್ತಾರೆ ಎಂದು ಹೇಳುವದು ಶಕ್ಯವಲ್ಲ; ಏಕೆಂದರೆ ಅವರು ಅದರಲ್ಲಿ ಕ್ರತುವುಳ್ಳವರಾಗಿರುವದಿಲ್ಲ.**[2] **ಆದ್ದರಿಂದ ಹೇಗೆ ಪರಮೇಶ್ವರ**

1. ಕಾರ್ಯವಾದ ಸ್ಥಾನಾದಿಗಳಲ್ಲಿರುವದಾಗಿ.
2. ಏಕೆಂದರೆ ಅವರು ನಿರ್ಗುಣರೂಪವನ್ನು ಧ್ಯಾನಮಾಡಿರುವದಿಲ್ಲ.

ನಿಗೆ ಎರಡು (ಬಗೆಯ) ರೂಪಗಳಿರುವಲ್ಲಿ ನಿರ್ಗುಣರೂಪವನ್ನು ಹೊಂದದೆ ಸಗುಣ(ರೂಪ)ದಲ್ಲಿಯೇ (ಉಪಾಸಕ)ರಿರುವರೋ ಹಾಗೆಯೇ ಸಗುಣದಲ್ಲಿಯೂ ನಿರಂಕುಶವಾದ ಐಶ್ವರ್ಯವನ್ನು ಪಡೆಯದೆ ಸಾಂಕುಶವಾದ (ಐಶ್ವರ್ಯ)ದಲ್ಲಿಯೇ ನಿಲ್ಲುತ್ತಾರೆ ಎಂದು ತಿಳಿಯಬೇಕು.[1]

**ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ॥ ೨೦ ॥**

೨೦. ಹೀಗೆಂದು ಪ್ರತ್ಯಕ್ಷಾನುಮಾನಗಳು ತಿಳಿಸುತ್ತಲೂ ಇವೆ.

## ನಿರ್ವಿಕಾರಬ್ರಹ್ಮವನ್ನು ಶ್ರುತಿಸ್ಮೃತಿಗಳಲ್ಲಿ ಹೇಳಿದೆ

(ಭಾಷ್ಯ)

೭೧೦. ದರ್ಶಯತಶ್ಚ ವಿಕಾರಾವರ್ತಿತ್ವಂ ಪರಸ್ಯ ಜ್ಯೋತಿಷಃ ಶ್ರುತಿಸ್ಮೃತೀ । "ನ ತತ್ರ ಸೂರ್ಯೋ ಭಾತಿ ನ ಚನ್ದ್ರತಾರಕಂ ನೇಮಾ ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ" (ಮುಂ. ೨-೨-೧೦) ಇತಿ । "ನ ತದ್ಭಾಸಯತೇ ಸೂರ್ಯೋ ನ ಶಶಾಙ್ಕೋ ನ ಪಾವಕಃ" (ಗೀ. ೧೫-೬) ಇತಿ । ತದೇವಂ ವಿಕಾರಾವರ್ತಿತ್ವಂ ಪರಸ್ಯ ಜ್ಯೋತಿಷಃ ಪ್ರಸಿದ್ಧಮ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಪರಂಜ್ಯೋತಿ(ಯಾದ ಪರಮಾತ್ಮ)ನಿಗೆ ವಿಕಾರದಲ್ಲಿಲ್ಲದ (ರೂಪ)ವನ್ನು ಶ್ರುತಿಸ್ಮೃತಿಗಳು ತಿಳಿಸುತ್ತಲೂ ಇವೆ. ಹೇಗೆಂದರೆ "ಅಲ್ಲಿ ಸೂರ್ಯನು ಬೆಳಗುವದಿಲ್ಲ, ಚಂದ್ರತಾರಕೆಗಳು (ಬೆಳಗುವದಿಲ್ಲ), ಈ ಮಿಂಚುಗಳು ಬೆಳಗುವದಿಲ್ಲ, ಈ ಅಗ್ನಿಯು ಹೇಗೆ (ಬೆಳಗುವನು) ?'' (ಮುಂ.೨-೨-೧೦) "ಅದನ್ನು ಸೂರ್ಯನು ಬೆಳಗುವದಿಲ್ಲ, ಚಂದ್ರನೂ (ಬೆಳಗು)ವದಿಲ್ಲ, ಅಗ್ನಿಯೂ (ಬೆಳಗು)ವದಿಲ್ಲ" (ಗೀ. ೧೫-೬) ಅಂತೂ ಹೀಗೆ ಪರಂಜ್ಯೋತಿ(ಯಾದ ಪರಮಾತ್ಮನಿಗೆ) ವಿಕಾರದಲ್ಲಿಲ್ಲದ (ರೂಪ)ವೂ ಪ್ರಸಿದ್ಧವಾಗಿದೆ ಎಂದು ಅಭಿಪ್ರಾಯ.

**ಭೋಗಮಾತ್ರಸಾಮ್ಯಲಿಙ್ಗಾಚ್ಚ ॥ ೨೧ ॥**

೨೧. ಭೋಗಮಾತ್ರವೇ ಸಮಾನವೆಂಬ ಲಿಂಗವಿದೆ.

---

1. ಸೃಷ್ಟ್ಯಾದಿಗಳಲ್ಲಿಯೂ ತಮಗೆ ಸ್ವಾತಂತ್ರ್ಯವು ಬೇಕೆಂದು ಅವರು ಉಪಾಸನೆಯನ್ನು ಮಾಡಿಲ್ಲ; ಹಾಗೆ ಮಾಡಬೇಕೆಂಬ ವಿಧಿಯೂ ಇಲ್ಲ. ಆದ್ದರಿಂದ ಅವರಿಗೆ ಆ ಐಶ್ವರ್ಯವು ದೊರಕಲಾರದು.

# ಪರಮೇಶ್ವರನಿಗೂ ಮುಕ್ತರಿಗೂ ಭೋಗಮಾತ್ರದಲ್ಲಿ ಸಮಾನವೆಂದು ಶ್ರುತಿ

(ಭಾಷ್ಯ)

೭೧೧. ಇತಶ್ಚ ನ ನಿರಙ್ಕುಶಂ ವಿಕಾರಾಲಮ್ಬನಾನಾಮ್ ಐಶ್ವರ್ಯಮ್। ಯಸ್ಮಾತ್ ಭೋಗಮಾತ್ರಮೇವ ಏಷಾಮ್ ಅನಾದಿಸಿದ್ಧೇನ ಈಶ್ವರೇಣ ಸಮಾನಮ್ ಇತಿ ಶ್ರೂಯತೇ "ತಮಾಹಾಪೋ ವೈ ಖಲು ಮೀಯನ್ತೇ ಲೋಕೋಽಸೌ'' (ಕೌ. ೧-೭),[1] "ಸ ಯಥೈತಾಂ ದೇವತಾಂ ಸರ್ವಾಣಿ ಭೂತಾನ್ಯವನ್ತ್ಯೇವಂ ಹೈವಂವಿದಂ ಸರ್ವಾಣಿ ಭೂತಾನ್ಯವನ್ತಿ" (ಬೃ. ೧-೫-೨೦) "ತೇನೋ ಏತಸ್ಯೈ ದೇವತಾಯೈ ಸಾಯುಜ್ಯಂ ಸಲೋಕತಾಂ ಜಯತಿ" (ಬೃ. ೧-೫-೨೩) ಇತ್ಯಾದಿಭೇದವ್ಯಪದೇಶಲಿಙ್ಗೇಭ್ಯಃ ॥

(ಭಾಷ್ಯಾರ್ಥ)

ಈ ಕಾರಣದಿಂದಲೂ ವಿಕಾರ(ರೂಪವನ್ನು) ಅವಲಂಬಿಸಿದ (ಉಪಾಸಕರಿಗೆ) ನಿರಂಕುಶೈಶ್ವರ್ಯವುಂಟಾಗುವದಿಲ್ಲ. ಏಕೆಂದರೆ ಇವರಿಗೂ ಅನಾದಿಸಿದ್ಧನಾದ ಈಶ್ವರನಿಗೂ ಭೋಗವೊಂದೇ ಸಮಾನವೆಂದು ಶ್ರುತಿಯಲ್ಲಿದೆ. ''ಆ (ಉಪಾಸಕನನ್ನು ಕುರಿತು) ಹೀಗೆನ್ನುತ್ತಾನೆ : (ಅಮೃತತುಲ್ಯವಾದ) ನೀರನ್ನಲ್ಲವೆ, ನಾನು ಭೋಗಿಸುತ್ತಿರುವೆನು, (ನಿನಗೂ) ಇದು (ಭೋಗ್ಯವಾದ) ಲೋಕ(ವಾಗಿರುವದು)" (ಕೌ. ೧-೭), "ಅದು ಹೇಗೆಂದರೆ, (ಹೇಗೆ) ಈ ದೇವತೆಯುನ್ನು ಎಲ್ಲಾ ಭೂತಗಳೂ ಕಾಪಾಡುತ್ತವೆಯೋ, ಹಾಗೆ ಹೀಗೆ ಉಪಾಸನೆಮಾಡುವವನನ್ನೂ ಸರ್ವಭೂತಗಳೂ ಕಾಪಾಡುತ್ತಿರುತ್ತವೆ" (ಬೃ. ೧-೫-೨೦), "ಆದರಿಂದ ಈ ದೇವತೆಯ ಸಾಯುಜ್ಯವನ್ನು (ಅಥವಾ) ಸಾಲೋಕ್ಯವನ್ನು ಗೆದ್ದುಕೊಳ್ಳುತ್ತಾನೆ" (೧-೫-೨೩) ಮುಂತಾದ ಭೇದವ್ಯಪದೇಶದ ಲಿಂಗಗಳಿಂದ (ಹೀಗೆಂದು ಸಿದ್ಧವಾಗುತ್ತದೆ).

**ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ॥ ೨೨ ॥**

೨೨. ಅನಾವೃತ್ತಿಯಾಗುತ್ತದೆ; ಏಕೆಂದರೆ ಹಾಗೆಂದು ಶಬ್ದವಿದೆ. ಅನಾವೃತ್ತಿಯಾಗುತ್ತದೆ; ಏಕೆಂದರೆ ಹಾಗೆಂದು ಶಬ್ದವಿದೆ.

---

1. ನಿ॥ ಪಾಠದಲ್ಲಿ "ತಮಾಹಾಪೋ ವೈ ಖಲು ಮೇಹ್ಯಸಾವಯಂ ತೇ ಲೋಕ ಇತಿ" ಎಂದಿದೆ.

# ಮುಕ್ತರಿಗೆ ಪುನರಾವೃತ್ತಿಯಿಲ್ಲ

(ಭಾಷ್ಯ)

೬೧೨. ನನು ಏವಂ ಸತಿ ಸಾತಿಶಯತ್ವಾತ್ ಅನ್ತವತ್ತ್ವಮ್ ಐಶ್ವರ್ಯಸ್ಯ ಸ್ಯಾತ್ । ತತಶ್ಚ ಏಷಾಮಾವೃತ್ತಿಃ ಪ್ರಸಜ್ಯೇತ ಇತ್ಯತಃ ಉತ್ತರಂ ಭಗವಾನ್ ಬಾದರಾಯಣ ಆಚಾರ್ಯಃ ಪಠತಿ । ("ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್") । ನಾಡೀರಶ್ಮಿಸಮನ್ವಿತೇನ, ಅರ್ಚಿರಾದಿಪರ್ವಣಾ ದೇವಯಾನೇನ ಪಥಾ ಯೇ ಬ್ರಹ್ಮಲೋಕಂ ಶಾಸ್ತ್ರೋಕ್ತವಿಶೇಷಣಂ ಗಚ್ಛನ್ತಿ ಯಸ್ಮಿನ್ ಅರಶ್ಚ ಹ ವೈ ಣ್ಯಶ್ಚ ಅರ್ಣವೌ ಬ್ರಹ್ಮಲೋಕೇ ತೃತೀಯಸ್ಯಾಮ್ ಇತೋ ದಿವಿ, ಯಸ್ಮಿನ್ ಐರಂ ಮದೀಯಂ ಸರಃ, ಯಸ್ಮಿನ್ ಅಶ್ವತ್ಥಃ ಸೋಮಸವನಃ, ಯಸ್ಮಿನ್ ಅಪರಾಜಿತಾ ಪೂರ್ಬ್ರಹ್ಮಣಃ, ಯಸ್ಮಿಂಶ್ಚ ಪ್ರಭುವಿಮಿತಂ ಹಿರಣ್ಮಯಂ ವೇಶ್ಮ, ಯಶ್ಚ ಅನೇಕಧಾ ಮನ್ತ್ರಾರ್ಥವಾದಾದಿಪ್ರದೇಶೇಷು ಪ್ರಪಞ್ಚ್ಯತೇ ತೇ ತಂ ಪ್ರಾಪ್ಯ ನ ಚನ್ದ್ರಲೋಕಾದಿವ ಭುಕ್ತಭೋಗಾ ಆವರ್ತನ್ತೇ । ಕುತಃ ? "ತಯೋರ್ಧ್ವಮಾಯನ್ನಮೃತತ್ವಮೇತಿ" (ಛಾಂ. ೮-೬-೬), "ತೇಷಾಂ ನ ಪುನರಾವೃತ್ತಿಃ" (ಬೃ. ೬-೨-೧೫), "ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತನ್ತೇ" (ಛಾಂ.೪-೧೫-೬), "ಬ್ರಹ್ಮಲೋಕಮಭಿಸಂಪದ್ಯತೇ" (ಛಾಂ. ೮-೧೫-೧), "ನ ಚ ಪುನರಾವರ್ತತೇ" (ಛಾಂ.೮-೧೫-೧) ಇತ್ಯಾದಿಶಬ್ದೇಭ್ಯಃ । ಅನ್ತವತ್ತ್ವೇಽಪಿ ತು ಐಶ್ವರ್ಯಸ್ಯ ಯಥಾ ಅನಾವೃತ್ತಿಃ ತಥಾ ವರ್ಣಿತಮ್ "ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮ್" (೪-೩-೧೦) ಇತ್ಯತ್ರ । ಸಮ್ಯಗ್ದರ್ಶನವಿಧ್ವಸ್ತತಮಸಾಂ ತು ನಿತ್ಯಸಿದ್ಧನಿರ್ವಾಣಪರಾಯಣಾನಾಂ ಸಿದ್ಧೈವ ಅನಾವೃತ್ತಿಃ । ತದಾಶ್ರಯಣೇನೈವ ಹಿ ಸಗುಣಶರಣಾನಾಮಪಿ ಅನಾವೃತ್ತಿಸಿದ್ಧಿರಿತಿ । "ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್" ಇತಿ ಸೂತ್ರಾಭ್ಯಾಸಃ ಶಾಸ್ತ್ರಪರಿಸಮಾಪ್ತಿಂ ದ್ಯೋತಯತಿ ॥

(ಭಾಷ್ಯಾರ್ಥ)

(ಆಕ್ಷೇಪ):- ಹೀಗಾದರೆ (ತನಗಿಂತ) ಮಿಗಿಲುಳ್ಳದ್ದಾದ್ದರಿಂದ (ಅವರ ಈ) ಐಶ್ವರ್ಯಕ್ಕೆ ಕೊನೆಯಿರಬೇಕಾಗುವದಲ್ಲ! ಆದ್ದರಿಂದ ಈ (ಮುಕ್ತ)ರಿಗೆ (ಸಂಸಾರಕ್ಕೆ) ಹಿಂತಿರುಗಿ ಬರುವದೂ ಪ್ರಸಕ್ತವಾಗುವದಲ್ಲ!

(ಪರಿಹಾರ) :- ಇದಕ್ಕೆ ಉತ್ತರವನ್ನು ಭಗವಂತರಾದ ಬಾದರಾಯಣಾಚಾರ್ಯರು ಹೇಳುತ್ತಾರೆ. (ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್) ಯಾರು ನಾಡೀರಶ್ಮಿಗಳಿಂದೊಡಗೂಡಿದ ಅರ್ಚಿರಾದಿಪರ್ವಗಳುಳ್ಳ ಬ್ರಹ್ಮ

ಲೋಕಕ್ಕೆ ಹೋಗುವರೋ (ಇದರ ವಿವರ): ಯಾವ ಬ್ರಹ್ಮಲೋಕದಲ್ಲಿ, ಇಲ್ಲಿಂದ ಮೂರನೆಯದಾದ[1] ದ್ಯುಲೋಕದಲ್ಲಿ, ಅರ, ಮತ್ತು ಣ್ಯ– ಎಂಬ (ಎರಡು) ಸಮುದ್ರಗಳಿರುವವೋ, ಯಾವದರಲ್ಲಿ, ಐರಂಮದೀಯವೆಂಬ[2] ಸರೋವರವಿರುವದೋ, ಯಾವದರಲ್ಲಿ ಸೋಮವನ್ನು ಸುರಿಸುತ್ತಿರುವ[3] ಅಶ್ವತ್ಥವಿರುವದೋ ಯಾವದರಲ್ಲಿ ಬ್ರಹ್ಮ ಅಪರಾಜಿತವೆಂಬ[4] ಪುರವಿರುವದೋ, ಮತ್ತು ಯಾವದರಲ್ಲಿ ಪ್ರಭುನಿರ್ಮಿತವಾದ ಹಿರಣ್ಮಯವಾದ ಭವನವಿರುವದೋ (ಛಾಂ. ೮–೬–೩), ಮತ್ತು ಯಾವದು ಮಂತ್ರಗಳು, ಅರ್ಥವಾದಗಳು– ಮುಂತಾದ ಕಡೆಗಳಲ್ಲಿ ಅನೇಕ ಪ್ರಕಾರವಾಗಿ ವಿವರವಾಗಿ ವರ್ಣಿಸಿದೆಯೋ ಅದನ್ನು ಅವರು ಪಡೆದಬಳಿಕ ಚಂದ್ರಲೋಕದಿಂದ (ಮರಳಿಬರುವಂತೆ) ಭೋಗಗಳನ್ನು ಅನುಭವಿಸಿ ಮರಳಿ (ಸಂಸಾರಕ್ಕೆ) ಬರುವದಿಲ್ಲ. ಏಕೆ? ಎಂದರೆ "ಅ (ನಾಡಿ)ಯಿಂದ ಮೇಲಕ್ಕೆ ಹೋದವನು ಅಮೃತತ್ವವನ್ನು ಹೊಂದುತ್ತಾನೆ" (ಛಾಂ. ೮–೬–೬) "ಅವನಿಗೆ ಮತ್ತೆ ಆವೃತ್ತಿಯಿಲ್ಲ" (ಬೃ. ೬–೨–೧೫), "ಈ (ಮಾರ್ಗದಿಂದ ಬ್ರಹ್ಮಲೋಕವನ್ನು) ಪಡೆದವರು ಈ ಮಾನವ(ಲೋಕಕ್ಕೆ) ಮರಳಿಬರುವದಿಲ್ಲ" (ಛಾಂ. ೪–೧೫–೬), "ಬ್ರಹ್ಮಲೋಕವನ್ನು ಪಡೆಯುತ್ತಾನೆ, ಮತ್ತೆ ಹಿಂತಿರುಗುವದಿಲ್ಲ" (ಛಾಂ. ೮–೧೫–೧) ಮುಂತಾದ ಶಬ್ದ(ಪ್ರಮಾಣ)ಗಳಿರುವದರಿಂದ ಐಶ್ವರ್ಯವು ಕೊನೆಯುಳ್ಳದ್ದಾದರೂ ಆವೃತ್ತಿಯಿಲ್ಲವೆಂಬುದು ಹೇಗೆಂಬುದನ್ನು "ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮ್" (೪–೩–೧೦) ಎಂಬಲ್ಲಿ ತಿಳಿಸಿಕೊಟ್ಟಿದೆ.

**ಸಮ್ಯಗ್ದರ್ಶನದಿಂದ ಅಜ್ಞಾನವನ್ನು ಕಳೆದುಕೊಂಡು ನಿತ್ಯಸಿದ್ಧವಾದ ನಿರ್ವಾಣವೇ ಪರಾಯಣವಾಗಿರುವ[5] (ಜ್ಞಾನಿಗಳಿ)ಗಾದರೊ ಅನಾವೃತ್ತಿಯು (ತಾನೇ) ಸಿದ್ಧವಾಗಿರುತ್ತದೆ.[6] ಏಕೆಂದರೆ ಅದನ್ನಾಶ್ರಯಿಸಿಕೊಂಡೇ ಸಗುಣಶರಣರಿಗೂ ಅನಾವೃತ್ತಿಯು ಸಿದ್ಧವಾಗ**

---

1. ಭೂಮ್ಯಂತರಿಕ್ಷಗಳಿಂದಾಚೆಗೆ ಇರುವ.

2. ಮದಕರವಾದ ಅನ್ನರಸದಿಂದ ಕೂಡಿರುವ.

3. ಅಮೃತವನ್ನು ಸ್ರವಿಸುತ್ತಿರುವ.

4. ಯಾರಿಗೂ ವಶವಾಗದ್ದೆಂಬ ಹೆಸರಿನ.

5. ಅದೇ ಪ್ರಾಪ್ಯಸ್ಥಾನವಾಗಿರುವ.

6. ನಿತ್ಯಪ್ರಾಪ್ತವಾಗಿರುವ ಮುಕ್ತಿಯನ್ನು ಜ್ಞಾನದಿಂದ ಪಡೆದುಕೊಂಡವರಿಗೆ ಮರಳಿ ಸಂಸಾರಕ್ಕೆಬರುವ ಶಂಕೆಯೇ ಇಲ್ಲವಷ್ಟೆ ಎಂದು ಭಾವ.

**ಬೇಕಾಗಿರುತ್ತದೆ.**[1] 'ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್' ಎಂದು ಸೂತ್ರವನ್ನು ಮತ್ತೆ ಹೇಳಿರುವದು (ಈ) ಶಾಸ್ತ್ರವು ಮುಗಿಯಿತೆಂಬುದನ್ನು ತಿಳಿಸುತ್ತದೆ.

ಇತಿ ಶ್ರೀಗೋವಿನ್ದಭಗವತ್ಪೂಜ್ಯಪಾದ ಶಿಷ್ಯ
ಶಂಕರಭಗವತ್ಪಾದಕೃತೌ ಶಾರೀರಕಮೀಮಾಂಸಾಭಾಷ್ಯೇ
ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ
ಸಮಾಪ್ತಃ



1. ಬ್ರಹ್ಮಲೋಕವಿರುವವರೆಗೆ ಬ್ರಹ್ಮಲೋಕದಲ್ಲಿರುತ್ತಾರೆ. ಆ ಲೋಕವು ಪ್ರಲಯವಾದ ಮೇಲೆ ಅಜ್ಞರು ಹಿಂತಿರುಗುತ್ತಾರೆ, ಜ್ಞಾನವನ್ನು ಪಡೆದುಕೊಂಡವರುಮಾತ್ರ ಮುಕ್ತರಾಗುತ್ತಾರೆ ಎಂದು ಛಾಂ. ೮-೧೫-೧, ೫-೯-೨, ಬೃ. ೬-೨-೧೫- ಇವುಗಳ ಭಾಷ್ಯದಲ್ಲಿ ಬರೆದಿರುವದನ್ನು ಇಲ್ಲಿ ನೆನಪಿಡಬೇಕು.

# ಅಧಿಕರಣಗಳ ಸಾರ

ಈ ಪಾದದಲ್ಲಿ ಮುಕ್ತರ ಸ್ವರೂಪವ್ಯವಹಾರಗಳನ್ನು ಕುರಿತು ವಿಚಾರ ಮಾಡಲಾಗಿದೆ.

## ೧. ಸಂಪದ್ಯಾವಿರ್ಭಾವಾಧಿಕರಣ

**ಸಂಶಯ :** ಜೀವನು ಶರೀರಾಭಿಮಾನವನ್ನು ಬಿಟ್ಟು ಪರಮಾತ್ಮನಲ್ಲಿ ನಿಲ್ಲುವಾಗ ತನ್ನ ರೂಪವನ್ನು ಪಡೆದುಕೊಳ್ಳುತ್ತಾನೆ (ಛಾಂ. ೮-೧೨-೩) ಎಂದು ಶ್ರುತಿಯಲ್ಲಿದೆ. ಅಲ್ಲಿ ಆತ್ಮರೂಪದಲ್ಲಿ ಮಾತ್ರವೆ ಇರುತ್ತಾನೊ, ದೇವಾದಿಲೋಕಗಳನ್ನು ಪಡೆದವರಂತೆ ಯಾವದಾದರೂ ವಿಶೇಷರೂಪವನ್ನು ಪಡೆದುಕೊಳ್ಳುತ್ತಾನೊ ?

**ಪೂರ್ವಪಕ್ಷ :** 'ಅಭಿನಿಷ್ಪದ್ಯತೇ' ಎಂಬ ಉತ್ಪತ್ತಿಪರ್ಯಾಯಶಬ್ದವನ್ನು ಪ್ರಯೋಗಿಸಿರುವದರಿಂದಲೂ ಮುಕ್ತಿಯೂ ಫಲವಾದ್ದರಿಂದಲೂ ಇದೊಂದು ವಿಶೇಷ ರೂಪದ ಪ್ರಾಪ್ತಿಯೇ. ಬರಿಯ ಸ್ವರೂಪವೇ ಆಗಿದ್ದರೆ ಅದು ಮೊದಲೇ ಇರುತ್ತದೆ ಯಾದ್ದರಿಂದ ಫಲವೇ ಆಗಲಾರದು.

**ಸಿದ್ಧಾಂತ :** 'ತನ್ನ ರೂಪದಿಂದ ನಿಲ್ಲುತ್ತಾನೆ' ಎಂದಿರುವದರಿಂದ ಇದು ಸ್ವರೂಪವೇ. ಈಗ ಮುಕ್ತನಾಗಿರುತ್ತಾನೆಂಬುದೇ ವಿಶೇಷ. ಹಿಂದೆ ಆಯಾ ಅವಸ್ಥೆಗಳ ಕಲುಷಸಂಬಂಧವೂ ಇದ್ದಂತೆ ಇರುತ್ತದೆಯಾದ್ದರಿಂದ ಮುಕ್ತಿಯನ್ನು ಪಡೆದುಕೊಳ್ಳುತ್ತಾನೆ ಎಂದು ಹೇಳಬಹುದು. ಬಂಧನಿವೃತ್ತಿ ಎಂಬ ಕಾರಣದಿಂದ ಮುಕ್ತಿಯನ್ನು ಫಲವೆನ್ನುವದು, ಹೊಸದಾಗಿ ಉಂಟಾಗುವದೆಂಬ ಕಾರಣದಿಂದಲ್ಲ. 'ಪರಂಜ್ಯೋತಿಯನ್ನು ಸೇರಿ' ಎಂದು ಶ್ರುತಿಯಲ್ಲಿರುವದು ಆತ್ಮನೇ. ಏಕೆಂದರೆ ಇದು ಆತ್ಮನ ಪ್ರಕರಣವಾಗಿರುತ್ತದೆ.

## ೨. ಅವಿಭಾಗೇನದೃಷ್ಟತ್ವಾಧಿಕರಣ

**ಸಂಶಯಪೂರ್ವಪಕ್ಷಗಳು :** ಮುಕ್ತನು ತನ್ನ ರೂಪದಲ್ಲಿರುವನೆಂದರೆ ಪರಮಾತ್ಮನಿಗಿಂತ ಬೇರೆಯಾಗಿರುತ್ತಾನೊ, ಅವನಲ್ಲಿ ಒಂದಾಗಿರುತ್ತಾನೊ ? ಎಂಬ ಸಂಶಯಕ್ಕೆ ಬೇರೆಯಾಗಿರುತ್ತಾನೆಂದೇ ಮೊದಲು ತೋರುತ್ತದೆ. ಏಕೆಂದರೆ 'ಪರಂಜ್ಯೋತಿಯನ್ನು ಸೇರಿ' ಎಂಬ ಕರ್ಮಕರ್ತೃಪ್ರಯೋಗವು ಇದಕ್ಕೆ ಹೊಂದುತ್ತದೆ. ಅಲ್ಲಿ ಸಂಚರಿಸುತ್ತಾನೆ ಎಂದು ಆಧಾರಾಧೇಯಭಾವವನ್ನು ಹೇಳಿರುವದೂ ಇದಕ್ಕೆ ಹೊಂದುಗೆಯಾಗಿದೆ.

**ಸಿದ್ಧಾಂತ :–** ತತ್ತ್ವಮಸಿ ಮುಂತಾದ ಐಕ್ಯವನ್ನು ಹೇಳುವ ಶ್ರುತಿಗಳಿಂದಲೂ ಜ್ಞಾನಕ್ಕನುಗುಣವಾಗಿ ಫಲವಾಗುವದು ನ್ಯಾಯವಾದ್ದರಿಂದಲೂ ಮುಕ್ತನು. ನೀರಿನಲ್ಲಿ ಬೆರೆತ ನೀರಿನಂತೆ ಒಂದಾಗಿರುತ್ತಾನೆಂದು ಶ್ರುತಿ ಹೇಳುವದರಿಂದಲೂ ಪರಮಾತ್ಮನಲ್ಲಿ ಒಂದೇ ಆಗಿರುತ್ತಾನೆನ್ನುವದು ಯುಕ್ತ. ಭೇದವನ್ನು ಹೇಳಿರುವದು ಅಭೇದವನ್ನೇ ಉಪಚಾರಕ್ಕಾಗಿ ಹೇಳಿದ್ದು ಎಂದು ಅವಿರೋಧವನ್ನು ಕಲ್ಪಿಸಿಕೊಳ್ಳಬೇಕು.

# ೩. ಬ್ರಾಹ್ಮಾಧಿಕರಣ

**ಸಂಶಯ :–** ಮುಕ್ತನು ಪಡೆದುಕೊಳ್ಳುವ ರೂಪವು ಯಾವದು ? ಅಪಹತಪಾಪ್ಮತ್ವಾದಿಗುಣಗಳಿಂದ ಕೂಡಿದ್ದೋ, ನಿರ್ವಿಶೇಷವಾದದ್ದೋ ?

**ಪೂರ್ವಪಕ್ಷಗಳು :–** 'ಯ ಆತ್ಮಾಪಹತಪಾಪ್ಮಾ' ಎಂದು ಪ್ರಾರಂಭಿಸಿ 'ಸತ್ಯಕಾಮಃ ಸತ್ಯಸಂಕಲ್ಪಃ' ಎಂದು (ಛಾಂ. ೮–೭–೧) ವರ್ಣಿಸಿರುವದರಿಂದಲೂ ಮುಕ್ತನು ತಿನ್ನುತ್ತಾ ಕುಡಿಯುತ್ತಾ ಕ್ರೀಡಿಸುತ್ತಾ ರಮಿಸುತ್ತಾ ಇರುವನೆಂದು ಶ್ರುತಿ ಹೇಳಿರುವದರಿಂದಲೂ ಸರ್ವಜ್ಞಸರ್ವೇಶ್ವರರೂಪದಿಂದಲೇ ಕೂಡಿರುತ್ತಾನೆಂದು ಜೈಮಿನ್ಯಾಚಾರ್ಯರ ಮತವು. ಅಪಹತಪಾಪ್ಮತ್ವಾದಿಗಳು ಕೇವಲಶಬ್ದವಿಕಲ್ಪದಿಂದಾಗಿರುವ ಗುಣಗಳಾದ್ದರಿಂದಲೂ ಸತ್ಯಕಾಮತ್ವಾದಿಗಳು ಔಪಾಧಿಕವಾಗಿರುವದರಿಂದಲೂ ತಿನ್ನುವದು ಮುಂತಾದವು ಮುಕ್ತನಿಗೆ ಯಾವ ದುಃಖವೂ ಇಲ್ಲವೆಂದು ಸ್ತುತಿಗಾಗಿ ಹೇಳಿದವುಗಳಾದ್ದರಿಂದಲೂ ನಿಷ್ಪ್ರಪಂಚರೂಪದಿಂದಲೇ ಮುಕ್ತನಿರುತ್ತಾನೆ– ಎಂದು ಔಡುಲೋಮ್ಯಾಚಾರ್ಯರ ಮತವು.

**ಸಿದ್ಧಾಂತ :–** ಪಾರಮಾರ್ಥಿಕಚೈತನ್ಯವೇ ಆತ್ಮನ ಸ್ವರೂಪವಾದರೂ ವ್ಯವಹಾರ ದೃಷ್ಟಿಯಿಂದ ಐಶ್ವರರೂಪವೂ ಮುಕ್ತನಿಗೆ ಇರಬಹುದೆಂಬುದು ಬಾದರಾಯಣಾಚಾರ್ಯರ ಮತವು.

# ೪. ಸಂಕಲ್ಪಾಧಿಕರಣ

**ವಿಷಯವೂ ಸಂಶಯವೂ :–** ಹಾರ್ದವಿದ್ಯೆಯಲ್ಲಿ ಮುಕ್ತನಿಗೆ ಸಂಕಲ್ಪಮಾತ್ರದಿಂದ ಪಿತ್ರಾದಿಕಾಮಗಳು ಸಿಕ್ಕುವವು ಎಂದಿದೆಯಷ್ಟೆ. ಅಲ್ಲಿ ಬರಿಯ ಸಂಕಲ್ಪವೊಂದೇ ನಿಮಿತ್ತವೋ, ಇನ್ನುಳಿದ ನಿಮಿತ್ತಗಳೂ ಉಂಟೋ ?

**ಪೂರ್ವಪಕ್ಷ :–** ಸಂಕಲ್ಪದ ಜೊತೆಗೆ ಮಿಕ್ಕ ಗಮನಾದಿಗಳೂ ಬೇಕು. ಹೀಗೆಂದು ಕಲ್ಪಿಸಿದರೆ ಲೋಕಾನುಭವಕ್ಕೆ ಅನುಸಾರವಾಗಿ ಕಲ್ಪಿಸಿದಂತೆ ಆಗುತ್ತದೆ. ಹಾಗಿಲ್ಲದಿದ್ದರೆ ಸಂಕಲ್ಪದಿಂದ ಮಾತ್ರವೇ ಲಭಿಸಿದ್ದು ಚಂಚಲವಾಗಿರುವದರಿಂದ ಸರಿಯಾದ ಭೋಗವನ್ನುಂಟುಮಾಡಲಾರದು.

**ಸಿದ್ಧಾಂತ :–** ಸಂಕಲ್ಪವೊಂದೇ ಹೇತು. ಏಕೆಂದರೆ ಹಾಗೆಂದು ಶ್ರುತಿಯಿದೆ. ಮತ್ತೊಂದು ಕಾರಣವೂ ಇವೆ ಎಂದರೆ ಅದು ಸಿದ್ಧಿಸುವ ಮುಂಚೆ ಸತ್ಯಸಂಕಲ್ಪತ್ವವಿಲ್ಲವೆಂದಾಗುತ್ತದೆ. ಸಂಕಲ್ಪಬಲದಿಂದಲೇ ಉಪಭೋಗವು ಪೂರ್ತಿಯಾಗುವವರೆಗೆ ಸ್ಥಿರವಾಗಿರಬಹುದಾಗಿದೆ. ಆದ್ದರಿಂದಲೇ ಮುಕ್ತರು ಅನನ್ಯಾಧಿಪತಿಗಳಾಗಿರುವರೆಂದು ಶ್ರುತಿಯಲ್ಲಿದೆ.

# ೫. ಅಭಾವಾಧಿಕರಣ

**ಸಂಶಯ :–** ಸಂಕಲ್ಪದಿಂದಲೇ ಸಿದ್ಧಿಯನ್ನು ಪಡೆಯುವ ಮುಕ್ತರಿಗೆ ಶರೀರೇಂದ್ರಿಯಗಳೂ ಉಂಟೋ, ಇಲ್ಲವೋ ?

**ಪೂರ್ವಪಕ್ಷ :–** ಶರೀರೇಂದ್ರಿಯಗಳಿರುವದಿಲ್ಲ. ಏಕೆಂದರೆ ಮನಸ್ಸಿನಿಂದಲೇ ಕಾಮಗಳನ್ನು ಮುಕ್ತರು ಅನುಭವಿಸುತ್ತಾರೆಂದು ಶ್ರುತಿಯಲ್ಲಿದೆ. ಅಥವಾ ಮುಕ್ತರು ಅನೇಕವಿಧವಾಗಿ ಆಗುತ್ತಾರೆಂದು ಶ್ರುತಿಯಲ್ಲಿ ಹೇಳಿದೆಯಾದ್ದರಿಂದ ಮನಸ್ಸಿನಂತೆ ಶರೀರೇಂದ್ರಿಯಗಳೂ ಇರುತ್ತವೆ –ಎನ್ನಬಹುದು.

**ಸಿದ್ಧಾಂತ :** ಹೀಗೆ ಉಭಯಲಿಂಗಶ್ರುತಿಗಳಿರುವದರಿಂದ ಎರಡು ಪಕ್ಷವೂ ಸರಿ. ಮುಕ್ತರು ಸತ್ಯಸಂಕಲ್ಪರಾದ್ದರಿಂದ ಸ್ವಪ್ನದಂತೆ ಶರೀರವಿಲ್ಲದೆಯೂ ಎಚ್ಚರದಂತೆ ಸಶರೀರರಾಗಿಯೂ ಇರಬಹುದು.

# ೬. ಪ್ರದೀಪಾಧಿಕರಣ

**ಸಂಶಯ :–** ಮುಕ್ತರು ಅನೇಕರೂಪರಾಗುವರೆಂದು ಶ್ರುತಿಯಲ್ಲಿದೆಯಷ್ಟೆ. ಆಗ ಎಲ್ಲಾ ಶರೀರಗಳಲ್ಲಿಯೂ ಆತ್ಮರು ಇರುವರೊ, ಇಲ್ಲವೊ ?

**ಪೂರ್ವಪಕ್ಷ :–** ಆತ್ಮ, ಮನಸ್ಸು –ಇವುಗಳು ಬೇರೆಬೇರೆಯಿರಲಾರವಾದ್ದರಿಂದ ಒಂದು ಶರೀರಕ್ಕೆ ಆತ್ಮಮನಸ್ಸುಗಳಿರುವವು ; ಮಿಕ್ಕ ಶರೀರಗಳಿಗೆ ಆತ್ಮವಿರುವದಿಲ್ಲ.

**ಸಿದ್ಧಾಂತ :–** ಪ್ರದೀಪವು ಅನೇಕದೀಪಗಳಾಗುವಂತೆ ಮುಕ್ತನು ಜ್ಞಾನೈಶ್ವರ್ಯ ಸಂಬಂಧದಿಂದ ಎಲ್ಲಾ ಶರೀರಗಳಲ್ಲಿಯೂ ಅನೇಕ ಭಾವವನ್ನು ಹೊಂದಿ ಸೇರಿಕೊಂಡಿರುತ್ತಾನೆ. ಒಂದು ಮನಸ್ಸಿಗೆ ಅನುಗುಣವಾಗಿ ಮಿಕ್ಕ ಮನಸ್ಸುಗಳೂ ಇರುವಂತೆ ಸೃಜಿಸಿಕೊಳ್ಳುತ್ತಾನಾದ್ದರಿಂದ ಮನಸ್ಸು ಬೇರೆಬೇರೆಯಾಗುವದೆಂಬ ದೋಷವಿಲ್ಲ. –ಹೀಗೆ ಮನಸ್ಸು ಬೇರೆಯಾಗುವದರಿಂದ ಉಪಹಿತವಾದ ಆತ್ಮರೂ ಬೇರೆಯಾಗಿರಬಹುದು. ಮುಕ್ತಿಯಲ್ಲಿ ವಿಶೇಷವಿಜ್ಞಾನವಿರುವದಿಲ್ಲವೆಂಬ ಶ್ರುತಿಯು ಸುಷುಪ್ತಿಕೈವಲ್ಯಗಳ ವಿಷಯವಾಗಿರುವದರಿಂದ ಅದಕ್ಕೆ ಈ ಐಶ್ವರ್ಯವರ್ಣನೆಯು ವಿರುದ್ಧವಲ್ಲ. ಸಗುಣವಿದ್ಯೆಯ ವಿಪಾಕದಿಂದ ಈ ಸಗುಣಮುಕ್ತಿಯು ಆಗಿರುವದರಿಂದ ಇದೂ ಸ್ವರ್ಗಾದಿಗಳಂತೆ ಒಂದಾನೊಂದು ಅವಸ್ಥೆಯಾಗಿರುತ್ತದೆಯಾದ್ದರಿಂದ ಇಲ್ಲಿ ಐಶ್ವರ್ಯವಿಶೇಷವಿರುವದರಲ್ಲಿ ಯಾವ ದೋಷವೂ ಇಲ್ಲ.

# ೭. ಜಗದ್ವ್ಯಾಪಾರಾಧಿಕರಣ

**ಸಂಶಯ :** ಸಗುಣವಿದ್ಯೆಯಿಂದ ಈಶ್ವರಸಾಯುಜ್ಯವನ್ನು ಹೊಂದಿದವರ ಐಶ್ವರ್ಯವು ನಿರಂಕುಶವಾಗಿರುವದೊ, ಸಾಂಕುಶವಾಗಿರುವದೊ ?

**ಪೂರ್ವಪಕ್ಷ :** "ಸ್ವಾರಾಜ್ಯವನ್ನು ಪಡೆದುಕೊಳ್ಳುತ್ತಾನೆ" (ತೈ. ೧–೬) ಎಂದು ಮುಂತಾಗಿ ಶ್ರುತಿ ಹೇಳುವದರಿಂದ ಇದು ನಿರಂಕುಶವೇ.

**ಸಿದ್ಧಾಂತ :** ಈಶ್ವರನ ಅಸಾಧಾರಣೈಶ್ವರ್ಯವಾದ ಜಗತ್ಸೃಷ್ಟ್ಯಾದಿವ್ಯಾಪಾರವನ್ನುಳಿದು ಮಿಕ್ಕ ಐಶ್ವರ್ಯವು ಮುಕ್ತರಿಗೆ ಆಗುತ್ತದೆ. ಏಕೆಂದರೆ ಶ್ರುತಿಯು ಪರಮೇಶ್ವರನ ಪ್ರಕರಣದಲ್ಲಿಯೇ ಈ ಸೃಷ್ಟ್ಯಾದಿಗಳನ್ನು ಹೇಳುತ್ತದೆ. ಶ್ರುತಿಯಲ್ಲಿ ಸ್ವಾರಾಜ್ಯಪ್ರಾಪ್ತಿಯೇ ಮುಂತಾದದ್ದನ್ನು ಹೇಳಿರುವದು ಆದಿತ್ಯಾದಿಸ್ಥಾನದಲ್ಲಿರುವ ಪರಮೇಶ್ವರನ ಅಧೀನವಾದ ಸ್ವಾರಾಜ್ಯವನ್ನೇ ಅಲ್ಲಿ ಹೇಳಿದೆ. ನಿತ್ಯಮುಕ್ತವಾದ ಪರಮೇಶ್ವರರೂಪವೂ ಇದೆ ಎಂದು ಶ್ರುತಿಸ್ಮೃತಿಗಳಿಂದ ತಿಳಿದುಬರುತ್ತದೆ. ಆದ್ದರಿಂದ ಸಗುಣನಿರ್ಗುಣರೂಪಗಳಲ್ಲಿ ಹೇಗೆ ಸಗುಣರೂಪವನ್ನು ಮಾತ್ರ ಉಪಾಸಕರು ಪಡೆದುಕೊಳ್ಳುತ್ತಾರೋ ಹಾಗೆಯೇ ಸಾಂಕುಶನಿರಂಕುಶೈಶ್ವರ್ಯಗಳೊಳಗೆ ಸಾಂಕುಶೈಶ್ವರ್ಯವನ್ನೇ ಪಡೆದುಕೊಳ್ಳುತ್ತಾರೆ ಎಂಬುದು ಯುಕ್ತ. ಆದ್ದರಿಂದ ಈಶ್ವರನಿಗೆ ಸಮವಾದ ಭೋಗವು ಮಾತ್ರ ಇವರಿಗೆ ಇರುತ್ತದೆ ಎಂದು ಶ್ರುತಿಯಲ್ಲಿ ಹೇಳಿದೆ. ಆದರೆ ಬ್ರಹ್ಮಲೋಕಕ್ಕೆ ಹೋದಮೇಲೆ ಉಪಾಸಕರಿಗೆ ಜ್ಞಾನದ್ವಾರದಿಂದ ಕ್ರಮಮುಕ್ತಿಯಾಗುವದರಿಂದ ಸಂಸಾರಕ್ಕೆ ಪುನರಾವೃತ್ತಿಮಾತ್ರಯಾಗುವದಿಲ್ಲ. ಜ್ಞಾನದಿಂದ ಮುಕ್ತರಾದವರಿಗೆ ಯಾರಿಗೂ ಪುನರಾವೃತ್ತಿಯಿಲ್ಲವಾದ್ದರಿಂದ ಹೀಗೆಂದು ಒಪ್ಪಬೇಕು.

---

# ಪರಿಶಿಷ್ಟ

## ಬಾದರಾಯಣಕೃತವೇದಾನ್ತಸೂತ್ರಪಾಠಃ

### ಅಥ ಪ್ರಥಮಾಧ್ಯಾಯೇ ಪ್ರಥಮಃ ಪಾದಃ

೧. **ಅಥಾತೋ ಬ್ರಹ್ಮಜಿಜ್ಞಾಸಾ** ೨. **ಜನ್ಮಾದ್ಯಸ್ಯ ಯತಃ** ೩. **ಶಾಸ್ತ್ರಯೋನಿತ್ವಾತ್** ೪. **ತತ್ತು ಸಮನ್ವಯಾತ್** ೫. **ಈಕ್ಷತೇರ್ನಾಶಬ್ದಮ್** ೬. ಗೌಣಶ್ಚೇನ್ನಾತ್ಮಶಬ್ದಾತ್ ೭. ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ೮. ಹೇಯತ್ವಾವಚನಾಚ್ಚ ೯. ಸ್ವಾಪ್ಯಯಾತ್ ೧೦. ಗತಿಸಾಮಾನ್ಯಾತ್ ೧೧. ಶ್ರುತತ್ವಾಚ್ಚ ೧೨. **ಆನನ್ದಮಯೋಽಭ್ಯಾಸಾತ್** ೧೩. ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ೧೪. ತದ್ಧೇತುವ್ಯಪದೇಶಾಚ್ಚ ೧೫. ಮಾನ್ತ್ರವರ್ಣಿಕಮೇವ ಚ ಗೀಯತೇ ೧೬. ನೇತರೋಽನುಪಪತ್ತೇಃ ೧೭. ಭೇದವ್ಯಪದೇಶಾಚ್ಚ ೧೮. ಕಾಮಾಚ್ಚ ನಾನುಮಾನಾಪೇಕ್ಷಾ ೧೯. ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ೨೦. **ಅನ್ತಸ್ತದ್ಧರ್ಮೋಪದೇಶಾತ್** ೨೧. ಭೇದವ್ಯಪದೇಶಾಚ್ಚಾನ್ಯಃ ೨೨. **ಆಕಾಶಸ್ತಲ್ಲಿಙ್ಗಾತ್** ೨೩. **ಅತ ಏವ ಪ್ರಾಣಃ** ೨೪. **ಜ್ಯೋತಿಶ್ಚರಣಾಭಿಧಾನಾತ್** ೨೫. ಛನ್ದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ತಥಾ ಹಿ ದರ್ಶನಮ್ ೨೬. ಭೂತಾದಿವ್ಯಪದೇಶೋಪಪತ್ತೇಶ್ಚೈವಮ್ ೨೭. ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್ ೨೮. **ಪ್ರಾಣಸ್ತಥಾನುಗಮಾತ್** ೨೯. ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬನ್ಧಭೂಮಾಹ್ಯಸ್ಮಿನ್ ೩೦. ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್ ೩೧. ಜೀವಮುಖ್ಯಪ್ರಾಣಲಿಙ್ಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ॥

ಇತಿ ವೇದಾನ್ತಸೂತ್ರಪಾಠೇ ಪ್ರಥಮಾಧ್ಯಾಯೇ ಪ್ರಥಮಃ ಪಾದಃ

### ಅಥ ಪ್ರಥಮಾಧ್ಯಾಯೇ ದ್ವಿತೀಯಃ ಪಾದಃ

೧. **ಸರ್ವತ್ರ ಪ್ರಸಿದ್ಧೋಪದೇಶಾತ್** ೨. ವಿವಕ್ಷಿತಗುಣೋಪಪತ್ತೇಶ್ಚ ೩. ಅನುಪಪತ್ತೇಶ್ಚ ನ ಶಾರೀರಃ ೪. ಕರ್ಮಕರ್ತೃವ್ಯಪದೇಶಾಚ್ಚ ೫. ಶಬ್ದವಿಶೇಷಾತ್ ೬. ಸ್ಮೃತೇಶ್ಚ ೭. ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ೮. ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ೯. **ಅತ್ತಾ ಚರಾಚರಗ್ರಹಣಾತ್**

೧೦. ಪ್ರಕರಣಾಚ್ಚ ೧೧. **ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್** ೧೨. ವಿಶೇಷಣಾಚ್ಚ ೧೩. **ಅನ್ತರ ಉಪಪತ್ತೇಃ** ೧೪. ಸ್ಥಾನಾದಿವ್ಯಪದೇಶಾಚ್ಚ ೧೫. ಸುಖವಿಶಿಷ್ಟಾಭಿಧಾನಾದೇವ ಚ ೧೬. ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ೧೭. ಅನವಸ್ಥಿತೇರಸಂಭವಾಚ್ಚ ನೇತರಃ ೧೮. **ಅನ್ತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್** ೧೯. ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ೨೦. ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ೨೧. **ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ** ೨೨. ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ೨೩. ರೂಪೋಪನ್ಯಾಸಾಚ್ಚ ೨೪. **ವೈಶ್ವಾನರಃ ಸಾಧಾರಣಶಬ್ದವಿಶೇಷಾತ್** ೨೫. ಸ್ಮರ್ಯಮಾಣಮನುಮಾನಂ ಸ್ಯಾದಿತಿ ೨೬. ಶಬ್ದಾದಿಭ್ಯೋಽನ್ತಃಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ ಪುರುಷಮಪಿ* ಚೈನಮಧೀಯತೇ ೨೭. ಅತ ಏವ ನ ದೇವತಾ ಭೂತಂ ಚ ೨೮. ಸಾಕ್ಷಾದಪ್ಯವಿರೋಧಂ ಜೈಮಿನಿಃ ೨೯. ಅಭಿವ್ಯಕ್ತೇರಿತ್ಯಾಶ್ಮರಥ್ಯಃ ೩೦. ಅನುಸ್ಮೃತೇರ್ಬಾದರಿಃ ೩೧. ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ೩೨. ಆಮನನ್ತಿ ಚೈನಮಸ್ಮಿನ್ ॥

ಇತಿ ವೇದಾನ್ತಸೂತ್ರಪಾಠೇ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ

## ಅಥ ಪ್ರಥಮಾಧ್ಯಾಯೇ ತೃತೀಯಃ ಪಾದಃ

೧. **ದ್ಯುಭ್ವಾದ್ಯಾಯತನಂ ಸ್ವಶಬ್ದಾತ್** ೨. ಮುಕ್ತೋಪಸೃಪ್ಯವ್ಯಪದೇಶಾತ್ ೩. ನಾನುಮಾನಮತಚ್ಛಬ್ದಾತ್ ೪. ಪ್ರಾಣಭೃಚ್ಚ ೫. ಭೇದವ್ಯಪದೇಶಾತ್ ೬. ಪ್ರಕರಣಾತ್ ೭. ಸ್ಥಿತ್ಯದನಾಭ್ಯಾಂ ಚ ೮. **ಭೂಮಾ ಸಂಪ್ರಸಾದಧ್ಯುಪದೇಶಾತ್** ೯. ಧರ್ಮೋಪಪತ್ತೇಶ್ಚ ೧೦. **ಅಕ್ಷರಮಮ್ಬರಾನ್ತಧೃತೇಃ** ೧೧. ಸಾ ಚ ಪ್ರಶಾಸನಾತ್ ೧೨. ಅನ್ಯಭಾವವ್ಯಾವೃತ್ತೇಶ್ಚ ೧೩. **ಈಕ್ಷತಿಕರ್ಮವ್ಯಪದೇಶಾತ್ ಸಃ** ೧೪. **ದಹರ ಉತ್ತರೇಭ್ಯಃ** ೧೫. ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಙ್ಗಂ ಚ ೧೬. ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ೧೭. ಪ್ರಸಿದ್ಧೇಶ್ಚ ೧೮. ಇತರಪರಾಮರ್ಶಾತ್ ಸ ಇತಿ ಚೇನ್ನಾಸಂಭವಾತ್ ೧೯. ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ೨೦. ಅನ್ಯಾರ್ಥಶ್ಚ ಪರಾಮರ್ಶಃ ೨೧. ಅಲ್ಪಶ್ರುತೇರಿತಿ ಚೇತ್ತದುಕ್ತಮ್ ೨೨. **ಅನುಕೃತೇಸ್ತಸ್ಯ ಚ** ೨೩. ಅಪಿ ಚ ಸ್ಮರ್ಯತೇ ೨೪. **ಶಬ್ದಾದೇವ ಪ್ರಮಿತಃ** ೨೫. ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರ

---

* ಪುರುಷವಿಧಮಪಿ ಪಾ॥

ತ್ವಾತ್ ೨೬. **ತದುಪರ್ಯಪಿ ಬಾದರಾಯಣಃ ಸಂಭವಾತ್** ೨೭. ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್ ೨೮. ಶಬ್ದ ಇತಿ ಚೇನ್ನಾತಃ ಪ್ರಭವಾತ್ಪ್ರತ್ಯಕ್ಷಾನುಮಾನಾಭ್ಯಾಮ್ ೨೯ ಅತ ಏವ ಚ ನಿತ್ಯತ್ವಮ್ ೩೦. ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ೩೧. ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ೩೨. ಜ್ಯೋತಿಷಿ ಭಾವಾಚ್ಚ ೩೩. ಭಾವಂ ತು ಬಾದರಾಯಣೋಽಸ್ತಿ ಹಿ ೩೪. **ಶುಗಸ್ಯ ತದನಾದರಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ** ೩೫. ಕ್ಷತ್ರಿಯತ್ವಗತೇಶ್ಚೋತ್ತರತ್ರ ಚೈತ್ರರಥೇನ ಲಿಙ್ಗಾತ್ ೩೬. ಸಂಸ್ಕಾರಪರಾಮರ್ಶಾತ್ತದಭಾವಾಭಿಲಾಪಾಚ್ಚ ೩೭. ತದಭಾವನಿರ್ಧಾರಣೇ ಚ ಪ್ರವೃತ್ತೇಃ ೩೮. ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ ೩೯. ಕಮ್ಪನಾತ್ ೪೦. **ಜ್ಯೋತಿರ್ದರ್ಶನಾತ್** ೪೧. **ಆಕಾಶೋಽರ್ಥಾನ್ತರತ್ವಾದಿವ್ಯಪದೇಶಾತ್** ೪೨. **ಸುಷುಪ್ತ್ಯುತ್ಕ್ರಾನ್ತ್ಯೋರ್ಭೇದೇನ** ೪೩. ಪತ್ಯಾದಿಶಬ್ದೇಭ್ಯಃ ॥

ಇತಿ ವೇದಾನ್ತಸೂತ್ರಪಾಠೇ ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ

## ಅಥ ಪ್ರಥಮಾಧ್ಯಾಯೇ ಚತುರ್ಥಃ ಪಾದಃ

೧. **ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ** ೨. ಸೂಕ್ಷ್ಮಂ ತು ತದರ್ಹತ್ವಾತ್ ೩. ತದಧೀನತ್ವಾದರ್ಥವತ್ ೪. ಜ್ಞೇಯತ್ವಾವಚನಾಚ್ಚ ೫. ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್ ೬. ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ ೭. ಮಹದ್ವಚ್ಚ ೮. **ಚಮಸವದವಿಶೇಷಾತ್** ೯. ಜ್ಯೋತಿರುಪಕ್ರಮಾ ತು ತಥಾ ಹ್ಯಧೀಯತ ಏಕೇ ೧೦. ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ೧೧. **ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ** ೧೨. ಪ್ರಾಣಾದಯೋ ವಾಕ್ಯಶೇಷಾತ್ ೧೩. ಜ್ಯೋತಿಷೈಕೇಷಾಮಸತ್ಯನ್ನೇ ೧೪. **ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ** ೧೫. ಸಮಾಕರ್ಷಾತ್ ೧೬. **ಜಗದ್ವಾಚಿತ್ವಾತ್** ೧೭. ಜೀವಮುಖ್ಯಪ್ರಾಣಲಿಙ್ಗಾನ್ನೇತಿ ಚೇತ್ತದ್ವ್ಯಾಖ್ಯಾತಮ್ ೧೮. ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ ೧೯. ವಾಕ್ಯಾನ್ವಯಾತ್ ೨೦. ಪ್ರತಿಜ್ಞಾಸಿದ್ಧೇರ್ಲಿಙ್ಗಮಾಶ್ಮರಥ್ಯಃ ೨೧. ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ ೨೨. ಅವಸ್ಥಿತೇರಿತಿ ಕಾಶಕೃತ್ಸ್ನಃ ೨೩. **ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್**

೨೪. ಅಭಿಧ್ಯೋಪದೇಶಾಚ್ಚ  ೨೫. ಸಾಕ್ಷಾಚ್ಚೋಭಯಾಮ್ನಾನಾತ್  ೨೬. ಆತ್ಮಕೃತೇಃ ಪರಿಣಾಮಾತ್[1]  ೨೭. ಯೋನಿಶ್ಚ ಹಿ ಗೀಯತೇ  ೨೮. **ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ** ||

**ಇತಿ ವೇದಾನ್ತಸೂತ್ರಪಾಠೇ ಪ್ರಥಮಾಧ್ಯಾಯಸ್ಯ ಚತುರ್ಥಃ ಪಾದಃ**

**ಇತಿ ಪ್ರಥಮೋಽಧ್ಯಾಯಃ**

## ಅಥ ದ್ವಿತೀಯಾಧ್ಯಾಯೇ ಪ್ರಥಮಃ ಪಾದಃ

೧ **ಸ್ಮೃತ್ಯನವಕಾಶದೋಷಪ್ರಸಙ್ಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಙ್ಗಾತ್**  ೨. ಇತರೇಷಾಂ ಚಾನುಪಲಬ್ಧೇಃ  ೩. **ಏತೇನ ಯೋಗಃ ಪ್ರತ್ಯುಕ್ತಃ**  ೪. **ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್**  ೫. ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್  ೬. ದೃಶ್ಯತೇ ತು  ೭. ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್  ೮ ಅಪೀತೌ ತದ್ವತ್ಪ್ರಸಙ್ಗಾದಸಮಞ್ಜಸಮ್  ೯. ನ ತು ದೃಷ್ಟಾನ್ತಭಾವಾತ್  ೧೦. ಸ್ವಪಕ್ಷದೋಷಾಚ್ಚ  ೧೧. ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯವಿಮೋಕ್ಷಪ್ರಸಙ್ಗಃ  ೧೨. **ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ**  ೧೩. ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್  ೧೪. **ತದನನ್ಯತ್ವಮಾರಮ್ಭಣಶಬ್ದಾದಿಭ್ಯಃ**  ೧೫. ಭಾವೇ ಚೋಪಲಬ್ಧೇಃ[2]  ೧೬. ಸತ್ತ್ವಾಚ್ಚಾವರಸ್ಯ  ೧೭. ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾನ್ತರೇಣ ವಾಕ್ಯಶೇಷಾತ್  ೧೮. ಯುಕ್ತೇಃ ಶಬ್ದಾನ್ತರಾಚ್ಚ  ೧೯. ಪಟವಚ್ಚ  ೨೦. ಯಥಾ ಚ ಪ್ರಾಣಾದಿ  ೨೧. **ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ**  ೨೨. ಅಧಿಕಂ ತು ಭೇದನಿರ್ದೇಶಾತ್  ೨೩. ಅಶ್ಮಾದಿವಚ್ಚ ತದನುಪಪತ್ತಿಃ  ೨೪. **ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ**  ೨೫. ದೇವಾದಿವದಪಿ ಲೋಕೇ  ೨೬. **ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ**  ೨೭. ಶ್ರುತೇಸ್ತು ಶಬ್ದಮೂಲತ್ವಾತ್  ೨೮. ಆತ್ಮನಿ ಚೈವಂ ವಿಚಿತ್ರಾಶ್ಚ ಹಿ  ೨೯. ಸ್ವಪಕ್ಷದೋಷಾಚ್ಚ  ೩೦. **ಸರ್ವೋಪೇತಾ ಚ ತದ್ದರ್ಶನಾತ್**  ೩೧. ವಿಕರಣತ್ವಾನ್ನೇತಿ ಚೇತ್ ತದುಕ್ತಮ್  ೩೨. **ನ ಪ್ರಯೋಜನವತ್ತ್ವಾತ್**  ೩೩. ಲೋಕವತ್ತು ಲೀಲಾಕೈವಲ್ಯಮ್  ೩೪. **ವೈಷಮ್ಯ**

1. ಇಲ್ಲಿ 'ಪರಿಣಾಮಾತ್' ಎಂಬುದಿಷ್ಟೇ ಬೇರೊಂದು ಸೂತ್ರವೆಂಬ ಮತವನ್ನೂ ಆಚಾರ್ಯರು ಸೂಚಿಸಿರುತ್ತಾರೆ.

2. 'ಭಾವಾಚ್ಚೋಪಲಬ್ಧೇಃ' ಪಾ||

ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ ೩೫. ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್ ೨೬. ಉಪಪದ್ಯತೇ ಚಾಪ್ಯುಪಲಭ್ಯತೇ ಚ ೨೭. ಸರ್ವಧರ್ಮೋಪಪತ್ತೇಶ್ಚ ||

ಇತಿ ವೇದಾನ್ತಸೂತ್ರಪಾಠೇ ದ್ವಿತೀಯಾಧ್ಯಾಯಸ್ಯ ಪ್ರಥಮಃ ಪಾದಃ

## ಅಥ ದ್ವಿತೀಯಾಧ್ಯಾಯೇ ದ್ವಿತೀಯಃ ಪಾದಃ

೧. ರಚನಾನುಪಪತ್ತೇಶ್ಚ ನಾನುಮಾನಮ್ ೨. ಪ್ರವೃತ್ತೇಶ್ಚ ೩. ಪಯೋಽಮ್ಬುವಚ್ಚೇತ್ ತತ್ರಾಪಿ ೪. ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್ ೫. ಅನ್ಯತ್ರಾಭಾವಾಚ್ಚ ನ ತೃಣಾದಿವತ್ ೬. ಅಭ್ಯುಪಗಮೇಽಪ್ಯರ್ಥಾಭಾವಾತ್ ೭. ಪುರುಷಾಶ್ಮವದಿತಿ ಚೇತ್ ತಥಾಪಿ ೮. ಅಙ್ಗಿತ್ವಾನುಪಪತ್ತೇಶ್ಚ ೯. ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್ ೧೦. ವಿಪ್ರತಿಷೇಧಾಚ್ಚಾಸಮಞ್ಜಸಮ್ ೧೧. ಮಹದ್ದೀರ್ಘವದ್ವಾ ಹ್ರಸ್ವಪರಿಮಣ್ಡಲಾಭ್ಯಾಮ್ ೧೨. ಉಭಯಥಾಪಿ ಚ ನ ಕರ್ಮಾತಸ್ತದಭಾವಃ ೧೩. ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ೧೪. ನಿತ್ಯಮೇವ ಚ ಭಾವಾತ್ ೧೫. ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್ ೧೬. ಉಭಯಥಾ ಚ ದೋಷಾತ್ ೧೭. ಅಪರಿಗ್ರಹಾಚ್ಚಾತ್ಯನ್ತಮನಪೇಕ್ಷಾ ೧೮. ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ ೧೯. ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್ ೨೦. ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ೨೧. ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ೨೨. ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ೨೩. ಉಭಯಥಾ ಚ ದೋಷಾತ್ ೨೪. ಆಕಾಶೇ ಚಾವಿಶೇಷಾತ್ ೨೫. ಅನುಸ್ಮೃತೇಶ್ಚ ೨೬. ನಾಸತೋಽದೃಷ್ಟತ್ವಾತ್ ೨೭. ಉದಾಸೀನಾನಾಮಪಿ ಚೈವಂ ಸಿದ್ಧಿಃ ೨೮. ನಾಭಾವ ಉಪಲಬ್ಧೇಃ ೨೯. ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ೩೦. ನ ಭಾವೋಽನುಪಲಬ್ಧೇಃ ೩೧ ಕ್ಷಣಿಕತ್ವಾಚ್ಚ ೩೨. ಸರ್ವಥಾನುಪಪತ್ತೇಶ್ಚ ೩೩. ನೈಕಸ್ಮಿನ್ನಸಂಭವಾತ್ ೩೪. ಏವಂ ಚಾತ್ಮಾಕಾರ್ತ್ಸ್ನ್ಯಮ್ ೩೫. ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ೩೬. ಅನ್ತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಃ ೩೭. ಪತ್ಯುರಸಾಮಞ್ಜಸ್ಯಾತ್ ೩೮. ಸಂಬನ್ಧಾನುಪಪತ್ತೇಶ್ಚ ೩೯. ಅಧಿಷ್ಠಾನಾನುಪಪತ್ತೇಶ್ಚ ೪೦. ಕರಣವಚ್ಚೇನ್ನ ಭೋಗಾದಿಭ್ಯಃ ೪೧. ಅನ್ತವತ್ತ್ವಮಸರ್ವಜ್ಞತಾ ವಾ ೪೨. ಉತ್ಪತ್ತ್ಯಸಂಭವಾತ್ ೪೩. ನ ಚ ಕರ್ತುಃ ಕರಣಮ್

೪೪. ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ ೪೫. ವಿಪ್ರತಿಷೇಧಾಚ್ಚ ॥

ಇತಿ ವೇದಾನ್ತಸೂತ್ರಪಾಠೇ ದ್ವಿತೀಯಾಧ್ಯಾಯಸ್ಯ ದ್ವಿತೀಯಃ ಪಾದಃ

## ಅಥ ದ್ವಿತೀಯಾಧ್ಯಾಯೇ ತೃತೀಯಃ ಪಾದಃ

೧. ನ ವಿಯದಶ್ರುತೇಃ ೨. ಅಸ್ತಿ ತು ೩. ಗೌಣ್ಯಸಂಭವಾತ್ ೪. ಶಬ್ದಾಚ್ಚ ೫. ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್ ೬. ಪ್ರತಿಜ್ಞಾಹಾನಿರವ್ಯತಿರೇಕಾಚ್ಛಬ್ದೇಭ್ಯಃ ೭. ಯಾವದ್ವಿಕಾರಂ ತು ವಿಭಾಗೋ ಲೋಕವತ್ ೮. **ಏತೇನ ಮಾತರಿಶ್ವಾ ವ್ಯಾಖ್ಯಾತಃ ೯. ಅಸಂಭವಸ್ತು ಸತೋಽನುಪಪತ್ತೇಃ ೧೦. ತೇಜೋಽತಸ್ತಥಾ ಹ್ಯಾಹ ೧೧. ಆಪಃ ೧೨. ಪೃಥಿವ್ಯಧಿಕಾರರೂಪಶಬ್ದಾನ್ತರೇಭ್ಯಃ** ೧೩. ತದಭಿಧ್ಯಾನಾದೇವ ತು ತಲ್ಲಿಙ್ಗಾತ್ ಸಃ ೧೪. **ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ ೧೫. ಅನ್ತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಙ್ಗಾದಿತಿ ಚೇನ್ನಾವಿಶೇಷಾತ್ ೧೬. ಚರಾಚರವ್ಯಪಾಶ್ರಯಸ್ತು ಸ್ಯಾತ್ ತದ್ವ್ಯಪದೇಶೋ ಭಾಕ್ತಸ್ತದ್ಭಾವಭಾವಿತ್ವಾತ್ ೧೭. ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ೧೮ ಜ್ಞೋಽತ ಏವ ೧೯ ಉತ್ಕ್ರಾನ್ತಿಗತ್ಯಾಗತೀನಾಮ್** ೨೦ ಸ್ವಾತ್ಮನಾ ಚೋತ್ತರಯೋಃ ೨೧. ನಾಣುರತಚ್ಛ್ರುತೇರಿತಿ ಚೇನ್ನೇತರಾಧಿಕಾರಾತ್ ೨೨. ಸ್ವಶಬ್ದೋನ್ಮಾನಾಭ್ಯಾಂ ಚ ೨೩. ಅವಿರೋಧಶ್ಚನ್ದನವತ್ ೨೪. ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ ಹೃದಿ ಹಿ ೨೫. ಗುಣಾದ್ವಾ ಲೋಕವತ್ ೨೬. ವ್ಯತಿರೇಕೋ ಗನ್ಧವತ್ ೨೭. ತಥಾ ಚ ದರ್ಶಯತಿ ೨೮. ಪೃಥಗುಪದೇಶಾತ್ ೨೯. ತದ್ಗುಣಸಾರತ್ವಾತ್ ತು ತದ್ವ್ಯಪದೇಶಃ ಪ್ರಾಜ್ಞವತ್ ೩೦. ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ೩೧. ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ೩೨. ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಙ್ಗೋಽನ್ಯತರನಿಯಮೋ ವಾನ್ಯಥಾ ೩೩. **ಕರ್ತಾ ಶಾಸ್ತ್ರಾರ್ಥವತ್ತ್ವಾತ್** ೩೪. ವಿಹಾರೋಪದೇಶಾತ್ ೩೫. ಉಪಾದಾನಾತ್ ೩೬. ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ ೩೭. ಉಪಲಬ್ಧಿವದನಿಯಮಃ ೩೮. ಶಕ್ತಿವಿಪರ್ಯಯಾತ್ ೩೯. ಸಮಾಧ್ಯಭಾವಾಚ್ಚ ೪೦. **ಯಥಾ ಚ ತಕ್ಷೋಭಯಥಾ** ೪೧. **ಪರಾತ್ತು ತಚ್ಛ್ರುತೇಃ** ೪೨. ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ ೪೩. **ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇ** ೪೪. ಮನ್ತ್ರವರ್ಣಾಚ್ಚ ೪೫. ಅಪಿ ಚ ಸ್ಮರ್ಯತೇ ೪೬. ಪ್ರಕಾಶಾದಿವನ್ನೈವಂ ಪರಃ ೪೭. ಸ್ಮರನ್ತಿ ಚ ೪೮. ಅನುಜ್ಞಾಪರಿಹಾರೌ ದೇಹ

ಷಂಬನ್ಧಾಜ್ಜ್ಯೋತಿರಾದಿವತ್ ೪೯. ಅಸನ್ತತೇಶ್ಚಾವ್ಯತಿಕರಃ ೫೦. ಆಭಾಸ ಏವ ಚ ೫೧. ಅದೃಷ್ಟಾನಿಯಮಾತ್ ೫೨. ಅಭಿಸನ್ಧ್ಯಾದಿಷ್ವಪಿ ಚೈವಮ್ ೫೩. ಪ್ರದೇಶಾದಿತಿ ಚೇನ್ನಾನ್ತರ್ಭಾವಾತ್ ॥

ಇತಿ ವೇದಾನ್ತಸೂತ್ರಪಾಠೇ ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ

## ಅಥ ದ್ವಿತೀಯಾಧ್ಯಾಯೇ ಚತುರ್ಥಃ ಪಾದಃ

೧. **ತಥಾ ಪ್ರಾಣಾಃ** ೨. ಗೌಣ್ಯಸಂಭವಾತ್ ೩. ತತ್ಪ್ರಾಕ್ಶ್ರುತೇಶ್ಚ ೪. ತತ್ಪೂರ್ವಕತ್ವಾದ್ ವಾಚಃ ೫. **ಸಪ್ತ ಗತೇರ್ವಿಶೇಷಿತತ್ವಾಚ್ಚ** ೬. ಹಸ್ತಾದಯಸ್ತು ಸ್ಥಿತೇಽತೋ ನೈವಮ್ ೭. **ಅಣವಶ್ಚ** ೮. **ಶ್ರೇಷ್ಠಶ್ಚ** ೯. **ನ ವಾಯುಕ್ರಿಯೇ ಪೃಥಗುಪದೇಶಾತ್** ೧೦. ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ೧೧. ಅಕರಣತ್ವಾಚ್ಚ ನ ದೋಷಸ್ತಥಾ ಹಿ ದರ್ಶಯತಿ ೧೨. ಪಞ್ಚವೃತ್ತಿರ್ಮನೋವದ್ ವ್ಯಪದಿಶ್ಯತೇ ೧೩. ಅಣುಶ್ಚ ೧೪. **ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್** ೧೫. ಪ್ರಾಣವತಾ ಶಬ್ದಾತ್ ೧೬. ತಸ್ಯ ಚ ನಿತ್ಯತ್ವಾತ್ ೧೭. **ತ ಇನ್ದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್** ೧೮. ಭೇದಶ್ರುತೇಃ ೧೯. ವೈಲಕ್ಷಣ್ಯಾಚ್ಚ ೨೦. **ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್** ೨೧. ಮಾಂಸಾದಿ ಭೌಮಂ ಯಥಾಶಬ್ದಮಿತರಯೋಶ್ಚ ೨೨. ವೈಶೇಷ್ಯಾತ್ತು ತದ್ವಾದಸ್ತದ್ವಾದಃ ॥

ಇತಿ ವೇದಾನ್ತಸೂತ್ರಪಾಠೇ ದ್ವಿತೀಯಾಧ್ಯಾಯಸ್ಯ ಚತುರ್ಥಃ ಪಾದಃ

**ಇತಿ ದ್ವಿತೀಯೋಽಧ್ಯಾಯಃ**

## ಅಥ ತೃತೀಯಾಧ್ಯಾಯೇ ಪ್ರಥಮಃ ಪಾದಃ

೧. **ತದನ್ತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಮ್** ೨. ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ೩. ಪ್ರಾಣಗತೇಶ್ಚ ೪. ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ೫. ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ೬. ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ೭. ಭಾಕ್ತಂ ವಾನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ ೮. **ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಯಥೇತಮನೇವಂ ಚ** ೯. ಚರಣಾದಿತಿ ಚೇನ್ನೋಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ೧೦. ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ೧೧. ಸುಕೃತದುಷ್ಕೃತೇ ಏವೇತಿ ತು ಬಾದರಿಃ ೧೨. **ಅನಿಷ್ಟಾದಿಕಾರಿಣಾ**

ಮಪಿ ಚ ಶ್ರುತಮ್ ೧೩. ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್ ೧೪. ಸ್ಮರನ್ತಿ ಚ ೧೫. ಅಪಿ ಚ ಸಪ್ತ ೧೬. ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ೧೭. ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ೧೮. ನ ತೃತೀಯೇ ತಥೋಪಲಬ್ಧೇಃ ೧೯. ಸ್ಮರ್ಯತೇಽಪಿ ಚ ಲೋಕೇ ೨೦. ದರ್ಶನಾಚ್ಚ ೨೧. ತೃತೀಯಶಬ್ದಾವರೋಧಃ ಸಂಶೋಕಜಸ್ಯ ೨೨. ಸಾಭಾವ್ಯಾಪತ್ತಿರುಪಪತ್ತೇಃ ೨೩. ನಾತಿಚಿರೇಣ ವಿಶೇಷಾತ್ ೨೪. ಅನ್ಯಾಧಿಷ್ಠಿತೇಷು ಪೂರ್ವವದಭಿಲಾಪಾತ್ ೨೫. ಅಶುದ್ಧಮಿತಿ ಚೇನ್ನ ಶಬ್ದಾತ್ ೨೬. ರೇತಃಸಿಗ್ಯೋಗೋಽಥ ೨೭. ಯೋನೇಃ ಶರೀರಮ್ ॥

ಇತಿ ವೇದಾನ್ತಸೂತ್ರಪಾಠೇ ತೃತೀಯಾಧ್ಯಾಯಸ್ಯ ಪ್ರಥಮಃ ಪಾದಃ

## ಅಥ ತೃತೀಯಾಧ್ಯಾಯೇ ದ್ವಿತೀಯಃ ಪಾದಃ

೧. ಸನ್ಧ್ಯೇ ಸೃಷ್ಟಿರಾಹ ಹಿ ೨. ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ೩. ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ೪. ಸೂಚಕಶ್ಚ ಹಿ ಶ್ರುತೇರಾಚಕ್ಷತೇ ತು ತದ್ವಿದಃ ೫. ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬನ್ಧವಿಪರ್ಯಯೌ ೬. ದೇಹಯೋಗಾದ್ವಾ ಸೋಽಪಿ ೭. ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಚ ೮. ಅತಃ ಪ್ರಬೋಧೋಽಸ್ಮಾತ್ ೯. ಸ ಏವ ತು ಕರ್ಮಾನುಸ್ಮೃತಿಶಬ್ದವಿಧಿಭ್ಯಃ ೧೦. ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ೧೧. ನ ಸ್ಥಾನತೋಽಪಿ ಪರಸ್ಯೋಭಯಲಿಙ್ಗಂ ಸರ್ವತ್ರ ಹಿ ೧೨. ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ೧೩. ಅಪಿ ಚೈವಮೇಕೇ ೧೪. ಅರೂಪವದೇವ ಹಿ ತತ್ಪ್ರಧಾನತ್ವಾತ್ ೧೫. ಪ್ರಕಾಶವಚ್ಚಾವೈಯರ್ಥ್ಯಾತ್ ೧೬. ಆಹ ಚ ತನ್ಮಾತ್ರಮ್ ೧೭. ದರ್ಶಯತಿ ಚಾಥೋ ಅಪಿ ಸ್ಮರ್ಯತೇ ೧೮. ಅತ ಏವ ಚೋಪಮಾ ಸೂರ್ಯಕಾದಿವತ್ ೧೯. ಅಮ್ಬುವದಗ್ರಹಣಾತ್ತು ನ ತಥಾತ್ವಮ್ ೨೦. ವೃದ್ಧಿಹ್ರಾಸಭಾಕ್ತ್ವಮನ್ತರ್ಭಾವಾದುಭಯಸಾಮಞ್ಜಸ್ಯಾದೇವಮ್ ೨೧. ದರ್ಶನಾಚ್ಚ ೨೨. ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ೨೩. ತದವ್ಯಕ್ತಮಾಹ ಹಿ ೨೪. ಅಪಿ ಚ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್ ೨೫. ಪ್ರಕಾಶಾದಿವಚ್ಚಾವೈಶೇಷ್ಯಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ೨೬. ಅತೋಽನನ್ತೇನ ತಥಾ ಹಿ ಲಿಙ್ಗಮ್ ೨೭. ಉಭಯವ್ಯಪದೇಶಾತ್ತ್ವಹಿಕುಣ್ಡಲವತ್ ೨೮ ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ೨೯. ಪೂರ್ವವದ್ವಾ

೩೦. ಪ್ರತಿಷೇಧಾಚ್ಚ ೩೧. **ಪರಮತಃ ಸೇತೂನ್ಮಾನಸಂಬನ್ಧಭೇದವ್ಯಪದೇಶೇಭ್ಯಃ** ೩೨. ಸಾಮಾನ್ಯಾತ್ತು ೩೩. ಬುದ್ಧ್ಯರ್ಥಃ ಪಾದವತ್ ೩೪. ಸ್ಥಾನವಿಶೇಷಾತ್ ಪ್ರಕಾಶಾದಿವತ್ ೩೫. ಉಪಪತ್ತೇಶ್ಚ ೩೬. ತಥಾನ್ಯಪ್ರತಿಷೇಧಾತ್ ೩೭. ಅನೇನ ಸರ್ವಗತತ್ವಮಾಯಾಮಶಬ್ದಾದಿಭ್ಯಃ ೩೮. **ಫಲಮತ ಉಪಪತ್ತೇಃ** ೩೯. ಶ್ರುತತ್ವಾಚ್ಚ ೪೦. ಧರ್ಮಂ ಜೈಮಿನಿರತ ಏವ ೪೧. ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ॥

ಇತಿ ವೇದಾನ್ತಸೂತ್ರಪಾಠೇ ತೃತೀಯಾಧ್ಯಾಯಸ್ಯ ದ್ವಿತೀಯಃ ಪಾದಃ

## ಅಥ ತೃತೀಯಾಧ್ಯಾಯೇ ತೃತೀಯಃ ಪಾದಃ

೧. **ಸರ್ವವೇದಾನ್ತಪ್ರತ್ಯಯಂ ಚೋದನಾದ್ಯವಿಶೇಷಾತ್** ೨. ಭೇದಾನ್ನೇತಿ ಚೇನ್ನೈಕಸ್ಯಾಮಪಿ ೩. ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಸವವಚ್ಚ ತನ್ನಿಯಮಃ ೪. ದರ್ಶಯತಿ ಚ ೫. **ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ ಸಮಾನೇ ಚ** ೬. **ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್** ೭. ನ ವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ೮. ಸಂಜ್ಞಾತಶ್ಚೇತ್ತದುಕ್ತಮಸ್ತಿ ತು ತದಪಿ ೯. **ವ್ಯಾಪ್ತೇಶ್ಚ ಸಮಞ್ಜಸಮ್** ೧೦. **ಸರ್ವಾಭೇದಾದನ್ಯತ್ರೇಮೇ** ೧೧. **ಆನನ್ದಾದಯಃ ಪ್ರಧಾನಸ್ಯ** ೧೨. ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ೧೩. ಇತರೇ ತ್ವರ್ಥಸಾಮಾನ್ಯಾತ್ ೧೪. **ಆಧ್ಯಾನಾಯ ಪ್ರಯೋಜನಾಭಾವಾತ್** ೧೫. ಆತ್ಮಶಬ್ದಾಚ್ಚ ೧೬. **ಆತ್ಮಗೃಹೀತಿರಿತರವದುತ್ತರಾತ್** ೧೭. ಅನ್ವಯಾದಿತಿ ಚೇತ್ಸ್ಯಾದವಧಾರಣಾತ್ ೧೮. **ಕಾರ್ಯಾಖ್ಯಾನಾದಪೂರ್ವಮ್** ೧೯. **ಸಮಾನ ಏವಂ ಚಾಭೇದಾತ್** ೨೦. **ಸಂಬನ್ಧಾದೇವಮನ್ಯತ್ರಾಪಿ** ೨೧. ನ ವಾ ವಿಶೇಷಾತ್ ೨೨. ದರ್ಶಯತಿ ಚ ೨೩. **ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ** ೨೪. **ಪುರುಷವಿದ್ಯಾಯಾಮಿವ ಚೇತರೇಷಾಮನಾಮ್ನಾನಾತ್** ೨೫. **ವೇಧಾದ್ಯರ್ಥಭೇದಾತ್** ೨೬. **ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛನ್ದಸ್ತುತ್ಯುಪಗಾನವತ್ ತದುಕ್ತಮ್** ೨೭. **ಸಾಂಪರಾಯೇ ತರ್ತವ್ಯಾಭಾವಾತ್ತಥಾ ಹ್ಯನ್ಯೇ** ೨೮. ಛನ್ದತ ಉಭಯಾವಿರೋಧಾತ್ ೨೯. **ಗತೇರರ್ಥವತ್ತ್ವಮುಭಯಥಾನ್ಯಥಾ ಹಿ ವಿರೋಧಃ** ೩೦. ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ೩೧. **ಅನಿಯಮಃ ಸರ್ವಾಸಾಮವಿರೋಧಃ ಶಬ್ದಾನುಮಾನಾಭ್ಯಾಮ್** ೩೨. **ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್** ೩೩. **ಅಕ್ಷರ**

ಧಿಯಾಂ ತ್ವವರೋಧಃ ಸಾಮಾನ್ಯತದ್ಭಾವಾಭ್ಯಾಮೌಪಸದವತ್ ತದುಕ್ತಮ್ ೩೪. ಇಯದಾಮನನಾತ್ ೩೫. ಅನ್ತರಾ ಭೂತಗ್ರಾಮವತ್ ಸ್ವಾತ್ಮನಃ ೩೬. ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶಾನ್ತರವತ್ ೩೭. ವ್ಯತಿಹಾರೋ ವಿಶಿಂಷನ್ತಿ ಹೀತರವತ್ ೩೮. ಸೈವ ಹಿ ಸತ್ಯಾದಯಃ ೩೯. ಕಾಮಾದೀತರತ್ರ ತತ್ರ ಚಾಯತನಾದಿಭ್ಯಃ ೪೦. ಆದರಾದಲೋಪಃ ೪೧. ಉಪಸ್ಥಿತೇಽತಸ್ತದ್ವಚನಾತ್ ೪೨. ತನ್ನಿರ್ಧಾರಣಾನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬನ್ಧಃ ಫಲಮ್ ೪೩. ಪ್ರದಾನವದೇವ ತದುಕ್ತಮ್ ೪೪. ಲಿಙ್ಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ೪೫. ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾ ಮಾನಸವತ್ ೪೬. ಅತಿದೇಶಾಚ್ಚ ೪೭. ವಿದ್ಯೈವ ತು ನಿರ್ಧಾರಣಾತ್ ೪೮. ದರ್ಶನಾಚ್ಚ ೪೯. ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ೫೦. ಅನುಬನ್ಧಾದಿಭ್ಯಃ ಪ್ರಜ್ಞಾನ್ತರಪೃಥಕ್ತ್ವವತ್ ದೃಷ್ಟಶ್ಚ ತದುಕ್ತಮ್ ೫೧ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ೫೨ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬನ್ಧಃ ೫೩. ಏಕ ಆತ್ಮನಃ ಶರೀರೇ ಭಾವಾತ್ ೫೪. ವ್ಯತಿರೇಕಸ್ತದ್ಭಾವಾಭಾವಿತ್ವಾನ್ನ ತೂಪಲಬ್ಧಿವತ್ ೫೫. ಅಙ್ಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ ೫೬. ಮನ್ತ್ರಾದಿವದ್ವಾವಿರೋಧಃ ೫೭. ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಹಿ ದರ್ಶಯತಿ ೫೮. ನಾನಾಶಬ್ದಾದಿಭೇದಾತ್ ೫೯. ವಿಕಲ್ಪೋಽವಿಶಿಷ್ಟಫಲತ್ವಾತ್ ೬೦. ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ನ ವಾ ಪೂರ್ವಹೇತ್ವಭಾವಾತ್ ೬೧. ಅಙ್ಗೇಷು ಯಥಾಶ್ರಯಭಾವಃ ೬೨. ಶಿಷ್ಟೇಶ್ಚ ೬೩. ಸಮಾಹಾರಾತ್ ೬೪. ಗುಣಸಾಧಾರಣ್ಯಶ್ರುತೇಶ್ಚ ೬೫. ನ ವಾ ತತ್ಸಹಭಾವಾಶ್ರುತೇಃ ೬೬. ದರ್ಶನಾಚ್ಚ ॥

ಇತಿ ವೇದಾನ್ತಸೂತ್ರಪಾಠೇ ತೃತೀಯಾಧ್ಯಾಯಸ್ಯ ತೃತೀಯಃ ಪಾದಃ

## ಅಥ ತೃತೀಯಾಧ್ಯಾಯೇ ಚತುರ್ಥಃ ಪಾದಃ

೧. ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ೨. ಶೇಷತ್ವಾತ್ ಪುರುಷಾರ್ಥವಾದೋ ಯಥಾನ್ಯೇಷ್ವಿತಿ ಜೈಮಿನಿಃ ೩. ಆಚಾರದರ್ಶನಾತ್ ೪. ತಚ್ಛ್ರುತೇಃ ೫. ಸಮನ್ವಾರಮ್ಭಣಾತ್ ೬. ತದ್ವತೋ ವಿಧಾನಾತ್ ೭. ನಿಯಮಾಚ್ಚ ೮. ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ೯. ತುಲ್ಯಂ ತು ದರ್ಶನಮ್ ೧೦. ಅಸಾರ್ವತ್ರಿಕೀ ೧೧. ವಿಭಾಗಃ ಶತವತ್ ೧೨ ಅಧ್ಯಯನಮಾತ್ರವತಃ ೧೩. ನಾವಿ

ಶೇಷಾತ್ ೧೪. ಸ್ತುತಯೇಽನುಮತಿರ್ವಾ ೧೫. ಕಾಮಕಾರೇಣ ಚೈಕೇ ೧೬. ಉಪಮರ್ದಂ ಚ ೧೭. ಊರ್ಧ್ವರೇತಃಸು ಚ ಶಬ್ದೇ ಹಿ ೧೮. **ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ** ೧೯. ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ೨೦. ವಿಧಿರ್ವಾ ಧಾರಣವತ್ ೨೧. **ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್** ೨೨. ಭಾವಶಬ್ದಾಚ್ಚ ೨೩. **ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್** ೨೪. ತಥಾ ಚೈಕವಾಕ್ಯತೋಪಬನ್ಧಾತ್ ೨೫. **ಅತ ಏವ ಚಾಗ್ನೀನ್ಧನಾದ್ಯನಪೇಕ್ಷಾ** ೨೬. **ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್** ೨೭. ಶಮದಮಾದ್ಯುಪೇತಃ ಸ್ಯಾತ್ ತಥಾಪಿ ತು ತದ್ವಿಧೇಸ್ತದಙ್ಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ೨೮. **ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್** ೨೯. ಅಬಾಧಾಚ್ಚ ೩೦. ಅಪಿ ಚ ಸ್ಮರ್ಯತೇ ೩೧. ಶಬ್ದಶ್ಚಾತೋಽಕಾಮಕಾರೇ ೩೨. **ವಿಹಿತತ್ವಾಚ್ಚಾಶ್ರಮಕರ್ಮಾಪಿ** ೩೩. ಸಹಕಾರಿತ್ವೇನ ಚ ೩೪. ಸರ್ವಥಾಪಿ ತ ಏವೋಭಯಲಿಙ್ಗಾತ್ ೩೫. ಅನಭಿಭವಂ ಚ ದರ್ಶಯತಿ ೩೬. **ಅನ್ತರಾ ಚಾಪಿ ತು ತದ್ದೃಷ್ಟೇಃ** ೩೭. ಅಪಿ ಚ ಸ್ಮರ್ಯತೇ ೩೮. ವಿಶೇಷಾನುಗ್ರಹಶ್ಚ ೩೯. ಅತಸ್ತ್ವಿತರಜ್ಜ್ಯಾಯೋ ಲಿಙ್ಗಾಚ್ಚ ೪೦. **ತದ್ಭೂತಸ್ಯ ತು ನಾತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾಭಾವೇಭ್ಯಃ** ೪೧. **ನ ಚಾಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್** ೪೨. ಉಪಪೂರ್ವಮಪಿ ತ್ವೇಕೇ ಭಾವಮಶನವತ್ ತದುಕ್ತಮ್ ೪೩. **ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ** ೪೪. **ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ** ೪೫. ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರೀಯತೇ ೪೬. ಶ್ರುತೇಶ್ಚ ೪೭. **ಸಹಕಾರ್ಯನ್ತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್** ೪೮. ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ೪೯. ಮೌನವದಿತರೇಷಾಮಪ್ಯುಪದೇಶಾತ್ ೫೦. **ಅನಾವಿಷ್ಕುರ್ವನ್ನನ್ವಯಾತ್** ೫೧. **ಐಹಿಕಮಪ್ಯಪ್ರಸ್ತುತಪ್ರತಿಬನ್ಧೇ ತದ್ದರ್ಶನಾತ್** ೫೨. **ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ** ॥

ಇತಿ ವೇದಾನ್ತಸೂತ್ರಪಾಠೇ ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ

ಇತಿ ತೃತೀಯೋಽಧ್ಯಾಯಃ

## ಅಥ ಚತುರ್ಥಾಧ್ಯಾಯೇ ಪ್ರಥಮಃ ಪಾದಃ

೧. **ಆವೃತ್ತಿರಸಕೃದುಪದೇಶಾತ್** ೨. ಲಿಙ್ಗಾಚ್ಚ ೩. **ಆತ್ಮೇತಿ ತೂಪಗಚ್ಛನ್ತಿ ಗ್ರಾಹಯನ್ತಿ ಚ** ೪. **ನ ಪ್ರತೀಕೇ ನ ಹಿ ಸಃ**

೫. ಬ್ರಹ್ಮದೃಷ್ಟಿರುತ್ಕರ್ಷಾತ್ ೬. ಆದಿತ್ಯಾದಿಮತಯಶ್ಚಾಙ್ಗ ಉಪಪತ್ತೇಃ ೭. ಆಸೀನಃ ಸಂಭವಾತ್ ೮. ಧ್ಯಾನಾಚ್ಚ ೯. ಅಚಲತ್ವಂ ಚಾಪೇಕ್ಷ್ಯ ೧೦. ಸ್ಮರನ್ತಿ ಚ ೧೧. ಯತ್ರೈಕಾಗ್ರತಾ ತತ್ರಾವಿಶೇಷಾತ್ ೧೨. ಆಪ್ರಾಯಣಾತ್ ತತ್ರಾಪಿ ಹಿ ದೃಷ್ಟಮ್ ೧೩. ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ೧೪. ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ೧೫. ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ೧೬. ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ೧೭. ಅತೋಽನ್ಯಾಪಿ ಹ್ಯೇಕೇಷಾಮುಭಯೋಃ ೧೮. ಯದೇವ ವಿದ್ಯಯೇತಿ ಹಿ ೧೯. ಭೋಗೇನ ತ್ವಿತರೇ ಕ್ಷಪಯಿತ್ವಾ ಸಂಪದ್ಯತೇ ||

ಇತಿ ವೇದಾನ್ತಸೂತ್ರಪಾಠೇ ಚತುರ್ಥಾಧ್ಯಾಯಸ್ಯ ಪ್ರಥಮಃ ಪಾದಃ

## ಅಥ ಚತುರ್ಥಾಧ್ಯಾಯೇ ದ್ವಿತೀಯಃ ಪಾದಃ

೧. ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ೨ ಅತ ಏವ ಚ ಸರ್ವಾಣ್ಯನು ೩. ತನ್ಮನಃ ಪ್ರಾಣ ಉತ್ತರಾತ್ ೪. ಸೋಽಧ್ಯಕ್ಷೇ ತದುಪಗಮಾದಿಭ್ಯಃ ೫. ಭೂತೇಷು ತಚ್ಛ್ರುತೇಃ ೬. ನೈಕಸ್ಮಿನ್ ದರ್ಶಯತೋ ಹಿ ೭. ಸಮಾನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ೮. ತದಾಪೀತೇಃ ಸಂಸಾರವ್ಯಪದೇಶಾತ್ ೯. ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ೧೦. ನೋಪಮರ್ದೇನಾತಃ ೧೧. ಅಸ್ಯೈವ ಚೋಪಪತ್ತೇರೇಷ ಊಷ್ಮಾ ೧೨. ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ೧೩. ಸ್ಪಷ್ಟೋ ಹ್ಯೇಕೇಷಾಮ್ ೧೪. ಸ್ಮರ್ಯತೇ ಚ ೧೫. ತಾನಿ ಪರೇ ತಥಾ ಹ್ಯಾಹ ೧೬. ಅವಿಭಾಗೋ ವಚನಾತ್ ೧೭. ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ೧೮. ರಶ್ಮ್ಯನುಸಾರೀ ೧೯. ನಿಶಿ ನೇತಿ ಚೇನ್ನ ಸಂಬನ್ಧಸ್ಯ ಯಾವದ್ದೇಹಭಾವಿತ್ವಾದ್ದರ್ಶಯತಿ ಚ ೨೦. ಅತಶ್ಚಾಯನೇಽಪಿ ಹಿ ದಕ್ಷಿಣೇ ೨೧. ಯೋಗಿನಃ ಪ್ರತಿ ಚ ಸ್ಮರ್ಯತೇ ಸ್ಮಾರ್ತೇ ಚೈತೇ ||

ಇತಿ ವೇದಾನ್ತಸೂತ್ರಪಾಠೇ ಚತುರ್ಥಾಧ್ಯಾಯಸ್ಯ ದ್ವಿತೀಯಃ ಪಾದಃ

## ಅಥ ಚತುರ್ಥಾಧ್ಯಾಯೇ ತೃತೀಯಃ ಪಾದಃ

೧. ಅರ್ಚಿರಾದಿನಾ ತತ್ಪ್ರಥಿತೇಃ ೨. ವಾಯುಮಬ್ದಾವಿಶೇಷವಿಶೇಷಾಭ್ಯಾಮ್ ೩. ತಡಿತೋಽಧಿ ವರುಣಃ ಸಂಬನ್ಧಾತ್

**೪. ಆತಿವಾಹಿಕಾಸ್ತಲ್ಲಿಙ್ಗಾತ್** ೫. ಉಭಯವ್ಯಾಮೋಹಾತ್ ತತ್ಸಿದ್ಧೇಃ ೬. ವೈದ್ಯುತೇನೈವ ತತಸ್ತಚ್ಛ್ರುತೇಃ ೭. **ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ** ೮. ವಿಶೇಷಿತತ್ವಾಚ್ಚ ೯. ಸಾಮೀಪ್ಯಾತ್ತು ತದ್ವ್ಯಪದೇಶಃ ೧೦. ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃಪರಮಭಿಧಾನಾತ್ ೧೧. ಸ್ಮೃತೇಶ್ಚ ೧೨. ಪರಂ ಜೈಮಿನಿರ್ಮುಖ್ಯತ್ವಾತ್ ೧೩. ದರ್ಶನಾಚ್ಚ ೧೪. ನ ಚ ಕಾರ್ಯೇ ಪ್ರತಿಪತ್ತ್ಯಭಿಸನ್ಧಿಃ ೧೫. **ಅಪ್ರತೀಕಾಲಮ್ಬನಾನ್ನಯತೀತಿ ಬಾದರಾಯಣ ಉಭಯಥಾ ದೋಷಾತ್ ತತ್ಕ್ರತುಶ್ಚ** ೧೬. ವಿಶೇಷಂ ಚ ದರ್ಶಯತಿ ॥

ಇತಿ ವೇದಾನ್ತಸೂತ್ರಪಾಠೇ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ

## ಅಥ ಚತುರ್ಥಾಧ್ಯಾಯೇ ಚತುರ್ಥಃ ಪಾದಃ

**೧. ಸಂಪದ್ಯಾವಿರ್ಭಾವಃ ಸ್ವೇನ ಶಬ್ದಾತ್** ೨. ಮುಕ್ತಃ ಪ್ರತಿಜ್ಞಾನಾತ್ ೩. ಆತ್ಮಾ ಪ್ರಕರಣಾತ್ **೪. ಅವಿಭಾಗೇನ ದೃಷ್ಟತ್ವಾತ್ ೫. ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ೬. ಚಿತಿತನ್ಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ** ೭. ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ **೮. ಸಂಕಲ್ಪಾದೇವ ತು ತಚ್ಛ್ರುತೇಃ** ೯. ಅತ ಏವ ಚಾನನ್ಯಾಧಿಪತಿಃ **೧೦. ಅಭಾವಂ ಬಾದರಿರಾಹ ಹ್ಯೇವಮ್** ೧೧. ಭಾವಂ ಜೈಮಿನಿರ್ವಿಕಲ್ಪಾಮನನಾತ್ ೧೨. ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ೧೩. ತನ್ವಭಾವೇ ಸನ್ಧ್ಯವದುಪಪತ್ತೇಃ ೧೪. ಭಾವೇ ಜಾಗ್ರದ್ವತ್ **೧೫. ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ** ೧೬. ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ **೧೭. ಜಗದ್ವ್ಯಾಪಾರವರ್ಜಂ ಪ್ರಕರಣಾದಸಂನಿಹಿತತ್ವಾಚ್ಚ** ೧೮. ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿಕಾರಿಕಮಣ್ಡಲಸ್ಥೋಕ್ತೇಃ ೧೯. ವಿಕಾರಾವರ್ತಿ ಚ ತಥಾ ಹಿ ಸ್ಥಿತಿಮಾಹ ೨೦. ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ೨೧. ಭೋಗಮಾತ್ರಸಾಮ್ಯಲಿಙ್ಗಾಚ್ಚ **೨೨. ಅನಾವೃತ್ತಿಃ** ಶಬ್ದಾದನಾವೃತ್ತಿಃ ಶಬ್ದಾತ್ ॥

ಇತಿ ವೇದಾನ್ತಸೂತ್ರಪಾಠೇ ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ

**ಇತಿ ಚತುರ್ಥೋಽಧ್ಯಾಯಃ**

**ಇತಿ ಶ್ರೀ ಬಾದರಾಯಣೀಯವೇದಾನ್ತಸೂತ್ರಪಾಠಃ ಸಮಾಪ್ತಃ**



# ಸೂತ್ರಗಳ ಅಕ್ಷರಾನುಕ್ರಮಣಿಕೆ

**ವಿಶೇಷ:** ಈ ಸಂಪುಟದಲ್ಲಿರುವ ಸೂತ್ರಗಳಿಗೆ ಮಾತ್ರ ಇಲ್ಲಿ ಅಕ್ಷರಾನುಕ್ರಮಣಿಕೆ ಕೊಡಲಾಗಿದೆ.

* ‘ಕುಶಾಚ್ಛನ್ದ’ ಎಂದು ಪಾ॥

# ವಿಷಯಗಳ ಶಬ್ದಾನುಕ್ರಮಣಿಕೆ

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಸಂಸ್ಕೃತಭಾಷ್ಯಭಾಗಗಳ ಸಂಖ್ಯೆಗಳು. ಸಂಪುಟಸಂಖ್ಯೆಯ ಮುಂದೆ ಅಡ್ಡಗೀಟು ಹಾಕಿದೆ. ಉದಾಹರಣೆಗೆ ೧–೧೭೬, ೪೧೪ ; ೨–೧೯೭, ೧೯೮ ಎಂದರೆ ಒಂದನೆಯ ಸಂಪುಟದಲ್ಲಿ ೧೭೬, ೪೦೪ ಈ ಭಾಷ್ಯಭಾಗಗಳನ್ನೂ ಎರಡನೆಯ ಸಂಪುಟದಲ್ಲಿ ೧೯೭, ೧೯೮ನೆಯ ಭಾಷ್ಯಭಾಗಗಳನ್ನೂ ನೋಡಬೇಕು ಎಂದರ್ಥ. ವಿವರಣೆಯಲ್ಲಿ ಒಂದು ಶಬ್ದವನ್ನು ಕಪ್ಪಕ್ಷರದಲ್ಲಿ ( Antique ) ಅಚ್ಚುಮಾಡಿದ್ದರೆ ಅಕ್ಷರಾನುಕ್ರಮಣಿಕೆಯ ಕ್ರಮದಲ್ಲಿ ಆ ಶಬ್ದವನ್ನು ನೋಡಬೇಕು ಎಂದು ಅರ್ಥ.

## ಅ

**ಅಕ್ಷರಮ್**— ನಾಶರಹಿತವಾದದ್ದು (೧) ಅವ್ಯಾಕೃತವೆಂಬ ಈಶ್ವರನ ಉಪಾಧಿ, ಸರ್ವವಿಕಾರಕ್ಕೂ ಕಾರಣ, ೧–೨೦೧. (೨) ಓಂಕಾರವೆಂಬ ಅಕ್ಷರ. ಇದು ಸರ್ವಾತ್ಮಕವೆಂದು ಉಪಾಸ್ಯ, ೧–೨೪೩. (೩) ಛಾಂದೋಗ್ಯದಲ್ಲಿ ಸರ್ವಾತ್ಮಕವೆಂದು ಹೇಳಿರುವ ಗಾಯತ್ರಿಯು ಬ್ರಹ್ಮವೇ, ಅಕ್ಷರಸಂನಿವೇಶರೂಪವಾದ ಛಂದಸ್ಸಲ್ಲ, ೧–೧೩೧. (೪) ಅವ್ಯಾಕೃತಾಕಾಶದವರೆಗೂ ಇರುವದಕ್ಕೆಲ್ಲ ಆಧಾರವಾದ ನಾಶರಹಿತಪರಬ್ರಹ್ಮ, ೧–೨೪೪ ; ಬೇರೆಬೇರೆ ಶ್ರುತಿಗಳಲ್ಲಿರುವ ನಿಷೇಧ್ಯಧರ್ಮಗಳನ್ನೆಲ್ಲ ಸೇರಿಸಿಕೊಂಡು ಅಕ್ಷರಸ್ವರೂಪವನ್ನು ತಿಳಿಯಬೇಕು, ೨–೩೮೨, ೩೮೩.

**ಅಣು**— ಸೂಕ್ಷ್ಮವಾದ. ಬುದ್ಧಿ ಅಥವಾ ಅನ್ತಃಕರಣವೆಂಬ ಉಪಾಧಿಯ ಸಂಬಂಧದಿಂದ ಜೀವನನ್ನು ಅಣುವೆಂದಿದೆ, ೨–೧೩೮, ೧೩೯ ; ಅಥವಾ ಅವನನ್ನು ತಿಳಿದುಕೊಳ್ಳುವದು ಕಷ್ಟವೆಂಬ ಅಭಿಪ್ರಾಯದಿಂದ ಹೀಗೆಂದಿದೆ, ೨–೧೩೮ ; ಪರಮೇಶ್ವರನನ್ನು ಅಣುವೆನ್ನುವದೂ ಉಪಾಧಿನಿಮಿತ್ತದಿಂದ, ೨–೧೩೯ ; ಪ್ರಾಣಗಳು ಅಣುವೆನ್ನುವದು ಅವು ಸೂಕ್ಷ್ಮವಾಗಿ ಪರಿಚ್ಛಿನ್ನವಾಗಿರುವವು ಎಂಬ ಕಾರಣದಿಂದ, ಪರಮಾಣುಪರಿಮಾಣವುಳ್ಳವೆಂದಲ್ಲ, ೨–೧೮೬ ; ಮುಖ್ಯಪ್ರಾಣವೂ ಈ ಅರ್ಥದಲ್ಲಿಯೇ ಅಣು, ೨–೧೯೫.

**ಅಣುಃ**— (೧) ವೈಶೇಷಿಕರು ಒಪ್ಪಿರುವ ಪರಮಾಣು. ೧–೨೬, ೬೪ ; ೨–೨೧, ೨೬, ೨೭, ೨೯. (೨) ಸರ್ವಾಸ್ತಿತ್ವವಾದಿಗಳು ಒಪ್ಪಿರುವ ಕ್ಷಣಿಕವಾದ ಅಣುಗಳು, ೨–೪೪, (೩) ಜೈನರು ಒಪ್ಪಿರುವ ಪುದ್ಗಲವೆಂಬ ಹೆಸರಿನ ಅಣುಗಳು, ೨–೬೮.

**ಅಥಾತಃ**— ಇನ್ನು ಆದ್ದರಿಂದ. ಒಂದನೆಯ ಸೂತ್ರದಲ್ಲಿ ಅಥ ಎಂದರ ಸಾಧನಚತುಷ್ಟಯವಾದಬಳಿಕ ಎಂದರ್ಥ, ೧–೧೩ ; ಈ ಸೂತ್ರದಲ್ಲಿ ಅತಃ ಎಂದರೆ ಕರ್ಮದ ಫಲವು ಅನಿತ್ಯ, ಬ್ರಹ್ಮಜ್ಞಾನದ ಫಲವೇ ನಿತ್ಯವಾದ ಪರಮಪುರುಷಾರ್ಥ ಎಂದು ವೇದವೇ ಹೇಳುವದರಿಂದ ಎಂದರ್ಥ, ೧–೧೪.

**ಅದೃಷ್ಟ**— (೧) ಕಾಣದಿರುವ ಪರಬ್ರಹ್ಮದ ಉಪಾಸನೆಗೆ ಕಾಲಾಂತರದಲ್ಲಿ ಮೋಕ್ಷವೆಂಬ ಅದೃಷ್ಟಫಲವೆಂದು ವೃತ್ತಿಕಾರರು ಕಲ್ಪಿಸಿದ್ದ (ಫಲ), ೧–೪೦ ; ಸಿದ್ಧಾಂತದಲ್ಲಿ

ಮನನವೆಂಬುದು ಅನುಭವಾಂಗವಾದ ತರ್ಕ, ೧–೪೧೮ ; ಜ್ಞಾನಫಲವು ಅನುಭವಾರೂಢ, ೨–೩೮೧, ೪೫೨ ; ಯಾವ ದುಃಖವೂ ಇಲ್ಲದ ಆತ್ಮಚೈತನ್ಯವೇ ನಾನು ಎಂಬುದೇ ಆತ್ಮಾನುಭವ, ೨–೫೦೭, ೫೦೮ ; ಜ್ಞಾನಿಗಳಿಗೆ ತುಷ್ಟ್ಯನುಭವವೇ ಮುಂತಾದದ್ದು ಕಂಡು ಬರುತ್ತದೆ, ೨–೫೮೩ ; ತತ್ಪದಾರ್ಥವು ಅನುಭವಾತ್ಮಕ, ೨–೫೦೬.

**ಅನುಮಾನಮ್** — (೧) ಅನುಮಾನಪ್ರಮಾಣ, ತರ್ಕ, ಜಗತ್ಕಾರಣವು ಅನುಮಾನಗಮ್ಯವಲ್ಲ, ೧–೨೯, ೨೯೬, ೪೬೯ ; ಈಶ್ವರನು ಅನುಮಾನಗಮ್ಯನೆಂಬ ತಾರ್ಕಿಕರ ತಪ್ಪುತಿಳಿವಳಿಕೆ, ೨–೨೭ ; ಶಾಸ್ತ್ರಪ್ರಾಮಾಣ್ಯವು ಅನುಮಾನಗಮ್ಯವಲ್ಲ, ೧–೩೮.

**ಅನುಶಯಃ** — ಐಹಿಕಫಲಕ್ಕಾಗಿರುವ ಕರ್ಮಶೇಷ. ಇಷ್ಟಾದಿಕರ್ಮಗಳನ್ನು ಉಪಭೋಗಿಸಿದವರು ಅನುಶಯಸಹಿತರಾಗಿ ಇಳಿಯುತ್ತಾರೆ, ೨–೨೨೫, ೨೨೯ ; ಅನುಶಯವೆಂದರೆ ಸ್ವರ್ಗಾರ್ಥಕರ್ಮದ ಶೇಷವಲ್ಲ, ೨–೨೨೮ ; ಆಚಾರಕ್ಕೂ ಅನುಶಯಕ್ಕೂ ಭೇದವಿಲ್ಲ, ೨–೨೩೨.

**ಅನುಷ್ಠಾನಮ್** — ಮಾಡತಕ್ಕದ್ದು. ಧರ್ಮಜ್ಞಾನಕ್ಕೆ ಅನುಷ್ಠಾನದ ಅಪೇಕ್ಷೆಯಿದೆ, ಬ್ರಹ್ಮಜ್ಞಾನಕ್ಕೆ ಇಲ್ಲ, ೧–೧೨ ; ಜ್ಞಾನವಾದಮೇಲೆ ಉಪಾಸನೆಯೆಂಬ ಅನುಷ್ಠಾನವು ಉಳಿದಿರುತ್ತದೆ ಎಂಬ ಮತವು ಸರಿಯಲ್ಲ, ೧–೪೦, ೪೨, ೪೩.

**ಅನುಸ್ಮೃತಿಃ** — ಅನುಭವವಾದಮೇಲೆ ಅದೇ ಇದೆಂಬ ನೆನಪಿನ ರೂಪವಾಗಿ ಆಗುವ ಪ್ರತ್ಯಭಿಜ್ಞೆ. ಇದರಿಂದ ಆತ್ಮನ ಸ್ಥಿರತ್ವಸಿದ್ಧಿ, ೨–೫೧ ; ಇದು ಸಾದೃಶ್ಯನಿಮಿತ್ತಕವೆಂಬ ಬೌದ್ಧರ ವಾದವು ಯುಕ್ತಿವಿರುದ್ಧ, ೨–೫೧೨ ; ಸುಷುಪ್ತಿಗೆ ಹೋದ ಜೀವನೇ ಎಚ್ಚರುತ್ತಾನೆಂಬುದಕ್ಕೆ ಅನುಸ್ಮೃತಿಯೊಂದು ಪ್ರಮಾಣ, ೨–೨೬೯.

**ಅನೃತ** — ಅಸತ್ಯ, ಮಿಥ್ಯೆ, ಹುಸಿಯಾದ. ಅನಾತ್ಮವು ಅನೃತ. ಸತ್ಯಾನೃತಗಳ ಅಧ್ಯಾಸದಿಂದ ವ್ಯವಹಾರ, ೧–೧ ; ವಿಕಾರವು ಅನೃತ, ೧–೨೨೩, ೪೩೩, ೪೩೫ : ಮೋಕ್ಷಶಾಸ್ತ್ರವೂ ಅನೃತ, ಅಸತ್ಯ, ೧–೪೩೬, ೪೩೭ ; ಕನಸಿನಲ್ಲಿ ಕಂಡ ಹಾವಿನ ಕಚ್ಚುವಿಕೆ ಮುಂತಾದವು ಮಿಥ್ಯೆಯಾದರೂ ಅವುಗಳಿಂದಾದ ಅರಿವು ಸತ್ಯವೇ, ೧–೪೩೭ ; ಅನೃತಾಕ್ಷರಗಳಿಂದ ಸತ್ಯಾಕ್ಷರಗಳ ಅರಿವು, ೧–೪೩೭ ; ಸತ್ಯಾನೃತವ್ಯವಹಾರವೆಲ್ಲ ಆತ್ಮೈಕತ್ವಾವಗತಿಗಿಂತ ಮೊದಲೇ, ೧–೪೩೮.

**ಅನ್ತಃಕರಣಮ್** — ಮನಸ್ಸು, ಬುದ್ಧಿ, ವಿಜ್ಞಾನ, ಚಿತ್ತ – ಮುಂತಾದ ಹಲವು ಹೆಸರುಗಳುಳ್ಳ ಜೀವೋಪಾಧಿ. ಅಂತಃಕರಣವಿದೆಯೆಂದು ಒಪ್ಪಬೇಕು, ೨–೧೪೩ ; ಭೂತಗಳಂತೆ ಬ್ರಹ್ಮದಿಂದ ಉತ್ಪನ್ನವಾಗುತ್ತದೆ, ೨–೧೧೭ ; ಇದರ ಸಂಬಂಧವು ಜೀವನಿಗೆ ಮೋಕ್ಷವಾಗುವವರೆಗೂ, ೨–೧೪೦ ; ಸುಷುಪ್ತಿಪ್ರಲಯಗಳಲ್ಲಿ ಇದರ ಸಂಬಂಧವು ಬೀಜರೂಪದಲ್ಲಿರುತ್ತದೆ, ೨–೧೪೨.

**ಅನ್ತ್ಯ** — ಕೊನೆಯ. ಸಾಯುವಾಗಿನ ಕೊನೆಯ ಉಪಾಸನಾಪ್ರತ್ಯಯವು ಅದೃಷ್ಟಫಲವನ್ನು ಕೊಡುತ್ತದೆ, ಕರ್ಮಗಳ ಫಲಕ್ಕೂ ಅಂತ್ಯಪ್ರತ್ಯಯವು ಅವಶ್ಯ, ೨–೫೨೫; ಅವಿದ್ಯೆಯನ್ನು ತೊಲಗಿಸಿ ಪ್ರಮಾಣವ್ಯವಹಾರವನ್ನೇ ಕಳೆಯುವದರಿಂದ ಶಾಸ್ತ್ರವು ಅಂತ್ಯಪ್ರಮಾಣ, ೧–೪೩೮ ; ಆತ್ಮರು ಬೇರೆ ಬೇರೆ ಎಂಬುದಕ್ಕೆ ವೈಶೇಷಿಕರು ಕಲ್ಪಿಸಿಕೊಂಡಿರುವ ಅಂತ್ಯವಿಶೇಷಗಳಿಗೆ ಪ್ರಮಾಣವಿಲ್ಲ, ೨–೧೭೨.

ಅನ್ನಮ್ — (೧) ಪೃಥಿವಿ. ಅಪ್ಪಿನಿಂದ ಹುಟ್ಟಿತೆಂದು ಛಾಂದೋಗ್ಯದಲ್ಲಿ ಹೇಳಿರುವ ಅನ್ನವು ಪೃಥಿವಿಯೇ, ೨–೧೧೧ ; ಅನ್ನಾದಿಕಾರ್ಯವನ್ನು ಹೇಳಿರುವದು ಕಾರಣವಾದ ಬ್ರಹ್ಮದ ಜ್ಞಾನಕ್ಕೆ, ೧–೩೬೭. (೨). ಅನ್ನ, ಆಹಾರ. ಅನ್ನಮಯವೇ (ಶರೀರವೇ) ಮುಂತಾದ ಪಂಚಕೋಶಗಳನ್ನು ಬ್ರಹ್ಮವನ್ನು ತಿಳಿಸುವದಕ್ಕಾಗಿ ಹೇಳಿದೆ, ೧–೧೧೭, ೩೬೬, ೩೬೮ ; ಸರ್ವಾನ್ನಭಕ್ಷಣವು ಪ್ರಾಣೋಪಾಸಕನಿಗೆ ವಿಹಿತವಲ್ಲ, ೧–೪೭೩ ; ಸರ್ವಾನ್ನ ಭಕ್ಷಣವು ಆಪತ್ತಿನಲ್ಲಿ ಎಂದು ಶ್ರುತಿಯಲ್ಲಿ ಸೂಚಿಸಿದೆ, ಸ್ಮೃತಿಯಲ್ಲಿ ಹೇಳಿದೆ, ೧–೪೭೩, ೪೭೪ ; ಸುರಾಪಾನವೇ ಮುಂತಾದ ಅನ್ನವನ್ನು ಶ್ರುತಿಯಲ್ಲಿ ನಿಷೇಧಿಸಿದೆ, ೧–೪೭೫.

ಅಪರ — (೧) ಮತ್ತೊಂದು. ಸೂತ್ರಗಳಿಗೆ ಮತ್ತೊಂದು ವ್ಯಾಖ್ಯಾನವನ್ನು ಹೇಳುವದಕ್ಕೆ 'ಅಪರ ಆಹ' ಎಂದು ಭಾಷ್ಯದಲ್ಲಿ ತಿಳಿಸಿದೆ, ೧–೧೩೨, ೧೩೪, ೨೨೪, ೨೫೦ ; ಅನ್ಯೋಽರ್ಥಃ, ೧–೧೪೪ ; ಅನ್ಯೇ ಪುನರ್ಮನ್ಯನ್ತೇ, ೧–೨೦೪ ; ಅಪರಾ ವ್ಯಾಖ್ಯಾ, ೧–೨೮೪ ; ತತ್ರಾಪಿ, ೧–೩೮೬. (೨) ಕಡಿಮೆಯು. ಉಪಾಸನೆಗಾಗಿ ಹೇಳಿರುವ ಬ್ರಹ್ಮ, ಮುಖ್ಯಬ್ರಹ್ಮವಲ್ಲ. ಕಾರ್ಯ, ಸಗುಣ, ಸವಿಶೇಷ, ಸಾಕಾರ, ಸೋಪಾಧಿಕ– ಇವೆಲ್ಲ ಅಪರಬ್ರಹ್ಮಕ್ಕೆ ಹೆಸರುಗಳು. ಒಂದೇ ಬ್ರಹ್ಮವನ್ನು ಉಪಾಸ್ಯವೆಂದೂ ಜ್ಞೇಯವೆಂದೂ ತಿಳಿಸುವದಕ್ಕಾಗಿ ಪರಬ್ರಹ್ಮ, ಅಪರಬ್ರಹ್ಮ– ಎಂದು ವಿಂಗಡಿಸಿದೆ. ಉಪಾಸ್ಯವೂ ಪರ ಬ್ರಹ್ಮವೇ, ೧–೯೦, ೯೨, ೧೧೦, ೧೨೮, ೨೪೮, ೨–೫೨೩. ಪೀಠಿಕೆಯನ್ನು ನೋಡಿ. ಅಪರವಿದ್ಯೆಯು ಅಭ್ಯುದಯವನ್ನು ಕೊಡುವದು, ಪರವಿದ್ಯೆಯಂತೆ ನಿಃಶ್ರೇಯಸವನ್ನು ಕೊಡುವದಿಲ್ಲ, ೧–೧೪೯ ; ಕರ್ಮವಿದ್ಯೆಯೂ ಅಪರವಿದ್ಯೆ, ೧–೧೪೯; ಸಗುಣೋಪಾಸನೆಯೂ ಅಪರವಿದ್ಯೆ, ೨–೫೦೦, ೫೨೧, ೫೩೯, ೫೫೯, ೫೮೧.

ಅಪವಾದಃ— (೧) ಮಿಥ್ಯಾಬುದ್ಧಿಯ ನಿವರ್ತನೆ. ದಿಗ್ಭ್ರಾಂತಿಯನ್ನು ದಿಗ್ಯಾಥಾತ್ಮ್ಯಬುದ್ಧಿಯು ಕಳೆಯುವಂತೆ ತತ್ತ್ವಮಸಿವಾಕ್ಯಜನ್ಯಬುದ್ಧಿಯು ದೇಹಾದ್ಯಾತ್ಮಬುದ್ಧಿಯನ್ನು ತೊಲಗಿಸುತ್ತದೆ, ೨–೩೩೧, ೩೩೨. (೨) ಸಾಮಾನ್ಯಶಾಸ್ತ್ರಕ್ಕೆ ಪ್ರತಿಯಾಗಿರುವ ವಿಶೇಷಶಾಸ್ತ್ರ, ೧–೨೮, ೨–೨೫೧.

ಅಪೂರ್ವಮ್— ಕರ್ಮಕಾರ್ಯ. ಕರ್ಮವು ಫಲವನ್ನು ಕೊಡುವದಕ್ಕೆ ದ್ವಾರಕಾರಣವೆಂದು ಮೀಮಾಂಸಕರು ಕಲ್ಪಿಸಿರುವ ಅದೃಷ್ಟವಿಶೇಷ, ೨–೩೧೬ ; ಅದರ ಖಂಡನೆ, ೨–೩೧೪, ೩೧೭. ಇಷ್ಟಾದಿಕಾರಿಗಳು ಕೊಟ್ಟ ಆಹುತಿಗಳು ಅಪೂರ್ವರೂಪವನ್ನು ಹೊಂದಿ ಅವರನ್ನು ಆಶ್ರಯಿಸುತ್ತವೆ, ೨–೨೨೦.

ಅಭಾವಃ— ಇಲ್ಲದ್ದು. ಕಾರ್ಯವು ಮೊದಲು ಇಲ್ಲದೆ ಹುಟ್ಟುವದೆಂಬ ವೈಶೇಷಿಕರ ಅಸತ್ಕಾರ್ಯವಾದದ ಖಂಡನೆ, ೧–೧೧೯ ; ಅಭಾವವು ವಂಧ್ಯಾಪುತ್ರನಂತೆ, ೧–೧೧೯ ; ಅಭಾವದಿಂದ ಭಾವೋತ್ಪತ್ತಿಯೆಂಬ ಸರ್ವಾಸ್ತಿತ್ವವಾದಿಗಳ ನಿರಸನ, ೨–೫೩, ೫೫, ೫೬.

ಅಭ್ಯುದಯಃ— ಕರ್ಮದಿಂದ ಅಥವಾ ಉಪಾಸನೆಯಿಂದ ಆಗುವ ಶ್ರೇಯಸ್ಸು, ೧–೧೨, ೯೧, ೩೫೦, ೩೮೯ ; ಅಭ್ಯುದಯವನ್ನು ಕೊಡುವ ಸಗುಣೋಪಾಸನೆಗಳಿಗೆಲ್ಲ ದೇವಯಾನ ಗತಿ, ೨–೩೭೭.

ಅವಿದ್ಯಾ— (೧) ತಪ್ಪುತಿಳಿವಳಿಕೆ, ಮಿಥ್ಯಾಪ್ರತ್ಯಯ, ಮಿಥ್ಯಾಜ್ಞಾನ, ಮಿಥ್ಯಾಬುದ್ಧಿ,ಭ್ರಾನ್ತಿ,ತಮಸ್ಸು,ಅನವಬೋಧ,ಅಪ್ರಬೋಧ– ಇವೆಲ್ಲ ಅವಿದ್ಯೆಗೆ ಪರ್ಯಾಯಗಳು. ಆತ್ಮಾನಾತ್ಮರುಗಳ ಪರಸ್ಪರಾಧ್ಯಾಸವೇ ಅವಿದ್ಯೆ, ೧–೪, ೨೨೫, ೨೪೦ ; ಅವಿದ್ಯೆಯಿಂದಲೇ ಲೌಕಿಕವೈದಿಕವ್ಯವಹಾರಗಳು, ೧–೫, ೬, ೭, ೨–೨೮೨ ; ಅವಿದ್ಯೆಯೇ ಮೋಕ್ಷಕ್ಕೆ ಪ್ರತಿಬಂಧ. ೧–೪೫ ; ಅನಾದ್ಯನಂತವಾದರೂ ವಿದ್ಯೆಯಿಂದ ಬಾಧಿತವಾಗುವದು, ೧–೯; ಅವಿದ್ಯಾದ್ಯನರ್ಥಗಳು ಬ್ರಹ್ಮಾವಗತಿಯಿಂದ ಹೋಗುವವು, ೧–೧೮ ; ಅವಿದ್ಯಾಕಾಮಕರ್ಮಗಳಿಂದ ವಿಜ್ಞಾನಾತ್ಮನಲ್ಲಿ ಮರ್ತ್ಯತ್ವವು ಅಧ್ಯಾರೋಪಿತ, ೧–೧೮೫ ; ಅವಿದ್ಯೆಯು ಯಾರಿಗೆಂದರೆ ಈ ಪ್ರಶ್ನೆಯನ್ನು ಕೇಳುವವನಿಗೆ, ೨–೫೦೦ ; ಅವಿದ್ಯೆಯಿಂದ ಆತ್ಮನಿಗೆ ಸದ್ವಿತೀಯತ್ವವಿಲ್ಲ, ೨–೫೦೦ ; ಅವಿದ್ಯೆಯಿರಲಿ ಹೋಗಲಿ ವಸ್ತುವಿನಲ್ಲಿ ವಿಶೇಷವಿಲ್ಲ, ೧–೩೫೧. (೨) ವೈಶೇಷಿಕಮತದಲ್ಲಿ ಪರಮಾಣುನಿತ್ಯತ್ವಕ್ಕೆ ಕಾರಣ. ೨–೩೨ ; ಸೌಗತಮತದಲ್ಲಿ ಸಂಸ್ಕಾರಕ್ಕೆ ಕಾರಣ, ೨–೪೩, ೪೯.

ಅವಿದ್ಯಾಕಲ್ಪಿತ— ಅವಿದ್ಯೆಯಿಂದ ತೋರುವ, ಪರಮಾರ್ಥವಲ್ಲದ. ಅವಿದ್ಯಾಕಲ್ಪಿತ, ಅವಿದ್ಯಾಕೃತ, ಅವಿದ್ಯಾತ್ಮಕ, ಅವಿದ್ಯಾಧ್ಯಸ್ತ, ಅವಿದ್ಯಾಧ್ಯಾರೋಪಿತ, ಅವಿದ್ಯಾನಿಮಿತ್ತ, ಅವಿದ್ಯಾಪ್ರತ್ಯುಪಸ್ಥಾಪಿತ– ಇವೆಲ್ಲ ಪರ್ಯಾಯಗಳು. ಮಿಥ್ಯಾಜ್ಞಾನನಿಮಿತ್ತವಾದ ಎಂದೇ ಇವಕ್ಕೆ ಅರ್ಥ. ಮುಂದೆ ಹೇಳುವವೆಲ್ಲ ಅವಿದ್ಯಾಕಲ್ಪಿತ ; ಭೇದ, ಸಂಸಾರಿತ್ವ, ೧–೪೭, ೪೫೬ ; ಶಾರೀರ ೧–೧೦೪ ; ಶಾರೀರನ ಉಪಭೋಗ, ೧–೧೬೨ ; ಸತ್ತ್ವ ಅಥವಾ ಅನ್ತಃಕರಣ, ೧–೧೭೫ ; ಮರ್ತ್ಯತ್ವ, ೧–೧೮೫ ; ಕಾರ್ಯಕರಣಗಳು, ೧–೧೯೫, ೪೪೮ ; ಭೂತೇನ್ದ್ರಿಯಮಾತ್ರೆಗಳು, ೧–೩೮೬ ; ನಾಮರೂಪಗಳು, ೧–೨೦೧, ೩೩೯, ೩೮೮, ೪೪೦, ೪೫೬, ೪೭೧, ೨–೯, ೧೬೧, ೨೬೧ ; ಕಾರ್ಯಪ್ರಪಂಚ, ೧–೨೨೩, ೨–೨೯೧ ; ಜೀವರೂಪ, ೨–೧೬೧, ೧೬೨, ೨೬೮ ; ಜೀವಭೇದ, ೧–೨೬೯ ; ಜೀವಪ್ರಾಜ್ಞಭೇದ, ೧–೩೫೨ ; ಕಾರಣದಲ್ಲಿ ಕಾರ್ಯ, ೧–೪೨೩ ; ಉಪಾಧಿಗಳು, ೧–೪೪೦, ೨–೨೮೨. ವ್ಯಾಕೃತಾವ್ಯಾಕೃತಭೇದ, ೧–೪೬೪, ೪೬೯ ; ತಪ್ಯತಾಪಕಭಾವ, ೨–೨೦ ; ಕರ್ತೃತ್ವ, ೧೫೩, ೧೫೪ ; ದುಃಖ, ೨–೧೬೨ ; ಬುದ್ಧ್ಯುಪಾಧಿಸಂಬಂಧ, ೨–೧೪೧ ; ಆಭಾಸ, ೨–೧೬೮ ; ಬಂಧ, ೨–೫೪೯.

ಅವಿದ್ಯಾವಸ್ಥಾ, ಅವಿದ್ಯಾವಿಷಯಃ— ಅವಿದ್ಯೆಯಿರುವ ಸ್ಥಿತಿ. ಈ ಅವಸ್ಥೆಯಲ್ಲಿಯೇ – ಉಪಾಸ್ಯೋಪಾಸಕವ್ಯವಹಾರವು, ೧–೯೧ ; ಕರ್ತೃತ್ವಾದಿವ್ಯವಹಾರ, ೧–೧೭೫, ೨–೧೫೧, ೧೫೪, ೧೫೫ ; ಎಲ್ಲಾ ವ್ಯವಹಾರ, ೧–೧೯೫ ; ವಿಶೇಷವಿಜ್ಞಾನ, ೧–೩೮೭.

ಅವಿದ್ವಾನ್— ಅರಿಯುವವನು. (೧) ಉಪಾಸಕನಲ್ಲದವನು, ೨–೫೩೯, ೫೪೭, ೫೫೯. ಬ್ರಹ್ಮಜ್ಞಾನಿಯಲ್ಲದವನು, ೨–೫೫೫.

ಅವ್ಯಕ್ತಮ್— (೧) ನಾಮರೂಪಗಳಾಗಿ ವ್ಯಕ್ತವಾಗದ ಬೀಜಾತ್ಮಕಜಗತ್ತು, ಅವ್ಯಾಕೃತ. ಇದು ಪರಮೇಶ್ವರನಿಗೆ ಅಧೀನವಾದ ಸತ್ತೆಯುಳ್ಳದ್ದು, ೧–೩೩೯ ; ಪರಮಾತ್ಮನಿಂದ ವ್ಯಕ್ತವಾಗುತ್ತದೆ, ೧–೪೦೧ ; ಕಠಶ್ರುತಿಯಲ್ಲಿ ಶರೀರವನ್ನೇ ಅವ್ಯಕ್ತ

ವೆಂದಿದೆ, ೧–೩೩೮, ೩೩೯, ಇದನ್ನು ಅಸತ್ ಎಂದು ಶ್ರುತಿಯಲ್ಲಿ ಕರೆದಿದೆ, ೧–೪೪೫. (೨) ತಾನು ವ್ಯಕ್ತವಾಗದೆ ಜೀವನವ್ಯವಹಾರವನ್ನೆಲ್ಲ ಸಾಗಿಸುತ್ತಿರುವ ಅವಿದ್ಯೆ, ೧–೩೪೦. (೩) ಎಲ್ಲಕ್ಕೂ ಸಾಕ್ಷಿಯಾಗಿರುವ ಬ್ರಹ್ಮ, ೨–೨೯೮.

ಅವ್ಯಾಕೃತಮ್— ಬಿಡಿಬಿಡಿಯಾಗದ ನಾಮರೂಪಬೀಜ, ಭೂತಸೂಕ್ಷ್ಮ. ಸೃಷ್ಟಿಗೆ ಮುಂಚೆ ಈಶ್ವರನ ಜ್ಞಾನಕ್ಕೆ ವಿಷಯ, ೧–೬೯; ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯ, ೧–೬೯, ೪೪೦; ಅವಿದ್ಯಾಕಲ್ಪಿತ, ೧–೪೪೦, ೪೬೪; ನಾಮರೂಪಗಳ ವ್ಯಾಕೃತಾವ್ಯಾಕೃತರೂಪಭೇದದಿಂದ ಈಶ್ವರನಿಗೆ ಪರಿಣಾಮಾದಿ ವ್ಯವಹಾರ, ೧, ೪೬೪.

ಅಶರೀರತ್ವಮ್— ಶರೀರವಿಲ್ಲದಿರುವಿಕೆ. ಉಪಾಸಕಮುಕ್ತರಿಗೆ ಸಶರೀರತ್ವವೂ ಅಶರೀರತ್ವವೂ ಸಂಕಲ್ಪಾನುಸಾರ, ೨–೬೦೨; ಆತ್ಮನಿಗೆ ಅಶರೀರತ್ವವು ಅನುಷ್ಠೇಯಫಲವಲ್ಲ, ಸ್ವಾಭಾವಿಕ, ೧–೪೨; ಬದುಕಿರುವಾಗಲೇ ಅಶರೀರತ್ವವಿರುತ್ತದೆ, ೧–೫೮, ೬೦; ಬ್ರಹ್ಮಭಾವವಿದ್ದ ಹೊರತು ಅಶರೀರತ್ವವಿಲ್ಲ, ೧–೩೨೧.

ಅಸತ್— ಇಲ್ಲದಿರುವದು, ಅಭಾವ. ಮೊದಲು ಇಲ್ಲದಿದ್ದ ಕಾರ್ಯವು ಹುಟ್ಟಿದ ಬಳಿಕ ಕಾರಣಸತ್ತಾಸಂಬಂಧವನ್ನು ಪಡೆಯುವದೆಂದು ಹೇಳುವ ವೈಶೇಷಿಕರ ಅಸತ್ಕಾರ್ಯವಾದದಲ್ಲಿ ಉತ್ಪತ್ತಿಯು ಹೊಂದುವದಿಲ್ಲ, ೧–೪೪೬ರಿಂದ ೪೪೯; ಕಾರ್ಯವು ಮೊದಲು ಅಸತ್ತಾಗಿತ್ತು ಎಂದರೆ ಅವ್ಯಾಕೃತವಾಗಿ ಕೇವಲಾತ್ಮರೂಪದಿಂದ ಅಸತ್ತಿನಂತೆ ಇತ್ತು ಎಂದರ್ಥ, ೧–೩೬೮, ೪೪೫; ಅಭಾವದಿಂದ ಭಾವ ಹುಟ್ಟುವದೆಂಬ ಬೌದ್ಧರ ಅಸತ್ಕಾರ್ಯವಾದವೂ ಯುಕ್ತಿವಿರುದ್ಧ, ೨–೫೩, ೫೫, ೫೬; ಅಸತ್ತು ನಿರಾತ್ಮಕವಾದ್ದರಿಂದ ಅದರಿಂದ ಸತ್ತು ಹುಟ್ಟಲಾರದು, ೨–೧೦೬; ಸಾಂಖ್ಯರಿಗೆ ಅಸತ್ಕಾರ್ಯವಾದಪ್ರಸಂಗ, ೧–೪೨೬.

ಅಹಂಕಾರಃ— ಅಹಂಕಾರವು ಮನಸ್ಸಿನಿಂದ ಹುಟ್ಟುತ್ತದೆ ಎಂಬ ಭಾಗವತಮತವು ಲೋಕವಿರುದ್ಧ, ೨–೮೫, ಯುಕ್ತಿವಿರುದ್ಧ, ೨–೮೬; ಅಹಂಕಾರಪೂರ್ವಕವಾಗಿಯೇ ಪ್ರವೃತ್ತಿಯಾಗುವದರಿಂದ ಜೀವನು ಕರ್ತೃ, ೨–೧೫೦; ಅಹಂಕಾರವೂ ಜ್ಞೇಯವಾದ್ದರಿಂದ ಜೀವನ ಕರ್ತೃತ್ವವು ಸ್ವಾಭಾವಿಕವಲ್ಲ, ೨–೧೫೬; ಮನಸ್ಸೇ ವೃತ್ತಿವಿಶೇಷದಿಂದ ಅಹಂಕಾರವೆನಿಸುತ್ತದೆ, ೨–೧೮೩.

ಅಹಂಪ್ರತ್ಯಯಃ, ಅಸ್ಮತ್ಪ್ರತ್ಯಯಃ— ನಾನು ಎಂಬ ಅರಿವು. ಆತ್ಮನು ನಿಯಮದಿಂದ ಅವಿಷಯನೇ ಎಂಬುದಿಲ್ಲ, ಅಸ್ಮತ್ಪ್ರತ್ಯಯವಿಷಯನೂ ಆಗಬಹುದು, ೧–೩; ಅಸ್ಮತ್ಪ್ರತ್ಯಯವಿಷಯನಾದ ಆತ್ಮನು ಅಧ್ಯಾಸಕ್ಕೆ ತಕ್ಕವನು, ೧–೧–೩; ಅಹಂಪ್ರತ್ಯಯಕ್ಕೆ ಆಶ್ರಯವಾಗಿರುವ ಅಂತಃಕರಣವು ಅಹಂಪ್ರತ್ಯಯಿ, ಅದರಿಂದೊಡಗೂಡಿದ ಆತ್ಮನನ್ನು ಅದರ ವೃತ್ತಿಗಳಿಗೆ ಸಾಕ್ಷಿಯಾದ ಆತ್ಮನಲ್ಲಿಯೂ ಸಾಕ್ಷಿಯನ್ನು ಅದರಲ್ಲಿಯೂ ಅಧ್ಯಾಸಮಾಡುವರು, ೧–೮; ಅಹಂಪ್ರತ್ಯಯವಿಷಯನಾದ ಪ್ರತ್ಯಯಿಯೇ ಕರ್ತೃಭೋಕ್ತೃ, ಅವನೇ ಸಂಸ್ಕಾರ್ಯನು, ೧–೪೯; ಅಹಂಪ್ರತ್ಯಯವಿಷಯನಾದ ಕರ್ತೃವಿಗಿಂತ ವ್ಯತಿರಿಕ್ತನಾದ ಸಾಕ್ಷಿಯೇ ಉಪನಿಷದ್ವೇದ್ಯನಾದ ಆತ್ಮ, ೧–೫೪; ದೇಹಾದಿಗಳಲ್ಲಿರುವ ಅಹಂಪ್ರತ್ಯಯವು ಮಿಥ್ಯೆಯೇ, ೧–೫೯.

## ಆ

**ಆತ್ಮೈಕತ್ವಮ್**— ಆತ್ಮನು ಒಬ್ಬನೇ ಎಂಬುದು. ಆತ್ಮೈಕತ್ವವನ್ನು ತಿಳಿಸುವದಕ್ಕೇ ವೇದಾಂತಗಳೆಲ್ಲ ಹೊರಟಿವೆ, ೧–೯; ಜೀವರೂಪವು ಪಾರಮಾರ್ಥಿಕವೆನ್ನುವವರ ತಪ್ಪುತಿಳಿವಳಿಕೆಯನ್ನು ಕಳೆಯುವದಕ್ಕಾಗಿ ಶಾರೀರಕದಲ್ಲಿ ಆತ್ಮೈಕತ್ವವನ್ನು ತಿಳಿಸಿದೆ, ೧–೨೬೯; ಆತ್ಮೈಕತ್ವಜ್ಞಾನವೇ ಮೋಕ್ಷಕ್ಕೆ ಸಾಧನ, ೧–೪೦೭; ಭೋಕ್ತ್ರಾದಿಪ್ರಪಂಚವು ಬ್ರಹ್ಮಕ್ಕಿಂತ ವ್ಯತಿರಿಕ್ತವಲ್ಲವೆನ್ನುವದಕ್ಕೆ ಆತ್ಮೈಕತ್ವವನ್ನು ತಿಳಿಸುವ ಶ್ರುತಿಪ್ರಮಾಣ, ೧–೪೩೪; ಇದರ ಜ್ಞಾನವಾದಮೇಲೆ ಆಕಾಂಕ್ಷೆಯೇನೂ ಉಳಿಯುವದಿಲ್ಲ, ೧–೪೩೮.

**ಆಧ್ಯಾನಮ್**— ಉಪಾಸನೆ, ನಿದಿಧ್ಯಾಸನ.

**ಆನನ್ದಃ**— ಸುಖವು. ಜಗತ್ಕಾರಣವಾದ ಬ್ರಹ್ಮವು ಆನಂದವೆಂಬ ನಿರ್ಣಯ, ೧–೨೮; ಆನಂದವೇ ಬ್ರಹ್ಮ, ಆನಂದಮಯವಲ್ಲ, ೧–೧೧೦; ಛಾಂದೋಗ್ಯದಲ್ಲಿ ಹೇಳಿರುವ ಅಕ್ಷಿಪುರುಷನು ಸುಖರೂಪವಾದ ಬ್ರಹ್ಮ, ೧–೧೮೦; ಆನಂದರೂಪಬ್ರಹ್ಮವು ಪುಚ್ಛವೆಂದರೆ ಲೌಕಿಕಾನಂದಕ್ಕೆಲ್ಲ ಆಶ್ರಯವೆಂದರ್ಥ, ೧–೧೦೯; ಆನಂದಬ್ರಹ್ಮವನ್ನು ತಿಳಿಸುವದಕ್ಕೆ ಆನಂದಮಯಾಂತವಾದ ಪಂಚಕೋಶಗಳನ್ನು ಹೇಳಿದೆ, ೧–೧೦೭; ಬ್ರಹ್ಮವೇ ಮುಖ್ಯಾರ್ಥದ ಆನಂದ, ೧–೧೩೯, ೨೪೧; ಆನಂದವೇ ಮುಂತಾದ ಬ್ರಹ್ಮಧರ್ಮಗಳನ್ನು ಎಲ್ಲಾ ಕಡೆಯಲ್ಲಿಯೂ ಉಪಸಂಹಾರಮಾಡಿಕೊಳ್ಳಬೇಕು, ೨–೩೩೬, ೩೩೯.

**ಆರ್ಷಂ ಜ್ಞಾನಮ್, ಆರ್ಷಂ ದರ್ಶನಮ್**— ಋಷಿಗಳ ತಿಳಿವಳಿಕೆ. ಧರ್ಮಾತಿಶಯದಿಂದ ಈ ಜ್ಞಾನವುಂಟಾಗುತ್ತದೆ, ೧–೧೪೦; ಕಪಿಲಾದಿಗಳಿಗೆ ಆರ್ಷಜ್ಞಾನವಿದೆಯೆಂದು ಸಾಂಖ್ಯಾದಿಗಳ ನಂಬಿಕೆ, ೧–೪೦೦.

**ಆಶ್ರಮಾಃ**— ಬ್ರಹ್ಮಚರ್ಯವೇ ಮುಂತಾದ ಆಶ್ರಮಗಳು. ಆಶ್ರಮಕರ್ಮಗಳು ಜ್ಞಾನೋತ್ಪತ್ತಿಗೆ ಸಾಧನ, ೨–೪೬೯, ೪೭೧, ೪೭೭; ಜ್ಞಾನಕ್ಕೆ ತನ್ನ ಫಲವನ್ನು ಕೊಡುವದಕ್ಕೆ ಕರ್ಮಗಳ ಸಹಾಯ ಬೇಡ, ೨–೪೬೮; ಮುಮುಕ್ಷುಗಳಲ್ಲದವರಿಗೂ ಅದೇ ಆಶ್ರಮಕರ್ಮಗಳು, ೨–೪೭೭; ಊರ್ಧ್ವರೇತಸ್ಕರ ಆಶ್ರಮದಲ್ಲಿ ವಿದ್ಯೆಯನ್ನು ಹೇಳಿದೆ, ೨–೪೫೪; ಗಾರ್ಹಸ್ಥ್ಯದಂತೆ ಆಶ್ರಮಾಂತರವೂ ಅನುಷ್ಠೇಯ, ೨–೪೫೭, ೪೫೮; ಆಶ್ರಮವಿಲ್ಲದ ವಿಧುರಾದಿಗಳಿಗೂ ವಿದ್ಯೆಯಲ್ಲಿ ಅಧಿಕಾರ, ೨–೪೮೦ರಿಂದ ೪೮೨; ಅನಾಶ್ರಮಿಯಾಗಿರುವದಕ್ಕಿಂತ ಆಶ್ರಮಿಯಾಗಿರುವದೇ ಮೇಲು, ೨–೪೮೩; ಮೇಲಿನ ಆಶ್ರಮಕ್ಕೆ ಹೋದವರು ಕೆಳಕ್ಕೆ ಇಳಿಯಬಾರದು, ೨–೪೮೪; ಆಶ್ರಮಚ್ಯುತರಿಗೆ ಪ್ರಾಯಶ್ಚಿತ್ತ, ೨–೪೮೫, ೪೮೬.

## ಇ ಈ

**ಇನ್ದ್ರಿಯಾಣಿ**— ಮುಖ್ಯಪ್ರಾಣನನ್ನುಳಿದು ಮಿಕ್ಕ ಪ್ರಾಣಗಳು. ಇವು, ಹನ್ನೊಂದು, ೨–೧೮೩, ೧೮೫, ೨೧೧; ಇವು ಮುಖ್ಯಪ್ರಾಣಕ್ಕಿಂತ ಬೇರೆಯ ತತ್ತ್ವ

## ಉ

**ಉತ್ಕ್ರಾನ್ತಿಃ—** ಪ್ರಾಣಗಳು ಶರೀರವನ್ನು ಬಿಟ್ಟು ಹೋಗುವದು, ಸ್ವತಃ ಜೀವನಿಗೆ ಉತ್ಕ್ರಾಂತಿಯಿಲ್ಲ, ಉಪಾಧಿಯಿಂದಲೇ ಉತ್ಕ್ರಾಂತಿ, ೨–೧೩೮, ೧೯೩ ; ಉಪಾಸಕರಿಗೆ ದೇವಯಾನಮಾರ್ಗವು ಪ್ರಾರಂಭಿಸುವವರೆಗೆ ಉತ್ಕ್ರಾಂತಿಯು ಎಲ್ಲರಿಗೂ ಸಮಾನ, ೨–೫೪೭ ; ಬ್ರಹ್ಮಜ್ಞಾನಿಗೆ ಉತ್ಕ್ರಾಂತಿಯಿಲ್ಲ, ೨–೫೪೭ರಿಂದ ೫೪೯, ೫೫೪ರಿಂದ ೫೫೬ ; ಉತ್ಕ್ರಾಂತಿಕ್ರಮವು? ೨–೫೩೯ರಿಂದ ೫೪೬, ೫೪೯ರಿಂದ ೫೫೨.

**ಉಪಲಬ್ಧಿಃ, ಉಪಲಮ್ಭಃ—** ಅರಿಯುವಿಕೆ. ಜೀವನು ಅರಿಯುವ ಕರ್ತೃವಾದರೂ ಇಷ್ಟವನ್ನೂ ಅನಿಷ್ಟವನ್ನೂ ಅರಿಯುತ್ತಾನೆ, ೨–೧೪೮; ಅಂತಃಕರಣವೆಂಬ ಉಪಾಧಿಯನ್ನು ಅಂಗೀಕರಿಸದಿದ್ದರೆ ಯಾವಾಗಲೂ ಉಪಲಬ್ಧಿಯಾಗಬೇಕು, ಅಥವಾ ಆಗದೆ ಇರಬೇಕು, ೨–೧೮೩ ; ಅರ್ಥದ ಉಪಲಬ್ಧಿಯಾಗುತ್ತಿರುವದರಿಂದ ಅದು ವಿಜ್ಞಾನಕ್ಕಿಂತ ಬೇರೆಯಿಲ್ಲ ವೆಂಬುದು ಸರಿಯಲ್ಲ, ೨–೫೮ ; ವಿಷಯವು ಪ್ರತ್ಯಯಕ್ಕೆ ಉಪಾಯವಾಗಿರುವದರಿಂದ ಎರಡರ ಉಪಲಂಭವೂ ಜೊತೆಯಲ್ಲಿ ಆಗುತ್ತದೆ, ೨–೫೮ ; ವಾಸನಾವೈಚಿತ್ರ್ಯದಿಂದಲೇ ಜ್ಞಾನವೈಚಿತ್ರ್ಯವೆನ್ನುವವರ ಮತದಲ್ಲಿ ವಾಸನೆಯ ಉಪಲಬ್ಧಿಯೇ ಇಲ್ಲ, ೨–೬೨.

**ಉಪಾದಾನಕಾರಣಮ್—** ಕಾರ್ಯವಾಗುವದಕ್ಕೆ ಯಾವದನ್ನು ಅವಶ್ಯವಾಗಿ ತೆಗೆದುಕೊಳ್ಳಬೇಕಾಗುವದೋ ಆ ಕಾರಣ, ಇದಕ್ಕೆ ಪ್ರಕೃತಿಯೆಂದೂ ಹೆಸರು. ಸಾಂಖ್ಯರು ಪ್ರಧಾನವೇ ಜಗತ್ತಿಗೆ ಉಪಾದಾನಕಾರಣವೆನ್ನುವರು, ೧–೩೯ , ವೈಶೇಷಿಕರು ಅಣುಗಳು ಸಮವಾಯಿಕಾರಣ ಎಂದರೆ ಉಪಾದಾನಕಾರಣ ಎನ್ನುವರು, ೧–೬೪ , ಚೇತನವಾದ ಬ್ರಹ್ಮವೇ ಜಗತ್ತಿಗೆ ಉಪಾದಾನಕಾರಣವೆಂದು ವೇದಾಂತಿಗಳು, ೧–೩೯೧ ; ಬ್ರಹ್ಮೋಪಾದಾನಕಾರಣವಾದಿಗಳಿಗೆ ಶ್ರುತಿಯು ಪ್ರಮಾಣ, ೧–೩೯೧ರಿಂದ ೩೯೬.

**ಉಪಾಧಿಃ—** ವಸ್ತುವಿನ ಬಳಿಯಲ್ಲಿಯೇ ಇದ್ದು ಅದರ ಸ್ವರೂಪಕ್ಕೆ ಸೇರಿ ಕೊಳ್ಳದೆ ಅದರಲ್ಲಿ ಹೆಚ್ಚುಕಡಿಮೆಯನ್ನು ತೋರಿಸುವ ಸುತ್ತುಗಟ್ಟು. ನಾಮರೂಪ ಗಳೆಂಬ ಉಪಾಧಿಯಿಂದ ಈಶ್ವರ, ನಾಮರೂಪಕೃತಕಾರ್ಯಕರಣಸಂಘಾತವೆಂಬ ಉಪಾಧಿಯಿಂದ ಜೀವ –ಹೀಗೆ ಒಂದೇ ತತ್ತ್ವದಲ್ಲಿ ಎರಡು ಭೇದಗಳು ಕಾಣುವವು, ೧–೪೪೦; ಜೀವರಿಗೆ ಉಪಾಧಿಗಳೆರಡೂ ತೊಲಗಿದರೆ ತನ್ನ ಸ್ವರೂಪವಾದ ಆತ್ಮನಲ್ಲಿ ಲಯ, ೧–೮೫, ೨–೨೬೬, ೩೧೧, ೩೧೧ ; ಜೀವನು ಉಪಾಧಿತಂತ್ರನು, ೨–೧೬೭, ೨೦೭ ; ವೇದಾಂತವಾಕ್ಯಗಳು ಸೋಪಾಧಿಕವಾಗಿ ಉಪಾಸ್ಯಬ್ರಹ್ಮವನ್ನೂ ನಿರುಪಾಧಿಕವಾಗಿ ಜ್ಞೇಯಬ್ರಹ್ಮವನ್ನೂ ತಿಳಿಸುತ್ತವೆ, ೧–೯೦ ; ಉಪಾಧಿದ್ವಾರದಿಂದ ತಿಳಿಸುವಾಗಲೂ ಜ್ಞಾನವಾಕ್ಯಗಳಲ್ಲಿ ಉಪಾಧಿಗಳು ವಿವಕ್ಷಿತವಲ್ಲ, ೧–೯೨, ೯೩ ; ಉಪಾಧಿಕೃತವಿಶೇಷ ಗಳಿಂದ ಬ್ರಹ್ಮವೇ ಜೀವನೆನಿಸಿರುವದು, ೧–೧೪೩, ೨೫೦, ೨–೨೭೨ ; ಜ್ಞಾನಕ್ರಿಯಾಶಕ್ತಿ ಗಳ ಆಶ್ರಯವಾದ ಬುದ್ಧಿಪ್ರಾಣಗಳೆರಡೂ ಪ್ರತ್ಯಗಾತ್ಮನಿಗೆ ಉಪಾಧಿಗಳು, ೧–೧೪೩ ; ನಿರತಿಶಯೋಪಾಧಿಗಳಿಂದೊಡಗೂಡಿದ ಈಶ್ವರನು ನಿಹೀನೋಪಾಧಿಗಳ ಜೀವರನ್ನು ಆಳುತ್ತಾನೆ, ೨–೧೬೦ ; ಈಶ್ವರನಿಗೆ ಉಪಾಧಿಯಿಂದಲೂ ಸವಿಶೇಷತ್ವವಿಲ್ಲ, ಏಕೆಂದರೆ ಉಪಾಧಿಗಳು ಅವಿದ್ಯಾಕಲ್ಪಿತವಾಗಿವೆ, ೨–೨೭೭ ; ಉಪಾಧಿಗಳ ಸಂಬಂಧದಿಂದ ಈಶ್ವರನು

ಬೇರೆಬೇರೆಯ ಆಕಾರವನ್ನು ಪಡೆದಂತೆ ತೋರುತ್ತಾನೆ, ಅದನ್ನಾಶ್ರಯಿಸಿ ಆಕಾರವಿಶೇಷಗಳನ್ನು ಉಪಾಸನೆಗಾಗಿ ಉಪದೇಶಿಸಿದೆ, ೩–೩೮೩ ; ಅವಿಕೃತವಾದ ಬ್ರಹ್ಮವು ಉಪಾಧಿಗಳನ್ನನುಸರಿಸಿ ಅವುಗಳ ಧರ್ಮವನ್ನು ಪಡೆದಿರುವಂತೆ ಕಾಣಿಸುತ್ತದೆ, ೩–೩೮೭ ; ಬ್ರಹ್ಮವು ಪರ, ಅಪರ –ಎಂದು ಎರಡು ವಿಧವಾಗಿರುವದು ಉಪಾಧಿಯಿಂದ, ೩–೫೮.

ಉಪಾಸನಮ್, ಉಪಾಸನಾ— ಶಾಸ್ತ್ರದಲ್ಲಿ ವಿಧಿಸಿರುವಂತೆ ಮಾಡುವ ಭಾವನೆ. ಧ್ಯಾನಮ್, ಆಧ್ಯಾನಮ್, ಚಿನ್ತನಮ್, ಅನುಚಿನ್ತನಮ್, ವಿಜ್ಞಾನಮ್, ಬುದ್ಧಿಃ, ಉಪಗಮನಮ್, ಅಪರವಿದ್ಯಾ, ಪ್ರತಿಪತ್ತಿಃ –ಇವೆಲ್ಲ ಉಪಾಸನೆಯ ಪರ್ಯಾಯಗಳು. ಉಪಾಸನೆಯು ಚೋದನಾತಂತ್ರವೂ ಪುರುಷತಂತ್ರವೂ ಆದ ಮಾನಸಕ್ರಿಯೆ, ೧–೫೧ ; ತಾನೇ ಒಂದನ್ನು ಮತ್ತೊಂದೆಂದು ತಿಳಿದುಕೊಂಡರೆ ಉಪಾಸನೆಯಲ್ಲ, ಭ್ರಾಂತಿ, ೩–೩೯೧ ; ಉಪಾಸ್ಯೋಪಾಸಕವ್ಯವಹಾರವು ಅವಿದ್ಯಾವಸ್ಥೆಯಲ್ಲಿ, ೧–೯೧ ; ಉಪಾಸನೆಗೆ ಕರ್ಮದಂತೆಯೇ ದೃಷ್ಟಾದೃಷ್ಟಫಲಗಳುಂಟು, ೩–೪೧೮ ; ಕರ್ಮಸಮೃದ್ಧಿ, ದುರಿತಕ್ಷಯ, ಅಭ್ಯುದಯ, ಕ್ರಮಮುಕ್ತಿ –ಇವುಗಳು ಬೇರೆಬೇರೆಯ ಉಪಾಸನೆಗಳ ಫಲಗಳು, ೧–೯೧, ೩–೩೯೦ ; ಗುಣವಿಶೇಷಗಳಿಂದಲೂ ಪ್ರತೀಕವಿಶೇಷಗಳಿಂದಲೂ ಉಪಾಸನೆಗಳಲ್ಲಿಯೂ ಅವುಗಳ ಫಲದಲ್ಲಿಯೂ ತಾರತಮ್ಯ, ೧–೯೧, ೧೩೮ ; ಕರ್ಮಾಂಗಾವಬದ್ಧೋಪಾಸನೆಗಳು, ಪ್ರತೀಕೋಪಾಸನೆಗಳು, ಅಹಂಗ್ರಹೋಪಾಸನೆಗಳು –ಎಂದು ಉಪಾಸನೆಗಳು ಬಗೆಬಗೆಯಾಗಿರುವವು. ಕರ್ಮಾಂಗಾವಬದ್ಧವಾಗಿರುವ ಉಪಾಸನೆಗಳು ಎಲ್ಲಾ ಶಾಖೆಗಳಿಗೂ ಅನ್ವಯಿಸುತ್ತವೆ, ೩–೬೩೩ ; ಈ ಉಪಾಸನೆಗಳಿಗೆ ಋತ್ವಿಜರೇ ಅಧಿಕಾರಿಗಳು, ೩–೬೮೯, ೬೯೦ ; ಇವು ಕರ್ಮಕ್ಕೇ ಕಟ್ಟುಬಿದ್ದಿರುವದಿಲ್ಲ, ಕರ್ಮಿಗಳು ಇವನ್ನು ಬೇಕಾದರೆ ಮಾಡಬಹುದು, ೩–೪೪೯ ; ಉದ್ಗೀಥಾದ್ಯುಪಾಸನೆಗಳಿಗೆ ಸೇರಿದ ರಸಾನಾಂ ರಸತಮಃ ಮುಂತಾದವು ಉಪಾಸನಾವಿಧಿಗೇ ಸೇರಿವೆ, ೩–೬೭೩, ೬೭೪ ; ಅಗ್ನಿರಹಸ್ಯದಲ್ಲಿರುವ ಮನಶ್ಚಿದಾದಿಗಳು ಕರ್ಮಪ್ರಕರಣದಲ್ಲಿದ್ದರೂ ಸ್ವತಂತ್ರೋಪಾಸನೆಗಳು, ೩–೬೦೫, ೬೦೮ ರಿಂದ ೬೧೬ ; ಕರ್ಮಾಂಗವನ್ನೇ ಆಯಾ ದೃಷ್ಟಿಯಿಂದ ಉಪಾಸನೆಮಾಡಬೇಕು, ೩–೫೧೭, ೫೧೮ ; ಪ್ರತೀಕೋಪಾಸನೆಗಳಲ್ಲಿ ಪ್ರತೀಕವನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು, ೩–೫೧೫ ; ಪ್ರತೀಕವನ್ನು ತಾನೆಂದು ಚಿಂತಿಸಬಾರದು, ೩–೫೧೩ ; ಪರಮಾತ್ಮನನ್ನು ತಾನೆಂದೇ ಉಪಾಸನೆಮಾಡಬೇಕು, ೩–೫೦೯ ; ಮೂರನೆಯ ಅಧ್ಯಾಯದಲ್ಲಿರುವ ವಿಜ್ಞಾನಭೇದಾಭೇದವಿಚಾರವು ಸಗುಣಬ್ರಹ್ಮದ ಮತ್ತು ಪ್ರಾಣಾದಿಗಳ ಉಪಾಸನೆಯ ವಿಷಯ, ೩–೪೧೮ ; ಈಶ್ವರಪ್ರಾಣಾದಿಗಳ ಉಪಾಸನೆಯಲ್ಲಿ ಬೇರೆಬೇರೆಯ ಗುಣಗಳಿಂದ ಕೂಡಿ ಉಪಾಸನೆಮಾಡಬೇಕೆಂದು ವಿಧಿಸಿರುವದು ಬೇರೆಬೇರೆಯ ಉಪಾಸನೆ, ೩–೬೩೭ ; ಒಂದೇ ಬಗೆಯ ಗುಣಗಳನ್ನು ವಿಧಿಸಿರುವ ಕಡೆಗಳಲ್ಲಿ ಉಪಾಸ್ಯವು ಒಂದೇ ಆಗಿರುವದರಿಂದ ಉಪಾಸನೆಯೂ ಒಂದೇ, ೩–೪೩೦ ; ೪೩೩ರಿಂದ ೪೩೬ ; ಒಂದೇ ವಿದ್ಯೆಯಲ್ಲಿ ಗುಣೋಪಸಂಹಾರವನ್ನು ಮಾಡಿಕೊಳ್ಳಬೇಕು, ೩–೪೩೫, ೪೪೫ ; ಒಂದೇ ಫಲವುಳ್ಳ ಬೇರೆಬೇರೆಯ ಉಪಾಸನೆಗಳಲ್ಲಿ ಯಾವದಾದರೂ ಒಂದನ್ನೇ ಆರಿಸಿಕೊಳ್ಳಬೇಕು, ೩–೬೩೯ ; ಕರ್ಮಾಂಗವಾದ ಮತ್ತು ಸಮ್ಯಗ್ದರ್ಶನಾರ್ಥವಾದ ಉಪಾಸನೆಗಳನ್ನುಳಿದು ಮಿಕ್ಕವುಗಳನ್ನು ಕುಳಿತುಕೊಂಡೇ ಮಾಡಬೇಕು, ೩–೫೩೦ರಿಂದ ೫೩೪ ; ಉಪಾಸನೆಗೆ ದಿಗ್ದೇಶಕಾಲಾದಿಗಳ ನಿಯಮವಿಲ್ಲ, ಏಕಾಗ್ರತೆಯು ಮುಖ್ಯ, ೩–೫೩೪ ; ಸಗುಣಬ್ರಹ್ಮದ ಉಪಾಸನೆಗಳನ್ನು

ಸಾಕ್ಷಾತ್ಕಾರವಾಗುವವರೆಗೂ ಮಾಡಬೇಕು, ಸಾಯುವಕಾಲದವರೆಗೂ ಮಾಡುತ್ತಿರಬೇಕು, ೨-೪೨೯, ೫೨೬.

## ಏ—ಔ

ಏಕತ್ವಮ್— ಆತ್ಮನು ಒಬ್ಬನೇ ಎಂಬ ಆತ್ಮೈಕತ್ವ. ಏಕತ್ವವಿಜ್ಞಾನದಿಂದ ಬಾಧಿತವಾದ ದ್ವೈತವು ಮತ್ತೆ ಸತ್ಯವಾಗದು, ೧-೩೪, ೨-೪೫೩ ; ಏಕತ್ವವನ್ನು ತಿಳಿಸವದು ಅಂತ್ಯಪ್ರಮಾಣ, ೧-೪೩೮ ; ಏಕತ್ವವೇ ನಿಯತವಾಗಿದ್ದರೂ ಅವಿದ್ಯಾಪೇಕ್ಷೆಯಿಂದ ಈಶಿತ್ರೀಶಿತವ್ಯಭಾವ, ೧-೪೪೦ ; ಪಟಾದಿಗಳಿಂದ ಏಕಮಾತ್ರಬ್ರಹ್ಮವನ್ನು ಅನುಮಾನಿಸುವ ಕ್ರಮ, ೧-೪೪೩ ; ಒಂದೇ ಬ್ರಹ್ಮದಲ್ಲಿ ಕಾರ್ಯವೈಚಿತ್ರ್ಯ, ೧-೪೫೭ ; ಏಕಾದ್ವಿತೀಯ ಬ್ರಹ್ಮವು ಜಗತ್ಕಾರಣವೆಂಬಲ್ಲಿ ಆಕ್ಷೇಪಸಮಾಧಾನಗಳು, ೧-೪೬೨, ೪೬೩ ; ಆತ್ಮೈಕತ್ವವಾದದಲ್ಲಿ ಅನಿರ್ಮೋಕ್ಷಶಂಕೆಯಿಲ್ಲ, ೨-೨೦ ; ಆತ್ಮೈಕತ್ವದರ್ಶಿಗಳಿಗೆ ಮೋಕ್ಷಕ್ಕಾಗಿ ಗತಿ ಬೇಕಿಲ್ಲ, ೨-೩೭೬.

ಐಶ್ವರ್ಯಮ್— ಈಶ್ವರಭಾವ, ಮಹಿಮೆ. ದೇವತೆಗಳು ಐಶ್ವರ್ಯದಿಂದ ಒಂದೇ ಕಾಲಕ್ಕೆ ಅನೇಕ ಶರೀರಗಳನ್ನು ಕಲ್ಪಿಸಿಕೊಳ್ಳುವರು, ೧-೨೮೫, ೩೦೨, ೪೬೧ ; ಉಪಾಸಕನು ಇಷ್ಟಕಾಮಗಳನ್ನು ಸಂಕಲ್ಪಮಾತ್ರದಿಂದ ಪಡೆದುಕೊಳ್ಳುವ ಐಶ್ವರ್ಯವನ್ನು ಪಡೆದುಕೊಳ್ಳುವನು, ೨-೫೯೮, ೬೮೦ ; ಸಗುಣವಿದ್ಯೆಯಿಂದ ಮುಕ್ತರಾದವರ ಐಶ್ವರ್ಯವು ಈಶ್ವರಾಧೀನ, ೨-೬೦೯ ; ಬ್ರಹ್ಮಜ್ಞಾನದಿಂದ ಮುಕ್ತರಾದವರಿಗೆ ವ್ಯಾವಹಾರಿಕದೃಷ್ಟಿಯಿಂದ ಐಶ್ವರ್ಯವೂ ಇರಬಹುದು, ೨-೫೯೭.

ಔಪನಿಷದ— (೧) ಉಪನಿಷತ್ತನ್ನೇ ಪ್ರಮಾಣವೆಂದು ಒಪ್ಪಿರುವ, ೧-೧೯, ೨೦, ೧೦೨. (೨) ಉಪನಿಷತ್ತಿನಲ್ಲಿ ಮಾತ್ರವೇ ತಿಳಿಯಬರುವ ಸಾಕ್ಷಿಚೈತನ್ಯಸ್ವರೂಪನಾದ ಆತ್ಮ, ೧-೫೪, ೨೦೧. (೩) ಉಪನಿಷತ್ತಿನಲ್ಲಿ ಹೇಳಿರುವ ಆತ್ಮೈಕತ್ವಜ್ಞಾನ. ಇದೇ ಯುಕ್ತಿಸಮ್ಮತ, ಸಮ್ಯಗ್ಜ್ಞಾನ, ೧-೪೨೫, ೪೨೯, ೨-೪೩೭, ೪೩೯.

## ಕ

ಕರಣಾನಿ— ಇಂದ್ರಿಯಗಳು

ಕರ್ತೃತ್ವಭೋಕ್ತೃತ್ವೇ— ಇವನ್ನು ಮಾಡಿ ಇವನ್ನು ಅನುಭವಿಸುವದೆಂಬ ಧರ್ಮಗಳು. ಅವಿದ್ಯೆಯು ಇವನ್ನುಂಟುಮಾಡುವದು, ೧-೯ · ದೇಹವ್ಯತಿರಿಕ್ತನಾದ ಕರ್ತೃಭೋಕ್ತೃರೂಪನಾದ ಆತ್ಮನಿದಾನೆಂದು ಕೆಲವರು, ಅವನು ಬರಿಯ ಭೋಕ್ತೃವೇ ಎಂದು ಕೆಲವರು, ೧-೨೦ ; ಅನೇಕ ಕರ್ತೃಭೋಕ್ತೃಗಳಿಂದೊಡಗೂಡಿದ ಜಗತ್ತು ಬ್ರಹ್ಮದಿಂದಾಗಿದೆ, ೧-೨೪ ; ಕರ್ತೃಭೋಕ್ತೃವಾದ ವಿಜ್ಞಾನಾತ್ಮನು ಅವಿದ್ಯಾಕಲ್ಪಿತ, ೧-೧೦೪ ; ಕರ್ತೃತ್ವವು ಸ್ವಾಭಾವಿಕವಲ್ಲ, ಕರಣಾಪೇಕ್ಷ, ಕರ್ತೃತ್ವಭೋಕ್ತೃತ್ವವೇ ಸಂಸಾರ ೨-೧೫೫.

ಕರ್ತವ್ಯಮ್, ಕಾರ್ಯಮ್— (೧) ಮಾಡತಕ್ಕ ಕ್ರಿಯೆ. ಇದು ಪುರುಷತಂತ್ರ, ೧–೨೮. (೨) ಬ್ರಹ್ಮಜ್ಞಾನವಾದ ಮೇಲೆ ಉಳಿದಿರುವವೆಂದು ವಾದಿಗಳು ನಂಬಿರುವ ಕೆಲಸ, ಉಪಾಸನಾರೂಪಕಾರ್ಯವಿಧಿಪ್ರಯುಕ್ತವಾಗಿ ಬ್ರಹ್ಮವನ್ನು ಹೇಳಿದೆ ಎಂಬವರ ಪಕ್ಷವೂ ಅದರ ಖಂಡನೆಯೂ, ೧–೪೦, ೪೧, ೪೩, ೪೪ ; ಜ್ಞಾನಿಗೆ ಬೇಕೆಂದು ಕೆಲವರು ಕಲ್ಪಿಸಿರುವ ಪ್ರಪಂಚಪ್ರವಿಲಯರೂಪವಾದ ಕಾರ್ಯ, ೨–೨೯೧; ಜ್ಞಾನಾವೃತ್ತಿರೂಪವಾದ ಕಾರ್ಯ, ೨–೫೦೫ ; ಬ್ರಹ್ಮಜ್ಞಾನವು ಕರ್ತವ್ಯಪ್ರಧಾನವಲ್ಲದಿದ್ದರೂ ದೋಷವಿಲ್ಲ, ೧–೫೩.

ಕರ್ಮ— ಶಾಸ್ತ್ರದಲ್ಲಿ ಮಾಡಬೇಕೆಂದು ಅಥವಾ ಬಿಡಬೇಕೆಂದು ಹೇಳಿರುವ ಕ್ರಿಯೆ. ಕ್ರಿಯಾ, ಕರ್ತವ್ಯ, ಕಾರ್ಯ, ಅನುಷ್ಠೇಯ –ಇವೆಲ್ಲ ಕರ್ಮಪರ್ಯಾಯಗಳು. ವಿಹಿತಕರ್ಮವನ್ನು ಧರ್ಮವೆಂದೂ ಕರೆಯುವರು. ಕರ್ಮಜ್ಞಾನವಾದಮೇಲೆಯೇ ಬ್ರಹ್ಮಜಿಜ್ಞಾಸೆಯೆಂಬ ವೃತ್ತಿಕಾರಮತದ ಖಂಡನೆ, ೧–೧೨ ; ಶಾಸ್ತ್ರವೆಲ್ಲ ಕರ್ಮಪರವೆಂಬ ಮೀಮಾಂಸಕಮತವೂ ಅದರ ಖಂಡನೆಯೂ, ೨–೩೫, ೩೮, ೫೫ ; ಅನುಷ್ಠೇಯಕರ್ಮದ ಫಲಕ್ಕಿಂತ ಮೋಕ್ಷವು ವಿಲಕ್ಷಣ, ೧–೪೨ ; ಇಷ್ಟಾದಿಕರ್ಮವನ್ನು ಮಾಡಿದವರಿಗೆ ದಕ್ಷಿಣಮಾರ್ಗ, ಉಪಾಸನಾಸಹಿತವಾಗಿ ಕರ್ಮವನ್ನು ಮಾಡಿದವರಿಗೆ ಉತ್ತರಾಯಣಮಾರ್ಗ, ೧–೪೨, ೨–೨೩೯; ಬ್ರಹ್ಮವು ಕರ್ತವ್ಯಶೇಷವೆಂದರೆ ಮೋಕ್ಷವು ಕರ್ಮಫಲಗಳಲ್ಲಿ ಒಂದೆಂದಾಗುವದು, ೧–೪೩ ; ಬ್ರಹ್ಮಜ್ಞಾನಕ್ಕೂ ಮೋಕ್ಷಕ್ಕೂ ನಡುವೆ ಕಾರ್ಯಾಂತರವಿಲ್ಲ, ೧–೪೪ ; ಕರ್ಮಕಾರ್ಯವು ಉತ್ಪಾದ್ಯಾದಿಚತುರ್ವಿಧ, ೧–೪೮, ೪೯, ಅಶರೀರತ್ವಕ್ಕೆ ಕರ್ಮವು ನಿಮಿತ್ತವಲ್ಲ; ೧–೫೮ ; ಕರ್ಮಗಳು ಜ್ಞಾನಕ್ಕೆ ಸಹಕಾರಿಕಾರಣ ಎಂದರೆ ಜ್ಞಾನೋತ್ಪತ್ತಿಗೆ ಬಹಿರಂಗಸಾಧನ, ೨–೪೬೪, ೪೭೦, ೪೭೭ ; ಜ್ಞಾನವುಂಟಾದ ಬಳಿಕ ಮೋಕ್ಷವನ್ನು ಕೊಡಲು ಕರ್ಮದ ಸಹಾಯವು ಬೇಡ, ೨–೪೬೨ ; ಜ್ಞಾನಿಯ ಕರ್ಮದ ವಿನಿಯೋಗ, ೨–೫೨೭, ೫೨೯, ೫೩೧, ೫೩೨, ೫೩೩, ೫೩೮; ಉಪಾಸನೆಯಿಂದ ಕರ್ಮಕ್ಕೆ ವೀರ್ಯವು ಹೆಚ್ಚುತ್ತದೆ, ೨–೫೬೫; ವಿದ್ಯಾಹೀನಕರ್ಮವೂ ಜ್ಞಾನೋತ್ಪತ್ತಿಗೆ ಅಂಗ; ೨–೫೫೭. ಮೋಕ್ಷಕ್ಕೆ ಕ್ರಿಯಾನುಪ್ರವೇಶವಿಲ್ಲ, ೧–೫೨, ೬೪. (೨) ಕ್ರಿಯೆಗೆ ವಿಷಯವಾದದ್ದು, ಕರ್ಮಕಾರಕ. ಮೊದಲನೆಯ ಸೂತ್ರದಲ್ಲಿ ಬ್ರಹ್ಮಣಃ ಎಂಬುದು ಕರ್ಮಣಿಷಷ್ಠಿಯೇ ಹೊರತು ಶೇಷಷಷ್ಠಿಯಲ್ಲ, ೧–೧೬, ೧೭. (೩) ಚಲನವ್ಯಾಪಾರ, ೧–೩೭೩ ; ವೈಶೇಷಿಕಮತದಲ್ಲಿ ಅಣುಗಳ ಸಂಯೋಗವಿಯೋಗಗಳಿಗೆ ಕರ್ಮವು ಸಂಭವಿಸುವದಿಲ್ಲ, ೨–೨೭ ; ಬೇರೆಬೇರೆಯ ಕರ್ಮವನ್ನು ಮಾಡುವ ವಾಗಾದಿಗಳು ಕರ್ಮೇಂದ್ರಿಯಗಳು, ೨–೧೮೩. (೪) ಕ್ರಿಯೆಯ ಫಲ, ೧–೩೭೩. (೫) ಮಾಡಲ್ಪಟ್ಟ (ಜಗತ್ತು), ೧–೩೭೩.

ಕಾಮಃ, ರಾಗಃ— ವಿಷಯಗಳ ಬಯಕೆ. ಅವಿದ್ಯಾಕಾಮಕರ್ಮಗಳನ್ನು ಅವಿದ್ಯಾದಿಗಳೆನ್ನುವರು. ಅವಿದ್ಯಾಕಾಮಕರ್ಮಗಳಿಂದ ಜೀವನಿಗೆ ಮರ್ತ್ಯತ್ವ, ೧–೧೮೫ ; ಬ್ರಹ್ಮಜ್ಞಾನದಿಂದ ಅವಿದ್ಯಾಕಾಮಕರ್ಮಗಳ ನಾಶ, ೧–೧೮ ; ಅವಿದ್ಯಾಕಾಮಾದಿದೋಷಗಳಿಂದ ಸುಖದುಃಖತಾರತಮ್ಯ, ೧–೪೨ ; ಅವಿದ್ಯಾದಿಗಳುಳ್ಳವನಿಗೆ ಶರೀರಾದ್ಯಪೇಕ್ಷವಾಗಿ ಜ್ಞಾನೋತ್ಪತ್ತಿ, ೧–೭೦ ; ಅವಿದ್ಯಾರಾಗಾದಿಮುಕ್ತರಿಗೇ ಬ್ರಹ್ಮವು ಪ್ರಾಪ್ಯ ೧–೨೨೫.

ಕಾರಣಮ್— (೧) ಕಾರ್ಯವನ್ನುಂಟುಮಾಡುವ ಸಾಧನ. ಸಾಂಖ್ಯರು ಪ್ರಧಾನವು ಜಗತ್ತಿಗೆ ಉಪಾದಾನಕಾರಣ, ಅದೃಷ್ಟವೇ ಮುಂತಾದದ್ದು ನಿಮಿತ್ತಕಾರಣ ಎನ್ನುವರು ; ವೈಶೇಷಿಕರು ಈಶ್ವರನು ನಿಮಿತ್ತಕಾರಣನು, ಅಣುಗಳು ಸಮವಾಯಿಕಾರಣ, ಸಮವಾಯಿಗೆ ಸಂಬಂಧಪಟ್ಟದ್ದು ಅಸಮವಾಯಿಕಾರಣ ಎನ್ನುವರು, ೧–೬೪, ೨–೨೭, ೯೧; ಜಗತ್ತಿಗೆ ಬ್ರಹ್ಮವೇ ಮೂಲಕಾರಣ, ಆಕಾಶವು ಶ್ರುತಿಗಮ್ಯವೇ ಹೊರತು ಅನುಮೇಯವಲ್ಲ ಎಂಬುದು ವೇದಾಂತಿಗಳ ಮತ, ೧–೨, ೨೫, ೬೪. (೨) ಪ್ರಮಾಣ, ೧–೩೩. (೩) ನಿಮಿತ್ತಕಾರಣ, ೧–೪೦೧, ೪೧೬, ೪೨೯, ೪೭೭.

ಕಾರ್ಯಕರಣಾನಿ— ದೇಹೇಂದ್ರಿಯಗಳು. ಕಾರ್ಯಕರಣಗಳಿಗೆ ಜೀವನು ಒಡೆಯ, ೧–೧೪೧, ೧೪೭; ೨–೧೧೯; ಕಾರ್ಯಕರಣಗಳು ಒಂದಕ್ಕೊಂದು ಹೊಂದಿಕೊಂಡು ಜೀವನಿಗಾಗಿ ಕೆಲಸಮಾಡುವದರಿಂದ ಅವುಗಳ ಒಟ್ಟಿಗೆ ಕಾರ್ಯಕರಣಸಂಘಾತವೆಂದು ಹೆಸರು, ೧–೧೯೩, ೪೪೦, ೪೫೬, ೨–೧೫೨ ; ಇವು ಅವಿದ್ಯಾಕಲ್ಪಿತ, ೧–೧೯೫, ೩೮೮, ೪೪೦, ೪೫೬, ೨–೧೬೧, ೧೬೫ ; ಕಾರ್ಯಕರಣಸಂಘಾತವಿಲ್ಲದ್ದರಿಂದ ಸುಷುಪ್ತಿಯಲ್ಲಿ ಜೀವನು ಸುಖಿ, ೨–೧೫೭ ; ಅವಿದ್ಯಾವಸ್ಥೆಯಲ್ಲಿ ಕಾರ್ಯಕರಣಸಂಘಾತದಿಂದ ಆತ್ಮನನ್ನು ಬಿಂಗಡಿಸಿಕೊಂಡಿರುವದಿಲ್ಲ, ೨–೧೫೪ ; ಕಾರ್ಯಕರಣಸಂಘಾತಗಳಲ್ಲಿ ಒಳಹೊಕ್ಕಿರುವ ಜೀವರುಗಳೆಲ್ಲರೂ ನಿಜವಾಗಿ ಬ್ರಹ್ಮವೇ, ೨–೧೫೮ ; ದೇಹೇಂದ್ರಿಯಗಳಿಂದ ತನ್ನನ್ನು ಬಿಂಗಡಿಸಿಕೊಳ್ಳದಿರುವದೇ ದುಃಖಕ್ಕೆ ನಿಮಿತ್ತ, ೨–೧೬೨,

ಕಾರ್ಯಕಾರಣೇ— ಉಪಾದಾನಕಾರಣವೂ ಅದರ ಕಾರ್ಯವೂ ಆದ ಪ್ರಕೃತಿವಿಕಾರಗಳು. ವೇದಾಂತಿಗಳ ಕಾರ್ಯಕಾರಣವಾದವು ಪರಿಣಾಮವಾದ, ಆರಂಭವಾದ–ಇವೆರಡಕ್ಕಿಂತಲೂ ವಿಲಕ್ಷಣ. ಕಾರ್ಯವು ಕಾರಣಕ್ಕಿಂತ ವಿಲಕ್ಷಣವಾಗಿರಬೇಕೆಂಬುದು ಆ ಎರಡು ವಾದಗಳ ತಿರುಳು, ೧–೩೯೦, ೪೧೦, ೪೧೧, ೪೧೪; ಆ ಎರಡು ವಾದಗಳ ಖಂಡನೆ, ೧–೪೧೫, ೨–೨೨, ೨೪ ; ಕಾರ್ಯದಲ್ಲಿ ಅತಿಶಯವಿಲ್ಲದಿದ್ದರೆ ಕಾರ್ಯಕಾರಣಭಾವವೇ ಇರಲಾರದು, ೧–೪೧೫, ೨–೮೬, ೧೮೬ ; ಕಾರ್ಯಕ್ಕೆ ಅನೇಕಕಾರಣಗಳಿರಬೇಕೆಂಬ ವೈಶೇಷಿಕರ ಮತವು ಸರಿಯಲ್ಲ, ೨–೧೨೦ ; ಕಾರ್ಯವು ಹುಟ್ಟುವ ಮುಂಚೆ ಕಾರಣದಲ್ಲಿರುವದೆಂಬುದನ್ನು ಸಾಂಖ್ಯರೂ ಒಪ್ಪುತ್ತಾರೆ, ೨–೩೪ ; ಕಾರ್ಯವು ಕಾರಣಕ್ಕಿಂತ ಅನ್ಯವಲ್ಲವೆಂಬುದೂ ಸಾಂಖ್ಯರಿಗೆ ಒಪ್ಪು, ೧–೩೯೭ ; ಆದರೆ ವೇದಾಂತಿಗಳ ಮತದಲ್ಲಿ ಕಾರ್ಯವು ಕಾಲತ್ರಯದಲ್ಲಿಯೂ ಕಾರಣಕ್ಕಿಂತ ಅನ್ಯವಾಗಿಲ್ಲ, ೧–೪೨೦, ೪೨೩, ೪೪೪, ೪೫೮ ; ಕಾರ್ಯವು ಕಾರಣಕ್ಕೆ ಅನನ್ಯವೆಂಬುದಕ್ಕೆ ಯುಕ್ತಿಗಳು, ೪೪೨ರಿಂದ ೪೪೪, ೪೪೬, ೪೫೨, ೪೫೩ ; ಕಾರ್ಯಪ್ರಪಂಚವು ಅವಿದ್ಯಾಕ, ೧–೨೨೩ ; ಕಾರ್ಯವು ಸ್ವಪ್ನಮಾಯೆಗಳಂತೆ, ೧–೪೨೪ : ಮೂಲಕಾರಣವಾದ ಬ್ರಹ್ಮವೇ ಎಲ್ಲಾ ಕಾರ್ಯಗಳ ರೂಪದಿಂದ ಹುಸಿಯಾಗಿ ತೋರಿಕೊಳ್ಳುತ್ತದೆ, ೧–೪೫೦; ಕಾರ್ಯವಿಷಯದಲ್ಲಿ ಶ್ರುತಿವಿಗಾನವಿದ್ದರೂ ದೋಷವಿಲ್ಲ, ೧–೩೬೬; ಕಾರ್ಯವಿಷಯದಲ್ಲಿಯೂ ವಿಗಾನವಿಲ್ಲವೆಂದು ಸೂತ್ರಕಾರರು ತೋರಿಸಿರುತ್ತಾರೆ, ೧–೩೬೭; ಕಾರಣವು ಅಸತ್ತಾಗಿತ್ತೆಂಬುದರ ಅರ್ಥ, ೧–೩೬೮ ; ಕಾರ್ಯಧರ್ಮವು ಪ್ರಲಯದಲ್ಲಿ ಕಾರಣಕ್ಕೆ ಅಂಟುವದೆಂಬ ಆಕ್ಷೇಪಕ್ಕೆ ಪರಿಹಾರ, ೧–೪೨೨ ; ಮಿಥ್ಯಾಜ್ಞಾನವಿರುವವರೆಗೆ

ಕಾರ್ಯವು ನಿಯಮದಿಂದ ಉತ್ಪನ್ನವಾಗುತ್ತಿರುತ್ತದೆ, ೧-೪೨೫ ; ಕಾರ್ಯಕಾರಣಗಳು ಬೇರೆಬೇರೆ ಎಂಬ ವಾದದ ಖಂಡನೆ. ೧-೪೪೭ರಿಂದ ೪೪೯ ; ಬ್ರಹ್ಮದಲ್ಲಿ ಎಲ್ಲಾ ಕಾರಣ ಧರ್ಮಗಳೂ ಇವೆ, ೧-೪೭೭.

ಕಾಲಃ— ಜಗತ್ತಿನಲ್ಲಿ ಕಾಣುವ ಕ್ರಿಯಾಫಲಗಳಿಗೆ ಆಧಾರವಾಗಿರುವ ಕಾಲ, ೧-೨೪ ; ಕಾಲವೂ ಬ್ರಹ್ಮದ ಕಾರ್ಯವೇ, ೨-೯೮ ; ಬ್ರಹ್ಮದಲ್ಲಿ ಕಾಲತ್ರಯವಿಲ್ಲ, ಕಾಲತ್ರಯದಲ್ಲಿಯೂ ಧರ್ಮಾಧರ್ಮಗಳಿಲ್ಲ, ೧-೪೩ ; ಜ್ಞೇಯವು ಅತೀತ, ಅನಾಗತ, ವರ್ತಮಾನ –ಎಂಬ ಭಾವಗಳನ್ನು ಪಡೆಯುತ್ತಿದ್ದರೂ ಆತ್ಮನು ಬೇರೆಯಾಗುವದಿಲ್ಲ, ೧-೯೯ ; ಜಾಗ್ರತ್ತಿನಲ್ಲಿರುವಂತೆ ಗೊತ್ತಾದ ಕಾಲವು ಸ್ವಪ್ನದಲ್ಲಿರುವದಿಲ್ಲ, ೨-೨೫೬ ; ಮೂರು ಕಾಲಗಳಲ್ಲಿಯೂ ಅಕರ್ತೃವಾದ ಬ್ರಹ್ಮವೇ ತಾನೆಂದು ಜ್ಞಾನಿಯ ಅರಿವು, ೨-೫೨೮ ; ಬ್ರಹ್ಮದಲ್ಲಿ ದೇಶಕಾಲಾದಿವಿಶೇಷಗಳನ್ನೂ ಸಂಬಂಧವನ್ನೂ ಕಲ್ಪಿಸುವದು ಆಗುವದಿಲ್ಲ, ಆದ್ದರಿಂದ ಅದು ಕಾಲಾಂತರದಲ್ಲಿ ಪಡೆಯುವ ವಾರ್ಧಕಾದಿಗಳಂತಲ್ಲ, ೨-೫೮೨.

ಕೂಟಸ್ಥ— ಮಾರ್ಪಡದೆ ಇದ್ದಂತೆ ಇರುವ. ಬ್ರಹ್ಮವು ಕೂಟಸ್ಥನಿತ್ಯವಾದ್ದರಿಂದ ಕರ್ಮಶೇಷವಲ್ಲ, ಬ್ರಹ್ಮರೂಪವಾದ ಮೋಕ್ಷವು ಕರ್ಮಸಾಧ್ಯವೂ ಅಲ್ಲ, ೧-೪೩ ; ಕೂಟಸ್ಥನಾದ ಸಾಕ್ಷಿಯು ವೇದಾಂತೈಕವೇದ್ಯ, ೧-೫೪, ೫೫ ; ಕೂಟಸ್ಥನಿತ್ಯನಾದ ಆತ್ಮನು ಉಪಾಧಿವಿಶೇಷದಿಂದ ತಾರತಮ್ಯದ ಐಶ್ವರ್ಯವುಳ್ಳವನಾಗಬಹುದು ೧-೯೧ ; ಕೂಟಸ್ಥನಿತ್ಯದೃಕ್ಸ್ವರೂಪವಾದ ಬ್ರಹ್ಮವೇ ನಾನೆಂದು ತಿಳಿಯುವವರೆಗೇ ಜೀವತ್ವ, ೧-೨೬೪ ; ಈ ಸ್ವಭಾವದ ಆತ್ಮನೂ ಅವಿವೇಕದಿಂದ ಅನಾವಿರ್ಭೂತಸ್ವರೂಪನೂ ವಿವೇಕದಿಂದ ಆವಿರ್ಭೂತಸ್ವರೂಪನೂ ಆಗಬಹುದು, ೧-೨೬೬ ; ಇಂಥ ಆತ್ಮನಿಗೆ ವಿಶೇಷವಿಜ್ಞಾನವು ತೋರಿಹೋಗುವ ರೀತಿ, ೧-೩೮೬ ; ಕೂಟಸ್ಥನಿತ್ಯಚೈತನ್ಯವೂ ಅವಿದ್ಯೆಯಿಂದ ನಾನಾವಿಧವಾಗಿ ತೋರುತ್ತವೆ, ೧-೨೬೯ ; ಕೂಟಸ್ಥಬ್ರಹ್ಮಕ್ಕೆ ನಿಜವಾಗಿ ಅನೇಕಧರ್ಮಗಳು ಇರಲಾರವು, ೧-೪೩೯.

ಕೇಚಿತ್— ಬೇರೆಯ ಅಭಿಪ್ರಾಯದ ವೃತ್ತಿಕಾರರು ಅಥವಾ ಬೇರೆಯ ವಾದಿಗಳು. ಸರ್ವಜ್ಞೇಶ್ವರವಾದಿಗಳು, ೧-೨೦ ; ಪ್ರಾಣಾಧಿಕರಣಕ್ಕೆ ಬೇರೆಯ ವಿಷಯವಾಕ್ಯವನ್ನು ಉದಾಹರಿಸಿದವರು, ೧-೧೨೪ ; ಜೀವಸ್ವರೂಪವು ಸತ್ಯವೆಂಬವರು, ೧-೨೬೮, ೨೬೯ ; ಅನುಶಯದ ವಿಷಯಕ್ಕೆ ಮತಭೇದವುಳ್ಳವರು, ೨-೨೨೭ ; ಉಭಯಲಿಂಗಾಧಿಕರಣವನ್ನು ಎರಡಾಗಿ ಒಡೆದವರು, ೨-೨೮೯ ; ಸತ್ಯಾದ್ಯಧಿಕರಣದ ವಿಷಯಕ್ಕೆ ಮತಾಂತರದವರು, ೨-೩೯೩ ; ವೈಶ್ವಾನರೋಪಾಸನೆಯ ವಿಷಯಕ್ಕೆ ಭಿನ್ನಾಭಿಪ್ರಾಯದವರು, ೨-೪೨೫ ; ಪರಬ್ರಹ್ಮಪ್ರಾಪ್ತಿಗೂ ಗತಿಯುಂಟೆಂಬವರು, ೨-೫೮೨ ; ಈ ಭಾಷ್ಯಭಾಗಗಳಲ್ಲಿಯೂ ಮತಾಂತರಾನುವಾದವಿದೆ: ೧-೩೪೨, ೩೮೮, ೨-೨೯೦.

ಕ್ರಮಮುಕ್ತಿಃ— ಕಾಲಾಂತರದಲ್ಲಾಗುವ ಮುಕ್ತಿ. ಕೆಲವು ಉಪಾಸನೆಗಳಿಗೆ ಈ ಮುಕ್ತಿ, ೧-೯೧ ; ಓಂಕಾರಪ್ರತೀಕದ ಮೂಲಕ ಬ್ರಹ್ಮವನ್ನು ಉಪಾಸನೆಮಾಡುವವರಿಗೆ ಕ್ರಮಮುಕ್ತಿ, ೧-೨೫೨ ; ದೇವತೆಗಳಿಗೆ ಅಧಿಕಾರವೆಂದರೆ ಕ್ರಮಮುಕ್ತಿಶಾಸ್ತ್ರ

ಗಳು ಸಾರ್ಥಕ, ೧–೩೦೫ ; ಉಪಾಸನೆಯಿಂದ ಬ್ರಹ್ಮಲೋಕಕ್ಕೆ ಈ ಮುಕ್ತಿಯಾಗುವ ರೀತಿ, ೨–೩೮೧, ೫೭೬, ೬೧೨.

ಕ್ರಿಯಾಕಾರಕಫಲಾನಿ— ಕರ್ಮ, ಅದರ ಸಾಮಗ್ರಿ, ಮತ್ತು ಫಲ. ಜಗತ್ತು ಇವಕ್ಕೆ ಆಶ್ರಯ, ೧–೨೪ ; ಶ್ರುತಿಯು ಇವನ್ನು ನಿರಾಕರಿಸಿದೆ, ೧–೩೮ ; ಬ್ರಹ್ಮಾತ್ಮಜ್ಞಾನಿಗೆ ಇವುಗಳ ವ್ಯವಹಾರವಿಲ್ಲ, ೧–೪೩೫ ; ಇವು ಅಭಿವ್ಯಕ್ತವಾಗುವದು ಬ್ರಹ್ಮಜ್ಯೋತಿಃಸತ್ತೆಯಿಂದ, ೧–೨೭೪ ; ಈ ರೂಪವಾದ ಪ್ರಪಂಚವು ವಿದ್ಯೆಯಿಂದ ನಾಶವಾಗುತ್ತದೆ, ೨–೪೫೩,

ಕ್ಷೇತ್ರಜ್ಞಃ— ಕ್ಷೇತ್ರವೆಂಬ ಶರೀರವನ್ನು ಅರಿಯುವ ಜೀವ.

## ಗ

ಗತಿಃ— (೧) ಕರ್ಮಫಲವನ್ನು ಅನುಭವಿಸುವದಕ್ಕೆ ಜೀವನು ಅನುಸರಿಸಬೇಕಾದ ಮಾರ್ಗವೂ ಪಡೆಯುವ ಫಲವೂ. ಇದು ದೇವಯಾನ, ಪಿತೃಯಾಣ, ಕ್ಷುದ್ರಜಂತು ಎಂದು ಮೂರು ವಿಧ, ೨–೩೩೭ ; ಉಪಾಧಿಯಾದ ಬುದ್ಧಿಯ ಉತ್ಕ್ರಾಂತಿಗತ್ಯಾದಿಗಳಿಂದ ಜೀವನಿಗೂ ಇವು ಆಗುವವು, ೨–೧೩೮ ; ಜೀವನಿಗೆ ಮುಖ್ಯಪ್ರಾಣ, ಇಂದ್ರಿಯ, ಮನಸ್ಸು, ವಿದ್ಯಾಕರ್ಮಪೂರ್ವಪ್ರಜ್ಞೆ ಗಳು– ಇವುಗಳೊಡನೆ ದೇಹಾಂತರಗತಿ, ೨–೨೧೨ ; ಇಷ್ಟಾದಿಕಾರಿಗಳ ಗತಿ, ೨–೨೨೨, ೨೨೩ ; ಉಪಾಸಕರಿಗೆ ಅರ್ಚಿರಾದಿಗತಿ, ೨–೫೫೫ರಿಂದ ೫೭೩ ; ಪರಬ್ರಹ್ಮಪ್ರಾಪ್ತಿಗೆ ಗತಿ ಬೇಡ, ೨–೫೮೧ರಿಂದ ೫೮೫. (೨) ಅವಗತಿ. ಚೇತನವೇ ಜಗತ್ಕಾರಣವೆಂಬುದು ವೇದಾಂತಗಳಿಗೆಲ್ಲ ಸಮಾನ, ಈ ವಿಷಯಕ್ಕೆ ವಿಗಾನವಿಲ್ಲ, ೧–೮೭, ೩೯೮.

ಗುಣಾಃ— (೧) ಉಪಾಸನೆಗಾಗಿ ಪರಮಾತ್ಮನಲ್ಲಿ ಆರೋಪಿಸಿರುವ ನಾಮರೂಪಧರ್ಮಗಳು, ೧–೯೧, ೧೫೧, ೧೭೮, ೧೭೯, ೧–೧೮೧, ೨–೨೮೨; ಒಂದೇ ವಿದ್ಯೆಗೆ ಸಂಬಂಧಪಟ್ಟ ಗುಣಗಳನ್ನು ಬೇರೆಬೇರೆ ಶ್ರುತಿಗಳಿಂದ ಉಪಸಂಹಾರಮಾಡಿಕೊಂಡು ಉಪಾಸನೆ ಮಾಡಬೇಕು, ೨–೩೨೫. (೨) ಸಾಂಖ್ಯರು ಒಪ್ಪಿರುವ ಸತ್ತ್ವರಜಸ್ತಮೋಗುಣಗಳು, ೧–೪೩, ೩೪೪, ೩೫೬, ೨–೧೨. (೩) ಗುಣವಾದ. ಮುಖ್ಯಾರ್ಥವನ್ನು ಬಿಟ್ಟು ಗೌಣಾರ್ಥವನ್ನು ಕಲ್ಪಿಸಬೇಕಾದ ಅರ್ಥವಾದ.

## ಚ

ಚಿದಾತ್ಮಕ, ಚಿದ್ರೂಪ— ಅರಿವಿನ ಸ್ವರೂಪವಾಗಿರುವ, (ಪರಮಾತ್ಮ), ೧–೧೧೬೦.

ಚೇತನ— ಅರಿವುಳ್ಳ. ಆದಿತ್ಯಾದಿಗಳು ಚೇತನರು, ೧–೩೦೨ ; ಚೇತನವಾದ ಅದ್ವಿತೀಯ ಬ್ರಹ್ಮವೇ ಜಗತ್ಕಾರಣವೆಂಬುದು ವೇದಾಂತವಾದ, ೧–೪೧೧, ೪೧೯, ೪೫೪, ೪೫೮, ೪೬೨, ೪೭೭ ; ವೇದಾಂತದಲ್ಲಿ ಚೇತನಾಚೇತನವಿಭಾಗವು ಹೊಂದುವ ಬಗೆ, ೧–೪೧೨, ೪೧೯ ; ಚೇತನವೇ ಜಗತ್ತಿಗೆ ಕರ್ತೃವೆಂಬಲ್ಲಿ ಆಕ್ಷೇಪಸಮಾಧಾನಗಳು, ೧–೪೭೦ರಿಂದ ೪೭೩ ; ಚೇತನಕಾರಣವಾದವು ಎಲ್ಲಾ ಶ್ರುತಿಗಳಲ್ಲಿಯೂ ಇವೆ, ೧–೮೭,೮೯; ಅಚೇತನವೆಂಬ ಚೇತನವಿರೋಧಿಧರ್ಮವು ಬೇರೆಯಿಲ್ಲ, ೧–೨೩.

